

# RIG-VEDA

# ಋಗ್ವೇದ

ಭಾಗ—೩೧

ಐತರೇಯಬ್ರಾಹ್ಮಣ—ಭಾಗ ೧

(ಅಧ್ಯಾಯಗಳು ೧—೧೩)

ಅನುವಾದಕ :
ಆಸ್ಥಾನ ಮಹಾವಿದ್ವಾನ್
ಹೆಚ್. ಪಿ. ವೆಂಕಟರಾವ್

ಶ್ರೀ ಪಂಚಾಚಾರ್ಯ
ಎಲೆಕ್ಟ್ರಿಕ್ ಪ್ರೆಸ್
ಮೈಸೂರು


ಋಗ್ವೇದಸಂಹಿತಾ
ಐತರೇಯಬ್ರಾಹ್ಮಣ—ಮೊದಲನೇ ಭಾಗ
(ಅಧ್ಯಾಯಗಳು ೧—೧೪)

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಭಾಗ—೩೧

# RIG-VEDA

# ಋಗ್ವೇದ

ಸಾಯಣಭಾಷ್ಯಯುತವೂ, ಕರ್ನಾಟಕಭಾಷಾವಿವರಣೆಸಹಿತವೂ ಆದ

## ಐತರೇಯಬ್ರಾಹ್ಮಣ—ಮೊದಲನೇ ಭಾಗ

(ಅಧ್ಯಾಯಗಳು ೧—೧೩)



*Translated with Exhaustive Critical Notes and Explanations*

*by*

ASTHANA MAHAVIDWAN

H. P. VENKATA RAO

*Editor*



*Printed at*

SREE PANCHACHARYA ELECTRIC PRESS MYSORE

1961



ಯದುವಂಶಪಯಃಪಾರಾವಾರಸುಧಾಕರರೂ, ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ,
ಧರ್ಮಪರಾಯಣರೂ, ಮೈಸೂರು ದೇಶದ ರಾಜ್ಯಪಾಲರೂ ಆದ ಶ್ರೀಮನ್ಮಹಾರಾಜ

**ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ. ಸಿ. ಬಿ., ಜಿ- ಸಿ. ಎಸ್. ಐ., ರವರು**

# ಪೀಠಿಕೆ

ಪ್ರತಿಯೊಂದು ವೇದದಲ್ಲಿಯೂ, ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕ, ಉಪನಿಷತ್ ಎಂಬ ಮೂರು ವಿಭಾಗಗಳಿವೆ. ಈ ಪ್ರತ್ಯೇಕ ವಿಭಾಗಗಳಲ್ಲಿರುವ ವಿಷಯಗಳೇನು, ಅವುಗಳ ಸ್ವರೂಪವೇನು ಎಂಬುದನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವು. ಸಂಹಿತೆಯೆಂದರೆ ಅನೇಕ ಋಷಿಗಳಿಂದ ಬೇರೆ ಬೇರೆ ಕಾಲಗಳಲ್ಲಿ ದೃಷ್ಟವಾದ ನಾನಾಮಂತ್ರಗಳನ್ನು ಒಂದು ಕ್ರಮದಲ್ಲಿ ವಿಂಗಡಿಸಿ ಜೋಡಿಸಿರುವುದು ಎಂದರ್ಥವು. ಋಗ್ವೇದಮಂತ್ರಗಳನ್ನು ಋಷಿದೇವತಾಛಂದಸ್ಸುಗಳಿಗನು ಸಾರವಾಗಿ ಮೂರು ವಿಧವಾಗಿ ವಿಂಗಡಿಸಿ ಜೋಡಿಸಬಹುದು. ಆಯಾ ಋಷಿದೃಷ್ಟವಾದ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು; ಒಂದೇ ದೇವತೆಯನ್ನು ಸ್ತುತಿಸುವ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು; ಒಂದೇ ಛಂದಸ್ಸಿನ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು. ಈ ಮೂರು ವಿಧಗಳಲ್ಲಿ ಮೊದಲನೆಯ ಕ್ರಮವನ್ನು ಎಂದರೆ ಒಬ್ಬೊಬ್ಬ ಋಷಿಯ ಮಂತ್ರಗಳನ್ನೆಲ್ಲಾ ಒಂದು ಗುಂಪಾಗಿ ಸೇರಿಸುವ ಕ್ರಮವನ್ನು ಋಗ್ವೇದದಲ್ಲಿ ಅನುಸರಿಸಲಾಗಿದೆ. ಇಂತಹ ಹತ್ತು ಗುಂಪುಗಳು ಋಗ್ವೇದದಲ್ಲಿವೆ. ಇವುಗಳಿಗೆ ಮಂಡಲಗಳೆಂದು ಹೆಸರು. ಒಂದೊಂದು ಮಂಡಲಕ್ಕೆ ಒಬ್ಬೊಬ್ಬ ಋಷಿ ಮತ್ತು ಅವನ ವಂಶದವರು ದ್ರಷ್ಟೃಗಳಾಗಿದ್ದಾರೆ. ಆದರೆ ಮೊದಲನೆಯ ಮತ್ತು ಹತ್ತನೆಯ ಮಂಡಲಗಳಲ್ಲಿ ಅನೇಕ ಋಷಿಗಳಿದ್ದಾರೆ. ಏಕೆಂದರೆ ಅಲ್ಪ ಸಂಖ್ಯೆಯ ಮಂತ್ರಗಳನ್ನು ಅಥವಾ ಸೂಕ್ತಗಳನ್ನು ಒಟ್ಟಾಗಿ ಒಂದೆಡೆ ಸೇರಿಸಿ ಈ ಮಂಡಲಗಳು ನಿರ್ಮಿತವಾಗಿವೆ ಒಂಭತ್ತನೆಯ ಮಂಡಲದಲ್ಲಿ ಮಾತ್ರ ಈ ಕ್ರಮವಿಲ್ಲ. ದೇವತಾಕ್ರಮವಿದೆ ಎಂದರೆ, ಆ ಮಂಡಲದ ಸೂಕ್ತಗಳಿಗೆಲ್ಲಾ ಸೋಮನೆಂಬ ಒಂದೇ ದೇವತೆಯು, ಋಷಿ, ಮಂಡಲ, ಸೂಕ್ತ, ಮಂತ್ರ ಮೊದಲಾದ ಋಗ್ವೇದ ವಿಭಾಗಕ್ರಮವನ್ನು ನಾವು ಋಗ್ವೇದಸಂಹಿತೆಯ ೧ ನೇ ಭಾಗದ ೧೧-೧೭ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಯಜುರ್ವೇದಸಂಹಿತೆಯಲ್ಲಿಯೂ ಇದೇ ಕ್ರಮವಿದೆ. ಎಂದರೆ ಒಂದು ಪ್ರತ್ಯೇಕವಾದ ಕರ್ಮದಲ್ಲಿ ಉಪಯೋಗಿಸುವ ಮಂತ್ರಗಳ ಅಥವಾ ವಾಕ್ಯಗಳನ್ನೆಲ್ಲಾ ಒಂದೆಡೆ ಸೇರಿಸಿ ಅದಕ್ಕೆ ಅನುವಾಕವೆಂದು ಕರೆಯಲಾಗಿದೆ. ಹೇಗೆಂದರೆ ಯಜುರ್ವೇದದ ಮೊದಲನೆಯ ಅನುವಾಕದಲ್ಲಿ (Para) ವತ್ಸಾಪಾಕರಣವೆಂಬ (ಕರುವನ್ನು ಅಟ್ಟಿಕೊಂಡು ಹೋಗುವುದು) ಯಜ್ಞಾಂಗಕರ್ಮದಲ್ಲಿ ಉಪಯೋಗಿಸಲ್ಪಡುವ ಅನೇಕ ವಾಕ್ಯಗಳ ಸಂಗ್ರಹವಿದೆ. ಈ ರೀತಿಯಾಗಿ ಒಂದೇವಿಧ ಕರ್ಮದಲ್ಲಿ ಉಪಯೋಗಿಸಲ್ಪಡುವ ನಾನಾವಾಕ್ಯಗಳು ಒಂದೆಡೆ ಸೇರಿ ಯಜುರ್ವೇದದ ಸಂಹಿತೆಯಾಗಿದೆ.

ಸಾಮವೇದಸಂಹಿತೆಯಲ್ಲಿಯೂ ಆಯಾ ಯಜ್ಞದಲ್ಲಿ ಗಾನಮಾಡಲು ಯೋಗ್ಯವಾದ ಮಂತ್ರಗಳನ್ನೊಳಗೊಂಡ ವಿಭಾಗಗಳಿವೆ. ಇವುಗಳಿಗೆ ಸ್ತೋತ್ರಗಳೆಂದು ಹೆಸರು.

ಅಥರ್ವವೇದದಲ್ಲಿಯೂ ಋಗ್ವೇದದ ಕ್ರಮವೇ ಸ್ವಲ್ಪಮಟ್ಟಿಗೆ ಅನುಸರಿಸಲ್ಪಟ್ಟಿದ್ದರೂ ಅಷ್ಟು ಕಟ್ಟುನಿಟ್ಟಾದ ನಿಯಮವಿಲ್ಲ. ಇವೆಲ್ಲವೂ ವೇದಗಳಲ್ಲಿರುವ ಸಂಹಿತಾ ವಿಭಾಗದ ವಿವರಣೆಯಾಯಿತು.

ಇನ್ನು ಬ್ರಾಹ್ಮಣವೆಂಬ ವಿಭಾಗದಲ್ಲಿ ಏನಿದೆ ಎಂಬುದನ್ನು ವಿಮರ್ಶೆಮಾಡೋಣ. ಆಯಾ ಸಂದರ್ಭದಲ್ಲಿ ಮಂತ್ರವನ್ನು ಹೇಗೆ ಉಪಯೋಗಿಸಬೇಕು, ಹಾಗೆ ಉಪಯೋಗಿಸಲು ಕಾರಣವೇನು, ಮಂತ್ರದ ಅರ್ಥ, ಪೂರ್ವೇತಿಹಾಸ, ಕರ್ಮಗಳನ್ನು ಮಾಡುವ ಉದ್ದೇಶವೇನು, ಅವುಗಳ ಫಲವೇನು ಇತ್ಯಾದಿ ನಾನಾವಿಷಯಗಳನ್ನು ಬ್ರಾಹ್ಮಣಗಳು ವಿವರಿಸುವವು. ಹೇಗೆಂದರೆ— ಋಗ್ವೇದಕ್ಕೆ ಸೇರಿದ ಐತರೇಯ ಅಥವಾ ಕೌಷೀತಕೀಬ್ರಾಹ್ಮಣವು ಯಜ್ಞಕ್ಕೆ ಸಂಬಂಧಪಟ್ಟ, ಅಗ್ನಿಮಥನ (ಅರಣಿಗಳಲ್ಲಿ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವುದು) ಸೋಮಾಹರಣ (ಸೋಮಲತೆಗಳನ್ನು ತರುವುದು) ಇತ್ಯಾದಿ ನಾನಾಯಜ್ಞಾಂಗಕರ್ಮಗಳಲ್ಲಿ

ಹೋತೃವೆಂಬ ಋತ್ವಿಜನು ಮತ್ತು ಅವನ ಸಹಾಯಕರಾದ ಇತರ ಋತ್ವಿಕ್ಕುಗಳು ಪಠಿಸಬೇಕಾದ ಮಂತ್ರಗಳನ್ನೂ ಆ ಮಂತ್ರಗಳ ಅರ್ಥ, ಪೂರ್ವೇತಿಹಾಸ ಮೊದಲಾದ ವಿಷಯಗಳನ್ನೂ ವಿವರಿಸುವವು.

ಇದರಂತೆಯೇ ಯಜುರ್ವೇದದ ಶತಪಥ, ತೈತ್ತಿರೀಯ ಮೊದಲಾದ ಬ್ರಾಹ್ಮಣಗಳು ಯಜ್ಞಾಂಗಕರ್ಮವನ್ನು ನೆರವೇರಿಸುವಾಗ ಪಠಿಸುವ ಮಂತ್ರಗಳ ವಿವರಣೆಯನ್ನೂ ಕರ್ಮಗಳನ್ನು ಋತ್ವಿಕ್ಕುಗಳು ಹೇಗೆ ಮಾಡಬೇಕು ಇತ್ಯಾದಿ ಕ್ರಮಗಳನ್ನೂ ವಿವರಿಸುವವು. ಸಾಮವೇದಬ್ರಾಹ್ಮಣಗಳಲ್ಲಿ ಎಂದರೆ ತಾಂಡ್ಯಬ್ರಾಹ್ಮಣ, ಜೈಮಿನೀಯಬ್ರಾಹ್ಮಣ, ಪಂಚವಿಂಶ ಬ್ರಾಹ್ಮಣ ಮೊದಲಾದ ಗ್ರಂಥಗಳಲ್ಲಿ ಸಾಮಗಾನಗಳನ್ನೂ ಸ್ತೋತ್ರಗಳನ್ನೂ ಪಠಿಸುವ ಕ್ರಮದ ವಿವರಣೆ ಇದೆ. ಅಲ್ಲಲ್ಲಿ ಸಂಬಂಧಪಟ್ಟ ವಿಷಯಗಳಿಗೆ ಪೂರ್ವೇತಿಹಾಸಗಳಿವೆ. ಅಥರ್ವವೇದದ ಗೋಪಥಬ್ರಾಹ್ಮಣದಲ್ಲಿ ಆ ವೇದಕ್ಕೆ ಸಂಬಂಧಪಟ್ಟ ವಿವರಣೆ ಇದೆ.

ಆರಣ್ಯಕಗಳನ್ನು ಆಯಾ ಬ್ರಾಹ್ಮಣಗಳ ಮುಂದಿನ ಭಾಗಗಳೆಂದು ಪರಿಗಣಿಸಬಹುದು, ಬ್ರಾಹ್ಮಣಗಳಲ್ಲಿ ಹೇಳದೆ ಉಳಿದಿರುವ ವಿಷಯಗಳನ್ನೂ ಕೆಲವು ರಹಸ್ಯವಾದ ತತ್ತ್ವಗಳನ್ನೂ ಇವುಗಳಲ್ಲಿ ವಿವರಿಸಲಾಗಿದೆ. ಈ ರಹಸ್ಯತತ್ತ್ವಗಳು ಇತರರಿಗೆ (ಅಧಿಕಾರಿಯಲ್ಲದವರಿಗೆ) ತಿಳಿಯದಿರಲೆಂಬ ಕಾರಣದಿಂದ ಇವುಗಳನ್ನು ಅರಣ್ಯದಲ್ಲಿ ಪಠಿಸಬೇಕೆಂಬ ನಿಯಮವಿದೆ ಆದ್ದರಿಂದ ಈ ಗ್ರಂಥಗಳಿಗೆ ಆರಣ್ಯಕಗಳೆಂದು ಹೆಸರು.

ಉಪನಿಷತ್ತುಗಳಲ್ಲಿ ಅಧ್ಯಾತ್ಮವಿಷಯವನ್ನು ಮಾತ್ರ ವಿವರಿಸಲಾಗಿದೆ. ಇವುಗಳಲ್ಲಿ ಗಹನವಾದ ತತ್ತ್ವವಿಮರ್ಶೆಯೂ, ಬ್ರಹ್ಮಸ್ವರೂಪ, ಸೃಷ್ಟಿಕ್ರಮ, ಆತ್ಮಾನಾತ್ಮವಿಚಾರ ಮೊದಲಾದ ವಿಷಯಗಳಲ್ಲಿ ವಿಸ್ತಾರವಾದ ವಿವರಣೆಗಳಿವೆ. ಅನೇಕ ಸಂದರ್ಭ ಗಳಲ್ಲಿ ಇವುಗಳಲ್ಲಿರುವ ವಿಷಯಗಳು ಪ್ರಶ್ನೋತ್ತರರೂಪವಾಗಿಯೂ, ಕಥಾರೂಪವಾಗಿಯೂ ವಿವರಿಸಲ್ಪಟ್ಟಿವೆ. ಇವುಗಳಲ್ಲಿ ಅಡಕವಾಗಿರುವ ಅನೇಕ ವಿಷಯಗಳು ಆಧುನಿಕವಿಜ್ಞಾನಕ್ಕೂ (Modern Science) ಅನುಸಾರವಾಗಿರುವುದರಿಂದಲೂ ಕಾರ್ಯಕಾರಣ ಸಂಬಂಧವನ್ನು ವಿಮರ್ಶೆಸಹಿತವಾಗಿ ವಿವರಿಸಿರುವುದರಿಂದಲೂ ಇವು ಸಮಸ್ತದೇಶಗಳ ಪಂಡಿತರ ಮೆಚ್ಚುಗೆಗೆ ಪಾತ್ರವಾಗಿವೆ, ಪ್ರತಿ ವೇದಕ್ಕೆ ಸಂಬಂಧಪಟ್ಟಂತೆ ಕೆಲವು ಉಪನಿಷತ್ತುಗಳಿದ್ದರೂ, ಯಾವ ವೇದಕ್ಕೂ ಸೇರದಿರುವ ಸ್ವತಂತ್ರವಾದ ಕೆಲವು ಉಪನಿಷತ್ತುಗಳೂ ಇವೆ.

## ಬ್ರಾಹ್ಮಣವೆಂದರೇನು? ಬ್ರಾಹ್ಮಣಶಬ್ದಾರ್ಥ

ಬ್ರಹ್ಮಶಬ್ದಕ್ಕೆ ಅನ್ನ, ಧನ, ಮಂತ್ರ, ಪರಬ್ರಹ್ಮ (ಅವ್ಯಕ್ತಸ್ವರೂಪನಾದ ಪರಮಾತ್ಮ) ಇತ್ಯಾದ್ಯನೇಕಾರ್ಥಗಳಿದ್ದರೂ ಪ್ರಕೃತಸಂದರ್ಭದಲ್ಲಿ ಮಂತ್ರ ಅಥವಾ ಪರಬ್ರಹ್ಮ ಎಂಬ ಅರ್ಥವನ್ನು ಸೂಚಿಸುವ ಬ್ರಹ್ಮಶಬ್ದದಿಂದ ಬ್ರಾಹ್ಮಣಶಬ್ದವು ಉತ್ಪನ್ನ ವಾಗಿದೆ. ಪರಬ್ರಹ್ಮವನ್ನು ತಿಳಿದವನು, ಬ್ರಹ್ಮಜ್ಞಾನಿಯಾದವನು ಎಂಬರ್ಥವನ್ನು ಬ್ರಾಹ್ಮಣಶಬ್ದವು ಸೂಚಿಸುವಾಗ ಬ್ರಾಹ್ಮಣ ಶಬ್ದವು ಜಾತಿವಾಚಕವು ಅಥವಾ ವೇದಮಂತ್ರವನ್ನು ತಿಳಿದವನು ಎಂಬರ್ಥದಲ್ಲಿಯೂ ಬ್ರಾಹ್ಮಣಶಬ್ದಪ್ರಯೋಗವಿರುವುದು. ಇಲ್ಲಿಯೂ ಬ್ರಾಹ್ಮಣಶಬ್ದವು ಜಾತಿವಾಚಕವು ಎಂದರೆ ಬ್ರಾಹ್ಮಣಾದಿ ನಾಲ್ಕುವರ್ಣಗಳಲ್ಲಿ ಮೊದಲನೆಯದಾದ ಬ್ರಾಹ್ಮಣವರ್ಣವು. ಬ್ರಾಹ್ಮಣಶಬ್ದಕ್ಕೆ ಜಾತಿವಾಚಕವಲ್ಲದ ಮತ್ತೊಂದರ್ಥವಿರುವುದು. ಬ್ರಹ್ಮವೆಂದರೆ ವೇದಮಂತ್ರವೆಂದೂ ಆ ಮಂತ್ರದ ವಿವರಣೆ ಗಳನ್ನೊಳಗೊಂಡ ಗ್ರಂಥಕ್ಕೆ ಬ್ರಾಹ್ಮಣವೆಂದೂ ಹೆಸರು. ಆದ್ದರಿಂದ ವೇದಗಳಿಗೆ ಸಂಬಂಧಪಟ್ಟಂತೆ ಇರುವ ಮಂತ್ರಗಳ ವಿವರಣೆ, ಮಂತ್ರಗಳನ್ನು ಯಜ್ಞಾದಿಗಳಲ್ಲಿ ಯಾವ ಸಂದರ್ಭದಲ್ಲಿ ಯಾರು ಹೇಗೆ ಉಪಯೋಗಿಸಬೇಕು, ವೇದಮಂತ್ರಗಳಲ್ಲಿ ಹೇಳಿರುವ ದೇವತೆಗಳ ವಿಷಯದಲ್ಲಿಯೂ ಇತರಸಂದರ್ಭಗಳಲ್ಲಿಯೂ ಸಮಯೋಚಿತವಾದ ಪೂರ್ವೇತಿಹಾಸ, (Legends, Traditions, Theological Explanations, Etymologies & c.) ಮಂತ್ರಾರ್ಥ, ಯಜ್ಞಾದಿಗಳನ್ನು ಮಾಡುವ ಕ್ರಮ, ವಿಧಿನಿಯಮಗಳು ಮತ್ತು ಯಜ್ಞಾಂಗಕರ್ಮಗಳ ವಿಚಾರವಿಮರ್ಶೆ ಇತ್ಯಾದಿ ಅನೇಕ ವಿಷಯಗಳು ಬ್ರಾಹ್ಮಣಗಳಲ್ಲಿ ವಿವರಿಸಲ್ಪಟ್ಟಿವೆ.

ಈ ಬ್ರಾಹ್ಮಣಗ್ರಂಥಗಳಲ್ಲಿ ವಿವರಿಸಲ್ಪಟ್ಟಿರುವ ಮಂತ್ರಗಳ ಸಾಮಾನ್ಯ ಮತ್ತು ರಹಸ್ಯಾರ್ಥಗಳು ಮತ್ತು ಪೂರ್ವೇತಿಹಾಸಗಳು ಬಹು ಹಿಂದಿನಕಾಲದಿಂದಲೂ ಜನರಲ್ಲಿ ಬಳಕೆಯಲ್ಲಿದ್ದ ಭಾವನೆಗಳನ್ನೂ ನಂಬಿಕೆಗಳನ್ನೂ ಪ್ರತಿಬಿಂಬಿಸುವುದಾದ್ದರಿಂದ ವೇದಮಂತ್ರಗಳಿಗೆ ಸರಿಯಾದ ಮತ್ತು ಋಷಿಗಳಿಂದ ನಿರ್ದಿಷ್ಟವಾದ ಅರ್ಥವನ್ನು ಗ್ರಹಿಸುವುದಕ್ಕೆ ಈ ಬ್ರಾಹ್ಮಣಗ್ರಂಥಗಳು ಬಹು ಸಹಾಯಕವಾಗಿವೆ. ಪ್ರತಿಯೊಂದು ವೇದಕ್ಕೂ ಅನೇಕ ಬ್ರಾಹ್ಮಣಗಳಿವೆ. ಬ್ರಾಹ್ಮಣದ ಮುಂದಿನ ಭಾಗವೇ ಆರಣ್ಯಕವು. ಎಂದರೆ, (continuance or later additions) ಅನೇಕ ಸಂದರ್ಭಗಳಲ್ಲಿ ಈ ಬ್ರಾಹ್ಮಣಗಳ ಕೊನೆಯ ಭಾಗವು ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ಪರಿಸಮಾಪ್ತಿಗೊಂಡಿರುವುದು. ಆರಣ್ಯಕವೆಂದರೆ ರಹಸ್ಯಾರ್ಥಗಳನ್ನೊಳಗೊಂಡ ವೇದ ವಿಭಾಗವೆಂತಲೂ ಇದನ್ನು ಅಧಿಕಾರಿಗಳಲ್ಲದವರು ಕೇಳದಂತೆ ಅರಣ್ಯದಲ್ಲಿ ಅಧ್ಯಯನಮಾಡಬೇಕಾಗಿರುವುದರಿಂದಲೂ ಇವುಗಳಿಗೆ ಆರಣ್ಯಕಗಳೆಂಬ ಹೆಸರು ಬಂದಿದೆ. ಉಪನಿಷತ್ತೆಂದರೆ—ಗುರುವು ತನ್ನ ಮುಖ್ಯಶಿಷ್ಯರನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು (ಉಪ-ಸಮೀಪ, ನಿಷತ್-ಕುಳಿತುಕೊಳ್ಳುವುದು) ವೇದಗಳ ರಹಸ್ಯಾರ್ಥವನ್ನು ಬೋಧಿಸುವುದು ಎಂದರ್ಥವು. ಈ ಉಪನಿಷತ್ತುಗಳು ಸಾಧಾರಣವಾಗಿ ವೇದಗಳ ಕೊನೆಯಭಾಗವಾದ್ದರಿಂದ ಇವುಗಳಿಗೆ ವೇದಾಂತಗ್ರಂಥಗಳೆಂದೂ ಹೆಸರು. ಆರಣ್ಯಕಗಳೂ ಉಪನಿಷತ್ತುಗಳೂ ವೇದಗಳ ಪ್ರತ್ಯೇಕವಿಭಾಗಗಳೆಂದು ಪರಿಗಣಿಸಲ್ಪಟ್ಟಿರುವುದರಿಂದ ಅವುಗಳ ವಿಮರ್ಶೆಯು ಇಲ್ಲಿ ಅನಾವಶ್ಯಕವು.

ಪ್ರತಿಯೊಂದು ವೇದಕ್ಕೂ ಅನೇಕ ಬ್ರಾಹ್ಮಣಗಳಿವೆ. ಋಗ್ವೇದಕ್ಕೆ ಐತರೇಯ ಮತ್ತು ಸಾಂಖ್ಯಾಯನ ಅಥವಾ ಕೌಶೀತಕೀ ಎಂಬ ಎರಡು ಬ್ರಾಹ್ಮಣಗಳಿವೆ. ಶುಕ್ಲಯಜುರ್ವೇದಕ್ಕೆ ಶತಪಥವೆಂಬ ಬ್ರಾಹ್ಮಣವೂ ಕೃಷ್ಣಯಜುರ್ವೇದಕ್ಕೆ ತೈತ್ತಿರೀಯ ಬ್ರಾಹ್ಮಣವೂ ಇವೆ. ಸಾಮವೇದಕ್ಕೆ ತಾಂಡ್ಯಬ್ರಾಹ್ಮಣ, ಪಂಚವಿಂಶಬ್ರಾಹ್ಮಣ, ಜೈಮಿನೀಯ ಉಪನಿಷದ್ಬ್ರಾಹ್ಮಣ, ಷಡ್ವಿಂಶಬ್ರಾಹ್ಮಣ, ಶಾಟ್ಯಾಯನ ಮಂತ್ರಬ್ರಾಹ್ಮಣ, ಆರ್ಷೇಯಬ್ರಾಹ್ಮಣ, ಸಾಮವಿಧಾನಬ್ರಾಹ್ಮಣ ಎಂಬ ಮುಖ್ಯ ಬ್ರಾಹ್ಮಣಗಳಿವೆ. ಅಥರ್ವಣವೇದಕ್ಕೆ ಗೋಪಥವೆಂಬ ಬ್ರಾಹ್ಮಣ ಮಾತ್ರವಿರುವುದು. ಈ ಬ್ರಾಹ್ಮಣಗಳೆಲ್ಲಾ ಈಗ ರೂಢಿಯಲ್ಲಿರುವವು. ಇವುಗಳಲ್ಲದೆ ವೇದಗಳ ನಾನಾಶಾಖೆಗಳಿಗೆ ಅನುಸಾರವಾಗಿ ಅನೇಕ ಬ್ರಾಹ್ಮಣಗಳಿದ್ದವೆಂದು ತಿಳಿದುಬರುತ್ತದೆ. ಈಗ ಅವು ದೊರೆಯುವುದಿಲ್ಲ, ಲುಪ್ತವಾಗಿವೆ. ಇತರ ಗ್ರಂಥಗಳಲ್ಲಿ ಅವುಗಳ ಹೆಸರು ಸೂಚಿತವಾಗಿರುವುದರಿಂದಲೂ ಆ ಬ್ರಾಹ್ಮಣಗಳ ಅನೇಕ ವಾಕ್ಯಗಳನ್ನು ಉದಾಹರಿಸಿರುವುದರಿಂದಲೂ ಹಿಂದಿನಕಾಲದಲ್ಲಿ ಆ ಬ್ರಾಹ್ಮಣಗಳು ರೂಢಿಯಲ್ಲಿದ್ದವೆಂಬುದಕ್ಕೆ ಸಮರ್ಥನೆ ಇರುವುದು. ಈ ವಿಷಯವನ್ನು ನಾವು ಸ್ವಲ್ಪ ವಿಸ್ತಾರವಾಗಿ ಋಗ್ವೇದಸಂಹಿತಾ ೧ ನೇ ಭಾಗದ 23-24 ನೇ ಪೇಜುಗಳಲ್ಲಿ ವಿವರಿಸಿದ್ದೇವೆ.

## ಋಗ್ವೇದ ಬ್ರಾಹ್ಮಣಗಳು

ಋಗ್ವೇದಕ್ಕೆ ಸಂಬಂಧಪಟ್ಟಂತೆ ಇರುವ ಮುಖ್ಯವಾದ ಮತ್ತು ಈಗ ಬಳಕೆಯಲ್ಲಿರುವ ಬ್ರಾಹ್ಮಣಗಳು ಎರಡು ಮಾತ್ರ ಐತರೇಯ ಮತ್ತು ಕೌಷೀತಕೀ (ಸಾಂಖ್ಯಾಯನ): ಈ ಬ್ರಾಹ್ಮಣಗಳಲ್ಲದೆ ಋಗ್ವೇದಕ್ಕೆ ಹಿಂದೆ ಅನೇಕ ಬ್ರಾಹ್ಮಣಗಳಿದ್ದಂತೆ ತಿಳಿಯಬರುತ್ತದೆ. ಆಶ್ವಲಾಯನರು ತಮ್ಮ ಗೃಹ್ಯಸೂತ್ರದಲ್ಲಿ (ಋಗ್ವೇದ) ಬ್ರಹ್ಮಯಜ್ಞದ ವೇದಾಂಗತರ್ಪಣದಲ್ಲಿ ಋಗ್ವೇದ ಪಾರಂಗತರೂ ಗ್ರಂಥಕರ್ತರೂ ಆದ ಕೆಲವು ಆಚಾರ್ಯರ ಹೆಸರುಗಳನ್ನು ಹೇಳಿದ್ದಾರೆ. [ಅವರ ಅಭಿಪ್ರಾಯದಲ್ಲಿ ಋಷಿಗಳೆಂದರೆ (ಋಗ್ವೇದ) ಮಂತ್ರಗಳ ದ್ರಷ್ಟೃಗಳೆಂದೂ ಆಚಾರ್ಯರೆಂದರೆ ಬ್ರಾಹ್ಮಣಗ್ರಂಥಗಳ ಕರ್ತೃಗಳೆಂದೂ ಸ್ಪಷ್ಟವಾಗುವುದು.] ಅವರುಗಳು ಯಾರೆಂದರೆ—ಕಹೋಳ, ಕೌಷೀತಕ, ಮಹಾಕೌಷೀತಕ, ಪೈಂಗ್ಯ, ಮಹಾಪೈಂಗ್ಯ, ಸುಯಜ್ಞ, ಸಾಂಖ್ಯಾಯನ, ಐತರೇಯ, ಮಹೈತರೇಯ, ಶಾಕಲ, ಬಾಷ್ಕಲ, ಸುಜಾತವಕ್ತ್ರ, ಔದವಾಹಿ, ಮಹೌದವಾಹಿ, ಸೌಜಮಿ, ಶೌನಕ, ಆಶ್ವಲಾಯನ. ಈ ಆಚಾರ್ಯರಲ್ಲಿ ಪ್ರತಿಯೊಬ್ಬರೂ ಬ್ರಾಹ್ಮಣಗ್ರಂಥವನ್ನು ಬರೆದಿರುವರೆಂದು ನಿಸ್ಪೃಷ್ಟವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ

ಅನೇಕರು ಬರೆದಿರಬಹುದೆಂದು ಹೇಳಬಹುದು. ಆದರೆ ಐತರೇಯ ಮತ್ತು ಕೌಷೀತಕೀ ಎಂಬ ಗ್ರಂಥಗಳನ್ನು ಬಿಟ್ಟರೆ ಇತರ ಗ್ರಂಥಗಳು ಲುಪ್ತವಾಗಿರುವುದರಿಂದ ರೂಢಿಯಲ್ಲಿರುವ ಐತರೇಯ ಮತ್ತು ಕೌಷೀತಕೀ ಬ್ರಾಹ್ಮಣಗಳನ್ನು ಮಾತ್ರ ವಿಮರ್ಶೆ ಮಾಡಲು ಸಾಧ್ಯವಾಗಿರುವುದು.

## ಐತರೇಯ ಮತ್ತು ಕೌಷೀತಕೀಬ್ರಾಹ್ಮಣಗಳು

ಆಶ್ವಲಾಯನ ಗೃಹ್ಯಸೂತ್ರದ ತರ್ಪಣವಿಧಿಯಲ್ಲಿ ಹೇಳಿರುವಂತೆ ಕೌಷೀತಕೀ ಮತ್ತು ಸಾಂಖ್ಯಾಯನ ಎಂಬ ಇಬ್ಬರು ಬೇರೆಬೇರೆ ವ್ಯಕ್ತಿಗಳಿದ್ದರೆಂದು ಹೇಳಬಹುದು. ಆದರೆ ಈಗ ದೊರೆಯುವ ಕೌಷೀತಕೀಬ್ರಾಹ್ಮಣವನ್ನೇ ಸಾಂಖ್ಯಾಯನ ಬ್ರಾಹ್ಮಣವೆಂದು ಕರೆಯುವುದು ರೂಢಿಯಾಗಿದೆ. ಪೂರ್ವದಲ್ಲಿ ಈ ಎರಡು ಹೆಸರಿನ ಬೇರೆಬೇರೆ ಬ್ರಾಹ್ಮಣಗಳಿದ್ದಿರಬಹುದು. ಅವುಗಳಲ್ಲಿ ಒಂದು ಲುಪ್ತವಾಗಿರುವುದರಿಂದ ಉಳಿದ ಬ್ರಾಹ್ಮಣವನ್ನು ಎರಡು ಹೆಸರುಗಳಿಂದಲೂ ಕರೆಯುವ ರೂಢಿಬಂದಿರಬಹುದು. ಏಕೆಂದರೆ ಕೌಷೀತಕಿಯಿಂದ ನಿರ್ಮಿತವಾದ ಸೂತ್ರವು ಇರುವುದಿಲ್ಲ. ಆದರೆ ಸಾಂಖ್ಯಾಯನರಿಂದ ರಚಿತವಾದ ಸೂತ್ರವು ಈಗಲೂ ದೊರೆಯುತ್ತದೆ. ಇದಲ್ಲದೇ ಕೌಷೀತಕೀ ಮತ್ತು ಸಾಂಖ್ಯಾಯನರು ಒಂದೇವಂಶದವರಾದ್ದರಿಂದ ಈಗ ದೊರೆಯುವ ಬ್ರಾಹ್ಮಣವನ್ನು ಎರಡು ಹೆಸರಿನಿಂದಲೂ ಕರೆಯುವುದು ರೂಢಿಗೆ ಬಂದಿರಬಹುದು. ಕೌಷೀತಕೀ ಮತ್ತು ಐತರೇಯ ಬ್ರಾಹ್ಮಣಗಳಲ್ಲಿ ಯಾವುದು ಪ್ರಾಚೀನವೆಂದು ನಿರ್ಣಯಿಸುವ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಈ ಬ್ರಾಹ್ಮಣಗಳು ಈಗಿರುವಂತೆ ಹಿಂದೆ ಇರಲಿಲ್ಲವೆಂದೂ ಕೆಲವು ಭಾಗಗಳು ಪ್ರಾಚೀನವಾಗಿದ್ದು ಮುಂದೆ ಕೆಲವು ಭಾಗಗಳನ್ನು ಅವುಗಳಿಗೆ ಸೇರಿಸಲಾಯಿತೆಂದೂ ಅನೇಕ ಪಾಶ್ಚಾತ್ಯಪಂಡಿತರ ಅಭಿಪ್ರಾಯವಾಗಿದೆ. ಆದ್ದರಿಂದ ಕೆಲವರು ಕೌಷೀತಕೀಬ್ರಾಹ್ಮಣವೇ ಪ್ರಾಚೀನವೆಂದೂ ಮತ್ತೆ ಕೆಲವರು ಐತರೇಯ ಬ್ರಾಹ್ಮಣವೇ ಪ್ರಾಚೀನವೆಂದೂ ಹೇಳುವುದಕ್ಕೆ ಸಮರ್ಥನೆ ಇಲ್ಲದೆ ಇಲ್ಲ. ಕೌಷೀತಕೀಬ್ರಾಹ್ಮಣದಲ್ಲಿ ಮೂವತ್ತು ಅಧ್ಯಾಯಗಳೂ ಐತರೇಯ ಬ್ರಾಹ್ಮಣದಲ್ಲಿ ನಲವತ್ತು ಅಧ್ಯಾಯಗಳೂ ಇರುವುದನ್ನು ಪಾಣಿನೀಯ [**ತ್ರಿಂಶಚ್ಚತ್ವಾರಿಂಶತೋರ್ಬ್ರಾಹ್ಮಣೇ ಸಂಜ್ಞಾಯಾಂ ಡಣ್**—೫-೧-೬ ಎಂಬ ಸೂತ್ರದಲ್ಲಿ ಹೇಳಿರುವುದರಿಂದ ಈ ಎರಡು ಬ್ರಾಹ್ಮಣಗಳು ಪಾಣಿನಿಗೆ ತಿಳಿದಿತ್ತೆಂದೂ ಆ ಕಾಲದಲ್ಲಿ (ಕ್ರಿ. ಪೂ. ೮ನೇ ಶತಮಾನ) ಈ ಬ್ರಾಹ್ಮಣಗಳು ಪ್ರಚಾರದಲ್ಲಿದ್ದವೆಂದೂ ಹೇಳಬಹುದು. ಈ ಬ್ರಾಹ್ಮಣಗಳ ಕಾಲವನ್ನು ಮುಂದೆ ವಿಮರ್ಶಿಸಲಾಗುವುದು.

ಐತರೇಯಬ್ರಾಹ್ಮಣವು ನಲವತ್ತು ಅಧ್ಯಾಯಗಳನ್ನೊಳಗೊಂಡು ಮಂತ್ರವಿವರಣೆಯಲ್ಲಿಯೂ, ಇತಿಹಾಸನಿರೂಪಣೆಯಲ್ಲಿಯೂ, ಕೌಷೀತಕೀಬ್ರಾಹ್ಮಣಕ್ಕಿಂತ ವಿಸ್ತಾರವಾಗಿರುವುದರಿಂದಲೂ ಋಗ್ವೇದದ ಮುಖ್ಯಮಂತ್ರಗಳನ್ನೇ ಅವಲಂಬಿಸಿರುವ ಹೋತೃವರ್ಗದ ಋತ್ವಿಕ್ಕುಗಳಿಗೆ ಹೆಚ್ಚು ಆದರಣೀಯವಾಗಿದೆ. ಈ ಬ್ರಾಹ್ಮಣಕ್ಕೆ ಮಹೀದಾಸ ಐತರೇಯನೆಂಬುವನು ಪ್ರವರ್ತಕನು ಅಥವಾ ಕರ್ತೃವು. ಈ ಮಹೀದಾಸನ ವಿಷಯದಲ್ಲಿ ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಇತಿಹಾಸವಿರುವುದು. ಈ ಮಹೀದಾಸನ ತಂದೆಗೆ (ಋಷಿ) ಅನೇಕಪತ್ನಿಯರಿದ್ದರೆಂದೂ ಅವರಲ್ಲಿ ಶೂದ್ರಜಾತಿಯ ಪತ್ನಿಯೂ ಒಬ್ಬಳೆಂದೂ ಕನಿಷ್ಠಜಾತಿಯವಳಾದ ಅವಳನ್ನು ಇತರಾ ಎಂದು ಜನರು ಕರೆಯುತ್ತಿದ್ದರೆಂದೂ ಪ್ರತೀತಿ ಇದೆ. ಇತರೆಯೆಂಬ ಸ್ತ್ರೀಯಪುತ್ರನಾದ್ದರಿಂದ ಮಹೀದಾಸನಿಗೆ ಐತರೇಯನೆಂಬ ಹೆಸರುಬಂದಿತು. ಈ ಮಹೀದಾಸನು ವಿದ್ಯಾವಂತನೂ ಬುದ್ಧಿವಂತನೂ ಆಗಿರಲಿಲ್ಲವಾದ್ದರಿಂದ ಇವನತಂದೆಗೆ ಇವನಮೇಲೆ ಪ್ರೀತಿ ಇರಲಿಲ್ಲ. ಆದ್ದರಿಂದ ಇವನ ತಾಯಿಯಾದ ಇತರೆಯು ಭೂಮಿದೇವಿಯನ್ನು (ಮಹೀ) ಪ್ರಾರ್ಥಿಸಲು ಆ ದೇವಿಯ ಅನುಗ್ರದಿಂದ ಈಕೆಯ ಪುತ್ರನು ಸಕಲ ವಿದ್ಯಾಪಾರಂಗತನಾದನು. ಮಹಿಯ ಅನುಗ್ರಹದಿಂದ ಇವನು ವಿದ್ಯೆಯನ್ನು ಪಡೆದುದರಿಂದ ಇವನಿಗೆ ಮಹೀದಾಸನೆಂದು ಹೆಸರಾಯಿತು ಎಂಬ ಕಥೆ ಇದೆ. ಐತರೇಯಬ್ರಾಹ್ಮಣಕ್ಕೆ ಸುಖಪ್ರದವೆಂಬ ವೃತ್ತಿಯನ್ನು ಬರೆದಿರುವ ಷಡ್ಗುರು ಶಿಷ್ಯರೆಂಬುವರು ಮಹೀದಾಸನ ವಿಷಯದಲ್ಲಿ ಸ್ವಲ್ಪ ವಿಸ್ತಾರವಾದ ವಿವರಣೆಯನ್ನು ಈರೀತಿ ಬರೆದಿರುವರು.

ಪೂಜ್ಯರಾದ ಹಿರಿಯರು ವೇದಪುರಾಣಾದಿಗಳಲ್ಲಿ ಉಕ್ತವಾಗಿರುವ ಐತರೇಯರ್ಷಿ ವಿಷಯವಾದ ಒಂದು ಇತಿಹಾಸವನ್ನು ಈರೀತಿ ವರ್ಣಿಸಿರುವರು—

ಪೂರ್ವದಲ್ಲಿ ಯಾಜ್ಞವಲ್ಕನೆಂಬ ಓರ್ವ ಮಹರ್ಷಿಗೆ ಇಬ್ಬರು ಪತ್ನಿಯರಿದ್ದರು. ಆ ಋಷಿಯು ತನ್ನ ಹಿರಿಯ ಪತ್ನಿಯಲ್ಲಿಯೇ ವಿಶೇಷ ಅನುರಕ್ತನಾಗಿ ಕನಿಷ್ಠಪತ್ನಿಯನ್ನು ಅಷ್ಟಾಗಿ ಆದರಿಸುತ್ತಿರಲಿಲ್ಲ. ಆದ್ದರಿಂದ ಅವಳನ್ನು ಇತರಾ (ಇನ್ನೊಬ್ಬಳು) ಎಂದೇ ಕರೆಯುತ್ತಿದ್ದನು. ಅವಳಲ್ಲಿ ಉತ್ಪನ್ನನಾದ ಪುತ್ರನು ಬಾಲ್ಯದಲ್ಲಿ ಅಳುತ್ತಿದ್ದಾಗ—ಎಲೈ ದುಷ್ಟನೇ ಸುಮ್ಮನಿರು ಅಳಬೇಡ ಎನ್ನುತ್ತಿದ್ದಳು. ಅದನ್ನು ಕೇಳಿ ಆ ಪುತ್ರನು ಮುಂದೆಯೂ ಮೂಕನಂತೆ ಯಾವ ಮಾತನ್ನೂ ಆಡದೆ ಏನೋ ಯೋಚಿಸುತ್ತಿರುವಂತೆ ಯಾವಾಗಲೂ ಧ್ಯಾನಪರವಶನಾಗಿಯೇ ಇರುತ್ತಿದ್ದನು. ಆದರೆ ಅವನು ವಾಸ್ತವವಾಗಿ ಮೂಕನಾಗಿರಲಿಲ್ಲ. ಅನೇಕ ಜನ್ಮಸಂಸ್ಕಾರದಿಂದ ಯೋಗಸಿದ್ಧಿಯನ್ನು ಪಡೆದಿದ್ದ ಅವನು ಕೆಲಸಕ್ಕೆಬಾರದ ಕಾಡುಹರಟೆಯಿಂದ ಪ್ರಯೋಜನವೇನೆಂದು ತಿಳಿದು ಯಾರೊಡನೆಯೂ ವ್ಯರ್ಥವಾಗಿ ಮಾತನಾಡದೆ ಮೋಕ್ಷಾಭಿಲಾಷಿಯಾಗಿ ಸದಾಕಾಲದಲ್ಲಿಯೂ ಪರಮಪವಿತ್ರವಾದ ವಿಷ್ಣುವಿನ ದ್ವಾದಶಾಕ್ಷರ ಮಂತ್ರವನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದನು. ಜ್ಯೇಷ್ಠಭಾರ್ಯೆಯ ಪುತ್ರರಾದರೋ ವಾಚಾಳಿಗಳೂ ವಿದ್ಯಾವಂತರೂ ಆಗಿದ್ದುದರಿಂದ ಮಂಕನಂತೆ ಕಾಣುತ್ತಿದ್ದ ಇತರಾಪುತ್ರನೆಂಬ ತಮ್ಮ ತಮ್ಮನನ್ನು ನೋಡಿ ಕುಚೇಷ್ಟೆಯಿಂದ ಹಾಸ್ಯಮಾಡಿ ನಗುತ್ತಿದ್ದರು.

ಹೀಗಿರುವಾಗ ದೂರದೇಶದಲ್ಲಿದ್ದ ಒಬ್ಬ ಬ್ರಾಹ್ಮಣನು ಯಜ್ಞಮಾಡಬೇಕೆಂದು ಉದ್ದೇಶಿಸಿ ಆ ಯಜ್ಞಕ್ಕೆ ಬೇಕಾಗುವ ಋತ್ವಿಕ್ಕುಗಳನ್ನೂ ಪುರೋಹಿತರನ್ನೂ ಹುಡುಕಿಕೊಂಡು ಈ ಯಾಜ್ಞವಲ್ಕಋಷಿಯ ಆಶ್ರಮಕ್ಕೆ ಬಂದನು. ಅಲ್ಲಿ ಜ್ಯೇಷ್ಠಪತ್ನಿಯ ಪುತ್ರರನ್ನು ಕಂಡು ಯಜ್ಞಮಾಡಿಸುವುದಕ್ಕಾಗಿ ಆಹ್ವಾನಿಸಲು ಅವರು ಒಪ್ಪಿಕೊಂಡು ತಮ್ಮ ತಂದೆಯೊಡನೆ ಆ ಬ್ರಾಹ್ಮಣನ ದೇಶಕ್ಕೆ ಹೋಗಿ ಯಜ್ಞವನ್ನು ನೆರವೇರಿಸಿದರು. ಈ ಯಜ್ಞವನ್ನು ಪ್ರತ್ಯಕ್ಷವಾಗಿ ನೋಡಿದ ಕೆಲವರು ಅಲ್ಲಿಂದ ಯಾಜ್ಞವಲ್ಕ್ಯ ಋಷಿಯೂ ಅವನ ಜ್ಯೇಷ್ಠಪತ್ನಿಯ ಪುತ್ರರೂ ನಿರ್ವಹಿಸಿದ ಪೌರೋಹಿತ್ಯದ ವೈಭವವನ್ನೂ ವಿಜೃಂಭಣೆಯನ್ನೂ ನಾನಾವಿಧವಾಗಿ ಬಣ್ಣಿಸಿ ಪ್ರಶಂಸೆಮಾಡಿದರು. ಅದನ್ನು ಕೇಳಿದ ಇತರಾ ಎಂಬ ಪತ್ನಿಯು ದುಃಖಸಂತಪ್ತಳಾಗಿ ಮೂಕನಾದ ತನ್ನ ಪುತ್ರನ ಸಮೀಪಕ್ಕೆ ಬಂದು—ಅಯ್ಯೋ ಪುತ್ರನೇ, ಮೂಕನೂ ಅಯೋಗ್ಯನೂ ಆದ ನಿನ್ನನ್ನು ಹಡೆದ ನನ್ನ ಜನ್ಮವು ವ್ಯರ್ಥವು. ನಿನ್ನನ್ನು ಹಡೆಯದೆ ನಾನು ಬಂಜೆಯಾಗಿದ್ದರೇ ಚೆನ್ನಾಗಿತ್ತು. ನಿನ್ನ ಸಹೋದರರು ವಿದ್ಯಾವಂತರಾಗಿ ಯಜ್ಞಾದಿಗಳನ್ನು ಮಾಡಿಸುತ್ತ ಕೀರ್ತಿವಂತರಾಗಿರುವರು. ನೀನಾದರೋ ಶುದ್ಧಮೂಕನಾಗಿಯೂ ಮೂಢನಾಗಿಯೂ ಇರುವೆ. ಒಂದು ಮಾತನ್ನಾದರೂ ಆಡಬಾರದೇ? ನಿನ್ನ ಸ್ಥಿತಿಯನ್ನು ನೋಡಿ ನನ್ನ ಪತಿಯೂ ಸವತಿಯೂ, ಸವತಿಯ ಪುತ್ರರೂ ನನ್ನನ್ನು ನಾನಾವಿಧವಾಗಿ ಹೀಯಾಳಿಸುತ್ತಿರುವುದನ್ನು ಹೇಗೆ ಸಹಿಸಲಿ? ಈ ಅವಮಾನವನ್ನು ಸಹಿಸುವುದಕ್ಕಿಂತ ನನಗೆ ಮರಣವೇ ಉತ್ತಮವು. ಆದರೆ ಯಮನಿಗೂ ನನ್ನಮೇಲೆ ಕರುಣಬರಲಿಲ್ಲ. ನರಕದಲ್ಲಿಯೂ ಸಹ ಈ ವಿಧವಾದ ದುಃಖವಿರುವುದಿಲ್ಲವೆಂದು ಬಲ್ಲವರು ಹೇಳುತ್ತಾರೆ. ಎಂದು ಮುಂತಾಗಿ ದುಃಖಿಸುತ್ತಿರುವುದನ್ನು ನೋಡಿ ಮೂಕನಾದ ಅವನು ಅವಳನ್ನು ಸಮಾಧಾನಪಡಿಸುತ್ತಾ ಇಂತೆಂದನು—ಅಮ್ಮಾ, ದುಃಖಿಸಬೇಡ, ಮಾತನಾಡೆಂದು ಹೇಳಿದೆಯಲ್ಲವೇ, ಇದೋ ಮಾತನಾಡುತ್ತೇನೆ, ನಾನು ಮೂಕನಲ್ಲ. ನಾನು ಯಾವಾಗಲೂ ಮೋಕ್ಷಾರ್ಥವಾಗಿ ಪರಮಾತ್ಮನಲ್ಲಿ ನೆಟ್ಟಮನಸ್ಸಿನಿಂದ ಧ್ಯಾನಾಸಕ್ತನಾಗಿ ಆತ್ಮಪರವಶನಾಗಿರುವುದರಿಂದ ಬಾಹ್ಯವ್ಯವಹಾರಗಳಲ್ಲಿ ಆಸಕ್ತಿಯಿಲ್ಲದೆ ಕೆಲಸಕ್ಕೆಬಾರದ ಮಾತುಗಳನ್ನಾಡುತ್ತಾ ಕಾಲಕಳೆಯಲು ಇಷ್ಟವಿಲ್ಲ. ಆದ್ದರಿಂದ ಯಾವಾಗಲೂ ಮೌನವಾಗಿಯೇ ಇರುತ್ತೇನೆ. ಹಿಂದೆ ನಾನು ಶಿಶುವಾಗಿದ್ದಾಗ ನಾನು ಅಳುತ್ತಿರುವುದನ್ನು ನೋಡಿ ಎಲೈ ದುಷ್ಟನೇ, ಸುಮ್ಮನಿರು ಅಳಬೇಡ ಎಂದು ನೀನು ಹೇಳಲಿಲ್ಲವೇ? ಅದನ್ನೇ ನಿನ್ನ ಆಜ್ಞೆಯೆಂದು ಭಾವಿಸಿ ಆಕಾಲದಿಂದಲೂ ಮಾತನಾಡದೆ ಮೌನವಾಗಿಯೇ ಇದ್ದೆನು. ಈಗ ನೀನು ಮಾತನಾಡೆಂದು ಹೇಳಿದಮೇಲೆ ಮಾತನಾಡಬೇಕಾಯಿತು. ನಾನೇನೂ ಮೂಕನಲ್ಲ. ನಾನು ಮಾತನಾಡುವುದನ್ನು ಕಂಡು ನಿನಗೆ ಸಂತೋಷವಾಗಿರುವುದಷ್ಟೆ. ಈಗ ನನ್ನ ತಂದೆಯೂ ನನ್ನ ಸಹೋದರರೂ ಇರುವ ಯಜ್ಞಭೂಮಿಗೂ ಹೋಗಿ

ಅವರೆದುರಿಗೂ ಮಾತನಾಡಬರುವೆನು ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟನು. ಮೂಕನಂತೆ ಕಾಣುತ್ತಿದ್ದರೂ ಪರಮಾತ್ಮನಲ್ಲಿ ಭಕ್ತಿಶ್ರದ್ಧೆಯಿಂದ ಧ್ಯಾನಪರವಶನಾಗಿ ಮಾರ್ಗಕ್ರಮಣ ಮಾಡುತ್ತಿದ್ದ ಈ ಮಹಾತ್ಮನು ಮೇಘಗಳಿಂದ ಆವೃತನಾದ ಸೂರ್ಯನಂತೆಯೂ ಬೂದಿಮುಚ್ಚಿದ ಕೆಂಡದಂತೆಯೂ ಶೋಭಿಸುತ್ತಿದ್ದನು. ಅನೇಕ ದಿನಗಳವರೆಗೆ ಪ್ರಯಾಣಮಾಡಿ ಕೊನೆಗೆ ಆ ಯಜ್ಞಭೂಮಿಗೆ ಬಂದನು. ಯಜ್ಞಶಾಲೆಯನ್ನು ಪ್ರವೇಶಿಸುತ್ತಿದ್ದ ಈ ಮೂಕನಾದ ತಮ್ಮ ತಮ್ಮನನ್ನು ನೋಡಿ ಅಹಂಕಾರದಿಂದ ಬೀಗಿ ಮೆರೆಯುತ್ತಿದ್ದ ಇವನ ಸಹೋದರರು ಗಹಗಹಿಸಿ ನಗುತ್ತಾ—ಈ ಮೂಕನೇಕೆ ಇಲ್ಲಿಗೆ ಬಂದನು? ಯಜ್ಞಶಾಲೆಯಲ್ಲಿ ಇವನಿಗೇನು ಕೆಲಸ? ಇವನೇನಾದರೂ ಮಂತ್ರೋಚ್ಚಾರಣೆ ಮಾಡಬಲ್ಲನೇ? ಎಂದು ಪರಸ್ಪರ ಮಾತನಾಡುತ್ತಾ ಅವನನ್ನು ನೋಡಿ ಹಲ್ಲುಕಿರಿದು ಅಣಕಿಸುತ್ತ ಹಾಸ್ಯಮಾಡಲಾರಂಭಿಸಿದರು. ಈ ಮೂಕನಾದರೋ ಇವರ ಮಾತುಗಳನ್ನು ಲಕ್ಷ್ಯಮಾಡದೆ ಯಾಗಶಾಲೆಯನ್ನು ಪ್ರವೇಶಿಸಿ ತನ್ನ ತಂದೆಯಿರುವಲ್ಲಿಗೆ ಹೋಗಿ ಅವನ ತೊಡೆಯಮೇಲೆ ಕುಳಿತುಕೊಳ್ಳಲು ಪ್ರಯತ್ನಿಸಿದನು ಇದನ್ನು ಕಂಡು ಇವನತಂದೆಯು ಕೋಪಾವಿಷ್ಟನಾಗಿ ಥೂ ದುಷ್ಟನೇ, ನನ್ನನ್ನು ಮುಟ್ಟಬೇಡ ದೂರಹೋಗು ಎಂದು ಬೈದು ಅವನನ್ನು ತನ್ನ ತೊಡೆಯಿಂದ ಆಚೆಗೆ ತಳ್ಳಿದನು. ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗಿನ ಸಮಸ್ತ ಚರಾಚರಪ್ರಾಣಿಗಳೂ ಇವನಿಗೆ ಆದ ಅವಮಾನವನ್ನು ಸಹಿಸಲಿಲ್ಲ. ಆದರೆ ಈ ಮೂಕನು ಇದೊಂದನ್ನೂ ಲಕ್ಷ್ಯಮಾಡಲಿಲ್ಲ. ಏಕೆಂದರೆ ನೋಡುವವರಿಗೆ ಮೂಕನಂತೆಯೂ ಬುದ್ಧಿಹೀನನಂತೆಯೂ ತೋರುತ್ತಿದ್ದರೂ ಇವನು ಯಾವಾಗಲೂ ಮನಸ್ಸಿನಲ್ಲಿ **ಓಂ ನಮೋ ಭಗವತೇ ವಾಸುದೇವಾಯ** ಎಂಬ ಶ್ರೇಷ್ಠವಾದ ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತಿದ್ದನು. ಸಮಸ್ತ ವೇದವೇದಾಂಗಗಳಲ್ಲಿಯೂ ಪ್ರವೀಣನಾದವನೂ ಶುದ್ಧವಾದ ಬುದ್ಧಿಯುಳ್ಳವನೂ ಆದ ಈ ಬ್ರಹ್ಮರ್ಷಿಗೆ ದುಃಖಾವಮಾನಗಳೆಂದರೇನು? ಬಾಹ್ಯಪ್ರಪಂಚದ ವ್ಯವಹಾರಗಳಿಗೆ ಗಮನಕೊಡದೆ ದ್ವಾದಶಾಕ್ಷರಮಂತ್ರಜಪದಲ್ಲಿಯೇ ಆಸಕ್ತನಾಗಿದ್ದನು. ಆದರೆ ಸರ್ವರ ತಪ್ಪುಗಳನ್ನು ಸಹಿಸುವ ಸ್ವಭಾವವುಳ್ಳ ಕ್ಷಮಾಗುಣವೇ ಭೂಷಣವಾಗಿವುಳ್ಳ ಭೂಮಿದೇವಿಯು ಈ ಬಾಲಕನಿಗೆ ಆದ ಅವಮಾನವನ್ನು ನೋಡಿ ಸಹಿಸಲಿಲ್ಲ. ಆದ್ದರಿಂದ ಈ ವಸುಂಧರಾದೇವಿಯು ಅಲ್ಲಿಯೇ ಯಜ್ಞವೇದಿಯನ್ನು ಭೇದಿಸಿಕೊಂಡು ಎಲ್ಲರಿಗೂ ಕಾಣುವಂತೆ ಸಮಸ್ತ ವಸ್ತ್ರಾಭರಣಗಳನ್ನು ಧರಿಸಿ ದಿವ್ಯಮಂಗಳ ವಿಗ್ರಹದಿಂದ ಆವಿರ್ಭೂತಳಾದಳು. ಮತ್ತು ಸುವರ್ಣದಿಂದಲೂ ನವರತ್ನಗಳಿಂದಲೂ ಖಚಿತವಾದ ಒಂದು ದಿವ್ಯಸಿಂಹಾಸನವನ್ನು ಅಲ್ಲಿಯೇ ನಿರ್ಮಿಸಿ ಅದರಲ್ಲಿ ಈ ಬಾಲಕನನ್ನು ತನ್ನ ಕಮಲಸದೃಶವಾದ ಕೈಗಳಿಂದ ತಾನೇ ಕರೆದೊಯ್ದು ಕೂಡಿಸಿದಳು. ಇದನ್ನೆಲ್ಲಾ ಈ ಬಾಲಕನ ತಂದೆಯೂ ಸವತಿಯ ಮಕ್ಕಳಾದ ಇವನ ಸಹೋದರರೂ ಮತ್ತು ಆ ಯಜ್ಞವೇದಿಯಲ್ಲಿದ್ದ ಸಮಸ್ತ ಋಷಿಗಳೂ, ಸಭಿಕರೂ ಆಶ್ಚರ್ಯದಿಂದ ನೋಡುತ್ತಿರಲು ವಿಷ್ಣುಪ್ರಿಯೆಯಾದ ಆ ಭೂಮಿದೇವಿಯು ಮುಗುಳುನಗೆಯನ್ನು ಸೂಸುತ್ತ ಇಂತೆಂದಳು—ಅಪ್ಪ, ಕುಮಾರನೇ, ದುಃಖಿಸಬೇಡ. ಸವತೀಮಕ್ಕಳಾದ ಆ ನಿನ್ನ ದುಷ್ಟಸಹೋದರರು ಕುಳಿತುಕೊಳ್ಳಲು ಆಶೆಪಡುವ ನಿನ್ನ ತಂದೆಯ ತೊಡೆಯಿಂದ ನಿನಗೇನಾಗಬೇಕಾಗಿದೆ? ಇಗೋ ಇಲ್ಲಿ ನೋಡು. ನಾನು ವಿಷ್ಣುವಿನ ಪ್ರಿಯಪತ್ನಿಯಾದ ಭೂಮಿದೇವಿಯು. ಬ್ರಹ್ಮಾದಿದೇವತೆಗಳಿಗೆಲ್ಲಾ ತಂದೆಯೂ ಪಾಲಕನೂ ಆಗಿರುವ ಸಾಕ್ಷಾತ್ ಶ್ರೀವಿಷ್ಣುವೇ ನಿನ್ನನ್ನು ಆದರಿಸಿ ಲಾಲಿಸುತ್ತಾನೆ. ನಾನು ಇಲ್ಲಿ ನಿರ್ಮಿಸಿರುವ ಸರ್ವತೋಭದ್ರವೆಂಬ ಈ ದಿವ್ಯಸಿಂಹಾಸನದ ಮೇಲೆ ಹತ್ತಿ ಕುಳಿತುಕೋ. ಬ್ರಹ್ಮನ ತಂದೆಯೂ, ಕಮಲನಾಭನೂ ಆದ ವಿಷ್ಣುವೇ ನಿನ್ನನ್ನು ಸರ್ವವಿಧದಿಂದಲೂ ಅನುಗ್ರಹಿಸುವನು. ಎಂದು ಭೂದೇವಿಯು ಹೇಳಿದ ಮಾತನ್ನು ಕೇಳಿ ಆ ಬಾಲಕನು ಎಲ್ಲರೂ ನೋಡುತ್ತಿರುವಂತೆಯೇ ಆ ಸಿಂಹಾಸನವನ್ನು ಹತ್ತಿ ಕುಳಿತಕೂಡಲೇ ವಿಷ್ಣುವಿನ ಅನುಗ್ರಹದಿಂದ ಅವನಿಗೆ **ಅಗ್ನಿರ್ವೈ** ಎಂದು ಪ್ರಾರಂಭವಾಗುವ **ಸ್ತೃಣುತೇ ಸ್ತೃಣುತೇ** ಎಂದು ಅಂತ್ಯವಾಗುವ ಬ್ರಾಹ್ಮಣಮಂತ್ರಗಳೆಲ್ಲಾ ಅವನ ಮನಸ್ಸಿಗೆ ಗೋಚರವಾದವು. ಆ ಕೂಡಲೇ ಆ ಬಾಲಕನು ಆ ಮಂತ್ರಗಳನ್ನು ಸಭಿಕರೆದುರಿಗೆ ಉಚ್ಚಸ್ವರದಿಂದ ಪಠಿಸಿದನು. ಮಂತ್ರಾತ್ಮಕವಾದ ಆ ಬ್ರಾಹ್ಮಣದಲ್ಲಿ ನಲವತ್ತು ಅಧ್ಯಾಯಗಳಿರುವುವು. ಅವುಗಳಲ್ಲಿ ಯಜ್ಞಗಳ ಪ್ರಾರಂಭದಲ್ಲಿ ಮಾಡಬೇಕಾದ ಪ್ರಾಯಣೀಯಾದಿ ಇಷ್ಟಿಗಳ ವಿವರಣೆಗಳು, ಚತುರ್ವಿಂಶ ಎಂದು ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ಯಜ್ಞಾಂಗ ದಿನಗಳಲ್ಲಿ ಮಾಡಬೇಕಾದ ಕರ್ತವ್ಯಕರ್ಮಗಳ ವಿವರಣೆಗಳು, ಸಂದರ್ಭಾನುಸಾರ ರಾಜನೀತಿಗಳ ವಿವರಣೆಗಳು ಇವೆಲ್ಲವೂ ಉಕ್ತವಾಗಿದ್ದವು. ಇವುಗಳನ್ನೆಲ್ಲಾ ಒಳಗೊಂಡ ಮಂತ್ರಾತ್ಮಕವಾದ ಬ್ರಾಹ್ಮಣ

ವನ್ನು ಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸದೆ ಪಠಿಸಿ ಕೊನೆಯಲ್ಲಿ ಓಂ ಎಂದು ಉಚ್ಚರಿಸಿ ಮುಗಿಸಿದನು. ಇಷ್ಟೇ ಅಲ್ಲದೆ ಆರಣ್ಯಕವೆಂಬ ಮಂತ್ರಭಾಗದ ಮೂರು ಅಧ್ಯಾಯಗಳನ್ನೂ ಮಹಾವ್ರತವೆಂಬ ಕರ್ಮಭಾಗದ ವಿವರಣೆಯನ್ನೂ (ಐತರೇಯವೆಂಬ) ಉಪನಿಷತ್ತಿನ ಎರಡುಭಾಗಗಳನ್ನೂ ಜ್ಞಾನದೃಷ್ಟಿಯಿಂದ ತಿಳಿದು ಪಠಿಸಿದನು. ಇದನ್ನೆಲ್ಲಾ ಕುತೂಹಲಾವಿಷ್ಟರಾಗಿ ನೋಡುತ್ತಿದ್ದ ದೇವರ್ಷಿ ಸಂಘಗಳೂ ಇವನ ತಂದೆಯೇ ಮೊದಲಾದ ಸಭಿಕರೂ ಆ ಬಾಲಕನನ್ನು ಗೌರವಗಳಿಂದ ಸತ್ಕರಿಸಿ ಪೂಜಿಸಿದರು. ಈ ಬಾಲಕನೂ ಸಹ ಆರಣ್ಯಕವೆಂಬ ಮಂತ್ರಭಾಗವನ್ನು ಮುಗಿಸಿ ಕೊನೆಯಲ್ಲಿ ಓಂಕಾರವನ್ನು ಪಠಿಸಿ ಭೂಮಿದತ್ತವಾದ ಆ ಸಿಂಹಾಸನದಿಂದ ಇಳಿದನು. ಅನಂತರ ಆ ಭೂಮಿದೇವಿಯು ಹಿಂದಿನಂತೆ ಯಜ್ಞವೇದಿಯನ್ನು ಭೇದಿಸಿ ಅಲ್ಲಿಯೇ ಅಂತರ್ಧಾನಳಾದಳು. ಸಿಂಹಾಸನವೂ ಸಹ ಅಲ್ಲಿಯೇ ಅದೃಶ್ಯವಾಯಿತು. ಬಳಿಕ ಈ ಬಾಲಕನ ತಂದೆಯಾದ ಬ್ರಾಹ್ಮಣನೂ ತನ್ನ ಪುತ್ರರೊಡನೆ ಆಶ್ರಮಕ್ಕೆ ಬರಲು ಇವನ ಪತ್ನಿಯಾದ ಇತರೆಯು ನಡೆದ ವಿಷಯವನ್ನೆಲ್ಲಾ ತಿಳಿದು ತುಂಬಾ ಸಂತೋಷಪಟ್ಟಳು. ಇವಳ ಸವತಿಯೂ ಸಹ ಇತರೆಯ ಬಾಲಕನನ್ನು ಗೌರವದಿಂದ ಸತ್ಕರಿಸಿದಳು. ಈ ಬಾಲಕನೂ ಸಹ ತನ್ನ ತಾಯಿಯನ್ನೂ ಬಲತಾಯಿಯನ್ನೂ ತಂದೆಯನ್ನೂ ಸಂತೋಷಪಡಿಸುತ್ತಾ ಅವರ ಆಜ್ಞಾಪಾಲಕನಾಗಿ ವನದಲ್ಲಿ ತಪಶ್ಚರ್ಯಾದಿಗಳಿಂದ ಕಾಲಕಳೆಯುತ್ತಾ ದೇಹಾವಸಾನದಲ್ಲಿ ಅತಿದುರ್ಲಭವಾದ ಬ್ರಹ್ಮಪದವಿಯನ್ನು ಪಡೆದನು ಎಂಬ ಈ ಕಥೆಯನ್ನು ವೇದಾಭಿಮಾನಿಗಳೂ ಆಸ್ತಿಕರೂ ಆದ ಮಹಾಮಹಿಮರು ಪೂಜ್ಯಭಾವದಿಂದಲೂ ಭಕ್ತ್ಯಾದರಗಳಿಂದಲೂ ಸ್ಮರಿಸುತ್ತಿರುವರು.

ಈ ಬಾಲಕನು ಇತರಾ ಎಂಬ ಸ್ತ್ರೀಯ ಪುತ್ರನಾದುದರಿಂದ ಇವನಿಗೆ ಐತರೇಯನೆಂಬ ಹೆಸರು ಬಂದಿತು. ಆದ್ದರಿಂದ ಈ ಐತರೇಯಋಷಿದೃಷ್ಟವಾದ ಬ್ರಾಹ್ಮಣವು ಐತರೇಯಬ್ರಾಹ್ಮಣವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಐತರೇಯ ಮಹರ್ಷಿಗೆ ಮಹೀದಾಸನೆಂಬ ಇನ್ನೊಂದು ಹೆಸರೂ ಇರುವುದು. ಈ ಹೆಸರುಬರಲು ಕಾರಣವೇನೆಂದರೆ—

ಮಹಿ+ದಾ+ಆಸ್=ಮಹಿದಾಸಃ । ಮಹ ಪೂಜಾಯಾಂ ಚುರಾದಿರಂತಃ । ತಸ್ಮಾತ್ ಅಚ ಇಃ । ಮಹಿಃ ಭೂಮಿಃ ದಾಞ್ ದಾನೇ ಆಸ ಉಪವೇಶನೇ ॥ ಮಹಿ, ದಾ, ಆಸ್ ಎಂಬ ಮೂರು ಶಬ್ದಗಳಿಂದ ಮಹಿದಾಸನೆಂಬ ಶಬ್ದವಾಗಿದೆ. ಮಹಿ ಎಂದರೆ ಭೂಮಿಯು; ದಾ ಎಂದರೆ ಕೊಡುವುದು; ಆಸ ಎಂದರೆ ಕುಳಿತುಕೊಳ್ಳುವ ಆಸನ; ಭೂಮಿದೇವಿಯಿಂದ ದತ್ತವಾದ ಸಿಂಹಾಸನದಲ್ಲಿ ಕುಳಿತಿದ್ದವನು ಎಂದರ್ಥವು.

ತೈತ್ತಿರೀಯ ಶಾಖೆಯ ಭಾಷ್ಯಕಾರರಾದ ಭಟ್ಟಭಾಸ್ಕರರೆಂಬುವರು ಈರೀತಿ ಐತರೇಯ ಪದಶಬ್ದಾರ್ಥವನ್ನು ವಿವರಿಸಿದಾರೆ
**ಇತರಸ್ಯ ಋಷೇರಪತ್ಯಮಿತ್ಯೈತರೇಯಃ । ಶುಭ್ರಾದಿಭ್ಯಶ್ಚ ಢಕ್ (೪-೧-೧೨೩) ಇತಿ ॥**

ಇತರ ಎಂಬ ಋಷಿಯ ಪುತ್ರನಾದುದರಿಂದ ಇವನಿಗೆ ಐತರೇಯನೆಂಬ ಹೆಸರು ಬಂದಿತು. ಸದ್ಗುರುಶಿಷ್ಯರೆಂಬುವರು ಐತರೇಯಾರಣ್ಯಕದ ಮೋಕ್ಷಪ್ರದವೆಂಬ ತಮ್ಮ ಭಾಷ್ಯದಲ್ಲಿ ಮಹಿದಾಸಶಬ್ದದ ಅರ್ಥವಿವರಣೆಯನ್ನು ಈರೀತಿ ಮಾಡಿದ್ದಾರೆ—

**ಋಷಿರ್ದೃಷ್ಟ್ವಾ ಸ್ವಮಾತ್ಮಾನಂ ಪಾರೋಕ್ಷ್ಯೇಣಾಹ ಚಾನ್ಯವತ್ ।**
**ಐತಜ್ಜ್ಞಾನಾಮ್ಯಹಂ ನಾನ್ಯದಿತ್ಯಾತ್ಮಾನಂ ವಿಭಾವಯನ್ ।**
**ಇತರಾಖ್ಯಾಸ್ಯ ಮಾತಾಭೂತ್ ಸ್ತ್ರೀಭ್ಯೋ ಢಕ್ಯೈತರೇಯಗೀಃ ।**
**ಮಹಿದಾಸೋ ಮಹೀದತ್ತಮಹಾಸನಸಮಾಸನಾತ್ ।**
**ಅವೋಚಾಮ ಬ್ರಾಹ್ಮಣಾದೌ ಮಾಹಿದಾಸೇತಿಹಾಸಕಂ । ಇತಿ.**



ಇಲ್ಲಿ ಹೇಳಿರುವ ಐತರೇಯ ಮಹಿದಾಸ ಶಬ್ದಗಳ ಅರ್ಥವಿವರಣೆಯು ಹಿಂದೆ ಹೇಳಿದಂತೆಯೇ ಇದೆ. ಐತರೇಯೋಪನಿಷನ್ಮಾಧ್ವಭಾಷ್ಯದಲ್ಲಿ ಈರೀತಿ ಇದೆ—

ಪ್ರಾದುರ್ಬಭೂವ ಭಗವಾಂಸ್ತಪಸೇತರಾಯಾ ನಾರಾಯಣೋಽಬ್ಜಜಸುತಸ್ಯ ವಿಶಾಲನಾಮ್ನಃ ।
ತಸ್ಮಿನ್ ಗತೇಽಧ್ವರಮುಖೋತ್ಸುರವಿಪ್ರಸಂಘೋ ನಿಶ್ಚೇತನಸ್ತದನು ಪದ್ಮಭವೋಽಮುಮುಸ್ತೌತ್ ॥
ತೇನ ಸ್ತುತಃ ಸ ಭಗವಾನ್ ಗಿರಿಶೇಂದ್ರಮುಖ್ಯಾನ್ ಸರ್ವಾನಬೋಧಯದಜೇನ ಸಹೈವ ತೇಽಥ
ದಾಸತ್ವಮಾಪುರತ ಏವ ಮಹತ್ಸುರಾಣಾಂ ದಾಸತ್ವತಃ ಸ ಮಹಿದಾಸ ಇತಿ ಪ್ರಸಿದ್ಧಃ ।
ಶೃಣ್ವತ್ಸು ತೇಷು ಭಗವಾನವದದ್ರಮಾಯೈ ದಿವ್ಯಾಂ ಶ್ರುತಿಂ ಸ ಪರಮೋಽತಿಮುದೈತರೇಯೀಮ್ ।
ಸಾ ಬಹ್ವೃಚೈಃ ಪ್ರಪಠಿತಾ ಚತುರಾನನಾಸ್ಯಾದ್ಯಸ್ಯಾಂ ರಹಸ್ಯಮುದಿತಂ ಪರಮಂ ಹಿ ವಿಷ್ಣೋಃ ॥

ಪೂರ್ವದಲ್ಲಿ ಚತುರ್ಮುಖಬ್ರಹ್ಮನಿಗೆ ವಿಶಾಲಋಷಿಯೆಂಬ ಪುತ್ರನಿದ್ದನು. ಆ ಋಷಿಯ ಪತ್ನಿಯಾದ ಇತರಾ ಎಂಬ ಸ್ತ್ರೀಯು ತನಗೆ ಉತ್ತಮ ಪುತ್ರನಾಗಬೇಕೆಂಬ ಉದ್ದೇಶದಿಂದ ವಿಷ್ಣುವನ್ನು ಕುರಿತು ಬಹುಕಾಲ ತಪಸ್ಸುಮಾಡಿದಳು. ಅವಳ ತಪಸ್ಸಿಗೆ ಪ್ರೀತನಾಗಿ ಸಾಕ್ಷಾನ್ನಾರಾಯಣನೇ ಆಕೆಯ ಗರ್ಭದಲ್ಲಿ ಪುತ್ರನಾಗಿ ಅವತರಿಸಿದನು. ಇತರೆಯೆಂಬ ಸ್ತ್ರೀಯ ಪುತ್ರನಾದುದರಿಂದ ಈ ಕುಮಾರನಿಗೆ ಐತರೇಯನೆಂಬ ಹೆಸರು ಪ್ರಸಿದ್ಧವಾಯಿತು. ಒಂದಾನೊಂದುಕಾಲದಲ್ಲಿ ಈ ಋಷಿಪುತ್ರನು ದೇವತೆಗಳೂ, ಋಷಿಗಳೂ, ಬ್ರಾಹ್ಮಣರೂ ಒಟ್ಟಾಗಿ ಸೇರಿ ಯಜ್ಞಮಾಡುತ್ತಿದ್ದಾಗ ಅಲ್ಲಿಗೆ ಹೋದನು. ಸಾಕ್ಷಾದ್ವಿಷ್ಣುವಿನ ಅವತಾರವೇ ಆದ ಈ ಋಷಿಪುತ್ರನ ದಿವ್ಯತೇಜಸ್ಸನ್ನೂ ಪ್ರಕಾಶವನ್ನೂ ನೋಡಲಾರದೆ ಅಲ್ಲಿದ್ದ ದೇವರ್ಷಿಬ್ರಾಹ್ಮಣರೆಲ್ಲರೂ ಮೂರ್ಛೆಗೊಂಡು ನಿಶ್ಚೇಷ್ಟಿತರಾದರು. ಆಗ ಅಲ್ಲಿಯೇ ಇದ್ದ ಬ್ರಹ್ಮನು ವಿಷ್ಣುಸ್ವರೂಪನಾದ ಈ ಋಷಿಕುಮಾರನನ್ನು ನಾನಾವಿಧವಾಗಿ ಸ್ತುತಿಸಿದನು. ಇದರಿಂದ ಪ್ರಸನ್ನನಾದ ಆ ಕುಮಾರನು ಯಜ್ಞಭೂಮಿಯಲ್ಲಿ ನಿಶ್ಚೇಷ್ಟಿತರಾಗಿದ್ದ ಈಶ್ವರ, ಇಂದ್ರ ಮೊದಲಾದ ದೇವತೆಗಳನ್ನೂ ಋಷಿಬ್ರಾಹ್ಮಣರನ್ನೂ ತನ್ನ ಸಾಮರ್ಥ್ಯದಿಂದ ಮೂರ್ಛೆಯಿಂದ ಎಚ್ಚರಗೊಳ್ಳುವಂತೆ ಮಾಡಿದನು. ಈ ರೀತಿ ಇಂದ್ರಾದಿ ದೇವತೆಗಳೂ ಋಷಿಗಳೂ ಈ ಋಷಿಕುಮಾರನಲ್ಲಿ ದೈನ್ಯತೆಯನ್ನು ಪ್ರದರ್ಶಿಸಿ ದಾಸಭಾವವನ್ನು ಹೊಂದಿ ಸ್ತುತಿಸಿದ್ದರಿಂದ ಈ ಕುಮಾರನು ಮಹಿದಾಸನೆಂಬ ಹೆಸರಿನಿಂದ ಪ್ರಸಿದ್ಧನಾದನು. ಬಳಿಕ ಆ ದೇವರ್ಷಿಬ್ರಾಹ್ಮಣರ ಸಭೆಯಲ್ಲಿ ಎಲ್ಲರಿಗೂ ಕೇಳಿಸುವಂತೆ ಐತರೇಯಶ್ರುತಿಯೆಂದು ಪ್ರಸಿದ್ಧವಾದ ಐತರೇಯಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳನ್ನು ಲಕ್ಷ್ಮೀದೇವಿಗೆ ಉಪದೇಶಿಸಿದನು. ಆ ಲಕ್ಷ್ಮಿಯಿಂದ ಬ್ರಹ್ಮನಿಗೂ ಬ್ರಹ್ಮನಿಂದ ಬಹ್ವೃಚಾ (ಋಗ್ವೇದಾ) ಧ್ಯಾಯಿಗಳಾದ ಬ್ರಾಹ್ಮಣರಿಗೂ ಉಪದಿಷ್ಟವಾದ ಈ ಐತರೇಯಶ್ರುತಿಯು ಅತಿರಹಸ್ಯವಾದ ವಿಷ್ಣುತತ್ತ್ವವನ್ನು ಪ್ರತಿಪಾದಿಸುತ್ತಾ ಪ್ರಸಿದ್ಧವಾಗಿರುವುದು, ಇದಲ್ಲದೆ,

ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್ ।
ಸಾಕ್ಷಾತ್ಸ ಭಗವಾನ್ ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥

ಇತರಾ ಎಂಬ ಸ್ತ್ರೀಯ ತಪೋಬಲದಿಂದ ಭಗವಂತನಾದ ಸಾಕ್ಷಾದ್ವಿಷ್ಣುವೇ ಆಕೆಯಲ್ಲಿ ಮಹಿದಾಸನೆಂಬ ಹೆಸರಿನಿಂದ ಉತ್ಪನ್ನನಾದನು. ಈ ಪುತ್ರನು ವಿಷ್ಣುತತ್ತ್ವವನ್ನು ಪ್ರತಿಪಾದಿಸುವ ಐತರೇಯಶ್ರುತಿಯನ್ನು ನಿರೂಪಿಸಿದನು ಎಂಬ ಈ ಬ್ರಹ್ಮಾಂಡಪುರಾಣದ ಶ್ಲೋಕವನ್ನು ಮಾಧ್ವರು ತಮ್ಮ ಬ್ರಹ್ಮಸೂತ್ರಭಾಷ್ಯದ ಪ್ರಥಮಾಧ್ಯಾಯಪ್ರಥಮಪಾದಾಂತ್ಯಸೂತ್ರದ ಭಾಷ್ಯದಲ್ಲಿ ಉದಾಹರಿಸಿರುವರು.

ಹಿಂದೆ ಹೇಳಿದಂತೆ ಐತರೇಯ ಬ್ರಾಹ್ಮಣದಲ್ಲಿ ಒಟ್ಟು ೪೦ ಅಧ್ಯಾಯಗಳಿವೆ. ಐದೈದು ಅಧ್ಯಾಯಗಳಿಗೆ ಒಂದೊಂದು ಪಂಚಿಕದಂತೆ ಎಂಟು ಪಂಚಿಕೆಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಕಂಡಿಕೆ ಅಥವಾ ಖಂಡಗಳೆಂಬ ವಿಭಾಗಗಳಿವೆ. ಮೊದಲನೆಯ ಪಂಚಿಕೆಯಲ್ಲಿ ೩೦ ಖಂಡಗಳೂ ಎರಡನೆಯ ಪಂಚಿಕೆಯಲ್ಲಿ ೪೧ ಖಂಡಗಳೂ ಮೂರನೆಯ ಪಂಚಿಕೆಯಲ್ಲಿ ೫೦ ಖಂಡಗಳೂ, ನಾಲ್ಕನೆಯ ಪಂಚಿಕೆಯಲ್ಲಿ ೩೨ ಖಂಡಗಳೂ, ಐದನೆಯ ಪಂಚಿಕೆಯಲ್ಲಿ ೩೪ ಖಂಡಗಳೂ, ಆರನೆಯ ಪಂಚಿಕೆಯಲ್ಲಿ ೩೬ ಖಂಡಗಳೂ, ಏಳನೆಯ ಪಂಚಿಕೆಯಲ್ಲಿ ೩೪ ಖಂಡಗಳೂ ಎಂಟನೆಯ ಪಂಚಿಕೆಯಲ್ಲಿ ೨೮ ಖಂಡಗಳೂ ಒಟ್ಟು ೨೮೫ ಖಂಡ

ಗಳಿವೆ. ತೈತ್ತಿರೀಯಬ್ರಾಹ್ಮಣದಲ್ಲಿರುವಂತೆ ವಾಕ್ಯಗಳ ಸಂಖ್ಯಾಪರಿಮಿತಿಯನ್ನು ನಿರ್ದೇಶಿಸಿಲ್ಲ. ಸುಮಾರು ಒಟ್ಟು ೫೭೦೦ ವಾಕ್ಯಗಳಿರಬಹುದು. ಈ ಬ್ರಾಹ್ಮಣದ ಶೈಲಿಯು ಗದ್ಯಾತ್ಮಕವಾಗಿದೆ ಮತ್ತು ವಾಕ್ಯಗಳು ಸಂಹಿತೆಯಂತೆ ಅಷ್ಟೇನೂ ಪ್ರೌಢ ವಾಗಿಯೂ ಬಿಗಿಯಾಗಿಯೂ ಇಲ್ಲ. ಅನೇಕ ವಾಕ್ಯಗಳು ಪುನಃಪುನಃ ಪಠಿತವಾಗಿವೆ. ಆದರೆ ಅರ್ಥವಿವರಣೆಯೂ ವಿಷಯ ನಿರೂಪಣೆಯೂ ಬಹುಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಇದು ಋಗ್ವೇದಕ್ಕೆ ಸಂಬಂಧಪಟ್ಟ ಬ್ರಾಹ್ಮಣವಾದ್ದರಿಂದ ಇದರಲ್ಲಿ ಹೋತೃವರ್ಗದ ಋತ್ವಿಕ್ಕುಗಳಿಗೂ, ಸಪ್ತಹೋತೃ ಗಳಿಗೂ ಸೋಮಾದಿ ಯಜ್ಞಾದಿಗಳಲ್ಲಿ ಅವಶ್ಯಕವಾದ ಮಂತ್ರಗಳ ವಿವರಣೆ ಇದೆ. ಆದರೆ ಇದರಲ್ಲಿ ಎಲ್ಲಾ ಯಜ್ಞಗಳ ವಿವರಣೆಯೂ ಇರುವುದಿಲ್ಲ. ಏಕೆಂದರೆ ಯಜ್ಞಗಳ ಪೂರ್ಣವಾದ ವಿವರಣೆಯು ಯಜುರ್ವೇದವ್ಯಾಪ್ತಿಗೆ ಒಳಪಟ್ಟಿರುತ್ತೆ. ಅಧ್ವರ್ಯು ಮತ್ತು ಉದ್ಗಾತೃವರ್ಗದ ಋತ್ವಿಕ್ಕುಗಳ ಕರ್ತವ್ಯವನ್ನು ಇಲ್ಲಿ ವಿವರಿಸಿಲ್ಲ. ಹೋತೃವರ್ಗದ ಋತ್ವಿಕ್ಕುಗಳ ಕರ್ತವ್ಯವನ್ನು ಮಾತ್ರ ಇಲ್ಲಿ ಅವಶ್ಯಕವಾದ ಮಂತ್ರಗಳೊಡನೆ ತಿಳಿಸಲಾಗಿದೆ. ಮುಖ್ಯವಲ್ಲದ ಸಣ್ಣಸಣ್ಣ ಇಷ್ಟಿಗಳ (ಯಜ್ಞಗಳ) ವಿಷಯದ ಪ್ರಸ್ತಾಪವನ್ನು ಕೈಬಿಡಲಾಗಿದೆ. ಮೊದಲು ಎರಡು ಪಂಚಿಕೆಗಳಲ್ಲಿಯೂ, ಮೂರನೆಯ ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ (೧-೧೩ ಅಧ್ಯಾಯಗಳು) ಸೋಮಯಾಗಗಳಲ್ಲಿ ಪ್ರಕೃತಿಯಾಗವೆಂದು ಪರಿಗಣಿಸಲ್ಪಟ್ಟಿರುವ ಅಗ್ನಿಷ್ಟೋಮಯಾಗದಲ್ಲಿ ಹೋತೃ ವರ್ಗದ ಋತ್ವಿಕ್ಕುಗಳು ನಿರ್ವಹಿಸಬೇಕಾದ ಕರ್ತವ್ಯಕರ್ಮಗಳ ವಿವರಣೆ ಇದೆ. ಈ ಅಗ್ನಿಷ್ಟೋಮಯಾಗವು ಒಂದು ದಿನದಲ್ಲಿ ಮಾಡಿ ಮುಗಿಸಬೇಕಾದ (ಪ್ರಕೃತಿ) ಸೋಮಯಾಗವು. ಈ ಪ್ರಕೃತಿಯಾಗದ ಜತೆಗೆ ಇತರ ಕರ್ಮಾಂಗಗಳೂ ಸೇರಿದರೆ ನಾನಾವಿಧ ವಿಕೃತಿಯಾಗಗಳಾಗುವವು. ಈ ಯಾಗಗಳಲ್ಲಿ ನಿರ್ವಹಿಸಬೇಕಾದ ಕರ್ಮಾಂಗಗಳನ್ನು ವಿಧ್ಯುಕ್ತ (ಯಾವರೀತಿ ಮಾಡಬೇಕೋ ಆರೀತಿ) ಕ್ರಮದಲ್ಲಿ ವಿವರಿಸಲಾಗಿದೆ. ಎರಡನೇ ಪಂಚಿಕೆಯ ಐದನೆಯ ಅಧ್ಯಾಯದಲ್ಲಿಯೂ ಮೂರನೆಯ ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ (೧೦-೧೩ ಅಧ್ಯಾಯಗಳು) ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವ ಪ್ರಾತಃಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಸೋಮರಸವನ್ನು ಹಿಂಡುವ ಮೂರು ಕರ್ಮಗಳಿಗೆ ಅವಶ್ಯಕವಾಗಿ ಬೇಕಾಗುವ ಮಂತ್ರಗಳ (ಶಸ್ತ್ರಮಂತ್ರಗಳ---ಹೋತೃವರ್ಗದ ಋತ್ವಿಕ್ಕುಗಳು ಪಠಿಸುವ ಸ್ತೋತ್ರಮಂತ್ರಗಳಿಗೆ ಶಸ್ತ್ರಮಂತ್ರಗಳೆಂದು ಹೆಸರು) ವಿವರಣೆ ಇದೆ. ಮೂರನೆಯ ಪಂಚಿಕೆಯ ಕೊನೆಯ ಅಧ್ಯಾಯದಲ್ಲಿಯೂ ನಾಲ್ಕನೆಯ ಪಂಚಿಕೆಯ ಮೊದಲ ಎರಡು ಅಧ್ಯಾಯಗಳಲ್ಲಿಯೂ (೧೫-೧೭ ಅಧ್ಯಾಯಗಳು) ಅಗ್ನಿಷ್ಟೋಮಯಾಗದ ವಿಕೃತಿರೂಪಗಳಾದ ಉಕ್ಥ್ಯ, ಷೋಡಶಿ, ಅತಿರಾತ್ರ ಎಂಬ ಸೋಮಯಾಗಗಳ ವರ್ಣನೆ ಇದೆ. -ನಾಲ್ಕನೆಯ ಪಂಚಿಕೆಯ ಮೂರನೆಯ ಅಧ್ಯಾಯದಲ್ಲಿ (೧೮ನೇ ಅಧ್ಯಾಯ) ಒಂದು ವರ್ಷದವರೆಗೂ ನಡೆಯುವ ಸತ್ರಗಳೆಂಬ ದೀರ್ಘಕಾಲಾವಧಿಯಾಗಗಳಲ್ಲಿ ಹೋತೃಗಳು ನಿರ್ವಹಿಸಬೇಕಾದ ಕರ್ತವ್ಯ ಕರ್ಮಗಳ ವಿವರಣೆ ಇದೆ. ನಾಲ್ಕನೆಯ ಪಂಚಿಕೆಯ ಕೊನೆಯ ಎರಡು ಅಧ್ಯಾಯಗಳಲ್ಲಿಯೂ ಐದನೆಯ ಪಂಚಿಕೆಯ ಮೊದಲ ನಾಲ್ಕು ಅಧ್ಯಾಯಗಳಲ್ಲಿಯೂ (೨೦ ೨೪ ಅಧ್ಯಾಯಗಳು) ದ್ವಾದಶಾಹವೆಂಬ ಯಜ್ಞದಲ್ಲಿ ಹೋತೃಗಳು ಮಾಡಬೇಕಾದ ಕರ್ತವ್ಯ ಕರ್ಮಗಳ ವಿಸ್ತಾರವಾದ ವಿವರಣೆ ಇದೆ. ಆರನೆಯ ಪಂಚಿಕೆಯಲ್ಲಿ (೨೬-೩೦ ಅಧ್ಯಾಯಗಳು) ಷಡಹ ಎಂಬ ಆರುದಿನಗಳವರೆಗೆ ನಡೆಯಬೇಕಾದ ಸೋಮಯಾಗಗಳಲ್ಲಿ ಹೋತೃವರ್ಗದ ಆರು ಮಂದಿ ಋತ್ವಿಕ್ಕುಗಳ ಕರ್ತವ್ಯವನ್ನೂ ಗ್ರಾವಸ್ತುತ್ ಮತ್ತು ಸುಬ್ರಹ್ಮಣ್ಯ ಎಂಬ ಋತ್ವಿಕ್ಕುಗಳ ಸಂಕ್ಷೇಪ ಪ್ರಸ್ತಾಪವನ್ನೂ ವಿವರಿಸಲಾಗಿದೆ. ಏಳು ಮತ್ತು ಎಂಟನೇ ಪಂಚಿಕೆಗಳಲ್ಲಿ (೩೧-೪೦ ಅಧ್ಯಾಯಗಳು) ಕ್ಷತ್ರಿಯರು, ರಾಜರು ಮಾತ್ರವೇ ಮಾಡಬೇಕಾದ ರಾಜಸೂಯ ಮೊದಲಾದ ಯಾಗಗಳ ವಿವರಣೆ ಇದೆ. ಇದಲ್ಲದೆ ರಾಜರು ಹೊಸದಾಗಿ ಪಟ್ಟಕ್ಕೆ ಬಂದಾಗ ಅವರು ನೆರವೇರಿಸಬೇಕಾದ ರಾಜ್ಯಾಭಿಷೇಕವಿಧಿಯೂ, ಶುನಃಶೇಫನ ವೃತ್ತಾಂತವೂ ಆ ಕಾಲದಲ್ಲಿ ರಾಜ್ಯಾಭಿಷಕ್ತರಾದ ಅನೇಕ ಪ್ರಸಿದ್ಧರಾಜರ ಮತ್ತು ಚಕ್ರವರ್ತಿಗಳ ಹೆಸರುಗಳೂ ವರ್ಣಿತವಾಗಿವೆ.

ಋಗ್ವೇದಕಾಲದಿಂದಲೂ ಬಳಿಕೆಯಲ್ಲಿದ್ದ ಯಜ್ಞಸಂಬಂಧವಾದ ಅನೇಕ ಸಂಪ್ರದಾಯಗಳೂ ವಿಧಿನಿಯಮಗಳೂ ಇತಿಹಾಸಗಳೂ ಮೊದಲಾದ ಅನೇಕ ವಿಷಯಗಳ ಮೇಲೆ ಈ ಬ್ರಾಹ್ಮಣವು ರಚಿತವಾಗಿರುವುದಲ್ಲದೆ ಗ್ರಂಥಕರ್ತೃವು ಅಲ್ಲಲ್ಲಿ ತನ್ನ

ಸ್ವಂತ ಅಭಿಪ್ರಾಯಗಳನ್ನೂ, ವಿವರಣೆಯನ್ನೂ, ವಿಮರ್ಶೆಯನ್ನೂ ಆಧ್ಯಾತ್ಮಿಕಸಂಬಂಧವಾದ ವಿಷಯಗಳನ್ನೂ ತಿಳಿಸಿದ್ದಾನೆ. ಈ ಗ್ರಂಥದಲ್ಲಿ ಸಂದರ್ಭಾನುಸಾರ ಉಕ್ತವಾಗಿರುವ ಮಂತ್ರಗಳೆಲ್ಲವೂ ಈಗ ಬಳಕೆಯಲ್ಲಿರುವ ಋಗ್ವೇದಮಂತ್ರಗಳೇ ಆಗಿರುವುದಲ್ಲದೆ ಋಗ್ವೇದದಲ್ಲಿಲ್ಲದ ಕೆಲವು ಇತರ ಮಂತ್ರಗಳೂ ಉಕ್ತವಾಗಿವೆ. ಇವು ಸಾಧಾರಣವಾಗಿ ಅಥರ್ವವೇದದಲ್ಲಿ ದೊರೆಯುತ್ತವೆ. ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ವೇದಾಂತತತ್ತ್ವಗಳೂ ಪರಬ್ರಹ್ಮಸ್ವರೂಪವಿಮರ್ಶೆಯೂ ಈ ಗ್ರಂಥದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ.

ಈ ಬ್ರಾಹ್ಮಣದ ಕಾಲದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಇಲ್ಲಿ ಹೇಳುವುದು ಅಪ್ರಕೃತವಾಗಲಾರದು. ವೈದಿಕ ಗ್ರಂಥಗಳ ಕಾಲವನ್ನು ನಿರ್ಣಯಿಸಲು ಸರಿಯಾದ ಸಾಧನೆಸಾಮಗ್ರಿಗಳು ದೊರೆಯುವುದಿಲ್ಲವಾದ್ದರಿಂದ ಈ ವಿಷಯದಲ್ಲಿ ಪಾಶ್ಚಾತ್ಯ ವಿದ್ವಾಂಸರು ಮಾಡಿರುವ ಕೆಲವು ಸಂಶೋಧನೆಗಳಿಗೆ ಮುಖ್ಯವಾಗಿ ಊಹೆಯೇ ಆಧಾರವಾಗಿದೆ. ಅವರು ಸೂಚಿಸುವ ಕಾಲ ನಿರ್ಣಯವು ನ್ಯಾಯವಾಗಿ ಇರಬಹುದಾದ ಪ್ರಾಚೀನತೆಯನ್ನು ನಿರ್ದೇಶಿಸುವುದಿಲ್ಲ. ಆಧುನಿಕ ಪೌರ್ವ[redacted]ವಿದ್ವಾಂಸರು ಪಾಶ್ಚಾತ್ಯರ ಕ್ರಮವನ್ನನುಸರಿಸಿ ನಡೆಸಿರುವ ಸಂಶೋಧನೆಗಳು ಸ್ವಲ್ಪಮಟ್ಟಿಗೆ ಊಹೆಯನ್ನೇ ಆಧಾರವಾಗಿ ಅವಲಂಬಿಸಿದ್ದರೂ ಪಾಶ್ಚಾತ್ಯರ ಕಾಲನಿರ್ಣಯಕ್ಕಿಂತ ಹೆಚ್ಚು ಸಮಂಜಸವಾಗಿದೆ. ಈ ಪ್ರಾಚೀನ ಗ್ರಂಥಗಳ ಕಾಲವನ್ನು ನಿರ್ಣಯಿಸುವಾಗ ಮೂರು ವಿಷಯಗಳನ್ನು ಗಮನಿಸಬೇಕು.

(೧) ಗ್ರಂಥದ ಭಾಷಾಶೈಲಿ.

(೨) ಒಂದು ಗ್ರಂಥಕ್ಕೂ ಮತ್ತೊಂದು ಗ್ರಂಥಕ್ಕೂ ಇರುವ ಸಂಬಂಧ.

(೩) ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು.

ಈ ಮೂರು ವಿಷಯಗಳ ಪ್ರಕಾರ ಐತರೇಯ ಬ್ರಾಹ್ಮಣದ ಕಾಲವನ್ನು ವಿಮರ್ಶೆಮಾಡಿದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಒಂದು ನಿರ್ಧಾರಕ್ಕೆ ಬರಬಹುದು.

ಮೊದಲು ಪಾಶ್ಚಾತ್ಯವಿದ್ವಾಂಸರ ಅಭಿಪ್ರಾಯಗಳನ್ನು ತಿಳಿಸಿ ಅನಂತರ ಪೌರ್ವಾತ್ಯರ ಅಭಿಪ್ರಾಯಗಳನ್ನು ತಿಳಿಸುತ್ತೇವೆ. ಐತರೇಯಬ್ರಾಹ್ಮಣವನ್ನು ಇಂಗ್ಲಿಷ್‌ಭಾಷೆಗೆ ಭಾಷಾಂತರ ಮಾಡಿದವರು Dr. M. Haug ಮತ್ತು A. B. Keith ಎಂಬುವರು. ಇವರಲ್ಲಿ Haug ಎಂಬುವರು—ವೇದಸಾಹಿತ್ಯವು ಕ್ರಿ. ಪೂ. ೨೪೦೦–೨೦೦೦ ರಿಂದ ಈಚೆಗೆ ಪ್ರಾರಂಭವಾಗಿದೆ ಯೆಂದೂ ಸಂಹಿತೆಯ ಕಾಲಕ್ಕೂ ಬ್ರಾಹ್ಮಣಗಳ ಕಾಲಕ್ಕೂ ಮಧ್ಯದಲ್ಲಿ ೫೦೦–೬೦೦ ವರ್ಷಗಳ ಅಂತರವಿರುವುದೆಂದೂ ಇಟ್ಟು ಕೊಂಡರೆ ಈ ಬ್ರಾಹ್ಮಣದ ಕಾಲವು ಕ್ರಿ. ಪೂ. ೧೪೦೦–೨೦೦೦ ಇರಬಹುದೆಂದು ಅಭಿಪ್ರಾಯಪಡುತ್ತಾರೆ. Keith ಎಂಬುವರು ಕ್ರಿ. ಪೂ. ೬೦೦ ವರ್ಷ ಈ ಗ್ರಂಥದ ಕಾಲವಿದ್ದಿರಬಹುದೆಂದು ಹೇಳುತ್ತಾರೆ. ಇವೆರಡು ಅಭಿಪ್ರಾಯಗಳೂ ಸಮಂಜಸವೆಂದು ತೋರುವುದಿಲ್ಲ. ಋಗ್ವೇದ ಕಾಲನಿರ್ಣಯದಲ್ಲಿ ಭಿನ್ನಾಭಿಪ್ರಾಯವಿರುವುದು ಸಹಜವಾಗಿದೆ. ಏಕೆಂದರೆ ಋಗ್ವೇದಸಂಹಿತೆಯೆಲ್ಲಾ ಒಬ್ಬ ಕರ್ತೃವಿನಿಂದ ಒಂದೇಕಾಲದಲ್ಲಿ ರಚಿತವಾದುದಲ್ಲ. ಬೇರೆಬೇರೆ ಕರ್ತೃಗಳು ಅಥವಾ ಋಷಿಗಳು ಬೇರೆಬೇರೆ ಕಾಲದಲ್ಲಿ ರಚಿಸಿದ ಭಾಗಗಳನ್ನೆಲ್ಲಾ ಒಟ್ಟುಗೂಡಿಸಿ ಈ ಗ್ರಂಥಕ್ಕೆ ಋಗ್ವೇದವೆಂಬ ಹೆಸರು ಪ್ರಸಿದ್ಧವಾಗಿದೆ. ಆದರೆ ಋಗ್ವೇದದ ಅತ್ಯಂತ ಪ್ರಾಚೀನಭಾಗಗಳು ಕ್ರಿ. ಪೂ. ಅನೇಕ ಸಾವಿರ ವರ್ಷಗಳ ಹಿಂದಿನವು. ಅತ್ಯಾಧುನಿಕಭಾಗವೂ ಸಹ ಕ್ರಿ. ಪೂ. ೫೦೦೦ ವರ್ಷ ಗಳಿಗಿಂತ ಆಧುನಿಕವಲ್ಲವೆಂದು ಗೋಖಲೆ ಮೊದಲಾದ ವಿದ್ವಾಂಸರು ನಡೆಸಿದ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ಭಾಷಾ ಶೈಲಿಯೂ, ವಿಷಯಗಳೂ ಸಹ ಇದನ್ನು ಸಮರ್ಥಿಸುತ್ತವೆ. ಋಗ್ವೇದಕ್ಕಿಂತ ಪ್ರಾಚೀನವಾದ ಗ್ರಂಥವೇ ಪ್ರಪಂಚದಲ್ಲಿಲ್ಲ. ಸಾಮವೇದವೂ ಅಥವಾ ಅದರ ಬಹು ಭಾಗವೂ ಋಗ್ವೇದದಷ್ಟೇ ಪ್ರಾಚೀನವಾದವು. ಸಾಮವೇದದಲ್ಲಿ ಋಗ್ವೇದಮಂತ್ರಗಳೇ

ಬಹುವಾಗಿ ಸೇರಿರುವುದರಿಂದ ಋಗ್ವೇದಕ್ಕೆ ಹೇಳಿದ ಕಾಲಮಾನವು ಸಾಮವೇದಕ್ಕೂ ಅನ್ವಯಿಸುವುದು. ಯಜುರ್ವೇದ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಋಗ್ವೇದಕಾಲದಲ್ಲಿ ಯಜ್ಞಮಾಡುವ ಕ್ರಮವು ಹೆಚ್ಚು ಕಾರ್ಯಕಲಾಪಗಳನ್ನೊಳಗೊಳ್ಳದೆ ಎಂದರೆ ಈಗಿನಂತೆ ಹೆಚ್ಚು ವಿಸ್ತೃತವಾಗಿಲ್ಲದೆ ಇದ್ದರೂ ಯಜ್ಞದಲ್ಲಿ ಉಪಯೋಗಿಸುವ ಶಬ್ದಗಳು ಎಂದರೆ ಯಜುರ್ಮಂತ್ರಗಳು ಋಗ್ವೇದದಷ್ಟೇ ಪ್ರಾಚೀನವಾದವು. ಈ ಮಂತ್ರಗಳನ್ನೆಲ್ಲಾ ವಿಷಯಾನುಸಾರವಾಗಿ ವಿಂಗಡಿಸಿ ಇದನ್ನು ಯಜುರ್ವೇದಸಂಹಿತೆ ಯೆಂದು ಕರೆಯಲಾಗಿದೆ. ಈ ಯಜುರ್ವೇದಸಂಹಿತೆಯನ್ನು ಕ್ರಮಪಡಿಸಿದ ಕಾಲವು ಅನೇಕ ಶತಮಾನಗಳ ಮೇಲೆ ನಡೆದುದ ರಿಂದ ಈ ಸಂಹಿತೆಯು ಋಗ್ವೇದ ಮತ್ತು ಸಾಮವೇದ ಸಂಹಿತೆಗಳಿಗಿಂತ ಈಚಿನದು ಎಂದರೆ ಋಗ್ವೇದ ಸಂಹಿತೆಗಿಂತ ಒಂದೆರಡು ಸಾವಿರ ವರ್ಷಗಳ ಈಚಿನದು. ಕ್ರಿ. ಪೂ. ೫೦೦೦–೪೦೦೦ ವರ್ಷಗಳು ಯಜುರ್ವೇದ ಸಂಹಿತೆಯ ಕಾಲವೆಂದು ಹೇಳಬಹುದು. ಯಜುಃಸಂಹಿತೆಯ ವಿಷಯದಲ್ಲಿ ಮತ್ತೊಂದು ಮುಖ್ಯವಾದ ವಿಷಯವನ್ನು ಗಮನಿಸಬೇಕಾಗಿದೆ. ಯಜ್ಞಕರ್ಮಾಂಗ[redacted]ಳಲ್ಲಿ ಋಗ್ವೇದಮಂತ್ರಗಳನ್ನಲ್ಲದೆ ಇದನ್ನುಮಾಡು-ಅದನ್ನುಮಾಡು ಮುಂತಾದ ವಾಕ್ಯಗಳನ್ನು ಒಂದುಗೂಡಿಸಿದ ಮಾತ್ರಕ್ಕೆ ಯಜ್ಞ ಮಾಡುವ ಕ್ರಮವನ್ನು ವಿವರಿಸಿದಂತಾಗಲಿಲ್ಲ. ಆದ್ದರಿಂದ ಮಂತ್ರಗಳ ವಿನಿಯೋಗವನ್ನೂ ಆಯಾ ಸಂದರ್ಭಗಳಲ್ಲಿ ಮಾಡಬೇಕಾದ ಕಾರ್ಯಕಲಾಪಗಳನ್ನೂ ವಿವರಿಸುವುದು ಅವಶ್ಯಕವಾಯಿತು. ಈ ವಿವರಣೆಗೆ ಬ್ರಾಹ್ಮಣವೆಂದು ಹೆಸರು. ಯಜುರ್ವೇದದಲ್ಲಿ (ಎಂದರೆ ಕೃಷ್ಣಯಜುರ್ವೇದದಲ್ಲಿ) ಮಂತ್ರಗಳ ಸಮೂಹವನ್ನೂ ಅವುಗಳ ವಿವರಣೆಯನ್ನೂ ಒಂದುಕ್ರಮದಂತೆ ವಿಂಗಡಿಸಿಲ್ಲ. ಯಾವರೀತಿಯನ್ನೂ ಅನುಸರಿಸದೆ ಈ ಎರಡು ಭಾಗಗಳೂ ಮಿಶ್ರಿತವಾಗಿವೆ. ಇದನ್ನು ತಿಳಿದುಕೊಳ್ಳಲು ಕಷ್ಟವಾದ್ದರಿಂದ ಮಂತ್ರ ಗಳನ್ನೆಲ್ಲಾ ಸೇರಿಸಿ ಅದನ್ನು ಸಂಹಿತೆಯೆಂದೂ ಆ ಮಂತ್ರಗಳ ವಿವರಣೆಗಳನ್ನು ಬೇರೆ ಸೇರಿಸಿ ಅದನ್ನು ಬ್ರಾಹ್ಮಣವೆಂದೂ ಕ್ರಮ ಪಡಿಸಲಾಯಿತು. ಈರೀತಿ ಕ್ರಮಪಡಿಸಿದ ಭಾಗವೇ ಶುಕ್ಲಯಜುರ್ವೇದವು. ಇದರಲ್ಲಿ ಮುಖ್ಯವಾಗಿ ಕಾಣ್ವ, ಮಾಧ್ಯಂದಿನ ಎಂಬ ಎರಡು ಶಾಖೆಗಳೂ ಶತಪಥವೆಂಬ ಬ್ರಾಹ್ಮಣವೂ ಈಗ ಬಳಕೆಯಲ್ಲಿವೆ. ಈ ಶುಕ್ಲಯಜುರ್ವೇದದ ಕಾಲವನ್ನು ಕ್ರಿ. ಪೂ. ೪೦೦೦-೩೦೦೦ ವರ್ಷಗಳೆಂದು ಊಹಿಸಬಹುದು. ಇದರಂತೆ ಋಗ್ವೇದಕ್ಕೆ ಐತರೇಯಬ್ರಾಹ್ಮಣದ ಕಾಲವು ಕ್ರಿ.ಪೂ.೩೦೦೦-೨೫೦೦ ವರ್ಷಗಳೆಂದೂ ಕೌಶಿತಕೀಬ್ರಾಹ್ಮಣದ ಕಾಲವು ಅದಕ್ಕಿಂತ ೨–೩ ಶತಮಾನದ ಈಚಿನದೆಂದೂ ಹೇಳಬಹುದು.

ಈ ಕಾಲನಿರ್ಣಯವನ್ನು ಮತ್ತೊಂದು ರೀತಿಯಲ್ಲಿ ನಿಶ್ಚಯಿಸಬಹುದು. ಮೊದಲು ಋಗ್ವೇದಾದಿವೇದಗಳ ಸಂಹಿತೆಗಳ ಕಾಲವು; ಅನಂತರ ಬ್ರಾಹ್ಮಣಗಳ ಕಾಲವು; ಬಳಿಕ ಆರಣ್ಯಕ ಮತ್ತು ಉಪನಿಷತ್ತುಗಳ ಕಾಲವು. ಬಳಿಕ ಯಾಸ್ಕರ ನಿರುಕ್ತವು ಆಮೇಲೆ ಶ್ರೌತ ಮೊದಲಾದ ಸೂತ್ರಗಳು, ಅದಾದನಂತರ ಮೀಮಾಂಸಾದಿ ಷಡ್ದರ್ಶನಗಳು ಬಳಿಕ ಪಾಣಿನಿಯ ವ್ಯಾಕರಣ. ಈರೀತಿ ಪ್ರತಿಯೊಂದು ಕಾಲಮಾನಕ್ಕೂ ಅನೇಕಶತಮಾನಗಳ ಅಂತರವಿರುವುದು. ಪಾಶ್ಚಾತ್ಯರ ಈ ಮಧ್ಯವರ್ತಿ ಕಾಲಮಾನವು ಸುಮಾರು ಎರಡು ಶತಮಾನಗಳೆಂದು ಹೇಳಲಾಗಿದೆ. ಅದು ಸರಿಯಲ್ಲ. ಈಗಿನಂತೆ ಆ ಕಾಲದಲ್ಲಿ ರೈಲು, ವಿಮಾನ ಮೊದಲಾದ ಪ್ರಯಾಣಸೌಲಭ್ಯಗಳು, ಟೆಲಿಗ್ರಾಫ್, ರೇಡಿಯೋ ಮೊದಲಾದ ವಾರ್ತಾಪ್ರಚಾರಸಾಧನಗಳೂ ಇರಲಿಲ್ಲ. ದೇಶದಲ್ಲಿ ಲಿಖಿತ ಭಾಷೆಯಾಗಲಿ ವಿದ್ಯಾಪ್ರಚಾರವಾಗಲಿ ವಿಶೇಷವಾಗಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಒಂದು ಗ್ರಂಥಪ್ರಚಾರವು ಅಥವಾ ಯಜ್ಞ ಮೊದಲಾದ ಕರ್ಮಗಳ ವಿಧಿನಿಯಮಗಳು ಅಥವಾ ಅವುಗಳಲ್ಲಿ ಬದಲಾವಣೆಗಳು ಇಂಡಿಯಾದೇಶದಂತಹ ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಹರಡಬೇಕಾದ ಆ ಕಾಲದಲ್ಲಿ ಅನೇಕಶತಮಾನಗಳ ಕಾಲವು ಅವಶ್ಯಕವಾಗಿತ್ತು. ಈ ದೃಷ್ಟಿಯಿಂದ ಕಾಲಮಾನದ ಅಂತರವು ಕೇವಲ ಎರಡು ಶತಮಾನಗಳೆಂದು ಹೇಳುವುದನ್ನು ಒಪ್ಪುವುದಕ್ಕಾಗುವುದಿಲ್ಲ. ಪಾಶ್ಚಾತ್ಯರು ವ್ಯಾಕರಣಕರ್ತೃವಾದ ಪಾಣಿನಿಯ ಕಾಲವನ್ನು ಕ್ರಿ. ಪೂ. ೩೦೦ ಅಥವಾ ೪೦೦ ಎಂದು ಹೇಳುವರು. ಇದು ಗೌತಮಬುದ್ಧನ ಕಾಲಕ್ಕಿಂತ (ಕ್ರಿ. ಪೂ. ೫೦೦) ಈಚಿನದಾಯಿತು. ಬುದ್ಧನಕಾಲಕ್ಕಿಂತಲೂ ಎಷ್ಟೋ ಹಿಂದೆಯೇ ವೈದಿಕ ಗ್ರಂಥಗಳೂ, ವ್ಯಾಕರಣವೂ, ಯೋಗಶಾಸ್ತ್ರವೂ ಸಹ ಪರಿಷ್ಕರಿಸಲ್ಪಟ್ಟು ಪ್ರಚಾರದಲ್ಲಿದ್ದಿತು. ಆದ್ದರಿಂದ ಈಚಿನ ಸಂಶೋಧನೆ ಯಂತೆ ಪಾಣಿನಿಯ ಕಾಲವು ಕ್ರಿ. ಪೂ. ೮೦೦ ವರ್ಷಕ್ಕಿಂತ ಹಿಂದಿನದಾಗಿರಬೇಕು. ಪೂರ್ವಮೀಮಾಂಸಾದಿ ದರ್ಶನಗಳು

ಪಾಣಿನಿಯ ಕಾಲಕ್ಕಿಂತ ೨೦೦ ವರ್ಷಗಳಾದರೂ ಹಿಂದಕ್ಕಿರಬೇಕು, ಎಂದರೆ ಕ್ರಿ. ಪೂ. ೧೦೦೦ ವರ್ಷಗಳು. ಶ್ರೌತಸೂತ್ರಗಳ ಕಾಲವು ಕ್ರಿ. ಪೂ. ೧೫೦೦ ಎಂದು ಹೇಳಬಹುದು. ಆದರಲ್ಲಿಯೂ ಐತರೇಯಬ್ರಾಹ್ಮಣ, ತೈತ್ತಿರೀಯಬ್ರಾಹ್ಮಣ, ಕೌಶೀತಕೀ ಅಥವಾ ಸಾಂಖ್ಯಾಯನಬ್ರಾಹ್ಮಣ, ಶತಪಥಬ್ರಾಹ್ಮಣಗಳು ಪ್ರಾಚೀನವಾದವುಗಳು. ಜೈಮಿನೀಯ ಮೊದಲಾದ ಇತರ ಬ್ರಾಹ್ಮಣ ಗಳು ಅಷ್ಟು ಪ್ರಾಚೀನವಾದವುಗಳಲ್ಲ. ಎಂದರೆ ಅವುಗಳ ಕಾಲವನ್ನು ಕ್ರಿ. ಪೂ. ೨೦೦೦-೧೫೦೦ ಎಂದು ಹೇಳಬಹುದು. ಯಾಸ್ಕರು (ಕ್ರಿ. ಪೂ. ೨೦೦೦) ತಮ್ಮ ನಿರುಕ್ತಗ್ರಂಥದಲ್ಲಿ ಐತರೇಯ, ಕೌಶೀತಕೀ, ಹಾರಿದ್ರವಿಕ ಮೊದಲಾದ ಬ್ರಾಹ್ಮಣಗಳ ಮತ್ತು ಇತರ ವೇದಸಂಹಿತೆಗಳ ವಾಕ್ಯಗಳನ್ನು ಅಲ್ಲಲ್ಲಿ ಉದಾಹರಿಸಿದ್ದಾರೆ ಎಂದರೆ ಅವರ ಕಾಲದಲ್ಲಿ ಈ ಬ್ರಾಹ್ಮಣಗಳು ಎಲ್ಲರಿಗೂ ತಿಳಿದಿತ್ತೆಂದು ಕಂಡುಬರುತ್ತದೆ. ಈ ಗ್ರಂಥಗಳ ಭಾಷಾಶೈಲಿಯು ಪಾಣಿನಿಯ ವ್ಯಾಕರಣ ನಿಯಮಗಳಿಗೆ ಒಳಪಟ್ಟಿರುವುದಿಲ್ಲ. ವಿಷಯನಿರೂಪಣೆಯಲ್ಲಿ ಎಂದರೆ ಯಜ್ಞಕರ್ಮಾಂಗಗಳ ವಿವರಣೆಯಲ್ಲಿ ಯಜುರ್ವೇದದಲ್ಲಿ ಹೇಳಿರುವ ವಿಷಯಗಳನ್ನೂ ಮತ್ತು ಕರ್ಮವನ್ನು ಅನುಸರಿಸಿರುತ್ತವೆ. ಇತಿಹಾಸಕಥನದಲ್ಲಿ ಸಾಮರಸ್ಯವಿದ್ದರೂ ಅಲ್ಪಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ. ಐತರೇಯಬ್ರಾಹ್ಮಣವನ್ನನುಸರಿಸಿ ಆಶ್ವಲಾಯನಶ್ರೌತಸೂತ್ರವೂ ಕೌಷೀತಕೀಬ್ರಾಹ್ಮಣವನ್ನನುಸರಿಸಿ ಶಾಂಖಾಯನ ಶ್ರೌತ ಸೂತ್ರವೂ ವಿಷಯನಿರೂಪಣೆಮಾಡಿರುವವು. ಆಶ್ವಲಾಯನಶ್ರೌತಸೂತ್ರದಲ್ಲಿ ಹೇಳಿರುವ ವಿಷಯಗಳು ಐತರೇಯಬ್ರಾಹ್ಮಣದಲ್ಲಿ ಈರೀತಿ ವಿವರಿಸಲ್ಪಟ್ಟಿರುವವು. ಐತರೇಯ ಬ್ರಾಹ್ಮಣದಲ್ಲಿರುವ ವಿಷಯಗಳಿಗಿಂತ ಹೆಚ್ಚು ವಿಷಯಗಳ ವಿವರಣೆಯು ಆಶ್ವಲಾಯನ ಶ್ರೌತಸೂತ್ರದಲ್ಲಿದೆ. ಆಶ್ವಲಾಯನಶ್ರೌತಸೂತ್ರದ ಮೊದಲನೇ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವ ದರ್ಶಪೂರ್ಣ ಮಾಸಯಾಗಗಳು, ಅಗ್ನಿಹೋತ್ರ, ಅಗ್ನ್ಯಾಧಾನ. ಚಾತುರ್ಮಾಸ್ಯ, ಪ್ರಾಯಶ್ಚಿತ್ತಗಳು, ಪಶುಬಂಧ ಎಂಬ ಯಜ್ಞಗಳಿಗೆ ಬದಲಾಗಿ ಐತರೇಯಬ್ರಾಹ್ಮಣದಲ್ಲಿ ಪಶುಬಂಧ (ಐ. ಬ್ರಾ. ೧-೧೪), ಅಗ್ನಿಹೋತ್ರ (ಐ. ಬ್ರಾ. ೫, ೨೬-೩೧) ಪ್ರಾಯಶ್ಚಿತ್ತ (ಐ. ಬ್ರಾ. ೭, ೨-೧೨) ಎಂಬ ಭಾಗಗಳ ವಿವರಣೆ ಮಾತ್ರ ಇದೆ. ಅದೂ ಅಷ್ಟು ವಿಸ್ತಾರವಾಗಿಲ್ಲ. ಅಲ್ಲಿಂದ ಮುಂದಕ್ಕೆ ಆಶ್ವ ಲಾಯನಶ್ರೌತಸೂತ್ರವು ಸ್ವಲ್ಪ ಹೆಚ್ಚುಕಡಿಮೆ ಐತರೇಯ ಬ್ರಾಹ್ಮಣವನ್ನೇ ಅನುಸರಿಸಿದೆ.

ವೇದಸಾಹಿತ್ಯದಲ್ಲಿ ಅತಿಮುಖ್ಯವೂ ಪ್ರಾಚೀನವೂ ಆದ ಋಗ್ವೇದಸಂಹಿತೆಯು ಮತ್ತು ಇದರ ಮುಂದಿನ ಗ್ರಂಥಗಳು ಕನ್ನಡಭಾಷೆಯಲ್ಲಿ ಇದೇ ಪ್ರಥಮವಾಗಿ ಅಚ್ಚಾಗಿ ಕನ್ನಡ ಸಾಹಿತ್ಯಾಭಿವೃದ್ಧಿಗೆ ಕಾರಣವಾಗಿವೆ. ಇಂತಹ ಗ್ರಂಥಗಳು ಇದುವರೆಗೆ ಯಾವ ದೇಶಭಾಷೆಯಲ್ಲಿಯೂ ಪ್ರಕಟವಾಗಿರುವುದಿಲ್ಲ. ಇದುವರೆಗೆ 30ಕ್ಕೂ ಹೆಚ್ಚಿನ ಗ್ರಂಥಗಳು ಪ್ರಕಟವಾಗಿವೆ. ಈ ಪುಸ್ತಕಗಳು ದೊಡ್ಡಸೈಜಿನ (ಡೆಮ್ಮಿ ಕಾಲುಭಾಗ) ಸುಮಾರು 30000 ಪೇಜುಗಳಿಗಿಂತಲೂ ಹೆಚ್ಚಾಗಿ ಒಳಗೊಂಡು ಕನ್ನಡಭಾಷೆಯಲ್ಲಿಯೇ (ಇತರ ಭಾಷೆಗಳಲ್ಲಿಯೂ ಸಹ) ಅತಿ ದೊಡ್ಡಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ನಮ್ಮ ಘನಸರ್ಕಾರದವರೂ, ಪ್ರಗತಿಪರವಾದ ಈಗಿನ ಮಂತ್ರಿಮಂಡಲವೂ ಈ ವಿಧವಾದ ಕನ್ನಡ ಸಾಹಿತ್ಯಾಭಿವೃದ್ಧಿಗೆ ನೆರವನ್ನು ನೀಡಿ ಉದಾರವಾಗಿ ಆಶ್ರಯವನ್ನೂ ಪ್ರೋತ್ಸಾಹ ವನ್ನೂ ನೀಡುತ್ತಿರುವುದು ಅಭಿನಂದನೀಯವಾಗಿದೆ.

ಅತಿ ಪ್ರಾಚೀನವೂ, ಅತಿ ಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನೂ, ವೇದಸಾಹಿತ್ಯಕ್ಕೆ ಸಂಬಂಧಪಟ್ಟ ಇತರ ಗ್ರಂಥಗಳನ್ನೂ ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದ ಸಹಿತ ವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ಣಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುವರ್ಯರೂ, ಘನ ಸರ್ಕಾರದವರೂ ಬಹು ದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು

ಕರ್ನಾಟಕರಾಜ್ಯದ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ ಪ್ರಗತಿಪರರಾದ ಸಚಿವರಾದಿಯಾಗಿ ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಶಾರ್ವರಿನಾಮ ಸಂ। ಮಾರ್ಗಶಿರ ಕೃಷ್ಣಾಷ್ಟಮಿ
ಭಾನುವಾರ, ತಾ॥ 12-12-60.

ಅನುವಾದಕ
ಹೆಚ್. ಪಿ. ವೆಂಕಟರಾವ್,
ಆಸ್ಥಾನ ಮಹಾವಿದ್ವಾನ್.

# ವಿಷಯಾನುಕ್ರಮಣಿಕೆ



ಒಂಭತ್ತನೇ ಅಧ್ಯಾಯವು :— ಪುಟಸಂಖ್ಯೆ



ಹತ್ತನೆಯ ಅಧ್ಯಾಯವು :—



ಹನ್ನೊಂದನೆಯ ಅಧ್ಯಾಯವು :—



ಹನ್ನೆರಡನೆಯ ಅಧ್ಯಾಯವು :—

**ಹದಿಮೂರನೆಯ ಅಧ್ಯಾಯವು:—**





॥ ಶ್ರೀಃ ॥

# ಪೂರ್ವಪೀಠಿಕೆ

ವೇದಸಾಹಿತ್ಯವು ಅನೇಕ ಗ್ರಂಥಗಳನ್ನೊಳಗೊಂಡಿದ್ದರೂ ಅವುಗಳನ್ನು ಮೂರು ವಿಧವಾಗಿ ವಿಂಗಡಿಸುವ ಪದ್ಧತಿ ಇದೆ. ಎಂದರೆ ಪ್ರತಿಯೊಂದು ವೇದದಲ್ಲಿಯೂ ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕ, ಉಪನಿಷತ್ ಎಂಬ ಭಾಗಗಳಿವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ನಾಲ್ಕು ವೇದಗಳು ನಿರ್ದಿಷ್ಟವಾಗಿದ್ದರೂ ಇವುಗಳೆಲ್ಲಾ ಒಂದೇ ಗ್ರಂಥದ (ಋಗ್ವೇದದ) ನಾಲ್ಕು ಅಧ್ಯಾಯಗಳೆಂದು ಪರಿಗಣಿಸಬಹುದು. ಏಕೆಂದರೆ, ವೇದಗಳಲ್ಲಿ ಮೊದಲನೆಯದೂ ಮುಖ್ಯವಾದುದೂ, ಅತಿ ಪ್ರಾಚೀನವಾದುದೂ ಆದ ಋಗ್ವೇದಸಂಹಿತೆಯಲ್ಲಿ ಮುಖ್ಯವಾಗಿ ದೇವತೆಗಳನ್ನು ಸ್ತುತಿಸುವ ಸೂಕ್ತಗಳಿವೆ. ಯಜ್ಞಯಾಗಾದಿಗಳಲ್ಲಿಯೂ ಇತರ ದೇವತಾಸಂಬಂಧವಾದ ಕರ್ಮಗಳಲ್ಲಿಯೂ ದೇವತೆಗಳನ್ನು ಸ್ತುತಿಸಿ ಪ್ರಾರ್ಥಿಸುವುದಕ್ಕಾಗಿ ಅಥವಾ ಆಹ್ವಾನಮಾಡುವುದಕ್ಕಾಗಿ ಈ ಋಗ್ವೇದದ ಸೂಕ್ತಗಳನ್ನು ಪಠಿಸುತ್ತಾರೆ. ಯಜುರ್ವೇದದಲ್ಲಿ ಯಜ್ಞಾಂಗಕರ್ಮಗಳ ವಿವರಣೆಗಳಿವೆ. ಎಂದರೆ ಯಜ್ಞವನ್ನು ಹೇಗೆ ಮಾಡಬೇಕು, ಯಾವ ಯಾವ ಸಂದರ್ಭಗಳಲ್ಲಿ ಯಾವ ಯಾವ ಕರ್ಮಗಳನ್ನು ಮಾಡಬೇಕು, ಯಾವ ಯಾವ ಮಂತ್ರಗಳನ್ನು ಯಾರು ಪಠಿಸಬೇಕು ಮುಂತಾದ ವಿವರಣೆಗಳಿವೆ. ಈ ವೇದದಲ್ಲಿ ಹೇಳಿರುವ ಯಜ್ಞಕರ್ಮಗಳಲ್ಲಿ ಪಠಿಸುವ ಮಂತ್ರಗಳೆಲ್ಲಾ ಋಗ್ವೇದಮಂತ್ರಗಳೇ ಆಗಿರಬೇಕು. ಮತ್ತು ಅವುಗಳನ್ನು ಪಠಿಸುವ ಋತ್ವಿಕ್ಕುಗಳಿಗೆ (ಪುರೋಹಿತರಿಗೆ) ಹೋತೃಗಳೆಂದು ಹೆಸರು. ಆದ್ದರಿಂದ ಋಗ್ವೇದದ ಸಹಾಯವಿಲ್ಲದೆ ಯಜ್ಞಾಂಗಕರ್ಮಗಳು ನೆರವೇರುವಂತಿಲ್ಲ. ಮತ್ತು ಈ ಕರ್ಮಗಳಲ್ಲಿ ಮುಖ್ಯಪಾತ್ರವನ್ನು ವಹಿಸುವ ಮತ್ತು ನಾನಾ ಕಾರ್ಯಗಳನ್ನು ಮಾಡುವ ಋತ್ವಿಕ್ಕುಗಳಿಗೆ ಅಧ್ವರ್ಯುಗಳೆಂದು ಹೆಸರು. ಹಾಗೆಯೇ ಸಾಮವೇದಮಂತ್ರಗಳನ್ನು ಶ್ರಾವ್ಯವಾಗಿ ಗಾನಮಾಡುವುದೂ ಯಜ್ಞದಲ್ಲಿ ಮುಖ್ಯವಾದ ಕರ್ಮವು. ಸಾಮವೇದದಲ್ಲಿ ಬಹುಭಾಗವು ಋಗ್ವೇದಮಂತ್ರಗಳೇ ಆಗಿರುವುದರಿಂದ ಋಗ್ವೇದಕ್ಕೂ ಸಾಮವೇದಕ್ಕೂ ಸಂಬಂಧವಿದ್ದಂತಾಯಿತು. ಈ ಸಾಮಗಾನವನ್ನು ಮಾಡುವ ಋತ್ವಿಕ್ಕುಗಳಿಗೆ ಉದ್ಗಾತೃಗಳೆಂದು ಹೆಸರು. ಯಜ್ಞಕರ್ಮವು ಲೋಪದೋಷಗಳಿಲ್ಲದಂತೆ ನೋಡಿಕೊಳ್ಳುವುದಕ್ಕಾಗಿ ಬ್ರಹ್ಮನೆಂಬ ಮುಖ್ಯನಾದ ಋತ್ವಿಕ್ಕಿರುವನು. ಅವನು ಋಗ್ವೇದ, ಯಜುರ್ವೇದ, ಸಾಮವೇದ ಮಂತ್ರಗಳನ್ನೂ ಅಥರ್ವವೇದವನ್ನೂ ಯಜ್ಞಕರ್ಮಗಳ ವಿಧಿನಿಯಮಗಳನ್ನು ತಿಳಿದವನಾಗಿರಬೇಕು. ಹೋತೃವರ್ಗದ ಋತ್ವಿಕ್ಕುಗಳು ಪಠಿಸುವ ಮಂತ್ರಗಳಲ್ಲಿ ಕೆಲವು ಅಥರ್ವವೇದದಲ್ಲಿರುವವು. ಆದ್ದರಿಂದ ಎಲ್ಲಾ ವೇದಗಳಿಗೂ, ಯಜ್ಞಕರ್ಮಗಳಿಗೂ ಋಗ್ವೇದವೇ ಮೂಲವು. ಋಗ್ವೇದಮಂತ್ರಗಳನ್ನೂ ಯಜ್ಞಗಳಲ್ಲಿ ಉಪಯೋಗಿಸುವ ಕ್ರಮವನ್ನೂ ಯಜುರ್ವೇದವು ವಿವರಿಸುವುದು. ಋಗ್ವೇದಮಂತ್ರಗಳನ್ನು ಗಾನಮಾಡುವ ಕ್ರಮವನ್ನು ಸಾಮವೇದವು ವಿವರಿಸುವುದು. ಅಥರ್ವವೇದವು ಅನೇಕ ಋಗ್ವೇದಮಂತ್ರಗಳನ್ನೊಳಗೊಂಡು ಯಜ್ಞಕರ್ಮದಲ್ಲಿ ಸಹಾಯಕವಾಗಿರುವುದು. ಆದ್ದರಿಂದ ಈ ನಾಲ್ಕು ವೇದಗಳೂ ಋಗ್ವೇದವೆಂಬ ಒಂದೇ ಗ್ರಂಥದ ಬೇರೆ ಬೇರೆ ವಿಷಯಗಳನ್ನು ವಿವರಿಸುವ ನಾಲ್ಕು ಪ್ರಕರಣಗಳು ಅಥವಾ ಅಧ್ಯಾಯಗಳೆಂದು ಹೇಳಬಹುದು. ಆದರೆ ಪ್ರತಿಯೊಂದು ವೇದವೂ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿ ಅನೇಕ ವಿಷಯಗಳನ್ನು ವಿವರಿಸುವ ಗ್ರಂಥರಾಶಿಯಾಗಿರುವುದರಿಂದ ಪ್ರತಿಯೊಂದನ್ನೂ ಪ್ರತ್ಯೇಕವಾದ ವೇದವೆಂದು ಪರಿಗಣಿಸುವುದು ರೂಢಿಯಲ್ಲಿದೆ. ಇದಲ್ಲದೆ ಈ ನಾಲ್ಕು ವೇದಗಳಲ್ಲಿರುವ ಗ್ರಂಥಗಳೆಲ್ಲವನ್ನೂ ಒಬ್ಬ ವ್ಯಕ್ತಿಯು ತನ್ನ ಜೀವಿತಕಾಲದಲ್ಲಿ ಅಭ್ಯಾಸ ಮಾಡಲು ಸಾಧ್ಯವಿಲ್ಲದ್ದರಿಂದ ವೇದಸಾಹಿತ್ಯವನ್ನು ವಿಷಯಾನುಸಾರವಾಗಿ ನಾಲ್ಕು ವೇದಗಳೆಂದು ಪರಿಗಣಿಸಿ ಒಬ್ಬ ವ್ಯಕ್ತಿಯು

ಒಂದೊಂದು ವೇದವನ್ನು ಮಾತ್ರ ಅಭ್ಯಾಸಮಾಡುವುದು ರೂಢಿಯಲ್ಲಿ ಬಂದಿರುವುದು. ಈ ಕಾರಣದಿಂದ ಕೆಲವರು ಋಗ್ವೇದವನ್ನು ಮಾತ್ರ ಕಲಿಯುವರು, ಮತ್ತೆ ಕೆಲವರು ಯಜುರ್ವೇದವನ್ನೂ ಇನ್ನು ಕೆಲವರು ಸಾಮವೇದವನ್ನೂ ಕಲಿಯುವರು. ಅತಿಪ್ರಾಚೀನಕಾಲದಲ್ಲಿ ಲಿಖಿತಭಾಗವು ಪ್ರಚಾರವಿಲ್ಲದ್ದರಿಂದ ಈ ವೇದಗಳೆಲ್ಲವೂ ಒಬ್ಬರಿಂದ ಮತ್ತೊಬ್ಬರಿಗೆ (ಗುರುವಿನಿಂದ ಶಿಷ್ಯರಿಗೆ) ಬಾಯಿಪಾಠವಾಗಿ ಕಲಿಸಲ್ಪಡುತ್ತಿತ್ತು. ಪರಂಪರಾಗತವಾಗಿ ಬಂದ ಈ ಕ್ರಮವು ಈಗಲೂ ಅನುಸರಿಸಲ್ಪಡುತ್ತಿದೆ.

ಇನ್ನು ಪ್ರತಿಯೊಂದು ವೇದದಲ್ಲಿಯೂ, ಸಂಹಿತೆ, ಬ್ರಾಹ್ಮಣ ಮತ್ತು ಆರಣ್ಯಕ, ಉಪನಿಷತ್ ಎಂಬ ಮೂರು ವಿಭಾಗಗಳವೆಯೆಂದು ಹಿಂದೆಯೇ ಹೇಳಿದೆಯಷ್ಟೆ. ಈ ಪ್ರತ್ಯೇಕ ವಿಭಾಗಗಳಲ್ಲಿರುವ ವಿಷಯಗಳೇನು, ಅವುಗಳ ಸ್ವರೂಪವೇನು ಎಂಬುವನ್ನು ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವು. ಸಂಹಿತೆಯೆಂದರೆ ಅನೇಕ ಋಷಿಗಳಿಂದ ಬೇರೆ ಬೇರೆ ಕಾಲಗಳಲ್ಲಿ ದೃಷ್ಟವಾದ ನಾನಾಮಂತ್ರಗಳನ್ನು ಒಂದು ಕ್ರಮದಲ್ಲಿ ವಿಂಗಡಿಸಿ ಜೋಡಿಸಿರುವುದು ಎಂದರ್ಥವು. ಋಗ್ವೇದಮಂತ್ರಗಳನ್ನು ಋಷಿದೇವತಾಛಂದಸ್ಸುಗಳಿಗನುಸಾರವಾಗಿ ಮೂರು ವಿಧವಾಗಿ ವಿಂಗಡಿಸಿ ಜೋಡಿಸಬಹುದು. ಆಯಾ ಋಷಿದೃಷ್ಟವಾದ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು ; ಒಂದೇ ದೇವತೆಯನ್ನು ಸ್ತುತಿಸುವ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು ; ಒಂದೇ ಛಂದಸ್ಸಿನ ಮಂತ್ರಗಳನ್ನೆಲ್ಲಾ ಒಂದೆಡೆ ಸೇರಿಸುವುದು. ಈ ಮೂರು ವಿಧಗಳಲ್ಲಿ ಮೊದಲನೆಯ ಕ್ರಮವನ್ನು ಎಂದರೆ ಒಬ್ಬೊಬ್ಬ ಋಷಿಯ ಮಂತ್ರಗಳನ್ನೆಲ್ಲಾ ಒಂದು ಗುಂಪಾಗಿ ಸೇರಿಸುವ ಕ್ರಮವನ್ನು ಋಗ್ವೇದದಲ್ಲಿ ಅನುಸರಿಸಲಾಗಿದೆ. ಇಂತಹ ಹತ್ತು ಗುಂಪುಗಳು ಋಗ್ವೇದದಲ್ಲಿವೆ. ಇವುಗಳಿಗೆ ಮಂಡಲಗಳೆಂದು ಹೆಸರು. ಒಂದೊಂದು ಮಂಡಲಕ್ಕೆ ಒಬ್ಬೊಬ್ಬ ಋಷಿ ಮತ್ತು ಅವನ ವಂಶದವರು ದ್ರಷ್ಟೃಗಳಾಗಿದ್ದಾರೆ. ಆದರೆ ಮೊದಲನೆಯ ಮತ್ತು ಹತ್ತನೆಯ ಮಂಡಲಗಳಲ್ಲಿ ಅನೇಕ ಋಷಿಗಳಿದ್ದಾರೆ. ಏಕೆಂದರೆ ಅಲ್ಪ ಸಂಖ್ಯೆಯ ಮಂತ್ರಗಳನ್ನು ಅಥವಾ ಸೂಕ್ತಗಳನ್ನು ಒಟ್ಟಾಗಿ ಒಂದೆಡೆ ಸೇರಿಸಿ ಈ ಮಂಡಲಗಳು ನಿರ್ಮಿತವಾಗಿವೆ. ಒಂಭತ್ತನೆಯ ಮಂಡಲದಲ್ಲಿ ಮಾತ್ರ ಈ ಕ್ರಮವಿಲ್ಲ. ದೇವತಾಕ್ರಮವಿದೆ ಎಂದರೆ, ಆ ಮಂಡಲದ ಸೂಕ್ತಗಳಿಗೆಲ್ಲಾ ಸೋಮನೆಂಬ ಒಂದೇ ದೇವತೆಯು. ಋಷಿ, ಮಂಡಲ, ಸೂಕ್ತ, ಮಂತ್ರ ಮೊದಲಾದ ಋಗ್ವೇದವಿಭಾಗಕ್ರಮವನ್ನು ನಾವು ಋಗ್ವೇದಸಂಹಿತೆಯ ೧ ನೇ ಭಾಗದ ೧೧-೧೭ ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಯಜುರ್ವೇದಸಂಹಿತೆಯಲ್ಲಿಯೂ ಇದೇ ಕ್ರಮವಿದೆ. ಎಂದರೆ ಒಂದು ಪ್ರತ್ಯೇಕವಾದ ಕರ್ಮದಲ್ಲಿ ಉಪಯೋಗಿಸುವ ಮಂತ್ರಗಳ ಅಥವಾ ವಾಕ್ಯಗಳನ್ನೆಲ್ಲಾ ಒಂದೆಡೆ ಸೇರಿಸಿ ಅದಕ್ಕೆ ಅನುವಾಕವೆಂದು ಕರೆಯಲಾಗಿದೆ. ಹೇಗೆಂದರೆ ಯಜುರ್ವೇದದ ಮೊದಲನೆಯ ಅನುವಾಕದಲ್ಲಿ (Para) ವತ್ಸಾಪಾಕರಣವೆಂಬ (ಕರುವನ್ನು ಅಟ್ಟಿಕೊಂಡು ಹೋಗುವುದು) ಯಜ್ಞಾಂಗಕರ್ಮದಲ್ಲಿ ಉಪಯೋಗಿಸಲ್ಪಡುವ ಅನೇಕ ವಾಕ್ಯಗಳ ಸಂಗ್ರಹವಿದೆ. ಈ ರೀತಿಯಾಗಿ ಒಂದೇವಿಧ ಕರ್ಮದಲ್ಲಿ ಉಪಯೋಗಿಸಲ್ಪಡುವ ನಾನಾವಾಕ್ಯಗಳು ಒಂದೆಡೆ ಸೇರಿ ಯಜುರ್ವೇದದ ಸಂಹಿತೆಯಾಗಿದೆ.

ಸಾಮವೇದಸಂಹಿತೆಯಲ್ಲಿಯೂ ಆಯಾ ಯಜ್ಞದಲ್ಲಿ ಗಾನಮಾಡಲು ಯೋಗ್ಯವಾದ ಮಂತ್ರಗಳನ್ನೊಳಗೊಂಡ ವಿಭಾಗಗಳಿವೆ. ಇವುಗಳಿಗೆ ಸ್ತೋತ್ರಗಳೆಂದು ಹೆಸರು.

ಅಥರ್ವವೇದದಲ್ಲಿಯೂ ಋಗ್ವೇದದ ಕ್ರಮವೇ ಸ್ವಲ್ಪಮಟ್ಟಿಗೆ ಅನುಸರಿಸಲ್ಪಟ್ಟಿದ್ದರೂ ಅಷ್ಟು ಕಟ್ಟುನಿಟ್ಟಾದ ನಿಯಮವಿಲ್ಲ. ಇವೆಲ್ಲವೂ ವೇದಗಳಲ್ಲಿರುವ ಸಂಹಿತಾ ವಿಭಾಗದ ವಿವರಣೆಯಾಯಿತು.

ಇನ್ನು ಬ್ರಾಹ್ಮಣವೆಂಬ ವಿಭಾಗದಲ್ಲಿ ಏನಿದೆ!ಎಂಬುದನ್ನು ವಿಮರ್ಶೆಮಾಡೋಣ. ಆಯಾ ಸಂದರ್ಭದಲ್ಲಿ ಮಂತ್ರವನ್ನು ಹೇಗೆ ಉಪಯೋಗಿಸಬೇಕು, ಹಾಗೆ ಉಪಯೋಗಿಸಲು ಕಾರಣವೇನು, ಮಂತ್ರದ ಅರ್ಥ, ಪೂರ್ವೇತಿಹಾಸ, ಕರ್ಮಗಳನ್ನು ಮಾಡುವ ಉದ್ದೇಶವೇನು, ಅವುಗಳ ಫಲವೇನು ಇತ್ಯಾದಿ ನಾನಾವಿಷಯಗಳನ್ನು ಬ್ರಾಹ್ಮಣಗಳು ವಿವರಿಸುವವು. ಹೇಗೆಂದರೆ—ಋಗ್ವೇದಕ್ಕೆ

ಸೇರಿದ ಐತರೇಯ ಅಥವಾ ಕೌಷೀತಕೀಬ್ರಾಹ್ಮಣವು ಯಜ್ಞಕ್ಕೆ ಸಂಬಂಧಪಟ್ಟ, ಅಗ್ನಿಮಥನ, (ಅರಣಿಗಳಲ್ಲಿ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವುದು) ಸೋಮಾಹರಣ (ಸೋಮಲತೆಗಳನ್ನು ತರುವುದು) ಇತ್ಯಾದಿ ನಾನಾಯಜ್ಞಾಂಗಕರ್ಮಗಳಲ್ಲಿ ಹೋತೃ ವೆಂಬ ಋತ್ವಿಜನು ಮತ್ತು ಅವನ ಸಹಾಯಕರಾದ ಇತರ ಋತ್ವಿಕ್ಕುಗಳು ಪಠಿಸಬೇಕಾದ ಮಂತ್ರಗಳನ್ನೂ ಆ ಮಂತ್ರಗಳ ಅರ್ಥ, ಪೂರ್ವೇತಿಹಾಸ ಮೊದಲಾದ ವಿಷಯಗಳನ್ನೂ ವಿವರಿಸುವವು.

ಇದರಂತೆಯೇ ಯಜುರ್ವೇದದ ಶತಪಥ, ತೈತ್ತಿರೀಯ ಮೊದಲಾದ ಬ್ರಾಹ್ಮಣಗಳು ಯಜ್ಞಾಂಗಕರ್ಮವನ್ನು ನೆರವೇರಿ ಸುವಾಗ ಪಠಿಸುವ ಮಂತ್ರಗಳ ವಿವರಣೆಯನ್ನೂ ಕರ್ಮಗಳನ್ನು ಋತ್ವಿಕ್ಕುಗಳು ಹೇಗೆ ಮಾಡಬೇಕು ಇತ್ಯಾದಿ ಕ್ರಮಗಳನ್ನೂ ವಿವರಿಸುವವು. ಸಾಮವೇದಬ್ರಾಹ್ಮಣಗಳಲ್ಲಿ ಎಂದರೆ ತಾಂಡ್ಯಬ್ರಾಹ್ಮಣ, ಜೈಮಿನೀಯಬ್ರಾಹ್ಮಣ, ಪಂಚವಿಂಶಬ್ರಾಹ್ಮಣ ಮೊದಲಾದ ಗ್ರಂಥಗಳಲ್ಲಿ ಸಾಮಗಾನಗಳನ್ನೂ ಸ್ತೋತ್ರಗಳನ್ನೂ ಪಠಿಸುವ ಕ್ರಮದ ವಿವರಣೆ ಇದೆ. ಅಲ್ಲಲ್ಲಿ ಸಂಬಂಧಪಟ್ಟ ವಿಷಯಗಳಿಗೆ ಪೂರ್ವೇತಿಹಾಸಗಳಿವೆ. ಅಥರ್ವವೇದದ ಗೋಪಥಬ್ರಾಹ್ಮಣದಲ್ಲಿ ಆ ವೇದಕ್ಕೆ ಸಂಬಂಧಪಟ್ಟ ವಿವರಣೆ ಇದೆ.

ಆರಣ್ಯಕಗಳನ್ನು ಆಯಾ ಬ್ರಾಹ್ಮಣಗಳ ಮುಂದಿನ ಭಾಗಗಳೆಂದು ಪರಿಗಣಿಸಬಹುದು. ಬ್ರಾಹ್ಮಣಗಳಲ್ಲಿ ಹೇಳದೆ ಉಳಿದಿರುವ ವಿಷಯಗಳನ್ನೂ ಕೆಲವು ರಹಸ್ಯವಾದ ತತ್ತ್ವಗಳನ್ನೂ ಇವುಗಳಲ್ಲಿ ವಿವರಿಸಲಾಗಿದೆ. ಈ ರಹಸ್ಯತತ್ತ್ವಗಳು ಇತರರಿಗೆ (ಅಧಿಕಾರಿಯಲ್ಲದವರಿಗೆ) ತಿಳಿಯದಿರಲೆಂಬ ಕಾರಣದಿಂದ ಇವುಗಳನ್ನು ಅರಣ್ಯದಲ್ಲಿ ಪಠಿಸಬೇಕೆಂಬ ನಿಯಮವಿದೆ. ಆದ್ದರಿಂದ ಈ ಗ್ರಂಥಗಳಿಗೆ ಆರಣ್ಯಕಗಳೆಂದು ಹೆಸರು.

ಉಪನಿಷತ್ತುಗಳಲ್ಲಿ ಅಧ್ಯಾತ್ಮವಿಷಯವನ್ನು ಮಾತ್ರ ವಿವರಿಸಲಾಗಿದೆ. ಇವುಗಳಲ್ಲಿ ಗಹನವಾದ ತತ್ತ್ವವಿಮರ್ಶೆಯೂ, ಬ್ರಹ್ಮಸ್ವರೂಪ, ಸೃಷ್ಟಿಕ್ರಮ, ಆತ್ಮಾನಾತ್ಮವಿಚಾರ ಮೊದಲಾದ ವಿಷಯಗಳಲ್ಲಿ ವಿಸ್ತಾರವಾದ ವಿವರಣೆಗಳಿವೆ. ಅನೇಕ ಸಂದರ್ಭ ಗಳಲ್ಲಿ ಇವುಗಳಲ್ಲಿರುವ ವಿಷಯಗಳು ಪ್ರಶ್ನೋತ್ತರರೂಪವಾಗಿಯೂ, ಕಥಾರೂಪವಾಗಿಯೂ ವಿವರಿಸಲ್ಪಟ್ಟಿವೆ. ಇವುಗಳಲ್ಲಿ ಅಡಕ ವಾಗಿರುವ ಅನೇಕ ವಿಷಯಗಳು ಆಧುನಿಕವಿಜ್ಞಾನಕ್ಕೂ (Modern Science) ಅನುಸಾರವಾಗಿರುವುದರಿಂದಲೂ ಕಾರ್ಯ ಕಾರಣ ಸಂಬಂಧವನ್ನು ವಿಮರ್ಶೆಸಹಿತವಾಗಿ ವಿವರಿಸಿರುವುದರಿಂದಲೂ ಇವು ಸಮಸ್ತದೇಶಗಳ ಪಂಡಿತರ ಮೆಚ್ಚುಗೆಗೆ ಪಾತ್ರವಾಗಿವೆ, ಪ್ರತಿ ವೇದಕ್ಕೆ ಸಂಬಂಧಪಟ್ಟಂತೆ ಕೆಲವು ಉಪನಿಷತ್ತುಗಳಿದ್ದರೂ, ಯಾವ ವೇದಕ್ಕೂ ಸೇರದಿರುವ ಸ್ವತಂತ್ರವಾದ ಕೆಲವು ಉಪನಿಷತ್ತುಗಳೂ ಇವೆ.

ಇದುವರೆಗೆ ವೇದವಿಭಾಗವನ್ನು ಸಾಮಾನ್ಯವಾಗಿ ವಿವರಿಸಿದ್ದರೂ ಈಗ ಬ್ರಾಹ್ಮಣ ವಿಭಾಗವನ್ನು ಅದರಲ್ಲಿಯೂ ಋಗ್ವೇದಕ್ಕೆ ಸೇರಿದ ಐತರೇಯ ಮತ್ತು ಕೌಷೀತಕೀ (ಅಥವಾ ಸಾಂಖ್ಯಾಯನ) ಬ್ರಾಹ್ಮಣಗಳ ವಿಷಯವನ್ನು ಸೂಕ್ಷ್ಮವಾಗಿ ವಿವರಿಸುವುದು ಆವಶ್ಯಕವು.

## ಬ್ರಾಹ್ಮಣವೆಂದರೇನು ? ಬ್ರಾಹ್ಮಣಶಬ್ದಾರ್ಥ

ಬ್ರಹ್ಮಶಬ್ದಕ್ಕೆ ಅನ್ನ, ಧನ, ಮಂತ್ರ, ಪರಬ್ರಹ್ಮ (ಅವ್ಯಕ್ತಸ್ವರೂಪನಾದ ಪರಮಾತ್ಮ) ಇತ್ಯಾದ್ಯನೇಕಾರ್ಥಗಳಿದ್ದರೂ ಪ್ರಕೃತಸಂದರ್ಭದಲ್ಲಿ ಮಂತ್ರ ಅಥವಾ ಪರಬ್ರಹ್ಮ ಎಂಬ ಅರ್ಥವನ್ನು ಸೂಚಿಸುವ ಬ್ರಹ್ಮಶಬ್ದದಿಂದ ಬ್ರಾಹ್ಮಣಶಬ್ದವು ಉತ್ಪನ್ನ ವಾಗಿದೆ. ಪರಬ್ರಹ್ಮನನ್ನು ತಿಳಿದವನು, ಬ್ರಹ್ಮಜ್ಞಾನಿಯಾದವನು ಎಂಬರ್ಥವನ್ನು ಬ್ರಾಹ್ಮಣಶಬ್ದವು ಸೂಚಿಸುವಾಗ ಬ್ರಾಹ್ಮಣ ಶಬ್ದವು ಜಾತಿವಾಚಕವು. ಅಥವಾ ವೇದಮಂತ್ರವನ್ನು ತಿಳಿದವನು ಎಂಬರ್ಥದಲ್ಲಿಯೂ ಬ್ರಾಹ್ಮಣಶಬ್ದಪ್ರಯೋಗವಿರುವುದು. ಇಲ್ಲಿಯೂ ಬ್ರಾಹ್ಮಣಶಬ್ದವು ಜಾತಿವಾಚಕವು ಎಂದರೆ ಬ್ರಾಹ್ಮಣಾದಿ ನಾಲ್ಕುವರ್ಣಗಳಲ್ಲಿ ಮೊದಲನೆಯದಾದ ಬ್ರಾಹ್ಮಣವರ್ಣವು. ಬ್ರಾಹ್ಮಣಶಬ್ದಕ್ಕೆ ಜಾತಿವಾಚಕವಲ್ಲದ ಮತ್ತೊಂದರ್ಥವಿರುವುದು: ಬ್ರಹ್ಮವೆಂದರೆ ವೇದಮಂತ್ರವೆಂದೂ ಆ ಮಂತ್ರದ ವಿವರಣೆ

ಗಳನ್ನೊಳಗೊಂಡ ಗ್ರಂಥಕ್ಕೆ ಬ್ರಾಹ್ಮಣವೆಂದೂ ಹೆಸರು. ಆದ್ದರಿಂದ ವೇದಗಳಿಗೆ ಸಂಬಂಧಪಟ್ಟಂತೆ ಇರುವ ಮಂತ್ರಗಳ ವಿವರಣೆ, ಮಂತ್ರಗಳನ್ನು ಯಜ್ಞಾದಿಗಳಲ್ಲಿ ಯಾವ ಸಂದರ್ಭದಲ್ಲಿ ಯಾರು ಹೇಗೆ ಉಪಯೋಗಿಸಬೇಕು, ವೇದಮಂತ್ರಗಳಲ್ಲಿ ಹೇಳಿರುವ ದೇವತೆಗಳ ವಿಷಯದಲ್ಲಿಯೂ ಇತರಸಂದರ್ಭಗಳಲ್ಲಿಯೂ ಸಮಯೋಚಿತವಾದ ಪೂರ್ವೇತಿಹಾಸ, (Legends, Traditions, Theological Explanations, Etymologies &c.) ಮಂತ್ರಾರ್ಥ, ಯಜ್ಞಾದಿಗಳನ್ನು ಮಾಡುವ ಕ್ರಮ, ವಿಧಿನಿಯಮಗಳು ಮತ್ತು ಯಜ್ಞಾಂಗಕರ್ಮಗಳ ವಿಚಾರವಿಮರ್ಶೆ ಇತ್ಯಾದಿ ಅನೇಕ ವಿಷಯಗಳು ಬ್ರಾಹ್ಮಣಗಳಲ್ಲಿ ವಿವರಿಸಲ್ಪಟ್ಟಿವೆ.

ಈ ಬ್ರಾಹ್ಮಣಗ್ರಂಥಗಳಲ್ಲಿ ವಿವರಿಸಲ್ಪಟ್ಟಿರುವ ಮಂತ್ರಗಳ ಸಾಮಾನ್ಯ ಮತ್ತು ರಹಸ್ಯಾರ್ಥಗಳು, ಮತ್ತು ಪೂರ್ವೇತಿಹಾಸಗಳು ಬಹು ಹಿಂದಿನಕಾಲದಿಂದಲೂ ಜನರಲ್ಲಿ ಬಳಕೆಯಲ್ಲಿದ್ದ ಭಾವನೆಗಳನ್ನೂ ನಂಬಿಕೆಗಳನ್ನೂ ಪ್ರತಿಬಿಂಬಿಸುವುದಾದ್ದರಿಂದ ವೇದಮಂತ್ರಗಳಿಗೆ ಸರಿಯಾದ ಮತ್ತು ಋಷಿಗಳಿಂದ ನಿರ್ದಿಷ್ಟವಾದ ಅರ್ಥವನ್ನು ಗ್ರಹಿಸುವುದಕ್ಕೆ ಈ ಬ್ರಾಹ್ಮಣಗ್ರಂಥಗಳು ಬಹು ಸಹಾಯಕವಾಗಿವೆ. ಪ್ರತಿಯೊಂದು ವೇದಕ್ಕೂ ಅನೇಕ ಬ್ರಾಹ್ಮಣಗಳಿವೆ. ಬ್ರಾಹ್ಮಣದ ಮುಂದಿನ ಭಾಗವೇ ಆರಣ್ಯಕವು. ಎಂದರೆ, (continuence or later additions) ಅನೇಕ ಸಂದರ್ಭಗಳಲ್ಲಿ ಈ ಬ್ರಾಹ್ಮಣಗಳ ಕೊನೆಯ ಭಾಗವು ಆರಣ್ಯಕ ಮತ್ತು ಉಪನಿಷತ್ತುಗಳಲ್ಲಿ ಪರಿಸಮಾಪ್ತಿಗೊಂಡಿರುವುದು. ಆರಣ್ಯಕವೆಂದರೆ ರಹಸ್ಯಾರ್ಥಗಳನ್ನೊಳಗೊಂಡ ವೇದ ವಿಭಾಗವೆಂತಲೂ ಇವನ್ನು ಅಧಿಕಾರಿಗಳಲ್ಲದವರು ಕೇಳದಂತೆ ಅರಣ್ಯದಲ್ಲಿ ಅಧ್ಯಯನಮಾಡಬೇಕಾಗಿರುವುದರಿಂದಲೂ ಇವುಗಳಿಗೆ ಆರಣ್ಯಕಗಳೆಂಬ ಹೆಸರು ಬಂದಿದೆ. ಉಪನಿಷತ್ತೆಂದರೆ—ಗುರುವು ತನ್ನ ಮುಖ್ಯಶಿಷ್ಯರನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು (**ಉಪ**-ಸಮೀಪ, **ನಿಷತ್**-ಕುಳಿತುಕೊಳ್ಳುವುದು) ವೇದಗಳ ರಹಸ್ಯಾರ್ಥವನ್ನು ಬೋಧಿಸುವುದು ಎಂದರ್ಥವು. ಈ ಉಪನಿಷತ್ತುಗಳು ಸಾಧಾರಣವಾಗಿ ವೇದಗಳ ಕೊನೆಯಭಾಗವಾದ್ದರಿಂದ ಇವುಗಳಿಗೆ ವೇದಾಂತಗ್ರಂಥಗಳೆಂದೂ ಹೆಸರು. ಆರಣ್ಯಕಗಳೂ ಉಪನಿಷತ್ತುಗಳೂ ವೇದಗಳ ಪ್ರತ್ಯೇಕವಿಭಾಗಗಳೆಂದು ಪರಿಗಣಿಸಲ್ಪಟ್ಟಿರುವುದರಿಂದ ಅವುಗಳ ವಿಮರ್ಶೆಯು ಇಲ್ಲಿ ಅನಾವಶ್ಯಕವು.

ಪ್ರತಿಯೊಂದು ವೇದಕ್ಕೂ ಅನೇಕ ಬ್ರಾಹ್ಮಣಗಳಿವೆ. ಋಗ್ವೇದಕ್ಕೆ ಐತರೇಯ ಮತ್ತು ಸಾಂಖ್ಯಾಯನ ಅಥವಾ ಕೌಶೀತಕೀ ಎಂಬ ಎರಡು ಬ್ರಾಹ್ಮಣಗಳಿವೆ. ಶುಕ್ಲಯಜುರ್ವೇದಕ್ಕೆ ಶತಪಥವೆಂಬ ಬ್ರಾಹ್ಮಣವೂ ಕೃಷ್ಣಯಜುರ್ವೇದಕ್ಕೆ ತೈತ್ತಿರೀಯ ಬ್ರಾಹ್ಮಣವೂ ಇವೆ. ಸಾಮವೇದಕ್ಕೆ ತಾಂಡ್ಯಬ್ರಾಹ್ಮಣ, ಪಂಚವಿಂಶಬ್ರಾಹ್ಮಣ, ಜೈಮಿನೀಯ ಉಪನಿಷದ್ಬ್ರಾಹ್ಮಣ, ಷಡ್ವಿಂಶಬ್ರಾಹ್ಮಣ, ಶಾಟ್ಯಾಯನ ಮಂತ್ರಬ್ರಾಹ್ಮಣ, ಆರ್ಷೇಯಬ್ರಾಹ್ಮಣ, ಸಾಮವಿಧಾನಬ್ರಾಹ್ಮಣ ಎಂಬ ಮುಖ್ಯ ಬ್ರಾಹ್ಮಣಗಳಿವೆ. ಅಥರ್ವಣವೇದಕ್ಕೆ ಗೋಪಥವೆಂಬ ಬ್ರಾಹ್ಮಣಮಾತ್ರವಿರುವುದು. ಈ ಬ್ರಾಹ್ಮಣಗಳೆಲ್ಲಾ ಈಗ ರೂಢಿಯಲ್ಲಿರುವವು. ಇವುಗಳಲ್ಲದೆ ವೇದಗಳ ನಾನಾಶಾಖೆಗಳಿಗೆ ಅನುಸಾರವಾಗಿ ಅನೇಕ ಬ್ರಾಹ್ಮಣಗಳಿದ್ದವೆಂದು ತಿಳಿದುಬರುತ್ತದೆ. ಈಗ ಅವು ದೊರೆಯುವುದಿಲ್ಲ, ಲುಪ್ತವಾಗಿವೆ. ಇತರ ಗ್ರಂಥಗಳಲ್ಲಿ ಅವುಗಳ ಹೆಸರು ಸೂಚಿತವಾಗಿರುವುದರಿಂದಲೂ ಆ ಬ್ರಾಹ್ಮಣಗಳ ಅನೇಕ ವಾಕ್ಯಗಳನ್ನು ಉದಾಹರಿಸಿರುವುದರಿಂದಲೂ ಹಿಂದಿನಕಾಲದಲ್ಲಿ ಆ ಬ್ರಾಹ್ಮಣಗಳು ರೂಢಿಯಲ್ಲಿದ್ದವೆಂಬುದಕ್ಕೆ ಸಮರ್ಥನೆ ಇರುವುದು. ಈ ವಿಷಯವನ್ನು ನಾವು ಸ್ವಲ್ಪವಿಸ್ತಾರವಾಗಿ ಋಗ್ವೇದಸಂಹಿತಾ ೧ ನೇ ಭಾಗದ 23-24 ನೇ ಪೇಜುಗಳಲ್ಲಿ ವಿವರಿಸಿದ್ದೇವೆ.

## ಋಗ್ವೇದ ಬ್ರಾಹ್ಮಣಗಳು

ಋಗ್ವೇದಕ್ಕೆ ಸಂಬಂಧಪಟ್ಟಂತೆ ಇರುವ ಮುಖ್ಯವಾದ ಮತ್ತು ಈಗ ಬಳಕೆಯಲ್ಲಿರುವ ಬ್ರಾಹ್ಮಣಗಳು ಎರಡು ಮಾತ್ರ-ಐತರೇಯ ಮತ್ತು ಕೌಶೀತಕೀ (ಸಾಂಖ್ಯಾಯನ): ಈ ಬ್ರಾಹ್ಮಣಗಳಲ್ಲದೆ ಋಗ್ವೇದಕ್ಕೆ ಹಿಂದೆ ಅನೇಕಬ್ರಾಹ್ಮಣಗಳಿದ್ದಂತೆ

ತಿಳಿಯಬರುತ್ತದೆ. ಆಶ್ವಲಾಯನರು ತಮ್ಮ ಗೃಹ್ಯಸೂತ್ರದಲ್ಲಿ (ಋಗ್ವೇದ) ಬ್ರಹ್ಮಯಜ್ಞದ ವೇದಾಂಗತರ್ಪಣದಲ್ಲಿ ಋಗ್ವೇದ ಪಾರಂಗತರೂ ಗ್ರಂಥಕರ್ತರೂ ಆದ ಕೆಲವು ಆಚಾರ್ಯರ ಹೆಸರುಗಳನ್ನು ಹೇಳಿದ್ದಾರೆ. [ಅವರ ಅಭಿಪ್ರಾಯದಲ್ಲಿ ಋಷಿಗಳೆಂದರೆ (ಋಗ್ವೇದ) ಮಂತ್ರಗಳ ದ್ರಷ್ಟೃಗಳೆಂದೂ ಆಚಾರ್ಯರೆಂದರೆ ಬ್ರಾಹ್ಮಣಗ್ರಂಥಗಳ ಕರ್ತೃಗಳೆಂದೂ ಸ್ಪಷ್ಟವಾಗುವುದು.] ಅವರುಗಳು ಯಾರೆಂದರೆ— ಕಹೋಳ, ಕೌಷೀತಕ, ಮಹಾಕೌಷೀತಕ, ಪೈಂಗ್ಯ, ಮಹಾಪೈಂಗ್ಯ, ಸುಯಜ್ಞ, ಸಾಂಖ್ಯಾಯನ, ಐತರೇಯ, ಮಹೈತರೇಯ, ಶಾಕಲ, ಬಾಷ್ಕಲ, ಸುಜಾತವಕ್ತ್ರ, ಔದವಾಹಿ, ಮಹೌದವಾಹಿ, ಸೌಜಾಮಿ, ಶೌನಕ, ಆಶ್ವಲಾಯನ. ಈ ಆಚಾರ್ಯರಲ್ಲಿ ಪ್ರತಿಯೊಬ್ಬರೂ ಬ್ರಾಹ್ಮಣಗ್ರಂಥವನ್ನು ಬರೆದಿರುವರೆಂದು ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಅನೇಕರು ಬರೆದಿರಬಹುದೆಂದು ಹೇಳಬಹುದು. ಆದರೆ ಐತರೇಯ ಮತ್ತು ಕೌಷೀತಕೀ ಎಂಬ ಗ್ರಂಥಗಳನ್ನು ಬಿಟ್ಟರೆ ಇತರ ಗ್ರಂಥಗಳು ಲುಪ್ತವಾಗಿರುವುದರಿಂದ ರೂಢಿಯಲ್ಲಿರುವ ಐತರೇಯ ಮತ್ತು ಕೌಷೀತಕೀ ಬ್ರಾಹ್ಮಣಗಳನ್ನು ಮಾತ್ರ ವಿಮರ್ಶೆಮಾಡಲು ಸಾಧ್ಯವಾಗಿರುವುದು.

## ಐತರೇಯ ಮತ್ತು ಕೌಷೀತಕೀಬ್ರಾಹ್ಮಣಗಳು

ಆಶ್ವಲಾಯನ ಗೃಹ್ಯಸೂತ್ರದ ತರ್ಪಣವಿಧಿಯಲ್ಲಿ ಹೇಳಿರುವಂತೆ ಕೌಷೀತಕೀ ಮತ್ತು ಸಾಂಖ್ಯಾಯನ ಎಂಬ ಇಬ್ಬರು ಬೇರೆಬೇರೆ ವ್ಯಕ್ತಿಗಳಿದ್ದರೆಂದು ಹೇಳಬಹುದು. ಆದರೆ ಈಗ ದೊರೆಯುವ ಕೌಷೀತಕೀ ಬ್ರಾಹ್ಮಣವನ್ನೇ ಸಾಂಖ್ಯಾಯನ ಬ್ರಾಹ್ಮಣ ವೆಂದು ಕರೆಯುವುದು ರೂಢಿಯಾಗಿದೆ. ಪೂರ್ವದಲ್ಲಿ ಈ ಎರಡು ಹೆಸರಿನ ಬೇರೆಬೇರೆ ಬ್ರಾಹ್ಮಣಗಳಿದ್ದಿರಬಹುದು. ಅವುಗಳಲ್ಲಿ ಒಂದು ಲುಪ್ತವಾಗಿರುವುದರಿಂದ ಉಳಿದ ಬ್ರಾಹ್ಮಣವನ್ನು ಎರಡು ಹೆಸರುಗಳಿಂದಲೂ ಕರೆಯುವ ರೂಢಿಬಂದಿರಬಹುದು. ಏಕೆಂದರೆ ಕೌಷೀತಕಿಯಿಂದ ನಿರ್ಮಿತವಾದ ಸೂತ್ರವು ಇರುವುದಿಲ್ಲ. ಆದರೆ ಸಾಂಖ್ಯಾಯನರಿಂದ ರಚಿತವಾದ ಸೂತ್ರವು ಈಗಲೂ ದೊರೆಯುತ್ತದೆ. ಇದಲ್ಲದೆ ಕೌಷೀತಕೀ ಮತ್ತು ಸಾಂಖ್ಯಾಯನರು ಒಂದೇವಂಶದವರಾದ್ದರಿಂದ ಈಗ ದೊರೆಯುವ ಬ್ರಾಹ್ಮಣವನ್ನು ಎರಡು ಹೆಸರಿನಿಂದಲೂ ಕರೆಯುವುದು ರೂಢಿಗೆ ಬಂದಿರಬಹುದು. ಕೌಷೀತಕೀ ಮತ್ತು ಐತರೇಯ ಬ್ರಾಹ್ಮಣಗಳಲ್ಲಿ ಯಾವುದು ಪ್ರಾಚೀನವೆಂದು ನಿಶ್ಚಯಿಸುವ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಈ ಬ್ರಾಹ್ಮಣಗಳು ಈಗಿರುವಂತೆ ಹಿಂದೆ ಇರಲಿಲ್ಲವೆಂದೂ ಕೆಲವು ಭಾಗಗಳು ಪ್ರಾಚೀನವಾಗಿದ್ದು ಮುಂದೆ ಕೆಲವು ಭಾಗಗಳನ್ನು ಅವುಗಳಿಗೆ ಸೇರಿಸಲಾಯಿತೆಂದೂ ಅನೇಕ ಪಾಶ್ಚಾತ್ಯಪಂಡಿತರ ಅಭಿಪ್ರಾಯವಾಗಿದೆ. ಆದ್ದರಿಂದ ಕೆಲವರು ಕೌಷೀತಕೀ ಬ್ರಾಹ್ಮಣವೇ ಪ್ರಾಚೀನವೆಂದೂ ಮತ್ತೆ ಕೆಲವರು ಐತರೇಯ ಬ್ರಾಹ್ಮಣವೇ ಪ್ರಾಚೀನವೆಂದೂ ಹೇಳುವುದಕ್ಕೆ ಸಮರ್ಥನೆ ಇಲ್ಲದೆ ಇಲ್ಲ. ಕೌಷೀತಕೀಬ್ರಾಹ್ಮಣದಲ್ಲಿ ಮೂವತ್ತು ಅಧ್ಯಾಯಗಳೂ ಐತರೇಯ ಬ್ರಾಹ್ಮಣದಲ್ಲಿ ನಲವತ್ತು ಅಧ್ಯಾಯಗಳೂ ಇರುವುದನ್ನು ಪಾಣಿನಿಯು **ತ್ರಿಂಶಚ್ಚತ್ವಾರಿಂಶತೋರ್ಬ್ರಾಹ್ಮಣೇ ಸಂಜ್ಞಾಯಾಂ ಡಣ್**-- ೫-೧-೬೨ ಎಂಬ ಸೂತ್ರದಲ್ಲಿ ಹೇಳಿರುವುದರಿಂದ ಈ ಎರಡು ಬ್ರಾಹ್ಮಣಗಳು ಪಾಣಿನಿಗೆ ತಿಳಿದಿತ್ತೆಂದೂ ಆ ಕಾಲದಲ್ಲಿ (ಕ್ರಿ.ಪೂ. ೮ ನೇ ಶತಮಾನ) ಈ ಬ್ರಾಹ್ಮಣಗಳು ಪ್ರಚಾರದಲ್ಲಿದ್ದವೆಂದೂ ಹೇಳಬಹುದು. ಈ ಬ್ರಾಹ್ಮಣಗಳ ಕಾಲವನ್ನು ಮುಂದೆ ವಿಮರ್ಶಿಸಲಾಗುವುದು.

ಐತರೇಯಬ್ರಾಹ್ಮಣವು ನಲವತ್ತು ಅಧ್ಯಾಯಗಳನ್ನೊಳಗೊಂಡು ಮಂತ್ರವಿವರಣೆಯಲ್ಲಿಯೂ, ಇತಿಹಾಸನಿರೂಪಣೆ ಯಲ್ಲಿಯೂ, ಕೌಷೀತಕೀ ಬ್ರಾಹ್ಮಣಕ್ಕಿಂತ ವಿಸ್ತಾರವಾಗಿರುವುದರಿಂದಲೂ ಋಗ್ವೇದದ ಮುಖ್ಯಮಂತ್ರಗಳನ್ನೇ ಅವಲಂಬಿಸಿರುವ ಹೋತೃವರ್ಗದ ಋತ್ವಿಕ್ಕುಗಳಿಗೆ ಹೆಚ್ಚು ಆದರಣೀಯವಾಗಿದೆ. ಈ ಬ್ರಾಹ್ಮಣಕ್ಕೆ ಮಹೀದಾಸ ಐತರೇಯನೆಂಬುವನು ಪ್ರವರ್ತಕನು ಅಥವಾ ಕರ್ತೃವು. ಈ ಮಹೀದಾಸನ ವಿಷಯದಲ್ಲಿ ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಇತಿಹಾಸವಿರುವುದು. ಈ ಮಹೀದಾಸನ ತಂದೆಗೆ (ಬಾಹ್ಯ) ಅನೇಕಪತ್ನಿಯರಿದ್ದರೆಂದೂ ಅವರಲ್ಲಿ ಶೂದ್ರಜಾತಿಯ ಪತ್ನಿಯೂ ಒಬ್ಬಳೆಂದೂ ಕನಿಷ್ಠ ಜಾತಿಯವಳಾದ ಅವಳನ್ನು ಇತರಾ ಎಂದು ಜನರು ಕರೆಯುತ್ತಿದ್ದರೆಂದೂ ಪ್ರತೀತಿ ಇದೆ. ಇತರೆಯೆಂಬ ಸ್ತ್ರೀಯಪುತ್ರನಾದ್ದರಿಂದ

ಮಹೀದಾಸನಿಗೆ ಐತರೇಯನೆಂಬ ಹೆಸರು ಬಂದಿತು. ಈ ಮಹೀದಾಸನು ವಿದ್ಯಾವಂತನೂ ಬುದ್ಧಿವಂತನೂ ಆಗಿರಲಿಲ್ಲವಾದ್ದರಿಂದ ಇವನ ತಂದೆಗೆ ಇವನ ಮೇಲೆ ಪ್ರೀತಿ ಇರಲಿಲ್ಲ. ಆದ್ದರಿಂದ ಇವನ ತಾಯಿಯಾದ ಇತರೆಯು ಭೂಮಿದೇವಿಯನ್ನು (ಮಹೀ) ಪ್ರಾರ್ಥಿಸಲು ಆ ದೇವಿಯ ಅನುಗ್ರಹದಿಂದ ಈಕೆಯ ಪುತ್ರನು ಸಕಲ ವಿದ್ಯಾಪಾರಂಗತನಾದನು ಮತ್ತು ಮಹಿಯ ಅನುಗ್ರಹದಿಂದ ಇವನು ವಿದ್ಯೆಯನ್ನು ಪಡೆದುದರಿಂದ ಇವನಿಗೆ ಮಹೀದಾಸನೆಂದು ಹೆಸರಾಯಿತು ಎಂಬ ಕಥೆ ಇದೆ. ಐತರೇಯ ಬ್ರಾಹ್ಮಣಕ್ಕೆ ಸುಖಪ್ರದವೆಂಬ ವೃತ್ತಿಯನ್ನು ಬರೆದಿರುವ ಸದ್ಗುರು ಶಿಷ್ಯರೆಂಬುವರು ಮಹೀದಾಸನ ವಿಷಯದಲ್ಲಿ ಸ್ವಲ್ಪ ವಿಸ್ತಾರವಾದ ವಿವರಣೆಯನ್ನು ಈ ರೀತಿ ಬರೆದಿರುವರು.

ಅತ್ರೈತರೇಯರ್ಷಿಮಹೇತಿಹಾಸಂ ಪುರಾಣವೇದೋದಿತಮಾಹುರಾರ್ಯಾಃ ।
ಆಸೀದ್ವಿಪ್ರೋ ಯಜ್ಞವಲ್ಕೋ ದ್ವಿಭಾರ್ಯಸ್ತಸ್ಯ ದ್ವಿತೀಯಾಮಿತರೇತಿ ಚಾಹುಃ ॥
ಸ ಜ್ಯೇಷ್ಠಯಾಕೃಷ್ಟಚಿತ್ತಃ ಪ್ರಿಯಾಂ ತಾಮುಕ್ತ್ವಾ ದ್ವಿತೀಯಾಮಿತರೇತಿ ಹೋಚೇ ।
ತಸ್ಯಾಂ ಜಾತೋಽಥ ಶಿಶುಃ ಸಂರುದನ್ ಸ ಪ್ರೋಕ್ತೋ ಮಾತ್ರಾ ದುಷ್ಟ ತೂಷ್ಣೀಂ ಭವೇತಿ ॥
ಅನೇಕಜನ್ಮಸ್ಮೃತಿಯೋಗಭಾಜಾ ಮೂಕಾಯಿತಂ ತೇನ ಮಹಾತ್ಮನಾಪಿ ।
ಯದ್ವಾಸುದೇವೇತಿ ಮಹತ್ತು ನಾಮ ವಿಷ್ಣೋಃ ಪ್ರವಕ್ಷ್ಯಾಮಿ ತದೇವ ಮೌನೀ ॥
ಅನ್ಯೈಃ ಪ್ರಲಾಪೈಃ ಕಿಮಿಹೇತಿ ಮತ್ವಾ ಜಜಾಪ ಜಪ್ಯಂ ಪರಮಂ ಮುಮುಕ್ಷುಃ ।
ಜ್ಯೇಷ್ಠಾಸುತಾ ವಾಗ್ಮಿನೋ ದರ್ಪಯುಕ್ತಾಶ್ಚೇರುಃ ಸಪುತ್ರಾಮಿತರಾಂ ಪ್ರಹಸ್ಯ ॥
ಆಹೂತಾಸ್ತೇ ಯಾಜನಾಯಾನ್ಯದೇಶೇ ಯಿಯಕ್ಷುಣಾ ಕೇನಚಿದ್ಬ್ರಾಹ್ಮಣೇನ ।
ಪ್ರಯೋಗೇಷು ಕುಶಲಾ ದರ್ಪಯುಕ್ತಾಃ ಸಮಂ ಪಿತ್ರಾಯಾಜಯಂಸ್ತಂ ಸಮೇತ್ಯ ॥
ತಸ್ಮಾದ್ದೇಶಾದಾಗತಾಃ ಕೇಚಿದತ್ರ ಗೃಹೇ ಯಜ್ಞಂ ತಂ ಪ್ರವೃತ್ತಂ ಶಶಂಸುಃ ।
ಸ್ವಪುತ್ರಪೂಜಾಶ್ರವಣೇನ ಹೃಷ್ಟಾಂ ಜ್ಯೇಷ್ಠಾಂ ಸಪತ್ನೀಮಿತರಾ ನಿರೀಕ್ಷ್ಯ ॥
ಸ್ವಮೂಕಪುತ್ರಸ್ಯ ಸಮೀಪಮೇತ್ಯ ಸ್ವಜನ್ಮ ಪುತ್ರಂ ಚ ವಿಗರ್ಹಯಂತೀ ।
ಉವಾಚ ಶೋಕಾಗ್ನಿವಿದೀಪ್ತದೇಹಾ ಸ್ವಭರ್ತ್ರಾದ್ಯೈಃ ಸ್ವಾವಮಾನಂ ವಿಚಿಂತ್ಯ ॥
ಕಿಂ ಜೀವಿತೇ ಮೇ ಮರಣಂ ವರೇಣ್ಯಮಕಾಲತೋ ದುರ್ಭರಂ ಖಲ್ವಹೋ ಧಿಕ್ ।
ವಂಧ್ಯಾ ಕೃತಾರ್ಥಾ ಖಲು ನೈವ ಯಸ್ಯಾಸ್ತ್ವಂ ಮೂಕರೂಪೋ ಭವಸೀಹ ಪುತ್ರಃ ॥
ಭರ್ತ್ರಾ ಸಪತ್ನ್ಯಾ ತನಯೈಶ್ಚ ತಸ್ಯಾಸ್ತ್ವಾಂ ಸೂತ್ವಾಹಂ ಬಾಧಿತಾ ಮುಂಚ ವಾಚಂ ।
ಯಮೋಽಪಿ ಮಾಂ ಜೀವಯನ್ ಪಾಪಕಾರೀ ನೈವಂವಿಧಂ ನರಕೇ ದುಃಖಮಾಹುಃ ॥
ಇತಿ ಶ್ರುತ್ವಾ ವಚನಂ ಸೋಽಪಿ ತಸ್ಯಾ ಉವಾಚ ತಾಂ ಹರ್ಷಯನ್ ಶೋಕತಪ್ತಾಂ ।
ಆತ್ಮಾರಾಮೋ ನೈವ ಮೂಕೋಽಹಮಂಬ ಜಪಂ ತು ಮೋಕ್ಷಾಯ ಕರೋಮಿ ಮೌನೀ ॥
ರುದಂಸ್ತೂಷ್ಣೀಂ ಭವ ದುಷ್ಟೇತಿ ಚೋಕ್ತಸ್ತಥಾಭವಂ ನೈವ ಮೂಕೋಽಹಮಂಬ ।
ಸಂಪ್ರತ್ಯುಕ್ತೋ ಮುಂಚ ವಾಚಂ ಸುತೇತಿ ವಕ್ಷ್ಯಾಮಿ ವಾಚಂ ತವ ಹರ್ಷವೃದ್ಧ್ಯೈ ॥
ಯತ್ರಾಸತೇ ಭ್ರಾತರೋ ಮೇ ಪಿತಾ ಚ ಗತ್ವಾ ವದಿಷ್ಯಾಮಿ ತು ತತ್ರ ವಾಚಂ ।
ಇತ್ಯುಕ್ತ್ವಾಗಾನ್ಮೂಕರೂಪೋ ಮಹಾತ್ಮಾ ಭಕ್ತಿಂ ವಹನ್ ಪುಂಡರೀಕಾಯತಾಕ್ಷೇ ॥

ಮೇಘೌಘಸಂಛನ್ನದಿವಾಕರಾಭೋ ಭಸ್ಮಪ್ರತಿಚ್ಛನ್ನಹುತಾಶನಾಭಃ ।
ಯಜ್ಞೇ ಸ್ಥಿತಾ ಭ್ರಾತರೋ ದರ್ಪಯುಕ್ತಾ ಆಯಾಂತಮಾಲಕ್ಷ್ಯ ಚ ಮೂಕಮೇನಂ ॥
ಮೂಕಸ್ಯ ಯಜ್ಞೇ ಕಿಮಿಹೇತಿ ದಂತಾನ್ ಪ್ರಕಾಶ್ಯ ತೇ ಚಕ್ರುರಥಾಟ್ಟಹಾಸಂ ।
ಸ ಚಾಪಿ ತಂ ಯಜ್ಞಮನುಪ್ರವಿಶ್ಯ ತ್ವಾರೋಢುಮಂಕಂ ಪಿತರಂ ಪ್ರಪೇದೇ ॥
ಮಾ ಮಾ ಸ್ಪೃಕ್ಷೋ ಮೂಕ ದುಷ್ಟೇತಿ ಚೋಕ್ತ್ವಾ ಕ್ರುದ್ಧಃ ಪಿತಾ ನ್ಯರುಧತ್ತ್ವೈತರೇಯಂ ।
ಬ್ರಹ್ಮಾದಿಭೂತಾನಿ ತೃಣಾವರಾಣಿ ನ ಸೇಹಿರೇ ತಸ್ಯ ತದಾವಮಾನಂ ॥
ವಿಷ್ಣುಪ್ರಿಯದ್ವಾದಶವರ್ಣಮಂತ್ರಜಪಪ್ರಸಂಕ್ಷಾಳಿತದುಃಖರಾಶೇಃ ।
ಬ್ರಹ್ಮರ್ಷಿಮುಖ್ಯಸ್ಯ ಸಮಸ್ತವೇದವೇದಾಂಗನಿಷ್ಣಾತವಿಶುದ್ಧಬುದ್ಧೇಃ ॥
ಕ್ಷಮಾಗುಣಾಧಾರಭೂತಾಪಿ ದೇವೀ ವಸುಂಧರಾ ನಾಶಕತ್ತದ್ಧಿ ಸೋಢುಂ ।
ಸದೋಹವಿರ್ಧಾನತಲಂ ವಿದಾರ್ಯ ಸಹಸ್ರಸೂರ್ಯೋದ್ಗಮತುಲ್ಯರೂಪಾ ॥
ಊರ್ಧ್ವಂ ಜಗಾಮಾತ್ಮವಿಭೂಷಣೈಶ್ಚ ಮಹಾದ್ಭುತೈಃ ಶೋಭಿತಸರ್ವದೇಹಾ ।
ಸುವರ್ಣಮುಕ್ತಾಮಣಿರತ್ನಚಿತ್ರಂ ಸಿಂಹಾಸನಂ ಸರ್ವತೋಭದ್ರಮಾಶು ॥
ಸ್ವಯಂ ಕರಾಭ್ಯಾಂ ಕಮಲೋಪಮಾಭ್ಯಾಂ ತಸ್ಮೈ ದದೌ ಸಾಸನಂ ದಿವ್ಯರೂಪಾ ।
ಪಿತ್ರಾ ಸಪತ್ನೀತನಯೈಃ ಸದಸ್ಯೈರ್ದೃಷ್ಟಾ ಸುರರ್ಷಿಪ್ರಮುಖೈಶ್ಚ ಭೂತೈಃ ॥
ಉವಾಚ ಚೈನಂ ಸ್ಮಿತಶೋಭಿವಕ್ತ್ರಾ ವಿಷ್ಣೋಃ ಪ್ರಿಯಾ ಸಾ ಧರಣೀಧರಸ್ಯ ।
ಕುಮಾರ ಕಿಂ ತೇ ಪಿತುರಂಕಕೇನ ಸುತೈಃ ಸಪತ್ನ್ಯಾಃ ಪರಿಮರ್ದಿತೇನ ॥
ಬ್ರಹ್ಮಾದಿಪಿತ್ರಾ ಖಲು ವಿಷ್ಣುನಾ ತ್ವಂ ಸಂಲಾಲಿತೋ ಮಾಂ ಧರಣೀತಿ ವಿದ್ಧಿ ।
ಮಯೋಪನೀತಂ ತ್ವಧಿರೋಹ ಪುತ್ರ ಸಿಂಹಾಸನಂ ಸರ್ವತೋಭದ್ರಮಾಶು ॥
ಅತ್ರಾಧಿರೂಢಸ್ಯ ತವ ಪ್ರಸಾದಂ ಕರಿಷ್ಯತಿ ಬ್ರಹ್ಮಗರ್ಭೋಽಬ್ಜನಾಭಃ ।
ಶ್ರುತ್ವಾ ಧರಿತ್ರ್ಯಾ ವಚನಂ ಸ ಚಾಪಿ ಸರ್ವೈರ್ದೃಷ್ಟಸ್ತ್ವಾರುರೋಹಾಸನಂ ತತ್ ॥
ಅಥಾಧಿರೂಢಸ್ಯ ತದಾವಿರಾಸೀದಗ್ನ್ಯಾದಿಕಂ ದ್ವಿಃಸ್ತೃಣುತೇಂತಕಂ ಚ ।
ಚತ್ವಾರಿಂಶಂ ಬ್ರಾಹ್ಮಣಂ ಪ್ರಾಯಣೀಯಾದ್ಯಹ್ನಾಂ ಚತುರ್ವಿಂಶತಿಕೇನ ಯುಕ್ತಂ ॥
ಏಷಾಮಂಗೈರ್ದೀಕ್ಷಣೀಯಾದಿಭಿಶ್ಚ ಪ್ರಾಸಂಗಿಕೈ ರಾಜಧರ್ಮಾದಿಭಿಶ್ಚ ।
ಸಮಾಪ್ಯ ಸ ಬ್ರಾಹ್ಮಣಂ ಸರ್ವಮಂತೇ ಕೃತ್ವೋಂಕಾರಂ ವಿರತೋ ಬ್ರಹ್ಮನಿಷ್ಠಃ ॥
ಬ್ರಹ್ಮಾದಿಭಿಶ್ಚೋದಿತೋ ಮಾ ವಿರಂಸೀರ್ಬ್ರಹ್ಮನ್ನಸಿ ತ್ವೈತರೇಯೋ ಮಹಾತ್ಮಾ ।
ಆರಣ್ಯಕಂ ತ್ರಿವಿಧಂ ವೈ ದದರ್ಶ ಮಹಾವ್ರತಂ ಚೋಪನಿಷದ್ದ್ವಯಂ ಚ ॥
ತತಃ ಸರ್ವೇಽಪೂಜಯಂಸ್ತಂ ಸಮೇತಾಃ ಪಿತ್ರಾದಯಃ ಸಹ ದೇವರ್ಷಿಸಂಘೈಃ ।
ಆರಣ್ಯಕಾಂತೇ ಪ್ರಣವಂ ಸ ಕೃತ್ವಾ ಹ್ಯವಾರೋಹದಾಸನಾದ್ಭೂಮಿದತ್ತಾತ್ ।
ತತೋ ದೇವೀ ಧರಣೀ ಸಾ ತಿರೋಭೂತ್ತಚ್ಚಾಸನಂ ತೇ ಚ ಸುರರ್ಷಿಸಂಘಾಃ ।
ಸದೋಹವಿರ್ಧಾನತಲಂ ವಿದೀರ್ಣಂ ಸುಶ್ಲಿಷ್ಟಮಾಸೀದ್ವವೃತೇಽಥ ಯಜ್ಞಃ ॥

ಅಥೇತರಾ ಸರ್ವಲೋಕಪ್ರಸಿದ್ಧಂ ತದ್ಬ್ರಾಹ್ಮಣಾರಣ್ಯಕದರ್ಶನಂ ವೈ ।
ಶ್ರುತ್ವಾ ಜಹರ್ಷಾಥ ಪಿತಾ ಸಮೇತ್ಯ ಸಹೈವ ಪುತ್ರೈರಿತರಾಂ ಸಪುತ್ರಾಂ ॥
ಅಪೂಜಯತ್ತಾಂ ಸಪತ್ನೀ ತಥೈನಾಮಸಾಂತ್ವಯತ್ತತ್ಸುತಂ ಚೈತರೇಯಂ ।
ಸ ಚಾಪಿ ಮಾತುಃ ಪ್ರಿಯಕೃನ್ಮಹರ್ಷಿಃ ಪಿತ್ರಾದಿಭಿಃ ಸಮನುಜ್ಞಾತ ಏವ ॥
ವನಂ ಪ್ರಾಪ್ಯ ತತ್ರ ತಪಸ್ತ್ವಾ ತಪಶ್ಚ ಪ್ರಾಪ ಬ್ರಹ್ಮ ದುರ್ವಚಂ ಸೂರಿದೃಶ್ಯಂ ।
ಸ ಚೈತರೇಯಸ್ತ್ವಿತರಾಸುತತ್ವಾತ್ ಸ್ತ್ರೀಭ್ಯೋ ಥಕಾ ಮಹಿದಾಸಸ್ತಥೈಷಃ ॥
ಮಹೀಪ್ರಣೀತಾಸನ ಆಸನಾಚ್ಚ ಸ್ವಾಂಬಾಸಪತ್ನೀಮದನಾಶನಾಚ್ಚ ।
ಮಹಾದಾನಾದ್ವೇದರೂಪಾಚ್ಚ ನಾಮ ತ್ರಿಧಾ ನಿರುಕ್ತಂ ತು ಪೃಷೋದರಾದಿ ॥
ತಥಾ ಚೈಷಾ ಮಾಹಿದಾಸ್ಯೈತರೇಯೀ ಶ್ರುತಾ ಪ್ರೋಕ್ತಾ ಸಂಸ್ಮೃತಾ ಪೂಜಿತಾ ಚ ।
ಶ್ರದ್ಧಾನ್ವಿತೈರಾಸ್ತಿಕೈಃ ಸರ್ವಸಿದ್ಧ್ಯೈ ಪ್ರಕಲ್ಪೇತೇತ್ಯೇವಮಾಹುರ್ಮಹಾಂತಃ ॥

ಇದರ ಮುಖ್ಯ ತಾತ್ಪರ್ಯವೇನೆಂದರೆ:—ಪೂಜ್ಯರಾದ ಹಿರಿಯರು ವೇದಪುರಾಣಾದಿಗಳಲ್ಲಿ ಉಕ್ತವಾಗಿರುವ ಐತರೇಯರ್ಷಿ ವಿಷಯವಾದ ಒಂದು ಇತಿಹಾಸವನ್ನು ಈರೀತಿ ವರ್ಣಿಸಿರುವರು—

ಪೂರ್ವದಲ್ಲಿ ಯಾಜ್ಞವಲ್ಕನೆಂಬ ಓರ್ವ ಮಹರ್ಷಿಗೆ ಇಬ್ಬರು ಪತ್ನಿಯರಿದ್ದರು. ಆ ಋಷಿಯು ತನ್ನ ಹಿರಿಯ ಪತ್ನಿಯಲ್ಲಿಯೇ ವಿಶೇಷ ಅನುರಕ್ತನಾಗಿ ಕನಿಷ್ಠಪತ್ನಿಯನ್ನು ಅಷ್ಟಾಗಿ ಆದರಿಸುತ್ತಿರಲಿಲ್ಲ. ಆದ್ದರಿಂದ ಅವಳನ್ನು ಇತರಾ (ಇನ್ನೊಬ್ಬಳು) ಎಂದೇ ಕರೆಯುತ್ತಿದ್ದನು. ಅವಳಲ್ಲಿ ಉತ್ಪನ್ನನಾದ ಪುತ್ರನು ಬಾಲ್ಯದಲ್ಲಿ ಅಳುತ್ತಿದ್ದಾಗ--ಎಲೈ ದುಷ್ಟನೇ ಸುಮ್ಮನಿರು ಅಳಬೇಡ ಎನ್ನುತ್ತಿದ್ದಳು. ಅದನ್ನು ಕೇಳಿ ಆ ಪುತ್ರನು ಮುಂದೆಯೂ ಮೂಕನಂತೆ ಯಾವ ಮಾತನ್ನು ಆಡದೆ ಏನೋ ಯೋಚಿಸುತ್ತಿರುವಂತೆ ಯಾವಾಗಲೂ ಧ್ಯಾನಪರವಶನಾಗಿಯೇ ಇರುತ್ತಿದ್ದನು. ಆದರೆ ಅವನು ವಾಸ್ತವವಾಗಿ ಮೂಕನಾಗಿರಲಿಲ್ಲ. ಅನೇಕ ಜನ್ಮಸಂಸ್ಕಾರದಿಂದ ಯೋಗಸಿದ್ಧಿಯನ್ನು ಪಡೆದಿದ್ದ ಅವನು ಕೆಲಸಕ್ಕೆ ಬಾರದ ಕಾಡುಹರಟೆಯಿಂದ ಪ್ರಯೋಜನವೇನೆಂದು ತಿಳಿದು ಯಾರೊಡನೆಯೂ ವ್ಯರ್ಥವಾಗಿ ಮಾತನಾಡದೆ ಮೋಕ್ಷಾಭಿಲಾಷಿಯಾಗಿ ಸದಾಕಾಲದಲ್ಲಿಯೂ ಪರಮಪವಿತ್ರವಾದ ವಿಷ್ಣುವಿನ ದ್ವಾದಶಾಕ್ಷರ ಮಂತ್ರವನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದನು. ಜ್ಯೇಷ್ಠಭಾರ್ಯೆಯ ಪುತ್ರರಾದರೋ ವಾಚಾಳಿಗಳೂ ವಿದ್ಯಾವಂತರೂ ಆಗಿದ್ದುದರಿಂದ ಮೂಕನಂತೆ ಕಾಣುತ್ತಿದ್ದ ಇತರಾಪುತ್ರನಾದ ತಮ್ಮ ತಮ್ಮನನ್ನು ನೋಡಿ ಕುಚೇಷ್ಟೆಯಿಂದ ಹಾಸ್ಯಮಾಡಿ ನಗುತ್ತಿದ್ದರು.

ಹೀಗಿರುವಾಗ ದೂರದೇಶದಲ್ಲಿದ್ದ ಒಬ್ಬ ಬ್ರಾಹ್ಮಣನು ಯಜ್ಞಮಾಡಬೇಕೆಂದು ಉದ್ದೇಶಿಸಿ ಆ ಯಜ್ಞಕ್ಕೆ ಬೇಕಾಗುವ ಋತ್ವಿಕ್ಕುಗಳನ್ನೂ ಪುರೋಹಿತರನ್ನೂ ಹುಡುಕಿಕೊಂಡು ಈ ಯಾಜ್ಞವಲ್ಕ್ಯಋಷಿಯ ಆಶ್ರಮಕ್ಕೆ ಬಂದನು. ಅಲ್ಲಿ ಜ್ಯೇಷ್ಠಪತ್ನಿಯ ಪುತ್ರರನ್ನು ಕಂಡು ಯಜ್ಞಮಾಡಿಸುವುದಕ್ಕಾಗಿ ಆಹ್ವಾನಿಸಲು ಅವರು ಒಪ್ಪಿಕೊಂಡು ತಮ್ಮ ತಂದೆಯೊಡನೆ ಆ ಬ್ರಾಹ್ಮಣನ ದೇಶಕ್ಕೆ ಹೋಗಿ ಯಜ್ಞವನ್ನು ನೆರವೇರಿಸಿದರು. ಈ ಯಜ್ಞವನ್ನು ಪ್ರತ್ಯಕ್ಷವಾಗಿ ನೋಡಿದ ಕೆಲವರು ಅಲ್ಲಿಂದ ಯಾಜ್ಞವಲ್ಕ್ಯಋಷಿಯೂ ಅವನ ಜ್ಯೇಷ್ಠಪತ್ನಿಯ ಪುತ್ರರೂ ನಿರ್ವಹಿಸಿದ ಪೌರೋಹಿತ್ಯದ ವೈಭವವನ್ನೂ ವಿಜೃಂಭಣೆಯನ್ನೂ ನಾನಾವಿಧವಾಗಿ ಬಣ್ಣಿಸಿ ಪ್ರಶಂಸೆಮಾಡಿದರು. ಅದನ್ನು ಕೇಳಿದ ಇತರಾ ಎಂಬ ಪತ್ನಿಯು ದುಃಖಸಂತಪ್ತಳಾಗಿ ಮೂಕನಾದ ತನ್ನ ಪುತ್ರನ ಸಮೀಪಕ್ಕೆ ಬಂದು—ಅಯ್ಯೋ ಪುತ್ರನೇ, ಮೂಕನೂ ಅಯೋಗ್ಯನೂ ಆದ ನಿನ್ನನ್ನು ಹಡೆದ ನನ್ನ ಜನ್ಮವು ವ್ಯರ್ಥವು. ನಿನ್ನನ್ನು ಹಡೆಯದೆ ನಾನು ಬಂಜೆಯಾಗಿದ್ದರೇ ಚೆನ್ನಾಗಿತ್ತು. ನಿನ್ನ ಸಹೋದರರು ವಿದ್ಯಾವಂತರಾಗಿ ಯಜ್ಞಾದಿಗಳನ್ನು ಮಾಡಿಸುತ್ತ

ಕೀರ್ತಿವಂತರಾಗಿರುವರು. ನೀನಾದರೋ ಶುದ್ಧಮೂಕನಾಗಿಯೂ ಮೂಢನಾಗಿಯೂ ಇರುವೆ. ಒಂದು ಮಾತನ್ನಾದರೂ ಆಡಬಾರದೇ? ನಿನ್ನ ಸ್ಥಿತಿಯನ್ನು ನೋಡಿ ನನ್ನ ಪತಿಯೂ ಸವತಿಯೂ, ಸವತಿಯ ಪುತ್ರರೂ ನನ್ನನ್ನು ನಾನಾವಿಧವಾಗಿ ಹೀಯಾಳಿಸುತ್ತಿರುವುದನ್ನು ಹೇಗೆ ಸಹಿಸಲಿ? ಈ ಅವಮಾನವನ್ನು ಸಹಿಸುವುದಕ್ಕಿಂತ ನನಗೆ ಮರಣವೇ ಉತ್ತಮವು. ಆವರೆ ಯಮನಿಗೂ ನನ್ನಮೇಲೆ ಕರುಣ ಬರಲಿಲ್ಲ. ನರಕದಲ್ಲಿಯೂ ಸಹ ಈವಿಧವಾದ ದುಃಖವಿರುವುದಿಲ್ಲವೆಂದು ಬಲ್ಲವರು ಹೇಳುತ್ತಾರೆ. ಎಂದು ಮುಂತಾಗಿ ದುಃಖಿಸುತ್ತಿರುವುದನ್ನು ನೋಡಿ ಮೂಕನಾದ ಅವನು ಅವಳನ್ನು ಸಮಾಧಾನಪಡಿಸುತ್ತಾ ಇಂತೆಂದನು— ಅಮ್ಮಾ, ದುಃಖಿಸಬೇಡ, ಮಾತನಾಡೆಂದು ಹೇಳಿದೆಯಲ್ಲವೇ, ಇದೋ ಮಾತನಾಡುತ್ತೇನೆ, ನಾನು ಮೂಕನಲ್ಲ. ನಾನು ಯಾವಾಗಲೂ ಮೋಕ್ಷಾರ್ಥವಾಗಿ ಪರಮಾತ್ಮನಲ್ಲಿ ನೆಟ್ಟಮನಸ್ಸಿನಿಂದ ಧ್ಯಾನಾಸಕ್ತನಾಗಿ ಆತ್ಮಪರವಶನಾಗಿರುವುದರಿಂದ ಬಾಹ್ಯವ್ಯವಹಾರಗಳಲ್ಲಿ ಆಸಕ್ತಿಯಿಲ್ಲದೆ ಕೆಲಸಕ್ಕೆ ಬಾರದ ಮಾತುಗಳನ್ನಾಡುತ್ತಾ ಕಾಲಕಳೆಯಲು ಇಷ್ಟವಿಲ್ಲ. ಆದ್ದರಿಂದ ಯಾವಾಗಲೂ ಮೌನವಾಗಿಯೇ ಇರುತ್ತೇನೆ. ಹಿಂದೆ ನಾನು ಶಿಶುವಾಗಿದ್ದಾಗ ನಾನು ಅಳುತ್ತಿರುವುದನ್ನು ನೋಡಿ ಎಲೈ ದುಷ್ಟನೇ, ಸುಮ್ಮನಿರು ಅಳಬೇಡ ಎಂದು ನೀನು ಹೇಳಲಿಲ್ಲವೇ? ಅದನ್ನೇ ನಿನ್ನ ಆಜ್ಞೆಯೆಂದು ಭಾವಿಸಿ ಆಕಾಲದಿಂದಲೂ ಮಾತನಾಡದೆ ಮೌನವಾಗಿಯೇ ಇದ್ದೆನು. ಈಗ ನೀನು ಮಾತನಾಡೆಂದು ಹೇಳಿದ ಮೇಲೆ ಮಾತನಾಡಬೇಕಾಯಿತು. ನಾನೇನೂ ಮೂಕನಲ್ಲ. ನಾನು ಮಾತನಾಡುವುದನ್ನು ಕಂಡು ನಿನಗೆ ಸಂತೋಷವಾಗಿರುವುದಷ್ಟೆ. ಈಗ ನನ್ನ ತಂದೆಯೂ ನನ್ನ ಸಹೋದರರೂ ಇರುವ ಯಜ್ಞಭೂಮಿಗೂ ಹೋಗಿ ಅವರೆದುರಿಗೂ ಮಾತನಾಡಿ ಬರುವೆನು ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟನು. ಮೂಕನಂತೆ ಕಾಣುತ್ತಿದ್ದರೂ ಪರಮಾತ್ಮನಲ್ಲಿ ಭಕ್ತಿಶ್ರದ್ಧೆಯಿಂದ ಧ್ಯಾನಪರವಶನಾಗಿ ಮಾರ್ಗಕ್ರಮಣ ಮಾಡುತ್ತಿದ್ದ ಈ ಮಹಾತ್ಮನು ಮೇಘಗಳಿಂದ ಆವೃತನಾದ ಸೂರ್ಯನಂತೆಯೂ ಬೂದಿಮುಚ್ಚಿದ ಕೆಂಡದಂತೆಯೂ ಶೋಭಿಸುತ್ತಿದ್ದನು. ಅನೇಕ ದಿನಗಳ ವರೆಗೆ ಪ್ರಯಾಣಮಾಡಿ ಕೊನೆಗೆ ಆ ಯಜ್ಞಭೂಮಿಗೆ ಬಂದನು. ಯಜ್ಞಶಾಲೆಯನ್ನು ಪ್ರವೇಶಿಸುತ್ತಿದ್ದ ಈ ಮೂಕನಾದ ತಮ್ಮ ತಮ್ಮನನ್ನು ನೋಡಿ ಅಹಂಕಾರದಿಂದ ಬೀಗಿ ಮೆರೆಯುತ್ತಿದ್ದ ಇವನ ಸಹೋದರರು ಗಹಗಹಿಸಿ ನಗುತ್ತಾ—ಈ ಮೂಕನೇಕೆ ಇಲ್ಲಿಗೆ ಬಂದನು? ಯಜ್ಞಶಾಲೆಯಲ್ಲಿ ಇವನಿಗೇನು ಕೆಲಸ? ಇವನೇನಾದರೂ ಮಂತ್ರೋಚ್ಚಾರಣೆ ಮಾಡಬಲ್ಲನೇ? ಎಂದು ಪರಸ್ಪರ ಮಾತನಾಡುತ್ತಾ ಅವನನ್ನು ನೋಡಿ ಹಲ್ಲುಕಿರಿದು ಅಣಕಿಸುತ್ತ ಹಾಸ್ಯಮಾಡಲಾರಂಭಿಸಿದರು. ಈ ಮೂಕನಾದರೋ ಇವರ ಮಾತುಗಳನ್ನು ಲಕ್ಷ್ಯಮಾಡದೆ ಯಾಗಶಾಲೆಯನ್ನು ಪ್ರವೇಶಿಸಿ ತನ್ನ ತಂದೆಯಿರುವಲ್ಲಿಗೆ ಹೋಗಿ ಅವನ ತೊಡೆಯಮೇಲೆ ಕುಳಿತುಕೊಳ್ಳಲು ಪ್ರಯತ್ನಿಸಿದನು. ಇದನ್ನು ಕಂಡು ಇವನತಂದೆಯು ಕೋಪಾವಿಷ್ಟನಾಗಿ ಥೂ ದುಷ್ಟನೇ, ನನ್ನನ್ನು ಮುಟ್ಟಬೇಡ ದೂರ ಹೋಗು ಎಂದು ಬೈದು ಅವನನ್ನು ತನ್ನ ತೊಡೆಯಿಂದ ಆಚೆಗೆ ತಳ್ಳಿದನು. ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗಿನ ಸಮಸ್ತ ಚರಾಚರಪ್ರಾಣಿಗಳೂ ಇವನಿಗೆ ಆದ ಈ ಅವಮಾನವನ್ನು ಸಹಿಸಲಿಲ್ಲ. ಆದರೆ ಈ ಮೂಕನು ಇದೊಂದನ್ನೂ ಲಕ್ಷ್ಯಮಾಡಲಿಲ್ಲ. ಏಕೆಂದರೆ ನೋಡುವವರಿಗೆ ಮೂಕನಂತೆಯೂ ಬುದ್ಧಿಹೀನನಂತೆಯೂ ತೋರುತ್ತಿದ್ದರೂ ಇವನು ಯಾವಾಗಲೂ ಮನಸ್ಸಿನಲ್ಲಿ **ಓಂ ನಮೋ ಭಗವತೇ ವಾಸುದೇವಾಯ** ಎಂಬ ಶ್ರೇಷ್ಠವಾದ ದ್ವಾದಶಾಕ್ಷರಮಂತ್ರವನ್ನು ಜಪಿಸುತ್ತಿದ್ದನು. ಸಮಸ್ತ ವೇದವೇದಾಂಗಗಳಲ್ಲಿಯೂ ಪ್ರವೀಣನಾದವನೂ ಶುದ್ಧವಾದ ಬುದ್ಧಿಯುಳ್ಳವನೂ ಆದ ಈ ಬ್ರಹ್ಮರ್ಷಿಗೆ ದುಃಖಾವಮಾನಗಳೆಂದರೇನು? ಬಾಹ್ಯಪ್ರಪಂಚದ ವ್ಯವಹಾರಗಳಿಗೆ ಗಮನಕೊಡದೆ ದ್ವಾದಶಾಕ್ಷರಮಂತ್ರಜಪದಲ್ಲಿಯೇ ಆಸಕ್ತನಾಗಿದ್ದನು. ಆದರೆ ಸರ್ವರ ತಪ್ಪುಗಳನ್ನು ಸಹಿಸುವ ಸ್ವಭಾವವುಳ್ಳ, ಕ್ಷಮಾಗುಣವೇ ಭೂಷಣವಾಗಿವುಳ್ಳ ಭೂಮಿದೇವಿಯು ಈ ಬಾಲಕನಿಗೆ ಆದ ಅವಮಾನವನ್ನು ನೋಡಿ ಸಹಿಸಲಿಲ್ಲ. ಆದ್ದರಿಂದ ಆ ವಸುಂಧರಾದೇವಿಯು ಅಲ್ಲಿಯೇ ಇದ್ದ ಯಜ್ಞವೇದಿಯನ್ನು ಭೇದಿಸಿಕೊಂಡು ಎಲ್ಲರಿಗೂ ಕಾಣುವಂತೆ ಸಮಸ್ತ ವಸ್ತ್ರಾಭರಣಗಳನ್ನು ಧರಿಸಿ ದಿವ್ಯಮಂಗಳ ವಿಗ್ರಹದಿಂದ ಆವಿರ್ಭೂತಳಾದಳು. ಮತ್ತು ಸುವರ್ಣದಿಂದಲೂ ನವರತ್ನಗಳಿಂದಲೂ ಖಚಿತವಾದ ಒಂದು ದಿವ್ಯಸಿಂಹಾಸನವನ್ನು ಅಲ್ಲಿಯೇ ನಿರ್ಮಿಸಿ ಅದರಲ್ಲಿ ಈ ಬಾಲಕನನ್ನು ತನ್ನ ಕಮಲಸದೃಶರಾದ ಕೈಗಳಿಂದ ತಾನೇ ಕರದೊಯ್ದು ಕೂಡಿಸಿದಳು. ಇದನ್ನೆಲ್ಲಾ ಈ ಬಾಲಕನ

ತಂದೆಯೂ ಸವತಿಯ ಮಕ್ಕಳಾದ ಇವನ ಸಹೋದರರೂ ಮತ್ತು ಆ ಯಜ್ಞವೇದಿಯಲ್ಲಿದ್ದ ಸಮಸ್ತ ಋಷಿಗಳೂ, ಸಭಿಕರೂ ಆಶ್ಚರ್ಯದಿಂದ ನೋಡುತ್ತಿರಲು ವಿಷ್ಣುಪ್ರಿಯೆಯಾದ ಆ ಭೂಮಿದೇವಿಯು ಮುಗುಳುನಗೆಯನ್ನು ಸೂಸುತ್ತ ಇಂತೆಂದಳು— ಅಪ್ಪ, ಕುಮಾರನೇ, ದುಃಖಿಸಬೇಡ. ಸವತೀಮಕ್ಕಳಾದ ಆ ನಿನ್ನ ದುಷ್ಟಸಹೋದರರು ಕುಳಿತುಕೊಳ್ಳಲು ಆಶೆಪಡುವ ನಿನ್ನ ತಂದೆಯ ತೊಡೆಯಿಂದ ನಿನಗೇನಾಗಬೇಕಾಗಿದೆ? ಇಗೋ ಇಲ್ಲಿ ನೋಡು. ನಾನು ವಿಷ್ಣುವಿನ ಪ್ರಿಯಪತ್ನಿಯಾದ ಭೂಮಿ ದೇವಿಯು. ಬ್ರಹ್ಮಾದಿದೇವತೆಗಳಿಗೆಲ್ಲಾ ತಂದೆಯೂ ಪಾಲಕನೂ ಆಗಿರುವ ಸಾಕ್ಷಾತ್ ಶ್ರೀವಿಷ್ಣುವೇ ನಿನ್ನನ್ನು ಆದರಿಸಿ ಲಾಲಿಸು ತ್ತಾನೆ. ನಾನು ಇಲ್ಲಿ ನಿರ್ಮಿಸಿರುವ ಸರ್ವತೋಭದ್ರವೆಂಬ ಈ ದಿವ್ಯಸಿಂಹಾಸನದ ಮೇಲೆ ಹತ್ತಿ ಕುಳಿತುಕೋ. ಬ್ರಹ್ಮನ ತಂದೆಯೂ, ಕಮಲನಾಭನೂ ಆದ ವಿಷ್ಣುವೇ ನಿನ್ನನ್ನು ಸರ್ವವಿಧದಿಂದಲೂ ಅನುಗ್ರಹಿಸುವನು ಎಂದು ಭೂದೇವಿಯು ಹೇಳಿದ ಮಾತನ್ನು ಕೇಳಿ ಆ ಬಾಲಕನು ಎಲ್ಲರೂ ನೋಡುತ್ತಿರುವಂತೆಯೇ ಆ ಸಿಂಹಾಸನವನ್ನು ಹತ್ತಿ ಕುಳಿತನು. ಕುಳಿತಕೂಡಲೇ ವಿಷ್ಣುವಿನ ಅನುಗ್ರಹದಿಂದ ಅವನಿಗೆ **ಅಗ್ನಿರ್ವೈ** ಎಂದು ಪ್ರಾರಂಭವಾಗುವ **ಸ್ತೃಣುತೇ ಸ್ತೃಣುತೇ** ಎಂದು ಅಂತ್ಯವಾಗುವ ಬ್ರಾಹ್ಮಣಮಂತ್ರಗಳೆಲ್ಲಾ ಅವನ ಮನಸ್ಸಿಗೆ ಗೋಚರವಾದವು. ಆ ಕೂಡಲೇ ಆ ಬಾಲಕನು ಆ ಮಂತ್ರಗಳನ್ನು ಸಭಿಕರೆದುರಿಗೆ ಉಚ್ಚಸ್ವರದಿಂದ ಪಠಿಸಿದನು. ಮಂತ್ರಾತ್ಮಕವಾದ ಆ ಬ್ರಾಹ್ಮಣದಲ್ಲಿ ನಲವತ್ತು ಅಧ್ಯಾಯಗಳಿರುವುವು. ಅವುಗಳಲ್ಲಿ ಯಜ್ಞಗಳ ಪ್ರಾರಂಭದಲ್ಲಿ ಮಾಡಬೇಕಾದ ಪ್ರಾಯಣೀಯಾದಿ ಇಷ್ಟಿಗಳ ವಿವರಣೆಗಳು, ಚತುರ್ವಿಂಶ ಎಂದು ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ಯಜ್ಞಾಂಗ ದಿನಗಳಲ್ಲಿ ಮಾಡಬೇಕಾದ ಕರ್ತವ್ಯಕರ್ಮಗಳ ವಿವರಣೆಗಳು, ಸಂದರ್ಭಾನುಸಾರ ರಾಜನೀತಿಗಳ ವಿವರಣೆಗಳು ಇವೆಲ್ಲವೂ ಉಕ್ತವಾಗಿದ್ದವು. ಇವುಗಳನ್ನೆಲ್ಲಾ ಒಳಗೊಂಡ ಮಂತ್ರಾತ್ಮಕವಾದ ಬ್ರಾಹ್ಮಣವನ್ನು ಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸದೆ ಪಠಿಸಿ ಕೊನೆಯಲ್ಲಿ ಓಂ ಎಂದು ಉಚ್ಚರಿಸಿ ಮುಗಿಸಿದನು. ಇಷ್ಟೇ ಅಲ್ಲದೆ ಆರಣ್ಯಕವೆಂಬ ಮಂತ್ರಭಾಗದ ಮೂರು ಅಧ್ಯಾಯ ಗಳನ್ನೂ ಮಹಾವ್ರತವೆಂಬ ಕರ್ಮಭಾಗದ ವಿವರಣೆಯನ್ನೂ (ಐತರೇಯವೆಂಬ) ಉಪನಿಷತ್ತಿನ ಎರಡುಭಾಗಗಳನ್ನೂ ಜ್ಞಾನದೃಷ್ಟಿ ಯಿಂದ ತಿಳಿದು ಪಠಿಸಿದನು. ಇದನ್ನೆಲ್ಲಾ ಕುತೂಹಲಾವಿಷ್ಟರಾಗಿ ನೋಡುತ್ತಿದ್ದ ದೇವರ್ಷಿಸಂಘಗಳೂ ಇವನ ತಂದೆಯೇ ಮೊದಲಾದ ಸಭಿಕರೂ ಆ ಬಾಲಕನನ್ನು ಗೌರವಗಳಿಂದ ಸತ್ಕರಿಸಿ ಪೂಜಿಸಿದರು. ಈ ಬಾಲಕನೂ ಸಹ ಆರಣ್ಯಕವೆಂಬ ಮಂತ್ರ ಭಾಗವನ್ನು ಮುಗಿಸಿ ಕೊನೆಯಲ್ಲಿ ಓಂಕಾರವನ್ನು ಪಠಿಸಿ ಭೂಮಿದತ್ತವಾದ ಆ ಸಿಂಹಾಸನದಿಂದ ಇಳಿದನು. ಅನಂತರ ಆ ಭೂಮಿದೇವಿಯು ಹಿಂದಿನಂತೆ ಯಜ್ಞವೇದಿಯನ್ನು ಭೇದಿಸಿ ಅಲ್ಲಿಯೇ ಅಂತರ್ಧಾನಳಾದಳು. ಸಿಂಹಾಸನವೂ ಸಹ ಅಲ್ಲಿಯೇ ಅದೃಶ್ಯವಾಯಿತು. ಬಳಿಕ ಈ ಬಾಲಕನ ತಂದೆಯಾದ ಬ್ರಾಹ್ಮಣನೂ ತನ್ನ ಪುತ್ರರೊಡನೆ ಆಶ್ರಮಕ್ಕೆ ಬರಲು ಇವನ ಪತ್ನಿಯಾದ ಇತರೆಯು ನಡೆದ ವಿಷಯವನ್ನೆಲ್ಲಾ ತಿಳಿದು ತುಂಬಾ ಸಂತೋಷಪಟ್ಟಳು. ಇವಳ ಸವತಿಯೂ ಸಹ ಇತರೆಯ ಬಾಲಕನನ್ನು ಗೌರವದಿಂದ ಸತ್ಕರಿಸಿದಳು. ಈ ಬಾಲಕನೂ ಸಹ ತನ್ನ ತಾಯಿಯನ್ನೂ ಬಲತಾಯಿಯನ್ನೂ ತಂದೆಯನ್ನೂ ಸಂತೋಷ ಪಡಿಸುತ್ತಾ ಅವರ ಆಜ್ಞಾಪಾಲಕನಾಗಿ ವನದಲ್ಲಿ ತಪಶ್ಚರ್ಯಾದಿಗಳಿಂದ ಕಾಲಕಳೆಯುತ್ತಾ ದೇಹಾವಸಾನದಲ್ಲಿ ಅತಿದುರ್ಲಭವಾದ ಬ್ರಹ್ಮಪದವಿಯನ್ನು ಪಡೆದನು ಎಂಬ ಈ ಕಥೆಯನ್ನು ವೇದಾಭಿಮಾನಿಗಳೂ ಆಸ್ತಿಕರೂ ಆದ ಮಹಾಮಹಿಮರು ಪೂಜ್ಯಭಾವ ದಿಂದಲೂ ಭಕ್ತ್ಯಾದರಗಳಿಂದಲೂ ಸ್ಮರಿಸುತ್ತಿರುವರು.

ಈ ಬಾಲಕನು ಇತರಾ ಎಂಬ ಸ್ತ್ರೀಯ ಪುತ್ರನಾದುದರಿಂದ ಇವನಿಗೆ ಐತರೇಯನೆಂಬ ಹೆಸರು ಬಂದಿತು. ಆದ್ದರಿಂದ ಈ ಐತರೇಯಋಷಿದೃಷ್ಟವಾದ ಬ್ರಾಹ್ಮಣವು ಐತರೇಯಬ್ರಾಹ್ಮಣವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಐತರೇಯ ಮಹರ್ಷಿಗೆ ಮಹೀದಾಸನೆಂಬ ಇನ್ನೊಂದು ಹೆಸರೂ ಇರುವುದು. ಈ ಹೆಸರುಬರಲು ಕಾರಣವೇನೆಂದರೆ—

ಮಹಿ+ದಾ+ಅಸ್=ಮಹಿದಾಸಃ । ಮಹ ಪೂಜಾಯಾಂ ಚುರಾದಿರಂತಃ । ತಸ್ಮಾತ್ ಅಚ ಇಃ । ಮಹಿಃ ಭೂಮಿಃ ಡಾಞ್ ದಾನೇ ಅಸ ಉಪವೇಶನೇ ॥ ಮಹಿ, ದಾ, ಅಸ್ ಎಂಬ ಮೂರು ಶಬ್ದಗಳಿಂದ ಮಹಿದಾಸನೆಂಬ ಶಬ್ದವಾಗಿದೆ. ಮಹಿ

ಎಂದರೆ ಭೂಮಿಯು; ದಾ ಎಂದರೆ ಕೊಡುವುದು; ಆಸ ಎಂದರೆ ಕುಳಿತುಕೊಳ್ಳುವ ಆಸನ; ಭೂಮಿದೇವಿಯಿಂದ ದತ್ತವಾದ ಸಿಂಹಾಸನದಲ್ಲಿ ಕುಳಿತಿದ್ದವನು ಎಂದರ್ಥವು.

ತೈತ್ತಿರೀಯ ಶಾಖೆಯ ಭಾಷ್ಯಕಾರರಾದ ಭಟ್ಟಭಾಸ್ಕರರೆಂಬುವರು ಈರೀತಿ ಐತರೇಯ ಪದಶಬ್ದಾರ್ಥವನ್ನು ವಿವರಿಸಿದಾರೆ.

**ಇತರಸ್ಯ ಋಷೇರಪತ್ಯಮಿತ್ಯೈತರೇಯಃ । ಶುಭ್ರಾದಿಭ್ಯಶ್ಚ ಢಕ್** (೪-೧-೧೨೩) ಇತಿ ॥

ಇತರ ಎಂಬ ಋಷಿಯ ಪುತ್ರನಾದುದರಿಂದ ಇವನಿಗೆ ಐತರೇಯನೆಂಬ ಹೆಸರು ಬಂದಿತು. ಸದ್ಗುರುಶಿಷ್ಯರೆಂಬುವರು ಐತರೇಯಾರಣ್ಯಕದ ಮೋಕ್ಷಪ್ರದವೆಂಬ ತಮ್ಮ ಭಾಷ್ಯದಲ್ಲಿ ಮಹಿದಾಸಶಬ್ದದ ಅರ್ಥವಿವರಣೆಯನ್ನು ಈರೀತಿ ಮಾಡಿದ್ದಾರೆ—

**ಋಷಿರ್ದೃಷ್ಟ್ವಾ ಸ್ವಮಾತ್ಮಾನಂ ಪಾರೋಕ್ಷ್ಯೇಣಾಹ ಚಾನ್ಯವತ್ ।**
**ಏತಜ್ಜ್ಞಾನಾಮ್ಯಹಂ ನಾನ್ಯದಿತ್ಯಾತ್ಮಾನಂ ವಿಭಾವಯನ್ ।**
**ಇತರಾಖ್ಯಾಸ್ಯ ಮಾತಾಭೂತ್ ಸ್ತ್ರೀಭ್ಯೋ ಢಕ್ಯೈತರೇಯಗೀಃ ।**
**ಮಹಿದಾಸೋ ಮಹೀದತ್ತಮಹಾಸನಸಮಾಸನಾತ್ ।**
**ಅವೋಚಾಮ ಬ್ರಾಹ್ಮಣಾದೌ ಮಾಹಿದಾಸೇತಿಹಾಸಕಂ ।** ಇತಿ.

ಇಲ್ಲಿ ಹೇಳಿರುವ ಐತರೇಯ ಮಹಿದಾಸ ಶಬ್ದಗಳ ಅರ್ಥವಿವರಣೆಯು ಹಿಂದೆ ಹೇಳಿದಂತೆಯೇ ಇದೆ. ಐತರೇಯೋಪನಿಷನ್ಮಾಧ್ವಭಾಷ್ಯದಲ್ಲಿ ಈ ರೀತಿ ಇದೆ—

**ಪ್ರಾದುರ್ಬಭೂವ ಭಗವಾಂಸ್ತಪಸೇತರಾಯಾ ನಾರಾಯಣೋಽಬ್ಜಜಸುತಸ್ಯ ವಿಶಾಲನಾಮ್ನಃ ।**
**ತಸ್ಮಿನ್ ಗತೇಽಧ್ವರಮಭೂತ್ಸುರವಿಪ್ರಸಂಘೋ ನಿಶ್ಚೇತನಸ್ತದನು ಪದ್ಮಭವೋಽಮುಮಸ್ತೌತ್ ॥**
**ತೇನ ಸ್ತುತಃ ಸ ಭಗವಾನ್ ಗಿರಿಶೇಂದ್ರಮುಖ್ಯಾನ್ ಸರ್ವಾನಬೋಧಯದಜೇನ ಸಹೈವ ತೇಽಥ ।**
**ದಾಸತ್ವಮಾಪುರತ ಏವ ಮಹತ್ಸುರಾಣಾಂ ದಾಸತ್ವತಃ ಸ ಮಹಿದಾಸ ಇತಿ ಪ್ರಸಿದ್ಧಃ ।**
**ಶೃಣ್ವತ್ಸು ತೇಷು ಭಗವಾನವದದ್ರಮಾಯೈ ದಿವ್ಯಾಂ ಶ್ರುತಿಂ ಸ ಪರಮೋಽತಿಮುದೈತರೇಯೀಂ ।**
**ಸಾ ಬಹ್ವೃಚೈಃ ಪ್ರಪಠಿತಾ ಚತುರಾನನಾಸ್ಯಾದ್ಯಸ್ಯಾಂ ರಹಸ್ಯಮುದಿತಂ ಪರಮಂ ಹಿ ವಿಷ್ಣೋಃ ॥**

ಪೂರ್ವದಲ್ಲಿ ಚತುರ್ಮುಖಬ್ರಹ್ಮನಿಗೆ ವಿಶಾಲಋಷಿಯೆಂಬ ಪುತ್ರನಿದ್ದನು. ಆ ಋಷಿಯ ಪತ್ನಿಯಾದ ಇತರಾ ಎಂಬ ಸ್ತ್ರೀಯು ತನಗೆ ಉತ್ತಮ ಪುತ್ರನಾಗಬೇಕೆಂಬ ಉದ್ದೇಶದಿಂದ ವಿಷ್ಣುವನ್ನು ಕುರಿತು ಬಹುಕಾಲ ತಪಸ್ಸುಮಾಡಿದಳು. ಅವಳ ತಪಸ್ಸಿಗೆ ಪ್ರೀತನಾಗಿ ಸಾಕ್ಷಾನ್ನಾರಾಯಣನೇ ಆಕೆಯ ಗರ್ಭದಲ್ಲಿ ಪುತ್ರನಾಗಿ ಅವತರಿಸಿದನು. ಇತರೆಯೆಂಬ ಸ್ತ್ರೀಯ ಪುತ್ರನಾದುದರಿಂದ ಈ ಕುಮಾರನಿಗೆ ಐತರೇಯನೆಂಬ ಹೆಸರು ಪ್ರಸಿದ್ಧವಾಯಿತು. ಒಂದಾನೊಂದುಕಾಲದಲ್ಲಿ ಈ ಋಷಿಪುತ್ರನು ದೇವತೆಗಳೂ ಋಷಿಗಳೂ, ಬ್ರಾಹ್ಮಣರೂ ಒಟ್ಟಾಗಿ ಸೇರಿ ಯಜ್ಞಮಾಡುತ್ತಿದ್ದಾಗ ಅಲ್ಲಿಗೆ ಹೋದನು. ಸಾಕ್ಷಾದ್ವಿಷ್ಣುವಿನ ಅವತಾರವೇ ಆದ ಈ ಋಷಿಪುತ್ರನ ದಿವ್ಯತೇಜಸ್ಸನ್ನೂ ಪ್ರಕಾಶವನ್ನೂ ನೋಡಲಾರದೆ ಅಲ್ಲಿದ್ದ ದೇವರ್ಷಿಬ್ರಾಹ್ಮಣರೆಲ್ಲರೂ ಮೂರ್ಛೆಗೊಂಡು ನಿಶ್ಚೇಷ್ಟಿತರಾದರು. ಆಗ ಅಲ್ಲಿಯೇ ಇದ್ದ ಬ್ರಹ್ಮನು ವಿಷ್ಣುಸ್ವರೂಪನಾದ ಈ ಋಷಿಕುಮಾರನನ್ನು ನಾನಾವಿಧವಾಗಿ ಸ್ತುತಿಸಿದನು. ಇದರಿಂದ ಪ್ರಸನ್ನನಾದ ಆ ಕುಮಾರನು ಯಜ್ಞಭೂಮಿಯಲ್ಲಿ ನಿಶ್ಚೇಷ್ಟಿತರಾಗಿದ್ದ ಈಶ್ವರ, ಇಂದ್ರ ಮೊದಲಾದ ದೇವತೆಗಳನ್ನೂ ಋಷಿಬ್ರಾಹ್ಮಣರನ್ನೂ ತನ್ನ ಸಾಮರ್ಥ್ಯದಿಂದ ಮೂರ್ಛೆಯಿಂದ ಎಚ್ಚರಗೊಳ್ಳುವಂತೆ ಮಾಡಿದನು. ಈ ರೀತಿ ಇಂದ್ರಾದಿ ದೇವತೆಗಳೂ ಋಷಿಗಳೂ ಈ ಋಷಿಕುಮಾರನಲ್ಲಿ ದೈನ್ಯತೆಯನ್ನು ಪ್ರದರ್ಶಿಸಿ ದಾಸಭಾವವನ್ನು ಹೊಂದಿ ಸ್ತುತಿಸಿದ್ದರಿಂದ

ಈ ಕುಮಾರನು ಮಹಿದಾಸನೆಂಬ ಹೆಸರಿನಿಂದ ಪ್ರಸಿದ್ಧನಾದನು. ಬಳಿಕ ಆ ದೇವರ್ಷಿಬ್ರಾಹ್ಮಣರ ಸಭೆಯಲ್ಲಿ ಎಲ್ಲರಿಗೂ ಕೇಳಿಸುವಂತೆ ಐತರೇಯಶ್ರುತಿಯೆಂದು ಪ್ರಸಿದ್ಧವಾದ ಐತರೇಯಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತುಗಳನ್ನು ಲಕ್ಷ್ಮೀದೇವಿಗೆ ಉಪದೇಶಿಸಿದನು. ಆ ಲಕ್ಷ್ಮಿಯಿಂದ ಬ್ರಹ್ಮನಿಗೂ ಬ್ರಹ್ಮನಿಂದ ಬಹ್ವೃಚಾ (ಋಗ್ವೇದಾ) ಧ್ಯಾಯಿಗಳಾದ ಬ್ರಾಹ್ಮಣರಿಗೂ ಉಪದಿಷ್ಟವಾದ ಈ ಐತರೇಯಶ್ರುತಿಯು ಅತಿರಹಸ್ಯವಾದ ವಿಷ್ಣುತತ್ತ್ವವನ್ನು ಪ್ರತಿಪಾದಿಸುತ್ತಾ ಪ್ರಸಿದ್ಧವಾಗಿರುವುದು. ಇದಲ್ಲದೆ,

**ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್ ।**
**ಸಾಕ್ಷಾತ್ಸ ಭಗವಾನ್ ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥**

ಇತರಾ ಎಂಬ ಸ್ತ್ರೀಯು ತಪೋಬಲದಿಂದ ಭಗವಂತನಾದ ಸಾಕ್ಷಾದ್ವಿಷ್ಣುವೇ ಆಕೆಯಲ್ಲಿ ಮಹಿದಾಸನೆಂಬ ಹೆಸರಿನಿಂದ ಉತ್ಪನ್ನನಾದನು. ಈ ಪುತ್ರನು ವಿಷ್ಣುತತ್ತ್ವವನ್ನು ಪ್ರತಿಪಾದಿಸುವ ಐತರೇಯಶ್ರುತಿಯನ್ನು ನಿರೂಪಿಸಿದನು ಎಂಬ ಈ ಬ್ರಹ್ಮಾಂಡಪುರಾಣದ ಶ್ಲೋಕವನ್ನು ಮಾಧ್ವರು ತಮ್ಮ ಬ್ರಹ್ಮಸೂತ್ರಭಾಷ್ಯದ ಪ್ರಥಮಾಧ್ಯಾಯಪ್ರಥಮಪಾದಾಂತ್ಯಸೂತ್ರದ ಭಾಷ್ಯದಲ್ಲಿ ಉದಾಹರಿಸಿರುವರು.

ಹಿಂದೆ ಹೇಳಿದಂತೆ ಐತರೇಯ ಬ್ರಾಹ್ಮಣದಲ್ಲಿ ಒಟ್ಟು ೪೦ ಅಧ್ಯಾಯಗಳಿವೆ. ಐದೈದು ಅಧ್ಯಾಯಗಳಿಗೆ ಒಂದೊಂದು ಪಂಚಿಕದಂತೆ ಎಂಟು ಪಂಚಿಕೆಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಕಂಡಿಕೆ ಅಥವಾ ಖಂಡಗಳೆಂಬ ವಿಭಾಗಗಳಿವೆ. ಮೊದಲನೆಯ ಪಂಚಿಕೆಯಲ್ಲಿ ೩೦ ಖಂಡಗಳೂ ಎರಡನೆಯ ಪಂಚಿಕೆಯಲ್ಲಿ ೪೧ ಖಂಡಗಳೂ ಮೂರನೆಯ ಪಂಚಿಕೆಯಲ್ಲಿ ೫೦ ಖಂಡಗಳೂ, ನಾಲ್ಕನೆಯ ಪಂಚಿಕೆಯಲ್ಲಿ ೩೨ ಖಂಡಗಳೂ, ಐದನೆಯ ಪಂಚಿಕೆಯಲ್ಲಿ ೩೪ ಖಂಡಗಳೂ, ಆರನೆಯ ಪಂಚಿಕೆಯಲ್ಲಿ ೩೬ ಖಂಡಗಳೂ, ಏಳನೆಯ ಪಂಚಿಕೆಯಲ್ಲಿ ೩೪ ಖಂಡಗಳೂ ಎಂಟನೆಯ ಪಂಚಿಕೆಯಲ್ಲಿ ೨೮ ಖಂಡಗಳೂ ಒಟ್ಟು ೨೮೫ ಖಂಡಗಳಿವೆ. ತೈತ್ತಿರೀಯಬ್ರಾಹ್ಮಣದಲ್ಲಿರುವಂತೆ ವಾಕ್ಯಗಳ ಸಂಖ್ಯಾಪರಿಮಿತಿಯನ್ನು ನಿರ್ದೇಶಿಸಿಲ್ಲ. ಸುಮಾರು ಒಟ್ಟು ೫೭೦೦ ವಾಕ್ಯಗಳಿರಬಹುದು. ಈ ಬ್ರಾಹ್ಮಣದ ಶೈಲಿಯು ಗದ್ಯಾತ್ಮಕವಾಗಿದೆ. ಮತ್ತು ವಾಕ್ಯಗಳು ಸಂಹಿತೆಯಂತೆ ಅಷ್ಟೇನೂ ಪ್ರೌಢವಾಗಿಯೂ ಬಿಗಿಯಾಗಿಯೂ ಇಲ್ಲ. ಅನೇಕ ವಾಕ್ಯಗಳು ಪುನಃಪುನಃ ಪಠಿತವಾಗಿವೆ. ಆದರೆ ಅರ್ಥವಿವರಣೆಯೂ ವಿಷಯ ನಿರೂಪಣೆಯೂ ಬಹುಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಇದು ಋಗ್ವೇದಕ್ಕೆ ಸಂಬಂಧಪಟ್ಟ ಬ್ರಾಹ್ಮಣವಾದ್ದರಿಂದ ಇದರಲ್ಲಿ ಹೋತೃವರ್ಗದ ಋತ್ವಿಕ್ಕುಗಳಿಗೂ, ಸಪ್ತಹೋತೃಗಳಿಗೂ ಸೋಮಾದಿ ಯಜ್ಞಾದಿಗಳಲ್ಲಿ ಅವಶ್ಯಕವಾದ ಮಂತ್ರಗಳ ವಿವರಣೆ ಇದೆ. ಆದರೆ ಇದರಲ್ಲಿ ಎಲ್ಲಾ ಯಜ್ಞಗಳ ವಿವರಣೆಯೂ ಇರುವುದಿಲ್ಲ. ಏಕೆಂದರೆ ಯಜ್ಞಗಳ ಪೂರ್ಣವಾದ ವಿವರಣೆಯು ಯಜುರ್ವೇದವ್ಯಾಪ್ತಿಗೆ ಒಳಪಟ್ಟಿರುತ್ತೆ. ಅಧ್ವರ್ಯು ಮತ್ತು ಉದ್ಗಾತೃವರ್ಗದ ಋತ್ವಿಕ್ಕುಗಳ ಕರ್ತವ್ಯವನ್ನು ಇಲ್ಲಿ ವಿವರಿಸಿಲ್ಲ. ಹೋತೃವರ್ಗದ ಋತ್ವಿಕ್ಕುಗಳ ಕರ್ತವ್ಯವನ್ನು ಮಾತ್ರ ಇಲ್ಲಿ ಅವಶ್ಯಕವಾದ ಮಂತ್ರಗಳೊಡನೆ ತಿಳಿಸಲಾಗಿದೆ. ಮುಖ್ಯವಲ್ಲದ ಸಣ್ಣಸಣ್ಣ ಇಷ್ಟಿಗಳ (ಯಜ್ಞಗಳ) ವಿಷಯದ ಪ್ರಸ್ತಾಪವನ್ನು ಕೈಬಿಡಲಾಗಿದೆ. ಮೊದಲು ಎರಡು ಪಂಚಿಕೆಗಳಲ್ಲಿಯೂ, ಮೂರನೆಯ ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ (೧-೧೩ ಅಧ್ಯಾಯಗಳು) ಸೋಮಯಾಗಗಳಲ್ಲಿ ಪ್ರಕೃತಿಯಾಗವೆಂದು ಪರಿಗಣಿಸಲ್ಪಟ್ಟಿರುವ ಅಗ್ನಿಷ್ಟೋಮಯಾಗದಲ್ಲಿ ಹೋತೃವರ್ಗದ ಋತ್ವಿಕ್ಕುಗಳು ನಿರ್ವಹಿಸಬೇಕಾದ ಕರ್ತವ್ಯಕರ್ಮಗಳ ವಿವರಣೆ ಇದೆ. ಈ ಅಗ್ನಿಷ್ಟೋಮಯಾಗವು ಒಂದು ದಿನದಲ್ಲಿ ಮಾಡಿ ಮುಗಿಸಬೇಕಾದ (ಪ್ರಕೃತಿ) ಸೋಮಯಾಗವು. ಈ ಪ್ರಕೃತಿಯಾಗದ ಜತೆಗೆ ಇತರ ಕರ್ಮಾಂಗಗಳೂ ಸೇರಿದರೆ ನಾನಾವಿಧ ವಿಕೃತಿಯಾಗಗಳಾಗುವವು. ಈ ಯಾಗಗಳಲ್ಲಿ ನಿರ್ವಹಿಸಬೇಕಾದ ಕರ್ಮಾಂಗಗಳನ್ನು ವಿಧ್ಯುಕ್ತ (ಯಾವರೀತಿ ಮಾಡಬೇಕೋ ಆರೀತಿ) ಕ್ರಮದಲ್ಲಿ ವಿವರಿಸಲಾಗಿದೆ. ಎರಡನೇ ಪಂಚಿಕೆಯ ಐದನೆಯ ಅಧ್ಯಾಯದಲ್ಲಿಯೂ ಮೂರನೆಯ

ಪಂಚಿಕೆಯ ಮೊದಲ ಮೂರು ಅಧ್ಯಾಯಗಳಲ್ಲಿಯೂ (೧೦-೧೩ ಅಧ್ಯಾಯಗಳು) ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ನಡೆಯುವ ಪ್ರಾತಃಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಸೋಮರಸಗಳನ್ನು ಹಿಂಡುವ ಮೂರು ಕರ್ಮಗಳಿಗೆ ಅವಶ್ಯಕವಾಗಿ ಬೇಕಾಗುವ ಮಂತ್ರಗಳ (ಶಸ್ತ್ರಮಂತ್ರಗಳ—ಹೋತೃವರ್ಗದ ಋತ್ವಿಕ್ಕುಗಳು ಪಠಿಸುವ ಸ್ತೋತ್ರಮಂತ್ರಗಳಿಗೆ ಶಸ್ತ್ರಮಂತ್ರಗಳೆಂದು ಹೆಸರು) ವಿವರಣೆ ಇದೆ. ಮೂರನೆಯ ಪಂಚಿಕೆಯ ಕೊನೆಯ ಅಧ್ಯಾಯದಲ್ಲಿಯೂ ನಾಲ್ಕನೆಯ ಪಂಚಿಕೆಯ ಮೊದಲ ಎರಡು ಅಧ್ಯಾಯಗಳಲ್ಲಿಯೂ (೧೪-೧೬ ಅಧ್ಯಾಯಗಳು)ಅಗ್ನಿಷ್ಟೋಮಯಾಗದ ವಿಕೃತಿರೂಪಗಳಾದ ಉಕ್ಥ್ಯ, ಷೋಡಶಿ, ಅತಿರಾತ್ರ ಎಂಬ ಸೋಮಯಾಗಗಳ ವರ್ಣನೆ ಇದೆ. ನಾಲ್ಕನೆಯ ಪಂಚಿಕೆಯ ಮೂರನೆಯ ಅಧ್ಯಾಯದಲ್ಲಿ (೧೮ನೇ ಅಧ್ಯಾಯ) ಒಂದು ವರ್ಷದವರೆಗೂ ನಡೆಯುವ ಸತ್ರಗಳೆಂಬ ದೀರ್ಘಕಾಲಾವಧಿಯಾಗಗಳಲ್ಲಿ ಹೋತೃಗಳು ನಿರ್ವಹಿಸಬೇಕಾದ ಕರ್ತವ್ಯ ಕರ್ಮಗಳ ವಿವರಣೆ ಇದೆ. ನಾಲ್ಕನೆಯ ಪಂಚಿಕೆಯ ಕೊನೆಯ ಎರಡು ಅಧ್ಯಾಯಗಳಲ್ಲಿಯೂ ಐದನೆಯ ಪಂಚಿಕೆಯ ಮೊದಲ ನಾಲ್ಕು ಅಧ್ಯಾಯಗಳಲ್ಲಿಯೂ (೨೦-೨೪ ಅಧ್ಯಾಯಗಳು) ದ್ವಾದಶಾಹವೆಂಬ ಯಜ್ಞದಲ್ಲಿ ಹೋತೃಗಳು ಮಾಡಬೇಕಾದ ಕರ್ತವ್ಯ ಕರ್ಮಗಳ ವಿಸ್ತಾರವಾದ ವಿವರಣೆ ಇದೆ. ಆರನೆಯ ಪಂಚಿಕೆಯಲ್ಲಿ (೨೬-೩೦ ಅಧ್ಯಾಯಗಳು) ಷಡಹ ಎಂಬ ಆರುದಿನಗಳವರೆಗೆ ನಡೆಯಬೇಕಾದ ಸೋಮಯಾಗಗಳಲ್ಲಿ ಹೋತೃವರ್ಗದ ಆರು ಮಂದಿ ಋತ್ವಿಕ್ಕುಗಳ ಕರ್ತವ್ಯವನ್ನೂ ಗ್ರಾವಸ್ತುತ್ ಮತ್ತು ಸುಬ್ರಹ್ಮಣ್ಯ ಎಂಬ ಋತ್ವಿಕ್ಕುಗಳ ಸಂಕ್ಷೇಪ ಪ್ರಸ್ತಾಪವನ್ನೂ ವಿವರಿಸಲಾಗಿದೆ. ಏಳು ಮತ್ತು ಎಂಟನೇ ಪಂಚಿಕೆಗಳಲ್ಲಿ (೩೧-೪೦ ಅಧ್ಯಾಯಗಳು) ಕ್ಷತ್ರಿಯರು, ರಾಜರು ಮಾತ್ರವೇ ಮಾಡಬೇಕಾದ ರಾಜಸೂಯ ಮೊದಲಾದ ಯಾಗಗಳ ವಿವರಣೆ ಇದೆ. ಇದಲ್ಲದೆ ರಾಜರು ಹೊಸದಾಗಿ ಪಟ್ಟಕ್ಕೆ ಬಂದಾಗ ಅವರು ನೆರವೇರಿಸಬೇಕಾದ ರಾಜ್ಯಾಭಿಷೇಕವಿಧಿಯೂ, ಶುನಃಶೇಪನ ವೃತ್ತಾಂತವೂ ಆ ಕಾಲದಲ್ಲಿ ರಾಜ್ಯಾಭಿಷಕ್ತರಾದ ಅನೇಕ ಪ್ರಸಿದ್ಧರಾಜರ ಮತ್ತು ಚಕ್ರವರ್ತಿಗಳ ಹೆಸರುಗಳೂ ವರ್ಣಿತವಾಗಿವೆ.

ಋಗ್ವೇದಕಾಲದಿಂದಲೂ ಬಳಕೆಯಲ್ಲಿದ್ದ ಯಜ್ಞಸಂಬಂಧವಾದ ಅನೇಕ ಸಂಪ್ರದಾಯಗಳೂ ವಿಧಿನಿಯಮಗಳೂ ಇತಿಹಾಸಗಳೂ ಮೊದಲಾದ ಅನೇಕ ವಿಷಯಗಳ ಮೇಲೆ ಈ ಬ್ರಾಹ್ಮಣವು ರಚಿತವಾಗಿರುವುದಲ್ಲದೆ ಗ್ರಂಥಕರ್ತೃವು ಅಲ್ಲಲ್ಲಿ ತನ್ನ ಸ್ವಂತ ಅಭಿಪ್ರಾಯಗಳನ್ನೂ, ವಿವರಣೆಯನ್ನೂ, ವಿಮರ್ಶೆಯನ್ನೂ ಆಧ್ಯಾತ್ಮಿಕಸಂಬಂಧವಾದ ವಿಷಯಗಳನ್ನೂ ತಿಳಿಸಿದಾನೆ. ಈ ಗ್ರಂಥದಲ್ಲಿ ಸಂದರ್ಭಾನುಸಾರ ಉಕ್ತವಾಗಿರುವ ಮಂತ್ರಗಳೆಲ್ಲವೂ ಈಗ ಬಳಕೆಯಲ್ಲಿರುವ ಋಗ್ವೇದಮಂತ್ರಗಳೇ ಆಗಿರುವುದಲ್ಲದೆ ಋಗ್ವೇದದಲ್ಲಿಲ್ಲದ ಕೆಲವು ಇತರ ಮಂತ್ರಗಳೂ ಉಕ್ತವಾಗಿವೆ. ಇವು ಸಾಧಾರಣವಾಗಿ ಅಥರ್ವವೇದದಲ್ಲಿ ದೊರೆಯುತ್ತವೆ. ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ವೇದಾಂತತತ್ತ್ವಗಳೂ ಪರಬ್ರಹ್ಮಸ್ವರೂಪವಿಮರ್ಶೆಯೂ ಈ ಗ್ರಂಥದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ.

ಈ ಬ್ರಾಹ್ಮಣದ ಕಾಲದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಇಲ್ಲಿ ಹೇಳುವುದು ಅಪ್ರಕೃತವಾಗಲಾರದು. ವೈದಿಕ ಗ್ರಂಥಗಳ ಕಾಲವನ್ನು ನಿರ್ಣಯಿಸಲು ಸರಿಯಾದ ಸಾಧನಸಾಮಗ್ರಿಗಳು ದೊರೆಯುವುದಿಲ್ಲವಾದ್ದರಿಂದ ಈ ವಿಷಯದಲ್ಲಿ ಪಾಶ್ಚಾತ್ಯ ವಿದ್ವಾಂಸರು ಮಾಡಿರುವ ಕೆಲವು ಸಂಶೋಧನೆಗಳಿಗೆ ಮುಖ್ಯವಾಗಿ ಊಹೆಯೇ ಆಧಾರವಾಗಿದೆ. ಅವರು ಸೂಚಿಸುವ ಕಾಲನಿರ್ಣಯವು ನ್ಯಾಯವಾಗಿ ಇರಬಹುದಾದ ಪ್ರಾಚೀನತೆಯನ್ನು ನಿರ್ದೇಶಿಸುವುದಿಲ್ಲ. ಆಧುನಿಕ ಪೌರ್ವಾತ್ಯವಿದ್ವಾಂಸರು ಪಾಶ್ಚಾತ್ಯರ ಕ್ರಮವನ್ನನುಸರಿಸಿ ನಡೆಸಿರುವ ಸಂಶೋಧನೆಗಳು ಸ್ವಲ್ಪಮಟ್ಟಿಗೆ ಊಹೆಯನ್ನೇ ಆಧಾರವಾಗಿ ಅವಲಂಬಿಸಿದ್ದರೂ ಪಾಶ್ಚಾತ್ಯರ ಕಾಲನಿರ್ಣಯಕ್ಕಿಂತ ಹೆಚ್ಚು ಸಮಂಜಸವಾಗಿದೆ. ಈ ಪ್ರಾಚೀನ ಗ್ರಂಥಗಳ ಕಾಲವನ್ನು ನಿರ್ಣಯಿಸುವಾಗ ಮೂರು ವಿಷಯಗಳನ್ನು ಗಮನಿಸಬೇಕು.

(೧) ಗ್ರಂಥದ ಭಾಷಾಶೈಲಿ.

(೨) ಒಂದು ಗ್ರಂಥಕ್ಕೂ ಮತ್ತೊಂದು ಗ್ರಂಥಕ್ಕೂ ಇರುವ ಸಂಬಂಧ.

(೩) ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳು.

ಈ ಮೂರು ವಿಷಯಗಳ ಪ್ರಕಾರ ಐತರೇಯ ಬ್ರಾಹ್ಮಣದ ಕಾಲವನ್ನು ವಿಮರ್ಶೆಮಾಡಿದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಒಂದು ನಿರ್ಧಾರಕ್ಕೆ ಬರಬಹುದು.

ಮೊದಲು ಪಾಶ್ಚಾತ್ಯವಿದ್ವಾಂಸರ ಅಭಿಪ್ರಾಯಗಳನ್ನು ತಿಳಿಸಿ ಅನಂತರ ಪೌರ್ವಾತ್ಯರ ಅಭಿಪ್ರಾಯಗಳನ್ನು ತಿಳಿಸುತ್ತೇವೆ. ಐತರೇಯಬ್ರಾಹ್ಮಣವನ್ನು ಇಂಗ್ಲಿಷ್ ಭಾಷೆಗೆ ಭಾಷಾಂತರ ಮಾಡಿದವರು Dr. M. Haug ಮತ್ತು A. B. Keith ಎಂಬುವರು. ಇವರಲ್ಲಿ Haug ಎಂಬುವರು—ವೇದಸಾಹಿತ್ಯವು ಕ್ರಿ. ಪೂ. ೨೪೦೦-೨೦೦೦ ರಿಂದ ಈಚೆಗೆ ಪ್ರಾರಂಭವಾಗಿದೆಯೆಂದೂ ಸಂಹಿತೆಯ ಕಾಲಕ್ಕೂ ಬ್ರಾಹ್ಮಣಗಳ ಕಾಲಕ್ಕೂ ಮಧ್ಯದಲ್ಲಿ ೫೦೦-೬೦೦ ವರ್ಷಗಳ ಅಂತರವಿರುವುದೆಂದೂ ಇಟ್ಟುಕೊಂಡರೆ ಈ ಬ್ರಾಹ್ಮಣದ ಕಾಲವು ಕ್ರಿ. ಪೂ. ೧೪೦೦-೨೦೦೦ ಇರಬಹುದೆಂದು ಅಭಿಪ್ರಾಯಪಡುತ್ತಾರೆ. Keith ಎಂಬುವರು ಕ್ರಿ. ಪೂ. ೬೦೦ ವರ್ಷ ಈ ಗ್ರಂಥದ ಕಾಲವಿದ್ದಿರಬಹುದೆಂದು ಹೇಳುತ್ತಾರೆ. ಇವೆರಡು ಅಭಿಪ್ರಾಯಗಳೂ ಸಮಂಜಸವೆಂದು ತೋರುವುದಿಲ್ಲ. ಋಗ್ವೇದ ಕಾಲನಿರ್ಣಯದಲ್ಲಿ ಭಿನ್ನಾಭಿಪ್ರಾಯವಿರುವುದು ಸಹಜವಾಗಿದೆ. ಏಕೆಂದರೆ ಋಗ್ವೇದಸಂಹಿತೆಯೆಲ್ಲಾ ಒಬ್ಬ ಕರ್ತೃವಿನಿಂದ ಒಂದೇ ಕಾಲದಲ್ಲಿ ರಚಿತವಾದುದಲ್ಲ. ಬೇರೆ ಬೇರೆ ಕರ್ತೃಗಳು ಅಥವಾ ಋಷಿಗಳು ಬೇರೆ ಬೇರೆ ಕಾಲದಲ್ಲಿ ರಚಿಸಿದ ಭಾಗಗಳನ್ನೆಲ್ಲಾ ಒಟ್ಟುಗೂಡಿಸಿ ಈ ಗ್ರಂಥಕ್ಕೆ ಋಗ್ವೇದವೆಂಬ ಹೆಸರು ಪ್ರಸಿದ್ಧವಾಗಿದೆ. ಆದರೆ ಋಗ್ವೇದದ ಅತ್ಯಂತ ಪ್ರಾಚೀನ ಭಾಗಗಳು ಕ್ರಿ. ಪೂ. ಅನೇಕ ಸಾವಿರ ವರ್ಷಗಳ ಹಿಂದಿನವು. ಅತ್ಯಾಧುನಿಕ ಭಾಗವೂ ಸಹ ಕ್ರಿ. ಪೂ. ೫೦೦೦ ವರ್ಷಗಳಿಗಿಂತ ಆಧುನಿಕವಲ್ಲವೆಂದು ಗೋಖಲೆ ಮೊದಲಾದ ವಿದ್ವಾಂಸರು ನಡೆಸಿದ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ಭಾಷಾಶೈಲಿಯೂ, ವಿಷಯಗಳೂ ಸಹ ಇದನ್ನು ಸಮರ್ಥಿಸುತ್ತವೆ. ಋಗ್ವೇದಕ್ಕಿಂತ ಪ್ರಾಚೀನವಾದ ಗ್ರಂಥವೇ ಪ್ರಪಂಚದಲ್ಲಿಲ್ಲ. ಸಾಮವೇದವೂ ಅಥವಾ ಅದರ ಬಹು ಭಾಗವೂ ಋಗ್ವೇದದಷ್ಟೇ ಪ್ರಾಚೀನವಾದವು. ಸಾಮವೇದದಲ್ಲಿ ಋಗ್ವೇದಮಂತ್ರಗಳೇ ಬಹುವಾಗಿ ಸೇರಿರುವುದರಿಂದ ಋಗ್ವೇದಕ್ಕೆ ಹೇಳಿದ ಕಾಲಮಾನವು ಸಾಮವೇದಕ್ಕೂ ಅನ್ವಯಿಸುವುದು. ಯಜುರ್ವೇದ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಋಗ್ವೇದ ಕಾಲದಲ್ಲಿ ಯಜ್ಞಮಾಡುವ ಕ್ರಮವು ಹೆಚ್ಚು ಕಾರ್ಯಕಲಾಪಗಳನ್ನೊಳಗೊಳ್ಳದೆ ಎಂದರೆ ಈಗಿನಂತೆ ಹೆಚ್ಚು ವಿಸ್ತೃತವಾಗಿಲ್ಲದೆ ಇದ್ದರೂ ಯಜ್ಞದಲ್ಲಿ ಉಪಯೋಗಿಸುವ ಶಬ್ದಗಳು ಎಂದರೆ ಯಜುರ್ಮಂತ್ರಗಳು ಋಗ್ವೇದದಷ್ಟೇ ಪ್ರಾಚೀನವಾದವು. ಈ ಮಂತ್ರಗಳನ್ನೆಲ್ಲಾ ವಿಷಯಾನುಸಾರವಾಗಿ ವಿಂಗಡಿಸಿ ಇದನ್ನು ಯಜುರ್ವೇದಸಂಹಿತೆಯೆಂದು ಕರೆಯಲಾಗಿದೆ. ಈ ಯಜುರ್ವೇದಸಂಹಿತೆಯನ್ನು ಕ್ರಮಪಡಿಸಿದ ಕಾಲವು ಅನೇಕ ಶತಮಾನಗಳ ಮೇಲೆ ನಡೆದುದರಿಂದ ಈ ಸಂಹಿತೆಯು ಋಗ್ವೇದ ಮತ್ತು ಸಾಮವೇದ ಸಂಹಿತೆಗಳಿಗಿಂತ ಈಚಿನದು ಎಂದರೆ ಋಗ್ವೇದಸಂಹಿತೆಗಿಂತ ಒಂದೆರಡು ಸಾವಿರ ವರ್ಷಗಳು ಈಚಿನದು. ಕ್ರಿ.ಪೂ. ೫೦೦೦—೪೦೦೦ ವರ್ಷಗಳು ಯಜುರ್ವೇದಸಂಹಿತೆಯ ಕಾಲವೆಂದು ಹೇಳಬಹುದು. ಯಜುಃಸಂಹಿತೆಯ ವಿಷಯದಲ್ಲಿ ಮತ್ತೊಂದು ಮುಖ್ಯವಾದ ವಿಷಯವನ್ನು ಗಮನಿಸಬೇಕಾಗಿದೆ. ಯಜ್ಞಕರ್ಮಾಂಗಗಳಲ್ಲಿ ಋಗ್ವೇದಮಂತ್ರಗಳನ್ನಲ್ಲದೆ ಇದನ್ನು ಮಾಡು ಅದನ್ನು ಮಾಡು ಮುಂತಾದ ವಾಕ್ಯಗಳನ್ನು ಒಂದುಗೂಡಿಸಿದ ಮಾತ್ರಕ್ಕೆ ಯಜ್ಞಮಾಡುವ ಕ್ರಮವನ್ನು ವಿವರಿಸಿದಂತಾಗಲಿಲ್ಲ. ಆದ್ದರಿಂದ ಮಂತ್ರಗಳ ವಿನಿಯೋಗವನ್ನೂ ಆಯಾ ಸಂದರ್ಭಗಳಲ್ಲಿ ಮಾಡಬೇಕಾದ ಕಾರ್ಯಕಲಾಪಗಳನ್ನೂ ವಿವರಿಸುವುದು ಅವಶ್ಯಕವಾಯಿತು. ಈ ವಿವರಣೆಗೆ ಬ್ರಾಹ್ಮಣವೆಂದು ಹೆಸರು. ಯಜುರ್ವೇದದಲ್ಲಿ (ಎಂದರೆ ಕೃಷ್ಣಯಜುರ್ವೇದದಲ್ಲಿ) ಮಂತ್ರಗಳ ಸಮೂಹವನ್ನೂ ಅವುಗಳ ವಿವರಣೆಯನ್ನೂ ಒಂದು ಕ್ರಮದಂತೆ ವಿಂಗಡಿಸಿಲ್ಲ. ಯಾವ ರೀತಿಯನ್ನೂ ಅನುಸರಿಸದೆ ಈ ಎರಡು ಭಾಗಗಳೂ ಮಿಶ್ರಿತವಾಗಿವೆ. ಇವನ್ನು ತಿಳಿದುಕೊಳ್ಳಲು ಕಷ್ಟವಾದ್ದರಿಂದ ಮಂತ್ರಗಳನ್ನೆಲ್ಲಾ ಸೇರಿಸಿ ಅದನ್ನು ಸಂಹಿತೆಯೆಂದೂ ಆ ಮಂತ್ರಗಳ ವಿವರಣೆಗಳನ್ನು ಬೇರೆ ಸೇರಿಸಿ ಅದನ್ನು ಬ್ರಾಹ್ಮಣವೆಂದೂ ಕ್ರಮಪಡಿಸಲಾಯಿತು. ಈ ರೀತಿ ಕ್ರಮಪಡಿಸಿದ ಭಾಗವೇ ಶುಕ್ಲಯಜುರ್ವೇದವು. ಇದರಲ್ಲಿ ಮುಖ್ಯವಾಗಿ ಕಾಣ್ವ, ಮಾಧ್ಯಂದಿನ ಎಂಬ ಎರಡು ಶಾಖೆಗಳೂ ಶತಪಥವೆಂಬ ಬ್ರಾಹ್ಮಣವೂ ಈಗ ಬಳಕೆಯಲ್ಲಿವೆ. ಈ ಶುಕ್ಲಯಜುರ್ವೇದದ

ಕಾಲವನ್ನು ಕ್ರಿ. ಪೂ. ೪೦೦೦—೩೦೦೦ ವರ್ಷಗಳೆಂದು ಊಹಿಸಬಹುದು. ಇದರಂತೆ ಋಗ್ವೇದಕ್ಕೆ ಐತರೇಯ ಬ್ರಾಹ್ಮಣದ ಕಾಲವು ಕ್ರಿ. ಪೂ. ೩೦೦೦—೨೫೦೦ ವರ್ಷಗಳೆಂದೂ ಕೌಶಿತಕೀ ಬ್ರಾಹ್ಮಣದ ಕಾಲವು ಅದಕ್ಕಿಂತ ೨-೩ ಶತಮಾನದ ಈಚಿನದೆಂದೂ ಹೇಳಬಹುದು.

ಈ ಕಾಲನಿರ್ಣಯವನ್ನು ಮತ್ತೊಂದು ರೀತಿಯಲ್ಲಿ ನಿಶ್ಚಯಿಸಬಹುದು. ಮೊದಲು ಋಗ್ವೇದಾದಿವೇದಗಳ ಸಂಹಿತೆಗಳ ಕಾಲವು; ಅನಂತರ ಬ್ರಾಹ್ಮಣಗಳ ಕಾಲವು; ಬಳಿಕ ಆರಣ್ಯಕ ಮತ್ತು ಉಪನಿಷತ್ತುಗಳ ಕಾಲವು. ಬಳಿಕ ಯಾಸ್ಕರ ನಿರುಕ್ತವು ಆ ಮೇಲೆ ಶ್ರೌತ ಮೊದಲಾದ ಸೂತ್ರಗಳು, ಅದಾದನಂತರ ಮೀಮಾಂಸಾದಿ ಷಡ್ದರ್ಶನಗಳು ಬಳಿಕ ಪಾಣಿನಿಯ ವ್ಯಾಕರಣ. ಈರೀತಿ ಪ್ರತಿಯೊಂದು ಕಾಲಮಾನಕ್ಕೂ ಅನೇಕಶತಮಾನಗಳ ಅಂತರವಿರುವುದು. ಪಾಶ್ಚಾತ್ಯರ ಈ ಮಧ್ಯವರ್ತಿ ಕಾಲಮಾನವು ಸುಮಾರು ಎರಡು ಶತಮಾನಗಳೆಂದು ಹೇಳಲಾಗಿದೆ. ಅದು ಸರಿಯಲ್ಲ. ಈಗಿನಂತೆ ಆಕಾಲದಲ್ಲಿ ರೈಲು, ವಿಮಾನ ಮೊದಲಾದ ಪ್ರಯಾಣಸೌಲಭ್ಯಗಳು, ಟೆಲಿಗ್ರಾಫ್, ರೇಡಿಯೋ ಮೊದಲಾದ ವಾರ್ತಾಪ್ರಚಾರಸಾಧನಗಳೂ ಇರಲಿಲ್ಲ. ದೇಶದಲ್ಲಿ ಲಿಖಿತ ಭಾಷೆಯಾಗಲಿ ವಿದ್ಯಾಪ್ರಚಾರವಾಗಲಿ ವಿಶೇಷವಾಗಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಒಂದು ಗ್ರಂಥಪ್ರಚಾರವು ಅಥವಾ ಯಜ್ಞ ಮೊದಲಾದ ಕರ್ಮಗಳ ವಿಧಿನಿಯಮಗಳು ಅಥವಾ ಅವುಗಳಲ್ಲಿ ಬದಲಾವಣೆಗಳು ಇಂಡಿಯಾದೇಶದಂತಹ ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಹರಡಬೇಕಾದರೆ ಆಕಾಲದಲ್ಲಿ ಅನೇಕಶತಮಾನಗಳ ಕಾಲವು ಅವಶ್ಯಕವಾಗಿತ್ತು. ಈ ದೃಷ್ಟಿಯಿಂದ ಕಾಲಮಾನದ ಅಂತರವು ಕೇವಲ ಎರಡು ಶತಮಾನಗಳೆಂದು ಹೇಳುವುದನ್ನು ಒಪ್ಪುವುದಕ್ಕಾಗುವುದಿಲ್ಲ. ಪಾಶ್ಚಾತ್ಯರು ವ್ಯಾಕರಣಕರ್ತೃವಾದ ಪಾಣಿನಿಯ ಕಾಲವನ್ನು ಕ್ರಿ. ಪೂ. ೩೦೦ ಅಥವಾ ೪೦೦ ಎಂದು ಹೇಳುವರು. ಇದು ಗೌತಮಬುದ್ಧನ ಕಾಲಕ್ಕಿಂತ (ಕ್ರಿ. ಪೂ. ೫೦೦) ಈಚಿನದಾಯಿತು. ಬುದ್ಧನಕಾಲಕ್ಕಿಂತಲೂ ಎಷ್ಟೋ ಹಿಂದೆಯೇ ವೈದಿಕ ಗ್ರಂಥಗಳೂ, ವ್ಯಾಕರಣವೂ, ಯೋಗಶಾಸ್ತ್ರವೂ ಸಹ ಪರಿಷ್ಕರಿಸಲ್ಪಟ್ಟು ಪ್ರಚಾರದಲ್ಲಿದ್ದಿತು. ಆದ್ದರಿಂದ ಈಚಿನ ಸಂಶೋಧನೆಯಂತೆ ಪಾಣಿನಿಯ ಕಾಲವು ಕಿ. ಪೂ. ೮೦೦ ವರ್ಷಕ್ಕಿಂತ ಹಿಂದಿನದಾಗಿರಬೇಕು. ಪೂರ್ವಮೀಮಾಂಸಾದಿ ದರ್ಶನಗಳು ಪಾಣಿನಿಯ ಕಾಲಕ್ಕಿಂತ ೨೦೦ ವರ್ಷಗಳಾದರೂ ಹಿಂದಕ್ಕಿರಬೇಕು, ಎಂದರೆ ಕ್ರಿ. ಪೂ. ೧೦೦೦ ವರ್ಷಗಳು. ಶ್ರೌತಸೂತ್ರಗಳ ಕಾಲವು ಕ್ರಿ. ಪೂ. ೧೫೦೦ ಎಂದು ಹೇಳಬಹುದು. ಯಾಸ್ಕರ ಕಾಲವು ಕ್ರಿ. ಪೂ. ೨೦೦೦ ವರ್ಷಗಳು. ಬ್ರಾಹ್ಮಣಕಾಲವು ಕ್ರಿ. ಪೂ. ೩೦೦೦-೨೫೦೦ ಎಂದು ಹೇಳಬಹುದು. ಅದರಲ್ಲಿಯೂ ಐತರೇಯಬ್ರಾಹ್ಮಣ, ತೈತ್ತಿರೀಯಬ್ರಾಹ್ಮಣ, ಕೌಶೀತಕೀ ಅಥವಾ ಸಾಂಖ್ಯಾಯನಬ್ರಾಹ್ಮಣ, ಶತಪಥಬ್ರಾಹ್ಮಣಗಳು ಪ್ರಾಚೀನವಾದವುಗಳು. ಜೈಮಿನೀಯ ಮೊದಲಾದ ಇತರ ಬ್ರಾಹ್ಮಣಗಳು ಅಷ್ಟು ಪ್ರಾಚೀನವಾದವುಗಳಲ್ಲ. ಎಂದರೆ ಅವುಗಳ ಕಾಲವನ್ನು ಕ್ರಿ. ಪೂ. ೨೦೦೦-೧೫೦೦ ಎಂದು ಹೇಳಬಹುದು. ಯಾಸ್ಕರು (ಕ್ರಿ. ಪೂ. ೨೦೦೦) ತಮ್ಮ ನಿರುಕ್ತಗ್ರಂಥದಲ್ಲಿ ಐತರೇಯ, ಕೌಶೀತಕೀ ಹಾರಿದ್ರವಿಕ ಮೊದಲಾದ ಬ್ರಾಹ್ಮಣಗಳ ಮತ್ತು ಇತರ ವೇದಸಂಹಿತೆಗಳ ವಾಕ್ಯಗಳನ್ನು ಅಲ್ಲಲ್ಲಿ ಉದಾಹರಿಸಿದಾರೆ ಎಂದರೆ ಅವರ ಕಾಲದಲ್ಲಿ ಈ ಬ್ರಾಹ್ಮಣಗಳು ಎಲ್ಲರಿಗೂ ತಿಳಿದಿತ್ತೆಂದು ಕಂಡುಬರುತ್ತದೆ. ಈ ಗ್ರಂಥಗಳ ಭಾಷಾಶೈಲಿಯು ಪಾಣಿನಿಯ ವ್ಯಾಕರಣನಿಯಮಗಳಿಗೆ ಒಳಪಟ್ಟಿರುವುದಿಲ್ಲ. ವಿಷಯನಿರೂಪಣೆಯಲ್ಲಿ ಎಂದರೆ ಯಜ್ಞಕರ್ಮಾಂಗಗಳ ವಿವರಣೆಯಲ್ಲಿ ಯಜುರ್ವೇದದಲ್ಲಿ ಹೇಳಿರುವ ವಿಷಯಗಳನ್ನೂ ಮತ್ತು ಕರ್ಮವನ್ನೂ ಅನುಸರಿಸಿರುತ್ತವೆ. ಇತಿಹಾಸಕಥನದಲ್ಲಿ ಸಾಮರಸ್ಯವಿದ್ದರೂ ಅಲ್ಪಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ. ಐತರೇಯ ಬ್ರಾಹ್ಮಣವನ್ನನುಸರಿಸಿ ಆಶ್ವಲಾಯನ ಶ್ರೌತಸೂತ್ರವೂ ಕೌಷೀತಕೀ ಬ್ರಾಹ್ಮಣವನ್ನನುಸರಿಸಿ ಶಾಂಖಾಯನ ಶ್ರೌತಸೂತ್ರವೂ ವಿಷಯನಿರೂಪಣೆಮಾಡಿರುವವು. ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವ ವಿಷಯಗಳು ಐತರೇಯ ಬ್ರಾಹ್ಮಣದಲ್ಲಿ ಈರೀತಿ ವಿವರಿಸಲ್ಪಟ್ಟಿರುವವು. ಐತರೇಯಬ್ರಾಹ್ಮಣದಲ್ಲಿರುವ ವಿಷಯಗಳಿಗಿಂತ ಹೆಚ್ಚು ವಿಷಯಗಳ ವಿವರಣೆಯು ಆಶ್ವಲಾಯನಶ್ರೌತಸೂತ್ರದಲ್ಲಿದೆ. ಆಶ್ವಲಾಯನಶ್ರೌತಸೂತ್ರದ ಮೊದಲನೇ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವ ದರ್ಶಪೂರ್ಣಮಾಸಯಾಗಗಳು, ಅಗ್ನಿಹೋತ್ರ, ಅಗ್ನ್ಯಾಧಾನ. ಚಾತುರ್ಮಾಸ್ಯ, ಪ್ರಾಯಶ್ಚಿತ್ತಗಳು, ಪಶುಬಂಧ ಎಂಬ

ಯಜ್ಞಗಳಿಗೆ ಬದಲಾಗಿ ಐತರೇಯಬ್ರಾಹ್ಮಣದಲ್ಲಿ ಪಶುಬಂಧ (ಐ. ಬ್ರಾ.೧. ೧೪), ಅಗ್ನಿಹೋತ್ರ (ಐ. ಬ್ರಾ. ೫, ೨೬-೩೧) ಪ್ರಾಯಶ್ಚಿತ್ತ (ಐ. ಬ್ರಾ. ೭, ೨-೧೨) ಎಂಬ ಭಾಗಗಳ ವಿವರಣೆ ಮಾತ್ರ ಇದೆ. ಅದೂ ಅಷ್ಟು ವಿಸ್ತಾರವಾಗಿಲ್ಲ. ಅಲ್ಲಿಂದ ಮುಂದಕ್ಕೆ ಆಶ್ವಲಾಯನಶ್ರೌತಸೂತ್ರವು ಸ್ವಲ್ಪ ಹೆಚ್ಚು ಕಡಿಮೆ ಐತರೇಯಬ್ರಾಹ್ಮಣವನ್ನೇ ಅನುಸರಿಸಿದೆ.

| ಆ.ಶ್ರೌ. ಅಧ್ಯಾಯ | ವಿಷಯ ವಿವರಣೆ | ಐ.ಬ್ರಾ. ಪಂಚಕ | ಪ್ರಕರಣ |
|---|---|---|---|
| ೪ | ಸೋಮಯಾಗದ ಸುತ್ಯಾದಿನದಲ್ಲಿ ಆಚರಿಸಬೇಕಾದ .... | ೧ | — |
| | ಪೂರ್ವಭಾವೀಕ್ರಮಗಳು .... | ೨ | ೧೮ |
| ೫ | ಅಗ್ನಿಷ್ಟೋಮಯಾಗ .... | ೨ | ೧೯ |
| | | ೩ | ೪೮ |
| ೬ (೧) | ಉಕ್ಥ್ಯಯಾಗ .... | ೩ | ೪೯, ೫೦ |
| (೧) | ಷೋಡಶಿನ್ .... | ೪ | ೧- ೪ |
| (೪- ೬) | ಅತಿರಾತ್ರ .... | ೪ | ೫-೧೧ |
| ೭ (೭-೧೦) | ಪ್ರಾಯಶ್ಚಿತ್ತಾದಿಗಳು | | — |
| (೧೧-೧೪) | ಅಗ್ನಿಷ್ಟೋಮಯಾಗದ ಕೊನೆಯ ಕಾರ್ಯಕಲಾಪಗಳು .... | ೩ | ೪೭-೪೮ |
| ೭-( ೧) | ಸಾಧಾರಣ ವಿಧಿನಿಯಮಗಳು | | — |
| ( ೨- ೪) | ಚತುರ್ವಿಂಶ .... | ೪ | ೧೨, ೧೪ |
| ( ೫- ೯) | ಅಭಿಪ್ಲವಷಡಹ ಇತ್ಯಾದಿ .... | ೪ | ೧೩, ೧೫, ೧೬ |
| (೧೦-೧೨) | ಪೃಷ್ಠ್ಯಷಡಹ .... | ೪ | ೧೩, ೧೫, ೧೬ |
| | | ೫ | ೧೫ |
| ೮ (೧-೪) | ಆರನೆಯ ದಿನದಲ್ಲಿ ಹೋತೃ ಮತ್ತು ಹೋತ್ರಕರು ಪಠಿಸಬೇಕಾದ | | |
| | ಶಸ್ತ್ರಮಂತ್ರಗಳು .... | ೬ | — |
| (೫) | ಅಭಿಜಿತ್ ಮತ್ತು ಸ್ವರಸಾಮನ್ .... | ೪ | ೧೯ |
| (೬) | ವಿಷುವತ್ .... | ೪ | ೧೯-೨೨ |
| (೭) | ವಿಶ್ವಜಿತ್ ಮತ್ತು ಸ್ವರಸಾಮನ್ .... | ೪ | ೧೯ |
| | ಅಭಿಪ್ಲವ ಮತ್ತು ಛಂದೋಮಾಃ (ಸಮೂಳ್ಹದಲ್ಲಿ) | | — |
| (೮) | ವ್ಯೂಳ್ಹದ್ವಾದಶಾಹ .... | ೪ | ೨೭ |
| (೯-೧೧) | ಛಂದೋಮಾಃ .... | ೫ | ೧೬-೨೧ |
| (೧೨) | ಯಾಗದ ಹತ್ತನೆಯ ದಿವಸ .... | ೫ | ೨೨-೨೫ |
| (೧೩) | ಹತ್ತನೆಯ ದಿವಸದ ಕಾರ್ಯಕಲಾಪಗಳ ಸಮಾಪ್ತಿ | | — |
| (೧೪) | ಮಂತ್ರೋಚ್ಚಾರಣೆಯ ವಿಧಿನಿಯಮಗಳು | | — |
| ೯-೧೨ | ಅಹೀನ ಮತ್ತು ಸತ್ರಯಾಗಗಳು | | — |

ಆ. ಶ್ರೌ. ಸೂತ್ರದ ಕೊನೆಯ ಅಧ್ಯಾಯಗಳಲ್ಲಿರುವ ವಿವರಣೆಗಳಿಗೆ ಪ್ರತಿಯಾಗಿ ಐತರೇಯ ಬ್ರಾಹ್ಮಣದಲ್ಲಿ ಏನೂ ಇರುವುದಿಲ್ಲ. ಆ. ಶ್ರೌ. ೧೦-೫ ರಲ್ಲಿ ದ್ವಾದಶಾಹವೂ ೧೧-೭ ರಲ್ಲಿ ಗವಾಮಯನವೂ, ವಿವೃತವಾಗಿದೆ. ೧೨-೯ ಕ್ಕೂ ಐ.ಬ್ರಾ. ೭-೧ ಕ್ಕೂ ಏನೂ ವ್ಯತ್ಯಾಸವಿಲ್ಲ. ಐ.ಬ್ರಾ. ದಲ್ಲಿರುವ (೭-೧೮) ಶುನಶ್ಶೇಪೋಪಾಖ್ಯಾನವು ಆ.ಶ್ರೌ. ಸೂತ್ರದಲ್ಲಿ (೯-೩) ಸೂತ್ರರೂಪದಲ್ಲಿ ಉಕ್ತವಾಗಿದೆ.

## ಯಜ್ಞಗಳ ಸ್ವರೂಪ

ಯಜ್ಞಗಳಲ್ಲಿ ಅನೇಕವಿಧಗಳಿದ್ದರೂ ಅವುಗಳನ್ನು ಪ್ರಕೃತಿ, ವಿಕೃತಿ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಪ್ರಕೃತಿಯೆಂದರೆ (Model) ಒಂದು ಯಜ್ಞವನ್ನು ಒಂದು ರೀತಿಯಲ್ಲಿ ಮಾಡುವ ಮೂಲಭೂತವಾದ ಕ್ರಮ. ಈ ಕ್ರಮದಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿ ಮಾಡುವ ಇತರ ಯಜ್ಞಗಳಿಗೆ ವಿಕೃತಿಯಾಗವೆಂದು ಹೆಸರು. ಇದು ಯಜ್ಞಗಳ ಸಾಮಾನ್ಯ ವಿಭಾಗವಾಯಿತು. ಇನ್ನು ಯಜ್ಞಗಳ ಸ್ವರೂಪವನ್ನು ವಿವೇಚಿಸುವಾಗ ಯಜ್ಞಗಳನ್ನು ಮೂರು ವಿಧವಾಗಿ ವಿಂಗಡಿಸಿರುವರು. ಹೇಗೆಂದರೆ—

(೧) ಹವಿರ್ಯಜ್ಞಗಳು—ಈ ಯಜ್ಞಗಳು ಸಾಧಾರಣವಾಗಿ ಒಂದೇ ದಿನದಲ್ಲಿ ಮುಗಿಯುವಂತಿದ್ದು ಇವುಗಳಲ್ಲಿ ಕೇವಲ ಆಜ್ಯ, ಚರು (ಅನ್ನ) ಹವಿಸ್ಸು, ಸಮಿತ್ತು ಮೊದಲಾದ ಹವಿರ್ದ್ರವ್ಯಗಳನ್ನು ಮಾತ್ರ ಉಪಯೋಗಿಸುವರು.

(೨) ಸೋಮಯಾಗಗಳು—ಈ ಯಜ್ಞಗಳಲ್ಲಿ ಸೋಮರಸವನ್ನು ಲತೆಗಳಿಂದ ಹಿಂಡಿ ಹೋಮಮಾಡಿದನಂತರ ಋತ್ವಿಕ್ಕುಗಳೂ ಯಜಮಾನರೂ ಪಾನಮಾಡುವರು. ಇವೆರಡೂ ಶ್ರೌತಯಜ್ಞಗಳು.

(೩) ಪಾಕಯಜ್ಞಗಳು—ಇವುಗಳಲ್ಲಿ ಪಕ್ವವಾದ ಚರು ಮೊದಲಾದ ದ್ರವ್ಯಗಳನ್ನು ವಿಧ್ಯುಕ್ತವಾಗಿ ಉಪಯೋಗಿಸಿ ಹೋಮಾದಿಗಳನ್ನು ಮಾಡುವರು. ಇವು ಗೃಹ್ಯಯಜ್ಞಗಳು.

ಈ ಮೂರುವಿಧ ಯಾಗಗಳಲ್ಲಿಯೂ ಅನೇಕ ಭೇದಪ್ರಭೇದಗಳಿರುವವು. ಮುಖ್ಯವಾಗಿ ಒಂದೊಂದು ವಿಭಾಗದಲ್ಲಿಯೂ ಏಳು ಮುಖ್ಯಸಂಸ್ಥೆ (ಯಜ್ಞ)ಗಳಿರುವವು. ಮೊದಲನೆಯ ಹವಿರ್ಯಜ್ಞಕ್ಕೆ ಅಥವಾ ಇಷ್ಟಿಗೆ ದರ್ಶಪೂರ್ಣಮಾಸೇಷ್ಟಿಗಳು ಪ್ರಕೃತಿಯಾಗಿರುವವು. ಸೋಮಯಾಗಕ್ಕೆ ಅಗ್ನಿಷ್ಟೋಮಯಾಗವು ಪ್ರಕೃತಿಯು. ಇವುಗಳ ವಿಷಯವನ್ನು ನಾವು ಋ.ಸಂ. ಭಾಗ ೧ ಪೇಜು ೪೧೬-೯೧೮, ೬೬೭-೬೭೦, ಭಾಗ ೨ ಪೇಜು ೧೫೦-೧೫೧ ಇತ್ಯಾದಿಸ್ಥಳಗಳಲ್ಲಿ ವಿವರಿಸಿದೇವೆ.

ಅಗ್ನಿಷ್ಟೋಮಯಾಗವು ೫ ದಿನಗಳಲ್ಲಿ ಮುಗಿಯುವುದು. ಇದರ ವಿಕೃತಿರೂಪಗಳಾದ ಅಭಿಪ್ಲವಷಡಹ, ಪೃಷ್ಠ್ಯಷಡಹ, ಷೋಡಶಿನ್ ಎಂಬ ಯಾಗಗಳು ಆರು ದಿವಸಗಳಲ್ಲಿ ಮುಗಿಯುವವು. ಏಕಾಹವೆಂದರೆ ಒಂದು ದಿನದಲ್ಲಿ ಮಾಡಿಮುಗಿಸುವ ಯಜ್ಞವು. ಅಹೀನವೆಂದರೆ ೭ ದಿನಗಳಿಗಿಂತ ಹೆಚ್ಚಾಗಿ ಹನ್ನೆರಡುದಿನಗಳೊಳಗೆ ಮಾಡಿಮುಗಿಸುವ ಯಜ್ಞವು. ಅಭಿಪ್ಲವ, ಪೃಷ್ಠ್ಯ, ಉಕ್ಥ್ಯ ಮೊದಲಾದವು ಈ ಅಹೀನವೆಂಬ ಯಾಗದ ಗುಂಪಿಗೆ ಸೇರಿದವು. ಸತ್ರವೆಂದರೆ ಹನ್ನೆರಡು ದಿವಸಕ್ಕಿಂತಲೂ ಹೆಚ್ಚಾಗಿ ಒಂದು ವರ್ಷದವರೆಗೆ ನಡೆಯುವ ಯಾಗವು. ಈ ಸತ್ರಯಾಗವು ಅನೇಕವರ್ಷಗಳವರೆಗೂ ನಡೆಯುವುದೂ ಉಂಟು. ಅಗ್ನಿಷ್ಟೋಮ ಯಾಗದ ಕಾರ್ಯಕ್ರಮವನ್ನು ನಾವು ಮುಂದೆ ವಿವರಿಸಿದ್ದೇವೆ. (ಪೇಜು 20) ದ್ವಾದಶಾಹವೆಂಬ ಯಾಗವು ಹನ್ನೆರಡು ದಿನಗಳವರೆಗೆ ನಡೆಯುವ ಸೋಮಯಾಗವು. ಇದರಲ್ಲಿಯೂ ಅನೇಕ ಬೇಧಗಳಿರುವವು. ಇದರ ಪ್ರಕೃತಿರೂಪವು ಈರೀತಿ ಇರುವುದು—

೧ ನೇ ದಿನ—ಅತಿರಾತ್ರದಂತೆ ಎಂದರೆ ಯಜ್ಞದಲ್ಲಿ ಪೂರ್ವಭಾವಿಯಾಗಿ ನಡೆಸುವ ಕಾರ್ಯಕ್ರಮಗಳು (ಪ್ರಾಯಣೀಯ).

೨ ನೇ ದಿನ—ಅಗ್ನಿಷ್ಟೋಮದ ಕಾರ್ಯಕ್ರಮಗಳು, ತ್ರಿವೃತ್‌ಸ್ತೋಮ, ರಥಂತರಸಾಮ (ಪೃಷ್ಠಸ್ತೋತ್ರದಂತೆ).

೩ ನೇ ದಿನ—ಉಕ್ಥ್ಯಯಾಗದಂತೆ, ಪಂಚವಿಂಶಸ್ತೋಮ, ಬೃಹತ್‌ಸಾಮ (ಪೃಷ್ಠದಂತೆ)

೪ ನೇ ದಿನ—ಉಕ್ಥ್ಯದಂತೆ, ಸಪ್ತದಶಸ್ತೋಮ, ವೈರೂಪಸಾಮ (ಪೃಷ್ಠದಂತೆ)

೫ ನೇ ದಿನ—ಷೋಡಶಿನ್, ಏಕವಿಂಶತಿಸ್ತೋಮ, ವೈರಾಜಸಾಮ (ಪೃಷ್ಠದಂತೆ)

೬ ನೇ ದಿನ—ಉಕ್ಥ್ಯದಂತೆ ತ್ರಿಣವಸ್ತೋಮ, ಶಾಕ್ವರಸಾಮ (ಪೃಷ್ಠದಂತೆ)

೭ ನೇ ದಿನ—ಉಕ್ಥ್ಯದಂತೆ, ತ್ರಯಸ್ತ್ರಿಂಶಸ್ತೋಮ, ರೈವತಸಾಮ (ಪೃಷ್ಠದಂತೆ)

೮ ನೇ ದಿನ—ಉಕ್ಥ್ಯದಂತೆ, ಚತುರ್ವಿಂಶಸ್ತೋಮ ಶಾಕ್ವರರೈವತ ಮತ್ತು ಬೃಹತ್ (ಪೃಷ್ಠದಂತೆ)

೯ ನೇ ದಿನ—ಉಕ್ಥ್ಯದಂತೆ, ಚತುಶ್ಚತ್ವಾರಿಂಶಸ್ತೋಮ, ರಥಂತರಸಾಮ (ಪೃಷ್ಠದಂತೆ)

೧೦ ನೇ ದಿನ—ಉಕ್ಥ್ಯದಂತೆ, ಅಷ್ಟಾಚತ್ವಾರಿಂಶಸ್ತೋಮ, ಬೃಹತ್‌ಸಾಮ (ಪೃಷ್ಠದಂತೆ)

೧೧ ನೇ ದಿನ—ಅಗ್ನಿಷ್ಟೋಮ, ಚತುರ್ವಿಂಶಸ್ತೋಮ ಮತ್ತು ತ್ರಯಸ್ತ್ರಿಂಶಸ್ತೋಮ, ಅಗ್ನಿಷ್ಟೋಮಸಾಮ ; ರಥಂತರ ಅಥವಾ ವಾಮದೇವ್ಯ (ಪೃಷ್ಠಸ್ತೋತ್ರದಂತೆ).

೧೨ ನೇ ದಿನ—ಅತಿರಾತ್ರ (ಉದಯನೀಯ) ಪರಿಸಮಾಪ್ತಿ.

ಈ ಹನ್ನೆರಡು ದಿನಗಳಲ್ಲಿ ಮೊದಲು ಮತ್ತು ಕೊನೆಯದಿನಗಳನ್ನು ಬಿಟ್ಟರೆ, ೧-೬ ದಿನಗಳು ಪೃಷ್ಠ್ಯಷಡಹವೆಂದೂ ೭-೯ ದಿನಗಳು ಛಂದೋಮಾದಿನಗಳೆಂದೂ ೧೦ ನೇಯದು ಹತ್ತನೆಯದಿನವೆಂದೂ ಕರೆಯಲ್ಪಡುವುವು. ಈ ವಿಧವಾದ ದ್ವಾದಶಾಹವು ಅಹೀನ (ಹನ್ನೆರಡುದಿನಗಳವರೆಗೆ ಮಾಡಲ್ಪಡುವ) ಇತರವಿಧ ಸೋಮಯಾಗಗಳಿಗೆ ಪ್ರಕೃತಿ (ಮಾದರಿ) ಯಂತಿರುವುದು.

ಸತ್ರಯಾಗದ ವಿವರಣೆ—

ಸತ್ರಯಾಗಕ್ಕೆ ಗವಾಮಯನ ಎಂಬುವುದು ಪ್ರಕೃತಿ (ಮಾದರಿ) ಯಾಗಿರುವುದು. ಇದು ಒಂದು ಸಂವತ್ಸರದವರೆಗೂ ನಡೆಯುವ ಯಾಗವು. ಇದರ ಕ್ರಮವು ಈರೀತಿ ಇರುವುದು.

೧ ಪ್ರಾಯಣೀಯ, ಅತಿರಾತ್ರ.

೨ ಚತುರ್ವಿಂಶ ದಿನ—ಅಗ್ನಿಷ್ಟೋಮ ಅಥವಾ ಉಕ್ಥ್ಯದಂತೆ ; ಚತುರ್ವಿಂಶಸ್ತೋಮ ; ಶಾಕ್ವರರೈವತ ಮತ್ತು ಬೃಹತ್‌ಸಾಮಗಳು (ಪೃಷ್ಠದಂತೆ)

ಇವು ಪೂರ್ವಭಾವೀಕಾರ್ಯಕಲಾಪಗಳು.

೧ ನೇ ತಿಂಗಳು—೪ ಅಭಿಪ್ಲವಷಡಹಗಳು (೪×೬=೨೪ ದಿನಗಳು)
೧ ಪೃಷ್ಠ್ಯಷಡಹ (೬ ದಿನಗಳು) ಒಟ್ಟು ೩೦ ದಿನಗಳು

೨ ನೇ ತಿಂಗಳು—೪ ಅಭಿಪ್ಲವ ಷಡಹಗಳು
೧ ಪೃಷ್ಠ್ಯಷಡಹ

೩ ನೇ ತಿಂಗಳು—೪ ಅಭಿಪ್ಲವಷಡಹಗಳು
೧ ಪೃಷ್ಠ್ಯಷಡಹ

೪ ನೇ ತಿಂಗಳು—೪ ಅಭಿಪ್ಲವಷಡಹಗಳು
೧ ಪೃಷ್ಠ್ಯಷಡಹ

೫ ನೇ ತಿಂಗಳು—೪ ಅಭಿಪ್ಲವಷಡಹಗಳು
೧ ಪೃಷ್ಠ್ಯಷಡಹ

೬ ನೇ ತಿಂಗಳು— ೩ ಅಭಿಪ್ಲವಷಡಹಗಳು

೧ ಪೃಷ್ಠ್ಯಷಡಹ

ಅಭಿಜಿತ್ ; ಅಗ್ನಿಷ್ಟೋಮ (ಎಲ್ಲಾ ಸ್ತೋಮಗಳೊಡನೆ)

ಎರಡು ಸಾಮಗಳು, ರಥಂತರ ಅಥವಾ ಬೃಹತ್ (ಪೃಷ್ಠದಂತೆ)

೩ ಸ್ವರಸಾಮನ್ ದಿನಗಳು ; ಉಕ್ಥ್ಯಗಳು ಅಥವಾ ಅಗ್ನಿಷ್ಟೋಮಗಳು ಸ್ವರಸಾಮ (ಪೃಷ್ಠದಂತೆ)

ಇಲ್ಲಿಗೆ ಈ ಸತ್ರಯಾಗದಲ್ಲಿ ೬ ತಿಂಗಳಾದ್ದರಿಂದ ಅರ್ಧಭಾಗವು ಸಮಾಪ್ತಿಯಾಯಿತು. ಆದ್ದರಿಂದ ಮುಂದಿನ ದಿನವಾದ ವಿಷುವತ್ ಎಂಬ ದಿನವು ಈ ಸತ್ರದ ಮಧ್ಯದಿನವಾಗಿರುವುದು.

ವಿಷುವದ್ದಿನ— (ವರ್ಷದಲ್ಲಿ ಮಧ್ಯದದಿನ— central day) ಅಗ್ನಿಷ್ಟೋಮದಂತೆ; ಏಕವಿಂಶಸ್ತೋಮ; ಬೃಹತ್ ಅಥವಾ ಮಹಾದಿವಾಕೀರ್ತ್ಯ ಎಂಬ ಸಾಮ (ಪೃಷ್ಠದಂತೆ)

ಇಲ್ಲಿಂದ ಮುಂದೆ ಕೊನೆಯವರೆಗೆ ೬ ತಿಂಗಳು ನಡೆಯುವ ಈ ಸತ್ರಯಾಗದಲ್ಲಿ ಪ್ರತಿತಿಂಗಳಲ್ಲಿಯೂ ಅಭಿಪ್ಲವ ಮತ್ತು ಪೃಷ್ಠ್ಯ ಭಾಗಗಳು ವ್ಯತ್ಯಸ್ತವಾಗಿ ಎಂದರೆ ಹಿಂದುಮುಂದಾಗಿ ಆಚರಿಸಲ್ಪಡುವವು. ಅವುಗಳ ಕ್ರಮವು ಈರೀತಿ ಇದೆ—

೭ ನೇ ತಿಂಗಳು— ೩ ಸ್ವರಸಾಮಗಳು (ಹಿಂದುಮುಂದಾಗಿ)

ವಿಶ್ವಜಿತ್, ಅಗ್ನಿಷ್ಟೋಮ-ಎಲ್ಲಾ ಸ್ತೋಮಗಳೊಡನೆ ಮತ್ತು ಪೃಷ್ಠ್ಯಗಳೊಡನೆ

೧ ಪೃಷ್ಠ್ಯಷಡಹ (ವ್ಯತ್ಯಸ್ತವಾಗಿ)

೩ ಅಭಿಪ್ಲವಷಡಹ ,,

೮ ನೇ ತಿಂಗಳು— ೧ ಪೃಷ್ಠ್ಯಷಡಹ ,,

೪ ಅಭಿಪ್ಲವಷಡಹಗಳು ,,

೯ ನೇ ತಿಂಗಳು— ೧ ಪೃಷ್ಠ್ಯಷಡಹ ,,

೪ ಅಭಿಪ್ಲವಷಡಹಗಳು ,,

೧೦ ನೇ ತಿಂಗಳು— ೧ ಪೃಷ್ಠ್ಯಷಡಹ ,,

೪ ಅಭಿಪ್ಲವಷಡಹಗಳು ,,

೧೧ ನೇ ತಿಂಗಳು— ೧ ಪೃಷ್ಠ್ಯಷಡಹ ,,

೪ ಅಭಿಪ್ಲವಷಡಹಗಳು ,,

೧೨ ನೇ ತಿಂಗಳು— ೩ ಅಭಿಪ್ಲವಷಡಹಗಳು ,,

ಆಯುಃ ಎಂಬ ದಿನ

ಗೌಃ ಎಂಬ ದಿನ

ದಶರಾತ್ರದ ದಿನ

ಮಹಾವ್ರತದ ದಿನ

ಅತಿರಾತ್ರ ಅಥವಾ ಉದಯನೀಯ ಕಾರ್ಯಕ್ರಮಗಳು.

ಇದು ಒಂದು ಸಂವತ್ಸರದವರೆಗೆ ನಡೆಯುವ ಗವಾಮಯನವೆಂಬ ಸತ್ರಯಾಗದ ಸ್ವರೂಪವು. ಈ ಕ್ರಮದಲ್ಲಿ ಆಶ್ವಲಾಯನ ಆಪಸ್ತಂಬ, ಬೋಧಾಯನ, ಕಾತ್ಯಾಯನ, ತಾಂಡ್ಯ, ಶಾಂಖಾಯನ, ಭಾಲ್ಲವಿಕ ಮುಂತಾದವರಲ್ಲಿ ಭಿನ್ನಾಭಿಪ್ರಾಯವು ಕಂಡು ಬರುವುದು.

ಈಗ ಐತರೇಯಬ್ರಾಹ್ಮಣದಲ್ಲಿ ವಿಸ್ತಾರವಾಗಿ ವಿವರಿಸಿರುವ ಸೋಮಯಾಗದ ಮಾದರಿಯಾದ ಅಗ್ನಿಷ್ಟೋಮ ಎಂಬ ಯಜ್ಞದ ಕ್ರಮವನ್ನು ಸಂಕ್ಷೇಪವಾಗಿ ವಿವರಿಸಲಾಗುವುದು—

## ಅಗ್ನಿಷ್ಟೋಮ

ಆನುಕೂಲಕ್ಯೋಕ್ಷರ ಯಾಗಗಳನ್ನು ಇಷ್ಟಿ, ಪಶು ಮತ್ತು ಸೋಮಯಾಗಗಳೆಂದು ವಿಭಾಗಿಸಿದ್ದಾರೆ. ಗೌತಮ (೮-21) ಮತ್ತು ಲಾಟ್ಯಾಯನಶ್ರೌತ (5-4-24) ಸೂತ್ರಗಳಲ್ಲಿ, ಸೋಮಯಾಗಗಳಲ್ಲಿ—ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀನ್, ವಾಜಪೇಯ, ಅತಿರಾತ್ರ ಮತ್ತು ಅಪ್ತೋರ್ಯಾಮವೆಂಬುದಾಗಿ ಏಳು ಪ್ರಭೇದಗಳು ಉಕ್ತವಾಗಿವೆ. ಎಲ್ಲಾ ಸೋಮಯಾಗಗಳಿಗೂ ಅಗ್ನಿಷ್ಟೋಮವೇ ಪ್ರಕೃತಿ. ಅಗ್ನಿಷ್ಟೋಮವು ಒಂದೇ ದಿನದಲ್ಲಿ ಮಾಡಬೇಕಾದ ಯಾಗವು. ಆದುದರಿಂದ ಇದನ್ನು ಏಕಾಹ ಅಥವಾ ಏಕಾಹಿಕವೆನ್ನುತ್ತಾರೆ. ಇದು ಜ್ಯೋತಿಷ್ಟೋಮದ ಬಹು ಮುಖ್ಯಭಾಗವು. ಅನೇಕ ಸಂದರ್ಭಗಳಲ್ಲಿ ಇವೆರಡೂ ಒಂದೇ ಎಂಬ ಭಾವನೆಯೂ ಉಂಟು. ಈ ಸೋಮಯಾಗಗಳನ್ನು ಮತ್ತೊಂದು ರೀತಿಯಲ್ಲಿ ವಿಭಾಗಮಾಡುವುದುಂಟು. ಒಂದೇ ದಿನದಲ್ಲಿ ಮುಗಿಯತಕ್ಕವುಗಳಿಗೆ ಏಕಾಹಸೋಮಯಾಗಗಳೆಂದೂ, ಒಂದು ದಿನಕ್ಕಿಂತ ಹೆಚ್ಚಿಗೆ ಆದರೆ ಹನ್ನೆರಡು ದಿನಗಳ ಒಳಗೆ ಮುಗಿಯತಕ್ಕವುಗಳಿಗೆ ಅಹೀನ ಸೋಮಯಾಗಗಳೆಂದೂ, ಹನ್ನೆರಡಕ್ಕಿಂತ ಹೆಚ್ಚಿನ ದಿನಗಳು ನಡೆಯುವ ಸೋಮಯಾಗಗಳಿಗೆ ಸತ್ರಗಳೆಂದೂ ಹೆಸರು. ಹನ್ನೆರಡುದಿನಗಳ ಯಾಗವು ಅಹೀನವೂ ಹೌದು ಮತ್ತು ಸತ್ರವೂ ಹೌದು.

ಜ್ಯೋತಿಷ್ಟೋಮವು ಸಾಧಾರಣವಾಗಿ ಐದುದಿನಗಳು ನಡೆಯುತ್ತವೆ. ಈ ಐದು ದಿನಗಳಲ್ಲಿ ನಡೆಯುವ ಮುಖ್ಯ ಕರ್ಮಗಳಿವು. (೧) ಋತ್ವಿಗ್ವರಣ—ಋತ್ವಿಜರನ್ನು ಆರಿಸುವುದು, ಮಧುಪರ್ಕ, ದೀಕ್ಷಣೀಯೇಷ್ಟಿ ಮತ್ತು ಯಜಮಾನನ ದೀಕ್ಷಾವಿಧಿ. (೨) ಪ್ರಾಯಣೀಯೇಷ್ಟಿ, ಸೋಮವನ್ನು ಕ್ರಯಮಾಡುವುದು, ಆತಿಥ್ಯೇಷ್ಟಿ, ಪ್ರವರ್ಗ್ಯ ಮತ್ತು ಉಪಸದ್ (೩) ಪ್ರವರ್ಗ್ಯ ಮತ್ತು ಉಪಸದ್ (೪) ಪ್ರವರ್ಗ್ಯ, ಉಪಸದ್, ಅಗ್ನಿಪ್ರಣಯನ, ಅಗ್ನೀಸೋಮಪ್ರಣಯನ, ಹವಿರ್ಧಾನ ಪ್ರಣಯನ, ಪಶುಬಲಿ. (೫) ಐದನೆಯ ದಿನಕ್ಕೆ ಸುತ್ಯ ಅಥವಾ ಸವನೀಯವೆಂದು ಹೆಸರು—ಸೋಮಸವನ, ಹವನ, ಪ್ರಾತಸ್ಸವನ, ಮಾಧ್ಯಂದಿನಸವನ ತೃತೀಯಸವನಗಳಲ್ಲಿ ಸೋಮಪಾನ, ಉದಯನೀಯ ಮತ್ತು ಅವಭೃತ. ಮುಖ್ಯವಾದ ಶ್ರೌತಸೂತ್ರಗಳಿಗನುಸಾರವಾಗಿ, ಅಗ್ನಿಷ್ಟೋಮ ಯಾಗದ ಸ್ಥೂಲಪರಿಚಯವನ್ನು ಮುಂದೆ ಕೊಡಲಾಗಿದೆ.

ಈ ಅಗ್ನಿಷ್ಟೋಮವನ್ನು ಬ್ರಹ್ಮ, ಕ್ಷತ್ರಿಯ ಮತ್ತು ವೈಶ್ಯವರ್ಣದವರೆಲ್ಲರೂ ಆಚರಿಸಬೇಕು. ಉಪನಯನದಂತೆಯೇ ಇದೂ ವಿಹಿತವಾದುದು ಮತ್ತು ಅವಶ್ಯವಾಗಿ ಆಚರಣೀಯವು. ಜೈ.ಸೂ. (6-2-31)

ಈ ಯಾಗದಲ್ಲಿ ಅಗ್ನಿಯು ಸ್ತುತಿಸಲ್ಪಡುವುದರಿಂದ ಅಥವಾ ಇದರಲ್ಲಿ ಕಡೆಯ ಸ್ತುತಿಯು ಅಗ್ನಿಪರವಾದುದರಿಂದ, ಇದಕ್ಕೆ ಅಗ್ನಿಷ್ಟೋಮವೆಂದು ಹೆಸರು ಬಂದಿದೆ. ಇದನ್ನು ಪ್ರತಿವರ್ಷವೂ ವಸಂತಋತುವಿನಲ್ಲಿ ಅಮಾವಾಸ್ಯಾ ಅಥವಾ ಪೂರ್ಣಿಮಾ ದಿನಗಳಲ್ಲಿ (ಆಪ. ಶ್ರೌ. ಸೂ. 10-2-2-5, 8) ; ಕಾತ್ಯಾ. ಶ್ರೌ.ಸೂ. (7-1-4) ; (ಸತ್ಯಾ. ಶ್ರೌ. ಸೂ. 7-1) ಸೋಮಯಾಗವನ್ನು ಆಚರಿಸಬೇಕು. ಸೋಮಯಾಗವನ್ನು ಆಚರಿಸುವ ಮೊದಲು ದರ್ಶಪೂರ್ಣಮಾಸ, ಚಾತುರ್ಮಾಸ್ಯಗಳು ಮತ್ತು ಪಶು ಇಷ್ಟಿಗಳನ್ನು ಮಾಡಬೇಕೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು ಅಗ್ನ್ಯಾಧಾನವೊಂದನ್ನು ಆಚರಿಸಿದನಂತರ ಮಾಡಬಹುದೆನ್ನುತ್ತಾರೆ. ಆದರೆ, ದರ್ಶಪೂರ್ಣಮಾಸೇಷ್ಟಿಯನ್ನು ಮಾಡಲು ಪ್ರಾರಂಭಿಸಿದ ನಂತರವೇ ಸೋಮಯಾಗಗಳ ಆಚರಣೆಗೆ ಅಧಿಕಾರವು ಬರುತ್ತದೆಂದು ವಿಧಿಸುತ್ತಾರೆ.

ಸೋಮಯಾಗವನ್ನು ಆಚರಿಸುವವನು ಮೊದಲು ಸೋಮಪ್ರವಾಕನೆನ್ನಿಸಿಕೊಳ್ಳುವ (ಅಂದರೆ ಸೋಮಯಾಗಕ್ಕೆ ಋತ್ವಿಜರನ್ನು ಆಹ್ವಾನಿಸುವವನು) ಪುರುಷನನ್ನು ಋತ್ವಿಜರನ್ನು ಕರೆಯಲು ಕಳುಹಿಸಬೇಕು ; ಋತ್ವಿಜರು ವೇದಪಾರಂಗತ

ರಾಗಿರಬೇಕು; ಅತಿತರುಣರೂ, ಅತಿವೃದ್ಧರೂ ಆಗಿರಬಾರದು; ಅವರ ಕಂಠವು ಶ್ರಾವ್ಯವೂ, ಸ್ಪಷ್ಟವೂ ಆಗಿರಬೇಕು; ಯಾವ ವಿಧವಾದ ಅಂಗವೈಕಲ್ಯವೂ ಇರಬಾರದು; ಈ ಲಕ್ಷಣಗಳುಳ್ಳ ಮುಖ್ಯರಾದ ನಾಲ್ಕು ಋತ್ವಿಜರನ್ನೋ ಅಥವಾ ಹದಿನಾರು ಋತ್ವಿಜರನ್ನೋ ಆಹ್ವಾನಿಸಬೇಕು. ಅವರೂ, ಋತ್ವಿಜರಾಗಲು ಒಪ್ಪಿಕೊಳ್ಳುವಮುನ್ನ, ಆಹ್ವಾನಿತರಾಗಿ ಯಾರಾದರೂ ಬರಲು ನಿರಾಕರಿಸಿದ್ದರೋ ಎಂಬುದನ್ನೂ, ದಕ್ಷಿಣೆಯು ಸಮೃದ್ಧಿಯಾಗಿ ಸಿಗುವುದೇ ಎಂಬುದನ್ನೂ ವಿಚಾರಿಸಿ ಅನಂತರ ಒಪ್ಪಿಕೊಳ್ಳಬೇಕು. ಈ ವರಣಕಾಲದಲ್ಲಿಯೂ ಮಂತ್ರೋಚ್ಚಾರಣೆಯು ವಿಹಿತವಾಗಿದೆ. "ಅಗ್ನಿರ್ಮೇ ಹೋತಾಽಽದಿತ್ಯೋ ಮೇಽಧ್ವರ್ಯುಶ್ಚಂದ್ರಮಾ ಮೇ ಬ್ರಹ್ಮಾ ಪರ್ಜನ್ಯೋ ಮ ಉದ್ಗಾತಾ"—ಇಲ್ಲಿಯವರೆಗೆ ಮನಸ್ಸಿನಲ್ಲಿ ಹೇಳಿ ಉಳಿದ "ಅಸೌ ಮಾನುಷಃ" ಎಂಬ ಭಾಗವನ್ನು ಘಟ್ಟಿಯಾಗಿಯೂ ಉಚ್ಚರಿಸಬೇಕು. ಋತ್ವಿಜರನ್ನು, ದೇವತೆಗಳೆಂಬ ಭಾವನೆಯಿಂದಲೇ ವರಿಸಬೇಕು. ಋತ್ವಿಜರು ಬಂದಕೂಡಲೇ, ಅವರಿಗೆ ಮಧುಪರ್ಕವನ್ನು ಕೊಡಬೇಕು.

ಅನಂತರ ಯಜಮಾನನು ರಾಜನನ್ನು ಸಮೀಪಿಸಿ, ಯಾಗಕ್ಕಾಗಿ ಭೂಮಿಯನ್ನು ಯಾಚಿಸಬೇಕು. ಪ್ರತ್ಯೇಕವಾದ ದೇವಯಜನಭೂಮಿಯಿದ್ದರೂ ರಾಜನಲ್ಲಿ ಪ್ರಾರ್ಥನೆಯನ್ನು ಸಲ್ಲಿಸಲೇಬೇಕು. ಈ ಪ್ರಾರ್ಥನೆ, ರಾಜನೇ ಯಜಮಾನನಾದಾಗಲೂ ತಪ್ಪಿದುದಲ್ಲ. ಆತನೂ ಹೋತ್ರಾದಿಋತ್ವಿಜರನ್ನು ಪ್ರಾರ್ಥಿಸುತ್ತಾನೆ. ಇದು ಕೇವಲ ಔಪಚಾರಿಕವಾದುದು. ದೇವಯಜನದ (ಯಜ್ಞಭೂಮಿಯ) ವಿವರವು ಈರೀತಿ ಇದೆ.

ಆ ಪ್ರದೇಶವು ಸುತ್ತಲಿನ ಭೂಭಾಗಗಳಿಗಿಂತ ಎತ್ತರವಾಗಿರಬೇಕು. ಪೂರ್ವದಕಡೆಗೆ ಇಳಿಜಾರಾಗಿರಬೇಕು. 'ಶಂ ನೋ ದೇವೀಃ' ಎಂಬ ಮಂತ್ರದಿಂದ ಪ್ರೋಕ್ಷಣೆಮಾಡಿ, ಅಲ್ಲಿ, ಪೂರ್ವ ಅಥವಾ ಉತ್ತರಾಭಿಮುಖವಾಗಿ ಬಿದಿರಿನ ಗುಡಿಸಲೊಂದನ್ನು ಕಟ್ಟಿಸಬೇಕು. ಈ ಆಯತನದ ಒಂದು ಕೊನೆಯಲ್ಲಿ ಮಧ್ಯಕ್ಕೆ ಸರಿಯಾಗಿ ಗಾರ್ಹಪತ್ಯಾಗ್ನಿಯ ಸ್ಥಾನ. ಇಲ್ಲಿಂದ ಪೂರ್ವಕ್ಕೆ, ಬ್ರಾಹ್ಮಣನಾದರೆ ಎಂಟು ಪ್ರಕ್ರಮಗಳಷ್ಟು (ಮಾರು) ದೂರದಲ್ಲಿ, ಕ್ಷತ್ರಿಯನಾದರೆ ಹನ್ನೊಂದು, ವೈಶ್ಯನಾದರೆ ಹನ್ನೆರಡು, ಅಥವಾ ಎಲ್ಲರೂ ೨೪ ಹೆಜ್ಜೆಗಳಷ್ಟು ದೂರದಲ್ಲಿ, ಆಹವನೀಯಾಗ್ನಿಗೆ ಸ್ಥಾನವನ್ನು ಕಲ್ಪಿಸಬೇಕು. ಇವೆರಡಕ್ಕೂ ಇರುವ ಅಂತರದಲ್ಲಿ ಮೂರರಲ್ಲೊಂದು ಭಾಗದಷ್ಟು ದೂರ, ಗಾರ್ಹಪತ್ಯಕ್ಕೆ ಆಗ್ನೇಯದಿಕ್ಕಿನಲ್ಲಿ ದಕ್ಷಿಣಾಗ್ನಿಗೆ ಸ್ಥಳ. ದೊಡ್ಡ ಯಾಗಗಳಾದರೆ, ಗಾರ್ಹಪತ್ಯ ಮತ್ತು ಆಹವನೀಯಗಳಿಗೆ ಪ್ರತ್ಯೇಕ ಆಯತನಗಳೇ ಆಗಬೇಕು. ಇಂತಹ ದೇವಯಜನದ ಪಶ್ಚಿಮದಲ್ಲಿ, ಗಿಡಗಳ ಬೇರುಗಳಾವುವೂ ಇಲ್ಲದಂತೆ ಭೂಶುದ್ಧಿಮಾಡಿ, ಆಯಾಕಾರವಾದ ಮಂಟಪವೊಂದನ್ನು ಕಟ್ಟಿಸಬೇಕು. ಇದೂ ಪೂರ್ವಪಶ್ಚಿಮವಾಗಿಯೇ ಇರಬೇಕು. ಇದರ ಮೇಲೆ ಹೊದಿಸುವ ಬೊಂಬುಗಳೂ ಪೂರ್ವಪಶ್ಚಿಮವಾಗಿಯೇ ಹೊದಿಸಿರಬೇಕು ಮತ್ತು ಸ್ವಲ್ಪ ಪೂರ್ವದಕಡೆಗೆ ವಾಲಿಕೊಂಡಿರಬೇಕು. ಇದಕ್ಕೆ ಪ್ರಾಗ್ವಂಶ ಅಥವಾ ಪ್ರಾಚೀನವಂಶವೆಂದು ಹೆಸರು. ಈ ಮಂಟಪದಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ಎರಡು ಮೊಳ ಇರುವ ಬಾಗಿಲುಗಳೂ ಇರುತ್ತವೆ. ಈ ಮಂಟಪದ ಬದಲು ಆಯಾಕಾರದ ಕಟ್ಟಡವನ್ನೇ ಕಟ್ಟಬಹುದು. ಮಂಟಪದ ದಕ್ಷಿಣದಲ್ಲಿ ಪಾಕಶಾಲೆಯೂ, ಪಶ್ಚಿಮದಲ್ಲಿ ಯಜಮಾನನ ಪತ್ನಿಗಾಗಿ ಒಂದು ಶಾಲೆಯೂ ಇರಬೇಕು.

ಯಜಮಾನನು ತನ್ನ ಮನೆಯಲ್ಲಿಯೇ ಗಾರ್ಹಪತ್ಯ ಮತ್ತು ಆಹವನೀಯಾಗ್ನಿಗಳನ್ನು ಅರಣಿಯಲ್ಲಿ ಪ್ರತಿಷ್ಠೆಮಾಡಿ (ಪ್ರತಿಷ್ಠಾಕಾಲದಲ್ಲಿ "ಅಯಂ ತೇ ಯೋನಿಃ" (ತೈ.ಸಂ. 1-5-2) ಎಂಬ ಮಂತ್ರವನ್ನು ಉಚ್ಚರಿಸಬೇಕು), ಅರಣಿಯನ್ನು ಹಿಡಿದುಕೊಂಡು, ಋತ್ವಿಜರು ಮತ್ತು ಪತ್ನಿಯೊಡಗೂಡಿ ದೇವಯಜನಕ್ಕೆ ಬಂದು, ಪೂರ್ವದ್ವಾರದ ಮೂಲಕ ಪ್ರವೇಶಿಸಿ, ಮಂಟಪದ ಮಧ್ಯಸ್ತಂಭವನ್ನೂ ಸ್ಪರ್ಶಿಸುತ್ತಾನೆ. ಈಗ ಯಜ್ಞಸಾಮಗ್ರಿಗಳೆಲ್ಲವೂ ಮಂಟಪಕ್ಕೆ ತರಲ್ಪಡುತ್ತವೆ. ಅರಣಿಮಥನದಿಂದ ಅಗ್ನಿಯನ್ನು ಉತ್ಪತ್ತಿಮಾಡಿ, ವೇದಿಯನ್ನು ರಚಿಸಿ, ಅಲ್ಲಿ ಅಗ್ನಿಗಳು ಸ್ಥಾಪಿಸಲ್ಪಡುತ್ತವೆ. ಸಂಭಾರಯಜುಸ್ಸು ಮತ್ತು ಸಪ್ತಹೋತೃವಿಧಿಯಿಂದ, (ತೈ. ಆ. 3-8 ಮತ್ತು 5) ಆಜ್ಯಾಹುತಿಗಳನ್ನು ಅರ್ಪಿಸಬೇಕು. ಯೂಪಾಹುತಿಯೂ ವಿಹಿತವಾಗಿದೆ.

ಮಂಟಪದ ಹೊರಗಡೆ ಉತ್ತರದಿಕ್ಕಿನಲ್ಲಿ ಚಾಪೆಗಳಿಂದ ಮುಚ್ಚಿದ ಗುಡಿಸಿಲಿನಲ್ಲಿ ಯಜಮಾನನು ಶಿರಸ್ಸು, ಕಂಕುಳು ಮತ್ತು ಮುಖಗಳ ಮೇಲಿರುವ ಕೇಶವನ್ನು ನಾಪಿತನಿಂದ ತೆಗೆಯಿಸಿ, ಅನಂತರ ಹಸ್ತಪಾದಗಳ ಉಗುರುಗಳನ್ನು ಕತ್ತರಿಸಿ ಕೊಳ್ಳಬೇಕು. ಈ ಕೇಶವಪನಾದಿಗಳು ಯಜಮಾನನಿಗೋ ಅಧ್ವರ್ಯುವಿಗೋ ಎಂಬ ವಿಷಯದಲ್ಲಿ ಅಭಿಪ್ರಾಯ ಭೇದವಿದೆ. ಜೈಮಿನಿಗಳ ಅಭಿಪ್ರಾಯವು ಯಜಮಾನನಿಗೇ ಈ ಸಂಸ್ಕಾರಗಳೆಂಬುದು. ಉದುಂಬರಕಾಷ್ಠದಿಂದ ದಂತಧಾವನಮಾಡಿಕೊಂಡು, ಜಲಾಶಯದಲ್ಲಿ ಮೊದಲು ಸುವರ್ಣನಾಣ್ಯವನ್ನು ಹಾಕಿ, ಅನಂತರ ಸ್ನಾನಮಾಡಿ, ಆಚಮನಮಾಡಬೇಕು. ಆ ಜಲಾಶಯದ ಜಲಪಾನವೂ ಶುದ್ಧಿಕಾರಕವೆಂದು ಹೇಳಿದೆ. ಈ ಎಲ್ಲಾ ಕರ್ಮಗಳೂ ಮಂತ್ರಪೂರ್ವಕವಾಗಿಯೇ ನಡೆಯಬೇಕು. ಯಜಮಾನಿಗೂ ಕೇಶವಪನದೊರತು, ಉಳಿದ ಕರ್ಮಗಳೆಲ್ಲವೂ ಅಮಂತ್ರಕವಾಗಿ, ಪ್ರತಿಪ್ರಸ್ಥಾತೃವಿನ ನೇತೃತ್ವದಲ್ಲಿ ನಡೆಯಬೇಕು. ಈ ಕಾರ್ಯಕ್ಕೆ ಅಪ್ಸುದೀಕ್ಷಾ' ಎಂದು ಹೆಸರು. ಸ್ನಾನಾನಂತರ, ಅಧ್ವರ್ಯುವು ಯಜಮಾನನಿಗೆ ಉತ್ತಮವಾದ ಮತ್ತು ನೂತನವಾದ ರೇಷ್ಮೆ ವಸ್ತ್ರವನ್ನು ಕೊಡುತ್ತಾನೆ. ಅವನು ಅದನ್ನು ಧರಿಸಬೇಕು. ಮಧ್ಯಾಹ್ನ, ಪ್ರಾಗ್ವಂಶದಲ್ಲಿ ಯಜಮಾನ ಮತ್ತು ಅವನ ಪತ್ನಿ. ದಧಿಘೃತ ಅಥವಾ ಅವನಿಗೆ ಇಷ್ಟವಾದ ಬೇರೆ ಯಾವುದಾದರೂ ಪರಿಕರಸಹಿತ ಅನ್ನವನ್ನು ಊಟಮಾಡಬಹುದು. ಎರಡು ಧರ್ಭಮುಷ್ಟಿಗಳಿಂದ ನವನೀತವನ್ನು (ಬೆಣ್ಣೆ) ತೆಗೆದುಕೊಂಡು, ಮುಖದಿಂದ ಮೊದಲುಮಾಡಿ ಶರೀರಾದ್ಯಂತವೂ ಲೇಪಿಸಿಕೊಳ್ಳು ತ್ತಾನೆ. ಅನಂತರ ದರ್ಭೆಯಿಂದಲೇ ಕಾಡಿಗೆಯನ್ನು ಎರಡೂ ಕಣ್ಣುಗಳಿಗೂ ಮೂರು ಮೂರುಸಲ ಹಚ್ಚಿಕೊಳ್ಳುತ್ತಾನೆ. ಅನಂತರ, ಪ್ರಾಗ್ವಂಶದ ಹೊರಗಡೆ, ಅದರ ಉತ್ತರಪಾರ್ಶ್ವದಲ್ಲಿ, ಏಳೇಳು ದರ್ಭೆಗಳ ಮೂರು ಮುಷ್ಟಿಗಳಿಂದ, ಅಧ್ವರ್ಯುವು ಯಜಮಾನನನ್ನು (ಪವನವೆಂದು ಹೆಸರು) ಹೊಕ್ಕಳಿನಿಂದ ಮೇಲಕ್ಕೆ ಎರಡುಸಲವೂ, ಕೆಳಗಡೆ ಒಂದುಸಲವೂ ಮಂತ್ರಪೂರ್ವಕವಾಗಿ ಸ್ಪರ್ಶಿಸಿ, ಪೂತನನ್ನಾಗಿ ಮಾಡುತ್ತಾನೆ.] ಪ್ರತಿಪ್ರಸ್ಥಾತೃವು ಈ ಎಲ್ಲಾ ಕರ್ಮಗಳನ್ನೂ ಯಜಮಾನನಿಗೆ ಅಮಂತ್ರಕವಾಗಿ ಮಾಡಿಸುತ್ತಾನೆ. ಯಜಮಾನನ ಪತ್ನಿಯೂ ಇದೇರೀತಿ ಆಚರಿಸಬೇಕು.

ಈಗ ಯಜಮಾನನು ಪೂರ್ವದ್ವಾರದಿಂದಲೂ, ಯಜಮಾನಿಯು ಪಶ್ಚಿಮದ್ವಾರದಿಂದಲೂ ಪ್ರವೇಶಿಸಿ, ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುತ್ತಾರೆ. ಈಗ ಅವರು ದೀಕ್ಷಣೀಯೇಷ್ಟಿಯಲ್ಲಿ ನಿರತರಾಗುತ್ತಾರೆ. ಈ ಕರ್ಮದಿಂದ ಯಜಮಾನನಿಗೆ ಒಂದು ಸಂಸ್ಕಾರಮಾಡುವುದರಿಂದಲೂ, ಇದಾದ ನಂತರ ಆತನಿಗೆ 'ದೀಕ್ಷಿತ' ನೆಂದು ವ್ಯವಹಾರ ಬರುವುದರಿಂದಲೂ, ಇದಕ್ಕೆ 'ದೀಕ್ಷಣೀಯೇಷ್ಟಿ' ಎಂದು ಹೆಸರು. ಕೇವಲ ದಂಡ ಮತ್ತು ಮೌಂಜಿಗಳಗ್ರಹಣದಿಂದ ದೀಕ್ಷಿತನಾಗುವುದಿಲ್ಲ. ದೀಕ್ಷಾಹುತಿಗಳು ಆರು. ಧ್ರುವಾದಲ್ಲಿರುವ ಆಜ್ಯವನ್ನು ಸ್ರುವದೊಳಗೆ ಹಾಕಿಕೊಂಡು ನಾಲ್ಕು ಸಲವೂ, ಐದನೆಯದನ್ನು ಸ್ರುಕ್ಕಿನಿಂದಲೂ, ಆರನೆಯ ದನ್ನು—ಇದಕ್ಕೇ ಪೂರ್ಣಾಹುತಿಯೆನ್ನುತ್ತಾರೆ—ಸ್ರುವದಿಂದ ಹನ್ನೆರಡು ಸಲ ಆಜ್ಯವನ್ನು ಸ್ರುಕ್ಕಿಗೆ ತುಂಬಿಕೊಂಡು ಅದರಿಂದಲೂ ಹೋಮ ಮಾಡುತ್ತಾರೆ. ಈ ಆರು ಆಹುತಿಗಳಿಗೆ 'ಔದ್ಗ್ರಹಣ' ಅಥವಾ ಔದ್ಗ್ರಭಣವೆಂದೂ ಹೇಳುತ್ತಾರೆ. ದೀಕ್ಷಣೀಯ ಇಷ್ಟಿಯಲ್ಲಿ ಹನ್ನೊಂದು ಕಪಾಲಗಳಲ್ಲಿ ಸಿದ್ಧಪಡಿಸಿದ ಚರುವನ್ನು ಅಥವಾ ಘೃತಮಿಶ್ರಿತವಾದ ಅನ್ನವನ್ನು ಹೋಮಮಾಡುತ್ತಾರೆ. ಕೆಲವರು ಅದಿತಿಯ ಉದ್ದಿಶ್ಯವಾಗಿ ಅನ್ನದ ಆಹುತಿಯೊಂದನ್ನು ಕೊಡುತ್ತಾರೆ. ಆರಂಭಣೀಯ ಇಷ್ಟಿಯಲ್ಲಿ ಹೇಳುವ ಅನೇಕ ಕರ್ಮಗಳು ಹತ್ತು ಎಂದು ಕೆಲವರ ಮತ. ಸೋಮಯಾಗಗಳಲ್ಲಿ ಅವಶ್ಯಕವಲ್ಲ. ಜೈಮಿನಿಯೂ ದೀಕ್ಷಣೀಯಾದಿ ಸೋಮ ಯಾಗಾಂಗವಾದ ಇಷ್ಟಿಗಳಲ್ಲಿ ಅನೇಕ ಕರ್ಮಗಳು ಅನವಶ್ಯಕವೆಂದೇ ಹೇಳುತ್ತಾರೆ. ಪತ್ನೀಸಂಯಾಜ ಮತ್ತು ದ್ವಿತೀಯ ಇಡಾಭಕ್ಷಣದಿಂದ (ಹೋಮಶೇಷ) ದೀಕ್ಷಣೀಯೇಷ್ಟಿಯು ಕೊನೆಯಾಗುತ್ತದೆ.

ಆಪಸ್ತಂಬರ ಪ್ರಕಾರ, ಅಗ್ನೀಷೋಮೀಯ ಕರ್ಮದವರೆಗೆ, ಮಂತ್ರಗಳೆಲ್ಲವೂ ಮಾನಸಿಕವಾಗಿರಬೇಕು. ಕಾತ್ಯಾಯನರ ಪ್ರಕಾರ, ದೀಕ್ಷಣೀಯದಲ್ಲಿ ಮಂತ್ರಗಳು ಅತ್ಯುಚ್ಚಸ್ವರದಲ್ಲಿಯೂ, ಪ್ರಾಯಣೀಯ ಮತ್ತು ಆತಿಥ್ಯ ಇಷ್ಟಿಗಳಲ್ಲಿ ಸ್ವಲ್ಪಕಡಿಮೆ ಯಾಗಿಯೂ ಉಪಸನ್ಮಂತ್ರಗಳು ಬಹಳ ಕಡಿಮೆಮಟ್ಟದಲ್ಲಿಯೂ ಇರಬೇಕು.

ದೀಕ್ಷಾಕರ್ಮವು ಈ ರೀತಿ ನಡೆಯುತ್ತದೆ. ಆಹವನೀಯಾಗ್ನಿಯ ದಕ್ಷಿಣಕ್ಕೆ ವೇದಿಕೆಯಮೇಲೆ ಎರಡು, ಸಿಗದಿದ್ದರೆ ಒಂದೇ ಕೃಷ್ಣಸಾರಂಗದ ಅಜಿನವನ್ನು ಕಂಠಭಾಗವು ಪೂರ್ವಕ್ಕಿರುವಂತೆ ಹಾಸಿರುತ್ತಾರೆ. ಋತ್ವಿಜನು ಅಜಿನದ ಪಶ್ಚಿಮದಲ್ಲಿ ಬಲಮಂಡಿಯನ್ನೂರಿಕೊಂಡು ಕುಳಿತುಕೊಳ್ಳುತ್ತಾನೆ. ಯಜಮಾನನು ಮೊದಲು ಅಜಿನದ ಮೇಲಿರುವ ಕಪ್ಪು ಬಿಳಿ ಚುಕ್ಕೆಗಳನ್ನು ಸ್ಪರ್ಶಮಾಡಿ, ಅನಂತರ ಬಲಮಂಡಿಯನ್ನೂರಿಕೊಂಡು ಚರ್ಮದ ಮೇಲಕ್ಕೆ ತೆವಳಿಕೊಂಡುಹೋಗಿ ಪಶ್ಚಿಮ ಭಾಗದಲ್ಲಿ ಕುಳಿತುಕೊಳ್ಳುತ್ತಾನೆ. ತಾನು ಉಟ್ಟಿರುವ ರೇಷ್ಮೆವಸ್ತ್ರದ ಮೇಲುಗಡೆ ಸೆಣಬು ಮತ್ತು ಮುಂಜಹುಲ್ಲುಗಳಿಂದ ನೂತ ಮೂರು ಎಳೆಯ ಹುಲ್ಲುಗಳಿಂದ ನೂತ ಮೂರು ಎಳೆಯ ಹುರಿಯನ್ನು ಕಟ್ಟಿಕೊಳ್ಳುತ್ತಾನೆ. ಬಲಭುಜವನ್ನು ಮತ್ತೊಂದು ಹೊಸವಸ್ತ್ರದಿಂದ ಮುಚ್ಚಿಕೊಂಡು, ತಲೆಗೂ ಒಂದು ತುಂಡು ಬಟ್ಟೆಯನ್ನು ಕಟ್ಟಿಕೊಳ್ಳುತ್ತಾನೆ. ಸುಮಾರು ಒಂದು ಗೇಣು ಉದ್ದದ ನಾಲ್ಕೈದು ಸುರುಟುಗಳಿರುವ ಸಾರಂಗದ ಕೊಂಬು ಒಂದನ್ನು ಕೊಡುತ್ತಾರೆ. ಇದನ್ನು ತನ್ನ ವಸ್ತ್ರದ ಕೊನೆಯಲ್ಲಿ ಕಟ್ಟಿಕೊಳ್ಳುತ್ತಾನೆ. ಬಲ ಹುಬ್ಬಿನ ಮೇಲ್ಭಾಗದ ಹಣೆಯ ಪ್ರದೇಶವನ್ನು ಕೊಂಬಿನಿಂದ ಸ್ಪರ್ಶಮಾಡಿ ಅದರಿಂದಲೇ ವೇದಿಯ ಮೇಲೆ ಪಶ್ಚಿಮದಿಂದ ಪೂರ್ವದ ಕಡೆಗೆ ಒಂದು ಗೆರೆ ಎಳೆಯುತ್ತಾನೆ. ಅವನು ಮೈಯನ್ನು ತುರಿಸಿಕೊಳ್ಳಬೇಕಾದಾಗಲೆಲ್ಲ ಈ ಕೊಂಬಿನಿಂದಲೇ ತುರಿಸಿಕೊಳ್ಳಬೇಕು. ದೇಹದ ಎಷ್ಟೋ ಭಾಗಗಳನ್ನು ತುರಿಸಿಕೊಳ್ಳಬೇಕಾಗಿ ಬಂದರೂ ಮಂತ್ರೋಚ್ಚಾರಣೆಯನ್ನು ಮಾತ್ರ ಒಂದೇ ಬಾರಿ ಮಾಡಬೇಕು. ಇದೇ ಕಾಲದಲ್ಲಿ ಪ್ರತಿಪ್ರಸ್ಥಾತೃವು ಈ ಎಲ್ಲಾ ಸಂಸ್ಕಾರಗಳನ್ನೂ ಯಜಮಾನನ ಪತ್ನಿಗೆ ಅಮಂತ್ರಕವಾಗಿ ಮಾಡಿಸುತ್ತಾನೆ. ಆದರೆ ಆಕೆಗೆ ಸೆಣಬು ಮುಂಜಾಗಳ ನಡುಪಟ್ಟಿಗೆ ಬದಲಾಗಿ, ದರ್ಭೆಯಿಂದ ಮಾಡಿದ ನಡುಪಟ್ಟಿಯೂ, ತಲೆಗೆ ತುಂಡುಬಟ್ಟೆಯ ಬದಲು ಬಲೆಯಂತಿರುವ ಉಣ್ಣೆಯಿಂದ ಮಾಡಿದ ವಸ್ತುವೂ, ಮೈತುರಿಸಿಕೊಳ್ಳಲು ಸಾರಂಗ ಕೊಂಬಿಗೆ ಬದಲಾಗಿ, ಯಾವುದಾದರೂ ಯಜ್ಞಕ್ಕೆ ಉಪಯೋಗವಾಗುವ ಮರದ ಒಂದು ಗೇಣುದ್ದದ ತುಂಡೊಂದನ್ನೂ ಕೊಡುತ್ತಾರೆ. ಅಧ್ವರ್ಯು ಮತ್ತು ಯಜಮಾನ ಇಬ್ಬರೂ ಒಟ್ಟಿಗೆ ಮಂತ್ರಗಳನ್ನು ಉಚ್ಚರಿಸುತ್ತಾರೆ. ಈ ಮಂತ್ರದಲ್ಲಿ 'ದೀಕ್ಷಾ' ಎಂಬ ಪದವು ಅನೇಕ ಬಾರಿ ಉಚ್ಚರಿತವಾಗುತ್ತದೆ. ಕಡೆಯದಾಗಿ ಅಧ್ವರ್ಯುವು ಯಜಮಾನನಿಂದ ಸಂಭಾರಯಜುರ್ಮಂತ್ರಗಳನ್ನು ಹೇಳಿಸುತ್ತಾನೆ.

ಯಜಮಾನನು ತನ್ನ ಬೆರಳುಗಳನ್ನೆಲ್ಲಾ ಮಡಚುತ್ತಾನೆ—ಮೊದಲು ಎರಡೂ ಹಸ್ತಗಳ ಕಿರುಬೆರಳುಗಳು, ಅನಂತರ ಅನಾಮಿಕೆಗಳು ಹೀಗೆ—; ಕೊನೆಗೆ ಮುಷ್ಟಿಯನ್ನೇ ಕಟ್ಟುತ್ತಾನೆ. ಅನಂತರ ಮೌನವಾಗಿರುತ್ತಾನೆ. ಈಗ ಅಧ್ವರ್ಯುವಿನ ಹೊರತಾಗಿ, ಬೇರೊಬ್ಬ ಋತ್ವಿಜನು ದೇವತೆಗಳನ್ನು ಉದ್ದೇಶಿಸಿ ಮನಸ್ಸಿನಲ್ಲಿಯೇ ಮೂರುಬಾರಿಯೂ, ಪ್ರಪಂಚಕ್ಕೆಲ್ಲಾ ಕೇಳಿಸುವಂತೆ ಘಟ್ಟಿಯಾಗಿ ಮೂರುಸಲವೂ ಈರೀತಿ ಹೇಳುತ್ತಾನೆ—"ಇಂತಹವನ ಮರಿಮಗನೂ, ಇಂತಹವನ ಮೊಮ್ಮಗನೂ, ಇಂತಹವನ ಮಗನೂ, ಇಂತಹವಳ ಮರಿಮಗನೂ, ಇಂತಹವಳ ಮೊಮ್ಮಗನೂ, ಇಂತಹವಳ ಮಗನೂ ಆದ ಈ ಬ್ರಾಹ್ಮಣನು ದೀಕ್ಷಾವಿಧಿಯನ್ನು ಆಚರಿಸಿದ್ದಾನೆ."

ಯಜಮಾನನು ಕ್ಷತ್ರಿಯ ಅಥವಾ ವೈಶ್ಯನೇ ಆದರೂ, ಬ್ರಾಹ್ಮಣನಂತಲೇ ವ್ಯವಹರಿಸಬೇಕು. ದೀಕ್ಷಾವಿಧಿಯ ನಂತರ ಆತನಿಗೆ ಪುನರ್ಜನ್ಮವಾದಂತೆಯೇ; ಪವಿತ್ರವಾದ ಮಂತ್ರಗಳಿಂದ ಆತನ ಜನನವಾಗಿದೆ; ಆದುದರಿಂದ ಯಾವುದೇ ಪವಿತ್ರ ಕರ್ಮಕ್ಕಾಗಲೀ ಅರ್ಹತೆಯನ್ನು ಪಡೆಯುವಷ್ಟು ಪವಿತ್ರನಾಗಿದ್ದಾನೆ.

**ಬ್ರಾಹ್ಮಣೋ ವಾ ಏಷ ಜಾಯತೇ ಯೋ ದೀಕ್ಷತೇ ।**
**ತಸ್ಮಾದ್ರಾಜನ್ಯವೈಶ್ಯಾವಪಿ ಬ್ರಾಹ್ಮಣ ಇತ್ಯಾವೇದಯತಿ ।**

ಈರೀತಿ ದೀಕ್ಷಾವಿಧಿಯು ಮಧ್ಯಾಹ್ನದಲ್ಲಿ ಜರಗುತ್ತದೆ. ಯಜಮಾನನು ನಕ್ಷತ್ರದರ್ಶನವಾಗುವವರೆಗೂ ಮೌನವಾಗಿರಬೇಕು. ಅಧ್ವರ್ಯುವು ಯಜಮಾನ ಮತ್ತು ಅವನ ಪತ್ನಿಯರಿಗಾಗಿ ಎರಡು ಗೋವುಗಳ ಹಾಲುಕರೆಯುವಂತೆ ಅದೇಶ

ಮಾಡುತ್ತಾನೆ. ಯಾಗ ಮುಗಿಯುವವರೆಗೂ, ಅವರಿಬ್ಬರೂ ಆ ಎರಡು ಹಸುಗಳ ಹಾಲಿನಿಂದಲೇ ಕಾಲಹಾಕಬೇಕು. ಈ ನಿಯಮವು ಪುರುಷಾರ್ಥವಲ್ಲವೆಂದೂ ಕ್ರತ್ವರ್ಥವೆಂದೂ ಜೈಮಿನಿಗಳು ಸ್ಪಷ್ಟವಾಗಿ ಹೇಳಿದ್ದಾರೆ. ಆದುದರಿಂದ ಅದೂ ವಿಧಿಯೇ ಆಯಿತು. ಕೆಲವರು ತಂಡುಲ ಅಥವಾ ಯವಧಾನ್ಯಗಳನ್ನೂ ಸ್ವೀಕರಿಸಬಹುದೆನ್ನುತ್ತಾರೆ. ಈ ಎರಡು ಹಸುಗಳ ಹಾಲು ಬೇರೆ ಬೇರೆ ಕರೆದು, ಯಜಮಾನನಿಗಾಗಿ ಗಾರ್ಹಪತ್ಯಾಗ್ನಿಯಲ್ಲಿಯೂ, ಪತ್ನಿಗೆ ದಕ್ಷಿಣಾಗ್ನಿಯಲ್ಲೂ ಕಾಯಿಸಬೇಕು. ಕ್ಷತ್ರಿಯನಿಗೆ ಗಂಜಿಯೂ, ವೈಶ್ಯನಿಗೆ ಆಮಿಕ್ಷಾ ಎಂಬುದೂ ಹೇಳಿದೆ. ಅಥವಾ ಎಲ್ಲರೂ ಹಾಲನ್ನೇ ಉಪಯೋಗಿಸಬಹುದು. ಹಾಲು ಸಾಕಾದಷ್ಟು ಸಿಗದಿದ್ದರೆ, ಸ್ವಲ್ಪಹಣ್ಣನ್ನಾಗಲೀ, ಹಾಲಿನಲ್ಲಿ ಬೇಯಿಸಿದ ಅನ್ನವನ್ನಾಗಲೀ, ಮೊಸರು, ಹುರಿದಅಕ್ಕಿ ಅಥವಾ ತುಪ್ಪ ಇವುಗಳನ್ನಾದರೂ ಹಾಲಿನಜೊತೆಯಲ್ಲಿ ತೆಗೆದುಕೊಳ್ಳಬಹುದು. ಇವರು ಆಹಾರ ತೆಗೆದುಕೊಳ್ಳುವ ಕಾಲವೂ ಪ್ರತ್ಯೇಕವಾದುದು. ಸಾಧಾರಣವಾಗಿ ಜನರು ಆಹಾರತೆಗೆದುಕೊಳ್ಳುವಕಾಲವನ್ನು ಮೀರಿರಬೇಕು, ಮಧ್ಯಾಹ್ನದಲ್ಲಿ ಅಥವಾ ಮಧ್ಯರಾತ್ರಿಯಾದ ಮೇಲೆ, ಅದೂ ಮಣ್ಣು ಹೊರತು ಬೇರೆಯಾವುದಾದರೂ ತಟ್ಟೆ ಅಥವಾ ಪರಿವಾಣದಲ್ಲಿ ಯಜಮಾನನೂ, ಆಕೆಯು ತಾಮ್ರದ ಪರಿವಾಣದಲ್ಲಿಯೂ ಭುಜಿಸಬೇಕು. ಈ ವ್ರತಾಂಗ ಆಹಾರ ತೆಗೆದುಕೊಳ್ಳುವುದನ್ನು ದೀಕ್ಷಿತರಲ್ಲದವರು ನೋಡಬಾರದು.

ಯಜಮಾನ, ಅವನ ಹೆಂಡತಿ ಮತ್ತು ಇತರರೂ ಪರಸ್ಪರವಾಗಿ ಮತ್ತು ಒಟ್ಟಾಗಿಯೂ ಅನುಸರಿಸಬೇಕಾದ ಮತ್ತೆ ಕೆಲವು ನಿಯಮಗಳಿವೆ. ದೀಕ್ಷಾದಿನ, ಸೋಮಕ್ರಯದದಿನ ಮತ್ತು ಸೋಮಸವನದ ಹಿಂದಿನದಿನ, ಈ ಮೂರು ದಿನಗಳಲ್ಲಿ ರಾತ್ರಿಯಲ್ಲಿ ಯಜಮಾನನು ಎಚ್ಚರವಾಗಿಯೇ ಇರಬೇಕು. ಯಜಮಾನನು ಸ್ತ್ರೀಯರೊಡನೆಯಾಗಲೀ, ಶೂದ್ರರೊಡನೆಯಾಗಲೀ ಮಾತನಾಡಬಾರದು. ಶೂದ್ರರೊಡನೆ ಮಾತನಾಡಲೇಬೇಕಾದ ಸಂದರ್ಭದಲ್ಲಿ, ಉತ್ತಮವರ್ಣದವರ ಮೂಲಕವಾಗಿ ಮಾತನಾಡಬೇಕು. ಇತರರೊಡನೆ ಮಾತಾಡಬಹುದು, ಆಶೀರ್ವದಿಸಬಹುದು ; ಆದರೆ, ಬಂದವರು---ಆಚಾರ್ಯರು, ಹೆಣ್ಣುಕೊಟ್ಟ ಮಾವ ಅಥವಾ ರಾಜನೇ ಆಗಿದ್ದರೂ, ನಮಸ್ಕರಿಸಬಾರದು. ಅವನನ್ನು ಯಾರೂ ಮುಟ್ಟಬಾರದು ; ದೀಕ್ಷಿತನಾಗಿರುವ ಕಾಲದಲ್ಲಿ ಹೆಸರು ಹಿಡಿದು ಕೂಗಬಾರದು ; ಭೋ ಎಂದಾಗಲೀ ದೀಕ್ಷಿತ ಎಂದಾಗಲೀ ಸಂಬೋಧಿಸಬೇಕು. ದಕ್ಷಿಣೆಕೊಡುವವರಿಗೆ ಸಾರಂಗದ ಕೊಂಬನ್ನು ಕೆಳಗಿಡಬಾರದು. ಬಾಯಿ ಮರೆಮಾಡಿಕೊಂಡು ನಗಬಹುದು, ಆದರೆ ಹಲ್ಲುಗಳು ಕಾಣಿಸುವಂತೆ ನಗಬಾರದು. ಹಗಲಿನಲ್ಲಿ ದೇಹಬಾಧೆಗಳನ್ನೂ ತೀರಿಸಿಕೊಳ್ಳಬಾರದು. ಅಗತ್ಯಬಿದ್ದಾಗ ನೆರಳಿನಲ್ಲಿ ಮರೆಯಾದ ಜಾಗದಲ್ಲಿ ಹೋಗಬೇಕು. ಸಂಪೂರ್ಣವಾಗಿ ಬ್ರಹ್ಮಚರ್ಯವನ್ನು ಪಾಲಿಸಬೇಕು. ದೀಕ್ಷಿತನಾಗಿರುವವರೆಗೂ, ಶಾಲೆಯ ಪಶ್ಚಿಮದ ಬಾಗಿಲಿನಿಂದ ಓಡಾಡಬಾರದು ; ಅಗ್ನಿಹೋತ್ರ, ವೈಶ್ವದೇವ, ಬಲಿಹರಣ ಅಥವಾ ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಬಾರದು ; ಬೇರೆಯವರಿಂದಲಾದರೂ ಮಾಡಿಸಬಹುದು. ಯಾವಾಗಲೂ ಸತ್ಯವನ್ನೇ ನುಡಿಯಬೇಕು ; ಎಲ್ಲರೊಡನೆಯೂ ನಯವಾಗಿ, ಬ್ರಾಹ್ಮಣನಾದರೆ 'ಚನಸಿತ' ಎಂತಲೂ, ಕ್ಷತ್ರಿಯವೈಶ್ಯರಾದರೆ 'ವಿಚಕ್ಷಣ' ಎಂತಲೂ ಸಂಬೋಧಿಸಿ ಸಂಭಾಷಿಸಬೇಕು. ಸೂರ್ಯೋದಯಾಸ್ತಕಾಲಗಳಲ್ಲಿ ಮಂಟಪದಲ್ಲಿಯೇ ಇರಬೇಕು. ಆಹವನೀಯಾಗ್ನಿಗೆ ದಕ್ಷಿಣಭಾಗದಲ್ಲಿ ನೆಲದಮೇಲೆ, ಪೂರ್ವಕ್ಕೆ ತಲೆಯಿಟ್ಟುಕೊಂಡು ಬಲಮಗ್ಗುಲಾಗಿ ಮಲಗಬೇಕು. ಅಗ್ನಿಗೆ ಯಾವಾಗಲೂ ಬೆನ್ನುತೋರಿಸಬಾರದು. ಸರ್ವದಾ ಕೃಷ್ಣಾಜಿನದ ಮೇಲೆಯೇ ಕುಳಿತುಕೊಳ್ಳಬೇಕು ಮತ್ತು ದಂಡವನ್ನು ಸರ್ವದಾ ಇಟ್ಟುಕೊಂಡಿರಬೇಕು. ದೇಹಬಾಧಾಪರಿಹಾರಕಾಲದಲ್ಲಿ ಮಾತ್ರ ಈ ನಿಯಮಕ್ಕೆ ವಿನಾಯಿತಿಯುಂಟು. ಅಗ್ನೀಷೋಮೀಯ ಪಶುಬಲಿಯಾಗುವವರೆಗೆ ದೀಕ್ಷಿತನು ಕೊಟ್ಟ ಆಹಾರವನ್ನು ಯಾರೂ ತೆಗೆದುಕೊಳ್ಳಬಾರದು.

ಈ ದೀಕ್ಷಾವಿಧಿಯು ಒಂದೇ ದಿನದಲ್ಲಿ ಮುಗಿಯಬಾರದು. ೧೨ ದಿನ, ಒಂದು ತಿಂಗಳು, ಒಂದು ವರ್ಷ ಅಥವಾ ಕಡೆಯ ಪಕ್ಷ ಪುಷ್ಟನಾಗಿದ್ದ ಯಜಮಾನನು ಕೃಶನಾಗುವವರೆಗಾದರೂ ಮುಂದುವರೆಸಬೇಕೆಂದು ಎಲ್ಲಾ ಸೂತ್ರಗಳೂ ಹೇಳುತ್ತವೆ. ಈ ಕಾಲದಲ್ಲಿ, ಪ್ರತಿದಿನವೂ ಸೂರ್ಯೋದಯಕ್ಕೆ ಮುಂಚಿತವಾಗಿ ಸೂರ್ಯನು ಮೇಲೆ ಬರುವವರೆಗೂ ಮತ್ತು ಮಧ್ಯಾಹ್ನ

ದಿಂದ ನಕ್ಷತ್ರದರ್ಶನವಾಗುವವರೆಗೂ ಮೌನವಾಗಿರಬೇಕು. ಯಾಗಕ್ಕೆ ಬೇಕಾಗುವ ದ್ರವ್ಯ ಮತ್ತು ಪದಾರ್ಥಸಂಗ್ರಹಣೆಗಾಗಿ ಯಜಮಾನನಾಗಲೀ, 'ಸನೀಹಾರ' ರೆನಿಸಿಕೊಳ್ಳುವ ಅವನ ಪ್ರತಿನಿಧಿಗಳಾಗಲೀ ಹೋಗಬಹುದು. ಆದರೆ ಆಕಾಲದಲ್ಲಿ ಅನೇಕ ನಿಯಮಗಳಿಗೆ ಒಳಗಾಗಿರಬೇಕಾಗುತ್ತದೆ.

ದೀಕ್ಷಾ ದಿನ ಅಥವಾ ದಿನಗಳಾದಮೇಲೆ, ಮಾರನೆಯದಿನ ಮೊದಲು ನಡೆಸಬೇಕಾದುದು ಪ್ರಾಯಣೀಯೇಷ್ಟಿ. ಈ ಇಷ್ಟಿಯಲ್ಲಿ, ಅದಿತಿಗೆ ಕ್ಷೀರಪಾಚಿತವಾದ ಚರು (ಅನ್ನ) ವಿನ ಆಹುತಿಯೊಂದು, ಅಗ್ನಿಯ ಮಧ್ಯದಲ್ಲಿ, ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಪಥ್ಯಾಸ್ವಸ್ತಿ, ಅಗ್ನಿ, ಸೋಮ ಮತ್ತು ಸವಿತೃಗಳಿಗೆ ಆಜ್ಯಾಹುತಿ ಒಂದೊಂದನ್ನು ಕೊಡಬೇಕು. ಅಗ್ನಿ ಸ್ವಿಷ್ಟಕೃತ್ ಆರನೆಯ ದೇವತೆ. ಈ ಇಷ್ಟಿಯಲ್ಲಿ ಆಜ್ಯಾಹುತಿಯು ಇಲ್ಲವೆಂದು ಆಶ್ವಲಾಯನರೂ, ಉಂಟೆಂದು ಕಾತ್ಯಾಯನರೂ ಅಭಿಪ್ರಾಯಪಡುತ್ತಾರೆ. ಈ ಪ್ರಾಯಣೀಯೇಷ್ಟಿಯಲ್ಲಿ ಅಧಿಕೃತರಾದ ಋತ್ವಿಜರೇ ಸಾಧ್ಯವಾದಮಟ್ಟಿಗೆ ಉದಯನೀಯೇಷ್ಟಿಯಲ್ಲಿಯೂ ಕೆಲಸಮಾಡಬೇಕು. ಮೊದಲನೆಯ ಶಂಯುವಿನಿಂದ ಈ ಇಷ್ಟಿಯು ಕೊನೆಯಾಗುತ್ತದೆ. ಆದರೆ ಇದರಲ್ಲಿ ಪತ್ನೀಸಂಯಾಜವಾಗಲೀ ಸಮಿಷ್ಟಯಜುಸ್ಸಾಗಲೀ ಇಲ್ಲ. ಇಲ್ಲಿಯ ಪುರೋನುವಾಕ್ಯಾ ಮಂತ್ರಗಳೇ ಉದಯನೀಯೇಷ್ಟಿಯ ಯಾಜ್ಯಾಮಂತ್ರಗಳಾಗುತ್ತವೆ. ಪ್ರಾಗ್ವಂಶದ ಒಂದು ನಿರ್ದಿಷ್ಟವಾದ ಸ್ಥಳದಲ್ಲಿ, ಅಂಟಿಕೊಂಡಿರುವ ಅನ್ನದ ಅಗುಳನ್ನೂ ತೆಗೆಯದೇ ಚರುಪಾತ್ರೆಯನ್ನು ಇಟ್ಟಿರಬೇಕು. ಇದರಂತೆಯೇ ಮೇಕ್ಷಣವನ್ನೂ, ನೆಲದಮೇಲೆ ಹರಡಿರುವವುಗಳನ್ನು ಬಿಟ್ಟು ಉಳಿದ ದರ್ಭೆಗಳನ್ನೂ ತೆಗೆದಿಡಬೇಕು. ಹಾಗೆ ಪ್ರಾಯಣೀಯೇಷ್ಟಿಯಲ್ಲಿ ನಿಷ್ಕಾಸಿತವಾದ (ಮಿಕ್ಕ) ಪದಾರ್ಥಗಳನ್ನು ಉದಯನೀಯೇಷ್ಟಿಯಲ್ಲಿ ಉಪಯೋಗಿಸಬೇಕೆಂಬುದಾಗಿ ಜೈಮಿನಿಗಳೂ ಹೇಳಿದ್ದಾರೆ.

**ಸೋಮಕ್ರಯ**:—ಬ್ರಾಹ್ಮಣಗಳಲ್ಲಿ ಮತ್ತು ಸೂತ್ರಗಳಲ್ಲಿ ಸೋಮವನ್ನು 'ರಾಜಾ' ಎಂದು ವ್ಯವಹರಿಸಿದೆ. ಕುತ್ಸಗೋತ್ರದ ಬ್ರಾಹ್ಮಣನಿಂದಾಗಲೀ, ಶೂದ್ರನಿಂದಾಗಲೀ ಸೋಮವನ್ನು ಕೊಳ್ಳಬಹುದು. ಬ್ರಾಹ್ಮಣನು ಯಾರಾದರೂ ಆಗಬಹುದು—ಕುತ್ಸಿತಕರ್ಮಮಾಡುವವನು ಎಂದೂ ಹೇಳುವುದುಂಟು. ಋತ್ವಿಜರನ್ನು ಬಿಟ್ಟು ಬೇರೆ ಯಾರಿಂದಲಾದರೂ ಕೊಳ್ಳಬೇಕು. ಕೊಳ್ಳುವ ಮೊದಲು ಸೋಮಲತೆಯೊಡನೆ ಬೆರತಿರಬಹುದಾದ ಜೊಂಡುಗಳನ್ನು ತೆಗೆದುಹಾಕುವಂತೆ ಮಾರುವವನಿಗೆ ಹೇಳಬೇಕು. ಹೀಗೆ ಸೋಮಲತೆಯನ್ನು ಶುದ್ಧಿಮಾಡುವಾಗ, ಅಧ್ವರ್ಯು, ಅವನ ಸಹಾಯಕರು, ಯಜಮಾನ, ಅವನ ಮಕ್ಕಳು, ಯಾರೂ ಈ ಶುದ್ಧೀಕರಣವನ್ನು ಮಾಡಬಾರದು ; ನೋಡಲೂಬಾರದು.

ಪ್ರತಿಪ್ರಸ್ಥಾತನು ವೃಷಭವೊಂದರ ಕೆಂಪು ಚರ್ಮವನ್ನು ಹಾಸುತ್ತಾನೆ. (ಈ ಸ್ಥಳದಲ್ಲಿಯೇ ಆಮೇಲೆ ನಾಲ್ಕು ಉಪರವ-ಶಬ್ದ ಮಾಡಲು ಉಪಯೋಗಿಸುವ ರಂಧ್ರಗಳನ್ನು ಮಾಡಬೇಕು). ಈ ಚರ್ಮದ ದಕ್ಷಿಣದ ಕೊನೆಯಲ್ಲಿ ಸೋಮಲತೆಯನ್ನು ಇಡಬೇಕು; ಉತ್ತರಭಾಗದಲ್ಲಿ ಮಾರುವವನು ಕೂಡುತ್ತಾನೆ. ಸೋಮದ ಮುಂದುಗಡೆ ಒಂದು ನೀರಿನ ಮಡಕೆಯೂ ಇಡಲ್ಪಟ್ಟಿರುತ್ತದೆ. ದೇವಯಜನದ ದ್ವಾರಗಳೆಲ್ಲಾ ಮುಚ್ಚಲ್ಪಟ್ಟಮೇಲೆ, ಪ್ರಾಯಣೀಯದಲ್ಲಿ ಉಪಯೋಗಿಸಲ್ಪಟ್ಟಿದ್ದ 'ಧ್ರುವಾ' ಎಂಬ ಸೌಟಿನಿಂದ ನಾಲ್ಕುಬಾರಿ ಜುಹೂವಿನೊಳಕ್ಕೆ ಆಜ್ಯವನ್ನೂ, ವೇದಿಕೆಯಮೇಲೆ ಹರಡಿರುವ ದರ್ಭೆಯೊಂದರಿಂದ ಚಿನ್ನದ ಚೂರನ್ನೂ ಜುಹೂವಿನೊಳಗೆ ಹಾಕಿಕೊಂಡು, ಅಧ್ವರ್ಯುವು ಆಜ್ಯವನ್ನು ಮಾತ್ರ ಆಹವನೀಯಾಗ್ನಿಯಲ್ಲಿ ಹೋಮ ಮಾಡುತ್ತಾನೆ. ಈ ಆಹುತಿಗೆ 'ಹಿರಣ್ಯವತೀ ಆಹುತಿ' ಎಂದು ಹೆಸರು. ಚಿನ್ನದ ಚೂರನ್ನು ತೆಗೆದುಕೊಂಡು, ಕಟ್ಟಿದ್ದ ದರ್ಭೆಯನ್ನು ವೇದಿಯಮೇಲೆ ಬಿಸುಟು, ದಾರದಿಂದ ಅದನ್ನು ಕಟ್ಟುತ್ತಾನೆ. ಈಗ ಬಾಗಿಲುಗಳನ್ನು ತೆಗೆಯುತ್ತಾರೆ. ಯಜಮಾನನೂ, ಅಧ್ವರ್ಯುವೂ ಹೊರಕ್ಕೆ ಬರುತ್ತಾರೆ. ಇಷ್ಟು ಹೊತ್ತಿಗೆ, ದಕ್ಷಿಣದ್ವಾರದಲ್ಲಿ, 'ಸೋಮಕ್ರಯಣೀ' ಎಂಬ, ೧-೨-೩ ವರ್ಷದ ಕಪಿಲ ವರ್ಣದ ಕಡಸು ಒಂದನ್ನು ತಂದು ನಿಲ್ಲಿಸಿರಬೇಕು. ಅದಕ್ಕೆ ಹಳದಿ ಛಾಯೆಯ ಮಾಸಲುಬಣ್ಣದ ಕಣ್ಣುಗಳಿರಬೇಕು. ಈ ಕಡಸು ಕೆಂಪಾಗಿಯೂ ಇರಬಹುದು. ಆದರೆ ಕಣ್ಣು ಮಾತ್ರ ಕೆಂಪಗಿರಬಾರದು. ಇನ್ನೂ ಕರು ಹಾಕಿರಬಾರದು ಮತ್ತು ಅದನ್ನು

ಕಟ್ಟಿರಬಾರದು. ಕಿವಿ ಹಿಡಿದು ತರಬಾರದು. ಕಾಲಿಗೆ ಹಗ್ಗ ಮುಂತಾದವೂ ಕಟ್ಟಿರಕೂಡದು. ಅವಶ್ಯಕವಾದರೆ, ಕುತ್ತಿಗೆ ಹಿಡಿದು ನಡೆಸಬಹುದು. ಅಧ್ವರ್ಯುವು "ಚಿದಸಿ........" ಎಂಬ ಮಂತ್ರದಿಂದ ಅದನ್ನು ಅಭಿಮಂತ್ರಿಸಿದ ಮೇಲೆ, ಶಾಲೆಯ ಉತ್ತರಕ್ಕೆ ಕರೆದುಕೊಂಡು ಹೋಗುತ್ತಾರೆ. ಅಧ್ವರ್ಯು ಮತ್ತು ಯಜಮಾನರು ಅದರ ಹಿಂದೆಯೇ ಹೋಗುತ್ತಾರೆ. ಆರು ಹೆಜ್ಜೆಗಳಾದ ಕೂಡಲೇ, ಏಳನೆಯ ಹೆಜ್ಜೆ ಇಟ್ಟಕೂಡಲೇ, ಬ್ರಹ್ಮ ಮತ್ತು ಯಜಮಾನ ಇಬ್ಬರೂ ಅದರ ಬಲಪಾರ್ಶ್ವದಲ್ಲಿ, ಅಧ್ವರ್ಯುವು ಹಿಂದೆ ಮತ್ತು ನೇಷ್ಟೃವು ಅದರ ಉತ್ತರಕ್ಕೆ ಕುಳಿತುಕೊಳ್ಳುತ್ತಾರೆ. ಏಳನೆಯ ಹೆಜ್ಜೆಯಿಟ್ಟ ಜಾಗವನ್ನು ತನ್ನ ಕೈಯಿಂದ ಮೊದಲು ಮುಚ್ಚಿ, ಅನಂತರ ಚಿನ್ನದ ಚೂರನ್ನು ಆ ಸ್ಥಳದಲ್ಲಿ ಇಡುತ್ತಾ, ಅದನ್ನು ಅದಿತಿಗೆ, "ಇದಂ ಅದಿತಯೆ, ನ ಮಮ' ಎಂದು ಅರ್ಪಿಸುತ್ತಾನೆ. ಏಳನೆಯ ಹೆಜ್ಜೆಯ ಗುರುತಿನ ಸುತ್ತಲೂ, 'ಸ್ಫ್ಯ' ಎಂಬುದರಿಂದ ಒಂದು ಸಲ ಮಂತ್ರಪೂರ್ವಕವಾಗಿಯೂ, ಎರಡು ಸಲ ಅಮಂತ್ರಕವಾಗಿಯೂ ಅಧ್ವರ್ಯುವು ಬಲದಿಂದ ಎಡಕ್ಕೆ ಗೆರೆಗಳನ್ನೆಳೆಯುತ್ತಾನೆ. (ಸಾರಂಗಶೃಂಗದಿಂದ ಗೆರೆಗಳನ್ನೆಳೆಯಬೇಕೆಂದು ಆಪಸ್ತಂಬರು). ಈ ಗೆರೆಗಳ ಮೇಲಿರುವ ಮಣ್ಣನ್ನು ತೆಗೆದು, ಒಂದು ಸ್ಥಾಲಿಯೊಳಗೆ ಹಾಕಿ, ಅದನ್ನು ಯಜಮಾನನಿಗೂ, ಆತನ ಪತ್ನಿಗೂ ಕೊಡುತ್ತಾನೆ. ಈ ಸಮಯದಲ್ಲಿ ಆಕೆಯೂ ಗೋವನ್ನು ಸ್ತುತಿಸುತ್ತಾಳೆ. ಯಜಮಾನನು ಚಿನ್ನದ ಚೂರನ್ನು ಕೈಯಲ್ಲಿ ಹಿಡಿದುಕೊಂಡು, ಆ ಗೆರೆಗಳ ಮೇಲೆ ಕೈತೊಳೆದುಕೊಂಡು, ಅದೇ ಕೈಯಿಂದ ಸ್ವಲ್ಪ ನೀರನ್ನು ಮಣ್ಣಿರುವ ಸ್ಥಾಲಿಯೊಳಗೆ ಹಾಕುತ್ತಾನೆ. ಆ ಮಣ್ಣನ್ನು ಮೂರು ಭಾಗಮಾಡಿ, ಒಂದು ಭಾಗವನ್ನು ಗಾರ್ಹಪತ್ಯಾಗ್ನಿಯ ಹತ್ತಿರ ಆರಿರುವ ಬೂದಿಯಮೇಲೂ, ಎರಡನೆಯದನ್ನು ಅದೇರೀತಿ ಆಹವನೀಯದ ಹತ್ತಿರವೂ, ಮೂರನೆಯದನ್ನು ಪತ್ನಿಯ ಕೈಯಲ್ಲೂ ಹಾಕುತ್ತಾನೆ. ಆಕೆಯು ಅದನ್ನು ಮನೆಯಲ್ಲಿಡುತ್ತಾಳೆ. ಸ್ವರ್ಣವನ್ನು ಅಧ್ವರ್ಯುವು ತನ್ನ ಕಿರುಬೆರಳಿಗೆ ಕಟ್ಟುತ್ತಾನೆ. ಆಪ್ಯಾಯನ, ಸೋಮಸವನ, ಅಂಶು ಮತ್ತು ಅದಾಭ್ಯ ಎಂಬ ಪಾತ್ರಗಳನ್ನು ತೆಗೆದುಕೊಳ್ಳುವ, ಈ ಕರ್ಮಗಳನ್ನು ಮಾಡುವಾಗಲೆಲ್ಲ, ಆ ಸ್ವರ್ಣವು ಆತನ ಬೆರಳಿನಲ್ಲಿರಬೇಕು.

ಅಧ್ವರ್ಯುವು ಯಜಮಾನನ ಭೃತ್ಯನಿಗೆ ಎರಡುಚೂರು ಬಟ್ಟೆಗಳನ್ನೂ (ಸೋಮವನ್ನು ಕಟ್ಟಲು ಒಂದು, ಅದನ್ನು ಮುಚ್ಚಲು ಮತ್ತೊಂದು), ಒಂದು ಉಷ್ಣೀಷವನ್ನೂ ತರಲು ಹೇಳುತ್ತಾನೆ. ಮೊದಲನೆಯ ಚೂರುಬಟ್ಟೆಯನ್ನು ಅಧ್ವರ್ಯು ಅಥವಾ ಯಜಮಾನನೂ, ಉಳಿದೆರಡನ್ನೂ ಪ್ರತಿಪ್ರಸ್ಥಾತನೂ ತೆಗೆದುಕೊಂಡು ಹೋಗುತ್ತಾರೆ. ಎಲ್ಲರೂ ಪೂರ್ವಾಭಿಮುಖರಾಗಿ, ಮೇಲೆ ಮತ್ತು ಸುತ್ತಲೂ ಚಾಪೆಗಳಿಂದ ಮುಚ್ಚಿರುವ ಸೋಮಲತೆ ತುಂಬಿರುವ ನಾಲ್ಕು ಚಕ್ರದ ಗಾಡಿಯಕಡೆ ಹೋಗುತ್ತಾರೆ. ಸೋಮದ ಅಂಶುಗಳನ್ನು ಆರಿಸುವುದು, ತೆಗೆದುಕೊಳ್ಳುವುದು, ಬಟ್ಟೆಯಿಂದ ಕಟ್ಟುವುದು ಮತ್ತು ಉಷ್ಣೀಷದಿಂದ ಮುಚ್ಚುವುದು, ಎಲ್ಲಾ ಕೆಲಸಗಳನ್ನೂ ನಿಯಮಗಳಿಗನುಸಾರವಾಗಿಯೇ ಮಾಡಬೇಕು. ಯಜಮಾನನು ಸೋಮಕ್ಕೆ ನಮಸ್ಕರಿಸಿ. ಅತಿಥಿಯನ್ನು ನಿರೀಕ್ಷಣೆಮಾಡುತ್ತಾನಿಲ್ಲುತ್ತಾನೆ. ಹೀಗೆ ಕಟ್ಟಿ ಸಿದ್ಧಪಡಿಸಿದ ಸೋಮದ ಹೊರೆಯನ್ನು, ಮಾರುವವನ ವಶಕ್ಕೆ ಅಧ್ವರ್ಯುವು ಒಪ್ಪಿಸಿದನಂತರ, ಇಬ್ಬರಿಗೂ ಅದರ ಕ್ರಯದ ವಿಷಯದಲ್ಲಿ ಚರ್ಜೆ ನಡೆಯುತ್ತದೆ. ಇದು ಬಹುಮಟ್ಟಿಗೆ ಕೃತಕವಾದುದು. ಈ ವ್ಯಾಪಾರವು ಐದುಬಾರಿ ನಡೆಯುತ್ತದೆ. ಬೆಲೆಯು ಹಸುವಿನ ತೊಡೆಯಭಾಗದ ಒಂದು ಕಲಾ ಅಂದರೆ; $\frac{1}{16}$ ಅಂಶದಿಂದ ಪ್ರಾರಂಭವಾಗಿ, ಆ ಹಸುವಿನಷ್ಟಕ್ಕೆ ಏರುತ್ತದೆ. ಅದರ ಜೊತೆಗೆ ಆ ಚಿನ್ನದ ಚೂರೂ ಸೇರುತ್ತದೆ. ಆಗ ಮಾರುವವನು 'ಸೋಮವನ್ನು ನಿಮಗೆ ಕೊಟ್ಟಿದ್ದೇನೆ; ನನಗೆ ಬೇರೆ ಪ್ರಾಣಿಗಳನ್ನು ಕೊಡಿ' ಎನ್ನುತ್ತಾನೆ. ಅಧ್ವರ್ಯುವು "ಚಿನ್ನದ ನಾಣ್ಯ, ಉಡುಪುಗಳು, ಮೇಕೆಗಳು, ಒಂದು ಹಸು, ಒಂದು ಹಸು ಮತ್ತು ಗೂಳಿ, ಮತ್ತು ಮೂರು ಹಸುಗಳು, ಇವೆಲ್ಲವೂ ನಿನ್ನವು" ಎಂದು ಉತ್ತರ ಕೊಡುತ್ತಾನೆ. ಅಧ್ವರ್ಯುವು ಸೋಮದ ಹೊರೆಯನ್ನು ಬಲಗೈಯಲ್ಲಿ ತೆಗೆದುಕೊಂಡು ಬಂದು, ಯಜಮಾನನ ಬಲತೊಡೆಯ ಮೇಲಿನ ಬಟ್ಟೆಯನ್ನು ತಳ್ಳಿ, ಅಲ್ಲಿ ಅದನ್ನು ಇಡುತ್ತಾನೆ. ಆಗ ಆತನು "ಸ್ವಾನಭ್ರಾಜಾಂಗಾರೇ...." ಎಂಬ ಮಂತ್ರವನ್ನು, ಉಚ್ಚರಿಸುತ್ತಾನೆ. ಕಡೆಗೆ ಆ ಚಿನ್ನದ ನಾಣ್ಯವೂ ಸೋಮಕ್ರಯಣೀ ಗೋವು ವಾಪಸ್ಸುತರಲ್ಪಟ್ಟು, (ಅದಕ್ಕೆ ಬದಲಾಗಿ ಬೇರೆ

ಒಂದು ಕೊಡಲ್ಪಡುತ್ತದೆ) ಗೋವು ಯಜಮಾನನ ಗೋಶಾಲೆಗೆ ಹೋಗುತ್ತದೆ. (ಈ ವ್ಯಾಪಾರಕಾಲದಲ್ಲಿ ಮಾರುವವನನ್ನು ದೊಣ್ಣೆ, ಮಣ್ಣುಹೆಂಟೆ ಮುಂತಾದವುಗಳಿಂದ ಹೊಡೆದು, ಸೋಮಲತೆಯನ್ನು ಬಲಾತ್ಕಾರವಾಗಿ ತೆಗೆದುಕೊಳ್ಳುವುದುಂಟೆಂದು ಆಪಸ್ತಂಬರು ಹೇಳುತ್ತಾರೆ).

ಯಜಮಾನನು ತನ್ನ ದಂಡವನ್ನು ಮೈತ್ರಾವರುಣನ ಕೈಗೆಕೊಟ್ಟು, ತನ್ನ ತೊಡೆಯ ಮೇಲಿರುವ ಸೋಮದ ಹೊರೆಯನ್ನು ಎರಡೂ ಕೈಗಳಲ್ಲಿ ತೆಗೆದುಕೊಂಡು, ಎದ್ದು, ತಲೆಯಮೇಲೆ ಒಂದು ಕೈಯಿಟ್ಟುಕೊಂಡು, ಅದರ ಮೇಲೆ ಹೊರೆಯನ್ನಿಟ್ಟು ಸೋಮಕ್ರಯವಾದ ಸ್ಥಳಕ್ಕೆ ದಕ್ಷಿಣದಲ್ಲಿ ನಿಲ್ಲಿಸಿರುವ, ತೊಳೆದು ಶುದ್ಧವಾದ, ಹರುಕಿಲ್ಲದ ಚಾಪೆಯಿಂದ ಮುಚ್ಚಿದ ಗಾಡಿಯ ಹತ್ತಿರ ಬರುತ್ತಾನೆ. ಈ ಗಾಡಿಯ ಪೆಟ್ಟಿಗೆಯ ಮೇಲೆ ಅಧ್ವರ್ಯುವು ಒಂದು ಕೃಷ್ಣಾಜಿನವನ್ನು (ತಲೆ ಪೂರ್ವದಕಡೆಗೂ, ರೋಮಗಳಿರುವ ಪಾರ್ಶ್ವವು ಮೇಲೆ ಇರುವಂತೆಯೂ) ಹಾಸಿ, ಸೋಮದ ಹೊರೆಯನ್ನು ಅದರ ಮೇಲೆ ಇಡಿಸಿ, ಇನ್ನೊಂದು ಬಟ್ಟೆಯಿಂದ ಮುಚ್ಚಿ, ಒಂದು ದೊಣ್ಣೆಗೆ ಚರ್ಮವನ್ನು ಕಟ್ಟಿ ಬಾವುಟದಂತೆ ಮಾಡುತ್ತಾನೆ. ಗಾಡಿಗೆ ಎರಡು ಎತ್ತುಗಳನ್ನು ಹೂಡುತ್ತಾರೆ. ಉದ್ಗಾತೃವಿಗೆ ಸಹಾಯಕನಾದ ಸುಬ್ರಹ್ಮಣ್ಯನೆಂಬ ಋತ್ವಿಜನು ನೆಲದಮೇಲೆ ನಡೆಯುತ್ತಾ, ಗಾಡಿಯನ್ನು ನಡೆಸುತ್ತಾನೆ. ಮುತ್ತುಗದ ಕೊಂಬೆಗಳೆರಡನ್ನು ಚಾವುಟಿಗಳನ್ನಾಗಿ ಉಪಯೋಗಿಸುತ್ತಾನೆ. ಅಧ್ವರ್ಯುವು ಗಾಡಿಯನ್ನು ಸ್ಪರ್ಶಿಸಿ, ಸೋಮಕ್ರಯದ ವಿಷಯವಾಗಿ, ಅಥವಾ ಪ್ರದರ್ಶನದ ವಿಷಯವಾಗಿ ಮಂತ್ರವನ್ನುಚ್ಚರಿಸುವಂತೆ ಹೋತೃವಿಗೂ ಸಾಮಮಂತ್ರವನ್ನು ಉಚ್ಚರಿಸುವಂತೆ ಸುಬ್ರಹ್ಮಣ್ಯನಿಗೂ ಹೇಳುತ್ತಾನೆ. ಎರಡು ಚಕ್ರಗಳ ಜಾಡುಗಳ ಮಧ್ಯೆ, ಗಾಡಿಯಿಂದ ಮೂರು ಹೆಜ್ಜೆ ಹಿಂದೆ ನಿಂತು, ಹೋತೃವು 'ತ್ವಂ ವಿಪ್ರಃ....' ಎಂಬ ಮಂತ್ರಪೂರ್ವಕವಾಗಿ, ಹಿಮ್ಮಡಿಗಳನ್ನೆತ್ತದೆ, ಕಾಲಿನ ಮುಂಭಾಗದಿಂದ ಮೂರುಸಲ ಮಣ್ಣಿನ ಹೆಕ್ಕಳೆಗಳನ್ನು ಅಥವಾ ಮಣ್ಣನ್ನು ಎಸೆದು, ಅನಂತರ, "ಹಿಂ ಭೂರ್ಭುವಸ್ಸ್ವರೋಮ್" ಎಂಬುದಾಗಿಯೂ ಮತ್ತು "ಭದ್ರಾದಭಿಶ್ರೇಯಃ ಪ್ರೇಹಿ...." ಎಂಬ ಮಂತ್ರವನ್ನೂ ಉಚ್ಚರಿಸುತ್ತಾನೆ. ಚಲಿಸುತ್ತಿರುವ ಗಾಡಿಯನ್ನನುಸರಿಸುತ್ತಾ ಋಗ್ವೇದ ೧-೯೧-೯, ೧೦; ೧೦-೭೧-೧೦. ಮತ್ತು ೪-೫೩-೭ ರಲ್ಲಿ ಅರ್ಧವನ್ನು ಹೇಳಿ ನಿಲ್ಲಿಸುತ್ತಾನೆ. ಗಾಡಿಯೂ ನಿಲ್ಲುತ್ತದೆ. ಹೋತೃವು ಗಾಡಿಯನ್ನು ಸಮೀಪಿಸಿ, ಸೋಮಕ್ಕೆ ಇದಿರಾಗಿ ನಿಲ್ಲುತ್ತಾನೆ. ಸೋಮವನ್ನಾಗಲೀ, ಆಚ್ಛಾದಕ ವಸ್ತ್ರವನ್ನಾಗಲೀ ಮುಟ್ಟುತ್ತಾ, ಪರಿಧಾನೀಯ ಎಂಬ ಋ. ೧-೯೧-೧೯ ಮತ್ತು ೮-೪೨-೩ ನೆಯ ಮಂತ್ರಗಳನ್ನು ಉಚ್ಚರಿಸುತ್ತಾನೆ, ಯಜಮಾನನೂ ಸೋಮವನ್ನು ಸ್ಪರ್ಶಮಾಡಿ, ಎಲ್ಲಾ ಋತ್ವಿಜರೊಡನೆ ಶಾಲೆಯಹತ್ತಿರ ಬರುತ್ತಾರೆ. ಈಗ ಸುಬ್ರಹ್ಮಣ್ಯನೆಂಬ ಋತ್ವಿಜನು ಸುಬ್ರಹ್ಮಣ್ಯವೆಂಬ ಇಂದ್ರದೇವತಾಕವಾದ ನಿಗದವನ್ನೂ ಹೇಳುತ್ತಾನೆ. ಇದು ಆತಿಥ್ಯೇಷ್ಟಿಗೆ ಮೊದಲೆಂದು ಆಪಸ್ತಂಬ ಮತ್ತು ಕಾತ್ಯಾಯನರೂ, ಅನಂತರವೆಂದು ಲಾಟ್ಯಾಯನರೂ ಅಭಿಪ್ರಾಯಪಡುತ್ತಾರೆ. ಪ್ರತಿ ಉಪಸತ್ತಿನಕಾಲದಲ್ಲಿಯೂ ಈ ಸುಬ್ರಹ್ಮಣ್ಯವು ಹೇಳಲ್ಪಡುತ್ತದೆ. ಹೀಗೆ ಹೇಳುವಾಗ, ಸುಬ್ರಹ್ಮಣ್ಯನು ವೇದಿಕೆಯನ್ನು ಕಟ್ಟುವಸ್ಥಳದಲ್ಲೇ ನಿಂತಿರಬೇಕು; ಅವನನ್ನು ಯಜಮಾನನೂ, ಯಜಮಾನನನ್ನು ಅವನ ಪತ್ನಿಯೂ ಸ್ಪರ್ಶಿಸುತ್ತಿರುತ್ತಾರೆ. ಮತ್ತು ಯಜಮಾನನೂ ಕೆಲವು ಮಂತ್ರಗಳನ್ನು ಮೆಲ್ಲಗೆ ಹೇಳುತ್ತಿರುತ್ತಾನೆ.

ಪ್ರತಿ ಉಪಸತ್ತಿನ ಕಾಲದಲ್ಲಿಯೂ ಸುಬ್ರಹ್ಮಣ್ಯನಿಗದವು ಉಚ್ಚರಿಸಲ್ಪಡಬೇಕು.

"ಸುಬ್ರಹ್ಮಣ್ಯೋ೩ಮ್ ! ಸುಬ್ರಹ್ಮಣ್ಯೋ೩ಮ್। ಸುಬ್ರಹ್ಮಣ್ಯೋ೩ಮ್ । ಇಂದ್ರಾಗಚ್ಛ ಹರಿವ ಆಗಚ್ಛ ಮೇಧಾತಿಥೇ-ರ್ಮೇಷ ವೃಷಣಶ್ವಸ್ಯ ಮೇನೇ ಗೌರಾವಸ್ಕಂದಿನ್ನಹಲ್ಯಾಯೈ ಜಾರ ಕೌಶಿಕ ಬ್ರಾಹ್ಮಣ ಗೌತಮ ಬ್ರುವಾಣ ಏತಾವದಹೇ (ಇಲ್ಲಿ ಎಷ್ಟು ದಿವಸಗಳು ಯಾಗವು ನಡೆಯುತ್ತದೆಯೋ ಆ ಸಂಖ್ಯೆಯನ್ನು ಸೇರಿಸಿ, ೨ ನೆಯ ದಿವಸ ದ್ವ್ಯಹೇ ಎಂತಲೂ, ೩ ನೆಯ ದಿವಸ ತ್ರ್ಯಹೇ ಎಂತಲೂ, ೪ ನೆಯ ದಿವಸ ಶ್ವಃ ಎಂತಲೂ ಕಡೆಯದಿನ ಅದ್ಯ ಎಂತಲೂ ೧೨ ದಿನದ ಯಾಗವಾದರೆ ಅದಕ್ಕೆ ಹೊಂದುವಂತೆ ಸಂಖ್ಯೆಯನ್ನು ಬದಲಾಯಿಸಿಕೊಂಡು ಹೇಳಬೇಕು. ಸುತ್ಯಾಂ ಯಾವದಹೇ ಸ್ಯಾತ್ । ದೇವಾ ಬ್ರಾಹ್ಮಣ್ಣ

ಆಗಚ್ಛತಾಗಚ್ಛತಾಗಚ್ಛತ । ಹಿಂದೆ ಹೇಳಿದಂತೆ ಸುಬ್ರಹ್ಮಣ್ಯನು ಈ ಸಿಗದವನ್ನುಚ್ಚರಿಸುವಾಗ ಯಜಮಾನನೂ ಮೆಲ್ಲಗೆ ಮಂತ್ರವನ್ನು ಹೇಳುತ್ತಿರಬೇಕು.

ಈ ಸಮಯದಲ್ಲಿ ಪ್ರಾಗ್ವಂಶದ ಪೂರ್ವದ ಬಾಗಿಲಿನಲ್ಲಿ, ಪ್ರತಿಪ್ರಸ್ಥಾತನು, ಬಿಳಿ ಕಪ್ಪು ಅಥವಾ ಕೆಂಪು ಕಪ್ಪು ಚುಕ್ಕೆಗಳುಳ್ಳ, ಕೊಂಬಿಲ್ಲದ, ಕೊಬ್ಬಿದ, ಗಷ್ಟ ಚೆನ್ನಾಗಿ ಬೆಳೆದಿರುವ ಮೇಕೆಯೊಂದನ್ನು ಸೋಮರಾಜನಿಗೆ ಕಾಣಿಕೆಯಾಗಿ ಕಿವಿಯಿಂದ ಹಿಡಿದು ನಿಂತಿರುತ್ತಾನೆ. ಪ್ರಾಗ್ವಂಶದ ಹತ್ತಿರ ಗಾಡಿಯನ್ನು ಉತ್ತರ ಅಥವಾ ಪೂರ್ವಕ್ಕೆ ಅಭಿಮುಖವಾಗಿ ನಿಲ್ಲಿಸಿ, ಗಾಡಿಯ ಮೂಕಿಯನ್ನು ತೆಗೆದು, ಎರಡೂ ಎತ್ತುಗಳನ್ನು ಅಥವಾ ಉತ್ತರದ ಎತ್ತನ್ನು ಬಿಚ್ಚಿಬಿಡುತ್ತಾರೆ. ಇದೇ ಕಾಲದಲ್ಲಿ, ಸೋಮರಾಜನನ್ನು ಸತ್ಕಾರಪೂರ್ವಕವಾಗಿ ಎದುರ್ಗೊಳ್ಳಲು, ಆತಿಥ್ಯೇಷ್ಟಿಯ ಸಿದ್ಧತೆಗಳು ನಡೆಯುತ್ತವೆ. ಉದುಂಬರದ ಮರದಿಂದ ಮಾಡಿದುದು, ಪುರುಷನನಾಭಿಯಷ್ಟು ಎತ್ತರವಾದ ನಾಲ್ಕು ಕಾಲುಗಳು, ಅದರ ಮೇಲೆ ಒಂದು ಅರತ್ನಿ (ಮೊಳ) ಚದುರದ ಹಲಗೆ, ಮುಂಜಿ ಹುಲ್ಲಿನಿಂದ ಹೆಣೆದಿರುವುದು, ಮೇಲೆ ಕೃಷ್ಣಾಜಿನ ಹರಡಿರುವುದು, ಇಂತಹ ಒಂದು ಆಸನವನ್ನು ಅಧ್ವರ್ಯು ಮತ್ತಿತರ ಮೂವರು ಋತ್ವಿಜರು ಸಿದ್ಧಪಡಿಸುತ್ತಾರೆ. ಗಾಡಿಯಿಂದ ಇಳಿಸಿ, ಸೋಮದ ಹೊರೆಯನ್ನು ಈ ಆಸನದ ಮೇಲೆ ಇರಿಸುತ್ತಾರೆ. ಸೋಮಸಹಿತವಾದ ಆಸಂದಿಯನ್ನು (ಕಾಲುಮಣೆ) ಪೂರ್ವದ್ವಾರದಿಂದ ಶಾಲೆಯ ಒಳಕ್ಕೆ ತಂದು, ಆಹವನೀಯಾಗ್ನಿಯ ಪಶ್ಚಿಮದ ಕಡೆಯಿಂದ ತಂದು, ಬ್ರಹ್ಮನ ಆಸನಕ್ಕೆ ಪೂರ್ವದಲ್ಲಿ, ಆಹವನೀಯಾಗ್ನಿಯ ದಕ್ಷಿಣದಲ್ಲಿ ಸ್ಥಾಪಿಸುತ್ತಾರೆ. ಇನ್ನು ಆತಿಥ್ಯೇಷ್ಟಿಯ ಕಾರ್ಯವು ಪ್ರಾರಂಭವಾಗುತ್ತದೆ. ಈ ಇಷ್ಟಿಯಲ್ಲಿ ಪ್ರಧಾನದೇವತೆಯಾದ ವಿಷ್ಣುವಿಗಾಗಿ, ಯಜಮಾನಿಯು ಒಂಬತ್ತು ಕಪಾಲಗಳಲ್ಲಿ ಸಿದ್ಧಪಡಿಸಬೇಕಾದ ಪುರೋಡಾಶದ ಸಂಭಾರಗಳನ್ನು ಒದಗಿಸುತ್ತಾಳೆ.

ಅಗ್ನಿಷ್ಟೋಮದ ದೀಕ್ಷಣೀಯೇಷ್ಟಿಯಾದ ಮೇಲೆ ಉದಯನೀಯೇಷ್ಟಿಯವರೆಗಿನ ಎಲ್ಲಾ ಇಷ್ಟಿಗಳಲ್ಲಿಯೂ, ಅಗ್ನ್ಯನ್ವಾಧಾನವಿಲ್ಲ. ಪ್ರತಿಸ್ವೀಕಾರವಿಲ್ಲ, ಉಪವಾಸಾದಿಗಳಿಲ್ಲ, ಉಪಹಾರವಿಲ್ಲ ಮತ್ತು ಬ್ರಹ್ಮವರಣವಿಲ್ಲ. ಐದು ಪ್ರಯಾಜಗಳು ಮಾತ್ರ ಅನುಯಾಜಗಳೂ ಇಲ್ಲ. ಅರಣಿಯಿಂದ ಅಗ್ನಿಯನ್ನು ಮಥನಮಾಡುವುದು, ಮೊದಲನೆಯ ಇಳಾದಿಂದ ಇಷ್ಟಿಯು (ಚರು) ಮುಗಿಯುತ್ತದೆ. ಇಳಾಭಕ್ಷಣವಾದಮೇಲೆ ಯಜಮಾನ ಮತ್ತು ಋತ್ವಿಜರೆಲ್ಲರೂ, 'ತಾನೂನಪ್ತ್ರ'ವೆಂಬ ಕರ್ಮವನ್ನು ಆಚರಿಸುತ್ತಾರೆ. ಪರಸ್ಪರ ಘರ್ಷಣಾದಿಗಳನ್ನು ಮಾಡುವುದಿಲ್ಲವೆಂಬ ಒಪ್ಪಂದಕ್ಕೆ ಬರುತ್ತಾರೆ. ಕಂಚಿನ ಪಾತ್ರೆಯಲ್ಲಾಗಲೀ, ಒಂದು ಚಮಸದಲ್ಲಾಗಲೀ ಧ್ರುವಾದಲ್ಲಿರುವ ಘೃತವನ್ನು ತೆಗೆದುಕೊಂಡು, ಎಲ್ಲರೂ ಏಕಕಾಲದಲ್ಲಿ ಈ ಘೃತವನ್ನು ಮುಟ್ಟಿ, ತನೂನಪಾತ್ ದೇವತೆಯ ಹೆಸರಿನಲ್ಲಿ ಪ್ರಮಾಣಮಾಡಿದಂತೆ ಈ ಒಂದು ಒಪ್ಪಂದ ಮಾಡಿಕೊಳ್ಳುತ್ತಾರೆ. ಈ ಘೃತವನ್ನು ಅಧ್ವರ್ಯುವು ಮೃಣ್ಮಯವಲ್ಲದ ಯಾವುದಾದರೂ ಪಾತ್ರೆಯಲ್ಲಿ ಒಂದು ಗೊತ್ತಾದ ಸ್ಥಳದಲ್ಲಿಟ್ಟಿದ್ದು, ಮಧ್ಯಾಹ್ನದಲ್ಲಿ ಯಜಮಾನನಿಗೆ ವ್ರತದುಗ್ಧವೆಂಬ ಹಾಲಿನ ಜೊತೆಯಲ್ಲಿ ಕೊಡುತ್ತಾನೆ.

ಈಗ ಯಜಮಾನನಿಗೆ ಅವಾಂತರ ದೀಕ್ಷೆಯು ಜರುಗುತ್ತದೆ. 'ಅಗ್ನೇ ವ್ರತಪಾ.......' ಎಂಬ ಮಂತ್ರದಿಂದ ಆಹವನೀಯಾಗ್ನಿಗೆ ಒಂದು ಸಮಿತ್ತನ್ನು ಆಹುತಿಯಾಗಿ ಹಾಕುತ್ತಾನೆ. ಇದೇರೀತಿ ಪತ್ನಿಯೂ ಅಮಂತ್ರಕವಾಗಿ ಗಾರ್ಹಪತ್ಯಾಗ್ನಿಯಲ್ಲಿ ಹೋಮಮಾಡುತ್ತಾಳೆ. 'ಮದಂತಿ'ಯೆಂಬ ಪಾತ್ರೆಯಲ್ಲಿ ಕಾಯಿಸಿದ ನೀರನ್ನು ಮುಟ್ಟಿ, ಮುಷ್ಟಿಯನ್ನು ಮತ್ತಷ್ಟು ಬಲವಾಗಿ ಬಿಗಿದು, ಸೊಂಟವನ್ನು ಕಟ್ಟಿ, ಬಿಸಿಹಾಲನ್ನು ಕುಡಿಯುತ್ತಾನೆ. ಎಲ್ಲಾ ಋತ್ವಿಜರೂ ಮದಂತಿಯಲ್ಲಿನ ನೀರನ್ನು ಮುಟ್ಟಿ, ಸುವರ್ಣ ನಾಣ್ಯಸಹಿತವಾದ ಹಸ್ತಗಳಿಂದ, ಯಜಮಾನನೊಡನೆ, ಸೋಮಕಾಷ್ಠಗಳನ್ನು ಸ್ಪರ್ಶಿಸಿ, ಅವನ್ನು—ಅಂಶುರಂಶುಷ್ಟೇ ದೇವ ಸೋಮಾಪ್ಯಾಯತಾಮಿಂದ್ರಾಯೈಕಧನವಿದೇ" ಎಂಬ ಮಂತ್ರದಿಂದ ಪುಷ್ಟೀಕರಿಸುತ್ತಾರೆ. ಅನಂತರ, ಕ್ರಮವಾಗಿ, ಒಬ್ಬರಾದ ಮೇಲೊಬ್ಬರು, 'ನಿಹ್ನವ'ವೆಂಬುವನ್ನು ಆಚರಿಸುತ್ತಾರೆ. ವೇದಿಯ ದಕ್ಷಿಣದ ಕೊನೆಯಲ್ಲಿರುವ ಪ್ರಸ್ತರದ ಮೇಲೆ ಬಲಗೈ

ಯನ್ನು ಮೇಲುಮುಖವಾಗಿಯೂ, ಅದರ ಮೇಲೆ ಎಡಗೈಯನ್ನು ಕೆಳಮುಖವಾಗಿಯೂ ಇಡುತ್ತಾರೆ. ಇದು ದ್ಯಾವಾಭೂಮಿಗಳಿಗೆ ಮಾಡುವ ಒಂದು ವಿಧವಾದ ವಂದನೆ.

ಇದಾದ ಮೇಲೆ ಪ್ರವರ್ಗ್ಯ; ಅನಂತರ ಉಪಸತ್ತು. ಅಥವಾ ಉಪಸತ್ತಾದ ನಂತರ ಪ್ರವರ್ಗ್ಯವಾಗಬಹುದು. ಹೇಗಾದರೂ ಇವೆರಡೂ ದಿನಕ್ಕೆರಡುಬಾರಿ, ಬೆಳಗ್ಗೆ ಮತ್ತು ಮಧ್ಯಾಹ್ನ ಮೂರು ದಿನಗಳ ವರೆಗೆ ನಡೆಯುತ್ತವೆ. ಐದನೆಯ ದಿವಸದಲ್ಲಿ ಸೋಮಸವನವಾಗುವುದಿದ್ದರೆ ೨, ೩ ಮತ್ತು ೪ ನೆಯ ದಿನಗಳಲ್ಲಿ ಮಾತ್ರ ಅಥವಾ ೭ ಅಥವಾ ಇನ್ನೂ ಮುಂದಿನ ದಿನಗಳಲ್ಲಿ ಸೋಮಸವನವಾಗುವುದಿದ್ದರೆ ಅಲ್ಲಿಯವರೆಗೂ ಎಲ್ಲಾ ದಿನಗಳಲ್ಲಿ ಪ್ರವರ್ಗ್ಯ ಮತ್ತು ಉಪಸತ್ತುಗಳು ನಡೆಯಬೇಕು. ಆತಿಥ್ಯೇಷ್ಟಿಯಲ್ಲಿ ಉಪಯೋಗಿಸಿದ ಬರ್ಹಿಸ್ಸು (ದರ್ಭೆ), ಪ್ರಸ್ತರ, ಪರಿಧಿಗಳನ್ನೇ ಉಪಸತ್ತುಗಳಲ್ಲಿಯೂ, ಅಗ್ನೀಷೋಮೀಯ ಕರ್ಮದಲ್ಲಿಯೂ ಉಪಯೋಗಿಸುತ್ತಾರೆ.

ಪ್ರಾಯಶಃ ಎಲ್ಲಾ ಸೂತ್ರಗಳಲ್ಲಿಯೂ ಪ್ರವರ್ಗ್ಯವನ್ನು ಪ್ರತ್ಯೇಕವಾಗಿ ಹೇಳಿರುತ್ತಾರೆ. ಇದರಿಂದ ಯಜಮಾನನಿಗೆ ದಿವ್ಯದೇಹವೊಂದು ಬರುತ್ತದೆ ಎಂದು ಹೇಳುತ್ತಾರೆ. ಪ್ರವರ್ಗ್ಯವು ಯಾವ ಕರ್ಮದ ರೂಪಾಂತರವಾಗಲೀ ಅಲ್ಲ. ಅದು ಸ್ವತಂತ್ರವಾದುದು. ಅದಕ್ಕೆ ಅಪೂರ್ವವೆನ್ನುತ್ತಾರೆ. ಎಲ್ಲಾ ಅಗ್ನಿಷ್ಟೋಮಗಳಲ್ಲಿಯೂ ಪ್ರವರ್ಗ್ಯವನ್ನು ಮಾಡಬೇಕೆಂಬ ನಿಯಮವಿಲ್ಲವೆಂದು ಆಪ. ಶ್ರೌ.ಸೂ. ೪-೩-೧೫ ರಿಂದ ತಿಳಿದುಬರುತ್ತದೆ. **ಘರ್ಮವನ್ನು ಸಾಮ್ರಾಟ್** ಎಂದು ಕರೆಯುತ್ತಾರೆ; ಸೂರ್ಯನೇ ಘರ್ಮವೆಂದೂ, ಯಜ್ಞಕ್ಕೆ ಯಜಮಾನನೆಂದೂ, ತಪ್ತಕ್ಷೀರವೇ ದಿವ್ಯಜೀವನ–ಜ್ಯೋತಿಯೆಂದೂ ಹೇಳುತ್ತಾರೆ.

ಮಣ್ಣಿನ ಪಾತ್ರೆಯೊಂದನ್ನು ಮಾಡಿಸಬೇಕು. ದೂರದಿಂದ ನೋಡಿದರೆ, ಒಂದರಮೇಲೊಂದು ಮೂರು ಮಡಕೆಗಳನ್ನು ಇಟ್ಟಂತೆ ಕಾಣಬೇಕು. ಸುಮಾರು ಒಂದು ಮೊಳ ಎತ್ತರದ ಪಾತ್ರೆ. ಮಧ್ಯಭಾಗದಲ್ಲಿ ಸಣ್ಣಗಿರುತ್ತದೆ. ತುದಿಯಿಂದ ಸುಮಾರು ಮೂರು ಅಂಗುಲದಷ್ಟು ಕೆಳಗಡೆ ಒಂದು ಮೇಖಲಾ ಇರಬೇಕು. ಪಾತ್ರೆಯ ಮೇಲ್ಭಾಗವು ಅಗಲವಾದ ಆಳವಾದ ಬೋಗುಣಿಯಂತಿದ್ದು, ಅದರಲ್ಲಿ ದ್ರವವನ್ನು ಸುರಿಯಲು ಅನುಕೂಲವಾಗುವಂತೆ ಒಂದು ಮೂತಿಯಿರಬೇಕು. ಇಂತಹ ಪಾತ್ರೆಗೆ **ಮಹಾವೀರ**ವೆಂದು ಹೆಸರು. 'ಮಹಾವೀರ'ಗಳೆಂಬ ಎರಡು ಮಣ್ಣಿನ ಪಾತ್ರೆಗಳು ಬೇಕು. '**ಪಿನ್ವನ**'ಗಳೆಂಬ ಹಾಲು ಕರೆಯುವ ಪಾತ್ರೆಗಳೆರಡೂ ಪುರೋಡಾಶವನ್ನು ಬೇಯಿಸಲು ಎರಡು ಮಣ್ಣಿನ ತಟ್ಟೆಗಳೂ ಬೇಕು. ಇವುಗಳಿಗೆ '**ರೌಹಿಣ**'ಗಳೆನ್ನುತ್ತಾರೆ. ಮೂರು ಮಣ್ಣಿನ ಪಾತ್ರೆಗಳನ್ನೂ, ಆಹವನೀಯಾಗ್ನಿ—ಕೆಲವರ ಮತದಲ್ಲಿ ದಕ್ಷಿಣಾಗ್ನಿಯಿಂದ ಹೊತ್ತಿಸಿದ ಕುದುರೆಯ ಲದ್ದಿಯ ಬೆಂಕಿಯಲ್ಲಿ ಬೇಯಿಸಿ ತೆಗೆಯಬೇಕು. ಪುರೋಡಾಶಗಳನ್ನೂ ರೌಹಿಣಗಳ ಮೇಲೆ ಬೇಯಿಸಿ, ದಿವಸ ಮತ್ತು ರಾತ್ರಿಗಳನ್ನುದ್ದೇಶಿಸಿ, ಅಗ್ನಿಯಲ್ಲಿ ಹೋಮಮಾಡಬೇಕು. ಈ ಮುಖ್ಯವಾದ ಮಹಾವೀರವನ್ನು ಎತ್ತರವಾದ ಮಣ್ಣಿನ ಜಗುಲಿಯೊಂದರ ಮೇಲಿಟ್ಟು, ಅದರ ಸುತ್ತ ಬೆಂಕಿಯನ್ನು ಹಾಕಬೇಕು. ಅದು ಕಾದಮೇಲೆ ಅದರಲ್ಲಿ ತುಪ್ಪವನ್ನು ಹಾಕಬೇಕು. ಉಳಿದೆರಡು ಮಹಾವೀರಗಳನ್ನು ಸೋಮದ ಆಸಂದಿಗೆ (ಆಸಂದಿಯೆಂದರೆ ಸೋಮರಸವನ್ನಿಡುವ ಮರದ ಕಾಲುಮಣೆ) ಹಿಂಭಾಗದಲ್ಲಿಟ್ಟಿರುವ ದೊಡ್ಡ ಆಸಂದಿಯ ಮೇಲೆ ಬಟ್ಟೆ ಮುಚ್ಚಿ ಇಡಬೇಕು. ಇವೆರಡಕ್ಕೆ ಈ ಸಂಸ್ಕಾರಗಳಿಲ್ಲ. ಅವು 'ಅಪ್ರಚರಣೀಯ'ಗಳು. ಮಹಾವೀರದಲ್ಲಿ ಕುದಿಯುತ್ತಿರುವ ತುಪ್ಪಕ್ಕೆ ಒಂದು ಹಸುವಿನ ಮತ್ತು ಗಂಡುಮರಿಯುಳ್ಳ ಮೇಕೆಯ ಹಾಲನ್ನು ಹಾಕಬೇಕು. ಮಹಾವೀರದಲ್ಲಿರುವ ಈ ಘೃತಕ್ಷೀರ ಮಿಶ್ರಕ್ಕೇ 'ಘರ್ಮ'ವೆಂದು ಹೆಸರು. ಅಶ್ವಿನೀದೇವತೆಗಳು, ವಾಯು, ಇಂದ್ರ ವಸು, ರುದ್ರ, ಆದಿತ್ಯರ ಜೊತೆಯಲ್ಲಿ) ಸವಿತೃ, ಬೃಹಸ್ಪತಿ ಮತ್ತು ಯಮ ಇವರುಗಳಿಗೆ ಈ ಘರ್ಮದ ಆಹುತಿಯನ್ನು ಕೊಟ್ಟು, ಉಳಿದುದನ್ನು ಉಪಯಮನಿಯಿಂದ ತುಂಬಿಕೊಂಡು, ಯಜಮಾನನು ಪಾನಮಾಡಬೇಕು; ಇತರರು ಘ್ರಾಣಿಸುವುದು ಮಾತ್ರ ಮಹಾವೀರವನ್ನು ಮಣ್ಣಿನ ಜಗುಲಿಯ ಮೇಲೆ ಇಟ್ಟಾಗಿನಿಂದ, ಘರ್ಮವನ್ನು ದೇವತೆಗಳಿಗೆ ಅರ್ಪಿಸುವ ವರೆಗೂ ಮತ್ತು ಪ್ರಸ್ತೋತನು ಸಾಮಗಾನಮಾಡುವವರೆಗೂ, ಹೋತೃವು ಆಯಾ ಕರ್ಮಗಳಿಗನುಗುಣವಾದ ಮಂತ್ರಗಳನ್ನು ಉಚ್ಚರಿಸುತ್ತಲೇ ಇರಬೇಕು. ಇವಿಷ್ಟೂ ಕಾರ್ಯಕಲಾಪಗಳಿಗೆ ಒಟ್ಟಾಗಿ ಪ್ರವರ್ಗ್ಯವೆಂದು ಹೆಸರು.

ಇವೆಲ್ಲಾ ನಡೆಯುವಾಗ, ಆಚರಿಸಬೇಕಾದ ಕೆಲವು ನಡೆವಳಿಕೆಗಳಿವೆ. ಯಾಗಶಾಲೆಯ ಬಾಗಿಲುಗಳಿಗೆಲ್ಲಾ ಒಟ್ಟೆಯ ಪರದೆಗಳನ್ನು ಬಿಟ್ಟಿರಬೇಕು. ಯಜಮಾನಿಯ ಬಿಡಾರಕ್ಕೂ ಈ ರೀತಿ ಪರದೆಯಿರಬೇಕು. ಆದರೆ ಕೊನೆಯಲ್ಲಿ ಆಕೆಯು ಒಂದು ನೋಡಲು ಅವಕಾಶವುಂಟು. ಮತ್ತು ಮಂತ್ರವೊಂದನ್ನು ಉಚ್ಚರಿಸಬೇಕು. ಈ ಕರ್ಮದಲ್ಲಿ ಉಪಯೋಗಿಸುವ ಮರದ ಪಾತ್ರೆಗಳೆಲ್ಲವೂ ಉದುಂಬರ ವೃಕ್ಷದಿಂದಲೂ, ಹಗ್ಗಗಳೆಲ್ಲವೂ ಮುಂಜಾಹುಲ್ಲಿನಿಂದಲೂ ಮಾಡಿದವು ಆಗಿರಬೇಕು. ೧೩ ಪರಿಧಿಗಳು (ವೈಕಂಕತ) ಹುಳಿಬೇಲದಿಂದಲೂ, ಘರ್ಮವನ್ನು ಕಾಯಿಸಲು ಉಪಯೋಗಿಸುವ ಕಾಷ್ಠವು ಹುಳಿಬೇಲ ಅಥವಾ ಬಿದಿರ, ಪಲಾಶ, ಉದುಂಬರ, ಇಂತಹ ವೃಕ್ಷಗಳಿಂದಲೂ ತರಬೇಕು. ಇಲ್ಲಿ ಉಪಯೋಗಿಸಲು ಮೂರು ಕೃಷ್ಣಾಜಿನದ ಬೀಸಣಿಗೆಗಳೂ, ಎರಡು ರುಕ್ಮಗಳೂ (ಚಿನ್ನ ಅಥವಾ ಬೆಳ್ಳಿಯ ತಟ್ಟೆಗಳು ಅಥವಾ ತುಂಡುಗಳು), ಎರಡು **ವೇದ**ಗಳೂ (ದರ್ಭಮುಷ್ಟಿಗಳು ಒಂದಕ್ಕೆ ಅಗ್ರವಿರಬಾರದು) ಬೇಕು. ಮಹಾವೀರಪಾತ್ರೆಗಳನ್ನು ಮಾಡುವ ಮಣ್ಣಿನ ವಿಷಯವಾಗಿ ಕೆಲವು ನಿಯಮಗಳನ್ನು ಅನುಸರಿಸಬೇಕು. ಆಹವನೀಯದ ಪೂರ್ವದಲ್ಲಿ ನೆಲವನ್ನು ಅಗೆದು ಮಣ್ಣನ್ನು ತೆಗೆದುಕೊಳ್ಳಬೇಕು. ಇದರ ಜೊತೆಗೆ ಕಾಡುಹಂದಿಯು ತೋಡಿದ ಮಣ್ಣು, ಹುತ್ತದ ಮಣ್ಣು, ಪೂತಿಕ (ತಪಸಿ) ಎಂಬ ಗಿಡದ ಭಾಗ, ಮೇಕೆಯ ಕೂದಲು, ಕೃಷ್ಣಾಜಿನದ ಚೂರು ಇವುಗಳನ್ನೆಲ್ಲಾ ಬೆರಸಬೇಕು. ಈ ಮಿಶ್ರಣದ ಮೇಲೆ, ಒಂದು ಮೇಕೆಯನ್ನು ನಿಲ್ಲಿಸಿ ಹಾಲು ಕರೆಯಬೇಕು. ಈ ಹಾಲು ಬೆರೆಸಿದ ಪದಾರ್ಥಗಳನ್ನು ಉತ್ತಮ ವರ್ಣದವರೇ ಹೊತ್ತುತಂದು, ಮದಂತಿಯಲ್ಲಿನ ಬಿಸಿನೀರನ್ನು ಸೇರಿಸಿ ಮುದ್ದೆಯಾಗುವಂತೆ ಕಲಸಬೇಕು. ಈ ಕೆಲಸಗಳನ್ನೆಲ್ಲಾ ಶೂದ್ರರು, ಸ್ತ್ರೀಯರು ನೋಡಬಾರದು. ಈ ಮಣ್ಣಿನಿಂದಲೇ ಎರಡು ಹಸುಗಳನ್ನೂ, ಮೇಕೆಯನ್ನೂ ಕರೆಯಲು ಬೇಕಾಗುವ ಪಾತ್ರೆಗಳನ್ನು ಮಾಡಬೇಕು. **ಪರಿಶಾಸ** ಅಥವಾ **ಶಫ** ಎಂಬ ಮರದ ಇಕ್ಕಳಗಳಿಂದಲೇ ಮಹಾವೀರವನ್ನು ಎತ್ತಬೇಕು. ಸೋಮವನ್ನು ಇಟ್ಟಿರುವ ಆಸಂದಿಗಿಂತಲೂ (ಕಾಲುಮಣೆ) ಮಹಾವೀರಕ್ಕಾಗಿ ಇಡುವ ಆಸಂದಿಯು ಎತ್ತರವಾಗಿರಬೇಕು—ಇದರಿಂದ ಮಹಾವೀರದ ಸ್ಥಾನವು ಸಮ್ರಾಜನದೆಂದು(ಹೆಚ್ಚಿನ) ವ್ಯಕ್ತವಾಗುತ್ತದೆ. ಮತ್ತು ಈ ಆಸನವು ಸೋಮದ ಆಸನಕ್ಕೆ ಉತ್ತರದಲ್ಲಿರಬೇಕು.

ಗಾರ್ಹಪತ್ಯ ಮತ್ತು ಆಹವನೀಯಗಳ ಉತ್ತರಕ್ಕೆ ಒಂದೊಂದೂ, ಪ್ರಾಗ್ವಂಶದ ಈಶಾನ್ಯದಲ್ಲಿ ಒಂದೂ, ಹೀಗೆ ಮೂರ ನೆಯದರಿಂದ, ತೊಳೆದ ಕಶ್ಮಲವೆಲ್ಲವೂ ಹೊರಗಡೆ ಹೋಗುವಂತೆ ಒಂದು ಬಚ್ಚಲಿನಂತೆ ಮಾಡಿಸಬೇಕು. ಇವುಗಳಿಗೆಲ್ಲಾ **ಖರ**ಗಳೆಂದೂ, ಮೂರನೆಯದಕ್ಕೆ ಉಚ್ಛಿಷ್ಟಖರವೆಂದೂ ಹೆಸರು.

ನೂರು **ರಕ್ತಿಕಾ**ಗಳ ತೂಕವುಳ್ಳ ಬೆಳ್ಳಿಯ ತಟ್ಟೆ ಅಥವಾ ತಗಡನ್ನು ಪಶ್ಚಿಮದಲ್ಲಿರುವ ಜಗುಲಿಯ ಮೇಲೆ ಹೂತಿಟ್ಟು, ಗಾರ್ಹಪತ್ಯಾಗ್ನಿಯಿಂದ ಹೊತ್ತಿಸಿದ ಜೊಂಡುಹುಲ್ಲಿನ ಕಂತೆಗಳನ್ನು ಅದರ ಮೇಲೆ ಹಾಕಿ, ಮಹಾವೀರವನ್ನು ಇಡಬೇಕು. ಈಗ ಹದಿಮೂರು ಪರಿಧಿಗಳನ್ನು ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳೂ ಕೊನೆಯದನ್ನು ಅಧ್ವರ್ಯುವೂ ಮಹಾವೀರದ ಸುತ್ತಲೂ ಇಡಬೇಕು. ಅಧ್ವರ್ಯುವು ಕೃಷ್ಣಾಜಿನದ ಮೂರು ಬೀಸಣಿಗೆಗಳಿಂದ, ಒಂದೊಂದರಿಂದ ಮೂರುಸಲ ಗಶ್ಚಿಮದಿಂದ ಪೂರ್ವಕ್ಕೆ ಬೀಸುತ್ತಾನೆ. ಜ್ವಲಿಸಲು ಆರಂಭವಾದ ಕೂಡಲೇ ಆ ತಗಡನ್ನು ತೆಗೆಯಬೇಕು. ಹೀಗೆ ಖಾಲಿಯಾಗಿರುವ ಮಹಾವೀರವನ್ನು ಕಾಯಿಸುವಾಗ, ಹೋತೃವು **ಪೊರ್ವಪಟಲ**ವೆನ್ನಿಸಿಕೊಳ್ಳುವ ೨೧ ಮಂತ್ರಗಳನ್ನು ಉಚ್ಚರಿಸುತ್ತಾನೆ. ಇದೇರೀತಿ ಹಾಲುಕರೆಯುವಾಗ ಅದೇ ಋತ್ವಿಜನು **ಉತ್ತರಪಟಲ**ವೆಂಬ ೨೧ ಮಂತ್ರಗಳನ್ನು ಉಚ್ಚರಿಸುತ್ತಾನೆ.

ಶತಪಥಬ್ರಾಹ್ಮಣದಲ್ಲಿ (XIV 2, 2, 44-46) ಮತ್ತು ಜೈಮಿನಿಸೂತ್ರದಲ್ಲಿ (III 3, 32-33) ಹೇಳಿರುವಪ್ರಕಾರ ಯಾವನೇ ಯಜಮಾನನು ಆಚರಿಸುವ ಮೊದಲನೆಯ ಸೋಮಯಾಗದಲ್ಲಿ ಪ್ರವರ್ಗ್ಯವನ್ನಾಚರಿಸಬಾರದು; ಅದರಂತೆಯೇ ಪ್ರತಿಯೊಬ್ಬನೂ ಇದನ್ನು ಮಾಡಲು ಅರ್ಹನಲ್ಲ; ಪ್ರಸಿದ್ಧನಾದ ಪುರುಷನಾಗಿರಬೇಕು ಅಥವಾ ವೇದವನ್ನು ಸಂಪೂರ್ಣವಾಗಿ ಸ್ವಾಧೀನಮಾಡಿಕೊಂಡವನಾಗಿರಬೇಕು. ಸೋಮಸವನದ ಹಿಂದಿನದಿನದಲ್ಲಿ, ಪ್ರವರ್ಗ್ಯ ಮತ್ತು ಉಪಸತ್ತುಗಳೆರಡನ್ನೂ ಸೇರಿಸಿ, ಪ್ರಾತಃಕಾಲದಲ್ಲಿಯೇ ಆಚರಿಸಿ, ಪ್ರವರ್ಗ್ಯದ ಪರಿಕರಗಳೆಲ್ಲವನ್ನೂ ವಿಸರ್ಜಿಸಬೇಕು. ಇದಕ್ಕೆ **ಉದ್ವಾಸನ**ವೆಂದು

ಹೆಸರು. ಪ್ರವರ್ಗ್ಯದ ಸಾಮಾನುಗಳೆಲ್ಲವನ್ನೂ ಮನುಷ್ಯನ ಶರೀರದ ಆಕಾರದಲ್ಲಿ ಜೋಡಿಸಬಹುದು, ಇಲ್ಲವೇ ಜಲಾಶಯದಲ್ಲಿ ಎಲ್ಲಿಯಾದರೂ ಬಿಸುಡಬಹುದು. ಯಜಮಾನ ಮತ್ತು ಋತ್ವಿಜರು ಸೇರಿ, ಸಾಧಾರಣವಾಗಿ ಎಲ್ಲಾ ಸಲಕರಣೆಗಳನ್ನೂ ಉತ್ತರ ವೇದಿಯ ಮೇಲೆ ಜೋಡಿಸುತ್ತಾರೆ. ಮುಖ್ಯವಾದ ಮಹಾವೀರವನ್ನು ಉತ್ತರವೇದಿಯ ನಾಭಿಯ ಮುಂಭಾಗದಲ್ಲಿ, ಅದಕ್ಕೆ ಸಮೀಪವಾಗಿ, ಶಿರಃಸ್ಥಾನದಲ್ಲಿರಿಸುತ್ತಾರೆ; ಉಳಿದೆರಡು ಮಹಾವೀರಗಳನ್ನು ಅದಕ್ಕೆ ಪೂರ್ವದಲ್ಲಿ ಇಡುತ್ತಾರೆ. ಶಿಖಾಸ್ಥಾನದಲ್ಲಿ 'ವೇದ' ಎಂಬ ಹೆಸರಿನ ದರ್ಭೆಯ ಕಟ್ಟನ್ನೂ, ಶಫಗಳೆರಡನ್ನೂ ಮಹಾವೀರದ ಎರಡೂ ಪಾರ್ಶ್ವಗಳಲ್ಲಿ ಬಾಹುಗಳಂತೆಯೂ ಇಡುತ್ತಾರೆ. ಘರ್ಮದಲ್ಲಿ ಉಳಿದ ಭಾಗವನ್ನು ಯಜಮಾನ, ಹೋತೃ, ಅಧ್ವರ್ಯು, ಬ್ರಹ್ಮ, ಪ್ರತಿಪ್ರಸ್ಥಾತೃ, ಆಗ್ನೀಧ್ರ ಮುಂತಾದವರು ಪಾನಮಾಡುತ್ತಾರೆ. ಇದಕ್ಕೆ ಅವರು ಉಪಯೋಗಿಸುವ ಪಾತ್ರೆ, **ಉಪಯಮನೀ** ಎಂಬ ದೊಡ್ಡ ಮರದ ಸೌಟು.

ಪ್ರವರ್ಗ್ಯವನ್ನು ಆಚರಿಸಿದವನು ಒಂದು ವರ್ಷಕಾಲ ಮಾಂಸಾಹಾರ, ಶೂದ್ರಸ್ತ್ರೀಸಂಭೋಗ, ಮೃತ್ಪಾತ್ರದಿಂದ ಜಲಪಾನ ಇವುಗಳನ್ನು ವರ್ಜಿಸಬೇಕು; ಮತ್ತು ಇವನು ತಿಂದು ಮಿಕ್ಕಿದುದನ್ನು ಶೂದ್ರರು ಭೋಜನಮಾಡಲು ಅವಕಾಶಕೊಡಬಾರದು. ಈ ಕರ್ಮದಲ್ಲಿ ಉಪಯೋಗಿಸಿದ ಚಿನ್ನದ ತಟ್ಟೆಯು ಬ್ರಹ್ಮನಿಗೂ ಮತ್ತು ಘರ್ಮವು ಅಧ್ವರ್ಯುವಿಗೆಂದೂ, ಶತಪಥ ಬ್ರಾಹ್ಮಣದಲ್ಲಿಯೂ (XIV 3,1, 32), ಚಿನ್ನ ಮತ್ತು ಬೆಳ್ಳಿ ತಟ್ಟೆಗಳು ಅಧ್ವರ್ಯುವಿಗೂ, ಗೋವು ಹೋತೃವಿಗೂ, ಮೇಕೆಯು ಆಗ್ನೀಧ್ರನಿಗೂ ಮತ್ತು ಗರ್ಭಿಣಿಯಾಗಿರುವ ಗೋವೊಂದು ಬ್ರಹ್ಮನಿಗೂ, ಎಂದು ಆಪಸ್ತಂಬಸೂತ್ರದಲ್ಲಿಯೂ (XV 13-1) ಹೇಳಿದೆ.

**ಉಪಸದ್** :—ಇದೂ ಒಂದು ಇಷ್ಟಿ. ದರ್ಶಪೂರ್ಣಮಾಸೇಷ್ಟಿಯಲ್ಲಿ ಕಂಡುಬರುವ ಅಗ್ನ್ಯಾಧಾನಾದಿಕಲಾಪಗಳು ಇಲ್ಲಿ ಇಲ್ಲ. ಪ್ರಣೀತಜಲಾನಯನದಿಂದಲೇ ಇದು ಪ್ರಾರಂಭವಾಗುತ್ತದೆ. ಜುಹುವಿನಿಂದ ಅಗ್ನಿ ಮತ್ತು ಸೋಮದೇವತೆಗಳಿಗೆ ಆಜ್ಯಾಹುತಿಯೂ, **ಉಪಭೃತ್ತಿ**ನಿಂದ ಆಜ್ಯವನ್ನು ಜುಹುವಿಗೆ ಹಾಕಿಕೊಂಡು, ಅನಂತರ ಜುಹುವಿನಿಂದಲೂ ವಿಷ್ಣುವಿಗೆ ಆಜ್ಯಾಹುತಿಯೂ ಹೇಳಿದೆ. ಅಂದರೆ, ಉಪಸತ್ತಿನಲ್ಲಿ ಮುಖ್ಯದೇವತೆಗಳು ಮೂವರು, ಅಗ್ನಿ, ಸೋಮ ಮತ್ತು ವಿಷ್ಣು 'ಯಾ ತೇ . . . .' ಮುಂತಾದ ಮಂತ್ರಗಳಿಂದ ಉಪಸದಾಹುತಿಗಳೂ ಉಂಟು. (ಹೆಚ್ಚು ವಿವರಗಳಿಗೆ ಕಾತ್ಯಾಯನ VIII 2-35 ನೋಡಿ.) ಆತಿಥ್ಯೇಷ್ಟಿಯನಂತರ ಮಾಡುವ, ಸೋಮಬಲೀಕರಣ (ಸೋಮವನ್ನು ಬಲಪಡಿಸುವುದು), ನಿನ್ಹವ, ಸುಬ್ರಹ್ಮಣ್ಯಘೋಷ ಮುಂತಾದ ಎಲ್ಲಾ ಕಲಾಪಗಳೂ ಪ್ರತಿ ಉಪಸತ್ತಿನಲ್ಲಿಯೂ ಉಂಟು (ಈ ರೀತಿಯ ಉಪಸತ್ತು ೩ ಅಥವಾ ಹೆಚ್ಚಿಗೆ ದಿನಗಳಲ್ಲಿ ಬೆಳಿಗ್ಗೆ ಮತ್ತು ಮಧ್ಯಾಹ್ನಗಳಲ್ಲಿ ಆಚರಿಸಬೇಕು). ಆಜ್ಯಭಾಗಗಳು, ಪ್ರಯಾಜಗಳು, ಅನುಯಾಜಗಳು ಮತ್ತು ಸ್ವಿಷ್ಟಿಕೃತ್ ಅಗ್ನಿಗೆ ಆಹುತಿ, ಇವು ಯಾವುವೂ ಇಲ್ಲ. (ಋ.ಸಂ. ೭-೧೫-೧)ರಿಂದ ೩ ಋಕ್ಕುಗಳೇ ಮೂರು ಮೂರು ಸಲ ಉಚ್ಚರಿಸಲ್ಪಟ್ಟು, ಬೆಳಗಿನ ಒಂಭತ್ತು **ಸಾಮಿಧೇನಿ**ಗಳೆನಿಸಿಕೊಳ್ಳುತ್ತವೆ; ಅದೇ ರೀತಿ 2-6-1 ರಿಂದ ೩ ರ ವರೆಗಿನ ಮೂರು ಮಂತ್ರಗಳು ಸಾಯಂಕಾಲದ ಸಾಮಿಧೇನಿಗಳಾಗುತ್ತವೆ. ಮೊದಲನೆಯ ದಿನದ ಉಪಸದಾಹುತಿಗೆ ಮಂತ್ರವು "ಯಾತೇ ಅಗ್ನೇ ಅಯಃ ಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠಾ । ಉಗ್ರಂವಚೋಽಪಾವಧೀತ್ತ್ವೇಷಂ ವಚೋಽಪಾವಧೀತ್ಸ್ವಾಹಾ" (ವಾಜ. ಸಂ. V, 8); ಎರಡನೆಯ ದಿನ, ಅದೇ ಮಂತ್ರವನ್ನು ಆದರೆ **ಅಯಃ ಶಯಾ** ಎಂಬುದರ ಬದಲು **ರಜಃ ಶಯಾ** ಎಂದೂ, ಮೂರನೆಯ ದಿನ **ಹರಾಶಯಾ** ಎಂದೂ ಉಚ್ಚರಿಸಬೇಕು. ಈ ಮಂತ್ರಗಳಲ್ಲಿ ಕಬ್ಬಿಣ, ಬೆಳ್ಳಿ ಮತ್ತು ಚಿನ್ನ ಕೋಟೆಗಳ ಮುತ್ತಿಗೆಯ ಪ್ರಸ್ತಾಪವು ಕಂಡುಬರುತ್ತದೆ. ಈ ಸಂದರ್ಭದಲ್ಲಿ ಈ ಮಂತ್ರಗಳನ್ನೇ ಏಕೆ ವಿಧಿಸಿದೆ ಎಂಬುದು ಹೇಳುವುದು ಕಷ್ಟಸಾಧ್ಯವಾಗಿದೆ. ಆಪ. ಸೂ. XI ೪,೮ ರಲ್ಲಿ, ಕ್ಷತ್ರಿಯನು ಸೋಮಯಾಗಮಾಡುತ್ತಿರುವಾಗ, ಪರರಾಜರು ದಂಡೆತ್ತಿಬಂದರೆ ಮೊದಲನೆಯ ಉಪಸತ್ತಿನ ಆಹುತಿಮಾಡುವಾಗ, ಆಜ್ಯದಜೊತೆಯಲ್ಲಿ ಒಂದು ಕಬ್ಬಿಣದಚೂರನ್ನೂ, ಎರಡನೆಯ ಆಹುತಿಯಲ್ಲಿ ಬೆಳ್ಳಿಯ ಚೂರನ್ನೂ, ಮೂರನೆಯದರಲ್ಲಿ ಚಿನ್ನದ ಚೂರನ್ನೂ ಉಪಯೋಗಿಸಬೇಕೆಂದು ಹೇಳಿದೆ. ಪ್ರಾತಃಕಾಲದ ಯಾಜ್ಯಾ ಮಂತ್ರಗಳೇ ಮಧ್ಯಾಹ್ನದ ಅನುವಾಕ್ಯಾಮಂತ್ರಗಳೂ, ಹಾಗೆಯೇ ಮಧ್ಯಾಹ್ನದ ಅನುವಾಕ್ಯಾಗಳು ಪ್ರಾತಃಕಾಲದ ಯಾಜ್ಯಾಗಳೂ

ಆಗುತ್ತವೆಯೆಂದೂ ಹೇಳಿವೆ. ಉಪಸತ್ತುಗಳು ಅಪೂರ್ವ ಇಷ್ಟಿಗಳೆಂದೂ, ಸಾಧಾರಣ ಇಷ್ಟಿಗಳಲ್ಲಿ ಹೇಳುವ ಎಲ್ಲಾ ಕಾರ್ಯಗಳನ್ನೂ ಇಲ್ಲಿ ಮಾಡಬಾರದೆಂದೂ, ಎಷ್ಟು ಸ್ಪಷ್ಟವಾಗಿ ವಿಹಿತವಾಗಿದೆಯೋ ಅಷ್ಟನ್ನು ಮಾತ್ರ ಮಾಡಬೇಕೆಂದೂ ಜೈಮಿನಿಗಳು ಹೇಳಿದ್ದಾರೆ (ಜೈ. X. ೭, ೪೩-೪೬) **ಉಪಾಂಶುಯಾಜ**ದಲ್ಲಿ ಅನುಸರಿಸುವ ವಿಧಾನದಂತೆಯೇ ಉಪಸತ್ತಿನ ವಿಧಾನ. (ಶತ. VII, ೪.)

ಉಪಸತ್ತುಗಳನ್ನು ಆಚರಿಸುವ ಎರಡನೆಯ ದಿನ ಪ್ರಾತಃಕಾಲದ ಪ್ರವರ್ಗ್ಯ ಮತ್ತು ಉಪಸತ್ತುಗಳಾದನಂತರ ಸೋಮಯಾಗಕ್ಕೆ ಬೇಕಾದ ಮಹಾವೇದಿಯ ಅಳತೆ ಮತ್ತು ರಚನೆ ಪ್ರಾರಂಭವಾಗುತ್ತದೆ. ಆಹವನೀಯಾಗ್ನಿಯ ಮುಂದುಗಡೆ ಪೂರ್ವಕ್ಕೆ ೬ ಪ್ರಕ್ರಮಗಳ ದೂರದಲ್ಲಿ (ಪ್ರಕ್ರಮವೆಂದರೆ ಎರಡು ಅಥವಾ ಮೂರು ಪದಗಳು, ಒಂದೊಂದು ಪದವು ಕೆಲವರ ಪ್ರಕಾರ ೧೫ ಅಂಗುಲಗಳು ಮತ್ತೆ ಕೆಲವರ ಪ್ರಕಾರ ೧೨ ಅಂಗುಲಗಳು) ಒಂದು ಶಂಕುವನ್ನು ನೆಲದಲ್ಲಿ ಹೂಳಬೇಕು. ಇದನ್ನೇ ಕಾತ್ಯಾಯನರು (VII, ೩-೭), ಅಗ್ನಿಶಾಲೆಯ ಪೂರ್ವದ್ವಾರದ ಪೂರ್ವಕ್ಕೆ ಮೂರೇ ಪ್ರಕ್ರಮಗಳ ದೂರದಲ್ಲಿ ನೆಡಬೇಕೆನ್ನುತ್ತಾರೆ— ಈ ಶಂಕುವಿಗೆ **ಅಂತಃಪಾತ್ಯ** ಅಥವಾ **ಶಾಲಾಮುಖೀಯ**ವೆಂದು ಹೆಸರು. ಈ ಶಂಕುವಿನಿಂದ ಪೂರ್ವಕ್ಕೆ ೩೬ ಪ್ರಕ್ರಮಗಳ ದೂರದಲ್ಲಿ **ಯೂಪಾವತೀಯ**ವೆಂಬ ಇನ್ನೊಂದು ಶಂಕುವನ್ನು ನೆಡಬೇಕು. ಈ ಎರಡೂ ಶಂಕುಗಳನ್ನು ಸೇರಿಸಿ **ಪೃಷ್ಠ್ಯ**ವೆನಿಸಿಕೊಳ್ಳುವ ಹಗ್ಗವನ್ನು ಬಿಗಿಯಬೇಕು, ಮೊದಲನೆಯ ಶಂಕುವಿನ ಉತ್ತರ ಮತ್ತು ದಕ್ಷಿಣಗಳಲ್ಲಿ ೧೫ ಪ್ರಕ್ರಮಗಳ ದೂರದಲ್ಲಿ ಒಂದೊಂದು ಶಂಕುವನ್ನೂ, ಎರಡನೆಯ ಶಂಕುವಿಗೂ ದಕ್ಷಿಣೋತ್ತರಗಳಲ್ಲಿ ೧೨ ಪ್ರಕ್ರಮಗಳದೂರದಲ್ಲಿ ಒಂದೊಂದು ಶಂಕುವನ್ನೂ ನೆಡಬೇಕು. ಹೀಗೆ ಮಹಾವೇದಿಯ ಒಟ್ಟು ಉದ್ದವು ೩೬ ಪ್ರಕ್ರಮಗಳೂ, **ಶ್ರೋಣಿ** ಭಾಗದ ಅಂದರೆ ಪಶ್ಚಿಮಭಾಗದ ಅಳತೆಯು ೩೦ ಪ್ರಕ್ರಮಗಳೂ, **ಅಂಸ** ಭಾಗದ ಅಂದರೆ ಪೂರ್ವಭಾಗದ ಅಳತೆಯು ೨೪ ಪ್ರಕ್ರಮಗಳೂ ಇರುತ್ತವೆ. ಮಹಾವೇದಿಯ ಸುತ್ತಲೂ ಹಗ್ಗವೊಂದನ್ನು ಕಟ್ಟಬೇಕು. ದರ್ಶಪೂರ್ಣಮಾಸದಲ್ಲಿ ವೇದಿಗೆ ಮಾಡುವಂತೆ ಎಲ್ಲಾ ಸಂಸ್ಕಾರಗಳೂ ಮಹಾವೇದಿಗೆ ನಡೆಯಬೇಕು. ಈ ಮಹಾವೇದಿಯ ಪೂರ್ವದ ಅಂಚಿನಲ್ಲಿ, ಆಯಾಕಾರವಾದ ಎತ್ತರವಾದ ವೇದಿಕೆಯೊಂದು ರಚಿತವಾಗಬೇಕು. ಇದಕ್ಕೆ ಉತ್ತರವೇದಿ ಎನ್ನುತ್ತಾರೆ. ಈ ಉತ್ತರವೇದಿಯ ಶ್ರೋಣಿಭಾಗವು ಹತ್ತು ಪದಗಳೂ, ಅಂಸಭಾಗವು ಎಂಟು ಪದಗಳೂ ಇರಬೇಕೆಂದು ಕೆಲವರೂ, ಹತ್ತು ಪದಗಳ ಚೌಕವೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. **ಚಾತ್ವಾಲ**ವೆಂಬ ಸಣ್ಣ ಹಳ್ಳವು ಮಹಾವೇದಿಯ ಎಡಭುಜದ ಉತ್ತರಕ್ಕೆ, ಪಶ್ಚಿಮದಕಡೆಗೆ, ಸುಮಾರು ಒಂದೂವರೆಪದಗಳಷ್ಟು (ಒಂದು ಪ್ರಕ್ರಮವೆಂತಲೂ ಒಂದು ಮತ) ದೂರದಲ್ಲಿರುತ್ತದೆ. **ಉತ್ಕಾರ**ವೆಂಬುದು—ಇದರ ಸಮೀಪದಲ್ಲಿಯೇ ಆಗ್ನೀಧ್ರನು ಕುಳಿತುಕೊಳ್ಳುವುದು— ಈ ಚಾತ್ವಾಲದ ಪಶ್ಚಿಮಕ್ಕೆ ಹನ್ನೆರಡು ಪ್ರಕ್ರಮಗಳಷ್ಟು ದೂರದಲ್ಲಿ, ಮಹಾವೇದಿಯ ಅಂಚಿನಿಂದ ೧ ಪ್ರಕ್ರಮಬಿಟ್ಟು ಇರುತ್ತದೆ. ಇದು ಸುಮಾರು ಎರಡು ಪದಗಳು ಅಳತೆಯುಳ್ಳದು. ವೇದಿಗೆ ಓಡಾಡುವ ದಾರಿಯು ಚಾತ್ವಾಲ ಮತ್ತು ಉತ್ಕರಗಳ ನಡುವೆ ಹಾದುಹೋಗುತ್ತವೆ. ಉತ್ತರ ವೇದಿಯು **ಸ್ಫ್ಯ** (ಯಾವುದೋ ಒಂದು ಪವಿತ್ರವಾದ ಪ್ರಾಣಿಯ ಮೂಳೆ) ಅಥವಾ ಪಿಕಾಶಿಯಿಂದ ಸಿದ್ಧಗೊಳಿಸಲ್ಪಡುತ್ತದೆ ಅಂದರೆ, ನೆಲವನ್ನು ಅಗೆದು, ಮಣ್ಣು ಹೆಂಟೆಗಳನ್ನು ಒಡೆದು ಪುಡಿಮಾಡಿ ಬೇರು ಮುಂತಾದವುಗಳನ್ನು ತೆಗೆಯುತ್ತಾರೆ. ಇದರ ಮಧ್ಯದಲ್ಲಿ **ನಾಭಿ** ಎಂಬ ಚಚ್ಚೌಕವಾದ ಸಣ್ಣರಂಧ್ರವನ್ನು ಮಾಡಿರುತ್ತಾರೆ. ಈ ದಿನವೆಲ್ಲವೂ ವೇದಿಯಮೇಲೆ ಉದುಂಬರ ಅಥವಾ ಪ್ಲಕ್ಷದ ಶಾಖೆಗಳಿಂದ ಮುಚ್ಚಿರುತ್ತಾರೆ.

ಮೂರನೆಯ ದಿವಸ, ಬೆಳಗಿನ ಮತ್ತು ಮಧ್ಯಾಹ್ನದ ಪ್ರವರ್ಗ್ಯ ಮತ್ತು ಉಪಸತ್ತುಗಳನ್ನು ಪ್ರಾತಃಕಾಲದಲ್ಲಿಯೇ ಮುಗಿಸಿಬಿಡುತ್ತಾರೆ. **ಪ್ರವರ್ಗ್ಯ**ದ **ಉದ್ವಾಸನಾ** ನಂತರ, ಆಹವನೀಯದಿಂದ ಉತ್ತರವೇದಿಗೆ ಅಗ್ನಿಯನ್ನು ತರುತ್ತಾರೆ. ಇದಕ್ಕೆ ಅಗ್ನಿಪ್ರಣಯನವೆನ್ನುತ್ತಾರೆ. ಹೀಗೆ ತರಲ್ಪಟ್ಟು, **ನಾಭಿ**ಯಲ್ಲಿ ಸ್ಥಾಪಿಸಲ್ಪಟ್ಟ ಅಗ್ನಿಯೇ ಸೋಮಯಾಗಕಾಲದಲ್ಲಿ ಆಹವನೀಯಾಗ್ನಿಯಾಗಿ ಪರಿಣತವಾಗುತ್ತದೆ ಮತ್ತು ಮೊದಲಿನ ಆಹವನೀಯವು ಗಾರ್ಹಪತ್ಯವಾಗಿಯೂ ಭಾವಿಸಲ್ಪಡುತ್ತದೆ. ದರ್ಭೆ, ಸಮಿತ್ತು ಮತ್ತು ವೇದಿಗಳನ್ನು ಮೂರುಬಾರಿ ನೀರಿನಿಂದ ಪ್ರೋಕ್ಷಣೆಮಾಡಿ, ಆ ದರ್ಭೆಯನ್ನು ಪ್ರಾಗ್ರವಾಗಿ ವೇದಿ ಯ

ಮೇಲೆ ಹರಡುತ್ತಾರೆ. ಅಗ್ನಿಶಾಲೆಯಿಂದ ತೊಳೆದು ಶುದ್ಧಿಮಾಡಿದ ಎರಡು ಗಾಡಿಗಳನ್ನೂ (ನೊಗಗಳು ಹೊರತಾಗಿ) ತಂದು, ಪೃಷ್ಠ್ಯದ ದಕ್ಷಿಣೋತ್ತರಗಳಲ್ಲಿ, ಪೃಷ್ಠ್ಯದಿಂದ ಒಂದುಮೊಳ ಬಿಟ್ಟು ನಿಲ್ಲಿಸುತ್ತಾರೆ. ದಕ್ಷಿಣದ ಗಾಡಿಯು ಉತ್ತರದ ಗಾಡಿಗಿಂತ ಸ್ವಲ್ಪ ದೊಡ್ಡದು. ಎರಡರ ಮೂಕಿಗಳೂ ಪೂರ್ವಾಭಿಮುಖವಾಗಿರಬೇಕು. ಈ ಯಾಗದಲ್ಲಿ ಹವಿಸ್ಸಾದ ಸೋಮವನ್ನು ಹೇರಲು ಉಪಯೋಗಿಸುವುದರಿಂದ, ಇವುಗಳಿಗೆ **ಹವಿರ್ಧಾನ**ಗಳೆಂದು ಹೆಸರು. ದಕ್ಷಿಣದ ಗಾಡಿಗೆ ಅಧ್ವರ್ಯುವೂ ಉತ್ತರದ ಗಾಡಿಗೆ ಪ್ರತಿಪ್ರಸ್ಥಾತನೂ ಮೇಲ್ವಿಚಾರಕರು. ಈ ಗಾಡಿಗಳ ಮೇಲೆ ಹುಲ್ಲು ಅಥವಾ ಬಿದಿರುಹಲ್ಲೆಗಳಿಂದ ಮಾಡಿದ ಚಾಪೆಗಳನ್ನು ಹೊದಿಸುತ್ತಾರೆ. ಈ ಎರಡು ಗಾಡಿಗಳನ್ನು ಮಧ್ಯದಲ್ಲಿಟ್ಟುಕೊಂಡು ಒಂದು ಮಂಟಪವನ್ನು ಕಟ್ಟುತ್ತಾರೆ. ಗಾಡಿಗಳ ಮುಂದೆ ಆರು ಕಂಬಗಳೂ, ಹಿಂದೆ ಆರುಕಂಬಗಳೂ ನೆಡಲ್ಪಡುತ್ತವೆ. ಈ ಕಂಬಗಳನ್ನು ಸೇರಿಸುವಂತೆ ಎರಡು ಉದ್ದವಾದ ಬೊಂಬುಗಳನ್ನು ದಕ್ಷಿಣೋತ್ತರವಾಗಿ ಬಿಗಿಯುತ್ತಾರೆ. ಈ ಮಂಟಪದ ಮುಂಭಾಗದಲ್ಲಿ ಹುಲ್ಲಿನಿಂದ ಹೆಣೆದು ಮಾಡಿದ ಮಾಲೆಯೊಂದನ್ನು ತೂಗುಬಿಡುತ್ತಾರೆ. ಇದಕ್ಕೆ **ರರಾಟೀ** ಎಂದು ಹೆಸರು. ಯಜಮಾನಿಯೂ ಮತ್ತು ಪ್ರತಿಪ್ರಸ್ಥಾತನೂ ಸೇರಿ, ಗಾಡಿಗಳ ಅಚ್ಚುಗಳಿಗೆ ಕೆಲವು ಸಂಸ್ಕಾರಗಳನ್ನು ಮಾಡುತ್ತಾರೆ. ಗಾಡಿಗಳಿಗೆ ಸಂಬಂಧಿಸಿದ ಇನ್ನೂ ಅನೇಕ ಸಂಸ್ಕಾರಗಳು ಆಪ. XI ೭-೮ ಮತ್ತು ಕಾತ್ಯಾ. VIII-೪ ರಲ್ಲಿಯೂ ಹೇಳಲ್ಪಟ್ಟಿವೆ. ಈ ಹವಿರ್ಧಾನ ಮಂಟಪವು ಪೂರ್ವದಲ್ಲಿ ಪಶ್ಚಿಮದ ಕಡೆಗಿಂತ ಎತ್ತರವಾಗಿರಬೇಕು ಮತ್ತು ಪೂರ್ವಪಶ್ಚಿಮಗಳೆರಡರಲ್ಲಿಯೂ ಒಂದೊಂದು ಬಾಗಿಲು ಇರಬೇಕು. ಈ ಮಂಟಪದೊಳಗೆ ಯಾರೂ ಭೋಜನವಾಗಲೀ ಇಳಾಭಕ್ಷಣವಾಗಲೀ ಮಾಡಬಾರದು. ದಕ್ಷಿಣದ ಗಾಡಿಯ ಕೆಳಗಡೆ, ಅಚ್ಚಿಗೆ ಸಮೀಪವಾಗಿ, ಅಧ್ವರ್ಯುವು ನಾಲ್ಕು ಹಳ್ಳಗಳನ್ನು ಮಾಡುತ್ತಾನೆ. ಒಂದೊಂದು ಹಳ್ಳವೂ ಸುಮಾರು ಒಂದು ಗೇಣು ವ್ಯಾಸವುಳ್ಳದ್ದು. ಒಂದೊಂದು ಸಾಲಿನಲ್ಲಿ ಎರಡೆರಡು, ಹೀಗೆ ನಾಲ್ಕು ರಂಧ್ರಗಳನ್ನು ಸೇರಿಸುವಂತೆ, ನೆಲದ ಒಳಗಡೆ ದಾರಿಮಾಡಬೇಕು. ಎಲ್ಲಾ ಹಳ್ಳಗಳೂ ಒಂದು ಮೊಳ ಆಳ ಇರಬೇಕು. ಈ ರಂಧ್ರಗಳನ್ನು ಮಾಡುವುದಕ್ಕೂ ಒಂದು ಕ್ರಮವಿದೆ. ಮೊದಲು ಆಗ್ನೇಯ, ನಂತರ ವಾಯವ್ಯ, ನೈಋತ್ಯ, ಕಡೆಯದಾಗಿ ಈಶಾನ್ಯ ಅಥವಾ ವಾಯವ್ಯ, ಆಗ್ನೇಯ, ನೈಋತ್ಯ ಮತ್ತು ಈಶಾನ್ಯ ಈ ಮೂಲೆಗಳಲ್ಲಿ ಹಳ್ಳಗಳನ್ನು ತೆಗೆಯಬೇಕು. ಯಾವುದೇ ಕ್ರಮವನ್ನನುಸರಿಸಿದರೂ ಈಶಾನ್ಯದ ಮೂಲೆ ಕೊನೆಗೆ ಬರಬೇಕು. ಈ ಹಳ್ಳಗಳನ್ನು ತೆಗೆಯುವಾಗ, ಒಂದೊಂದುಸಲವೂ 'ರಕ್ಷೋಹಣೊ' ಎಂಬ ಮಂತ್ರವನ್ನು ಉಚ್ಚರಿಸಬೇಕು.

ಈ ಹಳ್ಳಗಳ ಮೇಲೆ ದರ್ಭೆಗಳನ್ನು ಹರಡಿ, ಅದರಮೇಲೆ ಎರಡು ಮರದ ಹಲಗೆಗಳನ್ನು (**ಅಧಿಷವಣ ಫಲಕಗಳು**) ಇಟ್ಟು ಈ ಹಲಗೆಗಳ ಮೇಲೆ ವೃಷಭದ ಕೆಂಪುಚರ್ಮವೊಂದನ್ನು (**ಅಧಿಷವಣ ಚರ್ಮ**) ಹಾಸಬೇಕು. ಈ ಚರ್ಮದ ಮೇಲೆ ನಾಲ್ಕು ಕಲ್ಲುಗಳನ್ನು ಇಟ್ಟು, ಸೋಮರಸವನ್ನು ತೆಗೆಯಬೇಕು. ಕುಟ್ಟುವಾಗ ಹುಟ್ಟುವಧ್ವನಿಯು, ಕೆಳಗಡೆ ಹಳ್ಳಗಳು ಇರುವುದರಿಂದ, ಪ್ರತಿಧ್ವನಿತವಾಗುತ್ತದೆ. ಈರೀತಿ ಪ್ರತಿಧ್ವನಿಕೊಡುವುದರಿಂದ, ಈ ಹಳ್ಳಗಳಿಗೆ **ಉಪರವ**ಗಳೆಂದು ಹೆಸರು. ಅಧ್ವರ್ಯು ಮತ್ತು ಯಜಮಾನರು ಕ್ರಮವಾಗಿ ಆಗ್ನೇಯ ವಾಯುವ್ಯ ರಂಧ್ರಗಳಲ್ಲಿ ತಮ್ಮ ಬಲಗೈಯನ್ನು ಹಾಕಿ, ನೆಲದಒಳಗೆ ಒಬ್ಬರ ಕೈಯನ್ನು ಒಬ್ಬರು ಮುಟ್ಟುತ್ತಾ, ಅಧ್ವರ್ಯುವು ಯಜಮಾನನನ್ನು ಉದ್ದೇಶಿಸಿ ಹೀಗೆ ಪ್ರಶ್ನೆಮಾಡಬೇಕು. "ಯಜಮಾನನೆ, ಅಲ್ಲೇನಿದೆ?" ಯಜಮಾನನು "ಸುಖವು" ಎಂದು ಉತ್ತರಹೇಳಬೇಕು. ಆಗ ಅಧ್ವರ್ಯುವು ಮೆಲ್ಲಗೆ "ಅದು ನಮ್ಮಿಬ್ಬರಿಗೂ ಸೇರಲಿ" ಎನ್ನಬೇಕು. ಎರಡನೆಯಸಲ, ನೈಋತ್ಯ ಈಸಾನ್ಯರಂಧ್ರಗಳಲ್ಲಿ ಕೈಗಳನ್ನು ಹಾಕಿ, ಒಬ್ಬರಕೈಯನ್ನೊಬ್ಬರು ಮುಟ್ಟುತ್ತಾ, ಮೊದಲು ಯಜಮಾನನು ಪ್ರಶ್ನೆಮಾಡಬೇಕು. ಅಧ್ವರ್ಯುವು ಉತ್ತರಕೊಡಬೇಕು. ಆಗ ಯಜಮಾನನು ಮೆಲ್ಲಗೆ "ಅದು ನನಗೆ ಉಂಟಾಗಲಿ" ಎನ್ನಬೇಕು. ಈಗ ಆಗ್ನೇಯದಿಂದ ಮೊದಲುಮಾಡಿಕೊಂಡು, "ರಕ್ಷೋಹಣೋ...." ಮಂತ್ರವನ್ನುಚ್ಚರಿಸುತ್ತಾ, ಉಪರವಗಳನ್ನು ಪ್ರೋಕ್ಷಿಸಬೇಕು. ಉಳಿದ ಪ್ರೋಕ್ಷಣೀಜಲವನ್ನು ಉಪರವಗಳೊಳಗೆ ಚೆಲ್ಲಿ, ಯೂಪರಂಧ್ರಗಳೊಳಗೆ ಹರಡುವಂತೆ, ಉಪರವಗಳೊಳಗೂ ಧರ್ಭೆಗಳನ್ನು ಹರಡಿ, ಸುವರ್ಣನಾಣ್ಯವನ್ನು ಹಾಕಿ, ಆಜ್ಯಾಹುತಿಯನ್ನು ಕೊಡಬೇಕು.

ಉಪರವಗಳನ್ನು ಅಗಿಯುವಾಗ ಬಂದ ಮಣ್ಣಿನ ಜೊತೆಗೆ ಸ್ವಲ್ಪ ಮರಳನ್ನು ಸೇರಿಸಿ, ಕಲಸಿ, ಉಪರವಗಳು, ಅಧಿಷವಣ ಚರ್ಮ ಅಥವಾ **ಉಪಸ್ತಂಭನಕ್ಕೆ** ಪೂರ್ವದಲ್ಲಿ ಚತುಷ್ಕೋಣಾಕಾರದ ಜಗುಲಿಯೊಂದನ್ನು ಸೋಮಪಾತ್ರೆಗಳನ್ನು ಇಡುವುದಕ್ಕಾಗಿ ರಚಿಸಬೇಕು. ಹವಿರ್ಧಾನಮಂಟಪದಲ್ಲಿ ಸುಲಭವಾಗಿ ಓಡಾಡಲು ಅವಕಾಶವಿರುವಂತೆ ಈ ಜಗುಲಿಯನ್ನು ರಚಿಸಬೇಕು.

ಉತ್ತರಕ್ಕೆ ಪಶ್ಚಿಮದಲ್ಲಿ, ಸುಮಾರು ಆರು ಪ್ರಕ್ರಮಗಳ ದೂರದಲ್ಲಿ (ಅಂದರೆ, ಮಹಾವೇದಿಯ ಉತ್ತರದಕಡೆ, ಸುಮಾರು ಅದರ ಮಧ್ಯಭಾಗದಲ್ಲಿ) ಅಗ್ನೀಧ್ರನಿಗಾಗಿ ಒಂದು ಶಾಲೆ ರಚಿತವಾಗಬೇಕು. ಈ ಶಾಲೆಯ ಅರ್ಧಭಾಗವು ಮಹಾವೇದಿಯ ಒಳಗಡೆಯೂ, ಉಳಿದರ್ಧವು ಹೊರಗಡೆಯೂ ಇರುತ್ತದೆ. ಈ ಶಾಲೆಗೆ ನಾಲ್ಕುಕಂಬಗಳು. ಇದರ ದೂಲಗಳು ಪೂರ್ವಪಶ್ಚಿಮವಾಗಿರಬೇಕು. ದಕ್ಷಿಣದಕಡೆ ಮಾತ್ರ ಒಂದು ಭಾಗಿಲು. ಉಳಿದ ಎಲ್ಲಕಡೆಗಳೂ ಚಾಪೆಗಳಿಂದ ಮುಚ್ಚಿರಬೇಕು. ಸರಿಯಾಗಿ ಕಟ್ಟಿದರೆ, ಇದರ ಪಶ್ಚಿಮದ ಅಂಚೂ, ಹವಿರ್ಧಾನಮಂಟಪದ ಪಶ್ಚಿಮದ ಅಂಚೂ ಒಂದೇ ಶ್ರೇಣಿಯಲ್ಲಿರಬೇಕು ಮತ್ತು ಅಗ್ನೀಧ್ರಶಾಲೆಯು ಐದು ಅರತ್ನಿಗಳ ಒಂದು ಚಚ್ಚೌಕವಾಗಬೇಕು. (ಕಾತ್ಯಾ. VIII. ೬.೧೩).

ಮಹಾವೇದಿಯ ಪಶ್ಚಿಮದ ಅಂಚಿನಿಂದ ಒಳಗಡೆ ಮೂರು ಪ್ರಕ್ರಮಗಳಷ್ಟು ದೂರದಲ್ಲಿ ಸದಸ್ಸು ರಚಿತವಾಗಬೇಕು. ಇದರ ಅಗಲ ಏಳು ಅರತ್ನಿಗಳು, ಉದ್ದ (ದಕ್ಷಿಣೋತ್ತರವಾಗಿ) ೨೭ ಅರತ್ನಿಗಳು ಅಥವಾ ಎಲ್ಲಾ ಋತ್ವಿಜರು, ಅವರ ಧಿಷ್ಣ್ಯಗಳು (ಆಸನಗಳು) ಮತ್ತು ಪ್ರಸರ್ಪಕ (ಸಹಾಯಕ) ಮತ್ತು ಪ್ರೇಕ್ಷಕರು, ಎಲ್ಲರಿಗೂ ಸಾಕಾಗುವಷ್ಟು, ಈ ಸದಸ್ಸಿನ ಮಧ್ಯದಲ್ಲಿ, ಮಹಾವೇದಿಯ ಪೃಷ್ಠ್ಯದ ದಕ್ಷಿಣಕ್ಕೆ ಒಂದು ಪ್ರಕ್ರಮದೂರದಲ್ಲಿ, ಯಜಮಾನನಷ್ಟು ಎತ್ತರವಾದ ಉದುಂಬರದಿಂದ ಮಾಡಿದ ಕಂಬವೊಂದನ್ನು ನೆಡಬೇಕು. **ಶಕಲಕ್ಕೆ** ಸಂಬಂಧಿಸಿದ ಸಂಸ್ಕಾರಗಳು ಹೊರತು, ಮಿಕ್ಕ ಎಲ್ಲಾ ಸಂಸ್ಕಾರಗಳೂ, ಯೂಪಸ್ತಂಭ ಮತ್ತು ಅದರ ವಿವರಗಳಿಗೆ ನಡೆದಂತೆ ನಡೆಯಬೇಕು. ಈ ಔದುಂಬರಿಗೆ ಪೂರ್ವದಕಡೆ ಕಿವಿಯ ಆಕಾರದ ಒಂದು ಚೂರು ಚಾಚಿಕೊಂಡಿರಬೇಕು. ಜುಹುವಿನಿಂದ ಸುವರ್ಣನಾಣ್ಯವನ್ನು ಇದರಮೇಲಿಟ್ಟು, ನೆಲಕ್ಕೆ ತೊಟ್ಟಿಕ್ಕುವಂತೆ ಆಜ್ಯವನ್ನು ಸುರಿಯಬೇಕು.

ಈ ಔದುಂಬರಿಯೇ ಸದಸ್ಸಿನ ಎಲ್ಲಾ ಕಂಬಗಳಿಗಿಂತ ದಪ್ಪವಾದುದು. ಸದಸ್ಸಿನ ಅಂಚಿನಲ್ಲಿರುವ ಕಂಬಗಳು ಯಜಮಾನನ ಸೊಂಟ ಮಟ್ಟಕ್ಕೆ ಮಾತ್ರವೂ, ಮಧ್ಯದಲ್ಲಿರುವ ಕಂಬಗಳು ಔದುಂಬರಿಯಷ್ಟೆ ಎತ್ತರವಿರುತ್ತವೆ. ಈ ಕಂಬಗಳ ಮೇಲೆ ದಕ್ಷಿಣೋತ್ತರವಾಗಿಯೂ ಪೂರ್ವ-ಪಶ್ಚಿಮವಾಗಿಯೂ ಸರಳುಗಳನ್ನು ಇಟ್ಟು, ಮಧ್ಯದ ಮೂರನೆಯ ಒಂದು ಭಾಗದ ಮೇಲೆ ಕೊನೆಯ ಭಾಗವು ಉತ್ತರಕ್ಕಿರುವಂತೆ ಮೂರು ಚಾಪೆಗಳನ್ನೂ, ಈ ಚಾಪೆಗಳ ಉತ್ತರ ಮತ್ತು ದಕ್ಷಿಣಕ್ಕೆ ಔದುಂಬರಿಯ ಕಡೆಗೆ ಕೊನೆಯ ಭಾಗ ಬರುವಂತೆ ಮೂರು ಮೂರು ಚಾಪೆಗಳನ್ನೂ ಹರಡಬೇಕು. ಒಟ್ಟು ಒಂಬತ್ತು ಚಾಪೆಗಳನ್ನೂ ಸೇರಿಸಿ ಚೆನ್ನಾಗಿ ಹೊಲಿಯಬೇಕು. ಸುತ್ತಲೂ ಪರದೆಗಳಿರಬೇಕು. ಹವಿರ್ಧಾನಮಂಟಪದಂತೆ ಇದಕ್ಕೂ ಪೂರ್ವ-ಪಶ್ಚಿಮಗಳಲ್ಲೊಂದೊಂದರಂತೆ ಎರಡು ಬಾಗಿಲುಗಳು. ಉಪರವ ಮತ್ತು ಸದಸ್ಸುಗಳ ರಚನೆಯಲ್ಲಿ ಕ್ರಮ ವ್ಯತ್ಯಾಸಕ್ಕೆ ಅವಕಾಶವಿದೆ. ಪ್ರಾಗ್ವಂಶ, ಸದಸ್ಸು ಮತ್ತು ಹವಿರ್ಧಾನಗಳಲ್ಲಿ ಯಾವುದರಲ್ಲಿ ಕುಳಿತವರಿಗೂ ಎಲ್ಲವೂ ಕಾಣಿಸುವ ರೀತಿಯಲ್ಲಿ ಬಾಗಿಲುಗಳನ್ನಿಡಬೇಕು.

ಈಗ ಎಂಟು ಆಸನಗಳನ್ನು (ಧಿಷ್ಣ್ಯ) ಸಿದ್ಧಗೊಳಿಸಬೇಕು. ಅಗ್ನೀಧ್ರ ಶಾಲೆಯಲ್ಲಿ ಮಹಾವೇದಿಗೂ ಆಸನಕ್ಕೂ ಮಧ್ಯೆ ಓಡಾಡುವುದಕ್ಕೆ ಅವಕಾಶವಿರುವಂತೆ ಅಗ್ನೀಧ್ರನಿಗಾಗಿ ಒಂದು ಆಸನ. ಸದಸ್ಸಿನಲ್ಲಿ ಆರು ಆಸನಗಳು. ಇವುಗಳೆಲ್ಲವೂ ಸದಸ್ಸಿನ ಪೂರ್ವಭಾಗದಲ್ಲಿ, ಆಸನಗಳ ಪೂರ್ವದ ಕಡೆಗೆ ಸಂಚಾರಕ್ಕೆ ಬೇಕಾದಷ್ಟು ಅವಕಾಶಬಿಟ್ಟು ರಚಿಸಬೇಕು. ಈ ಆಸನಗಳಿಗೆ ಬೇಕಾಗುವ ಮಣ್ಣು ಚಾತ್ವಾಲದಿಂದಲೇ ತೆಗೆದುಕೊಳ್ಳಬೇಕು. ಇದರ ಮೇಲೆ ಮರಳನ್ನು ಹರಡಬೇಕು. ಈ ಕೆಲಸವು ಅಧ್ವರ್ಯುವಿನದು. ಅವನು ಆಸನವನ್ನು ರಚಿಸುವಾಗ 'ಸ್ಫ್ಯ'ದಿಂದ ಅವನನ್ನು ಯಜಮಾನನು ಮುಟ್ಟುತ್ತಿರಬೇಕು. ಆಸನಗಳು ಗುಂಡಗೆ ಅಥವಾ ಚಚ್ಚೌಕವಾಗಿರಬೇಕು. ಸುಮಾರು ೧೮ ಅಂಗುಲ ವ್ಯಾಸ ಇಲ್ಲವೇ ೧೮ ಅಂಗುಲ ಚೌಕ ಇರಬೇಕು.

ಸದಸ್ಸಿನ ಪೂರ್ವ ಬಾಗಿಲಿನಿಂದ ಒಂದು ಪ್ರಕ್ರಮದ ಅಂತರದಲ್ಲಿ 'ಪೃಷ್ಠ್ಯ'ಕ್ಕೆ ತಗುಲಿಕೊಂಡಿರುವಂತೆ ಅದರ ಉತ್ತರಕ್ಕೆ ಅಥವಾ (ಅಪ. XI-14-4) ಅದರ ಮೇಲೆಯೇ ಅಧ್ವರ್ಯುವು ಪಶ್ಚಿಮಾಭಿಮುಖನಾಗಿ ಕುಳಿತು, ಹೋತೃವಿಗಾಗಿ ಒಂದು 'ಧಿಷ್ಣ್ಯ'ವನ್ನು ಸಿದ್ಧಗೊಳಿಸುತ್ತಾನೆ. ಇದಕ್ಕೆ ಉತ್ತರದಲ್ಲಿ ಕ್ರಮವಾಗಿ ಬ್ರಾಹ್ಮಣಾಚ್ಛಂಸೀ, ಪೋತಾ, ನೇಷ್ಟಾ ಮತ್ತು ಅಚ್ಛಾವಾಕ ಇವರುಗಳಿಗಾಗಿ ಸಮಾನ ಅಂತರದಲ್ಲಿ ನಾಲ್ಕು ಧಿಷ್ಣ್ಯಗಳು. ಇದರಲ್ಲಿ ಅಚ್ಛಾವಾಕನ ಆಸನವು ಇತರ ಆಸನಗಳಿಗಿಂತ ನಾಲ್ಕು ಅಂಗುಲ ದೊಡ್ಡದು. ಹೋತೃವಿನ ಧಿಷ್ಣ್ಯಕ್ಕೆ ದಕ್ಷಿಣದಲ್ಲಿ, ಅಂದರೆ ಔದುಂಬರಿಯ ಆಗ್ನೇಯಕ್ಕೆ ಇರುವಂತೆ, ಹೋತ್ರಾಸನಕ್ಕೆ ನಾಲ್ಕುವರೆ ಅರತ್ನಿಗಳ ದೂರದಲ್ಲಿ ಮೈತ್ರಾವರುಣ ಅಥವಾ 'ಪ್ರಶಾಸ್ತಾ' ಋತ್ವಿಜನಿಗಾಗಿ ಉತ್ತರಾಭಿಮುಖನಾಗಿ ಕುಳಿತು, ಒಂದು ಧಿಷ್ಣ್ಯವನ್ನು ಮಾಡಬೇಕು. ಹೋತ್ರಾಸನವನ್ನು ಮಾಡಿದ ಕೂಡಲೇ ಮೈತ್ರಾವರುಣಾಸನವನ್ನು ಮಾಡಬೇಕು. ಆಗ್ನೀಧ್ರನಿಂದ ಮೊದಲುಮಾಡಿಕೊಂಡು, ಮೈತ್ರಾವರುಣನ ವರೆಗಿನ ಏಳು ಋತ್ವಿಜರನ್ನೂ 'ಏಳು ಜನ ಹೊತೃ'ಗಳೆಂದು ತೈ. ಬ್ರಾ. ೨-೩-೬ ಮತ್ತು ಸಾಯಣಭಾಷ್ಯದಲ್ಲಿ ವ್ಯವಹಾರವಿದೆ. (೧-೨-೨೬) ಆಶ್ವಲಾಯನರು ಇವನ್ನು ಒಪ್ಪುವುದಿಲ್ಲ. ಸದಸ್ಸಿಗೆ ಹೊರಗಡೆ ಆಗ್ನೀಧ್ರಶಾಲೆಗೆ ಎದುರಾಗಿ ಮಹಾವೇದಿಯ ದಕ್ಷಿಣದ ಕಡೆ, ಮಹಾವೇದಿಯ ಒಳಗಡೆ ಅರ್ಧವೂ ಹೊರಗಡೆ ಅರ್ಧವೂ ಇರುವಂತೆ, 'ಮಾರ್ಜಾಲೀಯ' ವೆಂಬ ಶಾಲೆ ರಚಿತವಾಗಬೇಕು. ಇದರ ಮಧ್ಯದಲ್ಲಿ, ಅಧ್ವರ್ಯುವು ದಕ್ಷಿಣಾಭಿಮುಖನಾಗಿ ಕುಳಿತು 'ಮಾರ್ಜಾಲೀಯ ಧಿಷ್ಣ್ಯ'ವನ್ನು ಕಟ್ಟಬೇಕು. ಈ ಮಾರ್ಜಾಲೀಯ ಶಾಲೆಗೆ ಉತ್ತರದ ಕಡೆಗೆ ಮಾತ್ರ ಒಂದು ಬಾಗಿಲು ಇರುತ್ತದೆ. ಒಟ್ಟು ಎಂಟು ಆಸನಗಳಲ್ಲಿ ಆರು ಆಸನಗಳನ್ನು ರಚಿಸುವಾಗ ಅಧ್ವರ್ಯುವು ಉತ್ತರಾಭಿಮುಖನಾಗಿಯೂ, ಹೋತ್ರಾಸನ ಮತ್ತು ಮಾರ್ಜಾಲೀಯಾಸನಗಳನ್ನು ಕ್ರಮವಾಗಿ ಪಶ್ಚಿಮ ಮತ್ತು ದಕ್ಷಿಣಾಭಿಮುಖನಾಗಿಯೂ ಇರಬೇಕು. ಈ ಶಾಲೆಗಳು ಮತ್ತು ಆಸನಗಳು ರಚಿತವಾದ ಮೇಲೆ ಋತ್ವಿಜರು ಆದಿಯಾಗಿ ಎಲ್ಲರೂ ಮಹಾವೇದಿಗೆ ಓಡಾಡುವಾಗ, ಚಾತ್ವಾಲ ಉತ್ಕರಗಳ ಮಧ್ಯದಲ್ಲಿರುವ ಅಥವಾ ಚಾತ್ವಾಲ ಮತ್ತು ಆಗ್ನೀಧ್ರಶಾಲೆಗಳ ಮಧ್ಯೆ ಇರುವ ದಾರಿಯನ್ನೇ ಉಪಯೋಗಿಸಬೇಕೆಂದು (ಸೋಮಸವನದ ದಿನದಲ್ಲಿ ಮಾತ್ರ ಪ್ರೇಕ್ಷಕರು ಎಲ್ಲಿಬೇಕಾದರೂ ಓಡಾಡಬಹುದೆಂದು ಕೆಲವರು) ನಿಯಮವಿದೆ.

ಉಪರವಗಳಮೇಲೆ, ಪೂರ್ವ ಅಥವಾ ಉತ್ತರಾಗ್ರವಾದ ಎಳೆಯ ದರ್ಭೆಗಳನ್ನು ಹರಡಿ, ಅವುಗಳ ಮೇಲೆ (ಉದುಂಬರ, ಪಲಾಶ ಅಥವಾ ಕಾರ್ಶ್ಮರ್ಯ) ಮರದ ಹಲಗೆಗಳೆರಡನ್ನು (ಚೆನ್ನಾಗಿ ನಯಮಾಡಿದ) ಮಧ್ಯೆ ಎರಡಂಗುಲ ಅವಕಾಶವಿರುವಂತೆ ಇಡಬೇಕು. ಹಲಗೆಗಳು ಒಂದು ಮೊಳ ಉದ್ದವಿರಬೇಕು. ತೊಳೆದು ಶುದ್ಧಿಮಾಡಿರಬೇಕು. ಪೂರ್ವದ ಅಂಚು ವೃತ್ತಾಕಾರವೆಂದು ಕೆಲವರೂ, ಎರಡು ಅಂಚುಗಳೂ ನೇರವಾಗಿರಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಒಂದಕ್ಕಿಂತ ಹೆಚ್ಚುದಿನಗಳಲ್ಲಿ ಸೋಮವನ್ನು ತೆಗೆಯುವುದಾದರೆ, ಈ ಹಲಗೆಗಳು ಬಿಗಿಯಾಗಿರುವಂತೆ ಅವುಗಳನ್ನು ಸೇರಿಸಿ ಮೊಳೆ ಹೊಡೆಯಬೇಕು. ನೆಲದ ಮೇಲೆ ಅಲುಗಾಡದಂತೆ ಇರುವುದಕ್ಕಾಗಿ, ಮುಂದುಗಡೆ ಎರಡೂ ಹಿಂದುಗಡೆ ಎರಡೂ, ಉತ್ತರಕ್ಕೆ ಒಂದು ಮತ್ತು ದಕ್ಷಿಣಕ್ಕೆ ಒಂದೂ, ಗೂಟಗಳನ್ನು ಹೊಡೆಯಬೇಕು. ಹಲಗೆಗಳಮಧ್ಯೆ ಇರುವ ಎರಡು ಅಂಗುಲ ಪ್ರದೇಶದಲ್ಲಿ, ಉಪರವಗಳಿಂದ ತೆಗೆದ ಮಣ್ಣನ್ನು ತುಂಬಬೇಕು. ಈ ಹಲಗೆಗಳಮೇಲೆ, ಹಿಂದೆಯೇ ಹೇಳಿದಂತೆ ಕೆಂಪುಬಣ್ಣದ ವೃಷಭಚರ್ಮವನ್ನು (ಅಭಿಷವಣ ಚರ್ಮ) ತಲೆಯಭಾಗ ಪೂರ್ವಕ್ಕಿರುವಂತೆ ಹಾಸಬೇಕು. ಇದರಮೇಲೆಯೇ ನಾಲ್ಕು (ಗ್ರಾವಾಣ) ಕಲ್ಲುಗಳನ್ನು ಇಡುವುದು. ಅಧ್ವರ್ಯುವಿನ ಆಜ್ಞೆಯಂತೆ (ಸತ್ಯಾ. ೭-೭ ರಂತೆ, ಉತ್ತರವೇದಿ, ಖರ, ಉಪರವಗಳು ಮತ್ತು ಧಿಷ್ಣ್ಯಗಳು ಹೊರತಾಗಿ) ಮಹಾವೇದಿಯ ಮೇಲೆಲ್ಲಾ ದರ್ಭೆಗಳನ್ನು ಹರಡುತ್ತಾರೆ ಮತ್ತು ಯಜಮಾನನು ವ್ರತಕ್ಷೀರದಲ್ಲಿ ಕಾಲುಭಾಗವನ್ನೇ ತೆಗೆದುಕೊಳ್ಳುತ್ತಾನೆ.

ಈಗ ಅಗ್ನಿ ಮತ್ತು ಸೋಮರಿಗೆ ಸೇರಿಸಿ ಒಂದು ಪಶುಬಲಿ ಪ್ರಾರಂಭವಾಗುತ್ತದೆ. 'ನಿರೂಢಪಶುಬಂಧ'ದಲ್ಲಿ ನಡೆಯುವಂತೆಯೇ ಇಲ್ಲಿಯೂ ಎಲ್ಲಾ ಕಾರ್ಯಕಲಾಪಗಳೂ ನಡೆಯುತ್ತವೆ. ಪರಿಸ್ತರಣ, ಪಾತ್ರಾಸಾದನ, ಪ್ರೋಕ್ಷಣ ಮೊದಲಾದವುಗಳು

ಜರುಗುತ್ತವೆ. 'ವಿಕಂಕತ'ದಿಂದ ಮಾಡಿದ 'ಜುಹು'ವಿನಂತಹ ಒಂದು ಸೌಟು ಮಾತ್ರ ಇಲ್ಲಿ ಹೆಚ್ಚಿಗೆ ಬೇಕಾಗುತ್ತದೆ. ಇದಕ್ಕೆ 'ಪ್ರಚರಣೀ' ಎಂದು ಹೆಸರು. ಪ್ರತಿಪ್ರಸ್ಥಾತನು (ನೇಷ್ಟೃ ಎಂದು ಸತ್ಯಾ. ೭-೮) ಪತ್ನೀಶಾಲೆಯಿಂದ ಯಜಮಾದಿಯನ್ನು ಕರತರುತ್ತಾನೆ. ಯಜಮಾನನ ಜೊತೆಯಲ್ಲೇ ಇರುವ ಇತರ ಬಂಧುಗಳೂ ಬರುತ್ತಾರೆ. ಎಂದಿನಂತೆ ಅಧ್ವರ್ಯುವನ್ನು ಯಜಮಾನನೂ, ಯಜಮಾನನನ್ನು ಪತ್ನಿಯೂ, ಆಕೆಯನ್ನು ಯಜಮಾನನ ಸೋದರರು ಮತ್ತು ಪುತ್ರರೂ ಮುಟ್ಟಿಕೊಂಡು ನಿಲ್ಲುತ್ತಾರೆ. ಇವರುಗಳ ಮೇಲೆ ಒಂದು ಹೊಸ ಬಟ್ಟೆಯನ್ನು ಹೊದಿಸುತ್ತಾರೆ. ಅಧ್ವರ್ಯುವು ಪ್ರಚರಿಣಿಯಿಂದ ಸೋಮವನ್ನು ಉದ್ದೇಶಿಸಿ, 'ವೈಸರ್ಜನ'ವೆಂಬ ಆಜ್ಯಾಹುತಿಯನ್ನು ಕೊಡುತ್ತಾನೆ (ಕಾತ್ಯಾ. VIII ೭, ೧ ಮತ್ತು ಆಪ. ೧೬-೧೫). ಅನಂತರ ಅಗ್ನಿ ಮತ್ತು ಸೋಮಗಳನ್ನು (ಪ್ರಣಯನ) ತರುವುದು. ಆಹವನೀಯದಲ್ಲಿ ಅಗ್ನಿಯನ್ನು ಹೊತ್ತಿಸಿ, ಉತ್ತರವೇದಿಗೆ ತರುತ್ತಾರೆ. ಇದರಂತೆ, ಸದಸ್ಸಿನಿಂದ ಆಚೆಗೆ ಇರುವ ಮಹಾವೇದಿಯ ಪ್ರದೇಶಕ್ಕೆ ನಾನಾಪಾತ್ರೆಗಳು ಮತ್ತು ಇತರ ಸಲಕರಣೆಗಳನ್ನೂ ಒಯ್ಯುತ್ತಾರೆ. ಪಶುಬಲಿ ಮತ್ತು ಮಾರನೆಯದಿನದ ಸೋಮಸವನಕ್ಕೆ ಅನುಕೂಲವಾದ ಸ್ಥಳಗಳಲ್ಲಿ ಇವುಗಳನ್ನು ಇಡುತ್ತಾರೆ. ಆಗ್ನೀಧ್ರಧಿಷ್ಣ್ಯದಲ್ಲಿ ಅಗ್ನಿಪ್ರತಿಷ್ಠಾಪನೆ, ಹವಿರ್ಧಾನಮಂಟಪದಲ್ಲಿರುವ ದಕ್ಷಿಣದ ಹವಿರ್ಧಾನ(ಗಾಡಿ)ದಲ್ಲಿರುವ ಕೃಷ್ಣಾಜಿನದ ಮೇಲೆ ಸೋಮಕಾಷ್ಠಗಳು, (ವಾಜ. ಸಂ. V-೩೯, ತೈ. ಸ. ೧-೩, ೪, ೨) "ಸವಿತೃದೇವನೇ, ಇದೋ ನಿನ್ನ ಸೋಮ...." ಎಂಬರ್ಥದ ಮಂತ್ರಪೂರ್ವಕವಾಗಿ, ಯಜಮಾನನು ಸೋಮವನ್ನು ದೇವತೆಗಳ ರಕ್ಷಣೆಗೆ ಒಪ್ಪಿಸುತ್ತಾನೆ. "ಅಗ್ನೇವ್ರತಪತೇ...." (ತೈ. ಸಂ. ೧ ೨. ೧೧. ೧., ವಾ. ಸಂ. ೫-೪೦) ಎಂಬ ಮಂತ್ರದಿಂದ, ಅಗ್ನಿಗೆ ಸಮಿದ್ಧೋಮಮಾಡಿ, ತನ್ನ ದೀಕ್ಷೆಯನ್ನು, ಯಜಮಾನನು ಸಡಲಿಸುತ್ತಾನೆ. ಸೊಂಟದಪಟ್ಟಿಯನ್ನು ಸಡಿಲಮಾಡಿಕೊಂಡು, ಮುಷ್ಟಿಯನ್ನು ಬಿಚ್ಚಿ, ಮೌನವ್ರತ (ಸಂಧ್ಯಾಕಾಲಗಳಲ್ಲಿ ಆಚರಿಸಬೇಕಾದುದು) ಮತ್ತು ವ್ರತಾಹಾರಗಳನ್ನು ತ್ಯಜಿಸಿ, ತನ್ನ ದಂಡವನ್ನು ಮೈತ್ರಾವರುಣನಿಗೆ ಒಪ್ಪಿಸುತ್ತಾನೆ. ಮಾರನೆಯ ದಿನದಲ್ಲಿ ಸೋಮಪಾನ ಮಾಡಲು ಮತ್ತು ಹೋಮಶೇಷಗಳನ್ನು ಭಕ್ಷಿಸಲು ಅರ್ಹನಾಗುತ್ತಾನೆ. ಇದಾದನಂತರ, ಇತರರು ಅವನನ್ನು ಹೆಸರುಹಿಡಿದು ಮಾತನಾಡಿಸಬಹುದು ಮತ್ತು ಅವನ ಮನೆಯಲ್ಲಿ ಭೋಜನಾದಿಗಳನ್ನು ಮಾಡಬಹುದು.

ಈಗ, ಅಗ್ನಿಸೋಮರಿಗೆ, ವಪಾ, ಪಶುಪುರೋಡಾಶ ಮತ್ತು ಹವಿಸ್ಸುಗಳ ಹೋಮವು ಜರುಗುತ್ತದೆ. ಬಹಳವಾಗಿ ವಿಚಾರಮಾಡಿ, ಜೈಮಿನಿಗಳು (ಜೈ. ೬-೮, ೩೦-೪೩) ಈ ಪಶುವು ಛಾಗವೇ ಆಗಬೇಕೆಂದು ನಿರ್ಣಯಮಾಡಿದಾರೆ. ಇಲ್ಲಿ ಅನುಸರಿಸಬೇಕಾದುದು, ದರ್ಶಪೂರ್ಣಮಾಸದ ಕ್ರಮವೇಹೊರತು, ಸೋಮಯಾಗದಕ್ರಮವಲ್ಲ. ಆದರೆ ನಿರೂಢ ಪಶುಬಂಧಕ್ಕೂ, ಈ ಅಗ್ನೀಷೋಮೀಯ ಪಶುಯಾಗಕ್ಕೂ ಕೆಲವು ವ್ಯತ್ಯಾಸಗಳಿವೆ. ಉದಾಹರಣೆಗಾಗಿ, ಸ್ವರುವನ್ನು ಅಗ್ನಿಯಲ್ಲಿ ಹೋಮ ಮಾಡುವುದಿಲ್ಲ. ಸಾಧಾರಣವಾಗಿ ಪ್ರೈಷವು ಅಧ್ವರ್ಯುವಿನಿಂದಲೂ, ಅನುವಾಕ್ಯವು ಹೋತೃವಿನಿಂದಲೂ ಹೇಳಲ್ಪಡುತ್ತವೆ. ಆದರೆ ಇಲ್ಲಿ, ಇವೆರಡನ್ನೂ ಹೇಳುವವನು ಮೈತ್ರಾವರುಣನು. ವಪಾಹೋಮಕಾಲದಲ್ಲಿ **ಸುಬ್ರಹ್ಮಣ್ಯನಿಗದವನ್ನು** ಹೇಳುವಂತೆ, ಸುಬ್ರಹ್ಮಣ್ಯ ಎಂಬ ಋತ್ವಿಜನಿಗೆ ಕರೆಬರುತ್ತದೆ.

ಇದರಲ್ಲಿ ಇಂದ್ರನನ್ನು ಯಾಗಕ್ಕೆ ಆಹ್ವಾನಿಸುತ್ತಾರೆ; ಯಜಮಾನನು ಇಂತಹವನ ಮರಿಮಗ, ಮೊಮ್ಮಗ, ಮಗನೆಂದೂ ಮತ್ತು ಇಂತಿಂತಹವರ ಮುತ್ತಾತ, ತಾತ ಮತ್ತು ತಂದೆಯೆಂದೂ ವರ್ಣನೆಯಿದೆ. ಸುಬ್ರಹ್ಮಣ್ಯವನ್ನು ಹೇಳುವಾಗಲೆಲ್ಲಾ ಇದೇರೀತಿ ಹೇಳಬೇಕು. ಪತ್ನೀಸಂಯಾಜವಾದೊಡನೆ, ಅಗ್ನಿಷೋಮೀಯವು ಮುಗಿಯುತ್ತದೆ. (VII-೮) ಸುಬ್ರಹ್ಮಣ್ಯವನ್ನು ಹೇಳಲು ಕರೆ ಬಂದಕೂಡಲೆ, ಆತನು ಪರ್ವತದಲ್ಲಿ ಹುಟ್ಟಿದ ನದಿಯೊಂದರ ನೀರುತುಂಬಿದ ಘಟವನ್ನು ಹಿಡಿದು ಪಶ್ಚಿಮಾಭಿಮುಖನಾಗಿ ನಿಲ್ಲುತ್ತಾನೆ (ಪರ್ವತದಲ್ಲಿ ಹುಟ್ಟಿದ ನದಿಯ ನೀರೇ ಶ್ರೇಷ್ಠವಾದರೂ, ಸಮೀಪದಲ್ಲಿ ಇತರ ನದಿಗಳಿದ್ದರೆ ಅದನ್ನು ದೂರೀಕರಿಸಬಾರದು). ಸೂರ್ಯಾಸ್ತಮಯಕ್ಕೆ ಮುಂಚೆ, ಮೋಡದ ನೆರಳು ಮತ್ತು ಸೂರ್ಯರಶ್ಮಿಗಳು ಸಂಧಿಸುವ ಜಾಗದಲ್ಲಿ

ಇಂತಹುದು ಸಾಧ್ಯವಿಲ್ಲದ್ದರೆ, ತನ್ನ, ಗಿಡ ಅಥವಾ ನದಿಯ ದಡ ಇವು ಯಾವುದಾದರೂ ಒಂದು ನೆರಳು ಬೀಳುವ ಜಾಗದಲ್ಲಿ, ನೀರನ್ನು ತುಂಬಿಕೊಂಡಿರಬೇಕು. ಹವಿಷ್ಮತೀಃ . . . . (ವಾ.ಸಂ. VI-23 ; ತೈ.ಸಂ. 3-12-1) ಎಂಬ ಮಂತ್ರಪೂರ್ವಕವಾಗಿ ಪ್ರವಾಹಕ್ಕೆದಿರಾಗಿ ನೀರು ತುಂಬಬೇಕು. (ಶತ.ಬ್ರಾ. III ೯-೨-೮, ೯ ; ಕಾತ್ಯಾ. VIII ೯-೮-೧೦ ; ಆಪ. XI ೨೦-೧೦ರಿಂದ೧೨) ಇವುಗಳಲ್ಲಿ, ಇತರ ಜಲಾಶಯಗಳೂ ಉಕ್ತವಾಗಿವೆ. ಸೋಮಸವನಕ್ಕಾಗಿ ಉಪಯೋಗಿಸಲ್ಪಡುವುದರಿಂದ ಈ ನೀರಿಗೆ 'ವಸತೀವರೀ' ಎನ್ನುತ್ತಾರೆ. ಈ ನೀರನ್ನು ತೆಗೆದುಕೊಂಡು ಬರುವಾಗ, ಚಾತ್ವಾಲ ಉತ್ಕರಗಳ ಮಧ್ಯೆ ಬಂದು, ಆಗ್ನೀಧ್ರ ಶಾಲೆಯ ಉತ್ತರದ ಕಡೆಯಿಂದ, ಶಾಲೆಯ ಪೂರ್ವದ್ವಾರಕ್ಕೆ ಬಂದು, ಒಳಗೆ ಪ್ರವೇಶಿಸುತ್ತಾನೆ. **ಶಾಲಾಮುಖೀ**ಯಾಗ್ನಿಯ ಪಶ್ಚಿಮದಲ್ಲಿ ಘಟವನ್ನು ಇಡಬೇಕು. ರಾತ್ರಿಯ ಎರಡನೆಯ ಯಾಮದಲ್ಲಿ, ವಸತೀವರೀಘಟವನ್ನು ಹೆಗಲಿನ ಮೇಲೆ ಇಟ್ಟುಕೊಂಡು, ಅಧ್ವರ್ಯುವು ಆಪ. XI ೨೧-೩-೫ ; ಸತ್ಯಾ. VII ೮ ; ಕಾತ್ಯಾ. VIII ೯-೧೮-೨೩ ಗಳಲ್ಲಿ, ಸೂಕ್ಷ್ಮವಾಗಿ ವಿವರಿಸಿರುವ ರೀತಿಯಲ್ಲಿ, ವೇದಿ ಮತ್ತು ಅಗ್ನಿಗಳ ಸುತ್ತಲೂ ತಿರುಗುತ್ತಾರೆ. ಈ ಕಾಲದಲ್ಲಿ ಯಜಮಾನ ಮತ್ತು ಪತ್ನಿ ಹೊರತಾಗಿ, ಇತರರು ಯಾರೂ ಒಳಗೆ ಇರಬಾರದು. ಕಡೆಗೆ ಈ ಘಟವು ಆಗ್ನೀಧ್ರಶಾಲೆಯಲ್ಲಿ ಇಡಲ್ಪಡುತ್ತದೆ. ಇದರ ಜೊತೆಗೆ, ಆದರೆ ಒಂದು ಆಸಂದಿಯಮೇಲೆ (ಎತ್ತರವಾದ ಆಸನ) ಸೋಮಲತೆಯೂ ಇರುತ್ತದೆ. ಈ ರಾತ್ರಿ ಯಜಮಾನನು ಎಚ್ಚರವಾಗಿ (ಎಚ್ಚರವಾಗಿರುವಂತೆ ಇತರರು ನೋಡಿಕೊಳ್ಳಬೇಕು) ಆಗ್ನೀಧ್ರಶಾಲಾ ಅಥವಾ ಹವಿರ್ಧಾನಶಾಲೆಯಲ್ಲಿದ್ದು, ಸೋಮವನ್ನು ರಕ್ಷಣೆಮಾಡಬೇಕು. ಯಜಮಾನಿಯು ಪ್ರಾಗ್ವಂಶದಲ್ಲಿರಬೇಕು. ಎಲ್ಲಾ ಋತ್ವಿಜರೂ, ಆ ರಾತ್ರಿ ಆಗ್ನೀಧ್ರಶಾಲೆಯಲ್ಲೇ ಇರಬೇಕು. ಸದಸ್ಸಿನಲ್ಲಿ ಯಾರೂ ಇರಬಾರದು.

ಮೂರನೆಯ ದಿನದಲ್ಲಿ, ಮಿತ್ರ ಮತ್ತು ವರುಣರಿಗೆ ಕೊಡಬೇಕಾದ **ಪಯಸ್ಯಾ** ಅಥವಾ **ಆಮಿಕ್ಷಾ** ಎಂಬ ದ್ರವ್ಯಕ್ಕೆ ಬೇಕಾಗುವ ಹಾಲನ್ನು, ಆರಾತ್ರಿ ಪ್ರತಿಪ್ರಸ್ಥಾತೃವು ಕರೆಯುತ್ತಾನೆ. ಮತ್ತು ಅಧ್ವರ್ಯುವಿನ ಅಪ್ಪಣೆಯಮೇಲೆ ಈ ಮುಂದೆ ಹೇಳುವ ಹಾಲುಗಳೂ ಸಿದ್ಧವಾಗುತ್ತವೆ. ಯಜಮಾನ ಮತ್ತು ಆತನ ಪತ್ನಿಯ ವ್ರತಾಹಾರಕ್ಕೆ ಉಪಯೋಗವಾಗುವ ಗೋವಿನ ಹಾಲು, **ಆಶೀಃ** (ಸೋಮ ಮತ್ತು ಕ್ಷೀರಮಿಶ್ರ) ಎಂಬ ಹೋಮದ್ರವ್ಯ ಮತ್ತು **ದಧಿಗ್ರಹ**ಗಳಿಗಾಗಿಯೂ, ಪ್ರವರ್ಗ್ಯದಲ್ಲಿ ಉಪಯುಕ್ತವಾಗಿದ್ದ ಗೋವಿನ ಹಾಲು, ದಧಿಘರ್ಮ (ಘನೀಭೂತವಾದ ಮಾಡಿದ ಪದಾರ್ಥ), ಮಜ್ಜಿಗೆಯೊಡನೆ ಬೆರಸದೆ, ಕಾಯಿಸಿ, ಮಿತ್ರ ಮತ್ತು ವರುಣರಿಗೆ ಅರ್ಪಿಸುವ ಕ್ಷೀರ ಮತ್ತು ಕಾಯಿಸಿ ಮಜ್ಜಿಗೆಯೊಡನೆ ಬೆರಸಿ **ದಧಿಗ್ರಹ**ದಲ್ಲಿ ಉಪಯೋಗಿಸುವ ಮಸರು, ಇವಗಳಿಗಾಗಿಯೂ ಸಿದ್ಧಪಡಿಸಲ್ಪಡುತ್ತವೆ. ಋತ್ವಿಜರೆಲ್ಲರೂ ಆಭರಣಗಳಿಂದ ಭೂಷಿತರಾಗಿ, ದಿವ್ಯ ವಸ್ತ್ರಗಳನ್ನು ಧರಿಸಿ, ರಾತ್ರಿಯೆಲ್ಲವೂ, ಮೇಲೆ ಹೇಳಿದಂತೆ ಆಗ್ನೀಧ್ರಶಾಲೆಯಲ್ಲಿಯೇ ಕಳೆಯುತ್ತಾರೆ.

ಕಡೆಯದಿನ (ಪ್ರಾಯಶಃ ಐದನೆಯ ದಿನ)ಕ್ಕೆ **ಸುತ್ಯಾ** ಎಂದು ಹೆಸರು. (ಸೋಮವನ್ನು ಹಿಂಡುವ ದಿನ). **ಉಪಾಂಶು** (ಉಪಾಂಶುವೆಂಬ ಕಲ್ಲಿನಿಂದ ಸೋಮರಸವನ್ನು ತೆಗೆಯುವುದು) ಎಂಬ ಕರ್ಮದ ವರೆಗಿನ ಎಲ್ಲಾ ಕರ್ಮಗಳನ್ನು ಮುಗಿಸುವುದಕ್ಕೋಸ್ಕರ, ಮಧ್ಯರಾತ್ರಿ ಕಳೆದ ಮೇಲೆ, ಅಂದರೆ ಬೆಳಕಾಗುವುದಕ್ಕೆ ಬಹಳ ಮುಂಚೆ, ಎಲ್ಲ ಋತ್ವಿಜರನ್ನೂ ಏಳಿಸಬೇಕಾಗುತ್ತದೆ. ಅಧ್ವರ್ಯುವು ಆಚಮನಮಾಡಿ, ಆಗ್ನೀಧ್ರ, ಹವಿರ್ಧಾನ ಮತ್ತು ಸದಸ್ಸು ಎಂಬ ಶಾಲೆಗಳು, ಸ್ರುಕ್ಕುಗಳು, ವಾಯವ್ಯ (ಮಧ್ಯದಲ್ಲಿ ಸಂಕುಚಿತವಾಗಿ, ಒಂದುಮೊಳ ಎತ್ತರವಿದ್ದು, ಮೇಲುಭಾಗದಲ್ಲಿ ಅಗಲವಾಗಿರುವ) ಎಂಬ ಪಾತ್ರೆಗಳು, ಎಲ್ಲವನ್ನೂ ಪ್ರೋಕ್ಷಣೆ ಮಾಡುತ್ತಾನೆ. (ಆಪ. XII ೧-೪). ಅಧ್ವರ್ಯುವು (ತೈ.ಸಂ. IV ೪-೯-೧) ಮಂತ್ರಪೂರ್ವಕವಾಗಿ, ಆಗ್ನೀಧ್ರೀಯಾಗ್ನಿಯಲ್ಲಿ, **ಯುಂಜ್ಞತನೂ** ಎಂಬ ೩೩ ಆಜ್ಯಾಹುತಿಗಳನ್ನು ಮಾಡುತ್ತಾನೆ. ಖರದ ಮೇಲೆ ಪಾತ್ರೆಗಳನ್ನೂ, ಮಹಾವೇದಿಯ ಪೂರ್ವಕ್ಕೆ, ದಕ್ಷಿಣದ ಮೂಲೆಯಲ್ಲಿ **ಉಪಾಂಶುಪಾತ್ರ**ವನ್ನೂ, ಉತ್ತರದ ಮೂಲೆಯಲ್ಲಿ **ಉಪಾಂಶುಸವನ** ಎಂಬ ಎರಡು ಕಲ್ಲುಗಳ ಮಧ್ಯೆ, **ಉಪಾಂಶುಪಾತ್ರ**ವನ್ನೂ ಇಡುತ್ತಾರೆ. ಈ ಪಾತ್ರೆಗಳನ್ನು ಇಡುವ ವಿಚಾರವಾಗಿ ಇನ್ನೂ

ಹೆಚ್ಚು ವಿವರಗಳು ಆಪ. XII ೧-೬; XII ೨-೧೩; ಮತ್ತು ಕಾತ್ಯಾ. IX ೨ ಗಳಲ್ಲಿ ಹೇಳಲ್ಪಟ್ಟಿವೆ. ಉನ್ನೇತೃವೆಂಬ ಋತ್ವಿಜನು ಈ ಪಾತ್ರೆಗಳನ್ನು ಆಯಾ ಸ್ಥಳಗಳಲ್ಲಿ ಇಡಬೇಕೆಂದು ಕಾತ್ಯಾಯನರು ಅಭಿಪ್ರಾಯಪಡುತ್ತಾರೆ. ಇದಾದಮೇಲೆ ಸೋಮಸವನದ ದಿನದಲ್ಲಿ ಕೊಡಬೇಕಾದ **ಸವನೀಯಪಶು** ಕಾರ್ಯಕ್ಕೆ ಸಿದ್ಧತೆಯು ಜರುಗುತ್ತದೆ. ಹಿಂದಿನದಲ್ಲಿ **ಅಗ್ನೀಷೋಮೀಯ** ಪಶು ಆಹುತಿಯಂತೆಯೇ ನಡೆಯಬೇಕಾದುದು.

ಪಕ್ಷಿಗಳು ಚಿಲಿಪಿಲಗುಟ್ಟಲು ಆರಂಭಿಸುವ ಮೊದಲೇ ಅಂದರೆ ಬೆಳಕಾಗುವುದಕ್ಕೆ ಬಹಳ ಮುಂಚೆಯೇ ಋತ್ವಿಜರನ್ನೆಲ್ಲಾ ಏಳಿಸಿ, ಅಧ್ವರ್ಯುವು ಒಬ್ಬೊಬ್ಬರಿಗೆ ಒಂದೊಂದು ಕೆಲಸವನ್ನು ವಿಧಿಸುತ್ತಾನೆ. **ಹೋತೃವು ಪ್ರಾತರನುವಾಕವನ್ನು** ಪ್ರಾತಃಕಾಲದಲ್ಲಿಯೇ ಬರುವ ಅಗ್ನಿ, ಉಷಸ್ಸು, ಅಶ್ವಿನಿಗಳು ಮೊದಲಾದ ದೇವತೆಗಳನ್ನು ಉದ್ದೇಶಿಸಿ ಹೇಳಬೇಕು; **ಬ್ರಹ್ಮನು** ಮೌನವನ್ನಾಚರಿಸಬೇಕು; ಪ್ರತಿಪ್ರಸ್ಥಾತನು **ಸವನೀಯ**ಪುರೋಡಾಶಕ್ಕೆ ಅವಶ್ಯಕವಾದ ಪರಿಕರಗಳನ್ನು (**ನಿರ್ವಾಪ**) ಸಿದ್ಧಪಡಿಸುವನು; ಸುಬ್ರಹ್ಮಣ್ಯನು 'ಅದ್ಯಸುತ್ಯಾಂ' ಎಂದು ಸೇರಿಸಿಕೊಂಡು ಸುಬ್ರಹ್ಮಣ್ಯಾನಿಗದವನ್ನು ಗಾನಮಾಡುವನು; ಹೋತೃವು ಪ್ರಾತರನುವಾಕವನ್ನುಚ್ಚರಿಸುವಾಗ ಮನಸಾ ಅವನನ್ನನುಸರಿಸುವೆನೆಂದು ಅಧ್ವರ್ಯುವು ಅವನಿಗೆ ವಚನವನ್ನೂ ಕೊಡುತ್ತಾನೆ. ಪ್ರಾತರನುವಾಕವನ್ನು ಹೇಳುವಾಗ, ಹೋತೃವಿನಸ್ಥಾನ ಎರಡು ಹವಿರ್ಧಾನಶಕಟಗಳ ಮೂಕಿಗಳ ನಡುವೆ ಆ ಅನುವಾಕವನ್ನು ಮೂರು ಭಾಗವಾಗಿ (ಕ್ರತು) ವಿಂಗಡಿಸಿಕೊಂಡು (ಮೊದಲನೆಯದು ಅಗ್ನಿಗೆ, ಎರಡನೆಯದು ಉಷೋದೇವಿಗೆ, ಮೂರನೆಯದು ಅಶ್ವಿನೀದೇವತೆಗಳಿಗೆ), ಒಂದೊಂದು ಭಾಗದಲ್ಲಿಯೂ, ಗಾಯತ್ರಿ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ ಮತ್ತು ಪಂಕ್ತಿ ಎಂಬ ಛಂದಸ್ಸುಗಳಲ್ಲಿ ಒಂದೊಂದು ಸೂಕ್ತವಾದರೂ ಇರುವಂತೆ, ಹಾಡಬೇಕು. ಅಶ್ವಲಾಯನರು (೪-೧೩.೬—೪-೧೫.೩) ಉಚ್ಚರಿಸಬೇಕಾದ ಸೂಕ್ತಗಳನ್ನೂ ಮತ್ತು ಕಡೆಯಪಕ್ಷ ಒಂದುನೂರು ಮಂತ್ರಗಳಾದರೂ ಇರಬೇಕೆಂದೂ ಹೇಳಿದಾರೆ. ಅವರು ನಿರ್ದೇಶಿಸಿರುವ ಸೂಕ್ತಗಳು ಮತ್ತು ಮಂತ್ರಗಳೆಲ್ಲಾ ಸೇರಿದರೆ, **ಆಗ್ನೇಯ** ಕ್ರತುವೊಂದರಲ್ಲೇ ೧೩೨೪ ಮಂತ್ರಗಳಾಗುತ್ತವೆ. (ಅದರಲ್ಲಿ ಗಾಯತ್ರೀ ಛಂದಸ್ಸಿನಲ್ಲಿ ೩೨೦, ತ್ರಿಷ್ಟುಪಿನಲ್ಲಿ ೫೯೧, ಮಂತ್ರಗಳನ್ನೂ ಇದರಂತೆ ಉಷಃಕ್ರತುವಿನಲ್ಲಿ ೨೫೦ ಮಂತ್ರಗಳನ್ನೂ, ಆಶ್ವಿನಕ್ರತುವಿನಲ್ಲಿ ೪೦೭ ಮಂತ್ರಗಳನ್ನೂ ಉಚ್ಚರಿಸಬೇಕೆಂಬ ವಿಧಿಯಿದೆ. (ಒಟ್ಟು ಸುಮಾರು ೨೦೦೦ ಮಂತ್ರಗಳು ಅಂದರೆ ಹೆಚ್ಚುಕಡಿಮೆ ಋಗ್ವೇದದಲ್ಲಿರುವ ಮಂತ್ರಗಳಲ್ಲಿ ಐದನೆಯ ಒಂದುಭಾಗ ಮಂತ್ರಗಳು). ಈ ಅನುವಾಕವನ್ನು **ಮಂದ್ರ**ದಲ್ಲಿಯೇ ಉಚ್ಚರಿಸಬೇಕು (ಆಶ್ವ. IV-೧೩. ೬). ಕೇವಲ ನೂರೇ ಮಂತ್ರಗಳನ್ನಾಗಲೀ, ಇನ್ನೂ ಕಡಿಮೆ ಮಂತ್ರಗಳನ್ನಾಗಲೀ ಹೇಳಿದರೂ, ಆಶ್ವಲಾಯನರು ವಿಧಿಸಿರುವ ಕ್ರಮದಲ್ಲಿಯೇ ಹೇಳಬೇಕು. ಮತ್ತು ಅಗ್ನಿದೇವತಾಕವಾದ, ತ್ರಿಷ್ಟುಪ್ ಛಂದಸ್ಸಿನ, ಋ. VII-೧೨ ನೆಯ ಸೂಕ್ತ ಮತ್ತು ಅಶ್ವಿನೀದೇವತಾಕವಾದ, ತ್ರಿಷ್ಟುಪ್ ಛಂದಸ್ಸಿನ ಋ. VII-೭೩ ನೆಯ ಸೂಕ್ತ ಮತ್ತು ಅದೇದೇವತೆಯನ್ನುದ್ದೇಶಿಸುವ, ಜಗತೀ ಛಂದಸ್ಸಿನ ಋ. ೧-೧೧೨ ನೆಯ ಸೂಕ್ತ, ಇವು ಮೂರೂ **ಮಂಗಳ**ಕರವಾದುದರಿಂದ, ಇವುಗಳನ್ನು ಹೇಳಲೇಬೇಕು. ಬೆಳಗಾಗುವವರೆಗೂ ಪ್ರಾತರನುವಾಕವನ್ನು ಹೇಳುತ್ತಲೇ ಇರಬೇಕಾದುದರಿಂದ ಋ. ೧-೧೧೨ ನೆಯ ಸೂಕ್ತವನ್ನು ಪುನಃ ಪುನಃ ಪಠಿಸಬಹುದೆಂದೂ ವಿಧಿಯಿದೆ (ಆಶ್ವ. IV-೧೫. ೭, ೯).

ಹೀಗೆ ಪ್ರಾತರನುವಾಕವನ್ನು ಹೋತೃವು ಪಠಿಸುತ್ತಿರುವಾಗ, ಇತರ ಕಾರ್ಯಗಳು ನಡೆಯುತ್ತಿರುತ್ತವೆ. ಕಾತ್ಯಾ. IX ೧, ೧೫ ರಲ್ಲಿ ಹೇಳಿರುವಂತೆ ಆಗ್ನೀಧ್ರನು, ಅಥವಾ ಆಪ. XII ೪, ೪ ರಲ್ಲಿ ಹೇಳಿರುವಂತೆ ಪ್ರತಿಪ್ರಸ್ಥಾತನು **ನಿರ್ವಾಪ** ಸಲಕರಣೆಗಳನ್ನೂ ತೆಗೆದುಕೊಂಡು ಐದು ಆಹುತಿಗಳಿಗೆ ಸಿದ್ಧಮಾಡುತ್ತಾನೆ—ಹನ್ನೊಂದು ಕಪಾಲಗಳ **ಪುರೋಡಾಶ**ವೊಂದು ಇಂದ್ರನಿಗಾಗಿ, **ಧಾನಾ** (ಹುರಿದ, ಯವಧಾನ್ಯ) ಎಂಬುದು ಇಂದ್ರನ ಎರಡು ಕುದುರೆಗಳಿಗಾಗಿ, ಕರಂಭವು(ಮೊಸರಿನೊಡನೆ ಬೆರೆಸಿದ ಯವಧಾನ್ಯದ ಹಿಟ್ಟು) ಪೂಷಣನಿಗಾಗಿ, ಮೊಸರು ಸರಸ್ವತಿಗಾಗಿ ಮತ್ತು **ಪಯಸ್ಯಾ** (ಅಥವಾ **ಅಮಿಕ್ಷಾ** ಅಂದರೆ, ಹಾಲು

ಕರೆದು, ಕಾಯಿಸಿ ಅದಕ್ಕೆ ಹಿಂದಿನದಿನದ ಹುಳಿಹಾಲನ್ನು ಬೆರೆಸಿದರೆ, ಆ ಮಿಶ್ರಣದಲ್ಲಿರುವ ಗಟ್ಟಿಭಾಗವು ಅಮಿಕ್ಷಾ ಅಥವಾ ಪಯಸ್ಯಾ ಎನಿಸಿಕೊಳ್ಳುತ್ತದೆ) ಎಂಬುದು ಮಿತ್ರಾವರುಣರಿಗಾಗಿ, ಈರೀತಿ ಐದು ಆಹುತಿಗಳು—ಇದರಲ್ಲಿ, ಮೇಲೆ ಹೇಳಿದಂತೆ, ಐದು ಬೇರೆ ಬೇರೆ ಉದ್ದೇಶದಿಂದ ಆಹುತಿಗಳನ್ನು ಕೊಡಬಹುದು ಅಥವಾ ಮೊದಲನೆಯದನ್ನು ಇಂದ್ರನಿಗೆ ಕೊಟ್ಟು, ಉಳಿದ ನಾಲ್ಕನ್ನು, ಉಕ್ತವಾದ ಹರೀ, ಪೂಷಣ, ಸರಸ್ವತೀ, ಮತ್ತು ಮಿತ್ರಾವರುಣ ಸಹಿತನಾದ ಇಂದ್ರನಿಗೆ ಕೊಡಬಹುದು ಎಂದೂ ಹೇಳಿದೆ. ಅಧ್ವರ್ಯುವಿನ ಆದೇಶದಂತೆ, ಈ ಕೆಳಗಿನ ಕೆಲಸಗಳು ನಡೆಯುತ್ತವೆ. ಹೋತೃವು ಜಲವನ್ನು ಮನಸ್ಸಿನಲ್ಲಿಯೇ ಭಾವಿಸಿಕೊಳ್ಳುತ್ತಾನೆ; **ಮೈತ್ರಾವರುಣಚಮಸ**ವನ್ನು ಕೈನಲ್ಲಿ ಹಿಡಿದಿರುವ ಮೈತ್ರಾವರುಣನ ಸಹಾಯಕನೊಬ್ಬನು ಅಧ್ವರ್ಯುವಿನ ಜೊತೆಯಲ್ಲಿ, ಯಜಮಾನನ ಪತ್ನಿ ಅಥವಾ ಪತ್ನಿಯರನ್ನು ಕರೆತರಲು ನೇಷ್ಟೃವಿರುವಲ್ಲಿಗೆ ಹೋಗುತ್ತಾನೆ; ಇತರ ಋತ್ವಿಜರು **ಏಕಧನ** ಘಟಗಳನ್ನು ಹಿಡಿದು ಹೊರಡುತ್ತಾರೆ; ಆಗ್ನೀಧ್ರನು ವಸತೀವರೀ ಜಲವನ್ನು ಹಿಡಿದು ಚಾತ್ವಾಲ ಗರ್ತದಬಳಿಯಿರುತ್ತಾನೆ. ಅಧ್ವರ್ಯುವು ಒಂದು ಕೊಳ ಅಥವಾ ಕಟ್ಟೆಯಬಳಿಗೆ ಹೋಗಿ, ಮೈತ್ರಾವರುಣಚಮಸದಿಂದ ಆಜ್ಯಾಹುತಿಗಳನ್ನು ಕೊಟ್ಟು ಆ ಚಮಸದಲ್ಲಿ ನೀರುತುಂಬಿಕೊಳ್ಳುತ್ತಾನೆ; ಏಕಧನಘಟಗಳಲ್ಲಿಯೂ ನೀರುತುಂಬಿಕೊಳ್ಳುತ್ತಾರೆ; **ಪನ್ನೇಜನ** ಅಥವಾ **ಪಾನ್ನೇಜನ**ವೆಂಬ ಪಾತ್ರೆಯಲ್ಲಿ ಯಜಮಾನಿಯೂ ನೀರು ತೆಗೆದುಕೊಳ್ಳುತ್ತಾಳೆ (ಈ ನೀರು ಕಾಲು ಅಥವಾ ಊರುಗಳನ್ನು ತೊಳೆಯಲು ಉಪಯೋಗಿಸುವುದು). ಏಕಧನಘಟಗಳನ್ನು ತುಂಬುವಾಗ, ಹೋತೃವು **ಅಪಾನ್ನಪಾತ್** ದೇವತಾಕವಾದ 'ಅಪ್ನೋನಪ್ತ್ರೀಯ' (ಋ. ೧೦-೩೦, ೧-೯ ಮತ್ತು ೧೧) ಮಂತ್ರಗಳನ್ನು ಪಠಿಸುತ್ತಾನೆ. (ಐ.ಬ್ರಾ. VIII. ೨, ಅಶ್ವ. ೫-೧, ೮). ಮೈತ್ರಾವರುಣ ಚಮಸದಲ್ಲಿರುವ ನೀರು, ವಸತೀವರೀ ನೀರಿನೊಂದಿಗೆ ಬೆರಸಲ್ಪಡುತ್ತದೆ. ಈ ಮಿಶ್ರಿತವಾದ ಜಲವನ್ನು ಹೋತೃಚಮಸದಲ್ಲಿಟ್ಟು, ಅದನ್ನು ಅಧ್ವರ್ಯುವು ಯಜಮಾನನಿಗೆ ಕೊಡುತ್ತಾನೆ. ಇನ್ನುಮುಂದೆ ಇದಕ್ಕೆ **ನಿಗ್ರಾಭ್ಯ**ವೆಂದು ವ್ಯವಹಾರ (ಆಪ. XII ೯, ೧) ಅಧ್ವರ್ಯುವು **ದಧಿಗ್ರ**ಹದಿಂದ, ದಧ್ಯಾಹುತಿಯೊಂದನ್ನು ಕೊಡುತ್ತಾನೆ, ಅನಂತರ, ಕೆಲವು ಸೋಮಕಾಷ್ಠಗಳನ್ನು ತೆಗೆದುಕೊಂಡು, **ಉಪರದ** (ಸೋಮರಸವನ್ನು ಕುಟ್ಟಿತೆಗೆಯಲು ಉಪಯೋಗಿಸುವ ಕಲ್ಲು) ಮೇಲಿಟ್ಟು, ಸ್ವಲ್ಪ ವಸತೀವರೀಜಲ (ನಿಗ್ರಾಭ್ಯ)ವನ್ನು ಅದರ ಮೇಲೆ ಸುರಿದು, ಸೋಮವನ್ನು ಕುಟ್ಟಿ, ರಸವನ್ನು ತೆಗೆದು ಬಟ್ಟಲಿನಲ್ಲಿ ತುಂಬಿಕೊಂಡು, ಆಹುತಿಕೊಡುತ್ತಾನೆ (ಇದಕ್ಕೆ ಉಪಾಂಶುಗ್ರಹ—ಸೋಮಗ್ರಹವೆಂದು ಹೆಸರು, ಆಪ. XII, ೭, ೧೦-೧೨. ಈ ಉಪಾಂಶುಗ್ರಹಕ್ಕಾಗಿ ಸೋಮವನ್ನು ಹಿಂಡುವ ವಿಧಾನದಲ್ಲಿ ಆಪಸ್ತಂಬರಿಗೂ ಐತರೇಯಬ್ರಾಹ್ಮಣಕ್ಕೂ ಸ್ವಲ್ಪ ವ್ಯತ್ಯಾಸವಿದೆ).

ಈಗ **ಮಹಾಭಿಷವ**ವು ಪ್ರಾರಂಭವಾಗುತ್ತದೆ. ಅಧ್ವರ್ಯುವು ಆಹವನೀಯದ್ರೋಣಿಯ ಹತ್ತಿರ ಹೋಗಿ, ಮೈತ್ರಾವರುಣಚಮಸದಲ್ಲಿ ಉಳಿದಿರುವ (ನಿಗ್ರಾಭ್ಯ) ಜಲವನ್ನೂ, ವಸತೀವರೀ ಜಲದ ಮೂರನೆಯ ಒಂದು ಭಾಗವನ್ನೂ ಮತ್ತು ಏಕಧನಾಜಲದ ಭಾಗವನ್ನೂ, ಅದರೊಳಗೆ ಸುರಿಯುತ್ತಾನೆ. ಹೀಗೆ ಉಳಿದ ಈ ಎರಡು ಜಲಗಳೂ, ಏಕಧನಾಜಲದಸ್ಥಾನ (ಅಂದರೆ, ಉತ್ತರ ಹವಿರ್ಧಾನಶಕಟದ ಅಚ್ಚಿನ ಕೆಳಗಡೆ, ಅದರ ಪಶ್ಚಿಮಕ್ಕೆ)ದಲ್ಲಿ ಇಡಲ್ಪಡುತ್ತವೆ. ಅಧಿಷವಣಚರ್ಮದ ಉತ್ತರಕ್ಕೆ ಸ್ವಲ್ಪ ಪೂರ್ವದಕಡೆಗೆ ಅಧ್ವರ್ಯುವೂ, ಅವನ ಹಿಂದೆ ಯಜಮಾನನೂ, ಆ ಚರ್ಮದ ದಕ್ಷಿಣಕ್ಕೆ ಪ್ರತಿಪ್ರಸ್ಥಾತೃವೂ, ಪಶ್ಚಿಮಕ್ಕೆ ನೇಷ್ಟೃವೂ, ಮತ್ತು ಉತ್ತರಕ್ಕೆ ಉನ್ನೇತೃವೂ ಕುಳಿತುಕೊಳ್ಳುತ್ತಾರೆ (ಆಪ. ೧೨-೧೨. ೨ ಮತ್ತು ಸತ್ಯಾ. ೮-೩) ಪ್ರಾತಃಸವನಕ್ಕೆ ಸೋಮಲತೆಗಳಲ್ಲಿ ಬಹುಭಾಗವನ್ನೂ, ಮಧ್ಯಾಹ್ನಸವನಕ್ಕೆ ಸ್ವಲ್ಪಭಾಗವನ್ನೂ ತೆಗೆದುಕೊಳ್ಳಬೇಕು. ಮೊದಲು, ಅಧ್ವರ್ಯುವು **ಉಪರ**ವನ್ನು **ಅಧಿಷವಣ**ಚರ್ಮದಮೇಲಿಟ್ಟು, ಅದರ ಮೇಲೆ ಸೋಮಲತೆಯನ್ನು ಇಟ್ಟು, ನಿಗ್ರಾಭ್ಯಜಲವನ್ನು ವರ್ಷಿಸಿದಮೇಲೆ, ಇತರ ಋತ್ವಿಜರು, ಸುವರ್ಣಾಂಗುಲೀಯಕವೋ ಅಥವಾ ಅಂತಹುದೇ ಯಾವುದಾದರೂ ಸುವರ್ಣ ಆಭರಣವನ್ನು ಹೊಂದಿರುವ ಬಲಗೈಗಳಿಂದ ಉಳಿದ ಕಲ್ಲುಗಳಿಂದ ಸೋಮಲತೆಯನ್ನು ಕುಟ್ಟುತ್ತಾರೆ. ಇದು ಮೊದಲನೆಯ **ಪರ್ಯಾಯ.**

ಹೀಗೆ ಕುಟ್ಟುವಾಗ ಚದುರಿಹೋದ ಲತೆಗಳನ್ನು ಪುನಃ ಒಂದುಗೂಡಿಸಿ, ಪುನಃ (ಎರಡನೆಯ ಪರ್ಯಾಯ) ಕುಟ್ಟುತ್ತಾರೆ. ಅನಂತರ ಮೂರನೆಯ ಪರ್ಯಾಯ. ಒಂದೊಂದು ಪರ್ಯಾಯದಲ್ಲಿಯೂ ಎಷ್ಟು ಏಟುಗಳು ಬೀಳಬೇಕೆಂಬುದೂ ನಿಯಮಿತವಾಗಿದೆ (ಆಪ. XII ೧೦, ೪-೮-೯., XII ೧೨, ೮-೯). ಹೀಗೆ ಮೂರುಸಲ ಕುಟ್ಟಲ್ಪಟ್ಟ, ತೇವವಾದ ಲತೆಗಳನ್ನು **ಸಂಭರಣೀ** ಎಂಬ ಪಾತ್ರೆಯಲ್ಲಿ ಸೇರಿಸಿ, ನೀರುತುಂಬಿರುವ **ಆಧವನೀಯ**ವೆಂಬ ದ್ರೋಣಿಯಲ್ಲಿಟ್ಟು, ಚೆನ್ನಾಗಿ ಮಥನಮಾಡಿ ಅನಂತರ ಲತೆಗಳನ್ನು ತೊಳೆದು, ಹಿಂಡಿ, ಅಧಿಷವಣಚರ್ಮದಮೇಲಿಡುತ್ತಾರೆ. ನಾಲ್ಕು ಕಲ್ಲುಗಳನ್ನು ಉಪರಕ್ಕೆ ಎದುರಾಗಿಟ್ಟು, ಸೋಮಲತೆಯ ಶೇಷವನ್ನು (**ಋಜೀಷಾ**) ಆ ಕಲ್ಲುಗಳಿಗೆ ಒರಗಿಸಿಡುತ್ತಾರೆ. ಉದ್ಗಾತೃಋತ್ವಿಜವರ್ಗದವರು ದ್ರೋಣಕಲಶವನ್ನು (ದೊಡ್ಡ ಕಲಶ) ಎತ್ತಿತಂದು ಆ ಕಲ್ಲುಗಳಮೇಲಿಡುತ್ತಾರೆ. ಸೋಮವನ್ನು ಕ್ರಯಮಾಡುವಾಗ ಯಜಮಾನನ ವಶಕ್ಕೆ ಕೊಟ್ಟಿದ್ದ, ತುಪ್ಪಟದಿಂದ ಮಾಡಿದ ಜರಡಿಯನ್ನು ಅದರ ಅಂಚು ಉತ್ತರಕ್ಕಿರುವಂತೆ, ಆ ಕಲಶದಮೇಲೆ ಹರಡುತ್ತಾರೆ.

ಉನ್ನೇತೃವು ಆಧವನೀಯದ್ರೋಣದಲ್ಲಿರುವ ಸೋಮರಸವನ್ನು ಚಮಸವೊಂದರಿಂದ ತುಂಬಿಕೊಂಡು, ನಿಗ್ರಾಭ್ಯ ಜಲವಿರುವ ಹೋತೃಚಮಸದೊಳಗೆ ಸುರಿಯುತ್ತಾನೆ. ಈ ಸೋಮರಸವನ್ನು ಹೋತೃವು ಜರಡಿಯಮೇಲೆ ಸಂತತಧಾರೆಯಾಗಿ ಸುರಿಯುತ್ತಾನೆ. ಈರೀತಿ ಸೋಮರಸವು ಶೋಧಿಸಲ್ಪಡುತ್ತದೆ. ಜರಡಿಯಿಂದ ಬೀಳುತ್ತಿರುವ ಶುದ್ಧಸೋಮರಸವನ್ನು **ಅಂತರ್ಯಾಮ**ದಿಂದ ಮೊದಲು ಮಾಡಿಕೊಂಡು **ಧ್ರುವ**ದವರೆಗಿನ ಎಲ್ಲಾ **ಗ್ರ**ಹಗಳಲ್ಲಿಯೂ ತುಂಬುತ್ತಾರೆ. ದ್ರೋಣಕಲಶ ದೊಳಗೆ ಬೀಳುವ ಸೋಮಕ್ಕೆ **ಶುಕ್ರ**ವೆಂದು ಹೆಸರು. ಸೂರ್ಯೋದಯಕ್ಕೆ ಮುಂಚಿತವಾಗಿ **ಉಪಾಂಶು**ಗ್ರಹವನ್ನೂ, ಸೂರ್ಯೋದಯ ವೇಳೆಗೆ ಸರಿಯಾಗಿ, ಅಧ್ವರ್ಯುವು **ಅಂತರ್ಯಾಮ** ಗ್ರಹವನ್ನೂ ಅರ್ಪಿಸಬೇಕು. ಸೋಮದಿಂದ ತುಂಬ ಬೇಕಾದ ಗ್ರಹಗಳು ಏಳು—ಐಂದ್ರಾವರುಣ, ಮೈತ್ರಾವರುಣ, ಶುಕ್ರ, ಮಂಥೀ, ಆಗ್ರಯಣ, ಉಕ್ಥ್ಯ ಮತ್ತು ಧ್ರುವ ಮತ್ತು ಇವುಗಳ ಸ್ಥಾನವು **ಖರ**ದಮೇಲೆ. ಜರಡಿಯಿಂದ ಬೀಳುತ್ತಿರುವ ಸೋಮಧಾರೆಯಿಂದ ತುಂಬುತ್ತಿರುವಾಗ ಇವುಗಳಿಗೆ **ಧಾರಾಗ್ರ**ಹಗಳೆಂದು ಹೆಸರು. ಸೋಮರಸದಿಂದ ತುಂಬಿದಮೇಲೆ, ಅವುಗಳನ್ನು ಜರಡಿಯತುದಿಯಿಂದ ಅಥವಾ ಅಂಥದೇ ಮತ್ತೊಂದು ಜರಡಿಯಿಂದ ಒರೆಸಬೇಕು. ಮೈತ್ರಾವರುಣಗ್ರಹದಲ್ಲಿರುವ ಸೋಮರಸದ ಜೊತೆಗೆ, ಕುದಿಸಿ ಆರಿಸಿದ ಹಾಲನ್ನೂ, ಮಂಥಿಯ ಸೋಮದೊಡನೆ ಯವಪಿಷ್ಟವನ್ನೂ ಬೆರಸಬೇಕು. ಆಗ್ರಯಣ, ಉಕ್ಥ್ಯ ಮತ್ತು ಧ್ರುವಗಳನ್ನು ಅಂಚಿನವರೆಗೂ ತುಂಬಬೇಕು.

ಅಗ್ನಿ, ಇಂದ್ರ ಮತ್ತು ಸೂರ್ಯರಿಗಾಗಿ (ಆಪ. VII. 15.9 ರ ಪ್ರಕಾರ ಅಗ್ನಿಷ್ಟೋಮದಲ್ಲಿ ಮಾತ್ರ) ಮೂರು **ಅತಿಗ್ರಾಹ್ಯ** ವೆಂಬ ಗ್ರಹಗಳನ್ನು ಸೋಮರಸದಿಂದ ತುಂಬುತ್ತಾನೆ. ಹೀಗೆ ಗ್ರಹಗಳನ್ನೆಲ್ಲಾ ತುಂಬಿ, ದ್ರೋಣ ಕಲಶವು ಅರ್ಧದಷ್ಟು ತುಂಬುವವರೆಗೆ ಸೋಮರಸವನ್ನು ಶೋಧಿಸಿದನಂತರ, ಸೋಮಧಾರೆಯು ನಿಲ್ಲುತ್ತದೆ. ಜರಡಿಯನ್ನು ಹಿಂಡಿ ರಸವನ್ನೆಲ್ಲಾ ಕಲಶದೊಳಗೆ ಹಾಕಿ, ಬೇರೆ ಒಂದುಕಡೆ ಇಡಬೇಕು. ಬೆಳಗ್ಗೆ ಎಲ್ಲಾ ಗ್ರಹಗಳಿಗೂ ಸಾಕಾಗುವಷ್ಟು **ಏಕಧನಾ** ಜಲವನ್ನೂ ಮೈತ್ರಾವರುಣ ಚಮಸದ ಮೂಲಕ, **ಆಧವನೀಯ** ದ್ರೋಣಿಯೊಳಗೆ ಸುರಿಯುತ್ತಾನೆ; ಅನಂತರ **ಶೋಧನಿ**ಯನ್ನು (ಜರಡಿ) **ಪೂತಭೃತ್** ದ್ರೋಣಿಯ ಮೇಲೆ, ಅಂಚು ಉತ್ತರಕ್ಕೆ ಇರುವಂತೆ ಹಾಸಿ ಆಧವನೀಯ ದ್ರೋಣಿಯಲ್ಲಿರುವ ಸೋಮದ ಒಂದುಭಾಗವನ್ನು ಸುರಿದು, ಮೂರು ದ್ರೋಣಿಗಳನ್ನು (ಆಧವನೀಯ, ದ್ರೋಣಕಲಶ ಮತ್ತು ಪೂತಭೃದ್ದ್ರೋಣಿ) ವಿಶೇಷ ಮಂತ್ರಪೂರ್ವಕವಾಗಿ ಮುಟ್ಟುತ್ತಾನೆ (ಆಪ. XII ೧೬. ೧೧) ಅನಂತರ, ಅಧ್ವರ್ಯು, ಪ್ರಸ್ತೋತಾ, ಪ್ರತಿಹರ್ತಾ, ಉದ್ಗಾತಾ, ಕಡೆಯಲ್ಲಿ ಬ್ರಹ್ಮ, ಈ ಕ್ರಮದಲ್ಲಿ, ಬಲಗೈಯಿಂದ ಒಬ್ಬರನ್ನೊಬ್ಬರು ಸ್ಪರ್ಶಿಸುತ್ತಾ ಹವಿರ್ಧಾನಶಾಲೆಯಿಂದ ಹೊರಬರುತ್ತಾರೆ. (ತಾಂ. ಬ್ರಾ. VI. ೭. ೧೨., ಆಪ. XII. ೧೭. ೧). ಇದರಲ್ಲಿ ಸ್ವಲ್ಪ ಕ್ರಮವ್ಯತ್ಯಾಸವೂ ಅಂಗೀಕೃತವಾಗಿದೆ.

ಸೋಮಸವನ ಕಾಲದಲ್ಲಿ, ಕೆಲವು ಸೋಮ ಬಿಂದುಗಳು ಬಿದ್ದಿರಬಹುದು. ಈ ಸೋಮಬಿಂದುಗಳೂ ದೇವತೆಗಳಿಗೇ ಸೇರಬೇಕು ಮತ್ತು ಆರೀತಿ ಚೆಲ್ಲಿ ಹೋದುದಕ್ಕೆ ಪ್ರಾಯಶ್ಚಿತ್ತವೂ ಆಗಬೇಕು ಎಂಬ ಉದ್ದೇಶದಿಂದ ನಾಲ್ಕು 'ವಿಪ್ರುಡ್ಢೋಮ'

( ವಿಪ್ರುಷ್-ಬಿಂದು ಅಥವಾ ತುಂತುರು ) ಗಳನ್ನು ಈ ಋತ್ವಿಜರು ( ಅಧ್ವರ್ಯುವು ಒಬ್ಬನೇ ಮಾಡಬೇಕೆಂದು ಕಾತ್ಯಾಯನರು ) ಆಚರಿಸುತ್ತಾರೆ. ಈ ಐದು ಜನರೂ,—ಅಧ್ವರ್ಯುವು ಮುಂದೆ, ಬ್ರಹ್ಮನು ಹಿಂದೆ-ಬ್ರಹ್ಮನನ್ನು ಸ್ಪರ್ಶಿಸುತ್ತಾ ಯಜಮಾನನೂ, ತಲೆಯನ್ನೂ ಬಗ್ಗಿಸಿಕೊಂಡು, ಕಳ್ಳ ಹೆಜ್ಜೆಯಿಡುತ್ತಾ ( ಬೇಟೆಯನ್ನು ಹಿಂಬಾಲಿಸುವರಂತೆ), **ಬಹಿಷ್ಪವಮಾನ** ಗಾನಕ್ಕಾಗಿ, ಉತ್ತರದ ಕಡೆಗೆ ಹೋಗುತ್ತಾರೆ. ವೇದಿಯ ಮೇಲೆ ಹರಡಿರುವ ಹುಲ್ಲಿನಲ್ಲಿ ಎರಡನ್ನು ತೆಗೆದುಕೊಂಡು, ಅಧ್ವರ್ಯುವು ಒಂದನ್ನು ಚಾತ್ವಾಲಗರ್ತದೊಳಗೂ, ಮತ್ತೊಂದನ್ನು ಉದ್ಗಾತೃವರ್ಗದ ಮುಂದೆಯೂ ಎಸೆಯುತ್ತಾನೆ. ಅಥವಾ ಒಂದು ಮುಷ್ಟಿಯಷ್ಟು ದರ್ಭೆಯನ್ನು ಪ್ರಸ್ತೋತೃವಿಗೆ ಕೊಡುತ್ತಾನೆ. ಈಗ ಉದ್ಗಾತೃವು 'ಗಾನ ಮಾಡೋಣ'? ಎಂಬುದಾಗಿ ಬ್ರಹ್ಮನ ( ಆಶ್ವಲಾಯನರು—೫.2.11. ಮೈತ್ರಾವರುಣನ ಆಜ್ಞೆಯೂ ಬೇಕೆನ್ನುತ್ತಾರೆ ) ಅನುಜ್ಞೆಯನ್ನು ಕೇಳುತ್ತಾನೆ ಮತ್ತು ಆತನು ಪ್ರಾತಃಸವನವಾದರೆ 'ಭೂಃ ಇಂದ್ರವನ್ತಃ' ಎಂಬುದಾಗಿಯೂ, ಉಳಿದವೆರಡರಲ್ಲಿ ಕ್ರಮವಾಗಿ 'ಭುವಃ' 'ಸ್ವಃ ಇಂದ್ರವನ್ತಃ' ಎಂಬುದಾಗಿ ಉಚ್ಚರಿಸಿ, ಅನಂತರ 'ಅಗಲಿ, ಅಗತ್ಯವಾಗಿ ಗಾನಮಾಡಿ,' ಎಂದೂ ಅನುಜ್ಞೆ ಕೊಡುತ್ತಾನೆ. (ಆಶ್ವ.5.2.12,13). ಆದರೆ ಆಪ. XIV. 9.7 ಮತ್ತು X. 10.1 ರಲ್ಲಿ, ಬ್ರಹ್ಮನು "ದೇವ ಸವಿತ...." ಮಂತ್ರವನ್ನೂ, (ತಾಂ.I.9–10) **ಸ್ತೋಮಭಾಗ**ಗಳಲ್ಲಿ ಒಂದಾದ "ರಶ್ಮಿರಸಿ...." ಮಂತ್ರವನ್ನೂ ಉಚ್ಚರಿಸಿ, ಅನಂತರವೇ ಅನುಮತಿ ಕೊಡುತ್ತಾನೆ, ಎಂದು ಹೇಳಿದೆ. ಪವಮಾನವನ್ನು ಹೇಳಬೇಕಾದಾಗಲೆಲ್ಲಾ ಇದೇ ಕ್ರಮವನ್ನನುಸರಿಸುತ್ತಾರೆ (ಪ್ರಸ್ತೋತನಿಗೆ ದರ್ಭ ಮುಷ್ಟಿ ಪ್ರದಾನ ಮುಂತಾಗಿ). ಪವಮಾನದ ಹೊರತು ಇತರ ಸ್ತೋತ್ರಗಳನ್ನು ಹೇಳಬೇಕಾದಾಗ, ಅಧ್ವರ್ಯುವು ಗಾಯಕರಿಗೆ ಎರಡು ದರ್ಭೆಗಳನ್ನು ಕೊಟ್ಟು, "ಅಸರ್ಜಿ....ಉಪಾವರ್ತಧ್ವಂ" ಎಂದು ಹೇಳಿ, ಪ್ರಾರಂಭಿಸಬೇಕೆಂದು ತಿಳಿಸುತ್ತಾನೆ. ಬಹಿಷ್ಪವಮಾನ ಗಾನಕಾಲದಲ್ಲಿ, ಋತ್ವಿಜರೂ ಮತ್ತು ಯಜಮಾನನೂ ಚಾತ್ವಾಲಗರ್ತಕ್ಕೆ ಸಮೀಪವಾಗಿ, ವೇದಿಯ ಒಳಭಾಗದಲ್ಲಿ ಒಂದು ನಿರ್ದಿಷ್ಟಕ್ರಮದಲ್ಲಿ ಕುಳಿತುಕೊಳ್ಳುತ್ತಾರೆ ಮತ್ತು ಚಾತ್ವಾಲವನ್ನೇ ನೋಡುತ್ತಿರುತ್ತಾರೆ ಅಥವಾ ವೇದಿಯ ಉತ್ತರ ಭುಜದ ಸುತ್ತಲೂ ಕೂಡುತ್ತಾರೆ. ಉದ್ಗಾತೃವು ಉತ್ತರಾಭಿಮುಖನಾಗಿ, ಪ್ರಸ್ತೋತನು ಪಶ್ಚಿಮಾಭಿಮುಖನಾಗಿ, ಪ್ರತಿಹರ್ತನು ಆಗ್ನೇಯಾಭಿಮುಖನಾಗಿ ಕುಳಿತುಕೊಳ್ಳಬೇಕು. ಇವರ ಮುಂದುಗಡೆ, ಪಶ್ಚಿಮಕ್ಕೆ ಮುಖ ಮಾಡಿಕೊಂಡು, ಅಧ್ವರ್ಯು, ಪ್ರತಿಪಸ್ಥಾತೃಗಳೂ, ಯಜಮಾನನು ಇವರ ದಕ್ಷಿಣಕ್ಕೂ ಕುಳಿತುಕೊಳ್ಳಬೇಕು. ಎಲ್ಲಾ ಸ್ತೋತ್ರ ಕಾಲಗಳಲ್ಲಿಯೂ ಇವೇ ಅವರ ಆಸನಗಳು. ಹೀಗೆ ಕುಳಿತಮೇಲೆ, ಪ್ರಸ್ತೋತ, ಉದ್ಗಾತ ಮತ್ತು ಪ್ರತಿಹರ್ತರುಗಳೂ ಗಾನವನ್ನು ಆರಂಭಿಸುತ್ತಾರೆ. ಈ ಗಾನವಾಗುವ ಪ್ರದೇಶಕ್ಕೆ 'ಆಸ್ತಾವ'ವೆಂದು ಹೆಸರು (ಆಶ್ವ.V.3.16 ರ ಮೇಲಿನ ವ್ಯಾಖ್ಯಾನ). ಒಂದು ದಿನಕ್ಕಿಂತ ಹೆಚ್ಚಿಗೆ ನಡೆಯುವ ಯಾಗಗಳಲ್ಲಿ, ಮೊದಲನೆಯ ದಿನ ಹೊರತಾಗಿ, ಉಳಿದ ದಿನಗಳಲ್ಲಿ ಬಹಿಷ್ಪವಮಾನವು ಸದಸ್ಸಿನಲ್ಲಿಯೇ ನಡೆಯುತ್ತದೆ ಎಂಬುದಾಗಿ ದ್ರಾ. ಶ್ರೌ. IV. 1.13 ರಲ್ಲಿ ಹೇಳಿದೆ. ಯಜಮಾನ ಮತ್ತು ಋತ್ವಿಜರಲ್ಲಿ ಅಧ್ವರ್ಯುವನ್ನುಳಿದು, ನಾಲ್ವರಾದರೂ, ಗಾಯಕವರ್ಗದವರಾಗುತ್ತಾರೆ. ಈ ಗಾನದ ವಿಚಾರದಲ್ಲಿ ವಿಶೇಷ ವಿವರವಾಗಿ ಲಾ. 1.11.26., ದ್ರಾ. III. 4.6., III. 7.30, ಮುಂತಾದ ಸ್ಥಳಗಳಲ್ಲಿ ಉಕ್ತವಾಗಿವೆ. ಬಹಿಷ್ಪವಮಾನದ ಮೊದಲನೆಯ ಪ್ರಸ್ತಾವಕಾಲದಲ್ಲಿ ಯಜಮಾನನು ಮಂದ್ರಸ್ವರದಲ್ಲಿ, ಪ್ರಸಿದ್ಧವಾದ "ಅಸತೋ ಮಾ ಸದ್ಗಮಯ....ಮಾಮೃತಂ ಗಮಯ" ಎಂಬ ಮಂತ್ರವನ್ನು ಉಚ್ಚರಿಸುತ್ತಿರಬೇಕು (ಬೃ. ಉಪ. I. 3.28 ಮತ್ತು ಕಾತ್ಯಾ IX. ೭. ೪). ಆದರೆ ಆಪ. XII. ೧೭. ೧೪ ರಲ್ಲಿ, **ದಶಹೋತೃ** ಮಂತ್ರಗಳನ್ನುಚ್ಚರಿಸಬೇಕೆಂದಿದೆ. ಎಲ್ಲಾ ಸವನಗಳಲ್ಲಿಯೂ ಮೊದಲನೆಯ ಸ್ತೋತ್ರಕ್ಕೆ ಪವಮಾನವೆಂದೂ, ಪ್ರಾತಸ್ಸವನದಲ್ಲಿ ಬಹಿಷ್ಪವಮಾನವೆಂದೂ, ಉಳಿದೆರಡರಲ್ಲಿ ಮಾಧ್ಯಂದಿನ ಸವನ ಮತ್ತು ಆರ್ಭವ ಅಥವಾ ತೃತೀಯಸವನವೆಂದೂ ಕ್ರಮವಾಗಿ ಹೆಸರು. ಲಾ. I. ೧೨. ೧ ಮತ್ತು ದ್ರಾ. ಶ್ರೌ, III. ೪. ೧೬-೧೭ ರ ಪ್ರಕಾರ, ಬಹಿಷ್ಪವಮಾನಕ್ಕೆ ಅನುಜ್ಞೆಕೇಳುವವರು, ಕೇಳುವ ವಿಧಾನಗಳಲ್ಲಿ ಸ್ವಲ್ಪ ವ್ಯತ್ಯಾಸವಿದೆ.

ಚಾತ್ವಾಲಗರ್ತವನ್ನು ನೋಡುತ್ತಾ ಸಾಮಗರು (ಪ್ರಸ್ತೋತ, ಉದ್ಗಾತ ಮತ್ತು ಪ್ರತಿಹರ್ತ) ಬಹಿಷ್ಪವಮಾನವನ್ನು ಆರಂಭಿಸುತ್ತಾರೆ. ಇದರಲ್ಲಿ ಒಂಬತ್ತು ಮಂತ್ರಗಳಿವೆ (ಋ. IX. ೧೧. ೧-೩., IX. ೬೪. ೨೮-೩೦., ಮತ್ತು IX. ೬೬. ೧೦-೧೨

ಇವೇ ಸಾ.ವೇ. II. ೧. ೧-೧೩ ಮಂತ್ರಗಳಾಗುತ್ತವೆ). ಲಾ. VI. ೧೦. ೧ನೆಯ ಸೂತ್ರವ್ಯಾಖ್ಯಾನದಲ್ಲಿ, ಪ್ರತಿ ಸ್ತೋತ್ರದ ಸಾಮದಲ್ಲಿಯೂ, ಪ್ರಸ್ತಾವ (ಎಲ್ಲರೂ ಒಟ್ಟಿಗೆ 'ಹುಂ' ಕಾರದಿಂದ ಆರಂಭಿಸುವ ಭಾಗ), ಉದ್ಗೀಥ, ಪ್ರತಿಹಾರ, ಉಪದ್ರವ ಮತ್ತು ನಿಧನ ಎಂಬುದಾಗಿ ಐದುಭಾಗಗಳಿವೆ; ಇವುಗಳನ್ನು ಗಾನಮಾಡುವವರು ಕ್ರಮವಾಗಿ, ಪ್ರಸ್ತೋತ, ಉದ್ಗಾತ, ಪ್ರತಿಹರ್ತ, ಉದ್ಗಾತ ಮತ್ತು ಮೂವರೂ ಒಟ್ಟಾಗಿ. ಬಹಿಷ್ಪವಮಾನವು ಹುಂಕಾರದಿಂದಲೂ, ಉದ್ಗೀಥವು ಓಂಕಾರ ದಿಂದಲೂ ಆರಂಭಿಸಲ್ಪಡುತ್ತವೆ (ಲಾ. VI. ೧೦-೧೩) ಇತರ ಸ್ತೋತ್ರಗಳಲ್ಲಿ 'ಹಿಂ' ಕಾರವು ಒಂದಕ್ಕಿಂತ ಹೆಚ್ಚುಸಲ ಉಚ್ಚರಿಸ ಲ್ಪಡುತ್ತದೆ. ಸಾಧಾರಣವಾಗಿ ಸಾಮಮಂತ್ರಗಳೆಲ್ಲವೂ ಋಗ್ವೇದದಿಂದಲೇ ಆರಿಸಿದವು.

ಅನಂತರ ಸಾಮಗಾನಮಾಡುವ ಉದ್ಗೀತಾ ಮೊದಲಾದ ಮೂವರು ಋತ್ವಿಜರು ಬಹಿಷ್ಪವಮಾನವೆಂಬ ಸ್ತೋತ್ರವನ್ನು ಗಾನಮಾಡುವರು. ಇದನ್ನು ಗಾನಮಾಡುವ ಕಾಲದಲ್ಲಿ ಈ ಋತ್ವಿಜರೂ ಅಧ್ವರ್ಯುವೂ ಯಜ್ಞವೇದಿಯಿಂದ ಹೊರಕ್ಕೆ ಹೋಗಿ ಚಾತ್ವಾಲ (ಯಜ್ಞದಲ್ಲಿ ಉಪಯೋಗಕ್ಕೆ ಬಾರದ ವಸ್ತುಗಳನ್ನು ಹಾಕಲು ಮಾಡಿರುವ ಒಂದು ಸಣ್ಣ ಹಳ್ಳ) ಎಂಬ ಹಳ್ಳಕ್ಕೆ ಎದುರಾಗಿ ಕುಳಿತು ಗಾನಮಾಡುವರು. ಯಜ್ಞವೇದಿಯಿಂದ ಹೊರಗಡೆ ಈ ಸ್ತೋತ್ರವನ್ನು ಗಾನಮಾಡುವುದರಿಂದ ಇದಕ್ಕೆ ಬಹಿ(ಹೊರಗೆ)ಷ್ಪವಮಾನವೆಂದು ಹೆಸರು. ಹೋತೃವು ಮಾತ್ರ ಯಜ್ಞವೇದಿಯಿಂದ ಹೊರಗೆ ಹೋಗದೆ ಅಲ್ಲಿಯೇ ಕುಳಿತಿರುವನು. ಈ ಬಹಿಷ್ಪವಮಾನ ಸ್ತೋತ್ರದಲ್ಲಿರುವ ಮಂತ್ರಗಳು ಋಗ್ವೇದದಲ್ಲಿಯೂ ಸಾಮವೇದದಲ್ಲಿಯೂ ಇರುವುವು. ಸಾಮವೇದದಲ್ಲಿ ಒಂದೇ ಕಡೆ ಇರುವವು. ಋಗ್ವೇದದಲ್ಲಿ ಬೇರೆಬೇರೆಕಡೆ ಇವೆ. ಒಟ್ಟು ಒಂಭತ್ತು ಋಕ್ಕುಗಳಿರುವುವು. ಅವು ಯಾವವೆಂದರೆ—

ಉಪಾಸ್ಮೈ ಗಾಯತಾ ನರಃ ಪವಮಾನಾಯೇಂದವೇ । ಅಭಿ ದೇವಾನ್ ಇಯಕ್ಷತೇ ॥೧॥
(ಋ.ಸಂ. ೯-೧೧-೧; ಸಾಮ. ಉತ್ತರಾರ್ಚಿಕ್ ೧-೧-೧; ೬೫೧; ೭೬೩)

ಅಭಿ ತೇ ಮಧುನಾಪಯೋಽಥರ್ವಾಣೋ ಅಶಿಶ್ರಯುಃ । ದೇವಂ ದೇವಾಯ ದೇವಯು ॥೨॥
(ಋ. ಸಂ. ೯-೧೧-೨; ಸಾ.ವೇ. ೧-೧-೨; ೬೫೨)

ಸ ನಃ ಪವಸ್ವ ಶಂ ಗವೇ ಶಂ ಜನಾಯ ಶಮರ್ವತೇ । ಶಂ ರಾಜನ್ನೋಷಧೀಭ್ಯಃ ॥೩॥
(ಋ.ಸಂ. ೯-೧೧-೩; ಸಾ.ವೇ. ೧-೧-೩; ೬೫೩)

ದವಿದ್ಯುತತ್ಯಾ ರುಚಾ ಪರಿಷ್ಟೋಭಂತ್ಯಾ ಕೃಪಾ । ಸೋಮಾಃ ಶುಕ್ರಾ ಗವಾಶಿರಃ ॥೪॥
ಋ.ಸಂ. ೯-೬೪-೨೮; ಸಾ.ವೇ. ೧-೧-೪; ೬೫೪)

ಹಿನ್ವಾನೋ ಹೇತೃಭಿರ್ಹಿತ ಆ ವಾಜಂ ವಾಜ್ಯಕ್ರಮೀತ್ । ಸೀದಂತೋ ವನುಷೋ ಯಥಾ ॥೫॥
(ಋ.ಸಂ. ೯-೬೪-೨೯; ಸಾ.ವೇ. ೧-೧-೫; ೬೫೫)

ಋಧಕ್ಸೋಮ ಸ್ವಸ್ತಯೇ ಸಂಜಗ್ಮಾನೋ ದಿವಾ ಕವೇ । ಪವಸ್ವ ಸೂರ್ಯೋ ದೃಶೇ ॥೬॥
(ಋ.ಸ. ೯-೬೪-೩೦; ಸಾ.ವೇ. ೧-೧-೬; ೬೫೬)

ಪವಮಾನಸ್ಯ ತೇ ಕವೇ ವಾಜಿನ್ತ್ಸರ್ಗಾ ಅಸೃಕ್ಷತ । ಅರ್ವಂತೋ ನ ಶ್ರವಸ್ಯವಃ ॥೭॥
(ಋ.ಸಂ. ೯-೬೬-೧೦; ಸಾ.ವೇ. ೧-೧-೭; ೬೫೭)

ಅಚ್ಛಾಕೋಶಂ ಮಧುಶ್ಚುತಮಸೃಗ್ರಂ ವಾರೇ ಅವ್ಯಯೇ । ಅವಾವಶಂತ ಧೀತಯಃ ॥೮॥
(ಋ.ಸಂ. ೯-೬೬-೧೧; ಸಾ.ವೇ. ೧-೧-೮; ೬೫೮)

ಅಚ್ಛಾ ಸಮುದ್ರಮಿಂದವೋಽಸ್ತಂ ಗಾವೋ ನ ಧೇನವಃ । ಅಗ್ಮನ್ನೃತಸ್ಯ ಯೋನಿಮಾ ॥೯॥
(ಋ.ಸಂ. ೯-೬೭-೧೨; ಸಾ.ವೇ. ೧-೧-೯; ೬೫೯)

ಈ ಒಂಭತ್ತು ಮಂತ್ರಗಳೂ ಒಟ್ಟು ಸೇರಿ ಬಹಿಷ್ಪವಮಾನಸ್ತೋತ್ರವೆನಿಸುವುದು. ಪ್ರತಿಯೊಂದು ಸ್ತೋತ್ರದಲ್ಲಿಯೂ ಪ್ರಸ್ತಾವ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನಗಳೆಂಬ ಐದು ವಿಭಾಗಗಳಿರುವುವು. ಎಲ್ಲ ಸಾಮಗಾನಮಾಡುವ ಋತ್ವಿಜರೂ ಮೊದಲು ಹುಂ ಎಂದು ಉಚ್ಚರಿಸಿ ಅನಂತರ ಪ್ರಸ್ತೋತೃವು ಪ್ರಸ್ತಾವವೆಂಬ ಭಾಗವನ್ನೂ, ಉದ್ಗಾತೃವು ಉದ್ಗೀಥವನ್ನೂ ಪ್ರತಿಹರ್ತೃವು ಪ್ರತಿಹಾರವನ್ನೂ, ಉದ್ಗಾತೃವು ಉಪದ್ರವವನ್ನೂ, ಎಲ್ಲರೂ ಸೇರಿ ನಿಧನ ಎಂಬ ಭಾಗವನ್ನು ಗಾನಮಾಡುವರು. ಋಗ್ವೇದದಲ್ಲಿ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯ ಎಂದು ನಾಲ್ಕು ಸ್ವರಗಳು ಇರುವವು. ಸಾಮವೇದದಲ್ಲಿ– ಕೃಷ್ಟ, ಪ್ರಥಮ, ದ್ವಿತೀಯ ತೃತೀಯ, ಚತುರ್ಥ, ಪಂಚಮ ಅಂತ (ಅತಿಸ್ವಾರ್ಯ) ಎಂದು ಏಳುವಿಧ ಸ್ವರಗಳಿರುವುವು (ಸಾಮವಿಧಾನ ಬ್ರಾಹ್ಮಣ ೧-೧-೮). ಸಾಮಗಾನವನ್ನು ಮಾಡುವಾಗ ಈ ಸಪ್ತಸ್ವರಗಳಿಗನುಸಾರವಾಗಿ ಮಾಡಬೇಕು. ಇವುಗಳ ವಿಸ್ತಾರವಾದ ವಿವರಣೆಯನ್ನೂ ಇಲ್ಲಿ ಕೊಡಲು ಸಾಧ್ಯವಿಲ್ಲ.

[ಮುಂದೆ ಹೇಳಲ್ಪಡಬೇಕಾದ ರಥಂತರಸಾಮದ ಮಂತ್ರಗಳು ಋ.ಸಂ. ೭-೩೨-೨೨, ೨೩ ಎಂಬ ಎರಡು ಋಕ್ಕುಗಳು—

**ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ ।**
**ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ ॥**
(ಋ.ಸಂ. ೭-೩೨-೨೨ ; ಸಾ.ವೇ. ೧-೩-೧-೫-೧ ; ೨೩೩ ; ೬೮೦)

**ನ ತ್ವಾವಾನ್ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ ।**
**ಅಶ್ವಾಯಂತೋ ಮಘವನ್ನಿಂದ್ರ ವಾಜಿನೋ ಗವ್ಯಂತಸ್ತ್ವಾ ಹವಾಮಹೇ ॥**
(ಋ.ಸಂ. ೭-೨೩-೨೩ ; ಸಾ.ವೇ. ೨-೧-೧-೧೨-೨ ; ೬೮೧)

ಯಜ್ಞಾಯಜ್ಞೀಯಸಾಮವು

**ಯಜ್ಞಾಯಜ್ಞಾ ವೋ ಅಗ್ನಯೇ ಗಿರಾ ಗಿರಾ ಚ ದಕ್ಷಸೇ ।**
**ಪ್ರಪ್ರ ವಯಮಮೃತಂ ಜಾತವೇದಸಂ ಪ್ರಿಯಂ ಮಿತ್ರಂ ನ ಶಂಸಿಷಂ ॥**
(ಋ.ಸಂ. ೬-೪೮-೧ ; ಸಾ.ವೇ. ೧-೧-೧-೪-೧ ; ೩೫ ; ೭೦೩)

**ಊರ್ಜೋ ನಪಾತಂ ಸ ಹಿನಾಯಮಸ್ಮಯುರ್ದಾಶೇಮ ಹವ್ಯದಾತಯೇ ।**
**ಭುವದ್ವಾಜೇಷ್ವವಿತಾ ಭುವದ್ವೃಧ ಉತ ತ್ರಾತಾ ತನೂನಾಂ ॥**
(ಋ.ಸಂ. ೬-೪೮-೨ ; ಸಾ.ವೇ. ೨-೧-೧-೨೦-೨ ; ೭೦೪)

ಇವುಗಳ ವಿಷಯವನ್ನು ಮುಂದೆ ವಿವರಿಸಲಾಗಿದೆ]

ಬಹಿಷ್ಪವಮಾನವನ್ನು ಹಾಡುತ್ತಿರುವ ಕಾಲದಲ್ಲಿ, ಉನ್ನೇತೃವು, ಆಧವನೀಯ ದ್ರೋಣಿಯಲ್ಲಿರುವ ಸೋಮರಸವನ್ನು, ಪೂತಭೃತ್ ದ್ರೋಣದೊಳಕ್ಕೆ, ಅದರಮೇಲೆ ಹರಡಿರುವ ಶೋಧನಿಯ ಮೂಲಕ, ಶೋಧಿಸುತ್ತಾನೆ ಗಾನವು ಮುಗಿದ ಕೂಡಲೇ, ಅಧ್ವರ್ಯುವು ಪ್ರೈಷಗಳನ್ನು ಕೊಡುತ್ತಾನೆ; ಧಿಷ್ಣ್ಯಗಳಲ್ಲಿ ಅಗ್ನಿಪ್ರತಿಷ್ಠಾಪನೆ, ವೇದಿಯಮೇಲೆ ಬರ್ಹಿರಾಸ್ತರಣ ಮತ್ತು ಪುರೋಡಾಶಾಲಂಕರಣಗಳು ಆಗ್ನೀಧ್ರನು ಮಾಡಬೇಕಾದವು; ಸವನೀಯ ಪಶುವನ್ನು ಪ್ರತಿಪ್ರಸ್ಥಾತನು ತರಬೇಕು. ಆಗ್ನೀಧ್ರನು ಹೊಳೆಯುತ್ತಿರುವ ಕೆಂಡವನ್ನು ತಂದು, ಹೋತೃಧಿಷ್ಣ್ಯದಿಂದ ಮೊದಲುಗೊಂಡು, ಎಲ್ಲಾ ಧಿಷ್ಣ್ಯಗಳಮೇಲೂ, ಆಸನರಚನಾಕಾಲದಲ್ಲಿ ಉಪಯೋಗಿಸಿದ ಮಂತ್ರಗಳನ್ನೇ ಉಚ್ಚರಿಸುತ್ತಾ, ಅಗ್ನಿಯನ್ನು ಪ್ರತಿಷ್ಠೆಮಾಡಬೇಕು; ಗಾರ್ಹಪತ್ಯದಿಂದ ಆಹವನೀಯದವರೆಗೆ ಪೃಷ್ಠ್ಯದಮೇಲೆ ಕುಶವನ್ನು ಹರಡಬೇಕು ಮತ್ತು ಪುರೋಡಾಶವನ್ನು ಅಲಂಕರಿಸಬೇಕು. ಅದೇ

ಋತ್ವಿಜನು ಆಹವನೀಯ, ಆಗ್ನೀಧ್ರೀಯ ಮತ್ತು ಮಾರ್ಜಾಲೀಯಾಗ್ನಿಗಳಲ್ಲಿ ಸೋಮಾಹುತಿಯನ್ನೂ, ಇತರ ಅಗ್ನಿಗಳಲ್ಲಿ ಆಜ್ಯಾಹುತಿಯನ್ನು ಕೊಡುತ್ತಾನೆ. ಯಜಮಾನನು ಸ್ಪರ್ಶಿಸುತ್ತಿರುವ ಹಾಗೆಯೇ, ಅಧ್ವರ್ಯುವು **ಪರಿಪ್ಲವಾ** ಎಂಬ ಹಿಡಿಯಿಲ್ಲದ ಸ್ರುಕ್ಕಿನಂತಿರುವ ಚಮಚದಿಂದ ದ್ರೋಣಕಲಶದಲ್ಲಿರುವ ಸೋಮರಸವನ್ನೂ ಆಶ್ವಿನಗ್ರಹ ಮತ್ತು ಧಾರಾಗ್ರಹಗಳಲ್ಲದ ಇತರ ಗ್ರಹಗಳಲ್ಲಿಯೂ ತುಂಬುತ್ತಾನೆ.

ಈಗ ಪಶುವಿನ ಆಹುತಿಗೆ ಸಂಬಂಧಿಸಿದ ಕಲಾಪಗಳು—ಯೂಪಕ್ಕೆ ತ್ರಿಗುಣಿತವಾದ ರಶನಾಬಂಧನದಿಂದ ಮೊದಲುಗೊಂಡು — ಪ್ರಾರಂಭವಾಗುತ್ತವೆ. ಹಿಂದಿನ ದಿನ ಅಗ್ನೀಷೋಮೀಯ ಪಶುವಿಗೆ ಉಪಯೋಗಿಸಿದ ಹಗ್ಗವೇ ಈಗಲೂ ಉಪಯೋಗಿಸಬಹುದೆಂದು ಕಾತ್ಯಾಯನರೂ (IX. ೮-೧), ಹೊಸಹಗ್ಗವೆಂದು ಆಪಸ್ತಂಬರೂ (XII. ೧೮-೧೨) ಅಭಿಪ್ರಾಯಪಡುತ್ತಾರೆ. ಅಗ್ನಿಷ್ಟೋಮದಲ್ಲಿ, ಅಗ್ನಿಯನ್ನುದ್ದೇಶಿಸಿ ಒಂದು ಆಡನ್ನೂ, ಉಕ್ಥ್ಯದಲ್ಲಿ, ಇದರ ಜೊತೆಗೆ, ಇಂದ್ರಾಗ್ನಿಗಳನ್ನುದ್ದೇಶಿಸಿ ಮತ್ತೊಂದನ್ನೂ ಷೋಡಶಿಯಲ್ಲಿ ಮೂರನೆಯದೊಂದನ್ನೂ, ಅತಿರಾತ್ರದಲ್ಲಿ ಸರಸ್ವತಿಗೆ ನಾಲ್ಕನೆಯದೊಂದನ್ನೂ ಬಲಿಕೊಡಬೇಕೆಂದು ಹೇಳಿದೆ. ಈ ನಾಲ್ಕು ಪಶುಗಳಿಗೆ ಸ್ತೋಮಾಯನ (ಕಾತ್ಯಾ. X. ೮-೭) ಗಳೆಂದೂ, ಕ್ರತುಪಶು (ಆಶ್ವ. V.೩-೪)ಗಳೆಂದೂ ಹೆಸರು. ನಿರೂಢಪಶುಬಂಧದಲ್ಲಿ ಅನುಸರಿಸಿದ ಕ್ರಮವನ್ನೇ ಇಲ್ಲಿಯೂ ಅನುಸರಿಸಬೇಕು – ವಪಾಹೋಮ ಮತ್ತು ಅನಂತರದ ಮಾರ್ಜನದವರೆಗೆ —. ಅನಂತರ, ಋತ್ವಿಜರು ಮತ್ತು ಯಜಮಾನನು ಸದಸ್ಸನ್ನು ಪ್ರವೇಶಿಸಿ, ಔದುಂಬರಿಗೆ ಪೂರ್ವಭಾಗದಲ್ಲಿ, ತಮ್ಮ ತಮ್ಮ ಆಸನಗಳಿಗೆ (ಧಿಷ್ಣ್ಯ) ಪಶ್ಚಿಮದಲ್ಲಿಯೂ ಕುಳಿತುಕೊಳ್ಳಬೇಕು. ಕೂಡುವುದಕ್ಕೆ ಮೊದಲು, ಮಂತ್ರಪೂರ್ವಕವಾಗಿ ಎಲ್ಲಾ ಗ್ರಹಗಳು, ಮೂರು ದ್ರೋಣಿಗಳು, ಶುದ್ಧವಾದ ಘೃತ ಮತ್ತು ಇತರ ಪಾತ್ರೆಗಳು, ಎಲ್ಲವನ್ನೂ ನೋಡಬೇಕು. ಯಜಮಾನನು ಇವುಗಳೆಲ್ಲಕ್ಕೂ ಪೂಜೆಮಾಡಬೇಕು. (ಆಪ. XII. ೧೯-೫).

ಈ ಸಮಯದಲ್ಲಿ, ಪ್ರತಿಪ್ರಸ್ಥಾತನು ಹಿಂದೆ ಹೇಳಿರುವ ಐದು ಸವನೀಯಾಹುತಿಗಳನ್ನು ತರುತ್ತಾನೆ. ಅಧ್ವರ್ಯುವು ಅವುಗಳನ್ನು ವೇದಿಯಮೇಲಿಟ್ಟು, ಅವುಗಳಲ್ಲಿ ಒಂದೊಂದು ಭಾಗವನ್ನು ತೆಗೆದುಕೊಂಡು, ಒಂದು ದೊಡ್ಡ ಪಾತ್ರೆಯಲ್ಲಿ ಅಥವಾ ಜುಹುವಿನಲ್ಲಿ, ಇಂದ್ರನ ಪುರೋಡಾಶವು ಮಧ್ಯದಲ್ಲಿಯೂ, ಧಾನಾ: ಎಂಬುದು ಅದರ ಪೂರ್ವಕ್ಕೂ, ಕರಂಭವು ದಕ್ಷಿಣಕ್ಕೂ ಪಶ್ಚಿಮಕ್ಕೂ ಮತ್ತು ಆಮಿಕ್ಷಾ ಎಂಬುದು ಉತ್ತರಕ್ಕೂ ಬರುವಂತೆ ಜೋಡಿಸುತ್ತಾನೆ. ಸ್ವಿಷ್ಟಕೃತ್ ಅಗ್ನಿಗೆ ಮೀಸಲಾದ ಭಾಗವು ಉಪಭೃತ್ ಎಂಬ ಪಾತ್ರೆಯಲ್ಲಿಡುತ್ತಾನೆ. ಅನಂತರ ಪ್ರಾತಃಸವನಕಾಲದಲ್ಲಿ ಇಂದ್ರನಿಗೆ ಕೊಡಬೇಕಾದ ಪುರೋಡಾಶ ಮೊದಲಾದ ಆಹುತಿಗಳಿಗೆ ಸಂಬಂಧಿಸಿದ **ಅನುವಾಕ್ಯಾ**ವನ್ನು ಉಚ್ಚರಿಸುವಂತೆ ಮೈತ್ರಾವರುಣನಿಗೂ, ಅದಕ್ಕನುಗುಣವಾದ **ಯಾಜ್ಯಾ**ಗಳನ್ನು ಹೇಳುವಂತೆ ಹೋತೃವಿಗೂ ತಿಳಿಸುತ್ತಾನೆ. ಈ ಪುರೋಡಾಶಾದಿ ಅನುವಾಕ್ಯಗಳು ಮೂರುಸವನಗಳಿಗೂ ಪ್ರತ್ಯೇಕವಾಗಿವೆ. ಇವು ಕ್ರಮವಾಗಿ ಋಗ್ವೇದ III ೫೨. ೧, ೫ ಮತ್ತು ೬ ನೆಯ ಮಂತ್ರಗಳು. ಅದೇರೀತಿ ಸ್ವಿಷ್ಟಕೃದ್ಧೋಮಕ್ಕೆ ಮೂರುಸವನಗಳಲ್ಲಿ ಋ. III. ೨೮, ೧, ೪ ಮತ್ತು ೫ ನೆಯ ಮಂತ್ರಗಳು. ಅಧ್ವರ್ಯುವು ಅಗ್ನಿಯಲ್ಲಿ ಮುಖ್ಯ ಆಹುತಿಯನ್ನೂ, ಸ್ವಿಷ್ಟಕೃದ್ಧೋಮವನ್ನೂ ಮಾಡಿ, ಉಳಿದುದರಲ್ಲಿ ಒಂದು ಭಾಗವನ್ನು ಬ್ರಹ್ಮನಿಗಾಗಿ, ಇಳಾದಲ್ಲಿ ಒಂದು ಭಾಗವನ್ನು ಹೋತೃವಿಗಾಗಿ ಆತನ ಆಸನದಮೇಲಿಟ್ಟು, ಉಳಿದುದೆಲ್ಲವನ್ನೂ ಯಜಮಾನನಿಗಾಗಿ ಸುರಕ್ಷಿತವಾಗಿ ತೆಗೆದಿಡುತ್ತಾನೆ.

ಅನಂತರ **ದ್ವಿದೇವತ್ಯಗ್ರ**ಹಗಳಾದ, ದೇವತಾದ್ವಯಗಳು, ಇಂದ್ರ ಮತ್ತು ವಾಯು, ಮಿತ್ರ ಮತ್ತು ವರುಣ ಮತ್ತು ಅಶ್ವಿನೀ ದೇವತೆಗಳಿಗೆ ಸೋಮಾಹುತಿಗಳು. ಇದಾದಮೇಲೆ **ಚಮಸೋನ್ನಯನ**ವೆಂಬ ಕರ್ಮ. ಉತ್ತರವೇದಿಗೆ ಪಶ್ಚಿಮದಲ್ಲಿ, ಉನ್ನೇತೃವು **ಚಮಸಾಧ್ವರ್ಯು**ಗಳಿಗಾಗಿ ಒಂಭತ್ತು ಚಮಸಗಳನ್ನೂ ಸೋಮದಿಂದ ತುಂಬುತ್ತಾನೆ, ಮೊದಲು ದ್ರೋಣಕಲಶದಿಂದ ಸ್ವಲ್ಪ ಸೋಮವನ್ನೂ (ಇದೇ **ಉಪಸ್ತರಣ**ವೆನ್ನಿಸಿಕೊಳ್ಳುತ್ತದೆ), ಪೂತಭೃದ್ದ್ರೋಣದಿಂದ ಸ್ವಲ್ಪ ಸೋಮವನ್ನೂ, ಮತ್ತೊಂದುಸಲ ದ್ರೋಣಕಲಶದಿಂದ ಸ್ವಲ್ಪ ಸೋಮವನ್ನೂ, ಒಂದೊಂದು ಚಮಸದಲ್ಲಿಯೂ ಹಾಕು

ತ್ತಾನೆ (ಇದಕ್ಕೆ **ಅಭಿಘಾರಣ**ವೆನ್ನುತ್ತಾರೆ), ಈ ಒಂಭತ್ತನ್ನು ತುಂಬುವುದರಲ್ಲಿ ಈ ಕ್ರಮವನ್ನು ಅನುಸರಿಸಬೇಕು—ಹೋತೃ, ಬ್ರಹ್ಮ, ಉದ್ಗಾತೃ, ಯಜಮಾನ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಪೋತೃ, ನೇಷ್ಟೃ ಮತ್ತು ಆಗ್ನೀಧ್ರರ ಚಮಸಗಳು (ಉನ್ನೇತೃ ಮತ್ತು ಅಚ್ಛಾವಾಕರಿಗೆ ಚಮಸಗಳಿಲ್ಲ). ಒಂದೊಂದು ಸವನದಲ್ಲಿ (ಪ್ರಾತಃ, ಮಾಧ್ಯಂದಿನ ಮತ್ತು ತೃತೀಯ), **ಚಮಸಪೂರಣ** ಮಾಡುವಾಗ, ಕ್ರಮವಾಗಿ, ಋ. I. ೧೬. VII. ೨೧., IV. ೩೫ ನೆಯ ಸೂಕ್ತಗಳನ್ನು ಪಠಿಸುತ್ತಾನೆ. (ಆಶ್ವ. V. ೫. ೧೪). ಇದಾದಮೇಲೆ **ಶುಕ್ರಾಮಂಥಿಪ್ರಚಾರ.** ಅಧ್ವರ್ಯುವು **ಶುಕ್ರ**ಗ್ರಹವನ್ನೂ, ಪ್ರತಿಪ್ರಸ್ಥಾತೃವು ಮಂಥಿ ಗ್ರಹವನ್ನೂ, ಚಮಸಾಧ್ವರ್ಯುಗಳು ಉತ್ತರವೇದಿಯ ಮೇಲಿಟ್ಟಿರುವ ಚಮಸಗಳನ್ನೂ ಕೈಗೆ ತೆಗೆದುಕೊಳ್ಳುತ್ತಾರೆ. (ಈ ಚಮಸಾಧ್ವರ್ಯುಗಳು ಯಜಮಾನನಿಂದ ವೃತರಾದ ಹೋತ್ರಾದಿ ಋತ್ವಿಜರಲ್ಲ; ಆಯಾ ಋತ್ವಿಜರಿಂದಲೇ ಆರಿಸಲ್ಪಟ್ಟ ಸಹಾಯಕರು. ಜೈ. III. ೭. ೨೭. ಮತ್ತು ಜೈ. III. ೭. ೨೬–೨೭ ರಲ್ಲಿ ಅವರು ಹತ್ತುಜನವೆಂದೂ ಹೇಳಲ್ಪಟ್ಟಿದೆ). ಯೂಪ ಸ್ತಂಭವನ್ನು ಮಾಡಿದಾಗ ಕತ್ತರಿಸಿದ, ಪ್ರೋಕ್ಷಿತವಾದ, ಎರಡು ಮರದ ಚೂರುಗಳಿಂದ, ಅಧ್ವರ್ಯು ಪ್ರತಿಪ್ರಸ್ಥಾತೃಗಳು ತಮ್ಮ ಗ್ರಹಗಳನ್ನು ಮುಚ್ಚಿ ಮತ್ತೆರಡು ಪ್ರೋಕ್ಷಿತವಲ್ಲದ ಮರದ ಚೂರುಗಳಿಂದ, ಗ್ರಹಗಳನ್ನು ಮೇಲಿನಿಂದ ಕೆಳಕ್ಕೆ ಒರೆಸಿ, ಉತ್ತರ ವೇದಿಯ ಪಶ್ಚಿಮದ ಅಂಚಿನ ದಕ್ಷಿಣ ಮತ್ತು ಉತ್ತರ ಮೂಲೆಗಳಲ್ಲಿ ಗ್ರಹಗಳನ್ನು ಇಟ್ಟು, ತಾವೂ ಯೂಪದ ದಕ್ಷಿಣ ಮತ್ತು ಉತ್ತರ ಪಾರ್ಶ್ವಗಳಿಗೆ ಹೋಗಿ, ಪ್ರೋಕ್ಷಿತವಲ್ಲದ ಮರದ ಚೂರುಗಳನ್ನು ವೇದಿಯಿಂದ ಆಚೆಗೆ ಬಿಸುಟು, ಪ್ರೋಕ್ಷಿತವಾದ ಚೂರು ಗಳನ್ನು ಆಹವನೀಯದ ಒಳಗೆ ಹಾಕಿ, ಪಶ್ಚಿಮದಕಡೆ ತಿರುಗಿಕೊಂಡು, ಆಹುತಿಗಳನ್ನು ಕೊಡುತ್ತಾರೆ. ಚಮಸಾಧ್ವರ್ಯುಗಳೂ (ಒಂಭತ್ತು ಜನ) ಮೌನವಾಗಿ, ಪೂರ್ವಾಭಿಮುಖರಾಗಿ, ಹೋಮಮಾಡುತ್ತಾರೆ. ಎಲ್ಲಾ ಆಹುತಿಗಳೂ ಇಂದ್ರ ದೇವತಾಕ ವಾದುವು. ಪ್ರತಿಪ್ರಸ್ಥಾತೃವು ಮಂಥಿಗ್ರಹದಲ್ಲಿ ಉಳಿದಿರುವ ಸೋಮವನ್ನು ಶುಕ್ರಗ್ರಹದೊಳಗೆ ಹಾಕುತ್ತಾನೆ. ಈ ಮಿಶ್ರಿತವಾದ ಸೋಮರಸದ ಶೇಷವನ್ನು, ಅಧ್ವರ್ಯುವು ಹೋತೃ ಚಮಸದೊಳಕ್ಕೆ ಹಾಕುತ್ತಾನೆ. ಅಧ್ವರ್ಯುವಿನ ಆದೇಶದಿಂದ, ಚಮ ಸಾಧ್ವರ್ಯುಗಳು ತಮ್ಮ ಚಮಸಗಳನ್ನು ದ್ರೋಣಕಲಶದಿಂದ ಪುನಃ ತುಂಬಿಕೊಂಡು, ಕ್ರಮವಾಗಿ, ಮಿತ್ರ ವರಣರು, ಇಂದ್ರ, ಮರುತ್ತುಗಳು, ತ್ವಷ್ಟ ಮತ್ತು ಅಗ್ನಿದೇವತೆಗಳನ್ನು ಉದ್ದೇಶಿಸಿ, ಅಗ್ನಿಯಲ್ಲಿ ಹೋಮಮಾಡುತ್ತಾರೆ. ಅನಂತರ, ಹೋತೃ, ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳು ದ್ವಿದೇವತ್ಯಗ್ರಹಗಳಲ್ಲಿ ಉಳಿದಿದ್ದ (ಇಂದ್ರ ವಾಯು, ಮಿತ್ರಾವರುಣ ಮತ್ತು ಆಶ್ವಿನಿಗಳು) ಸೋಮರಸವನ್ನು ಪಾನಮಾಡುತ್ತಾರೆ (ಆಪ. XII. ೨೫. ೧೩). ಪ್ರಥಮಪಾನವು ಅಧ್ವರ್ಯುವಿನದೋ ಹೋತೃವಿನದೋ ಎಂಬ ವಿಷಯದಲ್ಲಿ ವಿವಾದವಿದೆ. ಇಂದ್ರವಾಯುಗ್ರಹದ ಸೋಮವನ್ನು ಎರಡುಸಲವೂ, ಉಳಿದೆರಡರಿಂದ ಒಂದೊಂದುಸಲವೂ ಪಾನ ಹೇಳಲ್ಪಟ್ಟಿದೆ. ಋತ್ವಿಜರ ಈ ಎಲ್ಲಾ ಪಾನಗಳ ಕಾಲದಲ್ಲಿಯೂ "ವಾಗ್ದೇವೀ ಜುಷಾಣಾ ಸೋಮಸ್ಯ ತೃಪ್ಯತು ಸಹ ಪ್ರಾಣೇನ ಸ್ವಾಹಾ" ಎಂಬ ಮಂತ್ರವನ್ನು ಉಚ್ಚರಿಸಬೇಕು (ವಾ. ಸಂ. VIII. ೩೭, ಆಪ. XII. ೨೪. ೧೧. ೧೨., ಕಾತ್ಯಾ. XI. ೧೧. ೧೯; ಆಶ್ವ. V. ೭. ೨೨). ಅನಂತರ ಗ್ರಹಗಳಲ್ಲಿ ಉಳಿದ ಸೋಮವು ಹೋತೃಚಮಸದಲ್ಲಿ ಹಾಕಲ್ಪಡಬೇಕು. ಅಧ್ವರ್ಯುವು ಪುರುಡೋಶದಲ್ಲಿ ಬಹಳ ಸ್ವಲ್ಪಭಾಗವನ್ನು ಐಂದ್ರವಾಯವ ಗ್ರಹದಲ್ಲಿಯೂ, **ಪಯಸ್ಯಾ**ದ ಸ್ವಲ್ಪಭಾಗವನ್ನು ಮೈತ್ರಾವರುಣ ಗ್ರಹದಲ್ಲಿಯೂ, ಧಾನಾದ ಒಂದಂಶವನ್ನು ಆಶ್ವಿನ ಗ್ರಹದಲ್ಲಿಯೂ ಹಾಕುತ್ತಾನೆ (ಜೈ. III. ೮. ೩೩ ರಲ್ಲಿ ಇದರಿಂದ ಪುರು ಡೋಶಾದಿಗಳ ಸಂಸ್ಕಾರವಾದಂತಾಯಿತು ಎಂದು ಹೇಳಿದೆ) ಪ್ರತಿಪ್ರಸ್ಥಾತನು ಈ ಗ್ರಹಗಳನ್ನು ದಕ್ಷಿಣದ ಹವಿರ್ಧಾನಶಕಟದ ಉತ್ತರದ ಚಕ್ರದ ಜಾಡಿನಮೇಲೆ ಇಡುತ್ತಾನೆ. ಅಧ್ವರ್ಯು ಮತ್ತು ಇತರ ಋತ್ವಿಜರು ವಾಜಿನ (ಕಾಯಿಸಿದ ಹಾಲಿಗೆ ಮೊಸರನ್ನು ಬೆರಸಿದಾಗ ಬರುವ ತಿಳಿ)ವನ್ನು ಹೋಮಮಾಡುತ್ತಾರೆ (ಕಾತ್ಯಾ. XI. ೧೨. ೧). ಎಲ್ಲಾ ಋತ್ವಿಜರೂ ಚಮಸಗಳಲ್ಲಿರುವ ಸೋಮವನ್ನು ಸೇವಿಸುತ್ತಾರೆ. ಹೋತೃವು ಎಲ್ಲಾ ಚಮಸಗಳಿಂದ ಒಂದೊಂದುಸಲವೂ, ತನ್ನ ಚಮಸದಿಂದ ಎರಡುಸಲವೂ, ಉಳಿದವರು ತಮ್ಮತಮ್ಮ ಚಮಸಗಳಿಂದ ಮಾತ್ರ ಎರಡೆರಡುಸಲವೂ ಸೋಮಪಾನ ಮಾಡುತ್ತಾರೆ (ಆಪ. XII. ೨೫. ೧೯-೨೧). ಸೋಮಪಾನ ಮಾಡಿದಮೇಲೆ ಎಲ್ಲರೂ ತಮ್ಮ ಹೊಟ್ಟೆ ಮತ್ತು ಎದೆ ಭಾಗಗಳನ್ನು ಮುಟ್ಟಿ, "ಅಪಾಮ ಸೋಮಮಮೃತಾ

ಅಭೂಮ......." ಇತ್ಯಾದಿ ಋ. VIII. ೪೮. ೩-೪ ನೆಯ ಮಂತ್ರಗಳನ್ನುಚ್ಚರಿಸಬೇಕು. ಅನಂತರ ಎಲ್ಲರೂ ತಮ್ಮತಮ್ಮ ಚಮಸಗಳನ್ನು, ಋ. I. ೯೧. ೧೬. ಮತ್ತು ೧೮ ನೆಯ ("ಆಪ್ಯಾಯಸ್ವ.......ಸಂಗಥೇ ॥ ಸಂತೇ ಪಯಾಂಸಿ.......ಧಿಷ್ವ ॥") ಮಂತ್ರಗಳನ್ನುಚ್ಚರಿಸುತ್ತಾ ಪೂತಭೃತ್ ದ್ರೋಣದಿಂದ ಪುನಃ ತುಂಬಿಕೊಳ್ಳುತ್ತಾರೆ. ದಕ್ಷಿಣ ಹವಿರ್ಧಾನಶಕಟದ ಕೆಳಗೆ, ಅಚ್ಚಿನ ಪಶ್ಚಿಮಕ್ಕೆ ಈ ಗ್ರಹಗಳು ಇಡಲ್ಪಡುತ್ತವೆ. ಇಲ್ಲಿಂದ ಮುಂದೆ ವೈಶ್ವದೇವಗ್ರಹವನ್ನು ತೆಗೆದುಕೊಳ್ಳುವವರೆಗೆ, ಈ ಗ್ರಹಗಳಿಗೆ **ನಾರಾಶಂಸಗಳೆಂದು** ಹೆಸರು (ಆಪ. XII. ೨೫. ೨೪-೨೭., ಕಾತ್ಯಾ. IX. ೧೫. ೫-೮). ಅಧ್ವರ್ಯುವು ಪುರೋಡಾಶದಲ್ಲಿ ಸ್ವಲ್ಪ ಭಾಗವನ್ನು ತೆಗೆದು ಅಚ್ಛಾವಾಕನಿಗೆ ಕೊಡುತ್ತಾ "ಎಲೈ ಅಚ್ಛಾವಾಕನೇ, ನೀನು ಹೇಳಬೇಕಾದುದನ್ನು ಹೇಳು" ಎಂದು ಹೇಳುತ್ತಾನೆ. ಈ ಕಾಲದಲ್ಲಿ ಅಚ್ಛಾವಾಕನು ಸದಸ್ಸಿನ ಹೊರಗಡೆ, ತನಗಾಗಿ ಸಿದ್ಧಪಡಿಸಿದ ಆಸನ (ಧಿಷ್ಣ್ಯ)ದ ಮುಂದುಗಡೆ ಕುಳಿತಿರಬೇಕು. ಪುರೋಡಾಶ ಭಾಗವನ್ನು ತನ್ನ ಬಾಯಿನ ಹತ್ತಿರ ಹಿಡಿದುಕೊಂಡು, ಋ. V. ೨೫. ೧-೩ ನೆಯ ("ಅಚ್ಛಾವೋ ಅಗ್ನಿಮವಸೇ.......") ಮೂರು ಮಂತ್ರಗಳನ್ನುಚ್ಚರಿಸಿ. ಕೊನೆಯ 'ಓಂ' ಜೊತೆಗೆ ಗದ್ಯಭಾಗ (ನಿಗದ)ವೊಂದನ್ನು ಹೇಳುತ್ತಾನೆ. ಇವರ ಅಂತ್ಯದಲ್ಲಿ "ಎಲೈ ಬ್ರಾಹ್ಮಣನೇ, ಬ್ರಾಹ್ಮಣರಾದ ನಮ್ಮನ್ನೂ ಆಹ್ವಾನಿಸು" ("....ಅಸ್ಮಾನ್ ಬ್ರಾಹ್ಮಣಾನ್ ಬ್ರಾಹ್ಮಣಾಹ್ವಯಧ್ವಮಿತಿ" ಆಶ್ವ. V. ೭-೩) ಎಂದು ಇದೆ. ಈ ಪ್ರಾರ್ಥನೆಯನ್ನು ಕೇಳಿದಕೂಡಲೇ ಅಧ್ವರ್ಯುವು ಅಚ್ಛಾವಾಕನನ್ನೂ ಸೋಮಪಾನಕ್ಕೆ ಆಹ್ವಾನಿಸುವಂತೆ ತಿಳಿಸುತ್ತಾನೆ. ಅದರಂತೆ, ಹೋತೃವು ಆಹ್ವಾನಿಸಿದಮೇಲೆ, ಅಚ್ಛಾವಾಕನು ಋ. VI. ೪೨ ನೆಯ ಸೂಕ್ತವನ್ನು (ಪ್ರತ್ಯಸ್ಮೈಪಿಪೀಷತೇ.......") ಪಠಿಸುತ್ತಾನೆ. ಅವನಿಗಾಗಿ ಒಂದು ಚಮಸವು, ಮೊದಲು ದ್ರೋಣಕಲಶದಿಂದ, ಅಮೇಲೆ ಪೂತಭೃದ್ದ್ರೋಣದಿಂದ, ಪುನಃ ದ್ರೋಣಕಲಶದಿಂದ, ತುಂಬಲ್ಪಡುತ್ತದೆ. ಅಚ್ಛಾವಾಕನು ಋ. VIII. ೩೮. ೭ ನೆಯ ("ಶ್ಯಾವಾಶ್ವಸ್ಯ.......ಪೀತಯೇ"—ಇದೇ **ಯಾಜ್ಯಾ**) ಮಂತ್ರವನ್ನು ಪಠಿಸಿದಮೇಲೆ- ಅಧ್ವರ್ಯುವು, ಅಚ್ಛಾವಾಕನ ಚಮಸದಿಂದ, ಆಹವನೀಯದಲ್ಲಿ ಹೋಮ ಮಾಡುತ್ತಾನೆ. ಈಗ ಅಚ್ಛಾವಾಕನು ಪುರೋಡಾಶವನ್ನು ಕೆಳಗಿಟ್ಟು, ತನ್ನ ಆಸನದ ಮೇಲೆ ಕುಳಿತು, ತನ್ನ ಚಮಸದಲ್ಲಿ ಉಳಿದಿರುವ ಸೋಮವನ್ನು ತಾನೇ ಪಾನಮಾಡುತ್ತಾನೆ ಮತ್ತು ಪುರೋಡಾಶವನ್ನು ಭಕ್ಷಿಸುತ್ತಾನೆ. ಅವನ ಚಮಸವನ್ನೂ ಇತರ ಚಮಸಗಳ ಜೊತೆಯಲ್ಲಿಡುತ್ತಾರೆ.

ಅಚ್ಛಾವಾಕನು ಕುಳಿತುಕೊಂಡಮೇಲೆ, ಬ್ರಹ್ಮ, ಹೋತೃ, ಅಧ್ವರ್ಯು, ಮೈತ್ರಾವರುಣ ಮತ್ತು ಆಗ್ನೀಧ್ರರು, ಆಗ್ನೀಧ್ರ ಶಾಲೆಯಲ್ಲಿ ಕುಳಿತು, ಸವನೀಯ ಪುರೋಡಾಶ ಮತ್ತು ಇತರ ನಾಲ್ಕು ಆಹುತಿಗಳ ಇಳಾಭಾಗವನ್ನು ಸೇವಿಸುತ್ತಾರೆ. (ಆಪ. XII. ೨೫. ೮-೧೫., ಆಶ್ವ. V. ೭. ೧೦., ಕಾತ್ಯಾ IX. ೧೧. ೨೯., IX. ೧೨. ೧೬). ಯಜಮಾನನೂ ಇದನ್ನೇ ಸೇವಿಸುತ್ತಾನೆ. ಪತ್ನಿಯು ತನ್ನ ಶಾಲೆಯಲ್ಲಿಯೇ ಇದ್ದು ಅಲ್ಪಾಹಾರವನ್ನು ತೆಗೆದುಕೊಳ್ಳುತ್ತಾಳೆ (IX. ೧೨. ೧೬-೧೭., ಆಪ. XII. ೨೫. ೧೨ ರ ವ್ಯಾಖ್ಯಾನ). ಇದೇ ಕಾಲದಲ್ಲಿ, ದರ್ಶಪೂರ್ಣಮಾಸದಲ್ಲಿ ಆಚರಿಸುವ, 'ಶಾಖಾ'ವನ್ನು ಅಗ್ನಿಯಲ್ಲಿ ಹಾಕುವುದು, ವಾಜಿನದ ಆಹುತಿ, ಪಿಷ್ಟಲೇಪ ಮತ್ತು ಫಲೀಕರಣ ಹೋಮಗಳು, ಮುಂತಾದುವು ಜರುಗುತ್ತವೆ.

ಅನಂತರ **ಋತುಗ್ರಹ**ಗಳ ಆಹುತಿ. ದ್ರೋಣಕಲಸದಿಂದ ತುಂಬಿ, ಈ ಗ್ರಹಗಳನ್ನು ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳು ಹನ್ನೆರಡು ಮಾಸಗಳನ್ನು ಉದ್ದೇಶಿಸಿ (ಮಧು, ಮಾಧವ, ಮುಂತಾಗಿ—ತೈ. ಸಂ. I. ೪. ೧೪., ವಾ. ಸಂ. VII. ೩೦.—೧೨ ಮಾಸಗಳು ಅಥವಾ ಅಧಿಕ ಮಾಸವಿದ್ದರೆ ೧೩ ಮಾಸಗಳು, ಹದಿಮೂರನೆಯದಕ್ಕೆ ತೈ. ಸ. I. ೪. ೧೪ ರಲ್ಲಿ **ಸಂಸರ್ಪ**ವೆಂದೂ, ವಾ. ಸಂ. VII. ೩೦ ರಲ್ಲಿ **ಅಂಹಸ್ಪತಿ**ಯೆಂತಲೂ ಹೆಸರಿದೆ) ಹೋಮ ಮಾಡುತ್ತಾರೆ. ಈ ಮಾಸಗಳಲ್ಲಿ ಎರಡೆರಡು ಸೇರಿ, ಆರು ಜೋಡಿಗಳಾಗುತ್ತವೆ. ಮೊದಲನೆಯ ಮಾಸದ್ವಯಕ್ಕೆ ಅಧ್ವರ್ಯುವೂ, ಎರಡನೆಯದಕ್ಕೆ ಪ್ರತಿಪ್ರಸ್ಥಾತೃವೂ, "ಉಪಯಾಮಗೃಹೀತೋಸಿ ಮಾಧವೇತ್ವಾ......." (ವಾ. ಸಂ. VII. ೩೦) ಎಂಬ ಮಂತ್ರವನ್ನು ಹೇಳಿ ಹೋಮ ಮಾಡಬೇಕು. ಇದೇ ಕ್ರಮದಲ್ಲಿ ಉಳಿದ ಮಾಸದ್ವಯಗಳಿಗೂ ಹೋಮ ಮಾಡುವುದು. ಈ ಹೋಮಗಳಿಗೆ **ಪ್ರೈಷವು** ಮೈತ್ರಾ

ವರುಣನಿಂದ ಹೇಳಲ್ಪಡಬೇಕು. ಅಧ್ವರ್ಯುವು ಹವಿರ್ಧಾನ ಮಂಟಪವನ್ನು ಪ್ರವೇಶಿಸಿದಾಗ ಪ್ರತಿಪ್ರಸ್ಥಾತೃವು ಅದನ್ನು ಬಿಟ್ಟು ಹೋಗಬೇಕು. ಇದೇರೀತಿ ಪ್ರತಿಪ್ರಸ್ಥಾತೃವು ಬಂದಾಗ, ಅಧ್ವರ್ಯುವು ಹೊರಹೊರಡಬೇಕು. ಮೊದಲನೆಯ ಆರು ಹೋಮಗಳಿಗೆ ವಷಟ್ಕಾರವನ್ನು ಕ್ರಮವಾಗಿ ಹೋತೃ, ಪೋತೃ, ನೇಷ್ಟೃ, ಆಗ್ನೀಧ್ರ, ಬ್ರಾಹ್ಮಣಾಚ್ಛಂಸೀ, ಮತ್ತು ಮೈತ್ರಾವರುಣರು ಉಚ್ಚರಿಸುತ್ತಾರೆ. ಆಯಾ ಹೋಮಶೇಷವನ್ನು ಅಧ್ವರ್ಯುವೋ, ಪ್ರತಿಪ್ರಸ್ಥಾತನೋ, ವಷಟ್ಕಾರವನ್ನು ಹೇಳಿದ ಋತ್ವಿಜನೊಡನೆ ಸೇವಿಸಬೇಕು. ಮುಂದಿನ ನಾಲ್ಕು ಹೋಮಗಳ ವಷಟ್ಕಾರಗಳು ಹೋತೃ, ಪೋತೃ, ನೇಷ್ಟೃ ಮತ್ತು ಅಚ್ಛಾವಾಕರಿಂದಲೂ, ಕಡೆಯ ಎರಡಕ್ಕೆ ಹೋತೃವೂ, ಹೇಳುತ್ತಾರೆ. ಇವೆಲ್ಲವೂ ಆದಮೇಲೆ, ದ್ರೋಣ ಅಥವಾ ಪೂತಭೃತ್ಕಲಶದಿಂದ, ಇಂದ್ರಾಗ್ನಿಗಳಿಗಾಗಿ ಒಂದು ಗ್ರಹವನ್ನು ತುಂಬುತ್ತಾರೆ (ಆಪ. XII. ೨೭. ೮., ಕಾತ್ಯಾ. IX. ೧೩. ೨೦). ಸೋಮಪಾನ ಮಾಡಲು ಉಪಯೋಗಿಸಿದ ಎಲ್ಲಾ ಪಾತ್ರೆಗಳೂ ಮಾರ್ಜಾಲೀಯ ಶಾಲೆಯಲ್ಲಿ ತೊಳೆಯಲ್ಪಡಬೇಕು.

ಐತರೇಯಬ್ರಾಹಣ 35. 2-4 ರಲ್ಲಿ ಸೋಮಪಾನ ಪ್ರಸ್ತಾಪ ಬಂದಾಗ, ಕ್ಷತ್ರಿಯನೂ ಯಜಮಾನನಾದರೆ, ಸೋಮಪಾನಾರ್ಹತೆಯಿಲ್ಲವೆಂದೂ, ಪಾನಮಾಡಬೇಕೆಂದು ಅಪೇಕ್ಷಿಸಿದರೆ, ನ್ಯಗ್ರೋಧವೃಕ್ಷದ ಚಿಗುರು, ಫಲ, ಉದುಂಬರ ಫಲ ಅಥವಾ ಇತರ ಪವಿತ್ರವಾದ ವೃಕ್ಷಗಳ ಭಾಗಗಳನ್ನು ಕುಟ್ಟಿ ತೆಗೆದ ರಸವನ್ನು ಮಸರಿನೊಡನೆ ಬೆರಸಿ, ಪಾನ ಮಾಡಬೇಕೆಂದೂ ಹೇಳಿದೆ. ಆದರೆ ಇತ್ತೀಚಿನ ಸಂಸ್ಕೃತ ಗ್ರಂಥಗಳಲ್ಲಿ ರಾಜರುಗಳನ್ನು “ಸೋಮಪಾಃ” ಎಂದಿರುವುದು ಕಂಡು ಬರುತ್ತದೆ. ಸೂತ್ರಗಳಲ್ಲಿಯೂ (ಸತ್ಯ. VII. 7., ಆಪ್. XII. 24.5) ಈ ವ್ಯವಹಾರವಿದೆ. ಈ ರೀತಿ ಇತರ ವೃಕ್ಷಗಳ ರಸವನ್ನು ಉಪಯೋಗಿಸುವ ಪದ್ಧತಿಯು ಜೈ. ಸೂ. III. 5. 47-51 ದಲ್ಲಿ ಉಕ್ತವಾಗಿದೆ ಮತ್ತು ಇದಕ್ಕೆ **ಫಲಚಮುಸ**ವೆಂದು ಕರೆದಿದಾರೆ.

ಋತುಗ್ರಹವನ್ನು ಕೈಯಲ್ಲಿ ಹಿಡಿದು, ಅಧ್ವರ್ಯುವು, ಸದಸ್ಸಿನ ಬಾಗಿಲಿನ ಹತ್ತಿರ, ಹೋತೃವಿಗೆ ಮುಂಭಾಗದಲ್ಲಿ, ಪೂರ್ವಾಭಿಮುಖನಾಗಿ ಕುಳಿತು, “ದೇವತೆಗಳನ್ನು ಕರೆಯುವ ಇಳಾ” ಎಂಬರ್ಥ ಬರುವ (ತೈ. ಸಂ. III. 3. 2. 1) ಪದಗಳನ್ನು ಜಪಿಸುತ್ತಾನೆ. ಅನಂತರ ಹೊತೃವು ಆಶ್ವ. V. 9. 1. ರಲ್ಲಿ ಹೇಳಿರುವ ಮಂತ್ರಭಾಗವನ್ನು ಜಪಿಸಿ, ಅಧ್ವರ್ಯುವನ್ನು ಉದ್ದೇಶಿಸಿ, ಹಿಂಕಾರ ರಹಿತವಾದ “ಶೋಂಸಾವೋಮ್” ಎಂಬ **ಆಹಾವ**ವನ್ನು ಗಟ್ಟಿಯಾಗಿ ಉಚ್ಚರಿಸುತ್ತಾನೆ ಮತ್ತು **ತೂಷ್ಣೀಂಶಂಸ**ವೆಂಬ ಸ್ತುತಿಯನ್ನು ಜಪಿಸುತ್ತಾನೆ. ಈಗ ಅಧ್ವರ್ಯುವು ಮುಖವನ್ನು ಪಶ್ಚಿಮಕ್ಕೆ ತಿರುಗಿಸಿ, ಎದ್ದು ಅಥವಾ ಶರೀರವನ್ನು ಸದಸ್ಸಿನ ಬಾಗಿಲಿನ ಕಡೆಗೆ ಬಾಗಿಸಿ, “ಶೋಂಸಾವೋ ದೈವ” ಎಂಬುದಾಗಿ (ಪ್ರತಿಗರ) ಪ್ರತ್ಯುತ್ತರ ಕೊಡುತ್ತಾನೆ. (ಅಶ್ವ.V.9.5) ಈ ರೀತಿ ಒಂದು ಶಸ್ತ್ರಕ್ಕೆ ಸಂಬಂಧಿಸಿದ ಮಂತ್ರಗಳನ್ನು ಉಚ್ಚರಿಸುವ ಅವಧಿಯಲ್ಲಿ, ಅನೇಕ ಆಹಾವಗಳೂ, ಅಷ್ಟೇ ಪ್ರತಿಗರಗಳೂ ನಡೆಯುತ್ತವೆ. ಒಂದು ತೂಷ್ಣೀಂಶಂಸದಲ್ಲಿ ಮೂರು ಅಥವಾ ಆರು ವಾಕ್ಯಭಾಗಗಳಿರುತ್ತವೆ. (ಭೂರಗ್ನಿರ್ಜ್ಯೋತಿರ್ಜ್ಯೋತಿರಗ್ನೀಂ ‖ ಇಂದ್ರೋಜ್ಯೋತಿರ್ಭುವೋ ಜ್ಯೋತಿರಿಂದ್ರೋಮ್ ‖ ಸೂರ್ಯೋಜ್ಯೋತಿ ಜ್ಯೋತಿಃ ಸ್ವಃ ಸೂರ್ಯೋಮ್ ‖— ಇದು ಮೂರು ಪದದ ತೂಷ್ಣೀಂಶಂಸವು. ಮೂರರಲ್ಲಿಯೂ ಮೊದಲನೆಯ ಜ್ಯೋತಿಃ ಎಂಬ ಪದದವರೆಗೆ ಒಡೆದು ಉಚ್ಚರಿಸಿದರೆ ಆರು ಪದದ ತೂಷ್ಣೀಂಶಂಸವಾಗುತ್ತದೆ). ಈ ತೂಷ್ಣೀಂಶಂಸವಾದ ಮೇಲೆ, ಉಚ್ಚಸ್ವರದಲ್ಲಿ, ಹನ್ನೆರಡು ವಾಕ್ಯಭಾಗಗಳುಳ್ಳ **ನಿವಿದ**ವನ್ನು, ಒಂದೊಂದು ವಾಕ್ಯಭಾಗವಾದಮೇಲೂ ಸ್ವಲ್ಪ ನಿಲ್ಲಿಸಿ, ಪಠಿಸುತ್ತಾನೆ. (ಅಗ್ನಿರ್ದೇವೇದ್ಧಃ, ಅಗ್ನಿರ್ಮನ್ವಿದ್ಧಃ, ಅಗ್ನಿಃ ಸುಷಮಿತ್, ಹೋತಾದೇವವೃತಃ, ಹೋತಾಮನುವೃತಃ, ಪ್ರಣೀರ್ಯಜ್ಞಾನಾಂ, ರಥೀರಧ್ವರಾಣಾಂ, ಅತೂರ್ತೋಹೋತಾ, ತೂರ್ಣಿರ್ಹವ್ಯವಾಟ್, ಆದೇವೋ ದೇವಾನ್ವಕ್ಷತ್, ಯಕ್ಷದಗ್ನಿರ್ದೇವೋದೇವಾನ್, ಸೋ ಅಧ್ವರಾಕರತಿ ಜಾತವೇದಾಃ, ಐ. ಬ್ರಾ. x. 2., ಆಶ್ವ. v. 9. 12)। ಐ. ಬ್ರಾ. x. 7 ರಲ್ಲಿ, ಈ ನಿವಿದವನ್ನು ಜಾತವೇದನಿಗಾಗಿ ಉಚ್ಚರಿಸುವ ಪುರೋರುಕ್ ಎಂದು ಹೇಳಿದೆ ತೂಷ್ಣೀಂಶಂಸವನ್ನೂ ನಿವಿದವನ್ನೂ ಒಂದುಗೂಡಿಸಬಾರದು ; ಆದರೆ ನಿವಿದದ ಕೊನೆಯಪದವನ್ನು ಆಜ್ಯಶಸ್ತ್ರದ ಮೊದಲನೆಯ ಋಕ್ಕಿನೊಡನೆ (ಋ. III. 13. 1-7 ಮಂತ್ರಗಳಿಗೆ ಆಜ್ಯಶಸ್ತ್ರವೆಂದು ಹೆಸರು) ಸೇರಿಸಿ ಹೇಳಬೇಕು. ಈ ಸೂಕ್ತದ ಮೊದಲನೆಯ ಮಂತ್ರವನ್ನು ಮೂರು ಸಲ ಉಚ್ಚರಿಸಬೇಕು. ಒಂದೊಂದು ಸಲವೂ ಪೂರ್ವಾರ್ಧ ಉತ್ತರಾರ್ಧಗಳನ್ನು ಪ್ರತ್ಯೇಕವಾಗಿಯೂ,

ಮಂತ್ರದ ಕೊನೆಯಲ್ಲಿ ಓಂಕಾರ ಸಹಿತವಾಗಿಯೂ (ಆಶ್ವ. v. 9. 15, 20-21) ಉಚ್ಚರಿಸಬೇಕು. ಆದಿಯ ಮಂತ್ರ ಮುಗಿದ ಕೂಡಲೆ, ಹೋತೃವು 'ಶೋಂಸಾವೋಂ' ಎಂದು **ಆಹಾವ**ವನ್ನೂ, ಅಧ್ವರ್ಯುವು 'ಶೋಂಸಾಮೋದೈವ' ಎಂದು **ಪ್ರತಿಗರ** ವನ್ನೂ ಹೇಳಬೇಕು. ಆಗ ಹೋತೃವು **ಪರಿಧಾನೀಯ**ವೆನ್ನಿಸಿಕೊಳ್ಳುವ ಶಸ್ತ್ರದ ಕೊನೆಯ ಮಂತ್ರವನ್ನು ಪಠಿಸುತ್ತಾನೆ. ಕೊನೆಯಲ್ಲಿ ಅಧ್ವರ್ಯುವು 'ಓಂ' ಎನ್ನುತ್ತಾನೆ. ಶಸ್ತ್ರವು ಮುಗಿದ ಮೇಲೆ ಹೋತೃವು ಮೆಲ್ಲಗೆ "ಉಕ್ತಂವಾಚಿ................" (ವಾಕ್ಕಿನಿಂದ ಶಸ್ತ್ರವನ್ನು ಉಚ್ಚರಿಸಿದ್ದಾಯಿತು; ಅದರ ಕೀರ್ತಿಯು ನಿನಗಿರಲಿ) ಎಂದು ಹೇಳುತ್ತಾನೆ. ಅಧ್ವರ್ಯುವು ಐಂದ್ರಾಗ್ನ ಗ್ರಹವನ್ನೂ, ಚಮಸಾಧ್ವರ್ಯುಗಳು ಚಮಸಗಳನ್ನೂ ತೆಗೆದು ಕೊಳ್ಳುತ್ತಾರೆ. **ಆಶ್ರವಣ** ಮತ್ತು **ಪ್ರತ್ಯಾಶ್ರುತ**, ಗಳಾದಮೇಲೆ, ಅಧ್ವರ್ಯುವು "ಎಲೈ ಶಸ್ತ್ರವನ್ನು ಪಠಿಸುವವನೇ, ಸೋಮದೇವತೆಯನ್ನು ಉದ್ದೇಶಿಸಿ, ಒಂದು ಯಾಜ್ಯಾಮಂತ್ರವನ್ನು ಹೇಳು" ಎಂದು ಆದೇಶವನ್ನೀಯುತ್ತಾನೆ. ಹೋತೃವು ಯಾಜ್ಯಾಮಂತ್ರವಾಗಿ ಋ. III. ೨೫. ೩ ನೆಯ ಋಕ್ಕನ್ನು (ಆಶ್ವ. v. ೯. ೨೬) ಉಚ್ಚರಿಸಿ, 'ವೌಷಟ್' ಎಂದ ಕೂಡಲೇ, ಅಧ್ವರ್ಯುವು ತನ್ನ ಕೈಯಲ್ಲಿರುವ ಗ್ರಹದಿಂದ ಆಹವನೀಯದೊಳಗೆ ಹೋಮ ಮಾಡುತ್ತಾನೆ; "ಸೋಮಸ್ಯಾಗ್ನೇ ವಿಹಿ ವೌಷಟ್" ಎಂದು ಎರಡನೆಯ ಬಾರಿ ಹೋತೃವು ಹೇಳಿದಮೇಲೆ, ಚಮಸಾಧ್ವರ್ಯುಗಳು ನಾರಾಶಂಸಗ್ರಹಗಳನ್ನು ಅಲ್ಲಾಡಿಸುತ್ತಾರೆ. ಮೊದಲು ಅಧ್ವರ್ಯುವು ಗ್ರಹದಲ್ಲಿರುವ ಸೋಮವನ್ನೂ, ಅನಂತರ ಚಮಸ ಗಳನ್ನು ಹಿಡಿದುಕೊಂಡಿರುವವರು, ಚಮಸಗಳಲ್ಲಿರುವುದನ್ನೂ ಭುಜಿಸುತ್ತಾರೆ.

ಮೇಲೆ ಹೇಳಿರುವುದರಿಂದ, ಒಂದೊಂದು ಶಸ್ತ್ರದಲ್ಲಿಯೂ ಆರು ಅಥವಾ ಏಳು ಅಂಶಗಳಿವೆ ಯೆಂಬುದನ್ನು ಗಮನಿಸ ಬಹುದು: 1. ಮೌನವಾಗಿ ಮಾಡುವ ಜಪ, 2. ಆಹಾವ ಮತ್ತು ಪ್ರತಿಗರ, 3. ತೂಷ್ಣೀಂಶಂಸ, 4. ನಿವಿದ್ ಅಥವಾ ಪುರೋರುಕ್, 5. ಸೂಕ್ತ, 6. "ಉಕ್ತಮ್ ವಾಚಿ...." ಮುಂತಾದ ಪದಗಳ ಜಪ (ಇದಕ್ಕೆ **ಉಕ್ತವೀರ್ಯ** ವೆಂದು ಹೆಸರು) ಮತ್ತು ಇದಕ್ಕೆ ಅಧ್ವರ್ಯುವಿನ "ಉಕ್ತಶಾಃ........" ಎಂಬ ಉತ್ತರ, 7. ಯಾಜ್ಯಾ (ಆಶ್ವ. V. 10. 21). ಇತರ ಶಸ್ತ್ರಗಳಲ್ಲಿ ತೂಷ್ಣೀಂಶಂಸ ಬಂದಿರುವುದಿಲ್ಲ.

ಒಂದು ಅಗ್ನಿಷ್ಟೋಮದಲ್ಲಿ ಹನ್ನೆರಡು ಸ್ತೋತ್ರಗಳು ಇರುತ್ತವೆ. ಈ ಎರಡು ಪದಗಳಿಗೆ ಸ್ತುತಿ ಅಥವಾ ಹೊಗಳಿಕೆ ಎಂದು ಅರ್ಥ. ಆದರೆ ಸ್ತೋತ್ರವು ಗಾನಮಾಡಲ್ಪಡುವುದು. (ಜೈ. VII. 2.17ರ ಮೇಲೆ ಶಾಬರ ಭಾಷ್ಯ). ಸಾಧಾರಣವಾಗಿ ಶಸ್ತ್ರವು ಸ್ತೋತ್ರದ ಅಂಗಭೂತವಾದುದು ಮತ್ತು ಅದಾದಮೇಲೆಯೇ ಬರುವುದು. ಪ್ರಾತಃಸವನದಲ್ಲಿ, ಉದ್ಗಾತನು ಸ್ತೋತ್ರವನ್ನು ಗಾನಮಾಡಿ, ಹಿಂಕಾರವನ್ನುಚ್ಚರಿಸಿದ ಕೂಡಲೇ, ಹೋತೃವು ಶಸ್ತ್ರವನ್ನು ಪ್ರಾರಂಭಿಸುತ್ತಾನೆ: ಉಳಿದೆರಡು ಸವನಗಳಲ್ಲಿ, ಸ್ತೋತ್ರದ ಕೊನೆಯ ಮಂತ್ರದ **ಪ್ರಸ್ತಾವ**ವನ್ನು ಹೇಳುತ್ತಿರುವಾಗ, ಪ್ರಸ್ತೋತೃವು 'ಏಷಾ' ಎಂಬ ಪದದಿಂದ ಸೂಚನೆ ಕೊಡುತ್ತಾನೆ (ಇದಕ್ಕೆ **ಪ್ರತಿಹಾರ**ವೆಂದು ಹೆಸರು); ಆಗ ಹೋತೃವು ತನ್ನ ಶಸ್ತ್ರವನ್ನು ಆರಂಭಿಸುವುದು (ಆಶ್ವ. V. ೧೦. ೧-೩). ಅಗ್ನಿಷ್ಟೋಮದಲ್ಲಿ ಮೊದಲನೆಯ ಶಸ್ತ್ರವು ಆಜ್ಯಶಸ್ತ್ರವೆಂತಲೂ, ಕೊನೆಯದಕ್ಕೆ ಆಗ್ನಿಮಾರುತವೆಂತಲೂ ಹೆಸರು.

ವೈದಿಕವಾಕ್ಯಗಳಲ್ಲಿ "ಪ್ರಉಗಶಸ್ತ್ರವನ್ನು ಪಠಿಸುತ್ತಾನೆ," ಆಜ್ಯಸ್ತೋತ್ರವನ್ನು ಗಾನಮಾಡುತ್ತಾನೆ,"ಎಂದು ಉಕ್ತವಾದಾಗ, ಈ ಸ್ತೋತ್ರಶಸ್ತ್ರಗಳು ಆಯಾಕರ್ಮಾಧಿಪತಿಗಳಾದ ದೇವತೆಗಳಿಗೆ ಸಂಬಂಧಿಸಿದ ಅಪ್ರಧಾನವಾದ ಅಂಶಗಳೆಂದು ಭಾವಿಸಲ್ಪಡ ಬಾರದು, ಅವುಗಳೇ ಮುಖ್ಯವಾದವುಗಳೆಂದು ತಿಳಿಯಬೇಕೆಂದು ಜೈಮಿನಿಗಳು II. ೧. ೧೩–೨೯ ರಲ್ಲಿ ಸಾಧಿಸಿದ್ದಾರೆ. ಮತ್ತು (x. ೪-೪೯) ರಲ್ಲಿ ಅಗ್ನಿಷ್ಟುತ್ ಯಾಗಗಲ್ಲಿ, ಅಗ್ನಿಷ್ಟೋಮದ ಸ್ತೋತ್ರಶಸ್ತ್ರಗಳ ಊಹೆ ಮಾತ್ರವಲ್ಲ, ಅಗ್ನಿಷ್ಟೋಮದಂತೆ ಅಲ್ಲಿಯೂ ಗಾನಪಠಣಗಳುಂಟೆಂದೂ ಹೇಳಿದಾರೆ.

ಪ್ರಾತಃಸವನದಲ್ಲಿ ಐದುಸ್ತೋತ್ರಗಳು (ಬಹಿಷ್ಪವಮಾನ ಮತ್ತು ನಾಲ್ಕು ಆಜ್ಯಸ್ತೋತ್ರಗಳು); ಮಾಧ್ಯಂದಿನ ಸವನದಲ್ಲಿ ಐದು (ಮಾಧ್ಯಂದಿನ ಪವಮಾನ ಮತ್ತು ನಾಲ್ಕು ಪೃಷ್ಠಸ್ತೋತ್ರಗಳು); ಸಾಯಂಸವನದಲ್ಲಿ ಎರಡು (ಆರ್ಭವಪವಮಾನ ಮತ್ತು

"ಯಜ್ಞಾಯಜ್ಞಾವೋ........" ಮುಂತಾದ ಅಗ್ನಿಷ್ಟೋಮಸಾಮ) ; ಹೀಗೆ ಒಟ್ಟು ೧೨ ಸ್ತೋತ್ರಗಳು ಕ್ರಮವಾಗಿ ಇವುಗಳಿಗೆ ಸರಿಹೋಗುವ ಹನ್ನೆರಡು ಶಸ್ತ್ರಗಳು ಇವೆ: ಪ್ರಾತಃಕಾಲದಲ್ಲಿ **ಆಜ್ಯ, ಪ್ರಉಗ**ಗಳೆಂಬ ಎರಡು ಶಸ್ತ್ರಗಳು ಹೋತೃವಿನಿಂದ, ಮತ್ತು ಮೂರು ಆಜ್ಯಶಸ್ತ್ರಗಳು—(ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ ಮತ್ತು ಅಚ್ಛಾವಾಕರುಗಳಿಂದ—ಇವರಿಗೆ ಈ ಶಸ್ತ್ರಗಳನ್ನು ಹೇಳುವಾಗ **ಹೋತ್ರಕ**ರೆಂದು ಹೆಸರು); ಮಧ್ಯಾಹ್ನದಲ್ಲಿ **ಮರುತ್ವತೀಯ** ಮತ್ತು **ನಿಷ್ಕೇವಲ್ಯ** ಶಸ್ತ್ರಗಳು ಹೋತೃವಿನಿಂದ ಮತ್ತು ಮೂರು ಶಸ್ತ್ರಗಳು ಹೋತ್ರಕರಿಂದ; ಸಾಯಂಕಾಲದಲ್ಲಿ ವೈಶ್ವದೇವ ಮತ್ತು ಅಗ್ನಿಮಾರುತ ಶಸ್ತ್ರಗಳೆರಡೂ ಹೋತೃವಿನಿಂದ — ಪಠಿಸಲ್ಪಡುತ್ತವೆ. ಬಹಿಷ್ಪವಮಾನವನ್ನು ತ್ರಿವೃತ್‌ಸ್ತೋಮದಲ್ಲಿಯೂ, ನಾಲ್ಕು ಆಜ್ಯಸ್ತೋತ್ರಗಳು ಮತ್ತು ಮಾಧ್ಯಂದಿನ ಪವಮಾನಗಳನ್ನು ಪಂಚದಶಸ್ತೋಮದಲ್ಲಿಯೂ, ನಾಲ್ಕು ಪೃಷ್ಠಸ್ತೋತ್ರಗಳು ಮತ್ತು ಆರ್ಭವ ಪವಮಾನಗಳನ್ನು ಸಪ್ತದಶಸ್ತೋಮದಲ್ಲಿಯೂ, ಯಜ್ಞಾಯಜ್ಞೀಯ (ಅಗ್ನಿಷ್ಟೋಮಸಾಮ) ವನ್ನು ಏಕವಿಂಶಸ್ತೋಮದಲ್ಲಿಯೂ ಗಾನಮಾಡುತ್ತಾರೆ (ತಾಂ.ಬ್ರಾ. XX. ೧. ೧.). ಸ್ತೋಮ ಎಂದರೆ ಮಂತ್ರಗಳ ಸಮೂಹ. ಪಂಚದಶಸ್ತೋಮ ಮುಂತಾದ ಪದಗಳಿಂದ, (ಸಾಧಾರಣವಾಗಿ ಮೂರು) ಮಂತ್ರಗಳು ನಾನಾಪ್ರಕಾರವಾಗಿ ಆವೃತ್ತಿಮಾಡಲ್ಪಟ್ಟು, ೧೫, ೧೭ ಅಥವಾ ೨೧ ಕ್ಕೆ ಹೆಚ್ಚಿಸಲ್ಪಡುತ್ತವೆ. ಈರೀತಿ ಆವೃತ್ತಿಯಾದಾಗ, ಆ ಮಂತ್ರಗಳಿಗೆ **ವಿಷ್ಟುತಿ**ಗಳೆಂದು ಹೆಸರು. ಆವೃತ್ತಿಗಳ ಕ್ರಮ ಮತ್ತು ಸಂಖ್ಯಾ ಇವುಗಳನ್ನು ಬದಲಾಯಿಸುವುದರಿಂದ ಬೇರೆ ಬೇರೆ ವಿಷ್ಟುತಿಗಳು ಉಂಟಾಗುತ್ತವೆ. ಈ ಆವೃತ್ತಿಗಳ ಬದಲಾವಣೆಗಳನ್ನು ಮಾಡುವವನು ಪ್ರಸ್ತೋತೃವು ಮತ್ತು ಇದಕ್ಕೆ ಸಹಾಯಕವಾಗಿ, ಉದುಂಬರ ವೃಕ್ಷದಿಂದ ಒಂದೊಂದು ಚೋಟುದ್ದದ ಕಡ್ಡಿಗಳನ್ನು ಕತ್ತರಿಸಿ ಇಟ್ಟುಕೊಂಡಿರುತ್ತಾರೆ.

ಸ್ತೋಮ ಮತ್ತು ಸ್ತೋತ್ರಗಳಿಗೆ ಇರುವ ಭೇದವನ್ನು ಗ್ರಹಿಸಬೇಕು. ಸಾಮವೇದದ **ಗಾನ**ಗಳಲ್ಲಿ ಹೇಳಿರುವ ಯಾವುದಾದರೊಂದು ರಾಗದಲ್ಲಿ ಗಾನಮಾಡುವ ಮಂತ್ರಸಮುದಾಯಕ್ಕೆ ಸ್ತೋತ್ರವೆಂತಲೂ, ಸ್ತೋಮವೆಂದರೆ, ಹಿಂದೆಯೇ ಹೇಳಿದಂತೆ ಮಂತ್ರಸಮುದಾಯವೆಂದೂ ಅರ್ಥ. ಸಾಮಗಾನದಲ್ಲಿ ಸೇರಿಸುವ, ಋಕ್ಕುಗಳಲ್ಲಿ ಇಲ್ಲದಿರುವ, 'ಹಾವ್,' 'ಹಾಯ್', 'ಈ', 'ಊ' ಮುಂತಾದವುಗಳು ಸ್ತೋಭಗಳು (ಅಧಿಕಂಚ ವಿವರ್ಣಂಚ ಜೈಮಿನಿಃ ಸ್ತೋಭ-ಶಬ್ದತ್ವಾತ್). **ಸಾಮ**ವೆಂಬುದರಿಂದಲೇ **ಗೀತಿ** ಎಂಬರ್ಥವು ಬರುವುದಾದರೂ, ಗಾನಕ್ಕೆ ಒಂದು ವೈಶಿಷ್ಟ್ಯವನ್ನುಂಟುಮಾಡುವುದರಿಂದ ಸ್ತೋಭಾದಿಗಳು ಆವಶ್ಯಕವಾಗಿವೆ. ಸಾಮಗಳೆಲ್ಲವೂ ಋಕ್ಕುಗಳೇ ಆದರೂ, ಆ ಋಕ್ಕಿನ ಅಕ್ಷರಗಳಲ್ಲಿ ಅನೇಕ ಬದಲಾವಣೆಗಳನ್ನು ಮಾಡಿ, ಗಾನವನ್ನು ಪರಿಣಾಮಕಾರಿಯನ್ನಾಗಿ ಮಾಡುತ್ತಾರೆ ('ಅಗ್ನ ಆ ಯಾಹಿ ವೀತಯೇ' ಎಂಬಲ್ಲಿ **ಅಗ್ನ** ಎಂಬುದನ್ನು **ಓಗ್ನಾಯಿ** ಎಂಬುದಾಗಿ ಬದಲಾಯಿಸುತ್ತಾರೆ). ಸಾಮವಿಧಾನ ಬ್ರಾಹ್ಮಣದಲ್ಲಿ ಹೇಳುವಂತೆ (ತಸ್ಯ ಹ ವಾ ಏತಸ್ಯ ಸಾಮ್ನ ಋಗೇವಾಸ್ಥೀನಿ ಸ್ವರೋ ಮಾಂಸಾನಿ ಸ್ತೋಭಾ ಲೋಮಾನಿ"–ಸಾಮವಿಧಾನ ಬ್ರಾಹ್ಮಣ ೧-೧-೧೦), ಈ ಸಾಮಕ್ಕೆ ಋಕ್ಕೆಂಬುದೇ ಮೂಳೆಯೂ, ಸ್ವರಗಳು ಮಾಂಸವೂ, ಸ್ತೋಭಗಳು ಮೈಮೇಲೆಲ್ಲಾ ಇರುವ ರೋಮಗಳು. ಪ್ರತಿಯೊಂದು ಸಾಮವೂ ಕೆಲ ನಿರ್ದಿಷ್ಟ ಋಕ್ಕುಗಳಿಗೆ ಸಂಬಂಧಿಸಿದವು. ಉದಾಹರಣೆಗಾಗಿ, ರಥಂತರಸಾಮವೆಂದು ಹೇಳಿದರೆ, ಉದ್ದಿಷ್ಟವಾದ ಮಂತ್ರಗಳು ಋ. VII. ೩೨. ೨೨-೨೦ "(ಅಭಿತ್ವಾ ಶೂರ........) ಅಥವಾ ಸಾ. ವೇ. II. ೧. ೧. ೧೧, ಅಥವಾ ವಾಮದೇವ್ಯ ಸಾಮವೆಂದು ಹೇಳಿದರೆ, ಋ. IV. ೩೧. ೧-೩ "(ಕಯಾ ನಶ್ಚಿತ್ರ ಆಭುವತ್........)" ಅಥವಾ ಸಾ.ವೇ. II. ೧. ೧. ೧೨ ನೆಯ ಮಂತ್ರಗಳು ಉದ್ದಿಷ್ಟವಾದುವು ಎಂದು ನಿರ್ಣಯ. ಈ ಮಂತ್ರಗಳು ಆಯಾಸಾಮಗಳಿಗೆ **ಸ್ವಕೀಯ** ಮಂತ್ರಗಳೆಂದು ಭಾವನೆಯಿದೆ. ಆದರೆ ಒಂದು ಸಾಮದ ಸ್ವಕೀಯ ಮಂತ್ರಗಳು ಬೇರೆ ಒಂದು ರಾಗದಲ್ಲಿ ಹೇಳಲ್ಪಡಬಹುದು. ವಾಮದೇವ್ಯಸ್ವಕೀಯ ಮಂತ್ರಗಳಿಗೆ **ಕವತೀ** ಮಂತ್ರಗಳೆಂದು ಹೆಸರು. ಕೆಲವು ಸಂದರ್ಭಗಳಲ್ಲಿ "ಕವತೀ ಮಂತ್ರಗಳನ್ನು ರಥಂತರ ಸಾಮವಾಗಿ ಹೇಳುತ್ತಾನೆ" ಎಂದು ಆದೇಶ ಮಾಡುವುದುಂಟು. ಈ ಆದೇಶದ ಅಭಿಪ್ರಾಯವು "ಕಯಾನಶ್ಚಿತ್ರ........" ಎಂಬ ಮಂತ್ರವು ಸಾಧಾರಣವಾಗಿ ವಾಮದೇವ್ಯ ಸಾಮವಾಗಿ ಗಾನಮಾಡಲ್ಪಡಬೇಕಾದರೂ, ಈ ಸಂದರ್ಭದಲ್ಲಿ ಅದನ್ನು ರಥಂತರವಾಗಿಯೇ ಗಾನಮಾಡಬೇಕು

ಎಂಬುದು. ಅಂದರೆ, ರಥ ತರ, ಬೃಹತ್, ರೈವತ ಮುಂತಾದ ಸಾಮಗಳು ಎಂದರೆ, ಗಾನಮಾಡುವ ವಿಧಾನಗಳಲ್ಲಿ ಪ್ರಭೇದಗಳೆಂದೇ ಮುಖ್ಯವಾಗಿ ಗ್ರಹಿಸಬೇಕೇ ಹೊರತು, ಆಯಾಸಾಮಗಳಿಗೆ ಸಂಬಂಧಿಸಿದ ಒಂದು ಅಥವಾ ಹೆಚ್ಚಿಗೆ ಋಜ್ಮಂತ್ರಗಳಿಂದು ಅಲ್ಲ (ಸ್ವರಾದಿ ವಿಶೇಷಾನುಪೂರ್ವೀ ಮಾತ್ರ ಸ್ವರೂಪಮೃಗಕ್ಷರವ್ಯತಿರಿಕ್ತಂ ಯದ್‌ಗಾನಂ ತದೇವ ರಥಂತರಶಬ್ದಾರ್ಥ:—ಸಾಯಣರ ಸಾಮವೇದೋಪೋದ್ಘಾತ).

ಯಾಗಗಳಿಗೂ ಸಾಮವೇದಕ್ಕೂ ಇರುವ ಸಂಬಂಧದ ವಿಷಯವಾದ, ಜೈಮಿನಿ ಸೂತ್ರಗಳಲ್ಲಿ ೬೦ ಅಧಿಕರಣಗಳಿವೆ. ಸಾಮವಲ್ಲಿ ಮುಖ್ಯವಾದುದು ಋಜ್ಮಂತ್ರವು, ರಾಗಾದಿಗಳು ಅದಕ್ಕೆ ಗುಣಗಳು (IX· ೨. ೩-೧೩), ಪ್ರತಿಯೊಂದು ಮಂತ್ರವೂ ಒಂದು ಸಂಪೂರ್ಣಗಾನವಾಗಬೇಕು. (ಜೈ· IX· ೨. ೧೪-೨೦), ಒಂದೊಂದು ಸಾಮಕ್ಕಾಗಿ ತೆಗೆದುಕೊಳ್ಳುವ ಮಂತ್ರಗಳು ಎಲ್ಲವೂ ಸಾಧಾರಣವಾಗಿ ಒಂದೇ ಛಂದಸ್ಸಿನಲ್ಲಿರಬೇಕು (ಜೈ. IX· ೨. ೨೧-೨೨), ಉತ್ತರಾರ್ಚಿಕದಲ್ಲಿರುವ ಮಂತ್ರಗಳನ್ನೇ ಸ್ವರಾದಿ ವಿಶಿಷ್ಟವಾಗಿ ಗಾನಮಾಡಲು ತೆಗೆದುಕೊಳ್ಳಬೇಕು ( ಜೈ. IX ೨. ೨೩-೨೪), ಕೆಲವು ಗಾನಗಳಲ್ಲಿರುವ ಎರಡು ಮಂತ್ರಗಳು, ಕಡೆಯ ಅಥವಾ ೪ ನೆಯ ಪಾದವನ್ನು ಪುನಃ ಹೇಳಿ ಮೂರು ಮಂತ್ರಗಳಾಗಿ ಮಾಡಲ್ಪಡಬೇಕು (ಜೈ. IX· ೨. ೨೫-೨೭), ಯಜ್ಞಾಯಜ್ಞೀಯ ಸಾಮದ ಮೂಲಮಂತ್ರದಲ್ಲಿರುವ 'ಗಿರಾ ಗಿರಾ' ಎಂಬುದರ ಬದಲಾಗಿ, ಗಾನದಲ್ಲಿ "ಇರಾ ಇರಾ" ಎಂದು ಬದಲಾಯಿಸಿಕೊಳ್ಳಬೇಕು, ಎಂಬವುಗಳು ಕೆಲವು ಗ್ರಾಹ್ಯವಾದ ಅಂಶಗಳು.

ಶಸ್ತ್ರಪಠನ ಮತ್ತು ಸೋಮಶೇಷಭಕ್ಷಣಗಳಾದಮೇಲೆ, ಅಧ್ವರ್ಯುವು ವೈಶ್ವದೇವಗ್ರಹವನ್ನು ತೆಗೆದುಕೊಂಡು, ದ್ರೋಣಕಲಶದಿಂದ ತುಂಬಿ, ಎರಡು ಕಲಶಗಳಿಂದ ಅದನ್ನು ಸ್ಪರ್ಶಿಸಿ, ಆ ದರ್ಭೆಗಳನ್ನು ಪ್ರಸ್ತೋತೃವಿಗೆ ಕೊಟ್ಟು, ಸಾಮಗರನ್ನು ಮತ್ತೊಂದು ಸ್ತೋತ್ರವನ್ನು ಗಾನಮಾಡುವಂತೆ ಪ್ರೇರಿಸುತ್ತಾನೆ. ಎಲ್ಲಾ **ಧುರ್ಯ** ಸ್ತೋತ್ರಗಳಲ್ಲಿ ಈ ಕ್ರಮವನ್ನೇ ಅನುಸರಿಸಬೇಕು. ಬಹಿಷ್ಪವಮಾನವೊಂದು ಹೊರತಾಗಿ ಉಳಿದ ಸ್ತೋತ್ರಗಳೆಲ್ಲವೂ ಸದಸ್ಸಿನಲ್ಲಿ ಔದುಂಬರೀಸ್ತಂಭದ ಸಮೀಪದಲ್ಲಿ ಗಾನಮಾಡಲ್ಪಡುತ್ತವೆ; ಪಶ್ಚಿಮಾಭಿಮುಖನಾದ ಪ್ರಸ್ತೋತನು ಅಧ್ವರ್ಯುವಿನ ಹಿಂದುಗಡೆಯೂ, ಉತ್ತರಾಭಿಮುಖನಾಗಿ ಉದ್ಗಾತೃವು ಅವನ ಪಶ್ಚಿಮಕ್ಕೂ, ಉದ್ಗಾತೃವಿಗೆ ಅಭಿಮುಖನಾಗಿ ಆದರೆ ಆಗ್ನೇಯದ ಕಡೆಗೆ ನೋಡುತ್ತಾ ಪ್ರತಿಹರ್ತೃವೂ ಕುಳಿತುಕೊಳ್ಳುತ್ತಾರೆ (ತಾ. VI· ೪. ೧೪, ದ್ರಾ. III· ೩. ೨೮). ಈ ವೈಶ್ವದೇವಗ್ರಹವಾದ ಮೇಲೆ ಗಾನಮಾಡುವುದು ಮುಂದಿನ ಮೂರು ಆಜ್ಯಸ್ತೋತ್ರಗಳೆನಿಸಿಕೊಳ್ಳುತ್ತವೆ.

| | | | | | |
|---|---|---|---|---|---|
| ೧ ನೆಯ ಆಜ್ಯಸ್ತೋತ್ರ | —ಋ. | VI | ೧೬. | ೧೦-೧೨., | ಸಾ. ವೇ. II· ೧· ೧. ೪., |
| ೨ ” ” | —ಋ. | III | ೬೨. | ೧೬-೧೮., | ಸಾ. ವೇ. II· ೧. ೧. ೫., |
| ೩ ” ” | —ಋ. | VIII | ೧೭. | ೧-೩, | ಸಾ. ವೇ. II· ೧. ೧. ೬., |
| ೪ ” ” | —ಋ. | III | ೧೨. | ೧-೩., | ಸಾ. ವೇ. II· ೧. ೧. ೭., |

ಎರಡನೆಯ ಶಸ್ತ್ರಕ್ಕೆ **ಪ್ರಉಗ** ಶಸ್ತ್ರವೆಂದು ಹೆಸರು (ಅಶ್ವ. V· ೧೦. ೬.) ವೈಶ್ಯದೇವ ಗ್ರಹವಾದಮೇಲೆ ಇದನ್ನು ಪಠಿಸುತ್ತಾರೆ. ಇದರಿಂದ ಆಹಾರವು ದೊರಕುವುದೆಂದು ಐ. ಬ್ರಾ. XI· ೨ ರಲ್ಲಿ ಹೇಳಿದೆ. ಈ ಶಸ್ತ್ರದಲ್ಲಿ ಒಟ್ಟು ೨೧ ಮಂತ್ರಗಳು (ಋ. I· ೨-೩ ಸೂಕ್ತಗಳು). ಇವುಗಳನ್ನು ಮೂರು ಮೂರಾಗಿ ಏಳು ಭಾಗಗಳಾಗಿ ಮಾಡಿ, ಒಂದೊಂದನ್ನು ಒಂದೊಂದು ದೇವತೆಯನ್ನು ಉದ್ದೇಶಿಸಿ ಹೇಳುತ್ತಾರೆ. ಈ ಏಳು ದೇವತೆಗಳು ಕ್ರಮವಾಗಿ ವಾಯು, ಇಂದ್ರ-ವಾಯು, ಮಿತ್ರ-ವರುಣ ಅಶ್ವಿನಿಗಳು, ಇಂದ್ರ, ವಿಶ್ವೇದೇವತೆಗಳು ಮತ್ತು ಸರಸ್ವತಿ. ಈ ಒಂದೊಂದು ಋಕ್ತ್ರಯಕ್ಕೂ ಮೊದಲು ಒಂದು ಪುರೋರುಕ್ಕನ್ನು ಹೇಳುತ್ತಾರೆ. ಇದಕ್ಕೂ ಮೊದಲಾಗಿ ಒಂದು ಹಿಂಕಾರ ಮತ್ತು 'ಭೂರ್ಭುವಃಸ್ವರೋಮ್' ಎಂದು ಉಚ್ಚರಿಸುತ್ತಾರೆ. ಋಗ್ವೇದ ೧.೨ ನೆಯ ಸೂಕ್ತದ ಎರಡನೆಯ ಮಂತ್ರವನ್ನು ಮೂರುಸಲ (ಮೊದಲನೆಯದನ್ನು ತ್ರಿರಾವೃತ್ತಿ ಮಾಡಬೇಕಾಗಿಲ್ಲ—ಆಶ್ವ. V·

೧೦. ೬ ರ ವ್ಯಾಖ್ಯಾನ) ಉಚ್ಚರಿಸಬೇಕು. ಈ ಮಂತ್ರ ಪಠಣವಾದಮೇಲೆ, ಋತ್ವಿಜನು "ಉಕ್ತಂ ವಾಚಿ ಶ್ಲೋಕಾಯತ್ವಾ" ("....ಘೋಷಾಯತ್ವಾ" ಎಂಬುದರ ಬದಲು) ಎನ್ನುತ್ತಾನೆ. ಋಗ್ವೇದ ೧, ೧೪. ೧೦ ನೆಯ ಮಂತ್ರವು ಪ್ರಉಗಶಸ್ತ್ರದ ಯಾಜ್ಯಾ ಆಗುತ್ತದೆ. ಈ ಗ್ರಹವನ್ನು ಹೋಮಮಾಡಿ, ಗ್ರಹಶೇಷವನ್ನು ಮತ್ತು ಚಮಸಗಳಲ್ಲಿರುವುದನ್ನು ಎಲ್ಲರೂ ಸೇವಿಸುತ್ತಾರೆ ಉಕ್ಥ್ಯಸ್ಥಾಲಿಯಲ್ಲಿ ಇರುವ ಸೋಮದ ಮೂರನೆಯ ಒಂದು ಭಾಗವನ್ನು ಮಿತ್ರಾವರುಣ, ಇಂದ್ರ ಮತ್ತು ಇಂದ್ರಾಗ್ನಿಗಳಿಗಾಗಿ ಮೂರುಗ್ರಹಗಳಲ್ಲಿ ತೆಗೆದುಕೊಳ್ಳುತ್ತಾರೆ. ಈ ಒಂದೊಂದು ಗ್ರಹಕಾಲದಲ್ಲಿಯೂ ಸ್ತೋತ್ರಶಸ್ತ್ರಗಳು, ಕ್ರಮವಾಗಿ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ ಮತ್ತು ಅಚ್ಛಾವಾಕರುಗಳಿಂದ ಹೇಳಲ್ಪಡುತ್ತವೆ. ಈ ಒಂದೊಂದು ಶಸ್ತ್ರದಲ್ಲಿಯೂ ನಾಲ್ಕು ಭಾಗಗಳಿವೆ (೧) 'ಸ್ತೋತ್ರೀಯ' ಎಂಬ ಮಂತ್ರತ್ರಯ (ಇದರ ಸ್ತೋತ್ರದಲ್ಲಿಯೂ ಇದೇ ಮಂತ್ರಗಳನ್ನೇ ಗಾನಮಾಡುವುದರಿಂದ ಇದಕ್ಕೆ ಸ್ತೋತ್ರೀಯವೆಂದು ಹೆಸರು); (೨) **ಅನುರೂಪ**ವೆಂಬ ಮಂತ್ರತ್ರಯ(ಛಂದಸ್ಸು, ದೇವತಾ ಮತ್ತು ಋಷಿಗಳು ಈ ಶಸ್ತ್ರಭಾಗಕ್ಕೂ ಸ್ತೋತ್ರೀಯ ಮಂತ್ರಗಳಿಗೂ ಒಂದೇ ಆಗಿರಬೇಕು, ಆಶ್ವ. V. ೧೦. ೨೬-೨೬); (೩) ಶಸ್ತ್ರದ ಹೃದಯಭೂತವಾದುದು, ಆದುದರಿಂದ ಉಕ್ತಮುಖ (ಸಾಂಖ್ಯಾಯನಗೃಹ್ಯ. VII. ೧೧. ೩.); (೪) ಯಾಜ್ಯಾಮಂತ್ರವೊಂದು.

| | | | | |
|---|---|---|---|---|
| (೧) ಸ್ತೋತ್ರೀಯ ತ್ರಯ | — | ಋ. III. ೬೨. ೧೬-೧೮ | ನೆಯ | ಮಂತ್ರಗಳು. |
| (೨) ಅನುರೂಪತ್ರಯ | — | ಋ. X. ೬೮. ೧-೫ | ,, | ,, |
| (೩) ಉಕ್ತಮುಖ | — | ಋ. VII. ೬೬. ೧-೯ | ,, | ,, |
| (೪) ಆಜ್ಯಾ | — | ಋ. VII. ೬೬. ೧೯ | ,, | ,, |

ಇಲ್ಲಿಗೆ ಪ್ರಾತಃಸವನವು ಮುಗಿಯುತ್ತದೆ. ಕೊನೆಯದಾಗಿ ಅಧ್ವರ್ಯುವು "ಪ್ರಾತಃಸವನದಲ್ಲಿ ಅಗ್ನಿಯು ನಮ್ಮನ್ನು ಕಾಪಾಡಲಿ" ಎಂಬರ್ಥದ ಮಂತ್ರದಿಂದ ಒಂದು ಹೋಮ ಮಾಡುತ್ತಾನೆ. ಅಧ್ವರ್ಯುವಿನ ಅಪ್ಪಣೆಯಂತೆ ಮೈತ್ರಾವರುಣನು ಎಲ್ಲರನ್ನೂ ಸದಸ್ಸಿನಿಂದ ಹೊರಬರುವಂತೆ ಹೇಳುತ್ತಾನೆ. ಅದರಂತೆ ಎಲ್ಲರೂ ಬಂದ ದಾರಿಯಲ್ಲೇ ಹೊರಗೆ ಹೋಗುತ್ತಾರೆ.

ಮಾಧ್ಯಂದಿನ ಸವನಕ್ಕೆ ಮುಂಚೆ, ಪುನಃ ಎಲ್ಲರೂ ಸದಸ್ಸನ್ನು ಪ್ರವೇಶಿಸುತ್ತಾರೆ ಯಜಮಾನನು ಪೂರ್ವದ ಬಾಗಿಲಿನಿಂದ ಒಳಬರುತ್ತಾನೆ. ಸಾಧಾರಣವಾಗಿ ಈಗಲೂ ಪ್ರಾತಃಸವನದ ಕ್ರಮವೇ ಅನುಸರಿಸಲ್ಪಡುತ್ತದೆ. (ಆವ. XIII. ೧. ೨.) ಮೊದಲ ಎರಡು ಸವನಗಳು ಆತುರವಿಲ್ಲದೆಯೂ, ಮೂರನೆಯದು ಆತುರದಲ್ಲಿಯೂ ನಡೆಯುತ್ತವೆ (ಆಪ. XII. ೨೯. ೧೨). ಕೆಲವೇ ವ್ಯತ್ಯಾಸಗಳಿವೆ. ಮಾಧ್ಯಂದಿನಸವನದಲ್ಲಿ ದ್ವಿದೇವತ್ಯ ಮತ್ತು ಋತುಗ್ರಹಗಳಿಲ್ಲ (ಆಪ. XIII. ೧.೪.) ಮಹಾಭಿಷವವು ಪ್ರಾತಸ್ಸವನದಂತೆಯೇ, ಆದರೆ ಉಚ್ಚಸ್ವರದಲ್ಲಿ (ಆಪ. XIII. ೧.೮). ಇದರಲ್ಲಿ ವಸತೀವರಿ ನೀರನ್ನು ಹೋತೃ ಚಮಸದಲ್ಲಿ ತೆಗೆದುಕೊಂಡು, ಯಜಮಾನನ ಕೈಯಲ್ಲಿ ಕೊಡಲ್ಪಡುತ್ತದೆ ಮತ್ತು ಇದೇ ನಿಗ್ರಾಭ್ಯವಾಗುತ್ತದೆ. ಸೋಮಲತೆಗಳನ್ನು ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿ, 'ಗ್ರಾವಸ್ತುತ್' ಎಂಬ ಋತ್ವಿಜನು ಉಷ್ಣೀಷವಾಗಿ ಉಪಯೋಗಿಸಲು ಕೊಡಲ್ಪಟ್ಟು, ಅವನು ಸೋಮವನ್ನು ಕುಟ್ಟುವ ಕಲ್ಲನ್ನು ಸ್ತುತಿಸಿದಮೇಲೆ, ಹಿಂದಕ್ಕೆ ತೆಗೆದುಕೊಳ್ಳಲ್ಪಡುತ್ತದೆ (ಆಪ. XIII. ೧.೫). ಐದು ಗ್ರಹಗಳು ; ಶುಕ್ರ, ಮಂಥೀ, ಆಗ್ರಯಣ, ಎರಡು ಮರುತ್ವತೀಯಗಳು ಮತ್ತು ಉಕ್ಥ್ಯ (ಮರುತ್ವತೀಯಗಳಿಗಿಂತ ಮುಂಚೆ ಅಥವಾ ಅವೆರಡಕ್ಕು ಮಧ್ಯೆ).

ಗ್ರಾವಸ್ತುತ್ (ಸೋಮಸವನಕ್ಕಾಗಿ ಉಪಯೋಗಿಸುವ ಕಲ್ಲುಗಳನ್ನು ಸ್ತುತಿಸುವವನು) ಋತ್ವಿಜನು ಪೂರ್ವದ್ವಾರದಿಂದ ಹವಿರ್ಧಾನ ಶಾಲೆಯನ್ನು ಪ್ರವೇಶಿಸಿ, ದಕ್ಷಿಣ ಹವಿರ್ಧಾನ ಶಕಟದ ಅಚ್ಚಿನ ಕೊನೆಯ ಈಶಾನ್ಯದ ಮೂಲೆಗೆ ಒಂದು ದರ್ಭೆಯನ್ನೆಸೆದು, ಆಗ್ನೇಯಾಭಿಮುಖನಾಗಿ, ಸೋಮಕಾಷ್ಠಗಳ ಎದುರಿಗೆ ನಿಲ್ಲುತ್ತಾನೆ. ಸೋಮಕ್ಕೆ ಬಿಗಿದಿದ್ದ ಬಟ್ಟೆಯನ್ನು ತನ್ನ

ಅಂಜಲಿಯಲ್ಲಿ ತೆಗೆದುಕೊಂಡು, ಎಡದಿಂದ ಬಲಕ್ಕೆ ಮೂರುಬಾರಿ, ತಲೆಗೆ ಸುತ್ತುತ್ತಾನೆ. ಕಡೆಗೆ ಅದು ರುಮಾಲಿನಂತೆ ಕಾಣಬೇಕು. ಸವನಕ್ಕಾಗಿ ಸೋಮಗಳು ಕಲ್ಲಿನಮೇಲೆ ಇಡಲ್ಪಡುವಾಗ, ಮಧ್ಯಮ ಸ್ವರದಲ್ಲಿ (ಮಾಧ್ಯಂದಿನ ಸವನದಲ್ಲಿ ಎಲ್ಲಾ ವೇದ ಭಾಗಗಳನ್ನೂ ಇದೇ ಸ್ವರದಲ್ಲಿಯೇ ಹೇಳಬೇಕು) ಹೇಳುತ್ತಾನೆ (ಆಶ್ವ. V. ೧೨. ೭-೮). ಅವನು ಉಚ್ಚರಿಸಬೇಕಾದ ಭಾಗಗಳು (ಆಶ್ವ. V. ೧೨. ೯-೨೧), ಋ. I. ೨೪. ೩., V. ೮೧. ೧., VIII. ೮೧. ೧., VIII. ೧. ೧., X. ೯೪ (ಈ ಸೂಕ್ತಕ್ಕೆ **ಅರ್ಬುದ**ವೆಂದು ಹೆಸರು), X. ೭೬ ಮತ್ತು ೧೭೫. ಇವುಗಳಲ್ಲಿ, **ಅರ್ಬುದ**ದ ಕಡೆಯ ಮಂತ್ರವನ್ನು ಹೇಳುವುದಕ್ಕೆ ಮುಂಚೆ, X. ೭೬ ಮತ್ತು ೧೭೫ ನೆಯ ಸೂಕ್ತಗಳನ್ನು ಹೇಳಬೇಕು. ಈ ಎರಡು ಸೂಕ್ತಗಳಿಗೆ ಮುಂಚೆ, ಅಥವಾ ಮಧ್ಯೆ, ಅಥವಾ ಅನಂತರ ಮತ್ತು X. ೯೪ ರ ಕಡೆಯ ಮಂತ್ರಕ್ಕಿಂತ ಮುಂಚೆ, ಗ್ರಹಗಳನ್ನು ಸೋಮರಸದಿಂದ ತುಂಬಿ, ಕೈಗೆ ತೆಗೆದುಕೊಳ್ಳುವವರೆಗೆ ಎಷ್ಟುಬೇಕಾಗುತ್ತದೋ ಅಷ್ಟೂ ಪವಮಾನ ಮಂತ್ರಗಳನ್ನು ಹೇಳುತ್ತಿರಬೇಕು. ಎಲ್ಲವೂ ಮುಗಿದಮೇಲೆ, **ಅರ್ಬುದ**ದ ಕಡೆಯ ಮಂತ್ರವನ್ನು ಹೇಳಿ, ಉಷ್ಣೀಷದ ಬಟ್ಟೆಯನ್ನು ಯಜಮಾನನಿಗೆ ಹಿಂದಕ್ಕೆ ಕೊಡಬೇಕು. ಈ ಮಂತ್ರಗಳನ್ನು ಹೇಳುವ ವಿಷಯದಲ್ಲಿ ಅಶ್ವಲಾಯನರು ಮತ್ತೆ ಕೆಲವು ವಿವರಗಳನ್ನು ಕೊಟ್ಟಿದಾರೆ. ಈ ಅರ್ಬುದ ಸೂಕ್ತ (X. ೯೪)ದಲ್ಲಿ ಇರುವ ೧೪ ಋಕ್ಕುಗಳಲ್ಲಿ, ನಾಲ್ಕನೆಯದನ್ನು ಬಿಡಬೇಕು, ಕಡೆಯದು **ಪರಿಧಾನೀಯ** (ಗ್ರಾವಸ್ತುತ್ ಹೇಳಬೇಕಾದ ಮಂತ್ರಗಳಲ್ಲಿ ಕಟ್ಟಕಡೆಯದು), ಉಳಿದ ಹನ್ನೆರಡು ಮಂತ್ರಗಳನ್ನು ಮೂರು ಮೂರಾಗಿ ವಿಭಾಗಿಸಿಕೊಂಡು, ಒಂದೊಂದು ಮಂತ್ರತ್ರಯದ ಮೊದಲು ಅಥವಾ ಅನಂತರ, ಈ ಮುಂದಿನ ಮೂರು ಮೂರು ಮಂತ್ರಗಳನ್ನು ಸೇರಿಸಿಕೊಳ್ಳಬೇಕು—ಋ. ಸಂ. I. ೯೧. ೧೬-೧೮., IX. ೮. ೪., IX. ೧೫. ೮., IX. ೧೦೭. ೨೧., VIII. ೭೨. ೮., VIII. ೭೨. ೧೬., IX. ೧೭. ೪., IX. ೬೭. ೧೪-೧೫ (ಇವೆಲ್ಲವೂ ಸೇರಿದರೆ ೧೨ ಮಂತ್ರಗಳಾಗುತ್ತವೆ). ಸೋಮಪ್ರೋಕ್ಷಣ, ಸೋಮವನ್ನು ಕುಟ್ಟುವುದು, ರಸವನ್ನು ಹಿಂಡುವುದು ಮತ್ತು ಆಧವನೀಯ ದ್ರೋಣಿಯಲ್ಲಿ ಸೋಮವನ್ನು ಶೇಖರಿಸುವುದು, ಈ ನಾಲ್ಕು ಕೆಲಸಗಳು ನಡೆಯುತ್ತಿರುವಾಗ, ನಾಲ್ಕು ಮಂತ್ರತ್ರಯಗಳನ್ನು ಉಚ್ಚರಿಸಬೇಕು (ಆಶ್ವ. V. ೧೨. ೧೫-೧೯). ಬಹಿಷ್ಪವಮಾನದ ಬದಲು, ಇಲ್ಲಿ ಮಾಧ್ಯಂದಿನಪವಮಾನ ಸ್ತೋತ್ರ (ಆಪ. XIII. ೩. ೭). ಈ ಸ್ತೋತ್ರದಲ್ಲಿರುವ ಮಂತ್ರಗಳು ಋ. IX. ೬೧. ೧೦-೧೨., X. ೧೦೭, ೪-೫., X. ೮೭. ೧-೩ ಅಂದರೆ, ಸಾ. ವೇ. II. ೧. ೧. ೮-೧೦ ನೆಯುವು. ಈ ಮಾಧ್ಯಂದಿನಪವಮಾನಕ್ಕೆ ಮುಂಚೆ ಮತ್ತು ಅದರ ಗಾನಕಾಲದಲ್ಲಿ. ಯಜಮಾನನು ಕೆಲವು ಮಂತ್ರಗಳನ್ನು ಜಪಿಸುತ್ತಿರಬೇಕು. (ಆಪ. XIII. ೩-೧).

ಮಾಧ್ಯಂದಿನ ಪವಮಾನವಾದಮೇಲೆ, ಯಜಮಾನನು ಪ್ರವರ್ಗ್ಯವನ್ನು ಆಚರಿಸಿದ್ದರೆ, **ದಧಿಘರ್ಮ**ವೆಂಬ ಕರ್ಮವನ್ನು ಆಚರಿಸಬೇಕು (ಆಶ್ವ. V. ೧೩. ೧). ಉದುಂಬರದಿಂದ ಮಾಡಿದ ಸ್ರುಕ್ಕಿನಲ್ಲಿ, ಪ್ರತಿಪ್ರಸ್ಥಾತೃವು ಮೊಸರನ್ನು ತರುತ್ತಾನೆ; ಈ ಮೊಸರನ್ನು ಆಗ್ನೀಧ್ರಿಯಾಗ್ನಿಯಲ್ಲಿ ಕಾಯಿಸುತ್ತಾರೆ. ಈಗ ಹೋತೃವನ್ನು, "ಹವಿಸ್ಸನ್ನು ಕಾಯಿಸಿಯಾಯಿತೇ ?" ಎಂದು ಕೇಳುತ್ತಾರೆ. ಆಗ ಹೋತೃವು, ಅನುವಾಕ್ಯಾವಾಗಿ ಋ. X. ೧೭೯. ೨ ನೆಯ ಮಂತ್ರವನ್ನೂ, ಯಾಜ್ಯಾರೂಪವಾಗಿ X. ೧೭೯. ೩ ನೆಯದನ್ನೂ ಪಠಿಸಿ, 'ವೌಷಟ್' ಎನ್ನುತ್ತಾನೆ. ಆಗ ತಪ್ತದಧಿಯು ಆಹವನೀಯದಲ್ಲಿ ಹೋಮ ಮಾಡಲ್ಪಡುತ್ತದೆ. ಅದೇ ಋತ್ವಿಜನು "ಅಗ್ನೇವೀಹಿ...." ಎಂಬ ಮಂತ್ರವನ್ನುಚ್ಚರಿಸಿ, ಪುನಃ 'ವೌಷಟ್' ಎಂದಾಗ, ಎರಡನೆಯ ತಪ್ತದಧಿ ಹೋಮಮಾಡಿ, ಪ್ರವರ್ಗ್ಯದಲ್ಲಿ ಭಾಗವಹಿಸಿದ ಋತ್ವಿಜರೆಲ್ಲರೂ, ಹೋಮಶೇಷವನ್ನು ಸ್ವೀಕರಿಸುತ್ತಾರೆ. ಅನಂತರ ಪಶುಪುರೋಡಾಶ (ಪ್ರಾತಃಕಾಲದಲ್ಲಿ ವಧಿಸಲ್ಪಟ್ಟ ಪಶುವಿನದು), ಮತ್ತು ಇತರ ಹೋಮಗಳು (ಏಕಾದಶಕಪಾಲಪುರೋಡಾಶ ಮುಂತಾದುವು) ಹುತವಾಗಿ, ಶೇಷವು ಭಕ್ಷಿಸಲ್ಪಡುತ್ತದೆ. ಅಚ್ಛಾವಾಕನದೂ ಸೇರಿ, ಹತ್ತು ಚಮಸಗಳನ್ನೂ ತುಂಬುತ್ತಾರೆ. ಶುಕ್ರ ಮತ್ತು ಮಂಥಿಗ್ರಹಗಳಿಂದ ಕ್ರಮವಾಗಿ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳೂ, ಚಮಸಗಳಿಂದ ಚಮಸಾಧ್ವರ್ಯುಗಳೂ ಹೋಮಮಾಡಿ, ಹೋಮಶೇಷವನ್ನು ಎಲ್ಲ ಋತ್ವಿಜರೂ ತೆಗೆದುಕೊಳ್ಳುತ್ತಾರೆ. ಈಗ **ದಕ್ಷಿಣಾಹುತಿ** ಅಥವಾ **ದಕ್ಷಿಣ ಹೋಮಗಳೆಂಬ** ಆಜ್ಯಾಹುತಿಗಳು (**ಕಾತ್ಯಾ.** X. ೧. ೪., ಶಾ. IX. ೨). ಹಿಂದೆ ವಿವರಿಸಿರುವ **ನೈಸರ್ಜನ** ಹೋಮದಂತೆಯೇ ಇಲ್ಲಿಯೂ ಕ್ರಮ.

ಯಜಮಾನ ಮತ್ತು ಅವನ ಕುಟುಂಬದವರಮೇಲೆ ಹೊದಿಸಿರುವ ಬಟ್ಟೆಯಲ್ಲಿ ಒಂದುಚೂರು ಬಂಗಾರ ಅಥವಾ ಒಂದು ಸುವರ್ಣನಾಣ್ಯವನ್ನು ಕಟ್ಟಿ, ಅದನ್ನು ಜುಹುವಿನಲ್ಲಿಟ್ಟು, ಗಾರ್ಹಪತ್ಯಾಗ್ನಿಯಲ್ಲಿ, "ಉದುತ್ಯಂ...." (ಋ. I. ೫೦. ೧) ಮತ್ತು "ಚಿತ್ರಂ...." (ಋ. I. ೧೧೫-೧) ಮಂತ್ರಗಳನ್ನುಚ್ಚರಿಸಿ, ಎರಡು ಹೋಮಗಳನ್ನು ಮಾಡುತ್ತಾರೆ. ಆ ಸುವರ್ಣ ನಾಣ್ಯವನ್ನು ಬಿಚ್ಚಿ ತೆಗೆದು, ಯಜಮಾನನು ಅದನ್ನೂ ಆಜ್ಯವನ್ನೂ ಕೈಯಲ್ಲಿ ಹಿಡಿದು, ಮಹಾವೇದಿಯ ದಕ್ಷಿಣದಲ್ಲಿ ಇಟ್ಟಿರುವ ದಕ್ಷಿಣಾ (ದಕ್ಷಿಣೆ ಕೊಡುವುದಕ್ಕಾಗಿ ಸಿದ್ಧಪಡಿಸಿರುವ) ವಸ್ತುಗಳನ್ನು ಸಮೀಪಿಸುತ್ತಾನೆ (ಯಾವ ಋತ್ವಿಜನೂ ನೂರು ಗೋವುಗಳಿಗಿಂತ ಕಡಿಮೆ ದಕ್ಷಿಣೆಗೆ ಸೋಮಯಾಗದಲ್ಲಿ ಋತ್ವಿಜನಾಗಲು ಒಪ್ಪಿಕೊಳ್ಳಬಾರದು--ಶತ. ಬ್ರಾ. IV. ೩-೪). ಇದರಂತೆಯೇ ಆಪ. XIII. ೫. ೧., XIII. ೬-೧೫ ರಲ್ಲಿ, ಹದಿನಾರು ಜನ ಋತ್ವಿಜರಿಗೆ ಕೊಡಬೇಕಾದ ದಕ್ಷಿಣೆಯ ವಿಷಯದಲ್ಲಿ ಅನೇಕ ನಿಯಮಗಳನ್ನು ಹೇಳಿದೆ. ದಕ್ಷಿಣೆಯು, ೭, ೨೧, ೬೦, ೧೦೦, ೧೧೨ ಅಥವಾ ೧೦೦೦ ಅಥವಾ ಅಸಂಖ್ಯವಾದ ಗೋರೂಪವಾಗಿರಬಹುದು; ಯಜಮಾನನು ಹಿರಿಯಮಗನ ಭಾಗವನ್ನು ಬಿಟ್ಟು, ತನ್ನ ಆಸ್ತಿಯೆಲ್ಲವನ್ನು ಕೊಡಬಹುದು; ೧೦೦೦ ಗೋವುಗಳು ಅಥವಾ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವುದಾದರೆ, ಅದರಮೇಲೆ ಒಂದು ಹೇಸರಕತ್ತೆಯನ್ನೂ ಕೊಡಬೇಕು (ಆಪ. XIII. ೫. ೧-೩), ಇದಲ್ಲದೆ, ಆಡು, ಕುರಿ, ಕುದುರೆ, ಆಳುಗಳು, ಒಂದು ಆನೆ, ಉಡುಪುಗಳು, ರಥಗಳು, ಧಾನ್ಯಗಳು, ಕತ್ತೆಗಳು ಎಲ್ಲವನ್ನೂ ಕೊಡಬಹುದು. ಗೋವುಗಳನ್ನೇ ದಕ್ಷಿಣೆಯಾಗಿ ಕೊಡುವುದಾದರೆ, ಯಜಮಾನನು ತನ್ನ ಕೃಷ್ಣಾಜಿನದಿಂದ ಆ ಹಿಂಡನ್ನು ನಾಲ್ಕು ಸಮಭಾಗಗಳಾಗಿ ವಿಂಗಡಿಸಿ ಒಂದು ಭಾಗವನ್ನು ಅಧ್ವರ್ಯು ಮತ್ತು ಅವನ ಸಹಾಯಕರಿಗೆ ಕೊಡಬೇಕು. ಅಧ್ವರ್ಯುವಿಗೆ ಬರುವುದರಲ್ಲಿ ಅರ್ಧಭಾಗವು ಪ್ರತಿಪ್ರಸ್ಥಾತೃವಿಗೆ, ಮೂರನೆಯ ಒಂದುಭಾಗವು ನೇಷ್ಟೃವಿಗೆ ಮತ್ತು ಕಾಲುಭಾಗವು ಉನ್ನೇತೃವಿಗೆ ಬರಬೇಕು; ಅಂದರೆ ಕಾತ್ಯಾ. X. ೨. ೨೫ ಮತ್ತು ಆಪ. XIII. ೨. ೧೨ ರ ವ್ಯಾಖ್ಯಾನ, ಇವುಗಳಲ್ಲಿ ಹೇಳಿರುವಂತೆ, ಮುಖ್ಯ ಋತ್ವಿಜರಿಗೆ ಒಬ್ಬೊಬ್ಬರಿಗೂ ೧೨ ಗೋವುಗಳಾದರೆ, ಅವರ ಸಹಾಯಕರುಗಳಿಗೆ, ೬, ೪, ೩ ಗೋವುಗಳಂತೆ ಕೊಡಬೇಕು. ಜೈಮಿನಿ ಮತ್ತು ಮನುಗಳೂ ಈ ದಕ್ಷಿಣಾ ವಿಭಾಗವನ್ನೂ ಪ್ರಸ್ತಾಪಿಸಿದ್ದಾರೆ.

ಮೊದಲು ದಕ್ಷಿಣೆ ತೆಗೆದುಕೊಳ್ಳುವವನು ಆಗ್ನೀಧ್ರನು. ಅವನಿಗೆ ಸುವರ್ಣನಾಣ್ಯ, ಪೂರ್ಣಪಾತ್ರ ಮತ್ತು ನಾನಾ ಬಣ್ಣದ ದಾರಗಳಿಂದ ಕಸೂತಿ ಹಾಕಿದ ದಿಂಬು ಒಂದು, ಇವುಗಳು ಕೊಡಲ್ಪಡಬೇಕು. ಪ್ರತಿಪ್ರಸ್ಥಾತೃವಿಗೆ ಕಡೆಯಲ್ಲಿ ದಕ್ಷಿಣೆ ಕೊಡಬೇಕು (ಆಪ. XIII. ೬. ೨., ಕ್ಯಾತ್ಯಾ. XIII. ೨. ೩೯). ಸದಸ್ಸಿನಲ್ಲಿ ಕುಳಿತಿರುವಾಗ ಎಲ್ಲಾ ಋತ್ವಿಜರಿಗೂ ದಕ್ಷಿಣೆ ಕೊಡುವುದು. ಆದರೆ, ಅಧ್ವರ್ಯು ಮತ್ತು ಅವನ ಸಹಾಯಕರಿಗೆ ಮಾತ್ರ ಹವಿರ್ಧಾನಶಾಲೆಯಲ್ಲಿ ಕೊಡಬೇಕು. ಋತ್ವಿಜನಲ್ಲದ. ಅತ್ರಿಗೋತ್ರಜನಾದ ಒಬ್ಬ ಬ್ರಾಹ್ಮಣನಿಗೆ, ಎಲ್ಲರಿಗಿಂತ ಮುಂಚೆ ಅಥವಾ ಆಗ್ನೀಧ್ರನಿಗೆ ಕೊಟ್ಟಮೇಲೆ, ಒಂದು ಸುವರ್ಣನಾಣ್ಯವನ್ನು ದಕ್ಷಿಣೆಯಾಗಿ ಕೊಡಬೇಕು (ಆಪ. XIII ೬. ೧೨., ಕಾತ್ಯಾ. X. ೨. ೨೧). ಆಗ್ನೀಧ್ರನಾದ ಮೇಲೆ, ಕ್ರಮವಾಗಿ, ಬ್ರಹ್ಮ, ಉದ್ಗಾತೃ ಮತ್ತು ಹೋತೃಗಳಿಗೆ ದಕ್ಷಿಣೆ (ಕಾತ್ಯಾ. X ೨. ೨೬). ಕೊಡಬೇಕು.

ಋತ್ವಿಜರಿಗೆ ಕೊಡುವ ದಕ್ಷಿಣೆಯಲ್ಲದೇ, ಯಜಮಾನನ ಶಕ್ತಿ ಮತ್ತು ಇಚ್ಛೆಯನ್ನನುಸರಿಸಿ, ಚಮಸಾಧ್ವರ್ಯುಗಳು, ಸದಸ್ಯ, ಸದಸ್ಸಿನಲ್ಲಿರುವ ಪ್ರೇಕ್ಷಕರು (ಇವರಿಗೆ ಪ್ರಸರ್ಪಕರೆಂದು ಹೆಸರು) ಇವರುಗಳಿಗೆಲ್ಲಾ ದಕ್ಷಿಣೆಯನ್ನು ಕೊಡಬಹುದು; ಆದರೆ ತಾವಾಗಿಯೇ ಬಂದು ದಕ್ಷಿಣೆ ಬೇಡುವವರಿಗೆ ಮತ್ತು ಕಣ್ವ ಅಥವಾ ಕಶ್ಯಪ ಗೋತ್ರದಲ್ಲಿ ಜನಿಸಿದವರಿಗೆ, ಸಾಧಾರಣವಾಗಿ ಬ್ರಾಹ್ಮಣರಲ್ಲದವರಿಗೆ ದಕ್ಷಿಣೆ ಕೊಡಬಾರದು; ಆದರೆ, ವೈದಿಕ ವಿದ್ಯೆಗಳನ್ನು ತಿಳಿದ ಆ ಬ್ರಾಹ್ಮಣನಿಗೆ ದಕ್ಷಿಣೆ ಕೊಡಬಹುದು; ಬ್ರಾಹ್ಮಣನಾದರೂ ವಿದ್ಯಾವಂತನಲ್ಲದವನು ದಕ್ಷಿಣಾರ್ಹನಲ್ಲ (ಆಪ. XII. ೭-೭., ಕಾತ್ಯಾ. X. ೨. ೩೫). ಪತ್ನಿಯೂ ದಕ್ಷಿಣಾ ದಾನದಲ್ಲಿ ಭಾಗವಹಿಸಬೇಕು (ಕಾತ್ಯ. X. ೨. ೬೮). ಮರುತ್ವತೀಯ ಗ್ರಹಕ್ಕೆ, ಮೈತ್ರಾವರುಣನು ಅನುವಾಕ್ಯಾವನ್ನು ಹೇಳಿದ ಮೇಲೆ ದಕ್ಷಿಣೆಯನ್ನು ಕೊಡಬಾರದು (ಆಪ. XIII. ೭. ೧೪; ಕಾತ್ಯಾ X. ೩. ೨). ದಕ್ಷಿಣೆಗಳನ್ನೆಲ್ಲಾ ಕೊಟ್ಟು ಮುಗಿದಮೇಲೆ, ಯಜಮಾನನು ಎಲ್ಲಾ ಋತ್ವಿಜರಿಗೂ ನಮಸ್ಕರಿಸಿ, ದಾನಮಾಡಿದ ಪ್ರಾಣಿಗಳ ವಿಷಯವಾಗಿ **ಕಾಮಸ್ತುತಿ** ಎನಿಸಿಕೊಳ್ಳುವ

"ಕ ಇದಂ ಕಸ್ಮಾ........" ಎಂಬ ವಾಕ್ಯವನ್ನು ಹೇಳುತ್ತಾನೆ. ದಾನವನ್ನು ಸ್ವೀಕಾರಮಾಡುವ ಮೊದಲು, ಪ್ರತಿಋತ್ವಿಜನೂ "ಸವಿತೃದೇವನ ಪ್ರೇರಣೆಯಂತೆ ಸ್ವೀಕರಿಸುತ್ತಿದ್ದೇನೆ........" (ತಾಂ. I. ೮. ೧) ಎಂಬ ಅರ್ಥದ ಮಂತ್ರವನ್ನೂ, ದಾನಸ್ವೀಕಾರಾನಂತರ "ಕ ಇದಂ ಕಸ್ಮಾ........" ಮುಂತಾದ (ತಾಂ. I. ೮. ೧೬) ಕಾಮಸ್ತುತಿಯನ್ನೂ ಉಚ್ಚರಿಸಬೇಕು. ದಕ್ಷಿಣೆಯ ಪದಾರ್ಥಗಳನ್ನು ತೆಗೆದುಕೊಂಡು, ಆಗ್ನೀಧ್ರೀಯಶಾಲಾ ಮತ್ತು ಸದಸ್ಸಿನ ಮಧ್ಯೆ, ತೀರ್ಥದ ಪಕ್ಕದಲ್ಲಿ ಹೋಗಬೇಕು (ದ್ರಾ. V. ೩. ೧೩).

ಜೈಮಿನಿಗಳು ದಕ್ಷಿಣೆಗಳ ವಿಷಯದಲ್ಲಿ ಹೇಳಿರುವುದು ಗಮನಾರ್ಹವಾಗಿದೆ. ಈ ದಕ್ಷಿಣೆ ಎಂಬುದು ಕೇವಲ ಔಪಚಾರಿಕವಲ್ಲ; ಋತ್ವಿಜರು ಯಾಗಗಳಲ್ಲಿ ಬಂದು ಶ್ರದ್ಧೆಯಿಂದ ಕಾರ್ಯನಿರ್ವಾಹ ಮಾಡಲಿ ಎಂಬ ದೃಷ್ಟಿಯಿಂದ ಕೊಡಬೇಕಾದುದು. X. ೩. ೫೯-೬೯ ನೆಯ ಸ್ತೋತ್ರಗಳಲ್ಲಿ "ದಕ್ಷಿಣೆಯು ೧೧೨" ಎಂಬ ವೇದವಾಕ್ಯಕ್ಕೆ ೧೧೨ ಗೋವುಗಳು ಎಂದೇ ಅಭಿಪ್ರಾಯ; ಧಾನ್ಯಾದಿಗಳಲ್ಲವೆಂದೂ, X. ೩. ೫೦-೫೫ ನೆಯ ಸೂತ್ರಗಳಲ್ಲಿ, ಋತ್ವಿಜರು ಮತ್ತು ಅವರ ಸಹಾಯಕರಿಗೆ ದಕ್ಷಿಣೆಯನ್ನು ವಿಭಜಿಸುವುದು ಯಜಮಾನನೇ ಮಾಡಬೇಕಾದ ಕೆಲಸವೆಂದೂ, ಎಲ್ಲರಿಗೂ ಒಂದೇ ಸಮನಾದ ದಕ್ಷಿಣೆಯಿಲ್ಲವೆಂದೂ. ಕೆಲವರು 'ಅರ್ಧಿನಃ' ಎಂದರೆ ಅರ್ಧಭಾಗಕ್ಕೆ ಮಾತ್ರ ಅರ್ಹರು, ಕೆಲವರು "ತೃತೀಯಿನಃ" ಎಂದರೆ ಮೂರನೆಯ ಒಂದು ಭಾಗಕ್ಕೆ ಮಾತ್ರ ಅರ್ಹರೆಂತಲೂ, ನಿರ್ಧರಿಸಿದ್ದಾರೆ. ಸೋಮಯಾಗದಲ್ಲಿ ಅಧಿಕದಕ್ಷಿಣೆ ಕೊಡುವುದರಿಂದ, ದರ್ಶಪೂರ್ಣಮಾಸಾದಿಗಳಲ್ಲಿ ಕೊಡುವಂತೆ, ಅನ್ವಾಹಾರ್ಯ (ಪಕ್ವಾನ್ನ)ದ ಭಾಗಗಳಲ್ಲ.

ದಾನದ ವಸ್ತುಗಳೆಲ್ಲವನ್ನೂ ತೆಗೆದುಕೊಂಡು, ಋತ್ವಿಜರು ಸದಸ್ಸಿನಿಂದ ಹೊರಟು ಹೋದಮೇಲೆ, ಯಜಮಾನನು ಎರಡು ಮಂತ್ರಗಳನ್ನು ಉಚ್ಚರಿಸುತ್ತಾ, ಸಾರಂಗದ ಕೊಂಬನ್ನು ಚಾತ್ವಾಲಗರ್ತದೊಳಗೆ ಬಿಸಾಡುತ್ತಾನೆ (ಆಪ. XIII. ೭. ೧೬). ಹೀಗೆ ಸಾರಂಗದ ಕೊಂಬನ್ನು ಬಿಸುಡುವುದು ಕಟ್ಟಕಡೆಯದಾಗಿ ಮಾಡಬೇಕಾದುದೆಂದೂ, ಇದಕ್ಕೆ ಪ್ರತಿಪತ್ತಿಕರ್ಮವೆಂತಲೂ (ಜೈ. ೪–೨–೧೬ ರಿಂದ ೧೯), ದ್ವಾದಶಾಹಾದಿಯಾಗಗಳಲ್ಲಿ ಈ ಕರ್ಮವನ್ನು ಕಡೆಯ ದಿನದಲ್ಲಿ ಮಾಡಬೇಕೆಂದೂ (ಜೈ. ೧೧–೩–೧೩ ಮತ್ತು ೧೪) ಜೈಮಿನಿಗಳು ವಿಧಿಸಿದ್ದಾರೆ. ಅಧ್ವರ್ಯುವು **ವೈಶ್ವಕರ್ಮಣವೆಂಬ** (ವಿಶ್ವಕರ್ಮನನ್ನು ಉದ್ದೇಶಿಸಿ ಕೊಡುವುದು) ಐದು ಆಜ್ಯಾಹುತಿಗಳನ್ನು ಆಗ್ನೀಧ್ರಾಗ್ನಿಯಲ್ಲಿ ತೈ. ಸಂ. ೩–೨–೮–೧ ರಿಂದ ೩ ಮಂತ್ರಗಳನ್ನು ಉಚ್ಚರಿಸುತ್ತಾ, ಕೊಡುತ್ತಾನೆ. (ಆಪ. ೧೩–೭–೧೭., ಸತ್ಯಾ. ೯–೨). ಮರುತ್ವತ್ (ಇಂದ್ರ)ನನ್ನುದ್ದೇಶಿಸಿ, ಅಧ್ವರ್ಯು ಮತ್ತು ಪ್ರತಿಪ್ರಸ್ಥಾತೃಗಳು ಎರಡು ಗ್ರಹಗಳನ್ನು ತುಂಬಿಕೊಂಡು ಹೋಮಮಾಡುತ್ತಾರೆ. ಪ್ರತಿಪ್ರಸ್ಥಾತೃವಿನ ಕೈಯಲ್ಲಿರುವ ಗ್ರಹದಲ್ಲಿ ಉಳಿದಿರುವ ಸೋಮವನ್ನು ಅಧ್ವರ್ಯುವಿನ ಗ್ರಹಕ್ಕೆ ಹಾಕಿ, ಆ ಮಿಶ್ರಣದಲ್ಲಿ ಸ್ವಲ್ಪಭಾಗವನ್ನು ಪುನಃ ಪ್ರತಿಪ್ರಸ್ಥಾತೃವಿನ ಗ್ರಹಕ್ಕೆ ಹುಯಿದು, ಆ ಶೇಷವನ್ನೆಲ್ಲಾ, ಋತ್ವಿಜರು ಸ್ವೀಕರಿಸುತ್ತಾರೆ.

ಹೋತೃವಿನಿಂದ **ಮರುತ್ವತೀಯ** ಶಸ್ತ್ರದ ಪಠಣವಾಗುತ್ತಿರುವಾಗ, ಮೂರನೆಯ ಮರುತ್ವತೀಯ ಗ್ರಹವನ್ನು ತುಂಬಿಕೊಂಡು, ಶಸ್ತ್ರವು ಮುಗಿದಮೇಲೆ, ಅದನ್ನು ಹೋಮಮಾಡುತ್ತಾರೆ. **ಮರುತ್ವತೀಯ** ಶಸ್ತ್ರವು ಈರೀತಿ ಇರುತ್ತದೆ.

**ಹಿಂ ಭೂರ್ಭುವಃ ಸ್ವರೋಮ್ । ಅಧ್ವರ್ಯೋ ಶೋಂಸಾವೋಮ್** (ಆಹಾವಃ) **ಶೋಂಸಾಮೋ ದೈವೋಮ್** (ಪ್ರತಿಗರಃ)—ಇದನ್ನು **'ಶೋಂಸಾಮೋ ದೈವ'** ಎಂತಲೂ **'ಮೋಥಾಮೋ ದೈವ'** ಎಂತಲೂ, ಹೇಳಬೇಕೆಂದು ಕ್ರಮವಾಗಿ ತೈ. ಸಂಹಿತೆಯಲ್ಲೂ, ಕಾತ್ಯಾಯನ ೧೦–೩–೮ ರಲ್ಲೂ ಹೇಳಿದೆ. ಪ್ರತಿಗರವಾದಮೇಲೆ,

ಋ.ಸಂ. ೮-೬೮-೧ ರಿಂದ ೩ ಮಂತ್ರಗಳು (ಈ ಮಂತ್ರತ್ರಯಕ್ಕೆ **ಪ್ರತಿಪದ್** ಎಂದು ಹೆಸರು)., ಋ.ಸಂ. ೮. ೨. ೧,೨,೩ (ಈ ತ್ರಯಕ್ಕೆ **ಅನುಚರ**ವೆಂದು ಹೆಸರು) ಮಂತ್ರಗಳು., ಋ.ಸಂ. ೮–೫೩–೫, ೬ (**ಇಂದ್ರನಿಹ್ನವಪ್ರಗಾಥ**) ಮಂತ್ರಗಳು., ಋ.ಸಂ. ೧–೪೦–೫, ೬ (**ಬ್ರಾಹ್ಮಣಸ್ಪತ್ಯ** ಪ್ರಗಾಥ) ಮಂತ್ರಗಳು., ಋ.ಸಂ. ೩–೨೦–೪, ೧–೯೧–೨,

೧-೬೪-೬ (**ಧಾಯ್ಯಾ** ಎಂದು ಹೆಸರು) ನೆಯ ಮಂತ್ರಗಳು., ಋ. ಸಂ. ೮-೮೯-೩,೪ (**ಮರುತ್ವತೀಯ**ಪ್ರಗಾಥ)., ಋ.ಸಂ. ೧೦-೭೩-೧ ರಿಂದ ೬., "ಇಂದ್ರೋ ಮರುತ್ವಾನ್......." ಮೊದಲಾದ ಒಂದು **ನಿವಿದ್**., ಋ.ಸಂ. ೧೦-೭೩-೭ ರಿಂದ ೧೧., "ಉಕ್ತಂ ವಾಚೀಂದ್ರಾಯ ಶೃಣ್ವತೇ ತ್ವಾ" ಎಂದು ಜಪ (ಆಶ್ವ. ೫-೧೪-೨೬)., ಮತ್ತು ಕಡೆಯದಾಗಿ ಋ.ಸಂ. ೩-೪೭-೪ ನೆಯ ಮಂತ್ರವನ್ನು **ಯಾಜ್ಯಾ** ಆಗಿ, ಪಠಿಸಬೇಕು.

ಈಗ ಮಹೇಂದ್ರನಿಗಾಗಿ ಒಂದು ಗ್ರಹವನ್ನು ತೆಗೆದುಕೊಳ್ಳಬೇಕು. ಮಹೇಂದ್ರದೇವತಾಕವಾದ ಸ್ತೋತ್ರಕ್ಕೆ **ಪೃಷ್ಠ**ವೆಂದು ಹೆಸರು. ಇದನ್ನು ಈ ಕಾಲದಲ್ಲಿ **ರಥಂತರ** ಸಾಮವಾಗಿ ಗಾನಮಾಡಬೇಕು (ಲಾಟ್ಯಾ. ೨-೯-೭., ಆಶ್ವ. ೫-೧೫-೨,೩).

**ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ ।**
**ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ ॥**
**ನ ತ್ವಾವಾನ್ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ ।**
**ಅಶ್ವಾಯನ್ತೋ ಮಘವನ್ನಿಂದ್ರ ವಾಜಿನೋ ಗವ್ಯನ್ತಸ್ತ್ವಾ ಹವಾಮಹೇ ॥**

ಋ.ಸಂ. ೭-೩೨-೨೨ ಮತ್ತು ೨೩.

ಇವು ಈ ಸ್ತೋತ್ರದ ಋಙ್ಮಂತ್ರಗಳು. ಇದಾದಮೇಲೆ ಹೋತೃವಿನಿಂದ **ನಿಷ್ಕೇವಲ್ಯ** ಶಸ್ತ್ರವೆಂಬುದು. ಮಹೇಂದ್ರಗ್ರಹದಿಂದ ಹೋಮವಾದಮೇಲೆ, ಪ್ರತಿಪ್ರಸ್ಥಾತೃ, ನೇಷ್ಟೃ ಮತ್ತು ಉನ್ನೇತೃಗಳು **ಅತಿಗ್ರಾಹ್ಯ**ವೆಂಬ ಮೂರು ಗ್ರಹಗಳನ್ನೂ, ಅಗ್ನಿ, ಇಂದ್ರ ಮತ್ತು ಸೂರ್ಯದೇವತೆಗಳಿಗಾಗಿ ತೆಗೆದುಕೊಳ್ಳುತ್ತಾರೆ (ಆಪ. ೧೩-೮-೭, ೮, ೯). ಪ್ರಾತಃಸವನದಂತೆಯೇ, ಇಲ್ಲಿಯೂ ಮೂರು **ಉಕ್ಥ್ಯ**ಗ್ರಹಗಳ ಆಹುತಿ. ಈಗ ಮೂರು **ಪೃಷ್ಠಸ್ತೋತ್ರ**ಗಳ ಗಾನವು ಜರುಗುತ್ತದೆ (ಅಂದರೆ ೨, ೩ ಮತ್ತು ೪ನೆಯ ಪೃಷ್ಠಸ್ತೋತ್ರಗಳು).

೨ನೆಯ ಪೃಷ್ಠಸ್ತೋತ್ರ :— **ವಾಮದೇವ್ಯ**ವೆಂದು ಹೆಸರು. ಋ.ಸಂ. ೪-೩೧-೧,೨,೩ ಅಥವಾ ಸಾ.ವೇ. ೨-೧-೧-೧೨.

೩ನೆಯ ,, :— **ನೌಧಸ**ವೆಂದು ಹೆಸರು. ಋ.ಸಂ. ೮-೮೮-೧, ೨ ಅಥವಾ ಸಾ.ವೇ. ೨-೧-೧-೧೩.

೪ನೆಯ ,, :— **ಕಾಲೇಯ**. ಋ.ಸಂ. ೮-೬೬-೧, ೨ ಅಥವಾ ಸಾ.ವೇ. ೨-೧-೧-೧೪.

ಈ ಮೂರರಲ್ಲಿ ಒಂದೊಂದರ ಗಾನವಾದಮೇಲೆ, ಕ್ರಮವಾಗಿ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ ಮತ್ತು ಅಚ್ಛಾವಾಕರು ಒಂದೊಂದು ಶಸ್ತ್ರವನ್ನು ಪಠಿಸುತ್ತಾರೆ. ಇಲ್ಲಿಗೆ ಮಾಧ್ಯಂದಿನ ಸವನವು ಮುಗಿಯುತ್ತದೆ.

ತೃತೀಯ ಅಥವಾ ಸಾಯಂಸವನವು ಆದಿತ್ಯ (ಅದಿತಿದೇವತಾಕವಾದ) ಗ್ರಹದಿಂದ ಆರಂಭವಾಗುತ್ತದೆ. ಈ ಸವನದಲ್ಲಿ ಎಲ್ಲಾ ವೇದಮಂತ್ರಗಳು ಉಚ್ಚಸ್ವರದಲ್ಲಿ ಹೇಳಲ್ಪಡುತ್ತವೆ. (ಆಶ್ವ. ೫-೧೭-೧). ಮಾಧ್ಯಂದಿನ ಸವನದ ಕ್ರಮವೇ ತೃತೀಯ ಸವನದಲ್ಲಿಯೂ ಅನುಸರಿಸಬೇಕಾದುದು. (ಸತ್ಯಾ. ೫-೩). ಅಧ್ವರ್ಯು, ಯಜಮಾನ, ಪ್ರತಿಪ್ರಸ್ಥಾತೃ, ಆಗ್ನೀಧ್ರ ಮತ್ತು ಉನ್ನೇತೃಗಳು ಪೂರ್ವದ್ವಾರದಿಂದಲೂ, ಪತ್ನಿಯು ಪಶ್ಚಿಮದ ಬಾಗಿಲಿನಿಂದಲೂ, ಹವಿರ್ಧಾನ ಮಂಟಪವನ್ನು ಪ್ರವೇಶಿಸುತ್ತಾರೆ (ಕಾತ್ಯಾ. ೧೦-೩-೨,೩). ವೇದಿಯಲ್ಲಿ ಬಹಳ ಜನಗಳಿದ್ದರೆ, ಹವಿರ್ಧಾನ ಮಂಟಪದ ಬಾಗಿಲುಗಳನ್ನು ಮುಚ್ಚಿಬಿಡಬೇಕು (ಆಪ. ೧೩-೯-೨; ಸತ್ಯಾ. ೯-೩). ದ್ವಿದೇವತ್ಯಗ್ರಹಗಳಲ್ಲಿ ಉಳಿದಿರುವ ಸೋಮದಲ್ಲಿ ಸ್ವಲ್ಪಭಾಗವನ್ನು ಅಧ್ವರ್ಯುವು ಆದಿತ್ಯ ಗ್ರಹಕ್ಕೆ ಬಗ್ಗಿಸಿಕೊಂಡು, ಆ ಗ್ರಹದ ಮಧ್ಯ ಅಥವಾ ಪಶ್ಚಿಮಭಾಗದಲ್ಲಿ ಬೀಳುವಂತೆ ಸ್ವಲ್ಪ ಮೊಸರನ್ನು ಬೆರಸಿ, ಈಗ ದ್ವಿದೇವತ್ಯ

ಗ್ರಹಗಳಲ್ಲಿದ್ದ ಸೋಮವನ್ನೆಲ್ಲಾ ಬಗ್ಗಿಸಿಕೊಂಡು, (ಈ ಮಧ್ಯೆ ದ್ವಿದೇವತ್ಯಗ್ರಹಗಳಲ್ಲಿದ್ದ ಸೋಮಶೇಷವನ್ನೆಲ್ಲಾ ಆದಿತ್ಯಸ್ಥಾಲಿಯಲ್ಲಿ ಶೇಖರಿಸುತ್ತಾರೆ), ಸೋಮಲತೆಗಳನ್ನು ಕುಟ್ಟಲು ಉಪಯೋಗಿಸುತ್ತಿದ್ದ **ಉಪಾಂಶುಸವನ** ಗ್ರಾವ (ಕಲ್ಲಿ)ನಿಂದ, ಗ್ರಹದಲ್ಲಿರುವ ಸೋಮದಧಿಮಿಶ್ರಣವನ್ನು ಚೆನ್ನಾಗಿ ಕಲಕಿ, ಕಲ್ಲನ್ನು ಈಚೆಗೆ ತೆಗೆದು ಇತರ ಕಲ್ಲುಗಳ ಜೊತೆಯಲ್ಲಿಡುತ್ತಾನೆ. ಹೀಗೆ ಸೋಮದಧಿಗಳಿಂದ ತುಂಬಿದ ಗ್ರಹವನ್ನು ಕೆಳಗೆ ಇಡದೇ, ದರ್ಭೆಗಳಿಂದ ಅಥವಾ ಅಧ್ವರ್ಯುವಿನ ಹಸ್ತದಿಂದಲೇ ಮುಚ್ಚಿ, ಹವಿರ್ಧಾನ ಮಂಟಪದ ಬಾಗಿಲನ್ನು ತೆಗೆದಮೇಲೆ, ಆತನು, ಈಚೆಗೆ ಬಂದು, ಉತ್ತರವೇದಿಯನ್ನು ಸಮೀಪಿಸಿ, ಕೆಳಗೆ ಕೆಲವು ತೊಟ್ಟುಗಳು ಬೀಳುವಂತೆ, ದರ್ಭೆಯಿಂದಲೇ ಮಿಶ್ರವನ್ನು ಮತ್ತೊಮ್ಮೆ ಕಲಕುತ್ತಾನೆ. ಎಂದಿನಂತೆ ಪ್ರೈಷವೇ ಮುಂತಾದ ಕ್ರಮಗಳು ಜರುಗಿದಮೇಲೆ, ಮುಚ್ಚಿದ್ದ ದರ್ಭೆಗಳನ್ನು ಆಹವನೀಯಾಗ್ನಿಯಲ್ಲಿ ಎಸೆದು, ಆದಿತ್ಯಗ್ರಹದಲ್ಲಿದ್ದ ಪದಾರ್ಥವನ್ನು ಹೋಮಮಾಡುತ್ತಾನೆ. ಹೀಗೆ ಹೋಮಮಾಡುವಾಗಲೂ, ಅದಕ್ಕೆ ಪೂರ್ವಭಾವಿಯಾಗಿಯೂ, ಅಧ್ವರ್ಯುವು ಅಗ್ನಿಯಕಡೆ ಬೆಟ್ಟು ಬೇರೆ ಕಡೆಗೆ ನೋಡುತ್ತಿರಬೇಕು. (ಆಶ್ವ. ೫-೧೭-೩). ಇದರಲ್ಲಿ ಉಳಿದ ಸೋಮವನ್ನು ಪಾನಮಾಡದೇ, ಇತರ ಪಾತ್ರೆಗಳಲ್ಲಿರುವ ಸೋಮಶೇಷದೊಡನೆ ಇಡುತ್ತಾನೆ. ಋಜೀಷ (ರಸವನ್ನು ತೆಗೆದಮೇಲೆ ನಿಂತಿರುವ ಸೋಮಕಾಷ್ಠಗಳು) ದ ಮೇಲೆ, **ಅದಾಭ್ಯ** ಮತ್ತು **ಉಪಾಂಶು** ಪಾತ್ರಗಳಲ್ಲಿದ್ದ ಸೋಮಕಾಷ್ಠಗಳನ್ನು (ಅಂಶು) ಇಟ್ಟು, ಅವುಗಳಿಂದ ಮೌನವಾಗಿ ಸ್ವಲ್ಪ ಸೋಮರಸವನ್ನು ತೆಗೆಯುತ್ತಾನೆ. ಇದೇ ಕಾಲದಲ್ಲಿ, ಯಜಮಾನಿಯು, ಆಗ್ನೀಧ್ರಶಾಲೆಯಲ್ಲಿ, ಕ್ಷೀರ ಮತ್ತು ಸೋಮರಸಗಳನ್ನು ಮಥಿಸಿ, ಆಶಿರವನ್ನು ಸಿದ್ಧಗೊಳಿಸಿ, ಪಶ್ಚಿಮದ ಬಾಗಿಲಿನಿಂದ ಹವಿರ್ಧಾನ ಮಂಟಪವನ್ನು ಪ್ರವೇಶಿಸುತ್ತಾಳೆ. ಯಾಜಮಾನನು ಪೂರ್ವದ್ವಾರದಿಂದ ಪ್ರವೇಶಿಸಿ, ಪೂತಭೃದ್ದ್ರೋಣದ ಮೇಲೆ ಶೋಧನಿಯನ್ನು ಹರಡಿ ನಾಲ್ಕು ಮಂತ್ರಗಳನ್ನುಚ್ಚರಿಸುತ್ತಾ, ಆಶಿರವನ್ನು ಶೋಧಿಸುತ್ತಾನೆ. ಈ ಕೆಲಸದಲ್ಲಿ ಯಜಮಾನಿಯೂ ಭಾಗವಹಿಸುತ್ತಾಳೆ. ಇದಾದಮೇಲೆ, ಅಗ್ರಯಣಗ್ರಹವನ್ನು ನಾಲ್ಕುಧಾರೆಗಳಿಂದ (ನಾಲ್ಕನೆಯದು ಆದಿತ್ಯಪಾತ್ರದಲ್ಲಿರುವ ಸೋಮಶೇಷದಿಂದ) ತುಂಬುತ್ತಾನೆ. (ಮಾಧ್ಯಂದಿನ ಸವನದಲ್ಲಿ ಮೂರೇಧಾರೆಗಳು— **ಸತ್ಯಾ.** ೯-೩ ; ಆ ಪ. ೧೩-೧೦-೧೧). ಈ ಸವನದಲ್ಲಿ ಗ್ರಾವಸ್ತುತನಿಗೆ ಉಷ್ಣೀಷಕ್ಕಾಗಿ ಬಟ್ಟೆಯನ್ನು ಕೊಡುವುದಿಲ್ಲ. ಅನಂತರ ವಿಪ್ರುಡ್ಢೋಮ ; ಅದಾದನಂತರ, ಮಧ್ಯಾಹ್ನದಂತೆಯೇ, **ಆರ್ಭವ** ಪವಮಾನದ ಗಾನವು ನಡೆಯುತ್ತದೆ.

ಪ್ರಾತಃಕಾಲದಲ್ಲಿ ಬಲಿಕೊಟ್ಟ ಪಶುವಿನ ಅಂಗಾಂಗಗಳಿಂದ ಸಿದ್ಧಗೊಳಿಸಿದ ಹವಿಸ್ಸುಗಳ ಹೋಮವು ನಡೆಯುತ್ತದೆ (ಆಪ. ೧೩-೧೧-೩ ; ಆಶ್ವ. ೫-೧೭-೪). ಹೋತೃವು ಇಳಾಭಾಗವನ್ನು ಭುಜಿಸಿದಮೇಲೆ, ಇಂದ್ರನಿಗೆ ಪುರೋಡಾಶ (೧೨ ಕಪಾಲಗಳಲ್ಲಿ ಸಿದ್ಧಗೊಳಿಸಿದುದು-ಸತ್ಯಾ. ೯-೩) ವನ್ನೂ ಆಹುತಿ ಕೊಡುತ್ತಾರೆ. ಅಲ್ಲಿಂದ ಮುಂದೆ, ನಾರಾಶಂಸಗ್ರಹಗಳನ್ನು ಕೆಳಗೆ ಇಡುವವರೆಗೂ, ನಡೆಯಬೇಕಾದ ಕಲಾಪಗಳೆಲ್ಲವೂ ನಡೆಯುತ್ತವೆ. ಅನಂತರ ಮೂರನೆಯಸಲ ತೆಗೆದ ಸೋಮವನ್ನು, ಅಧ್ವರ್ಯುವು ಹೋತೃಚಮಸದಿಂದಲೂ, ಚಮಸಾಧ್ವರ್ಯುಗಳು ಚಮಸಗಳಿಂದಲೂ, ಹೋಮಮಾಡಿದಮೇಲೆ, ಶೇಷವನ್ನು, ಇತರ ಎರಡು ಸವನಗಳಲ್ಲಿ ಮಾಡಿದಂತೆ, ಇಲ್ಲಿಯೂ ಎಲ್ಲರೂ ಪಾನಮಾಡುತ್ತಾರೆ. ನಾರಾಶಂಸಗ್ರಹಗಳನ್ನು ಕೆಳಗಿಟ್ಟಮೇಲೆ, ಚಮಸಗಳಿಂದ ಸೋಮಪಾನಮಾಡುವ ಋತ್ವಿಜರೆಲ್ಲರೂ, ಪುರೋಡಾಶದಲ್ಲಿ ಅತ್ಯಂತ ಮೃದುವಾದ ಭಾಗದ ಮೂರು ಸಣ್ಣ ಉಂಡೆಗಳನ್ನು ತೆಗೆದುಕೊಂಡು, ಸೂಕ್ತಮಂತ್ರಗಳನ್ನು ಉಚ್ಚರಿಸುತ್ತಾ, ತಮ್ಮ ತಮ್ಮ ತಂದೆ, ತಾತ ಮತ್ತು ಮುತ್ತಾತಂದಿರಿಗೆ ಅರ್ಪಿಸುತ್ತಾರೆ (ಆಪ. ೧೩-೧೨-೯ ; ಆಶ್ವ. ೫-೧೭-೫). ಅನಂತರ ನಮಸ್ಕಾರ ಮಂತ್ರಗಳನ್ನು ಜಪಿಸುತ್ತಾರೆ. ಮತ್ತು ಯಜಮಾನನೂ ಷಡ್ಢೋತೃ ಮಂತ್ರ (ತೈ. ಆ. ೩-೪). ಗಳನ್ನು ಉಚ್ಚರಿಸುತ್ತಾನೆ. (ಆಪ. ೧೩-೧೨-೧೦, ೧೧). ಇದಾದಮೇಲೆ ಸಾವಿತ್ರಗ್ರಹ (ಆಪ. ೧೩-೧೩-೧. ಆಶ್ವ ೫-೧೮-೧). ಪೂತಭೃದ್ದ್ರೋಣದಿಂದ ವೈಶ್ವದೇವಗ್ರಹವನ್ನು ತುಂಬಿಕೊಳ್ಳುತ್ತಾರೆ. ಈ ಗ್ರಹಕಾಲದಲ್ಲಿ ಸ್ತೋತ್ರವು ಯಾವುದೂ ಇಲ್ಲ ; ವೈಶ್ವದೇವಾಸ್ತ್ರವನ್ನೇನೋ ಹೋತೃವು ಪಠಿಸುತ್ತಾನೆ (ಆಶ್ವ. ೫-೧೮-೫ರಿಂದ೧೩) ಸೋಮದೇವತೆಗೆ ಅರ್ಪಿಸಲು, ಅಕ್ಕಿಯನ್ನು ಬೇಯಿಸುತ್ತಾರೆ. ಅಧ್ವರ್ಯುವು ಯಜ್ಞೋಪವೀತವನ್ನು **ಪ್ರಾಚೀನಾವೀತವಾಗಿ**

ಧರಿಸಿ, ಅನ್ನದಲ್ಲಿ ಒಂದು ಆಹುತಿಯಷ್ಟು ಬಲಗೈಯಿಂದಲೂ, ಮತ್ತೊಂದನ್ನು ಮೇಕ್ಷಣದಿಂದಲೂ ತೆಗೆದುಕೊಂಡು, ಆಹವನೀಯದ ದಕ್ಷಿಣಭಾಗದಲ್ಲಿ, ಅನ್ನದ ಆಹುತಿಗಳೆರಡನ್ನೂ ಹಾಕುತ್ತಾನೆ. ಇದಕ್ಕೆ ಯಾಜ್ಯಾ "ತ್ವಂ ಸೋಮ ಪಿತೃಭಿಃ ಸಂವಿದಾನಃ" (ಋ. ಸಂ. ೮-೪೮-೧೩) ಎಂಬುದು. ಪಾತ್ರೆಯಲ್ಲಿರುವ ಚರುಶೇಷದ ಮೇಲೆ ಆಜ್ಯವನ್ನು ಸುರಿಯುತ್ತಾರೆ ಮತ್ತು ಅಧ್ವರ್ಯುವು ದ್ರವರೂಪವಾಗಿರುವ ಆ ಘೃತದಲ್ಲಿ ತನ್ನ ಮುಖವನ್ನು ನೋಡಿಕೊಳ್ಳುತ್ತಾನೆ. (ಆಶ್ವ. ೫-೧೯-೪); ಅಂಗುಷ್ಠ ಮತ್ತು ಅನಾಮಿಕೆಗಳಿಂದ (ಹೆಬ್ಬೆರಳು ಮತ್ತು ಉಂಗುರದ ಬೆರಳು) ಕಣ್ಣುಗಳಿಗೆ ತುಪ್ಪವನ್ನು ಸವರಿಕೊಂಡು, ಆಜ್ಯಸಹಿತವಾದ ಚರುಪಾತ್ರೆಯನ್ನು ಉದ್ಗಾತೃವರ್ಗದ ಋತ್ವಿಜರಿಗೆ ಕೊಡುತ್ತಾನೆ. ಅವರೂ ಆಜ್ಯದಲ್ಲಿ ತಮ್ಮ ಪ್ರತಿಬಿಂಬವನ್ನು ನೋಡಿಕೊಳ್ಳಬೇಕು. ಒಂದು ವೇಳೆ, ಹಾಗೆ ಕಾಣದಿದ್ದರೆ, ಅದು ಅವರಿಗೆ ಅಪಶಕುನವಾದಂತೆಯೇ. ಆಗ ಎರಡು ಮಂತ್ರಗಳನ್ನು (ಅಶ್ವ. ೫-೧೯-೫ - ಅದರಲ್ಲಿ ಒಂದು ಮಂತ್ರವು "ಭದ್ರಂ ಕರ್ಣೇಭಿಃ........" ಋ. ಸಂ. ೧-೮೯-೮ ಎಂಬುದು) ಉಚ್ಚರಿಸಿ, ಇನ್ನೂ ಸ್ವಲ್ಪ ಆಜ್ಯವನ್ನು ಪಾತ್ರೆಯೊಳಕ್ಕೆ ಹಾಕಿ, ಮತ್ತೆ ಪ್ರತಿಬಿಂಬಗಳನ್ನು ನೋಡಿಕೊಳ್ಳಬೇಕು.

ಆಗ್ನೀಧ್ರನು ಜ್ವಲಿಸುತ್ತಿರುವ ದರ್ಭೆಗಳನ್ನು ತೆಗೆದುಕೊಂಡು ಹೋಗಿ, ನಾನಾ ಧಿಷ್ಣ್ಯಗಳಮೇಲೆ ಅಗ್ನಿಗಳನ್ನು ಪ್ರತಿಷ್ಠಿಸುತ್ತಾನೆ. ಆ ಜ್ವಲಿಸುತ್ತಿರುವ ದರ್ಭೆಗಳಮೇಲೆ, ಬೇರೆ ಒಂದು ಪಾತ್ರೆಯಲ್ಲಿ ಆಜ್ಯವನ್ನು ತೆಗೆದುಕೊಂಡು, ಅಧ್ವರ್ಯುವು ಸುರಿಯುತ್ತಾನೆ. ಪಾತ್ರೆಯಲ್ಲಿ ಸ್ವಲ್ಪ ಘೃತವನ್ನುಳಿಸಿಕೊಂಡು, ಪತ್ನೀವತವೆಂಬ ಗ್ರಹವನ್ನು ಕೈಗೆ ತೆಗೆದುಕೊಳ್ಳುತ್ತಾನೆ. (ಇದು ಪತ್ನೀವತ್ ಅಗ್ನಿಗೆ ಕೊಡುವ ಆಹುತಿ. ಇದಕ್ಕೆ ಯಾಜ್ಯಾವನ್ನು ಆಗ್ನೀಧ್ರನು ಮೆಲ್ಲಗೆ ಹೇಳುತ್ತಾನೆ. ಆಶ್ವ. ೫-೧೯-೭ ರಲ್ಲಿರುವಂತೆ, ಮಂತ್ರವು ಋ. ಸಂ. ೩-೬-೯—'ಐಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾಂ ವಿಭವೋಹ್ಯಶ್ವಾಃ । ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ'). ಆಗ್ರಯಣ ಸ್ಥಾಲಿಯಲ್ಲಿರುವ ಸೋಮವನ್ನು ಅದರಲ್ಲಿ ತುಂಬಿ, ಧಿಷ್ಣ್ಯಗಳಮೇಲಿರುವ ಅಗ್ನಿಗೆ ಹೋಮಮಾಡಿ ಉಳಿದ ಘೃತವನ್ನು ಈ ಸೋಮದೊಡನೆ ಬೆರಸಿ, ಆ ಮಿಶ್ರವನ್ನು ಅಗ್ನಿಯಲ್ಲಿ ಹೋಮಮಾಡುತ್ತಾನೆ. ಈ ಹೋಮದೊಡನೆ ಹೇಳುವ ವಾಕ್ಯವು "ಅಗ್ನಾ ಇ ಪತ್ನೀವಾನ್ಸಜೂರ್ದೇವೇನ ತ್ವಷ್ಟ್ರಾ ಸೋಮಂ ಪಿಬ ಸ್ವಾಹಾ" ವಾ. ಸಂ. ೮-೧೦., ತೈ. ಸಂ. ೧-೪-೨೭-೧) ಎಂಬುದು. ಈ ಪತ್ನೀವ್ರತಗ್ರಹದ ವಿಷಯದಲ್ಲಿ, ಜೈಮಿನಿ ಮಹರ್ಷಿಗಳು ೩-೨-೩೩ ರಿಂದ ೩೭ ನೆಯ ಸೂತ್ರಗಳಲ್ಲಿ, ಕೆಲವು ಪ್ರಮೇಯಗಳನ್ನು ಹೇಳಿದಾರೆ—ಈ ಹೋಮವು ಅಗ್ನಿ ಪತ್ನೀವತ್ ಒಬ್ಬನನ್ನೇ ಉದ್ದೇಶಿಸಿ ಮಾಡುವುದು; ಇಂದ್ರ-ವಾಯು ಮತ್ತು ಇತರ ದ್ವಿದೇವತೆಗಳನ್ನು ಉದ್ದೇಶಿಸಿ ಕೊಡುವುದಲ್ಲ (ಆಗ್ರಯಣಸ್ಥಾಲಿಯಲ್ಲಿ ದ್ವಿದೇವತ್ಯಗ್ರಹಗಳ ಸೋಮಶೇಷವು ಇಡಲ್ಪಟ್ಟಿತ್ತು); ಸ್ವಾಹಾವಾಕ್ಯದಲ್ಲಿ ತ್ವಷ್ಟೃವಿನೊಡನೆ ಸೋಮಪಾನ ಮಾಡು (ದೇವೇನ ತ್ವಷ್ಟ್ರಾ) ಎಂದಿದ್ದರೂ, ತ್ವಷ್ಟೃವಿಗೆ ಈ ಗ್ರಹದಲ್ಲಿ ಭಾಗವಿಲ್ಲ; ಯಾಜ್ಯಾ ಋಕ್ಕಿನಲ್ಲಿ ಮೂವತ್ತುಮೂರು ದೇವತೆಗಳ ಪ್ರಾರ್ಥನೆಯಿದ್ದರೂ, ಆ ದೇವತೆಗಳಿಗೂ ಇದು ಉದ್ದಿಷ್ಟವಲ್ಲ, ಅಧ್ವರ್ಯುವು ನಾನಾ ಋತ್ವಿಜರಿಗೆ ನಾನಾ ಆದೇಶಗಳನ್ನು ಈಯುತ್ತಾನೆ. (ಆಪ. ಶ್ರೌ. ಸೂ. ೧೩-೧೪-೧೧., ಸತ್ಯಾ. ಶ್ರೌ. ೯-೪). ಆಗ್ನೀಧ್ರನು ನೇಷ್ಟೃವಿನ ತೊಡೆಯ ಮೇಲೆ (ಈ ತೊಡೆಯಮೇಲೆ ಕೂಡುವುದು ಕೆಲವು ಆಚಾರ್ಯರಿಗೆ ಅಭಿಮತವಲ್ಲ; ಆಪ. ಶ್ರೌ. ೧೩-೧೫-೧., ಸತ್ಯಾ. ಶ್ರೌ. ೯-೪— "ನೋಪಸ್ಥ ಆಸೀತ। ಯದ್ಯುಪಸ್ಥ ಆಸೀತ ಕ್ಲೀಬಃ ಸ್ಯಾತ್"—ಸತ್ಯಾ). ಕುಳಿತು, ಪತ್ನೀವತಗ್ರಹದ ಶೇಷವನ್ನು ಭುಜಿಸುತ್ತಾನೆ (ಆಶ್ವ.ಶ್ರೌ. ೫-೧೯-೮., ಕಾತ್ಯಾ. ಶ್ರೌ. ೧೦-೬-೨೪). ಆ ಗ್ರಹವನ್ನು ಮಾರ್ಜಾಲೀಯದಲ್ಲಿ ತೊಳೆದು, ಖರದಮೇಲೆ ಇಡುತ್ತಾನೆ. ಸೋಮಪಾತ್ರೆಗಳಲ್ಲಿ ಸ್ವಲ್ಪವನ್ನೂ ಬಿಡದಂತೆ, ಇರುವ ಸೋಮವನ್ನೆಲ್ಲಾ ಹೋತೃ ಮತ್ತಿತರ ಋತ್ವಿಜರ ಚಮಸಗಳಲ್ಲಿ, ಉನ್ನೇತೃವು ತುಂಬಿ, ದಶಾಗಳಿಂದ ಆ ಪಾತ್ರೆಗಳನ್ನು ಒರಸಿ, ತಲೆಕೆಳಗಾಗಿ ಇಡುತ್ತಾನೆ. ಉದ್ಗಾತೃವರ್ಗದವರು, ಅಧ್ವರ್ಯುವಿನ ಆದೇಶದಂತೆ, ಅಗ್ನಿಷ್ಟೋಮದ ಬಹುಮುಖ್ಯಸಾಮವಾದ ಯಜ್ಞಾಯಜ್ಞೀಯಸಾಮವನ್ನು ಆರಂಭಿಸುತ್ತಾರೆ—(ಆಪ. ಶ್ರೌ. ೧೩-೧೫-೩., ಸತ್ಯಾ. ಶ್ರೌ. ೯-೪ ರಲ್ಲಿ, ಯಜ್ಞಾಯಜ್ಞೀಯವನ್ನು 'ಅಗ್ನಿಷ್ಟೋಮಸಾಮ'ವೆಂದೇ ವ್ಯವಹರಿಸಿದ್ದಾರೆ). ಸಾಮ

ಗಾನ ಮಾಡುವವರೂ, ಅನುಗಾಯಕರೂ, ಎಲ್ಲರೂ ತಮ್ಮ ಕಿವಿ ಮತ್ತು ತಲೆಗಳನ್ನು ಮುಚ್ಚಿಕೊಳ್ಳುತ್ತಾರೆ (ಕಿವಿಗಳನ್ನು ಮುಚ್ಚುವ ವಿಷಯದಲ್ಲಿ ಮತಭೇದವಿದೆ). ಯಜಮಾನನಿಗೆ ಈ ಅಂಶದಲ್ಲಿ ಸ್ವಾತಂತ್ರ್ಯವಿದೆ. ಅವನು ಬೇಕಾದರೆ ತಲೆ ಕಿವಿಗಳನ್ನು ಮುಚ್ಚಬಹುದು, ಇಲ್ಲದಿದ್ದರೆ ಬಿಡಬಹುದು. ಪ್ರೇಕ್ಷಕರಾಗಿ ಸದಸ್ಸಿಗೆ ಬಂದಿರುವವರೆಲ್ಲರೂ ಅನುಗಾಯಕರಾಗಿ ಸೇರಿಕೊಳ್ಳಬೇಕು, (ಆಪ. ಶ್ರೌ. ೧೩-೧೫-೬). ಯಜ್ಞಾಯಜ್ಞೀಯದ ಹಿಂಕಾರವನ್ನು ಉದ್ಗಾತೃವು ಉಚ್ಚರಿಸುವ ಹೊತ್ತಿಗೆ, ನೇಷ್ಟೃವು ಯಜಮಾನಿಯನ್ನು, ಆತನ ಸಮೀಪಕ್ಕೆ ಕರೆತಂದಿರುತ್ತಾನೆ ಮತ್ತು ಹಿಂಕಾರವನ್ನುಚ್ಚರಿಸುತ್ತಾ, ಉದ್ಗಾತೃವು ಆಕೆಯನ್ನು ನೋಡುತ್ತಾನೆ. ಮೊದಲನೆಯ ಮಂತ್ರದ ನಿಧನ (ಅಂತ್ಯಭಾಗವು) ಗಾನಮಾಡಲ್ಪಡುತ್ತಿರುವಾಗ, ಯಜಮಾನಿಯು ತನ್ನ ಬಲತೊಡೆಯಮೇಲಿನ ಆವರಣವನ್ನು ತೆಗೆದು, ಮೊದಲನೆಯ ಪರ್ಯಾಯದ ಮೂರನೆಯ ಸ್ತೋತ್ರೀಯದ ಪ್ರಸ್ತಾವ ಭಾಗವು ಮುಗಿಯುವವರೆಗೂ, **ಪಾನ್ನೇಜನೀ** ಜಲವನ್ನು ಸುರಿಯುತ್ತಿರುತ್ತಾಳೆ, ಈ ಕರ್ಮವಾದಮೇಲೆ **ಪಾನ್ನೇಜನೀ** ಜಲವು ಉಳಿದಿರಬಾರದು. ಉದ್ಗಾತೃವು ಅನುಮತಿ ಕೊಟ್ಟಮೇಲೆ, ಅಥವಾ ಆಕೆಯಕಡೆ ಮೂರುಸಲ ನೋಡಿದಮೇಲೆ, ಅಥವಾ ಮೂರುಸಲ ನೀರನ್ನು ಸುರಿದಮೇಲೆ, ಆಕೆಯು ತನ್ನ ಶಾಲೆಗೆ ಹೋಗಬಹುದು (ಕಾತ್ಯಾ. ಶ್ರೌ. ೧೦-೭-೫ ಮತ್ತು ೬). ಸಾಮಗಾನವು ನಡೆಯುತ್ತಿರುವಾಗ, ಯಜಮಾನನು ಸಪ್ತಹೋತೃ (ಮಹಾಹವಿರ್ಹೋತಾ । ಸತ್ಯಹವಿರಧ್ವರ್ಯುಃ । ಅಚ್ಯುತಪಾಜಾ ಅಗ್ನೀತ್ । ಅಚ್ಯುಮನಾ ಉಪವಕ್ತಾ । ಅನಾಧೃಷ್ಯಶ್ಚಾಪ್ರತಿಧೃಷ್ಯಶ್ಚ ಯಜ್ಞಸ್ಯಾಭಿಗರೌ । ಅಯಾಸ್ಯ ಉದ್ಗಾತಾ । ತೈ. ಆ. ೩-೫) ಮಂತ್ರಗಳನ್ನು ಜಪಿಸುತ್ತಾನೆ. ಋಗ್ವೇದ ೬-೪೮-೧, ೨ ನೆಯ ಮಂತ್ರಗಳು (ಸಾ. ವೇ. ೨-೧-೧-೨೦) ಯಜ್ಞಾಯಜ್ಞೀಯಸಾಮದಲ್ಲಿ ಹಾಡಲ್ಪಡುವ ಮಂತ್ರಗಳು.

**ಯಜ್ಞಾಯಜ್ಞಾವೋ ಅಗ್ನಯೇ ಗಿರಾಗಿರಾ ಚ ದಕ್ಷಸೇ ।**
**ಪ್ರಪ್ರ ವಯಮಮೃತಂ ಜಾತವೇವಸಂ ಪ್ರಿಯಂ ಮಿತ್ರಂ ನ ಶಂಸಿಷಮ್ ॥೧॥**
**ಊರ್ಜೋ ನಪಾತಂ ಸ ಹಿನಾಯಮಸ್ಮಯುರ್ದಾಶೇಮ ಹವ್ಯದಾತಯೇ ।**
**ಭುವದ್ವಾಜೇಷ್ವವಿತಾ ಭುವದ್ವೃಧ ಉತ ತ್ರಾತಾ ತನೂನಾಮ್ ॥೨॥**

ಇದರಲ್ಲಿ ಮೊದಲನೆಯದು ಬೃಹತೀ ಛಂದಸ್ಸಿನಲ್ಲಿಯೂ. ಎರಡನಯದು ಸತೋಬೃಹತೀ ಛಂದಸ್ಸಿನಲ್ಲಿಯೂ ಇವೆ. ಈ ಎರಡು ಮಂತ್ರಗಳನ್ನು ಈ ರೀತಿ ಮೂರು ಮಂತ್ರಗಳಾಗಿ ಮಾಡಿಕೊಂಡು ಹಾಡಬೇಕು.

**ಯಜ್ಞಾಯಜ್ಞಾವೋ ಅಗ್ನಯೇ ಗಿರಾಗಿರಾ ಚ ದಕ್ಷಸೇ । ಪ್ರಪ್ರ ವಯಮಮೃತಂ**
**ಜಾತವೇದಸಂ ಪ್ರಿಯಂ ಮಿತ್ರಂ ನ ಶಂಸಿಷಮ್ ॥ (೧)**
**ಪ್ರಿಯಂ ಮಿತ್ರಂ ನ ಶಂಸಿಷಂ ಊರ್ಜೋನಪಾತಂ ಸ**
**ಹಿನಾಯ ಮಸ್ಮಯುರ್ದಾಶೇಮ ಹವ್ಯದಾತಯೇ ॥ (೨)**
**ದಾಶೇಮ ಹವ್ಯದಾತಯೇ ಭುವದ್ವಾಜೇಷ್ವವಿತಾ ಭುವತ್ವೃಧ**
**ಉತ ತ್ರಾತಾ ತನೂನಾಮ್ ॥ (೩)**

ಮೊದಲನೆಯ ಮಂತ್ರದಲ್ಲಿರುವ 'ಗಿರಾ ಗಿರಾ' ಎಂಬುದರ ಬದಲು 'ಇರಾ ಇರಾ' ಎಂದು ಹೇಳಬೇಕೆಂದು ತಾಂಡ್ಯ ಬ್ರಾಹ್ಮಣ ೮-೬-೧೦ ದಲ್ಲಿ ಹೇಳಿದೆ. ಈ ಭಾಗಕ್ಕೆ 'ಬಾರ್ಹತಪ್ರಗಾಥ' ವೆಂದು ಹೆಸರು).

ಈ ಸಾಮಗಾನವಾದಮೇಲೆ, **ಆಗ್ನಿಮಾರುತಶಸ್ತ್ರ** ಪಠಣವಾಗಬೇಕು (ಆಶ್ವ, ಶ್ರೌ. ೫-೨೦-೬). ಈ ಶಸ್ತ್ರವನ್ನು ದ್ರುತಗತಿಯಲ್ಲಿ ಪಠನಮಾಡಬೇಕು. ಈ ಶಸ್ತ್ರದ ಒಂದು ಭಾಗವಾದ "ಆ ಪೋಹಿಷ್ಠಾ........" (ಋ. ಸಂ. ೧೦-೯-೧ ರಿಂದ ೩) ಎಂಬ ಮಂತ್ರಗಳನ್ನು ಹೋತೃವು ಪಠಿಸುತ್ತಿರುವಾಗ, ಒಂದೊಂದು ಮಂತ್ರವನ್ನು ಹೇಳುವಾಗಲೂ, ಜಲವನ್ನು ಸ್ಪರ್ಶಿಸುತ್ತಾನೆ; ಇತರ ಋತ್ವಿಜರು ಅವನನ್ನು ಮುಟ್ಟಿಕೊಂಡೇ ಇರುತ್ತಾರೆ; ಎಲ್ಲರೂ ತಲೆಯಮೇಲಿನ ಆಚ್ಛಾದನವನ್ನು ತೆಗೆಯುವರು; ಜಲವನ್ನು ಎರಚಿದಮೇಲೆ ಹೋತೃವು ಆಹಾವವನ್ನೂ, ಅಧ್ವರ್ಯುವು ಪ್ರತಿಗರವನ್ನೂ ಉಚ್ಚರಿಸುತ್ತಾರೆ. ಇದೇ ರೀತಿ, ಈ ಶಸ್ತ್ರದ ಅಂಗವಾಗಿ, ಋ. ಸಂ. ೬-೪೭-೧ ರಿಂದ ೪ ಮಂತ್ರಗಳನ್ನು ಪಠಿಸುವಾಗಲೂ, ಆಹಾವಗಳುಂಟು. ಅದರಲ್ಲಿ ಮೊದಲನೆಯ ಆಹಾವಕ್ಕೆ, "ಮದಾಮೋದೈವ ಮೋದಾಮೋದೈವೋಂ (ದೈವ)" ಎಂಬುದು ಪ್ರತಿಗರವಾಗುತ್ತದೆ (ಸತ್ಯಾ. ೯-೪).

ಆಗ್ನಿಮಾರುತಶಸ್ತ್ರದ **ಪರಿಧಾನೀಯವು** ಪಠಿತವಾಗುತ್ತಿರುವಾಗ (ಅಥವಾ ಮತ್ತ್ಯಾವುದಾದರೂ ಒಂದು ಮಂತ್ರ ಪಠಣಕಾಲದಲ್ಲಿ—ಆಪ, ಶ್ರೌ. ೧೩-೧೬-೨, ೩, ೪, ೫, ಸತ್ಯಾ. ೯-೪), ಪ್ರತಿಪ್ರಸ್ಥಾತೃವು ಹೋತೃಚಮಸದೊಳಗೆ ಧ್ರುವಗ್ರಹ ದಲ್ಲಿರುವ ಸೋಮರಸವನ್ನು ತಂದು ಹಾಕುತ್ತಾನೆ. ಇದನ್ನು ಅಧ್ವರ್ಯುವೂ, ಚಮಸಾಧ್ವರ್ಯುಗಳೂ ತಮ್ಮ ಚಮಸಗಳಲ್ಲಿನ ಸೋಮರಸವನ್ನು ಹೋಮಮಾಡುತ್ತಾರೆ. ಹೋಮಶೇಷವನ್ನು ಎಲ್ಲಾ ಋತ್ವಿಜರೂ ಸ್ವೀಕರಿಸುತ್ತಾರೆ. ಬೆಳಿಗ್ಗೆ ವಧಿಸಿದ ಪಶುವಿನ ಸಂಬಂಧವಾದ **ಉಪಯಾಜ** ಹೋಮವನ್ನು ಮಾಡಿ, ಪರಿಧಿಗಳನ್ನು ಆಗ್ನಿಯೊಳಗೆ ಹಾಕಿದಮೇಲೆ, **ಹಾರಿಯೋಜನ** ಗ್ರಹವನ್ನು ತೆಗೆದುಕೊಳ್ಳುತ್ತಾನೆ. (ಸೋಮಯಾಗಕ್ಕೆ ಬಂದು, ಅರ್ಪಿಸಿದ ಆಹುತಿಗಳನ್ನೆಲ್ಲಾ ಸ್ವೀಕರಿಸಿದ ಇಂದ್ರನು, ತನ್ನ ಲೋಕಕ್ಕೆ ಹಿಂತಿರುಗಲು, ಅವನ ಹರಿ (ಕುದುರೆ) ಗಳನ್ನು ರಥಕ್ಕೆ ಯೋಜನ (ಹೂಡುವುದು) ಮಾಡುವುದಕ್ಕಾಗಿ ಮಾಡುವ ಹೋಮವಾದುದರಿಂದ ಇದಕ್ಕೆ ಹಾರಿಯೋಜನಗ್ರಹವೆನ್ನುತ್ತಾರೆ—"ಹರಿರಸ್ಮಿನ್ಯುಜ್ಯತೇ ಸ್ವಸ್ಥಾನಂ ಪ್ರತಿ ಗಮನಾಯೇಂದ್ರಸ್ಯೇತಿ ಹರಿಯೋಜನ ಇಂದ್ರಸ್ತತ್ಸಂಬಂಧಿಗ್ರಹೋ ಹಾರಿಯೋಜನಃ" ಸತ್ಯಾ-೯-೪ ರ ವ್ಯಾಖ್ಯಾನ. "ಹರಿರಸ್ಮಿನ್ ಯುಜ್ಯತೇ ಪ್ರತಿಗಮನಾಯೇಂದ್ರಸ್ಯೇತಿ ಹಾರಿಯೋಜನೋ ಗ್ರಹಃ" ಆಪ. ಶ್ರೌ. ೧೩-೧೭-೧ ರ ವ್ಯಾಖ್ಯಾನ). ಉನ್ನೇತೃವು, ಆಗ್ರಯಣಸ್ಥಾಲಿಯಲ್ಲಿರುವ ಸೋಮವನ್ನೆಲ್ಲಾ, ಈ ಗ್ರಹದೊಳಗೆ ಹಾಕುತ್ತಾನೆ. ಅದರ ಜೊತೆಗೆ ತುಂಬಾ ಹುರಿದ ಯವಧಾನ್ಯ ವನ್ನು ಬೆರೆಸಿ, ಗ್ರಹವನ್ನು ತಲೆಯಮೇಲಿಟ್ಟುಕೊಂಡು, ಹವಿರ್ಧಾನ ಶಾಲೆಯ ಹೊರಗಡೆ ಬಂದು, ಹಿಂದಕ್ಕೂ ಮುಂದಕ್ಕೂ ಅನೇಕಬಾರಿ ಓಡಾಡುತ್ತಾನೆ. ಅನಂತರ ಗ್ರಹದೊಳಗಿರುವ ಪದಾರ್ಥಗಳನ್ನು ಹೋಮಮಾಡುತ್ತಾನೆ. ಈ ಹೋಮಕ್ಕೆ ಯಜಮಾನನಿಂದ ಉಚ್ಚರಿಸಲ್ಪಡಬೇಕಾದ ತ್ಯಾಗವು—"ಇದಮಿಂದ್ರಾಯ ಹರಿವತೇ" ಎಂಬುದು. ಹೋಮಶೇಷವನ್ನು ಸದಸ್ಸಿನೊಳಗೆ ತಂದು, ಅದನ್ನು ಇತರ ಪಾತ್ರೆಗಳೊಳಗೆ ಹಾಕಿ, ಎಲ್ಲರೂ ದ್ರವಭಾಗವನ್ನು ಚಪ್ಪರಿಸಿ, ಹುರಿದ ಧಾನ್ಯದ ಕಾಳು ಗಳಲ್ಲಿರುವ ದ್ರವವನ್ನೂ ಹೀರಿ, ಅಗಿದಕಾಳನ್ನು ವೇದಿಯ ಹೊರಗಡೆ ಉಗುಳಿ, ಆಚಮನ ಮಾಡಬೇಕು. ಕಾತ್ಯಾಯನರ (ಕಾತ್ಯಾ. ಶ್ರೌ. ೧೦-೮-೫) ಮತದಲ್ಲಿ ಋತ್ವಿಜರು ಹುರಿದ ಕಾಳುಗಳನ್ನು ಸುಮ್ಮನೆ ಆಘ್ರಾಣಿಸುತ್ತಾರೆ. ಯೂಪಸ್ತಂಭವನ್ನು ಮಾಡಿದ ಮರದ ಚೂರುಗಳು ಒಂದೊಂದನ್ನು ಒಬ್ಬೊಬ್ಬ ಋತ್ವಿಜನೂ "ದೇವತೆಗಳು, ಮನುಷ್ಯರು, ಪಿತೃಗಳು, ಮೊದಲಾದ ವರಿಂದ ಉಂಟಾದ ಅರಿಷ್ಟಗಳೆಲ್ಲದರ ಪರಿಹಾರಕನೂ ನೀನೇ" ಎಂಬರ್ಥ ಬರುವ (ವಾ.ಸಂ. ೮-೧೩. ತೈಸಂ. ೩-೨-೫.೭; ಈ ಎರಡೂ ಆಪ. ಶ್ರೌ. ೧೩-೧೭-೯ ದಲ್ಲಿ ಉಲ್ಲೇಖಿತವಾಗಿವೆ) ಮಂತ್ರವನ್ನು ಉಚ್ಚರಿಸುತ್ತಾ, ಆಹವನೀಯಾಗ್ನಿಯಲ್ಲಿ ಹಾಕುತ್ತಾನೆ. ಅನಂತರ ಅವರೆಲ್ಲರೂ, ಆಗ್ನೀಧ್ರಶಾಲೆಗೆ ಹೋಗಿ, "ದಧಿಕ್ರಾವ್ಣೋ........" (ಋ. ಸಂ. ೪-೩೯-೬) ಎಂಬ ಮಂತ್ರಪೂರ್ವಕವಾಗಿ. ಮೊಸರಿನಮೇಲಿನ ಕೆನೆಯನ್ನು ಭುಜಿಸುತ್ತಾರೆ (ಸತ್ಯಾ. ೯-೪, ಆಪ. ಶ್ರೌ. ೧೩-೧೮-೧).

ಏಕಧನಾಜಲವು ಉಳಿದಿರುವ ಪಾತ್ರೆಗಳೊಳಗೆ ಸ್ವಲ್ಪಸ್ವಲ್ಪ ಹಸಿರು ಗರಿಕೆಯನ್ನು ಹಾಕಿ, ಅದನ್ನು ಚೆನ್ನಾಗಿ ಹಿಂಡಿ, ನೀರಿಗೆ (ಆ ಗರಿಕೆಯಿಂದ) ತೀಕ್ಷ್ಣವಾದ ವಾಸನೆಯನ್ನುಂಟುಮಾಡಿ, ಆ ನೀರನ್ನು ಹತ್ತುಚಮಸಗಳಿಗೆ ಸುರಿಯುತ್ತಾರೆ. ಪ್ರತಿ

ಯೊಬ್ಬ ಋತ್ವಿಜನೂ ಆ ನೀರನ್ನು (ಚಮಸವಿಲ್ಲದವರೂ ತಮ್ಮ ಸಮೀಪದಲ್ಲಿರುವವರ ಚಮಸದಲ್ಲಿರುವ ನೀರನ್ನು) ಆಘ್ರಾಣಿಸಿ, ನೀರನ್ನು ಚಾತ್ವಾಲದೊಳಗೆ ಸುರಿಯುತ್ತಾರೆ. (ಈ ಆಘ್ರಾಣಿಸುವ ಕೆಲಸವು ಚಾತ್ವಾಲದ ಪಶ್ಚಿಮಕ್ಕೆ ಅಥವಾ, ಬಹಿಷ್ಪವಮಾನವು ಗಾನಮಾಡಲ್ಪಟ್ಟ ಪ್ರದೇಶದಲ್ಲಿ ನಡೆಯಬೇಕು—ಆಪ.ಶ್ರೌ.೧೩-೧೭-೯., ಕಾತ್ಯಾ. ಶ್ರೌ. ೧೦-೮-೭., ಸತ್ಯಾ. ೯-೪). ಎಲ್ಲಾ ಋತ್ವಿಜರೂ ಮಿಂದಾ ಮಂತ್ರಗಳನ್ನು (ಯನ್ಮ ಆತ್ಮನೋ ಮಿಂದಾಭೂತ್...., ತೈ. ಸಂ. ೩-೨-೪-೪) ಉಚ್ಚರಿಸುತ್ತಾ, ಆಹವನೀಯಾದ್ಯುಪಸ್ಥಾನವನ್ನು ಆಚರಿಸಬೇಕು. **ತಾನೂನಪ್ತ್ರ** ಕರ್ಮಕಾಲದಲ್ಲಿ ತೆಗೆದುಕೊಂಡಿದ್ದ ಪ್ರಮಾಣವಚನದಿಂದ, ಎಲ್ಲಾ ಋತ್ವಿಜರೂ ತಮ್ಮಗಳನ್ನು ತಾವೇ ಬಿಡುಗಡೆ ಮಾಡಿಕೊಳ್ಳುತ್ತಾರೆ. ಪಶುಯಾಗಗಳಲ್ಲಿ ಮಾಡುವಂತೆ, ಇಲ್ಲಿಯೂ **ಪತ್ನೀಸಂಯಾಜ**ಗಳು ಆಚರಿಸಲ್ಪಡುತ್ತವೆ (ಆಪ. ಶ್ರೌ. ೧೩-೧೮-೩). ಅಧ್ವರ್ಯುವು ವೇದಿಯ ಒಳಗಡೆ ನಿಂತು, ಜುಹುವಿನಿಂದ ಒಂಭತ್ತು ಸಮಿಷ್ಟಯಾಜುಷ ಹೋಮಗಳನ್ನು ಅವಿಚ್ಛಿನ್ನವಾಗಿ, ಮಾಡುತ್ತಾನೆ. ಸೋಮರಸದ ಬಿಂದುಗಳನ್ನು ಕೆಳಗೆ ಬೀಳಿಸಿದುದು ಮುಂತಾದವುಗಳಿಗಾಗಿ ಪ್ರಾಯಶ್ಚಿತ್ತ ಆಹುತಿಗಳನ್ನು ಮಾಡಿ, ಕಡೆಯದಾಗಿ, ಅಗ್ನಿಷ್ಟೋಮವು ಮುಗಿದುದರ ಸೂಚಕವಾಗಿ **ಸವನಾಹುತಿ** ಎಂಬ ಆಜ್ಯಾಹುತಿಯನ್ನು ಮಾಡಿ, 'ಎಲ್ಲರನ್ನೂ ಯಜ್ಞಶಾಲೆಯಿಂದ ಹೊರಗಡೆ ಹೊರಡುವಂತೆ ಹೇಳು' ಎಂಬುದಾಗಿ ಮೈತ್ರಾವರುಣನಿಗೆ ಆದೇಶಿಸುತ್ತಾನೆ. ಅದರಂತೆ ಎಲ್ಲರೂ ಹೊರಕ್ಕೆ ಬರುತ್ತಾರೆ.

ಇದಾದನಂತರ ಅವಭೃಥವು (ಶುದ್ಧಿಕಾರಕವಾದ ಸ್ನಾನ) ಜರುಗುತ್ತದೆ. ಇದರ ಕ್ರಮವೂ ಒಂದು ಇಷ್ಟಿಯೇ. ಆದರೆ ಜೈಮಿನಿ ಮಹರ್ಷಿಗಳು (ಜೈ. ಸೂ. ೧೦-೭-೪೭, ೪೮, ೪೯, ೫೦) ಅವಭೃಥಸ್ನಾನವು ವಿಶೇಷ ಕರ್ಮವಾದುದರಿಂದ, ದರ್ಶಪೂರ್ಣಮಾಸಾದಿ ಇಷ್ಟಿಗಳಲ್ಲಿ ನಡೆಯುವ ಕಲಾಪಗಳೆಲ್ಲವೂ, ಇಲ್ಲಿ ನಡೆಯುವುದಿಲ್ಲವೆಂದು ಹೇಳಿದ್ದಾರೆ. ಅಗ್ನಿಗೆ ಒಂದು ಸಮಿತ್ತನ್ನು ಹೋಮಮಾಡಿ, ವೇದವೆಂಬ ದರ್ಭೆಗಳ ಕಟ್ಟು ಒಂದನ್ನು ಮಾಡಿ, ಅಗ್ನಿಯ ನಾಲ್ಕುಕಡೆಯೂ ದರ್ಭೆಗಳನ್ನು ಹಾಕಿ (ಪರಿಸ್ತರಣವನ್ನು ಮಾಡಿ), ಅವಶ್ಯಕವಾದ ಯಜ್ಞಪಾತ್ರೆಗಳನ್ನು ಅಧೋಮುಖವಾಗಿ ಇಡುತ್ತಾನೆ. ಇಧ್ಮವನ್ನು ತರುವುದಿಲ್ಲ. ಕೆಲವರು ವೇದಿಯನ್ನೂ ಸಿದ್ಧಪಡಿಸುವುದಿಲ್ಲ. ಎಲ್ಲಾ ಸ್ರುಕ್ಕುಗಳಲ್ಲಿಯೂ ಒಟ್ಟು ನಾಲ್ಕರಲ್ಲಿ ಹಿಡಿಸುವಷ್ಟು ಮಾತ್ರ ಆಜ್ಯವನ್ನು ತೆಗೆದುಕೊಳ್ಳಬೇಕು. ಒಂದೇ ಕಪಾಲದಲ್ಲಿ ಪಾಕಮಾಡಲು ಅವಶ್ಯಕವಾದಷ್ಟು ಮಾತ್ರ ಧಾನ್ಯವನ್ನು (ನಿರ್ವಾಪ–ದೇವತೆಗಳನ್ನು ಉದ್ದೇಶಿಸಿ, ತೆಗೆದಿಡುವ ಧಾನ್ಯ) ವರುಣ ದೇವತೆಯ ಉದ್ದೇಶವಾಗಿ ತೆಗೆದಿಡಬೇಕು. ಪ್ರಣೀತಜಲದ ಅವಶ್ಯಕತೆಯಿಲ್ಲ. ಪತ್ನಿಗೆ ಮೌಂಜೀಬಂಧನವಿಲ್ಲ. ಆಜ್ಯಸಹಿತವಾದ ಸ್ರುಕ್ಕುಗಳು ಮತ್ತು ನಿರ್ವಾಪವನ್ನು ಉತ್ತರವೇದಿಯ ಭುಜಶಿರಸ್ಸಿನಮೇಲೆ (ಪೂರ್ವದ ಅಂಚಿನ ಉತ್ತರಕೊನೆಯಲ್ಲಿ) ಇಡುತ್ತಾರೆ. ಯಜಮಾನನು ಸದಸ್ಸಿನಲ್ಲಿದ್ದ ಔದುಂಬರಿಯನ್ನು ಅದನ್ನು ಹೂತಿದ್ದ ಹಳ್ಳದಿಂದ ಈಚೆಗೆ ತೆಗೆದು, ಅದನ್ನು ಸೋಮರಸವನ್ನು ತೆಗೆಯಲು ಉಪಯೋಗಿಸಿದ ಮರದ ಹಲಗೆ ಮತ್ತು ಚರ್ಮಗಳಮೇಲೂ, ಆಗ್ರಯಣ, ಉಕ್ಥ್ಯ, ಆದಿತ್ಯ ಮತ್ತು ಧ್ರುವಸ್ಥಾಲಿಗಳ ಹೊರತು, ಉಳಿದ ಸ್ಥಾಲಿಗಳನ್ನೆಲ್ಲಾ, ಸೋಮರಸವನ್ನು ಸವರಿ, ಚಾತ್ವಾಲ ಮತ್ತು ಉತ್ಕರಗಳ ಮಧ್ಯೆ ಅಥವಾ ಸೋಮವನ್ನು ಇಡುವುದಕ್ಕಾಗಿ ಉಪಯೋಗಿಸುತ್ತಿದ್ದ ಆಸಂದಿಯ ಮೇಲಾಗಲೀ ಅಥವಾ ವೇದಿಯ ಉತ್ತರ ಭುಜದಮೇಲಾಗಲೀ, ಇಡಬೇಕು. ಯಜಮಾನನು ಕೃಷ್ಣಾಜಿನವನ್ನು ಚಾತ್ವಾಲದೊಳಗೆ ಬಿಸಾಡುತ್ತಾನೆ (ಇದನ್ನು ಇನ್ನೂ ಕೆಲವು ಬೇರೆ ರೀತಿಯಲ್ಲಿ ವಿಸರ್ಜಿಸಬಹುದು. ಆಪ. ಶ್ರೌ. ೧೩-೧೯-೮,೯), ಅವಭೃಥಸ್ನಾನಕ್ಕೆ ಹೊರಡುವ ಮುಂಚೆ, ತೈ. ಸಂ. ೧-೩-೧೪-೪ ನೆಯ ಮಂತ್ರದಿಂದ ಒಂದು ಆಜ್ಯಾಹುತಿಯನ್ನೂ, ವಾ. ಸಂ. ೮-೨೭ ನೆಯ ಮಂತ್ರದಿಂದ ಒಂದು ಆಹುತಿಯನ್ನೂ ಕೊಡಬೇಕು.

"ನಮೋ ರುದ್ರಾಯ......." (ತೈ. ಬ್ರಾ. ೩-೭-೯) ಎಂಬ ಮಂತ್ರಪೂರ್ವಕವಾಗಿ, ರುದ್ರನಿಗೆ ಒಂದು ಆಜ್ಯಾಹುತಿಯನ್ನು ಕೊಡಬೇಕು (ಆಪ. ಶ್ರೌ. ೧೩-೨೦-೧). ವೇದಿಯಿಂದಲೋ ಅಥವಾ ಚಾತ್ವಾಲದ ಸಮೀಪದಿಂದಲೋ ಉತ್ತರಾಭಿಮುಖವಾಗಿ ಹೊರಡುವಾಗ, ಋ. ಸಂ. ೧-೨೪-೮ (ತೈ. ಸಂ. ೧-೪_೪೫-೧) ನೆಯ ಮಂತ್ರವನ್ನು ಪಠಿಸಬೇಕು. ಈಗ

ಪ್ರಸ್ತೋತೃವು ಅಧ್ವರ್ಯುವಿನ ಆದೇಶದಂತೆ ಒಂದು ಸಾಮವನ್ನು ಗಾನಮಾಡುತ್ತಾನೆ. ಇದಕ್ಕೆ ಅವಭೃಥಸಾಮ (ಲಾಟ್ಯಾ.ಶ್ರೌ. ೨-೧೨-೧)ವೆಂದು ಹೆಸರು ಅಗ್ನಿಷ್ವಪೀತಿ ಎಂತಲೂ ಹೆಸರು. (ಶತ. ಬ್ರಾ. ೪-೪-೫-೮. ದ್ರಾಶ್ರೌ. ೪-೪-೧). ಈ ಸಾಮದ ನಿಧನ (ಕೊನೆಯ ಭಾಗ)ವನ್ನು ಹಾಡುವಾಗ, ಎಲ್ಲಾ ಋತ್ವಿಜರು, ಯಜಮಾನ ಮತ್ತು ಅವನ ಪತ್ನಿ, ಎಲ್ಲರೂ. ಆ ನಿಧನವನ್ನೂ ಮೂರು ಸಲ ಹೇಳಬೇಕು. ಜಲಾಶಯದ ಮಾರ್ಗದಲ್ಲಿ ಅರ್ಧದೂರವನ್ನು ಅತಿಕ್ರಮಿಸಿದಾಗ, ಒಂದು ಸಲ ಈ ಸಾಮದ ಅಂತಿಮ ಭಾಗವನ್ನು ಮೂರಾವರ್ತಿ ಪಠಣಮಾಡಬೇಕು. ಜಲಾಶಯವನ್ನು ಸೇರಿದಾಗ ಒಂದು ಸಲ ಅದೇ ರೀತಿ ಮಾಡಬೇಕು. (ಆಪ. ಶ್ರೌ ೧೩-೨೦-೪. ಸತ್ಯಾ. ಶ್ರೌ, ೯-೫). ವರುಣಪ್ರಘಾಸಗಳಲ್ಲಿ ನಿಷ್ಕಾಸವನ್ನು ಅರ್ಪಿಸಿದ ಕ್ರಮದಲ್ಲಿಯೇ, ಇಲ್ಲಿ ವರುಣ ಪುರೋಡಾಶವನ್ನು ಅರ್ಪಿಸಬೇಕು. ಸೋಮದ ಋಜೀಷವನ್ನು ಉದಂಬರಶಾಖೆಯೊಡನೆ ನೀರಿನಲ್ಲಿ ಎಸೆದು, ಅದರಮೇಲೆ ಮೊಸರನ್ನು ಸುರಿಯಬೇಕು. ಸೋಮರಸದಿಂದ ಲೇಪಿತವಾದ ಪಾತ್ರೆಗಳನ್ನೆಲ್ಲಾ ನೀರಿನಲ್ಲಿ ಹಾಕಿಬಿಡಬೇಕು. (ಆಪ. ಶ್ರೌ. ೧೩-೨೧-೧೨., ಕಾತ್ಯಾ. ಶ್ರೌ. ೧೦-೮-೨೪). ನೀರಿನಲ್ಲಿ ಪಾತ್ರೆಗಳನ್ನು ಬಿಸುಡುವುದಕ್ಕೆ ಪ್ರತಿಪತ್ತಿಯೆಂದು ಹೆಸರು (ಜೈ. ಸೂ. ೪-೨-೧೯ರಿಂದ ೨೨). ಯಜಮಾನನ ನಡುಪಟ್ಟಿ (ಸಣಬು ಮತ್ತು ಮುಂಜಾ ಹುಲ್ಲಿನಿಂದ ಮಾಡಿದುದು). ಯಜಮಾನಿಯ ಯೋಕ್ತ್ರಾ (ನಡುಪಟ್ಟಿ), ಜಾಲ (ತಲೆಗೆ ಹಾಕಿಕೊಂಡಿದ್ದ ಉಣ್ಣೆಯ ಬಲೆಯರೀತಿಯ ವಸ್ತು) ಮತ್ತು ಕೃಷ್ಣಾಜಿನ, ಇವುಗಳೆಲ್ಲ ವನ್ನು ನೀರಿನಲ್ಲಿ ಅದ್ದಿ ತೆಗೆಯಬೇಕು. ಯಜಮಾನನು-ದೇವೀರಾಪಃ......(ತೈ. ಸಂ. ೧-೪-೪೫-೩) ಎಂಬ ಮಂತ್ರದಿಂದ ಉದಕವನ್ನು ಸ್ತುತಿಸಿ, ನೀರನ್ನು ಪ್ರವೇಶಿಸಬೇಕು. ಆಳವಾಗಿಯೂ, ನಿಶ್ಶಬ್ದವಾಗಿಯೂ ಹರಿಯುತ್ತಿರುವ ನೀರೇ ಶ್ರೇಷ್ಠವಾದುದು ಅದಿಲ್ಲದಿದ್ದರೆ ಯಾವ ಜಲಾಶಯವಾದರೂ ಆಗಬಹುದು. ಯಜಮಾನ ಮತ್ತು ಅವನ ಪತ್ನಿ, ಇಬ್ಬರೂ ನೀರಿಗೆ ಇಳಿದು, ತಲೆಯ ಮೇಲೆ ನೀರನ್ನು ಪ್ರೋಕ್ಷಿಸಿಕೊಂಡು (ತಲೆಯನ್ನು ಮುಳುಗಿಸಬಾರದು), ಒಬ್ಬರೊಬ್ಬರ ಬೆನ್ನನ್ನು ಉಜ್ಜುತ್ತಾರೆ. ಒಂದು ಮುಷ್ಟಿ ದರ್ಭೆಯನ್ನು ನೀರಿನಲ್ಲಿ ಹಾಕುತ್ತಾರೆ. ಆ ದರ್ಭಮುಷ್ಟಿಯೇ ಅವಭೃಥದಲ್ಲಿ ಮಾಡಬೇಕಾದ ಆಹುತಿಗಳಿಗೆಲ್ಲಾ ಆಹವನೀಯ ಸ್ಥಾನದಲ್ಲಿರುತ್ತದೆ. ದರ್ಶಪೂರ್ಣಮಾಸದಂತೆಯೇ ಇಲ್ಲಿಯೂ ಎಲ್ಲಾ ಪ್ರಯಾಜ, ಅನುಯಾಜಗಳೂ ಉಂಟು. ಬರ್ಹಿಸ್ಸಿಗೆ ಮಾತ್ರ ಆಹುತಿಯಿಲ್ಲ. ಪ್ರಧಾನಪುರೋಡಾಶ ಮಾತ್ರವಲ್ಲದೆ, ಎಲ್ಲಾ ಆಘಾರಗಳನ್ನು ನೀರಿನಲ್ಲಿಯೇ ಕೊಡಬೇಕು. (ಜೈ. ಸೂ. ೧೧-೨-೩-೩೦ರಿಂದ ೩೪). ವರುಣನಿಗಾಗಿ ಸಿದ್ಧವಾಗಿರುವ ಪುರೋಡಾಶದಲ್ಲಿ ಒಂದು ಭಾಗವನ್ನು ಹೋಮಮಾಡಬೇಕು. ಉಳಿದ ಪುರೋಡಾಶವನ್ನು ಅಗ್ನಿ ಮತ್ತು ವರುಣರನ್ನು ಉದ್ದೇಶಿಸಿ ಹೋಮಮಾಡಬೇಕು. ಇದೇ ಸ್ವಿಷ್ಟಕೃತ್ ಹೋಮವಾಗುತ್ತದೆ. (ಕಾತ್ಯಾ. ಶ್ರೌ. ೧೦-೮-೨೭, ಸತ್ಯಾ. ೯-೫). ಅಧ್ವರ್ಯುವಿನ ಆದೇಶದಂತೆ, ಉನ್ನೇತೃವು ಎಲ್ಲರನ್ನೂ ನೀರಿನಿಂದ ಹೊರಗೆ ಕರೆತರುತ್ತಾನೆ. (ಯಜಮಾನ ಅಥವಾ ಹೋತೃವು ಮೊದಲು ಹೊರಗೆ ಬರಬೇಕು). ಯಜಮಾನ ಯಜಮಾನಿಯರು ನೂತನ ವಸ್ತ್ರಗಳನ್ನು ಧರಿಸುತ್ತಾರೆ. ಸೋಮದಮೇಲೆ ಹೊದಿಸಿದ್ದ ಬಟ್ಟೆಯು ಯಜಮಾನನ ಉಷ್ಣೀಷವಾಗುತ್ತದೆ. ಸೋಮಕಾಷ್ಠಗಳನ್ನು ಕಟ್ಟಿದ್ದ ಬಟ್ಟೆಯನ್ನು ಯಜಮಾನಿಯು ಧರಿಸುತ್ತಾಳೆ, ಮತ್ತು ಮುಂದೆ ಉದ್ವಾಸನೀಯೇಷ್ಟಿಕಾಲದಲ್ಲಿ, ಇವೆರಡನ್ನು ಅಧ್ವರ್ಯುವಿಗೆ ದಾನಮಾಡಬೇಕು. (ಆಪ. ೧೨-೨೨-೩೪).

ಯಜಮಾನ, ಋತ್ವಿಜರು ಮತ್ತು ಯಜಮಾನಿ, ಇವರು ಒಬ್ಬೊಬ್ಬರೂ ಒಂದೊಂದು ಉದುಂಬರದ ಸಮಿತ್ತನ್ನು ಕೈಯಲ್ಲಿ ಹಿಡಿದು, ಮಹೀಯಾ ಋಕ್ಕನ್ನು (ಅಪಾಮ ಸೋಮಮಮೃತಾ ಅಭೂಮ—ಋ. ಸಂ. ೮-೪೮-೩) ಉಚ್ಚರಿಸುತ್ತಾ, ನೀರನ್ನು ಹಿಂತಿರುಗಿ ನೋಡದೆ, ಯಾಗಶಾಲೆಯ ಕಡೆಗೆ ಉನ್ನೇತೃವನ್ನನುಸರಿಸಿಕೊಂಡು ಬಂದು, ಯಜಮಾನನ ಗೋಶಾಲೆಯ ಮುಂದೆ ಮಾರ್ಜನಮಾಡಿ, ಏಧೋಸಿ—(ತೈ. ಸಂ. ೧-೪-೪೫-೩) ಎಂಬ ಮಂತ್ರಪೂರ್ವಕವಾಗಿ, ಆ ಸಮಿತ್ತನ್ನು (ಎಲ್ಲರೂ) ಆಹವನೀಯಾಗ್ನಿಗೆ ಆಹುತಿಕೊಟ್ಟು, ಅಪೋ ಅನ್ವಚಾರಿಷಂ—(ಆಪ. ಶ್ರೌ. ೧೩-೨೨-೬., ತೈ. ಸಂ. ೧-೪-೪೫-೩) ಎಂಬುದರಿಂದ ಅಗ್ನ್ಯುಪಸ್ಥಾನವನ್ನು ಆಚರಿಸುತ್ತಾರೆ.

ಇದಾದನಂತರ ಉದಯನೀಯೇಷ್ಟಿಯು (ಕೊನೆಯಲ್ಲಿ ಆಚರಿಸಬೇಕಾದ ಇಷ್ಟಿ) ಪ್ರಾಗ್ವಂಶ (ಉತ್ತರವೇದಿಯಲ್ಲಿ ಅಲ್ಲ) ದಲ್ಲಿ ನಡೆಯುತ್ತದೆ. ಪ್ರಾಯಣೀಯೇಷ್ಟಿಯ ಕ್ರಮವೇ ಇಲ್ಲಿಯೂ, ಪ್ರಾಯಣೀಯಾಹುತಿಗೆ ಉಪಯೋಗಿಸಿದ ಸ್ಥಾಲಿಯಲ್ಲಿಯೇ. (ಅದರಲ್ಲಿ ಪ್ರಾಯಣೀಯಾಹುತಿಯು ಅವಶಿಷ್ಟವಿರುತ್ತದೆ), ಈ ಇಷ್ಟಿಗೆ ಬೇಕಾದಹೋಮದ್ರವ್ಯವನ್ನು ತೆಗೆದುಕೊಳ್ಳುತ್ತಾರೆ. ಯಜಮಾನಿಯು ಯೋಕ್ತ್ರವನ್ನು ಪುನಃ ತನ್ನ ನಡುವಿಗೆ ಕಟ್ಟಿಕೊಳ್ಳುತ್ತಾಳೆ. ಪ್ರಯಾಜಗಳು ಐಚ್ಛಿಕ ಮತ್ತು ಕೊಡದೇ ಇದ್ದರೆ, ಜುಹುವಿನಲ್ಲಿ ಆಜ್ಯವನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆಯಿಲ್ಲ. ಪ್ರಾಯಣೀಯದ ಯಾಜ್ಯಾನುವಾಕ್ಯಗಳು ಇಲ್ಲಿ ಕ್ರಮವಾಗಿ ಅನುವಾಕ್ಯಾ ಯಾಜ್ಯಾಗಳಾಗುತ್ತವೆ. ದೇವತಾಕ್ರಮದಲ್ಲಿಯೂ ವ್ಯತ್ಯಾಸವಿದೆ. ಆಜ್ಯಾಹುತಿಗಳಲ್ಲಿ ಮೊದಲನೆಯದು ಅಗ್ನಿಗೆ, ಕೊನೆಯದು ಪಥ್ಯಾಸ್ವಸ್ತಿಗೆ (ಆಪ. ಶ್ರೌ. ೧೩-೨೩-೪., ಸತ್ಯಾ. ೯-೬., ಆಶ್ವ. ಶ್ರೌ. ೬-೧೪-೩), ಉದಯನೀಯವು ಮುಗಿದಮೇಲೆ ಅನೂಬಂಧ್ಯಾ (ಅನೂ ಎಂದು ದೀರ್ಘವು ಆರ್ಷಪ್ರಯೋಗ) ಎಂಬ ಕರ್ಮ. (ಆಪ. ಶ್ರೌ. ೧೩-೨೩-೬., ಸತ್ಯಾ. ೯-೬), ಒಂದು ಗೊಡ್ಡು ಹಸುವನ್ನು ಮಿತ್ರಾವರುಣರಿಗೆ ಕೊಡಬೇಕು. ನಿರೂಢ ಪಶುಬಂಧದ ಕ್ರಮವನ್ನೇ ಇಲ್ಲಿಯೂ ಅನುಸರಿಸಬೇಕು. ಕೆಲವರು, ಮಿತ್ರಾವರುಣರು, ವಿಶ್ವೇದೇವತೆಗಳು ಮತ್ತು ಬೃಹಸ್ಪತಿ, ಈ ಮೂವರಿಗೆ ಮೂರು ಗೋವುಗಳನ್ನು ಕೊಡುವುದುಂಟು. ಆದರೆ ಆಪಸ್ತಂಬರು (ಆಪ. ಶ್ರೌ. ೧೩-೨೩-೬,೧೦,೧೪) ವಾಜಪೇಯ, ರಾಜಸೂಯ ಮತ್ತು ಸತ್ರಗಳಲ್ಲಿ ಮಾತ್ರ ಮೂರು ಪಶುಗಳೆಂದು ವಿಧಿಸಿದಾರೆ. ಮಿತ್ರಾವರುಣರಿಗೆ, ಗೋವಿನಬದಲು, ಒಂದು ವೃಷಭ ಅಥವಾ ಪಯಸ್ಯಾವನ್ನು ಮಾತ್ರ ಕೊಡಬಹುದೆಂದು ಕಾತ್ಯಾಯನರು (ಕಾತ್ಯಾ. ಶ್ರೌ. ೧೦-೯-೧೪,೧೫). ಋಕ್ಶಾಖೆಯವರು ಅನೂಬಂಧ್ಯ ಪಶುವಿನ ಬದಲು, ಮಿತ್ರಾವರುಣರಿಗೆ ಆಮಿಕ್ಷಾವನ್ನು ಮಾತ್ರ ಕೊಡುತ್ತಾರೆ, ಹವಿರ್ಧಾನಶಾಲೆಯ ಮುಂದುಗಡೆ ಈ ಹೋಮವನ್ನು ಹೋತೃವು ನೆರವೇರಿಸುತ್ತಾನೆ ಮತ್ತು ಈ ಕಾರ್ಯದಲ್ಲಿ ಆದರ್ಶೇಷ್ಟಿಯಲ್ಲಿ ನಡೆಯುವ ಕರ್ಮಗಳೆಲ್ಲವೂ—ಇಳಾದವರೆಗೆ—ನಡೆಯುತ್ತವೆ (ಆಪ. ೧೩-೨೪-೧೦). ಅನೂಬಂಧ್ಯಾ (ಆಮಿಕ್ಷಾ) ಆದಮೇಲೆ, **ದೇವಿಕಾ**ಗಳು ಐದು, ಧಾತೃವನ್ನುದ್ದೇಶಿಸಿ ದ್ವಾದಶಕಪಾಲ ಪುರೋಡಾಶವು ಒಂದು, ಹಾಲಿನಲ್ಲಿ ಬೇಯಿಸಿದ (ಸೋಮರಸವನ್ನು ಇಟ್ಟಿದ್ದ, ಮೇಲೆ ನಿರ್ದೇಶಿಸಿರುವ ಆಗ್ರಯಣ ಮೊದಲಾದ ನಾಲ್ಕು ಸ್ಥಾಲಿಗಳಲ್ಲೇ ಬೇಯಿಸಬೇಕು) ಅನ್ನದ ಆಹುತಿಗಳು, ಅನುಮತಿ, ರಾಕಾ, ಸಿನೀವಾಲೀ ಮತ್ತು ಕುಹೂ, ಇವರುಗಳಿಗೆ ನಾಲ್ಕು (ಆಶ್ವ. ಶ್ರೌ. ೪-೧೪-೧೫., ಆಪ. ಶ್ರೌ. ೧೩-೨೪,೧,೨,೩,). ವೇದಿಯ ದಕ್ಷಿಣಪಾರ್ಶ್ವದಲ್ಲಿ, ಯಜಮಾನನು ಕೇಶಶ್ಮಶ್ರುಗಳನ್ನು ವಪನಮಾಡಿಸಿಕೊಳ್ಳುತ್ತಾನೆ (ಆಪ. ಶ್ರೌ. ೧೩-೨೩-೧೬). ಆಹವನೀಯಾಗ್ನಿಯನ್ನು ಒಂದು ಮಣ್ಣಿನ ಪಾತ್ರೆಯಲ್ಲಿ ಮಹಾವೇದಿಯ ಹೊರಗಡೆ ಉತ್ತರಪಾರ್ಶ್ವಕ್ಕೆ ತೆಗೆದುಕೊಂಡು ಹೋಗಿ, ವೇದಿಯಮೇಲಿನ ಆಸ್ತರಣ ಬರ್ಹಿಸ್ಸನ್ನು ಅದರಲ್ಲಿ ಸುಟ್ಟು, ಆಗ ಬರುವ ಧೂಮವನ್ನು ಸ್ತುತಿಸುತ್ತಾರೆ (ಸತ್ಯಾ. ೯-೬). ಅಧ್ವರ್ಯುವು ಈ ಕುಶಾಗ್ನಿಯಲ್ಲಿ ತನ್ನ ಬೊಗಸೆಯಿಂದ ಯವಧಾನ್ಯದ ಹಿಟ್ಟನ್ನು ಹಾಕುತ್ತಾನೆ (ಆಪ.ಶ್ರೌ. ೧೩-೨೪-೧೬,೧೭). ಅಯಂ ತೇ ಯೋನಿಃ--(ಋ. ಸಂ. ೩-೨೯-೧೦., ತೈ. ಸಂ. ೧-೫-೨., ವಾ. ಸಂ. ೩-೧೪) ಎಂಬ ಮಂತ್ರವನ್ನುಚ್ಚರಿಸುತ್ತಾ, ಅಗ್ನಿಗಳನ್ನು ಅರಣಿಗಳಲ್ಲಿ ಇಡುತ್ತಾರೆ (ಆಶ್ವ. ಶ್ರೌ. ೩-೧೦-೫).

ಯಾಗಭೂಮಿಯನ್ನು ಬಿಟ್ಟು, ಅದರ ಉತ್ತರಕ್ಕೆ, ಪುನಃ ಅಗ್ನಿಯನ್ನು ಮಥನಮಾಡಿ, ಉದ್ವಾಸನೀಯೇಷ್ಟಿಯನ್ನು ಆಚರಿಸುತ್ತಾರೆ. ಇದರಲ್ಲಿ ಎಂಟು ಅಥವಾ ಐದು ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವನ್ನು ಅಗ್ನಿಗೆ ಅರ್ಪಿಸುತ್ತಾರೆ (ಆಪ. ಶ್ರೌ. ೧೩-೩೫-೫., ಸತ್ಯಾ. ೯-೭). ಇದರಲ್ಲಿ (ಅಶ್ವ. ಶ್ರೌ. ೬-೪-೨೪), ಪುನರಾಧೇಯದಲ್ಲಿ ನಡೆದಂತೆ ಎಲ್ಲವೂ ನಡೆಯುತ್ತದೆ. ಆದರೆ ಕಡೆಯ ಅನುಯಾಜವೊಂದು ಹೊರತು, ಉಳಿದ ಮಂತ್ರಗಳನ್ನೆಲ್ಲಾ ಜಪಿಸಬೇಕು. ದಕ್ಷಿಣೆಯು ಒಂದು ವೃಷಭ ಅಥವಾ ಒಂದು ವೃಷಭದ ಮೌಲ್ಯದಷ್ಟು ಸುವರ್ಣ. ಈ ಉದ್ವಾಸನೀಯೇಷ್ಟಿಗೆ ಬದಲಾಗಿ, ಕೆಲವರು, ಸ್ರುವದಿಂದ ಹನ್ನೆರಡುಸಲ ಆಜ್ಯವನ್ನು ಜುಹುವಿಗೆ ಹಾಕಿಕೊಂಡು, ಇದಂ ವಿಷ್ಣುಃ (ಋ. ಸಂ. ೧-೨೨-೧೭) ಎಂಬ ಮಂತ್ರದಿಂದ ಒಂದು ಆಜ್ಯಾಹುತಿಯನ್ನು ಕೊಡುತ್ತಾರೆ (ಆಪ. ಶ್ರೌ. ೧೩-೨೫-೭,೮.)

**ಇಲ್ಲಿಗೆ ಯಜ್ಞದ ಕಾರ್ಯಕಲಾಪಗಳೆಲ್ಲವೂ ಮುಗಿಯಿತು.**

ಪ್ರಾತಸ್ಸವನವೆಂದರೇನು ಎಂಬುದನ್ನು ಇಲ್ಲಿ ವಿವರಿಸಬೇಕಾಗಿದೆ. ಸೋಮಯಾಗದಲ್ಲಿ ಸೋಮವಲ್ಲಿ ಎಂಬ ಲತೆಯ ರಸವನ್ನು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡಿ ಆ ರಸದಿಂದ ದೇವತೆಗಳ ಪ್ರೀತ್ಯರ್ಥವಾಗಿ ವಿಧ್ಯುಕ್ತ ಮಂತ್ರವಿಧಾನದಿಂದ ಹೋಮಾದಿಗಳನ್ನು ಮಾಡಿ ಸೋಮರಸವನ್ನು ಯಜಮಾನನೂ ಋತ್ವಿಕ್ಕುಗಳೂ ಪಾನಮಾಡುವರು. ಸೋಮಯಾಗದಲ್ಲಿ ಏಳು ಪ್ರಭೇದಗಳಿವೆ. ಇವುಗಳನ್ನು ಸಪ್ತಸೋಮಸಂಸ್ಥೆಗಳೆಂದು ಕರೆಯುವುದು ರೂಢಿಯಾಗಿದೆ. ಅವುಗಳಿಗೆ **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ಅಪ್ತೋರ್ಯಾಮ, ವಾಜಪೇಯ** ಎಂದು ಹೆಸರುಗಳು. ಇವುಗಳಲ್ಲಿ ಅಗ್ನಿಷ್ಟೋಮಯಾಗವು ಪ್ರಕೃತಿಸ್ವರೂಪವಾದುದು. ಎಂದರೆ ಈ ಯಾಗವು ಉಳಿದ ಸೋಮಯಾಗಗಳಿಗೆ ಮೂಲ ಭೂತವಾಗಿರುವುದು ಇದು ಕೆಲವು ವ್ಯತ್ಯಾಸಗಳನ್ನು ಹೊಂದಿ ಉಳಿದ ಆರು ಸೋಮಯಾಗಗಳಾಗುವವು. ಅಗ್ನಿಷ್ಟೋಮ ಯಾಗವನ್ನು ಮಾಡುವ ಕ್ರಮವನ್ನು ಸಂಗ್ರಹರೂಪವಾಗಿ ಇಲ್ಲಿ ಹೇಳಲಾಯಿತು. ಇದರ ವಿಧ್ಯುಕ್ತವಿವರಣೆಯು ಯಜುರ್ವೇದದ ತೈತ್ತಿರೀಯಸಂಹಿತೆಯ ಆರನೆಯ ಕಾಂಡದ ೧-೬ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿದೆ. ಈ ಯಾಗಸ್ವರೂಪವನ್ನು ವಿವರಿಸುವಾಗ ಅನೇಕ ಪಾರಿಭಾಷಿಕಶಬ್ದಗಳ ಅರ್ಥವಿವರಣೆಯು ಅವಶ್ಯಕವಾದುದರಿಂದಲೂ, ಇಲ್ಲಿ ಅದನ್ನೆಲ್ಲಾ ವಿಶದವಾಗಿ ಹೇಳಬೇಕಾದರೆ ಗ್ರಂಥವು ವಿಸ್ತಾರವಾಗುವುದೆಂಬ ಭಯದಿಂದಲೂ, ಯಾಗಸ್ವರೂಪವನ್ನು ವಿವರಿಸುವ ಸಂಸ್ಕೃತಶ್ಲೋಕಗಳನ್ನು ಮಾತ್ರ ಇಲ್ಲಿ ಉದಹರಿಸಿ ಪ್ರಕೃತಸಂದರ್ಭಕ್ಕೆ ಉಪಯುಕ್ತವಾದ ವಿಷಯಗಳನ್ನು ಕನ್ನಡದಲ್ಲಿ ವಿವರಿಸಲಾಗುವುದು —

ಅಗ್ನಿಷ್ಟೋಮಯಾಗದ ಸಂಕ್ಷೇಪವಾದ ಸ್ವರೂಪಸಂಗ್ರಹವು —

**ಅಥಾಗ್ನಿಷ್ಟೋಮಸಂಸ್ಥೇನ ಜ್ಯೋತಿಷ್ಟೋಮೇನ ಯಾಜಯೇತ್ ।**
**ಸ ಪೂರ್ವಮೃತ್ವಿಜೋ ವೃತ್ವಾ ದೇವಭೂಮಿವಿನಿಶ್ಚಯೇ ॥**
**ದೀಕ್ಷಣೀಯಾಂ ನಿರ್ವಪೇತ್ಸಾಪಿ ಪತ್ನೀಸಂಯಾಜಸಂಸ್ಥಿತಿಃ ।**
**ಕೃತೇ ಪ್ರಾಚೀನವಂಶೇಽಥ ಸಂಸ್ಕಾರಾ ವಪನಾದಯಃ ॥**
**ಹುತ್ವಾ ದೀಕ್ಷಾಹುತೀಃ ಕಾರ್ಯಾ ದೀಕ್ಷಾ ಕೃಷ್ಣಾಜಿನಾದಿಭಿಃ ।**
**ದೀಕ್ಷಿತೋ ನಿಯಮೈರ್ಯುಕ್ತೋ ಭವೇತ್ಕ್ಷೀರವ್ರತಾದಿಭಿಃ ॥**
**ದ್ವಾದಶಾಹಂ ದೀಕ್ಷಿತೋಽಥ ಭಕ್ಷಿತ್ವಾ ದ್ರವ್ಯಮಾನಯೇತ್ ।**
**ಸೋಮಂ ಚರ್ಮಣ್ಯವಸ್ಥಾಯ ವಿವಸೇತ್ಸೋಮವಿಕ್ರಯೀ ॥**
**ಶಂಯ್ವಂತಾ ಪ್ರಾಯಣೀಯಾ ಸ್ಯಾದ್ಗೃಹ್ಣೀಯಾತ್ಕ್ರಯಣೀಪದಂ ।**
**ಕ್ರೀತ್ವಾ ಸೋಮಂ ರಥೇ ಕ್ಷಿಪ್ತ್ವಾ ಪ್ರಾಗ್ವಂಶಾಗ್ರೇ ಸಮಾನಯೇತ್ ॥**
**ಆತಿಥ್ಯಾಂ ನಿರ್ವಪೇತ್ಸೋಮಮಾಸಂದ್ಯಾಮುಪಸಾದಯೇತ್ ।**
**ಆತಿಥ್ಯೇಷ್ಟಿರಿಡಾಂತಾ ಸ್ಯಾತ್ತಾನೂನಪ್ತ್ರಮುವದ್ಯತಿ ॥**
**ದೀಕ್ಷಾಮವಾಂತರಾಮೇತಿ ಪ್ರವರ್ಗ್ಯೋಪಸದೋಃ ಕೃತಿಃ ।**
**ದಿನತ್ರಯೇ ತತ್ಕೃತಂ ಸ್ಯಾದ್ವೇದಿರ್ಮಧ್ಯಂದಿನೇ ಭವೇತ್ ॥**
**ಷಟ್ತ್ರಿಂಶತ್ಪದದೀರ್ಘೈಷಾ ಪ್ರಾಗ್ವಂಶಾತ್ಪೂರ್ವತಃ ಸ್ಥಿತಾ ।**
**ಪ್ರಾತಃ ಪ್ರವರ್ಗ್ಯಮುದ್ವಾಸ್ಯ ಪಶ್ಚಾದುತ್ತರವೇದಿತಃ ॥**
**ಶಕಟೇ ದ್ವೇ ಹವಿರ್ಧಾನೇ ಹವಿರ್ಧಾನಂ ಚ ಮಂಡಪಂ ।**
**ಪಶ್ಚಾತ್ಸದಸ್ತಸ್ಯ ಮಧ್ಯೇ ನಿಖಾತೌದುಂಬರೀ ಮಿತಾ ॥**

ದಕ್ಷಿಣಸ್ಯಾನಸೋಽಧಸ್ತಾದ್ಗರ್ತಾನುಪರವಾನ್ ಖನೇತ್ ।
ವಿಧಾಯ ಫಲಕಾವಸ್ಯಾಂತಾನಗ್ರೇ ಕುರ್ಯಾನ್ಮೃದಾ ಖರಂ ॥
ನಿರ್ವಪೇದ್ಧಿಷ್ಣ್ಯಗಾನಗ್ನೀಷೋಮೀಯಂ ಪಶುಮಾಚರೇತ್ ।
ಪ್ರಯುಜ್ಯೋಚಿತಪಾತ್ರಾಣಿ ದರ್ಶವತ್ಸರ್ವಮಾಚರೇತ್ ॥
ಆಜ್ಯಮಾಸಾದಿತೇ ವೇದ್ಯಾ ಅಂತೇ ಯೂಪಂ ಸಮುಚ್ಛ್ರಯೇತ್ ।
ಯೂಪಸ್ಯೋಚ್ಛ್ರಯಣಾದೂರ್ಧ್ವಂ ಸಮಾಪಯ್ಯ ಪಶುಂ ತತಃ ॥
ವೈಸರ್ಜನಾನಿ ಹುತ್ವಾಗ್ನಿಂ ಸೋಮಂ ಗ್ರಾವಾದಿ ಚಾನಯೇತ್ ।
ಹವಿರ್ಧಾನೇ ಸ್ಥಾಪಯಿತ್ವಾ ಗೃಹ್ಣೀಯಾದ್ವಸತೀವರೀಃ ॥
ಪ್ರಯುಂಜ್ಯಾತ್ಸೋಮಪಾತ್ರಾಣಿ ಮಹಾರಾತ್ರೇ ಖರಾದಿಷು ।
ಗ್ರಾವಸ್ತುತ್ಸ್ಥಾಪಿತೇ ಸೋಮೇ ಪಕ್ಷಿಣಾಂ ಧ್ವನಿನಃ ಪುರಾ ॥
ಸ್ಯಾತ್ಪ್ರಾತರನುವಾಕಾರ್ಥಮುಪಾಕರಣಮಾದರಾತ್ ।
ವಸತೀವರ್ಯಪಾಂ ಪ್ರಾಪ್ತೌ ಪ್ರಚಾರಃ ಸ್ಯಾದ್ದಧಿಗ್ರಹೇ ॥
ಉಪಾಂಶ್ವದಾಭ್ಯೌ ಹುತ್ವಾಥೋ ಮಹಾಭಿಷವಮಾಚರೇತ್ ।
ಉಪಾಂಶುಮಂತರ್ಯಾಮಂ ಚ ಹುತ್ವಾ ರಿಕ್ತಂ ತು ಸಾದಯೇತ್ ॥
ಅಥೈಂದ್ರವಾಯಂ ಪಾತ್ರೇ ಗೃಹೀತ್ವಾ ಸಾದಯೇತ್ ಖರೇ ।
ಯೋ ಮೈತ್ರಾವರುಣಸ್ತಂತು ಶ್ರೀಣಾತಿ ಪಯಸಾ ಗ್ರಹಂ ॥
ಶುಕ್ರಃ ಶೃತೋ ಹಿರಣ್ಯೇನ ಶೃತೋ ಮನ್ಥೀ ತು ಸಕ್ತುಭಿಃ ।
ಗೃಹೀತ್ವಾಗ್ರಯಣಂ ಗೃಹ್ಣಾತ್ಯತಿಗ್ರಾಹ್ಯಾಭಿಧಗ್ರಹಾನ್ ॥
ಗೃಹೀತ್ವೋಕ್ಥ್ಯಂ ಧ್ರುವೋ ಗ್ರಾಹ್ಯಃ ಪವಮಾನಗ್ರಹಾಸ್ತ್ರಯಃ ।
ಪೂತಭೃದ್ದ್ರೋಣಕಲಶೋಽಪರಶ್ಚಾಧವನೀಯಕಃ ॥
ತೇ ಬಹಿಷ್ಪವಮಾನಾಯ ಪ್ರಸರ್ಪಂತ್ಯತ್ರ ಪಂಚ ತೇ ।
ಗೃಹೀತ್ವಾಶ್ವಿನಮಾಗ್ನೇಯಪಶೋಃ ಕುರ್ಯಾದುಪಾಕೃತಿಂ ॥
ಸವನೀಯಪುರೋಡಾಶೈಶ್ಚರಿತ್ವಾ ಹ್ಯೈಂದ್ರವಾಯವಂ ।
ಹುತ್ವಾ ಗ್ರಹಂ ದ್ವಯೋರ್ಮೈತ್ರಾವರುಣಾಶ್ವಿನಯೋರ್ಹುತಿಃ ॥
ಶುಕ್ರಮನ್ಥ್ಯಾದಿಕಾನ್ ಹುತ್ವಾ ಚಮಸಾನಪಿ ಜುಹ್ವತಿ ।
ಸಂರಕ್ಷ್ಯರ್ತುಗ್ರಹೈಂದ್ರಾಗ್ನಂ ಸೋಮಪ್ರತಿಗರಸ್ತತಃ ॥
ಆಜ್ಯಸ್ತೋತ್ರೇಭ್ಯ ಉರ್ಧ್ವಂ ಹಿ ಪ್ರಾತಸ್ಸವನಸಂಸ್ಥಿತಿಃ ।
ಮಾಧ್ಯಂದಿನೇ ತು ಸವನೇ ಪುರೋಡಾಶಃ ಪಶೋರ್ಭವೇತ್ ॥
ಗ್ರಹೋ ಮರುತ್ವತೀಯಃ ಸ್ಯಾತ್ಪವಮಾನೇನ ಸಂಸ್ತುತಿಃ ।
ದಧಿಘರ್ಮೇ ಹುತೇ ದದ್ಯಾದ್ದಕ್ಷಿಣಾಸ್ತೇ ಯಥಾಯಥಂ ॥

**ಮರುತ್ವತೀಯಾಂಸ್ತಾನ್ ಹುತ್ವಾ ಮಾಹೇಂದ್ರೇಣ ಸಮಾಪ್ಯತೇ ।**
**ತೃತೀಯಸವನಾರಂಭ ಆದಿತ್ಯಗ್ರಹಮಾಚರೇತ್ ॥**
**ಆರ್ಭವೇನ ಸ್ತುವೀತಾಥೋ ಪಶ್ವಂಗೈಃ ಪ್ರಚರತ್ಯಯಂ ।**
**ಸಾವಿತ್ರವೈಶ್ವದೇವಾಖ್ಯೌ ಗ್ರಹೌ ಸೌಮ್ಯಚರುಸ್ತಥಾ ॥**
**ಪಾತ್ನೀವತಗ್ರಹಾದೂರ್ಧ್ವಂ ಯಜ್ಞಾಯಜ್ಞೀಯಸಂಸ್ತವಃ ।**
**ಆಗ್ನಿಮಾರುತಶಸ್ತ್ರಂ ಸ್ಯಾದ್ಗೃಹ್ಣೀಯಾದ್ಧಾರಿಯೋಜನಂ ॥**
**ಸಮಾಪ್ತೇ ಸವನೇ ಪಶ್ಚಾತ್ಕುರ್ಯಾದವಭೃಥಂ ತತಃ ।**
**ಕುರ್ಯಾದುದಯನೀಯೇಷ್ಟಿಮನೂಬಂಧ್ಯಾಂ ಯಜೇತ ಗಾಂ ॥**
**ದೇವಿಕಾ ನಿರ್ವಪೇದ್ದೇವಸುವಾಮಪಿ ಯಜೂಂಷ್ಯಥ ।**
**ಉದ್ವಾಸ್ಯ ವೇದಿಮಾಗ್ನೇಯಮಿತ್ಯಗ್ನಿಷ್ಟೋಮಸಂಸ್ಥಿತಿಃ ॥ ಇತಿ ॥**

ಇದು ಅಗ್ನಿಷ್ಟೋಮಯಾಗದ ಸಂಕ್ಷೇಪ ವಿವರಣೆಯು. ಅಗ್ನಿಷ್ಟೋಮಯಾಗದಲ್ಲಿ ಹನ್ನೆರಡು ಸ್ತೋತ್ರಗಳೂ ಹನ್ನೆರಡು ಶಸ್ತ್ರಗಳೂ ಉಪಯೋಗಿಸಲ್ಪಡುವವು. ಇತರ ಅತ್ಯಗ್ನಿಷ್ಟೋಮಾದಿ ಸೋಮಯಾಗಗಳಲ್ಲಿ ಈ ಸ್ತೋತ್ರ ಶಸ್ತ್ರಗಳ ಸಂಖ್ಯೆಯು ಅಧಿಕವಾಗಿರುವುದು. ಸೋಮಯಾಗದಲ್ಲಿ ಯಜ್ಞಮಾಡುವ ಯಜಮಾನನು ಒಬ್ಬನೂ, ಹದಿನಾರು ಜನ ಋತ್ವಿಜರೂ ಇರುವರು. ಕೆಲವು ಸೋಮಯಾಗಗಳಲ್ಲಿ ಅನೇಕ ಮಂದಿ ಯಜಮಾನರೂ ಅಧಿಕಸಂಖ್ಯೆಯ ಋತ್ವಿಕ್ಕುಗಳೂ ಇರುವರು. ಅನೇಕ ಜನರು ಸೇರಿ ಮಾಡುವ ಇಂತಹ ಸೋಮಯಾಗಕ್ಕೆ **ಸತ್ರ**ವೆಂದು ಹೆಸರು. ಈ ಸತ್ರಯಾಗವೂ ಎರಡು ವಿಧವಾಗಿರುವುದು. ಹನ್ನೆರಡು ದಿನಪರ್ಯಂತವಾಗಿ ಮಾಡುವುದು ಒಂದು ವಿಧ. ಒಂದು ಸಂವತ್ಸರದವರೆಗೂ ಮಾಡುವುದು ಮತ್ತೊಂದು ವಿಧ. ಸಂವತ್ಸರಾತ್ಮಕವಾದ ಸತ್ರಗಳು **ಗವಾಮಯನ, ಆದಿತ್ಯಾನಾಮಯನ, ಅಂಗಿರಸಾಮಯನ** ಎಂದು ಅನೇಕ ವಿಧವಾಗಿರುವುವು. ಇವೆಲ್ಲಕ್ಕೂ ಗವಾಮಯನವೇ ಪ್ರಕೃತಸ್ವರೂಪವಾಗಿರುವುದು ಎಂದರೆ ಮೂಲಭೂತ ವಾಗಿರುವುದು.

**ಅಭಿಪ್ಲವ**—ಆರು ದಿನಗಳ ಪರ್ಯಂತರ ಮಾಡುವ ಸೋಮಯಾಗಕ್ಕೆ ಷಡಹವೆಂದು ಹೆಸರು. ಇದು ಎರಡು ವಿಧ— ಅಭಿಪ್ಲವ ಮತ್ತು ಪೃಷ್ಠ್ಯ ಎಂದು. ಈ ಅಭಿಪ್ಲವ ಮತ್ತು ಪೃಷ್ಠ್ಯ ಯಾಗಗಳ ಲಕ್ಷಣವನ್ನು ಅಶ್ವಲಾಯನಮಹರ್ಷಿಗಳು— **ಉಭಯತೋಜ್ಯೋತಿಃ ಷಡಹಃ** ಮತ್ತು **ಅಂತರತೋಜ್ಯೋತಿಃ ಷಡಹಃ** ಎಂದು ಹೇಳಿರುವರು. ಎಂದರೆ ಷಡಹ ಸೋಮಯಾಗದಲ್ಲಿ ಮೊದಲನೆಯ ದಿನವೂ ಕೊನೆಯ ದಿನವೂ ಯಾಗವನ್ನು ಅಗ್ನಿಷ್ಟೋಮಯಾಗದಂತೆ ಮಾಡಿ ಉಳಿದ ನಾಲ್ಕು ದಿನಗಳಲ್ಲಿ ಉಕ್ಥ್ಯವೆಂಬ ಸೋಮಯಾಗದಂತೆ ಮಾಡುವ ಯಾಗವಿಶೇಷಕ್ಕೆ ಅಭಿಪ್ಲವಷಡಹವೆಂದು ಹೆಸರು. ಪೃಷ್ಠ್ಯಷಡಹ ವೆಂದರೆ ಮೊದಲನೆಯ ಮತ್ತು ನಾಲ್ಕನೆಯ ದಿನಗಳಲ್ಲಿ ಅಗ್ನಿಷ್ಟೋಮದಂತೆ ಮಾಡಿ ಉಳಿದ ದಿನಗಳಲ್ಲಿ ಉಕ್ಥ್ಯಯಾಗದಂತೆ ಮಾಡುವ ಸೋಮಯಾಗವಿಶೇಷವು.

ಅಗ್ನಿಷ್ಟೋಮಯಾಗಗಳಲ್ಲಿ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನವೆಂದು ಹೆಸರು. ಸೋಮರಸ ತೆಗೆಯುವ ಕಾಲದಲ್ಲಿ ಸ್ತೋತ್ರ ಶಸ್ತ್ರಮಂತ್ರಗಳ ಪಠನೆಮಾಡುವುದರಿಂದ ಈ ದಿನಕ್ಕೆ ಸ್ತುತ್ಯಾದಿನವೆಂದೂ ಹೆಸಸು. ಆ ದಿನದಲ್ಲಿ ಪ್ರಾತಃಕಾಲದಲ್ಲಿ ಎಂದರೆ ಹಿಂದಿನ ದಿನ ಅರ್ಧರಾತ್ರಿ ಕಳೆದಮೇಲೆ ಸೂರ್ಯೋದಯವಾಗುವುದರೊಳಗೆ ಪಕ್ಷಿಗಳ ಧ್ವನಿಯು ಕೇಳಿಬರುವುದಕ್ಕಿಂತ ಮುಂಚೆಯೇ ಹೋತೃವು ಪ್ರಾತರನುವಾಕಗಳೆಂಬ ಮಂತ್ರಗಳನ್ನು ಹೇಳಿ ಮುಗಿಸಬೇಕು. ಈ ಪ್ರಾತರನು

ವಾಕವು, ಆಗ್ನೇಯಕ್ರತು (ಅಗ್ನಿಸಂಬಂಧವಾದ ಋಕ್ಕುಗಳು) ಉಪಸ್ಯಕ್ರತು, ಆಶ್ವಿನಕ್ರತು ಎಂದು ಮೂರು ಭಾಗಗಳನ್ನೊಳಗೊಂಡಿರುವುದು. ಪ್ರತಿಯೊಂದು ಭಾಗದಲ್ಲಿಯೂ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿಃ ಎಂಬ ಏಳು ವಿಧವಾದ ಛಂದಸ್ಸುಗಳಿಂದ ಕೂಡಿದ ಅನೇಕ ಮಂತ್ರಗಳಿರಬೇಕು.

ಪ್ರಾತರನುವಾಕ ಪಠನಾನಂತರ ಪ್ರಾತಸ್ಸವನವೆಂಬ ಕರ್ಮವು ನಡೆಯುವುದು. ಸವನವೆಂದರೆ, ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವುದು. ಈ ಕರ್ಮವು ಮೂರು ಕಾಲಗಳಲ್ಲಿಯೂ ನಡೆಯುವುದು. ಪ್ರಾತಃಕಾಲದಲ್ಲಿ ರಸತೆಗೆಯುವುದಕ್ಕೆ **ಪ್ರಾತಸ್ಸವನವೆಂದೂ**, ಮಧ್ಯಾಹ್ನಕಾಲದಲ್ಲಿ ರಸತೆಗೆಯುವುದಕ್ಕೆ **ಮಾಧ್ಯಂದಿನಸವನವೆಂದೂ**, ಸಾಯಂಕಾಲದಲ್ಲಿ ರಸತೆಗೆಯುವುದಕ್ಕೆ **ತೃತೀಯಸವನವೆಂದೂ** ಹೆಸರು.

ಈ ಮೂರು ಸವನಗಳಲ್ಲಿಯೂ ಒಟ್ಟು ಹನ್ನೆರಡು ಸ್ತೋತ್ರಗಳನ್ನೂ ಹನ್ನೆರಡು ಶಸ್ತ್ರಗಳನ್ನೂ ಪಠಿಸಬೇಕು. ಅವುಗಳ ಕ್ರಮವನ್ನು ನಾವು ಋಗ್ವೇದಸಂಹಿತೆಯ ಭಾಗ ೧-೬೫೨ನೆಯ ಪುಟದಲ್ಲಿ ವಿವರಿಸಿದೇವೆ.

**ಇಲ್ಲಿಗೆ ಪೂರ್ವಪೀಠಿಕೆಯು ಸಮಾಪ್ತವು.**



|| ಶ್ರೀಃ ||

|| ಶ್ರೀಮಹಾಗಣಾಧಿಪತಯೇ ನಮಃ ||

**ಶ್ರೀಮತ್ಸಾಯಣಾಚಾರ್ಯವಿರಚಿತಭಾಷ್ಯಸಮೇತಾ**
**ಐತರೇಯಬ್ರಾಹ್ಮಣಭಾಷ್ಯಭೂಮಿಕಾ**

# ಕರ್ಣಾಟಕ ಭಾಷಾನುವಾದ ವಿವರಣೆಗಳೊಡಗೂಡಿದ ಐತರೇಯ ಬ್ರಾಹ್ಮಣದ

# ಸಾಯಣಭಾಷ್ಯಭೂಮಿಕೆಯು

## ಸಾಯಣಭಾಷ್ಯಭೂಮಿಕೆಯ ಕನ್ನಡಾನುವಾದವು

**ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।**
**ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥**

ವಿಜಯನಗರದ ಬುಕ್ಕಮಹಾರಾಜನ ಆಸ್ಥಾನದಲ್ಲಿ ಅಮಾತ್ಯಪದವಿಯನ್ನಲಂಕರಿಸಿದವರೂ ವೇದ, ವೇದಾಂಗ, ರಾಜನೀತಿ, ಪೂರ್ವೋತ್ತರಮೀಮಾಂಸಗಳು, ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಮಹಾಪಂಡಿತರಾಗಿದ್ದ ಸಾಯಣಾಚಾರ್ಯರೆಂಬುವರು ಋಗ್ವೇದಕ್ಕೆ ಭಾಷ್ಯವನ್ನು ರಚಿಸಲು ಉದ್ದೇಶಿಸಿ ಪ್ರಾಚೀನಶಿಷ್ಟಸಂಪ್ರದಾಯದಂತೆ ಪ್ರಥಮಶ್ಲೋಕದಲ್ಲಿ ಗಣಪತಿ ನಮಸ್ಕಾರರೂಪವಾದ ಮಂಗಳಾಚರಣೆಯನ್ನು ಮಾಡುತ್ತಾರೆ. **“ ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾ ”** ಎಂದರೆ ಆಶೀರ್ವಾದ, ನಮಸ್ಕಾರ, ವಸ್ತುನಿರ್ದೇಶ ಎಂದು ಮಂಗಳಾಚರಣೆಯು ಮೂರುವಿಧವಾಗಿರುವುದು. ಅವುಗಳಲ್ಲಿ ಇಷ್ಟದೇವತಾನಮಸ್ಕಾರವೇ ವಿಶೇಷವಾಗಿ ರೂಢಿಯಲ್ಲಿರುವುದರಿಂದ ಅದನ್ನನುಸರಿಸಿ ವಿಘ್ನಪರಿಹಾರಕನಾದ ಗಣಪತಿಯನ್ನು ಸ್ತೋತ್ರಮಾಡುತ್ತಾರೆ.

ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳು ತಾವು ಮಾಡುವ ಯಜ್ಞಯಾಗಾದಿಗಳು, ಯುದ್ಧಾರಂಭ ಮೊದಲಾದ ಸಮಸ್ತಕಾರ್ಯಾರಂಭದಲ್ಲಿಯೂ ಗಜವದನನಾದ ಗಣಪತಿಯನ್ನು ನಮಸ್ಕರಿಸಿ ತಮ್ಮ ಕಾರ್ಯಗಳಲ್ಲಿ ಕೃತಕೃತ್ಯರಾಗಿರುವರು ಎಂದರೆ ಜಯಶೀಲರಾಗಿರುವರು. ಇಂತಹ ವಿಘ್ನನಿವಾರಕನಾದ ಗಣಪತಿಯನ್ನು ನಾನು ಪ್ರಾರಂಭಿಸಲಿರುವ ಐತರೇಯಬ್ರಾಹ್ಮಣದ ಭಾಷ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲೆಂದು ನಮಸ್ಕರಿಸುತ್ತೇನೆ.

ಗಣಪತಿಯು ವಿಘ್ನರಾಜನೆಂದು ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿರುವುದು. ಎಂದರೆ ಕಾರ್ಯಾರಂಭದಲ್ಲಿ ತನ್ನನ್ನು ಪೂಜಿಸಿದವರ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಿಸುವನು. ಹಿಂದೆ ತ್ರಿಪುರದಹನಕಾಲದಲ್ಲಿ ಈಶ್ವರನು

ಗಣಪತಿಯನ್ನು ಪೂಜಿಸದೆ ತ್ರಿಪುರಸಂಹಾರಕ್ಕಾಗಿ ಪ್ರಯತ್ನಿಸಿದಾಗ ಅವನ ದೃಷ್ಟಿಗೆ ತ್ರಿಪುರಗಳೇ ಕಾಣಿಸಲಿಲ್ಲವೆಂದೂ ಬಳಿಕ ಗಣಪತಿಯನ್ನು ಪೂಜಿಸಿದಮೇಲೆ ಅವು ಗೋಚರವಾಗಿ ತ್ರಿಪುರದಹನಕಾರ್ಯವು ಅನಾಯಾಸವಾಗಿ ನೆರವೇರಿತೆಂದೂ ಶಿವಮಹಾ ಪುರಾಣದಲ್ಲಿ ಹೇಳಿರುವುದು. ವಿಷ್ಣು, ಬ್ರಹ್ಮ ಇಂದ್ರ ಮೊದಲಾದ ದೇವತೆಗಳೂ ಸಹ ಗಣಪತಿಯನ್ನು ಪೂಜಿಸಿಯೇ ಕಾರ್ಯಾರಂಭವನ್ನು ಮಾಡಿರುವರು. ದೇವತೆಗಳೇ ಆರೀತಿ ಮಾಡಿರುವಾಗ ಮನುಷ್ಯರು ಗಣಪತಿಯನ್ನು ಅವಶ್ಯಕವಾಗಿ ಪೂಜಿಸಲೇಬೇಕು. ವಿದ್ಯಾರಂಭದಲ್ಲಿಯೂ, ವಿವಾಹಾದಿ ಮಂಗಳಕಾರ್ಯಗಳಲ್ಲಿಯೂ ವ್ರತಾದಿಗಳಲ್ಲಿಯೂ, ದೇವತಾಪೂಜೆ ಗಳಲ್ಲಿಯೂ ಗಣಪತಿಯನ್ನುಮೊದಲು ಪೂಜಿಸುವುದು ಪದ್ಧತಿಯಾಗಿದೆ. ಈ ಶಿಷ್ಟಸಂಪ್ರದಾಯವನ್ನನುಸರಿಸಿ ಸಾಯಣಾಚಾರ್ಯರು ಗಣಪತಿಯನ್ನು ನಮಸ್ಕಾರಮಾಡಿರುವರು.

ಈ ಶ್ಲೋಕದಲ್ಲಿರುವ **ವಾಗೀಶ** ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಕಲ್ಪಿಸಬಹುದು. **ವಾಕ್** ಎಂದರೆ ಸರಸ್ವತಿಯು. ಈ ವಾಗಭಿಮಾನಿದೇವತೆಯಾದ ಸರಸ್ವತಿಗೆ **ಈಶ** ಎಂದರೆ ಪತಿಯು. ಆದುದರಿಂದ ವಾಗೀಶನೆಂದರೆ ಸರಸ್ವತೀಪತಿಯಾದ ಚತುರ್ಮುಖಬ್ರಹ್ಮನು, ಎಂದಾಗುವುದು. ಇದಲ್ಲದೆ ವಾಗೀಶನೆಂದರೆ ವೇದರೂಪವಾದ ವಾಕ್ಯಗಳಿಗೆ ಪಾಲಕನಾದ ಬೃಹಸ್ಪತಿ ಯೆಂದೂ ವಿದ್ಯಾಧಿದೇವತೆಯಾದ ಈಶ್ವರನೆಂದೂ, " **ವಾಚಸ್ಪತಿಂ ವಿಶ್ವಕರ್ಮಾಣಮೂತಯೇ** " ಎಂಬ ಶ್ರುತಿವಾಕ್ಯಾನು ಸಾರವಾಗಿ ಸೃಷ್ಟಿಕರ್ತನಾದ ವಿಶ್ವಕರ್ಮನೆಂದೂ ಅರ್ಥವಾಗುವುದು.

**ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್**
**ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥ ೨ ॥**

ಈರೀತಿ ಗಣಪತಿಯನ್ನು ನಮಸ್ಕರಿಸಿದನಂತರ ಭಗವಂತನಾದ ಈಶ್ವರನನ್ನು ನಮಸ್ಕಾರಮಾಡುತ್ತಾರೆ. ಯಾವ ಪರಮೇಶ್ವರನ ನಿಃಶ್ವಾಸಗಳೇ ವೇದರೂಪವಾಗಿವೆಯೋ ಮತ್ತು ಯಾವ ಪರಮಾತ್ಮನು ವೇದಗಳಿಂದಲೇ ಸಮಸ್ತಜಗತ್ತನ್ನೂ ಸೃಷ್ಟಿಮಾಡಿದನೋ ಅಂತಹ, ಸಮಸ್ತ ವಿದ್ಯೆಗಳಿಗೂ ಅಧಿಪತಿಯಾದ ಮಹೇಶ್ವರನನ್ನು ಅಥವಾ ಸಾಕ್ಷಾದೀಶ್ವರಸ್ವರೂಪರಾದ ವಿದ್ಯಾತೀರ್ಥರೆಂಬ ನಮ್ಮ ಗುರುವನ್ನು ನಮಸ್ಕರಿಸುತ್ತೇನೆ.

ವಿದ್ಯಾತೀರ್ಥರೆಂಬುವರು ಭಾರತತೀರ್ಥರೆಂಬುವರಿಗೆ ಗುರುಗಳು. ಈ ಭಾರತತೀರ್ಥರು ಮಾಧವಾಚಾರ್ಯರಿಗೆ ಗುರುಗಳು. ಆದುದರಿಂದ ವಿದ್ಯಾತೀರ್ಥರು ಪರಮಗುರುಗಳೆಂದಾಯಿತು. " **ಗುರುರೇವ ಮಹೇಶ್ವರಃ** " ಎಂಬ ಶಾಸ್ತ್ರವಚನಾನುಸಾರವಾಗಿ ಗುರುವೇ ಸಾಕ್ಷಾತ್ಪರಮೇಶ್ವರನೆಂದು ಶಿಷ್ಯನು ಭಾವಿಸಬೇಕು. ಈ ಕಾರಣಗಳಿಗಾಗಿ ಮಾಧವಾ ಚಾರ್ಯರು ವಿದ್ಯಾತೀರ್ಥಮಹೇಶ್ವರರನ್ನು ನಮಸ್ಕರಿಸುವಾಗ ತಮ್ಮ ಗುರುಗಳನ್ನೂ ಮಹೇಶ್ವರರನ್ನೂ ನಮಸ್ಕರಿಸಿರುವರೆಂದು ಭಾವವು.

ವೇದಗಳು ಪರಮೇಶ್ವರನ ನಿಃಶ್ವಾಸವೆಂದು ಹೇಳುವರು. " **ತಸ್ಯ ಹ ವಾ ಏತಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಸ್ಸಾಮವೇದಃ** " ಎಂದು ಉಪನಿಷದ್ವಾಕ್ಯವಿರುವುದು. ಆದುದರಿಂದ ವೇದಗಳು ಪರಮಾತ್ಮನ ಮುಖದಿಂದಲೇ ನಿಃಶ್ವಾಸರೂಪವಾಗಿ ಹೊರಹೊರಟಿರುವುವು. ಅಲ್ಲದೆ ವೇದಗಳ ಸಹಾಯದಿಂದಲೇ ಪರಮೇಶ್ವರನು ಜಗತ್ತನ್ನು ಸೃಷ್ಟಿಮಾಡಿರುವನು ಮತ್ತು ಈ ಭಗವಂತನೇ ಸಮಸ್ತವಿದ್ಯೆಗಳಿಗೂ ಕಾರಣನು ಎಂದರೆ ಇವನಿಂದಲೇ ಸಮಸ್ತವಿದ್ಯೆಗಳೂ ಶಾಸ್ತ್ರಗಳೂ ಉತ್ಪನ್ನವಾಗಿರುವವು. ಆದುದರಿಂದ ವೇದಭಾಷ್ಯರಚನೆಯ ಕಾಲದಲ್ಲಿ ಸರ್ವವೇದಸ್ವರೂಪನೂ ಸಕಲವಿದ್ಯಾಧೀಶ್ವರನೂ ಆದ ವಿದ್ಯಾತೀರ್ಥನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಮಹೇಶ್ವರನನ್ನು (ಮತ್ತು ಗುರುವನ್ನು) ನಮಸ್ಕರಿಸುತ್ತೇನೆ ಎಂದು ಈಶ್ವರನ ಮತ್ತು ಗುರುವಿನ ನಮಸ್ಕಾರರೂಪವಾದ ಮಂಗಳವನ್ನು ಮಾಡಿ ಗ್ರಂಥಾರಂಭವನ್ನು ಮಾಡುವರು.

**ತತ್ಕಟಾಕ್ಷೇಣ ತದ್ರೂಪಂ ದಧದ್ಬುಕ್ಕಮಹೀಪತಿಃ ।**
**ಆದಿಶನ್ಮಾಧವಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೩ ॥**

ಈ ವೇದಭಾಷ್ಯರಚನೆಯನ್ನು ವಿದ್ಯಾತೀರ್ಥಮಹೇಶ್ವರನ ಅನುಗ್ರಹದಿಂದಲೇ, ಈಶ್ವರಾಂಶಸಂಭೂತನಾದ ಬುಕ್ಕಮಹಾರಾಜನು ವೇದಗಳು ಜನರಿಗೆ ಸುಲಭವಾಗಿ ತಿಳಿಯಲು ಅವುಗಳ ಅರ್ಥವನ್ನು ವಿಶದವಾಗಿ ವಿವರಿಸುವ ಭಾಷ್ಯವನ್ನು ರಚಿಸುವಂತೆ ಮಾಧವಾಚಾರ್ಯರಿಗೆ ಅಪ್ಪಣೆಮಾಡಿದನು.

ಪ್ರಜೆಗಳನ್ನು ಧರ್ಮದಿಂದ ಪಾಲಿಸುವುದು ರಾಜನ ಪ್ರಥಮಕರ್ತವ್ಯವೆಂದು ಶಾಸ್ತ್ರವಿರುವುದಷ್ಟೆ. ಪಾಲನವೆಂದರೆ ಪ್ರಜೆಗಳಿಗೆ ನಾನಾಕಾರಣಗಳಿಂದ ಉಂಟಾಗಬಹುದಾದ ಕಷ್ಟಗಳನ್ನೂ, ಶತ್ರುಭೀತಿಯನ್ನೂ ನಿವಾರಿಸುವುದಲ್ಲದೆ, ಪ್ರಜೆಗಳು ವೇದಶಾಸ್ತ್ರಪುರಾಣೇತಿಹಾಸಗಳ ತತ್ತ್ವಾರ್ಥಗಳನ್ನು ತಿಳಿದುಕೊಂಡು ಸತ್ಕರ್ಮಾಚರಣೆಯಿಂದ ಈಶ್ವರಾನುಗ್ರಹಕ್ಕೆ ಪಾತ್ರರಾಗುವಂತೆ ಮಾಡುವುದೂ ಆಗಿರುವುದು. ಈ ವಿಧವಾದ ಪ್ರಜಾಪಾಲನವನ್ನು ಮಾಡಬೇಕಾದರೆ ಈಶ್ವರಾನುಗ್ರಹವಿಲ್ಲದಿದ್ದರೆ ಸಾಧ್ಯವಿಲ್ಲ ಮತ್ತು "**ನಾವಿಷ್ಣುಃ ಪೃಥಿವೀಪತಿಃ**" ಎಂದರೆ ವಿಷ್ಣುವಿನ ಅಂಶವಿಲ್ಲದವನು ರಾಜನಾಗಲಾರನು ಎಂದು ಸ್ಮೃತಿವಾಕ್ಯವಿರುವುದು. ಜಗತ್ಪಾಲನವು ವಿಷ್ಣುವಿನ ಮುಖ್ಯಕಾರ್ಯವಾದುದರಿಂದ ಪ್ರಜೆಗಳನ್ನು ಪಾಲಿಸುವ ರಾಜನೂ ವಿಷ್ಣುವಿನ ಅಂಶಸಂಭೂತನೇ ಆಗಿರಬೇಕು. ಇಂತಹ ರಾಜನಿಗೆ ಸದ್ಬುದ್ಧಿಯುಂಟಾಗಬೇಕಾದರೆ ಈಶ್ವರನ ಕಟಾಕ್ಷವು ಅವಶ್ಯಕವಾಗಿರಬೇಕು. ಬುಕ್ಕಮಹಾರಾಜನಿಗೆ ಈ ವಿಧವಾದ ಈಶ್ವರಕಟಾಕ್ಷವಿದ್ದುದರಿಂದಲೇ ವೇದಾರ್ಥಪ್ರಕಾಶನವೆಂಬ ಮಹತ್ಕಾರ್ಯವನ್ನು ಮಾಡಲು ಸಮರ್ಥನಾದನು. ಈಶ್ವರಪ್ರೇರಣೆಯಿಲ್ಲದೆ ಮಹಾಕಾರ್ಯಗಳು ನೆರವೇರುವುದು ಸಾಧ್ಯವಿಲ್ಲವೆಂದು ಅಭಿಪ್ರಾಯವು.

**ಸ ಪ್ರಾಹ ನೃಪತಿಂ ರಾಜನ್ ಸಾಯಣಾರ್ಯೋ ಮಮಾನುಜಃ ।**
**ಸರ್ವಂ ವೇತ್ತ್ಯೇಷ ವೇದಾನಾಂ ವ್ಯಾಖ್ಯಾತೃತ್ವೇ ನಿಯುಜ್ಯತಾಂ ॥ ೪ ॥**

ಬುಕ್ಕಮಹಾರಾಜನ ಅಪ್ಪಣೆಯನ್ನು ಕೇಳಿ ಮಾಧವಾಚಾರ್ಯರು ಆ ರಾಜನನ್ನು ಕುರಿತು—ಎಲೈ ರಾಜನೇ, ನನಗೆ ಸಾಯಣನೆಂಬ ಒಬ್ಬ ತಮ್ಮನಿರುವನು. ಅವನು ಸರ್ವಶಾಸ್ತ್ರಪಂಡಿತನು, ವೇದಗಳಿಗೆ ವ್ಯಾಖ್ಯಾನಬರೆಯುವಂತೆ ಅವನನ್ನು ಆಜ್ಞಾಪಿಸಬಹುದು ಎಂದು ಬಿನ್ನವಿಸಿಕೊಳ್ಳಲು,

**ಇತ್ಯುಕ್ತೋ ಮಾಧವಾರ್ಯೇಣ ವೀರಬುಕ್ಕಮಹೀಪತಿಃ ।**
**ಅನ್ವಶಾತ್ ಸಾಯಣಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥ ೫ ॥**

ಅದರಂತೆ ಬುಕ್ಕಮಹಾರಾಜನು ಸಾಯಣಾಚಾರ್ಯರನ್ನು ಕರೆಸಿ ಲೋಕೋಪಕಾರಾರ್ಥವಾಗಿ ವೇದಗಳಿಗೆ ಭಾಷ್ಯವನ್ನು ರಚಿಸಿ ಪ್ರಕಾಶಪಡಿಸುವಂತೆ ಅಪ್ಪಣೆಮಾಡಿದನು (ಕೆಲವು ಪ್ರತಿಗಳಲ್ಲಿ ೪, ೫ನೆ ಶ್ಲೋಕಗಳಿಲ್ಲ)

**ಯೋ ಪೂರ್ವೋತ್ತರಮೀಮಾಂಸೇ ತೇ ವ್ಯಾಖ್ಯಾಯಾತಿಸಂಗ್ರಹಾತ್ ।**
**ಕೃಪಾಲುರ್ಮಾಧವಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ ॥ ೬ ॥**

ಈ ಮಾಧವಾಚಾರ್ಯರೆಂಬುವರು ಪರಮದಯಾಶಾಲಿಗಳು. ಇವರು ವಿದ್ವಜ್ಜನರ ಸೌಕರ್ಯಕ್ಕಾಗಿ ಪೂರ್ವಮೀಮಾಂಸಾ, ಉತ್ತರಮೀಮಾಂಸಾ ದರ್ಶನಗಳನ್ನು ಹಿಂದೆಯೇ ವ್ಯಾಖ್ಯಾನಮಾಡಿರುವರು ಈಗ ವೇದಾರ್ಥವನ್ನೂ ಪ್ರಕಾಶಪಡಿಸಲು ವೇದಗಳಿಗೂ ಭಾಷ್ಯವನ್ನು ರಚಿಸಲು ಉದ್ಯುಕ್ತರಾದರು.

ಪೂರ್ವಮೀಮಾಂಸಾ ಮತ್ತು ಉತ್ತರಮೀಮಾಂಸಾದರ್ಶನಗಳು ಷಡ್ದರ್ಶನಗಳಲ್ಲಿ ಕಡೆಯ ಎರಡು ದರ್ಶನಗಳು. ಅವುಗಳಲ್ಲಿ ಪೂರ್ವಮೀಮಾಂಸವನ್ನು ಜೈಮಿನಿಋಷಿಯೂ ಉತ್ತರಮೀಮಾಂಸಾ ಅಥವಾ ಶಾರೀರಮೀಮಾಂಸಾ ಎಂಬ ವೇದಾಂತ ಸೂತ್ರಗಳನ್ನು ಬಾದರಾಯಣಮುನಿಯೂ ಬರೆದಿರುವರು, ಪೂರ್ವಮೀಮಾಂಸದಲ್ಲಿ ವೇದಾರ್ಥವನ್ನು ತಿಳಿಯಲು ಸಾಧಕವಾದ ಕಾರ್ಯಕಾರಣನಿರೂಪಣೆಯೂ, ವಿಷಯವಿಮರ್ಶೆಯ ಸ್ವರೂಪವೂ ಮೊದಲಾದವು ಪ್ರತಿಪಾದಿಸಲ್ಪಟ್ಟಿರುವವು. ಆದುದರಿಂದ ಈ ಪೂರ್ವಮೀಮಾಂಸಾಶಾಸ್ತ್ರವನ್ನು ಸಾಧನಗ್ರಂಥವೆಂದು ಹೇಳಬಹುದು ಎಂದರೆ ಈ ಗ್ರಂಥದ ಸಹಾಯದಿಂದ ಬೇರೆ ಗ್ರಂಥಗಳಲ್ಲಿರುವ ಗಹನವಾದ ವಿಷಯಗಳನ್ನು ವಿಮರ್ಶೆಯಿಂದ ಸಕಾರಣವಾಗಿ ತಿಳಿದುಕೊಳ್ಳಲು ಸಾಧ್ಯವಾಗುವುದು. ಉತ್ತರಮೀಮಾಂಸಕ್ಕೆ ವೇದಾಂತಸೂತ್ರವೆಂದೂ ಬ್ರಹ್ಮಸೂತ್ರವೆಂದೂ ಬೇರೆಬೇರೆ ಹೆಸರುಗಳಿರುವವು. ಉತ್ತರಮೀಮಾಂಸಾ ಸೂತ್ರದಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷಯಗಳಿಗೆ ವೇದಗಳೂ ಉಪನಿಷತ್ತುಗಳೂ ಮೂಲವು ಮತ್ತು ಈಗ ಪ್ರಸಿದ್ಧವಾಗಿರುವ ವೇದಾಂತಗ್ರಂಥಗಳೆಲ್ಲವೂ ಇದರ ಆಧಾರದಿಂದಲೇ ರಚಿತವಾಗಿರುವವು. ಈ ಸೂತ್ರಗಳಿಗೆ ಮತತ್ರಯಗಳ ಆಚಾರ್ಯರೂ ಇತರ ವೇದಾಂತಿಗಳೂ ವ್ಯಾಖ್ಯಾನಗಳನ್ನು ಬರೆದಿರುವರು ಮತ್ತು ಈ ಗ್ರಂಥವು ಇಂಗ್ಲಿಷ್ ಮೊದಲಾದ ಅನೇಕ ಭಾಷೆಗಳಲ್ಲಿ ಭಾಷಾಂತರವಾಗಿ ಪ್ರಸಿದ್ಧವಾಗಿರುವುದು. ಆದುದರಿಂದ ಷಡ್ದರ್ಶನಗಳಲ್ಲಿ ವೇದಾರ್ಥಕ್ಕೆ ಸಹಾಯಕವಾದ ಪೂರ್ವಮೀಮಾಂಸಕ್ಕೆ ನ್ಯಾಯಮಾಲಾವಿಸ್ತರವೆಂಬ ಭಾಷ್ಯಗ್ರಂಥವನ್ನು ಉತ್ತರಮೀಮಾಂಸಕ್ಕೆ ವೇದಾಂತರಹಸ್ಯಗಳನ್ನೊಳಗೊಂಡ ಪಂಚದಶೀ ಎಂಬ ಗ್ರಂಥವನ್ನೂ ವ್ಯಾಖ್ಯಾನರೂಪದಿಂದ ಬರೆದು ಬಳಿಕ ವೇದಭಾಷ್ಯವನ್ನು ಬರೆಯಲು ಉದ್ಯುಕ್ತರಾದರು ಎಂದರೆ ತಮ್ಮನಾದ ಸಾಯಣಾಚಾರ್ಯರಿಗೆ ವೇದಭಾಷ್ಯವನ್ನು ರಚಿಸುವ ಮಹತ್ಕಾರ್ಯದಲ್ಲಿ ನೆರವಾದರು. ಈ ಕಾರಣದಿಂದ ಸಾಯಣಾಚಾರ್ಯರು ಬರೆದಿರುವ ವೇದಭಾಷ್ಯಗಳಿಗೆ ಮಾಧವೀಯವೇದಾರ್ಥಪ್ರಕಾಶವೆಂಬ ಹೆಸರು ಪ್ರಸಿದ್ಧವಾಗಿರುವುದು.

**ನನು ಕೋಽಯಂ ವೇದೋ ನಾಮ? ಕೇ ವಾ ತಸ್ಯ ವಿಷಯಪ್ರಯೋಜನಸಂಬಂಧಾಧಿಕಾರಿಣಃ? ಕಥಂ ವಾ ತಸ್ಯ ಪ್ರಾಮಾಣ್ಯಂ? ನ ಖಲ್ವೇತಸ್ಮಿನ್ ಸರ್ವಸ್ಮಿನ್ನಸತಿ ವೇದೋ ವ್ಯಾಖ್ಯಾನಯೋಗ್ಯೋ ಭವತಿ । ಅತ್ರೋಚ್ಯತೇ । ಇಷ್ಟಪ್ರಾಪ್ತ್ಯನಿಷ್ಟಪರಿಹಾರಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ । ಅಲೌಕಿಕಪದೇನ ಪ್ರತ್ಯಕ್ಷಾನುಮಾನೇ ವ್ಯಾವರ್ತ್ಯೇತೇ । ಅನುಭೂಯಮಾನಸ್ಯ ಸ್ರಕ್ಚಂದನವನಿತಾದೇರಿಷ್ಟಪ್ರಾಪ್ತಿಹೇತುತ್ವಮೌಷಧಾದೇರನಿಷ್ಟಪರಿಹಾರಹೇತುತ್ವಂ ಚ ಪ್ರತ್ಯಕ್ಷತಃ ಸಿದ್ಧಂ । ಸ್ವೇನಾನುಭವಿಷ್ಯಮಾಣಸ್ಯ ಪುರುಷಾಂತರಗತಸ್ಯ ಚ ತಥಾತ್ವಮನುಮಾನಗಮ್ಯಂ । ಏವಂ ತರ್ಹಿ ಭಾವಿಜನ್ಮಗತಮಪ್ಯನುಮಾನಗಮ್ಯಮಿತಿ ಚೇನ್ನ ತದ್ವಿಶೇಷಸ್ಯಾನವಗಮಾತ್ । ನ ಖಲು ಜ್ಯೋತಿಷ್ಟೋಮಾದಿರಿಷ್ಟಪ್ರಾಪ್ತಿಹೇತುಃ ಕಲಂಜಭಕ್ಷಣವರ್ಜನಾದಿರನಿಷ್ಟಪರಿಹಾರಹೇತುರಿತ್ಯಮುಮರ್ಥಂ ವೇದವ್ಯತಿರೇಕೇಣಾನುಮಾನಸಹಸ್ರೇಣಾಪಿ ತಾರ್ಕಿಕಶಿರೋಮಣಿರಪ್ಯವಗಂತುಂ ಶಕ್ನೋತಿ । ತಸ್ಮಾದಲೌಕಿಕೋಪಾಯಬೋಧಕೋ ವೇದ ಇತಿ ಲಕ್ಷಣಸ್ಯ ನಾತಿವ್ಯಾಪ್ತಿಃ । ಅತ ಏವೋಕ್ತಂ—**

ಈಗ ವೇದಕ್ಕೆ ವ್ಯಾಖ್ಯಾನಮಾಡಲು ಸಾಯಣರು ಉದ್ಯುಕ್ತರಾದರೆಂದು ಮೇಲೆ ಹೇಳಿದೆಯಷ್ಟೆ. ಆದರೆ ವೇದವೆಂದರೇನು? ಯಾವ ಗ್ರಂಥಕ್ಕೆ ಈ ಹೆಸರು ಬಂದಿದೆ? ಈ ವೇದದಲ್ಲಿ ಏನು ಹೇಳಿರುವುದು? ಅದನ್ನು ತಿಳಿದುಕೊಳ್ಳುವುದರಿಂದ ಪ್ರಯೋಜನವೇನು? ಅದನ್ನು ಯಾರು ಕಲಿತುಕೊಳ್ಳಬೇಕು? ಪ್ರತಿಯೊಂದು ಉತ್ಕೃಷ್ಟವಾದ ಗ್ರಂಥವಿಚಾರದಲ್ಲಿಯೂ ಈ ಗುಣಗಳಿರಬೇಕು—ಗ್ರಂಥದಲ್ಲಿ ಹೇಳಿರುವ ಮುಖ್ಯ ವಿಷಯ, ಗ್ರಂಥಪಠನದಿಂದ ಆಗುವ ಪ್ರಯೋಜನ, ಗ್ರಂಥಕ್ಕೂ ವಿಷಯಕ್ಕೂ ಇರುವ ಸಂಬಂಧ, ಇದಕೆ ಅಧಿಕಾರಿ ಯಾರು ಎಂದರೆ ಎಂತಹ ಪುರುಷನು ಇದನ್ನು ಕಲಿಯಬೇಕು ಎಂಬ ನಾಲ್ಕು ಗುಣಗಳಿರಬೇಕು. ಇವುಗಳಿಲ್ಲದಿದ್ದರೆ

ಗ್ರಂಥವನ್ನು ಓದಬೇಕೆನ್ನುವವರಿಗೆ ಅಭಿರುಚಿ ಹುಟ್ಟುವುದಿಲ್ಲ. ಈ ಗುಣಗಳಿಲ್ಲವಮೇಲೆ ಈ ಗ್ರಂಥಕ್ಕೆ ವ್ಯಾಖ್ಯಾನವನ್ನಾದರೂ ಏತಕ್ಕೆ ಮಾಡಬೇಕು ? ಎಂದರೆ ವೇದದ ವಿಚಾರದಲ್ಲಿಯೂ ಈ ಗುಣಗಳಿರುವುವು ಎಂಬುದನ್ನು ಹೇಳುತ್ತೇವೆ. ಪುರುಷನು ಬಯಸುವ ಇಷ್ಟಾರ್ಥವನ್ನು ನೆರವೇರಿಸಿಕೊಡುವುದನ್ನೂ ಮತ್ತು ರೋಗಾದಿ ಅನಿಷ್ಟಪರಿಹಾರವನ್ನು ಮಾಡುವುದನ್ನೂ ಯಾವ ಗ್ರಂಥವು ಅಲೌಕಿಕವಿಧಾನದಿಂದ ತಿಳಿಸುವುದೋ ಅದಕ್ಕೆ ವೇದವೆಂದು ಹೆಸರು. ಇಲ್ಲಿ ಅಲೌಕಿಕವಿಧಾನವೆಂಬ ಶಬ್ದಕ್ಕೆ ವಿವರಣೆಯು ಆವಶ್ಯಕವು. ಒಬ್ಬ ಪುರುಷನು ಬಯಸುವ ಗಂಧಮಾಲ್ಯಾದಿ ಸುಖಸಾಧನಗಳೂ ಸ್ತ್ರೀಸುಖವೂ ಲೋಕವ್ಯವಹಾರದಲ್ಲಿ ಇಷ್ಟಪ್ರಾಪ್ತಿಯೆನಿಸುವುವು. ಅದರಂತೆ ರೋಗಾದಿಗಳನ್ನು ಔಷಧಾದಿಗಳಿಂದ ಪರಿಹಾರ ಮಾಡುವುದೂ ಲೋಕದಲ್ಲಿ ಅನಿಷ್ಟಪರಿಹಾರವೆಂದು ಹೇಳಲ್ಪಡುವುದು. ಈ ವಿಧವಾದ ಇಷ್ಟಪ್ರಾಪ್ತಿಮತ್ತು ಅನಿಷ್ಟಪರಿಹಾರವನ್ನು ನಾವು ಪ್ರತಿದಿನವೂ ಲೋಕವ್ಯವಹಾರದಲ್ಲಿ ಪ್ರತ್ಯಕ್ಷವಾಗಿ ನೋಡುತ್ತಲೇ ಇರುತ್ತೇವೆ. ಇದರಂತೆ ಎಂದರೆ ನಾವು ಅನುಭವಿಸುವಂತೆಯೇ ಇನ್ನೊಬ್ಬ ಪುರುಷನೂ ಇಷ್ಟಪ್ರಾಪ್ತಿ ಅನಿಷ್ಟಪರಿಹಾರವನ್ನು ಅನುಭವಿಸುತ್ತಾನೆಂದು ಊಹಿಸುತ್ತೇವೆ. ಇವಕ್ಕೆ ಅನುಮಾನವೆಂದು ಹೆಸರು. ಆದ್ದರಿಂದ ಲೋಕವ್ಯವಹಾರದಲ್ಲಿ ಪ್ರತ್ಯಕ್ಷ ಅನುಮಾನ (ಕಾರ್ಯದಿಂದ ಕಾರಣವನ್ನು ಊಹಿಸುವುದು) ಗಳಿಂದ ಯಾವ ವಿಷಯವನ್ನು ಬೇಕಾದರೂ ತಿಳಿಯಬಹುದೆಂದಾಯಿತು. ಆದರೆ ಮುಂದಿನ ಜನ್ಮದಲ್ಲಿ ನಾವು ಅನುಭವಿಸುವ ಸುಃಖದುಃಖಾದಿಗಳನ್ನು ಪ್ರತ್ಯಕ್ಷಾನುಮಾನಗಳಿಂದ ತಿಳಿಯಲು ಸಾಧ್ಯವೇ ಎಂದರೆ, ಸಾಧ್ಯವಿಲ್ಲ. ಏಕೆಂದರೆ ಅದು ಮನುಷ್ಯನ ಬುದ್ಧಿಶಕ್ತಿಗೆ ಮೀರಿದ ವಿಷಯವು. ಹೇಗೆಂದರೆ ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಆಚರಿಸುವುದರಿಂದ ಇಷ್ಟಪ್ರಾಪ್ತಿಯೂ ಕಲಂಜಭಕ್ಷಣವನ್ನು ವರ್ಜಿಸುವುದರಿಂದ ಅನಿಷ್ಟಪರಿಹಾರವೂ ಆಗುವುದೆಂಬುದನ್ನು ವೇದದಿಂದ ಮಾತ್ರ ತಿಳಿಯಲು ಸಾಧ್ಯವು. ವೇದದ ಸಹಾಯವಿಲ್ಲದೆ ಈ ವಿಷಯಗಳ ನಿರ್ಣಯವನ್ನು ಎಂತಹ ತರ್ಕಶಾಸ್ತ್ರ ಪಂಡಿತನೂ ಸಾವಿರಾರು ಅನುಮಾನ ಪ್ರಮಾಣಗಳಿಂದಲೂ ತಿಳಿದುಕೊಳ್ಳಲು ಸಮರ್ಥನಾಗುವುದಿಲ್ಲ. ಆದ್ದರಿಂದ ಲೌಕಿಕ ವ್ಯವಹಾರಗಳಿಂದ ಎಂದರೆ ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದ ತಿಳಿಯಲಾಗದ ಉಪಾಯವನ್ನು ಬೋಧಿಸುವ ಗ್ರಂಥವೇ ವೇದವೆಂದು ವೇದಕ್ಕೆ ಲಕ್ಷಣವನ್ನು ಹೇಳಿದರೆ ಅದು ಅತಿವ್ಯಾಪ್ತಿಯಾಗುವುದಿಲ್ಲ. ಈ ವಿಷಯದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡಬಹುದು.

ಲೋಕವ್ಯವಹಾರದಲ್ಲಿ ಕಣ್ಣಿಗೆ ಕಾಣಿಸುವ ವಸ್ತುಗಳೂ ಇಲ್ಲವೆಂದು ಹೇಳಲು ಯಾರಿಗೂ ಸಾಧ್ಯವಿಲ್ಲವಷ್ಟೆ. ಆದುದರಿಂದ ಪ್ರತ್ಯಕ್ಷಪ್ರಮಾಣವನ್ನು ಎಲ್ಲರೂ ಒಪ್ಪಲೇಬೇಕು. ಅನುಮಾನ ಪ್ರಮಾಣವೆಂದರೆ ಕಾರ್ಯಕಾರಣಸಂಬಂಧವು. ಎಂದರೆ ಕಾರ್ಯದಿಂದ ಕಾರಣವನ್ನು ಊಹಿಸುವುದು. ಇದು ಅನುಭವಜನ್ಯವಾದುದು. ನದಿಯಲ್ಲಿ ಪ್ರವಾಹವು ಬಂದಿರುವುದನ್ನು ನೋಡಿದರೆ ಮಳೆಯು ಬಂದಿರಬೇಕೆಂದು ಊಹಿಸುತ್ತೇವೆ. ನಾವಿರುವ ಪ್ರದೇಶದಲ್ಲಿ ಮಳೆಯಿಲ್ಲದಿರಬಹುದು. ಪ್ರವಾಹಮಾತ್ರವಿರುವುದು. ಹೀಗಿದ್ದರೂ ಮಳೆಯಿಲ್ಲದೆ ಪ್ರವಾಹವು ಸಾಧ್ಯವಿಲ್ಲವೆಂಬ ಅನುಭವದಿಂದ ಮೇಲಿನ ಪ್ರದೇಶದಲ್ಲಿ ಮಳೆಯು ಆಗಿರಲೇಬೇಕೆಂದು ದೃಢವಾಗಿ ಹೇಳಬಹುದು. ಈ ರೀತಿಕಾರ್ಯದಿಂದ ಕಾರಣವನ್ನು ಊಹಿಸುವುದಕ್ಕೆ ಅನುಮಾನವೆಂದು (Reasoning) ಹೆಸರು. ಲೋಕವ್ಯವಹಾರದಲ್ಲಿ ಈ ಎರಡು ವಿಧ ಪ್ರಮಾಣಗಳಿಗೂ ಮೀರಿದ ವಿಷಯವನ್ನು ಮನುಷ್ಯರು ತಿಳಿದುಕೊಳ್ಳಲು ಸಾಧ್ಯವಿಲ್ಲ. ಉದಾಹರಣೆಗೆ ಸೃಷ್ಟಿವಿಷಯವನ್ನು ವಿಮರ್ಶಿಸೋಣ. ಸೃಷ್ಟಿಗೆ ಪೂರ್ವದಲ್ಲಿ ಈ ಪ್ರಪಂಚವಿರಲಿಲ್ಲ. ಏನಿತ್ತು ? ಆಗ ಮನುಷ್ಯರಾಗಲಿ ಇತರ ಜೀವಜಂತುಗಳಾಗಲಿ ಇರಲಿಲ್ಲ. ಆದ್ದರಿಂದ ಆ ಕಾಲದಲ್ಲಿ ಏನು ನಡೆಯಿತು, ಸೃಷ್ಟಿಯು ಹೇಗಾಯಿತು, ಈ ಪ್ರಂಚವು ಹೀಗೆ ರೂಪಗೊಂಡಿತು. ಇತ್ಯಾದಿಗಹನವಿಷಯುಗಳನ್ನು ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದ ತಿಳಿಯಲಾಗುವುದಿಲ್ಲ. ವೇದವು ಮಾತ್ರ ಇದನ್ನು ತಿಳಿಸಬಲ್ಲದು. ಮನುಷ್ಯನ ಬುದ್ಧಿಶಕ್ತಿಗೆ ಮೀರಿದ ಅನೇಕ ಗಹನ ವಿಷಯಗಳನ್ನು ತಿಳಿಸುವ ಗ್ರಂಥಕ್ಕೆ ವೇದವೆಂದು ಹೇಳಬಹುದು. ಆದುದರಿಂದಲೇ ವೇದಶಬ್ದಕ್ಕೆ ಜ್ಞಾನ, ತಿಳುವಳಿಕೆ (Knowledge) ಎಂಬರ್ಥವಾಗುವುದು.

ಒಳ್ಳೇದು, ವೇದದಲ್ಲಿ ಇಂತಹ ಗಹನವಿಷಯನಿರೂಪಣೆ ಇರಬಹುದು. ಅದನ್ನು ಒಪ್ಪಿಕೊಳ್ಳೋಣ. ಆದರೆ ಇತರ ಗ್ರಂಥಗಳಲ್ಲಿಯೂ ಅಂತಹ ವಿಷಯ ನಿರೂಪಣೆ ಏಕೆ ಇರಬಾರದು ? ಆ ರೀತಿ ಇದ್ದಲ್ಲಿ ವೇದಕ್ಕೆಮಾತ್ರ ಇರುವ ಪ್ರಾಶಸ್ತ್ಯವೇನು ?

ಇತರ ಗ್ರಂಥಗಳನ್ನೂ ವೇದವೆಂದು ಏತಕ್ಕೆ ಕರೆಯಬಾರದು ? ಎಂದರೆ, ವೇದವು ಅತಿಪ್ರಾಚೀನವಾದುದೆಂದು ಎಲ್ಲರೂ ಒಪ್ಪುತ್ತಾರೆ, ಇತರ ಗ್ರಂಥಗಳು ವೇದವನ್ನನುಸರಿಸಿಯೇ ವಿಷಯನಿರೂಪಣೆ ಮಾಡುವುವು. ವೇದವಿಲ್ಲದಿದ್ದರೆ ಇತರ ಗ್ರಂಥಗಳಿಗೆ ಗಹನ ವಿಷಯಗಳ ನಿರೂಪಣೆಮಾಡುವುದು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ವೇದಕ್ಕೆ ಮಾತ್ರ ಗೌರವ ಸಲ್ಲಬೇಕು.

ಒಂದು ವಸ್ತುವನ್ನು ವಿಮರ್ಶೆಮಾಡುವಾಗ ಅದರಲ್ಲಿರುವ ದೋಷಗಳನ್ನೂ ಬಾಧಕಗಳನ್ನೂ ಎತ್ತಿತೋರಿಸಿ ಇದು ಸರಿಯಲ್ಲ ಎಂದು ವಿಮರ್ಶೆಪೂರ್ವಕ ಎಂದರೆ ಕಾರಣಪೂರ್ವಕವಾಗಿ ತೋರಿಸುವುದಕ್ಕೆ ಪೂರ್ವಪಕ್ಷವೆಂದು ಹೆಸರು. ಅಪರಂತಯೇ ವಸ್ತುವಿನಲ್ಲಿ ಆರೋಪಿಸಿದ ಪೂರ್ವದ ದೋಷಗಳನ್ನೂ ಬಾಧಕಗಳನ್ನೂ ಒಂದೊಂದಾಗಿ ಕಾರಣಪೂರ್ವಕವಾಗಿ ಪರಿಹರಿಸಿ ಆ ವಸ್ತುವು ಈ ರೀತಿಯಾಗಿಯೇ ಇರುವುದೆಂದು ದೃಢಪಡಿಸುವುದಕ್ಕೆ ಸಿದ್ಧಾಂತವೆಂದು ಹೆಸರು. ಶಾಸ್ತ್ರಾದಿಗಳಲ್ಲಿ ಪ್ರತಿಪಾದಿಸಿರುವ ವಿಷಯಗಳನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಿ ಮೊದಲು ಪೂರ್ವಪಕ್ಷವನ್ನು ಮಾಡಿ ಬಳಿಕ ಸಿದ್ಧಾಂತವನ್ನು ಸ್ಥಾಪಿಸುವುದು ರೂಢಿಯಾಗಿದೆ. ಈ ಪೂರ್ವಪಕ್ಷಸಿದ್ಧಾಂತಾದಿಗಳನ್ನು ಒಳಗೊಂಡ ಪ್ರಕರಣಕ್ಕೆ ಅಧಿಕರಣವೆಂದು ಹೆಸರು. ಅದರ ಲಕ್ಷಣವು—

**ವಿಷಯೋಽವಿಷಯಶ್ಚೇತಿ ಪೂರ್ವಪಕ್ಷಸ್ತಥೋತ್ತರಂ ।**
**ನಿರ್ಣಯಶ್ಚೇತಿ ಪಂಚಾಂಗಂ ಶಾಸ್ತ್ರೇಽಧಿಕರಣಂ ಮತಂ ॥**

ಎಂದಿರುವುದು. ಎಂದರೆ ಅಧಿಕರಣದಲ್ಲಿ ವಿಷಯ, ಸಂಶಯ, ಪೂರ್ವಪಕ್ಷ, ಅದಕ್ಕೆ ಉತ್ತರ, ನಿರ್ಣಯ ಅಥವಾ ಸಿದ್ಧಾಂತ ಎಂಬ ಐದು ಪ್ರತ್ಯೇಕಭಾಗಗಳಿರುವುವು. ಅವುಗಳನ್ನೆಲ್ಲಾ ಒಂದೊಂದಾಗಿ ವಿಮರ್ಶಿಸಿ ಕೊನೆಗೆ ಹೀಗೆಯೇ ಸರಿ ಎಂದು ಸಿದ್ಧಾಂತವನ್ನು ಸ್ಥಾಪಿಸುವರು.

ಇತರ ಸಾಧನಗಳಿಂದ ತಿಳಿದುಕೊಳ್ಳಲಾಗದ ವಿಷಯಗಳನ್ನು ತಿಳಿಸುವುದೇ ವೇದದ ಲಕ್ಷಣವೆಂದು ನಾವು ಮೇಲೆಯೇ ಹೇಳಿದ್ದೇವೆ. ಇತರ ಗ್ರಂಥಗಳಿಗೂ ಈ ಶಕ್ತಿಯಿದ್ದರೆ ವೇದಕ್ಕೆ ಅತಿವ್ಯಾಪ್ತಿಯಿದ್ದಂತಾಗಲಿಲ್ಲವೇ ? ಕುದುರೆಯು ಕೆಂಪಾಗಿದೆ ಎಂದರೆ ಕುದುರೆಗೆ ಲಕ್ಷಣವನ್ನು ಹೇಳಿದಂತಾಯಿತೇ? ಇತರ ಅನೇಕ ಪ್ರಾಣಿಗಳೂ ಕೆಂಪಾಗಿರುವವು. ಕೆಂಪಾಗಿರವ ಲಕ್ಷಣವು ಕುದುರೆಯಲ್ಲಿ ಮಾತ್ರವೇ ಅಲ್ಲದೆ ಇತರ ಪ್ರಾಣಿಗಳಲ್ಲಿಯೂ ಇರುವುದರಿಂದ ಈ ಲಕ್ಷಣವು ಅತಿವ್ಯಾಪ್ತಿಯೆನಿಸಿತು. ಒಂದು ವಸ್ತುವಿನಲ್ಲಿರುವ ಲಕ್ಷಣವು ಇತರ ವಸ್ತುಗಳಲ್ಲಿಯೂ ಇದ್ದರೆ ಅದಕ್ಕೆ ಅತಿವ್ಯಾಪ್ತಿಯೆಂದು ಹೆಸರು. ಲಕ್ಷಣವನ್ನು ಹೇಳಬೇಕಾದರೆ ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವ ಎಂಬ ಮೂರು ದೋಷಗಳೂ ಇಲ್ಲದಂತೆ ಲಕ್ಷಣವನ್ನು ಹೇಳಬೇಕು. ಅತಿವ್ಯಾಪ್ತಿಯೆಂದರೆ ನಾವು ಯಾವ ವಸ್ತುವಿನ ಲಕ್ಷಣವನ್ನು ಹೇಳುತ್ತೇವೆಯೋ ಆ ಲಕ್ಷಣವು ಬೇರೆ ವಸ್ತುವಿನಲ್ಲಿಯೂ ಇರುವುದು. ಹೇಗೆಂದರೆ ಹಾಲು ಬೆಳ್ಳಗಿದೆ ಎಂದು ಹಾಲಿಗೆ ಲಕ್ಷಣವನ್ನು ಹೇಳುವುದಾದರೆ ಬೆಳ್ಳಗಿರುವ ಗುಣವು ಸುಣ್ಣವೇ ಮೊದಲಾದ ಇತರ ವಸ್ತುಗಳಲ್ಲಿಯೂ ಇರುವುದರಿಂದ ಅದು ಅತಿವ್ಯಾಪ್ತಿಯೆನಿಸುವುದು, ಅವ್ಯಾಪ್ತಿಯೆಂದರೆ, ನಾವು ಹೇಳುವ ಲಕ್ಷಣವು ಒಂದು ವಸ್ತುವಿನಲ್ಲಿದ್ದರೂ ಅದೇ ವಿಧವಾದ ಮತ್ತೊಂದು ವಸ್ತುವಿನಲ್ಲಿಲ್ಲದಿರುವುದು. ಹೇಗೆಂದರೆ-ಕುದುರೆಯು ಬೆಳ್ಳಗಿದೆ ಎಂದರೆ ಎಲ್ಲಾ ಕುದುರೆಗಳೂ ಬೆಳ್ಳಗಿರುವುದಿಲ್ಲ. ಕೆಲವು ಕೆಂಪಗೂ, ಕೆಲವು ಕಪ್ಪಗೂ ಕೆಲವು ಮಿಶ್ರಬಣ್ಣವುಳ್ಳದ್ದಾಗಿಯೂ ಇರುವುವು. ಆದುದರಿಂದ ಕುದುರೆಯ ವಿಚಾರದಲ್ಲಿ ಬೆಳ್ಳಗಿದೆ ಎಂಬ ಲಕ್ಷಣವು ಅದೇ ಜಾತಿಯ ಇತರ ಕುದುರೆಗಳಲ್ಲಿಲ್ಲದಿರುವುದರಿಂದ ಇಲ್ಲಿ ಅವ್ಯಾಪ್ತಿಯೆಂಬ ದೋಷವು ಪ್ರಾಪ್ತವಾಯಿತು, ಇನ್ನು ಅಸಂಭವವೆಂದರೆ—ಒಂದು ವಸ್ತುವಿನಲ್ಲಿ ಇಲ್ಲದೆ ಇರುವ ಗುಣಗಳನ್ನು ಹೇಳುವುದು. ಹೇಗೆಂದರೆ--ಸಕ್ಕರೆಯು ಕಹಿಯಾಗಿದೆ ಎಂದು ಹೇಳುವುದು. ಸಕ್ಕರೆಯು ಯಾವಾಗಲೂ ಮಧುರವಾಗಿರುವುದರಿಂದ ಕಹಿಯಾಗಿದೆ ಎಂದು ಇಲ್ಲದ ಗುಣವನ್ನು ಹೇಳುವುದು ಸಕ್ಕರೆಯ ಲಕ್ಷಣವನ್ನು ಹೇಳಿದಂತಾಗುವುದಿಲ್ಲ. ಇದಕ್ಕೆ ಅಸಂಭವವೆಂದು ಹೆಸರು. ಒಂದು ವಸ್ತುವನ್ನು ಚೆನ್ನಾಗಿ ತಿಳಿಯುವಂತೆ ಲಕ್ಷಣಗಳಿಂದ ವರ್ಣಿಸಿ ಹೇಳುವಾಗ ಅತಿವ್ಯಾಪ್ತಿ, ಅವ್ಯಾಪ್ತಿ, ಅಸಂಭವಗಳೆಂಬ ಈ ಮೂರು

ದೋಷಗಳೂ ಇಲ್ಲದಿರಬೇಕು. ವೇದಕ್ಕೆ ಲಕ್ಷಣವನ್ನು ಹೇಳುವಾಗ ಮನುಷ್ಯನ ಶಕ್ತಿಗೆ ಮೀರಿದ ವಿಷಯಗಳನ್ನು ತಿಳಿಸುವ ಸಾಮರ್ಥ್ಯವುಳ್ಳ ಗ್ರಂಥವೇ ವೇದವು ಎಂದು ಹೇಳಿದಲ್ಲಿ ಆ ವಿಧವಾದ ಶಕ್ತಿಸಾಮರ್ಥ್ಯಗಳು ಇತರ ಗ್ರಂಥಗಳಲ್ಲಿಲ್ಲದೆ ವೇದಕ್ಕೆ ಮಾತ್ರವಿರುವುದರಿಂದ ವೇದಕ್ಕೆ ಅತಿವ್ಯಾಪ್ತಿದೋಷವಿಲ್ಲದ (ಮತ್ತು ಅವ್ಯಾಪ್ತಿ, ಅಸಂಭವವೆಂಬ ದೋಷಗಳೂ ಇಲ್ಲದ) ಲಕ್ಷಣವನ್ನು ಹೇಳಿದಂತಾಯಿತು. ಆದ್ದರಿಂದಲೇ—

ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿಂದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥

ಸ ಏವೋಪಾಯೋ ವೇದಸ್ಯ ವಿಷಯಸ್ತದ್ಬೋಧ ಏವ ಪ್ರಯೋಜನಂ, ತದ್ಬೋಧಾರ್ಥೀ ಚಾಧಿಕಾರೀ ತೇನ ಸಹೋಪಕಾರ್ಯೋಪಕಾರಕಭಾವಃ ಸಂಬಂಧಃ । ನನ್ವೇವಂ ಸತಿ ಸ್ತ್ರೀಶೂದ್ರಸಹಿತಾಃ ಸರ್ವೇಽಪಿ ವೇದಾಧಿಕಾರಿಣಃ ಸ್ಯುಃ । ಇಷ್ಟಂ ಮೇ ಸ್ಯಾದನಿಷ್ಟಂ ಮಾಭೂದಿತ್ಯಾಶಿಷಃ ಸಾರ್ವಜನೀನತ್ವಾತ್ । ನೈವಂ । ಸ್ತ್ರೀಶೂದ್ರಯೋಃ ಸತ್ಯಪ್ಯುಪಾಯಬೋಧಾರ್ಥಿತ್ವೇ ಹೇತ್ವಂತರೇಣ ವೇದಾಧಿಕಾರಸ್ಯ ಪ್ರತಿಬದ್ಧತ್ವಾತ್ । ಉಪನೀತಸ್ಯೈವಾಧ್ಯಯನಾಧಿಕಾರಂ ಬ್ರುವಚ್ಛಾಸ್ತ್ರಮನುಪನೀತಯೋಃ ಸ್ತ್ರೀಶೂದ್ರಯೋರ್ವೇದಾಧ್ಯಯನಮನಿಷ್ಟಪ್ರಾಪ್ತಿಹೇತುರಿತಿ ಬೋಧಯತಿ । ಕಥಂ ತರ್ಹಿ ತಯೋಸ್ತದುಪಾಯಾವಗಮಃ, ಪುರಾಣಾದಿಭಿರಿತಿ ಬ್ರೂಮಃ । ಅತ ಏವೋಕ್ತಂ—

ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಮುನಿನಾ ಕೃಪಯಾ ಕೃತಂ ॥ ಇತಿ ।

(ಭಾಗವತಪುರಾಣ ೧-೪-೨೫)

ಆದ್ದರಿಂದಲೇ ಪ್ರತ್ಯಕ್ಷಪ್ರಮಾಣದಿಂದಲೂ, ಕಾರ್ಯಕಾರಣವಿಮರ್ಶನೆಮಾಡುವ ಅನುಮಾನ ಪ್ರಮಾಣದಿಂದಲೂ ಯಾವ ವಿಷಯವನ್ನು ತಿಳಿಯಲಾಗುವುದಿಲ್ಲವೋ ಅದನ್ನು ವೇದದಿಂದ ತಿಳಿದುಕೊಳ್ಳಬಹುದು. ಆದ್ದರಿಂದಲೇ ವೇದಕ್ಕೆ ವೇದವೆಂಬ (ಜ್ಞಾನ, ತಿಳುವಳಿಕೆ, knowledge) ಎಂಬ ಹೆಸರು ಬಂದಿದೆ. ನಾವು ಪ್ರತಿಯೊಂದು ಗ್ರಂಥಕ್ಕೂ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಎಂಬ ನಾಲ್ಕು ಗುಣಗಳಿರಬೇಕೆಂದು ಹಿಂದೆಯೇ ಹೇಳಿರುವೆವಷ್ಟೆ. ವೇದವಿಷಯದಲ್ಲಿ ಈ ವಿಧವಾದ ಲಕ್ಷಣಗಳು ಇರುವವು ಎಂಬುದನ್ನು ಈಗ ತಿಳಿಸುತ್ತೇವೆ. ವೇದದ ಈ ವಿಧವಾದ ಶಕ್ತಿಸಾಮರ್ಥ್ಯವನ್ನು ತಿಳಿಸುವುದೇ ವೇದದಲ್ಲಿ ಪ್ರತಿಪಾದಿತವಾಗಿರುವ ವಿಷಯವು; ಅದನ್ನು ತಿಳಿದುಕೊಳ್ಳುವುದೇ ವೇದಾಭ್ಯಾಸದ ಪ್ರಯೋಜನವು; ಅದನ್ನು ತಿಳಿದುಕೊಳ್ಳಬೇಕೆಂದು ಅಪೇಕ್ಷಿಸುವವನೇ ವೇದಾರ್ಥವನ್ನು ತಿಳಿಯಲು ಅರ್ಹನಾದ ಅಧಿಕಾರಿಯು; ಈ ಜ್ಞಾನದಿಂದ ಉಪಕಾರವನ್ನು ಹೊಂದುವ ಅಧಿಕಾರಿಗೂ ವಿಷಯಕ್ಕೆ ಇರುವ ಸಹಕಾರವೇ ಸಂಬಂಧವು.

ಈಗ ಇಲ್ಲಿ ಇನ್ನೊಂದು ಸಂಶಯವು ತಲೆದೋರುವುದು. ವೇದಾರ್ಥವನ್ನು ತಿಳಿಯಲು ಇಚ್ಛಿಸುವ ಪುರುಷನೇ ವೇದಕ್ಕೆ ಅಧಿಕಾರಿಯು ಎಂದು ಹೇಳಿದರೆ ಸ್ತ್ರೀಶೂದ್ರರಾದಿಯಾಗಿ ಸರ್ವರೂ ವೇದಾರ್ಥವನ್ನು ತಿಳಿಯಲು ಇಷ್ಟಪಡುವುದು ಸಹಜವೇ ಆಗಿದೆ. ಏಕೆಂದರೆ – ನನಗೆ ಯಾವಾಗಲೂ ಒಳ್ಳೆಯದೇ ಆಗಬೇಕು, ಕೆಟ್ಟದ್ದು ಎಂದಿಗೂ ಆಗಬಾರದು ಎಂಬ ಆಶೆಯೇ ಸರ್ವರಿಗೂ ಇರುವುದರಿಂದ ಸ್ತ್ರೀಶೂದ್ರರಾದಿಯಾಗಿ ಸರ್ವರೂ ತಮಗೆ ಒಳ್ಳೆಯದಾಗಬೇಕೆಂಬ ಅಭಿಲಾಷೆಯಿಂದ

ವೇದಾಧ್ಯಯನವನ್ನು ಮಾಡಲು ಬಯಸುತ್ತಾರೆ. ಆದರೆ ಅದು ಸಾಧ್ಯವೇ, ಎಂದಿಗೂ ಇಲ್ಲ ಏಕೆಂದರೆ, ಸ್ತ್ರೀಶೂದ್ರರಿಗೆ ಉಪನಯನಾಧಿಕಾರವಿಲ್ಲದ್ದರಿಂದ ವೇದಾಧಿಕಾರವು ಇರುವುದಿಲ್ಲ ಎಂದು ಹೇಳಬೇಕಾಗುವುದು. ಆದರೆ ವೇದಾರ್ಥವನ್ನು ತಿಳಿದು ಕೊಳ್ಳಲು ಸ್ತ್ರೀಶೂದ್ರರಿಗೆ ಅಧಿಕಾರವೇ ಇಲ್ಲವೇ ಎಂದರೆ ಹಾಗಲ್ಲ. ಅವರೂ ವೇದದಲ್ಲಿ ಉಕ್ತವಾಗಿರುವ ಗಹನವಿಚಾರಗಳನ್ನು ತಿಳಿದುಕೊಳ್ಳಲು ಅರ್ಹರಾಗಿರುತ್ತಾರೆ. ಆದರೆ ವೇದಾಧ್ಯಯನಮಾಡುವುದರಿಂದಲೇ ವೇದಾರ್ಥವನ್ನು ತಿಳಿದುಕೊಳ್ಳಬೇಕಾಗಿಲ್ಲ. ಅದಕ್ಕೆ ಬೇರೆ ಉಪಾಯವಿದೆ. ವೇದಾರ್ಥಗಳನ್ನು ಸರ್ವರಿಗೂ ವಿಶದವಾಗಿ ತಿಳಿಯುವಂತೆ ಪುರಾಣಾದಿಗಳಲ್ಲಿ ವಿವರಿಸಲ್ಪಟ್ಟಿರುವುದು. ಈ ವಿಷಯದಲ್ಲಿ

**ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಇತಿ ಭಾರತಮಾಖ್ಯಾನಂ ಮುನಿನಾ ಕೃಪಯಾ ಕೃತಂ ॥ ಇತಿ ।**

ಸ್ತ್ರೀಶೂದ್ರರಿಗೂ ಇತರ ಅರ್ಹರಲ್ಲದ ದ್ವಿಜಾತಿಗಳಿಗೂ ಋಗ್ವೇದಾದಿ ಮೂರು ವೇದಗಳನ್ನು ಅಧ್ಯಯನಮಾಡಿ ಕಲಿಯಲು ಮತ್ತು ಅರ್ಥವನ್ನು ತಿಳಿದುಕೊಳ್ಳಲು ಸಾಧ್ಯವಲ್ಲದ್ದರಿಂದ ಪರಮದಯಾಳುವಾದ ವ್ಯಾಸಮಹರ್ಷಿಯು ಸರ್ವವೇದಶಾಸ್ತ್ರಗಳ ಸಾರವನ್ನೆಲ್ಲಾ ಒಳಗೊಂಡ ಭಾರತವೆಂಬ ಮಹಾಗ್ರಂಥವನ್ನು ರಚಿಸಿರುವರು (ಇದರಲ್ಲಿ ಭಗವದ್ಗೀತೆಯೂ ಸೇರಿದೆ) ಈ ಗ್ರಂಥಪಠನವನ್ನು ಸರ್ವರೂ ಮಾಡಬಹುದಾಗಿದೆ. ಕಷ್ಟಸಾಧ್ಯವಾದ ವೇದಾಧ್ಯಯನವನ್ನು ಮಾಡದೆ ಸ್ತ್ರೀಶೂದ್ರಾದಿಗಳು ಭಾರತ ಗ್ರಂಥದ ಅರ್ಥವನ್ನು ತಿಳಿದುಕೊಳ್ಳುವುದರಿಂದ ಸಮಸ್ತ ವೇದಾರ್ಥವನ್ನೂ ತಿಳಿದಂತಾಗುವುದು.

**ತಸ್ಮಾದುಪನೀತೈರೇವ ತ್ರೈವರ್ಣಿಕೈರ್ವೇದಸ್ಯ ಸಂಬಂಧಃ । ತತ್ಪ್ರಾಮಾಣ್ಯಂ ತು ಬೋಧಕತ್ವಾತ್ಸ್ವತ ಏವ ಸಿದ್ಧಂ । ಪೌರುಷೇಯವಾಕ್ಯಂ ತು ಬೋಧಕಮಪಿ ಸದ್ಭ್ರಾಂತಿಮೂಲತ್ವ-ಸಂಭಾವನಯಾ ತತ್ಪರಿಹಾರಾಯ ಮೂಲಪ್ರಮಾಣಮಪೇಕ್ಷ್ಯೈವ ಪ್ರಮಾಣಂ । ನ ತು ವೇದೋ ಮೂಲಪ್ರಮಾಣಮಪೇಕ್ಷತೇ ತಸ್ಯ ನಿತ್ಯತ್ವೇನ ಕರ್ತೃದೋಷಶಂಕಾಯಾ ಅನುದಯಾತ್ । ಏತದೇವ ಜೈಮಿನಿನಾ ಸೂತ್ರಿತಂ—" ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್ "**

(ಜೈ. ಸೂ. ೧-೧-೫)

ಆದ್ದರಿಂದ ಬ್ರಹ್ಮಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರಲ್ಲಿ ಉಪನಯನಸಂಸ್ಕಾರ ಹೊಂದಿದ ಪುರುಷರಿಗೆ ಮಾತ್ರವೇ ವೇದದ ಸಂಬಂಧವಿರುವುದು ಎಂದರೆ ವೇದಾಧ್ಯಯನ ಮಾಡುವ ಅಧಿಕಾರವಿರುವುದು. ವೇದದಲ್ಲಿ ಹೇಳಿರುವ ವಿಷಯವು ಪ್ರಮಾಣವೇ (ಸತ್ಯವೇ) ಅಲ್ಲವೇ ಎಂಬುದು ಸ್ವತಸ್ಸಿದ್ಧವಾಗಿರುವುದು ಎಂದರೆ ವೇದದಲ್ಲಿಯೇ ಹೇಳಿರುವುದರಿಂದ ಅದನ್ನು ಪ್ರಮಾಣವೆಂದು ನಂಬಲೇಬೇಕು. ಆ ವಿಷಯವು ಮತ್ತೆಲ್ಲಿಯೂ ಹೇಳಿರುವುದಿಲ್ಲ ಅಥವಾ ಅದಕ್ಕಿಂತ ಪ್ರಾಚೀನ ಗ್ರಂಥದಲ್ಲಿಯೂ ಹೇಳಿರುವುದಿಲ್ಲ (ಅದಕ್ಕಿಂತ ಪ್ರಾಚೀನ ಗ್ರಂಥವೇ ಇಲ್ಲ). ಆದರೆ ಪುರುಷರಚಿತವಾದ ಗ್ರಂಥಗಳಲ್ಲಿ ಹೇಳಿರುವುದನ್ನು ಹಾಗೆಯೇ ನಂಬಬೇಕೇ ಎಂದರೆ ನಂಬುವುದಕ್ಕಾಗುವುದಿಲ್ಲ. ಏಕೆಂದರೆ ಪುರುಷರಚಿತ ಗ್ರಂಥಗಳಲ್ಲಿ ಹೇಳಿರುವ ವಿಷಯಗಳು ಅನುಮಾನಾಸ್ಪದವಾಗಿರುವವು. ಅನುಮಾನಪರಿಹಾರಕ್ಕೆ ಬೇರೆ ಗ್ರಂಥಗಳ ಪ್ರಮಾಣವು ಅವಶ್ಯಕವಾಗಿರುವುದು. ಉದಾಹರಣೆಗೆ - ಒಬ್ಬ ಪುರುಷನು ಸಾವಿರ ವರ್ಷಗಳವರೆಗೆ ಜೀವಿಸಿದ್ದನು ಎಂದು ಒಂದು ಪುರುಷರಚಿತ ಗ್ರಂಥದಲ್ಲಿ ಇದೆಯೆಂದು ಇಟ್ಟುಕೊಳ್ಳೋಣ. ಲೋಕವ್ಯವಹಾರದಲ್ಲಿ ಒಬ್ಬ ಪುರುಷನು ಸಾವಿರವರ್ಷಗಳವರೆಗೆ ಜೀವಿಸಿರುವುದು ಎಲ್ಲಿಯೂ ಎಂದರೆ ನಮ್ಮ ಅನುಭವದಲ್ಲಿ ಕಂಡುಬಂದಿಲ್ಲ. ಆದ್ದರಿಂದ ಅದನ್ನು ನಂಬುವುದಕ್ಕಾಗುವುದಿಲ್ಲ. ಅದಕ್ಕೆ ಬೇರೆ ಪ್ರಮಾಣವು ಬೇಕು ಎಂದರೆ ಬೇರೆ ಗ್ರಂಥಗಳಲ್ಲಿ ಅಂತಹ ವಿಷಯವನ್ನು ತಿಳಿಸಿರಬೇಕು ಮತ್ತು ಆ ಗ್ರಂಥವು ಪ್ರಮಾಣಯೋಗ್ಯವಾಗಿರಬೇಕು. ಹಾಗಿದ್ದರೆ ಮಾತ್ರ ಅದನ್ನು ನಂಬಬಹುದು. ಆದ್ದರಿಂದ ಪುರುಷರಚಿತ

ಗ್ರಂಥಗಳ ವಿಷಯದಲ್ಲಿ ಬೇರೆ ಗ್ರಂಥಗಳ ಪ್ರಮಾಣವು ಅವಶ್ಯಕವೆಂದಾಯಿತು. ಅಪೌರುಷೇಯವಾದ ಎಂದರೆ ಪುರುಷನಿರ್ಮಿತ ವಲ್ಲದ ವೇದವಿಷಯದಲ್ಲಿ ವೇದದಲ್ಲಿ ಹೇಳಿರುವುದಷ್ಟೇ ಸಾಕು ಬೇರೆ ಪ್ರಮಾಣವು ಅವಶ್ಯಕವಿಲ್ಲ. ಏಕೆಂದರೆ ವೇದಕ್ಕೆ ಕರ್ತೃವಿಲ್ಲ. ಆದಕ್ಕೆ ನಾಶವಿಲ್ಲ ಎಂದರೆ ಯಾವಾಗಲೂ ಇರುವುದು. ಇದೇ ವಿಷಯವನ್ನೇ ಜೈಮಿನಿ ಮಹರ್ಷಿಯು—"**ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್**"—"ವೇದಕ್ಕೆ ಎಂದರೆ ವೇದದಲ್ಲಿ ಹೇಳಿರುವ ವಿಷಯಸಮರ್ಥನೆಗೆ ಬೇರೆ ಪ್ರಮಾಣಗಳ ಅವಶ್ಯಕತೆ ಇಲ್ಲವೆಂದು ಬಾದರಾಯಣ ಮುನಿಗಳ ಮತ" ಎಂದು ಹೇಳಿದ್ದಾರೆ.

**ನನು ವೇದೋಽಪಿ ಕಾಲಿದಾಸಾದಿವಾಕ್ಯವತ್ಪೌರುಷೇಯ ಏವ ಬ್ರಹ್ಮಕಾರ್ಯತ್ವಶ್ರವಣಾತ್**
**...................ಋಚಃ ಸಾಮಾನಿ ಜಜ್ಞಿರೇ ।**
**ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥**

(ಋ. ಸಂ. ೧೦-೯೦-೯)

**ಇತಿ ಹಿ ಶ್ರುತೇಃ । ಅತ ಏವ ಭಗವಾನ್ಬಾದರಾಯಣಃ—"ಶಾಸ್ತ್ರಯೋನಿತ್ವಾತ್" । (ವೇ. ಸೂ. ೧-೧-೩) ಇತಿ ಸೂತ್ರೇಣ ಬ್ರಹ್ಮಣೋ ವೇದಕಾರಣತ್ವಮವೋಚತ್ । ನೈವಂ । ಶ್ರುತಿಸ್ಮೃತಿಭ್ಯಾಂ ನಿತ್ಯತ್ವಾವಗಮಾತ್ । ವಾಚಾ ವಿರೂಪ ನಿತ್ಯಯಾ । ಇತಿ ಶ್ರುತಿಃ । ಅನಾದಿ ನಿಧನಾನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ಇತಿ ಸ್ಮೃತಿಃ । ಬಾದರಾಯಣೋಽಪಿ ದೇವತಾಧಿಕ- ರಣೇ ಸೂತ್ರಯಾಮಾಸ—ಅತ ಏವ ಚ ನಿತ್ಯತ್ವಂ ಇತಿ । ತರ್ಹಿ ಪರಸ್ಪರವಿರೋಧ ಇತಿ ಚೇನ್ನ ನಿತ್ಯತ್ವಸ್ಯ ವ್ಯಾವಹಾರಿಕತ್ವಾತ್ । ಸೃಷ್ಟೇರೂರ್ಧ್ವಂ ಸಂಹಾರಾತ್ಪೂರ್ವೋ ವ್ಯವಹಾರಕಾಲಸ್ತಸ್ಮಿ- ನ್ನುತ್ಪತ್ತಿವಿನಾಶಾದರ್ಶನಾತ್ । ಕಲಾಕಾಷ್ಠಾದಯೋ ಯಥಾ ನಿತ್ಯಾ ಏವಂ ವೇದೋಽಪಿ ವ್ಯವ ಹಾರೇ ಕಾಲಿದಾಸವಾಕ್ಯವತ್ಪುರುಷವಿರಚಿತತ್ವಾಭಾವಾನ್ನಿತ್ಯಃ । ಆದಿಸೃಷ್ಟೌ ತು ಕಲಾಕಾಷ್ಠಾ ದಿವದ್ವೇದೋತ್ಪತ್ತಿರಾಮ್ನಾಯತೇ । ಅತೋ ವಿಷಯಭೇದಾನ್ನ ಪರಸ್ಪರವಿರೋಧಃ । ಬ್ರಹ್ಮಣೋ ನಿರ್ದೋಷತ್ವೇನ ವೇದಸ್ಯ ಕರ್ತೃದೋಷಾಸಂಭವಾತ್ಸ್ವತಃಸಿದ್ಧಂ ಪ್ರಾಮಾಣ್ಯಂ ತದವಸ್ಥಂ । ತಸ್ಮಾಲ್ಲಕ್ಷಣಪ್ರಮಾಣಸದ್ಭಾವಾದ್ವಿಷಯಪ್ರಯೋಜನಸಂಬಂಧಾಧಿಕಾರಿಸದ್ಭಾವಾತ್ಪ್ರಾಮಾ ಣ್ಯಸ್ಯ ಸುಸ್ಥಿತತ್ವಾದ್ವೇದೋ ವ್ಯಾಖ್ಯಾತವ್ಯ ಏವ ।**

ಇದೂ ಅಲ್ಲದೆ ಕಾಲಿದಾಸಾದಿಪುರುಷರಚಿತ ಗ್ರಂಥಗಳಂತೆ ವೇದವೂ ಸಹ ಪುರುಷ ರಚಿತವೇ ಆಗಿದೆ. ಏಕೆಂದರೆ ಬ್ರಹ್ಮನೆಂಬ ಒಬ್ಬ ಪುರುಷನು ಇದನ್ನು ರಚಿಸಿದನೆಂದು ವೇದದಲ್ಲಿಯೇ ಕಂಡುಬರುವುದು—**ಋಚಸ್ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ।** (ಋ.ಸಂ. ೧೦-೯೦-೯) ಎಂಬ ಋಕ್ಕಿನಲ್ಲಿ ತಸ್ಮಾತ್ ಎಂದರೆ ಆ ವೇದಪುರುಷ ನಿಂದ ಋಕ್ಕುಗಳೂ (ಋಗ್ವೇದವೂ) ಸಾಮಮಂತ್ರಗಳೂ (ಸಾಮವೇದವೂ ಉತ್ಪನ್ನವಾದವು ಮತ್ತು ಆ ವೇದಪುರುಷನಿಂದಲೇ (ಎಂದರೆ ಬ್ರಹ್ಮನಿಂದಲೇ) ಛಂದಸ್ಸುಗಳೂ, ಯಜುರ್ವೇದ ಮಂತ್ರಗಳೂ ಉತ್ಪನ್ನವಾದವು ಎಂದಿದೆ. ಬ್ರಹ್ಮನೆಂಬ ಒಬ್ಬ ಪುರುಷನೇ ಈ ವೇದಗಳನ್ನು ರಚಿಸಿದನು ಎಂದು ವೇದಮಂತ್ರವೇ ಹೇಳುವುದರಿಂದ ವೇದಗಳು ಪುರುಷನಿರ್ಮಿತವಾದವು ಎಂದು ಏಕೆ ಹೇಳಬಾರದು? ಇದಲ್ಲದೆ ಬಾದರಾಯಣಮುನಿಯೂ ಸಹ ತಮ್ಮ ಬ್ರಹ್ಮಸೂತ್ರದಲ್ಲಿ—"**ಶಾಸ್ತ್ರಯೋನಿತ್ವಾತ್**" (ಬ್ರ.ಸೂ. ೧-೧-೩) ಎಂದರೆ ಬ್ರಹ್ಮನೇ (ಬ್ರಹ್ಮನೆಂಬ ಪುರುಷನೇ) ಸಮಸ್ತಶಾಸ್ತ್ರಗಳಿಗೂ ಮೂಲವು ಎಂದು ಹೇಳಿರುವುದರಿಂದ ವೇದವು ಪುರುಷನಿರ್ಮಿತವಲ್ಲದೆ ಮತ್ತೇನು? ಎಂದು ಕೇಳಬೇಕಾಗುವುದು. ಆದರೆ ವಸ್ತುಸ್ಥಿತಿಯು ಹಾಗಲ್ಲ. ಶ್ರುತಿಸ್ಮೃತಿ

ಗಳಲ್ಲಿಯೇ ಎಂದರೆ ವೇದ ಮತ್ತು ಇತರ ಧರ್ಮಶಾಸ್ತ್ರಗಳಲ್ಲಿಯೇ ವೇದವು ನಿತ್ಯವೆಂದೂ (ಯಾವಾಗಲೂ ಇರುವುದೆಂದೂ) ಅವು ಪುರುಷರಚಿತವಲ್ಲವೆಂದೂ ತಿಳಿಯಬರುವುದು. ಋಗ್ವೇದದ—“ **ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ । ವೃಷ್ಣೇ ಚೋದಸ್ವ ಸುಷ್ಟುತಿಂ ॥**(ಋ.ಸಂ. ೮-೭೫-೬) ವಿರೂಪಸಂಜ್ಞಕನಾದ ಎಲೈ ಋಷಿಯೇ, ವಿಸ್ತೃತಪ್ರಕಾಶವುಳ್ಳವನೂ, ಇಷ್ಟಾರ್ಥಪ್ರದನೂ ಆದ ಅಗ್ನಿಯನ್ನುದ್ದೇಶಿಸಿ ನಿತ್ಯವಾದುದೂ ಮಂತ್ರರೂಪವಾದುದೂ ಆದ ವಾಕ್ಕಿನಿಂದ ಸ್ತುತಿಯನ್ನು ಪಠಿಸು ” ಎಂಬ ಋಕ್ಕಿನಲ್ಲಿ ಮಂತ್ರರೂಪವಾದ ವೇದವಾಕ್ಯವು ನಿತ್ಯವಾದುದೆಂದು ಸ್ಪಷ್ಟವಾಗಿ ಹೇಳಿದೆ, ಮತ್ತು ಬ್ರಹ್ಮಸೂತ್ರದ ಶಂಕರ ಭಾಷ್ಯದಲ್ಲಿ—

> **ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।**
> **ಆದೌ ವೇದಮಯೀ ದಿವ್ಯಾ ಯತಃ ಸರ್ವಾಃ ಪ್ರವೃತ್ತಯಃ ॥**

(ಶಾಂಕರ ಸೂ.ಭಾ.— ೧-೩-೨೮) ಎಂದು ಹೇಳಿದೆ. ಎಂದರೆ ಎಲ್ಲಕ್ಕಿಂತ ಮೊದಲು ಎಂದರೆ ಸೃಷ್ಟಿಗೆ ಪೂರ್ವದಲ್ಲಿ ಸ್ವಯಂಭುವಾದ ಪರಮಾತ್ಮನಿಂದಲೇ ಆದಿ ಮತ್ತು ಅಂತ್ಯವಿಲ್ಲದ ಎಂದರೆ ಯಾವಾಗಲೂ ನಾಶವಾಗದ, ಆದ್ದರಿಂದಲೇ ನಿತ್ಯವೆಂದು ಹೇಳಲ್ಪಡುವ ವೇದರೂಪವಾದ ವಾಕ್ಯವು ಹೊರಹೊರಟಿತು. ಈ ವೇದವಾಕ್ಯವೇ ಮುಂದೆ ನಡೆಯುವ ಸಮಸ್ತಪ್ರವೃತ್ತಿಗಳಿಗೂ ಎಂದರೆ ಸೃಷ್ಟ್ಯಾದಿಕಾರ್ಯಗಳಿಗೂ ಮೂಲಭೂತವಾಯಿತು ಎಂದು ಇದರ ಅರ್ಥವು. ಈರೀತಿ ಶ್ರುತಿಸ್ಮೃತಿವಾಕ್ಯಗಳಲ್ಲಿಯೇ ವೇದವು ನಿತ್ಯವೆಂದೂ ಅಪೌರುಷೇಯ ವೆಂದೂ ಹೇಳಲಾಗಿದೆ. ಹಾಗಾದರೆ ಬಾದರಾಯಣಮುನಿಯು ತಮ್ಮ ಬ್ರಹ್ಮಸೂತ್ರದ ದೇವತಾಧಿಕರಣವೆಂಬ ಭಾಗದಲ್ಲಿ—“**ಅತ ಏವ ಚ ನಿತ್ಯತ್ವಂ**”(ಬ್ರ.ಸೂ. ೧-೩-೨೯) ಆದ್ದರಿಂದಲೇ ಬ್ರಹ್ಮನಿಗೆ ನಿತ್ಯತ್ವವು (ನಾಶರಾಹಿತ್ಯವು) ಸಿದ್ಧಿಸುವುದು ಎಂದು ಹೇಳಿರುವರಲ್ಲಾ. ಹಿಂದೆ ಹೇಳಿದ “**ಶಾಸ್ತ್ರಯೋನಿತ್ವಾತ್**” ಎಂಬ ಸೂತ್ರಕ್ಕೆ ಈಗ ಹೇಳಿದ “ **ಅತ ಏವ ಚ ನಿತ್ಯತ್ವಂ** ” ಎಂಬ ಸೂತ್ರಕ್ಕೂ ಪರಸ್ಪರ ವಿರೋಧವುಂಟಾಯಿತು. ಒಂದುಕಡೆ ಬ್ರಹ್ಮನು ಪುರುಷನೆಂದು ಒಪ್ಪಿ ಮತ್ತೊಂದು ಕಡೆ ಅವನು ನಿತ್ಯನೆಂದು ಹೇಳುವುದು ಪರಸ್ಪರ ವಿರುದ್ಧವು. ಇದು ಹೇಗೆ ಸಮಂಜಸವು? ಎಂದರೆ, ಪುರುಷ ಸೂಕ್ತದಲ್ಲಿ ಹೇಳಿರುವ ಪುರುಷನೆಂಬ ಪದಕ್ಕೆ ಸಾಕ್ಷಾತ್ ಬ್ರಹ್ಮನೆಂದೇ ಅರ್ಥವು, ಸಾಮಾನ್ಯಪುರುಷನಲ್ಲ. ಅವನು ನಾಶರಹಿತನು ಎಂದರೆ ಯಾವಾಗಲೂ ಇರತಕ್ಕವನು, ಆದ್ಯಂತರಹಿತನು. ಇಂತಹ ಬ್ರಹ್ಮನಿಂದ ಹೊರಹೊರಟ ವೇದರೂಪದ ವಾಕ್ಯವೂ ನಿತ್ಯವೇ ಎಂದರೆ ನಾಶರಹಿತವಾದದ್ದೇ ಆಗಿರುವುದು ಎಂದು ಇದಕ್ಕೆ ಸಮಾಧಾನವು. ಇದಲ್ಲದೆ ಇದಕ್ಕೆ ಮತ್ತೊಂದು ವಿಧವಾಗಿಯೂ ಸಮಾಧಾನವನ್ನು ಹೇಳಬಹುದು. ನಿತ್ಯ ಎಂಬ ಶಬ್ದಕ್ಕೆ ವ್ಯವಹಾರದಲ್ಲಿ ಮತ್ತೊಂದರ್ಥವಿರುವುದು. ಪ್ರಪಂಚ ಸೃಷ್ಟಿಯಾದನಂತರ ಪುನಃ ಅದು ನಾಶ (ಲಯ) ವಾಗುವವರೆಗೂ ಇರುವ ಕಾಲಕ್ಕೆ ವ್ಯವಹಾರಕಾಲವೆಂದು ಹೆಸರು. ಈ ವ್ಯವಹಾರ ಕಾಲದಲ್ಲಿ ಉತ್ಪತ್ತಿವಿನಾಶಗಳೊಂದೂ ಇರುವುದಿಲ್ಲ. ಲೋಕವ್ಯವಹಾರ ಮಾತ್ರ ನಡೆಯುತ್ತಿರುವುದು. ಕಾಲ, ಆಕಾಶ ಮೊದಲಾದವು ಯಾವರೀತಿ ನಿತ್ಯವೋ ಅದರಂತೆ ವೇದವೂ ವ್ಯವಹಾರಕಾಲದಲ್ಲಿ ನಿತ್ಯವೇ ಆಗಿದೆ. (ಕೆಲವು ಪ್ರತಿಗಳಲ್ಲಿ ಕಲಾಕಾಷ್ಠಾದಯಃ ಎಂಬ ಶಬ್ದವಿದೆ. ಅಲ್ಲಿ ಕಾಲ ಮತ್ತು ದಿಕ್ಕುಗಳು ಎಂದರ್ಥಮಾಡಬೇಕು. ಒಟ್ಟಿನಲ್ಲಿ ಎರಡರ್ಥವೂ ಒಂದೇ). ಕಾಳಿದಾಸಾದಿ ಪುರುಷರಚಿತವಾಕ್ಯಗಳು ಕೆಲವು ಕಾಲವಿದ್ದು ಅನಂತರ ನಾಶವಾಗುವವು. ಆದರೆ ವೇದವು ಯಾವಾಗಲೂ ಎಂದರೆ ವ್ಯವಹಾರಕಾಲ ಪೂರ್ತಿಯಾಗಿರುವವರೆಗೂ ಇರುವುದರಿಂದ ಇದನ್ನು ನಿತ್ಯವೆಂದು ಹೇಳಬೇಕು. ಆದಿಸೃಷ್ಟಿಯಲ್ಲಿ ಕಾಲ ಮತ್ತು ದಿಕ್ಕುಗಳು (Time and Space) ಸೃಷ್ಟಿಸಲ್ಪಟ್ಟಂತೆ ವೇದವೂ ಬ್ರಹ್ಮನಿಂದ ಉತ್ಪನ್ನವಾಯಿತು. ವ್ಯವಹಾರಕಾಲವಿರುವವರೆಗೂ ಇವೆಲ್ಲವೂ ಇದ್ದೇ ಇರುವವು. ವ್ಯವಹಾರಕಾಲಪೂರ್ತ ಇರುವ ವಸ್ತು ಅಥವಾ ವಿಷಯಗಳೆಲ್ಲವೂ ನಿತ್ಯವು. ಈರೀತಿ ಇರುವುದರಿಂದ ಪರಸ್ಪರ ವಿರೋಧಕ್ಕೆ ಅವಕಾಶವಿರುವುದಿಲ್ಲ. ಪರಬ್ರಹ್ಮನು ನಿರ್ದೋಷನೂ, ನಿತ್ಯನೂ ಆಗಿರುವುದರಿಂದ ಬ್ರಹ್ಮನ ಅಂಶವೇ ಆದ ವೇದವೂ ಸ್ವಭಾವಸಿದ್ಧವಾಗಿಯೇ ಬ್ರಹ್ಮನಂತೆಯೇ ದೋಷರಹಿತವೂ ಪ್ರಮಾಣ ಭೂತವೂ ಆಗಿರುವುದು. ಆದ್ದರಿಂದ ವೇದಪ್ರಾಮಾಣ್ಯವು ಸ್ವಯಂಸಿದ್ಧವು. ಈರೀತಿ ವೇದಕ್ಕೆ ಪ್ರಾಮಾಣ್ಯವೂ, ವಿಷಯ

ಪ್ರಯೋಜನ ಸಂಬಂಧಾಧಿಕಾರಿಗಳೆಂಬ ವಿಷಯಚತುಷ್ಟಯಗಳೂ ಇರುವುದರಿಂದ ಈ ಗ್ರಂಥಕ್ಕೆ ವ್ಯಾಖ್ಯಾನವು ಅವಶ್ಯಕವೆಂದಾಯಿತು. [ವೇದಾಪೌರುಷೇಯತ್ವ, ಋ.ಸಂ. ಭಾಗ ೧-ಪುಟ ೪೬೫; ವೇದಲಕ್ಷಣ ಋ. ಸಂ. ೧-೩೬೭; ವಿಷಯ ಚತುಷ್ಟಯ ಋ.ಸಂ. ೧-೫೩೯; ವೇದಾರ್ಥವನ್ನು ತಿಳಿದುಕೊಳ್ಳುವ ಅವಶ್ಯಕತೆ ಋ.ಸಂ. ೧-೪೯೦ ಇತ್ಯಾದಿ ಸ್ಥಳಗಳಲ್ಲಿ ಈ ಈ ವಿಷಯಗಳನ್ನು ನಾವು ವಿಸ್ತಾರವಾಗಿ ವಿವರಿಸಿದೇವೆ.]

ನನು ವೇದಾರ್ಥಾವಬೋಧೇ ವಿಧ್ಯಭಾವಾದ್ಬೋಧಸಾಧನಂ ವ್ಯಾಖ್ಯಾನಂ ವ್ಯರ್ಥಮಿತಿ ಚೇನ್ನ । ಅಧ್ಯಯನವಿಧೇರ್ಬೋಧಪರ್ಯವಸಾಯಿತ್ವಾತ್ । ಏತಚ್ಚ ಭಟ್ಟಗುರುಮತಾನುಸಾರಿಭಿರ್ಬಹುಧಾ ಪ್ರಪಂಚಿತಂ । ಆಮ್ನಾಯತೇ ಚ—

ಯದಧೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ ।
ಅನಗ್ನಾವಿವ ಶುಷ್ಕೇಂಧೋ ನ ತಜ್ಜ್ವಲತಿ ಕರ್ಹಿಚಿತ್ ॥
ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ ।
ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ ॥

ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚ । ಇತಿ.

ಈಗ ವೇದವೆಂಬುವುದು ಒಂದು ಉತ್ಕೃಷ್ಟವಾದ ಗ್ರಂಥ. ಅದು ಪುರುಷಕೃತವಲ್ಲ ಅದು ನಿತ್ಯವಾದುದು ಮತ್ತು ಪ್ರಮಾಣಭೂತವಾದುದು ಎಂಬ ವಿಷಯಗಳನ್ನು ಒಪ್ಪಿಕೊಂಡರೂ ಅದಕ್ಕೆ ವ್ಯಾಖ್ಯಾನವೇಕೆ ? ವೇದಾಧ್ಯಯನ ಮಾಡಬೇಕೆಂದು ಅನೇಕ ವಿಧಿವಾಕ್ಯಗಳಿರುವುವು. ಆದರೆ ಅರ್ಥವನ್ನು ತಿಳಿದುಕೊಳ್ಳಬೇಕೆಂದು ಎಲ್ಲಿಯೂ ಹೇಳಲಿಲ್ಲವಲ್ಲ ? ಆದ್ದರಿಂದ ವೇದಕ್ಕೆ ವ್ಯಾಖ್ಯಾನಮಾಡುವುದು ವ್ಯರ್ಥ ಎನ್ನುವುದಾದರೆ ಅದಕ್ಕೆ ಸಮಾಧಾನವು ಈ ರೀತಿ ಇರುವುದು — ಮೀಮಾಂಸಕರಲ್ಲಿ ಕುಮಾರಿಲ ಭಟ್ಟ, ಪ್ರಭಾಕರ ಎಂಬಿಬ್ಬರು ಆಚಾರ್ಯರು ಶಂಕರಾಚಾರ್ಯರ ಕಾಲದ ಸುಮಾರಿನಲ್ಲಿದ್ದರು. ಇವರಿಬ್ಬರೂ ಎರಡು ಸ್ವತಂತ್ರ ಮತಗಳನ್ನು ಸ್ಥಾಪಿಸಿದ್ದಾರೆ. ಕುಮಾರಿಲಮತಕ್ಕೆ ಭಾಟ್ಟಮತವೆಂದೂ, ಪ್ರಭಾಕರಮತಕ್ಕೆ ಗುರುಮತವೆಂದೂ ಹೆಸರು. ಮೇಲೆ ಹೇಳಿದಂತೆ ಈ ಎರಡು ಮತಗಳನ್ನನುಸರಿಸುವವರು ಎಂದರ್ಥವು. ಇವರು ಹೇಳುವುದೇನೆಂದರೆ—

ಯೋಽನಧೀತ್ಯ ದ್ವಿಜೋ ವೇದಾನನ್ಯತ್ರ ಕುರುತೇ ಶ್ರಮಂ ।
ಸ ಜೀವನ್ನೇವ ಶೂದ್ರತ್ವಮಾಶು ಗಚ್ಛತಿ ಸಾನ್ವಯಃ ॥
(ಮನುಸ್ಮೃತಿ ೨-೧೬೮)

ಎಂದರೆ ದ್ವಿಜನಾದವನು ವೇದಗಳನ್ನು ಓದದೆ ಎಷ್ಟು ಕಷ್ಟಪಟ್ಟು ಇತರ ಗ್ರಂಥಗಳನ್ನೋದಿದರೂ ಅಥವಾ ಬೇರೆ ಯಾವ ಕೆಲಸ ಮಾಡಿದರೂ ಅವೆಲ್ಲ ವ್ಯರ್ಥವಾಗಿ ಅವನಿಗೆ ಈ ಜನ್ಮದಲ್ಲಿಯೇ ಶೂದ್ರತ್ವವು ಪ್ರಾಪ್ತವಾಗುವುದು ಎಂದು ಸ್ಮೃತಿವಾಕ್ಯವಿದೆ. ಹಾಗಾದರೆ ವೇದವನ್ನು ಕಂಠಪಾಠವಾಗಿ ಅಧ್ಯಯನ ಮಾಡಿದರೆ ಸಾಕಲ್ಲಾ, ಅದರ ಅರ್ಥವನ್ನೇಕೆ ತಿಳಿದುಕೊಳ್ಳಬೇಕು ಎಂದರೆ—

ಯದಧೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ ।
ಅನಗ್ನಾವಿವ ಶುಷ್ಕೇಂಧೋ ನ ತಜ್ಜ್ವಲತಿ ಕರ್ಹಿಚಿತ್ ॥
(ನಿ. ೧-೧೮)

ವೇದವನ್ನು ಸುಮ್ಮನೆ ಕಂಠಪಾಠಮಾಡಿ ಕಲಿತಿದ್ದರೂ ಅದರ ಅರ್ಥವನ್ನು ತಿಳಿಯದಿದ್ದರೆ ಬೆಂಕಿಯು ಆರಿಹೋಗಿ ಬೂದಿಮಾತ್ರ ಉಳಿದಿರುವ ರಾಶಿಯಮೇಲೆ ಎಷ್ಟು ಒಣಗಿದ ಸೌದೆಯನ್ನು ಹಾಕಿ ಬೀಸಿದರೂ ಹತ್ತಿಕೊಂಡು ಉರಿಯದಿರುವಂತೆ ಅರ್ಥಜ್ಞಾನ ವಿಲ್ಲದ ವೇದಪಾಠವು ವ್ಯರ್ಥವಾಗುವುದು. ಇದಲ್ಲದೆ—

**ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ ॥**
**ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ ॥**

(ನಿ. ೧-೧೮)

ವೇದವನ್ನು ಓದಿ ಅದರ ಅರ್ಥವನ್ನು ತಿಳಿಯದವನು ಭಾರವನ್ನು ಹೊತ್ತು ನಿಂತಿರುವ ಕಂಭವಿದ್ದ ಹಾಗೆ. ಯಾವನು ತಾನು ಓದಿದ ವೇದದ ಅರ್ಥವನ್ನು ತಿಳಿದಿರುವನೋ ಅವನು ಸಮಸ್ತ ಮಂಗಳವನ್ನು ಪಡೆಯುವನು. ತಾನು ಸಂಪಾದಿಸಿದ ಜ್ಞಾನದಿಂದ ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಪಡೆಯುವನು. ಎಂದು ಯಾಸ್ಕರು ಹೇಳಿದಾರೆ. ವೇದವನ್ನು ಅಧ್ಯಯನಮಾಡಿದ ಪುರುಷನು ಅದರ ಅರ್ಥವನ್ನು ತಿಳಿಯದಿದ್ದರೆ ಸುಮ್ಮನೆ ಭಾರವನ್ನು ಹೊತ್ತವನೇ ಎನ್ನಬೇಕಾಗುವುದು. ಈ ವಿಚಾರದಲ್ಲಿ ಒಣಗಿ ನಿಂತಿರುವ ಮೋಟುಮರವೇ ದೃಷ್ಟಾಂತವು. ಕೊಂಬೆಗಳನ್ನೆಲ್ಲಾ ಕಡಿದು ಒಣಗಿ ನಿಂತಿರುವ ಮರದ ಬುಡವನ್ನು ಸ್ಥಾಣು ಎನ್ನುತ್ತಾರೆ. ಅದರ ಉಪಯೋಗತಿಳಿದಿದ್ದರೂ ಸೌದೆಗಾಗಬಹುದೇ ಹೊರತು ಫಲಪುಷ್ಪಗಳಿಗೆ ಅದರಿಂದ ಏನೂ ಪ್ರಯೋಜನವಿಲ್ಲ. ಅದರಂತೆ (ವೇದಾರ್ಥವನ್ನು ತಿಳಿಯದೆ ಸುಮ್ಮನೆ) ವೇದವನ್ನು ಕಂಠಪಾಠಮಾಡಿ ಅಧ್ಯಯನಮಾಡುವುದರಿಂದ ಅವನು ಪತಿತ ನಾಗುವುದಿಲ್ಲ ಎಂದಿಷ್ಟೇ ಫಲ. ಹೆಚ್ಚು ಫಲವಿಲ್ಲ. ಅಂತಹವನಿಗೆ ಯಾಗಗಳನ್ನು ಮಾಡುವುದು, ಸ್ವರ್ಗಾದಿಫಲಗಳನ್ನು ಪಡೆ ಯುವುದು ಮುಂತಾದ ಯಾವ ಪುರುಷಾರ್ಥವೂ ದೊರೆಯುವುದಿಲ್ಲ.

ಮೂಲದಲ್ಲಿ **ಕಿಲ** ಎಂಬ ಶಬ್ದವನ್ನು ಉಪಯೋಗಿಸಿರುವುದರಿಂದ ಈ ವಿಚಾರವು ಲೋಕದಲ್ಲಿ ಪ್ರಸಿದ್ಧಿಯಾಗಿರುವುದು ಎಂದರ್ಥವು. ಲೋಕದಲ್ಲಿಯೂ ಕೂಡ ಅರ್ಥರಹಿತವೇದಪಾಠಕನಿಗೆ ದೊರೆಯುವ ಧನಾದಿಗೌರವಕ್ಕಿಂತ ವೇದಾರ್ಥವನ್ನು ತಿಳಿದ ವಿದ್ವಾಂಸನಿಗೆ ಹೆಚ್ಚು ಗೌರವ ದೊರೆಯುತ್ತದೆ ಮತ್ತು ತನ್ನ ಗುರುವಾದ ಆಚಾರ್ಯನಿಂದ ಉಪದಿಷ್ಟವಾದ ವೇದವಾಕ್ಯವನ್ನು ಅರ್ಥಜ್ಞಾನವಿಲ್ಲದೆ ಪದೇ ಪದೇ ಉಚ್ಚರಿಸುತ್ತಿದ್ದರೂ ಅಂತಹ ಉಚ್ಚಾರಣೆಯಿಂದ ಪಾಠಕನಿಗೆ ವೇದದ ಅರ್ಥಜ್ಞಾನವಾಗುವುದಿಲ್ಲ. ಅದು ಪಾಠಕನಿಗೆ ಯಾವ ಸ್ಫೂರ್ತಿಯನ್ನೂ ಉಂಟುಮಾಡುವುದಿಲ್ಲ. ಬೆಂಕಿಯಿಲ್ಲದ ಕಡೆ ಎಸೆದ ಸೌದೆಯು ಎಷ್ಟು ಒಣಗಿದ್ದರೂ ಉರಿಯುವುದೇ ? ಅದರಂತೆ ಪಾಠಕನು ಉಚ್ಚರಿಸುವ ವಾಕ್ಯವು ವೇದವಾಕ್ಯವಾಗಿದ್ದರೂ ಅದರ ಮಹತ್ತ್ವವು ಅಷ್ಟೇನೂ ಇರುವು ದಿಲ್ಲ. ಅದರ ಅರ್ಥವನ್ನು ತಿಳಿದು ಉಚ್ಚರಿಸಿದರೆ ಮಾತ್ರ ಅದರಿಂದ ಮಹತ್ಫಲವುಂಟಾಗುವುದು.

**॥ ಬ್ರಾಹ್ಮಣೇನ ನಿಷ್ಕಾರಣೋ ಧರ್ಮಃ ಷಡಂಗೋ ವೇದೋಽಧ್ಯೇಯೋ ಜ್ಞೇಯಶ್ಚೇತಿ ॥**

(ಪತಂಜಲಿಯ ಮಹಾಭಾಷ್ಯ—ಪಸ್ಪಶಾಹ್ನಿಕ)

ಬ್ರಾಹ್ಮಣನಾದವನು ನಿಷ್ಕಾರಣವಾಗಿ ಎಂದರೆ ಯಾವ ಫಲಾಪೇಕ್ಷೆಯನ್ನೂ ಉದ್ದೇಶವಾಗಿಟ್ಟುಕೊಳ್ಳದೆ ಧರ್ಮವನ್ನು ಬೋಧಿಸುವ ವೇದವನ್ನು ಷಡಂಗಸಹಿತವಾಗಿ ಅಧ್ಯಯನಮಾಡಬೇಕು ಮತ್ತು ಅದರ ಅರ್ಥವನ್ನು ತಿಳಿದುಕೊಳ್ಳಬೇಕು. ಇದು ವಿಧಿವಿಹಿತವು ಎಂದಿರುವುದು ಮೂಲದಲ್ಲಿ **ನಿಷ್ಕಾರಣ**ವೆಂಬ ಶಬ್ದವನ್ನು ಉಪಯೋಗಿಸಲಾಗಿದೆ. ಈ ಶಬ್ದಪ್ರಯೋಗದಿಂದ ವೇದಾಧ್ಯಯನವೂ ಅದರ ಅರ್ಥಜ್ಞಾನವೂ ಐಚ್ಛಿಕವಲ್ಲವೆಂಬುದು ಸ್ಪಷ್ಟವಾಗುತ್ತದೆ, ಎಂದರೆ ಅರ್ಥಜ್ಞಾನಸಹಿತವಾದ ವೇದಾಧ್ಯಯನವನ್ನು ಬ್ರಾಹ್ಮಣನಾದವನು ಇಷ್ಟಬಂದರೆ ಮಾಡಬಹುದು ಇಲ್ಲದಿದ್ದರೆ ಇಲ್ಲ ಎನ್ನುವಹಾಗಿಲ್ಲ. ಅದನ್ನು ತನ್ನ ಕರ್ತವ್ಯಕರ್ಮದಂತೆ ಮಾಡಲೇಬೇಕಾಗಿರುವುದು. ಆದುದರಿಂದ ವೇದಾಧ್ಯಯನಾರ್ಥಜ್ಞಾನಗಳು ಕಾಮ್ಯವಲ್ಲ. ನಿತ್ಯವು.

ಈ ವಿಷಯದಲ್ಲಿ ಋಗ್ವೇದದಲ್ಲಿಯೇ ಒಂದು ಕಡೆ ಹೀಗೆ ಹೇಳಿರುವುದು—

**ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ।**
**ಉತೋ ತ್ವಸ್ಮೈ ತನ್ವಂ೧ ವಿಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ॥**

(ಋ.ಸಂ. ೧೦–೭೧–೪)

ಈ ಋಕ್ಕಿನ ಪೂರ್ವಾರ್ಧದಲ್ಲಿ ವೇದಾರ್ಥವನ್ನು ತಿಳಿಯದಿರುವ ಅಜ್ಞಪುರುಷನ ನಿಂದೆಯೂ ಉತ್ತರಾರ್ಧದಲ್ಲಿ ವೇದಾರ್ಥವನ್ನು ತಿಳಿದವನಿಗೆ ವಾಗ್ದೇವತೆಯು ಹೇಗೆ ಅನುಗ್ರಹಮಾಡುತ್ತಾಳೆ ಎಂಬುದನ್ನೂ ವಿವರಿಸಲಾಗಿದೆ. ಅನೇಕ ಪುರುಷರು ವ್ಯಾಕರಣ ಸಾಹಿತ್ಯಾದಿ ಶಾಸ್ತ್ರಗ್ರಂಥಗಳಲ್ಲಿ ಪರಿಣತರಾಗಿರುತ್ತಾರೆ, ವೇದಾಧ್ಯಯನವನ್ನು ಮಾಡಿರುತ್ತಾರೆ. ಆದರೆ ಅವರಲ್ಲಿ ಒಬ್ಬನು ವೇದವಾಕ್ಯವನ್ನು ಅಥವಾ ಮಂತ್ರವನ್ನು ಬಾಯಿಂದ ಪಠಿಸುತ್ತಿದ್ದರೂ ಆ ಮಂತ್ರದ ಅರ್ಥವನ್ನು ಮಾತ್ರ ತಿಳಿದಿರುವುದಿಲ್ಲ. ಅಥವಾ ತಿಳಿದುಕೊಳ್ಳುವ ಶಕ್ತಿಯಿರುವುದಿಲ್ಲ. ಹಾಗೆಯೇ ಇನ್ನೊಬ್ಬನು ವೇದಮಂತ್ರವನ್ನು ಶ್ರವಣಮಾಡುತ್ತಿದ್ದರೂ ಅವನಿಗೆ ಅದರ ಅರ್ಥಜ್ಞಾನವಾಗುವುದಿಲ್ಲ. ಕಣ್ಣಿದ್ದರೂ ನೋಡುವುದಿಲ್ಲ, ಕಿವಿಯಿದ್ದರೂ ಕೇಳುವುದಿಲ್ಲ. ಇದು ವೇದಾರ್ಥಜ್ಞಾನವಿಲ್ಲದಿರುವವರ ವಿಷಯವಾಯಿತು. ವೇದಾರ್ಥವನ್ನು ಚೆನ್ನಾಗಿ ತಿಳಿದಿರುವ ಇನ್ನೊಬ್ಬ ಪುರುಷನ ವಿಷಯದಲ್ಲಿಯಾದರೋ ವಾಗ್ದೇವತೆಯು ಅವನಿಗೆ ತನ್ನ ನಿಜಸ್ವರೂಪವನ್ನು ಎಂದರೆ ವೇದಮಂತ್ರಗಳ ಗೂಢಾರ್ಥವನ್ನು ಸ್ಪಷ್ಟವಾಗಿ ಪ್ರಕಟಪಡಿಸುತ್ತಾಳೆ. ಹೇಗೆಂದರೆ, ಒಳ್ಳೆಯ ವಸ್ತ್ರಾಭರಣಗಳಿಂದ ಅಲಂಕೃತಳಾದ ಸ್ತ್ರೀಯು ತನ್ನ ಪತಿಯ ಸಂಗವನ್ನು ಅಪೇಕ್ಷಿಸಿ (ಋತುಕಾಲದಲ್ಲಿ) ತನ್ನ ಅವಯವಗಳ ಸೌಂದರ್ಯವನ್ನು ತನ್ನ ಪತಿಗೆ ಹೇಗೆ ಪ್ರಕಟಿಸುವಳೋ ಎಂದರೆ ಪತಿಯು ತನ್ನ ಪತ್ನಿಯ ಸೌಂದರ್ಯಯುಕ್ತವಾದ ಅವಯವಗಳನ್ನು ರತಿಕಾಲದಲ್ಲಿ ನೋಡಲು ಹೇಗೆ ಸಮರ್ಥನಾಗುವನೋ ಅದರಂತೆ ವೇದಾರ್ಥಜ್ಞನಾದ ಪುರುಷನಿಗೆ ಮಂತ್ರಗಳ ಗೂಢಾರ್ಥಗಳು ಸಹ ಸ್ಪಷ್ಟವಾಗಿ ಗೋಚರಿಸುವುವು, ಅದರಂತೆ ವೇದಾರ್ಥವನ್ನರಿಯದ ಪುರುಷನು ಇತರ ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದರೂ ವೇದಮಂತ್ರಗಳ ರಹಸ್ಯಾರ್ಥಗಳನ್ನರಿಯಲು ಸಮರ್ಥನಾಗುವುದಿಲ್ಲ. ಆದರೆ ವೇದಾರ್ಥಜ್ಞನಾದ ಪುರುಷನಿಗೆ ಮಾತ್ರ, (ತನ್ನ ಪತ್ನಿಯನ್ನು ಏಕಾಂತದಲ್ಲಿ ನೋಡಲು ಶಕ್ಯವಾಗಿರುವಂತೆ) ವೇದಮಂತ್ರಗಳ ರಹಸ್ಯಾರ್ಥಗಳನ್ನು ಸಹ ತಿಳಿದುಕೊಳ್ಳಲು ಶಕ್ತನಾಗಿರುವನು ಎಂದು ವೇದಾರ್ಥವನ್ನು ತಿಳಿಯದವನ ಮತ್ತು ತಿಳಿದವನ ಶಕ್ತಿಸಾಮರ್ಥ್ಯಗಳನ್ನು ವಿಶದಪಡಿಸುವುದಕ್ಕಾಗಿ ಪತಿಪತ್ನಿಯರ ದೃಷ್ಟಾಂತವನ್ನು ಹೇಳಿ ಋಷಿಯು ಅರ್ಥವಿವರಣೆ ಮಾಡಿದಾನೆ.

**ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು।**
**ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾನ್ ಅಫಲಾಮಪುಷ್ಪಾಂ॥**

(ಋ. ಸಂ. ೧೦-೭೧-೫)

ವೇದಮಂತ್ರಗಳ ಅರ್ಥವನ್ನು ಚೆನ್ನಾಗಿ ಪಾನಮಾಡಿದವನು ಎಂದರೆ ಚೆನ್ನಾಗಿ ತಿಳಿದವನು ವೇದಮಂತ್ರಗಳೊಡನೆ ಸ್ನೇಹಭಾವದಿಂದಿರುವನೆಂದು ಹೇಳುವರು. ವೇದಾರ್ಥಜ್ಞನಿಗೂ ವೇದಮಂತ್ರಗಳಿಗೂ ಗಾಢವಾದ ಮೈತ್ರಿ (ಸ್ನೇಹ) ವಿರುವುದೆಂದು ತಿಳಿದವರು ಹೇಳುವರು. ಮತ್ತು ವೇದಾರ್ಥಜ್ಞನು ವೇದಮಂತ್ರಗಳೊಡನೆ ಸಂತೋಷಚಿತ್ತದಿಂದ ಕ್ರೀಡಿಸುತ್ತಿರುವನು ಅಥವಾ ದೇವತೆಗಳ ಸ್ನೇಹಭಾವದಲ್ಲಿ ಅಥವಾ ಉತ್ತಮವಾದ ಯಜ್ಞಸ್ಥಾನಗಳಲ್ಲಿ ಸಂತೋಷಚಿತ್ತವಾಗಿ ವಿಹರಿಸುತ್ತಿರುವನು. ಆದರೆ ವೇದಾರ್ಥವನ್ನು ತಿಳಿಯದ ಪುರುಷನು, ಹಾಲನ್ನು ಕೊಡದಿರುವ ಬಂಜೆಯಾದ ಗೋವಿನಂತೆ ವೇದಮಂತ್ರಗಳನ್ನು ಸುಮ್ಮನೆ ಪಠಿಸುತ್ತಾ ಸಂಚರಿಸುತ್ತಾನೆ. ಮತ್ತು ಫಲಪುಷ್ಪಗಳಿಲ್ಲದ ವೃಕ್ಷದಿಂದ ಯಾರಿಗೂ ಯಾವ ಪ್ರಯೋಜನವಿರುವುದಿಲ್ಲವೋ ಆದರಂತೆ ವೇದಾರ್ಥಜ್ಞಾನವಿಲ್ಲದ ಪುರುಷನು ಸುಮ್ಮನೆ ಪಠಿಸುವ ಮಂತ್ರಗಳಿಂದಲೂ ಅವನಿಗಾಗಲಿ ಇತರರಿಗಾಗಲೀ ಯಾವ ಪ್ರಯೋಜನವೂ ಇರುವುದಿಲ್ಲ.

ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ ।
ಯದೀಂ ಶೃಣೋತ್ಯಲಕಂ ಶೃಣೋತಿ ನಹಿ ಪ್ರವೇದ ಸುಕೃತಸ್ಯ ಪಂಥಾಂ ॥
(ಋ. ಸಂ. ೧೦-೭೧-೬)

ವೇದಗಳನ್ನೂ ವೇದಮಂತ್ರಗಳ ಅರ್ಥವನ್ನೂ ತಿಳಿದು ಅವುಗಳಿಗೆ ಮಿತ್ರನಂತಿರುವ ಪುರುಷನ (ಅಥವಾ ಮಿತ್ರನಂತಿರುವ ವೇದಗಳ ಅರ್ಥವನ್ನು ತಿಳಿಯುವ ಅದರ) ವಾಕ್ಯಗಳನ್ನು ಯಾವ ಪುರುಷನು ಅಲಕ್ಷ್ಯದಿಂದ ತಿರಸ್ಕರಿಸುವನೋ ಆ ಪುರುಷನ ಮಾತುಗಳಲ್ಲಿಯೂ ಯಾವ ಉತ್ತಮವಾದ ಅಂಶಗಳೂ ಇರುವುದಿಲ್ಲ. ಅವನು ಹೇಳುವುದೂ ಕೇಳುವುದೂ ಎಲ್ಲಾ ಅಸತ್ಯವೆ. ಅವನಿಗೆ ಉತ್ತಮವಾದ ಕಾರ್ಯಗಳಲ್ಲಿ ಆಸಕ್ತಿಯಾಗಲಿ, ಶ್ರದ್ಧೆಯಾಗಲಿ ಇರುವುದಿಲ್ಲ. ಅವನು ಸಜ್ಜನರ ಮಾರ್ಗವನ್ನು ಅನುಸರಿಸುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

ಏವಂ ತರ್ಹಿ ಜ್ಞಾನಸ್ಯ ಪೃಥಗ್ವಿಧಾನಾದಧ್ಯಯನಂ ಪಾಠಮಾತ್ರಮಿತಿ ಚೇದಸ್ತು ನಾಮ । ವರ್ಣಯಂತ್ಯೇವಮೇವ ಶಾಂಕರದರ್ಶನಾನುಸಾರಿಣಃ । ಕರ್ತುರ್ವಿಧಿವ್ಯತಿರೇಕೇಣಾನುಷ್ಠಾನಾನ್ಯಥಾನುಪಪತ್ತ್ಯಾ ವೇದಾರ್ಥಜ್ಞಾನಸ್ಯ ಪ್ರಾಪಿತತ್ವಾನ್ನೈತದ್ವಿಧೇಯಮಿತಿ ಚೇತ್ತರ್ಹಿ ತದ್ವಿಧಿಬಲಾದ್ವೇದನಮಾತ್ರೇಣ ಸ್ವತಂತ್ರಂ ಕಿಂಚಿದಪೂರ್ವಮಸ್ತು । ಶ್ರೂಯತೇ ಹ್ಯನುಷ್ಠಾನಜ್ಞಾನಯೋಃ ಸ್ವತಂತ್ರಂ ಪೃಥಕ್ಫಲಂ—"ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ" ಇತಿ । ಅಲ್ಪಪ್ರಯಾಸಸಾಧ್ಯೇನ ವೇದನೇನ ತತ್ಸಿದ್ಧೌ ಬಹ್ವಾಯಾಸಸಾಧ್ಯಮನುಷ್ಠಾನಂ ವ್ಯರ್ಥಮಿತಿ ಚೇನ್ನ । ತರಣೀಯಾಯಾ ಬ್ರಹ್ಮಹತ್ಯಾಯಾ ಮಾನಸವಾಚಿಕಕಾಯಿಕತ್ವಾದಿಭೇದೇನ ತಾರತಮ್ಯೋಪಪತ್ತೇಃ । ಮನಸಾ ಸಂಕಲ್ಪಿತಾ ವಾಚಾಭ್ಯನುಜ್ಞಾತಾ ಪರಹಸ್ತೇನ ಕಾರಿತಾ ಸ್ವಯಂ ಕೃತಾ ಪುನಃ ಕೃತಾ ಚೇತ್ಯೇವಂ ತಾರತಮ್ಯೇನಾವಸ್ಥಿತಾ ಬ್ರಹ್ಮಹತ್ಯಾ ಅನೇಕವಿಧಾಃ । ಅತಸ್ತತ್ತರಣಮಪ್ಯನೇಕವಿಧಂ । ಯಥಾ ಸ್ವರ್ಗೋ ಬಹುವಿಧಸ್ತದ್ವತ್ । ಅಗ್ನಿಹೋತ್ರಂ ಜುಹುಯಾತ್ಸ್ವರ್ಗಕಾಮೋ, ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ । ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತೇತ್ಯಾದ್ಯುಚ್ಚಾವಚಕರ್ಮಣಾಮನೇಕವಿಧಫಲಾಸಂಭವಾತ್ಸ್ವರ್ಗೋ ಬಹುವಿಧೋಽಭ್ಯುಪಗಂತವ್ಯಃ । ತಥಾ ಬ್ರಹ್ಮಹತ್ಯಾದಿಪಾಪನಿವೃತ್ತೇರಪಿ ಬಹುವಿಧತ್ವಾದ್ವೇದನೇನಾಪಿ ಕಾಚಿದ್ಬ್ರಹ್ಮಹತ್ಯಾ ನಿವರ್ತತ ಇತಿ ಯೋಗ್ಯತಾನುಸಾರೇಣ ಕಲ್ಪ್ಯತಾಂ । ಕಿಂಚ ತತ್ತದ್ವಿಧಿಸಮೀಪೇ ಯ ಏವಂ ವೇದೇತಿ ವಚನಾನಿ ವೇದನಫಲಂ ಬ್ರುವತೇ ತಾನ್ಯರ್ಥವಾದ ಇತಿ ಚೇತ್ । ಅಸ್ತು ನಾಮ ಸಹಾಮಹ ಏವೈತಮುಪರಾಧಂ ತೇಷಾಂ ವಚನಾನಾಂ ವಿಧೇಯಾರ್ಥಪ್ರಶಂಸಾಪರತ್ವಾತ್ । ತರ್ಹಿ ಯತ್ಪರೋ ಹಿ ಶಬ್ದಃ ಸ ಶಬ್ದಾರ್ಥ ಇತಿ ನ್ಯಾಯೇನ ಸ್ವಾರ್ಥೇ ಪ್ರಾಮಾಣ್ಯಂ ನಾಸ್ತೀತಿ ಚೇತ್ । ಮಹಾತಾತ್ಪರ್ಯಸ್ಯ ವಿಧೇಯವಿಷಯತ್ವೇಽಪ್ಯವಾಂತರತಾತ್ಪರ್ಯಸ್ಯ ಸ್ವವಿಷಯತ್ವಾನಿವಾರಣಾತ್ । ಗ್ರಾವಾಣಃ ಪ್ಲವಂತ ಇತ್ಯಾದ್ಯರ್ಥವಾದಸ್ಯಾಪಿ ಸ್ವಾರ್ಥೇ ಪ್ರಾಮಾಣ್ಯಂ ಪ್ರಸಜ್ಯೇತೇತಿ ಚೇನ್ನ । ಪ್ರಮಾಣಾಂತರಬಾಧಿತತ್ವಾತ್ । ದ್ವಿಃಸಂವತ್ಸರಸ್ಯ ಸಸ್ಯಂ ಪಚ್ಯತ ಇತ್ಯಾದ್ಯರ್ಥವಾದಸ್ಯ ತು ಬಾಧಾಭಾವೇಽಪ್ಯನುವಾದತ್ವಾನ್ನ ಸ್ವಾರ್ಥೇ ಪ್ರಾಮಾಣ್ಯಂ । ವೇದನಫಲವಚನಾನಿ ತು ನಾನುವಾದಕಾನಿ ನಾಪಿ ಬಾಧ್ಯಾನಿ ತಸ್ಮಾದರ್ಥವಾದತ್ವೇಽಪ್ಯಸ್ತ್ವೇಷಾಂ ಸ್ವಾರ್ಥೇ ಪ್ರಾಮಾಣ್ಯಮನ್ಯಥಾಮಂತ್ರಾರ್ಥವಾದಾದಿಭ್ಯೋ ದೇವಾದೀನಾಂ ವಿಗ್ರಹಾದಿಮತ್ತ್ವಂ ನ ಸಿಧ್ಯೇತ್ ।

**ವಿರೋಧೇ ಗುಣವಾದಃ ಸ್ಯಾದನುವಾದೋಽವಧಾರಿತೇ ।**
**ಭೂತಾರ್ಥವಾದಸ್ತದ್ಧಾನಾದರ್ಥವಾದಸ್ತ್ರಿಧಾ ಮತಃ ॥ ಇತಿ ॥**

ಒಳ್ಳೇದು, ವೇದಾಧ್ಯಯನವನ್ನು ಮಾಡಲೇಬೇಕೆಂದು ವಿಧಿಯಿರುವುದು, ಆದ್ದರಿಂದ ಅದನ್ನು ಮಾಡಲೇಬೇಕು. ಅರ್ಥವನ್ನು ತಿಳಿದುಕೊಳ್ಳಬೇಕೆಂಬ ವಿಧಿಯು ಎಲ್ಲಿಯೂ ಇದ್ದಂತೆ ಕಾಣುವುದಿಲ್ಲ. ಇಷ್ಟಬಂದರೆ ತಿಳಿದುಕೊಳ್ಳಬಹುದು ಇಲ್ಲದಿದ್ದರೆ ಇಲ್ಲ. ಎಂದು ಹೇಳುತ್ತೇವೆ ಎಂದರೆ ಅದನ್ನು ಸ್ವಲ್ಪಮಟ್ಟಿಗೆ ಒಪ್ಪಲೇಬೇಕು. ವೇದಾಧ್ಯಯನಮಾಡುವುದಕ್ಕೂ, ಅದರ ಅರ್ಥವನ್ನು ತಿಳಿದುಕೊಳ್ಳುವುದಕ್ಕೂ ಪ್ರತ್ಯೇಕ ಫಲವಿರುವುದೆಂದು ಕೆಲವರು ಹೇಳುವರು. ವೇದವನ್ನು ಅರ್ಥಜ್ಞಾನವಿಲ್ಲದೆ ಕಂಠಪಾಠಮಾಡಿ ಉಚ್ಚರಿಸಿದರೂ ಅದಕ್ಕೆ ಒಂದು ವಿಧವಾದ ಫಲವಿದ್ದೇ ಇರುವುದು. ಇದು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲವಾದ್ದರಿಂದ ಇದನ್ನು ಅಪೂರ್ವ ಅಥವಾ ಅದೃಷ್ಟಫಲವೆಂದು ಹೇಳುವರು. ಭೋಜನಾದಿಗಳಲ್ಲಿರುವಂತೆ ವೇದಾಧ್ಯಯನದಲ್ಲಿಯೂ ದೃಷ್ಟಫಲವಿದ್ದಮೇಲೆ ಅಧ್ಯಯನಮಾಡಬೇಕೆಂಬ ವಿಧಿವಾಕ್ಯವು ವ್ಯರ್ಥವಲ್ಲವೇ ? ಭೋಜನಮಾಡಿದರೆ ನಮಗೆ ಕ್ಷುದ್ಬಾಧೆ ಪರಿಹಾರವಾಗಿ ತೃಪ್ತಿಯುಂಟಾಗುತ್ತದೆ. ಇದು ನಮಗೆಲ್ಲ ತಿಳಿದಿರುವ ಪ್ರತ್ಯಕ್ಷವಿಚಾರ. ಇದನ್ನು ಮಾಡಬೇಕೆಂದು ಯಾವ ವಿಧಿಯೂ ಇಲ್ಲ. ಆದರೂ ನಾವು ನಮ್ಮ ಅನುಕೂಲಕ್ಕಾಗಿ ಭೋಜನಮಾಡುತ್ತೇವೆ. ಇದು ದೃಷ್ಟಫಲವು ಎಂದರೆ ನಮಗೆ ಕಣ್ಣಿಗೆ ಕಾಣಿಸುವ ಅಥವಾ ಅನುಭವವೇದ್ಯವಾದ ಪ್ರಯೋಜನವು. ವೇದಾಧ್ಯಯನವಿಚಾರದಲ್ಲಿಯೂ ಯಜ್ಞಾನುಷ್ಠಾನವಿಚಾರದಲ್ಲಿಯೂ ಇಂತಹ ದೃಷ್ಟಫಲವಿರುವುದಿಲ್ಲ. ಯಜ್ಞಾದಿಗಳಿಂದ ಸ್ವರ್ಗವು ಲಭಿಸುತ್ತದೆ ಎಂದು ವಿಧಿವಾಕ್ಯವಿರುವುದು. ಸ್ವರ್ಗವು ಲಭಿಸುವುದನ್ನು ನೋಡಿರುವವರು ಯಾರು ? ಯಾರೂ ಇಲ್ಲ. ವಿಧಿವಾಕ್ಯವೇ ಪ್ರಮಾಣವೆಂದು ನಂಬುವುದಾದರೆ ವೇದಾಧ್ಯಯನಕ್ಕೂ ಯಜ್ಞಾನುಷ್ಠಾನಕ್ಕೂ ಒಂದು ಫಲವಿರುವುದು. ಇದು ನಮಗೆ ಕಾಣಿಸುವುದಿಲ್ಲ ಅಥವಾ ಅನುಭವವೇದ್ಯವಲ್ಲದ್ದರಿಂದ ಈ ವಿಧಫಲಕ್ಕೆ ಅದೃಷ್ಟ ಅಥವಾ ಅಪೂರ್ವ ಎಂದು ಹೇಳುವರು. (ದೃಷ್ಟಾದೃಷ್ಟಫಲ ವಿಚಾರದಲ್ಲಿ ಋ.ಸಂ. ಭಾಗ ೧. ೫೦೨–೫೦೭ನೇ ಪುಟಗಳಲ್ಲಿ ಬರೆದಿರುವುದನ್ನು ನೋಡಿ). ಶಂಕರಮತಾನುವರ್ತಿಗಳು ಈ ವಿಚಾರದಲ್ಲಿ ಹೀಗೆ ಹೇಳುವರು--ವೇದದಲ್ಲಿ ಹೇಳಿರುವ ಕರ್ಮಗಳನ್ನು ಅನುಷ್ಠಾನಮಾಡುವುದಕ್ಕೆ ವಿಧಿನಿಯಮಗಳನ್ನು ತಿಳಿದುಕೊಳ್ಳಲೇಬೇಕು. ಅದಕ್ಕಾದರೂ ವೇದಾರ್ಥವನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ ಇರುವುದು. ಆದರೂ ಯಜ್ಞಾದಿಗಳ ವಿಧಿನಿಯಮಗಳನ್ನು ತಿಳಿದುಕೊಂಡು ಅದರಂತೆ ಆಚರಿಸಿದರೆ ಫಲಪ್ರಾಪ್ತಿಯಾಗುವುದಿಲ್ಲವೇ ? ಅರ್ಥಜ್ಞಾನವೇತಕ್ಕೆ ? ಎಂದರೆ. ವಿಧಿಯಲ್ಲಿ ಹೇಳಿರುವಂತೆ ಅಧ್ಯಯನಮಾಡಿ ಯಜ್ಞಾನುಷ್ಠಾನಕ್ರಮವನ್ನು ತಿಳಿದುಕೊಂಡರೂ ಅದಕ್ಕೂ ಪ್ರತ್ಯೇಕವಾದ ಫಲವಿದ್ದೇ ಇರುವುದು ಅರ್ಥಜ್ಞಾನಕ್ಕೂ ಪ್ರತ್ಯೇಕವಾದ ಫಲವಿರುವುದು. ಆದರೆ ಅರ್ಥಜ್ಞಾನವಿಲ್ಲದೆ ಸುಮ್ಮನೆ ಮಾಡುವ ವೇದಾಧ್ಯಯನಕ್ಕೂ ಯಜ್ಞಾನುಷ್ಠಾನಕ್ಕೂ ಸ್ವಲ್ಪಮಟ್ಟಿಗೆ ಫಲವಿರುವುದು, ಪೂರ್ಣಫಲವಿರುವುದಿಲ್ಲ. ಹೇಗೆಂದರೆ—

**ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ ॥ ಇತಿ**

(ತೈ. ಸಂ. ೫-೩-೧೨-೨)

ಎಂಬ ವೇದವಾಕ್ಯದಲ್ಲಿ ಈರೀತಿ ಹೇಳಿದೆ—ಅಶ್ವಮೇಧಯಾಗಮಾಡಿದರೆ ಬ್ರಹ್ಮಹತ್ಯಾದೋಷವು ನಿವಾರಣೆಯಾಗುವುದು. ಈ ವಿಷಯವನ್ನು ಎಂದರೆ ಅಶ್ವಮೇಧಯಜ್ಞಮಾಡುವ ಕ್ರಮವನ್ನು ತಿಳಿದವನಿಗೂ ಬ್ರಹ್ಮಹತ್ಯಾದೋಷನಿವಾರಣೆಯಾಗುವುದು ಎಂದಿದೆ. ಇಲ್ಲಿ ಯಜ್ಞಾನುಷ್ಠಾನಕ್ರಮವನ್ನು ತಿಳಿದಮಾತ್ರಕ್ಕೆ ಬ್ರಹ್ಮಹತ್ಯಾದೋಷವು ಸುಲಭವಾಗಿ ಪರಿಹಾರವಾಗುವುದಾದರೆ, ಬ್ರಹ್ಮಹತ್ಯಾಪರಿಹಾರಾರ್ಥವಾಗಿ ತುಂಬಾ ಶ್ರಮಪಟ್ಟು ಯಜ್ಞವನ್ನು ಏಕೆ ಆಚರಿಸಬೇಕು ? ಅಶ್ವಮೇಧಯಜ್ಞಮಾಡುವುದರಿಂದ ಪಾಪಪರಿಹಾರವಾಗುವುದೆಂಬ ತಿಳಿವಳಿಕೆಯೇ ಸಾಕಲ್ಲವೇ ? ಎಂದರೆ ಆ ವಿಧವಾದ ತಿಳಿವಳಿಕೆಯಿಂದ ಸ್ವಲ್ಪಮಟ್ಟಿಗೆ ಪಾಪಪರಿ

ಹಾರವಾಗುವುದೇನೋ ನಿಶ್ಚಯ. ಏಕೆಂದರೆ ಬ್ರಹ್ಮಹತ್ಯೆಯು ಅನೇಕ ವಿಧವಾಗಿರುವುದು. ಮನಸ್ಸಿನಲ್ಲಿ ಬ್ರಹ್ಮಹತ್ಯವನ್ನು ಮಾಡುತ್ತೇನೆಂದು ಸಂಕಲ್ಪಿಸಿದರೆ ಅದರಿಂದಲೂ ಸ್ವಲ್ಪಮಟ್ಟಿಗೆ ಪಾಪವು ಸಂಭವಿಸುವುದು; ಬಾಯಿಂದ ಎಂದರೆ ಮಾತಿನಿಂದ ಮಾಡುತ್ತೇನೆಂದು ಹೇಳಿದರೆ ಹೆಚ್ಚು ಪಾಪವೂ, ಇತರರನ್ನು ಪ್ರೇರಿಸಿ ಮಾಡಿಸಿದರೆ ಇನ್ನು ಹೆಚ್ಚು ಪಾಪವೂ, ತಾನೇ ಸ್ವಯಂ ಎಂದರೆ ಸ್ವಹಸ್ತದಿಂದ ಮಾಡಿದರೆ ಅತ್ಯಂತ ಪಾಪವೂ, ಪುನಃ ಪುನಃ (ಮತ್ತೆ ಮತ್ತೆ) ಮಾಡಿದರೆ ಬಹಳವಾದ ಪಾಪವೂ ಸಂಭವಿಸುವುದು. ಪಾಪಪರಿಹಾರದಲ್ಲಿಯೂ ಅದೇ ವಿಧವಿರುವುದು. ಮನಸ್ಸಿನಲ್ಲಿ ಯಜ್ಞವನ್ನು ಮಾಡುತ್ತೇನೆಂದು ಸಂಕಲ್ಪಿಸಿ ಯಜ್ಞಾನುಷ್ಠಾನಕ್ರಮವನ್ನೂ ಅದರಿಂದ ಪಾಪಪರಿಹಾರವಾಗುವುದೆಂಬ ಅಂಶವನ್ನೂ ತಿಳಿದರೆ ಸ್ವಲ್ಪಮಟ್ಟಿಗೆ ಪಾಪಪರಿಹಾರವಾಗುವುದು. ಕ್ರಮವಾಗಿ ಯಜ್ಞವನ್ನೇ ಮಾಡಿದರೆ ಪಾಪವು ಪೂರ್ತಾ ಪರಿಹಾರವಾಗುವುದು. ಬ್ರಹ್ಮಹತ್ಯೆಯಂತಹ ಪಾಪವು ಮಾನಸಿಕವಾಗಿ ಅಲ್ಪವಾಗಿದ್ದರೆ ಅದನ್ನು ಇತರರಿಗೆ ಪಶ್ಚಾತ್ತಾಪಯುಕ್ತನಾಗಿ ಹೇಳುವುದರಿಂದಲೇ ಕಳೆದುಹೋಗುವುದು. ಕಾಯಿಕವಾಗಿ ನಡೆದು ದೊಡ್ಡದಾಗಿದ್ದರೆ ಅಶ್ವಮೇಧಯಾಗಮಾಡುವುದರಿಂದ ಕಳೆಯುವುದು. ಆದ್ದರಿಂದ ಪಾಪಪರಿಹಾರವು ಕರ್ತೃವಿನ ಉದ್ದೇಶಕ್ಕೆ ಅನುಸಾರವಾಗಿರುವುದು. ಈ ವಿಚಾರದಲ್ಲಿ ಇನ್ನೊಂದು ಉದಾಹರಣೆಯನ್ನು ಕೊಡುತ್ತೇವೆ "**ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮಃ**" "**ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ**" "**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**" ಎಂಬ ವೇದವಾಕ್ಯಗಳಲ್ಲಿ–ಸ್ವರ್ಗವನ್ನು ಅಪೇಕ್ಷಿಸುವವನು ಅಗ್ನಿಹೋತ್ರವನ್ನು ಮಾಡಬೇಕು; ಹಾಗೆಯೇ ಸ್ವರ್ಗಲೋಕವನ್ನು ಅಪೇಕ್ಷಿಸುವವನು ದರ್ಶಪೂರ್ಣಮಾಸೇಷ್ಟಿಗಳಿಂದ ದೇವತೆಗಳನ್ನು ಆರಾಧಿಸಬೇಕು; ಸ್ವರ್ಗಕ್ಕೆ ಹೋಗಬೇಕೆಂದು ಬಯಸುವವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು. ಎಂದು ಹೇಳಿದೆ. ಒಂದೇ ವಿಧವಾದ ಫಲವನ್ನು ಬಯಸುವವನು ಬಹಳ ಸುಲಭವಾದ ಅಗ್ನಿಹೋತ್ರದಿಂದಲೇ ಅದನ್ನು ಸಾಧಿಸುವುದನ್ನು ಬಿಟ್ಟು ಕಷ್ಟಸಾಧ್ಯವಾದ ದರ್ಶಪೂರ್ಣಮಾಸೇಷ್ಟಿಗಳಿಂದಲೂ, ಅದಕ್ಕಿಂತಲೂ ಹೆಚ್ಚು ಶ್ರಮಸಾಧ್ಯವಾದ ಅಗ್ನಿಷ್ಟೋಮಯಾಗದಿಂದಲೂ ಸ್ವರ್ಗವನ್ನು ಪಡೆಯಲು ಏಕೆ ಪ್ರಯತ್ನಿಸಬೇಕು? ಎಂದರೆ, ಸ್ವರ್ಗದಲ್ಲಿಯೂ, ಸ್ವರ್ಗಫಲಗಳಲ್ಲಿಯೂ ಅನೇಕ ವಿಧಗಳಿರುವುವು. ಸುಲಭವಾದ ಯಜ್ಞಮಾಡುವವನಿಗೆ ಸ್ವರ್ಗದಲ್ಲಿ ಸ್ವಲ್ಪಮಟ್ಟಿಗೆ ಫಲವು ದೊರೆಯುವುದು, ಕಷ್ಟಸಾಧ್ಯವಾದ ಯಜ್ಞಗಳನ್ನು ಶ್ರಮಪಟ್ಟು ಮಾಡಿದವನಿಗೆ ಹೆಚ್ಚು ಪ್ರತಿಫಲ ದೊರೆಯುವುದು. ಎಂದರೆ ಅವನವನ ಕರ್ಮಕ್ಕೆ ತಕ್ಕಂತೆ ಅವನಿಗೆ ದೊರೆಯುವ ಫಲವೂ ಹೆಚ್ಚುಕಡಿಮೆಯಾಗಿರುವವು ಎಂದಭಿಪ್ರಾಯವು. ಆದ್ದರಿಂದಲೇ ಪ್ರತಿಯೊಂದು ವಿಧಿಯ ಜತೆಯಲ್ಲಿಯೂ ಅದನ್ನು ತಿಳಿದುಕೊಳ್ಳುವವನಿಗೂ ಫಲವು ದೊರೆಯುವುದೆಂದು ಅಲ್ಲಲ್ಲಿ ಹೇಳಿದೆ ಎಂದರೆ ವಿಧಿನಿಯಮಗಳನ್ನು ತಿಳಿದುಕೊಂಡರೆ ಸ್ವಲ್ಪಮಟ್ಟಿನ ಫಲವೂ, ವಿಧಿಯಂತೆ ಕರ್ಮಾನುಷ್ಠಾನ ಮಾಡಿದರೆ ಪೂರ್ಣಪ್ರತಿಫಲವೂ ದೊರೆಯುವುದೆಂದು ಅಭಿಪ್ರಾಯವು.

ಒಂದು ವೇಳೆ—**ಯತ್ಪರೋ ಶಬ್ದಃ ಸ ಶಬ್ದಾರ್ಥಃ**—ಒಂದು ಶಬ್ದದ ಮುಂದೆ ಇರುವ ಮತ್ತೊಂದು ಶಬ್ದವು ಅದನ್ನು ವಿವರಿಸುವುದಕ್ಕಾಗಿ ಇರುವ ಅರ್ಥವು ಎಂಬ ನ್ಯಾಯದಂತೆ ಒಂದು ವಿಧಿಯ ಸಮೀಪದಲ್ಲಿ ಇರುವ "**ಯ ಏವಂ ವೇದ**" ಎಂಬ ವಾಕ್ಯವು ಆ ವಿಧಿಯ ಅರ್ಥವನ್ನು ವಿವರಿಸುವುದಕ್ಕಾಗಿ ಇರಬಹುದು ಎಂದರೆ ಆ ವಿಧಿಯನ್ನು ಪ್ರಶಂಸೆ ಮಾಡುವುದಕ್ಕಾಗಿ ಇರಬಹುದು. ವಿಧಿಗೇ ಒಂದು ಅರ್ಥ, **ಯ ಏವಂ ವೇದ** ಎಂಬ ಪ್ರಶಂಸೆಗೆ ಬೇರೆ ಅರ್ಥ ಇರುವುದೆಂದು ಏಕೆ ಹೇಳಬಾರದು? ಎಂದರೆ ವಿಧಿಯು ಹೇಳಿದ್ದನ್ನೇ "ಯ ಏವಂ ವೇದ" ಎಂಬ ಪ್ರಶಂಸಾವಾಕ್ಯವು ಸಮರ್ಥಿಸುವುದಿಲ್ಲ ಎಂಬ **ಅರ್ಥವಾದ**ವನ್ನು ಏಕೆ ಹೇಳಬಾರದು? ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತೇವೆ. ಮೊದಲು ಅರ್ಥವಾದವೆಂದರೇನೆಂಬುದನ್ನು ವಿವರಿಸುವುದು ಅವಶ್ಯಕವು. ಬ್ರಾಹ್ಮಣಗಳಲ್ಲಿ ವಿಧಿವಾಕ್ಯಗಳು ಮಾತ್ರ ಇಲ್ಲ. ಕರ್ಮಗಳನ್ನು ವಿಧಿಸುವುದು, ಅಥವಾ ನಿಷೇಧಿಸುವುದು, ಇವೆರಡುಗುಂಪಿಗೂ ಸೇರದ ಭಾಗಗಳೂ ಇವೆ. ಈ ಭಾಗಗಳನ್ನು ನಿರರ್ಥಕವೆಂದು ಭಾವಿಸಿದರೆ ವೇದದ ಲಕ್ಷಣಕ್ಕೆ ಕುಂದು ಬರುತ್ತದೆ. ಆದುದರಿಂದ ಇವುಗಳೂ ವೇದದ ಮುಖ್ಯ ಉದ್ದಿಶ್ಯವಾದ ಶ್ರೇಯಸ್ಸಾಧನೆಗೆ ಸಹಕಾರಿಗಳು ಎಂಬುವನ್ನು ಅಂಗೀಕರಿಸ

ಬೇಕು. "ಆದುದರಿಂದ ಇವುಗಳ ನೈಜವಾದ ಅರ್ಥವನ್ನು ಬಿಟ್ಟು ಅವುಗಳಿಂದ ಸೂಚಿತವಾದ ಬೇರೆ ಒಂದು ಅರ್ಥವನ್ನು ವಿಧಿವಾಕ್ಯಗಳಿಗೆ ಅನ್ವಯಿಸುವಂತೆ ಗ್ರಹಿಸಬೇಕು. ಇಂತಹ ವಾಕ್ಯಗಳಿಗೆ **ಅರ್ಥವಾದಗಳೆಂದು ಹೆಸರು**" ಇವುಗಳು ಸಾಧಾರಣವಾಗಿ ವಿಧ್ಯುಕ್ತವಾದ ಕರ್ಮಗಳನ್ನು ಪ್ರಶಂಸನಮಾಡುತ್ತವೆ. ಅಥವಾ ನಿಷಿದ್ಧವಾದವುಗಳನ್ನು ನಿಂದಿಸುತ್ತವೆ. ಅರ್ಥವಾದವನ್ನು ಈ ಅರ್ಥಾನುಸಾರವಾಗಿ ನಾಲ್ಕು ವಿಧವಾಗಿ ವಿಂಗಡಿಸುತ್ತಾರೆ—

(೧) **ಪ್ರಶಂಸಾ**—ಸ್ತುತಿರೂಪವಾದುದು

(೨) **ನಿಂದಾ**—ನಿಷಿದ್ಧವೆಂದು ವಾದಿಸುವುದು.

(೩) **ಪರಕೃತಿ**—ವಿಧ್ಯುಕ್ತಕರ್ಮವನ್ನು ಹಿಂದೆ ಯಾರಾದರೊಬ್ಬ ಮಹನೀಯರು ಮಾಡಿದ್ದರೆಂದು ತಿಳಿಸುವುದು

(೪) **ಪುರಾಕಲ್ಪ**—ಪೂರ್ವಚರಿತ್ರೆಯನ್ನು ತಿಳಿಸುವುದು.

ಈ ರೀತಿ ನಾಲ್ಕುವಿಧ. ಈ ವಾಕ್ಯಗಳು ವಿಧ್ಯುಕ್ತಕರ್ಮಗಳಿಗೆ ಫಲವುಂಟೆಂಬುದನ್ನು ತಿಳಿಸುತ್ತವೆ. ಇವುಗಳನ್ನೋದಿ ಮನುಷ್ಯನು ಕರ್ಮವನ್ನು ಮಾಡುವುದು ಬಿಡುವುದು ಎಂಬ ನಿರ್ಣಯಕ್ಕೆ ಬರಲು ಸಹಕಾರಿಗಳಾಗಿರುತ್ತವೆ. ಒಳ್ಳೆಯ ಅಥವಾ ಕೆಟ್ಟ ಅಂಶಗಳನ್ನು ಸ್ಪಷ್ಟವಾಗಿ ತಿಳಿಯುವಂತೆ ಮಾಡಿ ವಿಧಿಗಳಿಗೆ ಪೋಷಕಗಳಾಗಿ ಕೆಲಸಮಾಡುತ್ತವೆ.

ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಮೂರುವಿಧ ಪ್ರಮಾಣಗಳಿಗೂ ಅರ್ಥವಾದಗಳಿಗೂ ಇರುವ ಸಂಬಂಧದಮೇಲೆ ಅರ್ಥವಾದಗಳು ಮೂರುವಿಧ—

೧. **ಗುಣವಾದ**—ಪ್ರತ್ಯಕ್ಷಕ್ಕೆ ವಿರುದ್ಧವಾದ ಅರ್ಥವನ್ನು ಸೂಚಿಸಿದರೆ ಗುಣವಾದವೆಂದು ಹೆಸರು. "**ಆದಿತ್ಯೋ ಯೂಪಃ**" ಎಂಬುದೊಂದು ಅರ್ಥವಾದವಾಕ್ಯ. ಸೂರ್ಯನೇ ಯೂಪಸ್ತಂಭವೆಂದರೆ ಅರ್ಥವಿಲ್ಲದ ಮಾತಾಗುತ್ತದೆ. ಯೂಪಸ್ತಂಭವು ಸೂರ್ಯನಂತೆ ತೇಜಸ್ಸಿನಿಂದ ಕೂಡಿ ಪ್ರಕಾಶಿಸುತ್ತದೆ. ಎರಡಕ್ಕೂ ಪ್ರಕಾಶವು ಸಾಮಾನ್ಯಗುಣವೆಂದು ಈ ವಾಕ್ಯದ ಅರ್ಥ.

೨. **ಅನುವಾದ**—ತಿಳಿದ ಅಂಶವನ್ನೇ ಪುನಃ ಹೇಳುವುದು. "**ಅಗ್ನಿರ್ಹಿಮಸ್ಯ ಭೇಷಜಂ**" ಚಳಿಗೆ ನಿವಾರಕವಾದುದು ಇದು ಎಲ್ಲರಿಗೂ ತಿಳಿದ ವಿಷಯವೇ.

೩. **ಭೂತಾರ್ಥವಾದ**—ಪ್ರತ್ಯಕ್ಷ, ಅನುಮಾನಗಳಿಂದ ತಿಳಿಯಲು ಅಸಾಧ್ಯವಾದ ವಿಷಯಗಳು ಎಂದರೆ ಹಿಂದಿನ ಕಾಲದಲ್ಲಿ ನಡೆದ ವಿಷಯಗಳು. "**ಇಂದ್ರೋ ವೃತ್ರಾಯ ವಜ್ರಮುದಯಚ್ಛತ್**" ಇಂದ್ರನು ವೃತ್ರಾಸುರನಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು.

ಈ ಮೂರನೆಯ ವಿಧವಾದ ಅರ್ಥವಾದದ ವಿಷಯದಲ್ಲಿ ಬಾದರಾಯಣ, ಸಾಯಣ ಮೊದಲಾದ ಆಗಮ ಪ್ರಾಮಾಣ್ಯವಾದಿಗಳಿಗೂ ಮೀಮಾಂಸಕರಿಗೂ ಭಿನ್ನಾಭಿಪ್ರಾಯವಿದೆ. ಭೂತಾರ್ಥವಾದಗಳಲ್ಲಿ ಹೇಳಿರುವ ಅಂಶಗಳನ್ನು ಒಪ್ಪದೆ ಇದ್ದರೆ, ವೇದ ಪುರಾಣ, ಇತಿಹಾಸ ಮುಂತಾದ ಎಲ್ಲ ಗ್ರಂಥಗಳೂ ಅಪ್ರಮಾಣವೆನ್ನಬೇಕಾಗುತ್ತದೆ ಎಂದು ಸಾಯಣಾದಿಗಳೂ, ಭೂತಾರ್ಥವಾದಗಳನ್ನು ಪ್ರಶಂಸಾ ಅಥವಾ ನಿಂದಾತ್ಮಕಗಳನ್ನಾಗಿಯೇ ಭಾವಿಸಬೇಕು ಎಂದು ಮೀಮಾಂಸಕರೂ ಹೇಳುತ್ತಾರೆ. ಆದರೆ ಮೀಮಾಂಸಕರ ವಾದವು ಸರಿಯಲ್ಲವೆಂದೇ ಹೇಳಬೇಕಾಗುತ್ತದೆ. ಯಜ್ಞಯಾಗಾದಿಗಳಿಗೆಲ್ಲಾ ಫಲವುಂಟೆಂದು ಹೇಳಿರುವುದಾದರೂ ರಾತ್ರಿಸತ್ರವೆಂಬ ಯಾಗದ ಮಂತ್ರಗಳಲ್ಲಿ ಆ ಯಾಗದ ಫಲವನ್ನೆಲ್ಲಿಯೂ ಹೇಳಿಲ್ಲ. ಆದರೆ ಅದಕ್ಕೆ ಸಂಬಂಧಿಸಿದ ಅರ್ಥವಾದದಲ್ಲಿ ಫಲವು ಹೇಳಲ್ಪಟ್ಟಿದೆ. ಇಲ್ಲಿಯಾದರೂ ಅರ್ಥವಾದ ಪ್ರಾಮಾಣ್ಯವನ್ನು ಅವರು ಒಪ್ಪಬೇಕಾಗುತ್ತದೆ.

ಆದ್ದರಿಂದ ಮೇಲೆ ಹೇಳಿದ ಅರ್ಥವಾದದ ವಿವರಣೆಯಂತೆ ಒಂದು ವಾಕ್ಯದಲ್ಲಿ ಹೇಳಿರುವ ಅರ್ಥವು ಅರ್ಥವಾದದಂತೆ ಅದಕ್ಕೆ ವಿರೋಧವಾಗಿರುವುದು ಕಂಡುಬರುವುದು. ಎಂದರೆ ಒಂದು ವಾಕ್ಯದ ಸೂಚಿತಾರ್ಥಕ್ಕೆ ಅದರ ಗೂಢವಾದ ಅರ್ಥಕ್ಕೆ ವ್ಯತ್ಯಾಸವು ಕಂಡುಬರುವುದು. ಉದಾಹರಣೆಗೆ **"ಗ್ರಾವಾಣಃ ಪ್ಲವಂತೆ"** ಸೋಮಲತೆಯನ್ನು ಜಜ್ಜುವ ಕಲ್ಲುಗಳು ತೇಲುತ್ತವೆ ಎಂಬ ವಾಕ್ಯದಲ್ಲಿ ಕಲ್ಲುಗಳು ತೇಲುವುದು ಅಸಂಗತವು ಎಂದರೆ ಆರೀತಿ ಲೋಕವ್ಯವಹಾರದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಈ ವಾಕ್ಯಕ್ಕೆ ಅರ್ಥವಾದದಂತೆ ಬೇರೆ ಅರ್ಥವನ್ನು ಹೇಳಬೇಕಾಗುವುದು. ಸೋಮಲತೆಗಳನ್ನು ಜಜ್ಜಿ ಹಿಂಡುವ ಕಾಲದಲ್ಲಿ ಆ ರಸದಲ್ಲಿ ಬಿದ್ದಿರುವ ಕಲ್ಲುಗಳು ಪೂರ್ತ ಮುಳಗೆ ಅರ್ಧಭಾಗ ಹೊರಗೆ ಕಾಣಿಸುತ್ತಿರುವುದರಿಂದ ಹೊರಗೆ ಕಾಣಿಸುವ ಕಲ್ಲಿನ ಭಾಗವು ರಸದಲ್ಲಿ ತೇಲುತ್ತಿರುವಂತೆ ಕಾಣುವವು ಎಂದರ್ಥವು. ಹಾಗೆಯೇ **"ದ್ವಿಃ ಸಂವತ್ಸರಸ್ಯ ಸಸ್ಯಂ ಪಚ್ಯತೇ"** (ತೈ.ಸಂ. ೫-೧-೭-೩) ಸಸ್ಯವು ಒಂದು ಸಂವತ್ಸರದಲ್ಲಿ ಎರಡಾವರ್ತಿ ಫಲಿಸುವುದು ಎಂಬ ವಾಕ್ಯದಲ್ಲಿ ಕಂಡುಬರುವ ಅರ್ಥವು ಲೋಕಾನುಭವಕ್ಕೆ ವಿರುದ್ಧವಾಗಿದೆ. ಸಸ್ಯವೆಂದರೆ ಭತ್ತ, ರಾಗಿ, ಜೋಳ ಇತ್ಯಾದಿ ಪೈರುಗಳಿಗೆ ಸಸ್ಯವೆಂದು ಹೆಸರು. ಈ ಸಸ್ಯವರ್ಗವು ಒಂದು ವರ್ಷದಲ್ಲಿ ಒಂದು ಕ್ಲಿಪ್ತವಾದ ಕಾಲದಲ್ಲಿ ಒಂದಾವರ್ತಿ ಮಾತ್ರ ಫಲವನ್ನು ಬಿಟ್ಟು ಅನಂತರ ಒಣಗಿಹೋಗುವುವು. ಮಾವು, ತೆಂಗು ಇತ್ಯಾದಿ ವೃಕ್ಷಗಳಂತೆ ಅನೇಕ ವರ್ಷಕಾಲವಿದ್ದು ಪ್ರತಿವರುಷವೂ ಫಲವನ್ನು ಬಿಡುವುದಿಲ್ಲ. ಆದ್ದರಿಂದ ಸಸ್ಯವರ್ಗವು ಎರಡಾವರ್ತಿ ಫಲಿಸುವುದೆಂಬ ವಿಷಯವು ಲೋಕದಲ್ಲಿ ಅನುಭವವಿರುದ್ಧವು. ಅರ್ಥವಾದದಂತೆ ಈ ವಾಕ್ಯಕ್ಕೆ ಅರ್ಥಮಾಡುವುದಾದರೆ ಒಂದು ಕ್ಷೇತ್ರದಲ್ಲಿ ಬಿತ್ತಿದ ಸಸ್ಯವರ್ಗವು ಸಂವತ್ಸರದ ಒಂದು ಕಾಲದಲ್ಲಿ ಫಲಿಸುವುದು. ಹಾಗೆಯೇ ಬೇರೆ ಕ್ಷೇತ್ರದಲ್ಲಿ ಸಂವತ್ಸರದ ಬೇರೆ ಕಾಲದಲ್ಲಿ ಬಿತ್ತಿದ ಅದೇ ವಿಧವಾದ ಸಸ್ಯವರ್ಗವು ಸಂವತ್ಸರದ ಬೇರೆ ಕಾಲದಲ್ಲಿ ಫಲಿಸುವುದು. ಆದ್ದರಿಂದ ಒಂದೇ ವಿಧವಾದ ಸಸ್ಯವರ್ಗವು ಸಂವತ್ಸರದ ಎರಡು ಬೇರೆಬೇರೆ ಕಾಲದಲ್ಲಿ ಫಲಿಸುವುದನ್ನು ಇಲ್ಲಿ ಸಸ್ಯವು ಸಂವತ್ಸರದಲ್ಲಿ ಎರಡಾವರ್ತಿ ಫಲಿಸುತ್ತದೆ ಎಂದು ಹೇಳಲಾಗಿದೆ. ಎಲ್ಲರಿಗೂ ತಿಳಿದಿರುವ ವಿಷಯವನ್ನೇ ಮತ್ತೊಂದಾವರ್ತಿ ಹೇಳುವುದಕ್ಕೆ ಅನುವಾದವೆಂದು ಹೆಸರು. ಆದ್ದರಿಂದ ಇಲ್ಲಿ ಸಸ್ಯವು ಪಕ್ವವಾಗುವುದು ಎಂದು ಎರಡಾವರ್ತಿ ಹೇಳಿರುವುದರಿಂದ ಇದು ಅನುವಾದವು. ಈ ರೀತಿ ತಿಳಿಯುವುದರಿಂದ ಫಲವುಂಟೆಂಬ ವಚನವು ವಾಕ್ಯದ ಸ್ವಾರ್ಥಕ್ಕೆ ಬಾಧಕವನ್ನುಂಟುಮಾಡುವುದಿಲ್ಲ. ಆದ್ದರಿಂದ ವಾಕ್ಯದ ಮೂಲಾರ್ಥಕ್ಕೆ ಪ್ರಮಾಣವಿದ್ದಂತಾಯಿತು. ಹಾಗಿಲ್ಲದೆ ಅರ್ಥವಾದದಿಂದ ಮೂಲಾರ್ಥಕ್ಕೆ ವಿರೋಧವುಂಟಾಗುವುದಾದರೆ ವೇದಮಂತ್ರಗಳಲ್ಲಿ ಉಕ್ತವಾಗಿರುವ ದೇವತೆಗಳ ಹಸ್ತಪಾದಾದ್ಯವಯವಗಳ ವಿಷಯವು ಸಿದ್ಧಿಸುವುದಿಲ್ಲ. ಎಂದರೆ ದೇವತೆಗಳ ಶರೀರಾದಿವರ್ಣನೆ ಇರುವ ಮಂತ್ರಗಳ ಅರ್ಥವನ್ನು ಒಪ್ಪುವುದಕ್ಕಾಗುವುದಿಲ್ಲ. ಆದ್ದರಿಂದ—

**ವಿರೋಧೇ ಗುಣವಾದಃ ಸ್ಯಾದನುವಾದೋಽವಧಾರಿತೇ ।**
**ಭೂತಾರ್ಥವಾದಸ್ತದ್ಧಾನಾದರ್ಥವಾದಸ್ತ್ರಿಧಾ ಮತಃ ॥ ಇತಿ**

ಅರ್ಥವಾದವು ಮೂರು ವಿಧವಾಗಿರುವುದು. ಎರಡು ವಸ್ತುಗಳು ಕೆಲವು ವಿಷಯಗಳಲ್ಲಿ ಗುಣಸಾಮ್ಯವಿದ್ದು ಮತ್ತೆ ಕೆಲವು ವಿಷಯಗಳಲ್ಲಿ ವಿರೋಧವಿದ್ದರೆ ಆ ಅರ್ಥವಾದಕ್ಕೆ ಗುಣವಾದವೆಂದು ಹೆಸರು. ಉದಾ—**ಆದಿತ್ಯೋ ಯೂಪಃ** ಎಂಬ ವಾಕ್ಯದಲ್ಲಿ ಆದಿತ್ಯನಲ್ಲಿಯೂ ಯೂಪದಲ್ಲಿಯೂ ಪ್ರಕಾಶವೆಂಬ ಗುಣವು ಸಾಮಾನ್ಯವು. ಆದರೆ ಆದಿತ್ಯನೇ ಯೂಪವಾಗಲಾರದು ಇದು ಪರಸ್ಪರ ವಿರೋಧವು. ಅನುವಾದವೆಂದರೆ ಎಲ್ಲರಿಗೂ ತಿಳಿದಿದ್ದನ್ನು ಅಥವಾ ಒಂದಾವರ್ತಿ ಹೇಳಿದ್ದನ್ನು ಮತ್ತೆ ಹೇಳುವುದು ಉದಾ — **ಅಗ್ನಿರ್ಹಿಮಸ್ಯ ಭೇಷಜಂ** ಅಗ್ನಿಯು ಚಳಿಯನ್ನು ಪರಿಹರಿಸುವುದು ಇದು ಎಲ್ಲರಿಗೂ ತಿಳಿದ ವಿಷಯ. ಭೂತಾರ್ಥವಾದವೆಂದರೆ, ಪ್ರತ್ಯಕ್ಷಾನುಮಾನಗಳಿಂದ ತಿಳಿಯಲಾಗದ ವಿಷಯವು. ಉದಾ: **ಇಂದ್ರೋ ವೃತ್ರಾಯ ವಜ್ರಮುದಯಚ್ಛತ್,** ಇಂದ್ರನು ವೃತ್ರಾಸುರನಮೇಲೆ ವಜ್ರಾಯುಧವನ್ನು ಪ್ರಯೋಗಿಸಿದನು. ಇಲ್ಲಿ ಇಂದ್ರನು ವಜ್ರಾಯುಧವನ್ನು ವೃತ್ರಾಸುರನಮೇಲೆ ಪ್ರಯೋಗಿಸಿದ ವಿಚಾರವನ್ನು ನಾವು ನೋಡಿಯೂ ಇಲ್ಲ (ಪ್ರತ್ಯಕ್ಷವಲ್ಲ) ಮತ್ತು ಕಾರ್ಯಕಾರಣನ್ಯಾಯದಿಂದ ಊಹಿಸಲೂ

ಸಾಧ್ಯವಿಲ್ಲ. ಇದನ್ನು ವೇದವಾಕ್ಯಗಳಿಂದಲೇ ತಿಳಿಯಬೇಕು. ಆದ್ದರಿಂದಲೇ ಪ್ರತ್ಯಕ್ಷಾನುಮಾನಗಳಿಂದ ತಿಳಿಯಲು ಸಾಧ್ಯವಲ್ಲದ ವಿಷಯಗಳನ್ನು ವೇದವು ತಿಳಿಸುವುದರಿಂದ ಅದಕ್ಕಾಗಿ ವೇದಕ್ಕೆ ವ್ಯಾಖ್ಯಾನಮಾಡುವುದು ಅವಶ್ಯಕವು.

ತಸ್ಯ ಚ ವೇದಸ್ಯ ಭಾಗದ್ವಯಂ ಕಲ್ಪಸೂತ್ರಕಾರೈರುದಾಹೃತಂ—“ಮಂತ್ರಬ್ರಾಹ್ಮಣಯೋರ್ವೇದನಾಮಧೇಯಂ” ಇತಿ । ತತ್ರ ಮಂತ್ರವಿಷಯಾ ವಿಚಾರಾಃ ಸಂಹಿತಾವ್ಯಾಖ್ಯಾನೇ ದ್ರಷ್ಟವ್ಯಾಃ । ಬ್ರಾಹ್ಮಣಲಕ್ಷಣಂ ತು ದ್ವಿತೀಯಾಧ್ಯಾಯಸ್ಯ ಪ್ರಥಮಪಾದೇ ವಿಚಾರಿತಂ—

ನಾಸ್ತ್ಯೇತದ್ಬ್ರಾಹ್ಮಣೇತ್ಯತ್ರ ಲಕ್ಷಣಂ ವಿದ್ಯತೇಽಥವಾ ।
ನಾಸ್ತೀಯಂತೋ ವೇದಭಾಗಾ ಇತಿ ಕ್ಲೃಪ್ತೇರಭಾವತಃ ॥
ಮಂತ್ರಶ್ಚ ಬ್ರಾಹ್ಮಣಂ ಚೇತಿ ದ್ವೌ ಭಾಗೌ ತೇನ ಮಂತ್ರತಃ ।
ಅನ್ಯದ್ಬ್ರಾಹ್ಮಣಮಿತ್ಯೇತದ್ಭವೇದ್ಬ್ರಾಹ್ಮಣಲಕ್ಷಣಂ ॥ ಇತಿ ॥

ಚಾತುರ್ಮಾಸ್ಯೇಷ್ವಿದಮಾಮ್ನಾಯತೇ—“ಏತದ್ಬ್ರಾಹ್ಮಣಾನ್ಯೇವ ಪಂಚ ಹವೀಂಷಿ” ಇತಿ । ತತ್ರ ಬ್ರಾಹ್ಮಣಸ್ಯ ಲಕ್ಷಣಂ ನಾಸ್ತಿ । ಕುತಃ ? ವೇದಭಾಗಾನಾಮಿಯತ್ತಾನಾವಧಾರಣೇನ ಬ್ರಾಹ್ಮಣಭಾಗೇಷ್ವನ್ಯಭಾಗೇಷು ಚ ವಾಚ್ಯಲಕ್ಷಣಸ್ಯಾವ್ಯಾಪ್ತ್ಯತಿವ್ಯಾಪ್ತ್ಯೋಃ ಶೋಧಯಿತುಮಶಕ್ಯತ್ವಾದಿತಿ ಚೇನ್ನ । ಭಾಗದ್ವಯಾಂಗೀಕಾರೇಣ ಮಂತ್ರವ್ಯತಿರಿಕ್ತೋ ಭಾಗೋ ಬ್ರಾಹ್ಮಣಮಿತಿ ಲಕ್ಷಣಸ್ಯ ನಿರ್ದೋಷತ್ವಾತ್ । ನನು ಬ್ರಹ್ಮಯಜ್ಞಪ್ರಕರಣೇ ಮಂತ್ರಬ್ರಾಹ್ಮಣವ್ಯತಿರಿಕ್ತಾ ಇತಿಹಾಸಾದಯೋ ಭಾಗಾ ಆಮ್ನಾಯಂತೇ ಯದ್ಬ್ರಾಹ್ಮಣಾನೀತಿಹಾಸಾನ್ಪುರಾಣಾನಿ ಕಲ್ಪಾನ್ಗಾಥಾ ನಾರಾಶಂಸೀರಿತಿ । ನೈವಂ । ವಿಪ್ರಪರಿವ್ರಾಜಕನ್ಯಾಯೇನ ಬ್ರಾಹ್ಮಣಾದ್ಯವಾಂತರಭೇದಾನಾಮೇವೇತಿಹಾಸಾದೀನಾಂ ಪೃಥಗಭಿಧಾನಾತ್ । ದೇವಾಸುರಾಃ ಸಂಯತ್ತಾ ಆಸನ್ನಿತ್ಯಾದಯ ಇತಿಹಾಸಾಃ । ಇದಂ ವಾ ಅಗ್ರೇ ನೈವ ಕಿಂಚನಾಸೀನ್ನ ದ್ಯೌರಾಸೀದಿತ್ಯಾದಿಕಂ ಜಗತಃ ಪ್ರಾಗವಸ್ಥಾನುಪಕ್ರಮ್ಯ ಸರ್ಗಪ್ರತಿಪಾದಕಂ ವಾಕ್ಯಜಾತಂ ಪುರಾಣಂ । ಕಲ್ಪಸ್ತು ಅರುಣಕೇತುಕಚಯನಪ್ರಕರಣೇ ಸಮಾಮ್ನಾಯತೇ— “ಇತಿ ಮಂತ್ರಾಃ । ಕಲ್ಪೋತ ಊರ್ಧ್ವಂ । ಯದಿ ಬಲಿಂ ಹರೇತ್” ಇತಿ । ಅಗ್ನಿಚಯನಪ್ರಕರಣೇ ಯಮಗಾಥಾಭಿಃ ಪರಿಗಾಯತೀತಿ ವಿಹಿತಾ ಮಂತ್ರಾವಿಶೇಷಾ ಗಾಥಾಃ । ಮನುಷ್ಯವೃತ್ತಾಂತಪ್ರತಿಪಾದಿಕಾ ಋಚೋ ನಾರಾಶಂಸ್ಯಃ । ತಸ್ಮಾನ್ಮಂತ್ರಬ್ರಾಹ್ಮಣವ್ಯತಿರಿಕ್ತವೇದಭಾಗಾಭಾವಾನ್ಮಂತ್ರವ್ಯತಿರಿಕ್ತಂ ಬ್ರಾಹ್ಮಣಮಿತ್ಯೇತಲ್ಲಕ್ಷಣಂ ಸುಸ್ಥಿತಂ । ತಸ್ಯ ಲಕ್ಷಣಸ್ಯಾಗ್ನಿರ್ವೈ ದೇವಾನಾಮವಮ ಇತ್ಯಾದಿಗ್ರಂಥೇ ವಿದ್ಯಮಾನತ್ವಾದಿದಂ ಬ್ರಾಹ್ಮಣಂ । ತಚ್ಚೇಶ್ವರಾನುಗ್ರಹಾದಿತರಾಯಾಃ ಪುತ್ರೇಣ ಲಬ್ಧತ್ವಾದೈತರೇಯಕಮಿತ್ಯುಚ್ಯತೇ । ಮಹರ್ಷೀಣಾಂ ತತ್ತದ್ವೇದಭಾಗಲಾಭಃ ಸ್ಮರ್ಯತೇ—

ಯುಗಾಂತೇಽನ್ತರ್ಹಿತಾನ್ವೇದಾನ್ಸೇತಿಹಾಸಾನ್ಮಹರ್ಷಯಃ ।
ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ ॥ ಇತಿ ॥

ವೇದಕ್ಕೆ ವ್ಯಾಖ್ಯಾನಮಾಡುವುದು ಅವಶ್ಯಕವೆಂದು ಹೇಳುವಾಗ ವೇದವೆಂಬುವುದು ಯಾವುದು ಎಂಬ ಪ್ರಶ್ನೆಯು ತಲೆದೋರುವುದು ಸಹಜವು. ಈ ವಿಷಯದಲ್ಲಿ ಕಲ್ಪಸೂತ್ರಕಾರರಾದ ಮಹರ್ಷಿಗಳು ಈರೀತಿ ಹೇಳಿರುವರು—ವೇದದಲ್ಲಿ ಮಂತ್ರಭಾಗವು

ಬ್ರಾಹ್ಮಣಭಾಗವು ಎಂದು ಎರಡು ವಿಭಾಗಗಳಿರುವವು. ಬ್ರಾಹ್ಮಣವೆಂದರೆ ಮಂತ್ರದ ಸ್ವರೂಪ ಮತ್ತು ವಿನಿಯೋಗಾದಿಗಳನ್ನು ವಿವರಿಸುವ ವಾಕ್ಯಗಳು. ಈ ವಿಷಯದಲ್ಲಿ ಆಪಸ್ತಂಬ ಪರಿಭಾಷಾಸೂತ್ರದಲ್ಲಿ—**ಮಂತ್ರಬ್ರಾಹ್ಮಣಯೋರ್ವೇದನಾಮಧೇಯಂ** (ಆಪಸ್ತಂಬಯಜ್ಞಪರಿಭಾಷಾಸೂತ್ರ-೩೪) ಮಂತ್ರ ಮತ್ತು ಬ್ರಾಹ್ಮಣವಾಕ್ಯಗಳನ್ನೊಳಗೊಂಡ ಗ್ರಂಥರಾಶಿಗೆ ವೇದವೆಂದು ಹೆಸರು ಎಂದು ಹೇಳಿದೆ. ಹಾಗಾದರೆ ಮಂತ್ರವೆಂದರೆ ಯಾವುದು? ಬ್ರಾಹ್ಮಣಭಾಗವು ಯಾವುದು? ಎಂಬ ಪ್ರಶ್ನೆಯು ಸಹಜವಾಗಿ ಏಳುವುದು. ಮಂತ್ರದ ಲಕ್ಷಣವನ್ನು ಸಂಹಿತಾಭಾಗದ ವ್ಯಾಖ್ಯಾನದಲ್ಲಿ ವಿವರಿಸಲಾಗಿದೆ. ಅದನ್ನು ಅಲ್ಲಿನೋಡಿ ತಿಳಿಯಬಹುದು.

ವೇದವು ಮಂತ್ರ, ಬ್ರಾಹ್ಮಣ ಎಂಬ ಎರಡು ಭಾಗಗಳನ್ನೊಳಗೊಂಡಿರುವ ಗ್ರಂಥವೆಂದು ವೇದಕ್ಕೆ ಲಕ್ಷಣವನ್ನು ಹೇಳುವುದು ಸರಿಯಲ್ಲ. ಏಕೆಂದರೆ ಅಪಾರವಾದ ವೇದರಾಶಿಯಲ್ಲಿ ಯಾವುದು ಮಂತ್ರ, ಯಾವುದು ಬ್ರಾಹ್ಮಣ ಎಂದು ಗೊತ್ತುಮಾಡಲು ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನವಿದು—ಹಾಗಲ್ಲ ಮಂತ್ರ ಮತ್ತು ಬ್ರಾಹ್ಮಣಗಳ ಸ್ವರೂಪವನ್ನು ಜೈಮಿನಿಮಹರ್ಷಿಯು ತಮ್ಮ ಪೂರ್ವಮೀಮಾಂಸಾದರ್ಶನದ ಎರಡನೆಯ ಅಧ್ಯಾಯ ಮೊದಲನೆಯ ಪಾದದ ಏಳು ಮತ್ತು ಎಂಟನೆಯ ಅಧಿಕರಣಗಳಲ್ಲಿ (ಮಂತ್ರನಿರ್ವಚನಾಧಿಕರಣ, ಬ್ರಾಹ್ಮಣನಿರ್ವಚನಾಧಿಕರಣ) ನಿರ್ಣಯ ಮಾಡಿದ್ದಾರೆ.—

ಪೂರ್ವಪಕ್ಷ— **ಅಹೇ ಬುಧ್ನಿಯ ಮಂತ್ರಂ ಮೇ ಗೋಪಾಯ** (ತೈ. ಬ್ರಾ. ೧-೨-೧) ಎಂಬ ಮಂತ್ರಕ್ಕೆ ಲಕ್ಷಣವಿದೆಯೋ, ಇಲ್ಲವೋ ? ಎಂದರೆ ಇಲ್ಲವೇ ಇಲ್ಲ. ಏಕೆಂದರೆ ಲಕ್ಷಣವನ್ನು ಹೇಳುವಾಗ ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ ಎಂಬ ಮೂರು ದೋಷಗಳಿಲ್ಲದಂತೆ ಹೇಳಬೇಕೆಂದು ನಿಯಮವಿರುವುದಷ್ಟೆ. ಈ ದೋಷತ್ರಯವನ್ನು ನಿವಾರಣೆ ಮಾಡಿ ಲಕ್ಷಣ ಹೇಳಲು ಸಾಧ್ಯವಿಲ್ಲವಾದುದರಿಂದ ಇದು ಮಂತ್ರವಲ್ಲ.

ಸಿದ್ಧಾಂತ— ಯಜ್ಞಮಾಡುವಾಗ ಯಾಜ್ಞಿಕರು ಯಾವುದನ್ನು ಮಂತ್ರವೆಂದು ಹೇಳುವರೋ ಅದೇ ಮಂತ್ರವು. ಅದರ ಲಕ್ಷಣವು ದೋಷವರ್ಜಿತವು. ಏಕೆಂದರೆ, ಅವರು ಯಜ್ಞಾನುಷ್ಠಾನಕಾಲದಲ್ಲಿ ಮಂತ್ರಗಳೆಂದು ಅವುಗಳನ್ನು ಉಪಯೋಗಿಸುವರು; ಅಷ್ಟೇಸಾಕು. ಆ ಮಂತ್ರಗಳ ಲಕ್ಷಣವು ದೋಷವರ್ಜಿತವೇ, ಅಲ್ಲವೇ ಎಂಬುದನ್ನು ನೋಡಬೇಕಾಗಿಲ್ಲ.

ಪೂರ್ವಪಕ್ಷ ಆಧಾನಕರ್ಮದಲ್ಲಿ (ಆಧಾನಕರ್ಮವನ್ನು ಋ.ಸಂ. ಭಾಗ ೧, ೪೩೧ ನೇ ಪುಟದಲ್ಲಿ ವಿವರಿಸಲಾಗಿದೆ) **ಅಹೇ ಬುಧ್ನಿಯ ಮಂತ್ರಂ ಮೇ ಗೋಪಾಯ** (ತೈ.ಬ್ರಾ. ೧-೨-೧-೨೬) ಎಂಬ ಮಂತ್ರವನ್ನು ಹೇಳುವರು. ಇಲ್ಲಿ ಮಂತ್ರದ ಲಕ್ಷಣವೇನು ಎಂಬುದನ್ನು ಹೇಳಿಲ್ಲ. ಮಂತ್ರವು ಹೀಗಿರಬೇಕು ಎಂದು ಒಂದು ಲಕ್ಷಣವನ್ನು ಹೇಳಿದರೆ ಆ ಲಕ್ಷಣವು ಅವ್ಯಾಪ್ತಿ ಅತಿವ್ಯಾಪ್ತಿಗಳೆಂಬ ದೋಷಗಳಿಂದ ವರ್ಜಿತಗಳಾಗಿರಬೇಕು. ಇಲ್ಲಿ ಅಂತಹ ಲಕ್ಷಣವನ್ನು ಹೇಳಲು ಸಾಧ್ಯವಿಲ್ಲ. ಶಾಸ್ತ್ರದಲ್ಲಿ ವಿಧಾಯಕವಾಗಿರುವ ಅರ್ಥವನ್ನು ಪ್ರತಿಪಾದಿಸುವ ವಾಕ್ಯವೇ ಮಂತ್ರವು ಎಂದು ಹೇಳುವುದಾದರೆ—" **ವಸಂತಾಯ ಕಪಿಂಜಲಾನಾಲಭತೇ**" (ವಾ. ಸಂ. ೨೪-೨೦) ಎಂಬ ಮಂತ್ರವು ಹೊಸವಿಷಯವನ್ನು ವಿಧಿಯಂತೆ ಹೇಳುವುದರಿಂದ ಅದು ಮಂತ್ರವಾಗದೇ ಹೋಗುವುದು. ಇಂತಹ ವಾಕ್ಯವೇ ಮಂತ್ರವು ಎಂದು ನಿರ್ದೇಶಿಸಿ ಹೇಳುವುದು ಬಹಳ ಕಷ್ಟವಾಗಿರುವುದು. ಮೇಲೆ ಹೇಳಿದ **ವಸಂತಾಯ ಕಪಿಂಜಲಾನಾಲಭತೇ** ಎಂಬ ಮಂತ್ರವು ವಿಧಿರೂಪವಾಗಿರುವುದರಿಂದ ಅದಕ್ಕೆ ಅವ್ಯಾಪ್ತಿ ದೋಷವು ಬರುವುದು. **ಮನನ** ಎಂಬ ಶಬ್ದದಿಂದ (ಮನನ ಎಂದರೆ ಮನಸ್ಸಿನಲ್ಲಿ ಸಾಧಕಬಾಧಕಗಳನ್ನು ಚೆನ್ನಾಗಿ ವಿಮರ್ಶೆ ಮಾಡಿ ಯೋಚಿಸುವುದು) ಮಂತ್ರಶಬ್ದವು ಉಂಟಾಗಿರುವುದೆಂದು ಹೇಳಿದಲ್ಲಿ ಬ್ರಾಹ್ಮಣವಾಕ್ಯಗಳ ವಿಚಾರದಲ್ಲಿ ಅತಿವ್ಯಾಪ್ತಿಯೆಂಬ ದೋಷವು ಪ್ರಾಪ್ತವಾಗುವುದು. ಎಂದರೆ ಬ್ರಾಹ್ಮಣಗಳೆಲ್ಲ ಮಂತ್ರವಾಗಬೇಕಾಗುವುದು. ಹೀಗೆಯೇ ಅಸಿಪದಾಂತಗಳು ಮಂತ್ರಗಳು. ಉತ್ತಮ ಪುರುಷಾಂತಗಳು ಮಂತ್ರಗಳು ಎಂದು ಮೊದಲಾದ ಲಕ್ಷಣಗಳನ್ನು ಹೇಳಿದರೆ ಒಂದಲ್ಲ ಒಂದನ್ನು ಬಿಡಬೇಕಾಗು.

ವುದು. ಎಂದರೆ ಪರಸ್ಪರ ಅವ್ಯಾಪ್ತಿಯೆಂಬ ದೋಷವುಂಟಾಗುವುದು. ಆದುದರಿಂದ ಮಂತ್ರಕ್ಕೆ ಲಕ್ಷಣವಿಲ್ಲ. ಇಂತಹ ಮಂತ್ರಗಳನ್ನು ವೇದವೆನ್ನುವುದಕ್ಕೆ ಸಾಧ್ಯವಿಲ್ಲ.

ಸಮಾಧಾನ- -ಹಾಗಲ್ಲ. ಯಾಜ್ಞಿಕರು ಯಾವುದನ್ನು ಮಂತ್ರವೆನ್ನುವರೋ ಅದೇ ಮಂತ್ರವು. ಅವರು ಹೇಳುವದು ನಿರ್ದೋಷವಾದ ಲಕ್ಷಣ. ಆ ಲಕ್ಷಣವೊಂದೇ ಯಾಗಪ್ರಯೋಗಾದಿಗಳನ್ನು ತಿಳಿಸಿಕೊಡುವುದರಿಂದ ಅದು ಮಂತ್ರವೆಂದರೇನು ಎಂಬುದನ್ನು ತಿಳಿಸಿಕೊಡಬಲ್ಲುದು. ಹೇಗೆಂದರೆ—

**ಉರು ಪ್ರಥಸ್ವ** (ತೈ.ಸಂ. ೬-೨-೭-೩) ಮೊದಲಾದ ಮಂತ್ರಗಳು ಅನುಷ್ಠಾನಕ್ರಮವನ್ನು ತಿಳಿಸಿಕೊಡುವವು.

**ಅಗ್ನಿಮೀಳೇ ಪುರೋಹಿತಂ** (ಋ.ಸಂ. ೧-೧-೧) ಇತ್ಯಾದಿ ಮಂತ್ರಗಳು ಸ್ತುತಿರೂಪವಾದವು.

**ಇಷೇ ತ್ವಾ** (ತೈ.ಸಂ. ೧-೧-೧-೧) ಮೊದಲಾದವು ತ್ವಾಂತಗಳು ಎಂದರೆ ಕೊನೆಯಲ್ಲಿ **ತ್ವಾ** ಎಂಬ ಪದವುಳ್ಳವು.

**ಅಗ್ನ ಆ ಯಾಹಿ ವೀತಯೇ** (ಸಾ. ಸಂ. ೧-೧) ಇತ್ಯಾದಿಗಳು ಆಮಂತ್ರಣಗಳು ಎಂದರೆ ದೇವತೆಗಳನ್ನು ಆಹ್ವಾನಿಸಿ (ಬರುವಂತೆ) ಕರೆಯುವ ಮಂತ್ರಗಳು.

**ಅಗ್ನೀದಗ್ನೀನ್ ವಿಹರ** (ತೈ. ಸಂ. ೬-೩-೧-೨) ಮೊದಲಾದವು ಪ್ರೈಷ (ಆಜ್ಞೆ) ರೂಪವಾದ ಮಂತ್ರಗಳು.

**ಅಧಃ ಸ್ವಿದಾಸೀ ೩ ದುಪರಿಸ್ವಿದಾಸೀ ೩ ತ್** (ಋ.ಸಂ. ೧೦-೧೨೯-೫) ಮೊದಲಾದವು ವಿಚಾರಪರವಾದ ಎಂದರೆ ತತ್ತ್ವಾರ್ಥಬೋಧಕಗಳಾದ ಮಂತ್ರಗಳು.

**ಅಂಬೇ ಅಂಬಾಲ್ಯಂಬಿಕೇ ನ ಮಾ ನಯತಿ ಕಶ್ಚನ** (ತೈ.ಸಂ. ೭-೪-೧೯-೧) ಮೊದಲಾದವು ಪರಿವೇದನ ಎಂದರೆ ಶೋಕವನ್ನು ಪ್ರದರ್ಶಿಸುವ ಮಂತ್ರಗಳು.

**ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ** (ಋ.ಸಂ. ೧-೧೬೪-೩೪)ಮೊದಲಾದವು ಪ್ರಶ್ನರೂಪವಾದ ಮಂತ್ರಗಳು

**ವೇದಿಮಾಹುಃ ಪರಮಂತಂ ಪೃಥಿವ್ಯಾಃ**(ತೈ.ಸಂ. ೭-೪-೧೮-೨)ಮೊದಲಾದವು ಉತ್ತರರೂಪವಾದ ಮಂತ್ರಗಳು.

ಇದರಂತೆ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಹೀಗೆ ಅತ್ಯಂತ ವಿಜಾತೀಯವಾದ ವಾಕ್ಯಗಳನ್ನು ಮಂತ್ರಗಳೆನ್ನಲು ಸಮಾಖ್ಯಾನವನ್ನು (ಯಾಜ್ಞಿಕರು ಯಾವುದನ್ನು ಮಂತ್ರವೆಂದು ಹೇಳುವರೋ ಅದು ಸಮಾಖ್ಯಾನ) ಬಿಟ್ಟು ಅವ್ಯಾಪ್ತಿ ಅತಿವ್ಯಾಪ್ತಿಗಳಿಲ್ಲದ ಬೇರೆ ಯಾವ ಧರ್ಮವನ್ನು ಲಕ್ಷಣವೆಂದು ಹೇಳುವಂತಿಲ್ಲ. ಲಕ್ಷಣದಿಂದ ಏನು ಪ್ರಯೋಜನ ಎಂದರೆ ವಸ್ತುಗಳನ್ನು ಗುರುತಿಸಲು ಸಾಧನವಾದ ಚಿಹ್ನೆಯು ಯಾವುದಾದರೂ ಒಂದಿದ್ದೇ ಇರಬೇಕು. ಅದರ ಆವಶ್ಯಕತೆಯು ಬಹುಮುಖ್ಯವಾದುದು. ಎಂಬುದನ್ನು ಪೂರ್ವಾಚಾರ್ಯರು ತೋರಿಸಿದ್ದಾರೆ.

ಸಕಲಶಾಸ್ತ್ರಗಳನ್ನೂ ತಿಳಿದ ಋಷಿಗಳೂ ಕೂಡ ಪ್ರಪಂಚದಲ್ಲಿರುವ ಪದಾರ್ಥಗಳನ್ನೆಲ್ಲಾ ಒಂದೊಂದಾಗಿ ವಿಮರ್ಶೆ ಮಾಡಿ ಅದರ ಲಕ್ಷಣಾದಿಗಳನ್ನು ಹೇಳಲು ಸಮರ್ಥರಲ್ಲ. ಆದರೆ ಆ ಎಲ್ಲಾ ಪದಾರ್ಥಗಳನ್ನು (ವಸ್ತುಗಳನ್ನು) ಗುಂಪುಗುಂಪಾಗಿ ವಿಂಗಡಿಸಿ ಆ ಗುಂಪುಗಳಿಗೆ ಸ್ವಭಾವಸಿದ್ಧವಾದ ಲಕ್ಷಣಗಳನ್ನು ಹೇಳುವುದು ಸುಲಭೋಪಾಯ. ಆ ಕ್ರಮವನ್ನೇ ಬುದ್ಧಿವಂತರು ಅನುಸರಿಸುವರು. ಹಾಗೆ ಮಾಡಿದಲ್ಲಿ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳಿಗೂ ಒಂದು ವಿಧವಾಗಿ ಲಕ್ಷಣವನ್ನು ಹೇಳಬಹುದು.

ಆದುದರಿಂದ ಅಭಿಯುಕ್ತರು (ಶಿಷ್ಟರು, ಪ್ರಾಜ್ಞರು, ಕರ್ಮಾನುಷ್ಠಾತೃಗಳು) "ಇದು ಮಂತ್ರ" ಎಂದರೆ ಸಾಕು. ಅದೇ ಮಂತ್ರವು, ಅವರ ಮಾತೇ ಪ್ರಮಾಣ. ಆ ಸಮಾಖ್ಯಾನವೇ ಎಂದರೆ ಅವರ ಮಾತೇ ಲಕ್ಷಣವು.

ಇದು ವರೆಗೆ ಮಂತ್ರ ಮತ್ತು ಬ್ರಾಹ್ಮಣವಾಕ್ಯಗಳ ಲಕ್ಷಣಗಳನ್ನು ವಿವರಿಸಿ ಈಗ ವೇದರಾಶಿಯಲ್ಲಿ ಮಂತ್ರಭಾಗವು ಯಾವುದು, ಬ್ರಾಹ್ಮಣ ಭಾಗವು ಯಾವುದು ಎಂಬುದನ್ನು ವಿಮರ್ಶಿಸಲು ಎಂಟನೆಯ ಬ್ರಾಹ್ಮಣನಿರ್ವಚನಾಧಿಕರಣವನ್ನು ವಿವರಿಸುವರು.

**ನಾಸ್ತ್ಯೇತದ್ಬ್ರಾಹ್ಮಣೇತ್ಯತ್ರ ಲಕ್ಷಣಂ ವಿದ್ಯತೇಽಥವಾ ।**
**ನಾಸ್ತೀಯಂತೋ ವೇದಭಾಗಾ ಇತಿ ಕ್ಲೃಪ್ತೇರಭಾವತಃ ।**
**ಮಂತ್ರಶ್ಚ ಬ್ರಾಹ್ಮಣಂ ಚೇತಿ ದ್ವೌ ಭಾಗೌ ತೇನ ಮಂತ್ರತಃ ।**
**ಅನ್ಯದ್ಬ್ರಾಹ್ಮಣಮಿತ್ಯೇತದ್ಭವೇದ್ಬ್ರಾಹ್ಮಣಲಕ್ಷಣಂ ॥**
(ಜೈ.ನ್ಯಾ.ವಿ. ೨-೧-೮)

ಮೇಲಿನ ಸಂಗ್ರಹ ಶ್ಲೋಕಗಳ ಅರ್ಥವಿದು—

ಪೂರ್ವಪಕ್ಷ—"**ಏತದ್ಬ್ರಾಹ್ಮಣಾನ್ಯೇವ ಪಂಚ ಹವೀಗ್ಂಷಿ**" (ತೈ. ಬ್ರಾ. ೧-೬-೪-೩; ೧-೭-೧-೧) ಮೊದಲಾದ ಬ್ರಾಹ್ಮಣವಾಕ್ಯಗಳಿಗೆ ಲಕ್ಷಣವೇನಾದರೂ ಇದೆಯೇ ಅಥವಾ ಇಲ್ಲವೇ ಎಂಬ ಸಂಶಯವುಂಟಾಗುವುದು. ಲಕ್ಷಣ ವಿಲ್ಲವೆಂದೇ ನಮ್ಮ ಅಭಿಪ್ರಾಯ. ಏಕೆಂದರೆ ಮಂತ್ರಬ್ರಾಹ್ಮಣಭಾಗದ್ವಯಾತ್ಮಕವಾದ ವೇದರಾಶಿಯಲ್ಲಿ ಮಂತ್ರವು ಯಾವುದು, ಬ್ರಾಹ್ಮಣವು ಯಾವುದು ಎಂಬುದನ್ನು ವಿಂಗಡಿಸಿ ಹೇಳಲಾಗುವುದಿಲ್ಲ. ಇಷ್ಟುಮಾತ್ರ ಮಂತ್ರಭಾಗವು, ಇಷ್ಟು ಬ್ರಾಹ್ಮಣಭಾಗವು ಎಂದು ವಿಧಾಯಕವಾಗಿರುವುದಿಲ್ಲ. ಹೀಗಿರುವುದರಿಂದ ಅವ್ಯಾಪ್ತ್ಯತಿವ್ಯಾಪ್ತಿದೋಷವನ್ನು ಪರಿಹಾರಮಾಡಿ ಲಕ್ಷಣವನ್ನು ಹೇಳು ವಂತಿಲ್ಲ. ಆದುದರಿಂದ ಬ್ರಾಹ್ಮಣಕ್ಕೆ ಲಕ್ಷಣವಿಲ್ಲ.

ಸಿದ್ಧಾಂತ—ವೇದದಲ್ಲಿ ಮಂತ್ರಭಾಗ ಬ್ರಾಹ್ಮಣಭಾಗ ಎಂಬ ಎರಡು ಭಾಗಗಳಿರುವುವೆಂಬುದು ನಿರ್ವಿವಾದವಷ್ಟೆ. ಇದುವರೆಗೆ (ಹಿಂದೆ) ಮಂತ್ರಭಾಗದ ಲಕ್ಷಣವನ್ನು ಹೇಳಿಯಾಯಿತು. ಮಂತ್ರವಲ್ಲದ ಉಳಿದ ವೇದಭಾಗವು ಬ್ರಾಹ್ಮಣವೆಂದು ಬ್ರಾಹ್ಮಣಕ್ಕೆ ಲಕ್ಷಣವನ್ನು ಹೇಳಬಹುದು.

ಪೂರ್ವಪಕ್ಷ—ಚಾತುರ್ಮಾಸ್ಯವೆಂಬ ಯಾಗದಲ್ಲಿ "**ಏತದ್ಬ್ರಾಹ್ಮಣಾನ್ಯೇವ ಪಂಚ ಹವೀಗ್ಂಷಿ**" (ತೈ.ಬ್ರಾ. ೧-೭-೧-೧) ಎಂಬ ಮಂತ್ರವನ್ನು ಉಪಯೋಗಿಸುವರು. ಆದರೆ ಅಲ್ಲಿ ಬ್ರಾಹ್ಮಣಕ್ಕೆ ಲಕ್ಷಣವನ್ನು ಹೇಳಿಲ್ಲ. ಏಕೆಂದರೆ, ವೇದಭಾಗಗಳಲ್ಲಿ ಇಷ್ಟು ಮಂತ್ರ, ಇಷ್ಟು ಬ್ರಾಹ್ಮಣ ಎಂದು ಗೊತ್ತಿಲ್ಲವಾದುದರಿಂದ ಯಾವ ಲಕ್ಷಣವನ್ನು ಹೇಳಿದರೂ ಬ್ರಾಹ್ಮಣ ಭಾಗದಲ್ಲಿಯೂ ಮಂತ್ರಭಾಗದಲ್ಲಿಯೂ ಅವ್ಯಾಪ್ತ್ಯತಿವ್ಯಾಪ್ತಿದೋಷಗಳೇ ಸಂಭವಿಸುವುವು.

ಸಿದ್ಧಾಂತ—ಮಂತ್ರಬ್ರಾಹ್ಮಣಾತ್ಮಕವಾದ ವೇದಭಾಗದಲ್ಲಿ ಮಂತ್ರವಲ್ಲದ ಭಾಗವು ಬ್ರಾಹ್ಮಣ. ಮಂತ್ರವೆಂದರೆ ಯಜ್ಞಾನುಷ್ಠಾನಕರ್ತೃಗಳೂ ಪೂರ್ವಾಚಾರ್ಯರೂ ಯಾವುದನ್ನು ಮಂತ್ರವೆಂದು ಹೇಳುವರೋ ಅದು ಮಂತ್ರವು ಎಂದು ಹಿಂದೆಯೇ ಹೇಳಿದೆ. ಆದರೆ ಮಂತ್ರವು ವೇದಗಳಲ್ಲಿರುವ ಯಾವುದಾದರೂ ವಾಕ್ಯವಾಗಿರಬೇಕು ವೇದದಲ್ಲಿಲ್ಲದ ಯಾವ ವಾಕ್ಯವೇ ಆಗಲಿ, ಅದು ಶಿಷ್ಟರಿಂದ ಪರಿಗೃಹೀತವಾದರೂ ಅದು ಮಂತ್ರವೆನಿಸುವುದಿಲ್ಲ. ವೇದವಾಕ್ಯಮಾತ್ರ ಮಂತ್ರವೆನಿಸುವುದು. ವೇದವಾಕ್ಯಗಳಲ್ಲಿ ಅಲ್ಪಸ್ವಲ್ಪ ಪದವ್ಯತ್ಯಾಸವಾದರೂ, ಕ್ರಮವ್ಯತ್ಯಾಸವಾದರೂ ಅದೂ ಮಂತ್ರವೆನಿಸುವುದಿಲ್ಲ. ಈ ವಿಚಾರವನ್ನು ಜೈಮಿನಿಮಹರ್ಷಿಯು ತಮ್ಮ ಪೂರ್ವಮೀಮಾಂಸಾಸೂತ್ರದಲ್ಲಿ—"**ಆಮ್ನಾತೇಷ್ವಮಂತ್ರತ್ವಮನಾಮ್ನಾತೇಷು ಹಿ ವಿಭಾಗಃ**" (ಜೈ.ಸೂ. ೨-೧-೩೪) ಎಂದು ಹೇಳಿದ್ದಾರೆ. ಆದುದರಿಂದ ಈ ಲಕ್ಷಣಗಳುಳ್ಳ ವೇದವಾಕ್ಯವು ಮಂತ್ರವು. ವೇದದ ಉಳಿದ ಭಾಗವು ಬ್ರಾಹ್ಮಣವು. ಈ ವಿಚಾರದಲ್ಲಿ **ಶೇಷೇ ಬ್ರಾಹ್ಮಣಶಬ್ದಃ** (ಜೈ.ಸೂ. ೨-೧-೩೩) ಎಂದು ಸೂತ್ರವಿರುವುದು.

ಇದುವರೆಗೆ ಹೇಳಿದ ವಿಷಯಗಳಿಂದ ವೇದವಾಕ್ಯಗಳಲ್ಲಿ ಮಂತ್ರವು ಯಾವುದು, ಬ್ರಾಹ್ಮಣವು ಯಾವುದು ಎಂಬುದನ್ನು ಸೂಕ್ಷ್ಮವಾಗಿ ವಿವರಿಸಿದ್ದಾಯಿತು. ಇದಲ್ಲದೆ ಬ್ರಾಹ್ಮಣಭಾಗವನ್ನು ನಿರ್ಣಯಿಸುವ ವಿಚಾರದಲ್ಲಿ ಪೂರ್ವಾಚಾರ್ಯರು, ಹೇತು (ಕಾರಣ), ನಿರ್ವಚನ (ವಿಷಯಸಮರ್ಥನೆ), ನಿಂದಾ (ದೋಷಾರೋಪಣೆ), ಪ್ರಶಂಸಾ (ಸ್ತುತಿ), ಸಂಶಯ (ಅನುಮಾನ), ವಿಧಿ (ಆಜ್ಞೆ), ಪರಕ್ರಿಯಾ (ಇನ್ನೊಂದು ವಸ್ತುವಿನ ವಿಷಯವಾಗಿ ಹೇಳುವುದು), ಪುರಾಕಲ್ಪ (ಹಿಂದಿನ ಇತಿಹಾಸ), ವ್ಯವಧಾರಣಕಲ್ಪನಾ (ಹೀಗೆ ಮಾಡಿದರೆ ಹೀಗೆ ಆಗುವುದು ಎಂದು ವಿಷಯ ನಿರೂಪಣೆ) ಎಂಬ ಈ ಲಕ್ಷಣಗಳಿಂದ ಬ್ರಾಹ್ಮಣಭಾಗವನ್ನು ಗೊತ್ತುಮಾಡಬಹುದೆಂದು ಹೇಳುತ್ತಾರೆ. ಈ ಲಕ್ಷಣಗಳಲ್ಲಿ ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡುತ್ತಾರೆ—

### ಬ್ರಾಹ್ಮಣಭಾಗದಲ್ಲಿ

**ಹೇತುಃ—ತೇನ ಹ್ಯನ್ನಂ ಕ್ರಿಯತೇ ।** (ಶ. ಬ್ರಾ. ೨-೫-೨-೨೩)
**ನಿರ್ವಚನಂ—ತದ್ದಧ್ನೋ ದಧಿತ್ವಂ ।** (ತೈ. ಸಂ. ೨-೫-೩-೪)
**ನಿಂದಾ—ಅಮೇಧ್ಯಾ ವೈ ಮಾಷಾಃ ।** (ತೈ. ಸಂ. ೫-೧-೮-೧)
**ಪ್ರಶಂಸಾ—ವಾಯುರ್ವೈ ಕ್ಷೇಪಿಷ್ಠಾ ದೇವತಾ ।** (ತೈ. ಸಂ. ೨-೧-೧-೧)
**ಸಂಶಯಃ--ತದ್ವ್ಯಚಿಕಿತ್ಸತ್ । ಜುಹವಾನೀ೩ ಮಾ ಹೌಷಾ೩ ಮಿತಿ** (ತೈ.ಸಂ. ೬-೫-೯-೧)
**ವಿಧಿಃ—ಯಜಮಾನೇನ ಸಂಮಿತೌದುಂಬರೀ ಭವತಿ ।** (ತೈ. ಸಂ. ೬-೨-೧೦-೩)
**ಪರಕೃತಿಃ—ಮಾಷಾನೇವ ಮಹ್ಯಂ ಪಚಂತಿ ।**
**ಪುರಾಕಲ್ಪಃ—ಪುರಾ ಬ್ರಾಹ್ಮಣಾ ಅಭೈಷುಃ ।** (ತೈ. ಸಂ. ೧-೫-೭-೫)
**ವ್ಯವಧಾರಣಕಲ್ಪನಾ--ಯಾವತೋಽಶ್ವಾನ್ ಪ್ರತಿಗೃಹ್ಣೀಯಾತ್ತಾವತೋ ವಾರುಣಾಂಶ್ಚತುಷ್ಕಪಾಲಾನ್ನಿರ್ವಪೇತ್** (ತೈ. ಸಂ. ೨-೩-೧೨-೧)

ಹೀಗೆಯೇ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಬ್ರಾಹ್ಮಣವಾಕ್ಯದ ಲಕ್ಷಣವನ್ನು ಹೇಳಬೇಕಾದರೆ ಹಿಂದೆ ಹೇಳಿದ ಹೇತುನಿರ್ವಚನಾದಿಲಕ್ಷಣಗಳಿಂದ ಕೂಡಿದ ಮಂತ್ರಭಾಗವಲ್ಲದ ವಾಕ್ಯಗಳೆಂದು ಹೇಳುವಹಾಗಿಲ್ಲ. ಅಥವಾ ಹೇತುನಿರ್ವಚನಾದಿಗಳಿಂದ ಬೇರೆಯಾದ ಬ್ರಾಹ್ಮಣವಿಲ್ಲ ಎಂದೂ ಹೇಳುವಂತಿಲ್ಲ. ಏಕೆಂದರೆ, ಮಂತ್ರಾದಿಗಳಲ್ಲಿಯೂ ಕೂಡ ಇಂತಹ ಹೇತುನಿರ್ವಚನಾದಿ ವಾಕ್ಯಗಳೂ ಇವೆ--

### ಮಂತ್ರಭಾಗದಲ್ಲಿ

**ಹೇತುಃ—ಇಂದವೋ ವಾಮುಶಂತಿ ಹಿ ।** (ಋ. ಸಂ. ೧-೨-೪)
**ನಿರ್ವಚನಂ—ಉದಾನಿಷುರ್ಮಹೀರಿತಿ ತಸ್ಮಾದುದಕಮುಚ್ಯತೇ** (ಅಥ. ಸಂ. ೩-೧೩-೪)
**ನಿಂದಾ—ಮೋಘಮನ್ನಂ ವಿಂದತೇ ಅಪ್ರಚೇತಾಃ** (ಋ. ಸಂ. ೧೦-೧೧೭-೬)
**ಪ್ರಶಂಸಾ—ಅಗ್ನಿರ್ಮೂರ್ಧಾ ದಿವಃ ಕಕುತ್ ।** (ಋ. ಸಂ. ೮-೪೪-೧೬)
**ಸಂಶಯಃ—ಅಧಃಸ್ವಿದಾಸೀ೩ ದುಪರಿಸ್ವಿದಾಸೀ೩ ತ್** (ಋ.ಸಂ. ೧೦-೧೨೯-೫)
**ವಿಧಿಃ—ವಸಂತಾಯ ಕಪಿಂಜಲಾನಾಲಭತ ।** (ವಾ.ಸಂ. ೨೪-೨೦)
**ಪರಕೃತಿಃ—ಸಹಸ್ರಮಯುತಾ ದದತ್ ।** (ಋ.ಸಂ. ೮-೨೧-೧೮)
**ಪುರಾಕಲ್ಪಃ—ಯಜ್ಞೇನ ಯಜ್ಞಮಯಜಂತ ದೇವಾಃ ।** (ಋ.ಸಂ. ೧೦-೯೦-೧೬)

ಇವೇ ಮೊದಲಾದ ವಾಕ್ಯಗಳು ಬೇಕಾದಷ್ಟಿವೆ. ಹೋಗಲಿ, ಇತಿಕರಣಬಹುಲತ್ವವು ಎಂದರೆ ಅಲ್ಲಲ್ಲಿ ಇತಿ ಇತಿ ಎಂಬ ಇತಿಶಬ್ದವನ್ನು ಉಪಯೋಗಿಸಿರುವ ವಾಕ್ಯಗಳನ್ನು ಬ್ರಾಹ್ಮಣಗಳೆಂದು ಹೇಳೋಣವೇ, ಎಂದರೆ ಅದೂ ಆಗುವುದಿಲ್ಲ. ಏಕೆಂದರೆ ಇತ್ಯಾದದಾ, ಇತ್ಯಯಜಥಾ, ಇತ್ಯಪಚ ಮೊದಲಾದ ಇತಿ ಶಬ್ದದಿಂದ ಕೂಡಿದ ಅನೇಕ ಮಂತ್ರಗಳನ್ನು ಬ್ರಾಹ್ಮಣನು ಯಜ್ಞದಲ್ಲಿ ಹೇಳಬೇಕಾಗಿರುವುದು. ಆದುದರಿಂದ ಇಲ್ಲಿ ಅತಿವ್ಯಾಪ್ತಿ ಎಂಬ ದೋಷವು ಬರುವುದು.

ಅದೂ ಹೋಗಲಿ, ಇತ್ಯಾಹ ಎಂಬ ಪದಗಳಿಂದ ಅಂತ್ಯವಾದ ವಾಕ್ಯಗಳನ್ನು ಬ್ರಾಹ್ಮಣಗಳೆಂದು ಹೇಳಬಹುದೇ, ಎಂದರೆ ಅದೂ ಆಗುವುದಿಲ್ಲ. ಏಕೆಂದರೆ—"**ರಾಜಾ ಚಿದ್ಯಂ ಭಗಂ ಭಕ್ಷೀತ್ಯಾಹ**" (ಋ.ಸಂ. ೭-೪೧-೨) ಮತ್ತು "**ಯೋ ವಾ ರಕ್ಷಃ ಶುಚಿರಸ್ಮೀತ್ಯಾಹ**" (ಋ. ಸಂ. ೭-೧೦೪-೧೬) ಎಂಬ ಮಂತ್ರಗಳಲ್ಲಿ **ಇತ್ಯಾಹ** ಎಂಬ ಪದಗಳಿರುವುದರಿಂದ ಇಲ್ಲಿಯೂ ಅತಿವ್ಯಾಪ್ತಿ ಎಂಬ ದೋಷವು ಬಂದಿತು. ಆದುದರಿಂದ ಇದೂ ಲಕ್ಷಣವಲ್ಲ.

ಆಖ್ಯಾಯಿಕಾ ಎಂದರೆ ಕಥಾರೂಪವಾದ ವಿವರಣೆ ಇರುವ ಭಾಗವನ್ನು ಬ್ರಾಹ್ಮಣವೆನ್ನೋಣವೇ ಎಂದರೆ, ಋಗ್ವೇದದ ೧೦-೧೦ ನೆಯ ಸೂಕ್ತದಲ್ಲಿ ಯಮಯಮಿಯರ ಸಂವಾದವು ಇರುವುದರಿಂದಲೂ ಋ. ಸಂ. ೧೦-೯೫ ನೆಯ ಸೂಕ್ತದಲ್ಲಿ ಊರ್ವಶೀ ಮತ್ತು ಪುರೂರವಾ-ಎಂಬುವರ ಸಂವಾದವಿರುವುದರಿಂದಲೂ ಇಲ್ಲಿಯೂ ಅತಿವ್ಯಾಪ್ತಿದೋಷವಿದ್ದೇ ಇರುವುದು. ಆದುದರಿಂದ ಇದೂ ಬ್ರಾಹ್ಮಣಕ್ಕೆ ಲಕ್ಷಣವಲ್ಲ. ಆದುದರಿಂದ ಬ್ರಾಹ್ಮಣಕ್ಕೆ ಅವ್ಯಾಪ್ತಿ, ಅತಿವ್ಯಾಪ್ತಿ ಮೊದಲಾದ ದೋಷಗಳಿಲ್ಲದೆ ನಿರ್ದುಷ್ಟವಾಗಿರುವ ಲಕ್ಷಣವು ಇಲ್ಲವೇ ಇಲ್ಲ ಎಂದು ಹೇಳಬೇಕಾಗುವುದು (ಇದು ಪೂರ್ವಪಕ್ಷವು).

ಸಮಾಧಾನ—ಹಾಗಲ್ಲ, ಅದಕ್ಕೆ ಸರಿಯಾದ ಸಮಾಧಾನವನ್ನು ಹೇಳುತ್ತೇವೆ. ಬ್ರಾಹ್ಮಣಕ್ಕೆ ಲಕ್ಷಣವಿದ್ದೇ ಇದೆ. ವೇದದಲ್ಲಿ ಮಂತ್ರ, ಬ್ರಾಹ್ಮಣ ಎಂದು ಎರಡೇಭಾಗಗಳಿರುವವು ಎಂದು ಶಿಷ್ಟರು ಅಂಗೀಕರಿಸುವುದರಿಂದಲೂ, ಮೊದಲನೆಯ ಭಾಗವಾದ ಮಂತ್ರದ ಲಕ್ಷಣವನ್ನು ಹೇಳಿರುವುದರಿಂದಲೂ ಮಂತ್ರವಲ್ಲದ ಉಳಿದ ವೇದಭಾಗವೆಲ್ಲಾ ಬ್ರಾಹ್ಮಣವೆಂದು ಬ್ರಾಹ್ಮಣಕ್ಕೆ ಲಕ್ಷಣವನ್ನು ಹೇಳುವುದು ಸರಿಯಾಗಿದೆ. ಇದನ್ನೇ ಜೈಮಿನಿಮಹರ್ಷಿಗಳು—**ತಚ್ಚೋದಕೇಷು ಮಂತ್ರಾಖ್ಯಾ ।** (ಜೈ.ಸೂ. ೨-೧-೩೨) ಮತ್ತು **ಶೇಷೇ ಬ್ರಾಹ್ಮಣಶಬ್ದಃ ।** (ಜೈ.ಸೂ. ೨-೧-೩೩) ಎಂಬ ಎರಡು ಸೂತ್ರಗಳಿಂದ ಹೇಳಿದಾರೆ.

ವೇದದಲ್ಲಿ ಕೆಲವು ಅಭಿಧಾಯಕವಾಕ್ಯಗಳುಂಟು. ಕರ್ಮವನ್ನು ಬೋಧಿಸುವ ವಾಕ್ಯಕ್ಕೆ ವಿಧಾಯಕವಾಕ್ಯವೆಂದೂ, ಕರ್ಮವನ್ನು ಬೋಧಿಸದ ವಾಕ್ಯಕ್ಕೆ ಅಭಿಧಾಯಕ ವಾಕ್ಯವೆಂದೂ ಮೀಮಾಂಸಾಸೂತ್ರದ ಶಾಬರಭಾಷ್ಯದಲ್ಲಿ (೨-೧-೬) ಹೇಳಿದೆ. ಸಂಪ್ರದಾಯವನ್ನು ತಿಳಿದ ಶಿಷ್ಟರು, ಈ ಅಭಿಧಾಯಕವಾಕ್ಯಗಳನ್ನೂ- **ಮಂತ್ರಾನಧೀಮಹೇ**—ಎಂದು ಹೇಳಿ ಮಂತ್ರಗಳೆಂದು ಕರೆದಿದ್ದಾರೆ. ಆದುದರಿಂದ ಶಿಷ್ಟರು ಮಂತ್ರವೆಂದು ಹೇಳುವ ವೇದಭಾಗವೆಲ್ಲವೂ ಮಂತ್ರವು. ಹಾಗೆ ಮಂತ್ರವಲ್ಲದ ಇತರ ವೇದಭಾಗವೆಲ್ಲ ಬ್ರಾಹ್ಮಣಗಳು ಎಂದು ವ್ಯವಹಾರವು.

ಹಾಗಾದರೆ, ಬ್ರಹ್ಮಯಜ್ಞಪ್ರಕರಣದಲ್ಲಿ ಮಂತ್ರಬ್ರಾಹ್ಮಣಗಳೆರಡೂ ಅಲ್ಲದ ಇತಿಹಾಸವೇ ಮೊದಲಾದ ಭಾಗಗಳು ಇವೆಯೆಂದು ಹೇಳಿದೆಯಲ್ಲ. "**ಯದ್ಬ್ರಾಹ್ಮಣಾನೀತಿಹಾಸಾನ್ ಪುರಾಣಾನಿ ಕಲ್ಪಾನ್ ಗಾಥಾ ನಾರಾಶಂಸೀಃ ।** (ತೈ.ಆ. ೨-೯) ಬ್ರಾಹ್ಮಣಗಳು, ಇತಿಹಾಸಗಳು, ಪುರಾಣಗಳು, ಕಲ್ಪಗಳು ಗಾಥೆಗಳು, ನಾರಾಶಂಸೀ ಎಂಬ ಪ್ರಶಂಸೆಗಳು ಎಂಬ ಇಷ್ಟುವಿಧ ವೇದವಾಕ್ಯಗಳಿವೆಯೆಂದು ಹೇಳಿರುವುದರಿಂದ ವೇದದಲ್ಲಿ ಮಂತ್ರ ಮತ್ತು ಬ್ರಾಹ್ಮಣಗಳಲ್ಲದ ಇನ್ನೂ ಇತರ ವಿಧವಾದ ವಾಕ್ಯಗಳಿವೆಯೆಂದು ಹೇಳಿದ ಹಾಗಾಯಿತು ಎಂದರೆ, ಹಾಗಲ್ಲ. ವಿಪ್ರಪರಿವ್ರಾಜಕನ್ಯಾಯದಂತೆ ಈ ಇತಿಹಾಸಾದಿಭಾಗಗಳೆಲ್ಲವೂ ಬ್ರಾಹ್ಮಣವೆಂದು ಹೇಳಲ್ಪಡುವ ವೇದಭಾಗದಲ್ಲಿ ಅಡಗಿರುವ ಅವಾಂತರಭೇದಗಳು (sub-divisions), ಸ್ವತಂತ್ರವಾದ ಪ್ರತ್ಯೇಕ ಭಾಗಗಳಲ್ಲ. ಇಲ್ಲಿ ವಿಪ್ರಪರಿವ್ರಾಜಕನ್ಯಾಯವೆಂದರೆ- ಬ್ರಾಹ್ಮಣರಿಗೆಲ್ಲ ಅಂಗಳದಲ್ಲಿ ಊಟವಾಗಲಿ, ಪರಿವ್ರಾಜಕರಿಗೆ

ಒಳಗೆ ಊಟವಾಗಲಿ ಎಂದರೆ ಪರಿವ್ರಾಜಕರು ಬ್ರಾಹ್ಮಣರಲ್ಲ ಎಂದು ಅರ್ಥವಲ್ಲ; ಅವರೂ ಬ್ರಾಹ್ಮಣರೇ. ಆದರೆ ಬ್ರಾಹ್ಮಣರಲ್ಲಿ ಅವರದು ವಿಶೇಷ ಸ್ಥಾನಪಡೆದ ಸಂಗಡ ಅಥವಾ ಗುಂಪು (ಆಶ್ರಮ ವಿಶೇಷ). ಆದುದರಿಂದ ಪರಿವ್ರಾಜಕರು ಬ್ರಾಹ್ಮಣರಲ್ಲಿ ಒಂದು ಅವಾಂತರಭೇದ ಮಾತ್ರ. ಬ್ರಾಹ್ಮಣರು ಎಂದು ಸಾಮಾನ್ಯವಾಗಿ ಹೇಳುವಾಗ ಬ್ರಾಹ್ಮಣರಲ್ಲಿರುವ ಅವಾಂತರಭೇದ ಗಳೆಲ್ಲವೂ ಸೇರಿರುವಂತೆ ವೇದದ ಬ್ರಾಹ್ಮಣಭಾಗ ಎಂದು ಹೇಳುವಾಗ ಬ್ರಾಹ್ಮಣಭಾಗದಲ್ಲಿರುವ ಇತಿಹಾಸ, ಪುರಾಣ, ಕಲ್ಪ ಮೊದಲಾದ ವಿಷಯಗಳನ್ನೊಳಗೊಂಡ ಅವಾಂತರ ಭೇದಗಳೆಲ್ಲವೂ ಸೇರಿರುವವು. ಈ ವಿಚಾರದಲ್ಲಿ ಕೆಲವು ಉದಾಹರಣೆಗಳನ್ನು ಕೊಡುವೆವು—

**ದೇವಾಸುರಾಃ ಸಂಯತ್ತಾ ಆಸನ್ ।** (ತೈ. ಸಂ. ೧-೫-೧-೧) ಮೊದಲಾದ ವಾಕ್ಯಗಳು ಇತಿಹಾಸಕ್ಕೆ ಉದಾಹರಣೆಗಳು.

**ಇದಂ ವಾ ಅಗ್ರೇ ನೈವ ಕಿಂಚನಾಸೀತ್ ।** (ತೈ. ಬ್ರಾ. ೨-೨-೯-೧) ಮೊದಲಾದ ವಾಕ್ಯಗಳು ಪುರಾಣ ದಲ್ಲಿರುವಂತೆ ಜಗತ್ಸೃಷ್ಟಿಗೆ ಪೂರ್ವದಲ್ಲಿದ್ದ ಅವಸ್ಥೆಯನ್ನೂ, ಸೃಷ್ಟಿವಿಷಯವನ್ನೂ ಹೇಳುವುದರಿಂದ ಇದು ಪುರಾಣಕ್ಕೆ ಉದಾಹರಣೆಯು.

**ಇತಿ ಮಂತ್ರಾಃ । ಕಲ್ಪೋಽತ ಊರ್ಧ್ವಂ । ಯದಿ ಬಲಿಗ್ಂ ಹರೇತ್ ।** (ತೈ. ಆ. ೧-೨೬-೧) ಈ ಮಂತ್ರಗಳು ಆರುಣಕೇತುಕಚಯನ ಪ್ರಕರಣದಲ್ಲಿರುವವು. ಇವು ಕಲ್ಪಕ್ಕೆ ಉದಾಹರಣೆಗಳು.

ಅಗ್ನಿಚಯನೇ—**ಯಮಗಾಥಾಭಿಃ ಪರಿಗಾಯತಿ ।** (ತೈ. ಸಂ. ೫-೧-೮-೨) ಈ ಮಂತ್ರಗಳು ಗಾಥೆಗಳು.

ಮನುಷ್ಯರಿಗೆ ಸಂಬಂಧಪಟ್ಟ ಎಂದರೆ ರಾಜರು ಮೊದಲಾದವರ ಮಾನ ಪ್ರಶಂಸೆಯನ್ನು ವಿವರಿಸುವ ಋಕ್ಕು ಅಥವಾ ಮಂತ್ರಗಳಿಗೆ **ನಾರಾಶಂಸಿಗಳೆಂದು** ಹೆಸರು. ಇಂತಹ ಮಂತ್ರಗಳು ಋಗ್ವೇದದಲ್ಲಿ ಅನೇಕವಿರುವವು.

ಆದುದರಿಂದ ಮೇಲೆ ಹೇಳಿದ ಇತಿಹಾಸಾದಿವಿಷಯಗಳನ್ನೊಳಗೊಂಡ ವಾಕ್ಯಗಳೆಲ್ಲವೂ ಬ್ರಾಹ್ಮಣಭಾಗದ ಅವಾಂತರ ಭೇದಗಳಾಗಿರುವುದರಿಂದ ಇವುಗಳೆಲ್ಲವೂ ಬ್ರಾಹ್ಮಣವಾಕ್ಯಗಳು. ಆದ್ದರಿಂದ ವೇದದಲ್ಲಿ ಮಂತ್ರಭಾಗ ಮತ್ತು ಬ್ರಾಹ್ಮಣಭಾಗ ಎಂಬ ಎರಡೇ ಭಾಗಗಳಿದ್ದಂತಾಯಿತು. ವೇದಗಳಲ್ಲಿ ಈ ಎರಡು ಭಾಗಗಳನ್ನು ಬಿಟ್ಟು ಬೇರೆ ಭಾಗಗಳಿಲ್ಲ. ಆದುದರಿಂದ ವೇದದಲ್ಲಿ ಮಂತ್ರಭಾಗವನ್ನು ಬಿಟ್ಟರೆ ಉಳಿದ ಭಾಗವೇ ಬ್ರಾಹ್ಮಣವೆಂದು ನಿಶ್ಚಿತವಾಯಿತು. **ಅಗ್ನಿರ್ವೈ ದೇವಾನಾಮವಮಃ** ಎಂದು ಪ್ರಾರಂಭವಾಗುವ ಗ್ರಂಥದಲ್ಲಿ ಮೇಲೆ ತಿಳಿಸಿರುವ ಲಕ್ಷಣವಿರುವುದರಿಂದ ಇದು ಬ್ರಾಹ್ಮಣವೆಂಬ ಗ್ರಂಥವು. ಈ ಗ್ರಂಥವು ಇತರಾ ಎಂಬ ಸ್ತ್ರೀಯ ಪುತ್ರನಿಗೆ ಈಶ್ವರಾನುಗ್ರಹದಿಂದ ಲಬ್ಧವಾದುದರಿಂದ ಈ ಬ್ರಾಹ್ಮಣಕ್ಕೆ ಐತರೇಯಬ್ರಾಹ್ಮಣವೆಂಬ ಹೆಸರು ಪ್ರಸಿದ್ಧವಾಗಿದೆ. ಮಹರ್ಷಿಗಳಿಗೆ ನಾನಾವೇದಭಾಗಗಳು ಗೋಚರವಾದ ವಿಷಯದಲ್ಲಿ—

**ಯುಗಾಂತೇಽನ್ತರ್ಹಿತಾನ್ ವೇದಾನ್ ಸೇತಿಹಾಸಾನ್ಮಹರ್ಷಯಃ ।**
**ಲೇಭಿರೇ ತಪಸಾ ಪೂರ್ವಮನುಜ್ಞಾತಾಃ ಸ್ವಯಂಭುವಾ ॥ ಇತಿ**

ಹಿಂದಿನಯುಗವು ಸಮಾಪ್ತಿಯಾಗಿ ಲೋಕಸಂಹಾರವಾದಾಗ ವೇದಗಳೂ ಇತಿಹಾಸಾದಿಗಳೂ ಪರಬ್ರಹ್ಮನಲ್ಲಿಯೇ ಲೀನವಾದುವು. ಪುನಃ ಸೃಷ್ಟಿಯಾದಾಗ ಮಹರ್ಷಿಗಳು ತಪಸ್ಸುಮಾಡಿ ಬ್ರಹ್ಮನಲ್ಲಿ ಅಂತರ್ಗತವಾಗಿದ್ದ ವೇದಾದಿಗಳನ್ನು ಬ್ರಹ್ಮನ ಅನುಗ್ರಹದಿಂದ ಪುನಃ ಪಡೆದರು ಎಂದು ಸ್ಮೃತಿವಾಕ್ಯವು ತಿಳಿಸುತ್ತದೆ.

**ಪ್ರಕೃತಸ್ಯ ತು ಬ್ರಾಹ್ಮಣಸ್ಯೈತರೇಯಕತ್ವೇ ಸಂಪ್ರದಾಯವಿದ ಏತಾಮಾಖ್ಯಾಯಿಕಾಮಾ-ಚಕ್ಷತೇ । ಕಸ್ಯಚಿತ್ಖಲು ಮಹರ್ಷೇರ್ಬಹ್ವ್ಯಃ ಪತ್ನ್ಯೋ ವಿದ್ಯಂತೇ ತಾಸಾಂ ಮಧ್ಯೇ ಕಸ್ಯಾಶ್ಚಿದಿ-**

**ತರೇತಿ ನಾಮಧೇಯಂ। ತಸ್ಯಾ ಇತರಾಯಾಃ ಪುತ್ರೋ ಮಹಿದಾಸಾಖ್ಯಃ ಕುಮಾರಃ। ಏತಚ್ಚಾರಣ್ಯಕಾಂಡೇ ಸಮಾಮ್ನಾಯತೇ– "ಏತದ್ಧ ಸ್ಮ ವೈ ತದ್ವಿದ್ವಾನ್ಮಹಿದಾಸ ಐತರೇಯಃ" । ಇತಿ। ತದೀಯಸ್ಯ ತು ಪಿತುರ್ಭಾರ್ಯಾಂತರಪುತ್ರೇಷ್ವೇವ ಸ್ನೇಹಾತಿಶಯೋ ನ ತು ಮಹಿದಾಸೇ। ತತಃ ಕಸ್ಯಾಂಚಿದ್ಯಜ್ಞಸಭಾಯಾಂ ತಂ ಮಹಿದಾಸಮವಜ್ಞಾಯಾನ್ಯಾನ್ಪುತ್ರಾನ್ಸ್ವೋತ್ಸಂಗೇ ಸ್ಥಾಪಯಾಮಾಸ। ತದಾನೀಂ ಖಿನ್ನವದನಂ ಮಹಿದಾಸಮವಗತ್ಯೇತರಾಖ್ಯಾ ತನ್ಮಾತಾ ಸ್ವಕೀಯಕುಲದೇವತಾಂ ಭೂಮಿಮನುಸಸ್ಮಾರ। ಸಾ ಚ ಭೂಮಿರ್ದೇವತಾ ದಿವ್ಯಮೂರ್ತಿಧರಾ ಸತೀ ಯಜ್ಞಸಭಾಯಾಂ ಸಮಾಗತ್ಯ ಮಹಿದಾಸಾಯ ದಿವ್ಯಂ ಸಿಂಹಾಸನಂ ದತ್ವಾ ತತ್ರೈನಮುಪವೇಶ್ಯ ಸರ್ವೇಷ್ವಪಿ ಕುಮಾರೇಷು ಪಾಂಡಿತ್ಯಾಧಿಕ್ಯಮವಗಮಯ್ಯೈತದ್ಬ್ರಾಹ್ಮಣಪ್ರತಿಭಾಸನರೂಪಂ ವರಂ ದದೌ। ತದನುಗ್ರಹಾತ್ತಸ್ಯ ಮಹಿದಾಸಸ್ಯ ಮನಸಾಗ್ನಿರ್ವೈ ದೇವಾನಾಮವಮ ಇತ್ಯಾದಿಕಂ ಸ್ತೃಣುತೇ ಸ್ತೃಣುತ ಇತ್ಯಂತ ಚತ್ವಾರಿಂಶದಧ್ಯಾಯೋಪೇತಂ ಬ್ರಾಹ್ಮಣಂ ಪ್ರಾದುರಭೂತ್। ತತ ಊರ್ಧ್ವಮಥ ಮಹಾವ್ರತಮಿತ್ಯಾದಿಕಮಾಚಾರ್ಯಾ ಆಚಾರ್ಯಾ ಇತ್ಯಂತಮಾರಣ್ಯಕವ್ರತರೂಪಂ ಚ ಬ್ರಾಹ್ಮಣಮಾಪಿರಭೂದಿತಿ॥**

ಈಗ ನಾವು ವ್ಯಾಖ್ಯಾನಮಾಡಬೇಕೆಂದಿರುವ ಬ್ರಾಹ್ಮಣಕ್ಕೆ ಐತರೇಯವೆಂಬ ಹೆಸರು ಹೇಗೆ ಬಂತೆಂಬ ವಿಚಾರದಲ್ಲಿ ಸಂಪ್ರದಾಯಜ್ಞರು ಒಂದು ಕಥೆಯನ್ನು (ಆಖ್ಯಾಯಿಕಾ) ಹೇಳುತ್ತಾರೆ— ಪೂರ್ವಕಾಲದಲ್ಲಿ ಓರ್ವ ಋಷಿಗೆ ಅನೇಕ ಪತ್ನಿಯರಿದ್ದರು. ಅವರಲ್ಲಿ ಒಬ್ಬಳಿಗೆ ಇತರಾ ಎಂಬ ಹೆಸರಿತ್ತು. ಆ ಇತರೆಯ ಪುತ್ರನಿಗೆ ಮಹಿದಾಸನೆಂದು ಹೆಸರು. ಈ ವಿಷಯವು ಐತರೇಯಾರಣ್ಯಕದ ದ್ವಿತೀಯಾರಣ್ಯಕದಲ್ಲಿ ೧-೮-೨ ನೇ ಖಂಡದಲ್ಲಿ– **ಏತದ್ಧ ಸ್ಮ ವೈ ತದ್ವಿದ್ವಾನ್ಮಹಿದಾಸ ಐತರೇಯಃ** ಎಂದು ಹೇಳಿರುವುದು. ಈ ಮಹಿದಾಸನ ತಂದೆಗೆ ತನ್ನ ಬೇರೆ ಪತ್ನಿಯರಲ್ಲಿ ಜನಿಸಿದ ಪುತ್ರರ ವಿಷಯದಲ್ಲಿ ಬಹಳವಾದ ಪ್ರೇಮಾದರಗಳಿದ್ದವು. ಇತರಾ ಎಂಬ ಪತ್ನಿಯ ಪುತ್ರನಾದ ಮಹಿದಾಸನಲ್ಲಿ ಅಷ್ಟೇನೂ ಪ್ರೇಮವಿರಲಿಲ್ಲ. ಹೀಗಿರುವಾಗ ಒಂದುದಿನ ಆ ಋಷಿಯು ಒಂದುಕಡೆ ನಡೆಯುತ್ತಿರುವ ಯಜ್ಞಸಭೆಗೆ ಹೋಗಿದ್ದಾಗ ಅಲ್ಲಿ ತನ್ನ ಪುತ್ರರನ್ನು ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಮಹಿದಾಸನನ್ನು ಲಕ್ಷಿಸಲೇ ಇಲ್ಲ. ಇದರಿಂದ ಖತಿಗೊಂಡ ಮಹಿದಾಸನನ್ನು ಅವನ ತಾಯಿಯಾದ ಇತರೆಯು ನೋಡಿ ದುಃಖಿತಳಾಗಿ ತನ್ನ ಕುಲದೇವತೆಯಾದ ಭೂಮಿದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸಿ ಸ್ತುತಿಸಿದಳು. ಅದರಿಂದ ಸಂತುಷ್ಟಳಾದ ಆ ಭೂಮಿದೇವಿಯು ದಿವ್ಯಶರೀರವನ್ನು ಧರಿಸಿ ಆ ಯಜ್ಞಸಭೆಗೆ ಬಂದು ದುಃಖಿಸುತ್ತಿರುವ ಮಹಿದಾಸನನ್ನು ಸಂತೈಸಿ ಒಂದು ದಿವ್ಯವಾದ ಸಿಂಹಾಸನವನ್ನು ನಿರ್ಮಿಸಿ ಅದರಲ್ಲಿ ಅವನನ್ನು ಕುಳ್ಳಿರಿಸಿ, ಅವನ ಸಹೋದರರಿಗಿಂತ ಅತ್ಯಧಿಕವಾದ ಪಾಂಡಿತ್ಯವನ್ನು ಅವನಿಗೆ ಅನುಗ್ರಹಿಸಿ ಈ ಬ್ರಾಹ್ಮಣವು (ಐತರೇಯ ಬ್ರಾಹ್ಮಣವು) ಅವನಿಗೆ (ಅವನ ಮನಸ್ಸಿಗೆ) ಸ್ಫೂರ್ತಿಯಾಗುವಂತೆ ವರವನ್ನು ಕೊಟ್ಟಳು. ಆ ಭೂಮಿದೇವಿಯ ಅನುಗ್ರಹದಿಂದ ಆ ಮಹಿದಾಸನಿಗೆ ಮನಸ್ಸಿನಲ್ಲಿಯೇ ಸ್ಫೂರ್ತಿಯುಂಟಾಗಿ—"**ಅಗ್ನಿರ್ವೈ ದೇವಾನಾಮವಮಃ**" (ಐ.ಬ್ರಾ. ೧-೧-೧) ಎಂದು ಪ್ರಾರಂಭವಾಗಿ "ಸ್ತೃಣುತೇ ಸ್ತೃಣುತೇ" (ಐ. ಬ್ರಾ. ೮-೫-೫) ಎಂದು ಪರಿಸಮಾಪ್ತಿಯಾಗಿ ನಲವತ್ತು ಅಧ್ಯಾಯಗಳಿಂದ ಕೂಡಿದ ಬ್ರಾಹ್ಮಣವು ಗೋಚರಿಸಿತು. ಅನಂತರ "**ಅಥ ಮಹಾವ್ರತಂ** (ಐ.ಆ. ೧-೧-೧) ಎಂದು ಪ್ರಾರಂಭವಾಗಿ "ಆಚಾರ್ಯಾ ಆಚಾರ್ಯಾ" (ಐ.ಆ. ೩. ಖಂ. ೨-೬-೯) ಎಂದು ಸಮಾಪ್ತಿಯಾಗಿರುವ ಆರಣ್ಯಕಭಾಗವೂ ಮನೋದೃಷ್ಟಿಗೆ ಗೋಚರಿಸಿತು.

[ಇಲ್ಲಿ ಸಾಯಣಾಚಾರ್ಯರು ಆರಣ್ಯಕದ ಮೂರನೆಯ ಅಧ್ಯಾಯದ ಪರಿಸಮಾಪ್ತಿಯಾದ "ಆಚಾರ್ಯಾ ಆಚಾರ್ಯಾಃ" ಎಂಬ ಶಬ್ದಗಳನ್ನು ಹೇಳಿ ಅದೇ ಆರಣ್ಯಕದ ಕೊನೆಯಲ್ಲಿ ವಿವರಿಸಿದ್ದಾರೆ. ಆದರೆ ಇದು ಆರಣ್ಯಕದ ಕೊನೆಯ ಭಾಗವಲ್ಲ.

ಐತರೇಯಾರಣ್ಯಕವೆಂಬ ಗ್ರಂಥದಲ್ಲಿ ಒಟ್ಟು ಐದು ಭಾಗಗಳಿವೆ (ಈ ಗ್ರಂಥದಲ್ಲಿರುವ ಭಾಗಕ್ಕೆ ಆರಣ್ಯಕವೆಂದು ಹೆಸರು). ಮೊದಲಿನ ನಾಲ್ಕು ಆರಣ್ಯಕಗಳು ಐತರೇಯ ಮಹಿದಾಸನಿಗೆ ಗೋಚರಿಸಿದವು. ಐದನೆಯ ಆರಣ್ಯಕವು ಶೌನಕಋಷಿಪ್ರೋಕ್ತವಾದ ಸೂತ್ರಗ್ರಂಥವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಐತರೇಯಾರಣ್ಯಕದ ಆದ್ಯಂತಗಳನ್ನು ಹೇಳುವಾಗ ಮೊದಲನೇ ಆರಣಕ್ಯದ ಪ್ರಾರಂಭಭಾಗವಾದ **ಅಥ ಮಹಾವ್ರತಂ** ಎಂಬ ಮಂತ್ರವನ್ನು ನಾಲ್ಕನೆಯ ಆರಣ್ಯಕದ ಕೊನೆಯ ಭಾಗವಾದ **ವಿದಾಮ-ಘವನ್ವಿದೋಕ್ಷಮ್** ಎಂಬ ಶಬ್ದಗಳನ್ನು ಆರಣ್ಯಕಗ್ರಂಥದ ಆದ್ಯಂತಗಳೆಂದು ವಿವರಿಸಬೇಕಾಗಿತ್ತು. ನಾಲ್ಕನೆಯ ಅಧ್ಯಾಯದಲ್ಲಿ **ವಿದಾ ಮಘವನ್ವಿದಾ** ಎಂದು ಪ್ರಾರಂಭವಾಗುವ ಒಂಭತ್ತು ಋಕ್ಕಗಳನ್ನೂ ಅನಂತರ **ಏವಾ ಹ್ಯೇವೈವಾ ಹ್ಯಗ್ನಾ ೩ ಇ** ಎಂದು ಮೊದಲಾಗುವ ಒಂಭತ್ತು ಪುರೀಷಪದಗಳನ್ನು ವಿವರಿಸಲಾಗಿದೆ. ಶೌನಕಪ್ರೋಕ್ತವಾದ ಐದನೆಯ ಆರಣ್ಯಕದಲ್ಲಿ **ಮಹಾವ್ರತಸ್ಯ ಪಂಚವಿಂಶತಿಂ ಸಾಮಿಧೇನ್ಯಃ** ಎಂದು ಪ್ರಾರಂಭಮಾಡಿ **ಬ್ರಹ್ಮ ಭವತಿ ಬ್ರಹ್ಮ ಭವತಿ** ಎಂದು ಕೊನೆಯ ವರೆಗೂ ಮೂರು ಅಧ್ಯಾಯಗಳಲ್ಲಿ ಮಹಾವ್ರತವೆಂಬ ಯಜ್ಞದ ವಿಧಿನಿಯಮಗಳನ್ನು ವಿವರಿಸಲಾಗಿದೆ.]

**ತಸ್ಯೈತರೇಯಸ್ಯ ಪ್ರಾದುರ್ಭೂತೇ ಚತ್ವಾರಿಂಶದಧ್ಯಾಯೋಪೇತಬ್ರಾಹ್ಮಣೇ ಚತುಃ-ಸಂಸ್ಥೋ ಜ್ಯೋತಿಷ್ಟೋಮಃ ಪ್ರಥಮಂ ವಿಧೀಯತೇ । ತತೋ ಗವಾಮಯನಂ ತತ ಆದಿತ್ಯಾ-ನಾಮಯನಂ ತತೋಽಙ್ಗಿರಸಾಮಯನಂ ತತೋ ದ್ವಾದಶಾಹಸ್ತತೋಽನ್ಯತ್ಸರ್ವಂ ಪ್ರಾಸಂಗಿಕ-ಮಿತಿ ದ್ರಷ್ಟವ್ಯಂ । ಗೋಷ್ಟೋಮಾಯುಷ್ಟೋಮಾದಿಷು ಸೋಮಯಾಗೇಷು ಜ್ಯೋತಿಷ್ಟೋ-ಮಸ್ಯ ಪ್ರಾಥಮ್ಯಮುಕ್ತಂ—“ ಏಷ ವಾವ ಪ್ರಥಮೋ ಯಜ್ಞೋ ಯಜ್ಞಾನಾಂ ಯಜ್ಜ್ಯೋತಿ-ಷ್ಟೋಮಃ ” ಇತಿ ಶ್ರುತೇಃ । ತಸ್ಯ ಜ್ಯೋತಿಷ್ಟೋಮಸ್ಯ ಸಪ್ತಸಂಸ್ಥೋಪೇತಸ್ಯಾಗ್ನಿಷ್ಟೋಮ ಉಕ್ಥ್ಯಃ ಷೋಡಶ್ಯತಿರಾತ್ರಶ್ಚೇತಾಶ್ಚತಸ್ರಃ ಸಂಸ್ಥಾ ಅತ್ರಾನುಕ್ರಮೇಣ ವಕ್ಷ್ಯಂತೇ । ತಸ್ಮಿನ್ನಪಿ ಚತುಷ್ಟಯೇ ಅಗ್ನಿಷ್ಟೋಮಃ ಪ್ರಕೃತಿಃ ಕೃತ್ಸ್ನಸ್ಯಾನುಷ್ಠೇಯಸ್ಯ ತಸ್ಮಿನ್ನಗ್ನಿಷ್ಟೋಮೇ ಪ್ರತ್ಯಕ್ಷ-ಶ್ರುತ್ಯೈವೋಪದಿಷ್ಟತ್ವಾತ್ । ಪ್ರಕರ್ಷೇಣ ಕ್ರಿಯತೇ ಸಾಕಲ್ಯೇನಾನುಷ್ಠೇಯಮುಪದಿಶ್ಯತೇ ಯಸ್ಯಾಂ ಸಾ ಪ್ರಕೃತಿರಿತಿ ಹಿ ತಚ್ಛಬ್ದವ್ಯುತ್ಪತ್ತಿಃ । ಉಕ್ಥ್ಯಾದಯಸ್ತು ವಿಕೃತಯಃ । ವಿಶೇಷಸ್ಯೈವ ತತ್ರ ಪ್ರತ್ಯಕ್ಷೋಪದೇಶೇನ ಸಂಪಾದಿತತ್ವಾತ್ । ಅವಶಿಷ್ಟಂ ತು ಸರ್ವಮನುಷ್ಠೇಯಂ ಪ್ರಕೃತಿ-ವದ್ವಿಕೃತಿಃ ಕರ್ತವ್ಯೇತಿ ನ್ಯಾಯೇನೈವ ಸಂಪಾದ್ಯತೇ । ಅತ ಏವೋಪಜೀವ್ಯತ್ವಾದಗ್ನಿಷ್ಟೋಮ ಏವಾದೌ ವಕ್ತವ್ಯಃ ।**

ಈ ರೀತಿ ಐತರೇಯಮಹರ್ಷಿಗೆ ಗೋಚರವಾದ ಈ ಬ್ರಾಹ್ಮಣಗ್ರಂಥದಲ್ಲಿ ನಲವತ್ತು ಅಧ್ಯಾಯಗಳಿರುವವು. ಈ ಗ್ರಂಥದ ಪ್ರಾರಂಭದಲ್ಲಿ ಏಳು ಸೋಮಸಂಸ್ಥೆ (ಸೋಮಯಾಗ)ಗಳಲ್ಲಿ ಮುಖ್ಯವಾದ ಜ್ಯೋತಿಷ್ಟೋಮಾದಿ ನಾಲ್ಕು ಸಂಸ್ಥಗಳು ಅಥವಾ ಯಜ್ಞಗಳ ವಿವರಣೆ ಇದೆ. ಈ ಗ್ರಂಥದಲ್ಲಿ ಉಕ್ತವಾಗಿರುವ ವಿಷಯಗಳನ್ನು ಈರೀತಿ ವಿವರಿಸಲಾಗಿದೆ—

೧ನೇ ಅಧ್ಯಾಯದಿಂದ ೧೬ನೇ ಅಧ್ಯಾಯದ ೫ ಖಂಡದವರೆಗೆ ಸೋಮಯಾಗಗಳಿಗೆ ಪೂರ್ವಭಾವಿಯಾಗಿ ಆಚರಿಸಲ್ಪಡಬೇಕಾದ ಕೆಲವು ಕರ್ಮಾಂಗಗಳು—

ಮೊದಲನೆಯ ಅಧ್ಯಾಯದಲ್ಲಿ— ದೀಕ್ಷಣೀಯೇಷ್ಟಿ.
ಎರಡನೆಯ ಅಧ್ಯಾಯದಲ್ಲಿ—ಪ್ರಾಯಣೀಯೇಷ್ಟಿ ಮತ್ತು ಉದಯನೀಯೇಷ್ಟಿ.
ಮೂರನೆಯ ಅಧ್ಯಾಯದಲ್ಲಿ—ಆತಿಥ್ಯೇಷ್ಟಿ ಇತ್ಯಾದಿ.

ಪ್ರಾಧಾನ್ಯವು ಸಿದ್ಧವಾಗಿದೆ. ಆದುದರಿಂದ ಅವುಗಳನ್ನೇ ಈ ಬ್ರಾಹ್ಮಣದಲ್ಲಿ ವಿಶೇಷರೀತಿಯಿಂದ ವಿವರಿಸಲಾಗಿದೆ. ಈ ಎಲ್ಲಾ ಸೋಮಯಾಗಗಳಿಗೂ ಅಗ್ನಿಷ್ಟೋಮವೇ ಪ್ರಕೃತಿರೂಪವು. ಎಂದರೆ ಮಾದರಿಯು (model) "**ಪ್ರಕರಣೇ ಯತ್ರ ಕ್ರಿಯತೇ ಸಾಕಲ್ಯೇನಾನುಷ್ಠೇಯಮುಪದಿಶ್ಯತೇ ಯಸ್ಯಾಂ ಸಾ ಪ್ರಕೃತಿಃ**" ಯಜ್ಞಾನುಷ್ಠಾನಕ್ರಮವನ್ನು ಸ್ವಲ್ಪವೂ ಬಿಡದೆ ಯಥಾವಿಧಿಯಾಗಿ ಮಾಡಿ ತೋರಿಸುವುದೇ ಪ್ರಕೃತಿಯು ಎಂದು ಪ್ರಕೃತಿಶಬ್ದದ ವ್ಯುತ್ಪತ್ತಿ ಇರುವುದು. ಆದ್ದರಿಂದ ಈ ಅಗ್ನಿಷ್ಟೋಮಯಾಗವು ಪ್ರಕೃತಿಯಜ್ಞವು. ಉಕ್ಥ್ಯಾದಿಯಾಗಗಳು ವಿಕೃತಿಯಾಗಗಳು. ಏಕೆಂದರೆ—ಅವು ಸ್ವಭಾವದಲ್ಲಿ ಪ್ರಕೃತಿಯಾಗವಾದ ಅಗ್ನಿಷ್ಟೋಮವನ್ನು ಅನುಸರಿಸಿದ್ದರೂ ಅದರ ಜೊತೆಗೆ ಇನ್ನು ಕೆಲವು ವಿಶೇಷ ವಿಷಯಗಳನ್ನು ಒಳಗೊಂಡಿರುವುವು. "**ಆದ್ದರಿಂದ ಪ್ರಕೃತಿವದ್ವಿಕೃತಿಃ ಕರ್ತವ್ಯಾ**" ಎಂಬ ನ್ಯಾಯದಂತೆ ವಿಶೇಷಶ್ರವಣವಿಲ್ಲದ ಕಡೆಗೆ ವಿಕೃತಿಯಾಗವನ್ನು ಪ್ರಕೃತಿಯಾಗದಂತೆಯೇ ಮಾಡಬೇಕು ಎಂದು ವಿಧಿ ಇರುವುದು. ಆದ್ದರಿಂದ ಸಮಸ್ತಸೋಮಯಾಗಗಳಿಗೂ ಮೂಲಭೂತವಾದ ಎಂದರೆ ಮಾದರಿಯಾದ ಅಗ್ನಿಷ್ಟೋಮಯಾಗದ ಸ್ವರೂಪವನ್ನು ಇಲ್ಲಿ ವಿವರಿಸುತ್ತೇವೆ.

ವೇದಾರ್ಥಗಳನ್ನು ವಿಮರ್ಶಾಪೂರ್ವಕವಾಗಿ ತಿಳಿದುಕೊಳ್ಳಲಿಚ್ಛಿಸುವವರೂ, ಮೀಮಾಂಸಾಶಾಸ್ತ್ರವನ್ನು ಅಭ್ಯಾಸ ಮಾಡಲಿಚ್ಛಿಸುವವರೂ ಯಜ್ಞಯಾಗಾದಿಗಳ ಸ್ವರೂಪವನ್ನು ಸ್ಥೂಲವಾಗಿಯಾದರೂ ತಿಳಿದುಕೊಂಡಿರಬೇಕು. ಯಜ್ಞದಲ್ಲಿ ನಡೆಯಬೇಕಾದ ಮುಖ್ಯಕರ್ಮಗಳು, ಅವುಗಳ ವಿಧಿಭಾಗಗಳು, ಅವುಗಳನ್ನು ಮಾಡುವ ವಿಧಾನ, ಯಜ್ಞದಲ್ಲಿ ಉಪಯೋಗಿಸುವ ಪಾರಿಭಾಷಿಕ ಶಬ್ದಗಳ ಅರ್ಥವಿವರಣೆ ಮುಂತಾದ ವಿಷಯಗಳನ್ನು ಸ್ವಲ್ಪಮಟ್ಟಿಗಾದರೂ ತಿಳಿದಿದ್ದರೆ ವೇದಮಂತ್ರಗಳ ಮತ್ತು ಮೀಮಾಂಸಾಸೂತ್ರಗಳ ವಾದಸರಣಿಯನ್ನು ವಿಮರ್ಶೆಯ ಸ್ವರೂಪವನ್ನು ತಿಳಿದುಕೊಳ್ಳಲು ಸಹಾಯಕವಾಗುವುದು. ಆದುದರಿಂದ ವಿಭಾಗಾದಿ ಸ್ವರೂಪವನ್ನು ಸೂಕ್ಷ್ಮವಾಗಿ ವಿವರಿಸುತ್ತೇವೆ.

ವೈದಿಕಯಜ್ಞ (ವೇದೋಕ್ತಯಜ್ಞ) ಗಳಲ್ಲಿ ಎರಡು ವಿಧ (೧) ಗೃಹ್ಯಯಜ್ಞ ಮತ್ತು (೨) ಶ್ರೌತಯಜ್ಞ ಎಂದು. ಈ ಗೃಹ್ಯಯಜ್ಞಗಳಿಗೆ ಪಾಕಯಜ್ಞಗಳೆಂದೂ ಹೆಸರು. ಇವುಗಳನ್ನು ಆಚರಿಸುವ ವಿಧಾನಗಳನ್ನು ಆಯಾಗೃಹ್ಯಸೂತ್ರಗಳಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಉಪಯೋಗಿಸುವ ಅಗ್ನಿಗೆ ಗೃಹ್ಯಾಗ್ನಿಯೆಂದು ಹೆಸರು. ಪಾಕಯಜ್ಞಗಳಲ್ಲಿ ಅನೇಕ ವಿಧಗಳಿವೆ. ನಾನಾ ವಿಧವಾದ ಪಾಕಯಜ್ಞಗಳಿಗೆ **ಸಂಸ್ಥಾಃ** (ಸಂಸ್ಥೆಗಳು) ಎಂದು ಹೆಸರು. ಈ ಸಂಸ್ಥೆಗಳ ವಿಷಯದಲ್ಲಿ ಮತಭೇದಗಳಿವೆ. ಎಲ್ಲಾ ಮತಗಳಲ್ಲಿಯೂ ಒಟ್ಟು ಏಳೇ ಸಂಸ್ಥೆಗಳು, ಹೆಚ್ಚುಕಡಿಮೆಯಿಲ್ಲ. ಈ ಪಾಕಯಜ್ಞದ ಏಳು ಸಂಸ್ಥೆಗಳು ಈರೀತಿ ಇವೆ—

## ಪಾಕಯಜ್ಞದ ಸಪ್ತಸಂಸ್ಥೆಗಳು

ಗೋಪಥಬ್ರಾಹ್ಮಣದಂತೆ (೧-೫-೨೩) —(೧) ಸಾಯಂಪ್ರಾತರ್ಹೋಮಗಳು. (೨) ಸ್ಥಾಲೀಪಾಕ (೩) ನವಯಜ್ಞ (೪) ಬಲಿ (ವೈಶ್ವದೇವಬಲಿ) (೫) ಪಿತೃಯಜ್ಞ (೬) ಅಷ್ಟಕ (೭) ಪಶು.

ಗೌತಮಧರ್ಮ ಸೂತ್ರದಂತೆ (೧-೮-೧೦) —(೧) ಅಷ್ಟಕ (೨) ಪಾರ್ವಣ (೩) ಶ್ರಾದ್ಧ (ಮಾಸಿಶ್ರಾದ್ಧ) (೪) ಶ್ರಾವಣೀ (೫) ಆಗ್ರಹಾಯಣೀ (೬) ಚೈತ್ರೀ (೭) ಆಶ್ವಯುಜೀ.

ಕೃಷ್ಣಯಜುರ್ವೇದ ತೈತ್ತಿರೀಯ ಶಾಖೆಯ ಭಾಷ್ಯಕಾರರಾದ ಭಟ್ಟಭಾಸ್ಕರರ ಮತದಂತೆ (ತೈ. ಸಂ. ೧-೬-೧) —(೧) ಹುತಃ (೨) ಪ್ರಹುತ (೩) ಆಹುತ (೪) ಶೂಲಗವ (೫) ಬಲಿಹರಣ (೬) ಪ್ರತ್ಯವರೋಹಣ (೭) ಅಷ್ಟಕಾಹೋಮ.

ಆಪಸ್ತಂಬಯಜ್ಞಪರಿಭಾಷಾಸೂತ್ರದ ವ್ಯಾಖ್ಯಾನಕರ್ತೃ ಧೂರ್ತಸ್ವಾಮಿಯ ಮತದಂತೆ —(೧) ಔಪಾಸನಹೋಮ (೨) ವೈಶ್ವದೇವ (೩) ಪಾರ್ವಣ (೪) ಅಷ್ಟಕ (೫) ಮಾಸಿಶ್ರಾದ್ಧ (೬) ಸರ್ಪಬಲಿ (೭) ಈಶಾನಬಲಿ (ಶೂಲಗವ)

ಪಾಕಯಜ್ಞಗಳು ಆಯಾ ಶಾಖೆಗಳ ಸಂಪ್ರದಾಯಾನುಸಾರವಾಗಿ ಬೇರೆಬೇರೆಯಾಗಿರುತ್ತವೆ. ಒಟ್ಟು ಸಂಖ್ಯೆ ಮಾತ್ರ ಏಳೇ.

ಶ್ರೌತಯಜ್ಞಗಳಲ್ಲಿಯೂ (೧) ಹವಿರ್ಯಜ್ಞಗಳು (೨) ಸೋಮಯಜ್ಞಗಳು ಎಂದು ಎರಡುವಿಧ. ಯಾವ ಯಜ್ಞಗಳಲ್ಲಿ ಹವಿಸ್ಸನ್ನು ಹೋಮಮಾಡುವುದಕ್ಕೆ ಉಪಯೋಗಿಸುವರೋ ಅವಕ್ಕೆ ಹವಿರ್ಯಜ್ಞಗಳೆಂದೂ, ಸೋಮರಸಾದಿಗಳನ್ನು ಹೋಮಾದಿಗಳಿಗೆ ಉಪಯೋಗಿಸಿದರೆ ಅವಕ್ಕೆ ಸೋಮಯಜ್ಞವೆಂದೂ ಸಂಕೇತವು. ಹವಿರ್ಯಜ್ಞಗಳ ಸಂಖ್ಯೆಯ ವಿಚಾರದಲ್ಲಿ ಭಿನ್ನಾಭಿಪ್ರಾಯವಿಲ್ಲ. ಇವೂ ಏಳೇ. ಆದರೆ ಒಂದೊಂದು ಶಾಖೆ ಅಥವಾ ಸಂಪ್ರದಾಯಾನುಸಾರ ಯಜ್ಞಗಳು ಬೇರೆಬೇರೆಯಾಗಿರುವವು.

## ಹವಿರ್ಯಜ್ಞದ ಸಪ್ತಸಂಸ್ಥೆಗಳು

೧. ಸಾಯಣಾಚಾರ್ಯರ ಐತರೇಯಬ್ರಾಹ್ಮಣ ಭಾಷ್ಯದಲ್ಲಿರುವಂತೆ (ಐ. ಬ್ರಾ. ಭಾ. ೫-೭)—

(೧) ಅಗ್ನ್ಯಾಧೇಯ (೨) ಅಗ್ನಿಹೋತ್ರ (೩) ದರ್ಶಪೂರ್ಣಮಾಸ (೪) ಆಗ್ರಯಣ (೫) ಚಾತುರ್ಮಾಸ್ಯ (೬) ದಾಕ್ಷಾಯಣಯಜ್ಞ (೭) ಕೌಂಡಪಾಯಿನಾಮಯನ ಅಥವಾ ಸೌತ್ರಾಮಣಿ.

೨. ಧೂರ್ತಸ್ವಾಮಿಯ ಯಜ್ಞಪರಿಭಾಷಾಸೂತ್ರವ್ಯಾಖ್ಯಾನ ಪ್ರಕಾರ—

(೧) ಅಗ್ನಿಹೋತ್ರ (೨) ದರ್ಶಪೂರ್ಣಮಾಸ (೩) ಆಗ್ರಯಣ (೪) ಪಿಂಡಪಿತೃಯಜ್ಞ (೫) ಚಾತುರ್ಮಾಸ್ಯ (೬) ನಿರೂಢಪಶುಬಂಧ (೭) ಸೌತ್ರಾಮಣಿ.

೩. ಗೌತಮಧರ್ಮಸೂತ್ರದಂತೆ (೧-೮-೨೦)—

(೧) ಅಗ್ನ್ಯಾಧೇಯ (೨) ಅಗ್ನಿಹೋತ್ರ (೩) ದರ್ಶಪೂರ್ಣಮಾಸ (೪) ಆಗ್ರಯಣ (೫) ಚಾತುರ್ಮಾಸ್ಯ (೬) ನಿರೂಢಪಶುಬಂಧ (೭) ಸೌತ್ರಾಮಣಿ.

೪. ಗೋಪಥಬ್ರಾಹ್ಮಣದಂತೆ (೧-೫-೨೩)—

(೧) ಅಗ್ನ್ಯಾಧೇಯ (೨) ಅಗ್ನಿಹೋತ್ರ (೩) ಪೌರ್ಣಮಾಸೀ (೪) ಅಮಾವಾಸ್ಯಾ (೫) ನವೇಷ್ಟಿ (೬) ಚಾತುರ್ಮಾಸ್ಯ (೭) ಪಶುಬಂಧ.

ದರ್ಶಪೂರ್ಣಮಾಸೇಷ್ಟಿಗಳೆಂದರೆ ಅಮಾವಾಸ್ಯಾ ಮತ್ತು ಪೌರ್ಣಿಮೆಗಳಲ್ಲಿ ಆಚರಿಸಲ್ಪಡುವ ಯಜ್ಞಗಳು. ಇವುಗಳಿಗೆ ಇಷ್ಟಿಗಳೆಂದು ಹೆಸರು. ಇತರ ಇಷ್ಟಿಗಳೆಲ್ಲಕ್ಕೂ ಇವು ಮಾದರಿಯಂತಿವೆ (ಪ್ರಕೃತಿ) ಎಂದರೆ ಮೂಲಭೂತವಾಗಿವೆ (model). ತಂತ್ರಗಳು ಮತ್ತು ಸ್ವರೂಪ ಎರಡರಲ್ಲಿಯೂ ಒಂದೇವಿಧ. ಈ ಇಷ್ಟಿಗಳಲ್ಲಿ ಮುಖ್ಯವಾಗಿ ಉಪಯೋಗಿಸುವ ಹವಿರ್ದ್ರವ್ಯವು ಪುರೋಡಾಶ. ಅಕ್ಕಿಹಿಟ್ಟು ಅಥವಾ ಗೋಧಿಯಹಿಟ್ಟನ್ನು ಹಾಲಿನಲ್ಲಿ ಕಲಸಿ ಬೇಯಿಸಿದರೆ ಪುರೋಡಾಶವೆನಿಸಿಕೊಳ್ಳುತ್ತದೆ. ಇವನ್ನು ಕಪಾಲ ಎಂದರೆ ಮಡಕೆಯ ಚೂರುಗಳಲ್ಲಿ ಬೇರೆಬೇರೆ ಬೇಯಿಸಬೇಕು. ಮೊದಲನೆಯ ಹೋಮವನ್ನು ಅಗ್ನಿದೇವತೆಯನ್ನುದ್ದೇಶಿಸಿ ಮಾಡುತ್ತಾರೆ. ಅಗ್ನಿಗೆ ಎಂಟು ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವನ್ನು (ಆಗ್ನೇಯಮಷ್ಟಾಕಪಾಲಂ) ಹೋಮಮಾಡಬೇಕು. ಅಗ್ನಿ ಮತ್ತು ಸೋಮ ಎಂಬ ದೇವತೆಗಳಿಗೆ ಹನ್ನೊಂದು ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವನ್ನು (ಅಗ್ನೀಷೋಮೀಯಮೇಕಾದಶಕಪಾಲಂ) ಒಟ್ಟಾಗಿ ಹೋಮಮಾಡಬೇಕು. ಹೀಗೆಯೇ ಬೇರೆಬೇರೆ ದೇವತೆಗಳಿಗೆ ಬೇರೆಬೇರೆ ಸಂಖ್ಯೆಯ ಕಪಾಲಗಳು ಹೇಳಲ್ಪಟ್ಟಿವೆ.

ಈ ಇಷ್ಟಿಗಳಿಗೆ ನಾಲ್ಕು ಜನ ಋತ್ವಿಕ್ಕುಗಳು ಬೇಕು. (೧) ಅಧ್ವರ್ಯು-ಯಜ್ಞದಲ್ಲಿ ಎಲ್ಲಾ ತಂತ್ರಗಳನ್ನೂ ಕೆಲಸ ಕಾರ್ಯಗಳನ್ನೂ ಈತನು ಮಾಡುತ್ತಾನೆ. (೨) ಹೋತೃ-ಋಗ್ವೇದ ಮಂತ್ರಗಳನ್ನು ಪಠಿಸಿ ದೇವತೆಗಳನ್ನು ಆಹ್ವಾನ ಮಾಡುತ್ತಾನೆ. (೩) ಬ್ರಹ್ಮ-ಮೇಲೆ ಹೇಳಿದ ಇಬ್ಬರು ಋತ್ವಿಜರ ಕರ್ತವ್ಯಗಳು ಸರಿಯಾಗಿ ನಡೆಯುವಂತೆ ನೋಡಿಕೊಳ್ಳುತ್ತಾನೆ. (೪) ಅಗ್ನೀತ್ (ಅಗ್ನೀಧ್ರ) ಬ್ರಹ್ಮನ ಸಹಾಯಕ. ಈ ದರ್ಶಪೂರ್ಣಮಾಸಯಾಗಗಳು ಅಮಾವಾಸ್ಯೆ ಮತ್ತು ಪೌರ್ಣಿಮೆಯ ದಿವಸ ಆಚರಿಸಬೇಕಾದವು. ಇದಕ್ಕೆ ಪೂರ್ವಭಾವಿಯಾಗಿ ಹಿಂದಿನ ದಿನ ಆಚರಿಸಬೇಕಾದ ಕರ್ಮಗಳು ಕೆಲವು ಇವೆ.

## ಸೋಮಯಜ್ಞದ ಸಪ್ತಸಂಸ್ಥೆಗಳು

ದಿನಸಂಖ್ಯೆಯ ಕ್ರಮದಂತೆ ನಡೆಯುವ ಸೋಮಯಜ್ಞಗಳನ್ನು ಮೂರುವಿಧವಾಗಿ ವಿಂಗಡಿಸಬಹುದು—

**ಏಕಾಹ**—ಒಂದು ದಿನದಲ್ಲಿ ಮಾಡಿ ಮುಗಿಸತಕ್ಕ ಯಜ್ಞ.

**ಅಹೀನ**—ಒಂದು ದಿನಕ್ಕಿಂತ ಹೆಚ್ಚಾಗಿ ಎಂದರೆ ಎರಡು ದಿನಗಳಿಂದ ಹನ್ನೆರಡು ದಿನಗಳಲ್ಲಿ ಮಾಡಿ ಮುಗಿಸತಕ್ಕ ಯಜ್ಞಗಳು.

**ಸತ್ರ**— ಹನ್ನೆರಡು ದಿನಗಳಿಗೆ ಅಥವಾ ಅದಕ್ಕೆ ಮೇಲ್ಪಟ್ಟು ನಡೆಯುವ ಯಾಗಗಳು. ಏಕಾಹಗಳಲ್ಲಿ ಬಹುಮುಖ್ಯವಾದುದು ಜ್ಯೋತಿಷ್ಟೋಮ. ಇದು ಏಳು ವಿಧ—

(೧) ಅಗ್ನಿಷ್ಟೋಮ (೨) ಅತ್ಯಗ್ನಿಷ್ಟೋಮ (೩) ಉಕ್ಥ್ಯ (೪) ಷೋಡಶಿನ್ (೫) ವಾಜಪೇಯ (೬) ಅತಿರಾತ್ರ (೭) ಅಪ್ತೋರ್ಯಾಮ.

ಇವುಗಳಲ್ಲಿ ಅಗ್ನಿಷ್ಟೋಮವೇ ಮುಖ್ಯವಾದುದು. ಉಳಿದ ಆರೂ ಇದರ ರೂಪಾಂತರಗಳು. ಆದುದರಿಂದ ಅಗ್ನಿಷ್ಟೋಮಕ್ಕೆ ಪ್ರಕೃತಿಯೆಂದೂ, ಉಳಿದ ಆರು ರೂಪಾಂತರಗಳಾದ ಅತ್ಯಗ್ನಿಷ್ಟೋಮಾದಿಗಳಿಗೆ ವಿಕೃತಿಯೆಂದೂ ಹೇಳುವರು. ಅಗ್ನಿಷ್ಟೋಮದಲ್ಲಿ ಉದ್ಗಾತೃ ಮತ್ತು ಅವನ ಸಹೋದ್ಯೋಗಿಗಳು ಒಟ್ಟು ೧೨ ಸ್ತೋತ್ರಗಳನ್ನು ಅಥವಾ ಸಾಮಮಂತ್ರಗಳನ್ನು ಗಾನಮಾಡುವರು. ಪ್ರತಿಯೊಂದು ಸ್ತೋತ್ರಗಾನವಾದಮೇಲೂ ಹೋತೃ ಮತ್ತು ಅವನ ಸಹಾಯಕರಾದ ಮೈತ್ರಾವರುಣ, ಬ್ರಾಹ್ಮಣಾಚ್ಛಂಸಿ, ಅಚ್ಛಾವಾಕ ಎಂಬ ಋತ್ವಿಜರು ಒಂದೊಂದು ಶಸ್ತ್ರದಂತೆ ೧೨ ಶಸ್ತ್ರಮಂತ್ರಗಳನ್ನು ಪಠಿಸುವರು. ಪ್ರಾತಃಸವನ, ಮಾಧ್ಯಂದಿನ ಸವನ, ತೃತೀಯಸವನ ಎಂಬ ಮೂರುಸವನ (ಸೋಮರಸವನ್ನು ಹಿಂಡುವ ಕರ್ಮ) ಕಾಲಗಳಲ್ಲಿಯೂ ಮಾಡುವ ಸ್ತೋತ್ರಗಳನ್ನೂ ಅವುಗಳ ಜತೆಯಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳನ್ನೂ ಕೆಳಗೆ ಕೊಟ್ಟಿದೆ.

### ಪ್ರಾತಸ್ಸವನ

| ಸ್ತೋತ್ರಗಾನ | ಶಸ್ತ್ರಮಂತ್ರ |
|---|---|
| ೧. ಬಹಿಷ್ಪವಮಾನಸ್ತೋತ್ರ | ೧. ಆಜ್ಯಶಸ್ತ್ರ |
| ೨. ಆಜ್ಯಸ್ತೋತ್ರಗಳು | ೨. ಪ್ರಉಗಶಸ್ತ್ರ |
| ೩. " | ೩. ಆಜ್ಯಶಸ್ತ್ರ |
| ೪. " | ೪. " |
| ೫. " | ೫. " |

### ಮಾಧ್ಯಂದಿನಸವನ

| | |
|---|---|
| ೬. ಮಾಧ್ಯಂದಿನಪವಮಾನಸ್ತೋತ್ರ | ೬. ಮರುತ್ವತೀಯಶಸ್ತ್ರ |
| ೭. ಪೃಷ್ಠಸ್ತೋತ್ರ | ೭. ನಿಷ್ಕೇವಲ್ಯಶಸ್ತ್ರ |
| ೮. " | ೮. " |
| ೯. " | ೯. " |
| ೧೦. " | ೧೦. " |

## ತೃತೀಯಸವನ

| | |
|---|---|
| ೧೧. ಆರ್ಭವಪವಮಾನಸ್ತೋತ್ರ | ೧೧. ವೈಶ್ವದೇವಶಸ್ತ್ರ |
| ೧೨. ಅಗ್ನಿಷ್ಟೋಮಸಾಮ | ೧೨. ಆಗ್ನಿಮಾರುತಶಸ್ತ್ರ |

ಕೊನೆಯಲ್ಲಿ ಹೇಳಿರುವ ೧೨ನೆಯ ಅಗ್ನಿಷ್ಟೋಮಸಾಮವೆಂಬ ಸ್ತೋತ್ರದಿಂದ ಅಗ್ನಿಷ್ಟೋಮಯಾಗಕ್ಕೆ ಆ ಹೆಸರು ಬಂದಿರುವುದು.
ಉಕ್ಥ್ಯದಲ್ಲಿ ಮೇಲೆ ಹೇಳಿದ ೧೨ರ ಜತೆಗೆ ೩ ಉಕ್ಥಸ್ತೋತ್ರಗಳು ಮತ್ತು ೩ ಉಕ್ಥಶಸ್ತ್ರಗಳು ಇರುವವು.
ಷೋಡಶಿಯಲ್ಲಿ ಮೇಲಿನ ೧೫ ಸ್ತೋತ್ರಶಸ್ತ್ರಗಳ ಜತೆಗೆ ಮತ್ತೊಂದನ್ನು ಸೇರಿಸಿ ಒಟ್ಟು ೧೬ ಸ್ತೋತ್ರಗಳಾಗುವವು.
ಅತಿರಾತ್ರದಲ್ಲಿ ಇನ್ನೂ ೧೨ ಸ್ತೋತ್ರಶಸ್ತ್ರಗಳನ್ನು ಸೇರಿಸುತ್ತಾರೆ.

ಈ ವರೆಗೆ ಹೇಳಿದ ಒಂದೊಂದು ಸಂಸ್ಥೆಯಲ್ಲಿಯೂ ಹಿಂದಿನ ಸಂಸ್ಥೆಯ ಸ್ತೋತ್ರ--ಶಸ್ತ್ರಗಳನ್ನು ಸೇರಿಸಿಕೊಳ್ಳುತ್ತಿರುವುದು ಸ್ಪಷ್ಟವಾಗಿದೆ. ಆದರೆ ಅತಿರಾತ್ರದಲ್ಲಿ ಹಿಂದಿನ ಷೋಡಶಿಸಂಸ್ಥೆಯ ಒಂದು ಸ್ತೋತ್ರಶಸ್ತ್ರವನ್ನು ಸೇರಿಸಿಕೊಳ್ಳಬೇಕೇ ಅಥವಾ ಬಿಡಬೇಕೇ ಎಂಬುದು ವಾದಗ್ರಸ್ತವಾದ ವಿಷಯ, ಸಾಂಖ್ಯಾಯನಶ್ರೌತಸೂತ್ರ, ಆಶ್ವಲಾಯನಶ್ರೌತಸೂತ್ರ, ಕೌಷೀತಕೀ ಬ್ರಾಹ್ಮಣ ಇವುಗಳಲ್ಲಿ ಷೋಡಶಿಯನ್ನು ಸೇರಿಸಿಕೊಳ್ಳಬೇಕೆಂದಿದೆ. ಆದರೆ ಐತರೇಯಬ್ರಾಹ್ಮಣದಲ್ಲಿ ಅದನ್ನು ಸೇರಿಸಿಯೇ ಇಲ್ಲ. ಈ ಅತಿರಾತ್ರವೆಂಬ ಯಾಗದಲ್ಲಿ ೧೨ ಸ್ತೋತ್ರಶಸ್ತ್ರಗಳನ್ನು ಹಿಂದಿನ ರಾತ್ರಿಯೆಲ್ಲಾ ಗಾನಮಾಡಿ ಸೂರ್ಯೋದಯದ ವೇಳೆಗೆ ಸಂಧಿಸ್ತೋತ್ರವೊಂದನ್ನು ಪಠಿಸುತ್ತಾರೆ. ರಾತ್ರಿಯೆಲ್ಲಾ ಯಜ್ಞಕರ್ಮಗಳು ನಡೆದುಬರುವುದರಿಂದಲೇ ಈ ಯಾಗಕ್ಕೆ ಅತಿರಾತ್ರವೆಂದು ಹೆಸರು ಪ್ರಸಿದ್ಧವಾಗಿರುವುದು.

ಇತರ ಬ್ರಾಹ್ಮಣಗಳ ಪ್ರಕಾರ ಅತಿರಾತ್ರದಲ್ಲಿ ಷೋಡಶಿಯಲ್ಲಿ ಹೇಳಿರುವ ೧೫+೧=೧೬ ಸ್ತೋತ್ರಶಸ್ತ್ರಗಳೂ ಅತಿರಾತ್ರದ ೧೨ ಬೇರೆ ಸ್ತೋತ್ರಶಸ್ತ್ರಗಳೂ ಸೇರಿ ಒಟ್ಟು ೨೮ ಸ್ತೋತ್ರಶಸ್ತ್ರಗಳಾಗುವವು. ಆದರೆ ಐತರೇಯಬ್ರಾಹ್ಮಣದ ಪ್ರಕಾರ ಷೋಡಶಿಯ ೧೬ ಸ್ತೋತ್ರಶಸ್ತ್ರಗಳಲ್ಲಿ ೧ನ್ನು ಬಿಟ್ಟು ಉಳಿದ ೧೫ ಸ್ತೋತ್ರಶಸ್ತ್ರಗಳೂ ಅತಿರಾತ್ರ ೧೨ ಸ್ತೋತ್ರಶಸ್ತ್ರಗಳೂ ೩ ಸಂಧಿಸ್ತೋತ್ರಗಳೂ (ಸಂಧಿಸ್ತೋತ್ರವೊಂದನ್ನೇ ಮೂರು ಎಂದು ಗಣನೆ) ಒಟ್ಟು ೩೦ ಸ್ತೋತ್ರಶಸ್ತ್ರಗಳಾಗುವವು. ಈ ರೀತಿ ಒಂದೇ ಯಾಗದ ವಿಷಯದಲ್ಲಿ ವ್ಯತ್ಯಾಸಗಳು ಕಂಡುಬರುವವು.

ಐತರೇಯ ಬ್ರಾಹ್ಮಣದಲ್ಲಿ ಮುಖ್ಯವಾಗಿ ಅಗ್ನಿಷ್ಟೋಮ, ಉಕ್ಥ್ಯ, ಷೋಡಶಿನ್, ಅತಿರಾತ್ರ ಎಂಬ ನಾಲ್ಕು ಯಜ್ಞಗಳ ವಿಷಯವನ್ನೇ ವಿಶೇಷರೀತಿಯಿಂದ ವಿವರಿಸಲಾಗಿದೆ. ಅತ್ಯಗ್ನಿಷ್ಟೋಮ, ವಾಜಪೇಯ, ಅಪ್ತೋರ್ಯಾಮಗಳೆಂಬ ಮೂರು ಸೋಮಯಾಗಗಳನ್ನು ಅಷ್ಟು ಹೆಚ್ಚಾಗಿ ಬಳಕೆಯಲ್ಲಿಲ್ಲವಾದ್ದರಿಂದ ಅವುಗಳ ವರ್ಣನೆ ಇರುವುದಿಲ್ಲ.

ಮೇಲೆ ಹೇಳಿದ, **ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ಅತಿರಾತ್ರ, ವಾಜಪೇಯ, ಅಪ್ತೋರ್ಯಾಮ** ಎಂಬ ಏಳು ಸೋಮಯಾಗಗಳಲ್ಲಿ ಅಗ್ನಿಷ್ಟೋಮಯಾಗವು ಪ್ರಕೃತಿಸ್ವರೂಪವಾದುದು (Model) ಎಂದರೆ ಈ ಯಾಗವು ಉಳಿದ ಸೋಮಯಾಗಗಳಿಗೆ ಮೂಲಭೂತವಾಗಿರುವುದು. ಇದು ಕೆಲವು ವ್ಯತ್ಯಾಸಗಳನ್ನು ಹೊಂದಿ ಉಳಿದ ಆರು ಸೋಮಯಾಗಗಳಾಗಿರುವವು. ಅಗ್ನಿಷ್ಟೋಮಯಾಗವನ್ನು ಮಾಡುವ ಕ್ರಮವನ್ನು ಸಂಗ್ರಹರೂಪವಾಗಿ ಇಲ್ಲಿ ಹೇಳುತ್ತೇವೆ. ಇದರ ವಿಧ್ಯುಕ್ತವಿವರಣೆಯು ಯಜುರ್ವೇದದ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ಅದನ್ನು ಅಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು. ಈ ಯಾಗದ ಸ್ವರೂಪವನ್ನು ವಿವರಿಸುವಾಗ ಅನೇಕ ಪಾರಿಭಾಷಿಕಶಬ್ದಗಳ ಅರ್ಥವಿವರಣೆಯು ಅವಶ್ಯಕವಾದುದರಿಂದಲೂ ಇಲ್ಲಿ ಅದನ್ನೆಲ್ಲಾ ವಿಶದವಾಗಿ ಹೇಳಬೇಕಾದರೆ ಗ್ರಂಥವು ವಿಸ್ತಾರವಾಗುವುದೆಂಬ ಭಯದಿಂದಲೂ, ಯಾಗಸ್ವರೂಪವನ್ನು ವಿವರಿಸುವ ಶ್ಲೋಕಗಳನ್ನು ಮಾತ್ರ ಹಿಂದೆ ಉದಹರಿಸಿ ಪ್ರಕೃತಸಂದರ್ಭಕ್ಕೆ ಯುಕ್ತವಾದ ವಿಷಯಗಳನ್ನು ಕನ್ನಡದಲ್ಲಿ ವಿವರಿಸಲಾಗುವುದು—

ಅಗ್ನಿಷ್ಟೋಮಯಾಗದ ಸಂಕ್ಷೇಪವಾದ ಸ್ವರೂಪಸಂಗ್ರಹವನ್ನು ನಾವು ೬೩-೬೫ನೇ ಪೇಜುಗಳಲ್ಲಿ ಶ್ಲೋಕರೂಪದಲ್ಲಿ ಸಂಗ್ರಹಿಸಿಕೊಟ್ಟಿದ್ದೇವೆ.

ಅಲ್ಲಿ ಅಗ್ನಿಷ್ಟೋಮಯಾಗದ ಕರ್ಮಾಂಗಗಳನ್ನು ಮಾಡುವ ಕ್ರಮದಲ್ಲಿಯೇ ಹೇಳಿದೆ. ಪ್ರತಿಯೊಂದು ಕರ್ಮಾಂಗದಲ್ಲಿಯೂ ಅನೇಕ ವಿಧಿನಿಯಮಗಳೂ ಮಂತ್ರಪಠನಗಳೂ ಉಂಟು. ಐತರೇಯಬ್ರಾಹ್ಮಣದಲ್ಲಿ ಆಯಾ ಕರ್ಮಗಳಲ್ಲಿ ಹೋತೃವು ಪಠಿಸಬೇಕಾದ ಮಂತ್ರಗಳನ್ನೂ ಅವುಗಳ ವಿಧಿನಿಯಮಗಳನ್ನೂ ಮಾತ್ರ ವಿವರಿಲಾಗಿದೆ. ಕರ್ಮಗಳನ್ನು ಯಾವರೀತಿ ಮಾಡಬೇಕು ಎಂಬ ವಿವರಗಳನ್ನು ಯಜುರ್ವೇದದಲ್ಲಿಯೂ ಆಪಸ್ತಂಬಾದಿಸೂತ್ರಗಳಲ್ಲಿ ಹೇಳಿದೆ. ಉದ್ಗಾತೃವಿಗೆ ಸಂಬಂಧಪಟ್ಟ ಸಾಮಗಾನದ ವಿವರವು ಸಾಮವೇದ, ಸಾಮವೇದಬ್ರಾಹ್ಮಣಗಳಾದ ತಾಂಡ್ಯಬ್ರಾಹ್ಮಣ, ಪಂಚವಿಂಶಬ್ರಾಹ್ಮಣ, ಶಾಟ್ಯಾಯನ, ಜೈಮಿನೀಯ ಮೊದಲಾದ ಬ್ರಾಹ್ಮಣಗಳಲ್ಲಿ ಉಕ್ತವಾಗಿದೆ. ಅಗ್ನಿಷ್ಟೋಮಯಾಗವು ಏಕಾಹ ಎಂದರೆ ಒಂದೇ ದಿನದಲ್ಲಿ ಮಾಡಿ ಮುಗಿಸುವ ಯಜ್ಞವೆಂದು ಹೇಳಿದ್ದರೂ ಅದು ಐದು ದಿನಗಳವರೆಗೂ ನಡೆಯುವುದು. ಮೊದಲಿನ ನಾಲ್ಕುದಿನಗಳಲ್ಲಿ ನಡೆಯುವ ಕಾರ್ಯಕಲಾಪಗಳು ಯಜ್ಞಕ್ಕೆ ಪೂರ್ವಭಾವಿಯಾಗಿ ನಡೆಯಬೇಕಾದ ಕರ್ಮಾಂಗಗಳು ಮಾತ್ರ. ಐದನೆಯ ದಿನದ ಸೋಮಾಭಿಷವಣ, ಸೋಮಾಹುತಿ, ಸೋಮಪಾನ ಮೊದಲಾದ ಕರ್ಮಗಳೇ ಮುಖ್ಯವು. ಇವೆಲ್ಲಾ ಒಂದೇ ದಿನದಲ್ಲಿ ಎಂದರೆ ಐದನೇದಿನದಲ್ಲಿ ನಡೆಯುವವು—

ಮೊದಲನೆಯ ದಿನ—ಋತ್ವಿಗ್ವರಣ (ಋತ್ವಿಕ್ಕಗಳನ್ನು ನಿಯಮಿಸುವುದು). ಅವರಿಗೆ ಮಧುಪರ್ಕಾದಿಗಳನ್ನು ನೀಡುವುದು, ದೀಕ್ಷಣೀಯೇಷ್ಟಿ, ಯಜಮಾನನ ದೀಕ್ಷಾವಿಧಿ ಇತ್ಯಾದಿ ಪೂರ್ವಭಾವಿಯಾಗಿ ಆಚರಿಸುವ ಕರ್ಮಗಳು.

ಎರಡನೆಯ ದಿನ—ಪ್ರಾಯಣೀಯೇಷ್ಟಿ ಎಂದರೆ ಯಜ್ಞದ ಪ್ರಾರಂಭವೇಳೆಯಲ್ಲಿ ಮಾಡುವ ಹೋಮ, ಸೋಮಕ್ರಯಣ (ಸೋಮಲತೆಗಳನ್ನು ಕೊಂಡುಕೊಳ್ಳುವುದು), ಆತಿಥ್ಯೇಷ್ಟಿ (ಸೋಮಲತೆಗಳಿಗೆ ಸ್ವಾಗತ) ಪ್ರವರ್ಗ್ಯ ಎಂಬ ಯಜಮಾನನ ಶುದ್ಧೀಕರಣಕ್ಕಾಗಿ ಮಾಡುವ ಇಷ್ಟಿ, ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲಗಳಲ್ಲಿ ಮಾಡಬೇಕಾದ ಉಪಸತ್ ಎಂಬ ಕರ್ಮ.

ಮೂರನೆಯ ದಿವಸ—ಎರಡನೆಯ ದಿವಸದಲ್ಲಿಯೇ ಹೇಳಿದ ಪ್ರವರ್ಗ್ಯ ಮತ್ತು ಉಪಸತ್ (ಇವುಗಳನ್ನು ಮುಂದುವರಿಸಿ ಮತ್ತೆಮಾಡುವುದು)

ನಾಲ್ಕನೆಯ ದಿವಸ–ಅಗ್ನಿಪ್ರಣಯನ (ಅಗ್ನಿಯನ್ನು ತರುವುದು) ಸೋಮಪ್ರಣಯನ (ಸೋಮಲತೆಗಳನ್ನು ಯಜ್ಞವೇದಿಗೆ ತರುವುದು), ಹವಿರ್ಧಾನಪ್ರಣಯನ (ಸೋಮಲತೆಗಳನ್ನು ತುಂಬಿದ ಗಾಡಿಗಳನ್ನು ತರುವುದು) ಪಶುಹೋಮ.

ಐದನೆಯ ದಿವಸ—ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಸೋಮಲತೆಗಳನ್ನು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವುದು. ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಸವನತ್ರಯಗಳಲ್ಲಿ ಪಠಿಸಬೇಕಾದ ಮಂತ್ರಗಳು, ಸೋಮಾಹುತಿ, ಸೋಮಪಾನ ಇತ್ಯಾದಿ ಯಜ್ಞದ ಸಮಾಪ್ತಿಕಾಲದಲ್ಲಿ ಮಾಡುವ ಉದಯನೀಯೇಷ್ಟಿ, ಅವಭೃಥಸ್ನಾನ ಇತ್ಯಾದಿ.

ಇದು ಅಗ್ನಿಷ್ಟೋಮಯಾಗದ ಸಂಕ್ಷೇಪವಿವರಣೆಯು. ಅಗ್ನಿಷ್ಟೋಮಯಾಗದಲ್ಲಿ ೧೨ ಸ್ತೋತ್ರಗಳೂ (ಸಾಮಗಾನಗಳೂ) ೧೨ ಶಸ್ತ್ರಗಳೂ (ಋಗ್ವೇದ ಸೂಕ್ತಗಳು) ಉಪಯೋಗಿಸಲ್ಪಡುವವು. ಇತರ ಅತ್ಯಗ್ನಿಷ್ಟೋಮಾದಿ ಸೋಮಯಾಗಗಳಲ್ಲಿ ಈ ಸ್ತೋತ್ರಶಸ್ತ್ರಗಳ ಸಂಖ್ಯೆಯು ಅಧಿಕವಾಗಿರುವುದು. ಸೋಮಯಾಗದಲ್ಲಿ ಯಜ್ಞಮಾಡುವ ಯಜಮಾನನು ಒಬ್ಬನೂ, ಹದಿನಾರುಜನ ಋತ್ವಿಜರೂ ಇರುವರು. ಕೆಲವು ಸೋಮಯಾಗಗಳಲ್ಲಿ ಅನೇಕ ಮಂದಿ ಯಜಮಾನರೂ ಅಧಿಕಸಂಖ್ಯೆಯ ಋತ್ವಿಜರೂ ಇರುವರು. ಅನೇಕ ಜನರು ಸೇರಿ ಮಾಡುವ ಇಂತಹ ಸೋಮಯಾಗಕ್ಕೆ ಸತ್ರವೆಂದು ಹೆಸರು. ಈ ಸತ್ರಯಾಗವೂ ಎರಡು ವಿಧವಾಗಿರುವುದು. ಹನ್ನೆರಡುದಿನ ಪರ್ಯಂತವಾಗಿ ಮಾಡುವುದು ಒಂದುವಿಧ. ಒಂದು ಸಂವತ್ಸರದ

ವರೆಗೂ ಮಾಡುವುದು ಮತ್ತೊಂದು ವಿಧ. ಸಂವತ್ಸರಾತ್ಮಕವಾದ ಸತ್ರಗಳು **ಗವಾಮಯನ, ಆದಿತ್ಯಾನಾಮಯನ, ಅಂಗಿರಸಾಮಯನ** ಇತ್ಯಾದಿ ಅನೇಕ ವಿಧವಾಗಿರುವವು. ಇವೆಲ್ಲಕ್ಕೂ ಗವಾಮಯನವೇ ಪ್ರಕೃತಿಸ್ವರೂಪವಾಗಿರುವುದು (model) ಎಂದರೆ ಮೂಲಭೂತವಾಗಿರುವುದು. (ಈ ವಿಷಯವನ್ನು ನಾವು ಹಿಂದೆಯೇ ವಿವರಿಸಿದೇವೆ).

ಅಭಿಪ್ಲವ--ಆರು ದಿನಗಳ ಪರ್ಯಂತರ ಮಾಡುವ ಸೋಮಯಾಗಕ್ಕೆ ಷಡಹವೆಂದು ಹೆಸರು. ಇದು ಎರಡು ವಿಧ, ಅಭಿಪ್ಲವಷಡಹ ಮತ್ತು ಪೃಷ್ಠ್ಯಷಡಹ ಎಂದು. ಈ ಅಭಿಪ್ಲವ ಮತ್ತು ಪೃಷ್ಠ್ಯಯಾಗಗಳ ಲಕ್ಷಣವನ್ನು ಆಶ್ವಲಾಯನ ಮಹರ್ಷಿಗಳು **ಉಭಯತೋ ಜ್ಯೋತಿಃ ಷಡಹಃ** ಮತ್ತು **ಅಂತರತೋ ಜ್ಯೋತಿಃ ಷಡಹಃ** ಎಂದು ಹೇಳಿರುವರು ಎಂದರೆ ಷಡಹಸೋಮಯಾಗದಲ್ಲಿ ಮೊದಲನೆಯ ದಿನವೂ ಕೊನೆಯ ದಿನವೂ ಯಾಗವನ್ನು ಅಗ್ನಿಷ್ಟೋಮಯಾಗದಂತೆ ಮಾಡಿ ಉಳಿದ ನಾಲ್ಕು ದಿನಗಳಲ್ಲಿ ಉಕ್ಥ್ಯವೆಂಬ ಸೋಮಯಾಗದಂತೆ ಮಾಡುವ ಯಾಗವಿಶೇಷಕ್ಕೆ **ಅಭಿಪ್ಲವಷಡಹ**ವೆಂದು ಹೆಸರು **ಪೃಷ್ಠ್ಯಷಡಹ**ವೆಂದರೆ, ಮೊದಲನೆಯ ಮತ್ತು ನಾಲ್ಕನೆಯ ದಿನಗಳಲ್ಲಿ ಅಗ್ನಿಷ್ಟೋಮದಂತೆ ಮಾಡಿ ಉಳಿದ ದಿನಗಳಲ್ಲಿ ಉಕ್ಥ್ಯ ಯಾಗದಂತೆ ಮಾಡುವ ಸೋಮಯಾಗ ವಿಶೇಷವು.

ಅಗ್ನಿಷ್ಟೋಮಯಾಗಗಳಲ್ಲಿ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನವೆಂದು ಹೆಸರು. ಸೋಮರಸ ತೆಗೆಯುವ ಕಾಲದಲ್ಲಿ ಸ್ತೋತ್ರ ಮತ್ತು ಶಸ್ತ್ರಮಂತ್ರಗಳ ಪಠನೆಮಾಡುವುದರಿಂದ ಆ ದಿನಕ್ಕೆ ಸುತ್ಯಾದಿನವೆಂದು ಹೆಸರು. ಆ ದಿನದಲ್ಲಿ ಪ್ರಾತಃಕಾಲದಲ್ಲಿ ಎಂದರೆ ಹಿಂದಿನ ದಿನ ಅರ್ಧರಾತ್ರಿ ಕಳೆದಮೇಲೆ ಸೂರ್ಯೋದಯವಾಗುವುದರೊಳಗೆ ಪಕ್ಷಿಗಳ ಧ್ವನಿಯು ಕೇಳಿಬರುವುದಕ್ಕಿಂತ ಮುಂಚೆಯೇ ಹೋತೃವೆಂಬ ಋತ್ವಿಜನು ಪ್ರಾತರನುವಾಕಗಳೆಂಬ ಮಂತ್ರಗಳನ್ನು ಹೇಳಿ ಮುಗಿಸಬೇಕು. ಈ ಪ್ರಾತರನುವಾಕದಲ್ಲಿ ಆಗ್ನೇಯಕ್ರತು (ಅಗ್ನಿಸಂಬಂಧವಾದ ಋಕ್ಕಗಳು) ಉಷಸ್ಯಕ್ರತು (ಉಷೋದೇವತೆಯ ಸಂಬಂಧವಾದ ಋಕ್ಕಗಳು) ಆಶ್ವಿನಕ್ರತು (ಅಶ್ವಿನೀದೇವತೆಗಳಿಗೆ ಸಂಬಂಧವಾದ ಋಕ್ಕಗಳು) ಎಂಬ ಮೂರು ಭಾಗಗಳಿರುವವು. ಪ್ರತಿಯೊಂದು ಭಾಗದಲ್ಲಿಯೂ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿಃ ಎಂಬ ಏಳುವಿಧವಾದ ಛಂದಸ್ಸುಗಳಿಂದ ಕೂಡಿದ ಅನೇಕ ಮಂತ್ರಗಳಿರಬೇಕು.

ಪ್ರಾತರನುವಾಕ ಪಠನಾನಂತರ ಪ್ರಾತಸ್ಸವನವೆಂಬ ಕರ್ಮವು ನಡೆಯುವುದು. ಸವನವೆಂದರೆ ಸೋಮಲತೆಯನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವುದು. ಈ ಕರ್ಮವು ಮೂರು ಕಾಲಗಳಲ್ಲಿಯೂ ನಡೆಯುವುದು. ಪ್ರಾತಃಕಾಲದಲ್ಲಿ ರಸತೆಗೆಯುವುದಕ್ಕೆ ಪ್ರಾತಸ್ಸವನವೆಂದೂ, ಮಧ್ಯಾಹ್ನಕಾಲದಲ್ಲಿ ರಸತೆಗೆಯುವದಕ್ಕೆ ಮಾಧ್ಯಂದಿನಸವನವೆಂದೂ, ಸಾಯಂಕಾಲದಲ್ಲಿ ರಸತೆಗೆಯುವುದಕ್ಕೆ ತೃತೀಯಸವನವೆಂದೂ ಹೆಸರು.

ಈ ಮೂರು ಸವನಗಳಲ್ಲಿಯೂ ಒಟ್ಟು ಹನ್ನೆರಡು ಸ್ತೋತ್ರಗಳನ್ನು (ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ) ಹನ್ನೆರಡು ಶಸ್ತ್ರಗಳನ್ನೂ ಪಠಿಸಬೇಕು. ಅವುಗಳ ಕ್ರಮವನ್ನು ನಾವು ಹಿಂದೆಯೇ ವಿವರಿಸಿದೇವೆ.

ಯದ್ಯಪಿ ತಸ್ಯಾಗ್ನಿಷ್ಟೋಮಸ್ಯೋಪಕ್ರಮೇಽವಶ್ಯಮೃತ್ವಿಗ್ವರಣಂ ವಕ್ತವ್ಯಂ ಸೋಮೇನ ಯಕ್ಷ್ಯಮಾಣೋ ಬ್ರಾಹ್ಮಣಾನಾರ್ಷೇಯಾನೃತ್ವಿಜೋ ವೃಣೀತ ಇತ್ಯಾಪಸ್ತಂಬೇನಾಭಿಧಾನಾತ್ತಥಾಪ್ಯೃಗ್ವೇದಸ್ಯ ಹೋತೃಕರ್ತವ್ಯಪ್ರತಿಪಾದಕತ್ವಾದೃತ್ವಿಗ್ವರಣಸ್ಯ ತು ಹೌತ್ರತ್ವಾಭಾವಾತ್ತದುಪೇಕ್ಷ್ಯ ದೀಕ್ಷಣೀಯೇಷ್ಟಿರಾದೌ ವಿಧೀಯತೇ । ಋಗ್ವೇದಸ್ಯ ಹೌತ್ರತ್ವಂ ಸಮಾಖ್ಯಾಬಲಾತ್ತೃತೀಯಾಧ್ಯಾಯಸ್ಯ ತೃತೀಯಪಾದೇ ವಿಚಾರಿತಂ—

ವೇದತ್ರಯೋಕ್ತಧರ್ಮಾಣಾಮೃತ್ವಿಗ್ಭಿಃ ಸಂಗತಿಸ್ತ್ರಿಭಿಃ ।
ಅನಿಯತ್ಯಾ ನಿಯತ್ಯಾ ವಾ ನಿಯತಿರ್ನಾನಿರೂಪಣಾತ್ ॥

**ಹೌತ್ರತ್ವಾದಿಸಮಾಖ್ಯಾನಂ ನಿಯತೇರ್ಗಮಕಂ ಸ್ಮೃತಃ ।
ನಿರ್ಬಾಧಂ ಚಾನ್ಯವತ್ತಚ್ಚ ತೇನಾತ್ರ ವಿನಿಯೋಜಕಂ ॥**

**ಯಾಜ್ಯಾಪುರೋನುವಾಕ್ಯಾಪಾಠಾದಯೋ ಧರ್ಮಾ ಋಗ್ವೇದೇ ಪ್ರೋಕ್ತಾಃ । ದೋಹನನಿರ್ವಾಪಾದಯೋ ಯಜುರ್ವೇದೇ । ಆಜ್ಯಸ್ತೋತ್ರಪೃಷ್ಠಸ್ತೋತ್ರಾದಯಃ ಸಾಮವೇದೇ । ತತ್ರಾಸ್ಯೈವೈತೇ ಧರ್ಮಾ ಇತಿ ನಿಯಾಮಕಸ್ಯ ದುರ್ನಿರೂಪತ್ವಾದ್ಯೇನಕೇನಾಪ್ಯೃತ್ವಿಜಾ ಯಃ ಕೋಽಪಿ ಧರ್ಮ ಇಚ್ಛಯಾ ಸಂಗಚ್ಛತ ಇತಿ ಚೇನ್ಮೈವಂ । ಹೌತ್ರಮಾಧ್ವರ್ಯವಮೌದ್ಗಾತ್ರಮಿತಿ ಸಮಾಖ್ಯಾನೇನ ನಿಯತಿರ್ಬೋಧ್ಯತೇ । ನ ಚ ಸಮಾಖ್ಯಾನಸ್ಯ ಬಾಧಕಂ ಕಿಂಚಿತ್ಪಶ್ಯಾಮಃ।ತಸ್ಮಾದಬೋಧಕತ್ವಬಾಧಿತತ್ವಯೋರಪ್ರಾಮಾಣ್ಯಕಾರಣಯೋರಭಾವಾಚ್ಛ್ರುತಿಲಿಂಗಾದಿಪಂಚಕವತ್ಪ್ರಮಾಣೇನ ಸಮಾಖ್ಯಾನೇನ ಧರ್ಮಾ ವ್ಯವಸ್ಥಾಪ್ಯಂತೇ। ನನ್ವಿಷ್ಟೇರಪ್ಯಧ್ವರ್ಯುಕರ್ತೃಕತ್ವಾದ್ಯಜುರ್ವೇದೇ ಕರ್ತವ್ಯತಾ ನ ತ್ವತ್ರೇತಿ ಚೇತ್ಸತ್ಯಂ ತಥಾಪೀಷ್ಟಿಗತಯೋರ್ಯಾಜ್ಯಾನುವಾಕ್ಯಯೋರ್ಹೌತ್ರತ್ವೇನಾತ್ರ ವಕ್ತವ್ಯತ್ವಾದಿಷ್ಟೇರನುಕ್ತೌ ಯಾಜ್ಯಾನುವಾಕ್ಯೇ ಕುತ್ರತ್ಯೇ ಇತಿ ವಿಶೇಷಸಂಬಂಧಸ್ಯ ಜ್ಞಾತುಮಶಕ್ಯತ್ವಾತ್ತದವಬೋಧಾಯ ಪ್ರಥಮಮಿಷ್ಟಿರ್ವಿಧಾತವ್ಯಾ-ತಸ್ಯಾಂ ವಿಧಾತುಂ ತದ್ದೇವತಾರೂಪಮಗ್ನಿಂ ವಿಷ್ಣುಂ ಚಾದೌ ಪ್ರಶಂಸತಿ ॥**

ನಾವು ಮೇಲೆ ವಿವರಿಸಿರುವ ಅಗ್ನಿಷ್ಟೋಮಾದಿಯಾಗಗಳ ವಿವರಣೆಯನ್ನು ಈ ಬ್ರಾಹ್ಮಣದಲ್ಲಿ ಪ್ರಾರಂಭಿಸಲಾಗಿದೆಯೇ? ಹಾಗಿದ್ದರೆ ಯಜ್ಞಮಾಡುವುದಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ಕರ್ತವ್ಯವೆಂದರೆ, ಋತ್ವಿಗ್ವರಣ (Selection & Appointment of Priests) ಎಂದರೆ ಯಜ್ಞವನ್ನು ನೆರವೇರಿಸಲು ಅತ್ಯವಶ್ಯಕವಾಗಿ ಬೇಕಾಗುವ ಹೋತೃ, ಅಧ್ವರ್ಯು ಮುಂತಾದ ಋತ್ವಿಜರನ್ನು ಆರಿಸಿ ನಿಯಮಿಸಿಕೊಳ್ಳುವುದು. ಈ ವಿಷಯದಲ್ಲಿ ಆಪಸ್ತಂಬಶ್ರೌತಸೂತ್ರದಲ್ಲಿ—**ಸೋಮೇನ ಯಕ್ಷ್ಯಮಾಣೋ ಬ್ರಾಹ್ಮಣಾನಾರ್ಷೇಯಾನೃತ್ವಿಜೋ ವೃಣೀತ** (ಆಪ. ಶ್ರೌ. ೧೦-೧-೧) ಸೋಮಯಾಗವನ್ನು ಮಾಡಬೇಕೆಂದು ಅಪೇಕ್ಷಿಸುವ ಪುರುಷನು ತನ್ನ ಯಜ್ಞದಲ್ಲಿ ಭಾಗವಹಿಸಿ ಯಜ್ಞಕರ್ಮಗಳನ್ನು ಸಾಂಗವಾಗಿ ನೆರವೇರಿಸಲು ಆ ಕರ್ಮಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಋಷಿವಂಶಜರೂ ಯೋಗ್ಯರೂ ಆದ ಬ್ರಾಹ್ಮಣರನ್ನು ಋತ್ವಿಕ್ಕುಗಳನ್ನಾಗಿ ಆರಿಸಿ ಆಹ್ವಾನಿಸಬೇಕು ಎಂದು ಹೇಳಿದೆ. ಯಜ್ಞದಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಪಠಿಸುವವನು ಹೋತೃವು. ಆ ಹೋತೃವನ್ನು ಮೊದಲು ನಿಯಮಿಸಿಕೊಳ್ಳಬೇಕು. ಆದರೆ ಈ ಐತರೇಯ ಬ್ರಾಹ್ಮಣದಲ್ಲಿ ಹೋತೃ ಮೊದಲಾದ ಋತ್ವಿಗ್ವರಣ ಕ್ರಮವನ್ನು ಗ್ರಂಥಪ್ರಾರಂಭದಲ್ಲಿ ವಿವರಿಸಿಲ್ಲ. ಮತ್ತು—**ಋಗ್ವೇದೇನೈವ ಹೌತ್ರಮಕುರ್ವತ ಯಜುರ್ವೇದೇನಾಧ್ವರ್ಯವಂ ಸಾಮವೇದೇನೋದ್ಗೀಥಂ** (ಶ. ಬ್ರಾ. ೧೧-೫-೮-೪) ಹೌತೃಕರ್ಮವನ್ನು ಋಗ್ವೇದ ಮಂತ್ರಗಳಿಂದಲೂ, ಅಧ್ವರ್ಯುವಿನ ಕಾರ್ಯಕಲಾಪಗಳನ್ನು ಯಜುರ್ವೇದ ಮಂತ್ರಗಳಿಂದಲೂ, ಉದ್ಗಾತೃ ಎಂಬ ಋತ್ವಿಜನು ಮಾಡಬೇಕಾದ ಸಾಮಗಾನವನ್ನು ಸಾಮವೇದ ಮಂತ್ರಗಳಿಂದಲೂ ನೆರವೇರಿಸಬೇಕು ಎಂದ ಶತಪಥಬ್ರಾಹ್ಮಣದ ವಾಕ್ಯವಿರುವುದು. ಇದಲ್ಲದೆ, ಅಲ್ಲಿಯೇ—**ಯದೃಚೈವ ಹೌತ್ರಂ ಕ್ರಿಯತೇ ಯಜುಷಾಧ್ವರ್ಯವಂ ಸಾಮ್ನೋದ್ಗೀಥಂ ವ್ಯಾರಬ್ಧಾ ತ್ರಯೀ ವಿದ್ಯಾ ಭವತಿ । ಅಥ ಕೇನ ಬ್ರಹ್ಮತ್ವಂ ಕ್ರಿಯತ ಇತಿ? ತ್ರಯ್ಯಾ ವಿದ್ಯಯೇತಿ ಬ್ರೂಯಾತ್** (ಶ. ಬ್ರಾ. ೧೧-೫-೫-೮) ಋಙ್ಮಂತ್ರಗಳಿಂದ ಹೋತೃಕರ್ಮವನ್ನೂ ಯಜುರ್ಮಂತ್ರಗಳಿಂದ ಅಧ್ವರ್ಯುಕರ್ಮಗಳನ್ನೂ, ಸಾಮಮಂತ್ರಗಳಿಂದ ಉದ್ಗಾತೃವಿನ ಕರ್ಮವನ್ನೂ ಮಾಡಬೇಕೆಂದು ಹೇಳಿದೆಯಷ್ಟೆ. ಆದರೆ ಬ್ರಹ್ಮನೆಂಬ ಋತ್ವಿಜನು ಯಾವ ವೇದಮಂತ್ರಗಳ ಆಧಾರದಮೇಲೆ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು ಎಂದರೆ, ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು

ವೇದಗಳನ್ನು ಚೆನ್ನಾಗಿ ತಿಳಿದು ಅವುಗಳ ಆದೇಶದಂತೆ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು ಎಂದೂ ತಿಳಿಸಿದೆ. ಆಪಸ್ತಂಬ ಮಹರ್ಷಿಯೂ ಸಹ– **ಋಗ್ವೇದೇನ ಹೋತಾ ಕರೋತಿ ಸಾಮವೇದೇನೋದ್ಗಾತಾ, ಯಜುರ್ವೇದೇನಾ-ಧ್ವರ್ಯುಃ, ಸರ್ವೈರ್ಬ್ರಹ್ಮಾ** (ಆಪ.ಶ್ರೌ. ೧೯-೨೩) ಋಗ್ವೇದವನ್ನು ಅಧ್ಯಯನಮಾಡಿದವನು ಹೋತೃಕರ್ಮವನ್ನೂ, ಸಾಮವೇದಾಧ್ಯಯನ ಮಾಡಿದವನು ಉದ್ಗಾತೃವಿನ ಕರ್ಮವನ್ನೂ, ಯಜುರ್ವೇದಾಧ್ಯಯನ ಮಾಡಿದವನು ಅಧ್ವರ್ಯುಕರ್ಮವನ್ನೂ, ಈ ಮೂರು ವೇದಗಳನ್ನು ಚೆನ್ನಾಗಿ ತಿಳಿದವನು ಬ್ರಹ್ಮನ ಕರ್ತವ್ಯವನ್ನೂ ಮಾಡಬೇಕು ಎಂದು ಹೇಳಿರುವರು.

ಆದ್ದರಿಂದ ಋಗ್ವೇದಕ್ಕೆ ಸಂಬಂಧಪಟ್ಟ ಈ ಬ್ರಾಹ್ಮಣದಲ್ಲಿ ಮೊದಲು ಹೋತೃ ಮೊದಲಾದ ಋತ್ವಿಗರಣ ವಿಧಿಯನ್ನು ವಿವರಿಸಬೇಕಾಗಿತ್ತು. ಆದರೆ ಹಾಗೆ ಮಾಡದೆ ದೀಕ್ಷಣೀಯೇಷ್ಟಿಯ ಕ್ರಮವನ್ನು ವಿವರಿಸಲಾಗಿದೆ. ಏಕೆಂದರೆ ಈ ಇಷ್ಟಿಯಲ್ಲಿ ಹೋತೃವೆಂಬ ಋತ್ವಿಜನ ಕರ್ತವ್ಯವೇನೂ ಇರುವುದಿಲ್ಲ. ಇತರ ಋತ್ವಿಜರ ವರಣ ಮುಂತಾದ ಕರ್ಮಗಳು ಋಗ್ವೇದಕ್ಕೆ ಸಂಬಂಧಪಟ್ಟಿರುವುದಿಲ್ಲ. ಆದ್ದರಿಂದ ಇಲ್ಲಿ ಋತ್ವಿಗ್ವರಣಾದಿಗಳನ್ನು ಹೇಳದೆ ಇಷ್ಟಿಯನ್ನು ಮಾತ್ರ ವಿವರಿಸಲಾಗಿದೆ. ಮುಖ್ಯವಾಗಿ ಈ ಬ್ರಾಹ್ಮಣದಲ್ಲಿ ಹೋತೃವಿಗೆ ಸಂಬಂಧಪಟ್ಟ ಕಾರ್ಯಕಲಾಪಗಳನ್ನು ಎಂದರೆ ಮಂತ್ರಪಠನಾದಿಗಳನ್ನು ಮಾತ್ರ ವಿವರಿಸಲಾಗಿದೆ. ಇತರ ಋತ್ವಿಜರ ಕರ್ತವ್ಯಕರ್ಮಗಳು ಬೇರೆ ವೇದಗಳಲ್ಲಿ ಉಕ್ತವಾಗಿರುವುದರಿಂದ ಇಲ್ಲಿ ಬಿಟ್ಟಿದೆ—

**ಆಖ್ಯಾ ಚೈವಂ ತದರ್ಥತ್ವಾತ್ ॥ ೧೩ ॥**

(ಜೈ.ಸೂ. ೩-೩-೧೩)

**ವೇದತ್ರಯೋಕ್ತಧರ್ಮಾಣಾಮೃತ್ವಿಗ್ಭಿಃ ಸಂಗತಿಸ್ತ್ರಿಭಿಃ ।**
**ಅನಿಯತ್ಯಾ ನಿಯತ್ಯಾ ವಾ ನಿಯತಿರ್ನಾನಿರೂಪಣಾತ್ ॥**
**ಹೌತ್ರತ್ವಾದಿಸಮಾಖ್ಯಾನಂ ನಿಯತೇರ್ಗಮಕಂ ತತಃ ।**
**ನಿರ್ಬಾಧಂ ಚಾನ್ಯವತ್ತಚ್ಚ ತೇನಾತ್ರ ವಿನಿಯೋಜಕಂ ॥**

(ನ್ಯಾಯಮಾಲಾವಿಸ್ತರ. ಅ. ೩. ಪಾ. ಅಧಿ ೬)

ಜೈಮಿನಿಯ ಮೀಮಾಂಸಾಸೂತ್ರದಲ್ಲಿ ಮೇಲೆ ಹೇಳಿದ ಹೋತೃ ಮೊದಲಾದ ಋತ್ವಿಜರ ಕರ್ತವ್ಯವನ್ನು ಹೇಳಲಾಗಿದೆ. ಈ ಸೂತ್ರವನ್ನೇ ಅನುಸರಿಸಿರುವ ನ್ಯಾಯಮಾಲಾವಿಸ್ತರವೆಂಬ ಗ್ರಂಥದಲ್ಲಿಯೂ ಮೂರು ವೇದಗಳಲ್ಲಿ ಹೇಳಿರುವ ಮಂತ್ರಗಳಿಂದ ಯಾವ ಯಾವ ಋತ್ವಿಕ್ಕಗಳು ಯಾವ ಯಾವ ಕರ್ಮವನ್ನು ಮಾಡಬೇಕು ಎಂದು ಹೇಳಲಾಗಿದೆ. ಅಲ್ಲದೆ ಇದಕ್ಕೆ ಯಾವುದಾದರೂ ಒಂದು ನಿಯಮವಿದೆಯೇ? ಯಾವ ಋತ್ವಿಜನಾಗಲಿ, ಯಾವ ವೇದದ ಮಂತ್ರವನ್ನಾಗಲಿ ಪಠಿಸಿ ಯಾವ ಕರ್ಮವನ್ನಾಗಲಿ ಮಾಡಬಹುದೇ? ಹಾಗೆ ಮಾಡಿದರೆ ಏನಾದರೂ ಬಾಧಕವುಂಟೇ? ಎಂದರೆ ಆರೀತಿ ಮಾಡಕೂಡದು. ಪ್ರತಿಯೊಬ್ಬ ಋತ್ವಿಜನೂ ತನ್ನ ಸ್ವಶಾಖೆಯಲ್ಲಿ ಹೇಳಿದ ಮಂತ್ರಗಳನ್ನು ಮಾತ್ರ ಪಠಿಸಬೇಕು ಮತ್ತು ಆ ವೇದಕ್ಕನುಸಾರವಾದ ಋತ್ವಿಕ್ಕಿನ ಪಾತ್ರವನ್ನು ಮಾತ್ರ ನಿರ್ವಹಿಸಬೇಕು. ಹೇಗೆಂದರೆ—

ಯಾಜ್ಯಾಪುರೋನುವಾಕ್ಯಾ ಎಂಬ ಮಂತ್ರಗಳನ್ನೂ (ಅನುವಾಕ್ಯಾ ಎಂದರೆ ದೇವತೆಗಳ ಗುಣಗಾನಮಾಡಿ ಅವರನ್ನು ಆಹ್ವಾನಿಸುವ ಮಂತ್ರ; ಯಾಜ್ಯಾ ಎಂದರೆ ಆ ದೇವತೆಗಳನ್ನುದ್ದೇಶಿಸಿ ಹೋಮದ್ರವ್ಯವನ್ನು ಅಗ್ನಿಯಲ್ಲಿ ಹೋಮಮಾಡುವಾಗ ಪಠಿಸುವ ಮಂತ್ರ) ಅವುಗಳನ್ನು ಪಠಿಸುವ ಕ್ರಮವನ್ನು ಋಗ್ವೇದದಲ್ಲಿ ಹೇಳಲಾಗಿದೆ. ದೋಹನ (ಯಜ್ಞದಲ್ಲಿ ಬಳಸುವ ಕ್ಷೀರಕ್ಕಾಗಿ ಹಸುವಿನ ಹಾಲನ್ನು ಕರೆಯುವುದಕ್ಕೆ ದೋಹನವೆಂದು ಹೆಸರು) ನಿರ್ವಾಪ ಮೊದಲಾದ ಕಾರ್ಯಕಲಾಪಗಳು ಯಜುರ್ವೇದದಲ್ಲಿ ಹೇಳಲ್ಪಟ್ಟಿವೆ. ಆಜ್ಯಸ್ತೋತ್ರಪೃಷ್ಠಸ್ತೋತ್ರ ಮೊದಲಾದ ಸಾಮಗಾನಮಂತ್ರಗಳು ಸಾಮವೇದದಲ್ಲಿ ಉಕ್ತವಾಗಿವೆ. ಒಟ್ಟಿನಲ್ಲಿ ಋತ್ವಿಕ್ಕುಗಳು ತಮ್ಮ ಮನಸ್ಸುಬಂದಂತೆ ಈ ಮೂರು ವೇದಗಳ ಮಂತ್ರಗಳನ್ನು ಬಳಸಿ ಯಜ್ಞವನ್ನು

ನಿರ್ವಹಿಸಬಹುದೇ? ಎಂದರೆ ಹೋತೃ, ಅಧ್ವರ್ಯು, ಉದ್ಗಾತೃ ಮೊದಲಾದ ಋತ್ವಿಜರಲ್ಲಿ ಯಾರು ಬೇಕಾದರೂ ಯಾವ ಮಂತ್ರವನ್ನಾದರೂ ಪಠಿಸಿ ಯಜ್ಞಕಾರ್ಯವನ್ನು ನೆರವೇರಿಸಬಹುದೇ? ಹಾಗೆ ಮಾಡಿದರೆ ಯಜ್ಞವು ಸಾಂಗವಾಗಿ ನೆರವೇರಿದಂತಾಗುವುದೇ? ಎಂದರೆ ಖಂಡಿತವಾಗಿಯೂ ಹಾಗಾಗುವುದಿಲ್ಲ, ಯಾವ ಋತ್ವಿಜನು ಯಾವ ಕಾಲದಲ್ಲಿ ಯಾವ ವೇದದ ಮಂತ್ರಗಳನ್ನು ಹೇಗೆ ಪಠಿಸಿ ಯಾವ ಕಾರ್ಯಕಲಾಪಗಳನ್ನು ಯಾವರೀತಿ ಮಾಡಬೇಕೆಂಬ ವಿಷಯದಲ್ಲಿ ವಿಧಿನಿಯಮಗಳಿವೆ. ಆ ವಿಧಿನಿಯಮಗಳಿಗೆ ಬಾಧಕ ಬರದಂತೆ ಅವುಗಳನ್ನು ಕಟ್ಟುನಿಟ್ಟಾಗಿ ಆಚರಿಸಿ ಯಜ್ಞಕರ್ಮವನ್ನು ನೆರವೇರಿಸಬೇಕು. ಆದ್ದರಿಂದ – **ಶ್ರುತಿಲಿಂಗವಾಕ್ಯಪ್ರಕರಣಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್** (ಜೈ.ಸೂ. ೩-೩-೧೪) ಎಂಬ ಮೀಮಾಂಸಾಸೂತ್ರದಲ್ಲಿ ಹೇಳಿರುವುದಕ್ಕೆ ವಿರೋಧಬಾರದಂತೆ ಮಂತ್ರಗಳ ಅರ್ಥಾನುಸಾರವಾಗಿ ಅವುಗಳನ್ನು ಪ್ರಯೋಗಮಾಡಬೇಕು. ಎಂದರೆ ಶ್ರುತಿ-ವಿಷಯನಿರೂಪಣೆ, ಲಿಂಗ–ಚಿಹ್ನೆ ಅಥವಾ ಲಕ್ಷಣ, ವಾಕ್ಯ–ಪೂರ್ವಾಪರಸಂದರ್ಭ, ಪ್ರಕರಣ–ಪ್ರಕೃತಸಂದರ್ಭ ಅಥವಾ ಕರ್ಮ, ಸ್ಥಾನ–ವಾಕ್ಯದಲ್ಲಿ ಶಬ್ದದ ನಿರ್ದಿಷ್ಟಸ್ಥಾನ, ಸಮಾಖ್ಯಾ–ಹೆಸರು. ಇವುಗಳೆಲ್ಲಾ ಅಥವಾ ಇವುಗಳಲ್ಲಿ ಕೆಲವು ಒಂದು ವಾಕ್ಯದಲ್ಲಿ ಸೇರಿರುವ ಪಕ್ಷದಲ್ಲಿ ಮೊದಲನೆಯದಕ್ಕಿಂತ ಎರಡನೆಯದಕ್ಕೆ ಪ್ರಾಮಾಣ್ಯ ಅಥವಾ ಪ್ರಾಧಾನ್ಯತೆ ಕಡಿಮೆಯಾಗಿರುವುದು, ಎರಡನೆಯದಕ್ಕಿಂತ ಮೂರನೆಯದಕ್ಕೆ ಇನ್ನೂ ಪ್ರಾಧಾನ್ಯತೆ ಕಮ್ಮಿ ಇರುವುದು ಈ ಕ್ರಮದಲ್ಲಿ ಅರ್ಥವು ಸರಿಹೋಗುವಂತೆ ಸಮನ್ವಯಮಾಡಿ ಮಂತ್ರಾದಿಗಳನ್ನು ಉಪಯೋಗಿಸಬೇಕು. ಉದಾಹರಣೆಗೆ—**ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ** ಎಂಬುದು ಒಂದು ವಿಧಿವಾಕ್ಯ. ಇಲ್ಲಿ **ಐಂದ್ರ್ಯಾ** ಎಂದರೆ ಇಂದ್ರನನ್ನು ಸ್ತುತಿಸುವ ಋಕ್ಕು ಅಥವಾ ಮಂತ್ರ **ಗಾರ್ಹಪತ್ಯ** ಎಂದರೆ ಗಾರ್ಹಪತ್ಯ ಎಂಬ ಹೆಸರಿನ ಅಗ್ನಿಕುಂಡದಲ್ಲಿ ಸ್ಥಾಪಿತವಾಗಿರುವ ಅಗ್ನಿ **ಉಪತಿಷ್ಠತೆ**—ಎಂದರೆ ಉಪಾಸನೆ ಅಥವಾ ಪ್ರಾರ್ಥನೆಮಾಡಬೇಕು ಎಂದು ಈ ವಾಕ್ಯದ ಅರ್ಥವು. ಸಾಧಾರಣವಾಗಿ ಆಯಾ ದೇವತೆಗಳನ್ನು ಸ್ತುತಿಸುವ ಮಂತ್ರಗಳಿಂದಲೇ ಆಯಾ ದೇವತೆಯನ್ನು ಪ್ರಾರ್ಥಿಸಬೇಕು. ಆದ್ದರಿಂದ ಈ ವಾಕ್ಯದಲ್ಲಿ ಅಗ್ನಿಯನ್ನು ಪ್ರಾರ್ಥಿಸಬೇಕು ಎಂಬ ವಿಷಯವಿರುವುದರಿಂದ **ಆಗ್ನೇಯ್ಯಾ** ಅಗ್ನಿಸಂಬಂಧವಾದ ಮಂತ್ರದಿಂದ ಎಂದಿರಬೇಕು. ಆದರೆ ಹಾಗಿಲ್ಲ **ಐಂದ್ರ್ಯಾ**–ಇಂದ್ರಸಂಬಂಧವಾದ ಎಂಬ ಶಬ್ದವಿರುವುದು. ಈ ವಿಷಯದಲ್ಲಿ ಮೇಲಿನ ಸೂತ್ರವನ್ನು ಅನ್ವಯಿಸುವುದಾದರೆ, ಮೊದಲನೆಯ **ಶ್ರುತಿ** ಎಂಬ ಶಬ್ದಕ್ಕೆ ಅರ್ಥವೇನು ಎಂದು ಕೇಳಬೇಕಾಗುವುದು. ಶ್ರುತಿ–ಎಂದರೆ ವಿಷಯನಿರೂಪಣೆ ಎಂದರ್ಥವು. ಆ ವಿಷಯವು ಯಾವುದು ಎಂದರೆ ಅಗ್ನಿಯನ್ನು ಸ್ತುತಿಸಬೇಕು ಎನ್ನುವುದು. ಆದ್ದರಿಂದ ಈ ವಾಕ್ಯದಲ್ಲಿ ಅಗ್ನಿಶಬ್ದಸೂಚಕವಾದ **ಗಾರ್ಹಪತ್ಯ** ಶಬ್ದವು **ಶ್ರುತಿ** ಎಂದು ಹೇಳಲ್ಪಡುವುದು. ಈ ಗಾರ್ಹಪತ್ಯ ಶಬ್ದಕ್ಕೆ ಈ ವಾಕ್ಯದಲ್ಲಿ ಹೆಚ್ಚು ಪ್ರಾಧಾನ್ಯವಿದೆ ಎಂದು ಶ್ರುತಿಶಬ್ದದ ಅರ್ಥವು. ಎರಡನೆಯ **ಲಿಂಗ**–ಲಕ್ಷಣ ಎಂಬ ಶಬ್ದಕ್ಕೆ ಶ್ರುತಿಶಬ್ದಕ್ಕಿಂತಲೂ ಕಮ್ಮಿಸ್ಥಾನವಿರುವುದು. ಲಕ್ಷಣದಿಂದ ಸೂಚಿತವಾಗುವ ಶಬ್ದವು ಈ ವಾಕ್ಯದಲ್ಲಿ ಯಾವುದೆಂದರೆ **ಐಂದ್ರ್ಯಾ**–ಇಂದ್ರದೇವತಾಕವಾದ ಎಂಬ ಪದವು. ಕದಾಚನಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ—ಎಂಬುದು ಇಂದ್ರನನ್ನು ಸ್ತುತಿಸುವ ಮಂತ್ರವು ಈ ಮಂತ್ರಕ್ಕೆ—"ಎಲೈ ಇಂದ್ರನೇ, ನೀನು ಯಾವಾಗಲೂ ಯಜ್ಞಮಾಡುವ ಯಜಮಾನನಿಗೆ ಹಿಂಸಕನಾಗಿರಬೇಡ. ನಿನಗೆ ಹವಿಸ್ಸನ್ನರ್ಪಿಸುವ ಆ ಯಜಮಾನನಿಗೆ ಮಿತ್ರನಾಗಿ ಅವನ ಬಳಿಯಲ್ಲಿಯೇ ಇರುತ್ತೀಯೆ" ಎಂದು ಮುಖ್ಯಾರ್ಥವು. ಈ ಮಂತ್ರದಲ್ಲಿ ಇಂದ್ರಶಬ್ದವಿರುವುದರಿಂದಲೂ ಇಂದ್ರನನ್ನೇ ಮುಖ್ಯದೇವತೆಯನ್ನಾಗಿ ಸ್ತುತಿಸಿರುವುದರಿಂದಲೂ ಈ ಮಂತ್ರಕ್ಕೆ ಐಂದ್ರೀ ಎಂಬ ಹೆಸರು. ಐಂದ್ರೀ ಎಂದರೆ ಇಂದ್ರದೇವತಾಕವಾದ ಎಂಬ ಲಕ್ಷಣವು ಲಿಂಗ ಎಂಬ ಶಬ್ದದಿಂದ ಇಲ್ಲಿ ನಿರ್ದಿಷ್ಟವಾಗಿದೆ. ಕೆಲವು ಮಂತ್ರಗಳಲ್ಲಿ ಒಂದಕ್ಕಿಂತ ಹೆಚ್ಚು ದೇವತೆಗಳ ಹೆಸರಿದ್ದಲ್ಲಿ ಮುಖ್ಯವಾಗಿ ಸ್ತುತಿಸಲಾಗಿರುವ ದೇವತೆಗೇ ಪ್ರಾಧಾನ್ಯವಿರುವುದು. ಪ್ರಾಸಂಗಿಕವಾಗಿ ಹೇಳಿರುವ ಬೇರೆ ದೇವತೆಯ ಹೆಸರು ಮುಖ್ಯವಲ್ಲ. "**ಮರುದ್ಭಿರಗ್ನ ಆಗಹಿ**—ಎಲೈ ಅಗ್ನಿಯೇ, ಮರುದ್ದೇವತೆಗಳೊಡನೆ ಈ ಯಜ್ಞಭೂಮಿಗೆ ದಯಮಾಡಿಸು" ಎಂಬ ಮಂತ್ರದಲ್ಲಿ ಅಗ್ನಿಯನ್ನು ಮುಖ್ಯವಾಗಿ ಸ್ತುತಿಸಿರುವುದರಿಂದ ಅಗ್ನಿಪ್ರಾಧಾನತ್ವವಿರುವುದು. ಮರುದ್ದೇವತೆಗಳ ಹೆಸರು ಈ ಮಂತ್ರದಲ್ಲಿ

ಪ್ರಾಸಂಗಿಕವಾಗಿದೆ. ಅದಕ್ಕೆ ಪ್ರಾಧಾನ್ಯವಿಲ್ಲ ಎಂದಭಿಪ್ರಾಯವು. ಉದಾಹರಣವಾಕ್ಯದಲ್ಲಿ— "ಗಾರ್ಹಪತ್ಯಾಗ್ನಿಯನ್ನು ಇಂದ್ರದೇವತಾಕವಾದ ಮಂತ್ರದಿಂದ ಸ್ತುತಿಸು" ಎಂಬಲ್ಲಿ ಅಗ್ನಿಯನ್ನು ಸ್ತುತಿಸು ಎಂಬ ವಿಷಯನಿರೂಪಣೆಯು (ಅಗ್ನಿಯನ್ನು ಎಂಬ ಶಬ್ದವು) ಪ್ರಧಾನವಾಗಿರುವುದು. ಅದನ್ನೇ ಶ್ರುತಿಶಬ್ದವು ತಿಳಿಸುವುದು, **ಐಂದ್ರ್ಯಾ**-ಇಂದ್ರದೇವತಾಕವಾದ ಮಂತ್ರದಿಂದ" ಎಂಬ ಶಬ್ದವು ಅಗ್ನಿಯನ್ನು ಎಂಬ ಶಬ್ದಕ್ಕಿಂತ ಪ್ರಧಾನತೆಯಲ್ಲಿ ಕಮ್ಮಿಯಾಗಿರುವುದು. ಹೇಗೆ ಎಂದರೆ **ಐಂದ್ರ್ಯಾ** ಎಂಬ ಶಬ್ದವನ್ನು ಬಿಟ್ಟು **ಗಾರ್ಹಪತ್ಯಮುಪತಿಷ್ಠತೇ** ಎಂದು ಹೇಳಿದರೂ ವಿಷಯನಿರೂಪಣಕ್ಕೆ ಎಂದರೆ ವಾಕ್ಯಾರ್ಥಕ್ಕೆ ಕುಂದುಬರುವುದಿಲ್ಲ. ಆದ್ದರಿಂದಲೇ **ಗಾರ್ಹಪತ್ಯಂ** ಎಂಬ ಶಬ್ದವು ಶ್ರುತಿಬೋಧ್ಯವು. ಐಂದ್ರ್ಯಾ ಎಂಬುದು ವಾಕ್ಯಾರ್ಥದಲ್ಲಿ ಗಾರ್ಹಪತ್ಯಶಬ್ದದಷ್ಟು ಮುಖ್ಯವಲ್ಲವಾದ್ದರಿಂದ ಅದಕ್ಕೆ **ಲಿಂಗ-ಲಕ್ಷಣ** ಎಂದು ದ್ವಿತೀಯಸ್ಥಾನವು. ಇದರಂತೆ ಒಂದು ವಾಕ್ಯದಲ್ಲಿ **ಶ್ರುತಿ, ಲಿಂಗ ವಾಕ್ಯ ಪ್ರಕರಣ, ಸ್ಥಾನ, ಸಮಾಖ್ಯಾ** ಎಂಬ ೬ ವಿಚಾರಗಳಿಗೆ ಸಂಬಂಧಪಟ್ಟ ಶಬ್ದಗಳು ಒಂದು ವಾಕ್ಯದಲ್ಲಿದ್ದರೆ ಆ ವಾಕ್ಯದ ಅರ್ಥವನ್ನು ನಿರ್ಣಯಿಸುವಾಗ ಮೊದಲು ಶ್ರುತಿಯಿಂದ ನಿರ್ದಿಷ್ಟವಾಗುವ ಶಬ್ದಕ್ಕೆ (ಅಥವಾ ವಿಷಯಕ್ಕೆ) ಪ್ರಥಮಸ್ಥಾನ ಅಥವಾ ಪ್ರಾಧಾನ್ಯತೆಯನ್ನು ಕೊಡಬೇಕು. ಬಳಿಕ ಕ್ರಮವಾಗಿ ಲಿಂಗವಾಕ್ಯಾದಿಗಳಿಗೆ ದ್ವಿತೀಯ ತೃತೀಯಾದಿಸ್ಥಾನಗಳನ್ನು ಕಲ್ಪಿಸಿ ವಾಕ್ಯಕ್ಕೆ ಅರ್ಥಮಾಡಬೇಕು ಎಂದಭಿಪ್ರಾಯವು. (ಜೈಮಿನಿಸೂತ್ರದ ವಿಸ್ತಾರವಾದ ವಿಮರ್ಶೆಯು ಇಲ್ಲಿ ಅಪ್ರಕೃತವಾದ್ದರಿಂದ ಸಂದರ್ಭಕ್ಕೆ ಆವಶ್ಯಕವಾದ ವಿಷಯವನ್ನು ಮಾತ್ರ ಇಲ್ಲಿ ಸೂಕ್ಷ್ಮವಾಗಿ ವಿಮರ್ಶಿಸಲಾಗಿದೆ).

ಯಜ್ಞಾದಿಗಳಲ್ಲಿ ಯಾವ ಕರ್ಮ ಮಾಡಬೇಕಾದರೂ ಆ ಕರ್ಮದ ವಿಷಯವನ್ನೇ ನಿರ್ದೇಶಿಸುವ ಮತ್ತು ಅರ್ಥವನ್ನು ಬೋಧಿಸುವ ಮಂತ್ರವನ್ನೇ ಪಠಿಸುತ್ತಾ ಆ ಕರ್ಮ ಮಾಡಬೇಕು. ಕರ್ಮಕ್ಕೂ ಮಂತ್ರಕ್ಕೂ ಹೊಂದಾಣಿಕೆ ಇರಬೇಕು. ಇದಕ್ಕೆ ರೂಪಸಮೃದ್ಧಿ ಎಂದು ಹೇಳುವರು. ಇದನ್ನು ಮುಂದೆ ವಿವರಿಸಲಾಗುವುದು. ಆದ್ದರಿಂದ ಹೋತೃವಿನ ಕರ್ತವ್ಯವನ್ನು ನೆರವೇರಿಸುವ ಋತ್ವಿಜನು ಋಗ್ವೇದವನ್ನು ಸಾಂಗವಾಗಿ ಅಧ್ಯಯನ ಮಾಡಿ ಅದರ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡು, ಯಾವ ಸಂದರ್ಭದಲ್ಲಿ ಯಾವ ಮಂತ್ರವನ್ನು ಯಾವರೀತಿ ಪಠಿಸಬೇಕು ಎಂಬ ನಿಯಮಗಳನ್ನೂ ವಿನಿಯೋಗಕ್ರಮವನ್ನೂ ಸೂತ್ರಾದಿಗ್ರಂಥಗಳಿಂದ ತಿಳಿದವನಾಗಿರಬೇಕು. ಅದರಂತೆ ಅಧ್ವರ್ಯುಪಾತ್ರವನ್ನು ನಿರ್ವಹಿಸುವ ಋತ್ವಿಜನು ಯಜುರ್ವೇದವನ್ನು ಅಧ್ಯಯನಮಾಡಿ ಅದರ ಅರ್ಥವನ್ನು ತಿಳಿದುಕೊಂಡು ಯಜ್ಞದ ಕಾರ್ಯಕಲಾಪಗಳನ್ನು ಚೆನ್ನಾಗಿ ತಿಳಿದವನಾಗಿರಬೇಕು. ಉದ್ಗಾತೃವೆಂಬ ಋತ್ವಿಜನೂ ಸಹ ಸಾಮವೇದವನ್ನು ಅಧ್ಯಯನಮಾಡಿ ಸಾಮಗಾನಸ್ತೋತ್ರಗಳನ್ನು ಗಾನಮಾಡುವ ವಿಧಾನವನ್ನು ತಿಳಿದವನಾಗಿರಬೇಕು. ಬ್ರಹ್ಮನೆಂಬ ಋತ್ವಿಜನು ಮೇಲೆ ಹೇಳಿದ ಮೂರು ವೇದಗಳನ್ನು ತಿಳಿದಿರುವುದಲ್ಲದೆ ಯಜ್ಞದ ಕಾರ್ಯಕಲಾಪಗಳನ್ನೂ ಅದನ್ನು ಮಾಡುವ ರೀತಿಯನ್ನೂ ತಿಳಿದು ಮಧ್ಯದಲ್ಲಿ ಏನಾದರೂ ಲೋಪದೋಷಗಳುಂಟಾದರೆ ಅದನ್ನು ಪ್ರಾಯಶ್ಚಿತ್ತಾದಿಗಳಿಂದ ಸರಿಪಡಿಸುವ ಸಾಮರ್ಥ್ಯವುಳ್ಳವನಾಗಿರಬೇಕು. ಆದ್ದರಿಂದ ಯಜ್ಞದಲ್ಲಿ ಭಾಗವಹಿಸುವ ಋತ್ವಿಕ್ಕುಗಳು ತಮ್ಮತಮ್ಮ ಕರ್ತವ್ಯಕರ್ಮಗಳಲ್ಲಿ ಚೆನ್ನಾಗಿ ತಿಳುವಳಿಕೆಯುಳ್ಳವರೂ ನುರಿತವರೂ ಆಗಿರಬೇಕು.

ಮೇಲೆ ಹೇಳಿದ ವಿಷಯಗಳಿಂದ ಇಷ್ಟಿ ಎಂಬ ಸಣ್ಣಯಾಗವು ಯಜುರ್ವೇದವನ್ನು ಅಧ್ಯಯನಮಾಡಿದ ಅಧ್ವರ್ಯುವಿನಿಂದ ನೆರವೇರಿಸಲ್ಪಡಬೇಕು ಎಂದಾಯಿತು. ಈ ಇಷ್ಟಿಯಲ್ಲಿ ಹೋತೃವಿನ ಪಾತ್ರವೇನೂ ಹೆಚ್ಚಾಗಿ ಇಲ್ಲ. ಹಾಗಾದರೂ ಇಲ್ಲಿ ಎಂದರೆ ಋಗ್ವೇದಕ್ಕೆ ಸಂಬಂಧಪಟ್ಟ ಈ ಬ್ರಾಹ್ಮಣ ಗ್ರಂಥದಲ್ಲಿ ಈ ಇಷ್ಟಿಯ ವಿವರಣವೇತಕ್ಕೆ? ಎಂದರೆ ಅದು ನಿಜ. ಅಧ್ವರ್ಯುವಿನ ಕಾರ್ಯಕಲಾಪಗಳೇ ಹೆಚ್ಚಾಗಿರುವ ಈ ಇಷ್ಟಿಯಲ್ಲಿ ಹೋತೃವಿನ ಪಾತ್ರವು ಹೆಚ್ಚಾಗಿಲ್ಲ. ಆದರೂ ಈ ಇಷ್ಟಿಯ ಯಾಜ್ಯಾ ಮತ್ತು ಅನುವಾಕ್ಯಾ ಎಂಬ ಮಂತ್ರಗಳು ಋಗ್ವೇದದಲ್ಲಿ ಇರುವುದರಿಂದಲೂ ಆ ಮಂತ್ರಗಳನ್ನು ಹೋತೃವೇ ಪಠಿಸಬೇಕಾಗಿರುವುದರಿಂದಲೂ ಈ ದೀಕ್ಷಣೀಯವೆಂಬ ಇಷ್ಟಿಯ ಸ್ವರೂಪವನ್ನು ಎಲ್ಲರಿಗೂ ಸುಲಭವಾಗಿ ತಿಳಿಯುವುದಕ್ಕಾಗಿ ಇಲ್ಲಿ ವಿವರಿಸಲಾಗಿದೆ.



॥ ಶ್ರೀಃ ॥

॥ ಶ್ರೀಮಹಾಗಣಾಧಿಪತಯೇ ನಮಃ ॥

## ಸಾಯಣಭಾಷ್ಯಸಹಿತಂ

# ಐತರೇಯಬ್ರಾಹ್ಮಣಂ

**ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯ ಬ್ರಾಹ್ಮಣವು**

## ಪ್ರಥಮಾಧ್ಯಾಯೇ ಪ್ರಥಮಃಖಂಡಃ

**ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು**

[ದೀಕ್ಷಣೀಯೇಷ್ಟಿವಿಧಾನ, ಅದಕ್ಕೆ ಸಂಬಂಧಪಟ್ಟ ಕೆಲವು ಸಂಸ್ಕಾರಗಳು]

॥ ಓಂ ॥ ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಸ್ತದಂತರೇಣ ಸರ್ವಾ ಅನ್ಯಾ ದೇವತಾಃ ॥

॥ ಸಾಯಣಭಾಷ್ಯಂ ॥

ಅತಸ್ತಾಂ ವಿಧಾತುಂ ತದ್ದೇವತಾರೂಪಮಗ್ನಿಂ ವಿಷ್ಣುಂ ಚಾದೌ ಪ್ರಶಂಸತಿ। ಯೋಽಯಮಗ್ನಿರಸ್ತಿ ಸೋಽಯಂ ದೇವತಾಮಧ್ಯೇಽವಮಃ ಪ್ರಥಮೋ ದ್ರಷ್ಟವ್ಯಃ। ಯಸ್ತು ವಿಷ್ಣುಃ ಸೋಽಯಂ ಪರಮ ಉತ್ತಮಃ। ವೈಶಬ್ದ ಉಕ್ತಾರ್ಥೇ ಮಂತ್ರಪ್ರಸಿದ್ಧಿದ್ಯೋತನಾರ್ಥಃ। ಅಗ್ನಿರ್ಮುಖಂ ಪ್ರಥಮೋ ದೇವತಾನಾಂ। ಸಂಯಾತಾನಾಮುತ್ತಮೋ ವಿಷ್ಣುರಾಸೀತ್ । ಇತಿ ಹಿ ಮಂತ್ರ ಆಮ್ನಾಯತೇ। ಯದ್ವಾ ವೈಶಬ್ದ ಉಪಪತ್ತಿಪ್ರಸಿದ್ಧ್ಯರ್ಥಃ। ಉಪಪತ್ತಿಶ್ಚೈವಂ ಯೋಜನೀಯಾ। ಯದ್ಯಪಿ ದೇವಶಬ್ದಃ ಸಾಧಾರಣತ್ವಾತ್ಸರ್ವದೇವತಾವಾಚೀ ತಥಾಪ್ಯತ್ರ ಪ್ರಕರಣಬಲಾದಗ್ನಿಷ್ಟೋಮಾಂಗೇಷು ಶಸ್ತ್ರೇಷು ಪ್ರತೀಯಮಾನಾಃ ಪ್ರಧಾನದೇವತಾ ವಿವಕ್ಷ್ಯಂತೇ। ಶಸ್ತ್ರಾಣಿ ಚ ದ್ವಾದಶ। ತೇಷ್ವಾಜ್ಯಶಸ್ತ್ರಂ ಪ್ರಥಮಂ ತಸ್ಮಿಂಶ್ಚ ಭೂರಗ್ನಿರ್ಜ್ಯೋತಿ-

ರಿತ್ಯಗ್ನಿರಾಮ್ನಾತಃ । ಆಗ್ನಿಮಾರುತಶಸ್ತ್ರಮಂತಿಮಂ ತಸ್ಮಿನ್ವಿಷ್ಣೋರ್ನರ್ಕಮಿತಿ ವಿಷ್ಣುರಾಮ್ನಾತಃ । ಏವಮಗ್ನಿಷ್ಟೋಮಸಂಸ್ಥಾಯಾಂ ಶಸ್ತ್ರಪಾಠಾಪೇಕ್ಷಮಗ್ನೇಃ ಪ್ರಾಥಮ್ಯಂ ವಿಷ್ಣೋರುತ್ತಮತ್ವಂ ಚ । ಯದ್ವಾ ಸರ್ವಾಸು ಸಂಸ್ಥಾಸೂಕ್ತನ್ಯಾಯೇನಾಗ್ನೇಃ ಪ್ರಾಥಮ್ಯಂ ವಿಷ್ಣೋರುತ್ತಮತ್ವಮಂತಿಮಸಂಸ್ಥಾಯಾಮಪ್ತೋರ್ಯಾಮಾಖ್ಯಾಯಾಂ ತ್ರಯಸ್ತ್ರಿಂಶತ್ ಸ್ತೋತ್ರಶಸ್ತ್ರೋಪೇತಾಯಾಮಂತಿಮಂ ಸ್ತೋತ್ರಂ ಶಸ್ತ್ರಂ ಚ ವೈಷ್ಣವಮಿತಿ ತದಪೇಕ್ಷಯಾ ದ್ರಷ್ಟವ್ಯಂ । ಯದ್ವಾ ಪ್ರಥಮಾಯಾಂ ದೀಕ್ಷಣೀಯೇಷ್ಟಾವಗ್ನಿರಿಜ್ಯತೇ । ಅಂತಿಮಾಯಾಮುದವಸಾನೀಯೇಷ್ಟೇಃ ಸ್ಥಾನೇ ವೈಷ್ಣವೀ ಪೂರ್ಣಾಹುತಿರ್ವಾಜಸನೇಯಿಭಿರಾಮ್ನಾತಾ । ಸರ್ವಥಾಪಿ ಸ್ತೋತವ್ಯಾನ್ಯಷ್ಟವ್ಯಾಂಶ್ಚ ದೇವಾನಪೇಕ್ಷ್ಯಾಗ್ನೇಃ ಪ್ರಾಥಮ್ಯಂ ವಿಷ್ಣೋರುತ್ತಮತ್ವಂ ಚ ಯುಕ್ತಂ । ತದಂತರೇಣ ತಯೋಃ ಪ್ರಥಮೋತ್ತಮಯೋರಗ್ನಾವಿಷ್ಣ್ವೋರ್ಮಧ್ಯೇ ತತ್ತಚ್ಛಸ್ತ್ರಪ್ರತಿಪಾದ್ಯಾ ಅನ್ಯಾ ಇಂದ್ರವಾಯ್ವಾದಯಃ ಸರ್ವಾಃ ಪ್ರಧಾನದೇವತಾ ವರ್ತಂತೇ । ತಸ್ಮಾತ್ಸರ್ವದೇವತಾನಾಮುಭಯತೋ ರಕ್ಷಕವದವಸ್ಥಿತಾವಗ್ನಾವಿಷ್ಣೂ ಪ್ರಶಸ್ತಾವಿತ್ಯರ್ಥಃ ॥

## ದೀಕ್ಷಣೀಯೇಷ್ಟಿವಿಧಾನಂ

### ಅನುವಾದವು

ಸೋಮಯಾಗದಲ್ಲಿ ಆರಾಧಿಸಲ್ಪಡುವ ದೇವತೆಗಳ ಮಧ್ಯದಲ್ಲಿ ಅಗ್ನಿಗೆ ಪ್ರಥಮಸ್ಥಾನವೂ, ವಿಷ್ಣುವಿಗೆ ಕೊನೆಯ ಸ್ಥಾನವೂ ಇರುವುದು. ಎಂದರೆ ಅಗ್ನಿಯನ್ನು ಮೊದಲು ಸ್ತುತಿಸಲಾಗುವುದು, ವಿಷ್ಣುವನ್ನು ಅಂತ್ಯದಲ್ಲಿ ಸ್ತುತಿಸಲಾಗುವುದು. ಈ ಎರಡು ದೇವತೆಗಳ ಮಧ್ಯದಲ್ಲಿ ಇತರ ಸಮಸ್ತದೇವತೆಗಳ ಸ್ತುತಿಗಳೂ ಇರುವವು. ಇದು ಪ್ರಸಿದ್ಧವು.

ಗ್ರಂಥಾರಂಭದಲ್ಲಿ ಯಜ್ಞಾದಿಗಳನ್ನು ವಿವರಿಸುವಾಗ, ಸೋಮಯಜ್ಞಗಳಲ್ಲಿ ಅತಿ ಮುಖ್ಯವಾದ ಅಗ್ನಿಷ್ಟೋಮ ಯಾಗವನ್ನು ವಿವರಿಸುವರು ಮತ್ತು ಈ ಯಾಗವನ್ನು ಪ್ರಾರಂಭಿಸುವುದಕ್ಕಿಂತ ಮೊದಲು ಯಜ್ಞಮಾಡುವ ಯಜಮಾನನು ಪೂರ್ವಭಾವಿಯಾಗಿ ನಿರ್ವಹಿಸಬೇಕಾದ ದೀಕ್ಷಾವಿಧಿ ಮೊದಲಾದ ಕೆಲವು ಕರ್ತವ್ಯಕರ್ಮಗಳಿವೆ. ಈ ದೀಕ್ಷಾವಿಧಿಯ ಅಂಗವಾಗಿ **ದೀಕ್ಷಣೀಯೇಷ್ಟಿ** ಎಂಬ ಸಣ್ಣ ಹೋಮವನ್ನು ಮಾಡಬೇಕು. ಈ ಇಷ್ಟಿಯನ್ನು ವಿವರಿಸುವುದಕ್ಕಾಗಿ ಇದರಲ್ಲಿ ಪ್ರಧಾನದೇವತೆಗಳಾದ ಅಗ್ನಿ ಮತ್ತು ವಿಷ್ಣು ಎಂಬ ದೇವತೆಗಳನ್ನು ಹೇಗೆ ಸ್ತುತಿಸಬೇಕು, ಅವರನ್ನುದ್ದೇಶಿಸಿ ಅಗ್ನಿಯಲ್ಲಿ ಯಾವ ದ್ರವ್ಯವನ್ನು ಹೋಮಮಾಡಬೇಕು ಇತ್ಯಾದಿ ವಿಷಯಗಳನ್ನು ಇಲ್ಲಿ ವಿಮರ್ಶೆಮಾಡಲಾಗಿದೆ.

ಮೇಲಿನ ವಾಕ್ಯಾರ್ಥದಲ್ಲಿ—ಸೋಮಯಾಗಗಳಲ್ಲಿ ಅಗ್ನಿಗೆ ಪ್ರಥಮಸ್ಥಾನವೂ ವಿಷ್ಣುವಿಗೆ ಅಂತ್ಯಸ್ಥಾನವೂ ಇರುವುದೆಂದು ಹೇಳಿದೆಯಷ್ಟೆ. ಆದರೆ ಈ ವಾಕ್ಯಕ್ಕೆ ಅರ್ಥಮಾಡುವಾಗ ಕೆಲವು ಪಾಶ್ಚಾತ್ಯಪಂಡಿತರು—ಅವರಲ್ಲಿಯೂ Dr, Haug ಮತ್ತು Keith (ತೈ.ಸಂ. ೫-೫-೧-೪) ಎಂಬುವರು-ಈರೀತಿ ಹೇಳುತ್ತಾರೆ—"Agni among the gods, has the lowest, Vishnu, the highest place ; between them stand all the other deities"—ದೇವತೆಗಳ ಗುಂಪಿನಲ್ಲಿ ಅಗ್ನಿಗೆ ನೀಚಸ್ಥಾನವೂ ವಿಷ್ಣುವಿಗೆ ಉಚ್ಚಸ್ಥಾನವೂ ಇರುವುದು. ಉಳಿದ ಇತರ ಎಲ್ಲಾ ದೇವತೆಗಳಿಗೆ ಇವರಿಬ್ಬರ ಮಧ್ಯದಲ್ಲಿ ಅತಿನೀಚವೂ ಅತಿಉಚ್ಚವೂ ಅಲ್ಲದ ಮಧ್ಯಮಸ್ಥಾನಗಳಿರುವವು ಎಂದು ಇದರ ಅರ್ಥವು. ಅವರ ಅಭಿಪ್ರಾಯದಲ್ಲಿ **ಅವಮ ಪರಮ** ಎಂಬ ಶಬ್ದಗಳಿಗೆ ನೀಚ ಉಚ್ಚ ಎಂಬರ್ಥವಿರುವುದು. ಋಗ್ವೇದದಲ್ಲಿ ವಿಷ್ಣುವೆಂದರೆ ಸರ್ವವ್ಯಾಪಿಯಾದ ಸೂರ್ಯನೆಂದೂ ಆ ಸೂರ್ಯನು ಮಧ್ಯಾಹ್ನಕಾಲದಲ್ಲಿ ಅಂತರಿಕ್ಷದಲ್ಲಿ ಅತ್ಯುಚ್ಚಸ್ಥಾನ (zenith)

ದಲ್ಲಿರುವನೆಂದೂ ಆದ್ದರಿಂದ ವಿಷ್ಣುವಿಗೆ ಉಚ್ಚಸ್ಥಾನವೂ, ಅಗ್ನಿಯು ಮನುಷ್ಯರ ಮಧ್ಯದಲ್ಲಿ ಎಂದರೆ ಈ ಪೃಥಿವಿಯಮೇಲೆ ಯಜ್ಞಾಗ್ನಿರೂಪದಿಂದ ವಾಸಿಸುವುದರಿಂದ ಅವನಿಗೆ ನೀಚಸ್ಥಾನವು ಸಲ್ಲಬೇಕಾಗಿರುವುದು ಎಂದು ಇವರ ವಾದವು. ಆದರೆ ಇದು ಸರಿಯಲ್ಲ.

ಈ ಬ್ರಾಹ್ಮಣಗ್ರಂಥವು **ಕರ್ಮಕಾಂಡ**ವನ್ನು ಎಂದರೆ ಯಜ್ಞಾದಿಗಳ ಅನುಷ್ಠಾನಕ್ರಮವನ್ನು ಮಾತ್ರ ವಿವರಿಸುವುದಾಗಿದೆ. ಆದ್ದರಿಂದ ಈ ಗ್ರಂಥದಲ್ಲಿ ಆಧ್ಯಾತ್ಮವಿಚಾರವನ್ನಾಗಲಿ, ದೇವತೆಗಳ ಸ್ಥಾನಮಾನಗಳನ್ನಾಗಲಿ ಎಲ್ಲಿಯೂ ವಿಮರ್ಶೆ ಮಾಡಿರುವುದಿಲ್ಲ. ಸಾಯಣರು ಹೇಳುವಂತೆ **ಅವಮಃ** ಮತ್ತು **ಪರಮಃ** ಎಂಬ ಶಬ್ದಗಳಿಗೆ ಮೊದಲು, ಕೊನೆ ಎಂಬರ್ಥವೇ ಸಮಂಜಸವಾಗಿದೆ. ಋಗ್ವೇದದಲ್ಲಿ ದೇವತೆಗಳಲ್ಲಿ ಕೆಲವರಿಗೆ ಉಚ್ಚಸ್ಥಾನವೂ ಕೆಲವರಿಗೆ ನೀಚಸ್ಥಾನವೂ (ಎಂದರೆ ತಾರತಮ್ಯವು) ನಿರ್ದಿಷ್ಟವಾಗಿ ಹೇಳಿಲ್ಲ. ಹಾಗೆ ನಿರ್ದಿಷ್ಟವಾಗಿದ್ದರೆ ಪ್ರಜಾಪತಿ ಮತ್ತು ಇವರುಗಳಿಗೆ ಆ ಉಚ್ಚಸ್ಥಾನವಿರುವುದು. ಅಗ್ನಿವಿಷ್ಣುಗಳಿಗಲ್ಲ. ಎಲ್ಲಾ ದೇವತೆಗಳೂ ಮುಖ್ಯದೇವತೆಯಾದ ಪ್ರಜಾಪತಿಯ (ಬ್ರಹ್ಮನ) ಅಂಶಗಳೇ ಆಗಿರುವುದರಿಂದ ದೇವತೆಗಳಲ್ಲಿ ಉಚ್ಚನೀಚ ಎಂಬ ಸ್ಥಾನಮಾನಗಳನ್ನು ಕಲ್ಪಿಸುವುದು ವೇದಮತಕ್ಕೆ ವಿರುದ್ಧವು. ಯಜ್ಞಗಳಲ್ಲಿ – ಅದರಲ್ಲಿಯೂ ಈಗ ಪ್ರಾರಂಭದಲ್ಲಿ ವಿವರಿಸಲಾಗುವ ಸೋಮಯಾಗಗಳಲ್ಲಿ ಅನೇಕ ದೇವತೆಗಳನ್ನು ಆರಾಧಿಸುವಾಗ ಮೊದಲು ಅಗ್ನಿಯನ್ನೂ ಕೊನೆಯಲ್ಲಿ ವಿಷ್ಣುವನ್ನೂ ಸ್ತುತಿಸಲಾಗುತ್ತದೆ. ಮಧ್ಯದಲ್ಲಿ ಇತರ ಎಲ್ಲಾ ದೇವತೆಗಳ ಸ್ತುತಿಗಳಿವೆ. ಈ ಅಭಿಪ್ರಾಯವನ್ನೇ ಸಾಯಣರು ವಿಶದವಾಗಿ ತಿಳಿಸಿದ್ದಾರೆ. ವಾಕ್ಯದಲ್ಲಿರುವ ವೈ ಎಂಬ ಶಬ್ದವು ಈ ವಿಷಯ ಪ್ರಸಿದ್ಧವಾಗಿರುವುದೆಂಬ ಅರ್ಥವನ್ನು ಸೂಚಿಸುವುದು. ಸಾಯಣರು ತಮ್ಮ ಅಭಿಪ್ರಾಯವನ್ನು ಸಮರ್ಥನೆಮಾಡುವುದಕ್ಕಾಗಿ ಕೆಲವು ಶ್ರುತಿವಾಕ್ಯಗಳನ್ನು ಉದಾಹರಿಸಿದಾರೆ. ಇದೇ ಐತರೇಯಬ್ರಾಹ್ಮಣದ ನಾಲ್ಕನೆಯ ಖಂಡದಲ್ಲಿ—"**ಅಗ್ನಿರ್ಮುಖಂ ಪ್ರಥಮೋ ದೇವತಾನಾಂ ಸಂಯಾತಾನಾಮುತ್ತಮೋ ವಿಷ್ಣುರಾಸೀತ್**" (ಐ.ಬ್ರಾ. ೧-೪) ಎಂಬ ವೇದಮಂತ್ರವು ಅಗ್ನಿವಿಷ್ಣು ಎಂಬ ದೇವತೆಗಳನ್ನು ದ್ದೇಶಿಸಿ ಮಾಡುವ ದೀಕ್ಷಣೀಯ [ದೀಕ್ಷಣೀಯೇಷ್ಟಿ ಎಂದರೆ, ಸೋಮಯಾಗವನ್ನು ಮಾಡಲು ಉದ್ದೇಶಿಸಿರುವ ಯಜಮಾನನು ಪೂರ್ವಭಾವಿಯಾಗಿ ದೀಕ್ಷೆಯನ್ನು ಕೈಕೊಂಡು ಅಗ್ನಿಯಲ್ಲಿ ಅಗ್ನಿವಿಷ್ಣುಗಳನ್ನು ದ್ದೇಶಿಸಿ ಹನ್ನೊಂದು ಕಪಾಲ (ಹೆಂಚು)ಗಳ ಮೇಲೆ ಬೇಯಿಸಿದ ಪುರೋಡಾಶವೆಂಬ ದ್ರವ್ಯವನ್ನು ಹೋಮಮಾಡಬೇಕು. ಈ ಹೋಮಾದಿಗಳಿಗೆ ದೀಕ್ಷಣೀಯೇಷ್ಟಿ ಎಂದು ಹೆಸರು. ಇದಾದನಂತರ ದೀಕ್ಷೆಯ ಅಂಗಕರ್ಮಗಳಾದ ಕ್ಷೌರ, ಸ್ನಾನ, ವಸ್ತ್ರಧಾರಣ, ಅಂಜನ ಇತ್ಯಾದಿ ಅನೇಕ ಕಾಯ ಅವುಗಳನ್ನು ಮುಂದೆ ವಿವರಿಸಲಾಗುವುದು] ಹೋಮದಲ್ಲಿ ಯಾಜ್ಯಾಪುರೋನುವಾಕ್ಯಾಮಂತ್ರಗಳೆಂದು [ಯಜ್ಞಗಳಲ್ಲಿ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮದ್ರವ್ಯವನ್ನರ್ಪಿಸುವಾಗ ಕೆಲವು ಮಂತ್ರಗಳನ್ನು ಪಠಿಸಬೇಕು. ಹೋತೃವೆಂಬ ಋತ್ವಿಜನು ನಿರ್ದಿಷ್ಟದೇವತೆಯ ಗುಣಗಾನವನ್ನೊಳಗೊಂಡಿರುವ ಮಂತ್ರವನ್ನು ಪಠಿಸಿ ಆ ದೇವತೆಯನ್ನು ಯಜ್ಞವೇದಿಗೆ ಬರುವಂತೆ ಆಹ್ವಾನಿಸುವನು. ಈ ಆಹ್ವಾನಮಂತ್ರಕ್ಕೆ **ಅನುವಾಕ್ಯಾ** ಅಥವಾ **ಪುರೋನುವಾಕ್ಯಾ** ಮಂತ್ರವೆಂದು ಹೆಸರು. ಈ ಮಂತ್ರದಿಂದ ಆಹ್ವಾನಿತರಾದ ದೇವತೆಗಳು ಯಜ್ಞಭೂಮಿಗೆ ಬಂದರೆಂದು ಭಾವಿಸಿ ಮತ್ತೊಂದು ಮಂತ್ರದಿಂದ ಹವಿಸ್ಸನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿ ಅಗ್ನಿಯಲ್ಲಿ ಹೋಮಮಾಡುವನು. ಈ ಮಂತ್ರಕ್ಕೆ **ಯಾಜ್ಯಾ** ಎಂದು ಹೆಸರು. ಈ ಎರಡು ಮಂತ್ರಗಳೂ ಉದ್ದಿಷ್ಟದೇವತೆಯ ಪ್ರಾರ್ಥನೆಯನ್ನೊಳಗೊಂಡಿರಬೇಕು. ಪ್ರತಿಯೊಂದು ದೇವತೆಯನ್ನುದ್ದೇಶಿಸಿ ಹವಿಸ್ಸನ್ನರ್ಪಿಸುವಾಗಲೂ ಈ ಕ್ರಮವೇ ಅನುಸರಿಸಲ್ಪಡುವುದು] ಹೇಳಲ್ಪಟ್ಟದೆ. ಈ ವಾಕ್ಯದಲ್ಲಿರುವ **ಮುಖಂ** ಮತ್ತು **ಪ್ರಥಮಃ** ಎಂಬ ಶಬ್ದಗಳು—ದೇವತೆಗಳ ಗುಂಪಿನಲ್ಲಿ ಅಗ್ನಿಯು ಮೊದಲನೆಯವನು, ಅವನು ದೇವತೆಗಳಿಗೆ ಮುಖವಿದ್ದಂತೆ ಎಂದರೆ ಅಗ್ನಿ ಮೂಲಕವೇ (ಅಗ್ನಿಯಲ್ಲಿ ಹೋಮಮಾಡುವುದರ ಮೂಲಕವೇ) ದೇವತೆಗಳು ಆಹಾರಗಳನ್ನು ಸ್ವೀಕರಿಸುತ್ತಾರೆ ಎಂಬ ಅರ್ಥವು ಸೂಚಿತವಾಗಿದೆ. ಇದೇ ಮಂತ್ರವು ಸ್ವಲ್ಪ ವ್ಯತ್ಯಸ್ತವಾಗಿ ತೈತ್ತಿರೀಯಬ್ರಾಹ್ಮಣದಲ್ಲಿ ಈರೀತಿ ಉಕ್ತವಾಗಿದೆ—"**ಅಗ್ನಿರಗ್ರೇ ಪ್ರಥಮೋ ದೇವತಾನಾಂ । ಸಂಯಾತಾನಾಮುತ್ತಮೋ ವಿಷ್ಣುರಾಸೀತ್**" (ತೈ.ಬ್ರಾ. ೨-೪-೩-೩) ಇಲ್ಲಿ **ಮುಖಂ**

ಎಂಬ ಶಬ್ದಕ್ಕೆ ಬದಲಾಗಿ **ಅಗ್ರೇ** ಎಂಬ ಶಬ್ದವಿದೆ. **ಅವಮಃ ಪರಮಃ** ಎಂಬ ಶಬ್ದಗಳಿಗೆ ಬದಲಾಗಿ **ಪ್ರಥಮಃ ಉತ್ತಮಃ** ಎಂಬ ಶಬ್ದಗಳಿವೆ. ಪ್ರಥಮ ಶಬ್ದಕ್ಕೆ ಮೊದಲನೆಯವನು ಎಂಬರ್ಥದಲ್ಲಿ ವಿವಾದಗಳಿಲ್ಲ. ಉತ್ತಮ ಶಬ್ದಕ್ಕೆ ವೇದಸಾಹಿತ್ಯದಲ್ಲಿ ಸಾಧಾರಣವಾಗಿ ಶ್ರೇಷ್ಠ ಎಂಬರ್ಥವಿರುವುದಿಲ್ಲ. **ಕೊನೆಯ** ಎಂಬರ್ಥವೇ ವಿಶೇಷವಾಗಿ ರೂಢಿಯಲ್ಲಿದೆ. "**ತ್ರಿಃಪ್ರಥಮಾಮನ್ವಾಹತ್ರಿರುತ್ತಮಾಂ**" ಎಂಬ ವಾಕ್ಯವು ಐ.ಬ್ರಾ., ತೈ.ಸಂ., ತಾಂ.ಬ್ರಾ. ಇತ್ಯಾದಿಗಳಲ್ಲಿ ಅನೇಕಕಡೆ ಕಂಡುಬರುವುದು. ಹೋತೃವು ಸಾಮಿಧೇನೀ ಮೊದಲಾದ ಋಗ್ವೇದದ ಋಕ್ಕುಗಳನ್ನು ಪಠಿಸುವಾಗ ಸೂಕ್ತದ ಮೊದಲ ಮಂತ್ರವನ್ನೂ ಕೊನೆಯ ಮಂತ್ರವನ್ನೂ ಮೂರುಮೂರಾವರ್ತಿ ಪಠಿಸುವನು ಎಂದು ಮೇಲಿನ ವಾಕ್ಯದ ಅರ್ಥವು. ಆದ್ದರಿಂದ ಉತ್ತಮ ಶಬ್ದಕ್ಕೆ **ಕೊನೆಯ** ಎಂಬರ್ಥವೇ ಪ್ರಮಾಣಸಹಿತವಾಗಿದೆ.

ಇದಲ್ಲದೆ ಅಗ್ನಿಷ್ಟೋಮಯಾಗದಲ್ಲಿ ಹನ್ನೆರಡು **(ದ್ವಾದಶಾಗ್ನಿಷ್ಟೋಮಸ್ಯ ಸ್ತೋತ್ರಾಣಿ ಶಸ್ತ್ರಾಣಿ ಚ)** ಸ್ತೋತ್ರಮಂತ್ರಗಳೂ ಹನ್ನೆರಡು ಶಸ್ತ್ರಮಂತ್ರಗಳೂ [ಯಜ್ಞದಲ್ಲಿ ದೇವತೆಗಳನ್ನು ಸ್ತೋತ್ರಮಾಡುವಾಗ ಋಗ್ವೇದ ಮತ್ತು ಸಾಮವೇದಗಳ ಕೆಲವು ಮಂತ್ರಗಳನ್ನು ಪಠಿಸುವರು. ಋಗ್ವೇದ ಮಂತ್ರಗಳನ್ನು ಅಥವಾ ಸೂಕ್ತಗಳನ್ನು ಹೋತೃವರ್ಗದ ಋತ್ವಿಜರು ಪಠಿಸುವರು. ಇವಕ್ಕೆ ಶಸ್ತ್ರಮಂತ್ರಗಳೆಂದು ಹೆಸರು. ಇದರಂತೆಯೇ ಉದ್ಗಾತೃವರ್ಗದ ಋತ್ವಿಜರು ಸಾಮವೇದದ ಮಂತ್ರಗಳನ್ನು ಸ್ವರಸಹಿತವಾಗಿ ಗಾನಮಾಡುವರು. ಇವರು ಗಾನಮಾಡುವ ಸಾಮಮಂತ್ರಗಳಿಗೆ ಸ್ತೋತ್ರಗಳೆಂದು ಹೆಸರು. ಅಗ್ನಿಷ್ಟೋಮಯಾಗದಲ್ಲಿ ಹನ್ನೆರಡು ಶಸ್ತ್ರಮಂತ್ರಗಳೂ ಹನ್ನೆರಡು ಸ್ತೋತ್ರಗಳೂ ಇರುವವು. ಬೇರೆಬೇರೆ ಯಾಗಗಳಲ್ಲಿ ಆಯಾ ಯಾಗಗಳಿಗೆ ಉಕ್ತವಾಗಿರುವಂತೆ ಶಸ್ತ್ರ ಮತ್ತು ಸ್ತೋತ್ರಗಳ ಸಂಖ್ಯೆಯು ಹೆಚ್ಚುಕಡಿಮೆಯಾಗಿರುವವು. ಈ ಶಸ್ತ್ರಸ್ತೋತ್ರಗಳನ್ನು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಸವನತ್ರಯಗಳಲ್ಲಿಯೂ (ಸೋಮರಸವನ್ನು ಹಿಂಡುವ ಕಾರ್ಯಕ್ಕೆ ಸವನ ಎಂದು ಹೆಸರು) ಪಠಿಸುವರು. ಇದರ ವಿವರವನ್ನು ಋ. ಸಂ. ಭಾಗ ೧, ಪುಟ ೪೧೬-೪೧೭ ರಲ್ಲಿ ವಿವರಿಸಿರುವುದು.] ಇವೆ. ಇವುಗಳಲ್ಲಿ ಆಜ್ಯಶಸ್ತ್ರವು ಮೊದಲನೆಯದು. ಇದರಲ್ಲಿ—**ಭೂರಗ್ನಿರ್ಜ್ಯೋತಿಃ** (ಆ. ಶ್ರೌ. ೨-೫-೫) ಎಂಬ ಅಗ್ನಿಯನ್ನು ಸ್ತುತಿಸುವ ಮಂತ್ರವಿದೆ. ಇದನ್ನು ಹೋತೃವು ಪಠಿಸುತ್ತಾನೆ. ಆಗ್ನಿಮಾರುತಶಸ್ತ್ರವು ಕೊನೆಯದು. ಇದರಲ್ಲಿ—**ವಿಷ್ಣೋರ್ನುಕಂ ವೀರ್ಯಾಣಿ** (ಋ. ಸಂ. ೧-೧೫೪-೧) ಎಂಬ ವಿಷ್ಣುದೇವತಾಕವಾದ ಮಂತ್ರವಿದೆ. ಆದ್ದರಿಂದ ಅಗ್ನಿಷ್ಟೋಮಯಾಗದ ಹನ್ನೆರಡು ಶಸ್ತ್ರಮಂತ್ರಗಳಲ್ಲಿ ಮೊದಲನೆಯ ಶಸ್ತ್ರದಲ್ಲಿ ಅಗ್ನಿಯನ್ನೂ ಕೊನೆಯ ಶಸ್ತ್ರದಲ್ಲಿ ವಿಷ್ಣುವನ್ನೂ ಸ್ತುತಿಸಲಾಗಿದೆ. ೨-೧೧ನೆಯ ಇತರ ಶಸ್ತ್ರಗಳಲ್ಲಿ ಇತರ ದೇವತೆಗಳ ಸ್ತುತಿಇದೆ. ಇದು ಅಗ್ನಿಷ್ಟೋಮದ ವಿಷಯವಾಯಿತು. ಇತರ ಸಪ್ತಸಂಸ್ಥೆಗಳಾದ ಸೋಮಯಾಗಗಳ ವಿಷಯದಲ್ಲಿಯೂ ಇದೇ ಕ್ರಮವೇ ಎಂದರೆ, ಹೌದು. ಅಗ್ನಿಷ್ಟೋಮದ ಪ್ರಥಮದಲ್ಲಿ ಅಗ್ನಿಯನ್ನು ಸ್ತುತಿಸಿರುವುದು ತಿಳಿದೇ ಇದೆಯಷ್ಟೆ. ಸಪ್ತಸಂಸ್ಥೆಗಳಲ್ಲಿ ಕೊನೆಯದಾದ ಅಪ್ತೋರ್ಯಾಮವೆಂಬ ಸೋಮಯಾಗದಲ್ಲಿ ೩೩ ಸ್ತೋತ್ರಗಳೂ ಶಸ್ತ್ರಗಳೂ ಇರುವವು. ಇವುಗಳಲ್ಲಿ ಕೊನೆಯ ಸ್ತೋತ್ರದಲ್ಲಿಯೂ ಶಸ್ತ್ರದಲ್ಲಿಯೂ ವಿಷ್ಣುವಿನ ಸ್ತುತಿಯಿದೆ. ಅಥವಾ ಸೋಮಯಾಗಗಳೂ ಸೇರಿ ಇತರ ಸಮಸ್ತ ಯಜ್ಞಗಳಲ್ಲಿಯೂ ಮೊದಲು ಎಂದರೆ ದೀಕ್ಷಣೀಯೇಷ್ಟಿಯಲ್ಲಿ ಅಗ್ನಿಯನ್ನು ಸ್ತುತಿಸಲಾಗಿದೆ. ಯಜ್ಞಗಳ ಕೊನೆಯಲ್ಲಿ ಮಾಡುವ ಉದಯನೀಯೇಷ್ಟಿಯಲ್ಲಿ ಪೂರ್ಣಾಹುತಿಮಂತ್ರಗಳಲ್ಲಿ ವಿಷ್ಣುವಿನ ಸ್ತುತಿ ಇರುವುದು. ಆದ್ದರಿಂದ ಸಮಸ್ತ ಯಜ್ಞಗಳ ಆದಿಯಲ್ಲಿ ಅಗ್ನಿಯೂ ಅಂತ್ಯದಲ್ಲಿ ವಿಷ್ಣುವೂ ಸ್ತುತಿಸಲ್ಪಡುವರು. ಈ ಅಗ್ನಿ ವಿಷ್ಣುಗಳ ಮಧ್ಯದಲ್ಲಿ ಎಂದರೆ ಅಗ್ನಿಯ ಸ್ತುತಿಯಾದನಂತರ ವಿಷ್ಣುವಿನ ಸ್ತುತಿಗೆ ಪೂರ್ವದಲ್ಲಿ ಇಂದ್ರ, ವಾಯು ಮೊದಲಾದ ಇತರ ದೇವತೆಗಳ ಸ್ತುತಿ ಇರುವುದು. ಮುಖ್ಯಾಭಿಪ್ರಾಯವೆಂದರೆ ಈ ವಾಕ್ಯದಲ್ಲಿ ವಿವೇಚಿಸಿರುವುದು ಅಗ್ನಿ ವಿಷ್ಣುಗಳ ಸ್ಥಾನಮಾನಗಳನ್ನಲ್ಲ, ಯಾವ ಕ್ರಮದಲ್ಲಿ ದೇವತೆಗಳನ್ನು ಸ್ತುತಿಸಬೇಕು ಎಂಬುದು. ಸಮಸ್ತ ಯಜ್ಞಗಳಲ್ಲಿಯೂ ಅಗ್ನಿಯನ್ನು ಮೊದಲು ಸ್ತುತಿಸಿ ಅನಂತರ ಆಯಾ ಯಜ್ಞದ ಪ್ರಧಾನ ದೇವತೆಗಳಾದ ಇಂದ್ರ ವಾಯ್ವಾದಿಗಳನ್ನು ಸ್ತುತಿಸಿ ಯಜ್ಞದ

ಕೊನೆಯಲ್ಲಿ ವಿಷ್ಣುವನ್ನು ಸ್ತುತಿಸಿ ಕರ್ಮಸಮಾಪ್ತಿಯನ್ನು ಮಾಡಬೇಕು ಎಂದು. ಯಜ್ಞದ ಆದ್ಯಂತಗಳಲ್ಲಿ ಸ್ತುತಿಸಲ್ಪಡುವ ಈ ಅಗ್ನಿವಿಷ್ಣುಗಳು ಯಜ್ಞದಲ್ಲಿ ಮೊದಲಿನಿಂದ ಕೊನೆಯವರಿಗೂ ಯಜ್ಞದ ಸಂರಕ್ಷರಾಗಿರುವರೆಂಬ ಭಾವದಿಂದ ಅವರನ್ನು ಇಲ್ಲಿ ಪ್ರಶಂಸಿಸಲಾಗಿದೆ.

[ಇಷ್ಟಿ ಎಂದರೆ ಸಣ್ಣಯಜ್ಞವು ಅಥವಾ ಯಜ್ಞದ ಒಂದು ಕರ್ಮಾಂಗವು. ಎಂದರೆ ಒಂದೆರಡು ಹೋಮಗಳು. **ಪ್ರಾಯಣೀಯೇಷ್ಟಿ** ಎಂದರೆ ಯಜ್ಞಾರಂಭದಲ್ಲಿ ಮಾಡುವ ಇಷ್ಟಿಯು; ಉದಯನೀಯೇಷ್ಟಿಯೆಂದರೆ ಅದೇವಿಧದ, ಯಜ್ಞದ ಕೊನೆಯಲ್ಲಿ ಮಾಡುವ ಇಷ್ಟಿಯು. ಇವೆರಡೂ ಒಂದೇ ವಿಧವಾಗಿರುವುದು. ಒಂದನ್ನು ಯಜ್ಞಾರಂಭದಲ್ಲಿಯೂ ಮತ್ತೊಂದನ್ನು ಯಜ್ಞದ ಕೊನೆಯಲ್ಲಿಯೂ ಮಾಡುವರು. ಈ ಇಷ್ಟಿಗಳ ವಿವರಣೆಯನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.]

## ಆಗ್ನಾವೈಷ್ಣವಂ ಪುರೋಳಾಶಂ ನಿರ್ವಪಂತಿ ದೀಕ್ಷಣೀಯಮೇಕಾ-ದಶಕಪಾಲಂ ॥

ಸೌಮಿಕೇಷು ಯಷ್ಟವ್ಯಾಸು ಸ್ತೋತವ್ಯಾಸು ಚ ಸರ್ವಾಸು ದೇವತಾಸ್ವಗ್ನಾವಿಷ್ಣೂ ಪ್ರಶಸ್ಯ ತದ್ದೇವತಾಕಾಮಿಷ್ಟಿಂ ವಿಧತ್ತೇ— ಅಗ್ನಿಶ್ಚ ವಿಷ್ಣುಶ್ಚಾಗ್ನಾವಿಷ್ಣೂ ತಾವುಭೌ ಪರಸ್ಪರ ವ್ಯಾಸಕ್ತೌ ಯಸ್ಯ ಪುರೋಡಾಶಸ್ಯೈಕಾ ದೇವತಾ ಸೋಽಯಮಾಗ್ನಾವೈಷ್ಣವೋ ಯಥೋಕ್ತ-ದೇವತಾಂ ಪ್ರತಿ ಹವಿಷ್ಟ್ವೇನ ಪ್ರದೇಯದ್ರವ್ಯರೂಪಃ ಪಕ್ವಃ ಪಿಷ್ಟಪಿಂಡಃ ಪುರೋಡಾಶ ಇತ್ಯು-ಚ್ಯತೇ। ಡಕಾರಸ್ಯಾತ್ರ ಳಕಾರ ಏತಚ್ಛಾಖಾಧ್ಯಯನಸಂಪ್ರದಾಯೇನ ಪ್ರಾಪಿತಃ। ಶಕಟಾವ ಸ್ಥಾಪಿತವ್ರೀಹಿಸಂಘಾನ್ನಿಷ್ಕೃಷ್ಯ ಮುಷ್ಟಿಚತುಷ್ಟಯಪರಿಮಿತಾನಾಂ ವ್ರೀಹೀಣಾಂ ಶೂರ್ಪೇ ಪ್ರಕ್ಷೇಪೋ ನಿರ್ವಾಪಸ್ತತ್ಪೂರ್ವಕೋ ಯಾಗೋಽತ್ರ ನಿರ್ವಾಪೇಣೋಪಲಕ್ಷ್ಯತೇ। ಆಗ್ನಾ-ವೈಷ್ಣವಂ ಪುರೋಡಾಶಮಿತಿ ಸಾಮಾನಾಧಿಕರಣ್ಯೇನಾವಗತಸ್ಯದ್ರವ್ಯದೇವತಾಸಂಬಂಧಸ್ಯಯಾಗ-ಮಂತರೇಣಾನುಪಪನ್ನತ್ವಾತ್। ಸತಿ ತು ಯಾಗೇ ಸಂಬಂಧ ಉಪಪದ್ಯತೇ। "ಉದ್ದಿಶ್ಯ ದೇವತಾಂ ದ್ರವ್ಯತ್ಯಾಗೋ ಯಾಗೋಽಭಿಧೀಯತೇ" ಇತಿ ಯಾಗಲಕ್ಷಣಸ್ಯ ಪೂರ್ವಾಚಾರ್ಯೈ-ರುಕ್ತತ್ವಾತ್। ನಿರ್ವಪಂತೀತ್ಯಯಂಶಬ್ದೋ ನ ವರ್ತಮಾನಾರ್ಥಃ ಕಿಂತು ವಿಧ್ಯರ್ಥಃ। ಸ ಚ ಲಕಾರೋ ಲಿಙರ್ಥೇ ಲೇಡಿತಿ ಸೂತ್ರೇಣ ವಿಧ್ಯರ್ಥೋ ದ್ರಷ್ಟವ್ಯಃ। ಏವಂ ಚ ಸತಿ ಶಾಖಾಂತ-ರೇಣ ಸಂವಾದೋ ಭವತಿ। ತಥಾ ಚ ತೈತ್ತಿರೀಯಾ ವಿಸ್ಪಷ್ಟಂ ವಿಧಿಮಾಮನಂತಿ— "ಆಗ್ನಾ-ವೈಷ್ಣವಮೇಕಾದಶಕಪಾಲಂ ನಿರ್ವಪೇದ್ದೀಕ್ಷಿಷ್ಯಮಾಣಃ" ಇತಿ। ತತ್ರೈಕಪ್ರಯೋಗಾಪೇಕ್ಷ-ಮೇಕವಚನಂ। ಅತ್ರ ತು ಬಹುಪ್ರಯೋಗಗತಂ ಸತ್ರಗತಂ ವಾ ಯಜಮಾನಬಹುತ್ವಮಪೇಕ್ಷ್ಯ ನಿರ್ವಪಂತೀತಿ ಬಹುವಚನಂ। ಯದ್ವಾ ಛಾಂದಸೋ ವಚನವ್ಯತ್ಯಯಃ। ಸೋಮಯಾಗೇ ಪ್ರವೃತ್ತಸ್ಯ ಯಜಮಾನಸ್ಯ ಸಂಸ್ಕಾರೋ ದೀಕ್ಷಣಂ ತಸ್ಯ ಚ ಸಂಸ್ಕಾರಸ್ಯ ಹೇತುಃ ಕರ್ಮ-ವಿಶೇಷೋ ದೀಕ್ಷಣೀಯಾಶಬ್ದವಾಚ್ಯಃ। ತಸ್ಯ ಚ ಕರ್ಮವಿಶೇಷಸ್ಯ ವಾಚಕೇನ ಶಬ್ದೇನ ತತ್ಕರ್ಮಸಾಧನಮುಪಲಕ್ಷ್ಯತೇ। ತತೋ ದೀಕ್ಷಣೀಯಾಖ್ಯಕರ್ಮಸಾಧನಂ ಪುರೋಡಾಶಮಿತಿ ಸಾಮಾನಾಧಿಕರಣ್ಯಮುಪಪನ್ನಂ। ಏಕಾದಶಸು ಕಪಾಲೇಷು ಸಂಸ್ಕೃತಃ ಪುರೋಡಾಶ ಏಕಾದಶಕಪಾಲಃ। ತೇಷು ಹಿ ಪುರೋಡಾಶಃ ಶ್ರಪ್ಯತೇ॥

ದೀಕ್ಷಣೀಯೇಷ್ಟಿಯಲ್ಲಿ ಅಗ್ನಿ ವಿಷ್ಣು ಎಂಬ ದೇವತೆಗಳನ್ನುದ್ದೇಶಿಸಿ ಹನ್ನೊಂದು ಕಪಾಲಗಳಮೇಲೆ ಬೇಯಿಸಿದ ಪುರೋಡಾಶವೆಂಬ ಹವಿರ್ದ್ರವ್ಯವನ್ನು ಅರ್ಪಿಸುತ್ತಾರೆ (ಅರ್ಪಿಸಬೇಕು).

[ಕಪಾಲ ಎಂಬ ಶಬ್ದವು ಬ್ರಾಹ್ಮಣಗ್ರಂಥಗಳಲ್ಲಿಯೂ ಯಜುರ್ವೇದ ಸಂಹಿತೆಗಳಲ್ಲಿಯೂ ಶ್ರೌತಸೂತ್ರಗಳಲ್ಲಿಯೂ ಹೆಚ್ಚು ಬಳಕೆಯಲ್ಲಿದೆ. ಇದು ಕಾವಲಿಯಂತಿರುವ ವೃತ್ತಾಕಾರದ ಮಣ್ಣಿನ ತಗಡು ಎಂದರೆ ತೆಳ್ಳಗೆ ದುಂಡಾಗಿರುವ ಮಣ್ಣಿನ ಹೆಂಚು. ಇವನ್ನು ಬೆಂಕಿಯಮೇಲಿಟ್ಟು ಇದರಲ್ಲಿ ಪುರೋಡಾಶವೆಂಬ ಕಲಸಿದ ಅಕ್ಕಿಹಿಟ್ಟನ್ನು ಕೂರ್ಮಾಕೃತಿಯಂತೆ ದುಂಡನೆ ತಟ್ಟಿ ರೊಟ್ಟಿಯನ್ನು ಬೇಯಿಸುವಂತೆ ಬೇಯಿಸಿ ಇಡಾ ಎಂಬ ಪಾತ್ರೆಯಲ್ಲಿಟ್ಟು ಆಜ್ಯವೆಂಬ ಕರಗಿಸಿದ ತುಪ್ಪವನ್ನು ಇದರಮೇಲೆ ಸುರಿದು ಇಡುವರು. ಹೋಮಕಾಲದಲ್ಲಿ ಇದನ್ನು ಮಂತ್ರಪೂರ್ವಕವಾಗಿ ಹೋಮಮಾಡುವರು. ಎಲ್ಲಾ ದೇವತೆಗಳಿಗೂ ಒಂದೇ ಕಪಾಲದ ಮೇಲೆ ಪುರೋಡಾಶವನ್ನು ಪಕ್ವಮಾಡುವುದಿಲ್ಲ. ಕೆಲವು ದೇವತೆಗಳಿಗೆ ಒಂದು ಕಪಾಲ, ಕೆಲವರಿಗೆ ಎರಡು ಕೆಲವರಿಗೆ ಮೂರು ಈರೀತಿಯಾಗಿ ಹನ್ನೆರಡು ಕಪಾಲಗಳವರೆಗೂ ಉಪಯೋಗಿಸಿ ಪುರೋಡಾಶವನ್ನು ಸಂಸ್ಕರಿಸುವರು. ಸಂಸ್ತವಿಕವಾಗಿ ಎಂದರೆ ಇಬ್ಬಿಬ್ಬರು ದೇವತೆಗಳಿಗೆ ಒಟ್ಟಾಗಿ ಸೇರಿಸಿ ನಿರ್ದಿಷ್ಟ ಕಪಾಲಗಳಮೇಲೆ ಪುರೋಡಾಶವನ್ನು ಸಂಸ್ಕರಿಸುವರು. ಪ್ರಕೃತಸಂದರ್ಭದಲ್ಲಿ ಅಗ್ನಿ ಮತ್ತು ವಿಷ್ಣು ಎಂಬ ಇಬ್ಬರು ದೇವತೆಗಳನ್ನುದ್ದೇಶಿಸಿ ಹನ್ನೊಂದು ಕಪಾಲಗಳ ಮೇಲೆ ಪಕ್ವಮಾಡಿದ ಪುರೋಡಾಶವನ್ನು ಹೋಮಮಾಡುವರು].

ಮೂಲದಲ್ಲಿ **ಆಗ್ನಾವೈಷ್ಣವಂ** ಎಂಬ ಪದವಿದೆ. ಈ ಶಬ್ದವು ಅಗ್ನಿ ಮತ್ತು ವಿಷ್ಣು ಎಂಬ ಎರಡು ದೇವತೆಗಳನ್ನು ದ್ದೇಶಿಸಿದ್ದರೂ, ಈರ್ವರನ್ನೂ ಉದ್ದೇಶಿಸಿ ಒಂದೇ ಹೋಮಮಾಡುವುದರಿಂದ **ಅಗ್ನಾವಿಷ್ಣೂ** ಎಂಬ ಒಂದೇ ದೇವತೆಯೆಂದು ಈ ಹೋಮದ ವಿಷಯದಲ್ಲಿ ಭಾವಿಸಬೇಕು. ಸೋಮಯಾಗಗಳಲ್ಲಿ ಆರಾಧಿಸಲ್ಪಡುವ ಮತ್ತು ಸ್ತುತಿಸಲ್ಪಡುವ ದೇವತೆಗಳಲ್ಲಿ ಅಗ್ನಿವಿಷ್ಣುಗಳಿಗೆ (ಅದರಲ್ಲಿಯೂ ದೀಕ್ಷಣೀಯೇಷ್ಟಿಯಲ್ಲಿ) ಪ್ರಥಮಸ್ಥಾನವಿರುವುದರಿಂದ ಈ ದೇವತೆಗಳಿಗೆ ಅರ್ಪಿಸಬೇಕಾದ ಹೋಮದ್ರವ್ಯದ ಸ್ವರೂಪವನ್ನು ಮೊದಲು ವಿವರಿಸುತ್ತಾರೆ. ಪುರೋಡಾಶವೆಂದರೇನು ಎಂಬುದನ್ನು ಇಲ್ಲಿ ವಿವರಿಸುವು ದವಶ್ಯಕವು. ಈ ಶಬ್ದದಲ್ಲಿರುವ ಡಾ ಎಂಬ ಅಕ್ಷರವನ್ನು ಋಗ್ವೇದಿಗಳು ಳಾ ಎಂಬ ಅಕ್ಷರವನ್ನುಪಯೋಗಿಸಿ ಪಠಿಸುತ್ತಾರೆ. ಹೀಗೆಯೇ ಡಕಾರವಿರುವ ಸ್ಥಳದಲ್ಲಿ ಳಕಾರವನ್ನು ಉಪಯೋಗಿಸುವುದು ರೂಢಿಯಲ್ಲಿದೆ. ಇಡಾ-ಇಳಾ, ಈಡೇ-ಈಳೇ ಇತ್ಯಾದಿ. ಪುರೋಡಾಶವನ್ನು ಸಿದ್ಧಪಡಿಸುವ ಕ್ರಮವು ಈರೀತಿ ಇದೆ—ಮೊದಲು ಧಾನ್ಯರಾಶಿಯಲ್ಲಿ (ಭತ್ತದ ರಾಶಿಯಲ್ಲಿ) ನಾಲ್ಕುಹಿಡಿಯನ್ನು ತೆಗೆದುಕೊಂಡು ಅದನ್ನು ಒಂದು ಮರದಲ್ಲಿ ಹಾಕುತ್ತಾರೆ. ಅನಂತರ ಅದನ್ನು ಕೇರಿ, ಬೀಸಿ ಹಿಟ್ಟುಮಾಡಿ, ನೀರಿನಿಂದ ಕಲಸಿ ರೊಟ್ಟಿಮಾಡುವಂತೆ ವೃತ್ತಾಕಾರವಾಗಿ ತಟ್ಟಿ ಕಾವಲಿಯಂತಿರುವ ಮಣ್ಣಿನ ಹಂಚಿನಮೇಲೆ ಬೇಯಿಸುತ್ತಾರೆ. ತೆಳ್ಳಗೆ ತಗಡಿ ನಂತಿರುವ ಈ ಹೆಂಚುಗಳಿಗೆ **ಕಪಾಲ**ಗಳೆಂದು ಹೆಸರು. ಇಲ್ಲಿ ಏಕಾದಶಕಪಾಲವೆಂದು ಹೇಳಿರುವುದರಿಂದ ಕಲಸಿದ ಹಿಟ್ಟನ್ನು ಹನ್ನೊಂದು ಕಪಾಲಗಳ ಅಥವಾ ಮಣ್ಣಿನ ಚೂರುಗಳಮೇಲೆ ಬೇಯಿಸುತ್ತಾರೆ. ಬೇಯಿಸುವುದಕ್ಕೆ ಮೊದಲು ಇದನ್ನು ಕೂರ್ಮ (ಆಮೆಯ) ಆಕಾರದಂತೆ ತಟ್ಟುತ್ತಾರೆ. ಇದು ಹದವಾಗಿ ಬೇಲೆ ಈ ರೊಟ್ಟಿಯ ಚೂರುಗಳನ್ನು ಇಡಾ ಎಂಬ ಪ್ರತ್ಯೇಕವಾದ ಪಾತ್ರೆಯಲ್ಲಿ ಇಡುತ್ತಾರೆ ಮತ್ತು ಅದರಮೇಲೆ ಕಾಯಿಸಿದ ತುಪ್ಪವನ್ನು ಹಾಕುತ್ತಾರೆ. ಈ ದ್ರವ್ಯವನ್ನು ಎಂದರೆ ಏಕಾದಶಕಪಾಲಗಳಲ್ಲಿ ಬೇಯಿಸಿದ ಪುರೋಡಾಶವೆಂಬ ದ್ರವ್ಯವನ್ನು ಹೋಮಮಾಡುವ ಕಾಲದಲ್ಲಿ ಇಡಾಪಾತ್ರೆಯಿಂದ ತೆಗೆದು ಹೋಮಮಾಡುತ್ತಾರೆ. ಪುರೋಡಾಶವನ್ನು ಸಿದ್ಧಪಡಿಸುವ ಕ್ರಮವು ಒಂದೇರೀತಿಯಾಗಿದ್ದರೂ ಎಲ್ಲಾ ದೇವತೆಗಳಿಗೂ ಹನ್ನೊಂದು ಕಪಾಲಗಳಮೇಲೆ ಬೇಯಿಸುವುದಿಲ್ಲ. ವರುಣನೆಂಬ ದೇವತೆಗೆ ಒಂದು ಕಪಾಲ, ವಿಷ್ಣುವಿಗೆ ಮೂರು ಕಪಾಲ, ಅಶ್ವಿನೀದೇವತೆಗಳಿಗೆ ಎರಡು ಕಪಾಲ ಇತ್ಯಾದಿಯಾಗಿ ಬೇರೆಬೇರೆ ದೇವತೆಗಳಿಗೆ ಬೇರೆಬೇರೆ ಸಂಖ್ಯೆಯ ಕಪಾಲಗಳು ನಿರ್ದಿಷ್ಟ ವಾಗಿವೆ. ಅದರಂತೆ ಆ ಸಂಖ್ಯೆಯ ಕಪಾಲಗಳಮೇಲೆ ಪುರೋಡಾಶವನ್ನು ಬೇಯಿಸಿ ಆಯಾ ದೇವತೆಗಳಿಗೆ ಹೋಮದಲ್ಲಿ

ಅರ್ಪಿಸಬೇಕು. ಈ ಪುರೋಡಾಶವನ್ನು ಸಿದ್ಧಪಡಿಸುವ ಕ್ರಮವು ಆಪಸ್ತಂಬ ಶ್ರೌತಸೂತ್ರದಲ್ಲಿ ೧, ೨೨-೨೫ ಸೂತ್ರಗಳಲ್ಲಿಯೂ ಕಾತ್ಯಾಯನ ಶ್ರೌತಸೂತ್ರದಲ್ಲಿ ೨-೪-೫ ಸೂತ್ರಗಳಲ್ಲಿಯೂ, ತೈತ್ತಿರೀಯಬ್ರಾಹ್ಮಣ ೩, ೨, ೪-೮ ರಲ್ಲಿಯೂ ಶತಪಥಬ್ರಾಹ್ಮಣ ೧-೬-೨-೩ ರಲ್ಲಿಯೂ ಉಕ್ತವಾಗಿದೆ. [ಏಕಾದಶಕಪಾಲಗಳಲ್ಲಿ ಪುರೋಡಾಶವನ್ನು ಸಿದ್ಧಪಡಿಸುವ ಕ್ರಮವು ಈರೀತಿ ಹೇಳಲ್ಪಟ್ಟಿದೆ–

> **ಏಕಾದಶಕಪಾಲಸ್ಥಾಪನಪ್ರಕಾರಸ್ತ್ವೇವಂ—ಪೂರ್ವಂ ಮಧ್ಯಮಮುಪದಧಾತಿ ತತಃ ಪುರಸ್ತಾತ್ ತೃತೀಯಂ ಮಧ್ಯಮಾದ್ದಕ್ಷಿಣಂ ಚತುರ್ಥಂ, ಚತುರ್ಥಾತ್ಪೂರ್ವಮೇಕಸ್ಯ ಕಪಾಲಸ್ಯಾಂತರಾಲಂ ಪರಿಶಿಷ್ಯ ಪಂಚಮಂ, ಚತುರ್ಥಪಂಚಮಯೋರಂತರಾಲೇ ಷಷ್ಠಂ, ಚತುರ್ಥಸ್ಯ ಪಶ್ಚಾತ್ ಸಪ್ತಮಂ, ತಸ್ಯ ಪಶ್ಚಾದಷ್ಟಮಂ ಸರ್ವೇಭ್ಯ ಉತ್ತರತೋ ನವಮದಶಮೈಕಾದಶಾನಿ ಪ್ರಾಕ್ಸಂಸ್ಥಾನಿ । ಕಿಂಚ ಪುರೋಡಾಶಸ್ಯ ಕೂರ್ಮಾಕಾರೋಕ್ತ್ಯಾ ವೃತ್ತಾಕಾರತ್ವಪ್ರಸಿದ್ಧೇಃ ಯಾವತ್ಕಪಾಲಂ ಪ್ರಥನವಿಧೇಶ್ಚ ತದರ್ಥಕಪಾಲಚಿತೇರಪಿ ಅರ್ಥಾತ್ ವೃತ್ತಾಕಾರತ್ವಂ । ಕಪಾಲಾನಿ ತು ಘರ್ಷಣಾದ್ಯುಪಾಯೇನ ತಥಾ ಕರಣೀಯಾನಿ ಯಥಾ ಚ ಕಪಾಲಚಿತಿಕ್ಷೇತ್ರಂ ವೃತ್ತಂ ಸಂಪೂರ್ಯೇತ ॥**

ಹಿಟ್ಟನ್ನು ನೀರಿನಿಂದ ಕಲಿಸಿ ಹನ್ನೊಂದು ಉಂಡೆಗಳನ್ನಾಗಿ ಮಾಡಬೇಕು. ಬೆಂಕಿಯಮೇಲೆ ಹನ್ನೊಂದು ಮಣ್ಣಿನ ತಗಡುಗಳನ್ನು (ಕಪಾಲಗಳನ್ನು) ಇಟ್ಟು ಅವುಗಳಲ್ಲಿ ಮೊದಲು ಪೂರ್ವ ಮತ್ತು ಮಧ್ಯದಲ್ಲಿರುವ ಕಪಾಲಗಳ ಹಿಟ್ಟನ್ನು ಆಮೆಯಂತೆ ವರ್ತುಲಾಕಾರವಾಗಿ ತಟ್ಟಬೇಕು. ಅನಂತರ ಅದರ ಮುಂದಿರುವ ಕಪಾಲದಲ್ಲಿ ಮೂರನೆಯದನ್ನೂ, ಮಧ್ಯಕಪಾಲಕ್ಕೆ ದಕ್ಷಿಣ ದಿಕ್ಕಿನಲ್ಲಿರುವ ಕಪಾಲದಲ್ಲಿ ನಾಲ್ಕನೆಯದನ್ನೂ, ನಾಲ್ಕನೆಯ ಕಪಾಲದಿಂದ ಪೂರ್ವಕ್ಕೆ ಸ್ವಲ್ಪ ಸ್ಥಳವನ್ನು ಬಿಟ್ಟು ಐದನೆಯದನ್ನೂ, ನಾಲ್ಕು ಮತ್ತು ಐದರ ಮಧ್ಯದಲ್ಲಿ ಆರನೆಯದನ್ನೂ, ನಾಲ್ಕನೆಯ ಕಪಾಲದ ಪಶ್ಚಿಮದಿಕ್ಕಿನಲ್ಲಿ ಏಳನೆಯ ಕಪಾಲವನ್ನು, ಏಳನೆಯ ಕಪಾಲಕ್ಕೆ ಪಶ್ಚಿಮದಲ್ಲಿ ಎಂಟನೆಯದನ್ನೂ ಈ ಎಲ್ಲಾ ಕಪಾಲಗಳಿಗೂ ಉತ್ತರದಿಕ್ಕಿನಲ್ಲಿ ಒಂಭತ್ತು, ಹತ್ತು, ಹನ್ನೊಂದನೆಯ ಕಪಾಲಗಳನ್ನು ಇಟ್ಟು ಬೇಯಿಸಬೇಕು. ಕೂರ್ಮಾಕಾರವು ಗುಂಡಾಗಿರುವುದರಿಂದ ಕಪಾಲಗಳೂ ವೃತ್ತಾಕಾರವಾಗಿಯೇ ಇರಬೇಕು].

ಮೂಲವಾಕ್ಯದಲ್ಲಿ **ನಿರ್ವಪಂತಿ** ಎಂಬ ಶಬ್ದದ ಪ್ರಯೋಗವಿದೆ. ಈ ಶಬ್ದದ ಅರ್ಥವನ್ನು ಸಾಯಣರು ಈರೀತಿ ವಿವರಿಸುತ್ತಾರೆ---ಗಾಡಿ ಅಥವಾ ಕಣಜದಲ್ಲಿರುವ ಧಾನ್ಯರಾಶಿಯಲ್ಲಿ ನಾಲ್ಕು ಹಿಡಿ ಭತ್ತವನ್ನು ಪ್ರತ್ಯೇಕವಾಗಿ ತೆಗೆದು ಒಂದು ಬಿದಿರುಮರದಲ್ಲಿ ಹಾಕುವುದಕ್ಕೆ ನಿರ್ವಾಪವೆಂದು ಹೆಸರು. ಧಾನ್ಯವನ್ನು ಮೊರದಲ್ಲಿ ಹಾಕಿದ ಮಾತ್ರದಿಂದಲೇ ದೇವತೆಗಳಿಗೆ ಅದನ್ನು ಅರ್ಪಿಸಿದಂತಾಗಲಿಲ್ಲ. ಅದನ್ನು ಮಂತ್ರೋಕ್ತವಾಗಿ ಅವಘಾತಕ್ರಮದಿಂದ ಕುಟ್ಟಿ ಬೀಸಿ ಹಿಟ್ಟುಮಾಡಿ ನೀರಿನಿಂದ ಕಲಸಿ ಆಮೆಯ ಆಕಾರದಲ್ಲಿ ತೆಳ್ಳಗೆ ತಟ್ಟಿ ಕಪಾಲಗಳೆಂಬ ತಗಡಿನಂತಿರುವ ಮಣ್ಣಿನ ಹೆಂಚುಗಳಮೇಲೆ ಬೇಯಿಸಿ ಇಡಾಪಾತ್ರೆಯಲ್ಲಿ ಇಟ್ಟಿದ್ದು ಹೋಮಕಾಲದಲ್ಲಿ ನಿರ್ದಿಷ್ಟದೇವತೆಯನ್ನುದ್ದೇಶಿಸಿ ಹೋಮಮಾಡಬೇಕು. ಈರೀತಿ ದೇವತೆಗಳಿಗೆ ಕ್ಲಪ್ತ ಸಂಖ್ಯೆಯ ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವನ್ನು ಅರ್ಪಿಸುವುದಕ್ಕೆ ನಿರ್ವಾಪವೆಂದು ಹೆಸರು. ಪ್ರಕೃತವಾಕ್ಯದಲ್ಲಿ ನಿರ್ವಪಂತಿ ಎಂದು ವರ್ತಮಾನಕಾಲದ ಪ್ರಥಮಪುರುಷ ಬಹುವಚನಶಬ್ದವಿದ್ದರೂ ಅದಕ್ಕೆ ವಿಧ್ಯರ್ಥವನ್ನು ಹೇಳಬೇಕೆಂದು ಸಾಯಣರು ಹೇಳಿ ಅದಕ್ಕಾಗಿ **ಲಿಜರ್ಥೇ ಲೇಟ್** (ಪಾ. ೩-೪-೭) ಎಂಬ ಪಾಣಿನಿಯ ಸೂತ್ರವನ್ನು ಉದಾಹರಿಸಿದಾರೆ. ತೈತ್ತಿರೀಯ ಸಂಹಿತೆಯಲ್ಲಿ ಅನೇಕಕಡೆ ವರ್ತಮಾನಕಾಲದ ಕ್ರಿಯಾಪದಗಳನ್ನೂ ವಿಧ್ಯರ್ಥಕ್ರಿಯಾಪದಗಳನ್ನೂ ಎರಡು ವಿಧವನ್ನೂ ಉಪಯೋಗಿಸಿರುವುದು ಕಂಡುಬರುತ್ತದೆ. ಉದಾ–**ಆಗ್ನೇಯಮಷ್ಟಾಕಪಾಲಂ ನಿರ್ವಪತಿ** (ತೈ.ಸಂ. ೧-೮-೧೯-೩೫) **ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತಿ ದೀಕ್ಷಿಷ್ಯಮಾಣಃ** (ತೈ.ಸಂ. ೫-೫-೧-೪) **ಆಗ್ನಾವೈಷ್ಣವಮೇಕಾ**

**ದಶಕಪಾಲಂ ನಿರ್ವಪೇತ್** (ತೈ.ಸಂ. ೨-೨-೯) ಇತ್ಯಾದಿ. ಇದಲ್ಲದೆ **ನಿರ್ವಪಂತಿ** ಎಂದು ಬಹುವಚನಪ್ರಯೋಗವಿದೆ. ಈ ವಿಧವಾದ ಪ್ರಯೋಗವು ಯಜ್ಞಮಾಡುವ ಅನೇಕ ಯಜಮಾನರಲ್ಲಿ ರೂಢಿಯಲ್ಲಿರುವ ಕ್ರಮವನ್ನು ತಿಳಿಸುತ್ತದೆ. ಇದಲ್ಲದೆ ಸತ್ರ ಎಂಬ ಅನೇಕ ಸಂವತ್ಸರಗಳವರೆಗೆ ನಡೆಯುವ ಯಾಗಗಳಲ್ಲಿ ಅನೇಕ ಯಜಮಾನರು ಒಟ್ಟಿಗೆ ಸೇರಿ ಯಜ್ಞಮಾಡುವುದರಿಂದ ಬಹುವಚನ ಪ್ರಯೋಗವಿರುವುದು ತಪ್ಪಲ್ಲ. ಇದಲ್ಲದೆ ವೇದವಾಕ್ಯಗಳಲ್ಲಿ ವಚನವಿಭಕ್ತಿಗಳ ಮತ್ತು ವರ್ತಮಾನಾದಿಕಾಲಗಳ ವ್ಯತ್ಯಾಸವಿರುವುದು ಸಹಜವು. ಆದ್ದರಿಂದ ಸಂದರ್ಭಾನುಸಾರ ವಾಕ್ಯಗಳಿಗೆ ಅರ್ಥಮಾಡಬೇಕು. ನಾವು ಇನ್ನು ಮುಂದೆ ನಿರ್ವಾಪಶಬ್ದಕ್ಕೆ ಅರ್ಪಿಸುವುದು ಎಂಬ ಶಬ್ದದಿಂದ ಅರ್ಥವಿವರಣೆಮಾಡುತ್ತೇವೆ.

## ಸರ್ವಾಭ್ಯ ಏವೈನಂ ತದ್ದೇವತಾಭ್ಯೋಽನನ್ತರಾಯಂ ನಿರ್ವಪಂತಿ।

**ಅತ್ರ ಪ್ರಥಮೋತ್ತಮಯೋರಗ್ನಾವಿಷ್ಣ್ವೋಃ ಪುರೋಡಾಶದೇವತಾತ್ವೇ ಫಲಿತಂ ದರ್ಶಯತಿ। ತತ್ತೇನಾಗ್ನಾವೈಷ್ಣವತ್ವೇನ ತಯೋರಗ್ನಾವಿಷ್ಣ್ವೋರ್ಮಧ್ಯವರ್ತಿನೀನಾಂ ಸೌಮಿಕೀನಾಂ ಸರ್ವಾಸಾಂ ದೇವತಾನಾಮುಪಲಕ್ಷಿತತ್ವಾದನಂತರಾಯಂ ನಿರವಶೇಷಂ ಕಾಚಿದಪಿ ದೇವತಾವಶಿಷ್ಟಾ ಯಥಾ ನ ಭವತಿ ತಥೈನಂ ಪುರೋಡಾಶಂ ಯಜಮಾನಾ ನಿರ್ವಪಂತ್ಯೇವ। ಅನೇನ ನಿರ್ವಾಪೇಣ ಸರ್ವಾ ದೇವತಾಸ್ತೃಪ್ಯಂತೀತ್ಯರ್ಥಃ। ಯಥಾ ವೈಯಾಕರಣಾಃ ಪ್ರತ್ಯಾಹಾರೇಷ್ವಾದ್ಯಂತಯೋರ್ವರ್ಣಯೋರ್ಗ್ರಹಣೇನ ಮಧ್ಯಪಾತಿನಾಂ ಸರ್ವೇಷಾಂ ವರ್ಣಾನಾಂ ಗ್ರಹಣಮಿಚ್ಛಂತಿ। ನ್ಯಾಯಸ್ತದೀಯ ಏವಂ ವ್ಯವಹ್ರಿಯತೇ–"ತನ್ಮಧ್ಯಪತಿತಸ್ತದ್ಗ್ರಹಣೇನ ಗೃಹ್ಯತೇ" ಇತಿ। ಯಥಾ ವಾ ಲೋಕೇ ಭುಂಜಾನಾನಾಮನೇಕಪಂಕ್ತಾವುಪವಿಷ್ಟಾನಾಮಾದ್ಯಂತಯೋರ್ಬ್ರಾಹ್ಮಣಯೋಃ ಪರಿತೋಷೇಣ ಮಧ್ಯವರ್ತಿನಃ ಸರ್ವೇ ಪರಿತುಷ್ಟಾ ಇತಿ ನಿಶ್ಚಿತಂ ತಥೇದಂ ದ್ರಷ್ಟವ್ಯಂ॥**

ಉಳಿದ ಎಲ್ಲಾ ದೇವತೆಗಳಿಗೂ ಯಾರಿಗೂ ಬಿಡದಂತೆ ಪುರೋಡಾಶವನ್ನು ಅರ್ಪಿಸುತ್ತಾರೆ;

ಅಗ್ನಿವಿಷ್ಣುದೇವತೆಗಳಿಗೆ ಪುರೋಡಾಶವನ್ನು ಅರ್ಪಿಸಿದರೆ ಉಳಿದ ಇತರ ದೇವತೆಗಳಿಗೆ ಅರ್ಪಿಸಿದಂತಾಯಿತೇ? ಅರ್ಪಿಸಿದಂತಾಗುವುದು ಎಂಬುದನ್ನು ತಿಳಿಸುತ್ತಾರೆ. ಮೊದಲ ದೇವತೆಯಾದ ಅಗ್ನಿಗೂ ಕೊನೆಯ ದೇವತೆಯಾದ ವಿಷ್ಣುವಿಗೂ ಪುರೋಡಾಶವನ್ನು ಅರ್ಪಿಸಿದರೆ ಈ ಸೋಮಯಾಗದಲ್ಲಿ ಆರಾಧಿಸಲ್ಪಡಬೇಕಾದ ಅಗ್ನಿವಿಷ್ಣುಗಳ ಮಧ್ಯದಲ್ಲಿರುವ ಸಮಸ್ತ ದೇವತೆಗಳನ್ನು ಒಬ್ಬರನ್ನೂ ಬಿಡದಂತೆ ಆರಾಧಿಸಿದಂತಾಗುವುದು. ಎಂದರೆ ಆದ್ಯಂತ ದೇವತೆಗಳಾದ ಅಗ್ನಿವಿಷ್ಣುಗಳಿಗೆ ಪುರೋಡಾಶವನ್ನು ಅರ್ಪಿಸಿ ಹೋಮಮಾಡುವುದರಿಂದ ಮಧ್ಯವರ್ತಿಗಳಾದ ಇತರ ಸಮಸ್ತದೇವತೆಗಳೂ ತೃಪ್ತರಾಗುವರು ಎಂದರ್ಥವು. ಹೇಗೆಂದರೆ, ವ್ಯಾಕರಣಶಾಸ್ತ್ರಜ್ಞರು ಕೆಲವು ಅಕ್ಷರಗಳನ್ನು ಸೂಚಿಸಬೇಕಾದರೆ ಮೊದಲು, ಕೊನೆ ಅಕ್ಷರಗಳನ್ನು ಮಾತ್ರ ಸೂಚಿಸುವರು. **ಯೇನ ವಿಧಿಸ್ತದಂತಸ್ಯ** (ಪಾ. ೧-೧-೭೨) **ತನ್ಮಧ್ಯಪತಿತಸ್ತದ್ಗ್ರಹಣೇನ ಗೃಹ್ಯತೇ** ಎಂಬ ಸೂತ್ರಾನುಸಾರವಾಗಿ **ತನ್** ಎಂದು ಹೇಳಿದರೆ ತಕಾರಕ್ಕೂ ನಕಾರಕ್ಕೂ ಮಧ್ಯದಲ್ಲಿರುವ ತ ಥ ದ ಧ ನ ಎಂಬ ಅಕ್ಷರಗಳೆಲ್ಲಾ ಸೂಚಿತವಾಗುವಂತೆ ಇಲ್ಲಿಯೂ ಸಹ ಆದ್ಯಂತ ದೇವತೆಗಳಾದ ಅಗ್ನಿ ವಿಷ್ಣುಗಳನ್ನು ಸೂಚಿಸುವುದರಿಂದ ಅವರ ಮಧ್ಯವರ್ತಿಗಳಾದ ಇತರ ಎಲ್ಲಾ ದೇವತೆಗಳನ್ನೂ ನಿರ್ದೇಶಿಸಿದಂತೆ ಆಯಿತು ಎಂದಭಿಪ್ರಾಯವು. ಇದಲ್ಲದೆ ಲೋಕವ್ಯವಹಾರದಲ್ಲಿ ಬ್ರಾಹ್ಮಣರು ಒಂದು ಪಂಕ್ತಿಯಲ್ಲಿ ಸಾಲಾಗಿ ಕುಳಿತು ಭೋಜನಮಾಡುತ್ತಿರುವಾಗ ಯಜಮಾನನು ಒಂದು ಪಂಕ್ತಿಯ ಮೊದಲಿನಲ್ಲಿಯೂ ಕೊನೆಯಲ್ಲಿಯೂ ಕುಳಿತಿರುವವರನ್ನು ಕುರಿತು ಚೆನ್ನಾಗಿ ಭೋಜನವಾಯಿತೇ ಎಂದು ಕೇಳಿ ಅವರು ಕೊಟ್ಟ ಉತ್ತರದಿಂದ ಸಂತುಷ್ಟನಾಗುವನು. ಪಂಕ್ತಿಯಲ್ಲಿರುವ ನೂರಾರು ಜನರಲ್ಲಿ ಪ್ರತಿಯೊಬ್ಬನನ್ನೂ ಕೇಳಬೇಕಾಗಿಲ್ಲ. ಅದರಂತೇ ಇಲ್ಲಿಯೂ ತಿಳಿಯಬೇಕು.

**ಅಗ್ನಿರ್ವೈ ಸರ್ವಾ ದೇವತಾ ವಿಷ್ಣುಃ ಸರ್ವಾ ದೇವತಾಃ ॥**

**ನನ್ವಗ್ನಾವಿಷ್ಣ್ವೋರೇವ ನಿರ್ವಾಪಸಂಬಂಧಃ ಶ್ರೂಯತೇ ನ ತು ಮಧ್ಯವರ್ತಿದೇವ-ತಾನಾಂ ತತ್ಕಥಂ ತಾಸಾಂ ತೃಪ್ತಿರಿತ್ಯಾಶಂಕ್ಯ ತತ್ಸಿದ್ಧ್ಯರ್ಥಂ ತಯೋರೇವ ಸರ್ವದೇವ-ತಾಂತರ್ಭಾವಂ ದರ್ಶಯತಿ—ಅಗ್ನೇಃ ಸರ್ವದೇವತಾರೂಪತ್ವೇ ಶ್ರುತ್ಯಂತರಪ್ರಸಿದ್ಧಿದ್ಯೋತ-ನಾರ್ಥೋ ವೈಶಬ್ದಃ । ತಥಾ ಚ ತೈತ್ತಿರೀಯಾಃ ಪೌರೋಡಾಶಿಕೇ ಕಾಂಡೇ ಸಮಾಮನಂತಿ— " ತೇ ದೇವಾ ಅಗ್ನೌ ತನೂಃ ಸಂನ್ಯದಧತ ತಸ್ಮಾದಾಹುರಗ್ನಿಃ ಸರ್ವಾ ದೇವತಾಃ " ಇತಿ । ಸೌಮಿ-ಕೇಽಪಿ ಕಾಂಡೇ ಶ್ರೂಯತೇ--" ದೇವಾಸುರಾಃ ಸಂಯತ್ತಾ ಆಸಂಸ್ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶಂಸ್ತಸ್ಮಾದಾಹುರಗ್ನಿಃ ಸರ್ವಾ ದೇವತಾಃ" ಇತಿ । ವಿಷಲೃ ವ್ಯಾಪ್ತಾವಿತ್ಯಸ್ಮಾದ್ಧಾ-ತೋರುತ್ಪನ್ನೋ ವಿಷ್ಣುಶಬ್ದಃ । ವ್ಯಾಪ್ತಿಶ್ಚ ಸರ್ವಜಗದುಪಾದಾನಕಾರಣತ್ವೇನ ಸರ್ವಾತ್ಮಕತ್ವಾ-ದುಪಪದ್ಯತೇ । ಅತ ಏವ ಸ್ಮರಂತಿ—" ಭೂತಾನಿ ವಿಷ್ಣುರ್ಭುವನಾನಿ ವಿಷ್ಣುಃ " ಇತಿ ॥**

ಅಗ್ನಿಯು ಎಲ್ಲಾ ದೇವತೆಗಳ ಸ್ವರೂಪನು, ಹಾಗೆಯೇ ವಿಷ್ಣುವೂ ಸರ್ವದೇವತಾಸ್ವರೂಪನು. ಇದು ಪ್ರಸಿದ್ಧವಾದ ವಿಷಯವು ;

ಅಗ್ನಿ ವಿಷ್ಣುದೇವತೆಗಳಿಗೆ ಪುರೋಡಾಶವನ್ನರ್ಪಿಸಿದರೆ ಅವರ ಮಧ್ಯವರ್ತಿಯಲ್ಲಿರುವ ದೇವತೆಗಳಿಗೆಲ್ಲಾ ಅರ್ಪಿಸಿದಂತಾಯಿತು ಎಂದು ಮೇಲೆ ಹೇಳಿದೆಯಷ್ಟೆ. ಆದರೆ ಅಗ್ನಿ ಮತ್ತು ವಿಷ್ಣುವಿನ ಹೆಸರುಗಳನ್ನು ಮಾತ್ರ ನಿರ್ದೇಶಿಸಿ ಹವಿಸ್ಸನ್ನು ಅರ್ಪಿಸಲಾಗಿದೆ. ಇಲ್ಲಿ ಇತರ ದೇವತೆಗಳ ಹೆಸರುಗಳು ಇಲ್ಲವಲ್ಲಾ, ಅವರಿಗೆ ಹೇಗೆ ತೃಪ್ತಿಯುಂಟಾಗುವುದು ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಅಗ್ನಿಯು ಸರ್ವದೇವತಾಸ್ವರೂಪನು. ಎಂದರೆ ಅಗ್ನಿಯಲ್ಲಿಯೇ ಸಮಸ್ತದೇವತೆಗಳೂ ಅಡಗಿರುವರು. ವಿಷ್ಣುವಿನಲ್ಲಿಯೂ ಅದರಂತೆಯೇ. ಇದು ಪ್ರಸಿದ್ಧವಾದ ವಿಷಯ. ಏಕೆಂದರೆ ಈ ವಿಷಯವನ್ನು ತೈತ್ತಿರೀಯ ಶಾಖೆಯಲ್ಲಿ ಪುರೋಡಾಶಕಾಂಡವೆಂಬ ಭಾಗದಲ್ಲಿ ಹೇಳಲಾಗಿದೆ.

ಯಜುರ್ವೇದದಲ್ಲಿ ಮಂತ್ರಗಳನ್ನು ಒಂದು ನಿರ್ದಿಷ್ಟಕ್ರಮದಲ್ಲಿ ವಿಂಗಡಿಸಿಲ್ಲ. ಕೆಲವು ಸಂದರ್ಭಗಳಲ್ಲಿ ಒಂದು ಯಜ್ಞಕ್ಕೆ ಬೇಕಾದ ಮಂತ್ರಗಳನ್ನು ಒಂದೆಡೆಯಲ್ಲಿ ಸೇರಿಸಲಾಗಿದೆ. ಅದಕ್ಕೆ ಸಂಬಂಧಪಟ್ಟ ಬ್ರಾಹ್ಮಣಮಂತ್ರಗಳು ಸಂಹಿತೆಯಲ್ಲಿ ಬೇರೊಂದು ಅಧ್ಯಾಯದಲ್ಲಿಯೋ ಬ್ರಾಹ್ಮಣದಲ್ಲಿಯೋ ಇರುವವು. ಸಂಹಿತೆಯಲ್ಲಿ ಬ್ರಾಹ್ಮಣಮಂತ್ರಗಳೂ, ಬ್ರಾಹ್ಮಣದಲ್ಲಿ ಸಂಹಿತೆಗೆ ಸೇರಬೇಕಾದ ಮಂತ್ರಗಳೂ ಸೇರಿವೆ. ಕೃಷ್ಣಯಜುರ್ವೇದದ ಎಲ್ಲಾ ಶಾಖೆಗಳಲ್ಲಿಯೂ ಈ ಗೊಂದಲವೇ ಇದೆ. ಪ್ರಾಚೀನ ಕಾಲದಲ್ಲಿ ಈಗಿರುವಂತೆ ಇರಲಿಲ್ಲವೆಂದು ತೋರುತ್ತದೆ. ಆಗ ಯಜನೀಯ ದೇವತೆಗಳು ಅವರಿಗೆ ಸಂಬಂಧಪಟ್ಟ ಮಂತ್ರ ಮೊದಲಾದವು ಪ್ರತ್ಯೇಕಭಾಗವೆಂದು ಪರಿಗಣಿಸಲ್ಪಟ್ಟಿದ್ದಂತೆ ತೋರುತ್ತದೆ. ಅದರ ಪ್ರಕಾರ ಯಜುರ್ವೇದದಲ್ಲಿ—(೧) ಪ್ರಾಜಾಪತ್ಯಕಾಂಡ (೨) ಸೌಮ್ಯಕಾಂಡ (೩) ಆಗ್ನೇಯಕಾಂಡ (೪) ವೈಶ್ವದೇವಕಾಂಡ (೫) ಸ್ವಾಯಂಭುವಕಾಂಡಗಳೆಂದು ಐದು ವಿಭಾಗಗಳಿದ್ದವು. ಪ್ರತಿಯೊಂದು ಕಾಂಡದಲ್ಲಿರುವ ಮಂತ್ರಗಳು ಯಾವುವು ಎಂಬುದನ್ನು ವಿವರಿಸಬೇಕಾದರೆ ಅದು ಅತಿ ವಿಸ್ತಾರವಾಗುವುದರಿಂದ ಇಲ್ಲಿ ಪ್ರಕೃತ ಸಂದರ್ಭದಲ್ಲಿ ಅವಶ್ಯಕವಾದ ಆಗ್ನೇಯಕಾಂಡದ ಕಾಂಡಾನುಕ್ರಮಣಿಕೆ ಮತ್ತು ಅದನ್ನು ವಿವರಿಸುವ ಶ್ಲೋಕಗಳನ್ನು ಮಾತ್ರ ಕೊಟ್ಟಿದೆ. ಹೆಚ್ಚು ವಿವರಗಳು ಯಜುರ್ವೇದದ ವ್ಯಾಪ್ತಿಗೊಳಪಟ್ಟಿವೆ—

ಸೂತ್ರಂ— **ಅಗ್ನ್ಯಾಧೇಯಮಗ್ನಿಹೋತ್ರಮಗ್ನ್ಯುಪಸ್ಥಾನಮಗ್ನಿಚಯನಂ ನಾಚಿಕೇತಂ ಚಾತು-ರ್ಹೋತ್ರೀಯಂ ವೈಶ್ವಸೃಜಮಾರುಣಾ ಇತಿ ಸಬ್ರಾಹ್ಮಣಾನಿ ಸಾನುಬ್ರಾಹ್ಮಣಾನ್ಯಾಗ್ನೇಯಾನಿ ॥**

ತೈತ್ತಿರೀಯಸಂಹಿತೆಯಲ್ಲಿ ಈ ಮಂತ್ರಭಾಗಗಳು ಎಲ್ಲಿವೆಯೆಂದರೆ—

ಉದ್ಧನ್ಯಮಾನಂ ಘರ್ಮಃ ಶಿರೋಽಗ್ನ್ಯಾಧೇಯಾವಿಮೌ ಮತೌ ।
ಕೃತ್ತಿಕಾಸ್ವಗ್ನಿಮಿತ್ಯಾರಭ್ಯ ಚ ಪಂಚ ಪಂಚಾನುವಾಕಕಾಃ ॥
ಇಮೇ ವಾ ಏತ ಇತಿ ಚ ತ್ರಯೋಗ್ನ್ಯಾಧೇಯಕೋ ವಿಧಿಃ ।
ಭೂಮಿರ್ಭೂಮ್ನಾನುವಾಕೋಽಯಂ ಪುನರಾಧೇಯನಾಮಕಃ ॥
ದೇವಾಸುರಾಃ ಪರಾ ವೈ ಚ ಭೂಮಿರ್ಭೂಮ್ನೇತಿ ಚೋತ್ತರಂ ।
ದೇವಾಸುರಾಗ್ನೀಷೋಮಯೋಃ ಪುನರಾಧೇಯಕೋ ವಿಧಿಃ ॥
ಉಪಪ್ರಯಂತಃ ಸಂಪಶ್ಯಾಮ್ಯನುವಾಕದ್ವಯಂ ತಥಾ ।
ಅಗ್ನ್ಯುಪಸ್ಥಾನಮಾಖ್ಯಾತಂ ಮಮ ನಾಮೇತ್ಯೃಚಶ್ಚ ಷಟ್ ॥
ಅಯಜ್ಞಾದಿ ತ್ರಿಕಂ ಪೂರ್ವಮಗ್ನ್ಯುಪಸ್ಥಾನಕೋ ವಿಧಿಃ ।
ಅಂತ್ಯಾನ್ವಿನಾನುವಾಕಾನ್ಸ್ವಾನ್ ಜೀವಮೂತಸ್ಯೇತಿ ಚ ತ್ರಯಂ ॥
ತುರೀಯಮಗ್ನಿಕಾಂಡಂ ಸ್ಯಾದ್ರುದ್ರಾಂತ್ಯಂ ತು ನ ವರ್ಜಯೇತ್ ।
ಮಾ ನೋ ಹಿಂಸೀದಸ್ಮಾದೂರ್ಧ್ವಮಾಪ್ಯಾಯಸ್ವ ಸಶಾಂತಿಕಂ ॥
ಇಯಮೇವಾನುವಾಕಾಂತೇ ಈಯುಷ್ಟೇಯೇ ಚ ತಾದೃಶಂ ।
ಪ್ರಜಾಪತಿರ್ಮನಸೋರ್ಧ್ವಂ ಜ್ಯೋತಿಷ್ಮತೀಂ ಚ ಯೋಜಯೇತ್ ॥
ಆಯುಷಃ ಪ್ರಾಣಮಿಂದ್ರೋದಧೀ ಚ ಏತೇಽಗ್ನಿಕಾಂಡಕಾಃ ।
ಸಾವಿತ್ರಾಣೀತಿ ಚತ್ವಾರಃ ಪ್ರಶ್ನಾ ಅಂತಿಮವರ್ಜಿತಾಃ ॥
ದ್ವಿಚತ್ವಾರಿಂಶಕಂ ಖ್ಯಾತಂ ಗಾಯತ್ರೀತಿ ಚ ವರ್ಜಿತಂ ।
ಯದೇಕೇನಾದಿಕಂ ಪ್ರಶ್ನತ್ರಿತಯಂ ತ್ರೈಂಶಿಕಂ ಮತಂ ॥
ಇಂದ್ರಾಯ ರೋಹಿತಸ್ತೇಗಾನಿತ್ಯಾದೀರ್ದಶಿನೀರ್ವಿನಾ ।
ಸಾವಿತ್ರಾಣೀತ್ಯಾದಿಕಮಗ್ನಿಚಯನಸ್ಯ ಬ್ರಾಹ್ಮಣಮಿತಿ ಜ್ಞೇಯಂ ॥
ಸಂಜ್ಞಾನಮಿಹ ಸಾವಿತ್ರಂ ಲೋಕೋಽಯಂ ನಾಚಿಕೇತಕಃ ।
ಚಾತುರ್ಹೋತ್ರೋ ಬ್ರಹ್ಮ ವೈ ಚ ಪರೇ ವೈಶ್ವಸೃಜಾಸ್ತತಃ ॥
ಭದ್ರಂ ಪ್ರಶ್ನಸ್ತ್ವಾರುಣಂ ಸ್ಯಾತ್ಪಂಚೈತೇ ಚಿತಿನಾಮಕಾಃ ।
ಯೋಽಯಮಂಗಿರಸಃ ಪ್ರಶ್ನಃ ಸೋಽಗ್ನಿಹೋತ್ರವಿಧಿಃ ಸ್ಮೃತಃ ॥
ಉದಸ್ಥಾನ್ನಿವಾ ಏತಸ್ಯೇತ್ಯೇತೌ ಚೇಹ ಪ್ರವೇಶಯೇತ್ ॥ ಇತಿ

ಕೃಷ್ಣಯಜುರ್ವೇದದಲ್ಲಿ ಆಗ್ನೇಯಕಾಂಡಕ್ಕೆ ಸಂಬಂಧಪಟ್ಟ ಮಂತ್ರಗಳು, ಅನುವಾಕಗಳು ಅಧ್ಯಾಯಗಳು ಇವುಗಳನ್ನು ಇಲ್ಲಿ ವಿವರಿಸಿದೆ. ಮತ್ತು ಈರೀತಿ ಹೇಳಲಾಗಿದೆ—**ತೇ ದೇವಾ ಅಗ್ನೌತನೂಃ ಸಂನ್ಯದಧತ । ತಸ್ಮಾದಾಹುರಗ್ನಿಃ ಸರ್ವಾ ದೇವತಾ** ಇತಿ (ತೈ.ಬ್ರಾ. ೩-೨-೮-೧೨) ಆ ದೇವತೆಗಳೆಲ್ಲರೂ ತಮ್ಮ ತಮ್ಮ ಶರೀರಗಳನ್ನು ಅಗ್ನಿಯಲ್ಲಿ ಬಚ್ಚಿಟ್ಟರು. ಆದ್ದರಿಂದ ಅಗ್ನಿಯು ಸಕಲದೇವತಾಸ್ವರೂಪನು ಎಂದು ತಿಳಿದವರು ಹೇಳುವರು. ಸೋಮಕಾಂಡದಲ್ಲಿಯೂ ಕೂಡ—**ದೇವಾಸುರಾಃ ಸಂಯತ್ತಾ ಆಸನ್ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ ತಸ್ಮಾದಾಹುರಗ್ನಿಃ ಸರ್ವಾ ದೇವತಾಃ"**

(ತೈ.ಸ. ೬-೨-೨)—ಒಂದಾನೊಂದು ಕಾಲದಲ್ಲಿ ದೇವತೆಗಳಿಗೂ ಅಸುರರಿಗೂ ಯುದ್ಧವು ಸನ್ನಿಹಿತವಾಯಿತು. ಆಗ ದೇವತೆಗಳು ಅಸುರರ ಅಗಾಧವಾದ ಶಕ್ತಿಯನ್ನು ಕಂಡು ತಾವು ಗೆಲ್ಲುವುದು ಕಷ್ಟವೆಂದು ಹೆದರಿ ಅಗ್ನಿಯನ್ನು ಪ್ರವೇಶಿಸಿ ಅಲ್ಲಿ ಯಾರಿಗೂ ಕಾಣಿಸದಂತೆ ಗುಪ್ತವಾಗಿದ್ದರು. ಆದ್ದರಿಂದ ಅಗ್ನಿಯು ಸರ್ವದೇವತಾಸ್ವರೂಪವೆಂದು ಹೇಳಲ್ಪಡುವನು. ವಿಷ್ಣುವಿನ ವಿಚಾರದಲ್ಲಿ— ವಿಷ್ಲೃ-ವ್ಯಾಪ್ತೌ (ಜುಹೋತ್ಯಾದಿ ೧೩) ವ್ಯಾಪಿಸು ಎಂಬ ಧಾತುವಿನಿಂದ ವಿಷ್ಣುಶಬ್ದದ ವ್ಯುತ್ಪತ್ತಿಯಾಗಿದೆ. ಸರ್ವತ್ರ ವ್ಯಾಪಿಸಿರುವವನಾದ್ದರಿಂದ ವಿಷ್ಣುವೆಂದು ಹೆಸರು. ವ್ಯಾಪ್ತಿ ಎಂದರೆ ಸಮಸ್ತ ಜಗತ್ತಿಗೂ ಕಾರಣಭೂತನಾಗಿ ಸರ್ವಾತ್ಮಕನಾಗಿರುವನು. ಆದ್ದರಿಂದಲೇ – **ಭೂತಾನಿ ವಿಷ್ಣುರ್ಭುವನಾನಿ ವಿಷ್ಣುರಿತಿ,** ಸಮಸ್ತ ಲೋಕಗಳೂ ಸಮಸ್ತ ಪ್ರಾಣಿಗಳೂ ವಿಷ್ಣುಸ್ವರೂಪವೇ ಆಗಿರುವುದು ಎಂದು ಸ್ಮೃತಿವಾಕ್ಯವಿದೆ. ಇದಲ್ಲದೆ **ಯಜ್ಞೋ ವೈ ವಿಷ್ಣುಃ** ಎಂಬ ಶ್ರುತಿವಾಕ್ಯದಂತೆ ವಿಷ್ಣುವು ಯಜ್ಞಸ್ವರೂಪನು (ತೈ. ಸಂ. ೫-೫-೧). ಯಜ್ಞವು ಸರ್ವದೇವತಾತ್ಮಕವಾದುದು. ಆದ್ದರಿಂದ ವಿಷ್ಣುವೂ ಸರ್ವದೇವತಾಸ್ವರೂಪನು ಸರ್ವದೇವತಾಸ್ವರೂಪರಾದ ಅಗ್ನಿವಿಷ್ಣುಗಳಿಗೆ ಪುರೋಡಾಶವನ್ನು ಅರ್ಪಿಸಿದರೆ ಸಮಸ್ತ ದೇವತೆಗಳಿಗೂ ಅರ್ಪಿಸಿದಂತಾಗುವುದು ಎಂದಭಿಪ್ರಾಯವು.

[ಯಜುರ್ವೇದದ ಸೋಮಕಾಂಡದ ವಿವರಣೆಯು ಈರೀತಿ ಇದೆ—

ಸೂತ್ರಂ (ಕಾಂಡಾನುಕ್ರಮಣಿಕೆ)- **ಆಧ್ವರ್ಯವಂ ಗ್ರಹಾಃ ದಾಕ್ಷಿಣಾನಿ ಸಮಿಷ್ಟಯಜೂಗ್ಂಷಿ ಅವಭೃತ-ಯಜೂಗ್ಂಷಿ ವಾಜಪೇಯಃ ಶುಕ್ರಿಯಾಣಿ ಸವಾಃ ಇತಿ ಸಬ್ರಾಹ್ಮಣಾನಿ ಸಾನುಬ್ರಾಹ್ಮಣಾನಿ ಸೌಮ್ಯಾನಿ ॥**

ಯಜುರ್ವೇದದಲ್ಲಿರುವ ಸೌಮ್ಯಕಾಂಡಮಂತ್ರಗಳ ವಿವರಣೆ—

**ಆಪ ಉಂದಂತು ದೇವಸ್ಯ ಪ್ರಶ್ನಾವಂತಿಮವರ್ಜಿತೌ ।**
**ಪವಮಾನೋ ಬ್ರಹ್ಮಸಂಧತ್ತಮೇತೌ ಚಾಧ್ವರಾಹ್ವಯಾ ॥**
**ಪ್ರಾಚೀನವಗ್ಂಶಂ ಷಟ್‌ಪ್ರಶ್ನಾಸ್ತ್ರಿಭಿಃ ಪ್ರಜನನಂ ಮುಖೈಃ ।**
**ದೇವಾಸುರಾಃ ಸಪ್ರಜಾಪತಿಶ್ಚತ್ವಾರ್ಯಾಧ್ವರೋ ವಿಧಿಃ ॥**
**ವರ್ಜಯಿತ್ವಾದದೇ ಪ್ರಶ್ನೇ ಚತುರೋನ್ಯಾನ್ ಗ್ರಹಾಹ್ವಯಾಃ ।**
**ಉಭಯೋ ವೈ ಬ್ರಹ್ಮವಾದಿನಃ ಕತ್ಯೇತೌ ಗ್ರಹೇ ವಿಧಿಃ ॥**
**ಉದುತ್ಯಮಿತಿ ಚಾರಭ್ಯ ತ್ರಯೋ ದಾಕ್ಷಿಣನಾಮಕಾಃ ।**
**ಉಕ್ತೇಽಧ್ವರವಿಧಾವಂತರ್ಗತೋಽಭೂದ್ದಾಕ್ಷಿಣೋ ವಿಧಿಃ ॥**
**ದೇವಸವಿತರಾರಭ್ಯ ವಾಜಪೇಯಾಹ್ವಯಾಶ್ಚ ಷಟ್ ।**
**ವಾಜಪೇಯಸ್ಯ ದೇವಾ ವೈ ಯಥಾದ್ಯಷ್ಟಾ ವಿಧಿರ್ಮತಃ ॥**
**ತ್ರಿವೃತ್ಪ್ರಶ್ನಃ ಸವಾಃ ಪ್ರೋಕ್ತಃ ಪ್ರವರ್ಗ್ಯಸ್ತು ನಮೋವಾಚೇ ಪರಃಪಶ್ನಶ್ಚ ತದ್ವಿಧಿಃ ॥ ]**

ಏತೇ ವೈ ಯಜ್ಞಸ್ಯಾಂತ್ಯೇ ತನ್ವೌ ಯದಗ್ನಿಶ್ಚ ವಿಷ್ಣುಶ್ಚ
ತದ್ಯದಾಗ್ನಾವೈಷ್ಣವಂ ಪುರೋಳಾಶಂ ನಿರ್ವಪಂತ್ಯತ
ಏವ ತದ್ದೇವಾನೃಧ್ನುವಂತಿ ॥

**ಸರ್ವದೇವತಾತ್ಮಕತ್ವೇನಾಗ್ನಾವಿಷ್ಣೂ ಪ್ರಶಸ್ಯ ಪ್ರಕಾರಾಂತರೇಣ ಪುನಃ ಪ್ರಶಂಸತಿ— ಅಗ್ನಿಶ್ಚ ವಿಷ್ಣುಶ್ಚೇತ್ಯನಯೋರ್ದೇವತಯೋರ್ಯಜ್ಞಶರೀರದ್ವಯಮಸ್ತಿ, ಏತೇ ಉಭೇ ತನ್ವೌ ಯಜ್ಞಸ್ಯಾಂತ್ಯೇ ಸೋಮಯಾಗಸ್ಯಾದಾವಂತೇ ಚ ವರ್ತಮಾನೇ ಆದ್ಯಾ ಚಾಂತ್ಯಾ ಚೇತಿ ವಿವಕ್ಷಾಯಾಮೇಕಶೇಷೇಣಾಂತ್ಯೇ ಇತಿ ಭವತಿ। ಯಥಾ ಮಾತಾ ಚ ಪಿತಾ ಚೇತ್ಯತ್ರ ಪಿತರಾವಿತ್ಯೇಕಶೇಷಸ್ತದ್ವತ್। ಆದ್ಯಂತವರ್ತಿತ್ವಂ ಚಾಗ್ನಿರ್ವೈ ದೇವಾನಾಮವಮ ಇತ್ಯತ್ರೈವೋಪಪಾದಿತಂ। ತತ್ತಥಾ ಸತ್ಯಾದ್ಯಂತವರ್ತಿತ್ವೇ ಸತಿ ತಾದೃಶದೇವತಾಕಂ ಪುರೋಡಾಶಂ ನಿರ್ವಪಂತೀತಿ ಯದಸ್ತಿ ತತ್ತೇನ ಯಥೋಕ್ತನಿರ್ವಾಪೇಣಾಂತತೋ ಯಾಗಸ್ಯಾದಾವಂತೇ ಚ ದೇವಾನ್ಸರ್ವಾನೃಧ್ನುವಂತ್ಯೇವ ಪರಿಚರಂತ್ಯೇವ। ತಮೇತಂ ಸಾರ್ಥವಾದಂ ದೀಕ್ಷಣೀಯೇಷ್ಟಿವಿಧಿಂ ತೈತ್ತಿರೀಯಾ ಅಪಿ ವಿಸ್ಪಷ್ಟಮಾಮನಂತಿ—ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದ್ದೀಕ್ಷಿಷ್ಯಮಾಣೋಽಗ್ನಿಃ ಸರ್ವಾ ದೇವತಾ ವಿಷ್ಣುರ್ಯಜ್ಞೋ ದೇವತಾಶ್ಚೈವ ಯಜ್ಞಂ ಚಾರಭತೇಽಗ್ನಿರವಮೋ ದೇವಾನಾಂ ವಿಷ್ಣುಃ ಪರಮೋ ಯದಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತಿ ದೇವತಾ ಏವೋಭಯತಃ ಪರಿಗೃಹ್ಯ ಯಜಮಾನೋಽವರುನ್ಧೇ॥ ಇತಿ**

ಅಗ್ನಿ ವಿಷ್ಣು ಎಂಬ ಯಾವ ಎರಡು ದೇವತೆಗಳಿರುವರೋ ಅವರು ಯಜ್ಞದ ಎರಡು ತುದಿಗಳು ಎಂದರೆ ಮೊದಲು ಮತ್ತು ಕೊನೆ. ಆದ್ದರಿಂದ ಈ ಎರಡು ದೇವತೆಗಳಿಗೆ ಪುರೋಡಾಶವನ್ನು ಅರ್ಪಿಸುವುದರಿಂದ ಯಜ್ಞದಲ್ಲಿ ನಿರ್ದಿಷ್ಟರಾಗಿರುವ ಎಲ್ಲಾ ದೇವತೆಗಳನ್ನೂ ಸೇವಿಸಿದಂತೆ ಎಂದರೆ ತೃಪ್ತಿಪಡಿಸಿದಂತೆ ಆಗುವುದು.

ಅಗ್ನಿವಿಷ್ಣುಗಳು ಸಮಸ್ತದೇವತೆಗಳ ಸ್ವರೂಪವೆಂದು ಹಿಂದೆ ಹೇಳಿರುವ ವಿಷಯವನ್ನೇ ಮತ್ತೆ ಬೇರೆ ವಿಧವಾಗಿ ತಿಳಿಸುವರು. ಅಗ್ನಿ ಮತ್ತು ವಿಷ್ಣು ಎಂಬ ಎರಡು ದೇವತೆಗಳಿಗೆ ಇರುವ ಎರಡು ಶರೀರಗಳು ಯಜ್ಞದ ಎರಡು ತುದಿಗಳು ಎಂದರೆ ಅಗ್ನಿಯು ಮೊದಲನೆಯ ತುದಿಯು, ವಿಷ್ಣುವು ಕೊನೆಯ ತುದಿಯು ಎಂದರೆ ಆದ್ಯಂತಗಳು. ವಾಕ್ಯದಲ್ಲಿ **ಅಂತ್ಯೆ** ಎಂಬ ಶಬ್ದಕ್ಕೆ ಕೊನೆಯ ಎಂಬ ಅರ್ಥಮಾತ್ರವೇ ಅಲ್ಲ ಮೊದಲು ಮತ್ತು ಕೊನೆಗಳು—**ಆದ್ಯಶ್ಚ ಅಂತ್ಯಶ್ಚ - ಅಂತ್ಯೇ** ಎಂದು ವಿಗ್ರಹವು. ಸಂಸ್ಕೃತದಲ್ಲಿ ಇಂತಹ ಪ್ರಯೋಗಗಳು ಅಲ್ಲಲ್ಲಿ ಕಂಡುಬರುವುವು. **ಮಾತಾ ಚ ಪಿತಾ ಚ=ಪಿತರೌ** ಎನ್ನುವ ಹಾಗೆ ಎಂದು ಭಾಷ್ಯಕಾರರು, ವಿವರಿಸಿದಾರೆ. ಸೋಮಯಾಗದ ಮೊದಲನೆಯ ಮತ್ತು ಕೊನೆಯ ತುದಿಗಳಲ್ಲಿ ಈ ಅಗ್ನಿ ವಿಷ್ಣು ಎಂಬ ದೇವತೆಗಳು ಯಜ್ಞರಕ್ಷಕರಾಗಿ ಇರುವುದರಿಂದ ಇವರಿಬ್ಬರನ್ನೂ ಒಟ್ಟಿಗೆ ಉದ್ದೇಶಿಸಿ ಅರ್ಪಿಸುವ ಪುರೋಡಾಶವು ಇತರ ಸಮಸ್ತ ದೇವತೆಗಳನ್ನು ಸೇವಿಸುತ್ತದೆ ಎಂದರೆ ತೃಪ್ತಿಪಡಿಸುತ್ತದೆ ಎಂದಭಿಪ್ರಾಯವು. ಈ ವಿಷಯದಲ್ಲಿ ಕೃಷ್ಣ ಯಜುರ್ವೇದದ ತೈತ್ತರೀಯಸಂಹಿತೆಯಲ್ಲಿ ಈರೀತಿ ಸ್ಪಷ್ಟವಾಗಿ ಹೇಳಿದೆ—**ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದ್ದೀಕ್ಷಿಷ್ಯಮಾಣೋಽಗ್ನಿಃ ಸರ್ವಾ ದೇವತಾ ವಿಷ್ಣುರ್ಯಜ್ಞೋ ದೇವತಾಶ್ಚೈವ ಯಜ್ಞಂ ಚಾರಭತೇಽಗ್ನಿರವಮೋ ದೇವಾನಾಂ ವಿಷ್ಣುಃ ಪರಮೋ ಯದಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತಿ ದೇವತಾ ಏವೋಭಯತಃ ಪರಿಗೃಹ್ಯ ಯಜಮಾನೋಽವರುನ್ಧೇ** (ತೈ.ಸಂ. ೫-೫-೧-೪)—ಎಂದರೆ ಸೋಮಯಾಗಗಳಲ್ಲಿ ದೀಕ್ಷೆಯನ್ನು ಕೈಗೊಳ್ಳುವ ಯಜಮಾನನು ದೀಕ್ಷಾಕಾಲದಲ್ಲಿ ಎಂದರೆ ದೀಕ್ಷಣೀಯೇಷ್ಟಿಯಲ್ಲಿ ಅಗ್ನಿವಿಷ್ಣು ಎಂಬ ದೇವತೆಗಳನ್ನುದ್ದೇಶಿಸಿ ಆಗ್ನಾವೈಷ್ಣವಂ ಎಂಬ ಹನ್ನೊಂದು ಕಪಾಲಗಳಮೇಲೆ ಬೇಯಿಸಿದ ಪುರೋಡಾಶವನ್ನು ಅರ್ಪಿಸಬೇಕು. ಏಕೆಂದರೆ ಅಗ್ನಿಯು ಸಮಸ್ತದೇವತಾಸ್ವರೂಪನು, ವಿಷ್ಣುವು ಸಮಸ್ತ ದೇವತಾಸ್ವರೂಪನು ಮತ್ತು ಯಜ್ಞಸ್ವರೂಪನು. ಈ ಇಬ್ಬರು ದೇವತೆಗಳನ್ನು ತೃಪ್ತಿಪಡಿಸಿ ಯಜಮಾನನು ಯಜ್ಞವನ್ನು ಆರಂಭಿಸಬೇಕು. ಏಕೆಂದರೆ ಅಗ್ನಿಯು ಯಜ್ಞದ ಮೊದಲನೆಯ ತುದಿಯು

(one end) ವಿಷ್ಣುವು ಕೊನೆಯ ತುದಿಯು (other end) ಆದ್ದರಿಂದ ದೇವತೆಗಳ ಗುಂಪಿನ ಎರಡು ತುದಿಗಳನ್ನು ಹಿಡಿದು ಪುರೋಡಾಶವನ್ನು ಅರ್ಪಿಸುವುದರಿಂದ ಯಜ್ಞದ ಸಮಸ್ತ ದೇವತೆಗಳನ್ನು ಯಜಮಾನನು ತೃಪ್ತಿಪಡಿಸಿದಂತಾಗುವುದು ಎಂದು ಮುಖ್ಯಾಭಿಪ್ರಾಯವು.

**ತದಾಹುರ್ಯದೇಕಾದಶಕಪಾಲಃ ಪುರೋಳಾಶೋ ದ್ವಾವಗ್ನಾವಿಷ್ಣೂ ಕೈನಯೋಸ್ತತ್ರ ಕ್ಲೃಪ್ತಿಃ ಕಾ ವಿಭಕ್ತಿರಿತಿ ॥**

ಇದಾನೀಂ ಯಥೋಕ್ತವಿಧೌ ಬ್ರಹ್ಮವಾದಿಚೋದ್ಯಮುದ್ಭಾವಯತಿ । ತತ್ರ ತತ್ರ ಕಪಾಲಸಂಖ್ಯಾಯಾಂ ಬ್ರಹ್ಮವಾದಿನ ಆಹುಶ್ಚೋದಯಂತಿ । ಏಕಾದಶಸು ಕಪಾಲೇಷು ಸಂಸ್ಕೃತಃ ಪುರೋಡಾಶ ಏಕನೇವ ದ್ರವ್ಯಂ ತಸ್ಯ ಭೋಕ್ತಾರೌ ದ್ವೌ ದೇವೌ । ಏನಯೋರ್ದ್ವಯೋಃ ಸಮಪ್ರಧಾನತ್ವೇನ ವಿಷಮಾಂಶಸ್ಯಾಯುಕ್ತತ್ವಾತ್ತತ್ರ ದ್ರವ್ಯೇ ಕಾ ಕ್ಲೃಪ್ತಿರ್ವಿಭಾಗಕಲ್ಪನಾನಿಮಿತ್ತಂ ಕಿಂ ಸ್ಯಾತ್ಕಾವಿಭಕ್ತಿರ್ನಿಮಿತ್ತವಿಶೇಷಾಭಾವೇ ನೈಮಿತ್ತಿಕೋ ವಿಭಾಗವಿಶೇಷಃ ಕಥಂ ಘಟೇತ । ಇತಿಶಬ್ದಶ್ಚೋದ್ಯಸಮಾಪ್ತ್ಯರ್ಥಃ ॥



(ಯಜ್ಞಾನುಷ್ಠಾನಕರ್ತರು) ಈರೀತಿ ಹೇಳುತ್ತಾರೆ—ಈ ಆಹುತಿಯಲ್ಲಿ ಹನ್ನೊಂದು ಕಪಾಲಗಳಮೇಲೆ ಬೇಯಿಸಿದ ಪುರೋಡಾಶವನ್ನು ಅರ್ಪಿಸುವರು. ದೇವತೆಗಳು ಮಾತ್ರ ಇಬ್ಬರೇ. ಅಗ್ನಿ ಮತ್ತು ವಿಷ್ಣು ಎಂದು. ಆದ್ದರಿಂದ ಈ ಹನ್ನೊಂದು ಕಪಾಲಗಳ ಪುರೋಡಾಶವು ಈ ಇಬ್ಬರು ದೇವತೆಗಳಲ್ಲಿ ಯಾವರೀತಿ ಹಂಚಿಕೆಯಾಗಬೇಕು?

ಬ್ರಹ್ಮವಾದಿಗಳು, ಎಂದರೆ ಅಧ್ಯಾತ್ಮವಾದಿಗಳು ಯಜ್ಞಾನುಷ್ಠಾನಕುಶಲರು ಈ ವಿಷಯವನ್ನು ಚರ್ಚಿಸುವಾಗ ಈರೀತಿ ಹೇಳುವರು. ಈ ಆಗ್ನಾವೈಷ್ಣವವೆಂಬ ಆಹುತಿಯು ಹನ್ನೊಂದು ಕಪಾಲಗಳಮೇಲೆ ಬೇಯಿಸಲ್ಪಟ್ಟು ಸಂಸ್ಕರಿಸಲ್ಪಟ್ಟು ಸಿದ್ಧವಾಗಿದೆಯಷ್ಟೆ. ಇದೆಲ್ಲವೂ ಒಂದೇ ಆಹುತಿಯಲ್ಲಿ ಇಬ್ಬರು ದೇವತೆಗಳನ್ನು ಉದ್ದೇಶಿಸಿ ಅರ್ಪಿಸಲ್ಪಡಬೇಕು. ಇಲ್ಲಿ ಹೋಮದ್ರವ್ಯವಾದ ಪುರೋಡಾಶವು ಒಂದೇ, ಆಹುತಿಯೂ ಒಂದೇ. ಆದರೆ ದೇವತೆಗಳು ಮಾತ್ರ ಇಬ್ಬರಿರುವರು. ಮತ್ತು ಇಲ್ಲಿ ಹನ್ನೊಂದು ಎಂಬ ವಿಷಮಸಂಖ್ಯೆಯ (odd) ಕಪಾಲಗಳಿರುವುದರಿಂದ ಇಬ್ಬರಿಗೂ ಸಮನಾಗಿ ಹಂಚುವಂತಿಲ್ಲ. ಆದ್ದರಿಂದ ಈ ಅಗ್ನಿ ಮತ್ತು ವಿಷ್ಣು ಎಂಬ ದೇವತೆಗಳಲ್ಲಿ ಯಾರಾರಿಗೆ ಎಷ್ಟೆಷ್ಟು ಕಪಾಲಗಳು ಎಂಬ ಹಂಚಿಕೆಯು ಹೇಗಾಗಬೇಕು? ಅಗ್ನಿಗೆ ಎಷ್ಟು? ವಿಷ್ಣುವಿಗೆ ಎಷ್ಟು? ಇಲ್ಲಿ ಇತಿ ಶಬ್ದಪ್ರಯೋಗವು ಸಂದೇಹವನ್ನೂ ಅದರ ವಿಮರ್ಶೆಯನ್ನೂ ವ್ಯಕ್ತಪಡಿಸುವುದು.

**ಅಷ್ಟಾಕಪಾಲ ಆಗ್ನೇಯೋಽಷ್ಟಾಕ್ಷರಾ ವೈ ಗಾಯತ್ರೀ ಗಾಯತ್ರಮಗ್ನೇಶ್ಛಂದಸ್ತ್ರಿಕಪಾಲೋ ವೈಷ್ಣವಸ್ತ್ರಿರ್ಹೀದಂ ವಿಷ್ಣುರ್ವ್ಯಕ್ರಮತ ಸೈನಯೋಸ್ತತ್ರ ಕ್ಲೃಪ್ತಿಃ ಸಾ ವಿಭಕ್ತಿಃ ॥**

ಬ್ರಹ್ಮವಾದಿಷ್ವೇವ ಮಧ್ಯೇಽಭಿಜ್ಞಾನಾಂ ಚೋದ್ಯಪರಿಹಾರಮುದ್ಭಾವಯತಿ–ಅಷ್ಟಸು ಕಪಾಲೇಷು ಸಂಸ್ಕೃತಃ ಪುರೋಡಾಶಭಾಗೋಽಗ್ನೇಃ ಸಂಬಂಧೀ । ಸ ಚ ಸಂಬಂಧಶ್ಛಂದೋದ್ವಾರಾ ದ್ರಷ್ಟವ್ಯಃ । ಗಾಯತ್ರಾಖ್ಯಂ ಛಂದೋಽಗ್ನೇಃ ಸಂಬಂಧಿ ತಯೋರಗ್ನಿಗಾಯತ್ರ್ಯೋಃ ಪ್ರಜಾಪತಿಮುಖಜನ್ಯತ್ವಸಾಮ್ಯಾತ್ । ಏತಚ್ಚ ಮುಖಜನ್ಯತ್ವಂ ತೈತ್ತಿರೀಯಾಃ ಸಪ್ತಮಕಾಂಡೇ

ಪಠಂತಿ--“ ಪ್ರಜಾಪತಿರಕಾಮಯತ ಪ್ರಜಾಯೇಯೇತಿ ಸ ಮುಖತಸ್ತ್ರಿವೃತಂ ನಿರಮಿಮಿತ ತಮಗ್ನಿರ್ದೇವತಾನ್ವಸೃಜ್ಯತ ಗಾಯತ್ರೀಛಂದಃ ” ಇತಿ। ತಸ್ಮಾಚ್ಚ ಗಾಯತ್ರ್ಯಾಃ ಪಾದಾಕ್ಷರೇಷ್ವಷ್ಟತ್ವಂ ಸಂಖ್ಯಾ ದೃಶ್ಯತೇ । ಸೋಽಯಂ ಯಥೋಕ್ತಪುರೋಡಾಶಭಾಗಸ್ಯಾಗ್ನೇಶ್ಚ ಸಂಬಂಧಃ। ತ್ರಿಷು ಕಪಾಲೇಷು ಸಂಸ್ಕೃತಃ ಪುರೋಡಾಶಭಾಗೋ ವಿಷ್ಣೋಃ ಸಂಬಂಧೀ। ಹಿ ಯಸ್ಮಾತ್ಕಾರಣಾದ್ವಿಷ್ಣುರಿದಂ ಸರ್ವಂ ಜಗತ್ತ್ರಿರ್ವ್ಯಕ್ರಮತ ತ್ರಿರಾವೃತ್ತೇನ ಸ್ವಕೀಯಪಾದವಿಕ್ಷೇಪೇಣ ವ್ಯಾಪ್ತವಾನ್ । ತಥಾ ಚ ಮಂತ್ರ ಆಮ್ನಾಯತೇ—ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ (ಋ.ಸಂ. ೧-೨೨-೧೭) ಇತಿ । ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ (ಋ.ಸಂ. ೧-೨೨-೧೮) ಇತಿ ಚ । ಸಾ ಯಥೋಕ್ತಾಷ್ಟತ್ವಸಂಖ್ಯಾ ತ್ರಿತ್ವಸಂಖ್ಯಾ ಚೈನಯೋರ್ದೇವತಯೋಸ್ತತ್ರ ಪುರೋಡಾಶೇ ಕ್ಲೃಪ್ತಿರ್ವಿಭಾಗಕಲ್ಪನಾಹೇತುಃ। ತದನುಸಾರೇಣ ವಿಭಕ್ತಿಸ್ತಾದೃಶೋ ವಿಭಾಗೋಽವಗಂತವ್ಯಃ ॥

ಎಂಟು ಕಪಾಲಗಳಲ್ಲಿ ಸಂಸ್ಕರಿಸಲ್ಪಟ್ಟ ಪುರೋಡಾಶವು ಅಗ್ನಿಗೆ ಸೇರಬೇಕು. ಏಕೆಂದರೆ, ಗಾಯತ್ರೀಛಂದಸ್ಸಿನ ಪಾದದಲ್ಲಿ ಎಂಟಕ್ಷರಗಳಿರುವವು. ಗಾಯತ್ರೀಛಂದಸ್ಸು ಅಗ್ನಿಗೆ ಸಂಬಂಧಪಟ್ಟದ್ದು. ವಿಷ್ಣುವಿಗೆ ಮೂರು ಕಪಾಲಗಳಮೇಲೆ ಸಂಸ್ಕರಿಸಲ್ಪಟ್ಟ ಪುರೋಡಾಶವು ಸೇರಬೇಕು. ಏಕೆಂದರೆ ವಿಷ್ಣುವು ವಿಶ್ವವನ್ನು ಮೂರು ಪಾದವಿಕ್ಷೇಪಗಳಿಂದ ಅತಿಕ್ರಮಿಸಿರುವನು. ಆದ್ದರಿಂದ ಹನ್ನೊಂದು ಕಪಾಲಗಳನ್ನು ಈರೀತಿ ವಿಭಾಗಿಸಿ ಹಂಚಬೇಕು.

ಅನುವಾದ---ಬ್ರಹ್ಮವಾದಿಗಳೂ ಯಜ್ಞಾನುಷ್ಠಾನಕುಶಲರೂ ಆದ ಪರಿಣಿತರ ಮಧ್ಯದಲ್ಲಿ ಈ ವಿಷಯವು ಈರೀತಿ ನಿಶ್ಚಯಿಸಲ್ಪಟ್ಟಿರುವುದು. ಹನ್ನೊಂದು ಕಪಾಲಗಳಲ್ಲಿ ಅಗ್ನಿಗೆ ಎಂಟು ಕಪಾಲಗಳಮೇಲೆ ಸಂಸ್ಕರಿಸಲ್ಪಟ್ಟ ಪುರೋಡಾಶವೂ ವಿಷ್ಣುವಿಗೆ ಮೂರು ಕಪಾಲಗಳಮೇಲೆ ಸಂಸ್ಕರಿಸಲ್ಪಟ್ಟ ಪುರೋಡಾಶವೂ ಸೇರಬೇಕು. ಏಕೆಂದರೆ, ಅಗ್ನಿಗೂ ಗಾಯತ್ರಿಛಂದಸ್ಸಿಗೂ ಒಂದು ವಿಧವಾದ ಸಂಬಂಧವಿರುವುದು. ಗಾಯತ್ರೀಛಂದಸ್ಸಿನ ಪಾದಗಗಳಲ್ಲಿ ಎಂಟೆಂಟು ಅಕ್ಷರಗಳಿರುವುದರಿಂದ ಎಂಟು ಕಪಾಲಗಳ ಸಂಬಂಧವು ಅಗ್ನಿಗಿರುವುದು. ಅಗ್ನಿಗೂ ಗಾಯತ್ರಿಗೂ ಸಂಬಂಧವೇನು, ಎಂದರೆ—ಪ್ರಜಾಪತಿರಕಾಮಯತ ಪ್ರಜಾಯೇಯೇತಿ ಸ ಮುಖತಸ್ತ್ರಿವೃತಂ ಸಿರಮಿಮಿತ ತಮಗ್ನಿರ್ದೇವತಾನ್ವಸೃಜತ ಗಾಯತ್ರೀಛಂದಃ (ತೈ. ಸಂ. ೭-೧-೧-೪) ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ. ಎಂದರೆ ಪೂರ್ವದಲ್ಲಿ ಪರಮೇಶ್ವರನಾದ ಪ್ರಜಾಪತಿಯು ಸೃಷ್ಟಿಮಾಡಬೇಕೆಂದು ಅಪೇಕ್ಷಿಸಿ ಮೊದಲು ತನ್ನ ಮುಖದಿಂದ ತ್ರಿವೃತ್ ಎಂಬ ಸ್ತೋಮವನ್ನೂ ಅನಂತರ ಅಗ್ನಿಯನ್ನೂ ಬಳಿಕ ಗಾಯತ್ರೀ ಛಂದಸ್ಸನ್ನೂ ಸೃಷ್ಟಿಮಾಡಿದನು. [ಸ್ತೋಮಗಳಲ್ಲಿ ತ್ರಿವೃತ್ಸ್ತೋಮ, ಪಂಚದಶಸ್ತೋಮ, ಸಪ್ತದಶಸ್ತೋಮ, ಏಕವಿಂಶ ಸ್ತೋಮ, ತ್ರಿಣವಸ್ತೋಮ, ತ್ರಯಸ್ತ್ರಿಂಶಸ್ತೋಮ, ಚತುರ್ವಿಂಶಸ್ತೋಮ, ಚತುಶ್ಚತ್ವಾರಿಂಶಸ್ತೋಮ, ಅಷ್ಟಾಚತ್ವಾರಿಂಶ ಸ್ತೋಮ ಎಂದು ಒಂಭತ್ತುವಿಧ ಸ್ತೋಮಗಳಿರುವವು. ಸ್ತೋಮವೆಂದರೆ ಸ್ತೋತ್ರವೆಂದು ಸ್ಥೂಲಾರ್ಥವು. ಪ್ರತಿಯೊಂದು ಸ್ತೋಮದಲ್ಲಿಯೂ ಪರ್ಯಾಯ, ವಿಷ್ಟುತಿ ಎಂಬ ಅನೇಕ ಭಾಗಗಳಿರುವವು. ತ್ರಿವೃತ್ಸ್ತೋಮದಲ್ಲಿ ಒಟ್ಟು ೯ ಋಕ್ಕುಗಳೂ ಇತರ ಸ್ತೋಮಗಳಲ್ಲಿ ಅವುಗಳು ತಿಳಿಸುವ ಸಂಖ್ಯೆಯಂತೆ ಕ್ರಮವಾಗಿ ೧೫, ೧೭, ೨೧, ೨೭, ೩೩, ೨೪, ೪೪, ೪೮ ಋಕ್ಕುಗಳಿರುವವು. ಈ ಸ್ತೋಮಗಳಲ್ಲಿ ಋಕ್ಕುಗಳನ್ನು ಪಠಿಸುವ ಕ್ರಮವು ಬೇರೆಬೇರೆ ವಿಧವಾಗಿರುವವು. ಇವು ಸಾಮವೇದದ ತಾಂಡ್ಯಬ್ರಾಹ್ಮಣದಲ್ಲಿ ವಿವರಿಸಲ್ಪಟ್ಟಿರುವುದನ್ನು ನಾವು, ಋ. ಸಂ. ಭಾಗ ೨ ಪುಟ ೧೩೭-೧೪೯ ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.] ತ್ರಿವೃತ್ಸ್ತೋಮವೂ ಅಗ್ನಿಯೂ ಗಾಯತ್ರಿಛಂದಸ್ಸೂ ಪ್ರಜಾಪತಿಯ ಮುಖದಿಂದ (ಒಂದೇ ಅವಯವದಿಂದ)

ಉತ್ಪನ್ನವಾದುದರಿಂದ ಅಗ್ನಿಗೂ ಗಾಯತ್ರಿಗೂ ಸಂಬಂಧವಿದ್ದಂತಾಯಿತು. ಆದ್ದರಿಂದ ಅಗ್ನಿಗೆ ಗಾಯತ್ರಿಯು ಸ್ವಕೀಯ ಛಂದಸ್ಸಾಯಿತು. ಇದರಲ್ಲಿ ಎಂಟು ಅಕ್ಷರಗಳಿರುವುದರಿಂದ ಅಗ್ನಿಗೆ ಎಂಟು ಕಪಾಲಗಳಮೇಲೆ ಸಂಸ್ಕಾರಿಸಲ್ಪಡುವ ಪುರೋಡಾಶವನ್ನು ಅರ್ಪಿಸುವುದು ಸಹಜವಾಗಿದೆ. ಇನ್ನು ವಿಷ್ಣುವಿನ ವಿಷಯದಲ್ಲಿ ಮೂರು ಕಪಾಲಗಳಮೇಲೆ ಸಂಸ್ಕೃತವಾದ ಪುರೋಡಾಶವನ್ನು ಅರ್ಪಿಸುವುದಕ್ಕೆ ಕಾರಣವಿದೆಯೇ, ಎಂದರೆ ಇದೆ. ವಿಷ್ಣುವು (ತ್ರಿವಿಕ್ರಮ ಅವತಾರಕಾಲದಲ್ಲಿ) ಈ ಜಗತ್ತೆಲ್ಲವನ್ನು ತನ್ನ ಮೂರು ಪಾದವಿಕ್ಷೇಪಗಳಿಂದ ಆಕ್ರಮಣ ಮಾಡಿದನು ಎಂದು **ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ** (ಋ. ಸಂ. ೧-೨೨-೧೭) ಮತ್ತು **ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ** (ಋ. ಸಂ. ೧-೨೨-೧೮) ಎಂಬ ಋಕ್ಕುಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಆದರೆ ಇಲ್ಲಿ ವಿಷ್ಣುವು ಯಾರು, ಅವನ ಸ್ವರೂಪವೇನು, ಅವನು ಹೇಗೆ ಈ ಜಗತ್ತನ್ನು ಮೂರು ಪಾದವಿಕ್ಷೇಪಗಳಿಂದ ಆಕ್ರಮಿಸಿದನು ಎಂಬ ವಿಷಯದಲ್ಲಿ ವೇದಸಾಹಿತ್ಯದಲ್ಲಿರುವ ವಿವರಣೆಗೂ, ಪುರಾಣಾದಿಗಳಲ್ಲಿರುವ ವಿವರಣೆಗೂ ಬಹಳ ವ್ಯತ್ಯಾಸವಿದೆ. ಮೊದಲು ವೇದದಲ್ಲಿ ಉಕ್ತವಾಗಿರುವ ವಿಷಯವನ್ನು ವಿಮರ್ಶಿಸೋಣ. ಯಾಸ್ಕಮಹರ್ಷಿಯು ಮೇಲೆ ಹೇಳಿದ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಋಕ್ಕಿಗೆ ನಿರ್ವಚನವನ್ನು ಈರೀತಿ ಹೇಳಿದ್ದಾರೆ—

> **ವಿಷ್ಣುಃ । ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ, ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ** (ನಿ. ೧೨-೧೮)

ವಿಷ್ಣುಶಬ್ದಕ್ಕೆ ಈರೀತಿ ಅರ್ಥವನ್ನು ವಿವರಿಸಿರುವರು—

> **ಯದಾ ವಿಷಿತಃ ವ್ಯಾಪ್ತೋಽಯಮೇವ ಸೂರ್ಯೋ ರಶ್ಮಿಭಿಃ ಭವತಿ ತದಾ ವಿಷ್ಣುರ್ಭವತಿ । ವಿಶತೇರ್ವಾ ಯದಾ ವಿಷ್ಟಃ ಪ್ರವಿಷ್ಟಃ ಸರ್ವತೋ ರಶ್ಮಿಭಿರ್ಭವತಿ ತದಾ ವಿಷ್ಣುರ್ಭವತಿ । ವ್ಯಶ್ನೋತೇರ್ವಾ ವಿಪೂರ್ವಸ್ಯ ವಾಶ್ನೋತೇಃ ಯದಾ ರಶ್ಮಿಭಿರತಿಶಯೇನಾಯಂ ವ್ಯಾಪ್ತೋ ಭವತಿ ವ್ಯಾಪ್ನೋತಿ ವಾ ರಶ್ಮಿಭಿರಯಂ ಸರ್ವಂ ತದಾ ವಿಷ್ಣುರಾದಿತ್ಯೋ ಭವತಿ ॥**

ಎಂದರೆ ಸೂರ್ಯನು ತನ್ನ ರಶ್ಮಿಗಳಿಂದ (ಕಿರಣಗಳಿಂದ) ಯಾವಾಗ ಸಮಸ್ತವನ್ನೂ ವ್ಯಾಪ್ತವನ್ನಾಗಿ ಮಾಡುವನೋ ಆಗ ವಿಷ್ಣುವೆಂದು ಹೇಳಲ್ಪಡುವನು; ಅಥವಾ ರಶ್ಮಿಗಳ ಮೂಲಕ ಎಲ್ಲವನ್ನು ಪ್ರವೇಶಿಸುವುದರಿಂದ ವಿಷ್ಣುವೆಂದು ಹೇಳಲ್ಪಡುವನು; ಅಥವಾ ರಶ್ಮಿಗಳಿಂದ ಅತಿಶಯವಾಗಿ ಎಲ್ಲವನ್ನೂ ವ್ಯಾಪಿಸಿ ಪ್ರಕಾಶಿಸುವುದರಿಂದ ಆದಿತ್ಯನೇ ವಿಷ್ಣುವೆಂದು ಹೇಳಲ್ಪಡುವನು. ಮತ್ತು

> **ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಳ್ಹಮಸ್ಯ ಪಾಂಸುರೇ** (ಋ.ಸಂ. ೧-೨೨-೧೭) **। ಯದಿದಂ ಕಿಂಚ ತದ್ವಿಕ್ರಮತೇ ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ । ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ । ಸಮೂಳ್ಹಮಸ್ಯ ಪಾಂಸುರೇ ಪ್ಯಾಯನೇಽನ್ತರಿಕ್ಷೇ ಪದಂ ನ ದೃಶ್ಯತೇ । ಅಪಿ ವೋಪಮಾರ್ಥೇ ಸ್ಯಾತ್ ಸಮೂಳ್ಹಮಸ್ಯಪಾಂಸುಲ ಇವ ಪದಂ ನ ದೃಶ್ಯತ ಇತಿ । ಪಾಂಸವಃ ಪಾದೈಃ ಸೂಯಂತ ಇತಿ ವಾ, ಪನ್ನಾಃ ಶೇರತ ಇತಿ ವಾ, ಪಿಂಶನೀಯಾ ಭವಂತೀತಿ ವಾ ॥** (ನಿ. ೧೨-೧೯)

ವಿಷ್ಣುಶಬ್ದಾರ್ಥಪ್ರತಿಪಾದನೆಗಾಗಿ **ಇದಂ ವಿಷ್ಣುರ್ವಿಚಕ್ರಮೇ** ಎಂಬ ಋಕ್ಕನ್ನೇ ಉದಾಹರಣೆಯನ್ನಾಗಿ ಕೊಟ್ಟು ಅದರ ಅರ್ಥವಿವರಣೆ ಮಾಡಿರುವರು—

ವಿಷ್ಣುವು (ಆದಿತ್ಯನು) ಈ ಜಗತ್ತನ್ನು ಮೂರು ವಿಧವಾಗಿ ಭಾಗಿಸುವುದಕ್ಕಾಗಿ ಮೂರು ಪಾದಗಳನ್ನು ಇಟ್ಟ ಪೃಥಿವೀ ಅಂತರಿಕ್ಷ ಸ್ವರ್ಗಗಳೆಂಬ ಮೂರು ಭಾಗಗಳನ್ನಾಗಿ ವಿಂಗಡಿಸುವುದಕ್ಕಾಗಿ ಮೂರು ಪಾದವಿಕ್ಷೇಪ ಮಾಡಿರುವನು ಎಂದು ಶಾಕಪೂಣಿ ಎಂಬ ಆಚಾರ್ಯರ ಮತವು. ಹೇಗೆಂದರೆ, ಭೂಮಿಯಮೇಲೆ ರಶ್ಮಿಗಳ ಮೂಲಕವೂ, ಅಂತರಿಕ್ಷದಲ್ಲಿ ವಿದ್ಯುತ್ತಿನ (ಮಿಂಚಿನ) ಮೂಲಕವೂ, ಸ್ವರ್ಗದಲ್ಲಿ ಸೂರ್ಯಮಂಡಲದ ಮೂಲಕವೂ ಪ್ರಕಟವಾಗುವುದರಿಂದ ತ್ರೇಧಾ ಎಂದರೆ ಮೂರು ವಿಧವಾಗಿ ಪಾದವಿಕ್ಷೇಪಮಾಡಿರುವನು.

ಸೂರ್ಯನು ಪ್ರಾತಃಕಾಲದಲ್ಲಿ ಉದಯಿಸುವಾಗ (ಸಮಾರೋಹಣೇ) ಉದಯಗಿರಿಯಲ್ಲಿಯೂ, ಮಧ್ಯಾಹ್ನದಲ್ಲಿ (ವಿಷ್ಣುಪದೇ) ಅಂತರಿಕ್ಷದಲ್ಲಿಯೂ ಸಾಯಂಕಾಲದಲ್ಲಿ (ಗಯಶಿರಸಿ) ಅಸ್ತಮಾನಪರ್ವತದಲ್ಲಿಯೂ ಕಾಣಲ್ಪಡುವುದರಿಂದ **ತ್ರೇಧಾ ನಿಧದೇ ಪದಂ** ಎಂಬುದಕ್ಕೆ ಇದೇ ಅರ್ಥವೆಂದು ಔರ್ಣವಾಭನೆಂಬುವರು ಅಭಿಪ್ರಾಯಪಡುವರು. **ಸಮೂಳ್ಹಮಸ್ಯ ಪಾಂಸುರೇ** ಎಂದರೆ ಅಂತರಿಕ್ಷದಲ್ಲಿ ಮಧ್ಯಂದಿನಪದವಾದ ವಿದ್ಯುತ್ತು ಯಾವಾಗಲೂ ಕಾಣಿಸದೆ ಅಂತರ್ಹಿತವಾಗಿರುವು ದೆಂದರ್ಥವು ಅಥವಾ ಧೂಳಿನಿಂದ ಮುಚ್ಚಲ್ಪಟ್ಟ ವಸ್ತುವು (ಅಥವಾ ಹೆಜ್ಜೆಯ ಗುರುತು) ಯಾವರೀತಿ ಕಾಣಿಸುವುದಿಲ್ಲವೋ ಅದರಂತೆ ಎಂದು ಉಪಮಾರ್ಥವನ್ನು ಬೇಕಾದರೂ ಹೇಳಬಹುದು.

ಮೇಲೆ ಹೇಳಿದ ವಿಷಯಗಳೆಲ್ಲಾ ಯಾಸ್ಕಮಹರ್ಷಿಯ ವಿವರಣೆಗಳು. ಪುರಾಣಾದಿಗ್ರಂಥಗಳಲ್ಲಿ ವಿಷ್ಣುವಿಗೆ ಒಂದು ಪ್ರಾಮುಖ್ಯವಾದ ಸ್ಥಾನವಿದೆ. ಸಮಸ್ತ ವಿಶ್ವವನ್ನೂ ವ್ಯಾಪಿಸಿರುವುದರಿಂದ ವಿಷ್ಣುವನ್ನು ಪರಮೇಶ್ವರನೆಂದೂ ಪರಬ್ರಹ್ಮನೆಂದೂ ಹೇಳುವರು ಅಥವಾ ಜಗದುತ್ಪತ್ತಿಸ್ಥಿತಿಲಯಗಳನ್ನು ನಡೆಸುವ ಬ್ರಹ್ಮವಿಷ್ಣುಮಹೇಶ್ವರರೆಂಬ ತ್ರಿಮೂರ್ತಿಗಳಲ್ಲಿ ವಿಷ್ಣುವು ಒಬ್ಬನಾಗಿ ಜಗತ್ತನ್ನು ಪಾಲಿಸುವನೆಂದು ಪ್ರಸಿದ್ಧಿಯು. ಈ ಜಗತ್ಪಾಲನಕಾರ್ಯಕ್ಕಾಗಿ ವಿಷ್ಣುವು ಅನೇಕ ಅವತಾರಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆಯುಂಟಾದುದರಿಂದ ಆ ಅವತಾರಗಳಲ್ಲಿ ಒಂದಾದ ವಾಮನ ಅಥವಾ ತ್ರಿವಿಕ್ರಮಾವತಾರವೇ ಈ ಋಕ್ಕಿನಲ್ಲಿ ವರ್ಣಿತವಾಗಿರುವುದೆಂದು ಭಾಷ್ಯಕಾರರ ಮತ್ತು ಇತರ ಪಂಡಿತರ ಅಭಿಪ್ರಾಯವು. ಋಗ್ವೇದದಲ್ಲಿ (ಇತರ ವೇದ ಗಳಲ್ಲಿಯೂ ಸಹ) ವಿಷ್ಣುವಿನ ಅವತಾರಾದಿಗಳು ನಿರ್ದೇಶಿಸಲ್ಪಡದಿರುವುದರಿಂದಲೂ, ವೇದದಲ್ಲಿ ಅಲ್ಲಲ್ಲಿ ಕಂಡುಬರುವ ದೇವತಾ ಕಾರ್ಯಗಳೇ ಪುರಾಣಗಳಲ್ಲಿ ವಿಶೇಷರೀತಿಯಿಂದ ವರ್ಣಿತವಾಗಿರುವುದರಿಂದಲೂ ಪುರಾಣಕಥೆಗಳಿಗೆ ಮೂಲವು ವೇದವೇ ಆಗಿರು ವುದರಿಂದಲೂ ಪುರಾಣಾಂತರ್ಗತವಾದ ಅವತಾರಾದಿಗಳನ್ನು ವೇದಮಂತ್ರಗಳಿಗೆ ಹೊಂದಿಸಿ ಅರ್ಥಮಾಡುವುದು ಸರಿಯಲ್ಲವೆಂದು ಪಾಶ್ಚಾತ್ಯ ಮತ್ತು ಆಧುನಿಕಪಂಡಿತರು ಅಭಿಪ್ರಾಯಪಡುವರು.

ಪುರಾಣಾದಿಗಳಲ್ಲಿರುವ ಕಥೆಯನ್ನನುಸರಿಸಿ ಐತರೇಯಬ್ರಾಹ್ಮಣಕ್ಕೆ ಸುಖಪ್ರದವೆಂಬ ಹೆಸರಿನ ವೃತ್ತಿ (ಟಿಪ್ಪಣಿ, Notes) ಯನ್ನು ಬರೆದಿರುವ ಸದ್ಗುರುಶಿಷ್ಯರೆಂಬುವರು ಈ ವಿಷಯದಲ್ಲಿ ಹೇಳಿರುವರು—

ತ್ರಿಭಿಃ ಪದೈರ್ಜಗದಿದಂ ಪುರಾ ವಿಷ್ಣುರ್ವಿಚಕ್ರಮೇ ।
ಕಥಂ ವಿಷ್ಣೋರ್ವಿಕ್ರಮಣಂ ಬಭೂವ ಸಮಸ್ತಲೋಕೈಕಧುರಂಧರಸ್ಯ ॥
ಅತ್ರೇತಿಹಾಸಂ ಕಥಯಂತಿ ವೃದ್ಧಾಃ ಶಕ್ರೇ ಜಿತೇ ಬಲಿನಾ ತ್ಯಕ್ತರಾಜ್ಯೇ ।
ಅದಿತ್ಯಭಿಪ್ರಾರ್ಥನಯಾ ತು ತಸ್ಯಾಂ ಜಾತೋ ಹರಿರ್ವಾಮನೋ ಲೋಕಭೂತ್ಯೈ ॥
ರೂಪೇಣ ತೇನೈವ ಚ ಶೋಭಮಾನೋ ಯಸ್ಯಾಂಗುಲ್ಯಃ ಷೋಡಶಾಸನ್ ಪ್ರಮಾಣಂ ॥
ದತ್ತೈರ್ವಸಿಷ್ಠಾದಿಮಹರ್ಷಿಭಿಸ್ತು ಯುಕ್ತೋಽಜಿನಾದ್ಯೈಃ ಪ್ರಥಮಾಶ್ರಮಾಂಗೈಃ ।
ಉಚ್ಚೈರ್ವದನ್ ಋಗ್ಯಜುಷಂ ಸಸಾಮ ಸನ್ನಾದಯನ್ ಬ್ರಹ್ಮಘೋಷೇಣ ಲೋಕಾನ್ ॥

ಗತ್ವಾ ಬಲೇರ್ಯಜ್ಞವಾಟಂ ಪ್ರವಿಶ್ಯ ಸ್ತುತ್ವಾ ಯಜ್ಞಮೃತ್ವಿಜೋಽಗ್ನೀನ್ ಸದಸ್ಯಾನ್ ।
ಪದತ್ರಯಂ ಸೋಽಥ ಬಲಿಂ ಯಯಾಚೇ ವಹ್ನೇರೇಕಂ ಸಮಿದರ್ಥಂ ತಥೈಕಂ ।
ಮಮಾಪ್ಯೇಕಮಿತಿ ಸ ಸ್ಮಾಹ ಕಿಂ ತೇ ತ್ರಿಪದ್ಯಾನ್ಯದ್ವಿ ್ರಯತಾಂ ಗೋಧನಾದಿ ।
ತದರ್ಥಿಭ್ಯೋ ದೀಯತಾಮಿತ್ಯನೇನ ಪ್ರೋಕ್ತಃ ಸೋಽಸ್ಮೈ ತ್ರಿಪದಿಮೇವ ಚಾದಾತ್ ॥
ಪಾಣೌ ತೋಯೇ ಪತಿತೇ ವಾಮನೋಽಥ ಭೂತ್ವಾ ಮಹಾನ್ ವ್ಯಕ್ರಮತಾಖಿಲಂ ಸಃ ।
ಸಪಾತಾಲಾ ಪದಮಾದ್ಯಂ ಧರಿತ್ರೀ ದ್ವಿತೀಯಂ ವೈ ಖಂ ತೃತೀಯಂ ಸ್ವರಾದಿ ॥
ಚತುರ್ದಶಂ ಭುವನಾನಿ ಜಿತ್ವಾ ದತ್ವೇಂದ್ರಾಯ ಸುತಲೇ ತಂ ಬಲಿಂ ಚ ।
ವಸೇತ್ಯುಕ್ತ್ವಾ ದೇವವೇದದ್ವಿಜಾಂಶ್ಚ ಯಜ್ಞಾನ್ಸಿತಾನ್ ಕೃತವಾನ್ ವೈ ಪುರೇತಿ ॥
ಅಥಾಪರೇ ವರ್ಣಯಂತೀತಿಹಾಸಮುಭಾ ಜಿಗ್ಯೇತ್ಯಾದಿಕೇ ವಕ್ಷ್ಯಮಾಣಂ ।
ಇಂದ್ರಾವಿಷ್ಣೂ ಯುಧಿ ಜಿತ್ವಾ ತು ದೈತ್ಯಾನವೋಚತಾಮಾಚರಾಮಾತ್ರ ಕ್ಲ್ಪಿಂ ॥
ಯುದ್ಧೇನಾಲಮಿತಿ ಸ ಸ್ಮೇಂದ್ರ ಆಹ ಯಾವದ್ವಿಷ್ಣುರ್ವಿಕ್ರಮತೇ ತ್ರಿರೇಷಃ ।
ತಾವನ್ನೋಽಸ್ತು ಯುಷ್ಮದೀಯಂ ತತೋಽನ್ಯದಿತಿ ಪ್ರೋಕ್ತಂ ತೈಸ್ತಥೇತ್ಯೇವ ದೈತ್ಯೈಃ ॥
ತತೋ ವಿಷ್ಣುರ್ವ್ಯಕ್ರಮತ ತ್ರಿರೇವ ಲೋಕಾನ್ ವೇದಾನ್ ವಾಙ್ಮಯಂ ಚ ತ್ರಿಪದ್ಯಾ ।
ಸರ್ವೇ ಲೋಕಾಃ ಪದಮಾದ್ಯಂ ದ್ವಿತೀಯಂ ಸರ್ವೇ ವೇದಾ ವಾಙ್ಮಯಂ ವೈ ತೃತೀಯಂ ॥
ಏವಂ ವಿಷ್ಣೋರ್ವಿಕ್ರಮಾದ್ದೈತ್ಯಸಂಘೇ ಪರಾಜಿತೇ ತ್ಯಕ್ತವಾಗ್ಲೋಕವೇದೇ ।
ತತೋ ದೇವಾ ವಾಙ್ಮಯಲೋಕವೇದಾನ್ ಲಬ್ಧ್ವಾ ಹೃಷ್ಟಾಃ ಸುಖಮಾಪುಃ ಪುರೇತಿ ।
ಇತ್ಥಂ ವಿಷ್ಣೋರ್ವಿಕ್ರಮಣಂ ಬಭೂವ ಸಮಸ್ತಲೋಕೈಕಧುರಂಧರಸ್ಯ ॥

ಸಮಸ್ತಲೋಕಗಳ ರಕ್ಷಣಾಕಾರ್ಯಭಾರವನ್ನು ವಹಿಸಿರುವ ಶ್ರೀ ವಿಷ್ಣುವು ಮೂರು ಪಾದವಿಕ್ಷೇಪವನ್ನು ಯಾವ ಸಂದರ್ಭದಲ್ಲಿ ಹೇಗೆ ಮಾಡಿದನು ಎಂಬ ವಿಷಯದಲ್ಲಿ ಹಿರಿಯರು ಒಂದು ಕಥೆಯನ್ನು ಹೇಳುತ್ತಾರೆ. ಪೂರ್ವದಲ್ಲಿ ಬಲಿಚಕ್ರವರ್ತಿಯೆಂಬ ಅಸುರರಾಜನು ಭೂಲೋಕದ ಸಮಸ್ತ ರಾಜ್ಯಗಳನ್ನು ಗೆದ್ದು ಕೊನೆಗೆ ಸ್ವರ್ಗಕ್ಕೆ ಹೋಗಿ ಇಂದ್ರನನ್ನು ಯುದ್ಧದಲ್ಲಿ ಸೋಲಿಸಿ ತ್ರಿಲೋಕಾಧೀಶ್ವರನಾಗಿ ರಾಜ್ಯಭಾರಮಾಡುತ್ತಿದ್ದನು. ದೇವಮಾತೆಯಾದ ಅದಿತಿದೇವಿಯ ಪ್ರಾರ್ಥನೆಯಿಂದ ವಿಷ್ಣುವು ದೇವತೆಗಳನ್ನು ಸಂರಕ್ಷಿಸುವುದಕ್ಕಾಗಿ ಅದಿತಿಯ ಗರ್ಭದಲ್ಲಿ ವಾಮನನೆಂಬ ಹೆಸರಿನಿಂದ ಅವತರಿಸಿದನು. ಈ ವಾಮನನು ಕೇವಲ ಹದಿನಾರು ಅಂಗುಲ ಪ್ರಮಾಣದವನಿದ್ದು ಬಹಳ ಕುಳ್ಳಾಗಿದ್ದುದರಿಂದ ಇವನನ್ನು ವಾಮನ(ಕುಳ್ಳ)ನೆಂದು ಕರೆಯುತ್ತಿದ್ದರು. ಈ ಕುಮಾರನಿಗೆ ಉಪನಯನ ವಯಸ್ಸಾಗಲು ವಸಿಷ್ಠಾದಿಋಷಿಗಳು ಇವನಿಗೆ ಬ್ರಹ್ಮೋಪದೇಶವನ್ನು ಮಾಡಿ ಬ್ರಹ್ಮಚರ್ಯಾಶ್ರಮಕ್ಕೆ ಆವಶ್ಯಕವಾದ ಕೃಷ್ಣಾಜಿನ ದಂಡ ಮೊದಲಾದವನ್ನು ಕೊಟ್ಟರು. ಆ ಕಾಲದಲ್ಲಿ ಬಲಿಚಕ್ರವರ್ತಿಯು ಯಜ್ಞದಲ್ಲಿ ದೀಕ್ಷಾಬದ್ಧನಾಗಿ ಯಜ್ಞವನ್ನು ಮಾಡುತ್ತಿದ್ದನು. ಬ್ರಹ್ಮಚಾರಿಯಾದ ಈ ವಾಮನನು ಅಜಿನಾದಿಗಳಿಂದ ಅಲಂಕೃತನಾಗಿ ಬ್ರಹ್ಮವರ್ಚಸ್ಸಿನಿಂದ ಶೋಭಿಸುತ್ತಾ ಋಗ್ಯಜುಸ್ಸಾಮವೇದಗಳನ್ನು ಘಟ್ಟಿಯಾದ ಸ್ವರದಿಂದ ಪಠಿಸುತ್ತಾ ಬಲಿಚಕ್ರವರ್ತಿಯ ಯಜ್ಞವೇದಿಯನ್ನು ಪ್ರವೇಶಿಸಿ ತನ್ನ ವೇದಘೋಷದಿಂದ ಅಲ್ಲಿದ್ದ ಯಜ್ಞವನ್ನು ಋತ್ವಿಕ್ಕುಗಳನ್ನು ಅಗ್ನಿಗಳನ್ನು ಸಭೆಯಲ್ಲಿದ್ದ ಇತರ ಮಹರ್ಷಿಗಳನ್ನು ಸ್ತುತಿಸಿದನು. ಇದನ್ನು ಕಂಡ ಯಜ್ಞದೀಕ್ಷಿತನಾದ ಬಲಿಚಕ್ರವರ್ತಿಯು ಈ ಕುಮಾರನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಎಲೈ ಬಾಲಕನೇ, ನೀನು ಬ್ರಹ್ಮವರ್ಚಸ್ಸಿನಿಂದ ಬೆಳಗುತ್ತಿರುವೆ. ಯಾವ ಕಾರ್ಯಾರ್ಥವಾಗಿ ಇಲ್ಲಿಗೆ

ಬಂದಿರುವೆ? ನಿನಗೆ ಏನು ಬೇಕು ಎಂದು ಕೇಳಲು ವಾಮನನು – ಅಯ್ಯಾ ರಾಜನೇ ನನಗೆ ಇನ್ನೇನೂ ಬೇಡ. ನನ್ನ ಯಜ್ಞಾನುಷ್ಠಾನಕ್ಕಾಗಿ ಒಂದು ಪಾದವಷ್ಟು ಭೂಮಿಯೂ, ಸಮಿದಾದಿ ದ್ರವ್ಯಗಳನ್ನು ಇಟ್ಟುಕೊಳ್ಳುವುದಕ್ಕಾಗಿ ಇನ್ನೊಂದು ಪಾದದಷ್ಟು ಭೂಮಿಯೂ, ನಾನು ಇರುವುದಕ್ಕಾಗಿ ಒಂದು ಪಾದಭೂಮಿಯೂ ಒಟ್ಟು ಮೂರು ಪಾದಗಳಷ್ಟು ಭೂಮಿಯನ್ನು ಕೊಟ್ಟರೆ ಸಾಕು, ಇನ್ನೇನೂ ಬೇಡವೆಂದನು. ಆಗ ರಾಜನು ಎಲೈ ಹುಚ್ಚು ಬ್ರಾಹ್ಮಣನೇ, ನಾನು ರಾಜನು, ಯಜ್ಞಮಾಡಲು ದೀಕ್ಷಿತನಾಗಿರುವೆನು. ಗೋವುಗಳನ್ನು ಧನವನ್ನು ನೀನು ಕೇಳಿದಷ್ಟು ಕೊಡುವೆನು. ಅದನ್ನೆಲ್ಲಾ ಬಿಟ್ಟು ಕೇವಲ ಮೂರುಪಾದ ಭೂಮಿಯನ್ನು ಕೇಳುತ್ತಿರುವೆಯಲ್ಲಾ, ನಿನ್ನ ಮೂಢತನಕ್ಕೆ ಏನೆನ್ನಬೇಕು ಎಂದನು. ಅದನ್ನು ಕೇಳಿ ವಾಮನನು - ನನಗೆ ಗೋವುಗಳೂ ಧನಗಳೂ ಯಾವುದೂ ಬೇಡ. ಬ್ರಹ್ಮಚಾರಿಯಾದ ನನಗೆ ಅವೆಲ್ಲಾ ಏತಕ್ಕೆ? ಆ ಗೋಧನಾದಿಗಳನ್ನು ಅಪೇಕ್ಷಿಸುವ ಯಾಚಕರಿಗೆ ಕೊಡು. ನನಗೆ ನಾನು ಕೇಳಿದ ಮೂರು ಪಾದದಗಲ ಭೂಮಿಯನ್ನು ಮಾತ್ರ ಕೊಟ್ಟರೆ ಸಾಕು ಎಂದನು. ಆದ್ದರಿಂದ ಯತ್ನವಿಲ್ಲದ ರಾಜನು ಹಾಗೇ ಆಗಲೆಂದು ಸಮ್ಮತಿಸಿ ಮೂರು ಪಾದವಷ್ಟು ಭೂಮಿಯನ್ನು ಜಲಧಾರಾಪೂರ್ವಕವಾಗಿ ದಾನಕೊಟ್ಟನು. ದಾನಧಾರೆಯ ನೀರು ತನ್ನ ಕೈಗೆ ಬಿದ್ದಕೂಡಲೇ ವಾಮನನು ಬೆಳೆಯುವುದಕ್ಕೆ ಪ್ರಾರಂಭಿಸಿ ಅತಿ ದೊಡ್ಡ ಆಕಾರವನ್ನು ತಾಳಿದನು. ಅವನ ಈ ಮಹಾ ಆಕೃತಿಯಿಂದ ಮೂರು ಲೋಕಗಳೂ ತುಂಬಿಹೋಯಿತು. ಮೊದಲನೆಯ ಪಾದವು ಪಾತಾಳಸಹಿತವಾದ ಸಮಸ್ತ ಭೂಮಂಡಲವನ್ನೂ ವ್ಯಾಪಿಸಿತು. ಎರಡನೆಯ ಪಾದವು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿತು. ಮೂರನೆಯ ಪಾದವು ಸ್ವರ್ಗಲೋಕವನ್ನು ಆವರಿಸಿತು. ಈರೀತಿ ಚತುರ್ದಶಲೋಕಸಹಿತವಾದ ಸಮಸ್ತ ಭೂಮಂಡಲವನ್ನೂ ಸ್ವರ್ಗವನ್ನೂ ಬಲಿಚಕ್ರವರ್ತಿಯಿಂದ ಗೆದ್ದು ಅದನ್ನು ಇಂದ್ರನಿಗೆ ಕೊಟ್ಟು. ಬಲಿಚಕ್ರವರ್ತಿಯನ್ನು ಸುತಲಲೋಕದಲ್ಲಿ ವಾಸಮಾಡುವಂತೆ ಹೇಳಿ ದೇವತೆಗಳೂ ದ್ವಿಜರೂ ಇನ್ನುಮುಂದೆ ನಿರ್ಬಾಧಿತರಾಗಿ ತಮ್ಮ ತಮ್ಮ ಯಜ್ಞಾದಿ ಕಾರ್ಯಗಳಲ್ಲಿ ಪ್ರವೃತ್ತರಾಗುವಂತೆ ಮಾಡಿದನು.

ಇನ್ನು ಕೆಲವರು ಐತಿಹಾಸಿಕರು ವಿಷ್ಣುವಿನ ಈ ಪರಾಕ್ರಮವನ್ನು ಇನ್ನೊಂದು ವಿಧವಾಗಿ ವರ್ಣಿಸುವರು. ಈ ಈ ಆಖ್ಯಾನವು ಋ.ಸಂ. ೬-೬೯-೮ ನೇ ಋಕ್ಕನ್ನೂ ಅದರ ವಿಷಯದಲ್ಲಿರುವ ಐತರೇಯ ಬ್ರಾಹ್ಮಣದ (ಐ.ಬ್ರಾ. ೨೮-೭) ವಿವರಣೆಯನ್ನೂ ಅವಲಂಬಿಸಿರುವುದರಿಂದ ಅದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ—

**ಉಭಾ ಜಿಗ್ಯಥುರ್ನ ಪರಾ ಜಯೇಥೇ ನ ಪರಾ ಜಿಗ್ಯೇ ಕತರಶ್ಚನೈನೋಃ ।**
**ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತದೈರಯೇಥಾಂ ॥**

(ಋ.ಸಂ. ೬-೬೯-೮)

**ಉಭೌ ಹಿ ತೌ ಜಿಗ್ಯತುಃ ನ ಪರಾಜಯೇಥೇ ನ ಪರಾಜಿಗ್ಯ ಇತಿ ನ ಹಿ ತಯೋಃ ಕತರಶ್ಚನ ಪರಾಜಿಗ್ಯೇ ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತದೈರಯೇಥಾಮಿತಿ ಇಂದ್ರಶ್ಚ ಹ ವೈ ವಿಷ್ಣುಶ್ಚಾಸುರೈಯುರ್ಯುಯುಧಾತೇ ತಾನ್ ಹ ಸ್ಮ ಜಿತ್ವೋಚತುಃ ಕಲ್ಪಾಮಹಾ ಇತಿ ತೇ ಹ ತಥೇತ್ಯಸುರಾ ಊಚುಃ ಸೋಽಬ್ರವೀದಿಂದ್ರೋ ಯಾವದೇವಾಯಂ ವಿಷ್ಣುಸ್ತ್ರಿರ್ವಿಕ್ರಮತೇ ತಾವದಸ್ಮಾಕಮಥ ಯುಷ್ಮಾಕಮಿತರದಿತಿ ಸ ಇಮಾನ್ಲೋಕಾನ್ವಿಚಕ್ರಮೇಽಥೋ ವೇದಾನಥೋ ವಾಚಂ ॥** (ಐ.ಬ್ರಾ. ೨೮-೭)

ಎಲೈ ಇಂದ್ರಾವಿಷ್ಣುಗಳೇ ನೀವಿಬ್ಬರೂ ಯಾವಾಗಲೂ ಶತ್ರುಗಳನ್ನು ಜಯಿಸುತ್ತೀರಿ. ನೀವು ಯಾವಾಗಲೂ ಪರಾಜಿತರಾಗಿಲ್ಲ. ನಿಮ್ಮಿಬ್ಬರಲ್ಲಿ ಯಾರೊಬ್ಬರೂ ಸಹ ಅಪಜಯವನ್ನು ಹೊಂದುವುದಿಲ್ಲ. ಎಲೈ ವಿಷ್ಣುವೇ, ನೀನೂ ಇಂದ್ರನೂ

ಯಾವ ಯಾವ ಯುದ್ಧಗಳಲ್ಲಿ ಅಸುರರೊಂದಿಗೆ ಸ್ಪರ್ಧಿಸುವಿರೋ ಅವುಗಳಲ್ಲೆಲ್ಲಾ ಮೂರು ಪ್ರಕಾರವಾದುದೂ ಅಪರಿಮಿತವಾದುದೂ ಆದ ಜಯವನ್ನು ಪಡೆದು ಪೂರ್ಣವಾದ ಆಕ್ರಮಣವನ್ನು ಮಾಡುತ್ತೀರಿ ಎಂದು ಮೇಲಿನ ಋಕ್ಕಿನ ಅರ್ಥವು. ಮೂರು ಪ್ರಕಾರವಾದ ಜಯವನ್ನು ಎಂದು ಹೇಳಿದೆಯಷ್ಟೆ. ಅದನ್ನು ಐತರೇಯ ಬ್ರಾಹ್ಮಣ ವಾಕ್ಯದಲ್ಲಿ ಈರೀತಿ ವಿವರಿಸಲಾಗಿದೆ —

ಒಂದಾನೊಂದು ಕಾಲದಲ್ಲಿ ಇಂದ್ರನೂ ವಿಷ್ಣುವೂ ಅಸುರರೊಡನೆ ಯುದ್ಧಮಾಡಿದರು. ಆಗ ಅವರು ಅಸುರರನ್ನು ಸೋಲಿಸಿದರು. ಆದರೂ ಸಹ ಅಸುರರನ್ನು ಕುರಿತು ಇಂದ್ರ ವಿಷ್ಣುಗಳು ಇಂತೆಂದರು—ಎಲೈ ಅಸುರರೇ, ನಾವು ನಾವು ಯಾಕೆ ಒಬ್ಬರಿಗೊಬ್ಬರು ವ್ಯರ್ಥವಾಗಿ ಕಾದಾಡೋಣ? ನಮ್ಮನಮ್ಮಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡು ಅದರಂತೆ ಇನ್ನುಮುಂದೆ ನಡೆಯೋಣ ಎನ್ನಲು ಅದಕ್ಕೆ ಅಸುರರು ಒಪ್ಪಿದರು. ಆಗ ಇಂದ್ರನು ಅಸುರರನ್ನು ಕುರಿತು— ನನ್ನ ಜತೆಯಲ್ಲಿರುವ ಈ ವಿಷ್ಣುವು ಮೂರು ಪಾದವಿಕ್ಷೇಪವನ್ನು ಮಾಡುವನು (ಮೂರು ಹೆಜ್ಜೆಗಳನ್ನು ಇಡುವನು). ಅವನು ಎಲ್ಲಿಯವರೆಗೆ ಹೆಜ್ಜೆಯನ್ನು ಇಡುವನೋ ಅದೆಲ್ಲಾ ನಮಗೆ ಸೇರಬೇಕು, ಉಳಿದಭಾಗವು ನಿಮಗೆ ಎಂದನು. ಅಸುರರು ಹಾಗೆಯೇ ಆಗಲಿ ಎನ್ನಲು ವಿಷ್ಣುವು ಬೃಹದಾಕಾರವಾಗಿ ಬೆಳೆದು ತನ್ನ ಒಂದು ಪಾದವಿಕ್ಷೇಪದಿಂದ ಮೂರು ಲೋಕಗಳನ್ನೂ ಆಕ್ರಮಿಸಿದನು. ಎರಡನೆಯ ಪಾದ ವಿಕ್ಷೇಪದಿಂದ ವೇದಗಳನ್ನೂ ಮೂರನೆಯ ಪಾದವಿಕ್ಷೇಪದಿಂದ ಸಮಸ್ತ ವಾಕ್ಸಮೂಹವನ್ನೂ ಆಕ್ರಮಿಸಿದನು. ಆದ್ದರಿಂದ ಮೂರು ಲೋಕಗಳೂ, ಸಮಸ್ತವೇದಗಳೂ, ವಾಕ್ಸಮೂಹವೂ ಇಂದ್ರ ವಿಷ್ಣುಗಳ ವಶವಾಯಿತು, ಎಂದಿದೆ.

ಆದ್ದರಿಂದ ಆಗ್ನಾವೈಷ್ಣವಸಂಬಂಧಿಯಾದ ಹನ್ನೊಂದು ಕಪಾಲಗಳಲ್ಲಿ ಅಗ್ನಿಗೆ ಎಂಟು ಕಪಾಲಗಳೂ ವಿಷ್ಣುವಿಗೆ ಮೂರು ಕಪಾಲಗಳೂ ಸೇರಬೇಕು. ಎಂದರೆ ಹನ್ನೊಂದು ಕಪಾಲಗಳಮೇಲೆ ಬೇಯಿಸಿದ ಪುರೋಡಾಶದ ಒಂದು ಆಹುತಿಯಲ್ಲಿ ಎಂಟು ಭಾಗದ ಪುರೋಡಾಶವು ಅಗ್ನಿಗೆ ಸಂಬಂಧಪಟ್ಟಿರುವುದು. ಮೂರುಭಾಗವು ವಿಷ್ಣುವಿಗೆ ಸಂಬಂಧಪಟ್ಟಿರುವುದು. ಇದೇ ಕ್ರಮವು, ಇದೇ ಅಗ್ನಿವಿಷ್ಣುಗಳಲ್ಲಿ ಆಹುತಿಯ ಹಂಚಿಕೆಯು.

## ಘೃತೇ ಚರುಂ ನಿರ್ವಪೇತ ಯೋಽಪ್ರತಿಷ್ಠಿತೋ ಮನ್ಯೇತ ।

**ಸಾ. ಭಾ—ಇತ್ಥಂ ಸಾರ್ಥವಾದೇನ ವಿಧಿವಾಕ್ಯೇನ ದೀಕ್ಷಣೀಯೇಷ್ಟಿಂ ವಿಧಾಯ ತಸ್ಯಾಮೇವೇಷ್ಟೌ ಪ್ರತಿಷ್ಠಾಕಾಮಸ್ಯ ಪುರೋಡಾಶಮುಪೋದ್ಯ ದ್ರವ್ಯಾಂತರಂ ವಿಧತ್ತೇ— ಪುತ್ರಾದಿಪ್ರಜಯಾ ಗವಾದಿಪಶುಭಿಶ್ಚ ರಹಿತತ್ವಮಪ್ರತಿಷ್ಠಿತತ್ವಂ ತಾದೃಶೋಽಹಮಿತಿ ಮನ್ಯ-ಮಾನೋ ಯಜಮಾನಃ ಪ್ರತಿಷ್ಠಾರ್ಥಂ ಘೃತೇನ ತಂಡುಲೈಶ್ಚರುಂ ನಿಷ್ಪಾದಯೇತ್ ॥**

ಯಾವ ಪುರುಷನು ತನಗೆ ಲೋಕದಲ್ಲಿ ಹೆಚ್ಚಿನ ಸ್ಥಾನಮಾನಗಳಿಲ್ಲವೆಂದು ಭಾವಿಸುವನೋ ಆ ಪುರುಷನು ಚರು(ಅನ್ನ) ವೆಂಬ ಹೋಮದ್ರವ್ಯವನ್ನು ಬೇಯಿಸಿ ಅದಕ್ಕೆ ತುಪ್ಪವನ್ನು ಮಿಶ್ರಮಾಡಿ ಅದರಿಂದ ಹೋಮಮಾಡಬೇಕು.

ದೀಕ್ಷಣೀಯೇಷ್ಟಿಯ ವಿಧಿಯನ್ನು ವಿಧಿವಾಕ್ಯಗಳಿಂದ ವಿವರಿಸಿ ಆ ಇಷ್ಟಿಯಲ್ಲಿಯೇ ಸ್ಥಾನಮಾನಗಳನ್ನಪೇಕ್ಷಿಸುವ ಪುರುಷನು ಯಾವ ದ್ರವ್ಯವನ್ನು ಹೋಮಮಾಡಬೇಕು ಎಂಬುದನ್ನು ವಿವರಿಸುತ್ತಾರೆ. ಈ ಲೋಕದಲ್ಲಿ ಒಬ್ಬ ಪುರುಷನು ಸ್ಥಾನಮಾನಗಳನ್ನು ಪಡೆದು ಗಣ್ಯನಾಗಿರಬೇಕಾದರೆ, ಪುತ್ರಾದಿ ಸಂತತಿಯು, ಗೋವು ಮೊದಲಾದ ಪಶುಸಂಪತ್ತು, ಧನಾದಿ ಐಶ್ವರ್ಯ ಇವೆಲ್ಲವೂ ಇರಬೇಕು. ಇವುಗಳಿಲ್ಲದಿದ್ದಮೇಲೆ ಅವನಿಗೆ ಸಮಾಜದಲ್ಲಿ ಗೌರವವೂ ಪ್ರತಿಷ್ಠೆಯೂ ಇರುವುದಿಲ್ಲ. ಅವನನ್ನು ಗಣ್ಯವ್ಯಕ್ತಿಯೆಂದು ಯಾರೂ ಭಾವಿಸುವುದಿಲ್ಲ. ಆದ್ದರಿಂದ ಜನರಲ್ಲಿ ಗಣ್ಯತೆಯನ್ನು ಪಡೆಯಬೇಕೆಂದು ಬಯಸುವ

ಪುರುಷನು ಅದಕ್ಕಾಗಿ ಈ ದೀಕ್ಷಣೀಯೇಷ್ಟಿಯಲ್ಲಿ ಅಕ್ಕಿಯನ್ನು ಬೇಯಿಸಿ ಪಕ್ವಮಾಡಿದ ಚರುವೆಂಬ ದ್ರವ್ಯವನ್ನು ಆಜ್ಯ (ತುಪ್ಪ) ದೊಡನೆ ಮಿಶ್ರಮಾಡಿ ಅಗ್ನಿಯಲ್ಲಿ ಅಗ್ನಿ ವಿಷ್ಣುಗಳನ್ನುದ್ದೇಶಿಸಿ ಹೋಮಮಾಡಬೇಕು.

## ಅಸ್ಯಾಂ ವಾವ ಸ ನ ಪ್ರತಿತಿಷ್ಠತಿ ಯೋ ನ ಪ್ರತಿತಿಷ್ಠತಿ

**ಅಪ್ರತಿಷ್ಠಿತತ್ವಸ್ಯಾತ್ಯಂತಿಕದೋಷತ್ವಂ ದರ್ಶಯತಿ—ಯೋ ಯಜಮಾನಃ ಪ್ರಜಾ-ಪಶುರೂಪಯಾ ಪ್ರತಿಷ್ಠಯಾ ವರ್ಜಿತಃ ಸೋಽಸ್ಯಾಂ ವಾವ ಕೃತ್ಸ್ನಾಯಾಮಪ್ಯೇತಸ್ಯಾಂ ಭೂಮೌ ನ ಪ್ರತಿತಿಷ್ಠತಿ ಶ್ಲಾಘ್ಯೋ ನ ಭವತಿ । ತಸ್ಮಾದಪ್ರತಿಷ್ಠಾ ಪರಿಹರ್ತವ್ಯೇತ್ಯರ್ಥಃ ॥**

ಯಾವ ಪುರುಷನಿಗೆ ಪ್ರಜೆ ಎಂದರೆ ಪುತ್ರಾದಿಗಳು, ಗೋವು ಮೊದಲಾದ ಪಶುಸಂಪತ್ತು ಇವುಗಳಿರುವುದಿಲ್ಲವೋ ಆ ಪುರುಷನು ಈ ಭೂಮಿಯಲ್ಲಿ ಗಣ್ಯನೆನಿಸಿಕೊಳ್ಳುವುದಿಲ್ಲ.

ಈ ಲೋಕದಲ್ಲಿ ಗಣ್ಯತೆ ಇಲ್ಲದಿರುವವನಿಗೆ ಗಣ್ಯತೆ ಹೇಗೆ ಉಂಟಾಗುವುದು ಎಂಬುದನ್ನು ತಿಳಿಸಲಾಗುವುದು. ಯಜ್ಞಮಾಡುವ ಯಾವ ಯಜಮಾನನ ಬಳಿ ಮಕ್ಕಳು, ಮೊಮ್ಮಕ್ಕಳು ಮುಂತಾದ ಸಂತತಿಯ ಅಭಿವೃದ್ಧಿಯಿರುವುದಿಲ್ಲವೋ ಮತ್ತು ಅವನ ಬಳಿ ಗೋವು ಮೊದಲಾದ ಪಶುಸಂಪತ್ತು, ಧಾನ್ಯ ಧನ ಇವುಗಳೂ ಇರುವುದಿಲ್ಲವೋ ಆ ಪುರುಷನು ಜನರ ಮಧ್ಯೆ ಎಂದಿಗೂ ಗಣ್ಯನೆನಿಸಲಾರನು. ಅವನಿಗೆ ಗೌರವವಿಲ್ಲ.

ಚರು ಎಂದರೆ ಪಕ್ವವಾದ ಅನ್ನವು. ಇದನ್ನು ಕೆಲವು ಸಂದರ್ಭಗಳಲ್ಲಿ ಹಾಲು, ತುಪ್ಪ ಮೊದಲಾದ ಪದಾರ್ಥಗಳೊಡನೆ ಮಿಶ್ರಮಾಡಿ ಹೋಮಮಾಡುವರು. ಈ ಚರುವನ್ನು ಅಕ್ಕಿಯಿಂದಲೇ ಯಾವಾಗಲೂ ಸಿದ್ಧಪಡಿಸುವುದಿಲ್ಲ. ಬೇರೆಬೇರೆ ದೇವತೆಗಳಿಗೆ ಬೇರೆಬೇರೆ ಧಾನ್ಯಗಳಿಂದ ಸಿದ್ಧಪಡಿಸಿದ ಚರುವನ್ನು ಉಪಯೋಗಿಸುವರು. ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ಇದೆ—

**ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಗ್ಂ ಸೋಮಾಯ ವನಸ್ಪತಯೇ ಶ್ಯಾಮಾಕಂ ಚರುಂ ಸವಿತ್ರೇ ಸತ್ಯಪ್ರಸವಾಯ ಪುರೋಡಾಶಂ ದ್ವಾದಶಕಪಾಲಮಾಶೂನಾಂ ವ್ರೀಹೀಣಾಗ್ಂ ರುದ್ರಾಯ ಪಶುಪತಯೇ ಗಾವೀಧುಕಂ ಚರುಂ ಬೃಹಸ್ಪತಯೇ ವಾಚಸ್ಪತಯೇ ನೈವಾರಂ ಚರುಮಿಂದ್ರಾಯ ಜ್ಯೇಷ್ಠಾಯ ಪುರೋಡಾಶಮೇಕಾದಶಕಪಾಲಂ ಮಹಾವ್ರೀಹೀಣಾಂ ಮಿತ್ರಾಯ ಸತ್ಯಾಯಾಂಬಾನಾಂ ಚರುಂ ವರುಣಾಯ ಧರ್ಮಪತಯೇ ಯವಮಯಂ ಚರುಂ ।**

(ತೈ. ಸಂ. ೧-೮-೧೦-೧)

ದೇವಸುವ ಎಂಬ ಎಂಟುಮಂದಿ ದೇವತೆಗಳಿಗೆ ಅರ್ಪಿಸುವ ನಾನಾ ವಿಧ ಹವಿಸ್ಸುಗಳನ್ನು ವಿವರಿಸುವ ಸಂದರ್ಭದಲ್ಲಿ ಆಯಾ ದೇವತೆಗಳಿಗೆ ಬೇರೆಬೇರೆ ಅರ್ಪಿಸಲ್ಪಡುವ ಹವಿರ್ದ್ರವ್ಯಗಳು ಈರೀತಿ ಇವೆ—

| | |
|---|---|
| ೧. ಗೃಹಪತಿಯೆಂಬ ಅಗ್ನಿಗೆ | ಎಂಟು ಕಪಾಲಗಳಲ್ಲಿ ಬೇಯಿಸಿದ ಪುರೋಡಾಶವು (ಈ ಪುರೋಡಾಶವು ಕಪ್ಪಗಿರುವ ಭತ್ತದ ಅಕ್ಕಿಯಿಂದ ಮಾಡಿದ್ದಾಗಿರಬೇಕು.) |
| ೨. ವನಸ್ಪತಿಯಾದ ಸೋಮದೇವತೆಗೆ | ಶ್ಯಾಮಾಕವೆಂಬ ಧಾನ್ಯದ ಚರುವು. |

| | | |
|---|---|---|
| ೩. | ಸತ್ಯಪ್ರೇರಕನಾದ ಸವಿತೃದೇವನಿಗೆ | ಹನ್ನೆರಡು ಕಪಾಲಗಳಮೇಲೆ ಬೇಯಿಸಿದ ಪುರೋಡಾಶವು ಈ ಪುರೋಡಾಶವು ಬೇಗ ಬೆಳೆಯಾಗುವ ಜಾತಿಯ ಭತ್ತದ ಅಕ್ಕಿಯಿಂದ ಮಾಡಿದ್ದಾಗಿರಬೇಕು. |
| ೪. | ಪಶುಪತಿಯಾದ ರುದ್ರನಿಗೆ | ಗಾವೀಧುಕವೆಂಬ ಸಣ್ಣಭತ್ತದ ಅಕ್ಕಿಯ ಚರು. |
| ೫. | ವಾಕ್ಪತಿಯಾದ ಬೃಹಸ್ಪತಿಗೆ | ನೀವಾರವೆಂಬ ಧಾನ್ಯದ ಚರುವು. |
| ೬. | ಜ್ಯೇಷ್ಠ ಇಂದ್ರನಿಗೆ | ಹನ್ನೊಂದು ಕಪಾಲಗಳಮೇಲೆ ಬೇಯಿಸಿದ ಪುರೋಡಾಶ (ಈ ಪುರೋಡಾಶವು ವ್ಯವಸಾಯವಿಲ್ಲದೆ ತಾನಾಗಿ ಬೆಳೆದ ಶಾಲಿತಂಡುಲದ ಅಕ್ಕಿಯಿಂದ ಮಾಡಿದ್ದಾಗಿರಬೇಕು.) |
| ೭. | ಸತ್ಯಸ್ವರೂಪನಾದ ಮಿತ್ರದೇವನಿಗೆ | ಅಂಬ ಎಂಬ ಹೆಸರಿನ ಧಾನ್ಯದ ಚರುವು. |
| ೮. | ಧರ್ಮಪತಿಯಾದ ವರುಣದೇವನಿಗೆ | ಗೋಧಿಯಿಂದ ಮಾಡಿದ ಚರುವು. |

ಈ ರೀತಿ ಚರುಗಳಿಗೆ ಉಪಯೋಗಿಸುವ ಧಾನ್ಯಗಳು ನಾನಾವಿಧವಾಗಿರುವವು. ಸಾಧಾರಣವಾಗಿ ಭತ್ತದ ಅಕ್ಕಿಯನ್ನು ಬೇಯಿಸಿ ಮಾಡಿದ ಪಕ್ವಾನ್ನವೇ ಚರುವೆಂದು ಹೇಳಲ್ಪಡುವುದು. ಇದನ್ನು ಉಪಯೋಗಿಸುವುದೇ ವಿಶೇಷ ರೂಢಿಯು.

**ತದ್ಯದ್ಘೃತಂ ತತ್ಸ್ತ್ರಿಯೈ ಪಯೋ ಯೇ ತಂಡುಲಾಸ್ತೇ ಪುಂಸಸ್ತನ್ಮಿಥುನಂ ಮಿಥುನೇನೈವೈನಂ ತತ್ಪ್ರಜಯಾ ಪಶುಭಿಃ ಪ್ರಜನಯತಿ ಪ್ರಜಾತ್ಯೈ ॥**

ಘೃತಚರುಣಾ ತತ್ಪರಿಹಾರಂ ದರ್ಶಯತಿ—ತತ್ತತ್ರ ಘೃತಪಕ್ವೇ ಚರೌ ಯದ್ಘೃತಮಸ್ತಿ ತತ್ಸ್ತ್ರಿಯೈ ಪಯಃ ಸ್ತ್ರಿಯಾಃ ಶೋಣಿತಂ ದ್ರವತ್ವಸಾಮ್ಯೇನ ಪಯಃಶಬ್ದಃ ಶೋಣಿತಮುಪಲಕ್ಷಯತಿ । ವಿಲೀನಸ್ಯ ಘೃತಸ್ಯೇಷದ್ರಕ್ತತ್ವಸಾಮ್ಯೇನ ಯೋಷಿದ್ವೀರ್ಯತ್ವಮುಪಚರ್ಯತೇ । ಚರೌ ಯೇ ತಂಡುಲಾಃ ಸಂತಿ ತೇ ಪುಂಸೋ ರೇತ ಇತಿ ಶೇಷಃ । ಶ್ವೇತತ್ವಂ ತತ್ರ ಸಾಮ್ಯಂ । ತದ್ಘೃತತಂಡುಲೋಭಯಾತ್ಮಕಂ ಚರುದ್ರವ್ಯಂ ಮಿಥುನಸದೃಶಂ ತತ್ತಸ್ಮಾತ್ಕಾರಣಾನ್ಮಿಥುನರೂಪೇಣೈವ ಚರುದ್ರವ್ಯೇಣೈವೈನಂ ಯಜಮಾನಂ ಪುತ್ರಾದಿಪ್ರಜಯಾ ಗವಾದಿಪಶುಭಿಶ್ಚ ಪ್ರಜನಯತಿ ಪ್ರವರ್ಧಯತಿ । ತಸ್ಮಾದಿದಂ ಚರುದ್ರವ್ಯಂ ಪ್ರಜನನಾಯ ಪ್ರತಿಷ್ಠಾರೂಪಾಯ ಸಂಪದ್ಯತ ಇತ್ಯರ್ಥಃ ॥

ಪ್ರಜಾಪಶುಸಂಪತ್ತಿಗಾಗಿ ಹೋಮಮಾಡುವ ಚರುದ್ರವ್ಯದಲ್ಲಿ ಚರುವಿನೊಡನೆ ಮಿಶ್ರಿತವಾಗಿರುವ ಘೃತವು (ತುಪ್ಪವು) ಸ್ತ್ರೀಯಹಾಲೆಂದು (ದ್ರವರೂಪವಾದ ಶೋಣಿತ) ವೆಂದು ಹೇಳಲ್ಪಡುವುದು. ಚರುವನ್ನು ಮಾಡುವುದಕ್ಕೆ ಉಪಯೋಗಿಸಿದ ಅಕ್ಕಿಯು ಪುರುಷನ ಸಂಕೇತವಾಗಿರುವುದು. ಆದ್ದರಿಂದ ಸ್ತ್ರೀಪುರುಷರ ಸಂಯೋಗದಿಂದ ಹೇಗೆ ಪ್ರಜಾಉತ್ಪತ್ತಿಯಾಗುವುದೋ ಅದರಂತೆ ಈ ಚರುವಿನಲ್ಲಿರುವ ಸ್ತ್ರೀಸಂಕೇತವಾದ ಪಯಸ್ಸು (ಹಾಲು) ಪುರುಷಸಂಕೇತವಾದ ಅಕ್ಕಿ ಇವುಗಳ ಮಿಶ್ರಣದಿಂದ ಯಜ್ಞಮಾಡುವ ಯಜಮಾನನಿಗೆ ಪುತ್ರಾದಿಪ್ರಜೆಗಳು, ಪಶುಗಳು ಇವುಗಳ ಉತ್ಪತ್ತಿಯಾಗುವುದು.

ಘೃತಮಿಶ್ರವಾದ ಚರುವನ್ನು ಹೋಮಮಾಡುವುದರಿಂದ ಯಜಮಾನನಿಗೆ ಪ್ರಜಾಪಶುಸಂಪತ್ತುಂಟಾಗಿ ಅವನು ಜನರಲ್ಲಿ ಗಣ್ಯನಾಗುವನೆಂದು ಹೇಳಿದೆಯಷ್ಟೆ. ಅದು ಹೇಗಾಗುವುದು ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಘೃತಮಿಶ್ರಿತವಾದ ಅಥವಾ ಘೃತಪಕ್ವವಾದ ಚರುವಿನಲ್ಲಿ ಎರಡು ವಸ್ತುಗಳಿರುವವು: ಒಂದು ಘೃತ ಮತ್ತೊಂದು ಅಕ್ಕಿ. ಇವುಗಳಲ್ಲಿ ಘೃತವು (ಅಥವಾ ಆಜ್ಯವು) ದ್ರವರೂಪವಾಗಿರುವುದರಿಂದ ಸ್ತ್ರೀಯ ಸ್ತನದಿಂದ ಉತ್ಪನ್ನವಾಗುವ ಹಾಲು ಎಂಬುದರ ಸಂಕೇತವು ಎಂದರೆ ಘೃತವು ಸ್ತ್ರೀಯನ್ನು ಸೂಚಿಸುತ್ತದೆ. ಮತ್ತೊಂದು ವಸ್ತುವಾದ ತಂಡುಲ ಅಥವಾ ಅಕ್ಕಿಯು ಪುರುಷನ ರೇತಸ್ಸಿನ ಸಂಕೇತವು ಎಂದರೆ ಅಕ್ಕಿಯು ಪುರುಷನ ಸಂಕೇತವಾಗಿದೆ. ಲೋಕವ್ಯವಹಾರದಲ್ಲಿ ಸ್ತ್ರೀಪುರುಷರ ಸಂಪರ್ಕದಿಂದ ಪ್ರಜೆಗಳ ಉತ್ಪತ್ತಿಯಾಗುವುದು ಪ್ರಸಿದ್ಧವಾಗಿದೆ. ಅದರಂತೆಯೇ ಸ್ತ್ರೀಪುರುಷಸಂಕೇತಗಳಾದ ಘೃತತಂಡುಲಗಳ ಮಿಶ್ರಣದಿಂದ ಸಿದ್ಧವಾದ ಚರುವು ಅಗ್ನಿಯಲ್ಲಿ ಹೋಮಮಾಡುವುದರಿಂದ ಯಜಮಾನನಿಗೆ ಪ್ರಜೆಗಳನ್ನೂ (ಪುತ್ರರನ್ನೂ) ಪಶುಸಂಪತ್ತನ್ನೂ ಒದಗಿಸಿಕೊಡುವುದು. ಪ್ರಜಾಪಶುಸಂಪತ್ತಿನಿಂದ ಯಜಮಾನನು ಜನರ ಮಧ್ಯದಲ್ಲಿ ಗಣ್ಯಸ್ಥಾನವನ್ನು ಪಡೆಯುವನು ಎಂದಭಿಪ್ರಾಯವು.

## ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥

**ಚರೋಃ ಪ್ರತಿಷ್ಠಾಹೇತುತ್ವವೇದನಂ ಪ್ರಶಂಸತಿ— ತಾವೇತೌ ಪುರೋಡಾಶಚರುಪಕ್ಷಾವಾಪಸ್ತಂಬೇನ ದರ್ಶಿತೌ—"ದೀಕ್ಷಣೀಯಾಯಾಸ್ತಂತ್ರಂ ಪ್ರಕ್ರಮಯತ್ಯಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತ್ಯಾಗ್ನಾವೈಷ್ಣವಂ ವಾ ಘೃತೇ ಚರುಂ ಪುರೋಡಾಶೋ ಬ್ರಹ್ಮವರ್ಚಸಕಾಮಸ್ಯ ಘೃತೇ ಚರುಃ ಪ್ರಜಾಕಾಮಸ್ಯ ಪಶುಕಾಮಸ್ಯ ವಾದಿತ್ಯಂ ಘೃತೇ ಚರುಂ ದ್ವಿತೀಯಂ ಪ್ರಜಾಕಾಮಸ್ಯ ಪಶುಕಾಮಸ್ಯೈಕೇ ಸಮಾಮನಂತಿ"**

ಘೃತಮಿಶ್ರಿತವಾದ ಚರುವನ್ನು ಹೋಮಮಾಡಿದರೆ ಪ್ರಜಾಪಶುಸಂಪತ್ತುಂಟಾಗುವುದು ಎಂಬ ವಿಷಯವನ್ನು ಯಾವ ಪುರುಷನು ತಿಳಿಯುವನೋ ಅವನೂ ಸಹ ಪ್ರಜಾಪಶುಸಂಪತ್ತನ್ನು ಪಡೆಯುವನು.

**ವೇದನಂ ಪ್ರಶಂಸತಿ** ಎಂದರೆ ಒಂದು ಮುಖ್ಯವಾದ ಕಾರ್ಯವನ್ನು ಮಾಡಿದರೆ ಅದಕ್ಕೆ ಫಲಪ್ರಾಪ್ತಿಯಾಗುವುದು ಸಹಜವು. ಆದರೆ ಕಾರ್ಯವನ್ನು ಮಾಡುವುದರಿಂದ ಫಲಪ್ರಾಪ್ತಿಯಾಗುತ್ತೆ ಎಂಬ ವಿಷಯಪರಿಜ್ಞಾನವನ್ನು ಹೊಂದಿರುವವನು ಸಹ (ಕಾರ್ಯಮಾಡದಿದ್ದರೂ) ಕಾರ್ಯಮಾಡಿದ ಫಲವನ್ನು ಹೊಂದುವನು ಎಂಬುದನ್ನು ಇಲ್ಲಿ ತಿಳಿಸಿದೆ. ಈ ವಿಧವಾದ ವೇದನಾಪ್ರಶಂಸೆಯನ್ನು ಈ ಗ್ರಂಥದಲ್ಲಿ ವಿಶೇಷವಾಗಿ ವಿವರಿಸಲಾಗಿದೆ.

ದೀಕ್ಷಣೀಯೇಷ್ಟಿಯಲ್ಲಿ ಮೇಲೆ ಹೇಳಿದ ಪುರೋಡಾಶ ಮತ್ತು ಚರುವನ್ನು ಹೋಮಮಾಡುವುದರಿಂದ ಲಭಿಸುವ ಫಲಪ್ರಾಪ್ತಿವಿಷಯದಲ್ಲಿ ಆಪಸ್ತಂಬಮಹರ್ಷಿಯು ಈರೀತಿ ಹೇಳಿದ್ದಾರೆ—

**ದೀಕ್ಷಣೀಯಾಯಾಸ್ತಂತ್ರಂ ಪ್ರಕ್ರಮಯತ್ಯಾಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತ್ಯಾಗ್ನಾವೈಷ್ಣವಂ ವಾ ಘೃತೇ ಚರುಂ ಪುರೋಡಾಶೋ ಬ್ರಹ್ಮವರ್ಚಸಕಾಮಸ್ಯ ಘೃತೇ ಚರುಃ ಪ್ರಜಾಕಾಮಸ್ಯ ಪಶುಕಾಮಸ್ಯ ವಾದಿತ್ಯಂ ಘೃತೇ ಚರುಂ ದ್ವಿತೀಯಂ ಪ್ರಜಾಕಾಮಸ್ಯ ಪಶುಕಾಮಸ್ಯೈಕೇ ಸಮಾಮನಂತಿ ॥** (ಆಪ.ಶ್ರೌ.ಸೂ. ೧೦, ೪, ೧-೪)

ದೀಕ್ಷಣೀಯೇಷ್ಟಿಯ ಪ್ರಾರಂಭದಲ್ಲಿ ಅಗ್ನಿವಿಷ್ಣುದೇವತೆಗಳನ್ನುದ್ದೇಶಿಸಿ ಆಗ್ನಾವೈಷ್ಣವವೆಂಬ ಆಹುತಿಯನ್ನು ಅರ್ಪಿಸಬೇಕು. ಇದರಲ್ಲಿ ಎರಡು ವಿಧವು. ಹನ್ನೊಂದು ಕಪಾಲಗಳಮೇಲೆ ಪಕ್ವಮಾಡಿದ ಪುರೋಡಾಶವನ್ನು ಅರ್ಪಿಸುವುದು ಒಂದು ವಿಧ. ಈ

ವಿಧಾನವನ್ನು ಬ್ರಹ್ಮವರ್ಚಸ್ಸನ್ನಪೇಕ್ಷಿಸುವ ಯಜಮಾನನು ಅನುಸರಿಸಬೇಕು. ಘೃತಪಕ್ವವಾದ ಚರುವನ್ನು ಅಗ್ನಿವಿಷ್ಣುಗಳಿಗೆ ಅರ್ಪಿಸುವುದು ಮತ್ತೊಂದು ವಿಧಿ. ಈ ವಿಧಾನವನ್ನು ಪ್ರಜೆಗಳನ್ನು ಪಶುಸಂಪತ್ತನ್ನು ಅಪೇಕ್ಷಿಸುವ ಯಜಮಾನನು ಅನುಸರಿಸಬೇಕು ಅಥವಾ ಆದಿತ್ಯನನ್ನುದ್ದೇಶಿಸಿ ಘೃತಪಕ್ವವಾದ ಚರುವನ್ನು ಹೋಮಮಾಡಿದರೂ ಯಜಮಾನನು ಪ್ರಜಾಪಶುಸಂಪತ್ತನ್ನು ಪಡೆಯುವನು ಎಂದು ಕೆಲವರು ಹೇಳುವರು.

ಆರಬ್ಧಯಜ್ಞೋ ವಾ ಏಷ ಆರಬ್ಧದೇವತೋ ಯೋ ದರ್ಶಪೂರ್ಣ-
ಮಾಸಾಭ್ಯಾಂ ಯಜತ ಅಮಾವಾಸ್ಯೇನ ವಾ ಹವಿಷೇಷ್ಟ್ವಾ
ಪೌರ್ಣಮಾಸೇನ ವಾ ತಸ್ಮಿನ್ನೇವ ಹವಿಷಿ ತಸ್ಮಿನ್ಬರ್ಹಿಷಿ ದೀಕ್ಷೇ-
ತೈಷೋ ಏಕಾ ದೀಕ್ಷಾ ॥

ಉಕ್ತಾಯಾ ದೀಕ್ಷಣೀಯೇಷ್ಟೇಃ ಕಾಲಂ ವಿಧತ್ತೇ—ಯಃ ಪುಮಾನ್ದರ್ಶಪೂರ್ಣಮಾಸಾಭ್ಯಾಂ ಯಜತೇ ತೇನ ಸರ್ವೋಽಪಿ ಯಜ್ಞಃ ಪ್ರಾರಬ್ಧಃ ಸರ್ವಸ್ಯ ತದಪೇಕ್ಷಿತತ್ವಾತ್ । ಸೋಮಯಾಗಸ್ಯ ದರ್ಶಪೂರ್ಣಮಾಸವಿಕೃತಿತ್ವಾಭಾವೇಽಪ್ಯಂಗಾದೀನಾಂ ದೀಕ್ಷಣೀಯಾಪ್ರಾಯಣೀಯಾದೀನಾಮಿಷ್ಟೀನಾಂ ತದ್ವಿಕೃತಿತ್ವಾದಸ್ತಿ ತದಪೇಕ್ಷಾ । ಅಗ್ನಿಹೋತ್ರಸ್ಯ ತದಂಗಾನಾಂ ಚ ತನ್ನಿರಪೇಕ್ಷತ್ವೇಽಪ್ಯಾಹವನೀಯಾದ್ಯಗ್ನಿಸಾಪೇಕ್ಷತ್ವಾದಗ್ನೀನಾಂ ಚ ಪವಮಾನೇಷ್ಟಿಸಾಧ್ಯತ್ವಾದಿಷ್ಟೀನಾಂ ದರ್ಶಪೂರ್ಣಮಾಸವಿಕೃತಿತ್ವಾದಸ್ತಿ ಪರಂಪರಯಾ ತದಪೇಕ್ಷಾ ತಸ್ತದನುಷ್ಠಾನೇನ ಸರ್ವಸ್ಯಾಪಿ ಯಜ್ಞಸ್ಯ ಪ್ರಾರಂಭಃ ಸಿಧ್ಯತಿ । ಯದ್ಯಪಿ ಯಜ್ಞಾರಂಭೇಣೈವ ತದೀಯದೇವತಾನಾಂ ಪೂಜಯಿತುಮಾರಂಭಃ ಸಿದ್ಧ ಏವ ತಥಾಪಿ ಪ್ರಾಧಾನ್ಯಖ್ಯಾಪನಾರ್ಥಮಾರಬ್ಧದೇವತ ಇತಿ ಪುನರ್ದೇವತಾಭಿಧಾನಂ । ಯಸ್ಮಾದ್ದರ್ಶಪೂರ್ಣಮಾಸಯಾಜಿನಾ ಸರ್ವೋಽಪಿ ಯಜ್ಞ ಆರಬ್ಧಪ್ರಾಯೋಽತ ಏವ ದೇವತಾನಾಂ ಪೂಜಾಪ್ಯಾರಬ್ಧಪ್ರಾಯಾ ತಸ್ಮಾದಾರಬ್ಧಸ್ಯ ಸೋಮಯಾಗಸ್ಯಾನುಷ್ಠೇಯತ್ವಾದ್ದರ್ಶಪೂರ್ಣಮಾಸಾನುಷ್ಠಾನಾದೂರ್ಧ್ವಂ ದೀಕ್ಷೇತ ದೀಕ್ಷಣೀಯೇಷ್ಟಿಂ ಕುರ್ಯಾತ್ । ಅಮಾವಾಸ್ಯಾಕಾಲೇ ಕರ್ತವ್ಯಂ ಹವಿರಾಮಾವಾಸ್ಯಂ ತದ್ವತ್ಪೌರ್ಣಮಾಸಂ ಚ । ಹವಿಃಶಬ್ದೋಽತ್ರಯಜ್ಞಮುಪಲಕ್ಷಯತಿ । ವಾಶಬ್ದೌ ಸಮುಚ್ಚಯಾರ್ಥೌ । ಅಮಾವಾಸ್ಯಾದಿಸಂಬಂಧಿನಾ ಪೌರ್ಣಮಾಸೀಸಂಬಂಧಿನಾ ಚ ಯಜ್ಞೇನೇಷ್ಟ್ವಾ ದೀಕ್ಷೇತ। ಉಕ್ತಾರ್ಥ ಏವ ತಸ್ಮಿನ್ನಿತ್ಯಾದಿನಾ ಪ್ರಪಂಚಯತೇ । ಹವಿಃಶಬ್ದವದ್ಬರ್ಹಿಃಶಬ್ದೋಽಪಿ ಯಜ್ಞೋಪಲಕ್ಷಕಃ । ತಸ್ಮಿನ್ನಮಾವಾಸ್ಯಾಖ್ಯೇ ಹವಿಷಿ ಯಜ್ಞೇ ತಸ್ಮಿನ್ಪೌರ್ಣಮಾಸಾಖ್ಯೇ ಬರ್ಹಿಷಿ ಯಜ್ಞೇಽನುಷ್ಠಿತೇ ಸತಿ ಪಶ್ಚಾದೇವ ದೀಕ್ಷೇತ । ತದಾಹಾಶ್ವಲಾಯನಃ– “ ದರ್ಶಪೂರ್ಣಮಾಸಾಭ್ಯಾಮಿಷ್ಟ್ವೇಷ್ಟಿಪಶುಚಾತುರ್ಮಾಸ್ಯೈರಥ ಸೋಮೇನ ” ಇತಿ । ಯಜೇತೇತಿ ಶೇಷಃ । ಇಷ್ಟಿರಾಗ್ರಯಣೇಷ್ಟಿಃ । ಪಶುರ್ನಿರೂಢಪಶುಬಂಧಃ । ಆಪಸ್ತಂಬೋಽಪ್ಯಾಹ– “ ಅಥ ದರ್ಶಪೂರ್ಣಮಾಸಾವಾರಭತೇ ತಾಭ್ಯಾಂ ಸಂವತ್ಸರಮಿಷ್ಟ್ವಾ ಸೋಮೇನ ಪಶುನಾ ವಾ ಯಜತೇ ” ಇತಿ । ಏತಚ್ಛಬ್ದಾದುತ್ತರ ಉಕಾರೋಽಪಿಶಬ್ದಪರ್ಯಾಯಃ । ಏಷಾಪ್ಯೇಕಾ ದೀಕ್ಷಾ । ಏವಮುಕ್ತೇ ಸತ್ಯನ್ಯಾಪಿ ಕಾಚಿದ್ದೀಕ್ಷಾಸ್ತೀತಿ ಸೂಚಿತಂ ಭವತಿ । ಅತ ಏವಾಶ್ವಲಾ-

ಯುನ ಇಷ್ಟಿಪೂರ್ವತ್ವಂ ಸೋಮಪೂರ್ವತ್ವಂ ಚೇತ್ಯುಭೌ ಪಕ್ಷಾವುದಾಜಹಾರ “ ಊರ್ಧ್ವಂ ದರ್ಶಪೂರ್ಣಮಾಸಾಭ್ಯಾಂ ಯಥೋಪಪತ್ತ್ಯೇಕೇ ಪ್ರಾಗಪಿ ಸೋಮೇನೈಕೇ ” ಇತಿ । ಉಪಪತ್ತಿರ್ದ್ರವ್ಯಾದಿಸಂಪತ್ತಿಸ್ತಾಮನತಿಕ್ರಮ್ಯೇತಿ ಯಥೋಪಪತ್ತಿ । ದರ್ಶಪೂರ್ಣಮಾಸಾಭ್ಯಾಮೂರ್ಧ್ವಂ ದ್ರವ್ಯಾದಿಸಂಪತ್ತೌ ಸತ್ಯಾಂ ಸೋಮೇನ ಯಜೇತೇತಿ ಕೇಷಾಂಚಿನ್ಮತಂ ತಾಭ್ಯಾಂ ಪ್ರಾಗಪಿ ಸಂಪತ್ತೌ ಸೋಮಪಾನಮಿತ್ಯಪರೇಷಾಂ ಮತಂ । ತೈತ್ತಿರೀಯಾಶ್ಚೇಷ್ಟಿಪೂರ್ವತ್ವಮಭಿಪ್ರೇತ್ಯ ವಸಂತಾದಿಕಾಲವಿಶೇಷೇಷ್ವಾಧಾನಮಾಮ್ನಾಯ ಪುನಃ ಸೋಮಪೂರ್ವತ್ವಮಭಿಪ್ರೇತ್ಯ ಕಾಲನಿಯಮಮಂತರೇಣಾಧಾನಮಾಮನಂತಿ– “ ಅಥೋ ಖಲು ಯದೈವೈನಂ ಯಜ್ಞ ಉಪನಮೇತ್ । ಅಥಾದಧೀತ ಸೈವಾಸ್ಯರ್ಧಿಃ ” ಇತಿ । ಆಪಸ್ತಂಬೋಽಪೀದಮೇವ ಸೋಮಾಧಾನಮಭಿಪ್ರೇತ್ಯ ವಸಂತಾದಿಕಾಲವಿಶೇಷಪ್ರತೀಕ್ಷಾಂ ವಾರಯತಿ– “ ನರ್ತೂನ್ಸೂರ್ಕ್ಷೇನ್ನ ನಕ್ಷತ್ರಂ ” ಇತಿ । ತಸ್ಮಾತ್ಪಕ್ಷದ್ವಯಂ ॥

ಯಾವ ಯಜಮಾನನು ದರ್ಶಪೂರ್ಣಮಾಸೇಷ್ಟಿಗಳನ್ನು ಅನುಷ್ಠಾನಮಾಡಿರುವನೋ ಅವನು ಯಜ್ಞಗಳನ್ನು ಮಾಡುವುದಕ್ಕೆ ಆರಂಭಿಸಿರುವನೆಂದೂ, ದೇವತೆಗಳನ್ನು ಆರಾಧಿಸಲು ಪ್ರಾರಂಭಿಸಿರುವನೆಂದೂ ತಿಳಿಯಬೇಕು. ಈ ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡುವಾಗ ಯಜಮಾನನು ಅಮಾವಾಸ್ಯೇಷ್ಟಿಯಲ್ಲಿಯೂ ಪೌರ್ಣಮಾಸ್ಯೇಷ್ಟಿಯಲ್ಲಿಯೂ ಸಿದ್ಧಪಡಿಸಿರುವ ಹವಿಸ್ಸನ್ನು ಹೋಮಮಾಡಿದನಂತರ (ಸೋಮಯಾಗದ) ದೀಕ್ಷಾಕ್ರಮದ ವಿಧಿಗಳನ್ನು ಕೈಗೊಳ್ಳಬೇಕು. ಇದು ಒಂದು (ರೀತಿಯ) ದೀಕ್ಷಾವಿಧಾನವು.

ಇದುವರೆಗೂ ದೀಕ್ಷಣೀಯೇಷ್ಟಿವಿಧಾನವನ್ನು ಹೇಳಿದ್ದಾಯಿತಲ್ಲಾ. ಅದನ್ನು ಯಾವಾಗ ಮಾಡಬೇಕು ಎಂಬ ವಿಷಯದಲ್ಲಿ ಅದರ ಕಾಲನಿರ್ಣಯವನ್ನು ತಿಳಿಸುತ್ತಾರೆ—ಹೊಸದಾಗಿ ಯಜ್ಞಮಾಡಲು ಪ್ರಾರಂಭಿಸುವ ಯಜಮಾನರು ಮೊದಲು ಆಧಾನ ಅಥವಾ ಅಗ್ನ್ಯಾಧಾನವೆಂಬ ಕರ್ಮವನ್ನು ಮಾಡುವರು. ಆಧಾನವೆಂದರೆ ವಿಧ್ಯುಕ್ತವಾಗಿ ಅರಣಿಗಳಲ್ಲಿ ಕಡೆದು ಅಗ್ನಿಯನ್ನು ಉತ್ಪಾದನೆ ಮಾಡಿ ಆ ಅಗ್ನಿಯಲ್ಲಿ ನಿತ್ಯವೂ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡುವರು. ಈ ಅಗ್ನಿಯನ್ನು ಅವರು ಆಜೀವಪರ್ಯಂತ ಕಾಪಾಡಬೇಕು. ಬಳಿಕ ಯಜಮಾನನು ಅಮಾವಾಸ್ಯೆ ಮತ್ತು ಪೌರ್ಣಿಮೆಗಳಲ್ಲಿ ಮಾಡುವ ದರ್ಶಪೂರ್ಣಮಾಸೇಷ್ಟಿಗಳೆಂಬ ಎರಡು ಇಷ್ಟಿಗಳನ್ನು ಮಾಡಬೇಕು. ಬಳಿಕ ನಿರೂಢಪಶುಬಂಧ, ಚಾತುರ್ಮಾಸ್ಯಗಳೆಂಬ ಇಷ್ಟಿಗಳನ್ನು ಮಾಡಿ ಅನಂತರ ಹಿಂದೆ ಹೇಳಿದಂತೆ ದೀಕ್ಷಣೀಯೇಷ್ಟಿ ಮೊದಲಾದ ವಿಧಿಗಳಿಂದ ದೀಕ್ಷಾಬದ್ಧನಾಗಿ ಸೋಮಯಾಗವನ್ನು ಮಾಡಬೇಕು. ಇದು ಮೊದಲಿನಿಂದಲೂ ನಡೆದುಬರುತ್ತಿರುವ ಕ್ರಮವು. ಆದರೆ ಈ ದೀಕ್ಷಣೀಯೇಷ್ಟಿಯನ್ನು ಮಾಡುವ ಕಾಲವಿಷಯದಲ್ಲಿ ಭಿನ್ನಾಭಿಪ್ರಾಯವು ಬಹಳ ಪೂರ್ವಕಾಲದಿಂದಲೂ ಇರುವುದು. ಹೇಗೆಂದರೆ—ಯಾವ ಪುರುಷನು ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಿರುವನೋ ಅವನು ಯಜ್ಞವನ್ನು (ಒಂದು ವಿಧದಲ್ಲಿ) ಪ್ರಾರಂಭಿಸಿದಂತೆಯೇ ಆಯಿತು. ಯಜ್ಞವನ್ನು ಮಾಡಲು ಪ್ರಾರಂಭಿಸಿರುವ ಯಜಮಾನನಿಗೆ ಪುನಃ ದೀಕ್ಷೆಯೆಂದರೇನು? ಇದು ವಿರೋಧಾಭಾಸವಲ್ಲವೇ ಎಂದರೆ, ಸೋಮಯಾಗದ ವಿಧಾನವೇ ಬೇರೆ, ದರ್ಶಪೂರ್ಣಮಾಸೇಷ್ಟಿಗಳ ವಿಧಾನವೇ ಬೇರೆ. ಅವುಗಳಿಗೆ ಪರಸ್ಪರ ಸಂಬಂಧವಿಲ್ಲ. ಸೋಮಯಾಗಕ್ಕೆ ಪ್ರತ್ಯೇಕವಾಗಿ ದೀಕ್ಷೆಯನ್ನು ಪಡೆಯಲೇಬೇಕು. ಎಂದು ಕೆಲವರ ಮತ. ಮತ್ತೆ ಕೆಲವರು-- ಸೋಮಯಾಗದ ಅಂಗಕರ್ಮಗಳಾದ ದೀಕ್ಷಣೀಯೇಷ್ಟಿ, ಪ್ರಾಯಣೀಯೇಷ್ಟಿ, ಮೊದಲಾದ ಇಷ್ಟಿಗಳು ದರ್ಶಪೂರ್ಣಮಾಸೇಷ್ಟಿಗಳ ವಿಕೃತರೂಪಗಳೇ ಆದ್ದರಿಂದ ದರ್ಶಪೂರ್ಣೇಷ್ಟಿಗಳನ್ನು ಮಾಡಿರುವ ಯಜಮಾನನು ಮತ್ತೆ ದೀಕ್ಷಣೀಯೇಷ್ಟಿ ಮೊದಲಾದ ಇಷ್ಟಿಗಳನ್ನು ಏಕೆ ಮಾಡಬೇಕು? ಎಂದರೆ, ದರ್ಶಪೂರ್ಣಮಾಸೇಷ್ಟಿಗಳು ಪ್ರಕೃತಿಸ್ವರೂಪಗಳು. ದೀಕ್ಷಣೀಯೇಷ್ಟಿ ಪ್ರಾಯಣೀಯೇಷ್ಟಿ ಮೊದ

ಲಾದವು ವಿಕೃತೇಷ್ಟಿಗಳು. ಪ್ರಕೃತೇಷ್ಟಿಗಳನ್ನು ಮಾಡುವುದರಿಂದ ವಿಕೃತೇಷ್ಟಿಗಳನ್ನು ಮಾಡಿದಂತಾಗಲಿಲ್ಲ. ಪ್ರಕೃತೇಷ್ಟಿ ವಿಕೃತೇಷ್ಟಿಗಳ ವಿಧಾನವು ಒಂದೇ ಆಗಿದ್ದರೂ ದೇವತಾದಿಗಳು ಬೇರೆಬೇರೆ. ಆದ್ದರಿಂದ ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಿದ್ದರೂ ದೀಕ್ಷಣೀಯೇಷ್ಟಿಯನ್ನು ಮಾಡಲೇಬೇಕು. ಅಗ್ನಿಹೋತ್ರವೂ ಮತ್ತು ಅದರ ಇತರ ಅಂಗಕರ್ಮಗಳೂ ಸಹ ದರ್ಶಪೂರ್ಣಮಾಸೇಷ್ಟಿಯ ಕ್ರಮದಂತೆ ಇರುವುದಾದರೂ ಅವು ದರ್ಶಪೂರ್ಣಮಾಸದಂತೆ ಪ್ರಕೃತಿಸ್ವರೂಪದ ಇಷ್ಟಿಗಳಲ್ಲ. ವಿಕೃತೇಷ್ಟಿಗಳು. ಮತ್ತು ಕೆಲವು ಇಷ್ಟಿಗಳಲ್ಲಿ ಆಹವನೀಯಾದಿ ಅಗ್ನಿಗಳ ಅವಶ್ಯಕತೆ ಇರುವುದು. ಇದಕ್ಕಾಗಿ ಪವಮಾನೇಷ್ಟಿಯನ್ನು ಮಾಡಬೇಕು. ಈ ಪವಮಾನೇಷ್ಟಿಯೂ ಸಹ ವಿಕೃತೇಷ್ಟಿಯೇ ಆಗಿರುವುದು. ಆದ್ದರಿಂದ ದರ್ಶಪೂರ್ಣಮಾಸೇಷ್ಟಿ, ಅಗ್ನಿಹೋತ್ರ, ಪವಮಾನೇಷ್ಟಿ ಮೊದಲಾದ ಯಾವ ಪ್ರಕೃತಿ ಅಥವಾ ವಿಕೃತಿ ಇಷ್ಟಿಯನ್ನು ಮಾಡಿದರೂ ಪ್ರಕೃತೇಷ್ಟಿಯಾದ ದರ್ಶಪೂರ್ಣಮಾಸೇಷ್ಟಿಯನ್ನು ಅನುಸರಿಸಿಯೇ ಮಾಡಬೇಕು. ಆದ್ದರಿಂದ ದರ್ಶಪೂರ್ಣಮಾಸೇಷ್ಟಿಯನ್ನು ಮಾಡಿರುವ ಯಜಮಾನನು ಯಜ್ಞಾರಂಭವನ್ನು ಮಾಡಿದಂತೆಯೇ ಆಯಿತು, ಎಂದು ಹೇಳುವರು.

ದರ್ಶಪೂರ್ಣಮಾಸೇಷ್ಟಿಗಳ ಅನುಷ್ಠಾನದಿಂದ ಯಜಮಾನನು ಯಜ್ಞಾರಂಭವನ್ನು ಮಾಡಿದಂತಾಯಿತು ಎಂದು ಒಪ್ಪಿಕೊಂಡಮೇಲೆ ಆಯಾ ಯಜ್ಞಗಳ ದೇವತೆಗಳನ್ನು ಪೂಜಿಸಲು ಪ್ರಾರಂಭಿಸಿದಂತಾಯಿತು. ಹಾಗಾದರೆ ಮತ್ತೆ **ಆರಬ್ಧ-ದೇವತಃ** ಎಂದು ಮತ್ತೆ ಏಕೆ ಹೇಳಬೇಕು ಎಂದರೆ ಯಜ್ಞಗಳಲ್ಲಿ ದೇವತೆಗಳನ್ನು ಆರಾಧಿಸುವುದು ಪ್ರಾಧಾನ್ಯವಿಷಯವಾದ್ದರಿಂದ ಇಲ್ಲಿ ಅದನ್ನು ಜ್ಞಾಪಕಾರ್ಥವಾಗಿ ಮತ್ತೆ ಹೇಳಲಾಗಿದೆ. ಇದಲ್ಲದೆ ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಿದ ಯಜಮಾನನು ಸಮಸ್ತಯಜ್ಞಗಳನ್ನು ಆರಂಭಿಸಿದಂತಾಯಿತೆಂದೂ, ದೇವತೆಗಳನ್ನು ಪೂಜಿಸಲು ಪ್ರಾರಂಭಿಸಿದಂತಾಯಿತೆಂದೂ ಹೇಳಿದರೂ ಈಗ ಎಂದರೆ ದರ್ಶಪೂರ್ಣಮಾಸಾನುಷ್ಠಾನಾನಂತರ ಸೋಮಯಾಗವನ್ನು ಆರಂಭಿಸಬೇಕಾಗಿರುವುದರಿಂದ ದೀಕ್ಷಣೀಯೇಷ್ಟಿಯನ್ನು ಮಾಡಬೇಕು. ಮೇಲೆ ಹೇಳಿರುವ ವಾಕ್ಯಗಳಲ್ಲಿ **ಅಮಾವಾಸ್ಯೇನ** ಮತ್ತು **ಪೌರ್ಣಮಾಸೇನ** ಎಂಬ ಶಬ್ದಪ್ರಯೋಗಗಳಿವೆ. ಅಮಾವಾಸ್ಯೆಯಲ್ಲಿ ಅರ್ಪಿಸುವ ಹವಿಸ್ಸಿಗೆ ಅಮಾವಾಸ್ಯಾ ಎಂದೂ ಪೌರ್ಣಮಾಸಿಯಲ್ಲಿ ಅರ್ಪಿಸುವ ಹವಿಸ್ಸಿಗೆ ಪೌರ್ಣಮಾಸಾ ಎಂದೂ ಸಂಕೇತವು. **ಹವಿಃ**ಶಬ್ದವು ಇಲ್ಲಿ ಯಜ್ಞವೆಂಬ ಅರ್ಥವನ್ನು ಸೂಚಿಸುವುದು. **ವಾ** ಎಂಬ ಶಬ್ದವು ಮತ್ತು ಎಂಬ ಸಮುಚ್ಚಯಾರ್ಥವನ್ನು ಸೂಚಿಸುವುದು. ಆದ್ದರಿಂದ ಅಮಾವಾಸ್ಯೆಯಲ್ಲಿಯೂ ಮತ್ತು ಪೌರ್ಣಮಾಸ್ಯೆಯಲ್ಲಿಯೂ ಸಹ ಹವಿಸ್ಸನ್ನರ್ಪಿಸಿ ಇಷ್ಟಿಯನ್ನು ಮಾಡಿ ದೀಕ್ಷಾಬದ್ಧನಾಗಬೇಕು. ಈ ಅರ್ಥವನ್ನು ಇನ್ನೂ ವಿಶದವಾಗಿ ತಿಳಿಸುವರು. **ಬರ್ಹಿಃ** ಎಂಬ ಶಬ್ದವೂ ಸಹ ಇಲ್ಲಿ ಯಜ್ಞವೆಂಬ ಅರ್ಥವನ್ನೇ ಸೂಚಿಸುವುದು. ಆದ್ದರಿಂದ ಅಮಾವಾಸ್ಯೆಯಲ್ಲಿಯೂ ಪೌರ್ಣಮಾಸ್ಯೆಯಲ್ಲಿಯೂ ಇಷ್ಟಿರೂಪವಾದ ಯಜ್ಞಾದಿಗಳನ್ನು ನೆರವೇರಿಸಿ ಅನಂತರ ದೀಕ್ಷಾಕ್ರಮವನ್ನು ಕೈಗೊಳ್ಳಬೇಕು ಎಂದಭಿಪ್ರಾಯವು. ಆಶ್ವಲಾಯನರೂ ಸಹ—**ದರ್ಶಪೂರ್ಣಮಾಸಾಭ್ಯಾಮಿಷ್ಟ್ವೇಷ್ಟಿಪಶುಚಾತುರ್ಮಾಸ್ಯೈರಥ ಸೋಮೇನ** (ಆಶ್ವ. ಶ್ರೌ.ಸೂ. ೪-೧-೧) ಎಂದು ಹೇಳಿರುವರು. ಎಂದರೆ ಯಜಮಾನನು ಮೊದಲು ದರ್ಶಪೂರ್ಣಮಾಸ ಅನಂತರ ಆಗ್ರಯಣೇಷ್ಟಿ, ನಿರೂಢಪಶುಬಂಧ, ಚಾತುರ್ಮಾಸ್ಯ ಎಂಬ ಇಷ್ಟಿಗಳನ್ನು ಮಾಡಿ ಅನಂತರ ಸೋಮಯಾಗಮಾಡುವುದಕ್ಕಾಗಿ ದೀಕ್ಷಾಬದ್ಧನಾಗಬೇಕು ಎಂದಿದೆ. ಆಪಸ್ತಂಬಮಹರ್ಷಿಯೂ ಹೀಗೆ ಹೇಳಿರುವರು—**ಅಥ ದರ್ಶಪೂರ್ಣಮಾಸಾವಾರಭತೇ ತಾಭ್ಯಾಂ ಸಂವತ್ಸರಮಿಷ್ಟ್ವಾ ಸೋಮೇನ ಪಶುನಾ ವಾ ಯಜತೇ** (ಆಪ. ಶ್ರೌ.ಸೂ. ೫-೨೩-೨). ಎಂದರೆ ಯಜ್ಞಮಾಡುವ ಯಜಮಾನನು ಮೊದಲು ದರ್ಶಪೂರ್ಣಮಾಸೇಷ್ಟಿಗಳನ್ನು ಪ್ರಾರಂಭಿಸಬೇಕು. ಆ ಇಷ್ಟಿಗಳನ್ನು ಪ್ರತಿಮಾಸದಲ್ಲಿಯೂ ಒಂದು ಸಂವತ್ಸರದವರೆಗೆ ಮಾಡಬೇಕು. ಅನಂತರ ಸೋಮಯಾಗವನ್ನು ಅಥವಾ ಪಶುಯಾಗವನ್ನು ಮಾಡಬೇಕು. ಮೇಲಿನ ಮೂಲವಾಕ್ಯದ ದೀಕ್ಷಿತೈಷೋ (ದೀಕ್ಷಿತಾ+ಏಷಾ+ಉ) ಉಕಾರವು ಅಪಿಶಬ್ದಾರ್ಥ ಎಂದರೆ ಮತ್ತು ಎಂಬರ್ಥವನ್ನು ಸೂಚಿಸುವುದು. ಇದು ಒಂದು ವಿಧವಾದ ದೀಕ್ಷೆಯು. ಇಲ್ಲಿ ಮತ್ತು (ಉ) ಎಂದಿರುವುದರಿಂದ ಇನ್ನೊಂದು ದೀಕ್ಷಾಕ್ರಮವು ಸೂಚಿತವಾದಂತಾಯಿತು. ಆದ್ದರಿಂದಲೇ ಆಶ್ವಲಾಯನರು – ಇಷ್ಟಿಪೂರ್ವದಲ್ಲಿ ಮಾಡುವ ದೀಕ್ಷಾ ಮತ್ತು ಸೋಮಯಾಗದ

ಪೂರ್ವದಲ್ಲಿ ಮಾಡುವ ದೀಕ್ಷಾ ಎಂದು ದೀಕ್ಷೆಗೆ ಎರಡು ಕಾಲಗಳನ್ನು ಹೇಳಿರುವರು—“ **ಊರ್ಧ್ವಂ ದರ್ಶಪೂರ್ಣಮಾಸಾಭ್ಯಾಂ ಯಥೋಪಪತ್ತ್ಯೇಕೇ ಪ್ರಾಗಪಿ ಸೋಮೇನೈಕೇ** ” (ಆಶ್ವ. ಸಾ. ಸೂ. ೪-೧-೨) ಎಂದು ಉಪಪತ್ತಿ ಎಂದರೆ ಯಜ್ಞಕ್ಕೆ ಬೇಕಾದ ಸಾಮಗ್ರಿಗಳು. ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಿದ ಬಳಿಕ ಸೋಮಯಾಗಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ಸೋಮಯಾಗಾರ್ಥವಾಗಿ ದೀಕ್ಷೆಯನ್ನು ವಹಿಸಬೇಕು ಅಥವಾ ಯಜ್ಞಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಸಂಪಾದನೆಮಾಡುವುದಕ್ಕಿಂತ ಮೊದಲೇ ಸೋಮಯಾಗಾರ್ಥವಾಗಿ ದೀಕ್ಷೆಯನ್ನು ಕೈಗೊಳ್ಳಬಹುದು ಎಂದು ಎರಡು ಕಾಲಗಳನ್ನು ನಿರ್ದೇಶಮಾಡಿರುವರು. ಕೃಷ್ಣಯಜುರ್ವೇದದ ತೈತ್ತಿರೀಯಬ್ರಾಹ್ಮಣದಲ್ಲಿ- “ **ಅಥೋ ಖಲು ಯದೇವೈನಂ ಯಜ್ಞ ಉಪನಮೇತ್ । ಅಥಾದಧೀತ । ಸೈವಾಸ್ಯರ್ಧಿಃ** (ತೈ. ಬ್ರಾ. ೧-೧-೨-೮). ವಸಂತಾದಿ ಋತುಗಳಲ್ಲಿ ಬ್ರಾಹ್ಮಣಾದಿವರ್ಣಗಳು ಆಧಾನವನ್ನು ಮಾಡಬೇಕೆಂದು ಹೇಳಿದ್ದರೂ ಸೋಮಯಾಗವನ್ನು ಮಾಡಬೇಕೆಂದು ಬಯಸಿ ಅದಕ್ಕಾಗಿ ಪೂರ್ವದಲ್ಲಿ ಆಧಾನಮಾಡಬೇಕಾದರೆ ವಸಂತಾದಿಕಾಲಗಳನ್ನು ನೋಡಬೇಕಾದುದಿಲ್ಲ. ಸೋಮಯಾಗಕ್ಕೆ ಮುಂಚಿತವಾಗಿ ಕಾಲಕ್ಕೆ ಗಮನವನ್ನು ಕೊಡದೆ ಯಾವಕಾಲದಲ್ಲಾದರೂ ಆಧಾನವನ್ನು ಮಾಡಬಹುದು ಎಂದಿದೆ. ಇದೇ ಅಭಿಪ್ರಾಯವನ್ನು ಆಪಸ್ತಂಬರು ಈರೀತಿ ಹೇಳಿದ್ದಾರೆ— **ನರ್ತುರ್ನ್ನಸೃಕ್ಷೇನ್ನ ನಕ್ಷತ್ರಂ** ” (ಆಪ. ಶ್ರೌ. ಸೂ. ೫-೩-೨೧) ಸೋಮಯಾಗಾರ್ಥವಾಗಿ ಪೂರ್ವಭಾವಿಯಾಗಿ ಮಾಡುವ ಆಧಾನವಿಷಯದಲ್ಲಿ ಹಿಂದೆ ಹೇಳಿದಂತೆ ವಸಂತಾದಿಕಾಲಗಳನ್ನೂ ಪ್ರಶಸ್ತವಾದ ನಕ್ಷತ್ರಾದಿಗಳನ್ನೂ ಗಮನಿಸಬೇಕಾಗಿಲ್ಲ. ಸೋಮಯಾಗಕ್ಕೆ ಪೂರ್ವದಲ್ಲಿ ಯಾವ ಕಾಲದಲ್ಲಿಯಾದರೂ ಆಧಾನವನ್ನು ಮಾಡಬಹುದು. ಅನಂತರ ದೀಕ್ಷೆಯನ್ನು ಕೈಗೊಳ್ಳಬೇಕು ಎಂದು. ಆದ್ದರಿಂದ ಆಧಾನಕರ್ಮವನ್ನು ಮಾತ್ರ ಮಾಡಿ ಸೋಮಯಾಗಾರ್ಥವಾಗಿ ದೀಕ್ಷಾಕ್ರಮವನ್ನು ಕೈಗೊಳ್ಳಬಹುದು ಅಥವಾ ಆಧಾನ ಮತ್ತು ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡಿ ಅನಂತರ ದೀಕ್ಷಾಕ್ರಮವನ್ನು ಕೈಗೊಳ್ಳಬಹುದು ಎಂಬ ಎರಡು ವಿಧ ಕ್ರಮಗಳನ್ನು ಹೇಳಿರುವರು.

ಮುಖ್ಯಾಭಿಪ್ರಾಯವು—ಮೂಲವಾಕ್ಯದಲ್ಲಿ ಎರಡು ವಿಷಯಗಳ ಪ್ರಸ್ತಾಪವಿರುವುದು. ಮೊದಲನೆಯದು—ಸೋಮಯಾಗವನ್ನು ಮಾಡುವ ಯಜಮಾನನು ದೀಕ್ಷಾಬದ್ಧನಾಗಿಯೇ ಮಾಡಬೇಕಾಗಿರುವುದು. ಯಾವ ಯಜ್ಞವನ್ನೂ ಮಾಡದಿರುವ ಯಜಮಾನನು ಮೊದಲು ಅಗ್ನ್ಯಾಧೇಯವನ್ನು ಮಾಡಬೇಕು. ಅನಂತರ ದರ್ಶಪೂರ್ಣಮಾಸ, ಆಗ್ರಯಣ, ಪಶುಬಂಧ, ಚಾತುರ್ಮಾಸ್ಯಾದಿ ಇಷ್ಟಿಗಳನ್ನು ಮಾಡಬಹುದು. ಆದ್ದರಿಂದ ಈ ಯಾಗಗಳನ್ನು ಮಾಡಿರುವ ಯಜಮಾನನು ಯಜ್ಞಾರಂಭವನ್ನು ಮಾಡಿರುವುದರಿಂದ ಸೋಮಯಾಗಕ್ಕೆ ಮತ್ತೆ ದೀಕ್ಷೆ ಯಾಕೆ? ಅದನ್ನೂ ದೀಕ್ಷೆ ಇಲ್ಲದೆ ಮಾಡಬಹುದಲ್ಲಾ ಎಂದರೆ, ಹಾಗಲ್ಲ ಯಾವ ಇಷ್ಟಿ ಅಥವಾ ಯಾಗಗಳನ್ನು ಮಾಡಿದ್ದರೂ ಸೋಮಯಾಗ ಮಾಡುವುದಕ್ಕಾಗಿ ದೀಕ್ಷಾಬದ್ಧನಾಗಿಯೇ ಮಾಡಬೇಕು. ಏಕೆಂದರೆ ಸೋಮಯಾಗದ ಕ್ರಮವೇ ಬೇರೆ, ಇತರ ಇಷ್ಟಿಗಳ ಕ್ರಮವೇ ಬೇರೆ. ಇಷ್ಟೇ ಅಲ್ಲ ಒಂದಾವರ್ತಿ ಸೋಮಯಾಗ ಮಾಡಿದ ಯಜಮಾನನು ಮತ್ತೊಂದಾವರ್ತಿ ಸೋಮಯಾಗವನ್ನು ಮಾಡಲು ಬಯಸಿದರೆ ಆಗಲೂ ದೀಕ್ಷೆಯನ್ನು ಕೈಗೊಳ್ಳಲೇಬೇಕು. ಎಂದರೆ ಎಷ್ಟಾವರ್ತಿ ಸೋಮಯಾಗ ಮಾಡಿದರೂ ಅಷ್ಟಾವರ್ತಿ ದೀಕ್ಷಾಕ್ರಮವನ್ನು ವಹಿಸಿಯೇ ಮಾಡಬೇಕು. ಎರಡನೆಯ ವಿಷಯ—ಮೇಲೆ ಹೇಳಿದ ಅಗ್ನ್ಯಾಧೇಯ, ದರ್ಶಪೂರ್ಣಮಾಸೇಷ್ಟಿ, ಆಗ್ರಯಣ ಇತ್ಯಾದಿಗಳನ್ನು ಮಾಡಿದನಂತರ ಸೋಮಯಾಗ ಮಾಡಬೇಕೇ ಅಥವಾ ಅಗ್ನ್ಯಾಧಾನವನ್ನು ಮಾತ್ರ ಮಾಡಿ ಸೋಮಯಾಗವನ್ನು ಮಾಡಬಹುದೇ ಎಂದರೆ, ಹೇಗೆಬೇಕಾದರೂ ಮಾಡಬಹುದು. ಎರಡು ಕ್ರಮಗಳಲ್ಲಿ ಯಾವುದನ್ನು ಬೇಕಾದರೂ ಅನುಸರಿಸಬಹುದು. ಅಗ್ನ್ಯಾಧಾನವನ್ನು ಮಾತ್ರ ಮಾಡಿ ಅನಂತರ ಸೋಮಯಾಗದ ದೀಕ್ಷಾಕ್ರಮವನ್ನು ಕೈಗೊಂಡು ಸೋಮಯಾಗವನ್ನು ಮಾಡಬಹುದು. ಅಥವಾ ಅಗ್ನ್ಯಾಧಾನಮಾಡಿದಮೇಲೆ ಮುಂದಿನ ಇಷ್ಟಿಗಳಾದ ದರ್ಶಪೂರ್ಣಮಾಸೇಷ್ಟಿ, ಆಗ್ರಯಣೇಷ್ಟಿ, ಪಶುಬಂಧ, ಚಾತುರ್ಮಾಸ್ಯ ಇವುಗಳನ್ನು ಮಾಡಿ ಬಳಿಕ ದೀಕ್ಷಾಬದ್ಧನಾಗಿ ಸೋಮಯಾಗವನ್ನು ಮಾಡಬಹುದು ಈ ಎರಡು ಕ್ರಮಗಳೂ ವಿಹಿತವು ಎಂದು ಮುಖ್ಯಾಭಿಪ್ರಾಯವು.

**ಸಪ್ತದಶ ಸಾಮಿಧೇನೀರನುಬ್ರೂಯಾತ್ ॥**

**ಚೋದಕಪ್ರಾಪ್ತಾಂ ಪಂಚದಶಸಂಖ್ಯಾಮುಪವದಿತುಂ ಸಂಖ್ಯಾನ್ತರಂ ವಿಧತ್ತೇ— ಪ್ರ ವೋ ವಾಜಾ ಅಭಿದ್ಯವ** (ಋ.ಸಂ. ೩-೨೭-೧) **ಇತ್ಯಾದ್ಯಾ ಏಕಾದಶಸಂಖ್ಯಾಕಾ ಋಚೋ ವಹ್ನಿಸಮಿಂಧನಹೇತುತ್ವಾತ್ಸಾಮಿಧೇನ್ಯ ಇತ್ಯುಚ್ಯಂತೇ । ತಾಸು ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಮಿತಿ ವಚನಾತ್ತಾಃ ಪಂಚದಶ ಸಂಪದ್ಯಂತೇ । ಪ್ರಕೃತಾವೇವ ವಿಹಿತಾಸು ಪಂಚದಶಸ್ವೃಕ್ಷು ಚೋದಕಪ್ರಾಪ್ತಾಸು ಯೇ ಸಮಿಧ್ಯಮಾನಸಮಿದ್ಧವತ್ಯೌ ದ್ವೇ ಋಚೌ ತಯೋರ್ಮಧ್ಯೇ ಧಾಯ್ಯಾಭಿಧೇಯೇ ಋಚೌ ಪ್ರಕ್ಷೇಪ್ತವ್ಯೇ । ತಥಾ ಚಾಶ್ವಲಾಯನಃ—'ದೀಕ್ಷಣೀಯಾಯಾಂ ಧಾಯ್ಯೇ ವಿರಾಜೌ' ಇತಿ । ತತ್ರ ಪೃಥುಪಾಜಾ ಅಮರ್ತ್ಯ ಇತ್ಯೇಕಾ ತಂ ಸಬಾಧೋ ಯತಸ್ರುಚ ಇತಿ ದ್ವಿತೀಯಾ । ಏತಚ್ಚ ಪ್ರಯೋಗಸಂಗ್ರಹಕಾರೇಣೋದಾಹೃತಂ—" ಅಥ ದೀಕ್ಷಣೀಯಾಯಾಂ ಧಾಯ್ಯೇ ಭವತಃ ಶೋಚಿಷ್ಕೇಶಸ್ತಮೀಮಹೇ ಪೃಥುಪಾಜಾಸ್ತಂ ಸಬಾಧಃ" ಇತಿ । ಅಗ್ನಯೇ ಸಮಿಧ್ಯಮಾನಾಯಾನುಬ್ರೂಹೀತ್ಯೇವಮಧ್ವರ್ಯುಣಾ ಪ್ರೇಷಿತೋ ಹೋತಾ ಸಾಮಿಧೇನೀಃ ಸಪ್ತದಶಾನುಬ್ರೂಯಾತ್ ॥**

(ಈ ದೀಕ್ಷಣೀಯೇಷ್ಟಿಯಲ್ಲಿ ಅಗ್ನಿಯನ್ನು ಮಥಿಸಿ ಪ್ರಜ್ವಲನ ಮಾಡುವಾಗ ಎಂದರೆ ಸಮಿತ್ತುಗಳನ್ನು ಹಾಕಿ ಅಗ್ನಿಯನ್ನು ಚೆನ್ನಾಗಿ ಉರಿಯುವಂತೆ ಮಾಡುವಾಗ) ಹದಿನೇಳು ಸಾಮಿಧೇನೀ ಎಂಬ ಮಂತ್ರಗಳನ್ನು ಪಠಿಸಬೇಕು.

ಯಜ್ಞಗಳಲ್ಲಿ ಅಗ್ನಿಯನ್ನು ಉತ್ಪತ್ತಿಮಾಡಬೇಕಾದರೆ ಶಮೀ, ಅಶ್ವತ್ಥ ಎಂಬ ವೃಕ್ಷಗಳ ಎರಡು ಮರದ ತುಂಡುಗಳಿಂದ ಮಾಡುವರು. ಇವುಗಳಿಗೆ ಅರಣಿಗಳೆಂದು ಹೆಸರು. ಇವುಗಳಲ್ಲಿ ಒಂದು (ಕೆಳಗಿರುವುದು) ಅಗಲವಾಗಿ ಮಧ್ಯದಲ್ಲಿ ಸ್ವಲ್ಪ ಹಳ್ಳವಾಗಿರುವುದು. ಇದರಮೇಲೆ ಕೋಲಿನಂತಿರುವ ಇನ್ನೊಂದು ಅರಣಿಯನ್ನು ಇಟ್ಟು ಮೊಸರನ್ನು ಕಡೆಯುವಂತೆ ಬಲವಾಗಿ ಕಡೆಯಬೇಕು. ಆ ಘರ್ಷಣೆಯಿಂದ ಅದರಲ್ಲಿ ಅಗ್ನಿಯ ಉತ್ಪತ್ತಿಯಾಗುವುದು. ಉತ್ಪತ್ತಿಯಾಗುವಾಗ ಅದು ಒಂದು ಕೇವಲ ಸಣ್ಣಕಿಡಿಮಾತ್ರವಿರುವುದರಿಂದ ಅದನ್ನು ಚೆನ್ನಾಗಿ ಒಣಗಿದ ಸಮಿತ್ತುಗಳೆಂಬ ಅಶ್ವತ್ಥ ಅಥವಾ ಕೆಲವು ಬೇರೆ ವೃಕ್ಷದ ಕಡ್ಡಿಗಳನ್ನು (ಇವು ಸಾಧಾರಣವಾಗಿ ೮-೫ ಅಂಗುಲವುದ್ದವಿರುವವು) ಹಾಕಿ ಪ್ರಜ್ವಲನಮಾಡುವರು. ಪ್ರಜ್ವಲನ ಕಾಲದಲ್ಲಿ ಕೆಲವು ಮಂತ್ರಗಳನ್ನು ಹೇಳುವರು ಈ ಮಂತ್ರಗಳಿಗೆ ಸಾಮಿಧೇನೀ ಮಂತ್ರಗಳೆಂದು ಹೆಸರು. **ಸಮಿನ್ಧೇ ಸಾಮಿಧೇನೀಭಿರ್ಹೋತಾ ತಸ್ಮಾತ್ಸಾಮಿಧೇನೀ ನಾಮ** (ಶ. ಬ್ರಾ. ೧-೩-೫-೧) ಹೋತೃವೆಂಬ ಋತ್ವಿಜನು ಈ ಮಂತ್ರಗಳನ್ನು ಪಠಿಸಿ ಅಗ್ನಿಯನ್ನು ಪ್ರಜ್ವಲನಗೊಳಿಸುವುದರಿಂದ ಈ ಮಂತ್ರಗಳಿಗೆ ಸಾಮಿಧೇನೀಮಂತ್ರಗಳೆಂದು ಹೆಸರು ಎಂದು ಶತಪಥಬ್ರಾಹ್ಮಣದಲ್ಲಿ ಹೇಳಿರುವುದು. ಸಾಯಣರೂ ಐತರೇಯಾರಣ್ಯಕದ ಭಾಷ್ಯದಲ್ಲಿ-**ಸಮ್ಯಗಿಧ್ಯತೇ ಜ್ವಾಲ್ಯತೇಽಗ್ನಿರ್ಯಾಭಿರ್ಋಗ್ಭಿಸ್ತಾಃ ಸಾಮಿಧೇನ್ಯಃ** (ಐ.ಆ.ಸಾ.ಭಾ.೫-೧-೧) ಯಾವ ಋಕ್ಕುಗಳ ಪಠನದಿಂದ ಅಗ್ನಿಯು ಪ್ರಜ್ವಲಿತವಾಗುವುದೋ ಆ ಋಕ್ಕುಗಳಿಗೆ ಸಾಮಿಧೇನೀ ಋಕ್ಕುಗಳೆಂದು ಹೆಸರು. ಇಂತಹ ಮಂತ್ರಗಳ ಸಂಖ್ಯೆ ಎಷ್ಟು ಎಂದರೆ—

ದರ್ಶಪೂರ್ಣಮಾಸೇಷ್ಟಿ ಮೊದಲಾದ ಪ್ರಕೃತೀಷ್ಟಿಗಳಲ್ಲಿ ಈ ಸಾಮಿಧೇನೀಮಂತ್ರಗಳ ಸಂಖ್ಯೆಯು ಹದಿನೈದು. **ಪಂಚದಶ ಸಾಮಿಧೇನೀರನ್ವಾಹ** (ತೈ.ಸಂ.೨-೫-೮೨) ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ. ಆದರೆ ಬೇರೆಬೇರೆ ಇಷ್ಟಿಗಳಲ್ಲಿ ಈ ಸಂಖ್ಯೆಯು ಹೆಚ್ಚಾಗಬಹುದು. ಯಾವಾಗಲೂ ಹದಿನೈದಕ್ಕೆ ಕಡಿಮೆ ಇರುವುದಿಲ್ಲ. ಈ ಹದಿನೈದು ಮಂತ್ರಗಳು ಯಾವವೆಂದರೆ **ಪ್ರ ವೋ ವಾಜಾ ಅಭಿದ್ಯವಃ** (ಋ.ಸಂ.೩-೨೭-೧) ಎಂಬುದು ಮೊದಲನೆಯ ಋಕ್ಕು ; **ಅಗ್ನ ಆಯಾಹಿ**

**ವೀತಯೇ** (ಋ.ಸಂ. ೬-೧೬-೧೦) ಎಂಬುದು ಎರಡನೆಯ ಋಕ್ಕು; **ತಂ ತ್ವಾ ಸಮಿದ್ಭಿರಂಗಿರಃ** (ಋ.ಸಂ.೬-೧೬-೧೧) ಎಂಬುದು ಮೂರನೆಯ ಋಕ್ಕು; **ಸ ನಃ ಪೃಥು ಶ್ರವಾಯ್ಯಂ** (ಋ.ಸಂ. ೬-೧೬-೧೨) ಎಂಬುದು ನಾಲ್ಕನೆಯ ಋಕ್ಕು; **ಈಡೇನ್ಯೋ ನಮಸ್ಯಸ್ತಿರಃ** (ಋ.ಸಂ.೩-೨೭-೧೩) ಎಂಬುದು ಐದನೆಯ ಋಕ್ಕು; **ವೃಷೋ ಅಗ್ನಿಸ್ಸಮಿಧ್ಯತೇ** (ಋ.ಸಂ.೩-೨೭-೧೪) ಎಂಬುದು ಆರನೆಯ ಋಕ್ಕು; **ವೃಷಣಂ ತ್ವಾ ವಯಂ ವೃಷನ್** (ಋ.ಸಂ.೩-೨೭-೧೫) ಎಂಬುದು ಏಳನೆಯ ಋಕ್ಕು; **ಅಗ್ನಿ ದೂತಂ ವೃಣೀಮಹೇ** (ಋ.ಸಂ.೧-೧೨-೧) ಎಂಬುದು ಎಂಟನೆಯ ಋಕ್ಕು; **ಸಮಿಧ್ಯಮಾನೋ ಅಧ್ವರೇ** (ಋ.ಸಂ.೩-೨೭-೪) ಎಂಬುದು ಒಂಭತ್ತನೆಯ ಋಕ್ಕು; **ಸಮಿದ್ಧೋ ಅಗ್ನ ಆಹುತ** (ಋ.ಸಂ.೫-೨೮-೫) ಎಂಬುದು ಹತ್ತನೆಯ ಋಕ್ಕು; **ಆ ಜುಹೋತ ದುವಸ್ಯತ** (ಋ.ಸಂ.೫-೨೮-೬) ಎಂಬುದು ಹನ್ನೊಂದನೆಯ ಋಕ್ಕು; **ತ್ವಂ ವರುಣ ಉತ ಮಿತ್ರೋ ಅಗ್ನೇ** (ಋ.ಸಂ.೭-೧೩-೩) ಎಂಬುದು ಹನ್ನೊಂದನೆಯ ಋಕ್ಕು. ಈ ಮಂತ್ರಗಳು ಯಜುರ್ವೇದ ತೈತ್ತಿರೀಯ ಬ್ರಾಹ್ಮಣದಲ್ಲಿ (ತೈ.ಬ್ರಾ.೩-೫-೨) ಒಂದೇ ಅನುವಾಕದಲ್ಲಿ ೧-೧೨ ಮಂತ್ರಗಳಾಗಿ ಪಠಿತವಾಗಿವೆ. ಬೇರೆಬೇರೆ ಶಾಖೆಗಳಲ್ಲಿ ಬೇರೆಬೇರೆಕಡೆ ಇದೆ. ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವಂತೆ **ಋಷೇಃಋರ್ಷೇರ್ವಾ ಏತಾ ನಿರ್ಮಿತಾ ಯತ್ಸಾಮಿಧೇನ್ಯಸ್ತಾ ಯದಸಂಯುಕ್ತಾಃ ಸ್ಯುಃ** (ತೈ.ಸಂ.೨-೫-೭-೫) ಈ ಮಂತ್ರಗಳು ಋಗ್ವೇದದಲ್ಲಿ ಬೇರೆಬೇರೆ ಋಷಿಗಳಿಂದ ರಚಿತವಾಗಿ ಒಂದೆಡೆಯಲ್ಲಿ ಇವೆಲ್ಲವೂ ಸೇರಿ ಸಾಮಿಧೇನೀಮಂತ್ರಗಳೆಂದು ಪ್ರಸಿದ್ಧವಾಗಿವೆ ಇವುಗಳನ್ನು ಋಗ್ವೇದದಲ್ಲಿರುವಂತೆ ಒಂದೆಡೆಯಲ್ಲಿ ಸೇರಿಸಿ ಕೊಟ್ಟಿದೆ—

**ಪ್ರ ವೋ ವಾಜಾ ಅಭಿದ್ಯವೋ ಹವಿಷ್ಮಂತೋ ಘೃತಾಚ್ಯಾ ।**
**ದೇವಾಞ್ಜಿಗಾತಿ ಸುಮ್ನಯುಃ ॥** ( ವಿಶ್ವಾಮಿತ್ರಃ ) ॥ ೧ ॥
**ಅಗ್ನ ಆ ಯಾಹಿ ವೀತಯೇ ಗೃಣಾನೋ ಹವ್ಯದಾತಯೇ ।**
**ನಿ ಹೋತಾ ಸತ್ಸಿ ಬರ್ಹಿಷಿ ॥** ॥ ೨ ॥
**ತಂ ತ್ವಾ ಸಮಿದ್ಭಿರಂಗಿರೋ ಘೃತೇನ ವರ್ಧಯಾಮಸಿ ।**
**ಬೃಹಚ್ಛೋಚಾ ಯವಿಷ್ಠ್ಯ ॥** ॥ ೩ ॥
**ಸ ನಃ ಪೃಥು ಶ್ರವಾಯ್ಯಮಚ್ಛಾ ದೇವ ವಿವಾಸಸಿ ।**
**ಬೃಹದಗ್ನೇ ಸುವೀರ್ಯಂ ॥** ( ೨-೪ ಭರದ್ವಾಜಃ ) ॥ ೪ ॥
**ಈಳೇನ್ಯೋ ನಮಸ್ಯಸ್ತಿರಸ್ತಮಾಂಸಿ ದರ್ಶತಃ ।**
**ಸಮಗ್ನಿರಿಧ್ಯತೇ ವೃಷಾ ॥** ॥ ೫ ॥
**ವೃಷೋ ಅಗ್ನಿಃ ಸಮಿಧ್ಯತೇಽಶ್ವೋ ನ ದೇವವಾಹನಃ ।**
**ತಂ ಹವಿಷ್ಮಂತ ಈಳತೇ ॥** ॥ ೬ ॥
**ವೃಷಣಂ ತ್ವಾ ವಯಂ ವೃಷನ್ ವೃಷಣಃ ಸಮಿಧೀಮಹಿ ।**
**ಅಗ್ನೇ ದೀದ್ಯತಂ ಬೃಹತ್ ॥** ( ೫-೭ ವಿಶ್ವಾಮಿತ್ರಃ ) ॥ ೭ ॥
**ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।**
**ಅಸ್ಯ ಯಜ್ಞಸ್ಯ ಸುಕ್ರತುಂ ॥** ( ಮೇಧಾತಿಥಿಃ ಕಾಣ್ವಃ ) ॥ ೮ ॥
**ಸಮಿಧ್ಯಮಾನೋ ಅಧ್ವರೇ ಽಗ್ನಿಃ ಪಾವಕ ಈಡ್ಯಃ**
**ಶೋಚಿಷ್ಕೇಶಸ್ತಮೀಮಹೇ** ( ವಿಶ್ವಾಮಿತ್ರಃ ) ॥ ೯ ॥

**ಸಮಿದ್ಧೋ ಅಗ್ನ ಆಹುತ ದೇವಾನ್ ಯಕ್ಷಿ ಸ್ವಧ್ವರ ।**
**ತ್ವಂ ಹಿ ಹವ್ಯವಾಳಸಿ ॥** ॥ ೧೦ ॥

**ಆ ಜುಹೋತಾ ದುವಸ್ಯತಾಗ್ನಿಂ ಪ್ರಯತ್ಯಧ್ವರೇ ।**
**ವೃಣೀಧ್ವಂ ಹವ್ಯವಾಹನಂ ॥** (೧೦-೧೧ ವಿಶ್ವವಾರಾತ್ರೇಯಿ) ॥ ೧೧ ॥

**ತ್ವಂ ವರುಣ ಉತ ಮಿತ್ರೋ ಅಗ್ನೇ ತ್ವಾಂ ವರ್ಧಂತಿ ಮತಿಭಿರ್ವಸಿಷ್ಠಾಃ ।**
**ತ್ವೇ ವಸು ಸುಷಣನಾನಿ ಸಂತು ಯೂಯಂ ಪಾತ ಸ್ವಸ್ತಿಭಿಃ ಸದಾ ನಃ** ॥ ೧೨ ॥
(ವಸಿಷ್ಠಃ)

ಮೇಲೆ ಕೊಟ್ಟಿರುವ ಋಕ್ಕಗಳಲ್ಲಿ ೧-೧೧ ಋಕ್ಕಗಳು ಸಾಮಿಧೇನೀಮಂತ್ರಗಳು. ಯಜ್ಞಮಾಡುವಾಗ ಅಗ್ನಿಮಥನಕಾಲದಲ್ಲಿ ಅಧ್ವರ್ಯುವು ಹೋತೃವನ್ನು ಕುರಿತು—ಅಗ್ನಯೇ ಸಮಿಧ್ಯಮಾನಾಯಾನುಬ್ರೂಹಿ (ಶ.ಬ್ರಾ. ೧-೩-೫-೨)ಮತ್ತು(ಆಪ.ಶ್ರೌ.ಸೂ. ೨-೧೨-೧) ಎಂಬ ಪ್ರೈಷಮಂತ್ರದಿಂದ ತಿಳಿಸಿದ ಕೂಡಲೇ ಹೋತೃವು ಈ ಸಾಮಿಧೇನೀಮಂತ್ರಗಳನ್ನು ಸ್ವರಾದಿಗಳನ್ನು ಬಿಟ್ಟು ಏಕಶ್ರುತಿಯಲ್ಲಿ ಪಠಿಸುವನು. ೧-೧೧ ಋಕ್ಕುಗಳನ್ನು ವಸಿಷ್ಠಗೋತ್ರದವರು ಮತ್ತು ರಾಜರು ಇವರನ್ನು ಬಿಟ್ಟು ಇತರರು ಯಜ್ಞ ಮಾಡುವಾಗ ಸಾಮಿಧೇನೀಮಂತ್ರಗಳನ್ನಾಗಿ ಪಠಿಸಬೇಕು. ವಸಿಷ್ಠಗೋತ್ರದವರು ಮತ್ತು ರಾಜರು ಯಜ್ಞಮಾಡುವಾಗ ೧೧ನೇ ಋಕ್ಕಿಗೆ ಬದಲಾಗಿ **ತ್ವಂ ವರುಣ ಉತ** ಎಂಬ ಹನ್ನೆರಡನೆಯ ಋಕ್ಕನ್ನು ಪಠಿಸಬೇಕು.

ಮೇಲೆ ಹೇಳಿದಂತೆ ಸಾಮಿಧೇನೀಋಕ್ಕುಗಳು ಒಟ್ಟು ೧೧ ಆಯಿತು. ಇವುಗಳಲ್ಲಿ **ಪ್ರ ವೋ ವಾಜಾ** ಎಂಬ ಮೊದಲನೆಯ ಋಕ್ಕನ್ನು **ಆ ಜುಹೋತಾ** ಅಥವಾ **ತ್ವಂ ವರುಣ** ಎಂಬ ಕೊನೆಯ ಋಕ್ಕನ್ನು ಮೂರು ಮೂರಾವೃತ್ತಿ ಪಠಿಸಬೇಕು ಎಂದು **ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ** (ತೈ.ಸಂ. ೨-೫-೭-೧) ಹೇಳಿರುವುದರಿಂದ (೩+೯+೩) ಒಟ್ಟು ಹದಿನೈದು ಮಂತ್ರಗಳಾಯಿತು. ಪ್ರಕೃತ ದೀಕ್ಷಣೀಯೇಷ್ಟಿಯಲ್ಲಿ ಹದಿನೇಳು ಮಂತ್ರಗಳನ್ನು ಹೇಳಬೇಕೆಂದಿದೆ. ಆದ್ದರಿಂದ ಧಾಯ್ಯಾ ಎಂಬ ಎರಡು ಋಕ್ಕಗಳನ್ನು ಹೆಚ್ಚಾಗಿ ಸೇರಿಸಿಕೊಳ್ಳಬೇಕು. ಇರುವ ಮಂತ್ರಗಳ ಜತೆಗೆ ಬೇರೆ ಹೆಚ್ಚಾಗಿ ಸೇರಿಸಿ ಕೊಳ್ಳುವ ಮಂತ್ರಗಳಿಗೆ ಧಾಯ್ಯಾ ಮಂತ್ರಗಳೆಂದು ಹೆಸರು. ಇವುಗಳನ್ನು ಕೊನೆಯಲ್ಲಿ ಸೇರಿಸುವುದಿಲ್ಲ. ಮಧ್ಯದಲ್ಲಿ ಸೇರಿಸುವುದು ರೂಢಿಯು. ಈ ಎರಡು ಮಂತ್ರಗಳು ಪ್ರಕೃತಸಂದರ್ಭದಲ್ಲಿ ಯಾವುವೆಂದರೆ—

**ಪೃಥುಪಾಜಾ ಅಮರ್ತ್ಯೋ ಘೃತನಿರ್ಣಿಕ್ ಸ್ವಾಹುತಃ ।**
**ಅಗ್ನಿರ್ಯಜ್ಞಸ್ಯ ಹವ್ಯವಾಟ್ ॥** (ಋ.ಸಂ. ೩-೨೭-೫)

**ತಂ ಸಬಾಧೋ ಯತಸ್ರುಚ ಇತ್ಥಾ ಧಿಯಾ ಯಜ್ಞವಂತಃ ।**
**ಆ ಚಕ್ರುರಗ್ನಿಮೂತಯೇ ॥** (ವಿಶ್ವಾಮಿತ್ರ) (ಋ.ಸಂ. ೩-೨೭-೬)

ಎಂಬ ಈ ಎರಡು ಋಕ್ಕುಗಳನ್ನು ಮೇಲೆ ಹೇಳಿದ ೯ ನೇ ಋಕ್ಕಿನ **ಶೋಚಿಷ್ಕೇಶಸ್ತಮೀಮಹೇ** ಎಂಬ ವಾಕ್ಯಾನಂತರ ಧಾಯ್ಯಾಮಂತ್ರಗಳನ್ನಾಗಿ ಸೇರಿಸಿ ಪಠಿಸಬೇಕು. ಈ ವಿಷಯದಲ್ಲಿ ಆಶ್ವಲಾಯನರು— **ದೀಕ್ಷಣೀಯಾಯಾ ಧಾಯ್ಯೇ ವಿರಾಜೌ** (ಆಶ್ವ.ಸೂ.೪-೨-೧) ಎಂದು ಹೇಳಿರುವರು. ಆ ಋಕ್ಕುಗಳು ಯಾವುದೆಂಬುದನ್ನು ಭಾಷ್ಯಕಾರರು— **ಪೃಥುಪಾಜಾ ಅಮರ್ತ್ಯ** ಮತ್ತು **ತಂ ಸಬಾಧೋ ಯತಸ್ರುಚಃ** ಎಂಬ ಋಕ್ಕುಗಳೆಂದು ಹೇಳಿ ಅವುಗಳನ್ನು ಶೋಚಿಷ್ಕೇಶಸ್ತಮೀಮಹೇ ಎಂಬ ವಾಕ್ಯಾನಂತರ ಸೇರಿಸಿ ಪಠಿಸಬೇಕೆಂದು ಹೇಳಿರುವರು. ಆದ್ದರಿಂದ ಈ ದೀಕ್ಷಣೀಯೇಷ್ಟಿಯಲ್ಲಿ ಸಾಮಿಧೇನೀ

ಮಂತ್ರಗಳು ೧೧ ; ಮಂತ್ರಗಳಲ್ಲಿ ಇವುಗಳ ಮೊದಲು ಮತ್ತು ಕೊನೆಯ ಮಂತ್ರಗಳು ಮೂರಾವೃತ್ತಿ ಪಠಿಸುವುದರಿಂದ ೧೫ ಮಂತ್ರಗಳು ಇವುಗಳ ಜತೆಗೆ ೨ ಧಾಯ್ಯಾ ಮಂತ್ರಗಳು ಸೇರಿ ಒಟ್ಟು ೧೭ ಸಾಮಿಧೇನೀಮಂತ್ರಗಳಾಗುವವು ಎಂದಭಿಪ್ರಾಯವು.

**ಸಪ್ತದಶೋ ವೈ ಪ್ರಜಾಪತಿರ್ದ್ವಾದಶ ಮಾಸಾಃ ಪಂಚರ್ತವೋ ಹೇಮಂತಶಿಶಿರಯೋಃ ಸಮಾನೇನ ತಾವಾನ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ॥**

ತಾಮೇತಾಂ ಸಂಖ್ಯಾಂ ಪ್ರಶಂಸತಿ—ಸಪದಶ ಚಾವಯವಾ ಯಸ್ಯ ಪ್ರಜಾಪತೇಃ ಸೋಽಯಂ ಸಪ್ತದಶಸ್ತಸ್ಮಿನ್ನರ್ಥೇ ವೈಶಬ್ದೋಕ್ತಪ್ರಸಿದ್ಧಿರ್ದ್ವಾದಶೇತ್ಯಾದಿನಾ ಸ್ಪಷ್ಟೀಕ್ರಿಯತೇ। ಚೈತ್ರಾದ್ಯಾ ಮಾಸಾ ದ್ವಾದಶ ಪ್ರಸಿದ್ಧಾಃ । ಯದ್ಯಪಿ ಷಡ್ವಾ ಋತವ ಇತಿ (ತೈ.ಸಂ. ೬-೨-೩-೪) ಶ್ರುತ್ಯಂತರಾಲ್ಲೋಕಪ್ರಸಿದ್ಧೇಶ್ಚ ವಸಂತಾದ್ಯಾಃ ಷಟ್ಸಂಖ್ಯಾಕಾಸ್ತಥಾಪಿ ಶೀತತ್ವಸಾಮ್ಯೇನ ಹೇಮಂತಶಿಶಿರಾವೇಕೀಕೃತ್ಯ ಪಂಚಸಂಖ್ಯೋಚ್ಯತೇ । ದ್ವಾದಶಭಿರ್ಮಾಸೈಸ್ತನ್ಮೇಲನಾತ್ಮಕಪಂಚರ್ತುಭಿಶ್ಚ ಯಾವಾನ್ಕಾಲೋ ಭವತಿ ತಾವಾನ್ಕಾಲಃ ಸಂವತ್ಸರ ಇತ್ಯುಚ್ಯತೇ । ಸ ಚ ಸಂವತ್ಸರಸ್ತತ್ತದೃತೂಚಿತವರ್ಷಾದಿನಿಷ್ಪಾದನೇನ ಪ್ರಜಾನಾಂ ಪಾಲಕತ್ವಾತ್ಪ್ರಜಾಪತಿಸ್ತದೀಯತ್ವೇನ ಸಪ್ತದಶಸಂಖ್ಯಾಪ್ರಶಸ್ತೇತ್ಯರ್ಥಃ ॥

ಏಕೆಂದರೆ ಪ್ರಜಾಪತಿಯು (ಪ್ರಜಾಪಾಲಕನಾದ ಪರಮೇಶ್ವರನು) ಸಪ್ತದಶ ಎಂದರೆ ಹದಿನೇಳು ಎಂಬ ಸಂಖ್ಯೆಯ ಪ್ರತೀಕದಿಂದ ಪ್ರಶಂಸಿಸಲ್ಪಡುವನು. ಹೇಗೆಂದರೆ. ಹನ್ನೆರಡು ಮಾಸಗಳು, ಐದು ಋತುಗಳು, ಇವುಗಳು ಸೇರಿ ಒಂದು ಸಂವತ್ಸರವಾಗುವುದು. ಆ ಸಂವತ್ಸರಾತ್ಮಕನೇ (ಕಾಲಾತ್ಮಕನೇ, ಪ್ರಜಾಪತಿಯು.

ಹದಿನೇಳು ಸಾಮಿಧೇನೀಮಂತ್ರಗಳನ್ನು ಹೇಳಬೇಕೆಂದು ಮೇಲೆ ಹೇಳಿದೆಯಷ್ಟೆ. ಆ ಹದಿನೇಳು ಎಂಬ (ಸಪ್ತದಶ) ಸಂಖ್ಯೆಗೆ ಏಕೆ ಪ್ರಶಸ್ತಿ ಬಂದಿದೆ ಎಂದರೆ ಈ ಸಪ್ತದಶ ಸಂಖ್ಯೆಯು ಪ್ರಜಾಪತಿಯ ಅವಯವಗಳ ಸಂಖ್ಯೆಯಾಗಿರುವುದ್ದರಿಂದ ಇಲ್ಲಿ ಸಪ್ತದಶವೆಂದು ಹೇಳಲಾಗಿದೆ. ಒಂದು ಸಂವತ್ಸರದಲ್ಲಿ ಚೈತ್ರಾದಿ ಹನ್ನೆರಡು ಮಾಸಗಳಿರುವವು ; ವಸಂತ, ಗ್ರೀಷ್ಮ ವರ್ಷಾ, ಶರತ್, ಹೇಮಂತ, ಶಿಶಿರ ಎಂಬ ಆರು ಋತುಗಳಿರುವವು. ಎರಡೆರಡು ಮಾಸಗಳಿಗೆ ಒಂದೊಂದು ಋತುವಿನಂತೆ ವರ್ಷಕ್ಕೆ ಆರು ಋತುಗಳಾಯಿತು. ತೈತ್ತಿರೀಯಸಂಹಿತೆಯಲ್ಲಿ—

**ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ ನಭಶ್ಚ ನಭಸ್ಯಶ್ಚ ವಾರ್ಷಿಕಾವೃತೂ ಇಷಶ್ಚೋರ್ಜಶ್ಚ ಶಾರದಾವೃತೂ ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ ತಪಶ್ಚ ತಪಸ್ಯಶ್ಚ ಶೈಶಿರಾವೃತೂ ।**

( ತೈ.ಸಂ. ೪-೪-೧೧-೧ )

ಎಂದು ಹೇಳಿದೆ. ಮಧು ಮಾಧವ ಮೊದಲಾದ ಶಬ್ದಗಳಿಗೆ ಚೈತ್ರ ವೈಶಾಖ ಮಾಸಗಳೆಂದರ್ಥವು. ಆದ್ದರಿಂದ ಚೈತ್ರ ವೈಶಾಖ ಮಾಸಗಳು ಸೇರಿ ವಸಂತಋತುವೂ, ಜ್ಯೇಷ್ಠ ಆಷಾಢಮಾಸಗಳು ಸೇರಿ ಗ್ರೀಷ್ಮಋತುವೂ, ಶ್ರಾವಣಭಾದ್ರಪದಮಾಸಗಳು ಸೇರಿ ವರ್ಷಋತುವೂ, ಆಶ್ವಯುಜ ಕಾರ್ತೀಕಮಾಸಗಳೂ ಸೇರಿ ಶರದೃತುವೂ, ಮಾರ್ಗಶಿರಪುಷ್ಯಮಾಸಗಳು ಸೇರಿ ಹೇಮಂತಋತುವೂ, ಮಾಘಫಾಲ್ಗುಣಮಾಸಗಳು ಸೇರಿ ಶಿಶಿರಋತುವೂ ಆಗಿವೆ. ಕೊನೆಯ ಎರಡು ಋತುಗಳಲ್ಲಿಯೂ ಶೈತ್ಯವು (ಚಳಿಯು) ವಿಶೇಷ

ವಾಗಿರುವುದರಿಂದ ಅನೇಕ ಸಂದರ್ಭಗಳಲ್ಲಿ ಇವೆರಡನ್ನೂ ಸೇರಿಸಿ ಒಂದೇ ಋತುವೆಂದು ಪರಿಗಣಿಸಲ್ಪಟ್ಟಿರುವುದು. ತೈತ್ತಿರೀಯ ಸಂಹಿತೆಯಲ್ಲಿಯೇ ಮತ್ತೊಂದುಕಡೆ—

**ವಸಂತಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು**
**ಗ್ರೀಷ್ಮಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು**
**ವರ್ಷಾ ಋತೂನಾಂ ಪ್ರೀಣಾಮಿ ತಾ ಮಾ ಪ್ರೀತಾಃ ಪ್ರೀಣಂತು**
**ಶರದಮೃತೂನಾಂ ಪ್ರೀಣಾಮಿ ಸಾ ಮಾ ಪ್ರೀತಾ ಪ್ರೀಣಾತು**
**ಹೇಮಂತಶಿಶಿರಾವೃತೂನಾಂ ಪ್ರೀಣಾಮಿ ತೌ ಮಾ ಪ್ರೀತೌ ಪ್ರೀಣೀತಾಂ ।**

(ತೈ.ಸಂ.೧-೬-೨-೨)

ಎಂದು ಇದೆ. ಇಲ್ಲಿ ಹೇಮಂತ ಶಿಶಿರಋತುಗಳು ಒಂದೇಋತುವೆಂಬ ಭಾವನೆಯಿಂದ ಸ್ತುತಿಸಲಾಗಿದೆ. ಈರೀತಿ ಅನೇಕಕಡೆ ಇದೆ. ಋತುಗಳು ಸಾಧಾರಣವಾಗಿ ಆರು ಎಂದು ಪರಿಗಣನೆ ಇದ್ದರೂ ಸಂದರ್ಭಾನುಸಾರವಾಗಿ ಐದೂ ಎಂದು ಅನೇಕಕಡೆ ಉಕ್ತವಾಗಿದೆ. ಆದ್ದರಿಂದ ಒಂದು ಸಂವತ್ಸರದಲ್ಲಿ ಅದರ ಅವಯವಗಳಾದ (ವಿಭಾಗಗಳಾದ) ಹನ್ನೆರಡು ಮಾಸಗಳೂ, ಪ್ರಕಾರಾಂತರವಾಗಿ ವಿಭಾಗಗಳಾಗಿರುವ ಐದು ಋತುಗಳೂ ಸೇರಿ ಹದಿನೇಳು ಸಂಖ್ಯೆಯಾಗಿದೆ. ಪ್ರಜಾಪತಿಯು ಕಾಲಾತ್ಮಕನಾದ ಪರಮೇಶ್ವರನಾಗಿರುವುದರಿಂದ ಹದಿನೇಳು ಅವಯವಗಳಿಂದ ಕೂಡಿದ ಸಂವತ್ಸರಾತ್ಮಕನೆಂದು ಹೇಳಲ್ಪಡುವನು. ಕಾಲವು ಅನಂತವಾಗಿದ್ದರೂ ಅದರ ಪರಿಮಾಣವನ್ನು ನಾವು ಸಂವತ್ಸರವೆಂಬ ವಿಭಾಗದಿಂದ ಪರಿಗಣನೆ ಮಾಡುತ್ತೇವೆ. ಧಾನ್ಯ ಮೊದಲಾದ ವನ್ನು ಒಂದು ಕ್ಲಪ್ತ ಪ್ರಮಾಣದಿಂದ (ಸೇರು ಇತ್ಯಾದಿ) ಅಳೆಯುವಂತೆ ಪ್ರಜಾಪತಿಯು ಸಂವತ್ಸರಾತ್ಮಕನು. ಆ ಸಂವತ್ಸರವು ಸಪ್ತದಶ ಅವಯವಗಳುಳ್ಳದ್ದು. ಆದ್ದರಿಂದ ಸಪ್ತದಶ ಎಂಬ ಪ್ರಶಸ್ತಸಂಖ್ಯೆಯೇ ಸಾಮಿಧೇನೀ ಋಕ್ಕುಗಳಿಗೆ ನಿರ್ದಿಷ್ಟವಾಗಿದೆ ಎಂದರ್ಥವು.

## ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ॥

**ಸಪ್ತದಶಸಂಖ್ಯಾವೇದನಂ ಪ್ರಶಂಸತಿ—ಸಂವತ್ಸರಾತ್ಮಕಃ ಪ್ರಜಾಪತಿರಾಯತನಮಾಶ್ರಯೋ ಯಾಸಾಂ ಸಾಮಿಧೇನೀನಾಂ ತಾಃ ಪ್ರಜಾಪತ್ಯಾಯತನಾಸ್ತದೀಯಸಂಖ್ಯೋಪೇತತ್ವಾತ್ತದಾಯತನತ್ವಂ ತಾದೃಶೀಭಿರಾಭಿಃ ಸಾಮಿಧೇನೀಭಿರ್ವೇದಿತಾ ರಾಧ್ನೋತಿ ಸಮೃದ್ಧೋ ಭವತಿ । ಸತಿ ವೇದನೇ ತದನುಷ್ಠಾನಪ್ರವೃತ್ತೇಃ ಫಲಪ್ರಾಪ್ತಿಸಮೃದ್ಧಿರುಪಪದ್ಯತೇ ।**

ಸಪ್ತದಶಸಂಖ್ಯೆಯ ಮಹತ್ತ್ವವನ್ನು ತಿಳಿಸುತ್ತಾರೆ. ಈ ಹದಿನೇಳು ಸಾಮಧೇನೀ ಮಂತ್ರಗಳು ಹದಿನೇಳು ಅವಯವಗಳುಳ್ಳ ಸಂವತ್ಸರಾತ್ಮಕನಾದ ಪ್ರಜಾಪತಿಯ ಆಶ್ರಯವನ್ನು ಪಡೆದಿವೆ. ಆದ್ದರಿಂದ ಈ ಸಪ್ತದಶ ಸಾಮಿಧೇನೀ ಮಂತ್ರಗಳ ಸ್ವರೂಪವನ್ನು ಅರಿತಿರುವ ಪುರುಷನು ಸಕಲ ವಿಷಯಗಳಲ್ಲಿಯೂ ಸಮೃದ್ಧಿಯನ್ನು ಪಡೆದು ಸುಖಿಸುವನು.

**ಅತ್ರ ಮೀಮಾಂಸೋದಾಹ್ರಿಯತೇ । ಪಂಚಮಾಧ್ಯಾಯಸ್ಯ ಚತುರ್ಥಪಾದೇ ದ್ವಯಂ ಚಿಂತಿತಂ —**

**ದರ್ಶಾದೀಷ್ಟ್ವಾ ಸೋಮಯಾಗಃ ಕ್ರಮೋಽಯಂ ನಿಯತೋ ನ ವಾ ।**
**ಉಕ್ತೇರಾದ್ಯೋ ನ ಸೋಮಸ್ಯಾಧಾನಾನನ್ತರತಾಶ್ರುತೇಃ ॥**

ದರ್ಶಪೂರ್ಣಮಾಸಾವಿಷ್ಟ್ವಾ ಸೋಮೇನ ಯಜೇತೇತಿ ಕ್ತ್ವಾಪ್ರತ್ಯಯೇನಾವಗಮ್ಯಮಾನಃ ಕ್ರಮೋ ನಿಯತ ಇತಿ ಚೇನ್ನೈವಂ । ಸೋಮೇನ ಯಕ್ಷ್ಯಮಾಣೋಽಗ್ನೀನಾದಧೀತೇತ್ಯಾಧಾನಾನನ್ತರತಾಯಾ ಅಪಿ ಶ್ರವಣಾತ್ । ತಸ್ಮಾದಿಷ್ಟಿಸೋಮಯೋಃ ಪೌರ್ವಾಪರ್ಯಂ ನ ನಿಯತಂ ।

ವಿಪ್ರಸ್ಯ ಸೋಮಪೂರ್ವತ್ವಂ ನಿಯತಂ ವಾ ನ ವಾಗ್ರಿಮಃ ।
ಉತ್ಕರ್ಷತೋ ನ್ಯೈವಮಗ್ನೀಷೋಮೀಯಸ್ಯೈವ ತಚ್ಛ್ರುತೇಃ ॥

ಇಷ್ಟಿಪೂರ್ವತ್ವಂ ಸೋಮಪೂರ್ವತ್ವಂ ವಿಕಲ್ಪಿತಮಿತಿ ಯದುಕ್ತಂ ತತ್ರ ಬ್ರಾಹ್ಮಣಸ್ಯ ಸೋಮಪೂರ್ವತ್ವಂ ನಿಯತಂ । ಕುತಃ, ಉತ್ಕರ್ಷಶ್ರವಣಾತ್ । "ಆಗ್ನೇಯೋ ವೈ ಬ್ರಾಹ್ಮಣೋ ದೇವತಯಾ ಸೋಮೇನೇಷ್ಟ್ವಾಗ್ನೀಷೋಮೀಯೋ ಭವತಿ ಯದೇವಾದಃ ಪೌರ್ಣಮಾಸಂ ಹವಿಸ್ತತ್ತರ್ಹ್ಯನುನಿರ್ವಪೇತ್ತರ್ಹಿ ಸ ಉಭಯದೇವತೋ ಭವತಿ" ಇತಿ । ಅಸ್ಯಾಯಮರ್ಥಃ । ಪ್ರಜಾಪತೇರ್ಮುಖಾದಗ್ನಿಬ್ರಾಹ್ಮಣಶ್ಚೇತ್ಯುಭಾವುತ್ಪನ್ನೌ । ತತೋ ಬ್ರಾಹ್ಮಣಸ್ಯಾಗ್ನಿರೇಕ ಏವ ದೇವತೇತ್ಯಾಗ್ನೇಯ ಏವ ಬ್ರಾಹ್ಮಣೋ ನ ತು ಸೌಮ್ಯಃ ಸೋಮಸ್ಯ ತದ್ದೇವತಾತ್ವಾಭಾವಾತ್ । ಯದಾ ಸ ಬ್ರಾಹ್ಮಣಃ ಸೋಮೇನ ಯಜೇತ ತದಾ ಸೋಮೋಽಪ್ಯಸ್ಯ ದೇವತೇತ್ಯಗ್ನಿಷೋಮೀಯೋ ಭವತಿ । ತಸ್ಯಾಗ್ನೀಷೋಮೀಯಸ್ಯ ಬ್ರಾಹ್ಮಣಸ್ಯಾನುರೂಪಂ ಪೌರ್ಣಮಾಸಮಗ್ನೀಷೋಮೀಯಪುರೋಡಾಶರೂಪಂ ಹವಿಃ ಸೋಮಾದೂರ್ಧ್ವಮನುನಿರ್ವಪೇತ್ । ತದಾ ಸ ಬ್ರಾಹ್ಮಣೋ ದೇವತಾದ್ವಯಸಂಬಂಧೀ ಭವತೀತಿ । ಯದ್ಯಪ್ಯತ್ರ ಕರ್ಮಾಂತರಂ ಕಿಂಚಿದ್ವಿಧೀಯತ ಇತಿ ಕಶ್ಚಿನ್ಮನ್ಯತೇ ತಥಾಪಿ ಪೌರ್ಣಮಾಸಂ ಹವಿರಿತಿ ವಿಸ್ಪಷ್ಟಪ್ರತ್ಯಭಿಜ್ಞಾನಾನ್ನ ಕರ್ಮಾಂತರಂ ಕಿಂತು ದರ್ಶಪೂರ್ಣಮಾಸಯೋಃ ಸೋಮಾದೂರ್ಧ್ವಮುತ್ಕರ್ಷಃ । ತಸ್ಮಾದ್ವಿಪ್ರಸ್ಯ ಸೋಮಪೂರ್ವತ್ವಮೇವ ನಿಯತಮಿತಿ ಪ್ರಾಪ್ತೇ ಬ್ರೂಮಃ । ನಾತ್ರ ದರ್ಶಶಬ್ದಃ ಪೂರ್ಣಮಾಸಶಬ್ದೋ ವಾ ಕಶ್ಚಿದ್ಯಾಗವಾಚೀ ಶ್ರೂಯತೇ । ಪೌರ್ಣಮಾಸಮಿತ್ಯೇತತ್ತದ್ಧಿತಾಂತಂ ಹವಿರ್ವಿಶೇಷಣತ್ವೇನೋಪನ್ಯಸ್ಯತೇ । ತಚ್ಚ ಹವಿರಗ್ನೀಷೋಮೀಯಪುರೋಡಾಶರೂಪಮಿತಿ ದೇವತಾದ್ವಯೇನ ಸಂಸ್ತವಾದವಗಮ್ಯತೇ । ತಸ್ಮಾದೇಕಸ್ಯೈವ ಹವಿಷ ಉತ್ಕರ್ಷೋ ನ ತು ಕೃತ್ಸ್ನಯೋರ್ದರ್ಶಪೂರ್ಣಮಾಸಯೋಃ । ತಥಾ ಸತಿ ಬ್ರಾಹ್ಮಣಸ್ಯೈಕಸ್ಮಿನ್ನೇವಾಗ್ನೀಷೋಮೀಯಪುರೋಡಾಶೇ ಸೋಮಪೂರ್ವತ್ವನಿಯಮ ಇತರತ್ರ ಕ್ಷತ್ರಿಯವೈಶ್ಯಯೋರಿವಾಸ್ಯಾಪೀಷ್ಟಿಪೂರ್ವತ್ವಸೋಮಪೂರ್ವತ್ವೇ ವಿಕಲ್ಪ್ಯೇತೇ । ತೃತೀಯಾಧ್ಯಾಯಸ್ಯ ಷಷ್ಠೇ ಪಾದೇ ಚಿಂತಿತಂ—

ಸಾಮಿಧೇನೀಃ ಸಪ್ತದಶ ಪ್ರಕೃತೌ ವಿಕೃತಾವುತ ।
ಪೂರ್ವವತ್ಪ್ರಕೃತೌ ಪಾಂಚದಶ್ಯೇನೈತದ್ವಿಕಲ್ಪ್ಯತೇ ॥
ವಿಕೃತೌ ಸಾಪ್ತದಶ್ಯಂ ಸ್ಯಾತ್ಪ್ರಕೃತೌ ಪ್ರಕ್ರಿಯಾಬಲಾತ್ ।
ಪಾಂಚದಶ್ಯಾವರುದ್ಧತ್ವಾದಾಕಾಂಕ್ಷಾಯಾ ನಿವೃತ್ತತಾ ॥

ಅನಾರಭ್ಯ ಶ್ರೂಯತೇ ಸಪ್ತದಶ ಸಾಮಿಧೇನೀರನುಬ್ರೂಯಾದಿತಿ । ಪ್ರ ವೋ ವಾಜಾ ಇತ್ಯಾದ್ಯಾ ಅಗ್ನಿಸಮಿಂಧನಾರ್ಥಾ ಋಚಃ ಸಾಮಿಧೇನ್ಯಸ್ತಾಸಾಂ ಸಾಪ್ತದಶ್ಯಂ ಪೂರ್ವಾಪಾಯೇನ ಪ್ರಕೃತಿಗತಂ ಯದಿ ಪ್ರಕೃತೌ ಪಂಚದಶ ಸಾಮಿಧೇನೀರನ್ವಾಹೇತಿ ವಿಧಿಃ ಸ್ಯಾತ್ತರ್ಹಿ ಪಾಂಚದಶ್ಯಸಾಪ್ತದಶ್ಯೇ ವಿಕಲ್ಪೇಯಾತಾಮಿತಿ ಪ್ರಾಪ್ತೇ ಬ್ರೂಮಃ । ವಿಕೃತಾವೇವ ಸಾಪ್ತದಶ್ಯಂ ನಿವಿಶತೇ ಪ್ರಕೃತೌ ಪಾಂಚದಶ್ಯಾವರುದ್ಧಾಯಾಂ ಸಾಮಿಧೇನೀನಾಂ ಸಂಖ್ಯಾಕಾಂಕ್ಷಾಯಾ ಅಭಾವಾತ್ । ನ ಚ ಪಾಂಚದಶ್ಯಸಾಪ್ತದಶ್ಯಯೋಃ ಸಮಾನಬಲತ್ವಾದವರೋಧಾಭಾವ ಇತಿ ಶಂಕನೀಯಂ ಪಾಂಚದಶ್ಯೇ ಪ್ರಕರಣಾನುಗ್ರಹಸ್ಯಾಧಿಕತ್ವಾತ್। ತಸ್ಮಾನ್ಮಿತ್ರವಿಂದಾಧ್ವರಕಲ್ಪಾದಿವಿಕೃತೌ ಸಾಪ್ತದಶ್ಯಮವತಿಷ್ಠತೇ । ನ ಚಾತ್ರ ಪೂರ್ವನ್ಯಾಯೋಽಸ್ತಿ ಸಾಪ್ತದಶ್ಯಸ್ಯ ಚೋದಕಪ್ರಾಪ್ತ್ಯಭಾವೇನ ಪುನರ್ವಿಧಾನದೋಷಾಭಾವಾತ್ ॥

ಸಾಪ್ತದಶ್ಯಂ ತು ವೈಶ್ಯಸ್ಯ ವಿಕೃತೌ ಪ್ರಕೃತಾವುತ ।
ಪೂರ್ವವಚ್ಚ ನ ಸಂಕೋಚೋ ನಿತ್ಯನೈಮಿತ್ತಿಕೋಕ್ತಿತಃ ॥
ಗೋದೋಹನೇನ ಪ್ರಣಯೇತ್ಕಾಮಿನ್ಯತ್ಯನ್ಯದುದಾಹರತ್ ।
ಭಾಷ್ಯಕಾರಸ್ತದಪ್ಯಸ್ತು ನ್ಯಾಯಸ್ಯಾತ್ರ ಸಮತ್ವತಃ ॥

ಸಪ್ತದಶಾನುಬ್ರೂಯಾದ್ವೈಶ್ಯಸ್ಯೇತಿ ಸ್ಥಿತಂ ವೈಶ್ಯನಿಮಿತ್ತಕಂ ಸಾಪ್ತದಶ್ಯಂ ಪೂರ್ವನ್ಯಾಯೇನ ವಿಕೃತಿಗತಮಿತಿ ಚೇನ್ಮೈವಂ । ನೈಮಿತ್ತಿಕೇನಾನೇನ ವಚನೇನ ಪ್ರಕೃತಿಗತಸ್ಯ ನಿತ್ಯಸ್ಯ ಪಾಂಚದಶ್ಯಸ್ಯ ವೈಶ್ಯವ್ಯತಿರಿಕ್ತವಿಷಯತಯಾ ಸಂಕೋಚನೀಯತ್ವಾತ್ । ನಿತ್ಯಂ ಸಾಮಾನ್ಯರೂಪತಯಾ ಸಾವಕಾಶತ್ವೇನ ದುರ್ಬಲಂ ನೈಮಿತ್ತಿಕಂ ತು ವಿಶೇಷರೂಪತ್ವ ನಿರವಕಾಶತ್ವಾಭ್ಯಾಂ ಪ್ರಬಲಂ ತಸ್ಮಾದ್ವೈಶ್ಯನಿಮಿತ್ತಕಂ ಸಾಪ್ತದಶ್ಯಂ ಪ್ರಕೃತಾವವತಿಷ್ಠತೇ। ಅತ್ರ ಭಾಷ್ಯಕಾರೋಽನ್ಯದುದಾಜಹಾರ—ಚಮಸೇನಾಪಃ ಪ್ರಣಯೇದ್ಗೋದೋಹನೇನ ಪಶುಕಾಮಸ್ಯೇತಿ । ತತ್ರ ಪ್ರಕೃತೇಶ್ಚಮಸೇನಾವರುದ್ಧತ್ವಾದ್ಗೋದೋಹನಂ ವಿಕೃತಾವಿತಿ ಪೂರ್ವಃ ಪಕ್ಷಃ । ಕಾಮನಾನಿಮಿತ್ತಕೇನ ಗೋದೋಹನೇನ ನಿತ್ಯಸ್ಯ ಚಮಸಸ್ಯ ನಿಷ್ಕಾಮವಿಷಯತಯಾ ಸಂಕೋಚನೀಯತ್ವಾತ್ಪ್ರಕೃತಾವೇವ ಗೋದೋಹನಮಿತಿ ರಾದ್ಧಾಂತಃ । ದಶಮಾಧ್ಯಾಯಸ್ಯಾಷ್ಟಮಪಾದೇ ಚಿಂತಿತಂ—

ಸಾಮಿಧೇನೀಸಾಪ್ತದಶ್ಯಂ ವೈಮೃಧಾದಾವಪೂರ್ವಗೀಃ ।
ಸಂಹೃತಿರ್ವೋಪಕಾರಸ್ಯ ಕ್ಲೃಪ್ತ್ಯಾದ್ಯೋಽಸ್ತ್ವಾಜ್ಯಭಾಗವತ್ ॥
ಸಾಮಿಧೇನೀ (ನ್ಯ) ಶ್ಚೋದಕಾಪ್ತಾಃ ಸಾಪ್ತದಶ್ಯಂ ತು ವೈಮೃಧೇ ।
ಪುನರ್ವಾಕ್ಯೇನ ಸಂಹಾರ್ಯಮನಾರಭ್ಯೋಕ್ತಿಚೋದಿತಂ ॥

ಅನಾರಭ್ಯ ಕಿಂಚಿದಾಮ್ನಾಯತೇ—ಸಪ್ತದಶ ಸಾಮಿಧೇನೀರನುಬ್ರೂಯಾದಿತಿ । ತಥಾ ವೈಮೃಧೇಽಧ್ವರಕಲ್ಪಾಯಾಂ ಪಶೌ ಚಾತುರ್ಮಾಸ್ಯೇಷು ಮಿತ್ರವಿಂದಾಯಾಮಾಗ್ರಯಣೇ-

ಷ್ಟಾದೌ ಚ ಪುನಃ ಸಾಪ್ತದಶ್ಯಂ ವಿಹಿತಂ । ಯದ್ಯಪ್ಯನಾರಭ್ಯಾಧೀತಾನಾಂ ಪ್ರಕೃತಿಗಾಮಿತ್ವಂ ನ್ಯಾಯ್ಯಂ ತಥಾಽಪಿ ಶ್ರುತೇನ ಪಾಂಚದಶ್ಯೇನಾವರುದ್ಧತ್ವಾದ್ವಿಕೃತಿಷ್ವೇವ ನಿವಿಶತೇ । ತಥಾ ಸತಿ ವೈಮೃಧಾದಿಷು ವಿಕೃತಿಷ್ವನಾರಭ್ಯವಾದಪ್ರಾಪ್ತಾಃ ಸಪ್ತದಶ ಸಾಮಿಧೇನ್ಯಃ ಪ್ರಾಕರಣಿಕೇನ ವಿಧಿನಾ ಪುನರ್ವಿಧೀಯಮಾನಾ ಗೃಹಮೇಧೀಯಾಜ್ಯಭಾಗವತ್ ಕ್ಲೃಪ್ತೋಪಕಾರತ್ವೇನೇತಿ-ಕರ್ತವ್ಯತಾಕಾಂಕ್ಷಾಂ ಪೂರಯಂತ್ಯಶ್ಚೋದಕಂ ಲೋಪಯಂತ್ಯೋ ವೈಮೃಧಾದೇರಪೂರ್ವ-ಕರ್ಮತಾಂ ಗಮಯತಿ । ಸಾಪ್ತದಶ್ಯಂ ತ್ವನಾರಭ್ಯವಾದಪ್ರಾಪ್ತಮನೂದ್ಯತ ಇತಿ ಪ್ರಾಪ್ತೇ ಬ್ರೂಮಃ । ವೈಮೃಧಾದಿಷು ಸಾಮಿಧೇನ್ಯ ಆಜ್ಯಭಾಗವನ್ನವಿಧೀಯಂತೇ ಕಿಂತು ಚೋದಕ-ಪ್ರಾಪ್ತಾ ಅನೂದ್ಯ ಸಾಪ್ತದಶ್ಯಂ ವಿಧೀಯತೇ । ತಚ್ಚ ಸಾಪ್ತದಶ್ಯಂ ವೈಮೃಧಾದಿಪ್ರಕರಣೇಷ್ವಾ-ಮ್ನಾತೈರ್ವಿಧಿಭಿಃ ಕಾಸುಚಿದೇವ ವಿಕೃತಿಷು ಪ್ರಾಪ್ತಮನಾರಭ್ಯವಾದೇನ ತು ಸರ್ವಾಸು ವಿಕೃತಿಷು ತತ್ರಾನಾರಭ್ಯವಾದೋ ವಿಲಂಬತೇ ಪ್ರಥಮಂ ವಿಧೇಯಸ್ಯ ಸಾಪ್ತದಶ್ಯಸ್ಯ ಸಾಮಿಧೇ-ನೀಸಂಬಂಧಮವಬೋಧ್ಯ । ತತ್ಸಂಬಂಧಾನ್ಯಥಾನುಪಪತ್ತ್ಯಾ ಕ್ರತುಪ್ರವೇಶಂ ಪರಿಕಲ್ಪ್ಯ ಪ್ರಕೃತೌ ಪಾಂಚದಶ್ಯಪರಾಹತತ್ವೇನ ವಿಕೃತಿಷು ಸರ್ವಾಸು ನಿವೇಶಃ ಕ್ರಿಯತ ಇತಿ ವಿಲಂಬಃ । ಪ್ರಾಕರಣಿಕೈರ್ವಿಧಿಭಿಃ ಸಾಮಿಧೇನೀಸಂಬಂಧ ಏವ ಬೋಧನೀಯಃ । ವಿಕೃತೌ ತದ್ವಿಶೇಷೇ ಚ-ಪ್ರವೇಶೋ ನ ಕಲ್ಪನೀಯಃ ಪ್ರತ್ಯಕ್ಷಪ್ರಕರಣಪಾಠೇನೈವ ತತ್ಸಿದ್ಧೇಃ । ತತ್ರ ಸಾಪ್ತದಶ್ಯಸ್ಯ ವೈಮೃಧಾದಿವಿಕೃತಿವಿಶೇಷಸಂಬಂಧೇ ಸಹಸಾ ಪ್ರತಿಪನ್ನೇ ಸತಿ ತದ್ವಿರೋಧಾತ್ಸರ್ವಪ್ರಕೃತಿ-ಸಂಬಂಧೋ ನ ಕಲ್ಪಯಿತುಂ ಶಕ್ಯಃ । ಅನಾರಭ್ಯವಾದಸ್ತು ಚೋದಕಪ್ರಾಪ್ತಸ್ಯ ಪಾಂಚದಶ್ಯಸ್ಯ-ಬಾಧಕಃ । ಸರ್ವಥಾಪಿ ಚತುರ್ಥಾಕರಣವದುಪಸಂಹಾರೋ ನ ತ್ವಾಜ್ಯಭಾಗವದಪೂರ್ವಂ ಕರ್ಮ ॥

## ಮೀಮಾಂಸಾ ಸೂತ್ರಗಳ ಅರ್ಥಾನುವಾದ

ಸೂಚನೆ—ಈ ಐತರೇಯ ಬ್ರಾಹ್ಮಣದ ಸಾಯಣಭಾಷ್ಯದಲ್ಲಿ ಅರ್ಥವಿವರಣೆಮಾಡುವಾಗ ಸಂದರ್ಭಾನುಸಾರ ಜೈಮಿನಿ ಮಹರ್ಷಿಯ ಪೂರ್ವಮೀಮಾಂಸಾ ಸೂತ್ರಗಳನ್ನು ಅಲ್ಲಲ್ಲಿ ಉದಾಹರಿಸಲಾಗಿದೆ. ಜೈಮಿನಿಯ ಮೀಮಾಂಸಾದರ್ಶನವು ಯಜ್ಞ ಯಾಗಾದಿ ಕರ್ಮಗಳನ್ನು ಮಾಡುವಾಗ ಕರ್ಮಗಳನ್ನು ಯಾವ ಕ್ರಮದಲ್ಲಿ ಮಾಡಬೇಕು, ಯಾವ ಕಾಲದಲ್ಲಿ ಯಾವ ಮಂತ್ರ ಗಳನ್ನು ಪಠಿಸಬೇಕು ಇವೇ ಮೊದಲಾದ ಕ್ರಮಗಳಲ್ಲಿ ಸಂಶಯವು ತೋರಿ ಬಂದರೆ ಅವುಗಳನ್ನು ಚೆನ್ನಾಗಿ ಚರ್ಚೆಮಾಡಿ ಕೊನೆಗೆ ಹೀಗೆಯೇ ಮಾಡಬೇಕು ಎಂಬ ಸಿದ್ಧಾಂತವನ್ನು ಅಥವಾ ನಿರ್ಣಯವನ್ನು ಹೇಳುವುದು. ಈ ಸಂಬಂಧದಲ್ಲಿ ಪೂರ್ವಪಕ್ಷ ಮತ್ತು ಸಿದ್ಧಾಂತ ಎಂಬ ಶಬ್ದಗಳನ್ನು ಉಪಯೋಗಿಸಲಾಗಿದೆ. ಪೂರ್ವಪಕ್ಷವೆಂದರೆ ಸಂಶಯದಿಂದ ಕೂಡಿರುವ ಅಥವಾ ಪ್ರಮಾಣ ವಾಕ್ಯಗಳಿಗೆ ಮೇಲೆ ತೋರುವ ಅರ್ಥಗಳಿಂದ ಉದ್ಭವಿಸಬಹುದಾದ ಅರ್ಥವಿವರಣೆಯು; ಸಿದ್ಧಾಂತವೆಂದರೆ, ಮೇಲೆ ತೋರುವ ಅರ್ಥವನ್ನು ಚರ್ಚೆ ಮತ್ತು ಪ್ರಮಾಣಗಳ ಮೂಲಕ ಚೆನ್ನಾಗಿ ಚರ್ಚೆಮಾಡಿ ಇದು ಹೀಗೆಯೇ ಸರಿ ಎಂದು ಸಂಶಯವಿಲ್ಲದಂತೆ ಪರಿಹಾರಮಾಡಿ ಒಂದು ನಿರ್ಣಯಕ್ಕೆ ಬರುವುದು.

ಪ್ರಕೃತಸಂದರ್ಭದಲ್ಲಿ ನಾವು ವಿವರಣೆಮಾಡುತ್ತಿರುವ ಐತರೇಯಬ್ರಾಹ್ಮಣದ ಸಾಯಣಭಾಷ್ಯದಲ್ಲಿ ಉದಾಹೃತವಾಗಿರುವ ಮೀಮಾಂಸಾಭಾಗವು ಜೈಮಿನಿಯ ಪೂರ್ವಮೀಮಾಂಸಾ ಸೂತ್ರಗಳನ್ನೇ ತೆಗೆದುಕೊಂಡು ಅರ್ಥವಿವರಣೆ ಮಾಡಿಲ್ಲ. ವೇದಗಳಿಗೆ ಭಾಷ್ಯಗಳನ್ನು ಬರೆದು ಜಗತ್ಪ್ರಸಿದ್ಧರಾದ ಶ್ರೀ ಸಾಯಣಾಚಾರ್ಯರ ಅಣ್ಣಂದಿರೂ ವಿಜಯನಗರದ ಬುಕ್ಕಮಹಾರಾಜನ ಆಸ್ಥಾನ

ಮಹಾವಿದ್ವಾಂಸರೂ ಆದ ಮಾಧವಾಚಾರ್ಯರೆಂಬುವರು ಜೈಮಿನಿ ಮಹರ್ಷಿಯ ಪೂರ್ವಮೀಮಾಂಸಾ ಸೂತ್ರಗಳನ್ನು ವಿವರಿಸುವುದಕ್ಕಾಗಿ ಪ್ರತಿಯೊಂದು ಅಧಿಕರಣವನ್ನೂ (ವಿಷಯನಿರೂಪಣೆ) ಸಂಗ್ರಹ ಅಥವಾ ಸಂಕ್ಷೇಪವಾಗಿ ಶ್ಲೋಕರೂಪದಿಂದ **ನ್ಯಾಯಮಾಲಾ** ಎಂಬ ಹೆಸರಿನ ಒಂದು ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥವು ಜೈಮಿನಿಯ ಪೂರ್ವಮೀಮಾಂಸಾ ಸೂತ್ರಗಳಷ್ಟು ವಿಸ್ತಾರವಾಗಿಲ್ಲದಿದ್ದರೂ ವಿಷಯನಿರೂಪಣೆಯು ಸಂದರ್ಭೋಚಿತವಾಗಿ ಸಂಗ್ರಹರೂಪದಿಂದ ವಿವೃತವಾಗಿದೆ. ಈ ನ್ಯಾಯಮಾಲಾಗ್ರಂಥದ ಶ್ಲೋಕಗಳನ್ನೇ ಈ ಸಾಯಣಭಾಷ್ಯದಲ್ಲಿ ಉದಾಹರಿಸಲಾಗಿದೆ. ಈ ಶ್ಲೋಕಗಳಿಗೆ ಭಾಷ್ಯವನ್ನು ಮೇಲೆ ಹೇಳಿದ ಮಾಧವಾಚಾರ್ಯರೇ ಬರೆದಿದ್ದಾರೆ. ಅದನ್ನು ಸಾಯಣಭಾಷ್ಯದಲ್ಲಿ ಸೇರಿಸಲಾಗಿದೆ. ಆದ್ದರಿಂದ ನಾವು ಈ ಗ್ರಂಥದ ಶ್ಲೋಕಗಳು ಮತ್ತು ಇವುಗಳ ಭಾಷ್ಯವನ್ನೇ ಅನುಸರಿಸಿ ಅರ್ಥವಿವರಣೆಮಾಡಿದೇವೆ. ಆದರೂ ಕೆಲವು ಸಂದರ್ಭಗಳಲ್ಲಿ ಎಂದರೆ ವಿಸ್ತಾರವಾದ ವಿವರಣೆಯು ಆವಶ್ಯಕವೆಂದು ಕಂಡುಬಂದ ಸಂದರ್ಭಗಳಲ್ಲಿ ಜೈಮಿನಿಯ ಮೂಲಸೂತ್ರಗಳು ಅವುಗಳಿಗೆ ಶಬರಸ್ವಾಮಿಗಳೆಂಬುವರು ಬರೆದಿರುವ ಭಾಷ್ಯ ಇವುಗಳನ್ನು ಧಾರಾಳವಾಗಿ ಉಪಯೋಗಿಸಿ ಸಂಶಯಕ್ಕಾಸ್ಪದವಿಲ್ಲದಂತೆ ಅರ್ಥ ವಿವರಣೆಮಾಡಿದೇವೆ.

ಈಗ ನಾವು ಐತರೇಯಬ್ರಾಹ್ಮಣದ ಪ್ರಥಮಾಧ್ಯಾಯದ ಪ್ರಥಮ ಖಂಡದ ಕೊನೆಯಲ್ಲಿ ಉದಾಹೃತವಾದ ಮೀಮಾಂಸಾ ಭಾಗವನ್ನು ವಿವರಿಸುತ್ತೇವೆ. ಜೈ.ಸೂ. ಐದನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಮೂರನೆಯ ಮತ್ತು ನಾಲ್ಕನೆಯ ಅಧಿಕರಣಗಳಲ್ಲಿರುವ ೫-೯ ಸೂತ್ರಗಳ ವಿವರಣೆಯು—

**ಪೂರ್ವಪಕ್ಷ**—ಯಜ್ಞಮಾಡಬೇಕೆಂದು ಬಯಸುವ ಪುರುಷನು ಮೊದಲು ಯಜ್ಞವಿಧಿಯಂತೆ ಅಗ್ನ್ಯಾಧೇಯವೆಂಬ ಕ್ರಮದಂತೆ ಅಗ್ನಿಯನ್ನು ಮರದ ತುಂಡುಗಳಿಂದ ಕಡೆದು ಉತ್ಪತ್ತಿಮಾಡಿ ಅನಂತರ ದರ್ಶಪೂರ್ಣಮಾಸ ಎಂಬ ಇಷ್ಟಿಗಳನ್ನು ಮಾಡಬೇಕು. ಅನಂತರ ಸೋಮ ಮೊದಲಾದ ಮಹಾಯಜ್ಞಗಳನ್ನು ಮಾಡಬೇಕು ಏಕೆಂದರೆ—**ಏಷ ವೈ ದೇವರಥೋ ಯದ್ದರ್ಶಪೂರ್ಣಮಾಸೌ ಯೋ ದರ್ಶಪೂರ್ಣಮಾಸಾವಿಷ್ಟ್ವಾ ಸೋಮೇನ ಯಜತೇ** (ತೈ.ಸಂ. ೨-೫-೬-೧) ಎಂದು ಯಜುರ್ವೇದದ ತೈತ್ತಿರೀಯಸಂಹಿತೆಯ ವಾಕ್ಯವಿರುವುದು. ವೇದವಾಕ್ಯವು ಪ್ರಮಾಣವಾದುದರಿಂದ ಮೊದಲು ಇಷ್ಟಿಗಳನ್ನು ಮಾಡಿ ಅನಂತರ ಸೋಮಯಾಗವನ್ನು ಮಾಡಬೇಕು.

[ಇಲ್ಲಿ ಸ್ವಲ್ಪ ವಿವರಣೆಯು ಆವಶ್ಯಕವು. **ಅಗ್ನ್ಯಾಧಾನ**ವೆಂದರೆ ಯಜ್ಞಕ್ಕಾಗಿ ಅಗ್ನಿಯನ್ನು ಉತ್ಪತ್ತಿಮಾಡುವ ಕ್ರಮವು. ಅರಣಿ ಎಂಬ ಒಂದು ಮರದ ತುಂಡಿನಮೇಲೆ ಮಂಥ ಎಂಬ ಮತ್ತೊಂದು ಮರದ ತುಂಡನ್ನಿಟ್ಟು ಮೊಸರನ್ನು ಕಡೆಯುವಂತೆ ಕಡೆದು ಅಗ್ನಿಯನ್ನು ಮಂತ್ರಪಠನಪೂರ್ವಕವಾಗಿ ಉತ್ಪತ್ತಿಮಾಡುವರು. ಅಗ್ನಿಯನ್ನು ಉತ್ಪತ್ತಿಮಾಡುವಾಗ ಅಗ್ನಿಯನ್ನು ಪ್ರಾರ್ಥಿಸಿ ಕರೆಯುವ ಮಂತ್ರಗಳನ್ನು ಪಠಿಸುವರು. ಈ ಮಂತ್ರಗಳಿಗೆ **ಸಾಮಿಧೇನೀ** ಮಂತ್ರಗಳೆಂದು ಹೆಸರು.

**ಇಷ್ಟಿ** ಎಂದರೆ ಒಂದು ಸಣ್ಣಯಜ್ಞವು. ಸಾಧಾರಣವಾಗಿ ದರ್ಶ (ಅಮಾವಾಸ್ಯೆ) ಮತ್ತು ಪೂರ್ಣಮಾಸ (ಪೌರ್ಣಮಿ) ದಿನಗಳಲ್ಲಿ ಇಷ್ಟಿಗಳನ್ನು ಮಾಡುವರು. ಇವುಗಳಿಗೆ ದರ್ಶಪೂರ್ಣಮಾಸೇಷ್ಟಿಗಳೆಂದು ಹೆಸರು. ಸಾಧಾರಣವಾಗಿ ಪುರುಷನು ಅಗ್ನಿಯನ್ನು ಉತ್ಪತ್ತಿಮಾಡಿದನಂತರ ಈ ದರ್ಶಪೂರ್ಣಮಾಸೇಷ್ಟಿಗಳನ್ನು ಮಾಡುವನು. ಅನಂತರ ಚಾತುರ್ಮಾಸ್ಯ ಮೊದಲಾದ ಇತರ ಯಜ್ಞಗಳನ್ನೂ ಮಾಡಿ ಬಳಿಕ ಸೋಮಯಾಗವೆಂಬ ಯಜ್ಞವನ್ನು ಮಾಡುವನು. ಇಷ್ಟಿಗಳಲ್ಲಿ ಹೋಮ ಮಾಡುವಾಗ ಹಾಲು, ತುಪ್ಪ, ಅಕ್ಕಿಹಿಟ್ಟು, ಗೋಧಿಹಿಟ್ಟು ಮೊದಲಾದ ದ್ರವ್ಯಗಳನ್ನು ಮಾತ್ರ ಉಪಯೋಗಿಸುವರು. ಸೋಮ ಯಾಗ ಮೊದಲಾದ ಮಹಾಯಾಗಗಳಲ್ಲಿ ಸೋಮ, ಪಶು ಮೊದಲಾದವುಗಳನ್ನು ಉಪಯೋಗಿಸುವರು. ಸೋಮ ಮೊದಲಾದ ದೊಡ್ಡ ಯಾಗಗಳಲ್ಲಿ ಅದರ ಅಂಗವಾಗಿ ಅನೇಕ ಸಣ್ಣ ಸಣ್ಣ ಹೋಮಕ್ರಮಗಳೂ ಇರುವವು. ಇವುಗಳಿಗೂ ಇಷ್ಟಿಗಳೆಂದು ಹೆಸರು.]

ಸಿದ್ಧಾಂತ—ಹಾಗಲ್ಲ. ಇಷ್ಟಿಗಳನ್ನು ಮಾಡಿಯೇ ಸೋಮಯಾಗವನ್ನು ಮಾಡಬೇಕೆಂಬ ನಿಯಮವು ಎಲ್ಲಾ ಸಂದರ್ಭಗಳಲ್ಲಿಯೂ ಪಾಲಿಸಲ್ಪಡಬೇಕಾಗಿಲ್ಲ. ಏಕೆಂದರೆ, ಅಗ್ನ್ಯಾಧಾನವನ್ನು (ಅಗ್ನಿಯ ಉತ್ಪತ್ತಿಯನ್ನು) ಇಂತಹ ಕಾಲ, ಮಾಸ, ನಕ್ಷತ್ರಗಳಲ್ಲಿಯೇ ಮಾಡಬೇಕೆಂಬ ವಿಧಿ ಇದೆ. ಹೇಗೆಂದರೆ **ವಸಂತಾ ಬ್ರಾಹ್ಮಣೋಽಗ್ನಿಮಾದಧೀತ । ವಸಂತೋ ವೈ ಬ್ರಾಹ್ಮಣಸ್ಯರ್ತುಃ ।....ಗ್ರೀಷ್ಮೇ ರಾಜನ್ಯ ಆದಧೀತ ।.... ಶರದಿ ವೈಶ್ಯ ಆದಧೀತ । ಕೃತ್ತಿಕಾಸ್ವಗ್ನಿಮಾದಧೀತ । ಏತದ್ವಾ ಅಗ್ನೇರ್ನಕ್ಷತ್ರಂ ।** ಇತ್ಯಾದಿ ವೇದವಾಕ್ಯಗಳು ಅಗ್ನ್ಯಾಧಾನಕ್ಕೂ ದರ್ಶಪೂರ್ಣಮಾಸ ಮೊದಲಾದ ಇಷ್ಟಿಗಳಿಗೂ ಒಂದು ನಿರ್ದಿಷ್ಟವಾದ ಕಾಲವನ್ನು ಸೂಚಿಸುವವು. ಆದ್ದರಿಂದ ಸೋಮಯಾಗವನ್ನು ಮಾಡಬಯಸುವ ಪುರುಷನು ಆಯಾಕಾಲವನ್ನು ಋತುವನ್ನು ಕಾಯುತ್ತಾ ಕುಳಿತರೆ ಸೋಮಯಾಗವನ್ನು ಮಾಡಲು ತೊಂದರೆಯಾಗುವುದು. ಆದ್ದರಿಂದ ಸೋಮಯಾಗವನ್ನು ಮಾಡಬಯಸುವ ಪುರುಷನು ಮಾಸ, ಋತು ಮೊದಲಾದ ಕಾಲ ನಿಯಮವನ್ನು ಪರಿಗಣಿಸದೆ ಯಾವಾಗಬೇಕಾದರೂ ಅಗ್ನ್ಯಾಧಾನವನ್ನು ಮಾಡಿ ಕೂಡಲೇ ಸೋಮಯಾಗವನ್ನು ಮಾಡಬಹುದು. ಇಷ್ಟಿಗಳನ್ನು ಮೊದಲು ಮಾಡಿ ಅನಂತರ ಸೋಮಯಾಗಮಾಡಬೇಕೆಂಬ ನಿಯಮವು ಇಲ್ಲಿ ಅನ್ವಯಿಸುವುದಿಲ್ಲ. ಇಷ್ಟಿಗಳನ್ನು ಮೊದಲುಮಾಡಬೇಕೆಂಬ ನಿಯಮವು ಕೇವಲ ವಿಕಲ್ಪವು (option) ಬೇಕಾದರೆ ಮಾಡಬಹುದು ಸಾಧ್ಯವಿಲ್ಲದಿದ್ದರೆ ಬಿಡಬಹುದು. ಇದು ಸೋಮಯಾಗ ಮಾಡುವ ಪುರುಷನಿಗೆ ಮಾತ್ರ ಅನ್ವಯಿಸುವುದು. ಸೋಮಯಾಗವನ್ನು ಮಾಡದೆ ಇತರ ಯಜ್ಞಗಳನ್ನು ಮಾಡುವ ಪುರುಷನು ಇಷ್ಟಿಗಳನ್ನು ಮಾಡಬೇಕು.

[ ಜೈ.ಸೂ. ಅಧ್ಯಾಯ ೫, ಪಾದ ೪ ]

ಇಷ್ಟಿಯನ್ನು ಮೊದಲುಮಾಡಿ ಅನಂತರ ಸೋಮಯಾಗವನ್ನು ಮಾಡಬಹುದೆಂಬುವುದು ಅಥವಾ ಸೋಮಯಾಗವನ್ನೇ ಮೊದಲು ಮಾಡಬಹುದೆಂಬುವುದೂ ವಿಕಲ್ಪವೆಂದು (option) ಹಿಂದೆ ಹೇಳಿದೆಯಷ್ಟೆ. ಆದರೆ ಬ್ರಾಹ್ಮಣನಿಗೆ ಸೋಮಯಾಗವನ್ನೇ ಮೊದಲು ಮಾಡಬೇಕೆಂದು ನಿಯಮವಿದೆ. ಏಕೆಂದರೆ ಬ್ರಾಹ್ಮಣನು ಇತರ ವರ್ಣದವರಿಗಿಂತ ಶ್ರೇಷ್ಠನು ಅಲ್ಲದೆ— **ಆಗ್ನೇಯೋ ವೈ ಬ್ರಾಹ್ಮಣೋ ದೇವತಯಾ । ಸ ಸೋಮೇನೇಷ್ಟ್ವಾಗ್ನೀಷೋಮೀಯೋ ಭವತಿ । ಯದೇವಾದಃ ಪೌರ್ಣಮಾಸಂ ಹವಿಃ । ತತ್ತರ್ಹ್ಯನು ನಿರ್ವಪೇತ್ । ತರ್ಹ್ಯುಭಯದೇವತೋ ಭವತಿ ।** ಎಂದು ಶ್ರುತಿಪ್ರಮಾಣವಿರುವುದು. ಇದರ ಅರ್ಥವೇನೆಂದರೆ--ಪ್ರಜಾಪತಿಯ (ಪರಮಾತ್ಮನ ಅಥವಾ ಪರಬ್ರಹ್ಮನ) ಮುಖದಿಂದ ಅಗ್ನಿಯು ಮತ್ತು ಬ್ರಾಹ್ಮಣನು ಉತ್ಪನ್ನರಾದರು. ಆದ್ದರಿಂದ ಬ್ರಾಹ್ಮಣನಿಗೆ ಅಗ್ನಿಯು ಮಾತ್ರ ಒಬ್ಬನೇ ದೇವತೆಯಾಗಿರುವ ಕಾರಣದಿಂದ ಬ್ರಾಹ್ಮಣನು ಆಗ್ನೇಯನೆಂದು ಹೇಳಲ್ಪಡುವನು. ಸೋಮನು ಬ್ರಾಹ್ಮಣನಿಗೆ ದೇವತೆಯಲ್ಲವಾದ್ದರಿಂದ ಸೌಮ್ಯನೆಂಬ ಹೆಸರು ಬರಲು ಕಾರಣವಿಲ್ಲ. ಆದರೆ ಬ್ರಾಹ್ಮಣನು ಸೋಮಯಾಗವನ್ನು ಮಾಡಿ ಸೋಮದೇವತೆಯನ್ನು ಆರಾಧಿಸಿದರೆ ಆಗ ಅವನಿಗೆ ಸೌಮ್ಯನೆಂಬ ಹೆಸರೂ ಬರುವುದು. ಎಂದರೆ ಅಗ್ನೀಷೋಮೀಯನೆಂಬ ಹೆಸರು ಬರುವುದು. ಇಂತಹ ಬ್ರಾಹ್ಮಣನು ತನಗೆ ಅನುರೂಪವಾದ, ಅಗ್ನೀಷೋಮೀಯದೇವತೆಗಳಿಗೆ ಸಂಬಂಧಪಟ್ಟ ಪೌರ್ಣಮಾಸ್ಯ ಎಂದರೆ ಪೌರ್ಣಮಾಸದಲ್ಲಿ ಹೋಮಮಾಡಬೇಕಾದ ಪುರೋಡಾಶರೂಪವಾದ ಹವಿಸ್ಸನ್ನು ಸೋಮಯಾಗಾನಂತರ ಹೋಮಮಾಡಿದ್ದೇ ಆದರೆ ಆಗ ಅವನು ಅಗ್ನಿ ಮತ್ತು ಸೋಮ ಎಂಬ ಉಭಯದೇವತೆಗಳ ಸಂಬಂಧವುಳ್ಳವನೂ ಆಗುವನು. ಈ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿಯೂ- **ಯದಾಗ್ನೇಯೋ ಭವತಿ । ಆಗ್ನೇಯೋ ವೈ ಬ್ರಾಹ್ಮಣಃ । ಅಥ ಯತ್ಸೌಮ್ಯಃ । ಸೌಮ್ಯೋ ಹಿ ಬ್ರಾಹ್ಮಣಃ ।.... ತೌ ಯದಾ ಸಂಗಚ್ಛೇತೇ । ಅಥ ವೀರ್ಯಾವತ್ತರೋ ಭವತಿ ।** (ತೈ.ಬ್ರಾ. ೨-೭-೩-೧) ಎಂದು ಹೇಳಿದೆ. ಆದರೆ ಕೆಲವರು ಈ ವಿಷಯದಲ್ಲಿ ಹೀಗೆ ಹೇಳುವರು—**ಪೌರ್ಣಮಾಸಂ ಹವಿಃ** ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಇದು ಬೇರೆ ಕರ್ಮವೇನೂ ಆಗುವುದಿಲ್ಲ. ದರ್ಶಪೂರ್ಣಮಾಸವೇ ಆದಂತಾಯಿತು.

ಆದ್ದರಿಂದ ಬ್ರಾಹ್ಮಣನಾದವನು ಸೋಮಯಾಗಾನಂತರವೇ ದರ್ಶಪೂರ್ಣಮಾಸವೆಂಬ ಇಷ್ಟಿಯನ್ನು ಮಾಡಬೇಕೆಂಬ ವಿಧಿ ಇದ್ದಂತಾಯಿತು ಎನ್ನುವರು.

ಹೀಗೆ ಹೇಳಿದರೆ ಅದಕ್ಕೆ ಈರೀತಿ ಸಮಾಧಾನವನ್ನು ಹೇಳಬೇಕಾಗುವುದು ಇಲ್ಲಿ **ದರ್ಶ** ಮತ್ತು **ಪೂರ್ಣಮಾಸ** ಎಂಬ ಶಬ್ದಗಳಿಗೆ ಯಾಗವೆಂಬ ಅರ್ಥವಿರುವುದಿಲ್ಲ. **ಪೌರ್ಣಮಾಸಂ ಹವಿಃ** ಎಂಬಲ್ಲಿ ಪೌರ್ಣಮಾಸಿಯಲ್ಲಿ ಹೋಮ ಮಾಡುವ ಒಂದು ವಿಶೇಷ ಹೋಮವು ಎಂಬರ್ಥವು ಸ್ಪಷ್ಟಪಡುವುದು. ಆ ಹವಿಸ್ಸನ್ನು ಅಗ್ನೀಷೋಮೀಯ (ಅಗ್ನಿ ಮತ್ತು ಸೋಮ) ಎಂದು ಉಭಯದೇವತೆಗಳನ್ನುದ್ದೇಶಿಸಿ ಹೇಳಿದೆ. ಆದ್ದರಿಂದ ಒಂದು ನಿರ್ದಿಷ್ಟವಾದ ಹವಿಸ್ಸಿನ ಉತ್ಕರ್ಷವನ್ನು ಹೇಳಿದಂತಾಯಿತೇ ಹೊರತು ದರ್ಶಪೂರ್ಣಮಾಸೇಷ್ಟಿಗಳೆಂಬ ಪೂರ್ತ ಎರಡು ಇಷ್ಟಿಗಳನ್ನು ಉದ್ದೇಶಿಸಿ ಹೇಳಿದಂತಾಗಲಿಲ್ಲ. ಈ ಕಾರಣಗಳಿಂದ ಬ್ರಾಹ್ಮಣನಾದವನಿಗೆ ಸೋಮಯಾಗಾನಂತರವೇ ಇಷ್ಟಿಗಳನ್ನು ಮಾಡಬೇಕೆಂಬ ನಿಯಮವು ಉಕ್ತವಾಯಿತು. ಆದರೂ ಸಹ ಇತರ ಸಂದರ್ಭಗಳಲ್ಲಿ ಕ್ಷತ್ರಿಯ ಮತ್ತು ವೈಶ್ಯವರ್ಣದವರಿಗೆ ಉಕ್ತವಾಗಿರುವಂತೆ ಬ್ರಾಹ್ಮಣನೂ ಸಹ ಇಷ್ಟಿಗಳನ್ನೇ ಮೊದಲುಮಾಡಿ ಅನಂತರ ಸೋಮಯಾಗವನ್ನು ಮಾಡಬಹುದು ಎಂದು ವಿಕಲ್ಪವು ಸಹ ಇರುವುದು.

[ಜೈ.ಸೂ. ಅಧ್ಯಾಯ ೩. ಪಾದ ೬. ಸೂತ್ರ ೯]

ಮೇಲಿನ ಬ್ರಾಹ್ಮಣವಾಕ್ಯದಲ್ಲಿ—**ಸಪ್ತದಶಸಾಮಿಧೇನೀರನುಬ್ರೂಯಾತ್** – ಹದಿನೇಳು ಸಾಮಿಧೇನೀಮಂತ್ರಗಳನ್ನು ಪಠಿಸಬೇಕು ಎಂದು ಹೇಳಿದೆಯಷ್ಟೆ. ಈ ಸಾಮಿಧೇನೀ ಮಂತ್ರಗಳ ಸ್ವರೂಪವನ್ನು ಸಂಖ್ಯೆಯನ್ನು ನಾವು ಆ ವಾಕ್ಯದ ಅರ್ಥವಿವರಣೆಯಲ್ಲಿ ವಿವರಿಸಿದೇವೆ. ಯಜ್ಞದಲ್ಲಿ ಅಗ್ನಿಯನ್ನು ಉತ್ಪನ್ನಮಾಡುವಾಗ ಪಠಿಸುವ ಮಂತ್ರಗಳಿಗೆ ಸಾಮಿಧೇನೀ ಮಂತ್ರಗಳೆಂದು ಹೆಸರು. ಈ ಸಂಬಂಧವಾಗಿ **ಪ್ರ ವೋ ವಾಜಾ ಅಭಿದ್ಯವಃ** ಎಂದು ಮೊದಲಾದ ೧೧ ಮಂತ್ರಗಳಿರುವುವು ಇವುಗಳಲ್ಲಿ ಮೊದಲ ಮತ್ತು ಕಡೆಯ ಎರಡು ಮಂತ್ರಗಳನ್ನು ಮೂರಾವರ್ತಿ ಪಠಿಸುವುದರಿಂದ ಒಟ್ಟು ಮಂತ್ರಸಂಖ್ಯೆಯು ೧೫ ಆಗುವುದು ಮತ್ತು ಮಧ್ಯದಲ್ಲಿ ಧಾಯ್ಯಾ ಎಂಬ ೨ ಮಂತ್ರಗಳನ್ನು ಸೇರಿಸುವುದರಿಂದ ಮಂತ್ರಸಂಖ್ಯೆಯು ೧೭ ಆಗುವುದು. ಇಲ್ಲಿ ಎಂದರೆ ಮೇಲಿನ ಸಂದರ್ಭದಲ್ಲಿ ೧೭ ಸಾಮಿಧೇನೀಮಂತ್ರಗಳನ್ನು ಪಠಿಸಬೇಕೆಂದು ಹೇಳಿದೆಯಷ್ಟೆ. ಆದರೆ ಪ್ರಕೃತಿಯಾಗದಲ್ಲಿ–**ಪಂಚದಶಸಾಮಿಧೇನೀರನ್ವಾಹ** ಎಂಬ ವಿಧಿವಾಕ್ಯವು ಕಂಡುಬರುವುದರಿಂದ ೧೫ ಅಥವಾ ೧೭ ಎಂಬ ಸಂಖ್ಯೆಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದೇ ಎಂದು ಸಂಶಯವುಂಟಾದಲ್ಲಿ ಅದಕ್ಕೆ ಸಮಾಧಾನವು.—

[ಇಲ್ಲಿ ಪ್ರಕೃತಿಯಾಗವೆಂದರೆ ಮೂಲನಿಯಮಗಳನ್ನೂ ಒಂದು ನಿರ್ದಿಷ್ಟವಾದ ಕ್ರಮವನ್ನೂ ಒಳಗೊಂಡಿರುವ ಯಾಗಕ್ಕೆ ಪ್ರಕೃತಿಯಾಗವೆಂದು ಹೆಸರು (standard) ಪ್ರಕೃತಿಯಾಗದಲ್ಲಿ ಕೆಲವು ಬದಲಾವಣೆಗಳನ್ನು ಅಥವಾ ಹೆಚ್ಚು ವಿಷಯಗಳನ್ನು ಸೇರಿಸಿ ಮಾಡುವ ಯಾಗಕ್ಕೆ ವಿಕೃತಿಯಾಗವೆಂದು ಹೆಸರು].

ಪ್ರಕೃತಿಯಾಗದಲ್ಲಿ ಸಾಧಾರಣವಾಗಿ ೧೫ ಸಾಮಿಧೇನೀ ಮಂತ್ರಗಳನ್ನು ಪಠಿಸುವುದು ರೂಢಿಯು. ವಿಕೃತಿಯಾಗದಲ್ಲಿ ೧೭ ಮಂತ್ರಗಳನ್ನು ಪಠಿಸಬೇಕು. ಹೀಗಿರುವಾಗ ಇಲ್ಲಿ ಪ್ರಕೃತಿಯಾಗದಲ್ಲಿ ೧೭ ಮಂತ್ರಗಳನ್ನು ಪಠಿಸುವುದು ಅನುಚಿತವಲ್ಲವೇ ಎಂದರೆ ಸಂದರ್ಭಾನುಸಾರ, ಆಯಾಯ ಕರ್ಮಗಳಿಗೆ ಅನುರೂಪವಾಗಿ ಪ್ರಕೃತಿಯಾಗದಲ್ಲಿಯೂ ೧೭ ಮಂತ್ರಗಳನ್ನು ಪಠಿಸಬಹುದು. ಆದ್ದರಿಂದ ಪ್ರಕೃತಿಯಾಗದಲ್ಲಿ ೧೫, ವಿಕೃತಿಯಾಗದಲ್ಲಿ ೧೭ ಎಂಬ ಕಟ್ಟುನಿಟ್ಟಾದ ನಿಯಮವನ್ನು ಇಲ್ಲಿ ಪಾಲಿಸಬೇಕಾಗಿಲ್ಲ. ಪೂರ್ವಸಂಪ್ರದಾಯವನ್ನೇ ಅನುಸರಿಸಬೇಕು. ಆದ್ದರಿಂದ ಮಿತ್ರವಿಂದ ಅಧ್ವರಕಲ್ಪಾದಿ ಯಾಗಗಳಲ್ಲಿ (ಅವು ಪ್ರಕೃತಿಯಾಗಗಳಾಗಿದ್ದರೂ) ೧೭ ಸಾಮಿಧೇನೀಮಂತ್ರಗಳನ್ನೇ ಪಠಿಸಬೇಕು.

[ಜೈ.ಸೂ. ಅಧ್ಯಾಯ ೩. ಪಾದ ೬. ಸೂತ್ರ ೧೦]

[ನಿತ್ಯ ಮತ್ತು ನೈಮಿತ್ತಿಕವೆಂಬ ಶಬ್ದಗಳ ವಿವರಣೆ—ನಿತ್ಯವೆಂದರೆ ಕರ್ತವ್ಯರೂಪವಾಗಿ ಮಾಡಬೇಕಾದ ಕರ್ಮವು. ಅದರಿಂದ ಪ್ರಯೋಜನವು ಉಂಟಾಗದಿದ್ದರೂ ಎಂದರೆ ಕಣ್ಣಿಗೆ ಕಾಣದಿದ್ದರೂ ಅದನ್ನು ಮಾಡಲೇಬೇಕು. ನೈಮಿತ್ತಿಕವೆಂದರೆ ಒಂದು ಕಾರಣಕ್ಕಾಗಿ ಅಥವಾ ಒಂದು ನಿರ್ದಿಷ್ಟವಾದ ಪ್ರಯೋಜನವನ್ನು ಪಡೆಯುವುದಕ್ಕಾಗಿ ಮಾಡುವ ಕರ್ಮವು. ಇದನ್ನು ಕರ್ತವ್ಯದಂತೆ ಮಾಡಲೇಬೇಕೆಂಬ ನಿಯಮವಿಲ್ಲ. ಪ್ರಯೋಜನ ಬೇಕಾದರೆ ಮಾಡಬಹುದು. ಬೇಡವಾದರೆ ಮಾಡಬೇಕಾಗಿಲ್ಲ]. ಪ್ರಕೃತಿಯಾಗವನ್ನು ಮಾಡುವಾಗ ೧೫ ಸಾಮಿಧೇನೀಮಂತ್ರಗಳನ್ನು ಮಾತ್ರ ಪಠಿಸಬೇಕೆಂದು ಹಿಂದೆ ಹೇಳಿರುವುದು. ಆದರೆ ಆ ಪ್ರಕೃತಿಯಾಗವನ್ನು ನೈಮಿತ್ತಿಕವಾಗಿ ಎಂದರೆ ಒಂದು ನಿರ್ದಿಷ್ಟಪ್ರಯೋಜನವನ್ನು ಪಡೆಯುವುದಕ್ಕಾಗಿ ಮಾಡುವಾಗ ೧೭ ಸಾಮಿಧೇನೀಮಂತ್ರಗಳನ್ನು ಪಠಿಸಬೇಕು. ಏಕೆಂದರೆ ಪ್ರಕೃತಿಯಾಗದಲ್ಲಿಯೂ ಸಂದರ್ಭಾನುಸಾರವಾಗಿ ೧೭ ಮಂತ್ರಗಳನ್ನು ಹೇಳಬೇಕೆಂದು ಅಲ್ಲಿಯೇ ಹೇಳಿದೆ. **ಸಪ್ತದಶಾನುಬ್ರೂಯಾದ್ವೈಶ್ಯಸ್ಯ** ಎಂಬ ಶ್ರುತಿವಾಕ್ಯದ ಪ್ರಕಾರ ವೈಶ್ಯನು ಯಜ್ಞ ಮಾಡುವಾಗ ಅದು ಪ್ರಕೃತಿಯಾಗಿರಲಿ ಅಥವಾ ವಿಕೃತಿಯಾಗಿರಲಿ ೧೭ ಸಾಮಿಧೇನೀಮಂತ್ರಗಳನ್ನೇ ಹೇಳಬೇಕೆಂಬ ನಿಯಮವಿದೆ. ಈ ನಿಯಮವು ಪ್ರಕೃತಿವಿಕೃತಿಯಾಗಗಳಿಗೆ ಹಿಂದೆ ಹೇಳಿದ ನಿಯಮಗಳನ್ನು ಅನುಸರಿಸಿದೆಯೇ ಎಂದರೆ ಹಾಗಲ್ಲ. ನಿತ್ಯನೈಮಿತ್ತಿಕ ಯಾಗಗಳಲ್ಲಿ ಅನುಸರಿಸಬೇಕಾದ ನಿಯಮಗಳೂ ಇಲ್ಲಿ ಅನ್ವಯವಾಗುವುದಿಲ್ಲ. ಶ್ರುತಿವಾಕ್ಯವು ಪ್ರಬಲ ಅಥವಾ ಪ್ರಮಾಣವಾಗಿರುವುದರಿಂದ ವೈಶ್ಯನು ಪ್ರಕೃತಿಯಾಗ ಮಾಡಿದರೂ ಅಥವಾ ನಿತ್ಯ (ಕರ್ತವ್ಯ) ಕರ್ಮವನ್ನಾಚರಿಸಿದರೂ ಸಹ ವಿಕೃತಿ ಮತ್ತು ನೈಮಿತ್ತಿಕ ಯಾಗಗಳಂತೆ ೧೭ ಸಾಮಿಧೇನೀ ಮಂತ್ರಗಳನ್ನೇ ಪಠಿಸಬೇಕು. ಇದಕ್ಕೆ ಕಾರಣವನ್ನು ಭಾಷ್ಯಕಾರರು ಹೀಗೆ ಹೇಳಿರುವರು.

ವೈಶ್ಯನು ಪ್ರಕೃತಿ ಮತ್ತು ನಿತ್ಯಯಾಗವನ್ನು ಮಾಡುವಾಗಲೂ ಕೆಲವು ವಿಶೇಷ ವಿಧಿಗಳನ್ನು ಅನುಸರಿಸಬೇಕಾಗಿರುವುದು. ಆ ವಿಧಿಗಳು ಪ್ರಕೃತಿ ಮತ್ತು ನಿತ್ಯಯಾಗಗಳಿಗೆ ವಿಕೃತಿ ಮತ್ತು ನೈಮಿತ್ತಿಕಯಾಗಗಳ ಸ್ವರೂಪವನ್ನೂ ಒದಗಿಸುವವು. ಉದಾಹರಣೆಗೆ – **ಚಮಸೇನಾಪಃ ಪ್ರಣಯೇದ್ಗೋದೋಹನೇನ ಪಶುಕಾಮಸ್ಯ** ಎಂಬ ವಾಕ್ಯದ ಪ್ರಕಾರ – ಪಶುಸಂಪತ್ತನ್ನು ಬಯಸುವ ವೈಶ್ಯನು ಯಜ್ಞದಲ್ಲಿ ಹಾಲನ್ನು ಕರೆಯುವ ಪಾತ್ರೆಯನ್ನು ನೀರನ್ನು ತರುವುದಕ್ಕಾಗಿ (ಅಪಃ ಪ್ರಣಯನ) ಉಪಯೋಗಿಸಬೇಕು ಮತ್ತು ಬ್ರಹ್ಮವರ್ಚಸ್ಸನ್ನು ಬಯಸುವವನು ಅಗ್ನೀಷೋಮೀಯ ಪಶುಯಾಗದಲ್ಲಿ ಪಶುವನ್ನು ಕಟ್ಟುವುದಕ್ಕಾಗಿ ಬೈಲ್ವ (ಬಿಲ್ವವೃಕ್ಷದ) ಮರದ ಕಂಭವನ್ನು ಉಪಯೋಗಿಸಬೇಕು ಎಂದಿದೆ. ಈ ವಿಶೇಷಕರ್ಮಗಳನ್ನೆಲ್ಲಾ ವೈಶ್ಯನ ವಿಷಯದಲ್ಲಿ ಪ್ರಕೃತಿ ಮತ್ತು ನಿತ್ಯಯಾಗಗಳಲ್ಲಿಯೂ ಅನುಸರಿಸುವುದರಿಂದ ವೈಶ್ಯನು ಮಾಡುವ ಯಾಗಗಳು ವಿಕೃತಿ ಮತ್ತು ನೈಮಿತ್ತಿಕಯಾಗಗಳ ಸ್ವರೂಪವನ್ನೇ ಹೋಲುವವು. ಆದುದರಿಂದ ವೈಶ್ಯನು ಮಾಡುವ ಎಲ್ಲಾ ಯಾಗಗಳಲ್ಲಿ ವಿಕೃತಿ ಮತ್ತು ನೈಮಿತ್ತಿಕಯಾಗಗಳಂತೆ ೧೭ ಸಾಮಿಧೇನೀಮಂತ್ರಗಳನ್ನು ಪಠಿಸಲೇಬೇಕೆಂಬುದು ಯುಕ್ತವು

[ಜೈ. ಸೂ. ಅಧ್ಯಾಯ. ೧೦. ಪಾದ. ೮. ಸೂತ್ರಗಳು. ೧೭-೧೯]

ಯಾವ ವಿಶೇಷಸಂದರ್ಭವನ್ನೂ ಸೂಚಿಸದೆ–ಹದಿನೇಳು ಸಾಮಿಧೇನೀ ಮಂತ್ರಗಳನ್ನು ಪಠಿಸಬೇಕು ಎಂಬ ವಿಧಿವಾಕ್ಯವಿರುವುದು. ಅದರಂತೆಯೇ ಕೆಲವು ವಿಕೃತಿಯಾಗಗಳಲ್ಲಿ ಎಂದರೆ ವೈಮೃಧ, ಅಧ್ವರಕಲ್ಪ, ಪಶು, ಚಾತುರ್ಮಾಸ್ಯ, ಮಿತ್ರವಿಂದಾ, ತ್ರೇಧಾತವೀ, ಆಗ್ರಯಣೇಷ್ಟಿ ಎಂಬ ವಿಕೃತಿಯಾಗಗಳಲ್ಲಿಯೂ ಹದಿನೇಳು ಸಾಮಿಧೇನೀಮಂತ್ರಗಳನ್ನು ಪಠಿಸಬೇಕೆಂದು ನಿಯಮವಿರುವುದು. ಆದರೆ ಪ್ರಕೃತಿಯಾಗದಲ್ಲಿ ಹದಿನೈದು ಸಾಮಿಧೇನೀಮಂತ್ರಗಳನ್ನು ಪಠಿಸಬೇಕೆಂದಿರುವುದು ನ್ಯಾಯವೇ ಆಗಿದೆ. ಹೀಗಿದ್ದರೂ ವೈಮೃಧಾದಿ ವಿಕೃತಿಯಾಗಗಳಲ್ಲಿ ಹದಿನೇಳು ಸಾಮಿಧೇನೀಮಂತ್ರಗಳನ್ನು ಹೇಳಬೇಕೆಂಬ ವಿಶೇಷವಿಧಿಯ ಉದ್ದೇಶವೇನು ? ವಿಕೃತಿಯಾಗಗಳಲ್ಲಿ ಹದಿನೇಳು, ಪ್ರಕೃತಿಯಾಗಗಳಲ್ಲಿ ಹದಿನೈದು ಮಂತ್ರಗಳನ್ನು ಹೇಳಬೇಕೆಂಬ

ಸಾಧಾರಣ ನಿಯಮವೇ ಸಾಕಲ್ಲವೇ ? ಎಂದರೆ, ವೈಮೃಧಾದಿ ವಿಕೃತಿಯಾಗಗಳಲ್ಲಿ ಆಜ್ಯಭಾಗ ನಿಯಮದಂತೆ ಸಾಮಿಧೇನೀ ಮಂತ್ರಗಳ ಸಂಖ್ಯೆಯು ಸಾಧಾರಣ ನಿಯಮಗಳಿಗೊಳಪಟ್ಟಿರುವುದಿಲ್ಲ. ಏಕೆಂದರೆ ಹಿಂದಿನಿಂದ ಬಂದ ಪದ್ಧತಿ ಸಂಪ್ರದಾಯಗಳನ್ನನುಸರಿಸಿ ಕೆಲವು ವಿಕೃತಿಯಾಗಗಳಲ್ಲಿ ಹದಿನೇಳು ಮಂತ್ರಗಳನ್ನು ಪಠಿಸುವುದು ರೂಢಿಯಾಗಿದೆ.

ಮತ್ತೆ ಕೆಲವು ವಿಕೃತಿಯಾಗಗಳಲ್ಲಿ ಹದಿನೇಳು ಮಂತ್ರಗಳನ್ನು ಪಠಿಸಲೇಬೇಕೆಂಬ ವಿಧಿವಾಕ್ಯವು ಇರುವುದು. ಅದರಂತೆ ಆಚರಣೆಯೂ ಇರುವುದು. ಹೀಗಿರುವುದರಿಂದ ಯಾವ ವಿಶೇಷ ಸಂದರ್ಭವನ್ನೂ ಸೂಚಿಸದೆ ಎಲ್ಲಾ ವಿಕೃತಿಯಾಗಗಳಲ್ಲಿಯೂ ಒಂದೇವಿಧವಾದ ನಿಯಮಗಳನ್ನು ಆಚರಿಸಲಾಗುವುದಿಲ್ಲ. ಸಾಮಿಧೇನೀ ಮಂತ್ರಸಂಖ್ಯೆಯ ವಿಷಯದಲ್ಲಿ ಪ್ರಕೃತಿ ಮತ್ತು ವಿಕೃತಿಯಾಗಗಳಿಗೆ ಹದಿನೈದು ಮತ್ತು ಹದಿನೇಳು ಎಂಬ ಸಂಖ್ಯೆಗಳು ಸಾಧಾರಣ ನಿಯಮದಂತೆ ನಿರ್ದಿಷ್ಟವಾಗಿದ್ದರೂ ವಿಶೇಷ ಸಂದರ್ಭ ಅಥವಾ ಪ್ರಕರಣಸಂದರ್ಭದಲ್ಲಿ ಇವುಗಳು ವ್ಯತ್ಯಾಸಕ್ಕೆ ಒಳಪಡುವವು. ಈ ವಿಷಯದಲ್ಲಿ ವಿಧಿವಾಕ್ಯಗಳನ್ನೂ ಪೂರ್ವಪದ್ಧತಿ ಸಂಪ್ರದಾಯಗಳನ್ನೂ ವಿಮರ್ಶಿಸಿ ಸಂದರ್ಭಾನುಸಾರ ಸಾಮಿಧೇನೀಮಂತ್ರಗಳ ಸಂಖ್ಯೆಯನ್ನು ನಿರ್ಧರಿಸಬೇಕಾಗುವುದು.



# THE AITAREYA BRAHMANAM OF THE RIGVEDA

## First Book - First Chapter (Adhyaya)

*(The Dikshanya Ishti, with the Initiatory Rites)*

Agni, among the gods, has the first, Vishnu the last place ; between them stand all the other deities.

They offer the Agni-Vishnu rice-cake (Purodasa) which belongs to the Dikshaniya ishti (and put its several parts) on eleven potsherds (kapala). They offer it (the rice-cake) really to all the deities of this (Ishti) without foregoing any one. For Agni is all the deities, and Vishnu is all the deities. For these two (divine) bodies, Agni and Vishnu, are the two ends of the sacrifice. Thus when they portion out the Agni-Visnnu rice-cake, they indeed make at the end (after the ceremony is over) prosper (all) the gods of this (ceremony).

Here they say: if there be eleven potsherds on which portions of the rice-cake are put, and (only) two deities, Agni and Vishnu, what arrangement is there for the two, or what division ?

(The answer is) The rice-cake protions on eight potsherds belong to Agni; for the Gayatri verse consists of eight syllables, and the Gayatri is Agni's metre. The rice-cake portions on the three potsherds belong to Vishnu ; for Vishnu (the sun) strode thrice through the universe. This the arrangement (to be made) for them ; this the division.

He who might think himself to have no position (not to be highly respected by others) should portion out (for being offered) Charu over which clarified butter is poured. For on this earth no one has a firm footing who does not enjoy a certain (high) position. The clarified butter (poured over this Charu) is the milk of the woman; the husked rice grains (tandula of which Charu consists) belong to the male; both are a pair. Thus the Charu on account of its consisting of a pair (of female and male parts) blesses him with the production of progeny and cattle, for his propagation (in his descendants and their property). He who has such a knowledge propagates his progeny and cattle.

He who brings the New and Full Moon oblations, has already made a beginning with fhe sacrifice, and made also a beginning with (the sacrifical worship of the) deities. After having brought the New or Full Moon oblations, he may be inaugurated in consequence of the offering made at these (oblations) and the sacrificial grass (having been spread) at these (oblations, at the time of making them). This (might be regarded as one Diksha (initiatory rite).

The Hotar must recite seventeen verses for the wooden sticks to be thrown into the fire (to feed it). For Prajapati (the Lord of all creatures) is seventeenfold; the months are twelve, and the seasons five; by putting Hemanta (winter) and S'is'iru (between winter and spring) as one. So much is the year. The year is Prajapati. He who has such a knowledge prospers by these verses (just mentioned) which reside in Prajapati.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದ
ಪ್ರಥಮಾಧ್ಯಾಯದಲ್ಲಿ ಪ್ರಥಮಖಂಡವು ಸಮಾಪ್ತವು.



# ಅಥ ಪ್ರಥಮಾಧ್ಯಾಯೇ ದ್ವಿತೀಯಃಖಂಡಃ

## ಮೊದಲನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ಇಷ್ಟಿ, ಆಹುತಿ, ಊತಿ, ಹೋತೃ ಎಂಬ ಶಬ್ದಗಳ ನಿಷ್ಪತ್ತಿಯು ]



ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಮಿಷ್ಟಿಭಿಃ ಪ್ರೈಷಮೈಚ್ಛನ್ಯ-
ದಿಷ್ಟಿಭಿಃ ಪ್ರೈಷಮೈಚ್ಛಂಸ್ತದಿಷ್ಟೀನಾಮಿಷ್ಟಿತ್ವಂ ತಮನ್ವವಿಂದನ್

**ದೀಕ್ಷಣೀಯೇಷ್ಟಿಂ ನಿರೂಪ್ಯ ತತ್ಪ್ರಶಂಸಾರ್ಥಮಿಷ್ಟಿಶಬ್ದನಿರ್ವಚನಂ ದರ್ಶಯತಿ। ಜ್ಯೋತಿಷ್ಟೋಮಾಭಿಮಾನೀ ಯಜ್ಞಪುರುಷಃ ಕೇನಾಪಿ ನಿಮಿತ್ತೇನಾಪರಕ್ತೋ ದೇವೇಭ್ಯೋಽಪಕ್ರಾಂತವಾನ್ । ತಂ ಯಜ್ಞಂ ದೇವಾ ದೀಕ್ಷಣೀಯಾಪ್ರಾಯಣೀಯಾದಿಭಿರಿಷ್ಟಿಭಿಃ ಪ್ರೈಷಮನ್ವೇಷ್ಟುಮೈಚ್ಛನ್ । ಇಚ್ಛಂತಿ ಯಜ್ಞಮಾಭಿರಿತೀಷ್ಟಿಶಬ್ದವ್ಯುತ್ಪತ್ತಿಃ। ಯಜತಿಧಾತೋರಿಷ್ಟಿಶಬ್ದಃ ಸರ್ವತ್ರ ಪ್ರಸಿದ್ಧಃ। ಅತ್ರ ತ್ವಿಚ್ಛತಿಧಾತೋರಿತಿ ವಿಶೇಷಃ ಅನ್ವಿಷ್ಯ ತಂ ಯಜ್ಞಮನುಕ್ರಮೇಣ ಲಬ್ಧವಂತಃ।**

ದೀಕ್ಷಣೀಯೇಷ್ಟಿವಿಧಿಯನ್ನು ಹೇಳಿ ಈಗ ಇಷ್ಟಿ ಎಂಬ ಶಬ್ದದ ನಿರ್ವಚನವನ್ನು ಹೇಳುತ್ತಾರೆ. ಒಂದು ಸಮಯದಲ್ಲಿ ಜ್ಯೋತಿಷ್ಟೋಮ ಎಂಬ ಯಜ್ಞಾಭಿಮಾನಿದೇವತೆಯು ಎಂದರೆ ಯಜ್ಞಪುರುಷನು ಕಾರಣಾಂತರದಿಂದ ಬೇಸರಗೊಂಡು ದೇವತೆಗಳನ್ನು ಬಿಟ್ಟು ಹೊರಟುಹೋದನು. ಆಗ ದೇವತೆಗಳು ದೀಕ್ಷಣೀಯ, ಪ್ರಾಯಣೀಯ ಮೊದಲಾದ ಇಷ್ಟಿಗಳಿಂದ (ಆ ಇಷ್ಟಿಗಳನ್ನು ಮಾಡಿ) ಆ ಯಜ್ಞಪುರುಷನನ್ನು ಹುಡುಕಬೇಕೆಂದು ಅಪೇಕ್ಷಿಸಿದರು. ಯಜ್ಞಪುರುಷನನ್ನು ಹುಡುಕುವ ಅಪೇಕ್ಷೆಯಿಂದ ದೇವತೆಗಳು ಯಾವ ಪ್ರಾಯಣೀಯಾದಿ ಇಷ್ಟಿಗಳಿಂದ (ಅಥವಾ ಕರ್ಮಾಂಗಗಳಿಂದ) ಆರಾಧಿಸಿದರೋ (ಯಜತಿ) ಆ ಕಾರಣದಿಂದ **ಇಷ್ಟಿ** ಎಂಬ ಕರ್ಮಾಂಗಕ್ಕೆ ಇಷ್ಟಿ ಎಂಬ ಹೆಸರು ಬಂದಿತು. ಇಷ್ಟಿಶಬ್ದವು **ಯಜತಿ** (ಆರಾಧಿಸು) ಧಾತುವಿನಿಂದ ನಿಷ್ಪನ್ನವಾದ ಶಬ್ದವು. ಇಲ್ಲಿ ಇಚ್ಛತಿಧಾತುವಿನಿಂದ ಈ ಇಷ್ಟಿಶಬ್ದವು ನಿಷ್ಪನ್ನವಾಗಿದೆಯೆಂದು ತಿಳಿಯಬೇಕು. ಈರೀತಿ ಇಷ್ಟಿಗಳ ಮೂಲಕ ಹುಡುಕಿ ಎಂದರೆ ಇಷ್ಟಿಗಳ ಮೂಲಕ ಆರಾಧಿಸಿ ಯಜ್ಞಪುರುಷನನ್ನು (ಯಜ್ಞವನ್ನು) ಮತ್ತೆ ಪಡೆದರು.

ಅನುವಿತ್ತಯಜ್ಞೋ ರಾಧ್ನೋತಿ ಯ ಏವಂ ವೇದ।

**ತಲ್ಲಾಭವೇದನಂ ಪ್ರಶಂಸತಿ । ವೇದಿತಾ ತದನುಷ್ಠಾನೇನ ಲಬ್ಧಯಜ್ಞಫಲೇನ ಸಮೃದ್ಧೋ ಭವತಿ। ಪುನರಪಿ ದೀಕ್ಷಣೀಯಾದೀಷ್ಟಿಪ್ರಶಂಸಾರ್ಥಂ ತಾಸ್ವಿಷ್ಟಿಷು ವಿದ್ಯಮಾನಾನಾಮಾಹುತೀನಾಂ ವಾಚಕಂ ಶಬ್ದಂ ನಿರ್ವಕ್ತಿ।**

ಈ ಇಷ್ಟಿ ವಿಷಯವಾದ ಆಖ್ಯಾನವನ್ನು ತಿಳಿದಿರುವ ಪುರುಷನು ಯಜ್ಞಮಾಡಿದ ಫಲವನ್ನು ಪಡೆದು ಸಂಪತ್ಸಮೃದ್ಧಿಯಿಂದ ಸುಖಿಸುವನು.

ಆಹೂತಯೋ ವೈ ನಾಮೈತಾ ಯದಾಹುತಯ ಏತಾಭಿರ್ವೈ ದೇವಾ-
ನ್ಯಜಮಾನೋ ಹ್ವಯತಿ ತದಾಹುತೀನಾಮಾಹೂತಿತ್ವಂ ॥

ಆಹುತಯ ಇತ್ಯುಕ್ತಕಾರೇಣ ಹ್ರಸ್ವೇನಾಹೂತಯ ಇತ್ಯೇವಂ ದೀರ್ಘೇಣಯುಕ್ತಂ ದ್ರಷ್ಟವ್ಯಂ । ಹ್ವಯತ್ಯಾಭಿರಿತಿ ತದ್ವ್ಯುತ್ಪತ್ತಿಃ । ಜುಹೋತಿಧಾತೋರುತ್ಪನ್ನಃ ಶಬ್ದಃ ಪೂರ್ವಂ ಪ್ರಸಿದ್ಧಃ । ಅಯಂ ತು ಹ್ವಯತಿಧಾತೋರುತ್ಪನ್ನ ಇತಿ ವಿಶೇಷಃ ॥

ಇಷ್ಟಿಶಬ್ದದ ನಿರ್ವಚನವನ್ನೂ ಇಷ್ಟಿಪ್ರಶಂಸೆಯನ್ನೂ ವಿವರಿಸಿ ಈಗ ದೀಕ್ಷಣೀಯಾದಿ ಇಷ್ಟಿಗಳಲ್ಲಿ ಉಪಯೋಗಿಸುವ **ಆಹುತಿ** ಎಂಬ ಶಬ್ದದ ಉತ್ಪತ್ತಿಯನ್ನು ವಿವರಿಸುವರು. ಆಹುತಯಃ ಎಂಬ ಶಬ್ದದಲ್ಲಿರುವ **ಉ** ಎಂಬ ಹ್ರಸ್ವಸ್ವರವು ಆಹೂತಯಃ ಎಂಬ ಶಬ್ದದಲ್ಲಿರುವ ಊ ಎಂಬ ದೀರ್ಘಸ್ವರವಿದ್ದಂತೆ ಭಾವಿಸಬೇಕು. ಹ್ವಯತಿಧಾತುವಿನಿಂದ ಆಹೂತಯಃ ಎಂಬ ಶಬ್ದವು ನಿಷ್ಪನ್ನವಾಗಿರುವುದು. ಆಹುತಿ ಶಬ್ದವು ಜುಹೋತಿಧಾತುವಿನಿಂದ ನಿಷ್ಪನ್ನವಾಗಿರುವುದು ಪ್ರಸಿದ್ಧವೇ ಆಗಿದೆ. ಆದರೂ ಇಲ್ಲಿ ಆಹುತಿಶಬ್ದವು ಹ್ವಯತಿಧಾತುವಿನಿಂದ ಉತ್ಪನ್ನವಾಗಿದೆಯೆಂದು ತಿಳಿಯಬೇಕು.

ಊತಯಃ ಖಲು ವೈ ತಾ ನಾಮ ಯಾಭಿರ್ದೇವಾ ಯಜಮಾನಸ್ಯ
ಹವಮಾಯಂತಿ ಯೇ ವೈ ಪಂಥಾನೋ ಯಾಃ ಸ್ರುತಯಸ್ತಾ
ವಾ ಊತಯಸ್ತ ಉ ಏವೈತತ್ಸ್ವರ್ಗಯಾಣಾ ಯಜಮಾನಸ್ಯ
ಭವಂತಿ ॥

ಇಷ್ಟೀರಾಹುತೀಶ್ಚ ಮಿಲಿತ್ವಾ ಪ್ರಕಾರಾಂತರೇಣ ಪ್ರಶಂಸತಿ । ಹೂಯಂತೇ ದೇವಾ ಅಸ್ಮಿನ್ನಿತಿ ಹವೋಽತ್ರ ಸೋಮಯಾಗೋ ಯಾಭಿರಿಷ್ಟಿಭಿಸ್ತತ್ರ ತಾಭಿರಾಹುತಿಭಿಶ್ಚ ನಿಮಿತ್ತ-ಭೂತಾಭಿರ್ದೇವಾ ಯಜಮಾನಸ್ಯ ಯಜ್ಞಮಾಗಚ್ಛಂತಿ ತಾ ಇಷ್ಟಯ ಆಹೂತಯಶ್ಚೋತಯ ಇತ್ಯೇತನ್ನಾಮ ಪ್ರತಿಪದ್ಯಂತೇ । ಖಲುಶಬ್ದೋ ವೈಶಬ್ದಶ್ಚ ಪ್ರಸಿದ್ಧಾರ್ಥಃ । ಅವಂತಿ ರಕ್ಷಂತೀ-ತ್ಯವತೇರ್ಧಾತೋರೂತಿಶಬ್ದಃ ಪ್ರಸಿದ್ಧಃ । ಆಯಂತ್ಯಾಗಚ್ಛಂತಿ ಯಾಭಿರಿತ್ಯಾಙ್ಪೂರ್ವಸ್ಯಾ-ಯತಿಧಾತೋರ್ವಾ ವರ್ಣವಿಕಾರೇಣೋತಿಶಬ್ದಃ । ಯದ್ವಾ ತಸ್ಮಾದೇವ ಧಾತೋಃ ಸ್ವರ್ಗಪ್ರಾ-ಪಕತ್ವಾಭಿಪ್ರಾಯೇಣ ಶಬ್ದೋ ವ್ಯುತ್ಪಾದ್ಯತೇ । ಯೇ ಕೇಚಿತ್ಪಂಥಾನ ಇಷ್ಟಿರೂಪಾಃ ಸ್ವರ್ಗಸ್ಯ ಪ್ರೌಢಮಾರ್ಗಾಃ ಸಂತಿ ಯಾಶ್ಚ ಸ್ರುತಯಸ್ತನ್ಮಾರ್ಗಾವಯವರೂಪಾ ಆಹುತಯಃ ಸಂತಿ ತಾ ದ್ವಿವಿಧಾ ಊತಯ ಇತ್ಯುಚ್ಯಂತೇ । ತ ಉ ಏವೈತತ್ತ ಏವೈತೇ ದ್ವಿವಿಧಾ ಅಪಿ ಮಾರ್ಗಾ ಯಜಮಾನಸ್ಯ ಸ್ವರ್ಗಯಾಣಾಃ ಸ್ವರ್ಗಪ್ರಾಪಕಾ ಭವಂತಿ ॥

ಇಷ್ಟಿ, ಆಹುತಿ ಎಂಬ ಶಬ್ದಗಳನ್ನು ಸೇರಿಸಿ ಬೇರೆ ವಿಧವಾಗಿ ವಿವರಣೆಮಾಡುವರು— **ಹೂಯಂತೇ ದೇವಾ ಅಸ್ಮಿನ್ನಿತಿ ಹವೋಽತ್ರ ಸೋಮಯಾಗಃ**— ಯಾವ ಕರ್ಮದಲ್ಲಿ ದೇವತೆಗಳು ಆಹ್ವಾನಿಸಲ್ಪಡುತ್ತಾರೋ ಅದು ಸೋಮಯಾಗವು. ಆಹುತಿರೂಪವಾದ ಯಾವ ಇಷ್ಟಿಗಳಿಂದ ದೇವತೆಗಳು ಯಜಮಾನನ ಯಜ್ಞಭೂಮಿಗೆ ಆಹ್ವಾನಿತರಾಗಿ ಬರುವರೋ ಆ ಇಷ್ಟಿಗಳಿಗೆ **ಆ ಊತಯಃ**— ರಕ್ಷಣೆಗಳು ಎಂದರ್ಥವು. ಎಂದರೆ ಯಾವ ಇಷ್ಟಿಗಳಲ್ಲಿ ಯಜಮಾನರ ಆಹುತಿರೂಪವಾದ ಆಹ್ವಾನವನ್ನು ಕೇಳಿ ದೇವತೆಗಳು ಯಜ್ಞಭೂಮಿಗೆ ಬರುವರೋ ಆ ಇಷ್ಟಿಗಳಿಗೆ ಅಥವಾ ಆಹುತಿಗಳಿಗೆ ದೇವತೆಗಳು ನೀಡುವ ರಕ್ಷಣೆಗಳೆಂದು ಅಭಿಪ್ರಾಯವು. ಇಲ್ಲಿ ಖಲು ಶಬ್ದಕ್ಕೆ ಮತ್ತು ವೈಶಬ್ದಕ್ಕೆ ಈ ವಿಷಯವು ಪ್ರಸಿದ್ಧವಾಗಿರುವುದು ಎಂದರ್ಥವು. ರಕ್ಷಿಸು ಎಂಬರ್ಥ ವಿರುವ **ಅವ ರಕ್ಷಣೇ** ಎಂಬ ಧಾತುವಿನಿಂದ **ಊತಯಃ** ರಕ್ಷಣೆಗಳು ಎಂಬ ಶಬ್ದವು ನಿಷ್ಪನ್ನವಾಗಿದೆ. ಅಥವಾ ಆ ಎಂಬ ಉಪಸರ್ಗದೊಡನೆ ಕೂಡಿದ ಯಾತಿಧಾತುವಿನಿಂದ (ಆಯಂತಿ-ಆಗಚ್ಛಂತಿ) ವರ್ಣವಿಕಾರವನ್ನು ಹೊಂದಿ ಊತಿಶಬ್ದವು ನಿಷ್ಪನ್ನ ವಾಗಿರುವುದು. ಅಥವಾ ಯಾ-ಪ್ರಾಪಣೇ ಎಂಬ ಧಾತುವಿಗೆ ಸ್ವರ್ಗವನ್ನು ದೊರಕಿಸಿಕೊಡು ಎಂಬರ್ಥವಿರುವುದರಿಂದ ಈ ಧಾತು ವಿನಿಂದಲಾದರೂ ಊತಿಶಬ್ದವು ನಿಷ್ಪನ್ನವಾಗಿದೆಯೆಂದು ಭಾವಿಸಬಹುದು. ಇಷ್ಟಿಗಳು (ಯಜ್ಞಗಳು) ಸ್ವರ್ಗಕ್ಕೆ ಹೋಗುವ ಮುಖ್ಯವಾದ ಮಾರ್ಗಗಳು ಎಂದರೆ ಇಷ್ಟಿಗಳನ್ನು ಮಾಡುವುದರಿಂದ ಅವುಗಳ ಫಲರೂಪವಾಗಿ ಸ್ವರ್ಗವು ಲಭಿಸುವುದು. ಯಜ್ಞಗಳಲ್ಲಿ ದೇವತೆಗಳಿಗೆ ಅರ್ಪಿಸುವ ಆಹುತಿಗಳೇ ಸ್ವರ್ಗಕ್ಕೆ ಹೋಗುವ ಮಾರ್ಗಗಳು ಎಂದು ಹೇಳಬಹುದು ಈ ಆಹುತಿಗಳೇ ರಕ್ಷಣೆಗಳು ಎಂದರೆ ಈ ಆಹುತಿಗಳಿಂದಲೇ ಯಜಮಾನನಿಗೆ ದೇವತೆಗಳಿಂದ ರಕ್ಷಣೆಗಳು ದೊರಕುವುವು. ಮುಖ್ಯಾಭಿಪ್ರಾಯವು— ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವ ಆಹ್ವಾನರೂಪವಾದ ಆಹುತಿಗಳೇ (ಹೋಮಗಳೇ) ಯಜಮಾನನಿಗೆ ದೇವತೆಗಳಿಂದ ಲಭಿಸುವ ರಕ್ಷಣೆಗಳು (ಊತಯಃ) ಈ ಊತಿಗಳೇ ಎಂದರೆ ರಕ್ಷಣೆಗಳೇ ಯಜಮಾನನಿಗೆ ಸ್ವರ್ಗಕ್ಕೆ ಹೋಗುವ ದಾರಿಗಳಂತಿವೆ.

ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ
ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ ॥

**ಪುನರಪೀಷ್ಟಿಪ್ರಶಂಸಾರ್ಥಂ ತದಂಗಭೂತಯೋರ್ಯಾಜ್ಯಾನುವಾಕ್ಯಯೋರ್ವಕ್ತರಿ ಪ್ರಯುಜ್ಯಮಾನಂ ಹೋತೃಶಬ್ದಂ ನಿರ್ವಕ್ತುಂ ಬ್ರಹ್ಮವಾದಿನಾಂ ಪ್ರಶ್ನಮವತಾರಯತಿ । ತತ್ರಾಸ್ಮಿನ್ನಿಷ್ಟಿಷು ಕಿಂಚಿಚ್ಚೋದ್ಯಮಾಹುಃ । ಯದ್ಯಸ್ಮಾತ್ಕಾರಣಾದ್ಧೋತುರನ್ಯೋಽಧ್ವರ್ಯುರ್ಜುಹೋತಿ ತಸ್ಮಾತ್ತತ್ಕಾರಣಾತ್ತದ್ಧಾತುನಿಷ್ಪನ್ನೋಹೋತೃಶಬ್ದಸ್ತಸ್ಯಾಧ್ವರ್ಯೋರ್ಯುಕ್ತಃ । ಯಾಜ್ಞಿಕಾಸ್ತು ತಮಧ್ವರ್ಯುಂ ಹೋತೇತಿ ನಾಚಕ್ಷತೇ । ಅಥ ಯಃ ಪುಮಾನನು ಚಾಹ ಪುರೋಽನುವಾಕ್ಯಾಂ ಚಾನುಬ್ರೂತೇ ಯಜತಿ ಚ ಯಾಜ್ಯಾಂ ಚ ಪಠತಿ ತಂ ಪುಮಾಂಸಮನುವಕ್ತೇತಿ ಯಷ್ಟೇತಿ ಚಾನಭಿಧಾಯ ಕಸ್ಮಾತ್ಕಾರಣಾದ್ಧೋತೇತ್ಯಾಚಕ್ಷತೇ । ಇತಿಶಬ್ದಃ ಪ್ರಶ್ನಸಮಾಪ್ತ್ಯರ್ಥಃ ॥**

ಮತ್ತು ಯಜ್ಞಗಳಲ್ಲಿ ಮಂತ್ರಾದಿಗಳನ್ನು ಪಠಿಸುವ ಹೋತೃವಿಗೆ ಆ ಹೆಸರು ಹೇಗೆ ಲಭಿಸಿತೆಂದು ಹೋತೃಶಬ್ದದ ನಿರ್ವಚನವನ್ನು ಹೇಳುವರು-ಯಜ್ಞಾದಿಗಳಲ್ಲಿ ದೇವತೆಗಳಿಗೆ ಆಹುತಿಗಳನ್ನರ್ಪಿಸುವಾಗ ಹೋತೃವೆಂಬ ಋತ್ವಿಜನು ಪುರೋಽನುವಾಕ್ಯಾ ಮತ್ತು ಯಾಜ್ಯಾ ಎಂಬ ಮಂತ್ರಗಳನ್ನು ಪಠಿಸುವನು. ಅಧ್ವರ್ಯುವೆಂಬ ಋತ್ವಿಜನು ಆ ಮಂತ್ರಾನುಸಾರವಾಗಿ ಆಯಾ ದೇವತೆಗಳಿಗೆ ಆಹುತಿಗಳನ್ನು ಎಂದರೆ ಆಜ್ಯಾದಿದ್ರವ್ಯಗಳನ್ನು ಅಗ್ನಿಯಲ್ಲಿ ಹಾಕಿ ಹೋಮಮಾಡುವನು. ಹೋತೃಶಬ್ದವು ಜುಹೋತಿ (ಹೋಮ ಮಾಡು) ಧಾತುವಿನಿಂದ ನಿಷ್ಪನ್ನವಾಗಿರುವುದು. ಇಲ್ಲಿ ಹೋಮಮಾಡುವವನು ಅಧ್ವರ್ಯುವು. ಹೋತೃವಲ್ಲ, ಅವನು

ಕೇವಲ ಮಂತ್ರಗಳನ್ನು ಮಾತ್ರ ಪಠಿಸುವನು. ಆದ್ದರಿಂದ ಹೋಮಮಾಡುವ ಅಧ್ವರ್ಯುವಿಗೆ ಹೋತೃವೆಂದು ಕರೆಯುವುದನ್ನು ಬಿಟ್ಟು ಕೇವಲ ಮಂತ್ರಗಳನ್ನು ಪಠಿಸುವ ಹೋತೃವಿಗೆ ಹೋತೃವೆಂದು ಏಕೆ ಕರೆಯಬೇಕು? ಎಂದು ಕೆಲವರು ಪ್ರಶ್ನೆಮಾಡುವರು.

**ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವ-ಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ ॥**

**ಅಭಿಜ್ಞಾನಾಮಭಿಪ್ರೇತಂ ಪ್ರಶ್ನಸ್ಯೋತ್ತರಂ ದರ್ಶಯತಿ । ಯದ್ವಾವ ಯಸ್ಮಾದೇವ ಕಾರಣಾದ್ಯಾಜ್ಯಾನುವಾಕ್ಯಯೋರ್ವಕ್ತಾ ಸ ಪುಮಾಂಸ್ತತ್ರ ಯಾಗೇ ಯಥಾ ಭಾಜನಂ ಯಥಾ ಸ್ಥಾನಂ ಸರ್ವಾ ದೇವತಾ ಆವಾಹಯತಿ ಅಮುಮಗ್ನಿಮಾವಹ, ಅಮುಂ ಸೋಮಮಾವಹೇತಿ ತದೇವ ತಸ್ಮಾದೇವ ಕಾರಣಾದ್ಯಾಜ್ಞಿಕಪ್ರಸಿದ್ಧಸ್ಯ ಹೋತುಸ್ತನ್ನಾಮ ಸಂಪನ್ನಂ । ಅತ್ರ ಣ್ಯಂತಸ್ಯ ವಹಧಾತೋಃಶ್ಛಾಂದಸ್ಯಾ ಪ್ರಕ್ರಿಯಯಾ ಹೋತೃಶಬ್ದನಿಷ್ಪತ್ತಿರ್ನ ತು ಜುಹೋತಿ-ಧಾತೋಸ್ತಸ್ಮಾದ್ಧೋಮಕರ್ತೃತ್ವಾಭಾವೇಽಪ್ಯಾವಾಹಯಿತೃತ್ವಸದ್ಭಾವಾದ್ಧೋತೃತ್ವಮುಪಪನ್ನ-ಮಿತ್ಯಯಂ ಯಾಜ್ಯಾನುವಾಕ್ಯಯೋರ್ವಕ್ತಾಪಿ ಹೋತಾ ಭವತ್ಯೇವ ।**

ಮೇಲೆ ಹೇಳಿದಂತೆ ಹೋಮಮಾಡು ಎಂಬರ್ಥವಿರುವ ಜುಹೋತಿಧಾತುವಿನಿಂದ ಹೋತೃಶಬ್ದವು ನಿಷ್ಪನ್ನವಾಗಿಲ್ಲ. ಯಜ್ಞದಲ್ಲಿ— **ಅಮುಮಾವಹ ಅಮುಮಾವಹ,** ಈದೇವತೆಯನ್ನು ಕರಿ, ಆ ದೇವತೆಯನ್ನು ಕರಿ ಎಂದರೆ ಅಗ್ನಿ ಎಂಬ ದೇವತೆಯನ್ನು ಆಹ್ವಾನಮಾಡು, ಸೋಮ ಎಂಬ ದೇವತೆಯನ್ನು ಆಹ್ವಾನಮಾಡು ಎಂಬ ಪ್ರೈಷಮಂತ್ರಾನುಸಾರವಾಗಿ ಒಬ್ಬ ಪುರುಷನು (ಹೋತೃವು) ಯಜ್ಞದಲ್ಲಿ ಪುರೋನುವಾಕ್ಯಾಯಾಜ್ಯಾ ಮಂತ್ರಗಳನ್ನು ಪಠಿಸುತ್ತಾ ಆಯಾ ದೇವತೆಗಳನ್ನು ಪ್ರಾರ್ಥಿಸಿ ಕರೆಯುವನು. ಪ್ರಾರ್ಥಿಸಿ ಕರೆಯುತ್ತಾನೆ ಎಂಬರ್ಥವಿರುವ **ಆವಹ** ಎಂಬ ಶಬ್ದವು **ವಹ** ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಮಂತ್ರಗಳನ್ನು ಹೇಳಿ ದೇವತೆಗಳನ್ನು ಪ್ರಾರ್ಥಿಸಿ ಕರೆಯುವ ಋತ್ವಿಜನಿಗೆ ಹೋತೃವೆಂದು ಹೆಸರು, ಹೋಮಮಾಡುವ ಅಧ್ವರ್ಯುವಿಗಲ್ಲ. ಯಜ್ಞಗಳಲ್ಲಿ ದೇವತೆಗಳನ್ನು ಆವಾಹನೆಮಾಡುವುದು ಮುಖ್ಯಕೆಲಸ. ಆ ದೇವತೆಗಳು ಬಂದರಲ್ಲವೇ ಅವರಿಗೆ ಆಹುತಿಗಳನ್ನರ್ಪಿಸುವುದು? ಅವರು ಬರದಿದ್ದರೆ ಯಾರಿಗೆ ಆಹುತಿಗಳನ್ನರ್ಪಿಸಿ ಹೋಮಮಾಡಬೇಕು? ಹೋಮ ಮಾಡುವುದಕ್ಕಿಂತಲೂ ದೇವತೆಗಳನ್ನು ಆಹ್ವಾನಮಾಡುವುದೂ ಅದಕ್ಕಾಗಿ ಯಾಜ್ಯಾಪುರೋನುವಾಕ್ಯಾ ಮಂತ್ರಗಳನ್ನು ಪಠಿಸುವುದೂ ಮುಖ್ಯಕೆಲಸವಾದ್ದರಿಂದ ಆರೀತಿ ಮಂತ್ರಗಳನ್ನು ಪಠಿಸಿ ದೇವತೆಗಳನ್ನು ಆಹ್ವಾನಮಾಡುವ ಪುರುಷನಿಗೆ ಎಂದರೆ ಹೋತೃವಿಗೇ ಹೋತೃವೆಂದು ಹೇಳಬೇಕು. ಜುಹೋತಿಧಾತುವಿನಿಂದ ಹೋತೃಶಬ್ದವು ನಿಷ್ಪನ್ನವಾಗಿಲ್ಲವಾದ್ದರಿಂದ ಹೋಮ ಮಾಡುವ ಅಧ್ವರ್ಯುವಿಗೆ ಹೋತೃಶಬ್ದವು ಅನ್ವಯಿಸುವುದಿಲ್ಲ. ಹೋತೃವಿಗೆ ಹೋತೃವೆಂಬ ಹೆಸರು ಬರುವುದಕ್ಕೆ ಇದೇ ಕಾರಣವು.

**ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ॥ ೨ ॥**

**ಹೋತೃತ್ವವೇದನಂ ಪ್ರಶಂಸತಿ । ಯಾಜ್ಞಿಕಾ ಏನಂ ವೇದಿತಾರಂ ಹೋತಾರಂ ಮುಖ್ಯೋ ಹೋತೇತಿ ಕಥಯಂತಿ । ಹೌತ್ರೇ ಕರ್ಮಣಿ ಕುಶಲೋ ಭವತೀತ್ಯರ್ಥಃ ॥**

ಯಜ್ಞಾನುಷ್ಠಾನದಲ್ಲಿ ಪ್ರವೀಣರಾದವರು ಮೇಲೆ ಹೇಳಿದ ಕಾರಣಗಳಿಗಾಗಿಯೇ ಮಂತ್ರಾದಿಗಳನ್ನು ಪಠಿಸಿ ದೇವತೆಗಳನ್ನು ಯಜ್ಞಭೂಮಿಗೆ ಆಹ್ವಾನಮಾಡುವ ಪುರುಷನನ್ನು ಎಂದರೆ ಋತ್ವಿಜನನ್ನು ಹೋತೃವೆಂದು ಹೇಳುತ್ತಾರೆ.

*English Translation*

The sacrifice went away from the gods. They wished to seek after it by means of the Ishtis. The Ishtis are called Ishtis because they wished (ish, to wish) to seek after it. They found it. He who has such a knowledge prospers after he has found the sacrifice. The name ahutis, i.e., oblations. stands instead of ahuti, i.e., invocation; with them the sacrificer calls the gods. This is (the reason) why they are called ahutis. They (the ahutis) are called utis; for by their means the gods come to the call of the sacrificer (ayanti, they come). Or they are the paths (and) ways; for they are the ways to heaven for the sacrificer.

There they say, as another priest (the Adhvaryu), offers (juhoti) the oblations why do they call that one who repeats the Anuvakya and Yajya verses, a Hotar? (The answer is) Because he causes the deities to be brought near (avahayati) according to their place, (by saying) "bring this one, bring that one". This is the reason why he is called a Hotar (avah, to bring near). He who has such a knowledge is called a Hotar.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ದ್ವಿತೀಯಃ ಖಂಡಃ ||

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೊದಲನೆಯ ಅಧ್ಯಾಯದ ಎರಡನೇ ಖಂಡವು ಸಮಾಪ್ತವಾದುದು.



# ಅಥ ಪ್ರಥಮಾಧ್ಯಾಯೇ ತೃತೀಯಃ ಖಂಡಃ

## ಮೊದಲನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಕೆಲವು ದೀಕ್ಷಾಸಂಸ್ಕಾರಗಳು—ಸ್ನಾನ, ಪ್ರಾಚೀನವಂಶಪ್ರವೇಶ, ವಸ್ತ್ರಾಚ್ಛಾದನ, ಕೃಷ್ಣಾಜಿನವೇಷ್ಟನ, ಮುಷ್ಟೀಕರಣ ಕೃಷ್ಣಾಜಿನವಿಸರ್ಜನ ಇತ್ಯಾದಿ ]

### ಪುನರ್ವಾ ಏತಮೃತ್ವಿಜೋ ಗರ್ಭಂ ಕುರ್ವಂತಿ ಯಂ ದೀಕ್ಷಯಂತಿ ॥

**ಇತ್ಥಮಿಷ್ಟ್ಯಾಹುತಿಹೋತೃಶಬ್ದಾನಾಂ ನಿರ್ವಚನೇನ ದೀಕ್ಷಣೀಯೇಷ್ಟಿಂ ಪ್ರಶಸ್ಯ ತಯೇಷ್ಟ್ಯಾ ದೀಕ್ಷಿತಸ್ಯ ಸಂಸ್ಕಾರವಿಶೇಷಾನ್ವಿಧಾತುಂ ಪ್ರಸ್ತೌತಿ— ಯಂ ಯಜಮಾನಂ ದೀಕ್ಷಣೀಯೇಷ್ಟ್ಯಾ ದೀಕ್ಷಿತಂ ಕುರ್ವಂತಿ ತಂ ಯಜಮಾನಂ ಪುರಾ ಮಾತಾಪಿತರೌ ಕಂಚಿತ್ಕಾಲಂ ಗರ್ಭಂ ಕೃತವಂತೌ ಪುನರಪ್ಯೇನಮಿದಾನೀಮೃತ್ವಿಜೋ ಯಜ್ಞಕಾಲೇ ಗರ್ಭಂ ಕುರ್ವಂತಿ ಗರ್ಭವದಸೌ ಸಂಸ್ಕಾರೈಃ ಪಾಲನೀಯ ಇತ್ಯರ್ಥಃ ॥**

ಹಿಂದಿನ ಖಂಡದಲ್ಲಿ ಇಷ್ಟಿ, ಆಹುತಿ, ಹೋತೃ ಎಂಬ ಶಬ್ದಗಳ ನಿರ್ವಚನವನ್ನು ಹೇಳಿ ದೀಕ್ಷಣೀಯೇಷ್ಟಿಯನ್ನು ಪ್ರಶಂಸನೆ ಮಾಡಿ ಈಗ ಯಜ್ಞದೀಕ್ಷೆಯನ್ನು ವಹಿಸುವ ಯಜಮಾನನು ಅನುಸರಿಸಬೇಕಾದ ಕೆಲವು ಸಂಸ್ಕಾರಗಳನ್ನು ವಿವರಿಸುವರು. ಯಜಮಾನನಿಗೆ ದೀಕ್ಷಾಸಂಸ್ಕಾರಗಳನ್ನು ಮಾಡಿಸುವುದಕ್ಕಾಗಿ ನಿಯೋಜಿತರಾಗಿರುವ ಋತ್ವಿಕ್ಕುಗಳು ಪ್ರಾರಂಭದಲ್ಲಿ ಯಜ್ಞಮಾಡುವುದಕ್ಕಾಗಿ ದೀಕ್ಷೆಯನ್ನು ವಹಿಸುತ್ತಿರುವ ಯಜಮಾನನನ್ನು ಗರ್ಭದಿಂದ ಆಗತಾನೇ ಹುಟ್ಟಿದಂತೆ ಭಾವಿಸಿ ಹೊಸದಾಗಿ ಹುಟ್ಟಿದ ಶಿಶುವಿಗೆ ಮಾಡಬೇಕಾದ ಸಂಸ್ಕಾರಾದಿಗಳನ್ನು ಮಾಡುವರು. ಯಜಮಾನನು ಹಿಂದೆ ಶಿಶುವಾಗಿದ್ದ ಕಾಲದಲ್ಲಿ ತನ್ನ ಮಾತೃಗರ್ಭದಿಂದ ಹುಟ್ಟಿದಾಗ ಅವನಿಗೆ ಯಾವ ಸಂಸ್ಕಾರಗಳು ನಡೆಯಿತೋ ಈಗಲೂ ಅದರಂತೆ ಭಾವಿಸಿ ಒಂದೊಂದಾಗಿ ಸಂಸ್ಕಾರಗಳನ್ನು ಮಾಡುವರು.

### ಅದ್ಭಿರಭಿಷಿಂಚತಿ ॥

**ಏಕಂ ಸಂಸ್ಕಾರಂ ವಿಧತ್ತೇ । ಅಪ್ಸು ಸ್ನಪಯಂತೀತ್ಯರ್ಥಃ । ಏತದೇವಾಭಿಪ್ರೇತ್ಯ ತೈತ್ತಿರೀಯಾ ಯಜಮಾನಸ್ಯ ವಪನಾದೂರ್ಧ್ವಂ ಸ್ನಾನಮಾಮನಂತಿ- ಅಂಗಿರಸಃ ಸುವರ್ಗಂ ಲೋಕಂ ಯಂತೋಽಪ್ಸು ದೀಕ್ಷಾತಪಸೀ ಪ್ರಾವೇಶಯನ್ । ಅಪ್ಸು ಸ್ನಾತಿ ಸಾಕ್ಷಾದೇವ ದೀಕ್ಷಾತಪಸೀ ಅವರುಂಧೇ ಇತಿ । ಯಜಮಾನಸ್ಯ ಸ್ನಾನಕರ್ತೃತ್ವೇಽಪಿ ಋತ್ವಿಜಾಂ ಸ್ನಾಪಯಿತೃತ್ವಮಭಿಪ್ರೇತ್ಯಾಭಿಷಿಂಚಂತೀತ್ಯುಕ್ತಂ ।**

ಋತ್ವಿಕ್ಕುಗಳು ಪ್ರಾರಂಭದಲ್ಲಿ ಯಜಮಾನನಿಗೆ ನೀರಿನಿಂದ ಸ್ನಾನಮಾಡಿಸುವರು. ಈ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ (ದೀಕ್ಷಾಪ್ರಕರಣದಲ್ಲಿ) ಹೀಗೆ ಹೇಳಿದೆ—"**ಅಂಗಿರಸಃ ಸುವರ್ಗಂ ಲೋಕಂ ಯಂತೋಽಪ್ಸು ದೀಕ್ಷಾತಪಸೀ ಪ್ರಾವೇಶಯನ್ ಅಪ್ಸು ಸ್ನಾತಿ ಸಾಕ್ಷಾದೇವ ದೀಕ್ಷಾತಪಸೀ ಅವರುಂಧೇ**" (ತೈ.ಸಂ. ೬-೧-೧-೨).

ಪೂರ್ವದಲ್ಲಿ ಭೂಮಿಯ ಮೇಲಿದ್ದ ಅಂಗಿರಸ ಋಷಿಗಳು ಸ್ವರ್ಗಕ್ಕೆ ಹೋಗುವಾಗ ಯಜ್ಞದೀಕ್ಷಾವಿಧಿಯನ್ನೂ ತಪಸ್ಸನ್ನೂ (ಧ್ಯಾನವನ್ನೂ) ಉದಕದಲ್ಲಿ ಹುದುಗಿಸಿ ಬಚ್ಚಿಟ್ಟು ಸ್ವರ್ಗಕ್ಕೆ ಹೋದರು. ಆದ್ದರಿಂದ ದೀಕ್ಷಾರ್ಥವಾಗಿ ನೀರಿನಲ್ಲಿ ಸ್ನಾನಮಾಡುವ ಪುರುಷನು ನೀರಿನಲ್ಲಿರುವ ದೀಕ್ಷಾ ಮತ್ತು ತಪಸ್ಸುಗಳನ್ನು ಪಡೆಯುತ್ತಾನೆ. ಇಲ್ಲಿ **ಅಭಿಷಿಂಚಂತಿ** ಎಂದು ಹೇಳಿರುವುದರಿಂದ ಋತ್ವಿಕ್ಕುಗಳು ಯಜಮಾನನನ್ನು ಸ್ನಾನವಿಧಿಯಿಂದ ಸಂಸ್ಕರಿಸುವರು ಎಂದಭಿಪ್ರಾಯವು.

## ರೇತೋ ವಾ ಆಪಃ ಸರೇತಸಮೇವೈನಂ ತತ್ಕೃತ್ವಾ ದೀಕ್ಷಯಂತಿ ॥

**ಉಕ್ತಾನಾಮಪಾಂ ಪ್ರಶಂಸಾಮಾಹ । ಕಾರ್ಯಕಾರಣಯೋರಭೇದಾದಪಾಂ ರೇತಸ್ತ್ವಂ ವೈರಾಜದೇಹಗತಾದ್ರೇತಸ ಆಪ ಉತ್ಪನ್ನಾಃ । ತಥಾ ಚಾರಣ್ಯಕೇ ಸೃಷ್ಟಿಪ್ರಕರಣೇ ಸಮಾಮ್ನಾಸ್ಯತೇ – ಶಿಶ್ನಾದ್ರೇತೋ ರೇತಸ ಆಪ ಇತಿ । ಯದಾ ಮನುಷ್ಯಾದಿಶರೀರಗತಂ ರೇತೋಮೂತ್ರಾದಿಕಮಪಾಂ ಕಾರ್ಯಂ । ತಚ್ಚ ಗರ್ಭೋಪನಿಷದ್ಯಾಮ್ನಾತಂ – ಅಸ್ಮಿನ್ಪಂಚಾತ್ಮಕೇ ಶರೀರೇ ಯತ್ಕಠಿನಂ ಸಾ ಪೃಥಿವೀ ಯದ್ದ್ರವಂ ತದಾಪ ಇತಿ । ತತ್ತೇನಾಭಿಷೇಚನೇನೈನಂ ಯಜಮಾನಂ ಸರೇತಸಂ ಪುತ್ರೋತ್ಪಾದನಸಮರ್ಥಂ ಕೃತ್ವಾ ಸಂಸ್ಕುರ್ವಂತಿ ॥**

ನೀರಿನಲ್ಲಿ ಏತಕ್ಕೆ ಸ್ನಾನಮಾಡಬೇಕು ಎಂದರೆ ನೀರಿನ ಪ್ರಾಶಸ್ತ್ಯವನ್ನು ತಿಳಿಸುವರು—ಹಿಂದೆ ಪರಮೇಶ್ವರನ ರೇತಸ್ಸಿನಿಂದ (ವೀರ್ಯದಿಂದ) ಉದಕದ ಉತ್ಪತ್ತಿಯಾಯಿತು ಎಂದು ಹೇಳಿದೆ. ಈ ವಿಷಯದಲ್ಲಿ ಐತರೇಯಾರಣ್ಯಕದ ಸೃಷ್ಟಿಪ್ರಕರಣದಲ್ಲಿ—**ಶಿಶ್ನಾದ್ರೇತೋ ರೇತಸ ಆಪಃ** "(ಐ.ಆ. ೨-೪-೧-೬) ಜಗತ್ಸೃಷ್ಟಿಕಾಲದಲ್ಲಿ ಪರಮೇಶ್ವರನ ಲಿಂಗದಿಂದ ರೇತಸ್ಸು ಉತ್ಪನ್ನವಾಯಿತು. ಆ ರೇತಸ್ಸಿನಿಂದ ಉದಕಗಳ ಉತ್ಪತ್ತಿಯಾಯಿತು ಎಂದು ಹೇಳಿದೆ. ಅಥವಾ ಮನುಷ್ಯ ಮೊದಲಾದ ಪ್ರಾಣಿಗಳ ಶರೀರಗಳಲ್ಲಿ ಇರುವ ರೇತಸ್ಸು ಮೂತ್ರ ಮೊದಲಾದವು ಉದಕಾತ್ಮಕವಾದವು. ಈ ವಿಷಯವು ಗರ್ಭೋಪನಿಷತ್ತಿನಲ್ಲಿ—ಅಸ್ಮಿನ್ ಪಂಚಾತ್ಮಕೇ ಶರೀರೇ ಯತ್ಕಠಿನಂ ಸಾ ಪೃಥಿವೀ, ಯದ್ದ್ರವಂ ತದಾಪಃ" ಎಂದು. ಪಂಚಭೂತಾತ್ಮಕವಾದ ಈ ಶರೀರದಲ್ಲಿ ಕಠಿಣ ಎಂದರೆ ಘಟ್ಟಿಯಾದ ಯಾವಯಾವ ವಸ್ತುಗಳು (bones & c) ಇರುವವೋ ಅವೆಲ್ಲಾ ಪೃಥ್ವಿಯ ಅಂಶಗಳು; ಯಾವುದು ದ್ರವರೂಪವಾಗಿರುವುದೋ (ರಕ್ತ, ರೇತಸ್ಸು ಮೂತ್ರ ಇತ್ಯಾದಿ) ಅದು ಉದಕದ ಅಂಶವು. ಆದ್ದರಿಂದ ಯಜಮಾನನನ್ನು ನೀರಿನಲ್ಲಿ ಮುಳುಗಿಸಿ ಸ್ನಾನಮಾಡಿಸುವುದರಿಂದ ಅವನನ್ನು ರೇತಸ್ಸಿನಿಂದ ಯುಕ್ತನಾಗುವಂತೆ ಎಂದರೆ ಪುತ್ರೋತ್ಪಾದನ ಸಮರ್ಥನನ್ನಾಗಿ (ವೀರ್ಯವಂತನನ್ನಾಗಿ) ಮಾಡಿದಂತಾಗುವುದು. ತೈತ್ತಿರೀಯ ಸಂಹಿತೆಯಲ್ಲಿ—**ತೀರ್ಥೇ ಸ್ನಾತಿ ತೀರ್ಥಮೇವ ಸಮಾನಾನಾಂ ಭವತ್ಯಪೋಽಶ್ನಾತಿ ಅಂತರತ ಏವ ಮೇಧ್ಯೋ ಭವತಿ** (ತೈ.ಸಂ. ೬-೧-೨-೩) ಪವಿತ್ರವಾದ ನೀರಿನಲ್ಲಿ ಸ್ನಾನಮಾಡುವುದರಿಂದ ಯಜಮಾನನ ಶರೀರವು ನೀರಿನಂತೆ ಶುದ್ಧವಾಗುವುದು. ಆ ನೀರನ್ನು ಪಾನಮಾಡುವುದರಿಂದ (ಆಚಮನಮಾಡುವುದರಿಂದ) ಯಜಮಾನನ ಶರೀರದ ಒಳಭಾಗವೂ ಶುದ್ಧವಾಗಿ ಅವನು ಯಜ್ಞಮಾಡಲು ಅರ್ಹತೆಯನ್ನು ಪಡೆಯುವನು.

## ನವನೀತೇನಾಭ್ಯಂಜಂತಿ ॥

**ಸಂಸ್ಕಾರಾಂತರಂ ವಿಧತ್ತೇ । ಸರ್ವಸ್ಮಿನ್ನಪಿ ಶರೀರೇಽನುಲೇಪಯಂತೀತ್ಯರ್ಥಃ ।**

ಅನಂತರ ಯಜಮಾನನ ಶರೀರವನ್ನು ನವನೀತ ಎಂದರೆ ಹೊಸದಾದ ಬೆಣ್ಣೆಯಿಂದ ಲೇಪನಮಾಡುವರು. ಗರ್ಭಸ್ಥಾನೀಯನಾದ ಯಜಮಾನನಿಗೆ ಬೆಣ್ಣೆಯಿಂದ ಏಕೆ ಲೇಪನಮಾಡಬೇಕೆಂದರೆ—

**ಆಜ್ಯಂ ವೈ ದೇವಾನಾಂ ಸುರಭಿ ಘೃತಂ ಮನುಷ್ಯಾಣಾಮಾಯುತಂ ಪಿತೃಣಾಂ ನವನೀತಂ ಗರ್ಭಾಣಾಂ ತದ್ಯನ್ನವನೀತೇನಾ-ಭ್ಯಂಜಂತಿ ಸ್ವೇನೈವೈನಂ ತದ್ಭಾಗಧೇಯೇನ ಸಮರ್ಧಯಂತಿ ॥**

ನವನೀತಸ್ಯ ಗರ್ಭಸ್ಥಾನೀಯಯಜಮಾನಯೋಗ್ಯತಾಂ ದರ್ಶಯತಿ । ಆಜ್ಯಘೃತ-ಯೋರ್ಭೇದಃ ಪೂರ್ವಾಚಾರ್ಯೈರುದಾಹೃತಃ—ಸರ್ಪಿರ್ವಿಲೀನಮಾಜ್ಯಂ ಸ್ಯಾದ್ಘನೀಭೂತಂ ಘೃತಂ ವಿದುಃ ಇತಿ । ಈಷದ್ವಿಲೀನಮಾಯುತಂ ಸುರಭಿ ಯೋಗ್ಯಂ ಪ್ರಿಯಮಿತ್ಯರ್ಥಃ । ಘೃತಾಯುತನವನೀತೇಷ್ವಪ್ಯೇತತ್ಪದಮನುವರ್ತತೇ। ನನು ತೈತ್ತಿರೀಯಾ ಘೃತಸ್ಯ ದೇವಪ್ರಿಯ-ತ್ವಮಾಮನಂತಿ—ಘೃತಂ ದೇವಾನಾಂ ಮಸ್ತು ಪಿತೃಣಾಂ ನಿಷ್ಪಕ್ವಂ ಮನುಷ್ಯಾಣಾಂ ಇತಿ । ಈಷ-ದ್ವಿಲೀನಂ ಮಸ್ತು ನಿಃಶೇಷೇಣ ವಿಲೀನಂ ನಿಷ್ಪಕ್ವಂ । ನಾಯಂ ದೋಷ ಉಭಯತ್ರ ನವನೀತ-ಪ್ರಶಂಸಾರೂಪಾರ್ಥವಾದತ್ವೇನ ಘೃತಾಜ್ಯಯೋರ್ವ್ಯತ್ಯಯೇನ ಪಾಠೇಽಪಿ ವಿರೋಧಾಭಾವಾತ್। ತಥಾ ಸತಿ ನವನೀತಸ್ಯ ಗರ್ಭಯೋಗ್ಯತ್ವೇ ಸತಿ ಯದಿ ನವನೀತೇನಾಭ್ಯಂಗಂ ಕುರ್ಯುಸ್ತದಾ-ನೀಮೇನಂ ಯಜಮಾನಂ ಸ್ವೋಚಿತೇನೈವ ಭಾಗೇನ ಸಮೃದ್ಧಂ ಕುರ್ವಂತಿ ॥

ಎಂದು ಹೇಳಿದೆ. ಇಲ್ಲಿ ಆಜ್ಯ ಘೃತ, ನವನೀತ ಮೊದಲಾದವುಗಳ ಭೇದಗಳನ್ನು ತಿಳಿಸುವುದು ಅವಶ್ಯಕವು. ನವನೀತವೆಂದರೆ ಹೊಸದಾಗಿ ಮೊಸರಿನಿಂದ ಕಡೆದು ತೆಗೆದ ಬೆಣ್ಣೆಯು, **ಸರ್ಪಿರ್ವಿಲೀನಮಾಜ್ಯಂ ಸ್ಯಾದ್ಘನೀಭೂತಂ ಘೃತಂ ವಿದುಃ । ವಿಲೀನಾರ್ಧಮಾಯುತಂ ತು ನವನೀತಂ ಯತೋ ಘೃತಂ ॥** ಘೃತವೆಂದರೆ ಘಟ್ಟಿಯಾಗಿರುವ (ಘನೀಭೂತವಾಗಿರುವ) ತುಪ್ಪವು: ಆಜ್ಯವೆಂದರೆ ಕರಗಿದ ಮತ್ತು ದ್ರವರೂಪದಲ್ಲಿರುವ ತುಪ್ಪವು; ಸ್ವಲ್ಪಮಟ್ಟಿಗೆ ಕರಗಿದ ಬೆಣ್ಣೆಗೆ ಆಯುತವೆಂದು ಹೆಸರು; ಸುರಭಿ ಎಂದರೆ ಬೆಣ್ಣೆಯನ್ನು ಚೆನ್ನಾಗಿ (ಹದವಾಗಿ) ಕಾಯಿಸಿ ಸ್ವಲ್ಪಹೊತ್ತಿನಮೇಲೆ ಅದು ಹೆತ್ತುಕೊಂಡು (ಘನೀಭೂತವಾಗಿ) ಘಮಘಮಿಸುತ್ತಿರುವ ತುಪ್ಪವು. ಘೃತವು ದೇವತೆಗಳಿಗೆ ಅತಿಪ್ರಿಯವಾದ ವಸ್ತುವು. ತೈತ್ತಿರೀಯ ಸಂಹಿತೆಯಲ್ಲಿ—**ಘೃತಂ ದೇವಾನಾಂ ಮಸ್ತು ಪಿತೄಣಾಂ ನಿಷ್ಪಕ್ವಂ ಮನುಷ್ಯಾಣಾಂ** (ತೈ.ಸಂ.೬-೧-೧-೪) ಎಂದರೆ ದೇವತೆಗಳಿಗೆ ಘೃತವೂ, ಪಿತೃಗಳಿಗೆ ಸ್ವಲ್ಪಮಟ್ಟಿಗೆ ಕರಗಿದ ಬೆಣ್ಣೆಯೂ, ಮನುಷ್ಯರಿಗೆ ಚೆನ್ನಾಗಿ ಕಾಯಿಸಿದ ಬೆಣ್ಣೆ ಎಂದರೆ ತುಪ್ಪವೂ ಪ್ರಿಯವಾಗಿರುವುದು. ಗೋವಿಂದಸ್ವಾಮಿ ಎಂಬುವರ ಭಾಷ್ಯದಲ್ಲಿ—**ನವನೀತೇನ ಹಿ ಗರ್ಭಾ ವರ್ಧಂತ ಇತ್ಯುತ್ತರಪಥ-ನಿವಾಸಿನಾಂ ಪ್ರಸಿದ್ಧಂ** ಗರ್ಭಿಣಿಯರು ಗರ್ಭಕಾಲದಲ್ಲಿ ಬೆಣ್ಣೆಯನ್ನು ಹೆಚ್ಚಾಗಿ ಉಪಯೋಗಿಸುವುದರಿಂದ ಅವರ ಗರ್ಭವು ವೃದ್ಧಿಯಾಗುತ್ತದೆ ಎಂದು ಉತ್ತರ ದೇಶವಾಸಿಗಳ ಅಭಿಮತವು ಎಂದು ಹೇಳಿದ್ದಾರೆ. ಆದ್ದರಿಂದ ಗರ್ಭಸ್ಥ ಶಿಶುವಿಗೂ ನವನೀತ ಅಥವಾ ಬೆಣ್ಣೆಗೂ ಸಂಬಂಧವಿದೆ ಎಂದಾಯಿತು. ಋತ್ವಿಕ್ಕುಗಳು ಈ ಕಾರಣದಿಂದಲೇ ಯಜಮಾನನಿಗೆ ನವನೀತದಿಂದ ಸಂಸ್ಕಾರಾರ್ಥವಾಗಿ ಲೇಪನಮಾಡುವರು.

**ಆಂಜಂತ್ಯೇನಂ । ತೇಜೋ ವಾ ಏತದಕ್ಷ್ಯೋರ್ಯದಾಂಜನಂ ಸತೇಜಸಮೇವೈನಂ ತತ್ಕೃತ್ವಾ ದೀಕ್ಷಯಂತಿ ॥**

ನೇತ್ರಯೋರಂಜನೇನ ಸಂಸ್ಕಾರಂ ವಿಧತ್ತೇ । ಅಕ್ಷ್ಣೋರ್ದೃಷ್ಟಿಪ್ರಸಾದಹೇತುತ್ವೇನಾಂ-ಜನಂ ಪ್ರಶಂಸತಿ । ಆಂಜನಸ್ಯಾಕ್ಷಿತೇಜಸ್ತ್ವಂ ಲೋಕೇ ಪ್ರಸಿದ್ಧಂ । ತತ್ಪ್ರಕಾರವಿಶೇಷಃ ಶಾಖಾಂತರೇ ದಕ್ಷಿಣಂ ಪೂರ್ವಮಾಂಕ್ತ ಇತ್ಯಾದಿನಾ ವಿಹಿತಃ ।

ಬಳಿಕ ಋತ್ವಿಜರು ಯಜಮಾನನ ಕಣ್ಣಿಗೆ ಅಂಜನವನ್ನು (ಕಪ್ಪನ್ನು) ಹಚ್ಚುವರು. ಏಕೆಂದರೆ ಅಂಜನದಿಂದ ಕಣ್ಣಿಗೆ ಕಾಂತಿ ಯುಂಟಾಗುವುದು. ಹೊಸದಾಗಿ ಹುಟ್ಟಿದ ಶಿಶುವಿಗೆ ಕಪ್ಪನ್ನು ಹಚ್ಚುವುದು ರೂಢಿಯಷ್ಟೆ. ಅದರಂತೆ ಯಜಮಾನನ ಕಣ್ಣುಗಳಿಗೆ ಅಂಜನವನ್ನು (ಕಾಡಿಗೆ ಕಪ್ಪು) ಹಚ್ಚಿ ಅವನನ್ನು ಕಾಂತಿಯುತನನ್ನಾಗಿ ಮಾಡಿ ದೀಕ್ಷಿತನನ್ನಾಗಿ ಮಾಡುವರು. ಈ ವಿಷಯ ದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಹೀಗೆ ಹೇಳಿದೆ—

**ಇಂದ್ರೋ ವೃತ್ರಮಹನ್ ತಸ್ಯ ಕನೀನಿಕಾ ಪರಾಪತತ್ತದಾಂಜನಮಭವದ್ಯದಾಂಕ್ತೇ ಚಕ್ಷುರೇವ ಭ್ರಾತೃವ್ಯಸ್ಯ ವೃಂಕ್ತೇ ದಕ್ಷಿಣಂ ಪೂರ್ವಮಾಂಕ್ತೇ ಸವ್ಯಗ್ಂ ಹಿ ಪೂರ್ವಂ ಮನುಷ್ಯಾ ಆಂಜತೇ ನ ನಿ ಧಾವತೇ ನೀವ ಹಿ ಮನುಷ್ಯಾ ಧಾವಂತೇ ಪಂಚ ಕೃತ್ವ ಆಂಕ್ತೇ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಮೇವಾವರುಂಧೇ ಪರಿಮಿತಮಾಂಕ್ತೇಽಪರಿಮಿತಗ್ಂ ಹಿ ಮನುಷ್ಯಾ ಆಂಜತೇ ಸತೂಲಯಾಂಕ್ತೇಽಪತೂಲಯಾ ಹಿ ಮನುಷ್ಯಾ ಆಂಜತೇ ವ್ಯಾವೃತ್ತ್ಯೈ ಯದಪತೂಲಯಾಂಜೀತ ವಜ್ರ ಇವ ಸ್ಯಾತ್ಸತೂಲಯಾಂಕ್ತೇ ಮಿತ್ರತ್ವಾಯ ॥**

(ತೈ.ಸಂ. ೬-೧-೧-೪,೫)

ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರ ಮಾಡಿದಾಗ ಅವನ ಕನೀನಿಕೆಯು ಎಂದರೆ ಕಣ್ಣುಗುಡ್ಡೆಯು ನೆಲದಮೇಲೆ ಬಿದ್ದಿತು. ಅನಂತರ ಅದು ಅಂಜನವಾಗಿ ಮಾರ್ಪಟ್ಟಿತು. ಆದ್ದರಿಂದ ಅಂಜನವನ್ನು (ಕಪ್ಪನ್ನು) ಕಣ್ಣಿಗೆ ಲೇಪಿಸಿಕೊಳ್ಳುವ ಪುರುಷನು ತನ್ನ ಶತ್ರುವಿನ ಕಣ್ಣಿಗೆ ಎಟಕುವುದಿಲ್ಲ. ಅಂಜನಲೇಪನಕಾಲದಲ್ಲಿ ಯಜಮಾನನು ಮೊದಲು ತನ್ನ ಬಲಗಣ್ಣಿಗೆ ಅಂಜನವನ್ನು ಲೇಪನಮಾಡಿಕೊಳ್ಳಬೇಕು. ಏಕೆಂದರೆ ದೇವತೆಗಳು ತಮ್ಮ ಬಲಗಣ್ಣಿಗೇ ಮೊದಲು ಅಂಜನ ಬಳಿಯುತ್ತಾರೆ. ಮನುಷ್ಯರು ಮಾತ್ರ ಮೊದಲು ತಮ್ಮ ಎಡಗಣ್ಣಿಗೆ ಅಂಜನಲೇಪನಮಾಡುತ್ತಾರೆ. ಅಂಜನಲೇಪನಾನಂತರ ಇದನ್ನು ಚೆನ್ನಾಗಿ ತಿಕ್ಕಬಾರದು. ಮನುಷ್ಯರು ಚೆನ್ನಾಗಿ ತಿಕ್ಕುತ್ತಾರೆ. ಅಂಜನವನ್ನು ಐದಾವರ್ತಿ ಮಾತ್ರ ಹಚ್ಚಬೇಕು. ಏಕೆಂದರೆ ಪಂಕ್ತಿಛಂದಸ್ಸಿನಲ್ಲಿ ಪಾದಕ್ಕೆ ಐದು ಅಕ್ಷರಗಳಿರುವವು. ಪಂಕ್ತಿಛಂದಸ್ಸೇ ಯಜ್ಞಸ್ವರೂಪವು. ಅದರಿಂದ ಯಜ್ಞವನ್ನು ಎಂದರೆ ಯಜ್ಞಫಲವನ್ನು ಯಜಮಾನನು ಪಡೆಯುವನು. ಅಂಜನವನ್ನು ಸ್ವಲ್ಪ ಹಚ್ಚಿಕೊಳ್ಳಬೇಕು, ಮನಸ್ಸುಬಂದಷ್ಟು ಹೆಚ್ಚಾಗಿ ಮನುಷ್ಯರು ಹಚ್ಚಿಕೊಳ್ಳುತ್ತಾರೆ ಮತ್ತು ಅದನ್ನು ಒಂದು ಗೊಂಚಲಿರುವ ಕಡ್ಡಿಯ ತುದಿಯಿಂದ ಹಚ್ಚಬೇಕು ಮನುಷ್ಯರು ಗೊಂಚಲಿಲ್ಲದ ಬರೀ ಕಡ್ಡಿಯಿಂದ ಹಚ್ಚುತ್ತಾರೆ. ಬರೀ ಕಡ್ಡಿಯಿಂದ ಹಚ್ಚಿದರೆ ಕಣ್ಣುಗಳು ಗಟ್ಟಿಯಾಗಿ ಒರಟಾಗುವವು. ಗೊಂಚಲಿರುವ ಕಡ್ಡಿಯಿಂದ ಹಚ್ಚಿದರೆ ಕಣ್ಣುಗಳು ಮೃದುವಾಗಿ ತೇಜೋಯುಕ್ತವಾಗುವವು ಎಂದು ಇದರ ಅಭಿಪ್ರಾಯವು. ಇದು ಅಂಜನ ಲೇಪನ ವಿಧಿಯು.

## ಏಕವಿಂಶತ್ಯಾ ದರ್ಭಪಿಂಜೂಲೈಃ ಪಾವಯಂತಿ ॥

**ಸಂಸ್ಕಾರಾಂತರಂ ವಿಧತ್ತೇ । ದರ್ಭಪಿಂಜೂಲಶಬ್ದೇನ ಕುಶಸಂಘಾ ಉಚ್ಯಂತೇ । ತೈರೇಕವಿಂಶತಿಸಂಖ್ಯಾಕೈರ್ಯಜಮಾನಂ ಮಾರ್ಜಯಿತ್ವಾ ಶುದ್ಧಂ ಕುರ್ಯುಃ ।**

ಅಂಜನಲೇಪನ ರೂಪವಾದ ಸಂಸ್ಕಾರಾನಂತರ ದರ್ಭಪಿಂಜೂಲ ಎಂದರೆ ದರ್ಭೆಯ ಕಂತೆಯಿಂದ ನೀರನ್ನು ಅದ್ದಿಕೊಂಡು ಯಜಮಾನನಮೇಲೆ ಪ್ರೋಕ್ಷಿಸಿ ಅವನನ್ನು ಶುದ್ಧನನ್ನಾಗಿ ಮಾಡುವರು. ಈ ದರ್ಭೆಯ ಕಂತೆಯಲ್ಲಿ ಇಪ್ಪತ್ತೊಂದು ದರ್ಭೆಗಳಿರಬೇಕು.

## ಶುದ್ಧಮೇವೈನಂ ತತ್ಪೂತಂ ದೀಕ್ಷಯಂತಿ

ಯದ್ಯಪ್ಯಸಾವಭಿಷೇಕೇಣೈವ ಶುದ್ಧಸ್ತಥಾಪ್ಯತಿಶಯೇನ ಶುದ್ಧಿರಿತ್ಯೇವಮಭಿಪ್ರಾಯಂ ದರ್ಶಯತಿ । ಪೂರ್ವಮಪಿ ಶುದ್ಧಮೇವ ಸಂತಮೇನಂ ಯಜಮಾನಂ ಪುನರಪಿ ತತ್ರೇನ ಕುಶಸಂಘಮಾರ್ಜನೇನ ಪೂತಂ ಕೃತ್ವಾ ಸಂಸ್ಕುರ್ವಂತಿ । ಯದ್ಯಪಿ ಶಾಖಾಂತರೇ – ದ್ವಾಭ್ಯಾಂ ಪವಯತಿ ಅಹೋರಾತ್ರಾಭ್ಯಾಮೇವೈನಂ ಪಾವಯತಿ ತ್ರಿಭಿಃ ಪಾವಯತಿ ಇತ್ಯದಿನಾ ಸಂಖ್ಯಾಂತರವಿಷಯಾ ಬಹವಃ ಪಕ್ಷಾ ಉಪನ್ಯಸ್ತಾಸ್ತಥಾಪ್ಯೇತೇ ಸರ್ವ ಏಕವಿಂಶತಾವಂತರ್ಭಾವಾದವಯುತ್ಯಾನುವಾದರೂಪಾಃ ಪ್ರಶಂಸಾರ್ಥಾಃ । ಅತ ಏವ ತತ್ರಾಂತಿಮೇ ಪರ್ಯಾಯ ಏಕವಿಂಶತ್ಯಾ ಪಾವಯತೀತ್ಯುಪಸಂಹಾರಃ ಕೃತಃ ।

ಇದುವರೆಗೆ ಆಚರಿಸಿದ ಸಂಸ್ಕಾರಗಳಿಂದ ಯಜ್ಞಮಾಡುವ ಯಜಮಾನನು ಶುದ್ಧನಾಗಿದ್ದರೂ ಪವಿತ್ರವಾದ ಉದಕವನ್ನು ದರ್ಭೆಯ ಕಂತೆಯಿಂದ ಪ್ರೋಕ್ಷಿಸಿ ಅವನನ್ನು ಪವಿತ್ರನನ್ನಾಗಿಯೂ ದೀಕ್ಷಾಬದ್ಧನನ್ನಾಗಿಯೂ ಮಾಡುವರು. ಇಲ್ಲಿ ಇಪ್ಪತ್ತೊಂದು ದರ್ಭೆಗಳಿರುವ ಕಂತೆ ಎಂದು ಹೇಳಿದೆ. ಏಕೆಂದರೆ ಎರಡು, ಮೂರು ಮೊದಲಾದ ಸಂಖ್ಯೆಯ ದರ್ಭೆಗಳಿಂದಲೂ ಪ್ರೋಕ್ಷಿಸಬಹುದು ಆದರೆ ಇಪ್ಪತ್ತೊಂದು ದರ್ಭೆಗಳು ಶ್ರೇಷ್ಠವು ಎಂದರ್ಥವು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಹೀಗೆ ಹೇಳಿರುವುದು—

ಇಂದ್ರೋ ವೃತ್ರಮಹನ್ತ್ಸೋಽಪೋಽಭ್ಯಮ್ರಿಯತ ತಾಸಾಂ ಯನ್ಮೇಧ್ಯಂ ಯಜ್ಞಿಯಗ್ಂ ಸದೇವಮಾಸೀತ್ತದಪೋದಕ್ರಾಮತ್ತೇ ದರ್ಭಾ ಅಭವನ್ ಯದ್ದರ್ಭಪುಂಜೀಲೈಃ ಪವಯತಿ ಯಾ ಏವ ಮೇಧ್ಯಾ ಯಜ್ಞಿಯಾಃ ಸದೇವಾ ಆಪಸ್ತಾಭಿರೇವೈನಂ ಪವಯತಿ ದ್ವಾಭ್ಯಾಂ ಪವಯತ್ಯಹೋರಾತ್ರಾಭ್ಯಾಮೇವೈನಂ ಪವಯತಿ ತ್ರಿಭಿಃ ಪವಯತಿ ತ್ರಯ ಇಮೇ ಲೋಕಾ ಏಭಿರೇವೈನಂ ಲೋಕೈಃ ಪವಯತಿ ಪಂಚಭಿಃ ಪವಯತಿ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಾಯೈವೈನಂ ಪವಯತಿ ಷಡ್ಭಿಃ ಪವಯತಿ ಷಡ್ವಾ ಋತವ ಋತುಭಿರೇವೈನಂ ಪವಯತಿ ಸಪ್ತಭಿಃ ಪವಯತಿ ಸಪ್ತ ಛಂದಾಗ್ಂಸಿ ಛಂದೋಭಿರೇವೈನಂ ಪವಯತಿ ನವಭಿಃ ಪವಯತಿ ನವ ವೈ ಪುರುಷೇ ಪ್ರಾಣಾಃ ಸಪ್ರಾಣಮೇವೈನಂ ಪವಯತ್ಯೇಕವಿಗ್ಂಶತ್ಯಾ ಪವಯತಿ ದಶ ಹಸ್ತ್ಯಾ ಅಂಗುಲಯೋ ದಶ ಪದ್ಯಾ ಆತ್ಮೈಕವಿಗ್ಂಶೋ ಯಾವಾನೇವ ಪುರುಷಸ್ತಮಪರಿವರ್ಗಂ ಪವಯತಿ ॥ (ತೈ.ಸಂ. ೬-೧-೧-೭,೮)

ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದಾಗ ಅವನ ಮೃತಶರೀರವು ನೀರಿನಮೇಲೆ ಬಿದ್ದಿತು. ಆಗ ನೀರಿನಲ್ಲಿ ಶುದ್ಧವೂ ಯಜ್ಞಾರ್ಹವೂ ದೇವತಾತ್ಮಕವಾದವೂ ಆದ ಯಾವ ಶ್ರೇಷ್ಠಭಾಗವಿದ್ದವೋ ಅವೆಲ್ಲವೂ ನೀರಿನಿಂದ ಹೊರಟುಹೋಗಿ ಭೂಮಿಯಮೇಲೆ ದರ್ಭೆಗಳಾಗಿ ಉತ್ಪನ್ನವಾದುವು. ಆದ್ದರಿಂದ ದರ್ಭೆಗಳಿಂದ ಪ್ರೋಕ್ಷಿಸಿದರೆ ಪುರುಷನು ಶುದ್ಧನಾಗುವನು. ಆದಕಾರಣ ದರ್ಭೆಗಳಿಂದ ನೀರನ್ನು ಅದ್ದಿಕೊಂಡು ಪ್ರೋಕ್ಷಿಸುವುದು ಶುದ್ಧೀಕರಣದ ಮುಖ್ಯಾಂಗವು. ಎಷ್ಟು ದರ್ಭೆಗಳಿಂದ ಪ್ರೋಕ್ಷಿಸಬೇಕು ಎಂದರೆ ದರ್ಭೆಸಂಖ್ಯೆಗೆ ತಕ್ಕಂತೆ ಬೇರೆಬೇರೆ ಫಲಗಳಿವೆ. ಎರಡು ದರ್ಭೆಗಳಿಂದ ಪ್ರೋಕ್ಷಿಸಿದರೆ ಯಜಮಾನನ ಅಹೋರಾತ್ರಿಗಳಿಂದ ಎಂದರೆ ಅಹೋರಾತ್ರಿಗಳೆರಡರಲ್ಲಿಯೂ ಶುದ್ಧನಾಗಿರುವನು. ಮೂರು ದರ್ಭೆಗಳಿಂದ ಪ್ರೋಕ್ಷಿಸಿದರೆ ಮೂರು ಲೋಕಗಳಲ್ಲಿಯೂ ಶುದ್ಧನೆನಿಸುವನು. ಐದು ದರ್ಭೆಗಳಿಂದ ಪ್ರೋಕ್ಷಿಸಿದರೆ ಪಂಚಾಕ್ಷರಗಳಿರುವ ಯಜ್ಞರೂಪವಾದ ಪಂಕ್ತಿಛಂದ

ಸ್ಸಿನಿಂದ ಶುದ್ಧನಾಗಿ ಯಜ್ಞವನ್ನು ಅವಿಚ್ಛಿನ್ನವಾಗಿ ನಿರ್ವಹಿಸಲು ಶಕ್ತನಾಗುವನು. ಏಳು ದರ್ಭೆಗಳಿಂದ ಪ್ರೋಕ್ಷಿಸಿದರೆ ಗಾಯತ್ರ್ಯಾದಿ ಏಳು ಮುಖ್ಯ ಛಂದಸ್ಸುಗಳಿಂದ ಶುದ್ಧನಾಗುವನು. ಒಂಬತ್ತು ದರ್ಭೆಗಳಿಂದ ಪ್ರೋಕ್ಷಿಸಿದರೆ ಯಜಮಾನನ ಶರೀರಾಂತರ್ಗತವಾದ ಒಂಭತ್ತು ರಂಧ್ರಗಳ ಮೂಲಕ ಸಂಚರಿಸುವ ಒಂಭತ್ತು ಪ್ರಾಣವಾಯುಗಳ ಸಹಿತ ಶುದ್ಧನಾಗುವನು. ಇಪ್ಪತ್ತೊಂದು ದರ್ಭೆಗಳಿಂದ ಪ್ರೋಕ್ಷಿಸಿದರೆ ಎರಡು ಹಸ್ತಗಳ ಹತ್ತು ಬೆರಳುಗಳು, ಎರಡು ಪಾದಗಳ ಹತ್ತು ಬೆರಳುಗಳು ಮತ್ತು ತನ್ನ ಒಟ್ಟು ಶರೀರ ಇವೆಲ್ಲವೂ ಸೇರಿ ಇಪ್ಪತ್ತೊಂದಾಗುವುದರಿಂದ ಇಪ್ಪತ್ತೊಂದು ಅವಯವ ಸಹಿತವಾದ ಪೂರ್ಣ ಶರೀರಸಹಿತನಾಗಿ ಶುದ್ಧನಾಗುವನು ಎಂದು ಹೇಳಿದೆ. ಈರೀತಿ ಶುದ್ಧನಾದ ಯಜಮಾನನನ್ನು ದೀಕ್ಷಿತನನ್ನಾಗಿ ಮಾಡುತ್ತಾರೆ.

**ದೀಕ್ಷಿತವಿಮಿತಂ ಪ್ರಪಾದಯಂತಿ ॥**

**ಉಕ್ತೈಃ ಸಂಸ್ಕಾರೈಃ ಸಂಕೃತಸ್ಯ ದೀಕ್ಷಿತಸ್ಯ ಪ್ರಾಚೀನವಂಶಾಖ್ಯಶಾಲಾಪ್ರವೇಶಂ ವಿಧತ್ತೇ । ದೀಕ್ಷಿತಸ್ಯ ಪ್ರವೇಶಾರ್ಥಂ ವಿಶೇಷೇಣ ನಿರ್ಮಿತಃ ಪ್ರಾಚೀನವಂಶೋ ದೀಕ್ಷಿತವಿಮಿತಸ್ತಂ ಪ್ರವೇಶಯೇಯುಃ ।**

ಇದುವರೆಗೆ ಹೇಳಿದ ದೀಕ್ಷಾಸಂಸ್ಕಾರಗಳಿಂದ ಶುದ್ಧನಾದ ಯಜಮಾನನನ್ನು ಪ್ರಾಚೀನವಂಶವೆಂಬ ಯಜ್ಞಗೃಹಕ್ಕೆ ಪ್ರವೇಶಮಾಡಿಸುವರು. ದೀಕ್ಷಿತನು ಪ್ರವೇಶಿಸುವುದಕ್ಕಾಗಿಯೇ ಪ್ರತ್ಯೇಕವಾಗಿ ನಿರ್ಮಿಸಿರುವ ಪ್ರಾಚೀನವಂಶವೆಂಬ ಯಜ್ಞಗೃಹಕ್ಕೆ ದೀಕ್ಷಿತವಿಮಿತವೆಂದು ಹೆಸರು. ಋತ್ವಿಕ್ಕುಗಳು ಯಜಮಾನನನ್ನು ಆ ದೀಕ್ಷಿತವಿಮಿತವೆಂಬ ಗೃಹವನ್ನು ಪ್ರವೇಶಿಸುವಂತೆ ಮಾಡುವರು.

**ಯೋನಿರ್ವಾ ಏಷಾ ದೀಕ್ಷಿತಸ್ಯ ಯದ್ದೀಕ್ಷಿತವಿಮಿತಂ ಯೋನಿಮೇ-
ವೈನಂ ತತ್ಸ್ವಾಂ ಪ್ರಪಾದಯಂತಿ ॥**

**ಪೂರ್ವತ್ರ ದೀಕ್ಷಿತಸ್ಯ ಗರ್ಭತ್ವಾಭಿಧಾನಾದೌಚಿತ್ಯೇನ ಪ್ರಾಚೀನವಂಶಂ ಯೋನಿತ್ವೇನ ಪ್ರಶಂಸತಿ । ಪ್ರಾಚೀನವಂಶಸ್ಯ ಯೋನಿತ್ವೋಪಚಾರಾತ್ತತ್ತೇನ ಪ್ರಾಚೀನವಂಶಪ್ರವೇಶೇನ ಸ್ವಕೀಯಯೋನಿಪ್ರವೇಶಃ ಸಂಪಾದ್ಯತೇ । ಸೋಽಯಂ ಪ್ರವೇಶಃ ಶಾಖಾಂತರೇ ವಿಸ್ಪಷ್ಟಮಾಮ್ನಾಯತೇ । ಬಹಿಃ ಪಾವಯಿತ್ವಾಂತಃ ಪ್ರಪಾದಯತಿ ಮನುಷ್ಯಲೋಕ ಏವೈನಂ ಪಾವಯಿತ್ವಾ ಪೂತಂ ದೇವಲೋಕಂ ಪ್ರಣಯತಿ ಇತಿ । ಆಪಸ್ತಂಬೋಽಪ್ಯಾಹ – ಆಪೋ ದೇವಾಸ ಈಮುಹ ಇತಿ ಪೂರ್ವಯಾ ದ್ವಾರಾ ಪ್ರಾಗ್ವಂಶಂ ಪ್ರವಿಶ್ಯ ಇತಿ ।**

ಹಿಂದೆ ಯಜಮಾನನು ಮಾತೃಗರ್ಭದಲ್ಲಿರುವಂತೆ ಭಾವಿಸಿ ಆ ಸಂಬಂಧವಾದ ಉಚಿತಸಂಸ್ಕಾರಗಳನ್ನು ಮಾಡಲಾಯಿತು. ಪ್ರಾಚೀನವಂಶ ಅಥವಾ ದೀಕ್ಷಿತವಿಮಿತವೆಂಬ ಗೃಹವನ್ನು ಯಜಮಾನನು ವಾಸಿಸುವ (ತನ್ನ) ಗರ್ಭಗೃಹದ ದ್ವಾರವಾದ ಯೋನಿಯೆಂದು ಪ್ರಶಂಸಿಸುವರು. ಈ ಪ್ರಾಚೀನವಂಶವೆಂಬುದೇ ಒಂದು ಯೋನಿಯು. ಈ ಗೃಹದಲ್ಲಿ ಪ್ರವೇಶಮಾಡುವುದರಿಂದ ತಾನು ವಾಸಮಾಡಬೇಕಾದ ಗರ್ಭಯೋನಿಯಲ್ಲಿ ಪ್ರವೇಶಮಾಡಿದಂತಾಯಿತು. ಈ ವಿಷಯದಲ್ಲಿ—

**ಬಹಿಃ ಪವಯಿತ್ವಾನ್ತಃ ಪ್ರಪಾದಯತಿ ಮನುಷ್ಯಲೋಕ ಏವೈನಂ ಪವಯಿತ್ವಾ ಪೂತಂ ದೇವಲೋಕಂ ಪ್ರಣಯತಿ ।** (ತೈ.ಸಂ. ೬-೧-೨-೧)

ಎಂದು ಹೇಳಿದೆ. ಇದುವರೆಗೂ ಯಜ್ಞಗೃಹದ ಹೊರಗೆ ಶುದ್ಧಿಸಂಸ್ಕಾರಗಳನ್ನು ನೆರವೇರಿಸಿ ಈಗ ಯಜ್ಞಗೃಹದ ಒಳಭಾಗವನ್ನು ಯಜಮಾನನು ಪ್ರವೇಶಿಸುವನು. ಬಳಿಕ ಮನುಷ್ಯಲೋಕ ಎಂದರೆ ಈ ಭೂಲೋಕದಲ್ಲಿ ನಾನಾವಿಧ ಸಂಸ್ಕಾರಗಳಿಂದ ಶುದ್ಧನಾಗಿ ದೇವಲೋಕಕ್ಕೆ ಹೋಗುವನು. ಆಪಸ್ತಂಬಮಹರ್ಷಿಯೂ ಕೂಡ--**ಆ ವೋ ದೇವಾಸ ಈಮಹ ಇತಿ ಪೂರ್ವಯಾ ದ್ವಾರಾ ಪ್ರಾಗ್ವಂಶಂ ಪ್ರವೇಶ್ಯ** (ಆ.ಪ.ಶ್ರೌ.ಸೂ. ೧೦-೮-೧)—**ಆ ವೋ ದೇವಾಸ ಈಮಹೇ** ಎಂಬ ಮಂತ್ರವನ್ನು ಪಠಿಸುತ್ತಾ ಯಜಮಾನನು ಪ್ರಾಚೀನವಂಶಗೃಹವನ್ನು ಪೂರ್ವದ್ವಾರದಿಂದ ಪ್ರವೇಶಿಸಬೇಕು ಎಂದು ಹೇಳಿರುವರು.

### ತಸ್ಮಾದ್ಧ್ರುವಾದ್ಯೋನೇರಾಸ್ತೇ ಚ ಚರತಿ ಚ

**ತಸ್ಯ ದೀಕ್ಷಿತಸ್ಯ ಕಂಚಿನ್ನಿಯಮಂ ವಿಧತ್ತೇ । ಅತ್ರ ತಿಸ್ರಃ ಪಂಚಮ್ಯಃ ಸಪ್ತಮ್ಯರ್ಥೇ ದ್ರಷ್ಟವ್ಯಾಃ । ತಸ್ಮಿನ್ದೀಕ್ಷಿತಾರ್ಥಂ ನಿರ್ಮಿತದೇವಯಜನಾಖ್ಯೇ ಸ್ಥಿರಸ್ಥಾನೇ ಸ ದೀಕ್ಷಿತ ಉಪವೇಶನಂ ಸಂಚರಣಂ ನ ಕುರ್ಯಾತ್ ।**

ಪ್ರಾಚೀನವಂಶಗೃಹವನ್ನು ಪ್ರವೇಶಿಸಿದ ದೀಕ್ಷಿತನು ಕೆಲವು ನಿಯಮಗಳನ್ನು ಅನುಸರಿಸಬೇಕು. ಆ ಗೃಹವನ್ನು ಪ್ರವೇಶಿಸಿದಮೇಲೆ ನಿರ್ಬಾಧಿತವಾದ ಸ್ಥಿರಪ್ರದೇಶದಲ್ಲಿ ಕುಳಿತುಕೊಳ್ಳುವಂತೆ ಕುಳಿತುಕೊಳ್ಳಬೇಕು. ಏಕೆಂದರೆ ಯೋನಿ (ಗರ್ಭ) ದಲ್ಲಿರುವ ಶಿಶುವು ಯಾವ ತೊಂದರೆಯೂ ಇಲ್ಲದೆ ನಿರ್ಬಾಧಿತವಾದ ಪ್ರದೇಶದಲ್ಲಿ ಪ್ರಸವವಾಗುವವರೆಗೂ ಸ್ಥಿರವಾಗಿ ಇರುವಂತೆ ದೀಕ್ಷಿತನೂ ಸಹ ಆ ಪ್ರಾಗ್ವಂಶಗೃಹದಲ್ಲಿ ಕುಳಿತಿರಬೇಕು. ಉಚಿತಕಾಲದಲ್ಲಿ ಹೊರಕ್ಕೆ ಬರಬೇಕು.

### ತಸ್ಮಾದ್ಧ್ರುವಾದ್ಯೋನೇರ್ಗರ್ಭಾ ಧೀಯಂತೇ ಚ ಪ್ರ ಚ ಜಾಯಂತೇ ।

**ವಿಹಿತಮರ್ಥಂ ಪ್ರಶಂಸತಿ । ಯಸ್ಮಾದ್ಗರ್ಭಸ್ಥಾನೀಯಸ್ಮ ದೀಕ್ಷಿತಸ್ಯ ಸ್ಥಿರೇ ದೇವಯಜನಸ್ಥಾನೇ ಯೋನಿರೂಪ ಉಪವೇಶನಂ ಸಂಚರಣಂ ಚ ತಸ್ಮಾಲ್ಲೋಕೇಽಪಿ ಸ್ಥಿರೇ ಯೋನಿಮಧ್ಯೇ ನವಸಂಖ್ಯಾಕಾನ್ಮಾಸಾನ್ಗರ್ಭಾ ಧಾರ್ಯಂತೇ ತಸ್ಮಾದೇವ ಸ್ಥಿರಾದ್ಯೋನಿಮಧ್ಯಾದುತ್ಪದ್ಯಂತೇ ।**

ಮೇಲೆ ಹೇಳಿದ ಅರ್ಥವನ್ನು ವಿಶದಪಡಿಸುವರು. ಗರ್ಭಸ್ಥಾನೀಯವೂ ಯೋನಿರೂಪವೂ ಆದ ದೇವಯಜನ (ಪ್ರಾಚೀನ ವಂಶಗೃಹ) ಪ್ರದೇಶದಲ್ಲಿ ದೀಕ್ಷಿತನಾದವನು ಸ್ಥಿರವಾಗಿ ಕುಳಿತುಕೊಳ್ಳಬೇಕು. ಹೊರಗೆ ಹೋಗಬಾರದು. ಏಕೆಂದರೆ ಲೋಕದಲ್ಲಿ ಗರ್ಭಸ್ಥವಾಗಿರುವ ಶಿಶುವು ಸ್ಥಿರವಾದ ಯೋನಿಮಧ್ಯದಲ್ಲಿ (ಗರ್ಭದಲ್ಲಿ) ಒಂಭತ್ತು ತಿಂಗಳವರೆಗೂ ಮಾತೃವಿನಿಂದ ಧರಿಸಲ್ಪಟ್ಟು ನವಮಾಸಾನಂತರ ಯೋನಿಯಿಂದ ಹೊರಬರುವುದು ಪ್ರಸಿದ್ಧವಾಗಿದೆ.

### ತಸ್ಮಾದ್ದೀಕ್ಷಿತಂ ನಾನ್ಯತ್ರ ದೀಕ್ಷಿತವಿಮಿತಾದಾದಿತ್ಯೋಽಭ್ಯುದಿಯಾದ್ವಾಭ್ಯಸ್ತಮಿಯಾದ್ವಾಪಿ ವಾಭ್ಯಾಶ್ರಾವಯೇಯುಃ ॥

**ತಸ್ಯ ದೀಕ್ಷಿತಸ್ಯ ದೇವಯಜನಾದ್ಬಹಿರ್ನಿರ್ಗಮನಂ ನಿಷೇಧತಿ । ಯಸ್ಮಾದ್ದೀಕ್ಷಿತಸ್ಯೋಪವೇಶನಸಂಚರಣಯೋರ್ದೇವಯಜನಮೇವ ಸ್ಥಾನಂ ತಸ್ಮಾತ್ಕಾರಣಾದ್ದೀಕ್ಷಿತವಿಮಿತಾದ್ದೇವಯಜನದೇಶಾದನ್ಯತ್ರ ಬಹಿರ್ದೇಶೇ ದೀಕ್ಷಿತಮಭಿಲಕ್ಷ್ಯಾದಿತ್ಯೋ ನೋದಿಯಾನ್ನಾಸ್ತಮಿ-**

ಯಾಚ್ಛ । ಕಿಂಚರ್ತ್ವಿಜೋ ಯಂ ಬಹಿರವಸ್ಥಿತಂ ದೀಕ್ಷಿತಮಭಿಲಕ್ಷ್ಯಶ್ರಾವಣಾದಿಕಂ ನ ಕುರ್ಯುಃ । ಯದ್ಯಪಿ ಧ್ರುವಾದ್ಯೋನೇರಾಸ್ತೇ ಚರತಿವಿಧಾನಾದೇವಾಯಮರ್ಥಃ ಸಿದ್ಧಸ್ತ-ಥಾಪಿ ಮಲಮೂತ್ರವಿಸರ್ಗಾದ್ಯಾವಶ್ಯಕಕಾರ್ಯಾರ್ಥಂ ಕದಾಚಿದ್ಬಹಿರ್ನಿರ್ಗಮನಮಭ್ಯುಪ-ಗಮ್ಯ ತತ್ರ ವಿಶೇಷಾಭಿಧಾನಮೇತತ್ । ಕಾಲಾಂತರೇ ಕಥಂಚಿದ್ಗಮನೇಽಪ್ಯುದಯಾಸ್ತಮಯಾ-ಶ್ರವಣಾದಿಕಾಲೇಷು ಸರ್ವಥಾ ನ ನಿರ್ಗಚ್ಛೇದಿತ್ಯರ್ಥಃ । ತದೇತದ್ದೃಷ್ಟಾಂತಪುರಸ್ಸರಂ ಶಾಖಾಂತರೇ ಪ್ರಪಂಚಿತಂ—ಗರ್ಭೋ ವಾ ಏಷ ಯದ್ದೀಕ್ಷಿತೋ ಯೋನಿರ್ದೀಕ್ಷಿತವಿಮಿತಂ ಯದ್ದೀಕ್ಷಿತೋ ದೀಕ್ಷಿತವಿಮಿತಾತ್ಪ್ರವಸೇದ್ಯಥಾ ಯೋನೇರ್ಗರ್ಭಃ ಸ್ಕಂದತಿ ತಾದೃಗೇವ ತನ್ನ-ಪ್ರವಸ್ತವ್ಯಮಾತ್ಮನೋ ಗೋಪೀಥಾಯ ಇತಿ ।

ಪ್ರಾಗ್ವಂಶಗೃಹವನ್ನು ಪ್ರವೇಶಿಸಿದ ದೀಕ್ಷಿತನು ಹೊರಕ್ಕೆ ಬರಕೂಡದು. ಆದ್ದರಿಂದ ದೀಕ್ಷಿತನು ಆ ಗೃಹದಲ್ಲಿಯೇ ಸ್ಥಿರವಾಗಿ ಒಂದೆಡೆ ಕುಳಿತಿರಬೇಕು. ಹೊರಗೆ ಹೋಗಕೂಡದು. ಒಂದುವೇಳೆ ಬಹಿಃಶೌಚಾದಿಗಳಿಗೆ ಹೋಗಲೇಬೇಕಾಗಿ ಬರುವ ಪಕ್ಷದಲ್ಲಿ ಸೂರ್ಯೋದಯ ಮತ್ತು ಸೂರ್ಯಾಸ್ತಮಯಕಾಲಗಳನ್ನು ಬಿಟ್ಟು ಇತರ ಕಾಲದಲ್ಲಿ ಹೋಗಿ ಬರಬೇಕು. ಹಾಗೆ ಹೊರಗೆ ಹೋದಾಗ ಇತರರು ಋತ್ವಿಕ್ಕಗಳೂ ಯಾರೂ ಆ ದೀಕ್ಷಿತನನ್ನು ಯಾವ ವಿಧವಾಗಿಯೂ ಮಾತನಾಡಿಸಬಾರದು. ಈ ವಿಷಯದಲ್ಲಿ ತೈತ್ತರೀಯಶಾಖೆಯಲ್ಲಿ ಹೇಳಿರುವುದನ್ನು ಇಲ್ಲಿ ಉದಾಹರಿಸಲಾಗಿದೆ—

ಗರ್ಭೋ ವಾ ಏಷ ಯದ್ದೀಕ್ಷಿತೋ ಯೋನಿರ್ದೀಕ್ಷಿತವಿಮಿತಂ ಯದ್ದೀಕ್ಷಿತೋ ದೀಕ್ಷಿತವಿಮಿತಾತ್ಪ್ರವಸೇದ್ಯಥಾ ಯೋನೇರ್ಗರ್ಭಃ ಸ್ಕಂದತಿ ತಾದೃಗೇವ ತನ್ನಪ್ರವಸ್ತವ್ಯಮಾ-ತ್ಮನೋ ಗೋಪೀಥಾಯ ॥

(ಶ.ಬ್ರಾ. ೩-೨-೧)

ದೀಕ್ಷಿತವಿಮಿತವೆಂದು ಹೇಳಲ್ಪಡುವ ಯಾವ ಪ್ರಾಚೀನವಂಶವೆಂಬ ಯಜ್ಞಗೃಹವಿರುವುದೋ ಅದು ದೀಕ್ಷಾಸಂಸ್ಕಾರವನ್ನು ಪಡೆಯುವ ದೀಕ್ಷಿತನಿಗೆ ಮಾತೃಗರ್ಭದಂತೆ ಇರುವುದು. ಗರ್ಭಸ್ಥಶಿಶುವು ಯೋನಿಯಿಂದ ಯಾವರೀತಿ ಹೊರಕ್ಕೆ ಹೋಗಲಾರದೋ ಅದರಂತೆ ದೀಕ್ಷಿತನೂ ಸಹ ಆ ಗೃಹದಿಂದ ಹೊರಗೆ ಹೋಗಕೂಡದು. ಅಲ್ಲಿಯೇ ಸ್ಥಿರವಾಗಿ ಕುಳಿತುಕೊಂಡಿರಬೇಕು ಈರೀತಿ ಮಾಡುವುದು ತನ್ನ ರಕ್ಷಣಾರ್ಥವಾಗಿಯೇ ಆಗಿರುವುದು ಎಂದಭಿಪ್ರಾಯವು.

## ವಾಸಸಾ ಪ್ರೋರ್ಣುವಂತಿ

ಸಂಸ್ಕಾರಾಂತರಂ ವಿಧತ್ತೇ । ಋತ್ವಿಜೋ ಯಜಮಾನಂ ವಸ್ತ್ರೇಣಾಚ್ಛಾದಯೇಯುಃ ।

ಇತರ ಸಂಸ್ಕಾರಗಳನ್ನು ವಿವರಿಸುವರು. ಋತ್ವಿಕ್ಕುಗಳು ಯಜಮಾನನನ್ನು ವಸ್ತ್ರದಿಂದ ಹೊದಿಸುವರು.

**ಉಲ್ಬಂ ವಾ ಏತದ್ದೀಕ್ಷಿತಸ್ಯ ಯದ್ವಾಸ ಉಲ್ಬೇನೈವೈನಂ ತತ್ಪ್ರೋ-ರ್ಣುವಂತಿ ॥**

ಗರ್ಭಸ್ಥಾನೀಯಂ ದೀಕ್ಷಿತಂ ಪ್ರತ್ಯಾಚಿತ್ಯೇನ ವಸ್ತ್ರಸ್ಯೋಲ್ಬತ್ವಂ ದರ್ಶಯತಿ । ಉಲ್ಬ-ಶಬ್ದೇನ ಗರ್ಭಸ್ಯಾಭ್ಯಂತರಂ ಚರ್ಮ ಸರ್ವವೇಷ್ಟನಮುಚ್ಯತೇ । ಅಯಮರ್ಥಃ ಶಾಖಾಂತರೇ

**ಸ್ಪಷ್ಟೀಕೃತಃ—ಗರ್ಭೋ ವಾ ಏಷ ಯದ್ದೀಕ್ಷಿತ ಉಲ್ಬಂ ವಾಸಃ ಪ್ರೋರ್ಣುತೇ ತಸ್ಮಾದ್ಗರ್ಭಾಃ ಪ್ರಾವೃತಾ ಜಾಯಂತೇ ಇತಿ ।**

ವಸ್ತ್ರವನ್ನು ಏತಕ್ಕೆ ಹೊದಿಸಬೇಕೆಂದರೆ. ಗರ್ಭದಲ್ಲಿರುವ ಶಿಶುವಿನ ಸುತ್ತಲೂ ಗರ್ಭಕೋಶದ ಉಲ್ಬ ಎಂದರೆ ಒಳಪರೆಯು (caul) ಸುತ್ತಿಕೊಂಡಿರುವುದು ಈ ವಿಷಯವು ಶಾಖಾಂತರದಲ್ಲಿ ಎಂದರೆ ತೈತ್ತಿರೀಯಸಂಹಿತೆಯಲ್ಲಿ—

**ಗರ್ಭೋ ವಾ ಏಷ ಯದ್ದೀಕ್ಷಿತ ಉಲ್ಬಂ ವಾಸಃ ಪ್ರೋರ್ಣುತೇ ತಸ್ಮಾದ್ಗರ್ಭಾಃ ಪ್ರಾವೃತಾ ಜಾಯಂತೇ ॥** (ತೈ. ಸಂ. ೬-೧-೩-೨)

ಗರ್ಭದಲ್ಲಿರುವ ಶಿಶುವಿನ ಸುತ್ತಲೂ ಗರ್ಭಕೋಶದ ಒಳಪದರವು (ಚರ್ಮವು) ಸುತ್ತಿಕೊಂಡಿರುತ್ತದೆ. ಈ ಚರ್ಮವು ಅಥವಾ ಉಲ್ಬವು ಶಿಶುವಿನ ಬೆಳವಣಿಗೆಗೆ ಸಹಾಯಕವಾಗಿರುತ್ತದೆ. ದೀಕ್ಷಿತನಾದ ಯಜಮಾನನಿಗೆ ಹೊದಿಸುವ ವಸ್ತ್ರವು ಈ ಉಲ್ಬದ ಸಂಕೇತವಾಗಿರುತ್ತದೆ.

## ಕೃಷ್ಣಾಜಿನಮುತ್ತರಂ ಭವತಿ ಉತ್ತರಂ ವಾ ಉಲ್ಬಾಜ್ಜರಾಯು ಜರಾಯುಣೈವೈನಂ ತತ್ಪ್ರೋರ್ಣುವಂತಿ ॥

**ವಾಸಸೋ ಬಹಿರ್ವೇಷ್ಟನಾಂತರಂ ವಿಧತ್ತೇ । ಬಹಿರ್ವೇಷ್ಟನತ್ವಸಾಮ್ಯೇನ ಕೃಷ್ಣಾಜಿನಸ್ಯ ಜರಾಯುರೂಪತ್ವಂ ದರ್ಶಯತಿ ।**

ಉಲ್ಬದ ಸಂಕೇತವಾದ ವಸ್ತ್ರಾಚ್ಛಾದನಾನಂತರ ಅದರಮೇಲೆ ಜರಾಯು ಎಂದರೆ ಗರ್ಭಕೋಶದ (placenta) ಸಂಕೇತವಾಗಿ ವಸ್ತ್ರದಮೇಲೆ ಕೃಷ್ಣಾಜಿನವೆಂಬ ಜಿಂಕೆಯ ಚರ್ಮವನ್ನು ಹೊದಿಸುವರು.

## ಮುಷ್ಟೀಕುರುತೇ ।

**ಸಂಸ್ಕಾರಾಂತರಂ ವಿಧತ್ತೇ । ಯಜಮಾನೋ ಹಸ್ತಯೋರ್ಮುಷ್ಟಿಂ ಕುರ್ಯಾತ್ । ತತ್ಪ್ರಕಾರ ಆಪಸ್ತಂಬೇನ ಸ್ಪಷ್ಟಮಭಿಹಿತಃ—ಅಥಾಂಗುಲೀರ್ನ್ಯಂಚತಿ । ಸ್ವಾಹಾ ಯಜ್ಞಂ ಮನಸೇತಿ ದ್ವೇ ಇಭ್ಯಃ ಸ್ವಾಹಾ ದಿವ ಇತಿ ದ್ವೇ ಸ್ವಾಹಾ ಪೃಥಿವ್ಯಾ ಇತಿ ದ್ವೇ ಸ್ವಾಹೋರೋರಂತರಿಕ್ಷಾದಿತಿ ದ್ವೇ ಸ್ವಾಹಾ ಯಜ್ಞಂ ವಾತಾದಾರಭ ಇತಿ ಮುಷ್ಟೀ ಕರೋತಿ ಇತಿ ।**

ಅನಂತರ ಯಜಮಾನನು ತನ್ನ ಎರಡು ಹಸ್ತಗಳ ಬೆರಳುಗಳನ್ನು ಒಳಭಾಗಕ್ಕೆ ಬಗ್ಗಿಸಿ ಮುಷ್ಟಿಮಾಡುವನು. ಆಪಸ್ತಂಬ ಋಷಿಯು ಈ ವಿಷಯದಲ್ಲಿ—**ಸ್ವಾಹಾ ಯಜ್ಞ ಮನಸೇತಿ ದ್ವೇ ಸ್ವಾಹಾ ದಿವ ಇತಿ ದ್ವೇ ಸ್ವಾಹಾ ಪೃಥಿವ್ಯಾ ಇತಿ ದ್ವೇ ಸ್ವಾಹೋರೋರಂತರಿಕ್ಷಾದಿತಿ ದ್ವೇ ಸ್ವಾಹಾ ಯಜ್ಞಂ ವಾತಾದಾರಭ ಇತಿ ಮುಷ್ಟೀಕರೋತಿ ॥** (ಆಪ. ಶ್ರೌ.ಸೂ.೧೮-೧೧-೩-೪) ಎಂದರೆ, **ಸ್ವಾಹಾ ಯಜ್ಞಂ ಮನಸಾ** ಎಂಬ ಮಂತ್ರವನ್ನು ಹೇಳಿ ತನ್ನ ಹಸ್ತಗಳ ಬೆರಳುಗಳಲ್ಲಿ ಎರಡನ್ನು ಬಗ್ಗಿಸಿ ಮುಚ್ಚಿಕೊಳ್ಳುವನು. ಆದರಂತೆ **ಸ್ವಾಹಾ** ದಿವ ಎಂದು ಮತ್ತೆರಡು ಬೆರಳುಗಳನ್ನು, **ಸ್ವಾಹಾ ಪೃಥಿವ್ಯಾ** ಎಂದು ಮತ್ತೆರಡು ಬೆರಳುಗಳನ್ನು **ಸ್ವಾಹೋರೋರಂತರಿಕ್ಷಾತ್** ಎಂದು ಮತ್ತೆರಡು ಬೆರಳುಗಳನ್ನು **ಸ್ವಾಹಾ ಯಜ್ಞ ವಾತಾದಾರಭೇ** ಎಂದು ಮತ್ತೆರಡು (ಒಟ್ಟು ಹತ್ತು) ಬೆರಳುಗಳನ್ನು ಮುಚ್ಚಿ ಮುಷ್ಟಿ (ಹಿಡಿ) ಯನ್ನಾಗಿ ಮಾಡುವನು ಎಂದು ಹೇಳಿರುವರು.

**ಮುಷ್ಟೀ ವೈ ಕೃತ್ವಾ ಗರ್ಭೋಽನ್ತಃ ಶೇತೇ ಮುಷ್ಟೀ ಕೃತ್ವಾ ಕುಮಾ-ರೋ ಜಾಯತೇ ತದ್ಯನ್ಮುಷ್ಟೀಕುರುತೇ ಯಜ್ಞಂ ಚೈವ ತತ್ಸ-ರ್ವಾಶ್ಚ ದೇವತಾ ಮುಷ್ಟ್ಯೋಃ ಕುರುತೇ ॥**

ಗರ್ಭಸಾಮ್ಯೇನ ಯಜ್ಞಸ್ಯ ಸರ್ವದೇವತಾನಾಂ ಚ ಧಾರಣೇನ ಪ್ರಶಂಸತಿ । ಗರ್ಭಸ್ಯ ಮುಷ್ಟೀದ್ವಯೇ ಶಾಸ್ತ್ರಪ್ರಸಿದ್ಧ್ಯರ್ಥೋ ವೈಶಬ್ದಃ । ಜಾಯಮಾನಸ್ಯಮುಷ್ಟಿದ್ವಯಂ ಲೋಕೇ ಪ್ರಸಿದ್ಧಂ । ಮುಷ್ಟಿಮಧ್ಯೇ ಯಜ್ಞಧಾರಣಂ ಶಾಖಾಂತರೇಽಪ್ಯಾಮ್ನಾತಂ—ಮುಷ್ಟೀಕರೋತಿ ವಾಚಂ ಯಚ್ಛತಿ ಯಜ್ಞಸ್ಯ ಧೃತ್ಯೈ ಇತಿ ।

ಯಜಮಾನನು ತನ್ನ ಹಸ್ತಗಳನ್ನು ಏತಕ್ಕೆ ಮುಷ್ಟಿ ಮಾಡಬೇಕೆಂದರೆ—ಯಜಮಾನನನ್ನು ಗರ್ಭಸ್ಥ ಶಿಶುವಿನಂತೆ ಭಾವಿಸಿರುವುದರಿಂದ ಗರ್ಭಸ್ಥಶಿಶುವು ಗರ್ಭದಲ್ಲಿರುವಾಗ ತನ್ನ ಕೈಬೆರಳುಗಳನ್ನು ಮಡಿಸಿ ಮುಷ್ಟಿಮಾಡಿಕೊಂಡೇ ಇರುವುದು. ಮತ್ತು ಆ ಮಗುವು (ಅಥವಾ ಪುತ್ರನು) ಮಾತೃಯೋನಿಯಿಂದ ಜನಿಸುವಾಗ ಕೈಬೆರಳುಗಳನ್ನು ಮಡಿಸಿಕೊಂಡು ಮುಷ್ಟಿಮಾಡಿಕೊಂಡೇ ಹುಟ್ಟುವುದು. ಅದರ ಸಂಕೇತಾರ್ಥವಾಗಿ ಯಜಮಾನನು ತನ್ನ ಎರಡು ಹಸ್ತಗಳನ್ನೂ ಮುಷ್ಟಿಯನ್ನಾಗಿ ಮಾಡಬೇಕು. ಇದಲ್ಲದೆ ಈ ಮುಷ್ಟೀಕರಣಕ್ಕೆ ಮತ್ತೊಂದು ಸಂಕೇತವಿರುವುದು. ಒಬ್ಬ ಮನುಷ್ಯನು ತನಗೆ ಬೇಕಾದ ವಸ್ತುವು ತನ್ನ ಕೈಬಿಟ್ಟು ಕಳೆದುಹೋಗದಿರುವುದಕ್ಕಾಗಿ ಅದನ್ನು ಭದ್ರವಾಗಿ ತನ್ನ ಹಿಡಿಯಲ್ಲಿಟ್ಟುಕೊಳ್ಳುವನಷ್ಟೆ. ಅದರಂತೆ ಯಜಮಾನನು ತನ್ನ ಎರಡು ಕೈಗಳನ್ನು ಮುಷ್ಟಿಮಾಡಿ ತಾನು ಮಾಡುವ ಯಜ್ಞವನ್ನು ಯಜ್ಞದಲ್ಲಿ ಆಹ್ವಾನಿತರಾದ ದೇವತೆಗಳನ್ನು ಯಜ್ಞಪೂರ್ತಿಯಾಗುವವರೆಗೂ ಕೈಬಿಟ್ಟುಹೋಗದಂತೆ ತನ್ನ ಮುಷ್ಟಿಯಲ್ಲಿ ಭದ್ರವಾಗಿ ಹಿಡಿದಿರುವನೆಂಬ ಸಂಕೇತವನ್ನು ಸೂಚಿಸುತ್ತದೆ. ತೈತ್ತಿರೀಯ ಸಂಹಿತೆಯಲ್ಲಿ—**ಮುಷ್ಟೀ ಕರೋತಿ ವಾಚಂ ಯಚ್ಛತಿ ಯಜ್ಞಸ್ಯ ಧೃತ್ಯೈ** (ತೈ.ಸಂ.೬-೧-೪-೩) ಎಂದು ಈ ವಿಷಯವನ್ನೇ ಪ್ರತಿಪಾದಿಸಲಾಗಿದೆ.

**ತದಾಹುರ್ನ ಪೂರ್ವದೀಕ್ಷಿಣಃ ಸಂಸವೋಽಸ್ತಿ ಪರಿಗೃಹೀತೋ ವಾ ಏತಸ್ಯ ಯಜ್ಞಃ ಪರಿಗೃಹೀತಾ ದೇವತಾ ನೈತಸ್ಯಾರ್ತಿರಸ್ತ್ಯಪರ-ದೀಕ್ಷಿಣ ಏವ ಯಥಾ ತಥೇತಿ ।**

ಪ್ರಕಾರಾಂತರೇಣ ಮುಷ್ಟಿದ್ವಯಂ ಪ್ರಶಂಸತಿ । ತತ್ತತ್ರ ಮುಷ್ಟ್ಯೋಃ ಕರಣೇ ಬ್ರಹ್ಮ-ವಾದಿನಃ ಕಂಚಿದ್ಗುಣಮಾಹುಃ । ದ್ವಯೋರ್ಬಹೂನಾಂ ವಾ ಯಜಮಾನಾನಾಂ ಸಂಭೂಯ ಸೋಮಾಭಿಷವಃ ಸಂಸವಃ । ಸ ಚ ಮಹಾನ್ದೋಷಸ್ತಸ್ಮಿನ್ನೇವ ದೇಶೇ ತಸ್ಮಿನ್ನೇವ ಕಾಲೇ ಮತ್ಸರಗ್ರಸ್ತೈರ್ಯಜಮಾನೈಃ ಪ್ರವರ್ತಿತತ್ವಾತ್ । ನದ್ಯಾ ವಾ ಪರ್ವತೇನ ವಾ ವ್ಯವಧಾನ-ರಹಿತಯೋಃ ಸಮೀಪವರ್ತಿನೋಃ ಪರಸ್ಪರಮಂತ್ರಧ್ವನಿಸವನಯೋಗ್ಯಯೋರ್ದೇಶಯೋಃ ಸ್ಪರ್ಧಮಾನಾಭ್ಯಾಂ ಯಜಮಾನಾಭ್ಯಾಂ ಪ್ರವರ್ತಿತೌ ಯೌ ಸೋಮಯಾಗೌ ತಯೋರಯಂ ಸಂಸವಾಖ್ಯೋ ದೋಷಃ । ತಥಾ ಚ ಸೂತ್ರಕಾರ ಆಹ—ಸಂಸವೋಽನಂತರ್ಹಿತೇಷು ನದ್ಯಾ ವಾ ಪರ್ವತೇನ ವಾ ಇತಿ । ಸೋಽಯಂ ದೋಷಃ ಪೂರ್ವದೀಕ್ಷಿಣೋ ನಾಸ್ತಿ । ಏಕಸ್ಮಿನ್ನೇವ ದಿವಸೇ ದ್ವಯೋರ್ಯಜಮಾನಯೋರ್ಮಧ್ಯೇ ಯಃ ಪೂರ್ವಂ ದೀಕ್ಷಣೀಯೇಷ್ಟಿಂ ಕರೋತಿ

ಸ ಪೂರ್ವದೀಕ್ಷೀ। ಏತಸ್ಯ ಮುಷ್ಟ್ಯೋರ್ಮಧ್ಯೇ ಯಜ್ಞಃ ಪರಿಗೃಹೀತಃ ಸರ್ವಾಶ್ಚ ದೇವತಾಃ ಪರಿಗೃಹೀತಾಃ । ತದಾನೀಮಿತರಸಂಬಂಧಿನೋ ಯಜ್ಞಸ್ಯಾಪ್ರವೃತ್ತತ್ವೇನ ತತ್ರ ಗಚ್ಛಾಮ ಇತ್ಯೇವಂ ಯಜ್ಞಸ್ಯ ದೇವತಾನಾಂ ಚಾಲೋಚನಾಭಾವಾತ್ । ಪಶ್ಚಾದ್ದೀಕ್ಷಣೀಯೇಷ್ಟಿಂ ಕುರ್ವಾಣಸ್ಯಾಪರದೀಕ್ಷಿತಸ್ಯ ಯಜ್ಞೋ ದೇವತಾಶ್ಚ ಸುಲಭಾ ನ ಭವಂತಿ ಪೂರ್ವಮನ್ಯೇನ ಯಜಮಾನೇನಾವರುದ್ಧತ್ವಾತ್ । ತಸ್ಮಾದಪರದೀಕ್ಷಿಣ ಆರ್ತಿಯೋ ವಿನಾಶೋ ಯಥಾಸ್ತಿ ತಥಾ ಪೂರ್ವದೀಕ್ಷಿಣ ಆರ್ತಿರ್ನೈವಾಸ್ತಿ । ಸಂವೇಶಾಯತ್ವೋಪವೇಶಾಯ ತ್ವಾ ಇತ್ಯಾದಿ ಮಂತ್ರೇಣ ಯೇಯಂ ಸಂಸವಪ್ರಾಯಶ್ಚಿತ್ತಾಹುತಿಃ ಸೇಯಮಪರದೀಕ್ಷಿಣೈವ ಕರ್ತವ್ಯಾ ನ ಪೂರ್ವದೀಕ್ಷಿಣೇತ್ಯರ್ಥಃ। ಇತಿಶಬ್ದೋ ಬ್ರಹ್ಮವಾದಿವಚನಸಮಾಪ್ತ್ಯರ್ಥಃ।

ಮುಷ್ಟೀಕರಣವನ್ನು ಬೇರೆವಿಧವಾಗಿ ವರ್ಣಿಸುವರು—ಈ ವಿಷಯದಲ್ಲಿ ಬ್ರಹ್ಮವಾದಿಗಳು ಒಂದು ವಿಶೇಷಸಂಗತಿ ಇದೆಯೆಂದು ಹೇಳುವರು. ಇಬ್ಬರು ಅಥವಾ ಅನೇಕ ಯಜಮಾನರು ಒಂದೇಪ್ರದೇಶದಲ್ಲಿ (ಒಂದೇ ಊರಿನಲ್ಲಿ) ಒಂದೇಕಾಲದಲ್ಲಿ ಸೋಮ ಯಾಗವನ್ನು ಪ್ರಾರಂಭಿಸಿ ಸೋಮಭಿಷವವನ್ನು (ಲತೆಗಳಿಂದ ಸೋಮರಸವನ್ನು ಹಿಂಡಿ ತೆಗೆಯುವ ಸವನ ಮುಂತಾದ ಕರ್ಮ ಗಳನ್ನು) ಏಕಕಾಲದಲ್ಲಿ ಮಾಡುವುದಕ್ಕೆ **ಸಂಸವ**ವೆಂದು ಹೆಸರು. ಆ ಯಜಮಾನರು ಆರೀತಿ ಪರಸ್ಪರ ಮಾತ್ಸರ್ಯ (ಸ್ಪರ್ಧೆ) ಯುಕ್ತರಾಗಿ ಒಂದೇಪ್ರದೇಶದಲ್ಲಿ ಏಕಕಾಲದಲ್ಲಿ ಸಂಸವದಲ್ಲಿ ಪ್ರವೃತ್ತರಾಗುವುದು ಬಹಳ ದೋಷಯುಕ್ತವಾದದ್ದು. ಏಕೆಂದರೆ ಎರಡು ಸೋಮಯಾಗಗಳ ನಡುವೆ ಪ್ರದೇಶದಲ್ಲಿ ಒಂದು ನದಿಯಾಗಲಿ ಪರ್ವತವಾಗಲಿ ಇಲ್ಲದೆ ಎರಡು ಯಜ್ಞಭೂಮಿಗಳೂ ಕೇವಲ ಸಮೀಪದಲ್ಲಿಯೇ ಇದ್ದರೆ ಮಂತ್ರಗಳನ್ನು ಪಠಿಸುವಾಗ ಗಲಿಬಿಲಿಯಾಗಿ ಗಲಾಟೆಯಾಗುವುದೂ, ಅದರಿಂದ ಯಜ್ಞಾಂಗ ಕರ್ಮಗಳಲ್ಲಿ ವ್ಯತ್ಯಾಸಗಳುಂಟಾಗುವುದೂ ಸಹಜವಾದ್ದರಿಂದ ಈ ಎರಡು ಯಜ್ಞಗಳಿಗೂ ಸಂಸವದೋಷವು ಪ್ರಾಪ್ತವಾಗುವುದು. ಆಶ್ವಲಾಯನರೂ ಸಹ—"**ಸಂಸವೋಽನನ್ತರ್ಹಿತೇಸು ನದ್ಯಾ ವಾ ಪರ್ವತೇನ ವಾ**" (ಆಶ್ವ.ಶ್ರೌ.ಸೂ.೬-೯-೧೧) ಎಂದು ಹೇಳಿರುವರು. ಎಂದರೆ ನದೀಪರ್ವತಾದಿಗಳ ಅಡಚಣೆ ಇಲ್ಲದೆ ಸಮೀಪವರ್ತಿಗಳಾದ ಎರಡು ಯಜ್ಞಗಳಲ್ಲಿ ಸಂಸವ ದೋಷವು ಪ್ರಾಪ್ತವಾಗುವುದು ಎಂದು. ಆದರೆ ಈ ಎರಡು ಯಜ್ಞಗಳಲ್ಲಿ ಯಾವ ಯಜಮಾನನು ಮೊದಲು ದೀಕ್ಷಾ ಸಂಸ್ಕಾರ ಗಳನ್ನು ಪಡೆದು ದೀಕ್ಷಿತನಾಗುವನೋ ಅವನಿಗೆ ಮೇಲೆಹೇಳಿದ ಸಂಸವದೋಷವುಂಟಾಗುವುದಿಲ್ಲ. ಒಂದೇದಿವಸದಲ್ಲಿ ಒಂದೇ ಪ್ರದೇಶದಲ್ಲಿ ಮಾಡಲ್ಪಡುವ ಈ ಎರಡು ಯಜ್ಞಗಳಲ್ಲಿ ಮೊದಲು ದೀಕ್ಷಿತನಾಗುವವನಿಗೆ ಪೂರ್ವದೀಕ್ಷಿತನೆಂದೂ ಅನಂತರ ದೀಕ್ಷಿತ ನಾಗುವವನಿಗೆ ಅಪರದೀಕ್ಷಿತನೆಂದೂ ಹೆಸರು. ಆದ್ದರಿಂದ ಈ ಇಬ್ಬರು ಯಜಮಾನರಲ್ಲಿ ಯಾವ ಯಜಮಾನನು ಮೊದಲು ದೀಕ್ಷಣೀಯೇಷ್ಟಿಯನ್ನು ಮಾಡಿ ಮುಷ್ಟೀಕರಣವನ್ನು ಮಾಡುವನೋ ಅವನ ಮುಷ್ಟಿಯಲ್ಲಿ ಯಜ್ಞವೂ, ಯಜ್ಞದ ದೇವತೆಗಳೂ ಬಲವಾಗಿ ಹಿಡಿಯಲ್ಪಟ್ಟಿರುವರು. ಆದ್ದರಿಂದ ಪೂರ್ವದೀಕ್ಷಿತನ ಮುಷ್ಟಿಯಲ್ಲಿ ಬದ್ಧರಾಗಿರುವ ದೇವತೆಗಳು ಸುಲಭವಾಗಿ ಅಲ್ಲಿಂದ ತಪ್ಪಿಸಿಕೊಂಡು ಬೇರೆ ಯಜಮಾನನ ಯಜ್ಞಕ್ಕೆ ಹೋಗಲು ಅಸಮರ್ಥರಾಗಿರುವರು. ಆದ್ದರಿಂದ ಅಪರದೀಕ್ಷಿತನ ಯಜ್ಞವು ತೊಂದರೆಗೆ ಒಳಗಾಗಿ ನಾಶವನ್ನೈದುವುದು. ಪೂರ್ವದೀಕ್ಷಿತನ ಯಜ್ಞಕ್ಕೆ ಆ ಭಯವಿಲ್ಲ. ಅವನ ಯಜ್ಞವು ನಿರ್ವಿಘ್ನವಾಗಿ ನೆರವೇರುವುದು. ಇಂತಹ ಸಂದರ್ಭದಲ್ಲಿ ಅಪರದೀಕ್ಷಿತನು ಸಂಸವ ದೋಷಪ್ರಾಯಶ್ಚಿತ್ತಾರ್ಥವಾಗಿ **ಸಂವೇಶಯ ತ್ವೋಪ ವೇಶಾಯ ತ್ವಾ** (ತೈ.ಸಂ.೩-೧-೭-೧) ಎಂಬ ಐದು ಮಂತ್ರಗಳಿಂದ ಆಜ್ಯಾಹುತಿಗಳನ್ನು ಅರ್ಪಿಸಬೇಕು. ಆ ಐದು ಮಂತ್ರಗಳು ಯಾವವೆಂದರೆ—(೧) ಸಂವೇಶಯ ತ್ವೋಪವೇಶಾಯ ತ್ವಾ ಗಾಯತ್ರಿಯಾ ಅಭಿಭೂತ್ಯೈ ಸ್ವಾಹಾ (೨) ಸಂವೇಶಾಯ ತ್ವೋಪವೇಶಾಯ ತ್ವಾ ತ್ರಿಷ್ಟುಭೋಽಭಿಭೂತ್ಯೈ ಸ್ವಾಹಾ (೩) ಸಂವೇಶಯ ತ್ವೋಪವೇಶಾಯ ತ್ವಾ ಜಗತ್ಯಾ ಅಭಿಭೂತ್ಯೈ ಸ್ವಾಹಾ (೪) ಪ್ರಾಣಾಪಾನೌ ಮೃತ್ಯೋರ್ಮಾ ಪಾತಗ್ಂ ಸ್ವಾಹಾ (೫) ಪ್ರಾಣಾಪಾನೌ ಮಾ ಮಾ ಹಾಸಿಷ್ಟಗ್ಂ ಸ್ವಾಹಾ, ಎಂಬಿವೇ ಐದು ಪ್ರಾಯಶ್ಚಿತ್ತಾಹುತಿ ಮಂತ್ರಗಳು.

ಉನ್ಮುಚ್ಯ ಕೃಷ್ಣಾಜಿನಮವಭೃಥಮಭ್ಯವೈತಿ ತಸ್ಮಾನ್ಮುಕ್ತಾ ಗರ್ಭಾ ಜರಾಯೋರ್ಜಾಯಂತೇ ॥

ಯದೇತತ್ಕೃಷ್ಣಾಜಿನವೇಷ್ಟನಂ ವಿಹಿತಂ ತಸ್ಯಾವಭೃಥಗಮನಾತ್ಪ್ರಾಗೇವೋನ್ಮೋಚನಂ ವಿಧತ್ತೇ । ಯೋನಿಸ್ಥಾನೀಯಾದ್ದೇವಯಜನದೇಶಾನ್ನಿರ್ಗತ್ಯಾವಭೃಥಗಮನಂ ಗರ್ಭರೂಪಸ್ಯ ದೀಕ್ಷಿತಸ್ಯ ಜನ್ಮಸ್ಥಾನೀಯಂ ಜನ್ಮ ಚ ಲೋಕೇ ಜರಾಯುರೂಪವೇಷ್ಟನೇ ಭಿನ್ನೇ ಸತಿ ಪಶ್ಚಾತ್ಸಂಪದ್ಯತೇ । ತಸ್ಮಾದತ್ರಾಪಿ ಜರಾಯುಸ್ಥಾನೀಯಂ ಕೃಷ್ಣಾಜಿನಮುನ್ಮುಚ್ಯ ಜನ್ಮಸ್ಥಾನೀಯಮವಭೃಥದೇಶಗಮನಂ ಕುರ್ಯಾತ್ ।

ದೀಕ್ಷಾಕಾಲದಲ್ಲಿ ಕೃಷ್ಣಾಜಿನವೇಷ್ಟನವನ್ನು ವಿಧಿಸಿದೆಯಷ್ಟೆ. ಆದರೆ ಕೃಷ್ಣಾಜಿನವನ್ನು ಯಜ್ಞಸಮಾಪ್ತಿಯಾಗಿ ಅವಭೃಥಸ್ನಾನದವರೆಗೂ ಧರಿಸಬೇಕಾಗಿಲ್ಲ. ಅದಕ್ಕೆ ಮುಂಚೆಯೇ ಅದನ್ನು ವಿಸರ್ಜಿಸಬೇಕೆಂದು ಹೇಳುವರು. ಏಕೆಂದರೆ ಹಿಂದೆ ಹೇಳಿದಂತೆ ಪ್ರಾಚೀನವಂಶವೆಂಬ ಯಜ್ಞಗೃಹವು ದೀಕ್ಷಿತನ ಗರ್ಭಸ್ಥಾನೀಯವೆಂದು ಹಿಂದೆಯೇ ಹೇಳಿದೆ. ಶಿಶುವು ಗರ್ಭದಿಂದ ಹುಟ್ಟುವಾಗ ಗರ್ಭದ ಚರ್ಮವನ್ನು (ಜರಾಯುವನ್ನು) ಮಾತೃವಿನ ಉದರದಲ್ಲಿಯೇ ಬಿಟ್ಟು ಉಲ್ಬಮಾತ್ರಸಹಿತವಾಗಿ ಜನಿಸುವುದರಿಂದ ಆದರಂತೆಯೇ ಇಲ್ಲಿ ಯಜಮಾನನು ತನ್ನ ಗರ್ಭಸ್ಥಾನೀಯವಾದ ಪ್ರಾಚೀನವಂಶಪ್ರದೇಶದಿಂದ (ಅರ್ಥಾತ್ ಗರ್ಭದಿಂದ) ಹೊರಗೆ ಬರುವಾಗ ಜರಾಯುಸ್ಥಾನೀಯವಾದ (ಗರ್ಭಾಶಯದ ಚರ್ಮ) ಕೃಷ್ಣಾಜಿನವನ್ನು ಅಲ್ಲಿಯೇ ಬಿಟ್ಟು ಅವಭೃಥಾದಿಗಳಿಗೆ ಹೊರಕ್ಕೆ ಬರಬೇಕು ಎಂಬಭಿಪ್ರಾಯವು ಇಲ್ಲಿ ಸೂಚಿತವಾಗಿದೆ.

ಸಹೈವ ವಾಸಸಾಭ್ಯವೈತಿ ತಸ್ಮಾತ್ಸಹೈವೋಲ್ಬೇನ ಕುಮಾರೋ ಜಾಯತೇ ।

ಕೃಷ್ಣಾಜಿನವದ್ವಾಸಸೋಽಪಿ ಪ್ರಸಕ್ತಮುನ್ಮೋಚನಂ ವಾರಯತಿ । ಉಲ್ಬಾಖ್ಯಸ್ಯಾಭ್ಯಂತರವೇಷ್ಟನಸ್ಯ ಜನ್ಮಕಾಲೇಽಪ್ಯನಿವೃತ್ತಿದರ್ಶನಾದುಲ್ಬಸ್ಥಾನೀಯವಸ್ತ್ರಸ್ಯಾವಭೃಥಗಮನಕಾಲೇಽಪ್ಯನುವೃತ್ತಿರ್ದ್ರಷ್ಟವ್ಯಾ ॥ ಅಥ ಮೀಮಾಂಸಾ ॥ ಪಂಚಮಾಧ್ಯಾಯಸ್ಯ ತೃತೀಯಪಾದೇ ಚಿಂತಿತಂ—

ಇಷ್ಟಿದಂಡಾದಿಭಿರ್ದೀಕ್ಷಾ ಕಿಂವೇಷ್ಟ್ಯೈವೋಕ್ತಿತೋಽಗ್ರಿಮಃ ।
ಯುಕ್ತಃ ಸಂಸ್ಕಾರ ಇಷ್ಟ್ಯೈವ ದಂಡಾದಿವ್ಯಂಜಕತ್ವತಃ ॥

ಜ್ಯೋತಿಷ್ಟೋಮೇ ಶ್ರೂಯತೇ—ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪೇದ್ದೀಕ್ಷಿಷ್ಯಮಾಣಃ ಇತಿ । ಅನ್ಯದಪಿ ಶ್ರುತಂ--ದಂಡೇನ ದೀಕ್ಷಯತಿ ಕೃಷ್ಣಾಜಿನೇನ ದೀಕ್ಷಯತಿ ಇತಿ । ಅತ್ರೇಷ್ಟಿವದ್ದಂಡಾದೀನಾಮಪಿ ಸಾಧನತ್ವವಿಧಾನಾತ್ಸರ್ವೈರಿಯಂ ದೀಕ್ಷೇತಿ ಚೇನ್ನೈವಂ । ಇಷ್ಟೇಃ ಕ್ರಿಯಾರೂಪತ್ವಾತ್ಸಂಸ್ಕಾರಹೇತುತ್ವಂ ಯುಕ್ತಂ ದಂಡಾದಯಸ್ತು ದ್ರವ್ಯರೂಪಾ ನ ಪುರುಷಂ ಸಂಸ್ಕರ್ತುಂ ಪ್ರಭವಂತಿ । ನ ಚೈವಂ ದಂಡಾದಿವೈಯರ್ಥ್ಯಂ ದೀಕ್ಷಿತೋಽಯಮಿತ್ಯಭಿವ್ಯಕ್ತಿರೂಪಸ್ಯ ದೃಷ್ಟಪ್ರಯೋಜನಸ್ಯ ಸದ್ಭಾವಾತ್ತಸ್ಮಾದಿಷ್ಟ್ಯೈವ ದೀಕ್ಷಾ ಸಿಧ್ಯತಿ ॥

ಆದರೆ ದೀಕ್ಷಾಕಾಲದಲ್ಲಿ ಮಾಡಿದ ವಸ್ತ್ರಾಚ್ಛಾದನವು ಮಾತ್ರ ಹಾಗೆಯೇ ಇರಬೇಕು. ಕೃಷ್ಣಾಜಿನದಂತೆ ಅದನ್ನು ವಿಸರ್ಜಿಸಬಾರದು. ಏಕೆಂದರೆ ಮಾತೃವಿನ ಗರ್ಭಕೋಶದಿಂದ ಶಿಶುವು ಹೊರಗೆ ಬಂದಾಗ ಅದಕ್ಕೆ ಜರಾಯುವಿನ(ಗರ್ಭಕೋಶದ ಚರ್ಮ-(ಇಲ್ಲಿ ಅದಕ್ಕೆ ಬದಲಾಗಿ ಕೃಷ್ಣಾಜಿನ) ಸಂಪರ್ಕವು ಶಿಶುವಿಗೆ ಇರುವುದಿಲ್ಲ. ಆದರೆ ಉಲ್ಬ (ಒಳಪದರ-caul) ಮಾತ್ರ ಶಿಶುವನ್ನು ಆವರಿಸಿರುವುದು. ಅದರಂತೆ ಉಲ್ಬಸ್ಥಾನೀಯವಾದ ವಸ್ತ್ರವನ್ನು ಯಜ್ಞಗೃಹದಿಂದ ಹೊರಕ್ಕೆ ಹೋಗುವಾಗಲೂ ವಿಸರ್ಜಿಸಬೇಕಾಗಿಲ್ಲ. ಮೀಮಾಂಸಸೂತ್ರದ ಅನುವಾದವು—

ಇಲ್ಲಿ ಯಜಮಾನನ ದೀಕ್ಷೆಯು ಇಷ್ಟಿಸಂಸ್ಕಾರದಿಂದ ಸಿದ್ಧಿಸುವುದು ಎಂಬ ಮೀಮಾಂಸಾಧಿಕರಣದಲ್ಲಿ (ಜೈ.ಸೂ. ೫-೩-೨೯,೩೧) **ಪರೇಣಾವೇದನಾತ್** ಇತ್ಯಾದಿ ಸೂತ್ರಗಳನ್ನನುಸರಿಸಿ ವಿರಚಿತವಾದ ನ್ಯಾಯಮಾಲಾವಿಸ್ತರವೆಂಬ ಗ್ರಂಥದಲ್ಲಿ ಈರೀತಿ ಹೇಳಿದೆ—

**ಇಷ್ಟಿದಂಡಾದಿಭಿರ್ದೀಕ್ಷಾ ಕಿಂ ವೇಷ್ಟ್ಯೈವೋಕ್ತಿತೋಽಗ್ರಿಮಃ ।**
**ಯುಕ್ತಃ ಸಂಸ್ಕಾರ ಇಷ್ಟ್ಯೈವ ದಂಡಾದೇರ್ವ್ಯಂಜಕತ್ವತಃ ॥**

(ನ್ಯಾ. ಮಾ. ಜೈ. ಸೂ. ೫-೩. ಅಧಿ. ೧೧)

ಎಂದರೆ, ಜ್ಯೋತಿಷ್ಟೋಮಯಾಗವಿವರಣೆಯಲ್ಲಿ—**ಆಗ್ನಾವೈಷ್ಣವಮೇಕಾದಶಕಪಾಲಂ ನಿರ್ವಪತಿ ದೀಕ್ಷಿಷ್ಯಮಾಣಃ** (ತೈ.ಸಂ.೫-೯-೧-೪) ಸೋಮಯಾಗದ ದೀಕ್ಷೆಯನ್ನು ವಹಿಸುವವನು ದೀಕ್ಷಾಕಾಲದಲ್ಲಿ ಅಗ್ನಿ ವಿಷ್ಣು ಎಂಬ ದೇವತೆಗಳನ್ನುದ್ದೇಶಿಸಿ ಆಗ್ನಾವೈಷ್ಣವವೆಂಬ ಹನ್ನೊಂದು ಕಪಾಲಗಳಮೇಲೆ ಪಕ್ವವಾದ ಪುರೋಡಾಶವೆಂಬ ಹವಿರ್ದ್ರವ್ಯವನ್ನು ಅಗ್ನಿಯಲ್ಲಿ ಅರ್ಪಿಸಬೇಕು, ಎಂದರೆ ದೀಕ್ಷಣೀಯೇಷ್ಟಿಯನ್ನು ಮಾಡಬೇಕು ಎಂದಿದೆ. ಮತ್ತೊಂದುಕಡೆಯಲ್ಲಿ—ದಂಡೇನ ದೀಕ್ಷಯತಿ, ಕೃಷ್ಣಾಜಿನೇನ ದೀಕ್ಷಯತಿ (ತೈ.ಸಂ. ೬-೧-೩-೨) ಯಜ್ಞದಲ್ಲಿ ದೀಕ್ಷೆಯನ್ನು ಪಡೆಯುವವನು ದಂಡ, ಕೃಷ್ಣಾಜಿನ ಇವುಗಳನ್ನು ಧರಿಸಿ ದೀಕ್ಷಿತನಾಗುವನು ಎಂದಿದೆ. ಇಷ್ಟ್ಯಾದಿಸಂಸ್ಕಾರಗಳಿಂದ ದೀಕ್ಷಿತನಾಗುವಂತೆಯೇ ದಂಡ ಕೃಷ್ಣಾಜಿನಗಳನ್ನು ಧರಿಸಿ ಏಕೆ ದೀಕ್ಷಿತನಾಗಬಾರದು ? ಎಂದರೆ ಹಾಗಲ್ಲ ಇಷ್ಟಿಗಳು ಕ್ರಿಯಾ ಎಂದರೆ ಸಂಸ್ಕಾರರೂಪವಾದವು. ಸಂಸ್ಕಾರಗಳಿಂದ ಶುದ್ಧನಾಗಿ ದೀಕ್ಷಿತನಾಗಲು ಅರ್ಹನಾಗುವನು. ದಂಡ ಕೃಷ್ಣಾಜಿನಗಳು ದ್ರವ್ಯರೂಪವಾದವು ಎಂದರೆ ಬಾಹ್ಯಚಿಹ್ನೆಗಳು ಮಾತ್ರ. ಅವುಗಳು ಪುರುಷನನ್ನು ಸಂಸ್ಕರಿಸಲಾರವು ಎಂದರೆ ಶುದ್ಧನನ್ನಾಗಿ ಮಾಡಲಾರವು. ಆದರೂ ದಂಡ ಕೃಷ್ಣಾಜಿನಗಳು ವ್ಯರ್ಥವೆಂದು ತಿಳಿಯಬಾರದು. ಈ ಚಿಹ್ನೆಗಳಿಂದ ಈ ಪುರುಷನು ಯಜ್ಞದಲ್ಲಿ ದೀಕ್ಷೆಯನ್ನು ವಹಿಸಿರುವವನು ಎಂದು ಇತರರು ತಿಳಿದುಕೊಳ್ಳಲು ಸಾಧನವಾಗಿರುವದು. ಆದ್ದರಿಂದ ಮುಖ್ಯವಾಗಿ ಇಷ್ಟಿಸಂಸ್ಕಾರದಿಂದಲೇ ದೀಕ್ಷೆಯು ಸಿದ್ಧಿಸುವುದು.

## *English Translation*

The priests make him whom they initiate (by means of the Diksha ceremony) to be an embryo again (i.e. they produce him anew altogether). They sprinkle him with water; for water is seed. By having thus provided him with seed (for his new birth), they initiate him. They besmear him with fresh butter ನವನೀತ. The butter for the gods is called ajya, that for men surabhi ghritam, that for the manes, ayuta, and that for the embryos ನವನೀತ. Therefore by anointing him with fresh butter, they make him thrive through his own portion.

They besmear his eyes with collyrium. For this anointment is lustre for both eyes. By having imparted lustre to him, they make him a ದೀಕ್ಷಿತ.

They rub him clean with twenty-one bandfuls of Darbha grass. By having thus made him pure and clean they make him a Dikshita.

They make him enter the place destined for the Dikshita. For this is the womb of the Dikshita. When they make him enter the place destined for the Dikshita, then they make him thus enter his own womb. In this (place) he sits as in a secure abode, and thence he departs. Therefore the embryos are placed in the womb as a secure place and thence they are brought forth(as fruit). Therefore the sun should neither rise nor set over him finding him in any other place than the spot assigned to the Dikshita; nor should they speak to him (if he should be compelled to leave his place).

They cover him with a cloth. For this cloth is the caul ಉಲ್ಬ of the Dikshita (with which he is to be born, like a child); thus they cover him with the caul. Outside (this cloth) there is (put by them) the skin of a black antelope. For outside the caul, there is the placenta ಜರಾಯು. Thus they cover him (symbolically by the skin of the antelope) with the placenta. He closes his hands. For with closed hands the embryo lies within (the womb); with closed hands the child is born. As he closes his hands, he thus holds the sacrifice, and all its deities in his two hands closed.

They allege as a reason (why the Dikshita should close together both his hands) that he who takes (among two who are sacrificing on the same place and at the same time) his Diksha (initiation) first, is not guilty (of the sin) of "confusion of libations" (samsava). For his sacrifice and the deities are held fast (in his hands); and (consequently) he does not suffer any loss like that which falls on him who performed his Diksha later.

After having put off the skin of the black antelope he descends to bathe.

Thence embryos are born after they are separated from the placenta. He descends to bathe with the cloth (which was put on him) on. Thence a child is born together with the caul.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೊದಲನೆಯ ಅಧ್ಯಾಯದ ಮೂರನೇ ಖಂಡವು ಸಮಾಪ್ತವಾದುದು.



## ಅಥ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

### ಮೊದಲನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಹೋತೃವು ಪಠಿಸಬೇಕಾದ ಯಾಜ್ಯಾ ಮೊದಲಾದ ಮಂತ್ರಗಳು—ರೂಪಸಮೃದ್ಧಿ ಇತ್ಯಾದಿ ]



**ತ್ವಮಗ್ನೇ ಸಪ್ರಥಾ ಅಸಿ ಸೋಮ ಯಾಸ್ತೇ ಮಯೋಭುವ ಇತ್ಯಾಜ್ಯ-ಭಾಗಯೋಃ ಪುರೋನುವಾಕ್ಯೇ ಅನುಬ್ರೂಯಾದ್ಯಃ ಪೂರ್ವ-ಮನೀಜಾನಃ ಸ್ಯಾತ್ತಸ್ಮೈ ॥**

ವಿವಕ್ಷಿತಸ್ಯ ಹೌತ್ರಸ್ಯೋಪೋದ್ಘಾತತ್ವೇನ ದೀಕ್ಷಣೀಯೇಷ್ಟಿಂ ವಿಧಾಯ ತಾಂ ಚ ಬಹುಧಾ ಪ್ರಶಸ್ಯ ಪ್ರಸಂಗಾದ್ದೀಕ್ಷಿತಸಂಸ್ಕಾರಾ ವಿಹಿತಾಃ । ಅಥ ವಿವಕ್ಷಿತಂ ಹೌತ್ರಂ ವಿಧತ್ತೇ । ಯೋ ಯಜಮಾನ ಇತಃ ಪೂರ್ವಂ ಸೋಮಯಾಗಂ ನ ಕೃತವಾನಿದಾನೀಂ ಕ್ರಿಯಮಾಣ ಏವ ಪ್ರಥಮಃ ಪ್ರಯೋಗಸ್ತಸ್ಮೈ ಯಜಮಾನಾಯ ತದರ್ಥಂ ದೀಕ್ಷಣೀಯೇಷ್ಟೌ ಪ್ರಥಮಸ್ಯಾಜ್ಯ-ಭಾಗಸ್ಯ ತ್ವಮಗ್ನ ಇತಿ ಪುರೋನುವಾಕ್ಯಾ । ದ್ವಿತೀಯಸ್ಯ ಸೋಮ ಯಾಸ್ತ ಇತಿ ಪುರೋನು-ವಾಕ್ಯಾ । ತದುಭಯಮಧ್ವರ್ಯುಣಾ ಪ್ರೇಷಿತೋ ಹೋತಾನುಬ್ರೂಯಾತ್ ।

ಇದುವರೆಗೂ ದೀಕ್ಷಣೀಯೇಷ್ಟಿವಿಧಿಯನ್ನೂ ಅದರಲ್ಲಿ ದೀಕ್ಷೆಯನ್ನು ವಹಿಸುವ ಯಜಮಾನನು ಅನುಸರಿಸಬೇಕಾದ ಸಂಸ್ಕಾರಗಳನ್ನೂ ವಿವರಿಸಿದ್ದಾಯಿತು. ಇವೆಲ್ಲವೂ ಹೋತೃವು ಯಜ್ಞದಲ್ಲಿ ನಿರ್ವಹಿಸಬೇಕಾದ ಕರ್ತವ್ಯವು. ಹೋತೃವಿನ ಕರ್ತವ್ಯವಾದ ಮಂತ್ರಪಠನ ಇತ್ಯಾದಿ ವಿವರಗಳನ್ನು ಈಗ ನಿರೂಪಿಸಲಾಗುವುದು. ಇದುವರೆಗೂ ಸೋಮಯಾಗವನ್ನು ಮಾಡದೇ ಇರುವ ಯಜಮಾನನು ಎಂದರೆ ಇದೇ ಪ್ರಥಮವಾಗಿ ಎಂದರೆ ಹೊಸದಾಗಿ ಮೊಟ್ಟಮೊದಲು ಸೋಮಯಾಗವನ್ನು ಪ್ರಾರಂಭ ಮಾಡುವ ಯಜಮಾನನು ದೀಕ್ಷಣೀಯೇಷ್ಟಿಯಲ್ಲಿ ಮೊದಲನೆಯ ಆಜ್ಯಭಾಗದ [ ಯಜ್ಞದಲ್ಲಿ ಅಗ್ನಿಪ್ರತಿಷ್ಠಾಪನೆ, ಅಗ್ನಿಸಂಸ್ಕಾರಾದಿಗಳನ್ನು ಮಾಡಿದ ಬಳಿಕ ಪ್ರಧಾನಾಹುತಿಗಳನ್ನು ಹೋಮಮಾಡುವುದಕ್ಕೆ ಮೊದಲು ಆಜ್ಯಭಾಗಗಳೆಂಬ ಎರಡು ಮಂತ್ರಗಳನ್ನು ಅಗ್ನಿ ಮತ್ತು ಸೋಮ ಎಂಬ ದೇವತೆಗಳನ್ನುದ್ದೇಶಿಸಿ ಹೋಮಮಾಡುವರು. ಈ ಎರಡು ಆಜ್ಯಭಾಗ ಹೋಮಗಳೂ ಯಜ್ಞಕ್ಕೆ ಎರಡು ಕಣ್ಣುಗಳಂತಿರುವವು ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿದೆ—

**ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ .... .... ಉತ್ತರಾರ್ಧೇಽಗ್ನಯೇ ಜುಹೋತಿ ದಕ್ಷಿಣಾರ್ಧೇ ಸೋಮಾಯ .... .... ರಾಜಾನೌ ವಾ ಏತೌ ದೇವತಾನಾಂ ಯದಗ್ನೀ-ಷೋಮಾವಂತರಾ ದೇವತಾ ಇಜ್ಯೇತೇ ದೇವತಾನಾಂ ವಿಧೃತ್ಯೈ .... ।**

(ತೈ.ಸಂ. ೨-೬-೨-೧,೨)

ಎಂದರೆ ಆಜ್ಯಭಾಗಗಳೆಂಬ ಈ ಎರಡು ಆಹುತಿಗಳು ಯಜ್ಞದ ಕಣ್ಣುಗಳು. ಈ ಎರಡರಲ್ಲಿ ಅಗ್ನಿಯನ್ನುದ್ದೇಶಿಸಿ ಒಂದು ಹೋಮವನ್ನು ಅಗ್ನಿಕುಂಡದಲ್ಲಿ ಉತ್ತರಾರ್ಧಭಾಗದಲ್ಲಿಯೂ ಸೋಮದೇವತೆಯನ್ನುದ್ದೇಶಿಸಿ ಮತ್ತೊಂದು ಆಹುತಿಯನ್ನು ಅಗ್ನಿಯ ದಕ್ಷಿಣಾರ್ಧಭಾಗದಲ್ಲಿಯೂ ಹೋಮಮಾಡಬೇಕು. ಈ ಅಗ್ನಿ ಮತ್ತು ಸೋಮದೇವತೆಗಳು ದೇವತೆಗಳಿಗೆ ರಾಜರಾಗಿರುವರು. ಆದ್ದರಿಂದ ಈ ಅಗ್ನಿ ಮತ್ತು ಸೋಮದೇವತೆಗಳಿಗೆ ಆಹುತಿಯನ್ನರ್ಪಿಸಿದ ಅಗ್ನಿಯ ಮಧ್ಯಪ್ರದೇಶದಲ್ಲಿ ದೇವತೆಗಳನ್ನುದ್ದೇಶಿಸಿ ಪ್ರಧಾನಾಹುತಿಗಳನ್ನು ಅರ್ಪಿಸಬೇಕು.] ಮಂತ್ರಕ್ಕಾಗಿ **ತ್ವಮಗ್ನೇ ಸಪ್ರಥಾ ಅಸಿ** (ಋ.ಸಂ. ೫-೧೩-೪) ಎಂಬ ಮಂತ್ರವನ್ನು ಪುರೋನುವಾಕ್ಯಾ ಮಂತ್ರವನ್ನಾಗಿಯೂ ಎರಡನೆಯ ಆಜ್ಯಭಾಗಕ್ಕಾಗಿ **ಸೋಮ ಯಾಸ್ತೇ ಮಯೋಭುವಃ** (ಋ. ಸಂ. ೧-೯೧-೯) ಎಂಬ ಮಂತ್ರವನ್ನು ಪುರೋನುವಾಕ್ಯಾ ಮಂತ್ರವನ್ನಾಗಿಯೂ [ಅನುವಾಕ್ಯಾ ಮತ್ತು ಯಾಜ್ಯಾ ಎಂಬ ಮಂತ್ರಗಳ ವಿಷಯವನ್ನು ಹಿಂದೆ ತಿಳಿಸಿದೆ. ಪುರೋನುವಾಕ್ಯಾ ಎಂದರೆ ಅನುವಾಕ್ಯಾ ಎಂಬ ಮಂತ್ರಕ್ಕೆ ಪೂರ್ವಭಾವಿಯಾಗಿ (ಪೀಠಿಕಾರೂಪವಾಗಿ) ಹೇಳಬೇಕಾದ ಮಂತ್ರವು. ಪ್ರಸಕ್ತ ಸಂದರ್ಭದಲ್ಲಿ ಈ ಎರಡು ಮಂತ್ರಗಳನ್ನು ಪೂರ್ತಿಯಾಗಿ ಇಲ್ಲಿ ಕೊಟ್ಟಿದೆ—

> **ತ್ವಮಗ್ನೇ ಸಪ್ರಥಾ ಅಸಿ ಜುಷ್ಟೋ ಹೋತಾ ವರೇಣ್ಯಃ ।**
> **ತ್ವಯಾ ಯಜ್ಞಂ ವಿ ತನ್ವತೇ ॥** (ಋ.ಸಂ. ೫-೧೩-೪)
> **ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ ದಾಶುಷೇ ।**
> **ತಾಭಿರ್ನೋಽವಿತಾ ಭವ ॥** (ಋ. ಸಂ. ೧-೯೧-೯) ]

ಪಠಿಸಬೇಕು. ಅಧ್ವರ್ಯುವು ಹೋತೃವನ್ನುದ್ದೇಶಿಸಿ ಆಜ್ಯಭಾಗಮಂತ್ರಗಳನ್ನು ಪಠಿಸಬೇಕೆಂದು ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು ಈ ಎರಡು ಮಂತ್ರಗಳನ್ನು ಪಠಿಸುವನು. ಈ ವಿಷಯದಲ್ಲಿ ಆಶ್ವಲಾಯನರು—**ಪ್ರೇಷಿತೋ ಜಪತಿ** (ಆಶ್ವ.ಶ್ರೌ.ಸೂ. ೧-೧-೨೭) ಎಂದು ಹೇಳಿರುವರು.

## ತ್ವಯಾ ಯಜ್ಞಂ ವಿ ತನ್ವತ ಇತಿ ಯಜ್ಞಮೇವಾಸ್ಮಾ ಏತದ್ವಿತನೋತಿ ।

**ಉಕ್ತಸ್ಯ ಪ್ರಥಮಮಂತ್ರಸ್ಯ ಪ್ರಥಮಪ್ರಯೋಗಾನುಕೂಲ್ಯಂ ದರ್ಶಯತಿ । ತಸ್ಮಿನ್ಮಂತ್ರೇ ತ್ವಯೇತ್ಯಾದಿಸ್ತೃತೀಯಃ ಪಾದಸ್ತಸ್ಯಾಯಮರ್ಥಃ । ಹೇ ಅಗ್ನೇ ಕ್ರಿಯಮಾಣಮಸ್ಮದ್ಯಜ್ಞಮಿಮಮೃತ್ವಿಜಸ್ತ್ವಯಾ ತ್ವತ್ಪ್ರಸಾದೇನ ವಿತನ್ವತೇ ವಿಸ್ತಾರಯಂತೀತಿ । ಏತದೇತೇನ ಮಂತ್ರವಚನೇನಾಸ್ಮೈ ಯಜಮಾನಾಯ ಯಜ್ಞಂ ವಿತನೋತ್ಯೇವ ಪೂರ್ವಮವಿಸ್ತಾರಿತಮಪಿ ಯಜ್ಞಮಿದಾನೀಂ ವಿಸ್ತಾರಯಂತ್ಯೇವ ।**

ಮೇಲೆ ಹೇಳಿದ—**ತಮಗ್ನೇ ಸಪ್ರಥಾ ಅಸಿ** ಎಂಬ ಮಂತ್ರದ ಪ್ರಯೋಗವಿಧಾನವನ್ನು ವಿವರಿಸುವರು. ಈ ಋಕ್ಕಿನ ಮೂರನೇ ಪಾದದಲ್ಲಿ **ತ್ವಯಾ ಯಜ್ಞಂ ವಿತನ್ವತೇ** ಎಂದಿರುವುದು. ಇದರ ಅಭಿಪ್ರಾಯವೇನೆಂದರೆ—ಎಲೈ ಅಗ್ನಿಯೇ, ಈಗ ನಾವು ಮಾಡುತ್ತಿರುವ ಈ ಯಜ್ಞವನ್ನು ಋತ್ವಿಕ್ಕುಗಳು ನಿನ್ನ ಅನುಗ್ರಹದಿಂದ ವಿಸ್ತಾರವಾಗುವಂತೆ (ಮುಂದುವರೆಯುವಂತೆ) ಮಾಡುತ್ತಾರೆ ಎಂದು. ಈ ಯಜಮಾನನು ಇದುವರೆಗೂ ಯಜ್ಞಮಾಡಿದವನಲ್ಲದಿದ್ದರೂ ಈಗ ಅಗ್ನಿಯ ಅನುಗ್ರಹದಿಂದ ಯಜ್ಞವನ್ನು ಸಾಂಗವಾಗಿ ನೆರವೇರಿಸುವುದಲ್ಲದೆ ಮುಂದೆ ಇತರ ಯಜ್ಞಗಳನ್ನು ಮಾಡಲು ಸಮರ್ಥನಾಗುವನು. ಮೇಲಿನ ವಾಕ್ಯದಲ್ಲಿ **ವಿತನ್ವತೇ**

ಮತ್ತು ವಿತನೋತಿ ಎಂಬ ಶಬ್ದಗಳ ಪ್ರಯೋಗವಿದೆ. ಈ ಶಬ್ದಗಳು ತನು-ವಿಸ್ತಾರೇ (To extend, to continue) ಎಂಬ ಧಾತುವಿನಿಂದ ನಿಷ್ಪನ್ನವಾಗಿವೆ. ಇದರಿಂದ ಯಜಮಾನನು ಈಗ ಮಾಡುತ್ತಿರುವ ಈ ಸೋಮಯಾಗವನ್ನೇ ಅಲ್ಲದೆ ಮುಂದೆ ಒಂದಾಗುತ್ತಲೊಂದು ಬೇರೆಬೇರೆ ಯಜ್ಞಗಳನ್ನು ಮಾಡಲು ಸಮರ್ಥನಾಗುತ್ತಾನೆ ಎಂದಭಿಪ್ರಾಯವು.

**ಅಗ್ನಿಃ ಪ್ರತ್ನೇನ ಮನ್ಮನಾ ಸೋಮ ಗೀರ್ಭಿಷ್ಟ್ವಾ ವಯಮಿತಿ ಯಃ ಪೂರ್ವಮೀಜಾನಃ ಸ್ಯಾತ್ತಸ್ಮೈ ।**

**ಅಧಿಕಾರಿವಿಶೇಷೇಣ ಪ್ರಕಾರಾಂತರಂ ವಿಧತ್ತೇ ಯೋ ಯಜಮಾನಃ ಪೂರ್ವಂ ಸೋಮಯಾಗಂ ಕೃತವಾಂಸ್ತಸ್ಮೈ ಯಜಮಾನಾರ್ಥಂ ಪುನಃ ಸೋಮಯಾಗಪ್ರಯೋಗೇ ದೀಕ್ಷಣೀಯೇಷ್ಟಾವಗ್ನಿಃ ಪ್ರತ್ನೇನೇತಿ ಪ್ರಥಮಸ್ಯಾಜ್ಯಭಾಗಸ್ಯ ಪುರೋನುವಾಕ್ಯಾ । ಸೋಮ ಗೀರ್ಭಿರಿತಿ ದ್ವಿತೀಯಸ್ಯ ।**

ಈಗ ಯಜ್ಞ ಮಾಡುವ ಯಜಮಾನನು ಹಿಂದೆ ಒಂದಾವರ್ತಿ ಸೋಮಯಾಗವನ್ನು ಮಾಡಿದ್ದರೆ ಅಂತಹ ಯಜಮಾನನು ಈ ದೀಕ್ಷಣೀಯೇಷ್ಟಿಯಲ್ಲಿ ಆಜ್ಯಭಾಗದ ಮೊದಲನೇ ಪುರೋನುವಾಕ್ಯಕ್ಕಾಗಿ **ಅಗ್ನಿಃ ಪ್ರತ್ನೇನ ಮನ್ಮನಾ** (ಋ.ಸಂ. ೮-೪೪-೧೨) ಎಂಬ ಋಕ್ಕನ್ನೂ **ಸೋಮ ಗೀರ್ಭಿಷ್ಟ್ವಾವಯಂ** [ಈ ಮಂತ್ರಗಳು ಈರೀತಿ ಇವೆ—

**ಅಗ್ನಿಃ ಪ್ರತ್ನೇನ ಮನ್ಮನಾ ಶುಂಭಾನಸ್ತನ್ವಂ೧ಸ್ವಾಂ ।**
**ಕವಿರ್ವಿಪ್ರೇಣ ವಾವೃಧೇ ॥** (ಋ. ಸಂ. ೮-೪೪-೧೨)

**ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ ।**
**ಸುಮೃಳೀಕೋ ನ ಆ ವಿಶ ॥** (ಋ. ಸಂ. ೧-೯೧-೧೧) ]

ಎಂಬ ಋಕ್ಕನ್ನು ಎರಡನೇ ಪುರೋನುವಾಕ್ಯಾಮಂತ್ರಕ್ಕಾಗಿಯೂ ಉಪಯೋಗಿಸಬೇಕು. (ಆಶ್ವ.ಶ್ರೌ.ಸೂ. ೧-೫-೩೫ ; (ತೈ.ಬ್ರಾ. ೩-೫-೬-೪,೫.)

**ಪ್ರತ್ನಮಿತಿ ಪೂರ್ವಂ ಕರ್ಮಾಭಿವದತಿ ।**

**ತತ್ರ ಪ್ರಥಮಮಂತ್ರಸ್ಯ ಪುನಃ ಪ್ರಯೋಗಾನುಕೂಲ್ಯಂ ದರ್ಶಯತಿ । ತಸ್ಮಿನ್ಮಂತ್ರೇ ಯತ್ಪ್ರತ್ನಮಿತಿ ಪದಂ ತೇನ ಪದೇನ ಪೂರ್ವಮನುಷ್ಠಿತಂ ಸೋಮಯಾಗಾಖ್ಯಂ ಕರ್ಮಾಭಿಧೀಯತೇ । ಪುರಾಣಪ್ರತನಪ್ರತ್ನಪುರಾತನಚಿರಂತನಾಃ ಇತಿ ಪ್ರತ್ನಶಬ್ದಸ್ಯಾಭಿಧಾನಕಾರೈಃ ಪುರಾತನಪರ್ಯಾಯತ್ವಾಭಿಧಾನಾತ್ ।**

ಪ್ರಥಮಮಂತ್ರದಲ್ಲಿರುವ ಪ್ರತ್ನವೆಂಬ ಪದವು ಹಿಂದೆ ಒಂದಾವರ್ತಿ ಈ ಯಜಮಾನನಿಂದ ಸೋಮಯಾಗವು ಮಾಡಲ್ಪಟ್ಟಿರುವುದೆಂಬುದನ್ನು ಸೂಚಿಸುವುದು. **ಪುರಾಣಪ್ರತನಪ್ರತ್ನ ಪುರಾತನಚಿರಂತನಾಃ** ಎಂಬ ಕೋಶವಾಕ್ಯದಂತೆ ಪುರಾಣ, ಪ್ರತನ, ಪ್ರತ್ನ, ಪುರಾತನ ಚಿರಂತನ ಎಂಬ ಶಬ್ದಗಳಿಗೆ ಪುರಾತನ ಎಂದರೆ ಹಿಂದೆ ನಡೆದದ್ದು ಎಂಬರ್ಥವಿರುವುದು.

## ತತ್ತನ್ನಾದೃತ್ಯಂ ।

**ಈಜಾನಾದೀಜಾನಭೇದೇನ ವ್ಯವಸ್ಥಿತಂ ಯನ್ಮಂತ್ರಚತುಷ್ಟಯಮುಕ್ತಂ ಸೋಽಯಂ ಪೂರ್ವಃ ಪಕ್ಷ ಇತ್ಯಭಿಪ್ರೇತ್ಯ ದೂಷಯತಿ । ತತ್ರ ದೀಕ್ಷಣೀಯೇಷ್ಟಿಗತಯೋರಾಜ್ಯಭಾಗಯೋಃ-ಸ್ತ್ವಮಗ್ನ ಇತ್ಯಾದಿಕಮನುಬ್ರೂಯಾದಿತಿ ಯನ್ಮತಮಸ್ತಿ ತನ್ಮತಂ ನಾದರಣೀಯಂ ।**

ಹಿಂದೆ ಹೇಳಿದಂತೆ ದೀಕ್ಷಣೀಯೇಷ್ಟಿಯಲ್ಲಿ ಆಜ್ಯಭಾಗಕ್ಕಾಗಿ ಹೇಳಿರುವ ಮಂತ್ರಗಳು ಎಂದರೆ ಯಜ್ಞಮಾಡದಿರುವ ಮತ್ತು ಮಾಡಿರುವ ಯಜಮಾನನು ಉಪಯೋಗಿಸಬೇಕಾದ ಎರಡೆರಡು ಪುರೋನುವಾಕ್ಯಾಮಂತ್ರಗಳ ವಿಷಯದಲ್ಲಿ ಅವುಗಳನ್ನು ಉಪಯೋಗಿಸಲೇಬೇಕೆಂಬ ನಿರ್ಬಂಧವಿಲ್ಲ. ಹಾಗಾದರೆ ಏನು ಮಾಡಬೇಕು ಎಂದರೆ ಮುಂದೆ ಹೇಳುವಂತೆ ಬೇರೆ ಮಂತ್ರಗಳಿವೆ. ಅವನ್ನು ಉಪಯೋಗಿಸಬೇಕು.

## ಅಗ್ನಿರ್ವೃತ್ರಾಣಿ ಜಂಘನತ್ ತ್ವಂ ಸೋಮಾಸಿ ಸತ್ಪತಿರಿತಿ ವಾರ್ತ್ರ-ಘ್ನಾವೇವ ಕುರ್ಯಾತ್ ॥

**ಕಿಂ ತರ್ಹ್ಯಾದರಣೀಯಮಿತ್ಯಾಶಂಕ್ಯಾಹ । ವೃತ್ರಂ ಶತ್ರುಂ ಹಂತೀತಿ ವೃತ್ರಹಾ । ವೃತ್ರಘ್ನಃ ಸಂಬಂಧಿನೌ ಮಂತ್ರೌ ವಾರ್ತ್ರಘ್ನೌ । ವೃತ್ರಾಣಿ ಜಂಘನದಿತಿ ತಲ್ಲಿಂಗಾತ್ತತ್ಸಂಬಧಿತ್ವಂ । ಅಗ್ನಿರ್ವೃತ್ರಾಣೀತಿ ಪ್ರಥಮಸ್ಯಾಜ್ಯಭಾಗಸ್ಯ ಪುರೋನುವಾಕ್ಯಾ ತ್ವಂ ಸೋಮಾಸೀತಿ ದ್ವಿತೀಯಸ್ಯ ।**

ಆಜ್ಯಭಾಗದ ಪುರೋನುವಾಕ್ಯಗಳಿಗಾಗಿ ವೃತ್ರ (ಶತ್ರು) ಸಂಹಾರವನ್ನು ವರ್ಣಿಸುವ ಈ ಎರಡು ಮಂತ್ರಗಳನ್ನು ಉಪಯೋಗಿಸಬೇಕು. ಈ ಎರಡು ಮಂತ್ರಗಳಲ್ಲಿ ಅಗ್ನಿರ್ವೃತ್ರಾಣಿ [ಪೂರ್ತಿ ಮಂತ್ರಗಳ ವಿವರವು—

**ಅಗ್ನಿರ್ವೃತ್ರಾಣಿ ಜಂಘನದ್ದ್ರವಿಣಸ್ಯುರ್ವಿಪನ್ಯಯಾ ।**
**ಸಮಿದ್ಧಃ ಶುಕ್ರ ಆಹುತಃ ॥**　　(ಋ. ಸಂ. ೬-೧೬-೩೪)
**ತ್ವಂ ಸೋಮಾಸಿ ಸತ್ಪತಿಸ್ತ್ವಂ ರಾಜೋತ ವೃತ್ರಹಾ ।**
**ತ್ವಂ ಭದ್ರೋ ಅಸಿ ಕ್ರತುಃ ॥**　　(ಋ. ಸಂ. ೧-೯೧-೫) ]

(ಋ.ಸಂ. ೬-೧೬-೩೪) ಎಂಬುದು ಆಜ್ಯಭಾಗದ ಮೊದಲನೆಯ ಪುರೋನುವಾಕ್ಯವು. ತ್ವಂ ಸೋಮಾಸಿ (ಋ.ಸಂ. ೧-೯೧-೫) ಎಂಬುದು ಎರಡನೆಯ ಪುರೋನುವಾಕ್ಯವು.

## ವೃತ್ರಂ ವಾ ಏಷ ಹಂತಿ ಯಂ ಯಜ್ಞ ಉಪನಮತಿ ತಸ್ಮಾದ್ವಾರ್ತ್ರ-ಘ್ನಾವೇವ ಕರ್ತವ್ಯೌ ॥

**ಏತಯೋರ್ಮಂತ್ರಯೋರಾನುಕೂಲ್ಯಂ ದರ್ಶಯತಿ । ಯಂ ಯಜಮಾನಂ ಯಜ್ಞ ಉಪನಮತಿ ಸೋಮಯಾಗೇ ಪ್ರೇರಯತಿ ಏಷ ಯಜಮಾನೋ ವೃತ್ರಂ ಪಾಪರೂಪಂ ಶತ್ರುಂ ಹಂತ್ಯೇವ ತಸ್ಮಾತ್ಕಾರಣಾದ್ವೃತ್ರಹತ್ಯಾಸಂಬಂಧಿನಾವೇವ ಮಂತ್ರೌ ಕರ್ತವ್ಯೌ । ಯಥಾ ಪ್ರಥಮಮಂತ್ರೇ ವೃತ್ರಾಣಿ ಜಂಘನದಿತಿ ಲಿಂಗಮಸ್ತಿ ತಥಾ ದ್ವಿತೀಯೇಽಪಿ ತ್ವಂ ರಾಜೋತ**

ವೃತ್ರಹೇತಿ ಲಿಂಗಂ ವಿದ್ಯತೇ । ತಸ್ಮಾದುಭಯೋರಪಿ ತತ್ಸಂಬಂಧಿತ್ವಂ ಪೂರ್ವೋಕ್ತಯೋಸ್ತು ಪಕ್ಷಯೋರ್ವಿ ತನ್ವತೇ ಪ್ರತ್ನಮಿತ್ಯಾನುಕೂಲ್ಯಲಿಂಗಂ ಪ್ರಥಮಯೋರೇವ ಮಂತ್ರಯೋರ್ದೃಶ್ಯತೇ ನ ತೂತ್ತರಯೋಸ್ತಸ್ಮಾತ್ತನ್ನಾದರಣೀಯಮಿತಿ ದೂಷಯಿತ್ವೋಭಯಲಿಂಗಸದ್ಭಾವಾದಯಂಪಕ್ಷಃ ಸ್ವೀಕೃತಃ ।

ಯಾವ ಮಂತ್ರಗಳು ಯಜ್ಞದಲ್ಲಿ ಪ್ರವೃತ್ತನಾದ ಯಜಮಾನನ ಪಾಪವನ್ನು ನಾಶಮಾಡುವವೋ ಅಂತಹ ಶತ್ರುನಾಶಕ ಸಾಮರ್ಥ್ಯವುಳ್ಳ ಈ ಮಂತ್ರಗಳನ್ನೇ ಉಪಯೋಗಿಸಬೇಕು. ಮೊದಲನೆಯ ಮಂತ್ರದಲ್ಲಿ **ವೃತ್ರಾಣಿ ಜಂಘನತ್** ಎಂಬ ಪದಗಳೂ ಎರಡನೆಯ ಮಂತ್ರದಲ್ಲಿ **ತ್ವಂ ರಾಜೋತ ವೃತ್ರಹಾ** ಎಂಬ ಶಬ್ದಗಳೂ ಶತ್ರುನಾಶವನ್ನು ಸೂಚಿಸುವ ಶಬ್ದಗಳಾಗಿವೆ. ಎರಡು ಮಂತ್ರಗಳಲ್ಲಿಯೂ ಒಂದೇ ವಿಧವಾದ ಈ ಅರ್ಥವು ಸೂಚಿತವಾಗಿರುವುದು. ಆದರೆ ಮೊದಲು ಹೇಳಿದ **ತ್ವಮಗ್ನೇ** ಇತ್ಯಾದಿ ಎರಡು ಮಂತ್ರಗಳಲ್ಲಿ ಮೊದಲನೆಯದು ಮಾತ್ರ **ವಿತನ್ವತೇ, ವಿತನೋತಿ** ಎಂಬ ಯಜ್ಞವಿಸ್ತಾರವೆಂಬ ಅರ್ಥವನ್ನು ಸೂಚಿಸುವುದಾದರೂ ಎರಡನೆಯ ಮಂತ್ರವಾದ **ಸೋಮ ಯಾಸ್ತೇ** ಎಂಬ ಮಂತ್ರದಲ್ಲಿ ಆ ಅರ್ಥವಿರುವುದಿಲ್ಲ. ಆದ್ದರಿಂದ ಆ ಮಂತ್ರಗಳಿಗೆ ಪ್ರಾಧಾನ್ಯತೆಯನ್ನು ಕೊಡಬೇಕಾಗಿಲ್ಲ. ಈಗ ಹೇಳಿರುವ ಮಂತ್ರಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟು ಅವುಗಳನ್ನೇ ಉಪಯೋಗಿಸಬೇಕು.

ಅಗ್ನಿರ್ಮುಖಂ ಪ್ರಥಮೋ ದೇವತಾನಾಮಗ್ನಿಶ್ಚ ವಿಷ್ಣೋ ತಪ ಉತ್ತಮಂ ಮಹ ಇತ್ಯಾಗ್ನಾವೈಷ್ಣವಸ್ಯ ಹವಿಷೋ ಯಾಜ್ಯಾನುವಾಕ್ಯೇ ಭವತಃ॥

ಆಜ್ಯಭಾಗರೂಪೇಽಙ್ಗಕರ್ಮಣಿ ಪುರೋನುವಾಕ್ಯಾಯುಗ್ಮಂ ವಿಧಾಯ ಪ್ರಧಾನಕರ್ಮಣಿ ಹವಿಷಿ ಯಾಜ್ಯಾನುವಾಕ್ಯೇ ವಿಧತ್ತೇ । ಪ್ರಥಮನಿರ್ದಿಷ್ಟತ್ವಾದಗ್ನಿರ್ಮುಖಮಿತ್ಯೇಷಾ ಪುರೋನುವಾಕ್ಯಾ ಪಶ್ಚಾನ್ನಿರ್ದಿಷ್ಟತ್ವಾದಗ್ನಿಶ್ಚೇತಿ ಯಾಜ್ಯಾ । ಯದ್ಯಪ್ಯರ್ಥಾನುಸಾರೇಣಾನುವಾಕ್ಯಾಯಾಜ್ಯೇ ಭವತ ಇತಿ ವಿಧಾತವ್ಯಂ ತಥಾಪ್ಯಲ್ಪಾಚ್‌ತರಮಿತಿ ವ್ಯಾಕರಣಸೂತ್ರಾನುಸಾರೇಣ ಯಾಜ್ಯಾಶಬ್ದಸ್ಯ ಪೂರ್ವನಿಪಾತೋ ದ್ರಷ್ಟವ್ಯಃ ।

ಇದುವರೆಗೆ ದೀಕ್ಷಣೀಯೇಷ್ಟಿಯ ಆಜ್ಯಭಾಗದ ಹೋಮದಲ್ಲಿ ಉಪಯೋಗಿಸಬೇಕಾದ ಪುರೋನುವಾಕ್ಯಾ ಮಂತ್ರಗಳ ವಿಮರ್ಶೆಯನ್ನು ವಿವರಿಸಿದ್ದಾಯಿತು. ಈಗ ಅದೇ ಆಜ್ಯಭಾಗದ ಹೋಮದಲ್ಲಿ ಉಪಯೋಗಿಸಬೇಕಾದ ಅನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳನ್ನು ಹೇಳುವರು— **ಅಗ್ನಿರ್ಮುಖಂ ಪ್ರಥಮೋ ದೇವತಾನಾಂ** | ಈ ಎರಡು ಮಂತ್ರಗಳೂ ಋಗ್ವೇದದಲ್ಲಿಲ್ಲ ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ ಈ ಮಂತ್ರಗಳನ್ನು ಪೂರ್ತಿಯಾಗಿ ಹೇಳಿರುವರು—

ಅಗ್ನಿರ್ಮುಖಂ ಪ್ರಥಮೋ ದೇವತಾನಾಂ ಸಂಗತಾನಾಮುತ್ತಮೋ ವಿಷ್ಣುರಾಸೀತ್ ।
ಯಜಮಾನಾಯ ಪರಿಗೃಹ್ಯ ದೇವಾನ್ ದೀಕ್ಷಯೇದಂ ಹವಿರಾಗಚ್ಛತಂ ನಃ ॥
ಅಗ್ನಿಶ್ಚ ವಿಷ್ಣೋ ತಪ ಉತ್ತಮಂ ಮಹೋ ದೀಕ್ಷಾಪಾಲಾಯ ವನತಂ ಹಿ ಶಕ್ರಾ ।
ವಿಶ್ವೈರ್ದೇವೈರ್ಯಜ್ಞಿಯೈಃ ಸಂವಿಧಾನೌ ದೀಕ್ಷಾಮಸ್ಮೈ ಯಜಮಾನಾಯ ಧತ್ತಂ ॥

(ಆಶ್ವ. ಶ್ರೌ. ಸೂ. ೪-೨-೩)

ತೈತ್ತಿರೀಯ ಬ್ರಾಹ್ಮಣದಲ್ಲಿ ಈ ಮಂತ್ರಗಳು ಸ್ವಲ್ಪ ವ್ಯತ್ಯಾಸವಾಗಿ ಪಠಿತವಾಗಿವೆ—

**ಅಗ್ನಿರಗ್ರೇ ಪ್ರಥಮೋ ದೇವತಾನಾಂ । ಸಂಯಾತಾನಾಮುತ್ತಮೋ ವಿಷ್ಣುರಾಸೀತ್ ।**
**ಯಜಮಾನಾಯ ಪರಿಗೃಹ್ಯ ದೇವಾನ್ । ದೀಕ್ಷಯೇದಗ್ಂ ಹವಿರಾಗಚ್ಛತಂ ನಃ ॥**
**ಅಗ್ನಿಶ್ಚ ವಿಷ್ಣೋ ತಪ ಉತ್ತಮಂ ಮಹಃ । ದೀಕ್ಷಾಪಾಲೇಭ್ಯೋ ವನತಗ್ಂ ಹಿ ಶಕ್ರಾ ।**
**ವಿಶ್ವೈರ್ದೇವೈರ್ಯಜ್ಞಿಯೈಃ ಸಂವಿದಾನೌ । ದೀಕ್ಷಾಮಸ್ಮೈ ಯಜಮಾನಾಯ ಧತ್ತಂ ॥**

(ತೈ.ಬ್ರಾ.೨-೪-೩-೩,೪)

ಇದರ ಅರ್ಥವು ಈರೀತಿ ಇರುವುದು—ದೇವತೆಗಳೆಲ್ಲಾ ಒಂದೆಡೆ ಸಭೆ ಸೇರಿರುವಾಗ ಆ ಗುಂಪಿನಲ್ಲಿ ಅಗ್ನಿಯು ಮುಂದುಗಡೆಯೂ ವಿಷ್ಣುವು ಕೊನೆಯಲ್ಲಿಯೂ ಕುಳಿತಿದ್ದರು. ಎಲೈ ಅಗ್ನಿವಿಷ್ಣುಗಳೇ, ನೀವು ಈ ನಮ್ಮ ದೀಕ್ಷಣೀಯೇಷ್ಟಿಗೆ ಇತರ ಎಲ್ಲಾ ದೇವತೆಗಳನ್ನೂ ಕರೆದುಕೊಂಡು ಬನ್ನಿರಿ ಮತ್ತು ಯಜಮಾನನಿಗೆ ದೀಕ್ಷೆಯನ್ನು ಅನುಗ್ರಹಿಸಿರಿ. ಎಲೈ ಅಗ್ನಿವಿಷ್ಣುಗಳೇ, ನೀವಿಬ್ಬರೂ ಬಹಳ ಶಕ್ತಿಯುತರಾದ ದೇವತೆಗಳು. ದೀಕ್ಷಾಸಂಸ್ಕಾರಕ್ಕಾಗಿ ಸಿದ್ಧನಾಗಿರುವ ಈ ಯಜಮಾನನ ಪಾಪವನ್ನು ಪರಿಹರಿಸಿ ಅವನಿಗೆ ತಪಶ್ಶಕ್ತಿಯನ್ನು ಉಂಟುಮಾಡಿ. ಯಜ್ಞಾರ್ಹರಾದ ಇತರ ಎಲ್ಲಾ ದೇವತೆಗಳೊಡನೆ ಕೂಡಿ ನೀವು ಈ ಯಜಮಾನನಿಗೆ ದೀಕ್ಷೆಯನ್ನು ಅನುಗ್ರಹಿಸಿರಿ.] ಎಂಬುದು ಅನುವಾಕ್ಯಾಮಂತ್ರವು; **ಅಗ್ನಿಶ್ಚ ವಿಷ್ಣೋ ತಪ ಉತ್ತಮಂ ಮಹಃ** ಎಂಬುದು ಯಾಜ್ಯಾಮಂತ್ರವು. ಅನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳ ಲಕ್ಷಣವು ಈರೀತಿ ಹೇಳಲ್ಪಟ್ಟಿದೆ.

**ಪುರಸ್ತಾಲ್ಲಕ್ಷ್ಮಾ ಪುರೋನುವಾಕ್ಯಾ ಭವತಿ । ಉಪರಿಷ್ಟಾಲ್ಲಕ್ಷ್ಮಾ ಯಾಜ್ಯಾ । ಮಂತ್ರಪ್ರತಿಪಾದ್ಯಾಯಾ ದೇವತಾಯಾ ನಾಮಧೇಯಂ ಲಕ್ಷ್ಮ । ತದ್ಯಸ್ಯಾಮೃಚಿ ಪೂರ್ವಾರ್ಧೇ ವಿದ್ಯತೇ ಸಾ ಪುರೋನುವಾಕ್ಯಾ । ತನ್ನಾಮ ಯಸ್ಯಾಮುತ್ತರಾರ್ಧೇ ವಿದ್ಯತೇ ಸಾ ಯಾಜ್ಯಾ । ತದ್ಯಥಾ—ಅಗ್ನಿರ್ಮೂರ್ಧಾ ಇತಿ ಪೂರ್ವಾರ್ಧೇಽಗ್ನಿಶಬ್ದಃ ವಿದ್ಯತೇ ತಸ್ಮಾದಿಯಂ ಪುರೋನುವಾಕ್ಯಾ ॥ ಜಿಹ್ವಾಮಗ್ನೇ ಚಕೃಷೇ ಇತ್ಯುತ್ತರಾರ್ಧೇಽಗ್ನಿಶಬ್ದಃ ತಸ್ಮಾದಿಯಂ ಯಾಜ್ಯಾ । (ಸಾ. ಭಾ.) ಅನುವಾಕ್ಯಾ-ತಿಷ್ಠನ್ನಾಹ । ಆಸೀನೋ ಯಾಜ್ಯಾಂ ಯಜತಿ ।**

(ಶ. ಬ್ರಾ. ೧-೪-೨-೧೮,೧೯)

ಲಕ್ಷ್ಮ ಎಂದರೆ ಚಿಹ್ನೆ, ದೇವತೆಯ ಹೆಸರು. ಮಂತ್ರದಲ್ಲಿ ಪ್ರತಿಪಾದಿತವಾಗಿರುವ ದೇವತೆಯ ಹೆಸರು ಋಕ್ಕಿನ ಪೂರ್ವಾರ್ಧದಲ್ಲಿ ಇದ್ದರೆ ಅದು ಪುರೋನುವಾಕ್ಯಾ ಮಂತ್ರವೆಂದೂ, ಉತ್ತರಾರ್ಧದಲ್ಲಿ ಇದ್ದರೆ ಯಾಜ್ಯಾ ಮಂತ್ರವೆಂದೂ ಪ್ರತೀಕವು. ಹೇಗೆಂದರೆ—ಅಗ್ನಿರ್ಮೂರ್ಧಾ ಎಂಬಲ್ಲಿ ಋಕ್ಕಿನ ದೇವತೆಯಾದ ಅಗ್ನಿಯನ್ನು ಸೂಚಿಸುವ ಅಗ್ನಿಶಬ್ದವು ಋಕ್ಕಿನ ಪೂರ್ವಾರ್ಧದಲ್ಲಿರುವುದು. ಆದ್ದರಿಂದ ಈ ಋಕ್ಕು ಪುರೋನುವಾಕ್ಯಾ ಮಂತ್ರವು; ಜಿಹ್ವಾಮಗ್ನೇ ಚಕೃಷೇ ಎಂಬಲ್ಲಿ ಅಗ್ನಿಶಬ್ದವು ಋಕ್ಕಿನ ಉತ್ತರಾರ್ಧದಲ್ಲಿ ಇರುವುದರಿಂದ ಈ ಋಕ್ಕು ಯಾಜ್ಯಾಮಂತ್ರವು. ಅನುವಾಕ್ಯಾ ಮಂತ್ರವನ್ನು ಹೋತೃವು ಎದ್ದುನಿಂತುಕೊಂಡು ಪಠಿಸಬೇಕೆಂದೂ ಯಾಜ್ಯಾಮಂತ್ರವನ್ನು ಕುಳಿತುಕೊಂಡು ಪಠಿಸಬೇಕೆಂದೂ ನಿಯಮವಿದೆ.

**ಆಗ್ನಾವೈಷ್ಣವ್ಯೌ ರೂಪಸಮೃದ್ಧೇ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ॥**

**ತಯೋರರ್ಥಯೋಃ ಕರ್ಮಾನುಕೂಲ್ಯಂ ದರ್ಶಯತಿ । ಅಗ್ನಿಶ್ಚ ವಿಷ್ಣುಶ್ಚ ಯಯೋರರ್ಚೋಃ ಪ್ರತಿಪಾದ್ಯೇ ದೇವತೇ ಭವತಸ್ತೇ ಉಭೇ ಋಚಾವಾಗ್ನಾವೈಷ್ಣವ್ಯೌ । ತೇ ಚ**

ಕರ್ಮಾನುಕೂಲ್ಯೇನ ರೂಪೇಣ ಸಮೃದ್ಧೇ । ನ ಚ ರೂಪಸಮೃದ್ಧಂ ವೈಯರ್ಥ್ಯಂ ಶಂಕ-
ನೀಯಂ । ಕರ್ಮಣೋ ಯದಂಗಂ ರೂಪಸಮೃದ್ಧಂ ಭವತ್ಯೇತದೇವ ಯಜ್ಞಸ್ಯಾಂಗೇಷು-
ಸಮೃದ್ಧಂ ಸಂಪೂರ್ಣಂ ನ ತು ತಸ್ಮಿನ್ಕಿಂಚಿದಪಿ ವೈಕಲ್ಯಮಸ್ತಿ । ಕೇಯಂ ರೂಪಸಮೃದ್ಧಮಿತಿ
ಚೇತ್ । ಪಠ್ಯಮಾನೇಯಮೃಗನುಷ್ಠೀಯಮಾನಂ ಕರ್ಮಾಭಿವದತಿ ಸಾಕಲ್ಯೇನ ಬ್ರವೀತೀತಿ
ಯದಸ್ತಿ ಏಷೈವ ರೂಪಸಮೃದ್ಧಿಃ ।

ದೀಕ್ಷಣೀಯೇಷ್ಟಿಯಲ್ಲಿ ಅಗ್ನಿ ವಿಷ್ಣುಗಳನ್ನುದ್ದೇಶಿಸಿ ಹೋಮಮಾಡಬೇಕಾದ **ಅಗ್ನಿರ್ಮುಖಂ** ಇತ್ಯಾದಿ ಎರಡು ಮಂತ್ರಗಳಿಂದ ದೀಕ್ಷೆಯು ಹೇಗೆ ಅನುಕೂಲವಾಗುವುದು ಎಂಬುದನ್ನು ವಿವರಿಸುವರು. ಮೇಲಿನ ವಾಕ್ಯದಲ್ಲಿ **ಆಗ್ನಾವೈಷ್ಣವ್ಯಾ ರೂಪಸಮೃದ್ಧೇ** ಎಂದಿದೆ. ಈ ವಾಕ್ಯವನ್ನು ಆಶ್ವಲಾಯನಶ್ರೌತಸೂತ್ರದಲ್ಲಿಯೂ ಹೇಳಿದೆ. (ಆಶ್ವ.ಶ್ರೌ.ಸೂ.೪-೨-೩) ಯಾವ ಋಕ್ಕುಗಳಲ್ಲಿ ಅಗ್ನಿ ಮತ್ತು ವಿಷ್ಣುಗಳು ಸ್ತುತರಾಗಿರುವರೋ ಆ ಋಕ್ಕುಗಳಿಗೆ ಎಂದರೆ ಇಲ್ಲಿ **ಅಗ್ನಿರ್ಮುಖಂ** ಮತ್ತು **ಅಗ್ನಿಷ್ಕ ವಿಷ್ಣೋ** ಎಂಬ ಋಕ್ಕುಗಳಿಗೆ ಆಗ್ನಾವೈಷ್ಣವ್ಯಾ ಋಕ್ಕುಗಳೆಂದು ಹೆಸರು. **ರೂಪಸಮೃದ್ಧೇ** ಎಂದರೆ ಯಜ್ಞಾದಿಗಳಲ್ಲಿ ಒಂದು ಕರ್ಮವನ್ನು ಮಾಡುವಾಗ ಆ ಕರ್ಮದ ವಿವರಗಳನ್ನೇ ತಿಳಿಸುವ ಅಥವಾ ಆ ದೇವತೆಯ ಗುಣಗಾನವನ್ನೇ ಮಾಡುವ ಋಕ್ಕಿಗೆ ರೂಪಸಮೃದ್ಧಿ ಎಂದು ಹೆಸರು. ಈ ದೀಕ್ಷಣೀಯೇಷ್ಟಿಯಲ್ಲಿ ಅಗ್ನಿ ವಿಷ್ಣುಗಳು ಪ್ರಧಾನದೇವತೆಗಳು. ಈ ದೇವತೆಗಳ ಅನುಗ್ರಹದಿಂದ ಯಜಮಾನ ದೀಕ್ಷಾಕರ್ಮವು ಸಾಂಗವಾಗಿ ನೆರವೇರಿ ಅವನು ದೀಕ್ಷಿತನಾಗಬೇಕೆಂದು ಆ ದೇವತೆಗಳನ್ನು ಆ ಋಕ್ಕುಗಳಲ್ಲಿ ಪ್ರಾರ್ಥಿಸಲಾಗಿದೆ. ಅದ್ದರಿಂದ ದೀಕ್ಷಣೀಯೇಷ್ಟಿಯಲ್ಲಿ ದೀಕ್ಷೆಯ ಸಂಸ್ಕಾರಕ್ಕಾಗಿ ಅಗ್ನಿ ವಿಷ್ಣುಗಳನ್ನು ಪ್ರಾರ್ಥಿಸಲಾಗಿರುವ ಋಕ್ಕುಗಳನ್ನೇ ದೀಕ್ಷಾಕರ್ಮದಲ್ಲಿ ಉಪಯೋಗಿಸಿರುವುದರಿಂದ ಮಂತ್ರಗಳಲ್ಲಿ ಹೇಳಿರುವ ವಿಷಯಗಳು ಕರ್ಮದ ಕಾರ್ಯಕಲಾಪಗಳಿಗೆ ಅನುಸಾರವಾಗಿ ಇದ್ದಂತಾಯಿತು. ಆದ್ದರಿಂದ ಯಾವಯಾವ ವಿಷಯಗಳಿರುವವೋ ಆ ವಿಷಯಗಳನ್ನೇ ವರ್ಣಿಸುವ ಋಕ್ಕುಗಳನ್ನು ಆ ಕರ್ಮಗಳಲ್ಲಿ ಹೇಳಬೇಕು. ಕರ್ಮಕ್ಕೂ ಮಂತ್ರಕ್ಕೂ ಪರಸ್ಪರ ಸಂಬಂಧವಿರಬೇಕು. ಉದಾ—ಅಗ್ನಿ ಮಥನಕಾಲದಲ್ಲಿ ಅಗ್ನಿಯನ್ನು ಸ್ತುತಿಸದೆ ಇಂದ್ರನನ್ನು ಸ್ತುತಿಸುವ ಋಕ್ಕುಗಳನ್ನು ಪಠಿಸಿದರೆ ಅದು ರೂಪಸಮೃದ್ಧಿಯೆನಿಸುವುದಿಲ್ಲ. ಅಗ್ನಿಯನ್ನು ಸ್ತುತಿಸುವ ಮಂತ್ರಗಳನ್ನೇ ಪಠಿಸಬೇಕು. ಇಂದ್ರನು ಸೋಮಪಾನಮಾಡಬೇಕೆಂದು ಪ್ರಾರ್ಥಿಸುವ ಕರ್ಮದಲ್ಲಿ ಇಂದ್ರನ ಸೋಮಪಾನಾರ್ಥವಾದ ಮಂತ್ರಗಳೇ ಇರಬೇಕು ಇತ್ಯಾದಿ. ಇದಕ್ಕೆ ರೂಪಸಮೃದ್ಧಿಯೆಂದು ಹೆಸರು. ಇದು ಎಲ್ಲಾ ಕರ್ಮಗಳಲ್ಲಿಯೂ ಇರಬೇಕು

**ಅಗ್ನಿಶ್ಚ ಹ ವೈ ವಿಷ್ಣುಶ್ಚ ದೇವಾನಾಂ ದೀಕ್ಷಪಾಲೌ ತೌ ದೀಕ್ಷಾಯಾ ಈಶಾತೇ ತದ್ಯದಾಗ್ನಾವೈಷ್ಣವಂ ಹವಿರ್ಭವತಿ ಯೌ ದೀಕ್ಷಾಯಾ ಈಶಾತೇ ತೌ ಪ್ರೀತೌ ದೀಕ್ಷಾಂ ಪ್ರಯಚ್ಛತಾಂ ಯೌ ದೀಕ್ಷ-ಯಿತಾರೌ ತೌ ದೀಕ್ಷಯೇತಾಮಿತಿ ॥**

ಮಂತ್ರಪ್ರತಿಪಾದ್ಯದೇವತಾಪ್ರಶಂಸಾದ್ವಾರೇಣ ಪುನರಪಿ ಮಂತ್ರೌ ಪ್ರಶಂಸತಿ ।
ಯೋಽಯಮಗ್ನಿಃ ಸರ್ವೇಷಾಂ ದೇವಾನಾಂ ಪ್ರಥಮೋ ಯಶ್ಚ ವಿಷ್ಣುಃ ಸರ್ವೇಷಾಮುತ್ತಮಸ್ತಾ-
ವುಭೌ ದೇವಾನಾಂ ಮಧ್ಯೇ ದೀಕ್ಷಾಖ್ಯಸ್ಯ ಚ ವ್ರತಸ್ಯ ಪಾಲಯಿತಾರೌ ತಾವುಭೌ ದೀಕ್ಷಾಯಾ
ಈಶಾತೇ ಸ್ವಾಮಿನೌ ಭವತಸ್ತಸ್ಮಾತ್ತಯೋರ್ದೀಕ್ಷಾಪಾಲಕತ್ವಂ ಯುಕ್ತಂ । ತಥಾ ಸತಿ ಯದ್ಯ-
ಗ್ನಾವಿಷ್ಣುದೇವತಾಕಂ ಹವಿರ್ದೀಕ್ಷಣೀಯೇಷ್ಟೌ ಭವತಿ ತದಾನೀಂ ಯೌ ದೀಕ್ಷಾಯಾಃ
ಸ್ವಾಮಿನೌ ದೇವೌ ತೌ ಪ್ರೀತೌ ಯಜಮಾನಾಯ ದೀಕ್ಷಾಂ ಪ್ರಯಚ್ಛತಾಂ । ಉಕ್ತಸ್ಯೈವ

**ವ್ಯಾಖ್ಯಾನಂ ಯೌ ದೀಕ್ಷಯಿತಾರಾವಿತ್ಯಾದಿಕಂ । ಇತಿಶಬ್ದೋಽಭಿಪ್ರಾಯಪರಾಮರ್ಶಾರ್ಥಃ । ಅನೇನಾಭಿಪ್ರಾಯೇಣಾಗ್ನಾವೈಷ್ಣವಂ ಹವಿಃ ಕ್ರಿಯತೇ । ತಸ್ಮಾನ್ಮಂತ್ರಪ್ರತಿಪಾದ್ಯಾವಗ್ನಾ-ವಿಷ್ಣೂ ಪ್ರಶಸ್ತಾವಿತ್ಯರ್ಥಃ ॥**

ಹಿಂದೆ ಹೇಳಿದ **ಅಗ್ನಿರ್ಮುಖಂ** ಮತ್ತು **ಅಗ್ನಿಶ್ಚ ವಿಷ್ಣೋ** ಎಂಬ ಎರಡು ಋಕ್ಕುಗಳು ರೂಪಸಮೃದ್ಧಿಗೆ ಅನುಸಾರವಾಗಿದೆಯೇ ಎಂಬುದನ್ನು ವಿವರಿಸುವುದಕ್ಕಾಗಿ ಆ ಋಕ್ಕುಗಳ ಅರ್ಥವನ್ನು ಇಲ್ಲಿ ಹೇಳಿ ಪ್ರಶಂಸೆಮಾಡುತ್ತಾರೆ. ಅಗ್ನಿ ಮತ್ತು ವಿಷ್ಣು ಎಂಬ ಈ ಇಬ್ಬರು ದೇವತೆಗಳು, ದೇವತೆಗಳು ಕೈಗೊಳ್ಳುವ ದೀಕ್ಷಾಸಂಸ್ಕಾರಗಳಿಗೂ ಸಹ ರಕ್ಷಕವಾಗಿರುವರು. ಆದ್ದರಿಂದ ಈ ದೇವತೆಗಳು ದೀಕ್ಷಾವಿಧಿಗೆ ಸ್ವಾಮಿಗಳು, ನಾಯಕರು. ಈ ದೇವತೆಗಳನ್ನುದ್ದೇಶಿಸಿ ಆಗ್ನಾವೈಷ್ಣವವೆಂಬ ಹವಿಸ್ಸನ್ನು ಯಜಮಾನನು ಅರ್ಪಿಸುವನು. ಆ ಹವಿಃಪ್ರದಾನದಿಂದ ಈ ದೇವತೆಗಳು ಪ್ರೀತರಾಗಿ ಯಜಮಾನನಿಗೆ ದೀಕ್ಷೆಯನ್ನು ಅನುಗ್ರಹಿಸಲಿ ಎಂದು ಆ ಮಂತ್ರಗಳಲ್ಲಿಯೇ ಪ್ರಾರ್ಥಿಸಿರುವುದರಿಂದ ಆ ಮಂತ್ರಗಳಲ್ಲಿ ಹೇಳಿರುವ ವಿಷಯಕ್ಕೂ ದೀಕ್ಷಾವಿಧಿಯಲ್ಲಿ ಮಾಡುವ ಹೋಮಕ್ಕೂ ಪರಸ್ಪರ ಸಂಬಂಧವುಂಟಾಗಿ ಇದು ರೂಪಸಮೃದ್ಧಿಗೆ ಅನುಸಾರವಾಗಿದ್ದಂತಾಯಿತು.

ತ್ರಿಷ್ಟುಭೌ ಭವತಃ ಸೇಂದ್ರಿಯತ್ವಾಯ ॥ ೪ ॥

**ಮಂತ್ರಗತಂ ಛಂದಃ ಪ್ರಶಂಸತಿ । ತ್ರಿಷ್ಟುಪ್ ಛಂದಸ ಇಂದ್ರಿಯಸಾಧನತ್ವೇನೇಂದ್ರಿಯ-ರೂಪತ್ವಂ ಶ್ರುತ್ಯಂತರೇ ಶ್ರುತಂ—ಇಂದ್ರಿಯಂ ವೈ ತ್ರಿಷ್ಟುಪ್ ಇತಿ । ಅತೋ ಮಂತ್ರಗತಂ ಛಂದೋ ಯಜಮಾನಸ್ಯ ಸೇಂದ್ರಿಯತ್ವಾಯ ಭವತಿ । ಅಥ ಮೀಮಾಂಸಾ । ದ್ವಾದಶಾಧ್ಯಾ-ಯಸ್ಯ ಚತುರ್ಥಪಾದೇ ಚಿಂತಿತಂ—**

ಪುರೋನುವಾಕ್ಯಾ ಯಾಜ್ಯಾ ವಿಕಲ್ಪ್ಯೇ ವಾ ಸಮುಚ್ಚಿತಾ ।
ಪುರೇವಾದ್ಯಃ ಸಮಾಖ್ಯಾನಾದ್ವಚನಾಚ್ಚ ಸಮುಚ್ಚಯಃ ॥

**ದೇವತಾಪ್ರಕಾಶನಕಾರ್ಯಸ್ಯೈಕತ್ವಾದ್ಯುಗ್ಮಯೋರ್ಯಥಾ ವಿಕಲ್ಪಸ್ತಥೈವೈಕಯುಗ್ಮಗತಯೋ-ರಿತಿ ಚೇನ್ಮೈವಂ । ಪುರೋನುವಾಕ್ಯೇತಿ ಸಮಾಖ್ಯಾಯಾ ಉತ್ತರಕಾಲೀನಯಾಜ್ಯಾಮಂತರೇ-ಣಾನುಪಪತ್ತೇಃ । ಕಿಂಚ ಪುರೋನುವಾಕ್ಯಾಮನೂಚ್ಯ ಯಾಜ್ಯಯಾ ಜುಹೋತೀತಿ ಪ್ರತ್ಯಕ್ಷ-ವಚನೇನ ದೇವತೋಪಲಕ್ಷಣಹವಿಃಪ್ರಕಾಶನಕಾರ್ಯಭೇದೋಕ್ತಿಪುರಸ್ಸರಂ ಸಾಹಿತ್ಯಂ ವಿಧೀಯತೇ ತಸ್ಮಾತ್ಸಮುಚ್ಚಯಃ ॥**

ಇದುವರೆಗೂ ವಿವರಿಸಿದ **ಅಗ್ನಿರ್ಮುಖಂ, ಅಗ್ನಿಶ್ಚ** ಎಂಬ ಎರಡು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಇಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೇ ಏಕೆ ಹೇಳಬೇಕು? ಅದೇ ಅರ್ಥವಿರುವ ಇತರ ಛಂದಸ್ಸಿನ ಮಂತ್ರಗಳನ್ನೇಕೆ ಪಠಿಸಬಾರದು? ಎಂದರೆ ತ್ರಿಷ್ಟುಪ್‌ಛಂದಸ್ಸಿಗೆ ಒಂದು ವಿಶೇಷವಾದ ಪ್ರಾಶಸ್ತ್ಯವಿದೆ. **ಇಂದ್ರಿಯಂ ವೈ ತ್ರಿಷ್ಟುಪ್** (ತೈ.ಬ್ರಾ. ೧-೭-೯-೨) ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದೆ. ಇಂದ್ರಿಯವೆಂದರೆ ಕರ್ಮಾನುಷ್ಠಾನಮಾಡುವುದರಲ್ಲಿ ಸಾಮರ್ಥ್ಯವು. ತ್ರಿಷ್ಟುಪ್‌ಛಂದಸ್ಸಿಗೆ ಸಾಮರ್ಥ್ಯವನ್ನುಂಟುಮಾಡುವ ಶಕ್ತಿಯಿರುವುದರಿಂದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಹೋಮವನ್ನು ಪಿಸಿದರೆ ಯಜಮಾನನಿಗೆ ಯಜ್ಞಾನುಷ್ಠಾನಕರ್ಮಗಳನ್ನು ಸಾಂಗವಾಗಿ ನೆರವೇರಿಸುವ ಶಕ್ತಿಸಾಮರ್ಥ್ಯಗಳು ಉಂಟಾಗುವವು

ಎಂದಭಿಪ್ರಾಯವು. ಪುರೋಽನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳ ವಿಷಯದಲ್ಲಿ ಮೀಮಾಂಸಾ ಸೂತ್ರವು—ಜೈ.ಸೂ. ೧೨ನೇ ಅಧ್ಯಾಯದ ೪ ನೇಯ ಪಾದದಲ್ಲಿ ಯಾಜ್ಯಾನುವಾಕ್ಯಾ ಸಮುಚ್ಚಯಾಧಿಕರಣದ ವಿವರಣೆಗಾಗಿ ನ್ಯಾಯಮಾಲಾವಿಸ್ತರದಲ್ಲಿ ಈರೀತಿ ಹೇಳಿದೆ

**ಪುರೋಽನುವಾಕ್ಯಾ ಯಾಜ್ಯಾ ವಿಕಲ್ಪ್ಯಾ ವಾ ಸಮುಚ್ಚಿತಾ ।**
**ಪುರೇವಾದ್ಯಃ ಸಮಾಖ್ಯಾನಾದ್ವಚನಾಚ್ಚ ಸಮುಚ್ಚಯಃ ॥**

ದೇವತೆಗಳನ್ನು ಸ್ತುತಿಸಿ ಹೋಮಮಾಡುವ ಕಾಲದಲ್ಲಿ ಪುರೋಽನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳೆರಡನ್ನೂ ಪಠಿಸಿ ಹೋಮಮಾಡುವರು. ಈ ಎರಡು ಮಂತ್ರಗಳೂ ಒಂದೇ ದೇವತೆಯನ್ನು ಸ್ತುತಿಸುವವು. ಆದ್ದರಿಂದ ಅನುವಾಕ್ಯಾ ಮತ್ತು ಯಾಜ್ಯಾ ಎಂಬ ಎರಡು ಮಂತ್ರಗಳನ್ನು ಏಕೆ ಪಠಿಸಿ ಹೋಮಮಾಡಬೇಕು? ಅನುವಾಕ್ಯಾಮಂತ್ರವನ್ನೋ ಅಥವಾ ಯಾಜ್ಯಾ ಮಂತ್ರವನ್ನೋ ಎರಡರಲ್ಲಿ ಯಾವುದಾದರೂ ಒಂದನ್ನು ಮಾತ್ರ ಪಠಿಸಿ ಹೋಮಮಾಡಿದರೆ ಆಗದೆ, ಎಂದರೆ ಹಾಗಲ್ಲ. ಈ ವಿಷಯದಲ್ಲಿ—**ಪುರೋಽನುವಾಕ್ಯಾಮನೂಚ್ಯ ಯಾಜ್ಯಯಾ ಜುಹೋತಿ** ಎಂದು ಸ್ಪಷ್ಟವಾಗಿ ಶ್ರುತಿಯಲ್ಲಿ ನಿರ್ದೇಶವಿರುವುದರಿಂದ ಮೊದಲು ಪುರೋಽನುವಾಕ್ಯಾ ಮಂತ್ರವನ್ನು ಪಠಿಸಿ (ಆದರ ದೇವತೆಯನ್ನು ಯಜ್ಞವೇದಿಗೆ ಆಹ್ವಾನಿಸಿ) ಅನಂತರ ಯಾಜ್ಯಾ ಮಂತ್ರದಿಂದ ಹೋಮಮಾಡಬೇಕು. ಆದ್ದರಿಂದ ಎರಡು ಮಂತ್ರಗಳಲ್ಲಿ ಒಂದನ್ನು ಹೇಳಿದರೆ ಸಾಲದು. ಎರಡು ಮಂತ್ರಗಳನ್ನು ಪಠಿಸಿಯೇ ಹೋಮಮಾಡಬೇಕು. ಇದೇ ವಿಧಿಯು.

*English Translation*

The Hotar ought to repeat for him who has not yet brought a sacrifice two Puronuvakyah verses from agne saprathi asi (Rig-veda Samhita 5-13,4) for the first, and Saoma yas te mayobhavah (1,91,9) for the second portion of (the offering of) melted butter. (By reading the third pada of the first verse tvaya yajnam "through thee (thy favour) they extend the sacrifice", the Hotar extends thus the sacrifice for him (who has not yet brought a sacrifice).

For him who has brought a sacrifice before, the Hotar has to recite (two other mantras instead): agnih pratnena manmana (8,44,12) and Soma girbhishtva vayam (1,91,11). For by the word pratnam, i.e., former (which occures in the first verse), he alludes to the former sacrifice. But the recital of these verses (for a man who has performed a sacrifice, and for one who has not done so) may be dispensed with. Let the Hotar rather use the two verses which refer to the destruction of Vritra (vartraghna), viz., Agnir vritrani janghanat (6,16,24), and tvam soma asi satpatih (1,91,5.) Since he whom the sacrifice approaches, destroys Vritra (the demon whom Indra conquers), the two verses referring to the destruction of Vritra are to be used.

The Anuvakya for the Agni-Vishnu-offering is: Agnir mukham prathmo devatamam, the Yajya: agnischa Vishno tapa). These two verses (addressed) to agni and Vishnu are corresponding (appropriate) in their form. What is appropriate in its form, is successful in the sacrifice; that is to say, when the verse which is recited refers to the ceremony which is being performed.

(Now follows a general paraphrase of the contents of these two verses) Agni and Vishnu are among the gods, tha "guardians of the Diksha" (that is to say), they rule over the Diksha. When they offer the Agni-Vishnu oblation, then those two who rule over the Diksha become pleased and grant Diksha, that is to say, the two makers of Diksha, they both make the sacrificer a Dikshita. These verses are in the Trishtuba metre, that the sacrificer might acquire the properties of the god Indra (vigour and strength).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೊದಲನೆಯ ಅಧ್ಯಾಯದ ನಾಲ್ಕನೇ ಖಂಡವು ಸಮಾಪ್ತವಾದುದು.



# ಅಥ ಪ್ರಥಮಾಧ್ಯಾಯೇ ಪಂಚಮಃ ಖಂಡಃ

## ಮೊದಲನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಸ್ವಿಷ್ಟಕೃದ್ಧೋಮ; ಈ ಹೋಮವನ್ನು ನಾನಾವಿಧ ಛಂದಸ್ಸಿನ ಋಕ್ಕುಗಳಿಂದ ಮಾಡಿದರೆ ನಾನಾವಿಧ ಫಲಗಳುಂಟಾಗುವವು. ಅವುಗಳ ವಿವರಣೆ. ]

---

**ಗಾಯತ್ರ್ಯೌ ಸ್ವಿಷ್ಟಕೃತಃ ಸಂಯಾಜ್ಯೇ ಕುರ್ವೀತ ತೇಜಸ್ಕಾಮೋ ಬ್ರಹ್ಮವರ್ಚಸಕಾಮಃ ॥**

ಪ್ರಧಾನಸ್ಯ ಹವಿಷೋ ಯಾಜ್ಯಾನುವಾಕ್ಯೇ ವಿಧಾಯ ಸ್ವಿಷ್ಟಕೃದ್ರೂಪಸ್ಯ ಯಾಗಸ್ಯ ಫಲವಿಶೇಷಾಯ ಛಂದೋವಿಶೇಷಯುಕ್ತೇ ಯಾಜ್ಯಾನುವಾಕ್ಯೇ ವಿಧಾತುಕಾಮಃ ಪ್ರಥಮಂ ದ್ವೇ ಋಚೌ ವಿಧತ್ತೇ । ಸ ಹವ್ಯವಾಳಮರ್ತ್ಯ (ಋ. ಸಂ. ೩-೧೧-೨) ಇತ್ಯೇಕಾ ಗಾಯತ್ರೀ । ಅಗ್ನಿರ್ಹೋತಾ ಪುರೋಹಿತ (ಋ. ಸಂ. ೩-೧೧-೧) ಇತ್ಯಪರಾ ಗಾಯತ್ರೀ । ತೇ ಉಭೇ ಸ್ವಿಷ್ಟಕೃದ್ಯಾಗಸ್ಯ ಸಂಯಾಜ್ಯೇ ಕುರ್ಯಾತ್ । ಕೀದೃಶೋಽಧಿಕಾರೀ । ತೇಜಃ ಶರೀರಕಾಂತಿಃ । ಬ್ರಹ್ಮವರ್ಚಸಂ ಶ್ರುತಾಧ್ಯಯನಸಂಪತ್ತಿಃ । ತದುಭಯಕಾಮೋಽತ್ರಾಧಿಕಾರೀ । ಸಂಯಾಜ್ಯಾಶಬ್ದಾರ್ಥಮಾಶ್ವಲಾಯನ ಆಹ—ಸ್ವಿಷ್ಟಕೃತಃ ಸಂಯಾಜ್ಯೇ ಇತ್ಯುಕ್ತೇ ಸೌವಿಷ್ಟಕೃತೀ ಪ್ರತೀಯಾತ್ ಇತಿ ಸ್ವಿಷ್ಟಕೃತ್ಸಂಬಂಧಿನ್ಯೌ ಯಾಜ್ಯಾನುವಾಕ್ಯೇ ಇತ್ಯರ್ಥಃ ।

ದೀಕ್ಷಣೀಯೇಷ್ಟಿಯಲ್ಲಿ ಅಗ್ನಾವಿಷ್ಣೂದೇವತಾಕವಾದ ಪ್ರಧಾನಹೋಮಗಳನ್ನು ವಿವರಿಸಿ ಈಗ ಸ್ವಿಷ್ಟಕೃತ್ ಎಂಬ ಹೋಮವನ್ನೂ ಅದರ ಮಂತ್ರಗಳನ್ನೂ ವಿವರಿಸಲಾಗುವುದು. ಸ್ವಿಷ್ಟಕೃದ್ಧೋಮವೆಂದರೆ ಪ್ರಧಾನಯೋಮಾನಂತರ (ಪ್ರಧಾನ ಹೋಮದಲ್ಲಿ ಪ್ರತಿಯೊಂದು ದೇವತೆಯನ್ನೂ ಪ್ರತ್ಯೇಕವಾಗಿ ನಿರ್ದೇಶಿಸಿ ಯಾಜ್ಯಾನುವಾಕ್ಯಾ ಮಂತ್ರಪಠನದಿಂದ ಹೋಮಮಾಡಲಾಗುವುದು) ಸ್ವಿಷ್ಟಿಕೃತ್ ಎಂಬ ಹೋಮವನ್ನು ಮಾಡಬೇಕು. ಈ ಹೋಮದಲ್ಲಿ ಪ್ರಧಾನದೇವತೆಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಹೋಮ ಮಾಡುವರು. **ಸರ್ವೇಭ್ಯಃ ಹವಿರ್ಭ್ಯಃ ಸಮವದಾಯ ಯಜತೀತಿ ಸಂಯಾಜ್ಯಾ** (ಆಶ್ವ.ಶ್ರೌ.ಸೂ ೨-೧-೨೧) ಪ್ರತಿಯೊಂದು ದೇವತೆಯ ಹೆಸರನ್ನೂ ಉಚ್ಚರಿಸಬೇಕಾಗಿಲ್ಲ. ಈ ಸ್ವಿಷ್ಟಕೃದ್ಧೋಮದಲ್ಲಿ ಉಪಯೋಗಿಸುವ ಯಾಜ್ಯಾ ಪುರೋನುವಾಕ್ಯಾ ಮಂತ್ರಗಳಿಗೆ ಸಂಯಾಜ್ಯಾ ಮಂತ್ರಗಳೆಂದು ಹೆಸರು. ಅವುಗಳಲ್ಲಿ ನಾನಾ ಛಂದಸ್ಸಿನ ಋಕ್ಕುಗಳನ್ನು ಉಪಯೋಗಿಸಬಹುದು. ಬೇರೆಬೇರೆ ಛಂದಸ್ಸಿನ ಋಕ್ಕುಗಳನ್ನು ಉಪಯೋಗಿಸಿದರೆ ಬೇರೆಬೇರೆ ಫಲಗಳು ಲಭಿಸುವವು. ಅವುಗಳ ವಿವರಗಳನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಲಾಗಿದೆ. ತೇಜಸ್ಸು ಎಂದರೆ ಶರೀರಕಾಂತಿಯು, ಬ್ರಹ್ಮವರ್ಚಸ್ಸು ಎಂದರೆ ವೇದಾಧ್ಯಯನ ಸಂಪತ್ತಿಯು. ಇವೆರಡನ್ನೂ ಬಯಸುವ ಯಜಮಾನನು ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಸಂಯಾಜ್ಯಾ ಮಂತ್ರಗಳನ್ನು

ಪಠಿಸಿ ಹೋಮಮಾಡಬೇಕು. ಈ ವಿಷಯದಲ್ಲಿ ಆಶ್ವಲಾಯನರು—**ಹವ್ಯವಾಳಮರ್ತ್ಯೋಽಗ್ನಿರ್ಹೋತಾ ಪುರೋಹಿತ ಇತಿ ಸ್ವಿಷ್ಟಿಕೃತಃ ಸಂಯಾಜ್ಯೇ ಇತ್ಯುಕ್ತೇ ಸೌವಿಷ್ಟಕೃತೀ ಪ್ರತೀಯಾತ್** (ಆಶ್ವ.ಶ್ರೌ. ೨-೧-೨೧) ಎಂದು ಹೇಳಿರುವರು. ಎಂದರೆ ಸ್ವಿಷ್ಟಿಕೃದ್ಧೋಮದಲ್ಲಿ ಸಂಯಾಜ್ಯಾ ಮಂತ್ರಗಳಿಗಾಗಿ ಗಾಯತ್ರೀಛಂದಸ್ಸಿನ **ಸ ಹವ್ಯವಾಡಮರ್ತ್ಯಃ** (ಋ.ಸಂ.೩-೧೧-೨) ಎಂಬ ಮಂತ್ರವನ್ನು ಮತ್ತು **ಅಗ್ನಿರ್ಹೋತಾ ಪುರೋಹಿತಃ** (ಋ.ಸಂ.೩-೧೧-೧) ಎಂಬ ಮಂತ್ರವನ್ನು ಪಠಿಸಬೇಕು. ಇವೆರಡೂ ಗಾಯತ್ರೀಛಂದಸ್ಸಿನ ಯಾಜ್ಯಾನುವಾಕ್ಯಾ ಮಂತ್ರಗಳು.

[ಸ್ವಿಷ್ಟಕೃದ್ಧೋಮದಲ್ಲಿ ಸಂಯಾಜ್ಯಾ ಮಂತ್ರಗಳಿಗಾಗಿ ನಾನಾವಿಧ ಛಂದಸ್ಸಿನ ಮಂತ್ರಗಳನ್ನು ಸೂಚಿಸಲಾಗಿದೆಯಷ್ಟೆ. ಇಲ್ಲಿ ಆ ಮಂತ್ರಗಳನ್ನು ಪೂರ್ತಿಯಾಗಿ ಕೊಟ್ಟಿದೆ—

(೧) ಗಾಯತ್ರೀಛಂದಸ್ಸಿನ ಮಂತ್ರಗಳು—

**ಸ ಹವ್ಯವಾಳಮರ್ತ್ಯ ಉಶಿಗ್ದೂತಶ್ಚನೋಹಿತಃ ।**
**ಅಗ್ನಿರ್ಧಿಯಾ ಸಮೃಣ್ವತಿ ॥** (ಋ. ಸಂ. ೩-೧೧-೨)
**ಅಗ್ನಿರ್ಹೋತಾ ಪುರೋಹಿತೋಽಧ್ವರಸ್ಯ ವಿಚರ್ಷಣಿಃ ।**
**ಸ ವೇದ ಯಜ್ಞಮಾನುಷಕ್ ॥** (ಋ.ಸಂ. ೩-೧೧-೧)

(೨) ಉಷ್ಣಿಕ್‌ಛಂದಸ್ಸಿನ ಮಂತ್ರಗಳು—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥** (ಋ. ಸಂ. ೧-೭೯-೪)
**ಸ ಇಧಾನೋ ವಸುಷ್ಕವಿರಗ್ನಿರೀಳೇನ್ಯೋ ಗಿರಾ ।**
**ರೇವದಸ್ಮಭ್ಯಂ ಪುರ್ವಣೀಕ ದೀದಿಹಿ ॥** (ಋ. ಸಂ. ೧-೭೯-೫)

(೩) ಅನುಷ್ಟುಪ್‌ಛಂದಸ್ಸಿನ ಮಂತ್ರಗಳು—

**ತ್ವಮಗ್ನೇ ವಸೂँರಿಹ ರುದ್ರಾँ ಆದಿತ್ಯಾँ ಉತ ।**
**ಯಜಾ ಸ್ವಧ್ವರಂ ಜನಂ ಮನುಜಾತಂ ಘೃತಪ್ರುಷಂ ॥** (ಋ. ಸಂ. ೧-೪೫-೧)
**ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।**
**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾವಹ ॥** (ಋ. ಸಂ. ೧-೪೫-೨)

(೪) ಬೃಹತೀಛಂದಸ್ಸಿನ ಮಂತ್ರಗಳು—

**ಏನಾ ವೋ ಅಗ್ನಿಂ ನಮಸೋರ್ಜೋ ನಪಾತಮಾ ಹುವೇ ।**
**ಪ್ರಿಯಂ ಚೇತಿಷ್ಠಮರತಿಂ ಸ್ವಧ್ವರಂ ವಿಶ್ವಸ್ಯ ದೂತಮಮೃತಂ ॥**
(ಋ. ಸಂ. ೭-೧೬-೧)
**ಉದಸ್ಯ ಶೋಚಿರಸ್ಥಾದಾಜುಹ್ವಾನಸ್ಯ ಮೀಳ್ಹುಷಃ ।**
**ಉದ್ಧೂಮಾಸೋ ಅರುಷಾಸೋ ದಿವಿಸ್ಪೃಶಃ ಸಮಗ್ನಿಮಿಂಧತೇ ನರಃ ॥**
(ಋ. ಸಂ. ೭-೧೬-೩)

(೫) ಪಂಕ್ತಿಶ್ಛಂದಸ್ಸಿನ ಮಂತ್ರಗಳು —

**ಅಗ್ನಿಂ ತಂ ಮನ್ಯೇ ಯೋ ವಸುರಸ್ತಂ ಯಂ ಯಂತಿ ಧೇನವಃ ।**
**ಅಸ್ತಮರ್ವಂತ ಆಶವೋಽಸ್ತಂ ನಿತ್ಯಾಸೋ ವಾಜಿನ ಇಷಂ ಸ್ತೋತೃಭ್ಯ ಆ ಭರ ॥**

(ಋ. ಸಂ. ೫-೬-೧)

**ಸೋ ಅಗ್ನಿರ್ಯೋ ವಸುರ್ಗೃಣೇ ಸಂ ಯಮಾಯಂತಿ ಧೇನವಃ ।**
**ಸಮರ್ವಂತೋ ರಘುದ್ರುವಃ ಸಂ ಸುಜಾತಾಸಃ ಸೂರಯ ಇಷಂ ಸ್ತೋತೃಭ್ಯ ಆ ಭರ ।**

(ಋ. ಸಂ. ೫-೬-೨)

(೬) ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳು—

**ದ್ವೇ ವಿರೂಪೇ ಚರತಃ ಸ್ವರ್ಥೇ ಅನ್ಯಾನ್ಯಾ ವತ್ಸಮುಪ ಧಾಪಯೇತೇ ।**
**ಹರಿರನ್ಯಸ್ಯಾಂ ಭವತಿ ಸ್ವಧಾವಾಞ್ಛುಕ್ರೋ ಅನ್ಯಸ್ಯಾಂ ದದೃಶೇ ಸುವರ್ಚಾಃ ॥**

(ಋ. ಸಂ. ೧-೯೫-೧)

**ದಶೇಮಂ ತ್ವಷ್ಟುರ್ಜನಯಂತ ಗರ್ಭಮತಂದ್ರಾಸೋ ಯುವತಯೋ ವಿಭೃತ್ರಂ ।**
**ತಿಗ್ಮಾನೀಕಂ ಸ್ವಯಶಸಂ ಜನೇಷು ವಿರೋಚಮಾನಂ ಪರಿ ಷೀಂ ನಯಂತಿ ॥**

(ಋ. ಸಂ. ೧-೯೧-೨)

(೭) ಜಗತೀ ಛಂದಸ್ಸಿನ ಮಂತ್ರಗಳು—

**ಜನಸ್ಯ ಗೋಪಾ ಅಜನಿಷ್ಟ ಜಾಗೃವಿರಗ್ನಿಃ ಸುದಕ್ಷಃ ಸುವಿತಾಯ ನವ್ಯಸೇ ।**
**ಘೃತಪ್ರತೀಕೋ ಬೃಹತಾ ದಿವಿಸ್ಪೃಶಾ ದ್ಯುಮದ್ವಿಭಾತಿ ಭರತೇಭ್ಯಃ ಶುಚಿಃ ।**

(ಋ.ಸಂ. ೫-೧೧-೧)

**ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಮಗ್ನಿಂ ನರಸ್ತ್ರಿಷಧಸ್ಥೇ ಸಮಿಧೀರೇ ।**
**ಇಂದ್ರೇಣ ದೇವೈಃ ಸರಥಂ ಸ ಬರ್ಹಿಷಿ ಸೀದನ್ನಿ ಹೋತಾ ಯಜಥಾಯ ಸುಕ್ರತುಃ ॥**

(ಋ. ಸಂ. ೫-೧೧-೨)

(೮) ವಿರಾಟ್ ಛಂದಸ್ಸಿನ ಮಂತ್ರಗಳು—

**ಪ್ರೇದ್ಧೋ ಅಗ್ನೇ ದೀದಿಹಿ ಪುರೋ ನೋಽಜಸ್ರಯಾ ಸೂರ್ಮ್ಯಾ ಯವಿಷ್ಠ ।**
**ತ್ವಾಂ ಶಶ್ವಂತ ಉಪ ಯಂತಿ ವಾಜಾಃ ॥** (ಋ.ಸಂ. ೭-೧-೩)

**ಇಮೋ ಅಗ್ನೇ ವೀತತಮಾನಿ ಹವ್ಯಾಜಸ್ರೋ ವಕ್ಷಿ ದೇವತಾತಿಮಚ್ಛ ।**
**ಪ್ರತಿ ನ ಈಂ ಸುರಭೀಣಿ ವ್ಯಂತು ॥** ಋ. ಸಂ. ೭-೧-೧೮)

## ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ ॥

**ಗಾಯತ್ರ್ಯಾ ಉಕ್ತಫಲಸಾಧನತ್ವಮುಪಪಾದಯತಿ । ತತ್ಸವಿತುರ್ವರೇಣ್ಯ** (ಋ. ಸಂ. ೩-೬೨-೧೦) **ಮಿತ್ಯಸ್ಯಾಮೃಚಿ ಯದ್ಗಾಯತ್ರೀಛಂದಸ್ತಸ್ಯ ತೇಜೋಬ್ರಹ್ಮವರ್ಚಸಸಾಧನತ್ವೇನ ತದ್ರೂಪತ್ವಂ ಲೋಕೇ ಪ್ರಸಿದ್ಧಂ । ಸ್ನಾನಧೌತವಸ್ತ್ರದರ್ಭತಿಲಕಧಾರಣಪುರಸ್ಸರಂ ಗಾಯತ್ರೀಂ ಜಪತೋ ಬ್ರಾಹ್ಮಣಸ್ಯ ದೇಹೇ ಕಾಚಿದಾಕಾರಶೋಭಾ ದೃಶ್ಯತೇ ತದಿದಂ ತೇಜಃ । ಸ ಚ ಜಪಿತಾ ವೇದಮಧೀತೇ ತದರ್ಥಂ ಚ ಶೃಣೋತಿ ತದಿದಂ ಬ್ರಹ್ಮವರ್ಚಸಂ ।**

**ತತ್ಸವಿತುರ್ವರೇಣ್ಯಂ** (ಋ.ಸಂ.೩-೬೨-೧೦) ಎಂಬುದು ಗಾಯತ್ರೀಮಂತ್ರವು ಇದರ ಛಂದಸ್ಸಿಗೂ ಈ ಮಂತ್ರದ ಹೆಸರೇ ಇರುವುದು. ತೈ. ಬ್ರಾಹ್ಮಣದಲ್ಲಿ ಗಾಯತ್ರಿಯ ವಿಷಯವಾಗಿ **ಅಷ್ಟಾಕ್ಷರಾ ಗಾಯತ್ರೀ । ಗಾಯತ್ರೀ ಬ್ರಹ್ಮವರ್ಚಸಂ । ಗಾಯತ್ರಿಯೈವ ಬ್ರಹ್ಮವರ್ಚಸಮವರುಂಧೇ ।........ ತೇಜಸ ಏವ ರುಚೇ ।** (ತೈ.ಬ್ರಾ.೨-೭-೩-೩) ಎಂದು ಹೇಳಿರುವುದು. ಎಂದರೆ ಗಾಯತ್ರೀಛಂದಸ್ಸಿನ ಪಾದಗಳಲ್ಲಿ ಎಂಟೆಂಟು ಅಕ್ಷರಗಳಿರುವವು. ಈ ಗಾಯತ್ರೀ ಮಂತ್ರವು ಅಥವಾ ಛಂದಸ್ಸಿನ ಮಂತ್ರವು ತೇಜಸ್ಸು ಮತ್ತು ಬ್ರಹ್ಮವರ್ಚಸ್ಸಿನ ಸ್ವರೂಪವಾಗಿರುವುದು. ಸ್ನಾನಮಾಡಿ ಶುಭ್ರವಸ್ತ್ರಗಳನ್ನು ಧರಿಸಿ ಭಸ್ಮ ತಿಲಕಾದಿಗಳನ್ನು ಧರಿಸಿ ಶುಚಿರ್ಭೂತನಾಗಿ ಗಾಯತ್ರೀ ಮಂತ್ರವನ್ನು ಜಪಿಸುವ ಪುರುಷನ ಶರೀರದಲ್ಲಿ ಒಂದು ಅಪೂರ್ವವಾದ ಕಾಂತಿಯು ಬೆಳಗುತ್ತಿರುವುದು ಗೋಚರಿಸುವುದು. ಅದನ್ನೇ ತೇಜಸ್ಸೆಂದು ಹೇಳುವರು. ಇಂತಹ ತೇಜೋ ವಿಶಿಷ್ಟನಾದ ಪುರುಷನು ವೇದಾಧ್ಯಯನವನ್ನು ಮಾಡಿ ಶ್ರವಣಮನನಾದಿಗಳಿಂದ ಅರ್ಥವಿಮರ್ಶೆ ಮಾಡಿ ಯಜ್ಞಾದಿ ಕರ್ಮಾನುಷ್ಠಾನದಲ್ಲಿ ಆಸಕ್ತನಾದರೆ ಅವನು ಬ್ರಹ್ಮವರ್ಚಸ್ಸಿನಿಂದ ಶೋಭಿಸುವನು.

**ತೇಜಸ್ವೀ ಬ್ರಹ್ಮವರ್ಚಸೀ ಭವತಿ ಯ ಏವಂ ವಿದ್ವಾನ್ಗಾಯತ್ರ್ಯಾ ಕುರುತೇ ॥**

**ವೇದನಪುರಸ್ಸರಮನುಷ್ಠಾತುಃ ಫಲಂ ದರ್ಶಯತಿ । ಯದ್ಯಪಿ ವಿಧಿವಾಕ್ಯೇಽನುಷ್ಠಾನಮಾತ್ರಾತ್ಫಲಮುಕ್ತಂ ತಥಾಪಿ ವೇದನಪೂರ್ವಕಾನುಷ್ಠಾನೇ ತಸ್ಮಿನ್ನೇವ ಫಲೇ ಕಶ್ಚಿದತಿಶಯೋ ದ್ರಷ್ಟವ್ಯಃ ।**

ಯಾವ ಪುರುಷನು ಮೇಲೆ ಹೇಳಿದ ಗಾಯತ್ರೀಛಂದಸ್ಸಿನ ಮಹಾತ್ಮೆಯನ್ನು ತಿಳಿದು ಅದರಂತೆ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಯಜ್ಞಾನುಷ್ಠಾನವನ್ನು ಮಾಡುವನೋ ಆ ಪುರುಷನು ಅಪೂರ್ವವಾದ ತೇಜಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಶೋಭಿಸುವನು.

**ಉಷ್ಣಿಹಾ ವಾಯುಷ್ಕಾಮಃ ಕುರ್ವೀತ ।**

**ಫಲಾಂತರಾಯ ಛಂದೋತ್ತರಂ ವಿಧತ್ತೇ । ಅಗ್ನೇ ವಾಜಸ್ಯಗೋಮತ** (ಋ.ಸಂ. ೧-೭೯-೪) **ಇತ್ಯೇಕೋಷ್ಣಿಕ್ । ಸ ಇಧಾನೋ ವಸುಷ್ಕವಿ** (ಋ.ಸಂ. ೧-೭೯-೫) **ರಿತ್ಯಪರಾ । ತೇ ಉಭೇ ಶತಸಂವತ್ಸರಪರ್ಯಂತಾಯುಷ್ಕಾಮಃ ಕುರ್ವಿತ ।**

ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಸಂಯಾಜ್ಯಾಹೋಮಗಳನ್ನು ಮಾಡುವ ಪುರುಷನಿಗೆ ಲಭಿಸುವ ಫಲವನ್ನು ಹೇಳಿದ್ದಾಯಿತು. ಇನ್ನು ಇತರ ಛಂದಸ್ಸುಗಳ ಮಂತ್ರಗಳಿಂದ ಸಂಯಾಜ್ಯಾ ಹೋಮವನ್ನು ಮಾಡಿದರೆ ಯಾವಯಾವ ಫಲಗಳು ಲಭಿಸುತ್ತವೆ ಎಂಬುದನ್ನು ಈಗ ವಿವರಿಸಲಾಗುವುದು. ಪ್ರಕೃತ ಉಷ್ಣಿಕ್‌ಛಂದಸ್ಸಿನ ಮಂತ್ರಗಳಾದ **ಅಗ್ನೇ ವಾಜಸ್ಯ** (ಋ.ಸಂ. ೧-೭೯-೪) ಮತ್ತು **ಸ ಇಧಾನೋ ವಸುಷ್ಕವಿಃ** (ಋ.ಸಂ.೧.೭೯-೫) ಎಂಬ ಋಕ್ಕುಗಳಿಂದ ಸಂಯಾಜ್ಯಾ ಹೋಮಗಳನ್ನು ಮಾಡಿದರೆ ಆ ಯಜಮಾನನು ನೂರು ಸಂವತ್ಸರಗಳವರೆಗೆ ಆಯುಸ್ಸನ್ನು ಪಡೆದು ಸುಖಿಸುವನು.

**ಆಯುರ್ವಾ ಉಷ್ಣಿಕ್ । ಸರ್ವಮಾಯುರೇತಿ ಯ ಏವಂ ವಿದ್ವಾನುಷ್ಣಿಹಾ ಕುರುತೇ ॥**

ಗಾಯತ್ರ್ಯಾ ಅಷ್ಟಾಕ್ಷರಚತುಷ್ಟಯೇನೋಷ್ಣಿಕ್ಛಂದಸೋಽಧಿಕತ್ವಾದಾಯುರ್ವೃದ್ಧಿಹೇತುತ್ವಂ ಯುಕ್ತಮಿತ್ಯಭಿಪ್ರೇತ್ಯೋಷ್ಣಿಗಾಯುಷೋರಭೇದಮಾಹ । ಪೂರ್ವವದ್ವೇದನಂ ಪ್ರಶಂಸತಿ ।

ಗಾಯತ್ರೀಛಂದಸ್ಸಿನಲ್ಲಿರುವುದಕ್ಕಿಂದ ಉಷ್ಣಿಕ್‌ಛಂದಸ್ಸಿನ ಪಾದಗಳಲ್ಲಿ ನಾಲ್ಕು ಅಕ್ಷರಗಳು ಹೆಚ್ಚಾಗಿರುವುದರಿಂದ ಈ ಛಂದಸ್ಸಿನ ಋಕ್ಕುಗಳಿಂದ ಹೋಮಮಾಡಿದರೆ ಆ ಯಜಮಾನನಿಗೆ ಆಯುರ್ವೃದ್ಧಿಯಾಗುವುದು ನಿಶ್ಚಯವು. ಆದ್ದರಿಂದ ಈ ವಿಷಯವನ್ನು ಚೆನ್ನಾಗಿ ತಿಳಿದುಕೊಂಡು ಅದರಂತೆ ಆಚರಿಸುವ ಪುರುಷನು ನೂರುವರುಷ ಆಯುಸ್ಸನ್ನು ಪಡೆದು ಸುಖಿಸುವನು.

**ಅನುಷ್ಟುಭೌ ಸ್ವರ್ಗಕಾಮಃ ಕುರ್ವೀತ ।**

ಫಲಾಂತರಾಯ ಛಂದೋಂತರಂ ವಿಧತ್ತೇ । ತ್ವಮಗ್ನೇ ವಸೂ (ಋ. ಸಂ. ೧-೪೫-೧) ನಿತಿ ದ್ವೇ ಅನುಷ್ಟುಭೌ ।

ಸ್ವರ್ಗಲೋಕಪ್ರಾಪ್ತಿಯಾಗಬೇಕೆಂದು ಬಯಸುವ ಯಜಮಾನನು ಅನುಷ್ಟುಪ್ ಛಂದಸ್ಸುಗಳಾದ ತ್ವಮಗ್ನೇ ವಸೂನ್ (ಋ.ಸಂ. ೧-೪೫-೧) ಮತ್ತು ಶ್ರುಷ್ಟೀವಾನೋ ಹಿ ದಾಶುಷೇ (ಋ. ಸಂ. ೧-೪೫-೨) ಎಂಬ ಋಕ್ಕುಗಳಿಂದ ಹೋಮಮಾಡಬೇಕು.

**ದ್ವಯೋರ್ವಾ ಅನುಷ್ಟುಭೋಶ್ಚತುಃಷಷ್ಟಿರಕ್ಷರಾಣಿ ತ್ರಯ ಇಮ ಊರ್ಧ್ವಾ ಏಕವಿಂಶಾ ಲೋಕಾ ಏಕವಿಂಶತ್ಯೈಕವಿಂಶತ್ಯೈವೇಮಾನ್ ಲೋಕಾನ್ರೋಹತಿ ಸ್ವರ್ಗ ಏವ ಲೋಕೇ ಚತುಃಷಷ್ಟಿತಮೇನ ಪ್ರತಿತಿಷ್ಠತಿ । ಪ್ರತಿತಿಷ್ಠತಿ ಯ ಏವಂ ವಿದ್ವಾನನುಷ್ಟುಭೌ ಕುರುತೇ ॥**

ಅನುಷ್ಟುಭೋಃ ಸ್ವರ್ಗಹೇತುತ್ವಮುಪಪಾದಯತಿ । ಶ್ರುತ್ಯಂತರೇ ದ್ವಾತ್ರಿಂಶದಕ್ಷರಾನುಷ್ಟುಬಿತ್ಯಭಿಧಾನಾದ್ದ್ವಯೋರನುಷ್ಟುಭೋರ್ಮಿಲಿತ್ವಾ ಚತುಃಷಷ್ಟಿಸಂಖ್ಯಾಕಾನ್ಯಕ್ಷರಾಣಿ ಸಂಪದ್ಯಂತೇ । ಇಮೇ ಪೃಥಿವ್ಯಂತರಿಕ್ಷಸ್ವರ್ಗರೂಪಾ ಏಕೈಕಸ್ಮಾದೂರ್ಧ್ವತ್ವೇನ ವರ್ತಮಾನಾಃ ಪ್ರತ್ಯೇಕಮೇಕವಿಂಶತ್ಯವಯವಸಮೂಹರೂಪಾ ಲೋಕಾಸ್ತ್ರಯೋ ವಿದ್ಯಂತೇ । ತೇಷ್ವೇಕೈಕಂ ಲೋಕಮೇಕೈಕಾಕ್ಷರಗತಯೈಕವಿಂಶತಿಸಂಖ್ಯಯಾ ಯಜಮಾನ ಆರೋಹತಿ । ಅಂತಿಮೇನ ಚತುಃಷಷ್ಟಿತಮೇನಾಕ್ಷರೇಣ ತೃತೀಯೇ ಸ್ವರ್ಗ ಏವ ಲೋಕೇ ಯಜಮಾನಃ ಪ್ರತಿತಿಷ್ಠತಿ ಸ್ಥಿರೋಽವತಿಷ್ಠತೇ । ವೇದನಂ ಪ್ರಶಂಸತಿ ।

ಅನುಷ್ಟುಪಛಂದಸ್ಸುಗಳು ಹೇಗೆ ಸ್ವರ್ಗಪ್ರಾಪ್ತಿಗೆ ಕಾರಣವೆಂಬುದನ್ನು ವಿವರಿಸುತ್ತಾರೆ. ತೈತ್ತಿರೀಯಸಂಹಿತೆಯಲ್ಲಿ—**ದ್ವಾತ್ರಿಂಶದಕ್ಷರಾನುಷ್ಟುಪ್** (ತೈ.ಸಂ.೨-೫-೧೦-೩) ಎಂದು ಹೇಳಿರುವುದರಿಂದ ಅನುಷ್ಟುಪ್‌ಛಂದಸ್ಸಿನ ಯಾಜ್ಯಾನುವಾಕ್ಯಾ ಎಂಬ ಎರಡು ಮಂತ್ರಗಳಿಗೆ ಒಟ್ಟು ೬೪ ಅಕ್ಷರಗಳಾದವು. ಪೃಥಿವೀ ಅಂತರಿಕ್ಷ ಸ್ವರ್ಗ ಎಂಬ ಮೂರು ಲೋಕಗಳಿರುವವು. ಇವು ಒಂದಕ್ಕಿಂತ ಮತ್ತೊಂದು ಊರ್ಧ್ವಭಾಗದಲ್ಲಿದ್ದು ಪ್ರತಿಯೊಂದು ಲೋಕವೂ ಇಪ್ಪತ್ತೊಂದು ಅವಯವ ಸಮೂಹಗಳಿಂದ ಕೂಡಿರುವವು.

ಯಜ್ಞಮಾಡುವ ಯಜಮಾನನು ಈ ಮೂರು ಲೋಕಗಳಲ್ಲಿರುವ ಪ್ರತಿಯೊಂದು ಅವಯವವನ್ನು (ವಿಭಾಗ) ಒಂದೊಂದು ಅಕ್ಷರ ದಿಂದ ಅತಿಕ್ರಮಿಸಿ ಮೇಲೆಮೇಲಕ್ಕೆ ಹೋಗುವನು. ಈರೀತಿ ಮೂರು ಲೋಕಗಳ ೬೩ ವಿಭಾಗಗಳನ್ನು ೬೩ ಅಕ್ಷರಗಳಿಂದ ಅತಿಕ್ರ ಮಿಸಿದನಂತರ ೬೪ ನೇ ಅಕ್ಷರದಿಂದ ಕೊನೆಯಭಾಗವಾದ ಸ್ವರ್ಗಲೋಕವನ್ನು ಏರಿ ಅಲ್ಲಿ ಸ್ಥಿರವಾಗಿ ನೆಲಸುವನು. ಆದ್ದರಿಂದ ಅನುಷ್ಟುಪ್‌ಛಂದಸ್ಸಿನ ಋಕ್ಕುಗಳಿಂದ ಯಾವ ಯಜಮಾನನು ಹೋಮಮಾಡುವನೋ ಅವನು ಮೇಲೆ ಹೇಳಿದಂತೆ ಪೃಥಿವ್ಯಂತರಿಕ್ಷಲೋಕಗಳನ್ನು ಅತಿಕ್ರಮಿಸಿ ಸ್ವರ್ಗಲೋಕದಲ್ಲಿ ಸ್ಥಿರವಾಗಿ ನೆಲಸುವನು.

## ಬೃಹತ್ಯಾ ಶ್ರೀಕಾಮೋ ಯಶಸ್ಕಾಮಃ ಕುರ್ವೀತ ।

**ಫಲಾಂತರಾಯ ಛಂದೋಂತರಂ ವಿಧತ್ತೇ । ಶ್ರೀರ್ಧನಧಾನ್ಯಾದಿಸಂಪತ್ತಿಃ । ಯಶಃ ಸತ್ಕುಲದಾನಾದಿಜನ್ಯಾ ಕೀರ್ತಿಃ । ಏನಾ ವೋ ಅಗ್ನಿ (ಸು. ಸಂ. ೭-೧೬-೧) ಮಿತಿ ದ್ವೇ ಬೃಹತ್ಯೌ ।**

ಶ್ರೀಃ ಎಂದರೆ ಧನಧಾನ್ಯಾದಿಸಂಪತ್ತು; ಯಶಃ ಎಂದರೆ ಸತ್ಕುಲದಲ್ಲಿ ಜನಿಸಿ ಧಾನಧರ್ಮಾದಿಗಳನ್ನು ಮಾಡಿ ಎಲ್ಲರಿಂದಲೂ ಪ್ರಶಂಸೆಯನ್ನು ಪಡೆಯುವುದೇ ಕೀರ್ತಿಯು. ಈ ವಿಧವಾದ ಧನಧಾನ್ಯಾದಿ ಸಂಪತ್ತುಗಳನ್ನೂ ಕೀರ್ತಿಯನ್ನೂ ಅಪೇಕ್ಷಿಸುವ ಯಜಮಾನನು ಬೃಹತೀಛಂದಸ್ಸಿನ ಮಂತ್ರಗಳಾದ **ಏನಾ ವೋ ಅಗ್ನಿಂ** (ಋ.ಸಂ.೭-೧೬-೧) ಮತ್ತು **ಸ ಯೋಜತೇ ಅರುಷಾ** (ಋ.ಸಂ.೭-೧೬-೨) ಅಥವಾ ಉದಸ್ಯ ಶೋಚಿರಸ್ಥಾತ್ (ಋ.ಸಂ.೭-೧೬-೩-) ಎಂಬ ಋಕ್ಕುಗಳಿಂದ ಹೋಮ ಮಾಡಬೇಕು. [ಇಲ್ಲಿ **ಏನಾ ವೋ ಅಗ್ನಿಂ** ಎಂಬುದು ಬೃಹತೀಛಂದಸ್ಸು; **ಸ ಯೋಜತೇ** ಎಂಬುದು ಸತೋ ಬೃಹತೀ ಛಂದಸ್ಸು ಇವೆರಡೂ ಸೇರಿ ಪ್ರಗಾಥವೆಂಬ ಛಂದಸ್ಸಾಗಿರುವುದು. ಈ ಸೂಕ್ತದಲ್ಲಿ (೭-೧೬) ಮತ್ತು ಈ ಮಂಡಲದ ಇತರ ಕೆಲವು ಸೂಕ್ತಗಳಲ್ಲಿಯೂ ಈ ವಿಧವಾದ ಪ್ರಗಾಥವೆಂಬ ಛಂದಸ್ಸಿನ ಮಂತ್ರಗಳಿರುವವು. ಇಲ್ಲಿ ಯಾಜ್ಯಾಪುರೋನುವಾಕ್ಯಾ ಮಂತ್ರ ಗಳಿಗೆ ಈ ಸೂಕ್ತದ (೭-೧೬) ಮೊದಲಿನ ಎರಡು ಋಕ್ಕುಗಳನ್ನು ಉಪಯೋಗಿಸಬೇಕೆಂದು ಹೇಳಿದೆ. ಆದರೆ ಕೆಲವರ ಅಭಿಪ್ರಾಯ ದಲ್ಲಿ **ಸ ಯೋಜತೇ** ಎಂಬ ೨ನೇ ಋಕ್ಕು ಸತೋಬೃಹತೀ ಛಂದಸ್ಕವಾದ್ದರಿಂದ ಮುಂದಿನ ಋಕ್ಕಾದ ಉದಸ್ಯ ಶೋಚಿಃ (೭-೧೬-೩) ಎಂಬ ಋಕ್ಕನ್ನು ಹೇಳಬೇಕೆಂದು ಕೆಲವರ ಅಭಿಪ್ರಾಯವು.]

## ಶ್ರೀರ್ವೈ ಯಶಶ್ಛಂದಸಾಂ ಬೃಹತೀ । ಶ್ರಿಯಮೇವ ಯಶ ಆತ್ಮ-ನ್ಧತ್ತೇ ಯ ಏವಂ ವಿದ್ವಾನ್ಬೃಹತ್ಯಾ ಕುರುತೇ ॥

**ಶ್ರೀಯಶಸೋಃ ಕಾರಣತ್ವೇನ ಬೃಹತ್ಯಾಸ್ತದುಭಯರೂಪತ್ವಂ ದರ್ಶಯತಿ । ಗಾಯ-ತ್ರ್ಯಾದೀನಾಂ ಛಂದಸಾಂ ಮಧ್ಯೇ ಯಾ ಬೃಹತೀ ಸೈವ ಶ್ರೀರೂಪಾ ಯಶೋರೂಪಾ ಚ । ಸರ್ವೇಷಾಂ ಛಂದಸಾಂ ಪಶುಸಂಪಾದನಸಾಮರ್ಥ್ಯೇ ಸತಿ ಬೃಹತ್ಯಾ ವಿಜಯಮಾಪನ್ನಾಯಾಃ ಪಶುರೂಪತ್ವಾಚ್ಛ್ರೀರೂಪತ್ವಂ । ತಥಾ ಚ ತೈತ್ತಿರೀಯಾ ಆಮನಂತಿ— ಛಂದಾಂಸಿ ಪಶುಷ್ವಾ-ಜಿಮಯುಸ್ತಾನ್ಬೃಹತ್ಯುದಜಯತ್ತಸ್ಮಾದ್ಬಾರ್ಹತಾಃ ಪಶವ ಉಚ್ಯಂತ ಇತಿ । ಇತರಚ್ಛಂದೋಭಿ-ರಾಶ್ರಿತತ್ವಾದಪಿ ಶ್ರೀರೂಪತ್ವಂ ತ ಏವಾಮನಂತಿ— ಯಾನಿ ಚ ಛಂದಾಗ್ಸ್ಯತ್ಯರಿಚ್ಯಂತ । ಯಾನಿ ಚ ನೋದಭವನ್ । ತಾನಿ ನಿರ್ವೀರ್ಯಾಣಿ ಹೀನಾನ್ಯಮನ್ಯಂತ । ಸಾಬ್ರವೀದ್ಬೃಹತೀಂ । ಮಾಮೇವ ಭೂತ್ವಾ ಮಾಮುಪಸಗ್‌ಶ್ರಯತ ಇತಿ । ಮಧ್ಯಂ ಹ್ಯೇಷಾಮಂಗಾನಾಮಾತ್ಮಾ**

**ಮಧ್ಯಂ ಛಂದಸಾಂ ಬೃಹತೀತಿ । ಮಧ್ಯತ್ವೇನ ಪ್ರಶಂಸನಾದ್ಯಶೋರೂಪತ್ವಮಪಿ ದ್ರಷ್ಟವ್ಯಂ । ವೇದನಂ ಪ್ರಶಂಸತಿ । ಏವಕಾರಃ ಶ್ರೀಯಶಸೋಃ ಸಮುಚ್ಚಯಾರ್ಥಃ ।**

ಧನಧಾನ್ಯ ಸಂಪತ್ತು ಮತ್ತು ಕೀರ್ತಿಗಳು ಬೃಹತೀಛಂದಸ್ಸಿನಿಂದ ಹೇಗೆ ಲಭಿಸುವವು ಎಂಬ ವಿವರವನ್ನು ತಿಳಿಸುತ್ತಾರೆ— ಗಾಯತ್ರ್ಯಾದಿ ಸಪ್ತಛಂದಸ್ಸುಗಳ ಮಧ್ಯದಲ್ಲಿ ಬೃಹತೀಛಂದಸ್ಸೆಂಬುದು ಶ್ರೀ ಮತ್ತು ಯಶಸ್ಸ್ವರೂಪವುಳ್ಳದ್ದು. ಸಮಸ್ತ ಛಂದಸ್ಸುಗಳ ಮಧ್ಯದಲ್ಲಿ ಬೃಹತೀಛಂದಸ್ಸಿಗೆ ಧನಧಾನ್ಯ ಸಂಪತ್ತನ್ನು ಉಂಟುಮಾಡುವ ಸಾಮರ್ಥ್ಯವು ಹೇಗೆ ಬಂತೆಂಬ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಒಂದು ಉಪಾಖ್ಯಾನವಿದೆ—ಛಂದಾಗ್ಂಸಿ ಪಶುಷ್ವಾಜಿಮಯುಸ್ತಾನ್ ಪಶುಷ್ವಾಜಿಮಯುಸ್ತಾನ್ ಬೃಹತ್ಯುದಜಯತ್ತಸ್ಮಾದ್ಬಾರ್ಹತಾಃ ಪಶವ ಉಚ್ಯಂತೇ (ತೈ.ಸಂ.೫-೩-೨-೩,೪). ಪೂರ್ವದಲ್ಲಿ ಪಶುಸಮೃದ್ಧಿಯನ್ನು ಪಡೆಯಬೇಕೆಂದು ಗಾಯತ್ರ್ಯಾದಿಛಂದಸ್ಸುಗಳಲ್ಲಿ ಆಕಾಂಕ್ಷೆಯು ಹುಟ್ಟಿತು. ಆಗ ಆ ಛಂದಸ್ಸುಗಳು ತಮ್ಮತಮ್ಮಲ್ಲಿಯೇ ಒಂದು ಸ್ಪರ್ಧೆಯನ್ನು ಏರ್ಪಡಿಸಿ ಆ ಸ್ಪರ್ಧೆಯಲ್ಲಿ ಯಾರು ಗೆಲ್ಲುತ್ತಾರೆಯೋ ಅವರೇ ಪಶುಸಂಪತ್ತಿಗೆ ಅರ್ಹರು ಎಂದು ತೀರ್ಮಾನಿಸಿ ಅದರಂತೆ ಸ್ಪರ್ಧೆಯನ್ನು ನಡೆಸಲು ಆಗ ಬೃಹತೀಛಂದಸ್ಸಿಗೇ ಜಯವುಂಟಾಯಿತು. ಆದ್ದರಿಂದ ಬೃಹತೀಛಂದಸ್ಸೇ ಶ್ರೀಯಶಸ್ಸುಗಳಿಗೆ ಅಧಿಪತಿಯು. ಇಲ್ಲಿ ಶ್ರೀ ಎಂದರೆ ಪಶುಸಂಪತ್ತು ಎಂದರ್ಥವು. [ಪೂರ್ವದಲ್ಲಿ ಒಬ್ಬ ಪುರುಷನಬಳಿ ಇರುವ ಪಶುಸಂಖ್ಯೆಯಿಂದಲೇ ಅವನ ಸಂಪತ್ತು ಮತ್ತು ಸ್ಥಾನಮಾನಗಳ ನಿರ್ಣಯವಾಗುವ ಪದ್ಧತಿ ಇತ್ತು. ಕೆಲವು ಕಾಡುಜನರಲ್ಲಿ ಈಗಲೂ ಆ ಪದ್ಧತಿ ಇದೆ]. ಇವಲ್ಲದೆ ಬೃಹತೀಛಂದಸ್ಸು ಗಾಯತ್ರ್ಯಾದಿ ಸಪ್ತಛಂದಸ್ಸುಗಳಲ್ಲಿ ಎಂದರೆ, ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿಃ, ತ್ರಿಷ್ಟುಪ್, ಜಗತೀ ಎಂಬ ಏಳು ಮುಖ್ಯಛಂದಸ್ಸುಗಳಲ್ಲಿ ಬೃಹತೀಛಂದಸ್ಸಿಗೆ ಮಧ್ಯ (ನಾಲ್ಕನೆಯ) ಸ್ಥಾನವಿರುವುದರಿಂದ ಇದನ್ನು ಇತರ ಛಂದಸ್ಸುಗಳು ಆಶ್ರಯಿಸುವಂತಾಯಿತು. ತೈತ್ತಿರೀಯಬ್ರಾಹ್ಮಣದಲ್ಲಿ—**ಯಾನಿ ಚ ಛಂದಾಗ್ಸ್ಯತ್ಯರಿಚ್ಯಂತ । ಯಾನಿ ಚ ನೋದಭವನ್ । ತಾನಿ ನಿರ್ವೀರ್ಯಾಣಿ ಹೀನಾನ್ಯಮನ್ಯಂತ । ಸಾಬ್ರವೀದ್ಬೃಹತೀ । ಮಾಮೇವ ಭೂತ್ವಾ । ಮಾಮುಪಸಗ್ಂ ಶ್ರಯತೇತಿ** &c. (ತೈ.ಬ್ರಾ.೧-೫-೧೨-೩). ಗಾಯತ್ರ್ಯಾದಿ ಸಪ್ತಛಂದಸ್ಸುಗಳಲ್ಲಿ ಇತರ ಛಂದಸ್ಸುಗಳು ಅಕ್ಷರಗಳಲ್ಲಿ ಹೆಚ್ಚುಕಡಿಮೆ ಇರುವುದರಿಂದ ಆದಿತ್ಯನನ್ನು ಸಮೀಪಿಸಲಾರದೇ ಹೋದುವು. ಆದರೆ ಬೃಹತೀಛಂದಸ್ಸಿನಲ್ಲಿ ನಿರ್ದಿಷ್ಟಾಕ್ಷರಗಳಿದ್ದದ್ದರಿಂದ ಅದು ಆದಿತ್ಯನನ್ನು ಸಮೀಪಿಸಿತು. ಇದನ್ನು ಕಂಡು ಇತರ ಛಂದಸ್ಸುಗಳು ಬೃಹತಿಯನ್ನು ಕುರಿತು ತಾವೂ ಹೇಗೆ ಆರೀತಿ ಮಾಡಲು ಸಾಧ್ಯವೆಂದು ಪ್ರಶ್ನಿಸಿದಾಗ ಬೃಹತಿಯು ಇತರ ಛಂದಸ್ಸುಗಳಿಗೆ—ನೀವೂ ನನ್ನಂತೆ ಹೆಚ್ಚುಕಡಿಮೆ ಇರುವ ಅಕ್ಷರಗಳನ್ನು ಸರಿಪಡಿಸಿಕೊಂಡು ಯುಕ್ತಾಕ್ಷರಗಳಿಂದ ಕೂಡಿದರೆ ಆದಿತ್ಯನನ್ನು ಸಮೀಪಿಸಲಾಗುವುದು ಎಂದು ಹೇಳಿತು. ಇತರ ಛಂದಸ್ಸುಗಳು ಹಾಗೆಯೇ ಆಗಲೆಂದು ಒಪ್ಪಿ ಅದಕ್ಕಾಗಿ ಬೃಹತೀಛಂದಸ್ಸನ್ನು ಆಶ್ರಯಿಸಿದವು ಎಂದು ಹೇಳಿದೆ. ಇತರ ಛಂದಸ್ಸುಗಳು ಬೃಹತೀಛಂದಸ್ಸನ್ನು ಆಶ್ರಯಿಸಿದ್ದರಿಂದ ಬೃಹತೀಛಂದಸ್ಸಿನ ಸ್ಥಾನಮಾನಗಳು ಹೆಚ್ಚಿ ಅದಕ್ಕೆ ಕೀರ್ತಿಯನ್ನುಂಟುಮಾಡಲು ಸಾಮರ್ಥ್ಯವುಂಟಾಯಿತು ಎಂದು ಅಭಿಪ್ರಾಯವು. ಛಂದಸ್ಸುಗಳಲ್ಲಿ ಬೃಹತಿಯ ಸ್ಥಾನವು ಮಧ್ಯದಲ್ಲಿರುವುದರಿಂದ ಇದಕ್ಕೆ ಯಶೋರೂಪವು ಲಭಿಸಿದೆಯೆಂದು ಹೇಳಬಹುದು. ಆದ್ದರಿಂದ ಬೃಹತೀಛಂದಸ್ಸಿಗೆ ಶ್ರೀಯಶಸ್ಸುಗಳನ್ನು ಎಂದರೆ ಧನಧಾನ್ಯಾದಿ ಪಶುಸಂಪತ್ತನ್ನೂ ಯಶಸ್ಸನ್ನೂ ಗಳಿಸಿಕೊಡುವ ಶಕ್ತಿಸಾಮರ್ಥ್ಯಗಳು ಇರುವವು ಎಂಬ ವಿಷಯವನ್ನು ತಿಳಿದು ಯಾವ ಯಜಮಾನನು ಬೃಹತೀಛಂದಸ್ಸಿನ ಮಂತ್ರಗಳಿಂದ ಸಂಯಾಜ್ಯಾಹೋಮವನ್ನು ಮಾಡುವನೋ ಆ ಯಜಮಾನನು ಪಶುಸಂಪತ್ತನ್ನೂ ಕೀರ್ತಿಯನ್ನೂ ಗಳಿಸಿ ಸುಖದಿಂದಿರುವನು.

**ಪಂಕ್ತೀ ಯಜ್ಞಕಾಮಃ ಕುರ್ವೀತ ಪಾಂಕ್ತೋ ವೈ ಯಜ್ಞಃ ಉಪೈನಂ ಯಜ್ಞೋ ನಮತಿ ಯ ಏವಂ ವಿದ್ವಾನ್ಪಂಕ್ತೀ ಕುರುತೇ ॥**

**ಅಹೀನಸತ್ರಾದ್ಯುತ್ತರಯಜ್ಞಪ್ರಾಪ್ತಿಕಾಮಸ್ಯ ಛಂದೋಂತರಂ ವಿಧತ್ತೇ । ಅಗ್ನಿಂ ತಂ ಮನ್ಯೆ** (ಋ. ಸಂ. ೫-೬-೧) **ಇತಿ ದ್ವೇ ಪಂಕ್ತೀ । ಯಜ್ಞಸ್ಯ ಪಂಕ್ತಿಸಂಬಂಧಿತ್ವಂ ದರ್ಶಯತಿ । ನೈಶಬ್ದೋ ವಕ್ಷ್ಯಮಾಣಬಹುವಿಧಪಾಂಕ್ತತ್ವಪ್ರಸಿದ್ಧಿಪ್ರದರ್ಶನಾರ್ಥಃ । ವೇದನಂ ಪ್ರಶಂಸತಿ ।**

ಅಗ್ನಿಷ್ಟೋಮಯಾಗದ ವಿಕೃತಿರೂಪಗಳಾದ ಉಕ್ಥ್ಯ, ಅತಿರಾತ್ರ ಷೋಳಶೀ ಇತ್ಯಾದಿ ಅಹೀನಯಾಗಗಳನ್ನೂ (೨ ದಿನದಿಂದ ೧೨ ದಿನಗಳವರೆಗೆ ಮಾಡುವ ಸೋಮಯಾಗಗಳಿಗೆ ಅಹೀನಯಾಗವೆಂದು ಹೆಸರು) ೧೨ ದಿನಗಳಿಂದ ೧ ತಿಂಗಳು ಅಥವಾ ಒಂದು ಸಂವತ್ಸರ ಅಥವಾ ಅದಕ್ಕೂ ಹೆಚ್ಚಿನ ಕಾಲ ನಡೆಯುವ ಸತ್ರವೆಂಬ ಯಾಗಗಳನ್ನು ಮಾಡಬೇಕೆಂದು ಬಯಸುವ ಯಜಮಾನನು ಈ ದೀಕ್ಷಣೀಯೇಷ್ಟಿಯಲ್ಲಿ ಸಂಯಾಜ್ಯಾ ಹೋಮಗಳನ್ನು ಪಂಕ್ತಿ ಎಂಬ ಛಂದಸ್ಸಿನ ಋಕ್ಕುಗಳಿಂದ ಮಾಡಬೇಕು. **ಅಗ್ನಿಂ ತಂ ಮನ್ಯೇ** (ಋ.ಸಂ.೫-೬-೧) ಮತ್ತು **ಸೋ ಅಗ್ನಿರ್ಯೋ** (ಋ.ಸಂ.೫-೬-೨) ಎಂಬ ಮಂತ್ರಗಳು ಇದಕ್ಕಾಗಿ ನಿರ್ದಿಷ್ಟವಾಗಿರುವ ಪಂಕ್ತಿಶ್ಛಂದಸ್ಸಿನ ಮಂತ್ರಗಳು. ಯಜ್ಞಕ್ಕೂ ಪಂಕ್ತಿಶ್ಛಂದಸ್ಸಿಗೂ ವಿಶೇಷ ಸಂಬಂಧವಿದೆ. ಆದ್ದರಿಂದ ಪಂಕ್ತಿಶ್ಛಂದಸ್ಸಿನ ಋಕ್ಕುಗಳಿಂದ ಹೋಮಮಾಡುವ ಯಜಮಾನನು ಅನೇಕ ಯಜ್ಞಗಳನ್ನು ನಿರ್ವಿಘ್ನವಾಗಿ ಮಾಡಲು ಶಕ್ತಿಸಾಮರ್ಥ್ಯಗಳನ್ನು ಪಡೆಯುವನು.

**ತ್ರಿಷ್ಟುಭೌ ವೀರ್ಯಕಾಮಃ ಕುರ್ವೀತ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಪ್ ಓಜಸ್ವೀಂದ್ರಿಯಾವಾನ್ವೀರ್ಯವಾನ್ಭವತಿ ಯ ಏವಂ ವಿದ್ವಾಂಸ್ತ್ರಿಷ್ಟುಭೌ ಕುರುತೇ ॥**

**ವೀರ್ಯಪ್ರಾಪ್ತ್ಯರ್ಥಂ ಛಂದೋಂತರಂ ವಿಧತ್ತೇ । ದ್ವೇ ವಿರೂಪೇ ಚರತ** (ಋ. ಸಂ. ೧-೯೫-೧) **ಇತಿ ದ್ವೇ ತ್ರಿಷ್ಟುಭೌ । ತ್ರಿಷ್ಟುಪ್‌ಛಂದಸೋ ವೀರ್ಯಸಾಧನತ್ವೇನ ತದ್ರೂಪತ್ವಂ ದರ್ಶಯತಿ । ವೀರ್ಯಂ ಶರೀರಬಲಂ । ತಚ್ಚೌಜಸ ಇಂದ್ರಿಯಸ್ಯ ಚೋಪಲಕ್ಷಣಂ । ಓಜೋ ಬಲಹೇತುರಷ್ಟಮೋ ಧಾತುಃ । ಇಂದ್ರಿಯಂ ಚಕ್ಷುರಾದಿಪಾಟವಂ । ವೇದನಂ ಪ್ರಶಂಸತಿ ।**

ವೀರ್ಯವೆಂದರೆ ಶರೀರಬಲ; ಓಜಸ್ಸೆಂದರೆ ಬಲಕ್ಕೆ ಕಾರಣಭೂತವಾದ (ಎಂಟನೆಯ) ಧಾತುವು; ಇಂದ್ರಿಯವೆಂದರೆ ಕಣ್ಣು ಮೊದಲಾದ ಅವಯವಗಳ ಪಾಟವವು (ಶಕ್ತಿಯು) ಶರೀರಬಲಾದಿಗಳನ್ನು ಅಪೇಕ್ಷಿಸುವ ಯಜಮಾನನು ಸಂಯಾಜ್ಯಾ ಹೋಮವನ್ನು ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಾದ **ದ್ವೇ ವಿರೂಪೇ** (ಋ.ಸಂ.೧-೯೫-೧) ಮತ್ತು **ದಶೇಮಂ ತ್ವಷ್ಟುರ್ಜನಯಂತ** (ಋ.ಸಂ.೧-೯೫-೨) ಎಂಬ ಋಕ್ಕಿಗಳಿಂದ ಮಾಡಬೇಕು. ಏಕೆಂದರೆ ತ್ರಿಷ್ಟುಪ್‌ಛಂದಸ್ಸು ಓಜಸ್ಸು, ಇಂದ್ರಿಯ ಮತ್ತು ವೀರ್ಯ ಇವುಗಳ ಸಂಕೇತವಾಗಿರುವುದು. ಆದ್ದರಿಂದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಹೋಮಮಾಡುವ ಯಜಮಾನನು ಓಜಸ್ಸು ಇಂದ್ರಿಯ, ವೀರ್ಯ ಇವುಗಳನ್ನು ಪಡೆದು ಸುಖಿಸುತ್ತಾನೆ.

**ಜಗತ್ಯೌ ಪಶುಕಾಮಃ ಕುರ್ವೀತ ಜಾಗತಾ ವೈ ಪಶವಃ ಪಶುಮಾನ್ಭವತಿ ಯ ಏವಂ ವಿದ್ವಾಞ್ಜಗತ್ಯೌ ಕುರುತೇ ॥**

**ಗವಾದಿಪಶುಪ್ರಾಪ್ತಯೇ ಛಂದೋಂತರಂ ವಿಧತ್ತೇ । ಜನಸ್ಯ ಗೋಪಾ** (ಋ. ಸಂ. ೫-೧೧-೧) **ಇತಿ ದ್ವೇ ಜಗತ್ಯೌ । ಪಶೂನಾಂ ಜಗತೀಛಂದಃಸಾಧ್ಯತ್ವೇನ ತತ್ಸಂಬಂಧಂ ದರ್ಶಯತಿ । ವೇದನಂ ಪ್ರಶಂಸತಿ ।**

ಗೋವು ಮುಂತಾದ ಪಶುಸಂಪತ್ತನ್ನು ಅಪೇಕ್ಷಿಸುವ ಯಜಮಾನನು ಸಂಯಾಜ್ಯಾ ಹೋಮವನ್ನು ಜನಸ್ಯ ಗೋಪಾ (ಋ.ಸಂ.೫-೧೧-೧) ಮತ್ತು ಯಜ್ಞಸ್ಯ ಕೇತುಂ (ಋ.ಸಂ.೫-೧೧-೨) ಎಂಬ ಎರಡು ಜಗತೀಛಂದಸ್ಸಿನ ಮಂತ್ರಗಳಿಂದ ಮಾಡಬೇಕು. ಯಾವ ಯಜ್ಞಮಾಡುವ ಯಜಮಾನನು ಜಗತೀಛಂದಸ್ಸಿನ ಮಂತ್ರಗಳಿಂದ ದೀಕ್ಷಣೀಯೇಷ್ಟಿಯಲ್ಲಿ ಸ್ವಿಷ್ಟ ಕೃದ್ಧೋಮವನ್ನು ಮಾಡುವನೋ ಅವನು ಗವಾಶ್ವಾದಿಪಶುಸಂಪತ್ತನ್ನೂ ಪಡೆಯುವನು.

**ವಿರಾಜಾವನ್ನಾದ್ಯಕಾಮಃ ಕುರ್ವೀತ ಅನ್ನಂ ವೈ ವಿರಾಟ್**

**ಅತ್ತುಂ ಯೋಗ್ಯಮನ್ನಂ ಕಾಮಯಮಾನಸ್ಯ ಛಂದೋಂತರಂ ವಿಧತ್ತೇ । ಪ್ರೇದ್ಧೋ ಅಗ್ನ (ಋ. ಸಂ. ೭-೧-೩) ಇಮೋ ಅಗ್ನ (ಋ. ಸಂ. ೭-೧-೧೮) ಇತಿ ದ್ವೇ ವಿರಾಜೌ । ಅನ್ನಸ್ಯ ವಿರಾಜನಹೇತುತ್ವೇನ ವಿರಾಡ್ರೂಪತ್ವಮಾಹ ।**

ಅನ್ನವೆಂಬ ಶಬ್ದವು ಅದ–ಭಕ್ಷಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ತಿನ್ನುವುದಕ್ಕೆ ಯೋಗ್ಯವಾದ ಆಹಾರಕ್ಕೆ ಅನ್ನವೆಂದು ಹೆಸರು. ಅನ್ನಾದ್ಯಾಹಾರಗಳು ಯಥೇಷ್ಟವಾಗಿ ಲಭಿಸಬೇಕೆಂದು ಬಯಸುವ ಯಜಮಾನನು ಸಂಯಾಜ್ಯಾ ಹೋಮವನ್ನು **ಪ್ರೇದ್ಧೋ ಅಗ್ನೇ** (ಋ.ಸಂ.೭-೧-೩) ಮತ್ತು **ಇಮೋ ಅಗ್ನೇ** (ಋ.ಸಂ.೭-೧-೧೮) ಎಂಬ ವಿರಾಟ್‌ಛಂದಸ್ಸಿನ ಋಕ್ಕುಗಳಿಂದ ಮಾಡಬೇಕು. ಈ ವಿರಾಟ್‌ಛಂದಸ್ಸು ಅನ್ನಸ್ವರೂಪವಾದುದು ಎಂದರೆ ಯಜಮಾನನಿಗೆ ಅನ್ನಾದ್ಯಾಹಾರಗಳನ್ನು ಕೊಡುವ ಶಕ್ತಿಸಾಮರ್ಥ್ಯವುಳ್ಳದ್ದು.

**ತಸ್ಮಾದ್ಯಸ್ಯೈವೇಹ ಭೂಯಿಷ್ಠಮನ್ನಂ ಭವತಿ ಸ ಏವ ಭೂಯಿಷ್ಠಂ ಲೋಕೇ ವಿರಾಜತಿ ತದ್ವಿರಾಜೋ ವಿರಾಟ್ತ್ವಂ ।**

**ತದೇವ ಸ್ಪಷ್ಟಯತಿ । ಯಸ್ಮಾದನ್ನಸ್ಯ ವಿರಾಜನಹೇತುತ್ವಂ ತಸ್ಮಾತ್ಕಾರಣಾದಿಹ ಲೋಕೇ ಯಸ್ಯೈವ ಪುರುಷಸ್ಯಾನ್ನಂ ಪ್ರಭೂತಂ ಭವತಿ ಸ ಏವ ಜನಮಧ್ಯೇಽತ್ಯಂತಂ ಶೋಭತೇ ತಸ್ಮಾದ್ವಿರಾಜತ್ಯನೇನೇತಿ ವ್ಯುತ್ಪತ್ತ್ಯಾ ವಿರಾಟ್‌ಶಬ್ದೋ ನಿಷ್ಪನ್ನಃ ।**

ವಿರಾಟ್ ಎಂದರೆ ವಿರಾಜಮಾನ, ಪ್ರಕಾಶಮಾನ ಎಂದರ್ಥವು. ಆದ್ದರಿಂದ ಈ ವಿರಾಟ್‌ಛಂದಸ್ಸು ಯಜಮಾನನಿಗೆ ಬಹಳವಾದ ಅನ್ನಾದ್ಯಾಹಾರಗಳನ್ನು ಕೊಡುವುದು. ಲೋಕದಲ್ಲಿ ಆಹಾರಾದಿಗಳನ್ನು ಎಂದರೆ ಧಾನ್ಯಾದಿಗಳನ್ನು ಪಡೆದಿರುವ ಪುರುಷನು ಜನರ ಮಧ್ಯದಲ್ಲಿ ಗಣ್ಯನೆನಿಸಿಕೊಂಡು ಬಹಳವಾಗಿ ಶೋಭಿಸುವನು ಎಂದರೆ ಪ್ರಖ್ಯಾತನಾಗುವನು. ಈರೀತಿ ಈ ಛಂದಸ್ಸಿಗೆ ಪ್ರಕಾಶನವಿರುವುದರಿಂದಲೇ ಇದಕ್ಕೆ ವಿರಾಟ್ ಎಂಬ ಹೆಸರು ಬಂದಿದೆ.

**ವಿ ಸ್ವೇಷು ರಾಜತಿ ಶ್ರೇಷ್ಠಃ ಸ್ವಾನಾಂ ಭವತಿ ಯ ಏವಂ ವೇದ ॥೫॥**

ವೇದನಂ ಪ್ರಶಂಸತಿ । ಯಃ ಪುಮಾನ್ವಿರಾಜೋ ಮಹಿಮಾನಂ ವೇತ್ತಿ ಸ ಪುಮಾನ್ಸ್ವಕೀಯೇಷು ಜ್ಞಾತಿಷು ಮಧ್ಯೇ ವಿಶೇಷೇಣ ರಾಜತಿ ಲೌಕಿಕಸಾಮರ್ಥ್ಯೇನ ಶೋಭತೇ । ತಥಾ ಸ್ವೀಯಾನಾಂ ಜ್ಞಾತೀನಾಂ ಮಧ್ಯೇ ವೃತ್ತವಿದ್ಯಾವಿನಯಾದಿಭಿಃ ಶ್ರೇಷ್ಠೋ ಭವತಿ ।

ಯಾವ ಪುರುಷನು ವಿರಾಟ್‌ಛಂದಸ್ಸಿನ ಈ ವಿಧವಾದ ಮಹಿಮೆಯನ್ನು ಎಂದರೆ ಅನ್ನಾದ್ಯಾಹಾರಗಳನ್ನು ಒದಗಿಸಿಕೊಡುವ ಶಕ್ತಿ ಸಾಮರ್ಥ್ಯಗಳನ್ನು ತಿಳಿದಿರುವನೋ ಆ ಪುರುಷನು ತನ್ನ ಸ್ವಕೀಯ ಜನರಲ್ಲಿ ವಿಶೇಷ ಗಣ್ಯತೆಯನ್ನೂ ಪಡೆದು ಅವರಿಗೆ ಮುಖಂಡನಾಗಿ ಶೋಭಿಸುವನು.

*English Translation*

He who wishes for beauty and acquisition of sacred knowledge should use at the Svishtakrit two verses ,n the Gayathri metre as his samyajyas. For the Gayathri is beauty and sacred knowledge. He who having such a knowledge uses two Gaygtris (at the Svishtakrit) becomes full of beauty and acquires sacred knowledge.

He who wishes for long life, should use two verses in the Ushnih metre; for Ushnih is life. He who having such a knowledge uses two Ushnishs arrives at his full age (i.e. 100 years).

He who desires heaven, should use two anushtubhs. There are sixty-four syllables in two Anushtubhs. Each of these three worlds (earth, air and sky) contains twenty-one places, one rising above the other (just as the steps of a ladder). By twenty-one steps he ascends to each of these worlds severally; by taking the sixty-fourth step he stands firm in the celestial world. He, who having such a knowledge uses two Anushtubhs gains a footing (in the celestial world).

He who desires wealth and glory, should use two Brihatis. For among the metres the Brihati is wealth and glory. He who having such a knowledge uses two Brihatis bestows upon himself wealth and glory.

He who loves the sacrifice should use two Pankties. For the sacrifice is like a Pankti. It eomes to him who having such a knowledge uses two Panktis.

He who desires strength should use two Trishtubhs. Trishtubh is strength, vigour, and sharpness of senses. He who knowing this, uses two Trishtubhs, becomes vigorous, endowed with sharp senses and strong.

He who desires cattle should use two Jagatis (verses in the Jagatri metre) Cattle are Jagati like. He who knowing this uses two Jagatis, becomes rich in cattle.

He who desires food (annadya) should use two verses in the Viraj metre. Viraj is food. Therefore he who has most of food, shines (vi-rajati) most on earth. This is the reason why it is called viraj (from vi-raj— to shine). He who knows this, shines forth among his own people, (and) becoms the most influential man among his own people.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೊದಲನೆಯ ಅಧ್ಯಾಯದ ಐದನೆಯ ಖಂಡವು ಸಮಾಪ್ತವಾದುದು.**



# ಅಥ ಪ್ರಥಮಾಧ್ಯಾಯೇ ಷಷ್ಠಃ ಖಂಡಃ

## ಮೊದಲನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ವಿರಾಟ್ಛಂದಸ್ಸಿನ ಮಹಿಮೆ; ದೀಕ್ಷಿತನು ಸತ್ಯವನ್ನೇ ನುಡಿಯಬೇಕು; ಚಕ್ಷುರಿಂದ್ರಿಯದ ಶ್ರೇಷ್ಠತೆ ]



### ಅಥೋ ಪಂಚವೀರ್ಯಂ ವಾ ಏತಚ್ಛಂದೋ ಯದ್ವಿರಾಟ್

**ಕಾಮ್ಯೇ ಸಂಯಾಜ್ಯೇ ನಾನಾವಿಧೇ ವಿಧಾಯ ನಿತ್ಯೇ ಸಂಯಾಜ್ಯೇ ವಿಧಾತುಂ ವಿರಾಟ್-ಛಂದಃ ಪ್ರಶಂಸತಿ । ಅಥೋ ಕಾಮ್ಯ ಸಂಯಾಜ್ಯಾಕಥನಾನಂತರಂ ನಿತ್ಯೇ ಸಂಯಾಜ್ಯೇ ಕಥ್ಯೇತೇ ಇತಿ ಶ್ರೇಷಃ । ವಿರಾಡಾಖ್ಯಂ ಯಚ್ಛಂದೋಽಸ್ತಿ ಏತಚ್ಛಂದಃ ಪಂಚವಿಧವೀರ್ಯೋಪೇತತ್ವೇನ ಪ್ರಸಿದ್ಧಂ ।**

ಇದುವರೆಗೂ ಸಂಯಾಜ್ಯಾ ಹೋಮದಲ್ಲಿ ಕಾಮ್ಯಫಲಪ್ರದಗಳಾದ ನಾನಾವಿಧ ಛಂದಸ್ಸುಗಳನ್ನು ವಿವರಿಸಿದ್ದಾಯಿತು. ಕಾಮ್ಯ ಫಲಗಳೆಂದರೆ–ತನಗೆಬೇಕಾದ ಫಲಗಳು, ಇಂತಹ ಛಂದಸ್ಸಿನ ಮಂತ್ರಗಳು ಇಂತಹ ಫಲಗಳನ್ನು ಕೊಡುವವು ಎಂದಭಿಪ್ರಾಯವು ಈಗ ನಿರ್ದಿಷ್ಟವಾಗಿ ಯಾವ ಒಂದು ಪ್ರತ್ಯೇಕಫಲವನ್ನೂ ಅಪೇಕ್ಷಿಸದೆ ಎಲ್ಲಾ ಫಲಗಳೂ ಸಿದ್ಧಿಸಬೇಕೆಂದು ಬಯಸುವ ಯಜಮಾನನು ವಿರಾಟ್ಛಂದಸ್ಸಿನ ಮಂತ್ರಗಳಿಂದ ದೀಕ್ಷಣೀಯೇಷ್ಟಿಯಲ್ಲಿ ಸಂಯಾಜ್ಯಾ ಹೋಮಗಳನ್ನು ಮಾಡಬೇಕು. ಏಕೆಂದರೆ ವಿರಾಟ್ಛಂದಸ್ಸಿಗೆ ಐದು ವಿಧವಾದ ಶಕ್ತಿಸಾಮರ್ಥ್ಯಗಳಿರುವವು. ಎಂದರೆ ಐದುವಿಧ ಛಂದಸ್ಸುಗಳ ಸ್ವರೂಪವು ಈ ವಿರಾಟ್ಛಂದಸ್ಸಿನಲ್ಲಿ ಸೇರಿರುವುದರಿಂದ ಆ ಐದುವಿಧ ಛಂದಸ್ಸುಗಳಿಂದ ಲಭಿಸುವ ಫಲಗಳು ಈ ವಿರಾಟ್ಛಂದಸ್ಸು ಒಂದರಿಂದಲೇ ಲಭಿಸುವವು.

**ಯತ್ತ್ರಿಪದಾ ತೇನೋಷ್ಣಿಹಾಗಾಯತ್ರ್ಯೌ ಯದಸ್ಯಾ ಏಕಾದಶಾಕ್ಷರಾಣಿ ಪದಾನಿ ತೇನ ತ್ರಿಷ್ಟುಬ್ಯತ್ತ್ರಯಸ್ತ್ರಿಂಶದಕ್ಷರಾ ತೇನಾನುಷ್ಟುಬ್ನ ವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ ಯದ್ವಿರಾಟ್ ತತ್ಪಂಚಮಂ ॥**

ತದೇವ ವಿಸ್ಪಷ್ಟಯತಿ । ಯಸ್ಮಾತ್ಕಾರಣಾದಿಯಂ ವಿರಾಟ್ಪಾದತ್ರಯೋಪೇತಾ ತೇನ ಕಾರಣೇನೋಷ್ಣಿಗ್ರೂಪಾ ಗಾಯತ್ರೀರೂಪಾ ಚ ಭವತಿ ತಯೋರಪಿ ಪಾದತ್ರಯೋಪೇತತ್ವೇನ ಸಮತ್ವಾದತಸ್ತಯೋರುಭಯೋರ್ವೀರ್ಯಂ ವಿರಾಜ್ಯಸ್ತಿ । ಯಸ್ಮಾತ್ಕಾರಣಾದಸ್ಯಾ ವಿರಾಜಃ ಪಾದಾ ಏಕಾದಶಾಕ್ಷರೋಪೇತಾಸ್ತೇನ ಕಾರಣೇನೇಯಂ ತ್ರಿಷ್ಟುಬ್ರೂಪಾ ಭವತಿ ತದೀಯಂ ವೀರ್ಯಂ ಪ್ರಾಪ್ನೋತಿ । ಯಸ್ಮಾತ್ಕಾರಣಾದಿಯಂ ತ್ರಯಸ್ತ್ರಿಂಶದಕ್ಷರೋಪೇತಾ ತೇನ ಕಾರಣೇನಾನುಷ್ಟುಬ್ರೂಪಾ ತದೀಯಂ ವೀರ್ಯಂ ಪ್ರಾಪ್ನೋತಿ । ಯದ್ಯಪ್ಯನುಷ್ಟುಪ್ದ್ವಾತ್ರಿಂಶದಕ್ಷರಾ ತಥಾಪ್ಯೇಕೇನಾಕ್ಷರೇಣ ನ್ಯೂನೇನಾಧಿಕೇನ ವಾ ಛಂದಾಂಸಿ ನೈವ ನಶ್ಯಂತಿ । ತಥಾ ದ್ವಾಭ್ಯಾಮಕ್ಷರಾಭ್ಯಾಂ ನ್ಯೂನಾಭ್ಯಾಮಧಿಕಾಭ್ಯಾಂ ವಾ ನ ನಶ್ಯಂತಿ । ಏಕೋ ಹಿ ದೋಷೋ ಗುಣಸಂನಿಪಾತೇ ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ ಇತಿ ನ್ಯಾಯಾತ್ । ನನು ತ್ರಿಂಶದಕ್ಷರಾ ವಿರಾಡಿತಿ ಶ್ರೂಯತೇ ತತ್ರ ಪ್ರೇದ್ಧೋ ಅಗ್ನ ಇತ್ಯಸ್ಯಾಮೃಚಿ ಏಕೋನತ್ರಿಂಶದಕ್ಷರಾಣೀನೋ ಅಗ್ನ ಇತ್ಯಸ್ಯಾಮೃಚಿ ದ್ವಾತ್ರಿಂಶದಕ್ಷರಾಣ್ಯತಸ್ತಯೋರ್ನ ವಿರಾಟ್ತ್ವಮಿತಿ ಚೇನ್ನೈವಂ । ನ ವಾ ಏಕೇನಾಕ್ಷರೇಣೇತಿ ವಾಕ್ಯೇನೈವ ಪರಿಹೃತತ್ವಾತ್ । ಯಸ್ಮಾದ್ವಿರಾಟ್ತಸ್ಮಾದೇತದೀಯಂ ಪಂಚಮಂ ವೀರ್ಯಮಸ್ತಿ ।

ಐದುವಿಧ ಛಂದಸ್ಸುಗಳ ಸ್ವರೂಪವು ಈ ವಿರಾಟ್ ಛಂದಸ್ಸಿನಲ್ಲಿ ಹೇಗೆ ಸೇರಿದೆ ಎಂಬ ವಿಷಯವನ್ನು ಸ್ಪಷ್ಟವಾಗಿ ತಿಳಿಸಲಾಗುವುದು- [ಪಿಂಗಲ ಮಹರ್ಷಿಯಿಂದ ರಚಿತವಾದ ಛಂದಶ್ಶಾಸ್ತ್ರದ ಪ್ರಕಾರ ನಾನಾ ಋಕ್ಕುಗಳ ಛಂದಸ್ಸ್ವರೂಪವನ್ನು —ಯಾವಯಾವ ಛಂದಸ್ಸಿನಲ್ಲಿ ಎಷ್ಟೆಷ್ಟು ಅಕ್ಷರಗಳಿವೆ ಎಂಬುದನ್ನು ನಾವು ಋ. ಸಂ. ಭಾಗ ೧ ರಲ್ಲಿ ೨೨೧-೨೩೧ ನೇ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಪ್ರಕೃತ ಇಲ್ಲಿ ಹೇಳಲಾಗಿರುವ ಎಂಟು ಛಂದಸ್ಸುಗಳ ಅಕ್ಷರಸಂಖ್ಯೆ ಮತ್ತು ಪಾದಸಂಖ್ಯೆಯನ್ನು ಮಾತ್ರ ಇಲ್ಲಿ ವಿವರಿಸಲಾಗುವುದು—

| | ಛಂದಸ್ಸಿನ ಹೆಸರು | ಪಾದಸಂಖ್ಯೆ | ಒಟ್ಟು ಅಕ್ಷರಸಂಖ್ಯೆ | ಸೂತ್ರ |
|---|---|---|---|---|
| (೧) | ಗಾಯತ್ರೀ | ೮+೮+೮ | ೨೪ | ತ್ರಿಪದಾ ಗಾಯತ್ರೀ |
| (೨) | ಉಷ್ಣಿಕ್ | ೮+೮+೧೨ | ೨೮ | ಉಷ್ಣಿಕ್ ತ್ರಿಪದಾಂತ್ಯೋ ದ್ವಾದಶ |
| (೩) | ಅನುಷ್ಟುಪ್ | ೮+೮+೮+೮ | ೩೨ | ಚತುಷ್ಪದಾಷ್ಟಾಕ್ಷರಾ |
| (೪) | ಬೃಹತೀ | ೮+೮+೧೨+೮ | ೩೬ | ಬೃಹತೀ ತೃತಿಯೋ ದ್ವಾದಶಕಃ |
| (೫) | ಪಂಕ್ತಿಃ | ೮+೮+೮+೮+೮ | ೪೦ | ಪಂಕ್ತಿಃ ಪಂಚಪದಾ |
| (೬) | ತ್ರಿಷ್ಟುಪ್ | ೧೧+೧೧+೧೧+೧೧ | ೪೪ | ತ್ರಿಷ್ಟುಪ್ ತ್ರೈಷ್ಟುಭಪದಾ |
| (೭) | ಜಗತೀ | ೧೨+೧೨+೧೨+೧೨ | ೪೮ | ಜಗತೀ ಜಾಗತಪದಾ |

| | | | | |
|---|---|---|---|---|
| (೮) | ವಿರಾಟ್ | ೧೦+೧೦+೧೦ | ೩೦ | **ದಶಕಾಸ್ತ್ರಯೋ ವಿರಾಟ್** |
| | | ೧೧+೧೧+೧೧ | ೩೩ | **ಏಕಾದಶಕಾ ವಾ** |

ವಿರಾಟ್‌ಛಂದಸ್ಸಿನಲ್ಲಿ ಮೂರುಪಾದಗಳಿವೆ. ಗಾಯತ್ರೀ ಮತ್ತು ಉಷ್ಣಿಕ್‌ಛಂದಸ್ಸುಗಳಲ್ಲಿಯೂ ಮೂರುಮೂರು ಪಾದಗಳಿವೆ. ಆದ್ದರಿಂದ ಈ ವಿಷಯದಲ್ಲಿ ಗಾಯತ್ರೀ ಮತ್ತು ಉಷ್ಣಿಕ್‌ಛಂದಸ್ಸುಗಳ ಸ್ವರೂಪವೂ ಮತ್ತು ಅವುಗಳ ಶಕ್ತಿಸಾಮರ್ಥ್ಯವೂ ವಿರಾಟ್ ಛಂದಸ್ಸಿನಲ್ಲಿದ್ದಂತಾಯಿತು. ವಿರಾಟ್‌ಛಂದಸ್ಸಿನ ಪ್ರತಿಯೊಂದು ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿರುವವು; ತ್ರಿಷ್ಟುಪ್ ಛಂದಸ್ಸಿನ ಪ್ರತಿಯೊಂದು ಪಾದದಲ್ಲೂ ಹನ್ನೊಂದು ಅಕ್ಷರಗಳಿರುವವು. ಆದ್ದರಿಂದ ಈ ವಿಷಯದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಸ್ವರೂಪವೂ ಅದರ ಸಾಮರ್ಥ್ಯವೂ ವಿರಾಟ್‌ಛಂದಸ್ಸಿನಲ್ಲಿದ್ದಂತಾಯಿತು.

ಇನ್ನು ಅನುಷ್ಟುಪ್‌ಛಂದಸ್ಸಿನಲ್ಲಿ ನಾಲ್ಕು ಪಾದಗಳಿಂದ ಒಟ್ಟು ಮೂವತ್ತೆರಡು ಅಕ್ಷರಗಳಿರುವವು. ವಿರಾಟ್‌ಛಂದಸ್ಸಿನಲ್ಲಿ ಪಾದಕ್ಕೆ ಹನ್ನೊಂದು ಅಕ್ಷರಗಳಂತೆ ಮೂರುಪಾದಗಳಲ್ಲಿ ಒಟ್ಟು ಮೂವತ್ತಮೂರು ಅಕ್ಷರಗಳಿರುವವು. ಛಂದಸ್ಸುಗಳಲ್ಲಿ ಒಂದು ಅಕ್ಷರ ಕಮ್ಮಿಯಾಗಲಿ ಅಥವಾ ಹೆಚ್ಚಾಗಲಿ ಇದ್ದರೆ ಅದು ಅಂತಹ ಲೋಪವೆಂದು ಭಾವಿಸಲಾಗುವುದಿಲ್ಲ. ಆದ್ದರಿಂದ ಅನುಷ್ಟುಪ್‌ಛಂದಸ್ಸಿನ ಸ್ವರೂಪವೂ, ಶಕ್ತಿಯೂ ವಿರಾಟ್‌ಛಂದಸ್ಸಿನಲ್ಲಿದ್ದಂತಾಯಿತು.

**“ ಏಕೋ ಹಿ ದೋಷೋ ಗುಣಸಂನಿಪಾತೇ ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ ”** ಚಂದ್ರನ ಕಿರಣಗಳಲ್ಲಿ (ಕಲೆಗಳಲ್ಲಿ) ಒಂದೆರಡು ಹೆಚ್ಚುಕಡಿಮೆ ಇದ್ದರೂ ಚಂದ್ರನ ಕಾಂತಿಗೆ ಲೋಪಬರುವುದಿಲ್ಲ ಎಂಬ ನ್ಯಾಯದಂತೆ ಇಲ್ಲಿ ಅಕ್ಷರ ಸಂಖ್ಯೆಯ ವಿಷಯದಲ್ಲಿ ಅನುಷ್ಟುಪ್‌ಛಂದಸ್ಸಿಗೂ ವಿರಾಟ್‌ಛಂದಸ್ಸಿಗೂ ಅಷ್ಟೇನೂ ಗಮನಾರ್ಹವಾದ ವ್ಯತ್ಯಾಸವಿರುವುದಿಲ್ಲ. ಕೆಲವುಕಡೆ “ **ತ್ರಿಂಶದಕ್ಷರಾ ವಿರಾಟ್** (ತೈ. ಸಂ. ೨-೫-೧೦-೩) ವಿರಾಟ್‌ಛಂದಸ್ಸಿನಲ್ಲಿ ಮೂವತ್ತು ಅಕ್ಷರಗಳಿರುವವು ” ಎಂದು ಹೇಳಿದೆ. ಪ್ರಸಕ್ತ ವಿರಾಟ್‌ಛಂದಸ್ಸಿನ ಋಕ್ಕುಗಳಾದ **ಪ್ರೇದ್ಧೋ ಅಗ್ನೇ** ಎಂಬ ಋಕ್ಕಿನಲ್ಲಿ (ಋ.ಸಂ. ೭-೧-೩) ಇಪ್ಪತ್ತೊಂಭತ್ತೇ ಅಕ್ಷರಗಳಿವೆ **ಇಮೋ ಅಗ್ನೇ** (ಋ. ಸಂ. ೭-೧-೧೮) ಎಂಬ ಋಕ್ಕಿನಲ್ಲಿ ಮೂವತ್ತೆರಡು ಅಕ್ಷರಗಳಿವೆ. ಆದ್ದರಿಂದ ಈ ಋಕ್ಕುಗಳು ವಿರಾಟ್‌ಛಂದಸ್ಸಿನ ಮಂತ್ರಗಳಲ್ಲ ಎಂದು ಏಕೆ ಹೇಳಬಾರದು ಎಂದರೆ ಹಾಗಲ್ಲ. **“ ನ ವಾ ಏಕೇ ನಾಕ್ಷರೇಣ”** ಎಂಬ ಛಂದಃಶಾಸ್ತ್ರದ ಸೂತ್ರದಂತೆ ಸಂಖ್ಯೆಯಲ್ಲಿ ಒಂದಕ್ಷರ ವ್ಯತ್ಯಾಸವಿದ್ದರೆ ಬಾಧಕವಿಲ್ಲ. ಇದಲ್ಲದೆ ಪ್ರತಿಯೊಂದು ಛಂದಸ್ಸಿನಲ್ಲಿಯೂ ಅನೇಕ ಭೇದಪ್ರಭೇದಗಳಿರುವುದರಿಂದ ಒಂದಕ್ಷರ ಕಮ್ಮಿಯಾಗಿದ್ದರೆ ನಿಚೃತ್ ಎಂದು ಕರೆಯಲ್ಪಡುವುದು. ಉದಾ—ಎಂಟಕ್ಷರಗಳಿದ್ದರೆ ಗಾಯತ್ರೀಛಂದಸ್ಸು; ಒಂದಕ್ಷರ ಕಮ್ಮಿಯಾಗಿ ಏಳು ಅಕ್ಷರಗಳಿದ್ದರೆ ನಿಚೃದ್ಗಾಯತ್ರೀ ಎಂದು ಹೆಸರು. ಅದರಂತೆ ಇಲ್ಲಿ **ಪ್ರೇದ್ಧೋ ಅಗ್ನೇ** ಎಂಬ ಋಕ್ಕಿನಲ್ಲಿ ಇಪ್ಪತ್ತೊಂಭತ್ತು ಅಕ್ಷರಗಳಿರುವುದರಿಂದ ಅದನ್ನು ನಿಚೃತ್‌ವಿರಾಟ್ ಎಂದು ಭಾವಿಸಬಹುದು. ಆದ್ದರಿಂದ ಈ ವಿರಾಟ್‌ಛಂದಸ್ಸಿನ ಋಕ್ಕುಗಳಲ್ಲಿ—ಗಾಯತ್ರೀ, ಉಷ್ಣಿಕ್, ತ್ರಿಷ್ಟುಪ್, ಅನುಷ್ಟುಪ್, ವಿರಾಟ್ ಎಂಬ ಐದು ಛಂದಸ್ಸುಗಳ ಸ್ವರೂಪವೂ ಶಕ್ತಿಸಾಮರ್ಥ್ಯಗಳೂ ಇದ್ದಂತಾಯಿತು.

ಸರ್ವೇಷಾಂ ಛಂದಸಾಂ ವೀರ್ಯಮವರುಂಧೇ ಸರ್ವೇಷಾಂ ಛಂದ-
ಸಾಂ ವೀರ್ಯಮಶ್ನುತೇ ಸರ್ವೇಷಾಂ ಛಂದಸಾಂ ಸಾಯುಜ್ಯಂ
ಸರೂಪತಾಂ ಸಲೋಕತಾಮಶ್ನುತೇಽನ್ನಾದೋಽನ್ನಪತಿರ್ಭವತ್ಯ-
ಶ್ನುತೇ ಪ್ರಜಯಾನ್ನಾದ್ಯಂ ಯ ಏವಂ ವಿದ್ವಾನ್ವಿರಾಜಾ
ಕುರುತೇ ॥

**ಏವಂವಿಧವಿರಾಡ್ವೇದನಂ ಪ್ರಶಂಸತಿ । ಗಾಯತ್ರ್ಯುಷ್ಣಿಕ್ ತ್ರಿಷ್ಟುಬನುಷ್ಟುಬ್ವಿರಾಡ್ರೂಪಾಣಾಂ ಸರ್ವೇಷಾಂ ಛಂದಸಾಂ ಯತ್ಸಾಮರ್ಥ್ಯಮಸ್ತಿ ತದಯಂ ವೇದಿತಾವರುಂಧೇಽಭಿಮುಖೀ ಕರೋತಿ । ಕೃತ್ವಾ ಚಾಶ್ನುತೇ ಪ್ರಾಪ್ನೋತಿ । ತಥಾ ಸರ್ವಛಂದೋಭಿಮಾನಿದೇವಾನಾಂ ಸಾಯುಜ್ಯಂ ಸಹಭಾವಂ ಸರೂಪತಾಂ ಸಮಾನರೂಪತ್ವಂ ಸಲೋಕತಾಮೇಕಸ್ಥಾನನಿವಾಸಂ ಚ ಪ್ರಾಪ್ನೋತಿ । ಅನ್ನಾದೋಽನ್ನಭಕ್ಷಣಸಮರ್ಥೋ ನೀರೋಗಃ । ಅನ್ನಪತಿರ್ಬಹ್ವನ್ನಸ್ವಾಮೀ ಭವತಿ ನ ಕೇವಲಂ ಸ್ವಯಮೇವ ಕಿಂತು ಸ್ವಕೀಯಯಾ ಪುತ್ರಾದಿಪ್ರಜಯಾ ಸಹಾನ್ನಾದ್ಯಮಶ್ನುತೇ ।**

ಈರೀತಿ ಶಕ್ತಿಸಾಮರ್ಥ್ಯಗಳುಳ್ಳ ವಿರಾಟ್‌ಛಂದಸ್ಸಿನ ಮಹಿಮೆಯನ್ನು ವರ್ಣಿಸಲಾಗುವುದು. ಮೇಲೆ ಹೇಳಿದಂತೆ ವಿರಾಟ್ ಛಂದಸ್ಸಿನಲ್ಲಿ ಗಾಯತ್ರೀ, ಉಷ್ಣಿಕ್, ತ್ರಿಷ್ಟುಪ್, ಅನುಷ್ಟುಪ್, ವಿರಾಟ್ ಎಂಬ ಐದು ಛಂದಸ್ಸುಗಳ ಶಕ್ತಿಸಾಮರ್ಥ್ಯಗಳೂ ಮಹಿಮೆಯೂ ವಿರಾಟ್‌ಛಂದಸ್ಸಿನಲ್ಲಿರುವುದರಿಂದ ಇಂತಹ ವಿರಾಟ್‌ಛಂದಸ್ಸಿನ ಋಕ್ಕುಗಳಿಂದ ಸಂಯಾಜ್ಯಾ ಹೋಮಮಾಡುವ ಯಜಮಾನನು ಸಮಸ್ತ ಛಂದಸ್ಸುಗಳಿಂದ ದೊರೆಯುವ ಶಕ್ತಿಸಾಮರ್ಥ್ಯಗಳನ್ನೂ ಪಡೆಯುವನು ಎಂದರೆ ತೇಜಸ್ಸು, ಬ್ರಹ್ಮವರ್ಚಸ್ಸು, ದೇಹಶಕ್ತಿ ಇತ್ಯಾದಿ. ಇದಲ್ಲದೆ ಈ ಛಂದೋಭಿಮಾನಿದೇವತೆಗಳ ಸಹಭಾವ, ಸಮಾನರೂಪ, ಸಮಾನಸ್ಥಾನಗಳನ್ನೂ ಪಡೆಯುವನು. ಯಾವಾಗಲೂ ಅಜೀರ್ಣಾದಿ ರೋಗಬಾಧೆಗಳಿಲ್ಲದೆ ಆರೋಗ್ಯವಂತನಾಗಿ ಅನ್ನಾದ್ಯಾಹಾರಗಳನ್ನು ಭುಜಿಸುವ ಸಾಮರ್ಥ್ಯವನ್ನೂ ಪಡೆಯುವನು. ಆಹಾರಾದಿ (ಧಾನ್ಯಾದಿ) ಸಂಪತ್ತುಗಳಿಗೆ ಪ್ರಭುವಾಗುವನು. ಮತ್ತು ತಾನೂ ತನ್ನ ಸ್ವಕೀಯರಾದ ಪುತ್ರಾದಿಗಳೂ ಯಥೇಷ್ಟವಾದ ಆಹಾರಾದಿಗಳನ್ನು ಭುಜಿಸುತ್ತಾ ಸುಖದಿಂದಿರುವರು.

## ತಸ್ಮಾದ್ವಿರಾಜಾವೇವ ಕರ್ತವ್ಯೇ । ಪ್ರೇದ್ಧೋ ಅಗ್ನ ಇಮೋ ಅಗ್ನ ಇತ್ಯೇತೇ ।

**ಇತ್ಥಂ ಛಂದಃ ಪ್ರಶಸ್ಯೇದಾನೀಂ ವಿಧತ್ತೇ । ಯಸ್ಮಾದ್ವಿರಾಜೋ ಹ್ಯುಕ್ತಮಹಿಮಾಸ್ತಿ ತಸ್ಮಾದಿತ್ಯರ್ಥಃ । ತಯೋಃ ಪ್ರತೀಕದ್ವಯಂ ದರ್ಶಯತಿ ।**

ಈರೀತಿ ವಿರಾಟ್‌ಛಂದಸ್ಸಿನ ಮಹಿಮೆ ಇರುವುದರಿಂದ ಯಜ್ಞಮಾಡುವ ಯಜಮಾನನು ಯಾವಾಗಲೂ ಎಂದರೆ ದೀಕ್ಷಣೀಯೇಷ್ಟಿಯಲ್ಲಿ ಸಂಯಾಜ್ಯಾ ಹೋಮಮಾಡುವ ಸಂದರ್ಭಗಳಲ್ಲೆಲ್ಲಾ **ಪ್ರೇದ್ಧೋ ಅಗ್ನೇ** (ಋ. ಸಂ. ೭-೧-೩) **ಇಮೋ ಅಗ್ನೇ** (ಋ. ಸಂ. ೭-೧-೧೮) ಎಂಬ ವಿರಾಟ್‌ಛಂದಸ್ಸಿನ ಮಂತ್ರಗಳನ್ನೇ ಉಪಯೋಗಿಸಿ ಹೋಮಮಾಡಬೇಕು.

## ಋತಂ ವಾವ ದೀಕ್ಷಾ ಸತ್ಯಂ ದೀಕ್ಷಾ ತಸ್ಮಾದ್ದೀಕ್ಷಿತೇನ ಸತ್ಯಮೇವ ವದಿತವ್ಯಂ ॥

**ಇತ್ಥಂ ದೀಕ್ಷಣೀಯೇಷ್ಟಾ ಸ್ವಿಷ್ಟಕೃತಃ ಸಂಯಾಜ್ಯೇ ವಿಧಾಯ ದೀಕ್ಷಿತಸ್ಯ ಸತ್ಯವದನಂ ವಿಧತ್ತೇ । ಮನಸಾ ಯಥಾ ವಸ್ತುಚಿಂತನಮೃತಶಬ್ದಾಭಿಧೇಯಂ ವಾಚಾ ಯಥಾ ವಸ್ತುಕಥನಂ ಸತ್ಯಶಬ್ದಾಭಿಧೇಯಂ ತದುಭಯಾತ್ಮಿಕಾ ದೀಕ್ಷಾ ತದ್ಭ್ರೈಕಲ್ಯೇ ವಿನಶ್ಯತಿ । ಯಸ್ಮಾದೇವಂ ತಸ್ಮಾದ್ದೀಕ್ಷಿತೇನ ಸತ್ಯಮೇವ ವದಿತವ್ಯಂ ನ ತು ಕಿಂಚಿದಪ್ಯನೃತಂ ವದೇತ್ ।**

ದೀಕ್ಷಣೀಯೇಷ್ಟಿಯಲ್ಲಿ ಸ್ವಿಷ್ಟಕೃದ್ಧೋಮದ ಸಂಯಾಜ್ಯಾ ಮಂತ್ರಗಳನ್ನು ವಿವರಿಸಿ ಈಗ ದೀಕ್ಷಿತನಾದವನು ಯಾವಾಗಲೂ ಸತ್ಯವನ್ನೇ ನುಡಿಯಬೇಕೆಂಬ ವಿಷಯವನ್ನು ವಿವರಿಸುವರು. ಮನಸ್ಸಿನಲ್ಲಿ ಯಾವುದಾದರೂ ವಿಷಯವಿನ್ನು ಅದು ಇದ್ದಂತೆಯೇ ಭಾವಿಸುವುದು ಋತವೆನಿಸುವುದು. ವಿಷಯವನ್ನು ಯಥಾವತ್ತಾಗಿ (ನಡೆದಂತೆ) ಮಾತಿನಿಂದ ಹೇಳುವುದಕ್ಕೆ ಸತ್ಯವೆಂದು ಹೆಸರು. ದೀಕ್ಷಾಸಂಸ್ಕಾರವನ್ನು ಹೊಂದಿದವನು ಈ ಎರಡು ವಿಧವಾದ ಎಂದರೆ ಮನಸ್ಸಿನಲ್ಲಯೂ ಮಾತಿನಲ್ಲಿಯೂ ಸತ್ಯವನ್ನೇ ಯಾವಾಗಲೂ ನುಡಿಯುತ್ತಿರಬೇಕು. ಸುಳ್ಳನ್ನು ಮನಸ್ಸಿನಲ್ಲಿ ಚಿಂತಿಸಿದರೂ ಮಾತಿನಲ್ಲಿ ಆಡಿದರೂ ದೀಕ್ಷೆಯು ನಾಶವಾಗುವುದು. ಆದ್ದರಿಂದ ದೀಕ್ಷಿತನಾದವನು ಯಾವಾಗಲೂ ಸತ್ಯವನ್ನೇ ನುಡಿಯಬೇಕು **ನಾನೃತಂ ವದೇತ್** (ತೈ. ಸಂ. ೨-೫-೫-೬) ಸುಳ್ಳನ್ನು ಹೇಳಬಾರದು ಎಂದು ಶ್ರುತಿವಾಕ್ಯವೂ ಇರುವುದು.

ಅಥೋ ಖಲ್ವಾಹುಃ ಕೋಽರ್ಹತಿ ಮನುಷ್ಯಃ ಸರ್ವಂ ಸತ್ಯಂ ವದಿ-
ತುಂ ಸತ್ಯಸಂಹಿತಾ ವೈ ದೇವಾ ಅನೃತಸಂಹಿತಾ ಮನುಷ್ಯಾ
ಇತಿ ॥

**ತದಶಕ್ಯಾಭಿಧಾನಮಿತ್ಯಭಿಪ್ರೇತ್ಯಾನುಜಿಘೃಕ್ಷಯಾ ಪ್ರಕಾರಾಂತರಂ ವಿಧಾತುಂ ಪ್ರಸ್ತೌತಿ । ಪ್ರಕಾರಾಂತರಪ್ರಾರಂಭಾರ್ಥೋಽಯಮಥೋಶಬ್ದಃ । ಬ್ರಹ್ಮವಾದಿನ ಏವಮಾಹುಃ ಖಲು ಮನುಷ್ಯಃ ಕೋ ನಾಮ ಸರ್ವಂ ವಾಕ್ಯಂ ಸತ್ಯಂ ವದಿತುಮರ್ಹತಿ ನ ಕಶ್ಚಿದಪಿ ತಥಾ ಕರ್ತುಂ ಶಕ್ನೋತಿ । ದೇವಾ ಏವ ಸತ್ಯಸಂಹಿತಾಃ ಸತ್ಯೇ ತಾತ್ಪರ್ಯವಂತಃ । ಮನುಷ್ಯಾಸ್ತು ಪ್ರಾಯೇಣಾನೃತೇ ತಾತ್ಪರ್ಯಯುಕ್ತಾಃ । ಇತಿಶಬ್ದೋ ಬ್ರಹ್ಮವಾದಿವಚನಸಮಾಪ್ತ್ಯರ್ಥಃ ।**

ಈಗ ಹೇಳಿದ್ದನ್ನೇ ಬೇರೆವಿಧವಾಗಿ ಹೇಳುವರು—ಬ್ರಹ್ಮವಾದಿಗಳು ಈರೀತಿ ಹೇಳುತ್ತಾರೆ; ಮನುಷ್ಯನಾದವನು, ಅವನು ಎಷ್ಟೇ ನಿಷ್ಠನಾಗಿದ್ದರೂ ಯಾವಾಗಲೂ ಸತ್ಯವನ್ನೇ ನುಡಿಯಬಲ್ಲನೇ? ಎಂದಿಗೂ ಸಾಧ್ಯವಿಲ್ಲ. ಸಾಧಾರಣವಾಗಿ ಮನುಷ್ಯರು ಸುಳ್ಳನ್ನು ಹೇಳುವುದೇ ಅವರ ಸ್ವಭಾವವು. ಆದರೆ ದೇವತೆಗಳು ಮಾತ್ರ ಸತ್ಯವನ್ನು ನುಡಿಯಲು ಶಕ್ತರಾಗಿರುವರು.

ವಿಚಕ್ಷಣವತೀಂ ವಾಚಂ ವದೇತ್

**ತದಾನೀಂ ಸತ್ಯವದನಫಲಸಿದ್ಧ್ಯರ್ಥಂ ಪ್ರಕಾರಾಂತರಂ ವಿಧತ್ತೇ । ವಿಚಕ್ಷಣೇತ್ಯಕ್ಷರಚತುಷ್ಟಯಾತ್ಮಕೋಽಯಂ ಮಂತ್ರಸ್ತದ್ಯುಕ್ತಂ ವಾಕ್ಯಂ ಪ್ರಯುಂಜೀತ । ದೇವದತ್ತ ವಿಚಕ್ಷಣ ಗಾಮಾನಯ ಯಜ್ಞದತ್ತ ವಿಚಕ್ಷಣ ಗಾಂ ಬಧಾನೇತ್ಯೇವಂ ತತ್ಪ್ರಯೋಗಃ । ಯದಾಹಾಪಸ್ತಂಬಃ—ಚನಸಿತ ವಿಚಕ್ಷಣ ಇತಿ ನಾಮಧೇಯಾಂತೇಷು ದಧಾತಿ ಚನಸಿತೇತಿ ಬ್ರಾಹ್ಮಣಂ ವಿಚಕ್ಷಣೇತಿ ರಾಜನ್ಯವೈಶ್ಯೌ ಇತಿ ।**

ಹಾಗಾದರೆ ಸತ್ಯವನ್ನು ನುಡಿಯುವ ಬಗೆ ಹೇಗೆ? ಎಂದರೆ ದೀಕ್ಷಿತನಾದವನು ಮತ್ತೊಬ್ಬ ಪುರುಷನೊಡನೆ ಮಾತನಾಡುವ ಸಂದರ್ಭದಲ್ಲಿ ಅವನನ್ನು ಸಂಬೋಧಿಸುವಾಗ ವಿಚಕ್ಷಣ ಎಂಬ ಶಬ್ದವನ್ನು ಉಪಯೋಗಿಸಿ ಮಾತನಾಡಬೇಕು. ಉದಾ—**ದೇವದತ್ತ ವಿಚಕ್ಷಣ ಗಾಮಾನಯ; ಯಜ್ಞದತ್ತ ವಿಚಕ್ಷಣ ಗಾಂ ಬಧಾನ**-ಆಪಸ್ತಂಬ ಮಹರ್ಷಿಯು ಈ ವಿಷಯ ಧಲ್ಲಿ—**ಚನಸಿತಂ ವಿಚಕ್ಷಣಮಿತಿ ನಾಮಧೇಯಾನ್ತೇಷು ನಿದಧಾತಿ ; ಚನಸಿತೇತಿ ಬ್ರಾಹ್ಮಣಂ, ವಿಚಕ್ಷಣೇತಿ**

**ರಾಜನ್ಯವೈಶ್ಯೌ** (ಆಪ. ಶ್ರೌ. ಸೂ. ೧೦-೧೩-೭,೮) ಎಂದು ಹೇಳಿರುವರು. ಸಂಬೋಧಿಸಲ್ಪಡುವ ಪುರುಷನ ಹೆಸರಿನ ಕೊನೆಯಲ್ಲಿ ವಿಚಕ್ಷಣಶಬ್ದವನ್ನು ಉಪಯೋಗಿಸಬೇಕು. ಬ್ರಾಹ್ಮಣನ ವಿಷಯದಲ್ಲಿ **ಚನಸಿತ** ಎಂಬ ಶಬ್ದವನ್ನೂ ಕ್ಷತ್ರಿಯವೈಶ್ಯರ ವಿಷಯದಲ್ಲಿ **ವಿಚಕ್ಷಣ** ಎಂಬ ಶಬ್ದವನ್ನು ಉಪಯೋಗಿಸಬೇಕು. ಉದಾ—ದೇವದತ ಚನಸಿತ; ಮಿತ್ರಪಾಲ ವಿಚಕ್ಷಣ ಇತ್ಯಾದಿ. ಕಾತ್ಯಾಯನರೂ ಸಹ—**ವಿಚಕ್ಷಣ ಚನಸಿತವತೀಂ ವಾಚಂ** (ಕಾತ್ಯಾ. ಶ್ರೌ.ಸೂ. ೭-೫-೭) (ಲಾಟ್ಯಾ. ಶ್ರೌ.ಸೂ. ೩-೩-೧೪) ಎಂದು ಹೇಳಿರುವರು.

## ಚಕ್ಷುರ್ವೈ ವಿಚಕ್ಷಣಂ ವಿ ಹ್ಯೇನೇನ ಪಶ್ಯತಿ ।

**ವಿಚಕ್ಷಣೇತಿ ಮಂತ್ರಸ್ಯ ಸತ್ಯವದನಪೂರ್ತಿಹೇತುತ್ವಂ ಪ್ರತಿಪಾದಯತಿ । ಚಕ್ಷುರಿಂದ್ರಿಯಮೇವ ವಿಚಕ್ಷಣಶಬ್ದವಾಚ್ಯಂ-ತದೇವ ಸ್ಪಷ್ಟೀಕ್ರಿಯತೇ । ಚಕ್ಷಿಙ್ ದರ್ಶನೇ ಇತ್ಯಸ್ಮಾದ್ಧಾತೋರಯಂ ಶಬ್ದೋ ನಿಷ್ಪನ್ನಃ । ತಥಾ ಸತಿ ವಿಶೇಷೇಣ ವಸ್ತುತತ್ತ್ವಮೇನೇನಾಚಷ್ಟೇ ಪಶ್ಯತೀತಿ ವಿಚಕ್ಷಣಂ ನೇತ್ರಂ । ತಸ್ಮಾಚ್ಚಕ್ಷುರ್ವಿಚಕ್ಷಣಮಿತಿ ಪರ್ಯಾಯೌ । ಉಕ್ತನಿರ್ವಚನಪ್ರದರ್ಶನಾರ್ಥ ಇತಿಶಬ್ದಃ ।**

ವಿಚಕ್ಷಣ ಶಬ್ದವು ಸತ್ಯವನ್ನು ಹೇಳುವುದೆಂಬುದನ್ನು ವಿವರಿಸಲಾಗುವುದು. **ಚಕ್ಷಿಙ್ ದರ್ಶನೇ** ಎಂಬ ಧಾತುವಿನಿಂದ ಚಕ್ಷುಃ ಶಬ್ದವು ನಿಷ್ಪನ್ನವಾಗಿದೆ. ಚಕ್ಷುಃ ಎಂದರೆ ಕಣ್ಣು ಎಂದರ್ಥ. ವಿಚಕ್ಷಣಶಬ್ದವು ಚಕ್ಷುರಿಂದ್ರಯವನ್ನು ಸೂಚಿಸುವುದು. ಮನುಷ್ಯನು ಒಂದು ವಸ್ತುವನ್ನು ನೋಡಬೇಕಾದರೆ ಚಕ್ಷುರಿಂದ್ರಿಯದಿಂದ ಎಂದರೆ ಕಣ್ಣಿನಿಂದ. **ಚಕ್ಷುಃ** ಮತ್ತು **ವಿಚಕ್ಷಣಂ** ಎಂಬ ಶಬ್ದಗಳು ಒಂದೇ ಅರ್ಥವನ್ನು ತಿಳಿಸುವ ಪರ್ಯಾಯಪದಗಳು.

## ಏತದ್ಧ ವೈ ಮನುಷ್ಯೇಷು ಸತ್ಯಂ ನಿಹಿತಂ ಯಚ್ಚಕ್ಷುಃ ।

**ಅಸ್ತ್ವೇವಂ ತಯೋಃ ಪರ್ಯಾಯತ್ವಂ ಕಥಮೇತಾವತಾ ಸತ್ಯಸಂಪೂರ್ತಿಸಿದ್ಧಿರಿತ್ಯಾಶಂಕ್ಯಾಹ – ಪ್ರತ್ಯಕ್ಷಾನುಮಾನಾದಿಪ್ರಮಾಣಾನಾಂ ಮಧ್ಯೇ ಪ್ರತ್ಯಕ್ಷಪ್ರಮಿತಿಸಾಧನಂ ಯಚ್ಚಕ್ಷುರಿಂದ್ರಿಯಮಸ್ತಿ ಏತದೇವ ಮನುಷ್ಯೇಷು ಸರ್ವೇಷು ಸತ್ಯಂ ನಿಹಿತಂ ಯಥಾವಸ್ತುಜ್ಞಾನಸಾಧನತ್ವೇನಾಭಿಮತಂ ತಸ್ಮಾಚ್ಚಕ್ಷುಷ್ಪರ್ಯಾಯವಿಚಕ್ಷಣಶಬ್ದಪ್ರಯೋಗೇಣ ಸತ್ಯಸಂಪೂರ್ತಿರ್ಭವತಿ ।**

ಚಕ್ಷುಃ ಮತ್ತು ವಿಚಕ್ಷಣ ಎಂಬ ಶಬ್ದಗಳಿಗೆ ಒಂದೇ ಅರ್ಥವಿದ್ದರೂ ಸತ್ಯವನ್ನು ನುಡಿಯುವ ವಿಷಯದಲ್ಲಿ ಈ ಶಬ್ದಗಳಿಗೆ ಇರುವ ಸಂಬಂಧವೇನು? ಎಂದರೆ ಮನುಷ್ಯರ ಚಕ್ಷುರಿಂದ್ರಿಯಗಳಲ್ಲಿ ಎಂದರೆ ಕಣ್ಣುಗಳಲ್ಲಿ ಸತ್ಯವು ದೃಢವಾಗಿ ಇಡಲ್ಪಟ್ಟಿದೆ. ಪ್ರತ್ಯಕ್ಷ ಅನುಮಾನ ಮೊದಲಾದ ಪ್ರಮಾಣಗಳಲ್ಲಿ ಪ್ರತ್ಯಕ್ಷಪ್ರಮಾಣವನ್ನು ಕಣ್ಣುಗಳಿಂದ ನೋಡಿ ತಿಳಿಯಬಹುದು. ಒಂದು ವಸ್ತುವಿನ ವಿಷಯವನ್ನು ಮತ್ತೊಬ್ಬನಿಂದ ಕೇಳಿ ತಿಳಿದುಕೊಳ್ಳುವುದಕ್ಕಿಂತಲೂ ತಾನು ತನ್ನ ಕಣ್ಣುಗಳಿಂದ ಪ್ರತ್ಯೇಕವಾಗಿ ನೋಡಿ ತಿಳಿದುಕೊಳ್ಳುವುದೇ ಶ್ರೇಷ್ಠವು. ಹಾಗೆ ತಾನೇ ನೋಡಬೇಕಾದರೆ ಚಕ್ಷುರಿಂದ್ರಿಯದ ಸಹಾಯವು ಬೇಕು. ಚಕ್ಷುರಿಂದ್ರಿಯವು ಎಂದರೆ ಕಣ್ಣು ಯಾವಾಗಲೂ ಇಲ್ಲದ್ದನ್ನು ತಿಳಿಸುವುದಿಲ್ಲ. ಇದ್ದುದನ್ನು ಇದ್ದಂತೆಯೇ ಎಂದರೆ ಸತ್ಯವನ್ನೇ ತಿಳಿಸುವುದು.

**ತಸ್ಮಾದಾಚಕ್ಷಾಣಮಾಹುರದ್ರಾಗಿತಿ ಸ ಯದ್ಯದರ್ಶಮಿತ್ಯಾಹಾಥಾಸ್ಯ ಶ್ರದ್ದಧತಿ ಯದ್ಯು ವೈ ಸ್ವಯಂ ಪಶ್ಯತಿ ನ ಬಹೂನಾಂ ಚನಾನ್ಯೇಷಾಂ ಶ್ರದ್ದಧಾತಿ ॥**

ಅನ್ವಯವ್ಯತಿರೇಕಾಭ್ಯಾಂ ಚಕ್ಷುಷೋ ಯಥಾವಸ್ತುದರ್ಶನಸಾಧನತ್ವಂ ಸಾಧಯತಿ। ಯಸ್ಮಾಚ್ಚಕ್ಷುಷಸ್ತತ್ತ್ವದರ್ಶನಹೇತುತ್ವಂ ಮನುಷ್ಯಾಣಾಮಭಿಪ್ರೇತಂ ತಸ್ಮಾಲ್ಲೋಕೇ ಸಭಾಯಾಮಾಗತ್ಯ ಕಾಂಚಿದ್ವಾರ್ತಾಮಾಚಕ್ಷಾಣಂ ಪುರುಷಂ ಪ್ರತಿ ಸಭ್ಯಾ ಏವಮಾಹುರದ್ರಾಗಿತಿ ಕಿಂತ್ವೇವಮೇವಾದ್ರಾಕ್ಷೀರಿತ್ಯರ್ಥಃ । ಸ ಚ ಪುರುಷೋ ಯದ್ಯಹಮೇವಾದ್ರಾಕ್ಷಮಿತಿ ಬ್ರೂಯಾತ್ತದಾಸ್ಯ ವಚನಂ ಸತ್ಯಮಿತಿ ಸಭ್ಯಾಃ ಸರ್ವೇ ಶ್ರದ್ದಧತಿ ವಿಶ್ವಾಸಂ ಕುರ್ವಂತಿ। ತದಿದಮೇಕಮುದಾಹರಣಂ। ಯದ್ಯು ವಾ ಇತ್ಯಯಂ ನಿಪಾತಸಮೂಹ ಉದಾಹರಣಾಂತರಪ್ರದರ್ಶನಾರ್ಥಃ। ಅಥವಾ ಕಶ್ಚಿತ್ಪುಮಾನ್ಸ್ವಯಮೇವ ಚಕ್ಷುಷಾ ಸ್ಕಂಧಮೂಲಾದ್ಯುಪೇತಂ ಸ್ಥಾಣುಂ ಪಶ್ಯತಿ। ಅನ್ಯೇ ಬಹವಃ ಪುರುಷಾ ದೂರವರ್ತಿನೋಽಪಶ್ಯಂತಃ ಪುರುಷೋಽಯಮಿತ್ಯಾಚಕ್ಷತೇ। ಚನಶಬ್ದೋಽಪಿಶಬ್ದಾರ್ಥಃ। ಬಹೂನಾಮಪ್ಯನ್ಯೇಷಾಂ ವಚನಮಯಂ ಪುರುಷೋ ನ ಶ್ರದ್ದಧಾತಿ ಕಿಂತು ಸ್ವಕೀಯಂ ಚಾಕ್ಷುಷಂ ದರ್ಶನಮೇವ ಶ್ರದ್ದಧಾತಿ। ವಾಜಸನೇಯಿನೋಽಪ್ಯಾಮನಂತಿ—ದ್ವೌ ವಿವದಮಾನಾವೇಯಾತಾಮಹಮದರ್ಶಮಹಮಶ್ರೌಷಮಿತಿ ಯ ಏವಂ ಬ್ರೂಯಾದಹಮದರ್ಶಮಿತಿ ತಸ್ಮಾ ಏವ ಶ್ರದ್ದಧೀತ ಇತಿ। ತೈತ್ತಿರೀಯಾಶ್ಚಾಮನಂತಿ-ಅನೃತಂ ವೈ ವಾಚಾವದತಿ। ಅನೃತಂ ಮನಸಾ ಧ್ಯಾಯತಿ। ಚಕ್ಷುರ್ವೈ ಸತ್ಯಂ ಅದ್ರಾಗಿತ್ಯಾಹ। ಅಹಮದರ್ಶಮಿತಿ। ತತ್ಸತ್ಯಂ। ಇತಿ॥

ಸತ್ಯಸ್ವರೂಪಜ್ಞಾನವು ಮನುಷ್ಯರಲ್ಲಿ ಚಕ್ಷುರಿಂದ್ರಿಯಗಳಲ್ಲಿ ಇದೆಯೆಂಬುದಕ್ಕೆ ಪ್ರಮಾಣವೇನು? ಎಂದರೆ ಅನೇಕ ಜನರು ಸೇರಿರುವ ಸಭೆಗೆ ಓರ್ವ ಪುರುಷನು ಬಂದು ಬೇರೆಕಡೆ ನಡೆದ ಒಂದು ವರ್ತಮಾನವನ್ನು ಹೇಳುತ್ತಿರುವನು. ಆಗ ಸಭಿಕರು ಆ ಪುರುಷನನ್ನು ಕುರಿತು—ನೀನು ಹೇಳುವ ಸಂಗತಿಯು ವಿಚಿತ್ರವಾಗಿದೆ ಅದನ್ನು ನಂಬಲು ಹೇಗೆ ಸಾಧ್ಯ? ನೀನು ಹೇಳಿರುವ ರೀತಿ ಆ ಸಂಗತಿ ನಡೆದಿದ್ದನ್ನು ನೀನು ನಿನ್ನ ಕಣ್ಣುಗಳಿಂದ ನೋಡಿದೆಯಾ ಎಂದು ಕೇಳುವರು. ಅದಕ್ಕೆ ಆ ಪುರುಷನು, ಹೌದು ನಾನು ನಡೆದ ಸಂಗತಿಯನ್ನು ನನ್ನ ಕಣ್ಣುಗಳಿಂದಲೇ ನೋಡಿದೆನು ಎಂದು ಹೇಳಿದಮೇಲೆ ಸಭಿಕರು ಅವನ ಮಾತಿನಲ್ಲಿ ವಿಶ್ವಾಸ ಇಡುವರು ಎಂದರೆ ಅವನ ಮಾತನ್ನು ನಂಬುವರು ಅಥವಾ ಈ ವಿಷಯದಲ್ಲಿ ಬೇರೆ ಉದಾಹರಣೆಯನ್ನು ಕೊಡಬಹುದು—ದೂರದಲ್ಲಿ ಎಲೆಗಳಿಲ್ಲದೆ ಕೇವಲ ಶಾಖಾಸಹಿತವಾಗಿರುವ ಒಂದು ಮೋಟುಮರವನ್ನು ನೋಡಿದ ಕೆಲವರು ಅಲ್ಲಿ ಒಬ್ಬ ಮನುಷ್ಯನು ನಿಂತಿರುವನು ಎಂದು ಹೇಳುತ್ತಾರೆ. ಆದರೆ ಮತ್ತೊಬ್ಬ ಪುರುಷನು ಆ ಮೋಟುಮರದ ಸಮೀಪದಲ್ಲಿಯೇ ನಿಂತು ಅದನ್ನು ತನ್ನ ಕಣ್ಣುಗಳಿಂದ ನೋಡಿದಮೇಲೆ, ಅದು ಮನುಷ್ಯನಲ್ಲ ಮೋಟುಮರ ಅದನ್ನು ನಾನು ನನ್ನ ಕಣ್ಣುಗಳಿಂದಲೇ ಸ್ಪಷ್ಟವಾಗಿ ನೋಡಿದೆನು ಎಂದು ಹೇಳಿದಾಗ ಇತರರೂ ಅದನ್ನು ನಂಬಲೇಬೇಕಾಗುವುದು. ಕಣ್ಣಿನಿಂದ ನೋಡದ ಅನೇಕರು ಒಂದು ವಿಷಯವನ್ನು ಹೇಳಿದರೂ ಅದರಲ್ಲಿ ನಂಬಿಕೆಯನ್ನಿಡುವುದು ಸಾಧ್ಯವಿಲ್ಲ. ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡಿದ ಒಬ್ಬ ಪುರುಷನು ಹೇಳುವುದಾದರೆ ಅದೇ ವಿಶ್ವಾಸಾರ್ಹವು. ಚಕ್ಷುರಿಂದ್ರಿಯವು ಎಂದರೆ ಕಣ್ಣು ಯಾವಾಗಲೂ ಸುಳ್ಳನ್ನು ತಿಳಿಸುವುದಿಲ್ಲ, ಸತ್ಯವನ್ನೇ ತಿಳಿಸುವುದು. ಶತಪಥಬ್ರಾಹ್ಮಣವಾಕ್ಯವು ಈ ವಿಷಯದಲ್ಲಿ ಈರೀತಿ ತಿಳಿಸುವುದು—ದ್ವೌ ವಿವದಮಾನಾವೇಯಾತಾ

**ಮಹಮದರ್ಶಮಹಮಶ್ರೌಷಮಿತಿ ; ಯ ಏವಂ ಬ್ರೂಯಾದಹಮದರ್ಶಮಿತಿ ತಸ್ಮಾ ಏವ ಶ್ರದ್ದಧೀತ** (ಶ. ಬ್ರಾ. ೧-೩-೧-೨೭). ಒಂದು ಸಂಗತಿ ನಡೆದಿರುವ ವಿಚಾರದಲ್ಲಿ ಇಬ್ಬರು ಪುರುಷರು ಪರಸ್ಪರ ಚರ್ಚೆಮಾಡುತ್ತಿರುವರು ಒಬ್ಬನು ಈ ಸಂಗತಿ ನಡೆದಿದೆಯೆಂದು ನಾನು ಇತರರಿಂದ ಕೇಳಿ ತಿಳಿದಿರುವೆನು ಎನ್ನುವನು, ಮತ್ತೊಬ್ಬನು ಇದನ್ನು ನಾನೇ ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡಿರುವೆನು ಎನ್ನುವನು. ಈ ಇಬ್ಬರಲ್ಲಿ ಕಣ್ಣಿನಿಂದ ನೋಡಿದೆನು ಎಂದು ಹೇಳುವ ಪುರುಷನ ವಾಕ್ಯವೇ ಸತ್ಯ, ಅದೇ ನಂಬಿಕೆಗೆ ಅರ್ಹವಾದದ್ದು. ಕಿವಿಯಿಂದ ಕೇಳಿದೆನೆಂದು ಹೇಳುವ ಪುರುಷನ ಮಾತಿನಲ್ಲಿ ದಂಬಿಕೆ ಯನ್ನಿಡುವುದಕ್ಕಾಗುವುದಿಲ್ಲ ಎಂದಭಿಪ್ರಾಯವು. ತೈತ್ತಿರೀಯಬ್ರಾಹ್ಮಣದಲ್ಲಿಯೂ ಸಹ ಈರೀತಿ ಇರುವುದು—

**ಅನೃತಂ ವೈ ವಾಚಾ ವದತಿ । ಅನೃತಂ ಮನಸಾ ಧ್ಯಾಯತಿ । ಚಕ್ಷುರ್ವೈ ಸತ್ಯಂ । ಅದ್ರಾ ೩ ಗಿತ್ಯಾಹ । ಅದರ್ಶಮಿತಿ । ತತ್ಸತ್ಯಂ ॥**

(ತೈ. ಬ್ರಾ. ೧-೧-೪-೧,೨)

ಎಂದರೆ ಮಾತುಗಳಿಂದ ಸುಳ್ಳನ್ನು ಹೇಳಬಹುದು, ಮನಸ್ಸಿನಿಂದಲೂ ಸುಳ್ಳನ್ನು ಯೋಚಿಸಬಹುದು. ಆದರೆ ಕಣ್ಣಿನಿಂದ ಸುಳ್ಳನ್ನು ಕಲ್ಪಿಸುವುದಕ್ಕಾಗುವುದಿಲ್ಲ. ಈ ವಸ್ತುವನ್ನು ನಾನು ನೋಡಿದೆ ಎಂದು ಹೇಳಿದರೆ ಆ ವಸ್ತುವು ಪ್ರತ್ಯಕ್ಷವಾಗಿ ಇದೆ, ಈ ಮಾತು ನಿಜವು ಎಂದು.



**ತಸ್ಮಾದ್ವಿಚಕ್ಷಣವತೀಮೇವ ವಾಚಂ ವದೇತ್ಸತ್ಯೋತ್ತರಾ ಹೈವಾಸ್ಯ ವಾಗುದಿತಾ ಭವತಿ ಭವತಿ ॥**

**ತಥಾವಿಧಚಕ್ಷುಃ ಪರ್ಯಾಯಸ್ಯ ವಿಚಕ್ಷಣಶಬ್ದಸ್ಯ ಸತ್ಯಸಂಪೂರ್ತಿಹೇತುತ್ವಮುಪ-ಪಾದ್ಯ ಪೂರ್ವೋಕ್ತಂ ವಿಧಿಮುಪಸಂಹರತಿ । ಅಸ್ಯ ವಿಚಕ್ಷಣಶಬ್ದೋಪೇತವಚನವಾದಿನೋ ಯಾ ವಾಗಸ್ತಿ ಸಾ ಸತ್ಯೋತ್ತರಾ ಸ್ವರೂಪೇಣಾನೃತಾಪಿ ವಿಚಕ್ಷಣೇತಿಮಂತ್ರಸಾಮರ್ಥ್ಯೇನ ಸತ್ಯಭೂಯಿಷ್ಠೈವ ಭವತಿ । ಅನೃತದೋಷೋ ನ ಸ್ಪೃಶತೀತ್ಯರ್ಥಃ । ಭವತಿಶಬ್ದಸ್ಯಾಭ್ಯಾ-ಸೋಽಧ್ಯಾಯಸಮಾಪ್ತ್ಯರ್ಥಃ ।**

ಆದ್ದರಿಂದ ವಿಚಕ್ಷಣಶಬ್ದಸಹಿತವಾದ ವಾಕ್ಯವನ್ನೇ ಆಡಬೇಕು. ಒಂದುವೇಳೆ ಅಜ್ಞಾನದಿಂದ ಅಥವಾ ಪ್ರಮಾದದಿಂದ ಆಡುವ ಮಾತಿನಲ್ಲಿ ಸತ್ಯಕ್ಕೆ ದೂರವಾದ ಸಂಗತಿಯಿದ್ದರೂ ವಿಚಕ್ಷಣಶಬ್ದಪ್ರಯೋಗದಿಂದ ದೀಕ್ಷಿತನಿಗೆ ಅನೃತಭಾಷಣದೋಷವು ತಟ್ಟುವುದಿಲ್ಲ. ವಾಕ್ಯದ ಕೊನೆಯಲ್ಲಿ ಭವತಿ ಭವತಿ ಎಂದು ಭವತಿಶಬ್ದವು ಎರಡಾವರ್ತಿ ಪ್ರಯೋಗಿಸಿರುವುದು ಅಧ್ಯಾಯದ ಸಮಾಪ್ತಿಯನ್ನು ಸೂಚಿಸುವುದು. ಭಾಷೆಗೆ ಲಿಪಿಯ ಸಹಾಯವಿಲ್ಲದೇ ಗ್ರಂಥವು ಗುರುವಿನಿಂದ ಶಿಷ್ಯರಿಗೆ ಪರಸ್ಪರ ಕಂಠಪಾಠದ ಮೂಲಕವಾಗಿಯೇ ಉಪದೇಶಿಸಿಲ್ಪಡುತ್ತಿದ್ದ ಆ ಕಾಲದಲ್ಲಿ ಅಧ್ಯಾಯದ ಅಥವಾ ಗ್ರಂಥದ ಪರಿಸಮಾಪ್ತಿಯನ್ನು ತಿಳಿಸುವುದಕ್ಕಾಗಿ ವಾಕ್ಯದ ಕೊನೆಯ ಶಬ್ದವನ್ನು ಎರಡಾವರ್ತಿ ಪಠಿಸುವುದು ರೂಢಿಯಾಗಿದೆ. ನಿರುಕ್ತ ಮೊದಲಾದ ಪ್ರಾಚೀನ ಗ್ರಂಥಗಳಲ್ಲೆಲ್ಲಾ ಈ ಪದ್ಧತಿಯು ಕಂಡುಬರುವುದು.

*English Translation*

The Viraj metre possesses five powers. Because of its consisting of three lines (padas), it is Gayatri and Ushnih (which metres have three lines also).

Because of its lines consisting of eleven syllables, it is Trishtubh (4 times 11 syllables=44). Because of its having thirty-three syllables, it is Anushtubh. (If it be said, that the two Viraj verses in question, i.e. preddho agne and imo agne have, the one only 29, and the other 32 syllables, instead of 33, it must be borne in mind that) metres do not change by (the want of) one syllable or two. The fifth power is, that it is Viraj.

He who knowing this, uses (at the Svishtakrit) two Viraj verses, obtains the power of all metres, gains the power of all metres, gains union, uniformity, and (complete) unison with all the metres.

Therefore two Viraj verses are certainly to be used, those (which begin with) preddho agne (7, 1, 3), and imo agne (7, 1, 18).

Diksha is right, Diksha is truth: thence a Dikshita should only speak the truth.

Now they say, what man aan speak all truth? Gods (alone) are full of truth, (but) men are full of falsehood.

He should make each address (to another) by the word "Vichakshana" i.e. "of penetrating eye." The eye (chakshus) is vichakshana, for with it he sees distinctly (vi-pasyati). For the eye is established as truth among men. Therefore people say to a man who tells something, have you seen it? (i.e. is it really true?) And if he says, "I saw it," (then they believe him. And if one sees a thing himself, one does not believe others, even if they were many. Therefore he should add (always) to his addresses (to others) the word vichkshana, "of penetrating, sharp eyes." Then the speech uttered by him becomes full of truth.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಪ್ರಥಮಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೊದಲನೆಯ ಅಧ್ಯಾಯದ ಆರನೆಯ ಖಂಡವು ಸಮಾಪ್ತವಾದುದು.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಪ್ರಥಮೋಽಧ್ಯಾಯಃ ॥

ಇಲ್ಲಿಗೆ ಮೊದಲನೆಯ ಅಧ್ಯಾಯವು ಸಮಾಪ್ತವು.



# ಅಥೈತರೇಯಬ್ರಾಹ್ಮಣೇ ದ್ವಿತೀಯಾಧ್ಯಾಯೇ ಪ್ರಥಮಃ ಖಂಡಃ

## ಎರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಪ್ರಾಯಣೀಯೇಷ್ಟಿಯು—ದಿಕ್ಪರಿಜ್ಞಾನಕ್ಕಾಗಿ ಪಥ್ಯಾದಿದೇವತೆಗಳ ಆರಾಧನೆಯು ; ಯಾವ ದಿಕ್ಕಿನಲ್ಲಿ ಹೋಮ ಮಾಡಿದರೆ ಯಾವ ಫಲಪ್ರಾಪ್ತಿ ಎಂಬ ವಿಷಯವಿಮರ್ಶೆ ಇತ್ಯಾದಿ. ]

---

**ಸ್ವರ್ಗಂ ವಾ ಏತೇನ ಲೋಕಮುಪಪ್ರಯಂತಿ ಯತ್ಪ್ರಾಯಣೀಯ-**
**ಸ್ತತ್ಪ್ರಾಯಣೀಯಸ್ಯ ಪ್ರಾಯಣೀಯತ್ವಂ ।**

**ಪ್ರಥಮೇ ದೀಕ್ಷಣೀಯೇಷ್ಟಿಸ್ತತ್ಸ್ತುತಿಸ್ತತ್ರ ಸಂಸ್ಕೃತಿಃ ।**
**ಯಾಜ್ಯಾನುವಾಕ್ಯೇ ಸಂಯಾಜ್ಯಾಃ ಸತ್ಯೋಕ್ತಿಶ್ಚೇತಿ ವರ್ಣಿತಾಃ ॥**

**ಅಥ ಪ್ರಾಯಣೀಯಾದಿಕಂ ವಿಧಾತುಂ ದ್ವಿತೀಯೋಽಧ್ಯಾಯ ಆರಭ್ಯತೇ । ತತ್ರಾದೌ ಪ್ರಾಯಣೀಯಶಬ್ದಾರ್ಥಂ ವದತಿ । ಪ್ರಾಯಣೀಯಾಖ್ಯೋ ಯಃ ಕರ್ಮವಿಶೇಷೋಽಸ್ತ್ಯೇತೇನ ಯಜಮಾನಾಃ ಸ್ವರ್ಗಂ ಲೋಕಂ ಸಾಮಿಪ್ಯೇನ ಪ್ರಾಪ್ನುವಂತಿ । ತಸ್ಮಾತ್ಪ್ರಯಂತ್ಯನೇನೇತಿ ವ್ಯುತ್ಪತ್ತ್ಯಾ ತತ್ಪ್ರಾಯಣೀಯನಾಮ ಸಂಪನ್ನಂ ।**

ಸಮಸ್ತ ಸೋಮಯಾಗಗಳಿಗೂ ಪೂರ್ವಭಾವಿಯಾಗಿ ಮಾಡಬೇಕಾದ ದೀಕ್ಷಣೀಯೇಷ್ಟಿವಿಧಾನವನ್ನೂ ದೀಕ್ಷಾಸಂಸ್ಕಾರಾದಿಕ್ರಮಗಳನ್ನೂ, ಆ ಇಷ್ಟಿಯಲ್ಲಿ ಉಪಯೋಗಿಸುವ ಸಂಯಾಜ್ಯಾ ಹೋಮದಲ್ಲಿ ಯಾಜ್ಯಾನುವಾಕ್ಯಾ ಮಂತ್ರಗಳನ್ನೂ, ದೀಕ್ಷಿತನು ಯಾವಾಗಲೂ ಸತ್ಯವನ್ನೇ ನುಡಿಯಬೇಕೆಂಬ ಆದೇಶವನ್ನೂ ಪ್ರಥಮಾಧ್ಯಾಯದಲ್ಲಿ ವಿವರಿಸಿದ್ದಾಯಿತು. ಈಗ ಈ ದ್ವಿತೀಯಾಧ್ಯಾಯದಲ್ಲಿ ಪ್ರಾಯಣೀಯೇಷ್ಟಿವಿಧಾನವನ್ನು ವಿವರಿಸಲಾಗುವುದು. ಈ ಪ್ರಾಯಣೀಯೇಷ್ಟಿಯಿಂದಲೇ ಯಜ್ಞವು ಪ್ರಾರಂಭವಾಗುವುದೆಂದು ತಿಳಿಯಬೇಕು. ದೀಕ್ಷಣೀಯಾದಿಹೋಮಗಳು ಯಜ್ಞಕ್ಕೆ ಪೂರ್ವಭಾವಿಯಾಗಿ ಯಜಮಾನನು ಆಚರಿಸಬೇಕಾದ ದೀಕ್ಷಾಕ್ರಮ ಮತ್ತು ಸಂಸ್ಕಾರಗಳು ಮಾತ್ರ. ಇವು ಯಜ್ಞಾದಿಗಳಿಗೆ ಅವಶ್ಯಕವಾದರೂ ಯಜ್ಞದ ಪ್ರಾರಂಭವೆನಿಸುವುದಿಲ್ಲ. ಪ್ರಾಯಣೀಯೇಷ್ಟಿಯಿಂದಲೇ ಯಜ್ಞವು ಪ್ರಾರಂಭವಾಗುವುದು.

ಈಗ ಪ್ರಾಯಣೀಯಶಬ್ದದ ಅರ್ಥವನ್ನೂ ವ್ಯುತ್ಪತ್ತಿಯನ್ನೂ ವಿವರಿಸಲಾಗುವುದು. ಪ್ರಾಯಣೀಯ ಎಂಬ ಯಾವ ಯಜ್ಞಾಂಗಕರ್ಮವಿರುವುದೋ ಅದನ್ನು ಮಾಡುವುದರಿಂದ ಯಜಮಾನರು ಸ್ವರ್ಗಕ್ಕೆ ಹೋಗುತ್ತಾರೆ. **ಪ್ರಯಂತಿ ಸ್ವರ್ಗಂ ಗಂತುಂ ಪ್ರಾರಭಂತೇಽನೇನೇತಿ ಪ್ರಾಯಣೀಯಃ ।** ಪ್ರಯಂತಿ – ಮುಂದಕ್ಕೆ (ಸ್ವರ್ಗಕ್ಕೆ) ಹೋಗುತ್ತಾರೆ ಎಂಬರ್ಥವುಳ್ಳ ಪ್ರ ಎಂಬ ಉಪಸರ್ಗಸಹಿತವಾದ ಯಾ–ಪ್ರಾಪಣೇ ಎಂಬ ಧಾತುವಿನಿಂದ ಪ್ರಾಯಣೀಯ ಶಬ್ದವು ನಿಷ್ಪನ್ನವಾಗಿದೆ. ಪ್ರಾಯಣೀಯ ಎಂದರೆ (ಸ್ವರ್ಗಕ್ಕೆ) ಹೋಗುವುದು ಎಂದರೆ ಸ್ವರ್ಗಕ್ಕೆ ಹೋಗಲು ಸಾಧನವಾದ ಇಷ್ಟಿಯು ಎಂದರ್ಥವು. ಆದ್ದರಿಂದಲೇ ಈ

ಇಷ್ಟಿಗೆ ಪ್ರಾಯಣೀಯೇಷ್ಟಿ ಎಂದು ಹೆಸರು ಬಂದಿದೆ. ಪ್ರಾಯಣೀಯೇಷ್ಟಿಯಂತೆಯೇ ಮತ್ತೊಂದು ಇಷ್ಟಿ ಇರುವುದು. ಅದೇ ಉದಯನೀಯೇಷ್ಟಿಯು; ಪ್ರಾಯಣೀಯೇಷ್ಟಿಯು ಯಜ್ಞದ ಪ್ರಾರಂಭವಾದರೆ ಉದಯನೀಯೇಷ್ಟಿಯು ಯಜ್ಞದ ಸಮಾಪ್ತಿಯು. ಈ ಎರಡು ಇಷ್ಟಿಗಳೂ ಒಂದೇ ವಿಧವಾಗಿರುವವು. ಎರಡಕ್ಕೂ ಒಂದೇ ವಿಧವಾದ ದೇವತೆಗಳು. ಆದರೆ ಪ್ರಾಯಣೀಯೇಷ್ಟಿಯನ್ನು ಯಜ್ಞದ ಪ್ರಾರಂಭದಲ್ಲಿಯೂ ಉದಯನೀಯೇಷ್ಟಿಯನ್ನು ಯಜ್ಞದ ಅಂತ್ಯದಲ್ಲಿಯೂ ಮಾಡುವರು.

**ಪ್ರಾಣೋ ವೈ ಪ್ರಾಯಣೀಯ ಉದಾನ ಉದಯನೀಯಃ ಸಮಾ-
ನೋ ಹೋತಾ ಭವತಿ ಸಮಾನೌ ಹಿ ಪ್ರಾಣೋದಾನೌ ಪ್ರಾಣಾ-
ನಾಂ ಕ್ಲೃಪ್ತ್ಯೈ ಪ್ರಾಣಾನಾಂ ಪ್ರತಿಪ್ರಜ್ಞಾತ್ಯೈ ॥**

ಅಥ ವಿಧಾಸ್ಯಮಾನೌ ಪ್ರಾಯಣೀಯೋದಯನೀಯಾಖ್ಯೌ ಕರ್ಮವಿಶೇಷೌ ಸ್ತೌತಿ ಸಹ ಪ್ರಶಂಸತಿ । ಪ್ರಾಣವಾಯೋಃ ಪ್ರಾಯಣೀಯಕರ್ಮಣಶ್ಚ ಪ್ರಶಬ್ದಸಾಮ್ಯಾದಭೇದಃ । ಉದಾನವಾಯೋರುದಯನೀಯಕರ್ಮಣಶ್ಚೋಚ್ಛಬ್ದಸಾಮ್ಯಾದಭೇದಃ । ಕಿಂಚ ಪ್ರಾಯಣೀಯೋದಯನೀಯಯೋಃ ಕರ್ಮಣೋರ್ಯಾಜ್ಯಾನುವಾಕ್ಯಾದಿಪ್ರಯೋಗಾರ್ಥಮೇಕ ಏವ ಹೋತಾ ಭವತಿ । ಪ್ರಾಣೋದಾನವಾಯೂ ಚೈಕದೇಹವರ್ತಿತ್ವಾದೇಕೇನ ಹೋತ್ರಾನುಷ್ಠೇಯಾಭ್ಯಾಂ ಕರ್ಮಭ್ಯಾಂ ಸಮಾನಾವತೋ ವಾಯುವಿಶೇಷಯೋಶ್ಚಾಭೇದಃ । ತಚ್ಚ ಕರ್ಮದ್ವಯಾನುಷ್ಠಾನಂ ಪ್ರಾಣವಾಯೂನಾಂ ಕ್ಲೃಪ್ತ್ಯೈ ಸ್ವಸ್ವವ್ಯಾಪಾರಸಾಮರ್ಥ್ಯಾಯ ಭವತಿ । ತಥಾ ಪ್ರಾಣವಾಯೂನಾಂ ಪ್ರತ್ಯೇಕಮಯಂ ಪ್ರಾಣೋಽಯಮುದಾನ ಇತ್ಯಾದಿವಿಶೇಷಸ್ಯ ಪ್ರಜ್ಞಾನಾಯ ಭವತಿ । ತಸ್ಮಾತ್ಕರ್ಮದ್ವಯಂ ಪ್ರಶಸ್ತಮಿತ್ಯರ್ಥಃ ।

ಉದಯನೀಯೇಷ್ಟಿಯ ವ್ಯುತ್ಪತ್ತಿಯೂ ಪ್ರಾಯಣೀಯೇಷ್ಟಿಯಂತೆಯೇ ಇರುವುದು. ಪ್ರ ಎಂಬ ಉಪಸರ್ಗಕ್ಕೆ ಬದಲಾಗಿ ಉತ್ ಎಂಬ ಉಪಸರ್ಗವಿರುವುದು ಎಂದರೆ ಯಜಮಾನರು ಉತ್ – ಎಂದರೆ ಊರ್ಧ್ವಭಾಗದಲ್ಲಿರುವ ಸ್ವರ್ಗಕ್ಕೆ ಹೋಗಿ ಸೇರುವರೆಂದರ್ಥವು. ಈ ಎರಡು ಇಷ್ಟಿಗಳನ್ನು ಶರೀರದಲ್ಲಿರುವ ಪ್ರಾಣ ಮತ್ತು ಉದಾನ ಎಂಬ ವಾಯುಗಳಿಗೆ ಇಲ್ಲಿ ಹೋಲಿಸಿರುವರು. ಭಟ್ಟಭಾಸ್ಕರರು ಈರೀತಿ ಹೇಳುತ್ತಾರೆ—

ಪ್ರಾಣಂತಿ ಜೀವಿತುಮಾರಭಂತೇಽನೇನೇತಿ ಪ್ರಾಣಃ । ಪ್ರಯಂತಿ ಸ್ವರ್ಗಂ ಗಂತುಂ ಪ್ರಾರಭಂತೇಽನೇನೇತಿ ಪ್ರಾಯಣೀಯಃ । ಏವಂ ವ್ಯುತ್ಪತ್ತಿಸಾಮ್ಯಾತ್ ಪ್ರಾಣಸ್ಥಾನೀಯಃ ಪ್ರಾಯಣೀಯಃ । ತಥಾ ಉದನಂತಿ ಊರ್ಧ್ವಂ ಜೀವಂತ್ಯನೇನೇತ್ಯುದಾನಃ ಉದ್ಯಂತಿ ಊರ್ಧ್ವಂ ಸ್ವರ್ಗಂ ಯಂತಿ ಪ್ರಾಪ್ನುವಂತ್ಯನೇನೇತ್ಯುದಯನೀಯಃ । ಏವಂ ವ್ಯುತ್ಪತ್ತ್ಯಾದಿಸಾಮ್ಯಾತ್ ಉದಾನಸ್ಥಾನೀಯಃ ಉದಯನೀಯಃ । ಯಸ್ಮಾದೇವಂ ತಸ್ಮಾತ್ ಪ್ರಾಯಣೀಯೋದಯನೀಯಯೋಃ ಸಮಾನ ಏಕ ಏವ ಹೋತಾ ಭವತಿ ॥

ಮನುಷ್ಯರ ಶರೀರದಲ್ಲಿ ಪ್ರಾಣ, ಅಪಾನ, ವ್ಯಾನ ಉದಾನ ಸಮಾನ ಎಂಬ ಐದು ವಿಧ ಪ್ರಾಣವಾಯುಗಳಿರುವವು. ಇವುಗಳಲ್ಲಿ ಇಲ್ಲಿ ಮೂರನ್ನು ಮಾತ್ರ ಸೂಚಿಸಲಾಗಿದೆ. ಪ್ರಾಣಕ್ಕೂ ಉದಾನಕ್ಕೂ ಮಧ್ಯವರ್ತಿಯಾಗಿ ಸಮಾನವು ಇದೆಯೆಂದು ಹೇಳಿದೆ ಯಜ್ಞವನ್ನೇ ಶರೀರವೆಂದು ಭಾವಿಸಿದರೆ ಆ ಯಜ್ಞವೆಂಬ ಶರೀರಕ್ಕೆ ಪ್ರಾಯಣೀಯವೇ ಪ್ರಾಣವು, ಉದಯನೀಯವೇ

ಉದಾನವು. ಇವುಗಳ ಮಧ್ಯದಲ್ಲಿ ಎರಡನ್ನು ತಡೆಹಿಡಿದಿರುವುದೇ ಎಂದರೆ ಸಂಬಂಧವನ್ನು ಕಲ್ಪಿಸುವುದೇ ಸಮಾನವು. ಪ್ರಾಣ ಶಬ್ದದಲ್ಲಿಯೂ ಪ್ರಾಯಣೀಯ ಶಬ್ದದಲ್ಲಿಯೂ ಪ್ರಾರಂಭದಲ್ಲಿ ಪ್ರ ಎಂಬ ಶಬ್ದವಿರುವುದರಿಂದ ಇವೆರಡಕ್ಕೂ ಸಾಮ್ಯವಿದ್ದಂತಾಯಿತು. ಅದರಂತೆಯೇ ಉದಾನ ಮತ್ತು ಉದಯನೀಯ ಶಬ್ದಗಳಿಗೆ ಉತ್ ಎಂಬ ಶಬ್ದವು ಸಾಮ್ಯವನ್ನು ಕಲ್ಪಿಸುವುದು. ಶರೀರದಲ್ಲಿರುವ ಪ್ರಾಣ ಮತ್ತು ಉದಾನಗಳಿಗೆ ಸಮಾನಸ್ಥಾನವಿರುವುದು ಎಂದರೆ ಒಂದು ಹೆಚ್ಚಲ್ಲ ಮತ್ತೊಂದು ಕಡಿಮೆಯಲ್ಲ. ಅದರಂತೆಯೇ ಪ್ರಾಯಣೀಯ ಮತ್ತು ಉದಯನೀಯಗಳೆಂಬ ಇಷ್ಟಿಗಳ ಸ್ಥಾನಮಾನವೂ ಸಮನಾಗಿರುವುದು. ಯಜ್ಞದಲ್ಲಿ ಒಂದು ಪ್ರಾರಂಭವೂ ಮತ್ತೊಂದು ಕೊನೆಯೂ ಆಗಿರುವುದು. ಇವೆರಡು ಇಷ್ಟಿಗಳನ್ನು ಹೋತೃವು (ಇತರ ಋತ್ವಿಕ್ಕುಗಳು ಸಹ) ನೆರವೇರಿಸುವನು ಎಂದರೆ ಪ್ರಾಯಣೀಯೇಷ್ಟಿಯಲ್ಲಿ ಭಾಗವಹಿಸುವ ಹೋತೃ ಮೊದಲಾದ ಋತ್ವಿಜರೇ ಯಜ್ಞದ ಪರಿಸಮಾಪ್ತಿಯವರೆಗೂ ಇದ್ದು ಉದಯನೇಷ್ಟಿಯಲ್ಲಿಯೂ ಭಾಗವಹಿಸುವರು. ಎಂದರೆ ಯಜ್ಞದ ಮಧ್ಯದಲ್ಲಿ ಋತ್ವಿಜರ ಬದಲಾವಣೆಯಾಗಕೂಡದು. ಮೊದಲಿದ್ದವರು ಕೊನೆಯವರೆಗೂ ಇರಬೇಕು ಪ್ರಾಣ ಮತ್ತು ಉದಾನವಾಯುಗಳು ಶರೀರದಲ್ಲಿ ತಾವು ನಿರ್ವಹಿಸಬೇಕಾದ ಕರ್ತವ್ಯವನ್ನು ತಿಳಿದು ನಿರ್ವಹಿಸುವಂತೆ ಸಮಾನವಾಯುವು ಸಹಕಾರಿಯಾಗಿರುವುದು. ಅದರಂತೆ ಪ್ರಾಯಣೀಯ ಮತ್ತು ಉದಯನೀಯೇಷ್ಟಿಗಳನ್ನು ಹೋತೃವು (ಯಜ್ಞಸಮಾಪ್ತಿಯಾಗುವವರೆಗೂ ಇದ್ದು) ನೆರವೇರಿಸುವನು. ಈ ಪ್ರಾಯನೀಯ ಮತ್ತು ಉದಯನೀಯೇಷ್ಟಿಗಳ ವಿಷಯದಲ್ಲಿ ಯಾಸ್ಕರು ತಮ್ಮ ನಿರುಕ್ತದಲ್ಲಿ— **ದ್ವೇ ಶೀರ್ಷೆ (ಯಜ್ಞಸ್ಯ) ಪ್ರಾಯಣೀಯೋದಯನೀಯೇ** (ನಿರುಕ್ತ. ೧೩-೧-೭) ಎಂದು ಹೇಳಿರುವರು. ಎಂದರೆ ಈ ಪ್ರಾಯಣೀಯ ಉದಯನೀಯ ಎಂಬ ಎರಡು ಇಷ್ಟಿಗಳು ಯಜ್ಞಕ್ಕೆ ಎರಡು ಶಿರಗಳಿದ್ದಂತೆ ಎಂದು. ಶತಪಥಬ್ರಾಹ್ಮಣದಲ್ಲಿ—**ಶಿರೋ ವೈ ಯಜ್ಞಸ್ಯಾತಿಥ್ಯಂ ಬಾಹೂ ಪ್ರಾಯಣೀಯೋದನೀಯೌ** (ಶ. ಬ್ರಾ. ೩-೨-೩-೨೦) ಎಂದು ಹೇಳಿದೆ. ಎಂದರೆ ಯಜ್ಞಕ್ಕೆ ಆತಿಥ್ಯೇಷ್ಟಿಯು ಶಿರಸ್ಸು ; ಪ್ರಾಯಣೀಯ ಮತ್ತು ಉದಯನೀಯೇಷ್ಟಿಗಳು ಅದರ ಎರಡು ಬಾಹುಗಳು ಎಂದು.

**ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತೇ ದೇವಾ ನ ಕಿಂಚನಾಶಕ್ನು-
ವನ್ಕರ್ತುಂ ನ ಪ್ರಾಜಾನಂಸ್ತೇಽಬ್ರುವನ್ನದಿತಿಂ ತ್ವಯೇಮಂ
ಯಜ್ಞಂ ಪ್ರಜಾನಾಮೇತಿ ಸಾ ತಥೇತ್ಯಬ್ರವೀತ್ಸಾ ವೈ ವೋ
ವರಂ ವೃಣಾ ಇತಿ ವೃಣೀಷ್ವೇತಿ ಸೈತಮೇವ ವರಮವೃಣೀತ
ಮತ್ಪ್ರಾಯಣಾ ಯಜ್ಞಾಃ ಸಂತು ಮದುದಯನಾ ಇತಿ ತಥೇತಿ
ತಸ್ಮಾದಾದಿತ್ಯಶ್ಚರುಃ ಪ್ರಾಯಣೀಯೋ ಭವತ್ಯಾದಿತ್ಯ ಉದಯ-
ನೀಯೋ ವರವೃತೋ ಹ್ಯಸ್ಯಾಃ ।**

**ಅಥ ದೇವತಾವಿಶೇಷವಿಧಾನಾಯಾಖ್ಯಾಯಿಕಾಮುಪಕ್ರಮತೇ । ಯೋಽಯಂ ಯಜ್ಞಃ ಸೋಮಯಾಗಾಭಿಮಾನೀ ಪುರುಷಃ ಸೋಽಯಂ ಕೇನಾಪಿ ನಿಮಿತ್ತೇನಾಪರಕ್ತಃ ಸನ್ದೇವಸಕಾಶಾದುತ್ಕ್ರಮ್ಯ ಗತವಾನ್ । ಯಜ್ಞಪುರುಷೇ ಗತೇ ಸತಿ ತೇ ದೇವಾಃ ಕಿಮಪಿ ಯಜ್ಞಾಂಗಂ ಕರ್ತುಂ ಶಕ್ತಿರಹಿತಾಸ್ತದಭಿಜ್ಞಾನರಹಿತಾಶ್ಚಾಭವನ್ । ತತಸ್ತೇ ಸರ್ವೇ ಸಮಾಗತ್ಯಾದಿತಿಂ ಪ್ರಾರ್ಥಿತವಂತೋ ಹೇ ಅದಿತೇ ತ್ವತ್ಪ್ರಸಾದೇನ ವಯಮಿಮಂ ಯಜ್ಞಂ ಕರ್ತುಂ ಜ್ಞಾತುಂ ಚ ಶಕ್ತಾ ಭೂಯಾಸ್ಮೇತಿ । ತತೋಽದಿತಿರಂಗೀಕೃತ್ಯ ಜ್ಞಾಪಯಿತುಮುಕ್ತ್ವಾ ಚರುರೂಪೇಣೈತಂ**

ವರಮವೃಣೀತ ಯೇ ಸೋಮಯಾಗಾಸ್ತೇ ಸರ್ವೇ ಮತ್ಪ್ರಾಯಣಾ ಮದುಪಕ್ರಮಾ ಮದು-
ದಯನಾ ಮದವಸಾನಾಶ್ಚ ಸಂತ್ವಿತಿ ತಸ್ಯ ವರಸ್ಯ ದೇವೈರಂಗೀಕೃತತ್ವಾತ್ಪ್ರಾಯಣೀಯಃ
ಪ್ರಾರಂಭಕಾಲೀನೇಷ್ಟಿಗತಶ್ಚರುರದಿತಿದೇವತಾಕಃ ಕರ್ತವ್ಯ ಉದಯನೀಯಃ ಸಮಾಪ್ತಿಕಾಲೀ-
ನೋಽಪಿ ಚರುರದಿತಿದೇವತಾಕಃ ಕರ್ತವ್ಯಃ । ಯಸ್ಮಾದಸ್ಯಾ ಅದಿತೇಸ್ತಾದೃಶಶ್ಚರುರ್ವರೇಣ
ಪ್ರಾರ್ಥಿತಸ್ತಸ್ಮಾತ್ತಥಾನುಷ್ಠಾನಂ ಯುಕ್ತಂ । ತಮಿಮಮರ್ಥಂ ತೈತ್ತಿರೀಯಾಶ್ಶಾಮನಂತಿ—
ದೇವಾ ವೈ ದೇವಯಜನಮಧ್ಯವಸಾಯ ದಿಶೋ ನ ಪ್ರಾಜಾನಂಸ್ತೇಽನ್ಯೋಽನ್ಯಮುಪಾಧಾವಂ-
ಸ್ತ್ವಯಾ ಪ್ರಜಾನಾಮ ತ್ವಯೇತಿ ತೇಽದಿತ್ಯಾಗ್‌ಂ ಸಮಧ್ರಿಯಂತ ತ್ವಯಾ ಪ್ರಜಾನಾಮೇತಿ
ಸಾಬ್ರವೀದ್ವರಂ ವೃಣೈ ಮತ್ಪ್ರಾಯಣಾ ಏವ ವೋ ಯಜ್ಞಾ ಮದುದಯನಾ ಅಸನ್ನಿತಿ ರಸ್ಮಾ-
ದಾದಿತ್ಯಃ ಪ್ರಾಯಣೀಯೋ ಯಜ್ಞಾನಾಮಾದಿತ್ಯ ಉದಯನೀಯಃ ಇತಿ ।

ಈ ಪ್ರಾಯಣೀಯ ಮತ್ತು ಉದಯನೀಯೇಷ್ಟಿಗಳ ವಿಷಯದಲ್ಲಿಯೂ ಅವುಗಳಲ್ಲಿ ನಿರ್ದಿಷ್ಟರಾದ ದೇವತೆಗಳ ವಿಷಯದಲ್ಲಿಯೂ ಒಂದು ಪೂರ್ವೇತಿಹಾಸವನ್ನು ಹೇಳುವರು—ಪೂರ್ವದಲ್ಲ ಯಜ್ಞವು ಅಥವಾ ಯಜ್ಞಾಭಿಮಾನಿ ದೇವತೆಯು ಕಾರಣಾಂತರದಿಂದ ಬೇಸರಗೊಂಡು ದೇವತೆಗಳನ್ನು ಬಿಟ್ಟು ಹೊರಟುಹೋಯಿತು. ಯಜ್ಞಪುರುಷನು ಹೊರಟುಹೋದಮೇಲೆ ದೇವತೆಗಳು ಯಜ್ಞ ಕರ್ಮವನ್ನಾಗಲಿ, ಇತರ ಯಾವ ಕಾರ್ಯವನ್ನಾಗಲಿ ಮಾಡಲು ಸಮರ್ಥರಾಗಿರಲಿಲ್ಲ ಎಂದರೆ ದೇವತೆಗಳ ಕಾರ್ಯಶಕ್ತಿಯು ಹೊರಟುಹೋಗಿ ಅವರಿಂದ ಯಾವ ಕೆಲಸಗಳನ್ನೂ ಮಾಡಲಾಗಲಿಲ್ಲ. ಆದ್ದರಿಂದ ಆ ದೇವತೆಗಳೆಲ್ಲಾ ಒಟ್ಟಾಗಿ ಸೇರಿ ದೇವ ಮಾತೆಯಾದ ಅದಿತಿಯ ಬಳಿಗೆ ಬಂದು—ಎಲೈ ಅದಿತಿಯೇ ಯಜ್ಞಸ್ವರೂಪವನ್ನು ತಿಳಿದುಕೊಳ್ಳುವುದಕ್ಕೂ ಅದನ್ನು ಆಚರಿಸು ವುದಕ್ಕೂ ನಮಗೆ ಶಕ್ತಿ ಇಲ್ಲ. ಅದೆಲ್ಲಾ ಯಜ್ಞಪುರುಷನ ಜೊತೆಯಲ್ಲಿಯೇ ಹೊರಟುಹೋಯಿತು. ಆದ್ದರಿಂದ ನೀನು ನಮ್ಮ ಮೇಲೆ ಅನುಗ್ರಹಮಾಡಿ ಯಜ್ಞಮಾಡುವ ಶಕ್ತಿಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನು ಅಂಗೀಕರಿಸಿ ಅದಿತಿಯು—ಹಾಗಾದರೆ ನಾನು ಒಂದು (ಎರಡು) ವರವನ್ನು ಕೇಳುತ್ತೇನೆ ನೀವು ಅದನ್ನು ಕೊಡುವುದಾದರೆ ನಿಮಗೆ ಯಜ್ಞಮಾಡುವ ಶಕ್ತಿಯನ್ನು ಅನುಗ್ರಹಿಸುತ್ತೇನೆ ಎಂದು ಹೇಳಲು, ದೇವತೆಗಳು ಹಾಗೆಯೇ ಆಗಲೆಂದು ಒಪ್ಪಿದರು. ಬಳಿಕ ಅದಿತಿಯು—ಅವರನ್ನು ಕುರಿತು—ಎಲೈ ದೇವತೆಗಳೇ, ಸೋಮಯಾಗಗಳಲ್ಲಿ ಯಾವ ಹೋಮಮಾಡುವುದಕ್ಕೂ ಮೊದಲು ನನಗೆ ಚರುಹೋಮವನ್ನು ಅರ್ಪಿಸಬೇಕು, ಕೊನೆಯ ಹೋಮವನ್ನೂ ನನಗೇ ಅರ್ಪಿಸಬೇಕು ಎಂದರೆ ಯಜ್ಞದಲ್ಲಿ ನನಗೆ ಅರ್ಪಿಸುವ ಚರುಹೋಮದಿಂದಲೇ ಯಜ್ಞವು ಪ್ರಾರಂಭವಾಗಿ ಕೊನೆಯ ಹೋಮವೂ ನನಗೇ ಅರ್ಪಿತವಾಗಬೇಕು ಎನ್ನಲು, ದೇವತೆಗಳು ಅದಕ್ಕೆ ಒಪ್ಪಿದರು. ಆದ್ದರಿಂದ ಸೋಮಯಾಗಗಳ ಪ್ರಾರಂಭದಲ್ಲಿ ಮಾಡುವ ಪ್ರಾಯಣೀಯೇಷ್ಟಿಯಲ್ಲಿ ಮೊದಲ ಹೋಮವು ಅದಿತಿಯನ್ನುದ್ದೇಶಿಸಿ ಚರುವಿನಿಂದ ಅರ್ಪಿಸಲ್ಪಡುವುದು. ಯಜ್ಞದ ಸಮಾಪ್ತಿಕಾಲದಲ್ಲಿ ಮಾಡುವ ಉದಯನೇಷ್ಟಿ ಯಲ್ಲಿಯೂ ಅದಿತಿಯನ್ನುದ್ದೇಶಿಸಿ ಮಾಡುವ ಚರುಹೋಮದಿಂದಲೇ ಸಮಾಪ್ತಿಗೊಳ್ಳುವುದು. ಇದೇ ಅಭಿಪ್ರಾಯವು ತೈತ್ತಿರೀಯ ಸಂಹಿತೆಯಲ್ಲಿಯೂ ಹೇಳಿದೆ—

ದೇವಾ ವೈ ದೇವಯಜನಮಧ್ಯವಸಾಯ ದಿಶೋ ನ ಪ್ರಾಜಾನನ್ ತೇ ೭ ನ್ಯೋಽನ್ಯ-
ಮುಪಾಧಾವನ್ತ್ವಯಾ ಪ್ರಜಾನಾಮ ತ್ವಯೇತಿ ತೇಽದಿತ್ಯಾಗ್‌ಂ ಸಮಧ್ರಿಯಂತ ತ್ವಯಾ ಪ್ರ
ಜಾನಾಮೇತಿ ಸಾಬ್ರವೀದ್ವರಂ ವೃಣೈ ಮತ್ಪ್ರಾಯಣಾ ಏವ ವೋ ಯಜ್ಞಾ ಮದುದಯನಾ
ಅಸನ್ನಿತಿ ತಸ್ಮಾದಾದಿತ್ಯಃ ಪ್ರಾಯಣೀಯೋ ಯಜ್ಞಾನಾಮಾದಿತ್ಯ ಉದಯನೀಯಃ ।

(ತೈ. ಸಂ. ೯-೧-೫-೧)

ಒಂದು ಸಮಯದಲ್ಲಿ ದೇವತೆಗಳು ಯಜ್ಞಮಾಡುವುದಕ್ಕಾಗಿ ಯಜ್ಞವೇದಿಯನ್ನು ನಿರ್ಮಿಸಿದರು. ಆಗ ಯಜ್ಞಮಾಡಲು ಅವರಿಗೆ ಪೂರ್ವದಿಕ್ಕು ಯಾವುದು ? ದಕ್ಷಿಣದಿಕ್ಕು ಯಾವುದು ? ಎಂದು ದಿಕ್ಕುಗಳೇ ತಿಳಿಯದೇಹೋಯಿತು. ಆದ್ದರಿಂದ ಅವರು ತಮ್ಮತಮ್ಮಲ್ಲೀ ಮಾತನಾಡುತ್ತಾ ಪೂರ್ವದಿಕ್ಕು ಯಾವುದು ? ನಿನಗೆ ತಿಳಿದಿದ್ದರೆ ಹೇಳು ಎಂದು ಪರಸ್ಪರ ಕೇಳಿದರು. ಯಾರಿಗೂ ತಿಳಿಯದಿರಲು ಕೊನೆಗೆ ಅವರೆಲ್ಲರೂ ದೇವಮಾತೆಯಾದ ಅದಿತಿಯ ಬಳಿಗೆ ಹೋಗಿ—ನಾವು ಯಜ್ಞಮಾಡಬೇಕಾಗಿದೆ. ಈಗ ದಿಕ್ಕುಗಳ ಪರಿಜ್ಞಾನವೇ ಇಲ್ಲ. ಅದನ್ನು ನೀನೇ ತಿಳಿಸಬೇಕು ಎಂದು ಪ್ರಾರ್ಥಿಸಲು, ಅದಿತಿಯು ನಾನು ಕೇಳುವ ವರವನ್ನು ಕೊಡುವುದಾದರೆ ನೀವು ಕೇಳಿದ ವಿಷಯವನ್ನು ತಿಳಿಸುತ್ತೇನೆಂದು ಹೇಳಲು ಅದಕ್ಕೆ ದೇವತೆಗಳು ಒಪ್ಪಿದ್ದರಿಂದ, ಅದಿತಿಯು ದೇವತೆಗಳನ್ನು ಪುನಃ ಉದ್ದೇಶಿಸಿ ಸೋಮಯಾಗಗಳು ನನ್ನನ್ನುದ್ದೇಶಿಸಿದ ಆಹುತಿಗಳಿಂದಲೇ ಪ್ರಾರಂಭವಾಗಿ ಆ ಆಹುತಿಗಳಿಂದಲೇ ಸಮಾಪ್ತಿಯಾಗಬೇಕು ಎಂದು ವರವನ್ನು ಕೇಳಿ ಅದರಂತೆ ಪಡೆದಳು. ಆದ್ದರಿಂದ ಯಜ್ಞಗಳು ಯಾವಾಗಲೂ ಅದಿತಿದೇವತಾಕವಾದ ಚರುಹೋಮದಿಂದ ಪ್ರಾರಂಭವಾಗಿ ಅದೇವಿಧವಾದ ಹೋಮದಿಂದ ಸಮಾಪ್ತಿಯಾಗುವುದು. ಎಂದರೆ ಪ್ರಾಯಣೀಯೇಷ್ಟಿಯಿಂದ (ಇದರ ಮೊದಲ ಹೋಮವು ಅದಿತಿದೇವತಾಕವಾಗಿದೆ) ಪ್ರಾರಂಭವಾಗುವುದು. ಯಜ್ಞಪರಿಸಮಾಪ್ತಿಯು ಉದಯನೀಯೇಷ್ಟಿಯಿಂದ (ಇದರ ಕೊನೆಯ ಹೋಮವು ಅದಿತಿದೇವತಾಕವು) ಮುಗಿಯುವುದು. ಮೈತ್ರಾಯಣೀಯ ಸಂಹಿತೆಯಲ್ಲಿ ಈರೀತಿ ಇದೆ—

> **ಅಕ್ಲೃಪ್ತಂ ವಾ ಇದಮಾಸೀದ್ದಿಶೋ ವಾ ಇಮಾನಪ್ರಜಾನನ್ಗ್‌ಸ್ತದ್ದೇವಾ ಅ ಇನ್ಯೋ-ನ್ಯಸ್ಮಿನ್ನೈಚ್ಛನ್ಗ್‌ಸ್ತನ್ನಾವಿಂದನ್ಗ್‌ಸ್ತೇ ದೇವಾ ಅದಿತಿಮಬ್ರುವನ್ಗ್‌ ಸ್ತ್ವಯಾ ಮುಖೇನೇಮಾ ದಿಶಃ ಪ್ರಜಾನಾಮೇತಿ ಸಾಬ್ರವೀದ್ಭಾಗೋ ಮೇಽಸ್ತ್ವಿತಿ ವೃಣೀಷ್ವೇತ್ಯಬ್ರುವನ್ತ್ಸಾಬ್ರವೀನ್ಮ-ದ್ದೇವತ್ಯನೇವ ಪ್ರಾಯಣೀಯಮಸನ್ಮದ್ದೇವತ್ಯಮುದಯನೀಯಂ ಮಾಮೇವಾನುಪ್ರಾ-ಯಾಥ ಮಾಮನುದಯಾಥೇತಿ ಸ ಏಷ ಆದಿತ್ಯಶ್ಚರುರದಿತಿಂ ವಾ ಏತದನುಪ್ರಯಂತ್ಯದಿತಿಮ-ನೂದ್ಯಂತಿ ತತೋ ವಾ ಇಮಾ ದಿಶಃ ಪ್ರಾಜಾನನ್ ।** (ಮೈತ್ರಾ. ಸಂ. ೩-೭-೧)

ಇದೂ ತೈತ್ತಿರೀಯಸಂಹಿತೆಯಂತೆಯೇ ಇದೆ. ಆದರೆ ಪ್ರಾರಂಭದಲ್ಲಿ ಪೂರ್ವಾದಿ ದಿಕ್ಕುಗಳು ಯಾವುದು ಎಂಬುದು ಕ್ಲೃಪ್ತವಾಗಿರಲಿಲ್ಲ ಎಂದಿರುವುದು. ಕಾಠಕಸಂಹಿತೆಯಲ್ಲಿ ಈರೀತಿ ಇದೆ—

> **ಸಾಧ್ಯಾ ವೈ ನಾಮ ದೇವಾ ಆಸನ್ ಪೂರ್ವೇ ದೇವೇಭ್ಯಸ್ತೇ ದಿಶೋ ಮೋಹಯಿತ್ವಾ ಸ್ವರ್ಗಂ ಲೋಕಮಾಯನ್ನೇನ್ನ ಇಮಂ ಲೋಕಮನ್ವೋಽನು ಪ್ರಜಾನಾದಿತಿ ತಾ ಇಮೇಽವರೇ ದೇವಾ ಅನು ಪ್ರಾಜಿಜ್ಞಾಸಂತ ತಾ ನ ಪ್ರಾಜಾನನ್ ಸಾದಿತಿರಬ್ರವೀದ್ವಾರ್ಯಂ ವೃಣಾ ಅಹಂ ವ ಇಮಾ ದಿಶಃ ಪ್ರವಕ್ಷ್ಯಾಮಿ ಮತ್ಪ್ರಾಯಣ ಏವ ಯಜ್ಞೋಽಸನ್ಮದುದಯನ ಇತಿ ತಸ್ಮಾ-ದಾದಿತ್ಯಂ ಪ್ರಾಯಣೀಯಂ ಭವತ್ಯಾದಿತ್ಯಮುದಯನೀಯಂ ವಾರ್ಯಂವೃತಂ ಹ್ಯಸ್ಯಾಃ ॥**
> (ಕಾಠಕಸಂಹಿತಾ. ೨೩-೭)

ಇದರ ಪ್ರಾರಂಭಭಾಗದಲ್ಲಿಯೂ ಸ್ವಲ್ಪವ್ಯತ್ಯಾಸವಿದೆ. ಈಗಿನ ದೇವತೆಗಳಿಗು ಬಹಳ ಹಿಂದೆ ಇದ್ದ ಸಾಧ್ಯರೆಂಬ ದೇವತೆಗಳು ಸ್ವರ್ಗಕ್ಕೆ ಹೋಗುವ ಸಮಯದಲ್ಲಿ ಇತರ ಮನುಷ್ಯರೂ ದೇವತೆಗಳೂ ಯಜ್ಞಮಾಡಿ ಸ್ವರ್ಗಕ್ಕೆ ಹೋಗದಂತೆ ಮಾಡಲು ಅವರಿಗೆ ದಿಕ್ಕುಗಳೇ ತಿಳಿಯದಂತೆ ಮೋಹವು ಆವರಿಸುವಂತೆ ಮಾಡಿದರು. ಆದ್ದರಿಂದ ದಿಕ್ಕುಗಳನ್ನು ತಿಳಿಯುವುದಕ್ಕಾಗಿ ಅವರು ಅದಿತಿಯ ಬಳಿಗೆ ಹೋದರು ಇತ್ಯಾದಿ.

**ಅಥೋ ಏವಂ ವರಮವೃಣೀತ ಮಯ್ಯೈವ ಪ್ರಾಚೀಂ ದಿಶಂ ಪ್ರಜಾ-ನಾಥಾಗ್ನಿನಾ ದಕ್ಷಿಣಾಂ ಸೋಮೇನ ಪ್ರತೀಚೀಂ ಸವಿತ್ರೋ-ದೀಚೀಮಿತಿ**

ಅದಿತೇರ್ವರಾಂತರಂ ದರ್ಶಯತಿ । ಅಥೋ ಅಪಿ ಚೇತ್ಯರ್ಥಃ । ಮಯೇತ್ಯಾದಿನಾ ವರಃ ಪ್ರಪಂಚ್ಯತೇ । ಹೇ ದೇವಾ ಯೂಯಮಿದಂ ದೇವಯಜನಂ ಸಮೀಚೀನಮಿತ್ಯೇವಂ ಬಹುಧಾ ವಿಚಾರಯಂತಸ್ತದರ್ಥಂ ಬಹುಷು ದೇಶೇಷು ಪರ್ಯಟಂತೋ ದಿಗ್ಭ್ರಮಂ ಪ್ರಾಪ್ಯ ಪ್ರಾಚ್ಯಾದಿದಿಶಂ ನ ಜ್ಞಾತವಂತೋಽತೋ ಭವತಾಂ ದಿಗ್ವಿಶೇಷಜ್ಞಾಪನಾಯಾಹಮಗ್ನಿಃ ಸೋಮಃ ಸವಿತಾ ಚೇತ್ಯೇತೇ ಚತ್ವಾರಶ್ಚತುರ್ಷು ದೇಶೇಷ್ವವಸ್ಥಿತಾಃ । ತಥಾಸತಿ ಯತ್ರಾಹ-ಮಸ್ಮಿ ಸಾ ಪ್ರಾಚೀ ದಿಗಿತ್ಯೇವಂ ಮಯ್ಯೈವ ಪ್ರಾಚೀಂ ದಿಶಂ ಬುಧ್ಯಧ್ವಂ । ಏವಮಗ್ನ್ಯಾದಿಭಿ-ರ್ದಕ್ಷಿಣಾದಯಸ್ತಿಸ್ರೋ ದಿಶೋ ಬೋದ್ಧವ್ಯಾಃ । ಇತ್ಯೇಷ ದ್ವಿತೀಯೋ ವರಃ । ಏತೇ ದೇವಾ ಅನೇನ ಚರುಣಾ ತತ್ರ ಯಷ್ಟುಂ ಯೋಗ್ಯಾ ಇತಿ ತಾತ್ಪರ್ಯಾರ್ಥಃ ।

ಅದಿತಿಯು ಕೇಳಿದ ಮತ್ತೊಂದು ವರವನ್ನು ತಿಳಿಸುವರು—ಎಲೈ ದೇವತೆಗಳೇ, ನೀವು ಯಜ್ಞಮಾಡುವುದಕ್ಕಾಗಿ ಯಜ್ಞವೇದಿಯನ್ನು ನಿರ್ಮಿಸಿದಿರಿ. ಆದರೆ ಪೂರ್ವ ಮೊದಲಾದ ದಿಕ್ಕುಗಳ ಪರಿಜ್ಞಾನವಿಲ್ಲದ್ದರಿಂದ ದಿಗ್ಭ್ರಮೆಯನ್ನು ಹೊಂದಿ ನಾನಾ ದೇಶಗಳಲ್ಲಿ ಅಲೆದು ಎಷ್ಟು ವಿಚಾರಿಸಿದರೂ ತಿಳಿಯಲಾಗದೆ ಕೊನೆಗೆ ನನ್ನ ಬಳಿಗೆ ಬಂದಿರಿ. ಈಗ ನಾನು ದಿಕ್ಕುಗಳ ವಿಷಯದಲ್ಲಿ ಸರಿಯಾದ ತಿಳುವಳಿಕೆಯನ್ನುಂಟುಮಾಡುವೆನು. ಪಥ್ಯಾಸ್ವಸ್ತಿ (ನಾನು), ಅಗ್ನಿ, ಸೋಮ, ಸವಿತಾ ಎಂಬ ನಾಲ್ವರೂ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ನೆಲಸಿರುವೆವು. ಎಂದರೆ ಪಥ್ಯಾಸ್ವಸ್ತಿ ನೆಲಸಿರುವ ದಿಕ್ಕನ್ನು ಪೂರ್ವದಿಕ್ಕೆಂದು ತಿಳಿಯಿರಿ; ಅಗ್ನಿಯಿರುವ ದಿಕ್ಕನ್ನು ದಕ್ಷಿಣದಿಕ್ಕೆಂದೂ, ಸೋಮನಿರುವ ದಿಕ್ಕನ್ನು ಪಶ್ಚಿಮದಿಕ್ಕೆಂದೂ, ಸವಿತೃದೇವನಿರುವ ದಿಕ್ಕನ್ನು ಉತ್ತರದಿಕ್ಕೆಂದೂ ತಿಳಿಯಿರಿ ಎಂದು ದೇವತೆಗಳಿಗೆ ಅದಿತಿಯು ದಿಕ್ಪರಿಜ್ಞಾನವನ್ನು ಬೋಧಿಸಿದಳು.

**ಪಥ್ಯಾಂ ಯಜತಿ ।**

ತತ್ರ ಪ್ರಥಮಂ ಯಾಗಂ ವಿಧತ್ತೇ । ಪಥ್ಯೇತಿ ದೇವತಾಯಾ ನಾಮಧೇಯಂ । ಯದ್ಯಪಿ ಶಾಖಾಂತರೇ—ಪಥ್ಯಾಗ್ಁಸ್ವಸ್ತಿಂ ಯಜತಿ ಪ್ರಾಚೀಮೇವ ತಯಾ ದಿಶಂ ಪ್ರಜಾನಾತಿ ಇತಿ ಪಥ್ಯಾ ಸ್ವಸ್ತಿರಿತ್ಯೇತಾವನ್ನಾಮಧೇಯಮಾಮ್ನಾತಂ ತಥಾಪಿ ಭೀಮಶಬ್ದವನ್ನಾಮೈಕದೇಶೇ-ನಾತ್ರ ವ್ಯವಹಾರಃ । ನನು ಪೂರ್ವತ್ರ ಮಯ್ಯೈವ ಪ್ರಾಚೀಂ ದಿಶಂ ಪ್ರಜಾನಾಥೇತ್ಯದಿತೇರ್ವಾಕ್ಯ-ಮಾಮ್ನಾತಮಿಹ ತು ಪಥ್ಯಾಂ ಯಜತೀತ್ಯುಕ್ತೌ ಪೂರ್ವಾಪರವಿರೋಧ ಇತಿ ಚೇನ್ನಾಯಂ ದೋಷಃ । ಅದಿತಿದೇವತಾಯಾ ಏವ ಪಥ್ಯಾಖ್ಯಂ ಮೂರ್ತ್ಯಂತರಮಿತಿ ವಕ್ತುಂ ಶಕ್ಯತ್ವಾತ್ ।

ಪ್ರಾಯಣೀಯೇಷ್ಟಿಯಲ್ಲಿ ನಿರ್ದಿಷ್ಟರಾದ ದೇವತೆಗಳನ್ನು ವಿವರಿಸುವರು. ಮೊದಲು ಪಥ್ಯಾ ಎಂಬ ದೇವತೆಯನ್ನುದ್ದೇಶಿಸಿ ಹೋಮಮಾಡುವರು. ಪಥ್ಯಾ ಎಂಬುದು ಒಂದು ದೇವತೆಯ ಹೆಸರು. ಈ ದೇವತೆಯನ್ನು ಪಥ್ಯಾ ಅಥವಾ ಪಥ್ಯಾಸ್ವಸ್ತಿ ಎಂದು ಎರಡುವಿಧವಾಗಿಯೂ ಕರೆಯುವರು. ತೈತ್ತಿರೀಯಸಂಹಿತೆಯಲ್ಲಿ **ಪಥ್ಯಾಗ್ಁಸ್ವಸ್ತಿಂ ಯಜತಿ ಪ್ರಾಚೀಮೇವ**

**ತಯಾ ದಿಶಂ ಪ್ರಜಾನಾತಿ** ಎಂದಿರುವುದು. ಲೋಕವ್ಯವಹಾರದಲ್ಲಿ ಭೀಮಸೇನನೆಂಬುವನನ್ನು ಭೀಮಾ ಎಂದೂ ಸತ್ಯಭಾಮೆಯನ್ನು ಭಾಮೆ ಎಂದು ಕರೆಯುವಂತೆ ಇಲ್ಲಿ ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ಪಥ್ಯಾ ಶಬ್ದದಿಂದಲೇ ಸೂಚಿಸಲಾಗಿದೆ. ಆದರೆ ಹಿಂದೆ ಅದಿತಿಗೆ ಮೊದಲು ಹೋಮುವನ್ನರ್ಪಿಸಬೇಕೆಂದು ಹೇಳಿದೆ ಈಗ ಪಥ್ಯಾಸ್ವಸ್ತಿಗೆ ಮೊದಲು ಹೋಮುವನ್ನರ್ಪಿಸಬೇಕೆಂದು ಹೇಳಿರುವುದರಿಂದ ಇದು ಪೂರ್ವಾಪರ ವಿರುದ್ಧವಲ್ಲವೇ, ಎಂದರೆ, ಹಾಗಲ್ಲ. ಅದಿತಿಗೆ ಪಥ್ಯಾಸ್ವಸ್ತಿ ಎಂಬ ಬೇರೆ ಹೆಸರೂ ಇರುವುದು. ಇದು ಅದಿತಿಯ ಮೂರ್ತ್ಯಂತರವು. ಆದ್ದರಿಂದ ಪಥ್ಯಾಸ್ವಸ್ತಿಯೆಂದರೆ ಅದಿತಿಯೆಂದೇ ತಿಳಿಯಬೇಕು ಎಂದು ಭಾಷ್ಯಕಾರರು ಅರ್ಥವಿವರಣೆ ಮಾಡಿರುವರು. ಭಟ್ಟಭಾಸ್ಕರರು—**ಪಥಿ ಸಾಧುಃ ಪಥ್ಯಾ ಪ್ರಜಾನಾಂ ಹಿತಂಕರಃ ಆದಿತ್ಯ ಇತಿ ಕೇಚಿತ್ । ಉಷಾ ಇತ್ಯನ್ಯೇ । ಪ್ರಜಾಪತಿರಿತ್ಯಪರೇ ಪಥಿಸಾಧ್ವೀ ಶೋಭನವಿಭೂತಿ-ಹೇತುಃ ಪ್ರಜಾನಾಂ ಸ್ವಸ್ತಿಃ । ಯತ್ರ ಚೋಷಾ ಉದೇತಿ ಸಾ ಪ್ರಾಚೀ ಭವತಿ ॥**(ತೈ.ಭಾ.ಭಾ. ೬-೧-೫-೧) ಎಂದು ಪಥ್ಯಾಸ್ವಸ್ತಿಶಬ್ದದ ಅರ್ಥವಿವರಣೆ ಮಾಡಿರುವರು; ಮಾರ್ಗದಲ್ಲಿ (ಅಂತರಿಕ್ಷದಲ್ಲಿ) ಜನರಿಗೆ ಹಿತಕರನಾಗಿರುವುದರಿಂದ ಆದಿತ್ಯನೆಂದೂ ಮಾರ್ಗದಲ್ಲಿ ಒಳ್ಳೆಯದನ್ನುಂಟುಮಾಡುವುದರಿಂದ ಅದಿತಿಗೆ ಪಥ್ಯಾಸ್ವಸ್ತಿಯೆಂದೂ, ಪೂರ್ವದಿಕ್ಕಿನಲ್ಲಿ ಉಷಾದೇವಿಯು ಉದಯಿಸುವುದರಿಂದ ಉಷಾದೇವಿಯೇ ಅದಿತಿಯೆಂದೂ ಕೆಲವರ ಅಭಿಪ್ರಾಯವಿರುವುದು ಎಂದು ಭಟ್ಟಭಾಸ್ಕರರ ಮತವು.

## ಯತ್ಪಥ್ಯಾಂ ಯಜತಿ ತಸ್ಮಾದಸೌ ಪುರ ಉದೇತಿ ಪಶ್ಚಾಸ್ತಮೇತಿ ಪಥ್ಯಾಂ ಹ್ಯೇಷೋಽನುಸಂಚರತಿ

**ಉಕ್ತಂ ವಿಧಿಮನೂದ್ಯ ಪ್ರಶಂಸತಿ । ಯದ್ಯಸ್ಮಾತ್ಕಾರಣಾತ್ಪೂರ್ವಸ್ಯಾಂ ದಿಶ್ಯವಸ್ಥಿತಾಂ ಪಥ್ಯಾಂ ದೇವತಾಂ ಯಜತಿ ತಸ್ಮಾತ್ಕಾರಣಾದಸಾವಾದಿತ್ಯಃ ಪುರಃ ಪೂರ್ವಸ್ಯಾಂ ದಿಶ್ಯುದೇತಿ ಪಶ್ಚಾತ್ಪಶ್ಚಿಮಾಯಾಂ ದಿಶ್ಯಸ್ತಮೇತಿ । ಹಿ ಯಸ್ಮಾತ್ಕಾರಣಾದೇಷ ಆದಿತ್ಯಃ ಪಥ್ಯಾಖ್ಯಾಂ ದೇವತಾಮನುಸೃತ್ಯ ಸಂಚರತಿ ತಸ್ಮಾತ್ಪೂರ್ವಾಪರಯೋರುದಯಾಸ್ತಮಯಾವುಪಪನ್ನೌ । ನ ಚ ಪೂರ್ವದಿಶಃ ಪಥ್ಯಾಸಂಬಂಧೇಽಪಿ ಪಶ್ಚಿಮದಿಶಃ ಸ ನಾಸ್ತೀತಿ ವಾಚ್ಯಂ । ಉದಯನೀ-ಯಾಯಾಂ ಪಶ್ಚಿಮದಿಶಿ ಪಥ್ಯಾಯಾ ಯಕ್ಷ್ಯಮಾಣತ್ವಾತ್ । ದ್ವಯೋರ್ದಿಶೋಸ್ತತ್ಸಂಬಂಧೇ ಸತಿ ಆದಿತ್ಯಸ್ಯ ತದನುಸಂಚಾರೋ ಯುಕ್ತಃ । ದಕ್ಷಿಣದಿಗ್ವರ್ತಿನೋಽಗ್ನೇರ್ಯಾಗಂ ವಿಧತ್ತೇ ।**

ಮೊದಲು ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ಉದ್ದೇಶಿಸಿ ಹೋಮುಮಾಡುವುದರಿಂದ ಪೂರ್ವದಿಕ್ಕಿನ ಜ್ಞಾನವು ಉದಯಿಸುವುದು. ಏಕೆಂದರೆ ಸೂರ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿ ಈ ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ಹಿಂಬಾಲಿಸಿ ಸಂಚರಿಸುತ್ತಾ ಪಶ್ಚಿಮದಿಕ್ಕಿನಲ್ಲಿ ಅಸ್ತಂಗತನಾಗುವನು. ಆದ್ದರಿಂದ ಆದಿತ್ಯನು ಉದಯಿಸುವ ದಿಕ್ಕನ್ನೇ ಪೂರ್ವದಿಕ್ಕೆಂದು ತಿಳಿಯಬೇಕು. ಆದರೆ ಆದಿತ್ಯನು ಅಸ್ತಂಗತನಾಗುವಾಗ ಪಥ್ಯಾಸ್ವಸ್ತಿ ದೇವತೆಯನ್ನು ಅನುಸರಿಸುವುದರಿಂದ ಪಥ್ಯಾಸ್ವಸ್ತಿಗೆ ಪಶ್ಚಿಮದಿಕ್ಕಿನ ಸಂಬಂಧವುಂಟಾಯಿತಲ್ಲವೇ? ಎಂದರೆ, ಹಾಗಲ್ಲ. ಪಥ್ಯಾಸ್ವಸ್ತಿಗೆ ಪೂರ್ವದಿಕ್ಕಿನ ಸಂಬಂಧಮಾತ್ರವಿರುವುದು. ಪಶ್ಚಿಮದಿಕ್ಕಿನಲ್ಲಿ ಆದಿತ್ಯನು ಅಸ್ತಂಗತನಾಗುವಾಗ ಅವನ ಸಂಬಂಧವಿರುವುದೆಂದರೆ, ಆದಿತ್ಯನು ಆಕಾಶದಲ್ಲಿ ಪರಿಭ್ರಮಣಮಾಡುವಾಗ ಪೂರ್ವದಿಂದ ಹೊರಟು ಪಶ್ಚಿಮಕ್ಕೆ ಹೋಗುವನು ಎಂದರೆ ಅವನಿಗೆ ಪೂರ್ವ ಮತ್ತು ಪಶ್ಚಿಮದಿಕ್ಕುಗಳೆರಡರ ಸಂಬಂಧವಿದ್ದಂತಾಯಿತು. ಪಥ್ಯಾಸ್ವಸ್ತಿ ಅಥವಾ ಅದಿತಿಗೆ ಈ ಎರಡು ವಿಧವಾದ ಸಂಬಂಧವೂ ಇದೆ. ಹೇಗೆಂದರೆ – ಯಜ್ಞಪ್ರಾರಂಭದಲ್ಲಿ ನಡೆಯುವ ಪ್ರಾಯಣೀಯೇಷ್ಟಿಯಲ್ಲಿಯೂ, ಯಜ್ಞಪರಿಸಮಾಪ್ತಿಯಲ್ಲಿ ನಡೆಯುವ ಉದಯನೀಯೇಷ್ಟಿಯಲ್ಲಿಯೂ ಅದಿತಿಯನ್ನುದ್ದೇಶಿಸಿ ಎರಡು ಹೋಮಗಳಿರುವುದರಿಂದ ಅದಿತಿಗೆ ಎರಡು ವಿಧವಾದ ಸಂಬಂಧವಿರುವುದೆಂದು ತಿಳಿಯಬೇಕು.

ಅಗ್ನಿಂ ಯಜತಿ ಯದಗ್ನಿಂ ಯಜತಿ ತಸ್ಮಾದ್ದಕ್ಷಿಣತೋಽಗ್ರ ಓಷ-
ಧಯಃ ಪಚ್ಯಮಾನಾ ಆಯಂತ್ಯಾಗ್ನೇಯ್ಯೋ ಹ್ಯೋಷಧಯಃ ।

ತಂ ವಿಧಿಮನೂದ್ಯ ಪ್ರಶಂಸತಿ । ಯಸ್ಮಾದತ್ರ ದೇವಾನಾಂ ದಿಗ್ವಿಶೇಷಜ್ಞಾಪನಾಯ ದಕ್ಷಿಣಸ್ಯಾಂ ದಿಶ್ಯವಸ್ಥಿತಮಗ್ನಿಂ ಯಜತಿ ತಸ್ಮಾತ್ಕಾರಣಾದ್ವಿಂಧ್ಯಪರ್ವತಸ್ಯ ದಕ್ಷಿಣಭಾಗೇ ವ್ರೀಹ್ಯಾದ್ಯೋಷಧಯೋಽಗ್ರೇ ಪಚ್ಯಮಾನಾ ಆಯಂತಿ ತತ್ರತ್ಯಾಸ್ವಾಮಿಗೃಹೇಷ್ವಾಗಚ್ಛಂತಿ । ವಿಂಧ್ಯಸ್ಯೋತ್ತರಭಾಗೇ ಯವಗೋಧೂಮಚಣಕಾದಿಧಾನ್ಯಪ್ರಾಚುರ್ಯಂ । ತಾನಿ ಚ ಧಾನ್ಯಾನಿ ಮಾಘಫಾಲ್ಗುನಯೋಃ ಪಚ್ಯಂತ ಇತಿ ಪಶ್ಚಾದ್ಭಾವೀನಿ । ದಕ್ಷಿಣದಿಗ್ಭಾಗೇ ತು ಯವಾದಿಪ್ರಾ-ಚುರ್ಯಾಭಾವಾತ್ । ಪ್ರಾಚುರ್ಯಾಣಿ ಚ ವ್ರೀಹ್ಯಾದೀನೀತಿ ಕಾರ್ತಿಕಮಾರ್ಗಶೀರ್ಷಯೋಃ ಪಚ್ಯಮಾನತ್ವಾದಗ್ರೇ ಪಾಕೋಽಭಿಹಿತಃ । ಹಿ ಯಸ್ಮಾತ್ಕಾರಣಾದೋಷಧಯ ಆಗ್ನೇಯ್ಯ ಆಸಾಂ ಪಾಕಸ್ಯಾಗ್ನ್ಯಧೀನತ್ವಾತ್ । ಯಥೌದನರೂಪೇಣ ಬಾಹ್ಯಪಾಕೋಽಗ್ನ್ಯಧೀನ ಏವಂ ಬೀಜರೂಪೇಣ ಸಸ್ಯಪಾಕೋಽಪಿ ತದಂತರ್ವರ್ತ್ಯಗ್ನ್ಯಧೀನ ಇತಿ ದ್ರಷ್ಟವ್ಯಂ । ತಸ್ಮಾದಗ್ನಿಸಂ-ಬಂಧಿನ್ಯಾಂ ದಕ್ಷಿಣಸ್ಯಾಂ ದಿಶ್ಯಗ್ರೇ ಪಾಕೋ ಯುಕ್ತಃ ।

ಅಗ್ನಿಯನ್ನುದ್ದೇಶಿಸಿ ಹೋಮಮಾಡುವುದರಿಂದ ದಕ್ಷಿಣದಿಕ್ಕಿನ ಪರಿಜ್ಞಾನವು ಹೇಗಾಗುವುದೆಂಬುದನ್ನು ತಿಳಿಸಲಾಗುವುದು. ವಿಂಧ್ಯಪರ್ವತದ ದಕ್ಷಿಣಭಾಗದಲ್ಲಿರುವ ದೇಶಗಳಲ್ಲಿ ಮುಖ್ಯಬೆಳೆಯಾದ ಭತ್ತವು ಬೇಗನೆ ಎಂದರೆ ಕಾರ್ತಿಕಮಾರ್ಗಶೀರ್ಷಮಾಸಗಳಲ್ಲಿ ಪಕ್ವವಾಗಿ ಕುಯಲಿಗೆ ಬರುವುದು. ಹಾಗೆಯೇ ವಿಂಧ್ಯಪರ್ವತದ ಉತ್ತರಭಾಗದ ದೇಶಗಳಲ್ಲಿ ಮುಖ್ಯಬೆಳೆಗಳಾದ ಗೋಧಿ ಕಡಲೆ ಮೊದಲಾದ ಧಾನ್ಯಗಳು ಸ್ವಲ್ಪಸಾವಕಾಶವಾಗಿ ಎಂದರೆ ಮಾಘಫಾಲ್ಗುಣ ಮಾಸಗಳಲ್ಲಿ ಪಕ್ವವಾಗಿ ಕುಯಲಿಗೆ ಬರುವುದು. ಪಾಕವು ಎಂದರೆ ಅಕ್ಕಿಯಿಂದ ಅನ್ನವನ್ನು ಪಕ್ವಮಾಡುವ ಕಾರ್ಯವು ಬಾಹ್ಯರೂಪದಲ್ಲಿ ಅಗ್ನಿಯ ಅಧೀನವಾಗಿರುವಂತೆಯೇ ಭೂಮಿಯಲ್ಲಿ ನೆಟ್ಟ ಬೀಜವು ಅಂಕುರವಾಗಿ ಸಸ್ಯಾದಿರೂಪದಲ್ಲಿ ಬೆಳೆದು ಆಂತರಿಕವಾಗಿ (ಭೂಮಿಯೊಳಗೆ) ಪಕ್ವವಾಗುವುದೂ ಅಗ್ನಿಯ ಕಾರ್ಯವೇ ಆಗಿರುವುದು. ಆದ್ದರಿಂದ ಅಗ್ನಿಯ ಕಾರ್ಯವಾದ ಸಸ್ಯಾದಿಗಳ ಪಕ್ವವು ಯಾವ ಪ್ರದೇಶದಲ್ಲಿ ಬೇಗನೆ ಸಿದ್ಧಿಸುವುದೋ ಆ ಪ್ರದೇಶವೇ ಅಗ್ನಿಯ ಸ್ಥಾನವಾದ ದಕ್ಷಿಣದಿಕ್ಕೆಂದು ತಿಳಿಯಬೇಕು.

ಸೋಮಂ ಯಜತಿ ಯತ್ಸೋಮಂ ಯಜತಿ ತಸ್ಮಾತ್ಪ್ರತೀಚ್ಯೋಽ
ಪ್ಯಾಪೋ ಬಹ್ವ್ಯಃ ಸ್ಯಂದಂತೇ ಸೌಮ್ಯಾ ಹ್ಯಾಪಃ ॥

ಪಶ್ಚಿಮದಿಶ್ಯವಸ್ಥಿತಸ್ಯ ಸೋಮಸ್ಯ ಯಾಗಂ ವಿಧತ್ತೇ । ತಂ ವಿಧಿಮನೂದ್ಯ ಪ್ರಶಂಸತಿ । ಯಸ್ಮಾದಾಪಃ ಸೋಮಸಂಬಂಧಿನ್ಯಃ ಸೋಮಸ್ಯಾಮೃತಕಿರಣತ್ವಾತ್ತಸ್ಮಾದ್ಬಹ್ವ್ಯ ಆಪಃ ಪ್ರತೀ-ಚ್ಯೋಽಪಿ ಪ್ರತ್ಯಙ್ಮುಖ್ಯೋಽಪಿ ಸತ್ಯಃ ಸ್ಯಂದಂತೇ । ಪಶ್ಚಿಮಸಮುದ್ರಸಮೀಪೇ ಪ್ರವಹಂತೀ-ನಾಂ ನದೀನಾಂ ಪಶ್ಚಿಮಾಭಿಮುಖತ್ವದರ್ಶನಾತ್ । ಸೋಮಸ್ಯಾತ್ರ ಪಶ್ಚಿಮದಿಶ್ಯವಸ್ಥಿತತ್ವೇನ ತದೀಯಾನಾಮಪಾಂ ತನ್ಮುಖತ್ವಂ ಯುಕ್ತಂ ।

ಸೋಮರಸವು ದ್ರವರೂಪವಾಗಿರುವುದು. ನೀರೂ ಸಹ ದ್ರವವಾಗಿರುವುದು. ಆದ್ದರಿಂದ ಬಹಳವಾದ ನೀರಿನಿಂದ ಕೂಡಿದ ನದಿಗಳು ಪಶ್ಚಿಮಾಭಿಮುಖವಾಗಿ ಹರಿದು ಪಶ್ಚಿಮ ಸಮುದ್ರವನ್ನು ಸೇರುವುದರಿಂದ ಯಾವ ದಿಕ್ಕಿಗೆ ಅಧಿಕಪ್ರವಾಹವುಳ್ಳ ನದಿಗಳು (ಸಪ್ತಸಿಂಧುಗಳು) ಪ್ರವಹಿಸುತ್ತವೆಯೋ ಆ ದಿಕ್ಕನ್ನು ಪಶ್ಚಿಮದಿಕ್ಕೆಂದು ತಿಳಿಯಬೇಕು. ಸೋಮದೇವತೆಯನ್ನು ದ್ದೇಶಿಸಿ ಹೋಮಮಾಡುವುದರಿಂದ ಪಶ್ಚಿಮದಿಕ್ಕಿನ ಪರಿಜ್ಞಾನವುಂಟಾಗುವುದು. [ಇಲ್ಲಿ ಪಶ್ಚಿಮ ಸಮುದ್ರಕ್ಕೆ ಹೋಗಿಸೇರುವ ಸಿಂಧು ಮೊದಲಾದ ನದಿಗಳ ಪ್ರಸ್ತಾಪವಿದೆ. ಸಿಂಧೂನದಿಯೂ, ಪಂಜಾಬ್ ಪ್ರಾಂತ್ಯದಲ್ಲಿ ಹರಿಯುವ ಐದು ದೊಡ್ಡ ನದಿಗಳೂ ದೊಡ್ಡ ಪ್ರವಾಹಗಳಿಂದ ಪಶ್ಚಿಮ ಸಮುದ್ರವನ್ನು ಸೇರುವುದು ಎಲ್ಲರಿಗೂ ತಿಳಿದವಿಷಯ. ಆದರೆ ಪೂರ್ವಸಮುದ್ರಕ್ಕೆ ಗಂಗಾ, ಬ್ರಹ್ಮಪುತ್ರ ಮೊದಲಾದ ದೊಡ್ಡನದಿಗಳು ಹೋಗಿ ಸೇರುವುದನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಏಕೆಂದರೆ ಆ ಪ್ರಾಚೀನಕಾಲದಲ್ಲಿ ಆರ್ಯರು ಇಂಡಿಯಾ ದೇಶವನ್ನು ಪಶ್ಚಿಮದಿಕ್ಕಿನಿಂದ ಪ್ರವೇಶಿಸಿ ಈಗಿನ ಪಂಜಾಬ್ ಮೊದಲಾದ ಪ್ರದೇಶಗಳಲ್ಲಿ ನೆಲೆಸಿದ್ದರು. ಪೂರ್ವಭಾಗಕ್ಕೂ ದಕ್ಷಿಣಪ್ರದೇಶಕ್ಕೂ ಇನ್ನೂ ಪ್ರವೇಶಮಾಡಿರಲಿಲ್ಲ. ಆದ್ದರಿಂದ ಅವರಿದ್ದ ಪ್ರದೇಶಗಳಲ್ಲಿ ಹರಿಯುವ ನದಿಗಳಿಗೇ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿರುವುದು ಸಹಜವಾಗಿದೆ.]

**ಸವಿತಾರಂ ಯಜತಿ ಯತ್ಸವಿತಾರಂ ಯಜತಿ ತಸ್ಮಾದುತ್ತರತಃ ಪಶ್ಚಾ-ದಯಂ ಭೂಯಿಷ್ಠಂ ಪವಮಾನಃ ಪವತೇ ಸವಿತೃಪ್ರಸೂತೋ ಹ್ಯೇಷ ಏತತ್ಪವತೇ ।**

**ಉತ್ತರದಿಶ್ಯವಸ್ಥಿತಸ್ಯ ಸವಿತುರ್ಯಾಗಂ ವಿಧತ್ತೇ । ತಂ ವಿಧಿಮನೂದ್ಯ ಪ್ರಶಂಸತಿ । ಸವಿತಾ ಪ್ರೇರಕೋ ದೇವಃ ಸೋಽತ್ರ ಯಸ್ಮಾದುತ್ತರಸ್ಯಾಂ ದಿಶ್ಯವತಿಷ್ಠತೇ ತಸ್ಮಾತ್ತೇನ ಸವಿತ್ರಾ ಪ್ರೇರಿತೋ ವಾಯುರುತ್ತರಪಶ್ಚಿಮಯೋರಂತರಾಲವರ್ತಿನ್ಯಾಂ ವಾಯವ್ಯಾಂ ದಿಶಿ ಭೂಯಿಷ್ಠಂ ಪವತೇಽತ್ಯಧಿಕಂ ಸಂಚರತಿ ।**

ಇನ್ನು ಸವಿತೃದೇವತೆಯನ್ನುದ್ದೇಶಿಸಿ ಹೋಮಮಾಡುವುದರಿಂದ ಉತ್ತರದಿಕ್ಕಿನ ಪರಿಜ್ಞಾನವು ಹೇಗಾಗುವುದೆಂಬುದನ್ನು ತಿಳಿಸುತ್ತಾರೆ. ಸವಿತಾ ಎಂದರೆ ಸರ್ವಪ್ರಾಣಿಗಳನ್ನೂ ಪ್ರೇರಿಸುವ ದೇವತೆಯು; ಈ ದೇವತೆಯು ಉತ್ತರದಿಕ್ಕಿನಲ್ಲಿ ನೆಲೆಸಿರುವುದು. ಈ ಸವಿತೃದೇವನಿಂದ ಪ್ರೇರಿತವಾದ ಗಾಳಿಯು ಪಶ್ಚಿಮೋತ್ತರ ದಿಕ್ಕುಗಳ ಮಧ್ಯವರ್ತಿಯಾದ ವಾಯವ್ಯ ದಿಕ್ಕಿನಲ್ಲಿ ಬಹಳವಾಗಿ ಬೀಸುವುದು. ಆದ್ದರಿಂದ ಸವಿತೃದೇವನನ್ನು ಉದ್ದೇಶಿಸಿ ಮಾಡುವ ಹೋಮದಿಂದ ಉತ್ತರದಿಕ್ಕಿನ ಪರಿಜ್ಞಾನವುಂಟಾಗುವುದು.

**ಉತ್ತಮಾಮದಿತಿಂ ಯಜತಿ । ಯದುತ್ತಮಾಮದಿತಿಂ ಯಜತಿ ತಸ್ಮಾ-ದಸಾವಿಮಾಂ ವೃಷ್ಟ್ಯಾಭ್ಯುನತ್ತ್ಯಭಿಜಿಘ್ರತಿ ।**

**ಊರ್ಧ್ವದಿಗ್ವರ್ತಿನ್ಯಾ ಅದಿತೇರ್ಯಾಗಂ ವಿಧತ್ತೇ । ಉತ್ತಮಾಂ ಮೂರ್ಧಾವಸ್ಥಿತಾ-ಮಿತ್ಯರ್ಥಃ । ಅತ ಏವ ತೈತ್ತಿರೀಯಾ ಆಮನಂತಿ—ಪಥ್ಯಾಂ ಸ್ವಸ್ತಿಮಯಜನ್ಪ್ರಾಚೀಮೇವ ತಯಾ ದಿಶಂ ಪ್ರಜಾನನ್ನಗ್ನಿನಾ ದಕ್ಷಿಣಾಂ ಸೋಮೇನ ಪ್ರತೀಚೀಂ ಸವಿತ್ರೋದೀಚೀಮದಿ-ತ್ಯೋರ್ಧ್ವಾಂ ಇತಿ । ಉಕ್ತಂ ವಿಧಿಮನೂದ್ಯ ಪ್ರಶಂಸತಿ । ಯಸ್ಮಾದೂರ್ಧ್ವದಿಗ್ವರ್ತಿನಾಂ ತಸ್ಮಾ-**

ದೂರ್ಧ್ವದಿಗ್ವರ್ತಿನಾಂ ದ್ಯಾರಿಮಾಮಧೋವರ್ತಿನೀಂ ಸ್ವಕೀಯಯಾ ವೃಷ್ಟ್ಯಾ ಭೂಮ್ಯನಕ್ತಿ ಸರ್ವತಃ ಕ್ಲೇದಯತಿ । ಪುನರಪಿ ಘರ್ಮಕಾಲೇಽಭಿಜಿಘ್ರತಿ ಭೂಮಿಗತಂ ರಸಮಾಭಿಮುಖ್ಯೇ-ನಾದತ್ತೇ । ಅತ್ರ ಪಥ್ಯಾದೀನಾಂ ಚತಸೃಣಾಂ ದೇವತಾನಾಮಾಜ್ಯೇನ ಯಾಗಃ । ಅದಿತೇಸ್ತು ಚರುಣೇತಿ ದ್ರಷ್ಟವ್ಯಂ । ತದಾಹಾಪಸ್ತಂಬಃ-ಚತುರ ಆಜ್ಯಭಾಗಾನ್ಪ್ರತಿದಿಶಂ ಯಜತಿ ಪಥ್ಯಾಂ ಸ್ವಸ್ತಿಂ ಪುರಸ್ತಾದಗ್ನಿಂ ದಕ್ಷಿಣತಃ ಸೋಮಂ ಪಶ್ಚಾತ್ಸವಿತಾರಮುತ್ತರತೋ ಮಧ್ಯೇಽದಿತಿಂ ಹವಿಷಾ ಇತಿ ।

ಇನ್ನು ಕೊನೆಯದಾದ ಅದಿತಿದೇವತಾಕಹೋಮವನ್ನು ಅರ್ಪಿಸುವುದರಿಂದ ಲಭಿಸುವ ಸಿದ್ಧಿಯನ್ನು ಪ್ರಶಂಸಿಸುವರು. ಪಥ್ಯಾಸ್ವಸ್ತಿ ಮೊದಲಾದ ಐದು ದೇವತೆಗಳನ್ನು [ಪಥ್ಯಾಸ್ವಸ್ತಿ (ಅದಿತಿ), ಅಗ್ನಿ, ಸೋಮ ಸವಿತೃ ಅದಿತಿ] ಉದ್ದೇಶಿಸಿ ಮಾಡುವ ಪ್ರಾಯಣೀಯೇಷ್ಟಿ ಹೋಮಗಳಲ್ಲಿ ಅದಿತಿಯನ್ನು ಉದ್ದೇಶಿಸಿ ಮಾಡುವ ಹೋಮವೇ ಕೊನೆಯದು. ಎಂದರೆ ಪೂರ್ವ ದಕ್ಷಿಣ, ಪಶ್ಚಿಮ ಉತ್ತರ, ಊರ್ಧ್ವ ಎಂಬ ಐದು ದಿಕ್ಕುಗಳಲ್ಲಿ ಊರ್ಧ್ವ (ಮೇಲಿನ) ದಿಕ್ಕೇ ಕೊನೆಯದು. ಊರ್ಧ್ವಭಾಗದಲ್ಲಿ ದ್ಯುಲೋಕ ಅಥವಾ ಅಂತರಿಕ್ಷವಿರುವುದು. ಈ ಅಂತರಿಕ್ಷವು ತನ್ನಲ್ಲಿರುವ ಮೇಘಗಳಿಂದ ವರ್ಷಾಕಾಲದಲ್ಲಿ ಭೂಮಿಯಮೇಲೆ ವೃಷ್ಟಿಯನ್ನು ಸುರಿಸಿ ಭೂಮಿಯನ್ನು ನೆನೆಯುವಂತೆ ಮಾಡುವುದು, ಬೇಸಿಗೆಯಲ್ಲಿ ಆ ನೀರನ್ನು ಹೀರುವುದು, ಆದ್ದರಿಂದ ಮಳೆಯು ಎಲ್ಲಿಂದ ಬರುವುದೋ ಆ ದಿಕ್ಕನ್ನು ಊರ್ಧ್ವದಿಕ್ಕೆಂದು ತಿಳಿಯಬೇಕು. ಅದಿತಿಯನ್ನು ಉದ್ದೇಶಿಸಿ ಹೋಮಮಾಡು ವುದರಿಂದ ಊರ್ಧ್ವದಿಕ್ಕಿನ ಪರಿಜ್ಞಾನವಾಗುವುದು.

ಇಲ್ಲಿ ಪಥ್ಯಾಸ್ವಸ್ತಿ, ಅಗ್ನಿ, ಸೋಮ, ಸವಿತೃ ಎಂಬ ನಾಲ್ಕು ದೇವತೆಗಳಿಗೆ ಆಜ್ಯದ್ರವ್ಯದಿಂದ (ಘೃತ) ಹೋಮವನ್ನು ಅರ್ಪಿಸಬೇಕು. ಐದನೆಯ ದೇವತೆಯಾದ ಅದಿತಿಗೆ ಚರು (ಅನ್ನ) ದ್ರವ್ಯದಿಂದ ಆಹುತಿಯನ್ನರ್ಪಿಸಬೇಕು. ಈ ವಿಷಯವನ್ನು ಆಪಸ್ತಂಬಮಹರ್ಷಿಯು—“**ಚತುರ ಆಜ್ಯಭಾಗಾನ್ಪ್ರತಿದಿಶಂ ಯಜತಿ ಪಥ್ಯಾಂ ಸ್ವಸ್ತಿಂ ಪುರಸ್ತಾದಗ್ನಿಂ ದಕ್ಷಿಣತಃ ಸೋಮಂ ಪಶ್ಚಾತ್ ಸವಿತಾರಮುತ್ತರತೋ ಮಧ್ಯೇಽದಿತಿಂ ಹವಿಷಾ**” ಎಂದು ಹೇಳಿರುವರು. ಎಂದರೆ, ಈ ಪ್ರಾಯಣೀಯೇಷ್ಟಿಯ ಹೋಮಮಾಡುವಾಗ ಪಥ್ಯಾಸ್ವಸ್ತಿ ಎಂಬ ದೇವತೆಯನ್ನುದ್ದೇಶಿಸಿ ಪೂರ್ವದಿಕ್ಕಿನಲ್ಲಿಯೂ, ದಕ್ಷಿಣ ದಿಕ್ಕಿನಲ್ಲಿ ಅಗ್ನಿಯನ್ನೂ, ಪಶ್ಚಿಮದಿಕ್ಕಿನಲ್ಲಿ ಸೋಮನನ್ನೂ, ಉತ್ತರದಿಕ್ಕಿನಲ್ಲಿ ಸವಿತೃದೇವತೆಯನ್ನೂ ಮಧ್ಯದಲ್ಲಿ (ಊರ್ಧ್ವ) ಅದಿತಿಯನ್ನೂ ಉದ್ದೇಶಿಸಿ ಹೋಮಮಾಡಬೇಕು ಎಂದು. ಮತ್ತು ಈ ಹೋಮಗಳ ವಿಷಯದಲ್ಲಿ—

ಪಂಚ ದೇವತಾ ಯಜತಿ ಪಂಚ ದಿಶೋ ದಿಶಾಂ ಪ್ರಜ್ಞಾತ್ಯೈ ಅಥೋ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಮೇವಾವರುಂಧೇ ಪಥ್ಯಾಗ್ ಸ್ವಸ್ತಿಮಯಜನ್ ಪ್ರಾಚೀಮೇವ ತಯಾ ದಿಶಂ ಪ್ರಾಜಾನನ್ನಗ್ನಿನಾ ದಕ್ಷಿಣಾ ಸೋಮೇನ ಪ್ರತೀಚೀಗ್ಂ ಸವಿತ್ರೋದೀಚೀಮದಿತ್ಯೋರ್ಧ್ವಾಂ ಪಥ್ಯಾಗ್ಂ ಸ್ವಸ್ತಿಂ ಯಜತಿ ಪ್ರಾಚೀಮೇವ ತಯಾ ದಿಶಂ ಪ್ರಜಾನಾತಿ ಪಥ್ಯಾಗ್ ಸ್ವಸ್ತಿಮಿಷ್ಟ್ವಾಗ್ನೀಷೋಮೌ ಯಜತಿ ಚಕ್ಷುಷೀ ವಾ ಏತೇ ಯಜ್ಞಸ್ಯ ಯದಗ್ನೀಷೋಮೌ ತಾಭ್ಯಾಮೇವಾನುಪಶ್ಯತ್ಯಗ್ನೀಷೋಮಾವಿಷ್ಟ್ವಾ ಸವಿತಾರಂ ಯಜತಿ ಸವಿತೃಪ್ರಸೂತ ಏವಾನು ಪಶ್ಯತಿ ಸವಿತಾರಮಿಷ್ಟ್ವಾದಿತಿಂ ಯಜತೀಯಂ ವಾ ಅದಿತಿರಸ್ಯಾ-ಮೇವ ಪ್ರತಿಷ್ಠಾಯಾನುಪಶ್ಯತಿ ॥

(ತೈ. ಸಂ. ೬-೧-೫-೧,೨,೩)

ಎಂದು ವಿವರಣೆ ಇದೆ. ಇದೆಲ್ಲಾ ಮೇಲೆ ವಿವರಿಸಿದ ವಿಷಯಗಳನ್ನೇ ಒಳಗೊಂಡಿದೆ.

**ಪಂಚ ದೇವತಾ ಯಜತಿ ಪಾಂಕ್ತೋ ಯಜ್ಞಃ ಸರ್ವಾ ದಿಶಃ ಕಲ್ಪಂತೇ ಕಲ್ಪತೇ ಯಜ್ಞೋಽಪಿ ।**

ಯಥೋಕ್ತದೇವತಾಗತಾಂ ಸಂಖ್ಯಾಂ ಪ್ರಶಂಸತಿ । ಪಥ್ಯಾದ್ಯದಿತ್ಯಂತಾಃ ಪಂಚ ದೇವತಾ ಯಜ್ಞಸ್ಯ ಪಂಚಸಂಖ್ಯಾಯೋಗಾತ್ಪಾಙ್ಕ್ತತ್ವಂ ಬಹುಧಾ ವಕ್ಷ್ಯತೇಽತೋ ಯಜ್ಞೇ ದೇವತಾವಿಷಯಾ ಪಂಚಸಂಖ್ಯಾ ಯುಕ್ತಾ । ದಿಶೋಽಪಿ ಪ್ರಾಚ್ಯಾದ್ಯಾ ಊರ್ಧ್ವಾಂತಾಃ ಪಂಚಸಂಖ್ಯಾಕಾಃ । ಅತೋ ದೇವತಾಗತಪಂಚಸಂಖ್ಯಯಾ ಗತಾಃ ಸರ್ವಾ ದಿಶಃ ಕಲ್ಪಂತೇ ಸಮರ್ಥಾ ಭವಂತಿ । ಪೂರ್ವಮವಿಜ್ಞಾತಾಃ ಸತ್ಯೋ ಜ್ಞಾತಾ ಭವಂತೀತ್ಯರ್ಥಃ । ಯಜ್ಞೋಽಪ್ಯನಯಾ ಕಲ್ಪತೇ ಸ್ವಪ್ರಯೋಜನಸಮರ್ಥೋ ಭವತಿ ।

ಮೇಲೆ ಹೇಳಿದಂತೆ ಪಥ್ಯಾಸ್ವಸ್ತಿ ಮೊದಲಾದ ಐದು ದೇವತೆಗಳನ್ನು ಉದ್ದೇಶಿಸಿ ಹೋಮಮಾಡುವುದರಿಂದ ಯಜ್ಞವು ನಿರ್ವಿಘ್ನವಾಗಿಯೂ ಸಾಂಗವಾಗಿಯೂ ನೆರವೇರಲು ಅನುಕೂಲವಾಗುವುದು. ಮತ್ತು ಪೂರ್ವಾದಿ ನಾಲ್ಕು ದಿಕ್ಕುಗಳು, ಊರ್ಧ್ವ ದಿಕ್ಕು ಒಟ್ಟು ಐದು ದಿಕ್ಕುಗಳ ಪರಿಜ್ಞಾನವೂ ಲಭಿಸುವುದು. ಆದ್ದರಿಂದ ಯಜ್ಞವು ಚೆನ್ನಾಗಿ ನೆರವೇರಿ ಯಜಮಾನನಿಗೆ ನಿರ್ದಿಷ್ಟವಾದ ಫಲವನ್ನು ಕೊಡುವುದು.

**ತಸ್ಯೈ ಜನತಾಯೈ ಕಲ್ಪತೇ ಯತ್ರೈವಂ ವಿದ್ವಾನ್‌ಹೋತಾ ಭವತಿ ॥**

ವೇದನಂ ಪ್ರಶಂಸತಿ । ಯತ್ರ ಯಸ್ಯಾಂ ಜನತಾಯಾಂ ಯಾಜ್ಞಿಕಜನಸಮೂಹೇ ಹೋತಾ ಪ್ರಾಯಣೀಯದೇವತಾನಾಂ ವೇದಿತಾ ಭವತಿ ತಸ್ಯಾಂ ಜನತಾಯಾಮಯಂ ಹೋತಾ ಸ್ವಪ್ರಯೋಜನಸಮರ್ಥೋ ಭವತಿ ।

ಈ ಪ್ರಾಯಣೀಯೇಷ್ಟಿಯಲ್ಲಿ ಮೇಲೆ ಹೇಳಿದ ಹೋಮ ವಿಧಾನಗಳನ್ನು ಚೆನ್ನಾಗಿ ತಿಳಿದಿರುವ ಹೋತೃವು ಯಾವ ಜನಸಮೂಹದಿಂದ ಕೂಡಿದ ಯಜ್ಞದಲ್ಲಿ ಇದ್ದು ಯಜ್ಞದಲ್ಲಿ ಭಾಗವಹಿಸುವನೋ ಆ ಯಜ್ಞವು ಜನಸಮೂಹಕ್ಕೆ ಬೇಕಾದ ಇಷ್ಟಾರ್ಥಗಳನ್ನು ಕೊಡಲು ಸಮರ್ಥವಾಗುವುದು.

*English Translation*

The Prayaniya ishti has its name "prayaniya" from the fact that by its means the sacrificers approach heaven (from pra-ya, going forward). The prayaniya ceremony is the air inhaled (prana), whereas the udayaniya i.e., concluding ceremony (of the whole sacrifice) is the air exhaled. The Hotar (who is required at both ceremonies) is the common hold of both the airs (samana). Both the air inhaled and exhaled are held together (in the same body). (The performance of both ceremonies, the prayaniya and udayaniya are intended) for making the vital airs, and for obtaining a discriminating knowledge of their several parts (prana, udana, & c.).

The sacrifice (the mystical sacrificial personage) went away from the gods. The gods were (consequently) unable to perform any further ceremony. They did not know where it had gone to. They said to Aditi: Let us know the sacrifice through you! Aditi said: Let it be so; but I will choose a boon from you. They said: Chose! Then she choose this boon; all sacrifices shall commence with me, and end with me. Thence there is at (the beginning of) the prayaniya ishti a Charu-offering for Aditi, and the same offering is given to her as the boon chosen by her at the end (of the sacrifice). Then she chose this (other) boon. Through me you shall know the eastern direction, through Agni the southern, through Soma the western, and through Savitar the northern direction. The Hotar repeats the (Anuvakya and) Yajya-mantra for the Pathya. Therefore the sun rises in the east and sets in the west; for it follows in its course the Pathya. He repeats the (Anuvakya and) Yijaya verse for Agni.

That is done because cereals first ripen in southern countries (for Agni is posted at the southern direction); for cereals are Agni's. He repeats the (Anuvakya and) Yajya for Soma. That is done because many rivers flow towards the west (to fall into the sea), and the waters are Soma's. He repeats the (Anuvakya and) Yajya mantra for Savitar. That is done, because the wind (pavamanah) blows most from the north between the northern and western directions; it thus blows moved by Savitar.

He repeats the (Anuvakya and) Yajya mantra for Aditi, who is the upper region. This is done because the sky (asau) wets the earth with rain (and) dries it up (which is done from above). He repeats (Anuvakya and) Yajya verses for five deities. The sacrifice is five-fold. All (ffve) directions are (thus) established; and the sacrifice becomes also established. It becomes established for such people (only) with whom there is a Hotar having this knowledge (to separate and mark the regions in this way).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಿತಿಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎರಡನೆಯ ಅಧ್ಯಾಯದ ಮೊದಲನೇ ಖಂಡವು ಸಮಾಪ್ತವಾದುದು.



# ಅಥ ದ್ವಿತಿಯಾಧ್ಯಾಯೇ ದ್ವಿತೀಯಃ ಖಂಡಃ

## ಎರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ಪ್ರಾಯಣೀಯೇಷ್ಟಿಯಲ್ಲಿ ಕಾಮ್ಯಪ್ರಕಾರ ವಿಶೇಷವಿಷಯಗಳ ನಿರೂಪಣೆ ]

**ಯಸ್ತೇಜೋ ಬ್ರಹ್ಮವರ್ಚಸಮಿಚ್ಛೇತ್ಪ್ರಯಾಜಾಹುತಿಭಿಃ ಪ್ರಾಙ್ಙ ಇಯಾತ್ತೇಜೋ ವೈ ಬ್ರಹ್ಮವರ್ಚಸಂ ಪ್ರಾಚೀ ದಿಕ್ ತೇಜಸ್ವೀ ಬ್ರಹ್ಮವರ್ಚಸೀ ಭವತಿ ಯ ಏವಂ ವಿದ್ವಾನ್ಪ್ರಾಙೇತಿ ।**

ಪ್ರಾಯಣೀಯೇಷ್ಟಿಂ ವಿಧಾಯ ತತ್ರ ಪ್ರಯಾಜಾನಾಂ ಕಾಮ್ಯಪ್ರಕಾರವಿಶೇಷಂ ವಿಧತ್ತೇ । ಸಮಿಧೋ ಯಜತಿ ತನೂನಪಾತಂ ಯಜತೀತ್ಯಾದಿನಾ ವಿಹಿತಾಃ ಪಂಚ ಪ್ರಯಾಜಾಹುತಯಸ್ತಾಸಾಂ ಪ್ರಕೃತಾವನುಷ್ಠಾನಪ್ರಕಾರ ಆಪಸ್ತಂಬೇನ ದರ್ಶಿತಃ – ಪಂಚ ಪ್ರಯಾಜಾನ್ಪ್ರಾಚೋ ಯಜತಿ ಪ್ರತಿದಿಶಂ ವಾ ಸಮಿಧಃ ಪುರಸ್ತಾತ್ತನೂನಪಾತಂ ದಕ್ಷಿಣತ ಇಡಾಂ ಪಶ್ಚಾದ್ಬರ್ಹಿರುತ್ತರತಃ ಸ್ವಾಹಾಕಾರಂ ಮಧ್ಯೇ ಇತಿ । ಸ ಪ್ರಕಾರೋಽತ್ರ ಚೋದಕಪ್ರಾಪ್ತಸ್ತಮುಪೋದ್ಯ ಶರೀರಕಾಂತಿಶ್ರುತಾಧ್ಯಯನಸಂಪತ್ತಿಂ ಚ ಕಾಮಯಮಾನಸ್ಯ ಪ್ರಕಾರಾಂತರಂ ವಿಧೀಯತೇ । ಯಃ ಪುಮಾಂಸ್ತೇಜೋ ಬ್ರಹ್ಮವರ್ಚಸಮಿಚ್ಛೇತ್ಸಪುಮಾನ್ಪ್ರಯಾಜಾಹುತಿಭಿಃ ಪ್ರಾಙಿಯಾತ್ । ಪ್ರಾಗಪವರ್ಗಾಸ್ತಾ ಆಚರೇದಿತ್ಯರ್ಥಃ । ಆದಿತ್ಯೋದಯೇನ ಪ್ರಾಚ್ಯಾಸ್ತೇಜಸ್ತ್ವಂ ತದಾಭಿಮುಖ್ಯೇನ ಗಾಯತ್ರೀಜಪಾನುಷ್ಠಾನಾದ್ಬ್ರಹ್ಮವರ್ಚಸತ್ವಂ ಚ । ವೇದನಂ ಪ್ರಶಂಸತಿ ।

ಪ್ರಾಯಣೀಯೇಷ್ಟಿಯ ವಿಷಯವನ್ನು ವಿವರಿಸಿ ಈಗ ಪ್ರಯಾಜ ಎಂಬ ಆಹುತಿಗಳ ಸ್ವರೂಪವನ್ನೂ ಅದರಲ್ಲಿಯೂ ಯಾವ ಅಪೇಕ್ಷೆಯಿಂದ ಮಾಡಿದರೆ ಯಾವ ಫಲವುಂಟಾಗುವುದೆಂಬ ಕಾಮ್ಯಪ್ರಕಾರಗಳನ್ನು ಹೇಳುವರು.

ಈ ಪ್ರಯಾಜ ಮಂತ್ರಗಳ ಎಂದರೆ ಆಹುತಿಗಳ ವಿಷಯದಲ್ಲಿ ಋಗ್ವೇದ ಸಂಹಿತೆಯ ಹತ್ತನೆಯ ಮಂಡಲದ ಐವತ್ತೊಂದನೆಯ ಸೂಕ್ತದಲ್ಲಿ ಅಗ್ನಿಗೂ ದೇವತೆಗಳಿಗೂ ನಡೆದ ಸಂಭಾಷಣೆಯನ್ನು ಈರೀತಿ ತಿಳಿಸಿದೆ—

**ಅಗ್ನೇಃ ಪೂರ್ವೇ ಭ್ರಾತರೋ ಅರ್ಥಮೇತಂ ರಥೀವಾಧ್ವಾನಮನ್ವಾವರೀವುಃ ।**
**ತಸ್ಮಾದ್ಭಿಯಾ ವರುಣ ದೂರಮಾಯಂ ಗೌರೋನ ಕ್ಷೇಪ್ನೋರವಿಜೇ ಜ್ಯಾಯಾಃ ।**
**ಕುರ್ಮಸ್ತ ಆಯುರಜರಂ ಯದಗ್ನೇ ಯಥಾ ಯುಕ್ತೋ ಜಾತವೇದೋ ನ ರಿಷ್ಯಾಃ ।**
**ಅಥಾ ವಹಾಸಿ ಸುಮನಸ್ಯಮಾನೋ ಭಾಗಂ ದೇವೇಭ್ಯೋ ಹವಿಷಃ ಸುಜಾತ ।**

**ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ ।**
**ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ ।**
**ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ ।**
**ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥**
(ಋ. ಸಂ. ೧೦-೫೧-೭ ರಿಂದ ೯)

ಈ ಸೂಕ್ತದಲ್ಲಿ ದೇವತೆಗಳಿಗೂ ಅಗ್ನಿಗೂ ನಡೆದ ಸಂಭಾಷಣೆಯು ಉಕ್ತವಾಗಿದೆ. ಮುಖ್ಯವಿಚಾರವೇನೆಂದರೆ—ಅಗ್ನಿಗೆ ಭೂಪತಿ, ಭುವನಪತಿ, ಭೂತಾನಾಂಪತಿ ಎಂಬ ಹೆಸರಿನ ಮೂವರು ಜ್ಯೇಷ್ಠ ಸಹೋದರರಿದ್ದರು. ಅವರೂ ಅಗ್ನಿಯಂತೆಯೇ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ದೇವತೆಗಳ ಬಳಿಗೆ ವಹಿಸುತ್ತಿದ್ದರು. ಹೀಗಿರುವಲ್ಲಿ ಯಜ್ಞದಲ್ಲಿ ಹೋಮಮಾಡುವಾಗ ವಷಟ್ಕಾರಪೂರ್ವಕವಾಗಿ ಹೋಮಮಾಡುವರು. ಈ ವಷಟ್ಕಾರವು (ವೌಷಟ್) ಸರಿಯಾಗಿ ಉಚ್ಚರಿಸಲ್ಪಡದಿದ್ದರೆ ವಜ್ರಾಯುಧದಂತೆ ಅಪಘಾತವನ್ನುಂಟುಮಾಡುವುದು. ಇಂತಹ ಹೋಮಗಳಿಂದ ಈ ಮೂವರು ಸಹೋದರರೂ ಮೃತರಾದರು. ಅದನ್ನು ಕಂಡು ಕಿರಿಯವನಾದ ಅಗ್ನಿಯು ತನಗೂ ಆ ದಶೆ ಸಂಭವಿಸಬಹುದೆಂದು ಭೀತನಾಗಿ ಓಡಿಹೋಡಿ ನೀರಿನಲ್ಲಿ ಅವಿತುಕೊಂಡಿದ್ದನು. ದೇವತೆಗಳು ಅಗ್ನಿಯನ್ನು ಎಲ್ಲಿಯೂ ಕಾಣದೆ ಹುಡುಕುತ್ತಿರುವಾಗ ನೀರಿನಲ್ಲಿದ್ದ ಮೀನುಗಳು ಅಗ್ನಿಯು ನೀರಿನಲ್ಲಿರುವನೆಂದು ದೇವತೆಗಳಿಗೆ ತಿಳಿಸಿದುವು. ಆಗ ದೇವತೆಗಳು ಅಗ್ನಿಯ ಬಳಿಗೆ ಬಂದು ಅವನೊಡನೆ ಈರೀತಿ ಸಂಭಾಷಿಸಿದರು. ಈ ಸಂಭಾಷಣೆಯು ಈ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ. ದೇವತೆಗಳು—ಅಗ್ನಿಯು ನೀರಿನಿಂದ ಎದ್ದು ಬರಬೇಕೆಂದೂ ಹಿಂದಿನಂತೆ ತಮಗೆ ಹವಿಸ್ಸನ್ನು ವಹಿಸಬೇಕೆಂದೂ ಪ್ರಾರ್ಥಿಸಲು, ಅಗ್ನಿಯು—ತನ್ನ ಸಹೋದರರು ಹವಿರ್ವಹನ ಕಾರ್ಯದಲ್ಲಿ ವಷಟ್ಕಾರಾಹುತಿಗಳಿಂದ ಮೃತರಾದರು. ತನಗೂ ಅದೇಗತಿ ಪ್ರಾಪ್ತವಾಗುವುದರಿಂದ ತಾನು ಬರುವುದಿಲ್ಲವೆಂದು ಹೇಳಿದನು. ಅದಕ್ಕೆ ದೇವತೆಗಳು—ಮರಣಕ್ಕಾಗಿ ಹೆದರಬೇಡವೆಂದೂ, ನಿನಗೆ ಮರಣಭಯವುಂಟಾಗದಂತೆ ಮಾಡುವೆವೆಂದೂ ಹೇಳಲು, ಅಗ್ನಿಯು ಪುನಃ ಇಂತೆಂದನು—ಒಳ್ಳೆಯದು, ಮರಣಭಯವನ್ನು ನನಗೆ ತಪ್ಪಿಸುವುದಲ್ಲದೆ, ಯಜ್ಞಗಳ ಆರಂಭದಲ್ಲಿ ಹೋಮಮಾಡುವ ಆಜ್ಯಭಾಗ, ಪ್ರಯಾಜಾ, ಎಂಬ ಆಹುತಿಗಳನ್ನು ಕೊನೆಯಲ್ಲಿ ಮಾಡುವ ಅನುಯಾಜಾ ಊರ್ಜಸ್ವತ್, ಸ್ವಿಷ್ಟಕೃತ್ ಮೊದಲಾದ ಕೆಲವು ವಿಶೇಷ ಆಹುತಿಗಳನ್ನು ನನಗೆ ಕೊಡಬೇಕು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಅವನು ಕೇಳಿದ ಹವಿರ್ಭಾಗಗಳನ್ನು ಕೊಟ್ಟು ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವಂತೆಯೂ ಸರ್ವರಿಂದಲೂ ನಮಸ್ಕೃತನಾಗುವಂತೆಯೂ ದೀರ್ಘಾಯುವಾಗುವಂತೆಯೂ ವರವನ್ನಿತ್ತು ಪೂರ್ವದಂತೆ ಹವಿರ್ವಹನಕಾರ್ಯದಲ್ಲಿ ಅವನನ್ನು ನಿಯಮಿಸಿದರು ಎಂದು ಈ ಸೂಕ್ತದ ಮುಖ್ಯಾಭಿಪ್ರಾಯವು.

ಪ್ರಯಾಜಾಃ ಮತ್ತು ಅನುಯಾಜಾಃ ಎಂಬ ಆಹುತಿಗಳಿಗೆ ದೇವತೆಗಳಾರು ಎಂಬ ವಿಷಯದಲ್ಲಿ ಯಾಸ್ಕರು ತಮ್ಮ ನಿರುಕ್ತದಲ್ಲಿ ಈರೀತಿ ವಿವರಿಸಿದ್ದಾರೆ—

**ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ । ಆಗ್ನೇಯಾ ಇತ್ಯೇಕೇ । ಪ್ರಯಾಜಾನ್ಮೇ ಅನುಯಾಜಾಂಶ್ಚ ಕೇವಲಾನೂರ್ಜಸ್ವಂತಂ ಹವಿಷೋ ದತ್ತ ಭಾಗಂ । ಘೃತಂ ಚಾಪಾಂ ಪುರುಷಂ ಚೌಷಧೀನಾಮಗ್ನೇಶ್ಚ ದೀರ್ಘಮಾಯುರಸ್ತು ದೇವಾಃ । ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ । ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥ ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನೂಯಾಜಾ ಇತಿ ಚ ಬ್ರಾಹ್ಮಣಂ ॥**

ಪ್ರಯಾಜಾನುಯಾಜಾಃ ಎಂದರೆ ಯಾವ ದೇವತೆಗಳು? ಎಂದು ಪ್ರಶ್ನೆಮಾಡಿ ಅದಕ್ಕೆ—**ಆಗ್ನೇಯಾ ಇತ್ಯೇಕೇ**—**ಅಗ್ನಿಯೇ** ಆ ಮಂತ್ರಗಳ ದೇವತೆಯು ಎಂದು ಕೆಲವರ ಮತವೆಂದು ಇಲ್ಲಿ ಹೇಳಿದೆ. ಇಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು. ಯಜ್ಞಾದಿಕರ್ಮಗಳಲ್ಲಿ ಪರೋಕ್ಷರಾದ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಆಹುತಿಯನ್ನರ್ಪಿಸಿ ಹೋಮಮಾಡುವುದು ಸರಿಯಷ್ಟೆ. ಉದ್ದಿಷ್ಟರಾದ ಮತ್ತು ಆಹೂತರಾದ (ಕರೆಯಲ್ಪಟ್ಟ) ದೇವತೆಗಳನ್ನುದ್ದೇಶಿಸಿ ಮಾಡುವ ಆಹುತಿಗಳಿಗೆ ಪ್ರಧಾನಾಹುತಿ (ಮುಖ್ಯಾಹುತಿ) ಗಳೆಂದು ಹೆಸರು. ಈ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿಯೂ ಅನಂತರವೂ ಕೆಲವು ಉಪಹೋಮಗಳನ್ನು ಮಾಡುವುದು ರೂಢಿಯು. ಆದ್ದರಿಂದ ಪ್ರಧಾನಾಹುತಿಗಳಿಗೆ ಪೂರ್ವಭಾವಿಯಾಗಿ ಮಾಡುವ ಉಪಹೋಮಗಳಲ್ಲಿ ಕೆಲವಕ್ಕೆ **ಪ್ರಯಾಜಾಃ** ಎಂದೂ ಪ್ರಧಾನಾಹುತಿಯ ಅನಂತರ ಮಾಡುವ ಉಪಹೋಮಗಳಲ್ಲಿ ಕೆಲವಕ್ಕೆ **ಅನುಯಾಜಾಃ** ಎಂದೂ ಹೆಸರು. ಮೇಲೆ ಉದಾಹರಿಸಿರುವ ಎರಡು ಋಕ್ಕುಗಳಲ್ಲಿ ಈ ಪ್ರಯಾಜಾನುಯಾಜಗಳೆಂಬ ಆಹುತಿಗಳನ್ನು ತನ್ನನ್ನುದ್ದೇಶಿಸಿಯೇ ಎಂದರೆ ತನಗೆ ಮಾತ್ರವೇ ಅರ್ಪಿಸಬೇಕೆಂದೂ ಆ ಆಹುತಿಗಳಿಗೆ ತಾನೇ ದೇವತೆಯಾಗಬೇಕೆಂದೂ ಅಗ್ನಿಯು ದೇವತೆಗಳಿಂದ ವರವನ್ನು ಕೇಳಿದಪ್ರಕಾರ ದೇವತೆಗಳು ಹಾಗೆಯೇ ಆಗಲೆಂದು ವರವನ್ನು ಕೊಟ್ಟರು. ಆದಕಾರಣ ಈ ಪ್ರಯಾಜಾನುಯಾಜ ಮಂತ್ರಗಳಿಗೂ ಆಹುತಿಗಳಿಗೂ ಅಗ್ನಿಯೇ ದೇವತೆಯೆಂದು ಕೆಲವರ ಮತವೆಂದು ಯಾಸ್ಕರು ಇಲ್ಲಿ ವಿವರಿಸಿದಾರೆ. ಈ ವಿಷಯದಲ್ಲಿ—**ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನೂಯಾಜಾ** ಎಂದು ಬ್ರಾಹ್ಮಣ ವಾಕ್ಯವನ್ನೂ ಉದಾಹರಿಸಿದಾರೆ. ಇದೇರೀತಿ ಬೇರೆಬೇರೆ ಮತದವರ ಅಭಿಪ್ರಾಯಗಳನ್ನು ಈರೀತಿ ತಿಳಿಸಿದಾರೆ—

**ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ**
**ಇತಿ ಚ ಬ್ರಾಹ್ಮಣಂ ॥**
**ಋತುದೇವಾ ಇತ್ಯಪರಂ । ಋತವೋ ವೈ ಪ್ರಯಾಜಾ ಋತವೋಽನುಯಾಜಾ**
**ಇತಿ ಚ ಬ್ರಾಹ್ಮಣಂ ॥**
**ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾ ಪಶವೋಽನುಯಾಜಾ**
**ಇತಿ ಚ ಬ್ರಾಹ್ಮಣಂ ॥**
**ಪ್ರಾಣದೇವತಾ ಇತ್ಯಪರಂ । ಪ್ರಾಣಾ ವೈ ಪ್ರಯಾಜಾಃ ಪ್ರಾಣಾ ವಾ ಅನುಯಾಜಾ**
**ಇತಿ ಚ ಬ್ರಾಹ್ಮಣಂ ॥**
**ಆತ್ಮದೇವತಾ ಇತ್ಯಪರಂ । ಆತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾ**
**ಇತಿ ಚ ಬ್ರಾಹ್ಮಣಂ ॥**

ಕೆಲವರು ಪ್ರಯಾಜಾನುಯಾಜಮಂತ್ರಗಳಿಗೆ ಛಂದಸ್ಸೇ ದೇವತೆಗಳೆಂದೂ, ಕೆಲವರು ಋತುಗಳೇ ದೇವತೆಗಳೆಂದೂ ಮತ್ತೆ ಕೆಲವರು ಗೋವುಗಳೇ ಮೊದಲಾದ ಪಶುಗಳೇ ದೇವತೆಗಳೆಂದೂ, ಮತ್ತೆ ಕೆಲವರು ಪ್ರಾಣವೇ ದೇವತೆಯೆಂದೂ ಮತ್ತೆ ಕೆಲವರು ಈ ಮಂತ್ರಗಳಿಗೆ ಆತ್ಮವೇ ದೇವತೆಯೆಂದೂ ಹೇಳುವರು. ಇದನ್ನು ಸಮರ್ಥಿಸುವುದಕ್ಕಾಗಿ ಮೇಲಿನ ಬ್ರಾಹ್ಮಣ ವಾಕ್ಯಗಳೇ ಪ್ರಮಾಣವೆಂದು ಪ್ರತಿಪಾದಿಸಿರುವರು.

**ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರತ್ । ಕಿಮರ್ಥಂ ಪುನರಿದಮುಚ್ಯತೇ । ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಮನಸಾ ಧ್ಯಾಯೇದ್ವಷಟ್ಕರಿಷ್ಯನ್ನಿತಿ ಹ ವಿಜ್ಞಾಯತೇ ॥** (ನಿ. ೮-೨೨)

ಇಷ್ಟೆಲ್ಲಾ ಮತಭೇದಗಳೂ ಅಭಿಪ್ರಾಯಭೇದಗಳೂ ಇದ್ದರೂ ಈ ಮಂತ್ರಗಳಿಗೆ ಅಗ್ನಿಯೇ ದೇವತೆಯೆಂಬ ಮತವೇ ಪ್ರಮಾಣಾರ್ಹವಾದುದು ಎಂದು ನಿರ್ಧರಿಸಲ್ಪಟ್ಟಿರುವುದು. ಹೀಗಿದ್ದರೂ ನಾನಾ ಮತಭೇದಗಳನ್ನು ಹೇಳಿರುವುದು ಯಾಕೆ? ಇದರಿಂದ ಏನು ಪ್ರಯೋಜನ? ಎಂದರೆ ಪ್ರಯಾಜಾನುಯಾಜಮಂತ್ರಗಳಿಂದ ವಷಟ್ಕಾರಪೂರ್ವಕವಾಗಿ ಅಗ್ನಿಯಲ್ಲಿ ಆಹುತಿಗಳನ್ನರ್ಪಿಸುವಾಗ ಆಯಾ ಮಂತ್ರಗಳ ದೇವತೆಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಆಹುತಿಗಳನ್ನರ್ಪಿಸಬೇಕೆಂಬ ವಿಧಿಯೂ ಸಂಪ್ರದಾಯವೂ ಇರುವುದರಿಂದ ಇದನ್ನೆಲ್ಲಾ ಇಲ್ಲಿ ವಿಶದವಾಗಿ ತಿಳಿಸಬೇಕಾಯಿತು.

ಪ್ರಸಕ್ತವಾದ ಪ್ರಯಾಜಾಹುತಿಗಳ ಸಂಖ್ಯೆ ಐದು. **"ಸಮಿಧೋ ಯಜತಿ"** (ತೈ.ಸಂ. ೨-೬-೧-೧) ಇತ್ಯಾದಿ ಶ್ರುತಿವಾಕ್ಯಗಳ ಪ್ರಕಾರ ಪ್ರಕೃತಿಯಾಗದಲ್ಲಿ ಈ ಪ್ರಯಾಜಾಹುತಿಗಳನ್ನು ಮಾಡುವ ಕ್ರಮವು ಆಪಸ್ತಂಬಮಹರ್ಷಿಯಿಂದ ಈ ರೀತಿ ತಿಳಿಸಲ್ಪಟ್ಟಿದೆ- **"ಪಂಚ ಪ್ರಯಾಜಾನ್ಪ್ರಾಙೋ ಯಜತಿ ಪ್ರತಿದಿಶಂ ವಾ ಸಮಿಧಃ ಪುರಸ್ತಾತ್ತನೂನಪಾತಂ ದಕ್ಷಿಣತ ಇಡಾಂ ಪಶ್ಚಾದ್ಬರ್ಹಿರುತ್ತರತಃ ಸ್ವಾಹಾಕಾರಂ ಮಧ್ಯೇ"** ಇತಿ (ಆಪ.ಶ್ರೌ.ಸೂ. ೨-೧೭-೧, ೨) ಪಂಚಪ್ರಯಾಜದೇವತೆಗಳು ಯಾವುವೆಂದರೆ, ಸಮಿಧಃ ತನೂನಪಾತ್ ಇಡಾ, ಬರ್ಹಿಃ, ಸ್ವಾಹಾಕಾರ. ಈ ದೇವತೆಗಳನ್ನುದ್ದೇಶಿಸಿ ಹೋಮಮಾಡುವ ಕ್ರಮವನ್ನೇ ಮೇಲಿನ ಸೂತ್ರವಾಕ್ಯದಲ್ಲಿ ತಿಳಿಸಲಾಗಿದೆ. ಹೇಗೆಂದರೆ – ಮುಂದುಗಡೆ ಎಂದರೆ ಪೂರ್ವಾಭಿಮುಖವಾಗಿ ಸಮಿಧಃ ಮೊದಲಾದ ಐದು ದೇವತೆಗಳನ್ನೂ ಉದ್ದೇಶಿಸಿ ಹೋಮಮಾಡಬಹುದು ಅಥವಾ ಒಂದೊಂದು ದಿಕ್ಕಿನಲ್ಲಿ ಒಂದೊಂದು ದೇವತೆಯಂತೆಯೂ ಹೋಮ ಮಾಡಬಹುದು. ಪೂರ್ವದಿಕ್ಕಿನಲ್ಲಿ ಸಮಿಧಃ ಎಂಬ ದೇವತೆಯನ್ನೂ, ದಕ್ಷಿಣದಿಕ್ಕಿನಲ್ಲಿ ತನೂನಪಾತ್ ಎಂಬ ದೇವತೆಯನ್ನೂ, ಪಶ್ಚಿಮದಿಕ್ಕಿನಲ್ಲಿ ಇಡಾ ಎಂಬ ದೇವತೆಯನ್ನೂ, ಉತ್ತರದಿಕ್ಕಿನಲ್ಲಿ ಬರ್ಹಿಃ ಎಂಬ ದೇವತೆಯನ್ನೂ ಮಧ್ಯದಲ್ಲಿ ಸ್ವಾಹಾಕಾರವನ್ನೂ ಉದ್ದೇಶಿಸಿ ಹೋಮಮಾಡಬಹುದು. ಇವೆರಡೂ ಸಾಧಾರಣಕ್ರಮಗಳು. ಆದರೆ ನಿರ್ದಿಷ್ಟವಾದ ಕೆಲವು ಇಷ್ಟಾರ್ಥವನ್ನು ಬಯಸುವ ಯಜಮಾನನು ಬೇರೆ ವಿಧವಾಗಿ ಮಾಡಬೇಕು. ಹೇಗೆಂದರೆ— ಶರೀರಕಾಂತಿಯನ್ನೂ (ತೇಜಸ್ಸನ್ನೂ) ಅಧ್ಯಯನಸಂಪತ್ತಿಯನ್ನೂ (ಬ್ರಹ್ಮವರ್ಚಸ್ಸನ್ನೂ) ಬಯಸುವ ಯಜಮಾನನು ಪೂರ್ವಾಭಿಮುಖವಾಗಿ ಕುಳಿತು ಈ ಐದು ಪ್ರಯಾಜಾಹುತಿಗಳನ್ನೂ ಹೋಮಮಾಡಬೇಕು. ಏಕೆಂದರೆ ಪೂರ್ವದಿಗ್ಭಾಗವು ತೇಜಸ್ಸನ್ನೂ ಬ್ರಹ್ಮವರ್ಚಸ್ಸನ್ನೂ ಸೂಚಿಸುವುದು. ಪೂರ್ವದಿಕ್ಕಿನಲ್ಲಿ ಸೂರ್ಯನು ಉದಯಿಸುವುದರಿಂದ ಪೂರ್ವದಿಕ್ಕಿನಲ್ಲಿ ಸೂರ್ಯನ ತೇಜಸ್ಸು ಸ್ಥಾಪಿತವಾಗಿ ಇರುವುದು. ಪೂರ್ವಾಭಿಮುಖವಾಗಿ ಕುಳಿತು ಗಾಯತ್ರೀ ಮೊದಲಾದ ಮಂತ್ರಗಳ ಜಪವನ್ನು ಮಾಡುವುದರಿಂದ ಬ್ರಹ್ಮವರ್ಚಸ್ಸು ಸಿದ್ಧಿಸುವುದು. ಇವೆರಡನ್ನೂ ಬಯಸುವವನು ಪೂರ್ವಾಭಿಮುಖವಾಗಿ ಹೋಮ ಮಾಡಬೇಕು. ಆದ್ದರಿಂದ ವಿವೇಕಿಯಾದ ಯಾವ ಪುರುಷನು ಯಜ್ಞಮಾಡುವಾಗ ಪ್ರಯಾಜಾಹುತಿಗಳನ್ನು ಪೂರ್ವಾಭಿಮುಖವಾಗಿ ಕುಳಿತು ಮಾಡುವನೋ ಅವನು ತೇಜಸ್ಸಿನಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಶೋಭಿಸುವನು.

**ಯೋಽನ್ನಾದ್ಯಮಿಚ್ಛೇತ್ಪ್ರಯಾಜಾಹುತಿಭಿರ್ದಕ್ಷಿಣಾ ಸ ಇಯಾದ-ನ್ನಾದೋ ವಾ ಏಷೋಽನ್ನಪತಿರ್ಯದಗ್ನಿಃ ಅನ್ನಾದೋಽನ್ನಪತಿ-ರ್ಭವತ್ಯಶ್ನುತೇ ಪ್ರಜಯಾನ್ನಾದ್ಯಂ ಯ ಏವಂ ವಿದ್ವಾ-ನ್ದಕ್ಷಿಣೈತಿ ॥**

ಅನ್ನಾದ್ಯಕಾಮಸ್ಯ ದಕ್ಷಿಣಾಪವರ್ಗತ್ವಂ ವಿಧತ್ತೇ । ದಕ್ಷಿಣಸ್ಯಾಂ ದಿಶ್ಯವಸ್ಥಿತೋ ಯೋಽಗ್ನಿಃ ಸೋಽಗ್ನಿರನ್ನಾದಃ । ಭಕ್ಷಿತಸ್ಯಾನ್ನಸ್ಯೋದರಾಗ್ನಿನಾ ಜೀರ್ಯಮಾಣತ್ವಾತ್ತಸ್ಯೈಷ್ವ-

ವಸ್ಥಾಯ ವ್ರೀಹ್ಯಾದಿಪಾಕಹೇತುತ್ವಾತ್ಸ್ಥಾಲ್ಯಾದಿಷ್ವವಸ್ಥಾಯೌದನಪಾಕಹೇತುತ್ವಾದನ್ನಪತಿ-ತ್ವಂ । ಅತೋಽನ್ನಕಾಮಸ್ಯ ದಕ್ಷಿಣಾಪವರ್ಗತ್ವಂ ಯುಕ್ತಂ । ವೇದನಂ ಪ್ರಶಂಸತಿ ।

ಉದರದಲ್ಲಿರುವ ಅನ್ನಾದ್ಯಾಹಾರಗಳನ್ನು ಅಗ್ನಿಯು (ಜಾಠರಾಗ್ನಿಯು) ಪಚನವಾಗುವಂತೆ ಮಾಡುವನು. ಮತ್ತು ಸಸ್ಯಾದಿಗಳಲ್ಲಿರುವ ಧಾನ್ಯಾದಿಗಳನ್ನು ಪಕ್ವವಾಗುವಂತೆ (ಮಾಗುವಂತೆ) ಮಾಡುವನು. ಸ್ಥಾಲ್ಯಾದಿಪಾತ್ರೆಗಳಲ್ಲಿ ಅಕ್ಕಿಯನ್ನು ಹಾಕಿ ಬೇಯಿಸುವಾಗ ಅನ್ನವಾಗುವಂತೆ ಮಾಡುವನು. ಅಗ್ನಿಯು ಈ ಮೂರು ವಿಧವಾದ ಕಾರ್ಯಗಳನ್ನು ಮಾಡುವುದರಿಂದ ಅನ್ನಾದ (ಅನ್ನವನ್ನು ಭಕ್ಷಿಸುವವನು) ಅನ್ನಪತಿ ಎಂದು ಹೇಳಲ್ಪಡುವನು. ಆದ್ದರಿಂದ ಅನ್ನಾದ್ಯಾಹಾರಗಳನ್ನು ಯಥೇಚ್ಛವಾಗಿ ಬಯಸುವ ಪುರುಷನು ದಕ್ಷಿಣದಿಕ್ಕಿನಲ್ಲಿ ಅವಸ್ಥಿತವಾಗಿರುವ ಅಗ್ನಿಯಲ್ಲಿ ಪ್ರಯಾಜಾಹೋಮಗಳನ್ನು ಮಾಡಬೇಕು. ವಿವೇಕಿಯಾದ ಯಾವ ಪುರುಷನು ದಕ್ಷಿಣದಿಕ್ಕಿನಲ್ಲಿ ಈ ಪ್ರಯಾಜಾಹುತಿಗಳನ್ನು ಮಾಡುವನೋ ಅವನು ಅನ್ನಾದ್ಯಾಹಾರಗಳನ್ನು ಸಂಪಾದಿಸಿ ಅವುಗಳಿಗೆ ಅಧಿಪತಿಯಾಗಿರುವುದಲ್ಲದೆ ತಾನೂ ಸಹ ಅಜೀರ್ಣಾದಿರೋಗಬಾಧೆಗಳಿಲ್ಲದಂತೆ ಯಥೇಷ್ಟವಾಗಿ ಆಹಾರಾದಿಗಳನ್ನು ಭುಜಿಸುವ ಶಕ್ತಿಯನ್ನೂ ಪಡೆಯುವನು.

ಯಃ ಪಶೂನಿಚ್ಛೇತ್ಪ್ರಯಾಜಾಹುತಿಭಿಃ ಪ್ರತ್ಯಙ್ಙ ಇಯಾತ್ಪಶವೋ
ವಾ ಏತೇ ಯದಾಪಃ ಪಶುಮಾನ್ಭವತಿ ಯ ಏವಂ ವಿದ್ವಾನ್ಪ್ರ-
ತ್ಯಙ್ಙೇತಿ ॥

ಪಶುಕಾಮಸ್ಯ ಪ್ರತ್ಯಗಪವರ್ಗತ್ವಂ ವಿಧತ್ತೇ । ಪ್ರತ್ಯಗ್ದಿಶ್ಯವಸ್ಥಿತಸ್ಯ ಸೋಮಸ್ಯ ಸಂಬಂ-ಧಿನ್ಯ ಆಪ ಇತಿ ಪೂರ್ವಮುಕ್ತಂ ತಾಸಾಂ ಚಾಪಾಂ ಪಾನದ್ವಾರೇಣ ತೃಣೋತ್ಪಾದನದ್ವಾರೇಣ ವಾ ಪಶೂಪಕಾರಿತ್ವಾತ್ಪಶುತ್ವಮತಃ ಪಶುಕಾಮಸ್ಯ ತಥಾವಿಧಪ್ರತ್ಯಗಪವರ್ಗತ್ವಂ ಯುಕ್ತಂ । ವೇದನಂ ಪ್ರಶಂಸತಿ ।

ಪಶ್ಚಿಮದಿಕ್ಕಿನಲ್ಲಿ ಸೋಮದೇವತೆಗೆ ಸಂಬಂಧಪಟ್ಟ ಉದಕಸಮೃದ್ಧಿಯಿರುವುದು. ಉದಕಸಮೃದ್ಧಿಯಿಂದ ಸಸ್ಯತೃಣಾದಿಗಳೂ ಅದರಿಂದ ಪಶುಸಮೃದ್ಧಿಯೂ ಉಂಟಾಗುವವು. ಗೋವು ಮೊದಲಾದ ಪಶುಸಂಪತ್ತನ್ನು ಬಯಸುವ ಯಜಮಾನನು ಪ್ರಯಾಜಾಹುತಿಗಳನ್ನು ಪಶ್ಚಿಮದಿಕ್ಕಿನಲ್ಲಿ ಮಾಡಬೇಕು. ಯಾವ ವಿವೇಕಿಯಾದ ಪುರುಷನು ಪ್ರಶ್ಚಿಮದಿಕ್ಕಿನಲ್ಲಿ ಪ್ರಯಾಜಾಹುತಿಗಳನ್ನು ನೆರವೇರಿಸುವನೋ ಅವನು ವಿಶೇಷವಾಗಿ ಪಶುಸಂಪತ್ತನ್ನು ಪಡೆದು ಸುಖಿಸುವನು.

ಯಃ ಸೋಮಪೀಥಮಿಚ್ಛೇತ್ಪ್ರಯಾಜಾಹುತಿಭಿರುದಙ್ಙ ಇಯಾದು-
ತ್ತರಾ ಹ ವೈ ಸೋಮೋ ರಾಜಾ ಪ್ರ ಸೋಮಪೀಥಮಾಪ್ನೋತಿ
ಯ ಏವಂ ವಿದ್ವಾನ್ ಉದಙ್ಙೇತಿ ॥

ಅಹೀನಾದ್ಯುತ್ತರಕ್ರತುಷು ಸೋಮಪಾನಂ ಕಾಮಯಮಾನಸ್ಯೋತ್ತರಾಪವರ್ಗತ್ವಂ ವಿಧತ್ತೇ । ಯಃ ಸೋಮವಲ್ಲೀರೂಪೋ ರಾಜಮಾನತ್ವೇನ ರಾಜಾ ತಸ್ಯೋತ್ತರಸ್ಯಾಂ ದಿಶಿ ಪ್ರಭೂತತ್ವಾತ್ತದ್ರೂಪತ್ವಮತಃ ಸೋಮಪಾನದ್ವಾರಾಸ್ಯೋತ್ತರಾಪವರ್ಗತ್ವಂ ಯುಕ್ತಂ । ವೇದನಂ ಪ್ರಶಂಸತಿ ।

ಸೋಮಲತೆಗಳು ಉತ್ತರದಿಕ್ಕಿನಲ್ಲಿ ವಿಶೇಷವಾಗಿ ಬೆಳೆಯುವವು. ಅವು ಪ್ರಕಾಶಮಾನವಾಗಿರುವುದರಿಂದ ಸೋಮ ಲತೆಗೆ (ಅಥವಾ ರಸಕ್ಕೆ) ರಾಜನೆಂಬ ಗೌರವಪದದಿಂದ ಕರೆಯುವುದು ರೂಢಿಯಾಗಿದೆ. ಯಾವ ಯಜಮಾನನು ಸೋಮಪಾನ ವನ್ನು ಮಾಡಬೇಕೆಂದು ಬಯಸುವನೋ ಅವನು ಉತ್ತರಾಭಿಮುಖವಾಗಿ ಪ್ರಯಾಜಾಹುತಿಗಳನ್ನು ಮಾಡಬೇಕು. ಏಕೆಂದರೆ ಯಾವ ಪುರುಷನು ಉತ್ತರಾಭಿಮುಖವಾಗಿ ಪ್ರಯಾಜಾಹುತಿಗಳನ್ನು ನೀಡುವನೋ ಅವನು ಸೋಮಯಾಗವನ್ನು ಮಾಡಿ ಸೋಮಪಾನಮಾಡಲು ಸಮರ್ಥನಾಗುವನು.

**ಸ್ವರ್ಗ್ಯೈರ್ವೋರ್ಧ್ವಾ ದಿಕ್ಸರ್ವಾಸು ದಿಕ್ಷು ರಾಧ್ನೋತಿ**

**ಸ್ವರ್ಗಕಾಮಸ್ಯಾಹವನೀಯೇ ಪ್ರಯಾಜಹೋಮವಿಧಿಮರ್ಥವಾದೇನೋನ್ನಯತಿ। ಯೇಯಮೂರ್ಧ್ವಾ ದಿಕ್ಸ್ವರ್ಗಾಯ ಹಿತೈವ ತಸ್ಮಾತ್ಸ್ವರ್ಗಕಾಮ ಊರ್ಧ್ವಾಂ ದಿಶಂ ಭಾವಯ-ನ್ನಾಹವನೀಯಮಧ್ಯೇ ಪ್ರಯಾಜಾನ್ಯಜೇತೇತ್ಯರ್ಥಃ । ಯಥಾ ಸ್ವರ್ಗಂ ಪ್ರಾಪ್ನೋತಿ ತಥಾ ಸರ್ವಾಸು ದಿಕ್ಷು ಸ ಸಮೃದ್ಧಶ್ಚ ಭವತ್ಯತಃ ಸಮೃದ್ಧಿಕಾಮೋ ಮಧ್ಯೇ ಯಜೇತೇತ್ಯೇವಗಂತವ್ಯಂ।**

ಸ್ವರ್ಗಲೋಕವು ಊರ್ಧ್ವದಿಕ್ಕಿನಲ್ಲಿ ಇರುವುದು. ಸ್ವರ್ಗಕ್ಕೆ ಹೋಗಬೇಕೆಂದು ಬಯಸುವ ಯಜಮಾನನು ಊರ್ಧ್ವ ದಿಕ್ಕನ್ನು ಮನಸ್ಸಿನಲ್ಲಿ ಭಾವಿಸುತ್ತಾ ಆಹವನೀಯಾಗ್ನಿಮಧ್ಯದಲ್ಲಿ ಪ್ರಯಾಜಾಹುತಿಗಳನ್ನು ಅರ್ಪಿಸಬೇಕು. ಸ್ವರ್ಗದಲ್ಲಿ ಸಮಸ್ತ ಇಷ್ಟಾರ್ಥಗಳೂ ನೆರವೇರುವವು. ಅದರಂತೆ ಈ ಯಜಮಾನನಿಗೆ ಸಮಸ್ತದಿಕ್ಕುಗಳಲ್ಲಿಯೂ (ಸಮಸ್ತ ವಿಷಯಗಳಲ್ಲಿಯೂ) ಸಮೃದ್ಧಿಯುಂಟಾಗುವುದು. ಆದ್ದರಿಂದ ಸಮೃದ್ಧಿಯನ್ನು ಬಯಸುವ ಪುರುಷನು ಸ್ವರ್ಗವಿರುವ ಊರ್ಧ್ವದಿಕ್ಕನ್ನು ಮನಸ್ಸಿನಲ್ಲಿ ಭಾವಿಸುತ್ತಾ ಆಹವನೀಯಾಗ್ನಿಮಧ್ಯದಲ್ಲಿ ಪ್ರಯಾಜಾಹುತಿಗಳನ್ನು ಅರ್ಪಿಸಬೇಕು.

**ಸಮ್ಯಂಚೋ ವಾ ಇಮೇ ಲೋಕಾಃ ಸಮ್ಯಂಚೋಽಸ್ಮಾ ಇಮೇ ಲೋಕಾಃ ಶ್ರಿಯೈ ದೀದ್ಯತಿ ಯ ಏವಂ ವೇದ ॥**

**ವೇದನಂ ಪ್ರಶಂಸತಿ। ಇಮೇ ಭೂರಾದಯಸ್ತ್ರಯೋ ಲೋಕಾಸ್ತೇ ಸಮ್ಯಂಚಃ ಸ್ವೋಚಿ-ತಭೋಗಪ್ರದಾ ಅತೋ ಯ ಏವಮಾಹವನೀಯಮಧ್ಯೇ ಹೋಮಂ ವೇದಾಸ್ಮೈ ಯಜಮಾ-ನಾಯ ಭೂರಾದಯ ಇಮೇ ಲೋಕಾಃ ಸಮ್ಯಂಚಃ ಸ್ವಸ್ವೋಚಿತಭೋಗಪ್ರದಾಃ ಸಂತಃ ಶ್ರಿಯೈ ಧನಧಾನ್ಯಾದಿಸಂಪದೇ ದೀದ್ಯತಿ ಪ್ರಕಾಶಂತೇ।**

ಪೃಥಿವ್ಯಾದಿ ಮೂರು ಲೋಕಗಳಿಗೆ ಪರಸ್ಪರ ಸಂಬಂಧವಿದ್ದು ಅವುಗಳು ನಾನಾ ವಿಧವಾದ ಭೋಗವಸ್ತುಗಳಿಂದ ತುಂಬಿರುವವು. ಯಾವ ಪುರುಷನು ಆಹವನೀಯಮಧ್ಯದಲ್ಲಿ ಪ್ರಯಾಜಾಹುತಿಗಳನ್ನು ಅರ್ಪಿಸುವನೋ ಮತ್ತು ಆ ವಿಷಯ ವನ್ನು ತಿಳಿದಿರುವನೋ ಆ ಪುರುಷನು ಈ ಮೂರು ಲೋಕಗಳಲ್ಲಿರುವ ಸುಖಪ್ರದವಾದ ಧನಧಾನ್ಯಾದಿ ಭೋಗವಸ್ತುಗಳಿಂದ ಕೂಡಿ ಸುಖಿಸುತ್ತಾ ಪ್ರಕಾಶಿಸುವನು.

ಪ್ರಯಾಜಾಮಂತ್ರಗಳ ವಿಷಯದಲ್ಲಿ ಗ್ರಂಥಾಂತರಗಳಲ್ಲಿ ಹೇಳಿರುವುದನ್ನು ಸ್ವಲ್ಪ ವಿವರಿಸುವುದು ಆವಶ್ಯಕವು. ತೈತ್ತಿರೀಯಸಂಹಿತೆಯಲ್ಲಿ—

**ಸಮಿಧೋ ಯಜತಿ ವಸಂತಮೇವರ್ತೂನಾಮುವ ರುಂಧೇ ತನೂನಪಾತಂ ಯಜತಿ ಗ್ರೀಷ್ಮಮೇವಾವರುಂಧ ಇಡೋ ಯಜತಿ ವರ್ಷಾ ಏವಾವ ರುಂಧೇ ಬರ್ಹಿರ್ಯಜತಿ ಶರದಮೇವಾವ ರುಂಧೇ ಸ್ವಾಹಾಕಾರಂ ಯಜತಿ ಹೇಮಂತಮೇವಾವ ರುಂಧೇ ತಸ್ಮಾತ್ಸ್ವಾಹಾಕೃತಾ ಹೇಮನ್ ಪಶವೋಽವ ಸೀದಂತಿ ಸಮಿಧೋ ಯಜತ್ಯುಷಸ ಏವ ದೇವತಾನಾಮುವ ರುಂಧೇ ತನೂನಪಾತಂ ಯಜತಿ ಯಜ್ಞಮೇವಾವ ರುಂಧ ಇಡೋ ಯಜತಿ ಪಶೂನೇವಾವ ರುಂಧೇ ಬರ್ಹಿರ್ಯಜತಿ ಪ್ರಜಾಮೇವಾವ ರುಂಧೇ ಸಮಾನಯತ ಉಪಭೃತಸ್ತೇಜೋ ವಾ ಆಜ್ಯಂ ಪ್ರಜಾ ಬರ್ಹಿಃ ಪ್ರಜಾಸ್ವೇವ ತೇಜೋ ದಧಾತಿ ಸ್ವಾಹಾಕಾರಂ ಯಜತಿ ವಾಚಮೇವಾರುಂಧೇ ದಶ ಸಂಪದ್ಯಂತೇ ದಶಾಕ್ಷರಾ ವಿರಾಡನ್ನಂ ವಿರಾಡ್ವಿರಾಜೈವಾನ್ನಾದ್ಯಮುವ ರುಂಧೇ ಸಮಿಧೋ ಯಜತ್ಯಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ ತನೂನಪಾತಂ ಯಜತಿ ಯಜ್ಞ ಏವಾಂತರಿಕ್ಷೇ ಪ್ರತಿತಿಷ್ಠತೀಡೋ ಯಜತಿ ಪಶುಷ್ವೇವ ಪ್ರತಿ ತಿಷ್ಠತಿ ಬರ್ಹಿರ್ಯಜತಿ ಯ ಏವ ದೇವಯಾನಾಃ ಪಂಥಾನಸ್ತೇಷ್ವೇವ ಪ್ರತಿ ತಿಷ್ಠತಿ ಸ್ವಾಹಾಕಾರಂ ಯಜತಿ ಸುವರ್ಗ ಏವ ಲೋಕೇ ಪ್ರತಿತಿಷ್ಠತಿ ||**

(ತೈ. ಸಂ. ೨-೯-೧-೧,೨,೩)

ಐತರೇಯಬ್ರಾಹ್ಮಣದಲ್ಲಿ ಈ ಪ್ರಯಾಜಾಹುತಿಗಳನ್ನು ಯಾವಯಾವ ದಿಕ್ಕಿನಲ್ಲಿ ಮಾಡಿದರೆ ಯಾವಯಾವ ಫಲಗಳುಂಟಾಗುವುವೆಂಬುದನ್ನು ಮೇಲೆ ತಿಳಿಸಿದೆ. ಮೇಲಿನ ತೈ. ಸಂ. ಮಂತ್ರದಲ್ಲಿ ಐದು ಪ್ರಯಾಜದೇವತೆಗಳಲ್ಲಿ ಪ್ರತಿಯೊಂದು ದೇವತೆಯೂ ಯಾವ ಫಲವನ್ನು ನೀಡುವುದೆಂಬ ವಿಷಯವನ್ನು ಮೂರು ವಿಧವಾಗಿ ತಿಳಿಸಿದೆ.

ಈ ಪ್ರಯಾಜಮಂತ್ರಗಳು ಯಾವವು ಎಂಬುದನ್ನು ತೈತ್ತಿರೀಯ ಬ್ರಾಹ್ಮಣದಲ್ಲಿ ತಿಳಿಸಿದೆ—**ಸಮಿಧೋ ಅಗ್ನ ಆಜ್ಯಸ್ಯ ವಿಯಂತು | ತನೂನಪಾದಗ್ನ ಆಜ್ಯಸ್ಯ ವೇತು | ಇಡೋ ಅಗ್ನ ಆಜ್ಯಸ್ಯ ವಿಯಂತು | ಬರ್ಹಿರಗ್ನ ಆಜ್ಯಸ್ಯ ವೇತು | ಸ್ವಾಹಾಗ್ನಿಂ ||** ಈ ಐದೂ ಪಂಚಪ್ರಯಾಜಮಂತ್ರಗಳು. ಐದನೆಯ ಮಂತ್ರವಾದ **ಸ್ವಾಹಾಗ್ನಿಂ** ಎಂಬ ಮಂತ್ರಗಳಲ್ಲಿ ಇತರ ದೇವತೆಗಳೂ ಸೇರಿರುವುದರಿಂದ ಅವರನ್ನು ಸೇರಿಸಿ ಹೋಮಮಾಡುವುದು ರೂಢಿಯಾಗಿದೆ ಅವರು ಯಾರೆಂಯರೆ—**ಸ್ವಾಹಾ ಸೋಮಂ | ಸ್ವಾಹಾಗ್ನಿಂ | ಸ್ವಾಹಾ ಪ್ರಜಾಪತಿಂ | ಸ್ವಾಹಾಗ್ನೀಷೋಮೌ | ಸ್ವಾಹೇಂದ್ರಾಗ್ನೀ | ಸ್ವಾಹೇಂದ್ರಂ | ಸ್ವಾಹಾ ಮಹೇಂದ್ರಂ | ಸ್ವಾಹಾ ದೇವಾಗ್ಂ ಆಜ್ಯಪಾನ್ | ಸ್ವಾಹಾಗ್ನಿಗ್ಂ ಹೋತ್ರಾಜ್ಜುಷಾಣಾಃ ||** ಇವುಗಳ ಜತೆಗೆ ಕೊನೆಯಲ್ಲಿ **ಅಗ್ನ ಆಜ್ಯಸ್ಯ ವೇತು** ಅಥವಾ **ವಿಯಂತು** ಎಂದು ವಚನಾನುಸಾರವಾಗಿ ಸೇರಿಸಿ ಹೇಳಬೇಕು.

ಈ ಹೋಮಗಳನ್ನು ಆಜ್ಯದ್ರವ್ಯದಿಂದ ಹೋಮಮಾಡಬೇಕು ಎಂದು **ಆಜ್ಯೇನ ಪ್ರಯಾಜಾ ಇಜ್ಯಂತೆ** (ತೈ.ಸಂ. ೯-೩-೧೧-೯) ತೈತ್ತಿರೀಯ ಶ್ರುತಿಯು ನಿರ್ದೇಶಿಸುವುದು ಮತ್ತು ಈ ಪ್ರಯಾಜಮಂತ್ರಗಳನ್ನು ಹೋಮದಲ್ಲಿ ಪಠಿಸುವಾಗ ವಿಭಕ್ತಿಪೂರ್ವಕವಾಗಿ ಪಠಿಸಬೇಕು. ತೈತ್ತಿರೀಯಸಂಹಿತೆಯಲ್ಲಿ—**ವಿಭಕ್ತಿಮುಕ್ತ್ವಾ ಪ್ರಯಾಜೇನ ವಷಟ್‌ಕರೋತಿ** (ತೈ. ಸಂ. ೧-೫-೨-೩) ಎಂದು ಹೇಳಿರುವುದು—**ಆಪಸ್ತಂಬಶ್ರೌತಸೂತ್ರದಲ್ಲಿಯೂ ಅಗ್ನಾಗ್ನೇಽಗ್ನಾವಗ್ನೇಽಗ್ನಿನಾಗ್ನೇಽಗ್ನಿಮಗ್ನ ಇತಿ ಚತುರ್ಷು ಪ್ರಯಾಜೇಷು ಚತಸ್ರೋ ವಿಭಕ್ತೀರ್ದಧಾತಿ** (ಆಪ. ಶ್ರೌ. ಸೂ. ೫-೨೮-೯) ಎಂದು ಹೇಳಿರುವುದು. ಪತಂಜಲಿ ಮಹರ್ಷಿಯು ತಮ್ಮ ಮಹಾಭಾಷ್ಯದಲ್ಲಿಯೂ—**ವಿಭಕ್ತಿಂ ಕುರ್ವಂತಿ | ಯಾಜ್ಞಿಕಾಃ ಪಠಂತಿ | ಪ್ರಯಾಜಾಃ ಸವಿಭಕ್ತಿಕಾಃ ಕರ್ತವ್ಯಾ ಇತಿ** (ಪ. ಸೂ. ೨-೨-೧-೨೭) ಎಂದರೆ ನಾಲ್ಕು ಪ್ರಯಾಜಮಂತ್ರ

ಗಳಲ್ಲಿ ಕ್ರಮವಾಗಿ ಅಗ್ನಾಗ್ನೇ ಅಗ್ನಾವಗ್ನೇ, ಅಗ್ನಿನಾಗ್ನೇ ಅಗ್ನಿಮಗ್ನೇ ಎಂದು ಸೇರಿಸಿ ಹೇಳಬೇಕು. ಹೀಗೆ ಸೇರಿಸಿದರೆ ಆ ಮಂತ್ರಗಳು— **ಸಮಿಧೋ ಅಗ್ನಾಗ್ನ ಆಜ್ಯಸ್ಯ ವಿಯಂತು ವೌಷಟ್** (ಇಲ್ಲಿ ವಷಟ್ಕಾರವನ್ನು ಸೇರಿಸಿದೆ) ‖ **ತನೂನ-ಪಾದಗ್ನಾವಗ್ನ ಆಜ್ಯಸ್ಯ ವೇತು ವೌಷಟ್** ‖ **ಇಡೋ ಅಗ್ನಿನಾಗ್ನ ಆಜ್ಯಸ್ಯ ವಿಯಂತು ವೌಷಟ್** ‖ **ಬರ್ಹಿ-ರಗ್ನಿಮಗ್ನೇ ಆಜ್ಯಸ್ಯ ವೇತು ವೌಷಟ್** ‖ ಎಂದಾಗುವವು.

ಇಲ್ಲಿ ವೇತು ವಿಯಂತು ಎಂಬ ಶಬ್ದಗಳು ಏಕವಚನ ಬಹುವಚನಗಳನ್ನು ಸೂಚಿಸುವವು. ಶತಪಥಾದಿಬ್ರಾಹ್ಮಣ ಗಳಲ್ಲಿಯೂ ಇತರ ಶಾಖೆಗಳಲ್ಲಿಯೂ ವಿಯಂತು ಎಂಬ ಶಬ್ದಕ್ಕೆ ಬದಲಾಗಿ ವ್ಯಂತು ಎಂಬ ಶಬ್ದಪ್ರಯೋಗವು ಕಂಡುಬರುವುದು. **ವ್ಯಂತು ವೇತ್ವಿತಿ ಪ್ರಯಾಜಾನಾಂ ರೂಪಂ** (ಶ. ಬ್ರಾ. ១-៥-១-១៤). ಇದು ವ್ಯಾಕರಣದ ಪ್ರಕಾರ ರೂಪಭೇದಗಳೇ ವಿನಹ ಇದರಿಂದ ಅರ್ಥವ್ಯತ್ಯಾಸವಾಗುವುದಿಲ್ಲ.

### ಪಥ್ಯಾಂ ಯಜತಿ ಯತ್ಪಥ್ಯಾಂ ಯಜತಿ ವಾಚಮೇವ ತದ್ಯಜ್ಞಮುಖೇ ಸಂಭರತಿ

**ಇತ್ಥಂ ಕಾಮ್ಯಾನ್ಪ್ರಯಾಜಹೋಮಪ್ರಕಾರಾನ್ನಿಧಾಯ ಪೂರ್ವೋಕ್ತಪ್ರಾಯಣೀಯ ದೇವತಾಃ ಕ್ರಮೇಣ ಸ್ತೋತುಂ ಪ್ರಥಮದೇವತಾಂ ಪ್ರಶಂಸತಿ । ಪಥ್ಯಾಭಿಧಾಂ ದೇವತಾಂ ಯಜತೀತಿ ಪೂರ್ವೋಕ್ತವಿಧಿರತ್ರ ಸ್ಮಾರಿತಃ ಪ್ರಯಾಜವಿಧಿಭಿರ್ವ್ಯವಹಿತತ್ವಾತ್ । ಸ್ತೋತವ್ಯಸ್ಯ ಸ್ಮಾರಣಮಪೇಕ್ಷಿತಂ । ಸ್ಮಾರಿತಸ್ಯ ಸ್ತುತಾವನ್ವೇತುಂ ಪುನರನುವಾದಃ । ಪಥ್ಯಾಯಾಗೇನ ಯಜ್ಞಮುಖೇ ಸೋಮಯಾಗಪ್ರಾರಂಭೇ ವಾಚಮೇವ ಮಂತ್ರರೂಪಾಂ ಸಂಭರತಿ ಸಂಪಾದ-ಯತಿ । ಯತೋ ಯಜ್ಞಾನುಷ್ಠಾನರೂಪಾಯ ಮಾರ್ಗಾಯ ಹಿತಾ ಪಥ್ಯಾ ಮಂತ್ರರೂಪಾ ವಾಕ್ತಾದೃಶ್ಯತಃ ಪಥ್ಯಾಯಾಗ ಏವ ವಾಕ್ಸಂಪಾದನಂ ।**

ಇದುವರೆಗೂ ಕಾಮ್ಯರೂಪವಾದ ಪ್ರಯಾಜಹೋಮಪ್ರಕಾರಗಳನ್ನು ಹೇಳಿ ಈಗ ಹಿಂದೆ ವಿವರಿಸಿದ ಪಥ್ಯಾ ಮೊದಲಾದ ಪ್ರಾಯಣೀಯೇಷ್ಟಿದೇವತೆಗಳನ್ನು ಪುನಃ ಪ್ರಶಂಸಿಸಲಾಗುವುದು. ಪ್ರಾಯಣೀಯೇಷ್ಟಿಯಲ್ಲಿ ದಿಕ್ಪರಿಜ್ಞಾನಾರ್ಥವಾಗಿ ಪಥ್ಯಾದಿ ಪಂಚದೇವತೆಗಳನ್ನುದ್ದೇಶಿಸಿ ಹೋಮಮಾಡಬೇಕೆಂಬ ವಿಷಯವನ್ನು ಹಿಂದೆಯೇ ತಿಳಿಸಲಾಗಿದೆ. ಈಗ ಆ ವಿಷಯವನ್ನೇ ಮುಂದುವರಿಸಲಾಗುವುದು. ಪಥ್ಯಾಸ್ವಸ್ತಿ ಎಂಬ ದೇವತೆಯನ್ನುದ್ದೇಶಿಸಿ ಯಜ್ಞಾರಂಭದಲ್ಲಿ ಹೋಮಮಾಡುವುದರಿಂದ ಯಜ್ಞಕ್ಕೆ ಒಂದು ರೂಪವನ್ನು ಕೊಟ್ಟು ಅದನ್ನು ವಾಕ್ಯಗಳಿಂದ ಎಂದರೆ ಮಂತ್ರರೂಪವಾದ ವಾಕ್ಯಗಳಿಂದ ಪ್ರಾರಂಭಿಸಲಾಯಿತು ಎಂದು ತಿಳಿಯಬೇಕು ಎಂದರೆ ಪಥ್ಯಾದೇವತೆಯನ್ನು ಪ್ರಶಂಸಿಸಿ ಯಜ್ಞಾರಂಭದಲ್ಲಿ ಮಾಡುವ ಹೋಮದಿಂದ ಮತ್ತು ಆ ದೇವತಾಕವಾದ ಮಂತ್ರಪಠನೆಯಿಂದ ಸೋಮಯಾಗವು ಪ್ರಾರಂಭವಾಯಿತು.

### ಪ್ರಾಣಾಪಾನಾವಗ್ನೀಷೋಮೌ ಪ್ರಸವಾಯ ಸವಿತಾ ಪ್ರತಿಷ್ಠಿತ್ಯಾ ಅದಿತಿಃ

**ಅಗ್ನ್ಯಾದಿಕಾಶ್ಚತಸ್ರೋ ದೇವತಾಃ ಪ್ರಶಂಸತಿ । ಮುಖನಾಸಿಕಾಭ್ಯೋ ಬಹಿಃ ಸಂಚರ-ನ್ನುಚ್ಛ್ವಾಸರೂಪೋ ವಾಯುಃ ಪ್ರಾಣಃ । ಸ ಹ್ಯೌಷ್ಣ್ಯಂ ಶರೀರೇ ಜನಯತಿ । ತತೋಽಗ್ನೇಃ**

**ಪ್ರಾಣರೂಪತ್ವಂ ಪ್ರತಿನಿಕೃತ್ಯ ಮುಖನಾಸಿಕಾಭ್ಯಾಮಂತಃ ಸಂಚರನ್ವಾಯುರಪಾನಃ । ಸ ಚ ಶರೀರೇ ಶೈತ್ಯಂ ಜನಯತೀತಿ ನಿಃಶ್ವಾಸಸ್ಯ ಸೋಮರೂಪತ್ವಂ । ಸವಿತಾ ದೇವಃ ಪ್ರಸವಾಯ ಯಜ್ಞಕರ್ಮಣಿ ಪ್ರೇರಣಾಯೋಪಯುಜ್ಯತೇ । ಅದಿತಿರ್ಭೂಮಿಃ ಪ್ರತಿಷ್ಠಿತ್ಯೈ ಸ್ಥಿರಾವಸ್ಥಾನಾಯೋಪಯುಜ್ಯತೇ ।**

ಪಥ್ಯಾ ದೇವತೆಯ ಅನಂತರ ಮುಂದಿನ ಅಗ್ನ್ಯಾದಿ ನಾಲ್ಕು ದೇವತೆಗಳನ್ನು ಪ್ರಶಂಸಿಸಲಾಗುವುದು. ಮುಖ (ಬಾಯಿ) ನಾಸಿಕಗಳಿಂದ ಹೊರಗೆ ಬರುವ ಉಚ್ಛ್ವಾಸರೂಪವಾದ ವಾಯುವಿಗೆ ಪ್ರಾಣವೆಂದು ಹೆಸರು. ಏಕೆಂದರೆ ಈ ಪ್ರಾಣವಾಯುವು ಶರೀರದಲ್ಲಿ ಅವಶ್ಯಕವಾದ ಉಷ್ಣತ್ವವನ್ನು ಉತ್ಪನ್ನಮಾಡುವುದು. ಉಷ್ಣತ್ವವನ್ನು ಉತ್ಪತ್ತಿಮಾಡುವ ಶಕ್ತಿಯಿರುವುದರಿಂದ ಈ ಪ್ರಾಣವಾಯು ಅಗ್ನಿಯ ರೂಪವೆಂದು ಹೇಳಲ್ಪಡುವುದು. ಮುಖನಾಸಿಕಗಳ ಮೂಲಕ ಶರೀರದೊಳಕ್ಕೆ ಪ್ರವೇಶಿಸುವ ವಾಯುವಿಗೆ ಅಪಾನವೆಂದು ಹೆಸರು. ಈ ಅಪಾನವಾಯುವು ಶರೀರದಲ್ಲಿ ಶೈತ್ಯವನ್ನುಂಟುಮಾಡುವುದು. ಆದ್ದರಿಂದ ಈ ನಿಶ್ವಾಸವಾಯು ಸೋಮದ ರೂಪವೆಂದು ಹೇಳಲ್ಪಡುವುದು. ಯಜ್ಞದಲ್ಲಿ ನಡೆಯುವ ನಾನಾ ಕರ್ಮಗಳನ್ನು ಸವಿತೃದೇವನು ಪ್ರೇರಿಸುವನೆಂದು ಹೇಳಲ್ಪಡುವನು. ಯಜ್ಞಮಾಡುವ ಈ ಭೂಮಿಯೇ ಅದಿತಿಯ ರೂಪಾಂತರವು. ಮತ್ತು ಈ ಅದಿತಿಯಿಂದ ಯಜ್ಞಕ್ಕೆ ದೃಢವಾದ ಸ್ಥಿತಿಯುಂಟಾಗುವುದು. ಎಂದರೆ ಭೂಮಿಯಲ್ಲಿರುವ ಯಜ್ಞವೇದಿಯು ಯಜ್ಞಾನುಷ್ಠಾನಕ್ಕೆ ಸಹಾಯಕವಾಗುವುದು ಎಂದಭಿಪ್ರಾಯವು.



**ಪಥ್ಯಾಮೇವ ಯಜತಿ ಯತ್ಪಥ್ಯಾಮೇವ ಯಜತಿ ವಾಚೈವ ತದ್ಯಜ್ಞಂ ಪಂಥಾಮಪಿ ನಯತಿ ॥**

**ಪುನರಪಿ ಪ್ರಕಾರಾಂತರೇಣ ಪ್ರಥಮಾಂ ದೇವತಾಂ ಸ್ತೌತಿ । ಅತ್ರೈವಕಾರಃ ಪೂರ್ವೋಕ್ತಸ್ತುತಿವಿಶೇಷಸ್ತಸ್ಯಾಯಮರ್ಥಃ । ದೇವತಾಂತರಂ ಪರಿತ್ಯಜ್ಯ ಪ್ರಥಮಂ ಪಥ್ಯಾಮೇವ ಯಜತಿ । ಈದೃಶಂ ಯಜನಂ ಯದಸ್ತಿ ತತ್ತೇನ ಯಜನೇನ ಮಂತ್ರರೂಪಯಾ ವಾಚೈವ ಚ ಕ್ರಿಯಮಾಣಂ ಯಜ್ಞಂ ವೈಕಲ್ಯಪರಿಹಾರೇಣ ಸಮೀಚೀನಮನುಷ್ಠಾನಮಾರ್ಗಂ ಪ್ರಾಪಯತಿ ದೇವತಾಂತರಸ್ಯ ಪ್ರಥಮಯಾಗೇ ತು ನೈತತ್ಸಂಭವತೀತಿ ।**

ಪಥ್ಯಾದೇವತೆಯನ್ನು ಪ್ರಕಾರಾಂತರವಾಗಿ ಮತ್ತೆ ಸ್ತುತಿಸಲಾಗಿದೆ. ಇಲ್ಲಿ ಏವಶಬ್ದವು ಹಿಂದೆ ಹೇಳಿದ ವಿಷಯವನ್ನೇ ಮತ್ತೆ ತಿಳಿಸಲಾಗುವುದೆಂಬುದನ್ನು ಸೂಚಿಸುತ್ತದೆ. ಇತರ ದೇವತೆಗಳನ್ನೆಲ್ಲಾ ಬಿಟ್ಟು ಯಜ್ಞಪ್ರಾರಂಭದಲ್ಲಿ ಈ ಪಥ್ಯಾದೇವತೆಯನ್ನೇ ಸ್ತುತಿಸಿ ಹೋಮಮಾಡಬೇಕು. ಈ ವಿಧವಾದ ಹೋಮ ಮತ್ತು ಅದಕ್ಕೆ ಸಂಬಂಧಪಟ್ಟ ಮಂತ್ರೋಚ್ಚಾರಣೆಯಿಂದ ಈಗ ಮಾಡಬೇಕೆಂದಿರುವ ಯಜ್ಞಕ್ಕೆ ಒದಗಬಹುದಾದ ವಿಘ್ನಗಳನ್ನು ಪರಿಹರಿಸಿ ಯಜ್ಞವು ಸಮೀಚೀನವಾದ ಮಾರ್ಗದಲ್ಲಿ ಮುಂದುವರೆಯಲು ಸಹಾಯವಾಗುವುದು. ಇತರ ದೇವತೆಗಳನ್ನು ಯಜ್ಞಾರಂಭದಲ್ಲಿ ಸ್ತುತಿಸುವುದರಿಂದ ಈರೀತಿ ಯಜ್ಞವು ಮುಂದುವರೆಯಲು ಸಾಧ್ಯವಾಗುವುದಿಲ್ಲ.

**ಚಕ್ಷುಷೀ ಏವಾಗ್ನೀಷೋಮೌ ಪ್ರಸವಾಯ ಸವಿತಾ ಪ್ರತಿಷ್ಠಿತ್ಯಾ ಅದಿತಿಃ**

ದ್ವಿತೀಯಾದ್ಯಾಂ ದೇವತಾಂ ಪ್ರಶಂಸತಿ। ಅಗ್ನೀಷೋಮಯೋಸ್ತೇಜಸ್ವಿತ್ವಾದ್ದಿಗ್ವಿಶೇಷಜ್ಞಾನಹೇತುತ್ವಾಚ್ಚಕ್ಷುರಿಂದ್ರಿಯರೂಪತ್ವಂ। ಚತುರ್ಥಪಂಚಮದೇವತಯೋಸ್ತು ಪೂರ್ವೋಕ್ತಸ್ತುತಿರೇವ ಸಮೀಚೀನೇತ್ಯಭಿಪ್ರೇತ್ಯ ಪುನಸ್ತತ್ಪಾಠಃ।

ಅಗ್ನಿ ಮತ್ತು ಸೋಮ ಎಂಬ ದೇವತೆಗಳು ತೇಜಸ್ಸಿನಿಂದ ಬೆಳಗುವರು. ದಿಕ್ಪರಿಜ್ಞಾನವನ್ನು ಉಂಟುಮಾಡಲು ಸಮರ್ಥರು ಆದ್ದರಿಂದ ಈ ಅಗ್ನೀಷೋಮದೇವತೆಗಳು ಯಜ್ಞಕ್ಕೆ ಎರಡು ಕಣ್ಣುಗಳಂತಿರುವರು. ಹಿಂದೆಯೇ ಹೇಳಿದಂತೆ ಸವಿತೃದೇವನು ಯಜ್ಞದ ನಾನಾಕರ್ಮಗಳನ್ನು ಪ್ರೇರಿಸುವನು. ಯಜ್ಞವು ದೃಢವಾಗಿ ನೆಲೆಸಿ ಎಂದರೆ ನಿರ್ವಿಘ್ನವಾಗಿ ನಡೆಯುವಂತೆ ಅದಿತಿಯು ಅನುಗ್ರಹಿಸುವಳು.

ಚಕ್ಷುಷಾ ವೈ ದೇವಾ ಯಜ್ಞಂ ಪ್ರಾಜಾನಂಶ್ಚಕ್ಷುಷಾ ವಾ ಏತತ್ಪ್ರಜ್ಞಾಯತೇ ಯದಪ್ರಜ್ಞೇಯಂ ತಸ್ಮಾದಪಿ ಮುಗ್ಧಶ್ಚರಿತ್ವಾ ಯದೈವಾನುಷ್ಠ್ಯಾ ಚಕ್ಷುಷಾ ಪ್ರಜಾನಾತ್ಯಥ ಪ್ರಜಾನಾತಿ ॥

ಅಗ್ನೀಷೋಮಯೋಶ್ಚಕ್ಷುಃಸ್ವರೂಪತ್ವೇ ಕೋಽತಿಶಯ ಇತ್ಯಾಶಂಕ್ಯಾಹ । ದೇವಾಃ ಪುರಾ ಯಜ್ಞಪುರುಷ ಉತ್ಕ್ರಾಂತೇ ಸತ್ಯನ್ವಿಷ್ಯ ಚಕ್ಷುಷೈವ ಪ್ರಜ್ಞಾತವಂತಃ । ಲೋಕೇಽಪಿ ಯದ್ವಸ್ತು ಸಹಸಾ ಪ್ರಜ್ಞಾತುಮಶಕ್ಯಂ ತದೇತಚ್ಚಕ್ಷುಷೈವ ಪ್ರಜ್ಞಾಯತೇ । ತಸ್ಮಾದಿತ್ಯಾದಿನಾ ತದೇವೋದಾಹ್ರಿಯತೇ। ಯಸ್ಮಾದ್ದುರ್ಜ್ಞೇಯಮಪಿ ಚಕ್ಷುಷಾ ಜ್ಞಾತುಂ ಶಕ್ಯಂ ತಸ್ಮಾದೇವ ಕಾರಣಾಲ್ಲೋಕೇ ಮುಗ್ಧೋ ದಿಙ್ಮೋಹಂ ಪ್ರಾಪ್ತಃ ಪುರುಷೋ ವನೇಷು ಬಹುಧಾ ಚರಿತ್ವಾ ಯದೈವ ಯಸ್ಮಿನ್ನೇವ ಕಾಲೇಽನುಷ್ಠ್ಯಾ ಕೇನಾಪಿ ಪ್ರಯತ್ನವಿಶೇಷೇಣ ಪರ್ವತಾರೋಹಣಾದಿರೂಪೇಣ ಸೂರ್ಯೋದಯಾದಿರೂಪಂ ದಿಗ್ವಿಶೇಷಲಿಂಗಂ ಚಕ್ಷುಷಾ ಪ್ರಜಾನಾತಿ । ಅಥ ತದಾನೀಮೇವ ಗ್ರಾಮಾದಿಮಾರ್ಗಂ ಪ್ರಜಾನಾತಿ । ತಸ್ಮಾಚ್ಚಕ್ಷುಃಸ್ವರೂಪಾಭ್ಯಾಮಗ್ನೀಷೋಮಾಭ್ಯಾಂ ದಿಗ್ವಿಶೇಷಜ್ಞಾನಂ ಯುಕ್ತಂ।

ಅಗ್ನೀಷೋಮದೇವತೆಗಳು ಯಜ್ಞದ ಚಕ್ಷುಸ್ಸುಗಳು ಎಂಬುವುದನ್ನು ವಿಶದಪಡಿಸುವರು. ಪೂರ್ವದಲ್ಲಿ ಯಜ್ಞಪುರುಷನು ದೇವತೆಗಳನ್ನು ಬಿಟ್ಟು ಹೊರಟುಹೋದಾಗ ದೇವತೆಗಳು ಆ ಯಜ್ಞಪುರುಷನನ್ನು ನಾನಾಪ್ರದೇಶಗಳಲ್ಲಿ ಹುಡುಕುತ್ತಿರುವಾಗ ಕೊನೆಗೆ ಅವನನ್ನು ತಮ್ಮ ಕಣ್ಣುಗಳಿಂದ ನೋಡಿ ಕಂಡುಹಿಡಿದರು. ಲೋಕವ್ಯವಹಾರದಲ್ಲಿಯೂ ಸಹ ಯಾವುದಾದರೂ ವಸ್ತುವಿನ ಸ್ವರೂಪವನ್ನು ತಿಳಿದುಕೊಳ್ಳಬೇಕಾದರೆ ಕಣ್ಣುಗಳಿಂದ ನೋಡುವುದರಿಂದಲೇ ಸಾಧ್ಯವು. ಇತರರು ಆ ವಸ್ತುವನ್ನು ಎಷ್ಟೇ ವರ್ಣಿಸಿ ಹೇಳಿದರೂ ಆ ವಸ್ತುವಿನ ನಿಜವಾದ ಪರಿಜ್ಞಾನವುಂಟಾಗುವುದಿಲ್ಲ. ಕಣ್ಣಿನಿಂದ ಒಂದಾವರ್ತಿ ನೋಡಿದಮಾತ್ರಕ್ಕೆ ತಕ್ಷಣ ಅದರ ಸ್ವರೂಪಜ್ಞಾನವಾಗುವುದು. ಈ ವಿಷಯವನ್ನು ಒಂದು ಉದಾಹರಣೆಯ ಮೂಲಕ ವ್ಯಕ್ತಪಡಿಸುವರು. ಪ್ರಯಾಣಮಾಡುತ್ತಿರುವ ಒಬ್ಬ ಪುರುಷನು ಕಾಡಿನ ಮಧ್ಯದಲ್ಲಿ ಸಂಚರಿಸುತ್ತಿರುವಾಗ ದಾರಿತಪ್ಪಿದರೆ ನಾನಾಕಡೆ ಅಲೆದರೂ ಅವನಿಗೆ ಮಾರ್ಗಜ್ಞಾನವಾಗುವುದು ಕಷ್ಟವು. ಸರಿಯಾದ ಮಾರ್ಗವನ್ನು ಕಂಡುಹಿಡಿಯಬೇಕಾದರೆ ಸಮೀಪದಲ್ಲಿರುವ ಪರ್ವತ ಮೊದಲಾದ ಎತ್ತರ ಪ್ರದೇಶವನ್ನು ಹತ್ತಿಯಾಗಲಿ, ಸೂರ್ಯೋದಯದಿಂದ ಪೂರ್ವಾದಿ ದಿಕ್ಕುಗಳನ್ನಾಗಲಿ ತಿಳಿದು ಅನಂತರ ತನ್ನ ಕಣ್ಣುಗಳ ಸಹಾಯದಿಂದ ಸರಿಯಾದ ಮಾರ್ಗವನ್ನು ಕಂಡುಹಿಡಿದು ನಿರ್ದಿಷ್ಟಸ್ಥಾನಕೆ

ಹೋಗುವನು. ಆದ್ದರಿಂದ ಯಜ್ಞದ ಪರಿಜ್ಞಾನವಾಗಬೇಕಾದರೆ ಯಜ್ಞದ ಚಕ್ಷುಗಳಾದ ಅಗ್ನೀಷೋಮದೇವತೆಗಳ ಸಹಾಯವು ಅವಶ್ಯಕವಾಗಿ ಬೇಕೇಬೇಕು.

ಯದ್ವೈ ತದ್ದೇವಾ ಯಜ್ಞಂ ಪ್ರಾಜಾನನ್ನಸ್ಯಾಂ ವಾವ ತತ್ಪ್ರಾಜಾನನ್ನಸ್ಯಾಂ ಸಮಭರನ್ನಸ್ಯೈ ವೈ ಯಜ್ಞಸ್ತಾಯತೇಽಸ್ಯೈ ಕ್ರಿಯತೇಽಸ್ಯೈ ಸಂಭ್ರಿಯತ ಇಯಂ ಹ್ಯದಿತಿಸ್ತದುತ್ತಮಾಮದಿತಿಂ ಯಜತಿ ಯದುತ್ತಮಾಮದಿತಿಂ ಯಜತಿ ಯಜ್ಞಸ್ಯ ಪ್ರಜ್ಞಾತ್ಯೈ ಸ್ವರ್ಗಸ್ಯ ಲೋಕಸ್ಯಾನುಖ್ಯಾತ್ಯೈ ॥

ಅಥಾದಿತೇಃ ಪ್ರತಿಷ್ಠಾಹೇತುತ್ವಂ ಪ್ರಪಂಚಯತಿ । ಪೂರ್ವತ್ರ ಚಕ್ಷುಷಾ. ವೈ ದೇವಾ ಯಜ್ಞಂ ಪ್ರಾಜಾನನ್ನಿತಿ ಯದುಕ್ತಂ ತತ್ಪ್ರಜ್ಞಾನಂ ಯದ್ವೈ ಯಸ್ಮಿನ್ನೇವ ಕಾಲೇ ಸಂಪನ್ನಂ-ತತ್ತಸ್ಮಿನ್ಕಾಲೇಽಸ್ಯಾಂ ವಾವ ಪ್ರಾಜಾನನ್ಭೂಮಾವೇವ ಯಜ್ಞಪುರುಷಂ ಪ್ರಜ್ಞಾತವಂತಃ । ತತೋಽಸ್ಯಾಂ ಭೂಮೌ ಸಮಭರನ್ಯಜ್ಞಸಾಧನಾನಿ ಸಂಪಾದಿತವಂತಃ । ಅಸ್ಯೈ ವಾ ಅಸ್ಯಾಮೇವ ಭೂಮೌ ಯಜ್ಞಸ್ತಾಯತೇ ವಿಸ್ತೀರ್ಯತೇ । ನ ಕೇವಲಂ ಯಜ್ಞಸ್ಯೈವ ಭೂಮಿರಾಧಾರಃ ಕಿಂತು ಲೌಕಿಕಂ ಕೃಷ್ಯಾದಿಕಮಪ್ಯಸ್ಯಾಂ ಕ್ರಿಯತೇ ತತ್ಸಾಧನಮಪ್ಯಸ್ಯಾಂ ಸಂಪಾದ್ಯತೇ । ನ ಚ ಭೂಮೇಃ ಪ್ರಾಶಸ್ತ್ಯೇ ಸತ್ಯದಿತೇಃ ಕಿಮಾಯಾತಮಿತಿ ವಾಚ್ಯಂ । ಹಿ ಯಸ್ಮಾದಿಯಂ ಭೂಮಿರದಿತಿಃ । ತತ್ತಸ್ಮಾದದಿತಿಮುತ್ತಮಾಂ ಚರಮದೇವತಾಂ ಯಜತಿ । ಈದೃಶಂ ಯಜನಂ ಯದಸ್ತಿ ತತ್ಕ್ರಿಯಮಾಣಸ್ಯ ಯಜ್ಞಸ್ಯಾದಿತಿದ್ವಾರಾ ದೇವೇಷು ಪ್ರಜ್ಞಾನಾಯ ಸಂಪದ್ಯತೇ । ತಚ್ಚ ದೇವಪ್ರಜ್ಞಾನಂ ಯಜಮಾನಸ್ಯ ಸ್ವರ್ಗಲೋಕಾವಗಮಾಯ ಭವತಿ ॥

ದೇವತೆಗಳು ಯಜ್ಞಪುರುಷನನ್ನು ತಮ್ಮ ಕಣ್ಣುಗಳಿಂದ ನೋಡಿ ತಿಳಿದರು. ಆದರೆ ಯಜ್ಞಮಾಡುವ ವಿಧಾನವನ್ನೂ ಅದು ನಿರ್ವಿಘ್ನವಾಗಿ ನೆರವೇರುವ ಮಾರ್ಗವನ್ನೂ ಹೇಗೆ ತಿಳಿದರು ಎಂಬುವುದನ್ನು ವಿವರಿಸಲಾಗುವುದು. ಯಜ್ಞಪುರುಷನು ಭೂಮಿಯಲ್ಲಿದ್ದುದನ್ನು ದೇವತೆಗಳು ನೋಡಿದರು ಮತ್ತು ತಮ್ಮ ಯಜ್ಞಕ್ಕೆ ಬೇಕಾದ ಸಾಧನಸಾಮಗ್ರಿಗಳನ್ನು ಭೂಮಿಯಲ್ಲಿಯೇ ಸಂಪಾದಿಸಿದರು ಮತ್ತು ಭೂಮಿಯ ಮೇಲೆಯೇ ಯಜ್ಞವೇದಿಯನ್ನು ನಿರ್ಮಿಸಿ ಯಜ್ಞವನ್ನು ಮುಂದುವರೆಸಿದರು. ಆದ್ದರಿಂದ ಭೂಮಿಯು ಯಜ್ಞಕ್ಕೂ ಯಜ್ಞಕ್ಕೆ ಸಾಧನವಾದ ಸಾಮಗ್ರಿಗಳ ಉತ್ಪತ್ತಿಗೂ ಕಾರಣವಾಯಿತು. ಅಷ್ಟೇ ಅಲ್ಲ. ಭೂಮಿಯು ಲೌಕಿಕವ್ಯವಹಾರಗಳಾದ ವ್ಯವಸಾಯ ಮೊದಲಾದ ಕಾರ್ಯಗಳಿಗೂ ಅವುಗಳನ್ನು ಮಾಡಲು ಬೇಕಾದ ಸಾಧನಸಾಮಗ್ರಿಗಳ ಉತ್ಪತ್ತಿಗೂ ಸಹಾಯಕವಾಗಿರುವುದು. ಆದ್ದರಿಂದ ಭೂಮಿಯ ಸಹಾಯವಿಲ್ಲದೆ ಯಜ್ಞಾದಿಕರ್ಮಗಳೂ, ಲೌಕಿಕವ್ಯಾಪಾರಗಳೂ ನಡೆಯುವಂತಿಲ್ಲ ಎಂದಾಯಿತು. ಒಳ್ಳೇದು, ಭೂಮಿಯ ಸಹಾಯವೇನೋ ಅವಶ್ಯಕವಾಗಿ ಬೇಕು ಎಂದು ಒಪ್ಪಿಕೊಳ್ಳೋಣ. ಆದರೆ ಭೂಮಿಯನ್ನು ಆರಾಧಿಸುವುದನ್ನು ಬಿಟ್ಟು ಅದಿತಿಯನ್ನು ಏತಕ್ಕೆ ಆರಾಧಿಸಬೇಕು? ಎಂದರೆ ಈ ಭೂಮಿಯೇ ಅದಿತಿಯು ಎಂದರೆ ಅದಿತಿಯ ರೂಪಾಂತರವು. ಆದ್ದರಿಂದ ಈ ಪಂಚಪ್ರಾಯಣೀಯ ದೇವತೆಗಳಲ್ಲಿ ಕೊನೆಯದಾದ ಅದಿತಿಯನ್ನು ಯಜಿಸುವುದು ಅವಶ್ಯಕವಾಗದೆ. ಈ ಅದಿತಿಯ ಆರಾಧನೆಯಿಂದ ಯಜ್ಞಮಾಡುವ ಯಜಮಾನನಿಗೆ ಯಜ್ಞದ ಸ್ವರೂಪ ಜ್ಞಾನವೂ ಯಜ್ಞದಲ್ಲಿ ಆರಾಧಿಸಲ್ಪಡುವ ದೇವತೆಗಳ ಮತ್ತು ಸ್ವರ್ಗದ ವಿಷಯವಾದ ತಿಳಿವಳಿಕೆಯೂ ಉಂಟಾಗುವುದು. ಪ್ರಾಯಣೀಯೇಷ್ಟಿಯ ಪಂಚದೇವತೆಗಳ ಹೋಮವಿಷಯದಲ್ಲಿ ತೈತ್ತಿರೀಯ ಸಂಹಿತೆಯು ಈರೀತಿ ತಿಳಿಸುವುದು—

ಪಂಚ ದೇವತಾ ಯಜತಿ ಪಂಚ ದಿಶೋಽದಿಶಾಂ ಪ್ರಜ್ಞಾತ್ಯಾ ಅಥೋ ಪಂಚಾಕ್ಷರಾ ಪಂಕ್ತಿಃ ಪಾಂಕ್ತೋ ಯಜ್ಞೋ ಯಜ್ಞಮೇವಾವರುಂಧೇ ಪಥ್ಯಾಗ್ಂ ಸ್ವಸ್ತಿಮಯಜನ್ ಪ್ರಾಚೀಮೇವ ತಯಾ ದಿಶಂ ಪ್ರಾಜಾನನ್ನಗ್ನಿನಾ ದಕ್ಷಿಣಾ ಸೋಮೇನ ಪ್ರತೀಚೀಗ್ಂ ಸವಿತ್ರೋದೀಚೀಮದಿತ್ಯೋರ್ಧ್ವಾಂ ಪಥ್ಯಾಗ್ ಸ್ವಸ್ತಿಂ ಯಜತಿ ಪ್ರಾಚೀಮೇವ ತಯಾ ದಿಶಂ ಪ್ರಜಾನಾತಿ ಪಥ್ಯಾಗ್ಸ್ವಸ್ತಿಮಿಷ್ಟ್ವಾಗ್ನೀಷೋಮೌ ಯಜತಿ ಚಕ್ಷುಷೀ ವಾ ಏತೇ ಯಜ್ಞಸ್ಯ ಯದಗ್ನೀಷೋಮೌ ತಾಭ್ಯಾಮೇವಾನು ಪಶ್ಯತ್ಯಗ್ನೀಷೋಮಾವಿಷ್ಟ್ವಾ ಸವಿತಾರಂ ಯಜತಿ ಸವಿತೃಪ್ರಸೂತ ಏವಾನುಪಶ್ಯತಿ ಸವಿತಾರಮಿಷ್ಟ್ವಾದಿತಿಂ ಯಜತೀಯಂ ವಾ ಅದಿತಿರಸ್ಯಾಮೇವ ಪ್ರತಿಷ್ಠಾಯಾನುಪಶ್ಯತಿ ॥

(ತೈ.ಸಂ. ೬-೧-೫-೧, ೨, ೩)

ಪೂರ್ವಾದಿ ಪಂಚದಿಕ್ಕುಗಳ ಪರಿಜ್ಞಾನಕ್ಕಾಗಿ ಐದು ದೇವತೆಗಳನ್ನು ಉದ್ದೇಶಿಸಿ ಹೋಮಮಾಡಬೇಕು. ಇದರಿಂದ ಯಜ್ಞವು ಸಾಂಗವಾಗಿ ನೆರವೇರುವುದು. ಪೂರ್ವದಲ್ಲಿ ದೇವತೆಗಳು ಯಜ್ಞಮಾಡುವಾಗ ಮೊದಲು ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ಆರಾಧಿಸಿ ಆ ದೇವತೆಯ ಅನುಗ್ರಹದಿಂದ ಪೂರ್ವದಿಕ್ಕನ್ನು ತಿಳಿದುಕೊಂಡರು. ಅದೇರೀತಿ ಅಗ್ನಿಯ ಆರಾಧನೆಯಿಂದ ದಕ್ಷಿಣದಿಕ್ಕನ್ನೂ, ಸೋಮದೇವತೆಯಿಂದ ಪಶ್ಚಿಮದಿಕ್ಕನ್ನೂ, ಸವಿತೃದೇವತೆಯಿಂದ ಉತ್ತರದಿಕ್ಕನ್ನೂ ಅದಿತಿಯಿಂದ ಊರ್ಧ್ವದಿಕ್ಕನ್ನೂ ತಿಳಿದರು. ಆದ್ದರಿಂದ ಯಜ್ಞಮಾಡುವ ಯಜಮಾನನು ಮೊದಲು ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ಆರಾಧಿಸಿ ಆ ದೇವತೆಯ ಸಹಾಯದಿಂದ ಪೂರ್ವದಿಕ್ಕನ್ನು ತಿಳಿಯಬೇಕು. ಅನಂತರ ಅಗ್ನೀಷೋಮದೇವತೆಗಳನ್ನು ಆರಾಧಿಸಬೇಕು. ಈ ಅಗ್ನೀಷೋಮದೇವತೆಗಳು ಯಜ್ಞದ ಎರಡು ಕಣ್ಣುಗಳು. ಇವರ ಸಹಾಯದಿಂದ ಯಜ್ಞಸ್ವರೂಪವನ್ನು ಯಜಮಾನನು ನೋಡಿ ತಿಳಿದುಕೊಳ್ಳುವನು. ಅನಂತರ ಸವಿತೃದೇವನನ್ನು ಆರಾಧಿಸಬೇಕು. ಈ ಸವಿತೃದೇವನು ಯಜ್ಞಾನುಷ್ಠಾನ ವಿಷಯದಲ್ಲಿ ಯಜಮಾನನಿಗೆ ಪ್ರೇರಕನಾಗಿರುವನು. ಅನಂತರ ಕೊನೆಯ ದೇವತೆಯಾದ ಅದಿತಿಯನ್ನು ಆರಾಧಿಸಬೇಕು. ಈ ಭೂಮಿಯೇ ಅದಿತಿಯು. ಈ ಭೂಮಿಯ ಮೇಲೆಯೇ ಯಜ್ಞವು ನೆರವೇರುವುದರಿಂದ, ಯಜ್ಞಕ್ಕೆ ಅದಿತಿಯ ಸಹಾಯವು ದೊರೆಯುವುದಲ್ಲದೆ ಈ ದೇವತೆಯ ಅನುಗ್ರಹದಿಂದ ಯಜ್ಞವು ಸಾಂಗವಾಗಿ ನೆರವೇರುವುದು ಎಂದು ಮುಖ್ಯಾಭಿಪ್ರಾಯವು.

*English Translation*

He who wishes for beauty and acquirement of sacred knowledge, should turn towards the east when making the offerrings for the Prayaja deities. For the eastern direction is beauty and sacred knowledge. He who having this knowledge turns eastward (when making the Prayajas) obtains beauty and sacred knowledge.

He who wishes for food, should turn towards the south when making the offerrings for the Prayaja deities. For Agni (who is posted at the southern direction) is the eater of food, and master of food. He who having this knowledge goes towards the south (when making the Prayajas) becomes an eater of food, a master of food; he obtains nourishment along with offspring.

He who desires cattle, should go towards the west when making the Prayaja offerings. For cattle are the waters (which are in the western direction). He who having such a knowledge goes westwards becomes rich in cattle.

He who desires the drinking of the soma, should go toward the north when making the Prayaja offerings. For the northern direction is the king Soma. He who having such a knowledge goes northwards (when making the Paayajas) obtains the drinking of the Soma.

The upper direction (urdhva) leads to heaven. He who performs the Prayaja offerings when standing in the upper direction becomes successful in all directions. For these (three) worlds are linked together. They being in such a condition shine for the welfare of him who has such a knowledge.

He repeats the Yajya for the Pathya. By doing so, he places speech (represented by Pathya) at the beginning of the sacrifice. The breath (coming out of the mouth and the nostrils) is Agni; the breath (being within the mouth and nostrils) is Soma. Savitar is to set into motion (the ceremonial machinery), and Aditi is to establish a firm footing. When he repeats a Yajya to Pathya, then he carries the sacrifice on its path. Agni and Soma verily are the two eyes; Savitar serves for moving it, and Aditi for establishing a firm footing (to it). For through the eye the gods got aware of the sacrifice. For what is not perceivable (elsewhere) is to be perceived by the eye. If any one even after having run astray gets aware (of any thing) by exerting his eye successively (in consequence of the successive exertions of the faculty of seeing), then he (really) knows it. When the gods (were exerting their eyes repeatedly, and looking from one object to the other) they got sight of the sacrifice. Thus they got sight of it on this earth; on the earth (therefore) they acquired the implements (required for performing the sacrifice). On her (the earth) the sacrifice is spread; on her it is performed; on her the sacrificial implements are acquired. This earth is Aditi; therefore the last Yajya verse repeated is addressed to her. This is done (in order to enable the sacrificer) to get aware of the sacrifice (the mystical sacrificial man) and to behold then afterwards the celestial world.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಿತೀಯಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

## ಎರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಪ್ರಾಯಣೀಯೇಷ್ಟಿಯಲ್ಲಿ ಪಥ್ಯಾಸ್ವಸ್ತಿ ಮೊದಲಾದ ಪಂಚದೇವತೆಗಳ ಪರವಾದ ಯಾಜ್ಯಾನುವಾಕ್ಯಾಮಂತ್ರಗಳು ಇತ್ಯಾದಿ ]

ದೇವವಿಶಃ ಕಲ್ಪಯಿತವ್ಯಾ ಇತ್ಯಾಹುಸ್ತಾಃ ಕಲ್ಪಮಾನಾ ಅನು ಮನುಷ್ಯವಿಶಃ ಕಲ್ಪಂತ ಇತಿ ಸರ್ವಾ ವಿಶಃ ಕಲ್ಪಂತೇ ಕಲ್ಪಂತೇ ಯಜ್ಞೋಽಪಿ ತಸ್ಯೈ ಜನತಾಯೈ ಕಲ್ಪತೇ ಯತ್ರೈವಂ ವಿದ್ವಾನ್ ಹೋತಾ ಭವತಿ ॥

ಪ್ರಾಯಣೀಯೇಷ್ಟೌ ಕಾಮ್ಯಾನ್ಪ್ರಯಾಜಪ್ರಕಾರಾನ್ವಿಧಾಯ ದೇವತಾಶ್ಚ ಪ್ರಶಸ್ಯ ತಾಸಾಂ ದೇವತಾನಾಂ ಸಂಬಂಧಿನ್ಯೌ ಯಾಜ್ಯಾನುವಾಕ್ಯೇ ಕ್ರಮೇಣಾಭಿಸಂಧಾತುಂ ಪ್ರಸ್ತೌತಿ । ವಿಶ ಇತ್ಯಯಂ ಶಬ್ದಃ ಪ್ರಜಾಮಾತ್ರವಾಚೀ ವೈಶ್ಯಜಾತಿವಿಶೇಷವಾಚೀ ವಾ । ಸಂತಿ ಹಿ ದೇವೇಷ್ವಪಿ ಜಾತಿವಿಶೇಷಾಃ । ಅಗ್ನಿರ್ಬೃಹಸ್ಪತಿಶ್ಚ ದೇವೇಷು ಬ್ರಾಹ್ಮಣೌ । ಅಗ್ನೇ ಮಹಾನ್ ಅಸಿ ಬ್ರಾಹ್ಮಣಭಾರತ । ಬ್ರಹ್ಮ ವೈ ದೇವಾನಾಂ ಬೃಹಸ್ಪತಿಃ ಇತಿ ಶ್ರುತೇಃ । ಕ್ಷತ್ರಿಯಾದಿಜಾತಯಸ್ತು ಸೃಷ್ಟಿಪ್ರಕರಣೇ ವಾಜಸನೇಯಿಭಿಃ ಸ್ಪಷ್ಟಮೇವಾಮ್ನಾತಾಃ-ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇತಾನಿ ದೇವತಾಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನಃ ಇತಿ । ಸ ವಿಶಮಸೃಜತ ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ । ತಮಥ ಶೌದ್ರಂ ವರ್ಣಮಸೃಜತ ಪೂಷಣಂ ಇತಿ । ಏವಮಾದಿತ್ಯೋ ವೈ ದೈವಂ ಕ್ಷತ್ರಮಿತ್ಯಾದಿಕಮುದಾಹಾರ್ಯಂ । ಏವಂ ಸತಿ ದೇವೇಷು ವಿಶೋ ವೈಶ್ಯಜಾತಿರೂಪಾಃ ಪ್ರಜಾ ಮರುದಾದಯೋ ಯಾಃ ಸಂತಿ ತಾ ಅಸ್ಮಿನ್ಯಾಗೇ ಕಲ್ಪಯಿತವ್ಯಾಃ ಸಂಪಾದಯಿತವ್ಯಾ ಇತ್ಯೇವಂ ಬ್ರಹ್ಮವಾದಿನ ಆಹುಃ । ಕಲ್ಪಮಾನಾಃ ಸಂಪನ್ನಾಸ್ತಾ ದೇವವಿಶೋಽನುಸೃತ್ಯ ಮನುಷ್ಯವಿಶೋಽಪಿ ತದನುಗ್ರಹಾತ್ಸಂಪದ್ಯಂತ ಇತ್ಯೇವಂ ದೈವ್ಯೋ ಮಾನುಷ್ಯಶ್ಚ ಸರ್ವಾ ವಿಶೋ ಯಜಮಾನಸ್ಯ ಸಂಪದ್ಯಂತೇ । ತಾಸು ಸಂಪನ್ನಾಸು ದ್ರವ್ಯಲಾಭಾದ್ಯಜ್ಞೋಽಪಿ ಕಲ್ಪತೇ ಸ್ವಪ್ರಯೋಜನಸಮರ್ಥೋ ಭವತಿ । ಏತದ್ವೇದನಂ ಪ್ರಶಂಸತಿ । ಪೂರ್ವವದ್ವ್ಯಾಖ್ಯೇಯಂ ।

ಇದುವರೆಗೂ ಪ್ರಾಯಣೀಯೇಷ್ಟಿಯಲ್ಲಿ ಕಾಮ್ಯವಾದ ಪ್ರಯಾಜಹೋಮಗಳ ನಾನಾ ವಿಧಗಳನ್ನೂ ಆ ಮಂತ್ರಗಳ ದೇವತೆಗಳನ್ನೂ ಪ್ರಶಂಸೆಮಾಡಿ ಈಗ ಆ ದೇವತೆಗಳ ಸಂಬಂಧವಾದ ಯಾಜ್ಯಾನುವಾಕ್ಯಾ ಮಂತ್ರಗಳನ್ನು ವಿವರಿಸಲಾಗುವುದು.

ಮೇಲಿನ ವಾಕ್ಯದಲ್ಲಿ ವಿಶಃ ಎಂಬ ಶಬ್ದವು ಸಾಮಾನ್ಯವಾಗಿ ಪ್ರಜೆಗಳು ಎಂಬರ್ಥವನ್ನು ಸೂಚಿಸುವುದು. ವೈಶ್ಯಜಾತಿಜನರರೆಂಬ ಅರ್ಥವನ್ನೂ ಸೂಚಿಸುವುದು. ದೇವತೆಗಳಲ್ಲಿಯೂ ಸಹ (ಮನುಷ್ಯರಲ್ಲಿರುವಂತೆ) ಅವರ ಸ್ವಭಾವಕ್ಕನುಸಾರವಾಗಿ ಜಾತಿವಿಶೇಷಗಳಿರುವವೆಂದು ಶ್ರುತಿವಾಕ್ಯದಿಂದಲೇ ತಿಳಿಯಬರುತ್ತದೆ. **“ ಅಗ್ನೇ ಮಹಾँ ಅಸಿ ಬ್ರಾಹ್ಮಣ ಭಾರತ ”** (ತೈ. ಬ್ರಾ. ೩-೫-೩ ; ತೈ. ಸಂ. ೨-೫-೯-೧ ; ಶ. ಬ್ರಾ. ೧-೪-೨-೨) ; **“ ಬ್ರಹ್ಮ ವೈ ದೇವಾನಾಂ ಬೃಹಸ್ಪತಿಃ ”** (ತೈ. ಸಂ. ೨-೨-೯-೧) ಎಂಬ ಶ್ರುತಿವಾಕ್ಯಗಳಂತೆ ಅಗ್ನಿಯೂ ಬೃಹಸ್ಪತಿಯೂ ದೇವತೆಗಳಲ್ಲಿ ಬ್ರಾಹ್ಮಣವರ್ಗಕ್ಕೆ ಸೇರಿದವರು. ದೇವತೆಗಳಲ್ಲಿ ಕ್ಷತ್ರಿಯರು ಯಾರು ಎಂಬ ವಿಷಯದಲ್ಲಿ ಶತಪಥಬ್ರಾಹ್ಮದಲ್ಲಿ–“ ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂ ದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ........ಸ ವಿಶಮಸೃಜತ ಯಾನ್ಯೇತಾನಿ ದೇವಜಾತಾನಿ ಗಣಶ ಆಖ್ಯಾಯಂತೇ ವಸವೋ ರುದ್ರಾ ಆದಿತ್ಯಾ ವಿಶ್ವೇದೇವಾ ಮರುತ ಇತಿ........ಸ ಶೌದ್ರಂ ವರ್ಣಮಸೃಜತ ಪೂಷಣಂ ” (ಶ. ಬ್ರಾ. ೧೪-೪-೨-೨೩,೨೪,೨೫) ಎಂದೂ **“ ಆದಿತ್ಯೋ ವೈ ದೈವಂ ಕ್ಷತ್ರಂ ”** (ಶ. ಬ್ರಾ, ೭-೪-೨) ಎಂದು ಸ್ಪಷ್ಟವಾಗಿ ಹೇಳಿರುವುದು. ಆದ್ದರಿಂದ ದೇವತೆಗಳಲ್ಲಿ—ಇಂದ್ರ, ವರುಣ, ಸೋಮ, ರುದ್ರ, ಪರ್ಜನ್ಯ, ಯಮ ಮೃತ್ಯು, ಈಶಾನ ಎಂಬ ದೇವತೆಗಳು ಕ್ಷತ್ರಿಯವರ್ಗಕ್ಕೆ ಸೇರಿದವರೆಂದೂ. ಗಣ ಎಂದರೆ ಗುಂಪಾಗಿರುವ ವಸುಗಳು, ರುದ್ರರು, ಆದಿತ್ಯರು, ವಿಶ್ವೇದೇವತೆಗಳು, ಮರುತ್ತುಗಳು ದೇವತೆಗಳಲ್ಲಿ ವೈಶ್ಯವರ್ಗಕ್ಕೆ ಸೇರಿದವರೆಂದೂ, ಪೂಷಾ ಎಂಬ ದೇವತೆಯು ಶೂದ್ರವರ್ಗಕ್ಕೆ ಸೇರಿದವನೆಂದೂ ಮೇಲಿನ ಶ್ರುತಿವಾಕ್ಯಗಳ ಅರ್ಥವಿರುವುದು. ಪ್ರಸಕ್ತ ಸಂದರ್ಭದಲ್ಲಿ ಯಜ್ಞಮಾಡಲು ಯಜಮಾನರು ದೀಕ್ಷೆ ವಹಿಸಿದಾಗ ಅವರಿಗೆ ಯಜ್ಞಕ್ಕಾಗಿ ಸಾಧನಸಾಮಗ್ರಿಗಳು ಬೇಕಾಗುವವು. ಬ್ರಾಹ್ಮಣಾದಿ ಚತುರ್ವರ್ಣಗಳಲ್ಲಿ ವೈಶ್ಯರ ವೃತ್ತಿಯು ವ್ಯವಸಾಯ ಮತ್ತು ಪಶುಪಾಲನೆಗಳಾಗಿರುವುದರಿಂದ ಅವರಲ್ಲಿ ಯಥೇಚ್ಛವಾದ ಧನಧಾನ್ಯಾದಿಗಳಿರುವುದು ಸಹಜವು. ಯಜ್ಞಕ್ಕೆ ಬೇಕಾದ ಧನಧಾನ್ಯಾದಿಗಳನ್ನು ಸಂಗ್ರಹಿಸಲು ವೈಶ್ಯರ ಸಹಕಾರವು ಅವಶ್ಯಕವಾಗಿರುವುದು. ಆದ್ದರಿಂದ ದೇವತೆಗಳು ಯಜ್ಞ ಮಾಡುವಾಗ ಯಜ್ಞಸಾಮಗ್ರಿಗಳ ಸಂಗ್ರಹಕ್ಕಾಗಿ ದೇವತೆಗಳಲ್ಲಿ ವೈಶ್ಯವರ್ಗಕ್ಕೆ ಸೇರಿದ ಮರುದಾದಿಗಳನ್ನು ಸಹಕರಿಸಬೇಕೆಂದು ಕೇಳಿ ಅದರಂತೆ ಅವರ ಸಹಾಯದಿಂದ ಯಜ್ಞವನ್ನು ನೆರವೇರಿಸಿದರು. ಯಜ್ಞಾದಿಗಳ ವಿಷಯದಲ್ಲಿ ಮನುಷ್ಯರು ಯಾವಾಗಲೂ ದೇವತೆಗಳನ್ನು ಅನುಸರಿಸುವ ರೂಢಿ ಇರುವುದರಿಂದ ಮನುಷ್ಯ ಯಜಮಾನರೂ ಸಹ ದೇವವೈಶ್ಯರಾದ ಮರುತ್ತುಗಳ ಮತ್ತು ಮನುಷ್ಯರಲ್ಲಿ ವೈಶ್ಯವರ್ಗದವರ ಸಹಾಯಸಹಕಾರಗಳನ್ನು ಕೋರಿ ಯಜ್ಞಸಾಮಗ್ರಿಗಳನ್ನು ಸಂಗ್ರಹಿಸಿ ಯಜ್ಞಮಾಡಬೇಕು. ಹೀಗೆ ಮಾಡಿದರೆ ಯಜ್ಞವು ನಿರ್ವಿಘ್ನವಾಗಿ ನೆರವೇರುವುದು. ಯಾವ ಯಜ್ಞಕರ್ಮದಲ್ಲಿ ಮೇಲೆ ಹೇಳಿದ ವಿಷಯಗಳನ್ನು ಚೆನ್ನಾಗಿ ತಿಳಿದಿರುವ ಹೋತೃವೆಂಬ ಋತ್ವಿಜನು ಭಾಗವಹಿಸುವನೋ ಆ ಯಜ್ಞದಲ್ಲಿ ಕರ್ಮಗಳೆಲ್ಲವೂ ಸಾಂಗವಾಗಿ ನೆರವೇರಿ ಯಜಮಾನಾದಿ ಸಮಸ್ತಜನರಿಗೂ ಶ್ರೇಯಸ್ಸುಂಟಾಗುವುದು.

**ಸ್ವಸ್ತಿ ನಃ ಪಥ್ಯಾಸು ಧನ್ವಸ್ವಿತ್ಯನ್ವಾಹ ಸ್ವಸ್ತ್ಯಪ್ಸು ವೃಜನೇ ಸ್ವರ್ವತಿ ।**
**ಸ್ವಸ್ತಿ ನಃ ಪುತ್ರಕೃಥೇಷು ಯೋನಿಷು ಸ್ವಸ್ತಿ ರಾಯೇ ಮರುತೋ**
**ದಧಾತನೇತಿ ।**

**ಪ್ರಥಮಂ ದೇವತಾಯಾಃ ಪುರೋನುವಾಕ್ಯಾಂ ವಿಧತ್ತೇ । ಸ ಏಷ ಪ್ರಥಮಪಾದಃ ಕೃತ್ಸ್ನಾಯಾ ಋಚಃ ಪ್ರತೀಕಗ್ರಹಣಾರ್ಥಃ । ಅಸ್ಯಾಮೃಚಿ ದೇವವಿಶಾಂ ವಾಚಕಂ ಮರುಚ್ಛಬ್ದಂ ದರ್ಶಯಿತುಮವಶಿಷ್ಟಂ ಪಾದತ್ರಯಂ ಪಠತಿ । ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ । ಮಂತ್ರಸ್ಯಾಯಮರ್ಥಃ।ಹೇ ಮರುತೋ ನೋಽಸ್ಮಾಕಂ ಧನ್ವಸು ಪಥ್ಯಾಸು ಮರುದೇಶರೂಪೇಷು**

**ಮಾರ್ಗೇಷು ಸ್ವಸ್ತಿ ದಧಾತನ ಜಲಪ್ರದಾನೇನ ಕ್ಷೇಮಂ ಕುರುತ । ಕಿಂಚ ಸತೀಷ್ವಪ್ಸು ವೃಜನೇ ವರ್ಜಿತೇ ಜನಶೂನ್ಯೇ ಸ್ವರ್ವತಿ ಸ್ವರ್ಗಯುಕ್ತೇ ಮಾರ್ಗೇ ಸ್ವಸ್ತಿ ದಧಾತನ । ಯಥಾ ಪುತ್ರಕೃಥೇಷು ಪುತ್ರೋತ್ಪತ್ತಿಕರಣೇಷು ಯೋನಿಷು ಕಲತ್ರೇಷು ನೋಽಸ್ಮಾಕಂ ಸ್ವಸ್ತಿ ದಧಾತನ ತಥಾ ರಾಯೇ ಧನಾಯ ಸ್ವಸ್ತ್ಯಸ್ತು ।**

ಈಗ ಪಥ್ಯಾಸ್ವಸ್ತಿ ಎಂಬ ದೇವತೆಗೆ ಸಂಬಂಧಪಟ್ಟಂತೆ ಪುರೋಽನುವಾಕ್ಯಾಮಂತ್ರವನ್ನು ವಿವರಿಸುವರು. **ಸ್ವಸ್ತಿ ನಃ ಪಥ್ಯಾಸು ಧನ್ವಸು** (ಋ. ಸಂ. ೧೦-೬೩-೧೫) ಎಂಬುದು ಅನುವಾಕ್ಯಾಮಂತ್ರದ ಪ್ರಥಮ ಪಾದವು. ಒಂದು ಋಕ್ಕಿನ ಪ್ರಥಮ ಪಾದವನ್ನು ಸೂಚಿಸುವುದರಿಂದ ಆ ಋಕ್ಕನ್ನು ಪೂರ್ತಿಯಾಗಿ ನಿರ್ದೇಶಿಸಲಾಗಿದೆಯೆಂದು ತಿಳಿಯಬೇಕು. ಉಳಿದ ಮೂರು ಪಾದಗಳನ್ನು ಮೇಲೆಯೇ ತಿಳಿಸಿದೆ. ವಾಕ್ಯದ ಕೊನೆಯಲ್ಲಿರುವ ಇತಿ ಎಂಬ ಶಬ್ದವು ಮಂತ್ರವು ಮುಗಿಯಿತೆಂಬುದನ್ನು ಸೂಚಿಸುವುದು. ಮಂತ್ರದ ಅರ್ಥವು—ಎಲೈ ಮರುತ್ತುಗಳೇ, ಜಲರಹಿತವಾದ ಮರಳುಕಾಡಿನ ಮಾರ್ಗಗಳಲ್ಲಿ ನಾವು ಸಂಚರಿಸುವಾಗ ನಮಗೆ ಜಲಪ್ರದಾನಾದಿಗಳಿಂದ ಮಂಗಳವನ್ನುಂಟುಮಾಡಿರಿ; ಜಲಸಹಿತವಾದ ಆದರೆ ನಿರ್ಜನಪ್ರದೇಶವಾದ ಮಾರ್ಗಗಳಲ್ಲಿಯೂ ನಮಗೆ ಮಂಗಳವನ್ನನುಗ್ರಹಿಸಿ; ನಮ್ಮ ಸಂತತಿಯನ್ನು ಬೆಳೆಸುವ ಸ್ತ್ರೀಯರ (ಪತ್ನಿಯರ) ಗರ್ಭಗಳಿಗೆ ರಕ್ಷಣೆಯನ್ನು ನೀಡಿರಿ; ಮತ್ತು ನಮ್ಮ ಸುಖಕ್ಕಾಗಿ ನಮಗೆ ಧನಾದಿಗಳನ್ನು ಒದಗಿಸಿಕೊಟ್ಟು ಕಾಪಾಡಿರಿ.

## ಮರುತೋ ವೈ ದೇವಾನಾಂ ವಿಶಸ್ತಾ ಏವೈತದ್ಯಜ್ಞಮುಖೇಽಚೀಕ್ಲೃಪತ್ ॥

**ಅಸ್ಯಾಮೃಚಿ ಮರುಚ್ಛಬ್ದಃ ಕಥಮೇತಾವತಾ ವಿಶಾಂ ಕಲ್ಪನಮಿತ್ಯಾಹ । ಏತದೇತೇನ ಮರುಚ್ಛಬ್ದೋಪೇತಮಂತ್ರಪಾಠೇನ ಯಜ್ಞಮುಖೇ ಯಜ್ಞಪ್ರಾರಂಭರೂಪೇ ಕರ್ಮಣಿ ತಾ ದೇವಾನಾಂ ವಿಶೋಽಚೀಕ್ಲೃಪತ್ಕಲ್ಪಿತವಾನ್ಭವತಿ ॥**

ಈ ಋಕ್ಕಿನಲ್ಲಿ ಮರುಚ್ಛಬ್ದವಿರುವುದರಿಂದ ಯಜ್ಞಾರಂಭದಲ್ಲಿ ದೇವತೆಗಳಲ್ಲಿ ವೈಶ್ಯರಾದ ಮರುದ್ದೇವತೆಗಳನ್ನು ಪ್ರಾರ್ಥಿಸಿ ಅವರ ಸಹಕಾರವನ್ನು ಕೋರಿ ಅವರ ಸಹಾಯವು ಯಜ್ಞದಲ್ಲಿ ಸ್ಥಿರವಾಗಿರುವಂತೆ ಮಾಡಲಾಗಿದೆ ಎಂಬುದನ್ನು ಸೂಚಿಸುವುದು.

## ಸರ್ವೈಶ್ಛಂದೋಭಿರ್ಯಜೇದಿತ್ಯಾಹುಃ ಸರ್ವೈರ್ವೈ ಛಂದೋಭಿರಿಷ್ಟ್ವಾ ದೇವಾಃ ಸ್ವರ್ಗಂ ಲೋಕಮಜಯಂಸ್ತಥೈವೈತದ್ಯಜಮಾನಃ ಸರ್ವೈಶ್ಛಂದೋಭಿರಿಷ್ಟ್ವಾ ಸ್ವರ್ಗಂ ಲೋಕಂ ಜಯತಿ ॥

**ಛಂದೋಬಾಹುಲ್ಯಮಭಿಧಾಯ ಪ್ರಶಂಸತಿ । ಸ್ಪಷ್ಟೋಽರ್ಥಃ ।**

ಯಜ್ಞದಲ್ಲಿ ನಾನಾ ಛಂದಸ್ಸುಗಳನ್ನು ಪಠಿಸಿ ದೇವತೆಗಳನ್ನು ಆರಾಧಿಸಬೇಕೆಂದು ಯಜ್ಞಾನುಷ್ಠಾನಕ್ರಮವನ್ನು ತಿಳಿದವರು ಹೇಳುವರು. ಏಕೆಂದರೆ ಪೂರ್ವದಲ್ಲಿ ದೇವತೆಗಳು ಸಮಸ್ತ ಛಂದಸ್ಸುಗಳ ಮಂತ್ರಗಳನ್ನು ಪಠಿಸಿ ಯಜ್ಞಮಾಡಿ ಅದರಿಂದ ಸ್ವರ್ಗಲೋಕವನ್ನು ಜಯಿಸಿದರು. ಆದ್ದರಿಂದ ಮನುಷ್ಯರಲ್ಲಿಯೂ ಯಜ್ಞಮಾಡುವ ಯಜಮಾನನು ಸಮಸ್ತ ಛಂದಸ್ಸುಗಳ ಮಂತ್ರಗಳಿಂದ ದೇವತೆಗಳನ್ನು ಆರಾಧಿಸಿ ಸ್ವರ್ಗಲೋಕವನ್ನು ಪಡೆಯಬೇಕು.

**ಸ್ವಸ್ತಿ ನಃ ಪಥ್ಯಾಸು ಧನ್ವಸು ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠೇತಿ ಪಥ್ಯಾಯಾಃ ಸ್ವಸ್ತೇಸ್ತ್ರಿಷ್ಟುಭಾವಗ್ನೇ ನಯ ಸುಪಥಾ ರಾಯೇ ಅಸ್ಮಾನಾ ದೇವಾನಾಮಪಿ ಪಂಥಾಮಗನ್ಮೇತ್ಯಗ್ನೇಸ್ತ್ರಿಷ್ಟುಭೌ ತ್ವಂ ಸೋಮ ಪ್ರಚಿಕಿತೋ ಮನೀಷಾ ಯಾ ತೇ ಧಾಮಾನಿ ದಿವಿ ಯಾ ಪೃಥಿ-ವ್ಯಾಮಿತಿ ಸೋಮಸ್ಯ ತ್ರಿಷ್ಟುಭಾವಾ ವಿಶ್ವದೇವಂ ಸತ್ಪತಿಂ ಯ ಇಮಾ ವಿಶ್ವಾ ಜಾತಾನೀತಿ ಸವಿತುರ್ಗಾಯತ್ರ್ಯೌ ಸುತ್ರಾ-ಮಾಣಂ ಪೃಥಿವೀಂ ದ್ಯಾಮನೇಹಸಂ ಮಹೀಮೂ ಷು ಮಾತರಂ ಸುವ್ರತಾನಾಮಿತ್ಯದಿತೇರ್ಜಗತ್ಯೌ ॥**

**ಮಂತ್ರವಿಶೇಷಾನ್ಮಂತ್ರಛಂದಾಂಸಿ ಚ ಪಂಚಾನಾಂ ದೇವಾನಾಂ ಕ್ರಮೇಣೋದಾಹರತಿ। ಸ್ವಸ್ತಿ ನ ಇತ್ಯನುವಾಕ್ಯಾ । ಸ್ವಸ್ತಿರಿದ್ಧೀತಿ ಯಾಜ್ಯಾ । ಅಗ್ನೇ ನಯೇತ್ಯನುವಾಕ್ಯಾ । ಆ ದೇವಾ-ನಾಮಿತಿ ಯಾಜ್ಯಾ । ತ್ವಂ ಸೋಮೇತ್ಯನುವಾಕ್ಯಾ । ಯಾ ತೇ ಧಾಮಾನೀತಿ ಯಾಜ್ಯಾ । ಆ ವಿಶ್ವದೇವಮಿತ್ಯನುವಾಕ್ಯಾ । ಯ ಇಮೇತಿ ಯಾಜ್ಯಾ । ಸುತ್ರಾಮಾಣಮಿತ್ಯನುವಾಕ್ಯಾ । ಮಹಿಮೂ ಷ್ವಿತಿ ಯಾಜ್ಯಾ ।**

ಪಥ್ಯಾ ಸ್ವಸ್ತಿ ಮೊದಲಾದ ಪಂಚದೇವತೆಗಳ ಅನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನೂ ಅವುಗಳ ಛಂದಸ್ಸನ್ನೂ ವಿವರಿಸುವರು. ಪಥ್ಯಾಸ್ವಸ್ತಿ ಎಂಬ ದೇವತೆಗೆ—**ಸ್ವಸ್ತಿನಃ ಪಥ್ಯಾಸು ಧನ್ವಸು** (ಋ.ಸಂ. ೧೦-೬೩-೧೫) ಎಂಬುದು ಅನುವಾಕ್ಯಾಮಂತ್ರವು; **ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ** (ಋ. ಸಂ. ೧೦-೬೩-೧೬) ಎಂಬುದು ಯಾಜ್ಯಾಮಂತ್ರವು. ಈ ಎರಡು ಮಂತ್ರಗಳೂ ತ್ರಿಷ್ಟುಪ್ ಛಂದಸ್ಕವು ; ಅಗ್ನಿದೇವತೆಗೆ—**ಅಗ್ನೇನಯ ಸುಪಥಾ ರಾಯೇ ಅಸ್ಮಾನ್** (ಋ. ಸಂ. ೧-೧೮೯-೧) ಎಂಬುದು ಅನುವಾಕ್ಯಾ ; **ಆ ದೇವಾನಾಮಪಿ ಪಂಥಾಮಗನ್ಮ** (ಋ. ಸಂ. ೧೦-೨-೩) ಎಂಬುದು ಯಾಜ್ಯಾ; ಇವೆರಡೂ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳು ; ಸೋಮದೇವತೆಗೆ—**ತ್ವಂ ಸೋಮ ಪ್ರಚಿಕಿತೋ ಮನೀಷಾ** (ಋ. ಸಂ. ೧-೯೧-೧) ಎಂಬುದು ಅನುವಾಕ್ಯಾ ಮಂತ್ರವು. **ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** (ಋ. ಸಂ. ೧-೯೧-೪) ಎಂಬುದು ಯಾಜ್ಯಾಮಂತ್ರವು; ಇವೆರಡು ಮಂತ್ರಗಳೂ ತ್ರಿಷ್ಟುಪ್‌ಛಂದಸ್ಕವು; ಸವಿತೃದೇವತೆಗೆ–**ಆ ವಿಶ್ವದೇವಂ ಸತ್ಪತಿಂ** (ಋ.ಸಂ. ೫-೮೨-೭) ಎಂಬುದು ಅನುವಾಕ್ಯಾ ಮಂತ್ರವು; **ಯ ಇಮಾ ವಿಶ್ವಾ ಜಾತಾನಿ** (ಋ. ಸಂ. ೫-೮೨-೯) ಎಂಬುದು ಯಾಜ್ಯಾಮಂತ್ರವು; ಇವೆರಡು ಮಂತ್ರಗಳೂ ಗಾಯತ್ರೀಛಂದಸ್ಕವು; ಅದಿತಿದೇವತೆಗೆ — **ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ** (ಋ. ಸಂ. ೧೦-೬೩-೧೦) ಎಂಬುದು ಅನುವಾಕ್ಯಾ ಮಂತ್ರವು; **ಮಹೀಮೂ ಷು ಮಾತರಂ ಸುವ್ರತಾನಾಂ** ವಾ. ಸಂ. ೨೧-೫ ; ತೈ. ಸಂ. ೧-೫-೧೧-೫) ಎಂಬುದು ಯಾಜ್ಯಾಮಂತ್ರವು. ಇವೆರಡು ಮಂತ್ರಗಳೂ ಜಗತೀಛಂದಸ್ಕವು. ಆದ್ಯಂತ ಮಂತ್ರಗಳ ವಿವರವು ಈರೀತಿ ಇದೆ.

**(೧) ಸ್ವಸ್ತಿನಃ ಪಥ್ಯಾಸು ಧನ್ವಸು ಸ್ವಸ್ತ್ಯ೧ ಪ್ಸು ವೃಜನೇ ಸ್ವರ್ವತಿ ।**
**ಸ್ವಸ್ತಿ ನಃ ಪುತ್ರಕೃಥೇಷು ಯೋನಿಷು ಸ್ವಸ್ತಿ ರಾಯೇ ಮರುತೋ ದಧಾತನ ॥**

ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।
ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥

(೨) ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯ೧ಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥
ಆ ದೇವಾನಾಮಪಿ ಪಂಥಾಮಗನ್ಮ ಯಚ್ಛಕ್ನವಾಮ ತದನು ಪ್ರವೋಳ್ಹುಂ ।
ಅಗ್ನಿರ್ವಿದ್ವಾನ್ತ್ಸ ಯಜಾತ್ಸೇದು ಹೋತಾ ಸೋ ಅಧ್ವರಾನ್ತ್ಸ ಋತೂನ್ಕಲ್ಪಯಾತಿ ॥

(೩) ತ್ವಂ ಸೋಮ ಪ್ರ ಚಿಕಿತೋ ಮನೀಷಾ ತ್ವಂ ರಜಿಷ್ಠಮನು ನೇಷಿ ಪಂಥಾಂ ।
ತವ ಪ್ರಣೀತೀ ಪಿತರೋ ನ ಇಂದೋ ದೇವೇಷು ರತ್ನಮಭಜಂತ ಧೀರಾಃ ॥
ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ ಯಾ ಪರ್ವತೇಷ್ವೋಷಧೀಷ್ವಪ್ಸು ।
ತೇಭಿರ್ನೋ ವಿಶ್ವೈಃ ಸುಮನಾ ಅಹೇಳನ್ ರಾಜನ್ತ್ಸೋಮ ಪ್ರತಿ ಹವ್ಯಾ ಗೃಭಾಯ ॥

(೪) ಆ ವಿಶ್ವದೇವಂ ಸತ್ಪತಿಂ ಸೂಕ್ತೈರದ್ಯಾ ವೃಣೀಮಹೇ ।
ಸತ್ಯಸವಂ ಸವಿತಾರಂ ॥
ಯ ಇಮಾ ವಿಶ್ವಾ ಜಾತಾನ್ಯಾಶ್ರಾವಯತಿ ಶ್ಲೋಕೇನ ।
ಪ್ರ ಚ ಸುವಾತಿ ಸವಿತಾ ॥

(೫) ಸುತ್ರಾಮಾಣಂ ಪೃಥಿವೀಂ ದ್ಯಾಮನೇಹಸಂ ಸುಶರ್ಮಾಣಮದಿತಿಂ ಸುಪ್ರಣೀತಿಂ ।
ದೈವೀಂ ನಾವಂ ಸ್ವರಿತ್ರಾಮನಾಗಸಮಸ್ರವಂತೀಮಾ ರುಹೇಮಾ ಸ್ವಸ್ತಯೇ ॥
ಮಹೀಮೂ ಷು ಮಾತರಗ್‌ಂ ಸುವ್ರತಾನಾಮೃತಸ್ಯ ಪತ್ನೀಮವಸೇ ಹುವೇಮ ।
ತುವಿಕ್ಷತ್ರಾಮಜರಂತೀಮುರೂಚೀಗ್‌ಂ ಸುಶರ್ಮಾಣಮದಿತಿಗ್‌ಂ ಸುಪ್ರಣೀತಿಂ ॥

ಈ ಮಂತ್ರಗಳಲ್ಲಿ ಕೊನೆಯದು ಋಗ್ವೇದದಲ್ಲಿಲ್ಲ. ತೈತ್ತಿರೀಯ ಮತ್ತು ವಾಜಸನೇಯಿಸಂಹಿತೆಗಳಲ್ಲಿರುವುದು. ಇವುಗಳಲ್ಲಿ ಯಾಜ್ಯಾಮಂತ್ರಗಳನ್ನು ಪಠಿಸುವಾಗ ಹೋತೃವು ಯೇ ಯಜಾಮಹೇ ಎಂಬ ಶಬ್ದಗಳನ್ನು ಮಂತ್ರದ ಪ್ರಾರಂಭದಲ್ಲಿ ಉಚ್ಚರಿಸಿ ಅನಂತರ ಮಂತ್ರವನ್ನು ಪಠಿಸಬೇಕು. ಉದಾ— ಯೇ ಯಜಾಮಹೇ ಸ್ವಸ್ತಿರಿದ್ಧಿ ಇತ್ಯಾದಿ.

**ಏತಾನಿ ವಾವ ಸರ್ವಾಣಿ ಛಂದಾಂಸಿ ಗಾಯತ್ರಂ ತ್ರೈಷ್ಟುಭಂ ಜಾಗತಮನ್ವನ್ಯಾನ್ಯೇತಾನಿ ಹಿ ಯಜ್ಞೇ ಪ್ರತಮಾಮಿವ ಕ್ರಿಯಂತೇ ॥**

ನನ್ವತ್ರ ತ್ರೀಣ್ಯೇವ ಛಂದಾಂಸ್ಯುಕ್ತಾನಿ ನ ತು ಸರ್ವಾಣೀತ್ಯಾಶಂಕ್ಯಾಹ । ಮುಖ್ಯಾನಿ ಸರ್ವಾಣಿ ಛಂದಾಂಸಿ ತ್ರೀಣ್ಯೇವ । ಇತರಾಣಿ ತು ಮುಖ್ಯಾನ್ಯನುಸೃತ್ಯ ವರ್ತಂತೇ । ಮುಖ್ಯತ್ವಮೇವೈತಾನಿ ಹೀತ್ಯಾದಿನಾ ಸ್ಪಷ್ಟೀಕ್ರಿಯತೇ । ಹಿ ಯಸ್ಮಾತ್ಕಾರಣಾದೇತಾನಿ ತ್ರೀಣಿ ಯಜ್ಞೇ ಪ್ರತಮಾಮಿವ ಕ್ರಿಯಂತೇಽತ್ಯಂತಪ್ರಾಚುರ್ಯೇಣೈವ ಪ್ರಯುಜ್ಯತೇ ತತೋ ಮುಖ್ಯತ್ವಂ ।

ಮೇಲೆ ಹೇಳಿದ ಐದು ದೇವತೆಗಳ ಯಾಜ್ಯಾನುವಾಕ್ಯಾ ಮಂತ್ರಗಳನ್ನು ಪರಿಶೀಲಿಸಿದರೆ ಅವುಗಳಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರೇ ವಿಧವಾದ ಛಂದಸ್ಸುಗಳಿರುವುದು ಕಂಡುಬರುವುದು. ಹಿಂದೆ ಎಲ್ಲಾ ಛಂದಸ್ಸುಗಳಿಂದಲೂ ಹೋಮಮಾಡಬೇಕೆಂದು ಹೇಳಿರುವುದು. ಆದ್ದರಿಂದ ಇದು ಪೂರ್ವಾಪರವಿರೋಧವಲ್ಲವೇ ಎಂದರೆ, ಹಾಗಲ್ಲ. ಗಾಯತ್ರೀ, ತ್ರಿಷ್ಟುಪ್ ಮತ್ತು ಜಗತೀ ಎಂಬ ಮೂರು ಛಂದಸ್ಸುಗಳೇ ಛಂದಸ್ಸುಗಳಲ್ಲೆಲ್ಲಾ ಮುಖ್ಯವಾದುವು. ಈ ಮೂರು ಛಂದಸ್ಸುಗಳನ್ನು ಅನುಸರಿಸಿಯೇ ಇತರ ಛಂದಸ್ಸುಗಳಿರುವವು. ಯಜ್ಞಗಳಲ್ಲಿ ಈ ಮೂರು ಛಂದಸ್ಸುಗಳಿಗೆ ಪ್ರಾಶಸ್ತ್ಯವಿರುವುದಲ್ಲದೆ ಇವುಗಳನ್ನು ಹೆಚ್ಚಾಗಿ ಉಪಯೋಗಿಸುವರು. ಆದ್ದರಿಂದ ಈ ಮೂರು ಛಂದಸ್ಸುಗಳೇ ಎಲ್ಲಾ ಛಂದಸ್ಸುಗಳಲ್ಲಿಯೂ ಮುಖ್ಯವಾದುವು.

**ಏತೈರ್ಹ ವಾ ಅಸ್ಯ ಛಂದೋಭಿರ್ಯಜತಃ ಸರ್ವೈಶ್ಛಂದೋಭಿರಿಷ್ಟಂ ಭವತಿ ಯ ಏವಂ ವೇದ ॥ ೯ ॥**

**ಏತದ್ವೇದನಂ ಪ್ರಶಂಸತಿ । ಸ್ಪಷ್ಟೋಽರ್ಥ ॥**

ಆದ್ದರಿಂದ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಛಂದಸ್ಸುಗಳು ಎಲ್ಲಾ ಛಂದಸ್ಸುಗಳಿಗೂ ಮುಖ್ಯವಾಗಿರುವವು ಎಂಬ ವಿಷಯವನ್ನು ಯಾವ ಪುರುಷನು ತಿಳಿದು ಅದರಂತೆ ಯಜ್ಞಾದಿ ಕರ್ಮಗಳಲ್ಲಿ ಈ ಮೂರು ಛಂದಸ್ಸುಗಳನ್ನು ಉಪಯೋಗಿಸುವನೋ ಅವನು ಯಜ್ಞದಲ್ಲಿ ಎಲ್ಲಾ ಛಂದಸ್ಸುಗಳಿಂದಲೂ ಹೋಮಮಾಡಿದಂತಾಗುವುದು.

*English Translation*

They say, the gods should be provided with Visyas (agriculturists and herdsmen). For if the gods are provided with them, men will subsequently obtain them also. If all Vaisyas (to furnish the necessary supplies) are in readiness, then the sacrifice is prepared. It is prepared for that family in the midst of which there is a Hotar who has this knowledge (and makes provision accordingly).

(The gods are provided for with Vaisyas by the recital of the verse, svastinah pathyasu: 10, 63, 15), "O Maruts! grant us in the desert tracks prosperity (by providing us with water); grant us prosperity (by abudance) in waters in a desolated region over which the sky shines! grant prosperity to the wombs of our women for producing children! grant prosperity to our wealth." For the Maruts are the Vaisyas of the gods (their agriculturists). The Hotar puts them by (repeating) this (mantra) in readiness at the beginning of the sacrifice.

They say, the Hotar should (as Anuvakya and Yajya verses at the Prayaniya ishti) use mantras of all (principal) metres. For the gods conquered

the celestial world by means of having used for their Anuvakya and) Yajya verses mantras of all metres. Likewise the sacrificer who does the same gains the celestial world. (The two verses) svastinah pathyasu and svastir iddhi prapathe (10, 63, 15, 16) which are addressed to pathya svasti i.e., safe journey, are in the Trishtubh metre. The two verses addressed to Agni, agne naya supatha (1,189,1) and a devanam api pantham 10, 2, 3) are also in the Trishtubh metre. The two verses, addressed to soma, tvam amos prachiki to manisha (1, 91, 1) and ya te dhamani divi (1, 19, 4) are (also) in the Trishtubh metre. The two verses addressed to Savita: a visvadevam satpatim (5, 82, 7) and ya ima visva (5, 82, 9), are in the Gayatri metre. The two verses addressed to Aditi, sutramanam prithivim (10, 63, 10) and mahim u shu mataram (Atharv. 7, 6, 2) are in the Jagati metre. These are all the (principal) metres: Gayatri, Trishtubh, and Jagati. Those (other metres) follow them. For these (three kinds of metres) are, as it were, of the most frequent occurrence (pratamam) at a sacrifice. He therefore who having such a knowledge gets repeated his Anuvakya and Yajya verses in these (three) metres, gets repeated them in all metres (obtains the particular advantage to be derived not only from the three metres mentioned, but from all other metres also).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಿತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎರಡನೆಯ ಅಧ್ಯಾಯದ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

## ಎರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಪ್ರಾಯಣೀಯ ಹೋಮದಲ್ಲಿ ಸ್ವಿಷ್ಟಕೃದ್ಧೋಮದ ಸಂಯಾಜ್ಯಾಮಂತ್ರಗಳು ವಿರಾಟ್ಛಂದಸ್ಸಿನ ಪ್ರಾಶಸ್ತ್ಯ ಇತ್ಯಾದಿ ]

**ತಾ ವಾ ಏತಾಃ ಪ್ರವತ್ಯೋ ನೇತೃಮತ್ಯಃ ಪಥಿಮತ್ಯಃ ಸ್ವಸ್ತಿಮತ್ಯ ಏತಸ್ಯ ಹವಿಷೋ ಯಾಜ್ಯಾನುವಾಕ್ಯಾ ಏತಾಭಿರ್ವಾ ಇಷ್ಟ್ವಾ । ದೇವಾಃ ಸ್ವರ್ಗಂ ಲೋಕಮಜಯಂಸ್ತಥೈವೈತ್ಯದ್ಯಜಮಾನ ಏತಾಭಿರಿಷ್ಟ್ವಾ ಸ್ವರ್ಗಂ ಲೋಕಂ ಜಯತಿ ॥**

ಪಂಚಾನಾಂ ದೇವತಾನಾಂ ಕ್ರಮೇಣ ಯಾಜ್ಯಾನುವಾಕ್ಯೇ ಉದಾಹೃತೇ ಅಥ ಸಂಯಾಜ್ಯೇ ವಕ್ತವ್ಯೇ ತತ್ರಾದೌ ತಾವದುದಾಹೃತಾ ಯಾಜ್ಯಾನುವಾಕ್ಯಾಃ ಪ್ರಶಂಸತಿ । ಸ್ವಸ್ತಿ ನಃ ಪಥ್ಯಾಸ್ವಿತ್ಯಾದ್ಯಾ ಮಹೀಮೂ ಷು ಮಾತರಮಿತ್ಯಂತಾ ದಶರ್ಚೋ ಯಾಃ ಪೂರ್ವಮುದಾಹೃತಾಸ್ತಾ ಏವೈತಾಃ ಪ್ರಶಬ್ದನೇತೃಶಬ್ದಪಥಿಶಬ್ದಸ್ವಸ್ತಿಶಬ್ದವತ್ಯಃ । ತತ್ರ ಪ್ರಶಬ್ದಃ ಸ್ವಸ್ತಿರಿದ್ಧಿ ಪ್ರಪಥೇ ತ್ವಂ ಸೋಮ ಪ್ರಚಿಕಿತ ಇತ್ಯತ್ರ ಶ್ರೂಯತೇ । ನೇತೃಶಬ್ದೋಽಗ್ನೇ ನಯೇತ್ಯತ್ರ ಶ್ರೂಯತೇ । ನಯತಿಧಾತೋಃ ಕರ್ತುಸ್ತತ್ರಾವಗಮಾತ್ । ಪಥಿಶಬ್ದೋಽಗ್ನೇ ನಯ ಸುಪಥಾ ಆ ದೇವನಾಮಪಿ ಪಂಥಾಮಿತ್ಯತ್ರ ಶ್ರೂಯತೇ । ಸ್ವಸ್ತಿಶಬ್ದಃ ಸ್ವಸ್ತಿ ನಃ ಪಥ್ಯಾಸು ಸ್ವಸ್ತಿರಿದ್ಧೀತ್ಯತ್ರ ಶ್ರೂಯತೇ । ತಥಾ ಸತಿ ಛತ್ರಿನ್ಯಾಯೇನ ಸರ್ವಾ ಅಪ್ಯೇತಾ ಋಚಃ ಪ್ರಾದಿಭಿಃ ಶಬ್ದೈರ್ಯುಕ್ತಾ ಇತಿ ವಕ್ತುಂ ಶಕ್ಯಾಃ । ಏವಂ ಸತ್ಯುತ್ಕರ್ಷದ್ಯೋತಕೈರೇತೈಃ ಶಬ್ದೈರ್ಯುಕ್ತಾ ಏತಾ ಋಚಃ ಪ್ರಾಯಣೀಯೇಷ್ಟಿಗತಸ್ಯ ಹವಿಷೋ ಯಾಜ್ಯಾನುವಾಕ್ಯಾಃ ಪ್ರಶಸ್ತಾ ಭವಂತಿ । ಏತಾಭಿರ್ವಾ ಇತ್ಯಾದೇರರ್ಥೋ ವಿಸ್ಪಷ್ಟಃ ।

ಪ್ರಾಯಣೀಯೇಷ್ಟಿಯ ಪಂಚದೇವತೆಗಳ ಸಂಬಂಧಿಸಿದ ಯಾಜ್ಯಾನುವಾಕ್ಯಾ ಮಂತ್ರಗಳನ್ನು ತಿಳಿಸಿದ್ದಾಯಿತು. ಈಗ ಸ್ವಿಷ್ಟಕೃದ್ಧೋಮದ ಸಂಯಾಜ್ಯಾ ಮಂತ್ರಗಳನ್ನು ಹೇಳುವುದಕ್ಕೆ ಪ್ರಾರಂಭಿಸಿ ಆದಕ್ಕೆ ಪೀಠಿಕಾ ರೂಪವಾಗಿ ಮೇಲೆ ಹೇಳಿದ ಯಾಜ್ಯಾನುವಾಕ್ಯಾ ಮಂತ್ರಗಳನ್ನು ವಿಶೇಷರೀತಿಯಿಂದ ಪ್ರಶಂಸಿಸಲಾಗುವುದು.

**ಸ್ವಸ್ತಿನಃ ಪಥ್ಯಾಸು** ಎಂದು ಮೊದಲಾಗುವ, **ಮಹೀಮೂ ಷು** ಎಂದು ಅಂತ್ಯವಾಗುವ ಈ ಹತ್ತು ಋಕ್ಕುಗಳಲ್ಲಿ ಪ್ರಶಬ್ದ, ನೇತೃಶಬ್ದ, ಪಥಿಶಬ್ದ, ಸ್ವಸ್ತಿಶಬ್ದಗಳು ಇರುವವು. ಪ್ರ ಎಂಬ ಶಬ್ದವು ಸ್ವಸ್ತಿರಿದ್ಧಿ ಪ್ರಪಥೇ, ತ್ವಂ ಸೋಮ

**ಪ್ರಚಿಕಿತಃ** ಎಂಬ ಎರಡು ಋಕ್ಕುಗಳಿರುವವು; ನೇತೃಶಬ್ದವು **ಅಗ್ನೇ ನಯ ಸುಪಥಾ** ಮತ್ತು **ತ್ವಂ ಸೋಮ ಪ್ರಚಿಕಿತಃ** ಎಂಬ ಋಕ್ಕುಗಳಲ್ಲಿ ಕಂಡುಬರುವುದು; ಈ ಋಕ್ಕುಗಳು ನಯತಿಧಾತುವಿನ ರೂಪಗಳಾದ **ನಯ, ನೇಷಿ** ಎಂಬ ಶಬ್ದಗಳಿರುವವು; ಪಥಿಶಬ್ದವು **ಅಗ್ನೇ ನಯ ಸುಪಥಾ, ಆ ದೇವನಾಮಪಿ ಪಂಥಾಂ** ಎಂಬ ಋಕ್ಕುಗಳಲ್ಲಿ ಕಂಡುಬರುವುದು; ಸ್ವಸ್ತಿಶಬ್ದವು **ಸ್ವಸ್ತಿನಃ ಪಥ್ಯಾಸು, ಸ್ವಸ್ತಿರಿದ್ಧಿ** ಎಂಬ ಋಕ್ಕುಗಳಲ್ಲಿರುವವು. ಮೇಲೆ ಹೇಳಿದ ಪ್ರಶಬ್ದ, ನೇತೃಶಬ್ದ, ಪಥಿಶಬ್ದ, ಸ್ವಸ್ತಿಶಬ್ದಗಳು ಪ್ರತಿಋಕ್ಕಿನಲ್ಲಿಯೂ ಇಲ್ಲದಿದ್ದರೂ ಸಮಷ್ಟಿರೂಪದಲ್ಲಿ ಎಂದರೆ ಒಟ್ಟು ಐದು ಋಕ್ಕುಗಳಲ್ಲಿ ಇರುವವು. ಆದ್ದರಿಂದ ಈ ಎಲ್ಲಾ ಶಬ್ದಗಳೂ ಎಲ್ಲಾ ಋಕ್ಕುಗಳಲ್ಲಿಯೂ ಇರುವವೆಂದು ಭಾವಿಸಬೇಕು. ಪ್ರಶಬ್ದಕ್ಕೆ ಉತ್ಕರ್ಷವೆಂಬರ್ಥವಿರುವುದು; ನೇತೃಶಬ್ದವು ಯಜ್ಞಕರ್ತನಾದ ಯಜಮಾನ ಅಥವಾ ಯಜ್ಞವು ಮುಂದುವರೆಯುವುದು ಎಂಬರ್ಥವನ್ನು ಸೂಚಿಸುವುದು; ಪಥಿಶಬ್ದವು ಯಜ್ಞವು ವಿಘ್ನಾದಿಗಳಿಲ್ಲದೆ, ಕರ್ಮವ್ಯತ್ಯಾಸ, ಕ್ರಮವ್ಯತ್ಯಾಸ, ಮಂತ್ರವ್ಯತ್ಯಾಸ ಇವುಗಳಿಲ್ಲದೆ ಸರಿಯಾದ ಮಾರ್ಗದಲ್ಲಿ ನಡೆಯುವುದೆಂಬುದನ್ನು ಸೂಚಿಸುವುದು. ಸ್ವಸ್ತಿಶಬ್ದವು ಯಜ್ಞದಲ್ಲಿ ಭಾಗವಹಿಸುವ ಯಜಮಾನಾದಿಗಳಿಗೆ (ಶ್ರೇಯಸ್ಸನ್ನು) ಉಂಟುಮಾಡುವುದನ್ನು ಸೂಚಿಸುವುದು. ಇಂತಹ ಶಬ್ದಗಳಿಂದ ಯುಕ್ತವಾದ ಯಾಜ್ಯಾನುವಾಕ್ಯಾ ಮಂತ್ರಗಳಿಂದ ಹವಿಸ್ಸನ್ನು ಹೋಮಮಾಡಿ ದೇವತೆಗಳು ಸ್ವರ್ಗಲೋಕವನ್ನು ಜಯಿಸಿದರು. ಅದರಂತೆಯೇ ಈ ಪ್ರಶಸ್ತವಾದ ಯಾಜ್ಯಾಪುರೋನುವಾಕ್ಯಾ ಮಂತ್ರಗಳಿಂದ ಹೋಮಮಾಡಿದರೆ ಯಜಮಾನನು ಸ್ವರ್ಗಲೋಕವನ್ನು ಪಡೆಯುತ್ತಾನೆ.

ತಾಸು ಪದಮಸ್ತಿ ಸ್ವಸ್ತಿ ರಾಯೇ ಮರುತೋ ದಧಾತನೇತಿ ಮರುತೋ ಹ ವೈ ದೇವವಿಶೋಽನ್ತರಿಕ್ಷಭಾಜನಾಸ್ತೇಭ್ಯೋ ಹ ಯೋ ನಿವೇದ್ಯಃ ಸ್ವರ್ಗಂ ಲೋಕಮೇತೀಶ್ವರಾ ಹೈನಂ ನಿ ವಾ ರೋದ್ಧೋರ್ವಿ ವಾ ಮಥಿತೋಃ ಸ ಯದಾಹ ಸ್ವಸ್ತಿ ರಾಯೇ ಮರುತೋ ದಧಾತನೇತಿ ತಂ ಮರುದ್ಭ್ಯೋ ದೇವವಿಡ್ಭ್ಯೋ ಯಜಮಾನಂ ನಿವೇದಯತಿ ನ ಹ ವಾ ಏನಂ ಮರುತೋ ದೇವವಿಶಃ ಸ್ವರ್ಗಂ ಲೋಕಂ ಯಂತಂ ನಿರುಂಧತೇ ನ ವಿಮಥ್ನತೇ ॥

ಪ್ರಥಮಾಯಾಮೃಚಿ ಚತುರ್ಥಂ ಪಾದಮಾದಾಯ ತತ್ರತ್ಯಸ್ಯ ಮರುಚ್ಛಬ್ದಸ್ಯಾನ್ವಯವ್ಯತಿರೇಕಾಭ್ಯಾಂ ತಾತ್ಪರ್ಯಂ ದರ್ಶಯತಿ । ತಾಸು ಪೂರ್ವೋಕ್ತಾಸ್ವೃಕ್ಷು ಪದಂ ಪಾದಸ್ತಸ್ಮಿನ್ಪಾದೇ ಪ್ರೋಕ್ತಾ ಮರುತೋ ದೇವಾನಾಂ ವೈಶ್ಯಾ ಅಂತರಿಕ್ಷೇ ನಿವಸಂತಿ । ಏನಂ ಯಜಮಾನಂ ನಿ ವಾ ರೋದ್ಧೋಃ ಸ್ವರ್ಗಮನಂ ನಿರೋದ್ಧುಂ ವಾ ವಿ ವಾ ಮಥಿತೋರ್ವಿಶೇಷೇಣ ಮಥಿತುಮಾಲೋಡಯಿತುಂ ವಿನಾಶಯಿತುಂ ವಾ ತೇ ಮರುತ ಈಶ್ವರಾಃ ಸಮರ್ಥಾಃ ಸೋಽಯಂ ವ್ಯತಿರೇಕಃ ಬಾಧಸ್ಯಾತ್ರೋಪನ್ಯಸ್ತತ್ವಾತ್ । ಸ ಯದಾಹೇತ್ಯಾದಿರನ್ವಯಃ । ಉಕ್ತಬಾಧಸಮಾಧಾನಸ್ಯ ತತ್ರೋಪನ್ಯಾಸಾತ್ । ಯದಿ ಹೋತಾ ಸ್ವಸ್ತಿ ರಾಯ ಇತ್ಯಾದಿಪಾದಂ ಪಠೇತ್ತದಾನೀಂ ಮರುದ್ಭ್ಯೋ ಯಜಮಾನಂ ನಿವೇದಯತಿ ತತೋ ಮರುತಃ ಸ್ವರ್ಗಂ ಲೋಕಂ ಗಚ್ಛಂತಂ ಯಜಮಾನಂ ನೈವ ನಿರುಂಧತೇ ನಾಪಿ ವಿಮಥ್ನತೇ ನಾಪಿ ವಿನಾಶಯಂತಿ ।

ಪ್ರಯಾಜಾನುಯಾಜಮಂತ್ರಗಳಲ್ಲಿ ಮೊದಲನೆಯದಾದ **ಸ್ವಸ್ತಿ ನ ಪಥ್ಯಾಸು** ಎಂಬ ಋಕ್ಕಿನಲ್ಲಿರುವ ಮರುತಃ ಎಂಬ ಶಬ್ದದ ಅರ್ಥವನ್ನು ವಿಮರ್ಶೆಮಾಡಿ ಮುಖ್ಯಾಭಿಪ್ರಾಯವನ್ನು ತಿಳಿಸುವರು. ಈ ಋಕ್ಕಿನ ನಾಲ್ಕನೆಯ ಪಾದವು **ಸ್ವಸ್ತಿ ರಾಯೇ ಮರುತೋ ದಧಾತನ** ಎಂದಿರುವುದು. ದೇವತೆಗಳಲ್ಲಿ ವೈಶ್ಯವರ್ಗದವರಾದ ಈ ಮರುದ್ದೇವತೆಗಳು ಅಂತರಿಕ್ಷದಲ್ಲಿ ನೆಲಸಿರುವರು. ಯಾಸ್ಕರು ನಿರುಕ್ತದಲ್ಲಿ— **ಅಥಾತೋ ಮಧ್ಯಸ್ಥಾನಾ ದೇವಗಣಾಃ । ತೇಷಾಂ ದುರುತಃ ಪ್ರಥಮಾ-ಗಾಮಿನೋ ಭವಂತಿ** (ನಿ. ೧೧-೨-೧,೨) ಎಂದು ಹೇಳಿರುವರು. ಎಂದರೆ—ಮಧ್ಯಸ್ಥಾನ ಎಂದರೆ ಅಂತರಿಕ್ಷದಲ್ಲಿ ವಾಸಿಸುವ ದೇವತೆಗಳನ್ನು ಹೇಳುವುದಕ್ಕೆ ಪ್ರಾರಂಭಿಸಿ ಆ ದೇವತೆಗಳಲ್ಲಿ ಮರುತ್ತುಗಳಿಗೆ ಪ್ರಥಮಸ್ಥಾನವಿರುವುದೆಂದು ಹೇಳಿದಾರೆ. ಇವರು ರುದ್ರಪುತ್ರರೆಂದೂ ಋಗ್ವೇದದಲ್ಲಿ (ಋ. ಸಂ. ೧-೧೧೪-೬ ; ೫-೫೭-೧) ಅನೇಕಕಡೆ ಹೇಳಿದೆ. ಇವರ ಶಕ್ತಿಸಾಮರ್ಥ್ಯಗಳು ಅಪಾರವಾಗಿವೆ. ಆದ್ದರಿಂದ ಈ ಮರುದ್ದೇವತೆಗಳು ಯಜಮಾನನು ಸ್ವರ್ಗಕ್ಕೆ ಹೋಗದಂತೆ ಅವನನ್ನು ತಡೆಯುವುದಕ್ಕಾಗಲಿ, ನಾಶಪಡಿಸುವುದಕ್ಕಾಗಲಿ ಸಮರ್ಥರಾಗಿರುವರು. ಇವರಿಂದ ಯಜಮಾನನಿಗೆ ತೊಂದರೆಯುಂಟಾಗದಿರುವುದಕ್ಕಾಗಿ ಯಜ್ಞದಲ್ಲಿ ಹೋತೃವು ಮರುದ್ದೇವತೆಗಳನ್ನು ಪ್ರಶಂಸಿಸಿ **(ಸ್ವಸ್ತಿ ರಾಯೇ ಮರುತೋ ದಧಾತನ)** ಎಲೈ ಮರುತ್ತುಗಳೇ ಈ ಯಜ್ಞ ಮಾಡುವ ಯಜಮಾನನು ತನ್ನ ಶ್ರೇಯೋಽಭಿವೃದ್ಧಿಗಾಗಿಯೂ ಧನಾರ್ಥವಾಗಿಯೂ ನಿಮ್ಮನ್ನು ಪ್ರಾರ್ಥಿಸುತ್ತಾನೆ. ನೀವು ಅವನ ಪ್ರಾರ್ಥನೆಯನ್ನು ಅಂಗೀಕರಿಸಿ ಶ್ರೇಯಸ್ಸನ್ನುಂಟುಮಾಡಿ ಎಂದು ಯಜಮಾನನ ಪರವಾಗಿ ಮರುದ್ದೇವತೆಗಳಲ್ಲಿ ವಿಜ್ಞಾಪನೆ ಮಾಡುವನು. ಆದ್ದರಿಂದ ಮರುದ್ದೇವತೆಗಳು ಯಜ್ಞಫಲರೂಪವಾಗಿ ಸ್ವರ್ಗಕ್ಕೆ ಹೋಗುವ ಯಜಮಾನನಿಗೆ ಯಾವ ಅಡ್ಡಿಆತಂಕಗಳನ್ನೂ ಉಂಟುಮಾಡುವುದಿಲ್ಲ, ಅವನನ್ನು ನಾಶಪಡಿಸುವುದೂ ಇಲ್ಲ.

## ಸ್ವಸ್ತಿ ಹೈನಮತ್ಯರ್ಜಂತಿ ಸ್ವರ್ಗಂ ಲೋಕಮಭಿ ಯ ಏವಂ ವೇದ ॥

**ವೇದನಂ ಪ್ರಶಂಸತಿ । ಸ್ವರ್ಗಮಭಿಲಕ್ಷ್ಯ ಜಿಗಮಿಷುಮೇನಂ ವೇದಿತಾರಂ ಸ್ವಸ್ತಿ ಕ್ಷೇಮೋ ಯಥಾ ಭವತಿ ತಥಾ ಮರುತೋಽತಿಶಯೇನ ಪ್ರಾಪಯಂತಿ ।**

ಈರೀತಿ ಮರುತ್ಪ್ರಾರ್ಥನೆಯಿಂದ ಸಹಿತರಾಗಿ ಹೋಮಮಾಡುವ ವಿಧಾನವನ್ನು ತಿಳಿದಿರುವ ಯಜಮಾನನು ಶ್ರೇಯಸ್ಸನ್ನು ಪಡೆದು ಸ್ವರ್ಗಾಭಿಮುಖವಾಗಿ ತೆರಳುವನು. ಮರುದ್ದೇವತೆಗಳು ಈ ಯಜಮಾನನು ಸ್ವರ್ಗವನ್ನು ಪಡೆಯುವಂತೆ ಸಹಾಯಮಾಡುವರು.

## ವಿರಾಜಾವೇತಸ್ಯ ಹವಿಷಃ ಸ್ವಿಷ್ಟಿಕೃತಃ ಸಂಯಾಜ್ಯೇ ಸ್ಯಾತಾಂ ಯೇ ತಯಸ್ತ್ರಿಂಶದಕ್ಷರೇ ॥

**ಇತ್ಥಮುಕ್ತಾಃ ಪ್ರಧಾನಹವಿಷೋ ಯಾಜ್ಯಾನುವಾಕ್ಯಾಃ ಪ್ರಕಸ್ಯ ಸಂಯಾಜ್ಯೇ ವಿಧತ್ತೇ । ವಿರಾಟ್‌ಛಂದಸ್ಕಾನಾಂ ಬಹೂನಾಂ ವಿದ್ಯಮಾನತ್ವಾತ್ತ್ರಯಸ್ತ್ರಿಂಶದಕ್ಷರಶಬ್ದೇನ ತೇ ಋಚೌ ವಿಶೇಷ್ಯೇತೇ ।**

ಈರೀತಿ ಪ್ರಧಾನಹವಿಸ್ಸಿನ ಯಾಜ್ಯಾನುವಾಕ್ಯಾಮಂತ್ರಗಳನ್ನು ಪ್ರಶಂಸೆಮಾಡಿ ಈಗ ಸ್ವಿಷ್ಟಕೃದ್ಧೋಮದ ಸಂಯಾಜ್ಯಾ ಮಂತ್ರಗಳನ್ನು ವಿವರಿಸುವರು. ವಿರಾಟ್‌ಛಂದಸ್ಸಿನಲ್ಲಿ ಅನೇಕ ಭೇದಪ್ರಭೇದಗಳಿರುವುದಾದರೂ ಇಲ್ಲಿ ೩೩ ಅಕ್ಷರಗಳುಳ್ಳ ವಿರಾಟ್ ಛಂದಸ್ಸನ್ನು ಪ್ರಶಂಸಿಸಿ ಆ ಋಕ್ಕುಗಳಿಂದ ಸ್ವಿಷ್ಟಕೃದ್ಧೋಮದ ಸಂಯಾಜ್ಯಾಹುತಿಗಳನ್ನು ಅರ್ಪಿಸಬೇಕೆಂದು ತಿಳಿಸಲಾಗಿದೆ.

ಸೇದಗ್ನಿರಗ್ನೀರತ್ಯಸ್ತ್ವ ನ್ಯಾನ್ಸೇದಗ್ನಿರ್ಯೋ ವನುಷ್ಯತೋ ನಿಪಾ-
ತೀತೇತ್ಯೇ ॥

ತಯೋ ಋಚೋಃ ಪ್ರಥಮಪಾದಾವುದಾಹರತಿ

ಆ ಋಕ್ಕುಗಳು ಯಾವವೆಂದರೆ—

ಸೇದಗ್ನಿರಗ್ನೀರತ್ಯಸ್ತ್ವನ್ಯಾನ್ ಯತ್ರ ವಾಜೀ ತನಯೋ ವೀಳುಪಾಣಿಃ ।
ಸಹಸ್ರಪಥಾ ಅಕ್ಷರಾ ಸಮೇತಿ ॥ (ಋ. ಸಂ. ೭-೧-೧೪)
ಸೇದಗ್ನಿರ್ಯೋ ವನುಷ್ಯತೋ ನಿಪಾತಿ ಸಮೇದ್ಧಾರಮಂಹಸ ಉರುಷ್ಯಾತ್ ।
ಸುಜಾತಾಸಃ ಪರಿ ಚರಂತಿ ವೀರಾಃ ॥ (ಋ. ಸಂ. ೭-೧-೧೫)

ಎಂಬ ಈ ಎರಡು ಋಕ್ಕುಗಳು ವಿರಾಟ್‌ಛಂದಸ್ಕವು. ಇವು ಸ್ವಿಷ್ಟಕೃದ್ಧೋಮದ ಅನುವಾಕ್ಯಾ ಮತ್ತು ಯಾಜಾ (ಸಂಯಾಜ್ಯಾ) ಮಂತ್ರಗಳು [ಇವುಗಳಲ್ಲಿ ಮೂವತ್ತಮೂರು ಅಕ್ಷರಗಳಿಲ್ಲ ಆದರೆ ಸಂದಿಯನ್ನು ಪದವಿಭಾಗವನ್ನು ಮಾಡಿದರೆ ಮೂವತ್ತುಮೂರು ಅಕ್ಷರಗಳಾಗುವವು.]

ವಿರಾಡ್ಭ್ಯಾಂ ವಾ ಇಷ್ಟ್ವಾ ದೇವಾಃ ಸ್ವರ್ಗಂ ಲೋಕಮಜಯಂಸ್ತ-
ಥೈವೈತದ್ಯಜಮಾನೋ ವಿರಾಡ್ಭ್ಯಾ ಮಿಷ್ಟ್ವಾ ಸ್ವರ್ಗಂ ಲೋಕಂ
ಜಯತಿ ॥

ವಿರಾಜೌ ಪ್ರಶಂಸತಿ । ತಥೈವೈತದಿತಿ ದಾರ್ಷ್ಟಾಂತಿಕ ಪ್ರತಿಜ್ಞಾ ಯಜಮಾನ ಇತ್ಯಾ-ದಿಕಂ ತದ್ವಿವರಣಂ ।

ಹಿಂದೆ ದೇವತೆಗಳು ವಿರಾಟ್‌ಛಂದಸ್ಸಿನ ಸಂಯಾಜ್ಯಾಮಂತ್ರಗಳಿಂದ ಸ್ವಿಷ್ಟಕೃದ್ಧೋಮವನ್ನು ಮಾಡಿ ಸ್ವರ್ಗವನ್ನು ಪಡೆದರು. ಆದ್ದರಿಂದ ಆದರಂತೆ ಈ ವಿರಾಟ್‌ಛಂದಸ್ಸಿನ ಮಂತ್ರಗಳಿಂದ ಸಂಯಾಜ್ಯಾಹೋಮವನ್ನು ಮಾಡುವ ಯಜಮಾನನು ಸ್ವರ್ಗಲೋಕವನ್ನು ಪಡೆಯುತ್ತಾನೆ.

ತೇ ತ್ರಯಸ್ತ್ರಿಂಶದಕ್ಷರೇ ಭವತಸ್ತ್ರಯಸ್ತ್ರಿಂಶದ್ವೈ ದೇವಾ ಅಷ್ಟೌವಸವ
ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚ
ತತ್ಪ್ರಥಮೇ ಯಜ್ಞಮುಖೇ ದೇವತಾ ಅಕ್ಷರಭಾಜಃ ಕರೋತ್ಯ-
ಕ್ಷರೇಣಾಕ್ಷರೇಣೈವ ತದ್ದೇವತಾಂ ಪ್ರೀಣಾತಿ ದೇವಪಾತ್ರೇಣೈವ
ತದ್ದೇವತಾಸ್ತರ್ಪಯತಿ ॥ ೧೦ ॥

ಋಚೋರವಸ್ಥಿತಾಮಕ್ಷರಸಂಖ್ಯಾಂ ಪ್ರಶಂಸತಿ । ವಷಟ್ಕಾರೋ ದೇವತಾವಿಶೇಷಃ । ತತ್ತಥಾ ಸತಿ ದೇವತಾನಾಮಕ್ಷರಾಣಾಂ ಚ ಸಂಖ್ಯಾಸಾಮ್ಯೇ ಸತಿ । ಯಜ್ಞಮುಖಂ ಯಜ್ಞೋ-ಪಕ್ರಮಃ । ಸ ಚ ಸುತ್ಯಾದಿನೇ ಪ್ರಾತರನುವಾಕಾದಿನಾ ಭವಿಷ್ಯತಿ । ತದಪೇಕ್ಷಯಾ ಪ್ರಾಯ-

ಣೀಯೇಷ್ಟಿಃ ಪ್ರಥಮಂ ಯಜ್ಞಮುಖಂ । ತಸ್ಮಿನ್ಯಜ್ಞಮುಖೇ ವಸ್ವಾದಿಕಾಃ ಸರ್ವದೇವತಾ ಸಂಖ್ಯಾಸಾಮ್ಯಾದಕ್ಷರಭಾಜಃ ಕರೋತಿ । ತತ್ರೇನ ದೇವತಾನಾಮಕ್ಷರಪ್ರಾಪಣೇನೈಕೈಕಾಂ ದೇವತಾಮೇಕೈಕೇನಾಕ್ಷರೇಣ ತೋಷಯತಿ । ದೇವಾನಾಂ ಪಾತ್ರಂ ಫಲಮೇಕೈಕಮಕ್ಷರಂ ತೇನೈವ ಪಾತ್ರೇಣ ತತ್ತದಾನೀಂ ದೇವತಾಸ್ತರ್ಪಯತಿ ಪ್ರೀಣಾತೀತ್ಯಸ್ಯೈವ ವಿವರಣಮೇತತ್ ।

ಈ ವಿರಾಟ್‌ಛಂದಸ್ಸಿನಲ್ಲಿರುವ ಮೂವತ್ತಮೂರು ಅಕ್ಷರಗಳ ಪ್ರತೀಕವೇನು ಎಂಬುದನ್ನು ತಿಳಿಸಿ ಅದನ್ನು ಪ್ರಶಂಸಿಸುವರು. ವಷಟ್ಕಾರವೆಂದರೆ ಹೋಮಮಾಡುವಾಗ ಯಾಜ್ಯಾಮಂತ್ರದ ಕೊನೆಯಲ್ಲಿ **ವೌಷಟ್** ಎಂದು ಪಠಿಸುವ ಶಬ್ದವು. ಇದನ್ನು ಇಲ್ಲಿ ಒಂದು ದೇವತೆಯೆಂದು ಭಾವಿಸಲಾಗಿದೆ. ವಿರಾಟ್‌ಛಂದಸ್ಸಿನಲ್ಲಿರುವ ಮೂವತ್ತಮೂರು ಅಕ್ಷರುಗಳು ಮೂವತ್ತಮೂರು ಪ್ರತ್ಯೇಕ ದೇವತೆಗಳನ್ನು ಸೂಚಿಸುವುದು. ಎಂಟು ವಸುಗಳು, ಹನ್ನೊಂದು ಮಂದಿ ರುದ್ರರು, ಹನ್ನೆರಡು ಮಂಡಿ ಆದಿತ್ಯರು, ಪ್ರಜಾಪತಿ ಮತ್ತು ವಷಟ್ಕಾರ ಇವು ಸೇರಿದರೆ ಮೂವತ್ತಮೂರು ದೇವದೆಗಳಾಗುವವು. ಮುಖ್ಯದೇವತೆಗಳ ಸಂಖ್ಯೆಯು ೩೩ ಎಂದು ಯೇ ದೇವಾಸೋ ದಿವಿ (ಋ. ಸಂ. ೧-೧೩೯-೧೧) ಇತ್ಯಾದಿ ಸ್ಥಳಗಳಲ್ಲಿ ಹೇಳಿದೆ. ಈ ಅಕ್ಷರ ಸಂಖ್ಯೆಗೆ ಅನುಸಾರವಾಗಿ ಯಜ್ಞಮುಖೇ ಎಂದರೆ ಯಜ್ಞಾರಂಭದಲ್ಲಿ ಮಾಡುವ ಪ್ರಾಯಣೀಯೇಷ್ಟಿಯಲ್ಲಿ ವಿರಾಟ್‌ಛಂದಸ್ಸಿನ ಸಂಯಾಜ್ಯಾಮಂತ್ರಗಳಿಂದ ಹೋಮಮಾಡಿದರೆ ಮೂವತ್ತುಮೂರು ದೇವತೆಗಳನ್ನು ತೃಪ್ತಿಪಡಿಸುದಂತಾಗುವುದು. ಪ್ರತಿಯೊಂದು ಅಕ್ಷರವೂ ಒಂದೊಂದು ದೇವತೆಯೂ ಆಹಾರವನ್ನು ಸ್ವೀಕರಿಸುವ ಒಂದೊಂದು ಪಾತ್ರೆಯೆಂದು ತಿಳಿಯಬೇಕು. ಆದ್ದರಿಂದ ಮೂವತ್ತಮೂರು ಅಕ್ಷರಸಹಿತವಾದ ಸಂಯಾಜ್ಯಾಮಂತ್ರಗಳ ಹೋಮದಿಂದ ಮೂವತ್ತಮೂರು ದೇವತೆಗಳನ್ನು ಮೂವತ್ತುಮೂರು ಪಾತ್ರೆಗಳಲ್ಲಿರುವ ಹವಿರ್ಭಾಗದಿಂದ ಯಜಮಾನನು ತೃಪ್ತಿಪಡಿಸುವನೆಂದು ತಿಳಿಯಬೇಕು. [ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು ಇವರು ಯಾರು, ಇವರ ಹೆಸರುಗಳೇನು ಎಂಬುದನ್ನು ಮಹಾಭಾರತದ ಆದಿಪರ್ವದ ೧೨೪ ನೇ ಅಧ್ಯಾಯದ ೫೫-೫೮ ಶ್ಲೋಕಗಳಲ್ಲಿ ಈರೀತಿ ತಿಳಿಸಿದೆ—

ವಸ್ವಾದಯಶ್ಚ ಕಥಿತಾ ಭಾರತೇಽರ್ಜುನಜನ್ಮನಿ ।
ಧರೋ ಧ್ರುವಶ್ಚ ಸೋಮಶ್ಚ ಅಪವಶ್ಚಾನಿಲೋಽನಲಃ ।
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವಶ್ಚಾವತಸ್ಥಿರೇ ॥
ಮೃಗವ್ಯಾಧಶ್ಚ ಶರ್ವಶ್ಚ ನಿರ್ಋತಿಶ್ಚ ಮಹಾಯಶಾಃ ।
ಅಜೈಕಪಾದಹಿರ್ಬುಧ್ನಿಃ ಪಿನಾಕೀ ಚ ಪರಂತಪ ॥
ಭವನೋಽಥೇಶ್ವರಶ್ಚೈವ ಕಪಾಲೀ ಚ ವಿಶಾಂ ಪತೇ ।
ಸ್ಥಾಣುರ್ಭಗಶ್ಚ ಭಗವಾನ್ ರುದ್ರಾಸ್ತತ್ರಾವತಸ್ಥಿರೇ ॥
ಧಾತಾರ್ಯಮಾ ಚ ಮಿತ್ರಶ್ಚ ವರುಣೋಽಂಶೋ ಭಗಸ್ತಥಾ ।
ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಃ ಸ್ಮೃತಃ ।
ತತಸ್ತ್ವಷ್ಟಾ ತತೋ ವಿಷ್ಣುರಜಘನ್ಯೋ ಜಘನ್ಯಜಃ ।
ಇತ್ಯೇತೇ ದ್ವಾದಶಾದಿತ್ಯಾ ಜ್ವಲಂತಃ ಸೂರ್ಯವರ್ಚಸಃ ॥

ಇಲ್ಲಿ ಹೇಳಿರುವ ಹೆಸರುಗಳಿಗೂ ಇತರ ಗ್ರಂಥಗಳಲ್ಲಿ ಹೇಳಿರುವ ಹೆಸರುಗಳಿಗೂ ಸ್ವಲ್ಪ ವ್ಯತ್ಯಾಸವು ಕಂಡುಬರುವುದು. ಇದರಂತೆ—

ಅಷ್ಟವಸುಗಳು—ಧರ, ಧ್ರುವ. ಸೋಮ, ಅಪವ, ಅನಿಲ, ಅನಲ, ಪ್ರತ್ಯೂಷ ಮತ್ತು ಪ್ರಭಾಸ.

ಏಕಾದಶರುದ್ರರು—ಮೃಗವ್ಯಾಧ, ಶರ್ವ, ನಿರ್ಋತಿ, ಅಜೈಕಪಾತ್, ಅಹಿರ್ಬುಧ್ನ್ಯ ಪಿನಾಕೀ, ಭವ, ಈಶ್ವರ, ಕಾಪಾಲೀ, ಸ್ಥಾಣು, ಭಗ.

ದ್ವಾದಶಾದಿತ್ಯರು ಧಾತಾ, ಅರ್ಯಮಾ, ಮಿತ್ರ, ವರುಣ, ಅಂಶ, ಭಗ, ಇಂದ್ರ ವಿವಸ್ವಾನ್, ಪೂಷಾ, ಪರ್ಜನ್ಯ ತ್ವಷ್ಟಾ, ವಿಷ್ಣು.

*English Translation*

These verses used as Anuvakyas and Vajyas at this offering (the Prayaniya Ishti) contain the words, pra, forward, forth to carry; pathin, path, svasti, welfare. The gods after having performed an Ishti by means of these verses, gained the celestial world. Likewise a sacrificer, after having done the same, gains the celestial world. Among these verses there is a pada (a foot, here the last quarter verse of 10, 63, 15): "O Maruts grant prosperity in wealth" The Maruts are the Vasiyas (the subjects) of the gods, and are domiciled in the air (By these words just mentioned) the sacrificer who goes to heaven is to be announced to them (the Maruts). For they have the power of preventing him (from going up) or even of killing him. By the words, "O Maruts, grant prosperity," &c, the Hotar announces the sacrificer (his projected journey up to the celestial world) to the Vaisyas (the sibjects) of the gods. The Maruts then neither prevent nor kill him who goes to the celestial world. He who has such a knowledge is allowed a safe passage up th the celestial world by them.

The two Samyajya verses required for the Svishtakrit (of the Prayaniya-ishti) ought to be in the Viraj metre, which consists of thirty-three syllables. These are: sed agnir agnimr (7, 1, 14) and sed agnir yo (7, 1, 15). The gods after having used for their Samyajyas two verses in the Viraj metre gained the celestial world. Likewise does not sacrificer gain heaven who uses also two verses in the Viraj metre (when performing the Svishtakrit of the Prayanjya ishti). They (each of them) contain thirty-three syllables. For these are thirty-three gods, viz., eight Vasus, eleven Rudras, twelve Adityas (one) Prajapati,) and one Vashat-kara. In this way the Hotar makes the gods participate at the very first beginning of the sacrifice in the (33) syllables of the mantra recited; for each syllable is (as it were) a plate for the gods, by which the sacrificer makes (all) deities pleased and satiates them.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಿತೀಯಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎರಡನೆಯ ಅಧ್ಯಾಯದ ನಾಲ್ಕನೆಯ ಖಂಡವು ಸಮಾಪ್ತವಾದುದು.

# ಅಥ ದ್ವಿತೀಯಾಧ್ಯಾಯೇ ಪಂಚಮಃ ಖಂಡಃ

## ಎರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಪ್ರಯಾಜಾ ಮತ್ತು ಅನುಯಾಜ ಹೋಮಗಳ ವಿಷಯದಲ್ಲಿಯೂ ಪ್ರಾಯಣೀಯೇಷ್ಟಿಯ ಮತ್ತು ಉದಯನೀಯೇಷ್ಟಿಯ ಯಾಜ್ಯಾಪುರೋನುವಾಕ್ಯಾಮಂತ್ರಗಳ ಬದಲಾವಣೆ ಮುಂತಾದ ವಿಶೇಷ ಸಂಗತಿಗಳು]

---

**ಪ್ರಯಾಜವದನನುಯಾಜಂ ಕರ್ತವ್ಯಂ ಪ್ರಾಯಣೀಯಮಿತ್ಯಾಹು-ರ್ಹೀನಮಿವ ವಾ ಏತದೀಂಖಿತಮಿವ ಯತ್ಪ್ರಾಯಣೀಯಸ್ಯಾ-ನುಯಾಜಾ ಇತಿ ||**

ಸಂಯಾಜ್ಯೇ ವಿಧಾಯ ಪ್ರಯಾಜಾನೂಯಾಜವಿಷಯೇ ಕಿಂಚಿದ್ವಿಶೇಷವಿಧಾನಂ ಪೂರ್ವಪಕ್ಷತ್ವೇನ ಶಾಖಾಂತರೀಯಮತಮುಪನ್ಯಸ್ಯತೇ । ಪ್ರಾಯಣೀಯೇಷ್ಟೇರ್ದರ್ಶಪೂರ್ಣಮಾಸವಿಕೃತಿತ್ವಾಚ್ಚೋದಕೇನ ಪ್ರಯಾಜಾ ಅನೂಯಾಜಾಶ್ಚ ಪ್ರಾಪ್ತಾಃ ಸಮಿಧೋ ಅಗ್ನ ಆಜ್ಯಸ್ಯೇತ್ಯಾದ್ಯಾ ಮಂತ್ರಸಾಧ್ಯಾ ಯೇ ಪ್ರಯಾಜಾ ದೇವಂ ಬರ್ಹಿರಿತ್ಯಾದ್ಯಾ ಮಂತ್ರಸಾಧ್ಯಾಸ್ತ್ರಯೋಽನೂಯಾಜಾಪ್ರಾಯಣೀಯಾಖ್ಯಂ ಕರ್ಮ ಪ್ರಯಾಜೋಪೇಕಮನೂಯಾಜವರ್ಜಿತಂ ಕರ್ತವ್ಯಮಿತಿ ಶಾಖಾಂತರೀಯಾ ಆಹುಃ । ತತ್ರೈಷಾ ಯುಕ್ತಿಃ ಪ್ರಾಯಣೀಯಸ್ಯಾನೂಯಾಜಾ ಇತಿ ಯದಸ್ತಿ ತದೇತದ್ಧೀನಮಿವ ವೈ ಸಸ್ಯೈವ ವ್ಯಾಖ್ಯಾನಮೀಂಖಿತಮಿವೇತಿ ವಿಲಂಬಿತಮಿತ್ಯರ್ಥಃ । ಅನೂಯಾಜೇಷ್ವಿಜ್ಯಮಾನೇಷು ಕರ್ಮಣಿ ವಿಲಂಬೋ ಭವೇತ್ತಸ್ಮಾನ್ನ ಯಷ್ಟವ್ಯಾ ಅನೂಯಾಜಾಃ । ಇತಿಶಬ್ದಃ ಪೂರ್ವಸಮಾಪ್ತ್ಯರ್ಥಃ । ಯಥಾ ಪ್ರಾಯಣೀಯೇ ಕರ್ಮಣ್ಯನೂಯಾಜಾ ವರ್ಜ್ಯಂತೇ ತಥೈವೋದಯನೀಯೇ ಕರ್ಮಣಿ ಪ್ರಯಾಜಾ ವರ್ಜನೀಯಾ ಇತಿ ಪೂರ್ವಾಭಿಪ್ರಾಯಃ । ತಮೇತಂ ತೈತ್ತಿರೀಯಾ ವಿಸ್ಪಷ್ಟಮಾಮನಂತಿ—ಪ್ರಯಾಜವದನನೂಯಾಜಂ ಪ್ರಾಯಣೀಯಂ ಕಾರ್ಯಮನೂಯಾಜವದಪ್ರಯಾಜಮುದಯನೀಯಂ ಇತಿ ।

ಇದುವರೆಗೆ ಪ್ರಾಯಣೀಯೇಷ್ಟಿಯ ಸಂಯಾಜ್ಯಾಮಂತ್ರಗಳನ್ನು ವಿವರಿಸಿದ್ದಾಯಿತು. ಈಗ ಪ್ರಯಾಜ ಮತ್ತು ಅನೂಯಾಜ ಹೋಮಗಳ ವಿಷಯದಲ್ಲಿ ಕೆಲವು ವಿಶೇಷಗಳನ್ನು ಹೇಳುವುದಕ್ಕಾಗಿ ಶಾಖಾಂತರದಲ್ಲಿ ಹೇಳಿರುವ ಅಭಿಪ್ರಾಯವನ್ನು ಪೂರ್ವಪಕ್ಷರೂಪವಾಗಿ ವಿವರಿಸುವರು. ಶಾಖಾಂತರವನ್ನು (ಋಗ್ವೇದವಲ್ಲದ ಬೇರೆ ವೇದದ ಶಾಖೆಯನ್ನು) ಅನುಸರಿಸುವ ಕೆಲವರು ಈರೀತಿ ಹೇಳುವರು—ಪ್ರಾಯಣೀಯೇಷ್ಟಿಯು ದರ್ಶಪೂರ್ಣಮಾಸೇಷ್ಟಿಯ ವಿಕೃತಿಸ್ವರೂಪವಾಗಿರುವುದು. ಆದ್ದರಿಂದ

ಇದರಲ್ಲಿ ಪ್ರಯಾಜ ಮತ್ತು ಅನೂಯಾಜ ಹೋಮಗಳಿರುವವು. ಇವುಗಳಾವುವೆಂದರೆ– **ಸಮಿಧೋ ಅಗ್ನ ಆಜ್ಯಸ್ಯ ವಿಯಂತು** (ತೈ. ಬ್ರಾ. ೩-೫-೫-೧ ರಿಂದ ೫) ಎಂಬ ಐದು ಮಂತ್ರಗಳು ಪಂಚಪ್ರಯಾಜಮಂತ್ರಗಳು; **ದೇವಂ ಬರ್ಹಿಃ** (ತೈ. ಬ್ರಾ. ೩-೫-೯-೧, ೧, ೨, ೩) ಎಂಬ ಮೂರು ಮಂತ್ರಗಳು ಅನೂಯಾಜ ಮಂತ್ರಗಳು. ಈ ಪ್ರಾಯಣೀಯೇಷ್ಟಿಯೆಂಬ ಕರ್ಮವನ್ನು ಮಾಡುವಾಗ ಪ್ರಾರಂಭದಲ್ಲಿ ಪ್ರಯಾಜಹೋಮಸಹಿತವಾಗಿ ಮಾಡಬೇಕು. ಕೊನೆಯಲ್ಲಿ ಅನೂಯಾಜ ಹೋಮಗಳನ್ನು ಮಾಡಕೂಡದು ಎಂದು ಹೇಳುವರು. ಏಕೆಂದರೆ ಪ್ರಾಯಣೀಯೇಷ್ಟಿಯಲ್ಲಿ ಅನೂಯಾಜಹೋಮವು **ಹೀನಮಿವ ವೈ**– ಇಲ್ಲದಂತೆಯೇ, ರಹಿತವಾಗಿಯೇ ಇರುವುದು. ಇದನ್ನು ಮಾಡುವುದರಿಂದ ಕಾಲವು ವ್ಯರ್ಥವಾಗಿ ಕರ್ಮವು ವಿಲಂಬಿತ ಎಂದರೆ ನಿಧನವಾಗುವುದು ಮತ್ತು ಅನುಯಾಜಹೋಮಗಳನ್ನು ಮಾಡುವ ಕರ್ಮಗಳು ವಿಲಂಬಿತ ಎಂದರೆ ನಿಧಾನವಾಗಿ ಸಾಗುವವು. ಆದ್ದರಿಂದ ಈ ಅನುಯಾಜ ಹೋಮಗಳನ್ನು ಮಾಡಬೇಕಾಗಿಲ್ಲ ಎಂದು—ಇದಲ್ಲದೆ ಪ್ರಾಯಣೀಯೇಷ್ಟಿಯಲ್ಲಿ ಅನುಯಾಜಹೋಮಗಳಿಲ್ಲದಿರುವುದರಿಂದ ಉದಯನೀಯೇಷ್ಟಿಯಲ್ಲಿ ಪ್ರಯಾಜ ಹೋಮಗಳೂ ಇರಕೂಡದು. ಪ್ರಾಯಣೀಯೇಷ್ಟಿಯಲ್ಲಿ ಪ್ರಯಾಜಹೋಮಗಳು ಮಾತ್ರವಿದ್ದು ಅನುಯಾಜಹೋಮಗಳಿಲ್ಲದಿರುವಂತೆ ಉದಯನೀಯೇಷ್ಟಿಯಲ್ಲಿ ಅನುಯಾಜಹೋಮಗಳು ಮಾತ್ರವಿರಬೇಕು ಪ್ರಯಾಜಹೋಮಗಳಿರಕೂಡದು. ಇದು ಪೂರ್ವಪಕ್ಷವು. ಈ ವಿಷಯದಲ್ಲಿ ತೈತ್ತಿರೀಯ ಶ್ರುತಿಯು ಈರೀತಿ ತಿಳಿಸುವುದು—

**ಪ್ರಯಾಜವದನನುಯಾಜಂ ಪ್ರಾಯಣೀಯಂ ಕಾರ್ಯಮನುಯಾಜವದಪ್ರಯಾ-ಜಮುದಯನೀಯಂ ॥**

(ತೈ. ಸಂ. ೬-೧-೫-೩)

ಎಂದರೆ ಪ್ರಾಯಣೀಯೇಷ್ಟಿಯಲ್ಲಿ ಪ್ರಯಾಜಹೋಮವನ್ನು ಮಾತ್ರ ಮಾಡಿ ಅನುಯಾಜ ಹೋಮವನ್ನು ಬಿಡಬೇಕು; ಉದಯನೇಷ್ಟಿಯಲ್ಲಿ ಅನುಯಾಜಹೋಮವಿರಬೇಕು, ಪ್ರಯಾಜಹೋಮವಿರಕೂಡದು ಎಂದು. ಇದು ಪೂರ್ವಪಕ್ಷಾಭಿಪ್ರಾಯವು.

## ತತ್ತನ್ನಾದೃತ್ಯಂ ಪ್ರಯಾಜವದೇವಾನುಯಾಜವತ್ಕರ್ತವ್ಯಂ ॥

**ಸ್ಪೋಕ್ತಂ ಪೂರ್ವಪಕ್ಷಂ ನಿರಾಚಷ್ಟೇ । ತಸ್ಮಿನ್ಪ್ರಾಯಣೀಯೇ ಕರ್ಮಣಿ ತತ್ಕರ್ಮಾ-ನುಯಾಜವರ್ಜನರೂಪಂ ನಾದರಣೀಯಂ ।**

ಮೇಲೆ ಹೇಳಿದ ಪೂರ್ವಪಕ್ಷದ ಅಭಿಪ್ರಾಯವನ್ನ ನಿರಾಕರಿಸಿ ಸ್ವಪಕ್ಷಸಿದ್ಧಾಂತವನ್ನು ಹೇಳುವರು. ಮೇಲೆ ಹೇಳಿದ ಪೂರ್ವಪಕ್ಷಾಭಿಪ್ರಾಯವು ಸ್ವೀಕಾರರ್ಹವಲ್ಲ. ಎಂದರೆ ಅನುಯಾಜ ಹೋಮವರ್ಜನರೂಪವಾದ ಉದಯನೇಷ್ಟಿಯು ಸ್ವೀಕಾರರ್ಹವಲ್ಲ. ಆದ್ದರಿಂದ ಇತರ ಇಷ್ಟಿಗಳಂತೆ ಪ್ರಾಯಣೀಯೇಷ್ಟಿಯಲ್ಲಿ ಪ್ರಯಾಜಹೋಮವನ್ನು ಉದಯನೀಯೇಷ್ಟಿಯಲ್ಲಿ ಅನುಯಾಜಹೋಮವನ್ನು ಮಾಡಬೇಕು.

## ಪ್ರಾಣಾ ವೈ ಪ್ರಯಾಜಾಃ ಪ್ರಜಾನುಯಾಜಾಃ ಯತ್ಪ್ರಯಾಜಾನನ್ತರಿ-ಯಾತ್ಪ್ರಾಣಾಂಸ್ತದ್ಯಜಮಾನಸ್ಯಾನ್ತರಿಯಾದ್ಯದನುಯಾಜಾನನ್ತ-ರಿಯಾತ್ಪ್ರಜಾಂ ತದ್ಯಜಮಾನಸ್ಯಾನ್ತರಿಯಾತ್ ॥

ವರ್ಜನೇ ಬಾಧಮುಪನ್ಯಸ್ಯತಿ । ಪ್ರಥಮಶಬ್ದಸಾಮಾನ್ಯಾತ್ಪ್ರಥಮಭಾವಿತ್ವಾದ್ವಾ ಪ್ರಯಾಜಾ ಯಜಮಾನಸ್ಯ ಪ್ರಾಣರೂಪಾಃ । ಪಶ್ಚಾದ್ಭಾವಿತ್ವಾದನುಯಾಜಾಃ ಪುತ್ರಾದಿರೂಪಾಃ । ಯದಾ ಪ್ರಯಾಜಾ ವರ್ಜ್ಯಂತೇ ತದಾ ಯಜಮಾನಸಂಬಂಧಿನಾಂ ಪ್ರಾಣಾನಾಮಂತರಾಯೋ ವಿಚ್ಛೇದಃ ಸ್ಯಾತ್ । ಅನುಯಾಜವರ್ಜನೇ ಪುತ್ರಾದಿವಿಚ್ಛೇದಃ । ಅಯಮೇವ ಪೂರ್ವಪಕ್ಷಬಾಧಸ್ತೈತ್ತಿರೀಯೈರಾಮ್ನಾತಃ—ತತ್ತಥಾ ನ ಕಾರ್ಯಮಾತ್ಮಾ ವೈ ಪ್ರಯಾಜಾಃ ಪ್ರಜಾನೂಯಾಜಾ ಯತ್ಪ್ರಯಾಜಾನಂತರಿಯಾದಾತ್ಮಾನಮಂತರಿಯಾದ್ಯದನೂಯಾಜಾನಂತರಿಯಾತ್ಪ್ರಜಾಮಂತರಿಯಾತ್ ಇತಿ । ಯದ್ಯಪಿ ಪ್ರಾಯಣೀಯೇ ಪ್ರಯಾಜವರ್ಜನಪ್ರಸಕ್ತಂ ತಥಾಪ್ಯುದಯನೀಯೇ ತೈತ್ತಿರೀಯೋಪನ್ಯಸ್ತಂ ಪ್ರಯಾಜವರ್ಜನಮಭಿಪ್ರೇತ್ಯಾಯಂ ಬಾಧೋಪನ್ಯಾಸಃ ।

ಉದಯನೀಯೇಷ್ಟಿಯಲ್ಲಿ ಅನುಯಾಜಹೋಮವರ್ಜನದಿಂದ ಉಂಟಾಗುವ ಬಾಧಕವನ್ನು ವಿವರಿಸುವರು—ಪ್ರಯಾಜ ಶಬ್ದದಲ್ಲಿಯೂ ಪ್ರಾಣಶಬ್ದದಲ್ಲಿ ಪ್ರ ಎಂಬ ಮೊದಲ ಪದವು ಸಾಮಾನ್ಯವಾಗಿರುವುದು. ಎಂದರೆ ಪ್ರಶಬ್ದವು ಎರಡರಲ್ಲಿಯೂ ಇರುವುದು. “ ಪ್ರಾಣಸ್ಥಾನೀಯಾಃ ಪ್ರಯಾಜಾಃ ಪಂಚತ್ವಾನ್ನಯಾತ್ ” ಎಂದು ಭಟ್ಟಭಾಸ್ಕರರು ಹೇಳಿರುವರು. ಪ್ರಾಣಗಳು ಐದು, ಪ್ರಯಾಜಾಮಂತ್ರಗಳೂ ಐದು. ಆದ್ದರಿಂದ ಪ್ರಯಾಜಮಂತ್ರಗಳು ಪ್ರಾಣಸದೃಶವಾಗಿರುವವು ಎಂದು. ಆತ್ಮಾ ವೈ ಪ್ರಯಾಜಾಃ (ತೈ. ಸಂ. ೩-೧-೫-೪) ಎಂದು ಹೇಳಿರುವುದರಿಂದ ಪ್ರಯಾಜ ಮಂತ್ರಗಳು ಯಜ್ಞ ಮಾಡುವ ಯಜಮಾನನ ಪ್ರಾಣರೂಪವಾಗಿರುವವು. ಅನುಯಾಜ ಮಂತ್ರಗಳನ್ನು ಕೊನೆಯಲ್ಲಿ ಉಪಯೋಗಿಸುವುದರಿಂದ ಅವು ಯಜಮಾನನ (ಪ್ರಜಾ) ಪುತ್ರಾದಿರೂಪವಾಗಿರುವವು. ತಂದೆಯ ಅನಂತರ ಪುತ್ರರು. ಆದ್ದರಿಂದ ಯಜ್ಞದ ಮೊದಲಿನಲ್ಲಿ ಉಪಯೋಗಿಸಲ್ಪಡುವ ಪ್ರಯಾಜಮಂತ್ರಗಳು ತಂದೆಯಾದ ಯಜಮಾನನನ್ನು ಪ್ರತಿನಿಧಿಸುವವು. ಅನಂತರ ಎಂದರೆ ಕೊನೆಯಲ್ಲಿ ಉಪಯೋಗಿಸಲ್ಪಡುವ ಅನುಯಾಜಮಂತ್ರಗಳ (ತಂದೆಯಿಂದ ಉತ್ಪನ್ನರಾಗುವ ಎಂದರೆ) ಯಜಮಾನನ ಪುತ್ರಾದಿಸಂತತಿಯನ್ನು ನಿರ್ದೇಶಿಸುವುವು. ಹೀಗಿರುವುದರಿಂದ ಯಜಮಾನನ ಪ್ರಾಣರೂಪವಾದ ಪ್ರಯಾಜಮಂತ್ರಗಳನ್ನು ವರ್ಜಿಸಿದರೆ ಎಂದರೆ ಪ್ರಯಾಜ ಹೋಮಗಳನ್ನು ಮಾಡದಿದ್ದರೆ ಯಜಮಾನನ ಪ್ರಾಣಕ್ಕೆ ಅಪಾಯವು ತಟ್ಟುವುದು. (ಎಂದರೆ ಮೃತನಾಗುವನು). ಆದರಂತೆಯೇ ಪುತ್ರಾದಿಗಳ ಪ್ರಾಣರೂಪವಾದ ಅನುಯಾಜಹೋಮಗಳನ್ನು ಮಾಡದೆ ಬಿಟ್ಟರೆ ಯಜಮಾನನ ಪುತ್ರಾದಿಗಳ ಪ್ರಾಣಕ್ಕೆ ಹಾನಿಯುಂಟಾಗುವುದು. ಆದ್ದರಿಂದ ಯಜಮಾನ ಮತ್ತು ಅವನ ಪುತ್ರಾದಿ ಸಂತತಿಗೆ ಹಾನಿಯು ಉಂಟಾಗದಿರುವುದಕ್ಕಾಗಿ ಪ್ರಯಾಜ ಮತ್ತು ಅನುಯಾಜಹೋಮಗಳನ್ನು ಬಿಡದೆ ಮಾಡಬೇಕು. ಈ ವಿಷಯವು ತೈತ್ತಿರೀಯಸಂಹಿತೆಯಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ–

ತತ್ತಥಾ ನ ಕಾರ್ಯಮಾತ್ಮಾ ವೈ ಪ್ರಯಾಜಾಃ ಪ್ರಜಾನೂಯಾಜಾಃ ಯತ್ಪ್ರಯಾಜಾನಂತರಿಯಾದಾತ್ಮಾನಮಂತರಿಯಾದ್ಯದನೂಯಾಜಾನಂತರಿಯಾತ್ಪ್ರಜಾಮಂತರಿಯಾತ್॥

(ತೈ ಸಂ. ೬-೧-೫-೪)

ಎಂದರೆ ಪ್ರಯಾಜಗಳೇ ಯಜಮಾನನ ಆತ್ಮಾ ಎಂದರೆ ಪ್ರಾಣ, ಅನುಯಾಜಗಳು ಅವನ (ಪ್ರಜೆಯ) ಪುತ್ರಾದಿಗಳ ಪ್ರಾಣ; ಆದ್ದರಿಂದ ಪ್ರಯಾಜಹೋಮಗಳನ್ನು ಮಾಡದಿದ್ದರೆ ಯಜಮಾನನಿಗೂ ಅನುಯಾಜಹೋಮಗಳನ್ನು ಮಾಡದಿದ್ದರೆ ಅವನ ಮಕ್ಕಳಿಗೂ ಹಾನಿಯುಂಟಾಗುವುದು. ಆದ್ದರಿಂದ ಈರೀತಿ ಹಾನಿಯುಂಟಾಗದಂತೆ ಮಾಡಬೇಕು.

## ತಸ್ಮಾತ್ಪ್ರಯಾಜವದೇವಾನುಯಾಜವತ್ಕರ್ತವ್ಯಂ ॥

**ಇತ್ಥಂ ಪೂರ್ವಪಕ್ಷೇ ಬಾಧಮುಪನ್ಯಸ್ಯ ಚೋದಕೈಃ ಪ್ರಾಪ್ತಸ್ಯೋಭಯಾನುಷ್ಠಾನಸ್ಯ ಪ್ರತಿಪ್ರಸವರೂಪಂ ಸಿದ್ಧಾಂತಂ ವಿಧತ್ತೇ । ಯಸ್ಮಾದನ್ಯತರತ್ಯಾಗೇ ಬಾಧಸ್ತಸ್ಮಾದಿತ್ಯರ್ಥಃ । ತೈತ್ತಿರೀಯಾ ಅಪ್ಯೇತದಾಮನಂತಿ — ಪ್ರಯಾಜವದೇವಾನೂಯಾಜವತ್ಪ್ರಾಯಣೀಯಂ ಕಾರ್ಯಂ ಪ್ರಯಾಜವದನೂಯಾಜವದುದಯನೀಯಂ ಇತಿ । ಅತ್ರ ಸರ್ವತ್ರೈತರೇಯಪಾಠೇಽನುಯಾಜ ಇತಿ ಹ್ರಸ್ವ ಉಕಾರಃ । ತೈತ್ತಿರೀಯಪಾಠೇ ದೀರ್ಘ ಇತಿ ವಿವೇಕಃ ।**

ಆದ್ದರಿಂದ ಪ್ರಯಾಜ ಮತ್ತು ಅನುಯಾಜಹೋಮಗಳಲ್ಲಿ ಯಾವುದನ್ನೂ ಬಿಡಕೂಡದು. ಎರಡನ್ನೂ ಮಾಡಬೇಕು. ಈ ವಿಷಯದಲ್ಲಿಯೂ ತೈತ್ತಿರೀಯಸಂಹಿತೆಯೂ—

**ಪ್ರಯಾಜವದೇವಾನೂಯಾಜವತ್ಪ್ರಾಯಣೀಯಂ ಕಾರ್ಯಂ ಪ್ರಯಾಜವದನೂಯಾಜವದುದಯನೀಯಂ ॥**

(ತೈ. ಸಂ. ೬-೧-೫-೫)

ಆದ್ದರಿಂದ ಪ್ರಾಯಣೀಯೇಷ್ಟಿಯಲ್ಲಿ ಪ್ರಯಾಜಹೋಮಗಳನ್ನು ಮಾಡುವಂತೆಯೇ ಉದಯನೀಯೇಷ್ಟಿಯಲ್ಲಿ ಅನುಯಾಜ ಹೋಮಗಳನ್ನು ಮಾಡಬೇಕು. ಋಗ್ವೇದ ಮತ್ತು ಐತರೇಯಬ್ರಾಹ್ಮಣಗಳಲ್ಲಿ ಅನುಯಾಜವೆಂಬ ಪಾಠವೂ ತೈತ್ತಿರೀಯಾದಿ ಸಂಹಿತೆಗಳಲ್ಲಿ ಅನೂಯಾಜವೆಂಬ ಪಾಠವೂ ಬಳಕೆಯಲ್ಲಿರುವುದು. ನು ಎಂಬ ಅಕ್ಷರದಲ್ಲಿರುವ ಉ, ಊ ಎಂಬ ಹ್ರಸ್ವ ಅಥವಾ ದೀರ್ಘಸ್ವರದಿಂದ ಪಾಠಭೇದವಿರುವುದೇ ವಿನಹ ಅರ್ಥವ್ಯತ್ಯಾಸವೇನೂ ಆಗುವುದಿಲ್ಲ.

## ಪತ್ನೀರ್ನ ಸಂಯಾಜಯೇತ್ಸಂಸ್ಥಿತಯಜುರ್ನ ಜುಹುಯಾತ್ ।
## ತಾವತೈವ ಯಜ್ಞೋಽಸಂಸ್ಥಿತಃ ॥

**ಚೋದಕಪ್ರಾಪ್ತಾತ್ಪತ್ನೀಸಂಯಾಜಾನ್ಸಮಿಷ್ಟಯಜುಶ್ಚ ನಿಷೇಧತಿ । ತತಃ ಕಿಮಿತ್ಯಪೇಕ್ಷಾಯಾಮಾಹ । ತದಾನೀಂ ಯಜ್ಞಸ್ಯ ಸಮಾಪ್ತತ್ವಾದುತ್ತರಕಾಲೀನಂ ಸೋಮಕ್ರಯಾದಿಕಂ ನ ಪ್ರವರ್ತೇತ । ಏತೇಷಾಮನನುಷ್ಠಾನಮಾತ್ರೇಣ ಯಜ್ಞೋಽಸಮಾಪ್ತೋ ಭವತಿ । ತತ ಉತ್ತರಾನುಷ್ಠಾನಂ ನಿರ್ಬಾಧಂ ಪ್ರವರ್ತತೇ ॥**

ಈ ಪ್ರಾಯಣೀಯೇಷ್ಟಿಯಲ್ಲಿ ಪ್ರಯಾಜಹೋಮಾನಂತರ ಪತ್ನೀಸಂಯಾಜವೆಂಬ ನಾಲ್ಕು ಹೋಮಗಳನ್ನೂ ಸಮಿಷ್ಟಯಜು ಎಂಬ ಹೋಮವನ್ನೂ ಮಾಡಕೂಡದು. ಈ ಹೋಮಗಳು ಅವಶ್ಯಕವಾದವುಗಳಲ್ಲಿ ಇದನ್ನು ಮಾಡದೇ ಇದ್ದರೆ ಬಾಧಕವಿಲ್ಲ. ಏಕೆಂದರೆ ಪ್ರಾಯಣೀಯೇಷ್ಟಿಯ ಅನಂತರ ಸೋಮವಿಕ್ರಯಣಾದಿ ಕರ್ಮಗಳು ನಡೆಯಬೇಕಾಗಿರುವುದರಿಂದ ಕಾಲವಿಳಂಬಕ್ಕೆ ಅವಕಾಶವಾಗಬಾರದು ಎಂದಭಿಪ್ರಾಯವು.

ಇಲ್ಲಿ ಪತ್ನೀಸಂಯಾಜಹೋಮಗಳು ಮತ್ತು ಸಮಿಷ್ಟಯಜು ಎಂದರೇನೆಂಬುದನ್ನು ಸೂಕ್ಷ್ಮವಾಗಿ ವಿವರಿಸುತ್ತೇವೆ. ಈ ಪತ್ನೀಸಯಾಜ ಮತ್ತು ಸಮಿಷ್ಟಯಜುಃ ಎಂಬ ಹೋಮಗಳನ್ನು ಯಜ್ಞದ ಕೊನೆಯಲ್ಲಿಯೇ ಮಾಡಬೇಕು. ಅನಂತರ ಯಜ್ಞವು ಮುಗಿದಂತೆಯೇ. ಆದರೆ ಯಜ್ಞವು ಇನ್ನೂ ಪ್ರಾರಂಭದೆಶೆಯಲ್ಲಿಯೇ ಇರುವಾಗ ಸೋಮವಿಕ್ರಯಣ, ಆತಿಥ್ಯೇಷ್ಟಿ

ಸವನತ್ರಯಗಳು ಇತ್ಯಾದಿ ಅನೇಕ ಕರ್ಮಾಂಗಗಳು ಇನ್ನೂ ನಡೆಯದಿರುವಾಗ ಈಗಲೇ ಯಜ್ಞಸಮಾಪ್ತಿಯನ್ನು ಮಾಡುವುದು ಉಚಿತವೇ? ಎಂದಿಗೂ ಅಲ್ಲ. ಮಾಡಬೇಕಾದ ಕಾರ್ಯಗಳು ಇನ್ನೂ ಇರುವುದರಿಂದ ಅವುಗಳನ್ನೆಲ್ಲಾ ಮಾಡಿ ಕೊನೆಯಲ್ಲಿ ಮಾತ್ರವೇ ಪತ್ನೀಸಂಯಾಜವನ್ನು ಮಾಡಬೇಕು. ಆದ್ದರಿಂದ ಈಗ ಯಜ್ಞ ಅರ್ಧದಲ್ಲಿದ್ದಂತೆಯೇ ಇರಬೇಕು. ಆ ಕಾರಣಕ್ಕಾಗಿ ಪತ್ನೀಸಂಯಾಜ ಮತ್ತು ಸಮಿಷ್ಟಯಜುಃ ಎಂಬ ಹೋಮಗಳನ್ನು ಮಾಡಕೂಡದು.

ಪತ್ನೀಸಂಯಾಜ ಹೋಮಗಳೆಂದರೆ ಯಜ್ಞಾಂತ್ಯದಲ್ಲಿ ಯಜಮಾನನ ಪತ್ನಿಯು ದೇವಪತ್ನಿಯರನ್ನು ಮತ್ತು ಇತರ ದೇವತೆಗಳನ್ನು ಉದ್ದೇಶಿಸಿ ಮಾಡುವ ಹೋಮವು. ಈ ಹೋಮಗಳನ್ನು ಅಧ್ವರ್ಯುವು ಮಾಡುವನು. ಯಜಮಾನ ಪತ್ನಿಯು ಹೋಮಕಾಲದಲ್ಲಿ ದರ್ಭೆಯ ಕಂತೆಯಿಂದ ಅಧ್ವರ್ಯುವನ್ನು ಸ್ಪರ್ಶಮಾಡುತ್ತಲಿರುವಳು. ಹೋಮಮಾಡುವ ಅಧ್ವರ್ಯುವನ್ನು ಯಜಮಾನಪತ್ನಿಯು ದರ್ಭೆಯ ಮೂಲಕ ಸ್ಪರ್ಶಮಾಡುತ್ತಿರುವುದರಿಂದ ಯಜಮಾನಪತ್ನಿಯೇ ಹೋಮವನ್ನು ಮಾಡಿದಂತಾಯಿತೆಂದು ಭಾವನೆಯು.

ಈ ಪತ್ನೀಸಂಯಾಜ ಹೋಮಗಳಲ್ಲಿ— ಸೋಮ ತ್ವಷ್ಟೃ, ದೇವಪತ್ನಿ ಅಗ್ನಿಗೃಹಪತಿ ಎಂಬ ನಾಲ್ಕು ಪ್ರಧಾನದೇವತೆಗಳನ್ನುದ್ದೇಶಿಸಿ ಹೋಮಮಾಡಬೇಕು. ಈ ಪ್ರಧಾನದೇವತೆಗಳಲ್ಲದೆ ಇವರ ಜತೆಗೆ ರಾಕಾ, ಸಿನೀವಾಲಿ ಮತ್ತು ಕುಹೂ ಎಂಬ (ಸ್ತ್ರೀ) ದೇವತೆಗಳೂ ಇರುವರು.

ಅಥ ಪತ್ನೀಃ ಸಂಯಾಜಯಂತಿ .... .... ಚತಸ್ರೋ ದೇವತಾ ಯಜತಿ .... .... ಅಥ ಸೋಮಂ ಯಜತಿ .... ಅಥ ತ್ವಷ್ಟಾರಂ ಯಜತಿ .... .... ಅಥ ದೇವಾನಾಂ ಪತ್ನೀರ್ಯಜತಿ ಅಥಾಗ್ನಿಂ ಗೃಹಪತಿಂ ಯಜತಿ ||

(ಶ. ಬ್ರಾ. ೧-೯-೨-೧ ರಿಂದ ೧೫)

ಪಂಚಪ್ರಯಾಜಾ ಇಜ್ಯಂತೇ ಚತ್ವಾರಃ ಪತ್ನೀಸಂಯಾಜಾಃ | ಸೋಮಂ ಯಜತಿ ರೇತ ಏವ ತದ್ದಧಾತಿ ತ್ವಷ್ಟಾರಂ ಯಜತಿ ರೇತ ಏವ ಹಿತಂ ತ್ವಷ್ಟಾರೂಪಾಣಿ ವಿ ಕರೋತಿ ದೇವಾನಾಂ ಪತ್ನೀರ್ಯಜತಿ ಮಿಥುನತ್ವಾಯಾಗ್ನಿಂ ಗೃಹಪತಿಂ ಯಜತಿ ಪ್ರತಿಷ್ಠಿತ್ಯೈ ||

(ತೈ. ಸಂ. ೨-೬-೧೦-೩)

ಎಂದು ಪತ್ನೀಸಂಯಾಜ್ಯಾಮಂತ್ರದ ದೇವತೆಗಳನ್ನು ಹೇಳಲಾಗಿದೆ. ಆ ಮಂತ್ರಗಳನ್ನು ಇಲ್ಲಿ ಪೂರ್ತಿಯಾಗಿ ಕೊಟ್ಟಿದೆ.

(೧) ಸೋಮದೇವತೆಗೆ—

ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ |
ಭವಾ ವಾಜಸ್ಯ ಸಂಗಥೇ || (ಋ. ಸಂ. ೧-೯೧-೧೬)

ಸಂ ತೇ ಪಯಾಂಸಿ ಸಮು ಯಂತು ವಾಜಾಃ ಸಂ ವೃಷ್ಣ್ಯಾನ್ಯಭಿಮಾತಿಷಾಹಃ |
ಆಪ್ಯಾಯಮಾನೋ ಅಮೃತಾಯ ಸೋಮ ದಿವಿ ಶ್ರವಾಂಸ್ಯುತ್ತಮಾನಿ ಧಿಷ್ವ ||

(ಋ. ಸಂ. ೧-೯೧-೧೮)

(೨) ತ್ವಷ್ಟೃದೇವತೆಗೆ—

ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ ।
ಅಸ್ಮಾಕಮಸ್ತು ಕೇವಲಃ (ಋ.ಸಂ. ೧-೧೩-೧೦)

ತನ್ನಸ್ತುರೀಪಮುದಪೋಷಯಿತ್ನು ದೇವತ್ವಷ್ಟರ್ವಿರರಾಣಃ ಸ್ಯಸ್ವ ।
ಯತೋ ವೀರಃ ಕರ್ಮಣ್ಯಃ ಸುದಕ್ಷೋ ಯುಕ್ತಗ್ರಾವಾ ಜಾಯತೇ ದೇವಕಾಮಃ ॥
(ಋ.ಸಂ. ೩-೪-೯)

(೩) ದೇವಪತ್ನಿ—

ದೇವಾನಾಂ ಪತ್ನೀರುಶತೀರವಂತು ನಃ ಪ್ರಾವಂತುನಸ್ತುಜಯೇ ವಾಜಸಾತಯೇ ।
ಯಾಃ ಪಾರ್ಥಿವಾಸೋ ಯಾ ಅಪಾಮಪಿ ವ್ರತೇ ತಾ ನೋ ದೇವೀಃ ಸುಹವಾಃ
ಶರ್ಮ ಯಚ್ಛತ ॥

ಉತ ಗ್ನಾ ವ್ಯಂತು ದೇವಪತ್ನೀರಿಂದ್ರಾಣ್ಯ೧ಗ್ನಾಯ್ಯಶ್ವಿನೀ ರಾಟ್ ।
ಆ ರೋದಸೀ ವರುಣಾನೀ ಶೃಣೋತು ವ್ಯಂತು ದೇವೀರ್ಯ ಋತುರ್ಜನೀನಾಂ ॥
(ಋ. ಸಂ. ೫-೪೬-೭,೮)

(೪) ಅಗ್ನಿರ್ಗೃಹಪತಿ—

ಅಗ್ನಿರ್ಹೋತಾ ಗೃಹಪತಿಃ ಸ ರಾಜಾ ವಿಶ್ವಾ ವೇದ ಜನಿಮಾ ಜಾತವೇದಾಃ ।
ದೇವನಾಮುತ ಯೋ ಮರ್ತ್ಯನಾಂ ಯಜಿಷ್ಠಃ ಸ ಪ್ರ ಯಜತಾಮುತಾವಾ ॥
(ಋ. ಸಂ. ೯-೧೫-೧೩)

ವಯಮು ತ್ವಾ ಗೃಹಪತೇ ಜನಾನಾಮಗ್ನೇ ಅಕರ್ಮ ಸಮಿಧಾ ಬೃಹಂತಂ ।
ಅಸ್ಥೂರಿ ನೋ ಗಾರ್ಹಪತ್ಯಾನಿ ಸಂತು ತಿಗ್ಮೇನ ನಸ್ತೇಜಸಾ ಸಂ ಶಿಶಾಧಿ ॥
(ಋ. ಸಂ. ೬-೧೫-೧೯)

ಇವು ನಾಲ್ಕೂ ಪತ್ನೀಸಂಯಾಜಾ ಹೋಮದ ಮುಖ್ಯದೇವತೆಗಳು.

(೫) ರಾಕಾ—

ರಾಕಾಮಹಂ ಸುಹವಾಂ ಸುಷ್ಟುತೀ ಹವೇ ಶೃಣೋತು ನಃ ಸುಭಗಾ ಬೋಧತು ತ್ಮನಾ ।
ಸೀವ್ಯತ್ವಪಃ ಸೂಚ್ಯಾಚ್ಛಿದ್ಯಮಾನಯಾ ದದಾತು ವೀರಂ ಶತದಾಯ ಮುಕ್ಥ್ಯಂ ॥
ಯಾಸ್ತೇ ರಾಕೇ ಸುಮತಯಃ ಸುಪೇಶಸೋ ಯಾಭಿರ್ದದಾಸಿ ದಾಶುಷೇ ವಸೂನಿ ।
ತಾಭಿರ್ನೋ ಅದ್ಯ ಸುಮನಾ ಉಪಾಗಹಿ ಸಹಸ್ರಪೋಷಂ ಸುಭಗೇ ರರಾಣಾ ॥
(ಋ. ಸಂ. ೨-೩೨-೪,೫)

(೬) ಸಿನೀವಾಲಿ—

ಸಿನೀವಾಲಿ ಪೃಥುಷ್ಟುಕೇ ಯಾ ದೇವನಾಮಸಿ ಸ್ವಸಾ ।
ಜುಷಸ್ವ ಹವ್ಯಮಾಹುತಂ ಪ್ರಜಾಂದೇವಿ ದಿದಿಡ್ಢಿನಃ ॥
ಯಾ ಸುಬಾಹುಃ ಸ್ವಂಗುರಿಃ ಸುಷೂಮಾ ಬಹುಸೂವರೀ ।
ತಸ್ಯೈ ವಿಶ್ಪತ್ನ್ಯೈ ಹವಿಃ ಸಿನೀವಾಲ್ಯೈ ಜುಹೋತನ ॥
(ಋ. ಸಂ. ೨-೩೨-೬,೭)

(೭) ಕುಹೂ—

**ಕುಹೂಮುಹಗ್ಂ ಸುಭಗಾಂ ವಿದ್ಮನಾಪಸಮುಸ್ಮಿನ್ಯಜ್ಞೇ ಸುಹವಾಂ ಜೋಹವೀಮಿ।**
**ಸಾ ನೋ ದದಾತು ಶ್ರವಣಂ ಪಿತೃಣಾಂ ತಸ್ಯಾಸ್ತೇ ದೇವಿ ಹವಿಷಾ ವಿಧೇಮ ॥**
**ಕುಹೂರ್ದೇವಾನಾಮಮೃತಸ್ಯ ಪತ್ನೀ ಹವ್ಯಾನೋ ಅಸ್ಯ ಹವಿಷಶ್ಚಿಕೇತು ।**
**ಸಂ ದಾಶುಷೇ ಕಿರತು ಭೂರಿ ವಾಮಗ್ಂ ರಾಯಸ್ಪೋಷಂ ಚಿಕಿತುಷೇ ದಧಾತು ॥**

(ತೈ.ಸಂ. ೩-೩-೧೧-೫)

ವಾಕ್ಯದಲ್ಲಿ "ಸಂಸ್ಥಿತಯಜುರ್ನ ಜುಹುಯಾತ್" ಎಂದಿದೆ ಈ ಹೋಮವನ್ನು ಯಜ್ಞಾಂತ್ಯದಲ್ಲಿಯೇ ಮಾಡಬೇಕು. ಸಂಸ್ಥಿತಯಜು ಎನ್ನುವುದಕ್ಕೆ ಬದಲಾಗಿ ಕೆಲವುಕಡೆ ಸಮಿಷ್ಟಯಜು ಎಂಬ ಶಬ್ದಪ್ರಯೋಗವಿದೆ. ಈ ಶಬ್ದಕ್ಕೆ ಅರ್ಥ ವೇನೆಂದರೆ – ಯಜ್ಞದಲ್ಲಿ ಯಾವ ಹೆಚ್ಚುಕಡಿಮೆ ಇಲ್ಲದೆ ಕ್ರಮಲೋಪ ಮಂತ್ರಲೋಪಗಳಿಲ್ಲದೆ ಯಜ್ಞವು ಸರಿಯಾಗಿ ನಡೆಯಿತೆಂದು ಅಥವಾ ನಡೆಯುವುದಕ್ಕಾಗಿ ಎಂದರೆ ನಾನಾ ಕರ್ಮಗಳಲ್ಲಿ ಸಂಭವಿಸಬಹುದಾದ ಲೋಪದೋಷಗಳ ಪ್ರಾಯಶ್ಚಿತ್ತಾರ್ಥವಾಗಿ ಮಾಡುವ ಹೋಮಗಳು ಎಂದರ್ಥವು ಈ ಸಮಿಷ್ಟಯಜುರ್ಹೋಮಗಳ ವಿಷಯದಲ್ಲಿ ತೈತ್ತಿರೀಯ ಸಂಹಿತೆಯಲ್ಲಿ ಹೀಗೆ ಹೇಳಿದೆ—

**ಸಮಿಷ್ಟಯಜೂಗ್ಂಷಿ ಜುಹೋತಿ ಯಜ್ಞಸ್ಯ ಸಮಿಷ್ಟ್ಯೈ ಯದ್ವೈ ಯಜ್ಞಸ್ಯ ಕ್ರೂರಂ ಯದ್ವಿಲಿಷ್ಟಂ ಯದತ್ಯೇತಿ ಯನ್ನಾತ್ಯೇತಿ ಯದತಿಕರೋತಿ ಯನ್ನಾಪಿ ಕರೋತಿ ತದೇವ ತೈಃ ಪ್ರೀಣಾತಿ ನವ ಜುಹೋತಿ ನವ ವೈ ಪುರುಷೇ ಪ್ರಾಣಾಃ........ಷಡೃಗ್ಮಿಯಾಣಿ ಜುಹೋತಿ ಷಡ್ವಾ ಋತವ ಋತೂನೇವ ಪ್ರೀಣಾತಿ ತ್ರೀಣಿ ಯಜೂಗ್ಂಷಿ ತ್ರಯ ಇಮೇ ಲೋಕಾ ಇಮಾನೇವ ಲೋಕಾನ್ ಪ್ರೀಣಾತಿ ಯಜ್ಞ ಯಜ್ಞಂ ಗಚ್ಛ ಯಜ್ಞಪತಿಂ ಗಚ್ಛೇತ್ಯಾಹ ........ಸ್ವಾಂ ಯೋನಿಂ ಗಚ್ಛೇತ್ಯಾಹ........ ಏಷತೇ ಯಜ್ಞೋ ಯಜ್ಞಪತೇ ಸಹಸೂಕ್ತವಾಕ ಇತ್ಯಾಹ ........ ........ದೇವಾ ಗಾತುವಿದೋ ಗಾತುಂ ವಿತ್ವಾ ಗಾತುಮಿತೇತ್ಯಾಹ........॥**

(ತೈ. ಸಂ. ೬-೬-೮-೧,೨,೩)

ಸಮಿಷ್ಟಯಜುರ್ಹೋಮಗಳನ್ನು ಯಜ್ಞವು ಲೋಪದೋಷಗಳಿಲ್ಲದೆ ನಡೆದು ಸಂಪೂರ್ಣವಾಗುವುದಕ್ಕಾಗಿ ಮಾಡಬೇಕು. ಮತ್ತು ಯಜ್ಞದಲ್ಲಿ ಸಂಭವಿಸಬಹುದಾದ ಕ್ರೂರಹಿಂಸೆಗಳು, ಮಂತ್ರ ಮತ್ತು ಕರ್ಮಗಳಲ್ಲಿ ಲೋಪಗಳು, ವಿಧಿನಿಯಮಗಳಲ್ಲಿ ಹೇಳಿರುವುದಕ್ಕಿಂತ ಹೆಚ್ಚಾಗಿ ಆಚರಿಸುವುದು, ನಿರ್ದಿಷ್ಟಕಾಲವನ್ನು ಮೀರಿ ಮಾಡುವುದು ಈ ವಿಧವಾದ ಲೋಪದೋಷಗಳ ಪರಿಹಾರಾರ್ಥವಾಗಿ ಈ ಸಮಿಷ್ಟಯಜೂಂಷಿ ಎಂಬ ಹೋಮವನ್ನು ಮಾಡಬೇಕು. ಈ ಹೋಮಗಳು ಒಟ್ಟು ಒಂಭತ್ತು ಇರುವವು. ಇವುಗಳಲ್ಲಿ ಆರು ಋಗ್ವೇದಮಂತ್ರಗಳಿಂದ ಮಾಡುವ ಹೋಮಗಳು ; ಉಳಿದ ಮೂರು ಯಜುರ್ವೇದ ಮಂತ್ರಗಳಿಂದ ಮಾಡುವ ಹೋಮಗಳು. ಆ ಮಂತ್ರಗಳನ್ನು ಇಲ್ಲಿ ಪೂರ್ತಿಯಾಗಿ ವಿವರಿಸುತ್ತೇವೆ—

(೧) ಋಗ್ವೇದ ಮಂತ್ರಗಳು—

**ಧಾತಾ ರಾತಿಸ್ಸವಿತೇದಂ ಜುಷಂತಾಂ ಪ್ರಜಾಪತಿರ್ನಿಧಿಪತಿರ್ನೋ ಅಗ್ನಿಃ ।**
**ತ್ವಷ್ಟಾ ವಿಷ್ಣುಃ ಪ್ರಜಯಾ ಸಂರರಾಣೋ ಯಜಮಾನಾಯ ದ್ರವಿಣಂ ದಧಾತು ॥ ೧ ॥**

ಸಮಿಂದ್ರಿಣೋ ಮನಸಾ ನೇಷಿ ಗೋಭಿಸ್ಸಗ್ಂ ಸೂರಿಭಿರ್ಮಘವನ್ತ್ಸಗ್ಂ ಸ್ವಸ್ತ್ಯಾ ।
ಸಂ ಬ್ರಹ್ಮಣಾ ದೇವಕೃತಂ ಯದಸ್ತಿ ಸಂ ದೇವಾನಾಗ್ಂ ಸುಮತ್ಯಾಯಜ್ಞಿಯಾನಾಂ ॥ ೨ ॥
ಸಂ ವರ್ಚಸಾ ಪಯಸಾ ಸಂ ತನೂಭಿರಗನ್ಮಹಿ ಮನಸಾ ಸಗ್ಂ ಶಿವೇನ ।
ತ್ವಷ್ಟಾ ನೋ ಅತ್ರ ವರಿವಃ ಕೃಣೋತ್ವನು ಮಾರ್ಷ್ಟು ತನುವೋ ಯದ್ವಿಲಿಷ್ಟಂ ॥ ೩ ॥
ಯದದ್ಯ ತ್ವಾ ಪ್ರಯತಿ ಯಜ್ಞೇ ಅಸ್ಮಿನ್ನಗ್ನೇ ಹೋತಾರಮವೃಣೀಮಹೀಹ ।
ಋಧಗಯಾಡೃಧಗುತಾಶಮಿಷ್ಠಾಃ ಪ್ರಜಾನನ್ ಯಜ್ಞಮುಪಯಾಹಿ ವಿದ್ವಾನ್ ॥ ೪ ॥
ಸ್ವಗಾವೋ ದೇವಾಸ್ಸದನಮಕರ್ಮ ಯ ಆಜಗ್ಮ ಸವನೇದಂ ಜುಷಾಣಾಃ ।
ಜಕ್ಷಿವಾಗ್ಂಸಃ ಪಪಿವಾಗ್ಂಸಶ್ಚ ವಿಶ್ವೇಸ್ಮೇ ಧತ್ತ ವಸವೋ ವಸೂನಿ ॥ ೫ ॥
ಯಾನಾವಹ ಉಶತೋ ದೇವ ದೇವಾನ್ತಾನ್ ಪ್ರೇರಯ ಸ್ವೇ ಅಗ್ನೇ ಸಧಸ್ಥೇ ।
ವಹಮಾನಾ ಭರಮಾಣಾ ಹವೀಗ್ಂಷಿ ವಸುಂ ಘರ್ಮಂ ದಿವಮಾ ತಿಷ್ಠತಾನು ॥೬॥

(೨) ಯಜುರ್ಮಂತ್ರಗಳು—

ಯಜ್ಞಂ ಯಜ್ಞಂ ಗಚ್ಛ ಯಜ್ಞಪತಿಂ ಗಚ್ಛ ಸ್ವಾಂ ಯೋನಿಂ ಗಚ್ಛ ಸ್ವಾಹಾ ॥ ೭ ॥
ಏಷ ತೇ ಯಜ್ಞೋ ಯಜ್ಞಪತೇ ಸಹಸೂಕ್ತವಾಕಃ ಸುವೀರಃ ಸ್ವಾಹಾ ॥ ೮ ॥
ದೇವಾ ಗಾತುವಿದೋ ಗಾತುಂ ವಿತ್ವಾ ಗಾತುಮಿತಮನಸಸ್ಪತ ಇಮಂ ನೋ ದೇವ ದೇವೇಷು
ಯಜ್ಞಗ್ಂಸ್ವಾಹಾ ವಾಚಿ ಸ್ವಾಹಾ ವಾತೇಧಾಃ ॥ ೯ ॥
(ತೈ. ಸಂ. ೧-೪-೩೮-೧,೨,೩)

ಮೇಲೆ ಹೇಳಿದ ಆರು ಋಗ್ವೇದ ಮಂತ್ರಗಳಲ್ಲಿ ಕೆಲವು ಋಗ್ವೇದದಲ್ಲಿಲ್ಲ. ಶಾಖಾಂತರಗಳಲ್ಲಿವೆ. ಆದ್ದರಿಂದ ನಾವು ತೈತ್ತಿರೀಯ ಸಂಹಿತೆಯಲ್ಲಿ ಇರುವಂತೆಯೇ ಇಲ್ಲಿ ಕೊಟ್ಟಿದ್ದೇವೆ.

## ಪ್ರಾಯಣೀಯಸ್ಯ ನಿಷ್ಕಾಸಂ ನಿದಧ್ಯಾತ್ತಮುದಯನೀಯೇನಾಭಿ-ನಿರ್ವಪೇದ್ಯಜ್ಞಸ್ಯ ಸಂತತ್ಯೈ ಯಜ್ಞಸ್ಯಾವ್ಯವಚ್ಛೇದಾಯ ।

ಕಂಚಿದ್ವಿಶೇಷಂ ವಿಧತ್ತೇ । ಭಾಂಡಗತೋ ಲೇಪರೂಪೋ ಹವಿಃಶೇಷೋ ನಿಷ್ಕಾಸಃ । ಪ್ರಾಯಣೀಯಕರ್ಮಸಂಬಂಧಿನಂ ನಿಷ್ಕಾಸಂ ಕಸ್ಮಿಂಶ್ಚಿತ್ಪಾತ್ರೇ ಸ್ಥಾಪಯೇತ್ । ತತಃ ಸುತ್ಯಾ-ದಿನೇ ಸೋಮಯಾಗಸ್ಯಾವಸಾನ ಉದಯನೀಯೇಷ್ಟಿಗತೇನ ಹವಿಷಾ ಸಹ ತಂ ನಿಷ್ಕಾಸಂ ಸಮಭಿನಿರ್ವಪೇತ್ । ಏವಂ ಸತಿ ಪ್ರಾಯಣೀಯಶೇಷಸ್ಯಾನುವರ್ತನಾತ್ಸೋಮಯಾಗಃ ಸಂತತೋ ಭವತಿ ನ ತು ತಸ್ಯ ವಿಚ್ಛೇದಃ ಪ್ರಾಪ್ನೋತಿ । ತೈತ್ತಿರೀಯಾಶ್ಚಾಮನಂತಿ—ಪ್ರಾಯ-ಣೀಯಸ್ಯ ನಿಷ್ಕಾಸ ಉದಯನೀಯಮಭಿನಿರ್ವಪತಿ ಸೈವ ಸಾ ಯಜ್ಞಸ್ಯ ಸಂತತಿಃ ಇತಿ ।

ಪ್ರಾಯಣೀಯ ಮತ್ತು ಉದಯನಿಯೇಷ್ಟಿಗಳ ವಿಷಯದಲ್ಲಿ ಕೆಲವು ವಿಶೇಷಸಂಗತಿಗಳನ್ನು ಹೇಳುವರು. ನಿಷ್ಕಾಸವೆಂದರೆ—“ ಭಾಂಡಗತೋ ಲೇಪರೂಪೋ ಹವಿಃಶೇಷೋ ನಿಷ್ಕಾಸಃ ” ಹೋಮಾರ್ಥವಾಗಿ ಸಿದ್ಧಪಡಿಸಿದ ದ್ರವ್ಯವನ್ನು

ಹೋಮಮಾಡಿದಮೇಲೆ ಪಾತ್ರೆಯ ತಳದಲ್ಲಿ ಅಂಟಿಕೊಂಡು ಇನ್ನೂ ಸ್ವಲ್ಪ ಉಳಿದಿರುವ ಹವಿಃಶೇಷವು. ಪ್ರಾಯಣೀಯೇಷ್ಟಿಯಲ್ಲಿ ಹೋಮವನ್ನು ಮಾಡಿದ ಬಳಿಕ ಉಳಿದಿರುವ ಹವಿಃಶೇಷವನ್ನು (ನಿಷ್ಕಾಸ) ಬೇರೊಂದು ಪಾತ್ರೆಯಲ್ಲಿ ಹಾಕಿ ಹಾಗೆಯೇ ಇಟ್ಟು ಕೊಂಡಿರಬೇಕು. ಬಳಿಕ ಸುತ್ಯಾದಿನದಲ್ಲಿ (ಎಂದರೆ ಅಗ್ನಿಷ್ಟೋಮಯಾಗ ಕೊನೆಯದಿನ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವ ದಿನಕ್ಕೆ ಸುತ್ಯಾದಿನವೆಂದು ಹೆಸರು) ಯಜ್ಞಸಮಾಪ್ತಿಕಾಲದಲ್ಲಿ ಉದಯನೀಯೇಷ್ಟಿಯನ್ನು ಮಾಡುವಾಗ ಅದರ ಹೋಮದಲ್ಲಿ ಪ್ರಾಯಣೀಯೇಷ್ಟಿಯಲ್ಲಿ ಉಳಿದಿದ್ದ ನಿಷ್ಕಾಸ ಅಥವಾ ಹವಿಃಶೇಷವನ್ನು ಬೆರೆಸಿ (ಉದಯನೀಯೇಷ್ಟಿಯ ಹೋಮ ದ್ರವ್ಯದಮೇಲೆ ಇಟ್ಟುಕೊಂಡು) ಹೋಮಮಾಡಬೇಕು. ಹೀಗೆ ಮಾಡುವುದರಿಂದ ಯಜ್ಞಾರಂಭದಲ್ಲಿ ಮಾಡುವ ಪ್ರಾಯಣೀ ಯೇಷ್ಟಿಗೂ ಯಜ್ಞಾಂತ್ಯದಲ್ಲಿ ಮಾಡುವ ಉದಯನೀಯೇಷ್ಟಿಗೂ ಸಂಬಂಧವನ್ನು ಕಲ್ಪಿಸಿದಂತಾಗುವುದು. ಈರೀತಿ ಮಾಡು ವುದರಿಂದ ಯಜ್ಞವು ವಿಘ್ನಾದಿಗಳಿಲ್ಲದಂತೆ ಒಂದೇಸಮನೆ ನಡೆದು ಕೊನೆ ಮುಟ್ಟುವಂತಾಗುವುದು. ಈ ವಿಷಯದಲ್ಲಿ— "ಪ್ರಾಯಣೀಯಸ್ಯ ನಿಷ್ಕಾಸ ಉದಯನೀಯಮಭಿನಿರ್ವಪತಿ ಸೈವ ಸಾ ಯಜ್ಞಸ್ಯ ಸಂತತಿಃ" (ತೈ. ಸಂ. ೬-೧-೫-೫) ಎಂದು ತೈತ್ತಿರೀಯ ಶ್ರುತಿಯು ಹೇಳುವುದು.

ಅಥೋ ಖಲು ಯಸ್ಯಾಮೇವ ಸ್ಥಾಲ್ಯಾಂ ಪ್ರಾಯಣೀಯಂ ನಿರ್ವ-
ಪೇತ್ತಸ್ಯಾಮುದಯನೀಯಂ ನಿರ್ವಪೇತ್ತಾವತೈವ ಯಜ್ಞಃ
ಸಂತತೋಽವಚ್ಛಿನ್ನೋ ಭವತಿ ॥

ಪ್ರಕಾರಾಂತರಮಾಹ । ನಾತ್ರ ನಿಷ್ಕಾಸೋಽಪೇಕ್ಷಿತಃ ಕಿಂತು ಸ್ಥಾಲ್ಯೇಕತ್ವಮಾತ್ರೇಣ ಯಜ್ಞಸ್ಯ ಸಂತತತ್ವಾದ್ವ್ಯವಚ್ಛೇದರಾಹಿತ್ಯಂ ಸಿಧ್ಯತಿ । ಸಾತತ್ಯವ್ಯವಚ್ಛೇದರಾಹಿತ್ಯಯೋರರ್ಥತ ಏಕತ್ವೇಽಪ್ಯನ್ವಯವ್ಯತಿರೇಕರೂಪತ್ವೇನ ಪೃಥಗುಪನ್ಯಾಸಃ ।

ಈ ವಿಷಯದಲ್ಲಿ ಎಂದರೆ ಯಜ್ಞವು ವಿಚ್ಛಿತ್ತಿಯಿಲ್ಲದೆ ನಡೆಯಲು ಪ್ರಾಯಣೀಯ ಮತ್ತು ಉದಯನೀಯೇಷ್ಟಿಗಳಿಗೆ ಸಂಬಂಧವನ್ನು ಕಲ್ಪಿಸುವ ವಿಷಯದಲ್ಲಿ ಹಿಂದೆ ಹೇಳಿದ ನಿಷ್ಕಾಸ ವಿಧಾನವಲ್ಲದೆ ಬೇರೆ ವಿಧವೂ ಇರುವುದು. ಪ್ರಾಯಣೀ ಯೇಷ್ಟಿಯಲ್ಲಿ ಹೋಮಕ್ಕಾಗಿ ಉಪಯೋಗಿಸಿದ ಪಾತ್ರೆಯನ್ನೇ ಉದಯನೀಯೇಷ್ಟಿಯಲ್ಲಿ ಉಪಯೋಗಿಸಿದರೆ ಯಜ್ಞದ ಆದ್ಯಂತ ಗಳಿಗೆ ಸಂಬಂಧವನ್ನು ಕಲ್ಪಿಸಿದಂತಾಗಿ ಯಜ್ಞವು ಯಾವ ಅಡಚಣೆಯೂ ಇಲ್ಲದೆ ಅವಿಚ್ಛಿನ್ನವಾಗಿ ನಡೆದಂತಾಗುವುದು.

ಅಮುಷ್ಮಿನ್ವಾ ಏತೇನ ಲೋಕೇ ರಾಧ್ನುವಂತಿ ನಾಸ್ಮಿನ್ನಿತ್ಯಾಹುರ್ಯ-
ತ್ಪ್ರಾಯಣೀಯಮಿತಿ ಪ್ರಾಯಣೀಯಮಿತಿ ನಿರ್ವಪಂತಿ
ಪ್ರಾಯಣೀಯಮಿತಿ ಚರಂತಿ ಪ್ರಯಂತ್ಯೇವಾಸ್ಮಾಲ್ಲೋಕಾದ್ಯ-
ಜಮಾನಾ ಇತಿ ॥

ಅಥ ಪ್ರಾಯಣೀಯೋದಯನೀಯೇಷ್ಟ್ಯೋರ್ಯಾಜ್ಯಾನುವಾಕ್ಯಾವ್ಯತ್ಯಾಸಂ ವಿಧಾ- ತುಂ ಪ್ರಸ್ತೌತಿ । ಪ್ರಾಯಣೀಯಮಿತಿ ನಿರ್ವಪಂತಿ ಪ್ರಾಯಣೀಯಮಿತಿ ಚರಂತಿ ಬ್ರಹ್ಮವಾ- ದಿನಃ ಕಂಚಿದ್ದೋಷಮಾಹುಃ । ಪ್ರಾಯಣೀಯಮಿತ್ಯೇವಂ ವಿಧಿನೋಪೇತಂ ಯತ್ಕಾರ್ಯ-

ಮಸ್ತಿ ಏತೇನ ಕರ್ಮಣಾ ಯಜಮಾನಾಃ ಸ್ವರ್ಗಲೋಕ ಏವ ಸಮೃದ್ಧಿಂ ಪ್ರಾಪ್ನುವಂತಿ ನಾಸ್ಮಿಲ್ಲೋಕೇ । ಕಥಮಿತಿ ಚೇತ್ । ಪ್ರಾಯಣೀಯಮಿತ್ಯೇತನ್ನಾಮ ಮನಸಾ ಕೃತ್ವಾ ನಿರ್ವಪಂತಿ । ಚರಣಕಾಲೇಽಪಿ ತಥೈವ ಚರಂತಿ । ಚರಣಮಾಹುತಿಪ್ರಕ್ಷೇಪಃ । ತಸ್ಯ ಚ ನಾಮ್ನೋಽಯಮರ್ಥಃ । ಅನೇನ ಕರ್ಮಣಾ ಯಜಮಾನಾ ಅಸ್ಮಾಲ್ಲೋಕಾತ್ಪ್ರಯಂತ್ಯೇವ ನ ತ್ವಸ್ಮಿಲೋಕೇ ಕಂಚಿತ್ಕಾಲಂ ಪ್ರತಿತಿಷ್ಠಂತಿ ತಸ್ಮಾತ್ಪ್ರಾಯಣೀಯನಾಮ ಸಂಪನ್ನಮಿತಿ । ಶ್ರೌತ ಇತಿ ಶಬ್ದೋ ಬ್ರಹ್ಮವಾದ್ಯುದ್ಭಾವಿತದೋಷಸಮಾಪ್ತ್ಯರ್ಥಃ ।

ಯಜ್ಞಾನುಷ್ಠಾನಕುಶಲರಾದ ಕೆಲವರು ಈರೀತಿ ಹೇಳುವರು--ಯಜ್ಞಮಾಡುವ ಯಜಮಾನರು ಈ ಪ್ರಾಯಣೀಯೇಷ್ಟಿಯಲ್ಲಿ ಯಾವಾಗಲೂ ಪ್ರಾಯಣೀಯಂ ಪ್ರಯಂತಿ ಇತ್ಯಾದಿ ಶಬ್ದಗಳನ್ನೇ ಬಳಸುತ್ತಾ ಇರುವರು. ಮಂತ್ರಪಠನಕಾಲದಲ್ಲಿಯೂ ಪ್ರಾಯಣೀಯ ಶಬ್ದವನ್ನು ಉಪಯೋಗಿಸುವರು. ಆಹುತಿಗಳನ್ನರ್ಪಿಸುವಾಗಲೂ ಈ ಶಬ್ದದ ಉಚ್ಚಾರವೇ ಇರುವದು. ಯಾವಾಗಲೂ ಈ ಶಬ್ದದ ಉಚ್ಚಾರವೇ ಈ ಇಷ್ಟಿಯಲ್ಲಿ ಬಹಳವಾಗಿರುವುದರಿಂದ ಯಜಮಾನರು ಸ್ವರ್ಗದಲ್ಲೇ ನೆಟ್ಟ ದೃಷ್ಟಿಯುಳ್ಳವರಾಗಿರುವರು ಪ್ರಾಯಣೀಯ ಮತ್ತು ಪ್ರಯಂತಿ ಮೊದಲಾದ ಶಬ್ದಗಳಿಗೆ ಇಲ್ಲಿಂದ ಹೋಗುವುದು ಎಂದರೆ ಸ್ವರ್ಗಕ್ಕೆ ಹೋಗುವುದು ಎಂಬರ್ಥವೇ ಇರುವುದರಿಂದ ಯಜ್ಞಮಾಡುವ ಯಜಮಾನರು ಸ್ವರ್ಗವನ್ನು ಸೇರಿ ಅಲ್ಲಿ ಸುಖವನ್ನನುಭವಿಸುವರು ಎಂದಾಯಿತು. ಈ ಲೋಕದಲ್ಲಿ ಅವರು ಯಾವ ಶ್ರೇಯಸ್ಸನ್ನೂ ಪಡೆಯುವುದಿಲ್ಲ ಎಂದು ಹೇಳಿದಹಾಗಾಯಿತು. ಏಕೆಂದರೆ ಮಂತ್ರಾದಿಗಳಲ್ಲಿ ಈ ಲೋಕದ ಪ್ರಸ್ತಾಪವೇ ಇರುವುದಿಲ್ಲ. ಆದ್ದರಿಂದ ನಮ್ಮ ಅನುಭವಕ್ಕೆ ಗೋಚರವಾಗುವ ಈ ಲೋಕದ ಸುಖಗಳನ್ನು ಬಯಸದೆ ಯಾರೂ ಎಂದೂ ಕಾಣದ ಸ್ವರ್ಗಲೋಕದ ಸುಖಗಳಿಗಾಗಿ ಯಾರು ತಾನೇ ಅಪೇಕ್ಷೆಪಡುವರು ?

## ಅವಿದ್ಯಯೈವ ತದಾಹುರ್ವ್ಯತಿಷಜೇದ್ಯಾಜ್ಯಾನುವಾಕ್ಯಾಃ ।

ಅಥ ತದ್ದೋಷಸಮಾಧಾನಂ ವಿಧತ್ತೇ । ಅಜ್ಞಾನೇನೈವ ಬ್ರಹ್ಮವಾದಿನಸ್ತದ್ವಚನಮಾಹುಃ । ನ ತ್ವತ್ರ ತದುಕ್ತದೋಷೋಽಸ್ತಿ । ತದ್ದೋಷಾನುದಯಾಯ ಸ್ವಸ್ತಿ ನಃ ಪಥ್ಯಾಸ್ವಿತ್ಯಾರಭ್ಯ ಮಹೀಮೂ ಷು ಮಾತರಮಿತ್ಯಂತಾನಾಂ ಯಾಜ್ಯಾನುವಾಕ್ಯಾನಾಂ ವ್ಯತಿಷಂಗಂ ವಿಸ್ಪಷ್ಟಯತಿ ।

ಎಂದರೆ, ಹಾಗಲ್ಲ. ಈ ಬ್ರಹ್ಮವಾದಿಗಳು ಎಂದರೆ ಯಜ್ಞಾನುಷ್ಠಾನುನಪರರು ತಮ್ಮ ಅಜ್ಞಾನದಿಂದಲೇ ಹಾಗೆ ಹೇಳುವರು. ಮಂತ್ರಗಳಲ್ಲಿಯೂ ಕರ್ಮಗಳಲ್ಲಿಯೂ ಈ ಲೋಕದ ವಿಷಯಗಳನ್ನು ಸೂಚಿಸಿಲ್ಲವೆಂಬುದು ಸರಿಯಲ್ಲ. ಮಂತ್ರಗಳಲ್ಲಿ ಸ್ವಸ್ತಿ ಮಹೀ ಇತ್ಯಾದಿ ಶಬ್ದಗಳು ಈ ಲೋಕದಲ್ಲಿ ಪಡೆಯಬಹುದಾದ ಶ್ರೇಯಸ್ಸನ್ನು ಸೂಚಿಸುವವು. ಇದಲ್ಲದೆ ಈ ವಿಧವಾದ ಸಂಶಯಗಳಿಗೆ ಆಸ್ಪದವಿಲ್ಲದಂತೆ ಮಂತ್ರಪಠನಕ್ರಮದಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡುವರು. ಪ್ರಾಯಣೀಯೇಷ್ಟಿಯಲ್ಲಿ ಉಪಯೋಗಿಸುವ ಸ್ವಸ್ತಿನಃ ಪಥ್ಯಾಸು ಎಂದು ಪ್ರಾರಂಭವಾಗುವ ಮಹೀಮೂ ಷು ಎಂದು ಕೊನೆಗೊಳ್ಳುವ ಯಾಜ್ಯಾನುವಾಕ್ಯಾ ಮಂತ್ರಗಳನ್ನು ಹಿಂದುಮುಂದಾಗಿ ಉಪಯೋಗಿಸಿ ಹೋಮಮಾಡುವರು. ಅದರಿಂದ ಮೇಲೆ ತಿಳಿಸಿದ ದೋಷಗಳು ಪರಿಹಾರವಾಗುವವು.

ಯಾಃ ಪ್ರಾಯಣೀಯಸ್ಯ ಪುರೋನುವಾಕ್ಯಾಸ್ತಾ ಉದಯನೀಯಸ್ಯ ಯಾಜ್ಯಾಃ ಕುರ್ಯಾದ್ಯಾ ಉದಯನೀಯಸ್ಯ ಪುರೋನುವಾಕ್ಯಾಸ್ತಾಃ ಪ್ರಾಯಣೀಯಸ್ಯ ಯಾಜ್ಯಾಃ ಕುರ್ಯಾತ್ತದ್ವ್ಯತಿಷಜತ್ಯುಭಯೋರ್ಲೋಕಯೋರೃದ್ಧ್ಯಾ ಉಭಯೋರ್ಲೋಕಯೋಃ ಪ್ರತಿಷ್ಠಿತ್ಯಾ ಉಭಯೋರ್ಲೋಕಯೋರೃಧ್ನೋತ್ಯುಭಯೋರ್ಲೋಕಯೋಃ ಪ್ರತಿತಿಷ್ಠತಿ ಪ್ರತಿತಿಷ್ಠತಿ ಯ ಏವಂ ವೇದ ॥

ತಮೇವ ವ್ಯತಿಷಂಗಂ ವಿಸ್ಪಷ್ಟಯತಿ । ತತ್ರೇನ ಯಾಃ ಪ್ರಾಯಣೀಯಸ್ಯೇತ್ಯುಕ್ತಪ್ರಕಾರೇಣ ವ್ಯತಿಷಂಗಃ ಸಂಪದ್ಯತೇ । ಸ ಚ ಲೋಕದ್ವಯೇ ಭೋಗ್ಯವಸ್ತುಸಮೃದ್ಧ್ಯೈ ಸ್ಥೈರ್ಯೇಣಾವಸ್ಥಾನಾಯ ಭವತಿ । ತಥಾನುಷ್ಠಾನೇನ ಯಜಮಾನೋ ಲೋಕದ್ವಯೇ ಸಮೃದ್ಧಪ್ರತಿಷ್ಠಿತಶ್ಚ ಭವತಿ । ಯಥೋಕ್ತದೋಷಸಮಾಧಾನೇ ತೈತ್ತಿರೀಯಾ ಆಮನಂತಿ—ಯಾಃ ಪ್ರಾಯಣೀಯಸ್ಯ ಯಾಜ್ಯಾಸ್ತಾ ಉದಯನೀಯಸ್ಯ ಕುರ್ಯಾತ್ಪ್ರಾಜಮುಂ ಲೋಕಮಾರೋಹೇತ್ಪ್ರಮಾಯುಕಃ ಸ್ಯಾದ್ಯಾಃ ಪ್ರಾಯಣೀಯಸ್ಯ ಪುರೋನುವಾಕ್ಯಾಸ್ತಾ ಉದಯನೀಯಸ್ಯ ಯಾಜ್ಯಾಃ ಕರೋತ್ಯಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ ಇತಿ । ವ್ಯತಿಷಂಗವೇದನಂ ಪ್ರಶಂಸತಿ ।

ಯಾಜ್ಯಾನುವಾಕ್ಯಾ ಮಂತ್ರಗಳಲ್ಲಿ ಮಾಡುವ ವ್ಯತ್ಯಾಸಗಳನ್ನು ಇನ್ನೂ ವಿಶದವಾಗಿ ತಿಳಿಸಲಾಗುವುದು. ಪುರೋನುವಾಕ್ಯಾ ಮತ್ತು ಯಾಜ್ಯಾ ಮಂತ್ರಗಳನ್ನು ವ್ಯತ್ಯಸ್ತವಾಗಿ ಎಂದರೆ ಹಿಂದುಮುಂದಾಗಿ ಪಠಿಸಿ ಹೋಮಮಾಡುವರು. ಎಂದರೆ ಪ್ರಾಯಣೀಯೇಷ್ಟಿಯಲ್ಲಿ ಪಠಿಸುವ ಪುರೋನುವಾಕ್ಯಾ ಮಂತ್ರವು ಉದಯನೀಯೇಷ್ಟಿಯಲ್ಲಿ ಯಾಜ್ಯಾಮಂತ್ರವಾಗುವುದು. ಹಾಗೆಯೇ ಉದಯನೀಯೇಷ್ಟಿಯಲ್ಲಿ ಬಳಸುವ ಪುರೋನುವಾಕ್ಯಾ ಮಂತ್ರಗಳನ್ನು ಪ್ರಾಯಣೀಯೇಷ್ಟಿಯಲ್ಲಿ ಯಾಜ್ಯಾ ಮಂತ್ರಗಳನ್ನಾಗಿ ಪಠಿಸಬೇಕು. ತೈತ್ತಿರೀಯ ಸಂಹಿತೆಯಲ್ಲಿಯೂ ಈರೀತಿ ಹೇಳಿದೆ—

ಯಾಃ ಪ್ರಾಯಣೀಯಸ್ಯ ಯಾಜ್ಯಾಸ್ತಾ ಉದಯನೀಯಸ್ಯ ಕುರ್ಯಾತ್ಪ್ರಾಜಮುಂ ಲೋಕಮಾರೋಹೇತ್ಪ್ರಮಾಯುಕಃ ಸ್ಯಾದ್ಯಾಃ ಪ್ರಾಯಣೀಯಸ್ಯ ಪುರೋನುವಾಕ್ಯಾಸ್ತಾ ಉದಯನೀಯಸ್ಯ ಯಾಜ್ಯಾಕರೋತ್ಯಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ ॥

(ತೈ. ಸಂ. ೬-೧-೫-೫)

ಹೀಗೆ ವ್ಯತ್ಯಸ್ತಮಾಡಿ ಪಠಿಸಿ ಮಾಡುವುದರಿಂದ ಯಜ್ಞಮಾಡುವ ಯಜಮಾನನು ಈ ಭೂಲೋಕ ಮತ್ತು ಸ್ವರ್ಗಲೋಕಗಳೆರಡರಲ್ಲಿಯೂ ಸಂಪತ್ಸಮೃದ್ಧಿಯಿಂದ ಸುಖಿಸುವನು. ಎಂದರೆ ಈ ಲೋಕದಲ್ಲಿ ಶ್ರೇಯಸ್ಸನ್ನೂ ಗಣ್ಯಸ್ಥಾನವನ್ನೂ ಗಳಿಸಿ ಬಹುಕಾಲ ಸುಖದಿಂದ ಜೀವಿಸಿದ್ದು ಅಂತ್ಯದಲ್ಲಿ ಸ್ವರ್ಗಲೋಕವನ್ನು ಹೊಂದಿ ಅಲ್ಲಿಯೂ ಬಹುಕಾಲ ಸ್ವರ್ಗಸುಖದಿಂದ ಬಾಳುವನು. ಈ ವಿಷಯವನ್ನು ತಿಳಿಯುವ ವಿವೇಕಿಯಾದ ಪುರುಷನೂ ಸಹ ಈ ಲೋಕದಲ್ಲಿ ತನ್ನ ಜನರ ನಡುವೆ ಗಣ್ಯನಾಗಿ ಸುಖದಿಂದಿರುವನು.

ಆದಿತ್ಯಶ್ಚರುಃ ಪ್ರಾಯಣೀಯೋ ಭವತ್ಯಾದಿತ್ಯ ಉದಯನೀಯೋ ಯಜ್ಞಸ್ಯ ಧೃತ್ಯೈ ಯಜ್ಞಸ್ಯ ಬರ್ಸನಧ್ಯೈ ಯಜ್ಞಸ್ಯಾಪ್ರಸ್ರಂಸಾಯ ॥

ಯೋಽಯಂ ಪ್ರಥಮಖಂಡೇ ಪ್ರಾಯಣೀಯೋದಯನೀಯಯೋರದಿತಿದೇವತಾಕಶ್ಚರುರ್ವಿಹಿತಸ್ತಮಿಮಂ ಪ್ರಶಂಸತಿ । ಸೋಮಯಾಗಸ್ಯಾದೌ ಪ್ರಾಯಣೀಯೇಷ್ಟಿಃ । ಅಂತೇ ಚೋದಯನೀಯೇಷ್ಟಿಸ್ತಯೋರುಭಯೋರಯಮದಿತಿದೇವತಾಕಶ್ಚರುಃ । ಸೋಽಯಂ ತಸ್ಯ ಯಜ್ಞಸ್ಯ ಧಾರಣಾಯ ಮಣ್ಯಾಕಾರೋ ಗ್ರಂಥಿವಿಶೇಷಃ । ತಸ್ಯ ಬಂಧನಂ ತತ್ಸಿದ್ಧ್ಯರ್ಥಮುಭಯತ್ರಾಪ್ಯಚರುಕರಣಂ । ಬಂಧನಸ್ಥಾನೀಯೇನ ಚರುಣಾ ಯಜ್ಞಸ್ಯ ಧಾರಣಂ ಸಿಧ್ಯತಿ । ಸತಿ ಚ ಧಾರಣೇ ಯಜ್ಞಾಂಗಂ ಕಿಂಚಿದಪಿ ಸ್ರಸ್ತಂ ಲುಪ್ತಂ ನ ಭವತಿ । ತತೋ ಯಜ್ಞಸ್ಯಾಪ್ರಸ್ರಂಸಾಯೋಭಯತಶ್ಚರುಃ ।

ಸೋಮಯಾಗಗಳ ಪ್ರಾರಂಭದಲ್ಲಿ ಪ್ರಾಯಣೀಯೇಷ್ಟಿಯೂ ಯಾಗದ ಅಂತ್ಯದಲ್ಲಿ ಉದಯನೀಯೇಷ್ಟಿಯೂ ನಡೆಯುವುದು. ಈ ಎರಡು ಇಷ್ಟಿಗಳಲ್ಲಿಯೂ ಆದ್ಯಂತಗಳಲ್ಲಿ ಅದಿತಿದೇವತಾಕವಾದ ಚರುವನ್ನು ಅರ್ಪಿಸಿ ಹೋಮಮಾಡುವರು ಲೋಕವ್ಯವಹಾರದಲ್ಲಿ ಮಣಿಗಳನ್ನು ದಾರದಲ್ಲಿ ಪೋಣಿಸಿ ಹಾರವನ್ನು ಮಾಡುವಾಗ ಆ ದಾರದ ಎರಡು ತುದಿಗಳಲ್ಲಿಯೂ ಭದ್ರವಾಗಿ ಗಂಟನ್ನು ಹಾಕಿದರೆ ಅವು ಬಿಚ್ಚಿಹೋಗುವುದಿಲ್ಲ. ಅದರಂತೆಯೇ ಯಜ್ಞದ ಆದ್ಯಂತ್ಯಗಳಲ್ಲಿ ಅದಿತಿದೇವತಾಕವಾದ ಚರುಹೋಮದಿಂದ ಯಜ್ಞವು ಲೋಪಗಳಿಲ್ಲದೆ ಅವಿಚ್ಛಿನ್ನವಾಗಿ ನಡೆದು ಕೊನೆಗೊಳ್ಳುವುದು. ಅದಿತಿದೇವತಾಕವಾದ ಆದ್ಯಂತ ಚರುಹೋಮಗಳೇ ಯಜ್ಞಾಂಗಕರ್ಮಗಳನ್ನು ಪೋಣಿಸಿರುವ ದಾರದ ಎರಡು ತುದಿಗಳಿಗೂ ಬಿಚ್ಚಲಾಗದ ಗಂಟುಗಳಂತಿರುವವು. ಎಂದರೆ ಯಜ್ಞದಲ್ಲಿ ಕರ್ಮಗಳು ನ್ಯೂನಾತಿರಿಕ್ತವಿಲ್ಲದೆ ಯಥಾಕ್ರಮವಾಗಿ ನಡೆದು ಸಮಾಪ್ತಿಗೊಳ್ಳುವುದು ಎಂದಭಿಪ್ರಾಯವು.

ತದ್ಯಥೈವಾದ ಇತಿ ಹ ಸ್ಮಾಹ ತೇಜನ್ಯಾ ಉಭಯತೋಽನ್ತಯೋರಪ್ರಸ್ರಂಸಾಯ ಬರ್ಸೌ ನಹ್ಯತ್ಯೇವಮೇವೈತದ್ಯಜ್ಞಸ್ಯೋಭಯತೋಽನ್ತಯೋರಪ್ರಸ್ರಂಸಾಯ ಬರ್ಸೌ ನಹ್ಯತಿ ಯದಾದಿತ್ಯಶ್ಚರುಃ ಪ್ರಾಯಣೀಯೋ ಭವತ್ಯಾದಿತ್ಯ ಉದಯನೀಯಃ ॥

ಅತ್ರ ದೃಷ್ಟಾಂತಮಾಹ । ಅಥೋ ವಕ್ಷ್ಯಮಾಣಂ ನಿದರ್ಶನಂ ಯಥಾ ಭವತಿ ತಥಾ ದಾರ್ಷ್ಟಾಂತಿಕಮಿತ್ಯೇವಂ ಕಶ್ಚಿದ್ಬ್ರಹ್ಮವಾದ್ಯಾಹ ಸ್ಮ ತೇಜನ್ಯಾ ಇತ್ಯಾದಿನಾ । ತಾವೇವ ದೃಷ್ಟಾಂತದಾರ್ಷ್ಟಾಂತಿಕೌ ಸ್ಪಷ್ಟೀ ಕ್ರಿಯೇತೇ । ತೇಜನೀ ರಜ್ಜುಸ್ತಸ್ಯಾ ಉಭಯೋರಂತಯೋರಪ್ರಸ್ರಂಸಾಯ ವಿಶ್ಲೇಷನಿವಾರಣಾಯ ಲೌಕಿಕಃ ಪುರುಷೋ ಬರ್ಸೌ ನಹ್ಯತಿ ಮಣ್ಯಾಕಾರೌ ಗ್ರಂಥೀ ಬಧ್ನಾತಿ । ಏವಮೇವ ಚರುದ್ವಯಂ ಯದಸ್ತಿ ತದೇತದ್ಯಜ್ಞಸ್ಯೋಪಕ್ರಮೋಪಸಂಹಾರರೂಪಯೋರುಭಯೋರಶೈಥಿಲ್ಯಾಯ ಮಣ್ಯಾಕಾರಬಂಧನಸ್ಥಾನೀಯಂ ಭವತಿ ।

ಮೇಲೆ ಹೇಳಿದ ವಿಷಯವನ್ನೇ ಇನ್ನೂ ಸ್ಪಷ್ಟವಾಗಿ ವಿವರಿಸಲಾಗುವುದು. ಲೋಕವ್ಯವಹಾರದಲ್ಲಿ ಒಬ್ಬ ಪುರುಷನು ಒಂದು ಹಗ್ಗವನ್ನು ತೆಗೆದುಕೊಂಡು ಅದರ ಎರಡು ಕೊನೆಗಳಲ್ಲಿಯೂ ಮುಣ್ಯಾಕಾರದ ಎಂದರೆ ದುಂಡಾಗಿರುವ ಎರಡು ಗಂಟುಗಳನ್ನು ಹಾಕುತ್ತಾನೆ. ಆ ಹಗ್ಗವು ಬಿಚ್ಚಿಹೋಗದೆ ಘಟ್ಟಿಯಾಗಿರಲಿ ಎಂಬ ಉದ್ದೇಶದಿಂದ ಗಂಟುಹಾಕುತ್ತಾನೆ. ಅದರಂತೆ ಯಜ್ಞದಲ್ಲಿ ನಡೆಯುವ ಅನೇಕ ಕರ್ಮಾಂಗಗಳು ಪ್ರಮಾದದಿಂದ ಬಿಟ್ಟುಹೋಗದಂತೆ ಯಜ್ಞವು ಅವಿಚ್ಛಿನ್ನವಾಗಿ ನಡೆಯಲು ಯಜ್ಞದ ಪ್ರಾರಂಭಕರ್ಮವಾದ ಪ್ರಾಯಣೀಯೇಷ್ಟಿಯಲ್ಲಿಯೂ ಯಜ್ಞಾಂತ್ಯಕರ್ಮವಾದ ಉದಯನೀಯೇಷ್ಟಿಯಲ್ಲಿಯೂ ಅದಿತಿ ದೇವತೆಗೆ ಅರ್ಪಿಸಲ್ಪಡುವ ಎರಡು ಚರುಹೋಮಗಳು ಹಗ್ಗದ ಎರಡು ತುದಿಗಳಲ್ಲಿರುವ ಎರಡು ಗಂಟುಗಳಂತಿದ್ದು ಯಜ್ಞವು ಸಂತತವಾಗಿ ನಡೆದು ಸಮಾಪ್ತಿಗೊಳ್ಳಲು ಸಹಾಯಕವಾಗಿರುವವು.

**ಪಥ್ಯಯೈವೇತಃ ಸ್ವಸ್ತ್ಯಾ ಪ್ರಯಂತಿ ಪಥ್ಯಾಂ ಸ್ವಸ್ತಿಮಭ್ಯುದ್ಯಂತಿ ಸ್ವಸ್ತ್ಯೈವೇತಃ ಪ್ರಯಂತಿ ಸ್ವಸ್ತ್ಯುದ್ಯಂತಿ ಸ್ವಸ್ತ್ಯುದ್ಯಂತಿ ॥**

ಯೋಽಯಂ ಪ್ರಾಯಣೀಯೋ ಪಥ್ಯಾಖ್ಯಾ ಪ್ರಥಮಾ ದೇವತಾಸ್ತಿ ಉದಯನೀಯೋ ತಸ್ಯಾ ಉತ್ತಮಾತ್ವಮರ್ಥವಾದೇನೋನ್ನಯತಿ । ಇತಃಶಬ್ದಃ ಷಷ್ಠ್ಯರ್ಥೇ ವರ್ತತೇ । ಆಸಾಮಾಜ್ಯಹವಿಷ್ಕಾನಾಂ ದೇವತಾನಾಂ ಮಧ್ಯೇ ಪಥ್ಯಯೈವ ಸ್ವಸ್ತ್ಯೈತಚ್ಛಬ್ದದ್ವಯಾಭಿಹಿತಯೈವ ದೇವತಯಾ ಪ್ರಯಂತಿ ಪ್ರಾರಭಂತೇ ಪ್ರಾಯಣೀಯೋ ತಾಂ ದೇವತಾಂ ಪ್ರಥಮಂ ಯಜಂತೀತ್ಯರ್ಥಃ । ಪಥ್ಯಾಂ ಸ್ವಸ್ತಿಮಭಿಶಬ್ದದ್ವಯಾಭಿಹಿತಾಂ ದೇವತಾಮಭಿಲಕ್ಷ್ಯೋದ್ಯಂತಿ ಸಮಾಪಯಂತಿ । ಉದಯನೀಯೋ ತಾಂ ದೇವತಾಮುತ್ತಮಾಂ ಯಜಂತೀತ್ಯರ್ಥಃ । ಸ್ವಸ್ತ್ಯಾಖ್ಯಯಾ ದೇವತಯಾ ಆದ್ಯಂತಯೋರ್ಯಾಗೇ ಸತಿ ಯಜಮಾನಾ ಇತೋಽಸ್ಮಿನ್ಕರ್ಮಣಿ ಸ್ವಸ್ತ್ಯೇವ ಕ್ಷೇಮ ಏವ ಯಥಾ ಭವತಿ ತಥಾ ಪ್ರಯಂತಿ ಪ್ರಾರಭಂತೇ । ತಥಾ ಸ್ವಸ್ತ್ಯುದ್ಯಂತಿ ಕ್ಷೇಮೇಣ ಸಮಾಪಯಂತಿ । ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಅಥ ಮೀಮಾಂಸಾ । ದ್ವಾದಶಾಧ್ಯಾಯಸ್ಯ ದ್ವಿತೀಯಪಾದೇ ಚಿಂತಿತಂ—

ಪ್ರಾಯಣೀಯಸ್ಯ ನಿಷ್ಕಾಸೇ ಯೋ ನಿರ್ವಾಪೋಽರ್ಥಕರ್ಮ ತತ್ ।
ನಿಷ್ಕಾಸಪ್ರತಿಪತ್ತಿರ್ವೋದಯನೀಯಸ್ಯ ಸಂಸ್ಕೃತಿಃ ॥

ಉತಾದ್ಯಃ ಪೂರ್ವವನ್ಮೈವಂ ಮುಖ್ಯಸ್ಯ ಪ್ರಕೃತತ್ವತಃ ॥
ಮಧ್ಯೋಽಸ್ತು ನೋಪಯೋಕ್ತವ್ಯಸಂಸ್ಕಾರಸ್ಯ ಗುರುತ್ವತಃ ॥

ಜ್ಯೋತಿಷ್ಟೋಮೇ ಶ್ರೂಯತೇ । ಪ್ರಾಯಣೀಯಸ್ಯ ನಿಷ್ಕಾಸ ಉದಯನೀಯಮಭಿನಿರ್ವಪತೀತಿ । ಅತ್ರ ಪೂರ್ವನ್ಯಾಯೇನ ನಿಷ್ಕಾಸದ್ರವ್ಯಕಮುಪಯನೀಯಮವಸಾನಧರ್ಮಕಮನ್ಯದರ್ಥಕರ್ಮೇತ್ಯಾದ್ಯಃ ಪಕ್ಷಃ । ಮುಖ್ಯಸ್ಯೈವೋದಯನೀಯಸ್ಯ ಪ್ರಕೃತತ್ವಾದ್ಭಿನ್ನಪ್ರಕರಣಾಮ್ನಾತಾವಭೃಥಧರ್ಮಾದಿದೇಶವದುದಯನೀಯಸ್ಯ ಧರ್ಮಾತಿದೇಶಸ್ಯಾಪ್ಯಸಂಭವಾನ್ನಾರ್ಥಕರ್ಮತ್ವಂ । ಯದಿ ತರ್ಹಿ ನಿಷ್ಕಾಸಪ್ರತಿಪತ್ತಿರಿತಿ ಮಧ್ಯಮಃ ಪಕ್ಷೋಽಸ್ತು ಸೋಽಪೀತ್ಥಂ ನ

**ಸಂಭವತಿ । ಉಪಯುಕ್ತಸಂಸ್ಕಾರಾದುಪಯೋಕ್ಷ್ಯಮಾಣಸಂಸ್ಕಾರಸ್ಯ ಗರೀಯಸ್ತ್ವಾತ್ । ತಸ್ಮಾದುದಯನೀಯಸ್ಯ ಸಂಸ್ಕಾರಃ ।**

ಸೋಮಯಾಗದ ಆದ್ಯಂತ್ಯಗಳಲ್ಲಿ ಆಚರಿಸಲ್ಪಡುವ ಪ್ರಾಯಣೀಯೋದಯನೀಯೇಷ್ಟಿಗಳ ದೇವತೆಗಳಲ್ಲಿ ಪಥ್ಯಾಸ್ವಸ್ತಿ ಎಂಬ ದೇವತೆಯ ಹೋಮದಿಂದಲೇ ಯಜ್ಞವು ಪ್ರಾರಂಭವಾಗುವುದು. ಎಂದರೆ ಆ ದೇವತೆಯನ್ನೇ ಉದ್ದೇಶಿಸಿ ಮೊದಲನೇ ಆಹುತಿಯನ್ನು ಅರ್ಪಿಸುವರು. ಯಜ್ಞಾಂತ್ಯದಲ್ಲಿ ನಡೆಯುವ ಉದಯನೇಷ್ಟಿಯಲ್ಲಿಯೂ ಈ ಪಥ್ಯಾಸ್ವಸ್ತಿ ಎಂಬ ದೇವತೆಯನ್ನು ದ್ದೇಶಿಸಿ ಮಾಡುವ ಹೋಮದಿಂದಲೇ ಯಜ್ಞವು ಸಮಾಪ್ತಿಗೊಳ್ಳುವುದು. ಆದ್ದರಿಂದ ಯಜ್ಞಮಾಡುವ ಯಜಮಾನನು ಈ ಲೋಕದಲ್ಲಿ ನಡೆಯುವ ಯಜ್ಞದಲ್ಲಿ ಕ್ಷೇಮದಿಂದಲೇ ಯಜ್ಞಕರ್ಮಗಳನ್ನು ಆಚರಿಸುತ್ತಾ ಕ್ಷೇಮದಿಂದಲೇ ಮುಂದುವರೆದು ಯಜ್ಞಸಮಾಪ್ತಿಯನ್ನು ಮಾಡುತ್ತಾನೆ. ಸ್ವಸ್ತ್ಯದ್ಯಂತಿ ಎಂಬ ಶಬ್ದದ ದ್ವಿರಾವೃತ್ತಿಪಠನವು ಅಧ್ಯಾಯಸಮಾಪ್ತಿಯನ್ನು ಸೂಚಿಸುವುದು.

*English Translation*

They say, at the Prayaniya ishti are (only) the Prayjaya offerings to be made, but not the Anuyajas; for the latter are, as it were, a blank, and (if performed) cause delay. But this (precept) should not be observed; at the said Ishti both the Prayaja as well as the Anuyaja offerings should be made. For the Prayajas are the vital airs, and the Anuyajas are offspring. When he thus foregoes the vital airs of the sacrificer (deprives him of his life), and when he forgoes the Anuyajas, he foregoes the offspring of the sacrificer (deprives him of it). Thence Prayajas as well as Anuyajas are required (at the Prayanjiya ishti).

He should not repeat the Samyaja mantras addressed to the ladies (patnis, of the gods); nor should he use the Samshita-Yajus formula. Only inasmuch as this is done (i e., if the Patni-samyajya and Samsthita-Yajus offerings are omitted) the sacrifice is complete.

He should keep the remainder of the Prayaniya-ishti offering, and (after the Soma sacrifice is over) mix it together with the offering required for the Udayaniya (concluding) ishti, in order to make the sacrifice one continuous uninterrupted whole. (There is also another way for connecting both Ishtis). In the same vessel, in which he portions out the rice for the Purodasa of the Payaniya ishti, he should portion out also the rice for the Purodasa of the Udayaniya ishti. Inasmuch as this is done, the sacrifice becomes continuous, uninterrupted. They say, in doing this the sacrificers succeed in that (the other) world, but not in this one. They use the expression Prayaniyam (on several) occasions. For on the several portions of rice being taken out for the Purodasa (by the Adhvaryu) the sacrificers say this is Prayaniya (i.e. to go forth, to progress), and on the Purodasa oblations being thrown (into the fire) they say again, this is Prayaniyam

(i.e. to progress). In this way the sacrificers go forth (prayanti) from this world. But they say so from ignorance (and this objection is consequently not to be regarded).

The Anuvakya and Yajya verses of both the Prayaniya and Udayaniya ishtis should inter-change in this way, that the Anuvakya verses of the Prayaniya ishti should be used as the Yajya verses for the Udayaniya, and the Yajya verses of the Prayaniya as Anuvakyas of the Udayaniya. The Hotar shifts in this way (the Anuvakyas and Yajyas of both the Ishtis) for ensuing success (to the sacrificer) in both worlds, for obtaining a firm footing (for the sacrificer) in both worlds. The sacrificer (thus) succeeds in both worlds, and obtains a firm footing in both worlds. He who has this knowledge, obtains a firm footing (in both worlds). The Charu oblation which is given to Aditi at the Prayaniya as well as at the Udayaniya ishti server for holding the sacrifice (at both its ends) together, to tie the two knots of the sacrifice (at the beginning and at the end) in order to prevent it from slipping down. Some one (a theologian) has told; this (tying of the two ends of the sacrifice) is exactly corresponding to that (act of common life to which it alludes); as (for instance) one ties two knots at both the ends of a rope (tejanih) in order to prevent (the load which is tied up) from slipping down. In the same way the priest ties the knots at both ends of the sacrifice (the sacrificial chain) by means of the Charu oblation given to Aditi at the Prayaniya as well as at the Udayaniya ishti. Among those (deities required at both the Ishtis) they commence with Pathya Svasti (at the Prayaniya ishti) and conclude (at the Udayaniya ishti) also with Pathya Svasti. (Thus) the sacrificers start safely from here, and end (their journey there, in the other world), they end safely, sefely (their journey there, in the other world).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಿತೀಯಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎರಡನೆಯ ಅಧ್ಯಾಯದ ಐದನೆಯ ಖಂಡವು ಸಮಾಪ್ತವಾದುದು.

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತೌ ಪ್ರಥಮಪಂಚಿಕಾಯಾಂ ದ್ವಿತೀಯೋಽಧ್ಯಾಯಃ.



# ಅಥೈತರೇಯಬ್ರಾಹ್ಮಣೇ ತೃತೀಯೋಽಧ್ಯಾಯಃ ಪ್ರಥಮಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಸೋಮವಿಕ್ರಯಣ—ಹದಿಮೂರನೇ ಮಾಸ ಇತ್ಯಾದಿ ]

---

**ಪ್ರಾಚ್ಯಾಂ ವೈ ದಿಶಿ ದೇವಾಃ ಸೋಮಂ ರಾಜಾನಮಕ್ರೀಣಂಸ್ತ-
ಸ್ಮಾತ್ಪ್ರಾಚ್ಯಾಂ ದಿಶಿ ಕ್ರೀಯತೇ ॥**

ಪ್ರಾಯಣೀಯಾ ತದಂಗಂ ಚ ದೇವತಾದಿಕನಿರ್ಣಾರಿತಂ ।
ತಥೈವೋದಯನೀಯಾ ಚ ತದ್ವಿಶೇಷಾಶ್ಚ ವರ್ಣಿತಾಃ ॥

ಅಥ ಸೋಮಪ್ರವಹಣಾಂಗಮಂತ್ರಾಪಯೋ ವಕ್ತವ್ಯಾಃ । ತತ್ರಾದೌ ಸೋಮಕ್ರಯ-
ಣಸ್ಯ ದಿಶಂ ವಿಧತ್ತೇ । ಪ್ರಾಚೀನವಂಶಾತ್ಪೂರ್ವಸ್ಯಾಂ ದಿಶಿ ದೇವೈಃ ಪುರಾ ಸೋಮಸ್ಯ ಕ್ರೀತತ್ವಾ-
ದೃತ್ವಿಗ್ಭಿರಪಿ ತಥಾ ಸೋಮಃ ಕ್ರೇತವ್ಯ ಇತ್ಯರ್ಥಃ ।

ಹಿಂದಿನ ಅಧ್ಯಾಯದಲ್ಲಿ ಪ್ರಾಯಣೀಯೇಷ್ಟಿ ಮತ್ತು ಉದಯನೀಯೇಷ್ಟಿಗಳ ವಿಷಯವನ್ನೂ ಆ ಇಷ್ಟಿಗಳಲ್ಲಿ ನಿರ್ದಿಷ್ಟರಾದ ದೇವತೆಗಳ ವಿಷಯವನ್ನೂ, ಇತರ ವಿಶೇಷ ಸಂಗತಿಗಳನ್ನೂ ತಿಳಿಸಲಾಯಿತು. ಈ ಅಧ್ಯಾಯದಲ್ಲಿ ಸೋಮ ಕ್ರಯಣ, ಸೋಮಪ್ರವಹಣ ಮುಂತಾದ ವಿಷಯಗಳನ್ನು ಹೇಳಲಾಗುವುದು. ಪ್ರಾರಂಭದಲ್ಲಿ ಸೋಮವಿಕ್ರಯವು ಯಾವ ದಿಕ್ಕಿನಲ್ಲಿ ಮಾಡಲ್ಪಡಬೇಕೆಂಬ ವಿಷಯದ ಪ್ರಸ್ತಾಪವನ್ನು ಮಾಡುತ್ತಾರೆ. ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಪ್ರಾಚೀನವಂಶವೆಂಬ ಯಜ್ಞಗೃಹದ ಪೂರ್ವದಿಕ್ಕಿನಲ್ಲಿ ಸೋಮವನ್ನು ಕೊಂಡುಕೊಂಡದ್ದರಿಂದ ಅದೇ ಪದ್ಧತಿಯನ್ನನುಸರಿಸಿ ಈಗಲೂ ಸೋಮವಿಕ್ರಯವನ್ನು ಪೂರ್ವದಿಕ್ಕಿನಲ್ಲಿಯೇ ಮಾಡಲ್ಪಡುವುದು.

ಸೋಮವಿಕ್ರಯವೆಂದರೇನು? ಅದು ಹೇಗೆ ರೂಢಿಯಲ್ಲಿ ಬಂದಿತು ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ. ಒಂದಾನೊಂದು ಕಾಲದಲ್ಲಿ ಎಂದರೆ ಅತಿ ಪ್ರಾಚೀನಕಾಲದಲ್ಲಿ ಸೋಮಲತೆಗಳು ದೇಶದ ನಾನಾಭಾಗಗಳಲ್ಲಿ ಯಥೇಚ್ಛವಾಗಿ ಬೆಳೆಯುತ್ತಿದ್ದುದರಿಂದ ಯಜ್ಞವನ್ನು ಮಾಡುವಾಗ ಅವುಗಳನ್ನು ತರುವುದು ಕಷ್ಟವಾಗಿರಲಿಲ್ಲ. ಕ್ರಮಕ್ರಮವಾಗಿ ಅವು ಬೆಳೆಯುವುದು ಕಮ್ಮಿಯಾಗುತ್ತಾ ಬಂದು ಎತ್ತರವಾದ ಪರ್ವತಪ್ರದೇಶಗಳಲ್ಲಿಯೂ ಕೆಲವು ನದಿಗಳ ತೀರಪ್ರದೇಶಗಳಲ್ಲಿಯೂ ಮಾತ್ರ ದೊರೆಯುತ್ತಿತ್ತು. ಮೂಜವತವೆಂಬ ಪರ್ವತವೂ, ಸುಷೋಮ ಎಂಬ ನದಿಯೂ ಉತ್ತಮವಾದ ಸೋಮಲತೆಗೆ ಪ್ರಖ್ಯಾತವಾಗಿತ್ತೆಂಬು ಋಗ್ವೇದದಲ್ಲಿ ಹೇಳಿದೆ. ಎತ್ತರವಾದ ಪರ್ವತಪ್ರದೇಶಗಳಲ್ಲಿ ಬೆಳೆಯುವ ಲತೆಗಳಲ್ಲಿ ಸಾರವು ಹೆಚ್ಚಾಗಿರುವುದರಿಂದ ಅಂತಹ ಸ್ಥಳಗಳಲ್ಲಿ ದೊರೆಯುವ ಸೋಮಕ್ಕೆ ವಿಶೇಷ ಪ್ರಾಶಸ್ತ್ಯವಿತ್ತು. ಯಜ್ಞದಲ್ಲಿ ದೀಕ್ಷಿತನಾದ ಯಜಮಾನನು ಅಥವಾ ಅವನ ಕಡೆಯವರು ಬಹುದೂರ ಪ್ರದೇಶಗಳಿಗೆ ಹೋಗಿ ಸೋಮಲತೆಗಳನ್ನು ತರುವುದು ಪ್ರಯಾಸವಾದ ಕೆಲಸವಾದ್ದರಿಂದ

ಇತರರು ಹೋಗಿ ತಂದದ್ದನ್ನು ಕೊಂಡುಕೊಂಡು ಯಜ್ಞಗಳಲ್ಲಿ ಉಪಯೋಗಿಸುವುದು ರೂಢಿಯಲ್ಲಿ ಬಂದಿತು ಮತ್ತು ಈರೀತಿ ಸೋಮವನ್ನು ಕೊಂಡುಕೊಳ್ಳುವುದೂ ಅದನ್ನು ಯಜ್ಞಭೂಮಿಗೆ ವಿಜೃಂಭಣೆಯಿಂದ ಗಾಡಿಯಲ್ಲಿ ತರುವುದೂ ಯಜ್ಞಾಂಗ ಕರ್ಮಗಳಾಗಿ ಭಾವಿಸಲ್ಪಟ್ಟು ಆ ಕರ್ಮಗಳನ್ನು ಮಂತ್ರಪೂರ್ವಕವಾಗಿಯೂ ವಿಧಿವತ್ತಾಗಿಯೂ ಮಾಡುವುದೂ ರೂಢಿಗೆ ಬಂದಿತು. ಈ ವಿಷಯವನ್ನೇ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

> ತಂ ತ್ರಯೋದಶಾನ್ಮಾಸಾದಕ್ರೀಣಂಸ್ತಸ್ಮಾತ್ತ್ರಯೋದಶೋ ಮಾಸೋ ನಾನುವಿದ್ಯತೇ ನ ವೈ ಸೋಮವಿಕ್ರಯ್ಯನುವಿದ್ಯತೇ ಪಾಪೋ ಹಿ ಸೋಮವಿಕ್ರಯೀ ॥

ಪ್ರಸಂಗಾತ್ಸೋಮವಿಕ್ರಯಿಣಃ ಪ್ರತ್ಯವಾಯಂ ದರ್ಶಯತಿ—ಪುರಾ ಸಂವತ್ಸರಸ್ಯ ತ್ರಯೋದಶಮಾಸಾಃ ಸಂತಿ ನೇದಾನೀಂ ॥ ದೇವಾಸ್ತ್ರಯೋದಶಸ್ಯ ಮಾಸಸ್ಯಾಭಿಮಾನಿನಃ ಪುರುಷಾತ್ತಂ ಸೋಮಂ ಕ್ರೀತವಂತಃ ॥ ಯಸ್ಮಾತ್ತದಭಿಮಾನೀ ಪುರುಷಃ ಸೋಮವಿಕ್ರಯೀ ತಸ್ಮಾಲ್ಲೋಕೇ ತದೀಯಸ್ತ್ರಯೋದಶಮಾಸೋ ನಾನುವಿದ್ಯತೇ ಶುಭಕರ್ಮಾನುಕೂಲೋ ನಾಸ್ತಿ ॥ ಮೇಷಾದಿ ಸಂಕ್ರಾಂತ್ಯಾದಿರಹಿತತ್ವಾನ್ಮಲಮಾಸ ಇತ್ಯಭಿಪ್ರೇತ್ಯ ತಸ್ಮಿನ್ಮಾಸೇ ಶಿಷ್ಟಾಃ ಶುಭಕರ್ಮಾಣಿ ವರ್ಜಯಂತಿ ॥ ಅತಏವಾದಾನೀಮಪಿ ಸೋಮವಿಕ್ರಯೀ ಶಿಷ್ಟಾಚಾರಸ್ಯಾನುಕೂಲೋ ನೈವ ವಿದ್ಯತೇ ॥ ಸೋಮವಿಕ್ರಯಿಣಃ ಪಾಪರೂಪತ್ವೇ ಶ್ರುತ್ಯಂತರಪ್ರಸಿದ್ಧಿದ್ಯೋತನಾರ್ಥೋ ಹಿ ಶಬ್ದಃ ॥ ಅತ ಏವ ಶ್ರುತ್ಯಂತರೇ ತದ್ವಿಷಯೋ ಮಂತ್ರ ಏವಂ ವ್ಯಾಖ್ಯಾಯತೇ—'ಅಸ್ಮೇ ಜ್ಯೋತಿಃ-ಸೋಮವಿಕ್ರಯಿಣಿ ತಮ ಇತ್ಯಾಹ ॥ ಜ್ಯೋತಿರೇವ ಯಜಮಾನೇ ದಧಾತಿ। ತಮಃ ಸೋಮವಿಕ್ರಯಿಣಮರ್ಪಯತಿ' ಇತಿ ॥ ತಮಃಶಬ್ದಃ ಪಾಪವಾಚೀ ॥

ಪೂರ್ವದಲ್ಲಿ ಒಂದು ಸಂವತ್ಸರದಲ್ಲಿ ಹದಿಮೂರು ಮಾಸಗಳು (ತಿಂಗಳುಗಳು) ಇದ್ದವು. ಈಗ ಹನ್ನೆರಡೇ ಇವೆ. ಈಗ ಅವು ರೂಢಿಯಲ್ಲಿಲ್ಲ. ಈ ಹದಿಮೂರನೇ ಮಾಸವೇ ಅಧಿಕಮಾಸವು ಅಥವಾ ಮಲಮಾಸವು. ಈ ಮಾಸದಲ್ಲಿ ಮೇಷಾದಿ ಹನ್ನೆರಡು ಸಂಕ್ರಮಣಗಳಲ್ಲಿ ಯಾವುದೂ ಇರುವುದಿಲ್ಲವಾದ್ದರಿಂದ ಈ ಮಾಸಕ್ಕೆ ಪ್ರಾಶಸ್ತ್ಯವಿಲ್ಲ. ಈ ಮಾಸದಲ್ಲಿ ಶುಭ ಕಾರ್ಯಾದಿಗಳು ನಡೆಯುವಂತಿಲ್ಲ.

ಅಧಿಕಮಾಸವೆಂದರೇನು ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುತ್ತೇವೆ. ಜ್ಯೋತಿಶ್ಶಾಸ್ತ್ರರೀತಿಯಾಗಿ ಸಂವತ್ಸರ ಪರಿಮಾಣವನ್ನು ಕ್ರಮಪಡಿಸುವುದು ಎರಡುವಿಧವಾಗಿರುವುದು. ಸೂರ್ಯಗತಿಯಿಂದ ಎಂದರೆ ಮೇಷಾದಿ ದ್ವಾದಶರಾಶಿಗಳಲ್ಲಿ ಸೂರ್ಯನ ಗತಿಯನ್ನು ಗಮನಿಸಿ ಅದರಂತೆ ದ್ವಾದಶಮಾಸಗಳನ್ನು ವಿಂಗಡಿಸಿ ಒಂದು ಸಂವತ್ಸರದವರೆಗೆ ಆಗುವ ಕಾಲಪರಿಮಿತಿಗೆ ಸೌರಮಾನಸಂವತ್ಸರವೆಂದು ಹೆಸರು. ಈ ಸೌರಮಾನಕ್ರಮದಲ್ಲಿ ಹನ್ನೆರಡು ತಿಂಗಳುಗಳುಮಾತ್ರವಿರುವವು. ಹದಿಮೂರನೆಯ ತಿಂಗಳು ಇರುವುದಿಲ್ಲ. ಪ್ರತಿತಿಂಗಳಲ್ಲಿಯೂ ಮೂವತ್ತು ಅಥವಾ ಮೂವತ್ತೊಂದು ದಿನಗಳಿರುವವು. ಈ ದಿನಗಳಿಗೆ ತೇದಿ ಎನ್ನುವರು. ಮತ್ತೊಂದು ವಿಧವಾದ ಸಂವತ್ಸರ ಪರಿಮಿತಿಯ ಕ್ರಮಕ್ಕೆ ಚಾಂದ್ರಮಾನವೆನ್ನುವರು. ಇದನ್ನು ಚಂದ್ರನ ಗತಿಯಿಂದ ಪರಿಗಣಿಸುವರು. ಚಂದ್ರನ ವೃದ್ಧಿಕ್ಷಯಗಳಿಗೆ ಅನುಸಾರವಾಗಿ ೧೪ ಅಥವಾ ೧೫ ದಿನಗಳಿಗೆ ಒಂದುಸಲ ಪೂರ್ಣ ಚಂದ್ರನಿರುವ ದಿನಕ್ಕೆ ಪೌರ್ಣಮಾಸೀ ಎಂದೂ ಪೌರ್ಣಮಾಸೀಗೆ ಅಂತ್ಯವಾಗುವ ೧೫ ದಿವಸಗಳು ಅಥವಾ ಪಕ್ಷಕ್ಕೆ ಶುಕ್ಲಪಕ್ಷ

ಎಂದೂ ಹೆಸರು. ಪೌರ್ಣಮಾಸೀಯಿಂದ ಮುಂದೆ ೧೫ ದಿನಗಳವರೆಗಿನ ಕಾಲಕ್ಕೆ ಕೃಷ್ಣಪಕ್ಷ ಎನ್ನುವರು. ಈ ಕೃಷ್ಣಪಕ್ಷದ ಕೊನೆಯ ದಿನಕ್ಕೆ ಅಮಾವಾಸ್ಯಾ ಎಂದು ಹೆಸರು. ಅಮಾವಾಸ್ಯೆಯಲ್ಲಿ ಚಂದ್ರೋದಯವಿರುವುದಿಲ್ಲ. ಆ ದಿನ—**ದರ್ಶಃ ಸೂರ್ಯೇಂದುಸಂಗಮಃ** ಎಂದರೆ ಸೂರ್ಯಚಂದ್ರರ ಸಂಗಮವೆಂದು ಪ್ರಸಿದ್ಧಿಯಾಗಿರುವುದು. ಈ ಅಮಾವಾಸ್ಯೆಯೇ ಚಾಂದ್ರಮಾನ ಸಂವತ್ಸರದ ಪ್ರತಿಮಾಸಕ್ಕೆ ಕೊನೆಯ ದಿನ. ಆದ್ದರಿಂದ ಪ್ರತಿಮಾಸದಲ್ಲಿಯೂ ಒಂದು ಪೌರ್ಣಮಾಸೀ ಒಂದು ಅಮಾವಾಸ್ಯಾ ಎಂಬ ಕ್ರಮದಂತೆ ಒಂದು ಚಾಂದ್ರಮಾನ ಸಂವತ್ಸರದಲ್ಲಿ ಹನ್ನೆರಡು ಪೌರ್ಣಮಾಸಿಗಳು, ಹನ್ನೆರಡು ಅಮಾವಾಸ್ಯೆಗಳು ಇರುವವು. ಪೌರ್ಣಮಾಸಿಯ ದಿನ ಯಾವ ನಕ್ಷತ್ರವಿರುವುದೋ ಆ ನಕ್ಷತ್ರದ ಹೆಸರಿನಿಂದ ಚಾಂದ್ರಮಾನಮಾಸವನ್ನು ಕರೆಯುವುದು ರೂಢಿಯಾಗಿದೆ. ಎಂದರೆ, ಪೌರ್ಣಮಾಸಿಯ ದಿನ ಚಿತ್ರಾನಕ್ಷತ್ರವಿದ್ದರೆ ಆ ಮಾಸಕ್ಕೆ ಚೈತ್ರಮಾಸವೆಂದೂ, ವಿಶಾಖನಕ್ಷತ್ರವಿದ್ದರೆ ವೈಶಾಖಮಾಸವೆಂದೂ, ಜ್ಯೇಷ್ಠಾನಕ್ಷತ್ರವಿದ್ದರೆ ಜ್ಯೇಷ್ಠಮಾಸವೆಂದು ಹೆಸರು. ಇತ್ಯಾದಿ. ಈ ಕ್ರಮದಲ್ಲಿ ಎರಡು ಪಕ್ಷಗಳಿಂದ ಕೂಡಿದ ಮಾಸದಲ್ಲಿ ಯಾವಾಗಲೂ ಮೂವತ್ತು ದಿನಗಳು ಅಥವಾ ತಿಥಿಗಳಿರುವುದಿಲ್ಲ. ಒಟ್ಟು ನಕ್ಷತ್ರಗಳ ಸಂಖ್ಯೆ ೨೭ ಇರುವುದರಿಂದ ಚಂದ್ರನಗತಿಯು ಚಾಂದ್ರಮಾನ ಮಾಸದಲ್ಲಿ ಮೂವತ್ತು ದಿನಗಳಿಗಿಂತ ಕಮ್ಮಿಯಾಗಿಯೇ ಇರುವುದು. ಈರೀತಿ ಪರಿಗಣನೆ ಮಾಡುವಾಗ ಪ್ರತಿಸಂವತ್ಸರದಲ್ಲಿಯೂ ೮-೧೦ ದಿನಗಳು ಕಮ್ಮಿಯಾಗುವವು. ಆದುದರಿಂದ ಸೌರಮಾನ ಸಂವತ್ಸರದ ಪರಿಮಾಣಕ್ಕೆ ಎಂದರೆ ೩೬೫ ದಿವಸಗಳಿಗೆ ಸರಿಯಾಗಿ ಹೊಂದುವುದಕ್ಕಾಗಿ ೩ ವರ್ಷಗಳಿಗೊಂದು ಸಲ ಒಂದು ಚಾಂದ್ರಮಾನ ಮಾಸವನ್ನು ಹೆಚ್ಚಾಗಿ ಸೇರಿಸುವರು. ಹೆಚ್ಚಾಗಿ ಸೇರಿಸುವ ಈ ಮಾಸಕ್ಕೆ ಅಧಿಕಮಾಸವೆಂದು ಹೆಸರು. ಈ ಅಧಿಕಮಾಸವು ಚಾಂದ್ರಮಾನಕ್ರಮದಲ್ಲಿ ಮಾತ್ರವಿರುವುದು. ಈ ವಿಷಯವನ್ನೇ ಪ್ರಸಕ್ತ ಸಂದರ್ಭದಲ್ಲಿ ತಿಳಿಸಿದೆ

ಹಿಂದೆ ದೇವತೆಗಳು ಯಜ್ಞಮಾಡಿದಾಗ ಸೋಮವನ್ನು ಹದಿಮೂರನೇ (ಅಧಿಕ) ಮಾಸದಲ್ಲಿ ಕೊಂಡುತಂದರು. ಎಂದರೆ ಹದಿಮೂರನೇ ಮಾಸದ ಅಭಿಮಾನಿದೇವತೆಯಾದ ಪುರುಷನಿಂದ ಕೊಂಡುಕೊಂಡರು. ಈಗ ಎಂದರೆ ವರ್ತಮಾನ ಕಾಲದಲ್ಲಿ, ಹದಿಮೂರನೇ ಮಾಸವು ಇರುವುದಿಲ್ಲ. (ಇದ್ದರೂ) ಅದು ಯಜ್ಞಾದಿ ಶುಭಕಾರ್ಯಗಳಿಗೆ ಯೋಗ್ಯವಾದುದಲ್ಲ. ಅಲ್ಲದೆ ಸೋಮವಿಕ್ರಯವು ಪಾಪಕಾರ್ಯವೆಂದು ಪರಿಗಣಿಸಲ್ಪಟ್ಟಿರುವುದರಿಂದ ಸೋಮವಿಕ್ರಯವನ್ನು (ಮಾರುವ) ಮಾಡುವ ಪುರುಷನೂ ಪಾಪಿಷ್ಠನೆಂದು ಪರಿಗಣಿಸಲ್ಪಟ್ಟಿದೆ. ಅವನೊಡನೆ ಯಾವ ಶಿಷ್ಟಾಚಾರವ್ಯವಹಾರಗಳೂ ನಡೆಯಲವಕಾಶವಿಲ್ಲ. ಈ ವಿಷಯದಲ್ಲಿ—

**ಅಸ್ಮೇ ಜ್ಯೋತಿಃ ಸೋಮವಿಕ್ರಯಿಣಿ ತಮ ಇತ್ಯಾಹ ಜ್ಯೋತಿರೇವ ಯಜಮಾನೇ ದಧಾತಿ ತಮಸಾ ಸೋಮವಿಕ್ರಯಿಣಮರ್ಪಯತಿ ||**

(ತೈ. ಸಂ. ೬-೧-೧೦-೪)

ಎಂಬ ತೈತ್ತಿರೀಯಶ್ರುತಿಯು ಸ್ಪಷ್ಟವಾಗಿ ಹೇಳಿರುವುದು. ಇಲ್ಲಿ ತಮಃಶಬ್ದಕ್ಕೆ ಪಾಪವೆಂದು ಅರ್ಥವು. ಸೋಮವಿಕ್ರಯಮಾಡುವವನ **ಜ್ಯೋತಿಃ** ಎಂದರೆ ಶಕ್ತಿಸಾಮರ್ಥ್ಯವು ಅವನನ್ನು ಬಿಟ್ಟುಹೋಗಿ ಸೋಮವನ್ನು ಕೊಂಡು ಯಜ್ಞ ಮಾಡುವ ಯಜಮಾನನನ್ನು ಹೋಗಿ ಸೇರುವುದು. ಸೋಮವಿಕ್ರಯಮಾಡುವವನಿಗೆ ಪಾಪವೇ ಸಂಭವಿಸುವುದು ಎಂದು ಶ್ರುತಿವಾಕ್ಯದ ಅರ್ಥವು.

ತಸ್ಯ ಕ್ರೀತಸ್ಯ ಮನುಷ್ಯಾನಭ್ಯುಪಾವರ್ತಮಾನಸ್ಯ ದಿಶೋ ವೀರ್ಯಾ-
ಣೀಂದ್ರಿಯಾಣಿ ವ್ಯುದಸೀದಂಸ್ತಾನ್ಯೇಕಯರ್ಚಾವಾರುರು-
ತ್ಸಂತ ತಾನಿ ನಾಶಕ್ನುವಂಸ್ತಾ ದ್ವಾಭ್ಯಾಂ ತಾನಿ ತಿಸೃಭಿಸ್ತಾನಿ

**ಚತಸೃಭಿಸ್ತಾನಿ ಪಂಚಭಿಸ್ತಾನಿ ಷಡ್ಭಿಸ್ತಾನಿ ಸಪ್ತಭಿರ್ನೈವಾವ-ರುಂಧತ ತಾನ್ಯಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ಯದ-ಷ್ಟಾಭಿರವಾರುಂಧತಾಷ್ಟಾಭಿರಾಶ್ನುವತ ತದಷ್ಟಾನಾಮಷ್ಟತ್ವಂ ಅಶ್ನುತೇ ಯದ್ಯತ್ಕಾಮಯತೇ ಯ ಏವಂ ವೇದ ॥**

**ಕ್ರಯಾದೂರ್ಧ್ವಂ ಪ್ರಾಚೀನವಂಶಂಪ್ರತಿ ನೀಯಮಾನೇ ಸೋಮೇ ಪಠಿತವ್ಯಾನಾಮೃ-ಚಾಮಷ್ಟಸಂಖ್ಯಾಮಾದೌ ಪ್ರಶಂಸತಿ–ಕ್ರೀತಃ ಸೋಮೋಯದಾ ಮನುಷ್ಯಾನ್ಯಜಮಾನಾದೀನ-ಭಿಲಕ್ಷ್ಯಾಗಚ್ಛತಿ ತದಾನೀಂ ತಸ್ಯ ಸೋಮಸ್ಯ ದಿಗಾದೀನಿ ವ್ಯುದಸೀದನ್ವಿಶೇಷೇಣೋತ್ಸನ್ನಾನ್ಯ-ಭವನ್ ॥ ದಿಕ್ಶಬ್ದೇನಾಧಿಷ್ಠಾನಮುಪಲಕ್ಷ್ಯತೇ ॥ ಸೋಮಂ ನೇತುಂ ಯದಧಿಷ್ಠಾನಂ ಯಚ್ಚ ವೀರ್ಯಂ ಸೋಮನಿಷ್ಠಂ ಬಲಪ್ರದಾನಸಾಮರ್ಥ್ಯಂ ಯಚ್ಚೇಂದ್ರಿಯಂ ಚಕ್ಷುರಾದಿಪಾಟವಹೇ-ತುತ್ವಂ ತತ್ಸರ್ವಂ ವಿನಷ್ಟಂ ॥ ತದಾನೀಂ ತೇ ಯಜಮಾನಾ ಯೇ ಮನುಷ್ಯಾಸ್ತಾನಿ ದಿಗಾದೀ-ನ್ಯೇಕಯರ್ಚಾಽವರೋದ್ಧುಂ ಸ್ವಾಧೀನಂ ಕರ್ತುಮೈಚ್ಛನ್ ॥ ತತಸ್ತಾನ್ಯವರೋದ್ಧುಂ ನಾಶ-ಕ್ನುವನ್ ॥ ಏವಂ ದ್ವಿತ್ವಾದಿ ಸಪ್ತಪರ್ಯಂತಯಾ ಮಂತ್ರಸಂಖ್ಯಯಾ ನೈವಾವರೋಧಂ ಕೃತ-ವಂತಃ । ಅಷ್ಟಸಂಖ್ಯಯಾತ್ವವರೋಧಂ ಕೃತವಂತಃ ॥ ಅಷ್ಟಸಂಖ್ಯಯಾತ್ವವರೋಧಂ ಕೃತ್ವಾ ತಾನಿ ದಿಗಾದೀನಿ ಪ್ರಾಪ್ತವಂತಃ ॥ ಅಷ್ಟಸಂಖ್ಯಯಾ ತಸ್ಮಾದವರುಧ್ಯಂತ ॥ ಏಭಿರ್ನಶ್ಯಂತೇಽಶ್ನು-ವತ ಏಭಿರಿತಿ ವಾ ವ್ಯುತ್ಪತ್ತ್ಯಾಽಷ್ಟಶಬ್ದೋ ನಿಷ್ಪನ್ನಃ ॥ ಏತದ್ವೇದನಂ ಪ್ರಶಂಸತಿ–ತತ್ಕಾಮ್ಯ-ಮಶ್ನುತ ಇತಿ ಯೋಜ್ಯಂ ॥**

ಸೋಮಲತೆಗಳನ್ನು ಕೊಂಡುಕೊಂಡನಂತರ ಅವುಗಳನ್ನು ಗಾಡಿಯಲ್ಲಿ ಹಾಕಿ ಪ್ರಾಚೀನವಂಶವೆಂಬ ಯಜ್ಞಗೃಹದ ಒಳಗೆ ತರುವಾಗ ಕೆಲವು ಋಕ್ಕುಗಳನ್ನು ಪಠಿಸಬೇಕು. ಆ ಋಕ್ಕುಗಳ ಸಂಖ್ಯೆ ಎಂಟು. ಎಂಟು ಋಕ್ಕುಗಳನ್ನು ಮಾತ್ರ ಏಕೆ ಪಠಿಸಬೇಕು ಹೆಚ್ಚೂಕಡಿಮೆ ಏಕೆ ಆಗಬಾರದು ಎಂಬುದನ್ನು ಇಲ್ಲಿ ವಿವರಿಸಿದೆ. ಸೋಮಕ್ರಯಾನಂತರ ಅದನ್ನು ದೇವತೆಗಳು ಯಜ್ಞಭೂಮಿಗೆ ತರಬೇಕೆಂದು ಪ್ರಯತ್ನಿಸಿದಾಗ ಅವರ ಶಕ್ತಿಯೂ ಇಂದ್ರಿಯಪಟುತ್ವವೂ ಉಡುಗಿಹೋಯಿತು. ಎಂದರೆ ಅವರಿಗೆ ಸೋಮವನ್ನು ಎತ್ತಲು ಶಕ್ತಿಯಿರಲಿಲ್ಲ, ಕಣ್ಣು ಕಾಣಿಸದಾಯಿತು, ಕಿವಿ ಕೇಳಿಸದಾಯಿತು. ಅವರ ಶಕ್ತಿಸಾಮರ್ಥ್ಯಗಳೆಲ್ಲಾ ನಾನಾ ದಿಕ್ಕಿಗೆ ಚದುರಿಹೋದುವು. ಅವರು ನಿರ್ವೀರ್ಯರಾದರು. ಆದ್ದರಿಂದ ತಮ್ಮ ಶಕ್ತಿಸಾಮರ್ಥ್ಯಗಳನ್ನು ಪುನಃ ಗಳಿಸಿಕೊಳ್ಳಲು ವೇದಮಂತ್ರಗಳನ್ನು ಪಠಿಸಿ ಸಾಧಿಸಬೇಕೆಂದು ನಿಶ್ಚಯಿಸಿದರು. ಅದರಂತೆ ಒಂದು ಮಂತ್ರವನ್ನು (ಒಂದು ಋಕ್ಕನ್ನು) ಪಠಿಸಿದರು. ಏನೂ ಪ್ರಯೋಜನವಾಗಲಿಲ್ಲ; ಅನಂತರ ಎರಡು ಮಂತ್ರಗಳನ್ನು ಪಠಿಸಿ ಪ್ರಯತ್ನಮಾಡಿದರು ಸಾಧ್ಯವಾಗಲಿಲ್ಲ; ಪುನಃ ಮೂರು ಮಂತ್ರಗಳಿಂದಲೂ, ನಾಲ್ಕು, ಐದು, ಆರು, ಏಳು ಮಂತ್ರಗಳಿಂದಲೂ ಮತ್ತೆಮತ್ತೆ ಪ್ರಯತ್ನಿಸಿ ನೋಡಿದರು. ಏನೂ ಆಗದಿರಲು ಇನ್ನೊಂದಾವರ್ತಿ ಕೊನೆಯಸಲ ಪ್ರಯತ್ನಿಸಿ ನೋಡೋಣವೆಂದು ಎಂಟು ಮಂತ್ರಗಳನ್ನು ಪಠಿಸಿದರು. ಅದರಿಂದ ಅವರ ಪ್ರಯತ್ನವು ಸಿದ್ಧಿಸಿ ಪುನಃ ಶಕ್ತಿಸಾಮರ್ಥ್ಯಗಳು ದೊರೆತವು. ಸಂಸ್ಕೃತದಲ್ಲಿ ಅಷ್ಟೌ ಎಂದರೆ ಎಂಟು ಎಂಬ ಸಂಖ್ಯೆಯು; ಈ ಅಷ್ಟೌ ಎಂಬ ಶಬ್ದವು ಅಶ್–ಹೊಂದು ಎಂಬ ಧಾತುವಿನಿಂದ ನಿಷ್ಪನ್ನವಾಗಿವೆ. ದೇವತೆಗಳು ತಮ್ಮ ಇಷ್ಟಾರ್ಥವನ್ನು ಎಂಟು ಮಂತ್ರಗಳಿಂದ ಪಡೆದದ್ದರಿಂದ ಎಂಟು ಎಂಬ ಸಂಖ್ಯೆಗೆ ಅಷ್ಟೌ ಎಂದು ಹೆಸರಾಯಿತು. ಎಂದರೆ ಅನ್ವರ್ಥನಾಮವಾಯಿತು. ಆದ್ದರಿಂದ ಅಷ್ಟೌ ಎಂಬ ಶಬ್ದದ ರೂಪನಿಷ್ಪತ್ತಿಯನ್ನೂ ಅರ್ಥವನ್ನೂ ತಿಳಿದಿರುವ ಪುರುಷನು ತಾನು ಅಪೇಕ್ಷಿಸುವ ಇಷ್ಟಾರ್ಥಗಳನ್ನು ಪಡೆಯುವನು.

ತಸ್ಮಾದೇತೇಷು ಕರ್ಮಸ್ವಷ್ಟಾವಷ್ಟಾವನೂಚ್ಯಂತ ಇಂದ್ರಿಯಾಣಾಂ ವೀರ್ಯಾಣಾಮವರುದ್ಧ್ಯೈ ॥

ಇದಾನೀಮಷ್ಟಸಂಖ್ಯಾಂ ವಿಧತ್ತೇ—ಇದಾನೀಂ ಪ್ರಸ್ತುತಂ ಸೋಮಪ್ರವಹಣಾಖ್ಯಂ ಯತ್ಕರ್ಮ ತತ್ರ ಕರಿಷ್ಯಮಾಣಂ ಕರ್ಮಾಂತರಂ ತಥಾವಿಧೇಷು ಪ್ರತ್ಯೇಕಮಷ್ಟಾವಷ್ಟಾವೃಚೋ ಹೋತಾನುಬ್ರೂಯಾತ್ ॥ ತಥಾಷ್ಟಸಂಖ್ಯಯೇಂದ್ರಿಯಾಣಿ ವೀರ್ಯಾಣಿ ಚಾವರುದ್ಧಾನಿ ಭವಂತಿ ॥

ಆದ್ದರಿಂದ ಈ ಸೋಮಪ್ರವಾಹಣವೆಂಬ (ಸೋಮವನ್ನು ತರುವುದು) ಕರ್ಮದಲ್ಲಿ ಹೋತೃವು ಎಂಟು ಋಕ್ಕುಗಳನ್ನು (ವೇದಮಂತ್ರಗಳನ್ನು) ಪ್ರತ್ಯೇಕವಾಗಿ ಪಠಿಸಬೇಕು. ಹೀಗೆ ಮಾಡುವುದರಿಂದ ಸೋಮಪ್ರವಹಣ ಕರ್ಮವು ಸಾಂಗವಾಗಿ ನೆರವೇರುವುದಲ್ಲದೆ ಎಂಟು ವಿಧವಾದ ಇಂದ್ರಿಯ ಸಾಮರ್ಥ್ಯಗಳೂ ಶಕ್ತಿಯೂ ದೊರೆಯುವವು.

*English Translation*

**The buying and bringing of the Soma. The producing of fire by friction. The Atithya Ishti.**

The gods bought the king Soma in the eastern direction. Thence he is (generally) bought in the eastern direction. They bought him from the thirteenth month. Thence the thirteenth month is found unfit (for any religious work to be done in it); a seller of the Soma is (likewise) found unfit (for intercourse). For such a man is a defaulter. When the Soma after having been bought was brought to men (the sacrificers), his powers and his facults of making the senses sharp moved from their place and scattered everywhere. They tried to collect and keep them together with one verse. But they failed. They (tried to keep them together) with two, then with three, then with four, then with five, then with six, then with seven verses; but they did not succeed in keeping them together. (Finally) with eight verses they succeeded, and recovered them (in their entirety and completeness). (Therefore) what is held together and obtained, that is called ashtau, i.e., eight (from as to reach, obtain). He who has this knowledge obtains anything he might wish for. Thence there are in those ceremonies (which follow the bringing of the Soma to the sacrificial compound), eight verses each time recited in order to collect and hold together the strength and those qualities (of the Soma plant) which give sharpness of senses.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ತೃತೀಯಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ಮೊದಲನೆಯ ಖಂಡವು ಸಮಾಪ್ತವಾದುದು.

# ಅಥ ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಸೋಮಪ್ರವಾಹಣಕರ್ಮ ಎಂದರೆ ಕೊಂಡ ಸೋಮವನ್ನು ಪ್ರಾಚೀನವಂಶ ಎಂಬ ಯಜ್ಞಗೃಹದ ಸಮೀಪದಿಂದ ಪಶ್ಚಿಮದಿಕ್ಕಿನಲ್ಲಿರುವ ಉತ್ತರವೇದಿಯ ಸಮೀಪಕ್ಕೆ ತರುವ ಕರ್ಮ]

ಇದುವರೆಗೂ ಈ ಸೋಮಪ್ರವಾಹಣ ಕರ್ಮದಲ್ಲಿ ಉಪಯೋಗಿಸಬೇಕಾದ ಋಕ್ಕುಗಳ ಸಂಖ್ಯೆಯನ್ನು ಸ್ಪಷ್ಟಪಡಿಸಲಾಯಿತು. ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರೈಷಮಂತ್ರವನ್ನು (ಇಂತಹ ಕರ್ಮವನ್ನು ಮಾಡು ಎಂದು ಸೂಚಿಸುವ ವಾಕ್ಯಕ್ಕೆ ಪ್ರೈಷವೆಂದು ಹೆಸರು) ಪಠಿಸುವನು—

### ಸೋಮಾಯ ಕ್ರೀತಾಯ ಪ್ರೋಹ್ಯಮಾಣಾಯಾನುಬ್ರೂಹೀತ್ಯಾಹಾಧ್ವರ್ಯುಃ ॥

ಮಂತ್ರಗತಾಂ ಸಂಖ್ಯಾಂ ವಿಧಾಯ ತನ್ಮಂತ್ರಾನ್ನಿಧಾತುಮಾದೌ ಪ್ರೈಷಮಂತ್ರಂ ವಿಧತ್ತೇ-ಯಃ ಸೋಮಃ ಕ್ರೀತಃ ಸ ಕ್ರಯದೇಶಾತ್ಪ್ರಾಚೀನವಂಶಂ ಪ್ರತಿ ಪ್ರೋಹ್ಯತೇ ನೀಯತೇ ತದರ್ಥಮನುಕೂಲಾ ಋಚೋ ಹೇ ಹೋತರನುಕ್ರಮೇಣ ಬ್ರೂಹಿ । ತಮೇವಂ ಪ್ರೈಷಮಂತ್ರಮಧ್ವರ್ಯುಃ ಪಠೇತ್ ॥

ಈಗ ಅಧ್ವರ್ಯುವು ಹೋತೃವನ್ನುದ್ದೇಶಿಸಿ, ಎಲೈ ಹೋತೃವೇ, ಕ್ರಯಕ್ಕೆ ತೆಗೆದುಕೊಂಡುಬಂದ ಸೋಮವನ್ನು ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗುವುದಕ್ಕಾಗಿ ನೆರವೇರಿಸುವ ಸೋಮಪ್ರವಾಹಣವೆಂಬ ಈ ಕರ್ಮದಲ್ಲಿ ಅವಶ್ಯಕವಾದ ಮಂತ್ರಗಳನ್ನು ಪಠಿಸು ಎಂದು ನಿರ್ದೇಶಿಸಿ ಹೇಳುವನು.

### ಭದ್ರಾದಭಿ ಶ್ರೇಯಃ ಪ್ರೇಹೀತ್ಯನ್ವಾಹ ।

**ಅಥ ಹೋತುಃ ಪ್ರಥಮಾಮೃಚಂ ವಿಧತ್ತೇ — ಸೇಯಮೃಕ್ತೈತ್ತರೀಯಶಾಖಾಯಾಮೇವಮಾಮ್ನಾತಾ—'ಭದ್ರಾದಭಿ ಶ್ರೇಯಃ ಪ್ರೇಹಿ ಬೃಹಸ್ಪತಿಃ ಪುರ ಏತಾ ತೇ ಅಸ್ತು ॥ ಅಥೇಮವಸ್ಯ ವರ ಆಪೃಥಿವ್ಯಾ ಆರೇ ಶತ್ರೂನ್ಕೃಣುಹಿ ಸರ್ವವೀರಃ' ಇತಿ ॥ ತಸ್ಯಾಯಮರ್ಥಃ। ಹೇ ಸೋಮ ಭದ್ರಾನ್ಮಂಗಲರೂಪಾದ್ಭೂಲೋಕರೂಪಾತ್ತಸ್ಮಾತ್ಕ್ರಯದೇಶಾಚ್ಛ್ರೇಯಃ ಶ್ರೇಷ್ಠಂ ಸ್ವರ್ಗಲೋಕಸ್ಥಾನೀಯಂ ಪ್ರಾಚೀನವಂಶದೇಶಮಭಿಲಕ್ಷ್ಯ ಪ್ರೇಹಿ ಪ್ರಕರ್ಷೇಣ-ಗಚ್ಛ ॥ ತಥಾ ಗಚ್ಛತಸ್ತೇ ಬೃಹಸ್ಪತಿಃ ಪುರ ಏತಾ ಪುರತೋ ಗಂತಾಽಸ್ತು ॥ ಅಥ ಗಮನಾದೂ-**

**ರ್ಧ್ವರ್ಗಂ ಪೃಥಿವ್ಯಾಃ ಸಂಬಂಧಿನ್ಯಾ ಸಮಂತಾಧ್ವರೇ ಶ್ರೇಷ್ಠೇ ದೇವಯಜನ ಈಮವಸ್ಮೇದಂ ತವಾ-ವಸ್ಥಾನ ಯೋಗ್ಯಂ ಸ್ಥಾನಂ ನಿಶ್ಚಿನು ॥ ಸರ್ವೇಭ್ಯೋ ವೀರಃ ಶೂರಸ್ತ್ವಂ ಶತ್ರೂನ್ಪಾಪರೂಪಾನ್ಯ-ಜ್ಞವಿದ್ವೇಷಿಣ ಆರೇ ಕೃಣುಹಿ ದೂರೇ ಕುರು ನಿರಾಕುರ್ವಿತ್ಯರ್ಥಃ ॥**

ಇದನ್ನು ಕೇಳಿ ಹೋತೃವು **ಭದ್ರಾದಭಿ ಶ್ರೇಯಃ ಪ್ರೇಹಿ** ಎಂಬ ಮಂತ್ರವನ್ನು ಪಠಿಸುವನು. ಈ ಮಂತ್ರವು ಋಗ್ವೇದಸಂಹಿತೆಯಲ್ಲಿಲ್ಲ. ತೈತ್ತಿರೀಯ ಶಾಖೆಯಲ್ಲಿ ಎಂದರೆ ಯಜುರ್ವೇದದಲ್ಲಿಯೂ (ತೈ. ಸಂ. ೧-೨-೩-೩) ಅಥರ್ವವೇದ ಸಂಹಿತೆಯಲ್ಲಿಯೂ (ಅ. ವೇ. ೭-೮-೧) ಇರುವುದು. ಈ ಮಂತ್ರವು—

ಭದ್ರಾದಭಿ ಶ್ರೇಯಃ ಪ್ರೇಹಿ ಬೃಹಸ್ಪತಿಃ ಪುರ ಏತಾ ತೇ ಅಸ್ತು ।
ಅಥೇಮವಸ್ಯ ವರ ಆ ಪೃಥಿವ್ಯಾ ಆರೇ ಶತ್ರೂನ್ ಕೃಣುಹಿ ಸರ್ವವೀರಃ ॥
(ತೈ. ಸಂ. ೧-೨-೩-೩)

ಎಂದು ಇರುವುದು. ಅಥರ್ವಸಂಹಿತೆಯಲ್ಲಿ **ಭದ್ರಾದಭಿ** ಎನ್ನುವಕಡೆ **ಭದ್ರಾದಧಿ** ಎಂದೂ ಅಥೇಮವಸ್ಯ ಎನ್ನುವಕಡೆ **ಅಥೇಮಮಸ್ಯಾ** ಎಂದೂ ಇರುವುದು. ಅರ್ಥದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ಈ ಮಂತ್ರದ ಅರ್ಥವು ಈರೀತಿ ಓ ಯಜಮಾನ - ಎಲೈ ಸೋಮನೇ, ಮಂಗಳಕರವಾದುದೂ ಶ್ರೇಯಪ್ರದೇಶವಾದುದೂ ಆದ ಈ ಭೂಲೋಕದಿಂದ ಸ್ವರ್ಗಸ್ಥಾನಕ್ಕೆ ಸಮಾನವಾದ ಪ್ರಾಚೀನವಂಶವೆಂಬ ಯಜ್ಞಗೃಹದ ಅಭಿಮುಖವಾಗಿ ಹೊರಡು. ಆರೀತಿ ಹೋಗುವ ನಿನಗೆ ಬೃಹಸ್ಪತಿಯು ಮಾರ್ಗದರ್ಶಕನಾಗಿ ನಿನ್ನಮುಂದೆ ಹೋಗುವನು. ಅಲ್ಲಿಗೆ ಹೋದಬಳಿಕ ಪೃಥಿವೀಸಂಬಂಧವಾದ ದೇವಯಜನಪ್ರದೇಶದಲ್ಲಿ ನೀನು ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ಮತ್ತು ಶ್ರೇಷ್ಠವಾದ ಸ್ಥಾನವನ್ನು ನಿಷ್ಕರ್ಷಿಸು. ಅನಂತರ ಸರ್ವರಿಗಿಂತಲೂ ಶೂರನಾದ ನೀನು ಪಾಪಿಷ್ಠರಾದ ಮತ್ತು ಯಜ್ಞವಿದ್ವೇಷಿಗಳಾದ ಸಮಸ್ತ ಶತ್ರುಗಳನ್ನೂ ದೂರವಾಗಿಡುವಂತೆ ಮಾಡು. ಎಂದರೆ, ಅವರನ್ನು ದೂರವಾಗಿ ಹೊರಟುಹೋಗುವಂತೆ ಮಾಡು, ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಪಠಿಸುವುದರಿಂದ ಉಂಟಾಗುವ ಪರಿಣಾಮವನ್ನು ವಿವರಿಸುತ್ತಾ ಪ್ರಥಮಪಾದದ ವಿವರಣೆಯನ್ನು ಮಾಡಲಾಗಿದೆ.

ಅಯಂ ವಾವ ಲೋಕೋ ಭದ್ರಸ್ತಸ್ಮಾದಸಾವೇವ ಲೋಕಃ ಶ್ರೇಯಾನ್
ಸ್ವರ್ಗಮೇವ ತಲ್ಲೋಕಂ ಯಜಮಾನಂ ಗಮಯತಿ ।

**ತಸ್ಯಾನ್ಯೃಚಿ ಪ್ರಥಮಂ ಪಾದಂ ವ್ಯಾಚಷ್ಟೇ—ತತ್ರೇನ ಪ್ರಥಮಪಾದಪಾಠೇನ । ಸ್ಪಷ್ಟ-ಮನ್ಯತ್ ॥**

ಪ್ರಥಮಪಾದದಲ್ಲಿ ಹೇಳಿರುವಂತೆ ಈ ಭೂಲೋಕವು ಮಂಗಳಕರವಾದುದು. ಆದರೆ ಈ ಲೋಕಕ್ಕಿಂತಲೂ ಸ್ವರ್ಗಲೋಕವು ಅತ್ಯಂತ ಶ್ರೇಯಃಪ್ರದವಾದುದು. ಈ ಮಂತ್ರಪಠನವು ಯಜ್ಞಮಾಡುವ ಯಜಮಾನನಿಗೆ ಅಂತಹ ಸ್ವರ್ಗಲೋಕವನ್ನು ಒದಗಿಸಿಕೊಡುವುದು.

ಬೃಹಸ್ಪತಿಃ ಪುರ ಏತಾ ತೇ ಅಸ್ತ್ವಿತಿ ಬ್ರಹ್ಮ ವೈ ಬೃಹಸ್ಪತಿಬ್ರಹ್ಮೈ-
ವಾಸ್ಮಾ ಏತತ್ಪುರೋಗವಮಕರ್ನ ವೈ ಬ್ರಹ್ಮಣ್ವದ್ರಿಷ್ಯತಿ ।

**ದ್ವಿತೀಯಪಾದಮನೂದ್ಯ ವ್ಯಾಚಷ್ಟೇ–ಬೃಹಸ್ಪತೇರ್ಬ್ರಹ್ಮತ್ವಂ ಬ್ರಾಹ್ಮಣಜಾತಿಮತ್ತ್ವಂ 'ಬ್ರಹ್ಮ ವೈ ದೇವಾನಾಂ ಬೃಹಸ್ಪತಿಃ' ಇತ್ಯಾದಿ ಶ್ರುತ್ಯಂತರೇ ಪ್ರಸಿದ್ಧಂ ॥ ಏತದೇತೇನ ದ್ವಿತೀಯಪಾದಪಾಠೇನಾಸ್ಮೈ ಯಜಮಾನಾರ್ಥಂ ಬ್ರಹ್ಮೈವ ಬ್ರಾಹ್ಮಣಮೇವ ಪುರೋಗಮಂ ಪುರೋಗಂತಾರಮುಖ್ಯಂಕರೋತಿ । ಬ್ರಹ್ಮಣ್ವದ್ಬ್ರಾಹ್ಮಣಸಹಾಯೋಪೇತಂ ಕರ್ಮ ನ ವೈ ರಿಷ್ಯತಿ ಸರ್ವಥಾ ನಾಶಂ ನ ಪ್ರಾಪ್ನೋತಿ ।**

ಅನಂತರ ಹೋತೃವು ಬೃಹಸ್ಪತಿಃ ಪುರ ಏತಾ ತೇ ಅಸ್ತು ಎಂಬ ಎರಡನೆಯ ಪಾದವನ್ನು ಪಠಿಸುವನು. ದೇವತೆಗಳಿಗೆ ಬೃಹಸ್ಪತಿಯೇ ಬ್ರಹ್ಮನೆಂಬ ಋತ್ವಿಜನು. ಬ್ರಾಹ್ಮಣಶ್ರೇಷ್ಠನಾದ ಬ್ರಹ್ಮನೆಂಬ ಋತ್ವಿಜನು ಮಾರ್ಗದರ್ಶಕನಾಗಿರುವನು ಎಂದು ಹೇಳಿರುವುದರಿಂದ ಬ್ರಾಹ್ಮಣನೇತೃತ್ವದಲ್ಲಿ ನೆರವೇರುವ ಯಜ್ಞಕರ್ಮವು ಸರ್ವಥಾ ಕೆಡುವುದಿಲ್ಲ, ಕಲ್ಯಾಣಪ್ರದವಾಗಿಯೇ ಪರಿಸಮಾಪ್ತಿಯನ್ನೈದುವುದು.

ಅಥೇಮವಸ್ಯ ವರ ಆ ಪೃಥಿವ್ಯಾ ಇತಿ ದೇವಯಜನಂ ವೈ ವರಂ
ಪೃಥಿವ್ಯೈ ದೇವಯಜನ ಏವೈನಂ ತದವಸಾಯಯತ್ಯಾರೇ
ಶತ್ರೂನ್ಕೃಣುಹಿ ಸರ್ವವೀರ ಇತಿ ದ್ವಿಷಂತಮೇವಾಸ್ಮೈ ತತ್ಪಾ-
ಪ್ಮಾನಂ ಭ್ರಾತೃವ್ಯಮಪಬಾಧತೇಽಧರಂ ಪಾದಯತಿ ॥

**ತೃತೀಯಪಾದಮನೂದ್ಯ ವ್ಯಾಚಷ್ಟೇ—ದೇವಯಜನಾಖ್ಯಸ್ಯ ಯಾಗದೇಶಸ್ಯ ಪೃಥಿವೀಸಂಬಂಧಿಶ್ರೇಷ್ಠಸ್ಥಾನತ್ವಾತ್ತತ್ರೈವೈನಂ ಸೋಮಂ ತತ್ತೇನ ತೃತೀಯಪಾದಪಾಠೇನಾಸ್ಮೈ ಯಜಮಾನಾಯ ದ್ವೇಷಂ ಕುರ್ವಂತಂ ಪಾಪರೂಪಂ ಶತ್ರುಮಪಬಾಧತೇ ಅಧರಂ ಪಾದಯತೀತಿ । ನಿಕೃಷ್ಟಂ ಪದಂ ಪ್ರಾಪಯತೀತ್ಯರ್ಥಃ ॥**

ಈಗ ಮೂರನೆಯ ಪಾದವನ್ನು ವಿವರಿಸುವರು— ಅಥೇಮವಸ್ಯ ವರ ಆ ಪೃಥಿವ್ಯಾಃ ಎಂಬುವುದು ಮೂರನೆಯ ಪಾದವು. ಪೃಥಿವಿಯಲ್ಲಿ ಶ್ರೇಷ್ಠವಾದ ಪ್ರದೇಶವೆಂದರೆ ದೇವಯಜನಪ್ರದೇಶವು. ಈ ಮೂರನೇ ಪಾದವನ್ನು ಪಠಿಸುವುದರಿಂದ ಸೋಮವು ಪೃಥಿವೀ ಸಂಬಂಧವಾದ ಶ್ರೇಷ್ಠಸ್ಥಾನದಲ್ಲಿ ಎಂದರೆ ದೇವಯಜನಪ್ರದೇಶದಲ್ಲಿ ನೆಲಸುವಂತೆ ಮಾಡುವನು. ಇನ್ನು ನಾಲ್ಕನೆಯ ಪಾದವಾದ ಆರೇ ಶತ್ರೂನ್ ಕೃಣುಹಿ ಸರ್ವವೀರಃ ಎಂಬುದನ್ನು ಪಠಿಸುವುದರಿಂದ ಯಜಮಾನನನ್ನು ದ್ವೇಷಿಸುವ ಪಾಪರೂಪವಾದ ಶತ್ರುವನ್ನು ಓಡಿಸುವುದಕ್ಕೆ ಸಹಾಯವಾಗುವುದು. ಆದುದರಿಂದ ಹೋತೃವು ಈ ನಾಲ್ಕನೆಯ ಪಾದವನ್ನು ಪಠಿಸಿ ಯಜಮಾನನಿಗೆ ಕೆಡಕನ್ನುಂಟುಮಾಡುವ ಶತ್ರುವನ್ನು ಓಡಿಸಿ ಆ ಶತ್ರುವು ನಿಕೃಷ್ಟವಾದ (ಬಹಳ ಕೀಳಾದ) ಪ್ರದೇಶಕ್ಕೆ ಹೋಗುವಂತೆ ಮಾಡುವನು.

ಸೋಮ ಯಾಸ್ತೇ ಮಯೋಭುವ ಇತಿ ತೃಚಂ ಸೌಮ್ಯಂ ಗಾಯತ್ರ್ಯ-
ಮನ್ವಾಹ ಸೋಮೇ ರಾಜನಿ ಪ್ರೋಹ್ಯಮಾಣೇ ಸ್ವಯೈವೈನಂ
ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ॥

ಹೋತ್ರಾನವಕ್ತವ್ಯಾ ದ್ವಿತೀಯಾದ್ಯಾಸ್ತಿಸ್ರ ಋಚೋ ವಿಧತ್ತೇ—ತಿಸೃಣಾಮೃಚಾಂ ಸಂಘಾತಸ್ತೃಚಃ ಸ ಚ ಸೋಮದೇವತಾಕೋ ಗಾಯತ್ರೀ ಛಂದಸ್ಕಶ್ಚ ಸೋಮಾನಯನ-ಕಾಲೇ ತಂ ತೃಚಮನುಬ್ರೂಯಾತ್ ॥ ತತ್ತೇನಾನುವಚನೇನ ಸ್ವಾತ್ಮರೂಪಯಾ ದೇವತಯಾ ಸ್ವಕೀಯಚ್ಛಂದಸಾ ಚೈನಂ ಸೋಮಂ ಸಮೃದ್ಧಂ ಕರೋತಿ । ಅತ್ರ ನೀಯಮಾನದ್ರವ್ಯವಿಶೇಷಃ ಸೋಮೋ ಮಂತ್ರದೇವತಾಽಪ್ಯಸಾವೇವ ತಸ್ಮಾತ್ತಾಸ್ವಾತ್ಮರೂಪತ್ವಂ ಗಾಯತ್ರೀ ದ್ಯುಲೋಕಾ-ತ್ಸೋಮಮಾನೀತವತೀತಿ ತೈತ್ತರೀಯಾಃ ಕದ್ರೂಶ್ಚೇತ್ಯನುವಾಕೇ ಸಮಾಮನಂತಿ । ತಸ್ಮಾಚ್ಛಂ-ದಸಃ ಸ್ವಕೀಯತ್ವಂ ॥

ಅನಂತರ ಹೋತೃವು—

ಸೋಮ ಯಾಸ್ತೇ ಮಯೋಭುವ ಊತಯಃ ಸಂತಿ ದಾಶುಷೇ ।
ತಾಭಿರ್ನೋಽವಿತಾ ಭವ ॥
ಇಮಂ ಯಜ್ಞಮಿದಂ ವಚೋ ಜುಜುಷಾಣ ಉಪಾಗಹಿ ।
ಸೋಮ ತ್ವಂ ನೋ ವೃಧೇ ಭವ ॥
ಸೋಮ ಗೀರ್ಭಿಷ್ಟ್ವಾ ವಯಂ ವರ್ಧಯಾಮೋ ವಚೋವಿದಃ ।
ಸುಮೃಳೀಕೋ ನ ಆ ವಿಶ ॥

(ಋ.ಸಂ. ೧-೯೧-೯, ೧೦, ೧೧.)

ಎಂಬ ಮೂರು ಋಕ್ಕುಗಳನ್ನು ಪಠಿಸುವನು. ಈ ಮೂರು ಋಕ್ಕುಗಳೂ ಸೋಮದೇವತಾಕವು ಮತ್ತು ಗಾಯತ್ರೀ ಛಂದಸ್ಸಿನವು. ಇವುಗಳನ್ನು ಸೋಮಾನಯನಕಾಲದಲ್ಲಿ ಪಠಿಸಬೇಕು. ಸೋಮದೇವತೆಯನ್ನೇ ಸ್ತುತಿಸುವ ಮತ್ತು ಸೋಮದೇವತೆಗೆ ಪ್ರಿಯವಾಗಿರುವ ಗಾಯತ್ರೀಛಂದೋಬದ್ಧವಾದ ಋಕ್ಕುಗಳನ್ನು ಪಠಿಸುವುದರಿಂದ ಸೋಮದೇವತೆಯನ್ನು ತನ್ನ ಸ್ವಕೀಯವಾದ ಮಂತ್ರಗಳಿಂದಲೂ, ಸ್ವಕೀಯವಾದ ಗಾಯತ್ರೀಛಂದಸ್ಸಿನಿಂದಲೂ ಸ್ತುತಿಸಿದಂತೆ ಆಗಿ ಸೋಮದೇವತೆಯು ಸಮೃದ್ಧವಾಗುವನು ಎಂದರೆ ಸಂತೋಷಚಿತ್ತನಾಗುವನು. ಇಲ್ಲಿ ತರಲ್ಪಡುವ ದ್ರವ್ಯವೂ ಸೋಮವೂ, ಸ್ತುತಿಸುವ ಮಂತ್ರಗಳೂ ಸೋಮದೇವತಾಕವಾದವುಗಳು. ಆದುದರಿಂದ ಮಂತ್ರಗಳು ಸೋಮದೇವತೆಗೆ ಸ್ವಕೀಯವೆಂದು ಹೇಳಲ್ಪಡುವವು. ಸ್ವರ್ಗದಲ್ಲಿದ್ದ ಸೋಮವನ್ನು ಭೂಮಿಗೆ ತಂದುದು ಗಾಯತ್ರಿಯೇ (ಗಾಯತ್ರೀಛಂದಸ್ಸೇ) ಆದುದರಿಂದ ಗಾಯತ್ರೀಛಂದಸ್ಸು ಸೋಮದೇವತೆಗೆ ಸ್ವಕೀಯವೆನಿಸುವುದು. ಈ ವಿಷಯವನ್ನು ತೈತ್ತಿರೀಯಸಂಹಿತೆಯಲ್ಲಿ ಕದ್ರೂಶ್ಚ ವೈ (ತೈ.ಸಂ. ೬-೧-೬) ಎಂಬ ಅನುವಾಕದಲ್ಲಿ ಹೇಳಲಾಗಿದೆ. ಆದುದರಿಂದ ಇಲ್ಲಿ ಮೇಲೆ ಹೇಳಿದ ಮೂರು ಋಕ್ಕುಗಳೂ ಗಾಯತ್ರೀಛಂದಸ್ಸೂ ಸಹ ಸೋಮದೇವತೆಗೆ ಸ್ವಕೀಯವೆಂದು ವಿವರಿಸಲಾಗಿದೆ.

## ಸರ್ವೇ ನಂದಂತಿ ಯಶಸಾಗತೇನೇತ್ಯಾಹ ।

ಪಂಚಮೀಮೃಚಂ ವಿಧತ್ತೇ—ಸಾ ಚ ಸಂಹಿತಾಯಾಮೇವಮಾಮ್ನಾತಾ—'ಸರ್ವೇ ನಂದಂತಿ ಯಶಸಾಽಽಗತೇನ ಸಭಾಸಾಹೇನ ಸಖ್ಯಾ ಸಖಾಯಃ ॥ ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇ-ಷಾಮರಂ ಹಿತೋ ಭವತಿ ವಾಜಿನಾಯ' (ಋ. ಸಂ. ಮ. ೧೦. ಸೂ. ೭೧-ಋ. ೧೦) ಇತಿ । ತಸ್ಯಾ ಋಚೋಽಯಮರ್ಥಃ । ಸರ್ವೇ ಸಖಾಯೋ ಯಜಮಾನಪ್ರಭೃತಯಃ ಸಖ್ಯಾ ಸೋಮರೂಪೇಣ

**ನಂದಂತಿ ತುಷ್ಯಂತಿ । ಕೀದೃಶೇನ ಸಖ್ಯಾ । ಯಶಸಾ ಯಶೋಹೇತುನಾ । ಆಗತೇನ ಸಮೀಪಂ ಪ್ರಾಪ್ತೇನ । ಸಭಾಸಾಹೇನ ವಿದ್ವತ್ಸಭಾಂ ವಿದ್ಯಾಪ್ರಸಂಗೇನ ಸಹತೇಽಭಿಭವತಿ ಸಭಾಸಹಸ್ತಾದೃಶೇನ । ಸ ತಾದೃಶಃ ಸೋಮರೂಪಃ ಸಖೈಷಾಮೃತ್ವಿಗ್ಯಜಮಾನಾನಾಂ ಕಿಲ್ಬಿಷಸ್ಪೃತ್ ಕಿಲ್ಬಿಷಾತ್ಪಾಪಾತ್ಸ್ಪೃಣೋತಿ ಪಾಲಯತಿ ಕಿಲ್ಬಿಷಸ್ಪೃತ್ । ಪಿತ್‌ತುಶಬ್ದೋಽನ್ನವಾಚೀ । ತಸ್ಯ ಸನಿರ್ದಾನಂ ಯೇನ ಸೋಮೇನ ಲಭ್ಯತೇ ಸೋಽಯಂ ಪಿತುಷಣಿಃ । ಸೋಮಸ್ಯ ಪಾಪನಿವಾರಕತ್ವಮನ್ನಪ್ರದಾನೇನ । ಸರ್ವಶಾಸ್ತ್ರಪ್ರಸಿದ್ಧಿದ್ಯೋತನಾರ್ಥೋ ಹಿ ಶಬ್ದಃ । ತಥಾಽಯಂ ಸೋಮೋ ವಾಜಿನಶಬ್ದಾಭಿಧೇಯೇಂದ್ರಿಯಾಯ ವೀರ್ಯಾಯ ವಾಽರಂ ಹಿತೋಽಲಮತ್ಯಂತಹಿತೋ ಭವತೀತಿ ॥**

ಎಂದು ಹೋತೃವು ಐದನೆಯ ಋಕ್ಕಾದ—

> **ಸರ್ವೇ ನಂದಂತಿ ಯಶಸಾಗತೇನ ಸಭಾಸಾಹೇನ ಸಖ್ಯಾ ಸಖಾಯಃ ।**
> **ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ ॥**

(ಋ.ಸಂ. ೧೦-೭೧-೧೦)

ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕು ಋಗ್ವೇದಸಂಹಿತೆಯಲ್ಲಿಯೇ ಇದೆ. ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ರೀತಿ ಇರುವುದು. ಯಜಮಾನ, ಋತ್ವಿಕ್ಕುಗಳು ಮೊದಲಾದ ಯಜ್ಞದಲ್ಲಿ ಭಾಗವಹಿಸುವ ಜನರು, ಸ್ನೇಹಿತನಂತೆ ಸರ್ವರಿಗೂ ಆಪ್ತನಾದ ಈ ಸೋಮದೇವನು ಯಜ್ಞಭೂಮಿಗೆ ಬಂದುದನ್ನು ನೋಡಿ ಸಂತೋಷಪಡುತ್ತಿರುವರು. ಈ ಸೋಮನು ಕೀರ್ತಿಯನ್ನುಂಟುಮಾಡುವವನು; ವಿದ್ವತ್ಸಭೆಯಲ್ಲಿ ತನ್ನ ಅಸಾಧಾರಣವಾದ ವಿದ್ಯದಿಂದ ಎಲ್ಲರನ್ನೂ ಪರಾಭವಗೊಳಿಸುವ ವಿದ್ವಾಂಸನು ಸಭೆಯನ್ನು ಪ್ರವೇಶಿಸಿ ಎಲ್ಲರಿಗೂ ಸಂತೋಷವನ್ನುಂಟುಮಾಡುವಂತೆ ಈ ಸೋಮದೇವನ ಆಗಮನದಿಂದ ಸರ್ವರೂ ಸಂತೋಷಪಡುವರು; ಮತ್ತು ಈ ಸೋಮನು ಋತ್ವಿಗ್ಯಜಮಾನರ ಕಿಲ್ಬಿಷಗಳನ್ನೂ ಎಂದರೆ ಪಾಪಗಳನ್ನೂ, ದೋಷಗಳನ್ನೂ ನಾಶಮಾಡಿ ಅವರನ್ನು ಸಂರಕ್ಷಿಸುವನು; ಅವರಿಗೆ ಅನ್ನದಾತೃವಾಗಿರುವನು ಎಂದರೆ ಸೋಮಪಾನದಿಂದ ಎಲ್ಲರಿಗೂ ತೃಪ್ತಿಯಾಗುವುದು. ಇಂತಹ ಮಹತ್ವಗುಣವಿಶಿಷ್ಟನಾದ ಸೋಮನು ಸಮಸ್ತರಿಗೂ ಅನ್ನ, ಇಂದ್ರಿಯ, ವೀರ್ಯ ಇವುಗಳನ್ನು ಕೊಟ್ಟು ಅನುಗ್ರಹಮಾಡುವುದಕ್ಕಾಗಿ ಈ ಯಜ್ಞವೇದಿಗೆ ಆನೀತನಾಗಿ ಇಲ್ಲಿ ಸ್ಥಾಪಿತನಾಗಿರುವನು. ಈ ವಿಷಯವು ಪ್ರಸಿದ್ಧವಾಗಿರುವುದು ಎಂದು ಈ ಋಕ್ಕಿನ ಅಭಿಪ್ರಾಯವು.

**ಯಶೋ ವೈ ಸೋಮೋ ರಾಜಾ ಸರ್ವೋ ಹ ವಾ ಏತೇನ ಕ್ರಿಯಮಾಣೇನ ನಂದಂತಿ ಯಶ್ಚ ಯಜ್ಞೇ ಲಪ್ಸ್ಯಮಾನೋ ಭವತಿ ಯಶ್ಚನ ॥**

**ತಸ್ಯಾಃ ಋಚಃ ಪ್ರಥಮಂ ಪಾದಂ ವ್ಯಾಚಷ್ಟೇ — ಯಶಃಕಾರಣಾತ್ಸೋಮಸ್ಯ ಯಶಸ್ತ್ವಂ । ಯಃ ಪುಮಾನೃತ್ವಿಗ್ಭೂತ್ವಾ ಯಜ್ಞೇ ಧನಂ ಲಪ್ಸ್ಯತೇ ಯಶ್ಚ ದ್ರಷ್ಟುಮಾಗತೋ ನ ತು ಧನಾರ್ಥೀ ಸರ್ವೋಽಪ್ಯಸೌ ಸೋಮಕ್ರಯಣಂ ದೃಷ್ಟ್ವಾ ತುಷ್ಯತಿ ॥**

ಈ ಋಕ್ಕಿನ ಪ್ರಥಮಪಾದವನ್ನು ವಿವರಿಸುವರು. ಸೋಮದೇವನು ಯಶಸ್ಸಿಗೆ ಕಾರಣನು. ಇಂದ್ರನೇ ಮೊದಲಾದವರು ಸೋಮಪಾನಮಾಡಿ ಅನೇಕ ಸಾಹಸಕಾರ್ಯಗಳನ್ನು ಮಾಡಿ ಯಶಸ್ವಿಯಾಗಿರುವರು. ಆದುದರಿಂದ ಸೋಮನು ಯಶಃಸ್ವರೂಪನಾಗಿರುವನು ಎಂದು ಹೇಳಲಾಗಿದೆ. ಯಜ್ಞದಲ್ಲಿ ಋತ್ವಿಕ್ಕುಗಳ ಕರ್ಮಗಳನ್ನು ನೆರವೇರಿಸಿ ಕೆಲವರು ಧನಸಂಪಾದನೆ ಮಾಡುವರು, ಕೆಲವರು ಯಜ್ಞವನ್ನು ನೋಡಿಯೇ ಸಂತೋಷಪಡುವರು. ಆದುದರಿಂದ ಎಲ್ಲರೂ, ವಿಕ್ರೀತವಾಗಿ ಯಜ್ಞಭೂಮಿಗೆ ತರಲ್ಪಟ್ಟ ಈ ಸೋಮವನ್ನು ನೋಡಿ ಸಂತೋಷಪಡುವರು.

**ಸಭಾಸಾಹೇನ ಸಖ್ಯಾ ಸಖಾಯ ಇತ್ಯೇಷ ವೈ ಬ್ರಾಹ್ಮಣಾನಾಂ ಸಭಾ-**
**ಸಹಃ ಸಖಾ ಯತ್ಸೋಮೋ ರಾಜಾ ॥**

ದ್ವಿತೀಯಪಾದಮನೂದ್ಯ ವ್ಯಾಚಷ್ಟೇ — ಯೋಽಯಂ ರಾಜಮಾನಃ ಸೋಮಃ ಸೋಽಯಂ ಬ್ರಾಹ್ಮಣಸಭಾಮಭಿಭವತಿ । ಸರ್ವೇ ಬ್ರಾಹ್ಮಣಾಃ ಸೋಮಾಧೀನಾ ಭವಂತೀತ್ಯರ್ಥಃ।

ಎರಡನೆಯ ಪಾದವನ್ನು ವಿವರಿಸುವರು.—ಪ್ರಕಾಶಮಾನವಾಗಿ ಬೆಳಗುತ್ತಿರುವ ಈ ಸೋಮನು ಬ್ರಾಹ್ಮಣರ ವಿದ್ವತ್ಸಭೆಗಳಲ್ಲಿ ಎಲ್ಲರನ್ನೂ ಗೆದ್ದು ವಿದ್ವತ್ತಿನಿಂದ ಬೆಳಗುವನು. ಈ ದೇವನು ಬ್ರಾಹ್ಮಣರಿಗೂ ಋತ್ವಿಗ್ಯಜಮಾನರಿಗೂ ಹಿತವನ್ನುಂಟುಮಾಡುವುದರಿಂದ ಸ್ನೇಹಿತನಾಗಿರುವನು.

**ಕಿಲ್ಬಿಷಸ್ಪೃದಿತ್ಯೇಷ ಉ ಏವ ಕಿಲ್ಬಿಷಸ್ಪೃತ್ ಯೋ ವೈ ಭವತಿ ಯಃ**
**ಶ್ರೇಷ್ಠತಾಮಶ್ನುತೇ ಸ ಕಿಲ್ಬಿಷಂ ಭವತಿ । ತಸ್ಮಾದಾಹುರ್ಮಾ-**
**ನುವ್ರೋ ಚೋ ಮಾ ಪ್ರಚಾರೀಃ ಕಿಲ್ಬಿಷಂ ನು ಮಾ ಯಾತ-**
**ಯನ್ನಿತಿ ॥**

ತೃತೀಯಪಾದೇ ಪ್ರಥಮಂ ಪಾದಮನೂದ್ಯ ವ್ಯಾಚಷ್ಟೇ—ಯೋಽಯಂ ಸೋಮೋಽಸ್ತಿ ಏಷ ಉ ಏವ ಕಿಲ್ಬಿಷಾತ್ಪಾಲಯತಿ ಸರ್ವಕಾಮಹೇತೋಃ ಸೋಮಯಾಗಸ್ಯ ಪಾಪಕ್ಷಯಾಯಾನುಷ್ಠಾತುಂ ಶಕ್ಯತ್ವಾತ್ ॥ ಯಜ್ಞಾನುಷ್ಠಾನೇ ಚ ಪ್ರವೃತ್ತಾನಾಮೃತ್ವಿಗ್ಯಜಮಾನಾನಾಂ ಕಃ ಕಿಲ್ಬಿಷಪ್ರಸಂಗ ಇತ್ಯಾಶಂಕ್ಯಾಽಽಹ—ಯಃ ಪುಮಾನ್ಸ್ಪರ್ಧೇ ಯಜ್ಞೇ ಪ್ರವೃತ್ತೋ ಭವತಿ ತತ್ರಾಪಿ ಯಃ ಶ್ರೇಷ್ಠತಾಂ ಪ್ರಯೋಗಪಾಟವಾಭಿಮಾನಮಶ್ನುತಿ ಸ ತಾದೃಶಃ ಪುರುಷಃ ಕರ್ಮಸಮಾಪ್ತಿವ್ಯಗ್ರತಯಾ ಪಂಡಿತಂಮನ್ಯತ್ವೇನ ವಾಗ್ವೈಕಲ್ಯಂ ಕುರ್ವನ್ಕಿಲ್ಬಿಷಂ ಭವತಿ ಪಾಪಂ ಪ್ರಾಪ್ನೋತಿ ॥ ತಮೇತಂ ಪಾಪಪ್ರಸಂಗಂ ವಿಸ್ಪಷ್ಟಯತಿ—ಯಸ್ಮಾದೃತ್ವಿಜಾಂ ಕಿಲ್ಬಿಷಂ ಸಂಭಾವ್ಯತೇ ತಸ್ಮಾದ್ಯಜಮಾನಾ ಏವಮಾಹುರ್ಹೇ ಹೋತಸ್ತ್ವಂ ಮಾನುವೋಚೋಽನ್ಯಚಿತ್ತಃ ಸನ್ಪುರೋಽನುವಾಕ್ಯಾಂ ಮಾ ಪಠ । ಹೇಽಧ್ವರ್ಯೋ ಮಾ ಪ್ರಚಾರೀರ್ವ್ಯಗ್ರತಯಾ ಪ್ರಚಾರಮನ್ಯಥಾನುಷ್ಠಾನಂ ಮಾ ಕಾರ್ಷೀಃ । ನು ಕ್ಷಿಪ್ರಂ ಕುರ್ವಂತೋ ಭವಂತಃ ಕಿಲ್ಬಿಷಂ ಮಾ ಯಾತಯನ್ಮಾ ಪ್ರಾಪ್ನುವಂತಃ । ಇತಿಶಬ್ದೋ ಯಜಮಾನಾನಾಂ ಯುಕ್ತಿಸಮಾಪ್ತೌ ಇತ್ಥಂ ಸಂಭಾವಿತಾತ್ಕಿಲ್ಬಿಷಾತ್ಸೋಮಃ ಪಾಲಯತಿ ॥

ಮೂರನೆಯ ಪಾದವನ್ನು ವಿವರಿಸುವರು—ಈ ಸೋಮದೇವನು ಕಿಲ್ಬಿಷ ಅಥವಾ ಪಾಪವನ್ನು ಪರಿಹರಿಸಿ ಕಾಪಾಡು ವವನು. ತನ್ನ ಸಮಸ್ತ ಇಷ್ಟಾರ್ಥಗಳನ್ನು ಪಡೆಯುವುದಕ್ಕಾಗಿ ಮಾಡುವ ಸೋಮಯಾಗದಲ್ಲಿ ಕಿಲ್ಬಿಷ ಎಂದರೆ ಲೋಪ ದೋಷಗಳು, ನ್ಯೂನತೆಗಳು, ಪಾಪಗಳು ಮೊದಲಾದವು ಉಂಟಾಗುವ ಸಂಭವವುಂಟು. ಅಂತಹ ಸಂದರ್ಭಗಳಲ್ಲಿ ಆ ಲೋಪ ದೋಷಗಳನ್ನೂ ಪಾಪಗಳನ್ನೂ ಸೋಮದೇವತೆಯು ಪರಿಹಾರಮಾಡಿ ಯಜಮಾನನನ್ನು ರಕ್ಷಿಸುವನು. ಯಜ್ಞಮಾಡುತ್ತಿರು ವಾಗ ಋತ್ವಿಗ್ಯಜಮಾನರಿಗೆ ಕಿಲ್ಬಿಷವು ಸಂಭವಿಸುವ ಪ್ರಮೇಯವೇನಿದೆ ಎಂದರೆ, ಯಜ್ಞಕರ್ಮದಲ್ಲಿ ಪ್ರವೃತ್ತನಾಗಿರುವ ಪುರುಷನು ಬಹಳ ಬುದ್ಧಿವಂತಿಕೆಯಿಂದ ನಡೆಸಬೇಕಾಗಿರುವ ಪ್ರೌಢವಾದ ಯಜ್ಞದಲ್ಲಿ ಮಂತ್ರಾದಿಗಳನ್ನು ಪಠಿಸುತ್ತಿರುವಾಗ ಬೇಗ ಮುಗಿಸಬೇಕೆಂಬ ಇಚ್ಛೆಯಿಂದಲೂ ತಾನೇ ಮಂತ್ರಪ್ರಯೋಗಾದಿಗಳಲ್ಲಿ ಅತ್ಯಂತ ಸಮರ್ಥನೆಂದೂ ತನಗೆ ಸಮಾನರು ಯಾರೂ ಇಲ್ಲವೆಂಬ ದುರಭಿಮಾನದಿಂದಲೂ ಕೂಡಿ ಮಂತ್ರಪಠನಮಾಡುವುದರಿಂದ ಮಂತ್ರೋಚ್ಚಾರಣೆಯಲ್ಲಿಯೂ ಕ್ರಮ ದಲ್ಲಿಯೂ ಅಕ್ಷರಲೋಪ, ಕರ್ಮಲೋಪ ಮೊದಲಾದ ದೋಷಗಳಿಂದ ಕರ್ಮನ್ಯೂನತೆಯುಂಟಾಗಿ ಪಾಪವು ಸಂಭವಿಸುವುದು. ಮತ್ತು ಯಜಮಾನನು ಋತ್ವಿಜರನ್ನು ಕುರಿತು ಈರೀತಿ ಹೇಳುವನು – ಎಲೈ ಹೋತೃವೇ, ಮಂತ್ರಪಠನಕಾಲದಲ್ಲಿ ನಿನ್ನ ಮನಸ್ಸು ಮಂತ್ರಪಠನ, ಮಂತ್ರಾರ್ಥಗಳಲ್ಲಿಯೇ ಆಸಕ್ತವಾಗಿರಲಿ, ಬೇರೆಕಡೆ ಮನಸ್ಸು ಹೋಗದಂತೆ ಸ್ಥಿರಚಿತ್ತನಾಗಿ ಪುರೋನುವಾಕ್ಯಾದಿ ಮಂತ್ರಗಳನ್ನು ಪಠಿಸು ; ಎಲೈ ಅಧ್ವರ್ಯುವೇ, ಕೆಲಸದ ಗಡಿಬಿಡಿಯಲ್ಲಿ ಮಾಡಬೇಕಾದ ಕೆಲಸಕಾರ್ಯಗಳು ವ್ಯತ್ಯಾಸ ವಾಗದಂತೆಯೂ, ನಿನ್ನ ಗಮನವು ಬೇರೆಕಡೆ ಇದ್ದು ಕಾರ್ಯವು ಕೆಟ್ಟುಹೋಗದಂತೆಯೂ, ಜಾಗ್ರತೆಯಾಗಿ ಕಾರ್ಯವು ಮುಗಿ ಯಬೇಕೆಂಬ ಆತುರವನ್ನು ಬಿಟ್ಟು ಸಾವಧಾನವಾಗಿ ಕಾರ್ಯಗಳನ್ನು ನೆರವೇರಿಸು. ನೀವು ಮಾಡುವ ಲೋಪದೋಷಗಳಿಂದ ಯಜಮಾನನಾದ ನನಗೆ ಕಿಲ್ಬಿಷವು ಎಂದರೆ ಪಾಪವು ಸಂಭವಿಸದಂತೆ ಎಚ್ಚರಿಕೆಯಿಂದ ಇರಿ ಎಂದು ಯಜಮಾನನು ಹೇಳಬೇಕಾ ಗುವುದು. ಇಂತಹ ಪಾಪಗಳಿಂದ ಸೋಮದೇವತೆಯು ಋತ್ವಿಗ್ಯಜಮಾನರನ್ನು ಕಾಪಾಡಲಿ ಎಂದು ಹೇಳಿರುವುದು.

**ಪಿತುಷಣಿರಿತ್ಯನ್ನಂ ವೈ ಪಿತು ದಕ್ಷಿಣಾ ವೈ ಪಿತು ತಾಮನೇನ ಸನೋ-**
**ತ್ಯನ್ನಸನಿಮೇವೈನಂ ತತ್ಕರೋತಿ ॥**

**ತೃತೀಯಪಾದೇ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಅನ್ನವಾಚೀ ಪಿತುಶಬ್ದೋ ಲಬ್ಧವ್ಯತ್ವಸಾಮ್ಯಾದ್ದಕ್ಷಿಣಾಮಪ್ಯುಪಲಕ್ಷಯತಿ । ತಾಂ ದಕ್ಷಿಣಾಮೇತೇನ ಸೋಮೇನ ನಿಮಿತ್ತ ಭೂತೇನ ಸನೋತಿ ಋತ್ವಿಗ್ಭ್ಯೋ ದದಾತಿ ॥ ತತ್ತೇನ ಪಿತುಶಬ್ದಪಾಠೇನೈನಂ ಸೋಮಮನ್ನಂ ಸನಿಮನ್ನದಾನನಿಮಿತ್ತಭೂತಮೇವ ಕರೋತಿ ॥**

ನಾಲ್ಕನೆಯ ಪಾದವನ್ನು ವಿವರಿಸುತ್ತಾ ಪಿತುಷಣಿಃ ಎಂಬ ಶಬ್ದದ ಅರ್ಥವನ್ನು ವಿವರಿಸುವರು. ಪಿತುಶಬ್ದಕ್ಕೆ ಅನ್ನವೆಂಬ ಹೆಸರು ಇರುವುದಲ್ಲದೆ ಯಜ್ಞಾದಿಗಳಲ್ಲಿ ಋತ್ವಿಜರಿಗೆ ಕೊಡುವ ದಕ್ಷಿಣೆಯೆಂದೂ ಅರ್ಥವಿರುವುದು. ಈ ಸೋಮಯಾಗದಲ್ಲಿ ಪಾತ್ರವಹಿಸುವ ಋತ್ವಿಜರಿಗೆ ಸೋಮನು ದಕ್ಷಿಣಾದಿಗಳನ್ನೂ ಅನ್ನವನ್ನೂ ಕೊಡುವನು.

**ಅರಂ ಹಿಕೋ ಭವತಿ ವಾಜಿನಾಯೇತೀಂದ್ರಿಯಂ ವೈ ವೀರ್ಯಂ**
**ವಾಜಿನಂ ಅಜರಸಂ ಹಾಸ್ಮೇ ವಾಜಿನಂ ನಾಪಚ್ಛಿದ್ಯತೇ ಯ**
**ಏವಂ ವೇದ ॥**

ಚತುರ್ಥಂ ಪಾದಮನೂದ್ಯ ತತ್ರ ವಾಜಿನಶಬ್ದಂ ವ್ಯಾಚಷ್ಟೇ—ವೇದನಂ ಪ್ರಶಂಸತಿ—ಜರಾಸಮಾಪ್ತಿಪರ್ಯಂತಂ ವೇದಿತುರಿಂದ್ರಿಯವೀರ್ಯಯೋರಪಚ್ಛೇದೋ ನ ಭವತಿ ।

ಮತ್ತು ಸೋಮನು ಋತ್ವಿಗ್ಯಜಮಾನರಿಗೆ ಮುಪ್ಪಿನ ಪರ್ಯಂತವೂ ಇಂದ್ರಿಯಗಳ ಪಟುತ್ವವನ್ನೂ ವೀರ್ಯವನ್ನೂ ಸಾಮರ್ಥ್ಯವನ್ನೂ ಕೊಡುವನು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಅವನಿಗೆ ಇಂದ್ರಿಯಪಟುತ್ವಾದಿಗಳು ಮಧ್ಯೆ ನಾಶವಾಗದಂತೆ ಸೋಮದೇವನು ಅನುಗ್ರಹಿಸುವನು. ಇಂತಹ ಸೋಮನು ಯಜ್ಞವೇದಿಗೆ ಆಸೀನನಾಗಿ ಸ್ವಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿರುವುದನ್ನು ನೋಡಿ ಸಮಸ್ತಜನರೂ ಸಂತೋಷದಿಂದಿರುವರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವನ್ನು ಇಲ್ಲಿ ವಿವರಿಸಿದೆ.

## ಆಗನ್ದೇವ ಇತ್ಯಾಹ ।

ಷಷ್ಠೀಂ ಋಚಂ ವಿಧತ್ತೇ—ಸ ಚ ಮಂತ್ರಃ ಸಂಹಿತಾಯಾಮಾಮ್ನಾತಃ—“ ಆಗನ್ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾಮಿಷಂ ॥ ಸ ನಃ ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ” (ಋ. ಸಂ.ಮಂ. ೪ ಸೂ. ೫೩ ಋ. ೭) ಇತಿ ॥ ತಸ್ಯಾಯಮರ್ಥಃ—ಸೋಮೋ ದೇವ ಆಗನ್ನಿಹ ಕರ್ಮಣ್ಯಾಗಚ್ಛತು ॥ ಆಗತ್ಯ ಚ ಋತುಭಿಃ ಸಹ ಕ್ಷಯಂ ನಿವಾಸಸ್ಥಾನಂ ವರ್ಧತು ವೃದ್ಧಿಂ ಪ್ರಾಪಯತು ॥ ನೋಽಸ್ಮಾಕಂ ಸವಿತಾ ಪ್ರೇರಕಃ ಸ ದೇವಃ ಸುಪ್ರಜಾಂ ಶೋಭನಾಪತ್ಯಮಿಷಮನ್ನಂ ಚ ದಧಾತು ಸಂಪಾದಯತು ॥ ಸದೇವೋ ನೋ ಅಸ್ಮಾನ್ಕ್ಷಪಾಭಿರಾತ್ರಿಭಿರಹೋಭಿಶ್ಚ ಜಿನ್ವತು ಪ್ರೀಣಯತು ॥ ತಥಾ ಪ್ರಜೋಪೇತಂ ಧನಮಸ್ಮೇ ಸಮಿನ್ವತ್ವಸ್ಮಾಸು ಸಮ್ಯಕ್ಪ್ರಾಪಯತ್ವಿತಿ ॥

ಇನ್ನು ಆರನೆಯ ಋಕ್ಕಾದ—

ಆಗನ್ದೇವ ಋತುಭಿರ್ವರ್ಧತು ಕ್ಷಯಂ ದಧಾತು ನಃ ಸವಿತಾ ಸುಪ್ರಜಾಮಿಷಂ ।
ಸ ನಃ ಕ್ಷಪಾಭಿರಹಭಿಶ್ಚ ಜಿನ್ವತು ಪ್ರಜಾವಂತಂ ರಯಿಮಸ್ಮೇ ಸಮಿನ್ವತು ॥

(ಋ. ಸಂ. ೪-೫೩-೭)

ಎಂಬ ಋಕ್ಕನ್ನು ಪಠಿಸುವನು. ಈ ಮಂತ್ರವು ಋಗ್ವೇದಸಂಹಿತೆಯಲ್ಲಿಯೇ ಇದೆ. ಇದರ ಮುಖ್ಯಾಭಿಪ್ರಾಯವು—ಈ ಸೋಮದೇವನು ನಮ್ಮ ಯಜ್ಞಭೂಮಿಗೆ ದಯಮಾಡಿಸಲಿ; ಇಲ್ಲಿಗೆ ಬಂದು ಋತುಗಳಿಂದ ಕೂಡಿ ನಿವಾಸಸ್ಥಾನವನ್ನು ವೃದ್ಧಿಪಡಿಸಲಿ; ಮತ್ತು ಈ ಸೋಮದೇವನು ನಮಗೆ ಪ್ರೇರಕನಾಗಿ ಉತ್ತಮವಾದ ಪುತ್ರಪೌತ್ರಾದಿ ಸಂತತಿಯನ್ನೂ ಅನ್ನವನ್ನೂ ನಮಗೆ ಒದಗಿಸಿಕೊಡಲಿ; ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮಗೆ ಸಂತೋಷವನ್ನುಂಟುಮಾಡಲಿ; ಪ್ರಜೆಗಳನ್ನೂ (ಪುತ್ರಾದಿಗಳನ್ನೂ) ಧನವನ್ನೂ ನಮಗೆ ಸಂಪಾದಿಸಿಕೊಡಲಿ.

ಆಗತೋ ಹಿ ಸ ತರ್ಹಿ ಭವತಿ ಋತುಭಿರ್ವರ್ಧತು ಕ್ಷಯಮಿತ್ಯೃತವೋ ವೈ ಸೋಮಸ್ಯ ರಾಜ್ಞೋ ರಾಜಭ್ರಾತರೋ ಯಥಾ ಮನುಷ್ಯಸ್ಯ ತೈರೇವೈನಂ ತತ್ಸಹಾಗಮಯತಿ ॥

**ಅಸ್ಯಾ ಋಚಃ ಪ್ರಥಮಪಾದೇ ಪೂರ್ವಭಾಗಂ ವ್ಯಾಚಷ್ಟೇ—ತರ್ಹಿ ತಸ್ಮಿನ್ಕ್ರಯೋತ್ತರಕಾಲೇ ಸ ಸೋಮ ಆಗತೋ ಭವತೀತಿ ಪ್ರಸಿದ್ಧಂ ॥ ಉತ್ತರಭಾಗಮನೂದ್ಯ ವ್ಯಾಚಷ್ಟೇ—ಯಥಾ ಲೋಕೇ ಕಸ್ಯಚಿನ್ಮನುಷ್ಯಸ್ಯ ಭ್ರಾತರೋಽಪಿ ಮನುಷ್ಯಜಾತೀಯಾಸ್ತಥಾ ರಾಜಜಾತೀಯಸ್ಯ ಸೋಮಸ್ಯ ಭ್ರಾತರೋಽಪಿ ರಾಜಜಾತೀಯಾಃ ॥ ತತ್ರೇನ ಮಂತ್ರಭಾಗಪಾಠೇನ ತೈರ್ಋತುಭಿರ್ಭ್ರಾತೃಭಿಃ ಸಹೈನಂ ಸೋಮಮಸ್ಮಿನ್ಕರ್ಮಣ್ಯಾಗಮಯತಿ ।**

ಋಕ್ಕಿನ ಪ್ರಥಮಪಾದದ ಅರ್ಥವನ್ನು ವಿವರಿಸುವರು—ಈ ಋಕ್ಕಿನ ಪ್ರಾರಂಭದಲ್ಲಿರುವ ಆಗನ್ ಎಂಬ ಶಬ್ದವು ಸೋಮಕ್ರಯಣಾನಂತರ ಸೋಮನು ಯಜ್ಞಭೂಮಿಗೆ ಬಂದಿರುವನು ಎಂಬುದನ್ನು ಸೂಚಿಸುವುದು. ಲೋಕವ್ಯವಹಾರದಲ್ಲಿ ಮನುಷ್ಯರಿಗೆ ಸಹೋದರರು ಜತೆಯಲ್ಲಿರುವಂತೆ ರಾಜರಿಗೂ ಸಹೋದರರಿರುವರು. ಇಲ್ಲಿ ಸೋಮನೇ ರಾಜನು. ಋತುಗಳೇ ಆವನ ಸಹೋದರರು. ಈ ಋತುಗಳೆಂಬ ಸಹೋದರರೊಡನೆ ಈ ಸೋಮರಾಜನು ಇಲ್ಲಿಗೆ ದಯಮಾಡಿಸಿರುವನು. ಈ ಅರ್ಥವುಳ್ಳ ಪ್ರಥಮಪಾದವನ್ನು ಹೋತೃವು ಪಠಿಸಿ ಸಹೋದರರಿಂದ ಸಹಿತನಾದ ಸೋಮರಾಜನಿಗೆ ಸ್ವಾಗತವನ್ನು ಬಯಸಿರುವನು.

ದಧಾತು ನಃ ಸವಿತಾ ಸುಪ್ರಜಾಮಿಷಮಿತ್ಯಾಶಿಷಮಾಶಾಸ್ತೇ । ಸ ನಃ ಕ್ಷಪಾಭಿರಹಭಿಶ್ಚ ಜಿನ್ವತ್ವಿತ್ಯಹಾನಿ ವಾ ಅಹಾನಿ ರಾತ್ರಯಃ ಕ್ಷಪಾ ಅಹೋರಾತ್ರೈರೇವಾಸ್ಮಾ ಏತಾಮಾಶಿಷಮಾಶಾಸ್ತೇ ಪ್ರಜಾವಂತಂ ರಯಿಮಸ್ಮೇ ಸಮಿನ್ವತ್ವಿತ್ಯಾಶಿಷಮೇವಾಶಾಸ್ತೇ ॥

**ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಆಶಾಸನೀಯೋಪೇಕ್ಷಣೀಯಃ ಪ್ರಜಾದಿಪದಾರ್ಥ ಆಶೀಸ್ತಾಮನೇನ ಪಾದಪಾಠೇನಾಶಾಽಽಸ್ತೇ ॥ ತೃತೀಯಪಾದಮನೂದ್ಯ ವ್ಯಾಚಷ್ಟೇ—ಲೋಕಪ್ರಸಿದ್ಧಾನ್ಯಹಾನ್ಯೇವಾತ್ರ ಮಂತ್ರೋಕ್ತಾನ್ಯಹಾನಿ ॥ ಅಹೋಭಿರಿತಿ ವಕ್ತವ್ಯೇ ವರ್ಣವಿಕಾರೇಣಾಹಭಿರಿತ್ಯುಕ್ತತ್ವಾತ್ ॥ ಶಬ್ದಾಂತರಭ್ರಮಂ ವ್ಯುದಸಿತುಮಿದಂ ವ್ಯಾಖ್ಯಾನಂ । ಏವಮತ್ರ ವ್ಯಾಖ್ಯಾತವ್ಯಃ ಪದವಿಶೇಷೋ ನಾಸ್ತಿ ಕಿಂತ್ವಾಶೀಃ ಪ್ರಾರ್ಥನಾರೂಪಂ ತಾತ್ಪರ್ಯಮೇವೇತ್ಯಭಿಪ್ರೇತ್ಯೈವಕಾರಃ ಪ್ರಯುಕ್ತಃ ॥**

ಪ್ರಥಮಪಾದವನ್ನು ವಿವರಿಸಿ ಮುಂದಿನ ಪಾದಗಳ ಅರ್ಥವನ್ನು ವಿವರಿಸುವರು. ಸಮಸ್ತರನ್ನೂ ಪ್ರೇರಿಸುವ ಈ ಸೋಮದೇವನು ನಮಗೆ ಸುಪುತ್ರರನ್ನೂ ಅನ್ನವನ್ನೂ ಕೊಟ್ಟು ಕಾಪಾಡಲಿ ಮತ್ತು ಆ ದೇವನು ಅಹೋರಾತ್ರಿಗಳಲ್ಲಿಯೂ ನಮ್ಮನ್ನು ಸಂತೋಷಗೊಳಿಸುತ್ತಾ ನಮಗೆ ಪುತ್ರಪೌತ್ರಾದಿ ಪ್ರಜಾಸಂತತಿಯನ್ನೂ ಧನವನ್ನೂ ಕೊಟ್ಟು ಸಂರಕ್ಷಿಸಲಿ ಎಂಬ ಆಶಂಸನೆಯು ಉಕ್ತವಾಗಿದೆ.

[ಮೇಲೆ ಉದಾಹೃತವಾಗಿರುವ **ಆಗನ್** ಎಂಬ ಋಕ್ಕು ಸವಿತೃದೇವತಾಕವು; ವಾಮದೇವಋಷಿದೃಷ್ಟವಾದ ಏಳು ಋಕ್ಕುಗಳ ಈ ಸೂಕ್ತವೆಲ್ಲವೂ ಸವಿತೃದೇವತೆಯ ಪರವಾಗಿಯೇ ಇದೆ. ಆದರೂ ಇಲ್ಲಿ ಸೋಮದೇವತೆಯ ಪರವಾಗಿ ಅರ್ಥಮಾಡಿ ಉಪಯೋಗಿಸಲಾಗಿದೆ. ಈ ಹೇಳಿರುವ ವಿಷಯಗಳು ಸೋಮಾನಯನಕಾಲದಲ್ಲಿ ಸಂದರ್ಭೋಚಿತವಾದ ವಿಷಯಗಳನ್ನೊಳಗೊಂಡಿರುವುದರಿಂದ ಈ ಋಕ್ಕನ್ನು ಇಲ್ಲಿ ಸೋಮದೇವತೆಯ ಪರವಾಗಿ ಉಪಯೋಗಿಸಿರುವುದು ಸಹಜವಾಗಿದೆ. ಹಿಂದೆ ಹೇಳಿದ

ಸರ್ವೇ ನಂದಂತಿ ಯಶಸಾಗತೇನ (ಋ. ಸಂ. ೧೦-೭೧-೧೦) ಎಂಬ ಋಕ್ಕು ಸಹ ಜ್ಞಾನದೇವತಾಕವಾಗಿದೆ. ಸೋಮ ದೇವತೆಯನ್ನು ಸ್ತುತಿಸುವುದಿಲ್ಲ. ಆದರೂ ಯಜ್ಞಾದಿಕರ್ಮಗಳಲ್ಲಿ—

**ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ।**

(ಐ. ಬ್ರಾ. ೩-೧೩)

ಎಂಬ ಐತರೇಯ ಬ್ರಾಹ್ಮಣದ ಶ್ರುತಿವಚನದ ಪ್ರಕಾರ ಆಯಾಕರ್ಮಗಳಲ್ಲಿ ಆಯಾ ಕರ್ಮಗಳ ವಿಷಯಗಳನ್ನು ಪ್ರತಿಪಾದಿಸುವ ಸಂದರ್ಭೋಚಿತವಾದ ಅರ್ಥವನ್ನು ವಿವರಿಸುವ ಋಕ್ಕುಗಳನ್ನು ಉಪಯೋಗಿಸಬೇಕೆಂದು ಹೇಳಿರುವುದರಿಂದಲೂ, ಇಲ್ಲಿ ಸೋಮಾಯನಕಾಲದಲ್ಲಿ ಋತ್ವಿಗ್ಯಜಮಾನರು ಸೋಮದೇವತೆಯನ್ನು ಪ್ರಾರ್ಥಿಸಿರುವ ವಿಷಯಗಳೆಲ್ಲವೂ ಈ ಋಕ್ಕುಗಳಲ್ಲಿರು ವುದರಿಂದಲೂ, ಈ ಋಕ್ಕುಗಳು— ಬೇರೆ ದೇವತೆಯ ಪರವಾಗಿದ್ದರೂ—ಇಲ್ಲಿ ಸೋಮದೇವತೆಯ ಪರವಾಗಿಯೇ ಇದೆಯೆಂದು ಭಾವಿಸಿ ಪಠಿಸಲಾಗಿದೆ. ಇದರಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ. ]

ಅನಂತರ ಹೋತೃವು ಈ ಕರ್ಮದಲ್ಲಿ ಏಳನೆಯ ಋಕ್ಕನ್ನು ಪಠಿಸುವನು—

## ಯಾ ತೇ ಧಾಮಾನಿ ಹವಿಷಾ ಯಜಂತೀತ್ಯನ್ವಾಹ ।

**ಸಪ್ತಮೀಮೃಚಂ ವಿಧತ್ತೇ**—ಸೇಯಮೃಕ್ಸಂಹಿತಾಯಾಮಾಮ್ನಾತಾ—'ಯಾ ತೇ ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ॥ ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರಚರಾ ಸೋಮ ದುರ್ಯಾನ್ (೧-೯೧-೪) ಇತಿ ॥ ಹೇ ಸೋಮ ತೇ ತವ ಧಾಮಾನಿ ಯಾನ್ಯುತ್ತರವೇದ್ಯಾದಿಸ್ಥಾನಾನಿ ಯಜಮಾನಾ ಹವಿಷಾ ಯಜಂತಿ ತೇ ತವ ತಾ ವಿಶ್ವಾ ತಾನಿ ಸರ್ವಾಣಿ ಸ್ಥಾನಾನಿ ವ್ಯಾಪ್ಯೇತಿ ಶೇಷಃ । ತತೋ ಭವಾನ್ಯಜ್ಞಂ ಪರಿಭೂರಸ್ತು ಪರಿತಃ ಪ್ರಾಪ್ತವಾನ್ಭವತು ॥ ಕಿಂಚ ॥ ತ್ವಂ ಗಯಸ್ಫಾನೋ ಗಯಾನಾಮಸ್ಮದೀಯಾನಾಂ ಗವಾಂ ವರ್ಧಯಿತಾ ಪ್ರತರಣಃ ಪ್ರತಾರಯಿತಾ ಸರ್ವಾಪದುತ್ತಾರಣಹೇತುಃ ಸುವೀರಃ ಶೋಭನ ಪುತ್ರಪೌತ್ರಾದಿಪ್ರದೋ ಭವೇತಿ ಶೇಷಃ ॥ ಹೇ ಸೋಮ ವೀರಹಾಸ್ಮದೀಯಾನಾಂ ವೀರಪುರುಷಾಣಾಂ ಮನಸಾ ಕುರ್ವಾಣೋ ದುರ್ಯಾನಸ್ಮದೀಯಗೃಹಾನ್ಪ್ರತಿ ಪ್ರಚರ ಪ್ರಕರ್ಷೇಣ ಗಚ್ಛ ॥

ಹೋತೃವು ಪಠಿಸುವ ಈ ಏಳನೆಯ ಋಕ್ಕು ಋಗ್ವೇದ ಸಂಹಿತೆಯಲ್ಲಿಯೇ ಇದೆ—

ಯಾ ತೇ ಧಾಮಾನಿ ಹವಿಷಾ ಯಜಂತಿ ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ।
ಗಯಸ್ಫಾನಃ ಪ್ರತರಣಃ ಸುವೀರೋಽವೀರಹಾ ಪ್ರಚರಾ ಸೋಮ ದುರ್ಯಾನ್ ॥

(ಋ. ಸಂ. ೧-೯೧-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಸೋಮನೇ, ಉತ್ತರವೇದಿಯೇ ಮೊದಲಾದ ನಿನ್ನ ಸ್ಥಾನಗಳನ್ನು ಯಜ್ಞಮಾಡುವ ಯಜಮಾನರು ಹವಿರಾದಿಗಳಿಂದ ಪೂಜಿಸುತ್ತಾರೆ. ಆ ನಿನ್ನ ಸ್ಥಾನಗಳು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿರು ವುದರಿಂದ ನೀನು ಯಜ್ಞಪ್ರದೇಶವನ್ನು ಸುತ್ತುವರೆದು ನೆಲಸಿರುವೆ ಮತ್ತು ನೀನು ನಮ್ಮ ಗೋವುಗಳನ್ನು ಪೋಷಿಸಿ ವೃದ್ಧಿಪಡಿ

ಸುವವನು; ನಮ್ಮನ್ನು ಸಮಸ್ತ ಸಂಕಟಗಳಿಂದ ಪಾರುಮಾಡುವವನು; ನೀನು ನಮಗೆ ಒಳ್ಳೆಯ ಪುತ್ರಪೌತ್ರಾದಿಗಳನ್ನು ಕೊಡುವವನು; ಇದಲ್ಲದೆ, ಎಲೈ ವೀರಾಭಿಮಾನಿಯಾದ ಸೋಮದೇವನೇ, ನೀನು ನಮ್ಮಲ್ಲಿರುವ ಉತ್ತಮವೀರರನ್ನು ಕೊಲ್ಲುವವನಲ್ಲ. ಇಂತಹ ನೀನು ಈಗ ನಮ್ಮ (ಯಜ್ಞ) ಗೃಹಾಭಿಮುಖವಾಗಿ ದಯಮಾಡು.

ತಾ ತೇ ವಿಶ್ವಾ ಪರಿಭೂರಸ್ತು ಯಜ್ಞಂ ಗಯಸ್ಫಾನಃ ಪ್ರತರಣಃ ಸುವೀರ ಇತಿ ಗವಾಂ ನಃ ಸ್ಫಾವಯಿತಾ ಪ್ರತಾರಯಿತೈಧೀತ್ಯೇವ ತದಾಹ ।

ಅತ್ರ ಪ್ರಥಮಪಾದಸ್ಯ ಸ್ಪಷ್ಟಾರ್ಥತ್ವಬುಧ್ಯಾ ವ್ಯಾಖ್ಯಾನಮುಪೇಕ್ಷ್ಯ ದ್ವಿತೀಯಪಾದಮಪಿ ಸ್ಪಷ್ಟಾರ್ಥಾಭಿಪ್ರಾಯೇಣೈವ ಪಠತಿ ॥ ತೃತೀಯಪಾದಮನೂದ್ಯ ವ್ಯಾಚಷ್ಟೇ—ಸ್ಫಾವಯಿತಾ ವರ್ಧಯಿತಾ ॥

ಮೊದಲನೆಯ ಪಾದದ ಅರ್ಥವು ಸ್ಪಷ್ಟವಾಗಿರುವುದರಿಂದ ಎರಡನೆಯ ಮತ್ತು ಮೂರನೆಯ ಪಾದಗಳನ್ನು ವಿವರಿಸುವರು. ಇದರ ಅರ್ಥವನ್ನು ಸಹ ಮೇಲೆಯೇ ತಿಳಿಸಿದೆ.

ಅವೀರಹಾ ಪ್ರಚರಾ ಸೋಮ ದುರ್ಯಾನಿತಿ ಗೃಹಾ ವೈ ದುರ್ಯಾ ಬಿಭ್ಯತಿ ವೈ ಸೋಮಾದ್ರಾಜ್ಞ ಆಯತೋ ಯಜಮಾನಸ್ಯ ಗೃಹಾಃ ಸ ಯದೇತಾಮನ್ವಾಹ ಶಾಂತ್ಯೈವೈನಂ ತಚ್ಛಮಯತಿ ಸೋಽಸ್ಯ ಶಾಂತೋ ನ ಪ್ರಜಾಂ ನ ಪಶೂನ್ ಹಿನಸ್ತಿ ॥

ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಆಯತ ಆಗಚ್ಛತಃ ಸೋಮಾದ್ರಾಜ್ಞೋ ಯಜಮಾನಸ್ಯ ಗೃಹಾ ಗೃಹವರ್ತಿನೋ ವೀರಪುರುಷಾಃ ಕೇನಾಪಿ ಪರಿಚರ್ಯಾವೈಕಲ್ಯೇನ ರಾಜಾ ಕೋಪಂ ಕರಿಷ್ಯತೀತಿ ಮತ್ವಾ ತಸ್ಮಾತ್ಸರ್ವೇ ಬಿಭ್ಯತಿ ತದಾನೀಂ ಸಹೋತಾ ಯದ್ಯೇತಾಮವೀರಹೇತಿಪದಯುಕ್ತಾಮೃಚಮನ್ವಾಹ ತತ್ತೇನಾನುವಚನೇನ ಶಾಂತ್ಯಾ ಶಾಂತಿಹೇತುಭೂತಯಾ ಸುವೀರಪದೋಕ್ತ್ಯೈವೈನಂ ರಾಜಾನಂ ಶಮಯತಿ—ಶಾಂತಂ ಕರೋತಿ । ಸ ಚ ರಾಜಾ ಶಾಂತಃ ಸನ್ನಸ್ಯ ಯಜಮಾನಸ್ಯ ಪುತ್ರಾದಿಕಾಂ ಪ್ರಜಾಂ ಗವಾದಿಪಶೂಂಶ್ಚ ನ ಹಿನಸ್ತಿ ॥

ಈಗ ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು—ಯಜಮಾನನ ಗೃಹಾಭಿಮುಖವಾಗಿ ಬರುತ್ತಿರುವ ಈ ಸೋಮರಾಜನನ್ನು ನೋಡಿ ಯಜಮಾನನ ಗೃಹದಲ್ಲಿರುವ ವೀರಪುರುಷರು—ನಾವು ಈ ಸೋಮರಾಜನಿಗೆ ಮಾಡುವ ಸೇವೆಯಲ್ಲಿ ಹೆಚ್ಚುಕಡಿಮೆಯಾಗಿ, ಅದರಿಂದ ಈ ದೇವನು ಕೋಪಗೊಳ್ಳುವನೆಂದು ಗೃಹದಲ್ಲಿ ವೀರಪುರುಷರೇ ಮೊದಲಾದವರು ಭಯಪಡುವರು. ಆಗ ಹೋತೃವು ಆ ಭಯವನ್ನು ಪರಿಹಾರಮಾಡುವುದಕ್ಕಾಗಿ, ಅವೀರಹಾ—ಈ ಸೋಮದೇವನು ವೀರಪುರುಷರನ್ನು ಕೊಲ್ಲುವವನಲ್ಲ ಎಂಬ ಆಶ್ವಾಸನಶಬ್ದವಿರುವ ನಾಲ್ಕನೆಯ ಪಾದವನ್ನು ಪಠಿಸಿ ಸೋಮರಾಜನಿಗೆ ಶಾಂತಿವಚನವನ್ನು ಹೇಳಿ ಸಮಾಧಾನಪಡಿಸುವನು. ಸೋಮರಾಜನೂ ಸಹ ಆ ಶಾಂತಿವಚನಗಳಿಂದ ತೃಪ್ತನಾಗಿ ಯಜಮಾನನ ಪುತ್ರಾದಿಗಳನ್ನೂ ಗೋವುಗಳನ್ನೂ ಪರಿವಾರದವರನ್ನೂ ಹಿಂಸಿಸುವುದಿಲ್ಲ.

### ಇಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ವಾರುಣ್ಯಾ ಪರಿದಧಾತಿ ।

ಅಷ್ಟಮೀಮೃಚಂ ವಿಧತ್ತೇ— ಇಯಮೃಗ್ವರುಣದೇವತಾಕಾ ತಯಾ ಪರಿದಧಾತಿ । ಅನುವಚನಂ ಸಮಾಪಯೇದಿತ್ಯರ್ಥಃ । ಸೇಯಮೃಕ್ಸಂಹಿತಾಯಾಮೇವಮಾಮ್ನಾತಾ— " ಇಮಾಂ ಧಿಯಂ ಶಿಕ್ಷಮಾಣಸ್ಯ ದೇವಕ್ರತುಂ ದಕ್ಷಂ ವರುಣ ಸಂಶಿಶಾಧಿ । ಯಯಾಽತಿ ವಿಶ್ವಾ ದುರಿತಾ ತರೇಮ ಸುಕರ್ಮಾಣಮಧಿ ನಾವಂ ರುಹೇಮ " (ಋ.ಸ. ೮-೪೨-೩) ಇತಿ । ತಸ್ಯಾಯಮರ್ಥಃ । ಹೇ ವರುಣ ದೇವೇಮಾಂ ಧಿಯಂ ಯಜ್ಞಾನುಷ್ಠಾನವಿಷಯಾಂ ಬುದ್ಧಿಂ ಶಿಕ್ಷಮಾಣಸ್ಯಾಭ್ಯಸ್ಯತೋ ಯಜಮಾನಸ್ಯ ಕ್ರತುಂ ಯಜ್ಞವಿಷಯಂ ವೀರ್ಯಂ ದಕ್ಷಂ ಕೌಶಲಂ ಯಜ್ಞವಿಷಯಪ್ರಜ್ಞಾನಂ ಸಂಶಿಶಾಧಿ ಸಮ್ಯಗುಪದಿಶ । ಯಯಾ ವಾಗ್ರೂಪಯಾ ನಾವಾ ವಿಶ್ವಾ ದುರಿತಾ ಸರ್ವಾಣಿ ಪಾಪಾನ್ಯತಿತರೇಮ । ತಾದೃಶೀಂ ಸುತರ್ಮಾಣಂ ಸುಷ್ಠುತರಣಹೇತುಂ ವಾಗ್ರೂಪಾಂ ನಾವಮಧಿರುಹೇಮಾಽಽಧಿಕ್ಯೇನಾಽಽರೋಹಣಂ ಕುರ್ಮ ಇತಿ ।

ಈಗ ಹೋತೃವು ಇಮಾಂ ಧಿಯಂ ಎಂಬ ವರುಣದೇವತಾಕವಾದ ಎಂಟನೆಯ ಋಕ್ಕನ್ನು ಪಠಿಸಿ ಈ ಸೋಮಪ್ರವಾಹಣವೆಂಬ ಕರ್ಮವನ್ನು ಸಮಾಪ್ತಿಗೊಳಿಸುವನು.

ಇಮಾಂ ಧಿಯಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಂಶಿಶಾಧಿ ।
ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮ ॥
(ಋ. ಸಂ. ೮-೪೨-೩)

ಈ ಋಕ್ಕು ಸಹ ಋಗ್ವೇದಸಂಹಿತೆಯಲ್ಲಿಯೇ ಇರುವುದು. ಈ ಋಕ್ಕಿನ ಮುಖ್ಯಾಭಿಪ್ರಾಯವು— ಎಲೈ ವರುಣದೇವನೇ, ಈ ಯಜ್ಞಾನುಷ್ಠಾನವಿಷಯದಲ್ಲಿ ಪ್ರವರ್ತಿತವಾದ ಬುದ್ಧಿಯಲ್ಲಿ ಆಸಕ್ತನಾಗಿರುವ (ಎಂದರೆ ಯಜ್ಞಾನುಷ್ಠಾನವನ್ನು ವಿಧ್ಯುಕ್ತರೀತಿಯಿಂದ ಮಾಡಬೇಕೆಂದು ಜಯಸುತ್ತಿರುವ) ಈ ಯಜಮಾನನಿಗೆ ನೀನು ಯಜ್ಞವಿಷಯವಾದ ಸಾಮರ್ಥ್ಯವನ್ನೂ, ಕುಶಲತೆಯನ್ನೂ, ಜ್ಞಾನವನ್ನೂ ಚೆನ್ನಾಗಿ ಉಪದೇಶಮಾಡು. ನಿನ್ನ ವಾಗ್ರೂಪವಾದ ಉಪದೇಶವೆಂಬ ನಾವೆಯನ್ನು ಹತ್ತಿಕುಳಿತು, ಸಮಸ್ತವಾದ ದುರಿತ(ಕಷ್ಟ) ಗಳನ್ನೂ ಪಾಪಗಳನ್ನೂ ದಾಟಿ ಪಾರಾಗೋಣ.

### ವರುಣದೇವತ್ಯೋ ವಾ ಏಷ ತಾವದ್ಯಾವದುಪನದ್ಧೋ ಯಾವತ್ಪರಿಶ್ರಿತಾನಿ ಪ್ರಪದ್ಯತೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ॥

ವಾರುಣ್ಯಾ ಸಮಾಪನೇ ಕಾರಣಮಾಹ— ಯಾವತ್ಕಾಲಂ ಸೋಮ ಉಪನದ್ಧೋ ವಸ್ತ್ರಾದಿನಾ ಬದ್ಧಃ ಸ್ಯಾದ್ಯಾವಚ್ಚ ಪರಿಶ್ರಿತಾನಿ ಪ್ರಾಚೀನವಂಶಾದಿಸ್ಥಾನಾನಿ ಪ್ರತಿಪದ್ಯತೇ ತಾವದೇಷ ಸೋಮೋ ವರುಣದೇವತಾಕೋ ಬಂಧನಸ್ಯ ವರುಣಪಾಶಾಧೀನತ್ವಾದಾವರಣಸ್ಯಾಪಿ ವರುಣಾಧೀನತ್ವಾತ್ ॥ ತತ್ತಥಾ ಸತಿ ವಾರುಣ್ಯಾ ಪರಿದಧಾನೋ ಹೋತಾ ಸ್ವಯೈವ ಸೋಮಸಂಬಂಧಿನ್ಯೈವ ದೇವತಯಾ ಸ್ವೇನ ಸಂಬಂಧಿನಾ ಛಂದಸಾ ತಮೇನಂ ಸೋಮಂ ಸಮೃದ್ಧಂ

**ಕರೋತಿ ॥ ಅಸ್ಯಾ ಋಚಸ್ತ್ರಿಷ್ಟುಪ್ಛಂದಃ ॥ ಸಾ ಚ ತ್ರಿಷ್ಟುಪ್ ಸೋಮಮಾಹರ್ತುಂ ದ್ಯುಲೋಕೇಗತ್ವಾ ದಕ್ಷಿಣಾ(ಣಾಂ)ತಪಶ್ಚಾಹೃತವತೀ ॥ ತಥಾಚ ಶಾಖಾಂತರೇ ಶ್ರೂಯತೇ— “ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ ” ಇತಿ ॥ ತಸ್ಮಾದಿದಂ ಛಂದಃ ಸೋಮಸ್ಯ ಸ್ವಕೀಯಂ ॥**

ಈ ಸೋಮಪ್ರವಾಹಣಕರ್ಮವನ್ನು ಸಮಾಪ್ತಿಗೊಳಿಸಲು ವರುಣದೇವತಾಕವಾದ ಋಕ್ಕನ್ನು ಏತಕ್ಕೆ ಪಠಿಸಬೇಕೆಂದರೆ ಅದಕ್ಕೆ ಕಾರಣವನ್ನು ಹೇಳುವರು. ವಿಕ್ರಯಮಾಡಿ ತಂದ ಸೋಮವನ್ನು ಇದುವರೆಗೂ ಹಗ್ಗಮುಂತಾದ ಬಂಧನಗಳಿಂದ ಕಟ್ಟಿ ವಸ್ತ್ರಾದಿಗಳಿಂದ ಆಚ್ಛಾದಿಸಿ ಪ್ರಾಚೀನವಂಶ ಮೊದಲಾದ ಸ್ಥಾನಗಳಿಗೆ ತರಲಾಗಿದ್ದಿತು. ಯಾವ ವಸ್ತುವನ್ನೇ ಆಗಲಿ ಕಟ್ಟಿರುವ ಬಂಧನವು ಅಥವಾ ಅದರಮೇಲೆ ಹೊದ್ದಿಸಿರುವ ವಸ್ತ್ರಾದಿ ಆಚ್ಛಾದನವು ವರುಣದೇವನ ಪಾಶಾಧೀನವಾಗಿರುವುದು. ಅದನ್ನು ಬಿಚ್ಚಬೇಕಾದರೆ ವರುಣದೇವನನ್ನು ಪ್ರಾರ್ಥಿಸುವ ಋಕ್ಕನ್ನು ಪಠಿಸಬೇಕೆಂಬ ನಿಯಮಪ್ರಕಾರ ಹೋತೃವು ವರುಣದೇವತಾಕ ವಾದ ಮಂತ್ರವನ್ನು ಪಠಿಸುವನು. ಹಿಂದೆ ಸೋಮನನ್ನು ಪ್ರಾರ್ಥಿಸುವಾಗ ಸೋಮದೇವನಿಗೆ ಪ್ರಿಯವಾದ ಅಥವಾ ಸ್ವಕೀಯ ವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಸ್ತುತಿಸಲಾಗಿತ್ತಷ್ಟೆ. ಈಗ ಕರ್ಮಸಮಾಪ್ತಿ ಕಾಲದಲ್ಲಿ ಸ್ತುತಿಸುವ ಈ ಮಂತ್ರವು ತ್ರಿಷ್ಟುಪ್‌ಛಂದಸ್ಸಿನದು. ಅದೂ ಸೋಮನಿಗೆ ಸ್ವಕೀಯಛಂದಸ್ಸೇ ಆಗಿರುವುದು ಹೇಗೆಂದರೆ—ಪೂರ್ವದಲ್ಲಿ ಸೋಮವು ಸ್ವರ್ಗ ಲೋಕದಲ್ಲಿದ್ದಿತು ಅದನ್ನು ಭೂಮಿಗೆ ತರುವುದಕ್ಕಾಗಿ ದೇವತೆಗಳು ಛಂದಸ್ಸುಗಳನ್ನು ಪ್ರಾರ್ಥಿಸಲು ತ್ರಿಷ್ಟುಪ್, ಜಗತೀ, ಗಾಯತ್ರೀ ಎಂಬ ಮೂರು ಛಂದಸ್ಸುಗಳು ಪಕ್ಷಿಗಳ ಆಕಾರವನ್ನು ಕೈಗೊಂಡು ಸ್ವರ್ಗಕ್ಕೆ ಹಾರಿ ಸೋಮವನ್ನು ತರಲು ಪ್ರಯತ್ನಿ ಸಿದವು. ಮೊದಲು ತ್ರಿಷ್ಟುಪ್ ಅನಂತರ ಜಗತೀಛಂದಸ್ಸು ಸೋಮಗಳನ್ನು ತರಲು ಪ್ರಯತ್ನಿಸಿ ವಿಫಲವಾದುವು. ಅನಂತರ ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಸ್ವರ್ಗದಿಂದ ಸೋಮವನ್ನು ತಂದಿತು. ತ್ರಿಷ್ಟುಪ್‌ಛಂದಸ್ಸು ಸೋಮ ವನ್ನು ತರದಿದ್ದರೂ ಅದಕ್ಕಾಗಿ ಪ್ರಯತ್ನಪಟ್ಟದ್ದರಿಂದ ಇಲ್ಲಿ ತ್ರಿಷ್ಟುಪ್‌ಛಂದಸ್ಸೂ ಸಹ ಸೋಮದೇವತೆಗೆ ಸ್ವಕೀಯವೆಂದೇ ಹೇಳಲ್ಪಟ್ಟಿದೆ.

ಶಿಕ್ಷಮಾಣಸ್ಯ ದೇವೇತಿ ಶಿಕ್ಷತೇ ವಾ ಏಷ ಯೋ ಯಜತೇ ಕ್ರತುಂ ದಕ್ಷಂ ವರುಣ ಸಂಶಿಶಾಧೀತಿ ವೀರ್ಯಂ ಪ್ರಜ್ಞಾನಂ ವರುಣ ಸಂಶಿಶಾಧೀತ್ಯೇವ ತದಾಹ ॥

**ಪ್ರಥಮಪಾದೇ ಶಿಕ್ಷಮಾಣಸ್ಯೇತಿ ಪದಂ ವ್ಯಾಚಷ್ಟೇ—ಪುನಃ ಪುನರಭ್ಯಾಸಃ ಶಿಕ್ಷಾ ಯಜನಶೀಲಸ್ಯ ಸೋಽಸ್ತಿ ॥ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—**

ಸೋಮಲತೆಗಳನ್ನು ಹಗ್ಗದಿಂದ ಕಟ್ಟಿ, ವಸ್ತ್ರದಿಂದ ಆಚ್ಛಾದಿಸಿರುವ ಪರ್ಯಂತರ ಅದು ವರುಣದೇವನ ಸ್ವಾಧೀನ ದಲ್ಲಿದ್ದಂತೆ ಭಾವಿಸಲಾಗುವುದು. ಈಗ ಬಂಧನವನ್ನು ತೆಗೆದು ವಸ್ತ್ರವನ್ನು ತೆಗೆಯುವುದಕ್ಕಾಗಿ ವರುಣನನ್ನು ಪ್ರಾರ್ಥಿಸಲಾಗಿದೆ. ಹೀಗೆ ಪ್ರಾರ್ಥಿಸುವಾಗ—ಎಲೈ ವರುಣನೇ, ಈ ಯಜ್ಞವನ್ನು ಮಾಡುತ್ತಿರುವ ಯಜಮಾನನಿಗೆ ಸರಿಯಾದ ತಿಳುವಳಿಕೆಯನ್ನು ಕೊಡು, ಇಂದ್ರಿಯಪಟುತ್ವವನ್ನೂ ಯಜ್ಞಮಾಡುವ ಸಾಮರ್ಥ್ಯವನ್ನೂ. ಜ್ಞಾನವನ್ನೂ ಕೊಡು ಎಂದು ಹೋತೃವು ಈ ಮಂತ್ರ ಪಠನದಿಂದ ವರುಣನನ್ನು ಪ್ರಾರ್ಥಿಸುವನು.

ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮೇತಿ ಯಜ್ಞೋ ವೈ ಸುತರ್ಮಾ ನೌಃ ಕೃಷ್ಣಾಜಿನಂ ವೈ

ಸುತರ್ಮಾ ನೌರ್ವಾಗ್ವೈ ಸುತರ್ಮಾ ನೌರ್ವಾಚಮೇವ ತದಾ-
ರುಹ್ಯ ತಯಾ ಸ್ವರ್ಗಂ ಲೋಕಮಭಿಸಂತರತಿ ॥

ದ್ವಿತೀಯಾರ್ಥಮನೂದ್ಯ ವ್ಯಾಚಷ್ಟೇ—ಯತ್ರ ಯಜ್ಞಸ್ಯ ವಾ ಕೃಷ್ಣಾಜಿನಸ್ಯ ವಾ ಪ್ರಸ್ತಾವಸ್ತತ್ರ ತತ್ಪರತ್ವೇನ ಸುಶರ್ಮಶಬ್ದೋ ವ್ಯಾಖ್ಯೇಯಃ । ಇಹ ತು ಮಂತ್ರರೂಪಾ ವಾಗ್ವಿವಕ್ಷಿತಾ । ತತ್ತೇನ ಮಂತ್ರಪಾಠೇನ ವಾಗ್ರೂಪಾಮೇವ ನಾವಮಾರುಹ್ಯ ತಯಾ ನಾವಾ ಸ್ವರ್ಗಮಭಿಲಕ್ಷ್ಯ ಸಮ್ಯಕ್ಸ್ವರ್ಗಂ ತರತಿ ।

ಇಲ್ಲಿ ನಾವೆಯೆಂದರೆ ಯಜ್ಞವು; ಯಜ್ಞದಲ್ಲಿ ದೀಕ್ಷಾಸಂಸ್ಕಾರಕ್ಕಾಗಿ ಉಪಯೋಗಿಸುವ ಕೃಷ್ಣಾಜಿನವೇ ನಾವೆಯು; ಮಂತ್ರರೂಪವಾದ ವಾಕ್ಯಗಳೇ ನಾವೆಯು; ಇಂತಹ ನಾವೆಯನ್ನೇರಿ ಎಂದರೆ ನಾವು ಯಜ್ಞವನ್ನು ಪ್ರಾರಂಭಿಸಿ ಅದರಲ್ಲಿ ದೀಕ್ಷೆಯನ್ನು ಹೊಂದಿ ಸಮಯಾನುಸಾರವಾದ ಮಂತ್ರಗಳನ್ನು ಪಠಿಸುತ್ತಾ ಯಜ್ಞಮಾಡುವುದರಿಂದ ಪಾಪಗಳನ್ನೆಲ್ಲಾ ಕಳೆದುಕೊಂಡು ಸ್ವರ್ಗಲೋಕವನ್ನು ಪಡೆಯುವಂತಾಗಲಿ ಎಂದಭಿಪ್ರಾಯವು. ಇಂತಹ ಅರ್ಥವುಳ್ಳ ಋಕ್ಕನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನು ಸ್ವರ್ಗವನ್ನು ಪಡೆಯುವನು.

ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣ-
ಮೃಗಭಿವದತಿ ॥

ಉಕ್ತಾಃ ಸರ್ವಾ ಋಚಃ ಪ್ರಶಂಸತಿ— ವಿವಕ್ಷಿತಾರ್ಥಪ್ರತಿಪಾದಕೇನ ರೂಪೇಣ ಸಮೃದ್ಧಾಃ । ತಾಮೇವ ಸಮೃದ್ಧಿಂ ವಿಶದಯತಿ— ಪೂರ್ವವದ್ವ್ಯಾಖ್ಯೇಯಂ ।

ಈ ಎಂಟು ಋಕ್ಕುಗಳೂ ಸೇರಿ ಸೋಮಪ್ರವಾಹಣವೆಂಬ ಕರ್ಮವು ಪೂರ್ತಿಯಾಗುವುದು. ಕರ್ಮಪೂರ್ತಿಯಾಗುವ ಋಕ್ಕುಗಳನ್ನು ಪಠಿಸುವುದರಿಂದ ಯಜ್ಞವು ಸಾಂಗವಾಗಿ ನೆರವೇರಿದಂತಾಗುವುದು. ಮತ್ತು ಆಯಾ ಕರ್ಮಕ್ಕೆ ಸಂಬಂಧಪಟ್ಟ ಮತ್ತು ಅದೇ ಅರ್ಥವನ್ನೊಳಗೊಂಡ ಋಕ್ಕುಗಳನ್ನು ಪಠಿಸುವುದರಿಂದಲೇ ಆಯಾ ಕರ್ಮಗಳು ಪೂರ್ತಿಯಾಗಿ ಯಜ್ಞವು ಸಾಂಗವಾಗಿ ನೆರವೇರುವುದು.

ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ದ್ವಾದಶ ಸಂಪ-
ದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾ-
ಪತಿಃ ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ
ವೇದ । ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ
ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥

ಆದ್ಯಂತಯೋರೃಚೋರಾವೃತ್ತಿಂ ವಿಧತ್ತೇ—ಆವೃತ್ತಿಸಹಿತಾನಾಮೃಚಾಂ ಸಂಖ್ಯಾಂ ಪ್ರಶಂಸತಿ—ವೇದನಂ ಪ್ರಶಂಸತಿ—ಆವೃತ್ತಿಂ ಪ್ರಶಂಸತಿ—ತತ್ತೇನಾವರ್ತನೇನ— ಬರ್ಸೌ ರಜ್ಜ್ವಾ

ಉಭಯೋರಂತಯೋಃ ಸ್ಥಿತೌ ಮುಷ್ಟ್ಯಾಕಾರೌ ಗ್ರಂಥೀ ತದ್ವದತ್ರಾಪಿ ನಹ್ಯತಿ ಬಧ್ನಾತಿ । ತಚ್ಚ ಬಂಧನಂ ಸ್ಥೇಮ್ನೇ ಸ್ಥೈರ್ಯಾಯ ಭವತಿ । ತಸ್ಯೈವಾನ್ವಯವ್ಯತಿರೇಕಾಭ್ಯಾಂ ವ್ಯಾಖ್ಯಾನಂ ಪ್ರಾಬಲ್ಯಂ ಅವಿಸ್ರಂಸನಂ ಚ ॥

ಈ ಎಂಟು ಋಕ್ಕುಗಳನ್ನು ಪಠಿಸುವಾಗ ಮೊದಲನೆಯ ಋಕ್ಕನ್ನೂ, ಕೊನೆಯ ಋಕ್ಕನ್ನೂ ಹೋತೃವು ಮೂರುಮೂರಾವರ್ತಿ ಪಠಿಸುವನು. ಇದರಿಂದ ಒಟ್ಟು ಹನ್ನೆರಡು ಋಕ್ಕುಗಳನ್ನು ಪಠಿಸಿದಂತಾಗುವುದು. ಒಂದು ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವವು. ಸಂವತ್ಸರವು (ಕಾಲವು) ಪ್ರಜಾಪತಿಸ್ವರೂಪವು. ಮೇಲೆ ಹೇಳಿದ ಈ ಋಕ್ಕುಗಳೂ ಪ್ರಜಾಪತಿಯಲ್ಲೇ ನೆಲಸಿರುವವು. ಇದನ್ನು ತಿಳಿದು ಈ ಋಕ್ಕುಗಳನ್ನು ಪಠಿಸುವುದರಿಂಧ ಆಯಾ ಕರ್ಮಗಳಲ್ಲಿ ಜಯಶೀಲನಾಗುವನು. ಕರ್ಮದ ಆದಿಯಲ್ಲಿಯೂ ಕೊನೆಯಲ್ಲಿಯೂ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರಾವರ್ತಿ ಪಠಿಸುವುದರಿಂದ ಯಜ್ಞವೆಂಬ ಕರ್ಮವು ಮಂತ್ರಗಳೆಂಬ ಹಗ್ಗಗಳಿಂದ ಎರಡು ತುದಿಗಳಲ್ಲಿಯೂ ಗಂಟುಹಾಕಿ ಬಲವಾಗಿ ಕಟ್ಟಲ್ಪಟ್ಟು ಜಾರಿಹೋಗದಂತೆ ದೃಢವಾಗಿರುವಂತಾಗಿರುವುದು.

*English Translation*

The Adhvaryu then says (to the Hotar); repeat a mantra for the Soma who is bought and being brought (to the sacrificial compound). The Hotar repeats : Bhadrad abhi'sreyah prehi, i.e, go from happiness to still greater bliss. By the word bhadra i.e. happy, this world (the earth) is meant. The world is better (s'reyan) than this world. Thus the Hotar makes the sacrificer go to the celestial world (which is to be understood by S'reyas, i.e., better). The second pada of the verse is): brihaspatih para eta astu, i.e., the (thy) guide be Brihaspati! If the Hotar has made (by repeating this pada) the Brahma his (the sacrificer's) gide, (the sacrifice) being thus provided with the Brahma will not be damaged. (The third pada of the verse is:) atha im avasya vara a prithivyu, i.e., stop him (soma) on the surface of the earth. Vara means the place for sacrificing to the gods (devayajana). (By these words) the Hotar makes him (the Soma) stop (and remain in that place). (The fourth pada is: are s'atrina krinuhisarvavirah, i.e., endowed with all powers drive far off the enemies! (By reading these words) the Hotar turns out the enemy who does injury to the sacrificer, and his adversary, (and) consigns him to the lowest condition.

The Hotar then repeats the triplet: soma yas te mayobhuvah (1, 91, 9, 11 which is addressed to Soma, and is in the Gayatri metre. In this way the Hotar makes the king Soma flourishing when he is being brought (to the sacrificial compound) by means of his own deity (the verse being addressed to Soma himself), and his own metre (his favourite metre being the Gayatri.) (The Hotar repeats :) sarve nandanti yas asa (10, 71, 10) i.e. "all friends rejoice at the arrival of the friend crowned with fame for having remained victor in the learned

discussion (subha) for as their (of his friends) protector from defects, and giver of food, he is fit and ready for providiug them with strength". (Now follows the plantation): Yas-ah i.e., fame, flory, is the king Soma. At his being bought every one rejoices, he who has to gain something (in the shape of Dakshina, the sacrificial reward), as well as he who has not. The king Soma "is the friend who remains victor at the learned discussion of the Brahmans." He is kilbishasprit, "the protector from defects." For he protects him from defects who becomes liable to them. He (that priest) who excels all others (regarding the power of speech and recitation) becomes liable to defects (voice becoming hoarse of the hands flag.) Thence they the sacrificers say to the Hotar: "Do not repeat (if thy intention is only to excel a rival in skill) the mantra (wrong), and likewise (to the Adhvaryu:) do not (in a state of confusion) perform the ceremony (wrong): may they now not do anything wrong, in too great a hurry!" He is "pitushanir" i.e., giver of food, pitu is food, and pitu is the sacrificial reward (dakshina). The sacrificer gives, on account of a Soma sacrifice having been performed for him, (to the priests), a reward. Thus he makes him (the Soma) "the giver of food" (for the priests). The word rajinam means sharpness of senses and (bodily) strength. He who has this knowledge will preserve up to the end of his life the unimpaired use of his senses and strength.

The Hotar repeats: agan deva (4, 53, 7) i.e., May the divine mover Savitar come" with the Ritus (i.e. seasons)! May he make prosperous our household, and bless us with children and nourishment! May he favour us (with gifts) at day and night (always)! May he let us obtain children and wealth! "agan means: he (the Soma) has come and is here by that time (after having been bought). The Ritus (seasons) are the royal brothers of the king Soma just as men have brothers. (By repeating this first pada) the Hotar makes him (the Soma) come with them (his brothers, the Ritus). By the words: 'may he make prosperous" &c., he asks for a blessing. (By repeating the third, pada) "may he favour us at day and night," he asks for a blessing for him (the sacrifice) at day and night. (by the fourth pada:) "may he let us." &c., he (also) asks for a blessing.

The Hotar repeats: ya te dhamani harisha (a, 91, 19). i.e. "may all they qualities which they honour (with prayers and with oblations) become manifest at (this) sacrifice everywhere! Enter, O Soma! (our) houses (the sacrificial hall) as an increaser of property (of cows), as a protector (from evil), as one who gives good children and does not hurt them (in any way)."

The words gayasphana, pratarana, suvirah mean: be an increaser and protector of our cattle. Duryah means the premises (of the sacrificer) which are afraid of the king Soma having arrived. When the Hotar repeats this (last pada of the verse) he does it with a view to propitiate him (Soma). If the Hotar has thus propitiated him (the Soma), he nither kills the children nor the cattle of the sacrificer.

The Hotar concludes with the verse addressed to Varuna: imam dhiyam s'ikshamanasya deva (8, 42, 3) i.e. "O divine Varuna, instruct the pupil in understanding, performance and skill. May we ascend the ship for crossing safely all evil waters and land in safety (on the other shore)." Soma is in the power of the god Varuna, as long as he is tied up (in the cloth), and goes to the places of the pragvams'a. When reciting this verse he thus makes the Soma prosper by means of his own deity (for as liquor he is Varuni), and his own metre. The "pupil" (learner) is he who sacrifices, for he is learning. By the words "instruct in understanding, performance, and skill, "he means, teach, O Varuna, strength (and) knowledge. The "ship" is the sacrifice. The ship is of "Good passage". The black goat-skin is the "good passage". and speech the ship. By means of this verse the sacrificer thus ascends speech (as his ship) and sails in it up to the celestial world.

These eight verses which he repeats, are complete in form. What is complete in form, that is successful in the sacrifice, when the verse repeated alludes to the ceremony which is being performed.

Of these verses he repeats the first and last thrice; this makes twelve (in all). The year consists of twelve months, and Prajapathi is the year. He who has this knowledge succeeds by these verses which reside in Prajapati. By repeating the first and last verses thrice he ties the two end knots of the sacrifice for fastening and tightening it in order to prevent it from slipping down

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ

ಐತರೇಯಬ್ರಾಹ್ಮಣಭಾಷ್ಯಸ್ಯ ತೃತೀಯಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ತೃತೀಯಾಧ್ಯಾಯೇ ತೃತೀಯಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಸೋಮನು ಆತಿಥ್ಯವನ್ನು ಸ್ವೀಕರಿಸುವ ವಿಚಾರ—ಛಂದಸ್ಸುಗಳು ಸೋಮರಾಜನ ಅನುಚರರು—ದೇವತೆಗಳು ಐಶಾನ್ಯದಿಕ್ಕಿನಲ್ಲಿ ಜಯವನ್ನು ಪಡೆದ ವಿಚಾರ—ದೇವತೆಗಳು ಸೋಮದೇವನನ್ನು ತಮ್ಮ ರಾಜನನ್ನಾಗಿ ಆರಿಸಿಕೊಂಡ ವಿಚಾರ.]

---

ಇದುವರೆಗೂ ಸೋಮಪ್ರವಾಹಣ ಸಂಬಂಧವಾದ ಋಕ್ಕುಗಳನ್ನು ವಿವರಿಸಿ ಈಗ ಸೋಮವನ್ನು ಗಾಡಿಯಿಂದ ಇಳಿಸುವ ಸಂದರ್ಭದಲ್ಲಿ ನಡೆಸಬೇಕಾದ ಕ್ರಮವನ್ನು ವಿವರಿಸುವರು—

**ಅನ್ಯತರೋಽನಡ್ವಾನ್ಯುಕ್ತಃ ಸ್ಯಾದನ್ಯತರೋ ವಿಮುಕ್ತೋಽಥ ರಾಜಾನ-
ಮುಪಾವಹರೇಯುಃ ॥**

**ಸೋಮಪ್ರವಹಣೀರ್ಋಚೋ ವಿಧಾಯ ಸೋಮಸ್ಯ ಶಕಟಾದವರೋಹಣಂ ವಿಧತ್ತೇ—ಕ್ರಯದೇಶೇ ಸೋಮಂ ಶಕಟೇ ಪ್ರಕ್ಷಿಪ್ಯ ಪ್ರಾಚೀನವಂಶಸಮೀಪೇ ಸಮಾನೀಯ ಶಕಟಬದ್ಧಯೋರನಡುಹೋರ್ಮಧ್ಯೇ ಕಂಚಿದನಡ್ವಾಹಂ ವಿಮುಚ್ಯೇತರಮನವಮುಚ್ಯ ರಾಜಾನಂ ಶಕಟಾದಧಸ್ತಾದೃತ್ವಿಜ ಉಪಾಹರೇಯುಃ । ಯುಕ್ತಃ ಶಕಟೇ ಬದ್ಧೋ ವಿಮುಕ್ತಃ ಶಕಟಾದ್ವಿಯೋಜಿತಃ ।**

ರಾಜನಾದ ಸೋಮದೇವನನ್ನು ಕ್ರಯಪ್ರದೇಶದಿಂದ ಪ್ರಾಚೀನವಂಶಪ್ರದೇಶಕ್ಕೆ ತಂದ ಗಾಡಿಗೆ ಕಟ್ಟಿರತಕ್ಕ ಎರಡು ಎತ್ತುಗಳಲ್ಲಿ ಒಂದನ್ನು ಮಾತ್ರ ಬಿಚ್ಚಿ ಇನ್ನೊಂದನ್ನು ಬಿಚ್ಚದೆ ಹಾಗೆಯೇ ಬಿಟ್ಟು ಸೋಮನನ್ನು ಋತ್ವಿಗ್ಜನರು ಗಾಡಿಯಿಂದ ಕೆಳಕ್ಕೆ ಇಳುಹಿಸಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗಬೇಕು. ಇದು ವಿಧಿಯು.

**ಯದುಭಯೋರ್ವಿಮುಕ್ತಯೋರುಪಾವಹರೇಯುಃ ಪಿತೃ
ದೇವತ್ಯಂ ರಾಜಾನಂ ಕುರ್ಯುಃ ॥**

**ಉಭಯೋರನಡುಹೋರ್ವಿಮೋಚನೇ ದೋಷಮುಪನ್ಯಸ್ಯತಿ—ರಾಜ್ಞಃ ಸೋಮಸ್ಯ ಪಿತೃಭಿಃ ಸ್ವೀಕೃತತ್ವಾದಯಂ ಸೋಮೋ ದೇವಯೋಗ್ಯೋ ನ ಭವೇತ್ ॥**

ಮೇಲೆ ಹೇಳಿದ ವಿಧಿಯಂತೆ ನಡೆಸದೆ, ಗಾಡಿಗೆ ಕಟ್ಟಿರುವ ಎರಡು ಎತ್ತುಗಳನ್ನೂ ಬಿಚ್ಚಿಬಿಟ್ಟು ಅನಂತರ ಸೋಮನನ್ನು ಉತ್ತರವೇದಿಗೆ ತೆಗೆದುಕೊಂಡುಹೋದರೆ, ಆಗ ಸೋಮವನ್ನು ಪಿತೃದೇವತೆಗಳು ಸ್ವೀಕರಿಸುವರು. ಸೋಮವು ದೇವಯೋಗ್ಯವಾಗಿ ಯಜ್ಞಾರ್ಹವಾಗುವುದಿಲ್ಲ.

ಯದ್ಯುಕ್ತಯೋರಯೋಗಕ್ಷೇಮಃ ಪ್ರಜಾ ವಿಂದೇತ್ತಾಃ ಪ್ರಜಾಃ ಪರಿಪ್ಲವೇರನ್ । ಯೋಽನಡ್ವಾನ್ವಿಮುಕ್ತಸ್ತಚ್ಛಾಲಾಸದಾಂ ಪ್ರಜಾನಾಂ ರೂಪಂ ಯೋ ಯುಕ್ತಸ್ತಚ್ಚಕ್ರಿಯಾಣಾಂ ತೇ ಯೇ ಯುಕ್ತೇಽನ್ಯೇ ವಿಮುಕ್ತೇಽನ್ಯ ಉಪಾವಹರಂತ್ಯುಭಾವೇವ ತೇ ಕ್ಷೇಮಯೋಗೌ ಕಲ್ಪಯಂತಿ ॥

ಉಭಯೋರನಡುಹೋಃ ಶಕಟಯೋಗೇಽಪಿ ದೋಷಮಾಹ—ಅಪ್ರಾಪ್ತಸ್ಯ ಧನಾದೇಃ ಸಂಪಾದನಂ ಯೋಗಃ । ಪ್ರಾಪ್ತಸ್ಯ ರಕ್ಷಣಂ ಕ್ಷೇಮಃ । ಯೋಗಸಹಿತಃ ಕ್ಷೇಮಃ ಯೋಗಕ್ಷೇಮಃ ತದಭಾವಃ ಪ್ರಜಾಃ ಪುತ್ರಾದಿಕಾ ವಿಂದೇಲ್ಲಭೇತ್ಪ್ರಾಪ್ನುಯಾತ್ ॥ ಯೋಽನಡ್ವಾನ್ವಿಮುಕ್ತಸ್ತದೇತಚ್ಛಾಲಾಸದಾಂ ಗೃಹಾವಸ್ಥಿತಾನಾಂ ಪ್ರಜಾನಾಂ ಪುತ್ರಾದೀನಾಂ ರೂಪಂ ಯೋಽನಡ್ವಾನಥಸ್ತಾಚ್ಛಕಟೇ ಯುಕ್ತಸ್ತಚ್ಚ ಕ್ರಿಯಾಣಾಂ ಲೌಕಿಕಾನಾಂ ವೈದಿಕಾನಾಂ ಚ ರೂಪಂ । ಯದ್ವಾ ಚಕ್ರಮಸ್ಯಾಸ್ತೀತಿ ಚಕ್ರಿ ಶಕಟಂ ತೇನ ಚಕ್ರಿಣಾ ಯಾಂತೀತಿ ಶಕಟಮಾರುಹ್ಯ ಗಚ್ಛಂತ್ಯಃ ಪ್ರಜಾಶ್ಚಕ್ರಿಯಾಸ್ತಾಸಾಂರೂಪಂ ॥ ಏವಂ ಸತಿ ತೇ ಯೇ ಯಜಮಾನಾನಾಂ ಮಧ್ಯೇ ಯೇ ಕೇಚಿದ್ಬುದ್ಧಿಮಂತೋ ಯಜಮಾನಾ ಅನ್ಯೇ ಯುಕ್ತ ಏಕಸ್ಮಿನ್ನನಡುಹಿ ಶಕಟಬದ್ಧೇಽನ್ಯೇ ವಿಮುಕ್ತ ಇತರಸ್ಮಿನ್ನನಡುಹಿ ಶಕಟಾದ್ವಿಯೋಜಿತೇ ಸತಿ ಸೋಮಮುಪಾವಹರಂತಿ ತೇ ಬುದ್ಧಿಮಂತ ಉಭಾವೇವ ಕ್ಷೇಮಂ ಯೋಗಂ ಚ ಸಂಪಾದಯಂತಿ । ತಮಿಮಮರ್ಥಂ ತೈತ್ತರೀಯಾಶ್ಚಾಽಮನಂತಿ—“ ಯದುಭೌ ವಿಮುಚ್ಯಾಽಽತಿಥ್ಯಂ ಗೃಹ್ಣೀಯಾದ್ಯಜ್ಞಂ ವಿಚ್ಛಿಂದ್ಯಾದುಭಾವವಿಮುಚ್ಯ ಯಥಾನಾಗತಾಯಾಽಽತಿಥ್ಯಂ ಕ್ರಿಯತೇ ತಾದೃಗೇವ ತದ್ವಿಮುಕ್ತೋಽನ್ಯೋಽನಡ್ವಾನ್ಭವತ್ಯವಿಮುಕ್ತೋಽನ್ಯೋಽನಡ್ವಾನ್ಭವತ್ಯವಿಮುಕ್ತೋಽನ್ಯೋಽಥಾಽಽತಿಥ್ಯಂ ಗೃಹ್ಣಾತಿ ಯಜ್ಞಸ್ಯ ಸಂತತ್ಯೈ” ಇತಿ ॥ ನನ್ವೇಕತ್ರ ಸೋಮಾವರೋಹಣ ಕಾಲ ಉಚ್ಯತ ಇತರತ್ರಾಽಽತಿಥ್ಯೇಷ್ಟಿಕಾಲ ಇತಿ ನ ಸಮಾನವಿಷಯತ್ವಮಿತಿ ಚೇನ್ನ । ಉಭಯೋರೇಕಕಾಲೀನತ್ವಾತ್ ॥

ಒಂದುವೇಳೆ ಎರಡು ಎತ್ತುಗಳನ್ನೂ ಗಾಡಿಯಿಂದ ಬಿಚ್ಚದೆ ಹಾಗೆಯೇ ಕಟ್ಟಿರುವಾಗ ಸೋಮವನ್ನು ಇಳುಹಿಸಿ ತೆಗೆದುಕೊಂಡು ಹೋದರೆ ಆಗ ಧನಾದಿಗಳನ್ನು ಸಂಪಾದಿಸುವ ಯೋಗ್ಯವೂ (ಅದೃಷ್ಟವೂ) ಸಂಪಾದಿಸಿದ್ದನ್ನು ಕಳೆದುಕೊಳ್ಳದಂತೆ ಕಾಪಾಡಿ ಇಟ್ಟುಕೊಳ್ಳುವ ಯೋಗವೂ ನಾಶವಾಗುವುದಲ್ಲದೆ ಯಜಮಾನನ ಪುತ್ರಾದಿಗಳೂ ನಾನಾಕಡೆಗೆ ಹೊರಟುಹೋಗುವ ಸಂಭವವೂ ಉಂಟಾಗುವುದು. ಗಾಡಿಗೆ ಕಟ್ಟಿರುವ ಎರಡು ಎತ್ತುಗಳಲ್ಲಿ ಗಾಡಿಯಿಂದ ಬಿಚ್ಚಿರುವ ಒಂದು ಎತ್ತು ಯಜ್ಞಶಾಲೆ ಮತ್ತು ಗೃಹದಲ್ಲಿ ಇರುವ ಪುತ್ರಾದಿಗಳ ರೂಪವಾಗಿರುವುದು. ಗಾಡಿಯಿಂದ ಬಿಚ್ಚದೇ ಇರುವ ಎತ್ತು ಯಜ್ಞಶಾಲೆಯಲ್ಲಿ ನಡೆಯುತ್ತಿರುವ ಲೌಕಿಕ ಮತ್ತು ವೈದಿಕಕರ್ಮಗಳ ರೂಪವಾಗಿರುವುದು. ಇಲ್ಲಿ ಚಕ್ರಿ ಎಂಬ ಶಬ್ದಕ್ಕೆ ಚಕ್ರಗಳುಳ್ಳ ಗಾಡಿ ಎಂದರ್ಥವು. ಆ ಗಾಡಿಯಲ್ಲಿ ಕುಳಿತು ಪ್ರಯಾಣಮಾಡುವ ಯಜಮಾನನ ಪ್ರಜಾರೂಪರಾದ ಪುತ್ರಪೌತ್ರಾದಿಗಳಿಗೆ ಚಕ್ರಿಯಾಃ ಎಂದು ಹೆಸರು ಯಜ್ಞಮಾಡುವ ಯಜಮಾನರಲ್ಲಿ ಬುದ್ಧಿವಂತರಾದವರು ಸೋಮಾವರೋಹಣಕಾಲದಲ್ಲಿ ಒಂದು ಎತ್ತನ್ನು ಬಿಚ್ಚಿ ಮತ್ತೊಂದನ್ನು ಹಾಗೆಯೇ ಬಿಟ್ಟು, ಸೋಮಾವರೋಹಣವನ್ನು ಮಾಡುವುದರಿಂದ ಹಿಂದೆ ಹೇಳಿದಂತೆ ಧನಸಂಪಾದನೆ ಮತ್ತು ಅದರ ಯೋಗಕ್ಷೇಮ ಇವೆರಡನ್ನೂ ಗಳಿಸುವರು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಹೇಳಿರುವುದು ಗಮನಾರ್ಹವಾಗಿದೆ—

ಯದುಭೌ ವಿಮುಚ್ಯಾತಿಥ್ಯಂ ಗೃಹ್ಣೀಯಾದ್ಯಜ್ಞಂ ವಿಚ್ಛಿಂದ್ಯಾದ್ಯದುಭಾವವಿಮುಚ್ಯ ಯಥಾನಾಗತಾಯಾತಿಥ್ಯಂ ಕ್ರಿಯತೇ ತಾದೃಗೇವ ತದ್ವಿಮುಕ್ತೋಽನ್ಯೋಽನಡ್ವಾನ್ಭವತ್ಯವಿಮುಕ್ತೋಽನ್ಯೋಽಥಾತಿಥ್ಯಂ ಗೃಹ್ಣಾತಿ ಯಜ್ಞಸ್ಯ ಸಂತತ್ಯೈ ॥

(ತೈ. ಸಂ. ೬-೨-೧-೧)

ಸೋಮವನ್ನು ತುಂಬಿ ತಂದ ಗಾಡಿಗೆ ಕಟ್ಟಿರುವ ಎರಡು ಎತ್ತುಗಳನ್ನೂ ಬಿಚ್ಚಿ ಸೋಮವನ್ನು ಇಳುಹಿದರೆ ಸೋಮ ರಾಜನು ಆತಿಥ್ಯವನ್ನು ಸ್ವೀಕರಿಸುವುದಿಲ್ಲ. ಮತ್ತು ಹಾಗೆ ಮಾಡುವುದರಿಂದ ಯಜ್ಞವಿಚ್ಛಿತ್ತಿಯಾಗಿ ಯಜ್ಞವು ನೆರವೇರದೆ ಮಧ್ಯದಲ್ಲಿಯೇ ನಿಂತುಹೋಗುವುದು. ಎರಡು ಎತ್ತುಗಳನ್ನು ಬಿಚ್ಚದೆ ಗಾಡಿಯಲ್ಲಿಯೇ ಕಟ್ಟಿ ಹಾಗೆಯೇ ನಿಲ್ಲಿಸಿದ್ದರೆ ಸೋಮ ರಾಜನು ಅತಿಥಿಸತ್ಕಾರಕ್ಕಾಗಿ ಮನೆಗೆ ಬಂದಂತೆಯೇ ಆಗುವುದಿಲ್ಲ. ಹಾಗೆಯೇ ಹೊರಟುಹೋದಂತೆ ಆಗುವುದು. ಆದ್ದರಿಂದ ಎರಡು ಎತ್ತುಗಳನ್ನು ಬಿಚ್ಚದೆ ಕಟ್ಟಿರುವುದೂ ಸರಿಯಲ್ಲ. ಹಾಗಾದರೆ ಯಜ್ಞವು ಸಾಂಗವಾಗಿ ನೆರವೇರುವುದಕ್ಕೆ ಏನು ಮಾಡಬೇಕು? ಎಂದರೆ ಗಾಡಿಯಿಂದ ಒಂದು ಎತ್ತನ್ನು ಬಿಚ್ಚಬೇಕು. ಇನ್ನೊಂದು ಎತ್ತನ್ನು ಬಿಚ್ಚದೆ ಗಾಡಿಗೆ ಕಟ್ಟಿಯೇ ಇರಬೇಕು. ಹೀಗೆ ಮಾಡಿದರೆ ಸೋಮರಾಜನು ಯಜ್ಞಭೂಮಿಗೆ ಬಂದು ಯಜಮಾನನ ಆತಿಥ್ಯವನ್ನು ಸ್ವೀಕರಿಸುವನು. ಯಜ್ಞವೂ ಯಾವ ವಿಚ್ಛಿತ್ತಿಯೂ ಇಲ್ಲದೆ ಸಮಾಪ್ತಿಯನ್ನೈದುವುದು ಎಂದಭಿಪ್ರಾಯವು.

ಸೋಮಾವರೋಹಣಕರ್ಮವನ್ನು (ಸೋಮವನ್ನು ಗಾಡಿಯಿಂದ ಕೆಳಕ್ಕೆ ಇಳಿಸುವ ಕರ್ಮ) ಈಶಾನ್ಯದಿಕ್ಕಿನಲ್ಲಿ ಮಾಡಬೇಕೆಂಬ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ಉದಾಹರಿಸಿ ವಿವರಿಸಿರುವರು.

ದೇವಾಸುರಾ ವಾ ಏಷು ಲೋಕೇಷು ಸಮಯತಂತ ತ ಏತಸ್ಯಾಂ ಪ್ರಾಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತೇ ದಕ್ಷಿಣಸ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತೇ ಪ್ರತೀಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತ ಉದೀಚ್ಯಾಂ ದಿಶ್ಯಯತಂತ ತಾಂಸ್ತತೋಽಸುರಾ ಅಜಯಂಸ್ತ ಉದೀಚ್ಯಾಂ ಪ್ರಾಚ್ಯಾಂ ದಿಶ್ಯಯತಂತ ತೇ ತತೋ ನ ಪರಾಜಯಂತ ಸೈಷಾ ದಿಗಪರಾಜಿತಾ ತಸ್ಮಾದೇತಸ್ಯಾಂ ದಿಶಿ ಯತೇತ ವಾ ಯಾತಯೇದ್ವೇಶ್ವರೋ ಹಾನೃಣಾಕರ್ತೋಃ ।

ಅಥಾಖ್ಯಾಯಿಕಾಮುಖೇನ ಸೋಮೋಪಾವಹರಣಸ್ಯೈಶಾನೀಂ ದಿಶಂ ವಿಧತ್ತೇ— ಸಮಯತಂತ ಸಂಗ್ರಾಮಮಕುರ್ವನ್ । ಪ್ರಾಚ್ಯಾದಿಷು ಚತಸೃಷು ದಿಕ್ಷು ದೇವಾನಾಂ ಪರಾಜಯ ಆಸೀತ್ । ಐಶಾನ್ಯಾಂ ದಿಶಿ ನಾಸ್ತಿ ಪರಾಜಯಃ । ತಸ್ಮಾತ್ತಸ್ಯಾಂ ದಿಶಿ ಸೋಮೋಪಾವಹರಣಾಯ ಯತೇತ ಪ್ರಯತ್ನಂ ಕುರ್ಯಾದ್ವಾ ಯಾತಯೇತ್ಪ್ರಯತ್ನಂ ಕಾರಯೇದ್ವಾ ॥ ಏವಮೇವ ವೈಕಲ್ಯರಾಹಿತ್ಯಂ ಕರ್ತುಂ ಪ್ರಭುರ್ಭವತಿ । ಅಥವಾ ಸೋಮಸ್ಯ ರಾಜ್ಞೋ ವಿಜಯಿತ್ವೇನೋತ್ತರತ್ರ ಪ್ರಶಂಸಾಂ ಕರ್ತುಂ ದೇವಾಸುರಾವಾ ಇತ್ಯಾದಿನಾ ಲೌಕಿಕಸ್ಯ ರಾಜ್ಞ ಐಶಾನ್ಯಾಂ ದಿಶಿ ಸ್ವಕೀಯಭೃತ್ಯಪ್ರೇರಣಂ ಪ್ರತಿಪಾದಿತಂ ॥

ಹಿಂದೆ ಈ ಲೋಕದಲ್ಲಿ ದೇವತೆಗಳೂ ಅಸುರರೂ ಯುದ್ಧಮಾಡುತ್ತಿದ್ದರು. ಅವರು ಪೂರ್ವದಿಕ್ಕಿನಲ್ಲಿ ಯುದ ಮಾಡಿದರು. ಆ ಯುದ್ಧದಲ್ಲಿ ಅಸುರರು ದೇವತೆಗಳನ್ನು ಸೋಲಿಸಿದರು; ಅನಂತರ ದಕ್ಷಿಣದಿಕ್ಕಿನಲ್ಲಿ ಯುದ್ಧಮಾಡಿದರು. ಅಲ್ಲಿಯೂ ಅಸುರರೇ ಗೆದ್ದರು; ಅನಂತರ ಪಶ್ಚಿಮದಿಕ್ಕಿನಲ್ಲಿ ಯುದ್ಧಮಾಡಿದರು ಅಲ್ಲಿಯೂ ಅಸುರರಿಗೇ ಜಯವಾಯಿತು. ಅನಂತರ ಉತ್ತರದಿಕ್ಕಿನಲ್ಲಿ ಯುದ್ಧಮಾಡಿದರು, ಅಲ್ಲಿಯೂ ಅಸುರರು ದೇವತೆಗಳನ್ನು ಸೋಲಿಸಿ ಜಯಶಾಲಿಗಳಾದರು; ಬಳಿಕ ಅವರು ಉತ್ತರದಿಕ್ಕಿಗೂ ಪೂರ್ವದಿಕ್ಕಿಗೂ ಮಧ್ಯದಲ್ಲಿರುವ ಐಶಾನ್ಯದಿಕ್ಕಿನಲ್ಲಿ ಯುದ್ಧಮಾಡಿದರು. ಅಲ್ಲಿ ದೇವತೆಗಳಿಗೆ ಸೋಲುಂಟಾಗಲಿಲ್ಲ ಜಯವೇ ಆಯಿತು. ಆದುದರಿಂದ (ದೇವತೆಗಳಿಗೆ ಸೋಲಾಗದಿದ್ದರಿಂದ) ಐಶಾನ್ಯದಿಕ್ಕಿಗೆ ಅಪರಾಜಿತಾ ಎಂದು ಹೆಸರಾಯಿತು. ಆದುದರಿಂದ ಯಾವ ಒಳ್ಳೆಯ ಕಾರ್ಯವನ್ನು ಮಾಡಬೇಕಾದರೂ ಅದನ್ನು ಐಶಾನ್ಯದಿಕ್ಕಿನಲ್ಲಿಯೇ ಮಾಡಬೇಕು. ಅಥವಾ ಮಾಡಲು ಪ್ರಯತ್ನಿಸಬೇಕು. ಹೀಗೆ ಮಾಡುವುದರಿಂದ ಯಜಮಾನನು ತನ್ನ ಋಣವನ್ನು ಪರಿಹಾರ ಮಾಡಿಕೊಂಡು ಅದರಿಂದ ವಿಮುಕ್ತನಾಗುವನು.

[ಇಲ್ಲಿ ಋಣವೆಂದರೇನು? ಅದರ ಪರಿಹಾರವು ಯಾವುದು? ಎಂಬ ವಿಷಯದಲ್ಲಿ ತೈತ್ತಿರೀಯಸಂಹಿತೆಯ ಸ್ಪಷ್ಟವಾದ ವಿವರಣೆ ಇದೆ—

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ||**

(ತೈ. ಸಂ. ೬-೩-೧೦-೫)

ಎಂದರೆ ದ್ವಿಜನಾದವನು ಹುಟ್ಟುವಾಗಲೇ ಋಷಿಋಣ, ದೇವಋಣ, ಪಿತೃಋಣ ಎಂಬ ಮೂರು ವಿಧವಾದ ಋಣಗಳಿಂದ ಸಹಿತನಾಗಿಯೇ ಹುಟ್ಟುವನು. ಈ ಋಣಗಳು ತೀರಬೇಕಾದರೆ—ಉಪನಯನಾನಂತರ ಗುರುಕುಲದಲ್ಲಿ ಬ್ರಹ್ಮಚರ್ಯಾಶ್ರಮದಿಂದ ವೇದಾಧ್ಯಯನವನ್ನು ಮಾಡಿದರೆ ಋಷಿಋಣವು ತೀರುವುದು; ಅನಂತರ ವಿವಾಹವನ್ನು ಮಾಡಿಕೊಂಡು ಗಾರ್ಹಸ್ಥ್ಯ ಆಶ್ರಮವನ್ನು ಕೈಗೊಂಡು ಯಜ್ಞಾದಿಗಳನ್ನು ಮಾಡಿ ದೇವತೆಗಳನ್ನು ಆರಾಧಿಸುವುದರಿಂದ ದೇವಋಣವು ತೀರುವುದು; ವಿವಾಹಿತಸ್ತ್ರೀಯಲ್ಲಿ ಧರ್ಮಪ್ರಜೋತ್ಪಾದನೆಗಾಗಿ ಪುತ್ರಸಂತಾನವನ್ನು ಪಡೆಯುವುದರಿಂದ ಪಿತೃಋಣವು ತೀರುವುದು. ಈ ವಿಧವಾದ ಮೂರು ಋಣಗಳಿಂದ (ಕರ್ತವ್ಯಕರ್ಮಗಳಿಂದ) ಯಜಮಾನನು ಮುಕ್ತನಾಗುವನೆಂದು ಇಲ್ಲಿ ಹೇಳಿದೆ.]

ಈಗ ಸೋಮರಾಜನ ಜಯಕ್ಕೆ ಕಾರಣವನ್ನು ಹೇಳುವರು—

**ತೇ ದೇವಾ ಅಬ್ರುವನ್ನರಾಜತಯಾ ವೈ ನೋ ಜಯಂತಿ ರಾಜಾನಂ ಕರವಾಮಹಾ ಇತಿ ತಥೇತಿ ತೇ ಸೋಮಂ ರಾಜಾನಮಕುರ್ವಂಸ್ತೇ ಸೋಮೇನ ರಾಜ್ಞಾ ಸರ್ವಾ ದಿಶೋಽಜಯನ್ನೇಷ ವೈ ಸೋಮರಾಜಾ ಯೋ ಯಜತೇ ಪ್ರಾಚಿ ತಿಷ್ಠದ್ಯಾದದತಿ ತೇನ ಪ್ರಾಚೀಂ ದಿಶಂ ಜಯತಿ ತಂ ದಕ್ಷಿಣಾ ಪರಿವಹಂತಿ ತೇನ ದಕ್ಷಿಣಾಂ ದಿಶಂ ಜಯತಿ ತಂ ಪ್ರತ್ಯಂಚಮಾವರ್ತಯಂತಿ ತೇ ಪ್ರತೀಚೀಂ ದಿಶಂ ತಮುದೀಚಸ್ತಿಷ್ಠತ ಉಪಾವ-**

ಹರಂತಿ ತೇನೋದೀಚೀಂ ದಿಶಂ ಜಯತಿ ಸೋಮೇನ ರಾಜ್ಞಾ
ಸರ್ವಾ ದಿಶೋ ಜಯತಿ ಯ ಏವಂ ವೇದ ॥

ಇದಾನೀಂ ಸೋಮಸ್ಯ ಜಯಹೇತುತ್ವಂ ದರ್ಶಯತಿ—ತೇ ದೇವಾಃ ಪರಸ್ಪರಮೇವಮಬ್ರುವನ್; ಅಸ್ಮಾಕಂ ರಾಜಾಭಾವಾತ್ ಪ್ರಾಚ್ಯಾದಿದಿಕ್ಷು ಪರಾಜಯ ಆಸೀದಸುರಾಣಾಂ ಜಯ ಆಸೀತ್ ॥ ತತೋ ರಾಜಾನಂ ಸಂಪಾದಯಾಮ ಇತಿ ವಿಚಾರ್ಯ ಸೋಮಮೇವ ರಾಜಾನಂ ಕೃತ್ವಾ ಪ್ರಾಚ್ಯಾದಿದಿಕ್ಷು ಜಯಂ ಪ್ರಾಪ್ತಾಃ । ಏವಂ ಸತಿ ಯೋ ಯಜಮಾನಃ ಸೋಮಯಾಗಂ ಕರೋತಿ, ಏಷ ಏವ ಸೋಮರಾಜಾ । ಸೋಮೋ ರಾಜಾ ಯಸ್ಯೇತಿ ಬಹುವ್ರೀಹಿಃ । ಅತಃ ಸೋಮಾಖ್ಯಸ್ವಾಮಿನಃ ಪ್ರಚಾರಾದಯಂ ಯಜಮಾನಃ ಸರ್ವತ್ರ ಜಯತಿ । ತತ್ಕಥಮಿತಿ ಚೇತ್ತದುಚ್ಯತೇ । ಸೋಮವಾಹನಾರ್ಥೇ ಶಕಟೇ ಪ್ರಾಚಿ ತಿಷ್ಠತಿ ಪ್ರಾಙ್ಮುಖೇ ಅವಸ್ಥಿತೇ ಸತಿ ಋತ್ವಿಜಃ ತತ್ರ ಸೋಮಮಾದಧತಿ ಪ್ರಕ್ಷಿಪಂತಿ । ತೇನ ಸೋಮಸಂಬಂಧಿಶಕಟಸ್ಯ ಪ್ರಾಙ್ಮುಖತ್ವೇನ ಯಜಮಾನಃ ಪ್ರಾಚ್ಯಾಂ ದಿಶಿ ಜಯಂ ಪ್ರಾಪ್ನೋತಿ ॥ ಶಕಟಸ್ಥಿತಂ ಸೋಮಂ ದಕ್ಷಿಣಾ ಪರಿವಹಂತಿ ಶಕಟಂ ದಕ್ಷಿಣಾಭಿಮುಖತ್ವೇನ ಪರ್ಯಾವೃತ್ಯ ವಹಂತಿ ತೇನ ದಕ್ಷಿಣಸ್ಯಾಂ ದಿಶಿ ಜಯಃ ॥ ತಮುದೀಚಸ್ತಿಷ್ಠತ ಉದಙ್ಮುಖತ್ವೇನಾವಸ್ಥಿತಾಚ್ಛಕಟಾತ್ತಂ ಸೋಮಮುಪಾವಹರಂತಿ ತೇನೋದಙ್ಮುಖತ್ವೇನೋದೀಚ್ಯಾಂ ದಿಶಿ ಜಯಃ । ಏವಂ ಸೋಮರಾಜಪ್ರಸಾದಾದ್ಯಜಮಾನಃ ಸರ್ವಾ ದಿಶೋ ಜಯತಿ । ಅತ್ರಾರ್ಥವಾದೇನ ವಿಧಯ ಉನ್ನೇಯಾಃ ಪ್ರಾಙ್ಮುಖೇ ಶಕಟೇ ಸೋಮಮಾದಧ್ಯುಃ । ತತೋ ದಕ್ಷಿಣಾಭಿಮುಖತ್ವೇನ ಪರಿವಹೇಯುಃ । ತತಃ ಪ್ರತ್ಯಙ್ಮುಖತ್ವೇನಾವರ್ತಯೇಯುಃ । ತತ ಉದಙ್ಮುಖಾಚ್ಛಕಟಾತ್ಸೋಮಮುಪಾವಹೇಯುರಿತಿ ॥ ಏತತ್ಸರ್ವಮಭಿಪ್ರೇತ್ಯಾಽಽಹ ಆಪಸ್ತಂಬಃ—'ಸಂಜಗ್ರಾಹ ಪ್ರತ್ಯವಸ್ತನುವಸ್ಯತ ಇತಿ ಪ್ರಾಂಚೋಽಭಿಪ್ರವಾಯ ದಕ್ಷಿಣಮಾವರ್ತತ ಇತ್ಯಗ್ರೇಣ ಪ್ರಾಗ್ವಂಶಂ ಪ್ರಾಗೀಷಮುದಗೀಷಂ ವಾ ಶಕಟಮವಸ್ಥಾಪ್ಯ' ಇತಿ ॥ ವೇದನಂ ಪ್ರಶಂಸತಿ- ಅತ್ರ ಶಬ್ದಾದೇವ ಶ್ರುತಸ್ಯಾಪಿ ಸರ್ವಾದಿಶೋಜಯತೀತಿ ವಾಕ್ಯಸ್ಯ ದ್ವಿರಾವೃತ್ತಿಃ ಕರ್ತವ್ಯಾ ॥

ದೇವತೆಗಳು ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು —ನಮಗೆ ಯುದ್ಧಾದಿಗಳಲ್ಲಿ ಮುಂದಾಳುತ್ವವನ್ನು ವಹಿಸಿ ಜಯವನ್ನು ದೊರಕಿಸಬಲ್ಲ ರಾಜನಿಲ್ಲ. ಆದುದರಿಂದಲೇ ಪೂರ್ವಾದಿದಿಕ್ಕುಗಳಲ್ಲಿ ನಮಗೆ ಪರಾಜಯವುಂಟಾಯಿತು. ಆದುದರಿಂದ ಒಬ್ಬ ರಾಜನನ್ನು ಗೊತ್ತುಮಾಡಿಕೊಳ್ಳೋಣ ಎಂದು ನಿಶ್ಚಯಿಸಿ ಸೋಮದೇವನನ್ನು ತಮಗೆ ರಾಜನಾಗಿರುವಂತೆ ಆರಿಸಿಕೊಂಡರು. ಅದರಿಂದ ದೇವತೆಗಳಿಗೆ ಪೂರ್ವಾದಿದಿಕ್ಕುಗಳಲ್ಲಿ ಜಯವು ಲಭಿಸಿತು. ಹೀಗಿರುವುದರಿಂದ ಯಾವ ಯಜಮಾನನು ಸೋಮಯಾಗವನ್ನು ಮಾಡುವನೋ ಅವನಿಗೆ ಸೋಮನೇ ರಾಜನು. ಈ ಸೋಮರಾಜನ ಪ್ರಭಾವದಿಂದ ಯಜಮಾನನು ಎಲ್ಲಾ ಕಡೆಗಳಲ್ಲಿಯೂ ಜಯವನ್ನೇ ಪಡೆಯುವನು. ಅದು ಹೇಗೆಂದರೆ—ಸೋಮವನ್ನು ಗಾಡಿಯಲ್ಲಿ ತರುವಾಗ ಋತ್ವಿಜರು ಗಾಡಿಯನ್ನು ಪೂರ್ವದಿಕ್ಕಿಗೆ ಅಭಿಮುಖವಾಗಿ ನಿಲ್ಲಿಸಿ ಅದರಲ್ಲಿ ಸೋಮವನ್ನು ಇಡುವರು. ಪೂರ್ವಾಭಿಮುಖವಾಗಿರುವ ಗಾಡಿಯಲ್ಲಿ ಸೋಮನಿರುವುದರಿಂದ ಯಜಮಾನನು ಪೂರ್ವದಿಕ್ಕಿನಲ್ಲಿ ಜಯವನ್ನು ಪಡೆಯುವನು: ಅನಂತರ ಸೋಮವನ್ನು ತರುವಾಗ ಸೋಮವಿರುವ ಗಾಡಿಯನ್ನು ದಕ್ಷಿಣಾಭಿಮುಖವಾಗಿ ತಿರುಗಿಸುವರು. ಆಗ ಸೋಮನು ದಕ್ಷಿಣಾಭಿಮುಖನಾಗಿರು

ವುದರಿಂದ ಯಜಮಾನನಿಗೆ ದಕ್ಷಿಣದಿಕ್ಕಿನಲ್ಲಿಯೂ ಜಯವು ಲಭಿಸುವುದು; ಅನಂತರ ಆ ಗಾಡಿಯನ್ನು ಉತ್ತರದಿಕ್ಕಿಗೆ ತಿರುಗಿಸುವುದರಿಂದ ಉತ್ತರದಿಕ್ಕಿನಲ್ಲಿಯೂ ಜಯವು ಲಭಿಸುವುದು; ಅನಂತರ ಆ ಗಾಡಿಯು ಉತ್ತರ ಮತ್ತು ಪೂರ್ವದಿಕ್ಕುಗಳ ಮಧ್ಯದಲ್ಲಿ ಬಂದು ನಿಂತಾಗ ಅಲ್ಲಿಂದ (ಐಶಾನ್ಯದಿಕ್ಕಿನಿಂದ) ಸೋಮವನ್ನು ಗಾಡಿಯಿಂದ ಇಳುಹಿಸಿ ಉತ್ತರವೇದಿಗೆ ಒಯ್ಯುವರು. ಎಂದರೆ ಪ್ರಾಚೀನವಂಶದ ಪಶ್ಚಿಮದಿಕ್ಕಿನಲ್ಲಿ ಬಿಟ್ಟಿದ್ದ ಗಾಡಿಯನ್ನು ಯಜ್ಞಶಾಲೆಗೆ ಪೂರ್ವದಿಕ್ಕಿನಲ್ಲಿರುವ ಉತ್ತರವೇದಿಗೆ ತರುವುದಕ್ಕಾಗಿ ಪೂರ್ವಾಭಿಮುಖವಾಗಿ ತಿರುಗಿಸಿ ಅನಂತರ ಯಜ್ಞಶಾಲೆಯನ್ನು ಬಳಸಿ ಬರುವಾಗ ದಕ್ಷಿಣದಿಕ್ಕಿಗೂ ಅನಂತರ ಪಶ್ಚಿಮದಿಕ್ಕಿಗೂ ಅನಂತರ ಉತ್ತರದಿಕ್ಕಿಗೂ ತಂದು ಐಶಾನ್ಯದಿಕ್ಕಿಗೂ ಬಂದಾಗ ಸೋಮವನ್ನು ಗಾಡಿಯಿಂದ ಇಳಿಸುವರು ಎಂದಭಿಪ್ರಾಯವು. ಈ ವಿಷಯವನ್ನು ಆಪಸ್ತಂಬಮಹರ್ಷಿಗಳು—**ಸಂಜಗ್ರಾಹ ಪ್ರತ್ಯವಸ್ತನುವಸ್ಯತ ಇತಿ ಪ್ರಾಂಚೋಽಭಿಪ್ರವಾಯ ದಕ್ಷಿಣಮಾವರ್ತತ ಇತ್ಯಗ್ರೇಣ ಪ್ರಾಗ್ವಂಶಂ ಪ್ರಾಗೀಷಮುದಗೀಷಂ ವಾ ಶಕಟಮವಸ್ಥಾಪ್ಯ** ಎಂಬ ವಾಕ್ಯದಿಂದ ವಿವರಿಸಿರುವರು. ಈ ವಿಷಯವನ್ನು ತಿಳಿದವನು ಎಲ್ಲಾ ದಿಕ್ಕುಗಳಲ್ಲಿಯೂ ಜಯವನ್ನು ಪಡೆಯುವನು.

## *English Translation*

One of the bullocks (which carry the cart on which the king Soma is seated) is to remain yoked, the other to be unyoked. Then they should take down (from the cart) the king Soma. Were they to take him down when both are let loose, they would bring him in to the power of the manes (pitarah). Would they do so, when both are still yoked (to the cart), the sacrificer could not keep what he is possessed of, nor increase it; should he have any children, they would be scattered (everywhere, and consequently be lost for him). The bullock which is let loose, represents the children who are in the house, that one which remains yoked, the actions (ceremonies, and worldly pursuits). Those sacrificers who take the Soma down, whilst one of the bullock is yoked and the other let loose, avail themselves of both actions, of acquiring property, and keeping what they have acquired.

The Devas and Asuras were fighting in these worlds. They fought in the eastern direction; there the Asuras defeated the Devas. They then fought in the southern direction, the Asuras defeated the Devas again. They fought in the northern direction, the Asuras defeated the Devas again. They fought in the north-eastern direction; there the Devas did not sustain defeat. The direction is aparajita, i.e., unconquerable. Thence one should do work in this (north-eastern) direction, and have it done there; for such one alone is able to clear off his debts.

The Devas said, it is on account of our having no king, that the Asuras defeat us. Let us elect a king. All consented. They elected Soma their king. Headed by the king Soma, they were victorious in all directions. He who brings

the sacrifice is the king Soma. The Soma faces the eastern direction, when the priests put him (on the cart). By this means the sacrificer conquers the eastern direction. The priests turn the cart round in the southern direction. By this means he conquers the southern direction. They turn the cart towards the west; by this means he conquers the western direction. When the cart stands in the northern direction, they take (the Soma) off. By this means he conquers the northern direction. He who has this knowledge conquers all directions·

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತೃತೀಯಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ತೃತೀಯಾಧ್ಯಾಯೇ ಚತುರ್ಥಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಆತಿಥ್ಯೇಷ್ಟಿಯ ಮುಂದಿನ ಕಾರ್ಯಕಲಾಪಗಳು_ಆತಿಥ್ಯೇಷ್ಟಿಯ ಮಧ್ಯದಲ್ಲಿ ಅಗ್ನಿಮಥನವನ್ನು ಮಾಡಬೇಕೆಂಬ ವಿಷಯ_ಅಗ್ನಿಯು ದೇವತೆಗಳ ಪಶುವು]



ಹವಿರಾತಿಥ್ಯಂ ನಿರುಪ್ಯತೇ ಸೋಮೇ ರಾಜನ್ಯಾಗತೇ ।

ಸೋಮೋಪಾವಹರಣಂ ವಿಧಾಯಾತಿಥ್ಯೇಷ್ಟಿರೂಪಂ ಕರ್ಮವಿಧತ್ತೇ—ಪ್ರಾಚೀನವಂಶಸಮೀಪಂ ಸೋಮೇ ರಾಜನಿ ಸಮಾಗತೇ ಸತಿ ತಸ್ಯಾತಿಥಿರೂಪತ್ವಾತ್ತದೀಯಮಾತಿಥ್ಯಾಖ್ಯಕರ್ಮಸಂಬಂಧಿ ಹವಿರ್ನಿರ್ವಪೇತ್ ॥ ಯದ್ಯಪ್ಯಸ್ಯ ಹವಿಷೋಽತಿಥಿರ್ದೇವತಾ ನ ಭವತಿ ವಿಷ್ಣುದೇವತಾಯಾ ವಕ್ಷ್ಯಮಾಣತ್ವಾತ್ತಥಾಪಿ ಸೋಮಸ್ಯಾತಿಥಿರೂಪಸ್ಯೋಪಚಾರಾಯ ಕ್ರಿಯಮಾಣತ್ವಾದಾತಿಥ್ಯಮಿತಿ ಕರ್ಮನಾಮ ಯುಕ್ತಂ ॥

ಪ್ರಾಚೀನವಂಶಗೃಹದ ಸಮೀಪಕ್ಕೆ ಸೋಮವನ್ನು ತಂದನಂತರ, ಸೋಮರಾಜನ ಅತಿಥಿಸತ್ಕಾರರೂಪವಾದ ಕರ್ಮ ಮಾಡಲು ಪ್ರಾರಂಭಿಸಿ ಆ ಇಷ್ಟಿಯಲ್ಲಿ ಮಾಡುವ ಹವಿಸ್ಸಿನ ಹೋಮವಿಧಾನವನ್ನು ಹೇಳುವರು. ಈ ಇಷ್ಟಿಯಲ್ಲಿ ಮಾಡುವ ಹವಿರ್ಹೋಮಕ್ಕೆ ಅತಿಥಿಯಾದ ಸೋಮನು ದೇವತೆಯಲ್ಲ, ವಿಷ್ಣುವು ದೇವತೆಯು. ಆದರೂ ಅತಿಥಿಯಾದ ಸೋಮರಾಜನ ಸತ್ಕಾರಕ್ಕಾಗಿ ಈ ಇಷ್ಟಿಯು ನಡೆಯುವುದರಿಂದ ಇದಕ್ಕೆ ಆತಿಥ್ಯೇಷ್ಟಿಯೆಂದು ಹೆಸರು. **ಕ್ರೀತಂ ಸೋಮಂ ಶಕಟೇ ಸಂಸ್ಥಾಪ್ಯ ಪ್ರಾಚೀನವಂಶಂ ಪ್ರತಿ ಆನೀಯಮಾನೇಽಭಿಮುಖೇ ಯಾಮಿಷ್ಟಿಂ ನಿರ್ವಪತಿ ಸೇಯಮಾತಿಥ್ಯಾ ಇತಿ** ॥ (ಜೈ.ಮಿ.ಭಾ. ೪-೨-೧೪) ಮೇಲೆ ಹೇಳಿದ ಅರ್ಥವನ್ನೇ ಇಲ್ಲಿ ತಿಳಿಸಿದೆ.

ಅತಿಥಿಶಬ್ದಕ್ಕೆ ಭಾಷ್ಯಕಾರರು ಎರಡು ಮೂರು ಅರ್ಥಗಳನ್ನು ಹೇಳಿರುವರು— **ಅತಿಥಿರಭ್ಯತಿತೋ ಗೃಹಾನ್ ಭವತಿ । ಅಭ್ಯೇತಿ ತಿಥಿಷು ಪರಕುಲಾನೀತಿ ವಾ** ॥ (ನಿ. ೪-೫) **ತಿಥಿವಿಶೇಷಮನಪೇಕ್ಷ್ಯ ಭೋಜನಾಯ ಕಸ್ಯಚಿದ್ಗೃಹಂ ಪ್ರತ್ಯಕಸ್ಮಾತ್ ಸಮಾಗತಃ ಸೋಽತಿಥಿಃ ಇತಿ ಸಾಯಣಃ** । ಎಂದರೆ ಹೊರಗೆ ಸಂಚರಿಸುತ್ತಿದ್ದು ಪೂರ್ವಸೂಚನೆಯಿಲ್ಲದೆ ಗೃಹಗಳಿಗೆ ಬರುವವನು ಅಥವಾ ತನ್ನ ವಂಶವಲ್ಲದ ಅಥವಾ ತನ್ನ ಮನೆಯಲ್ಲದ ಇತರರ ಮನೆಗೆ ಬರುವವನು ಎಂದು ಯಾಸ್ಕರ ಅರ್ಥವಿವರಣೆ ಇರುವುದು. ಅಥವಾ ತಿಥಿನಿಯಮವಿಲ್ಲದೆ ಯಾವ ದಿನವೆಂದರೆ ಆ ದಿನ ಪರರ ಮನೆಗೆ ಭೋಜನಾರ್ಥವಾಗಿ ಹೋಗುವವನಿಗೆ ಅತಿಥಿಯೆಂದು ಹೆಸರು ಎಂದು ಸಾಯಣರ ವಿವರಣೆಯು.

**ಸೋಮೋ ವೈ ರಾಜಾ ಯಜಮಾನಸ್ಯ ಗೃಹಾನಾಗಚ್ಛತಿ ತಸ್ಮಾ ಏತ-ದ್ಧವಿರಾತಿಥ್ಯಂ ನಿರುಪ್ಯತೇ ತದಾತಿಥ್ಯಸ್ಯಾತಿಥ್ಯತ್ವಂ ॥**

ಏತಸ್ಯೇವಾಭಿಪ್ರಾಯಂ ವಿಸ್ಪಷ್ಟಯತಿ—ತಿಥಿವಿಶೇಷಮನಪೇಕ್ಷ್ಯ ಭೋಜನಾರ್ಥಂ ಕಸ್ಯಚಿದ್ಗೃಹಂ ಪ್ರತ್ಯಕಸ್ಮಾದ್ಯಃ ಸಮಾಗತಃ ಸೋಽತಿಥಿಃ । ಸೋಮೋಽಪಿ ತಥಾವಿಧತ್ವಾದತಿಥಿ-ರಿತ್ಯುಚ್ಯತೇ । ತತ್ಸಂಬಂಧಿತ್ವಾದಾತಿಥ್ಯಮಿತಿ ನಾಮಧೇಯಂ ।

ಮೇಲೆ ಹೇಳಿದಂತೆ ಸೋಮರಾಜನೂ ಸಹ ಯಜಮಾನನ ಗೃಹಾಭಿಮುಖವಾಗಿ ಬರುವನು. ಆದ್ದರಿಂದ ಅತಿಥಿಯಾಗಿ ಬಂದ ಸೋಮರಾಜನಿಗೆ ಅತಿಥಿಸತ್ಕಾರವನ್ನು ಮಾಡಬೇಕು. ಅತಿಥಿಯನ್ನು ಸತ್ಕಾರಾದಿಗಳಿಂದ ಗೌರವಿಸುವ ಕಾರ್ಯಕ್ಕೆ ಆತಿಥ್ಯವೆಂದು ಹೆಸರು.

**ನವಕಪಾಲೋ ಭವತಿ ನವ ವೈ ಪ್ರಾಣಾಃ ಪ್ರಾಣಾನಾಂ ಕ್ಲೃಪ್ತ್ಯೈ ಪ್ರಾಣಾನಾಂ ಪ್ರತಿಪ್ರಜ್ಞಾತ್ಯೈ ॥**

ಹವಿರ್ವಿಶೇಷಂ ವಿಧತ್ತೇ—ನವಸು ಕಪಾಲೇಷು ಸಂಸ್ಕೃತಃ ಪುರೋಡಾಶೋ ನವಕ-ಪಾಲಃ । ಪುರುಷಸ್ಯ ಶಿರೋಗತೇಷು ಸಪ್ತಸು ಛಿದ್ರೇಷು ವರ್ತಮಾನಾಃ ಸಪ್ತ ಪ್ರಾಣಾಃ ।ಅಧೋ-ಭಾಗಾವಸ್ಥಿತಯೋರ್ವರ್ತಮಾನೌ ದ್ವೌ । ಏವಂ ನವಸಂಖ್ಯಾಕಾಃ ಪ್ರಾಣಾಃ । ತಥಾಚಾನ್ಯತ್ರ ಶ್ರೂಯತೇ 'ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಂಚೌ' ಇತಿ ॥ ಏವಂ ಸತಿ ಕಪಾಲಗತಾ ನವಸಂಖ್ಯಾ ಪ್ರಾಣಾನಾಂ ಕ್ಲೃಪ್ತ್ಯೈ ಸ್ವವ್ಯಾಪಾರಸಾಮರ್ಥ್ಯಾಯ ಭವತಿ । ಸಾಮರ್ಥ್ಯೇ ಚ ಪ್ರಾಣೋಽಯಮೀದೃಶ ಇತಿ ಸರ್ವೈಃ ಪ್ರಾಣಾಃ ಪ್ರಜ್ಞಾತಾ ಭವಂತಿ ।

ಈ ಆತಿಥ್ಯೇಷ್ಟಿಯಲ್ಲಿ ಒಂಭತ್ತು ಕಪಾಲಗಳ ಮೇಲೆ ಪಕ್ವಮಾಡಿದ ಪುರೋಡಾಶವೇ ಹವಿರ್ದ್ರವ್ಯವು. ಏಕೆಂದರೆ, ಶರೀರದಲ್ಲಿ ಒಂಭತ್ತು ಪ್ರಾಣಗಳು ಇರುವವು. ಎಂದರೆ ಎರಡು ನೇತ್ರಗಳು, ಎರಡು ಶ್ರೋತ್ರಗಳು, ಎರಡು ನಾಸಿಕದ್ವಾರಗಳು, ಮುಖ (ಬಾಯಿ) ಈ ಏಳು ರಂಧ್ರಗಳೂ ಶಿರಸ್ಸಿ (ತಲೆ)ಯಲ್ಲಿರುವವು. ಅಧೋಭಾಗದಲ್ಲಿ ಮೂತ್ರದ್ವಾರ, ಮಲದ್ವಾರ ಎಂಬ ಎರಡು ರಂಧ್ರಗಳಿರುವವು. ಒಟ್ಟು ನವರಂಧ್ರಗಳಲ್ಲಿ ನವಸಂಖ್ಯಾಕವಾದ ಪ್ರಾಣವಾಯುಗಳು ಸಂಚರಿಸುತ್ತಿರುವವು— **ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಂಚೌ** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು. ಆದ್ದರಿಂದ ಈ ನವಸಂಖ್ಯಾಕವಾದ ಪ್ರಾಣಗಳು ಶರೀರದಲ್ಲಿ ತಮ್ಮ ತಮ್ಮ ನಿರ್ದಿಷ್ಟವ್ಯಾಪಾರ (ಕಾರ್ಯ)ಗಳನ್ನು ನಿರ್ವಹಿಸುವುದಕ್ಕಾಗಿಯೂ, ಪ್ರಾಣಗಳ ಸಾಮರ್ಥ್ಯಗಳು ಈ ರೀತಿ ಇರುವವೆಂಬುದನ್ನು ಎಲ್ಲರೂ ತಿಳಿದುಕೊಳ್ಳುವುದಕ್ಕಾಗಿಯೂ (ಎಂದರೆ ಪ್ರಾಣಗಳು ಒಂಭತ್ತು ಎಂಬ ವಿಷಯಜ್ಞಾಪಕಾರ್ಥವಾಗಿ) ಈ ಆತಿಥ್ಯೇಷ್ಟಿಯಲ್ಲಿ ನವಕಪಾಲಗಳ ಹೋಮವು ನಿರ್ದಿಷ್ಟವಾಗಿದೆ.

**ವೈಷ್ಣವೋ ಭವತಿ ವಿಷ್ಣುರ್ವೈ ಯಜ್ಞಃ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ॥**

**ದ್ರವ್ಯಂ ವಿಧಾಯ ದೇವತಾಂ ವಿಧತ್ತೇ—ವಿಷ್ಣುರ್ದೇವತಾ ಯಸ್ಯ ಪುರೋಡಾಶಸ್ಯ ಸೋಽಯಂ ವೈಷ್ಣವಃ ॥ ವಿಷ್ಣೋರ್ವ್ಯಾಪಿತ್ವಾತ್ಸರ್ವಯಜ್ಞಸ್ವರೂಪತ್ವಂ ॥ ತಥಾಸತ್ಯಾತಿಥ್ಯೇಷ್ಟೇರಪಿಯಜ್ಞತ್ವಾದ್ವಿಷ್ಣುಃ ಸ್ವಕೀಯಾದೇವತಾ ಭವತಿ ॥ ತಯಾ ದೇವತಯೈನಂ ಸಮೃದ್ಧಂ ಕರೋತಿ । ಯದ್ಯಪ್ಯತ್ರ ಮಂತ್ರಾವಿಹಿತತ್ವಾತ್ತಚ್ಛಂದೋ ನ ಪ್ರಕೃತಂ ತಥಾಽಪಿ ಯಜ್ಞಸ್ಯ ವಿಹಿತತ್ವಾದ್ಯಾಜ್ಯಾನುವಾಕ್ಯಯೋರವಶ್ಯಂಭಾವೇನ ಛಂದೋಽರ್ಥಸಿದ್ಧಂ ॥ ತೇನ ಸ್ವಕೀಯೇನ ಛಂದಸಾ ಯಜ್ಞಂ ಸಮೃದ್ಧಂ ಕರೋತಿ । ತೇ ಚ ಯಾಜ್ಯಾನುವಾಕ್ಯೇ ಆಶ್ವಲಾಯನೇನ ದರ್ಶಿತೇ—' ಇದಂ ವಿಷ್ಣುರ್ವಿಚಕ್ರಮೇ—(೧-೨೨-೧೭) ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ' (೧-೧೫೪-೫) ಇತಿ । ತಯೋಶ್ಚ ಗಾಯತ್ರೀ ತ್ರಿಷ್ಟುಪ್ಚೇತಿ ಛಂದೋದ್ವಯಂ । ತೇನ ಛಂದೋದ್ವಯೇನಾಸ್ಯ ಯಜ್ಞಸ್ಯ ಸಮೃದ್ಧಿಃ ॥**

ಹವಿರ್ದ್ರವ್ಯವನ್ನು ಹೇಳಿ ಈಗ ಆತಿಥ್ಯೇಷ್ಟಿಯ ದೇವತೆಯನ್ನು ನಿರ್ದೇಶಿಸುವರು. ಮೇಲೆ ಹೇಳಿದ ನವಕಪಾಲರೂಪವಾದ ಪುರೋಡಾಶಕ್ಕೆ ವಿಷ್ಣುವೇ ದೇವತೆಯು. ಏಕೆಂದರೆ, ವಿಷ್ಣುವು ಯಜ್ಞಸ್ವರೂಪಿಯಾಗಿ ಸಕಲಯಜ್ಞಗಳನ್ನೂ ವ್ಯಾಪಿಸಿರುವುದರಿಂದ ಈ ಆತಿಥ್ಯೇಷ್ಟಿಯಲ್ಲಿಯೂ ಮುಖ್ಯದೇವತೆಯು ವಿಷ್ಣುವೇ ಆಗಿರುವುದು. ಪ್ರಕೃತ ಮೇಲಿನ ವಾಕ್ಯದಲ್ಲಿ ವಿಷ್ಣುದೇವತಾಕವಾದ ಯಾವ ಮಂತ್ರಗಳನ್ನು ಇಲ್ಲಿ ಉಪಯೋಗಿಸಬೇಕು ಎಂಬುದನ್ನು ಹೇಳಿಲ್ಲವಾದರೂ ಈ ವಿಷಯದಲ್ಲಿ ಆಶ್ವಲಾಯನರು **ಇದಂ ವಿಷ್ಣುರ್ವಿಚಕ್ರಮೇ** (ಋ. ಸಂ. ೧-೨೨-೧೭) **ತದಸ್ಯಪ್ರಿಯ ಮಭಿಪಾಥೋಅಶ್ಯಾಂ** (ಋ. ಸಂ. ೧-೧೫೪-೫) ಎಂಬ ಎರಡು ಋಕ್ಕುಗಳನ್ನು ಯಾಜ್ಯಾನುವಾಕ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಹೇಳಿರುವ(ಆಶ್ವ-ಶ್ರೌ-ಸೂ-೪-೫-೩) ಈ ಮಂತ್ರಗಳನ್ನು ಇಲ್ಲಿ ಕೊಟ್ಟಿದೆ—

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ॥ (ಋ. ಸಂ. ೧-೨೨-೧೭)

**ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ ।**
**ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥**

(ಋ. ಸಂ. ೧-೧೫೪-೫)

ಈ ಋಕ್ಕುಗಳಲ್ಲಿ ಮೊದಲನೆಯದು ಗಾಯತ್ರೀಛಂದಸ್ಸು, ಎರಡನೆಯದು ತ್ರಿಷ್ಟುಪ್‌ಛಂದಸ್ಸು ವಿಷ್ಣುದೇವತೆಯನ್ನೇ ಉದ್ದೇಶಿಸಿ ಮಾಡುವ ಈ ಆತಿಥ್ಯೇಷ್ಟಿಯಲ್ಲಿ ವಿಷ್ಣುವಿನ ಸ್ವಕೀಯವಾದ ಛಂದಸ್ಸುಗಳಿಂದ ಎಂದರೆ ವಿಷ್ಣುವನ್ನು ಸ್ತುತಿಸುವ ಗಾಯತ್ರೀತ್ರಿಷ್ಟುಪ್‌ಛಂದಸ್ಕವಾದ ಮಂತ್ರಗಳಿಂದ ವಿಷ್ಣುವಿಗೆ ಹವಿಸ್ಸನ್ನು ಅರ್ಪಿಸುವುದು ಯಜ್ಞಕ್ಕೆ ಸಮೃದ್ಧಿಯನ್ನುಂಟು ಮಾಡುವುದು.

**ಸರ್ವಾಣಿ ವಾವ ಛಂದಾಂಸಿ ಚ ಪೃಷ್ಠಾನಿ ಚ ಸೋಮಂ ರಾಜಾನಂ ಕ್ರೀತಮನ್ವಾಯಂತಿ ಯಾವಂತಃ ಖಲು ವೈ ರಾಜಾನಮನುಯಂತಿ ತೇಭ್ಯಃ ಸರ್ವೇಭ್ಯ ಆತಿಥ್ಯಂ ಕ್ರಿಯತೇ ॥**

**ಅತ್ರ ಶಾಖಾಂತರೋಕ್ತಾನಗ್ನೇರಾತಿಥ್ಯಮಸಿ ವಿಷ್ಣವೇ ತ್ವೇತ್ಯಾದಿಕಾಂಶ್ಚ ನಿರ್ವಾಪಮಂತ್ರಾನ್ಹೃದಿ ನಿಧಾಯ ತತ್ಪ್ರಶಂಸಾರೂಪಮರ್ಥವಾದಂ ದರ್ಶಯತಿ—ಗಾಯತ್ರೀ ತ್ರಿಷ್ಟುಬಿತ್ಯಾದಿನೀ ಸರ್ವಚ್ಛಂದಾಸಿ ಬೃಹದ್ರಥಂತರ ವೈರೂಪಾದಿಸಾಮಸಾಧ್ಯಾನಿ ಪೃಷ್ಠಸ್ತೋತ್ರಾಣಿ ॥ ತದುಭಯಾಭಿಮಾನಿನೋ ದೇವಾ ಅನುಚರಾಃ ಸಂತೋ ರಾಜಾನಮನು ಯಜಮಾನಗೃಹಂ ಪ್ರತ್ಯಾಗಚ್ಛಂತಿ—ಅತೋ ರಾಜ್ಞಾ ಸಹಾಽಽಗತೇಭ್ಯಃ ಸರ್ವೇಭ್ಯಃ ಸಹಾತಿಥ್ಯಂ ಕರ್ತವ್ಯಂ । ತಥಾ ಸತ್ಯಗ್ನೇರಾತಿಥ್ಯಮಸೀತ್ಯಾದಿಮಂತ್ರೈಃ ಸರ್ವೇಷಾಮನುಚರಾಣಾಂ ಗಾಯತ್ರ್ಯಾದೀನಾಂ ತೃಪ್ತಿರ್ಭವತೀತ್ಯರ್ಥಃ । ತಥಾಚ ತೈತ್ತಿರೀಯಾ ಆಮನಂತಿ—‘ ಯಾವದ್ಭಿರ್ವೈ ರಾಜಾಽನುಚರೈರಾಗಚ್ಛತಿ ಸರ್ವೇಭ್ಯೋ ವೈ ತೇಭ್ಯ ಆತಿಥ್ಯಂ ಕ್ರಿಯತೇ ಛಂದಾಂಸಿ ಖಲು ವೈ ಸೋಮಸ್ಯ ರಾಜ್ಞೋಽನುಚರಾಣ್ಯಗ್ನೇರಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ಗಾಯತ್ರ್ಯಾ ಏವೈತೇನ ಕರೋತಿ ’ ಇತ್ಯಾದಿ ॥ ಅತ್ರಾಽಽತಿಥ್ಯೇಷ್ಟಿಮಧ್ಯೇಽಗ್ನಿಮಂಥನಮಾಪಸ್ತಂಬ ಆಹ—‘ ಚತುರ್ಹೋತ್ರಾತಿಥ್ಯಮಾಸಾದ್ಯ ಸಂಭಾರಯಜೂಂಷಿ ವ್ಯಾಚಷ್ಟೇ । ಯಜಮಾನಂ ವಾಚಯತೀತ್ಯೇಕೇ ॥ ಪಶುವನ್ನಿರ್ಮಥ್ಯಃ ಸಾಮಿಧೇನ್ಯಶ್ಚ’ ಇತಿ ॥ ಆಶ್ವಲಾಯನೋಽಪ್ಯಾಹ—‘ ಆತಿಥ್ಯೇಳಾಂತಾ ತಸ್ಯಾಮಗ್ನಿಮಂಥನಂ ’ ಇತಿ ॥**

ಈಗ ಶಾಖಾಂತರದಲ್ಲಿ (ಯಜುರ್ವೇದಾದಿಗಳಲ್ಲಿ) ಹೇಳಿರುವ ಆತಿಥ್ಯೇಷ್ಟಿವಿಧಾನವನ್ನು ಸೂಕ್ಷ್ಮವಾಗಿ ವಿವರಿಸುವರು. ಗಾಯತ್ರೀ ತ್ರಿಷ್ಟುಪ್ ಮೊದಲಾದ ಛಂದಸ್ಸಿನ ಮಂತ್ರಗಳು ಸಾಮವೇದದ ಪೃಷ್ಠಸ್ತೋತ್ರಗಳಲ್ಲಿರುವವು. ಈ ಗಾಯತ್ರ್ಯಾದಿ ಛಂದಸ್ಸುಗಳ ಅಭಿಮಾನಿ ದೇವತೆಗಳು ರಾಜನಾದ ಸೋಮದೇವನ ಅನುಚರರೆಂದು (ಭೃತ್ಯರು) ಹೇಳಲ್ಪಡುವರು. ಆದ್ದರಿಂದ ಇವರೆಲ್ಲರೂ ಸೋಮರಾಜನನ್ನು ಅನುಸರಿಸಿ ಅವನ ಜತೆಯಲ್ಲೇ ಯಜಮಾನನ ಗೃಹಕ್ಕೆ ಅತಿಥಿಯಾಗಿ ಬರುವರು. ಯಜಮಾನನು ಮುಖ್ಯಾತಿಥಿಯಾದ ಸೋಮರಾಜನಿಗೂ ಅವನ ಅನುಚರರಾದ ಛಂದೋಭಿಮಾನಿದೇವತೆಗಳಿಗೂ ಆತಿಥ್ಯವನ್ನು ಮಾಡಬೇಕು. ಇದಕ್ಕಾಗಿ ಈ ಕೆಳಗಿನ ಮಂತ್ರಗಳನ್ನು ಯಜಮಾನನು ಪಠಿಸುವನು.

(೧) ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ
(೨) ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವಾ
(೩) ಅತಿಥೇರಾತಿಥ್ಯಮಸಿ ವಿಷ್ಣವೇ ತ್ವಾ
(೪) ಅಗ್ನಯೇ ತ್ವಾ ರಾಯಸ್ಪೋಷದಾವ್ನೇ ವಿಷ್ಣವೇ ತ್ವಾ
(೫) ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವಾ

(ತೈ.ಸಂ. ೧-೨-೧೦-೧)

ಈ ಐದು ಮಂತ್ರಗಳನ್ನು ಪಠಿಸುವುದರಿಂದ ಗಾಯತ್ರ್ಯಾದಿಛಂದಸ್ಸುಗಳಿಗೆ ತೃಪ್ತಿಯುಂಟಾಗುವುದು. **ಅಗ್ನೇರಾತಿಥ್ಯಮಸೀತ್ಯೇತೈಃ ಪ್ರತಿಮಂತ್ರಂ** (ಆಪ. ಶ್ರೌ. ಸೂ. ೧೦-೩೦-೮) ಎಂದು ಆಪಸ್ತಂಬ ಮಹರ್ಷಿಗಳು ಹೇಳಿರುವರು. ತೈತ್ತಿರೀಯ ಸಂಹಿತೆಯಲ್ಲಿ ಈ ಆತಿಥ್ಯೇಷ್ಟಿವಿಚಾರವಾಗಿ—

**ಯಾವದ್ಭಿರ್ವೈ ರಾಜಾನುಚರೈರಾಗಚ್ಛತಿ ಸರ್ವೇಭ್ಯೋ ವೈ ತೇಭ್ಯ ಆತಿಥ್ಯಂ ಕ್ರಿಯತೇ ಛಂದಾಗ್ಂಸಿ ಖಲು ವೈ ಸೋಮಸ್ಯ ರಾಜ್ಞೋಽನುಚರಾಣ್ಯಗ್ನೇರಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ಗಾಯತ್ರಿಯಾ ಏವೈತೇನ ಕರೋತಿ ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ತ್ರಿಷ್ಟುಭ ಏವೈತೇನ ಕರೋತ್ಯತಿಥೇರಾತಿಥ್ಯಮಸಿ ವಿಷ್ಣವೇ ತ್ವೇತ್ಯಾಹ ಜಗತ್ಯಾ ಏವೈತೇನ ಕರೋತ್ಯಗ್ನಯೇ ತ್ವಾ ರಾಯಸ್ಪೋಷದಾವ್ನೇ ವಿಷ್ಣವೇ ತ್ವೇತ್ಯಾಹಾನುಷ್ಟುಭ ಏವೈತೇನ ಕರೋತಿ ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವೇತ್ಯಾಹ ಗಾಯತ್ರಿಯಾ ಏವೈತೇನ ||**

(ತೈ. ಸಂ. ೬-೨-೧-೨,೩)

ರಾಜನಿಗೆ ಆತಿಥ್ಯಾದಿಗಳಿಂದ ಸತ್ಕರಿಸುವಾಗ ಆ ರಾಜನ ಜತೆಯಲ್ಲಿ ಬಂದಿರುವ ಅವನ ಅನುಚರರಿಗೆಲ್ಲರಿಗೂ ಸತ್ಕಾರವನ್ನು ಮಾಡುವುದು ಲೋಕದಲ್ಲಿ ರೂಢಿಯಾಗಿದೆಯಷ್ಟೆ. ಅದರಂತೆ ಇಲ್ಲಿ ಸೋಮರಾಜನು ಅತಿಥಿಯಾಗಿ ಯಜಮಾನನ ಯಜ್ಞಗೃಹಕ್ಕೆ ಬಂದಾಗ ಅವನ ಅನುಚರರಿಗೂ ಸತ್ಕಾರವನ್ನು ಮಾಡಬೇಕು. ಸೋಮನಿಗೆ ಗಾಯತ್ರ್ಯಾದಿಛಂದಸ್ಸುಗಳೇ ಅನುಚರರು. ಈ ಗಾಯತ್ರ್ಯಾದಿ ಅನುಚರರನ್ನು ಉಪಚರಿಸಿ ಸತ್ಕರಿಸುವುದಕ್ಕಾಗಿ ಯಜಮಾನನು ಆಯಾ ಛಂದಸ್ಸಿಗೆ ತೃಪ್ತಿಯಾಗುವಂತೆ ಒಂದೊಂದು ಮಂತ್ರವನ್ನು ಪಠಿಸಿ ಅವರನ್ನು ಸತ್ಕರಿಸುವನು. ಮೊದಲು—**ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ** ಎಂಬ ಮಂತ್ರದಿಂದ ಗಾಯತ್ರೀಛಂದಸ್ಸನ್ನು ಸತ್ಕರಿಸುವನು. ಬಳಿಕ **ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವಾ** ಎಂಬ ಮಂತ್ರದಿಂದ ತ್ರಿಷ್ಟುಪ್ ಛಂದಸ್ಸನ್ನೂ, **ಅತಿಥೇರಾತಿಥ್ಯಮಸಿ ವಿಷ್ಣವೇ ತ್ವಾ** ಎಂಬ ಮಂತ್ರದಿಂದ ಜಗತೀಛಂದಸ್ಸನ್ನೂ **ಅಗ್ನಯೇ ತ್ವಾ ರಾಯಸ್ಪೋಷದಾವ್ನೇ ವಿಷ್ಣವೇ ತ್ವಾ** ಎಂಬ ಮಂತ್ರದಿಂದ ಅನುಷ್ಟುಪ್ ಛಂದಸ್ಸನ್ನೂ **ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇ ತ್ವಾ** ಎಂಬ ಮಂತ್ರದಿಂದ ಪುನಃ ಗಾಯತ್ರೀಛಂದಸ್ಸನ್ನೂ ಸತ್ಕರಿಸಿ ತೃಪ್ತಿಪಡಿಸುವನು.

**ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರಿಯಾ ಉಭಯತ ಆತಿಥ್ಯಸ್ಯ ಕ್ರಿಯತ ಇತಿ ಯದೇವಾದಃ ಸೋಮಮಾಹರತ್ತಸ್ಮಾದ್ಗಾಯತ್ರಿಯಾ ಉಭಯತ ಆತಿಥ್ಯಸ್ಯ ಕ್ರಿಯತೇ ಪುರಸ್ತಾಚ್ಚೋಪರಿಷ್ಟಾಚ್ಚ ||**

(ತೈ. ಸಂ. ೬-೨-೧-೩,೪)

ಇಲ್ಲಿ ಬ್ರಹ್ಮವಾದಿಗಳು ಈರೀತಿ ಪ್ರಶ್ನೆಮಾಡುತ್ತಾರೆ- ಮೇಲೆ ವಿವರಿಸಿರುವ ಅತಿಥಿಸತ್ಕಾರದಲ್ಲಿ ಗಾಯತ್ರೀಛಂದಸ್ಸಿಗೆ ಮಾತ್ರ ಏತಕ್ಕೆ ಎರಡಾವರ್ತಿ ಸತ್ಕಾರವನ್ನು ನೀಡಲಾಗಿದೆ? ಅದಕ್ಕೆ ಸಮಾಧಾನವು—ಈಗಾಯತ್ರೀಛಂದಸ್ಸು ಹಿಂದೆ ಸ್ವರ್ಗದಲ್ಲಿದ್ದ

ಸೋಮವನ್ನು ತಂದಿತು. ಆದ್ದರಿಂದ ಗಾಯತ್ರೀಛಂದಸ್ಸು ಸೋಮರಾಜನಿಗೆ ವಿಶೇಷವಾಗಿ ಪ್ರೀತಿಪಾತ್ರವಾಗಿರುವುದು. ಆದಕ್ಕಾಗಿ ಈ ಗಾಯತ್ರಿಯನ್ನು ಛಂದಸ್ಸುಗಳನ್ನು ತೃಪ್ತಿಪಡಿಸುವಾಗ ಮೊದಲಲ್ಲಿಯೂ ಕೊನೆಯಲ್ಲಿಯೂ ಎರಡಾವರ್ತಿ ಸತ್ಕರಿಸ ಲಾಗಿದೆ ಎಂದಭಿಪ್ರಾಯವು.

ಆತಿಥ್ಯೇಷ್ಟಿಯಾಗುವಾಗ ಅಗ್ನಿಮಥನವನ್ನು (ಅರಣಿಗಳಲ್ಲಿ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವುದು) ಮಾಡ ಬೇಕೆಂದು ಆಪಸ್ತಂಬಋಷಿಯು ಹೇಳಿರುವರು — "ಚತುರ್ಹೋತ್ರಾತಿಥ್ಯಮಾಸಾದ್ಯ ಸಂಭಾರಯಜೂಂಷಿ ವ್ಯಾಚಷ್ಟೇ । ಯಜಮಾನಂ ವಾಚಯತೀತ್ಯೇಕೇ । ಪಶುವನ್ನಿರ್ಮಥ್ಯಃ ಸಾಮಿಧೇನ್ಯಶ್ಚ ॥" (ಆಪ.ಶ್ರೌ.ಸೂ ೧೦-೩೧-೧೦,೧೧,೧೨) ಆಶ್ವಲಾಯನರೂ ಸಹ—"ಆತಿಥ್ಯೇಳಾಂತಾ ತಸ್ಯಾಮಗ್ನಿಮಂಥನಂ" (ಆಶ್ವ. ೪-೫-೧,೨) ಆತಿಥ್ಯೇಷ್ಟಿಯನ್ನು ಇಡಾಂತವಾಗಿ ಮಾಡಿ ಆ ಇಷ್ಟಿಯ ಮಧ್ಯದಲ್ಲಿಯೇ ಅಗ್ನಿಮಥನವನ್ನು ಮಾಡಬೇಕು ಎಂದು ಹೇಳಿರುವರು ಆದ್ದರಿಂದ ಅಗ್ನಿಮಂಥನಕ್ರಮವನ್ನು ಇಲ್ಲಿ ವಿವರಿಸಲಾಗುವುದು.

ಅಗ್ನಿಂ ಮಂಥಂತಿ ಸೋಮೇ ರಾಜನ್ಯಾಗತೇ ತದ್ಯಥೈವಾದೋ ಮನುಷ್ಯರಾಜ ಆಗತೇಽನ್ಯಸ್ಮಿನ್ವಾರ್ಹತ್ಯುಕ್ಷಾಣಂ ವಾ ವೇಹತಂ ವಾ ಕ್ಷದಂತ ಏವಮೇವಾಸ್ಮಾ ಏತತ್ಕ್ಷದಂತಂ ಯದಗ್ನಿಂ ಮಂಥಂತ್ಯಗ್ನಿರ್ಹಿ ದೇವಾನಾಂ ಪಶುಃ ॥ ೧೫ ॥

ತದಿದಮಗ್ನಿಮಂಥನಂ ವಿಧತ್ತೇ—ಲೋಕೇ ಯಥೈವಾದೋಽತಿಥಿಸತ್ಕರಣಂ ತಥೈವ ಸೋಮಸ್ಯಾಪಿ ತತ್ಸತ್ಕರಣಂ ದ್ರಷ್ಟವ್ಯಂ ॥ ತಾವೇತೌ ದೃಷ್ಟಾಂತದಾರ್ಷ್ಟಾಂತಿಕೌ ಮನುಷ್ಯ-ರಾಜ ಇತ್ಯಾದಿನಾ ಸ್ಪಷ್ಟೀಕ್ರಿಯತೇ । ಮಹತಿ ಮನುಷ್ಯಭೂಪತೌ ವಾನ್ಯಸ್ಮಿಂಶ್ಚಿದ್ವಿದ್ಯಾವೃತ್ತಾ-ದಿಸಂಪನ್ನಶ್ರೇನಾರ್ಹತಿ ಪೂಜ್ಯೇ ಮಹತಿ ಬ್ರಾಹ್ಮಣೇಽಬ್ರಾಹ್ಮಣೇ ವಾ ಗೃಹಂ ಪ್ರತ್ಯಾಗತೇ ಸತ್ಯತಿಥಿಸತ್ಕಾರಾರ್ಥಂ ಶಾಸ್ತ್ರಕುಶಲಾಃ ಶಿಷ್ಟಾಃ ಕಂಚಿದುಕ್ಷಾಣಂ ವೃಷಭಂ ವಾ ವೇಹತಂ ಗರ್ಭಘಾತಿನೀಂ ವೃದ್ಧಾಂ ಗಾಂ ವಾ ಕ್ಷದಂತೇ ಹಿಂಸಂತಿ॥ ಅಯಂ ಸತ್ಕಾರಃ ಸ್ಮೃತಿಷು ಪ್ರಸಿದ್ಧೋ ಯುಗಾಂತರಧರ್ಮೋ ದ್ರಷ್ಟವ್ಯಃ । ಏವಮೇವಾತ್ರಾಪಿ ಅಗ್ನಿಂ ಮಂಥಂತೀತಿ ಯದಸ್ತಿ, ಏತ-ದಸ್ಮೈ ಸೋಮಾಯಾತಿಥಿಸತ್ಕಾರಾರ್ಥಂ ಕ್ಷದಂತೇಽಗ್ನೇರ್ದೇವಪಶುತ್ವಾತ್ ॥ ಯಥಾನಡ್ವಾ-ನ್ಹವ್ಯಂ ವಹತಿ ತಥಾಽಗ್ನಿರಪಿ ಹವ್ಯಂ ವಹತಿ ತಸ್ಮಾದಗ್ನೇಃ ಪಶುಸಾಮ್ಯಂ॥ ಅತ್ರ ಮೀಮಾಂಸಾ॥ ಸಪ್ತಮಾಧ್ಯಾಯೇ ತೃತೀಯಪಾದೇ ಚಿಂತಿತಂ—

"ವೈಷ್ಣವೇ ತ್ರಿಕಪಾಲೇ ವೈಷ್ಣವಾನ್ನವಕಪಾಲತಃ ॥
ಧರ್ಮಾತಿದೇಶಃ ಸ್ಯಾನ್ನೋವಾ ವಿದ್ಯತೇಽತಾಗ್ನಿಹೋತ್ರವತ್ ॥
ಶ್ರುತ್ಯಾ ವೈಷ್ಣವಶಬ್ದೋಽಯಂ ದೇವತಾಯಾ ವಿಧಾಯಕಃ ।
ಸಗೌಣವೃತ್ತಿಮಾಶ್ರಿತ್ಯ ಧರ್ಮಾನ್ನಾತಿದಿಶತ್ಯತಃ ॥

ಆತಿಥ್ಯೇಷ್ಟ್ಯಾ ವೈಷ್ಣವೋ ನವಕಪಾಲೋ ವಿಹಿತಃ । ತತ್ರ ಶ್ರುತೌ ವೈಷ್ಣವಶಬ್ದೋ ರಾಜಸೂಯ ಗತೇ ವೈಷ್ಣವೇ ತ್ರಿಕಪಾಲೇ ಪ್ರಯುಜ್ಯಮಾನೋಽಗ್ನಿಹೋತ್ರಶಬ್ದವನ್ನವಕಪಾಲಧರ್ಮಾನತಿ

**ದಿಶತೀತಿ ಪೂರ್ವಃ ಪಕ್ಷಃ । ವಿಷ್ಣುರ್ದೇವತಾ ಯಸ್ಯೇತಿ ವಿಗ್ರಹೇ ವಿಹಿತತದ್ಧಿತಪ್ರತ್ಯಯೋ ದೇವತಾಮಭಿಧತ್ತೇ ನ ತು ಧರ್ಮಾನ್ ॥ ತಸ್ಮಾನ್ನಾತಿದಿಶತಿ ॥**

ಸೋಮರಾಜನು ಯಜ್ಞಗೃಹಕ್ಕೆ ಬಂದಮೇಲೆ ಎಂದರೆ ಸೋಮನನ್ನು ಯಜ್ಞಗೃಹದ ಬಳಿಗೆ ತಂದಮೇಲೆ ಅಗ್ನಿಮಥನ ಕಾರ್ಯವನ್ನು ಋತ್ವಿಗ್ಯಜಮಾನರು ನಿರ್ವಹಿಸುವರು. ಲೋಕವ್ಯವಹಾರದಲ್ಲಿ ರಾಜರು ಅತಿಥಿಯಾಗಿ ಬಂದಾಗ ಯಾವರೀತಿ ಆದರದಿಂದಲೂ ವಿಜೃಂಭಣೆಯಿಂದಲೂ ರಾಜನನ್ನು ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಸತ್ಕರಿಸುವರೋ ಅದರಂತೆಯೇ ಸೋಮರಾಜನನ್ನೂ ಸಹ ಸತ್ಕರಿಸಬೇಕು. ಇದು ಬಹು ಪೂರ್ವಕಾಲದಿಂದಲೂ ನಡೆದುಬಂದಿರುವ ಪದ್ಧತಿಯು. ಜನರಿಗೆಲ್ಲಾ ಪ್ರಭುವಾದ ರಾಜನಾಗಲಿ, ವಿದ್ಯಾದಿಗಳಲ್ಲಿ ಶ್ರೇಷ್ಠವಾದ ಸ್ಥಾನವನ್ನು ಗಳಿಸಿರುವ ಆಚಾರ್ಯ, ಶ್ರೋತ್ರಿಯರಾಗಲಿ ಅಥವಾ ಇತರ ವಿಧದಲ್ಲಿ ಗಣ್ಯತೆಯನ್ನು ಪಡೆದಿರುವ ಜನನಾಯಕರು, ದೊಡ್ಡಮನುಷ್ಯರು ಇವರಲ್ಲಿ ಯಾರಾದರೂ ಅತಿಥಿಯಾಗಿ ಬಂದಲ್ಲಿ ಅವರನ್ನು ಪೂಜ್ಯಭಾವದಿಂದ ಸತ್ಕರಿಸಿ ಅವರ ಭೋಜನಾದಿಗಳಿಗಾಗಿ ಧಷ್ಟಪುಷ್ಟವಾಗಿ ಬೆಳೆದು ಕೊಬ್ಬಿರುವ ದೊಡ್ಡ ಹೋರಿಯನ್ನು ಅಥವಾ ಕರುವನ್ನು ಹಾಕಲಾರದ ಮುದಿಯಾದ ಗೋವನ್ನಾಗಲಿ ಕೊಂದು ಅದರ ಮಾಂಸದಿಂದ ಆಹಾರವನ್ನು ಸಿದ್ಧಪಡಿಸಿ ಬಂದ ಅತಿಥಿಗೆ ತೃಪ್ತಿಯಾಗುವಂತೆ ಬಡಿಸಿ ಸಂತೋಷಪಡಿಸುವುದು ಪ್ರಾಚೀನಸಂಪ್ರದಾಯವು. **ಮಹೋಕ್ಷಂ ವಾ ಮಹಾಜಂ ವಾ ಶ್ರೋತ್ರಿಯಾಯೋಪಕಲ್ಪಯೇತ್** (ಯಾಜ್ಞವಲ್ಕ್ಯಸ್ಮೃತಿ. ೧-೧-೯) ಶ್ರೋತ್ರಿಯನಾದ ಎಂದರೆ ವೇದಾಧ್ಯಯನಸಂಪನ್ನನು ಯಜ್ಞಯಾಗಾದಿಗಳನ್ನು ಮಾಡಿದ ಬ್ರಾಹ್ಮಣನು ಅತಿಥಿಯಾಗಿ ಬಂದಾಗ ಅವನ ಪ್ರೀತ್ಯರ್ಥವಾಗಿ ದೊಡ್ಡವೃಷಭವನ್ನಾಗಲೀ, ಆಡನ್ನಾಗಲೀ ಸಂಹರಿಸಿ ಅದರ ಮಾಂಸದಿಂದ ಅತಿಥಿಯನ್ನು ತೃಪ್ತಿಪಡಿಸಬೇಕು ಎಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿದೆ. ಆದರೆ ಈ ಪದ್ಧತಿಯು ಹಿಂದಿನ ಯುಗಗಳಲ್ಲಿ ನಡೆಯುತ್ತಿತ್ತು. ಈ ಕಲಿಯುಗದಲ್ಲಿ ಗೋವುಗಳನ್ನು ಕೊಲ್ಲುವುದಾಗಲಿ ಅವುಗಳ ಮಾಂಸವನ್ನು ಭಕ್ಷಿಸುವುದಾಗಲಿ ನಿಷೇಧಿಸಲ್ಪಟ್ಟಿದೆ.

ಪ್ರಕೃತಸಂದರ್ಭದಲ್ಲಿ ಸೋಮರಾಜನು ಯಜಮಾನನ ಗೃಹಕ್ಕೆ ಅತಿಥಿಯಾಗಿ ಬಂದಿರುವನು. ಮೇಲೆಹೇಳಿದ ಪದ್ಧತಿಯಂತೆ ಪಶುವನ್ನು ಹನನಮಾಡಿ ಸೋಮನನ್ನು ತೃಪ್ತಿಪಡಿಸಬೇಕಾಗುವುದು. ಇಲ್ಲಿ ಪಶುವು ಯಾವುದು ಎಂದರೆ ಅಗ್ನಿಯೇ ಪಶುವು ಎಂದು ಹೇಳಿರುವುದು. ಹೇಗೆಂದರೆ ಎತ್ತು ಮೊದಲಾದ ಪಶುಗಳು ಇತರರ ಅನುಕೂಲಕ್ಕಾಗಿ ಭಾರವನ್ನು ಹೊರುವವು. ಅಗ್ನಿಯು ದೇವತೆಗಳ ಪ್ರೀತ್ಯರ್ಥವಾಗಿ ಯಜ್ಞದಲ್ಲಿ ಯಜಮಾನರು ಅರ್ಪಿಸುವ ಹವಿಸ್ಸನ್ನು ದೇವತೆಗಳ ಬಳಿಗೆ ಒಯ್ಯುವನು. ಈ ಸಾಮ್ಯದಿಂದ ಇಲ್ಲಿ ಅಗ್ನಿಯನ್ನು ಪಶುವೆಂದು ಹೇಳಲಾಗಿದೆ. ಅತಿಥಿಯಾದ ಈ ಸೋಮರಾಜನ ಪ್ರೀತ್ಯರ್ಥವಾಗಿ ಈ ಆತಿಥ್ಯೇಷ್ಟಿಯಲ್ಲಿ ಅಗ್ನಿಯೆಂಬ ಪಶುವನ್ನು ಹಿಂಸಿಸುವರು (ಕೊಲ್ಲುವರು) ಎಂದರೆ ಅರಣಿಗಳಲ್ಲಿ ಕಡೆದು ಉತ್ಪತ್ತಿಮಾಡುವರು ಅರಣಿಗಳಲ್ಲಿ ಬಲಪ್ರಯೋಗದಿಂದ ಕಡೆಯುವುದನ್ನೇ ಇಲ್ಲಿ ಅಗ್ನಿಯನ್ನು ಹಿಂಸಿಸುವುದೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ಆತಿಥ್ಯೇಷ್ಟಿಯಲ್ಲಿ ಅಗ್ನಿಮಥನಕಾರ್ಯವು ನಡೆಯುವುದು.

## *English Translation*

After the king Soma has arrived, the reception offering is prepared. For the king Soma comes to the premises of the sacrificer (as a guest). Thence the offering for receiving him as a guest (atithi) is called Atithya-ishti. Its Purodasa is made ready in nine potsherds (i.e., the rice ball, making up the Purodasa is placed on nine potsherds). For there are nine vital airs (pranah). (This offering is made) for making the vital airs (to the sacrifice) and for making them severally

known. It belongs to Vishnu; for Vishnu is the sacrifice. By means of his own deity is the sacrifice. By means of his own deity and his own metre he makes the sacrifice successful. For all metres and Prishthas follow the king Soma, when he is bought (as his retinue). To all who follow a king (as his retinue) a reception is given.

When the king Soma has arrived, then they produce fire by friction. Agni being the animal of the gods, this rite of producing (and throwing him into another fire) is equivalent to the slaughter of an ox or a cow which miscarries, which rite is always performed when a king or another man who deserves high honour is to be received.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯೇ ತೃತೀಯಾಧ್ಯಾಯಸ್ಯ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ನಾಲ್ಕನೆಯ ಖಂಡವು ಸಮಾಪ್ತವಾದುದು.**



# ಅಥ ತೃತೀಯಾಧ್ಯಾಯೇ ಪಂಚಮಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಅಗ್ನಿಮಥನಕ್ರಿಯೆಯು—ಆ ಕಾರ್ಯದಲ್ಲಿ ಪಠಿಸಬೇಕಾದ ಮಂತ್ರಗಳ ವಿವರಣೆ ಇತ್ಯಾದಿ ]

---

ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡುವಾಗ ಅಶ್ವತ್ಥವೃಕ್ಷದ ಅಥವಾ ಶಮೀವೃಕ್ಷದ ಎರಡು ಮರದ ತುಂಡುಗಳನ್ನು (ಇವುಗಳಿಗೆ ಅರಣಿಗಳೆಂದು ಹೆಸರು) ಒಂದರಮೇಲೊಂದನ್ನಿಟ್ಟು ಬಲವಾಗಿ ಕಡೆಯುವರು. ಅದರಿಂದ ಅಗ್ನಿಯು ಉತ್ಪನ್ನನಾಗುವನು. ಈ ವಿಷಯದಲ್ಲಿ—

**ಶಮೀಗರ್ಭಾದಗ್ನಿಂ ಮಂಥತಿ । ಏಷಾ ವಾ ಅಗ್ನೇರ್ಯಜ್ಞಿಯಾ ತನೂಃ । ತಾಮೇವಾಸ್ಮೈ ಜನಯತಿ ॥**

(ತೈ. ಬ್ರಾ. ೧-೧-೯-೧)

ಎಂದು ತೈತ್ತಿರೀಯ ಬ್ರಾಹ್ಮಣವಾಕ್ಯವಿರುವುದು. ಯಜ್ಞಾದಿಗಳಲ್ಲಿ ಅಗ್ನಿಯನ್ನು ಮಂತ್ರಪೂರ್ವಕವಾಗಿಯೂ, ಸಂಸ್ಕಾರಸಹಿತವಾಗಿಯೂ ಮಥಿಸಿ ಉತ್ಪನ್ನಮಾಡುವ ವಿಧಾನವನ್ನು ಈರೀತಿ ಹೇಳಿರುವುದು. ಯಜ್ಞದಲ್ಲಿ ಸೋಮವಿಕ್ರಯಣವೆಂಬ (ಸೋಮಲತೆಯನ್ನು ಪರ್ವತವಾಸಿಗಳಿಂದ ತಂದವರಿಂದ ಕ್ರಯಪಡೆಯುವುದು) ಕರ್ಮವು ಸಮಾಪ್ತಿಯಾದಮೇಲೆ ಅಗ್ನಿಮಥನಕಾರ್ಯವು ಪ್ರಾರಂಭವಾಗುವುದು. ಆಗ ಅಧ್ವರ್ಯುವೆಂಬ ಋತ್ವಿಜನು ಹೋತೃವನ್ನು ಪ್ರೇರಿಸಿ ಈರೀತಿ ಹೇಳುವನು.—

**ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹಾಧ್ವರ್ಯುರಭಿ ತ್ವಾ ದೇವಸವಿತರಿತಿ ಸಾವಿತ್ರೀಮನ್ವಾಹ ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾತ್ಸಾವಿತ್ರೀಮನ್ವಾಹೇತಿ । ಸವಿತಾ ವೈ ಪ್ರಸವಾನಾಮೀಶೇ ಸವಿತೃಪ್ರಸೂತ ಏವೈನಂ ತನ್ಮಂಥತಿ ತಸ್ಮಾತ್ಸಾವಿತ್ರೀಮನ್ವಾಹ ॥**

**ಅಗ್ನಿಮಥನಂ ವಿಧಾಯ ತತ್ರತ್ಯಾ ಋಚೋ ವಿಧಾತುಂ ಪ್ರೈಷಮಂತ್ರಂ ವಿಧತ್ತೇ— ತತ್ರ ಪ್ರಥಮಾಮೃಚಂ ವಿಧತ್ತೇ—ಸವಿತಾ ದೇವತಾ ಗಾಯತ್ರ್ಯಾ ಋಚಃ ಸಾ ಸಾವಿತ್ರೀ ॥ ಅತ್ರ ಪ್ರೈಷಾನುವಚನಮಂತ್ರಯೋಃ ವೈಯಧಿಕರಣ್ಯರೂಪಂ ಚೋದ್ಯಮುದ್ಭಾವಯತಿ— ತತ್ತತ್ರ ಬ್ರಹ್ಮವಾದಿನಶ್ಚೋದ್ಯಮಾಹುಃ ಯದ್ಯಸ್ಮಾತ್ಕಾರಣಾದಧ್ವರ್ಯುರಗ್ನಯೇ ಮಥ್ಯಮಾನಾಯೇತ್ಯಗ್ನಯೇಽನುಕೂಲಯಾವಾಚಾ ಪ್ರೈಷಮಂತ್ರಮಾಹ ತತ್ತಸ್ಮಾತ್ಕಾರಣಾದಾಗ್ನೇಯೀಹೋತ್ರಾನುವಕ್ತವ್ಯಾ ತಾಂ ಪರಿತ್ಯಜ್ಯಾಥಾನಂತರಂ ಕಸ್ಮಾತ್ಕಾರಣಾದ್ಧೋತಾ ಸಾವಿತ್ರೀಮೃಚಮನುಬ್ರೂತೇ ॥ ಇತಿಶಬ್ದಶ್ಚೋದ್ಯಸಮಾಪ್ತ್ಯರ್ಥಃ ॥ ತಸ್ಯ ಚೋದ್ಯಸ್ಯೋತ್ತರಮಾಹ— ಯೋಽಯಂ ಸವಿತಾ ದೇವಃ ಸ ಏವ ಪ್ರಸವಾನಾಂ ಕರ್ಮಸ್ವನುಜ್ಞಾನಾಮೀಶೇ ಸ್ವಾಮೀ ಭವತಿ ॥ ತಥಾಸತಿ ತತ್ತೇನ ಮಂತ್ರಪಾಠೇನ ಸವಿತ್ರಾನುಜ್ಞಾತಾ ಏವ ಸಂತ ಏನಮಗ್ನಿಂ ಮಂಥಂತಿ । ತಸ್ಮಾತ್ಕಾರಣಾತ್ಸಾವಿತ್ರೀಮೃಚಮನುಬ್ರೂಯಾತ್ ॥**

ಅಧ್ವರ್ಯುವು ಹೋತೃವನ್ನು ಪ್ರೇರಿಸಿ— **ಅಗ್ನಯೇ ಮಥ್ಯಮಾನಾಯಾನುಬ್ರೂಹಿ** ಎಂಬ ಪ್ರೈಷಮಂತ್ರವನ್ನು ಹೇಳುವನು. ಪ್ರೈಷಮಂತ್ರವೆಂದರೆ ಯಜ್ಞದಲ್ಲಿ ನಾನಾ ಕರ್ಮಗಳನ್ನು ಮಾಡುವಾಗ ಅಧ್ವರ್ಯು ಮೊದಲಾದವರು ಸಂಬಂಧಪಟ್ಟ ಜನರನ್ನು ಪ್ರೇರಿಸಿ ಇಂತಿಂತಹ ಕರ್ಮವನ್ನು (ಅಥವಾ ಹೋಮವನ್ನು) ಮಾಡು ಎಂದು ಆಜ್ಞಾರೂಪವಾಗಿ ವಿಧಿಸುವ ಮಂತ್ರಪಠನವು. ಅದನ್ನು ಕೇಳಿ ಹೋತೃವು—

**ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ ।**
**ಸದಾವನ್ಭಾಗಮೀಮಹೇ ॥** (ಋ. ಸಂ. ೧-೨೪-೩)

ಎಂಬ ಸವಿತೃದೇವತಾಕವಾದ ಮಂತ್ರವನ್ನು ಪಠಿಸುವನು. ಇಲ್ಲಿ ಒಂದು ಸಂಶಯವು ತಲೆದೋರುವುದು. ಅಗ್ನಿಮಂಥನಕ್ಕಾಗಿ ಆವಶ್ಯಕವಾದ ಮಂತ್ರವನ್ನು ಪಠಿಸಬೇಕೆಂದು ಅಧ್ವರ್ಯುವು ಹೋತೃವಿಗೆ ನಿರ್ದೇಶಮಾಡಿದ್ದರೂ, ಹಾಗೆ ಮಾಡದೆ ಹೋತೃವು ಸವಿತೃದೇವತಾಪರವಾದ ಋಕ್ಕನ್ನು ಪಠಿಸಲು ಕಾರಣವೇನು? ಇದು ತಪ್ಪಲ್ಲವೇ, ಎಂದರೆ ಹಾಗಲ್ಲ.

**ಸವಿತಾ ವೈ ಪ್ರಸವಾನಾಮೀಶೇ**—ಎಂಬ ವಾಕ್ಯದಂತೆ ಯಜ್ಞಾದಿಸಮಸ್ತಕರ್ಮಗಳಲ್ಲಿಯೂ ಯಾವುದನ್ನು ಉತ್ಪತ್ತಿಮಾಡಬೇಕಾದರೂ ಆ ಉತ್ಪತ್ತಿಗೆಲ್ಲಾ ಸವಿತೃವು ಅಧಿಪತಿಯಾಗಿರುವುದರಿಂದ ಇಲ್ಲಿ ಅಗ್ನಿಮಥನವೆಂಬ ಕಾರ್ಯಾರಂಭಕ್ಕಾಗಿ ಸವಿತೃದೇವತೆಯ ಅನುಜ್ಞೆಯನ್ನು ಕೇಳುವುದು ಸಹಜವಾಗಿದೆ. ಅದಕ್ಕಾಗಿಯೇ ಹೋತೃವು ಮೊದಲು ಸವಿತೃದೇವತಾಪರವಾದ ಋಕ್ಕನ್ನು ಪಠಿಸಿರುವನು.

**ಮಹೀ ದ್ಯೌಃ ಪೃಥಿವೀ ಚ ನ ಇತಿ ದ್ಯಾವಾಪೃಥಿವೀಯಾಮನ್ವಾಹ । ತದಾಹುರ್ಯದಗ್ನಯೇ ಮಥ್ಯಮಾನಾಯಾನುವಾಚಾಹಾಥ ಕಸ್ಮಾದ್ದ್ಯಾವಾಪೃಥಿವೀಯಾಮನ್ವಾಹೇತಿ ದ್ಯಾವಾಪೃಥಿವೀಭ್ಯಾಂ ವಾ ಏತಂ ಜಾತಂ ದೇವಾಃ ಪರ್ಯಗೃಹ್ಣಂಸ್ತಾಭ್ಯಾಮೇವಾದ್ಯಾಪಿ ಪರಿಗೃಹೀತಸ್ತಸ್ಮಾದ್ದ್ಯಾವಾಪೃಥಿವೀಯಾಮನ್ವಾಹ ॥**

**ದ್ವಿತೀಯಾಮೃಚಂ ವಿಧತ್ತೇ—ದ್ಯೌಶ್ಚ ಪೃಥಿವೀ ಚ ದೇವತೇ ಯಸ್ಯಾ ಋಚಃ ಸೇಯಂ ದ್ಯಾವಾಪೃಥಿವೀಯಾ । ಅತ್ರಾಪಿ ಪೂರ್ವವಚ್ಚೋದ್ಯಪರಿಹಾರೌ ದರ್ಶಯತಿ ॥ ಪುರಾ ಕದಾಚಿದ್ದೇವಾ ಉತ್ಪನ್ನಮಗ್ನಿಂ ದ್ಯಾವಾಪೃಥಿವೀಭ್ಯಾಂ ಪರಿಗೃಹೀತವಂತಃ । ಅದ್ಯಾಪಿ ತಾಭ್ಯಾಮೇವ ಪರಿಗೃಹೀತೋ ದೃಶ್ಯತೇ ॥ ಪಾವಕೋಽಗ್ನಿರ್ಭೂಮ್ಯಾ ಪರಿಗೃಹೀತಃ ಪ್ರಕಾಶಕಸೂರ್ಯರೂಪೋಽಗ್ನಿರ್ದಿವಾ ಪರಿಗೃಹೀತಃ । ತಸ್ಮಾದಗ್ನಿಪರಿಗ್ರಹಾಯ ದ್ಯಾವಾಪೃಥಿವೀ ದೇವತಾಕಾಯಾ ಋಚೋಽನುವಚನಂ ಯುಕ್ತಂ ॥**

ಅನಂತರ ಹೋತೃವು ಮುಂದುವರೆದು—

**ಮಹೀ ದ್ಯೌಃ ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಂ ।**
**ಪಿಪೃತಾಂ ನೋ ಭರೀಮಭಿಃ ॥**　　(ಋ.ಸಂ. ೧-೨೨-೧೩)

ಎಂಬ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸುವನು. ಇದಕ್ಕೆ ಕೆಲವರ ಆಕ್ಷೇಪಣೆಯು—ಅಗ್ನಿಮಥನಕಾರ್ಯಕ್ಕಾಗಿ ಅಗ್ನಿಪರವಾದ ಋಕ್ಕನ್ನು ಹೇಳಿಂದರೆ ಈ ಹೋತೃವು ದ್ಯಾವಾಪೃಥಿವೀಪರವಾದ ಋಕ್ಕನ್ನು ಪಠಿಸುವುದೇತಕ್ಕೆ? ಎಂದರೆ, ಹಿಂದೆ ದೇವತೆಗಳು, ಅಗ್ನಿಯು ಉತ್ಪನ್ನನಾದಾಗ ಅವನನ್ನು ದ್ಯಾವಾಪೃಥಿವಿಗಳ (ಭೂಮಿಸ್ವರ್ಗಗಳ) ಮಧ್ಯದಲ್ಲಿ ಪರಿಗ್ರಹಿಸಿರುವರು. ಆದ್ದರಿಂದ ಈಗಲೂ ಹಾಗೆಯೇ ಮಾಡಬೇಕು. ಪಾವಕನಾಮನಾದ ಅಗ್ನಿಯು ಭೂಮಿಯಿಂದಲೂ ಸೂರ್ಯರೂಪನಾದ ಅಗ್ನಿಯು ಸ್ವರ್ಗದಿಂದಲೂ ಪರಿಗ್ರಹಿಸಲ್ಪಟ್ಟಿರುವುದರಿಂದ ಅಗ್ನಿಪರಿಗ್ರಹಕ್ಕಾಗಿ ದ್ಯಾವಾಪೃಥಿವೀದೇವತಾಕವಾದ ಋಕ್ಕನ್ನು ಪಠಿಸಬೇಕಾದುದು ನ್ಯಾಯವಾಗಿದೆ.

**ತ್ವಾಮಗ್ನೇ ಪುಷ್ಕರಾದಧೀತಿ ತೃಚಮಾಗ್ನೇಯಂ ಗಾಯತ್ರಮನ್ವಾಹಾಗ್ನೌ ಮಥ್ಯಮಾನೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ । ಅಥರ್ವಾ ನಿರಮಂಥತೇತಿ ರೂಪ-**

ಸಮೃದ್ಧಮೇತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ
ಯತ್ಕರ್ಮ ಕ್ರಿಯಮಾಣಮೃಗಭಿವದತಿ ॥

ತೃತೀಯಾದ್ಯಾಸ್ತಿಸ್ರ ಋಚೋ ವಿಧತ್ತೇ — ಅಸ್ಯ ತೃಚಸ್ಯಾಗ್ನಿದೇವತಾಕತ್ವೇನ ನೈಯಧಿ-ಕರಣ್ಯಚೋದ್ಯಾಸುದಸಿರಾತ್ಸ್ವಯೈವೇತ್ಯಾದಿನಾ ಪ್ರಶಂಸೈವ ಕ್ರಿಯತೇ । ಗಾಯತ್ರೀ-ಛಂದೋಽಗ್ನೇಃ ಸ್ವಕೀಯಮುಭಯೋಃ ಪ್ರಜಾಪತಿಮುಖಜನ್ಯತ್ವಾತ್ ॥ ಪ್ರಥಮಾಯಾಮೃಚಿ ದ್ವಿತೀಯಪಾದಮನೂದ್ಯ ಪ್ರಶಂಸತಿ — ಅಥರ್ವಾಖ್ಯಋಷಿರ್ನಿಃಶೇಷೇಣ ಮಂಥನಂ ಕೃತವಾನಿ-ತ್ಯುಚ್ಯತೇ — ತದೇತದ್ವಚನಮಗ್ನಿಮಂಥನಸ್ಯಾನುಕೂಲ್ಯೇನ ರೂಪೇಣ ಸಮೃದ್ಧಂ ॥

ಬಳಿಕ ಹೋತೃವು ಅಗ್ನಿಮಥನಕ್ಕಾಗಿ ಅಗ್ನಿದೇವತಾಕವಾದ—

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।**
**ಮೂರ್ಧ್ನೋ ವಿಶ್ವಸ್ಯ ವಾಘತಃ ॥**
**ತಮು ತ್ವಾ ದಧ್ಯಙ್ಙೃಷಿಃ ಪುತ್ರ ಈಧೇ ಅಥರ್ವಣಃ ।**
**ವೃತ್ರಹಣಂ ಪುರಂದರಂ ॥**
**ತಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಂ ।**
**ಧನಂಜಯಂ ರಣೇರಣೇ ॥** (ಋ.ಸಂ. ೬-೧೬-೧೩, ೧೪, ೧೫)

ಎಂಬ ಮೂರು ಋಕ್ಕುಗಳನ್ನು ಪಠಿಸುವನು. ಈ ಮೂರು ಋಕ್ಕುಗಳೂ ಅಗ್ನಿದೇವತೆಯನ್ನೇ ಸ್ತುತಿಸುವವು; ಮತ್ತು ಅಗ್ನಿಗೆ ಪ್ರಿಯವಾದ ಗಾಯತ್ರೀಛಂದಸ್ಸಿನ ಋಕ್ಕುಗಳೇ ಆಗಿರುವವು. ಏಕೆಂದರೆ ಅಗ್ನಿಯೂ, ಗಾಯತ್ರೀಛಂದಸ್ಸೂ ಎರಡೂ ಪ್ರಜಾಪತಿಯ ಮುಖದಿಂದಲೇ ಉತ್ಪನ್ನವಾಗಿರುವುದರಿಂದ ಗಾಯತ್ರೀಛಂದಸ್ಸು ಅಗ್ನಿಗೆ ಸ್ವಕೀಯಛಂದಸ್ಸೆಂದು ಹೇಳಲ್ಪಡುವುದು. ಈ ಮೊದಲನೆಯ ಋಕ್ಕಿನ ಎರಡನೆಯ ಪಾದದಲ್ಲಿ **ಅಥರ್ವಾ ನಿರಮಂಥತ**—ಅಥರ್ವಾ ಎಂಬ ಋಷಿಯು ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದನು ಎಂದು ಹೇಳಿದೆಯಷ್ಟೆ. ಈ ಅಥರ್ವಾ ಎಂಬ ಋಷಿಯು ಎಲ್ಲರಿಗಿಂತ ಮೊದಲು ಅಗ್ನಿಯನ್ನು ಅರಣಿಗಳಲ್ಲಿ ಮಥಿಸಿ ಉತ್ಪತ್ತಿಮಾಡಿದನು. ಆದ್ದರಿಂದ ಅಥರ್ವಣಋಷಿಗೆ ಪುತ್ರನಾಗಿ ಜನಿಸಿದ ಅಗ್ನಿಯು ಯಜ್ಞದಲ್ಲಿ ಸಮೃದ್ಧನಾಗಿ ಬೆಳೆದು ವೃದ್ಧಿಯನ್ನು ಹೊಂದುವನು ಎಂಬ ಪ್ರಾರ್ಥನೆ ಇದೆ. ಈ ಕಾರಣಕ್ಕಾಗಿ ಅಗ್ನಿಯು ಅರಣಿಗಳಿಂದ ರೂಪಗೊಂಡು ಉತ್ಪನ್ನನಾಗಿ (ಎಂದರೆ ಸಂಪೂರ್ಣ ಅಗ್ನಿರೂಪದಿಂದ) ಯಜ್ಞಕರ್ಮದಲ್ಲಿ ಅಭಿವೃದ್ಧಿಗೊಂಡು (ದೊಡ್ಡದಾಗಿ ಪ್ರಜ್ವಲಿಸುತ್ತಾ) ಪ್ರಕಾಶಿಸಲಿ ಎಂಬ ಅರ್ಥವಿರುವ ಈ ಋಕ್ಕುಗಳನ್ನು ಪಠಿಸುವುದು ಸಹಜವಾಗಿದೆ. ಯಜ್ಞದಲ್ಲಿ ಯಾವ ಮಂತ್ರವನ್ನು ಪಠಿಸಿದರೂ ಆ ಮಂತ್ರದ ಅರ್ಥವು ಆಯಾ ಕರ್ಮಕ್ಕನುಗುಣವಾಗಿ ಅದನ್ನು ವಿವರಿಸುವಂತಿರಬೇಕು. ಇದನ್ನು ರೂಪಸಮೃದ್ಧಿ ಎಂದು ಹೇಳುವರು.

ಸ ಯದಿ ನ ಜಾಯೇತ ಯದಿ ಚಿರಂ ಜಾಯೇತ ರಾಕ್ಷೋಘ್ನ್ಯೋ
ಗಾಯತ್ರ್ಯೋಽನೂಚ್ಯಾಃ ಅಗ್ನೇ ಹಂಸಿ ನ್ಯತ್ರಿಣಮಿತ್ಯೇತಾಃ
ರಕ್ಷಸಾಮಪಹತ್ಯೈ ರಕ್ಷಾಂಸಿ ವಾ ಏನಂ ತರ್ಹ್ಯಾಲಭಂತೇ
ಯರ್ಹಿ ನ ಜಾಯತೇ ಯರ್ಹಿ ಚಿರಂ ಜಾಯತೇ ॥

ಇತ್ಥಮುಕ್ತಾಸ್ವಗ್ನಿಮಂಥನಾಸ್ವೃಕ್ಷು ಪಂಚಸ್ವನೂಕ್ತಾಸು ಷಷ್ಠಪ್ರಭೃತೀನಾಮೃಚಾಂ ಅನುವಚನಾತ್ಪೂರ್ವಂ ನೈಮಿತ್ತಿಕಾಃ ಕಾಶ್ಚಿದೃಚೋ ವಿಧತ್ತೇ–ಪಂಚಾನಾಮೃಚಾಮನುವಚನೇ ಸತಿ ತಸ್ಮಿನ್ಕಾಲೇ ಯದಿ ಸೋಽಗ್ನಿರ್ನೋತ್ಪದ್ಯೇತ ತತ ಉತ್ಪತ್ತಿಲಿಂಗಂ ಧೂಮಾದಿರೂಪಂ ಯದಿ ನ ದೃಶ್ಯೇತ ದೃಶ್ಯಮಾನೇಽಪಿ ವಾ ಲಿಂಗೇ ಯದಿ ಸಹಸಾ ನೋತ್ಪದ್ಯತೇ ಕಿಂತು ವಿಲಂಬೇನ ತದಾನೀಂ ಸಹಸಾ ತದುತ್ಪತ್ತ್ಯರ್ಥಂ ರಕ್ಷೋಹನನಲಿಂಗೋಪೇತಾ ಗಾಯತ್ರೀ ಛಂದಸ್ಕಾ ಋಚೋಽನುಬ್ರೂಯಾತ್ ॥ ಪ್ರತೀಕಗ್ರಹಣೇನ ತಾ ಋಚೋ ದರ್ಶಯತಿ । ಅಗ್ನೇ ಹಂಸೀ-ತ್ಯಾದಿಕೇ ಸೂಕ್ತೇ ಸಮರ್ಚೋ ವಿದ್ಯಂತೇ ॥ ಏತೇ ರಕ್ಷೋಹನನಲಿಂಗಕಾಃ ॥ ತಾಸಾಮನು-ವಚನೇ ಪ್ರಯೋಜನಮಾಹ—ಕಃ ಪ್ರಸಂಗೋ ರಕ್ಷಸಾಮಿತ್ಯಾಶಂಕ್ಯಾಹ । ಯಸ್ಮಿನ್ಕಾಲೇ ಮಥ್ಯಮಾನಸ್ಯ ವಹ್ನೇಃ ಸರ್ವಥಾನುತ್ಪತ್ತಿರ್ವಿಲಂಬೋ ವಾ ಭವೇತ್ತದಾನೀಮೇನಂ ವಹ್ನಿಂ ರಕ್ಷಾಂಸ್ಯೇವಾಽಽಲಭಂತೇ ಸಂಸ್ಪೃಶಂತಿ ಪ್ರತಿಬಧ್ನಂತೀತ್ಯರ್ಥಃ ॥ ತತೋ ರಕ್ಷೋಹನನಾಯ ತಾ ಋಚಃ ಪಠನೀಯಾಃ ॥

ಹಿಂದೆ ಹೇಳಿದ ಐದು ಋಕ್ಕುಗಳನ್ನು ಪಠಿಸುತ್ತಾ ಅರಣಿಗಳಲ್ಲಿ ಅಗ್ನಿಮಂಥನವನ್ನು ಮಾಡಬೇಕು. ಹೀಗೆ ಮಾಡಿದರೂ ಅಗ್ನಿಯು ಉತ್ಪತ್ತಿಯಾಗದೆ ಇದ್ದರೆ ಅಥವಾ ಬಹಳಕಾಲದವರೆಗೂ ಹೊಗೆ ಮಾತ್ರ ಬರುತ್ತಾ ನಿಧಾನವಾಗಿ ಉತ್ಪತ್ತಿಯಾದರೆ ಆಗ ಗಾಯತ್ರೀಛಂದಸ್ಸಿನ ಅಗ್ನೇ ಹಂಸಿ ಎಂಬ ರಾಕ್ಷೋಘ್ನಸೂಕ್ತವನ್ನು ಪಠಿಸಬೇಕು—

ಅಗ್ನೇ ಹಂಸಿ ನ್ಯ೧ ತ್ರಿಣಂ ದೀದ್ಯನ್ಮರ್ತ್ಯೇಷ್ವಾ ।
ಸ್ವೇ ಕ್ಷಯೇ ಶುಚಿವ್ರತ ॥
ಉತ್ತಿಷ್ಠಸಿ ಸ್ವಾಹುತೋ ಘೃತಾನಿ ಪ್ರತಿಮೋದಸೇ ।
ಯತ್ತ್ವಾ ಸ್ರುಚಃ ಸಮಸ್ಥಿರನ್ ॥
ಸ ಆಹುತೋ ವಿ ರೋಚತೇಽಗ್ನಿರೀಳೇನ್ಯೋ ಗಿರಾ ।
ಸ್ರುಚಾ ಪ್ರತೀಕಮಜ್ಯತೇ ॥
ಘೃತೇನಾಗ್ನಿಃ ಸಮಜ್ಯತೇ ಮಧುಪ್ರತೀಕ ಆಹುತಃ ।
ರೋಚಮಾನೋ ವಿಭಾವಸುಃ ॥
ಜರಮಾಣಃ ಸಮಿಧ್ಯಸೇ ದೇವೇಭ್ಯೋ ಹವ್ಯವಾಹನ ।
ತ್ವಂ ತ್ವಾ ಹವಂತ ಮರ್ತ್ಯಾಃ ॥
ತಂ ಮರ್ತಾ ಅಮರ್ತ್ಯಂ ಘೃತೇನಾಗ್ನಿಂ ಸಪರ್ಯತ ।
ಅದಾಭ್ಯಂ ಗೃಹಪತಿಂ ॥
ಅದಾಭ್ಯೇನ ಶೋಚಿಷಾಗ್ನೇ ರಕ್ಷಸ್ತ್ವಂ ದಹ ।
ಗೋಪಾ ಋತಸ್ಯ ದೀದಿಹಿ ॥
ಸ ತ್ವಮಗ್ನೇ ಪ್ರತೀಕೇನ ಪ್ರತ್ಯೋಷ ಯಾತು ಧಾನ್ಯಃ ।
ಉರುಕ್ಷಯೇಷು ದೀದ್ಯತ್ ॥

ತಂ ತ್ವಾ ಗೀರ್ಭಿರುರುಕ್ಷಯಾ ಹವ್ಯವಾಹಂ ಸಮೀಧಿರೇ ।
ಯಜಿಷ್ಠಂ ಮಾನುಷೇ ಜನೇ ॥

(ಋ. ಸಂ. ೧೦-೧೧೮-೧ ರಿಂದ ೯)

ಈ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವವು. ಇವುಗಳು ಯಜ್ಞವಿಘ್ನಕಾರಿಗಳಾದ ರಾಕ್ಷಸರನ್ನು ಓಡಿಸಿ ಅವರನ್ನು ಕೊಲ್ಲುವವು. ಆದ್ದರಿಂದ ಈ ಋಕ್ಕುಗಳನ್ನು ಪಠಿಸುವುದರಿಂದ ರಾಕ್ಷಸರು ನಾಶವಾಗುವರು. ಅಗ್ನಿಯನ್ನು ಮಥನಮಾಡುವ ಕಾಲದಲ್ಲಿ ಅಗ್ನಿಯು ಉತ್ಪನ್ನನಾಗದಿರುವುದೂ ಅಥವಾ ವಿಳಂಬವಾಗಿ ಉತ್ಪನ್ನನಾಗುವುದೂ ಸಹ ಏತಕ್ಕೆಂದರೆ, ಈ ರಾಕ್ಷಸರು ಅಗ್ನಿಯನ್ನು ಪ್ರತಿಬಂಧಿಸಿ ಅವನನ್ನು ಬಿಡದೆ ತಮ್ಮ ಅಧೀನದಲ್ಲಿಟ್ಟುಕೊಂಡಿರುವರು. ಅವರಿಂದ ಅಗ್ನಿಯನ್ನು ಬಿಡುಗಡೆಮಾಡುವುದಕ್ಕಾಗಿ ರಾಕ್ಷಸರ ಹನನವು ಅವಶ್ಯಕವು. ಅದಕ್ಕಾಗಿ ಈ ಒಂಭತ್ತು ಋಕ್ಕುಗಳ ರಕ್ಷೋಹನನಸೂಕ್ತವನ್ನು ಪಠಿಸಬೇಕೆಂದು ಹೇಳಿರುವುದು.

**ಸ ಯದ್ಯೇಕಸ್ಯಾಮೇವಾನೂಕ್ತಾಯಾಂ ಜಾಯೇತ ಯದಿ ದ್ವಯೋ-ರಥೋತ ಬ್ರುವಂತು ಜಂತವ ಇತಿ ಜಾತಾಯ ಜಾತವತೀಮ-ಭಿರೂಪಾಮನುಬ್ರೂಯಾತ್ ॥**

**ನೈಮಿತ್ತಿಕಾ ಋಚೋ ವಿಧಾಯ ಪ್ರಕೃತಾಮೇವ ಷಷ್ಠೀಮೃಚಂ ವಿಧತ್ತೇ— ರಾಕ್ಷೋಘ್ನೀನಾಮೃಚಾಂ ಮಧ್ಯೇ ಯದ್ಯೇಕಸ್ಯಾಮೇವ ಪಠಿತಾಯಾಂ ಸ ವಹ್ನಿರ್ಜಾಯೇತ ಯದಿವಾ ದ್ವಯೋಃ ಪಠಿತಯೋರುತ್ಪದ್ಯೇತ ॥ ಏವಂ ತೃತೀಯಾದೀನಾಮುಪಲಕ್ಷಣಂ ॥ ಅಥೇದಾನೀಮುತ್ಪತ್ತಿಲಕ್ಷಣಏವ, ಉತ ಬ್ರುವಂತ್ವೇತಾಮನುಬ್ರೂಯಾತ್ ॥ ಸಾ ಚ ಜಾತಾಯಾಭಿರೂಪಾ ಜಾತಸ್ಯಾಗ್ನೇರನುಕೂಲಾ॥ ತದೇವಾಽಽನುಕೂಲ್ಯಂ ಜಾತವತೀಮಿತಿ ಶಬ್ದೇನ ಸ್ಪಷ್ಟೀಕ್ರಿಯತೇ । ಜಾತಂ ಜನ್ಮವಾಚಿಪದಂ ತದಸ್ಯಾಮಸ್ತೀತಿ ಜಾತವತೀ ತಸ್ಯಾಋಚೋ ದ್ವಿತೀಯಃ ಪಾದ ಏವಂ ಪಠ್ಯತೇ—‘ ಉದಗ್ನಿರ್ವೃತ್ರಹಾಽಜನಿ ’ ಇತಿ । ತಸ್ಮಿನ್ನಜನೀತಿ ಜನ್ಮವಾಚಕಂ ಪದಮಸ್ತಿ ॥**

ರಕ್ಷೋಘ್ನಸೂಕ್ತವನ್ನು ಪಠಿಸುತ್ತಿರುವಾಗ ಮಧ್ಯದಲ್ಲಿ ಒಂದು ಋಕ್ಕನ್ನು ಪಠಿಸಿದಮೇಲೆ ಅಗ್ನಿಯು ಉತ್ಪನ್ನನಾದರೆ ಅಥವಾ ಎರಡು, ಮೂರು ಇತ್ಯಾದಿ ಋಕ್ಕುಗಳ ಪಠನಾನಂತರ ಉತ್ಪನ್ನನಾದರೆ ಆ ಕ್ಷಣವೇ,

ಉತ ಬ್ರುವಂತು ಜಂತವ ಉದಗ್ನಿರ್ವೃತ್ರಹಾಜನಿ ।
ಧನಂಜಯೋ ರಣೇರಣೇ ॥ (ಋ. ಸಂ. ೧-೭೪-೩)

ಎಂಬ ಋಕ್ಕನ್ನು ಕೂಡಲೇ ಪಠಿಸಬೇಕು. ಏಕೆಂದರೆ, ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವ ಅಗ್ನಿಯ ವಿಷಯವು ಉತ್ಪತ್ತಿಗೆ ಅನುಕೂಲವಾಗಿರುವುದು. ಈ ಅನುಕೂಲವಾಗಿರುವುದೆಂಬ ವಿಷಯವನ್ನು ಹೇಳುವುದಕ್ಕಾಗಿಯೇ ಜಾತವತೀಂ ಎಂಬ ಶಬ್ದಪ್ರಯೋಗವಿರುವುದು. ಅನಂತರ **ಉದಗ್ನಿರ್ವೃತ್ರಹಾಜನಿ** ಎಂಬ ಎರಡನೆಯ ಪಾದದಲ್ಲಿ **ಅಜನಿ**—ಉತ್ಪನ್ನನಾದನು ಎಂಬ ಜನ್ಮಸೂಚಕವಾದ ಪದವು ಪಠಿತವಾಗಿದೆ. ಆದುದರಿಂದ ಅಗ್ನಿಯು ಉತ್ಪತ್ತಿಯಾದಕೂಡಲೇ ಅನುರೂಪವಾದ ಈ ಋಕ್ಕನ್ನು ಆ ಕೂಡಲೇ ಪಠಿಸಬೇಕೆಂದು ಹೇಳಿರುವುದು.

ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ಆ ಯಂ ಹಸ್ತೇನ ಖಾದಿನಮಿತಿ ಹಸ್ತಾಭ್ಯಾಂ ಹ್ಯೇನಂ ಮಂಥಂತಿ ಶಿಶುಂ ಜಾತಮಿತಿ ಶಿಶುರಿವ ವಾ ಏಷ ಪ್ರಥಮಜಾತೋ ಯದಗ್ನಿ ನ ಬಿಭ್ರತಿ ವಿಶಾಮಗ್ನಿಂ ಸ್ವಧ್ವರಮಿತಿ ಯದ್ವೈ ದೇವಾನಾಂ ನೇತಿ ತದೇಷಾಮೋ೩ ಮಿತಿ ಪ್ರ ದೇವಂ ದೇವವೀತಯೇ ಭರತಾ ವಸುವಿತ್ತಮಮಿತಿ ಪ್ರಹ್ರಿಯಮಾಣಾಯಾಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ಆ ಸ್ವೇ ಯೋನೌ ನಿಷೀದತ್ವಿತಿ ಏಷ ಹ ವಾ ಅಸ್ಯ ಸ್ವೋ ಯೋನಿರ್ಯದಗ್ನಿರಗ್ನೇಃ ॥

ಅಸ್ಯಾ ಋಚೋಽಭಿರೂಪತ್ವಂ ಪ್ರಶಂಸತಿ—ಸಪ್ತಮೀಮೃಚಂ ವಿಧತ್ತೇ॥ ಅನುಬ್ರೂಯಾದಿತಿ ಶೇಷಃ। ಸಾ ಚ ಸಂಹಿತಾಯಾಂ ಪಠಿತಾ—'ಆಯಂ ಹಸ್ತೇನ ಖಾದಿನಂ ಶಿಶುಂ ಜಾತಂ ನ ಬಿಭ್ರತಿ। ವಿಶಾಮಗ್ನಿಂ—ಸ್ವಧ್ವರಂ' ಇತಿ॥ ತಸ್ಯಾ ಅಯಮರ್ಥಃ। ಯಂ ಶಬ್ದಃ ಪ್ರಸಿದ್ಧವಾಚೀ ನಶಬ್ದ ಉಪಮಾರ್ಥಃ। ಯಂ ಮಂಥನೇನ ಪ್ರಸಿದ್ಧಮಗ್ನಿಂ ಹಸ್ತೇನ ಹಸ್ತ ಇವ ಋತ್ವಿಜ ಅಬಿಭ್ರತಿ ಸಮಂತಾದ್ಧಾರಯಂತಿ॥ ತತ್ರರ್ತ್ವಿಜಾಂ ಹಸ್ತಾಭ್ಯಾಂ ಮಂಥನಂ ಹಸ್ತಧಾರಣಸದೃಶಂ ಶಿಶುಂ ಜಾತಂ ನೇತ್ಯನೇನ ದೃಷ್ಟಾಂತೋಽಭಿಧೀಯತೇ॥ ಜಾತಂ ಶಿಶುಮಿವ॥ ಯಥಾ ಸದ್ಯಃ ಸಮುತ್ಪನ್ನಂ ಶಿಶುಂ ಹಸ್ತಾಭ್ಯಾಂ ಧಾರಯಂತಿ ತದ್ವತ್॥ ಕೀದೃಶಮಗ್ನಿ ವಿಶ್ವಾಸ್ವಧ್ವರಂ, ಶೋಭನೋಽಧ್ವರೋ ಯಾಗೋ ಯಸ್ಯಾಗ್ನೇಃ ಸೋಽಯಂ ಸ್ವಧ್ವರಃ॥ ವಿಶಾಂ ಪ್ರಜಾನಾಮೃತ್ವಿಗ್ಯಜಮಾನರೂಪಾಣಾಂ ಅಧ್ವರನಿಷ್ಪಾದಕಂ। ಪುನರಪಿ ಕೀದೃಶಂ। ಖಾದಿನಂ ಹವಿರಾದೀನಾಂ ಭಕ್ಷಕಮಿತಿ॥ ಅಸ್ಯಾಮೃಚಿ ಪ್ರಥಮಪಾದೇ ಹಸ್ತಶಬ್ದೇನ ವಿವಕ್ಷಿತಮರ್ಥಂ ದರ್ಶಯತಿ—ಹಿ ಯಸ್ಮಾದೇನಮಗ್ನಿಂ ಹಸ್ತಾಭ್ಯಾಂ ಮಂಥಂತಿ ತಸ್ಮಾದ್ಧಸ್ತೇ ಧಾರಣಮುಪಪದ್ಯತೇ॥ ದ್ವಿತೀಯಪಾದೇ ಪೂರ್ವಭಾಗಮನೂದ್ಯ ತಾತ್ಪರ್ಯಂ ದರ್ಶಯತಿ—ಯೋಽಗ್ನಿರ್ಮಂಥನೇನ ಪ್ರಥಮಮುತ್ಪನ್ನ ಏಷ ಶಿಶುನಾ ಸದೃಶ ಇತ್ಯೇತಸ್ಯ ಭಾಗಸ್ಯ ತಾತ್ಪರ್ಯಂ॥ ದ್ವಿತೀಯಭಾಗಸ್ಯೋತ್ತರಭಾಗಂ ತೃತೀಯಪಾದಂ ಚಾನುವದತಿ॥ ಅತ್ರ ನೇತಿ ಪದಂ ವ್ಯಾಚಷ್ಟೇ—ದೇವಾನಾಂ ಸಂಬನ್ಧಿನಿ ಮಂತ್ರೇ ಕ್ವಚಿತ್ಕ್ವಚಿನ್ನೇತಿ ಪದಂ ಯದೇವಾಸ್ತಿ ತದೇಷಾಂ ದೇವಪ್ರತಿಪಾದಕಾನಾಂ ಮಂತ್ರಾಣಾಂ ನೇತಿ ಪದಮೋಮಿತ್ಯಸ್ಮಿನ್ನರ್ಥೇ ವರ್ತತೇ॥ ಲೋಕೇ ಪ್ರತಿಷಿದ್ಧವಾಚೀ ನೇತಿ ಶಬ್ದೋ ವೇದೇಂಗೀಕಾರವಾಚೀ। ಸ ಓಮಿತ್ಯಸ್ಯ ಪದಸ್ಯಾರ್ಥೇ ವರ್ತತೇ। ತಥಾ ಸತಿ ಲೋಕವೈಪರೀತ್ಯಸ್ಯ ದೃಷ್ಟತ್ವಾದುಪಮಾರ್ಥೋಽಪಿ ವಕ್ತುಂ ಶಕ್ಯತೇ॥ ತದೇತದುಭಯಂ ನಿರುಕ್ತಕಾರೇಣೋಕ್ತಂ। 'ನೇತಿ ಪ್ರತಿಷೇಧಾರ್ಥೀಯೋ ಭಾಷಾಯಾಂ' ಇತಿ। 'ಉಪರಿಷ್ಟಾದುಪಚಾರ ಉಪಮಾರ್ಥೀಯಃ' ಇತಿ ಚ। ಅಯಂ ಚ ನೇತಿ ಶಬ್ದಃ ಶಿಶುಂ ಜಾತಂ ನೇತ್ಯುಪಮೇಯಾದುಪರಿಷ್ಟಾತ್ಪ್ರಯುಜ್ಯತೇ॥ ತಸ್ಮಾದುಪಮಾರ್ಥೀ।

ದೇವಾನಾಮಿತ್ಯತ್ರ ದೇವಪ್ರತಿಪಾದಕಾನಾಂ ಮಂತ್ರಾಣಾಂ ಸಂಬಂಧೀತಿ ವ್ಯಾಖ್ಯಾತಂ ॥ ಯದ್ವಾ ದಕಾರವಕಾರಯೋರ್ವಿಪರ್ಯಾಸೇನ ವೇದಾನಾಂ ಸಂಬಂಧೀತಿ ವ್ಯಾಖ್ಯೇಯಂ ।

ಅಷ್ಟಮೀಮೃಚಂ ವಿಧತ್ತೇ— ಅನುವಕ್ತವ್ಯೇತಿ ಶೇಷಃ । ಆಹವನೀಯೇ ಪ್ರಕ್ಷಿಪ್ಯಮಾಣೋಽಯಂ ಮಥಿತೋಽಗ್ನಿಃ ಪ್ರಹ್ರಿಯಮಾಣಸ್ತಸ್ಯೇಯಮೃಗನುರೂಪಾ ॥ ಕಥಮಿತಿ ಚೇತ್ತದುಚ್ಯತೇ ॥ ದೇವವೀತಯೇ ದೇವಾನಾಂ ಕಾಮಾಯಾಭಿಲಾಷಾಯ ವಸು ವಿತ್ತಂ ಹವಿರ್ಲಕ್ಷಣಧನಾಭಿಜ್ಞಂ ದೇವಂ ಮಥಿತಮಗ್ನಿಂ ಹೇ ಋತ್ವಿಜಃ ಪ್ರಭರತ, ಆಹವನೀಯೇ ಪ್ರಹರತ ಪ್ರಕ್ಷಿಪತ ॥ ತಸ್ಮಾತ್ಪ್ರಹ್ರಿಯಮಾಣಾನುರೂಪತ್ವಂ ॥ ಅತ್ರ ಜಾತಾಯಾನುಬ್ರೂಹೀತ್ಯಧ್ವರ್ಯುಣಾ ಪ್ರೇಷಿತೋ ಹೋತಾ ಪೂರ್ವೋಕ್ತಾಮುತ ಬ್ರುವಂತು ಜಂತವ ಇತ್ಯೇತಾಮನುಬ್ರೂಯಾತ್ ॥ ತಥಾ ಪ್ರಹ್ರಿಯಮಾಣಾಯಾನುಬ್ರೂಹೀತ್ಯೇವಂ ಪ್ರೇಷಿತಃ ಪ್ರ ದೇವಮಿತ್ಯಾದಿಕಾಮೃಚಂ ಬ್ರೂಯಾತ್ । ಏವಮುತ್ತರಾ ಅಪಿಚ । ತದೇತತ್ಸರ್ವಂ ತೈತ್ತಿರೀಯಾಃ ಸಂಗೃಹ್ಯಾಽಽಮನಂತಿ—'ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹ । ಸಾವಿತ್ರೀಮೃಚಮನ್ವಾಹ ಸವಿತೃಪ್ರಸೂತಾ ಏವೈನಂ ಮಂಥಂತಿ । ಜಾತಾಯಾನುಬ್ರೂಹಿ ಪ್ರಹ್ರಿಯಮಾಣಾಯಾನುಬ್ರೂಹೀತ್ಯಾಹ ಕಾಂಡೇ ಕಾಂಡ ಏವೈನಂ ಕ್ರಿಯಮಾಣೇ ಸಮರ್ಧಯತಿ ॥ ಗಾಯತ್ರೀಃ ಸರ್ವಾ ಅನ್ವಾಹ' ಇತಿ ॥ ಪ್ರದೇವಮಿತ್ಯಸ್ಯಾ ಋಚಃ ಪ್ರಹ್ರಿಯಮಾಣಾಭಿರೂಪತ್ವೇ ಯಜ್ಞಾಂಗಸಮೃದ್ಧಿರೂಪಂ ಪ್ರಯೋಜನಂ ದರ್ಶಯತಿ ಅಸ್ಯಾ ಋಚಸ್ತೃತೀಯಪಾದಮನುವದತಿ— ಅಯಂ ಮಥಿತೋಽಗ್ನಿರಾಗತ್ಯ ಸ್ವೇ ಯೋನೌ ಸ್ವಕೀಯಸ್ಥಾನ ಆಹವನೀಯರೂಪೇ । ನಿತರಾಮುಪವಿಶತ್ವಿತಿ ಪಾದಸ್ಯಾರ್ಥಃ ॥ ತಸ್ಮಿನ್ಪಾದೇ ಯೋನಿಪದಂ ವ್ಯಾಚಷ್ಟೇ ॥

ಆಹವನೀಯಾಖ್ಯೋ ಯೋಽಗ್ನಿರಸ್ತಿ, ಏಷ ವಾ ಅಸ್ಯ ಮಥಿತಸ್ಯಾಗ್ನೇಃ ಸ್ವಕೀಯಂ ಸ್ಥಾನಂ ॥

ಇದುವರೆಗೆ ಅಗ್ನಿಮಥನಕ್ಕಾಗಿ ಪ್ರಯೋಗಿಸಲ್ಪಡುವ ಆರು ಋಕ್ಕುಗಳನ್ನು (ಅಭಿತ್ವಾ, ಮಹೀ ದ್ಯೌಃ, ತ್ವಾಮಗ್ನೇ, ತಮುತ್ವಾ, ತಮುತ್ವಾ, ಉತ ಬ್ರುವಂತು ಎಂಬ ಆರು ಋಕ್ಕುಗಳನ್ನು) ಹೇಳಿ ಈಗ—

**ಆ ಯಂ ಹಸ್ತೇನ ಖಾದಿನಂ ಶಿಶುಂ ಜಾತಂ ನ ಬಿಭ್ರತಿ ।**
**ವಿಶಾಮಗ್ನಿಂ ಸ್ವಧ್ವರಂ ॥** (ಋ. ಸಂ. ೬-೧೬-೪೦)

ಎಂಬ ಏಳನೆಯ ಋಕ್ಕನ್ನು ಹೋತೃವು ಪಠಿಸುವನು. ಈ ಋಕ್ಕಿನ ಅರ್ಥವು ಈರೀತಿ ಇರುವುದು-- ಹೊಸದಾಗಿ ಹುಟ್ಟಿದ ಮಗುವನ್ನು ಕೈಗಳಿಂದ ಎತ್ತಿಕೊಳ್ಳುವಂತೆ ಅರಣಿಯಲ್ಲಿ ಉತ್ಪನ್ನನಾದ ಅಗ್ನಿಯನ್ನು ಋತ್ವಿಕ್ಕುಗಳು ಕೈಗಳಿಂದ ಎತ್ತಿಕೊಳ್ಳುವರು. ಈ ಶಿಶುರೂಪದ ಅಗ್ನಿಯು ಪ್ರಜೆಗಳು ಮಾಡುವ ಯಜ್ಞದಲ್ಲಿ ಮುಖ್ಯಪಾತ್ರವಹಿಸುವವನಾಗಿಯೂ ಹವಿರಾದಿಗಳನ್ನು ಭಕ್ಷಿಸುವವನಾಗಿಯೂ ಇರುವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಮೊದಲನೆಯ ಪಾದದಲ್ಲಿ ಹಸ್ತಶಬ್ದಪ್ರಯೋಗವು—ಈ ಅಗ್ನಿಯನ್ನು ಋತ್ವಿಕ್ಕುಗಳು ತಮ್ಮ ಹಸ್ತಗಳಿಂದ ಮಥಿಸುವರು. ಆದ್ದರಿಂದ ಕೈಗಳಲ್ಲಿ ಎತ್ತಿಕೊಳ್ಳುವರು ಎಂದು ಹೇಳಿದೆ. ಎರಡನೆಯ ಪಾದದಲ್ಲಿ ಆಗತಾನೇ ಉತ್ಪನ್ನನಾದ ಅಗ್ನಿಗೆ ಹುಟ್ಟಿದ ಮಗುವಿನ ದೃಷ್ಟಾಂತವನ್ನು ಹೇಳಿದೆ.

ಇಲ್ಲಿ ಉಪಯೋಗಿಸಿರುವ **ನ** ಎಂಬ ಪದವು **ಓಂ** ಎಂಬ ಅಂಗೀಕಾರಾರ್ಥವನ್ನು ಸೂಚಿಸುವುದು. ಲೋಕಭಾಷೆಯಲ್ಲಿ **ನ** ಎಂಬ ಶಬ್ದವು ನಿಷೇಧಾರ್ಥವನ್ನು ಮಾತ್ರ ಸೂಚಿಸುವುದು. ಆದರೆ ವೇದಗಳಲ್ಲಿ ಈ ಶಬ್ದವು ನಿಷೇಧಾರ್ಥವನ್ನೂ, ಉಪಮಾರ್ಥವನ್ನೂ, ಅಂಗೀಕಾರಾರ್ಥವನ್ನೂ ಸೂಚಿಸುವುದು. ಇಲ್ಲಿ ಅಂಗೀಕಾರಾರ್ಥವೆಂದೇ ಅಭಿಪ್ರಾಯವು. ಮತ್ತು ದೇವಾನಾಂ ಎಂಬ ಪದಕ್ಕೆ ದೇವತೆಗಳನ್ನು ಪ್ರತಿಪಾದಿಸುವ ಮಂತ್ರಗಳೆಂದಾಗಲಿ ಅಥವಾ ವರ್ಣವ್ಯತ್ಯಯದಿಂದ ವೇದಾನಾಂ—ವೇದಗಳ ಸಂಬಂಧವಾದ ಎಂದಾಗಲಿ ಅರ್ಥವಾಗಬಹುದು. ಇನ್ನು ಅಗ್ನಿಮಥನದ ಎಂಟನೆಯ ಋಕ್ಕನ್ನು ಎಂದರೆ—

**ಪ್ರ ದೇವಂ ದೇವವೀತಯೇ ಭರತಾ ವಸು ವಿತ್ತಮಂ ।**
**ಆ ಸ್ವೇ ಯೋನೌ ನಿಷೀದತು ॥** (ಋ. ಸಂ. ೬-೧೬-೪೧)

ಎಂಬ ಋಕ್ಕನ್ನು ಹೋತೃವು ಪಠಿಸುವನು. ಎಲೈ ಋತ್ವಿಜರೇ, ಈಗ ಉತ ಉತ್ಪನ್ನನಾದ ಅಗ್ನಿಯನ್ನು ಅವನ ಸ್ವಸ್ಥಾನವಾದ ಆಹವನೀಯಕುಂಡದಲ್ಲಿ ಇಡಿರಿ. ಅಗ್ನಿಯು ಸ್ವಸ್ಥಾನವಾದ ಅಲ್ಲಿ ಅವನು ಕುಳಿತುಕೊಳ್ಳಲಿ ಎಂಬರ್ಥವಿರುವ ಈ ಋಕ್ಕೂ ಅಗ್ನಿಯನ್ನು ಆಹವನೀಯಕುಂಡದಲ್ಲಿ ಇಡುವ ಕರ್ಮಕ್ಕೆ ಸಮಯೋಚಿತವಾದ ಅರ್ಥವನ್ನೊಳಗೊಂಡಿರುವುದು. ಇಲ್ಲಿ ಪ್ರತಿಕರ್ಮದಲ್ಲಿಯೂ ಪಠಿಸುವ ಪ್ರೈಷಮಂತ್ರಕ್ಕೆ ಅನುಸಾರವಾಗಿ ಹೋತೃವು ಆಯಾ ಕರ್ಮಕ್ಕೆ ಸಮಯೋಚಿತವಾದುದೂ ಸರಿಯಾದ ಅರ್ಥವುಳ್ಳದ್ದೂ ಆದ ಮಂತ್ರವನ್ನು ಪಠಿಸುವನು. ಹೇಗೆಂದರೆ—ಅಗ್ನಿಯು ಉತ್ಪನ್ನನಾದಕೂಡಲೇ ಅಧ್ವರ್ಯುವು ಹೋತೃವನ್ನು ಕುರಿತು— **ಜಾತಾಯಾನುಬ್ರೂ ೩ ಹಿ** ಎಂದು ಪ್ರೈಷಮಂತ್ರವನ್ನು ಹೇಳುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು ಸಮಯೋಚಿತವಾದ **ಉತ ಬ್ರುವಂತು ಜಂತವಃ** ಎಂಬ ಋಕ್ಕನ್ನು ಪಠಿಸುವನು. ಹಾಗೆಯೇ ಉತ್ಪನ್ನನಾದ ಅಗ್ನಿಯನ್ನು ಆಹವನೀಯವೆಂಬ ಕುಂಡದಲ್ಲಿ ಇಡುವಾಗ ಅಧ್ವರ್ಯುವು— **ಪ್ರಹ್ರಿಯಮಾಣಾಯಾನುಬ್ರೂ ೩ ಹಿ** ಎಂದು ಪ್ರೈಷಮಂತ್ರವನ್ನು ಹೇಳಿದಕೂಡಲೇ ಹೋತೃವು ಆ ಸಂದರ್ಭಕ್ಕೆ ಸರಿಯಾದ **ಪ್ರದೇವಂ** ದೇವವೀತಯೇ ಎಂಬ ಋಕ್ಕನ್ನು ಪಠಿಸುವನು. ಇದರಂತೆ ಪ್ರತಿಕರ್ಮದಲ್ಲಿಯೂ ನಡೆಯುವುದೆಂದು ತಿಳಿಯಬೇಕು. ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವಾಗಿ ಈರೀತಿ ಹೇಳಿದೆ—

**ಅಗ್ನಯೇ ಮಥ್ಯಮಾನಾಯಾನುಬ್ರೂಹೀತ್ಯಾಹ ಸಾವಿತ್ರೀಮೃಚಮನ್ವಾಹ ಸವಿತೃಪ್ರಸೂತ ಏವೈನಂ ಮಂಥತಿ ಜಾತಾಯಾನುಬ್ರೂಹಿ ಪ್ರಹ್ರಿಯಮಾಣಾಯಾನುಬ್ರೂಹೀತ್ಯಾಹ ಕಾಂಡೇಕಾಂಡ ಏವೈನಂ ಕ್ರಿಯಮಾಣೇ ಸಮರ್ಧಯತಿ ಗಾಯತ್ರೀಃ ಸರ್ವಾ ಅನ್ವಾಹ ।**
(ತೈ. ಸಂ. ೬-೩-೫-೨,೩)

ಇತ್ಯಾದಿ. ಈ ವಿಷಯವನ್ನೇ ಇಲ್ಲಿ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ಎಂಬ ವಾಕ್ಯದಿಂದ ವಿವರಿಸಲಾಗಿದೆ. ಎಂದರೆ ಆಯಾ ಕರ್ಮಗಳಲ್ಲಿ ಆಯಾ ಕರ್ಮಕ್ಕೆ ತಕ್ಕಂತೆ ಅನುರೂಪವಾದ ಮಂತ್ರವನ್ನು ಹೇಳಿ ಯಜ್ಞವನ್ನು ನೆರವೇರಿಸಬೇಕು. ಎಲ್ಲಾ ಮಂತ್ರಗಳೂ ಗಾಯತ್ರೀಛಂದಸ್ಕವಾಗಿರಬೇಕು ಎಂದು ಮುಖ್ಯಾಭಿಪ್ರಾಯವು. ಕೊನೆಯಲ್ಲಿ—**ಆ ಸ್ವೇ ಯೋನೌ ನಿಷೀದತು** ಎಂದು ಹೇಳಿದಕೂಡಲೇ ಅಗ್ನಿಯನ್ನು ಆಹವನೀಯ ಕುಂಡದಲ್ಲಿ ಸ್ಥಾಪಿಸುವರು. ಏಕೆಂದರೆ, ಆಹವನೀಯ ಸ್ಥಾನವೇ ಮಥಿತನಾದ (ಅಗತಾನೇ ಉತ್ಪನ್ನನಾದ) ಅಗ್ನಿಯ ಸ್ಥಾನವೆಂದು ಹೇಳಲ್ಪಡುವುದು.

**ಆ ಜಾತಂ ಜಾತವೇದಸೀತಿ ಜಾತ ಇತರೋ ಜಾತವೇದಾ ಇತರಃ ಪ್ರಿಯಂ ಶಿಶೀತಾತಿಥಿಮಿತ್ಯೇಷ ಹ ವಾ ಅಸ್ಯ ಪ್ರಿಯೋಽತಿಥಿ-**

ರ್ಯದಗ್ನಿರಗ್ನೇಃ ಸ್ಯೋನ ಆ ಗೃಹಪತಿಮಿತಿ ಶಾಂತ್ಯಾಮೇ-
ವೈನಂ ತದ್ದಧಾತಿ । ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿ-
ರ್ಯುವಾ । ಹವ್ಯವಾಡ್ಜುಹ್ವಾಸ್ಯ ಇತ್ಯಭಿರೂಪಾ ಯದ್ಯಜ್ಞೇಽ
ಭಿರೂಪಂ ತತ್ಸಮೃದ್ಧಂ । ತ್ವಂ ಹಗ್ನೇ ಅಗ್ನಿನಾ ವಿಪ್ರೋ
ವಿಪ್ರೇಣ ಸನ್ತ್ಸತೇತಿ ವಿಪ್ರ ಇತರೋ ವಿಪ್ರ ಇತರಃ ಸನ್ನಿತರಃ
ಸನ್ನಿತರಃ ಸಖಾ ಸಖ್ಯಾ ಸಮಿಧ್ಯಸ ಇತ್ಯೇಷ ಹ ವಾ ಅಸ್ಯ ಸ್ವಃ
ಸಖಾ ಯದಗ್ನಿರಗ್ನೇಃ ॥

ನವಮೀಮೃಚಂ ವಿಧತ್ತೇ ॥ ಅನುಬ್ರೂಯಾದಿತಿ ಶೇಷಃ ॥ ಸಾ ಚೈವಂ ಸಂಹಿತಾಯಾಮಾಮ್ನಾತಾ—ಆಜಾತಂ ಜಾತವೇದಸಿ ಪ್ರಿಯಂ ಶಿಶೀತಾತಿಥಿಂ । ಸ್ಯೋನ ಆ ಗೃಹಪತಿಂ’ ಇತಿ ॥ ಅಸ್ಯಾಯಮರ್ಥಃ । ಈದೃಶಮಾಹವನೀಯಸ್ಯ ಪ್ರೀತಿಹೇತುಮತಿಥಿಂ ॥ ಇದಾನೀಮಾಗತತ್ವಾದತಿಥಿರೂಪಂ ಸ್ಯೋನೇ ಸುಖಕರ ಆಹವನೀಯ ಆಗೃಹಪತಿಮಾಗತ್ಯ ಗೃಹಸ್ವಾಮಿತ್ವೇನ ವರ್ತಮಾನಂ ॥ ತಸ್ಯಾಮೃಚಿ ಪ್ರಥಮಪಾದೇ ಪದದ್ವಯಂ ವ್ಯಾಚಷ್ಟೇ । ಇತರ ಇದಾನೀಂ ಮಥಿತೋಽಗ್ನಿಃ ಸದ್ಯಃ ಸಮುತ್ಪನ್ನತ್ವಾಜ್ಜಾತ ಇತ್ಯುಚ್ಯತೇ ॥ ಇತರಃ ಪೂರ್ವಪ್ರಸಿದ್ಧಾಹವನೀಯೋಽಗ್ನಿರಿದಾನೀಂ ಜಾತಮಿಮಮಗ್ನಿಂ ವೇತ್ತೀತಿ । ಜಾತವೇದಾ ಇತ್ಯುಚ್ಯತೇ ॥ ದ್ವಿತೀಯ ಪಾದಮನೂದ್ಯ ವ್ಯಾಚಷ್ಟೇ—ಯೋಽಗ್ನಿರ್ಮಂಥನೇನೋತ್ಪನ್ನ ಏಷ ಏವಾಸ್ಯ ಪೂರ್ವಪ್ರಸಿದ್ಧಸ್ಯಾಽಽಹವನೀಯಸ್ಯಾಗ್ನೇಃ ಪ್ರಿಯಶ್ಚಾತಿಥಿಶ್ಚ ॥ ತೃತೀಯಪಾದಮನೂದ್ಯ ವ್ಯಾಚಷ್ಟೇ ॥ ಸ್ಯೋನೇ ಸುಖರೂಪೇ ಪೂರ್ವಾಗ್ನೌ ಸ್ಥಾಪನಂ ಯದಸ್ತಿ ತತ್ತೇನ ಸ್ಥಾಪನೇನ ನೂತನಮೇವಮಗ್ನಿಂ ಶಾಂತ್ಯಾಮೇವ ಸ್ಥಾಪಯತಿ । ಪೂರ್ವಾಗ್ನೇಃ ಸುಖನಿವಾಸಹೇತುತ್ವಾಚ್ಛಾಂತಿತ್ವಂ ॥ ದಶಮೀಮೃಚಂ ವಿಧತ್ತೇ—ಅನೂಚ್ಯೇತಿ ಶೇಷಃ । ಅಸ್ಯಾ ಅಯಮರ್ಥಃ । ಅಗ್ನಿನಾಽಽಧಾರಭೂತೇನ ಆಹವನೀಯಮನುಗೃಹೀತ ಇದಾನೀಂ ಪ್ರಹೃತೋಽಗ್ನಿಃ ಸಮ್ಯಗ್ದೀಪ್ಯತೇ ॥ ಈದೃಶೋಽಗ್ನಿಃ ॥ ಕವಿರ್ವಿದ್ವಾನಾಕೂತಾಭಿಜ್ಞೋಽತಏವ ಗೃಹಪತಿರ್ಯಜಮಾನಸ್ಯ ಗೃಹಸ್ಯ ಪಾಲಕಃ ॥ ಯುವಾ ನೂತನಃ । ದೇವೇಭ್ಯೋ ಹವ್ಯಂ ವಹತೀತಿ ಹವ್ಯವಾಟ್ ॥ ಹೋಮಸಾಧನಭೂತಃ । ಜುಹೂದೇವಾಸ್ಯಂ ಮುಖಂ ಯಸ್ಯಾಸೌ ಜುಹ್ವಾಸ್ಯಃ ॥ ಸೇಯಮೃಕ್ಪ್ರಿಯಮಾಣಾಗ್ನಿಗುಣಕೀರ್ತನಾತ್ತಸ್ಯಾಗ್ನೇರನುರೂಪಾ ॥ ತದೇತದಾನುರೂಪ್ಯಂ ಪ್ರಶಂಸತಿ—ಏಕಾದಶೀಮೃಚಂ ವಿಧತ್ತೇ—ಅನುಬ್ರೂಯಾದಿತಿ ಶೇಷಃ ॥ ಹೇ ನೂತನಾಗ್ನೇ ತ್ವಂ ಸಿದ್ಧೇನಾಹವನೀಯೇನಾಗ್ನಿನಾ ಸಮಿಧ್ಯಸ ಇತಿ ತೃತೀಯಪಾದಗತೇನ ಪದೇನ ಯೋಜ್ಯಂ ॥ ಉಭಯೋರಗ್ನೇರ್ವಿದ್ಯಮಾನತ್ವಾತ್ಸಮ್ಯಗನುಷ್ಠಾನ ನಿರ್ವಾಹಕತ್ವಾದ್ವಾ ಸಚ್ಛಬ್ದವಾಚ್ಯತ್ವಂ ॥ ‘ಅಗ್ನೇ ಮಹಾ ಅಸಿ ಬ್ರಾಹ್ಮಣಭಾರತ’ ಇತಿಶ್ರುತೇರ್ಬ್ರಾಹ್ಮಣಜಾತ್ಯಭಿಮಾನಿತ್ವಾದ್ವಿಪ್ರತ್ವಂ ॥ ತದೇತದುಭಯಂ ವಿಶದಯತಿ । ತೃತೀಯಪಾದಮನೂದ್ಯ ವ್ಯಾಚಷ್ಟೇ—ಯೋಽಗ್ನಿರಾಹವನೀಯಾಖ್ಯ ಏಷ ಏವಾಸ್ಯ ಅಗ್ನೇರ್ಮಥಿತಸ್ಯ ಸ್ವಕೀಯಃ ಸಖಾ ॥

ಈಗ ಹೋತೃವು ಒಂಭತ್ತನೆಯ ಋಕ್ಕಾದ—

**ಆ ಜಾತಂ ಜಾತವೇದಸಿ ಪ್ರಿಯಂ ಶಿಶೀತಾತಿಥಿಂ ।**
**ಸ್ಯೋನ ಆ ಗೃಹಪತಿಂ ॥** (ಋ. ಸಂ. ೬-೧೬-೪೨)

ಎಂಬ ಮಂತ್ರವನ್ನು ಪಠಿಸುವನು. ಈ ಋಕ್ಕಿನ ಮುಖ್ಯಾಭಿಪ್ರಾಯವೇನೆಂದರೆ—ಈ ಋಕ್ಕಿನಲ್ಲಿ ಎರಡು ವಿಧವಾದ ಅಗ್ನಿಗಳನ್ನು ನಿರ್ದೇಶಿಸಿದೆ. **ಜಾತಂ** ಎಂದರೆ ಆಗತಾನೇ ಮಥನಮಾಡಿ ಉತ್ಪತ್ತಿಮಾಡಿರುವ ಅಗ್ನಿಯೇ ಮೊದಲನೆಯದು. ಆಗತಾನೇ ಉತ್ಪನ್ನನಾದುದರಿಂದ ಇದನ್ನು **ಜಾತಂ** ಎಂಬ ಪದದಿಂದ ನಿರ್ದೇಶಿಸಿರುವುದು. ಆಹವನೀಯಾಗ್ನಿಕುಂಡದಲ್ಲಿ ಮೊದಲೇ ಸ್ಥಾಪಿತವಾಗಿರುವುದೇ ಎರಡನೆಯದು. ಇದಕ್ಕೆ **ಜಾತವೇದಸಂ** ಎಂದು ಹೇಳಿರುವರು. ಮಥನದಿಂದ ಉತ್ಪನ್ನವಾದ ಅಗ್ನಿಯ ಸ್ವರೂಪವನ್ನು ತಿಳಿದಿರುವವನಾದ್ದರಿಂದ ಆಹವನೀಯಾಗ್ನಿಗೆ **ಜಾತವೇದಸಂ** ಎಂದು ಇಲ್ಲಿ ಅರ್ಥವಿವರಣೆ ಮಾಡಿದೆ. ಇಲ್ಲಿ ಆಹವನೀಯಾಗ್ನಿಸ್ಥಾನದಲ್ಲಿ ಮೊದಲೇ ಸ್ಥಾಪಿತವಾಗಿದ್ದ ಜಾತವೇದಸವೆಂಬ ಅಗ್ನಿಗೆ ಹೊಸದಾಗಿ ಮಥಿತವಾದ ಅಗ್ನಿಯು ಪ್ರೀತಿಪಾತ್ರನಾದ ಅತಿಥಿಯಂತಿರುವುದು. ಆದುದರಿಂದ ಪ್ರಿಯನೂ ಅತಿಥಿಸ್ವರೂಪನೂ ಆದ ಈ ಮಥಿತಾಗ್ನಿಯನ್ನು ಸುಖನಿವಾಸಸಿದ್ಧಿಗಾಗಿ ಆಹವನೀಯಾಗ್ನಿಕುಂಡದಲ್ಲಿ ಸ್ಥಾಪಿಸಲಾಗುವುದು ಎಂದು ಮುಖ್ಯಾಭಿಪ್ರಾಯವು. ಅನಂತರ ಹೋತೃವು—

**ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।**
**ಹವ್ಯವಾಡ್ಜುಹ್ವಾಸ್ಯಃ ॥** (ಋ. ಸಂ. ೧-೧೨-೬)

ಎಂಬ ಹತ್ತನೆಯ ಋಕ್ಕನ್ನು ಪಠಿಸುವನು. ಇದರ ಅರ್ಥವು—ಮೊದಲೇ ಆಹವನೀಯಕುಂಡದಲ್ಲಿ ಸ್ಥಾಪಿಸಿದ್ದ ಅಗ್ನಿಯ ಜತೆಗೆ ಹೊಸದಾಗಿ ಮಥಿತವಾದ ಅಗ್ನಿಯು ಸೇರಿ ಚೆನ್ನಾಗಿ ಪ್ರಕಾಶಮಾನವಾಗಿ ಬೆಳಗುವುದು. ಈ ಮಥಿತಾಗ್ನಿಯು ಸರ್ವರನ್ನೂ ತಿಳಿಯುವ ಕ್ರಾಂತದರ್ಶಿಯು, ಗೃಹದ ಅಥವಾ ಯಜಮಾನನ ಪಾಲಕನು, ನಿತ್ಯತರುಣನು, ದೇವತೆಗಳಿಗೆ ಹವ್ಯಾದಿಗಳನ್ನು ವಹಿಸುವವನು, **ಜುಹೂ** ಎಂಬ ಹೋಮಸಾಧನವಾದ ಸೌಟನ್ನು ಮುಖದಲ್ಲಿ (ಬಾಯಲ್ಲಿ) ಇಟ್ಟುಕೊಂಡಿರುವವನು. (ಎಂದರೆ ಜುಹೂ ಎಂಬ ಸೌಟಿನಿಂದ ಆಜ್ಯಾದಿಹೋಮದ್ರವ್ಯಗಳನ್ನು ಅಗ್ನಿಯ ಜ್ವಾಲೆಯಲ್ಲಿ ಹೋಮಮಾಡುವುದರಿಂದ **ಜುಹ್ವಾಸ್ಯಃ** ಎಂದು ಅಗ್ನಿಯನ್ನು ಕರೆಯಲಾಗಿದೆ) ಈರೀತಿ ಕಾಲಕ್ಕೆ ಅನುರೂಪವಾದ ಮಂತ್ರವನ್ನು ಇಲ್ಲಿ ಪಠಿಸಲಾಗಿದೆ. ಇದಾದ ಬಳಿಕ ಹೋತೃವು—

**ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ ।**
**ಸಖಾ ಸಖ್ಯಾ ಸಮಿಧ್ಯಸೇ ॥** (ಋ. ಸಂ. ೮-೪೩-೧೪)

ಎಂಬ ಋಕ್ಕನ್ನು ಪಠಿಸುವನು. ಎಲೈ ನೂತನಾಗ್ನಿಯೇ, ಮೇಧಾವಿಯಾದ ನೀನು ಮೇಧಾವಿಯಾದ ಆಹವನೀಯಾಗ್ನಿಯೊಡನೆ ಸೇರಿ, ಸ್ನೇಹಿತನು ಸ್ನೇಹಿತನೊಡನೆ ಸೇರಿ ಸುಖಿಸುವಂತೆ ಸುಖವಾಗಿರು ಎಂದಭಿಪ್ರಾಯವು.

**ತಂ ಮರ್ಜಯಂತ ಸುಕ್ರತುಂ ಪುರೋಯಾವಾನಮಾಜಿಷು । ಸ್ವೇಷು ಕ್ಷಯೇಷು ವಾಜಿನಮಿತಿ ಏಷ ಹ ವಾ ಅಸ್ಯ ಸ್ವಃ ಕ್ಷಯೋ ಯದಗ್ನಿರಗ್ನೇಃ । ಯಜ್ಞೇನ ಯಜ್ಞಮಯಜಂತ ದೇವಾ**

ಇತ್ಯುತ್ತಮಯಾ ಪರಿದದಾತಿ । ಯಜ್ಞೇನ ವೈ ತದ್ದೇವಾ ಯಜ್ಞಮಯಜಂತ ಯದಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾ ಇತಿ ಛಂದಾಂಸಿ ವೈ ಸಾಧ್ಯಾ ದೇವಾಸ್ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ॥

ದ್ವಾದಶೀಮೃಚಂ ವಿಧತ್ತೇ—ಅನುಬ್ರೂಯಾದಿತಿ ಶೇಷಃ ॥ ಹೇ ಋತ್ವಿಜಸ್ತಂ ನೂತನಮಗ್ನಿಂ ಮರ್ಜಯಂತ ಶೋಧಯಂತ ॥ ಕೀದೃಶಂ ಶೋಭನಸ್ಯ ಕ್ರತೋರ್ನಿರ್ವಾಹಕಂ । ಆಜಿಷು ಸಂಗ್ರಾಮೇಷು ಪುರೋಯಾವಾನಂ ಪುರೋಗಂತಾರಂ ಸ್ವೇಷು ಕ್ಷಯೇಷು ಸ್ವೀಯೇಷು ಗೃಹೇಷ್ವಾಹವನೀಯಾದಿಷು ವಾಜಿನಮನ್ನವಂತಂ ಗಚ್ಛಂತಂ ವಾ ॥ ಕ್ಷಯಶಬ್ದೇನಾತ್ರ ಆಹವನೀಯಾಗ್ನಿರೂಪಗೃಹವಿವಕ್ಷಾಂ ದರ್ಶಯತಿ—ಉತ್ತಮಯಾ ಚಾನಯಾ ಪರಿದಧಾತಿ, ಅನುವಚನಂ ಸಮಾಪಯೇತ್ ॥ ಯದಾಹಾಶ್ವಲಾಯನಃ । 'ಯಜ್ಞೇನ ಯಜ್ಞಮಯಜಂತದೇವಾ ಇತಿ ಪರಿದಧ್ಯಾತ್ಸರ್ವತ್ರೋತ್ತಮಾಂ ಪರಿಧಾನೀಯೇತಿ ವಿದ್ಯಾತ್' ಇತಿ ॥ ಉದಾಹೃತಮೃಚಃ ಪಾದಂ ವ್ಯಾಚಷ್ಟೇ—ಅಗ್ನಿನಾ ಪ್ರಹ್ರಿಯಮಾಣೇನ ನೂತನೇನ ಪೂರ್ವಸಿದ್ಧಮಾಹವನೀಯಾಗ್ನಿಮಯಜಂತ ಪೂಜಿತವಂತ ಇತಿ ಯದಸ್ತಿ ತೇನ ಕಾರಣೇನ ಯಜ್ಞೇನ ವೈ ದೇವಾ ಯಜ್ಞಮಯಜಂತೇತ್ಯುಚ್ಯತೇ ॥ ಉಭೌ ಯಜ್ಞಶಬ್ದೌ ಸ್ವಕಾರಣಭೂತಮಗ್ನಿದ್ವಯಮುಪಲಕ್ಷಯತಃ ॥ ದೇವಶಬ್ದೇನೇದಾನೀಂ ದೇವತ್ವೇನ ವರ್ತಮಾನಾಃ ಪೂರ್ವಸಿದ್ಧಾ ಋತ್ವಿಜೋ ವಿವಕ್ಷಿತಾಃ ॥ ತೇ ಚ ಪೂರ್ವಮನುಷ್ಠಿತೇನ ಯಾಗೇನ ಸ್ವರ್ಗಲೋಕಂ ಪ್ರಾಪ್ತಾಃ ॥

ಅವಶಿಷ್ಟಂ ಪಾದತ್ರಯಂ ಪಠತಿ—ಇದಾನೀಂ ದೇವತ್ವೇ ನ ವರ್ತಮಾನೈಃ ಪೂರ್ವಸಿದ್ಧೈರೃತ್ವಿಗ್ಯಜಮಾನೈರ್ಯಾನಿ ಜ್ಯೋತಿಷ್ಟೋಮಾದೀನಿ ಕರ್ಮಾಣ್ಯನುಷ್ಠಿತಾನಿ ತಾನಿ ಸರ್ವಾಣಿ ಪ್ರಥಮಾನಿ ಧರ್ಮಾಣ್ಯಾದಿಸೃಷ್ಟಿಕಾಲೀನಾನಿ ಸುಕೃತಸಾಧನಾನ್ಯಾಸನ್ ॥ ತೇ ಹ ತೇ ಚಾನುಷ್ಠಾತಾರೋ ಮಹಿಮಾನೋ ಮಹಿಮತ್ವೋಪೇತಾ ನಾಕಂ ಸಚಂತ ಕಂ ಸುಖಮಕಂ ದುಃಖಂ ತದ್ರಹಿತೋ ಭೋಗೋ ನಾಕಸ್ತಂ ಸಂಪ್ರಾಪ್ತವಂತಃ ॥ ಯತ್ರ ಯಸ್ಮಿಂಲ್ಲೋಕೇ ಪೂರ್ವೇ ಸಾಧ್ಯಾಃ ಪೂರ್ವಸೃಷ್ಟಿಗತಾ ಯಜ್ಞಾದಿ ಸಾಧಕಾ ಇದಾನೀಂ ಯಜ್ಞಾದಿಭಿಃ ಸಾಧ್ಯತ್ವೇನ ವರ್ತಮಾನಾ ದೇವಾಃ ಸಂತಿ ವರ್ತಂತೇ ತಂ ನಾಕಂ ಸಚಂತೇತಿ ಪೂರ್ವತ್ರಾನ್ವಯಃ ॥ ಚತುರ್ಥಪಾದಸ್ಯ ತಾತ್ಪರ್ಯಂ ದರ್ಶಯತಿ ॥ ಛಂದಾಸಿ ವೈ ಗಾಯತ್ರ್ಯಾದಿ ಚ್ಛಂದೋಭಿಮಾನಿನ ಏವ ಸಾಧ್ಯಾ ಇದಾನೀಂ ಜನೈಃ ಪೂಜ್ಯಾ ದೇವಾಸ್ತೇಽಗ್ರೇ ಚ ಪೂರ್ವಸೃಷ್ಟಾವಗ್ನಿನಾ ಮಥಿತೇನಾಗ್ನಿನಾಽಽಹವನೀಯಮಗ್ನಿಮಯಜಂತ ಪೂಜಿತವಂತಃ ॥ ತೇ ಚ ತೇನ ಯಾಗೇನ ಸ್ವರ್ಗಂ ಪ್ರಾಪ್ತಾಃ ॥

ಅನಂತರ ಹೋತೃವು—

**ತಂ ಮರ್ಜಯಂತ ಸುಕ್ರತುಂ ಪುರೋಯಾವಾನಮಾಜಿಷು ।**
**ಸ್ವೇಷು ಕ್ಷಯೇಷು ವಾಜಿನಂ ॥** (ಋ. ಸಂ. ೮-೮೪-೮)

ಎಂಬ ಋಕ್ಕನ್ನು ಪಠಿಸುವನು. ಹೀಗೆ ಹೇಳಿ ಅಗ್ನಿಯ ಸ್ವಕೀಯನಿವಾಸಸ್ಥಾನವಾದ ಆಹವನೀಯಾಗ್ನಿಯಲ್ಲಿ ಸ್ಥಾಪಿಸಿ ಅನಂತರ ಅಗ್ನಿಮಥನದಲ್ಲಿ ಕೊನೆಯ ಋಕ್ಕಾದ—

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ ।**
**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥**
(ಋ. ಸಂ. ೧೦-೯೦-೧೬)

ಎಂಬ ಋಕ್ಕನ್ನು ಹೋತೃವು ಪಠಿಸಿ ಅಗ್ನಿಮಥನಕಾರ್ಯವನ್ನು ಮುಗಿಸುವನು. ಇಲ್ಲಿ ಮಥಿತಾಗ್ನಿಯನ್ನು (ಪ್ರಹ್ರಿಯಮಾಣಾಗ್ನಿಯನ್ನು) ಆಹವನೀಯಾಗ್ನಿಯೊಡನೆ ಸೇರಿ ಸ್ಥಾಪಿಸುವುದೇ ಅಗ್ನಿನಾಗ್ನಿಃ ಸಮಿಧ್ಯತೇ ಎಂದು ಹೇಳಲ್ಪಡುವುದು. ಅಥವಾ ಈ ಕರ್ಮವನ್ನೇ ಯಜ್ಞೇನ ಯಜ್ಞಮಯಂತ ದೇವಾಃ ಎಂಬ ಕೊನೆಯ ಋಕ್ಕಿನಲ್ಲಿ ಹೇಳಿರುವುದು. ಇಲ್ಲಿ ಸಾಧ್ಯಾಃ ಎಂಬ ಶಬ್ದಕ್ಕೆ ಗಾಯತ್ರ್ಯಾದಿಛಂದಸ್ಸುಗಳಿಗೆ ಅಭಿಮಾನಿದೇವತೆಗಳು ಎಂದರ್ಥವು. ಈ ದೇವತೆಗಳು ಪೂರ್ವದಲ್ಲಿ ಮಥಿತಾಗ್ನಿಯಿಂದ ಆಹವನೀಯಾಗ್ನಿಯನ್ನು ಪೂಜಿಸಿದರು. ಆದರಿಂದ ಅವರು ಸ್ವರ್ಗಲೋಕವನ್ನು ಪಡೆದರು,

ಆದಿತ್ಯಾಶ್ಚೈವೇಹಾಸನ್ನಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ಸೈಷಾ ಸ್ವರ್ಗ್ಯಾಹುತಿರ್ಯದ-ಗ್ನ್ಯಾಹುತಿರ್ಯದಿ ಹ ವಾ ಅಪ್ಯಬ್ರಾಹ್ಮಣೋಕ್ತೋ ಯದಿ ದುರುಕ್ತೋಕ್ತೋ ಯಜತೇಽಥ ಹೈಷಾಹುತಿರ್ಗಚ್ಛತ್ಯೇವ ದೇವಾನ್ನ ಪಾಪ್ಮನಾ ಸಂಸೃಜ್ಯತೇ ಗಚ್ಛತ್ಯಸ್ಯಾಹುತಿರ್ದೇವಾ-ನ್ನಾಸ್ಯಾಹುತಿಃ ಪಾಪ್ಮನಾ ಸಂಸೃಜ್ಯತೇ ಯ ಏವಂ ವೇದ ॥

ನ ಕೇವಲಂ ಛಂದೋದೇವಾ ಏವ ಚತುರ್ಥಪಾದೇ ವಿವಕ್ಷಿತಾಃ ಕಿಂತ್ವನ್ಯೇಽಪೀತ್ಯಾಹ–ಇದಾನೀಮಾದಿತ್ಯಶಬ್ದೇನಾಭಿಧೇಯಾ ದೇವಾ ಅಂಗಿರಃಶಬ್ದೇನಾಭಿಧೇಯಾ ಯೇ ಚರ್ಷ-ಯಸ್ತೇ ದ್ವಿವಿಧಾ ಅಪೀಹೈವಾಽಽಸನ್ಪೂರ್ವಮೇವ ಪೂರ್ವಸೃಷ್ಟೌ ಮನುಷ್ಯರೂಪೇಣಾವಸ್ಥಿತಾಃ॥ ತೇಽಗ್ರ ಇತ್ಯಾದಿ ಪೂರ್ವವತ್ ॥ ತದೇವಂ ಚತುರ್ಥಪಾದತಾತ್ಪರ್ಯದ್ವಯಮುಕ್ತಂ ॥ ಯದ್ವಾ ಛಂದಾಂಸೀತ್ಯಾದಿಕಮೇವ ಚತುರ್ಥಪಾದತಾತ್ಪರ್ಯಂ ॥ ಆದಿತ್ಯಾದಿಕಮಿತರಪಾದತಾತ್ಪರ್ಯ-ಮಿತಿ ದ್ರಷ್ಟವ್ಯಂ ॥ ಯೇಽಯಮಾಹವನೀಯೇಽಗ್ನೌ ಮಥಿತಾಗ್ನಿಪ್ರಕ್ಷೇಪಲಕ್ಷಣಾಹುತಿಸ್ತಾಂ ಪ್ರಶಂಸತಿ ॥ ಅಗ್ನಿರೂಪದ್ರವ್ಯಾಹುತಿರ್ಯಾ ವಿದ್ಯತೇ ಸೈಷಾ ಸ್ವರ್ಗಾಯ ಹಿತಾ ॥ ಯದಿಹೇ-ತ್ಯಾದಿನಾ ಸ್ವರ್ಗತ್ವಮೇವ ಸ್ಪಷ್ಟೀಕ್ರಿಯತೇ—ಬ್ರಾಹ್ಮಣಂ ವಿಧಾಯಕಂ ವಾಕ್ಯಂ ತೇನ ಪ್ರೇರಿತೋ ಬ್ರಾಹ್ಮಣೋಕ್ತಃ ॥ ತದ್ವಿಪರೀತಃ ಪಂಡಿತಂಮನ್ಯಮಾನಃ ಸ್ವಬುದ್ಧ್ಯೈವ ಯತ್ಕಿಂಚಿ-

ದ್ಯೋಽನುತಿಷ್ಠತಿ ಸೋಽಯಮಬ್ರಾಹ್ಮಣೋಕ್ತಃ । ಪುರುಷೇಣಾನ್ಯಥಾವಬುದ್ಧಂ ವಿಧಿವಾಕ್ಯಂ ದುರಕ್ತಂ ತೇನಪ್ರೇರಿತೋ ದುರುಕ್ತೋಕ್ತಃ ॥ ಅಥವಾ ಸ್ಮೃತಿಷ್ವಬ್ರಾಹ್ಮಣತ್ವೇನ ಪ್ರತಿಪಾದಿತೋ ಯೋಽಸ್ತಿ ಸೋಽಯಮಬ್ರಾಹ್ಮಣೋಕ್ತಃ ॥ ತದ್ಯಥಾ ॥

“ಅಬ್ರಾಹ್ಮಣಾಸ್ತು ಷಟ್ಪ್ರೋಕ್ತಾ ಇತಿ ಶಾತಾತಪೋಽಬ್ರವೀತ್ ।
ಆದ್ಯಸ್ತು ರಾಜಭೃತ್ಯಃ ಸ್ಯಾದ್ದ್ವಿತೀಯಃ ಕ್ರಯವಿಕ್ರಯೀ ।
ತೃತೀಯೋ ಬಹುಯಾಜ್ಯಾಖ್ಯಶ್ಚತುರ್ಥೋಽಶ್ರೌತಯಾಜಕಃ ।
ಪಂಚಮೋ ಗ್ರಾಮಯಾಜೀ ಚ ಷಷ್ಠೋ ಬ್ರಹ್ಮಬಂಧುಃ ಸ್ಮೃತಃ ॥

ಯದ್ಯಪಿ ಯಾಜನಾಧ್ಯಾಪನಪ್ರತಿಗ್ರಹಾ ಬ್ರಾಹ್ಮಣಸ್ಯ ಜೀವನಹೇತುತ್ವೇನ ವಿಹಿತತ್ವಾದನಿಷಿದ್ಧಾಸ್ತಥಾಪಿ ಯಾವತಾ ಜೀವನಂ ನಿಷ್ಪದ್ಯತೇ ತಾವದೇವ ಯಾಜನಂ ಶಾಸ್ತ್ರೇಣಾಂಗೀಕೃತಂ ॥ ಯಸ್ತು ಸತ್ಯಪಿ ಜೀವನೇ ಧನಾಧಿಕ್ಯವಾಂಛಯಾ ಯಾಜನಶೀಲಃ ಸೋಽತ್ರ ಬಹುಯಾಜೀ ವಿವಕ್ಷಿತಃ॥ ಯಃ ಪುಮಾನ್ಶ್ರೌತಕರ್ಮಣ್ಯಧಿಕೃತೋಽನಾದರೇಣ ಸ್ವಯಂ ಶ್ರೌತಂ ನಾನುತಿಷ್ಠತಿ ಅನ್ಯಾನಪಿ ನಾನುಷ್ಠಾಪಯತಿ ಕಿಂತು ಸ್ಮಾರ್ತಕರ್ಮಪರಃಸನ್ ಅನುತಿಷ್ಠತ್ಯನುಷ್ಠಾಪಯತಿ ಸೋಽಯಮಶ್ರೌತಯಾಜಕಃ ॥ ಗ್ರಾಮೇ ನಗರೇ ಚ ಯೋಗ್ಯಾಯೋಗ್ಯಾಶ್ಚ ಯಾವಂತಃ ಸಂತಿ ಧನಾಭಿಲಾಷೇಣ ತಾವತಾಂ ಸರ್ವೇಷಾಂ ಯಾಜಕೋ ಗ್ರಾಮನಗರಯಾಜೀ॥ ಯಃ ಪುಮಾನ್ಪ್ರಾತಃ ಸೂರ್ಯೋದಯಾತ್ಪ್ರಾಕ್ ಸಂಧ್ಯಾಂ ನೋಪಾಸ್ತೇ ಸಾಯಂಚಾಸ್ತಮಯಾತ್ಪ್ರಾಙ್ನೋಪಾಸ್ತೇ ಸೋಽಯಂ ಬ್ರಹ್ಮಬಂಧುಃ ಏತೇ ಷಡಬ್ರಾಹ್ಮಣತ್ವೇನ ಸ್ಮೃತಿಷೂಕ್ತಾಃ ॥ ದುಷ್ಟಾನ್ಯಪವಾದರೂಪಾಣಿ ವಚನಾನಿ ದುರುಕ್ತಾನಿ ತೈರಭಿಶಸ್ತೋ ದುರುಕ್ತೋಽಕ್ತಃ ॥ ಅಬ್ರಾಹ್ಮಣೋಕ್ತೋ ವಾ ದುರುಕ್ತೋಕ್ತೋಽವಾ ಯದ್ಯಪಿ ಯಜೇತ ತಥಾಪ್ಯೇಷಾಽಽಹವನೀಯೇ ಹುತಾ ಮಥಿತಾಽಗ್ನ್ಯಾಹುತಿರ್ದೇವಾನ್ಪ್ರಾಪ್ನೋತ್ಯೇವ ॥ ತತೋ ಯಜಮಾನಸ್ಯ ಪಾಪಸಂಸರ್ಗೋ ನ ಭವತಿ ॥ ವೇದನಂ ಪ್ರಶಂಸತಿ—ಉಕ್ತಾರ್ಥವೇದಿತಾ ಯದ್ಯಪಿ ಯತ್ಕಿಂಚಿತ್ಕರ್ಮ ವಿಕಲಮನುತಿಷ್ಠತಿ ತಥಾಪಿ ತತ್ಸರ್ವಂ ಸಕಲಂ ಭವತಿ ॥

ಇದರಂತೆಯೇ ಆದಿತ್ಯರೂ, ಅಂಗಿರಸೂ ಹಿಂದೆ ಹೇಳಿದಂತೆ ಯಜ್ಞವನ್ನು ಮಾಡಿ ಸ್ವರ್ಗಲೋಕಕ್ಕೆ ಹೋದರು. ಈ ಅಗ್ನ್ಯಾಹುತಿಯು ಸ್ವರ್ಗಲೋಕಕ್ಕೆ ನೇರವಾದ ಮಾರ್ಗವು. ಇಂತಹ ಯಜ್ಞಕರ್ಮದಲ್ಲಿ ಪ್ರವರ್ತಿಸುತ್ತಿರುವಾಗ ಮುಖ್ಯ ಪುರೋಹಿತನು ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ ಅಥವಾ ಕೆಟ್ಟಮನುಷ್ಯನಾದರೂ ಯಜ್ಞದಲ್ಲಿ ನೆರವೇರಿಸಲ್ಪಡುವ ಅಗ್ನ್ಯಾಹುತಿಯು ಮಾತ್ರ ಯಜಮಾನನನ್ನು ಸ್ವರ್ಗಕ್ಕೆ ಸೇರಿಸುವುದು. ಪುರೋಹಿತನ ದೋಷಾದಿಗಳು ಯಜ್ಞಮಾಡುವ ಯಜಮಾನನಿಗೆ ಸಂಬಂಧಪಡುವುದಿಲ್ಲ. ಎಂದರೆ, ಅದರಿಂದ ಯಜಮಾನನಿಗೆ ಕೆಡಕಾಗುವುದಿಲ್ಲ. ಮೇಲೆ ವಿವರಿಸಿರುವ ಈ ಅಗ್ನ್ಯಾಹುತಿಯಕ್ರಮವನ್ನು ಯಾವನು ತಿಳಿದಿರುವನೋ ಅವನು ಸ್ವರ್ಗದಲ್ಲಿ ದೇವತೆಗಳನ್ನು ಸೇರುವನು. ಅವನಿಗೆ ಯಾವ ವಿಧವಾದ ಪಾಪದ ಸಂಪರ್ಕವೂ ಇರುವುದಿಲ್ಲ.

ಇಲ್ಲಿ “ಶಾಸ್ತ್ರೋಕ್ತವಾದ ಬ್ರಾಹ್ಮಣನಲ್ಲದಿದ್ದರೂ” ಎಂದು ಮೇಲಿನ ವಾಕ್ಯದಲ್ಲಿ ಹೇಳಿರುವುದಷ್ಟೆ. ಅದಕ್ಕೆ ವಿವರಣೆಯು ಆವಶ್ಯಕವು—ಜನ್ಮಮಾತ್ರದಿಂದ ಬ್ರಾಹ್ಮಣನಾಗಿ ಯಾಜನಾಧಿಕಾರವನ್ನು (ಯಜ್ಞಮಾಡಿಸುವ ಅಧಿಕಾರವನ್ನು) ಪಡೆದಿದ್ದರೂ

ಕೆಲವು ಬ್ರಾಹ್ಮಣರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ದೋಷಭಾಗಿಗಳಾಗುವರು. ಈ ಅಬ್ರಾಹ್ಮಣರಲ್ಲಿ ಆರು ವಿಧವೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದು. ಹೇಗೆಂದರೆ—

**ಅಬ್ರಾಹ್ಮಣಾಸ್ತು ಷಟ್ ಪ್ರೋಕ್ತಾ ಇತಿ ಶಾತಾತಪೋಽಬ್ರವೀತ್ ।**
**ಆದ್ಯಸ್ತು ರಾಜಭೃತ್ಯಃ ಸ್ಯಾದ್ದ್ವಿತೀಯಃ ಕ್ರಯವಿಕ್ರಯೀ ॥**
**ತೃತೀಯೋ ಬಹುಯಾಜ್ಯಾಖ್ಯಶ್ಚತುರ್ಥೋಽಶ್ರೌತಯಾಜಕಃ ।**
**ಪಂಚಮೋ ಗ್ರಾಮಯಾಜೀ ಚ ಷಷ್ಠೋ ಬ್ರಹ್ಮಬಂಧುಃ ಸ್ಮೃತಃ ॥**

ಅಬ್ರಾಹ್ಮಣನೆಂದರೆ ಯಾರು ಎಂಬ ವಿಷಯದಲ್ಲಿ ಶಾತಾತಪರೆಂಬುವರು ಈರೀತಿ ಹೇಳಿರುವರು. (೧) **ರಾಜಭೃತ್ಯರು.** ಎಂದರೆ ಜೀವನೋಪಾಯಕ್ಕಾಗಿ ರಾಜನನ್ನೇ ಆಶ್ರಯಿಸಿ ಅವನ ಸೇವೆ ಮಾಡುವವರು. (೨) ಕ್ರಯವಿಕ್ರಯಾದಿಗಳಿಂದ ಜೀವಿಸುವವರು. ಅಂಗಡಿ ಮುಂತಾದ್ದನ್ನು ಇಟ್ಟು ಪದಾರ್ಥಗಳನ್ನು ಮಾರಿ ಜೀವಿಸುವವರು. (೩) ಜೀವನೋಪಾಯಕ್ಕೆ ಸಾಕಾದಷ್ಟು ವರಮಾನವಿದ್ದರೂ ಅಧಿಕವಾಗಿ ಧನಸಂಪಾದನೆ ಮಾಡಬೇಕೆಂಬ ದುರಾಸೆಯಿಂದ ಯಾರಿಗೆಂದರವರಿಗೆ ಯಜ್ಞ (ಅಥವಾ ಪೌರೋಹಿತ್ಯ) ಮಾಡಿಸುವುದನ್ನೇ ತಮ್ಮ ವೃತ್ತಿಮಾಡಿಕೊಂಡಿರುವವರಿಗೆ **ಬಹುಯಾಜಿಗಳೆಂದು** ಹೆಸರು. (೪) **ಅಶ್ರೌತಯಾಜಕರು.** ಎಂದರೆ ಶ್ರೌತಕಾರ್ಯಗಳನ್ನು ಅಥವಾ ಯಜ್ಞಾದಿಗಳನ್ನು ಮಾಡಲು ವೇದಾಧ್ಯಯನಸಂಪನ್ನರಾಗಿದ್ದರೂ ಆರೀತಿ ಶ್ರೌತಕರ್ಮಗಳಲ್ಲಿ ಪ್ರವರ್ತಿಸದೆ, ಇತರರಿಗೂ ಮಾಡಿಸದೆ ಶ್ರೇಷ್ಠವಲ್ಲದ ಸ್ಮಾರ್ತಕರ್ಮಗಳಲ್ಲಿಯೇ ಪ್ರವರ್ತಿಸುವವರಿಗೆ ಅಶ್ರೌತಯಾಜಕರೆಂದು ಹೆಸರು. (೫) **ಗ್ರಾಮಯಾಜಕರು** ಎಂದರೆ ಗ್ರಾಮಗಳಲ್ಲಾಗಲಿ, ನಗರಗಳಲ್ಲಾಗಲಿ, ಯೋಗ್ಯರಾಗಲಿ, ಅಯೋಗ್ಯರಾಗಲಿ ಯಾರಿಗೆ ಬೇಕಾದರೂ ದ್ರವ್ಯಾಶೆಗಾಗಿ ಯಜ್ಞಮಾಡಿಸತಕ್ಕವರಿಗೆ ಗ್ರಾಮನಗರಯಾಜಕರೆಂದು ಹೆಸರು. (೬) **ಬ್ರಹ್ಮಬಂಧು** ಎಂದರೆ ಸೂರ್ಯೋದಯಾಸ್ತಮಯಗಳಲ್ಲಿ ಕಾಲಕ್ಕೆ ಸರಿಯಾಗಿ ಸಂಧ್ಯಾದಿಕರ್ಮಗಳನ್ನು ಆಚರಿಸದೆ ಇರತಕ್ಕವರಿಗೆ ಬ್ರಹ್ಮಬಂಧುಗಳೆಂದು ಹೆಸರು. ಈ ಆರು ವಿಧವಾದ ಪುರೋಹಿತರು (ಅಥವಾ ಬ್ರಾಹ್ಮಣರು) ಮಾಡಿಸುವ ಕರ್ಮಕ್ಕೆ ಅಬ್ರಾಹ್ಮಣೋಕ್ತ ಅಥವಾ ದುರುಕ್ತೋಕ್ತ ಎಂದು ಮೇಲೆ ಹೇಳಲಾಗಿದೆ.

ತಾ ಏತಾಸ್ತ್ರಯೋದಶಾನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ । ತಾಸಾಂ ತ್ರಿಃಪ್ರಥಮಾಮನ್ವಾಹ ತ್ರಿರುತ್ತಮಾಂ ತಾಃ ಸಪ್ತದಶ ಸಂಪದ್ಯಂತೇ ಸಪ್ತದಶೋ ವೈ ಪ್ರಜಾಪತಿರ್ದ್ವಾದಶ ಮಾಸಾಃ ಪಂಚರ್ತವಸ್ತಾವಾನ್ತ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ ॥

ನ್ಯೂನಾಧಿಕಸಂಖ್ಯಾ ಭ್ರಮವ್ಯುದಾಸಾಯ ವಿಹಿತಾನಾಮೃಚಾಂ ಸಂಖ್ಯಾಂ ದರ್ಶಯತಿ—ರಾಕ್ಷೋಘ್ನೀನಾಂ ನೈಮಿತ್ತಿಕತ್ವಾತ್ತತ್ಪರಿತ್ಯಾಗೇನೇತರಾಸ್ತ್ರಯೋದಶಸಂಖ್ಯಾಕಾಃ ॥

ತಾಶ್ಚ ಮಥ್ಯಮಾನಸ್ಯ ಜಾಯಮಾನಸ್ಯ ಪ್ರಹ್ರಿಯಮಾಣಸ್ಯಾಹವನೀಯೇನ ಸಂಸೃಜ್ಯಮಾನಸ್ಯ ಚ ಪ್ರತಿಪಾದನೇನಾನುಕೂಲೇನೈವರೂಪೇಣ ಸಮೃದ್ಧಾಃ ॥ ತಾಮೇತಾಂ ಸಮೃದ್ಧಿಂ ಪ್ರಶಂಸತಿ॥ ಆದ್ಯಂತಯೋರ್ಋಚೋಸ್ತ್ರಿರಾವೃತ್ತಿವಿಧಿಮಾವೃತ್ತಾನಾಂ ಸಂಖ್ಯಾಪ್ರಶಂಸಾಂ ವೇದನಪ್ರಶಂಸಾಮಾವೃತ್ತಿಪ್ರಶಂಸಾಂ ಚ ದರ್ಶಯತಿ— ಪೂರ್ವವದ್ವ್ಯಾಖ್ಯೇಯಂ ॥

ಈರೀತಿ ಅಗ್ನಿಮಥನಕಾರ್ಯದಲ್ಲಿ ಉಪಯೋಗಿಸುವ ಋಕ್ಕುಗಳು ಒಟ್ಟು ಹದಿಮೂರು. ರಕ್ಷೋಘ್ನದೇವತಾಕವಾದ ೯ ಋಕ್ಕುಗಳು ಇದರಲ್ಲಿ ಸೇರುವುದಿಲ್ಲ. ಈ ಹದಿಮೂರು ಋಕ್ಕುಗಳನ್ನು ಆಯಾ ಕಾಲಗಳಲ್ಲಿ ಪಠಿಸುವುದರಿಂದ ಅಗ್ನಿಮಥನ, ಅಗ್ನ್ಯುತ್ಪತ್ತಿ, ಅಗ್ನಿಯನ್ನು ತೆಗೆದುಕೊಂಡುಹೋಗಿ ಆಹವನೀಯದಲ್ಲಿ ಸ್ಥಾಪಿಸುವುದು, ಅಲ್ಲಿ ಆಹವನೀಯಾಗ್ನಿಯೊಡನೆ ಸೇರಿಸುವುದು ಎಂಬ ಈ ಕರ್ಮಗಳೆಲ್ಲಾ ಸಮಯೋಚಿತವಾದ ಋಕ್ಕುಗಳ ಪಠನದಿಂದ ಸಾಂಗವಾಗಿ ನೆರವೇರುವುದಕ್ಕೆ ರೂಪಸಮೃದ್ಧಿಯೆಂದು ಹೆಸರು. ಈ ಹದಿಮೂರು ಋಕ್ಕುಗಳಲ್ಲಿ **ಅಭಿತ್ವಾ ದೇವ ಸವಿತಃ** ಎಂಬ ಮೊದಲನೆಯ ಋಕ್ಕನ್ನೂ, **ಯಜ್ಞೇನ ಯಜ್ಞಮಯಜಂತ ದೇವಾಃ** ಎಂಬ ಕೊನೆಯ ಋಕ್ಕನ್ನು ಹೋತೃವು ಮೂರುಮೂರಾವರ್ತಿ ಪಠಿಸಬೇಕು. ಆದ್ದರಿಂದ ಈ ಅಗ್ನಿಮಥನಕಾರ್ಯದಲ್ಲಿ ಒಟ್ಟು ಹದಿನೇಳು ಋಕ್ಕುಗಳನ್ನು ಪಠಿಸಿದಂತಾಯಿತು. ಪ್ರಜಾಪತಿಯು ಸಪ್ತದಶಸಂಖ್ಯಾ (ಹದಿನೇಳು) ಸ್ವರೂಪನು ಏಕೆಂದರೆ, ಹನ್ನೆರಡು ತಿಂಗಳೂ, ಐದು ಋತುಗಳೂ ಸೇರಿ ಒಂದು ಸಂವತ್ಸರವಾಗುವುದು. ಹದಿನೇಳು ಅವಯವಗಳಿಂದ ಕೂಡಿದ ಈ ಸಂವತ್ಸರವೇ ಕಾಲಾತ್ಮಕನಾದ ಪ್ರಜಾಪತಿಯು. ಆದುದರಿಂದ ಪ್ರಜಾಪತಿಯಲ್ಲಿ ನಿಹಿತವಾದ ಈ ಋಕ್ಕುಗಳ ಅರ್ಥವನ್ನು ತಿಳಿದವನು ಅಭಿವೃದ್ಧಿಯನ್ನು ಹೊಂದುತ್ತಾನೆ. ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನೂ ಮೂರುಮೂರಾವರ್ತಿ ಪಠಿಸುವುದರಿಂದ ಯಜ್ಞಕರ್ಮದ ಆದ್ಯಂತತುದಿಗಳಲ್ಲಿ ಗಂಟನ್ನು ಹಾಕಿ ಕಟ್ಟುವಂತೆ ಆಗಿ ಯಜ್ಞವು ಬಿಗುವಾಗಿಯೂ, ಜಾರಿಹೋಗದಂತೆ ಸ್ಥಿರವಾಗಿಯೂ ನಿಲ್ಲಲು ಅವಕಾಶವಾಗುವುದು ಎಂದು ಇಲ್ಲಿ ವಿವರಿಸಲಾಗಿದೆ.

## *English Translation*

The Adhvaryu (says to the Hotar): repeat mantras for Agni who is being produced by friction.

The Hotar repeats a verse addressed to Savitar; abhitva deva Savitar (1, 24, 3). They ask: why does he repeat a verse addressed to Savitar for the Agni who is being produced? (The answer is:) Savitar rules over all productions. Produced (themselves) by Savitar, they (are able) to produce Agni (by friction). Thence a verse addressed to Savitar is required.

He repeats a verse, addressed to Dyava-prithivi: mahi dyauh prithivicha na (4, 56, 1).

They ask: why does he repeat a verse addressed to Dyava prithivi for Agni who is being produced (by friction)? They answer: the gods caught him (once), when he was born, between heaved and earth (Dyavaprithvi: since that time he is kept there enclosed (by heaven and earth). Thence the Hotar repeats a verse addressed to Dyava-prithivi.

He repeats a triplet or verses addressed to Agni in the Gayatri-metre tvam Agne pushkarad adhi (6, 16, 13) when Agni is being produced. Thus he makes him (Agni) presser by his own metre (Gayatri). The words, atharva niramanthato, i.e., the fire-priest produced thee out (of the two wooden sticks by means of friction), are complete in form.

What is complete in form, (that is) when the verse which is repeated alludes to the ceremony which is being performed, that is successful in the sacrifice.

Should Agni not be born (the fire not be produced) or should it take a long time, then the Rakshoghni verses, which are in the Gayatri metre are to be repeated: Agne hamsi nyatrinam (10, 118). These verses are intended for destroying the Rakshas (the evil-doers). For the Rakshasas have seized him, if he is not born, or if his birth is delayed.

When Agni is born after the recital of the first or the second (and so on) of these (Raksoghni verses), then the Hotar has to repeat a verse appropriate to him, who has been born, by containing the term "born" uta bruvantu jantava (1, 74, 3).

What is appropriate in the sacrifice, that is successful. He repeats: a yam hastena khadinam (6, 16, 40). In this verse occurs the term "hasta, hand", for they rub him (out of two wooden sticks) by means of their hands. In it there further occurs: s'ir'ur-jatah, i.e., a child born; for just as a child, he is first born. The word na (in na bibhrati of the verse) has with the gods the same meaning, as om (yes) with these (men). He repeats, pra devam devavitaye (6, 16, 41). This verse is appropriate for Agni when he is being thrown into the Ahavaniya fire (after having come out of the two wooden sticks). The half verse a sve yonau nishidate (which are contained in this verse) i.e., he may sit in his owu house, means, that Agni, (the Ahavaniya fire) is Agni's (who was just born by friction) proper place.

In the verse: Ja'tam jatavedasi (6, 16, 42) the one is jata (the Agni produced by friction), the other jatavedas (the Ahavaniya fire). The words, priyam, s'is itha atithim mean, Agni (the new born) is the beloved guest of the (other) Agni (the Ahavaniya). By the words, Syona a grihapatim, the priest places him into ease (by puttiug him into his proper place, the Ahavaniya fire). Agninagnis samidhyate (1, 12, 6) is appropriate (when the new born Agni has been thrown into the Ahavaniya fire). In the verse: tvam hyagne agnina vipro viprena santsata (8, 43, 14) the one vipra (wise) means one Agni, and the other vipra the

other Agni; the one san (being, existing) means the one, the other san in (sata) the other Agni.

In the verse: tam marjayanta sukratum (8, 73, 7) the words, sveshukshayeshu, mean, this Agni is the other Agni's own residence.

With the verse, yajnena yajnam ayajanta (1, 163, 50) he concludes By means of the sacrifice (the ideal omnipresent sacrifice) the gods thus performed (the actual, visible) saerifice. By having sacrificed Agni through Agni (having thrown the new born Agni into the Ahavaniya fire) the gods went to heaven. (In the remaining part of the verse) "these (producing fire &c.) were the first rites; the great ones (the sacrificers) reached that heaven in which those gods, who formerly performed the same rites reside." (1,64,50), the metres are the sadhya devas, *i.e.* the gods who (formerly) performed. They sacrificed Agni at the beginning by means of Agni, and went to heaven. There were the Aditya, and the Angiras. They sacrificed at the beginning Agni by means of Agni and went to heaven. The offering of the fire (Agni) is that offering which leads to heaven. Even if the performed priest is no proper Brahman (in the strictes sense), or even pronounced to be an ill-reputed man, this sacrifice nevertheless goes up to the gods, and becomes not polluted by the contagion with a wicked man (as in this case the performing priest is). The oblation (of Agni in the Ahavniya fire) of him who has this knowledge goes up to the gods, and does not become infected by the contagion with a wicked man.

The verses he repeats are thirteen in number; they are complete in form. If the form is complete and the verse alludes to the ceremony which is being performed, then the sacrifice is successful. Of these verses he repeats the first and the last thrice; this makes seventeen. For Prajapati is seventeenfold, comprising such a year as consists of twelve months and five seasons. Prajapathi is the year.

He who has such a knowledge prospers by these verses which reside in Prajapati. By repeating thrice the first and last verses he ties both the knots of the sacrifice to fasten and tighten it, and prevent it from slipping down.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತೃತೀಯಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ಐದನೆಯ ಖಂಡವು ಸಮಾಪ್ತವಾದುದು.



# ಅಥ ತೃತೀಯಾಧ್ಯಾಯೇ ಷಷ್ಠಃ ಖಂಡಃ

## ಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಆತಿಥ್ಯೇಷ್ಟಿಯ ಯಾಜ್ಯಾಪುರೋನುವಾಕ್ಯಮಂತ್ರಗಳು_ಇಳಾಂತವಾಗಿ ಮಾತ್ರ ಆತಿಥ್ಯೇಷ್ಟಿಯನ್ನು ಮಾಡಬೇಕು_ಆತಿಥ್ಯೇಷ್ಟಿಯಲ್ಲಿ ಪ್ರಯಾಜಹೋಮಗಳನ್ನು ಮಾಡಬೇಕು—ಅನುಯಾಜಹೋಮಗಳನ್ನು ಮಾಡಕೂಡದು ಇತ್ಯಾದಿ]

---

**ಸಮಿಧಾಗ್ನಿಂ ದುವಸ್ಯತಾಪ್ಯಾಯಸ್ವ ಸಮೇತು ತ ಇತ್ಯಾಜ್ಯಭಾಗಯೋಃ ಪುರೋನುವಾಕ್ಯೇ ಭವತ ಆತಿಥ್ಯವತ್ಯೌ ರೂಪಸಮೃದ್ಧೇ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ॥**

ಆತಿಥ್ಯೇಷ್ಟಿಮಧ್ಯೇ ಕರ್ತವ್ಯಮಗ್ನಿಮಂಥನಮುಕ್ತ್ವಾ ತದಿಷ್ಟಿವಿಶೇಷಂ ವಿಧತ್ತೇ— ಸಮಿಧಾಗ್ನಿಮಿತಿ ಪ್ರಥಮಾಜ್ಯಭಾಗಸ್ಯ ಪುರೋನುವಾಕ್ಯಾ ॥ ಆಪ್ಯಾಯಸ್ವ ಸಮೇತುತ ಇತಿ ದ್ವಿತೀಯಸ್ಯ । ಪ್ರಥಮಮಂತ್ರಸ್ಯ ದ್ವಿತೀಯಪಾದೇ ಘೃತೈರ್ಬೋಧಯತಾತಿಥಿಮಿತಿ ಶ್ರೂಯಮಾಣತ್ವಾದಾತಿಥ್ಯವತ್ಯೌ ॥

ಆತಿಥ್ಯೇಷ್ಟಿಯ ಮಧ್ಯದಲ್ಲಿ ಅಗ್ನಿಮಥನಮಾಡುವುದಕ್ಕಾಗಿ ಆ ಇಷ್ಟಿಯನ್ನು ಮಧ್ಯದಲ್ಲಿಯೇ ನಿಲ್ಲಿಸಿದ್ದು ಸರಿಯಷ್ಟೆ. ಈಗ ಆ ಆತಿಥ್ಯೇಷ್ಟಿಯನ್ನು ಪೂರ್ಣಗೊಳಿಸುವುದಕ್ಕಾಗಿ ಉಳಿದ ಕರ್ಮಗಳನ್ನು ವಿವರಿಸುವರು. ಈ ಆತಿಥ್ಯೇಷ್ಟಿಯಲ್ಲಿ ಆಜ್ಯಭಾಗಗಳೆಂಬ ಎರಡು ಹೋಮಗಳಿಗಾಗಿ ಪುರೋನುವಾಕ್ಯಾ ಎರಡು ಮಂತ್ರಗಳನ್ನು ನಿರ್ದೇಶಿಸುವರು. ಅವುಗಳಲ್ಲಿ—

**ಸಮಿಧಾಗ್ನಿಂ ದುವಸ್ಯತ ಘೃತೈರ್ಬೋಧಯತಾತಿಥಿಂ ।**
**ಆಸ್ಮಿನ್ ಹವ್ಯಾ ಜುಹೋತನ ॥** (ಋ. ಸಂ. ೮-೪೪-೧)

ಎಂಬ ಋಕ್ಕು ಮೊದಲನೆಯ ಪುರೋನುವಾಕ್ಯವು.

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಂ ।**
**ಭವಾ ವಾಜಸ್ಯ ಸಂಗಥೇ ॥** (ಋ. ಸಂ. ೧-೯೧-೧೬)

ಎಂಬ ಋಕ್ಕು ಎರಡನೆಯ ಪುರೋನುವಾಕ್ಯಾಮಂತ್ರವು. ಮೊದಲನೆಯ ಋಕ್ಕಿನ ಎರಡನೆಯ ಪಾದದ **ಘೃತೈರ್ಬೋಧಯತಾತಿಥಿಂ** ಎಂಬಲ್ಲಿ ಅತಿಥಿಶಬ್ದಪ್ರಯೋಗವಿರುವುದರಿಂದ ಈ ಎರಡು ಋಕ್ಕುಗಳೂ ಆತಿಥ್ಯೇಷ್ಟಿಯ ಕರ್ಮವನ್ನು ಸೂಚಿಸತಕ್ಕವು. ಯಜ್ಞಕರ್ಮಗಳಲ್ಲಿ ಪಠಿಸತಕ್ಕ ಋಕ್ಕುಗಳು ಆಯಾ ಕರ್ಮಗಳಿಗೆ ತಕ್ಕಂತೆ ಅವುಗಳನ್ನು ವಿವರಿಸುವ ಅರ್ಥ

ವನ್ನು ಹೇಳುವುದಾಗಿರಬೇಕು. ಈರೀತಿ ಕರ್ಮಕ್ಕೂ ಋಕ್ಕಿನ ಅರ್ಥಕ್ಕೂ ಸಂಬಂಧವಿದ್ದರೆ ಎಂದರೆ ಸಮನ್ವಯವಿದ್ದರೆ ಅದಕ್ಕೆ ರೂಪಸಮೃದ್ಧಿ ಎಂದು ಹೇಳುವರು. [ಯಜ್ಞಗಳಲ್ಲಿ ಪ್ರಧಾನಾಹುತಿಗಳನ್ನು ಹೋಮಮಾಡುವುದಕ್ಕೆ ಪೂರ್ವಭಾವಿಯಾಗಿ ಅಗ್ನಿ ಮತ್ತು ಸೋಮದೇವತೆಗಳನ್ನುದ್ದೇಶಿಸಿ ಎರಡು ಹೋಮಗಳನ್ನು ಮಾಡುವರು. ಈ ಎರಡು ಹೋಮಗಳಿಗೆ ಆಜ್ಯಭಾಗವೆಂದು ಹೆಸರು. ಈ ಆಜ್ಯಭಾಗಗಳು ಯಜ್ಞಕ್ಕೆ ಎರಡು ಕಣ್ಣುಗಳು ಎಂದು ಹೇಳಿದೆ

**ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ ಯದಾಜ್ಯಭಾಗೌ ಯಜತಿ ಚಕ್ಷುಷೀ ಏವ ತದ್ಯಜ್ಞಸ್ಯ ಪ್ರತಿದಧಾತಿ........ರಾಜಾನೌ ವಾ ಏತೌ ದೇವತಾನಾಂ ।**

(ತೈ. ಸಂ. ೨-೬-೨-೧)

ಎಂದು ಯಜುರ್ವೇದದಲ್ಲಿ ಹೇಳಿದೆ.]

## ಸೈಷಾಗ್ನೇಯ್ಯತಿಥಿಮತೀ ನ ಸೌಮ್ಯಾತಿಥಿಮತ್ಯಸ್ತಿ ಯತ್ಸೌಮ್ಯಾತಿಥಿಮತೀ ಸ್ಯಾಚ್ಛಶ್ವತ್ಸಾ ಸ್ಯಾತ್ ।

**ತದೇತದಾಕ್ಷಿಪತಿ—ಸೌಮ್ಯಾ ತ್ವತಿಥಿಶಬ್ದೋಪೇತಾ ನಾಸ್ತಿ ॥ ಆಪ್ಯಾಯಸ್ವೇತ್ಯಸ್ಯಾಮೃಚ್ಯತಿಥಿಶಬ್ದಸ್ಯಾಶ್ರವಣಾತ್ ॥ ಯದಿ ಸೌಮ್ಯಾತಿಥಿಶಬ್ದೋಪೇತಾ ಸ್ಯಾತ್ತದಾನೀಂ ಶಶ್ವದವಶ್ಯಂ ಸಾ ಸೌಮ್ಯಾ ಪುರೋನುವಾಕ್ಯಾ ಭವೇತ್ ॥ ನ ತ್ವಸಾವತಿಥಿಮತೀ ॥ ತಸ್ಮಾದಾತಿಥ್ಯವತ್ಯಾವಿತಿ ದ್ವಿವಚನಮಯುಕ್ತಮಿತ್ಯರ್ಥಃ ॥**

ಮೇಲಿನ ಪುರೋನುವಾಕ್ಯಾಮಂತ್ರಗಳಲ್ಲಿ ಅಗ್ನಿಯನ್ನು ಸ್ತುತಿಸುವ **ಸಮಿಧಾಗ್ನಿಂ** ಎಂಬ ಮೊದಲನೆಯ ಋಕ್ಕಿನಲ್ಲಿ ಅತಿಥಿಶಬ್ದಪ್ರಯೋಗವಿದೆ. ಸೋಮವನ್ನು ಸ್ತುತಿಸುವ **ಆ ಪ್ಯಾಯಸ್ವ** ಎಂಬ ಎರಡನೆಯ ಋಕ್ಕಿನಲ್ಲಿ ಅತಿಥಿಶಬ್ದಪ್ರಯೋಗವಿರುವುದಿಲ್ಲ. ಆದ್ದರಿಂದ ಎಂದರೆ ಸೌಮ್ಯಾತಿಥಿಶಬ್ದಪ್ರಯೋಗವಿಲ್ಲದಿರುವ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪರಿಗಣಿಸಲು ಸಾಧ್ಯವಿಲ್ಲ. ಅಲ್ಲದೆ ಈ ಎರಡನೆಯ ಮಂತ್ರವು ಅತಿಥಿಯ ವಿಷಯವಾಗಿ ಏನನ್ನೂ ಹೇಳುವುದಿಲ್ಲ. ಆದರೂ ಇಲ್ಲಿ ಈ ಎರಡು ಋಕ್ಕುಗಳನ್ನೂ ಆತಿಥ್ಯವತ್ಯೌ (ಅತಿಥಿಯನ್ನು ಪ್ರಶಂಸಿಸುವ ಋಕ್ಕುಗಳು) ಎಂದು ಕರೆಯಲಾಗಿದೆ. ಇದು ಅಯುಕ್ತವಲ್ಲವೇ ?

## ಏತತ್ತ್ವೇವೈಷಾತಿಥಿಮತೀ ಯದಾಪೀನವತೀ ।

**ಆಕ್ಷೇಪಂ ಸಮಾಧತ್ತೇ—ತುಶಬ್ದ ಆಕ್ಷೇಪನಿವಾರಣಾರ್ಥಃ । ಆಪೀನಮಭಿವೃದ್ಧಿಸ್ತದ್ವಾಚಕಸ್ಯಾಽಽಪ್ಯಾಯಸ್ವೇತಿ ಶಬ್ದಸ್ಯ ವಿದ್ಯಮಾನತ್ವಾದಿಯಂ ಸೌಮ್ಯಾಽಽಪೀನವತೀ ॥ ಯದಾಪೀನವತ್ತ್ವಮಸ್ತಿ, ಏತದೇವೈತೇನಾಪೀನವತ್ವೇನೈವೈಷಾ ಸೌಮ್ಯಾತಿಥಿಮುಯೀ ಸಂಪದ್ಯತೇ ॥ ಆಪೀನವತ್ವಸ್ಯಾತಿಥ್ಯುಪಲಕ್ಷಕತ್ವಾತ್ ॥**

ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಇಲ್ಲಿ ತು ಶಬ್ದವು ಆಕ್ಷೇಪನಿವಾರಣೆಯನ್ನು ಸೂಚಿಸುವುದು. ಸೋಮವನ್ನು ಸ್ತುತಿಸುವ ಋಕ್ಕಿನಲ್ಲಿಯೂ ಅತಿಥಿಶಬ್ದವಿದ್ದರೆ ಉತ್ತಮ. ಅಂತಹ ಋಕ್ಕನ್ನೇ ಇಲ್ಲಿ ಉಪಯೋಗಿಸಬೇಕು. ಆದರೆ ಅಂತಹ ಋಕ್ಕು ಇಲ್ಲದ್ದರಿಂದ ಬೇರೆ ಋಕ್ಕನ್ನು ಉಪಯೋಗಿಸಲಾಗಿದೆ. ಅತಿಥಿಶಬ್ದಕ್ಕೆ ಬದಲಾಗಿ ಈ ಎರಡನೇ ಋಕ್ಕಿನಲ್ಲಿ ಆ ಪ್ಯಾಯಸ್ವ ಎಂಬ ಶಬ್ದಗಳಿರುವುದರಿಂದ ಇದು ಆಪೀನವತಿ ಋಕ್ಕು. ಎಂದರೆ ಆ ಪ್ಯಾಯಸ್ವ ಶಬ್ದವು (ಅತಿಥಿಸತ್ಕಾರದಿಂದ ಉಂಟಾಗುವ) ತೃಪ್ತಿಯನ್ನು ಸೂಚಿಸುವುದು. ಆದ್ದರಿಂದ ಈ ಆಪೀನವತೀ ಋಕ್ಕು ಸಹ ಅತಿಥಿಮತೀ ಎಂದರೆ ಅತಿಥಿಯನ್ನೇ

ಪ್ರಶಂಸಿಸುವುದಾಗಿರುವುದು. ಎಂದರೆ ಆಪೀನವತಿ ಎಂಬ ಶಬ್ದವೂ ಆತಿಥ್ಯವತೀ ಎಂಬ ಶಬ್ದದ ಅರ್ಥವನ್ನೇ ಬೋಧಿಸುವುದು. ಆದ್ದರಿಂದ ಈ ಎರಡು ಋಕ್ಕುಗಳನ್ನು ಆತಿಥ್ಯವತೀ ಎಂದು ಕರೆದಿರುವುದು ನ್ಯಾಯವಾಗಿದೆ.

**ಯದಾ ವಾ ಅತಿಥಿಂ ಪರಿವೇವಿಷತ್ಯಾ ಪೀನ ಇವ ವೈ ಸ ತರ್ಹಿ ಭವತಿ ।**

**ತದೇವೋಪಲಕ್ಷಕತ್ವಂ ವಿಶದಯತಿ—ತಮತಿಥಿಂ ಗೃಹಸ್ವಾಮೀ ಯದ್ಯೈವ ಪರಿವೇವಿಷತಿ ಪರಿವೇಷಣೇನ ಪಾತ್ರೇ ಭೋಜ್ಯಪ್ರಕ್ಷೇಪಣೇನ ಭೋಜಯತಿ ತರ್ಹಿ ತಸ್ಮಿನ್ಭೋಜನೋತ್ತರಕಾಲೇ ಸೋಽತಿಥಿರಾಪೀನ ಇವೋದರಪೂರ್ತ್ಯಾ ವೃದ್ಧಿಂ ಪ್ರಾಪ್ತ ಇವ ಭವತ್ಯೇವ ॥ ತಸ್ಮಾದ್ವೃದ್ಧಿವಾಚಕ ಆಪ್ಯಾಯಸ್ವೇತಿ ಶಬ್ದೋಽತಿಥಿಲಕ್ಷಕಃ ॥ ಅತೋ ದ್ವಿವಚನಂ ಪುರೋನುವಾಕ್ಯಾತ್ವಂ ಚ ಯುಕ್ತಂ ।**

ಮೇಲೆ ಹೇಳಿದ ವಿಷಯವನ್ನೇ ವಿಶದಪಡಿಸುವರು. ಗೃಹದ ಯಜಮಾನನಾದವನು ಭೋಜನಸಾಮಗ್ರಿಗಳನ್ನು ಎಂದರೆ ಪಕ್ವವಾದ ಆಹಾರಾದಿಗಳನ್ನು ತಂದು ಅತಿಥಿಯ ಮುಂದೆ ಇಡುವನು. ಅತಿಥಿಯು ಆ ಪಕ್ವಾನ್ನವನ್ನು ಭೋಜನಮಾಡಿ ಭೋಜನಾನಂತರ ಆಪೀನ ಇವ ಎಂದರೆ ಉದರಪೂರ್ತಿಯಾಗಿ ಭೋಜನಮಾಡಿದ್ದರಿಂದ ವೃದ್ಧಿಯನ್ನು ಎಂದರೆ ತೃಪ್ತಿಯನ್ನು ವ್ಯಕ್ತಪಡಿಸುವನು. ಆದ್ದರಿಂದ ವೃದ್ಧಿ (ತೃಪ್ತಿ) ವಾಚಕವಾದ ಆ ಪ್ಯಾಯಸ್ವ ಎಂಬ ಶಬ್ದವು ಅತಿಥಿಯನ್ನೇ ಸೂಚಿಸುವುದಾಗಿದೆ. ಆದ್ದರಿಂದ ಎರಡು ಪುರೋನುವಾಕ್ಯಾಮಂತ್ರಗಳನ್ನೂ ಸೇರಿಸಿ **ಆತಿಥ್ಯವತ್ಯೌ** ಎಂದು ದ್ವಿವಚನವನ್ನು ಉಪಯೋಗಿಸಲಾಗಿದೆ.

**ತಯೋರ್ಜುಷಾಣೇನೈವ ಯಜತಿ ।**

**ಆಜ್ಯಭಾಗಯೋರ್ಯಾಜ್ಯಾಂ ವಿಧತ್ತೇ—ಪ್ರಕೃತಾವಾಮ್ನಾತೌ ಜುಷಾಣೋಽಗ್ನಿರಾಜ್ಯಸ್ಯವೇತು ॥ ಜುಷಾಣಃ ಸೋಮ ಆಜ್ಯಸ್ಯ ಹವಿಷೋ ವೇತ್ವಿತಿ ॥ ತೇನೈವ ಮಂತ್ರೇಣ ಯಜೇತ ॥ ಅಗ್ನಿರ್ವೃತ್ರಾಣೀತ್ಯಾದಿಕೇ ಪ್ರಕೃತಿಗತೇ ಪುರೋನುವಾಕ್ಯೇ ಚೋದಕಪ್ರಾಪ್ತೇ ಅಪೋದ್ಯ ಯಥಾ ಸಮಿಧಾಗ್ನಿಮಿತ್ಯಾದಿಕೇ ವಿಹಿತೇ ತದ್ವದ್ಯಾಜ್ಯಾಂತರಪ್ರಸಕ್ತಿಂ ವಾರಯಿತುಂ ವಿಧಿಃ ॥**

ಈ ಖಂಡದ ಆದಿಯಲ್ಲಿ ಸಮಿಧಾಗ್ನಿಂ ಎಂದು ಮೊದಲಾಗಿ ಎರಡು ಪುರೋನುವಾಕ್ಯಾಮಂತ್ರಗಳನ್ನು ನಿರ್ದೇಶಿಸಲಾಗಿದೆಯಷ್ಟೆ. ಈಗ ಅದಕ್ಕೆ ಸಂಬಂಧಿಸಿದಂತೆ ಎಂದರೆ ಆಜ್ಯಭಾಗದಲ್ಲಿ ಯಾಜ್ಯಾಮಂತ್ರಗಳನ್ನು ಹೇಳಲಾಗುವುದು. ಆ ಎರಡು ಮಂತ್ರಗಳೂ ಜುಷಾಣಶಬ್ದದಿಂದಲೇ ಪ್ರಾರಂಭವಾಗಬೇಕು—

(೧) **ಜುಷಾಣೋ ಅಗ್ನಿರಾಜ್ಯಸ್ಯ ವೇತು ।**

(೨) **ಜುಷಾಣಃ ಸೋಮ ಆಜ್ಯಸ್ಯ ಹವಿಷೋ ವೇತ ॥** (ತೈ. ಬ್ರಾ: ೩-೫-೬)

ಎಂಬ ಎರಡು ಮಂತ್ರಗಳಿಂದ (ಯಾಜ್ಯಾಮಂತ್ರಗಳಿಂದ) ಹೋಮಮಾಡಬೇಕು. ಈ ಮಂತ್ರಗಳು ತೈತ್ತಿರೀಯ ಬ್ರಾಹ್ಮಣದ ೩ ನೇ ಕಾಂಡದ ಐದನೆಯ ಪ್ರಪಾಠಕದಲ್ಲಿ **ಅಗ್ನಿರ್ವೃತ್ರಾಣಿ** ಎಂಬ ಆರನೆಯ ಅನುವಾಕದಲ್ಲಿ ಉಕ್ತವಾಗಿವೆ.

**ಇದಂ ವಿಷ್ಣುರ್ವಿಚಕ್ರಮೇ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಮಿತಿ ವೈಷ್ಣವ್ಯೌ ॥ ತ್ರಿಪದಾಮನೂಚ್ಯ ಚತುಷ್ಪದಯಾ ಯಜತಿ**

ಪ್ರಧಾನಸ್ಯ ಹವಿಷೋ ಯಾಜ್ಯಾನುವಾಕ್ಯೇ ವಿಧತ್ತೇ— ಯಾಜ್ಯಾನುವಾಕ್ಯೇ ಕುರ್ಯಾ-ದಿತಿ ಶೇಷಃ ॥ ತಯೋರ್ವಿಭಾಗಂ ವಿಧತ್ತೇ—ಇದಂ ವಿಷ್ಣುರಿತಿ ತ್ರಿಪದಾ ತಾಂ ಪುರೋನುವಾ-ಕ್ಯಾರೂಪೇಣಾನು ಬ್ರೂಯಾತ್ ॥ ತದಸ್ಯ ಪ್ರಿಯಮಿತಿ ಚತುಷ್ಪದಾ ತಯಾ ಯಜೇತ ॥ ಯಾಜ್ಯಾರೂಪೇಣ ತಾಂ ಪಠೇತ್ ॥

ಈ ಆತಿಥ್ಯೇಷ್ಟಿಯಲ್ಲಿ ಪ್ರಧಾನಾಹುತಿಯ ಮಂತ್ರಗಳನ್ನು ನಿರ್ದೇಶಿಸುವರು. ಇಲ್ಲಿ ವಿಷ್ಣು ದೇವತೆಯನ್ನು ಪ್ರತಿಪಾದಿಸುವ ಎರಡು ಋಕ್ಕುಗಳು ಇರುವವು. ಇದಂ ವಿಷ್ಣುರ್ವಿಚಕ್ರಮೇ (ಋ. ಸಂ. ೧-೨೨-೧೭) ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ (ಋ. ಸಂ. ೧-೧೫೪-೫) ಎಂಬ ಈ ಎರಡು ವಿಷ್ಣುದೇವತಾಕವಾದ ಋಕ್ಕುಗಳನ್ನು ಪ್ರಧಾನಾಹುತಿಗಳಿಗಾಗಿ ಉಪಯೋಗಿಸಬೇಕು.

ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ॥ ತ್ರಿಪಾದಮನೂಚ್ಯ ಚತುಷ್ಪದಯಾ ಯಜತಿ ॥

ಎಂಬ ಮೂರುಪಾದಗಳುಳ್ಳ ಮಂತ್ರವನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ

ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ ।
ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ॥

ಎಂಬ ನಾಲ್ಕು ಪಾದಗಳುಳ್ಳ ಮಂತ್ರವನ್ನು ಯಾಜ್ಯಾಮಂತ್ರವನ್ನಾಗಿಯೂ ಪಠಿಸಿ ಪ್ರಧಾನಾಹುತಿಯನ್ನು ಅರ್ಪಿಸಬೇಕು

**ಸಪ್ತ ಪದಾನಿ ಭವಂತಿ ಶಿರೋ ವಾ ಏತದ್ಯಜ್ಞಸ್ಯ ಯದಾತಿಥ್ಯಂ ಸಪ್ತ ವೈ ಶೀರ್ಷನ್ಪ್ರಾಣಾಃ ಶೀರ್ಷನ್ನೇವ ತತ್ಪ್ರಾಣಾನ್ದಧಾತಿ ॥**

ಋಗ್ದ್ವಯಗತಾಂ ಪಾದಸಂಖ್ಯಾಂ ಪ್ರಶಂಸತಿ—ಆತಿಥ್ಯೇಷ್ಟೇರ್ಯಜ್ಞಶಿರೋರೂಪ-ತ್ವಾಚ್ಛಿರಸಿ ಚ್ಛಿದ್ರವರ್ತಿನಾಂ ಪ್ರಾಣಾನಾಂ ಸಪ್ತತ್ವಾದತ್ರ ಪಾದಸಂಖ್ಯಯಾ ಯಜ್ಞಸ್ಯ ಶಿರಸಿ ಸಪ್ತ ಪ್ರಾಣಾಃ ಸ್ಥಾಪಿತಾ ಭವಂತಿ ॥

ಮೇಲಿನ ಎರಡು ಋಕ್ಕುಗಳಿಂದ ಒಟ್ಟು ಏಳು ಪಾದಗಳಾಗುವವು (೩+೪=೭). ಈ ಆತಿಥ್ಯೇಷ್ಟಿಯು ಯಜ್ಞದ ಶಿರಃಸ್ವರೂಪವಾಗಿರುವುದೆಂದು ಹೇಳಲ್ಪಡುವುದು. ಏಕೆಂದರೆ ಶಿರಸ್ಸಿನಲ್ಲಿ ಪ್ರಾಣವಾಯುಗಳ ಸಂಚಾರಕ್ಕಾಗಿ ಏಳು ರಂಧ್ರಗಳಿರುವವು. ಶಿರಸ್ಸಿನಲ್ಲಿಯೇ ಪ್ರಾಣಗಳು ನೆಲಸಿರುವವು. ಅದರಂತೆಯೇ ಈ ಆತಿಥ್ಯೇಷ್ಟಿಯಲ್ಲಿರುವ ಪ್ರಧಾನಾಹುತಿಗಳ ಮಂತ್ರಗಳಲ್ಲಿ ಏಳು ಪಾದಗಳಿರುವವು. ಆದ್ದರಿಂದ ಈ ಆತಿಥ್ಯೇಷ್ಟಿಯು ಯಜ್ಞದ ಶಿರಃಸ್ಥಾನೀಯವು.

**ಹೋತಾರಂ ಚಿತ್ರರಥಮಧ್ವರಸ್ಯ ಪ್ರ ಪ್ರಾಯಮಗ್ನಿರ್ಭರತಸ್ಯ ಶೃಣ್ವ ಇತಿ ಸ್ವಿಷ್ಟಕೃತಃ ಸಂಯಾಜ್ಯೇ ಭವತ ಆತಿಥ್ಯವತ್ಯೌ ರೂಪ-**

**ಸಮೃದ್ಧೋ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣಮೃಗಭಿವದತಿ ॥**

ಸಂಯಾಜ್ಯೇ ವಿಧತ್ತೇ—ಹೋತಾರಮಿತಿ ಪುರೋನುವಾಕ್ಯಾ ॥ ಪ್ರ ಪ್ರಾಯಮಿತಿ ಯಾಜ್ಯಾ । ಪ್ರಥಮಾಯಾ ಋಚಶ್ಚತುರ್ಥಪಾದೇ ಶ್ರಿಯಾ ತ್ವಗ್ನಿಮತಿಥಿಂ ಜನಾನಾಮಿತಿ ಕ್ರಿಯಮಾಣತ್ವಾದಾತಿಥ್ಯವತ್ವಂ ॥ ದ್ವಿತೀಯಸ್ಯಾ ಅಪಿ ಚತುರ್ಥಪಾದೇ ದ್ಯುತಾನೋ ದೈವ್ಯೋ ಅತಿಥಿರಿತಿ ॥

ಆತಿಥ್ಯೇಷ್ಟಿಯಲ್ಲಿ ಸ್ವಿಷ್ಟಕೃದ್ಧೋಮದ ಸಂಯಾಜ್ಯಾ ಮಂತ್ರಗಳನ್ನು ಎಂದರೆ ಯಾಜ್ಯಾಪುರೋನುವಾಕ್ಯಾಮಂತ್ರಗಳನ್ನು ನಿರ್ದೇಶಿಸುವರು.

**ಹೋತಾರಂ ಚಿತ್ರರಥಮಧ್ವರಸ್ಯ ಯಜ್ಞಸ್ಯ ಯಜ್ಞಸ್ಯ ಕೇತುಂ ರುಶಂತಂ ।**
**ಪ್ರತ್ಯರ್ಧಿಂ ದೇವಸ್ಯದೇವಸ್ಯ ಮಹ್ನಾ ಶ್ರಿಯಾತ್ವಗ್ನಿಮತಿಥಿಂ ಜನಾನಾಂ ॥**

(ಋ. ಸಂ. ೧೦-೧-೫)

**ಪ್ರಪ್ರಾಯಮಗ್ನಿರ್ಭರತಸ್ಯ ಶೃಣ್ವೇ ವಿ ಯತ್ಸೂರ್ಯೋ ನ ರೋಚತೇ ಬೃಹದ್ಭಾಃ ।**
**ಅಭಿ ಯಃ ಪೂರುಂ ಪೃತನಾಸು ತಸ್ಥೌ ದ್ಯುತಾನೋ ದೈವ್ಯೋ ಅತಿಥಿಃ ಶುಶೋಚ ॥**

(ಋ. ಸಂ. ೭-೮-೪)

ಈ ಎರಡು ಋಕ್ಕಗಳಲ್ಲಿ **ಹೋತಾರಂ** ಎಂಬುವುದು ಪುರೋನುವಾಕ್ಯಾಮಂತ್ರವು; **ಪ್ರಪ್ರಾಯಂ** ಎಂಬುದು ಯಾಜ್ಯಾಮಂತ್ರವು. ಮೊದಲನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿಯೂ, ಎರಡನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿಯೂ ಅತಿಥಿ ಶಬ್ದಪ್ರಯೋಗವಿರುವುದರಿಂದ ಈ ಎರಡು ಋಕ್ಕುಗಳೂ ಆತಿಥ್ಯವನ್ನು ಸೂಚಿಸುವುವು. ಆದ್ದರಿಂದ ಈ ಎರಡು ಋಕ್ಕುಗಳು ಕರ್ಮಕ್ಕೆ ತಕ್ಕಂತೆ ಅರ್ಥವನ್ನು ಹೇಳುವುದರಿಂದ ರೂಪಸಮೃದ್ಧಿಯೆನಿಸುವುವು.

**ತ್ರಿಷ್ಟುಭೌ ಭವತಃ ಸೇಂದ್ರಿಯತ್ವಾಯ ।**

ಮಂತ್ರದ್ವಯಗತಂ ಛಂದಃ ಪ್ರಶಂಸತಿ—ಇಂದ್ರಿಯಂ ವೈ ತ್ರಿಷ್ಟುಬಿತಿ ಶ್ರುತ್ಯಂತರಾ-ತ್ರಿಷ್ಟುಭ ಇಂದ್ರಿಯಹೇತುತ್ವಂ ॥

ಮೇಲಿನ ಎರಡು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಸವು. **ಇಂದ್ರಿಯಂ ವೈ ತ್ರಿಷ್ಟುಪ್** ಎಂಬ ಶ್ರುತಿವಾಕ್ಯಾನುಸಾರವಾಗಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳ ಪ್ರಯೋಗದಿಂದ ಇಂದ್ರಿಯ ಎಂದರೆ ಶಕ್ತಿಸಾಮರ್ಥ್ಯಗಳು ಉಂಟಾಗುವವು.

**ಇಳಾಂತಂ ಭವತೀಳಾಂತೇನ ವಾ ಏತೇನ ದೇವಾ ಅರಾಧ್ನುವನ್ಯದಾ-ತಿಥ್ಯಂ ತಸ್ಮಾದಿಳಾಂತಮೇವ ಕರ್ತವ್ಯಂ ।**

ಅತ್ರೇಡಾಭಕ್ಷಣಾದೂರ್ಧ್ವಭಾವಿಕರ್ತವ್ಯಮಪಿ ಚೋದಕೇನ ಪ್ರಾಪ್ತಂ ತದೇತದ್ವಾರಯತಿ-ಪುರೋಡಾಶಸಂಬಂಧಿ ಯದೇತದಿಡಾಭಾಗಭಕ್ಷಣಂ ತದಂತಮೇವಾಽಽತಿಥ್ಯೇಷ್ಟಿರೂಪಂ

**ಕರ್ಮ ಭವೇತ್ ॥ ತಾವತ್ಯೈವ ಸಮೃದ್ಧಿಸಿದ್ಧೇಃ । ದ್ವಿವಿಧಮಿಡಾಭಕ್ಷಣಂ ॥ ಅನುಯಾಜಯಾ-ಗಾತ್ಪೂರ್ವಮುತ್ತರಕಾಲೀನಂ ಚ ॥**

ಈ ಆತಿಥ್ಯೇಷ್ಟಿಯನ್ನು ಇಡಾಭಕ್ಷಣದವರೆಗೆ ಮಾತ್ರ ಮಾಡಬೇಕು. (ಇಡಾ ಎಂದರೆ ಹೋಮಮಾಡಿ ಮಿಕ್ಕಿರುವ ಪುರೋಡಾಶನೇ ಜ ಹವಿರ್ದ್ರವ್ಯವು) ಅಲ್ಲಿಂದ ಮುಂದಕ್ಕೆ ಮಾಡಕೂಡದು ಸಾಧಾರಣವಾದ ಎಲ್ಲಾ ಇಷ್ಟಿಗಳಲ್ಲಿಯೂ ಇಡಾಭಕ್ಷಣಾನಂತರ ಇನ್ನೂ ಕೆಲವು ಕರ್ಮಗಳನ್ನು ಮಾಡಬೇಕು ಎಂದರೆ ಅನೂಯಾಜಮಂತ್ರಗಳಿಂದ ಹೋಮ, ಸೂಕ್ತವಾಕ, ಶಂಯುವಾಕ, ಪತ್ನೀಸಂಯಾಜ, ಸಮಿಷ್ಟಯಜು ಇವುಗಳನ್ನು ಮಾಡಿದರೆ ಇಷ್ಟಿಯು ಪೂರ್ತಿಯಾಗುವುದು. ಆದರೆ ಈ ಆತಿಥ್ಯೇಷ್ಟಿಯಲ್ಲಿ ಇಡಾಂತವಾಗಿ ಮಾಡಿ ಅಲ್ಲಿಂದ ಮುಂದೆ ಮಾಡಬೇಕಾದ ಅನೂಯಾಜಾದಿಹೋಮಗಳನ್ನೂ ಇತರ ಕರ್ಮಗಳನ್ನೂ ಮಾಡದೆ ಅಲ್ಲಿಗೇ ನಿಲ್ಲಿಸಬೇಕು. ಹೀಗೆ ಈ ಇಷ್ಟಿಯನ್ನು ಅರ್ಧದಲ್ಲಿಯೇ ನಿಲ್ಲಿಸಿದರೂ ಅದು ಪೂರ್ಣವಾದಂತೆಯೇ ಪರಿಗಣಿಸಲ್ಪಡುವುದು. ಏಕೆಂದರೆ ಪೂರ್ವದಲ್ಲಿ ದೇವತೆಗಳು ಈ ಆತಿಥ್ಯೇಷ್ಟಿಯನ್ನು ಇಡಾಂತವಾಗಿ ಮಾಡಿ ಅಲ್ಲಿಗೇ ನಿಲ್ಲಿಸಿದ್ದರಿಂದ ಈಗಲೂ ಆತಿಥ್ಯೇಷ್ಟಿಯನ್ನು ಇಡಾಂತವಾಗಿ ಮಾಡಿ ನಿಲ್ಲಿಸಬೇಕು. ಮುಂದಿನ ಇಷ್ಟಿಕರ್ಮಗಳನ್ನು ಮಾಡಕೂಡದು. ಸಾಧಾರಣವಾಗಿ ಇಷ್ಟಿಗಳನ್ನು ಮಾಡುವಾಗ ಇಡಾಭಕ್ಷಣವನ್ನು ಎರಡು ಪ್ರಕಾರವಾಗಿ ಮಾಡುವರು. ಅನೂಯಾಜಹೋಮಗಳನ್ನು ಮಾಡುವುದಕ್ಕೆ ಮುಂಚೆ ಇಡಾಭಕ್ಷಣವನ್ನು ಮಾಡುವುದು ಒಂದು ವಿಧ. ಅನೂಯಾಜಹೋಮಾನಂತರ ಇಡಾಭಕ್ಷಣಮಾಡುವುದು ಎರಡನೆಯ ವಿಧ. ಪ್ರಕೃತ ಆತಿಥ್ಯೇಷ್ಟಿಯಲ್ಲಿ ಅನೂಯಾಜಾದಿಹೋಮಗಳೂ ಅದರ ಮುಂದಿನ ಕರ್ಮಗಳೂ ಇಲ್ಲದ್ದರಿಂದ ಮೊದಲಿನ ಕ್ರಮವನ್ನೇ ಅನುಸರಿಸಬೇಕಾಗಿರುವುದು.

## ಪ್ರಯಾಜಾನೇವಾತ್ರ ಯಜಂತಿ ನಾನುಯಾಜಾನ್ ।

**ತಯೋಃ ಪೂರ್ವಕಾಲೀನಮುತ್ರಾಂತತ್ವೇನ ದರ್ಶಯಿತುಮನುಯಾಜಾನ್ನಿಷೇಧತಿ—**

ಈ ಆತಿಥ್ಯೇಷ್ಟಿಯಲ್ಲಿ ಪ್ರಯಾಜಮಂತ್ರಗಳಿಂದ ಮಾತ್ರವೇ ಹೋಮಮಾಡುವರು. ಇಷ್ಟಿಯು ಇಡಾಂತದವರೆಗೆ ಮಾತ್ರ ನಡೆಯುವುದರಿಂದ ಅನುಯಾಜಹೋಮಗಳನ್ನು ಮಾಡುವುದಿಲ್ಲ. ಒಂದುವೇಳೆ ಮಾಡಿದರೆ ದೋಷವು ಪ್ರಾಪ್ತವಾಗುವುದು. ಹೇಗೆಂದರೆ—

## ಪ್ರಾಣಾ ವೈ ಪ್ರಯಾಜಾನುಯಾಜಾಸ್ತೇ ಯ ಇಮೇ ಶೀರ್ಷನ್ಪ್ರಾಣಾಸ್ತೇ ಪ್ರಯಾಜಾ ಯೇಽವಾಂಚಸ್ತೇಽನುಯಾಜಾಃ ಸ ಯೋಽತ್ರಾನು-ಯಾಜಾನ್ಯಜೇದ್ಯಥೇಮಾನ್ಪ್ರಾಣಾನಾಲುಪ್ಯ ಶೀರ್ಷಂ ಧಿತ್ಸೇತ್ತಾ-ದೃಕ್ತತ್ ।

**ಅನುಯಾಜಾನಾಂ ಯಜನೇ ದೋಷಂ ಪ್ರಕಟಯತಿ—ಪ್ರಶಬ್ದಸಾಮ್ಯಾತ್ಪ್ರಯಾ-ಜಾನಾಂ ಪ್ರಾಣತ್ವಂ ತದನುವರ್ತಿತ್ವಸಾಮ್ಯಾದನುಯಾಜಾನಾಮಪಿ ಪ್ರಾಣತ್ವಂ॥ ತಥಾ ಸತಿ ತೇ ಯ ಇಮೇ ಶೀರ್ಷನ್ಪ್ರಾಣಾಃ ಶಿರಸ್ಯವಸ್ಥಿತಾಃ ಶ್ವಾಸಾದಿಕಾರಿಣಃ ಪ್ರಾಣಾ ಯೇ ಕೇಚಿತ್ಸಂತಿ ತೇ ಪ್ರಯಾಜರೂಪಾಃ ಪ್ರಕೃಷ್ಟಸಾಮ್ಯಾದುತ್ತಮಾಂಗವರ್ತಿತ್ವೇನ ಪ್ರಾಣಾನಾಂ ಪ್ರಕೃಷ್ಟತ್ವಂ ॥ ಪ್ರಯಾಜಾನಾಂ ಚ ಪ್ರಥಮಾನುಷ್ಠಾನತ್ವೇನ ಪ್ರಕೃಷ್ಟತ್ವಂ ॥ ಯೇ ತ್ವವಾಂಚೋ ನಾಭೇರಧ-ಸ್ತಾದ್ವರ್ತಮಾನಾ ಅಪಾನವಾಯ್ವಾದಯಸ್ತೇಽನುಯಾಜರೂಪಾ ನಿಕೃಷ್ಟತ್ವಸಾಮ್ಯಾದಪಾನ-**

**ವಾಯ್ವಾದೀನಾಂ ಮಧ್ಯಾಂಗವರ್ತಿತ್ವೇನ ನಿಕೃಷ್ಟತ್ವಂ ॥ ಅನುಯಾಜಾನಾಂ ಪಶ್ಚಾದ್ಭಾವಿತ್ವೇನ ನಿಕೃಷ್ಟತ್ವಂ ॥ ಏವಂ ಸತಿ ಯಃ ಪುರ್ಮಾ—ಅತ್ರಾಽಽತಿಥ್ಯೇಷ್ಟಾವನುಯಾಜಾನ್ಯಜೇಲ್ಲೋಕೇ ಕಶ್ಚಿದ್ಯಥೇವಮಾನವಾಗ್ದೇಶವರ್ತಿನೋಽಪಾನವಾಯ್ವಾದೀನಾಲುಪ್ಯ ಚ್ಛಿತ್ವಾ ಶೀರ್ಷಂ ಧಿತ್ಸೇತ್, ಶಿರಸಿ ಸ್ಥಾಪಯಿತುಮಿಚ್ಛೇತ್, ತಾದೃಕ್ತತ್ ತಥೈವ ಸಪುಮಾಂಸ್ತತ್ಕರ್ತುಮಿಚ್ಛೇತ್ ॥ ದೇಶವರ್ತಿಪ್ರಾಣಸ್ಥಾನೀಯಾನುಯಾಜಾನಾಂ ಯಜ್ಞಶಿರಃಸ್ಥಾನೀಯಾತಿಥ್ಯಕರ್ಮಣ್ಯನುಷ್ಠಾನಮನುಯುಕ್ತಂ ತಥಾ ಪುತ್ರಾದಿಪ್ರಜಾಸ್ಥಾನೀಯಾನಾಮನುಯಾಜಾನಾಂ ಶಿರಸ್ಥಾನೀಯೇಽನುಷ್ಠಾನಮನುಯುಕ್ತಮಿತ್ಯಪಿ ದ್ರಷ್ಟವ್ಯಂ ॥**

ಪ್ರಾಣ, ಪ್ರಯಾಜ ಎಂಬ ಶಬ್ದಗಳಲ್ಲಿ ಪ್ರಶಬ್ದವು ಸಾಮಾನ್ಯವಾಗಿರುವುದರಿಂದ ಪ್ರಯಾಜ ಶಬ್ದವು ಪ್ರಾಣವೆಂಬ ಅರ್ಥವನ್ನು ಸೂಚಿಸುವುದು. ಅದರಂತೆಯೇ ಅನೂಯಾಜಶಬ್ದವೂ ಪ್ರಾಣವನ್ನೇ (ನಾಭಿಯಿಂದ ಕೆಳಗಿರುವ) ಸೂಚಿಸುವುದು. ಆದ್ದರಿಂದ ಶಿರಸ್ಸಿನಲ್ಲಿ ಎಂದರೆ ದೇಹದ ಮೇಲುಭಾಗದಲ್ಲಿ ಇರುವ (ಏಳು) ಪ್ರಾಣಗಳು ಪ್ರಯಾಜರೂಪವಾಗಿರುವವು. ಇವು ಉತ್ತಮಾಂಗವಾದ ಶಿರಸ್ಸಿನಲ್ಲಿ ಇರುವುದರಿಂದ ಇವಕ್ಕೆ ಶ್ರೇಷ್ಠತೆಯುಂಟಾಗಿದೆ. ಆದ್ದರಿಂದಲೇ ಪ್ರಯಾಜಾಹುತಿಗಳನ್ನು ಮೊದಲೇ ಎಂದರೆ ಯಜ್ಞಾರಂಭದಲ್ಲಿಯೇ ಮಾಡುವರು. ಅನುಯಾಜಗಳು ನಾಭಿಯ ಕೆಳಗಿರುವ ಅಪಾನವಾಯ್ವಾದಿಗಳನ್ನು ಸೂಚಿಸುವುದರಿಂದ ಅವು ನಿಕೃಷ್ಟವೆನಿಸುವುವು. ಆದ್ದರಿಂದಲೇ ಪ್ರಕೃಷ್ಟವಾದ ಪ್ರಯಾಜಹೋಮಗಳನ್ನು ಮೊದಲುಮಾಡಿ ನಿಕೃಷ್ಟವಾದ ಅನುಯಾಜಹೋಮಗಳನ್ನು ಕೊನೆಯಲ್ಲಿ ಮಾಡುವರು. ವಸ್ತುಸ್ಥಿತಿಯು ಹೀಗಿರುವಾಗ ಇದಕ್ಕೆ ವ್ಯತಿರಿಕ್ತವಾಗಿ ಒಬ್ಬ ಪುರುಷನು ನಿಕೃಷ್ಟವಾದ ಅಪಾನಾದಿವಾಯುಗಳನ್ನು ನಾಭಿಪ್ರದೇಶದಿಂದ ತಪ್ಪಿಸಿ ತಂದು ಶಿರಸ್ಸಿನಲ್ಲಿ ಸ್ಥಾಪಿಸಲು ಇಚ್ಛಿಸಿದರೆ ಅದರಿಂದ ಅನಾಹುತವೇ ಆದೀತು ಎಂದರೆ ಪ್ರಾಣಾಪಾಯವೇ ಆಗಬಹುದು. ಪ್ರಾಣವಾಯುಗಳು ಅವುಗಳ ಸ್ವಸ್ಥಾನದಲ್ಲಿ ಇದ್ದರೆ ಮಾತ್ರ ಪುರುಷನು ಸುಖವಾಗಿರುವನು. ಅವುಗಳ ಸ್ಥಾನವನ್ನು ಬದಲಿಸಿದರೆ ಅಪಾಯವುಂಟಾಗುವುದು. ಅದರಂತೆಯೇ ಅನುಯಾಜಹೋಮಗಳನ್ನು ಈ ಆತಿಥ್ಯೇಷ್ಟಿಯಲ್ಲಿ ಮಾಡುವುದಾದರೆ ಯಜಮಾನನ ಪ್ರಾಣಕ್ಕೆ ಅಪಾಯ ತಟ್ಟುವುದಲ್ಲದೆ ಯಜ್ಞಕಾರ್ಯಕ್ಕೆ ವಿಘ್ನವೂ ಉಂಟಾಗುವುದು. ಆದ್ದರಿಂದ ಈ ಇಷ್ಟಿಯಲ್ಲಿ ಅನುಯಾಜಹೋಮಗಳನ್ನು ಮಾಡುವುದು ಅಯುಕ್ತವು.

## ಅತಿರಿಕ್ತಂ ತತ್ಸನುು ವಾ ಇಮೇ ಪ್ರಾಣಾ ವಿದ್ರೇ ಯೇ ಚೇಮೇ ಯೇ ಚೇಮೇ ।

**ದೋಷಾಂತರಮಾಹ—ಯೇ ಚೇಮೇ ಶಿರಸಿ ಯೋಗ್ಯಾಃ ಪ್ರಾಣಾ ಯೇಽಪ್ಯಮೀ ನೀಚದೇಶಸ್ಥಿತಾಃ ಪ್ರಾಣಾಸ್ತೇ ಸರ್ವೇ ಸಮುವಿದ್ರೇ ಸಂಭೂಯೈಕತ್ರ ಶಿರಸ್ಯವತಿಷ್ಠೇರನ್ ॥ ತಚ್ಚಾತಿರಿಕ್ತಂ ಯೋಗ್ಯಸ್ಥಾನೀಯಾದಧಿಕಂ ಶಿರೋರೂಪಮಾತಿಥ್ಯಂ ಕರ್ಮ ಚಕ್ಷುರಾದೀನಾಮೇವ ಪ್ರಾಣಾನಾಂ ಯೋಗ್ಯಸ್ಥಾನಂ ನ ತ್ವಧೋದೇಶವರ್ತಿನಾಂ ಅಪಾನಾದೀನಾಂ ತತ್ರಾವಕಾಶೋಽಸ್ತೀತ್ಯರ್ಥಃ ॥**

ಶಿರಸ್ಸಿನಲ್ಲಿ ಇರಲು ಯೋಗ್ಯವಾದ ಪ್ರಾಣವಾಯುಗಳು ಶಿರಸ್ಸಿನಲ್ಲಿಯೇ ಇರಬೇಕು. ಶರೀರದ ಅಧಃಪ್ರದೇಶದಲ್ಲಿರುವ ಪ್ರಾಣವಾಯುಗಳು ಅಲ್ಲಿಯೇ ಇರಬೇಕು. ಅಧಃಪ್ರದೇಶದ ಪ್ರಾಣವಾಯುಗಳಿಗೆ ಶಿರಃಸ್ಥಾನವು ಯೋಗ್ಯವಾದ ಪ್ರದೇಶವಲ್ಲ.

ಹೀಗಿದ್ದರೂ ಈ ಎರಡು ವಿಧವಾದ ಪ್ರಾಣಗಳನ್ನು ಒಂದೇಕಡೆ ಎಂದರೆ ಶಿರಃಸ್ಥಾನದಲ್ಲಿ ಸೇರಿಸುವುದು ಯುಕ್ತವಲ್ಲ. ಅದರಿಂದ ಒಳ್ಳೆಯದಾಗುವುದಿಲ್ಲ.

ತದ್ಯದೇವಾತ್ರ ಪ್ರಯಾಜಾನ್ಯಜನ್ತಿ ನಾನುಯಾಜಾಂಸ್ತತ್ರ ಸಕಾಮ
ಉಪಾಪ್ತೋ ಯೋಽನುಯಾಜೇಷು ಯೋಽನುಯಾಜೇಷು ॥೧೭॥

ನನ್ವನುಯಾಜಾನಾಮನುಷ್ಠಾನಾಭಾವೇ ಕರ್ಮಾಂಗಸಾಕಲ್ಯಲಕ್ಷಣಃ ಫಲವಿಶೇಷೋ ನ ಪ್ರಾಪ್ಯೇತೇತ್ಯಾಶಂಕ್ಯಾಹ—ತತ್ತಸ್ಮಿನ್ನಾತಿಥ್ಯಕರ್ಮಣಿ ಯದಿ ಪ್ರಯಾಜಾನೇವ ಯಜಂತಿ ನ ತ್ವನುಯಾಜಾಂಸ್ತದಾನೀಮನುಯಾಜೇಷು ಯಃ ಕಾಮಃ ಫಲವಿಶೇಷಃ ಸ ಸರ್ವೋಽಪಿ ತತ್ರ ಕರ್ಮಣಿ ಪ್ರಾಪ್ತೋ ಭವತಿ ॥ ಯಥಾಲೋಕೇ ಕಂಚಿದಾಂದೋಲಿಕಾದಿಭಾರಂ ವಹತ್ಸು ಬಹುಷು ಮಧ್ಯೇ ಕಸ್ಯಚಿದಶಕ್ತಾ ಸತ್ಯಾಮವಶಿಷ್ಟಾ ಏವ ವಹಂತಿ ತದ್ವದಿತ್ಯರ್ಥಃ ॥ ದ್ವಿರಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥ ಅತ್ರ ಮೀಮಾಂಸಾ ॥ ದಶಮಾಧ್ಯಾಯಸ್ಯ ಸಪ್ತಮಪಾದೇ ಚಿಂತಿತಂ ॥

ಪ್ರಾಯಣೀಯಾತಿಥ್ಯಯೋಃ ಕಿಂ ವಿಕಲ್ಪಃ ಶಂಯ್ವಿಡಾಂತಯೋಃ ॥
ನಿಯಮೋ ವಾ ವಿಕಲ್ಪಃ ಸ್ಯಾನ್ನಿಷೇಧ ಪರಿಸಂಖ್ಯಯಾ ॥
ಶಂಯ್ವಿಡಾಂತತ್ವವಾಕ್ಯಾಚ್ಚ ನಿಯಮೋ ವಿಧಿಮಾತ್ರತಃ ॥
ನಿತ್ಯಾನುವಾದೋ ನಞ್ವಾಕ್ಯಂ ದೋಷಬಾಹುಲ್ಯಮನ್ಯಥಾ ॥

ಜ್ಯೋತಿಷ್ಟೋಮೇ ಶ್ರೂಯತೇ ॥ "ಶಂಯ್ವಂತಾ ಪ್ರಾಯಣೀಯಾ ಸಂತಿಷ್ಠತೇ ನಪತ್ನೀಃ ಸಂಯಾಜಯಂತಿ ॥ ಇಡಾಂತಾಽಽತಿಥ್ಯಾ ಸಂತಿಷ್ಠತೇ ನಾನುಯಾಜಾನ್ಯಜತಿ" ಇತಿ ॥ ಪ್ರಕೃತೌ ಯದಾ ಹೋತಾ ತಚ್ಛಂಯೋರಿತಿ ಜಪತಿ ತದಾನೀಮಧ್ವರ್ಯುಃ ಪರಿಧೀನಗ್ನೌ ಪ್ರಕ್ಷಿಪತಿ ॥ ತದಾಹ ಕಲ್ಪಸೂತ್ರಕಾರಃ—'ಅನೂಚ್ಯಮಾನೇ ಶಂಯುವಾಕ ಆಹವನೀಯೇ ಪರಿಧೀನ್ಪ್ರಹರತಿ' ಇತಿ ॥ ತತೋ ಹವಿಃಶೇಷೇಷು ಭಕ್ಷಿತೇಷು ಪತ್ನೀಃ ಸಂಯಾಜಯಂತೀತಿ-ಕ್ರಮಃ ॥ ಪತ್ನೀಸಂಯಾಜಾನಾಮುಪರಿ ಫಲೀಕರಣಪ್ರಾಯಶ್ಚಿತ್ತಹೋಮಕಪಾಲೋದ್ವಾಸನೈ-ರಿಷ್ಟಿಃ ಸಮಾಪ್ಯತೇ ॥ ಏವಂ ಸ್ಥಿತೇ ವಿಕೃತಿರೂಪಾಯಾಃ ಪ್ರಾಯಣೀಯೇಷ್ಟೇಃ ಶಂಯುವಾ-ಕಾಂತತ್ವಂ, ಆತಿಥ್ಯೇಷ್ಟೇರಿಡಾಭಕ್ಷಣಾಂತತ್ವಂ ಚ ವಿಕಲ್ಪಿತಂ ಸ್ಯಾತ್ ॥ ಕುತಃ, ನಿಷೇಧವಾಕ್ಯಾ-ಭ್ಯಾಂ ಪ್ರಕಾರದ್ವಯಪ್ರತೀತೇಃ ॥ ತಥಾಹಿ ॥ ಶಂಯ್ವಂತತ್ವೇಡಾಂತತ್ವವಿಧಿನೈವೋಪರಿತನಪತ್ನೀ-ಸಂಯಾಜಾನುಯಾಜನಿಷೇಧೇ ಪುನರ್ನಿಷೇಧವಚನಂ ಪರಿಸಂಖ್ಯಾರ್ಥಂ ॥ ಪತ್ನೀಸಂಯಾ-ಜಾನುಜವ್ಯತಿರಿಕ್ತೇ ನಾಸ್ತಿ ನಿಷೇಧ ಇತಿ ಪರಿಸಂಖ್ಯಾ ॥ ತೇನ ಪ್ರಕೃತಿವದ್ಯಥಾಪ್ರಾಪ್ತಂ ಕಪೋ-ಲೋದ್ವಾಸನಾಂತತ್ವಮನಯೋರಿಷ್ಟ್ಯೋಃ ಪ್ರತೀಯತೇ ವಿಧಿವಾಕ್ಯೇನ ಶಂಯ್ವಿಡಾಂತತ್ವಂ ತೇನ ವ್ರೀಹಿಯವವದ್ವಿಕಲ್ಪ ಇತಿ ಪ್ರಾಪ್ತೇ ಬ್ರೂಮಃ॥ ವಿಧಿಮಾತ್ರಸ್ಯ ಅತ್ರ ಪ್ರವೃತ್ತೇಃ॥ ಶಂಯ್ವಂ-ತತ್ವಮಿಡಾಂತತ್ವಂ ಚ ತಯೋಃ ಪ್ರತಿನಿಯತಂ ॥ ಪತ್ನೀಸಂಯಾಜಾದ್ಯಭಾವಸ್ತ್ವರ್ಥಸಿದ್ಧಃ ॥ ತತೋ ನಞ್ಪದಯುಕ್ತಮುಪರಿತನಂ ಪ್ರತಿಷೇಧವಾಕ್ಯಂ ನಿತ್ಯಾನುವಾದೋಽನ್ಯಥಾ ಬಹವೋ

ದೋಷಾಃ ಪ್ರಸಜ್ಯೇರನ್ ‖ ವಿಕಲ್ಪೇ ತಾವದಷ್ಟೌ ದೋಷಾಃ ಪ್ರಸಿದ್ಧಾಃ ಪರಿಸಂಖ್ಯಾಯಾಂ ಚ ತ್ರಯೋ ದೋಷಾಃ ‖ ವಿಧಿಪರಿಸಂಖ್ಯಾಭ್ಯಾಂ ವಾಕ್ಯಭೇದೋಽಪರೋ ದೋಷಃ ‖ ತತಃ ಶಂಯ್ವಿಡಾಂತತ್ವಂ ನಿಯತಂ ‖ ತತ್ರೈವಾನ್ಯಚ್ಚಿಂತಿತಂ ‖

“ತತ್ರೈವ ಶಂಯ್ವಿಡೇ ಪೂರ್ವೇ ಪರೇ ವಾ ಸ್ವೇಚ್ಛಯಾಥವಾ ।
ಪರೇ ಏವಾಥವಾ ಪೂರ್ವೇ ಏವಾಽಽದ್ಯೋ ದ್ವಿವಿಧಶ್ರುತೇಃ ‖
ನಿಷೇಧಸ್ಯಾರ್ಥವತ್ತ್ವಾಯ ಪರೇ ಏವಾನುವಾದಗೀಃ ।
ಪೂರ್ವೈಕವಾಕ್ಯತಾಂ ಯಾತಿ ಪೂರ್ವೇ ಏವಾವಿರೋಧಿತಃ ‖”

ಪ್ರಾಯಣೀಯಾತಿಥ್ಯೇಯಾನಿರ್ಣೀತೇ ಶಂಯ್ವಿಡೇ ಪುನಃ ಸಂದಿಹ್ಯೇತೇ ॥ ಪ್ರಕೃತೌ ದ್ವಿವಿಧೇ ಶಂಯ್ವಿಡೇ ಪತ್ನೀಸಂಯಾಜೇಭ್ಯಃ ಪುರಸ್ತಾದುಪರಿಷ್ಟಾಚ್ಚ ವಿಹಿತೇ ‖ ತೇ ಚಾತ್ರ ಚೋದಕಪ್ರಾಪ್ತೇ ‖ ತತ್ರ ದ್ವಿವಿಧಶ್ರುತೇರರ್ಥೇ ಚೋದಕೇನಾತಿದಿಷ್ಟೇ ಸತಿ ವಿಶೇಷನಿಯಾಮಕಾಭಾವಾದಿಚ್ಛಯಾ ಇಚ್ಛಯಾಸ್ವೀಕಾರ್ಯೇ ಇತ್ಯೇಕಃ ಪಕ್ಷಃ ‖ ಯದಿ ಪ್ರಾಯಣೀಯಾ ಪೂರ್ವಶಂಯ್ವಂತಾ ಆತಿಥ್ಯಾ ಚ ಪೂರ್ವೇಡಾಂತಾಸ್ಯಾತ್ತದಾನೀಮಂತತ್ವವಿಧಿನೈವ ತಾಭ್ಯಾಂ ಶಂಯ್ವಿಡಾಭ್ಯಾಮೂರ್ಧ್ವಂ ಪ್ರಾಪ್ತಾನಾಂ ಪತ್ನೀಸಂಯಾಜಾನಾಮನುಯಾಜಾನಾಂ ಚ ವಾರಿತತ್ವಾನ್ನ ನಿಷೇಧೋ ವ್ಯರ್ಥಃ ಸ್ಯಾತ್ ‖ ಪರಯೋಃ ಶಂಯ್ವಿಡಯೋರಂತತ್ವೇ ತು ತಾಭ್ಯಾಂ ಶಂಯಿಡ್ವಾಭ್ಯಾಂ ಪೂರ್ವಪ್ರಾಪ್ತಾನಾಂ ತೇಷಾಂ ಅನಿವಾರಣಾತ್ತನ್ನಿವಾರಣಾಯ ಸಾರ್ಥಕೋ ನಿಷೇಧಸ್ತಸ್ಮಾತ್ಪರೇ ಏವ ಶಂಯ್ವಿಡೇ ಗ್ರಾಹ್ಯೇ ‖ ಇತಿ ದ್ವಿತೀಯಃ ಪಕ್ಷಃ ‖ ನಿಷೇಧೋಽಯಂ ನಿತ್ಯಾನುವಾದ ಇತ್ಯುಕ್ತಂ ‖ ಸ ಚ ಪೂರ್ವಯೋಃ ಶಂಯ್ವಿಡಯೋರಂತತ್ವೇಽಪ್ಯೇಕವಾಕ್ಯತಾಮಾಪದ್ಯ ಅನುವಾದಕತ್ವೇನೋಪಪದ್ಯತೇ ‖ ಅಸಂಜಾತವಿರೋಧಿನ್ಯೌ ಹಿ ಪೂರ್ವೇ ಶಂಯ್ವಿಡೇ ‖ ತಸ್ಮಾತ್ತೇ ಏವ ಗ್ರಾಹ್ಯೇ ಇತಿರಾದ್ಧಾಂತಃ ‖

ಆದ್ದರಿಂದ ಆತಿಥ್ಯೇಷ್ಟಿಯಲ್ಲಿ ಪ್ರಯಾಜಮಂತ್ರಗಳಿಂದ ಮಾತ್ರ ಹೋಮವನ್ನು ಮಾಡಿ ಅನುಯಾಜಮಂತ್ರಗಳಿಂದ ಹೋಮಮಾಡುವುದನ್ನು ಬಿಟ್ಟರೂ ಅದರಿಂದ ಬಾಧಕವಿಲ್ಲ. ಅನುಯಾಜಮಂತ್ರಗಳಿಂದ ದೊರೆಯುವ ಫಲವು ದೊರತೇ ದೊರೆಯುವುದು. ಹೇಗೆಂದರೆ ಲೋಕವ್ಯವಹಾರದಲ್ಲಿ ಒಂದು ಪಲ್ಲಕ್ಕಿಯನ್ನು ಅನೇಕಮಂದಿ ಸೇರಿ ಹೊರುತ್ತಾರಷ್ಟೆ. ಭಾರವಾದ ಆ ಪಲ್ಲಕ್ಕಿಯನ್ನು ಎಲ್ಲರ ಒಟ್ಟುಗೂಡಿದ ಶಕ್ತಿಯಿಂದ ಮಾತ್ರ ಹೊರಲು ಸಾಧ್ಯವು. ಒಬ್ಬಿಬ್ಬರ ಶಕ್ತಿಯಿಂದ ಸಾಧ್ಯವಿಲ್ಲ. ಹಾಗೆಯೇ ಅದನ್ನು ಹೊರುತ್ತಿರುವ ಜನರಲ್ಲಿ ಒಬ್ಬಿಬ್ಬರು ಅಶಕ್ತರಾಗಿ ಹೊರಲು ಸಾಧ್ಯವಾಗದಿದ್ದರೆ ಉಳಿದವರು ಅದನ್ನು ಗಮನಿಸದೆ ಹೊರುವರು. ಎಂದರೆ ಒಬ್ಬಿಬ್ಬರು ಕೆಲಸಮಾಡದಿರುವುದರಿಂದ ಆ ಕೆಲಸವೇನೂ ನಿಂತುಹೋಗುವುದಿಲ್ಲ. ಇತರರ ಶಕ್ತಿಯಿಂದ ನಡದೇ ನಡೆಯುತ್ತದೆ. ಅದರಂತೆ ಅನುಯಾಜ ಮಂತ್ರಗಳಿಂದ ಹೋಮಮಾಡುವುದನ್ನು ಈ ಆತಿಥ್ಯೇಷ್ಟಿಯಲ್ಲಿ ಬಿಟ್ಟರೂ ಪ್ರಯಾಜಾದಿಹೋಮಗಳು ತಮ್ಮ ಕರ್ತವ್ಯವನ್ನು ಮಾಡುವುದಲ್ಲದೆ ಅದರ ಜತೆಗೆ ಅನುಯಾಜಹೋಮಗಳ ಕರ್ತವ್ಯವನ್ನು ಮಾಡುವುವು. ಅನುಯಾಜಹೋಮಗಳನ್ನು ಮಾಡಬೇಕಾಗಿಲ್ಲ. ಆದರೂ ಆದರಿಂದ ಇಷ್ಟಿಯು ಲೋಪದೋಷಗಳಿಲ್ಲದೆ ನೆರವೇರುವುದು ಎಂದಭಿಪ್ರಾಯವು.

*English Translation*

**The remaining rites of the Atithi-ishti, after the ceremony of producing fire by friction is finished.**

The two Puro-anuvakyas for both portions of melted butter (which are to be offered) are, samidha gnim duvasyata (8, 44, 1), and apyayasva sametu (1, 91, 16). These two verses are complete in form; for they contain an allusion to guest. When the verse (which is repeated) alludes to the ceremony which is being performed, then the form is complete, and (consequently) the sacrifice successful. The verse (8, 44, 1) alluding to the guest (atithi) belongs to Agni, whilst the verse, addressed to Soma (1, 91, 16) does not contain the word "guest." If there were a verse addressed to Soma, containing the word "guest", such one should always be used. But notwithstanding (there being no such verse) the verse mentioned (1, 91, 16) refers to a guest, for it contains the term "being fattened," for, when one feeds a guest (well) then he grows fat, as it were. The Yajya mantra for both, Agni and Soma, commences with jushanah. The Anuvakya and and Yajya mantras (for the principal offering consisting of "Purodasa") are idam Vishnur vichakrame (1, 22, 17) and tad asya priyam abhi patho (1, 154, 5). Both verses are addressed to Vishnu. Having repeated as Anuvakya a verse with three padas he uses as Yajya one consisting of four padas; thus seven padas are obtained.

For the ceremony of receiving a guest (atithyam—atithi-ishti) is the head of the sacrifice. There are seven vital airs in the head. By this ceremony the Hotar thus puts the seven vital airs in the head (of the sacrificer).

The two Samyajya mantras, required at the Svishtakrit are: hotaram chiraratham (10, 1, 5) and pra prayam agnir (7, 8, 4). Both verses are complete in form; for in both the word atithi, a guest (referring to Agni's reception as a guest), occurs. The success of the sacrifice depends on the completeness of the form, i.e., that the mantra (which is repeated) alludes to the ceremony which is being performed. Both Samyajyas (used at the Svishtakrit of the Atithishti) are in the Trishtubh metre, for getting possession of Indra's powers (for Indra is

Trishtubh). The ceremony ends here with the eating of the sacrificial food. The gods having (once) rested satisfied with the Atithya-ishti ending by the eating of the sacrificial food (on the part of the sacrificer and the priests), this Ishti is to end with the eating of the sacrificial food (no further ceremonies being required).

They offer only the Prayajas at this (Ishti), but not the Anuyajas. The Prayajas, as well as the Anuyajas are the vital airs. The airs which are in the head are the Prayajas, whilst those in the lower parts of the body are the Anuyajas. He who should offer the Anuyajas at this (Ishti) is just like a man who after having cutt off the vital airs (residing in the lower parts of the body) wishes to put them in the head. That would be superfluity, were all the vital airs, those of the head as well as those of the lower parts of the body, to be found at the same place (viz., in the head). If they therefore offer at this (Ishti) only the Prayajas without Anuyajas; then the wish which one entertains at the offering of the Anuyajas becomes also fulfilled (for the offering of the Anuyajas on this occasion would be a mistake).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತೃತೀಯಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಮೂರನೆಯ ಅಧ್ಯಾಯದ ಆರನೆಯ ಖಂಡವು ಸಮಾಪ್ತವಾದುದು.

ಇತಿ ತೃತೀಯೋಽಧ್ಯಾಯಃ



# ಅಥೈತರೇಯಬ್ರಾಹ್ಮಣೇ ಚತುರ್ಥಾಧ್ಯಾಯೇ ಪ್ರಥಮಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು

### ಪಂಚಿಕಾ ೧—ಪ್ರಕರಣ ೧೮



[ ಪ್ರವರ್ಗ್ಯೇಷ್ಟಿಯು—ಪೂರ್ವೇತಿಹಾಸ—ಯಜ್ಞಸಾಮಗ್ರಿಗಳ ಸಿದ್ಧತೆ ]

### ಟೀಕೆ

ಹಿಂದಿನ ಅಧ್ಯಾಯದಲ್ಲಿ ಸೋಮಪ್ರವಾಹಣಕರ್ಮ ಎಂದರೆ ಸೋಮವನ್ನು ಪೂರ್ವದಿಕ್ಕಿನಿಂದ ಕೊಂಡುತರುವುದು, ಆತಿಥ್ಯೇಷ್ಟಿಯ ಮಧ್ಯದಲ್ಲಿ ಅಗ್ನಿಮಂಥನ (ಅಗ್ನಿಯನ್ನು ಅರಣಿಗಳಲ್ಲಿ ಕಡೆದು ಉತ್ಪತ್ತಿಮಾಡುವುದು) ಅನಂತರ ಆತಿಥ್ಯೇಷ್ಟಿಯಲ್ಲಿ ಉಳಿದ ಇತರ ಕರ್ಮಗಳನ್ನು ಮಾಡಿ ಆ ಇಷ್ಟಿಯನ್ನು ಸಮಾಪ್ತಿಗೊಳಿಸುವುದು ಮುಂತಾದ ವಿಷಯಗಳನ್ನು ವಿವರಿಸಿದ್ದಾಯಿತು. ಈಗ ಪ್ರವರ್ಗ್ಯ ಎಂಬ ಇಷ್ಟಿಯ ಸ್ವರೂಪವನ್ನೂ ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನೂ ಈ ಅಧ್ಯಾಯದಲ್ಲಿ ವಿವರಿಸಲಾಗುವುದು. ಹಿಂದೆ ಹೇಳಿದಂತೆ ಯಜಮಾನನು ಸ್ವರ್ಗಕ್ಕೆ ಹೋಗಬೇಕಾದರೆ ಅಗ್ನಿಷ್ಟೋಮಯಾಗವನ್ನು ಮಾಡಬೇಕು. ಸ್ವರ್ಗಕ್ಕೆ ಹೋಗಬೇಕಾದರೆ ಈ ಪಾರ್ಥಿವಶರೀರದಿಂದ ಹೋಗಲು ಸಾಧ್ಯವಿಲ್ಲ. ಅದಕ್ಕೆ ಸ್ವರ್ಗೀಯಶರೀರವೇ ಆಗಬೇಕು. ಏಕೆಂದರೆ ಸ್ವರ್ಗಲೋಕದ ರಚನೆಗೆ ತಕ್ಕಂತೆ ಅದರಲ್ಲಿ ವಾಸಮಾಡುವ ಪ್ರಾಣಿಗಳ ಶರೀರರಚನೆಯೂ ಇರಬೇಕು. ಉದಾಹರಣೆಗೆ ಹೇಳುವುದಾದರೆ ಸಮುದ್ರದಲ್ಲಿ ವಾಸಿಸುವ ಪ್ರಾಣಿಗಳು ಭೂಮಿಯಮೇಲೆ ವಾಸಮಾಡಲಾರವು. ಭೂಮಿಯಲ್ಲಿ ವಾಸಮಾಡುವ ಪ್ರಾಣಿಗಳು ಸಮುದ್ರಜಲದೊಳಗೆ ವಾಸಮಾಡಲಾರವು. ಏಕೆಂದರೆ ಪ್ರಾಣಿಗಳ ಶರೀರರಚನೆಯು ಅವುಗಳು ವಾಸಮಾಡುವ ಲೋಕಕ್ಕೆ ಎಂದರೆ ಪರಿಸ್ಥಿತಿಗೆ ತಕ್ಕಂತೆ ಇರುವವು. ಹಾಗೆಯೇ ಸ್ವರ್ಗಲೋಕದಲ್ಲಿ ವಾಸಿಸಬೇಕಾದರೆ ಈ ಪಾರ್ಥಿವಶರೀರದಿಂದ ಸಾಧ್ಯವಿಲ್ಲ. ಸೂಕ್ಷ್ಮಶರೀರವೇ ಆಗಬೇಕು. ಸ್ವರ್ಗಲೋಕವು ಬಹುಸೂಕ್ಷ್ಮವಾಗಿ ರಚಿಸಲ್ಪಟ್ಟಿರುವುದು. **ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್** (ತೈ. ಸಂ. ೬-೧-೧) ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವುದು. ಎಂದರೆ ದೇವಲೋಕವು ಪೃಥ್ವಿಲೋಕದಲ್ಲಿಯೇ (ಎಂದರೆ ಅದರ ಮೇಲುಭಾಗದಲ್ಲಿ) ಬಹುಸೂಕ್ಷ್ಮರೂಪದಿಂದಿದ್ದು ಪೃಥ್ವಿಯೊಡನೆ ಹಾಸುಹೊಕ್ಕಾಗಿ ಬೆರತಿರುವುದು. ಅದನ್ನು ನಾವು ನಮ್ಮ ಕಣ್ಣುಗಳಿಂದ ನೋಡಲು ಸಾಧ್ಯವಿಲ್ಲ. ಒಂದು ಲೋಹವಸ್ತುವನ್ನು (ಅಥವಾ ಯಾವ ವಸ್ತುವನ್ನಾದರೂ) ಚೆನ್ನಾಗಿ ಕಾಯಿಸಿದರೆ ಅದರ ಆಕಾರಾದಿಗಳು ವ್ಯತ್ಯಾಸವಾಗಿರುವಂತೆ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಆದರೆ ಅದರಲ್ಲಿ ಔಷ್ಣ್ಯ ಅಥವಾ ಉಷ್ಣತ್ವವು (ಶಾಖವು) ಆ ವಸ್ತುವಿನ ಒಳಗೂ ಹೊರಗೂ ವ್ಯಾಪಿಸಿರುವುದು. ಅದು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಅದರಂತೆ ಸ್ವರ್ಗಲೋಕವು ನಮ್ಮ ಸಮೀಪದಲ್ಲಿಯೇ ನಮ್ಮ ಸುತ್ತಮುತ್ತಲೂ ಇರುವುದಾದರೂ ನಮ್ಮ ಚರ್ಮಚಕ್ಷುಸ್ಸಿಗೆ ಗೋಚರವಾಗುವುದಿಲ್ಲ. ಏಕೆಂದರೆ ಪಾರ್ಥಿವಶರೀರದ ಪ್ರಾಣಿಗಳ ಚಕ್ಷುರಾದೀಂದ್ರಿಯಗಳಿಗೆ ಒಂದು ಮಿತಿಯುಂಟು. ಅದನ್ನತಿಕ್ರಮಿಸಿ ಇತರ ವಸ್ತುಗಳನ್ನು ನೋಡಲು ಸಾಧ್ಯವಿರುವುದಿಲ್ಲ. ಹಾಗೆಯೇ ಲೋಹದ ತಂತಿಯಲ್ಲಿ ವಿದ್ಯುತ್ಪ್ರವಾಹವು ಹರಿಯುತ್ತಿರುವಾಗ ಅದನ್ನು ನಾವು ನೋಡಲಾರೆವು. ಆದರೂ ಸ್ಪರ್ಶಾದಿಗಳಿಂದ ಅದರಲ್ಲಿ ಪ್ರವಾಹವಿದೆ ಎಂದು

ತಿಳಿಯುತ್ತೇವೆ. ಈ ಕಾರಣಗಳಿಂದ ದೇವಲೋಕವು ಬಹುಸೂಕ್ಷ್ಮಕಣಗಳಿಂದ ರಚಿತವಾಗಿರುವುದು. ಆ ಲೋಕದ ನಿವಾಸಿಗಳು ನಮ್ಮನ್ನು ನೋಡಬಲ್ಲರಾದರೂ ನಾವು ನಮ್ಮ ಪರಿಮಿತ (limitad) ಶಕ್ತಿಯಿಂದ ಅವರನ್ನು ನೋಡಲಾಗುವುದಿಲ್ಲ. ಎಂದ ಮಾತ್ರಕ್ಕೆ ದೇವಲೋಕವಾಗಲಿ, ದೇವತೆಗಳಾಗಲಿ ಇಲ್ಲವೆಂದು ಹೇಳಲು ಸಾಧ್ಯವಿಲ್ಲ.

ಮೇಲೆ ಹೇಳಿದ ಕಾರಣಗಳಿಂದ ದೇವಲೋಕವನ್ನು ಪ್ರವೇಶಿಸುವ ಯಜಮಾನನು ಸ್ವರ್ಗೀಯ ಸಂಬಂಧವಾದ ಶರೀರವನ್ನು ಪಡೆಯಬೇಕು. ಈ ಜನ್ಮದಲ್ಲಿ ಅದನ್ನು ಪಡೆಯಲು ಸಾಧ್ಯವಿಲ್ಲದ್ದರಿಂದ ಆ ಶರೀರವನ್ನು ಪಡೆಯಲು ಸಾಧನಭೂತವಾದ ಅಗ್ನಿಷ್ಟೋಮಾದಿಯಾಗಗಳನ್ನು ಆಚರಿಸಬೇಕು. ಈ ಯಾಗಗಳನ್ನು ಆಚರಿಸಬೇಕಾದರೂ ಈಗ ಇರುವ ಪಾರ್ಥಿವಶರೀರವನ್ನು ಕೆಲವು ಸಂಸ್ಕಾರಗಳಿಂದ ಶುದ್ಧಿಗೊಳಿಸಬೇಕು. ಈರೀತಿ ಶುದ್ಧಿಗೊಳಿಸುವ ಕ್ರಮವೇ ಪ್ರವರ್ಗ್ಯ ವೆಂಬ ಯಜ್ಞವು. ಇದನ್ನು ಮಾಡಿ ಶುದ್ಧನಾದವನಲ್ಲದೆ ಸೋಮಯಾಗವನ್ನು ಮಾಡಲು ಅರ್ಹನಾಗುವುದಿಲ್ಲ. ಆದುದರಿಂದ ಅಗ್ನಿಷ್ಟೋಮಯಾಗಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ದೀಕ್ಷಣೀಯೇಷ್ಟಿ (ದೀಕ್ಷಾಸಂಸ್ಕಾರವಿಧಿ), ಪ್ರಾಯಣೀಯೇಷ್ಟಿ ಇತ್ಯಾದಿಗಳನ್ನು ಮಾಡಿ ಮುಗಿಸಿದ ನಂತರ ಸೋಮವಿಕ್ರಯ, ಆತಿಥ್ಯೇಷ್ಟಿ, ಅಗ್ನಿಮಂಥನ ಇತ್ಯಾದಿ ಸೋಮಯಾಗಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ಮುಂದಿನ ಬಹುಮುಖ್ಯವಾದ ಸೋಮಯಾಗಕ್ಕೆ ಅರ್ಹನಾಗುವುದಕ್ಕಾಗಿ ಸ್ವರ್ಗೀಯ ಶರೀರವನ್ನು ಸಂಸ್ಕಾರಾದಿಗಳಿಂದ ಪಡೆಯಲು ಪ್ರವರ್ಗ್ಯ ಮತ್ತು ಉಪಸದವೆಂಬ ಇಷ್ಟಿಗಳನ್ನು ಮಾಡಬೇಕು. ಈ ಎರಡು ಇಷ್ಟಿಗಳೂ ಪ್ರತಿದಿನ ಪ್ರಾತಃಕಾಲ ಮತ್ತು ಮಧ್ಯಾಹ್ನ ಕಾಲಗಳಲ್ಲಿ ಮೂರುದಿನಗಳವರೆಗಾದರೂ ನಡೆಯಲೇಬೇಕು. ಹೆಚ್ಚು ಅವಕಾಶವಿದ್ದರೆ ಇನ್ನು ಕೆಲವು ದಿವಸಗಳವರೆಗೆ ದಿನಕ್ಕೆ ಎರಡಾವರ್ತಿಯಂತೆ ನಡೆಯಬೇಕು. ಅಗ್ನಿಷ್ಟೋಮವು ಸಾಧಾರಣವಾಗಿ ಐದು ದಿನಗಳಲ್ಲಿ ಮುಗಿಯುವುದು. ಮೊದಲನೆಯ ದಿನ ದೀಕ್ಷಣೀಯೇಷ್ಟಿಯಿಂದ ಅಗ್ನಿಮಂಥನದವರೆಗೆ ನಡೆಸಬೇಕಾದ ಕಾರ್ಯಕಲಾಪಗಳನ್ನು ಮುಗಿಸಿ ಎರಡನೆಯ ದಿವಸದಿಂದ ಮೂರುದಿನಗಳವರೆಗೆ (ಎಂದರೆ ೨, ೩, ೪ ನೆಯ ದಿವಸಗಳು) ಪ್ರತಿದಿನವೂ ದಿನಕ್ಕೆ ಎರಡಾವರ್ತಿಯಂತೆ ಪ್ರಾತಃಕಾಲ, ಮಧ್ಯಾಹ್ನ ಕಾಲಗಳಲ್ಲಿ ಪ್ರವರ್ಗ್ಯ ಮತ್ತು ಉಪಸದವೆಂಬ ಕರ್ಮಗಳನ್ನು ಮಾಡಬೇಕು. ಐದನೆಯ ದಿವಸದಲ್ಲಿ ಸೋಮಯಾಗವು ಪ್ರಾರಂಭವಾಗಿ ಆದಿನವೇ ಕೊನೆಗೊಳ್ಳುವುದು. ಇದರಲ್ಲಿ ಪ್ರಾತರನುವಾಕದಿಂದ ಮೊದಲು ಅವಭೃಥೇಷ್ಟಿಯವರೆಗೆ ನಾನಾಕಾರ್ಯ ಕಲಾಪಗಳಿರುವವು.

ಸೋಮಯಾಗವು ಒಂದೇದಿನದಲ್ಲಿ ಮುಗಿಯುವುದಾದರೂ ಅದಕ್ಕೆ ಪೂರ್ವಭಾವಿಯಾಗಿ ಮಾಡಬೇಕಾದ ಮೇಲೆ ಹೇಳಿದ ಕಾರ್ಯಕಲಾಪಗಳನ್ನು ನಾಲ್ಕೇದಿನಗಳಲ್ಲಿ ಮಾಡಿ ಮುಗಿಸಬೇಕೆಂಬ ನಿಯಮವೇನೂ ಇಲ್ಲ. ಎಂದರೆ ದೀಕ್ಷಾಸಂಸ್ಕಾರಗಳಿಗೆ ಒಂದುದಿನ ಅನಂತರ ಉಳಿಯುವ ಪ್ರವರ್ಗ್ಯ ಮತ್ತು ಉಪಸದಗಳನ್ನು ಮೂರೇದಿನಗಳವರೆಗೆ ಮಾಡಬೇಕೆಂಬ ವಿಧಿಯೇನೂ ಇರುವುದಿಲ್ಲ. ಕಾಲಾವಕಾಶವಿದ್ದಂತೆ ಪ್ರವರ್ಗ್ಯ ಮತ್ತು ಉಪಸದಗಳನ್ನು ಮೂರುದಿನಗಳಿಂದ ಹನ್ನೆರಡುದಿನಗಳವರೆಗೂ ಮಾಡಿ ಅನಂತರ ಸೋಮಯಾಗವನ್ನು ಮಾಡಬಹುದು.

ಯಜ್ಞೋ ವೈ ದೇವೇಭ್ಯ ಉದಕ್ರಾಮನ್ನ ವೋಽಹಮನ್ನಂ ಭವಿಷ್ಯಾ-
ಮೀತಿ ನೇತಿ ದೇವಾ ಅಬ್ರುವನ್ನನ್ನಮೇವ ನೋ ಭವಿಷ್ಯಸೀತಿ
ತಂ ದೇವಾ ವಿಮೇಥಿರೇ ಸಹೈಭ್ಯೋ ವಿಹೃತೋ ನ ಪ್ರಬಭೂವ
ತೇ ಹೋಚುರ್ದೇವಾ ನ ವೈ ನ ಇತ್ಥಂ ವಿಹೃತೋಽಲಂ

ಭವಿಷ್ಯತಿ ಹಂತೇಮಂ ಯಜ್ಞಂ ಸಂಭರಾಮೇತಿ ತಥೇತಿ ತಂ ಸಂಜಭ್ರುಃ ।

ಸೋಮಪ್ರವಾಹಿಕಾ ಅಗ್ನಿಮಂಥನೀಯಾ ಋಚಸ್ತಥಾ ।
ಆತಿಥ್ಯಾಸ್ತದ್ವಿಶೇಷಾಶ್ಚ ತೃತೀಯಾಧ್ಯಾಯ ಈರಿತಾಃ ॥

ಅಥ ಪ್ರವಗ್ರ್ಯಾದಯೋ ವಕ್ತವ್ಯಾಸ್ತದರ್ಥಮಾದಾವಾಖ್ಯಾಯಿಕಾಮಾಹ—ಯಜ್ಞ-ಶಬ್ದೇನಾತ್ರ ಪ್ರವರ್ಗ್ಯೋ ವಿವಕ್ಷಿತಃ ॥ ತದಭಿಮಾನೀ ದೇವಃ ಕೇನಾಪಿ ನಿಮಿತ್ತೇನಾಪರಕ್ತೋಽ-ನ್ಯೇಽಭ್ಯೋ ದೇವೇಭ್ಯ ಉತ್ಕ್ರಾಂತವಾನ್ ॥ ಹೇ ದೇವಾ ಯುಷ್ಮಾಕಮಹಮನ್ನಂ ನ ಭವಿಷ್ಯಾ-ಮೀತ್ಯೇವಮುತ್ಕ್ರಮಣಕಾಲೇ ಪ್ರೋಕ್ತವಾನ್ ॥ ತತೋ ದೇವಾಸ್ತದುತ್ಕ್ರಮಣಂ ನೇತಿ ಪ್ರತಿಷಿಧ್ಯ ಸರ್ವಥಾ ತ್ವಮಸ್ಮಾಕಮನ್ನಂ ಭವೇತಿ ಪ್ರಾರ್ಥಿತವಂತಃ ॥ ಪ್ರವಗ್ರ್ಯಾಖ್ಯೇ ಕರ್ಮಣಿ ಯದ್ಧವಿಸ್ತದ್ದೇವಾನಾಮನ್ನಂ ತದಭಿಮಾನೀ ಚ ಪುರುಷೋ ದೇವೈಃ ಪ್ರಾರ್ಥಿತಂ ತದನ್ನತ್ವಂ ನಾಂಗೀಚಕಾರ ॥ ತಮನಂಗೀಕುರ್ವಾಣಂ ಪ್ರವರ್ಗ್ಯಂ ಪುರುಷಂ ದೇವಾ ವಿಮೇಥಿರೇ ತಾಡನ-ಭರ್ತ್ಸನಾದಿಭಿರ್ಹಿಂಸಿತವಂತಃ ॥ ಸ ಚ ಪ್ರವರ್ಗ್ಯೋ ದೇವೈರ್ವಿಶೇಷೇಣ ಬಾಧಿತ ಏಭ್ಯೋ ದೇವೇಭ್ಯೋ ನ ಪ್ರಬಭೂವ ಪ್ರಭೂತೋ ನಾಭೂತ್ ॥ ಅನ್ನತ್ವೇನಾವಸ್ಥಾತುಂ ನ ಶಕ್ತ ಇತ್ಯರ್ಥಃ ॥ ತತೋ ದೇವಾಃ ಪರಸ್ಪರಮೇವಂ ವಿಚಾರಿತವಂತಃ ॥ ಏವಂ ವಿಹೃತೋ ವಿಶೇಷೇಣ ಬಾಧಿತಃ ಪ್ರವರ್ಗ್ಯೋ ನೋಽಸ್ಮಾಕಮನ್ನಂ ನೈವ ಭವಿಷ್ಯತೀತಿ ಸಂಪೂರ್ಣಮನ್ನಂ ನ ಭವಿಷ್ಯತಿ ತಮಿಮಂ ಪ್ರವಗ್ರ್ಯಾಖ್ಯಂ ಯಜ್ಞಂ ಸಂಭರಾಮೋಚಿತೈಃ ಸಾಧನೈಃ ಸಮ್ಯಕ್ಪೋಷಯಾಮೇತಿ॥ ಸಂಪೂರ್ತಿಹೇತುದರ್ಶನನಿಮಿತ್ತಜನ್ಯಹರ್ಷದ್ಯೋತನಾರ್ಥೋ ಹಂತಶಬ್ದಃ ॥ ತಥೇತಿ ಪರಸ್ಪರ-ಮಂಗೀಕೃತ್ಯ ತಂ ಪ್ರವರ್ಗ್ಯಂ ಸಂಜಭ್ರುಃ ಸಾಧನಸಂಪಾದನೇನ ಸಮ್ಯಕ್ಪೋಷಿತವಂತಃ ॥

ಪ್ರವರ್ಗ್ಯೇಷ್ಟಿಯನ್ನು ವಿವರಿಸುವುದಕ್ಕೆ ಮೊದಲು ಅದಕ್ಕೆ ಸಂಬಂಧಪಟ್ಟಂತೆ ಒಂದು ಪೂರ್ವೇತಿಹಾಸವನ್ನು ಹೇಳುವರು. ಇಲ್ಲಿ ಯಜ್ಞವೆಂದರೆ ಪ್ರವರ್ಗ್ಯವೆಂದು ತಿಳಿಯಬೇಕು. ಹಿಂದೆ ಒಂದಾನೊಂದು ಕಾಲದಲ್ಲಿ ಪ್ರವರ್ಗ್ಯವೆಂಬ ಯಜ್ಞವು ಎಂದರೆ ಆ ಯಜ್ಞದ ಅಭಿಮಾನಿದೇವತೆಯು ಕಾರಣಾಂತರದಿಂದ ದೇವತೆಗಳ ಮೇಲೆ ಕೋಪಿಸಿಕೊಂಡು ಅವರನ್ನು ಬಿಟ್ಟು ಹೊರಟುಹೋದನು.

ಯುಷ್ಮಾಕಮನ್ನಂ ನೈವಾಹಂ ಭವಿತೇತ್ಯಭಿಧಾಯ ವೈ ।
ಯಜ್ಞ ಉತ್ಕ್ರಾಂತವಾನ್ ದೇವಗಣಾನ್ ಕ್ರೋಧಾನ್ವಿತಃ ಪುರಾ ॥

ಹೋಗುವಾಗ, ಎಲೈ ದೇವತೆಗಳೇ, ನಾನು ನಿಮಗೆ ಇನ್ನುಮುಂದೆ ಅನ್ನ (ಆಹಾರ) ವಾಗಿರುವುದಿಲ್ಲ ಎಂದು ಹೇಳಿ ಹೊರಟುಹೋದನು. ಎಂದರೆ ಪ್ರವರ್ಗ್ಯೇಷ್ಟಿಯಲ್ಲಿ ಅರ್ಪಿಸಿದ ಆಹುತಿಗಳು ದೇವತೆಗಳಿಗೆ ಅನ್ನ ಅಥವಾ ಆಹಾರರೂಪವಾಗಿರುವುದು ಎಂದಭಿಪ್ರಾಯವು. ಅದನ್ನು ಕೇಳಿ ದೇವತೆಗಳು ಆ ಯಜ್ಞಾಭಿಮಾನಿಪುರುಷನನ್ನು ತಡೆದು, ಖಂಡಿತವಾಗಿಯೂ ನೀನು ನಮ್ಮನ್ನು ಬಿಟ್ಟುಹೋಗಬಾರದು ಎಂದು ನಾನಾವಿಧವಾಗಿ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನೆಲ್ಲಾ ನಿರಾಕರಿಸಿ ಆ ಯಜ್ಞಪುರುಷನು ಹೊರಟೇಬಿಟ್ಟನು. ದೇವತೆಗಳು ಇದನ್ನು ಸಹಿಸಲಾರದೆ ಆ ಯಜ್ಞಪುರುಷನನ್ನು ಹಿಡಿದು ತಂದು ಕೋಪಾವಿಷ್ಟರಾಗಿ ಅವನನ್ನು ನಾನಾವಿಧವಾಗಿ ಬೈದು ಹೊಡೆದು ಹಿಂಸಿಸಿದರು. ಎಷ್ಟು ಹೊಡೆದು ಹಿಂಸೆ ಮಾಡಿದರೂ ಆ ಪ್ರವರ್ಗ್ಯಾಭಿಮಾನಿ

ಯಜ್ಞಪುರುಷನು ದೇವತೆಗಳ ಮಾತಿಗೆ ಸಮ್ಮತಿಸಲಿಲ್ಲ. ಅಷ್ಟೇ ಅಲ್ಲ. ದೇವತೆಗಳ ತಾಡನಾದಿಗಳಿಂದ ಹಿಂಸಿತನಾದ ಆ ಪುರುಷನು ತನ್ನ ಶಕ್ತಿಸಾಮರ್ಥ್ಯಗಳನ್ನೆಲ್ಲಾ ಸಂಪೂರ್ಣವಾಗಿ ಕಳೆದುಕೊಂಡು ಏನುಮಾಡಲೂ ಶಕ್ತಿಯಿಲ್ಲದೆ ಸುಮ್ಮನೆ ಬಿದ್ದಿದ್ದನು. ಅದನ್ನು ನೋಡಿ ದೇವತೆಗಳು— ನಮ್ಮ ಪ್ರಹಾರಾದಿ ಹಿಂಸೆಗಳಿಂದ ಈ ಪುರುಷನು ತನ್ನ ಶಕ್ತಿಯನ್ನು ಕಳೆದುಕೊಂಡು ನಿರ್ವೀರ್ಯನಾಗಿರುವನು. ಈ ಸ್ಥಿತಿಯಲ್ಲಿ ಇವನು ನಮಗೆ ಸಹಾಯಮಾಡಲು ಸಾಧ್ಯವಿಲ್ಲ. ಆದ್ದರಿಂದ ಈ ಪ್ರವರ್ಗ್ಯಾಖ್ಯಯಜ್ಞಪುರುಷನನ್ನು ಕೆಲವುಕಾಲ ನಮ್ಮಲ್ಲಿಟ್ಟುಕೊಂಡು ಪೋಷಿಸಿ ಅವನಿಗೆ ಮುಂಚಿನಂತೆ ಶಕ್ತಿಯನ್ನುಂಟುಮಾಡೋಣ ಎಂದು ಪರಸ್ಪರ ಮಾತನಾಡಿಕೊಂಡು ಅದರಂತೆಯೇ ಮಾಡಿದರು.

ತಂ ಸಂಭೃತ್ಯೋಚುರಶ್ವಿನಾವಿಮಂ ಭಿಷಜ್ಯತಮಿತ್ಯಶ್ವಿನೌ ವೈ ದೇವಾನಾಂ ಭಿಷಜಾವಶ್ವಿನಾವಧ್ವರ್ಯೂ ತಸ್ಮಾದಧ್ವರ್ಯೂ ಸಂಭರತಃ ॥

ಅಥ ಹವಿರಾದೀನಾಂ ಸಾಧನಾನಾಂ ಸಂಪಾದನಂ ವಿಧತ್ತೇ—ದೇವಾಃ ಪ್ರವರ್ಗ್ಯಕರ್ಮೋಪಯುಕ್ತಂ ಮಹಾವೀರಾದಿಸಂಭಾರಂ ಸಂಭೃತ್ಯ ಸ್ವಕೀಯಾವಶ್ವಿನೌ ಪ್ರತ್ಯೇವಮೂಚುಃ। ಹೇಽಶ್ವಿನಾವಿಮಂ ಪ್ರವರ್ಗ್ಯಪುರುಷದೇಹಮಸ್ಮಾಭಿರ್ಹಿಂಸಿತಂ ಯುವಾಂ ಭಿಷಜ್ಯತಮೌಷಧೈರೇತಸ್ಯ ಸಮಾಧಾನಂ ಕುರುತಮಿತಿ ॥ ದೇವಾನಾಂ ಮಧ್ಯೇ ಭಿಷಜಾವೇವಾಶ್ವಿನೌ ತಸ್ಮಾತ್ತತ್ಪ್ರಾರ್ಥನಮೇವ ಯುಕ್ತಂ ॥ ಕಿಂಚ ॥ ದೇವಾನಾಂ ಯಜ್ಞಕರ್ಮಣ್ಯಶ್ವಿನಾವಧ್ವರ್ಯೂ ॥ ಅತಏವಾನ್ಯತ್ರ ಕಸ್ಯಚಿನ್ಮಂತ್ರಸ್ಯ ಬ್ರಾಹ್ಮಣೇ ಪಠ್ಯತೇ—'ಅಶ್ವಿನೋರ್ಬಾಹುಭ್ಯಾಮಿತ್ಯಾಹ । ಅಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಂ' ಇತಿ ॥ ಅತೋಽಪಿ ಕಾರಣಾದಶ್ವಿನೋರ್ಯಜ್ಞಸಮಾಧಾನಕರಣಂ ಯುಕ್ತಂ ॥ ತಸ್ಮಾತ್ಕಾರಣಾದಧ್ವರ್ಯೂ ॥ ಉಭಾಭ್ಯಾಮಶ್ವಿಭ್ಯಾಂ ಯಜ್ಞಶರೀರಂ ಚಿಕಿತ್ಸಿತಂ ತಸ್ಮಾದಿದಾನೀಮಪ್ಯಧ್ವರ್ಯೂ ಘರ್ಮಂ ಸಂಭರಂತಃ ಪ್ರವರ್ಗ್ಯಸಾಧನಂ ಸಂಪಾದೇಯಾತಾಂ ॥ ತದೇತತ್ತೈತ್ತರೀಯಾ ದೇವಾ ವೈ ಸತ್ರಮಾಸತೇತ್ಯಸ್ಮಿನ್ನನುವಾಕೇ ಪ್ರವರ್ಗ್ಯವಿಷಯಮುಪಾಖ್ಯಾನಂ ಪ್ರಪಂಚಯಂತಿ ॥ ತಸ್ಮಿನ್ನೇವಾಖ್ಯಾನೇ ಯಜ್ಞಸ್ಯ ಪ್ರವರ್ಗ್ಯರೂಪಂ ಶಿರೋ ಧನುಷಃ ಕೋಟ್ಯಾ ಛಿನ್ನಮಿತ್ಯುಕ್ತ್ವಾ—ಪಶ್ಚಾದೇತದಾಮ್ನಾಯತೇ—'ತೇನಾಥ ಶೀರ್ಷ್ಣಾ ಯಜ್ಞೇನ ಯಜಮಾನಾ ನಾಶಿಷೋಽವಾರುಂಧತ ॥ ನ ಸುವರ್ಗಂ ಲೋಕಮಭ್ಯಜಯನ್ ॥ ತೇ ದೇವಾ ಅಶ್ವಿನಾವಬ್ರುವನ್ ॥ ಭಿಷಜೌ ವೈ ಸ್ಥಃ ॥ ಇದಂ ಯಜ್ಞಸ್ಯ ಶಿರಃ ಪ್ರತಿಧತ್ತಮಿತಿ । ತಾವಬ್ರೂತಾಂ ವರಂ ವೃಣಾವಹೈ ॥ ಗ್ರಹ ಏವ ನಾವತ್ರಾಪಿ ಗೃಹ್ಯತಾಮಿತಿ ॥ ತಾಭ್ಯಾಮೇತಮಾಶ್ವಿನಮಗೃಹ್ಣನ್ ॥ ತಾವೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ ॥ ಯತ್ಪ್ರವರ್ಗ್ಯಸ್ತೇನ ಸ ಶೀರ್ಷ್ಣಾ ಯಜ್ಞೇನ ಯಜಮಾನಾ ಅವಾಽಽಶಿಷೋಽವರುಂಧಂತ ॥ ಅಭಿ ಸುವರ್ಗಂ ಲೋಕಮಜಯನ್ ॥ ಯತ್ಪ್ರವರ್ಗ್ಯಂ ಪ್ರವೃಣಕ್ತಿ ॥ ಯಜ್ಞಸ್ಯೈವ ತಚ್ಛಿರಃ ಪ್ರತಿದಧಾತಿ' ಇತಿ ॥

ಅನಂತರ ದೇವತೆಗಳು ಪ್ರವರ್ಗ್ಯವೆಂಬ ಯಜ್ಞಕ್ಕೆ ಬೇಕಾದ ಸಾಧನಸಾಮಗ್ರಿಗಳನ್ನು ಸಂಪಾದಿಸಿಕೊಂಡು ಮುಂದಿನ ಕರ್ತವ್ಯವನ್ನು ಮಾಡಲು ಪ್ರಯತ್ನಿಸಿದರು. ಆ ಸಾಧನಸಾಮಗ್ರಿಗಳನ್ನು ಇಲ್ಲಿ ಸೂಚಿಸದಿದ್ದರೂ ಅದರ ವಿವರಣೆಯನ್ನು ಇಲ್ಲಿ ತಿಳಿಸುತ್ತೇವೆ.

(೧) ಒಂದು ಮಣ್ಣಿನ ಮಡಕೆ. ಇದಕ್ಕೆ **ಮಹಾವೀರ** ಅಥವಾ **ಘರ್ಮ**ವೆಂದು ಹೆಸರು. ಇದರ ಆಕಾರವು ಮೂರು ಮಡಕೆಗಳನ್ನು ಒಂದರಮೇಲೊಂದನ್ನು ಇಟ್ಟಂತೆ ಇರುವುದು. (ಇದರಲ್ಲಿ ಹಾಲನ್ನು ಕಾಯಿಸುವರು.)

(೨) ಒಂದು ಕಾಲುಮಣೆ. ಇದಕ್ಕೆ **ಆಸಂದಿ** ಎಂದು ಹೆಸರು.

(೩) ಮಹಾವೀರಪಾತ್ರೆಯನ್ನು ಬೆಂಕಿಯಮೇಲಿಂದ ಕೆಳಕ್ಕೆ ಎತ್ತಿಡಲು ಎರಡು ಮರದ ಸಣ್ಣ ತುಂಡುಗಳು. ಇವಕ್ಕೆ **ಶಫ**ಗಳೆಂದು ಹೆಸರು.

(೪) ಎರಡು ಗುದ್ದಲಿಗಳು (ಇದ್ದಿಲನ್ನು ಹಾಕುವುದಕ್ಕಾಗಿ) ಇವಕ್ಕೆ **ಧೃಷ್ಟಿ**ಗಳೆಂದು ಹೆಸರು.

(೫) ಒಂದು ದೊಡ್ಡಮರದ ಸೌಟು. ಇದಕ್ಕೆ **ಉಪಯಮನಿ** ಎಂದು ಹೆಸರು. ಇದರಿಂದ ಯಜ್ಞಮಾಡುವ ಯಜಮಾನನು ಘರ್ಮಪಾತ್ರೆಯಿಂದ ಹಾಲನ್ನು ತೆಗೆದುಕೊಂಡು ಕುಡಿಯುವನು.

(೬) ಕೃಷ್ಣಾಜಿನದಿಂದ ಮಾಡಿದ ಮೂರು ಬೀಸಣಿಗೆಗಳು. ಇವುಗಳಿಗೆ **ಧವಿತ್ರ**ಗಳೆಂದು ಹೆಸರು.

(೭) ಉದುಂಬರ ವೃಕ್ಷದ ಒಣಗಿದ ಆರು ಕಡ್ಡಿಗಳು. (ಸೌದೆಯ ತುಂಡುಗಳು) ಅಗ್ನಿಯನ್ನು ಹೊತ್ತಿಸುವುದಕ್ಕಾಗಿ ಇವುಗಳನ್ನು ಉಪಯೋಗಿಸುವರು.

(೮) ಮಹಾವೀರಪಾತ್ರೆಯ ಸುತ್ತಲೂ ಇಡುವುದಕ್ಕಾಗಿ ಉದುಂಬರ ವೃಕ್ಷದ ಹದಿಮೂರು ಕಡ್ಡಿಗಳು. ಇವುಗಳಿಗೆ **ಪರಿಧಿ**ಗಳೆಂದು ಹೆಸರು.

(೯) ಎರಡು ತಗಡುಗಳು, ಒಂದು ಬೆಳ್ಳಿಯದು ಮತ್ತೊಂದು ಚಿನ್ನದ್ದು. ಇವುಗಳಿಗೆ **ಸುವರ್ಣರಜತೌ ರುಕ್ಮೌ** ಎಂದು ಹೆಸರು.

(೧೦) ಹಾಲುಕರೆಯುವುದಕ್ಕಾಗಿ ಒಂದು ಹಸು ಮತ್ತು ಒಂದು ಆಡು (ಹೆಣ್ಣು).

(೧೧) ಎರಡು ಕುಶ ಎಂಬ ದರ್ಭೆಯ ಕಂತೆಗಳು. ಇವುಗಳಲ್ಲಿ ಒಂದು ಅಗ್ರಯುಕ್ತವಾಗಿಯೂ ಮತ್ತೊಂದು ಕತ್ತರಿಸಲ್ಪಟ್ಟದ್ದಾಗಿಯೂ ಇರಬೇಕು. ದರ್ಭೆಗಳನ್ನು ಮಧ್ಯದಲ್ಲಿ ಕಟ್ಟಿರಬೇಕು. ಇವುಗಳಿಗೆ **ವೇದ**ಗಳೆಂದು ಹೆಸರು.

ಈ ಸಾಧನಸಾಮಗ್ರಿಗಳನ್ನು ಅಧ್ವರ್ಯು ಮತ್ತು ಅವನ ಸಹಾಯಕನಾದ ಪ್ರತಿಪ್ರಸ್ಥಾತೃವು ಸಂಪಾದಿಸಿ ಗಾರ್ಹಪತ್ಯಾಗ್ನಿಯ ಎಡಭಾಗದಲ್ಲಿ ಸಿದ್ಧಪಡಿಸಿ ಇಡುವರು.

ಬಳಿಕ ದೇವತೆಗಳು ಪ್ರವರ್ಗ್ಯಯಜ್ಞಕ್ಕೆ ಅವಶ್ಯಕವಾದ ಸಂಭಾರಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ತಮ್ಮ ಬಳಿಯಲ್ಲಿಯೇ ಇದ್ದ ಅಶ್ವಿನೀದೇವತೆಗಳನ್ನು ಕರೆದು ಇಂತೆಂದರು—ಎಲೈ ಅಶ್ವಿನೀದೇವತೆಗಳೇ, ನೀವು ದೇವತೆಗಳಿಗೆ ವೈದ್ಯರಾಗಿರುವಿರಿ. ಈಗ ಈ ಪ್ರವರ್ಗ್ಯಯಜ್ಞಾಭಿಮಾನಿ ಪುರುಷನು ನಮ್ಮ ಮಾತನ್ನು ಕೇಳಲಿಲ್ಲವಾದ್ದರಿಂದ ನಾವು ಅವನನ್ನು ಬಹಳವಾಗಿ ಹಿಂಸಿಸಬೇಕಾಯಿತು. ಆ ಹಿಂಸೆಯಿಂದ ಅವನ ಶರೀರಾವಯವಗಳು ತುಂಬಾ ಶಿಥಿಲವಾಗಿ ಯಾವ ಕಾರ್ಯವನ್ನು ಮಾಡಲೂ ಅವನು ಶಕ್ತಿಸಾಮರ್ಥ್ಯರಹಿತನಾಗಿರುವನು. ನೀವು ವೈದ್ಯರಾಗಿರುವುದರಿಂದ ಅವನು ಮುಂಚಿನಂತೆ ದೃಢಕಾಯನಾಗುವುದಕ್ಕಾಗಿ ಬೇಕಾದ ಔಷಧೋಪಚಾರಗಳನ್ನು ನೀಡಿ ಗುಣಪಡಿಸಿ ಎಂದು ಪ್ರಾರ್ಥಿಸಿದರು.

ಅಶ್ವಿನೀದೇವತೆಗಳು ಇತರ ಎಲ್ಲಾ ದೇವತೆಗಳಿಗೂ ವೈದ್ಯರಾಗಿರುವುದಲ್ಲದೆ ದೇವತೆಗಳು ಮಾಡುವ ಯಜ್ಞಕರ್ಮಗಳಲ್ಲಿ ಅಧ್ವರ್ಯುವೆಂಬ ಋತ್ವಿಜರೂ ಆಗಿರುವರು. ಆದ್ದರಿಂದ ಪ್ರವರ್ಗ್ಯ ಪುರುಷನನ್ನು ಔಷಧಾದಿಗಳಿಂದ ಉಪಚರಿಸುವ ಕಾರ್ಯವೂ

ಮತ್ತು ಯಜ್ಞವು ನೆರವೇರುವಂತೆ ಮಾಡುವ ಅಧ್ವರ್ಯುಗಳ ಪಾತ್ರಗಳೂ ಅಶ್ವಿನೀದೇವತೆಗಳು ನಿರ್ವಹಿಸಬೇಕಾದ ಸಹಜ ಕರ್ತವ್ಯಗಳಾಗಿರುವವು. ಈ ವಿಷಯವು—**ಅಶ್ವಿನೋರ್ಬಾಹುಭ್ಯಾಮಿತ್ಯಾಹ । ಅಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಂ** (ತೈ. ಸಂ. ೧-೩-೧-೧; ತೈ. ಸಂ. ೨-೬-೪-೧; ತೈ. ಬ್ರಾ. ೩-೨-೨-೧; ತೈ. ಆ. ೫-೨-೫) ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಉಕ್ತವಾಗಿದೆ. ಆದ್ದರಿಂದ ದೇವತೆಗಳಿಗೆ ಅಧ್ವರ್ಯುಗಳಾದ ಅಶ್ವಿನೀದೇವತೆಗಳು ದೇವತೆಗಳು ಮಾಡುವ ಯಜ್ಞದಲ್ಲಿ ಭಾಗಿಗಳಾಗಿ ಅವರಿಗೆ ಸಹಾಯವನ್ನು ಮಾಡಬೇಕಾದುದು ಅವರ ಕರ್ತವ್ಯವಾಗಿದೆ. ಆದ್ದರಿಂದಲೇ ದೇವತೆಗಳು ಯಜ್ಞಶರೀರವನ್ನು ಔಷಧಾದಿಗಳಿಂದ ಚಿಕಿತ್ಸೆಮಾಡಬೇಕೆಂದೂ ಯಜ್ಞಕ್ಕೆ ಬೇಕಾದ ಘರ್ಮಾದಿ ಸಂಭಾರಗಳನ್ನು ಒದಗಿಸಿಕೊಡಬೇಕೆಂದೂ ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದಾರೆ. ಈ ವಿಷಯವು ಸಹ ತೈತ್ತಿರೀಯಾರಣ್ಯಕದಲ್ಲಿ—**ದೇವಾ ವೈ ಸತ್ರಮಾಸತ** (ತೈ. ಆ. ೫-೧) ಇತ್ಯಾದ್ಯನುವಾಕಗಳಲ್ಲಿ ಉಕ್ತವಾಗಿದೆ ಆದರೆ ಇಲ್ಲಿ ಹೇಳಿರುವ ಆಖ್ಯಾಯಿಕೆಯು ಸ್ವಲ್ಪ ವ್ಯತ್ಯಸ್ತವಾಗಿದೆ. ಪ್ರವರ್ಗ್ಯಯಜ್ಞಪುರುಷನ ಶಿರಸ್ಸು ಧನುಸ್ಸಿನ ತುದಿಯಿಂದ ಕತ್ತರಿಸಿಹೋಯಿತೆಂದು ಹೇಳಲಾಗಿದೆ—

> **ದೇವಾ ವೈ ಸತ್ರಮಾಸತ ಋದ್ಧಿಪರಿಮಿತಂ ಯಶಸ್ಕಾಮಾಃ ತೇಽಬ್ರುವನ್ । ಯನ್ನಃ ಪ್ರಥಮಂ ಯಶ ಋಚ್ಛಾತ್ ಸರ್ವೇಷಾಂ ನಸ್ತತ್ಸಹಾಸದಿತಿ । ತೇಷಾಂ ಕುರುಕ್ಷೇತ್ರಂ ವೇದಿರಾಸೀತ್ । ತಸ್ಯೈ ಖಾಂಡವೋ ದಕ್ಷಿಣಾರ್ಧ ಆಸೀತ್ । ತೂರ್ಘ್ನಮುತ್ತರಾರ್ಧಃ । ಪರೀಣಜ್ಜಘನಾರ್ಧಃ । ಮರವ ಉತ್ಕರಃ । ತೇಷಾಂ ಮಖಂ ವೈಷ್ಣವಂ ಯಶ ಆರ್ಚ್ಛತ್ ॥**
>
> (ತೈ. ಆ. ೫-೧-೧)

ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ತಮಗೆ ಯಶಸ್ಸು ದೊರೆಯಬೇಕೆಂಬ ಅಪೇಕ್ಷೆಯಿಂದ ಯಜ್ಞಮಾಡಲು ನಿರ್ಧರಿದರು. ಅದಕ್ಕಾಗಿ ಯಥೇಚ್ಛವಾಗಿ ಯಜ್ಞಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡರು ಮತ್ತು ಯಜ್ಞದಿಂದ ಲಭಿಸುವ ಯಶಸ್ಸು ಒಬ್ಬಬ್ಬರಿಗೆ ಮಾತ್ರವಲ್ಲ ಎಲ್ಲರಿಗೂ ದೊರೆಯಬೇಕೆಂದು ಪರಸ್ಪರ ನಿಶ್ಚಯಿಸಿದರು. ಆಗ ಕುರುಕ್ಷೇತ್ರವೇ ಅವರಿಗೆ ಯಜ್ಞವೇದಿಯಾಯಿತು; ಆ ಕುರುಕ್ಷೇತ್ರದ ಸಮೀಪದಲ್ಲಿರುವ ಖಾಂಡವ, ತೂರ್ಘ್ನ, ಪರೀಣತ್ ಎಂಬ ಪುಣ್ಯ(ಪವಿತ್ರ)ಪ್ರದೇಶಗಳು ಆ ಯಜ್ಞವೇದಿಗೆ ಕ್ರಮವಾಗಿ ದಕ್ಷಿಣ, ಉತ್ತರ, ಪಶ್ಚಿಮದಿಕ್ಕಗಳ ಮೇರೆಯಾದವು. ಅದರಲ್ಲಿದ್ದ ಮರವಃ ಎಂಬ ಮರುಭೂಮಿಪ್ರದೇಶವು ಉತ್ಕರವಾಯಿತು. (ವೇದಿಯ ಉತ್ತರಭಾಗದಲ್ಲಿ ತೃಣಾದಿಗಳನ್ನು ಇಡತಕ್ಕ ಸ್ಥಳಕ್ಕೆ ಉತ್ಕರವೆಂದು ಹೆಸರು). ಆ ದೇವತೆಗಳ ಮಧ್ಯದಲ್ಲಿ ಯಜ್ಞಾಭಿಮಾನಿದೇವತೆಯಾದ ವಿಷ್ಣುವು (ವಿಷ್ಣುರ್ಯಜ್ಞಃ, ಯಜ್ಞೋ ವೈ ವಿಷ್ಣುಃ) ದೀಕ್ಷಾಸಂಸ್ಕಾರಗಳನ್ನು ಕೈಗೊಂಡು ಯಜಮಾನನಾದನು. ಯಜ್ಞದಲ್ಲಿ ಯಜಮಾನನಾದ್ದರಿಂದ ಯಜ್ಞಮಾಡಿದ ಯಶಸ್ಸು ಅವನಿಗೆ ದೊರೆಯಿತು.

> **ತನ್ನ್ಯಕಾಮಯತ । ತೇನಾಪಾಕ್ರಾಮತ್ । ತಾಂ ದೇವಾ ಅನ್ವಾಯನ್ । ಯಶೋಽವರುರುತ್ಸಮಾನಾಃ । ತಸ್ಯಾನ್ವಾಗತಸ್ಯ । ಸವ್ಯಾದ್ಧನುರಜಾಯತ । ದಕ್ಷಿಣಾದಿಷವಃ । ತಸ್ಮಾದಿಷುಧನ್ವಂ ಪುಣ್ಯಜನ್ಮ । ಯಜ್ಞಜನ್ಮಾ ಹಿ । ತಮೇಕಗ್ಂ ಸಂತಂ । ಬಹವೋ ನಾಭ್ಯಧೃಷ್ಣುವನ್ । ತಸ್ಮಾದೇಕಮಿಷುಧನ್ವಿನಂ । ಬಹವೋಽನಿಷುಧನ್ವಾ ನಾಭಿಧೃಷ್ಣುವಂತಿ ॥**
>
> (ತೈ. ಆ. ೫-೧-೨)

ಯಜ್ಞಮಾಡಿದ ಯಶಸ್ಸು ಎಲ್ಲರಿಗೂ ಸಮನಾಗಿ ಸೇರಬೇಕೆಂದು ಹಿಂದೆ ಪರಸ್ಪರ ಒಪ್ಪಂದವಾಗಿದ್ದರೂ ಎಲ್ಲಾ ಯಶಸೂ ವಿಷ್ಣುವು ತನಗೇ ಸೇರಬೇಕೆಂದು ಬಯಸಿದನು. ಇತರ ದೇವತೆಗಳನ್ನು ಲಕ್ಷ್ಯಮಾಡದೆ ಯಶೋಯುಕ್ತನಾಗಿ ದೇವತೆಗಳನ್ನು ಅಲ್ಲಿಯೇ ಬಿಟ್ಟು ಮುಂದೆ ಹೊರಟನು. ಹೀಗೆ ಯಶಸ್ಸನ್ನೆಲ್ಲಾ ಅವನೊಬ್ಬನೇ ತೆಗೆದುಕೊಂಡು ಹೋಗುವುದನ್ನು ದೇವತೆಗಳು

ಸೈರಿಸಲಾರದೆ ವಿಷ್ಣುವನ್ನು ಬೆನ್ನಟ್ಟಿದರು. ದೇವತೆಗಳು ಹಿಂಬಾಲಿಸುತ್ತಿರಲು ವಿಷ್ಣುವು ಮುಂದೆ ಮುಂದೆ ಹೋಗುತ್ತಿರುವಾಗ ಅವನ ಎಡಗೈಯಲ್ಲಿ ಒಂದು ಧನುಸ್ಸೂ ಎಡಗೈಯಲ್ಲಿ ಅನೇಕ ಬಾಣಗಳೂ ಉತ್ಪನ್ನವಾದವು. ವಿಷ್ಣುವು ಯಜ್ಞಪುರುಷನಾದ್ದರಿಂದ (ಯಜ್ಞೋ ವೈ ವಿಷ್ಣುಃ) ಅವನ ಸಂಕಲ್ಪಮಾತ್ರದಿಂದಲೇ ಈ ಧನುರ್ಬಾಣಗಳು ಉತ್ಪನ್ನವಾದವು. ಯಜ್ಞವು ಪುಣ್ಯರೂಪವಾದ್ದರಿಂದ ಧನುರ್ಬಾಣಗಳೂ ಪುಣ್ಯರೂಪವೆಂದೇ ಪ್ರಸಿದ್ಧವು. ಆಗ ದೇವತೆಗಳು ತಮ್ಮ ಎದುರಿಗೆ ಧನುರ್ಬಾಣಗಳನ್ನು ಧರಿಸಿ ಯುದ್ಧಸನ್ನಿದ್ಧನಾಗಿ ನಿಂತಿರುವ ವಿಷ್ಣುವನ್ನು ನೋಡಿ ಭೀತರಾದರು. ವಿಷ್ಣುವು ಸಹ ಅವರನ್ನು ಕುರಿತು-ಇಲ್ಲಿ ನೋಡಿ ನಾನು ಧನುರ್ಬಾಣಗಳನ್ನು ಧರಿಸಿ ಯುದ್ಧಸನ್ನದ್ಧನಾಗಿ ನಿಂತಿದ್ದೇನೆ. ನಿಮ್ಮ ಕೈಗಳಲ್ಲಿ ಯಾವ ಆಯುಧಗಳೂ ಇಲ್ಲ. ದೇವತೆಗಳಾದ ನೀವು ಅನೇಕ ಮಂದಿ ಇದ್ದರೂ ಆಯುಧರಹಿತರಾಗಿರುವುದರಿಂದ ಆಯುಧವನ್ನು ಧರಿಸಿರುವ ನನ್ನ ಒಬ್ಬನ ಮುಂದೆ ನಿಮ್ಮ ಆಟವೇನೂ ಸಾಗದು ಎಂದನು. ದೇವತೆಗಳು ಅಷ್ಟುಮಂದಿ ಇದ್ದರೂ ಆಯುಧಧಾರಿಯಾದ ವಿಷ್ಣುವನ್ನು ಜಯಿಸಲು ಶಕ್ತರಾಗಲಿಲ್ಲ. ಆದ್ದರಿಂದ ಲೋಕವ್ಯವಹಾರದಲ್ಲಿ ಆಯುಧವನ್ನು ಹಿಡಿದಿರುವ ಒಬ್ಬನ ಮುಂದೆ ಆಯುಧರಹಿತರಾದ ಅನೇಕ ಜನರ ಪ್ರಯತ್ನಗಳಾವವೂ ನಡೆಯುವುದಿಲ್ಲ.

ಸೋಽಸ್ಮಯತ । ಏಕಂ ಮಾ ಸಂತಂ ಬಹವೋ ನಾಭ್ಯಧರ್ಷಿಷುರಿತಿ । ತಸ್ಯ ಸಿಷ್ಮಿಯಾ-ಣಸ್ಯ ತೇಜೋಽಪಾಕ್ರಾಮತ್ । ತದ್ದೇವಾ ಓಷಧೀಷು ನ್ಯಮೃಜುಃ । ತೇ ಶ್ಯಾಮಾಕಾ ಅಭ-ವನ್ । ಸ್ಮಯಾಕಾ ವೈ ನಾಮೈತೇ । ತತ್ಸ್ಮಯಾಕಾನಾಗ್ಂ ಸ್ಮಯಾಕತ್ವಂ । ತಸ್ಮಾದ್ದೀಕ್ಷಿತೇ-ನಾಪಿಗೃಹ್ಯ ಸ್ಮೇತವ್ಯಂ । ತೇಜಸೋ ಧೃತ್ಯೈ ॥ (ತೈ. ಸಂ. ೫-೧-೩)

ಹೀಗೆಯೇ ಯಜ್ಞಸ್ವರೂಪಿಯಾದ ವಿಷ್ಣುವು ತನ್ನ ಎದುರಿಗೆ ನಿಂತಿದ್ದ ದೇವತೆಗಳನ್ನು ನೋಡಿ ಹಾಸ್ಯಮಾಡುತ್ತಾ ನಗುತ್ತ ಅಹಂಕಾರದಿಂದ ಇಂತೆಂದನು-ಇಲ್ಲಿ ನೋಡಿ ನಾನು ಇರುವವನು ಒಬ್ಬನೇ, ನೀವಾದರೋ ಸಾವಿರಾರುಮಂದಿ ಇರುವಿರಿ. ಆದರೂ ನನ್ನನ್ನು ಎದುರಿಸಿ ಜಯಿಸಲು ನಿಮಗೆ ಶಕ್ತಿಯಿಲ್ಲ ಎಂದು ಕುಚೇಷ್ಟೆಮಾಡಿ ನಗುತ್ತಿರಲು ಆಗ ನಗುತ್ತಿರುವ ಅವನ ಮುಖದಿಂದ ತೇಜಸ್ಸು ಎಂದರೆ ಶಕ್ತಿಸಾಮರ್ಥ್ಯವು ಅವನನ್ನು ಬಿಟ್ಟು ಹೊರಟುಹೋಯಿತು. ಇದೇ ಸಮಯವೆಂದು ಆಗ ದೇವತೆಗಳು ಅವನ ಮುಖದಿಂದ ಹೊರಟುಬಂದ ತೇಜಸ್ಸನ್ನು ಎಂದರೆ ಶಕ್ತಿಸಾಮರ್ಥ್ಯವನ್ನು ಪುನಃ ಅವನು ಹಿಂದಕ್ಕೆ ತೆಗೆದುಕೊಳ್ಳಲಾಗದಂತೆ ಓಷಧಿ ವನಸ್ಪತಿಗಳಲ್ಲಿ ಸ್ಥಾಪಿಸಿದರು. ಅದು ಶ್ಯಾಮಾಕಾ ಎಂಬ ಧಾನ್ಯವಾಗಿ ಪರಿವರ್ತಿತವಾಯಿತು. ಇದಕ್ಕೆ ಸ್ಮಯಾಕಾ ಎಂದು ಹೆಸರು. ನಗುತ್ತಿರುವ ಯಜ್ಞಪುರುಷನ ಮುಖದಿಂದ ತೇಜಸ್ಸು ಹೊರಟುಬಂದು ಧಾನ್ಯವಾದ್ದರಿಂದ ಇದಕ್ಕೆ ಸ್ಮಯಾಕಾ ಎಂಬ ಹೆಸರು ಅನ್ವರ್ಥನಾಮವಾಯಿತು. ಈ ಧಾನ್ಯಕ್ಕೆ ಈ ಹೆಸರು ಬರಲು ಇದೇ ಕಾರಣವು. ಆದ್ದರಿಂದ ಈಗಲೂ ದೀಕ್ಷಾಬದ್ಧನಾಗಿ ಯಜ್ಞಮಾಡುವ ಯಜಮಾನನು ಇತರರಿಗೆ ಹಲ್ಲುಕಾಣಿಸುವಂತೆ ನಗಬಾರದು. ದೀಕ್ಷಾವಿಧಿಯಲ್ಲಿಯೂ–**ಕೃಷ್ಣವಿಷಾಣಯಾ ಕಂಡೂಯತೇಽಪಿಗೃಹ್ಯ ಸ್ಮಯತೇ** ತೈ. ಸಂ.—ಯಜಮಾನನು ಯಜ್ಞಮಾಡುವ ಕಾಲದಲ್ಲಿ ಮೈನವೆಯಾದರೆ ಉಗುರುಗಳಿಂದ ಕೆರೆದುಕೊಳ್ಳಬಾರದು, ಜಿಂಕೆಯ ಕೊಂಬಿನಿಂದ ಕೆರದುಕೊಳ್ಳಬೇಕು. ನಗಬಾರದು, ಹಾಗೂ ನಗಬೇಕಾದ ಸಂದರ್ಭದಲ್ಲಿ ತನ್ನ ಹಲ್ಲನ್ನು ಪ್ರದರ್ಶನಮಾಡದೆ ಬಾಯನ್ನು ತನ್ನ ಕೈಗಳಿಂದ ಮುಚ್ಚಿಕೊಂಡು ನಗಬೇಕು ಎಂದು ಶ್ರುತಿವಾಕ್ಯವಿರುವುದು.

**ಸ ಧನುಃ ಪ್ರತಿಷ್ಕಭ್ಯಾತಿಷ್ಠತ್ । ತಾ ಉಪದೀಕಾ ಅಬ್ರುವನ್ವರಂ ವೃಣಾಮಹೈ । ಅಥ ವ ಇಮಗ್ಂ ರಂಧಯಾಮ । ಯತ್ರ ಕ್ವ ಚ ಖನಾಮ । ತದಪೋಽದಭಿತೃಣದಾಮೇತಿ । ತಸ್ಮಾದುಪದೀಕಾ ಯತ್ರ ಕ್ವ ಚ ಖನಂತಿ । ತದಪೋಽಭಿತೃಂದಂತಿ । ವಾರೇ ವೃತಗ್ಂ ಹ್ಯಾಸಾಂ । ತಸ್ಯ ಜ್ಯಾಮಪ್ಯಾದನ್ । ತಸ್ಯ ಧನುರ್ವಿಪ್ರವಮಾಣಗ್ಂ ಶಿರ ಉದವರ್ತಯತ್ । ತದ್ದ್ಯಾವಾ-**

**ಪೃಥಿವೀ ಅನುಪ್ರಾವರ್ತತ । ಯತ್ಪ್ರಾವರ್ತತ । ತತ್ಪ್ರವರ್ಗಸ್ಯ ಪ್ರವರ್ಗ್ಯತ್ವಂ । ಯದ್-ಘ್ರಾಁ ಇತ್ಯಪತತ್ । ತದ್ಘರ್ಮಸ್ಯ ಘರ್ಮತ್ವಂ । ಮಹತೋ ವೀರ್ಯಮಪಪ್ತದಿತಿ । ತನ್ಮಹಾ-ವೀರಸ್ಯ ಮಹಾವೀರತ್ವಂ । ಯದಸ್ಯಾಃ ಸಮಭರನ್ । ತತ್ಸಮ್ರಾಜ್ಞಃ ಸಮ್ರಾಟ್ತ್ವಂ ॥**

(ತೈ. ಆ. ೫-೧-೪)

ಪ್ರವರ್ಗ್ಯವೆಂಬ ಈ ಯಜ್ಞದಲ್ಲಿ ಬಳಸುವ—**ಪ್ರವರ್ಗ್ಯ, ಘರ್ಮ, ಮಹಾವೀರ, ಸಮ್ರಾಟ್** ಎಂಬ ಈ ನಾಲ್ಕು ಶಬ್ದಗಳು ಹೇಗೆ ಪ್ರಚಾರಕ್ಕೆ ಬಂದವು ಎಂಬುದನ್ನು ಈಗ ವಿವರಿಸಲಾಗುತ್ತದೆ. ಮೇಲೆ ಹೇಳಿದಂತೆ ಯಜ್ಞಪುರುಷನು ದೇವತೆಗಳನ್ನು ನೋಡಿ ನಗುತ್ತಾ ತನ್ನ ಧನುಸ್ಸನ್ನು ಊರಿಕೊಂಡು ಅವರ ಎದುರಿಗೆ ನಿಂತಿದ್ದನು. ಆಗ ಧನುಸ್ಸಿನ ಮೇಲಿನ ತುದಿಯು ಯಜ್ಞಪುರುಷನ ಕಂಠಕ್ಕೂ ಶಿರಸ್ಸಿಗೂ ಮಧ್ಯದಲ್ಲಿ ಸಂಬಂಧಿಸಿತ್ತು. ಆಗ ದೇವತೆಗಳು ಈ ಯಜ್ಞಪುರುಷನನ್ನು ಸೋಲಿಸುವುದು ಹೇಗೆಂದು ಯೋಚಿಸುತ್ತಿರುವಾಗ ಅವರ ಸಮೀಪಕ್ಕೆ ಉಪದೀಕಾ ಎಂದರೆ ಗೆಜ್ಜಲು ಇರುವೆಗಳು ಬಂದು ದೇವತೆಗಳನ್ನು ಈರೀತಿ ಪ್ರಾರ್ಥಿಸಿದವು—ಎಲೈ ದೇವತೆಗಳೇ, ನೀವು ಯೋಚಿಸುತ್ತಿರುವ ವಿಷಯವು ನಮಗೆ ಗೊತ್ತು. ನಿಮ್ಮ ಕಾರ್ಯಸಿದ್ಧಿಗಾಗಿ ನಾವು ಸಹಾಯಮಾಡುತ್ತೇವೆ. ಆದರೆ ನಾವು ಕೇಳುವ ಒಂದು ವರವನ್ನು ಕೊಡಬೇಕು ಎಂದು ಹೇಳಲು ದೇವತೆಗಳು ಒಪ್ಪಿದರು. ಆ ವರವೇನೆಂದರೆ-ನಾವು ಎಲ್ಲಿ ಅಗೆದರೂ ಅಲ್ಲಿ ದ್ರವತ್ವ(ನೀರು)ಉಂಟಾಗಬೇಕು ಎಂದು ಆ ಇರುವೆಗಳು ಕೇಳಿಕೊಂಡವು. ದೇವತೆಗಳು ಹಾಗೆಯೇ ಆಗಲೆಂದರು. ಬಳಿಕ ಆ ಗೆಜ್ಜಲು ಇರುವೆಗಳು ಯಜ್ಞಪುರುಷನು ಹಿಡಿದಿದ್ದ ಧನುಸ್ಸಿನ ಸಮೀಪಕ್ಕೆ ಬಂದು ಆ ಧನುಸ್ಸಿನ ಕೆಳತುದಿಯ ಸಮೀಪದಲ್ಲಿ ಅದಕ್ಕೆ ಕಟ್ಟಿದ ಹೆದೆ ಅಥವಾ ಹಗ್ಗವನ್ನು ಕಡಿದು ತಿಂದು ಹಾಕಿದವು. ಧನುಸ್ಸಿನ ಹೆದೆಯು ಕಿತ್ತುಹೋಗಲು ಯಜ್ಞಪುರುಷನ ಕಂಠಕ್ಕೆ ಸಮೀಪದಲ್ಲಿದ್ದ ತುದಿಯು ಘ್ರಾಁ ಎಂಬ ಮಹಾ ಶಬ್ದದೊಡನೆ ಯಜ್ಞಪುರುಷನ ಶಿರಸ್ಸನ್ನು ಕತ್ತರಿಸಲು ಕತ್ತರಿಸಿದ ರಭಸಕ್ಕೆ ಆ ಶಿರಸ್ಸು ಸ್ವರ್ಗಲೋಕದವರಿವಿಗೂ ಊರ್ಧ್ವಾಭಿಮುಖವಾಗಿ ಹಾರಿಹೋಗಿ ಕೆಳಕ್ಕೆ ಬಿದ್ದಿತು. ಈರೀತಿ ಯಜ್ಞಪುರುಷನ ಶಿರಸ್ಸು ಕತ್ತರಿಸಿಹೋಗಿ (ಉದವರ್ತಯತ್) ಮೇಲಕ್ಕೆ ಎಸೆಯಲ್ಪಟ್ಟಿದ್ದರಿಂದ (**ಊರ್ಧ್ವಂ ಪ್ರಾವರ್ತಯತ್**) ಈ ಯಜ್ಞಕ್ಕೆ **ಪ್ರವರ್ಗ್ಯ**—ಎಂಬ ಹೆಸರು ಬಂದಿತು. ಕತ್ತರಿಸಿದ ಶಿರಸ್ಸು ಮೇಲಕ್ಕೆ ಎಸೆಯಲ್ಪಟ್ಟಾಗ ಹೆದೆಯಿಂದ ಕಿತ್ತ ಧನಸ್ಸು ಘ್ರಾಁ ಎಂಬ ಶಬ್ದಮಾಡಿದ್ದರಿಂದ ಇದಕ್ಕೆ **ಘರ್ಮ**ವೆಂದೂ ಹೆಸರಾಯಿತು. ಶರೀರಕ್ಕೆ ವೀರ್ಯದಂತಿದ್ದ ಎಂದರೆ ಸಾರಭೂತವಾದ (ಸರ್ವಸ್ಯ ಗಾತ್ರಸ್ಯ ಶಿರಃಪ್ರಧಾನಂ ಎಂಬ ಉಕ್ತಿಯಂತೆ) ಯಜ್ಞಪುರುಷನ ಶಿರಸ್ಸು ಕೆಳಗೆ ಬಿದ್ದದ್ದರಿಂದ ಇದಕ್ಕೆ **ಮಹಾವೀರ**ವೆಂಬ ಹೆಸರು ಬಂದಿತು. ದೇವತೆಗಳು ಈ ಶಿರಸ್ಸನ್ನು ಈ ಪೃಥಿವಿಯಿಂದ ತೆಗೆದುಕೊಂಡು (**ಸಮಭರನ್**) ಹೋದ್ದರಿಂದ ಇದಕ್ಕೆ ಸಮ್ರಾಟ್ ಎಂಬ ಮತ್ತೊಂದು ಹೆಸರು ಬಂದಿತು. ಈ ನಾಲ್ಕು ಹೆಸರುಗಳು ಬರಲು ಇದೇ ಕಾರಣವು.

**ತಗ್ಂ ತ್ರೇಧಾ ದೇವತಾಸ್ತ್ರೇಧಾ ವ್ಯಗೃಹ್ಣತ । ಅಗ್ನಿಃ ಪ್ರಾತಸ್ಸವನಂ । ಇಂದ್ರೋ ಮಾಧ್ಯಂದಿನಗ್ಂ ಸವನಂ । ವಿಶ್ವೇದೇವಾಸ್ತೃತೀಯಸವನಂ । ತೇನಾಪಶೀರ್ಷ್ಣಾ ಯಜ್ಞೇನ ಯಜಮಾನಾಃ । ನಾಶೀಷೋಽವಾರುಂಧತ । ನ ಸುವರ್ಗಂ ಲೋಕಮಭ್ಯಜಯನ್ ॥**

(ತೈ.ಆ. ೫-೧-೫)

ಯಜ್ಞಪುರುಷನ ಶಿರಸ್ಸು ಕತ್ತರಿಸಿಹೋದಮೇಲೆ ಉಳಿದ ಶರೀರಭಾಗವನ್ನು ಅಗ್ನ್ಯಾದಿದೇವತೆಗಳು ತಮ್ಮತಮ್ಮಲ್ಲಿ ಹಂಚಿಕೊಂಡರು. ಅಗ್ನಿಯು ಪ್ರಾತಸ್ಸವನವನ್ನೂ, ಇಂದ್ರನು ಮಾಧ್ಯಂದಿನಸವನವನ್ನೂ, ವಿಶ್ವೇದೇವತೆಗಳು ತೃತೀಯಸವನವನ್ನೂ ತೆಗೆದುಕೊಂಡರು. ಆದರೂ ದೇವತೆಗಳಿಗೆ ಶಿರೋರಹಿತವಾದ ಯಜ್ಞಶರೀರದಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಯಜ್ಞಾನುಷ್ಠಾನದಿಂದ ಲಭಿಸಬೇಕಾದ ಇಷ್ಟಾರ್ಥಗಳಾಗಲಿ, ಸ್ವರ್ಗಲೋಕವಾಗಲಿ ಯಜಮಾನರಿಗೂ ದೇವತೆಗಳಿಗೂ ದೊರೆಯಲಿಲ್ಲ.

**ತೇ ದೇವಾ ಅಶ್ವಿನಾವಬ್ರುವನ್ । ಭಿಷಜೌ ವೈ ಸ್ಥಃ । ಇದಂ ಯಜ್ಞಸ್ಯ ಶಿರಃ ಪ್ರತಿಧತ್ತಮಿತಿ । ತಾವಬ್ರೂತಾಂ ವರಂ ವೃಣಾವಹೈ । ಗ್ರಹ ಏವ ನಾವತ್ರಾಪಿ ಗೃಹ್ಯತಾಮಿತಿ । ತಾಭ್ಯಾಮೇತಮಾಶ್ವಿನಮಗೃಹ್ಣನ್ । ತಾವೇತದ್ಯಜ್ಞಸ್ಯ ಶಿರಃಪ್ರತ್ಯಧತ್ತಾಂ । ಯತ್ಪ್ರವರ್ಗ್ಯಃ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಾಃ । ಅವಾಶಿಷೋಽವಾರುಂಧತ । ಅಭಿಸುವರ್ಗಂ ಲೋಕಮಜಯನ್ ॥** (ತೈ.ಆ. ೫-೧-೬)

ಪ್ರವರ್ಗ್ಯವೆಂಬ ಶಿರಸ್ಸಿಲ್ಲದ ಯಜ್ಞಶರೀರದಿಂದ ದೇವತೆಗಳಿಗೆ ಯಾವ ಪ್ರಯೋಜನವೂ ಆಗದಿರಲು ಅವರು ಅಶ್ವಿನೀದೇವತೆಗಳ ಬಳಿಗೆ ಹೋಗಿ ಇಂತೆಂದರು—ಎಲೈ ಅಶ್ವಿನೀದೇವತೆಗಳೇ, ನೀವು ದೇವತೆಗಳಿಗೆ ವೈದ್ಯರಷ್ಟೆ. ಆದ್ದರಿಂದ ಈಗ ಕತ್ತರಿಸಿಹೋಗಿರುವ ಯಜ್ಞಶಿರಸ್ಸನ್ನು ಯಜ್ಞಶರೀರದಲ್ಲಿ ಪುನಃ ಸೇರಿಸಿ ಚಿಕಿತ್ಸೆಯನ್ನು ಮಾಡಬೇಕು ಎಂದರು. ಅದಕ್ಕೆ ಅಶ್ವಿನೀದೇವತೆಗಳು—ನೀವು ಹೇಳುವುದೇನೋ ಸರಿ. ಆದರೆ ನಾವು ಕೇಳುವ ವರವನ್ನು ಕೊಟ್ಟರೆ ನೀವು ಹೇಳಿದಂತೆಯೇ ಮಾಡುವೆವು ಎನ್ನಲು, ಆ ವರವು ಯಾವುದು ಅದನ್ನು ಕೇಳಿ ಎಂದು ದೇವತೆಗಳು ಹೇಳಿದರು. ಅಶ್ವಿನೀದೇವತೆಗಳು—ಸೋಮಯಾಗದಲ್ಲಿ ದೇವತೆಗಳಾದ ನೀವೆಲ್ಲ ಸೋಮಪಾನಮಾಡುವಿರಷ್ಟೆ. ನಾವು ವೈದ್ಯರಾದ್ದರಿಂದ ನಿಕೃಷ್ಟರು ಎಂಬ ಭಾವನೆಯಿಂದ ನಮಗೆ ನೀವು ಪಾನಮಾಡಿ ಮಿಕ್ಕ ಉಚ್ಛಿಷ್ಟವನ್ನು ಮಾತ್ರ ಕೊಡುತ್ತಿದ್ದೀರಿ. ಅದು ನಮಗೆ ಇಷ್ಟವಿಲ್ಲ. ನಿಮ್ಮ ಸರಿಸಮಾನಸ್ಕಂಧರಂತೆಯೇ ಭಾವಿಸಿ ನಮಗೂ ಸೋಮಪಾನದಲ್ಲಿ ಭಾಗವನ್ನು ಕೊಡಬೇಕು ಎಂದರು. ದೇವತೆಗಳು ಹಾಗೆಯೇ ಆಗಲೆಂದು ಸಮ್ಮತಿಸಿದರು. ಬಳಿಕ ಅಶ್ವಿನೀದೇವತೆಗಳು ಪ್ರವರ್ಗ್ಯವೆಂಬ ಯಜ್ಞಶಿರಸ್ಸನ್ನು ಯಜ್ಞಪುರುಷನ ಶರೀರಕ್ಕೆ ಮುಂಚಿನಂತೆ ಸೇರಿಸಿ ಚಿಕಿತ್ಸೆಮಾಡಿದರು. ಅನಂತರ ದೇವತೆಗಳು ಶಿರಸ್ಸಹಿತವಾದ ಯಜ್ಞಶರೀರವನ್ನು ಪಡೆದು ಯಜ್ಞಮಾಡಿ ತಮ್ಮ ಇಷ್ಟಾರ್ಥಗಳನ್ನು ಸ್ವರ್ಗಲೋಕವನ್ನು ಪಡೆದರು.

**ಯತ್ಪ್ರವರ್ಗ್ಯಂ ಪ್ರವೃಣಕ್ತಿ । ಯಜ್ಞಸ್ಯೈವ ತಚ್ಛಿರಃ ಪ್ರತಿದಧಾತಿ । ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಃ । ಅವಾಶಿಷೋಽವರುಂಧೇ । ಅಭಿ ಸುವರ್ಗಂ ಲೋಕಂ ಜಯತಿ । ತಸ್ಮಾದೇಷ ಆಶ್ವಿನಪ್ರವಯಾ ಇವ । ಯತ್ಪ್ರವರ್ಗ್ಯಃ ॥** (ತೈ. ಆ. ೫-೧-೭)

ಆದ್ದರಿಂದ ಸೋಮಯಾಗವನ್ನು ಮಾಡುವ ಯಜಮಾನನು ಯಜ್ಞದ ಶಿರಸ್ಸಿನ ರೂಪವಾದ ಈ ಪ್ರವರ್ಗ್ಯವೆಂಬ ಕರ್ಮವನ್ನು ಆಚರಿಸಿ ಮುಂದೆ ಯಜ್ಞಮಾಡಬೇಕು. ಹಾಗೆ ಮಾಡುವುದರಿಂದ, ಶಿರಸ್ಸಿನಿಂದ ಸಹಿತವಾದ ಯಜ್ಞಶರೀರದಿಂದ ಯಜ್ಞಮಾಡಿದಂತಾಗಿ ಯಜ್ಞದ ಪೂರ್ಣಫಲವು ಯಜಮಾನನಿಗೆ ಲಭಿಸುವುದು. ಸ್ವರ್ಗಲೋಕಪ್ರಾಪ್ತಿಯೂ ಆಗುವುದು ಈ ಪ್ರವರ್ಗ್ಯವೆಂಬ ಯಜ್ಞಶಿರಸ್ಸನ್ನು ಯಜ್ಞಶರೀರಕ್ಕೆ ಸೇರಿಸಿ ಚಿಕಿತ್ಸೆಮಾಡಿದವರು ಅಶ್ವಿನೀದೇವತೆಗಳಾದ್ದರಿಂದ ಈ ಪ್ರವರ್ಗ್ಯವೆಂಬ ಕರ್ಮಕ್ಕೆ ‘ ಆಶ್ವಿನಪ್ರವಯ ’ ಎಂಬ ಹೆಸರು ಪ್ರಸಿದ್ಧವಾಗಿರುವುದು ಎಂದರೆ ಪ್ರವರ್ಗ್ಯಕರ್ಮದಲ್ಲಿ ಅಶ್ವಿನೀದೇವತೆಗಳ ಪರವಾದ ಮಂತ್ರಗಳೇ ಹೆಚ್ಚಾಗಿರುವವು ಎಂದಭಿಪ್ರಾಯವು.

**ತಂ ಸಂಭೃತ್ಯಾಹತುರ್ಬ್ರಹ್ಮನ್ ಪ್ರವರ್ಗ್ಯೇಣ ಪ್ರಚರಿಷ್ಯಾಮೋ ಹೋತರಭಿಷ್ಟುಹೀತಿ ॥**

**ಪ್ರವರ್ಗ್ಯಸಾಧನಾನಿ ಸಂಪಾದಿತವತೋಽಸ್ತಯೋರನುಜ್ಞಾಪನಮಂತ್ರಂ ಪ್ರೈಷಮಂತ್ರಂ ಚ ವಿಧತ್ತೇ—ತಂ ಪ್ರವರ್ಗ್ಯಕರ್ಮೋಪಯುಕ್ತಂ ಸಾಧನಸಮೂಹಂ ಸಂಭೃತ್ಯ ಸಂಪಾದ್ಯ ಚತುರ್ಣಾಮಧ್ವರ್ಯೂಣಾಂ ಮಧ್ಯೇಽಧ್ವರ್ಯುಃ ಪ್ರತಿಪ್ರಸ್ಥಾತಾ ಚೇತ್ಯುಭಾವಧ್ವರ್ಯೂ ಬ್ರಹ್ಮಾಣಂ ಹೋತಾರಂ ಚ ಪ್ರತ್ಯೇವಂ ಬ್ರೂಯಾತಾಂ ॥ ಭೋ ಬ್ರಹ್ಮನ್ ವಯಮೃತ್ವಿಜ ಸರ್ವೇ ಪ್ರವರ್ಗ್ಯಾಖ್ಯೇನ ಕರ್ಮಣಾ ಪ್ರಚರಿಷ್ಯಾಮೋಽನುಷ್ಠಾಸ್ಯಾಮಃ ॥ ಸೋಽಯಮನುಜ್ಞಾಪನಮಂತ್ರಃ ಹೇ ಹೋತಸ್ತ್ವಭಿಷ್ಟುಹಿ ಪ್ರವರ್ಗ್ಯಸ್ತುತಿರೂಪಾಃ ಸರ್ವಾ ಋಚಃ ಪಠ ॥ ಸೋಽಯಂ ಪ್ರೈಷಮಂತ್ರಃ ಇತಿಶಬ್ದೋ ಮಂತ್ರದ್ವಯಸಮಾಪ್ತ್ಯರ್ಥಃ ॥**

ಈರೀತಿ ಯಜ್ಞಸಾಮಗ್ರಿಗಳನ್ನು ಸಂಪಾದಿಸಿಕೊಂಡಮೇಲೆ ಅಧ್ವರ್ಯುವರ್ಗದ ನಾಲ್ಕುಮಂದಿ ಋತ್ವಿಜರಲ್ಲಿ ಅಧ್ವರ್ಯು ಮತ್ತು ಪ್ರತಿಪ್ರಸ್ಥಾತಾ ಎಂಬಿಬ್ಬರು ಬ್ರಹ್ಮ ಮತ್ತು ಹೋತೃವೆಂಬ ಋತ್ವಿಜರನ್ನು ಕುರಿತು ಈರೀತಿ ಹೇಳುವರು—ಎಲೈ ಬ್ರಹ್ಮನೇ ನಾವು ಪ್ರವರ್ಗ್ಯವೆಂಬ ಕರ್ಮಕ್ಕೆ ಬೇಕಾದ ಸಕಲ ಸಾಮಗ್ರಿಗಳನ್ನು ಒದಗಿಸಿಕೊಂಡು ಸಿದ್ಧರಾಗಿದೇವೆ. ಆದ್ದರಿಂದ ಈಗ ಪ್ರವರ್ಗ್ಯವೆಂಬ ಕರ್ಮಾನುಷ್ಠಾನಮಾಡುವುದಕ್ಕೆ ಪ್ರವೃತ್ತರಾಗೋಣ. ಅನಂತರ ಅಧ್ವರ್ಯುವು ಹೋತೃವನ್ನು ಕುರಿತು ಎಲೈ ಹೋತೃವೇ ಪ್ರವರ್ಗ್ಯಸ್ತುತಿರೂಪವಾದ ಮಂತ್ರಗಳನ್ನು ಈಗ ಪಠಿಸು ಎಂದು ಪ್ರೈಷಮಂತ್ರದಿಂದ ನಿರ್ದೇಶಿಸುವನು.

*English Translation*

**(The Pravargya Ceremony)**

The sacrifice went away from the gods (saying), I shall not be your food. The gods said: do not go; thou alone shalt be our food. The gods then killed it. When it had been taken asunder (cut into pieces) by them, it was found not to be sufficient (to satisfy their appetite). The gods said: this sacrifice after having been taken asunder, will certainly not be sufficient for us. Well, let us dress (and fill up) this sacrifice. After having dressed it, they said to the As'vins are the two physicians of the gods, they are the two Adhvaryus (sacred cooks). Thence two Adhvaryu priests provide for all the implements required for the Pravarga vessel (gharma). After having done so, they say, "Brahma! we shall perform the Pravargya ceremony. Hotar! repeat the appropriate mantras!"

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ಥಾಧ್ಯಾಯೇ ಪ್ರಥಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಮೊದಲನೆಯ ಖಂಡವು ಸಮಾಪ್ತವಾದುದು.**



# ಅಥ ಚತುರ್ಥಾಧ್ಯಾಯೇ ದ್ವಿತೀಯಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು

### ಪಂಚಿಕೆ ೧—ಪ್ರಕರಣ ೧೯



[ ಪ್ರವರ್ಗ್ಯೇಷ್ಟಿಯ ಮಂತ್ರಗಳು ]

---

**ಬ್ರಹ್ಮಜಜ್ಞಾನಂ ಪ್ರಥಮಂ ಪುರಸ್ತಾದಿತಿ ಪ್ರತಿಪದ್ಯತೇ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮಣೈವೈನಂ ತದ್ಭಿಷಜ್ಯತಿ ||**

ಹೋತುರಭಿಷ್ಟವಾರ್ಥಾಸ್ವೃಕ್ಷು ಪ್ರಥಮಾಮೃಚಂ ವಿಧತ್ತೇ—ಪ್ರತಿಪದ್ಯತೇಽನೇನ ಮಂತ್ರೇಣ ಹೋತಾಭಿಷ್ಟವಂ ಪ್ರಾರಭೇತ ಇತ್ಯರ್ಥಃ || ಅಸ್ಮಿನ್ಮಂತ್ರೇ ಬ್ರಹ್ಮಶಬ್ದೇನ ದೇವಾನಾಂ ಮಧ್ಯೇ ಬ್ರಾಹ್ಮಣಜಾತಿರೂಪೋ ಬೃಹಸ್ಪತಿರುಚ್ಯತೇ || ತಸ್ಮಾದನೇನ ಮಂತ್ರೇಣೋಪಕ್ರಮೇ ಸತಿ ಬ್ರಹ್ಮಣೈವ ಬ್ರಾಹ್ಮಣಜಾತ್ಯೈವೈನಂ ಪ್ರವರ್ಗ್ಯಂ ತದಾಭಿಷಜ್ಯತಿ ಚಿಕಿತ್ಸತೇ ||

ಅಧ್ವರ್ಯುವು ಪ್ರೈಷಮಂತ್ರದಿಂದ ಹೋತೃವನ್ನು ನಿರ್ದೇಶಿಸಿದ ಕೂಡಲೇ ಹೋತೃವು—

ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿ ಸೀಮತಃ ಸುರುಚೋ ವೇನ ಆವಃ |
ಸ ಬುಧ್ನಿಯಾ ಉಪಮಾ ಅಸ್ಯ ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ||

(ತೈ.ಸಂ. ೪-೨-೮-೨; ವಾ.ಸಂ. ೧೩-೩ ; ಅ.ವೇ. ೪-೧-೧ ; ೫-೬-೧ ; ಮೈ.ಸಂ. ೨-೭-೧೯೭ ; ಕಾಠ.ಸಂ. ೧೬-೧೫೩)
ಎಂಬ ಮೊದಲನೆಯ ಋಕ್ಕಿನಿಂದ ಪ್ರಾರಂಭಮಾಡುವನು. ಈ ಮಂತ್ರವೂ ಮುಂದಿನ ಮೂರು ಮಂತ್ರಗಳೂ ಋಗ್ವೇದಸಂಹಿತೆಯಲ್ಲಿಲ್ಲ. ಶಾಖಾಂತರದಲ್ಲಿದೆಯೆಂದು ಹೇಳಲಾಗಿದೆ. (ಆಶ್ವ.ಶ್ರೌ.ಸೂ. ೪-೬-೩-೧, ೨, ೩, ೪). ಈ ಮಂತ್ರದಲ್ಲಿರುವ ಬ್ರಹ್ಮಶಬ್ದಕ್ಕೆ ದೇವತೆಗಳ ಮಧ್ಯದಲ್ಲಿ ಬ್ರಾಹ್ಮಣಜಾತಿರೂಪನಾದ ಬೃಹಸ್ಪತಿಯೆಂದರ್ಥವು. ಆದ್ದರಿಂದ ಹೋತೃವು ಈ ಮಂತ್ರವನ್ನು ಪ್ರಾರಂಭದಲ್ಲಿ ಪಠಿಸಿ ಪ್ರವರ್ಗ್ಯರೂಪವಾದ ಯಜ್ಞಪುರುಷನ ಶಿರಸ್ಸನ್ನು ಶರೀರಕ್ಕೆ ಸೇರಿಸುವ ಚಿಕಿತ್ಸೆಯನ್ನು ಆರಂಭಿಸುವನು.

**ಇಯಂ ಪಿತ್ರೇ ರಾಷ್ಟ್ರ್ಯೇತ್ಯಗ್ರ ಇತಿ ವಾಗ್ವೈ ರಾಷ್ಟ್ರೀ ವಾಚಮೇವಾಸ್ಮಿಂಸ್ತದ್ದಧಾತಿ ||**

ದ್ವಿತೀಯಾಮೃಚಂ ವಿಧತ್ತೇ—ಅಸ್ಮಿನ್ಮಂತ್ರೇ ತೃತೀಯಾಂತೋ ರಾಷ್ಟ್ರೀಶಬ್ದೋ ವಾಚಂ ಬ್ರೂತೇ | ತತ್ತೇನ ಮಂತ್ರಪಾಠೇನಾಸ್ಮಿನ್ಪ್ರವರ್ಗ್ಯೇ ವಾಚಮೇವ ಸಂಪಾದಯತಿ ||

ಅನಂತರ ಹೋತೃವು—

**ಇಯಂ ಪಿತ್ರ್ಯಾ ರಾಷ್ಟ್ರ್ಯೇತ್ವಗ್ರೇ ಪ್ರಥಮಾಯ ಜನುಷೇ ಭುವನೇಷ್ಠಾಃ ।**
**ತಸ್ಮಾ ಏತಂ ಸುರುಚಂ ಹ್ವಾರಮಹ್ಯಂ ಘರ್ಮಂ ಶ್ರೀಣಂತು ಪ್ರಥಮಾಯ ಧಾಸ್ಯವೇ ॥**
(ಅಥ. ಸಂ. ೪-೧-೨)

ಎಂಬ ಎರಡನೆಯ ಋಕ್ಕನ್ನು ಪಠಿಸುವನು. ಈ ಮಂತ್ರದಲ್ಲಿರುವ ತೃತೀಯಾವಿಭಕ್ತ್ಯಂತವಾದ ರಾಷ್ಟ್ರ್ಯಾ ಎಂಬ ಶಬ್ದವು ವಾಕ್ಕನ್ನು (ಮಾತನ್ನು) ಸೂಚಿಸುವುದು. ಆದ್ದರಿಂದ ಈ ಮಂತ್ರಪಠನವು ಯಜ್ಞಶರೀರದಲ್ಲಿ ವಾಕ್ಕನ್ನು (ಮಾತನಾಡುವ ಶಕ್ತಿಯನ್ನು) ಸ್ಥಾಪಿಸುವುದು.

## ಮಹಾನ್ಮಹೀ ಅಸ್ತಭಾಯ ದ್ವಿಜಾತ ಇತಿ ಬ್ರಾಹ್ಮಣಸ್ಪತ್ಯಾ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮಣೈವೈನಂ ತದ್ಭಿಷಜ್ಯತಿ ॥

**ತೃತೀಯಾಮೃಚಂ ವಿಧತ್ತೇ—ಅಸ್ಯ ಮಂತ್ರಸ್ಯ ಚತುರ್ಥಪಾದೇ ಬೃಹಸ್ಪತಿರ್ದೇವತೇತಿ ಶ್ರೂಯಮಾಣತ್ವಾದ್ಬೃಹಸ್ಪತೇಶ್ಚ ಬ್ರಾಹ್ಮಣಸ್ವಾಮಿತ್ವಾದಿಯಮೃಗ್ಬ್ರಾಹ್ಮಣಸ್ಪತ್ಯಾ ॥**

ಅನಂತರ ಹೋತೃವು—

**ಮಹಾನ್ ಮಹೀ ಅಸ್ತಭಾಯ ದ್ವಿಜಾತೋ ದ್ಯಾಗ್ಂ ಸದ್ಮ ಪಾರ್ಥಿವಂ ಚ ರಜಃ ।**
**ಸ ಬುಧ್ನಾದಾಷ್ಟ ಜನುಷಾಭ್ಯಗ್ರಂ ಬೃಹಸ್ಪತಿರ್ದೇವತಾ ಯಸ್ಯ ಸಮ್ರಾಟ್ ॥**
(ತೈ. ಸಂ. ೨-೩-೧೪-೬)

ಎಂಬ ಮೂರನೆಯ ಋಕ್ಕನ್ನು ಪಠಿಸುವನು. ಈ ಮಂತ್ರದ ನಾಲ್ಕನೆಯ ಪಾದದಲ್ಲಿ ಬೃಹಸ್ಪತಿ ಶಬ್ದಪ್ರಯೋಗವಿರುವುದು. ಬೃಹಸ್ಪತಿಯು ದೇವತೆಗಳಲ್ಲಿ ಬ್ರಾಹ್ಮಣವರ್ಗಕ್ಕೆ ಸೇರಿದವನಾದ್ದರಿಂದ ಈ ಮಂತ್ರವು ಬ್ರಹ್ಮಣಸ್ಪತಿದೇವತಾಕವಾಗಿರುವುದು. ಈ ಮಂತ್ರಪಠನದಿಂದ ಎಂದರೆ ಬ್ರಹ್ಮಶಬ್ದೋಚ್ಚಾರಣೆಯಿಂದ ಹೋತೃವು ಪ್ರವರ್ಗ್ಯಪುರುಷನ ಚಿಕಿತ್ಸೆಯನ್ನು ಮಾಡಿದಂತಾಗುವುದು.

## ಅಭಿ ತ್ಯಂ ದೇವಂ ಸವಿತಾರಮೋಣ್ಯೋರಿತಿ ಸಾವಿತ್ರೀ ಪ್ರಾಣೋ ವೈ ಸವಿತಾ ಪ್ರಾಣಮೇವಾಸ್ಮಿಂಸ್ತದ್ದಧಾತಿ ॥

**ಚತುರ್ಥೀಮೃಚಂ ವಿಧತ್ತೇ—ಸವಿತಾರಮಿತಿ ಶ್ರುತತ್ವಾದಿಯಮೃಕ್ಸಾವಿತ್ರೀ ॥ ಪಠನೀಯೇತಿ ಶೇಷಃ ॥ ಪ್ರಾಣಸ್ಯ ದೇಹೇಂದ್ರಿಯಪ್ರೇರಕತ್ವಾತ್ಸವಿತೃತ್ವಂ ॥ ತತ್ತೇನ ಮಂತ್ರೇಣಾಸ್ಮಿನ್ಪ್ರವರ್ಗ್ಯೇ ಪ್ರಾಣಮೇವ ಸಂಪಾದಯತಿ ॥ ತಾಏತಾಶ್ಚತಸ್ರ ಋಚಃ ಶಾಖಾಂತರಗತಾ ಆಶ್ವಲಾಯನೇನ ಪಠಿತಾ ದ್ರಷ್ಟವ್ಯಾಃ ॥**

ಅನಂತರ ಹೋತೃವು—

**ಅಭಿ ತ್ಯಂ ದೇವಂ ಸವಿತಾರಮೂಣ್ಯೋಃ ಕವಿಕ್ರತುಮರ್ಚಾಮಿ ಸತ್ಯಸವಸಗ್ಂ ರತ್ನಧಾಮಭಿಪ್ರಿಯಂ ಮತಿಂ ಕವಿಂ । ಊರ್ಧ್ವಾ ಯಸ್ಯಾಮತಿರ್ಭಾ ಅದಿದ್ಯುತತ್ಸವೀಮನಿ ಹಿರಣ್ಯಪಾಣಿರಮಿಮೀತ ಸುಕ್ರತುಃ ಕೃಪಾ ಸುವಃ ॥** (ತೈ.ಸಂ. ೧-೨-೬-೧ ; ವಾ. ಸಂ. ೪-೨೫)

ಎಂಬ ನಾಲ್ಕನೆಯ ಋಕ್ಕನ್ನು ಪಠಿಸುವನು. (ಈ ಮಂತ್ರವು ಅಥರ್ವಸಂಹಿತೆಯಲ್ಲಿ ಎರಡು ಋಕ್ಕುಗಳಾಗಿ ಪಠಿತವಾಗಿವೆ. ೭-೧೪ ೧, ೨). ಈ ಋಕ್ಕಿನಲ್ಲಿ **ಸವಿತಾರಂ** ಎಂಬ ಶಬ್ದಪ್ರಯೋಗವಿರುವುದರಿಂದ ಈ ಮಂತ್ರವು ಸವಿತೃದೇವತಾಕವು. ಸವಿತೃ ದೇವತೆಯು ಶರೀರದ ಪ್ರಾಣ ಮತ್ತು ಇಂದ್ರಿಯಗಳ ಪ್ರೇರಕನಾದುದರಿಂದ ಈ ಮಂತ್ರಪಠನವು ಪ್ರವರ್ಗ್ಯಶರೀರದಲ್ಲಿ ಪ್ರಾಣ ವನ್ನು ಸ್ಥಾಪಿಸುವುದು. ಮೇಲೆ ಹೇಳಿದ ನಾಲ್ಕು ಮಂತ್ರಗಳು ಋಗ್ವೇದದಲ್ಲಿರುವುದಿಲ್ಲ. ಶಾಖಾಂತರಗಳಲ್ಲಿರುವುದನ್ನು ಆಶ್ವಲಾಯನರು ಶ್ರೌತಸೂತ್ರದಲ್ಲಿ ಪಠಿಸಿರುವರು. ಆದರೆ ನಾವು ಆ ಮಂತ್ರಗಳನ್ನು ಆಯಾ ಶಾಖೆಗಳಿಂದ ಸಂಗ್ರಹಿಸಿ ತೆಗೆದು ಇಲ್ಲಿ ಪೂರ್ತಿಯಾಗಿ ಕೊಟ್ಟಿದೇವೆ.

**ಸಂಸೀದಸ್ವ ಮಹಾँ ಅಸೀತ್ಯೇನ್ಮೈನಂ ಸಮುಸಾದಯನ್ ।**

ಪಂಚಮೀಮೃಚಂ ವಿಧತ್ತೇ—ಅನೇನ ಮಂತ್ರೇಣೈನಂ ಪ್ರವರ್ಗ್ಯಾಖ್ಯಂ ಮಹಾವೀರಂ ಖರಶಬ್ದಾಭಿಧೇಯೇ ಸಂತಾಪನಸ್ಥಾನೇ ಸಮುಸಾದಯನ್ನಾಸ್ಥಾಪಯೇಯುರಿತ್ಯರ್ಥಃ ॥

ಅನಂತರ ಹೋತೃವು—

**ಸಂಸೀದಸ್ವ ಮಹಾँ ಅಸಿ ಶೋಚಸ್ವ ದೇವವೀತಮಃ ।**
**ವಿ ಧೂಮಮಗ್ನೇ ಅರುಷಂ ಮಿಯೇಧ್ಯ ಸೃಜ ಪ್ರಶಸ್ತ ದರ್ಶತಂ ॥**

(ಋ. ಸಂ. ೧-೩೬-೯)

ಎಂಬ ಐದನೆಯ ಋಕ್ಕನ್ನು ಪಠಿಸುವನು. ಈ ಮಂತ್ರಪಠನದಿಂದ ಪ್ರವರ್ಗ್ಯಕರ್ಮದಲ್ಲಿ **ಮಹಾವೀರ**ವೆಂಬ (ಹಾಲು ಕಾಯಿಸುವ) ಮಣ್ಣಿನ ಪಾತ್ರೆಯನ್ನು ಖರವೆಂಬ ಕಾಯಿಸುವ ಸ್ಥಾನದಲ್ಲಿ ಸ್ಥಾಪಿಸಲಾಗುವುದು. ಖರವೆಂದರೆ—**ಖರೋ ನಾಮ ಮಹಾವೀರಸಂತಾಪನಪ್ರಕ್ಷಾಲನಾದ್ಯರ್ಥಂ ಸಿಕತಾಭಿಃ ಕಲ್ಪಿತೋ ದೇಶ ಉಚ್ಯತೇ ।** ಪ್ರವರ್ಗ್ಯಕರ್ಮ ದಲ್ಲಿ ಮಹಾವೀರವೆಂಬ ಮಣ್ಣಿನ ಪಾತ್ರೆಯನ್ನು (ಇದರಲ್ಲಿ ಹಾಲಿರುವುದು) ಕಾಯಿಸುವುದಕ್ಕೂ ತೊಳೆಯುವುದಕ್ಕೂ ಮರಳಿನಿಂದ ಸಿದ್ಧಪಡಿಸಿರುವ ಪ್ರದೇಶವು (ಆಪಸ್ತಂಬ ಶ್ರೌತಸೂತ್ರದಲ್ಲಿ—ತತಃ ಖರಾನುಪವಪತಿ । ಉತ್ತರೇಣ ಗಾರ್ಹಪತ್ಯಮೇಕಂ ಉತ್ತರೇಣಾಹವನೀಯಮೇಕಂ । ಉತ್ತರಪೂರ್ವಂ ದ್ವಾರಂ ಕರೋತಿ ಬಾಹ್ಯತೋ ನಿಷ್ಷೇಚನವಂತಂ (ಆಪ. ಶ್ರೌ. ಸೂ. ೧೫-೬-೨೦, ೨೧, ೨೨) ಎಂದು ಹೇಳಿದೆ. ಗಾರ್ಹಪತ್ಯಾಗ್ನಿಕುಂಡದ ಉತ್ತರಭಾಗದಲ್ಲಿಯೂ ಆಹವನೀಯಾಗ್ನಿಯ ಉತ್ತರಪ್ರದೇಶ ದಲ್ಲಿಯೂ, ಉತ್ತರ ಮತ್ತು ಪೂರ್ವದಿಕ್ಕುಗಳ ಮಧ್ಯಪ್ರದೇಶದಲ್ಲಿಯೂ (ಐಶಾನ್ಯ) ಖರವೆಂಬ ಮೂರು ಸಣ್ಣ ಹಳ್ಳಗಳನ್ನು ತೋಡಬೇಕು. ಐಶಾನ್ಯಪ್ರದೇಶದಲ್ಲಿರುವ ಖರವು ಅಥವಾ ಖರದ ದ್ವಾರವು (ಬಚ್ಚಲು) ಮಹಾವೀರಪಾತ್ರೆಯನ್ನು ತೊಳೆಯು ವುದಕ್ಕನುಕೂಲವಾಗಿರುವಂತೆ ಹೊರಭಾಗದಲ್ಲಿರಬೇಕು. ಈ ಹಳ್ಳದ ಅಥವಾ ಗುಂಡಿಯ ಆಳವು **ಪ್ರಾದೇಶಮಾತ್ರಂ ಪರಿಮಂಡಲಂ** ಒಂದು ಗೇಣು ಉದ್ದವಿರಬೇಕು. ಇವುಗಳಲ್ಲಿ ಮರಳನ್ನು ತುಂಬಿರಬೇಕು. **ಮಹಾವೀರ**ವೆಂದರೆ—**ಪ್ರವರ್ಗ್ಯ ಹವಿರಾಶ್ರಯಭೂತೋ ಮೃನ್ಮಯಪಾತ್ರವಿಶೇಷೋ ಮಹಾವೀರಃ ।** ಪ್ರವರ್ಗ್ಯಕರ್ಮದಲ್ಲಿ ಹವಿಸ್ಸನ್ನು (ಹಾಲನ್ನು) ಇಡುವ ಮಣ್ಣಿನ ಪಾತ್ರೆಗೆ ಮಹಾವೀರವೆಂದು ಹೆಸರು. ಇದರ ಆಕಾರವು ಮೂರು ಮಡಕೆಗಳನ್ನು ಒಂದರ ಮೇಲೊಂದನ್ನು ಇಟ್ಟಂತಿರುವುದು. ಅದನ್ನು ಮಾಡುವ ಕ್ರಮವು ಆಪಸ್ತಂಬಸೂತ್ರದಲ್ಲಿ ಹೇಳಿರುವುದು—ಸಂಪ್ರಕ್ಲಿಶ್ಯ ಮೃದಂ ಮಖಸ್ಯ ಶಿರೋಽಸೀತಿ ಪಿಂಡಂ ಕೃತ್ವಾ ಯಜ್ಞಸ್ಯ ಪದೇ ಸ್ಥ ಇತ್ಯಂಗುಷ್ಠಾಭ್ಯಾಂ ಸಿಗೃಹ್ಯ ಮಹಾವೀರಂ ಕರೋತಿ । ತ್ರ್ಯುದ್ಧಿಂ ಪಂಚೋ- ದ್ಧಿಮಪರಿಮಿತೋದ್ಧಿಂ ವಾ ಪ್ರಾದೇಶಮಾತ್ರಮೂರ್ಧ್ವಸಾನುಮುಪರಿಷ್ಟಾದಾಸೇಚನವಂತಂ ಮಧ್ಯೇ ಸನ್ನತಂ ವಾಯವ್ಯಪ್ರಕಾರಂ (ಆಪ. ಶ್ರೌ. ಸೂ. ೧-೫-೨-೧೪) ಜಿಗಟಾಗಿರುವ ಮಣ್ಣನ್ನು ಅಗೆದು ತಂದು **ಮಖಸ್ಯ ಶಿರೋಽಸಿ** ಎಂಬ ಮಂತ್ರದಿಂದ ನೀರನ್ನು ಹಾಕಿ ಕಲಸಿ ಉಂಡೆಯನ್ನಾಗಿ ಮಾಡಿ, **ಯಜ್ಞಸ್ಯ ಪದೇಸ್ಥ** ಎಂಬ ಮಂತ್ರದಿಂದ ಅಂಗುಷ್ಠಾನಾಮಿಕಬೆರಳುಗಳಿಂದ

ಮಣ್ಣನ್ನು ತೆಗೆದುಕೊಂಡು ಮಹಾವೀರ ಪಾತ್ರೆಯನ್ನು ಮಾಡಬೇಕು. ಆ ಪಾತ್ರೆಯು ಒಂದು ಗೇಣು ಪ್ರಮಾಣದ್ದಾಗಿರಬೇಕು. ಆ ಪಾತ್ರೆಯು ಮೂರು, ಐದು ಅಥವಾ ಅನೇಕ ಪಾತ್ರೆಗಳನ್ನು ಸೇರಿಸಿದಂತೆ ಇಡಬೇಕು ಮಧ್ಯದಲ್ಲಿ ಸಣ್ಣನಾಗಿರಬೇಕು. ಪಾತ್ರೆಯ ಬಾಯಿಯು ಮೇಲುಭಾಗದಲ್ಲಿರಬೇಕು ಇತ್ಯಾದಿ.

**ಅಂಜಂತಿ ಯಂ ಪ್ರಥಯಂತೋ ನ ವಿಪ್ರಾ ಇತ್ಯಜ್ಯಮಾನಾಯಾಭಿ-ರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥**

ಷಷ್ಠೀಮೃಚಂ ವಿಧತ್ತೇ--ಅಸ್ಮಿನ್ಮಂತ್ರೇಽಂಜಂತೀತಿಪದಸ್ಯ ಶ್ರುತತ್ವಾದಾಜ್ಯೇನಾಜ್ಯ-ಮಾನಾಯ ಮಹಾವೀರಾಖ್ಯಾಯ ಪಾತ್ರಾಯಯೋಯಮೃಗಭಿರೂಪಾ ಭವತಿ ॥

ಅನಂತರ ಹೋತೃವು—

ಅಂಜಂತಿ ಯಂ ಪ್ರಥಯಂತೋ ನ ವಿಪ್ರಾ ವಪಾವಂತಂ ನಾಗ್ನಿನಾ ತಪಂತಃ ।
ಪಿತುರ್ನ ಪುತ್ರ ಉಪಸಿ ಪ್ರೇಷ್ಠ ಆ ಘರ್ಮೋ ಅಗ್ನಿಮೃತಯನ್ನಸಾದಿ ॥

(ಋ. ಸಂ. ೫-೪೩-೭)

ಎಂಬ ಆರನೆಯ ಋಕ್ಕನ್ನು ಪಠಿಸುವನು. ಈ ಮಂತ್ರಪಠನವನ್ನು ಮಾಡುತ್ತಾ ಋತ್ವಿಜರು ಮಹಾವೀರಪಾತ್ರೆಯನ್ನು ಆಜ್ಯ (ತುಪ್ಪ)ದಿಂದ ಲೇಪನಮಾಡುವರು. ಈ ಮಂತ್ರದಲ್ಲಿ ಅಂಜಂತಿ ಎಂಬ ಪದವಿರುವುದರಿಂದ ಇದು ಆಜ್ಯಲೇಪನಕರ್ಮವನ್ನು ಸೂಚಿಸುವುದು. ಯಜ್ಞದಲ್ಲಿ ಮಾಡಬೇಕಾದ ಕರ್ಮಗಳನ್ನು ಯಥಾವತ್ತಾಗಿ ವಿವರಿಸುವ ಮಂತ್ರಗಳ ಪಠನದಿಂದ ಆ ಕರ್ಮವು ಸಾಂಗವಾಗಿ ನೆರವೇರುವುದು. ಇಲ್ಲಿ ಮಹಾವೀರಪಾತ್ರೆಯನ್ನು ಆಜ್ಯದಿಂದ ಲೇಪನಮಾಡುವಾಗ ಆ ಕರ್ಮವನ್ನು ಈ ಮಂತ್ರವು ವಿವರಿಸುವುದರಿಂದ ಈ ಕರ್ಮಕ್ಕೆ ಈ ಮಂತ್ರಕ್ಕೆ ಸಮನ್ವಯವುಂಟಾಗಿ ಕರ್ಮವು ನಿರ್ವಿಘ್ನವಾಗಿ ನೆರವೇರುವುದು ಎಂದಭಿಪ್ರಾಯವು.

**ಪತಂಗಮಕ್ತಮಸುರಸ್ಯ ಮಾಯಯಾ ಯೋ ನಃ ಸನುತ್ಯೋ ಅಭಿ-ದಾಸದಗ್ನೇ ಭವಾ ನೋ ಅಗ್ನೇ ಸುಮನಾ ಉಪೇತಾವಿತಿ ದ್ವೇ ದ್ವೇ ಅಭಿರೂಪೇ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥**

ಸಪ್ತಮೀಮಾರಭ್ಯ ದ್ವಾದಶಪರ್ಯಂತಾಃ ಷಡೃಚೋ ವಿಧತ್ತೇ-ಪತಂಗಮಿತಿ ಸಂಹಿತಾ-ಯಾಮಾಮ್ನಾತಯೋರ್ದ್ವಯೋಃ ಪ್ರತೀಕೇ ॥ ಯೋ ನಃ ಸನುತ್ಯ ಇತಿ ದ್ವಯೋಃ ಪ್ರತೀಕೇ ॥ ಭವಾ ನೋ ಅಗ್ನಯ ಇತಿ ದ್ವಯೋಃ॥ ಏತಾಸಾಂ ಸರ್ವಾಸಾಮಭಿಷ್ಟೂಯಮಾನಾರ್ಥ ಪ್ರತಿ-ಪಾದಕತ್ವಾದಭಿರೂಪತ್ವಂ ॥ ತಚ್ಚಾತ್ರೈತಾಸ್ವೃಕ್ಷು ಬುದ್ಧಿಮತಾಯೋಜನೀಯಂ ॥

ಅನಂತರ ಹೋತೃವು ಏಳರಿಂದ ಹನ್ನೆರಡರವರೆಗಿನ ಆರು ಋಕ್ಕುಗಳನ್ನು ಪಠಿಸುವನು--ಅವು ಯಾವವೆಂದರೆ— **ಪತಂಗಮಕ್ತಮಸುರಸ್ಯ** (ಋ.ಸಂ. ೧೦-೧೭೭-೧, ೨) ಎಂಬ ಎರಡು ಋಕ್ಕುಗಳು **ಯೋ ನಃ ಸನುತ್ಯೋ** (ಋ.ಸಂ. ೬-೫-೪, ೫) ಎಂಬ ಎರಡು ಋಕ್ಕುಗಳು. **ಭವಾ ನೋ ಅಗ್ನೇ** (ಋ.ಸಂ. ೩-೧೮-೧, ೨) ಎಂಬ ಎರಡು ಋಕ್ಕುಗಳು ಒಟ್ಟು ಆರು ಋಕ್ಕುಗಳು—

ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ ।
ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ ॥
ಪತಂಗೋ ವಾಚಂ ಮನಸಾ ಬಿಭರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ ।
ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಮೃತಸ್ಯ ಪದೇ ಕವಯೋ ನಿಪಾಂತಿ ॥

(ಋ.ಸಂ. ೧೦-೧೭೭-೧, ೨)

ಯೋ ನಃ ಸನುತ್ಯೋ ಅಭಿದಾಸದಗ್ನೇ ಯೋ ಅಂತರೋ ಮಿತ್ರಮಹೋ ವನುಷ್ಯಾತ್।
ತಮಜರೇಭಿರ್ವೃಷಭಿಸ್ತವ ಸ್ವೈಸ್ತಪಾ ತಪಿಷ್ಠ ತಪಸಾ ತಪಸ್ವಾನ್ ॥
ಯಸ್ತೇ ಯಜ್ಞೇನ ಸಮಿಧಾ ಯ ಉಕ್ಥೈರರ್ಕೇಭಿಃ ಸೂನೋ ಸಹಸೋ ದದಾಶತ್ ।
ಸ ಮರ್ತ್ಯೇಷ್ವಮೃತ ಪ್ರಚೇತಾ ರಾಯಾ ದ್ಯುಮ್ನೇನ ಶ್ರವಸಾ ವಿ ಭಾತಿ ॥

(ಋ. ಸಂ. ೬-೫-೪, ೫)

ಭವಾ ನೋ ಅಗ್ನೇ ಸುಮನಾ ಉಪೇತೌ ಸಖೇವ ಸಖ್ಯೇ ಪಿತರೇವ ಸಾಧುಃ ।
ಪುರುದ್ರುಹೋ ಹಿ ಕ್ಷಿತಯೋ ಜನಾನಾಂ ಪ್ರತಿ ಪ್ರತೀಚೀರ್ದಹತಾದರಾತೀಃ ॥
ತಪೋ ಷ್ವಗ್ನೇ ಅಂತರಾँ ಅಮಿತ್ರಾನ್ ತಪಾ ಶಂಸಮರರುಷಃ ಪರಸ್ಯ ।
ತಪೋ ವಸೋ ಚಿಕಿತಾನೋ ಅಚಿತ್ತಾನ್ ವಿ ತೇ ತಿಷ್ಠಂತಾಮಜರಾ ಅಯಾಸಃ ॥

(ಋ. ಸಂ. ೩-೧೮-೧, ೨)

ಈ ಋಕ್ಕುಗಳು ಸಂದರ್ಭೋಚಿತವಾದ ಅರ್ಥವನ್ನು ಪ್ರತಿಪಾದಿಸುವವು. ಆದ್ದರಿಂದ ಬುದ್ಧಿವಂತನಾದ ಪುರುಷನು ಈ ಋಕ್ಕುಗಳನ್ನು ಈ ಕರ್ಮದಲ್ಲಿ ಉಪಯೋಗಿಸಬೇಕು.

## ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಮಿತಿ ಪಂಚ ರಾಕ್ಷೋಘ್ನ್ಯೋ ರಕ್ಷಸಾಮಪಹತ್ಯೈ ॥

ತ್ರಯೋದಶೀಮಾರಭ್ಯ ಸಪ್ತದಶೀಪರ್ಯಂತಾಃ ಪಂಚರ್ಚೋ ವಿಧತ್ತೇ--

ಅನಂತರ ಹೋತೃವು--

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವाँ ಇಭೇನ ।
ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥
ತವ ಭ್ರಮಾಸ ಆಶುಯಾ ಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ ।
ತಪೂಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿ ಸೃಜ ವಿಷ್ವಗುಲ್ಕಾಃ ॥
ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।
ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥

ಉದಗ್ನೇ ತಿಷ್ಠ ಪ್ರತ್ಯಾ ತನುಷ್ವ ನ್ಯಮಿತ್ರಾ ಓಷತಾತ್ತಿಗ್ಮಹೇತೇ ।
ಯೋ ನೋ ಅರಾತಿಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಂ ॥
ಊರ್ಧ್ವೋ ಭವ ಪ್ರತಿ ವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ ।
ಅವ ಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರ ಮೃಣೀಹಿ ಶತ್ರೂನ್ ॥

(ಋ. ಸಂ. ೪-೪-೧, ೨, ೩, ೪, ೫.)

ಎಂಬ ಐದು ರಾಕ್ಷೋಘ್ನ (ಯಜ್ಞವಿಘ್ನಕಾರಿಗಳಾದ ರಾಕ್ಷಸರನ್ನು ನಾಶಮಾಡುವ) ಋಕ್ಕುಗಳನ್ನು ಪಠಿಸುವನು.

**ಪರಿ ತ್ವಾ ಗಿರ್ವಣೋ ಗಿರೋಽಧಿ ದ್ವಯೋರದಧಾ ಉಕ್ಥ್ಯಂ ವಚಃ ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದಪಶ್ಯಂ ಗೋಪಾಮನಿಪದ್ಯ-ಮಾನಮಿತಿ ಚತಸ್ರ ಏಕಪಾತಿನ್ಯಃ ॥**

ಅಷ್ಟಾದಶೀಮಾರಭ್ಯೈಕವಿಂಶತ್ಯಂತಾಶ್ಚತಸ್ರ ಋಚೋ ವಿಧತ್ತೇ--ಏಕಸ್ಯ ಮಂತ್ರಸ್ಯ ಪಾತಃ ಪ್ರತೀಕಮೇಕಪಾತಃ ಸೋಽಯಂ ಯಾಸ್ವೃಕ್ಷು ತಾ ಏಕಪಾತಿನ್ಯಃ॥ ಪರಿತ್ವಾ ಗಿರ್ವಣ ಇತಿ ಯತ್ಪ್ರತೀಕಾಂ ತತ್ಸಂಹಿತಾಯಾಂ ಕ್ರಮೇಣಾಮ್ನಾತಾನಾಂ ಚತಸೃಣಾಂ ಪ್ರತೀಕಮಿತ್ಯಾ-ಶಂಕ್ಯೇತ ಚತಸ್ರಇತಿ ಬ್ರಾಹ್ಮಣೇಽಭಿಧಾನಾತ್, ಏವಮಧಿ ದ್ವಯೋಃ ಶುಕ್ರಂ ತೇಽಪಶ್ಯಂ ಗೋಪಾಮಿತಿ ತ್ರಿಷು ಪ್ರತೀಕೇಷು ಶಂಕೋದಯಾತ್, ತದ್ವ್ಯಾವೃತ್ತ್ಯರ್ಥಮೇಕಪಾತಿನ್ಯ ಇತ್ಯುಚ್ಯತೇ॥ ಏಕೈಕಸ್ಯಾ ಋಚಃ ಪ್ರತೀಕಾನ್ಯೇತಾನಿ ಮಿಲಿತ್ವಾ ಚತಸ್ರ ಇತಿ ತಾತ್ಪರ್ಯಾರ್ಥಃ॥

ಆನಂತರ ಹೋತೃವು— **ಪರಿ ತ್ವಾ ಗಿರ್ವಣೋ ಗಿರಃ** (ಋ.ಸಂ. ೧-೧೦-೧೨) ಎಂಬ ಋಕ್ಕನ್ನೂ, **ಅಧಿ ದ್ವಯೋರದಧಾ ಉಕ್ಥ್ಯಂ ವಚಃ** (ಋ. ಸಂ. ೧-೮೩-೩) ಎಂಬ ಋಕ್ಕನ್ನೂ, **ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯತ್** (ಋ.ಸಂ. ೬-೫೮-೧) ಎಂಬ ಋಕ್ಕನ್ನೂ, **ಅಪಶ್ಯಂ ಗೋಪಾಮನಿಪದ್ಯಮಾನಂ** (ಋ.ಸಂ. ೧-೧೬೪-೩೧ ; ೧೦-೧೭೭-೩) ಎಂಬ ಋಕ್ಕನ್ನೂ, ಒಟ್ಟು ನಾಲ್ಕು ಋಕ್ಕುಗಳನ್ನು ಪಠಿಸುವನು—

ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ ।
ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥

(ಋ.ಸಂ. ೧-೧೦-೧೨)

ಅಧಿ ದ್ವಯೋರದಧಾ ಉಕ್ಥ್ಯಂ೧ವಚೋ ಯತಸ್ರುಚಾ ಮಿಥುನಾ ಯಾ ಸ ಪರ್ಯತಃ ।
ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತಿ ಭದ್ರಾ ಶಕ್ತಿರ್ಯಜಮಾನಾಯ ಸುನ್ವತೇ ॥

(ಋ.ಸಂ. ೧-೮೩-೩)

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥

(ಋ.ಸಂ. ೬-೫೮-೧)

ಅಪಶ್ಯಂ ಗೋಪಾಮನಿಪದ್ಯಮಾನಮಾ ಚ ಪರಾ ಚ ಪಥಿಭಿಶ್ಚರಂತಂ ।
ಸ ಸಧ್ರೀಚೀಃ ಸ ವಿಷೂಚೀರ್ವಸಾನ ಆ ವರೀವರ್ತಿ ಭುವನೇಷ್ವಂತಃ ॥
(ಋ.ಸಂ. ೧-೧೬೪-೩೧ ; ೧೦-೧೭೭-೩)

ಈ ನಾಲ್ಕು ಋಕ್ಕುಗಳೂ ಋಗ್ವೇದಸಂಹಿತೆಯಲ್ಲಿ ಒಂದೇಕಡೆಯಲ್ಲಿಲ್ಲ. ಬೇರೆ ಬೇರೆ ಮಂಡಲಗಳಲ್ಲಿ ಬೇರೆ ಬೇರೆ ಸೂಕ್ತಗಳಲ್ಲಿರುವವು. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಇಲ್ಲಿ **ಏಕಪಾತಿನ್ಯಃ** ಎಂಬ ಶಬ್ದಪ್ರಯೋಗವಿದೆ. **ಏಕಪಾತಿನೀ ಋಕ್ಕು** ಎಂದರೆ ನಿರ್ದಿಷ್ಟವಾದ ಒಂದು ಋಕ್ಕು ಮಾತ್ರ. ಅದರ ಮುಂದಿನ ಋಕ್ಕನ್ನಲ್ಲ. ಇಲ್ಲಿ ಒಟ್ಟು ನಾಲ್ಕು ಋಕ್ಕುಗಳನ್ನು ಪಠಿಸಬೇಕೆಂದು ಹೇಳಿರುವುದರಿಂದ **ಪರಿ ತ್ವಾ ಗಿರ್ವಣೋ ಗಿರಃ** ಎಂದು ಮೊದಲಾದ ಒಂದೇ ಸ್ಥಳದಲ್ಲಿರುವ ನಾಲ್ಕು ಋಕ್ಕುಗಳಿರಬಹುದು ಎಂಬ ಸಂಶಯ ಪರಿಹಾರಕ್ಕಾಗಿ ಈ ನಾಲ್ಕು ಋಕ್ಕುಗಳಲ್ಲಿ ಪ್ರತಿಯೊಂದೂ ಬೇರೆ ಬೇರೆ ಸೂಕ್ತಗಳಲ್ಲಿರುವವು ಎಂಬುದನ್ನು ತೋರಿಸುವುದಕ್ಕಾಗಿ **ಏಕಪಾತಿನ್ಯಃ** ಎಂಬ ಶಬ್ದವನ್ನು ಇಲ್ಲಿ ಉಪಯೋಗಿಸಲಾಗಿದೆ. ಇವುಗಳೆಲ್ಲವೂ ಸೇರಿ ನಾಲ್ಕು ಋಕ್ಕುಗಳು ಎಂದರ್ಥವು.

ತಾ ಏಕವಿಂಶತಿರ್ಭವಂತಿ । ಏಕವಿಂಶೋಽಯಂ ಪುರುಷೋ ದಶ ಹಸ್ತ್ಯಾ ಅಂಗುಲಯೋ ದಶ ಪಾದ್ಯಾ ಆತ್ಮೈಕವಿಂಶಸ್ತಮಿಮ-ಮಾತ್ಮಾನಮೇಕವಿಂಶಂ ಸಂಸ್ಕುರುತೇ ॥

ಸಂಖ್ಯಾಂತರಭ್ರಮವ್ಯುದಾಸಾಯೋಕ್ತಮಂತ್ರಗತಾಂ ಸಂಖ್ಯಾಂ ಪ್ರಶಂಸತಿ—ತಾಂ ಸಂಖ್ಯಾಂ ಪ್ರಶಂಸತಿ ॥ ಅಯಂ ಪುರುಷೋ ಮನುಷ್ಯದೇಹೋ ಜೀವನೋಪೇತ ಏಕವಿಂಶತಿಸಂಖ್ಯಾನಾಮವಯವಾನಾಂ ಸಮೂಹರೂಪತ್ವಾದೇಕವಿಂಶ ಇತ್ಯುಚ್ಯತೇ—ದಶ ಹಸ್ತ್ಯಾ ಇತ್ಯಾದಿನಾ ತದೇವ ಸ್ಪಷ್ಟೀ ಕ್ರಿಯತೇ ॥ ಆತ್ಮಶಬ್ದೇನ ಮಧ್ಯದೇಹೋ ಜೀವಾತ್ಮಾ ವಾಭಿಧೀ-ಯತೇ ॥ ಸಂಖ್ಯಾಸಾಮಾನ್ಯಾತ್ತೈರ್ಮಂತ್ರೈರಾತ್ಮಾನಮೇವ ಸಂಸ್ಕರೋತಿ ॥

ಈ ಪ್ರವರ್ಗ್ಯಾಖ್ಯಯಜ್ಞಪುರುಷನ ಶಿರಸ್ಸನ್ನು ಯಜ್ಞಶರೀರಕ್ಕೆ ಸೇರಿಸುವ ಈ ಕರ್ಮದಲ್ಲಿ ಇದುವರೆಗೆ ಹೇಳಿದ ಋಕ್ಕುಗಳ ಸಂಖ್ಯೆಯು ಇಪ್ಪತ್ತೊಂದಾಯಿತು. ಮನುಷ್ಯನ ಶರೀರದಲ್ಲಿ ಎರಡು ಹಸ್ತಗಳಲ್ಲಿ ಹತ್ತು ಬೆರಳುಗಳೂ, ಎರಡು ಪಾದಗಳಲ್ಲಿ ಹತ್ತು ಬೆರಳುಗಳೂ, ಒಟ್ಟು ಇಪ್ಪತ್ತು ಬೆರಳುಗಳಾದವು. ಇದರ ಜತೆಗೆ ಶರೀರಮಧ್ಯದಲ್ಲಿರುವ ಆತ್ಮವನ್ನು ಸೇರಿಸಿದರೆ ಶರೀರದ ಒಟ್ಟು ಅವಯವಗಳು ಇಪ್ಪತ್ತೊಂದಾಯಿತು. ಈ ಇಪ್ಪತ್ತೊಂದು ಋಕ್ಕುಗಳನ್ನು ಪಠಿಸಿ ಪ್ರವರ್ಗ್ಯಶಿರಸ್ಸನ್ನು ಚಿಕಿತ್ಸೆಮಾಡುವುದರಿಂದ ಯಜಮಾನನು ತನ್ನ ಶರೀರವನ್ನು ಸಂಸ್ಕಾರಮಾಡಿದಂತೆ ಆಯಿತು.

*English Translation*

The Hotar begins with brahma jajnanam prathamam (Vaj. S. 13, 5, As'val. S'. 4.6). In this mantra Brahma is Brihaspati (the teacher of the gods); by means of Brahma (i.e. the Brahmans) the Hotar thus cures the Pravargya man (the mystical personage, called "sacrifice") which had been torn to pieces by the gods). By repeating the mantra, iyam pitre rashtri (As'val. S'.S. 4. 6), the Hotar

puts speech in the Pravargya man; for by rashti, i.e., queen, speech is to be understood.

The verse, mahan mahi astabhayal (As'val. S'. S. 4. 6.), is addresse to Brahmaspati. Brahma is Brihaspati; by menans of Brahma the priest thus cures the Pravargya man.

The verse addressed to Savitar is, abhityam devam savitaram (Vaj. S. 4, 25. As'val. S'. S. 4. 6). Savitar is the vital air; thus the Hotar puts the vital air in this Pravargya man.

By the verse, samsidarsa mahan asi (1. 36. 9), they make him (the Pravargya man) sit down.

The verse: amjanti yam prathayanto (5, 43, 7), is appropriate to the ceremony of anointing the Pravargya vessel with melted butter). What is appropriate in the sacrifice that is successful.

Of the followin mantras, patangam aktam asurasya( 10, 177, 1) yo the first as well as the second verse) are appropriate.

The five verses required for killing the Rakshas, commence with kriushva pajah prasitim (4, 4, 1, 5).

Now follow four single verses:

Pari tra girvano gira (1, 10, 12);
Adhi dvayar adadhi ukthyam (1, 83, 3);
S'ukram te anvad yajatam (6, 58, 1);
Apas'yan gopim anipadyamanam (10, 177, 3).

All these verses (if counted) amount to twenty-one. This (sacrificial) man is twenty-one fold; for he has ten fingers on his hands and ten on his feet, and the soul is reckoned as the twenty-first. He (thus) prepares the soul as the twenty-first (part).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುರ್ಥಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ಥಾಧ್ಯಾಯೇ ತೃತೀಯಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು

### ಪಂಚಿಕಾ ೧—ಪ್ರಕರಣ ೨೦



[ ಸೋಮರಸದ ಶುದ್ಧಿಗಾಗಿ ಪಾವಮಾನೀಋಕ್ಕುಗಳ ಪಠನ ]



**ಸ್ರಕ್ವೇ ದ್ರಪ್ಸಸ್ಯ ಧಮತಃ ಸಮಸ್ವರನ್ನಿತಿ ನವ ಪಾವಮಾನ್ಯೋ ನವ ವೈ ಪ್ರಾಣಾಃ ಪ್ರಾಣಾನೇವಾಸ್ಮಿಂಸ್ತದ್ದಧಾತಿ ॥**

ಅಥೈಕಸೂಕ್ತಗತಾಃ ಕಾಶ್ಚಿದೃಚೋ ವಿಧತ್ತೇ— ಅಸ್ಮಿನ್ಸ್ರಕ್ವೇ ದ್ರಪ್ಸಸ್ಯೇತಿ ಸೂಕ್ತೇ ಪವಮಾನದೇವತಾಕಾ ಋಚೋ ನವಸಂಖ್ಯಾಕಾ ಅತಃ ಸಂಖ್ಯಾಸಾಮ್ಯಾತ್ತತ್ಪಾಠೇನಾಸ್ಮಿನ್ಸ್ವರ್ಗ್ಯಾಭಿಮಾನಿನಿ ಪುರುಷೇ ನವಚ್ಛಿದ್ರವರ್ತಿನಃ ಪ್ರಾಣಾನವಸ್ಥಾಪಯತಿ ॥

ಅನಂತರ ಹೋತೃವು ಯಜ್ಞಶರೀರದಲ್ಲಿ ಪ್ರಾಣಗಳನ್ನು ಸ್ಥಾಪಿಸುವುದಕ್ಕಾಗಿ ಸ್ರಕ್ವೇ ದ್ರಪ್ಸಸ್ಯ ಧಮತಃ ಸಮಸ್ವರನ್ (ಋ. ಸಂ. ೯-೭೩-೧ ರಿಂದ ೯ ಋಕ್ಕುಗಳು) ಎಂದು ಮೊದಲಾದ ಒಂಭತ್ತು ಋಕ್ಕುಗಳನ್ನು ಪಠಿಸುವನು.—

[ಪೂರ್ತಾ ಸೂಕ್ತಗಳನ್ನು ಹೇಳಬೇಕಾದ ಸಂದರ್ಭದಲ್ಲಿ ಇನ್ನುಮುಂದೆ ಗ್ರಂಥವಿಸ್ತಾರವಾಗದಿರುವುದಕ್ಕಾಗಿ ಸೂಕ್ತದ ಮೊದಲನೆಯ ಋಕ್ಕಿನ ಪೂರ್ವಾರ್ಧವನ್ನು ಮಧ್ಯದಲ್ಲಿ .... ಈ ರೀತಿ ಚುಕ್ಕೆಗಳನ್ನೂ ಕೊನೆಯಲ್ಲಿ ಕೊನೆಯ ಋಕ್ಕಿನ ಉತ್ತರಾರ್ಧವನ್ನು ಮಾತ್ರ ಕೊಡಲಾಗುವುದು. ಎಂದರೆ ಸೂಕ್ತದ ಮೊದಲು ಮತ್ತು ಕೊನೆಯನ್ನು ಮಧ್ಯದಲ್ಲಿ ಚುಕ್ಕೆಗಳನ್ನು ಬರೆಯಲಾಗುವುದು.

ಸ್ರಕ್ವೇ ದ್ರಪ್ಸಸ್ಯ ಧಮತಃ ಸಮಸ್ವರನ್ನೃತಸ್ಯ ಯೋನಾ ಸಮರಂತ ನಾಭಯಃ ।
ತ್ರೀನ್ತ್ಸ ಮೂರ್ಧ್ನೋ ಅಸುರಶ್ಚಕ್ರ ಆರಭೇ ಸತ್ಯಸ್ಯ ನಾವಃ ಸುಕೃತಮಪೀಪರನ್ ॥
ಸಮ್ಯಕ್ ಸಮ್ಯಂಚೋ ಮಹಿಷಾ ಅಹೇಷತ ಸಿಂಧೋರೂರ್ಮಾವಧಿ ವೇನಾ ಅವೀವಿಪನ್ ।
ಮಧೋರ್ಧಾರಾಭಿರ್ಜನಯಂತೋ ಅರ್ಕಮಿತ್ಪ್ರಿಯಾಮಿಂದ್ರಸ್ಯ ತನ್ವಮವೀವೃಧನ್ ॥
ಪವಿತ್ರವಂತಃ ಪರಿ ವಾಚಮಾಸತೇ ಪಿತೈಷಾಂ ಪ್ರತ್ನೋ ಅಭಿ ರಕ್ಷತಿ ವ್ರತಂ ।
ಮಹಃ ಸಮುದ್ರಂ ವರುಣಸ್ತಿರೋ ದಧೇ ಧೀರಾ ಇಚ್ಛೇಕುರ್ಧರುಣೇಷ್ವಾರಭಂ ॥
ಸಹಸ್ರಧಾರೇಽವ ತೇ ಸಮಸ್ವರನ್ದಿವೋ ನಾಕೇ ಮಧುಜಿಹ್ವಾ ಅಸಶ್ಚತಃ ।
ಅಸ್ಯ ಸ್ಪಶೋ ನ ನಿಮಿಷಂತಿ ಭೂರ್ಣಯಃ ಪದೇಪದೇ ಪಾಶಿನಃ ಸಂತಿ ಸೇತವಃ ।

ಪಿತುರ್ಮಾತುರಧ್ಯಾ ಯೇ ಸಮಸ್ವರನ್ನೃಚಾ ಶೋಚಂತಃ ಸಂದಹಂತೋ ಅವ್ರತಾನ್ ।
ಇಂದ್ರದ್ವಿಷ್ಟಾಮಪ ಧಮಂತಿ ಮಾಯಯಾ ತ್ವಚಮಸಿಕ್ನೀಂ ಭೂಮನೋ ದಿವಸ್ಪರಿ ॥
ಪ್ರತ್ನಾನ್ಮಾನಾದಧ್ಯಾ ಯೇ ಸಮಸ್ವರಞ್ಶ್ಲೋಕಯಂತ್ರಾಸೋ ರಭಸಸ್ಯ ಮಂತವಃ ।
ಅಪಾನಕ್ಷಾಸೋ ಬಧಿರಾ ಅಹಾಸತ ಋತಸ್ಯ ಪಂಥಾಂ ನ ತರಂತಿ ದುಷ್ಕೃತಃ ॥
ಸಹಸ್ರಧಾರೇ ವಿತತೇ ಪವಿತ್ರ ಆ ವಾಚಂ ಪುನಂತಿ ಕವಯೋ ಮನೀಷಿಣಃ ।
ರುದ್ರಾಸ ಏಷಾಮಿಷಿರಾಸೋ ಅದ್ರುಹಃ ಸ್ಪಶಃ ಸ್ವಂಚಃ ಸುದೃಶೋ ನೃಚಕ್ಷಸಃ ॥
ಋತಸ್ಯ ಗೋಪಾ ನ ದಭಾಯ ಸುಕ್ರತುಸ್ತ್ರೀ ಷ ಪವಿತ್ರಾ ಹೃದ್ಯಾಂತರಾ ದಧೇ ।
ವಿದ್ವಾನ್ತ್ಸ ವಿಶ್ವಾ ಭುವನಾಭಿ ಪಶ್ಯತ್ಯವಾಜುಷ್ಟಾನ್ ವಿಧ್ಯತಿ ಕರ್ತೇ ಅವ್ರತಾನ್ ॥
ಋತಸ್ಯ ತಂತುರ್ವಿತತಃ ಪವಿತ್ರ ಆ ಜಿಹ್ವಾಯಾ ಅಗ್ರೇ ವರುಣಸ್ಯ ಮಾಯಯಾ ।
ಧೀರಾಶ್ಚಿತ್ತತ್ಸಮಿನಕ್ಷಂತ ಆಶತಾತ್ರಾ ಕರ್ತಮವ ಪದಾತ್ಯಪ್ರಭುಃ ॥

(ಋ. ಸ. ೯-೭೩-೧ ರಿಂದ ೯ ಋಕ್ಕುಗಳು)

ಮೇಲಿನ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವವು. ಶರೀರದಲ್ಲಿ ಪ್ರಾಣಗಳು (ನವರಂಧ್ರಗಳು) ಒಂಭತ್ತು ಇರುವವು. ನಾಭಿಯಿಂದ ಮೇಲಕ್ಕೆ ಶಿರಸ್ಸಿನಲ್ಲಿ—ಎರಡು ನೇತ್ರಗಳು, ಎರಡು ಕಿವಿಗಳು, ಎರಡು ನಾಸಿಕಗಳು, ಒಂದು ಬಾಯಿ, ಒಟ್ಟು ಏಳು ರಂಧ್ರಗಳೂ ನಾಭಿಯಿಂದ ಕೆಳಭಾಗದಲ್ಲಿ ಮಲದ್ವಾರ, ಮತ್ತು ಮೂತ್ರದ್ವಾರಗಳೆಂಬ ಎರಡು ದ್ವಾರಗಳೂ ಒಟ್ಟು ೯ ರಂಧ್ರಗಳಿರುವವು. ಈ ಒಂಭತ್ತು ರಂಧ್ರಗಳಲ್ಲಿ ಪ್ರಾಣವಾಯುವಿನ ಸಂಚಾರವಿರುವುದರಿಂದ ಶರೀರದಲ್ಲಿ ೯ ಪ್ರಾಣಗಳಿರುವವೆಂದು ಹೇಳಲಾಗಿದೆ. ಹೋತೃವು ಪವಮಾನದೇವತಾಕವಾದ ಈ ಒಂಭತ್ತು ಋಕ್ಕುಗಳನ್ನು ಪಠಿಸುವುದರಿಂದ ಯಜ್ಞಶರೀರದಲ್ಲಿ ಒಂಭತ್ತು ಪ್ರಾಣಗಳನ್ನು ಸ್ಥಾಪಿಸುವನು.

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಇತಿ ವೇನೋಽಸ್ಮಾದ್ವಾ ಊರ್ಧ್ವಾ ಅನ್ಯೇ ಪ್ರಾಣಾವೇನಂತ್ಯವಾಂಚೋಽನ್ಯೇ ತಸ್ಮಾದ್ವೇನಃ ಪ್ರಾಣೋ ವಾ ಅಯಂ ಸನ್ನಾಭೇರಿತಿ ತಸ್ಮಾನ್ನಾಭಿಸ್ತನ್ನಾಭೇರ್ನಾಭಿತ್ವಂ ಪ್ರಾಣಮೇವಾಸ್ಮಿಂಸ್ತದ್ದಧಾತಿ ॥

ಅಥೈಕಾಮೃಚಂ ವಿಧತ್ತೇ—ಏತನ್ಮಂತ್ರಗತಸ್ಯ ವೇನಶಬ್ದಸ್ಯ ನಾಭಿಪರತ್ವಮಭಿಪ್ರೇತ್ಯ ಪ್ರಶಂಸತಿ—ಶರೀರಮಧ್ಯೇಽವಸ್ಥಿತಂ ನಾಭಿಂ ಹಸ್ತೇನಾಭಿನೀಯ ಪ್ರದರ್ಶಯನ್ನಯಂ ವೈ ವೇನ ಇತ್ಯುಚ್ಯತೇ ॥ ತಸ್ಯ ನಾಭೇರ್ವೇನತ್ವಂ ಕಥಮಿತಿ ಚೇದುಚ್ಯತೇ ಅಸ್ಮಾನ್ನಾಭೇರೂರ್ಧ್ವಾ ಅನ್ಯೇ ಪ್ರಾಣಾಶ್ಚಕ್ಷುರಾದಯಃ ಕೇಚಿದ್ವೇನಂತಿ ಚರಂತಿ ॥ ತಥಾ ನಾಭೇರವಾಂಚೋಽಪಾನವಾಯ್ವಾದಯಃ ತೇಚಿದ್ವೇನಂತಿ ಚರಂತಿ । ತಸ್ಮಾದ್ವೇನಂತ್ಯಸ್ಮಾದವಧಿಭೂತಾನ್ನಾಭೇರಿತಿ ವ್ಯುತ್ಪತ್ತ್ಯಾ ವೇನಶಬ್ದವಾಚ್ಯೋ ನಾಭಿಃ ॥ ನಾಭಿಶಬ್ದವಾಚ್ಯತ್ವಂ ಕಥಮಿತಿ ಚೇತ್ತದುಚ್ಯತೇ ॥ ಅಯಂ ನಾಭಿಃ ಪ್ರಾಣಾಧಾರತ್ವೇನ ಸ್ವಯಂ ಪ್ರಾಣರೂಪಃ ಸನ್ನಿತರಾನೂರ್ಧ್ವವರ್ತಿನೋಽಧೋವರ್ತಿನಶ್ಚ ಪ್ರಾಣಾನುದ್ದಿಶ್ಯ ಪ್ರತ್ಯೇಕಂ ನಾಭೇರ್ನಾಭ್ಯೈಷೀರಿತ್ಯೇವಂ ವದನ್ನಿವ ಮರ್ಯಾದಾ-

ರೂಪತ್ವೇನಾವಸ್ಥಿತಸ್ತಸ್ಮಾದಯಂ ದೇಹಮಧ್ಯವರ್ತೀ ನಾಭಿರ್ಭವತಿ ॥ ನೈವಭೀತಿಂ ಕುರ್ವಿ-ತ್ಯಭಿಪ್ರೇತ್ಯ ಮರ್ಯಾದಾತ್ವೇನಾವಸ್ಥಾನಮೇವ ನಾಭೇರ್ನಾಭಿಶಬ್ದಪ್ರವೃತ್ತಿ ನಿಮಿತ್ತಂ ॥ ತಸ್ಮಾದಯಂ ವೇನ ಇತಿ ಮಂತ್ರಪಾಠೇನ ಪ್ರಾಣಮೇವಾಸ್ಮಿನ್ಸ್ಪ್ರವರ್ಗ್ಯೇ ಸ್ಥಾಪಯತಿ ॥

ಅನಂತರ ಹೋತೃವು—

ಅಯಂ ವೇನಶ್ಚೋದಯತ್ಪೃಶ್ನಿಗರ್ಭಾ ಜ್ಯೋತಿರ್ಜರಾಯುೂ ರಜಸೋ ವಿಮಾನೇ ।
ಇಮಮಪಾಂ ಸಂಗಮೇ ಸೂರ್ಯಸ್ಯ ಶಿಶುಂ ನ ವಿಪ್ರಾ ಮತಿಭೀ ರಿಹಂತಿ ॥
(ಋ.ಸಂ. ೧೦-೧೨೩-೧)

ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿರುವ ವೇನಶಬ್ದಕ್ಕೆ ನಾಭಿಯೆಂದರ್ಥವು. **ಅಯಂ ವೇನಃ** ಈ ನಾಭಿಯು ಎಂದು ನಾಭಿಪ್ರದೇಶವನ್ನು ನಿರ್ದೇಶಿಸಿ ಈ ನಾಭಿಪ್ರದೇಶವೇ ಪ್ರಾಣವು ಎಂದು ಇಲ್ಲಿ ವಿವರಿಸಲಾಗಿದೆ. ಅದು ಹೇಗೆ ಎಂದರೆ—

ಕಮನೀಯೋ ವೇನ ಉಕ್ತೋ ವೇನತೇಃ ಕಾಂತಿಕರ್ಮಣಃ ।
ನಾಭಿಚಕ್ರಗತಃ ಪ್ರಾಣೋಽತ್ರಾಯಂಶಬ್ದೇನ ಕಥ್ಯತೇ ॥
ನಾಭಿಸ್ಥಾದುತ್ಥಿತಾ ಹ್ಯಸ್ಮಾನ್ನವ ಪ್ರಾಣಾಶ್ಚಂತಿ ವೈ ।
ಊರ್ಧ್ವರೂಪಾ ಏತದಿಚ್ಛಾವಶೇನಾತೋಽಸ್ಯ ವೇನತಾ ॥
ನಾಭೇರಧಸ್ಥಾದ್ರೇತಸ್ಯಃ ಪುರೀಷ್ಯೋ ಮೂತ್ರ ಏವ ಚ ।
ತೇಽಪ್ಯೇತದಿಚ್ಛಾಸಂಯುಕ್ತಾಶ್ಚರಂತೀತ್ಯಸ್ಯ ವೇನತಾ ॥

ಈ ನಾಭಿಯಿಂದ ಮೇಲಿರುವ ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕಗಳೂ ಒಂದು ಬಾಯಿ ಒಟ್ಟು ಏಳು ರಂಧ್ರಗಳಲ್ಲಿ ಪ್ರಾಣವಾಯುಗಳು ಸಂಚರಿಸುತ್ತಿರುವವು. ಹಾಗೆಯೇ ನಾಭಿಯಿಂದ ಕೆಳಭಾಗದಲ್ಲಿರುವ ಅಪಾನವಾಯುಗಳು ಮಲದ್ವಾರ ಮತ್ತು ಮೂತ್ರದ್ವಾರ (ಮತ್ತು ವೀರ್ಯದ್ವಾರ)ಗಳಲ್ಲಿ ಸಂಚರಿಸುವವು ಆದ್ದರಿಂದ ಈ ನಾಭಿಯು ನವಪ್ರಾಣಗಳಿಗೆ ಮಧ್ಯವರ್ತಿಯಾಗಿದ್ದು ಅವುಗಳನ್ನು ನಿಯತಸ್ಥಾನಗಳಲ್ಲಿಟ್ಟು ಕೂಡಿಸುವುದಾಗಿರುವುದು. ವೇನಶಬ್ದಕ್ಕೆ ಸಂಚಾರವೆಂಬ ಅರ್ಥವಿರುವುದರಿಂದ (**ಯದ್ಯಪಿ ವೇನತಿಃ ಕಾಂತಿಕರ್ಮಾ ನಿ. ೨-೬ ತಥಾಪ್ಯತ್ರ ಗತಿಕರ್ಮಾಭಿಪ್ರೇತಃ**) ಪ್ರಾಣ ವಾಯುಗಳ ಸಂಚಾರಸ್ಥಾನಕ್ಕೆ ವೇನವೆಂದು ಹೆಸರು. ಈ ಪ್ರಾಣವಾಯುಗಳನ್ನು ಸ್ಥಿಮಿತದಲ್ಲಿಟ್ಟಿರುವ ಮಧ್ಯವರ್ತಿಪ್ರದೇಶಕ್ಕೆ ನಾಭಿಯೆಂದು ಹೆಸರು. ಆದ್ದರಿಂದ ಈ ನಾಭಿಯು ಈ ಪ್ರಾಣವಾಯುಗಳನ್ನುದ್ದೇಶಿಸಿ (**ನಾಭೈಷೀಃ ನ+ಅಭೇಃ=ನಾಭೈಷೀಃ**) ಹೆದರಬೇಡವೆಂದು ಧೈರ್ಯವನ್ನುಂಟುಮಾಡುವಂತೆ ಇರುವುದರಿಂದ ದೇಹದ ಈ ಮಧ್ಯವರ್ತಿಪ್ರದೇಶಕ್ಕೆ ನಾಭಿ ಎಂಬ ಹೆಸರು ಬಂದಿದೆ. ಹೋತೃವು **ಅಯಂ ವೇನಃ** ಎಂಬ ಈ ಮಂತ್ರವನ್ನು ಪಠಿಸುವುದರಿಂದ ಯಜ್ಞಪುರುಷನ ನಾಭಿಯಲ್ಲಿ ಪ್ರಾಣಾದಿವಾಯುಗಳನ್ನು ಸ್ಥಾಪಿಸಿದಂತಾಗುವುದು.

**ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ತಪೋಷ್ಪವಿತ್ರಂ ವಿತತಂ ದಿವ-ಸ್ಪದೇ ವಿಯತ್ಪವಿತ್ರಂ ಧಿಷಣಾ ಅತನ್ವತೇತಿ ಪೂತವಂತಃ ಪ್ರಾಣಾಸ್ತ ಇಮೇಽವಾಂಚೋ ರೇತಸ್ಯೋ ಮೂತ್ರ್ಯಃ ಪುರೀಷ್ಯಾ ಇತ್ಯೇತಾನೇವಾಸ್ಮಿಂಸ್ತದ್ದಧಾತಿ ॥**

ಅಥೈಕತ್ರ ಸಮಾಮ್ನಾತಮೃಗ್ದ್ವಯಮನ್ಯತ್ರ ಸಮಾಮ್ನಾತಾಮೇಕಾಮೃಚಂ ವಿಧಾಯ ಸಹ ಪ್ರಶಂಸತಿ—ಅತ್ರ ವಿಯತ್ಪವಿತ್ರಮಿತ್ಯೇಷಾ ಶಾಖಾಂತರಗತಾ ಸೂತ್ರಕಾರೇಣ ಪಠಿತಾ ॥ ತ್ರಿಷ್ವಪ್ಯೇತೇಷು ಮಂತ್ರೇಷು ಶುದ್ಧಿವಾಚಿನಃ ಪವಿತ್ರಶಬ್ದಸ್ಯ ವಿದ್ಯಮಾನತ್ವಾದೇತೇ ಪೂತವಂತಃ ॥ ಯಜ್ಞಪುರುಷಸ್ಯ ಪ್ರಾಣಸ್ಥಾನೀಯಾಃ ಪೂರ್ವಮುದಾಹೃತಾ ಮಂತ್ರವಿಶೇಷಾ ಯಜ್ಞಪುರುಷಸ್ಯ ನಾಭೇರೂರ್ಧ್ವಭಾವಿಪ್ರಾಣಸ್ಥಾನೀಯಾಃ ಪವಿತ್ರಂತೆ ವಿತತಮಿತ್ಯಾದ್ಯಾಸ್ತ್ರಯೋ ಮಂತ್ರಾ ಯೇ ಸಂತಿ ತ ಇಮೇ ನಾಭೇರವಾಂಚೋಽಧೋದೇಶಪ್ರಾಣಸ್ಥಾನೀಯಾಸ್ತೇಷು ರೇತಸೇ ಹಿತ ಏಕಃ ಪ್ರಾಣೋ ಮೂತ್ರಾಯ ಹಿತೋಽಪರಃ ಪ್ರಾಣಸ್ತಯೋರುಭಯೋರ್ಗೋಲಕದ್ವಾರಕಸ್ಯೈಕತ್ವೇಽಪಿ ಸ್ವರೂಪೇಣೇಂದ್ರಿಯಭೇದಾತ್ಪೃಥಙ್ನಿರ್ದೇಶಃ । ದ್ವಾರಾಂತರಸಂಚಾರೀ ಪುರೀಷಾಯ ಹಿತಸ್ತೃತೀಯಃ ಪ್ರಾಣ ಇತ್ಯುಕ್ತಾನೇತಾನಾನೇವ ತ್ರೀನ್ಪ್ರಾಣಾನ್ಮಂತ್ರತ್ರಯಪಾಠೇನಾಸ್ಮಿನ್ಪ್ರವರ್ಗ್ಯೇ ಸ್ಥಾಪಯತಿ ॥

ಅನಂತರ ಹೋತೃವು—

ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।
ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತ ॥

ತಪೋಷ್ಪವಿತ್ರಂ ವಿತತಂ ದಿವಸ್ಪದೇ ಶೋಚಂತೋ ಅಸ್ಯ ತಂತವೋ ವ್ಯಸ್ಥಿರನ್ ।
ಅವಂತ್ಯಸ್ಯ ಪವೀತಾರಮಾಶವೋ ದಿವಸ್ಪೃಷ್ಠಮಧಿ ತಿಷ್ಠಂತಿ ಚೇತಸಾ ॥

(ಋ. ಸಂ. ೯-೮೩-೧, ೨)

ವಿಯತ್ಪವಿತ್ರಂ ಧಿಷಣಾ ಅತನ್ವತ

(ಆಶ್ವ. ಶ್ರೌ. ಸೂ. ೪-೬-೩)

ಎಂಬ ಮೂರು ಮಂತ್ರಗಳನ್ನು ಪಠಿಸುವನು. ಇವುಗಳಲ್ಲಿ ವಿಯತ್ಪವಿತ್ರಂ ಎಂಬ ಮೂರನೆಯ ಮಂತ್ರವು ಋಗ್ವೇದದಲ್ಲಾಗಲಿ, ತೈತ್ತಿರೀಯ, ವಾಜಸನೇಯ, ಕಣ್ವ, ಕಾಠಕ, ಮೈತ್ರಾಯಣೀಯ, ಅಥರ್ವಸಂಹಿತೆಯಲ್ಲಾಗಲಿ ಇರುವುದಿಲ್ಲ. ಶಾಖಾಂತರದಲ್ಲಿರುವುದೆಂದು ಭಾಷ್ಯಕಾರರು ಹೇಳಿದಾರೆ. ಸೂತ್ರಕಾರರು ಈ ಮಂತ್ರವನ್ನು ಹೇಳಿದಾರೆ. ಆದರೆ ಇದು ಎಲ್ಲಿದೆ ಎಂಬುದು ತಿಳಿಯಲಾಗಿಲ್ಲ. ಈ ಮೂರು ಮಂತ್ರಗಳಲ್ಲಿ ಶುದ್ಧಿ ಎಂಬ ಅರ್ಥವನ್ನು ಸೂಚಿಸುವ ಪವಿತ್ರಶಬ್ದದ ಪ್ರಯೋಗವಿದೆ. ಆದ್ದರಿಂದ ಈ ಮೂರು ಮಂತ್ರಗಳೂ ಶುದ್ಧಿವಾಚಕಮಂತ್ರಗಳು. ಇದುವರೆಗೂ ಎಂದರೆ ಸ್ರಕ್ವೇ (ಋ.ಸ. ೯-೭೩) ಇತ್ಯಾದಿ ಮಂತ್ರಗಳ ಪಠನದಿಂದ ಯಜ್ಞಪುರುಷನ ನಾಭಿಯಿಂದ ಊರ್ಧ್ವಭಾಗದಲ್ಲಿರುವ (ಚಕ್ಷುರಾದಿ ಸಪ್ತಪ್ರಾಣಗಳು) ಪ್ರಾಣಗಳನ್ನು ಶುದ್ಧಿಮಾಡಿ ಸ್ಥಾಪಿಸಿದಂತಾಯಿತು. ಈಗ ಮೇಲೆ ಹೇಳಿದ ಪವಿತ್ರಂ ತೇ ವಿತತಂ ಇತ್ಯಾದಿ ಮೂರು ಮಂತ್ರಗಳ ಪಠನದಿಂದ ಯಜ್ಞಪುರುಷನ ನಾಭಿಯಿಂದ ಅಧಃಪ್ರದೇಶದಲ್ಲಿರುವ ಪ್ರಾಣಗಳನ್ನು ಶುದ್ಧಿಮಾಡಿದಂತಾಗುವುದು. ಅಧಃಪ್ರದೇಶಗಳೆಂದರೆ ಮೂತ್ರದ್ವಾರ, ವೀರ್ಯದ್ವಾರ, ಮಲದ್ವಾರಗಳು. ಮೂತ್ರ ಮತ್ತು ವೀರ್ಯದ್ವಾರಗಳು ಒಂದೇ ಆಗಿದ್ದರೂ ಅವುಗಳ ಕಾರ್ಯಗಳು ಬೇರೆ ಬೇರೆಯಾಗಿರುವುದರಿಂದ ಆ ದ್ವಾರವನ್ನು ಎರಡೆಂದು ಭಾವಿಸಿ ಅದರ ಜತೆಗೆ ಮಲದ್ವಾರವನ್ನು ಸೇರಿಸಿ ಒಟ್ಟು ಮೂರು ದ್ವಾರಗಳಲ್ಲಿ ಸಂಚರಿಸುವ ಅಪಾನವಾಯುಗಳ ಶುದ್ಧ್ಯರ್ಥವಾಗಿ ಇಲ್ಲಿ ಮೂರು ಮಂತ್ರಗಳನ್ನು ಪಠಿಸಲಾಗಿದೆ ಎಂದು ತಿಳಿಯಬೇಕು.

*English Translatison*

(Now follow) nine Pavamani-verses (dedicated to the purification of the Soma juice) beginning with, srakve drapsusya dhamatah (9, 73, 1). There are nine vital airs. By repeating these (verses) the Hotar puts the vital airs in him (the Pravargya man). (Now he repats) ayam venas chodayat (10, 123, 1). (When repeating this mantra, the Hotar points, when pronouncing the word ayam, i.e. this, to the naval).

This (the navel) is meant by venas; for some vital airs are circulating (venanti) above the navel, others below it. On account of this, vital air (the life) taking its origin from the navel, venas, (circnlation, from ven to circulate) means "navel." By repeating this mantra the Hotar puts life in this (Pravargya man).

(Now he repeats the verses), pavitram te vitatam (2, 83, 1), tapash pavitram vitatam (9, 83, 2), and, viyat pavitram dhishana atanvata. On account of their containing the word "pavitram" (pure), the vital airs are purified (when these mantras are recited over them. These are the vital airs of the lower part of the body presiding over the semen, urine, and excrements. (By repeating these three verses) he puts these vital airs in this (Pravargya man).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ಥಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಮೂರನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ಥಾಧ್ಯಾಯೇ ಚತುರ್ಥಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಪ್ರವರ್ಗ್ಯಪುರುಷನ ಚಿಕಿತ್ಸೆಗಾಗಿ ಪಠಿಸುವ ಮಂತ್ರಗಳು ]

**ಗಣಾನಾಂ ತ್ವಾ ಗಣಪತಿಂ ಹವಾಮಹ ಇತಿ ಬ್ರಾಹ್ಮಣಸ್ಪತ್ಯಂ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮಣೈವೈನಂ ತದ್ಭಿಷಜ್ಯತಿ ॥**

ಅತ್ರ ಸೂಕ್ತ ವಿಶೇಷಾವಿಧಾತವ್ಯಾಃ । ತತ್ರೈಕೋನವಿಂಶತ್ಯೃಚಂ ವಿಧತ್ತೇ—ತಸ್ಮಿನ್ಸೂಕ್ತೇ ಪ್ರಥಮಾಯಾ ಋಚಸ್ತೃತೀಯಪಾದೇ ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತೇ ಇತಿ ಶ್ರೂಯಮಾಣತ್ವಾದಿದಂ ಸೂಕ್ತಂ ಬ್ರಹ್ಮಣಸ್ಪತಿದೇವತಾಕಂ ॥ ಬ್ರಹ್ಮ ವಾ ಇತ್ಯಾದಿಕಂ ಪೂರ್ವವದ್ವ್ಯಾಖ್ಯೇಯಂ ॥

ಅನಂತರ ಹೋತೃವು—

ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ ।

.....................................................................................................

ವಿಶ್ವಂ ತದ್ಭದ್ರಂ ಯದವಂತಿ ದೇವಾ ಬೃಹದ್ವದೇಮ ವಿದಥೇ ಸುವೀರಾಃ ॥

(ಋ.ಸಂ. ೨-೨೩—೧ ರಿಂದ ೧೯ ಋಕ್ಕುಗಳು)

ಎಂಬ ಹತ್ತೊಂಭತ್ತು ಋಕ್ಕುಗಳ ಸೂಕ್ತವನ್ನು ಪಠಿಸುವನು. ಈ ಸೂಕ್ತದ ಮೊದಲನೆಯ ಋಕ್ಕಿನ ಮೂರನೆಯ ಪಾದದಲ್ಲಿ **ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತೇ** ಎಂದಿರುವುದರಿಂದ ಈ ಸೂಕ್ತವು ಬ್ರಹ್ಮಣಸ್ಪತಿದೇವತಾಕವು ಬ್ರಹ್ಮ ಮೊದಲಾದ ಶಬ್ದಗಳ ಅರ್ಥವನ್ನು ಹಿಂದೆಯೇ ವಿವರಿಸಲಾಗಿದೆ. ಈ ಮಂತ್ರಪಠನದಿಂದ ಹೋತೃವು ಯಜ್ಞಶರೀರವನ್ನು ಚಿಕಿತ್ಸೆಮಾಡಿದಂತಾಗುವುದು.

**ಪ್ರಥಶ್ಚ ಯಸ್ಯ ಸಪ್ರಥಶ್ಚ ನಾಮೇತಿ ಘರ್ಮತನ್ವಃ ಸತನುಮೇವೈನಂ ತತ್ಸರೂಪಂ ಕರೋತಿ ।**

ತೃಚಾತ್ಮಕಂ ಸೂಕ್ತಾಂತರಂ ವಿಧತ್ತೇ—ಅಸ್ಮಿನ್ಸೂಕ್ತೇ ಪಠಿತಾಃ ಪ್ರಥಶ್ಚೇತ್ಯಾದಯಸ್ತಿಸ್ರ ಋಚೋ ಘರ್ಮತನ್ವಃ ಪ್ರವರ್ಗ್ಯಸ್ಯ ಶರೀರಸ್ಥಾನೀಯಾಸ್ತನ್ಮಂತ್ರಪಾಠೇನೈನಂ

ಪ್ರವರ್ಗ್ಯಂ ಸತನುಂ ಶರೀರೋಪೇತಂ ಕರೋತಿ । ಸತನುಮಿತ್ಯಸ್ಯೈವ ವ್ಯಾಖ್ಯಾನಂ ಸರೂಪ-
ಮಿತಿ ॥ ಯದ್ವಾ ತಸ್ಮಿನ್ಶರೀರೇ ಶೋಭನರೂಪಸಹಿತಂ ಪ್ರವರ್ಗ್ಯಂ ಕರೋತಿ ॥

ಅನಂತರ ಹೋತೃವು—

ಪ್ರಥಶ್ಚ ಯಸ್ಯ ಸಪ್ರಥಶ್ಚ ನಾಮಾನುಷ್ಟುಭಸ್ಯ ಹವಿಷೋ ಹವಿರ್ಯತ್ ।

.......................................................................................................

ಧಾತುರ್ದ್ಯುತಾನಾತ್ಸವಿತುಶ್ಚ ವಿಷ್ಣೋರಾಸೂರ್ಯಾದಭರನ್ ಘರ್ಮಮೇತೇ ॥

(ಋ.ಸಂ. ೧-೧೮೧-೧ ರಿಂದ ೩ ಋಕ್ಕುಗಳ)

ಎಂಬ ಮೂರು ಋಕ್ಕುಗಳ ಸೂಕ್ತವನ್ನು ಪಠಿಸುವನು. ಈ ಸೂಕ್ತದ ಋಕ್ಕುಗಳಲ್ಲಿ ಘರ್ಮಶಬ್ದಪ್ರಯೋಗವಿರುವುದರಿಂದ ಘರ್ಮ ಅಥವಾ ಪ್ರವರ್ಗ್ಯಪುರುಷನ ಶರೀರವನ್ನು ಈ ಸೂಕ್ತಪಠನದಿಂದ ಒಳ್ಳೆಯ ಆಕಾರವುಳ್ಳದ್ದನ್ನಾಗಿ ಮಾಡುವನು. ಸತನು ಶಬ್ದಕ್ಕೆ ಸರೂಪವೆಂದು ಅರ್ಥವು. ಎಲ್ಲಾ ಅವಯವಗಳೂ ಸೇರಿ ಶರೀರವು ಒಳ್ಳೆಯ ಆಕಾರವನ್ನು ಪಡೆಯುವುದೆಂದರ್ಥವು.

**ರಥಂತರಮಾಜಭಾರಾ ವಸಿಷ್ಠಃ । ಭರದ್ವಾಜೋ ಬೃಹದಾಚಕ್ರೇ ಅಗ್ನೇರಿತಿ ಬೃಹದ್ರಥಂತರವಂತಮೇವೈನಂ ತತ್ಕರೋತಿ ॥**

ಅಸ್ಮಿನ್ಸೂಕ್ತೇ-ಪ್ರಥಮಾದ್ವಿತೀಯಯೋರೃಚೋರ್ಯೌ ಚತುರ್ಥೌ ಪಾದೌ ತಾವ-
ನೂದ್ಯ ಪ್ರಶಂಸತಿ । ಸಾಮದ್ವಯವಾಚಿರಥಂತರಶಬ್ದಬೃಹಚ್ಛಬ್ದಯೋರತ್ರ ಶ್ರೂಯಮಾಣ-
ತ್ವೇನ ತತ್ಪಾಠೇನ ಪ್ರವರ್ಗ್ಯಂ ಸಾಮದ್ವಯೋಪೇತಂ ಕರೋತಿ ॥

ಈ ಸೂಕ್ತದ ಮೊದಲನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿ **ರಥಂತರಮಾಜಭಾರಾ ವಸಿಷ್ಠಃ** ಎಂದೂ ಎರಡನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿ **ಭರದ್ವಾಜೋ ಬೃಹದಾಚಕ್ರೇ ಅಗ್ನೇಃ** ಎಂದೂ ಹೇಳಿರುವುದರಿಂದ ರಥಂತರ ಮತ್ತು ಬೃಹತ್ ಎಂಬ ಶಬ್ದಗಳ ಪ್ರಯೋಗವು ಈ ಹೆಸರಿನ ಎರಡು ಸಾಮಮಂತ್ರಗಳನ್ನು ನಿರ್ದೇಶಿಸಿದಂತಾಯಿತು. ಈ ಮಂತ್ರಪಠನದಿಂದ ಹೋತೃವು ಪ್ರವರ್ಗ್ಯಶರೀರದಲ್ಲಿ ರಥಂತರ ಮತ್ತು ಬೃಹತ್ಸಾಮಗಳನ್ನು ಸ್ಥಾಪಿಸಿದಂತಾಯಿತು. ಇಲ್ಲಿ **ಅಭಿ ತ್ವಾ ಶೂರ ನೋನುಮಃ** (ಋ.ಸಂ. ೭-೩೨-೨೨) ಎಂಬುವುದು ರಥಂತರ ಸಾಮವು ; ಇದಕ್ಕೆ ವಸಿಷ್ಠನು ಋಷಿಯು ; **ತ್ವಾಮಿದ್ಧಿ ಹವಾಮಹೇ** (ಋ.ಸಂ. ೬-೪೬-೧) ಎಂಬುದು ಬೃಹತ್ಸಾಮವು. ಇದಕ್ಕೆ ಭರದ್ವಾಜನು ಋಷಿಯು.

**ಅಪಶ್ಯಂ ತ್ವಾ ಮನಸಾ ಚೇಕಿತಾನಮಿತಿ ಪ್ರಜಾವಾನ್ಪ್ರಾಜಾಪತ್ಯಃ ಪ್ರಜಾಮೇವಾಸ್ಮಿಂಸ್ತದ್ದಧಾತಿ ।**

ತೃಚಾಂತರಂ ಸೂಕ್ತಾತ್ಮಕಂ ವಿಧತ್ತೇ—ಏತತ್ಸೂಕ್ತಗತಾನಾಂ ತಿಸೃಣಾಮೃಚಾಂ ಪೃಥ-
ಗ್ವಿನಿಯೋಗಮಾಶ್ವಲಾಯನ ಆಹ—ಅಪಶ್ಯಂತ್ವೇತಸ್ಯಾದ್ಯಯಾ ಯಜಮಾನಮೀಕ್ಷೇತೇ ದ್ವಿತೀ-
ಯಯಾ ಪತ್ನೀಂ ತೃತೀಯಯಾತ್ಮಾನಮಿತಿ । ಅಸ್ಯ ಚ ಸೂಕ್ತಸ್ಯ ಋಷಿಃ ಪ್ರಜಾವಾ-
ನಿತ್ಯೇತನ್ನಾಮಕಃ ಸ ಚ ಪ್ರಜಾಪತೇಃ ಪುತ್ರಸ್ತದೀಯಪಾಠೇನ ಪ್ರಜಾಂ ಸಂಪಾದಯತಿ ।

ಅನಂತರ ಹೋತೃವು—

**ಅಪಶ್ಯಂ ತ್ವಾ ಮನಸಾ ಚೇಕಿತಾನಂ ತಪಸೋ ಜಾತಂ ತಪಸೋ ವಿಭೂತಂ ।**

..........................................................................................

**ಅಹಂ ಪ್ರಜಾ ಅಜನಯಂ ಪೃಥಿವ್ಯಾಮಹಂ ಜನಿಭ್ಯೋ ಅಪರೀಷು ಪುತ್ರಾನ್ ॥**

(ಋ. ಸಂ. ೧೦-೧೮೩-೧ ರಿಂದ ೩ ಋಕ್ಕುಗಳು)

ಎಂಬ ಮೂರು ಋಕ್ಕುಗಳ ಸೂಕ್ತವನ್ನು ಪಠಿಸುವನು. ಈ ಸೂಕ್ತದ ಋಕ್ಕುಗಳ ವಿನಿಯೋಗ ವಿಷಯದಲ್ಲಿ ಆಶ್ವಲಾಯನರು—**ಅಪಶ್ಯಂ ತ್ವೇ ತ್ಯೇತಸ್ಯಾದ್ಯಯಾ ಯಜಮಾನಮೀಕ್ಷತೇ ದ್ವಿತೀಯಯಾ ಪತ್ನೀಂ ತೃತೀಯಯಾತ್ಮಾನಮಿತಿ ।** (ಆಶ್ವ. ಶ್ರೌ. ಸೂ. ೪-೬-೩) ಎಂದು ಹೇಳಿರುವರು. ಎಂದರೆ ಈ ಸೂಕ್ತದ ಮೊದಲ ಋಕ್ಕಿನ ಪಠನದಿಂದ ಯಜಮಾನನನ್ನು ನೋಡಬೇಕು. ಎರಡನೆಯ ಋಕ್ಕಿನಿಂದ ಯಜಮಾನನ ಪತ್ನಿಯನ್ನು ಮೂರನೆಯ ಋಕ್ಕಿನಿಂದ ಹೋತೃವು ತನ್ನನ್ನು ನೋಡಬೇಕು ಎಂದು. ಈ ಸೂಕ್ತಕ್ಕೆ ಪ್ರಜಾವಾನ್ ಎಂಬುವನು ಋಷಿಯು. ಈತನು ಪ್ರಜಾಪತಿಯ ಪುತ್ರನು. ಈ ಋಷಿದೃಷ್ಟವಾದ ಸೂಕ್ತಪಠನದಿಂದ ಯಜ್ಞಶರೀರದಲ್ಲಿ ಪ್ರಜೋತ್ಪತ್ತಿಸಾಮರ್ಥ್ಯವನ್ನು ಸ್ಥಾಪಿಸಿದಂತಾಗುವುದು.

ಕಾ ರಾಧದ್ಧೋತ್ರಾಶ್ವಿನಾ ವಾಮಿತಿ ।ನವ ವಿಚ್ಛಂದಸಸ್ತದೇತದ್ಯಜ್ಞಸ್ಯಾನ್ತಸ್ತ್ಯಂ ವಿಕ್ಷುದ್ರಮಿವ ವಾ ಅಂತಸ್ತ್ಯಮಣೀಯ ಇವ ಚ ಸ್ಥವೀಯ ಇವ ಚ ತಸ್ಮಾದೇತಾ ವಿಚ್ಛಂದಸೋ ಭವಂತಿ ॥

ಸೂಕ್ತಾಂತರೇ ನವಸಂಖ್ಯಾ ಋಚೋ ವಿಧತ್ತೇ—ಕಾರಾಧದಿತ್ಯಸ್ಮಿನ್ಸೂಕ್ತೇ ವಿದ್ಯಮಾನಾ ಋಚೋ ನವಸಂಖ್ಯಾಕಾಸ್ತಾಶ್ಚ ವಿವಿಧೇನ ಚ್ಛಂದಸಾ ಯುಕ್ತಾಃ ॥ ತಚ್ಚ ವಿವಿಧತ್ವಮನುಕ್ರಮಣಿಕಾಯಾಮುಕ್ತಂ—'ಆದ್ಯಾ ಗಾಯತ್ರೀ ದ್ವಿತೀಯಾ ಕಕುಪ್ತೃತೀಯಾಚತುರ್ಥ್ಯೌ ಕಾವಿರಾಣ್ಣಷ್ಟರೂಪ್ಯೌ ಪಂಚಮೀ ತನುಶಿರಾ ಷಷ್ಠ್ಯಕ್ಷರೈರುಷ್ಣಿಗ್ವಿಷ್ಟಾರಬೃಹತೀ ಕೃತಿರ್ವಿರಾಟ್ತ್ರಿಸ್ರೋ ಗಾಯತ್ರ್ಯಃ' ಇತಿ ॥ ಯದ್ಯಪ್ಯೇತದ್ವಾದಶರ್ಚಂ ಸೂಕ್ತಂ ತಥಾಽಪಿ ನವೈವರ್ಚೋಽತ್ರಾಪೇಕ್ಷಿತಾ ಇತಿ ನವೇತ್ಯುಕ್ತಂ ॥ ತದೇತತ್ಸೂಕ್ತಂ ಪ್ರವರ್ಗ್ಯಾಖ್ಯಸ್ಯ ಯಜ್ಞಸ್ಯ ಅಂತಸ್ತ್ಯಮುದರಗತಾವಯವಸ್ವರೂಪಂ ॥ ಲೋಕೇಽಪ್ಯಂತಸ್ತ್ಯಂ ಶರೀರಮಧ್ಯಸ್ಥಾವಯವಜಾತಂ ॥ ವಿಕ್ಷುದ್ರಮಿವ ವೈ ವಿವಿಧತ್ವೇನ ತಾರತಮ್ಯೇನ ಸ್ವಲ್ಪಮೇವ ಭವತಿ ॥ ತದ್ಯಥಾ । ಕಿಂಚಿನ್ಮಾಂಸನಾಡ್ಯಾದಿಕಮಣೀಯ ಇವಚ, ಅತ್ಯಂತಂ ಸೂಕ್ಷ್ಮಮೇವ ಭವತಿ । ಅನ್ಯಚ್ಚ ಮಾಂಸನಾಡ್ಯಾದಿಕಂ ಸ್ಥವೀಯ ಇವ ಚ, ಅತ್ಯಂತಂ ಸ್ಥೂಲಮೇವ ಭವತಿ ॥ ಯಸ್ಮಾದುದರಗತಮವಯವಜಾತಮೀದೃಶಂ ತಸ್ಮಾತ್ತತ್ಸ್ಥಾನೀಯಾ ಏತಾ ಋಚೋ ವಿಚ್ಛಂದಸೋ ಭವಂತಿ ॥

ಅನಂತರ ಹೋತೃವು—

**ಕಾ ರಾಧದ್ಧೋತ್ರಾಶ್ವಿನಾ ವಾಂ ಕೋ ವಾಂ ಜೋಷ ಉಭಯೋಃ ।**

..........................................................................................

**ಇಷೇ ಚ ನೋ ಮಿಮೀತಂ ಧೇನುಮತ್ಯೈ ॥** (ಋ. ಸಂ. ೧-೧೨೦-೧ ರಿಂದ ೯ ಋಕ್ಕುಗಳು)

ಎಂಬ ಸೂಕ್ತದಲ್ಲಿರುವ ೧೨ ಋಕ್ಕುಗಳಲ್ಲಿ ಮೊದಲ ೯ ಋಕ್ಕುಗಳನ್ನು ಮಾತ್ರ ಪಠಿಸುವನು. ಈ ೯ ಋಕ್ಕುಗಳ ಛಂದಸ್ಸುಗಳು ನಾನಾಛಂದಸ್ಸಿನವು. ಹೇಗೆಂದರೆ—ಮೊದಲನೆಯ ಋಕ್ಕು ಗಾಯತ್ರೀಛಂದಸ್ಕವು; ಎರಡನೆಯದು ಕಕುಪ್; ಮೂರನೆಯದು ಕಾವಿರಾಟ್; ನಾಲ್ಕನೆಯದು ನಷ್ಟರೂಪೀ; ಐದನೆಯದು ತನುಶಿರಾ; ಆರನೆಯದು ಉಷ್ಣಿಕ್; ಏಳನೆಯದು ಪಿಷ್ಟಾರ-ಬೃಹತೀ; ಎಂಟನೆಯದು ಕೃತಿಃ; ಒಂಭತ್ತನೆಯದು ವಿರಾಟ್ (೧೦-೧೨ ಋಕ್ಕುಗಳು ಗಾಯತ್ರೀಛಂದಸ್ಕವು) ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು. ಈ ಸೂಕ್ತವನ್ನು ಬಿಟ್ಟು ಹನ್ನೆರಡು ಋಕ್ಕುಗಳಿದ್ದರೂ ಇಲ್ಲಿ ಒಂಭತ್ತು ಋಕ್ಕುಗಳನ್ನು ಮಾತ್ರ ಪಠಿಸಲಾಗಿದೆ. ಈ ಒಂಭತ್ತು ಋಕ್ಕುಗಳು ಪ್ರವರ್ಗ್ಯಪುರುಷನ ಶರೀರದ ಉದರಭಾಗದಲ್ಲಿರುವ ನಾನಾ ಅವಯವಗಳನ್ನು ಸೂಚಿಸುವುವಾಗಿವೆ. ಉದರದಲ್ಲಿರುವ ಅವಯವಗಳನ್ನು ಎಂದರೆ ಮಾಂಸಖಂಡ, ನಾಡಿ, ರಕ್ತನಾಳ ಮೊದಲಾದವುಗಳಲ್ಲಿ ಕೆಲವು ಅತ್ಯಂತ ಸೂಕ್ಷ್ಮವಾಗಿರುವವು, ಮತ್ತೆ ಕೆಲವು ಸ್ಥೂಲವಾಗಿರುವವು. ಈ ವಿಧವಾದ ಸ್ಥೂಲಸೂಕ್ಷ್ಮಾದ್ಯವಯವಗಳನ್ನು ನಿರ್ದೇಶಿಸುವುದಕ್ಕಾಗಿ ಈ ಒಂಭತ್ತು ಋಕ್ಕುಗಳ ಛಂದಸ್ಸುಗಳು ನಾನಾವಿಧವಾಗಿವೆ (ಎಂದರೆ ಛಂದಸ್ಸುಗಳ ಅಕ್ಷರ ಸಂಖ್ಯೆಯು ನಾನಾವಿಧವಾಗಿವೆ). ಈ ಒಂಭತ್ತು ಋಕ್ಕುಗಳ ಪಠನದಿಂದ ಹೋತೃವು ಪ್ರವರ್ಗ್ಯಶರೀರದ ಮಧ್ಯದಲ್ಲಿರುವ ಸ್ಥೂಲಸೂಕ್ಷ್ಮಾದಿ ನಾನಾ ಅವಯವಗಳನ್ನು ಸ್ಥಾಪಿಸಿದಂತಾಗುವುದು ಎಂದು ಅಭಿಪ್ರಾಯವು.

ಏತಾಭಿರ್ವಾ ಅಶ್ವಿನೋಃ ಕಕ್ಷೀವಾನ್ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ
ಲೋಕಮಜಯದುಪಾಶ್ವಿನೋಃ ಪ್ರಿಯಂ ಧಾಮ ಗಚ್ಛತಿ
ಜಯತಿ ಪರಮಂ ಲೋಕಂ ಯ ಏವಂ ವೇದ ॥

ಉತ್ತಮಲೋಕಪ್ರಾಪ್ತಿಹೇತುತ್ವೇನ ತಾ ಋಚಃ ಪ್ರಶಂಸತಿ— ಕಕ್ಷೀವಾನಿತ್ಯೇತನ್ನಾಮಕಃ ಕಶ್ಚಿದೃಷಿಃ । ಸ ಚ ಕಾ ರಾಧದಿತ್ಯೇತಾಭಿರೃಗ್ಭಿರ್ಜಯಂ ಕೃತ್ವಾಽಶ್ವಿನೋರ್ಮಪ್ರಿಯಂಧಾಮ ಸ್ಥಾನಂ ತತ್ಪ್ರಾಪ್ನೋತ್ ॥ ತತಸ್ತಾಭ್ಯಾಮನುಗೃಹೀತಸ್ತತೋಽಪ್ಯುತ್ತಮಂ ಲೋಕಂ ಜಿತವಾನ್ ॥ ಏತದ್ವೇದನಂ ಪ್ರಶಂಸತಿ—

ಮೇಲೆ ಹೇಳಿದ ಕಾ ರಾಧದ್ಧೋತ್ರಾ ಎಂಬ ಸೂಕ್ತಕ್ಕೆ ಕಕ್ಷೀವಾನ್ ಎಂಬುವನು ಋಷಿಯು. ಈ ಋಷಿಯು ಈ ಸೂಕ್ತದಿಂದ ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರ ಅನುಗ್ರಹದಿಂದ ತನಗೆ ಪ್ರಿಯವಾದ ಉತ್ತಮಸ್ಥಾನವನ್ನು ಪಡೆದನು. ಅದ್ದರಿಂದ ಈ ವಿಷಯವನ್ನು ತಿಳಿದು ಯಾವ ಪುರುಷನು ಈ ಸೂಕ್ತವನ್ನು ಪಠಿಸಿ ಸ್ತುತಿಸುವನೋ ಅವನು ಉತ್ತಮಸ್ಥಾನವನ್ನೂ ಉತ್ತಮ ಲೋಕವನ್ನೂ ಪಡೆಯುವನು.

ಆಭಾತ್ಯಗ್ನಿರುಷಸಾಮನೀಕಮಿತಿ ಸೂಕ್ತಂ ।

ಪಂಚರ್ಚಂ ಸೂಕ್ತಾಂತರಂ ವಿಧತ್ತೇ—ಅಭಿಷ್ಟವಾರ್ಥಂ ಪಠೇದಿತಿ ಸರ್ವತ್ರದ್ರಷ್ಟವ್ಯಂ॥

ಅನಂತರ ಹೋತೃವು—

ಆ ಭಾತ್ಯಗ್ನಿರುಷಸಾಮನೀಕಮುದ್ವಿಪ್ರಾಣಾಂ ದೇವಯಾ ವಾಚೋ ಅಸ್ಥುಃ ।

..........................................................................................

ಆ ನೋ ರಯಿಂ ವಹತಮೋತ ವೀರಾನಾ ವಿಶ್ವಾನ್ಯಮೃತಾ ಸೌಭಗಾನಿ ॥

(ಋ.ಸಂ. ೫-೭೬-೧ ರಿಂದ ೫ ಋಕ್ಕುಗಳು)

ಎಂಬ ಐದು ಋಕ್ಕುಗಳ ಸೂಕ್ತವನ್ನು ಪಠಿಸುವನು.

**ಪೀಪಿವಾಂಸಮಶ್ವಿನಾ ಘರ್ಮಮಚ್ಛೇತ್ಯಭಿರೂಪಂ ಯದ್ಯಜ್ಞೇಽಭಿ-
ರೂಪಂ ತತ್ಸಮೃದ್ಧಂ ।**

ಪ್ರಥಮಾಯಾ ಋಚಶ್ಚತುರ್ಥಪಾದಂ ಪಠಿತ್ವಾ ತನ್ಮುಖೇನ ಸೂಕ್ತಂ ಪ್ರಶಂಸತಿ ॥ ಹೇ ಅಶ್ವಿನೌ ಪೀಪಿವಾಂಸಮಭಿವೃದ್ಧಂ ಘರ್ಮಮಚ್ಛ ಪ್ರವರ್ಗ್ಯಮಭಿಲಕ್ಷ್ಯೇತ್ಯೇವಮಸ್ಮಿನ್ಪಾ-ದೇಽವಗಮ್ಯತೇ ॥ ಏತತ್ಸೂಕ್ತಂ ಪ್ರವರ್ಗ್ಯಸ್ಯಾನುರೂಪಂ ॥

ಈ ಸೂಕ್ತದ ಮೊದಲನೆಯ ಋಕ್ಕಿನ ನಾಲ್ಕನೆಯ ಪಾದದಲ್ಲಿ ಪೀಪಿವಾಂಸಮಶ್ವಿನಾ ಘರ್ಮಮಚ್ಛ ಎಂದಿರುವುದು. ಎಲೈ ಅಶ್ವಿನೀದೇವತೆಗಳೇ, ಪ್ರವೃದ್ಧಮಾನವಾದ ಈ ಘರ್ಮ ಅಥವಾ ಪ್ರವರ್ಗ್ಯ ಶರೀರವನ್ನು ಅಭಿಲಕ್ಷಿಸಿ ಎಂದು ಇದರ ಅರ್ಥವು. ಈ ಅರ್ಥವು ಪ್ರಕೃತಸಂದರ್ಭಕ್ಕೆ ಸರಿಯಾಗಿ ಹೊಂದಿರುವುದು. ಯಜ್ಞದಲ್ಲಿ ಮಂತ್ರಾರ್ಥಕ್ಕೂ ಕರ್ಮಕ್ಕೂ ಸಮನ್ವಯವಿದ್ದಲ್ಲಿ (ಸರಿಯಾಗಿ ಹೊಂದಿದಲ್ಲಿ) ಯಜ್ಞವು ಸಮೃದ್ಧವಾಗುವುದು.

**ತದು ತ್ರೈಷ್ಟುಭಂ ವೀರ್ಯಂ ವೈ ತ್ರಿಷ್ಟುಬ್ವೀರ್ಯಮೇವಾಸ್ಮಿಂ-
ಸ್ತದ್ದಧಾತಿ ॥**

ಸೂಕ್ತಗತಂ ಛಂದಃ ಪ್ರಶಂಸತಿ । ತದು ತಚ್ಚ ಸೂಕ್ತಂ ॥

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ತ್ರಿಷ್ಟುಪ್‌ಛಂದಸ್ಸು (ಇಂದ್ರನಿಗೆ ಪ್ರಿಯವಾಗಿರುವುದರಿಂದ) ವೀರ್ಯದ ಸಂಕೇತವು. ಈ ತ್ರಿಷ್ಟುಪ್‌ಛಂದಸ್ಸಿನ ಸೂಕ್ತಪಠನದಿಂದ ಪ್ರವರ್ಗ್ಯಶರೀರದಲ್ಲಿ ವೀರ್ಯವನ್ನು ಸ್ಥಾಪಿಸಿದಂತಾಗುವುದು.

**ಗ್ರಾವಾಣೇವ ತದಿದರ್ಥಂ ಜರೇಥೇ ಇತಿ ಸೂಕ್ತಮಕ್ಷೀ ಇವ ಕರ್ಣಾ-
ವಿವ ನಾಸೇವೇತ್ಯಂಗಸಮಾಖ್ಯಾಯಮೇವಾಸ್ಮಿಂಸ್ತದಿಂದ್ರಿ-
ಯಾಣಿ ದಧಾತಿ ॥**

ಅಷ್ಟರ್ಚಂ ಸೂಕ್ತಾಂತರಂ ವಿಧತ್ತೇ—ತಸ್ಯ ಸೂಕ್ತಸ್ಯ ಪಂಚಮ್ಯಾಮೃಚಿ ದ್ವಿತೀಯಪಾದ ಏವಮಾಮ್ನಾತಃ ॥ ' ಅಕ್ಷೀ ಇವ ಚಕ್ಷುಷಾ ಯಾತಮರ್ವಾಕ್ ' ಇತಿ ॥ ಷಷ್ಠ್ಯಾಮೃಚ್ಯುತ್ತ-ರಾರ್ಥಮೇವಮಾಮ್ನಾತಂ ॥ ' ನಾಸೇವ ನಸ್ತನ್ವೋ ರಕ್ಷಿತಾರಾ ಕರ್ಣಾವಿವ ಸುಶ್ರುತಾ ಭೂತ-ಮಸ್ಮೇ ' (ಮ. ೨ ಸೂ. ೩೯ ಋ. ೬) ಇತಿ । ಏವಂ ಚ ಸತ್ಯಂಗಸಮಾಖ್ಯಾಽಯಮೇವ ಅಕ್ಷಿಕರ್ಣ ನಾಸಾದಿರೂಪಾಣ್ಯಂಗಾನಿ ಪುನಃ ಪುನಃ ಕಥಯನ್ನೇವ ತಸ್ಮಿನ್ಘರ್ಮ ಇಂದ್ರಿಯಾಣಿ ಸ್ಥಾಪಯತಿ ॥

ಅನಂತರ ಹೋತೃವು—

ಗ್ರಾವಾಣೇವ ತದಿದರ್ಥಂ ಜರೇಥೇ ಗೃಧ್ರೇವ ವೃಕ್ಷಂ ನಿಧಿಮಂತಮಚ್ಛ ।

..........................................................................................

ತಾನಿ ನರಾ ಜುಜುಷಾಣೋಪಯಾತಂ ಬೃಹದ್ವದೇಮ ವಿದಥೇ ಸುವೀರಾಃ ॥

(ಋ.ಸಂ. ೨-೩೯-೧ ರಿಂದ ೮ ಋಕ್ಕುಗಳು)

ಎಂಬ ಎಂಟು ಋಕ್ಕುಗಳ ಸೂಕ್ತವನ್ನು ಪಠಿಸುವನು. ಈ ಸೂಕ್ತದ ಐದನೆಯ ಋಕ್ಕಿನ ಎರಡನೆಯ ಪಾದದಲ್ಲಿ **ಅಕ್ಷೀ ಇವ ಚಕ್ಷುಷಾ ಯಾತಮರ್ವಾಕ್** ಎಂದೂ ಆರನೆಯ ಋಕ್ಕಿನ ಉತ್ತರಾರ್ಧದಲ್ಲಿ—**ನಾಸೇವ ನಸ್ತನ್ವೋ ರಕ್ಷಿತಾರಾ ಕರ್ಣಾವಿವ ಸುಶ್ರುತಾ ಭೂತಮಸ್ಮೇ** ಎಂದೂ ಪಠಿತವಾಗಿರುವುದು. ಎಂದರೆ ಅಕ್ಷೀ-ಕಣ್ಣುಗಳು, ನಾಸಾ-ನಾಸಿಕಗಳು ಮೊದಲಾದ ಅಂಗಗಳ ವಿವರಣೆ ಇರುವುದರಿಂದ ಈ ಸೂಕ್ತಪಠನವು ಪ್ರವರ್ಗ್ಯಶರೀರದಲ್ಲಿ ನಾನಾ ಇಂದ್ರಿಯಗಳನ್ನು ಸ್ಥಾಪಿಸಲು ಸಹಾಯಭೂತವಾಗಿರುವುದು.

## ತದು ತ್ರೈಷ್ಟುಭಂ ವೀರ್ಯಂ ವೈ ತ್ರಿಷ್ಟುಬ್ವೀರ್ಯಮೇವಾಸ್ಮಿಂ-ಸ್ತದ್ದಧಾತಿ ।

**ಸೂಕ್ತಗತಂ ಛಂದಃ ಪ್ರಶಂಸತಿ—**

ಈ ಸೂಕ್ತದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ತ್ರಿಷ್ಟುಪ್‌ಛಂದಸ್ಸು ವೀರ್ಯದ ಸಂಕೇತವಾಗಿರುವುದರಿಂದ ಈ ತ್ರಿಷ್ಟುಪ್ ಛಂದಸ್ಸಿನ ಸೂಕ್ತ ಪಠನದಿಂದ ಪ್ರವರ್ಗ್ಯಶರೀರದಲ್ಲಿ ವೀರ್ಯವನ್ನು ಸ್ಥಾಪಿಸಿದಂತಾಗುವುದು.

## ಈಳೇ ದ್ಯಾವಾಪೃಥಿವೀ ಪೂರ್ವಚಿತ್ತಯ ಇತಿ ಸೂಕ್ತಂ ।

**ಪಂಚವಿಂಶತ್ಯೃಚಂ ಸೂಕ್ತಾಂತರಂ ವಿಧತ್ತೇ—**

ಅನಂತರ ಹೋತೃವು—

**ಈಳೇ ದ್ಯಾವಾಪೃಥಿವೀ ಪೂರ್ವಚಿತ್ತಯೇಽಗ್ನಿಂ ಘರ್ಮಂ ಸುರುಚಂ ಯಾಮನ್ನಿಷ್ಟಯೇ ।**

..............................................................................................

**ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥**

(ಋ. ಸಂ. ೧-೧೧೨-೧ ರಿಂದ ೨೫ ಋಕ್ಕುಗಳು)

ಎಂಬ ಇಪ್ಪತ್ತ ಐದು ಋಕ್ಕುಗಳ ಸೂಕ್ತವನ್ನು ಪಠಿಸುವನು.

## ಅಗ್ನಿಂ ಘರ್ಮಂ ಸುರುಚಂ ಯಾಮನ್ನಿಷ್ಟಯ ಇತ್ಯಭಿರೂಪಂ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ।

**ಪ್ರಥಮಾಯಾ ಋಚೋ ದ್ವಿತೀಯಪಾದಮುದಾಹೃತ್ಯ ತದ್ದ್ವಾರಾ ಸೂಕ್ತಂ ಪ್ರಶಂಸತಿ॥**

**ಅಗ್ನಿಮಿತ್ಯಾದಿಕೇ ದ್ವಿತೀಯಪಾದೇ ಸುರುಚಂ ಘರ್ಮಮಿತಿ ಶೋಭನದೀಪ್ತಿಯುಕ್ತಃ ಪ್ರವರ್ಗ್ಯಃ ಪಠಿತಸ್ತಸ್ಮಾದಿದಂ ಸೂಕ್ತಮನುರೂಪಂ ॥**

ಈ ಸೂಕ್ತದ ಮೊದಲನೆಯ ಋಕ್ಕಿನ ಎರಡನೆಯ ಪಾದದಲ್ಲಿ **ಘರ್ಮಂ ಸುರುಚಂ** ಎಂಬ ಶಬ್ದಗಳ ಪ್ರಯೋಗವು ಶೋಭನದೀಪ್ತಿಯುಕ್ತವಾದ ಪ್ರವರ್ಗ್ಯವನ್ನು ಸೂಚಿಸುವುದರಿಂದ ಈ ಸೂಕ್ತಪಠನವು ಈ ಪ್ರವರ್ಗ್ಯದಲ್ಲಿ ಅನುರೂಪಮಂತ್ರವಾಗಿದೆ. ಅನುರೂಪವಾದ ಮಂತ್ರಪಠನದಿಂದ ಯಜ್ಞಸಮೃದ್ಧಿಯುಂಟಾಗುವುದು.

**ತದು ಜಾಗತಂ ಜಾಗತಾ ವೈ ಪಶವಃ ಪಶೂನೇವಾಸ್ಮಿಂಸ್ತದ್ದಧಾತಿ ।**

ತತ್ಸೂಕ್ತಗತಂ ಛಂದಃ ಪ್ರಶಂಸತಿ—ಪುರಾ ಕದಾಚಿತ್ಸೋಮಮಾಹರ್ತುಂ ದ್ಯುಲೋಕೇಗತಂ ಜಗತೀ ತಮಾಹರ್ತುಮಶಕ್ತಾ ಸತೀ ಪಶೂನ್ದೀಕ್ಷಾಂ ಚಾಽಽಹೃತವತೀ ತಸ್ಮಾತ್ಪಶವೋಜಾಗತಾಃ ॥ ಏತಚ್ಚ ಕದ್ರೂಶ್ಚೇತ್ಯನುವಾಕೇ ತೈತ್ತಿರೀಯೈಃ ಸಮಾಮ್ನಾತಂ ॥—'ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ' ಇತಿ ॥ ಅತಸ್ತದೀಯಪಾಠೇನ ಪಶೂನ್ಸಂಪಾದಯತಿ ॥

ಪೂರ್ವದಲ್ಲಿ ಸ್ವರ್ಗಲೋಕದಲ್ಲಿದ್ದ ಸೋಮವನ್ನು ಭೂಮಿಗೆ ತರುವುದಕ್ಕಾಗಿ ಜಗತೀ ಛಂದಸ್ಸು ಪ್ರಯತ್ನಿಸಿ ಸಫಲವಾಗದೆ ಹಿಂತಿರುಗಿ ಬರುವಾಗ ಪಶುಗಳನ್ನೂ, ದೀಕ್ಷೆಯನ್ನೂ (ದೀಕ್ಷಾವಿಧಿಯನ್ನೂ) ತಂದಿತೆಂದು ಇತಿಹಾಸವಿರುವುದು. ಆದ್ದರಿಂದ ಜಗತೀ ಛಂದಸ್ಸಿಗೂ ಪಶುಗಳಿಗೂ ನಿಕಟಸಂಬಂಧವಿರುವುದು. ತೈತ್ತಿರೀಯ ಸಂಹಿತೆಯ ಆರನೆಯ ಕಾಂಡದ ಮೊದಲ ಅಧ್ಯಾಯದಲ್ಲಿ ಕದ್ರೂಶ್ಚ ವೈ ಎಂಬ ಅನುವಾಕದಲ್ಲಿ ಸಾ (ಜಗತೀ) ಪಶುಭಿಶ್ಚ ದೀಕ್ಷಯಾ ಜಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ (ತೈ. ಸಂ. ೬-೧-೬-೨) ಎಂದು ಹೇಳಿರುವುದು. ಆದ್ದರಿಂದ ಜಗತೀಛಂದಸ್ಸಿನ ಋಕ್ಕುಗಳಿಂದ ಕೂಡಿದ (೨೪-೨೫ ಋಕ್ಕುಗಳನ್ನು ಬಿಟ್ಟು) ಈ ಸೂಕ್ತಪಠನವು ಪಶುಸಮೃದ್ಧಿಯನ್ನುಂಟುಮಾಡುವುದು.

**ಯಾಭಿರಮುಮಾವತಂ ಯಾಭಿರಮುಮಾವತಮಿತ್ಯೇತಾವತೋ ಹಾ-ತ್ರಾಶ್ವಿನೌ ಕಾಮಾನ್ದದೃಶತುಸ್ತಾನೇವಾಸ್ಮಿಂಸ್ತದ್ದಧಾತಿ ತೈರೇ-ವೈನಂ ತತ್ಸಮರ್ಧಯತಿ ॥**

ಸೂಕ್ತಗತಾಸ್ವೃಕ್ಷು ಸರ್ವಾಸು ವಿದ್ಯಮಾನಮರ್ಥಮುಪಜೀವ್ಯಸೂಕ್ತಂ ಪ್ರಶಂಸತಿ—ಅಸ್ಯ ಸೂಕ್ತಸ್ಯ ಪ್ರಥಮಾಯಾಮೃಚಿ ದ್ವಿತೀಯಾರ್ಧಮೇವಮಾಮ್ನಾತಂ ॥ 'ಯಾಭಿರ್ಭರೇ ಕಾರಮಂಶಾಯ ಜಿನ್ವಯಸ್ತಾಭಿರೂಷು ಊತಿಭಿರಶ್ವಿನಾಽಽಗತಂ' ಇತಿ ॥ ತಸ್ಯಾಯಮರ್ಥಃ । ಹೇಽಶ್ವಿನೌ ಯುವಾಮಂಶಾಯ ತನ್ನಾಮ್ನಃ ಪುರುಷಸ್ಯೋಪಕಾರಾಯ ಭರೇ ಯುದ್ಧೇ ಕಾರಂ ವಿಜಯಂ ಕೃತ್ವಾ ಯಾಭಿರೂತಿಭಿಃ ಪಾಲನೈರಂಶನಾಮಕಂ ತಂ ಪುರುಷಂ ಜಿನ್ವಥಃ ಪ್ರಾಣಯಥಸ್ತಾಭಿರೂ ಷು ತಾದೃಶೀಭಿರೇವೋತಿಭಿಃ ಪಾಲನೈರಾಗತಮಿಹ ಕರ್ಮಣಿ ಸಮಾಗಚ್ಛತಮಿತಿ ॥ ದ್ವಿತೀಯಸ್ಯಾಮೃಚಿ ದ್ವಿತೀಯಾರ್ಧಮೇವಮಾಮ್ನಾತಂ—'ಯಾಭಿರ್ಧಿಯೋಽವಥಃ ಕರ್ಮನ್ನಿಷ್ಟಯೇ ತಾಭಿರೂ ಷು ಊತಿಭಿರಶ್ವಿನಾಽಽಗತಂ' ಇತಿ ॥ ತಸ್ಯಾಯಮರ್ಥಃ । ಹೇಽಶ್ವಿನಾವಿಷ್ಟಯೇಽಭೀಷ್ಟಸಿಧ್ಯರ್ಥಂ ಕರ್ಮಣ್ಯನುಷ್ಠೀಯಮಾನೇ ಲೌಕಿಕೇ ವೈದಿಕೇ ವಾ ಸರ್ವಸ್ಮಿನ್ಕರ್ಮಣಿ ಯಾಭಿರೂತಿಭಿರ್ಧಿಯಃ ಪ್ರಾಣಿನಾಂ ಬುದ್ಧೀರವಥೋ ರಕ್ಷಥಃ ತಾಭಿರೇವೋತಿಭಿರಾಗಚ್ಛತಮಿತಿ ॥ ಏವಂ ಸರ್ವಾಸ್ವಪ್ಯೃಕ್ಷ್ವರ್ಥೋಽನುಸಂಧೇಯಃ । ತಮರ್ಥಂ ಸರ್ವಂ ಸಾಮಾನ್ಯವಾಚಿನಾ ಸರ್ವನಾಮಶಬ್ದೇನ ಪರಾಮೃಶ್ಯ ಶ್ರುತಿರ್ಯಾಭಿರಿತ್ಯೇಕೇನ ವಾಕ್ಯೇನ ಸಂಗೃಹ್ಣಾತಿ ಯಾಭಿರೂತಿಭಿರಮುಮೀದೃಶಮಾವತಂ ಯುವಾಂ ರಕ್ಷಿತವಂತಾವಿತಿ ॥ ಸರ್ವೇಷಾಂ ಋಗರ್ಥಾನಾಂ ಸಂಗ್ರಾಹಿಕಾಂ ವೀಪ್ಸಾಮಭಿಪ್ರೇತ್ಯ ಯಾಭಿರಮುಮಾವತಮಿತಿ ದ್ವಿಃ ಪಠ್ಯತೇ ॥ ತಾಸ್ವೃಕ್ಷುಕಾಮಾಃ ಶ್ರೂಯಂತೇ ತಾವಂತಃ ಕಾಮಾ ಇಹ ಕರ್ಮಣ್ಯಶ್ವಿನೌ

**ದದೃಶತುಃ ಕಟಾಕ್ಷೇಣಾನುಗೃಹೀತವಂತೌ ॥ ತತ್ಸೂಕ್ತಪಾಠೇನ ತಾನೇವ ಸರ್ವಾನ್ಕಾಮಾನಸ್ಮಿನ್ಪ್ರವರ್ಗ್ಯೇ ಯಜಮಾನೇ ವಾ ಸಂಪಾದಯತಿ ತೇ ಚ ಕಾಮಾಃ ಸಮೃದ್ಧಾಃ ಸಂಪದ್ಯಂತೇ ॥**

ಈ ಸೂಕ್ತದ ಋಕ್ಕುಗಳಲ್ಲಿ ನಿರೂಪಿತವಾಗಿರುವ ಅರ್ಥವನ್ನು ಸಂಗ್ರಹರೂಪದಿಂದ ತಿಳಿಸುತ್ತಾರೆ. ಈ ಸೂಕ್ತದ ಮೊದಲನೆಯ ಋಕ್ಕಿನ ದ್ವಿತೀಯಾರ್ಧದಲ್ಲಿ—**ಯಾಭಿರ್ಭರೇ ಕಾರಮಂಶಾಯ ಜಿನ್ವಥಸ್ತಾಭಿರೂ ಷು ಊತಿಭಿರಶ್ವಿನಾಗತಂ** ಎಂದು ಹೇಳಿರುವುದು. ಇದರ ಅರ್ಥವು—ಎಲೈ ಅಶ್ವಿನೀದೇವತೆಗಳೇ, ನೀವು ಅಂಶನೆಂಬ ಪುರುಷನನ್ನು (ನಿಮ್ಮನ್ನು ಭಜಿಸುವವನನ್ನು) ಉದ್ಧಾರಮಾಡುವುದಕ್ಕಾಗಿ ಅವನು ಶತ್ರುಗಳೊಡನೆ ಮಾಡುತ್ತಿರುವ ಯುದ್ಧದಲ್ಲಿ ಅವನಿಗೆ ಜಯವನ್ನೊದಗಿಸಿಕೊಟ್ಟ ಯಾವ ನಿಮ್ಮ ರಕ್ಷಣೆಗಳಿಂದ ಆ ಪುರುಷನನ್ನು ಸಂತೋಷಗೊಳಿಸಿದರೋ ಅಂತಹ ಸಂರಕ್ಷಣೆಗಳಿಂದ ಕೂಡಿ ಈ ಯಜ್ಞಕರ್ಮದಲ್ಲಿ ದಯಮಾಡಿಸಿರಿ ಎಂದರ್ಥವು. ಎರಡನೆಯ ಋಕ್ಕಿನ ಉತ್ತರಾರ್ಧದಲ್ಲಿ—**ಯಾಭಿರ್ಧಿಯೋಽವಥಃ ಕರ್ಮನ್ನಿಷ್ಟಯೇ ತಾಭಿರೂ ಷು ಊತಿಭಿರಶ್ವಿನಾಗತಂ** ಎಂದಿರುವುದು. ಇದರ ಅರ್ಥವು—ಎಲೈ ಅಶ್ವಿನೀದೇವತೆಗಳೇ, ಅಭೀಷ್ಟಾರ್ಥಸಿದ್ಧಿಗಾಗಿ ಯಜ್ಞಾದಿಕರ್ಮಾನುಷ್ಠಾನಮಾಡುವಾಗ ಅಥವಾ ಇತರ ಕರ್ಮಗಳನ್ನಾಚರಿಸುತ್ತಿರುವಾಗ ನೀವು ಪ್ರಾಣಿಗಳ ಬುದ್ಧಿಯನ್ನು ಯೋಗ್ಯವಾದ ಯಾವ ಪ್ರೇರಣೆಯಿಂದ ಕಾರ್ಯಪ್ರವೃತ್ತನಾಗಿ ಮಾಡಿ ರಕ್ಷಿಸುತ್ತೀರೋ ಅಂತಹ ರಕ್ಷಣೆಗಳಿಂದ ಕೂಡಿ ಇಲ್ಲಿಗೆ ದಯಮಾಡಿಸಿರಿ ಎಂದರ್ಥವು. ಇದರಂತೆಯೇ ಈ ಸೂಕ್ತದ ಸಮಸ್ತ ಋಕ್ಕುಗಳಲ್ಲಿಯೂ ಇಂತಹ ಪುರುಷನನ್ನು ಈವಿಧವಾಗಿ ನಿಮ್ಮ ರಕ್ಷಣೆಗಳಿಂದ ಕಾಪಾಡಿರಿ. ಅಂತಹ ರಕ್ಷಣೆಗಳಿಂದ ನಮ್ಮ ಬಳಿಗೆ ಬನ್ನಿ ಎಂದು **ಯಾಭಿಃ ಅಮುವಮಾವತಂ** ಇತ್ಯಾದಿ ಶಬ್ದಗಳಿಂದ ಋಷಿಯು ಸ್ತುತಿಸಿರುವನು. ಸಮಸ್ತ ಋಕ್ಕುಗಳಲ್ಲಿಯೂ ಈ ವಿಧವಾದ ಅರ್ಥವು ಸೂಚಿತವಾಗಿರುವುದರಿಂದ ಅದನ್ನು ನಿರ್ದೇಶಿಸುವುದಕ್ಕಾಗಿ ಇಲ್ಲಿ **ಯಾಭಿರಮುವಮಾವತಂ** ಎಂಬ ವಾಕ್ಯವು ಎರಡಾವರ್ತಿ ಪಠಿತವಾಗಿರುವುದು. ಆಯಾ ಋಕ್ಕುಗಳಿಲ್ಲಿ ಯಾವ ಯಾವ ಅಭಿಲಾಷೆಗಳು ಅಪೇಕ್ಷಿಸಲ್ಪಟ್ಟಿವೆಯೋ ಆಯಾ ಅಭಿಲಾಷೆಗಳನ್ನು ಅಶ್ವಿನೀದೇವತೆಗಳು ಪೂರ್ತಿಗೊಳಿಸಿ ಅನುಗ್ರಹಿಸಿದ್ದಾರೆ. ಆದ್ದರಿಂದ ಈ ಪ್ರವರ್ಗ್ಯ ಕರ್ಮದಲ್ಲಿಯೂ ಯಜಮಾನನು ಯಾವ ಯಾವ ಅಭಿಲಾಷೆಗಳನ್ನು ವ್ಯಕ್ತಪಡಿಸುವನೋ ಆಯಾ ಅಭಿಲಾಷೆಗಳನ್ನು ಈ ಸೂಕ್ತಪಠನದಿಂದ ಯಜಮಾನನು ಪಡೆಯುವನು. ಎಂದರೆ ಯಜಮಾನನ ಸಮಸ್ತ ಅಭಿಲಾಷೆಗಳೂ ಈಡೇರುವವು ಎಂದಭಿಪ್ರಾಯವು.

**ಅರೂರುಚದುಷಸಃ ಪೃಶ್ನಿರಗ್ರಿಯ ಇತಿ ರುಚಿತವತೀ ರುಚಮೇವಾಸ್ಮಿಂಸ್ತದ್ದಧಾತಿ ॥**

**ಅನ್ಯಾಂ ಕಾಂಚಿದೃಚಂ ವಿಧತ್ತೇ—ಅಸ್ಯಾಮೃಚ್ಯರೂರುಚದಿತಿ ಶ್ರುತತ್ವಾದ್ರುಚಿತಮಭೀಷ್ಟಂ ಕಾಂತಿವಾಽಸ್ಯಾಮಸ್ತೀತ್ಸನೌ ರುಚಿತವತೀ ಸಾ ಪಠನೀಯಾ । ತಸ್ಯಾಃ ಪೂರ್ವೋಕ್ತಸೂಕ್ತೇ ಸ್ಥಾನವಿಶೇಷ ಆಶ್ವಲಾಯನೇನ ದರ್ಶಿತಃ—ಪ್ರಾಗುತ್ತಮಾಯಾ ಅರೂರುಚದುಷಸಃ ಪೃಶ್ನಿದಗ್ರಿಯ ಇತ್ಯಾವಪೇತೋತ್ತರೇಣಾರ್ಧರ್ಚೇನ ಪತ್ನೀಮೀಕ್ಷೇತ ' ಇತಿ ತನ್ಮಂತ್ರಪಾಠೇನ ಯಜಮಾನೇ ಕಾಂತಿಂ ಸಂಪಾದಯತಿ—**

ಅನಂತರ ಹೋತೃವು—

**ಅರೂರುಚದುಷಸಃ ಪೃಶ್ನಿಮಾತರಃ ಉಕ್ಷಾ ಬಿಭರ್ತಿ ಭುವನಾನಿ ವಾಜಯುಃ ।**
**ಮಾಯಾವಿನೋ ಮಮಿರೇ ಅಸ್ಯ ಮಾಯಯಾ ನೃಚಕ್ಷಸಃ ಪಿತರೋ ಗರ್ಭಮಾ ದಧುಃ ॥**

**(ಋ. ಸಂ. ೯–೮೩–೩)**

ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನಲ್ಲಿ **ಅರೂರುಚತ್** ಎಂಬ ಶಬ್ದವು ರುಚಿಧಾತುವಿನಿಂದ ನಿಷ್ಪನ್ನವಾಗಿರುವುದು. ರುಚಿತಂ ಎಂದರೆ ಅಭೀಷ್ಟ ಅಥವಾ ಕಾಂತಿಯೆಂದರ್ಥವು. ಈ ಶಬ್ದಪ್ರಯೋಗವಿರುವುದರಿಂದ ಇದನ್ನು **ರುಚಿತವತೀ** ಋಕ್ಕೆಂದು ಕರೆಯಲಾಗಿದೆ. ಈ ಋಕ್ಕನ್ನು ಪಠಿಸುವ ವಿಷಯದಲ್ಲಿ ಆಶ್ವಲಾಯನರು—**ಪ್ರಾಗಾತ್ತಮಾಯಾ ಅರೂರುಚದುಷಸಃ ಪೃಶ್ನಿರಗ್ರಿಯ ಇತ್ಯಾವಪೇತೋತ್ತರೇಣಾರ್ಧರ್ಚೇನ ಪತ್ನೀಮೀಕ್ಷೇತ** । (ಆಶ್ವ. ಶ್ರೌ. ಸೂ. ೪-೬-೩) ಎಂದು ಹೇಳಿರುವರು. ಎಂದರೆ ಈ ಋಕ್ಕನ್ನು ಹಿಂದೆ ಹೇಳಿದ **ಈಳೇದ್ಯಾವಾಪೃಥಿವೀ** (ಋ.ಸಂ. ೧-೧೧೨) ಎಂಬ ಸೂಕ್ತದ ಉಪಾಂತ್ಯದಲ್ಲಿ ಎಂದರೆ ಕೊನೆಯ ಋಕ್ಕಿನ ಹಿಂದೆ, ೨೪ ನೇ ಋಕ್ಕಿನ ಅನಂತರ ೨೫ ನೇ ಋಕ್ಕನ್ನು ಪಠಿಸುವುದಕ್ಕೆ ಪೂರ್ವದಲ್ಲಿ ಪಠಿಸಬೇಕು ಮತ್ತು ಈ ಋಕ್ಕಿನ ಉತ್ತರಾರ್ಧಪಠನದಿಂದ ಪತ್ನಿಯನ್ನು ನೋಡಬೇಕು ಎಂದರ್ಥವು. ಈ ಮಂತ್ರಪಠನದಿಂದ ಯಜಮಾನನಲ್ಲಿ ಕಾಂತಿಯು (ವರ್ಚಸ್ಸು) ಉಂಟಾಗುವುದು.

**ದ್ಯುಭಿರಕ್ತುಭಿಃ ಪರಿಪಾತಮಸ್ಮಾನಿತ್ಯುತ್ತಮಯಾ ಪರಿದಧಾತಿ ।**

**ಸೂಕ್ತಸ್ಯಾಂತಿಮಯರ್ಚಾಽಭಿಷ್ಟವೇ ಪೂರ್ವಭಾಗಸ್ಯ ಸಮಾಪನಂ ವಿಧತ್ತೇ—**

ಹೋತೃವು ಈಳೇ ದ್ಯಾವಾಪೃಥಿವೀ ಎಂಬ ಸೂಕ್ತದ ಕೊನೆಯ ಋಕ್ಕಾದ **ದ್ಯುಭಿರಕ್ತುಭಿಃ ಪರಿಪಾತಮಸ್ಮಾನ್** ಎಂಬ ೨೫ ನೇ ಋಕ್ಕನ್ನು ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸುವನು.

**ಅರಿಷ್ಟೇಭಿರಶ್ವಿನಾ ಸೌಭಗೇಭಿಃ । ತನ್ನೋ ಮಿತ್ರೋ ವರುಣೋ ಮಾಮಹಂತಾಮದಿತಿಃ ಸಿಂಧುಃ ಪೃಥಿವೀ ಉತದ್ಯೌರಿತ್ಯೇತೈರೇವೈನಂ ತತ್ಕಾಮೈಃ ಸಮರ್ಧಯತಿ ।**

**ತಸ್ಯಾ ಋಚೋಽವಶಿಷ್ಟಂ ಪಾದತ್ರಯಮನೂದ್ಯ ಕೃತ್ಸ್ನಂ—ಮಂತ್ರತಾತ್ಪರ್ಯಂ ದರ್ಶಯತಿ—ತಸ್ಯಾ ಋಚೋಽಯಮರ್ಥಃ । ಹೇ ಅಶ್ವಿನೌ ದ್ಯುಭಿರ್ದೀಪ್ತಿಭಿರ್ದ್ಯುಲೋಕೋಚಿತಭೋಗೈರ್ವಾಽಕ್ತುಭಿರಂಜನಸಾಧನದ್ರವ್ಯೈರಾಜ್ಯತೈಲಾಭಿತರಿಷ್ಟೇಭಿರ್ಹಿಂಸಾಪರಿಹಾರೈಃ ಸೌಭಗೇಭಿಃ ಸವಂಭೋಗಸರ್ಪತ್ತಿಲಕ್ಷಣೈಃ ಸೌಭಾಗ್ಯೈಶ್ಚಾಸ್ಮಾನ್ಪಾತಂ ರಕ್ಷತಂ॥ತತ್ತಸತ್ಯನಂತರಂ ನೋಽಸ್ಮಾನ್ಮಿತ್ರಾವರುಣಾದಿತಿ ಸಮುದ್ರಪೃಥಿವೀದ್ಯುದೇವತಾಃ ಸರ್ವಾ ಅಪಿ ಮಾಮಹಂತಾಮತಿಶಯೇನ ಪೂಜಯಂತ್ವಿತಿ ॥ ತನ್ಮಂತ್ರಪಾಠೇನೈನಂ ಯಜಮಾನಮೇತೈರೇವ ಕಾಮ್ಯೈದ್ಯುಭಿರಕ್ತುಭಿರಿತ್ಯಾದಿಶಬ್ದೋಕ್ತೈಃ ಫಲೈಃ ಸಮೃದ್ಧಂ ಕರೋತಿ ॥**

ಈ ಕೊನೆಯ ಋಕ್ಕಿನ ಅರ್ಥವನ್ನು ವಿಶದೀಕರಿಸುವರು. ಎಲೈ ಅಶ್ವಿನೀದೇವತೆಗಳೇ, ದೀಪ್ತಿಯುಕ್ತವಾದ ಅಥವಾ ಪ್ರಕಾಶಮಾನವಾದ (ಶ್ರೇಷ್ಠವಾದ) ಸ್ವರ್ಗಲೋಕೋಚಿತವಾದ ಅಂಜನ, ಆಜ್ಯ, ತೈಲಾದಿ ಭೋಗಸಾಧನದ್ರವ್ಯಗಳಿಂದಲೂ, ಹಿಂಸಾಪರಿಹಾರರೂಪವಾದ ಮತ್ತು ಸರ್ವಭೋಗಸಮೃದ್ಧವಾದ ಸಮಸ್ತ ಭೋಗಭಾಗ್ಯಗಳಿಂದಲೂ ಎಂದರೆ ಅವುಗಳನ್ನು ನಮಗೆ ಕೊಟ್ಟು ನಮ್ಮನ್ನು ರಕ್ಷಿಸಿ; ಹಾಗೆಯೇ ಮಿತ್ರದೇವನೂ, ವರುಣನೂ, ಅದಿತಿಯೂ, ಸಿಂಧು (ಸಮುದ್ರ) ವೂ, ಪೃಥಿವಿಯೂ ಮತ್ತು ದ್ಯುಲೋಕಾಭಿಮಾನಿದೇವತೆಗಳೂ ಸಹ ನಮ್ಮನ್ನು ಆದರಿಸುವಂತಾಗಲಿ ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಮಂತ್ರದಲ್ಲಿ **ದ್ಯುಭಿರಕ್ತುಭಿಃ** ಇತ್ಯಾದಿ ಶಬ್ದಗಳು ಯಜಮಾನನನ್ನು ಅವನ ಇಷ್ಟಾರ್ಥಗಳಿಂದ ಪೂರ್ಣಗೊಳಿಸಲಿ ಎಂದರೆ ಸಮೃದ್ಧವಾಗಿ ಅಭೀಷ್ಟಫಲಗಳನ್ನು ಕೊಡಲಿ ಎಂಬರ್ಥವನ್ನು ಸೂಚಿಸುವವು.

ಇತಿ ನು ಪೂರ್ವಂ ಪಟಲಂ ॥

ಅಭಿಪ್ಲವಸ್ಯ ಪೂರ್ವಭಾಗಮುಪಸಂಹರತಿ—ಬ್ರಹ್ಮಜಜ್ಞಾನಮಿತ್ಯಾರಭ್ಯ ಪೃಥಿವೀ ಉತ ದ್ಯೌರಿತ್ಯಂತೇನೋಕ್ತಪ್ರಕಾರೇಣಾಭಿಪ್ಲವಸ್ಯ ಪೂರ್ವೋ ಭಾಗೋ ವರ್ಣಿತಃ ॥ ಅತ್ರ ಭಾಗದ್ವಯಕಲ್ಪನಪೇಕ್ಷೈಕಸ್ಮಿನ್ಭಾಗೇ ಪ್ರಥಮೋತ್ತಮಯೋರೃಚೋರಾವೃತ್ಯರ್ಥಂ ॥ ಅತ ಏವೋಕ್ತಂ—

“ ಆದ್ಯಾಂತ್ಯಾತ್ರಿತ್ವಸಿಧ್ಯರ್ಥಂ ಪಟಲದ್ವಿತಯಂ ಕೃತಂ ॥
ಅನ್ಯಥಾಭಿಪ್ಲವಸ್ಯೈಕ್ಯಾತ್ರಿತ್ವಂ ತತ್ರೈವ ನೈ ಭವೇತ್ ” ಇತಿ ॥

ಈ ಅಭಿಪ್ಲವದ ಪೂರ್ವಭಾಗವು ಇಲ್ಲಿಗೆ ಮುಗಿಯಿತು. ಅಭಿಪ್ಲವವೆಂದರೆ — ಅಭಿಪ್ಲವಂ ನಾಮ ಘರ್ಮಸ್ಯ ಸಂಸ್ಕಾರೋಽಭಿಧಾನರೂಪಃ ಈ ಘರ್ಮ (ಅಥವಾ ಪ್ರವರ್ಗ್ಯ) ವೆಂಬ ಕರ್ಮದ ಸಂಸ್ಕಾರಕ್ಕೆ ಅಭಿಪ್ಲವವೆಂದು ಹೆಸರು. ಇದುವರೆಗೆ ಹೇಳಿದ **ಬ್ರಹ್ಮಜಜ್ಞಾನಂ** (ಈ ಅಧ್ಯಾಯದ ಎರಡನೇ ಖಂಡ) ಎಂಬ ಮಂತ್ರದಿಂದ **ಪೃಥಿವೀ ಉತದ್ಯೌಃ** ಎಂಬ ಮಂತ್ರದವರೆಗೆ ಹೇಳಿದ ಈ ಭಾಗವೆಲ್ಲವೂ ಪೂರ್ವಭಾಗವು. ಈ ಕರ್ಮದಲ್ಲಿ ಎರಡುಭಾಗಗಳನ್ನು ವಿಂಗಡಿಸಿ ಮೊದಲನೆಯ ಭಾಗವನ್ನು ನಿರ್ದೇಶಿಸುವುದಕ್ಕಾಗಿ **ಬ್ರಹ್ಮಜಜ್ಞಾನಂ** ಎಂಬ ಮೊದಲನೆಯ ಮಂತ್ರದ ಆರಂಭವನ್ನು ಕೊನೆಯ ಮಂತ್ರದ ಪರಿಸಮಾಪ್ತಿಯಾದ **ಪೃಥಿವೀ ಉತ ದ್ಯೌಃ** ಎಂಬ ಭಾಗವನ್ನು ಇಲ್ಲಿ ಉದಹರಿಸುವರು. ಆದ್ದರಿಂದಲೇ ಈ ಐತರೇಯ ಬ್ರಾಹ್ಮಣಕ್ಕೆ ವೃತ್ತಿಯೆಂಬ ಟಿಪ್ಪಣಿಯನ್ನು ಬರೆದಿರುವ ಸದ್ಗುರುಶಿಷ್ಯರೆಂಬುವರು—

**ಆದ್ಯಾಂತ್ಯಾತ್ರಿತ್ವಸಿದ್ಧ್ಯರ್ಥಂ ಪಟಲದ್ವಿತಯಂ ಕೃತಂ ।**
**ಅನ್ಯಥಾಭಿಪ್ಲವಸ್ಯೈಕ್ಯಾತ್ರಿತ್ವಂ ತತ್ರೈವ ನೈ ಭವೇತ್ ॥**

ಎಂದು ಹೇಳಿರುವರು. (ಋಕ್ಪ್ರಾತಿಶಾಖ್ಯ, ೪-೭ ; ೬-೪)

*English Translation*

(He now repeats) a hymn, addressed to Brahmanaspati Gananam tva ganapatim haramahe (2, 23), Brahma is Brihaspati; by means of Brahma he cures him (the sacrificial man, who had been torn to pieces). The verses beginning with prathas'-cha yasya sraprathas'cha nama (10, 181, 1-3) are the three Gharmatanu mantras; by repeating them the Hotar provides the Pravargya man with a body, and a form. (For in the fourth pada of the first of these verses), there is said: "Vasishta brought the Rathantara Sama", and (in the last half verse of the second Gharma-tanu mantra is said), "Bharadvaja made the Brihat Sama out of Agni". By repeating these mantras the Hotar provides the Pravargya man with the Rathantara and Brihat-Samans (required for its prosperity).

(By repeating) three verses (of the hymn) apas'yan tra manasa chekitanam (10, 183, 1), the Rishi of which is Prajvan, the son of Prajapati (the Lord of creatures), he provides him with offspring.

(Now the Hotar repeats) nine verses in different metres, commencing with ka radhah dhotra (1, 120, 1-9).

(These different metres represent the difference in magnitude and expansion) of the extremities of the belly of the sacrificial man). For the extremities of the (mystical) sacrificial body (to be restored by means of the Pravargya ceremony) vary as to magnitude and largeness; some are rather thin, others are rather thin, others are rather big.

Thence are verses of various metres required (for the verses represent the extremities of the body). By means of these verses (the Rishi) Kakshivan went to the beloved residence of the As'vins. He conquered the highest heaven. He who has this knowledge goes up to the beloved house of the As'vins, and conquers the highest heaven.

(Now he repeats) the hymn: Abhaty agnir ushasam (5, 76). The words: pipvamasam as'vina gharman achha (the fourth pada of the first verse of the hymn mentioned) are appropriate to the ceremony. What is appropriate at the sacrifice that is successful. This hymn is in the Trishtubh metre, for Trishtubh is strength; by this means he puts strength in this (Pravargya man).

He repeats the hymn: gravaneva tad id artham jarethe (2, 39). In this hymn there being expressions like, akshi iva "as two eyes" (2, 39, 5), karnav iva "as two ears", nasa iva "as a nose" (2, 39, 6), he puts in this way, by enumerating the limbs of the body, the senses in this (Pravargya man). This hymn is in the Trishtubh metre; for Trishtubh is strength. In this way he puts strength in this (Pravargya man).

He repeats the hymn: 'de dyavaprithiri (1, 112). (The words in the second pada:) gharmam surucham are appropriate. This hymn is in the Jagati metre; cattle is of the same (Jagati) nature. Thus he provides this (Pravargya man) with cattle. By the words "what assistance you (As'vina) have rendered such and such one" (which occur in every verse of the hymn mentioned), he provides this (Pravargya man) with all those wishes (and their fulfilment) which the As'vins in this hymn are said to have deemed proper to fulfi.

In repeating this hymn the priest thus makes this (Pravargya man) thrive by means of those desires (including their satisfaction).

He repeats the ruchitavati, i.e., the verse, whose characteristic the word "ruch", to shine, is: ar'uruchad Ushasah pris'nir (9, 83, 3). In this way he provides this (Pravargya man) with splendour.

With the verse, dymbhia aktubhih paripatam (1, 112, 25) he concludes (the ceremony). (In repeating this verse, the words of which) arishtebhir prithvi uta dyauh (contain a prayer for prosperity) he makes thus this Pravargya man thrive, granting him all that is wished for (in the verse mentioned). Now is (completed) the first part of the mantra collection (required at the Pravargya ceremony).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಚತುರ್ಥಾಧ್ಯಾಯಸ್ಯ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಖಂಡವು ಸಮಾಪ್ತವಾದುದು.**



## ಅಥ ಚತುರ್ಥಾಧ್ಯಾಯೇ ಪಂಚಮಃ ಖಂಡಃ

### ನಾಲ್ಕನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಪ್ರವರ್ಗ್ಯೇಷ್ಟಿಯಲ್ಲಿ ಉತ್ತರಭಾಗದಲ್ಲಿ (ಎರಡನೆಯ ಭಾಗದಲ್ಲಿ) ಪಠಿಸಬೇಕಾದ ಮಂತ್ರಗಳು]

---

### ಅಥೋತ್ತರಂ

**ಪಟಲಾಂತರಂ ಪ್ರತಿಜಾನೀತೇ—ಪಟಲಮುಚ್ಯತ ಇತಿ ಶೇಷಃ । ಪಟಲಶಬ್ದಃ ಸಮೂಹವಾಚೀ ॥ ಸಮೂಹಃ ಪಟಲಂ ನ ನೇತ್ಯಭಿಧಾನಕಾರೈರುಕ್ತತ್ವಾತ್ ॥ ಉತ್ತರಭಾಗಸ್ಥೋ ಮಂತ್ರಸಮೂಹಃ ಕಥ್ಯತ ಇತ್ಯರ್ಥಃ ॥**

ಈಗ ಮುಂದಿನ ಎರಡನೆ ಪಟಲವನ್ನು ಹೇಳುತ್ತಾರೆ. ಪಟಲವೆಂದರೆ, ಸಮೂಹವೆಂದರ್ಥವು. **ಸಮೂಹೇ ಪಟಲಂ ನನಾ** (ಅಮ ಕೋ. ೩-೩-೨೦೦) ಎಂದು ಕೋಶವಿರುವುದು. ಎಂದರೆ ಪೂರ್ವಭಾಗಾನಂತರ ಈಗ ಉತ್ತರಭಾಗದಲ್ಲಿರುವ ಮಂತ್ರಸಮೂಹವನ್ನು ವಿವರಿಸಲಾಗುವುದೆಂದಭಿಪ್ರಾಯವು.

ಉಪಹ್ವಯೇ ಸುದುಘಾಂ ಧೇನುಮೇತಾಂ ಹಿಂಕೃಣ್ವತೀ ವಸುಪತ್ನೀ
ವಸೂನಾಮಭಿ ತ್ವಾ ದೇವ ಸವಿತಃ ಸಮಿಾವತ್ಸಂ ನ ಮಾತೃಭಿಃ
ಸಂವತ್ಸ ಇವ ಮಾತೃಭಿರ್ಯಸ್ತೇ ಸ್ತನಃ ಶಶಯೋ ಯೋ

ಮಯೋಭೂರ್ಗೌರಮಿಮಾಮೇದನುವತ್ಸಂ ಮಿಷಂತಂ ನಮಸೇದುಪಸೀದತ ಸಂಜಾನಾನಾ ಉಪಸೀದನ್ನಭಿಜ್ಞ್ವಾದಶಭಿರ್ವಿವಸ್ವತೋ ದುಹಂತಿ ಸಪ್ತೈಕಾಂ ಸಮಿದ್ಧೋ ಅಗ್ನಿರಶ್ವಿನಾ ಸಮಿದ್ಧೋ ಅಗ್ನಿರ್ವೃಷಣಾ ರತಿರ್ದಿವಸ್ತದು ಪ್ರಯಕ್ಷತಮಮುಸ್ಯ ಕರ್ಮಾತ್ಮನ್ವನ್ನಭೋ ದುಹ್ಯತೇ ಘೃತಂ ಪಯ ಉತ್ತಿಷ್ಠ ಬ್ರಹ್ಮಣಸ್ಪತೇಽಧುಕ್ಷತ್ಪಿಪ್ಯುಷೀಮಿಷಮುಪದ್ರವ ಪಯಸಾ ಗೋಧುಗೋಷಮಾ ಸುತೇ ಸಿಂಚತ ಶ್ರಿಯಮಾನೂನಮಶ್ವಿನೋರ್ಋಷಿಃ ಸಮುತ್ಯೇ ಮಹತೀರಪ ಇತ್ಯೇಕವಿಂಶತಿರಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥

ಏಕವಿಂಶತಿಸಂಖ್ಯಾಕಾ ಋಚಸ್ತತ್ತತ್ಪ್ರತೀಕಗ್ರಹಣೇನ ವಿಧತ್ತೇ— ವಿಹಿತಾಸ್ವೃಕ್ಷು ಉಪಹ್ವಯ ಇತಿ ಪ್ರಥಮಾ ॥ ಹಿಂ ಕೃಣ್ವತೀತಿ ದ್ವಿತೀಯಾ । ಅಭಿತ್ವೇತಿ ತೃತೀಯಾ । ಸಮೀವತ್ಸಮಿತಿ ಚತುರ್ಥೀ । ಸಂವತ್ಸರ ಇವೇತಿ— ಪಂಚಮೀ । ಯಸ್ತೇ ಸ್ತನ ಇತಿ ಷಷ್ಠೀ । ಗೌರಮೀಮೇದಿತಿ ಸಪ್ತಮೀ ॥ ನಮಸೇದಿತ್ಯಷ್ಟಮೀ । ಸಂಜಾನಾನಾ ಇತಿ ನವಮೀ । ಆದಶಭಿರಿತಿ-ದಶಮೀ । ದುಹಂತಿ ಸಪ್ತೈಕಾಮಿತ್ಯೇಕಾದಶೀ । ಸಮಿದ್ಧೋ ಅಗ್ನಿರಶ್ವಿನೇತಿ ದ್ವಾದಶೀ । ಸಮಿದ್ಧೋ ಅಗ್ನಿರ್ವೃಷಣಾ ರತಿರ್ದಿವ ಇತಿ ತ್ರಯೋದಶಿ ॥ ಏತದುಭಯಂ ಶಾಖಾಂತರಗತಮಾಶ್ವಲಾಯನೇವ ಪಠಿತಂ ॥ ತದು ಪ್ರಯಕ್ಷತಮಮಿತಿ ಚತುರ್ದಶೀ ॥ ಆತ್ಮನ್ವನ್ನಿತಿ ಪಂಚದಶೀ ॥ ಉತ್ತಿಷ್ಠೇತಿ ಷೋಡಶೀ ॥ ತಸ್ಯಾ ವಿನಿಯೋಗಮಾಶ್ವಲಾಯನ ಆಹ— ಉತ್ತಿಷ್ಠ ಬ್ರಹ್ಮಣಸ್ಪತ ಇತ್ಯೇತಾಮುಕ್ತ್ವಾಽವತಿಷ್ಠತ ಇತಿ ಅಧುಕ್ಷದಿತಿ ಸಪ್ತದಶೀ । ತದ್ವಿನಿಯೋಗಮಾಹ— ದುಗ್ಧಾಯಾಮಧುಕ್ಷದಿತಿ ॥ ಉಪದ್ರವೇತ್ಯಷ್ಟಾದಶೀ । ತದ್ವಿನಿಯೋಗಂ ಚಾಹ— ಅಹ್ರಿಯಮಾಣ ಉಪದ್ರವೇತಿ । ಸೇಯಂ ಶಾಖಾಂತರಗತತ್ವಾದಾಶ್ವಲಾಯನೇನ ಪಠಿತಾ ॥ ಆಸುತ ಇತ್ಯೇಕೋನವಿಂಶೀ । ಆನೂನಮಿತಿವಿಂಶೀ । ಅನಯೋರ್ವ್ಯತ್ಯಯೇನ ಪ್ರಯೋಗಮಾಹ— ಆಸಿಚ್ಯಮಾನ ಆನೂನಮಶ್ವಿನೋರ್ಋಷಿರಿತಿ ಗವ್ಯ ಆಸುತೇ ಸಿಂಚತ ಶ್ರಿಯಮಿತ್ಯಾಜ ಇತಿ । ಸಮುತ್ಯ ಇತ್ಯೇಕವಿಂಶೀ । ತದ್ವಿನಿಯೋಗಂ ಚಾಹ— ಆಸಿಕ್ತಯೋಃ ಸಮುತ್ಯ ಇತಿ ಸೇಯಮೃಚಾಮೇಕವಿಂಶತಿರ್ಘರ್ಮದುಹೋ ಧೇನೋರ್ದೋಹನಸ್ಯಾನುರೂಪಾ ॥ ತಾಸ್ವೃಕ್ಷು ದೋಹನೋಚಿತಾನಾಂ ದೃಶ್ಯಮಾನತ್ವಾತ್ ॥

ಈಗ ಹೋತೃವು ಉತ್ತರಾರ್ಧದಲ್ಲಿ ಪಠಿಸಬೇಕಾದ ೨೧ ಮಂತ್ರಗಳನ್ನು ಪಠಿಸುವನು—

(೧) ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ ।
ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥
(ಋ.ಸಂ. ೧-೧೬೪-೨೬)

(೨) ಹಿಂಕೃಣ್ವತೀ ವಸುಪತ್ನೀ ವಸೂನಾಂ ವತ್ಸಮಿಚ್ಛಂತೀ ಮನಸಾಭ್ಯಾಗಾತ್ ।
ದುಹಾಮಶ್ವಿಭ್ಯಾಂ ಪಯೋ ಅಘ್ನ್ಯೇಯಂ ಸಾ ವರ್ಧತಾಂ ಮಹತೇ ಸೌಭಗಾಯ ॥
(ಋ. ಸಂ. ೧-೧೬೪-೨೭)

(೩) ಅಭಿ ತ್ವಾ ದೇವ ಸವಿತರೀಶಾನಂ ವಾರ್ಯಾಣಾಂ ।
ಸದಾವನ್ ಭಾಗಮೀಮಹೇ ॥ (ಋ. ಸಂ. ೧-೨೪-೩)

(೪) ಸಮೀ ವತ್ಸಂ ನ ಮಾತೃಭಿಃ ಸೃಜತಾ ಗಯಸಾಧನಂ ।
ದೇವಾವ್ಯಂ೧ ಮದಮಭಿ ದ್ವಿಶವಸಂ ॥ (ಋ. ಸಂ. ೯-೧೦೪-೨)

(೫) ಸಂ ವತ್ಸ ಇವ ಮಾತೃಭಿರಿಂದುರ್ಹಿನ್ವಾನೋ ಅಜ್ಯತೇ ।
ದೇವಾವೀರ್ಮದೋ ಮತಿಭಿಃ ಪರಿಷ್ಕೃತಃ ॥ (ಋ. ಸಂ. ೧-೧೦೫-೨)

(೬) ಯಸ್ತೇ ಸ್ತನಃ ಶಶಯೋ ಯೋ ಮಯೋಭೂರ್ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ ।
ಯೋ ರತ್ನಧಾ ವಸುವಿದ್ಯಃ ಸುದತ್ರಃ ಸರಸ್ವತಿ ತಮಿಹ ಧಾತವೇ ಕಃ ॥
(ಋ. ಸಂ. ೧-೧೬೪-೪೯)

(೭) ಗೌರಮೀಮೇದನು ವತ್ಸಂ ಮಿಷಂತಂ ಮೂರ್ಧಾನಂ ಹಿಙ್ಙಕೃಣೋನ್ಮಾತವಾ ಉ ।
ಸೃಕ್ವಾಣಂ ಘರ್ಮಮಭಿ ವಾವಶಾನಾ ಮಿಮಾತಿ ಮಾಯುಂ ಪಯತೇ ಪಯೋಭಿಃ ॥
(ಋ. ಸಂ. ೧-೧೬೪-೨೮)

(೮) ನಮಸೇದುಪ ಸೀದತ ದಧ್ನೇದಭಿ ಶ್ರೀಣೀತನ ।
ಇಂದುಮಿಂದ್ರೇ ದಧಾತನ ॥ (ಋ. ಸಂ. ೯-೧೧-೬)

(೯) ಸಂಜಾನಾನಾ ಉಪ ಸೀದನ್ನಭಿಜ್ಞು ಪತ್ನೀವಂತೋ ನಮಸ್ಯಂ ನಮಸ್ಯನ್ ।
ರಿರಿಕ್ವಾಂಸಸ್ತನ್ವಃ ಕೃಣ್ವತ ಸ್ವಾಃ ಸಖಾ ಸಖ್ಯುರ್ನಿಮಿಷಿ ರಕ್ಷಮಾಣಾಃ ॥
(ಋ. ಸಂ. ೧-೭೨-೫)

(೧೦) ಆ ದಶಭಿರ್ವಿವಸ್ವತ ಇಂದ್ರಃ ಕೋಶಮಚುಚ್ಯವೀತ್ ।
ಖೇದಯಾ ತ್ರಿವೃತಾ ದಿವಃ ॥ (ಋ. ಸ. ೮-೭೨-೮)

(೧೧) ದುಹಂತಿ ಸಪ್ತೈಕಾಮುಪ ದ್ವಾ ಪಂಚ ಸೃಜತಃ ।
ತೀರ್ಥೇ ಸಿಂಧೋರಧಿ ಸ್ವರೇ ॥ (ಋ. ಸಂ. ೮-೭೨-೭)

(೧೨) ಸಮಿದ್ಧೋ ಅಗ್ನಿರಶ್ವಿನಾ ತಪ್ತೋ ಘರ್ಮೋ ವಿರಾಟ್ಸುತಃ ।
ದುಹೇ ಧೇನುಃ ಸರಸ್ವತೀ ಸೋಮಗ್ಂ ಶುಕ್ರಮಿಹೇಂದ್ರಿಯಂ ॥

(ವಾ. ಸಂ. ೨೦-೫೫ ; ತೈ. ಬಾ. ೨-೬-೧೨-೧ ; ಅಥ. ಸಂ. ೭-೭೩-೨ ; ಕಾಠಸ. ೩೮-೮೮ ; ಮೈತ್ರಾ.ಸಂ. (೩-೧೧-೧೩)

(೧೩) ಸಮಿದ್ಧೋ ಅಗ್ನಿರ್ವೃಷಣಾ ರಥೀ (ರತಿರ್) ದಿವಸ್ತಪ್ತೋ ಘರ್ಮೋ ದುಹ್ಯತೇವಾಮಿಷೇಮಧು।
ವಯಂ ಹಿ ವಾಂ ಪುರುದಮಾಸೋ ಅಶ್ವಿನಾ ಹವಾಮಹೇ ಸಧಮಾದೇಷು ಕಾರವಃ ॥
(ಅಥ. ಸಂ. ೭-೭೩-೧)

(೧೪) **ತದು ಪ್ರಯಕ್ಷತಮಮಸ್ಯ ಕರ್ಮ ದಸ್ಮಸ್ಯ ಚಾರುತಮಮಸ್ತಿ ದಂಸಃ।**
**ಉಪಹ್ವರೇ ಯದುಪರಾ ಅಪಿನ್ವನ್ಮಧ್ವರ್ಣಸೋ ನದ್ಯಶ್ಚತಸ್ರಃ ॥** (ಋ. ಸಂ. ೧-೬೨-೬)

(೧೫) **ಆತ್ಮನ್ವನ್ನಭೋ ದುಹ್ಯತೇ ಘೃತಂ ಪಯ ಋತಸ್ಯ ನಾಭಿರಮೃತಂ ವಿ ಜಾಯತೇ ।**
**ಸಮೀಚೀನಾಃ ಸುದಾನವಃ ಪ್ರೀಣಂತಿ ತಂ ನರೋ ಹಿತಮವ ಮೇಹಂತಿ ಪೇರವಃ ॥**
(ಋ. ಸಂ. ೯-೭೪-೪)

(೧೬) **ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।**
**ಉಪ ಪ್ರ ಯಂತು ಮರುತಃ ಸುದಾನವ ಇಂದ್ರ ಪ್ರಾಶೂರ್ಭವಾ ಸಚಾ ॥**
(ಋ. ಸಂ. ೧-೪೦-೧)

(೧೭) **ಅಧುಕ್ಷತ್ ಪಿಪ್ಯುಷೀಮಿಷಮೂರ್ಜಂ ಸಪ್ತಪದೀಮರಿಃ ।**
**ಸೂರ್ಯಸ್ಯ ಸಪ್ತ ರಶ್ಮಿಭಿಃ ॥** (ಋ. ಸಂ. ೮-೭೨-೧೬)

(೧೮) **ಉಪ ದ್ರವ ಪಯಸಾ ಗೋಧುಗೋಷಮಾ ಘರ್ಮೇ ಸಿಂಚ ಪಯ ಉಸ್ರಿಯಾಯಾಃ ।**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನುಪ್ರಯಾಣಮುಷಸೋ ವಿ ರಾಜತಿ ॥**
(ಅಥ. ಸಂ. ೭-೭೩-೬)

(೧೯) **ಆ ಸುತೇ ಸಿಂಚತ ಶ್ರಿಯಂ ರೋದಸ್ಯೋರಭಿಶ್ರಿಯಂ ।**
**ರಸಾ ದಧೀತ ವೃಷಭಂ ॥** (ಋ. ಸಂ. ೮-೭೨-೧೩)

(೨೦) **ಆ ನೂನಮಶ್ವಿನೋರೃಷಿಃ ಸ್ತೋಮಂ ಚಿಕೇತ ವಾಮಯಾ ।**
**ಆ ಸೋಮಂ ಮಧುಮತ್ತಮಂ ಘರ್ಮಂ ಸಿಂಚಾದಥರ್ವಣಿ ॥** (ಋ. ಸಂ. ೮-೯-೭)

(೨೧) **ಸಮು ತ್ಯೇ ಮಹತೀರಪಃ ಸಂ ಕ್ಷೋಣೀ ಸಮು ಸೂರ್ಯಂ ।**
**ಸಂ ವಜ್ರಂ ಪರ್ವಶೋ ದಧುಃ ॥** (ಋ. ಸಂ. ೮-೭-೨೨)

ಈ ಇಪ್ಪತ್ತೊಂದು ಋಕ್ಕುಗಳಲ್ಲಿ—**ಉಪಹ್ವಯೇ** ಎಂಬ ಮೊದಲನೆಯ ಋಕ್ಕಿನಿಂದ ಹಾಲು ಕರೆಯುವುದಕ್ಕಾಗಿ ಅಧ್ವರ್ಯುವು ಗೋವನ್ನು ಆಹ್ವಾನಿಸುವನು; **ಸಮಿದ್ಧೋ ಅಗ್ನಿರಶ್ವಿನಾ** ಮತ್ತು **ಸಮಿದ್ಧೋ ಅಗ್ನಿರ್ವೃಷಣಾ ರತಿರ್ದಿವಃ** ಎಂಬ ೧೨ ಮತ್ತು ೧೩ ನೆಯ ಋಕ್ಕುಗಳು ಋಗ್ವೇದದಲ್ಲಿಲ್ಲವೆಂದೂ ಶಾಖಾಂತರಗಳಲ್ಲಿವೆಯೆಂದೂ ಆಶ್ವಲಾಯನರು ಹೇಳಿದಾರೆ. (ಆಶ್ವ. ಶ್ರೌ. ಸೂ. ೪-೭-೪); **ಉತ್ತಿಷ್ಠ** ಎಂಬ ಹದಿನಾರನೇ ಋಕ್ಕಿನವರೆಗೂ ಹೇಳಿ ಅಧ್ವರ್ಯುವು ಎದ್ದು ನಿಂತುಕೊಳ್ಳಬೇಕೆಂದು ಆಶ್ವಲಾಯನರು—**ಉತ್ತಿಷ್ಠ ಬ್ರಹ್ಮಣಸ್ಪತ ಇತ್ಯೇತಾ ಮುಕ್ತ್ವಾವತಿಷ್ಠತೇ** (ಆಶ್ವ. ಶ್ರೌ. ಸೂ. ೪-೭-೪) ಹೇಳಿದಾರೆ; **ಅಧುಕ್ಷತ್** ಎಂಬ ೧೭ ನೇ ಋಕ್ಕನ್ನು ಪಠಿಸಿ (ದುಗ್ಧಾಯಾಮಧುಕ್ಷತ್–ಆಶ್ವ. ಶ್ರೌ. ಸೂ. ೪-೭-೪) ಹಾಲನ್ನು ಕರೆಯಬೇಕು; **ಉಪದ್ರವ** ಎಂಬ ಹದಿನೆಂಟನೆಯ ಮಂತ್ರವು ಶಾಖಾಂತರದಲ್ಲಿರುವುದೆಂದು ಹೇಳಿದಾರೆ; **ಆಸುತೇ** ಮತ್ತು **ಆ ನೂನಮಶ್ವಿನೋರೃಷಿಃ** ಎಂಬ ೧೯ ಮತ್ತು ೨೦ ನೇ ಋಕ್ಕುಗಳನ್ನು ಹಾಲುಕರೆಯುವಾಗ ಚೆಲ್ಲದಂತೆ ಎಂದರೆ ಕೆಳಗೆ ಬೀಳದಂತೆ ಇರುವುದಕ್ಕಾಗಿ ಪಠಿಸಬೇಕೆಂದು ಹೇಳಿದಾರೆ. (ಆಶ್ವ. ಶ್ರೌ. ಸೂ. ೪-೭-೪) ಹಾಲುಕರೆಯುವಾಗ ಕೆಳಗೆ ಸ್ವಲ್ಪಭಾಗವು ಚೆಲ್ಲಿಹೋದಲ್ಲಿ **ಸಮುತ್ಯೇ** ಎಂಬ ಇಪ್ಪತ್ತೊಂದನೆಯ ಋಕ್ಕನ್ನು ಪಠಿಸಬೇಕೆಂದು ಹೇಳಿದಾರೆ. ಈ ಇಪ್ಪತ್ತೊಂದು ಋಕ್ಕುಗಳೂ ಘರ್ಮಪಾತ್ರೆಯಲ್ಲಿ ಹಾಕುವುದಕ್ಕಾಗಿ ಗೋವಿನಿಂದ ಹಾಲಕರೆಯುವಾಗ ಹೇಳುವ ಋಕ್ಕುಗಳು. ಈ ಮಂತ್ರಗಳು ಹಾಲುಕರೆಯುವ ವಿಷಯದಲ್ಲಿ ಆದಕ್ಕೆ ಸಂಬಂಧಪಟ್ಟ ಅರ್ಥವಿವರಣೆಗಳನ್ನೊಳಗೊಂಡಿರುವುದರಿಂದ ಈ ಮಂತ್ರಗಳು ಗೋದೋಹನಮಂತ್ರಕ್ಕೆ ಅನುರೂಪವಾದವು.

ಉದು ಷ್ಯ ದೇವಃ ಸವಿತಾ ಹಿರಣ್ಯಯೇತ್ಯನೂತ್ತಿಷ್ಠತಿ ಪ್ರೈತು ಬ್ರಹ್ಮ-ಣಸ್ಪತಿರಿತ್ಯನುಪ್ರೈತಿ ಗಂಧರ್ವ ಇತ್ಥಾ ಪದಮಸ್ಯ ರಕ್ಷತೀತಿ ಖರಮವೇಕ್ಷತೇ: ನಾಕೇ ಸುಪರ್ಣಮುಪಯತ್ಪತಂತಮಿತ್ಯುಪ-ವಿಶತಿ ತಪ್ತೋ ವಾಂ ಘರ್ಮೋ ನ ಕ್ಷತಿಃ ಸ್ವಹೋತೋಭಾ ಪಿಬತಮಶ್ವಿನೇತಿ ಪೂರ್ವಾಹಣೇ ಯಜತಿ ।

ಅಥ ಷಣ್ಣಾಮೃಚಾಂ ಪ್ರತೀಕಾನಿ ಕ್ರಮೇಣಾದಾಯ ತದ್ವಿನಿಯೋಗಂ ದರ್ಶಯತಿ— ಮಹಾವೀರಮಾದಾಯೋತ್ತಿಷ್ಠತ್ಸ್ವನ್ಯೇಷು ಹೋತೋದುಷ್ಯ ದೇವ ಇತ್ಯನೇನ ಮಂತ್ರೇಣ ತಾನನೂತ್ತಿಷ್ಠೇತ್ ॥ ತೇಷು ಗಚ್ಛತ್ಸು ಮಂತ್ರೇಣಾನುಗಚ್ಛೇತ್ ॥ ಖರಃ ಪ್ರವೃಂಜನಸ್ಥಾನಂ ॥ ತಪ್ತೋ ವಾಮಿತ್ಯೇಷಾ ಶಾಖಾಂತರಗತತ್ವಾತ್ಸೂತ್ರಕಾರೇಣ ಪಠಿತಾ ॥ ಉಭಾ ಪಿಬತಮಿತಿ ಸ್ವಶಾಖಾಗತಾ ತಾಭ್ಯಾಮುಭಾಭ್ಯಾಂ ಪೂರ್ವಾಹ್ಣೇ ಯಜತಿ॥ ತದುಭಯಂ ಯಾಜ್ಯಾರೂಪೇಣ ಪಾಠೇನ ಪಠೇತ್ ॥ ಪ್ರವರ್ಗ್ಯಸ್ಯ ಕಾಲದ್ವಯೇಽಪ್ಯನುಷ್ಠೇಯತ್ವಾತ್ಪೂರ್ವಾಹ್ಣ ಇತಿ ವಿಶೇಷ್ಯತೇ॥

ಈಗ ಹೋತೃವು ಇನ್ನು ಆರು ಋಕ್ಕುಗಳನ್ನು ಪಠಿಸಿ ಅದಕ್ಕನುಸಾರವಾಗಿ ಕರ್ತವ್ಯಕರ್ಮವನ್ನು ನೇರವೇರಿಸುವನು. ಮೊದಲು-ಗೋದೋಹನಾನಂತರ ಅಧ್ವರ್ಯು ಮೊದಲಾದವರು ಆ ಕೆಲಸವನ್ನು ಮುಗಿಸಿ ಎದ್ದಮೇಲೆ ಹೋತೃವು—

ಉದು ಷ್ಯ ದೇವಃ ಸವಿತಾ ಹಿರಣ್ಯಯಾ ಬಾಹೂ ಅಯಂಸ್ತ ಸವನಾಯ ಸುಕ್ರತುಃ ।
ಘೃತೇನ ಪಾಣೀ ಅಭಿ ಪ್ರುಷ್ಣುತೇ ಮಖೋ ಯುವಾ ಸುದಕ್ಷೋ ರಜಸೋ ವಿಧರ್ಮಣಿ ॥

(ಋ.ಸಂ. ೬-೭೧-೧)

ಎಂಬ ಋಕ್ಕನ್ನು ಪಠಿಸಿ ಅಧ್ವರ್ಯು ಮೊದಲಾದವರ ಹಿಂದುಗಡೆ ನಿಂತುಕೊಳ್ಳಬೇಕು. ಅವರು ಮುಂದೆ ಹೋದನಂತರ—

ಪ್ರೈತು ಬ್ರಹ್ಮಣಸ್ಪತಿಃ ಪ್ರ ದೇವ್ಯೇತು ಸೂನೃತಾ ।
ಅಚ್ಛಾ ವೀರಂ ನರ್ಯಂ ಪಂಕ್ತಿರಾಧಸಂ ದೇವಾ ಯಜ್ಞಂ ನಯಂತು ನಃ ॥

ಎಂಬ ಋಕ್ಕನ್ನು ಪಠಿಸಿ ಅವರನ್ನನುಸರಿಸಿ ಹಿಂದೆ ಹೋಗಬೇಕು. ಖರವೆಂದರೆ ಪ್ರವರ್ಗ್ಯ ಅಥವಾ ಘರ್ಮ (ಮಹಾವೀರ) ಪಾತ್ರೆಯನ್ನು ಇಡುವ ಪ್ರದೇಶ. ಇದನ್ನು ಭೂಮಿಯಲ್ಲಿ ಸ್ವಲ್ಪ ಹಳ್ಳಮಾಡಿ ಅದರಲ್ಲಿ ಮರಳನ್ನು ತುಂಬಿ ಸಿದ್ಧಪಡಿಸಿರುವರು. ಈ ಖರಪ್ರದೇಶದಲ್ಲಿ ಘರ್ಮಪಾತ್ರೆಯನ್ನು ಕಾಯಿಸುವರು.

ಯತ್ರ ದೇಶೇ ಮಹಾವೀರಃ ಸಾದಿತಃ ಸ ಖರೋ ಮತಃ ।
ಅಭಿಷ್ಟುವಂಸ್ತು ಗಂಧರ್ವಂ ಇತಿ ನೈ ಖರಮೀಕ್ಷತೇ ॥

ಈ ಖರಪ್ರದೇಶವನ್ನು ನೋಡುತ್ತಾ ಹೋತೃವು—

ಗಂಧರ್ವ ಇತ್ಥಾ ಪದಮಸ್ಯ ರಕ್ಷತಿ ಪಾತಿ ದೇವಾನಾಂ ಜನಿಮಾನ್ಯದ್ಭುತಃ ।
ಗೃಭ್ಣಾತಿ ರಿಪುಂ ನಿಧಯಾ ನಿಧಾಪತಿಃ ಸುಕೃತ್ತಮಾ ಮಧುನೋ ಭಕ್ಷಮಾಶತ ॥

(ಋ. ಸಂ. ೯-೮೩-೪)

ಎಂಬ ಋಕ್ಕನ್ನು ಪಠಿಸುವನು. ಅನಂತರ—

**ನಾಕೇ ಸುಪರ್ಣಮುಪ ಯತ್ಪತಂತಂ ಹೃದಾ ವೇನಂತೋ ಅಭ್ಯಚಕ್ಷತ ತ್ವಾ ।**
**ಹಿರಣ್ಯಪಕ್ಷಂ ವರುಣಸ್ಯ ದೂತಂ ಯಮಸ್ಯ ಯೋನೌ ಶಕುನಂ ಭುರಣ್ಯುಂ ॥**

(ಋ. ಸಂ. ೧೦-೧೨೩-೬)

ಎಂಬ ಋಕ್ಕನ್ನು ಪಠಿಸಿ ತನ್ನ ಸ್ಥಾನದಲ್ಲಿ ಕುಳಿತುಕೊಳ್ಳುವನು. ಅನಂತರ—

**ತಪ್ತೋ ವಾಂ ಘರ್ಮೋ ನಕ್ಷತು ಸ್ವಹೋತಾ ಪ್ರ ವಾಮಧ್ವರ್ಯುಶ್ಚರತು ಪಯಸ್ವಾನ್ ।**
**ಮಧೋರ್ದುಗ್ಧಸ್ಯಾಶ್ವಿನಾ ತನಾಯಾ ವೀತಂ ಪಾತಂ ಪಯಸ ಉಸ್ರಿಯಾಯಾಃ ॥**

(ಅಥ. ಸಂ. ೭-೭೩-೫)

**ಉಭಾ ಪಿಬತಮಶ್ವಿನೋಭಾ ನಃ ಶರ್ಮ ಯಚ್ಛತಂ ।**
**ಅವಿದ್ರಿಯಾಭಿರೂತಿಭಿಃ ॥** (ಋ. ಸಂ. ೧-೪೬-೧೫)

ಎಂಬ ಈ ಎರಡು ಮಂತ್ರಗಳನ್ನು ಯಾಜ್ಯಾಮಂತ್ರಗಳನ್ನಾಗಿ ಪಠಿಸಿ ಪೂರ್ವಾಹ್ಣದಲ್ಲಿ ಹೋಮಮಾಡುವನು. ಪ್ರವರ್ಗ್ಯಕರ್ಮವು ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲ ಎಂಬ ಎರಡು ವೇಳೆಗಳಲ್ಲಿಯೂ ನಡೆಯುವುದರಿಂದ ಇಲ್ಲಿ **ಪೂರ್ವಾಹ್ಣೇ**—ಪ್ರಾತಃಕಾಲದಲ್ಲಿ ಎಂದು ಪ್ರತ್ಯೇಕಿಸಿ ಹೇಳಲಾಗಿದೆ.

## ಅಗ್ನೇ ವೀಹೀತ್ಯನುವಷಟ್ಕರೋತಿ ಸ್ವಿಷ್ಟಕೃದ್ಭಾಜನಂ ।

**ವಿನಿಯೋಗಸಹಿತಂ ಮಂತ್ರಾಂತರಂ ವಿಧತ್ತೇ—ಪೂರ್ವೋಕ್ತಯೋರ್ಯಾಜ್ಯಯೋಃ ಪಾಠಾಂತೇ ವೌಷಡಿತಿ ಯತ್ಪಠನಂ ಸೋಽಯಮನುವಷಟ್ಕಾರಃ ॥ ಏತಂ ಮಂತ್ರಂ ಹೋತಾ ಪಠೇತ್ ॥ ಹೇಽಗ್ನೇ ವೀಹಿ ಖಾದ ಭಕ್ಷಯೇತ್ಯರ್ಥಃ ॥ ಘರ್ಮಸ್ಯ ಯಜೇತ್ಯಧ್ವರ್ಯುಣಾ ಪ್ರೇಷಿತೋ ಹೋತಾ ಪೂರ್ವೋಕ್ತಯಾಜ್ಯಾದ್ವಯಂ ಸವಷಟ್ಕಾರಂ ಯದಾ ಪಠತಿ ತದಾನೀಮಧ್ವರ್ಯುರಶ್ವಿನಾ ಘರ್ಮಂ ಪಾತಮಿತಿ ಮಂತ್ರೇಣ ಜುಹೋತಿ ॥ ಪುನರಪ್ಯಗ್ನೇ ವೀಹೀತಿ ಹೋತ್ರಾ ಪಠಿತೇ ಸತ್ಯಧ್ವರ್ಯುಃ ಸ್ವಾಹೇಂದ್ರಾವಡಿತಿ ಜುಹೋತಿ ॥ ತದೇತತ್ಸರ್ವಮಾಪಸ್ತಂಬ ಆಹ—“ಆಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೇಷ್ಯತಿ ಘರ್ಮಸ್ಯ ಯಜೇತ್ಯಶ್ವಿನಾ ಘರ್ಮಂ ಪಾತಮಿತಿ ವಷಟ್ಕೃತೇ ಜುಹೋತಿ ॥ ಸ್ವಾಹೇಂದ್ರಾವಡಿತ್ಯನುವಷಟ್ಕೃತೇ” ಇತಿ ॥ ಯದೇತದನುವಷಟ್ಕಾರೇ ಯಜನಂ ತದೇತತ್ಸ್ವಿಷ್ಟಕೃದ್ಭಾಜನಂ ಸ್ವಿಷ್ಟಕೃತ್ಸ್ಥಾನೀಯಮಿತ್ಯರ್ಥಃ ॥**

ಅನಂತರ ಹೋತೃವು ಮತ್ತೊಂದು ಮಂತ್ರವನ್ನು ಪಠಿಸುವನು—ಮೇಲೆ ಹೇಳಿದ **ತಪ್ತೋ ವಾಂ** ಮತ್ತು **ಉಭಾ ಪಿಬತಂ** ಎಂಬ ಎರಡು ಯಾಜ್ಯಾಮಂತ್ರಗಳ ಕೊನೆಯಲ್ಲಿ ವೌಷಟ್ ಎಂದು ಉಚ್ಚರಿಸಿದ ವಷಟ್ಕಾರವು ಮೊದಲನೆಯ ವಷಟ್ಕಾರವು. ಅನಂತರ **ಅಗ್ನೇ ವೀಹಿ ವೌಷಟ್** ಎಂಬ ಮಂತ್ರವನ್ನು ಉಚ್ಚರಿಸಿ ಹೋಮಮಾಡುವ ವಷಟ್ಕಾರವು ಅನುವಷಟ್ಕಾರವೆಂದು ಹೇಳಲ್ಪಡುವುದು. ಈ ಮಂತ್ರವನ್ನು ಹೋತೃವು ಪಠಿಸಬೇಕು. ಎಲೈ ಅಗ್ನಿಯೇ ಇದನ್ನು ಭಕ್ಷಿಸು ಎಂದು ಈ ಮಂತ್ರದ ಅರ್ಥವು. ಅಧ್ವರ್ಯುವು ಹೋತೃವನ್ನುದ್ದೇಶಿಸಿ **ಘರ್ಮಸ್ಯ ಯಜ** ಎಂಬ ಪ್ರೈಷಮಂತ್ರವನ್ನು ಉಚ್ಚರಿಸಿದ ಕೂಡಲೇ ಹೋತೃವು ಹಿಂದೆ ಹೇಳಿದ ಎರಡು ಯಾಜ್ಯಾಮಂತ್ರಗಳಿಂದ ವಷಟ್ಕಾರಸಹಿತವಾಗಿ ಹೋಮಮಾಡಿದಾಗ ಅಧ್ವರ್ಯುವು **ಅಶ್ವಿನಾ ಘರ್ಮಂ ಪಾತಂ** ಎಂಬ ಮಂತ್ರದಿಂದ ಹೋಮಮಾಡುವನು. ಮತ್ತೆ ಹೋತೃವು **ಅಗ್ನೇ ವೀಹಿ** ಎಂಬ

ಮಂತ್ರದಿಂದ ಅನುವಷಟ್ಕಾರಸಹಿತವಾಗಿ ಹೋಮಮಾಡಿದಾಗ ಅಧ್ವರ್ಯುವು **ಸ್ವಾಹೇಂದ್ರಾವಟ್** ಎಂಬ ಮಂತ್ರದಿಂದ ಹೋಮಮಾಡುವನು. ಈ ವಿವರವನ್ನೆಲ್ಲಾ ಆಪಸ್ತಂಬ ಋಷಿಯು—**ಆಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೇಷ್ಯತಿ ಘರ್ಮಸ್ಯ ಯಜೇತ್ಯಶ್ವಿನಾ ಘರ್ಮಂ ಪಾತಮಿತಿ ವಷಟ್ಕೃತೇ ಜುಹೋತಿ । ಸ್ವಾಹೇಂದ್ರಾವಡಿತ್ಯನುವಷಟ್ಕೃತೇ ।** (ಆಪ-ಶ್ರೌ. ಸೂ. ೧೫-೧೦-೧೧) ಎಂದು ಹೇಳಿರುವರು. ಇಲ್ಲಿ ಮಾಡಿರುವ ಅನುವಷಟ್ಕಾರಪೂರ್ವಕವಾದ ಹೋಮವು ಸ್ವಿಷ್ಟಕೃದ್ಧೋಮಕ್ಕೆ ಬದಲಾಗಿ ಇರುವುದು.

**ಯದುಸ್ರಿಯಾಸ್ವಾಹುತಂ ಘೃತಂ ಪಯೋಽಸ್ಯ ಪಿಬತಮಶ್ವಿನೇತ್ಯಪರಾಹ್ಣೇ ಯಜತ್ಯಗ್ನೇಃ ವೀಹೀತ್ಯನುವಷಟ್ಕರೋತಿ ಸ್ವಿಷ್ಟಕೃದ್ಭಾಜನಂ ॥**

ಯಥಾ ಪೂರ್ವಾಹ್ಣೇ ಯಾಜ್ಯಾಪಾಠಸ್ತಥಾಽಪರಾಹ್ಣಕಾಲಾನುಷ್ಠಾನೇಽಪಿ ವಿಧತ್ತೇ—ಯದುಸ್ರಿಯಾ ಸ್ವಾಹುತಮಿತ್ಯೇಷಾ ಶಾಖಾಂತರಗತತ್ವಾದಾಶ್ವಲಾಯನೇನ ಪಠಿತಾ । ಅಸ್ಯ ಪಿಬತಮಿತಿ ಸ್ವಶಾಖಾಗತಾ ॥ ಅನ್ಯತ್ಸರ್ವಂ ಪೂರ್ವವತ್ ॥

ಇದುವರೆಗೆ ಪೂರ್ವಾಹ್ನ (ಪ್ರಾತಃಕಾಲ) ದಲ್ಲಿ ಆಚರಿಸಲ್ಪಡುವ ಯಾಜ್ಯಾಮಂತ್ರಗಳನ್ನು ಹೇಳಿ ಈಗ ಅಪರಾಹ್ಣಕಾಲದಲ್ಲಿ ಅನುಷ್ಠಾನಮಾಡಬೇಕಾದ ಮಂತ್ರವನ್ನು ವಿವರಿಸುವರು.

**ಯದುಸ್ರಿಯಾಸ್ವಾಹುತಂ ಘೃತಂ ಪಯೋಽಯಂ ಸ ವಾಮಶ್ವಿನಾ ಭಾಗ ಆಗತಂ ।**
**ಮಾಧ್ವೀ ಧರ್ತಾರಾ ವಿದಥಸ್ಯ ಸತ್ಪತೀ ತಪ್ತಂ ಘರ್ಮಂ ಪಿಬತಂ ರೋಚನೇ ದಿವಃ ॥**
(ಅಥ. ಸಂ. ೭-೭೩-೪)
**ಅಸ್ಯ ಪಿಬತಮಶ್ವಿನಾ ಯುವಂ ಮದಸ್ಯ ಚಾರುಣಃ ।**
**ಮಧ್ವೋ ರಾತಸ್ಯ ಧಿಷ್ಣ್ಯಾ ॥** (ಋ. ಸಂ. ೮-೫-೧೪)

ಈ ಎರಡು ಋಕ್ಕುಗಳು ಅಪರಾಹ್ಣದಲ್ಲಿ ಉಪಯೋಗಿಸಬೇಕಾದ ಯಾಜ್ಯಾಮಂತ್ರಗಳು. ಉಳಿದ ಕರ್ಮವನ್ನೆಲ್ಲಾ ಪೂರ್ವಾಹ್ನದಂತೆ ಮಾಡಬೇಕು.

**ತ್ರಯಾಣಾಂ ಹ ವೈ ಹವಿಷಾಂ ಸ್ವಿಷ್ಟಕೃತೇನ ಸಮವದ್ಯಂತಿ ಸೋಮಸ್ಯ ಘರ್ಮಸ್ಯ ವಾಜಿನಸ್ಯೇತಿ ಸ ಯದನುವಷಟ್ಕರೋತ್ಯಗ್ನೇರೇವ ಸ್ವಿಷ್ಟಕೃತೋಽನನ್ತರಿತ್ಯೈ ॥**

ಅತ್ರ ಮುಖ್ಯಸ್ವಿಷ್ಟಕೃದ್ರಹಿತತ್ವಾತ್ತಲ್ಲೋಪಮಾಶಂಕ್ಯಾ ಪರಿಹರತಿ—ಸೋಮೋ ವಲ್ಲೀರಸಃ । ಘರ್ಮಃ ಪ್ರವರ್ಗ್ಯಹವಿಃ । ವಾಜಿನಮಾಮಿಕ್ಷಾನುನಿಷ್ಪಾದಿ ನೀರಂ ॥ ಏತೇಷಾಂ ಸ್ವಿಷ್ಟಕೃದರ್ಥಮವಧಾನಂ ನ ಕುರ್ಯುಃ ॥ ನ ಚೈತಾವತಾ ತಲ್ಲೋಪಃ । ಸ ಹೋತಾಽನುವಷಟ್ಕರೋತೀತಿ ಯದಸ್ತಿ ತದೇತತ್ಸ್ವಿಷ್ಟಕೃನ್ನಾಮಕಸ್ಯಾಗ್ನೇ ರನಂತದಿತ್ಯೈ ॥ ಅಂತರಾಯೋಲೋಪಃ ತನ್ನಿವೃತ್ತ್ಯರ್ಥಂ ಭವತಿ ॥

ಈ ಪ್ರವರ್ಗ್ಯಕರ್ಮದಲ್ಲಿ ಸ್ವಿಷ್ಟಕೃದ್ಧೋಮವಿಲ್ಲವೆಂದು ಹೇಳಿದೆಯಷ್ಟೆ. ಆ ಲೋಪಪರಿಹಾರಮಾರ್ಗವನ್ನು ವಿವರಿಸುವರು. ಇಲ್ಲಿ ಮೂರುವಿಧವಾದ ಹವಿಸ್ಸುಗಳ ನಿರ್ದೇಶವಿದೆ. ಸೋಮಃ ಘರ್ಮ; ವಾಜೀ ಎಂದು. ಸೋಮವೆಂದರೆ ಸೋಮಲತೆಯ ರಸವು; ಘರ್ಮವೆಂದರೆ ಘರ್ಮಪಾತ್ರೆಯಲ್ಲಿ ಕಾಯಿಸಿದ ಹಾಲು (ಪ್ರವರ್ಗ್ಯ ಹವಿಸ್ಸು); ವಾಜಿ ಎಂದರೆ ಗಂಜಿ. ಈ ದ್ರವ್ಯಗಳನ್ನು ಯಾಜ್ಯಾಮಂತ್ರಪೂರ್ವಕವಾಗಿಯೇ ಹೋಮಮಾಡುವುದರಿಂದ ಪುನಃ ಸ್ವಿಷ್ಟಕೃದ್ಧೋಮಕ್ಕಾಗಿ ಈ ದ್ರವ್ಯಗಳನ್ನು ಉಪಯೋಗಿಸಬೇಕಾಗಿಲ್ಲ. ಇದಲ್ಲದೆ ಹೋತೃವು ಅಗ್ನೇ ವೀಹಿ ಎಂದು ಅನುವಷಟ್ಕಾರಪೂರ್ವಕವಾಗಿ ಹೋಮಮಾಡುವುದರಿಂದ ಸ್ವಿಷ್ಟಕೃದ್ಧೋಮಮಾಡಿದಂತೆಯೇ ಆಯಿತು. ಕರ್ಮಲೋಪವಾಗಲಿಲ್ಲ.

**ವಿಶ್ವಾ ಆಶಾ ದಕ್ಷಿಣಸಾದಿತಿ ಬ್ರಹ್ಮಾ ಜಪತಿ ।**

**ಅಥ ಬ್ರಹ್ಮಣಃ ಶಾಖಾಂತರಪ್ರಸಿದ್ಧೇನ ಮಂತ್ರೇಣ ಜಪಂ ವಿಧತ್ತೇ—ಇಯಮೃಗಾಶ್ವಲಾಯನೇನ ಪಠಿತಾ ॥**

ಈಗ ಬ್ರಹ್ಮನೆಂಬ ಋತ್ವಿಜನು ವಿಶ್ವಾ ಆಶಾ ದಕ್ಷಿಣಸಾತ್ ಎಂಬ ಮಂತ್ರವನ್ನು ಜಪಿಸುವನು.

**ವಿಶ್ವಾ ಆಶಾ ದಕ್ಷಿಣಸದ್ವಿಶ್ವಾನ್ದೇವಾನಯಾಡಿಹ ।**
**ಸ್ವಾಹಾಕೃತಸ್ಯ ಘರ್ಮಸ್ಯ ಮಧೋಃ ಪಿಬತಮಶ್ವಿನಾ ॥**

(ವಾ. ಸಂ. ೩೮-೧೦; ತೈ. ಆ. ೪-೯; ಮೈ. ಸಂ. ೪-೯-೯)

ಈ ಮಂತ್ರವು ಋಗ್ವೇದದಲ್ಲಿಲ್ಲ. ಶಾಖಾಂತರದಲ್ಲಿರುವುದೆಂದು ಆಶ್ವಲಾಯನರು ಹೇಳಿರುವರು ಅವುಗಳನ್ನು ಮೇಲೆ ಕೊಟ್ಟಿದೆ, ಆದರೆ ಪಾಠಭೇದವಿರುವುದು.

**ಸ್ವಾಹಾಕೃತಃ ಶುಚಿರ್ದೇವೇಷು ಘರ್ಮಃ ಸಮುದ್ರಾದೂರ್ಮಿಮುದಿಯರ್ತಿ ವೇಸೋ ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ । ಸಖೇ ಸಖಾಯಮಭ್ಯಾವವೃತ್ಸ್ವೋರ್ಧ್ವ ಊ ಷು ಣ ಊತಯ ಊರ್ಧ್ವೋ ನಃ ಪಾಹ್ಯಂಹಸಸ್ತಂ ಘೇಮಿತ್ಥಾ ನಮಸ್ವಿನ ಇತ್ಯಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥**

**ಪ್ರಾಸಂಗಿತಂ ಬ್ರಹ್ಮಜಪಂ ವಿಧಾಯ ಹೋಮಾದೂರ್ಧ್ವಂ ಹೋತ್ರಾ ಪಠನೀಯಾ ಋಚಃ ಸಪ್ತ ವಿಧತ್ತೇ—ಸ್ವಾಹಾಕೃತ ಇತ್ಯೇಷಾ ಪ್ರಥಮಾ । ಸಾ ಚ ಶಾಖಾಂತರಗತತ್ವಾದಾಶ್ವಲಾಯನೇನ ಪಠಿತಾ । ಸಮುದ್ರಾ ದೂರ್ಮಿಮಿತಿ ದ್ವಿತೀಯಾ । ದ್ರಪ್ಸಃ ಸಮುದ್ರಮಿತಿ ತೃತೀಯಾ । ಸಖೇ ಸಖಾಯಮಿತಿ ಚತುರ್ಥೀ ॥ ಊರ್ಧ್ವ ಊ ಷು ಣ ಇತಿ ಪಂಚಮೀ । ಘರ್ಮಪ್ರಕಾಶಕತ್ವಾದೇತಾ ಅಭಿರೂಪಾಃ ।**

ಬ್ರಹ್ಮನೆಂಬ ಋತ್ವಿಜನು ವಿಶ್ವಾ ಆಶಾ ಎಂಬ ಮಂತ್ರವನ್ನು ಜಪಮಾಡಿದ ಮೇಲೆ ಹೋಮಾನಂತರ ಹೋತೃವು ಈ ಕೆಳಗೆ ಹೇಳಿರುವ ಏಳು ಋಕ್ಕುಗಳನ್ನು (೨೩) ಪಠಿಸುವನು.

ಸ್ವಾಹಾಕೃತಃ ಶುಚಿರ್ದೇವೇಷು ಯಜ್ಞೋ (ಘರ್ಮೋ) ಯೋ ಅಶ್ವಿನೋಶ್ಚಮಸೋ ದೇವಪಾನಃ।
ತಮು ವಿಶ್ವೇ ಅಮೃತಾಸೋ ಜುಷಾಣಾ ಗಂಧರ್ವಸ್ಯ ಪ್ರತ್ಯಾಸ್ನಾ ರಿಹಂತಿ ॥

(ಅಥ. ಸಂ. ೭-೭೩-೩)

ಸಮುದ್ರಾದೂರ್ಮಿಮುದಿಯರ್ತಿ ವೇನಃ (ಋ. ಸಂ. ೧೦-೧೨೩-೨)
ದ್ರಪ್ಸಃ ಸಮುದ್ರಮಭಿ ಯಜ್ಜಿಗಾತಿ (ಋ. ಸಂ. ೧೦-೧೨೩-೮)
ಸಖೇ ಸಖಾಯಮಭ್ಯಾವವೃತ್ಸ್ವ (ಋ. ಸಂ. ೪-೧-೩)
ಊರ್ಧ್ವ ಊಷುಣ ಊತಯೇ (ಋ. ಸಂ. ೧-೩೬-೧೩)
ಊರ್ಧ್ವೋ ನಃ ಪಾಹ್ಯಂಹಸಃ (ಋ. ಸಂ. ೧-೩೬-೧೪)
ತಂ ಘೇಮಿತ್ಥಾ ನಮಸ್ವಿನಃ (ಋ. ಸಂ. ೮-೬೯-೧೭)

ಈ ಏಳು ಋಕ್ಕುಗಳನ್ನು ಪಠಿಸಿದನಂತರ

ಪಾವಕ ಶೋಚೇ ತವ ಹಿ ಕ್ಷಯಂ ಪರೀತಿ ಭಕ್ಷಮಾಕಾಂಕ್ಷತೇ ।

ಹೋತುರೇಕಯರ್ಚಾ ಪ್ರವರ್ಗ್ಯ ಹವಿಃ ಶೇಷಭಕ್ಷಣಪ್ರತೀಕ್ಷಾಂ ವಿಧತ್ತೇ—

ಪ್ರವರ್ಗ್ಯಹವಿಃಶೇಷವನ್ನು ಭಕ್ಷಿಸುವುದಕ್ಕಾಗಿ

ಪಾವಕಶೋಚೇ ತವ ಹಿ ಕ್ಷಯಂ ಪರಿ (ಋ.ಸಂ. ೩-೨-೬)

ಎಂಬ ಋಕ್ಕಿಂದ ಹವಿಃಶೇಷವನ್ನು ನಿರೀಕ್ಷಿಸಿ

ಹುತಂ ಹವಿರ್ಮಧು ಹವಿರಿಂದ್ರತಮೇಽಗ್ನಾವಶ್ಯಾಮ ತೇ ದೇವ ಘರ್ಮ।ಮಧುಮತಃ ಪಿತುಮತೋ ವಾಜವತೋಽಙ್ಗಿರಸ್ವತೋ ನಮಸ್ತೇ ಅಸ್ತು ಮಾ ಮಾ ಹಿಂಸೀರಿತಿ ಘರ್ಮಸ್ಯ ಭಕ್ಷಯತಿ ।

ಸಮಂತ್ರಕಂ ಭಕ್ಷಣಂ ವಿಧತ್ತೇ—ಅತಿಶಯೇನಾಯಮೈಶ್ವರ್ಯವಾನಿಂದ್ರತಮಸ್ತಾದೃಶೇಽಗ್ನೌ ಪ್ರವರ್ಗ್ಯಾಖ್ಯಂ ಹವಿರ್ಹುತಂ ತಚ್ಚ ಮಧು ಮಾಧುರ್ಯೋಪೇತಂ ಹೇ ಘರ್ಮ ಪ್ರವರ್ಗ್ಯ ದೇವರೂಪ ದೇವ ತೇ ತ್ವದೀಯಂ ಹವಿಃಶೇಷಮಶ್ಯಾಮ ಭಕ್ಷಯೇಮ ॥ ಕೀದೃಶಸ್ಯ ತೇ ಮಧುಮತೋ ಮಾಧುರ್ಯೋಪೇತಸ್ಯ ಪಿತುಮತೋಽನ್ನವತೋಽನ್ನಸಾಧನಸ್ಯ ವಾಜವತೋ ಗತಿಮತಃ ಸ್ವರ್ಗಪ್ರಾಪ್ತಿಸಾಧನಸ್ಯ । ಅಂಗಿರಸ್ವತಃ, ಅಂಗಿರೋಭಿರ್ಮಹರ್ಷಿಭಿರನುಷ್ಠಾನಕಾಲೇ ಭಕ್ಷಿತತ್ವೇನ ತದ್ಯುಕ್ತಸ್ಯ ॥ ಈದೃಶಾಯ ತೇ ತುಭ್ಯಂ ನಮೋಽಸ್ತು । ಮಾಂ ಭಕ್ಷಯಂತಂ ಮಾ ಹಿಂಸೀರಿತ್ಯನೇನ ಮಂತ್ರೇಣ ಘರ್ಮಸ್ಯ ಶೇಷಂ ಭಕ್ಷಯೇತ್ ॥ ಅಯಂ ಮಂತ್ರೋಽನ್ಯೇಷಾಮಪಿ ಭಕ್ಷಯಿತೃಣಾಂ ಸಾಧಾರಣೋಽತ ಏವ ತೈತ್ತಿರೀಯೈರಪ್ಯಾಮ್ನಾತಃ ॥

ಹುತಂ ಹವಿಃ .... .... .... .... ಮಾಮಾಹಿಂಸೀಃ (ತೈ.ಆ. ೪-೧೦-೫) ಎಂಬ ಮಂತ್ರವನ್ನು ಪಠಿಸಿ ಭಕ್ಷಿಸುವನು. ಇತರರೂ ಭಕ್ಷಿಸುವರು. ಇದರ ಅರ್ಥವು—ಅತಿಶಯವಾದ ಪರಮೈಶ್ವರ್ಯಯುಕ್ತವಾದ ಅಗ್ನಿಯಲ್ಲಿ ಪ್ರವರ್ಗ್ಯಾಖ್ಯವಾದ

ಹವಿಸ್ಸು ಹೋಮಮಾಡಲ್ಪಟ್ಟಿದೆ. ಈ ಹವಿಸ್ಸು ಬಹಳ ಮಧುರವಾಗಿದೆ ಎಲೈ ಪ್ರವರ್ಗ್ಯವೆಂಬ ದೇವನೇ, ನಿನ್ನ ಹವಿಶ್ಶೇಷವನ್ನು ನಾವು ಭಕ್ಷಿಸುತ್ತೇವೆ. ಈ ಹವಿಶ್ಶೇಷವು ಮಾಧುರ್ಯೋಪೇತವೂ, ಅನ್ನ (ಆಹಾರ) ರೂಪವಾದುದೂ ಸಂಚಾರಶಕ್ತಿಯುಳ್ಳದ್ದೂ, ಹಿಂದೆ ಅಂಗಿರಾಋಷಿಗಳಿಂದ ಯಜ್ಞಾನುಷ್ಠಾನಕಾಲದಲ್ಲಿ ಭಕ್ಷಿಸಲ್ಪಟ್ಟುದೂ ಆಗಿರುವುದು. ಇಂತಹ ನಿನಗೆ, ಇಗೋ ನಮಸ್ಕಾರವು. ಇದನ್ನು ಭಕ್ಷಿಸುವ ನನ್ನನ್ನು ಹಿಂಸಿಸಬೇಡ ಎಂದು ಇದರ ಅಭಿಪ್ರಾಯವು. ಈ ಮಂತ್ರವನ್ನು ಪಠಿಸಿ ಹವಿಃಶೇಷವನ್ನು ಭಕ್ಷಿಸಬೇಕು.

## ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಮಾ ಯಸ್ಮಿನ್‌ಸಪ್ತ ವಾಸವಾ ಇತಿ ಸಂಸಾದ್ಯಮಾನಾಯಾನ್ವಾಹ ॥

ಅಥ ಹೋತುರ್ಮಂತ್ರದ್ವಯಂ ವಿಧತ್ತೇ—ಶ್ಯೇನೋ ನ ಯೋನಿಮಿತಿ ಪೂರ್ವಾ । ಆ ಯಸ್ಮಿನ್ಸಪ್ತೇತ್ಯಪರಾ ॥ ಸೇಯಂ ಶಾಖಾಂತರಗತತ್ವಾದಾಶ್ವಲಾಯನೇನ ಪಠಿತಾ ॥ ಯದಾ ಪ್ರವರ್ಗ್ಯಪಾತ್ರಾಣಿ ಸಂಸಾದ್ಯಂತೇ ತದಾ ಹೋತಾ ಮಂತ್ರದ್ವಯಮಿದಮನುಬ್ರೂಯಾತ್ ॥

ಹವಿಃಶೇಷವನ್ನು ಭಕ್ಷಿಸಿದನಂತರ ಹೋತೃವು—

ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ ಹಿರಣ್ಯಯಮಾಸದಂ ದೇವ ಏಷತಿ ।
ಏ ರಿಣಂತಿ ಬರ್ಹಿಷಿ ಪ್ರಿಯಂ ಗಿರಾಶ್ವೋ ನ ದೇವಾ ಅಪ್ಯೇತಿ ಯಜ್ಞಿಯಃ ॥
(ಋ.ಸ. ೯-೭೧-೬)

ಎಂಬ ಋಕ್ಕನ್ನೂ

ಆ ಯಸ್ಮಿನ್ತ್ಸಪ್ತ ವಾಸವಾಃ । ರೋಹಂತಿ ಪೂರ್ವ್ಯಾ ರುಹಃ ।
ಋಷಿರ್ಹ ದೀರ್ಘಶ್ರುತ್ತಮಃ । ಇಂದ್ರಸ್ಯ ಘರ್ಮೋ ಅತಿಥಿಃ ॥
(ತೈ.ಆ. ೧-೮-೭, ೮)

ಎಂಬ ಋಕ್ಕನ್ನು ಪಠಿಸಿ ಹವಿಃಶೇಷವಿದ್ದ ಪಾತ್ರೆಯನ್ನು ಕೆಳಗಿಡುವನು.

## ಹವಿರ್ಹವಿಷ್ಮೋ ಮಹಿ ಸದ್ಮ ದೈವಮಿತಿ ಯದಹರುತ್ಸಾದಯಿಷ್ಯಂತೋ ಭವಂತಿ ।

ಬಹುಷು ದಿನೇಷು ಪೂರ್ವಾಹ್ಣಾಪರಾಹ್ಣಯೋಃ ಪ್ರವರ್ಗ್ಯಾಖ್ಯಂ ಕರ್ಮಾನುಷ್ಠೀಯತೇ ತತ್ರೋತ್ತಮದಿನೇಽಪರಾಹ್ಣಕಾಲೀನೇ ಪ್ರವರ್ಗ್ಯೇ ಕಾಂಚಿದೃಚಂ ಅಧಿಕಾಂ ವಿಧತ್ತೇ—ಯದಹರ್ಯಸ್ಮಿನ್ನಹನ್ಯುತ್ಸಾದಯಿಷ್ಯಂತಃ ಪ್ರವರ್ಗ್ಯಮುದ್ವಾಸಯಿತುಮುದ್ಯುಕ್ತಾ ಭವಂತಿ ತಸ್ಮಿನ್ನಹನಿ ಹವಿರ್ಹವಿಷ್ಮ ಇತ್ಯೇತಾಮೃಚಮಧಿಕಾಮುಪೋತ್ತಮರೂಪಾಮಾವಪೇತ ॥

ಈ ಪ್ರವರ್ಗ್ಯವೆಂಬ ಕರ್ಮವನ್ನು ಅನೇಕ ದಿನಗಳ ವರೆಗೆ ಪ್ರಾತಃಕಾಲ ಮತ್ತು ಮಧ್ಯಾಹ್ನಕಾಲಗಳಲ್ಲಿ ಪ್ರತಿದಿನ ಎರಡಾವರ್ತಿ ಮಾಡುತ್ತಿದ್ದು ಕೊನೆಯದಿನ ಮಧ್ಯಾಹ್ನಕಾಲದಲ್ಲಿ ಪ್ರವರ್ಗ್ಯವನ್ನು ಉದ್ವಾಸನೆಮಾಡುವಾಗ,

ಹವಿರ್ಹವಿಷ್ಮೋ ಮಹಿ ಸದ್ಮ ದೈವ್ಯಂ ನಭೋ ವಸಾನಃ ಪರಿ ಯಾಸ್ಯಧ್ವರಂ ।
ರಾಜಾ ಪವಿತ್ರರಥೋ ವಾಜಮಾರುಹಃ ಸಹಸ್ರಭೃಷ್ಟಿರ್ಜಯಸಿ ಶ್ರವೋ ಬೃಹತ್ ॥
(ಋ.ಸಂ. ೯-೮೩-೫)

ಎಂಬ ಮಂತ್ರವನ್ನು ಉಪಾಂತಮಂತ್ರವನ್ನಾಗಿ (ಕೊನೆಯ ಮಂತ್ರದ ಹಿಂದಿನ ಮಂತ್ರವನ್ನಾಗಿ) ಪಠಿಸಬೇಕು.

ಸೂಯವಸಾದ್ಭಗವತೀ ಹಿ ಭೂಯಾ ಇತ್ಯುತ್ತಮಯಾ ಪರಿದಧಾತಿ ॥

ಅಥ ಕಯಾಚಿದೃಚಾಽಭಿಷ್ಟವಸ್ಯ ಸಮಾಪ್ತಿಂ ವಿಧತ್ತೇ— ಆಂತಿಮಾತ್ಪ್ರಾಚೀನೇಷು ಪ್ರವರ್ಗ್ಯೇಷು ಪೂರ್ವೋಕ್ತಾಮಧಿಕಾಮಪ್ರಕ್ಷಿಪ್ಯೈವಾನಯಾ ಪರಿದಧ್ಯಾತ್ ॥ ಅಂತಿಮೇ ತಾಂ ಪ್ರಕ್ಷಿಪ್ಯ ಪಶ್ಚಾದನಯಾ ಪರಿದಧ್ಯಾತ್ ॥ ತದಾಹಾಽಽಶ್ವಲಾಯನಃ— ಸೂಯವಸಾದ್ಭಗವತೀ ಹಿ ಭೂಯಾ ಇತಿ ಪರಿದಧ್ಯಾದುತ್ತಮೇ ಪ್ರಾಗುತ್ತಮಾಯಾ ಹವಿರ್ಹವಿಷ್ಮೋ ಮಹಿ ಸದ್ಮದೈವ್ಯಮಿತ್ಯಾವಪೇತ " ॥ ಇತಿ

ಅನಂತರ ಹೋತೃವು

ಸೂಯವಸಾದ್ಭಗವತೀ ಹಿ ಭೂಯಾ ಅಥೋ ವಯಂ ಭಗವಂತಃ ಸ್ಯಾಮ ।
ಅದ್ಧಿ ತೃಣಮಘ್ನ್ಯೇ ವಿಶ್ವದಾನೀಂ ಪಿಬ ಶುದ್ಧಮುದಕಮಾಚರಂತೀ ॥
(ಋ.ಸಂ. ೧-೧೬೪-೪೦)

ಎಂಬ ಮಂತ್ರವನ್ನು ಪಠಿಸಿ ಈ ಪ್ರವರ್ಗ್ಯಾಖ್ಯಕರ್ಮವನ್ನು ಸಮಾಪ್ತಿಗೊಳಿಸುವನು. ಹಿಂದೆ ಹೇಳಿದಂತೆ ಹವಿರ್ಹವಿಷ್ಮೋ ಎಂಬ ಋಕ್ಕನ್ನು ಉಪಾಂತ್ಯದಲ್ಲಿ ಸೇರಿಸಿ ಪಠಿಸದೆ ಹಾಗೆಯೇ ಬೇಕಾದರೂ ಸೂಯವಸಾತ್ ಎಂಬ ಋಕ್ಕನ್ನು ಮಾತ್ರ ಪಠಿಸಿ ಈ ಪ್ರವರ್ಗ್ಯವನ್ನು ಸಮಾಪ್ತಿಗೊಳಿಸಬಹುದು. ಈ ವಿಷಯದಲ್ಲಿ ಆಶ್ವಲಾಯನರು— ಸೂಯವಸಾದ್ಭಗವತೀ ಹಿ ಭೂಯಾ ಇತಿ ಪರಿದಧ್ಯಾದುತ್ತಮೇ ಪ್ರಾಗುತ್ತಮಾಯಾ ಹವಿರ್ಹವಿಷ್ಮೋ ಮಹಿಸದ್ಮದೈವ್ಯಮಿತ್ಯಾವಪೇತ (ಆಶ್ವ.ಶ್ರೌ. ೪-೭-೪, ೫) ಎಂದು ಹೇಳಿರುವರು.

ತದೇತದ್ದೇವಮಿಥುನಂ ಯದ್ಘರ್ಮಃ ಸ ಯೋ ಘರ್ಮಸ್ತಚ್ಛಿಶ್ನಂ ಯೌ ಶಫೌ ತೌ ಶಫೌ ಯೋಪಯಮನೀ ತೇ ಶ್ರೋಣಿಕಪಾಲೇ ಯತ್ಪಯಸ್ತದ್ರೇತಸ್ತದಿದಮಗ್ನೌ ದೇವಯೋನ್ಯಾಂ ಪ್ರಜನನೇ ರೇತಃ ಸಿಚ್ಯತೇಽಗ್ನಿರ್ವೈ ದೇವಯೋನಿಃಸೋಽಗ್ನೇರ್ದೇವಯೋನ್ಯಾ ಆಹುತಿಭ್ಯಃ ಸಂಭವತಿ ॥

ಅಥ ಪೂರ್ವೋಕ್ತಸ್ಯ ಪ್ರವರ್ಗ್ಯಕರ್ಮಣಃ ಪ್ರಶಂಸಾರ್ಥಂ ಮಿಥುನವ್ಯಾಪಾರಾಕಾರೇಣ ರೂಪಕಂ ದರ್ಶಯತಿ— ಯದ್ಘರ್ಮಃ ಪ್ರವರ್ಗ್ಯಾಖ್ಯಂ ಯತ್ಕರ್ಮಾಸ್ತಿ ತದೇತದ್ದೇವಮಿಥುನಂ ದೇವಸಂಬಂಧಿಮಿಥುನವ್ಯಾಪಾರಃ । ತತ್ಕಥಮಿತಿ ಚೇದುಚ್ಯತೇ । ಸ ಯೋ ಘರ್ಮಃ ಪ್ರವರ್ಗ್ಯಹವಿರಾಶ್ರಯಭೂತೋ ಮಹಾವೀರಾಖ್ಯೋ ಮೃಣ್ಮಯಪಾತ್ರವಿಶೇಷೋ ಯೋ

ಸಾವಸ್ತಿ ತಚ್ಛಿಶ್ನಂ ಪ್ರಜನನೇಂದ್ರಿಯರೂಪಂ । ತಪ್ತಸ್ಯ ಮಹಾವೀರಸ್ಯ ಹಸ್ತಾಭ್ಯಾಂ ಗ್ರಹೀತುಮಶಕ್ಯತ್ವಾತ್ತದ್ಗ್ರಹಣಸಮರ್ಥೋದುಂಬರಕಾಷ್ಠನಿರ್ಮಿತೌ ಶಫೌ ಶಫನಾಮಾನೌ ವಿದ್ಯೇತೇ ತೌ ಪ್ರಜನನೇಂದ್ರಿಯಸ್ಯ ಪಾರ್ಶ್ವವರ್ತಿನೌ ಶಫಾವಿವ ಸಂದೃಶ್ಯೇತೇ ಚೋದುಂಬರಕಾಷ್ಠಾಭ್ಯಾಂ ಶಫನಾಮಕಾಭ್ಯಾಂ ಮಹಾವೀರಸ್ಯ ಮಧ್ಯಮಭಾಗೇ ಧೃತತ್ವಾತ್ ॥ ತಸ್ಯಾಧಸ್ತಾದಾಧಾರಾರ್ಥಮುದುಂಬರಕಾಷ್ಠನಿರ್ಮಿತೋಪಯಮನೀಶಬ್ದವಾಚ್ಯಾ ದರ್ವೀ ಯಾ ವಿದ್ಯತೇ ಸೇಯಂ ಶರೀರಸಂಬಂಧಿನೀ ತೇ ಶ್ರೋಣಿಕಪಾಲೇ ಶ್ರೋಣಿದ್ವಯಮಧ್ಯಗತಮಸ್ಥಿದ್ವಯಂ ॥ ಉಪಯಮನ್ಯಾ ಏಕತ್ವೇಽಪ್ಯಧಸ್ತಾನ್ಮಹಾವೀರಸ್ಯ ಕದಾಚಿದ್ದಕ್ಷಿಣಭಾಗೇ ಕದಾಚಿದ್ವಾಮಭಾಗೇ ತದ್ಧಾರಣಾತ್ಕಪಾಲದ್ವಯರೂಪತ್ವಂ । ಮಹಾವೀರಗತೇ ತಪ್ತ ಆಜ್ಯೇ ಪ್ರಕ್ಷೇಪ್ತವ್ಯಂ ಯತ್ಪಯಸ್ತದ್ರೇತಃಸ್ವರೂಪಂ ॥ ತದಿದಂ ರೇತೋರೂಪಮಾಜ್ಯಮಿಶ್ರಂ ಪಯೋಽಗ್ನೌ ದೇವಯೋನಿರೂಪೇ ಪ್ರಜನನ ಉತ್ಪತ್ತಿಸ್ಥಾನೇ ರೇತಃ ಸಿಚ್ಯತೇ ರೇತೋರೂಪೇಣಪ್ರಕ್ಷಿಪ್ಯತೇ ॥ ಅಗ್ನೇರ್ದೇವಯೋನಿತ್ವಪ್ರಸಿದ್ಧ್ಯರ್ಥೋ ವೈಶಬ್ದಃ । ಅಗ್ನೇಃ ಕರ್ಮಣ್ಯನುಷ್ಠಾಯ ದೇವರೂಪೇಣ ಜಾಯಮಾನತ್ವಾತ್ಸಾ ಪ್ರಸಿದ್ಧಿರ್ದ್ರಷ್ಟವ್ಯಾ ॥ ಸೈವ ಪ್ರಸಿದ್ಧಿಃ ಸೋಽಗ್ನೇರಿತ್ಯಾದಿನಾ ಸ್ಪಷ್ಟೀಕ್ರಿಯತೇ । ಸ ಯಜಮಾನೋ ದೇವಯೋನಿರೂಪಾದಗ್ನೇರನುಷ್ಠಿತಾಭ್ಯ ಆಹುತಿಭ್ಯಶ್ಚ ದೇವತಾರೂಪಃ ಸಂಭವತಿ ಉತ್ಪದ್ಯತೇ ॥

ಇದುವರೆಗೂ ಪ್ರವರ್ಗ್ಯಕರ್ಮದ ಮಂತ್ರಾದಿಗಳನ್ನು ವಿವರಿಸಿ ಈಗ ಈ ಕರ್ಮವನ್ನು ದೇವಮಿಥನಕ್ಕೆ (ಮಿಥುನವೆಂದರೆ ಸ್ತ್ರೀಪುರುಷಸಂಯೋಗ) ಹೋಲಿಸಿ ಪ್ರಶಂಸೆಮಾಡುವರು. ಈ ಪ್ರವರ್ಗ್ಯಕರ್ಮವು ದೇವಮಿಥುನದಂತೆ ಎಂದರೆ ದೇವತೆಗಳು ಮತ್ತು ಅವರ ಪತ್ನಿಯರು ನಡೆಸುವ ಸಂಭೋಗಕ್ರಿಯೆಯಂತಿರುವುದು. ಅದು ಹೇಗೆಂದರೆ—ಈ ಪ್ರವರ್ಗ್ಯಕರ್ಮದಲ್ಲಿ ಹವಿಸ್ಸನ್ನು ಇಡುವ ಮಣ್ಣಿನಿಂದ ಮಾಡಿರುವ ಮಹಾವೀರವೆಂಬ ಪಾತ್ರೆಯೇ (ಮಡಕೆಯೇ) ಪುರುಷಜನನೇಂದ್ರಿಯವಾದ ಶಿಶ್ನವು (penis) ; ಈ ಮಹಾವೀರಪಾತ್ರೆಯಲ್ಲಿ ಹಾಲನ್ನು ಹಾಕಿ ಕಾಯಿಸಿದಮೇಲೆ ಅದು ಬಹಳ ಬಿಸಿಯಾಗಿರುವುದರಿಂದ ಆ ಪಾತ್ರೆಯನ್ನು ಕೈಗಳಿಂದ ಮುಟ್ಟಲು ಸಾಧ್ಯವಿರುವುದಿಲ್ಲ. ಆದ್ದರಿಂದ ಆ ಪಾತ್ರೆಯನ್ನು ಬೆಂಕಿಯ ಮೇಲಿಂದ ಕೆಳಗಿಳಿಸುವುದಕ್ಕಾಗಿ ಔದುಂಬರವೃಕ್ಷದ ಎರಡು ತುಂಡುಗಳನ್ನು ಉಪಯೋಗಿಸುವರು. ಈ ಮರದ ತುಂಡುಗಳಿಗೆ ಶೀರ್ಷಗಳೆಂದು ಹೆಸರು. ಈ ಎರಡು ಶೀರ್ಷಗಳೇ ಶಿಶ್ನದ ಎರಡು ಪಕ್ಕಗಳಲ್ಲಿರುವ ವೃಷಣಗಳಂತೆ (testicles) ಇರುವವು; ಮಹಾವೀರಪಾತ್ರೆಯ ಕೆಳಭಾಗದಲ್ಲಿ ಉದುಂಬರಕಾಷ್ಠನಿರ್ಮಿತವಾದ ಉದ್ದವಾಗಿರುವ ಮರದ ಒಂದು ತುಂಡನ್ನು ಇಟ್ಟಿರುವರು. ಇದಕ್ಕೆ **ಉಪಯಮನೀ** ಎಂದು ಹೆಸರು. ಈ ಉಪಯಮನಿಯೇ ಎರಡು ತೊಡೆಗಳ ಮಧ್ಯದಲ್ಲಿರುವ ಎರಡು ಅಸ್ಥಿಗಳಂತೆ (thigh bones) ಇರುವುದು. ಉಪಯಮನಿಯು ಒಂದೇ ಇರುವುದಾದರೂ ಅದನ್ನು ಸಂದರ್ಭಾನುಸಾರವಾಗಿ ಸ್ಥಾನಪಲ್ಲಟ ಮಾಡುವುದರಿಂದ ಅದನ್ನು ಎರಡೆಂದು ಇಲ್ಲಿ ಭಾವಿಸಲಾಗಿದೆ; ಮಹಾವೀರಪಾತ್ರೆಯಲ್ಲಿ ಕಾದ ಆಜ್ಯದಮೇಲೆ ಹಾಕಿ ಕಾಯಿಸುವ ಹಾಲೇ ರೇತಸ್ಸಾಗಿರುವುದು (ವೀರ್ಯ, semen); ಈ ಆಜ್ಯಮಿಶ್ರವಾದ ಹಾಲನ್ನು ಅಗ್ನಿಯಲ್ಲಿ ಹೋಮಮಾಡುವುದೇ ರೇತಸ್ಸನ್ನು ಯೋನಿಯಲ್ಲಿ ಸೇಚನಮಾಡುವ ಕ್ರಿಯೆಯು; ಏಕೆಂದರೆ ಅಗ್ನಿಯೇ ದೇವಯೋನಿಯೆಂದು ಹೇಳಲ್ಪಡುವುದು. ಯೋನಿಯಲ್ಲಿ ರೇತಸ್ಸನ್ನು ಸೇಚನಮಾಡುವಂತೆ ಆಜ್ಯಮಿಶ್ರವಾದ ಹಾಲನ್ನು ದೇವಯೋನಿಸ್ವರೂಪವಾದ ಅಗ್ನಿಯಲ್ಲಿ ಹೋಮಮಾಡುವುದರಿಂದ ದೇವಯೋನಿಯಲ್ಲಿ ರೇತಸ್ಸೇಚನವಾದಂತಾಗಿ ಈ ವ್ಯಾಪಾರದಿಂದ ಯಜ್ಞಮಾಡುವ ಯಜಮಾನನು ದೇವಯೋನಿಯಿಂದ ದೇವಶರೀರಿಯಾಗಿ ಉತ್ಪನ್ನನಾದಂತಾಗುವುದೆಂದು ಮುಖ್ಯಾಭಿಪ್ರಾಯವು.

ಇಲ್ಲಿ ಪ್ರವರ್ಗ್ಯವಿಷಯದಲ್ಲಿ ಸ್ವಲ್ಪ ವಿವರಣೆಯು ಅವಶ್ಯಕವು. ತೈತ್ತಿರೀಯ ಆರಣ್ಯಕದಲ್ಲಿ ಈರೀತಿ ಹೇಳಿರುವುದು--

**ಪ್ರಜಾಪತಿಃ ಸಂಭ್ರಿಯಮಾಣಃ । ಸಮ್ರಾಟ್‌ಸಂಭೃತಃ । ಘರ್ಮಃಪ್ರವೃಕ್ತಃ । ಮಹಾವೀರ ಉದ್ವಾಸಿತಃ । ಅಸೌ ಖಲು ವಾವೈಷ ಆದಿತ್ಯಃ । ಯತ್ಪ್ರವರ್ಗ್ಯಃ । ಸ ಏತಾನಿ ನಾಮಾನ್ಯಕುರುತ ॥** (ತೈ.ಆ. ೫-೧೧-೧) ;

ಇದಕ್ಕೆ ಸಾಯಣರು ಅರ್ಥವಿವರಣೆಯನ್ನು ಈರೀತಿ ಮಾಡಿರುವರು—

**ತಪ್ತೇ ಘೃತೇ ಪಯಃಪ್ರಕ್ಷೇಪಾದಿನಾ ಪ್ರಣೀಯತೇ ಘರ್ಮಃ ಖಾದ್ಯವಿಶೇಷಃ । ಸ ಏವ ಪ್ರಕ್ಷೇಪಃ ಪ್ರವೃಂಜನಮುಚ್ಯತೇ । ತಾದೃಶಪ್ರವೃಂಜನನಿಬಂಧನೈವಾಸ್ಯಕರ್ಮಣಃ ಸಮಾಖ್ಯಾ ಪ್ರವರ್ಗ್ಯಂ ಭವತಿ । ತತ್ರ ಘರ್ಮಪಾಕಾಯ ಮೃನ್ನಿರ್ಮಿತಃ ಕಟಾಹವಿಶೇಷ ಏವ ಮಹಾವೀರಃ । ಗೌಣ್ಯಾ ತು ವೃತ್ತ್ಯಾ ಘರ್ಮಃ ಪ್ರವರ್ಗ್ಯಃ ಮಹಾವೀರಃ ಇತಿ ತ್ರೀಣ್ಯೇವ ಪದಾನಿ ಸಮಾನಾರ್ಥಾನೀತಿ ವಿವೇಕಃ ॥**

ಘೃತವನ್ನು (ತುಪ್ಪವನ್ನು) ಕಾಯಿಸಿದಮೇಲೆ ಅದರ ಜತೆಗೆ ಹಾಲನ್ನು ಹಾಕಿ (ಮಿಶ್ರಮಾಡಿ) ಕಾಯಿಸುವಾಗ ಆ ಮಿಶ್ರಣಕ್ಕೆ ಘರ್ಮವೆಂದು ಹೆಸರು. ಹಾಲನ್ನು ಪಾತ್ರೆಯಲ್ಲಿ ಹಾಕುವುದಕ್ಕೆ ಪ್ರವೃಂಜನವೆಂದು ಹೆಸರು. ಪ್ರವೃಂಜನ (ಪ್ರಕ್ಷೇಪ) ಮೊದಲಾದ ಕರ್ಮಗಳಿಂದ ಸಹಿತವಾದ ಈ ಕರ್ಮಕ್ಕೆ ಪ್ರವರ್ಗ್ಯವೆಂದು ಹೆಸರು. ಘರ್ಮವೆಂಬ ಆಜ್ಯ ಮತ್ತು ಹಾಲಿನ ಮಿಶ್ರಣವನ್ನು ಹಾಕಿ ಕಾಯಿಸುವ ಮಣ್ಣಿನ ಪಾತ್ರೆಗೆ ಮಹಾವೀರವೆಂದು ಹೆಸರು. ಸಾಧಾರಣವಾಗಿ ಘರ್ಮ, ಪ್ರವರ್ಗ್ಯ, ಮಹಾವೀರ ಎಂಬ ಮೂರು ಶಬ್ದಗಳಿಗೂ ಮಹಾವೀರಪಾತ್ರೆ ಮೃನ್ಮಯಪಾತ್ರೆ ಎಂಬ ಒಂದೇ ಅರ್ಥದಲ್ಲಿ ಉಪಯೋಗಿಸಲ್ಪಡುವವು.

**ಅಸ್ಯ ಪ್ರವರ್ಗ್ಯಸ್ಯ ತತ್ತದವಸ್ಥಾಭೇದೇನ ಪ್ರಜಾಪತ್ಯಾದೀನಿನಾಮಾನಿ ಸಂಪದ್ಯಂತೇ । ಯದಾ ಮೃದ್ವರಾಹವಿಹತವಲ್ಮೀಕವಪಾದಿಸಂಭಾರೈಃ ಸಂಭ್ರಿಯಮಾಣತ್ವದಶಾಪನ್ನೋ ಭವತಿ ತದಾ ಪ್ರಜಾಪತಿರಿತ್ಯೇತಸ್ಯ ನಾಮ । ಸರ್ವಾತ್ಮನಾ ಸಂಭೃತತ್ವದಶಾಪನ್ನಸ್ಯ ಸಮ್ರಾಡಿತಿ ನಾಮ । ಪ್ರವೃಂಜನದಶಾಪನ್ನಸ್ಯ ಘರ್ಮ ಇತಿನಾಮ । ಉದ್ವಾಸನದಶಾಪನ್ನಸ್ಯ ಮಹಾವೀರ ಇತಿ ನಾಮ । ಏತಾಭಿರ್ದಶಾಭಿರವಸ್ಥಾವದ್ಯತ್ಸ್ವರೂಪಂ ತೇನ ರೂಪೇಣಾದಿತ್ಯ ಇತಿ ನಾಮ । ಸ ಪ್ರವರ್ಗ್ಯ ಏವಮೇತಾನಿ ನಾಮಾನ್ಯಕುರುತ ಸಂಪಾದಿತವಾನ್ ॥** (ಸಾ.ಭಾ.ತೈ.ಆ. ೫-೧೧-೧)

ಈ ಪ್ರವರ್ಗ್ಯಕರ್ಮದಲ್ಲಿ ಉಪಯೋಗಿಸುವ ಮೃನ್ಮಯಪಾತ್ರೆಗೆ ಅದರ ಅವಸ್ಥಾವಿಶೇಷಗಳಿಗೆ ಅನುಸಾರವಾಗಿ ನಾನಾವಿಧ ಹೆಸರುಗಳಿರುವವು. ವರಾಹವಿಹತವಾದ ವಲ್ಮೀಕ ಮೊದಲಾದ ಸ್ಥಳಗಳಿಂದ ತರುವ ಮಣ್ಣಿಗೆ ಪ್ರಜಾಪತಿಯೆಂದು ಹೆಸರು. ಆ ಮಣ್ಣನ್ನು ಮಡಕೆಮಾಡುವುದಕ್ಕಾಗಿ ಚೆನ್ನಾಗಿ ಕಲಸಿ ಉಂಡೆಮಾಡಿದಾಗ ಅದಕ್ಕೆ ಸಮ್ರಾಟ್ ಎಂದು ಹೆಸರು. ಮಡಕೆಯನ್ನು ಮಾಡಿ ಹಾಲನ್ನು ಹಾಕುವಂತೆ ಸಿದ್ಧಪಡಿಸಿದಾಗ ಅದಕ್ಕೆ ಘರ್ಮವೆಂದು ಹೆಸರು. ಕರ್ಮಾಂತ್ಯದಲ್ಲಿ ಆ ಮೃನ್ಮಯಪಾತ್ರೆಯನ್ನು ಉದ್ವಾಸನೆಮಾಡುವ ಸಂದರ್ಭದಲ್ಲಿ ಅದಕ್ಕೆ ಮಹಾವೀರವೆಂದು ಹೆಸರು. ಈ ನಾನಾ ಅವಸ್ಥೆಗಳಿಂದ ಕೂಡಿದ ಈ ಕರ್ಮಕ್ಕೆ ಆದಿತ್ಯವೆಂದು ಹೆಸರು. ಈ ಪ್ರವರ್ಗ್ಯಕರ್ಮದಲ್ಲಿ ಅವಸ್ಥಾವಿಶೇಷಗಳಿಗೆ ಅನುಸಾರವಾಗಿ ನಾನಾ ಹೆಸರುಗಳಿರುವವು.

**ಋಙ್ಮಯೋ ಯಜುರ್ಮಯಃ ಸಾಮಮಯೋ ವೇದಮಯೋ**
**ಬ್ರಹ್ಮಮಯೋಽಮೃತಮಯಃ ಸಂಭೂಯ ದೇವತಾ ಅಪ್ಯೇತಿ**

**ಯ ಏವಂ ವೇದ ಯಶ್ಚೈವಂ ವಿದ್ವಾನೇತೇನ ಯಜ್ಞಕ್ರತುನಾ ಯಜೇ ತೇ ॥**

**ಉಕ್ತಾರ್ಥವೇದನಂ ತದ್ವೇದನಪೂರ್ವಕಮನುಷ್ಠಾನಂ ಚ ಪ್ರಶಂಸತಿ ॥ ವೇದನಶಬ್ದೇನಾಥರ್ವವೇದಃ ಸರ್ವವೇದಸಮಷ್ಟಿಯುಕ್ತಿರ್ವೋಚ್ಯತೇ । ಬ್ರಹ್ಮಶಬ್ದೇನ ಹಿರಣ್ಯ ಗರ್ಭಃ । ಅಮೃತಶಬ್ದೇನ ಪರಮಾತ್ಮಾ । ತಾ ಏಕೈಕದೇವತಾಃ ಸರ್ವಾಃ ಸಂಭೂಯೈಕೀಕೃತ್ಯ ಸಮಷ್ಟಿರೂಪಮಪ್ಯೇತಿ ಪ್ರಾಪ್ನೋತಿ । ವೇದನಮಾತ್ರೇಣ ಶನೈಸ್ತತ್ಪ್ರಾಪ್ತಿರ್ವೇದನಪೂರ್ವಕಾನುಷ್ಠಾನೇನ ತು ಸಹಸೇತಿ ವಿಶೇಷೋ ದ್ರಷ್ಟವ್ಯಃ ॥**

ಇಲ್ಲಿ ಋಗ್ವೇದ ಯಜುರ್ವೇದ, ಸಾಮವೇದ ಎಂಬ ಮೂರು ವೇದಗಳ ಹೆಸರನ್ನು ಸೂಚಿಸಿ ಮತ್ತೆ ವೇದಮಯ ಎಂದು ಹೇಳಿರುವುದರಿಂದ ವೇದಶಬ್ದಕ್ಕೆ ಇಲ್ಲಿ ಅಥರ್ವವೇದವೆಂದು ಅಭಿಪ್ರಾಯವು. ಬ್ರಹ್ಮನೆಂದರೆ ಹಿರಣ್ಯಗರ್ಭನು, ಅಮೃತವೆಂದರೆ ನಿತ್ಯನಾದ ಪರಮಾತ್ಮನು. ಈ ಪ್ರವರ್ಗ್ಯಕರ್ಮವನ್ನು ಅನುಷ್ಠಾನಮಾಡುವ ಯಜಮಾನನು ಋಗ್ವೇದ, ಯಜುರ್ವೇದ, ಸಾಮವೇದ, ಬ್ರಹ್ಮ ಪರಮಾತ್ಮ ಇತ್ಯಾದಿ ದೇವತಾಸ್ವರೂಪವಾದ ಶರೀರವನ್ನು ಪಡೆಯುವನು ಮತ್ತು ಯಜ್ಞದ ಈ ವಿಧವಾದ ಸ್ವರೂಪವನ್ನು ತಿಳಿದು ಯಜ್ಞಮಾಡುವ ವಿವೇಕಿಯಾದ ಯಜಮಾನನು ದೇವತಾಸ್ವರೂಪವಾದ ಶರೀರವನ್ನು ಪಡೆಯುವನು.



*English Translation*

The second part of the mantra collection (required at the Pravargya ceremony) is as follows :—

1 Upahvaye sudugham dhenum (1, 164, 26)
2 Himkrinvati vasupatui (1, 164, 27)
3 Abhi tva d'va Savitah (1, 24, 3)
4 Sami vatsann amatribhih (9-104-2)
5 Samvatsa iva matribhih (9, 105, 2)
6 Yaste stanah s'as'ayo (1, 164, 49)
7 Gaur amimed anuvatsam (1, 164, 28)
8 Namsased upasidatam (9, 11, 6)
9 Samjanana upasidan (1, 72, 5)
10 A das'abhir (8, 61, 8)
11 Duhanti saptaikan (8, 61, 7)
12 Samidho Agnir Asvina (As'val 4, 7)

13 Samiddho Agnir vrishana (As'val, 4, 7)
14 Tad u prayakshataman (1, 62, 6)
15 Atmanvan nabho duhyate (9, 74, 4)
16 Uttishtha Brahmanaspate (1, 40, 1)
17 Adhukshat pipyushim isham (8, 61, 16)
18 Upadrava payasa (As'val 4, 7)
19 A sute sinchata S'riyam (8, 61, 13)
20 Anunam as'vinor (8, 9, 7)
21 Sam u tye mahatir apah (8, 7, 22)

These twenty-one verses are appropriate. What is appropriate at a sacrifice, that is successful.

The Hotar when standing behind (the others) repeats ud u shya devah Savita hiranyaya (6, 71, 1). When going forward, he repeats, praitu Brahmanaspati (1, 40, 3). When looking at the Khara (the earthern ring, in which the Pravargya vessel is placed), he repeats: Gandharva ittha (9, 83, 4). When repeating nake suparnam upa yat (9, 85, 4), he takes his seat. By the two mantras, tapto vam gharmo makshati svahota (Atharv, 7, 73, 5. As'v. 4, 7) and ubha pibatam (1, 46, 15) the Hotar sacrifices to the forenoon (the deity of the forenoon). After the formula: Agni eat! he pronounces Vaushat! which is in lieu of the Svishtakrit.

By the mantras, yad usriyasu svahutam (Atharv, 7, 73, 4. As'v. 4, 7), and asya pibatam As'vina (8, 5, 14), he sacrifices for the afternoon. After the formula, Agni eat! he pronounces Vaushat! which is in lieu of the Svishtakrit. They take, for making Svishtakrit, parts of three offerings, viz., Soma juice (contained in the stalks), the things thrown in the Pravargya vessel (milk, butter, etc.) and hot wheys. When the Hotar (after having repeated the two mantras, above mentioned, along with the formula, Agni eat!) pronounces the formula Vaushat! then thus the omission of "Agni Svishtakrit" is replaced.

The Brahma priest mutters (makes japa), as'a dakshinasad (As'v. 4, 7).

(After the offering has been given to the fire) the Hotar repeats the following (seven) verses: svahakritah S'uchir deveshu (Atharv, 7, 73, 3. As'v. 4, 7);

samudrad urmin udiyarti veno (10, 123, 2); drapsah samudram abhi (10, 123, 8); sakhe sakhyam (4, 1, 3); urdhva u shu na (1, 36, 13); These verses are appropriate at the sacrifice, that is successful.

By the mantra, pavaka S'oche tava (3, 2, 6), the Hotar wants to eat. When eating it, he says: "let us eat the (remainder of the) offering which has been offered, of the sweet offering which has been thrown into the most brightly blazing (indratana) fire! (Let us eat) of thee, O divine gharma (the contents of the Pravargya vessel) which art full of honey, full of food, and quite hot (angirasvat). Praise to thee (O. gharma!); do me no harm!"

When the Pravargya vessel is put down then the Hotar repeats these two mantras, s'yeno na yonim sadanam, (9, 71, 6) and ayasmin sapta Vasava, (As'vl. 4, 7). In whatever (part of the) day (forenoon or afternoon), they are about to take off the Pravargya vessel from its place), he repeats the mantra, havir havishmo mahi (9, 83, 5). With the verse, sayavasad bhagavati (1, 164, 40) he concludes the ceremony.

The Gharma (ceremony) represents the cohabitation of the gods. The Gharma vessel is the penis; the two handles (placed underneath, to lift it) are the two testicles, the Upayamani the thighs. The milk (in the vessel) is the seed. This seed (in the shape of milk) is poured in Agni as the womb of the gods for production. For Agni is the womb of the gods.

He who knowing this sacrifices according to this rite (yajnakratu), is born (anew) from the womb of Agni and the offerings, and participates in the nature of the Rik, Yajus and Saman, the Veda (sacred knowledge) the Brahma (sacred element) and immortaility and is absorbed in the deity.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ಥಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಐದನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ಥಾಧ್ಯಾಯೇ ಷಷ್ಠಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ಉಪಸತ್ ಎಂಬ ಕರ್ಮ (ಇಷ್ಟಿ)—ಪೂರ್ವೇತಿಹಾಸ ]

### ಪೀಠಿಕೆ

ಇದುವರೆಗೆ ಪ್ರವರ್ಗ್ಯವೆಂಬ ಕರ್ಮವನ್ನು ವಿವರಿಸಿ ಈಗ ಉಪಸತ್ ಎಂಬ ಕರ್ಮವಿಶೇಷವನ್ನು ವಿವರಿಸಲು ಪೂರ್ವಭಾವಿಯಾಗಿ ಅದಕ್ಕೆ ಹಿನ್ನೆಲೆಯಾದ ಒಂದು ಉಪಾಖ್ಯಾನವನ್ನು ಹೇಳುವರು.

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವಾ ಅಸುರಾ ಇಮಾನೇವ ಲೋಕಾನ್ಪುರೋಽಕುರ್ವತ ಯಥೌಜೀಯಾಂಸೋ ಬಲೀಯಾಂಸ ಏವಂ ತೇ ವಾ ಅಯಸ್ಮಯೀಮೇವೇಮಾಮ-ಕುರ್ವತ ರಜತಾಮಂತರಿಕ್ಷಂ ಹರಿಣೀಂ ದಿವಂ ತೇ ತಥೇಮಾಂ-ಲ್ಲೋಕಾನ್ಪುರೋಽಕುರ್ವತ ತೇ ದೇವಾ ಅಬ್ರುವನ್ಪುರೋ ವಾ ಇಮೇಽಸುರಾ ಇಮಾಂಲ್ಲೋಕಾನಕ್ರತ ಪುರ ಇಮಾಂಲ್ಲೋ-ಕಾನ್ಪ್ರತಿಕರವಾಮಹಾ ಇತಿ ತಥೇತಿ ತೇ ಸದ ಏವಾಸ್ಯಾಃ ಪ್ರತ್ಯಕುರ್ವತಾಗ್ನೀಧ್ರಮಂತರಿಕ್ಷಾದ್ಧವಿರ್ಧಾನೇ ದಿವಸ್ತೇ ತಥೇಮಾಂಲ್ಲೋಕಾನ್ಪುರಃ ಪ್ರತ್ಯಕುರ್ವತ ॥**

ಪ್ರವರ್ಗ್ಯಾಖ್ಯಂ ಕರ್ಮ ಪರಿಸಮಾಪ್ಯೋಪಸದಾಖ್ಯಂ ಕರ್ಮವಕ್ತುಮಾಖ್ಯಾಯಿಕಾ-ಮಾಹ—ದೇವಾಶ್ಚಾಸುರಾಶ್ಚ ಲೋಕತ್ರಯವಿಷಯೇ ಸಮಯತಂತ ಪರಸ್ಪರಂ ಯುದ್ಧಂ ಕೃತವಂತಃ । ತದಾನೀಮಸುರಾ ಇಮಾನೇವ ಭೂರಾದೀಂಸ್ತ್ರೀಲ್ಲೋಕಾನ್ಪುರೋಽಕುರ್ವತ ಪ್ರಾ-ಕಾರಪರಿವೇಷ್ಟಿತಾನಿ ನಗರಾಣಿ ಕೃತವಂತಃ ॥ ಯಥಾ ಲೋಕೇ ಮಹಾಂತೋ ರಾಜಾನೋಽಭ್ಯ-ಧಿಕೇನೌಜಸಾ ಶರೀರಶಕ್ತ್ಯಾ ಸಂಪನ್ನಾ ಅಭ್ಯಧಿಕೇನ ಸೈನ್ಯರೂಪೇಣ ಬಲೇನ ಚ ಸಂಪನ್ನಾಃ ಪ್ರೌಢಾನಿ ದುರ್ಗಾಣಿ ಕುರ್ವಂತಿ ಏವಮೇತೇ ಕೃತವಂತಃ । ತತ್ರೇಮಾಂ ಭೂಮಿಮಯಸ್ಮಯೀಂ ಲೋಹಪ್ರಾಕಾರಯುಕ್ತಾಮಕುರ್ವತ । ಅಂತರಿಕ್ಷಂ ಲೋಕಂ ಚ ರಜತಪ್ರಾಕಾರವೇಷ್ಟಿತಾಂ

ಪುರೀಮಕುರ್ವತ ॥ ತಥೇತ್ಯುಕ್ತನಗರನಿರ್ಮಾಣಕೃತಸ್ಯೋಪಸಂಹಾರಃ । ತಮಿಮಮರ್ಥಂ ಸರ್ವಂ ತೈತ್ತಿರೀಯಾಃ ಸಂಕ್ಷಿಪ್ಯ ಆಮನಂತಿ॥ "ತೇಷಾಮಸುರಾಣಾಂ ತಿಸ್ರಃ ಪುರ ಆಸನ್ನಯಸ್ಮಯ್ಯವಮಾಽಥ ರಜತಾಽಥ ಹರಿಣೀ" ಇತಿ ॥ ತತಸ್ತೇ ದೇವಾ ವಿಚಾರಯಂತಃ ಪರಸ್ಪರಮಿದಮಬ್ರುವನ್ ॥ ಅಸುರಾ ಇಮೇ ಭೂರಾದೀನಿಮಾನ್ಲೋಕಾನ್ಪುರೋ ವೈ ಸ್ವಕೀಯನಗರಾಣ್ಯೇವ ಕೃತವಂತಃ ॥ ಅತೋ ವಯಮಪೀಮಾನ್ಭೂರಾದೀಂಲ್ಲೋಕಾನ್ಪುರೋಽಸ್ಮದೀಯನಗರಾಣಿ ಪ್ರತಿಕರವಾಮಹೈ ॥ ಅಸುರಾಣಾಂ ಪ್ರತಿಕೂಲಾನಿ ಸಂಪಾದಯಾಮ ಇತ್ಯೇವಂ ವಿಚಾರಂ ಪರಸ್ಪರಮಂಗೀಕೃತ್ಯ ತ್ರಿಷು ಲೋಕೇಷು ಅಸುರಾಃ ಕ್ವಚಿದ್ದೇಶವಿಶೇಷೇ ಯಥಾ ಸ್ವಕೀಯಾನಿ ನಗರಾಣಿ ಕೃತವಂತಸ್ತಥಾ ದೇವಾ ಅಸ್ಯಾಃ ಪೃಥಿವ್ಯಾಃ ಸಕಾಶಾತ್ಸದಏವ ಪ್ರತ್ಯಕುರ್ವತ ॥ ಸೌಮಿಕವೇದ್ಯಾಂ ಪ್ರಾಚೀನವಂಶಾತ್ಪೂರ್ವಭಾವಿಸದೋನಾಮಕಮಂಡಪಮೇವಾಸುರಪ್ರತಿಕೂಲಮಕುರ್ವತ ॥ ಅಂತರಿಕ್ಷಲೋಕಾದಾಗ್ನೀಧ್ರನಾಮಕಂ ಧಿಷ್ಣ್ಯಮಕುರ್ವತ ॥ ದ್ಯುಲೋಕಾದ್ಧವಿರ್ಧಾನನಾಮಕೇ ದ್ವೇ ಶಕಟೇ ಅಕುರ್ವತ ॥ ತೇ ತಥೇತ್ಯಾದಿರುಕ್ತಾರ್ಥೋಪಸಂಹಾರಃ । ಅಸುರನಿರ್ಮಿತಪುರತ್ರಯಪ್ರತಿಕೂಲಂ ಸದಆಗ್ನೀಧ್ರಹವಿರ್ಧಾನರೂಪತ್ರಯಂ ಕೃತವಂತಃ ॥ ಅಸುರೈರ್ಲೋಕತ್ರಯೇ ಪ್ರೌಢಾಸು ತಿಸೃಷು ದುರ್ಗರೂಪಾಸು ಪುರೀಷು ನಿರ್ಮಿತಾಸು ದೇವಾಶ್ಚ ಸ್ವರಕ್ಷಾರ್ಥಂ ಸದಃ ಪ್ರಭೃತೀನಿ ತ್ರೀಣಿ ದುರ್ಗಾಣಿ ಕೃತ್ವಾ ವಿಜಯಂ ಪ್ರಾಪ್ತಾಃ ॥

ಪೂರ್ವದಲ್ಲಿ ದೇವತೆಗಳೂ, ಅಸುರರೂ ಈ ಪೃಥಿವ್ಯಾದಿ ಮೂರು ಲೋಕಗಳನ್ನು ಜಯಿಸಿ ರಾಜ್ಯಭಾರ ಮಾಡಬೇಕೆಂದು ಬಯಸಿ ಪರಸ್ಪರ ಯುದ್ಧಮಾಡುವುದಕ್ಕಾಗಿ ಪ್ರಯತ್ನಮಾಡಿದರು. ಈಗಲೂ ಲೋಕವ್ಯವಹಾರದಲ್ಲಿ ರಾಜರು ಯುದ್ಧಮಾಡುವಾಗ ತಮ್ಮ ಸ್ವದೇಶವನ್ನು ಶತ್ರುಗಳು ನುಗ್ಗಿಬರದಂತೆ ಕೋಟೆಕೊತ್ತಲುಗಳಿಂದಲೂ, ದುರ್ಗಗಳಿಂದಲೂ ಭದ್ರಪಡಿಸುವುದು ರೂಢಿಯಷ್ಟೆ. ಅದರಂತೆ ಅಸುರರು ಈ ಪೃಥಿವೀ ಲೋಕವನ್ನು ಕಬ್ಬಿಣದ ಅಥವಾ ಉಕ್ಕಿನ ಕೋಟೆಯಿಂದ ಭದ್ರಪಡಿಸಿದರು. ಅಂತರಿಕ್ಷಲೋಕವನ್ನು ಬೆಳ್ಳಿಯ ಕೋಟೆಯಿಂದಲೂ, ಸ್ವರ್ಗಲೋಕವನ್ನು ಚಿನ್ನದ ಕೋಟೆಯಿಂದಲೂ ಭದ್ರಪಡಿಸಿಕೊಂಡರು.

ಪೃಥಿವೀಂ ನಗರೀಂ ಚಕ್ರುರಯಸಾ ನಿರ್ಮಿತಾಂ ದೃಢಾಂ ।
ಖಲೋಕನಗರೀ ಸಮ್ಯಕ್ ರಜತೇನ ವಿನಿರ್ಮಿತಾ ॥
ತೇ ಚಕ್ರೇ ಸ್ವರ್ಗನಗರೀಂ ತಪ್ತಕಾಂಚನನಿರ್ಮಿತಾಂ ।
ಹಿರಣ್ಮಯೀಂ ಹೇಮಮಯೀಂ ಹರಿಣೀತಿ ವಿದುರ್ಬುಧಾಃ ॥

ಇದನ್ನು ನೋಡಿ ದೇವತೆಗಳು ಈ ಅಸುರರನ್ನು ಜಯಿಸಬೇಕಾದರೆ ತಾವೂ ಸಹ ಕೋಟೆಕೊತ್ತಲಗಳನ್ನೂ ದುರ್ಗಗಳನ್ನೂ ರಚಿಸಿಕೊಂಡು ಅಸುರರ ಮೇಲೆ ಯುದ್ಧಮಾಡಿ ಅವರನ್ನು ಜಯಿಸಬೇಕೆಂದು ನಿಶ್ಚಯಿಸಿದರು. ಆದ್ದರಿಂದ ದೇವತೆಗಳು ಸಹ ಪೃಥಿವ್ಯಾದಿ ಮೂರು ಲೋಕಗಳಲ್ಲಿಯೂ ಬಲವಾದ ದುರ್ಗಗಳನ್ನು ರಚಿಸಿದರು. ಪೃಥಿವಿಯಲ್ಲಿ ಎಂದರೆ ಸೋಮಯಾಗಾರ್ಥವಾಗಿ ನಿರ್ಮಿಸಿದ ಪ್ರಾಚೀನವಂಶವೆಂಬ ಯಜ್ಞಶಾಲೆಯ ಪೂರ್ವದಿಕ್ಕಿನಲ್ಲಿ ಸದಃ ಎಂಬ ಸ್ಥಾನವಿಶೇಷವನ್ನು ನಿರ್ಮಿಸಿದರು. ಅಂತರಿಕ್ಷಲೋಕದ ಕೋಟೆಗೆ ಪ್ರತಿನಿಧಿಯಾಗಿ ಧಿಷ್ಣ್ಯವೆಂಬ ಸ್ಥಾನವನ್ನು ನಿರ್ಮಿಸಿದರು. ಸ್ವರ್ಗಲೋಕದ ಕೋಟೆದುರ್ಗಗಳಿಗೆ ಪ್ರತಿಯಾಗಿ ಹವಿರ್ಧಾನ (ಹವಿಸ್ಸನ್ನು ಇಡುವ ಗಾಡಿ) ವೆಂಬ ಎರಡು ಗಾಡಿಗಳನ್ನು ರಚಿಸಿದರು. ಎಂದರೆ ಅಸುರರು ಪೃಥಿವ್ಯಾದಿ

ಲೋಕತ್ರಯಗಳಲ್ಲಿ ಉಕ್ಕಿನ, ಬೆಳ್ಳಿಯ, ಚಿನ್ನದ ದುರ್ಗಗಳನ್ನು ರಚಿಸಿದಂತೆ ದೇವತೆಗಳು ಸ್ವರಕ್ಷಣಾರ್ಥವಾಗಿ (ಯಜ್ಞರೂಪವಾದ) ಸದಃಸ್ಥಾನಧಿಷ್ಣ್ಯ, ಹವಿರ್ಧಾನವೆಂಬ ಎರಡು ಗಾಡಿಗಳು ಇವುಗಳನ್ನು ನಿರ್ಮಿಸಿ ಅಸುರರನ್ನು ಜಯಿಸಲು ಯುದ್ಧಸನ್ನದ್ಧರಾದರು.

ತೇ ದೇವಾ ಅಬ್ರುವನ್ನುಪಸದ ಉಪಯಾಮೋಪಸದಾ ವೈ ಮಹಾಪುರಂ ಜಯಂತೀತಿ ತಥೇತಿ ತೇ ಯಾಮೇವ ಪ್ರಥಮಾಮುಪಸದಮುಪಾಯಂಸ್ತಯೈವೈನಾನಸ್ಮಾಂಲ್ಲೋಕಾದನುದಂತ ಯಾಂ ದ್ವಿತೀಯಾಂ ತಯಾಂತರಿಕ್ಷಾದ್ಯಾಂ ತೃತೀಯಾಂ ತಯಾ ದಿವಸ್ತಾಂಸ್ತಥೈಭ್ಯೋ ಲೋಕೇಭ್ಯೋಽನುದಂತ ॥

ತಂ ವಿಜಯಪ್ರಕಾರಂ ದರ್ಶಯತಿ—ವಿಜಯಾರ್ಥಿನಸ್ತೇ ದೇವಾಃ ಪರಸ್ಪರಮಿದಮಬ್ರುವನ್ ॥ ಉಪಸದಾಖ್ಯಾನ್ಹೋಮಾನುಪಯಾಮಾನುತಿಷ್ಠಾಮ ॥ ಲೋಕೇಷೂಪಸದಾ ವೈ ಪರಕೀಯದುರ್ಗಸಮೀಪಾವಸ್ಥಾನೇನ ದುರ್ಗಾನರೋಧರೂಪೇಣೈವ ಮಹತ್ಯಾ ಸೇನಯಾ ದುರ್ಗವೇಷ್ಟನೇನ ಸರ್ವೇ ರಾಜಾನೋ ಮಹತೀಂ ದುರ್ಗರೂಪಾಂ ಪುರಂ ಜಯಂತಿ ॥ ಅತೋ ವಯಮಪ್ಯುಪಸದನಹೇತುಭೂತಾನ್ಹೋಮಾನ್ಕರವಾಮೇತಿ ವಿಚಾರ್ಯ ತಿಸ್ರ ಉಪಸದೋ ಹುತ್ವಾ ಲೋಕತ್ರಯನಿರ್ಮಿತಾಭ್ಯೋ ದುರ್ಗರೂಪಾಭ್ಯಃ ಪುರೀಭ್ಯೋಽಸುರಾನ್ನಿಃಸಾರಿತವಂತಃ ॥ ತತ್ರ ಯಾ ತೇ ಅಗ್ನೇಽಯಾಶಯಾ ತನೂರಿತ್ಯನೇನ ಮಂತ್ರೇಣ ಸಾಧ್ಯೋಪಸತ್ಪ್ರಥಮದಿನೇಽನುಷ್ಠಿತತ್ವಾತ್ಪ್ರಥಮಾ ॥ ಯಾ ತೇ ಅಗ್ನೇರಜಾಶಯಾ ತನೂರಿತ್ಯನೇನ ಮಂತ್ರೇಣ ಸಾಧ್ಯಾ ದ್ವಿತೀಯದಿನೇಽನುಷ್ಠೇಯತ್ವಾದ್ದ್ವಿತೀಯಾ ॥ ಯಾ ತೇ ಅಗ್ನೇಹರಾಶಯೇತಿ ಮಂತ್ರೇಣ ಸಾಧ್ಯಾ ತೃತೀಯದಿನಾನುಷ್ಠೇಯತ್ವಾತ್ತೃತೀಯಾ । ಯುದ್ಧೇನ ತಾಃ ಪುರೀರ್ಜೇತುಮಶಕ್ತಾ ದೇವಾ ಉಪಸದ್ಧೋಮೈರ್ಜಿತವಂತಃ ॥ ತಥಾ ಚ ಶಾಖಾಂತರೇ ಶ್ರೂಯತೇ—'ತೇ ದೇವಾ ಜೇತುಂ ನಾಶಕ್ನುವನ್ನುಪಸದೈವಾಜಿಗೀಷನ್' ಇತಿ ॥ ಲೋಕತ್ರಯಾನ್ನಿಃಸಾರಿತಾಶ್ಚಾಸುರಾ ವಸಂತಾದ್ಯೃತುದೇವಾನ್ಶರಣಂ ಪ್ರಾಪ್ತಾಸ್ತದಾ ತದಾನೀಮೇವೇಕೈಕಸ್ಮಿನ್ದಿನೇ ದ್ವಿರ್ದ್ವಿರನುಷ್ಠೇಯಾಭಿಃ ಷಡ್ಭಿಸ್ತಾನಸುರಾನ್ವಸಂತಾದ್ಯೃತುದೇವತಾಭ್ಯೋ ನಿಃಸಾರಿತವಂತಃ ॥

ಅನಂತರ ದೇವತೆಗಳು ಪರಸ್ಪರ ತಮ್ಮಲ್ಲಿ ಈರೀತಿ ಮಾತನಾಡಿಕೊಂಡರು. ಲೋಕವ್ಯವಹಾರದಲ್ಲಿ ಶತ್ರುಗಳನ್ನು ಜಯಿಸಬೇಕಾದರೆ ಅವರ ನಗರಗಳನ್ನು ಸೈನ್ಯದಿಂದ ಮುತ್ತಿಗೆ ಹಾಕಿ (besieging) ಶತ್ರುಗಳು ಹೊರಗೆ ಬರದಂತೆ ತಡೆದು ಯುದ್ಧಮಾಡಿ ನಗರವನ್ನು ವಶಮಾಡಿಕೊಳ್ಳುವುದು ರೂಢಿಯಷ್ಟೆ. ಅದರಂತೆ ನಾವು ಶತ್ರುನಗರ ಪ್ರತೀಕಗಳಾದ ಪೃಥಿವೀ, ಅಂತರಿಕ್ಷ ಸ್ವರ್ಗಗಳಲ್ಲಿ ಉಕ್ಕು, ಬೆಳ್ಳಿ, ಚಿನ್ನಗಳಿಂದ ನಿರ್ಮಿತವಾದ ಶತ್ರುಪುರಗಳನ್ನು ಮುತ್ತಿಗೆಹಾಕಿ ವಶಪಡಿಸಿಕೊಳ್ಳೋಣ ಎಂದರೆ ಮುತ್ತಿಗೆಹಾಕಿ ಯುದ್ಧಮಾಡುವುದಕ್ಕೆ ಪ್ರತೀಕವಾಗಿರುವ ಉಪಸದ್ಧೋಮದಿಂದ ಹೋಮಮಾಡಿ ಅಸುರರನ್ನು ಗೆಲ್ಲೋಣ ಎಂದು ನಿಶ್ಚಯಿಸಿ ಆದೇರೀತಿ ಉಪಸದವೆಂಬ ಹೋಮವನ್ನು ಮೂರಾವರ್ತಿ ಮಾಡಿದರು. ಮೊದಲಾವರ್ತಿ ಮಾಡಿದ ಹೋಮದಿಂದ ಎಂದರೆ **ಯಾ ತೇ ಅಗ್ನೇಽಯಾಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠೋಗ್ರಂ ವಚೋ ಅಪಾವಧೀಂ ತ್ವೇಷಂ ವಚೋ ಅಪಾವಧೀಗ್ ಸ್ವಾಹಾ** (ತೈ. ಸಂ. ೧-೨-೧೧-೨) ಎಂಬ ಹೋಮಪೂರ್ವಕವಾಗಿ

ಮಾಡಿದ ಪ್ರಥಮದಿನದ ಉಪಸದ್ಧೋಮದಿಂದ ದೇವತೆಗಳು ಅಸುರರನ್ನು ಪೃಥಿವೀಲೋಕದಿಂದ ಓಡಿಸಿದರು; ಎರಡನೆಯ ದಿವಸ **ಯಾ ತೇ ಅಗ್ನೇ ರಜಾಶಯಾ ತನೂರ್ವರ್ಷಿಷ್ಠಾ ಗಹ್ವರೇಷ್ಠೋಗ್ರಂ ವಚೋ ಅಪಾವಧೀಂ ತ್ವೇಷಂ ವಚೋ ಅಪಾವಧೀಗ್ಂ ಸ್ವಾಹಾ** (ತೈ. ಸಂ. ೧-೨-೧೧-೨) ಎಂಬ ಹೋಮಪೂರ್ವಕವಾದ ಮೂರನೆಯ ಉಪಸದ್ಧೋಮದಿಂದ ಅಸುರರನ್ನು ಸ್ವರ್ಗಲೋಕದಿಂದ ಓಡಿಸಿದರು. ಎಂದರೆ ದೇವತೆಗಳು ಮೂರುದಿನಗಳಲ್ಲಿ ಮೂರಾವರ್ತಿ ಮಾಡಿದ ಉಪಸದ್ಧೋಮದಿಂದ ಅಸುರರನ್ನು ಪೃಥಿವೀ, ಅಂತರಿಕ್ಷ, ಸ್ವರ್ಗಗಳೆಂಬ ಮೂರುಲೋಕಗಳಿಂದಲೂ ಓಡಿಸಿ ಜಯವನ್ನು ಸಂಪಾದಿಸಿದರು. ಈ ವಿಷಯವಾಗಿ ತೈತ್ತಿರೀಯಸಂಹಿತೆಯಲ್ಲಿ ಈರೀತಿ ಹೇಳಿದೆ—

> **ತೇಷಾಮಸುರಾಣಾಂ ತಿಸ್ರಃ ಪುರ ಆಸನ್ನಯಸ್ಮಯ್ಯವಮಾಥ ರಜತಾಥ ಹರಿಣೀ ತಾ ದೇವಾ ಜೇತುಂ ನಾಶಕ್ನುವನ್ ತಾ ಉಪಸದೈವಾಜಿಗೀಷನ್ ತಸ್ಮಾದಾಹುರ್ಯಶ್ಚೈವಂ ವೇದ ಯಶ್ಚ ನೋಪಸದಾ ವೈ ಮಹಾಪುರಂ ಜಯಂತೀತಿ ತ ಇಷಗ್ಂ ಸಮಸ್ಕುರ್ವತಾಗ್ನಿಮನೀಕಗ್ಂ ಸೋಮಗ್ಂ ಶಲ್ಯಂ ವಿಷ್ಣುಂ ತೇಜನಂ ತೇಽಬ್ರುವನ್ ಕ ಇಮಾಮಸಿಷ್ಯತೀತಿ ರುದ್ರ ಇತ್ಯಬ್ರುವನ್ ರುದ್ರೋ ವೈ ಕ್ರೂರಃ ಸೋಽಸ್ಯತ್ವಿತಿ ಸೋಽಬ್ರವೀದ್ವರಂ ವೃಣಾ ಅಹಮೇವ ಪಶೂನಾಮಧಿಪತಿ-ರಸಾನೀತಿ ತಸ್ಮಾದ್ರುದ್ರಃ ಪಶೂನಾಮಧಿಪತಿಸ್ತಾಗ್ಂ ರುದ್ರೋಽವಾಸೃಜತ್ಸ ತಿಸ್ರಃ ಪುರೋ ಭಿತ್ವೈಭ್ಯೋ ಲೋಕೇಭ್ಯೋಽಸುರಾನ್ ಪ್ರಾಣುದತ ॥**
>
> (ತೈ.ಸಂ. ೬-೨-೩-೧,೨)

ಪೂರ್ವದಲ್ಲಿ ಅಸುರರು ಉಕ್ಕು, ಬೆಳ್ಳಿ, ಚಿನ್ನ ಇವುಗಳಿಂದ ಕ್ರಮವಾಗಿ ಪೃಥಿವ್ಯಂತರಿಕ್ಷ ಸ್ವರ್ಗಲೋಕಗಳಲ್ಲಿ ಮೂರು ದುರ್ಗಗಳನ್ನು ರಚಿಸಿಕೊಂಡು ಅವುಗಳಲ್ಲಿ ವಾಸಿಸುತ್ತಿದ್ದರು. ದೇವತೆಗಳು ಎಷ್ಟು ಸಾಹಸಪಟ್ಟರೂ ಅವುಗಳನ್ನು ಜಯಿಸಲು ಸಮರ್ಥರಾಗಲಿಲ್ಲ. ಆದ್ದರಿಂದ ಅವರು ಆ ಪಟ್ಟಣಗಳನ್ನು ಮುತ್ತಿಗೆ ಹಾಕಿ ಜಯಿಸಬೇಕೆಂದು ನಿರ್ಧರಿಸಿದರು ಎಂದರೆ ಉಪಸದವೆಂಬ ಹೋಮವನ್ನು ಮಾಡಿ ಆ ಮೂಲಕ ಅವರನ್ನು ಗೆಲ್ಲಬೇಕೆಂದು ನಿಶ್ಚಯಿಸಿದರು. ಅನಂತರ ಆ ದೇವತೆಗಳು ಒಂದು ಬಾಣವನ್ನು ನಿರ್ಮಿಸಿದರು. ಆ ಬಾಣಕ್ಕೆ ಅಗ್ನಿಯನ್ನು ತುದಿಯನ್ನಾಗಿಯೂ ಸೋಮದೇವತೆಯನ್ನು ಬಾಣಕ್ಕೆ ಕಟ್ಟುವ ರೆಕ್ಕೆಯನ್ನಾಗಿಯೂ, ವಿಷ್ಣುವನ್ನು ಕಾಷ್ಠವನ್ನಾಗಿಯೂ (shaft) ಮಾಡಿ ಸಿದ್ಧಪಡಿಸಿದರು. ಅನಂತರ ಅವರು ತಮ್ಮತಮ್ಮಲ್ಲಿ ಮಾತನಾಡಿ—ಈ ಬಾಣವನ್ನು ಬಿಲ್ಲಿನಲ್ಲಿ ಹೂಡಿ ಅಸುರರ ಪಟ್ಟಣಗಳನ್ನು ಧ್ವಂಸಮಾಡಲು ಸಮರ್ಥನಾದವನು ನಮ್ಮಲ್ಲಿ ಯಾರಿರುವರು ಎಂದು ಯೋಚಿಸಿ ಕೊನೆಗೆ ರುದ್ರನು ಕ್ರೂರದೇವತೆಯಾಗಿರುವುದರಿಂದ ಅವನೇ ಈ ಕಾರ್ಯವನ್ನು ಮಾಡಲು ಸಮರ್ಥನೆಂದು ನಿಶ್ಚಯಿಸಿ ಅವನ ಬಳಿಗೆ ಬಂದು ಈ ಬಾಣವನ್ನು ಬಿಟ್ಟು ಅಸುರರ ನಗರಗಳನ್ನು ನಾಶಮಾಡಬೇಕೆಂದು ಪ್ರಾರ್ಥಿಸಿದರು. ಆಗ ರುದ್ರನು ಪಶುಗಳಿಗೆ ತಾನು ಅಧಿಪತಿಯಾಗಿರುವಂತೆ ವರವನ್ನು ಕೊಟ್ಟರೆ ತಾನು ಬಾಣವನ್ನು ಹೂಡಿ ಅಸುರರನ್ನು ಗೆಲ್ಲುವೆನೆಂದು ಹೇಳಲು ಅದಕ್ಕೆ ದೇವತೆಗಳು ಒಪ್ಪಿದರು. ಅನಂತರ ರುದ್ರನು ಆ ಬಾಣವನ್ನು ತನ್ನ ಧನುಸ್ಸಿನಲ್ಲಿ ಹೂಡಿ ಪೃಥಿವ್ಯಾದಿಲೋಕತ್ರಯಗಳಲ್ಲಿದ್ದ ಆ ಮೂರು ಪಟ್ಟಣಗಳನ್ನು ಧ್ವಂಸಗೊಳಿಸಿ ಅಲ್ಲಿಂದ ಅಸುರರನ್ನು ಓಡಿಸಿದನು ಎಂದು ಇದರ ಮುಖ್ಯಾಭಿಪ್ರಾಯವು.

**ತೇ ವಾ ಏಭ್ಯೋ ಲೋಕೇಭ್ಯೋ ನುತ್ತಾ ಅಸುರಾ ಋತೂನಶ್ರಯಂತ ತೇ ದೇವಾ ಅಬ್ರುವನ್ನುಪಸದ ಏವೋಪಯಾಮೇತಿ ತಥೇತಿ ತ ಇಮಾಸ್ತಿಸ್ರಃ ಸತೀರುಪಸದೋ ದ್ವಿರ್ದ್ವಿರೇಕೈಕಾಮುಪಾಯಂ-**

ಸ್ತಾಃ ಷಟ್ ಸಮುಪದ್ಯಂತ ಷಡ್ವಾ ಋತವಸ್ತಾನ್ವಾ ಋತು-
ಭ್ಯೋಽನುದಂತ ||

ತಮಿಮಮರ್ಥಂ ದರ್ಶಯತಿ ||

ಪೃಥಿವ್ಯಾದಿ ಮೂರು ಲೋಕಗಳಿಂದ ಓಡಿಸಲ್ಪಟ್ಟ ಅಸುರರು ವಸಂತಾದಿ ಷಡೃತುಗಳಲ್ಲಿ ಆಶ್ರಯವನ್ನು ಪಡೆದು ಅಲ್ಲಿ ವಾಸಿಸುತ್ತಿದ್ದರು. ಇದನ್ನು ತಿಳಿದು ದೇವತೆಗಳು ಅಸುರರನ್ನು ಆ ಋತುಗಳಿಂದ ಓಡಿಸುವುದಕ್ಕಾಗಿ ಮತ್ತೆ ಉಪಸದ ಹೋಮಗಳನ್ನು ಮಾಡಿದರು. ದಿನಕ್ಕೆ ಎರಡಾವರ್ತಿಯಂತೆ ಮೂರು ದಿನಗಳವರೆಗೆ ಮಾಡಿದ ಉಪಸದ್ಧೋಮದಿಂದ ಆರು ಉಪಸದಗಳನ್ನು ಮಾಡಿದಂತಾಯಿತು. ಈ ಆರು ಉಪಸದ್ಧೋಮಗಳ ಅನುಷ್ಠಾನದಿಂದ ದೇವತೆಗಳು ಅಸುರರನ್ನು ಋತುಗಳಿಂದ ಓಡಿಸಿದರು.

ತೇ ವಾ ಋತುಭ್ಯೋ ನುತ್ತಾ ಅಸುರಾ ಮಾಸಾನಶ್ರಯಂತ ತೇ
ದೇವಾ ಅಬ್ರುವನ್ನುಪಸದ ಏವೋಪಯಾಮೇತಿ ತಥೇತಿ ತ
ಇಮಾಃ ಷಟ್ಸತೀರುಪಸದೋ ದ್ವಿರ್ದ್ವಿರೈಕೈಕಾಮುಪಾ-
ಯಂಸ್ತಾ ದ್ವಾದಶ ಸಮುಪದ್ಯಂತ ದ್ವಾದಶ ವೈ ಮಾಸಾಸ್ತಾನ್ವೈ
ಮಾಸೇಭ್ಯೋಽನುದಂತ ||

ತತೋ ಮಾಸಾನ್ಶರಣಂ ಪ್ರಾಪ್ಯಾವಸ್ಥಿತಾನಾಮಸುರಾಣಾಂ ಷಡ್ದಿನೇಷ್ವನುಷ್ಠಿತಾಭಿರಾ-ವೃತ್ತಾಭಿರ್ದ್ವಾದಶೋಪಸದ್ಭಿರ್ನಿಃಸಾರಣಂ ಕೃತಂ ತದಿದಂ ದರ್ಶಯತಿ । ಮಂತ್ರತ್ರಯೇಣ ದಿನತ್ರಯೇಽನುಷ್ಠೇಯಾಸ್ತಿಸ್ರಃ ಪುನರಪ್ಯಾವೃತ್ತ್ಯಾಽನ್ಯಸ್ಮಿನ್ದಿನತ್ರಯೇಽನುಷ್ಠಿತಾಃ ಷಡ್ಭವಂತಿ || ಏಕೈಕಸ್ಮಿನ್ದಿನೇ ದ್ವಿರನುಷ್ಠಿತಾ ದ್ವಾದಶ ಸಂಪದ್ಯಂತೇ ||

ಅನಂತರ ಋತುಗಳಿಂದ ಹೊರದೂಡಲ್ಪಟ್ಟ ಅಸುರರು ಮಾಸಗಳನ್ನು ಆಶ್ರಯಿಸಿ ಅಲ್ಲಿದ್ದರು. ಮಾಸಗಳು ಒಂದ ಸಂವತ್ಸರದಲ್ಲಿ ಹನ್ನೆರಡು ಇರುವವು. ವಸಂತಾದಿ ಈ ಹನ್ನೆರಡು ಮಾಸಗಳ ಆಶ್ರಯದಲ್ಲಿದ್ದ ಅಸುರರನ್ನು ಅಲ್ಲಿಂದ ಓಡಿಸುವುದಕ್ಕಾಗಿ ದೇವತೆಗಳು ಪರಸ್ಪರ ಆಲೋಚಿಸಿ ಪುನಃ ಉಪಸದ್ಧೋಮಗಳನ್ನು ಮಾಡಬೇಕೆಂದು ನಿಶ್ಚಯಿಸಿದರು. ಅದರಂತೆ ಅವರು ದಿನಕ್ಕೆ ಎರಡಾವರ್ತಿಯಂತೆ ಉಪಸದ್ಧೋಮವನ್ನು ಹಿಂದೆ ಮೂರುದಿನಗಳವರೆಗೆ ಮಾಡಿದರಷ್ಟೆ. ಈಗ ದಿನಕ್ಕೆ ಎರಡಾವರ್ತಿಯಂತೆ ಆರುದಿನಗಳವರೆಗೆ ಮಾಡಿದರು. ಆದ್ದರಿಂದ ಆರುದಿನಗಳಿಂದ ಒಟ್ಟು ಹನ್ನೆರಡು ಉಪಸದ್ಧೋಮವನ್ನು ಮಾಡಿದಂತಾಯಿತು. ಈ ಹನ್ನೆರಡು ಉಪಸವಗಳಿಂದ ಹನ್ನೆರಡು ಮಾಸಗಳಲ್ಲಿ ಆಶ್ರಯಪಡೆದಿದ್ದ ಅಸುರರನ್ನು ಅಲ್ಲಿಂದಲೂ ದೇವತೆಗಳು ಓಡಿಸಿದರು.

ತೇ ವೈ ಮಾಸೇಭ್ಯೋ ನುತ್ತಾ ಅಸುರಾ ಅರ್ಧಮಾಸಾನಶ್ರಯಂತ
ತೇ ದೇವಾ ಅಬ್ರುವನ್ನುಪಸದ ಏವೋಪಯಾಮೇತಿ ತಥೇತಿ ತ
ಇಮಾ ದ್ವಾದಶ ಸತೀರುಪಸದೋ ದ್ವಿರ್ದ್ವಿರೈಕೈಕಾಮುಪಾ-

**ಯಂಸ್ತಾಶ್ಚತುರ್ವಿಂಶತಿಃ ಸಮುಪದ್ಯಂತ ಚತುರ್ವಿಂಶತಿರ್ವಾ ಅರ್ಧಮಾಸಾಸ್ತಾನ್ಸಾ ಅರ್ಧಮಾಸೇಭ್ಯೋಽನುದಂತ ॥**

**ಅನೇನೈವ ನ್ಯಾಯೇನ ದ್ವಾದಶಸು ದಿನೇಷ್ವನುಷ್ಠಿತಾಭಿಶ್ಚತುರ್ವಿಂಶತಿಭಿರುಪಸದ್ಭಿರ-ರ್ಧಮಾಸದೇವತಾಭ್ಯೋ ನಿಃಸಾರಿತವಂತ ಇತ್ಯೇತದ್ದರ್ಶಯತಿ ॥**

ಬಳಿಕ ಮಾಸಗಳಿಂದ ಓಡಿಸಲ್ಪಟ್ಟ ಅಸುರರು ಅರ್ಧಮಾಸಗಳಲ್ಲಿ ಆಶ್ರಯವನ್ನು ಪಡೆದರು. ಒಂದು ಸಂವತ್ಸರದಲ್ಲಿ ಮಾಸಕ್ಕೆ ಎರಡರ್ಧಮಾಸಗಳಂತೆ ಹನ್ನೆರಡು ಮಾಸಗಳಿಗೆ ಒಟ್ಟು ಇಪ್ಪತ್ತುನಾಲ್ಕು ಅರ್ಧಮಾಸಗಳಿರುವವು. ಅಸುರರು ಅರ್ಧಮಾಸಗಳಲ್ಲಿ ಆಶ್ರಯಪಡೆದಿರುವುದನ್ನು ದೇವತೆಗಳು ತಿಳಿದು ಅವರನ್ನು ಅಲ್ಲಿಂದಲೂ ಓಡಿಸುವುದಕ್ಕಾಗಿ ಹನ್ನೆರಡು ದಿವಸಗಳ ಪರ್ಯಂತ ನಡೆಯುವ ಅಹೀನಸೋಮಯಾಗಗಳಲ್ಲಿ ದಿನಕ್ಕೆ ಎರಡಾವರ್ತಿಯಂತೆ ಹನ್ನೆರಡುದಿನಗಳವರೆಗೆ ಇಪ್ಪತ್ತನಾಲ್ಕು ಉಪಸದ್ಹೋಮಗಳನ್ನು ಮಾಡಿ ಇಪ್ಪತ್ತನಾಲ್ಕು ಅರ್ಧಮಾಸಗಳಿಂದಲೂ ಅಸುರರನ್ನು ಓಡಿಸಿದರು.

**ತೇ ದೇವಾ ಅರ್ಧಮಾಸೇಭ್ಯೋ ನುತ್ತಾ ಅಸುರಾ ಅಹೋರಾತ್ರೇ ಅಶ್ರಯಂತ ತೇ ದೇವಾ ಅಬ್ರುವನ್ನುಪಸದಾವೇವೋಪಯಾ-ಮೇತಿ ತಥೇತಿ ತೇ ಯಾಮೇವ ಪೂರ್ವಾಹ್ಣ ಉಪಸದಮುಪಾ-ಯಂಸ್ತಯೈವೈನಾನಹ್ನೋಽನುದಂತ ಯಾಮುಪರಾಹ್ಣೇ-ತಯಾ ರಾತ್ರೇಸ್ತಾಂಸ್ತಥೋಭಾಭ್ಯಾಮಹೋರಾತ್ರಾಭ್ಯಾಮಂ-ಮಂತರಾಯನ್ ॥**

**ತತೋಽಹೋರಾತ್ರದೇವೌ ಶರಣಂ ಗತಾನಾಮಸುರಾಣಾಂ ಕಾಲವಿಶೇಷದ್ವಯಾನು-ಷ್ಠಾನೇನ ನಿಃಸಾರಣಂ ದರ್ಶಯತಿ ॥ ಅಂತರಾಯನ್ನಂತರಿತಾನ್ಕೃತವಂತೋ ನಿಃಸಾರಿತವಂತ ಇತ್ಯರ್ಥಃ ॥**

ಅರ್ಧಮಾಸಗಳಿಂದಲೂ ಹೊರದೂಡಲ್ಪಟ್ಟ ಅಸುರರು ಅಹೋರಾತ್ರೆಗಳಲ್ಲಿ (ಹಗಲು ಮತ್ತು ರಾತ್ರಿಕಾಲಗಳಲ್ಲಿ) ಆಶ್ರಯವನ್ನು ಪಡೆದರು. ಇದನ್ನು ದೇವತೆಗಳು ತಿಳಿದು ಉಪಸದ್ಹೋಮವನ್ನು ಮಾಡಿ ಅಲ್ಲಿಂದಲೂ ಅಸುರರನ್ನು ಓಡಿಸಬೇಕೆಂದು ನಿಶ್ಚಯಿಸಿ ದಿನಕ್ಕೆ ಎರಡಾವರ್ತಿಯಂತೆ ಎಂದರೆ ಪೂರ್ವಾಹ್ಣದಲ್ಲಿಯೂ ಅಪರಾಹ್ಣದಲ್ಲಿಯೂ ಉಪಸದ್ಹೋಮವನ್ನು ಮಾಡಿ ಅಸುರರನ್ನು ಅಲ್ಲಿಂದಲೂ ಓಡಿಸಿದರು. ಪೂರ್ವಾಹ್ಣದಲ್ಲಿ ಮಾಡಿದ ಹೋಮದಿಂದ ಹಗಲಿನಿಂದ ಅಸುರರನ್ನು ಓಡಿಸಿದಂತಾಯಿತು. ಅಪರಾಹ್ಣದಲ್ಲಿ ಮಾಡುವ ಉಪಸದ್ಹೋಮವು ರಾತ್ರಿಯಿಂದ ಅಸುರರನ್ನು ಓಡಿಸುವುದು. ಈರೀತಿ ಪೂರ್ವಾಹ್ಣ ಮಧ್ಯಾಹ್ನಗಳೆರಡರಲ್ಲಿಯೂ ಎರಡಾವರ್ತಿಮಾಡಿದ ಉಪಸದ್ಹೋಮದಿಂದ ಅಸುರರನ್ನು ಅಹೋರಾತ್ರೆಗಳೆರಡರಿಂದಲೂ ಓಡಿಸಲಾಯಿತು. ಈ ವಿಷಯದಲ್ಲಿ—

**ದೇವಾ ವೈ ಯಾಃ ಪ್ರಾತರುಪಸದ ಉಪಾಸೀದನನ್ನಸ್ತಾಭಿರಸುರಾನ್ಪ್ರಾಣುದಂತ ಯಾಃ ಸಾಯಗ್ಂ ರಾತ್ರಿಯೈ ತಾಭಿರ್ಯತ್ಸಾಯಂ ಪ್ರಾತರುಪಸದ ಉಪಸದ್ಯಂತೇಽಹೋರಾ-ತ್ರಾಭ್ಯಾಮೇವ ತದ್ಯಜಮಾನೋ ಭ್ರಾತೃವ್ಯಾನ್ಪ್ರಣುದತೇ ।** (ತೈ. ಸಂ. ೬-೨-೩-೩)

ಎಂದು ಹೇಳಿರುವುದು. ಆದ್ದರಿಂದ ಅವರು (ಅಸುರರು ನಿರ್ವಾಹವಿಲ್ಲದೆ ಅಹೋರಾತ್ರಿಗಳ ಸಂಧಿಕಾಲದ ಅಲ್ಪಕಾಲದಲ್ಲಿ ಮಾತ್ರ ಆಶ್ರಯವನ್ನು ಪಡೆಯುವಂತಾಯಿತು.

ತಸ್ಮಾತ್ಸಪೂರ್ವಾಹ್ಣ ಏವ ಪೂರ್ವಯೋಪಸದಾ ಪ್ರಚರಿತವ್ಯಂ ಸ್ವಪ-ರಾಹ್ಣೇಽಪರಯಾ ತಾವಂತಮೇವ ತದ್ದ್ವಿಷತೇ ಲೋಕಂ ಪರಿಶಿನಷ್ಟಿ ॥

ಏಕೈಕಸಿನ್ದಿನ ಏಕೈಕಸ್ಯಾ ಉಪಸದೋ ದ್ವಿರನುಷ್ಠಾನಾಯ ಕಾಲದ್ವಯವಿಶೇಷಂ ವಿಧತ್ತೇ ॥ ಯಸ್ಮಾತ್ಪೂರ್ವಾಹ್ಣಾಪರಾಹ್ಣೌ ಕಾಲವಿಶೇಷಾವಹೋರಾತ್ರಾಭ್ಯಾಂ ಶತ್ರೂಣಾಂ ನಿಃಸಾರಣೇ ಹೇತೂ ತಸ್ಮಾತ್ತಸ್ಮಿನ್ನೇವ ಕಾಲದ್ವಯೇಽನುಷ್ಠಾತವ್ಯಂ ॥ ಏವಂ ಸತಿ ಯಾವಾನ-ಹೋರಾತ್ರಯೋಃ ಸಂಧಿಕಾಲಸ್ತಾವಂತಮೇವ ದ್ವಿಷತೇ ದ್ವೇಷಿಣೇ ಲೋಕಂ ಸ್ಥಾನವಿಶೇಷಂ ಪರಿಶಿನಷ್ಟಿ ॥ ಇತರಸ್ಮಾತ್ಕಾಲಾನ್ನಿಃಸಾರಿತತ್ವೇನ ಸಂಧ್ಯಾಕಾಲ ಏವಾಸುರಾಣಾಂ ಪರಿಶಿಷ್ಯತೇ ॥ ಅತ್ರೈಕೈಕಸ್ಮಿನ್ದಿನೇ ದ್ವಿರ್ದ್ವಿರನುಷ್ಠೇಯಾ ಉಪಸದೋ ಜ್ಯೋತಿಷ್ಟೋಮೇ ತ್ರಿಷು ದಿನೇಷ್ವನು-ಷ್ಠೇಯಾಃ ॥ ಅಗ್ನಿಚಯನೇ ಷಟ್ಸು ದಿನೇಷು ॥ ಅಹೀನಸತ್ರಯೋರ್ದ್ವಾದಶದಿನೇಷು । ತಥಾಚ ತೈತ್ತಿರೀಯೈರಾಮ್ನಾತಂ ॥ 'ತಿಸ್ರ ಏವ ಸಾಹ್ನಸ್ಯೋಪಸದೋ ದ್ವಾದಶಾಹೀನಸ್ಯ ಯಜ್ಞಸ್ಯ ಸವೀರ್ಯತ್ವಾಯ' ಇತಿ ॥ ತಥಾ 'ಷಡುಪಸದೋಽಗ್ನೇಶ್ಚಿತ್ಯಸ್ಯ ಭವಂತಿ' ಇತಿ ಶ್ರುತ್ಯಂತರಂ ದ್ರಷ್ಟವ್ಯಂ ॥ ಆಶ್ವಲಾಯನಸ್ತ್ವೇವಮಾಹ—'ಏಕಾಹಾನಾಂ ತಿಸ್ರಃ ಷಡ್ವಾಹೀನಾನಾಂ ದ್ವಾದಶ ಚತುರ್ವಿಂಶತಿಃ ಸಂವತ್ಸರ ಇತಿ ಸತ್ರಾಣಾಂ' ಇತಿ ಗವಾಮಯನಾಖ್ಯೇ ಸಂವತ್ಸರ-ಇತ್ಯರ್ಥಃ ॥ ಅಥಮೀಮಾಂಸಾ ಪಂಚಮಾಧ್ಯಾಯಸ್ಯ ತೃತೀಯಪಾದೇ ಚಿಂತಿತಂ ॥

"ಆವೃತ್ತಿರುಪಸತ್ಸ್ವೇಷಾ ಸಂಘಸ್ಯೈಕೈಕಶೋಽಥವಾ ॥
ತ್ರಿರಧ್ಯಾಯಂ ಪಠೇತ್ಯಾದಾವಿವ ಸ್ಯಾತ್ಸಮುದಾಯಗಾ ॥
ಪ್ರಥಮಾಮಧ್ಯಮಾಂತ್ಯೇತಿಪ್ರಾಕೃತಕ್ರಮಸಿದ್ಧಯೇ ॥
ಏಕೈಕಸ್ಯಾ ದ್ವಿರಭ್ಯಾಸೇ ಷಟ್ಸಂಖ್ಯಾಽಪಿ ಪ್ರಸಿಧ್ಯತಿ ॥"

ಅಗ್ನೌ ಶ್ರೂಯತೇ—ಷಡುಪಸದ ಇತಿ ॥ ತತ್ರ ಚೋದಕಪ್ರಾಪ್ತಾನಾಂ ತಿಸೃಣಾಮುಪಸದಾಂ ಪೂರ್ವನ್ಯಾಯೇನಾಽಽವೃತ್ತ್ಯಾ ಷಟ್ಸಂಖ್ಯಾ ಸಂಪಾದನೀಯಾ ॥ ಸಾ ಚಾವೃತ್ತಿರ್ದಂಡಕಲಿತವತ್ಸ-ಮುದಾಯಸ್ಯ ಯುಕ್ತಾ । ಯಥಾ ದಂಡೇನ ಭೂಪ್ರದೇಶಂ ಸಂಮಿಮಾನಃ ಪುರುಷ ಆಮೂ-ಲಾಗ್ರಂ ಕೃತ್ಸ್ನಂ ದಂಡಂ ಪುನಃ ಪುನಃ ಪಾತಯಾತ ನ ತು ದಂಡಸ್ಯ ಪ್ರತ್ಯವಯವಂ ಪೃಥಗಾ-ವೃತ್ತಿಂ ಕರೋತಿ ಯಥಾ ವಾ ತ್ರಿವಾರಂ ರುದ್ರಾಧ್ಯಾಯಂ ಜಪತೀತ್ಯತ್ರ ಕೃತ್ಸ್ನ ಏವಾಧ್ಯಾಯ ಆವರ್ತ್ಯತೇ ನತ್ವಧ್ಯಾಯೈಕದೇಶಃ ॥ ಏಕೈಕೋಽನುವಾಕಃ ಪೃಥಗೇವ ತ್ರಿಃ ಪಠ್ಯತೇ—ತಥಾ ತ್ರಿಸೃಣಾಮುಪಸದಾಂ ಸಮುದಾಯ ಆವರ್ತನೀಯ ಇತಿಚೇನ್ನೈವಂ ॥ ಪ್ರಾಕೃತಕ್ರಮಬಾಧ-ಪ್ರಸಂಗಾತ್ ॥ ಪ್ರಕೃತೌ ಹಿ ದೀಕ್ಷಾನಂತರಭಾವಿನಿ ದಿನೇ ಹೋತವ್ಯಾ ಪ್ರಥಮೋಪಸತ್ ॥ ತತ ಊರ್ಧ್ವದಿನೇ ದ್ವಿತೀಯಾ ॥ ತತೋಽಪ್ಯೂರ್ಧ್ವದಿನೇ ತೃತೀಯಾ ॥ ತಾ ಏತಾಃ ಸಕೃದನುಷ್ಠಾ-

**ಯ ಪುನರುಪರಿತನದಿನೇಽನುಷ್ಠೀಯಮಾನಾಯಾಂ ಪ್ರಥಮಾತ್ವಮುಪೈತಿ ಚತುರ್ಥೀತ್ವಮಾಯಾತಿ ॥ ತಸ್ಮಾತ್ಪ್ರಕೃತಕ್ರಮುಸಿದ್ಧಯೇ ಪ್ರಥಮಾಂ ದಿನದ್ವಯೇಽಭ್ಯಸ್ಯ ತತೋ ದ್ವಿತೀಯಾಂ ದ್ವಿರಭ್ಯಸ್ಯೇದಿತ್ಯೇವಂ ಸ್ವಸ್ಥಾನವಿವೃಧ್ಯಾ ತಾಸಾಮಾವೃತ್ತಿಃ ಕಾರ್ಯಾ ॥ ನ ಚಾಧ್ಯಾಯದೃಷ್ಟಾಂತೋ ಯುಕ್ತಃ ॥ ಅನುವಾಕಸಮುದಾಯಸ್ಯೈವಾಧ್ಯಾಯತ್ವಾದಧ್ಯಾಯಸ್ಯೈವ ಚಾಽಽವೃತ್ತಿವಿಧಾನಾತ್ ನ ತ್ವಿಹಸಮುದಾಯಸ್ಯೋಪಸತ್ವಮಸ್ತಿ ॥ ತಸ್ಮಾತ್ಪ್ರತ್ಯೇಕಮುಪಸದಾವರ್ತನೀಯಾ ॥**

ಈರೀತಿಯಾಗಿ ಪೂರ್ವಾಹ್ಣ ಮತ್ತು ಅಪರಾಹ್ಣಗಳೆಂಬ ಕಾಲವಿಶೇಷಗಳು ಶತ್ರುಗಳಾದ ಅಸುರರನ್ನು ಅವರು ಆಶ್ರಯ ಪಡೆದಿದ್ದ ಅಹೋರಾತ್ರಿಗಳಿಂದಲೂ ಓಡಿಸಲು ಕಾರಣಭೂತವಾದ್ದರಿಂದ ಈಗಲೂ ಸಹ ಯಜ್ಞಮಾಡುವ ಯಜಮಾನರು ದಿನಕ್ಕೆ ಪೂರ್ವಾಹ್ಣ ಮತ್ತು ಅಪರಾಹ್ಣ ಎಂಬ ಎರಡು ಕಾಲಗಳಲ್ಲಿಯೂ ಉಪಸದ್ಹೋಮವನ್ನು ಮಾಡುವುದು ಕರ್ತವ್ಯವಾಗಿದೆ. ಎಲ್ಲಾ ಸ್ಥಳಗಳಿಂದಲೂ ಎಲ್ಲಾ ಕಾಲಗಳಿಂದಲೂ ಓಡಿಸಲ್ಪಟ್ಟ ಅಸುರರು ಕೊನೆಗೆ ವಿಧಿಯಿಲ್ಲದೆ ಅಹೋರಾತ್ರಿಗಳ ಸಂಧಿಕಾಲದಲ್ಲಿ ಮಾತ್ರ ಆಶ್ರಯವನ್ನು ಪಡೆಯಬೇಕಾದುದರಿಂದ ಲೋಕದಲ್ಲಿ ದ್ವೇಷಿಸುವ ಶತ್ರುಗಳಿಗೆ ಅಹೋರಾತ್ರಿಗಳ ಸಂಧಿಕಾಲವನ್ನು ಮಾತ್ರ ನಿರ್ದೇಶಿಸಲಾಗಿದೆ. ಈ ಕಾರಣದಿಂದಲೇ ಅಸುರರಿಗೆ ಸಂಧ್ಯಾಕಾಲವೇ ಮುಖ್ಯವಾಗಿ ನಿರ್ದಿಷ್ಟವಾಗಿರುವುದು. ದಿನಕ್ಕೆ ಎರಡಾವರ್ತಿಯಂತೆ ಮಾಡಲ್ಪಡುವ ಉಪಸದ್ಹೋಮಗಳನ್ನು ಅಗ್ನಿಷ್ಟೋಮಯಾಗದಲ್ಲಿ ಮೂರುದಿನಗಳವರೆಗೆ ಮಾಡಬೇಕು; ಅಗ್ನಿಚಯನದಲ್ಲಿ ಆರುದಿನಗಳವರೆಗೂ, ಅಹೀನಾದಿ ಸತ್ರಯಾಗಗಳಲ್ಲಿ ಹನ್ನೆರಡು ದಿನಗಳವರೆಗೂ ಮಾಡಬೇಕು. ಈ ವಿಷಯದಲ್ಲಿ ತೈತ್ತರೀಯ ಶ್ರುತಿಯು—**ತಿಸ್ರ ಏವ ಸಾಹ್ನಸ್ಯೋಪಸದೋ ದ್ವಾದಶಾಹೀನಸ್ಯ ಸವೀರ್ಯತ್ವಾಯ** (ತೈ. ಸಂ. ೬-೨-೫-೧) ಎಂದು ಹೇಳಿರುವುದು. ಆಶ್ವಲಾಯನ ಶ್ರೌತಸೂತ್ರದಲ್ಲಿಯೂ ಸಹ—**ಏಕಾಹಾನಾಂ ತಿಸ್ರಃ ಷಡ್ವಾ, ಅಹೀನಾನಾಂ ದ್ವಾದಶ, ಚತುರ್ವಿಂಶತಿಃಸಂವತ್ಸರ ಇತಿ ಸತ್ರಾಣಾಂ**—(ಆಶ್ವ.ಶ್ರೌ.ಸೂ. ೪-೮-೧೩ ರಿಂದ ೧೬) ಎಂದು ಹೇಳಿರುವುದು. ಎಂದರೆ ಒಂದು ದಿನದಲ್ಲಿ ಮಾಡಿ ಮುಗಿಸುವ ಯಜ್ಞದಲ್ಲಿ ಮೂರು ಅಥವಾ ಆರು (ದಿನಕ್ಕೆ ಎರಡರಂತೆ) ಉಪಸದಗಳನ್ನೂ, ಅಹೀನಯಾಗಗಳಲ್ಲಿ (ಒಂದು ದಿವಸಕ್ಕಿಂತ ಹೆಚ್ಚುಕಾಲ ಮಾಡುವ ಯಾಗಗಳಲ್ಲಿ) ಹನ್ನೆರಡು ಉಪಸದಗಳನ್ನು, ಒಂದು ಸಂವತ್ಸರದವರೆಗೂ ಮಾಡುವ ಗವಾಮಯನ ಮೊದಲಾದ ಸತ್ರಯಾಗಗಳಲ್ಲಿ ಇಪ್ಪತ್ತನಾಲ್ಕು ಉಪಸದಗಳನ್ನು ಆಚರಿಸಬೇಕು ಎಂದಭಿಪ್ರಾಯವು.



*English Translatison*

The Devas and Asuras were fighting in these worlds. The Asuras made these worlds fortified castles, just as the strongest and most powerful (kings) do. Thus they made the earth an iron castle, the air a silver, the sky a golden castle. Thus they made these worlds castles. The devas said, these Asuras have made these worlds castles; let us thus make other worlds in opposition to these castles. They made out of the earth in opposition (to the iron castle of the Asuras). A sitting room (sadas), out of the air a fire-place (agnidhriya), and out of the sky

two repositories for food (havirdhana). Such they made these worlds in oppsition to the castles (into which the three worlds had been transformed by the Asuras). The gods said, Let us perform the burnt offerings called Upasada (i.e. blessing). For by means of an upasad, i.e. besieging, they conquer a large (fortified) town. Thus they did. When they performed the first Upasad, they drove by it them (the Asuras) out from this world (the earth). By the performance of the second, they drove them out of the air, and by the performance of the third, out of the sky. Thus they were driven out of these worlds. The Asuras driven out of these (three) worlds, repaired to the Ritus (seasons). The gods said, Let us performs the Upasads. Thus they did.

These Upasads being three, they performed each twice; (thus) they became six. There are six Ritus (seasons); thus they drove them (the Asuras) out of the Ritus. The Asuras driven out of the Ritus, repaired to the months. The Devas said, Let us perform the Upasads. Thus they did. The Upasads being six. Let us perform each twice, that makes twelve. There are twelve months. They drove them out of the months. The Asuras driven out of the months repaired to the half months. The Devas said, Let us perform the Upasads. Thus they did. The Upasads being twelve, they performed each twice: that makes twenty-four. There are twenty-four half months. They turned them (the Asuras) out of the half months. The Asuras, turned out of the half months, repaired to Day and Night (ahoratra). The Devas said, Let us perform the Upasads. Thus They did. By means of the Upasad which they performed for the first part of the day, they turned them out of day, and by means of that which they performed for the second part of the day, they turned them out of night. Thus they disappeared from both day and night. Thence the first Upasad is to be performed during the first part of the day, and the second, during the second part. By doing so the sacrificer leaves only so much space to his enemy (as there is between the junction of day and night).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುರ್ಥಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಆರನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ಥಾಧ್ಯಾಯೇ ಸಪ್ತಮಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ ಉಪಸತ್ ಎಂಬ ಇಷ್ಟಿ (ಮುಂದುವರೆದುದು)—ಯಜ್ಞದಲ್ಲಿ ಋತ್ವಿಕ್ಕುಗಳು ಪರಸ್ಪರ ಸಹಕರಿಸುವುದಕ್ಕಾಗಿ **ತಾನೂನಪ್ತ್ರಂ** ಎಂಬ ಪ್ರಮಾಣವಚನಸ್ವೀಕಾರವೆಂಬ ಕರ್ಮವಿಶೇಷದ ವಿವರಣೆ ]



**ಜಿತಯೋ ವೈ ನಾಮೈತಾ ಯದುಪಸದೋಽಸಪತ್ನಾಂ ವಾ ಏತಾಭಿ-**
**ರ್ದೇವಾ ವಿಜಿತಿಂ ವ್ಯಜಯಂತ । ಅಸಪತ್ನಾಂ ವಿಜಿತಿಂ ವಿಜ-**
**ಯತೇ ಯ ಏವಂ ವೇದ ॥**

**ಅಥೋಪಸದಃ ಪ್ರಶಂಸತಿ—ಉಪಸದೋ ಯಾಃ ಸನ್ತ್ಯೇತಾ ಜಿತಯೋ ವೈ ನಾಮ ॥ ಜಯಹೇತುತ್ವಾಜ್ಜಿತಯ ಇತ್ಯೇವಂ ನಾಮ ಪ್ರತಿಪದ್ಯಂತೇ । ಜಯಹೇತುತ್ವಮೇವಾಸಪತ್ನಾ-ನಾಮಿತ್ಯಾದಿನಾ ಸ್ಪಷ್ಟೀಕ್ರಿಯತೇ ॥ ದೇವಾ ಏತಾಭಿರುಪಸದ್ಭಿರಸಪತ್ನಾನಾಂ ವೈರರಹಿತಾಮೇವ ವಿಜಿತಿಂ ವಿಶಿಷ್ಟಂ ಜಯಂ ವ್ಯಜಯಂತ ವಿಶೇಷೇಣ ಪ್ರಾಪ್ತವಂತಃ ॥ ವೇದನಂ ಪ್ರಶಂಸತಿ ॥**

ಈಗ ಉಪಸದಾಖ್ಯಕರ್ಮವನ್ನು ಪ್ರಶಂಸೆಮಾಡುವರು. ಉಪಸದಃ ಎಂಬ ಕರ್ಮಗಳಿಗೆ **ಜಿತಯಃ** ಎಂದು ಹೆಸರು. ಏಕೆಂದರೆ ಈ ಉಪಸದಗಳು ಅನುಷ್ಠಾನಮಾಡುವವರಿಗೆ ಜಯವನ್ನು ಗಳಿಸಿಕೊಡುವುದರಿಂದ ಈ ಕರ್ಮಗಳಿಗೆ ಜಿತಯಃ ಎಂಬ ಅನ್ವರ್ಥನಾಮವು ಬಂದಿದೆ. ಇದಕ್ಕೆ ಕಾರಣವೇನೆಂದರೆ ಪೂರ್ವದಲ್ಲಿ ದೇವತೆಗಳು ಈ ಉಪಸದಾಖ್ಯಕರ್ಮವನ್ನು ಮಾಡಿದ್ದರಿಂದ ತಮ್ಮ ಶತ್ರುಗಳನ್ನು ಸೋಲಿಸಿ ಜಯವನ್ನು ಗಳಿಸಿದರು. ಆದ್ದರಿಂದ ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ವಿವೇಕಿಯಾದ ಪುರುಷನೂ ಸಹ ತನ್ನ ಶತ್ರುಗಳನ್ನು ಸೋಲಿಸಿ ಜಯವನ್ನು ಗಳಿಸುವನು.

**ಯಾಂ ದೇವಾ ಏಷು ಲೋಕೇಷು ಯಾಮೃತುಷು ಯಾಂ ಮಾಸೇಷು**
**ಯಾಮರ್ಧಮಾಸೇಷು ಯಾಮಹೋರಾತ್ರಯೋರ್ವಿಜಿತಂ**
**ವ್ಯಜಯಂತ ತಾಂ ವಿಜಿತಿಂ ವಿಜಯತೇ ಯ ಏವಂ ವೇದ ।**

**ಸಾಮಾನ್ಯಾಕಾರೇಣ ವೇದನಂ ಪ್ರಶಸ್ಯ ಪುನಃ ಪೂರ್ವೋಕ್ತಾರ್ಥವಾದಾನುಕ್ರಮೇಣ ವಿಶೇಷಾಕಾರೇಣ ಪ್ರಶಂಸತಿ ॥**

ಹೇಗೆಂದರೆ ಯಾವ ಉಪಸದಾಖ್ಯಕರ್ಮವನ್ನು ಮಾಡಿ ದೇವತೆಗಳು ಪೃಥಿವ್ಯಾದಿ ಮೂರು ಲೋಕಗಳಲ್ಲಿಯೂ, ವಸಂತಾದಿ ಆರು ಋತುಗಳಲ್ಲಿಯೂ, ಚೈತ್ರಾದಿದ್ವಾದಶಮಾಸಗಳಲ್ಲಿಯೂ, ಸಂವತ್ಸರದಲ್ಲಿರುವ ಇಪ್ಪತ್ತನಾಲ್ಕು ಅರ್ಧಮಾಸಗಳಲ್ಲಿಯೂ, ಅಹೋರಾತ್ರಿಗಳಲ್ಲಿಯೂ ಆಶ್ರಯವನ್ನು ಪಡೆದಿದ್ದ ಅಸುರರನ್ನು ಸೋಲಿಸಿ ಓಡಿಸಿ ಜಯವನ್ನು ಗಳಿಸಲು ಸಮರ್ಥರಾದರೋ ಅಂತಹ ಉಪಸತ್ಕರ್ಮವನ್ನು ಸರಿಯಾಗಿ ತಿಳಿದು ಆಚರಿಸುವ ಪುರುಷನು ತನ್ನ ಶತ್ರುಗಳನ್ನು ಸೋಲಿಸಿ ಜಯವನ್ನು ಗಳಿಸುವನು.

ತೇ ದೇವಾ ಅಬಿಭಯುರಸ್ಮಾಕಂ ವಿಪ್ರೇಮಾಣಮನ್ವಿದಮಸುರಾ ಆಭವಿಷ್ಯಂತೀತಿ ತೇ ವ್ಯುತ್ಕ್ರಮ್ಯಾಮಂತ್ರಯಂತಾಗ್ನಿರ್ವಸುಭಿರುದಕ್ರಾಮದಿಂದ್ರೋ ರುದ್ರೈರ್ವರುಣ ಆದಿತ್ಯೈರ್ಬೃಹಸ್ಪತಿರ್ವಿಶ್ವೈರ್ದೇವೈಃ ।

ಅಥ ತಾನೂನಪ್ತ್ರಸ್ಯ ನಾಮ ನಿರ್ವಕ್ತುಮಾಖ್ಯಾಯಿಕಾಮಾಹ—ಅಸುರೈಃ ಸಹ ಯುದ್ಧಾರ್ಥಮುದ್ಯತಾ ದೇವಾ ಸ್ವಸೇನಾಯಾ ಮಧ್ಯೇ ಪರಸ್ಪರಮೇಕೈಕಸ್ಯ ಸೇನಾನೀತ್ವಲಕ್ಷಣಂ ಜ್ಯೈಷ್ಠ್ಯಮುಪಗಚ್ಛಂತಃ ಪರಸ್ಪರವಿರೋಧಿನೋ ಭೂತ್ವಾಽಪಸೃತ್ಯಾಬಿಭಯುರ್ಮನಸಿ ಭೀತಿಂ ಪ್ರಾಪ್ತಾಃ ॥ ಕೇನಾಭಿಪ್ರಾಯೇಣೇತಿ ತದುಚ್ಯತೇ ॥ ಅಸ್ಮಾಕಂ ವಿಪ್ರೇಮಾಣಮನು ಪರಸ್ಪರಪ್ರೇಮರಾಹಿತ್ಯಮನುವೀಕ್ಷ್ಯಾಸುರಾ ಇದಮಸ್ಮದೀಯಂ ರಾಜ್ಯಮಾಭವಿಷ್ಯಂತಿ ಸರ್ವತಃ ಪ್ರಾಪ್ಸ್ಯಂತೀತಿ ॥ ತತಸ್ತೇ ದೇವಾ ವ್ಯುತ್ಕ್ರಮ್ಯ ಪರಸ್ಪರವಿಭಾಗೇನ ತಸ್ಮಾದ್ದೇಶಾದಪಸೃತ್ಯ ಸ್ವಸಂಬಂಧಿಭಿರ್ಮಂತ್ರಿಭಿಃ ಸಹಾಮಂತ್ರಯಂತ ಪರ್ಯಾಲೋಚನಂ ಕೃತವಂತಃ ॥ ತತಸ್ತತ್ರಾಗ್ನಿರ್ದೇವೋ ವಸುಭಿರಷ್ಟಮಂತ್ರಿಭಿಃ ಸಹಿತಃ ಪೃಥಗುದಕ್ರಾಮತ್ ॥ ಅತ್ರ ಚತುರ್ವಿಧೈವ ವಿಭಾಗ ಉಕ್ತಃ । ಶಾಖಾಂತರೇತು ಪಂಚಧಾ ॥ ತಥಾ ಚಾಽಽಮ್ನಾಯತೇ—‘ದೇವಾಸುರಾಃ ಸಂಯತ್ತಾ ಆಸಂಸ್ತೇ ದೇವಾಮಿಥೋ ವಿಪ್ರಿಯಾ ಆಸಂಸ್ತೇಽನ್ಯೋಽನ್ಯಸ್ಮೈ ಜ್ಯೈಷ್ಠ್ಯಾಯಾತಿಷ್ಠಮಾನಃ ಪಂಚಧಾ ವ್ಯಕ್ರಾಮನ್ ॥ ಅಗ್ನಿರ್ವಸುಭಿಃ ಸೋಮೋರುದ್ರೈರಿಂದ್ರೋ ಮರುದ್ಭಿರ್ವರುಣ ಆದಿತ್ಯೈರ್ಬೃಹಸ್ಪತಿರ್ವಿಶ್ವೈರ್ದೇವೈಃ’ ಇತಿ ॥

ಈಗ ತಾನೂನಪ್ತ್ರವೆಂಬ ಕರ್ಮವನ್ನು ಹೇಳುವುದಕ್ಕಾಗಿ ಅದರ ಹಿನ್ನೆಲೆಯಾದ ಒಂದು ಇತಿಹಾಸವನ್ನು ಹೇಳುವರು ಹಿಂದೆ ದೇವತೆಗಳು ಅಸುರರೊಡನೆ ಯುದ್ಧಮಾಡುವ ಸಂದರ್ಭದಲ್ಲಿ ಸೇನೆಯ ಮಧ್ಯದಲ್ಲಿದ್ದ ದೇವತೆಗಳಲ್ಲಿಯೇ ಪರಸ್ಪರ ವಿವಾದಕ್ಕಾರಂಭವಾಯಿತು. ದೇವತೆಗಳ ಸೇನೆಗಳಿಗೆ ಯುದ್ಧಮಾಡುವಾಗ ನಾನೇ ನಾಯಕನಾಗಬೇಕು (leader) ಎಂದು ಅವರವರಲ್ಲಿಯೇ ತಿಕ್ಕಾಟವುಂಟಾಯಿತು. ಒಬ್ಬರಿಗೊಬ್ಬರಿಗೂ ಸರಿಹೋಗದೆ ಎಂದರೆ ಐಕಮತ್ಯವುಂಟಾಗದೆ ಬೇರೆ ಬೇರೆ ಗುಂಪುಗಳಾಗಿ ಚದುರಿದರು. ಆಗ ದೇವತೆಗಳು ತಮ್ಮ ಅನೈಕಮತ್ಯದಿಂದ ಅಸುರರು ಬಲಗೊಂಡು ನಮ್ಮನ್ನು ಜಯಿಸಿ ನಮ್ಮ ರಾಜ್ಯವನ್ನು ಕಿತ್ತುಕೊಂಡು ನಮ್ಮನ್ನು ಓಡಿಸಬಹುದೆಂದು ಬಹಳವಾಗಿ ಹೆದರಿದರು. ಆದ್ದರಿಂದ ದೇವತೆಗಳಲ್ಲಿ ಅಗ್ನಿಯು ಅಷ್ಟವಸುಗಳಿಂದ ಸಹಿತನಾಗಿ ಬೇರೆ ಕಡೆಗೆ ಹೋಗಿ ಅಲ್ಲಿ ಪ್ರತ್ಯೇಕವಾಗಿ ಮಂತ್ರಾಲೋಚನೆಮಾಡಿದನು. ಇಂದ್ರನು ಏಕಾದಶ ರುದ್ರರೊಡನೆಯೂ, ವರುಣನು ದ್ವಾದಶಾದಿತ್ಯರೊಡನೆಯೂ ಬೃಹಸ್ಪತಿಯು ವಿಶ್ವೇದೇವತೆಗಳೊಡನೆಯೂ ಪ್ರತ್ಯೇಕ ಗುಂಪು

ಗಳಾಗಿ ಬೇರೆಬೇರೆ ಪ್ರದೇಶಗಳಿಗೆ ಹೋಗಿ ಮಂತ್ರಾಲೋಚನೆಮಾಡಿದರು. ಇಲ್ಲಿ ಅಗ್ನಿ, ಇಂದ್ರ, ವರುಣ, ಬೃಹಸ್ಪತಿ ಎಂಬುವರು ನಾಲ್ಕು ಗುಂಪುಗಳಾಗಿ ಹೊರಟುಹೋದರೆಂದು ಹೇಳಿದೆ. ಶಾಖಾಂತರದಲ್ಲಿ ಎಂದರೆ ತೈತ್ತಿರೀಯ ಸಂಹಿತೆಯಲ್ಲಿ—

**ದೇವಾಸುರಾಃ ಸಂಯತ್ತಾ ಆಸಂಸ್ತೇ ದೇವಾ ಮಿಥೋ ವಿಪ್ರಿಯಾ ಆಸಂಸ್ತೇಽನ್ಯೋ-ನ್ಯಸ್ಮೈ ಜ್ಯೈಷ್ಠ್ಯಾಯಾತಿಷ್ಠಮಾನಾಃ ಪಂಚಧಾ ವ್ಯಕ್ರಾಮನ್ನಗ್ನಿರ್ವಸುಭಿಃ ಸೋಮೋರುದ್ರೈ-ರಿಂದ್ರೋ ಮರುದ್ಭಿರ್ವರುಣ ಆದಿತ್ಯೈರ್ಬೃಹಸ್ಪತಿರ್ವಿಶ್ವೈರ್ದೇವೈಃ ॥**

(ತೈ. ಸಂ. ೬-೨-೨-೧)

ಎಂದರೆ ಅಗ್ನಿಯು ವಸುಗಳೊಡನೆಯೂ, ಸೋಮನು ರುದ್ರರೊಡನೆಯೂ, ಇಂದ್ರನು ಮರುದ್ಗಣಗಳೊಡನೆಯೂ, ವರುಣನು ಆದಿತ್ಯರೊಡನೆಯೂ, ಬೃಹಸ್ಪತಿಯು ವಿಶ್ವೇದೇವತೆಗಳೊಡನೆಯೂ ಗುಂಪುಕಟ್ಟಿಕೊಂಡು ಪ್ರತ್ಯೇಕವಾಗಿ ಹೋಗಿ ಮಂತ್ರಾಲೋಚನೆಮಾಡಿದರು ಎಂದು ಐದುವಿಧ ಗುಂಪುಗಳೆಂದು ಇಲ್ಲಿ ತಿಳಿಸಲಾಗಿದೆ.

ತೇ ತಥಾ ವ್ಯುತ್ಕ್ರಮ್ಯಾಮಂತ್ರಯಂತ ತೇಽಬ್ರುವನ್ ಹಂತ ಯಾ ಏವ ನ ಇಮಾಃ ಪ್ರಿಯತಮಾಸ್ತನ್ವಸ್ತಾ ಅಸ್ಯ ವರುಣಸ್ಯ ರಾಜ್ಞೋ ಗೃಹೇ ಸಂನಿದಧಾಮಹೈ ತಾಭಿರೇವ ನಃ ಸ ನ ಸಂಗಚ್ಛಾತೈ ಯೋ ನ ಏತದತಿಕ್ರಾಮಾದ್ಯ ಆಲುಲೋಭಯಿಷಾದಿತಿ ತಥೇತಿ ತೇ ವರುಣಸ್ಯ ರಾಜ್ಞೋ ಗೃಹೇ ತನೂಃ ಸಂನ್ಯದಧತ ॥

**ಏವಂ ಪರಸ್ಪರಂ ವಿಭಜ್ಯಾವಸ್ಥಿತಾನಾಂ ದೇವಸಮೂಹಾನಾಂ ಪರ್ಯಾಲೋಚನಪೂರ್ವಕಂ ಕೃತ್ಯಂ ದರ್ಶಯತಿ—ಸ್ವಕಾರ್ಯಹಾನಿನಿಮಿತ್ತದುಃಖಪರಿಹಾರೋಪಾಯದರ್ಶನನಿಮಿತ್ತಹರ್ಷದ್ಯೋತನಾರ್ಥೋ ಹಂತಶಬ್ದಃ ॥ ಅಸ್ಮಾಕಮತ್ಯಂತಂ ಪ್ರಿಯಾ ಯಾಃ ಪುತ್ರಕಳತ್ರಾದಿರೂಪಾಸ್ತನ್ವಃ ಸಂತಿ ತಾಃ ಸರ್ವಾ ಅಸ್ಯ ವರುಣಸ್ಯ ರಾಜ್ಞೋ ಗೃಹೇ ಸಂನಿದಧಾಮಹೈ ಬಂದೀರೂಪೇಣ ಸ್ಥಾಪಯಾಮಃ ॥ ತಥಾ ಸತಿ ನೋಽಸ್ಮಾಕಂ ಮಧ್ಯೇ ಯಃ ಕೋಽಪ್ಯೇತದತಿಕ್ರಾಮಾದುಲ್ಲಂಘಯೇತ್, ಉಲ್ಲಂಘ್ಯ ಚಾಽಽಲುಲೋಭಯಿಷಾತ್ಸ್ವಪುತ್ರಕಳತ್ರಾದೀನೇವ ಲೋಭಯಿತುಮಿಚ್ಛೇತ್ ; ಗುಪ್ತಮನುಷ್ಯಮುಖೇನ ಆನೇತುಮಿಚ್ಛೇನ್ನೋಽಸ್ಮಾಕಂ ಮಧ್ಯೇ ಸ ತಾದೃಶಃ ಪುರುಷಸ್ತಾಭಿರೇವ ನ ಸಂಗಚ್ಛಾತೈ ಪುತ್ರಕಲತ್ರಾದಿಭಿರ್ನ ಸಂಗಚ್ಛತಾಂ॥ಇತ್ಯೇತಂ ಸಮಯಂ ಸರ್ವೇಽಪ್ಯಂಗೀಕೃತ್ಯ ವರುಣಗೃಹೇ ಸ್ವಪುತ್ರಾದಿಶರೀರಾಣಿ ಸ್ಥಾಪಿತವಂತಃ । ಪರಸ್ಪರಾವಿರೋಧೇ ಸತಿ ವಯಮೇವಾಸುರಾಣಾಮಿದಂ ಲೋಕತ್ರಯಂ ಸಾಧಯಾಮ ಇತಿ ವಿಚಾರ್ಯೇಮಂ ಸಮಯಂ ಕೃತವಂತಃ ॥ ಸೋಽಯಂ ಶಾಖಾಂತರೇ ಸ್ಪಷ್ಟಮಾಮ್ನಾಯತೇ— 'ತೇಽಮನ್ಯಂತಾಸುರೇಭ್ಯೋ ವಾ ಇದಂ ಭ್ರಾತೃವ್ಯೇಭ್ಯೋ ರಧ್ಯಾಮೋ ಯನ್ಮಿಥೋ ವಿಪ್ರಿಯಾಃ ಸ್ಮೋ ಯಾ ನ ಇಮಾಃ ಪ್ರಿಯಾಸ್ತನುವಸ್ತಾಃ ಸಮವದ್ಯಾಮಹೈ ತಾಭ್ಯಃ ಸ ನಿರ್ಋಚ್ಛಾದ್ಯೋ ನಃ ಪ್ರಥಮೋಽನ್ಯೋಽನ್ಯಸ್ಮೈ ದ್ರುಹ್ಯಾತ್' ಇತಿ ॥**

ಈರೀತಿ ಗುಂಪುಗಳಾಗಿ ಹೊರಟ ದೇವತೆಗಳು ಒಂದೆಡೆ ಸೇರಿ ಮಂತ್ರಾಲೋಚನೆಯನ್ನು ಮಾಡಿ ಒಂದು ಒಪ್ಪಂದಕ್ಕೆ ಬಂದರು. ಈಗ ನಮ್ಮಲ್ಲಿ ಒಗ್ಗಟ್ಟಿಲ್ಲದಿರುವುದರಿಂದ ಅಸುರರನ್ನು ಸುಲಭವಾಗಿ ಜಯಿಸಲು ಸಾಧ್ಯವಿಲ್ಲ. ಆದ್ದರಿಂದ ನಾವೆಲ್ಲರೂ ಒಟ್ಟಗೂಡಿ ನಮಗೆ ಅತ್ಯಂತ ಪ್ರೀತಿಪಾತ್ರವಾದ ನಮ್ಮ ಶರೀರಗಳನ್ನು ನಮಗೆ ಸಂಬಂಧಿಸಿದ ಪತ್ನೀಪುತ್ರಾದಿಗಳನ್ನು ಒಂದು ಸುರಕ್ಷಿತವಾದ ಸ್ಥಳದಲ್ಲಿ ಎಂದರೆ ವರುಣನ ಗೃಹದಲ್ಲಿ ಇರಿಸೋಣ. ಅಸುರರು ಅಲ್ಲಿಗೆ ಬಂದು ಅವರನ್ನು ಹಿಂಸಿಸಲು ಸಾಧ್ಯವಿಲ್ಲ. ಮತ್ತು ನಮ್ಮಲ್ಲಿ ಯಾರೂ ಈ ನಿಯಮವನ್ನು ಉಲ್ಲಂಘಿಸಕೂಡದು. ಹಾಗೇನಾದರೂ ಉಲ್ಲಂಘಿಸಿ ತನ್ನ ಪತ್ನೀಪುತ್ರಾದಿಗಳನ್ನು ವರುಣನ ಗೃಹದಿಂದ ರಹಸ್ಯವಾಗಿ ಬೇರೆ ಕಡೆಗೆ ಕೊಂಡೊಯ್ದಿದ್ದೇ ಆದರೆ ಅವನು ಅಸುರರಿಂದ ನಾಶವನ್ನೈದಲಿ ಎಂದು ಒಂದು ಒಂದು ಒಪ್ಪಂದವನ್ನು ಮಾಡಿಕೊಂಡರು. ಎಂದರೆ—

ವಯಂ ಘೋರಾಣಿ ರೂಪಾಣಿ ಗೃಹೀತ್ವಾ ಶತ್ರುನುತ್ತಯೇ ।
ವರುಣಸ್ಯ ಗೃಹೇ ದೇಹಾನ್ ಪ್ರಿಯಾಂಸ್ತು ನಿದಧಾಮುಹೈ ॥
ಜಿತ್ವಾ ಶತ್ರೂನ್ ಪುನಸ್ತಾನಿ ರೂಪಾಣೀಹ ಲಭೇಮಹಿ ।

ನಮ್ಮ ಸೌಮ್ಯರೂಪಗಳನ್ನು ವರುಣನ ಗೃಹದಲ್ಲಿ ರಹಸ್ಯವಾಗಿ ಸ್ಥಾಪಿಸಿ ಶತ್ರುಗಳಾದ ಅಸುರರನ್ನು ಹೊಡೆದೋಡಿಸುವುದಕ್ಕಾಗಿ ಘೋರವಾದ ರೂಪಗಳನ್ನು ಎಂದರೆ ಯುದ್ಧಮಾಡುವುದಕ್ಕೆ ತಕ್ಕ ಶರೀರಗಳನ್ನು ಧರಿಸಿ ಶತ್ರುಗಳನ್ನು ಯುದ್ಧದಲ್ಲಿ ಗೆದ್ದು ಅವರನ್ನು ಓಡಿಸಿ ಮತ್ತೆ ವರುಣನ ಗೃಹದಲ್ಲಿ ಸ್ಥಾಪಿಸಿರುವ ನಮ್ಮ ಸ್ವಶರೀರಗಳನ್ನು ಮತ್ತೆ ಪಡೆಯೋಣ ಎಂದು ನಿರ್ಧರಿಸಿದರು. ಅದರಂತೆ ತಮ್ಮ ಶರೀರಗಳನ್ನು ಪತ್ನೀಪುತ್ರಾದಿಗಳನ್ನು ವರುಣನ ಗೃಹದಲ್ಲಿ ಸುರಕ್ಷಿತವಾಗಿರುವಂತೆ ಸ್ಥಾಪಿಸಿದರು. ಮತ್ತು ಅಸುರರನ್ನು ಸೋಲಿಸಿ ಲೋಕತ್ರಯವನ್ನು ಗೆಲ್ಲುವುದಕ್ಕಾಗಿ ಪರಸ್ಪರ ಐಕಮತ್ಯದಿಂದಿರುವಂತೆ ನಿಶ್ಚಯಿಸಿದರು. ಈ ವಿಷಯವು—

ತೇಽಮನ್ಯಂತಾಸುರೇಭ್ಯೋ ವಾ ಇದಂ ಭ್ರಾತೃವ್ಯೇಭ್ಯೋ ರಧ್ಯಾಮೋ ಯನ್ಮಿಥೋ ವಿಪ್ರಿಯಾಃ ಸ್ಮೋ ಯಾ ನ ಇಮಾಃ ಪ್ರಿಯಾಸ್ತನುವಃ ಸಮವದ್ಯಾಮಹೈ ತಾಭ್ಯಃ ಸ ನಿರ್ಋಚ್ಛಾದ್ಯೋ ನಃ ಪ್ರಥಮೋಽನ್ಯೋನ್ಯಸ್ಮೈ ದ್ರುಹ್ಯಾತ್ ॥ (ತೈ.ಸಂ. ೬-೨-೨-೧)

ಎಂದು ತೈತ್ತಿರೀಯಸಂಹಿತೆಯಲ್ಲಿ ಸ್ಪಷ್ಟವಾಗಿ ಹೇಳಿರುವುದು. ಇದರ ಅಭಿಪ್ರಾಯವೂ ಮೇಲೆ ಹೇಳಿದಂತೆಯೇ ಇದೆ.

**ತೇ ಯದ್ವರುಣಸ್ಯ ರಾಜ್ಞೋ ಗೃಹೇ ತನೂಃ ಸಂನ್ಯದಧತ ತತ್ತಾನೂನಪ್ತ್ರಮಭವತ್ತತ್ತಾನೂನಪ್ತ್ರಸ್ಯ ತಾನೂನಪ್ತ್ರತ್ವಂ ।**

ಇದಾನೀಂ ನಿರ್ವಚನಂ ದರ್ಶಯತಿ—ಯಸ್ಮಾದ್ವರುಣಗೃಹೇ ಪುತ್ರಾದಿತನೂರವಸ್ಥಾಪ್ಯ ಪರಸ್ಪರಸಖ್ಯಾಯಾಽಽಜ್ಯಸ್ಪರ್ಶನಂ ಶಪಥರೂಪಂ ಕೃತವಂತಃ ಇತಿ ಶೇಷಃ ॥ ತಸ್ಮಾದಿದಮಾಜ್ಯಸ್ಪರ್ಶನಾಖ್ಯಂ ತಾನೂನಪ್ತ್ರಂ ಕರ್ಮಾಭವತ್ ॥ ಇದಂ ಚ ಕರ್ಮಾಽಽಪಸ್ತಂಬೇನ ವಿಸ್ಪಷ್ಟಮಭಿಹಿತಂ—'ಆತಿಥ್ಯಾಯಾ ಧ್ರೌವಾತ್ಸ್ರುಚಿ ಚಮಸೇ ವಾ ತಾನೂನಪ್ತ್ರಂ ಸಮವದ್ಯತಿ॥ ಚತುರವತ್ತಂ ಪಂಚಾವತ್ತಂ ವಾ ಪತಯೇ ತ್ವಾ ಗೃಹ್ಣಾಮೀತ್ಯೇತೈಃ ಪ್ರತಿಮಂತ್ರಮನಾಧೃಷ್ಟಮಸೀತಿ ಯಜಮಾನಸಪ್ತದಶಾ ಋತ್ವಿಜಸ್ತಾನೂನಪ್ತ್ರಂ ಸಮವಮೃಶಂತ್ಯನು ಮೇ ದೀಕ್ಷಾಮಿತಿ ಯಜಮಾನ ಇತಿ । ತನೂನಾಂ ಪುತ್ರಾದಿಶರೀರಾಣಾಂ ನಪ್ತ್ರಂ ನ ಪತತಮತಿಶಯಿತಂ ನಿಮಿತ್ತೀಕೃತ್ಯ ಕ್ರಿಯಮಾಣತ್ವಾದಸ್ಯ ಕರ್ಮಣ ತಾನೂನಪ್ತ್ರಂ ನಾಮ ಸಂಪನ್ನಂ ॥

ಅನಂತರ ದೇವತೆಗಳು ಮೇಲೆ ಹೇಳಿದಂತೆ ತಮ್ಮ ಶರೀರಗಳನ್ನೂ ತಮ್ಮ ಪತ್ನೀಪುತ್ರರನ್ನೂ ಸುರಕ್ಷಿತ ಪ್ರದೇಶವಾದ ವರುಣನ ಗೃಹದಲ್ಲಿ ಸ್ಥಾಪಿಸಿದರು. ಬಳಿಕ ತಮ್ಮಲ್ಲಿ ಒಡಕಿಲ್ಲದಂತೆ ಸ್ನೇಹಪೂರ್ವಕವಾಗಿ ವರ್ತಿಸಲು ಸ್ನೇಹಸಂಕೇತವಾದ ಆಜ್ಯ ಸ್ಪರ್ಶನವೆಂಬ ಕರ್ಮವನ್ನು ಮಾಡಿದರು ಎಂದರೆ ಹೋಮಮಾಡುವ ಸ್ರುಕ್ಕು ಅಥವಾ ಚಮಸಪಾತ್ರೆಯಲ್ಲಿ ಕರಗಿಸಿದ ತುಪ್ಪವನ್ನು ತಂದಿಟ್ಟು, ತಾವು ಇನ್ನುಮುಂದೆ ಐಕಮತ್ಯದಿಂದಲೂ ಸ್ನೇಹಭಾವದಿಂದಲೂ ಇರುವುದಾಗಿ ಶಪಥಮಾಡಿ ಆಜ್ಯವನ್ನು ಪ್ರತಿಯೊಬ್ಬರೂ ಸ್ಪರ್ಶಿಸಿದರು. ಆದ್ದರಿಂದ ಈ ಆಜ್ಯಸ್ಪರ್ಶನವೆಂಬ ಕರ್ಮವು (ಸ್ನೇಹವನ್ನು ಒಟ್ಟುಗೂಡಿಸುವ) ತಾನೂನಪ್ತ್ರವೆಂಬ ಕರ್ಮವೆಂದು ಪ್ರಸಿದ್ಧವಾಯಿತು. ಆದ್ದರಿಂದ ಈಗಲೂ ಅನೇಕರು ಎಂದರೆ ೧೬ ಮಂದಿ ಋತ್ವಿಕ್ಕುಗಳೂ ಯಜಮಾನ ಇವರು ಸೇರಿ ಮಾಡುವ ಯಜ್ಞದಲ್ಲಿ ಪರಸ್ಪರ ಐಕಮತ್ಯ ಮತ್ತು ಸ್ನೇಹದಿಂದ ಕೆಲಸಕಾರ್ಯಗಳನ್ನು ಮಾಡುವುದಕ್ಕಾಗಿ ಈ ತಾನೂನಪ್ತ್ರವೆಂಬ ಕರ್ಮವನ್ನು ಆಚರಿಸುವರು. ಈ ವಿಷಯದಲ್ಲಿ ಆಪಸ್ತಂಬ ಮಹರ್ಷಿಗಳು ತಮ್ಮ ಶ್ರೌತಸೂತ್ರದಲ್ಲಿ—

ಆತಿಥ್ಯಾಯಾ ಧ್ರೌವಾತ್ಸ್ರುಚಿ ಚಮಸೇ ವಾ ತಾನೂನಪ್ತ್ರಂ ಸಮವದ್ಯತಿ । ಚತುರವತ್ತಂ ಪಂಚಾವತ್ತಂ ವಾ ಪತಯೇ ತ್ವಾ ಗೃಹ್ಣಾಮೀತ್ಯೇತೈಃ ಪ್ರತಿಮಂತ್ರಮನಾಧೃಷ್ಟಮಸೀತಿ ಯಜಮಾನಸಪ್ತದಶಾ ಋತ್ವಿಜಸ್ತಾನೂನಪ್ತ್ರಂ ಸಮವಭೃಶಂತ್ಯನು ಮೇ ದೀಕ್ಷಾಮಿತಿ ಯಜಮಾನಃ ॥

(ಆಪ. ಶ್ರೌ. ಸೂ. ೧೧-೧-೧, ೨, ೩)

ಯಜ್ಞದ ಕಾರ್ಯಕಲಾಪಗಳಲ್ಲಿ ಹದಿನಾರುಮಂದಿ ಋತ್ವಿಜರೂ ಯಜಮಾನನು ಒಟ್ಟು ಹದಿನೇಳು ಮಂದಿ ಭಾಗ ವಹಿಸುವರು. ಇವರಲ್ಲಿ ಯಾರಾಗಲಿ ತಮ್ಮ ತಮ್ಮ ಕರ್ತವ್ಯಗಳನ್ನು ಸರಿಯಾಗಿ ಮಾಡದೆ ಎಂದರೆ ಮಂತ್ರಾದಿಗಳನ್ನು ವಿಧ್ಯುಕ್ತವಾಗಿ ಪಠಿಸದೆ ಅಥವಾ ಕಾರ್ಯಕಲಾಪಗಳಲ್ಲಿ ನ್ಯೂನತೆಯನ್ನುಂಟುಮಾಡಿದರೆ ಯಜ್ಞವು ದೋಷಪೂರ್ಣವಾಗಿ ಯಜಮಾನನಿಗೆ ಹಾನಿಯು ತಟ್ಟುವುದು. ಆದ್ದರಿಂದ ಯಜ್ಞದಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಮನಃಪೂರ್ವಕವಾಗಿ ಸಹಕರಿಸಿ ತಮ್ಮ ಕರ್ತವ್ಯಗಳನ್ನು ಮಾಡಬೇಕಾದುದು ಅತ್ಯವಶ್ಯಕವು. ಅದಕ್ಕಾಗಿ ಎಂದರೆ ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡುತ್ತೇನೆಂದು ಪ್ರತಿಜ್ಞೆಮಾಡುವ ಈ ತಾನೂನಪ್ತ್ರವೆಂಬ ಕರ್ಮವು ಆತಿಥ್ಯೇಷ್ಟಿಯ ಅನಂತರ ಮಾಡಬೇಕಾಗಿರುವುದು. ಮೊದಲು ಅಧ್ವರ್ಯುವು ಸ್ರುಕ್ ಅಥವಾ ಚಮಸವೆಂಬ ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿ ಸ್ರುವವೆಂಬ ಹೋಮಮಾಡುವ ಸೌಟಿನಿಂದ ನಾಲ್ಕು ಅಥವಾ ಐದಾವರ್ತಿ (ಹಿಂದೆ ದೇವತೆಗಳ ನಾಲ್ಕು ಅಥವಾ ಐದು ಗುಂಪುಗಳಾಗಿ ವಿಭಾಗಿಸಲ್ಪಟ್ಟರೆಂದು ಹೇಳಿದೆ). ಆಜ್ಯವನ್ನು (ಕರಗಿಸಿದ ತುಪ್ಪವನ್ನು) ಹಾಕುವನು. ಈ ಆಜ್ಯವನ್ನು ಹಾಕುವಾಗ ಅಧ್ವರ್ಯುವು—

(೧) ಆ ಪತಯೇ ತ್ವಾ ಗೃಹ್ಣಾಮಿ (೨) ಪರಿಪತಯೇ ತ್ವಾ ಗೃಹ್ಣಾಮಿ

(೩) ತನೂನಪ್ತ್ರೇ ತ್ವಾ ಗೃಹ್ಣಾಮಿ (೪) ಶಾಕ್ವರಾಯ ತ್ವಾ ಗೃಹ್ಣಾಮಿ

(೫) ಶಕ್ಮನ್ನೋಜಿಷ್ಠಾಯ ತ್ವಾ ಗೃಹ್ಣಾಮಿ ॥

(ತೈ. ಸಂ. ೧-೨-೧೦-೨)

ಎಂಬ ಐದು ಮಂತ್ರಗಳನ್ನು ಪಠಿಸಿ ಐದಾವರ್ತಿ ಆಜ್ಯವನ್ನು ಚಮಸಪಾತ್ರೆಯಲ್ಲಿ ಹಾಕುವನು. ಅನಂತರ ಹದಿನಾರು ಮಂದಿ ಋತ್ವಿಜರಲ್ಲಿ ಪ್ರತಿಯೊಬ್ಬರೂ ಬಂದು ಪಾತ್ರೆಯಲ್ಲಿರುವ ಆಜ್ಯವನ್ನು ಹಸ್ತದಿಂದಾಗಲಿ ದರ್ಭೆಯಿಂದಾಗಲಿ ಸ್ಪರ್ಶಮಾಡುವರು ಹದಿನಾರು ಮಂದಿ ಋತ್ವಿಜರು ಯಾರೆಂದರೆ—

ಅಧ್ವರ್ಯುಂ ಪ್ರತಿಪ್ರಸ್ಥಾತಾರಂ ನೇಷ್ಟಾರಮುನ್ನೇತಾರಮಿತ್ಯಧ್ವರ್ಯೂನ್ ।
ಬ್ರಹ್ಮಾಣಂ ಬ್ರಾಹ್ಮಣಾಚ್ಛಂಸಿನಮಾಗ್ನೀಧ್ರಂ ಪೋತಾರಮಿತಿ ಬ್ರಹ್ಮಣಃ ।

**ಹೋತಾರಂ ಮೈತ್ರಾವರುಣಮಚ್ಛಾವಾಕಂ ಗ್ರಾವಸ್ತುತಮಿತಿ ಹೋತ್ರ್ಯಾನ್ ।**
**ಉದ್ಗಾತಾರಂ ಪ್ರಸ್ತೋತಾರಂ ಪ್ರತಿಹರ್ತಾರಂ ಸುಬ್ರಹ್ಮಣ್ಯಮಿತ್ಯುದ್ಗಾತ್ರ್ಯಾನ್ ।**
**ಸದಸ್ಯಂ ಸಪ್ತದಶಂ ಕೌಷೀತಕಿನಃ ಸಮಾಮನಂತಿ ॥**

(ಆಪ. ಶ್ರೌ. ೧೦-೧-೯, ೧೦)

ಎಂದರೆ—

ಅಧ್ವರ್ಯುವರ್ಗ—ಅಧ್ವರ್ಯು, ಪ್ರತಿಪ್ರಸ್ಥಾತೃ, ನೇಷ್ಟೃ, ಉನ್ನೇತೃ ಎಂಬ ನಾಲ್ವರು
ಬ್ರಹ್ಮವರ್ಗ—ಬ್ರಹ್ಮ, ಬ್ರಾಹ್ಮಣಾಚ್ಛಂಸಿ, ಆಗ್ನೀಧ್ರ, ಪೋತೃ ,,
ಹೋತೃವರ್ಗ—ಹೋತೃ, ಮೈತ್ರಾವರುಣ, ಅಚ್ಛಾವಾಕ, ಗ್ರಾವಸ್ತುತ್ ,,
ಉದ್ಗಾತೃವರ್ಗ—ಉದ್ಗಾತೃ, ಪ್ರಸ್ತೋತೃ, ಪ್ರತಿಹರ್ತೃ, ಸುಬ್ರಹ್ಮಣ್ಯ ,,

ಎಂದು ನಾಲ್ಕುವರ್ಗಗಳಲ್ಲಿ ಹದಿನಾರು ಮಂದಿ ಋತ್ವಿಜರು. ಕೌಷೀತಕೀ ಬ್ರಾಹ್ಮಣದ ಪ್ರಕಾರ **ಸದಸ್ಯ**ನೆಂಬ ಹದಿನೇಳನೇ ಋತ್ವಿಜನು ಅಥವಾ ಯಜಮಾನನೂ ಸೇರಿ ಹದಿನೇಳು ಮಂದಿ ಆಗಬಹುದು. ಇವರಲ್ಲಿ ಪ್ರತಿಯೊಬ್ಬರೂ ಆಜ್ಯಸ್ಪರ್ಶನ ಮಾಡುವಾಗ—**ಅನಾಧೃಷ್ಟಮಸ್ಯನಾಧೃಷ್ಯಂ ದೇವಾನಾಮೋಜೋಽಭಿಶಸ್ತಿಪಾ ಅನಭಿಶಸ್ತೇನ್ಯಂ** (ತೈ. ಸಂ. ೧-೨-೧೦-೨) ಎಂಬ ಮಂತ್ರವನ್ನು ಪಠಿಸುವರು. ಯಜಮಾನನೂ ಸಹ ಆಗ—**ಅನು ಮೇ ದೀಕ್ಷಾಂ ದೀಕ್ಷಾಪತಿರ್ಮನ್ಯತಾಮನು ತಪಸ್ತಪಸ್ಪತಿರಂಜಸಾ ಸತ್ಯಮುಪಗೇಷಗ್ಂ ಸುವಿತೇ ಮಾ ಧಾಃ** (ತೈ. ಸಂ. ೧-೨-೧೦-೨) ಎಂಬ ಮಂತ್ರವನ್ನು ಪಠಿಸಬೇಕು. ಅನಂತರ ಹೋತೃವರ್ಗದ ಋತ್ವಿಜರು **ಮದಂತೀ** ಎಂಬ ತಾಮ್ರದ ಪಾತ್ರೆಯಲ್ಲಿರುವ ನೀರಿನಲ್ಲಿ ತಮ್ಮ ಹಸ್ತಗಳನ್ನು ಅದ್ದುವರು. ಈ ಮದಂತೀ ಪಾತ್ರೆಯು ವರುಣಗೃಹದ ಪ್ರತೀಕವಾಗಿರುವುದು. ಈ ಕರ್ಮದಲ್ಲಿ ಎಂದರೆ ದೇವತೆಗಳು ತಮ್ಮ ಶರೀರಾದಿಗಳನ್ನು ಸುರಕ್ಷಿತವಾಗಿ ವರುಣಗೃಹದಲ್ಲಿ ಸ್ಥಾಪಿಸುವ ಕರ್ಮದಲ್ಲಿ ಅವರ ಶರೀರಗಳಿಗೆ ಯಾವ ಬಾಧೆಯೂ ಉಂಟಾಗದಂತೆ ಈ ಕರ್ಮವು ಕಾಪಾಡುವುದರಿಂದ ಇದಕ್ಕೆ **(ನ ತಪತಮಿತಿ ನಪ್ತ್ರಂ)** ತಾನೂನಪ್ತ್ರವೆಂದು ಹೆಸರು ಪ್ರಸಿದ್ಧಿಯಾಗಿರುವುದು.

## ತಸ್ಮಾದಾಹುರ್ನ ಸತಾನೂನಪ್ತ್ರಿಣೇ ದ್ರೋಗ್ಧವ್ಯಮಿತಿ ।

**ಪ್ರಸಂಗಾಲ್ಲೋಕವ್ಯವಹಾರೇ ಕಂಚಿದ್ಧರ್ಮಂ ದರ್ಶಯತಿ । ಯಸ್ಮಾದ್ದೇವಾಃ ಪರಸ್ಪರ ದ್ರೋಹಪರಿಹಾರಾಯ ಶಪಥಂ ಕೃತವಂತಸ್ತಸ್ಮಾದ್ಬ್ರಹ್ಮವಾದಿನ ಏವಮಾಹುಃ ॥ ಸತಾನೂನಪ್ತ್ರಿಣೇ ಸಹ ಶಪಥಕಾರಿಣೇ ನ ದ್ರೋಗ್ಧವ್ಯಂ । ಇತಿಶಬ್ದಸ್ತದುಕ್ತಿಸಮಾಪ್ತ್ಯರ್ಥಃ ॥ ದೇವಸಂಬಂಧಿಶಪಥವಿಶೇಷವಾಚಿನಾ ತಾನೂನಪ್ತ್ರಶಬ್ದೇನ ಶಪಥಮಾತ್ರಮುಪಲಕ್ಷ್ಯತೇ ॥ ಬಹುಭಿಃ ಸಹ ಕ್ರಿಯಮಾಣಂ ತಾನೂನಪ್ತ್ರಂ ಯಸ್ಯಾಸ್ತಿ ಸೋಽಯಂ ಸತಾನೂನಪ್ತ್ರೀ ॥**

ಪರಸ್ಪರ ದ್ರೋಹವನ್ನೆಸಗುವ ಕರ್ಮವನ್ನು ಮಾಡುವುದಿಲ್ಲವೆಂದು ಶಪಥಮಾಡುವ ಈ ಕರ್ಮಕ್ಕೆ ತಾನೂನಪ್ತ್ರವೆಂದು ಹೆಸರು. ಅನೇಕಮಂದಿ ಒಟ್ಟಾಗಿ ಸೇರಿ ಶಪಥಮಾಡುವ ಕರ್ಮಕ್ಕೆ ಸತಾನೂನಪ್ತ್ರವೆಂದು ಹೆಸರು. ಯಜ್ಞದಲ್ಲಿ ೧೬ ಮಂದಿ ಋತ್ವಿಜರು ಒಟ್ಟಾಗಿ ಸೇರಿ ಈ ತಾನೂಪ್ತ್ರವೆಂಬ ಕರ್ಮದಲ್ಲಿ ಪರಸ್ಪರ ದ್ರೋಹಚಿಂತನೆ ಮಾಡುವುದಿಲ್ಲವೆಂದು ಶಪಥವನ್ನು ಕೈಗೊಳ್ಳುವುದರಿಂದ ಈ ವಿಧವಾದ ಸಹ+ತಾನೂನಪ್ತ್ರಕ್ಕೆ ಸತಾನೂನಪ್ತ್ರವೆಂಬ ಹೆಸರು ಬಂದಿರುವುದು.

## ತಸ್ಮಾದ್ದ್ವಿದಮಸುರಾ ನಾನ್ವಾ ಭವಂತಿ ॥

ಪ್ರಾಸಂಗಿಕಂ ಪರಿಸಮಾಪ್ಯ ಪ್ರಕೃತಮನುಸರತಿ—ತಸ್ಮಾದು ತಸ್ಮಾದೇವ ಕಾರಣಾದ್ದೇವಾನಾಂ ಪರಸ್ಪರಸಖ್ಯರೂಪಾದಸುರಾ ಇದಂ ಲೋಕತ್ರಯಂ ನಾನ್ವಾಭವಂತಿ ನೈವ ಸಮಂತಾತ್ಪ್ರಾಪ್ನುವಂತಿ ॥ ಯದ್ಯಪ್ಯೇತತ್ತಾನೂನಪ್ತ್ರೀಕರ್ಮೋಪಸದ್ಭ್ಯಃ ಪೂರ್ವಮನುಷ್ಠೇಯಂ ತಥಾಽಪ್ಯುಪಸತ್ಪ್ರಯುಕ್ತವಿಜಯಪ್ರಸಂಗೇನ ಬುದ್ಧಿಸ್ಥತ್ವಾದತ್ರಾಭಿಹಿತಂ ॥

ಈ ಸತಾನೂನಪ್ತ್ರೀ ಎಂಬ ಕರ್ಮವನ್ನು ಮಾಡಿದ್ದರಿಂದ ದೇವತೆಗಳಲ್ಲಿ ಪರಸ್ಪರ ಸಖ್ಯವುಂಟಾಯಿತು. ಮತ್ತು ಇದರಿಂದಲೇ ಅಸುರರು ದೇವತೆಗಳಿಂದ ಪರಾಜಿತರಾಗಿ ಪೃಥಿವ್ಯಾದಿಲೋಕತ್ರಯವನ್ನು ವ್ಯಾಪಿಸದಂತಾಯಿತು. ಈ ತಾನೂನಪ್ತ್ರವೆಂಬ ಕರ್ಮವನ್ನು ಕಾರಣಾಂತರದಿಂದ ಇಲ್ಲಿ ಹೇಳಿರುವುದಾದರೂ ಇದನ್ನು ಆತಿಥ್ಯೇಷ್ಟಿಯ ಅನಂತರ ಮಾಡಬೇಕು. ಉಪಸದ್ಧೋಮಾನಂತರ ಅಲ್ಲ.

*English Translation*

The Upasads are the goddesses of victory (jitayah). For by means of them the gods gained a complete victory destroying all their enemies. He who has such a knowledge gains a victory destroying all his enemies. All the victories which the gods gained in these (three) worlds, or in the Ritus (seasons), or in the months, or the half months, or in day and night, will he also gain who has such a knowledge.

**(The Tanunapatram ceremony, or solemn oath taken by the priests)**

The Devas were afraid, surmising the Asuras might become aware of their being disunited, and seize their regin. They marched out in several division, and deliberated. Agni marched out with the Vasus, and deliberated. Indra did so with the Rudras; Varuna with the Adityas; and Brihaspati with the Visve Devas. Thus all, having severally marched out, deliberated. They said, "Well, let us put these our dearest bodies in the house of Varuna the king, (i.e. water); he among us who should out of greediness transgress this (oath, not to do any thing which injure the sacrificer,) he shall no more be joined with them.

They put their bodies in the house of Varuna. This putting of their bodies in the house of Varuna, the king, became their Tanunaptram (joining of bodies). Thence they say: none of those joined together by the tanunaptram ceremony is to be injured, Thence the Asuras could not conquer their (the gods,) empire (for they all had been made inviolable by this ceremony).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ಥಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಏಳನೆಯ ಖಂಡವು ಸಮಾಪ್ತವಾದುದು.

# ಅಥ ಚತುರ್ಥಾಧ್ಯಾಯೇ ಅಷ್ಟಮಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ ದೀಕ್ಷಿತನ ಆಹಾರದ ವಿಷಯದಲ್ಲಿ ಕೆಲವು ನಿಯಗಳು— ಉಪಸದಿಷ್ಟಿಯಲ್ಲಿ ಪಠಿಸಬೇಕಾದ ಸಾಮಿಧೇನೀಮಂತ್ರಗಳ ವಿವರಣೆ ]

**ಶಿರೋ ವಾ ಏತದ್ಯಜ್ಞಸ್ಯ ಯದಾತಿಥ್ಯಂ ಗ್ರೀವಾ ಉಪಸದಃ ಸಮಾನ-ಬರ್ಹಿಷೀ ಭವತಃ ಸಮಾನಂ ಹಿ ಶಿರೋಗ್ರೀವಂ ।**

**ಅಥಾಽಽತಿಥ್ಯಕರ್ಮಣ್ಯಾಸ್ತೀರ್ಣಸ್ಯೈವ ಬರ್ಹಿಷ ಉಪಸತ್ಸ್ವನುವೃತ್ತಿಂ ವಿಧತ್ತೇ— ಅಥಾತಿಥ್ಯಕರ್ಮಣೋ ಯಜ್ಞಶಿರೋರೂಪತ್ವಾದುಪಸದಾಂ ಚ ಗ್ರೀವಾರೂಪತ್ವಾತ್ತಯೋರವ-ಯವಯೋರ್ಮಧ್ಯೇ ಲೋಕೇ ವಿಚ್ಛೇದಾದರ್ಶನಾದತ್ರಾಪ್ಯವಿಚ್ಛೇದಾಯಾಽಽತಿಥ್ಯೋಪಸತ್ಕ-ರ್ಮಣೀ ಸಮಾನಬರ್ಹಿಷೀ ಏಕಬರ್ಹಿಷಾಯುಕ್ತೇ ಕರ್ತವ್ಯೇ ॥ ಆತಿಥ್ಯಕರ್ಮಣ್ಯಾಸ್ತೀರ್ಣಂ ಬರ್ಹಿರ್ನಾಗ್ನೌ ಪ್ರಹೃತಂ ॥ ಇಡಾಂತತ್ವೇನ ತತ್ರ ಕರ್ಮಸಮಾಪನಾತ್ । ತಚ್ಚಾಪಸ್ತಂಬೇ-ನೋಕ್ತಂ—'ಇಡಾಂತಾ ಸಂತಿಷ್ಠತೇ ಧಾರಯಂತಿ ಧ್ರೌವಮಾಜ್ಯಂ' ಇತಿ ॥ ಶಾಖಾಂತರೇ ಚ ಬರ್ಹಿಷೋಽನುವೃತ್ತಿರಾಮ್ನಾತಾ ॥ 'ಯದಾತಿಥ್ಯಾಯಾಂ ಬರ್ಹಿಸ್ತದುಪಸದಾಂ ತದಗ್ನೀ-ಷೋಮೀಯಸ್ಯ' ಇತಿ ॥**

ಹಿಂದೆ ಹೇಳಿದ ಆತಿಥ್ಯೇಷ್ಟಿಯು ಯಜ್ಞದ (ಯಜ್ಞಪುರುಷನ) ಶಿರಸ್ಸು ಎಂದರೆ ಶಿರಃಸ್ಥಾನೀಯವಾಗಿರುವುದು, ಶಿರಸ್ಸಿನಂತಿರುವುದು. ಇದುವರೆಗೂ ಹೇಳಿದ ಉಪಸದಿಷ್ಟಿಯು ಯಜ್ಞದ ಕಂಠವಾಗಿರುವುದು. ಪ್ರಪಂಚದಲ್ಲಿ ಪ್ರಾಣಿಗಳ ಶಿರಸ್ಸು ಮತ್ತು ಕಂಠವು ಪರಸ್ಪರ ಸಂಬಂಧಿಸಿರುವುದು ಎಂದರೆ ಒಂದಕ್ಕೊಂದು ಸೇರಿಕೊಂಡಿರುವುದು. ಅವುಗಳ ಮಧ್ಯದಲ್ಲಿ ವಿಚ್ಛಿತ್ತಿ ಇರುವುದಿಲ್ಲ. ಆದ್ದರಿಂದ ಆತಿಥ್ಯೇಷ್ಟಿಯಲ್ಲಿ ಉಪಯೋಗಿಸಿದ **ಬರ್ಹಿಃ** ಎಂಬ ದರ್ಭೆಗಳೇ ಉಪಸದ್ಧೋಮದಲ್ಲಿಯೂ ಉಪಯೋಗಿಸಲ್ಪಡುವುದು. ಬರ್ಹಿಃ ಎಂದರೆ ಒಂದೇ ಅಳತೆಗೆ ಸರಿಯಾಗಿ ಕತ್ತರಿಸಿದ ದರ್ಭೆಗಳು. ಇವುಗಳನ್ನು ಅಗಲವಾಗಿ ಆಸನದಂತೆ ಹರವಿ ಅದರ ಮೇಲೆ ಹವಿರ್ದ್ರವ್ಯವನ್ನು ಇಡುವರು. ಮತ್ತು ಈ ದರ್ಭೆಗಳನ್ನು ಮೂರು ಪದರಗಳಾಗಿ ಹರಡಿ ಮೆತ್ತಗಿರುವಂತೆ ಆಸನವನ್ನು (ಕುಳಿತುಕೊಳ್ಳುವ ಸ್ಥಳ) ನಿರ್ಮಿಸಿ ಅದರ ಮೇಲೆ ಯಜ್ಞದಲ್ಲಿ ಆಹ್ವಾನಿತರಾದ ದೇವತೆಗಳನ್ನು ಬಂದು ಕೂಡುವಂತೆ ಪ್ರಾರ್ಥಿಸುವರು. ಯಜ್ಞಕರ್ಮವು ಸಮಾಪ್ತಿಯಾದಮೇಲೆ ಈ ಬರ್ಹಿ ಎಂಬ ದರ್ಭೆಗಳನ್ನು ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹಾಕುವರು. ಆದರೆ ಆತಿಥ್ಯೇಷ್ಟಿಯು ಪೂರ್ತಿಯಾಗಿ ನೆರವೇರದೆ ಇಡಾ (ಹವಿಸ್ಸು) ಭಕ್ಷಣದ ಪರ್ಯಂತ ಮಾತ್ರ ನಡೆಯುವುದರಿಂದ ಹೋಮಸಮಾಪ್ತಿಯಾಗಲು ಸಾಧ್ಯವಿಲ್ಲ. ಆದ್ದರಿಂದ ಬರ್ಹಿ ಎಂಬ ದರ್ಭೆಗಳನ್ನು ಅಗ್ನಿಯಲ್ಲಿ ಹಾಕಲು ಅವಕಾಶವಿರುವುದಿಲ್ಲ. ಅದೇ ದರ್ಭೆಗಳನ್ನೇ ಉಪಸದ್ಧೋಮ ಎಂದರೆ ಉಪಸದಿಷ್ಟಿಯಲ್ಲಿಯೂ ಆಸನಾದಿಗಳಿಗೆ ಉಪಯೋಗಿಸುವರು. ಈ ದರ್ಭೆಗಳು ಎರಡು ಇಷ್ಟಿಗಳಲ್ಲಿಯೂ ಉಪಯೋಗಿಸಲ್ಪಡುವುದರಿಂದ ಇದರ ಉಪಯೋಗವು ಎರಡು

ಇಷ್ಟಿಗಳಲ್ಲಿಯೂ ಸಮಾನವು ಎಂದು ಇಲ್ಲಿ ಹೇಳಲಾಗಿದೆ. ಆತಿಥ್ಯೇಷ್ಟಿಯು ಇಡಾಂತವಾಗಿ ಮಾತ್ರ ನೆರವೇರಿದ ವಿಷಯದಲ್ಲಿ ಆಪಸ್ತಂಬ ಶ್ರೌತಸೂತ್ರದಲ್ಲಿ—**ಇಡಾಂತಾ ಸಂತಿಷ್ಠತೇ । ಧಾರಯತಿ ಧ್ರೌವಮಾಜ್ಯಂ** (ಆಪ. ಶ್ರೌ. ಸೂ. ೧೦-೩೧-೧೫, ೧೬) ಎಂದು ಹೇಳಿದೆ. ಶಾಖಾಂತರದಲ್ಲಿಯೂ ಸಹ—ಒಂದೇ ಬರ್ಹಿಸ್ಸನ್ನು ಎರಡು ಇಷ್ಟಿಗಳಲ್ಲಿಯೂ ಉಪಯೋಗಿಸುವ ವಿಷಯದಲ್ಲಿ—**ಯದಾತಿಥ್ಯಾಯಾಂ ಬರ್ಹಿಸ್ತದುಪಸದಾಂ ತದಗ್ನೀಷೋಮೀಯಸ್ಯ** ಎಂದೂ ಹೇಳಿರುವುದು.

**ಇಷುಂ ವಾ ಏತಾಂ ದೇವಾಃ ಸಮಸ್ಕುರ್ವತ ಯದುಪಸದಸ್ತಸ್ಯಾ ಅಗ್ನಿರನೀಕಮಾಸೀತ್ಸೋಮಃ ಶಲ್ಯೋ ವಿಷ್ಣುಸ್ತೇಜನಂ ವರುಣಃ ಪರ್ಣಾನಿ ತಾಮಾಜ್ಯಧನ್ವಾನೋ ವ್ಯಸೃಜಂಸ್ತಯಾ ಪುರೋ ಭಿಂದಂತ ಆಯನ್ ತಸ್ಮಾದೇತಾ ಆಜ್ಯಹವಿಷೋ ಭವಂತಿ ॥**

**ಅಥೋಪಸತ್ಸು ದ್ರವ್ಯದೇವತಾವಿಧಾನಾರ್ಥಂ ಪ್ರಸ್ತೌತಿ—ಯದುಪಸದೋ ಯಾ ಉಪಸದ್ದೇವತಾ ಅಗ್ನ್ಯಾದಿಕಾಃ ಸಂತಿ, ಏತಾಮಗ್ನ್ಯಾದಿರೂಪಾಮಿಷುಂ ವೈ ಬಾಣಮೇವ ದೇವಾಃ ಸಮಸ್ಕುರ್ವತ ಸಂಸ್ಕೃತವಂತಃ; ಅಗ್ನ್ಯಾದೀನ್ಬಾಣಾವಯವರೂಪೇಣ ಸಂಯೋಜಿತವಂತ ಇತ್ಯರ್ಥಃ ॥ ಯೋಽಯಮಗ್ನಿಃ ಸೋಽಯಂ ತಸ್ಯಾ ಇಷೋರನೀಕಂ ಮುಖಮಾಸೀತ್ ॥ ಪತ್ರಯುಕ್ತಾದ್ಬಾಣಮೂಲಾದೂರ್ಧ್ವವರ್ತೀ ಭಾಗೋ ಮುಖಂ ತಸ್ಯೋಪರಿ ವರ್ತಮಾನಃ ಲೋಹವಿಶೇಷಃ ಶಲ್ಯಂ ತಸ್ಯ ಲೋಹಸ್ಯ ತೀಕ್ಷ್ಣಮುಗ್ರಂ ತೇಜನಂ । ಪರ್ಣಾನಿ ಬಾಣಮೂಲೇ ಸ್ಥಾಪಿತಾನಿ ಪಕ್ಷಿಣಾಂ ಪತ್ರಾಣಿ ಶಲ್ಯಾದಿರೂಪೇಣಾಗ್ನಿಸೋಮವಿಷ್ಣುವರುಣಾ ಯೋಜಿತಾಃ ॥ ವರುಣೋಽತ್ರ ಪ್ರಶಂಸಾರ್ಥಮೇವೋಪಾದೀಯತೇ ನ ತು ದೇವತಾತ್ವೇನ ತದೀಯಯೋರ್ಯಾಜ್ಯಾನುವಾಕ್ಯಯೋರನಭಿಧಾಸ್ಯಮಾನತ್ವಾತ್ ॥ ಅತಏವ ಶಾಖಾಂತರೇ ವರುಣಂ ಪರಿತ್ಯಜ್ಯ ಅಗ್ನ್ಯಾದಯ ಆಮ್ನಾಯಂತೇ—'ತ ಇಷುಂ ಸಮಸ್ಕುರ್ವತ ಅಗ್ನಿಮನೀಕಂ ಸೋಮಂ ಶಲ್ಯಂ ವಿಷ್ಣುಂ ತೇಜನಂ' ಇತಿ ॥ ತಾಮೇತಾಂ ಇಷುಂ ದೇವಾ ಆಜ್ಯಧನ್ವಾನಃ ಸಂತೋ ವಿಸೃಷ್ಟವಂತಃ । ತಯಾ ವಿಸೃಷ್ಟಯೇಷ್ವಾ ತೇಷಾಮಸುರಾಣಾಂ ಪುರೋ ಭಿಂದಂತೋ ವಿದಾರಯಂತ ಆಯನ್ನಾಗಚ್ಛನ್ ॥ ಇದಾನೀಂ ದ್ರವ್ಯದೇವತಾ ವಿಧತ್ತೇ—ಯಸ್ಮಾದಗ್ನ್ಯಾದಯೋ ಬಾಣರೂಪಾ ಆಜ್ಯಂ ಚ ಧನುಃಸ್ವರೂಪಂ ತಸ್ಮಾದಾಜ್ಯಹವಿಷ್ಕಾ ಏತಾ ಅಗ್ನ್ಯಾದಿ ದೇವತಾ ಉಪಸತ್ಸು ಭವೇಯುಃ ॥**

ಈಗ ಈ ಉಪಸದ್ಧೋಮದಲ್ಲಿ ಹೋಮಾರ್ಥವಾಗಿ ಉಪಯೋಗಿಸಲ್ಪಡುವ ದ್ರವ್ಯವಿಶೇಷಗಳನ್ನೂ ಆ ದ್ರವ್ಯಾಭಿಮಾನಿ ದೇವತೆಗಳನ್ನೂ ಪ್ರಶಂಸಿಸಲಾಗುವುದು. ಹಿಂದೆ ದೇವತೆಗಳು ತ್ರಿಪುರಗಳನ್ನು ಜಯಿಸಿದಾಗ ತ್ರಿಪುರಧ್ವಂಸನಾರ್ಥವಾಗಿ ಒಂದು ಬಾಣವನ್ನು (arrow) ನಿರ್ಮಿಸಿದರು. ಬಾಣದಲ್ಲಿ ನಾಲ್ಕು ಭಾಗಗಳಿವೆ—

**ಅಗ್ರೋಽನೀಕಮಯಃ ಶಲ್ಯಸ್ತ್ವಥ ಯಷ್ಟಿಶ್ಚ ತೇಜನಂ ।**
**ಪುಂಖಬಂಧಾನಿ ಪರ್ಣಾನಿ ಶರಸ್ತ್ವೇವಂ ಚತುರ್ವಿಧಃ ॥**

ಅವು ಯಾವವೆಂದರೆ—ಬಾಣದ ಕಾಂಡ ಅಥವಾ ಕಡ್ಡಿ, ತುದಿಯಲ್ಲಿರುವ ಲೋಹ, ಬಾಣದ ಮೊನೆ, ಬಾಣದ ಹಿಂಭಾಗದಲ್ಲಿ ಕಟ್ಟಿರುವ ಗರಿಗಳು ಎಂದು. ಈ ನಾಲ್ಕು ಭಾಗಗಳು ನಾಲ್ಕು ದೇವತಾಸ್ವರೂಪಗಳಾಗಿರುವವು. ಎಂದರೆ ಅಗ್ನಿ, ಸೋಮ, ವಿಷ್ಣು, ವರುಣ ಎಂಬ ನಾಲ್ಕು ದೇವತೆಗಳ ಶಕ್ತಿಸಾಮರ್ಥ್ಯಗಳ ಸಾರವನ್ನು ಸೇರಿಸಿ ಈ ಬಾಣವನ್ನು ದೇವತೆಗಳು ನಿರ್ಮಿಸಿದರು. ಅದಕ್ಕಾಗಿ ಅಗ್ನಿಯೇ ಆ ಬಾಣದ ಮುಖ ಎಂದರೆ ಬಾಣದ ಕಡ್ಡಿಯ ಮುಂದೆ ಸೇರಿಸಿರುವ ಲೋಹದ ತುಂಡಾಯಿತು. ಸೋಮ ದೇವತೆಯು ಬಾಣದ ಕಡ್ಡಿಯಾಯಿತು. ವಿಷ್ಣುವು ಬಾಣದ ತುದಿಯಲ್ಲಿದ್ದ ಲೋಹಮಯವಾದ ತೀಕ್ಷ್ಣವಾದ ಮೊನೆಯಾಯಿತು. ವರುಣನು ಬಾಣದ ಕೊನೆಯಲ್ಲಿ ಕಟ್ಟಿರುವ ಗರಿಗಳಾಯಿತು (ಬಾಣವು ವೇಗವಾಗಿ ಚಲಿಸುವುದಕ್ಕಾಗಿ ಅದರ ಹಿಂಭಾಗದಲ್ಲಿ ಪಕ್ಷಿಗಳ ಗರಿಗಳನ್ನು ಕಟ್ಟುವುದು ರೂಢಿಯು) ಇಲ್ಲಿ ವರುಣನ ಪಾತ್ರವು ವಿಶೇಷರೀತಿಯಿಂದ ಮುಖ್ಯವಾದುದಲ್ಲ. ಆದರೂ ವರುಣನ ಸಹಾಯವೂ ಇದರಲ್ಲಿ ಸೇರಿದೆಯೆಂದು ಇಲ್ಲಿ ಹೇಳಲಾಗಿದೆ. ಕೆಲವು ಕಡೆ ಎಂದರೆ ಶಾಖಾಂತರದಲ್ಲಿ ವರುಣನನ್ನು ಬಿಟ್ಟೇ ಉಳಿದ ಅಗ್ನಿ, ಸೋಮ, ವಿಷ್ಣುಗಳೆಂಬ ಮೂವರ ಹೆಸರುಗಳನ್ನು ಮಾತ್ರ ಉಪಯೋಗಿಸಲಾಗಿದೆ--

ತ ಇಷುಗ್ಂ ಸಮಸ್ಕುರ್ವತಾಗ್ನಿಮನೀಕಗ್ಂ ಸೋಮಗ್ಂ ಶಲ್ಯಂ ವಿಷ್ಣುಂತೇಜನಂ ।
(ತೈ.ಸಂ. ೬-೨-೩-೧)

ಇಂತಹ ಬಾಣವನ್ನು ಎಂದರೆ ಅಗ್ನಿ, ಸೋಮ, ವಿಷ್ಣು ಎಂಬ ದೇವತೆಗಳ ಸ್ವರೂಪಗಳಾದ ಬಾಣದ ಕಡ್ಡಿ, ಲೋಹ, ಮೊನೆ ಎಂಬ ಮೂರು ಭಾಗಗಳಿಂದ ಕೂಡಿದ ಬಾಣವನ್ನು ಅಸುರರ ತ್ರಿಪುರಗಳಮೇಲೆ ಪ್ರಯೋಗಿಸಿ ದೇವತೆಗಳು ಜಯವನ್ನು ಗಳಿಸಿದರು.

ಆಜ್ಯರೂಪೇ ಧನುಷಿ ತಾಮಿಷುಂ ಸಂಧಾಯ ತೇ ಸುರಾಃ ।
ದೈತ್ಯಾನ್ ಪ್ರತ್ಯಕ್ಷಿಪನ್ನತ್ರ ಧನುಷಶ್ಚೇತ್ಯನಜ್ಯೃತಃ ॥
ಪ್ರಸಂಗಾದುಪಸತ್ಕರ್ಮಣ್ಯಾಜ್ಯಂ ಹವಿರಿತೀರಿತಂ ।
ತಯೇಷ್ವಾ ದೈತ್ಯನಗರೀಂ ಭಿಂದಂತೋ ಜಗ್ಮುರುದ್ಧತಾಃ ॥

ಆದ್ದರಿಂದ ಅಸುರರನ್ನು ಸೋಲಿಸಿ ದೇವತೆಗಳಿಗೆ ಜಯವನ್ನು ಗಳಿಸಿಕೊಟ್ಟ ಈ ಉಪಸದ್ಧೋಮದಲ್ಲಿ ಮೇಲೆ ಹೇಳಿದ ಬಾಣದ ಭಾಗಗಳಾದ ಅಗ್ನಿ, ಸೋಮ, ವಿಷ್ಣು ಎಂಬ ದೇವತೆಗಳನ್ನು ಉದ್ದೇಶಿಸಿ ಧನುಃಸ್ವರೂಪವಾದ ಆಜ್ಯ (ತುಪ್ಪ)ದಿಂದ ಎಂದರೆ ಆಜ್ಯದ್ರವ್ಯದಿಂದ ಹೋಮಮಾಡುವುದು ರೂಢಿಯು.

**ಚತುರೋಽಗ್ರೇ ಸ್ತನಾನ್ವ್ರತಮುಪೈತ್ಯುಪಸತ್ಸು ಚತುಃಸಂಧಿರ್ಹೀಷುರನೀಕಂ ಶಲ್ಯಸ್ತೇಜನಂ ಪರ್ಣಾನಿ ।**

ಉಪಸದಂಗಭೂತಂ ವ್ರತೋಪಯಾನಂ ವಿಧತ್ತೇ–ಉಪಸತ್ಸ್ವನುಷ್ಠೀಯಮಾನಾಸು, ಅಗ್ರೇ ಪ್ರಥಮದಿನೇ ಸಾಯಂಕಾಲೇ ಚತುರಃ ಸ್ತನಾನ್ವ್ರತಮುಪೈತಿ ॥ ವ್ರತಶಬ್ದೇನಾತ್ರ ಪಯಃಪಾನಮುಚ್ಯತೇ ॥ ಗೋಶ್ಚತುರ್ಷು ಸ್ತನೇಷು ಯಾವತ್ಪಯಸ್ತಾವತ್ಪೂರ್ವೋಕ್ತಸ್ಯ ಬಾಣಸ್ಯ ಚತುಃ ಸಂಧಿತ್ವಾದನೀಕಾದ್ಯವಯವಚತುಷ್ಟಯೋಪೇತತ್ವಾತ್ ಸ್ತನಾನಾಂ ಚತುಃಸಂಖ್ಯಾ ಯುಕ್ತಾ ॥

ಉಪಸತ್ಕರ್ಮ ಅನುಷ್ಠಾನಕಾಲದಲ್ಲಿ (ಎಂದರೆ ಮೂರು ದಿನಗಳಲ್ಲಿ) ದೀಕ್ಷಿತನಾದ ಯಜಮಾನನು ಆಹಾರವಿಷಯದಲ್ಲಿ ಒಂದು ಕಟ್ಟುನಿಟ್ಟಾದ ವ್ರತವನ್ನು ಪಾಲಿಸಬೇಕು. ಇಲ್ಲಿ ವ್ರತವೆಂದರೆ ಹಾಲನ್ನು ಕುಡಿಯುವುದು ಎಂದರ್ಥವು. ಬ್ರಾಹ್ಮಣ

ಯಜಮಾನನಿಗೆ ಪಯಃಪಾನವೇ ಪ್ರತೋಕ್ತವಾದ ಆಹಾರವು. ಏಕಂದರೆ—**ಪಯೋ ಬ್ರಾಹ್ಮಣಸ್ಯ ವ್ರತಂ ಯವಾಗೂ ರಾಜನ್ಯಸ್ಯಾಮಿಕ್ಷಾ ವೈಶ್ಯಸ್ಯ** ಎಂದು ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವುದು. ಹಿಂದೆ ಅಸುರನಗರ ವಿಧ್ವಂಸನಕ್ಕಾಗಿ ನಿರ್ಮಿಸಿದ ಬಾಣದಲ್ಲಿ ಬಾಣದ ಮೊನೆ, ಲೋಹ, ಕಡ್ಡಿ, ಗರಿ ಎಂದು ನಾಲ್ಕು ಬೇರೆ ಬೇರೆ ದ್ರವ್ಯಗಳಿರುವುದೆಂದು ಹೇಳಿದೆಯಷ್ಟೆ. ಅದರ ಪ್ರತೀಕವಾಗಿ ಯಜಮಾನನು ಗೋವಿನ ನಾಲ್ಕು ಸ್ತನಗಳ ಅಥವಾ ಕೆಚ್ಚಲುಗಳಿಂದ ಕರೆಯುವ ಹಾಲನ್ನು ಪಾನಮಾಡ ಬೇಕೆಂದು ಹೇಳಿದೆ.

**ಕುರ್ಯಾದುಪಸದಾಂ ಕಾಲಂ ಚತುರ್ಥಾತ್ರ ಕ್ರಮೇಣ ಚ ।**
**ಚತುಸ್ತ್ರಿದ್ವ್ಯೇಕಸ್ತನಜಕ್ಷೀರೇಣ ವ್ರತಮಾಚರೇತ್ ॥**

ಎಂದರೆ ಮೂರುದಿನಗಳವರೆಗೆ ಆಚರಿಸಲ್ಪಡುವ ಉಪಸತ್ಕರ್ಮದ ಮೊದಲನೆಯ ದಿವಸ ಸಾಯಂಕಾಲದಲ್ಲಿ ಗೋವಿನ ನಾಲ್ಕು ಕೆಚ್ಚಲುಗಳಿಂದಲೂ ಕರೆಯಲ್ಪಡುವ ಹಾಲನ್ನು ಮಾತ್ರ ಪಾನಮಾಡಬೇಕು. ಇದು ವ್ರತನಿಯಮವು. ಅನಂತರ ಕ್ರಮ ಕ್ರಮವಾಗಿ ಪಯಃಪಾನವನ್ನು ಕಡಮೆಮಾಡುತ್ತಾ ಹೋಗಬೇಕು. ಹೇಗೆಂದರೆ—

ತ್ರೀನ್ತ್ಸ್ತನಾನ್ವ್ರತಮುಪೈತ್ಯುಪಸತ್ಸು ತ್ರಿಷಂಧಿರ್ಹೀಷುರನೀಕಂ ಶಲ್ಯ-ಸ್ತೇಜನಂ ದ್ವೌ ಸ್ತನೌ ವ್ರತಮುಪೈತ್ಯುಪಸತ್ಸು ದ್ವಿಷಂಧಿರ್ಹೀಷುಃ ಶಲ್ಯಶ್ಚ ಹ್ಯೇವ ತೇಜನಂ ಚೈಕಂ ಸ್ತನಂ ವ್ರತಮುಪೈತ್ಯುಪಸ-ತ್ಸ್ವೇಕಾ ಹ್ಯೇವೇಷುರಿತ್ಯಾಖ್ಯಾಯತ ಏಕಯಾ ವೀರ್ಯಂ ಕ್ರಿಯತೇ ।

**ಅನೇನೈವ ಪ್ರಕಾರೇಣ ದ್ವಿತೀಯೋಪಸದ್ದಿನೇ ಪ್ರಾತಃಸಾಯಂಕಾಲಯೋಸ್ತೃತೀಯ ದಿನಸ್ಯ ಪ್ರಾತಃಕಾಲೇ ಚೈಕೈಕನ್ಯೂನಾಃ ಸ್ತನಸಂಖ್ಯಾ ವಿಧತ್ತೇ—ಏತಾಸಾಂ ಸ್ತನಸಂಖ್ಯಾನಾ-ಮುಕ್ತಾಃ ಕಾಲವಿಶೇಷಾ ಆಪಸ್ತಂಬೇನೋದಾಹೃತಾಃ—'ಚತುರಃ ಸಾಯಂ ದುಹ್ಯಾತ್ತ್ರೀ-ನ್ಪ್ರಾತರ್ದ್ವೌ ಸಾಯಮೇಕಮುತ್ತಮಃ' ಇತಿ ॥**

ಉಪಸತ್ಕರ್ಮದ ಅನುಷ್ಠಾನದ ಎರಡನೆಯ ದಿವಸ ಪ್ರಾತಃಸಾಯಂಕಾಲಗಳಲ್ಲಿಯೂ ಮೂರನೆಯ ದಿವಸ ಪ್ರಾತಃಕಾಲ ದಲ್ಲಿಯೂ ಒಂದೊಂದು ಸ್ತನಸಂಖ್ಯೆಯನ್ನು ಕಡಮೆಮಾಡಿ ಕರೆದ ಹಾಲನ್ನು ಮಾತ್ರ ಪಾನಮಾಡಬೇಕು. ಏಕೆಂದರೆ ಬಾಣ ದಲ್ಲಿ ಮೇಲೆ ಹೇಳಿದ ಮೊನೆ, ಲೋಹ, ಕಡ್ಡಿ, ಗರಿ ಎಂಬ ನಾಲ್ಕುಭಾಗಗಳ ಪ್ರತೀಕವಾಗಿ ಗೋವಿನ ಸ್ತನಗಳಿಂದ ಕರೆದ ಹಾಲನ್ನು ಮೊದಲನೆಯ ದಿವಸ ಸಾಯಂಕಾಲದಲ್ಲಿ ಪಾನಮಾಡಬೇಕು. ಎರಡನೆಯ ದಿವಸ ಪ್ರಾತಃಕಾಲದಲ್ಲಿ ಮೊನೆ, ಲೋಹ, ಕಾಂಡ (ಕಡ್ಡಿ) ಇವುಗಳ ಪ್ರತೀಕವಾಗಿ ಗೋವಿನ ಮೂರು ಕೆಚ್ಚಲುಗಳಿಂದ ಮಾತ್ರ ಕರೆದ ಹಾಲನ್ನು ಪಾನಮಾಡಬೇಕು; ಎರಡನೆಯ ದಿನಸ ಸಾಯಂಕಾಲ ಬಾಣದ ಕಾಂಡ ಮತ್ತು ಮೊನೆ ಇವುಗಳ ಪ್ರತೀಕವಾಗಿ ಗೋವಿನ ಎರಡು ಸ್ತನಗಳಿಂದ ಕರೆದ ಹಾಲನ್ನು ಮಾತ್ರ ಪಾನಮಾಡಬೇಕು. ಮೂರನೆಯ ದಿವಸ ಪ್ರಾತಃಕಾಲ ಒಂದೇ ಆದ ಬಾಣದ ಪ್ರತೀಕವಾಗಿ ಗೋವಿನ ಒಂದು ಸ್ತನ ದಿಂದ ಲಬ್ಧವಾದ ಹಾಲನ್ನು ಮಾತ್ರ ಪಾನಮಾಡಬೇಕು. ಈ ರೀತಿ ಮಾಡಿದರೆ ವ್ರತವು ಸಫಲವಾಗುವುದು. ಈ ವಿಷಯದಲ್ಲಿ ಆಪಸ್ತಂಬಶ್ರೌತಸೂತ್ರದಲ್ಲಿ—ಚತುರಃಸಾಯಂ ದುಹ್ಯಸ್ತ್ರೀನ್ ಪ್ರಾತರ್ದ್ವೌ ಸಾಯಮೇಕಮುತ್ತಮೇ(ಆ.ಶ್ರಾ.ಸೂ. ೧೧-೪-೧೦) ಎಂದು ಹೇಳಿರುವುದು. ತೈತ್ತಿರೀಯಸಂಹಿತೆಯಲ್ಲಿಯೂ ಈ ವಿಷಯದಲ್ಲಿ—

ಚತುರೋಽಗ್ರೇ ಸ್ತನಾನ್ವ್ರತಮುಪೈತ್ಯಥ ತ್ರೀನಥ ದ್ವಾವಥೈಕಮೇತದ್ವೈ ಸುಜಘನಂ ನಾಮ ವ್ರತಂ ತಪಸ್ಯಗ್ಂ ಸುವರ್ಗ್ಯಮಥೋ ಪ್ರೈವ ಜಾಯತೇ ಪ್ರಜಯಾ ಪಶುಭಿಃ ॥ (ತೈ. ಸಂ. ೬-೨-೫-೨)

ಎಂದು ಹೇಳಿದೆ.

ಪರೋವರೀಯಾಂಸೋ ವಾ ಇಮೇ ಲೋಕಾ ಅರ್ವಾಗಂಹೀ-ಯಾಂಸಃ ಪರಸ್ತಾದರ್ವಾಚೀರುಪಸದ ಉಪೈತ್ಯೇಷಾಮೇವ ಲೋಕನಾಮಭಿಜಿತ್ಯೈ ॥

ಯಥೋಕ್ತಂ ಸಂಖ್ಯಾವಿಶೇಷಂ ಪ್ರಶಂಸತಿ—ಇಮೇ ಪೃಥಿವ್ಯಂತರಿಕ್ಷದ್ಯುಸಪ್ತಲೋಕಾಃ ಪರೋವರೀಯಾಂಸಃ ಪರಸ್ತಾದೂರ್ಧ್ವಭಾಗೇ ನಿವಸಂತೋಽತ್ಯಂತಂ ವಿಸ್ತೃತಾಃ ॥ ಅರ್ವಾಗ-ಧೋಭಾಗೇಂಽಹೀಯಾಂಸೋಽತಿಶಯೇನಾಣುವತ್ಸಂಕುಚಿತಾಃ ॥ ಸತ್ಯಲೋಕಾದಣುರ್ದ್ಯು-ಲೋಕಃ ತಸ್ಮಾದಪ್ಯಣುರಂತರಿಕ್ಷಲೋಕಃ ತಸ್ಮಾದಪ್ಯಣುರ್ಭೂಲೋಕಃ । ಏವಂ ಸತ್ಯುಪ-ಸದೋಽಪಿಪರಸ್ತಾದೂರ್ಧ್ವಲೋಕಸ್ಥಾನೀಯಾತ್ಪ್ರಥಮದಿನಾದಾರಭ್ಯ ತತ್ತದ್ದಿನಾಂತರದಿನೇ-ಷು ಸ್ತನಸಂಖ್ಯಾಹ್ರಾಸೇನ ಅರ್ವಾಚೀರುಪೈತ್ಯನುತಿಷ್ಠತೀತಿ ಯದಸ್ತಿ ತದೇಷಾಮೇವ ಲೋಕಾನಾಮಭಿಜಯಾಯ ಭವತಿ ॥

ಪೃಥಿವೀ ಮೊದಲಾದ ಊರ್ಧ್ವಲೋಕಗಳು ಒಂದಕ್ಕಿಂತ ಮತ್ತೊಂದು ವಿಸ್ತಾರವಾಗಿರುವವು.

ಸ್ವರ್ಗಾದೂನಂ ಖಂ ತತೋಽಪಿ ನ್ಯೂನಂ ಭೂಮಂಡಲಂ ಕ್ಷಿತಿ ।
ಲೋಕಾಃ ಪರಸ್ತಾದ್ಬಹುಲಾ ಅಧೋಧಶ್ಚಾಲ್ಪರೂಪಕಾಃ ॥

ಎಂದರೆ ಎಲ್ಲಕ್ಕೂ ಮೇಲಿರುವ ಸತ್ಯಲೋಕವು ಅತ್ಯಂತ ವಿಸ್ತಾರವಾಗಿರುವುದು. ಅದರ ಕೆಳಗಿರುವ ಸ್ವರ್ಗಲೋಕವು ಸತ್ಯಲೋಕಕ್ಕಿಂತ ಚಿಕ್ಕದು; ಅಂತರಿಕ್ಷಲೋಕವು ಸ್ವರ್ಗಕ್ಕಿಂತ ಚಿಕ್ಕದು. ಭೂಲೋಕವು ಅಂತರಿಕ್ಷಲೋಕಕ್ಕಿಂತ ಚಿಕ್ಕದು. ಈರೀತಿ ಇರುವುದು ಲೋಕಗಳ ವಿಸ್ತಾರಕ್ರಮದ ಸಂಕೇತವಾಗಿ ಉಪಸತ್ಕರ್ಮದಲ್ಲಿ ವ್ರತನಿಷ್ಠನಾದ ದೀಕ್ಷಿತನು ಮೊದಲು ದಿನ ನಾಲ್ಕು ಸ್ತನಗಳಿಂದ ಕರೆದ ಹಾಲನ್ನೂ ಅನಂತರ ಮೂರು, ಆನಂತರ ಎರಡು, ಅನಂತರ ಒಂದು ಸ್ತನದ ಹಾಲನ್ನು ಮಾತ್ರ ಪಾನ ಮಾಡಬೇಕು. ಎಂದರೆ ಲೋಕವಿಸ್ತಾರಕ್ಕನುಸಾರವಾಗಿ ಪಾನಮಾಡುವ ಹಾಲೂ ಕ್ರಮ ಕ್ರಮವಾಗಿ ಕಮ್ಮಿಯಾಗುತ್ತಾ ಬರಬೇಕು. ಈರೀತಿ ಮಾಡುವುದರಿಂದ ಪೃಥಿವ್ಯಾದಿ ಸ್ವರ್ಗಲೋಕಗಳನ್ನು ಯಜಮಾನನು ಜಯಿಸುವನು ಎಂದರೆ ಪಡೆಯುವನು ಎಂದಭಿಪ್ರಾಯವು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ—

ಪರೋವರೀಯಸೀಮವಾಂತರದೀಕ್ಷಾಮುಪೇಯಾದ್ಯಃ ಕಾಮಯೇತಾಮುಷ್ಮಿನ್ ಲೋಕೇಽರ್ಧುಕಂ ಸ್ಯಾದಿತಿ ಚತುರೋಽಗ್ರೇಽಥ ತ್ರೀನಥ ದ್ವಾವಥೈಕಮೇಷಾ ವೈ ಪರೋವರೀ-ಯಸ್ಯವಾಂತರದೀಕ್ಷಾಮುಷ್ಮಿನ್ನೇವಾಸ್ಮೈ ಲೋಕೇಽರ್ಧುಕಂ ಭವತಿ ॥ (ತೈ. ಸಂ. ೬-೨-೩)

ಎಂದು ಹೇಳಿದೆ.

**ಉಪಸದ್ಯಾಯ ಮೀಳ್ಹುಷ ಇಮಾಂ ಮೇ ಅಗ್ನೇ ಸಮಿಧಮಿಮಾ-ಮುಪಸದಂ ವನೇರಿತಿ ತಿಸ್ರಸ್ತಿಸ್ರಃ ಸಾಮಿಧ್ಯೇನ್ಯೋ ರೂಪ-ಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯತ್ಕರ್ಮ ಕ್ರಿಯ-ಮಾಣಮೃಗಭಿವದತಿ ॥**

ಅಥ ಪೂರ್ವಾಹ್ನಾಪರಾಹ್ಣಯೋರ್ವ್ಯವಸ್ಥಿತಾಃ ಸಾಮಧೇನೀಃ ವಿಧತ್ತೇ—ಉಪಸ-ದ್ಯಾಯೇತ್ಯಾದ್ಯಾ ಅನ್ವಾತಾಸ್ತಿಸ್ರ ಋಚಃ ಪೂರ್ವಾಹ್ಣೇ ಸಾಮಿಧೇನ್ಯ ಇಮಾಂ ಮೇ ಅಗ್ನ ಇತ್ಯಾದಿಕಾ ಆನ್ವಾತಾ ಸ್ತಿಸ್ರ ಋಚೋಽಪರಾಹ್ಣೇ ಸಾಮಿಧೇನ್ಯಃ ॥ ಮಂತ್ರಾಂತರಶಂಕಾವ್ಯ-ದಾಸೇನ ವೈಶಬ್ದಾರ್ಥಃ ಕೃತ್ಸ್ನಾರ್ಥಪಾಠಃ ॥ ಉಪಸದ್ಯಾಯೇೋಪಸದಂ ವನೇರಿತ್ಯುಪಶಬ್ದ-ಯೋಗೇನ ರೂಪಸಮೃದ್ಧಿಃ ॥

ಈಗ ಉಪಸತ್ಕರ್ಮದಲ್ಲಿ ಪೂರ್ವಾಹ್ಣ ಮತ್ತು ಅಪರಾಹ್ಣಕಾಲಗಳಲ್ಲಿ ಪಠಿಸಬೇಕಾದ ಸಾಮಿಧೇನೀಮಂತ್ರಗಳನ್ನು ತಿಳಿಸುವರು. ಪ್ರಾತಃಕಾಲದಲ್ಲಿ ಆಚರಿಸಲ್ಪಡುವ ಉಪಸದ್ಧೋಮದಲ್ಲಿ **ಉಪಸದ್ಯಾಯ ಮೀಳ್ಹುಷೇ** (ಋ. ಸಂ. ೬-೧೫-೧) **ಯಃ ಪಂಚ ಚರ್ಷಣೀರಭಿ** (೬-೧೫-೨) **ಸ ನೋ ವೇದೋ ಅಮಾತ್ಯಂ** (೬-೧೫-೩) ಎಂಬ ಮೂರು ಋಕ್ಕುಗಳನ್ನೂ ಅಪರಾಹ್ಣದಲ್ಲಿ ಆಚರಿಸಲ್ಪಡುವ ಉಪಸದ್ಧೋಮದಲ್ಲಿ—ಇ**ಮಾಂ ಮೇ ಅಗ್ನೇ ಸಮಿಧಂ** (ಋ. ಸಂ. ೨-೬-೧) **ಅಯಾತೇ ಅಗ್ನೇ ವಿಧೇಮ** (೨-೬-೨) **ತಂ ತ್ವಾ ಗೀರ್ಭಿರ್ಗಿರ್ವಣಸಂ** (೨-೬-೩) ಎಂಬ ಮೂರು ಋಕ್ಕುಗಳನ್ನು ಸಾಮಿಧೇನೀಮಂತ್ರ ಗಳನ್ನಾಗಿ ಪಠಿಸಬೇಕು. ಈ ಮಂತ್ರಗಳಲ್ಲಿ—ಅದರಲ್ಲಿಯೂ ಮುಖ್ಯವಾಗಿ **ಇಮಾಂ ಮೇ ಅಗ್ನೇ** ಎಂಬ ಮಂತ್ರದಲ್ಲಿ **ಇಮಾಮುಪಸದಂ ವನೇಃ** ಎಂಬ ಶಬ್ದಗಳ ಪ್ರಯೋಗವು ಉಪಸತ್ಕರ್ಮವನ್ನು ಸೂಚಿಸುವುದು. ಅನುಷ್ಠಾನಮಾಡುವ ಕರ್ಮದ ವಿವರಣೆಯನ್ನೇ ಹೇಳುವ ಋಕ್ಕುಗಳ ಪಠನದಿಂದ ಆ ಕರ್ಮವು ಸಮೃದ್ಧಿಯಾಗಿ ನೆರವೇರುವುದು.

**ಜಘ್ನೀವತೀರ್ಯಾಜ್ಯಾನುವಾಕ್ಯಾಃ ಕುರ್ಯಾತ್ । ಅಗ್ನಿರ್ವೃತ್ರಾಣಿ ಜಂಘನದ್ಯ ಉಗ್ರ ಇವ ಶರ್ಯಹಾ ತ್ವಂ ಸೋಮಾಸಿ ಸತ್ಪತಿ-ರ್ಗಯಸ್ಫಾನೋ ಅಮೀವಹೇದಂ ವಿಷ್ಣುರ್ವಿಚಕ್ರಮೇ ತ್ರೀಣಿ ಪದಾ ವಿಚಕ್ರಮ ಇತ್ಯೇತಾಃ ॥**

ಯಾಜ್ಯಾನುವಾಕ್ಯಾ ವಿಧತ್ತೇ—ಹಂತಿಧಾತ್ವರ್ಥಯುಕ್ತಾ ಜಘ್ನಿವತೀಃ ॥ ತಥಾವಿಧಾ ಋಚ ಉದಾಹರತಿ ॥ ಅಗ್ನಿರ್ವೃತ್ರಾಣೀತಿ ಪುರೋಽನುವಾಕ್ಯಾ ॥ ಯ ಉಗ್ರ ಇವೇತಿ ಯಾಜ್ಯಾ ॥ ತ್ವಂ ಸೋ ಮೇತಿ ಪುರೋಽನುವಾಕ್ಯಾ ॥ ಗಯಸ್ಫಾನ ಇತಿ ಯಾಜ್ಯಾ ॥ ಇದಂ ವಿಷ್ಣುರಿತಿ ಪುರೋಽನುವಾಕ್ಯಾ ॥ ತ್ರೀಣಿಪದೇತಿ ಯಾಜ್ಯಾ ॥ ಏತಾಶ್ಚಾಗ್ನ್ಯಾದಿದೇವಾನಾಂ ಕ್ರಮೇಣ ದ್ರಷ್ಟವ್ಯಾಃ ॥

ಈಗ ಈ ಉಪಸದ್ಧೋಮದಲ್ಲಿ ಯಾಜ್ಯಾಪುರೋಽನುವಾಕ್ಯಾಮಂತ್ರಗಳನ್ನು ವಿವರಿಸುವರು. **ಅಗ್ನಿರ್ವೃತ್ರಾಣಿ ಜಂಘನತ್** ಇತ್ಯಾದಿ ಮಂತ್ರಗಳಲ್ಲಿ ಹಂತಿಧಾತ್ವರ್ಥವನ್ನು ಸೂಚಿಸುವ ಜಂಘನತ್ ಮೊದಲಾದ ಶಬ್ದಗಳ ಪ್ರಯೋಗವಿರುವುದ

ರಿಂದ ಈ ಋಕ್ಕುಗಳಿಗೆ ಜಘ್ನಿವತೀ ಋಕ್ಕುಗಳೆಂದು ಹೆಸರು. ಈ ಹೋಮದಲ್ಲಿ ಅಗ್ನಿ, ಸೋಮ, ವಿಷ್ಣುಗಳು ಪ್ರಧಾನ ದೇವತೆಗಳಾದ್ದರಿಂದ ಪ್ರತಿ ದೇವತೆಗೂ ಯಾಜ್ಯಾಪುರೋಽನುವಾಕ್ಯಾಮಂತ್ರಗಳು ಬೇರೆ ಬೇರೆಯಾಗಿರುವವು. ಹೇಗೆಂದರೆ ಅಗ್ನಿಗೆ—**ಅಗ್ನಿರ್ವೃತ್ರಾಣಿ ಜಂಘನತ್** (ಋ. ಸಂ. ೬-೧೬-೩೪) ಎಂಬ ಋಕ್ಕು ಪುರೋಽನುವಾಕ್ಯಾಮಂತ್ರವು; **ಯ ಉಗ್ರ ಇವ ಶರ್ಯಹಾ** (೬-೧೬-೩೯) ಎಂಬ ಋಕ್ಕು ಯಾಜ್ಯಾಮಂತ್ರವು. ಸೋಮದೇವತೆಗೆ—**ತ್ವಂ ಸೋಮಾಸಿ ಸತ್ಪತಿಃ** (ಋ. ಸಂ. ೧-೯೧-೫) ಎಂಬ ಋಕ್ಕು ಪುರೋಽನುವಾಕ್ಯಾಮಂತ್ರವು; **ಗಯಸ್ಫಾನೋ ಅಮೀವಹಾ** (೧-೯೧-೧೨) ಎಂಬ ಋಕ್ಕು ಯಾಜ್ಯಾಮಂತ್ರವು; ವಿಷ್ಣುದೇವತೆಗೆ—**ಇದಂ ವಿಷ್ಣುರ್ವಿ ಚಕ್ರಮೇ** (ಋ. ಸಂ. ೧-೨೨-೧೭) ಎಂಬ ಋಕ್ಕು ಪುರೋಽನುವಾಕ್ಯಾಮಂತ್ರವು; **ತ್ರೀಣಿ ಪದಾ ವಿಚಕ್ರಮೇ** (ಋ. ಸಂ. ೧-೨೨-೧೮) ಎಂಬ ಋಕ್ಕು ಯಾಜ್ಯಾಮಂತ್ರವು.

**ವಿಪರ್ಯಸ್ತಾಭಿರಪರಾಹ್ಣೇ ಯಜತಿ ।**

**ಯಾಃ ಪೂರ್ವಾಹ್ಣೇ ಪುರೋಽನುವಾಕ್ಯಾ ಉಕ್ತಾಸ್ತಾಸಾಮಪರಾಹ್ಣೇ ಯಾಜ್ಯಾತ್ವಂ ತಥಾ ತತ್ರತ್ಯಾನಾಂ ಯಾಜ್ಯಾನಾಮಪರಾಹ್ಣೇ ಪುರೋಽನುವಾಕ್ಯಾತ್ವಂ ಚ ವಿಧತ್ತೇ—**

ಮೇಲೆ ಅಗ್ನಿಸೋಮವಿಷ್ಣುದೇವತೆಗಳಿಗೆ ಪುರೋಽನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನು ಪ್ರತ್ಯೇಕವಾಗಿ ನಿರ್ದೇಶಿಸಲಾಗಿದೆಯಷ್ಟೆ. ಆ ಕ್ರಮದಂತೆ ಪೂರ್ವಾಹ್ಣದಲ್ಲಿ ಉಪಯೋಗಿಸಬೇಕು. ಅಪರಾಹ್ಣಕಾಲದಲ್ಲಿ ಆಚರಿಸಲ್ಪಡುವ ಉಪಸದ್ಧೋಮದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಎಂದರೆ ಯಾಜ್ಯಾಮಂತ್ರಗಳನ್ನು ಪುರೋಽನುವಾಕ್ಯಾಮಂತ್ರಗಳನ್ನಾಗಿಯೂ, ಪುರೋಽನುವಾಕ್ಯಾಮಂತ್ರಗಳನ್ನು ಯಾಜ್ಯಾಮಂತ್ರಗಳನ್ನಾಗಿಯೂ ಪಠಿಸಬೇಕು. ಈ ವಿಷಯದಲ್ಲಿ—**ಯಾಃ ಪ್ರಾತರ್ಯಾಜ್ಯಾಃ ಸ್ಯುಸ್ತಾಃ ಸಾಯಂ ಪುರೋಽನುವಾಕ್ಯಾಃ ಕುರ್ಯಾದಯಾತಯಾಮತ್ವಾಯ** (ತೈ.ಸಂ. ೬-೨-೩) ಎಂದು ತೈತ್ತಿರೀಯಸಂಹಿತಾವಾಕ್ಯವಿರುವುದು.

**ಘ್ನಂತೋ ವಾ ಏತಾಭಿರ್ದೇವಾಃ ಪುರೋ ಭಿಂದಂತ ಆಯನ್ನ್ಯದುಪಸದಃ ।**

**ಯಥೋಕ್ತ ಯಾಜ್ಯಾನುವಾಕ್ಯಾಯುಕ್ತಾ ಉಪಸದಃ ಪ್ರಶಂಸತಿ—ಯಾ ಉಕ್ತ ಮಂತ್ರೋಪೇತಾ ಉಪಸದಃ ಸಂತಿ, ಏತಾಭಿರ್ದೇವಾ ಅಸುರಾಣಾಂ ತಿಸ್ರಃ ಪುರೋ ವಿದಾರಯಂತೋಽಸುರಾಂಶ್ಚ ಹಿಂಸಂತ ಆಗತಾಃ ॥**

ಈ ಯಾಜ್ಯಾಪುರೋಽನುವಾಕ್ಯಾಮಂತ್ರಗಳಲ್ಲಿ ಹಂತಿಧಾತುವಿನ ಅರ್ಥವನ್ನು ಸೂಚಿಸುವ ಪದಗಳ ಪ್ರಯೋಗವಿರುವುದಷ್ಟೆ. ಆದ್ದರಿಂದ ಈ ವಿಧವಾದ ಅರ್ಥಪ್ರತಿಪಾದಕವಾದ ಮಂತ್ರಗಳನ್ನು ಉಪಯೋಗಿಸಿ ದೇವತೆಗಳು ಉಪಸದ್ಧೋಮಮಾಡಿ ಅಸುರರನ್ನು ಎಂದರೆ ಅಸುರರ ಮೂರು ಪಟ್ಟಣಗಳನ್ನು ಸಂಹಾರಮಾಡುತ್ತಾ ಮುಂದುವರೆದರು ಎಂಬ ಅಭಿಪ್ರಾಯವು ವ್ಯಕ್ತವಾಗುವುದು.

**ಸಚ್ಛಂದಸಃ ಕರ್ತವ್ಯಾ ನ ವಿಚ್ಛಂದಸಃ ಯದ್ವಿಚ್ಛಂದಸಃ ಕುರ್ಯಾದ್ಗ್ರೀವಾಸು ತದ್ಗಂಡಂ ದಧ್ಯಾದೀಶ್ವರೋ ಗ್ಲಾವೋ ಜನಿತೋಃ ತಸ್ಮಾತ್ಸಚ್ಛಂದಸ ಏವ ಕರ್ತವ್ಯಾ ನ ವಿಚ್ಛಂದಸಃ ।**

ಉದಾಹೃತಾಸು ಯಾಜ್ಯಾನುವಾಕ್ಯಾಸು ಸರ್ವಾಸು ಯದೇಕವಿಧಂ ಛಂದೋ ದೃಶ್ಯತೇ ನ ತು ವಿಲಕ್ಷಣಂ ತದನ್ವಯವ್ಯತಿರೇಕಾಭ್ಯಾಂ ವಿಶದಯತಿ—ಸಮಾನಂ ಛಂದೋ ಯಾಸಾಂ ತಾಃ ಸಚ್ಛಂದಸಃ ‖ ವಿಲಕ್ಷಣಂ ಛಂದೋ ಯಾಸಾಂ ತಾಃ ವಿಚ್ಛಂದಸಃ ‖ ವೈಲಕ್ಷಣ್ಯೇ ಬಾಧಮಾಹ—ವಿಲಕ್ಷಣಚ್ಛಂದಸಾಮನುಷ್ಠಾನೇ ಗ್ರೀವಾಸ್ಥಾನೀಯಾಸೂಪಸತ್ಸು ಗಂಡಮಾಲಾಖ್ಯ ರೋಗಸ್ಥಾನೀಯಂ ದೋಷಂ ದಧ್ಯಾದುತ್ಪಾದಯೇತ್ ‖ ತಥಾ ಸತಿ ಹೋತಾ ಯಜಮಾನಸ್ಯ ಗ್ಲಾನಿವಿಶೇಷಾಂಜನಿತೋರುತ್ಪಾದಯಿತುಮೀಶ್ವರಃ ಸಮರ್ಥೋ ಭವೇತ್ ‖ ಅಸ್ವಪಕ್ಷೇ ಬಾಧಮುಕ್ತ್ವಾ ಸ್ವಪಕ್ಷಮುಪಸಂಹರತಿ—

ಈ ಉಪಸದಿಷ್ಟಿಯಲ್ಲಿ ಯಾಜ್ಯಾಪುರೋನುವಾಕ್ಯಾಮಂತ್ರಗಳಿಗಾಗಿ ಒಂದೇ ವಿಧವಾದ ಛಂದಸ್ಸಿನ (ಗಾಯತ್ರೀ ಛಂದಸ್ಸಿನ) ಮಂತ್ರಗಳನ್ನು ಉಪಯೋಗಿಸಬೇಕು. ಹಾಗೆ ಮಾಡದೆ ಬೇರೆಬೇರೆ ವಿಧದ ಛಂದಸ್ಸಿನ ಮಂತ್ರಗಳನ್ನು ಉಪಯೋಗಿಸಿ ಹೋಮಮಾಡಿದಲ್ಲಿ ಯಜ್ಞಮಾಡುವ ಯಜಮಾನನಿಗೆ ಕಂಠಪ್ರದೇಶದಲ್ಲಿ ಗಂಡಮಾಲಾ ಎಂಬ ರೋಗವು ಪ್ರಾಪ್ತವಾಗುವ ಸಂಭವವುಂಟು. ಈ ಉಪಸತ್ಕರ್ಮವು ಯಜ್ಞಪುರುಷನ ಕಂಠವೆಂದು ಹಿಂದೆಯೇ ಹೇಳಲ್ಪಟ್ಟಿರುವುದರಿಂದ ಈ ಇಷ್ಟಿಯ ಹೋಮವನ್ನು ಒಂದೇ ವಿಧವಾದ ಛಂದಸ್ಸಿನ ಮಂತ್ರಗಳಿಂದ ಮಾಡಬೇಕು. ಇಲ್ಲದಿದ್ದರೆ ರೋಗವು ಸಂಭವಿಸುವುದು. ಆದ್ದರಿಂದ ಮಂತ್ರವನ್ನು ಪಠಿಸುವ ಹೋತೃವು ಯಜ್ಞಮಾಡುವ ಯಜಮಾನನಿಗೆ ರೋಗವು ಉಂಟಾಗುವುದಕ್ಕೂ, ಉಂಟಾಗದಿರುವುದಕ್ಕೂ ಕಾರಣನಾಗಿರುವನು. ಈ ಕಾರಣಗಳಿಗಾಗಿ ಹೋತೃವು ಯಜಮಾನನ ಆರೋಗ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಒಂದೇವಿಧವಾದ ಛಂದಸ್ಸಿನ ಮಂತ್ರಗಳನ್ನು ಪಠಿಸುತ್ತಾ ಹೋಮಮಾಡಬೇಕು. ಬೇರೆಬೇರೆವಿಧ ಛಂದಸ್ಸುಗಳ ಮಂತ್ರಗಳನ್ನು ಉಪಯೋಗಿಸಕೂಡದು.

ತದು ಹ ಸ್ಮಾಹೋಪಾವಿರ್ಜಾನಶ್ರುತೇಯ ಉಪಸದಾಂ ಕಿಲ ವೈ ತದ್ಬ್ರಾಹ್ಮಣೇ ಯಸ್ಮಾದಪ್ಯಶ್ಲೀಲಸ್ಯ ಶ್ರೋತ್ರಿಯಸ್ಯ ಮುಖಂ ವ್ಯೇವ ಜ್ಞಾಯತೇ ತೃಪ್ತಮಿವ ರೇಭತೀವೇತ್ಯಾಜ್ಯಹವಿಷೋ ಹ್ಯುಪಸದೋ ಗ್ರೀವಾಸು ಮುಖಮಧ್ಯಾಹಿತಂ ತಸ್ಮಾದ್ಧ ಸ್ಮ ತದಾಹ ‖

ಉಪಸದಾಂ ಆಜ್ಯಹವಿಷ್ಕತ್ವಂ ಪ್ರಶಂಸತಿ—ತದು ಹ ತಸ್ಮಿನ್ನೇವೋಕ್ತಾರ್ಥೇ ಕಶ್ಚಿದ್ವೃತ್ತಾಂತ ಉಚ್ಯತ ಇತಿ ಶೇಷಃ ‖ ಉಪಾವಿರ್ನಾಮಕಃ ಕಶ್ಚಿದೃಷಿಃ ಸ ತು ಜಾನಶ್ರುತೇಯಃ, ಜನಶ್ರುತಾಯಾಃ ಸ್ತ್ರಿಯಾ ಅಪತ್ಯಂ ಸ ಪುಮಾನುಪಸದಾಂ ಕಿಲ ವೈ, ಉಪಸನ್ನಾಮಕಾನಾಂ ಕರ್ಮಣಾಮೇವ ವಿಧಾಯಕೇ ಬ್ರಾಹ್ಮಣೇ ತದ್ವಾಕ್ಯಮಾಹ ಸ್ಮ ‖ ಕಿಮಾಹೇತಿ ತದುಚ್ಯತೇ ‖ ಯಸ್ಮಾತ್ಕಾರಣಾದಶ್ಲೀಲಸ್ಯಾಪಿ ಕುರೂಪಸ್ಯ ಶೋತ್ರಿಯಸ್ಯ ವೇದಶಾಸ್ತ್ರವಿದೋ ಮುಖಂ ತೃಪ್ತಮಿವ ದೈನ್ಯ ಹೀನತಯಾ ತೃಪ್ತಿಯುಕ್ತಮೇವ ರೇಭತೀವ ವೇದಶಾಸ್ತ್ರಪಾಠೋಪೇತತ್ವಾಚ್ಛಂಸನ್ನಿವ ವ್ಯೇವ ಜ್ಞಾಯತೇ ವಿಶೇಷೇಣಾವಶ್ಯಂ ಪ್ರತೀಯತೇ ‖ ಇತ್ಯೇತದೃಷೇರ್ವಚನಂ ತಸ್ಯ ವಚನಸ್ಯಾಭಿಪ್ರಾಯ ಉಚ್ಯತೇ ‖ ಗ್ರೀವಾಸ್ಥಾನೀಯಾ ಉಪಸದ ಆಜ್ಯಹವಿಷ್ಕಾ ಅತ ಏವ

ಶೋಭಮಾನಾಃ ॥ ಲೋಕೇಽಪಿ ಶೋಭಮಾನಾಸು ಗ್ರೀವಾಸು, ಅಧ್ಯಾಹಿತಮಾಶ್ರಿತಂ ಮುಖಂ ಶ್ರೋತ್ರಿಯಸಂಬಂಧಿ ತೃಪ್ತ್ಯಾದ್ಯುಪೇತಂ ದೃಶ್ಯತೇ ॥ ತಸ್ಮಾತ್ಕಾರಣಾಚ್ಛೋಭನಗ್ರೀವಾಹಿತಮುಖಸಾಮ್ಯಮಾಜ್ಯಹವಿಷ್ಕತ್ವಮಿತ್ಯಭಿಪ್ರೇತ್ಯ ಸ ಋಷಿಸ್ತದ್ವಾಕ್ಯಮಾಹ—ಅಥ ಮೀಮಾಂಸಾ । ಚತುರ್ಥಾಧ್ಯಾಯಸ್ಯ ದ್ವಿತೀಯಪಾದೇ ಚಿಂತಿತಂ ॥

"ಯದಾತಿಥ್ಯಾಬರ್ಹಿರೇತದುಪಸತ್ಸ್ವತಿದೇಶನಂ ॥
ಸಾಧಾರಣವಿಧಿರ್ವಾಽಽದ್ಯಸ್ತದೀಯಸ್ಯೋಪಸಂಹೃತೇಃ ॥
ಬರ್ಹಿಃಶ್ರುತ್ಯೈಕತಾಭಾನಾನ್ನಾತಿದೇಶಸ್ಯ ಲಕ್ಷಣಾ ॥
ಆತಿಥ್ಯಯೋಪಸದ್ಭಿಶ್ಚ ಬರ್ಹಿರೇತತ್ಪ್ರಯುಜ್ಯತೇ ॥"

ಜ್ಯೋತಿಷ್ಟೋಮೇ ಶ್ರೂಯತೇ—ಯದಾತಿಥ್ಯಾಯಾಂ ಬರ್ಹಿಸ್ತದುಪಸದಾಂ ತದಗ್ನೀಷೋಮೀಯಸ್ಯ ಚೇತಿ ॥ ಕ್ರೀತಂ ಸೋಮಂ ಶಕಟೇಽವಸ್ಥಾಪ್ಯ ಪ್ರಾಚೀನವಂಶಂ ಪ್ರತ್ಯಾನಯನೇಽಭಿಮುಖೋ ಯಾಮಿಷ್ಟಿಂ ನಿರ್ವಪತಿ ಸೇಯಮಾತಿಥ್ಯಾ॥ ತತ ಊರ್ಧ್ವಂ ತ್ರಿಷು ದಿನೇಷ್ವನುಷ್ಠೀಯಮಾನಾ ಉಪಸದಃ । ಔಪವಸಥ್ಯೇ ದಿನೇಽನುಷ್ಠೇಯಃ ಸೋಽಗ್ನೀಷೋಮೀಯಃ ॥ ತತ್ರಾತಿಥ್ಯೇಷ್ಟೌ ವಿಹಿತಂ ಯದ್ಬರ್ಹಿಸ್ತದ್ಯದಿ ತಸ್ಯಾ ಇಷ್ಟೇರಾಚ್ಛಿದ್ಯೋಪಸತ್ಸು ವಿಧೀಯೇತ ತದಾನೀಮಾತಿಥ್ಯಾವಿಧಾನಮನರ್ಥಕಂ ಸ್ಯಾತ್ ॥ ಯದಿ ತತ್ರೋಪಯುಕ್ತಮಿತರತ್ರ ವಿಧೀಯತೇ ವಿನಿಯುಕ್ತವಿನಿಯೋಗರೂಪೋ ವಿರೋಧಃ ಸ್ಯಾತ್॥ತಸ್ಮಾದಾತಿಥ್ಯಾ ಬರ್ಹಿಷೋ ಯೇ ಧರ್ಮಾ ಆಶ್ವವಾಲತ್ವಾದಯಸ್ತೇ ಧರ್ಮಾ ಉಪಸತ್ಸೂಪಸಂಹ್ರಿಯಂತ ಇತ್ಯತಿದೇಶಪರಂ ವಾಕ್ಯಮಿತಿ ಪ್ರಾಪ್ತೇ ಬ್ರೂಮಃ ॥ ಬರ್ಹಿಃಶಬ್ದಸ್ಯ ಧರ್ಮಾತಿದೇಶಪರತ್ವೇ ಲಕ್ಷಣಾ ಪ್ರಸಜ್ಯೇತ ॥ ಶ್ರುತ್ಯಾ ತು ಬರ್ಹಿಷ ಆತಿಥ್ಯೋಪಸದಗ್ನೀಷೋಮೀಯೇಷ್ವೇಕತ್ವಂ ಪ್ರತಿಭಾತ್ಯತಃ ಸಾಧಾರಣ್ಯಮತ್ರ ವಿಧೇಯಂ ॥ ಆತಿಥ್ಯಾರ್ಥಂ ಯದ್ಬರ್ಹಿರುಪಾದೀಯತೇ ತನ್ನ ಕೇವಲಮಾತಿಥ್ಯಾರ್ಥಂ ಕಿಂತೂಪಸದರ್ಥಮಗ್ನೀಷೋಮೀಯಾರ್ಥಂ ಚೋಪಾದೇಯಮಿತಿ ವಿದಿವಾಕ್ಯಸ್ಯಾರ್ಥಃ ॥ ತಸ್ಮಾದಾತಿಥ್ಯೋಪಸದಗ್ನೀಷೋಮೀಯಾಸ್ತ್ರಯೋಽಪ್ಯಸ್ಯ ಬರ್ಹಿಷಃ ಪ್ರಯೋಜಕಾಃ ॥ ದ್ವಾದಶಾಧ್ಯಾಯಸ್ಯ ಪ್ರಥಮಪಾದೇ ಚಿಂತಿತಂ ॥

"ಆತಿಥ್ಯಾದಿಗತೇ ಬರ್ಹಿಷ್ಯುಕ್ಷಣಾದಿ ಪೃಥಙ್ನ ವಾ ॥
ಆದ್ಯೋಽತಂತ್ರಪ್ರಸಂಗತ್ವಾನ್ನ ಪ್ರಸಂಗಾನಿವಾರಣಾತ್"

ಯದಾತಿಥ್ಯಾಯಾಂ ಬರ್ಹಿಸ್ತದುಪಸದಾಂ ತದಗ್ನೀಷೋಮೀಯಸ್ಯೇತಿ ಶ್ರುತಂ ತತ್ರ ಬರ್ಹಿಸ್ತ್ರಯಾಣಾಂ ಸಾಧಾರಣಮಿತಿ ಚತುರ್ಥೇ ನಿರೂಪಿತಂ ॥ ತಸ್ಮಿನ್ಸಾಧಾರಣೇ ಬರ್ಹಿಷಿ ಪ್ರೋಕ್ಷಣಾದಿಸಂಸ್ಕಾರಾಃ ಪ್ರತಿಕರ್ಮ ಪೃಥಗನುಷ್ಠೇಯಾಃ ॥ ಕುತಃ ॥ ತಂತ್ರಪ್ರಯೋಗಯೋರತ್ರಾಸಂಭವಾತ್ ॥ ನ ತಾವತ್ತಂತ್ರಮಸ್ತಿ, ದರ್ಶಗತಯಾಗತ್ರಯವದೇಕಕಾಲೀನತ್ವಾಭಾವಾತ್ ॥ ನಾಪಿ ಪ್ರಸಂಗಃ, ಏಕಸ್ಯ ತಂತ್ರಮಧ್ಯೇಽನ್ಯಯೋರಪಠಿತತ್ವಾದಿತಿ ಪ್ರಾಪ್ತೇ ಬ್ರೂಮಃ ॥ ಬರ್ಹಿಷ ಏಕತ್ವಾತ್ಸಕೃತ್ಪ್ರೋಕ್ಷಣಾದಿಭಿಃ ಸಂಸ್ಕಾರೇ ಪುನಃ ಪ್ರೋಕ್ಷಣಾದ್ಯ

**ಪೇಕ್ಷಾ ನಾಸ್ತಿ ॥ ತೇ ಚ ಪ್ರೋಕ್ಷಣಾದಯಃ ಪ್ರಾಥಮ್ಯಾದಾತಿಥ್ಯಾಯಾಂ ಕಾರ್ಯಾಃ ॥ ತತ ಉಪಸತ್ಸ್ವಗ್ನೀಷೋಮೀಯೇ ಚ ಪ್ರಸಂಗಸಿದ್ಧಿರ್ನ ವಾರಯಿತುಂ ಶಕ್ಯತೇ ॥**

ಈ ವಿಷಯದಲ್ಲಿ ಒಂದು ಪೂರ್ವವೃತ್ತಾಂತವನ್ನು ಉದಹರಿಸುವರು. ಪೂರ್ವದಲ್ಲಿ ಜನಶ್ರುತಾ ಎಂಬ ಸ್ತ್ರೀಯ ಪುತ್ರನಾದ ಉಪಾವಿಃ ಎಂಬ ಒಬ್ಬ ಋಷಿಯಿದ್ದನು. ಆ ಋಷಿಯು ಉಪಸತ್ಕರ್ಮವನ್ನು ಅನುಷ್ಠಾನಮಾಡಿದ ಓರ್ವ ಬ್ರಾಹ್ಮಣನ ವಿಷಯದಲ್ಲಿ ಇಂತು ಹೇಳಿದನು—ಓರ್ವ ಪುರುಷನು ಅಶ್ಲೀಲ ಎಂದರೆ ಸದಾಚಾರರಹಿತನೂ ಕುರೂಪಿಯೂ ಆಗಿದ್ದರೂ ಅವನು ವೇದಶಾಸ್ತ್ರಾಧ್ಯಯನಸಂಪನ್ನನಾಗಿದ್ದರೆ ಅವನ ಮುಖದಲ್ಲಿ ಭಯಭೀತಿಗಳಿಲ್ಲದ ದರ್ಪಯುಕ್ತವಾದ ಒಂದುವಿಧ ಕಳೆಯು ಶೋಭಿಸುತ್ತಿರುವುದು. ಉಪಸದ್ಧೋಮವು ಯಜ್ಞಪುರುಷನ ಗ್ರೀವಾ (ಕಂಠ) ಸ್ಥಾನೀಯವಾಗಿರುವುದು. ಈ ಉಪಸದ್ಧೋಮದಲ್ಲಿ ಆಜ್ಯವೆಂಬ ಹವಿಸ್ಸನ್ನು ಹೋಮಮಾಡುವುದರಿಂದ ಅದಕ್ಕೆ ಒಂದು ಅಪೂರ್ವವಾದ ಕಳೆಯು (ಶೋಭೆಯು) ಉಂಟಾಗುವುದು. ಲೋಕವ್ಯವಹಾರದಲ್ಲಿಯೂ ಕೂಡ ಚೆನ್ನಾಗಿ ವೇದಾಧ್ಯಯನಮಾಡಿದ ಶ್ರೋತ್ರಿಯನ ಕಂಠವೂ ಮುಖವೂ ಅಪೂರ್ವ ಶೋಭೆಯಿಂದ ಕೂಡಿರುವುದು ಕಂಡುಬರುತ್ತಿರುವುದು. ಈ ಉಪಮಾನವನ್ನೇ (ಸಾದೃಶ್ಯವನ್ನೇ) ಆ ಋಷಿಯು ಉಪಸದ್ಧೋಮಕ್ಕೆ ಹೋಲಿಸಿ ವಿವರಿಸಿರುವನು.



*English Translation*

The Atithya-ishti is the very head of the sacrifice (the sacrificial personage); the Upasads are his neck. The two stalks of Kus'a grass (held by the Hotar) are of the same length; for head and neck are equal.

The gods made the Upasads as an arrow (the upasad ceremony served them as an arrow); Agni was its shaft, Soma its steel, Vishnu its point, and Varuna its feathers. The gods holding this arrow represented by the Ajya(at the Upasad ceremony) discharged it, and breaking with it the castles of the Asuras, entered them. For these (deities, Agni and so on) are in the Ajya offering. At first he (the sacrificer) undergoes the religious ceremony of drinking (milk) coming from four nipples (of the cow), for the arrow in the Upasads consists of four parts, viz., shaft, steel, point and feathers. He (subsequently) undergoes the religious ceremony of drinking what comes from three nipples. For the arrow in the Upasads consists of three parts, viz., shaft, steel and point. He undergoes the religious ceremony of drinking what comes from two nipples. For the arrow in the Upasads eonsists of two parts viz., shaft and point. He undergoes the religious ceremony of drinking what comes from one nipple (alone). For in the Upasads there is only " one " arrow mentioned (as a unit), By means of one alone (i.e. by co-operation of all its parts) effect is produced. The worlds which are above are extended and those which were below, contracted. The priest (in

performing this ceremony) commences by that number of nipples (four) which represents the larger worlds, and proceeds to those which represent the smaller ones. (That is done) for conquering these worlds.

**(Now the Samidheni verses for the forenoon and afternoon Upasad ceremonies are mentioned).**

Upasadyaya milkushe (7, 15, 1-3) Imam me Agne samidham (2, 6, 7-3) Three Samidheni verses are to be repeated each time (the first set in the forenoon and the second in the afteruoon). They are complete in form. When the form is complete, and the verse which is recited alludes to the ceremony which is being performed, then the sacrifice is successful. For Anuvakyas and Yajyas, Jaghnivati verses (such verses, as contain derivatives of the root han to kill) ought to be used. These are: agnir vritrani jamghanat (6, 16, 34); ya agra iva saryaha (6, 16, 39); tvam somasi satpatih (1. 91, 5); gayasphano amivaha (1, 91, 12); idam Vishnur vichakrame (1, 22, 17); trini pada vichakrame (1, 22, 81). (This is the order for the forenoon ceremony, he inverts the order of these verses (so as to make the Vajya of the forenoon Anuvakya in the afternoon and vice versa). By means of these Upasads the Devas defeated (the Asuras), and breaking down their castles, entered them.

In performing the Upasad ceremony he should use verses in the same metre (for all the Ahutis), not such ones as are in different metres. When the Hotar uses different metres, then he produces the king's evil on the necks (of the sacrificers). Thus the Hotar has it in his power to produce diseases. Thence the mantras (for the chief deities at the Upasad ishti) should be always of the same metre, not of different metres.

Upavih, the son of Janasruta, gave once (when asked) about a Brahman who performed the Upasads, " whence the face of an ugly looking S'rotriya (sacrificial priest) is to be accounted for, " the answer, that the Upasad offerings of melted butter are put as a face over the throat (so as to make it unusually big).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಚತುರ್ಥಾಧ್ಯಾಯಸ್ಯ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಎಂಟನೆಯ ಖಂಡವು ಸಮಾಪ್ತವಾದುದು.



# ಅಥ ಚತುರ್ಥಾಧ್ಯಾಯೇ ನವಮಃ ಖಂಡಃ

## ನಾಲ್ಕನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು



[ ಉಪಸದಿಷ್ಟಿಯಲ್ಲಿ ಪಾಲಿಸಬೇಕಾದ ಕೆಲವು ವಿಶೇಷನಿಯಮಗಳು ]

---

**ದೇವವರ್ಮ ವಾ ಏತದ್ಯತ್ಪ್ರಯಾಜಾಶ್ಚಾನುಯಾಜಾಶ್ಚಾಪ್ರಯಾಜ-
ಮನನುಯಾಜಂ ಭವತೀಷ್ವೈ ಸಂಶಿತ್ಯಾ ಅಪ್ರತಿಶರಾಯ ।**

**ಅಥೋಪಸತ್ಸು ಪ್ರಯಾಜಾನನುಯಾಜಾಂಶ್ಚ ನಿಷೇಧತಿ—ಯೇ ಪ್ರಯಾಜಾ ಯೇ ಚಾನುಯಾಜಾಃ ಸಂತಿ ತದುಭಯಂ ದೇವಾನಾಂ ವರ್ಮ ವೈ ಕವಚಸ್ಥಾನೀಯಂ ॥ ಅತ ಏವ ಶಾಖಾಂತರೇ ಸಮಾಮನಂತಿ—'ಯತ್ಪ್ರಯಾಜಾ ಅನೂಯಾಜಾ ಇಜ್ಯಂತೇ ವರ್ಮ ವಾ ಏತ-ದ್ಯಜ್ಞಾಯ ಕ್ರಿಯತೇ ವರ್ಮ ಯಜಮಾನಾಯ ಭ್ರಾತೃವ್ಯಾಭಿಭೂತ್ಯೈ' ಇತಿ ॥ ಏವಂ ಸತ್ಯು-ಪಸದಾಖ್ಯಂ ಕರ್ಮ ಪ್ರಯಾಜಾನುಯಾಜರಹಿತಂ ಕರ್ತವ್ಯಂ ಕವಚಸ್ಯಾನುಪಯುಕ್ತತ್ವಾತ್ ॥ ಪರಕೀಯಪ್ರಹಾರಾದ್ರಕ್ಷಾರ್ಥಂ ಹಿ ಕವಚಂ ಸಂಪಾದ್ಯತೇ ॥ ನಾತ್ರ ಪರಪ್ರಹಾರಃ ಸಂಭವತಿ ॥ ಪೂರ್ವೋಕ್ತಾಯಾ ಇಷೋಸ್ತೀಕ್ಷ್ಣತ್ವೇನ ಸಕೃತ್ಪ್ರಯೋಗಾದೇವ ಮಾರಿತೇಷು ಶತ್ರುಷು ಪ್ರಹರ್ತ್ರ್ಯಣಾಮಭಾವಾತ್ ॥ ಏವಂ ಸತಿ ಯದಿ ಕವಚಂ ಸಂಪಾದ್ಯತೇ ತದಾನೀಂ ಸ್ವಕೀಯಾ-ಯಾ ಇಷೋರತೀಕ್ಷ್ಣತ್ವಂ ಶಂಕ್ಯೇತ ಸ್ವಸ್ಯ ಚ ಶತ್ರುಭಿಃ ಸಂಪಾದಿತಾ ಪ್ರತಿಹಿಂಸಾ ಶಕ್ಯೇ-ತ ತಚ್ಚಾಯುಕ್ತಂ ॥ ತಸ್ಮಾದಿಷ್ವೈ ಸಂಶಿತ್ಯೈ ಸ್ವಕೀಯಸ್ಯ ಬಾಣಸ್ಯ ಸಮ್ಯಕ್ತೀಕ್ಷ್ಣತ್ವಾರ್ಥ-ಮಪ್ರತಿಶರಾಯ ಸ್ವೇಷು ಶತ್ರುಕರ್ತೃಕಪ್ರತಿಹಿಂಸಾಯಾಃ ಶಂಕಾಪರಿಹಾರಾರ್ಥಂ ಚ ಪ್ರಯಾಜಾನುಯಾಜವರ್ಜನಂ ಯುಕ್ತಂ ॥ ತಥಾ ಚಾಽಽಶ್ವಲಾಯನ ಆಹ—'ಸ್ವಿಷ್ಟಕೃದಾದಿ ಲುಪ್ಯತೇ ಪ್ರಯಾಜಾ ಆಜ್ಯಭಾಗೌ ಚ' ಇತಿ ॥ ಸ್ವಿಷ್ಟಕೃದಾದಿಷ್ವಂತರ್ಭಾವಾದನುಯಾಜ-ಲೋಪೋ ಯುಕ್ತ ಏವ ॥**

ಇಷ್ಟಿಗಳಲ್ಲಿ ಮಾಡುವ ಪ್ರಯಾಜ ಮತ್ತು ಅನೂಯಾಜ ಹೋಮಗಳು ದೇವತೆಗಳಿಗೆ ಕವಚದಂತಿರುವವು (Armour) ತೈತ್ತಿರೀಯಸಂಹಿತೆಯಲ್ಲಿ—**ಯತ್ಪ್ರಯಾಜಾನೂಯಾಜಾ ಇಜ್ಯಂತೇ ವರ್ಮೈವ ತದ್ಯಜ್ಞಾಯ ಕ್ರಿಯತೇ, ವರ್ಮ ಯಜಮಾನಾಯ ಭ್ರಾತೃವ್ಯಾಭಿಭೂತ್ಯೈ** (ತೈ. ಸಂ. ೨-೬-೧-೫) ಎಂದು ಹೇಳಿರುವುದು. ದೇವತೆಗಳು ಮಾಡುವ ಯುದ್ಧದಲ್ಲಿ ಕವಚಗಳ ಅವಶ್ಯಕತೆ ಇಲ್ಲದ್ದರಿಂದ ಈ ಉಪಸತ್ಕರ್ಮದಲ್ಲಿ ಕವಚಸ್ಥಾನೀಯವಾದ ಪ್ರಯಾಜ ಮತ್ತು ಅನುಯಾಜ ಹೋಮಗಳನ್ನು ಮಾಡಬೇಕಾಗಿಲ್ಲ. ಯುದ್ಧದಲ್ಲಿ ಕವಚಗಳ ಪಾತ್ರವೇನೆಂದರೆ, ಶತ್ರುಗಳ ಆಯುಧಗಳಿಂದ ತಮ್ಮ ಶರೀರಗಳಿಗೆ ಆಘಾತವಾಗದಂತೆ ರಕ್ಷಿಸುವುದೇ ಆಗಿದೆ. ಶತ್ರುಗಳನ್ನು ಕೊಲ್ಲುವುದಕ್ಕೆ ಸಾಧನವಾದ ಆಯುಧಗಳಾಗಿರುವುದಿಲ್ಲ. ಹಿಂದೆ ದೇವತೆಗಳು ತ್ರಿಪುರಗಳನ್ನು ಧ್ವಂಸಮಾಡಿದಾಗ ತೀಕ್ಷ್ಣವಾದ ಬಾಣವನ್ನು ಉಪಯೋಗಿಸಿ

ತ್ರಿಪುರಗಳ ನಾಶಮಾಡಿದರು. ಅಲ್ಲಿದ್ದ ಶತ್ರುಗಳು ಎಂದರೆ ಅಸುರರು ಅಲ್ಲಿಂದ ಓಡಿಹೋದರು. ಅನಂತರ ದೇವತೆಗಳನ್ನು ಎದುರಿಸುವ ಶತ್ರುಗಳೇಇಲ್ಲದ್ದರಿಂದ, ಶತ್ರುಪ್ರಹಾರಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಕವಚಗಳ ಅವಶ್ಯಕತೆಯೇ ಇಲ್ಲವಾಯಿತು. ತಮ್ಮ ತೀಕ್ಷ್ಣವಾದ ಸ್ವಕೀಯ ಬಾಣಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಎಂದರೆ ಅದು ಅರ್ಥವಿಲ್ಲದ ಮಾತಾಗುವುದು. ಆದ್ದರಿಂದ ಹೇಗೆ ನೋಡಿದರೂ ಕವಚಗಳ ಅವಶ್ಯಕತೆಯೇ ಇರುವುದಿಲ್ಲ. ಆದ್ದರಿಂದಲೇ ಈ ಉಪಸದ್ಧೋಮದಲ್ಲಿ ಕವಚ ಸ್ಥಾನೀಯಗಳಾದ ಪ್ರಯಾಜ ಮತ್ತು ಅನುಯಾಜ ಹೋಮಗಳನ್ನು ಮಾಡಬೇಕಾಗಿಲ್ಲ, ಆಶ್ವಲಾಯನರು ಈ ವಿಷಯದಲ್ಲಿ— ಸ್ವಿಷ್ಟಕೃದಾದಿ ಲುಪ್ಯತೇ ಪ್ರಯಾಜಾ ಆಜ್ಯಭಾಗೌ ಚ (ಆಶ್ವ. ಶ್ರೌ. ಸೂ. ೪-೮-೮) ಎಂದು ಹೇಳಿರುವರು. ಈ ಸೂತ್ರದಲ್ಲಿ ಪ್ರಯಾಜಾ ಎಂದು ಮಾತ್ರ ಹೇಳಿ ಅನುಯಾಜಾ ಎಂದು ಹೇಳಿಲ್ಲವಾದ್ದರಿಂದ ಅನುಯಾಜಾ ಹೋಮಗಳನ್ನು ಮಾಡಬಹುದೇ ಎಂದರೆ, ಹಾಗಲ್ಲ. ಸ್ವಿಷ್ಟಕೃದ್ಧೋಮಗಳನ್ನು ಮಾಡಕೂಡದೆಂದು ಅಲ್ಲಿಯೇ ಹೇಳಿರುವುದರಿಂದ ಸ್ವಿಷ್ಟಕೃದ್ಧೋಮದ ಅಂಗ ಭೂತವಾದ ಅನುಯಾಜಾಹೋಮಗಳನ್ನು ಮಾಡಕೂಡದೆಂದೇ ಹೇಳಿದಂತಾಯಿತು.

## ಸಕೃದತಿಕ್ರಮ್ಯಾಶ್ರಾವಯತಿ ಯಜ್ಞಸ್ಯಾಭಿಕ್ರಾಂತ್ಯಾ ಅನಪಕ್ರಮಾಯ ।

**ಅತ್ರಾಗ್ನೀಷೋಮವಿಷ್ಣುರೂಪಾಣಾಂ ದೇವಾನಾಂ ಬಹುತ್ವೇನಾಶ್ರವಣಾರ್ಥಮುತ್ತರ-ಸ್ಮಾದ್ವೇಶಾದಾಹವನೀಯಸ್ಯ ದಕ್ಷಿಣದೇಶಂ ಪ್ರತ್ಯಸದತಿಕ್ರಮಣಂ ಪ್ರಾಪ್ತಂ ತದ್ವಾರಯಿತು-ಮಾಹ—ವೇದ್ಯಾಹವನೀಯಯೋರ್ಮಧ್ಯೇ ಸಕೃದೇವಾತಿಕ್ರಮ್ಯ ದಕ್ಷಿಣದಿಶ್ಯವಸ್ಥಿತೋ ಬಹು-ಷು ಯಾಗೇಷು ಪ್ರತ್ಯೇಕಮಾಶ್ರಾವಣಂ ಕುರ್ಯಾತ್ ॥ ಏವಂ ಸತ್ಯುಪಸದ್ಯಜ್ಞಸ್ಯ ಸರ್ವತ ಆಕ್ರಮಣಂ ಭವತಿ ಸ್ಥೈರ್ಯಂ ಭವತಿ ॥ ಅನ್ಯಥಾ ಪುನಃ ಪುನರುತ್ತರಸ್ಯಾಂ ದಿಶಿ ಗಮನೇ ಲಬ್ಧಾವಸರಃ ಸನ್ಯಜ್ಞೋಽಪ್ಯಪಕ್ರಾಮೇತ್ ॥ ತಸ್ಮಾತ್ಸಕೃದೇವಾತಿಕ್ರಮಣಂ ಯುಕ್ತಂ ॥ ತದಾ-ಹಾಽಽಪಸ್ತಂಬಃ—'ಧ್ರೌವಾದಷ್ಟೌ ಜುಹ್ವಾಂ ಗೃಹ್ಣಾತಿ ಚತುರ ಉಪಭೃತಿ ಘೃತವತಿ ಶಬ್ದೇ ಜುಹೂಪ್ರಭೃತಾವಾದಾಯ ದಕ್ಷಿಣಾ ಸಕೃದತಿಕ್ರಾಂತ ಉಪಾಂಶುಯಾಜವತ್ಪ್ರಚರತಿ' ಇತಿ ॥**

ಉತ್ತರಭಾಗದಲ್ಲಿರುವ ವೇದಿಯಲ್ಲಿ ಕುಳಿತಿರುವ ಹೋತೃವು ದೇವತೆಯನ್ನುದ್ದೇಶಿಸಿ ಹೋಮಮಾಡುವಾಗ ಎಂದರೆ ಯಾಜ್ಯಾನುವಾಕ್ಯಾಮಂತ್ರಗಳನ್ನು ಪಠಿಸುವಾಗ ದಕ್ಷಿಣಭಾಗದಲ್ಲಿರುವ ಆಹವನೀಯಾಗ್ನಿಯ ಸಮೀಪಕ್ಕೆ ಬರಬೇಕಾಗುವುದು. ಇದು ಎಲ್ಲಾ ಇಷ್ಟಿಗಳಲ್ಲಿಯೂ ನಡೆಯುವ ಕ್ರಮವು. ಪ್ರತಿದೇವತೆಯ ಹೋಮದಲ್ಲಿಯೂ ಈರೀತಿ ಮಾಡಬೇಕಾಗುವುದು. ಇಲ್ಲಿ ಎಂದರೆ ಉಪಸದ್ಧೋಮದಲ್ಲಿ ಅಗ್ನಿ, ಸೋಮ, ವಿಷ್ಣು ಎಂಬ ಮೂರು ಪ್ರಧಾನದೇವತೆಗಳು ಇರುವುದರಿಂದ ಮೂರಾವರ್ತಿ ವೇದ್ಯಾಹವನೀಯಗಳ ಮಧ್ಯೆ ಓಡಾಡಬೇಕಾಗುವುದು. ಆದರೆ ಹಾಗೆ ಮಾಡಕೂಡದು ಎಂದು ಇಲ್ಲಿ ಹೇಳಲಾಗಿದೆ. ಏಕೆಂದರೆ ತ್ರಿಪುರಾಸುರರನ್ನು ಒಂದಾವರ್ತಿ ಬಾಣಪ್ರಯೋಗ ಮಾಡಿದ್ದರಿಂದಲೇ ಶತ್ರುಗಳು ಪರಾಜಿತರಾಗಿ ಓಡಿಹೋದರು. ಪುನಃ ಪುನಃ ಅವರನ್ನು (ಶತ್ರುಗಳನ್ನು) ಪ್ರಹರಿಸುವ ಅವಶ್ಯಕತೆಯುಂಟಾಗಲಿಲ್ಲ. ಆದ್ದರಿಂದ ಅದರ ಪ್ರತೀಕವಾದ ಉಪಸದ್ಧೋಮದಲ್ಲಿ ಪದೇಪದೇ ಅತಿಕ್ರಮಣ ಮಾಡಿ ವೇದ್ಯಾಹವನೀಯಗಳ ಮಧ್ಯದಲ್ಲಿ ಪದೇಪದೇ ಓಡಾಡುವ ಅವಶ್ಯಕತೆ ಇರುವುದಿಲ್ಲ. ಒಂದಾವರ್ತಿ ಮಾಡುವ ಅತಿಕ್ರಮಣದಿಂದಲೇ ಯಜ್ಞವು ನೆರವೇರುವುದು. ಇತರ ಇಷ್ಟಿಗಳಲ್ಲಿರುವಂತೆ ಪದೇಪದೇ ಅತಿಕ್ರಮಣ ಮಾಡಿದರ ಯಜ್ಞಕ್ಕೆ ವಿಘಾತವನ್ನುಂಟುಮಾಡಿದಂತಾಗುವುದು. ಈ ವಿಷಯದಲ್ಲಿ ಆಪಸ್ತಂಬ ಶ್ರೌತಸೂತ್ರದಲ್ಲಿ— **ಧ್ರೌವಾದಷ್ಟೌ ಜುಹ್ವಾಂ ಗೃಹ್ಣಾತಿ, ಚತುರುಪಭೃತಿ । ಘೃತವತಿ ಶಬ್ದೇ ಜುಹೂಪಭೃತಾವಾದಾಯ ದಕ್ಷಿಣಾ ಸಕೃದತಿಕ್ರಾಂತ ಉಪಾಂಶುಯಾಜವತ್ಪ್ರಚರತಿ** (ಆಪ. ಶ್ರೌ. ಸೂ. ೧೧-೩-೯,೧೦) ಎಂದು ಹೇಳಿದೆ.

**ತದಾಹುಃ ಕ್ರೂರಮಿವ ವಾ ಏತತ್ಸೋಮಸ್ಯ ರಾಜ್ಞೋಽನ್ತೇ ಚರಂತಿ ಯದಸ್ಯ ಘೃತೇನಾಂತೇ ಚರಂತಿ ಘೃತೇನ ಹಿ ವಜ್ರೇಣೇಂದ್ರೋ ವೃತ್ರಮಹನ್ ।**

**ಅಥ ಸಮಂತ್ರಕಂ ಸೋಮಾಪ್ಯಾಯನಂ ವಿಧಾತುಂ ಪ್ರಸ್ತೌತಿ—ತತ್ತತ್ರ ಬ್ರಹ್ಮವಾದಿನ ಏವಮಾಹುಃ—ಸೋಮಸ್ಯ ರಾಜ್ಞೋಽಂತೇ ಸಮೀಪೇ ಘೃತೇನ ದ್ರವ್ಯೇಣ ತಾನೂನಪ್ತ್ರಸಂಜ್ಞಕಂ ಕರ್ಮ ಚರಂತ್ಯನುತಿಷ್ಠಂತೀತಿ ಯದಸ್ತಿ ತದೇತತ್ಸೋಮಸ್ಯ ರಾಜ್ಞಃ ಸಮೀಪೇ ಕ್ರೂರಮಿವ ವೈ, ಉಗ್ರಮೇವ ಕರ್ಮ ಚರಂತಿ ॥ ಹಿ ಯಸ್ಮಾತ್ಕಾರಣಾದ್ಘೃತರೂಪೇಣ ವಜ್ರೇಣೇಂದ್ರೋ ವೃತ್ರಂ ಹತವಾನ್, ತಸ್ಮಾದ್ಘೃತಕರ್ಮ ಕ್ರೂರಂ ॥ ತಚ್ಛಾಖಾಂತರೇ ವಿಸ್ಪಷ್ಟಮಾಮ್ನಾತಂ—'ಘೃತಂ ಖಲು ವೈ ದೇವಾ ವಜ್ರಂ ಕೃತ್ವಾ ಸೋಮಮಘ್ನನ್ನಂತಿಕಮಿವ ಖಲು ವಾ ಅಸ್ಯೈತಚ್ಚರಂತಿ ಯತ್ತಾನೂನಪ್ತ್ರೇಣ ಚರಂತಿ' ಇತಿ ॥**

ಬ್ರಹ್ಮವಾದಿಗಳು ಎಂದರೆ ಯಜ್ಞಾನುಷ್ಠಾನಕುಶಲರು, ಈರೀತಿ ಹೇಳುವರು—ಹಿಂದೆ ತಾನೂನಪ್ತ್ರವೆಂಬ (ಪ್ರಮಾಣ ವಚನಸ್ವೀಕಾರವೆಂಬ) ಕರ್ಮವನ್ನು ಮಾಡುವಾಗ ದೇವತೆಗಳು (ಅಥವಾ ಋತ್ವಿಕ್ಕುಗಳು) ಸೋಮಲತೆಗಳ ಸಮೀಪದಲ್ಲಿ ಘೃತ ಪಾತ್ರೆಯನ್ನಿಟ್ಟು ಅದನ್ನು ಸ್ಪರ್ಶಮಾಡಿದರೆಂದು ಹೇಳಿದೆಯಷ್ಟೆ. ಸೋಮಲತೆಗಳ ಸಮೀಪದಲ್ಲಿ (ಅಥವಾ ಅವರಮೇಲೆ) ಘೃತ ಪಾತ್ರೆಯನ್ನಿಡುವುದು ಮೊದಲಾದ ಕರ್ಮವು ಸೋಮದೇವತೆಯ ವಿಷಯದಲ್ಲಿ ಮಾಡುವ ಅಪಚಾರವು ಎಂದರೆ ಕ್ರೂರಕರ್ಮವು ಎಂದೆಣಿಸಲ್ಪಡುವುದು. ಏಕೆಂದರೆ ಘೃತವು ಕ್ರೂರವಸ್ತುವು. ಹಿಂದೆ ಇಂದ್ರನು ಘೃತರೂಪವಾದ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹಾರಮಾಡಿದನು. ಆದ್ದರಿಂದ ಕ್ರೂರವಸ್ತುವಾದ ಘೃತದಿಂದ ಪೂರಿತವಾದ ಪಾತ್ರೆಯನ್ನು ಸೋಮದೇವತೆಯ ಸಮೀಪದಲ್ಲಿಡುವುದೂ ಸಹ ಕ್ರೂರಕರ್ಮವಾಯಿತು. ಈ ವಿಷಯದಲ್ಲಿ ಶಾಖಾಂತರವಲ್ಲಿ ಈರೀತಿ ಹೇಳಿದೆ—**ಘೃತಂ ಖಲು ವೈ ದೇವಾ ವಜ್ರಂ ಕೃತ್ವಾ ಸೋಮಮಘ್ನನ್ನಂತಿಕಮಿವ ಖಲು ವಾ ಅಸ್ಯೈತಚ್ಚರಂತಿ ಯತ್ತಾನೂನಪ್ತ್ರೇಣ ಚರಂತಿ** (ತೈ. ಸಂ. ೬-೨-೨-೪) ದೇವತೆಗಳು ತಾನೂನಪ್ತ್ರವೆಂಬ ಪ್ರಮಾಣವಚನಸ್ವೀಕಾರ ಕರ್ಮವನ್ನು ನೆರವೇರಿಸಿದಾಗ ಘೃತವನ್ನು ಸ್ಪರ್ಶಿಸಿ ಕರ್ಮವನ್ನು ನೆರವೇರಿಸಿದರು. ಘೃತವು ಕ್ರೂರವಾದ ವಜ್ರಾಯುಧಕ್ಕೆ ಸಮಾನವು. ಇಂತಹ ಘೃತವನ್ನು ಸೋಮದೇವತೆಯ ಸಮೀಪದಲ್ಲಿಟ್ಟು ಪ್ರಮಾಣವಚನವನ್ನು ಸ್ವೀಕರಿಸಿದ್ದರಿಂದ ಸೋಮದೇವತೆಯನ್ನು ವಜ್ರಾಯುಧದಿಂದ ಪ್ರಹರಿಸಿದಂತೆ ಆಯಿತು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

**ತದ್ಯದಂಶುರಂಶುಷ್ಟೇ ದೇವ ಸೋಮಾಪ್ಯಾಯತಾಮಿಂದ್ರಾಯೈಕಧನವಿದ ಆ ತುಭ್ಯಮಿಂದ್ರಃ ಪ್ಯಾಯತಾಮಾ ತ್ವಮಿಂದ್ರಾಯ ಪ್ಯಾಯಸ್ವಾಪ್ಯಾಯಯಾಸ್ಮಾನ್ಸಖೀನ್ । ಸನ್ಯಾ ಮೇಧಯಾ ಸ್ವಸ್ತಿ ತೇ ದೇವ ಸೋಮ ಸುತ್ಯಾಮುದೃಚಮಶೀಯೇತಿ ರಾಜಾನಮಾಪ್ಯಾಯಯಂತಿ ಯದೇವಾಸ್ಯ ತತ್ಕ್ರೂರಮಿವಾಂತೇ ಚರಂತಿ ತದೇವಾಸ್ಯೈತೇನಾಪ್ಯಾಯಯಂತ್ಯಥೋ ಏನಂ ವರ್ಧಯಂತ್ಯೇವ ।**

ತಸ್ಯ ಕ್ರೂರಕರ್ಮಣಃ ಪರಿಹಾರಾಯ ವಿಧತ್ತೇ— ಯದ್ಯಸ್ಮಾತ್ಕಾರಣಾತ್ಸೋಮಸ್ಯ ರಾಜ್ಞಃ ಸಮೀಪೇ ಘೃತಸಾಧನಕಂ ತಾನೂನಪ್ತ್ರಂ ಕರ್ಮ ಕ್ರೂರಂ ತತ್ತಸ್ಮಾತ್ಕಾರಣಾತ್ಕ್ರೌರ್ಯ ಪರಿಹಾರಾಯಾಂಶುರಂಶುರಿತಿ ಮಂತ್ರೇಣ ಸೋಮಂ ರಾಜಾನಮಾಪ್ಯಾಯಯೇಯುಃ। ಜಲೇನ ಪ್ರೋಕ್ಷಣಮಾಪ್ಯಾಯನಂ॥ ಏವಂ ಸತಿ ಯತ್ಕ್ರೂರಮಾಚರಿತಂ ತತ್ಸರ್ವಮೇತೇನ ಪ್ರೋಕ್ಷಣೇ-ನಾಽಽಪ್ಯಾಯಯಂತಿ ಶಮಯಂತಿ॥ ಅಪಿ ಚೈನಂ ಸೋಮಂ ವರ್ಧಯಂತ್ಯೇವ॥ ಮಂತ್ರಸ್ಯಾಯ-ಮರ್ಥಃ। ಹೇ ಸೋಮ ದೇವ, ಇಂದ್ರಾರ್ಥಂ ತೇ ತ್ವದೀಯೋಽಂಶುಸ್ತ್ವದವಯವ ಆಪ್ಯಾಯತಾಂ ವರ್ಧತಾಂ ॥ ಕೀದೃಶಾಯೇಂದ್ರಾಯ ॥ ಏಕಧನವಿದೇ । ಸೋಮರೂಪಂ ಯದೇಕಂ ಧನಂ ತದ್ವೇತ್ತಿ ವಿಂದತೇ ವೇತ್ಯೇಕಧನವಿತ್ ॥ ತಸ್ಮಾ ಏಕಧನವಿದೇ। ತುಭ್ಯಂ ತದರ್ಥಮಿಂದ್ರೋ ವರ್ಧತಾಮಿಂದ್ರಾರ್ಥಂ ಚ ತ್ವಂ ವರ್ಧಸ್ವ ॥ ಸಖೀನಸ್ಮಾನ್ಸನ್ಯಾಕ್ಷೇಪೇಣ ಮೇಧಯಾ ಯಜ್ಞ-ಪ್ರತಿಪಾದಕ ಗ್ರಂಥಧಾರಣಾಶಕ್ತ್ಯಾ ಚಾಪ್ಯಾಯಯ ವರ್ಧಯ ॥ ಹೇ ಸೋಮ ದೇವ ತೇ ಸ್ವಸ್ತಿ ಕ್ಷೇಮೋಽಸ್ತು ॥ ಯಸ್ಯಾಂ ಕ್ರಿಯಾಯಾಂ ಸೋಮಃ ಸೂಯತೇ ಅಭಿಷೂಯತೇ ಸಾ ಸುತ್ಯಾ ॥ ಉದುತ್ತಮಾ ಸಮಾಪ್ತಿವಿಷಯರ್ಗ್ಯಸ್ಯಾಂ ಸುತ್ಯಾಯಾಂ ಸೇಯಮುದೃಕ್ತಾಂ ಸುತ್ಯಾಮುದೃಚಮಶೀಯ ಪ್ರಾಪ್ನುಯಾಂ ವಿಘ್ನಮಂತರೇಣ ಸಮಾಪ್ತಿಪರ್ಯಂತಮನುತಿ-ಷ್ಠೇಯಮಿತಿ ॥ ಶ್ರೌತ ಇತಿ ಶಬ್ದೋ ಮಂತ್ರಸಮಾಪ್ತ್ಯರ್ಥಃ ॥

ಮೇಲೆ ಹೇಳಿದ ಕ್ರೂರಕರ್ಮಕ್ಕೆ ಪರಿಹಾರವನ್ನು ಈಗ ಹೇಳುವರು. ಲೋಕದಲ್ಲಿ ರಾಜರೇ ಮೊದಲಾದ ಗಣ್ಯ ವ್ಯಕ್ತಿಗಳ ವಿಷಯದಲ್ಲಿ ಅಪಚಾರವೆಸಗಿದಾಗ ಅವರ ಕ್ಷಮೆಯನ್ನು ಬೇಡಿ ಸಮಾಧಾನಪಡಿಸುವುದು ರೂಢಿಯಷ್ಟೆ. ಅದರಂತೆ ಸೋಮರಾಜನ (ಸೋಮದೇವತೆಯನ್ನು ರಾಜನೆಂಬ ಗೌರವಶಬ್ದದಿಂದ ಕರೆಯುವುದು ರೂಢಿಯು) ವಿಷಯದಲ್ಲಿ ಎಂದರೆ ಸಮೀಪದಲ್ಲಿ ಘೃತಪಾತ್ರೆಯನ್ನಿಟ್ಟು ತಾನೂನಪ್ತ್ರವೆಂಬ ಕರ್ಮವನ್ನು ಮಾಡಿರುವುದು ಕ್ರೂರವಾದ ಕರ್ಮವಾಯಿತು. ಈ ಕ್ರೂರಕರ್ಮವಾದ ಅಪಚಾರದ ಪರಿಹಾರಾರ್ಥವಾಗಿ ಸೋಮರಾಜನನ್ನು ಸಮಾಧಾನಪಡಿಸುವುದು ಯುಕ್ತವಾಗಿರುವುದು. ಜಲದಿಂದ ಸೋಮಲತೆಗಳನ್ನು ಪ್ರೋಕ್ಷಿಸುವುದೇ ಈ ಸಮಾಧಾನಪಡಿಸುವ ಕರ್ಮವು. ಇದಕ್ಕೆ ಆಪ್ಯಾಯನವೆಂದು ಹೆಸರು. ಈ ಆಪ್ಯಾಯನವೆಂಬ ಜಲಪ್ರೋಕ್ಷಣ ಕರ್ಮದಿಂದ ಸೋಮರಾಜನ ವಿಷಯದಲ್ಲಿ ಆಚರಿಸಲ್ಪಟ್ಟ ಕ್ರೂರಕರ್ಮವನ್ನು ಶಮನ ಮಾಡುವರು ಮತ್ತು ಸೋಮನು ಹರ್ಷದಿಂದ ವೃದ್ಧಿಯನ್ನೈದುವಂತೆ ಮಾಡುವರು. ಅದಕ್ಕಾಗಿ,

ಅಗ್‌ಂಶುರಗ್‌ಂಶುಸ್ತೇ ದೇವ ಸೋಮಾಪ್ಯಾಯತಾಮಿಂದ್ರಾಯೈಕಧನವಿದ ಆ ತುಭ್ಯ-ಮಿಂದ್ರಃ ಪ್ಯಾಯತಾಮಾ ತ್ವಮಿಂದ್ರಾಯ ಪ್ಯಾಯಸ್ವಾಪ್ಯಾಯಯ ಸಖೀನ್ತ್ಸನ್ಯಾ ಮೇಧಯಾ ಸ್ವಸ್ತಿ ತೇ ದೇವ ಸೋಮ ಸುತ್ಯಾ (ಮುದೃಚ)ಮಶೀಯ। (ತೈ. ಸಂ. ೧-೨-೧೧-೧)

ಎಂಬ ಮಂತ್ರವನ್ನು ಪಠಿಸಿ ಜಲಪ್ರೋಕ್ಷಣೆಯನ್ನು ಮಾಡುವರು. ಈ ಮಂತ್ರದ ಬ್ರಾಹ್ಮಣವು ತೈತ್ತಿರೀಯಸಂಹಿತೆ ಯಲ್ಲಿಯೇ ಈರೀತಿ ಹೇಳಿದೆ—

ಅಗ್‌ಂಶುರಗ್‌ಂಶುಸ್ತೇ ದೇವ ಸೋಮಾಪ್ಯಾಯತಾಮಿತ್ಯಾಹ ಯದೇವಾಸ್ಯಾಪುವಾ-ಯತೇ ಯನ್ಮೀಯತೇ ತದೇವಾಸ್ಯೈತೇನಾಪ್ಯಾಯಯತ್ಯಾ ತುಭ್ಯಮಿಂದ್ರಃ ಪ್ಯಾಯತಾಮಾ ತ್ವಮಿಂದ್ರಾಯ ಪ್ಯಾಯಸ್ವೇತ್ಯಾಹೋಭಾವೇವೇಂದ್ರಂ ಚ ಸೋಮಂ ಚಾಪ್ಯಾಯಯತ್ಯಾಪ್ಯಾ-

**ಯಸ್ತ್ವ ಸಖೀನ್ತ್ಸನ್ಯಾ ಮೇಥಯೇತ್ಯಾಹರ್ತ್ವಿಜೋ ವಾ ಅಸ್ಯ ಸಖಾಯಸ್ತಾನೇವಾಪ್ಯಾಯಯತಿ ಸ್ವಸ್ತಿ ತೇ ದೇವ ಸೋಮ ಸುತ್ಯಾಮುಶೀಯೇತ್ಯಾಹಾಶಿಷಮೇವೈತಾಮಾಶಾಸ್ತೇ ।**

(ತೈ. ಸಂ. ೬-೨-೨-೪,೫)

ಈ ಮಂತ್ರದ ಅರ್ಥವು ಈರೀತಿ ಇರುವುದು—ಎಲೈ ಸೋಮದೇವನೇ, ನಿನ್ನ ಅಂಶು (ಸೋಮರಸ) ರೂಪವಾದ ಅವಯವವು ಸಮಾಧಾನಗೊಂಡು ವೃದ್ಧಿಯನ್ನೈದಲಿ. ಸೋಮರಸವೆಂಬ ಧನದ ಪ್ರಭಾವವನ್ನು ಚೆನ್ನಾಗಿ ಅರಿತಿರುವ (ಸೋಮರಸಪಾನದಿಂದ ತರ್ಷಿತನಾದ) ಇಂದ್ರನ ಪ್ರೀತ್ಯರ್ಥವಾಗಿ ನಿನ್ನ ಅವಯವವು ವೃದ್ಧಿಯನ್ನೈದಲಿ. ಎಲೈ ಸೋಮ ದೇವನೇ, ಇಂದ್ರನಿಗಾಗಿ ನೀನೂ ನಿನಗಾಗಿ ಇಂದ್ರನೂ ಇಬ್ಬರೂ ವೃದ್ಧಿಯನ್ನೈದಲಿ ಎಂದರೆ ಸಮಾಧಾನದಿಂದ ಹರ್ಷಯುಕ್ತ ರಾಗಲಿ. ಇದಲ್ಲದೆ ಎಲೈ ಸೋಮದೇವನೇ ಋತ್ವಿಕ್ಕುಗಳಾದ ನಮ್ಮನ್ನೂ ಕ್ಷೇಮದಿಂದಲೂ ಯಜ್ಞಮಾಡುವ ಶಕ್ತಿಸಾಮರ್ಥ್ಯ ಗಳನ್ನು ಕೊಡುವುದರಿಂದಲೂ ತೃಪ್ತಿಗೊಳಿಸು. ಎಲೈ ಸೋಮನೆ, ನಿನಗೆ ಈ ಅಭಿಷವಣಕಾಲದಲ್ಲಿ (ಸೋಮರಸವನ್ನು ಹಿಂಡುವ ಕಾಲದಲ್ಲಿ) ಕ್ಷೇಮವುಂಟಾಗಲಿ ಎಂದು ಮಂತ್ರದ ಮುಖ್ಯಾಭಿಪ್ರಾಯವು. ಇಲ್ಲಿ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವ ಕರ್ಮಕ್ಕೆ ಅಭಿಷವ ಅಥವಾ ಸುತ್ಯಾ ಎಂದು ಹೆಸರು. ಉದೃಚವೆಂದರೆ ಈ ಸುತ್ಯಾಕರ್ಮದಲ್ಲಿ ಪಠಿಸುವ ಕೊನೆಯ ಋಕ್ಕು ಅಥವಾ ಮಂತ್ರವು. ಇಂತಹ ಅರ್ಥವಿರುವ ಈ ಕೊನೆಯ ಮಂತ್ರವನ್ನು ಪಠಿಸಿ ಈ ಕರ್ಮವು ವಿಘ್ನರಹಿತವಾಗಿ ಸಮಾಪ್ತಿಯನ್ನೈದ ಲೆಂದು ಇಲ್ಲಿ ಪ್ರಾರ್ಥಿಸಲಾಗಿದೆ.

ದ್ಯಾವಾಪೃಥಿವ್ಯೋರ್ವಾ ಏಷ ಗರ್ಭೋ ಯತ್ಸೋಮೋ ರಾಜಾ ತದ್ಯ-ದೇಷ್ಟಾ ರಾಯ ಏಷ್ಟಾ ವಾಮಾನಿ ಪ್ರೇಷೇ ಭಗಾಯ । ಋತ-ಮೃತವಾದಿಭ್ಯೋ ನಮೋ ದಿವೇ ನಮಃ ಪೃಥಿವ್ಯಾ ಇತಿ ಪ್ರಸ್ತರೇ ನಿಹ್ನ (ಹ್ನು) ವತೇ ದ್ಯಾವಾಪೃಥಿವೀಭ್ಯಾಮೇವ ತಂ ನಮ-ಸ್ಕುರ್ವಂತ್ಯಥೋ ಏನೇ ವರ್ಧಯಂತ್ಯೇವ ವರ್ಧಯಂತ್ಯೇವ ॥

ಸಮಂತ್ರಕಂ ನಿಹ್ನವಂ ವಿಧತ್ತೇ—ಯಃ ಸೋಮೋ ರಾಜಾ, ಏಷ ದ್ಯಾವಾಪೃಥಿವ್ಯೋ-ರೇವ ಗರ್ಭಃ ॥ ಯದ್ಯಸ್ಮಾದೇವಂ ತತ್ತಸ್ಮಾದ್ಗರ್ಭರಕ್ಷಾರ್ಥಂ ಪ್ರಸ್ತರ ಏತನ್ನಾಮಕೇ ದರ್ಭ-ಮುಷ್ಟೌ ನಿಹ್ನ(ಹ್ನು)ವತೇ ಸಂಪ್ರಣಯಂತಿ ನಮಸ್ಕಾರೋಪಚಾರಂ ಕುರ್ಯುರಿತ್ಯರ್ಥಃ ॥ ತದೇತದ್ದ್ಯಾವಾಪೃಥಿವೀಭ್ಯಾಮಿತ್ಯಾದಿನಾ ಸ್ಪಷ್ಟೀಕ್ರಿಯತೇ ॥ ಅಪಿ ಚೈನೇ ದ್ಯಾವಾಪೃಥಿವ್ಯೌ ವರ್ಧಯಂತ್ಯೇವ ಉತ್ಸಾಹಯುಕ್ತೇ ಕುರ್ವಂತ್ಯೇವ ॥ ನಿಹ್ನವಪ್ರಕಾರ ಆಪಸ್ತಂಬೇನ ದರ್ಶಿತಃ– 'ಅಥ ನಿಹ್ನವತೇ ದಕ್ಷಿಣೇ ವೇದ್ಯಂತೇ ಪ್ರಸ್ತರಂ ನಿಧಾಯ ದಕ್ಷಿಣಾನ್ಪಾಣೀನುತ್ತಾನಾನ್ಕೃತ್ವಾ ಸವ್ಯಾನ್ನೀಚ ಏಷ್ಟಾ ರಾಯಃ' ಇತಿ ॥ ಅಸ್ಮಾದಭ್ಯುದಯಮಿಚ್ಛತೀತ್ಯೇಷ್ಟಾ ಪ್ರಸ್ತರಃ ಸೋ-ಮೋ ವಾ ॥ ದೇಹೀತಿ ಪದಮುಧ್ಯಾಹರ್ತವ್ಯಂ ॥ ಹೇ ಏಷ್ಟಃ ಇಷೇ: ಅನ್ನಾರ್ಥಂ ಭಗಾಯ ಸೌಭಾಗ್ಯಾರ್ಥಂ ಚ ರಾಯೋ ಧನಾನಿ ಪ್ರದೇಹಿ ॥ ಯದ್ವಾ ॥ ಏಷ್ಟೇತಿ ಪ್ರಥಮಾಂತಂ ತದಾನೀಂ ಪ್ರದದಾತ್ವಿತ್ಯಧ್ಯಾಹಾರಃ ॥ ಕಿಂಚ । ಏಷ್ಟಾ ವಾಮಾನ್ಯನ್ಯಾನಪಿ ಕಾಮಾನ್ಪ್ರದದಾತು ಋತ-ವಾದಿಭ್ಯಃ ಸತ್ಯವಾದಿಭ್ಯೋ ದೇವೇಭ್ಯ ಋತ್ವಿಗ್ಯಜಮಾನೇಭ್ಯೋ ವಾ ॥ ಋತಂ ಸತ್ಯಂ ವದಾ-ಮೀತಿ ಶೇಷಃ ॥ ತದೇವ ಸತ್ಯವಚನಂ ಸ್ಪಷ್ಟಮುಚ್ಯತೇ ॥ ದಿವೇ ದ್ಯುಲೋಕದೇವತಾಯೈ

ನಮೋಽಸ್ತು ॥ ಪೃಥಿವ್ಯೈ ಭೂಲೋಕದೇವತಾಯೈ ನಮೋಽಸ್ತ್ವಿತಿ ॥ ಶ್ರೌತ ಇತಿಶಬ್ದೋ ಮಂತ್ರಸಮಾಪ್ತ್ಯರ್ಥಃ ॥ ವರ್ಧಯಂತ್ಯೇವೇತ್ಯಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಅತ್ರ ಮೀಮಾಂಸಾ—

" ಉಪಸತ್ಸು ನಿಷಿದ್ಧೇಭ್ಯಃ ಶಿಷ್ಟಂ ಸರ್ವಂ ಸಮಾಚರೇತ್ ।
ಯಾವದುಕ್ತಮುತಾಽಽದ್ಯೋಽಸ್ತು ಚೋದಕಸ್ಯಾನಿವಾರಣಾತ್ ॥
ಸ್ರೌವಾಘಾರೇ ಪುನಃ ಶ್ರುತ್ಯಾ ಶಿಷ್ಟಸ್ಯ ಪರಿಸಂಖ್ಯಯಾ ।
ಅಪೂರ್ವಾರ್ಥತ್ವತೋ ನಾಂತ್ಯೋಽನುವಾದಃ ಪ್ರತಿಷೇಧಗೀಃ " ॥

ಜ್ಯೋತಿಷ್ಟೋಮೇ ವಿಹಿತಾಸೂಪಸತ್ಸು ಪಠ್ಯತೇ—' ಅಪ್ರಯಾಜಾಸ್ತಾ ಅನನುಯಾಜಾಃ ' ಇತಿ ॥ ತತ್ರ ನಿಷಿದ್ಧಾನ್ಪ್ರಯಾಜಾನುಯಾಜಾನ್ವರ್ಜಯಿತ್ವಾ ಅವಶಿಷ್ಟಂ ಚೋದಕಪ್ರಾಪ್ತ-ಮಂಗಜಾತಂ ಸರ್ವಮಾಚರಣೀಯಮಿತಿಪ್ರಾಪ್ತೇ ಬ್ರೂಮಃ ॥ ಪ್ರಕೃತೌ ವಿಹಿತಏವ ಸ್ರೌವಾಘಾರಃ ಪುನರಿಹ ವಿಧೀಯತೇ ॥ ಸ ಚ ಚೋದಕಪ್ರಾಪ್ತಮನ್ಯತ್ಸರ್ವಮಂಗಜಾತಂ ಪರಿಸಂಚಷ್ಟೇ ॥ ಅನ್ಯಥಾ ಪುನರ್ವಿಧಾನವೈಯರ್ಥ್ಯಾತ್ ॥ ನನು ಪುನರ್ವಿಧಾನಂ ಪ್ರತಿಪ್ರಸ-ವಾರ್ಥಂ ಅತಏವ ಶ್ರುತಿರತ್ರ ಸ್ರೌವಾಘಾರಮಭಾವಶಂಕಾನಿರಾಕರಣಪೂರ್ವಕಂ ವಿದಧಾತಿ—' ನಾನ್ಯಾಮಾಹುತಿಂ ಪುರಸ್ತಾಜ್ಜುಹುಯಾದ್ಯದನ್ಯಾಮಾಹುತಿಂ ಪುರಸ್ತಾಜ್ಜುಹುಯಾದನ್ಯ-ನ್ಮುಖಂ ಕುರ್ಯಾತ್ಸ್ರುವೇಣಾಽಽಘಾರಮಾಘಾರಯತಿ ' ಇತಿ ॥ ಅಯಮರ್ಥಃ । ಸ್ರೌವಾ-ಘಾರಃ ಸರ್ವತ್ರ ಯಜ್ಞಸ್ಯ ಮುಖಂ ತಥಾ ಸತಿ ಯದಿ ಕಶ್ಚಿನ್ಮಂದ ಉಪಸತ್ಪ್ರಯೋಗಾದೌ ಸ್ರೌವಾಘಾರಮಹುತ್ವಾ ತಸ್ಯ ಸ್ಥಾನೇ ಕಾಂಚಿದನ್ಯಾಮಾಹುತಿಂ ಜುಹುಯಾತ್ತದಾ ಮುಖವ್ಯ-ತ್ಯಾಸೇನ ಪ್ರತ್ಯವಾಯಂ ಪ್ರಾಪ್ನುಯಾತ್ ॥ ತಸ್ಮಾತ್ಸ್ರೌವಾಘಾರ ಆದೌ ಕರ್ತವ್ಯ ಇತಿ ನೈತದ್ಯುಕ್ತಂ ॥ ಚೋದಕಪ್ರಾಪ್ತಸ್ಯಾಽಽಘಾರಸ್ಯಾಕಸ್ಮಾದಭಾವಶಂಕಾಯಾ ಅಯುಕ್ತತ್ವಾತ್ ॥ ತಸ್ಮಾತ್ಪರಿಸಂಖ್ಯಾರ್ಥ ಏವ ಪುನರ್ವಿಧಿಃ ॥ ಆಹುತ್ಯಂತರನಿಂದಾ ತು ತಚ್ಛೇಷಭೂತೋಽರ್ಥ-ವಾದಃ । ಯದಿ ಪರಿಸಂಖ್ಯಾ ಸಾಽಪಿ ತ್ರಿದೋಷೇತ್ಯುಚ್ಯೇತ ತರ್ಹಿ ಗೃಹಮೇಧೀಯವದ-ಪೂರ್ವಂ ಕರ್ಮಾಽಸ್ತು ॥ ಪ್ರಯಾಜಾದಿನಿಷೇಧೋ ನಿತ್ಯಾನುವಾದಃ । ಸರ್ವಥಾ ಯಾವ-ದುಕ್ತಮುತ್ರಾನಷ್ಠೇಯಂ ॥

ಈಗ ಮಂತ್ರಪೂರ್ವಕವಾಗಿ ನಮಸ್ಕಾರ ಅಥವಾ ಪ್ರಾರ್ಥನಾಕ್ರಮವನ್ನು ಹೇಳುವರು— ಈ ಸೋಮರಾಜನು ದ್ಯಾವಾ ಪೃಥಿವಿಗಳ (ಭೂಮಿಸ್ವರ್ಗಗಳ) ಮಧ್ಯದಲ್ಲಿ ಗರ್ಭಸ್ಥಾನೀಯನಾಗಿ ಇರುವನು. ಇಂತಹ ಸೋಮರಾಜನನ್ನು ನಮಸ್ಕಾರ ಮಾಡುವಾಗ ದ್ಯಾವಾಪೃಥಿವಿಗಳ ಸಂಕೇತವಾದ ಎರಡು ಪ್ರಸ್ತರಗಳನ್ನು ಎಂದರೆ ದರ್ಭೆಗಳ ಕಂತೆಗಳನ್ನು ಮುಷ್ಟಿಯಲ್ಲಿ ಹಿಡಿದು ಕೊಂಡು ನಮಸ್ಕಾರಪೂರ್ವಕವಾಗಿ ಋತ್ವಿಕ್ಕುಗಳು ಉಪಚರಿಸುವರು. ಇದನ್ನು ಇಲ್ಲಿ ದ್ಯಾವಾಪೃಥಿವೀಭ್ಯಾಂ ಇತ್ಯಾದಿ ಶಬ್ದಗಳಿಂದ ಸ್ಪಷ್ಟಪಡಿಸುವರು. ಮತ್ತು ಸೋಮರಾಜನನ್ನು ನಮಸ್ಕರಿಸುವುದರಿಂದ ದ್ಯಾವ್ಯಾಪೃಥಿವಿಗಳನ್ನು ವೃದ್ಧಿಪಡಿಸಿ (ತೃಪ್ತಿಪಡಿಸಿ)ದಂತಾಗುವುದು. ಎಂದರೆ ಉತ್ಸಾಹಯುಕ್ತರನ್ನಾಗಿ ಮಾಡಲಾಗುವುದು. ಈ ವಿಷಯವು ಆಪಸ್ತಂಬ ಶ್ರೌತಸೂತ್ರದಲ್ಲಿ ಈರೀತಿ ತಿಳಿಸಲಾಗಿದೆ— ಅಥ ನಿಹ್ನವತೇ ದಕ್ಷಿಣೇ ವೇದ್ಯಂತೇ ಪ್ರಸ್ತರಂ ನಿಧಾಯ ದಕ್ಷಿಣಾನ್ಪಾಣೀನುತ್ತಾನಾ-ನ್ಕೃತ್ವಾ ಸವ್ಯಾನ್ನೀಚ ಏಷ್ವಾರಾಯಃ (ಆಪ. ಶ್ರೌ. ಸೂ. ೧೧-೧-೧೨). ನಿಹ್ನವವನ್ನು ಎಂದರೆ ನಮಸ್ಕಾರವನ್ನು ಮಾಡು

ವಾಗ ಋತ್ವಿಕ್ಕುಗಳು ವೇದಿಯ ದಕ್ಷಿಣಭಾಗದಲ್ಲಿ ನಿಂತು ಪ್ರಸ್ತರವನ್ನು ಎಂದರೆ ದರ್ಭೆಯ ಕಂತೆಯನ್ನು ಕೈಯಲ್ಲಿ ಹಿಡಿದು ಎಂದರೆ ಎಡಗೈಯನ್ನು ಕೆಳಗಿರುವಂತೆಯೂ ಬಲಗೈಯನ್ನು ಮೇಲಿರುವಂತೆಯೂ ಹಿಡಿದುಕೊಂಡು,

**ಏಷ್ಟಾ ರಾಯಃ ಪ್ರೇಷೇ ಭಗಾಯರ್ತಮೃತವಾದಿಭ್ಯೋ ನಮೋ ದಿವೇ ನಮಃ ಪೃಥಿವ್ಯೈ ।** (ತೈ. ಸಂ. ೧-೨-೧೧-೧)

ಎಂಬ ಮಂತ್ರವನ್ನು ಪಠಿಸಿ ವೇದಿಯ ದಕ್ಷಿಣಬಾಗದಲ್ಲಿ ಹಾಕುವರು. **ಏಷ್ಟಾರಾಯಃ** ಇತ್ಯಾದಿ ಮಂತ್ರದ ಅರ್ಥವು ಈರೀತಿಯಾಗಿರುವುದು—**ಏಷ್ಟಃ** ಎಂದರೆ ಇಚ್ಛಿಸುವವರು. ಏನನ್ನು ಎಂದರೆ ನಮ್ಮ (ಋತ್ವಿಕ್ಕುಗಳ) ಅಭ್ಯುದಯವನ್ನು ಇಚ್ಛಿಸುವ ಈ ಸೋಮರಾಜನು ಎಂದರ್ಥವು. ಇಂತಹ ಎಲೈ ಸೋಮರಾಜನೇ ನಮಗೆ ಅನ್ನಾದ್ಯಾಹಾರಗಳನ್ನೂ ಸೌಭಾಗ್ಯವನ್ನೂ ಉಂಟುಮಾಡುವುದಕ್ಕಾಗಿ ನಮಗೆ ಧನವನ್ನು ಒದಗಿಸಿಕೊಡು. (ಒದಗಿಸಿಕೊಡಲಿ) ಮತ್ತು ಸತ್ಯವನ್ನೇ ನುಡಿಯುವ ದೇವತೆಗಳಿಗೂ ಋತ್ವಿಗ್ಯಜಮಾನರಿಗೂ ಸಹ ಸಕಲ ಇಷ್ಟಾರ್ಥಗಳನ್ನು ಒದಗಿಸಿಕೊಡಲಿ. ಸತ್ಯವಾಗಿ ಹೇಳುತ್ತೇನೆ. ಇಗೋ ಈ ದ್ಯುಲೋಕಾಭಿಮಾನಿಯಾದ ದೇವತೆಗೆ ನಮಸ್ಕಾರವು, ಈ ಭೂಲೋಕಾಭಿಮಾನಿಯಾದ ಪೃಥಿವೀ ದೇವತೆಗೆ ನಮಸ್ಕಾರವು ಎಂಬರ್ಥವಿರುವ ಈ ಮಂತ್ರವನ್ನು ಋತ್ವಿಕ್ಕುಗಳು ಪಠಿಸಿ ದ್ಯಾವಾಪೃಥಿವಿಗಳನ್ನು ನಮಸ್ಕಾರಮಾಡಿ ಆ ದೇವತೆಗಳನ್ನು ಉತ್ಸಾಹಯುಕ್ತರನ್ನಾಗಿ ಮಾಡುವರು.



## *English Translation*

**(Neither Prayajas nor Anuyajas are to be used at the Upasad Ishti)**

The Prayajas as well as the Anuvajas are the armour of the gods. (The Upasad ishti) is to be performed without both, in order to sharpen the arrow for preventing it from recoiling.

The Hotar repeats the mantras (at this occasion) only after having overstepped (the boundary between the Vedi and Ahavaniya fire on all sides) in order to supervene the sacrifice, and prevent it from going.

They (the divines) say: it is, as it were, a cruel act, when they perform the ceremony of (touching) the melted butter (the Tanunaptram) near the king Soma. The reason is, that Indra, using melted butter as his thunderbolt, killed Vritra. (In order to compensate the king Soma for any injury he might have received from the performance of the Tanunaptram ceremony in his presence) they sprinkle the king (Soma) with water (whilst the following mantra is repeated); amas'ur amas'ush te deva Soma (Taitt. 1, 2, 11, 2) When they perform this ceremony near him (Soma), which is, as it were, a cruel treatment of him, then they (subsequently) make him (Soma) by this (sprinlking of water) fat (when lying) on her (the Vedi), and make him grow.

The king Soma is the fruit of heaven and earth. When repeating the words: eshta rayah, & c,, they (the Hotri prests) throw the two bundles of Kus'a grass (held in their hands, in the southern corner of the Vedi), and put their rights hands over their left ones (to cover the Kus'a grass). By making a bow to "heaven and earth" (which are represented by those two bundles of Kus'a grass) they make them both grow.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಚತುರ್ಥಾಧ್ಯಾಯೇ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ನಾಲ್ಕನೆಯ ಅಧ್ಯಾಯದ ಒಂಭತ್ತನೆಯ ಖಂಡವು ಸಮಾಪ್ತವಾದುದು.

ಇತಿ ಚತುರ್ಥೋಽಧ್ಯಾಯಃ



# ಅಥೈತರೇಯಬ್ರಾಹ್ಮಣೇ ಪಂಚಮಾಧ್ಯಾಯೇ ಪ್ರಥಮಃ ಖಂಡಃ

## ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಸೋಮಕ್ರಯಣ— ಪೂರ್ವೇತಿಹಾಸ ]

### ಪೀಠಿಕೆ

ಇದುವರೆಗೂ ಹಿಂದಿನ ಅಧ್ಯಾಯದಲ್ಲಿ ಅಭಿಪ್ಲವ, ಉಪಸತ್, ತಾನೂನಪ್ತ್ರೀ, ಆಪ್ಯಾಯನ, ನಿಹ್ನವ ಎಂಬ ಕರ್ಮಗಳನ್ನು ವಿವರಿಸಿದ್ದಾಯಿತು. ಈಗ ಸೋಮಕ್ರಯವೇ ಮೊದಲಾದ ಕರ್ಮಗಳನ್ನು ಹೇಳಲು ಆರಂಭಿಸಿ, ಸೋಮಕ್ರಯಕ್ಕೆ ಸಂಬಂಧಿಸಿದ ಒಂದು ಇತಿಹಾಸವನ್ನು ಹೇಳುವರು—

**ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯಮಸ್ಮಾನ್ಸೋಮೋ ರಾಜಾಗಚ್ಛೇದಿತಿ ಸಾ ವಾಗಬ್ರವೀತ್ಸ್ತ್ರೀಕಾಮಾ ವೈ ಗಂಧರ್ವಾ ಮಯೈವ ಸ್ತ್ರಿಯಾ ಭೂತಯಾ ಪಣಧ್ವಮಿತಿ। ನೇತಿ ದೇವಾ ಅಬ್ರುವನ್ಕಥಂ ವಯಂ ತ್ವದೃತೇ ಸ್ಯಾಮೇತಿ ಸಾಬ್ರವೀತ್ಕ್ರೀಣೀತೈವ ಯರ್ಹಿ ವಾವ ವೋ ಮಯಾರ್ಥೋ ಭವಿತಾ ತರ್ಹ್ಯೇವ ವೋಽಹಂ ಪುನರಾಗಂತಾಸ್ಮೀತಿ ತಥೇತಿ ತಯಾ ಮಹಾನಗ್ನ್ಯಾ ಭೂತಯಾ ಸೋಮಂ ರಾಜಾನಮಕ್ರೀಣನ್ ॥**

ಅಭಿಪ್ಲವೋಪಸತ್ತಾನೂನಪ್ತ್ರಾಪ್ಯಾಯನನಿಹ್ನವಾಃ ॥
ಕಥಿತಾ ಧರ್ಮಸಂಭಾರಾ ವ್ರತೋಪಾಯನಮೇವಃ ಚ ॥

ಅಥ ಸೋಮಕ್ರಯಾದ್ಯಾ ವಕ್ತವ್ಯಾಃ ॥ ತತ್ರ ಕ್ರಯಂ ವಕ್ತುಮಾಖ್ಯಾಯಿಕಾಮಾಹ— ಸ್ವಾನಭ್ರಾಜೇತ್ಯಾದಿ ನಾಮಧಾರಿಣೋ ಗಂಧರ್ವಾ ದ್ಯುಲೋಕೇ ಸೋಮಸ್ಯ ರಕ್ಷಕಾಃ ॥ ತಚ್ಚ ಶಾಖಾಂತರೇ ಮಂತ್ರವ್ಯಾಖ್ಯಾನ ಬ್ರಾಹ್ಮಣೇ ಶ್ರೂಯತೇ ॥ ‘ ಸ್ವಾನಭ್ರಾಜೇತ್ಯಾಹ । ಏತೇಷಾಮಮುಷ್ಮಿಲ್ಲೋಕೇ ಸೋಮಮರಕ್ಷನ್’ ಇತಿ ॥ ಅಥವಾ ವಿಶ್ವಾವಸುಪ್ರಭೃತಯಃ ಸೋಮಸ್ಯಾಪಹಂತಾರೋ ಗಂಧರ್ವಾಃ ॥ ತದಪಿ ತತ್ರೈವ ಶ್ರುತಂ ॥ ‘ ತಂ ಸೋಮಮಾಹ್ರಿಯಮಾಣಂ ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ಸ ತಿಸ್ರೋ ರಾತ್ರೀಃ ಪರಿಮುಷಿತೋಽವಸತ್’ ಇತಿ ॥

ತೇಷು ಗಂಧರ್ವೇಷು ಯಃ ಸೋಮ ಆಸೀತ್ತಂ ಸೋಮಂ ಮಿತ್ರಾದಯೋ ದೇವಾ ವಸಿಷ್ಠಾದಿ ಋಷಯಶ್ಚ ಕೇನ ಪ್ರಕಾರೇಣ ಸೋಮೋಽಸ್ಮಾನ್ಪ್ರಾಪ್ನುಯಾದಿತಿ ವಿಚಾರಿತವಂತಃ॥ ತದಾನೀಂ ಗಂಧರ್ವಹೃದಯಾಭಿಜ್ಞಾ ವಾಗ್ದೇವೀ ದೇವಾನಬ್ರವೀತ್ ॥ ಗಂಧರ್ವಾಃ ಸರ್ವೇಽಪಿ ಸ್ತ್ರೀ-ಲಂಪಟಾಹಂ ಚ ಸ್ತ್ರೀ ಭೂತ್ವಾ ತಿಷ್ಠಾಮ್ಯತೋ ಮಯಾ ಪಣಧ್ವಂ ಸೋಮಮೂಲ್ಯತ್ವೇನ ಮಾಂ ಗಂಧರ್ವಾಣಾಮಗ್ರೇ ಕುರುತೇತಿ ॥ ತತೋ ದೇವಾ ಅನಂಗೀಕೃತ್ಯ ತ್ವದೃತೇ ತ್ವಾಂ ವಾಚಂ ವಿನಾ ವಯಂ ಕಥಂ ಸ್ಯಾಮ ಮಂತ್ರರೂಪ ವಾಗ್ರಾಹಿತ್ಯೇ ಸತಿ ಕರ್ಮಣಾಮಪ್ರವೃತ್ತೇಃ ಕೇನ ಪ್ರಕಾರೇಣ ಜೀವಾಮೇತಿ ವಾಚಮಬ್ರುವನ್ ॥ ತತೋ ವಾಗ್ದೇವಾನಬ್ರವೀತ್ ॥ ಸಂದೇಹಂ ಮಾ ಕುರುತಾವಶ್ಯಂ ಮಯಾ ಮೂಲ್ಯೇನ ಕ್ರೀಣೀತ ಯದೈವ ಮಯಾ ಯುಷ್ಮಾಕಂ ಪ್ರಯೋಜನಂ ಭವಿಷ್ಯತಿ ತದೈವಾಹಂ ಪುನರಪಿ ಯುಷ್ಮಾನ್ಪ್ರಾಪ್ಸ್ಯಾಮೀತಿ ॥ ತತೋ ದೇವಾ ಅಂಗೀಕೃತ್ಯ ತಯಾ ವಾಚಾ ಸೋಮಮಕ್ರೀಣನ್॥ ಕೀದೃಶ್ಯಾ ಮಹಾನಗ್ನ್ಯಾ॥ ಮಹತೀ ಚಾಸೌ ನಗ್ನೀ ಚ ಮಹಾನಗ್ನೀ ತಯಾ॥ ರೂಪಸಂಪತ್ತಿವಿವಕ್ಷಯಾ ಮಹತ್ವಮುಚ್ಯತೇ॥ ಬಾಲ್ಯವಿವಿಕ್ಷಯಾ ನಗ್ನತ್ವಂ॥ ಭೂತಯಾ ತದಾನೀಮೇವ ಕುಮಾರೀರೂಪೇಣ ನಿಷ್ಪನ್ನಯಾ॥ ತದೇತಚ್ಛಾಖಾಂತರೇ ಸ್ಪಷ್ಟಮಾಮ್ನಾತಂ—'ತೇ ದೇವಾ ಅಬ್ರುವನ್ಸ್ತ್ರೀಕಾಮಾ ವೈ ಗಂಧರ್ವಾಃ ಸ್ತ್ರಿಯಾ ನಿಷ್ಕ್ರೀಣಾಮೇತಿ ॥ ತೇ ವಾಚಂ ಸ್ತ್ರಿಯಮೇಕಹಾಯನೀಂ ಕೃತ್ವಾ ತಯಾ ನಿರಕ್ರೀಣನ್' ಇತಿ॥

ಪೂರ್ವದಲ್ಲಿ ಸೋಮದೇವತೆಯು (ಸೋಮರಾಜನು ಎಂದರೆ ಸೋಮಲತೆಯು) ಗಂಧರ್ವ (ಸ್ವರ್ಗ)ಲೋಕದಲ್ಲಿದ್ದನು. ಅಲ್ಲಿ ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು ಎಂಬ ಏಳುಮಂದಿ ಗಂಧರ್ವರು ಸೋಮರಾಜನ ರಕ್ಷಣಾರ್ಥವಾಗಿ ಇದ್ದರು. ಈ ವಿಷಯವು ಶಾಖಾಂತರದಲ್ಲಿ ಈರೀತಿ ಹೇಳಲ್ಪಟ್ಟಿದೆ

ಸ್ವಾನ ಭ್ರಾಜೇತ್ಯಾಹ, ಏತೇ ವಾ ಅಮುಷ್ಮಿನ್ ಲೋಕೇ ಸೋಮಮರಕ್ಷನ್ ॥

(ತೈ. ಸಂ. ೬-೧-೧೦-೫)

ಅಥವಾ ವಿಶ್ವಾವಸು ಮೊದಲಾದ ಕೆಲವು ಗಂಧರ್ವರು ಸೋಮವನ್ನು ಅಪಹರಿಸಿ ತಮ್ಮಲ್ಲಿ ಇಟ್ಟುಕೊಂಡಿದ್ದರು ಎಂದು ಮತ್ತೊಂದುಕಡೆ ಹೇಳಿದೆ –

ತಗ್ಂ ಸೋಮಮಾಹ್ರಿಯಮಾಣಂ ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ಸ ತಿಸ್ರೋ ರಾತ್ರೀಃ ಪರಿಮುಷಿತೋಽವಸತ್ ॥ (ತೈ. ಸಂ. ೬-೧-೬-೫)

ಎಂದರೆ ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪದಿಂದ ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿದ್ದ ಸೋಮಲತೆಯನ್ನು ಭೂಮಿಗೆ ತರುತ್ತಿರುವಾಗ ದಾರಿಯಲ್ಲಿ (ಈ ವಿಷಯವನ್ನು ಬೇರೆಕಡೆ ವಿಸ್ತಾರವಾಗಿ ಹೇಳಲಾಗಿದೆ) ವಿಶ್ವಾವಸುವೆಂಬ ಗಂಧರ್ವನು ಅದನ್ನು ಅಪಹರಿಸಿ ತನ್ನಲ್ಲಿ ಮೂರುದಿನಗಳವರೆಗೂ ಇಟ್ಟುಕೊಂಡಿದ್ದನು. ಹೀಗೆ ವಿಶ್ವಾವಸುವಿನ ಬಳಿ ಇದ್ದ ಸೋಮವನ್ನು ಈ ಭೂಮಿಗೆ ತರುವ ಬಗೆ ಹೇಗೆ ಎಂದು ಮಿತ್ರಾದಿ ದೇವತೆಗಳೂ, ವಸಿಷ್ಠಾದಿ ಋಷಿಗಳೂ ಪರಸ್ಪರ ಕಲೆತು ಮಂತ್ರಾಲೋಚನೆ ಮಾಡುತ್ತಿದ್ದರು. ಆಗ ಈ ವಿಷಯವನ್ನು ತಿಳಿದ ವಾಗ್ದೇವತೆಯು ದೇವತೆಗಳ ಬಳಿಗೆ ಬಂದು—ಎಲೈ ದೇವತೆಗಳೇ, ನೀವು

ಆಲೋಚಿಸುತ್ತಿರುವ ವಿಷಯದಲ್ಲಿ ನನಗೆ ಒಂದು ಉಪಾಯವು ತೋರುವುದು. ಗಂಧರ್ವರೆಲ್ಲರೂ ಸ್ತ್ರೀಕಾಮುಕರು ಎಂದರೆ ಸ್ತ್ರೀಯರಲ್ಲಿ ಅತ್ಯಾಸಕ್ತಿಯುಳ್ಳವರು. ಅವರಿಗೆ ಸ್ತ್ರೀಯರ ಆಸೆಯನ್ನು ತೋರಿಸಿ ಅವರಲ್ಲಿರುವ ಸೋಮವನ್ನು ತರಬಹುದು. ಅದಕ್ಕಾಗಿ ಈಗ ನಾನು ಓರ್ವ ಸುಂದರ ತರುಣಿಯ ರೂಪವನ್ನು ಕೈಗೊಳ್ಳುವೆನು. ನೀವು ತರುಣಿಯ ರೂಪದಿಂದಿರುವ ನನ್ನನ್ನು ಗಂಧರ್ವರಿಗೆ ಮಾರಿ ಅವರಲ್ಲಿರುವ ಸೋಮವನ್ನು ಕ್ರಯಕ್ಕೆ ಪಡೆಯಬಹುದು ಎಂದು ಹೇಳಲು, ಅದಕ್ಕೆ ದೇವತೆಗಳು—ಎಲೈ ವಾಗ್ದೇವಿಯೇ, ನೀನು ನಮ್ಮ ಹಿತದೃಷ್ಟಿಯಿಂದ ಈ ಮಾತನ್ನು ಹೇಳುವೆಯಾದರೂ ಅದನ್ನು ನಾವು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಮಂತ್ರಸ್ವರೂಪಳಾದ ನೀನು ನಮ್ಮನ್ನು ಬಿಟ್ಟುಹೋದರೆ ಮಂತ್ರಸಹಾಯವಿಲ್ಲದೆ ನಾವು ಯಾವ ಯಜ್ಞಾದಿಕರ್ಮಗಳನ್ನು ಮಾಡಲಾರೆವು. ನಮ್ಮ ಜೀವನವೇ ಸಾಧ್ಯವಿಲ್ಲ, ಆದ್ದರಿಂದ ನಿನ್ನನ್ನು ಬಿಟ್ಟಿರಲಾರೆವು ಎಂದರು. ಅದಕ್ಕೆ ವಾಗ್ದೇವಿಯು ಮತ್ತೆ—ಎಲೈ ದೇವತೆಗಳಿರಾ ನಾನು ಹೇಳುವುದನ್ನು ಕೇಳಿರಿ. ತರುಣಿಯೂ ಸುಂದರಿಯೂ ಆದ ನನ್ನನ್ನು ಗಂಧರ್ವರಿಗೆ ಮಾರಿ ಅವರಿಂದ ಸೋಮವನ್ನು ಕ್ರಯರೂಪದಲ್ಲಿ ಪಡೆಯಿರಿ, ಸ್ವಲ್ಪಕಾಲಾನಂತರ ನಾನು ಆ ಗಂಧರ್ವರನ್ನು ತ್ಯಜಿಸಿ ಮತ್ತೆ ನಿಮ್ಮ ಬಳಿಗೆ ಬರುವೆನು. ಈ ವಿಷಯದಲ್ಲಿ ಸಂದೇಹಪಡಬೇಡಿರಿ ಎನ್ನಲು ಅದಕ್ಕೆ ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಸುಂದರಾಕೃತಿಯಿಂದಿರುವ ಆ ವಾಗ್ದೇವತೆಯನ್ನು ಗಂಧರ್ವರಿಗೆ ವಿಕ್ರಯಿಸಿ ಅವರಲ್ಲಿದ್ದ ಸೋಮವನ್ನು ಕೊಂಡುತಂದರು, ಇಲ್ಲಿ **ಮಹಾನಗ್ನ್ಯಾ ಭೂತಯಾ** ಎಂದು ಹೇಳಿದೆ. ಎಂದರೆ ವಿಕ್ರಯಕಾಲದಲ್ಲಿ ಗಂಧರ್ವರು ಮೋಹಿಸುವಂತೆ ವಾಗ್ದೇವತೆಯು ನಗ್ನಳಾದ (ಬೆತ್ತಲೆ) ಸುಂದರ ತರುಣಿ (ಕುಮಾರಿ)ಯಾಗಿದ್ದಳು ಎಂದಭಿಪ್ರಾಯವು. ಈ ವಿಷಯವು ಶಾಖಾಂತರದಲ್ಲಿ—

**ತೇ ದೇವಾ ಅಬ್ರುವನ್ ಸ್ತ್ರೀಕಾಮಾ ವೈ ಗಂಧರ್ವಾಃ ಸ್ತ್ರಿಯಾ ನಿಷ್ಕ್ರೀಣಾಮೇತಿ ತೇ ವಾಚಗ್‌ಂ ಸ್ತ್ರಿಯಮೇಕಹಾಯನೀಂ ಕೃತ್ವಾ ತಯಾ ನಿರಕ್ರೀಣನ್ ॥** (ತೈ. ಸಂ. ೬-೧-೬-೫)

ಎಂದು ಹೇಳಲ್ಪಟ್ಟಿದೆ.

**ತಾಮನುಕೃತಿಮಸ್ಕನ್ನಾಂ ವತ್ಸತರೀಮಾಜಂತಿ ಸೋಮಕ್ರಯಣೀಂ ತಯಾ ಸೋಮಂ ರಾಜಾನಂ ಕ್ರೀಣಂತಿ ॥**

**ಇದಾನೀಂ ಸೋಮಕ್ರಯಂ ವಿಧತ್ತೇ—ತಾಮನುಕೃತಿಂ ಸ್ತ್ರೀರೂಪಾಂ ವಾಚಮನುಕ್ರಿಯಮಾಣಾಂ ನಿಷ್ಪನ್ನಾಂ ತತ್ಸದೃಶೀಮಿತ್ಯರ್ಥಃ ॥ ಅಸ್ಕನ್ನಾಂ ವೀರ್ಯಸ್ಕಂದನರಹಿತಾಂ ಅಪ್ರಾಪ್ತಯೌವನಾಂ ವತ್ಸತರೀಮತಿಶಯೇನ ಬಾಲಾಂ ಸೋಮಕ್ರಯಸಾಧನಭೂತಾಂ ಕಾಂಚಿದ್ಗಾಮಾಜಂತಿ ಸಂಪಾದಯೇಯುರಿತ್ಯರ್ಥಃ ॥ ತಯಾ ತಾದೃಶ್ಯಾ ಗವಾ ಸೋಮಂ ರಾಜಾನಂ ಕ್ರೀಣಂತಿ ಕ್ರೀಣೀಯುಃ ॥ ತಾಂ ಗಾಂ ಮೂಲ್ಯರೂಪೇಣ ದತ್ವಾ ಸೋಮಂ ಸ್ವೀಕುರ್ಯುಃ ॥**

ದೇವತೆಗಳು ಗಂಧರ್ವರಿಂದ ಸೋಮವನ್ನು ಕೊಂಡುಕೊಳ್ಳುವಾಗ ಮೌಲ್ಯರೂಪವಾಗಿದ್ದ ವಾಗ್ದೇವತೆಯೂ ಸುಂದರಳಾದ ಕುಮಾರಿಯಾಗಿದ್ದಳು ಎಂದರೆ ಪ್ರಾಪ್ತವಯಸ್ಕಳಾಗದೆ, ಪುರುಷಸಂಪರ್ಕವಿಲ್ಲದ ಕುಮಾರಿಯಾಗಿದ್ದಳು. ಆದ್ದರಿಂದ ಈಗಲೂ ಯಜ್ಞದಲ್ಲಿ ಸೋಮವಿಕ್ರಯವನ್ನು ಮಾಡುವಾಗ ಸ್ತ್ರೀಗೆ ಬದಲಾಗಿ ಇನ್ನೂ ಕರುವನ್ನು ಹಾಕದೆ ಒಂದುವರ್ಷ ಮಾತ್ರ ವಯಸ್ಸಾಗಿರುವ ಹೆಣ್ಣುಕರುವನ್ನು ಕೊಟ್ಟು ಸೋಮವನ್ನು ಕೊಂಡುಕೊಳ್ಳುವುದು ರೂಢಿಯಾಗಿದೆ. ಸೋಮಕ್ರಯಾರ್ಥವಾಗಿ ಉಪಯೋಗಿಸುವ ಹೆಣ್ಣುಕರುವು ಹೇಗಿರಬೇಕೆಂಬ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ ಹೀಗೆ ಹೇಳಿದೆ—

ಏಕಹಾಯನ್ಯಾ ಕ್ರೀಣಾತಿ ವಾಚೈವೈನಗ್‌ಂ ಸರ್ವಯಾ ಕ್ರೀಣಾತಿ ತಸ್ಮಾದೇಕಹಾಯನಾ ಮನುಷ್ಯಾ ವಾಚಂ ವದಂತ್ಯಕೂಟಯಾಕರ್ಣಯಾಶ್ಲೋಣಯಾಸಪ್ತಶಫಯಾ ಕ್ರೀಣಾತಿ ಸರ್ವಯೈವೈನಂ ಕ್ರೀಣಾತಿ ಯಚ್ಛ್ವೇತಯಾ ಕ್ರೀಣೀಯಾದ್ದುಶ್ಚರ್ಮಾ ಯಜಮಾನಃ ಸ್ಯಾದ್ಯತ್ಕೃಷ್ಣಯಾನುಸ್ತರಣೀ ಸ್ಯಾತ್ಪ್ರಮಾಯುಕೋ ಯಜಮಾನಃ ಸ್ಯಾದ್ಯದ್ವಿರೂಪಯಾ ವಾರ್ತ್ರಘ್ನೀ ಸ್ಯಾತ್ಸ ವಾನ್ಯಂ ಜಿನೀಯಾತ್ತಂ ವಾನ್ಯೋ ಜಿನೀಯಾದರುಣಯಾ ಪಿಂಗಾಕ್ಷ್ಯಾ ಕ್ರೀಣಾತ್ಯೇತದ್ವೈ ಸೋಮಸ್ಯ ರೂಪಗ್‌ಂ ಸ್ವಯೈವೈನಂ ದೇವತಯಾ ಕ್ರೀಣಾತಿ ॥ (ತೈ. ಸಂ. ೬-೧-೬-೭)

ಸೋಮವನ್ನು ಕೊಂಡುಕೊಳ್ಳುವಾಗ ಅದರ ಮೌಲ್ಯಕ್ಕಾಗಿ ಕೊಡುವ ಹೆಣ್ಣುಕರುವಿಗೆ ಒಂದುವರ್ಷ ಮಾತ್ರ ವಯಸ್ಸಾಗಿರಬೇಕು. ಕ್ರಯವಿಕ್ರಯಕಾಲದಲ್ಲಿ ಸಂದರ್ಭೋಚಿತವಾದ ಮಾತುಗಳನ್ನಾಡಿ ಕೊಂಡುಕೊಳ್ಳಬೇಕು. ಏಕೆಂದರೆ ಮನುಷ್ಯನು (ಶಿಶುವು) ಹುಟ್ಟಿ ಒಂದು ವರ್ಷವಾದಮೇಲೆ ಮಾತನಾಡುವುದನ್ನು ಕಲಿಯುವನು. ಮತ್ತು ಸೋಮಕ್ರಯಾರ್ಥವಾಗಿ ಉಪಯೋಗಿಸುವ ಕರುವಿನ ಕೊಂಬು ಸರಿಯಾಗಿರಬೇಕು ಎಂದರೆ ಸೊಟ್ಟಗಿರಕೂಡದು, ಮುರಿದುಹೋಗಿರಕೂಡದು ಅಥವಾ ಒಂದು ಕೊಂಬುಮಾತ್ರವಿರಕೂಡದು, ಎರಡು ಕೊಂಬುಗಳೂ ನೇರವಾಗಿ ಸರಿಯಾಗಿರಬೇಕು; ಕಿವಿಯು ಸಣ್ಣಗಿರಕೂಡದು ಅಥವಾ ಹರಿದಿರಕೂಡದು; ಕಣ್ಣಿನಲ್ಲಿ ನ್ಯೂನತೆ ಇರಕೂಡದು ಎಂದರೆ ಕುರುಡಾಗಿರಕೂಡದು; ಕುಂಟಾಗಿರಕೂಡದು; ಏಳು ಗೊರಸುಗಳಿರಕೂಡದು ಎಂದರೆ ನಾಲ್ಕು ಪಾದಗಳಲ್ಲಿಯೂ ಇರುವ ಎಂಟು ಗೊರಸುಗಳಲ್ಲಿ ಒಂದು ನ್ಯೂನವಾಗಿರಕೂಡದು. ಈ ದೋಷಗಳಿಲ್ಲದ ಹೆಣ್ಣುಕರುವನ್ನು ಸೋಮಕ್ರಯಾರ್ಥವಾಗಿ ಉಪಯೋಗಿಸಬೇಕು. ಇದಲ್ಲದೆ ಇನ್ನೂ ಕೆಲವು ವಿಶೇಷಾಂಶಗಳನ್ನು ಗಮನಿಸಬೇಕು. ಸೋಮಕ್ರಯಾರ್ಥವಾಗಿ ಉಪಯೋಗಿಸುವ ಕರುವು ಬೆಳ್ಳಗಿದ್ದರೆ ಯಜ್ಞಮಾಡುವ ಯಜಮಾನನಿಗೆ ಕುಷ್ಠ (ತೊನ್ನು) ರೋಗವು ಸಂಭವಿಸುವುದು; ಕರುವು ಕಪ್ಪಗಿದ್ದರೆ ಯಜಮಾನನಿಗೆ ಮರಣವು ಸಂಭವಿಸಬಹುದು; ಕರುವು ಮಿಶ್ರಬಣ್ಣದ್ದಾದರೆ ಅದು ವೃತ್ರಹಂತಕನಾದ ಇಂದ್ರನಿಗೆ ಪ್ರೀತಿಪಾತ್ರವಾಗಿರುವುದು. ಆದ್ದರಿಂದ ಯಜಮಾನನು ತನ್ನ ಶತ್ರುವನ್ನು ಯುದ್ಧದಲ್ಲಿ ಜಯಿಸಬಹುದು ಅಥವಾ ಶತ್ರುವಿನಿಂದ ಸಂಹರಿಸಲ್ಪಡಲೂ ಬಹುದು; ಆದ್ದರಿಂದ ಈ ವಿಧವಾದ ದೋಷಗಳಿರುವ ಕರುಗಳನ್ನು ಉಪಯೋಗಿಸದೆ ಸ್ವಲ್ಪ ಮಾಸಲು ಕೆಂಪುಬಣ್ಣದ್ದೂ ಕೆಂಗಣ್ಣುಳ್ಳದ್ದೂ (ಅಥವಾ ಹಳದಿಯ ಕಣ್ಣುಳ್ಳದ್ದೂ) ಆದ ಕರುವನ್ನು ಕೊಟ್ಟು ಸೋಮವನ್ನು ಕೊಂಡುಕೊಳ್ಳಬೇಕು. ಏಕೆಂದರೆ ಸೋಮರಸದ ಬಣ್ಣವು ಮಾಸಲು ಕೆಂಪುಬಣ್ಣದ್ದಾಗಿರುವುದು. ಇತ್ಯಾದಿ ವರ್ಣನೆ ಇದೆ.

## ತಾಂ ಪುನರ್ನಿಷ್ಕ್ರೀಣೀಯಾತ್ಪುನರ್ಹಿ ಸಾ ತಾನಾಗಚ್ಛತ್ ।

ಮೂಲ್ಯತ್ವೇನ ಸೋಮವಿಕ್ರಯಿಣೇ ದತ್ತಾ ಯಾ ಗೌಸ್ತಸ್ಯಾಃ ಪುನರ್ಮೂಲ್ಯಾಂತರದಾನೇನ ಸ್ವೀಕರಣಂ ವಿಧತ್ತೇ-ಯಸ್ಮಾದಿಯಂ ವಾಗ್ಗಂಧರ್ವೇಭ್ಯೋ ನಿಷ್ಕ್ರಮ್ಯ ಪುನಸ್ತಾನ್ದೇವಾನ್ಪ್ರಾಪ್ನೋತ್ತಸ್ಮಾತ್ಸೋಮಕ್ರಯಣ್ಯಾಃ ಪುನರಾದಾನಂ ಯುಕ್ತಂ ॥ ವಾಚೋ ವೃತ್ತಾಂತಃ ಶಾಖಾಂತರೇ ಸ್ಪಷ್ಟಮಾಮ್ನಾತಃ—' ಸಾ ರೋಹಿದ್ರೂಪಂ ಕೃತ್ವಾ ಗಂಧರ್ವೇಭ್ಯೋಽಪಕ್ರಮ್ಯಾಽತಿಷ್ಠತ್ತದ್ರೋಹಿತೋ ಜನ್ಮ ತೇ ದೇವಾ ಅಬ್ರುವನ್ನಯಂ ಯುಷ್ಮದಕ್ರಮೀನ್ನಾಸ್ಮಾದುಪಾವರ್ತೇತೇ ವಿಹ್ವಯಾಮಹಾ ಇತಿ ಬ್ರಹ್ಮಗಂಧರ್ವಾ ಅವದನ್ನಗಾಯನ್ದೇವಾಃ ಸಾ ದೇವಾನ್ಗಾಯನ್ನುಪಾವರ್ತತ ತಸ್ಮಾದ್ಗಾಯಂತಂ ಸ್ತ್ರಿಯಃ ಕಾಮಯಂತೇ ' ಇತಿ ॥

ದೇವತೆಗಳು ಸ್ತ್ರೀರೂಪದಿಂದಿದ್ದ ವಾಗ್ದೇವತೆಯನ್ನು ಗಂಧರ್ವರಿಗೆ ಕೊಟ್ಟು ಸೋಮವನ್ನು ಕೊಂಡುಕೊಂಡರಷ್ಟೆ. ಅನಂತರ ಎಂದರೆ ಅಗ್ನಿಪ್ರಣಯನ ಎಂಬ ಕರ್ಮಾನಂತರ ಆ ವಾಗ್ದೇತೆಯು ಒಂದು ಕೆಂಪು ಜಿಂಕೆಯ ಆಕಾರವನ್ನು ತಳೆದು ಗಂಧರ್ವರಿಂದ ತಪ್ಪಿಸಿಕೊಂಡು ಓಡಿಬಂದು ಪುನ ದೇವತೆಗಳ ಬಳಿಗೆ ಬಂದಿತು. ಆದ್ದರಿಂದ ಅದರ ಪ್ರತೀಕವಾಗಿ ಸೋಮ ಕ್ರಯಾರ್ಥವಾಗಿ ಕೊಟ್ಟ ಗೋವನ್ನು ದುಡ್ಡುಕೊಟ್ಟು ಮತ್ತೆ ಹಿಂದಕ್ಕೆ ಕೊಂಡುಕೊಳ್ಳುವುದು ಯುಕ್ತವು. ಈ ವಿಷಯವು ತೈತ್ತಿರೀಯಸಂಹಿತೆಯಲ್ಲಿ ಹೀಗೆ ಹೇಳಿರುವುದು—

ಸಾ ರೋಹಿದ್ರೂಪಂ ಕೃತ್ವಾ ಗಂಧರ್ವೇಭ್ಯೋಽಪಕ್ರಮ್ಯಾತಿಷ್ಠತ್ತದ್ರೋಹಿತೋ ಜನ್ಮ, ತೇ ದೇವಾ ಅಬ್ರುವನ್ನಪ ಯುಷ್ಮದಕ್ರಮೀನ್ನಾಸ್ಮಾನುಪಾವರ್ತತೇ ವಿಹ್ವಯಾಮಹಾ ಇತಿ, ಬ್ರಹ್ಮಗಂಧರ್ವಾ ಅಪವನ್ನಗಾಯನ್ ದೇವಾಃ, ಸಾ ದೇವಾನ್ ಗಾಯತ ಉಪಾವರ್ತತ, ತಸ್ಮಾದ್ಗಾಯಂತಗ್ಂ ಸ್ತ್ರಿಯಃ ಕಾಮಯಂತೇ ॥ (ತೈ. ಸಂ. ೬-೧-೬-೫,೬)

ವಿಕ್ರಯಾನಂತರ ವಾಗ್ದೇವತೆಯು ಒಂದು ಕೆಂಪುಜಿಂಕೆಯ ಆಕೃತಿಯನ್ನು ತಳೆದು ಗಂಧರ್ವರಿಂದ ತಪ್ಪಿಸಿಕೊಂಡು ಓಡಿಬಂದಿತು. ಕೆಂಪುಜಿಂಕೆಯ ಉತ್ಪತ್ತಿಗೆ ಇದೇಕಾರಣವು. ಅನಂತರ ತಮ್ಮಿಂದ ತಪ್ಪಿಸಿಕೊಂಡು ಓಡಿಹೋಗುತ್ತಿರುವ (ಕೆಂಪು ಜಿಂಕೆಯ ರೂಪದಲ್ಲಿದ್ದ) ವಾಗ್ದೇವತೆಯನ್ನು ನೋಡಿ ಗಂಧರ್ವರು ದೇವತೆಗಳನ್ನು ಕುರಿತು—ಎಲೈ ದೇವತೆಗಳಿರಾ, ಇದೇನು? ನಮಗೆ ನೀವು ಮಾರಿದ ಸ್ತ್ರೀಯನ್ನು ನೀವು ಪುಸಲಾಯಿಸಿ ಮತ್ತೆ ಹಿಂದಕ್ಕೆ ಕರೆಸಿಕೊಳ್ಳುತ್ತೀರಲ್ಲಾ, ಇದು ನ್ಯಾಯವೇ ಎನ್ನಲು‹ ಅದಕ್ಕೆ ದೇವತೆಗಳು ಇಂತೆಂದರು—ನಾವೇನು ಆ ಸ್ತ್ರೀಯನ್ನು ಅಪಹರಿಸಿಕೊಂಡುಬರುತ್ತಿಲ್ಲ. ಇನ್ನೂ ನಮ್ಮಬಳಿಗೂ ಬಂದಿಲ್ಲ. ಮಧ್ಯಮಾರ್ಗದಲ್ಲಿ ಓಡಿಬರುತ್ತಿರುವ ಅವಳನ್ನು ನೀವು ನಿಮ್ಮ ಶಕ್ತಿಯಿಂದ ಹಿಂದಕ್ಕೆ ಕರೆಸಿಕೊಳ್ಳಿ ಎಂದರು. ಬಳಿಕ ಗಂಧರ್ವರು ಮಾಯಾ ಮಂತ್ರ ಮೊದಲಾದ್ಯುಪಾಯಗಳಿಂದ ವಾಗ್ದೇವತೆಯನ್ನು ಹಿಂತಿರುಗಿಸಲು ಪ್ರಯತ್ನಪಟ್ಟರು. ದೇವತೆಗಳು ಸುಶ್ರಾವ್ಯ ವಾಗಿ ಹಾಡುತ್ತಿದ್ದರು. ಆ ಸ್ತ್ರೀಯು ಗಂಧರ್ವರ ಉಪಾಯುಗಳಿಗೆ ಮರುಳಾಗದೆ ದೇವತೆಗಳ ಗಾನವನ್ನು ಕೇಳುವುದರಲ್ಲಿ ಆಸಕ್ತಳಾಗಿ ಅವರ ಬಳಿಗೆ ಬಂದಳು. ಆದ್ದರಿಂದ ಲೋಕವ್ಯವಹಾರದಲ್ಲಿ ಈಗಲೂ ಚೆನ್ನಾಗಿ ಹಾಡುವ ಪುರುಷರನ್ನು ಸ್ತ್ರೀಯರು ಮೋಹಿಸುತ್ತಾರೆ.

**ತಸ್ಮಾದುಪಾಂಶು ವಾಚಾ ಚರಿತವ್ಯಂ ಸೋಮೇ ರಾಜನಿ ಕ್ರೀತೇ ಗಂಧರ್ವೇಷು ಹಿ ತರ್ಹಿ ವಾಗ್ಭವತಿ ಸಾಗ್ನಾವೇವ ಪ್ರಣೀಯ-ಮಾನೇ ಪುನರಾಗಚ್ಛತಿ ।**

ಮಂತ್ರಾಣಾಂ ಮಂದ್ರಧ್ವನಿಂ ವಿಧತ್ತೇ—ಸೋಮಕ್ರಯಾದೂರ್ಧ್ವಕಾಲೇ ಮೂಲ್ಯ-ರೂಪಾ ವಾಗ್ದೇವೀ ಗಂಧರ್ವೇಷು ತಿಷ್ಠತಿ ॥ ಪುನರಪ್ಯಗ್ನೌ ಪ್ರಣೀಯಮಾನೇ ದೇವಾನಾ-ಗಚ್ಛತಿ ॥ ಯಸ್ಮಾದೇವಂ ತಸ್ಮಾತ್ಸೋಮಕ್ರಯಾದೂರ್ಧ್ವಮಗ್ನಿಪ್ರಣಯನಾತ್ಪ್ರಾಗ್ವಾಚೋ-ಪಾಂಶು ಚರಿತವ್ಯಂ ॥ ಯಥಾ ಪರ್ಶ್ವೈರ್ಧ್ವನಿರ್ನ ಶ್ರೂಯತೇ ತಥಾ ಮಂತ್ರಪಾಠಾದಿಕಂ ಕರ್ತವ್ಯ-ಮಿತ್ಯರ್ಥಃ ॥

ಅತ್ರ ಮೀಮಾಂಸಾ ॥ ದ್ವಾದಶಾಧ್ಯಾಯಸ್ಯ ಚತುರ್ಥಪಾದೇ ಚಿಂತಿತಂ—
“ಕ್ರಯಣೇಷು ವಿಕಲ್ಪಃ ಸ್ಯಾತ್ಸಾಹಿತ್ಯಂ ವಾಗ್ರಿಮೋ ಯತಃ ॥
ಕಾರ್ಯೈಕ್ಯಮಾನಶೇಲಾಭಾದ್ವಶೋಕ್ತೇಶ್ಚ ಸಮುಚ್ಚಯಃ ॥”

ಅಜಯಾ ಕ್ರೀಣಾತಿ ಹಿರಣ್ಯೇನ ಕ್ರೀಣಾತಿ ವಾಸಸಾ ಕ್ರೀಣಾತೀತ್ಯಾದೀನಿ ಬಹೂನಿ ಸೋಮಕ್ರಯಸಾಧನಾನಿ ದ್ರವ್ಯಾಣ್ಯಾಮ್ನಾತಾನಿ ತೇಷಾಂ ಕಾರ್ಯೈಕತ್ವಾದ್ವಿಕಲ್ಪ ಇತಿ ಚೇನ್ನೈವಂ.॥ ಬಹುಭಿರ್ದ್ರವ್ಯೈರ್ವಿಕ್ರೇತುರಾಸತ್ತೇಃ ಸಾಲಭ್ಯಾದ್ದಶಭಿಃ ಕ್ರೀಣಾತೀತಿ ಸಂಖ್ಯೋಕ್ತೇಶ್ಚ ಸಮುಚ್ಚಯಃ ॥

ಸೋಮಕ್ರಯಾನಂತರ ಮೌಲ್ಯರೂಪದಿಂದಿದ್ದ ವಾಗ್ದೇವಿಯು ಗಂಧರ್ವರಲ್ಲಿದ್ದಳಷ್ಟೆ. ಅನಂತರ ಎಂದರೆ ಅಗ್ನಿಪ್ರಣಯನಾನಂತರ (ಅಗ್ನಿಯನ್ನು ಉತ್ತರವೇದಿಗೆ ತರುವ ಕರ್ಮ) ವಾಗ್ದೇವತೆಯು ಗಂಧರ್ವರನ್ನು ತ್ಯಜಿಸಿ ದೇವತೆಗಳ ಬಳಿಗೆ ಹಿಂತಿರುಗಿದಳು. ಆದ್ದರಿಂದ ಆ ಕಾಲದಲ್ಲಿ ಎಂದರೆ ಸೋಮಕ್ರಯಾನಂತರ ಅಗ್ನಿಪ್ರಣಯನಕರ್ಮದ ಮಧ್ಯವರ್ತಿ ಕಾಲದಲ್ಲಿ ಎಂದರೆ ವಾಗ್ದೇವತೆಯು ಗಂಧರ್ವರ ಬಳಿ ಇದ್ದ ಕಾಲದಲ್ಲಿ ಮಾಡುವ ಎಲ್ಲಾ ಕಾರ್ಯಕಲಾಪಗಳನ್ನು ಘಟ್ಟಿಯಾಗಿ ಮಾತನಾಡದೆ ಇತರರಿಗೆ ಕೇಳಿಸದಂತೆ ಮೆತ್ತನೆಯ ಧ್ವನಿಯಿಂದ ಮಾಡಬೇಕು. ಮಂತ್ರಪಠನವನ್ನು ಸಣ್ಣಧ್ವನಿಯಿಂದಲೇ ಮಾಡಬೇಕು.

*English Translation*

**(The ceremonies of carrying the fire, Soma, and the offerings from their places in the Prachinavamsa to the Uttara Vedi).**

The king Soma lived among the Gandharvas. The Gods and Rishis deliberated, as to how the king might be induced to return to them. Vach (the goddess of speech) said, the Gandharvas, lust after women. (therefore shall transform myself into a woman, and then you sell me to them in exchange for Soma.) The gods answered, No! how may we live without thee? She said, sell me unto them; if you should want me, I shall return to you. Thus they did. In the disguise of a big naked women she was sold (by the gods to the Gandharvas) in exchange for Soma. In limitation (of this precedent) they drive away an immaculate cow of oue year's age, being the price at which thэy purchase the king Soma. She (this cow) may, however, be rebought; for Vach (whom this cow, for which the Soma is brought, represents) returned to the gods. Thence the mantras (after Soma has been bought) are to be repeated with a low voice. After Soma has been bought, Vach is with the Gandharvas; but she returns as soon as the ceremony of the Agnipranayana is performed.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಪಂಚಮಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಐದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



# ಅಥ ಪಂಚಮಾಧ್ಯಾಯೇ ದ್ವಿತೀಯಃ ಖಂಡಃ

## ಐದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



ಅಗ್ನಿಪ್ರಣಯನ (ಅಗ್ನಿಯನ್ನು ಉತ್ತರ ವೇದಿಗೆ ತರುವುದು)

ಯಜ್ಞದಲ್ಲಿ ಮಾಡಲ್ಪಡುವ ಸೋಮಕ್ರಯಣ (ಸೋಮಲತೆಗಳನ್ನು ಕೊಂಡುಕೊಳ್ಳುವುದು) ಎಂಬ ಕರ್ಮವನ್ನು ಮಾಡಿ ಮುಗಿಸಿದ ಬಳಿಕ ಆಹವನೀಯಕುಂಡದಲ್ಲಿರುವ ಅಗ್ನಿಯನ್ನು ಉತ್ತರವೇದಿಗೆ ತೆಗೆದುಕೊಂಡು ಹೋಗುವುದಕ್ಕಾಗಿ ನೆರವೇರಿಸಲ್ಪಡುವ ಅಗ್ನಿಪ್ರಣಯನ ಎಂಬ ಕರ್ಮವನ್ನು ಮಾಡಲು ಅಧ್ವರ್ಯುವು ಹೋತೃವನ್ನುದ್ದೇಶಿಸಿ—

**ಅಗ್ನಯೇ ಪ್ರಣೀಯಮಾನಾಯಾನುಬ್ರೂಹೀತ್ಯಾಹಾಧ್ವರ್ಯುಃ ।**

**ಸೋಮಕ್ರಯಮಭಿಧಾಯಾಗ್ನಿಪ್ರಣಯನೀಯಾ ಋಚೋ ವಿಧಾತುಮಾದೌ ಪ್ರೈಷಮಂತ್ರಂ ವಿಧತ್ತೇ—ಪ್ರಾಚೀನವಂಶಗತ ಆಹವನೀಯೇ ಅವಸ್ಥಿತಸ್ಯಾಗ್ನೇಃ ಸೌಮಿಕ್ಯಾಮುತ್ತರವೇದ್ಯಾಂ ನಯನಂ ಯದಸ್ತಿ ತದೇತದತ್ರಾಗ್ನಿಪ್ರಣಯನಂ ತತ್ಕುರ್ವನ್ನಧ್ವರ್ಯುರಗ್ನಯೇ ಪ್ರಣೀಯಮಾನಾಯಾನುಬ್ರೂಹೀತಿ ಪ್ರೈಷಮಂತ್ರಂ ಹೋತಾರಮುದ್ದಿಶ್ಯ ಪಠೇತ್ ॥**

ಎಲೈ ಹೋತೃವೇ ಅಗ್ನಿಪ್ರಣಯನಕಾರ್ಯಕ್ಕಾಗಿ ನಿರ್ದಿಷ್ಟವಾಗಿರುವ ಋಕ್ಕುಗಳನ್ನು ಪಠಿಸು ಎಂದು ಮೇಲಿನ ಪ್ರೈಷ ಮಂತ್ರದಿಂದ ನಿರ್ದೇಶಿಸುವನು. ಆಗ ಹೋತೃವು ಈ ಕರ್ಮದಲ್ಲಿ ಪಠಿಸಬೇಕಾಗಿರುವ ಎಂಟು ಋಕ್ಕುಗಳಲ್ಲಿ—

**ಪ್ರ ದೇವಂ ದೇವ್ಯಾ ಧಿಯಾ ಭರತಾ ಜಾತವೇದಸಂ । ಹವ್ಯಾ ನೋ ವಕ್ಷದಾನುಷಕ್** (ಋ.ಸಂ. ೧೦-೧೭೬-೨) **ಇತಿ ಗಾಯತ್ರೀಂ ಬ್ರಾಹ್ಮಣಸ್ಯಾನುಬ್ರೂಯಾತ್ ॥**

**ತತ್ರ ಹೋತ್ರಾಽನುವಕ್ತವ್ಯಾಸ್ವೃಕ್ಷು ಪ್ರಥಮಾಮೃಚಂ ವಿಧತ್ತೇ—ಹೇ ಋತ್ವಿಜೋ ಜಾತವೇದಸಂ ದೇವಂ ದೇವ್ಯಾ ತದ್ರೂಪಪ್ರಕಾಶಿಕಯಾ ತದ್ಭಾವನಾಯುಕ್ತಯಾ ಧಿಯಾ-ಪ್ರಭರತ ಪ್ರಕರ್ಷೇಣೋತ್ತರವೇದಿಂ ಪ್ರತಿಹರತ ನಯತ ॥ ಅಯಂ ಚ ಜಾತವೇದಾ ಆನುಷಗುತ್ತರವೇದ್ಯಾಮನುಷಕ್ತಾಃ ಸನ್ನೋ ಹವ್ಯಾ, ಅಸ್ಮದೀಯಾನಿ ಹವೀಂಷಿ ವಕ್ಷದ್ದೇವಾನ್ಪ್ರತಿವಹತು ॥ ಇತ್ಯೃಗೇಷಾ ಗಾಯತ್ರೀಚ್ಛಂದಸ್ಕಾ ತಾಂ ಬ್ರಾಹ್ಮಣಸ್ಯ ಯಜಮಾನಸ್ಯ ಹೋತಾಽನುಬ್ರೂಯಾತ್ ॥**

ಎಂಬ ಮೊದಲನೆಯ ಋಕ್ಕನ್ನು ಪಠಿಸುವನು. ಈ ಋಕ್ಕಿನ ಮುಖ್ಯಾಭಿಪ್ರಾಯವು—ಯಜಮಾನನು ಋತ್ವಿಕ್ಕುಗಳನ್ನು ಸಂಬೋಧಿಸಿ, ಎಲೈ ಋತ್ವಿಕ್ಕುಗಳೇ, ಜಾತವೇದನಾಮಕನಾದ ಈ ಅಗ್ನಿಯನ್ನು ಈ ದೇವನಿಗೆ ತಕ್ಕ ಸ್ತೋತ್ರಾದಿಗಳಿಂದ

ಮತ್ತು ಸಮುಚಿತವಾದ ಕರ್ಮದಿಂದ ಕೂಡಿ ಉತ್ತರವೇದಿಯಬಳಿಗೆ ತೆಗೆದುಕೊಂಡುಹೋಗಿ ಅನಂತರ ಈ ಅಗ್ನಿಯು ನಾವು ಅರ್ಪಿಸುವ ಹವಿರಾದಿಗಳನ್ನು ದೇವತೆಗಳಿಗೆ ವಹಿಸಲಿ ಎಂದು. ಈ ಋಕ್ಕು ಗಾಯತ್ರೀಛಂದಸ್ಸಿನದು. ಈ ಛಂದಸ್ಸಿನ ಋಕ್ಕನ್ನೇ ಏತಕ್ಕೆ ಪಠಿಸಬೇಕೆಂದರೆ—

**ಗಾಯತ್ರೋ ವೈ ಬ್ರಾಹ್ಮಣಸ್ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ ತೇಜಸೈವೈನಂ ತದ್ಬ್ರಹ್ಮವರ್ಚಸೇನ ಸಮರ್ಧಯತಿ ॥**

ತದೇತತ್ಪ್ರಶಂಸತಿ— ಬ್ರಾಹ್ಮಣಸ್ಯ ಪ್ರಜಾಪತಿಮುಖಜನ್ಯತ್ವಸಾಮ್ಯೇನ ಗಾಯತ್ರೀಸಂಬಂಧಃ ॥ ತೇಜೋ ವಾ ಇತ್ಯಾದಿಕಂ ಪೂರ್ವವದ್ವ್ಯಾಖ್ಯೇಯಂ ॥

ಎಂಬ ವಾಕ್ಯದ ಪ್ರಕಾರ ಯಜ್ಞಮಾಡುವ ಯಜಮಾನನು ಬ್ರಾಹ್ಮಣನಾಗಿದ್ದರೆ ಅಗ್ನಿಪ್ರಣಯನಕರ್ಮದಲ್ಲಿ ಗಾಯತ್ರೀ ಛಂದಸ್ಸಿನ ಋಕ್ಕನ್ನು ಪಠಿಸಬೇಕು. ಏಕೆಂದರೆ, ಬ್ರಾಹ್ಮಣನು ಗಾಯತ್ರಿಯ ಸ್ವರೂಪವುಳ್ಳವನು. ಬ್ರಾಹ್ಮಣನು ಪ್ರಜಾಪತಿಯ ಮುಖದಿಂದ ಹುಟ್ಟಿರುವುದರಿಂದ (**ಬ್ರಾಹ್ಮಣೋಽಸ್ಯ ಮುಖಮಾಸೀತ್** ಋ. ಸಂ. ೧೦-೯೦-೧೨) ಪ್ರಜಾಪತಿಯ ತೇಜಸ್ಸೇ ಬ್ರಾಹ್ಮಣನಲ್ಲಿರುವುದು. ಗಾಯತ್ರಿಯಲ್ಲಿಯೂ ಅಂತಹ ಬ್ರಹ್ಮವರ್ಚಸ್ಸಿರುವುದು. ಆದುದರಿಂದ ಬ್ರಹ್ಮವರ್ಚಸ್ಸಿನಿಂದ ಕೂಡಿದ ಗಾಯತ್ರೀಛಂದಸ್ಸಿನ ಋಕ್ಕಿನಿಂದಲೇ ಬ್ರಾಹ್ಮಣನಾದವನು ಈ ಕರ್ಮವನ್ನು ನೆರವೇರಿಸಬೇಕು. ಯಜ್ಞಕರ್ಮಗಳಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯರು ಯಾವಯಾವ ಛಂದಸ್ಸಿನ ಋಕ್ಕುಗಳನ್ನು ಪಠಿಸಿ ಕರ್ಮವನ್ನು ನೆರವೇರಿಸಬೇಕೆಂಬ ವಿಷಯದಲ್ಲಿ ಯಜುರ್ವೇದದ ತೈತ್ತಿರೀಯ ಬ್ರಾಹ್ಮಣವಾಕ್ಯವು ಈರೀತಿ ಇರುವುದು—

ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ಗಾಯತ್ರಛಂದಾ ವೈ ಬ್ರಾಹ್ಮಣಃ । ಸ್ವಸ್ಯ ಛಂದಸ್ಯಪ್ರತ್ಯಯುನಸ್ತ್ವಾಯ । ತ್ರಿಷ್ಟುಗ್ಭೀ ರಾಜನ್ಯಸ್ಯ । ತ್ರಿಷ್ಟುಪ್‌ಛಂದಾ ವೈ ರಾಜನ್ಯಃ । ಸ್ವಸ್ಯ ಛಂದಸಃ ಪ್ರತ್ಯಯುನಸ್ತ್ವಾಯ । ಜಗತೀಭಿರ್ವೈಶ್ಯಸ್ಯ । ಜಗತೀಛಂದಾ ವೈ ವೈಶ್ಯಃ । ಸ್ವಸ್ಯ ಛಂದಸಃ ಪ್ರತ್ಯಯುನಸ್ತ್ವಾಯ ॥ (ತೈ. ಬ್ರಾ. ೧-೧-೯-೬,೭)

ಎಂದರೆ ಬ್ರಾಹ್ಮಣನಾದವನು ಗಾಯತ್ರಿಛಂದಸ್ಸಿನ ಮಂತ್ರಗಳಿಂದಲೇ ಅಗ್ನ್ಯಾಧಾನವನ್ನು (ಹೊಸದಾಗಿ ಮಾಡುವ ಯಜ್ಞಕರ್ಮವನ್ನು) ನೆರವೇರಿಸಬೇಕು. ಏಕೆಂದರೆ, ಬ್ರಾಹ್ಮಣನು ಗಾಯತ್ರೀಛಂದಸ್ಸಿನ ಸ್ವರೂಪವುಳ್ಳವನು. ಅದಕ್ಕಾಗಿಯೇ ಬ್ರಹ್ಮವರ್ಚಸ್ಸಿನ ಪ್ರಾಪ್ತಿಗಾಗಿ ಗಾಯತ್ರೀಛಂದಸ್ಸಿನ ಋಕ್ಕುಗಳನ್ನೇ ಉಪಯೋಗಿಸಿ ಯಜ್ಞಕರ್ಮಗಳನ್ನು ಮಾಡಬೇಕು. ಆದರಂತೆ ಕ್ಷತ್ರಿಯರು ಶಕ್ತಿಸಾಮರ್ಥ್ಯಗಳ ಪ್ರಾಪ್ತಿಗಾಗಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ ವೈಶ್ಯರು ಪಶುಸಂಪತ್ತಿನ ಪ್ರಾಪ್ತಿಗಾಗಿ ಜಗತೀಛಂದಸ್ಸಿನ ಋಕ್ಕುಗಳಿಂದಲೂ ಯಜ್ಞಕರ್ಮಗಳನ್ನು ನೆರವೇರಿಸಬೇಕು ಎಂದು ಹೇಳಿದೆ. ಹೀಗೆ ಹೇಳಿರುವುದರಿಂದ ಯಜ್ಞಮಾಡುವ ಯಜಮಾನನು ಕ್ಷತ್ರಿಯನಾಗಿದ್ದರೆ ಅಗ್ನಿಪ್ರಣಯನಕಾರ್ಯದಲ್ಲಿ—

**ಇಮಂ ಮಹೇ ವಿದಥ್ಯಾಯ ಶೂಷಮಿತಿ ತ್ರಿಷ್ಟುಭಂ ರಾಜನ್ಯಸ್ಯಾನುಬ್ರೂಯಾತ್ತ್ರೈಷ್ಟುಭೋ ವೈ ರಾಜನ್ಯ ಓಜೋ ವಾ ಇಂದ್ರಿಯಂ ವೀರ್ಯಂ ತ್ರಿಷ್ಟುಭೋಜಸೈವೈನಂ ತದಿಂದ್ರಿಯೇಣ ವೀರ್ಯೇಣ ಸಮರ್ಧಯತಿ ॥**

ಕ್ಷತ್ರಿಯಸ್ಯ ಯಜಮಾನಸ್ಯ ಯಾಗೇಽನ್ಯಾಮೃಚಂ ವಿಧತ್ತೇ—ತದೇತತ್ಪ್ರಶಂಸತಿ— ತ್ರಿಷ್ಟುಬ್ರಾಜನ್ಯಯೋಃ ಪ್ರಜಾಪತಿಬಾಹುಜನ್ಯತ್ವೇನ ಸಂಬಂಧಃ ॥ ಏತದಪಿ ಗಾಯತ್ರೀ-ಬ್ರಾಹ್ಮಣಯೋರಿವ ಸಪ್ತಮಕಾಂಡೇ ತೈತ್ತಿರೀಯೈರಾಮ್ನಾತಂ—'ಉರಸೋ ಬಾಹುಭ್ಯಾಂ ಪಂಚದಶಂ ನಿರಮಿಮೀತ ತಮಿಂದ್ರೋ ದೇವತಾಽನ್ವಸೃಜ್ಯತ ತ್ರಿಷ್ಟುಪ್ಛಂದೋ ಬೃಹತ್ಸಾಮ ರಾಜನ್ಯೋ ಮನುಷ್ಯಾಣಾಂ' ಇತಿ ॥ ಓಜೋ ವಾ ಇತ್ಯಾದಿಕಂ ಪೂರ್ವವದ್ವ್ಯಾಖ್ಯೇಯಂ ॥

ಇಮಂ ಮಹೇ ವಿದಥ್ಯಾಯ ಶೂಷಂ ಎಂಬ ತ್ರಿಷ್ಟುಪ್ ಛಂದಸ್ಸಿನ ಋಕ್ಕನ್ನು ಪಠಿಸಬೇಕು. ಏಕೆಂದರೆ, ಕ್ಷತ್ರಿಯನು ಪ್ರಜಾಪತಿಯ ಬಾಹುವಿನಿಂದ ಉತ್ಪನ್ನನಾಗಿರುವನು. (ಬಾಹೂ ರಾಜನ್ಯಃ ಕೃತಃ । ಋ. ಸಂ. ೧೦-೯೦-೧೨); ಬಾಹುವು ಓಜಸ್ಸು (ಬಲ) ಇಂದ್ರಿಯ ವೀರ್ಯ (ಬಲ, ಪರಾಕ್ರಮ ಶಕ್ತಿಸಾಮರ್ಥ್ಯ)ಗಳ ಸಂಕೇತವಾಗಿರುವುದು. ತ್ರಿಷ್ಟುಪ್ ಛಂದಸ್ಸಿನಿಂದ ಓಜಸ್ಸು ಮೊದಲಾದವು ಲಭಿಸುವುದರಿಂದ ಕ್ಷತ್ರಿಯನಾದವನು ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಂದಲೇ ಯಜ್ಞಕರ್ಮವನ್ನು ನೆರವೇರಿಸಬೇಕು. ಆದ್ದರಿಂದಲೇ ಹೋತೃವು

ಇಮಂ ಮಹೇವಿದಥ್ಯಾಯ ಶೂಷಂ ಶಶ್ವತ್ಕೃತ್ವ ಈಡ್ಯಾಯ ಪ್ರ ಜಭ್ರುಃ । ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರಃ ॥ (ಋ. ಸಂ. ೩-೫೪-೧)

ಎಂಬ ತ್ರಿಷ್ಟುಪ್ ಛಂದಸ್ಸಿನ ಋಕ್ಕನ್ನು ಪಠಿಸುವನು. ಈ ಋಕ್ಕಿನ ಅರ್ಥವಿವರಣೆಯು ಸಹ ಬ್ರಾಹ್ಮಣವಾಕ್ಯದಲ್ಲಿಯೇ ಉಕ್ತವಾಗಿರುವುದು—

**ಶಶ್ವತ್ಕೃತ್ವ ಈಡ್ಯಾಯ ಪ್ರಜಭ್ರುರಿತಿ ಸ್ವಾನಾಮೇವೈನಂ ತಚ್ಛ್ರೈಷ್ಠ್ಯಂ ಗಮಯತಿ ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರ ಇತಿ ಆಜರಸಂ ಹಾಸ್ಮಿನ್ನಜಸ್ರೋ ದೀದಾಯ ಯ ಏವಂ ವೇದ ॥**

ತಸ್ಯಾ ಋಚೋ ದ್ವಿತೀಯಪಾದಂ ಪಠತಿ—ಉಕ್ತಸ್ಯ ಪಾದದ್ವಯಸ್ಯಾಯಮರ್ಥಃ ॥ ಶೂಷಂ ಸುಖಹೇತುಮಿಮಮಗ್ನಿಂ ಮಹೇ ವಿದಥ್ಯಾಯ ಮಹತೇ ಸ್ತುತ್ಯಾಯ ರಾಜನ್ಯಾಯ ರಾಜನ್ಯಸ್ಯ ಯಾಗಸಿದ್ಧ್ಯರ್ಥಂ ಪ್ರಜಭ್ರುಃ ಪ್ರಕರ್ಷೇಣ ಹೃತವಂತಃ ಉತ್ತರವೇದ್ಯಾಂ ನೀತವಂತ ಇತಿ ॥ ಶ್ರೌತ ಇತಿ ಶಬ್ದೋ ದ್ವಿತೀಯಪಾದಸಮಾಪ್ತ್ಯರ್ಥಃ ॥ ತತ್ಪಾದಪಠನೇನ ಜ್ಞಾತೀನಾಂ ಮಧ್ಯೇ ಯಜಮಾನಸ್ಯ ಶ್ರೈಷ್ಠ್ಯಂ ದರ್ಶಯತಿ—ತಸ್ಯಾ ಋಚ ಉತ್ತರಾರ್ಧಂ ಪಠತಿ—ದಮ್ಯೇಭಿಃ ಪರಕೀಯಸೇನಾಂ ದಮಯಿತುಮರ್ಹೈರನೀಕೈಃ ಸ್ವಕೀಯೈಃ ಸೈನ್ಯೈಃ ಸಹಾಯಂ ಪ್ರಣೀಯಮಾನೋಽಗ್ನಿಃ ನೋಽಸ್ಮಾನ್ಶೃಣೋತು ॥ ಏತೇ ಯಜಮಾನಾಃ ಸಮ್ಯಗನುತಿಷ್ಠಂತೀತ್ಯೇವಂ ಸ್ವಕೀಯದೂತಮುಖಾದವಗಚ್ಛತು । ಯದ್ವಾ । ದಮೋ ಗೃಹಂ ತದ್ಯೋಗ್ಯೈರ್ದಮ್ಯೈರ್ಗೃಹರಕ್ಷಣಾರ್ಥಮವಸ್ಥಾಪಿತೈಃ ಇತ್ಯರ್ಥಃ ॥ ಕಿಂಚಾಯಮಗ್ನಿರ್ದಿವ್ಯೈರ್ದೇವಲೋಕ-ಯೋಗ್ಯೈರ್ಭೋಗೈಃ ಸಹಾಜಸ್ರೋ ನಿರಂತರಮಸ್ಮದ್ಗೃಹೇ ವರ್ತಮಾನೋಽಸ್ಮದೀಯಾಂ ಸ್ತುತಿಂ ಶೃಣೋತ್ವಿತಿ ॥ ಶ್ರೌತ ಇತಿಶಬ್ದ ಉತ್ತರಾರ್ಧ ಸಮಾಪ್ತ್ಯರ್ಥಃ ॥ ಉಕ್ತವೇದನಂ

ಪ್ರಶಂಸತಿ ॥ ವೇದಿತುರ್ಜರಾಸಮಾಪ್ತಿಪರ್ಯಂತಂ ಅಸ್ಮಿನ್ನೇತದೀಯೇ ಗೃಹೇಽಜಸ್ರೋ ನೈರಂತರ್ಯೇಣ ವರ್ತಮಾನೋಽಗ್ನಿರ್ದೀದಾಯ ದೀಪ್ಯತೇ ॥

ಇಮಂ ಮಹೇ ಎಂಬ ಮೇಲಿನ ಋಕ್ಕಿನ ಅರ್ಥವು—ಸುಖಹೇತುವಾದ ಅಗ್ನಿಯನ್ನು ರಾಜನ ಯಾಗಸಿದ್ಧಿಗಾಗಿ ಋತ್ವಿಕ್ಕುಗಳು ಉತ್ತರವೇದಿಯಬಳಿಗೆ ತೆಗೆದುಕೊಂಡುಬಂದರು. ಅಗ್ನಿಯು ಯಾವಾಗಲೂ ಸ್ತುತಿಸಲ್ಪಡಲು ಅರ್ಹನು. ಹೋತೃವು ಯಜಮಾನನನ್ನು ಮುಖ್ಯನನ್ನಾಗಿ (ಅವನ ಬಂಧು ಬಾಂಧವರ ಮುಂದುಗಡೆ ಇರುವಹಾಗೆ ಕರೆದುಕೊಂಡು ಬರುವನು). ಇದು ಈ ಋಕ್ಕಿನ ಪೂರ್ವಾರ್ಧದ ಅರ್ಥವು; ಉತ್ತರಾರ್ಧದ ಅರ್ಥವು—ಯಜಮಾನನ ಶತ್ರುಸೇನೆಗಳನ್ನು ಅಂಕಿತ ದಲ್ಲಿಡಲು ಅಗ್ನಿಯು ತನ್ನ ಜ್ವಾಲಾರೂಪದಿಂದಿರುವ ಸೈನ್ಯಗಳಿಂದ ಯಜಮಾನನಿಗೆ ಸಹಾಯಮಾಡುತ್ತಾ ನಮ್ಮ ಸ್ತೋತ್ರಾದಿ ಗಳನ್ನು ಕೇಳಲಿ. ಯಜಮಾನರು ಚೆನ್ನಾಗಿ ಮಾಡುವ ಯಜ್ಞಕರ್ಮಗಳನ್ನು ಅಗ್ನಿಯು ತಿಳಿಯಲಿ ಮತ್ತು ಈ ಅಗ್ನಿಯು ದೇವಲೋಕಯೋಗ್ಯವಾದ ಭೋಗಾದಿಗಳಿಂದ ಯುಕ್ತನಾಗಿ ನಮ್ಮ ಮನೆಗಳಲ್ಲಿದ್ದುಕೊಂಡು ಯಾವಾಗಲೂ ಎಂದರೆ ಜೀವಿತಕಾಲ ಪರ್ಯಂತವಾಗಿ ನಮ್ಮ ಯಜಮಾನರನ್ನು ರಕ್ಷಿಸುತ್ತಿರಲಿ ಎಂದು ಮುಖ್ಯಾಭಿಪ್ರಾಯವು. ಇನ್ನು ವೈಶ್ಯರು ಪಠಿಸಬೇಕಾದ ಮಂತ್ರಗಳು ಈರೀತಿ ಇವೆ—

ಅಯಮಿಹ ಪ್ರಥಮೋ ಧಾಯಿ ಧಾತೃಭಿರಿತಿ ಜಗತೀಂ ವೈಶ್ಯಸ್ಯಾನು-ಬ್ರೂಯಾತ್ ಜಾಗತೋ ವೈ ವೈಶ್ಯೋ ಜಾಗತಾಃ ಪಶವಃ ಪಶುಭಿರೇವೇನಂ ತತ್ಸಮರ್ಧಯತಿ । ವನೇಷು ಚಿತ್ರಂ ವಿಭ್ವಂ ವಿಶೇ ವಿಶ ಇತ್ಯಭಿರೂಪಾ ಯದ್ಯಜ್ಞೇಽಭಿರೂಪಂ ತತ್ಸಮೃದ್ಧಂ ॥

ವೈಶ್ಯಸ್ಯ ಯಜಮಾನಸ್ಯಾನ್ಯಾಮೃಚಂ ವಿಧತ್ತೇ—ತದೇತತ್ಪ್ರಶಂಸತಿ ।

ಪ್ರಜಾಪತಿ ಮಧ್ಯದೇಶಜನ್ಯತ್ವಸಾಮ್ಯೇನ ಜಗತೀಸಂಬಂಧಃ । ಏತದಪಿ ಶಾಖಾಂತರೇ ಸಮಾಮ್ನಾತಂ—‘ ಮಧ್ಯತಃ ಸಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಚ್ಛಂದೋ ವೈರೂಪಂ ಸಾಮ ವೈಶ್ಯೋ ವೈ ಮನುಷ್ಯಾಣಾಂ ’ ಇತಿ ॥ ಜಾಗತಾ ಇತ್ಯಾ-ದಿಕಂ ಪೂರ್ವವದ್ವ್ಯಾಖ್ಯೇಯಂ ॥ ಚತುರ್ಥಪಾದಮನೂದ್ಯ ಪ್ರಶಂಸತಿ—ಅತ್ರ ತತ್ತದ್ವೈಶ್ಯ-ವಾಚಿನೋ ವಿಶ್ಶಾಯುಕ್ತಸ್ಯ ವಿಟ್ಛಬ್ದಸ್ಯ ಶ್ರೂಯಮಾಣತ್ವಾದ್ವೈಶ್ಯಂ ಪ್ರತ್ಯನುರೂಪತ್ವಂ ॥

ಪ್ರಜಾಪತಿಯ ಮಧ್ಯಪ್ರದೇಶ ಅಥವಾ ಊರು (ತೊಡೆ) ಪ್ರದೇಶದಿಂದ(**ಊರೂ ತದಸ್ಯ ಯದ್ವೈಶ್ಯಃ** । ಋ. ಸಂ. ೧೦-೯೦-೧೨) ವೈಶ್ಯನು ಉತ್ಪನ್ನನಾಗಿರುವನು. ಈ ವಿಷಯವು ತೈತ್ತಿರೀಯಸಂಹಿತೆಯಲ್ಲಿ—**ಮಧ್ಯತಃ ಸಪ್ತದಶಂ ನಿರಮಿಮೀತ ತಂ ವಿಶ್ವೇ ದೇವಾ ದೇವತಾ ಅನ್ವಸೃಜ್ಯಂತ ಜಗತೀಛಂದೋ ವೈರೂಪಗ್ಂ ಸಾಮ ವೈಶ್ಯೋ ವೈ ಮನುಷ್ಯಾಣಾಂ** । ಎಂದು ಹೇಳಿರುವುದು. ವೈಶ್ಯನು ಜಗತೀಛಂದಸ್ಸಿನ ಸ್ವರೂಪವುಳ್ಳವನು. ಏಕೆಂದರೆ ಪಶುಗಳೂ (ಪಶು ಸಂಪತ್ತು) ಜಗತೀಛಂದಸ್ಸಿನ ಸ್ವರೂಪವುಳ್ಳವು. ಈ ಪಶುಸಂಪತ್ತಿನಿಂದ ಕೂಡಿರುವಂತೆ ಮಾಡಬೇಕಾದರೆ ವೈಶ್ಯನು ಜಗತೀ ಛಂದಸ್ಸಿನ ಋಕ್ಕುಗಳನ್ನು ಪಠಿಸಿ ಯಜ್ಞಕರ್ಮವನ್ನು ನೆರವೇರಿಸಬೇಕು. ಆದುದರಿಂದ ಯಜ್ಞಮಾಡುವ ಯಜಮಾನನು ವೈಶ್ಯನಾಗಿದ್ದರೆ ಹೋತೃವು—

**ಅಯಮಿಹ ಪ್ರಥಮೋ ಧಾಯಿ ಧಾತೃಭಿರ್ಹೋತಾ ಯಜಿಷ್ಠೋ ಅಧ್ವರೇಷ್ವೀಡ್ಯಃ ।**
**ಯಮಪ್ನವಾನೋ ಭೃಗವೋ ವಿರುರುಚುರ್ವನೇಷು ಚಿತ್ರಂ ವಿಭ್ವಂ ವಿಶೇವಿಶೇ ॥**
(ಋ. ಸಂ. ೪-೭-೧)

ಎಂದು ಜಗತೀಛಂದಸ್ಸಿನ ಋಕ್ಕನ್ನು ಪಠಿಸುವನು. ಏಕೆಂದರೆ, ಹಿಂದೆ ಹೇಳಿದಂತೆ ವೈಶ್ಯನು ಜಗತೀಛಂದಸ್ಸಿನ ಸ್ವರೂಪವುಳ್ಳವನು. ಪಶುಗಳೂ (ಪಶುಸಂಪತ್ತೂ) ಜಗತೀಛಂದಸ್ಸಿನ ಸ್ವರೂಪವುಳ್ಳವು. ಆದ್ದರಿಂದ ವೈಶ್ಯನು ಸಂಪತ್ತಿನಿಂದ ಕೂಡಿ ಅಭಿವೃದ್ಧಿಯಾಗುವುದಕ್ಕಾಗಿ ಜಗತೀಛಂದಸ್ಸಿನ ಮಂತ್ರಗಳನ್ನು ಪಠಿಸಬೇಕು. ಈ ಋಕ್ಕಿನ ಕೊನೆಯ ಪಾದದಲ್ಲಿ **ವಿಶೇವಿಶೇ** ಎಂಬ ವೈಶ್ಯಶಬ್ದ ಸೂಚಕವಾದ ಪದಪ್ರಯೋಗವಿರುವುದು. ಯಜ್ಞಗಳಲ್ಲಿ ಆಯಾ ಸಂದರ್ಭಕ್ಕನುಸಾರವಾದ ಅರ್ಥವನ್ನು ವಿವರಿಸುವ ಮಂತ್ರಗಳ ಪಠನದಿಂದ ಉದ್ದಿಷ್ಟವಾದ ಫಲವು ವಿಶೇಷವಾಗಿ ಲಭಿಸುವುದು. ಆದ್ದರಿಂದ ವೈಶ್ಯಶಬ್ದ ಸೂಚಕವಾದ ಪದಪ್ರಯೋಗವಿರುವ ಜಗತೀಛಂದಸ್ಸಿನ ಈ ಋಕ್ಕನ್ನು ಇಲ್ಲಿ ಪಠಿಸಿರುವುದು ಈ ಸಂದರ್ಭಕ್ಕೆ ಅನುಸಾರವಾಗಿದೆ. ಈರೀತಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬುವರು ಅವರವರು ಅಪೇಕ್ಷಿಸುವ ಫಲಕ್ಕನುಸಾರವಾಗಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಬೇರೆಬೇರೆ ವಿಧವ ಛಂದಸ್ಸುಗಳಿಂದ ಒಂದೊಂದು ಪ್ರಥಮ ಋಕ್ಕನ್ನೂ ಹೇಳಿ ಈಗ ಈ ಅಗ್ನಿಪ್ರಣಯನ ಕರ್ಮದಲ್ಲಿ ಎಲ್ಲಾ ವರ್ಣದವರೂ ಸಾಮಾನ್ಯವಾಗಿ ಪಠಿಸಬೇಕಾದ ಇತರ ಮಂತ್ರಗಳನ್ನು ಹೇಳಲು ಪ್ರಾರಂಭಿಸಿ ಈಗ ಎರಡನೆಯ ಋಕ್ಕನ್ನು (ಮಂತ್ರವನ್ನು) ಹೋತೃವು ಪಠಿಸುವನು—

ಅಯಮು ಷ್ಯ ಪ್ರ ದೇವಯುರಿತಿ ಅನುಷ್ಟುಭಿ ವಾಚಂ ವಿಸೃಜತೇ ವಾಗ್ವಾ ಅನುಷ್ಟುಬ್ವಾಚ್ಯೇವ ತದ್ವಾಚಂ ವಿಸೃಜತೇ । ಅಯಮು ಷ್ಯ ಇತಿ ಯದಾಹಾಯಮು ಸ್ಯಾಗಮಂ ಯಾ ಪುರಾ ಗಂಧರ್ವೇಷ್ವವಾತ್ಸಮಿತ್ಯೇವ ತದ್ವಾಕ್ಪ್ರಬ್ರೂತೇ ॥

ಇತ್ಥಂ ಜಾತಿಭೇದೇನ ಪ್ರಥಮಾಯಾ ಋಚೋ ವ್ಯವಸ್ಥಾಮಭಿಧಾಯ ಜಾತಿತ್ರಯಸಾಧಾರಣಭೂತಾಂ ದ್ವಿತೀಯಾಮೃಚಂ ವಿಧತ್ತೇ—ಸೋಮಕ್ರಯಣಕಾಲೇ ಯದ್ವಾಚ ಉಪಾಂಶುತ್ವಂ ವಿಹಿತಂ ತಸ್ಯಾಸ್ಮಿನ್ಕಾಲೇ ವಿಸರ್ಗಂ ವಿಧತ್ತೇ- ಅಯಮು ಷ್ಯೇತ್ಯೇತಸ್ಯಾಮೃಚ್ಯುಪಾಂಶುರೂಪಾಂ ವಾಚಂ ವಿಸೃಜೇತ್ ॥ ತದೇತತ್ಪ್ರಶಂಸತಿ॥ ಅಯಮು ಷ್ಯೇತ್ಯಸ್ಯಾ ಅನುಷ್ಟುಪ್ಛಂದಸ್ಕತ್ವಾದನುಷ್ಟುಭೋ ವಾಗ್ರೂಪತ್ವಸ್ಯ ಸರ್ವಶ್ರುತಿಪ್ರಸಿದ್ಧತ್ವಾದನುಷ್ಟುಬ್ರೂಪಾಯಾ ವಾಚ್ಯೇವೋಪಾಂಶುತ್ವನಿರೂಪಾಂ ವಾಚಂ ತನ್ಮಂತ್ರಪಾಠೇನ ವಿಸೃಜತೇ ॥

ಏತನ್ಮಂತ್ರಗತಪ್ರಥಮಪಾದಸ್ಯ ಪೂರ್ವಭಾಗಮನೂದ್ಯ ವ್ಯಾಚಷ್ಟೇ ॥ ಬ್ರಾಹ್ಮಣಗತೋಽಯಂ ಶಬ್ದೋಽತ್ರ ಸ್ತ್ರೀಲಿಂಗತ್ವೇನ ಪರಿಣೇಯಃ ॥ ತಚ್ಛಬ್ದಪರ್ಯಾಯಸ್ಯ ತ್ಯಚ್ಛಬ್ದಸ್ಯ ಟಾಬಂತಸ್ಯ ಸ್ಯೇತಿರೂಪಂ ಭವತಿ ॥ ಏವಂ ಸತ್ಯಯಮುಷ್ಯ ಇತಿ ಮಂತ್ರೋ ಯದಾಹ ತತ್ರ ವಾಗ್ದೇವತೇತ್ಥಂ ಬ್ರೂತೇ—ಕಥಮಿತಿ ತದುಚ್ಯತೇ ॥ ಪುರಾ ಗಂಧರ್ವೇಷು ಯಾಽಹಂ ವಾಗವಾತ್ಸಂಸ್ಥಿತಾಽಸ್ಮಿ ಸ್ಯಾಽಽಗಮಂ ಸೇಯಮೇವಾಽಽಗಮಮಿದಾನೀಮಾಗತಾಸ್ಮೀತಿ ॥ ಅತೋ ವಾಗ್ದೇವತಯೈವಮುಚ್ಯಮಾನತ್ವಾದತ್ರಾರ್ಥಚೋರ್ಽಭಿಯುಕ್ತ ಇತ್ಯರ್ಥಃ ॥

ಸೋಮಕ್ರಯಣಕಾಲದಲ್ಲಿಯೂ ಅಲ್ಲಿಂದ ಇದುವರೆಗೂ ನಡೆದ ಕರ್ಮಗಳಲ್ಲಿ ಮಂತ್ರಗಳನ್ನು ಉಪಾಂಶುಕ್ರಮದಿಂದ ಎಂದರೆ ಮೆತ್ತನೆಯ ಧ್ವನಿಯಿಂದ ಪಠಿಸಬೇಕೆಂಬ ವಿಧಿಯಂತೆ ಮಂತ್ರಗಳನ್ನು ಸಣ್ಣಧ್ವನಿಯಿಂದ ಪಠಿಸಿದ್ದಾಯಿತು. ಈಗ ಎಂದರೆ ಇನ್ನುಮುಂದೆ ಆ ನಿಯಮವನ್ನು ವಿಸರ್ಜನೆಮಾಡಲಾಗುವುದು. ಎಂದರೆ ಮೆಲ್ಲಗೆ ಹೇಳುವುದನ್ನು ಬಿಟ್ಟು ಘಟ್ಟಿಯಾದ ಧ್ವನಿಯಿಂದ ಮಂತ್ರಗಳನ್ನು ಪಠಿಸಲಾಗುವುದು. ಈ ಕ್ರಮಕ್ಕೆ ವಾಚೋವಿಸರ್ಜನವೆಂದು ಹೆಸರು. ಇದನ್ನು ಅನುಷ್ಟುಪ್ ಛಂದಸ್ಸಿನ ಋಕ್ಕಿನಿಂದ ಪ್ರಾರಂಭಿಸುವುದು ಪ್ರಸಿದ್ಧವಾಗಿದೆ. ಏಕೆಂದರೆ, ವಾಕ್ಕೇ (ವಾಕ್ಯವೇ) ಅನುಷ್ಟುಪ್‌ಛಂದಸ್ಸ್ವರೂಪವು. ಆದ್ದರಿಂದ ಆ ಛಂದಸ್ಸಿನ ಮಂತ್ರದಿಂದಲೇ ಮೆಲ್ಲಗೆ ಹೇಳುವುದನ್ನು ಬಿಟ್ಟುಬಿಡಲಾಗುವುದು. ಆದ್ದರಿಂದ ಹೋತೃವು—

**ಅಯಮು ಷ್ಯ ಪ್ರ ದೇವಯುರ್ಹೋತಾ ಯಜ್ಞಾಯ ನೀಯತೇ ।**
**ರಥೋ ನ ಯೋರಭೀವೃತೋ ಘೃಣೀವಾಂಚೇತತಿ ತ್ಮನಾ ॥**
(ಋ. ಸಂ. ೧೦-೧೭೬-೩)

ಎಂಬ ಋಕ್ಕನ್ನು ಘಟ್ಟಿಯಾಗಿ ಪಠಿಸುವನು. ಈ ವಾಕ್ಯವು (ವಾಗ್ದೇವತೆಯು) ಹಿಂದೆ ಗಂಧರ್ವರಲ್ಲಿದ್ದಿತು. ಈಗ ಅದು ಹೀಗೆ ಹೇಳುವುದು—ನಾನು ಹಿಂದೆ ಸೋಮಕ್ರಯಣಕಾಲದಲ್ಲಿ ಗಂಧರ್ವರಲ್ಲಿದ್ದೆನು. ಈಗ ಹಿಂದಕ್ಕೆ (ದೇವತೆಗಳ ಬಳಿಗೆ) ಬಂದಿರುವೆನು ಎಂದು ಹೇಳುವುದರಿಂದ ಹೋತೃವು ಅದಕ್ಕನುಸಾರವಾಗಿ ಮಂತ್ರವನ್ನು ಘಟ್ಟಿಯಾಗಿ ಹೇಳುವನು.

ವಾಗ್ದೇವತೆಯು ಗಂಧರ್ವರಲ್ಲಿದ್ದು ಈಗ ಹಿಂದಕ್ಕೆ ಬಂದಿರುವೆನೆಂದು ಹೇಳಿರುವ ವಿಷಯದಲ್ಲಿ ಒಂದು ಉಪಾಖ್ಯಾನವು ತೈತ್ತಿರೀಯಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು—

**ತಗ್ಂ ಸೋಮಮಾಹ್ರಿಯಮಾಣಂ ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ಸ ತಿಸ್ರೋ ರಾತ್ರೀಃ ಪರಿಮುಷಿತೋಽವಸತ್ತಸ್ಮಾತ್ತ್ರಿಸ್ರೋ ರಾತ್ರೀಃ ಕ್ರೀತಃ ಸೋಮೋ ವಸತಿ ತೇ ದೇವಾ ಅಬ್ರುವನ್ತ್ಸ್ತ್ರೀಕಾಮಾ ವೈ ಗಂಧರ್ವಾಃ ಸ್ತ್ರಿಯಾ ನಿಷ್ಕ್ರೀಣಾಮೇತಿ ತೇ ವಾಚಗ್ಂ ಸ್ತ್ರಿಯಮೇಕಹಾಯನೀಂ ಕೃತ್ವಾ ತಯಾ ನಿರಕ್ರೀಣನ್ತ್ಸಾ ರೋಹಿದ್ರೂಪಂ ಕೃತ್ವಾ ಗಂಧರ್ವೇ-ಭ್ಯೋಽಪಕ್ರಮ್ಯಾತಿಷ್ಠತ್ತದ್ರೋಹಿತೋ ಜನ್ಮ ತೇ ದೇವಾ ಅಬ್ರುವನ್ನಪ ಯುಷ್ಮದಕ್ರಮೀನ್ನಾ-ಸ್ಮಾನುಪಾವರ್ತತೇ ವಿ ಹ್ವಯಾಮಹಾ ಇತಿ ಬ್ರಹ್ಮ ಗಂಧರ್ವಾ ಅವದನ್ನಗಾಯನ್ದೇವಾಃ ಸಾ ದೇವಾನ್ಗಾಯತ ಉಪಾವರ್ತತ ತಸ್ಮಾದ್ಗಾಯಂತಗ್ಂ ಸ್ತ್ರಿಯಃ ಕಾಮಯಂತೇ ಕಾಮುಕಾ ಏನಗ್ಂ ಸ್ತ್ರಿಯೋ ಭವಂತಿ ಯ ಏವಂ ವೇದಾಥೋ ಯ ಏವಂ ವಿದ್ವಾನಪಿ ಜನ್ಯೇಷು ಭವತಿ ತೇಭ್ಯ ಏವ ದದತ್ಯುತ ಯದ್ಬಹುತಯಾ ಭವಂತಿ ॥** (ತೈ. ಸಂ. ೬-೧-೬-೫,೬)

ಪೂರ್ವದಲ್ಲಿ ಗಾಯತ್ರೀಛಂದಸ್ಸು ಶ್ಯೇನಪಕ್ಷಿಯರೂಪವನ್ನು ಧರಿಸಿ ಸ್ವರ್ಗಕ್ಕೆ ಹಾರಿಹೋಗಿ ಅಲ್ಲಿದ್ದ ಸೋಮಲತೆಯನ್ನು ಭೂಮಿಗೆ ತರುತ್ತಿರುವಾಗ ಮಾರ್ಗಮಧ್ಯದಲ್ಲಿ ವಿಶ್ವಾವಸುವೆಂಬ ಗಂಧರ್ವನು ಅದನ್ನು ಅಪಹರಿಸಿ ತನ್ನಬಳಿ ಮೂರುರಾತ್ರಿಗಳವರೆಗೆ ಇಟ್ಟಿದ್ದನು. ಆದ್ದರಿಂದ ಈಗಲೂ ಸೋಮಕ್ರಯಣಾನಂತರ ಅದನ್ನು ಮೂರು ರಾತ್ರಿಗಳವರೆಗೆ ಹಾಗೆಯೇ ಇಟ್ಟಿರುವುದು ರೂಢಿಯಲ್ಲಿ ಬಂದಿದೆ. ಆಗ ದೇವತೆಗಳೆಲ್ಲಾ ಸೇರಿ, ಆ ಗಂಧರ್ವನಿಂದ ಸೋಮವನ್ನು ಹೇಗೆ ಹಿಂದಕ್ಕೆ ತರಬೇಕೆಂದು ಆಲೋಚನೆಮಾಡುತ್ತಿರುವಾಗ ಅವರಿಗೆ ಒಂದು ವಿಷಯವು ತಟ್ಟನೆ ಮನಸ್ಸಿಗೆ ಹೊಳೆಯಿತು. ಗಂಧರ್ವರು ಸ್ತ್ರೀಯರನ್ನು ಕಂಡರೆ ಬಹಳವಾಗಿ ಮೋಹಿಸುವರು. ಆದ್ದರಿಂದ ಓರ್ವ ಸುಂದರಿಯಾದ ತರುಣಿಯನ್ನು ಗಂಧರ್ವರಿಗೆ ಕೊಟ್ಟು ಅದಕ್ಕೆ ಬದಲಾಗಿ ಸೋಮವನ್ನು ಕೊಂಡುಕೊಳ್ಳಬಹುದೆಂದು ಯೋಚಿಸಿದರು. ಅನಂತರ ಅದಕ್ಕಾಗಿ ದೇವತೆಗಳು ವಾಗ್ದೇವತೆಯನ್ನು

ಕರೆದು ಎಲೈ ವಾಗ್ದೇವತೆಯೇ, ನೀನು ಓರ್ವ ಸುಂದರತರುಣಿಯ ರೂಪವನ್ನು ಧರಿಸು. ನಿನ್ನನ್ನು ಗಂಧರ್ವರಿಗೆ ಮಾರಿ ಸೋಮವನ್ನು ತಂದು ಯಜ್ಞವನ್ನು ನೆರವೇರಿಸುವೆವು ಎಂದು ಹೇಳಲು, ಅದಕ್ಕೆ ವಾಗ್ದೇವತೆಯು ಒಪ್ಪಿಕೊಂಡಳು. ಬಳಿಕ ದೇವತೆಗಳು ಆ ಸುಂದರತರುಣಿಯನ್ನು ವಿಶ್ವಾವಸುವೆಂಬ ಗಂಧರ್ವರಾಜನಿಗೆ ಮಾರಿ ಸೋಮವನ್ನು ಕೊಂಡುತಂದರು. ದೇವತೆಗಳ ಕಾರ್ಯವಾದನಂತರ ಸುಂದರ ಯುವತಿಯ ರೂಪದಲ್ಲಿದ್ದ ವಾಗ್ದೇವತೆಯು ಕೆಂಪುಜಿಂಕೆಯ ರೂಪವನ್ನು ಧರಿಸಿ ಗಂಧರ್ವರ ಬಳಿಯಿಂದ ದೇವತೆಗಳ ಸಮೀಪಕ್ಕೆ ಓಡಿಬಂದಳು. ಈ ವಿಷಯವನ್ನೇ ಇಲ್ಲಿ–ವಾಗ್ದೇವತೆಯು ಹಿಂದಕ್ಕೆ ಬಂದಿರುವೆನು ಎಂದು–ಹೇಳಲಾಗಿದೆ. ವಾಗ್ದೇವತೆಯು ಸುಂದರಯುವತಿಯ ರೂಪದಿಂದ ಗಂಧರ್ವರ ಬಳಿ ಇದ್ದು ಮತ್ತೆ ದೇವತೆಗಳ ಸಮೀಪಕ್ಕೆ ಬರುವವರೆಗೂ ನಡೆಯುವ ಸೋಮಕ್ರಯಣ (ಸೋಮವನ್ನು ಕೊಂಡುಕೊಳ್ಳುವುದು) ಮತ್ತು ಅಗ್ನಿಪ್ರಣಯನದಲ್ಲಿ ಇದುವರೆಗೂ ನಡೆದು ಕರ್ಮ ಇವೆಲ್ಲವನ್ನೂ ವಾಗ್ದೇವತೆಯು ಹತ್ತಿರ ಇಲ್ಲದ ಕಾರಣ ಉಪಾಂಶುಧ್ವನಿಯಿಂದ (low voice) ಹೇಳುವರು. ವಾಗ್ದೇವತೆಯು ಹಿಂದಕ್ಕೆ ಬಂದಬಳಿಕ ಹೋತೃವು ನಿರ್ಭಯವಾಗಿ ಮಂತ್ರಗಳನ್ನು ಘಟ್ಟಿಯಾಗಿ (loud voice) ಉಚ್ಚರಿಸಲು ಪ್ರಾರಂಭಮಾಡುವನು ಎಂದು ಮುಖ್ಯಾಭಿಪ್ರಾಯವು.

**ಅಯಮಗ್ನಿರುರುಷ್ಯತೀತಿ ಅಯಂ ವಾ ಅಗ್ನಿರುರುಷ್ಯತಿ ಅಮೃತಾದಿವ ಜನ್ಮನ ಇತ್ಯಮೃತತ್ವಮೇವಾಸ್ಮಿಂಸ್ತದ್ದಧಾತಿ ಸಹಸಶ್ಚಿತ್ಸಹೀಯಾನ್ದೇವೋ ಜೀವಾತವೇ ಕೃತ ಇತಿ ದೇವೋ ಹ್ಯೇಷ ಏತಜ್ಜೀವಾತವೇ ಕೃತೋ ಯದಗ್ನಿಃ ॥**

ತೃತೀಯಾಮೃಚಂ ವಿಧತ್ತೇ— ಅನುಬ್ರೂಯಾದಿತ್ಯನುಕ್ತಸ್ಥಲೇಷ್ವನುವರ್ತತೇ— ಏತತ್ಪದಾರ್ಥಪ್ರಸಿದ್ಧಂ ವೈ ಶಬ್ದೇನ ದರ್ಶಯತಿ-- ಅಯಂ ಪ್ರಣೀಯಮಾನೋಽಗ್ನಿರ್ಯಜಮಾನಮುರುಷ್ಯತಿ ಕರ್ಮನಿಷ್ಪಾದನೇನ ರಕ್ಷತೀತ್ಯೇತತ್ಪ್ರಸಿದ್ಧಂ ॥ ದ್ವಿತೀಯಪಾದಮನೂದ್ಯ ತಾತ್ಪರ್ಯಂ ದರ್ಶಯತಿ— ಅಮೃತಾನ್ಮರಣರಹಿತಾದ್ದೇವತಾರೂಪಾಜ್ಜನ್ಮನೋ ಯಥಾ ರಕ್ಷಾ ಸಂಪದ್ಯತೇ ॥ ನ ಹಿ ಮರಣರಾಹಿತ್ಯಾದಧಿಕಾ ರಕ್ಷಾ ಕ್ವಚಿದಸ್ತಿ । ತದ್ವದಿಯಮಗ್ನಿಕರ್ತೃಕಾ ರಕ್ಷೇತ್ಯರ್ಥಃ ॥ ತತ್ತೇನ ಮಂತ್ರಪಾಠೇನ ಅಮೃತತ್ವಮೇವ ದೇವತ್ವಮೇವಾಸ್ಮಿನ್ಯಜಮಾನೇ ಸಂಪಾದಯತಿ ॥ ದ್ವಿತೀಯಾರ್ಧಮನುವದತಿ– ದೇವೋಽಗ್ನಿರ್ಜೀವಾತವೇ ಅಸ್ಮಾಕಂ ಜೀವನೌಷಧಾಯ ಸಹಸಶ್ಚಿತ್ಪ್ರಬಲಾದಪಿ ಪುರುಷಾತ್ಸಹೀಯಾನತಿಶಯೇನ ಪ್ರಬಲೀಕೃತೋ ನಿಷ್ಪಾದಿತ ಇತ್ಯುತ್ತರಾರ್ಧಸ್ಯಾರ್ಥಃ ॥ ತಮಿಮಮರ್ಥಂ ವಿಸ್ಪಷ್ಟಯತಿ— ಯೋಽಗ್ನಿರಸ್ತ್ಯೇಷ ದೇವ ಏತೇನೋತ್ತರಾರ್ಧಪಾಠೇನ ಜೀವನೌಷಧಾಯ ಸಂಪಾದಿತೋ ಭವತಿ ॥

ಅನಂತರ ಹೋತೃವು ಮುಂದುವರೆದು ಈ ಕರ್ಮದಲ್ಲಿ ಮೂರನೆಯ ಋಕ್ಕಾದ ಈ ಮಂತ್ರವನ್ನು ಪಠಿಸುವನು.

**ಅಯಮಗ್ನಿರುರುಷ್ಯತ್ಯಮೃತಾದಿವ ಜನ್ಮನಃ ।**
**ಸಹಸಶ್ಚಿತ್ಸಹೀಯಾನ್ದೇವೋ ಜೀವಾತವೇ ಕೃತಃ ॥** (ಋ. ಸಂ. ೧೦-೧೭೬-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಈ ಅಗ್ನಿಯು ಯಜ್ಞಮಾಡುವ ಯಜಮಾನರಿಗೆ ದೇವತಾರೂಪವಾದ ಜನ್ಮವನ್ನು ಉಂಟುಮಾಡುವುದರಿಂದ ಮನುಷ್ಯರಿಂದ ಪ್ರಾಪ್ತವಾಗುವ ಭಯವನ್ನೂ ಮತ್ತು ದೇವತೆಗಳಿಂದ ಪ್ರಾಪ್ತವಾಗುವ ಭಯ

ವನ್ನೂ ನಿವಾರಣೆಮಾಡಿ ಕಾಪಾಡುವನು. ಈ ಅಗ್ನಿಯು ಶಕ್ತಿಗಿಂತಲೂ ಅತಿಬಲಿಷ್ಠನಾದವನು. ಯಜ್ಞಕ್ಕಾಗಿ ದೀರ್ಘಾಯುಸ್ಸನ್ನು ಅನುಗ್ರಹಿಸಲು ನಿರ್ಮಿಸಲ್ಪಟ್ಟಿರುವನು ಎಂದು ಇಲ್ಲಿ ಹೋತೃವು ಈ ಋಕ್ಕಿನ ಪೂರ್ವಾರ್ಧಪಠನದಿಂದ ಯಜಮಾನನನ್ನು ಮರಣರಹಿತನನ್ನಾಗಿ ಎಂದರೆ ದೀರ್ಘಾಯುಸ್ಸುಳ್ಳವನನ್ನಾಗಿ ಮಾಡುವನು. ಋಕ್ಕಿನ ಉತ್ತರಾರ್ಧಪಠನದಿಂದ ಈ ಅಗ್ನಿಯ ಶಕ್ತಿಯು ಬಹಳ ಸಾಮರ್ಥ್ಯವುಳ್ಳದ್ದಾಗುವುದು. ಆದುದರಿಂದ ಈ ಋಕ್ಕನ್ನು ಪಠಿಸುವುದರಿಂದ ಅಗ್ನಿಯು ನಮ್ಮ ಜೀವಿತವನ್ನು ರಕ್ಷಿಸಲು ಅನುಕೂಲವಾಗುವುದು.

ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧೀತಿ ಏತದ್ವಾ ಇಳಾಯಾಸ್ಪದಂ ಯದುತ್ತರವೇದೀ ನಾಭಿಃ । ಜಾತವೇದೋ ನಿಧೀಮಹೀತಿ ನಿಧಾಸ್ಯಂತೋ ಹ್ಯೇನಂ ಭವಂತಿ । ಅಗ್ನೇ ಹವ್ಯಾಯ ವೋಳ್ಹವ ಇತಿ ಹವ್ಯಂ ಹಿ ವಕ್ಷ್ಯನ್ಭವತಿ ॥

ಚತುರ್ಥ್ಯಾ ಋಚಃ ಪೂರ್ವಾರ್ಧಂ ಪಠತಿ—ಪೃಥಿವ್ಯಾ ನಾಭಾ ಭೂಮಿಸ್ಥಾನಾತ್ಪ್ರಾಗುತ್ತರವೇದ್ಯಾಂ ನಾಭಿಸ್ಥಾನೀಯೇ ಧಿಷ್ಣ್ಯೇ ಹೇಽಗ್ನೇ ತ್ವಾ ನಿಧೀಮಹೀತಿ ವಕ್ಷ್ಯಮಾಣಪದೇನ ಸಂಬಂಧಃ ॥ ನಾಭಿರೇವ ವಿಶೇಷ್ಯತೇ—ಇಳಾಯಾಃ ಪದ ಇತಿ ಇಳಾಶಬ್ದೋ ಗೋವಾಚೀ ॥ ಇಳಾಖ್ಯಾಂ ದೇವತಾಂ ಪ್ರಕೃತ್ಯ ಗೌರ್ವಾ ಅಸ್ಯೈ ಶರೀರಮಿತಿ ಶ್ರುತತ್ವಾತ್ ॥ ಇಳೇಽಸಂತೇ ಸರಸ್ವತೀತಿ ನಾಜ್ಞಾಮಸು ಶ್ರುತತ್ವಾತ್ ॥ ತಸ್ಯಾಃ ಪದಂ ಘೃತನಿಷ್ಪೀಡನೇನ ಪ್ರಶಸ್ತಂ ಸಾ ಯತ್ರ ಯತ್ರ ನ್ಯಕ್ರಾಮತ್ತತೋ ಘೃತಮಪೀಡ್ಯತ ಇತಿ ಶ್ರುತೇಃ ॥ ತತ್ಪದರೂಪತ್ವವಿಶೇಷಣೋತ್ತರವೇದಿನಾಭಿಃ ಪ್ರಶಸ್ಯತೇ ॥ ಯದ್ವಾ ಸೋಮಕ್ರಯಣ್ಯಾ ಗೋಪದಪಾಂಸುರಸ್ಯಾಂ ನಾಭೌ ಪ್ರಕ್ಷಿಪ್ಯತ ಇತಿ ತತ್ಪದರೂಪತ್ವಂ ॥ ನಾಭೇಃ ಪದರೂಪತ್ವಂ ವಿಶದಯತಿ—ತೃತೀಯಂ ಪಾದಮನೂದ್ಯ ವ್ಯಾಚಷ್ಟೇ—ಏನಮಗ್ನಿಂ ವೇದಿನಾಭೌ ನಿಧಾಸ್ಯಂತಃ ಸ್ಥಾಪಯಿತುಮುದ್ಯುಕ್ತಾ ಭವಂತ್ಯೃತ್ವಿಜಃ ತಸ್ಮಾನ್ನಿಧೀಮಹೀತ್ಯುಪಪನ್ನಂ ॥ ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ-ಹೇಽಗ್ನೇ ಹವಿರ್ವೋಢುಂ ತ್ವಾಂ ನಿಧೀಮಹೀತಿ ಪೂರ್ವತ್ರಾನ್ವಯಃ ॥ ಹವ್ಯಂ ವಕ್ಷ್ಯನ್ವೋಢುಮುದ್ಯುಕ್ತೋ ಭವನ್ನಗ್ನಿಸ್ತಸ್ಮಾದ್ವೋಢವ ಇತ್ಯೇತದುಚಿತಂ ॥

ಬಳಿಕ ಹೋತೃವು ನಾಲ್ಕನೆಯ ಋಕ್ಕನ್ನು ಪಠಿಸುವನು.

ಇಳಾಯಾಸ್ತ್ವಾ ಪದೇ ವಯಂ ನಾಭಾ ಪೃಥಿವ್ಯಾ ಅಧಿ ।
ಜಾತವೇದೋ ನಿಧೀಮಹ್ಯಗ್ನೇ ಹವ್ಯಾಯ ವೋಳ್ಹವೇ ॥ (ಋ. ಸಂ. ೩-೨೯-೪)

ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಜಾತವೇದನಾಮಕನಾದ ಅಗ್ನಿಯೇ, ಪೃಥಿವಿಯು ನಾಭಿಸ್ಥಾನವೆಂದು ಹೇಳಲ್ಪಡುವ ಉತ್ತರವೇದಿಯಲ್ಲಿ ನಾವು ನಿನ್ನನ್ನು ಸ್ಥಾಪಿಸುವೆವು (ಇಡುವೆವು) ಎಂದು. ಇಳಾಶಬ್ದವು ಗೋವಾಚಿಯಾಗಿರುವುದು. ಇಳಾಯಾಃ ಪದೇ ಎಂದರೆ ಘೃತನಿಷ್ಪೀಡನಾದಿ ಕರ್ಮಗಳಿಂದ ಪ್ರಶಸ್ತವಾದ ಗೋವಿನ ಕಾಲುಗಳು ಇಡಲ್ಪಟ್ಟಿರುವ ಉತ್ತರವೇದಿಯು ನಾಭಿಪ್ರದೇಶವೇ ಇಳಾಯಾಸ್ಪದಂ ಎಂಬ ಶಬ್ದಗಳಿಂದ ವರ್ಣಿಸಲ್ಪಡುವುದು. ಜಾತವೇದೋ ನಿಧೀಮಹಿ ಎಂಬ ವಾಕ್ಯದಿಂದ ಅಗ್ನಿಯನ್ನು ಉತ್ತರವೇದಿಯಲ್ಲಿ ಋತ್ವಿಜರಾದ ನಾವು ಇಡುವೆವು ಎಂಬರ್ಥವು ಸೂಚಿತವಾಗುವುದು.

ಕೊನೆಯ ಪಾದದಲ್ಲಿರುವ **ಅಗ್ನೇ ಹವ್ಯಾಯ ವೋಳ್ಹವೇ** ಎಂಬ ವಾಕ್ಯವು ದೇವತೆಗಳಿಗೆ ಹವಿರಾದಿಗಳನ್ನು ಅಗ್ನಿಯು ವಹಿಸುವುದಕ್ಕಾಗಿ ಇಲ್ಲಿ ಸ್ಥಾಪಿಸಲ್ಪಟ್ಟಿರುವುದು ಎಂಬರ್ಥವನ್ನು ಸೂಚಿಸುವುದು.

ಅಗ್ನೇ ವಿಶ್ವೇಭಿಃ ಸ್ವನೀಕ ದೇವೈರೂರ್ಣಾವಂತಂ ಪ್ರಥಮಃ ಸೀದ ಯೋನಿಮಿತಿ ವಿಶ್ವೇರೇವೈನಂ ತದ್ದೇವೈಃ ಸಹಾಸಾದಯತಿ । ಕುಲಾಯಿನಂ ಘೃತವಂತಂ ಸವಿತ್ರ ಇತಿ ಕುಲಾಯಮಿವ ಹ್ಯೇತದ್ಯಜ್ಞೇ ಕ್ರಿಯತೇ ಯತ್ಪೈತುದಾರವಾಃ ಪರಿಧಯೋ ಗುಗ್ಗುಲೂರ್ಣಾಸ್ತುಕಾಃ ಸುಗಂಧಿತೇಜನಾನೀತಿ ಯಜ್ಞಂ ನಯ ಯಜಮಾನಾಯ ಸಾಧ್ವಿತಿ ಯಜ್ಞಮೇವ ತದೃಜುಧಾ ಪ್ರತಿಷ್ಠಾಪಯತಿ ।

ಪಂಚಮ್ಯಾಋಚಃ ಪೂರ್ವಾರ್ಧಂ ಪಠತಿ—ಸ್ವನೀಕ ಶೋಭನಸೈನ್ಯೋಪೇತ ಹೇಽಗ್ನೇ ವಿಶ್ವೇಭಿಃ ಸರ್ವೈರ್ದೇವೈಃ ಸಹ ತ್ವಂ ಪ್ರಥಮೋ ಮುಖ್ಯಃ ಸನ್ನೂರ್ಣಾವಂತಮೂರ್ಣಾಯುಕ್ತ-ಮುತ್ತರವೇದಿನಾಭಿಸ್ಥಾನಂ ಸೀದ ಪ್ರಾಪ್ನುಹಿ ॥ ತತ್ಪಾಠೇನೋಕ್ತಾರ್ಥಸಿದ್ಧಿಂ ದರ್ಶಯತಿ—ತೃತೀಯಚತುರ್ಥಪಾದೌ ಕ್ರಮೇಣಾನೂದ್ಯ ವ್ಯಾಚಷ್ಟೇ ॥ ಕುಲಾಯೋ ನೀಡಂ ಪಕ್ಷ್ಯಾದಿನಿ-ವಾಸಸ್ಥಾನಸದೃಶಂ ತದ್ವಾನಯಂ ಯಜ್ಞೋ ಘೃತವಾನ್ ॥ ತಂ ಘೃತವಂತಂ ಯಜ್ಞಂ ಸವಿತ್ರೇ ಪ್ರೇರಕಾಯಾನುಷ್ಠಾತ್ರೇ ಯಜಮಾನಾಯ ತದುಪಕಾರಾರ್ಥಂ ಸಾಧು ನಯ ಸತ್ಯಂ ನಿಷ್ಪಾ-ದಯ ॥ ತತ್ಕುಲಾಯಿತ್ವಂ ತೃತೀಯಪಾದೇಽಭಿಹಿತಂ ॥ ತತ್ಕುಲಾಯಮಿವೇತ್ಯಾದಿನಾ ಸ್ಪಷ್ಟೀ-ಕ್ರಿಯತೇ ॥ ಪಿತುದಾರುಃ ಖದಿರವೃಕ್ಷ ಇತ್ಯೇಕೇ ದೇವದಾರುವೃಕ್ಷ ಇತ್ಯನ್ಯೇ ॥ ತತ್ಸಂಬಂಧಿನಃ ಪೈತುದಾರುವಾಃ ಪರಿಧಯೋಽಸ್ಯಾಮುತ್ತರವೇದ್ಯಾಂ ಸ್ಥಾಪ್ಯಂತೇ ॥ ಗುಗ್ಗುಲು ಪ್ರಸಿದ್ಧಂ ಧೂಪಸಾಧನಂ ॥ ಊರ್ಣಾಸ್ತುಕಾ ಅವಿಸಂಬಂಧಿರೋಮವಿಶೇಷಾಃ ॥ ಸುಗಂಧಿತೇಜನಂ ತೃಣವಿಶೇಷಃ ॥ ಯಸ್ಯ ಮೂಲಾನಿ ಘರ್ಮಕಾಲೇ ಪಾನೀಯಮಧ್ಯೇ ಸ್ಥಾಪ್ಯಂತೇ ॥ ಏತ ಉತ್ತರವೇದ್ಯಾಂ ಸ್ಥಾಪಿತಾಃ ಸಂಭಾರಾಃ ॥ ಯಥಾ ಕುಲಾಯಃ ಕಾಷ್ಠತೃಣಾದಿಭಿರ್ನಿಷ್ಪಾದ್ಯತೇ ತದ್ವದತ್ರ ಯಜ್ಞೇ ಪರಿಧಿಕಾಷ್ಠಾದಿಸದ್ಭಾವಾತ್ಕುಲಾಯಿತ್ವಂ ॥ ಯಜ್ಞಂ ನಯೇತಿ ಚತುರ್ಥ-ಪಾದೇ ಯದ್ಯದುಕ್ತಂ ತೇನ ಯಜ್ಞಮೇವ ತದೃಜುಧಾ, ಋಜುಪ್ರಕಾರೇಣ ಪ್ರತಿಷ್ಠಿತಂ ಕರೋತಿ ॥

ಹೋತೃವು ಅನಂತರ ಐದನೆಯ ಋಕ್ಕನ್ನು ಪಠಿಸುವನು—

(5) ಅಗ್ನೇ ವಿಶ್ವೇಭಿಃ ಸ್ವನೀಕ ದೇವೈರೂರ್ಣಾವಂತಂ ಪ್ರಥಮಃ ಸೀದ ಯೋನಿಂ ।
ಕುಲಾಯಿನಂ ಘೃತವಂತಂ ಸವಿತ್ರೇ ಯಜ್ಞಂ ನಯ ಯಜಮಾನಾಯ ಸಾಧು ॥
(ಋ. ಸಂ. ೬-೧೫-೧೬)

ಎಲೈ ಅಗ್ನಿಯೇ, ಜ್ವಾಲಾಖ್ಯಸೇನೆಗಳಿಂದ ಯುಕ್ತನಾದ ನೀನು ಸಮಸ್ತದೇವತೆಗಳಿಗೂ ಮುಖ್ಯನಾಗಿ ಈ ಉತ್ತರ-ವೇದಿಯೆಂಬ ನಾಭಿಸ್ಥಾನದಲ್ಲಿ ಬಂದು ಕುಳಿತುಕೋ ಎಂದು ಈ ಋಕ್ಕಿನ ಪೂರ್ವಾರ್ಧದ ಮುಖ್ಯಾಭಿಪ್ರಾಯವು. ಇಲ್ಲಿ

ವಿಶ್ವೇಭಿಃ ಎಂಬ ಪದಪ್ರಯೋಗದಿಂದ ಅಗ್ನಿಯೊಡನೆ ಸಮಸ್ತದೇವತೆಗಳನ್ನು ಸ್ಥಾಪಿಸಲಾಗಿದೆಯೆಂದು ನಿರ್ದೇಶಿಸಲಾಗಿರುವುದು ಎಂದರೆ ಅಗ್ನಿಯು ಸಮಸ್ತದೇವತೆಗಳ ಸಹಿತನಾಗಿ ಉಣ್ಣೆಯ ಧಾರಗಳನ್ನು ಹಾಸಿ ಮೆತ್ತಗಿರುವಂತೆ ಮಾಡಿರುವ ಪಕ್ಷಿಯ ಗೂಡಿನಂತಿರುವ ಉತ್ತರವೇದಿಯಲ್ಲಿ ಕೂಡುವನೆಂದಭಿಪ್ರಾಯವು. ಕಾಷ್ಠಾದಿಗಳಿಂದ ಸಮೃದ್ಧವಾಗಿಯೂ ಘೃತಸಿಕ್ತವಾಗಿಯೂ ಇರುವ ನಾಭಿಪ್ರದೇಶವಾದ ಉತ್ತರವೇದಿಯಲ್ಲಿದ್ದು ಯಜಮಾನನ ಯಜ್ಞಕರ್ಮಗಳನ್ನು ಚೆನ್ನಾಗಿ ನೆರವೇರಿಸು ಎಂದು ಈ ಋಕ್ಕಿನ ಉತ್ತರಾರ್ಧದ ಅಭಿಪ್ರಾಯವು. ಇಲ್ಲಿ ಮೂರನೆಯ ಪಾದದಲ್ಲಿ ಹೇಳಿರುವ **ಕುಲಾಯಿನಂ ಘೃತವಂತಂ** ಎಂಬ ಶಬ್ದಗಳಿಂದ ಪಕ್ಷಿಯ ಗೂಡು ಎಂಬರ್ಥವು ಸೂಚಿತವಾಗುವುದು. ಎಂದರೆ ಪಕ್ಷಿಯು ತನ್ನ ಗೂಡನ್ನು ಖದಿರ ಅಥವಾ ದೇವ-ದಾರುವೃಕ್ಷದ ಸಣ್ಣ ಸಣ್ಣ ಕಡ್ಡಿಗಳು, ಗುಗ್ಗುಲು (ಅಂಟು) ಉಣ್ಣೆಯ ದಾರಗಳು, ಒಂದುವಿಧ ಸುವಾಸನೆಯುಳ್ಳ ಹುಲ್ಲುಗರಿಕೆ ಇವುಗಳನ್ನೆಲ್ಲಾ ಸೇರಿಸಿ ಹೆಣೆದು ಗೂಡನ್ನು ಕಟ್ಟುವುದು. ಅಗ್ನಿಯ ನಾಭಿಸ್ಥಾನವೂ ಅದರಂತಿರುವುದೆಂದು ಇಲ್ಲಿ ಹೋಲಿಸಿದೆ. ಹೇಗೆಂದರೆ, ಗೂಡನ್ನು ಕಟ್ಟುವಾಗ ಪಕ್ಷಿಯು ಕಡ್ಡಿಗಳನ್ನು ಉಪಯೋಗಿಸುವುದಷ್ಟೆ. ಇಲ್ಲಿ ಅಗ್ನಿಯ ಸುತ್ತಲೂ ಪರಿಧಿಯೆಂಬ ಕಾಷ್ಠಗಳನ್ನು ಇಟ್ಟಿರುವರು. ಹಾಗೆಯೇ ಅಂಟಿಗೆ ಬದಲಾಗಿ ಹೋಮಕ್ಕಾಗಿ ಇಟ್ಟಿರುವ ಘೃತಾದಿಸುಗಂಧದ್ರವ್ಯವೂ, ಉಣ್ಣೆಯ ದಾರಗಳಿಗೆ ಬದಲಾಗಿ ಆಡು ಮೊದಲಾದ ಯಜ್ಞಪಶುಗಳೂ, ಹುಲ್ಲುಗರಿಕೆಗೆ ಬದಲಾಗಿ ಸಮಿತ್ತು (ಮತ್ತು ದರ್ಭೆ) ಗಳೂ ಅಗ್ನಿಯ ಸುತ್ತಲೂ ಸಿದ್ಧಪಡಿಸಿ ಇಟ್ಟಿರುವುದರಿಂದ ಅಗ್ನಿಗಾಗಿ ಸ್ಥಾಪಿತವಾಗಿರುವ ಉತ್ತರವೇದಿಯನ್ನು (ಅಗ್ನಿಕುಂಡವನ್ನು) ಪಕ್ಷಿಯ ಗೂಡಿಗೆ ಹೋಲಿಸಿ ವರ್ಣಿಸಲಾಗಿದೆ. ಇಂತಹ ಪಕ್ಷಿಯ ಗೂಡಿನಂತಿರುವ ಉತ್ತರವೇದಿಸ್ಥಾನದಲ್ಲಿ ಸ್ಥಾಪಿತನಾದ ಅಗ್ನಿಯು ಯಜಮಾನನ ಯಜ್ಞಕಾರ್ಯಗಳನ್ನು ಚೆನ್ನಾಗಿ ನೆರವೇರಿಸಲಿ ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀ ನಾಭಿಃ । ಸಾದಯಾ ಯಜ್ಞಂ ಸುಕೃತಸ್ಯ ಯೋನಾವಿತಿ ಯಜಮಾನೋ ವೈ ಯಜ್ಞೋ ಯಜಮಾನಾಯೈವೈತಾಮಾಶಿಷಮಾಶಾಸ್ತೇ । ದೇವಾವೀರ್ದೇವಾನ್ ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋಧಾ ಇತಿ ಪ್ರಾಣೋ ವೈ ವಯಃ ಪ್ರಾಣಮೇವ ತದ್ಯ-ಜಮಾನೇ ದಧಾತಿ ॥**

ಷಷ್ಠ್ಯಾ ಋಚಃ ಪ್ರಥಮಂ ಪಾದಂ ಪಠಿತ್ವಾ ವ್ಯಾಚಷ್ಟೇ — ಹೇ ಹೋತರ್ಹೋಮ-ನಿಷ್ಪಾದಕಾಗ್ನೇ ಚಿಕಿತ್ವಾನ್ನಿಜ್ಞಾನವಾಂಸ್ತ್ವಂ ಸ್ವ ಉ ಲೋಕೇ ಸ್ವಕೀಯ ಏವ ಸ್ಥಾನೇ ಉತ್ತರ-ವೇದಿನಾಭಿರೂಪೇ ಸೀದೋಪವಿಶ ॥ ಅಗ್ನೇರ್ದೇವಹೋತೃತ್ವಾದುತ್ತರವೇದಿನಾಭೇಸ್ತದೀಯ-ಸ್ಥಾನತ್ವಾಚ್ಚ ಪ್ರಥಮಪಾದಾರ್ಥ ಉಪಪನ್ನಃ ॥ ದ್ವಿತೀಯಪಾದಮನೂದ್ಯ ತತ್ರತ್ಯಸ್ಯ ಯಜ್ಞ-ಶಬ್ದಸ್ಯ ಯಜಮಾನಪರತ್ವಂ ದರ್ಶಯತಿ ॥ ಯಜ್ಞಂ ಯಷ್ಟಾರಂ ಸುಕೃತಸ್ಯ ಯೋನೌ ಪುಣ್ಯ-ಕರ್ಮಣಾಂ ಸ್ಥಾನೇ ಸಾದಯ ಹೇಽಗ್ನೇ ಸ್ಥಾಪಯ ॥ ಇಜ್ಯತ ಇತಿ ವ್ಯುತ್ಪತ್ತ್ಯಾ ಯಜ್ಞಶಬ್ದಃ ಸರ್ವತ್ರ ಯಾಗವಾಚೀ ॥ ಇಹ ತು ಯಜತೀತಿ ವ್ಯುತ್ಪತ್ತ್ಯಾ ಯಷ್ಟಾರಮಾಚಷ್ಟೇ॥ ಅತಸ್ತದರ್ಥ-ಮೇವಾಶೀಃ ಪ್ರಾರ್ಥಿತಾ ಭವತಿ ॥ ಉತ್ತರಾರ್ಧಮನೂದ್ಯ ತತ್ರತ್ಯಸ್ಯ ವಯಃಶಬ್ದಸ್ಯ ಪ್ರಾಣ-

**ವಾಚಿತ್ವಂ ದರ್ಶಯತಿ-ದೇವಾನ್ವೇತಿ ಕಾಮಯತ ಇತಿ ದೇವಾವೀರ್ದೇವಪ್ರಿಯ ಹೇಽಗ್ನೇ ತ್ವಂ ದೇವಪ್ರಿಯತ್ವಾದ್ದೇವಾನ್ಹವಿಷಾ ಯಜಾಸಿ ಪೂಜಯಸಿ ॥ ಯಜಮಾನೇ ವಯಃ ಪ್ರಾಣಂ ಬೃಹದಧಿಕಂ ಯಥಾ ಭವತಿ ತಥಾ ಧಾಃ ಧೇಹಿ ಸ್ಥಾಪಯ ॥ ಅತ್ರ ವಯಃಶಬ್ದೇನ ಪ್ರಾಣ ಉಪಲಕ್ಷ್ಯತೇ ॥ ಬಾಲ್ಯಾದಿವಯೋವಿಶೇಷಹೇತೋಃ ಆಯುಷಃ ನಿಮಿತ್ತತ್ವಾತ್ 'ಯಾವ-ದಸ್ಮಿನ್ಶರೀರೇ ಪ್ರಾಣೋ ವಸತಿ ತಾವದಾಯುಃ' ಇತಿ ಶ್ರುತೇಃ ॥ ತಸ್ಮಾದುತ್ತರಾರ್ಧಪಾಠೇನ ಪ್ರಾಣಮೇವ ಯಜಮಾನೇ ಸ್ಥಾಪಯತೀತಿ ॥**

ಅನಂತರ ಹೋತೃವು ಮುಂದುವರೆಯುತ್ತಾ ಈ ಕರ್ಮಾಂಗದಲ್ಲಿ ಹೇಳಬೇಕಾದ—

(6) **ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನ್ತ್ಸಾದಯಾ ಯಜ್ಞಂ ಸುಕೃತಸ್ಯ ಯೋನೌ ।**
**ದೇವಾವೀರ್ದೇವಾನ್ ಹವಿಷಾ ಯಜಾಸ್ಯಗ್ನೇ ಬೃಹದ್ಯಜಮಾನೇ ವಯೋ ಧಾಃ ।**
(ಋ. ಸಂ. ೩-೨೯-೮)

ಎಂಬ ಆರನೆಯನೆಯ ಋಕ್ಕನ್ನು ಪಠಿಸುವನು. ದೇವತೆಗಳಿಗೆ ಅಗ್ನಿಯೇ ಹೋತೃವೆಂಬ ಋತ್ವಿಜನು. ಮತ್ತು ಉತ್ತರವೇದಿನಾಭಿಯೇ ಅಗ್ನಿಯ ಸ್ವಸ್ಥಾನವು. ಆದ್ದರಿಂದ ಎಲೈ ಅಗ್ನಿಯೇ, ನೀನು ಹೋಮನಿಷ್ಪಾದಕನು, ದೇವತೆಗೆ ಹೋತೃವು. ಇಂತಹ ನೀನು ನಿನ್ನ ಸ್ವಸ್ಥಾನವಾದ ಉತ್ತರವೇದಿಯಲ್ಲಿ ಕುಳಿತುಕೋ ಎಂಬ ಪ್ರಾರ್ಥನೆಯು ಈ ಋಕ್ಕಿನ ಪ್ರಥಮ ಪಾದದಲ್ಲಿ ಹೇಳಲ್ಪಟ್ಟಿರುವುದು. ಎರಡನೆಯ ಪಾದದಲ್ಲಿರುವ ಯಜ್ಞಶಬ್ದಕ್ಕೆ ಯಜ್ಞಮಾಡುವ ಯಜಮಾನನೆಂದರ್ಥವು. ಇಂತಹ ಯಜಮಾನನನ್ನು, ಎಲೈ ಅಗ್ನಿಯೇ ಪುಣ್ಯಕರ್ಮಗಳನ್ನು ಮಾಡುವ ಸುಕೃತಶಾಲಿಗಳ ಸ್ಥಾನದಲ್ಲಿ ಸ್ಥಾಪಿಸು ಎಂದು ದ್ವಿತೀಯಪಾದದ ಅರ್ಥವು. ಉತ್ತರಾರ್ಧದಲ್ಲಿರುವ ವಯಃ ಎಂಬ ಶಬ್ದಕ್ಕೆ ಪ್ರಾಣವೆಂದರ್ಥವು. ಆದ್ದರಿಂದ ದೇವತೆಗಳಿಗೆ ಪ್ರಿಯನಾದ ಎಲೈ ಅಗ್ನಿಯೇ, ನೀನು ದೇವತೆಗಳನ್ನು ಹವಿಸ್ಸಿನಿಂದ ಪೂಜಿಸಿ ತೃಪ್ತಿಪಡಿಸು ಮತ್ತು ಯಜ್ಞಮಾಡುವ ಯಜಮಾನನಲ್ಲಿ ಪ್ರಾಣವನ್ನು ಎಂದರೆ ಆಯುಷ್ಯವನ್ನು ಧರಿಸು ಎಂದರೆ ವೃದ್ಧಿಪಡಿಸು—**ಯಾವದಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ** ಎಂಬ ಶ್ರುತಿವಾಕ್ಯರೀತಿಯಿಂದ ಶರೀರದಲ್ಲಿ ಪ್ರಾಣವಿರುವವರೆಗೂ ಪುರುಷನಿಗೆ ಆಯುಷ್ಯವಿರುವುದು ಎಂದು ಹೇಳಿರುವುದರಿಂದ ಇಲ್ಲಿ ಪ್ರಾಣಶಬ್ದವನ್ನು ಆಯುಷ್ಯವೆಂಬ ಅರ್ಥದಲ್ಲಿ ಪ್ರಯೋಗಿಸಿದೆ, ಯಜಮಾನನಿಗೆ ದೀರ್ಘಾಯುಷ್ಯವನ್ನು ಅನುಗ್ರಹಿಸು ಎಂದು ತಾತ್ಪರ್ಯವು.

**ನಿ ಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತತದ್ಧೋತೃಷದನಂ ಯದುತ್ತರವೇದೀನಾಭಿಃ । ತ್ವೇಷೋ ದೀದಿವಾ ಅಸದತ್ಸುದಕ್ಷ ಇತ್ಯಾಸನ್ನೋ ಹಿ ಸ ತರ್ಹಿ ಭವತಿ । ಅದಬ್ಧವ್ರತಪ್ರಮತಿರ್ವಸಿಷ್ಠ ಇತ್ಯಗ್ನಿರ್ವೈ ದೇವಾನಾಂ ವಸಿಷ್ಠಃ । ಸಹಸ್ರಂಭರಃ ಶುಚಿಜಿಹ್ವೋ ಅಗ್ನಿರಿತ್ಯೇಷಾ ಹ ವಾ ಅಸ್ಯ ಸಹಸ್ರಂಭರತಾ ಯದೇನಮೇಕಂ ಸಂತಂ ಬಹುಧಾ ವಿಹರಂತಿ ಪ್ರ ಹ ವೈ ಸಾಹಸ್ರಂ ಪೋಷಮಾಪ್ನೋತಿ ಯ ಏವಂ ವೇದ ॥**

ಸಪ್ತಮ್ಯಾ ಋಚಃ ಪ್ರಥಮಪಾದಮನೂದ್ಯ ವ್ಯಾಚಷ್ಟೇ—ಹೋತಾ ಹೋಮನಿಷ್ಪಾದಕೋಽಗ್ನಿಸ್ತಾದೃಶಸ್ಯ ಸ್ವಸ್ಯ ಹೋತುಃ ಸದನೇ ಯೋಗ್ಯಸ್ಥಾನ ಉತ್ತರವೇದಿನಾಭಿರೂಪೇ ವಿದಾನಃ ಕ್ರಿಯಮಾಣಂ ಕರ್ಮವಿಚಾರಯನ್ ॥ ಅಸದದಿತಿ ವಕ್ಷ್ಯಮಾಣೇನಾನ್ವಯಃ ॥ ಅಗ್ನಿರ್ವಾ ಇತ್ಯಾದಿ ವ್ಯಾಖ್ಯಾನಂ ವಿಸ್ಪಷ್ಟಂ ॥ ದ್ವಿತೀಯಂ ಪಾದಮನೂದ್ಯ ಅಸದದಿತಿ ಪದಂ ವ್ಯಾಚಷ್ಟೇ—ಕೀದೃಶೋಽಗ್ನಿಃ ॥ ತ್ವೇಷಃ ಸ್ವಯಂ ದೀಪ್ಯಮಾನಃ ॥ ದೀದಿವಾನನ್ಯೇಷಾಮಪಿ ದೀಪಕಃ ॥ ಸುದಕ್ಷಃ ಸುಷ್ಠು ಕುಶಲಃ ॥ ತಾದೃಶೋಽಗ್ನಿರಾಸನ್ನೋ ವೇದಿತಾ ಭವತಿ ॥ ಸ ತರ್ಹಿ ತಸ್ಮಿನ್ಪ್ರಣಯನಕಾಲೇ ಸೋಽಗ್ನಿರ್ಯಸ್ಮಾದುತ್ತರವೇದಿನಾಭೇರಾಸನ್ನಸ್ತಸ್ಮಾದಾಸದದಿತ್ಯುಚಿತಂ॥ ತೃತೀಯಪಾದಮನೂದ್ಯ ವಸಿಷ್ಠ ಶಬ್ದಾರ್ಥಂ ದರ್ಶಯತಿ—ಅದಬ್ಧೇ ಹಿಂಸಾರಹಿತೇ ವ್ರತೇ ಕರ್ಮಣಿ ಪ್ರಕೃಷ್ಟಾ ಮತಿರ್ಯಸ್ಯಾಗ್ನೇಃ ಸೋಽಯಮದಬ್ಧವ್ರತಪ್ರಮತಿಃ ॥ ವಸಿಷ್ಠೋಽತಿಶಯೇನ ನಿವಾಸಹೇತುಃ ॥ ಹವಿರ್ಹವನೇನ ದೇವಾನಾಂ ಸ್ವಸ್ಥಾನೇ ನಿವಾಸಹೇತುತ್ವಾದಗ್ನೇರ್ವಸಿಷ್ಠತ್ವಂ ॥ ಚತುರ್ಥಂಪಾದಮನೂದ್ಯ ವ್ಯಾಚಷ್ಟೇ—ಅಯಮಗ್ನಿರ್ಬಹುಷು ಧಿಷ್ಣ್ಯೇಷು ವಿಹೃತಃ ಸನ್ನನೇಕಸ್ವರೂಪಭರಣಾತ್ಸಹಸ್ರಂಭರಃ ॥ ಮಂತ್ರಪೂತಹವಿಃ ಸ್ವೀಕಾರೇಣ ಶುಚಿಜಿಹ್ವಃ ಶುದ್ಧಾ ಜಿಹ್ವಾ ಯಸ್ಯಾಸೌ ಶುಚಿಜಿಹ್ವಃ ॥ ಸ್ವರೂಪೇಣೈಕನೇವ ಸಂತಮಗ್ನಿಮೃತ್ವಿಜೋ ಬಹುಧಿಷ್ಣ್ಯೇಷು ಬಹುಧಾ ವಿಹರಂತೀತಿ ಯದಸ್ತಿ, ಏಷೈವಾಗ್ನೇಃ ಸಹಸ್ರಂಭರತಾ ॥ ವೇದನಂ ಪ್ರಶಂಸತಿ—ಅತ್ರ ಸಹಸ್ರಸಂಖ್ಯೋಪೇತಂ ಪೋಷಂ ಗೋಸುವರ್ಣಾದಿ ಪುಷ್ಟಿಂ ವೇದಿತಾ ಪ್ರಾಪ್ನೋತಿ—

ಅನಂತರ ಹೋತೃವು ಏಳನೆಯ ಋಕ್ಕಾದ—

(7) ನಿ ಹೋತಾ ಹೋತೃಷದನೇ ವಿದಾನಸ್ತ್ವೇಷೋ ದೀದಿವಾँ ಅಸದತ್ಸುದಕ್ಷಃ ।
ಅದಬ್ಧವ್ರತಪ್ರಮತಿರ್ವಸಿಷ್ಠಃ ಸಹಸ್ರಂಭರಃ ಶುಚಿಜಿಹ್ವೋ ಅಗ್ನಿಃ ॥
(ಋ. ಸಂ. ೨-೯-೧)

ಎಂಬ ಮಂತ್ರವನ್ನು ಪಠಿಸುವನು. ಅಗ್ನಿಯು ದೇವತೆಗಳ ಹೋತೃವು. ಉತ್ತರವೇದಿನಾಭಿಸ್ಥಾನವೇ ಈ ದೇವ ಹೋತೃವಾದ ಅಗ್ನಿಯು ಕುಳಿತುಕೊಳ್ಳುವ ಹೋತೃಸದನವೆಂಬ ಸ್ಥಳವು ಎಂದು ಈ ಋಕ್ಕಿನ ಪ್ರಥಮಪಾದದ ಅರ್ಥವು ; ಪ್ರಕಾಶಮಾನನಾಗಿಯೂ, ಯಜ್ಞಕರ್ಮಗಳಲ್ಲಿ ಕುಶಲನಾಗಿಯೂ ಇರುವ ಈ ಅಗ್ನಿಯು ಈ ಹೋತೃಸದನವೆಂಬ ಉತ್ತರವೇದಿನಾಭಿಯಲ್ಲಿ ಕುಳಿತಿರುವನೆಂದು ದ್ವಿತೀಯಪಾದದ ಅರ್ಥವು; ಅಗ್ನಿಯು ಹವಿಸ್ಸನ್ನು ದೇವತೆಗಳ ಬಳಿಗೆ ತೆಗೆದುಕೊಂಡು ಹೋಗುವುದರಿಂದ ದೇವತೆಗಳ ಸ್ವಸ್ಥಾನವಾದ ಸ್ವರ್ಗದಲ್ಲಿ ಅಗ್ನಿಯೂ ಉತ್ತಮಸ್ಥಾನವನ್ನು ಪಡೆದಿರುವನು. ಅಹಿಂಸಿತವಾದ ಯಜ್ಞಾದಿಕರ್ಮಮನಸ್ಕನಾದ ಈ ಅಗ್ನಿಯು ಶ್ರೇಷ್ಠವಾದ ನಿವಾಸಸ್ಥಾನವುಳ್ಳವನು ಎಂದು ತೃತೀಯಪಾದದ ಅರ್ಥವು ; ಅಗ್ನಿಯು ಒಂದೇ ರೂಪದಿಂದ ಕಾಣಿಸುತ್ತಿದ್ದರೂ ಋತ್ವಿಜರಾದಿ ಸಮಸ್ತರಲ್ಲಿಯೂ ಇದ್ದು ಅವರವರ ಕರ್ತವ್ಯನಿರ್ವಹಣವನ್ನು ಮಾಡುವುದರಿಂದ ಅನೇಕ ರೂಪಗಳನ್ನು ಧರಿಸಿರುವನೆಂದು ಸಹಸ್ರಂಭರಶಬ್ದದ ಅರ್ಥವು, ಅಥವಾ ಅಗ್ನಿಯು ಅನೇಕ ಯಾಗಗೃಹಗಳಲ್ಲಿದ್ದು ಅನೇಕ ಯಜಮಾನರ ಯಜ್ಞಗಳನ್ನು ನೆರವೇರಿಸುವುದರಿಂದ ಅನೇಕ ರೂಪಗಳನ್ನು ಧರಿಸಿ ಇರುವನೆಂದು ಸಹಸ್ರಂಭರಶಬ್ದದ ಅರ್ಥವು. ಹವಿಸ್ಸ್ವೀಕಾರಾದಿಯಿಂದ ಶುದ್ಧವಾದ ಜಿಹ್ವೆ (ನಾಲಗೆ)ಯುಳ್ಳವನಾದ್ದರಿಂದ ಅಗ್ನಿಗೆ ಶುಚಿಜಿಹ್ವನೆಂದು ಹೆಸರು. ಇಂತಹ ಅಗ್ನಿಯು ಯಜಮಾನನಿಗೆ ಸಾವಿರಗಟ್ಟಲೆಯಾಗಿ ಗೋಸುವರ್ಣಾದಿಪುಷ್ಟಿಯನ್ನು ಕೊಡುವನು ಎಂದು ಇಲ್ಲಿ ಸ್ತುತಿಸಿದೆ.

ತ್ವಂ ದೂತಸ್ತ್ವಮು ನಃ ಪರಸ್ಪಾ ಇತ್ಯುತ್ತಮಯಾ ಪರಿದಧಾತಿ ತ್ವಂ. ವಸ್ಯ ಆ ವೃಷಭ ಪ್ರಣೇತಾ । ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ದೀದ್ಯದ್ಬೋಧಿಂ ಗೋಪಾ ಇತಿ ಅಗ್ನಿರ್ವೈ ದೇವಾನಾಂ ಗೋಪಾ ಅಗ್ನಿಮೇವ ತತ್ಸರ್ವತೋ ಗೋಪ್ತಾರಂ ಪರಿದತ್ತ ಆತ್ಮನೇ ಚ ಯಜಮಾನಾಯ ಚ ಯತ್ರೈವಂ ವಿದ್ವಾನೇತಯಾ ಪರಿದಧಾತ್ಯಥೋ ಸಂವತ್ಸರೀಣಾಮೇವೈತಾಂ ಸ್ವಸ್ತಿಂ ಕುರುತೇ ॥

ಅಷ್ಟಮೀಮೃಚಂ ವಿಧತ್ತೇ—ತ್ವಂ‌ದೂತ ಇತ್ಯನಯಾಽನ್ತಿಮಯಾಽಗ್ನಿಪ್ರಣಯನೀಯಾ ಋಚಃ ಸಮಾಪಯೇತ್ ॥ ಹೇಽಗ್ನೇ ತ್ವಂ ದೂತೋಽಸಿ ' ಅಗ್ನಿರ್ದೇವಾನಾಂ ದೂತ ಆಸೀದಿತಿ ಶ್ರುತೇಃ ॥ ತ್ವಮೇವ ನೋ—ಅಸ್ಮಾಕಂ ಪರಸ್ಪಾತಿಶಯೇನ ಪಾಲಯಿತಾಸಿ ॥ ಅವಶಿಷ್ಟಂ ಪಾದತ್ರಯಂ ಪಠತಿ ॥ ಹೇ ವೃಷಭ ಶ್ರೇಷ್ಠಾಗ್ನೇ ತ್ವಮಾಸಮಂತಾತ್ ವಸ್ಯೋ ನಿವಾಸಹೇತುಃ ಪ್ರಣೇತಾ ಬಹುಷು ಕರ್ಮಸು ಪ್ರೇರಕೋ ನೋಽಸ್ಮಾಕಂ ತೋಕಸ್ಯಾಪತ್ಯಸ್ಯ ತನೂನಾಂ ಶರೀರಾಣಾಂ ಚ ತನೇ ವಿಸ್ತಾರೇಽಪ್ರಯುಚ್ಛನ್ಪ್ರಮಾದಮಕುರ್ವನ್ದೀದ್ಯತ್ಪ್ರಕಾಶನ್ಗೋಪಾ ರಕ್ಷಕಃ ಸನ್, ಬೋಧಿ ಬುಧ್ಯಸ್ವ ಸರ್ವದಾ ಚಿತ್ತೇಽನುಗೃಹಾಣೇತ್ಯರ್ಥಃ ॥ ಉಕ್ತಾರ್ಥಾಮೃಚಂ ಪ್ರಶಂಸಯತಿ—ಯತ್ರ ಯಸ್ಮಿನ್ಕರ್ಮಣಿ ಏವಮುಕ್ತಂ ಮಂತ್ರಮಹಿಮಾನಂ ವಿದ್ವಾನೇತಯಾಂತಿಮಯಾ ಸಮಾಪಯತಿ—ಸ ಹೋತಾಽಗ್ನೇರ್ದೇವರಕ್ಷಕತ್ವಮಭಿಪ್ರೇತ್ಯಾಽಽತ್ಮಾರ್ಥಂ ಯಜಮಾನಾರ್ಥಂ ಚಾಗ್ನಿಮೇವ ಸರ್ವತೋ ರಕ್ಷಕಂ ಪರಿದತ್ತೇ ಸ್ವೀಕರೋತಿ—ಕಿಂಚ । ಸಂವತ್ಸರೀಣಾಮೇವಾಸ್ಮಿನ್ಸಂವತ್ಸರೇ ನಿರಂತರಮೇವೈತಾಂ ಸ್ವಸ್ತಿಂ ಕ್ಷೇಮಂ ಕುರುತೇ ॥

ಅನಂತರ ಹೋತೃವು ಕೊನೆಯದಾದ ಎಂಟನೇ ಋಕ್ಕನ್ನು ಹೇಳಿ ಅಗ್ನಿಪ್ರಣಯನಕಾರ್ಯವನ್ನು ಸಮಾಪ್ತಿಗೊಳಿಸುವನು—

(8) ತ್ವಂ ದೂತಸ್ತ್ವಮು ನಃ ಪರಸ್ಪಾಸ್ತ್ವಂ ವಸ್ಯ ಆ ವೃಷಭ ಪ್ರಣೇತಾ ।
ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ ದೀದ್ಯದ್ಬೋಧಿ ಗೋಪಾಃ ॥
(ಋ. ಸಂ. ೨-೯-೨)

ಅಗ್ನಿಪ್ರಣಯನಕಾರ್ಯದಲ್ಲಿ ಇದೇ ಕೊನೆಯ ಋಕ್ಕು. ಸಾಧಾರಣವಾಗ ಒಂದುಕರ್ಮದ ಕೊನೆಯ ಋಕ್ಕನ್ನು ಆ ಕರ್ಮದ ಪರಿಧಾನ (ಹೊದಿಕೆ)ಯೆಂದು ಹೇಳುವರು.) ಅಗ್ನಿರ್ದೇವಾನಾಂ ದೂತ ಆಸೀತ್ ಎಂಬ ಶ್ರುತಿವಾಕ್ಯದಂತೆ, ಎಲೈ ಅಗ್ನಿಯೇ ನೀನು ದೇವತೆಗಳ ದೂತನಾಗಿದ್ದೀಯೇ; ನೀನೇ ನಮ್ಮ ಪಾಲಕನು ಎಂದು ಈ ಋಕ್ಕಿನ ಪ್ರಥಮಪಾದದ ಅರ್ಥವು; ಇದನ್ನು ಪಠಿಸಿ ಹೋತೃವು ಅಗ್ನಿಪ್ರಣಯನಕಾರ್ಯಕ್ಕೆ ಸಮಾಪ್ತಿಸೂಚಕವಾದ ಮಂತ್ರವನ್ನು ಹೇಳುವನು. ಎಲೈ ಅಗ್ನಿಯೇ, ನೀನು ದೇವತೆಗಳಲ್ಲಿ ಮತ್ತು ಮನುಷ್ಯರಲ್ಲಿ ಶ್ರೇಷ್ಠನು; ಸರ್ವಸ್ಥಳಗಳಲ್ಲಿಯೂ ನಿವಾಸಸ್ಥಾನವುಳ್ಳವನು. ಅನೇಕ ಕರ್ಮಗಳಲ್ಲಿ ಪ್ರೇರಕನಾದವನು; ನಮ್ಮ ಪುತ್ರಪೌತ್ರಾದಿಗಳನ್ನೂ ನಮ್ಮನ್ನೂ ಯಾವ ಪ್ರಮಾದವೂ ಸಂಭವಿಸದಂತೆ ನೋಡುತ್ತಾ

ನಮ್ಮನ್ನು ರಕ್ಷಿಸುವವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಅಗ್ನಿಯು ದೇವತೆಗಳಿಗೂ ರಕ್ಷಕನು. ನನಗೂ ಯಜಮಾನನಿಗೂ ರಕ್ಷಣೆಯನ್ನುಂಟುಮಾಡುವವನು ಎಂದು ಯಾವ ಪುರುಷನು ತಿಳಿಯುತ್ತಾನೆಯೋ ಅವನು ಒಂದು ಸಂವತ್ಸರ ಪರ್ಯಂತರವೂ ಅಗ್ನಿಯಿಂದ ರಕ್ಷಣೆಯನ್ನು ಪಡೆದು ಕ್ಷೇಮದಿಂದಿರುವನು.

ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣ-ಮೃಗಭಿವದತಿ । ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರು-ತ್ತಮಾಂ ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿ-ರೇವಾಭೀ ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾಯಾವಿಸ್ರಂಸಾಯ

ನ್ಯೂನಾಧಿಕಸಂಖ್ಯಾಭ್ರಮಂ ವ್ಯುದಸಿತುಮಾಹ— ಪ್ರಣೀಯಮಾನಸ್ಯಾಗ್ನೇಃ ಪ್ರಕಾಶ-ಕತ್ವಾದೇತಾಸಾಂ ರೂಪಸಮೃದ್ಧಿಃ॥ ಆದ್ಯಂತಯೋಋರ್ಚೋರಾವೃತ್ತಿಂ ವಿಧಾಯ ಪ್ರಶಂಸತಿ— ಪೂರ್ವವದ್ವ್ಯಾಖ್ಯೇಯಂ ॥

ಈರೀತಿಯಾಗಿ ಹೋತೃವು ಹಿಂದೆ ಹೇಳಿದ ಎಂಟು ಋಕ್ಕುಗಳನ್ನು ಈ ಅಗ್ನಿಪ್ರಣಯನಕರ್ಮದಲ್ಲಿ ಪಠಿಸುವನು. ಇವೆಲ್ಲವೂ ಸೇರಿ ಒಂದು ಸಂಪೂರ್ಣವಾದ ರೂಪವನ್ನು ಪಡೆದಿರುವ ಕರ್ಮವಾಗಿರುವುದು. ಆಯಾ ಕರ್ಮಗಳಿಗೆ ಅನುಗುಣವಾದ ಎಂದರೆ ಆ ಕರ್ಮಗಳ ಅರ್ಥಾನುವಾದವಿವರಣೆಗಳನ್ನು ವರ್ಣಿಸುವ ಮಂತ್ರಗಳನ್ನು ಆಯಾ ಕಾಲಗಳಲ್ಲಿ ಹೇಳುವುದರಿಂದ ಯಜ್ಞ ಕರ್ಮವು ಸಾಂಗವಾಗಿ ನೆರವೇರುವುದಕ್ಕೆ ಸಹಾಯಕವಾಗಿರುವುದು. ಈ ಎಂಟು ಮಂತ್ರಗಳಲ್ಲಿ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಹೋತೃವು ಮೂರುಮೂರಾವೃತ್ತಿ ಪಠಿಸುವನು. ಇದರಿಂದ ಈ ಕರ್ಮದಲ್ಲಿ ಒಟ್ಟು ಹನ್ನೆರಡು ಋಕ್ಕುಗಳಿದ್ದಂತಾಯಿತು. ಹನ್ನೆರಡು ಮಾಸಗಳು ಸೇರಿ ಒಂದು ಸಂವತ್ಸರವಾಗುವುದು. ಪ್ರಜಾಪತಿಯು ಸಂವತ್ಸರ (ಕಾಲ) ಸ್ವರೂಪನು. ಆದ್ದರಿಂದ ಪ್ರಜಾಪತಿಯಲ್ಲಿ ಸ್ಥಾಪಿತವಾಗಿರುವ ಈ ಮಂತ್ರಗಳ ಸ್ವರೂಪವನ್ನೂ ಕ್ರಮವನ್ನೂ ಯಾವ ಪುರುಷನು ತಿಳಿದುಕೊಳ್ಳುವನೋ ಅವನು ಅಭಿವೃದ್ಧಿಯನ್ನೈದುವನು-ಮೊದಲಿನ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರುಸಲ ಹೋತೃವು ಪಠಿಸುವುದರಿಂದ ಯಜ್ಞದ ಎರಡು ತುದಿಗಳು ಜಾರಿಹೋಗಿ ಬೀಳದಹಾಗೆ ಭದ್ರವಾಗಿ ಗಂಟುಹಾಕಿದಂತಾಗುವುದು.

## *English Translation*

**(The Agni-pranayana i.e., ceremony of carrying the sacrificial fire to the altar destined for the animal and Soma sacrifices.)**

The Adhvaryu orders (the Hotar), when the sacrificial fire is to be carried (to the Uttara Vedi), to repeat Mantras appropriate (to the ceremony).

(He repeats :) pra devam devya (10, 176, 2), If the sacrificer be a Brahman, he ought to repeat a verse in the Gayatri metre; for the Brahman belongs to the Gayatri metre (has its nature). The Gayatri is beauty and acquisition of sacred knowledge. (This metre) makes him (the sacrificer) thus prosper by means of the beauty aud sacred knowledge (which is contained in it).

If the sacrificer be a Kshattriya, he should repeat a Trishtubh, imam mahe vidathyaya (3, 54, 1). For the Kshattriya belongs to the Trishtubh (has its nature). Trishtubh is strength, sharpness of senses and power. By repeating thus a Trishtubh the Hotar makes him (the sacrificer of the Kshattriya caste) prosper through the strength, sharpness of sense and power) contained in the Trishtubh). By the words of the second pada of the verse (mentioned): as'vatkritva idyaya prajabhrur, i.e., "they brought to him who is to be praised always (Agni)", the Hotar brings the sacrificer at the head of his (the sacrificer's) family. By the second half verse s'rinotu no damyebhis &c., i.e. may Agni hear us with the hosts (the flames) posted in his house; may he, the imperishable, hear (us) with his hosts in heaven! (the Hotar effects that). Agni shines in the house of the sacrificer till the end of his life (i.e. he is always protected by him).

If the sacrificer be a Vais'ya, the Hotar should repeat a verse in the Jagati metre, viz., :—ayam iha prathamo (4, 71, 1). For the Vais'ya belongs to the Jagati: cattle is of the same (Jagati) nature. Thus he makes him prosper by means of cattle (Provides him with it). In its fourth pada vaneshu, &c., the word Vis'e (Vais'ya) is mentioned. This is appropriate. What is appropriate, that is successful in the sacrifice.

When repeating the verse: ayam u shya pra devayur (10, 176, 3), which is in the Anushtubh metre, the Hotar sends forth speech, (i.e. he repeats for the first time, this mantra, with a loud voice again, after having only inaudibly muttered some of the preceding ones). For the Anushtubh metre is speech. By repeating (an Anushtubh) he thus sends forth speech in speech. By the words ayam u shya he expresses the following sentence: I who formerly was living among the Ghandharvas have come.

By the verse: ayam agnir urushyati, &c. (10, 176, 4) i.e., "this Agni makes (us) fearless by dint of his immortal nature, as it were," the Hotar provides him (the sacrificer) with immortality. (The second half of this verse), sahas'chit sahiyan devo jivatave kritah, i.e. "the god has been made very powerful by meaus of (his own) power, in order to preserve (our) lives" signifies, that he

(Agni) is the god who, by (our) repeating this verse, is made the preserver of (our) lives.

(The Hotar now repeats :) ilayas tva pade vayam, & c., (3, 29, 4) i.e., " we put thee, O Jatavedas ! (Agni) in the place of Ila, in the centre (nabhi of the Uttara Vedi) on the earth to carry up (our) offerings ". By nabhi (lt. navel) the nabhi of the Uttara Vedi is meant. Nidhimahi ('lit, we put down) means " they are about to put him (Agni) down." The term " havyaya volhave " means ; he is about to carry up the sacrifice.

(The Hotar repeats ;) Agne vis'vebhih svanika (6, 15, 16). " O Agni, with thy well-armed host " the flames, take first with all the gods thy seat in the hole which is stuffed with wool ; carry well the sacrificial offering, seasoned with melted butter, and deposited in thee as in a nest, for the sacrificer who is producing (the mystical sacrificial man) anew." (When repeating the first and second padas :) agne vis'vebhih, he makes him (Agni) with all the gods sit. (When repeating the third pada : kulayinam ghritavantam & c.) a bird's nest, as it were, consisting of sticks of fir-tree wood, an odoriferous gum (guggnl), a braid of hair (urnastukah), and a kind of fragrant grass is prepared for Agni at the sacrifice.

(When repeating the fourth pada:) yajnam noya & c. he thus places the sacrifice (the sacrificial personage) straight on him (Agni),

(The Hotar repeats :) sipa hotah sva u loke & c. (3, 29, 8) " sit, O Hotar ! (Agni) in thy own " place (the Nabhi) being conspicuous ; make sit the sacrifice in the hole of the well made (nest). Mayst thou, Agni who art going to the gods with the offering, repeat sacrificial verses addressed to the gods. Mayst thou grant the sacrificer a life with abundance."

By " Hotar " Agni is to be understood ; for he is the Hotar of the gods. " His own place " (sva u loke) is the Nabhi of the Uttara Vedi. By the words : make sit, & c., the Hotar asks a blessing for the sacrificer for the " yajna " (sacrifice, mentioned in this verse) is the sacrificer. When repeating the second half of this verse : devavir & c. the Hotar provides the sacrificer with life ; for " vayas " (mentioned in this verse) is llfe.

(The Hotar repeats :) ni hota hotrishadane (2, 9, 1) i.e. " The Hotar of great knowledge and skill, who is brightly shining, sat down on the Hotri-seat (place for the Hotar), Agni, who deeply comprehends the inviolable laws (of the

sacrificial art,) he, the most splendid (vasishthah) who bear's a thousand burdens i.e. preserver of all and has a flaming tongue." By Hotar is Agni to be understood; hotrishadanam is the nabhi of the uttara vedi. By "he sat down" is expressed, that he was put there. The term "vasishtha" means, that Agni is the most shining (vasu) among the gods. The term "sahasrambhara" means, that they, though he (Agni) be only one, multiply him, by using him at different occasions. He who has this knowledge, has a thousand-fold profit.

The Hotar concludes with the verse: tvam dutas tvam u nah (2, 92), i.e. "thou art our messenger, our protector behind (us); thou the bringer of wealth, O strong one! O Agni! do not neglect the bodies (members) in the spread of our families. The herdsman with his light was awake." Agni is the herdsman (gopa) of the gods. He who knowing this, concludes(the ceremony of Agni-pranayanam) with this verse (mentioned) has Agni everywhere round him as herdsman (watchman) for himself and the sacrificer, and secures thus welfare for the whole year.

He recites these eight verses (just enumerated), which are complete in form. What is complete in form, that is, when the mantra recited alludes to the ceremony which is being performed, that is successful in the sacrifice. Of these eight verses he repeats the first and last thrice, that makes twelve. Twelve months make a year; the year is Prajapati. He who has such a knowledge prospers through these verses which reside in Prajapati.

By repeating the first and last verses thrice, he ties the two ends of the sacrifice in order to give it a hold, and tighten it to prevent it from falling down.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಪಂಚಮಾಧ್ಯಾಯಸ್ಯ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಐದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



# ಅಥ ಪಂಚಮಾಧ್ಯಾಯೇ ತೃತೀಯಃ ಖಂಡಃ

## ಐದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಹವಿರ್ಧಾನ ಪ್ರವರ್ತನ—ಹವಿರ್ಧಾನವೆಂಬ ಸೋಮಲತೆಗಳನ್ನು ತುಂಬಿರುವ ಗಾಡಿಗಳನ್ನು ತರುವುದು]



**ಹವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುಬ್ರೂಹೀತ್ಯಾಹಾಧ್ವರ್ಯುಃ ।**

**ಅಥ ಹವಿರ್ಧಾನ ಪ್ರವರ್ತನೀಯಾ ಋಚೋ ವಿಧಾತುಮಾದೌ ಪ್ರೈಷಂ ವಿಧತ್ತೇ— ಹವಿಃ ಸೋಮರೂಪಂ ಧತ್ತೋ ಧಾರಯತ ಇತಿ ಹವಿರ್ಧಾನೇ ದ್ವೇ ಶಕಟೇ ॥ ತಯೋಃ ಸ್ವರೂಪಮಾಪಸ್ತಂಬೋ ದರ್ಶಯತಿ—'ಪ್ರಯುಕ್ತಃ ಪೂರ್ವೇ ಶಕಟೇ ಬದ್ಧಯುಗೇ ಪ್ರಕಟಿತಶಮ್ಯೇ ಪ್ರಕ್ಷಾಲ್ಯ ತಯೋಃ ಪ್ರಥಮಗ್ರಥಿತಾನ್ವಿಸ್ರಸ್ಯ ನವಾನ್ಪ್ರಜ್ಞಾತಾನ್ಕೃತ್ವಾಗ್ರೇಣ ಪ್ರಾಗ್ವಂಶಮುಭಿತಃ ಪೃಷ್ಠ್ಯಾಮುಪ್ಯಪನಯನ್ಪರಿಶ್ರಿತೇ ಸಚ್ಛದಿಷೀ ಅವಸ್ಥಾಪಯತಿ' ಇತಿ ॥ ತಯೋರ್ಹವಿರ್ಧಾನಯೋಃ ಪ್ರಾಚೀನವಂಶಸ್ಯ ಪುರೋಭಾಗಮುಪಕ್ರಮ್ಯೋತ್ತರದೇಶಪರ್ಯಂತಂ ನಯನಂ ಪ್ರವರ್ತನಂ ತದಪಿ ಸ ಏವಾಽಽಹ—'ಪ್ರಾಚೀ ಪ್ರೇತಮಧ್ವರಮಿತ್ಯುಕ್ತಂ ಗೃಹ್ಣಂತಂ ಪ್ರವರ್ತಯಂತಿ ಇತಿ ॥ ತತ್ಪ್ರವರ್ತನಕಾಲೇಽಧ್ವರ್ಯುಃ ಹೋತಾರಂ ಪ್ರತಿ ಹವಿರ್ಧಾನಾಭ್ಯಾಮಿತ್ಯಾದಿಪ್ರೈಷಮಂತ್ರಂ ಪ್ರಬ್ರೂಯಾತ್ ॥**

ಈ ಖಂಡದಲ್ಲಿ ಹವಿರ್ಧಾನಗಳೆಂಬ ಎರಡು ಗಾಡಿಗಳನ್ನು ಪ್ರಾಚೀನವಂಶಪ್ರದೇಶದಿಂದ ಉತ್ತರವೇದಿಯ ಬಳಿಗೆ ತರುವ ಯಜ್ಞಾಂಗ ಕರ್ಮವು ವಿವರಿಸಲ್ಪಡುವುದು. ಹವಿರ್ಧಾನವೆಂದರೆ—**ಹವಿಃ ಸೋಮರೂಪಂ ಧಾರಯತ ಇತಿ ಹವಿರ್ಧಾನೇ ಶಕಟೇ** ಅಗ್ನಿಯಲ್ಲಿ ಹೋಮಮಾಡುವ ಹವಿಸ್ಸಿಗಾಗಿ ಉಪಯೋಗಿಸಲ್ಪಡುವ ಸೋಮಲತೆಗಳನ್ನು ಇಡುವ ಎರಡು ಗಾಡಿಗಳಿಗೆ ಹವಿರ್ಧಾನವೆಂದು ಹೆಸರು; ಸೋಮಲತೆಗಳೆಂಬ ಹವಿಸ್ಸನ್ನು ವಹಿಸಿರುವ ಅಥವಾ ತುಂಬಿರುವ ಎರಡು ಗಾಡಿಗಳೆಂದರ್ಥವು. ಸೋಮಕ್ರಯಣಾನಂತರ ಸೋಮಲತೆಗಳನ್ನು ಎರಡು ಗಾಡಿಗಳಲ್ಲಿ ತುಂಬಿ ಅವುಗಳನ್ನು ಪ್ರಾಚೀನವಂಶವೆಂಬ ಯಜ್ಞಗೃಹದ ಸಮೀಪದಲ್ಲಿ ಬಿಟ್ಟಿರುವರು. ಈ ಗಾಡಿಗಳ ಸ್ವರೂಪವನ್ನು ಆಪಸ್ತಂಬ ಋಷಿಗಳು ಈರೀತಿ ಹೇಳಿರುವರು—**ಪ್ರಯುಕ್ತಃ ಪೂರ್ವೇ ಶಕಟೇ ಬದ್ಧಯುಗೇ ಪ್ರಕಟಿತಶಮ್ಯೇ ಪ್ರಕ್ಷಾಲ್ಯ ತಯೋಃ ಪ್ರಥಮಗ್ರಥಿತಾನ್ವಿಸ್ರಸ್ಯ ನವಾನ್ ಪ್ರಜ್ಞಾತಾನ್ಕೃತ್ವಾಗ್ರೇಣ ಪ್ರಾಗ್ವಂಶಮುಭಿತಃ ಪೃಷ್ಠ್ಯಾಮುಪ್ಯಪನಯನ್ಪರಿಶ್ರಿತೇ ಸಚ್ಛದಿಷೀ ಅವಸ್ಥಾಪಯತಿ** (ಆಪ. ಶ್ರೌ. ಸೂ. ೧೧-೬-೩) ಆ ಗಾಡಿಗಳನ್ನು ಮಂತ್ರಪೂರ್ವಕವಾಗಿ ಯಜ್ಞಪ್ರದೇಶವಾದ ಉತ್ತರವೇದಿಯ ಬಳಿಗೆ ತರುವುದಕ್ಕೆ ಹವಿರ್ಧಾನಪ್ರವರ್ತನವೆಂದು ಹೆಸರು. ಅದನ್ನೂ ಆಪಸ್ತಂಬಸೂತ್ರದಲ್ಲಿಯೇ ಹೇಳಿರುವುದು—**ಪ್ರಾಚೀ-ಪ್ರೇತಮಧ್ವರಮಿತ್ಯುಕ್ತಂ ಗೃಹ್ಣಂತಂ ಪ್ರವರ್ತಯಂತಿ** (ಆಪ. ಶ್ರೌ. ಸೂ. ೧೧-೬-೧೧) ಇದು ಯಜ್ಞದಲ್ಲಿ ಒಂದು

ಮುಖ್ಯವಾದ ಕರ್ಮವು. ಈ ಕರ್ಮಕ್ಕೆ ಸಂಬಂಧಪಟ್ಟ ಮಂತ್ರಗಳನ್ನು (ಎಂಟು ಮಂತ್ರಗಳನ್ನು) ಪಠಿಸು ಎಂದು ಅಧ್ವರ್ಯುವು ಹೋತೃವನ್ನು ಹವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುಬ್ರೂ ೩ ಹಿ ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿಃ ಎಂಬ ಋಕ್ಕನ್ನು ಪಠಿಸಲುಪ್ರಾರಂಭಿಸುವನು.

**ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರಿತ್ಯನ್ವಾಹ ಬ್ರಹ್ಮಣಾ ವಾ ಏತೇ ದೇವಾ ಅಯುಂಜತ ಯದ್ಧವಿರ್ಧಾನೇ ಬ್ರಹ್ಮಣೈವೈನೇ ಏತದ್ಯುಂಕ್ತೇ ನ ವೈ ಬ್ರಹ್ಮಣ್ವದ್ರಿಷ್ಯತಿ ॥**

ಹೋತ್ರಾನುವಚನೀಯಾನಾಮೃಚಾಂ ಮಧ್ಯೇ ಪ್ರಥಮಾಮೃಚಂ ವಿಧತ್ತೇ— ಹೇ ಹವಿರ್ಧಾನೇ ವಾಂ ಯುವಾಂ ಬ್ರಹ್ಮಯುಜೇ ಬ್ರಹ್ಮಣಾ ಯುನಕ್ತೀತ್ಯೇವಂ ಮಂತ್ರೇ ಯದುಕ್ತಮೇತತ್ಪಾಠೇನ ಬ್ರಾಹ್ಮಣಮುಖೇನೈವ ಹವಿರ್ಧಾನೇ ಯುಕ್ತೇ ಭವತಃ ॥ ಪೂರ್ವಂ ದೇವೈಸ್ತಥಾ ಕೃತತ್ವಾತ್ ॥ ಏತದ್ಯುಕ್ತಂ ಬ್ರಹ್ಮಣ್ವದ್ಬ್ರಾಹ್ಮಣೋಪೇತಂ ಕರ್ಮ ನೈವ ವಿನಶ್ಯತಿ ತಸ್ಮಾದ್ಯುಕ್ತೋಽಯಂ ಮಂತ್ರಃ ॥

ಈ ಹವಿರ್ಧಾನಪ್ರವರ್ತನವೆಂಬ ಕರ್ಮದಲ್ಲಿ ಮೊದಲನೆಯ ಋಕ್ಕಾದ—

(1) ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿಶ್ಲೋಕ ಏತು ಪಥ್ಯೇವ ಸೂರೇಃ ।
ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾ ಆ ಯೇ ಧಾಮಾನಿ ದಿವ್ಯಾನಿ ತಸ್ಥುಃ ॥
(ಋ. ಸಂ. ೧೦-೧೩-೧)

ಎಂಬ ಮಂತ್ರವನ್ನು ಹೋತೃವು ಪಠಿಸುವನು. ಈ ಋಕ್ಕಿನ ಮೊದಲನೆಯ ಪಾದದ ಅರ್ಥವು—ಎಲೈ ಹವಿರ್ಧಾನ (ಎರಡು)ಗಳನ್ನು ತುಂಬಿರುವ ಗಾಡಿಗಳೆ, ನಿಮ್ಮನ್ನು ಬ್ರಾಹ್ಮಣಮುಖದಿಂದ ಪಠಿತವಾಗುವ ವೇದಮಂತ್ರಗಳಿಂದ ಎಂದರೆ ವೇದ ಮಂತ್ರಪಠನಪೂರ್ವಕವಾಗಿ ಹವಿರೂಪವಾದ ಸೋಮಲತೆಗಳೊಡನೆ ಸೇರಿಸುವನು. ಎಂದರೆ ನಿಮ್ಮಲ್ಲಿ (ಗಾಡಿಗಳಲ್ಲಿ) ಸೋಮ ಲತೆಗಳನ್ನೂ ಮಂತ್ರಪೂರ್ವಕವಾಗಿ ತುಂಬುವೆನು ಎಂದಭಿಪ್ರಾಯವು. [ಈ ಋಕ್ಕನ್ನೊಳಗೊಂಡ ಋ. ಸಂ. ೧೦-೧೩ ನೇ ಸೂಕ್ತದ ಪೀಠಿಕೆಯಲ್ಲಿ ಹವಿರ್ಧಾನಪ್ರವರ್ತನವೆಂಬ ಕರ್ಮವನ್ನು ಶತಪಥಬ್ರಾಹ್ಮಣ, ತೈತ್ತಿರೀಯಸಂಹಿತೆ, ಐತರೇಯಬ್ರಾಹ್ಮಣ ಗಳಲ್ಲಿರುವಂತೆ ವಿಸ್ತಾರವಾಗಿ ವಿವರಿಸಲಾಗಿರುವುದು. ಋ. ಸಂ. ಭಾಗ ೨೭ ಪುಟ 407-421 ನೋಡಿ]. ಈ ಕ್ರಮವನ್ನು ಏಕೆ ಅನುಸರಿಸಬೇಕೆಂದರೆ ಪೂರ್ವದಲ್ಲಿ ದೇವತೆಗಳು ಯಜ್ಞಮಾಡುವಾಗ ಹವಿರ್ಧಾನವೆಂಬ ಶಕಟಗಳನ್ನು ಮಂತ್ರಗಳಿಂದ ಸೇರಿಸಿ ಎಂದರೆ ಮಂತ್ರಪೂರ್ವಕವಾಗಿ ಈ ಕರ್ಮವನ್ನು ಆಚರಿಸಿರುವರು. ಆದ್ದರಿಂದ ಮಂತ್ರಪೂರ್ವಕವಾಗಿ ಮಾಡಲ್ಪಡುವ ಈ ಕರ್ಮವು ನಾಶವಾಗುವುದಿಲ್ಲ ಎಂದರೆ ವಿಘ್ನಗಳಿಗೆ ಒಳಗಾಗುವುದಿಲ್ಲ.

**ಪ್ರೇತಾಂ ಯಜ್ಞಸ್ಯ ಶಂಭುವೇತಿ ತೃಚಂ ದ್ಯಾವಾಪೃಥಿವೀಯಮನ್ವಾಹ।**

ದ್ವಿತೀಯಾದ್ಯಾಸ್ತಿಸ್ರ ಋಚೋ ವಿಧತ್ತೇ—ಮಧ್ಯಮಾಯಾಮೃಚಿ ದ್ಯಾವಾ ನಃ ಪೃಥಿವೀ ಇಮಮಿತಿ ಶ್ರೂಯಮಾಣತ್ವಾದಯಂ ತೃಚೋ ದ್ಯಾವಾಪೃಥಿವೀಯಃ ॥

ಅನಂತರ ಹೋತೃವು ಈ ಕರ್ಮದಲ್ಲಿ ಪಠಿಸಬೇಕಾದ ಮುಂದಿನ ಮೂರು ಮಂತ್ರಗಳನ್ನು ಪಠಿಸುವನು—

(2) ಪ್ರೇತಾಂ ಯಜ್ಞಸ್ಯ ಶಂಭುವಾ ಯುವಾಮಿದಾ ವೃಣೀಮಹೇ ।
ಅಗ್ನಿಂ ಚ ಹವ್ಯವಾಹನಂ ॥

(3) ದ್ಯಾವಾ ನಃ ಪೃಥಿವೀ ಇಮಂ ಸಿಧ್ರಮದ್ಯ ದಿವಿಸ್ಪೃಶಂ ।
ಯಜ್ಞಂ ದೇವೇಷು ಯಚ್ಛತಾಂ ॥

(4) ಆ ವಾಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾಃ ।
ಇಹಾದ್ಯ ಸೋಮಪೀತಯೇ ॥ (ಋ. ಸಂ. ೨-೪೧-೧೯,೨೦,೨೧)

ಈ ಮೂರು ಋಕ್ಕುಗಳಲ್ಲಿ ಮಧ್ಯದ ಋಕ್ಕಿನಲ್ಲಿ ದ್ಯಾವಾ ನಃ ಪೃಥಿವೀ ಎಂಬ ಶಬ್ದಗಳಿರುವುದರಿಂದ ಈ ಮೂರು ಋಕ್ಕುಗಳೂ ದ್ಯಾವಾಪೃಥಿವೀ ದೇವತೆಗಳನ್ನು ಪ್ರತಿಪಾದಿಸುವವು ಎಂದಾಯಿತು. ಹವಿರ್ಧಾನಪ್ರವರ್ತನ ಕರ್ಮಕ್ಕೆ ಈ ದ್ಯಾವಾಪೃಥಿವೀದೇವತಾಕವಾದ ಋಕ್ಕುಗಳ ಪಠನಕ್ಕೂ ಏನು ಸಂಬಂಧ? ಈ ಮಂತ್ರಗಳನ್ನು ಈ ಕರ್ಮದಲ್ಲಿ ಏಕೆ ಪಠಿಸಬೇಕು ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು—

ತದಾಹುರ್ಯದ್ಧವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುವಾಚಾಹಾಥ ಕಸ್ಮಾತ್ತ್ರೃಚಂ ದ್ಯಾವಾಪೃಥಿವೀಯಮನ್ವಾಹೇತಿ ದ್ಯಾವಾಪೃಥಿವೀ ವೈ ದೇವಾನಾಂ ಹವಿರ್ಧಾನೇ ಆಸ್ತಾಂ ತೇ ಉ ಏವಾದ್ಯಾಪಿ ಹವಿರ್ಧಾನೇ ತೇ ಹೀದಮಂತರೇಣ ಸರ್ವಂ ಹವಿರ್ಯದಿದಂ ಕಿಂಚ ತಸ್ಮಾತ್ತ್ರೃಚಂ ದ್ಯಾವಾಪೃಥಿವೀಯಮನ್ವಾಹ ॥

ಅಸ್ಯ ತೃಚಸ್ಯ ಹವಿರ್ಧಾನಪ್ರತಿಪಾದಕತ್ವಾಭಾವಾದ್ವೈಯಧಿಕರಣ್ಯ ಮಿತ್ಯಾಕ್ಷಿಪ್ಯ ಸಮಾಧತ್ತೇ— ಯದ್ಯಪ್ಯತ್ರ ಹವಿರ್ಧಾನಯೋರನುಕೂಲಯಾ ವಾಚಾ ಪ್ರೈಷಮಾಹ ತಥಾಪಿ ದ್ಯಾವಾಪೃಥಿವೀಯಸ್ತೃಚಃ ನ ವ್ಯಧಿಕರಣಃ ಪುರಾ ದ್ಯಾವಾಪೃಥಿವ್ಯೋರೇವ ಹವಿರ್ಧಾನತ್ವಾತ್ ॥ ಅದ್ಯಾಪಿ ದ್ಯಾವಾಪೃಥಿವ್ಯಾವೇವ ಹವಿರ್ಧಾನೇ ॥ ತತ್ಕಥಮಿತಿ ಚೇದುಚ್ಯತೇ ॥ ಯಸ್ಮಾಲ್ಲೋಕೇ ಯತ್ಕಿಂಚಿದ್ಧವಿರಸ್ತಿ ತದಿದಂ ಸರ್ವಂ ತೇ ಅಂತರೇಣ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತತೇ ತಸ್ಮಾದ್ದ್ಯಾವಾಪೃಥಿವ್ಯೋರ್ಹವಿರ್ಧಾನತ್ವಾತ್ತದೀಯಸ್ಯ ತೃಚಸ್ಯಾನುವಚನಂ ಯುಕ್ತಂ ॥

ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಅವರು ದ್ಯಾವಾಪೃಥಿವೀಗಳನ್ನೇ ಹವಿರ್ಧಾನಶಕಟಗಳನ್ನಾಗಿ ಉಪಯೋಗಿಸಿದರು. ಈಗಲೂ ಸಹ ಯಜ್ಞಗಳಲ್ಲಿ ಉಪಯೋಗಿಸಲ್ಪಡುವ ಹವಿಸ್ಸಾಧನಗಳು ದ್ಯಾವಾಪೃಥಿವಿಗಳ (ಭೂಮ್ಯಂತರಿಕ್ಷಗಳ) ಮಧ್ಯದಲ್ಲಿಯೇ ಇರುವವು. ಆದುದರಿಂದ ಇಲ್ಲಿ ಹವಿರ್ಧಾನಪ್ರತಿಪಾದಕಗಳಾದ ಮಂತ್ರಗಳಿಗಾಗಿ ಅಥವಾ ಮಂತ್ರಗಳ ಮಧ್ಯದಲ್ಲಿ ದ್ಯಾವಾಪೃಥಿವೀದೇವತಾಕವಾದ ಈ ಮೂರು ಋಕ್ಕುಗಳನ್ನು ಪಠಿಸುವುದು ಯೋಗ್ಯವಾಗಿದೆ.

**ಯಮೇ ಇವ ಯತಮಾನೇ ಯದೈತಮಿತಿ ಯಮೇ ಇವ ಹ್ಯೇತೇ ಯತಮಾನೇ ಪ್ರಬಾಹುಗಿತಃ ।**

ಪಂಚಮೀಮೃಚಂ ವಿಧತ್ತೇ—ಯಮಶಬ್ದ ಏಕಸ್ಯಾ ಮಾತುರುದರೇ ಸಹೋತ್ಪನ್ನಸ್ಯ ಶರೀರದ್ವಯಸ್ಯ ವಾಚಕಃ ॥ ಯಮೇ ಇವ ಯಥಾ ಲೋಕೇ ತಾದೃಶ್ಯೌ ದ್ವೇ ಕನ್ಯಕೇ ಸಹ ವರ್ತೇತೇ ತಥೇಮೇ ಶಕಟೇ ಯತಮಾನೇ ಜಗದುಪಕಾರಾರ್ಥಂ ಪ್ರಯತ್ನಂ ಕುರ್ವತೀ ಯಸ್ಮಾತ್ಕಾರಣಾದೈತಮಾಗತವತೀ ಇತ್ಯೇತಸ್ಯ ಪಾದಸ್ಯಾರ್ಥಃ ಪ್ರಸಿದ್ಧ ಇತಿ ಹಿಶಬ್ದೋ ದ್ಯೋತಯತಿ ॥ ಯುಗಪದುತ್ಪನ್ನ ಕನ್ಯಕಾದ್ವಯವದೇವೈತೇ ಪ್ರಬಾಹುಕ್ಪರಸ್ಪರ ಸಾದೃಶ್ಯೇನ ಸಹೈವ ವರ್ತಮಾನೇ ಇತಃ ಪ್ರಚರತಃ ॥ ತದೇತಲ್ಲೋಕೇ ಪ್ರಸಿದ್ಧಮೇವ ದೃಶ್ಯತೇ ॥

ಈಗ ಹೋತೃವು ಈ ಕರ್ಮದಲ್ಲಿ ಐದನೆಯ ಋಕ್ಕಾದ—

(5) ಯಮೇ ಇವ ಯತಮಾನೇ ಯದೈತಂ ಪ್ರ ವಾಂ ಭರನ್ಮಾನುಷಾ ದೇವಯಂತಃ ।
ಆ ಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ ನಃ ॥

(ಋ. ಸಂ. ೧೦-೧೩-೨)

ಈ ಋಕ್ಕಿನ—**ಯಮೇ ಇವ ಯಾತಮಾನೇ ಯದೈತಂ** ಎಂಬ ಪ್ರಥಮಪಾದದ ಅರ್ಥವು ಈರೀತಿ ಇರುವುದು—ಲೋಕವ್ಯವಹಾರದಲ್ಲಿ ಒಂದೇ ಮಾತೃವಿನ ಉದರದಲ್ಲಿ ಒಟ್ಟಿಗೆ ಜನಿಸಿದ ಅವಳೀ ಕನ್ಯೆಯರು ಯಾವರೀತಿ ಒಟ್ಟಿಗೆ ಇರುವರೋ ಅದರಂತೆ ಈ ಗಾಡಿಗಳೂ ಸಹ ಜಗದುಪಕಾರಾರ್ಥವಾಗಿ ಯಾವಾಗಲೂ ಒಟ್ಟಾಗಿಯೇ ಇರುತ್ತವೆ. ಅವಳೀ ಕನ್ಯೆಯರಂತೆ ಇವೆರಡೂ ಸಹ ಒಂದನ್ನೊಂದು ಹೋಲುತ್ತಾ ಇಬ್ಬರಿಗೂ ಸಮಾನವಾದ ಗುಣಗಳಿಂದ ಶೋಭಿಸುತ್ತಿರುತ್ತವೆ.

**ಪ್ರ ವಾಂ ಭರನ್ಮಾನುಷಾ ದೇವಯಂತ ಇತಿ ದೇವಯಂತೋ ಹ್ಯೇನೇ ಮಾನುಷಾಃ ಪ್ರಭರಂತಿ ॥**

ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಯಚ್ಛಬ್ದಸ್ಯ ಪೂರ್ವಪಾದೇಽಭಿಹಿತತ್ವಾತ್ತಚ್ಛಬ್ದೋಽಸ್ಮಿನ್ಪಾದೇಽಧ್ಯಾಹರ್ತವ್ಯಃ ॥ ಯಸ್ಮಾತ್ಪ್ರಾಣ್ಯುಪಕಾರಾರ್ಥಂ ಪ್ರಯತಮಾನೇ ಸ್ಥಿತೇ ತಸ್ಮಾತ್ಕಾರಣಾದ್ದೇವಯಂತೋ ಯಷ್ಟುಮಿಚ್ಛಂತೋ ಮಾನುಷಾ ಋತ್ವಿಗ್ಯಜಮಾನಾ ಹೇ ಹವಿರ್ಧಾನೇ ವಾಂ ಯುವಾಂ ಪ್ರಭರ್ರ ಪ್ರಕರ್ಷೇಣ ಸಂಪಾದಯಂತಿ ॥ ಏತತ್ಪದಾರ್ಥಸ್ಯ ಯಾಜ್ಞಿಕಪ್ರಸಿದ್ಧಿದ್ಯೋತನಾರ್ಥೋ ಹಿ ಶಬ್ದಃ ॥

ಇನ್ನು ಈ ಋಕ್ಕಿನ—**ಪ್ರ ವಾಂ ಭರನ್ಮಾನುಷಾ ದೇವಯಂತಃ** ಎಂಬ ಎರಡನೆಯ ಪಾದದ ಅರ್ಥವನ್ನು ವಿವರಿಸುವರು—ಪ್ರಥಮಪಾದದಲ್ಲಿ ಯಚ್ಛಬ್ದಪ್ರಯೋಗವಿರುವುದರಿಂದ ಇಲ್ಲಿ ತಚ್ಛಬ್ದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಎಲೈ ಹವಿರ್ಧಾನಶಕಟಗಳೇ, ಯಾವ ನಿಮ್ಮ ಮಾಹಾತ್ಮ್ಯದಿಂದ ಪ್ರಾಣಿಗಳಿಗೆ ಉಪಕಾರಾರ್ಥವಾಗಿ ನೀವು ಪ್ರಯತ್ನಿಸುತ್ತಿರುವರೋ ಆದುದರಿಂದಲೇ ದೇವಪೂಜಾನಿರತರಾದ ಋತ್ವಿಗ್ಯಜಮಾನರು ನಿಮ್ಮನ್ನು ಅತಿಶಯವಾದ ಭಕ್ತಿಯಿಂದ ಯಜ್ಞಭೂಮಿಗೆ ಬರಮಾಡಿಕೊಳ್ಳುತ್ತಾರೆ. ಎಂದರೆ ಪ್ರೀತ್ಯಾದರಗಳಿಂದ ನಿಮ್ಮನ್ನು ಗೌರವಿಸುತ್ತಾರೆ.

ಆ ಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ
ನ ಇತಿ ಸೋಮೋ ವೈ ರಾಜೇಂದುಃ ಸೋಮಾಯೈವೈನೇ ಏತ-
ದ್ರಾಜ್ಞ ಆಸದೇಽಚೀಕ್ಲೃಪತ್ ॥

ದ್ವಿತೀಯಾರ್ಧಮನೂದ್ಯ ವ್ಯಾಚಷ್ಟೇ—ಹೇ ಹವಿರ್ಧಾನೇ ಉಭೇ ಯುವಾಂ ಪ್ರವರ್ತ-ಮಾನೇ ಸತೀ ಸ್ವಮು ಲೋಕಂ ಸ್ವಕೀಯಮೇವಸ್ಥಾನಂ ವಿದಾನೇ ಜ್ಞಾತವತೀ ಆಸೀದತಂ ತತ್ರ ಸ್ಥಿತಿಂ ಪ್ರಾಪ್ನುತಂ ನೋಽಸ್ಮದೀಯಾಯೇಂದವೇ ಸೋಮಾಯ ಸ್ವಾಸಸ್ಥೇ ಸುಶೋಭನ ಆಸನೇ ಸ್ಥಿತಿಂ ಪ್ರಾಪ್ತೇ ಭವತಂ ॥ ಅತ್ರೇಂದು ಶಬ್ದೇನ ಸೋಮೋರಾಜಾ ಉಚ್ಯತೇ ॥ ಅತಏವ ತತ್ಪಾಠೇನ ಸೋಮರಾಜಾರ್ಥಮಾಸದ ಆಸಾ(ಸ)ದನಾಯಾವಸ್ಥಾನಾಯಾಚೀಕ್ಲೃಪತ್ ಕಲ್ಪಿತವಾನ್ಭವತಿ ॥

ಈಗ ಮೂರನೆಯ ಮತ್ತು ನಾಲ್ಕನೆಯ ಪಾದಗಳ ಅರ್ಥವನ್ನು ವಿವರಿಸುವರು—ಆ ಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ ನಃ—ಎಲೈ ಹವಿರ್ಧಾನಶಕಟಗಳೇ, ನೀವು ನಿಮ್ಮ ಸ್ವಕೀಯವಾದ ಸ್ಥಾನವನ್ನು ತಿಳಿದಿರುವಿರಿ. ಆದ್ದರಿಂದ ನೀವು ಅಲ್ಲಿ ಕುಳಿತುಕೊಳ್ಳಿರಿ. ನಾವು ಮಾಡುವ ಈ ಯಜ್ಞದಲ್ಲಿ ಸೋಮರಸಪ್ರಾಪ್ತಿಗೋಸ್ಕರ ನೀವು ಶೋಭನವಾದ ನಿಮ್ಮ ಸ್ಥಾನದಲ್ಲಿ ಸುಖಾಸೀನರಾಗಿ ಕುಳಿತುಕೊಳ್ಳಿ. ಈ ಸ್ಥಾನವು ನಿಮ್ಮ ಸುಖಾಸನಕ್ಕಾಗಿ ಕಲ್ಪಿತವಾಗಿದೆ.

ಅಧಿ ದ್ವಯೋರದಧಾ ಉಕ್ಥ್ಯಂ ವಚ ಇತಿ ದ್ವಯೋರ್ಹ್ಯೇತತ್ತೃ-
ತೀಯಂ ಛದಿರಧಿ ನಿಧೀಯತೇ ॥

ಷಷ್ಠೀಮೃಚಂ ವಿಧತ್ತೇ—ಹವಿರ್ಧಾನಾಖ್ಯಯೋಃ ಶಕಟಯೋರುಪರಿ ಸೋಮಸ್ಯಾ-ವಸ್ಥಾನಾಯ ಗೃಹಾಕಾರೇಣ ಪರಿತೋ ವೇಷ್ಟನಮುಪರ್ಯಾಚ್ಛಾದನಂ ಯತ್ಕ್ರಿಯತೇ ತದೇತದಾಚ್ಛಾದನಂ ಛದಿಃಶಬ್ದವಾಚ್ಯಂ ॥ ತಾದೃಶೇ ದ್ವೇ ಛದಿಷೀ ದ್ವಯೋರ್ಹವಿರ್ಧಾನ-ಯೋರವಸ್ಥಾಪ್ಯ ತಯೋಃ ಛದಿಷೋರುಪರಿ ತೃತೀಯಂ ಛದಿರ್ಹವಿರ್ಧಾನಯೋರುದಾಹೃತ-ಯೋರವಸ್ಥಾಪ್ಯತೇ ॥ ತದೇತತ್ತೈತ್ತರೀಯಾ ಆಮನಂತಿ ॥ ' ದಂಡೋ ವಾ ಔದುಂಬರಸ್ತೃತೀ-ಯಸ್ಯ ಹವಿರ್ಧಾನಸ್ಯವಷಟ್ಕಾರೇಣಾಕ್ಷಮಾಚ್ಛಿನದ್ಯತ್ತೃತೀಯಂಛದಿರ್ಹವಿರ್ಧಾನಯೋರುದಾಹ್ರಿಯತೇ ತೃತೀಯಸ್ಯ ಹವಿರ್ಧಾನಸ್ಯಾವರುದ್ಧ್ಯೈ' ಇತಿ ॥ ತದೇತತ್ತೃತೀಯಚ್ಛದಿರವಸ್ಥಾಪನಂ॥ ಏತನ್ಮಂತ್ರಪ್ರಥಮಪಾದೇ ಪ್ರಸ್ತೂಯತೇ ॥ ಯದ್ವಯೋಶ್ಛದಿಷೋರಧ್ಯದಧಾ ಉಪರಿ ತೃತೀ-ಯಂ ಛದಿರ್ನಿಧೀಯತೇ ತದಿದಮುಕ್ಥ್ಯಂ ವಚ ಉಕ್ಥ್ಯಶಸ್ತ್ರನಾಮಕಂ ಯದ್ಯಜ್ಞಿಯಂ ಕರ್ಮ ತದ್ಯೋಗ್ಯಂ ವಚೋ ಮಂತ್ರಪಾಠಸ್ತದ್ರೂಪಂ ಇದಂ ಛದಿರಿತಿ ಚ್ಛದಿಷಃ ಪ್ರಶಂಸಾ ॥ ಅಸ್ಮಿ-ನ್ಪಾದೇ ಪೂರ್ವಭಾಗಸ್ಯಾರ್ಥೋ ಯಾಜ್ಞಿಕಪ್ರಸಿದ್ಧ ಇತ್ಯಭಿಪ್ರೇತ್ಯ ಹಿಶಬ್ದಯುಕ್ತೇನ ವಾಕ್ಯೇನ ವ್ಯಾಚಷ್ಟೇ ॥

ಅನಂತರ ಹೋತೃವು—

(6) ಅಧಿ ದ್ವಯೋರದಧಾ ಉಕ್ಥ್ಯಂಗವಚೋ ಯತಸ್ರುಚಾ ಮಿಥುನಾ ಯಾ ಸಪರ್ಯತಃ ।
ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತಿ ಭದ್ರಾ ಶಕ್ತಿರ್ಯಜಮಾನಾಯ ಸುನ್ವತಿ ॥
(ಋ. ಸಂ. ೧-೮೩-೩)

ಎಂಬ ಆರನೆಯ ಋಕ್ಕನ್ನು ಪಠಿಸುವನು. ಹವಿರ್ಧಾನಗಳೆಂಬ ಸೋಮಲತೆಗಳನ್ನು ತುಂಬಿರುವ ಎರಡು ಗಾಡಿಗಳ ಮೇಲುಭಾಗದಲ್ಲಿ ಗೃಹಾಕಾರವಾಗಿ ಒಂದು ಆಚ್ಛಾದನೆಯನ್ನು ಎಂದರೆ ಒಂದು ಹೊದಿಕೆಯನ್ನು ಹೊದಿಸಿ ಮುಚ್ಚುವರು. ಈ ಹೊದಿಕೆಯು ದರ್ಭೆಯ ಹುಲ್ಲಿನಿಂದ ಚಾಪೆ ಅಥವಾ ತಡಿಕೆಯ ರೂಪದಲ್ಲಿರುವುದು. ಇದಕ್ಕೆ ಛದಿಯೆಂದು ಹೆಸರು. ಎರಡು ಗಾಡಿಗಳಮೇಲೆ ಎರಡು ಛದಿಗಳಿರುವವು ಇವೆರಡು ಛದಿಗಳಮೇಲೆ ಮತ್ತೊಂದು ಎಂದರೆ ಮೂರನೆಯ ಛದಿಯನ್ನು ಹೊದಿಸಿರುವರು. ಈ ಮೂರನೆಯ ಛದಿಯನ್ನು ಮೂರನೆಯ ಹವಿರ್ಧಾನವೆಂದೂ ಕರೆಯುವ ರೂಢಿ ಇದೆ. ಈ ವಿಷಯದಲ್ಲಿ ತೈತ್ತರೀಯಸಂಹಿತೆಯಲ್ಲಿ ಈ ವಾಕ್ಯವಿದೆ—

ದಂಡೋ ವಾ ಔದುಂಬರಸ್ತೃತೀಯಸ್ಯ ಹವಿರ್ಧಾನಸ್ಯ ವಷಟ್ಕಾರೇಣಾಕ್ಷಮಾಚ್ಛಿನದ್ಯತ್ತೃತೀಯಂ ಛದಿರ್ಹವಿರ್ಧಾನಯೋರುದಾಹ್ರಿಯತೇ, ತೃತೀಯಸ್ಯ ಹವಿರ್ಧಾನಸ್ಯಾವರುಧ್ಯೈ ॥ (ತೈ. ಸಂ. ೬-೨-೯-೪)

ಮೂರನೆಯ ಹವಿರ್ಧಾನವೆಂದು ಹೇಳಲ್ಪಡುವ ಛದಿ (ಹೊದಿಕೆ)ಯೇ ಈ ಋಕ್ಕಿನಲ್ಲಿ ಹೇಳಲ್ಪಟ್ಟಿದೆ. ಎರಡು ಗಾಡಿಗಳ ಮೇಲೆ ಎರಡು ಛದಿಗಳನ್ನು ಹೊದಿಸಿ ಇವೆರಡನ್ನೂ ಸೇರಿಸುವಂತೆ ಮೂರನೆಯ ಛದಿಯನ್ನು ಇವುಗಳಮೇಲೆ ಹೊದಿಸಲಾಗುವುದು. ಈ ಮೂರನೆಯ ಛದಿಯು ಎರಡು ಹವಿರ್ಧಾನಶಕಟಗಳನ್ನು ಒಂದಾಗಿ ಸೇರಿಸುವುದು. ಆದ್ದರಿಂದ ಇದಕ್ಕೆ **ಉಕ್ಥ್ಯಂ ವಚಃ** ಎಂದೂ ಹೆಸರು. ಎಂದರೆ ಈ ಹವಿರ್ಧಾನಪ್ರವರ್ತನಕರ್ಮದಲ್ಲಿ ಉಕ್ಥ್ಯವೆಂಬ ಶಸ್ತ್ರಮಂತ್ರಗಳ (ವಾಕ್ಯಗಳ) ರೂಪವೇ ಈ ಮೂರನೆಯ ಛದಿಯಾಗಿರುವುದು. ಮೂರನೆಯ ಛದಿಯು ಎರಡು ಹವಿರ್ಧಾನಶಕಟಗಳನ್ನೂ ಒಂದಾಗಿ ಸೇರಿಸುವಂತೆ ಉಕ್ಥ್ಯಮಂತ್ರವು ಒಂದಾವೃತ್ತಿ ಪಠಿಸುವುದರಿಂದಲೇ ಎರಡು ಹವಿರ್ಧಾನಶಕಟಗಳ ಪ್ರವರ್ತನಕಾರ್ಯವು ನೆರವೇರುವುದೆಂದಭಿಪ್ರಾಯವು.

ಉಕ್ಥ್ಯಂ ವಚ ಇತಿ ಯದಾಹ ಯಜ್ಞಿಯಂ ವೈ ಕರ್ಮೋಕ್ಥ್ಯಂ ವಚೋ ಯಜ್ಞಮೇವೈತೇನ ಸಮರ್ಧಯತಿ ॥

ಉತ್ತರಭಾಗಂ ವ್ಯಾಚಷ್ಟೇ—ಉಕ್ಥ್ಯಂ ವಚ ಇತಿ ಯತ್ಪದದ್ವಯಂ ಮಂತ್ರೋ ಬ್ರೂತೇ ತೇನ ಪದದ್ವಯೇನ ಶಸ್ತ್ರಪಾಠಾಖ್ಯಂ ಯಜ್ಞಸಂಬಂಧಿ ಕರ್ಮೋಚ್ಯತೇ ॥ ತಸ್ಮಾದೇತೇನ ಮಂತ್ರಪಾಠೇನ ಯಜ್ಞಮೇವ ಸಮೃದ್ಧಂ ಕರೋತಿ ॥

ಇಲ್ಲಿ **ಉಕ್ಥ್ಯಂ ವಚಃ** ಎಂಬ ಎರಡು ಶಬ್ದಗಳು ಈ ಯಜ್ಞಾಂಗಕರ್ಮದಲ್ಲಿ ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಸೂಚಿಸುವುವು. ಈ ಶಸ್ತ್ರಮಂತ್ರಪಠನದಿಂದ ಯಜ್ಞಕರ್ಮವು ಸಮೃದ್ಧಿಯನ್ನೈದುವುದು ಎಂದರೆ ಪ್ರಶಸ್ತವಾಗಿ ನೆರವೇರುವುದು.

ಇಲ್ಲಿ ಒಂದು ವಿಶೇಷವಿಷಯವನ್ನು ಗಮನಿಸಬೇಕು. ಹೋತೃವು ಮೇಲಿನ **ಅಧಿ ದ್ವಯೋರದಧಾ ಉಕ್ಥ್ಯಂ ವಚಃ** ಎಂಬ ಋಕ್ಕನ್ನು ಪಠಿಸುವಾಗ, ಈ ಋಕ್ಕಿನ ಪೂರ್ವಾರ್ಧವನ್ನು ಎಂದರೆ– **ಅಧಿ ದ್ವಯೋರದಧಾ ಉಕ್ಥ್ಯಂ ವಚೋ ಯತಸ್ರುಚಾ ಮಿಥುನಾ ಯಾ ಸಪರ್ಯತಃ** ಎಂಬ ಅರ್ಧ ಋಕ್ಕನ್ನು ಪಠಿಸಿ ಮುಂದಿನ ಅರ್ಧ ಋಕ್ಕನ್ನು ಪಠಿಸದೆ ಸುಮ್ಮನಾಗುವನು. ಈ ವಿಷಯದಲ್ಲಿ—**ಅಧಿ ದ್ವಯೋರದಧಾ ಉಕ್ಥ್ಯಂ ವಚ ಇತಿ ಅರ್ಧರ್ಚ ಆರಮೇತ್ ವ್ಯವಸ್ತಾ ಚೇದ್ರರಾಟೀ ವಿಶ್ವಾ ರೂಪಾಣಿ ಪ್ರತಿಮುಂಚತೇ ವ್ಯವಸ್ತಾಯಾಂ** (ಆಶ್ವ. ಶ್ರೌ. ಸೂ. ೪-೯) ಆಶ್ವಲಾಯನಶ್ರೌತಸೂತ್ರದ ವಾಕ್ಯವಿರುವುದು. ಆ ಕಾಲದಲ್ಲಿ ಹವಿರ್ಧಾನಶಕಟಗಳ ಎರಡುಪಕ್ಕಗಳಲ್ಲಿರುವ ಉದುಂಬರ ಕಂಬಗಳ ಮೇಲೆ ದರ್ಭೆಯ ರರಾಟೀ ಎಂಬ ದರ್ಭಮಾಲೆಯನ್ನು ಹೊದಿಸಿರುವುದಿಲ್ಲ. ಅದನ್ನು ಹೊದಿಸಿದನಂತರ ಮಂತ್ರವನ್ನು ಮುಂದು ವರೆಸುವನು.

**ಯತಸ್ರುಚಾ ಮಿಥುನಾ ಯಾ ಸಪರ್ಯತಃ । ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತೀತಿ ॥**

**ದ್ವಿತೀಯ ತೃತೀಯ ಪಾದೌ ಪಠತಿ ॥**

**ಯದಾ ತೃತೀಯಂ ಛದಿರ್ನಿಧೀಯತೇ ತದಾನೀಂ ಯೇ ಹವಿರ್ಧಾನೇ ಸ್ತಸ್ತೇ ಉಭೇ ಯತಸ್ರುಚಾ ನಿಯತಸ್ರಗ್ಯುಕ್ತೇ ಕೃತಹೋಮೇ ಹುತಸೋಮೇ ಮಿಥುನಾ ಮಿಥುನವತ್ಪರಸ್ಪರಯುಕ್ತೇ ಸಪರ್ಯತಃ ಪೂಜಿತೇ ಭವತಃ ॥ ಅಯಮರ್ಥಃ ॥ ದ್ವಯೋರುಪರಿ ತೃತೀಯೇ ಚ್ಛದಿಷಿ ವ್ಯವಸ್ಥಾಪಿತೇ ಸತಿ ವಿವಾಹಹೋಮಾದೂರ್ಧ್ವಂ ಪರಸ್ಪರಸಂಯುಕ್ತೌ ಮಿಥುನರೂಪೌ ಸ್ತ್ರೀಪುರುಷೌ ಯಥಾ ಪೂಜ್ಯೇತೇ ತಥಾ ಹವಿರ್ಧಾನೇ ಹವಿಷಾ ಪೂಜಿತೇ ಭವತ ಇತಿ ॥ ಸಂಪೂರ್ವೋ ಯತಿಧಾತುಃ ಸಂಗ್ರಾಮೇ ವರ್ತತೇ ॥ ತೇನ ಕ್ರೌರ್ಯಗುಣೋ ಲಕ್ಷ್ಯತೇ ॥ ಸಂಯತ್ತಃ ಕ್ರೂರಃ ಅಸಂಯತ್ತಃ ಶಾಂತಃ ॥ ಅತ್ರೇಂದ್ರಸಂಬೋಧನಮಧ್ಯಾಹಾರ್ಯಂ ॥ ಹೇ ಇಂದ್ರ ಶಾಂತೋಽಧ್ವರ್ಯುಸ್ತೇ ವ್ರತೇ ತ್ವದೀಯೇ ಕರ್ಮಣಿ ಕ್ಷೇತಿ ನಿವಸತಿ ಪುಷ್ಯತಿ ತಚ್ಚ ಕರ್ಮ ಪುಷ್ಟಂ ಕರೋತಿ ॥**

ಈಗ ಈ ಋಕ್ಕಿನ ಎರಡು ಮತ್ತು ಮೂರನೆಯ ಪಾದಗಳ ಅರ್ಥವನ್ನು ವಿವರಿಸುವರು. ಮೇಲೆ ಹೇಳಿದಂತೆ ಎರಡು ಹವಿರ್ಧಾನಶಕಟಗಳ ಮೇಲೆ ಎರಡು ಛದಿ (ಹೊದಿಕೆ)ಗಳನ್ನು ಹೊದಿಸಿದನಂತರ ಆ ಎರಡು ಛದಿಗಳಮೇಲೆ ಮೂರನೆಯ ಛದಿಯನ್ನು ಹೊದಿಸುವರು. ಬಳಿಕ ಸ್ರುಕ್ ಎಂಬ ಹೋಮಮಾಡುವ ಮರದ ಸೌಟುಗಳಿಂದ ಹವಿರ್ಧಾನ ಶಕಟಗಳನ್ನುದ್ದೇಶಿಸಿ ಹೋಮಮಾಡುವರು. ಆಗ ಎರಡು ಛದಿಗಳಮೇಲೆ ಮೂರನೆಯ ಛದಿಯನ್ನು ಹೊದಿಸಿರುವುದು ಹೇಗೆ ಕಾಣುವುದೆಂದರೆ—ಹೊಸದಾಗಿ ವಿವಾಹವಾದನಂತರ ವಧೂವರರು ಎಂದರೆ ದಂಪತಿಗಳಾದ ಸ್ತ್ರೀಪುರುಷರು ವಸ್ತ್ರಾಭರಣಗಳಿಂದ ಅಲಂಕೃತರಾಗಿ ಗೌರವಿಸಲ್ಪಟ್ಟಂತೆ ಕಾಣುವರೋ ಅದರಂತೆ ಈ ಎರಡು ಹವಿರ್ಧಾನಶಕಟಗಳೂ ಕಾಣಿಸುವವು. ಮೂಲಮಂತ್ರದಲ್ಲಿ **ಯತಸ್ರುಚಾ** ಎಂಬ ಶಬ್ದಪ್ರಯೋಗವಿರುವುದು. **ಯತಸ್ರುಚಾ** ಎಂದರೆ ಹೋಮಾರ್ಥವಾಗಿ ಸ್ರುಕ್ ಎಂಬ ಮರದ ಸೌಟನ್ನು ಆಜ್ಯದಿಂದ ತುಂಬಿ ಅಗ್ನಿಯಲ್ಲಿ ಹೋಮಾರ್ಥವಾಗಿ ಮೇಲಕ್ಕೆ ಎತ್ತಿ ಹಿಡಿದಿರುವುದೆಂದರ್ಥವು. **ಯತಿ** ಧಾತುವಿಗೆ ಮೇಲೆತ್ತಿ ಹಿಡಿದಿರುವುದೆಂದು ಅರ್ಥವಿದ್ದರೂ ಈ ಧಾತುವಿಗೆ **ಸಂ** ಎಂಬ ಉಪಸರ್ಗವು ಶಬ್ದದ ಪೂರ್ವದಲ್ಲಿ ಸೇರಿದ್ದರೆ ಎಂದರೆ **ಸಂಯತ್ತಃ** ಎಂಬ ಶಬ್ದಕ್ಕೆ ಯುದ್ಧ ಅಥವಾ ಯುದ್ಧಸನ್ನದ್ಧ ಎಂಬರ್ಥವಿರುವುದು. ಉದಾ—**ದೇವಾಸುರಾಃ ಸಂಯತ್ತಾ ಆಸನ್**

ದೇವತೆಗಳೂ ಅಸುರರೂ ಪರಸ್ಪರ ಯುದ್ಧಸನ್ನದ್ಧರಾದರು. ಎಂಬ ವಾಕ್ಯದಲ್ಲಿ **ಸಂಯತ್ತಾಃ** ಎಂಬ ಶಬ್ದಕ್ಕೆ ಇದೇ ಅರ್ಥವಿರುವುದು. ಪ್ರಕೃತಸಂದರ್ಭದಲ್ಲಿ ಸೋಮಲತೆಗಳನ್ನು ತುಂಬಿರುವ ಹವಿರ್ಧಾನಶಕಟಗಳ ವಿಷಯದಲ್ಲಿ ಯುದ್ಧಸೂಚಕವಾದ ಯತಶಬ್ದಪ್ರಯೋಗವು ಸೋಮರಾಜನಿಗೆ ಅಪಚಾರವನ್ನೆಸಗಿದಂತಾಗುವುದು. **ಸಂಯತಃ** ಎಂದರೆ ಕ್ರೂರವು ಎಂದರ್ಥವು. ಆದ್ದರಿಂದ **ಅಸಂಯತ್ತಃ** ಎಂಬ ಶಬ್ದಕ್ಕೆ ಶಾಂತಿಯೆಂದರ್ಥವು. ಹೋತೃವು ಶಾಂತ್ಯರ್ಥವಾಗಿ ಈ ಕರ್ಮದಲ್ಲಿ ಇಂದ್ರನನ್ನು ಸಂಬೋಧಿಸಿ—ಎಲೈ ಇಂದ್ರನೇ, ಶಾಂತನಾದ ಅಧ್ವರ್ಯುವು (ಅಥವಾ ಯಜ್ಞಮಾಡುವ ಯಜಮಾನನು) ನಿನ್ನನ್ನುದ್ದೇಶಿಸಿ ಮಾಡುವ ಈ ಸೋಮಾಭಿಷವಕರ್ಮದಲ್ಲಿ ಪ್ರವೃತ್ತನಾಗಿರುವನು ಮತ್ತು ಆ ಕರ್ಮವನ್ನು ಪುಷ್ಟಿಗೊಳಿಸುವನು ಎಂದರೆ ಕರ್ಮವನ್ನು ವೃದ್ಧಿಯಾಗುವಂತೆ ಮಾಡುವನು.

### ಯದೇವಾದಃ ಪೂರ್ವಂ ಯತ್ತವತ್ಪದಮಾಹ ತದೇವೈತೇನ ಶಾಂತ್ಯಾ ಶಮಯತಿ ॥

**ಏತಸ್ಯ ತೃತೀಯಪಾದಸ್ಯ ತಾತ್ಪರ್ಯಂ ದರ್ಶಯತಿ—ಯತ್ತವತ್ಪದವಾಚ್ಯಸ್ತೃತೀಯಃ ಪಾದಃ॥ ಅತ್ರ ವ್ರತಪದಾತ್ಪೂರ್ವಂ ಯದೇವಾದೋ ಯದಿದಂ ಯತ್ತವತ್ಪದಂ ಯತ್ತಶಬ್ದೋಪೇತಂ ಸಂಯತ್ತ ಇತಿ ಪದಂ ತೇನ ಯುದ್ಧವಾಚಿನಾ ಯತ್ಕ್ರೌರ್ಯಂ ದ್ಯೋತಿತಂ ತದೇವ ಕ್ರೌರ್ಯಮೇತೇನಾಸಂಯತ್ತಃ ಪುಷ್ಯತೀತಿ ಪದದ್ವಯೇನ ಪ್ರತೀತಯಾ ಶಾಂತ್ಯಾ ಹೋತಾ ಶಮಯತಿ ॥**

ಮೇಲೆ ಹೇಳಿದಂತೆ **ಯತಸ್ರುಚಾ** ಎಂಬ ಶಬ್ದದಲ್ಲಿರುವ ಯತ ಅಥವಾ ಯತ್ತಶಬ್ದವು ಯುದ್ಧ ಅಥವಾ ಕ್ರೌರ್ಯವೆಂಬ ಅರ್ಥವನ್ನು ಸೂಚಿಸುವುದು. ಈ ಶಬ್ದವನ್ನು ಸೋಮರಾಜನ ವಿಷಯದಲ್ಲಿ ಮಾಡಿರುವುದು ಸೋಮರಾಜನಿಗೆ ಅಪಚಾರವನ್ನೆಸಗಿದಂತಾಗಿರುವುದು. ಆದ್ದರಿಂದ ಹೋತೃವು ಸೋಮರಾಜನನ್ನು ಸಮಾಧಾನಪಡಿಸುವುದಕ್ಕಾಗಿ ಈ ಋಕ್ಕಿನ ಮೂರನೆಯ ಪಾದದಲ್ಲಿ **ಅಸಂಯತ್ತಃ**—ಕ್ರೌರ್ಯವಿಲ್ಲದ, ಶಾಂತ್ಯರ್ಥವಾದ ಎಂಬ ಶಬ್ದವನ್ನು **ಪುಷ್ಯತಿ** ಎಂಬ ಶಬ್ದವನ್ನು ಪ್ರಯೋಗಿಸಿ ಸೋಮನನ್ನು ಸಮಾಧಾನಪಡಿಸಿರುವನು.

### ಭದ್ರಾ ಶಕ್ತಿರ್ಯಜಮಾನಾಯ ಸುನ್ವತ ಇತ್ಯಾಶಿಷಮಾಶಾಸ್ತೇ ।

**ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ಭದ್ರಾ ಕಲ್ಯಾಣರೂಪಾ ಶಕ್ತಿರ್ಭವತ್ವಿತಿ ಶೇಷಃ ॥ ಅನೇನ ಪಾದೇನ ಪ್ರಾರ್ಥನೀಯಂ ಪ್ರಾರ್ಥಯತೇ—**

ಈಗ ಋಕ್ಕಿನ ನಾಲ್ಕನೆಯ ಪಾದವನ್ನು ವಿವರಿಸುವರು—ಸೋಮಾಭಿಷವವನ್ನು ಮಾಡುವ ಯಜಮಾನನಿಗೆ ಕಲ್ಯಾಣರೂಪವಾದ ಶಕ್ತಿಯು (ಶ್ರೇಯಸ್ಸು) ಉಂಟಾಗಲಿ ಎಂಬ ಆಶ್ವಾಸನೆಯು (ಪ್ರಾರ್ಥನೆಯು) ಈ ಪಾದದಲ್ಲಿ ಉಕ್ತವಾಗಿರುವುದು.

### ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿರಿತಿ ವಿಶ್ವರೂಪಾಮನ್ವಾಹ ।

ಸಪ್ತಮೀಮೃಚಂ ವಿಧತ್ತೇ—ಕವಿರ್ಮೇಧಾವೀ ಮಂತ್ರಪ್ರತಿಪಾದ್ಯೋ ದೇವಃ ಸವಿತಾ ವಿಶ್ವಾರೂಪಾಣಿ ಶುಕ್ಲಕೃಷ್ಣಾದೀನಿ ಬಹೂನಿ ದೂಪಾಣ್ಯಾಭರಣತ್ವೇನ ಪ್ರತಿಮುಂಚತೇ ಸ್ವಶರೀರೇ ಸ್ಥಾಪಯತಿ ॥ ಅತ್ರರೂಪಶಬ್ದಸ್ಯ ವಿಶ್ವಶಬ್ದಸ್ಯ ಚ ವಿದ್ಯಮಾನತ್ವಾದಿಯಮೃಗ್ವಿಶ್ವ-ರೂಪಶಬ್ದಾಭಿಧೇಯಾ ॥

ಅನಂತರ ಹೋತೃವು—

(7) ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।
ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿರಾಜತಿ ॥
(ಋ. ಸಂ. ೫-೮೧-೨)

ಎಂಬ ಏಳನೆಯ ಋಕ್ಕನ್ನು ಪಠಿಸುವನು. ಇದರ ಅರ್ಥವಿವರಣೆಯು—ಮೇಧಾವಿಯೂ ಈ ಮಂತ್ರಪ್ರತಿಪಾದ್ಯನೂ ಆದ ಸವಿತೃದೇವನು ಶುಕ್ಲಕೃಷ್ಣ ಮೊದಲಾದ ಅನೇಕ ವರ್ಣಗಳುಳ್ಳ ಆಭರಣಾದಿಗಳನ್ನು ತನ್ನ ಶರೀರದಲ್ಲಿ ಧರಿಸಿದ್ದಾನೆ. ಎಂದರೆ ಪ್ರಕಾಶಮಾನವೂ ನಾನಾವಿಧವೂ ಆದ ಕಿರಣಗಳನ್ನು ಬೀರುತ್ತಾನೆ. ಇಲ್ಲಿ ವಿಶ್ವಾ ಮತ್ತು ರೂಪಾಣಿ ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಈ ಋಕ್ಕನ್ನು ವಿಶ್ವರೂಪಋಕ್ಕೆಂದು ಕರೆಯುವರು.

## ಸ ರರಾಟ್ಯಾಮೀಕ್ಷಮಾಣೋಽನುಬ್ರೂಯಾತ್ ॥

ತಸ್ಯಾ ಅನುವಚನೇ ಹೋತುಃ ಕಿಂಚಿದಿತಿಕರ್ತವ್ಯತಾಮಾಹ—ಹವಿರ್ಧಾನಮಂಡಪಸ್ಯ ಚಿಕೀರ್ಷಿತಸ್ಯ ಪ್ರಾಚ್ಯಾಂ ದ್ವಾರಿ ಬಂಧನೀಯಾ ದರ್ಭಮಾಲಾ ರರಾಟೀ ॥ ದ್ವಿತೀಯಾರ್ಥೇ ಸಪ್ತಮೀ ॥ ತಾಂ ದರ್ಭಮಾಲಾಂ ಪಶ್ಯನ್ನನುಬ್ರೂಯಾತ್ ॥

ಹವಿರ್ಧಾನಶಕಟಗಳನ್ನು ನಿಲ್ಲಿಸಿರುವ ಮಂಟಪದ ಪೂರ್ವದ್ವಾರದಲ್ಲಿ ಕಟ್ಟಿರುವ ದರ್ಭಮಾಲೆಗೆ ರರಾಟೀ ಎಂದು ಹೆಸರು. ಆ ದರ್ಭಮಾಲೆಯನ್ನು ನೋಡುತ್ತಾ ಹೋತೃವು ಮೇಲಿನ **ವಿಶ್ವಾ ರೂಪಾಣಿ** ಎಂಬ ಋಕ್ಕನ್ನು ಪಠಿಸುವನು.

## ವಿಶ್ವಮಿವ ಹಿ ರೂಪಂ ರರ್ರ್ಯಾಟ್ಯಾಃ ಶುಕ್ಲಮಿವ ಚ ಕೃಷ್ಣಮಿವ ಚ

ಅಸ್ಯಾ ಋಚೋ ದರಾಟ್ಯನುರೂಪತ್ವಂ ದರ್ಶಯತಿ—ದರ್ಭಮಾಲಾಯಾ ಅತ್ಯಂತ ಶುಷ್ಕಾಸ್ತೃಣವಿಶೇಷಾಃ ಶುಕ್ಲಾ ದೃಶ್ಯಂತೇ ಅಶುಷ್ಕಾಸ್ತು ಕೃಷ್ಣಾ ಅತೋ ವಿಶ್ವಮಿವ ಬಹು-ವಿಧಮಿವ ದರ್ಭಮಾಲಾಯಾಃ ಸ್ವರೂಪಂ ತೇನ ವಿಶ್ವಾರೂಪಾಣೀತ್ಯಯಂಮಂತ್ರೋಽನುಕೂಲಃ

ಈ ಋಕ್ಕಿಗೂ ರರಾಟೀ ಎಂಬ ದರ್ಭಮಾಲೆಗೂ ಏನುಸಂಬಂಧ ಎಂದರೆ ಅದನ್ನು ಇಲ್ಲಿ ವಿವರಿಸುವರು. ದರ್ಭಮಾಲೆ ಯಲ್ಲಿ ಒಣಗಿದ್ದು ಮತ್ತು ಹಸಿಯದು ಎಂದು ಎರಡುವಿಧ ದರ್ಭೆಗಳಿರುವವು. ಒಣಗಿದ ದರ್ಭೆಯು ಬೆಳ್ಳಗಿರುವುದು (ಶುಕ್ಲ); ಹಸಿಯ ದರ್ಭೆಯು ಕೃಷ್ಣವರ್ಣದ್ದಾಗಿರುವುದು. ಆದ್ದರಿಂದ ನಾನಾವಿಧವರ್ಣಗಳುಳ್ಳ ದರ್ಭೆಗಳ ಮಾಲೆಗಳನ್ನು ವರ್ಣಿಸುವಾಗ **ವಿಶ್ವಾ ರೂಪಾಣಿ** ಎಂಬ ಋಕ್ಕನ್ನು ಪಠಿಸುವುದು ನ್ಯಾಯವಾಗಿದೆ.

**ವಿಶ್ವಂ ರೂಪಮವರುಂಧ ಆತ್ಮನೇ ಚ ಯಜಮಾನಾಯ ಚ ಯತ್ರೈವಂ ವಿದ್ವಾನೇತಾಂ ರರಾಟ್ಯಾಮೀಕ್ಷಮಾಣೋಽನ್ವಾಹ ॥**

**ಹೋತುರೇತದ್ವೇದನಂ ಪ್ರಶಂಸತಿ—ವಿಶ್ವರೂಪಂ ಪ್ರಜಾಪಶ್ವಾದಿವಿವಿಧವಸ್ತುಸ್ವರೂಪಂ ॥**

ಈ ಋಕ್ಕಿನಲ್ಲಿರುವ ವಿಶ್ವಾ ರೂಪಾಣಿ ಎಂಬ ಶಬ್ದಗಳು ಅನೇಕರೂಪಗಳುಳ್ಳ ಗೋವು ಅಶ್ವ ಮೊದಲಾದ ಪ್ರಾಣಿಗಳನ್ನು ಸೂಚಿಸುವುದು. ಈ ಋಕ್ಕಿನ ಪಠನದಿಂದ ಇಂತಹ ಗೋಅಶ್ವಾದಿಗಳಿಂದ ಯುಕ್ತವಾದ ಪಶುಸಂಪತ್ತು ಹೋತೃವಿಗೂ ಯಜ್ಞಮಾಡುವ ಯಜಮಾನನಿಗೂ ಲಭಿಸುವುದು ಎಂದು ಭಾವಿಸಿ ಹೋತೃವು ರರಾಟಿಯೆಂಬ ದರ್ಭಮಾಲೆಯನ್ನು ವೀಕ್ಷಿಸುತ್ತಾ ಈ ಋಕ್ಕನ್ನು ಪಠಿಸುವನು. ಈ ವಿಷಯವನ್ನು ತಿಳಿದವನೂ ಸಹ ಪಶುಸಂಪತ್ತನ್ನು ಪಡೆಯುವನು.

**ಪರಿ ತ್ವಾ ಗಿರ್ವಣೋ ಗಿರ ಇತ್ಯುತ್ತಮಯಾ ಪರಿದಧಾತಿ**

**ಅಷ್ಟಮ್ಯಾಽನುವಚನಸಮಾಪ್ತಿಂ ವಿಧತ್ತೇ—**

ಅನಂತರ ಹೋತವು ಈ ಕರ್ಮದಲ್ಲಿ ಎಂಟನೆಯ ಮತ್ತು ಕೊನೆಯ ಋಕ್ಕಾದ

(8) **ಪರಿ ತ್ವಾ ಗಿರ್ವಣೋ ಗಿರ ಇಮಾ ಭವಂತು ವಿಶ್ವತಃ ।**
**ವೃದ್ಧಾಯುಮನು ವೃದ್ಧಯೋ ಜುಷ್ಟಾ ಭವಂತು ಜುಷ್ಟಯಃ ॥**

(ಋ. ಸಂ. ೧-೧೦-೧೨)

ಎಂಬ ಋಕ್ಕನ್ನು ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸುವನು.

**ಸ ಯದೈವ ಹವಿರ್ಧಾನೇ ಸಂಪರಿಶ್ರಿತೇ ಮನ್ಯೇತಾಥ ಪರಿದಧ್ಯಾತ್ ॥**

**ಪರಿಧಾನಸ್ಯ ಕಾಲಂ ವಿಧತ್ತೇ—ಯಸ್ಮಿನ್ನೇವ ಕಾಲೇ ಪ್ರವರ್ತಿತೇ ದ್ವೇ ಶಕಟೇ ಸಂಪರಿಶ್ರಿತೇ ಸ್ವಸ್ಥಾನೇಽವಸ್ಥಾಪ್ಯ ಸಮ್ಯಗಾಚ್ಛಾದಿತೇ ಇತಿ ಸ ಹೋತಾ ಮನ್ಯೇತ ತತ್ತದಾನೀಂ ಸಮಾಪಯೇತ್ ॥**

ಈ ಕರ್ಮದ ಸಮಾಪ್ತಿಕಾಲವು ಯಾವುದೆಂದರೆ, ಹವಿರ್ಧಾನಶಕಟಗಳನ್ನು ಅವುಗಳ ಸ್ವಸ್ಥಾನದಲ್ಲಿ ಎಂದರೆ ಹವಿರ್ಧಾನಮಂಡಪದಲ್ಲಿ ತಂದು ನಿಲ್ಲಿಸಿ ಅನಂತರ ಮಂತ್ರಪೂರ್ವಕವಾಗಿ ಅವುಗಳಮೇಲೆ ಛದಿ ಎಂಬ ಆಚ್ಛಾದನೆಯನ್ನು ಹೊದಿಸಿದನಂತರ ಈ ಕರ್ಮವು ಸಮಾಪ್ತಿಗೊಳ್ಳುವುದು. ಈ ಸಮಾಪ್ತಿಕಾಲದಲ್ಲಿ ಹೋತೃವು ಪರಿ ತ್ವಾ ಗಿರ್ವಣೋ ಗಿರ ಎಂಬ ಮಂತ್ರವನ್ನು ಪಠಿಸುವನು ಎಂದಭಿಪ್ರಾಯವು.

**ಅನಗ್ನಂಭಾವುಕಾ ಹ ಹೋತುಶ್ಚ ಯಜಮಾನಸ್ಯ ಚ ಭಾರ್ಯಾ ಭವಂತಿ ಯತ್ರೈವಂ ವಿದ್ವಾನೇತಯಾ ಹವಿರ್ಧಾನಯೋಃ ಸಂಪರಿಶ್ರಿತಯೋಃ ಪರಿದಧಾತಿ ॥**

**ಹೋತುರೇತದ್ವೇದನಂ ಪ್ರಶಂಸತಿ—ಅನಗ್ನಂಭಾವುಕಾ ಆಚ್ಛಾದನಬಾಹುಲ್ಯಸಂಪತ್ತ್ಯಾ ನಗ್ನತ್ವರಹಿತಾಃ ॥**

ಮೂಲವಾಕ್ಯದಲ್ಲಿ **ಅನಗ್ನಂಭಾವುಕಾಃ** ಎಂಬ ಶಬ್ದಪ್ರಯೋಗವಿದೆ. ನಗ್ನವೆಂದರೆ ಬೆತ್ತಲೆ ಆಚ್ಛಾದನೆರಹಿತವಾಗಿರುವುದು ಎಂದರ್ಥ. ಅನಗ್ನವೆಂದರೆ ಆರೀತಿ ಇಲ್ಲದಿರುವುದು ಎಂದರೆ ನಗ್ನಾವಸ್ಥೆ ಇಲ್ಲದೆ ದರ್ಭಾಚ್ಛಾದನೆಯಿಂದ ಹವಿರ್ಧಾನಶಕಟಗಳನ್ನು ಹೊದ್ದಿಸಿರುವುದು ಎಂದರ್ಥವು. ಈರೀತಿ ಹವಿರ್ಧಾನಶಕಟಗಳನ್ನು ಛದಿ ಎಂಬ ದರ್ಭಾಚ್ಛಾದನೆಗಳಿಂದ ಯಾವಾಗ ಹೊದ್ದಿಸುವರೋ ಆಗ ಈ ಹವಿರ್ಧಾನಕರ್ಮವು ಮುಗಿಯಿತೆಂದು ತಿಳಿಯಬೇಕು. ಇದನ್ನು ವಿವೇಕಿಯಾದ ಹೋತೃವು ತಿಳಿದು ಕರ್ಮಸಮಾಪ್ತಿಮಾಡುವುದಕ್ಕಾಗಿ ಕೊನೆಯ ಋಕ್ಕಾದ **ಪರಿ ತ್ವಾ ಗಿರ್ವಣೋ ಗಿರಃ** ಎಂಬ ಋಕ್ಕನ್ನು ಪಠಿಸಬೇಕು. ಈ ಕರ್ಮದ ಸಮಾಪ್ತಿಕಾಲದಲ್ಲಿ ಇನ್ನೂ ಕೆಲವು ಕಾರ್ಯಕಲಾಪಗಳಿರುವವು. ಈರೀತಿ ಮಾಡುವ ಹೋತೃವೂ ಮತ್ತು ಯಜಮಾನನೂ ವಸ್ತ್ರಾಲಂಕೃತಳಾದ ಸ್ತ್ರೀಯರನ್ನು ಭಾರ್ಯೆಯರನ್ನಾಗಿ ಪಡೆಯುವರು.

## ಯಜುಷಾ ವಾ ಏತೇ ಸಂಪರಿಶ್ರಿಯೇತೇ ಯದ್ಧವಿರ್ಧಾನೇ ಯಜುಷೈವೈನೇ ಏತತ್ಪರಿಶ್ರಯಂತಿ ॥

**ಹವಿರ್ಧಾನಯೋಃ ಪರಿಶ್ರಯಣಕಾಲಂ ಜ್ಞಾತ್ವಾ ಪರಿದಧ್ಯಾದಿತ್ಯುಕ್ತಂ ಸಕಾಲಃ ಕಥಂ ಜ್ಞಾಯತ ಇತ್ಯಾಶಂಕ್ಯಾಹ—ಯದ್ಧವಿರ್ಧಾನೇ ದ್ವೇ ಶಕಟೇ ವಿದ್ಯೇತೇ ಏತೇ ಯಜುಷಾ ವೈ ಯಜುರ್ಮಂತ್ರೇಣೈವ ಸಂಪರಿಶ್ರಿತೇ ಭವತಃ, ತದೇವ ಕಥಮಿತಿ ತದುಚ್ಯತೇ ॥ ಅಧ್ವರ್ಯವ ಏತೇ ಹವಿರ್ಧಾನೇ ಯಜುಷೈವ ಪರಿಶ್ರಯಂತೀತ್ಯೇತತ್ಪ್ರಸಿದ್ಧಮಿತಿಶೇಷಃ ॥ ತದೇತದಾಪಸ್ತಂಬೋ ದರ್ಶಯತಿ—'ವಿಷ್ಣೋಃ ಪೃಷ್ಠಮಸೀತಿ । ತೇಷುಮಧ್ಯಮಂ ಛದಿರಧ್ಯೂಹತಿ । ಅರತ್ನಿವಿಸ್ತಾರಂ ನವಾಯಾಮಂ' ಇತಿ ॥**

ಈ ಹವಿರ್ಧಾನಪ್ರವರ್ತನವೆಂಬ ಕರ್ಮದಲ್ಲಿ ಹೋತೃವು ನೆರವೇರಿಸಬೇಕಾದ ಮಂತ್ರಪಠನವೆಲ್ಲವೂ ಕೊನೆಯ ಋಕ್ಕಾದ **ಪರಿ ತ್ವಾ ಗಿರ್ವಣೋ ಗಿರಃ** ಎಂಬ ಋಕ್ಕಿನ ಪಠನದಿಂದ ಪರಿಸಮಾಪ್ತಿಯಾಯಿತು. ಆದರೆ ಮಂತ್ರಪಠನವಾದ ಮಾತ್ರಕ್ಕೆ ಕಾರ್ಯಸಮಾಪ್ತಿಯಾಗಲಿಲ್ಲ. ಹೋತೃವು ತನ್ನ ಕರ್ತವ್ಯವಾದ ಋಗ್ವೇದ ಮಂತ್ರಗಳನ್ನು ಮಾತ್ರ ಪಠಿಸಿದನು. ಉಳಿದ ಕಾರ್ಯಕಲಾಪಗಳನ್ನು ಯಜುರ್ವೇದಮಂತ್ರಗಳಿಂದ ನೆರವೇರಿಸಬೇಕಾಗಿರುವುದು. ಈ ಕಾರ್ಯಕಲಾಪಗಳನ್ನು ಅಧ್ವರ್ಯುವೂ ಅವನ ಸಹಾಯಕನಾದ ಪ್ರತಿಪ್ರಸ್ಥಾತೃವೆಂಬ ಋತ್ವಿಜನೂ ಈ ಸಂಬಂಧವಾದ ಯಜುರ್ವೇದಮಂತ್ರಗಳನ್ನು ಪಠಿಸಿ ಸಮಾಪ್ತಿ ಮಾಡುವರು. ಈ ವಿಷಯದಲ್ಲಿ ಆಪಸ್ತಂಬಶ್ರೌತಸೂತ್ರದ ವಾಕ್ಯವು ಈರೀತಿ ಇರುವುದು—**ವಿಷ್ಣೋಃ ಪೃಷ್ಠಮಸೀತಿ । ತೇಷು ಮಧ್ಯಮಂ ಛದಿರಧ್ಯೂಹತಿ । ಅರತ್ನಿವಿಸ್ತಾರಂ ನವಾಯಾಮಂ** (ಆಪ. ಶ್ರೌ. ಸೂ. ೧೧-೮-೧).

## ತೌ ಯದ್ಯೈವಾಧ್ವರ್ಯುಶ್ಚ ಪ್ರತಿಪ್ರಸ್ಥಾತಾ ಚೋಭಯತೋ ಮೇಥ್ಯೌ ನಿಹನ್ಯಾತಾಮಥ ಪರಿದಧ್ಯಾತ್ ॥

**ಪರಿಧಾನಸ್ಯ ಕಾಲಂ ವಿಧತ್ತೇ—ಅಧ್ವರ್ಯುರ್ದಕ್ಷಿಣಸ್ಯ ಹವಿರ್ಧಾನಸ್ಯ ಮೇಥೀಮೀಷಾಗ್ರಭಾಗಾವಸ್ಥಾಪನಕಾಷ್ಠಂ ಸ್ಥಾಪಯತಿ । ತದೇತಚ್ಛಾಖಾಂತರೇ ಶ್ರೂಯತೇ—**

'ದಿವೋ ವಾ ವಿಷ್ಣ ಉತ ವಾ ಪೃಥಿವ್ಯಾ ಇತ್ಯಾಶೀಃಪದಯರ್ಚಾ ದಕ್ಷಿಣಸ್ಯ ಹವಿರ್ಧಾನಸ್ಯ ಮೇಥೀಂ ನಿಹಂತಿ' ಇತಿ ॥ ಉತ್ತರಸ್ಯ ತು ಪ್ರತಿಪ್ರಸ್ಥಾತಾ ಕರೋತಿ ॥ ತದೇತದುಭಯ-ಮಾಪಸ್ತಂಬೋ ದರ್ಶಯತಿ—'ದಿವೋ ವಾ ವಿಷ್ಣ ಇತ್ಯಧ್ವರ್ಯುರ್ದಕ್ಷಿಣಸ್ಯ ಹವಿರ್ಧಾನಸ್ಯ ಮೇಥೀಂ ನಿಹನ್ತೀತಿ ॥ ತಸ್ಯಾಮೀಷಾಂ ನಿಹಂತಿ ॥ ಏವಮುತ್ತರಸ್ಯ ಪ್ರತಿಪ್ರಸ್ಥಾತಾ-ವಿಷ್ಣೋರ್ನುಕಮಿತ್ಯುಕ್ತ್ವಾಽಸ್ಯ ಹವಿರ್ಧಾನಸ್ಯೋತ್ತರಂ ಕರ್ಣಂ ತದಾಸನ್ನಿತಿ ॥ ತಸ್ಮಿನ್ಮೇಥೀನಿ-ಹನನಕಾಲೇ ಪರಿದಧ್ಯಾತ್' ಇತಿ ॥

ಪರಿಸಮಾಪ್ತಿಕಾಲದಲ್ಲಿ ಯಜುರ್ಮಂತ್ರಗಳಿಂದ ನಡೆಸಬೇಕಾದ ಕಾರ್ಯಕಲಾಪಗಳನ್ನು ವಿವರಿಸುವರು. ಎರಡು ಹವಿರ್ಧಾನಶಕಟಗಳಲ್ಲಿ ದಕ್ಷಿಣಭಾಗವಲ್ಲಿರುವ ಶಕಟದ ಪಕ್ಕದಲ್ಲಿ ನೆಟ್ಟಿರುವ ಕಂಬದ ತುದಿಯನ್ನು (ಮೇಧೀ) ತನ್ನ ಕೈಯಲ್ಲಿರುವ ಕಾಷ್ಠದಿಂದ (ಕೋಲಿನಿಂದ) ಪ್ರಹರಿಸುವನು. ಹವಿರ್ಧಾನಶಕಟಗಳ ಎರಡು ಪಕ್ಕಗಳಲ್ಲಿಯೂ ಎರಡು ಕಂಭಗಳನ್ನು ನೆಟ್ಟು ಅವುಗಳ ಮಧ್ಯದಲ್ಲಿ ರರಾಟಿ ಎಂಬ ದರ್ಭಮಾಲೆಯನ್ನು ಕಟ್ಟಿರುವರು. ಈ ಕಂಬದ ತುದಿಯೇ ಮೇಧಿಯು. ದಕ್ಷಿಣಭಾಗದ ಮೇಧಿಯನ್ನು ಅಧ್ವರ್ಯುವು—**ದಿವೋ ವಾ ವಿಷ್ಣ ಉತ ವಾ ಪೃಥಿವ್ಯಾ (ಇತ್ಯಾಶೀಃಪದಯರ್ಚಾ ದಕ್ಷಿಣಸ್ಯ ಹವಿರ್ಧಾನಸ್ಯ ಮೇಥೀಂ ನಿಹಂತಿ)** (ತೈ. ಸಂ. ೬-೨-೯-೩) ಎಂಬ ಮಂತ್ರದಿಂದ ಪ್ರಹರಿಸುವನು. (ಬಡಿಯುವನು). ಅದರಂತೆಯೇ ಉತ್ತರಭಾಗದಲ್ಲಿರುವ ಮೇಧಿಯನ್ನು ಪ್ರತಿಪ್ರಸ್ಥಾತೃವೆಂಬ ಋತ್ವಿಜನು—**ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಗ್ಂಸಿ ಯೋ ಅಸ್ಕಭಾಯದುತ್ತರಗ್ಂ ಸಧಸ್ಥಂ ವಿಚಕ್ರ-ಮಾಣಸ್ತ್ರೇಧೋರುಗಾಯಃ** (ತೈ. ಸಂ. ೧-೨-೧೩-೩) ಎಂಬ ಮಂತ್ರದಿಂದ ಪ್ರಹರಿಸುವನು. ಈ ವಿಷಯವನ್ನು ಆಪಸ್ತಂಬ ಶ್ರೌತಸೂತ್ರದಲ್ಲಿ—**ದಿವೋ ವಾ ವಿಷ್ಣವಿತ್ಯಧ್ವರ್ಯುರ್ದಕ್ಷಿಣಸ್ಯ ಹವಿರ್ಧಾನಸ್ಯ ದಕ್ಷಿಣಂ ಕರ್ಣಾತರ್ದಮನು-ಮೇಥೀಂ ನಿಹಂತಿ ತಸ್ಯಾಮೀಷಾಂ ನಿಹಂತಿ । ಏವಮುತ್ತರಸ್ಯ ಪ್ರತಿಪ್ರಸ್ಥಾತಾ ವಿಷ್ಣೋರ್ನುಕಮಿತ್ಯುತ್ತರಂ ಕರ್ಣಾತರ್ದಮನು** (ಆಪ. ಶ್ರೌ. ಸೂ. ೧೧-೭-೩,೪) ಎಂದು ಹೇಳಿದೆ.

## ಅತ್ರ ಹಿ ತೇ ಸಂಪರಿಶ್ರಿತೇ ಭವತಃ ॥

ಯದ್ಯಪ್ಯಯಂ ಕಾಲಃ ಪರಿಶ್ರಯಣಕಾಲಾತ್ಪ್ರಾಚೀನಸ್ತಥಾಪಿ ತತ್ಸಮೀಪವರ್ತಿತ್ವಾ-ತ್ಪೂರ್ವವಿಧಿನಾ ಸಹ ನಾತ್ಯಂತಂ ವಿರೋಧ ಇತ್ಯೇತದ್ದರ್ಶಯತಿ—ಅತ್ರ ಮೇಥೀನಿಹನನದೇಶೇ ತತ್ಸಮೀಪವರ್ತಿನಿ ಕಾಲೇ ಪರಿಶ್ರಯಣಂ ಕ್ರಿಯತೇ ॥

ಈ ವಿಧವಾದ ಮೇಥೀನಿಹನನ (ಪ್ರಹರಣ) ಕಾರ್ಯವು ನಡೆದ ಬಳಿಕ ಛದಿಯೆಂಬ ಆಚ್ಛಾದನೆಯನ್ನು ಹೊದಿಸುವ ಕಾರ್ಯವು ನೆರವೇರುವುದು. ಈ ಕಾರ್ಯಗಳು ಈ ಹವಿರ್ಧಾನಪ್ರವರ್ತನಕರ್ಮದ ಸಮಾಪ್ತಿಯನ್ನು ಸೂಚಿಸುವುದು. ಇದಾದ ನಂತರ ಅಧ್ವರ್ಯುವು **ವಿಷ್ಣೋ ರರಾಟಮಸಿ, ವಿಷ್ಣೋಃ ಪೃಷ್ಠಮಸಿ, ವಿಷ್ಣೋಃ ಶ್ನಪ್ತ್ರೇಸ್ಥಃ; ವಿಷ್ಣೋಃ-ಸ್ಯೂರಸಿ, ವೈಷ್ಣವಮಸಿ, ವಿಷ್ಣವೇ ತ್ವಾ** (ತೈ.ಸಂ. ೧-೨-೧೩-೩) ಎಂಬ ಆರು ಮಂತ್ರಗಳನ್ನು ಪಠಿಸಿ ಉಳಿದ ಕಾರ್ಯ ಕಲಾಪಗಳನ್ನು ಸಮಾಪ್ತಿಗೊಳಿಸುವನು. ಆ ಸಂಬಂಧವಾದ ವಿವರಣೆಗಳನ್ನು ಇಲ್ಲಿ ಹೇಳಿಲ್ಲವಾದ್ದರಿಂದ ಅವುಗಳ ವಿಸ್ತಾರವಾದ ವಿವರಣೆಯು ಇಲ್ಲಿ ಅವಶ್ಯಕವಿಲ್ಲ.

ತಾ ಏತಾ ಅಷ್ಟಾವನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ
ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣ-
ಮೃಗಭಿವದತಿ ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ
ತಾ ದ್ವಾದಶ ಸಂಪದ್ಯಂತೇ ದ್ವಾದಶ ವೈ ಮಾಸಾಃ ಸಂವತ್ಸರಃ
ಸಂವತ್ಸರಃ ಪ್ರಜಾಪತಿಃ ಪ್ರಜಾಪತ್ಯಾಯತನಾಭಿರೇವಾಽಽಭೀ
ರಾಧ್ನೋತಿ ಯ ಏವಂ ವೇದ ತ್ರಿಃ ಪ್ರಥಮಾಂ ತ್ರಿರುತ್ತಮಾ-
ಮನ್ವಾಹ ಯಜ್ಞಸ್ಯೈವ ತದ್ಬರ್ಸೌ ನಹ್ಯತಿ ಸ್ಥೇಮ್ನೇ ಬಲಾ-
ಯಾವಿಸ್ರಂಸಾಯ ॥

ಋಕ್ಸಂಖ್ಯಾದಿಕಂ ದರ್ಶಯತಿ—

ಈ ಎಂಟು ಋಕ್ಕುಗಳೂ ಸೇರಿ ಹವಿರ್ಧಾನಪ್ರವರ್ತನವೆಂಬ ಕರ್ಮವು ಪೂರ್ತಿಯಾಗುವುದು. ಯಜ್ಞಾಂಗ ಕರ್ಮಗಳಲ್ಲಿ ಆಯಾ ಕರ್ಮಗಳನ್ನು ವಿವರಿಸುವ ಋಕ್ಕುಗಳನ್ನು ಪಠಿಸುವುದರಿಂದ ಆಯಾ ಕರ್ಮಗಳು ಪೂರ್ತಿಯಾಗಿ ಯಜ್ಞವು ಸಾಂಗವಾಗಿ ನೆರವೇರುವುದು. ಋಕ್ಕುಗಳ ಅರ್ಥಕ್ಕೂ ಮಾಡುವ ಕಾರ್ಯಕಲಾಪಗಳಿಗೂ ಸಮನ್ವಯ (ಹೊಂದಾಣಿಕೆ)ವಿದ್ದರೆ ಅದಕ್ಕೆ ರೂಪಸಮೃದ್ಧಿಯೆಂದು ಹೆಸರು. ಪ್ರತಿಯೊಂದು ಕರ್ಮದಲ್ಲಿಯೂ ಈ ವಿಧವಾದ ರೂಪಸಮೃದ್ಧಿಯಿರಬೇಕು. ಈ ಎಂಟು ಋಕ್ಕುಗಳನ್ನು ಪಠಿಸುವಾಗ ಮೊದಲನೆಯ ಋಕ್ಕನ್ನೂ ಕೊನೆಯ ಋಕ್ಕನ್ನೂ ಹೋತೃವು ಮೂರುಮೂರಾವರ್ತಿ ಪಠಿಸುವನು. ಇದರಿಂದ ಒಟ್ಟು ಹನ್ನೆರಡು ಋಕ್ಕುಗಳನ್ನು ಪಠಿಸಿದಂತಾಗುವುದು. ಒಂದು ಸಂವತ್ಸರದಲ್ಲಿ (ಸಂವತ್ಸರವೆಂದರೆ ಕಾಲವಾಚಕಶಬ್ದವು) ಹನ್ನೆರಡುಮಾಸಗಳಿರುವವು. ಸಂವತ್ಸರವು (ಕಾಲವು) ಪ್ರಜಾಪತಿಯ ಸ್ವರೂಪವು. ಪ್ರಜಾಪತಿಯು ಕಾಲಸ್ವರೂಪನು. ಮೇಲೆ ಹೇಳಿದ ಈ ಋಕ್ಕುಗಳು ಪ್ರಜಾಪತಿಯಲ್ಲೇ ನೆಲಸಿರುವವು. ಇದನ್ನು ತಿಳಿದು ಈ ಋಕ್ಕುಗಳನ್ನು ಪಠಿಸುವುದರಿಂದ ಆಯಾ ಕರ್ಮಗಳಲ್ಲಿ ಜಯಶೀಲನಾಗುವನು. ಕರ್ಮದ ಆದಿಯಲ್ಲಿಯೂ, ಕೊನೆಯಲ್ಲಿಯೂ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನು ಮೂರುಮೂರಾವರ್ತಿ ಪಠಿಸುವುದರಿಂದ ಯಜ್ಞವೆಂಬ ಕರ್ಮವು ಮಂತ್ರಗಳೆಂಬ ಹಗ್ಗಗಳಿಂದ ಎರಡು ತುದಿಗಳಲ್ಲಿಯೂ ಗಂಟುಹಾಕಿ ಬಲವಾಗಿ ಕಟ್ಟಲ್ಪಟ್ಟು ಜಾರಿಹೋಗದಂತೆ ದೃಢವಾಗಿರುವಂತೆ ಆಗುವುದು.



## *English Translation*

### (The carrying of the repositories of sacred food to the Uttara Vedi)

The Adhvaryu calls (upon the Hotar): repeat the mantras appropriate to the two repositories with sacred food (havirdhana) being carried (to the Uttara Vedi).

He repeats: yuje vam brahma, &c. (10-13, 1), "the Brahma is joined to the praises of you both." For the two Havirdhanas, which are gods, were united

with the Brahma. By reciting this verse he joins both these (Havirdhanas) with the Brahma, and having this latter (Brahma) power, he does not suffer any harm.

He repeats the triplet: pretam yajnasya s'ambhuva (2, 41, 19-21), which is addressed to Heaven and Earth.

They ask: "why does the Hotar repeat a triplet addressed to Heaven and Earth, when he is reciting mantras to the two Havirdhanas being removed (to the Uttara Vedi)?" "The answer is: Because Heaven and Earth are the two Havirdhanas of the gods. They are always repositories for offerings: for every offering is between them (Heaven and Earth).

The verse: yame iva yatamane yadaitam (10, 13, 2), means, these two Havirdhanas, walk together, like twins, their arms stretched. (The second pada of this verse) pra vam bharan manusha devayautah means, that men bring both (these Havirdhanas) when worsbipping god. (The third and fourth padas:) asidatam u lokam, &c. allude to Soma (by the name Indu). By repeating this (half verse) the priest prepares for the king Soma (a seat) to sit on (alluding to asidatam).

(He repeats:) adhi dvayor adadha ukthyam vachah (1, 83, 3). This ukthyam vachah is as a cover, forming the third piece (in addition to the two Havirdhanas), put over both. For ukthyam vachah is the sacrificial performance. By means of this (ukthyam vachah) he thus makes the sacrifice successful.

The term yata, i.e., cruel, used in the second pada (yatasrucha, 1, 83, 3) is propitiated in the following third pada by asamyata, i.e., appeased, propitiated. By the fourth pada: bhadra s'aktis &c., he asks for a blessing.

He repeats the Vis'varupa verse: vis'va rupani pratimunchate (5, 81, 2). He ought to repeat this verse when looking at the upper part (rarati) of the posts (between which the two Havirdhanas are put): for on this part there every form is hung, white and black, as it were. He who having such a knowledge repeats this verse when looking at the upper part of the posts obtains for himself and the sacrificer every form.

With the verse: pari tra givano gira (1, 10, 12) he concludes, He should repeat this concluding verse at the time he might think both the Havirdhanas closed by hanging over them the bunch of Darbha (between the two posts). He who knowing thus concludes with this verse, when the two Havirdhanas are thus closed, secures for himself and the sacrificer fine women who are not naked (covered with clothes, jewels & c.).

Both are closed with a Yajusmantra. Thus the Adhvaryus do it with the said Yajus. When the Adhvaryu and Pratiprasthatar on both sides (of the Havirdhanas) drive in the two stakes (methi) then he should conclude. For at that time the two Havirdhanas are closed.

These eight verses which he has repeated are complete in form. What is complete in form, that is, when the verse recited alludes to the ceremony which is being performed, that is successful in the sacrifice. Of these, he repeats the first and last thrice, that makes twelve. For the year has twelve months. Prajapathi is the year. He who has such a knowledge thus prospers through these verses which reside in Prajapathi.

By repeating the first and last thrice he ties the two ends (knots) of the sacrifice for giving it a hold, and tighten it to prevent it from falling down.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಪಂಚಮಾಧ್ಯಾಯಸ್ಯ ತೃತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಐದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.**



# ಅಥ ಪಂಚಮಾಧ್ಯಾಯೇ ಚತುರ್ಥಃ ಖಂಡಃ

## ಐದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



### ಅಗ್ನೀಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನುಬ್ರೂಹೀತ್ಯಾಹಾ-ಧ್ವರ್ಯುಃ ॥

ಅಥಾಗ್ನೀಷೋಮಪ್ರಣಯನೀಯಾ ಖಂಡೋ ವಿಧಾತುಮಾದಾ ಪ್ರೈಷಮಂತ್ರಂ ವಿಧತ್ತೇ—ಯೋಽಯಮಗ್ನಿಃ ಪ್ರಾಚೀನವಂಶಾಖ್ಯಾಯಾಃ ಶಾಲಾಯಾ ಮುಖೇ ದ್ವಾರಭಾಗೇ ಪೂರ್ವಸಿದ್ಧಾಹವನೀಯರೂಪೇಣಾವತಿಷ್ಠತೇ ತಸ್ಮಾಚ್ಛಾಲಾಮುಖೀಯಾದಗ್ನೇಃ ಸಕಾಶಾ-ತ್ಕಿಯಾನಪ್ಯಾಗ್ನೀಧ್ರೀಯೇ ಧಿಷ್ಣ್ಯೇ ನೇತವ್ಯಃ ॥ ಸೋಮಶ್ಚ ಪೂರ್ವಂ ಶಾಲಾಮುಖೀಯ-ಸಮೀಪೇಽವಸ್ಥಿತಃ ತೇನಾಗ್ನಿನಾಸಹಾಽಽನೀತಶ್ಚೇಸಸ್ಪುನರಪಿ ಹವಿರ್ಧಾನಮಂಡಪೇ ನೇತವ್ಯಃ ॥ ತದಿದಮಗ್ನೀಷೋಮಪ್ರಣಯನಂ ತದರ್ಥಂ ಹೋತಾರಂ ಪ್ರತ್ಯಧ್ವರ್ಯುಃ ಪ್ರೈಷಮಂತ್ರಂ ಬ್ರೂಯಾತ್ ॥ ತದೇತತ್ಸರ್ವಮಾಪಸ್ತಂಬ ಆಹ—'ಶಾಲಾಮುಖೀಯೇ ಪ್ರಣಯನೀಯಮಿ-ಧ್ಮಮಾದೀಪ್ಯ ಸಿಕತಾಭಿರುಪಯಮ್ಯಾಗ್ನೀಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನುಬ್ರೂ-ಹೀತಿ ಸಂಪ್ರೇಷ್ಯತಿ' ಇತಿ ॥ ಅಗ್ನಿಪ್ರಥಮಾಃ ಸೋಮಪ್ರಥಮಾ ವಾ ಪ್ರಾಚೀಮಭಿಪ್ರವ್ರಜಂ-ತ್ಯಾಗ್ನೀಧ್ರೀಯೇಽಗ್ನಿಂ ಪ್ರತಿಷ್ಠಾಪ್ಯೇತಿ ಸ ಚ ಸೋಮೋ ಜಿಗಾತಿ ಗಾತುವಿದಿತ್ಯಪರಯಾ-ದ್ವಾರಾ ಹವಿರ್ಧಾನಂ ರಾಜಾನಂ ಪ್ರಪಾದಯತೀತಿ ಚ ॥

ಹಿಂದಿನ ಎರಡು ಖಂಡಗಳಲ್ಲಿ ಅಗ್ನಿಪ್ರಣಯನವೆಂಬ ಕರ್ಮವನ್ನೂ ಹವಿರ್ಧಾನಪ್ರವರ್ತನ ಎಂಬ ಕರ್ಮವನ್ನೂ ವಿವರಿಸಿದ್ದಾಯಿತು. ಈಗ ಅಗ್ನೀಷೋಮಪ್ರಣಯನವೆಂಬ ಕರ್ಮವನ್ನು ವಿವರಿಸಲಾಗುವುದು. ಪ್ರಾಚೀನವಂಶವೆಂಬ ಯಜ್ಞಗೃಹದಿಂದ ಅಗ್ನಿಯನ್ನು ವಿಧ್ಯುಕ್ತವಾಗಿ ತಂದು ಉತ್ತರವೇದಿಯಲ್ಲಿ ಇಡಲಾಗಿರುವುದು. ಹವಿರ್ಧಾನ ಮಂಟಪದಿಂದ ಉತ್ತರವೇದಿಗೆ ತರಲಾಗುವುದು. ಇವೆರಡು ಕರ್ಮಗಳಿಗೂ ಕ್ರಮವಾಗಿ ಅಗ್ನಿಪ್ರಣಯನ ಮತ್ತು ಹವಿರ್ಧಾನಪ್ರವರ್ತನ ಎಂದು ಹೆಸರು—ಅಗ್ನಿ ಮತ್ತು ಸೋಮಗಳನ್ನು ಒಟ್ಟಿಗೆ ಅಲ್ಲಿಂದ ಮಂತ್ರಪೂರ್ವಕವಾಗಿ ಮತ್ತೆ ಉತ್ತರವೇದಿಯ ಬಳಿಗೆ ತರಲಾಗುವುದು. ಇದನ್ನೇ ಅಗ್ನೀಷೋಮಪ್ರಣಯನವೆಂದು ಹೇಳುವರು. ಈ ಕರ್ಮಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಹೇಳಬೇಕೆಂದು ಅಧ್ವರ್ಯುವು ಹೋತೃವನ್ನು ಮೇಲೆ ಹೇಳಿದ—**ಅಗ್ನೀಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನುಬ್ರೂಹಿ**— ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಈ ವಿವರವನ್ನು ಆಪಸ್ತಂಬಶ್ರೌತಸೂತ್ರದಲ್ಲಿ—**ಶಾಲಾಮುಖೀಯೇ ಪ್ರಣಯನೀಯಮಿಧ್ಮಮಾದೀಪ್ಯ ಸಿಕತಾಭಿರುಪಯಮ್ಯಾಗ್ನೀಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನು-ಬ್ರೂಹೀತಿ ಸಂಪ್ರೇಷ್ಯತಿ ।** (ಆಪ. ಶ್ರೌ. ಸೂ. ೧೧-೧೭-೨) **ಅಗ್ನಿಃ ಪ್ರಥಮಾಃ ಸೋಮಪ್ರಥಮಾ ವಾ**

ಪ್ರಾಂಚೋಽಭಿ ಪ್ರವ್ರಜಂತ್ಯಾಗ್ನೀಧ್ರೀಯೇಽಗ್ನಿಂ ಪ್ರತಿಷ್ಠಾಪ್ಯ(೩-೪). ಸ ಚ—ಸೋಮೋ ಜಿಗಾತಿ ಗಾತುವಿದಿತ್ಯಪರಯಾ ದ್ವಾರಾ ಹವಿರ್ಧಾನಂ ರಾಜಾನಂ ಪ್ರಪಾದಯತಿ(೮) ಎಂದು ಹೇಳಿರುವುದು.

ಪ್ರಾಚೀನವಂಶವೆಂದರೆ ಸೋಮಯಾಗಗಳಲ್ಲಿ ದೀಕ್ಷಾದಿಸಂಸ್ಕಾರಗಳನ್ನು ನೆರವೇರಿಸುವುದಕ್ಕಾಗಿ ನಿರ್ಮಿಸಿರುವ ಯಜ್ಞಗೃಹವು. ಇದರಲ್ಲಿ ಯಜ್ಞಾಗ್ನಿಗಳು ಇರುವುದಿಲ್ಲ. ಉತ್ತರವೇದಿಯೆಂಬ ಮತ್ತೊಂದು ಯಜ್ಞಗೃಹದಲ್ಲಿ ಆಹವನೀಯಾದಿ ಯಜ್ಞಾಗ್ನಿಗಳನ್ನು ಕುಂಡಗಳಲ್ಲಿ ಪ್ರತಿಷ್ಠಿಸಿ ಅಲ್ಲಿ ವಿಧ್ಯುಕ್ತವಾದ ಮಂತ್ರಗಳಿಂದ ದೇವತೆಗಳನ್ನು ಆಹ್ವಾನಮಾಡಿ ಹವಿರಾದಿಗಳನ್ನು ಹೋಮಮಾಡುವರು. ಇದೇ ಮುಖ್ಯವಾದ ಯಜ್ಞಶಾಲೆಯು. ಈಗ ಅಗ್ನೀಷೋಮ ಪ್ರಣಯನವೆಂಬ ಈ ಯಜ್ಞಾಂಗ ಕರ್ಮದಲ್ಲಿ ಹಿಂದೆ ಅಗ್ನಿಪ್ರಣಯನಕರ್ಮದಲ್ಲಿ ಶಾಲಾಮುಖ (ದ್ವಾರ) ದಲ್ಲಿ ಇಟ್ಟಿದ್ದ ಅಗ್ನಿಯನ್ನೂ, ಸೋಮವನ್ನು ಅಲ್ಲಿಂದ ಮುಂದಕ್ಕೆ ತಂದು ಉತ್ತರವೇದಿಯಲ್ಲಿ ಅಗ್ನಿಯನ್ನು ಎಡಭಾಗದಲ್ಲಿ ಆಗ್ನೀಧ್ರೀಯ ಕುಂಡದಲ್ಲಿ ಸ್ಥಾಪಿಸುವರು. ಸೋಮವನ್ನು ಆಗ್ನೀಧ್ರೀಯಕುಂಡದ ಸಮೀಪದಲ್ಲಿರುವ ಸದಃ ಎಂಬ ಸ್ಥಾನದಲ್ಲಿ ಇಡುವರು. ಈರೀತಿ ಮಾಡುವ ಕರ್ಮಕ್ಕೆ ಅಗ್ನೀಷೋಮ ಪ್ರಣಯನವೆಂದು ಹೆಸರು.

ಸಾವೀರ್ಹಿ ದೇವ ಪ್ರಥಮಾಯ ಪಿತ್ರ ಇತಿ ಸಾವಿತ್ರೀಮನ್ವಾಹ ।

ಅಗ್ನೀಷೋಮಪ್ರಣಯನೀಯಾಸ್ವೃಕ್ಷು ಪ್ರಥಮಾಮೃಚಂ ವಿಧತ್ತೇ-ಸೇಯಂ ಶಾಖಾಂತರಗತತ್ವಾತ್ಸೂತ್ರಕಾರೇಣ ಪಠಿತಾ ॥ ತಸ್ಯಾಸ್ತೃತೀಯಪಾದೇಽಸ್ಮಭ್ಯಂ ಸವಿತರಿತಿ ಶ್ರುತತ್ವಾದಿಯಂ ಸಾವಿತ್ರೀ ॥

ಅನಂತರ ಹೋತೃವು ಈ ಕರ್ಮದಲ್ಲಿ ಮೊದಲನೆಯ ಋಕ್ಕಾದ—

(1) ಸಾವೀರ್ಹಿ ದೇವ ಪ್ರಥಮಾಯ ಪಿತ್ರೇ ವರ್ಷ್ಮಾಣಮಸ್ಮೈ ವರಿಮಾಣಮಸ್ಮೈ ॥
ಅಥಾಸ್ಮಭ್ಯಂ ಸವಿತಃ ಸರ್ವತಾತಾ ದಿವೇದಿವ ಆಸುವ ಭೂರಿಪಶ್ವಃ ॥

(ಅಥರ್ವ ಸಂ. ೭-೧೪-೩ ; ಕಾಠಕ ಸಂ. ೩೭-೧೨)

ಎಂಬ ಮಂತ್ರವನ್ನು ಪಠಿಸುವನು. ಈ ಮಂತ್ರವು ಋಗ್ವೇದದಲ್ಲಿಲ್ಲದಿರುವುದರಿಂದ ಆಶ್ವಲಾಯನರು ಇದನ್ನು ಶಾಖಾಂತರದಲ್ಲಿರುವುದೆಂದು ಹೇಳಿದಾರೆ. (ಆಶ್ವ.ಶ್ರೌ.) ಸೂ. ೪-೧೦-೧). ಈ ಋಕ್ಕಿನ ಮೂರನೆಯ ಪಾದದಲ್ಲಿ ಸವಿತಃ ಎಂಬ ಶಬ್ದವಿರುವುದರಿಂದ (ಸವಿತೃದೇವತೆಯನ್ನು ಸಂಬೋಧಿಸಿರುವುದರಿಂದ) ಈ ಋಕ್ಕು ಸವಿತೃದೇವತಾಕವೆಂದಾಯಿತು.

ತದಾಹುರ್ಯದಗ್ನೀಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನುವಾಚಾಹಾಥ ಕಸ್ಮಾತ್ಸಾವಿತ್ರೀಮನ್ವಾಹೇತಿ ಸವಿತಾ ವೈ ಪ್ರಸವಾನಾಮೀಶೇ ಸವಿತೃಪ್ರಸೂತಾ ಏವೈನೌ ತತ್ಪ್ರಣಯಂತಿ ತಸ್ಮಾತ್ಸಾವಿತ್ರೀಮನ್ವಾಹ ।

ಅತ್ರ ವೈಯಧಿಕರಣ್ಯಮಾಶಂಕ್ಯ ಸಮಾಧತ್ತೇ—ಪೂರ್ವವದ್ವ್ಯಾಖ್ಯೇಯಂ ॥

ಈಗ ಇಲ್ಲಿ ಕೆಲವರು ಒಂದು ಸಂಶಯವನ್ನು ವ್ಯಕ್ತಪಡಿಸುವರು. ಅಗ್ನೀಷೋಮಪ್ರಣಯನವೆಂಬ ಈ ಕರ್ಮದಲ್ಲಿ ಅಗ್ನಿ ಮತ್ತು ಸೋಮದೇವತೆಗಳನ್ನು ಪ್ರತಿಪಾದಿಸುವ ಋಕ್ಕುಗಳನ್ನು ಪಠಿಸುವುದು ಯುಕ್ತವು. ಆದರೆ ಹೋತೃವು ಅದನ್ನು ಬಿಟ್ಟು ಸವಿತೃದೇವತಾಕವಾದ ಈ ಋಕ್ಕನ್ನು ಏತಕ್ಕಾಗಿ ಪಠಿಸುತ್ತಾನೆ? ಇದು ತಪ್ಪಲ್ಲವೇ ಎಂದರೆ, ಹಾಗಲ್ಲ. ಭೂಮಿಯಲ್ಲಿ ಇರುವ ಸಮಸ್ತವಸ್ತುಗಳೂ ಸವಿತೃದೇವನಿಂದಲೇ ಉತ್ಪನ್ನವಾಗುವವು. ಉತ್ಪನ್ನವಾಗುವ ಅಥವಾ ಇರುವ ಸಮಸ್ತ ವಸ್ತುಗಳಿಗೂ ಸವಿತೃವೇ ಕಾರಣಗಳು ಮತ್ತು ಅಧಿಪತಿಯು. ಆದ್ದರಿಂದ ಅಗ್ನಿ ಮತ್ತು ಸೋಮಗಳೂ ಎಂದರೆ ಅವುಗಳ ಉತ್ಪತ್ತಿಗೂ ಸವಿತೃವೇ ಕಾರಣನೂ ಅಧಿಪತಿಯೂ ಆದ್ದರಿಂದ ಮೊದಲು ಸವಿತೃದೇವನನ್ನು ಸ್ತುತಿಸುವುದು ಯುಕ್ತವು.

ಭೂಮಿಯಲ್ಲಿ ಉತ್ಪತ್ತಿಯಾಗುವ ಸಕಲ ವಸ್ತುಗಳಿಗೂ ಸವಿತೃವು ಹೇಗೆ ಕಾರಣನು ಎಂದರೆ ಸವಿತೃ ಅಥವಾ ಸೂರ್ಯನ ಕಿರಣಗಳ ಔಷ್ಣ್ಯದಿಂದ ಸಮುದ್ರಾದಿ ಜಲಾಶಯಗಳ ನೀರು ಆವಿಯಾಗಿ ಮಾರ್ಪಟ್ಟು ಅನಂತರ ಮೇಘಗಳಾಗಿ ಪರಿವರ್ತಿತವಾಗುವವು. ಮೇಘಗಳಿಂದ ಮಳೆಯ ಮೂಲಕ ಭೂಮಿಯಲ್ಲಿ ಸಮಸ್ತ ಸಸ್ಯವರ್ಗವೂ, ಪ್ರಾಣಿವರ್ಗವೂ ಉತ್ಪನ್ನವಾಗುವವು. ಇಲ್ಲಿ ಅಗ್ನಿಯು ಕಾಷ್ಠಾದಿಗಳಿಂದ ಉತ್ಪನ್ನವಾಗುವುದು. ಆದ್ದರಿಂದ ಕಾಷ್ಠಾದಿಗಳು ಅಥವಾ ವೃಕ್ಷಗಳು, ಸೋಮಲತೆ ಇವೆಲ್ಲವೂ ಸವಿತೃವಿನಿಂದ ಉತ್ಪನ್ನವಾಗಿರುವುದರಿಂದ ಅಗ್ನೀಷೋಮಪ್ರಣಯನವೆಂಬ ಈ ಯಜ್ಞಾಂಗಕರ್ಮದಲ್ಲಿ ಸವಿತೃದೇವನನ್ನು ಮೊದಲು ಸ್ತುತಿಸುವುದು ನ್ಯಾಯವಾಗಿದೆ ಎಂದಭಿಪ್ರಾಯವು.

**ಪ್ರೈತು ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯಾಮನ್ವಾಹ ।**

**ದ್ವಿತೀಯಾಂ ವಿಧತ್ತೇ—**

ಅನಂತರ ಹೋತೃವು ಈ ಕರ್ಮದಲ್ಲಿ ಎರಡನೆಯ ಋಕ್ಕಾದ—

(2) **ಪ್ರೈತು ಬ್ರಹ್ಮಣಸ್ಪತಿಃ ಪ್ರ ದೇವ್ಯೇತು ಸೂನೃತಾ ।**
**ಅಚ್ಛಾ ವೀರಂ ನರ್ಯಂ ಪಂಕ್ತಿರಾಧಸಂ ದೇವಾ ಯಜ್ಞಂ ನಯಂತು ನಃ ॥**

(ಋ.ಸಂ. ೧-೪೦-೩)

ಎಂಬ ಮಂತ್ರವನ್ನು ಪಠಿಸುವನು. ಈ ಮಂತ್ರವು ಬ್ರಹ್ಮಣಸ್ಪತಿದೇವತಾಕವಾದುದು.

**ತದಾಹುರ್ಯದಗ್ನಿಷೋಮಾಭ್ಯಾಂ ಪ್ರಣೀಯಮಾನಾಭ್ಯಾಮನು-ವಾಚಾಹಾಥ ಕಸ್ಮಾದ್ಬ್ರಾಹ್ಮಣಸ್ಪತ್ಯಾಮನ್ವಾಹೇತಿ ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮೈವಾಭ್ಯಾಮೇತತ್ಪುರೋಗವಮಕರ್ನ ವೈ ಬ್ರಹ್ಮಣ್ವದ್ರಿಷ್ಯತಿ ॥**

**ಅತ್ರಾಪಿ ವೈಯಧಿಕರಣ್ಯಮಾಶಂಕ್ಯ ಸಮಾಧತ್ತೇ—ಪುರೋಗವಂ ಬ್ರಾಹ್ಮಣಮೇವ ಪುರೋಗಂತಾರಮಕಃ ಕರೋತಿ ಬ್ರಾಹ್ಮಣೋಪೇತಸ್ಯ ಕರ್ಮಣೋ ವಿನಾಶಾಭಾವಾತ್ತದ್ಯುಕ್ತಂ॥**

ಅಗ್ನೀಷೋಮಪ್ರಣಯನಕರ್ಮದಲ್ಲಿ ಬ್ರಹ್ಮಣಸ್ಪತಿದೇವತಾಕವಾದ ಮಂತ್ರವನ್ನು ಏತಕ್ಕೆ ಪಠಿಸಬೇಕು? ಈ ಕರ್ಮಕ್ಕೂ ಬ್ರಹ್ಮಣಸ್ಪತಿಗೂ ಏನು ಸಂಬಂಧ? ಎಂದು ಕೆಲವರು ಕೇಳುವರು-ಅದಕ್ಕೆ ಬ್ರಹ್ಮ ವೈ ಬೃಹಸ್ಪತಿಃ ಎಂಬ ಶ್ರುತಿ ವಾಕ್ಯದ ಪ್ರಕಾರ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿಯು ಬ್ರಹ್ಮನೆಂದೇ ಭಾವಿಸಲ್ಪಟ್ಟಿರುವನು. ಕರ್ಮಪ್ರಾರಂಭದಲ್ಲಿ ಬ್ರಹ್ಮನನ್ನು

ಸ್ತುತಿಸುವುದರಿಂದ ಆ ಕರ್ಮಕ್ಕೆ ಬ್ರಹ್ಮನೇ ಪುರೋಗವ (leader) ಎಂದರೆ ನಾಯಕನೆಂದು ಭಾವಿಸಲಾಗುವುದು. ಬ್ರಹ್ಮನ ನಾಯಕತ್ವದಲ್ಲಿ ನಡೆಯುವ ವಿಘ್ನಾದಿಗಳಿಗೆ ಸಿಲುಕದೆ ಸಾಂಗವಾಗಿ ನೆರವೇರುವುದು. ಇಲ್ಲಿ ಬೃಹಸ್ಪತಿ ಅಥವಾ ಬ್ರಹ್ಮಶಬ್ದದಿಂದ ಬ್ರಾಹ್ಮಣಶಬ್ದವು ಸೂಚಿಸಲ್ಪಡುವುದು. ಎಂದರೆ ಬ್ರಾಹ್ಮಣಋತ್ವಿಕ್ಕುಗಳಿಂದ ನೆರವೇರಿಸಲ್ಪಡುವ ಯಜ್ಞವು ವಿಘ್ನರಹಿತವಾಗಿರುವುದು. ಆದ್ದರಿಂದ ಇಲ್ಲಿ ಎಂದರೆ ಕರ್ಮಾರಂಭದಲ್ಲಿ ಬ್ರಹ್ಮಣಸ್ಪತಿಯನ್ನು ಸ್ತುತಿಸುವ ಮಂತ್ರವನ್ನು ಪಠಿಸುವುದು ನ್ಯಾಯವಾಗಿದೆ.

**ಪ್ರ ದೇವ್ಯೇತು ಸೂನೃತೇತಿ ಸಸೂನೃತಮೇವ ತದ್ಯಜ್ಞಂ ಕರೋತಿ ತಸ್ಮಾದ್ಬ್ರಾಹ್ಮಣಸ್ಪತ್ಯಾಮನ್ವಾಹ ।**

ದ್ವಿತೀಯಪಾದಮುಪಜೀವ್ಯ ತಾಮೃಚಂ ಪ್ರಶಂಸತಿ—ಸೂನೃತಾ ಪ್ರಿಯವಚನರೂಪಾ ವಾಗ್ದೇವೀ ಪ್ರೈತು ಬ್ರಹ್ಮಣಾ ಸಹ ಪುರೋ ಗಚ್ಛತ್ವಿತಿ ದ್ವಿತೀಯಪಾದೇ ಶ್ರೂಯತೇ ತತ್ಪಾಠೇನ ಯಜ್ಞಂ ಸಸೂನೃತಮೇವ ಪ್ರಿಯವಚನಯುಕ್ತಮೇವ ಕರೋತಿ ॥

ಈ ಋಕ್ಕಿನ ಎರಡನೆಯ ಪಾದದಲ್ಲಿ ಪ್ರ ದೇವ್ಯೇತಿ ಸೂನೃತಾ ಎಂದಿರುವುದು. ಪ್ರಿಯವೂ ಸತ್ಯವೂ ಆದ ಮಾತುಗಳನ್ನಾಡುವ ವಾಗ್ದೇವತೆಯು ಬ್ರಹ್ಮನಿಂದ ಸಹಿತಳಾಗಿ ಈ ಯಜ್ಞಕ್ಕೆ ಬಂದು ಸಹಕರಿಸಲಿ ಎಂದು ಇದರ ಅಭಿಪ್ರಾಯವು. ಇಂತಹ ಅರ್ಥವುಳ್ಳ ಮಂತ್ರಪಠನದಿಂದ ಯಜ್ಞವು ಹಿತಕರವಾದ ಸನ್ನಿವೇಶದಿಂದ ನೆರವೇರುವುದು. ಆದ್ದರಿಂದ ಈ ಅಭಿಪ್ರಾಯವುಳ್ಳ ಮಂತ್ರಪಠನವು ಎಂದರೆ ಬ್ರಹ್ಮಣಸ್ಪತಿದೇವತಾಕವಾದ ಮಂತ್ರಪಠನವು ಇಲ್ಲಿ ಯುಕ್ತವು.

**ಹೋತಾ ದೇವೋ ಅಮರ್ತ್ಯ ಇತಿ ತೃಚಮಾಗ್ನೇಯಂ ಗಾಯತ್ರಮನ್ವಾಹ ಸೋಮೇ ರಾಜನಿ ಪ್ರಣೀಯಮಾನೇ ।**

ತೃತೀಯಾದ್ಯಾಸ್ತಿಸ್ರ ಋಚೋ ವಿಧತ್ತೇ—ಜುಹೋತ್ಯಸ್ಮಿನ್ನಗ್ನಾವಿತಿ ಹೋತಾಽಗ್ನಿಃ । ಅತೋ ಹೋತೃಶಬ್ದಶ್ರವಣಾದಿದಮಾಗ್ನೇಯಂ ।

ಈಗ ಹೋತೃವು ಈ ಕರ್ಮದಲ್ಲಿ **ಹೋತಾ ದೇವೋ ಅಮರ್ತ್ಯಃ** ಎಂದು ಮೊದಲಾಗುವ ೩-೫ ಮೂರು ಋಕ್ಕುಗಳನ್ನು ಪಠಿಸುವನು —

(3) **ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ ।**
**ವಿದಥಾನಿ ಪ್ರಚೋದಯನ್ ॥**

(4) **ವಾಜೀ ವಾಜೇಷು ಧೀಯತೇಽಧ್ವರೇಷು ಪ್ರಣೀಯತೇ ।**
**ವಿಪ್ರೋ ಯಜ್ಞಸ್ಯ ಸಾಧನಃ ॥**

(5) **ಧಿಯಾ ಚಕ್ರೇ ವರೇಣ್ಯೋ ಭೂತಾನಾಂ ಗರ್ಭಮಾ ದಧೇ ।**
**ದಕ್ಷಸ್ಯ ಪಿತರಂ ತನಾ ॥** (ಋ. ಸಂ. ೩-೨೭-೭, ೮, ೯)

ಈ ಮೂರೂ ಗಾಯತ್ರೀಛಂದಸ್ಸಿನ ಋಕ್ಕುಗಳು. ಮೊದಲನೆಯ ಋಕ್ಕಿನಲ್ಲಿರುವ **ಹೋತಾ** ಶಬ್ದವು–ದೇವತೆಗಳಿಗೆ ಹವಿಸ್ಸನ್ನು ಹೋಮಮೂಲಕ ಅರ್ಪಿಸುವವನು ಎಂಬರ್ಥವನ್ನು ಸೂಚಿಸುವುದರಿಂದ ಹೋತಾ ಎಂದರೆ ಅಗ್ನಿಯು ಎಂದರ್ಥವು

ಆದ್ದರಿಂದ ಈ ಋಕ್ಕು ಅಗ್ನಿದೇವತಾಕವು ಸೋಮಪ್ರಣಯನಕಾಲದಲ್ಲಿ ಅಗ್ನಿದೇವತಾಕವಾದ ಮಂತ್ರವನ್ನು ಏತಕ್ಕೆ ಪಠಿಸಬೇಕು ಎಂದರೆ---

**ಸೋಮಂ ವೈ ರಾಜಾನಂ ಪ್ರಣೀಯಮಾನಮಂತರೇಣೈವ ಸದೋಹವಿರ್ಧಾನಾನ್ಯಸುರಾ ರಕ್ಷಾಂಸ್ಯಜಿಘಾಂಸಂಸ್ತಮಗ್ನಿರ್ಮಾಯಯಾಽತ್ಯನಯತ್ ॥**

**ಆಗ್ನೇಯಸ್ಯ ಸೋಮಪ್ರಣಯನಾನುಕೂಲ್ಯಂ ದರ್ಶಯತಿ—ಯದಿದಂ ಸದೋನಾಮಕಂ ಮಂಡಪಂ ಯಚ್ಚ ಹವಿರ್ಧಾನನಾಮಕಂ ಮಂಡಪಂ ಶಕಟದ್ವಯಂ ಚ ತಾನ್ಯಂತರೇಣ ತೇಷಾಂ ಮಧ್ಯೇಽಸುರಾಶ್ಚ ರಕ್ಷಾಂಸಿ ಚ ನೀಯಮಾನಂ ಸೋಮಂ ಹಂತುಮೈಚ್ಛನ್ ॥ ತಂ ಭೀತಂ ಸೋಮಮಗ್ನಿಃ ಸ್ವಕೀಯಯಾ ಮಾಯಯಾ ತಾನಸುರಾಂಸ್ತಾನಿ ರಕ್ಷಾಂಸ್ಯತಿಕ್ರಮ್ಯ ನೀತವಾನ್ ॥ ತಸ್ಮಾತ್ಸೋಮಪ್ರಣಯನೇಽಸ್ಯಾಗ್ನೇಯಸ್ಯ ಯೋಗ್ಯತ್ವಮಸ್ತಿ ॥ ಅಸುರಾಣಾಂ ರಕ್ಷಸಾಂ ಚಾವಾಂತರಜಾತಿಭೇದೋ ದ್ರಷ್ಟವ್ಯಃ ॥**

ಹಿಂದೆ ಸೋಮಪ್ರಣಯನಕಾಲದಲ್ಲಿ ಎಂದರೆ ಹವಿರ್ಧಾನಮಂಡಪದಿಂದ ಉತ್ತರವೇದಿಯಲ್ಲಿರುವ ಸದಸ್ಥಾನಕ್ಕೆ ಸೋಮವನ್ನು ತರುವ ಕಾಲದಲ್ಲಿ ಮಧ್ಯಮಾರ್ಗದಲ್ಲಿ ಅಸುರರೂ ರಾಕ್ಷಸರೂ ಸೋಮರಾಜನನ್ನು ಮುತ್ತಿ ಸಂಹರಿಸಲು ಉದ್ಯುಕ್ತರಾದರು. ಆಗ ಅಗ್ನಿಯು ಸೋಮರಾಜನ ಮುಂದಿದ್ದು ತನ್ನ ಮಾಯಾರೂಪದಿಂದ ಅಸುರರನ್ನು ಮೋಸಗೊಳಿಸಿ ಸೋಮವನ್ನು ಸುರಕ್ಷಿತವಾಗಿ ಮುಂದಕ್ಕೆ ಕರೆದೊಯ್ದನು. ಆದ್ದರಿಂದ ಸೋಮಾನಯನಕಾಲದಲ್ಲಿ ಮುಂದೆ ಅಗ್ನಿಯನ್ನು ಸ್ತುತಿಸುವುದು ರೂಢಿಯಾಗಿದೆ.

**ಪುರಸ್ತಾದೇತಿ ಮಾಯಯೇತಿ ಮಾಯಯಾ ಹಿ ಸ ತಮತ್ಯನಯತ್ತಸ್ಮಾದ್ವಸ್ಯಾಗ್ನಿಂ ಪುರಸ್ತಾದ್ಧರಂತಿ ।**

**ಪ್ರಥಮಾಯಾ ಋಚೋ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಮಾಯಯಾ ಸಹಿತೋಽಗ್ನಿಃ ಪುರಸ್ತಾದ್ಗಚ್ಛತೀತಿ ದ್ವಿತೀಯಪಾದೇ ಶ್ರೂಯತೇ—ಯಸ್ಮಾತ್ಸೋಽಗ್ನಿರ್ಮಾಯಯಾ ಶತ್ರೂನ್ ಭೀತಿಸ್ಥಾನಮತಿಲಂಘ್ಯ ತಂ ಸೋಮಮನಯತ್ತಸ್ಮಾದು ತಸ್ಮಾದೇವ ಕಾರಣಾದಸ್ಯ ಸೋಮಸ್ಯ ಪುರಸ್ತಾದಾಗ್ನೀಧ್ರಪರ್ಯಂತಮಗ್ನಿಮೃತ್ವಿಜೋ ಹರಂತಿ ॥**

ಮೊದಲನೆಯ ಋಕ್ಕಿನ ಎರಡನೆಯ ಪಾದದಲ್ಲಿ—**ಪುರಸ್ತಾದೇತಿ ಮಾಯಯಾ** ಎಂದಿರುವುದರಿಂದ ಸೋಮದೇವತೆಯ ಮುಂದಿರುವ ಅಗ್ನಿಯು ತನ್ನ ಮಾಯಾಶಕ್ತಿಯಿಂದ ಅಸುರರನ್ನು ವಂಚಿಸಿ ಸೋಮದೇವತೆಯನ್ನು ಭೀತಿಪ್ರದೇಶದಿಂದ ದಾಟಿಸಿ ಮುಂದಕ್ಕೆ ತರೆತಂದನು ಎಂಬರ್ಥವು ಸೂಚಿತವಾಗುವುದು. ಆದ್ದರಿಂದ ಈಗಲೂ ಈ ಕಾರ್ಯದಲ್ಲಿ ಸೋಮವನ್ನು ಉತ್ತರವೇದಿಯ ಸದಸ್ಥಾನದ ಬಳಿಗೆ ತರುವಾಗ ಋತ್ವಿಜರು ಅಗ್ನಿಯನ್ನು ಸೋಮದ ಮುಂಭಾಗದಲ್ಲಿ ಆಗ್ನೀಧ್ರೀಯಕುಂಡದವರೆಗೂ ತರುವುದು ರೂಢಿಯಾಗಿದೆ.

ಉಪ ತ್ವಾಗ್ನೇ ದಿವೇ ದಿವ ಉಪ ಪ್ರಿಯಂ ಪನಿಪ್ನತಮಿತಿ ತಿಸ್ರಶ್ಚೈಕಾಂ ಚಾನ್ವಾಹ ।

ಷಷ್ಠೀಮಾರಭ್ಯ ಚತಸ್ರ ಋಚೋ ವಿಧತ್ತೇ—ಉಪ ತ್ವಾಗ್ನ ಇತ್ಯಾದಿಕಾಃ ಕ್ರಮೇಣಾ-ಮ್ನಾತಾಸ್ತಿಸ್ರ ಉಪ ಪ್ರಿಯಮಿತ್ಯೇಕಾ ॥

ಅನಂತರ ಹೋತೃವು ಉಪ ತ್ವಾಗ್ನೇ ದಿವೇದಿವೇ ಎಂದು ಮೊದಲಾದ ಮೂರು ಋಕ್ಕುಗಳನ್ನೂ (ಈ ಕರ್ಮದಲ್ಲಿ ೬-೮ ನೇ ಋಕ್ಕುಗಳನ್ನು) ಉಪ ಪ್ರಿಯಂ ಪನಿಪ್ನತಂ ಎಂಬ ೯ ನೇ ಋಕ್ಕನ್ನು ಪಠಿಸುವನು—

(6) ಉಪ ತ್ವಾಗ್ನೇ ದಿವೇದಿವೇ ದೋಷಾವಸ್ತರ್ಧಿಯಾ ವಯಂ ।
ನಮೋ ಭರಂತ ಏಮಸಿ ॥

(7) ರಾಜಂತಮಧ್ವರಾಣಾಂ ಗೋಪಾಮೃತಸ್ಯ ದೀದಿವಿಂ ।
ವರ್ಧಮಾನಂ ಸ್ವೇ ದಮೇ ॥

(8) ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ ।
ಸಚಸ್ವಾ ನಃ ಸ್ವಸ್ತಯೇ ॥ (ಋ. ಸಂ. ೧-೧-೭,೮,೯)

(9) ಉಪ ಪ್ರಿಯಂ ಪನಿಪ್ನತಂ ಯುವಾನಮಾಹುತೀವೃಧಂ ।
ಅಗನ್ಮ ಬಿಭ್ರತೋ ನಮಃ ॥ (ಋ. ಸಂ. ೯-೬೭-೨೯)

ಈ ನಾಲ್ಕು ಋಕ್ಕುಗಳ ಸಂಕ್ಷೇಪಾರ್ಥವನ್ನು ವಿವರಿಸುವರು.

ಈಶ್ವರೌ ಹ ವಾ ಏತೌ ಸಂಯಂತೌ ಯಜಮಾನಂ ಹಿಂಸಿತೋರ್ಯ-ಶ್ಚಾಸೌ ಪೂರ್ವ ಉದ್ಧೃತೋ ಭವತಿ ಯಮು ಚೈನಮಪರಂ ಪ್ರಣಯಂತಿ ತದ್ಯತ್ತಿಸ್ರಶ್ಚೈಕಾಂ ಚಾನ್ವಾಹ ಸಂಜಾನಾ-ನಾವೇವೈನೌ ತತ್ಸಂಗಮಯತಿ ಪ್ರತಿಷ್ಠಾಮೇವೈನೌ ತತ್ಪ್ರತಿ-ಷ್ಠಾಪಯತ್ಯಾತ್ಮನಶ್ಚ ಯಜಮಾನಸ್ಯ ಚಾಹಿಂಸಾಯೈ ॥

ಉಕ್ತಸ್ಯ ತೃಚಸ್ಯೈಕಸ್ಯಾಶ್ಚೈಕಸ್ಯಾ ಅನುವಚನಮುಪಪಾದಯತಿ ॥ ಯಶ್ಚಾಸಾ-ವಗ್ನಿಃ ಪೂರ್ವಮುದ್ಧೃತಃ ಪೂರ್ವಭಾವೀ ಸನ್ನುತ್ತರವೇದ್ಯಾಮಾನೀಯ ಸ್ಥಾಪಿತಃ ॥ ಯಮಪ್ಯ-ಪರಮಗ್ನಿಮಿದಾನೀಂ ಆಗ್ನೀಧ್ರಧಿಷ್ಣ್ಯಂ ಪ್ರತಿ ಪ್ರಣಯಂತಿ ॥ ಏತಾವುಭಾವಗ್ನೀ ಸಂಯಂತಾ-ವನ್ಯೋನ್ಯಾಽಽಹುತಿರಿಕ್ತ್ಯೇವಂ ಸಂಗ್ರಾಮಂ ಕುರ್ವಂತೌ ಯಜಮಾನಂ ಹಿಂಸಿತೋರೀಶ್ವರೌ ಹಿಂಸಿತುಂ ಸಮರ್ಥೌ ॥ ತಥಾ ಸತಿ ಯದಿ ತಿಸ್ರಶ್ಚೈಕಾಂ ಚಾನುಬ್ರೂಯಾತ್ತದಾನೀಮೇತಾ-ವುಭಾವಪ್ಯಗ್ನೀ ಸಂಜಾನಾನಾವೇವ ಪರಸ್ಪರೈಕಮತ್ಯಯುಕ್ತಾವೇವ ಕೃತ್ವಾ ಸಂಗಮಯತ್ಯ-ನ್ಯೋನ್ಯಂ ಸಂಯೋಜಯತಿ ॥ ತಿಸೃಷ್ವೃಕ್ಷು ನಮೋ ಭರಂತ ಏಮಸೀತಿ ಪೂರ್ವೋದ್ಧೃತ-

**ಸ್ಯಾಗ್ನೇಃ ನಮುಸ್ಕಾರಃ ಶ್ರೂಯತೇ ॥ ಏತಸ್ಯಾಮೃಚಿ ಅಗನ್ಮ ಬಿಭ್ರತೋ ನಮ ಇತಿ ಪ್ರಣೀಯಮಾನಸ್ಯಾಗ್ನೇರ್ನಮುಸ್ಕಾರಃ ಶ್ರುತಸ್ತೇನ ತುಷ್ಟೌ ಪರಸ್ಪರದ್ವೇಷಂ ಪರಿತ್ಯಜತಃ ॥ ತತ್ತಥಾ ಸತ್ಯೇತಾವುಭಾವಗ್ನೀ ಪ್ರತಿಷ್ಠಾಯಾಮೇವೋತ್ತರವೇದ್ಯಾಗ್ನೀಧ್ರಲಕ್ಷಣಸ್ವಸ್ವೋಚಿತಸ್ಥಾನ ಏವ ಪ್ರತಿಷ್ಠಾಪಯತಿ ॥ ತಚ್ಚ ಹೋತುರಾತ್ಮನಶ್ಚ ಯಜಮಾನಸ್ಯ ಚ ಹಿಂಸಾಪರಿಹಾರಾಯ ಭವತಿ ॥**

ಹಿಂದೆ ಹೇಳಿದಂತೆ ಅಗ್ನಿಪ್ರಣಯನಕಾಲದಲ್ಲಿ ತಂದು ಉತ್ತರವೇದಿಯಲ್ಲಿ ಸ್ಥಾಪಿಸಲಾಗಿದ್ದ ಅಗ್ನಿಯು ಮೊದಲನೆಯ ಅಗ್ನಿಯು; ಈಗ ಸೋಮದೇವತೆಯೊಡನೆ ಅಗ್ನೀಷೋಮಪ್ರಣಯನ ಕರ್ಮದಲ್ಲಿ ತರಲ್ಪಟ್ಟು ಆಗ್ನೀಧ್ರೀಯಕುಂಡದಲ್ಲಿ ಸ್ಥಾಪಿಸಲ್ಪಡುವ ಅಗ್ನಿಯು ಎರಡನೆಯದು. ಈ ಎರಡು ಅಗ್ನಿಗಳಿಗೂ ಪರಸ್ಪರ ವಿರೋಧವುಂಟಾಗಿ ತನಗೇ ಹೋಮಮಾಡುವ ಹವಿಸ್ಸನ್ನರ್ಪಿಸಬೇಕೆಂಬ ವಿಚಾರದಲ್ಲಿ ಜಿಜ್ಞಾಸೆಯುಂಟಾಗಿ ಪರಸ್ಪರ ಯುದ್ಧಮಾಡಿ ಹೊಡೆದಾಡಲೂ ಸಿದ್ಧವಾದವು. ಈ ವಿಧವಾದ ಮತ್ತು ಯುದ್ಧಗಳಿಂದ ಯಜ್ಞಮಾಡುವ ಯಜಮಾನನಿಗೆ ಹಿಂಸೆಯುಂಟಾಗಲು ಅವಕಾಶವಾಯಿತು. ಎಂದರೆ ಈ ಎರಡು ಅಗ್ನಿಗಳ ಯುದ್ಧಪ್ರವೃತ್ತಿಯಿಂದ ಯಜಮಾನನಿಗೆ ಹಿಂಸೆಯನ್ನುಂಟುಮಾಡಲು ಸಮರ್ಥವಾದವು. ಇದನ್ನು ಕಂಡು ಯಜಮಾನನು ಹೆದರಿ ಅವುಗಳನ್ನು ಮೇಲೆ ಹೇಳಿದ ಮೂರು ಮತ್ತೊಂದು (ಒಟ್ಟು ನಾಲ್ಕು) ಋಕ್ಕುಗಳಿಂದ ಸ್ತುತಿಸಿ ಸಮಾಧಾನ ಮಾಡಬೇಕಾಯಿತು. ಮೊದಲನೆಯ ಋಕ್ಕಿನ ಮೂರನೆಯ ಪಾದದಲ್ಲಿ ಪಠಿತವಾಗಿರುವ **ನಮೋ ಭರಂತ ಏಮಸಿ**—ಎಲೈ ಅಗ್ನಿಯೇ ಇಗೋ ನಿನಗೆ ನಮುಸ್ಕಾರವು. ನಾವು ನಿನ್ನನ್ನು ಒಯ್ಯುತ್ತೇವೆ-ಎಂಬ ವಾಕ್ಯದಿಂದ ಯಜಮಾನನು ಮೊದಲನೆಯ ಅಗ್ನಿಯನ್ನು ನಮುಸ್ಕಾರಪೂರ್ವಕವಾಗಿ ಪ್ರಾರ್ಥಿಸಿ ಸಮಾಧಾನಮಾಡುವನು; ಹಾಗೆಯೇ ನಾಲ್ಕನೆಯ ಋಕ್ಕಿನ ಮೂರನೆಯ ಪಾದದಲ್ಲಿರುವ—**ಅಗನ್ಮ ಬಿಭ್ರತೋ ನಮಃ**:—ಎಲೈ ಅಗ್ನಿಯೇ, ನಿನ್ನನ್ನು ನಾವು ಧರಿಸಿದ್ದೇವೆ. ನಿನಗೆ ನಮುಸ್ಕಾರವು ಎಂಬರ್ಥವುಳ್ಳ ವಾಕ್ಯದಿಂದ ಎರಡನೆಯ ಅಗ್ನಿಯನ್ನು ಯಜಮಾನನು ನಮುಸ್ಕರಿಸಿ ಸಮಾಧಾನಗೊಳಿಸುವನು. ಈ ವಿಧವಾದ ಸಮಾಧಾನವನ್ನುಂಟುಮಾಡುವ ಮಂತ್ರೋಚ್ಚಾರಣೆಯಿಂದ ಎರಡು ಅಗ್ನಿಗಳೂ ಶಾಂತಮನಸ್ಕರಾಗಿ ಪರಸ್ಪರ ಯುದ್ಧಾಭಿಲಾಷೆಯನ್ನೂ ತೊರೆದು ಯಜಮಾನನ ಯಜ್ಞದಲ್ಲಿ ಸಹಕರಿಸಿ ಕೆಲಸಮಾಡಲು ಸಮಾಧಾನದಿಂದಿರುವವು. ಅನಂತರ ಯಜಮಾನನು ಆ ಅಗ್ನಿಗಳನ್ನು ಅವುಗಳ ಸ್ವಸ್ಥಾನವಾದ ಉತ್ತರವೇದಿ ಮತ್ತು ಆಗ್ನೀಧ್ರೀಯಸ್ಥಾನಗಳಲ್ಲಿ ಪ್ರತಿಷ್ಠಿಸುವನು. ಈರೀತಿ ಮಾಡುವುದರಿಂದ ಹೋತೃವಿಗೂ ಯಜ್ಞಮಾಡುವ ಯಜಮಾನನಿಗೂ ಈ ಅಗ್ನಿಗಳಿಂದ ಯಾವವಿಧವಾದ ಹಿಂಸೆಯೂ ಉಂಟಾಗುವುದಿಲ್ಲ.

**ಅಗ್ನೇ ಜುಷಸ್ವ ಪ್ರತಿ ಹರ್ಯ ತದ್ವಚ ಇತ್ಯಾಹುತ್ಯಾಂ ಹೂಯಮಾನಾಯಾಮನ್ವಾಹ ॥**

**ದಶಮೀಮೃಚಂ ವಿಧತ್ತೇ—ಆಹುತಿಸ್ತು ಯಜುರ್ವೇದವಿಹಿತಾ ॥ ತಯೈವೇತ್ಯ್ಯಚಾऽऽಗ್ನೀಧ್ರೇ ಜುಹೋತಿ ಸುವರ್ಗಸ್ಯ ಲೋಕಸ್ಯಾಭಿಜಿತ್ಯಾ ಇತಿ॥ಸಾ ಚಾऽऽಪಸ್ತಂಬೇನ ಸ್ಪಷ್ಟೀಕೃತಾ— 'ಆಗ್ನೀಧ್ರೀಯೇऽಗ್ನಿಂ ಪ್ರತಿಷ್ಠಾಪ್ಯಾಗ್ನೇ ನಯೇತ್ಯರ್ಧಮಾಜ್ಯಶೇಷಸ್ಯ ಜುಹೋತಿ' ಇತಿ ॥ ತದಾಹುತಿಕಾಲೇ ಹೋತಾऽಗ್ನೇ ಜುಷಸ್ವೇತ್ಯೇತಾಮನುಬ್ರೂಯಾತ್ ॥**

ಅನಂತರ ಹೋತೃವು ಹತ್ತನೆಯ ಋಕ್ಕಾದ—

(10) **ಅಗ್ನೇ ಜುಷಸ್ವ ಪ್ರತಿ ಹರ್ಯ ತದ್ವಚೋ ಮಂದ್ರ ಸ್ವಧಾವ ಋತಜಾತ ಸುಕ್ರತೋ ।**
**ಯೋ ವಿಶ್ವತಃ ಪ್ರತ್ಯಙ್ಙಸಿ ದರ್ಶತೋ ರಣ್ವಃ ಸಂದೃಷ್ಟೌ ಪಿತುಮಾँ ಇವ ಕ್ಷಯಃ ॥**

(ಋ. ಸಂ. ೧-೧೪೪-೭)

ಎಂಬ ಮಂತ್ರವನ್ನು ಪಠಿಸುವನು. ಈ ಸಂದರ್ಭದಲ್ಲಿ ಎಂದರೆ ಈ ಮಂತ್ರವನ್ನು ಹೋತೃವು ಪಠಿಸುತ್ತಿರುವಾಗ ಅಧ್ವರ್ಯುವು ಆಗ್ನೀಧ್ರಕುಂಡದಲ್ಲಿ ಒಂದು ಆಹುತಿಯನ್ನು ಅರ್ಪಿಸಬೇಕು. ಈ ವಿಷಯದಲ್ಲಿ— **ನಯವತ್ಯರ್ಚಾಗ್ನೀಧ್ರೇ ಜುಹೋತಿ ಸುವರ್ಗಸ್ಯ ಲೋಕಸ್ಯಾಭಿನೀತ್ಯೈ** (ತೈ. ಸಂ. ೬-೬-೧-೧) ಎಂದು ಹೇಳಿರುವುದು. ಎಂದರೆ ಸ್ವರ್ಗಲೋಕ ಪ್ರಾಪ್ತಿಗಾಗಿ ಆಗ್ನೀಧ್ರಕುಂಡದಲ್ಲಿ ನಯವತೀ ಎಂಬ ಋಕ್ಕಿನಿಂದ ಒಂದು ಹೋಮವನ್ನು ಮಾಡಬೇಕು.

ನಯವತೀ ಋಕ್ಕು ಎಂದರೆ—

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ವಿಶ್ವಾನಿ ದೇವ ವಯುನಾನಿ ವಿದ್ವಾನ್।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥**

(ಋ. ಸಂ. ೧-೧೮೯-೧)

ಎಂಬ ಋಕ್ಕು. ಈ ಋಕ್ಕಿನಲ್ಲಿ **ನಯ** ಎಂಬ ಶಬ್ದವಿರುವುದರಿಂದ ಇದಕ್ಕೆ ನಯವತೀ ಋಕ್ಕೆಂದು ಕರೆಯುವುದು ರೂಢಿಯಾಗಿದೆ. ಅದರಂತೆ **ಹಂಸಃ ಶುಚಿಷತ್** ಎಂಬ ಋಕ್ಕನ್ನು ಹಂಸವತೀ ಋಕ್ಕೆಂದೂ ಸವಿತೃದೇವತಾಕವಾದ ಋಕ್ಕನ್ನು ಸಾವಿತ್ರೀಋಕ್ಕೆಂದೂ ಮರುದ್ದೇವತಾಕವಾದ ಋಕ್ಕನ್ನು ಮಾರುತೀ ಋಕ್ಕೆಂದೂ, ವಿಷ್ಣುದೇವತಾಕವಾದ ಋಕ್ಕನ್ನು ವೈಷ್ಣವೀ ಋಕ್ಕೆಂದೂ, ವರುಣದೇವತಾಕವಾದ ಋಕ್ಕನ್ನು ವಾರುಣೀ ಋಕ್ಕೆಂದೂ- ಸೋಮದೇವತಾಕವಾದ ಋಕ್ಕನ್ನು ಸೌಮ್ಯರ್ಕ್ ಎಂದೂ ಯಜುರ್ವೇದ ಮತ್ತು ಬ್ರಾಹ್ಮಣ ಸೂತ್ರ ಮೊದಲಾದ ಗ್ರಂಥಗಳಲ್ಲಿ ಹೇಳಲಾಗಿದೆ. ಆಪಸ್ತಂಬಋಷಿಗಳು ಇದನ್ನು ಸ್ಪಷ್ಟವಾಗಿ ಹೇಳಿದಾರೆ—**ಆಗ್ನೀಧ್ರೀಯೇಽಗ್ನಿಂ ಪ್ರತಿಷ್ಠಾಪ್ಯಾಗ್ನೇ ನಯೇತ್ಯರ್ಧಮಾಜ್ಯಶೇಷಸ್ಯ ಜುಹೋತಿ** (ಆಪ. ಶ್ರೌ. ಸೂ. ೧೧-೧೭-೪) ಎಂದರೆ ಆಗ್ನೀಧ್ರಕುಂಡದಲ್ಲಿ ಹೊಸದಾಗಿ ಅಗ್ನಿಯನ್ನು ಪ್ರತಿಷ್ಠಿಸಿ ಅದರಲ್ಲಿ ಆಜ್ಯದಿಂದ ಅಗ್ನೇ ನಯ ಎಂಬ ಮೇಲೆ ಹೇಳಿದ ಋಕ್ಕಿನಿಂದ ಒಂದು ಆಹುತಿಯನ್ನು ಅರ್ಪಿಸಬೇಕು ಎಂದು.

## ಅಗ್ನಯ ಏವ ತಜ್ಜುಷ್ಟಿಮಾಹುತಿಂ ಗಮಯತಿ ॥

**ತಾಮೇತಾಂ ಪ್ರಶಂಸತಿ—ಜುಷಸ್ವೇತಿ ಮಂತ್ರೇಽಭಿಧಾನಾದಾಹುತಿಮಗ್ನೇಃ ಪ್ರಿಯಂ ಸಂಪಾದಯತಿ—**

ಮೇಲೆ ಹೇಳಿದ ನಯವತೀಋಕ್ಕಿನಿಂದ ಹೋಮಮಾಡುವ ಕಾಲದಲ್ಲಿ ಹೋತೃವು ಅಗ್ನೇಜುಷಸ್ವ ಎಂಬ ಋಕ್ಕನ್ನು (೧೦ ನೇ ಋಕ್ಕು) ಪಠಿಸುವನು. ಈ ಋಕ್ಕಿನಲ್ಲಿರುವ ಜುಷಸ್ವ ಶಬ್ದಪಠನದಿಂದ ಅರ್ಪಿಸಲ್ಪಡುವ) ಆಹುತಿಯು ಅಗ್ನಿಗೆ ಹಿತಕರವಾಗಿ ಆಗುವುದು.

## ಸೋಮೋ ಜಗಾತಿ ಗಾತುವಿದಿತಿ ತೃಂಚಂ ಸೌಮ್ಯಂ ಗಾಯತ್ರಮನ್ವಾಹ ಸೋಮೇ ರಾಜನಿ ಪ್ರಣೀಯಮಾನೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ॥

**ಏಕಾದಶೀಮಾರಭ್ಯ ತಿಸ್ರೋ ಋಚೋ ವಿಧತ್ತೇ—ಮಂತ್ರೇ ಸೋಮದೇವತಾಯಾ ಏವ ಪ್ರತಿಪಾದ್ಯತ್ವಾತ್ಸೋಮಾತ್ಮಕಸ್ಯೇಯಂ ಸ್ವಕೀಯದೇವತಾ ಗಾಯತ್ರ್ಯಾ ಸೋಮಸ್ಯ ದ್ಯುಲೋಕಾದಾಹೃತತಾಚ್ಛಂದೋಽಪಿ ಸ್ವಕೀಯಂ ।**

ಅನಂತರ ಹೋತೃವು ೧೧ ರಿಂದ ೧೩ ವರೆಗಿನ ಮೂರು ಋಕ್ಕುಗಳನ್ನು—

(11) **ಸೋಮೋ ಜಿಗಾತಿ ಗಾತುವಿದ್ದೇವಾನಾಮೇತಿ ನಿಷ್ಕೃತಂ ।**
**ಋತಸ್ಯ ಯೋನಿಮಾಸದಂ ॥**

(12) **ಸೋಮೋ ಅಸ್ಮಭ್ಯಂ ದ್ವಿಪದೇ ಚತುಷ್ಪದೇ ಚ ಪಶವೇ ।**
**ಅನಮೀವಾ ಇಷಸ್ಕರತ್ ॥**

(13) **ಅಸ್ಮಾಕಮಾಯುರ್ವರ್ಧಯನ್ನಭಿಮಾತೀಃ ಸಹಮಾನಃ ।**
**ಸೋಮಃ ಸಧಸ್ಥಮಾಸದತ್ ॥** (ಋ. ಸಂ. ೩-೬೨-೧೩,೧೪,೧೫)

ಪಠಿಸುವನು. ಈ ಮೂರು ಋಕ್ಕುಗಳೂ ಸೋಮದೇವತೆಯನ್ನು ಪ್ರಶಂಸಿಸುವವು ಮತ್ತು ಸೋಮದೇವತೆಯ ಸ್ವಂತಛಂದಸ್ಸಾದ ಗಾಯತ್ರೀಛಂದಸ್ಸಿನವು. ಹಿಂದೆ ಸೋಮವು ಸ್ವರ್ಗದಲ್ಲಿದ್ದಾಗ ಅದನ್ನು—**ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ । ತಂ ಗಾಯತ್ರ್ಯಾಹರತ್ ॥** (ತೈ. ಬ್ರಾ. ೩-೨-೧-೧) ಎಂಬ ಶ್ರುತಿವಾಕ್ಯದಂತೆ ಗಾಯತ್ರೀಛಂದಸ್ಸು ಶ್ಯೇನಪಕ್ಷಿಯ ರೂಪದಿಂದ ಭೂಮಿಗೆ ತಂದಿದ್ದರಿಂದ ಗಾಯತ್ರೀಛಂದಸ್ಸು ಸೋಮದೇವತೆಗೆ ಸ್ವಕೀಯಛಂದಸ್ಸಾಯಿತು. ರಾಜನಾದ ಸೋಮದೇವತೆಯನ್ನು ಯಜ್ಞಭೂಮಿಯ ಉತ್ತರವೇದಿಯಲ್ಲಿರುವ ಸದಸ್ಥಾನಕ್ಕೆ ಕರೆತರುವಾಗ ಸೋಮರಾಜನ ಸ್ವಕೀಯ ಋಕ್ಕುಗಳಾದ ಮೇಲೆ ಹೇಳಿದ **ಸೋಮೋ ಜಿಗಾತಿ ಗಾತುವಿತ್** ಇತ್ಯಾದಿ ಮೂರು ಮಂತ್ರಗಳನ್ನು ಪಠಿಸುವುದರಿಂದ ಸೋಮದೇವತೆಯು ಸಂತುಷ್ಟನಾಗುವನು.

## ಸೋಮಃ ಸದಸ್ಥಮಾಸದದಿತ್ಯಾಸತ್ಸದ್ಧಿ ಸ ತರ್ಹಿ ಭವತಿ ।

**ಅಸ್ಯ ತೃಚಸ್ಯಾಂತಿಮಂ ಪಾದಮಾದಾಯ ವ್ಯಾಚಷ್ಟೇ—ಅಯಂ ಸೋಮಃ ಸಧಸ್ಥಂ ಹವಿರ್ಧಾನಾಭ್ಯಾಂ ಸಹಾವಸ್ಥಾನಪ್ರದೇಶಂ ಪ್ರಾಪ್ಯಾಽಽಸದದಾಸನ್ನೋಽಭೂತ್ ॥ ಯಸ್ಮಾತ್ಸ ಸೋಮಸ್ತರ್ಹಿ ತತ್ಪಾದಪಾಠಕಾಲ ಆಸತ್ಸ್ಯನ್ಭವತಿ ಹವಿರ್ಧಾನದೇಶಸ್ಯಾಽಽಸನ್ನತಾಂ ಕರಿಷ್ಯನ್ವರ್ತತೇ ತಸ್ಮಾತ್ಸಧಸ್ಥಮಾಸದದಿತಿ ಯುಕ್ತಂ ॥**

ಈ ಮೂರು ಮಂತ್ರಗಳ ಕೊನೆಯ ಮಂತ್ರದ ಮೂರನೆಯ ಪಾದದಲ್ಲಿ—**ಸೋಮಃ ಸಧಸ್ಥಮಾಸದತ್**-ಸೋಮದೇವತೆಯು ತನ್ನ ಸ್ವಸ್ಥಾನದಲ್ಲಿ ಕುಳಿತುಕೊಂಡನು-ಎಂದಿರುವುದರಿಂದ, ಹವಿರ್ಧಾನಶಕಟಗಳಿಂದ ಸೋಮವನ್ನು ತಂದು ಉತ್ತರವೇದಿಯ ಸದಸ್ಥಾನದಲ್ಲಿ ಇಡುವಾಗ ಈ ಕಾರ್ಯಕ್ಕೆ ಅನುಗುಣವಾಗಿ ಅರ್ಥವನ್ನು ವಿವರಿಸುವ **ಸೋಮಃ ಸದಸ್ಥಮಾಸದತ್** ಎಂಬ ಮಂತ್ರವನ್ನು ಪಠಿಸುವುದು ಯುಕ್ತವಾಗಿದೆ.

## ತದತಿಕ್ರಮ್ಯೈವಾನುಬ್ರೂಯಾತ್ಪೃಷ್ಠತ ಇವಾಗ್ನೀಧ್ರಂ ಕೃತ್ವಾ ।

**ಅಸ್ಯ ತೃಚಸ್ಯಾನುವಚನದೇಶಂ ವಿಧತ್ತೇ—ಪೂರ್ವೋಕ್ತಾಯಾಮಾಹುತ್ಯಾಮಧ್ವರ್ಯುಣಾ ಹೂಯಮಾನಾಯಾಂ ಹೋತಾ ತೃಚಮುಪಕ್ರಮ್ಯಾನುಬ್ರುವಾಣೋ ಗಚ್ಛಂಸ್ತದಾಗ್ನೀಧ್ರಸ್ಥಾನಮತಿಕ್ರಮ್ಯೈವಾಗ್ನೀಧ್ರಂ ಪೃಷ್ಠತ ಏವ ಕೃತ್ವಾ ತಂ ಪಾದಮನುಬ್ರೂಯಾತ್ ॥ ಅತಿಕ್ರಮ್ಯೇತ್ಯಸ್ಯೈವ ಪೃಷ್ಠತಃ ಕೃತ್ವೇತಿ ವ್ಯಾಖ್ಯಾನಂ ॥**

ಮೇಲಿನ ಮೂರು ಮಂತ್ರಗಳನ್ನು ಪಠಿಸುವಾಗ ಹೋತೃವು ಆಗ್ನೀಧ್ರಕುಂಡದ ಸಮೀಪದಲ್ಲಿ ಇದ್ದು ಅಲ್ಲಿಂದ ಮುಂದಕ್ಕೆ ಹೋಗುವಾಗ ಎಂದರೆ ಆಗ್ನೀಧ್ರಕುಂಡವನ್ನು ಅತಿಕ್ರಮಿಸಿ ಮುಂದೆ ಹೋಗುವಾಗ ಹಿಂತಿರುಗಿ ಕೊನೆಯಪಾದದ ಸೋಮಃ ಸದಸ್ಥಮಾಸದತ್ ಎಂಬ ವಾಕ್ಯವನ್ನು ಪಠಿಸಬೇಕು. ಅನಂತರ ಮುಂದೆ ಹೋಗಬೇಕು.

**ತಮಸ್ಯ ರಾಜಾ ವರುಣಸ್ತಮಶ್ವಿನೇತಿ ವೈಷ್ಣವೀಮನ್ವಾಹ ।**

**ಚತುರ್ದಶೀಮೃಚಂ ವಿಧತ್ತೇ—ವ್ರಜಂ ಚ ವಿಷ್ಣುರಿತಿ ಚತುರ್ಥಪಾದೇ ಶ್ರುತತ್ವಾತ್ ॥**

ಅನಂತರ ಹೋತೃವು ಈ ಕರ್ಮದಲ್ಲಿ ಹದಿನಾಲ್ಕನೆಯ ಋಕ್ಕಾದ—

**ತಮಸ್ಯ ರಾಜಾ ವರುಣಸ್ತಮಶ್ವಿನಾ ಕ್ರತುಂ ಸಚಂತ ಮಾರುತಸ್ಯ ವೇಧಸಃ ॥**
**ದಾಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ ಸಖಿವಾँ ಅಪೋರ್ಣುತೇ ॥**
(ಋ. ಸಂ. ೧-೧೫೬-೪)

ಎಂಬ ಋಕ್ಕನ್ನು ಪಠಿಸುವನು. ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ವ್ರಜಂ ಚ ವಿಷ್ಣುಃ ಎಂದಿರುವುದರಿಂದ ಈ ಋಕ್ಕು ವಿಷ್ಣುದೇವತಾಕವಾದುದು.

**ಕ್ರತುಂ ಸಚಂತ ಮಾರುತಸ್ಯ ವೇಧಸಃ । ದಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ ಸಖಿವಾँ ಅಪೋರ್ಣುತ ಇತಿ । ವಿಷ್ಣುರ್ವೈ ದೇವಾನಾಂ ದ್ವಾರಪಃ ಸ ಏವಾಸ್ಮಾ ಏತದ್ದ್ವಾರಂ ವಿವೃಣೋತಿ ॥**

ಅವಶಿಷ್ಟಂ ಪಾದತ್ರಯಂ ಪಠತಿ ॥ ಅಸ್ಯಾ ಋಚೋಽಯಮರ್ಥಃ ॥ ಅಸ್ಯ ಸೋಮಸ್ಯೋಪನದ್ಧಸ್ಯ ರಾಜಾ ಸ್ವಾಮೀ ವರುಣಸ್ತಂ ಕ್ರತುಂ ಯಾಗಂ ಸಚತ ಇತ್ಯಧ್ಯಾಹಾರಃ । ಅಶ್ವಿನಾ ಉಭಾವಶ್ವಿನೌ ದೇವೌ ಮಾರುತೋ ವಾಯುರ್ವೇಧಾ ಬ್ರಹ್ಮಾ ಚ ಕ್ರತುಂ ಸಚಂತ ಸಮವಯಂತಿ ॥ ಮಾರುತಸ್ಯ ವೇಧಸ ಇತಿ ಪ್ರಥಮಾರ್ಥೇ ಷಷ್ಠ್ಯೌ ॥ ವಿಷ್ಣುರ್ದೇವೋ ದಕ್ಷಂ ದೇವಾನಾಂ ತೃಪ್ತೌ ಕುಶಲಮುತ ಏವೋತ್ತಮಮಹರ್ವಿದಂ ಶ್ರುತ್ಯಾ ದಿನಾಭಿಜ್ಞಂ ಸೋಮಂ ದಾಧಾರ ಪ್ರಣಯನಕಾಲೇ ಧೃತವಾನ್ ॥ ತಥಾ ವಿಷ್ಣುಃ ಸಖಿವಾನ್ಸೋಮರೂಪೇಣ ಸಖ್ಯಾ ಯುಕ್ತತಯಾ ತದ್ವಾನ್ವ್ರಜಂ ಸೋಮಸ್ಥಾನಂ ಹವಿರ್ಧಾನಮಪೋರ್ಣುತೇ ಚೇತಿ ಸಮುಚ್ಚಯಾರ್ಥಶ್ಚಕಾರಃ ॥ ಉಕ್ತಮಂತ್ರತಾತ್ಪರ್ಯಂ ವಿಸ್ಪಷ್ಟಯತಿ ॥

ಈ ಋಕ್ಕಿನ ಅರ್ಥವು ಈರೀತಿ ಇರುವುದು— **ಅಸ್ಯ**-ಈ ಸೋಮದ । **ರಾಜಾ**-ಸ್ವಾಮಿಯಾದ । **ವರುಣಃ**-ವರಣದೇವನು । **ತಂ ಕ್ರತುಂ**-ಈ ಯಜ್ಞವನ್ನು । (ಸಚತ-ಸೇವಿಸುತ್ತಾನೆ ।) **ಅಶ್ವಿನಾ**-ಇಬ್ಬರು ಅಶ್ವಿನೀದೇವತೆಗಳೂ । **ಮಾರುತಃ** ವಾಯುದೇವನೂ । **ವೇಧಸಃ**-ಬ್ರಹ್ಮನೂ ಸಹ(ಈ ಯಾಗವನ್ನು) **ಸಚಂತ**-ಸೇವಿಸುತ್ತಾರೆ(ಇಲ್ಲಿ **ಮಾರುತಃ** ಮತ್ತು **ವೇಧಸಃ** ಎಂಬ ಷಷ್ಠೀಏಕವಚನಾಂತಶಬ್ದಗಳು ಪ್ರಥಮಾವಿಭಕ್ತಿಯ ಅರ್ಥವನ್ನು ಸೂಚಿಸುವವು ಎಂದು ಸಾಯಣರು ಹೇಳಿದಾರೆ) । **ವಿಷ್ಣುಃ**-ವಿಷ್ಣುವು । **ದಕ್ಷಂ**-ದೇವತೆಗಳನ್ನು ತೃಪ್ತಿಪಡಿಸುವುದರಲ್ಲಿ ಕುಶಲನಾದವನೂ । **ಅಹರ್ವಿದಂ**-ದಿನವ ಎಂದರೆ ಕಾಲದ

ಸ್ವರೂಪವನ್ನು ತಿಳಿದವನೂ ಆದ ಸೋಮದೇವತೆಯನ್ನೂ । ದಾಧಾರ-ಪ್ರಣಯನಕಾಲದಲ್ಲಿ ಎಂದರೆ ಸೋಮವನ್ನು ತರುವ ಕಾಲದಲ್ಲಿ ಧರಿಸಿದ್ದಾನೆ । ಹಾಗೆಯೇ ವಿಷ್ಣುವು **ಸಖಿವಾನ್**-ತನ್ನೊಡನೆ ಸ್ನೇಹಭಾವದಿಂದ ಇರುವ ಸೋಮನೊಡನೆ ಸಹಿತ ನಾಗಿ । **ವ್ರಜಂ**-ಸೋಮನು ಕುಳಿತುಕೊಳ್ಳಬೇಕಾದ ಸದಸ್ಥಾನ(ವನ್ನು)ದ । **ಅಪೋರ್ಣುತೇ**-ಅನಾವರಣಮಾಡುತ್ತಾನೆ ಎಂದರೆ ಸದಸ್ಥಾನದ ಬಾಗಿಲನ್ನು ತೆರೆಯುತ್ತಾನೆ. ಏಕೆಂದರೆ ವಿಷ್ಣುವು ದೇವತೆಗಳಿರುವ ಸ್ಥಾನದ ದ್ವಾರದ ರಕ್ಷಕನಾಗಿದ್ದಾನೆ ಆದ್ದರಿಂದ ಈ ದ್ವಾರವನ್ನು ಎಂದರೆ ಸೋಮದೇವತೆಯ ಸದಸ್ಥಾನದ ದ್ವಾರವನ್ನು ತೆರೆಯುತ್ತಾನೆ ಎಂದು ಮುಖ್ಯಾಭಿಪ್ರಾಯವು. (ಋಕ್ಸಂಹಿತೆಯಲ್ಲಿ ಈ ಮಂತ್ರದ ಅರ್ಥವನ್ನು ಸಾಯಣರು ತಮ್ಮ ಭಾಷ್ಯದಲ್ಲಿ ಬೇರೆವಿಧವಾಗಿ ವಿವರಿಸಿದ್ದಾರೆ ಋ. ಸಂ. ಭಾಗ ೧ ಪುಟ ೬೫೪-೬೬೨ ಗಳನ್ನು ನೋಡಿ. ಇಲ್ಲಿ ಸಂದರ್ಭಕ್ಕೆ ಸರಿಹೋಗುವಂತೆ ಸೋಮದೇವತೆಯ ಪರವಾಗಿ ಅರ್ಥಮಾಡಿದಾರೆ).

## ಅಂತಶ್ಚ ಪ್ರಾಗಾ ಅದಿತಿರ್ಭವಾಸೀತಿ ಪ್ರಪದ್ಯಮಾನೇಽನ್ವಾಹ ।

**ಪಂಚದಶೀಮೃಚಂ ವಿಧತ್ತೇ—ಸೋಮೇ ಹವಿರ್ಧಾನಂ ಪ್ರಾಪ್ಯಮಾಣೇ ಸತ್ಯೇತಾಮೃಚಮನುಬ್ರೂಯಾತ್ ॥**

ಅನಂತರ ಹೋತೃವು ಹದಿನೈದನೆಯ ಋಕ್ಕಾದ—

(15) **ಅಂತಶ್ಚ ಪ್ರಾಗಾ ಅದಿತಿರ್ಭವಾಸ್ಯವಯಾತಾ ಹರಸೋ ದೈವ್ಯಸ್ಯ ।**
**ಇಂದವಿಂದ್ರಸ್ಯ ಸಖ್ಯಂ ಜುಷಾಣಃ ಶ್ರೌಷ್ಟೀವ ಧುರಮನು ರಾಯ ಋಧ್ಯಾಃ ॥**

(ಋ. ಸಂ. ೮-೪೮-೨)

ಎಂಬ ಮಂತ್ರವನ್ನು ಪಠಿಸುವನು. ಸೋಮವನ್ನು ಹವಿರ್ಧಾನಶಕಟದಿಂದ ತರುವಾಗ ಈ ಮಂತ್ರವನ್ನು ಹೇಳಬೇಕು.

## ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಮಿತ್ಯಾಸನ್ನೇ ।

**ಷೋಡಶೀಮೃಚಂ ವಿಧತ್ತೇ—ಆಸನ್ನೇ ಹವಿರ್ಧಾನಂ ಪ್ರತಿ ಸೋಮೇ ಸಮೀಪವರ್ತಿನಿ ಸತ್ಯೇತಾಮನುಬ್ರೂಯಾತ್ ॥ ನಕಾರ ಉಪಮಾರ್ಥಃ ॥ ಯಥಾ ಶ್ಯೇನಃ ಪಕ್ಷೀ ತತ್ರ ತತ್ರ ಸಂಚಾರಂ ಕೃತ್ವಾ ಯೋನಿಂ ಸ್ವಸ್ಥಾನಂ ಪ್ರಾಪ್ನೋತಿ ತಥಾ ಧಿಯಾ ಯಜಮಾನರ್ತ್ವಿಗ್ಬುಧ್ಯಾ ಕೃತಂ ಸಂಪಾದಿತಂ ಸದನಂ ಹವಿರ್ಧಾನಂ ಪ್ರತಿ ಸೋಮ ಏಷತೀತಿ ವಕ್ಷ್ಯಮಾಣೇನ ಸಂಬಂಧಃ ॥**

ಅನಂತರ ಹೋತೃವು ಹದಿನಾರನೇ ಋಕ್ಕಾದ—

(16) **ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ ಹಿರಣ್ಯಯಮಾಸದಂ ದೇವ ಏಷತಿ ।**
**ಏ ರಿಣಂತಿ ಬರ್ಹಿಷಿ ಪ್ರಿಯಂ ಗಿರಾಶ್ವೋ ನ ದೇವಾ ಅಪ್ಯೇತಿ ಯಜ್ಞಿಯಃ ॥**

(ಋ. ಸಂ. ೯-೭೧-೬)

ಎಂಬ ಮಂತ್ರವನ್ನು ಪಠಿಸುವನು. ಸೋಮವನ್ನು ಇಡುವ ಹವಿರ್ಧಾನ ಅಥವಾ ಸದಸ್ಥಾನವನ್ನು ಋತ್ವಿಕ್ಕಗಳು ಸೋಮಸಹಿತ ಸಮಾಪಿಸಿದಾಗ ಈ ಋಕ್ಕನ್ನು ಪಠಿಸಬೇಕು. ಲೋಕವ್ಯವಹಾರದಲ್ಲಿ ಶ್ಯೇನಪಕ್ಷಿಯು ನಾನಾಕಡೆ ಸಂಚಾರಮಾಡಿ ಕೊನೆಗೆ ತನ್ನ ಸ್ವಸ್ಥಾನವಾದ ಗೂಡನ್ನು ಸಮಾಪಿಸಿ ಅದರಲ್ಲಿ ಹೇಗೆ ಕುಳಿತುಕೊಳ್ಳುವುದೋ ಅದರಂತೆ ಋತ್ವಿಗ್ಯಜಮಾನರು ತಮ್ಮ ಬುದ್ಧಿ

ಶಕ್ತಿಯಿಂದ ನಿರ್ಮಿಸಿರುವ ಹವಿರ್ಧಾನವನ್ನು ಎಂದರೆ ಸೋಮವನ್ನಿಡುವ ಸದಸ್ಥನವನ್ನು ಸೋಮದೇವತೆಯು ಹೋಗಿ ಸೇರುವನು ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು.

## ಹಿರಣ್ಯಯಮಾಸದಂ ದೇವ ಏಷತೀತಿ ।

**ದ್ವಿತೀಯಪಾದಮನುವದತಿ— ಹಿರಣ್ಮಯಂ ಸುವರ್ಣಸದೃಶಂ ಕೃಷ್ಣಾಜಿನಮಾಸದಮುಪವೇಶನಯೋಗ್ಯಂ ಸೋಮೋ ದೇವ ಏಷತಿ ಪ್ರಾಪ್ನೋತಿ ॥ ಇಷು ಗತಾವಿತಿಧಾತುಃ ॥**

ಈ ಋಕ್ಕಿನ ಎರಡನೆಯ ಪಾದದ ಅರ್ಥವನ್ನು ವಿವರಿಸುವರು. **ಹಿರಣ್ಮಯಂ** ಎಂದರೆ ಸುವರ್ಣ ಸದೃಶವಾದ, ಅತ್ಯಂತ ಶ್ರೇಷ್ಠವಾದ ಎಂದರ್ಥವು. **ಸದನಂ** ಎಂದರೆ-ಸ್ಥಾನವು. ಸೋಮವನ್ನಿಡುವುದಕ್ಕಾಗಿ ನೆಲದಮೇಲೆ ಹಾಸಿ ಸಿದ್ಧಪಡಿಸಿರುವ ಕೃಷ್ಣಾಜಿನವು. ಇಂತಹ ಶ್ರೇಷ್ಠವಾದ ಆಸನದಲ್ಲಿ ಸೋಮದೇವನು ಬಂದು ಕುಳಿತುಕೊಳ್ಳುವನು.

## ಹಿರಣ್ಯಯಮಿವ ಹ ವಾ ಏಷ ಏತದ್ದೇವೇಭ್ಯಶ್ಛದಯತಿ ಯತ್ಕೃಷ್ಣಾಜಿನಂ ತಸ್ಮಾದೇತಾಮನ್ವಾಹ ।

**ಹಿರಣ್ಮಯಶಬ್ದಂ ವ್ಯಾಚಷ್ಟೇ—ಹವಿರ್ಧಾನಸ್ಯ ಶಕಟಸ್ಯೋಪರಿ ಸೋಮಸ್ಥಾಪನಾರ್ಥೇ ಕೃಷ್ಣಾಜಿನಮಾಸ್ತೃಣಂತಿ ॥ ತಥಾಚಾಪಸ್ತಂಬ ಆಹ—'ದಕ್ಷಿಣಸ್ಯ ಹವಿರ್ಧಾನಸ್ಯ ನೀಡೇ ಪೂರ್ವವತ್ಕೃಷ್ಣಾಜಿನಾಸ್ತರಣಂ ರಾಜ್ಞಃ ಸಾದನಂ' ಇತಿ ॥ ಯದೇತತ್ಕೃಷ್ಣಾಜಿನಮಸ್ತಿ ತದೇತದ್ಧಿರಣ್ಯಯಮಿವ ಹ ವೈ ಸುವರ್ಣನಿರ್ಮಿತಾಸನಮಿವ ದೇವಾರ್ಥಮೇಷೋಽಧ್ವರ್ಯುರ್ಛದಯತ್ಯಾಸ್ತೃಣಾತಿ ॥ ತಸ್ಮಾನ್ಮಂತ್ರೇ ಹಿರಣ್ಮಯಮಿತ್ಯುಪಪನ್ನಂ ॥ ಏತನ್ಮಂತ್ರವಿಧಿಮುಪಸಂಹರತಿ— ಯಸ್ಮಾದಾಸನ್ನದೇಶಸ್ಯಾನುಕೂಲೇಯಮೃಕ್ತಸ್ಮಾದೇತಾಮನುಬ್ರೂಯಾತ್ ॥**

ಹಿರಣ್ಮಯ ಶಬ್ದಾರ್ಥವನ್ನು ವಿವರಿಸುವರು—ಹವಿರ್ಧಾನಶಕಟದ ಮೇಲೆ ಸೋಮವನ್ನು ಸ್ಥಾಪಿಸುವುದಕ್ಕಾಗಿ ಕೃಷ್ಣಾಜಿನವನ್ನು ಹೊದಿಸಿರುವರು. ರಾಜರು ಕುಳಿತುಕೊಳ್ಳುವುದಕ್ಕಾಗಿ ಸುವರ್ಣಮಯವಾದ ಆಸನವನ್ನು (ಸಿಂಹಾಸನ ಇತ್ಯಾದಿ) ನಿರ್ಮಿಸಿ ಸಿದ್ಧಪಡಿಸುವುದು ರೂಢಿಯಷ್ಟೆ. ಆದರಂತೆ ರಾಜನಾದ (ಸೋಮದೇವತೆಯನ್ನು ಗೌರವಸೂಚಕವಾದ ರಾಜಶಬ್ದದಿಂದ ಕರೆಯುವುದು ವೇದಸಾಹಿತ್ಯದಲ್ಲಿ ರೂಢಿಯಲ್ಲಿದೆ) ಸೋಮದೇವತೆಯು ಕುಳಿತುಕೊಳ್ಳುವುದಕ್ಕಾಗಿ ಸುವರ್ಣಸದೃಶವೂ ಶ್ರೇಷ್ಠವೂ ಆದ ಕೃಷ್ಣಾಜಿನವನ್ನು ಸದಸ್ಥಾನದಲ್ಲಿ ಹಾಸಿ ಸಿದ್ಧಪಡಿಸಿರುವರು. ಈ ವಿಷಯದಲ್ಲಿ ಆಪಸ್ತಂಬಶ್ರೌತಸೂತ್ರವು **ದಕ್ಷಿಣಸ್ಯ ಹವಿರ್ಧಾನಸ್ಯ ನೀಡೇ ಪೂರ್ವವತ್ಕೃಷ್ಣಾಜಿನಾಸ್ತರಣಂ ರಾಜ್ಞಃಸಾದನಂ** (ಆಪ. ಶ್ರೌ. ಸೂ. ೧೧-೧೭-೧೦) ಎಂದು ಹೇಳುವುದು. ದೇವತೆಗಳು ಯಜ್ಞದಲ್ಲಿ ಬಂದು ಕುಳಿತುಕೊಳ್ಳುವುದಕ್ಕಾಗಿ ಋತ್ವಿಕ್ಕಗಳು ಕೃಷ್ಣಾಜಿನವನ್ನು ಯಜ್ಞಭೂಮಿಯಲ್ಲಿ ಹಾಸಿರುವರು. ಈ ಕೃಷ್ಣಾಜಿನವು ಸುವರ್ಣನಿರ್ಮಿತವಾದ ಆಸನದಂತೆ ಕಂಗೊಳಿಸುತ್ತಿರುವುದು. ಆದ್ದರಿಂದ ಈ ವಿವರವನ್ನು ಸೂಚಿಸುವುದಕ್ಕಾಗಿ ಈ ಮಂತ್ರವನ್ನು ಪಠಿಸಬೇಕು.

## ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಇತಿ ವಾರುಣ್ಯಾ ಪರಿದಧಾತಿ ।

**ಸಪ್ತದಶ್ಯಾ ಸಮಾಪನಂ ವಿಧತ್ತೇ—ಚತುರ್ಥಪಾದೇ ವರುಣಸ್ಯ ವ್ರತಾನೀತಿ ಶ್ರವಣಾದಿಯಂ ವಾರುಣೀ ॥**

ಅನಂತರ ಹೋತೃವು ಈ ಕರ್ಮದಲ್ಲಿ ಹದಿನೇಳನೆಯ ಋಕ್ಕಾದ—

(17) ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಅಮಿಮೀತ ವರಿಮಾಣಂ ಪೃಥಿವ್ಯಾಃ ।
ಆಸೀದದ್ವಿಶ್ವಾ ಭುವನಾನಿ ಸಮ್ರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ॥

(ಋ. ಸಂ. ೮-೪೨-೧)

ಎಂಬ ವರುಣದೇವತಾಕವಾದ ಈ ಮಂತ್ರವನ್ನು ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸುವನು. ಈ ಋಕ್ಕಿನ ನಾಲ್ಕನೆಯ ಪಾದದಲ್ಲಿ ವರುಣಸ್ಯ ಎಂಬ ಶಬ್ದಪ್ರಯೋಗವಿರುವುದರಿಂದ ಈ ಮಂತ್ರವು ವರುಣದೇವತಾಕವು.

**ವರುಣದೇವತ್ಯೋ ವಾ ಏಷ ತಾವದ್ಯಾವದುಪನದ್ಧೋ ಯಾವತ್ಪರಿ-ಶ್ರಿತಾನಿ ಪ್ರಪದ್ಯತೇ ಸ್ತುಯೈವೈನಂ ತದ್ದೇವತಯಾ ಸ್ವೇನ-ಛಂದಸಾ ಸಮರ್ಧಯತಿ ।**

ತಸ್ಯಾ ಸೋಮಸಂಬಂಧಂ ದರ್ಶಯತಿ ॥ ಪೂರ್ವವದ್ವ್ಯಾಖ್ಯೇಯಂ ।

ಈ ಋಕ್ಕು ವರುಣದೇವತೆಯನ್ನು ಸ್ತುತಿಸುವುದು. ಇದರ ಮುಖ್ಯಾಭಿಪ್ರಾಯವು—ಸಮಸ್ತ ಧನಕ್ಕೆ (ಅಥವಾ ವಸ್ತುಗಳಿಗೆ) ಅಧಿಪತಿಯೂ ಶಕ್ತಿಯುತನೂ ಆದ ವರುಣನು ಅಂತರಿಕ್ಷವನ್ನು ಸ್ಥಿರವಾಗಿ ನಿಲ್ಲಿಸಿದ್ದಾನೆ. ಪೃಥಿವಿಯ ಪರಿಣಾಮವನ್ನು ನಿರ್ಮಿಸಿದ್ದಾನೆ. ಸಾರ್ವಭೌಮನಾದ ವರುಣನು ಸಮಸ್ತಲೋಕಗಳನ್ನೂ ಆಕ್ರಮಿಸಿ (ವ್ಯಾಪಿಸಿ) ನಿಂತಿದ್ದಾನೆ. ಪ್ರಸಿದ್ಧವಾದ ಸಮಸ್ತ ಕರ್ಮಗಳೂ ವರುಣನ ಮಹಿಮೆಯೇ ಆಗಿವೆ. ಲೋಕವ್ಯವಹಾರದಲ್ಲಿ ಸದಾಕಾಲವೂ ಎಡಬಿಡದೆ ನಡೆಯುತ್ತಿರುವ ಹುಟ್ಟು ಸಾವು ಮೊದಲಾದ ಸಮಸ್ತ ವ್ಯಾಪಾರಗಳೂ ವರುಣನ ಶಕ್ತಿಯುತವಾದ ನಿಯಮಗಳೇ ಆಗಿವೆ. ಆದ್ದರಿಂದ ಸೋಮಲತೆಗಳನ್ನು ವಸ್ತ್ರದಿಂದ ಬಿಗಿದು ಕಟ್ಟಿ ಹವಿರ್ಧಾನಸ್ಥಾನದಲ್ಲಿ ಇಟ್ಟಿರುವವರೆಗೂ ಮತ್ತು ಅದನ್ನು ಕುಶಾಸ್ತರಣದಿಂದ (ಛದಿ) ಹೊದ್ದಿಸಿರುವವರೆಗೂ ಸೋಮವು ವರುಣನ ಅಧೀನದಲ್ಲಿದ್ದಂತೆಯೇ ಆಗಿರುವುದು. ಆದ್ದರಿಂದ ಈ ಕಾಲದಲ್ಲಿ ಹೋತೃವು ಈ ಮಂತ್ರವನ್ನು ಪಠಿಸುವುದರಿಂದ ಸೋಮನು ವರುಣಪಾಶದಿಂದ ವಿಮುಕ್ತನಾಗಿ ವೃದ್ಧಿಯನ್ನೈದುವನು. ಈ ಋಕ್ಕು ತ್ರಿಷ್ಟುಪ್ ಛಂದಸ್ಕವು. ಹಿಂದೆ ಸ್ವರ್ಗದಿಂದ ಸೋಮವನ್ನು ಭೂಮಿಗೆ ತರುವ ಕಾಲದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಪಾತ್ರವೂ ಇದ್ದುದರಿಂದ ಈ ಛಂದಸ್ಸೂ ಸೋಮದೇವತೆಗೆ ಸ್ವಕೀಯಛಂದಸ್ಸೆಂದು ಭಾವಿಸಲಾಗಿರುವುದು. ಈ ಸ್ವಕೀಯಛಂದಸ್ಸಿನ ಪಠನದಿಂದ ಸೋಮದೇವತೆಯು ಸಂತುಷ್ಟನಾಗಿ ವೃದ್ಧಿಯನ್ನೈದುವನು.

**ತಂ ಯದ್ಯುಪ ವಾ ಧಾವೇಯುರಭಯಂ ವೇಚ್ಛೇರನ್ನೇವಾ ವಂದಸ್ವ ವರುಣಂ ಬೃಹಂತಮಿತ್ಯೇತಯಾ ಪರಿದಧ್ಯಾತ್ ॥**

ಅಥಾತ್ರ ನೈಮಿತ್ತಿಕಮನ್ಯಗಂತರಂ ವಿಧತ್ತೇ—ತಂ ಯಜಮಾನಮಿತರೇ ಬಂಧವೋ ಜೀವಾರ್ಥಿನೋ ಯದ್ಯುಪ ವಾ ಧಾವೇಯುಃ ಪ್ರಾಪ್ನುಯುಃ ॥ ಅಥವಾ ವೈರಿಭ್ಯೋ ಭೀತಾ ಅಭಯಂ ಯಜಮಾನಸಮೀಪೇ ಯದೀಚ್ಛೇದಂಸ್ತದಾನೀಮೇವಾ ವಂದಸ್ವೇತ್ಯೇತಯಾ ಪರಿದಧ್ಯಾತ್ ॥

ಯಜಮಾನನ ಬಂಧುವರ್ಗದ ಜನರಾಗಲಿ ಅಥವಾ ಶತ್ರುಗಳಿಂದ ಭೀತರಾದ ಜನರಾಗಲಿ ಯಜಮಾನನ ರಕ್ಷಣೆಯನ್ನು ಅಪೇಕ್ಷಿಸಿ ಅವನಲ್ಲಿ ಆಶ್ರಯವನ್ನು ಪಡೆಯಲಿಚ್ಛಿಸಿದರೆ ಆಗ ಹೋತೃವು ಮೇಲೆ ಹೇಳಿದ **ಅಸ್ತಭ್ನಾದ್ದ್ಯಾಂ** ಎಂಬ ಋಕ್ಕಿಗೆ ಬದಲಾಗಿ—

(17) **ಏವಾ ವಂದಸ್ವ ವರುಣಂ ಬೃಹಂತಂ ನಮಸ್ಯಾ ಧೀರಮಮೃತಸ್ಯ ಗೋಪಾಂ ।**
**ಸ ನಃ ಶರ್ಮ ತ್ರಿವರೂಥಂ ವಿಯಂಸತ್ಪಾತಂ ನೋ ದ್ಯಾವಾಪೃಥಿವೀ ಉಪಸ್ಥೇ ॥**

(ಋ. ಸಂ. ೮-೪೨-೨)

ಎಂಬ ಋಕ್ಕನ್ನು ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸಬೇಕು. ಈ ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಸ್ತೋತೃವೇ, ಮಹಾತ್ಮನಾದ ವರುಣನನ್ನೇ ಸ್ತುತಿಸು. ಅಮೃತಕ್ಕೆ ರಕ್ಷಕನಾದವನೂ (ಮರಣರಹಿತವಾದ ಪದವಿಯನ್ನು ಅನುಗ್ರಹಿಸತಕ್ಕವನೂ) ಪ್ರಾಜ್ಞನೂ ಆದ ವರುಣನನ್ನೇ ನಮಸ್ಕರಿಸು. ಅದೇ ವರುಣನು ನಿಮಗೆ ಮೂರು ವಿಧವಾದ (ಭೂಜಲವಾಯುಗಳಿಂದ ಸಂಭವಿಸಬಹುದಾದ) ರಕ್ಷಣೆಯುಳ್ಳ ಗೃಹವನ್ನು ಒದಗಿಸಿಕೊಡಲಿ. ಸಮಿಾಪದಲ್ಲಿಯೇ ಇರುವ ನಮ್ಮನ್ನು ದ್ಯಾವಾಪೃಥಿವಿಗಳೆರಡೂ ರಕ್ಷಿಸಲಿ. ಎಂದು.

**ಯಾವದ್ಭ್ಯೋ ಹಾಭಯಮಿಚ್ಛತಿ ಯಾವದ್ಭ್ಯೋ ಹಾಭಯಂ ಧ್ಯಾಯತಿ ತಾವದ್ಭ್ಯೋ ಹಾಭಯಂ ಭವತಿ ಯತ್ರೈವಂ ವಿದ್ವಾನೇತಯಾ ಪರಿದಧಾತಿ ತಸ್ಮಾದೇವಂ ವಿದ್ವಾನೇತಯೈವ ಪರಿದಧ್ಯಾತ್ ।**

**ಹೋತುರೇತದ್ವೇದನಪ್ರಶಂಸಾಪೂರ್ವಕಮೇತದ್ವಿಧಮುಪಸಂಹರತಿ—ಯತ್ರ ಯೋಗೇ ಯಥೋಕ್ತಾರ್ಥಂ ವಿದ್ವಾನ್ಹೋತೈತಯಾ ಪರಿದಧ್ಯಾತ್ತತ್ರ ಯಜಮಾನೋ ಯಾವದ್ಭ್ಯೋ ಬಂಧುಭ್ಯೋ ಹೃದ್ರೋಗಪರಿಹಾರರೂಪಮಭಯಮಿಚ್ಛತ್ಯಥವಾ ವೈರಿಭೀತಿಪರಿಹಾರರೂಪಮಭಯಂ ಧ್ಯಾಯತಿ ತಾವದ್ಭ್ಯಃ ಸರ್ವೇಭ್ಯಸ್ತಾದೃಶಮಭಯಂ ಭವತಿ॥ ತಸ್ಮಾದೇವಾ ವಂದಸ್ವೇತ್ಯನಯೈವ ಪರಿದಧ್ಯಾತ್ ॥**

ಯಾವ ಯಾಗದಲ್ಲಿ ಯಜ್ಞಮಾಡುವ ಯಜಮಾನನು ಹೃದ್ರೋಗ ಮೊದಲಾದ ರೋಗಗಳಿಂದ ಪೀಡಿತರಾದ (ತನ್ನ ಬಂಧುಗಳ ಅಥವಾ ಆಶ್ರಿತಜನರ ರೋಗದ) ಉಪಶಮನವನ್ನು ಬಯಸುವನೋ ಅಥವಾ ವೈರಿಗಳಿಂದ ಭೀತರಾದವರ ರಕ್ಷಣೆಯನ್ನು ಬಯಸುವನೋ ಅಂತಹ ಸಂದರ್ಭದಲ್ಲಿ ಹೋತೃವು ಏವಾ ವಂದಸ್ವ ಎಂಬ ಮೇಲಿನ ಋಕ್ಕನ್ನು ಪಠಿಸಿ ಈ ಕರ್ಮವನ್ನು ಪರಿಸಮಾಪ್ತಿಮಾಡಬೇಕು. ಹಾಗೆ ಮಾಡುವುದರಿಂದ ಯಜಮಾನನ ಆಶ್ರಯದಲ್ಲಿರುವ ಬಂಧುಜನರ ಮತ್ತು ಆಶ್ರಿತವರ್ಗದವರ ರೋಗಾದಿಗಳೂ, ಶತ್ರುಭಯವೂ ನಿವಾರಣೆಯಾಗುವವು ಎಂದಭಿಪ್ರಾಯವು. ಆದ್ದರಿಂದ ವಿವೇಕಿಯಾದ ಹೋತೃವು ಯಜ್ಞಾದಿಗಳಲ್ಲಿ ಯಜಮಾನನ ಮತ್ತು ಅವನ ಆಶ್ರಿತರ ರಕ್ಷಣೆಯನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಸಂದರ್ಭಾನುಸಾರ ಈ ಮಂತ್ರವನ್ನು ಪಠಿಸಿ ಕರ್ಮಸಮಾಪ್ತಿಮಾಡಬೇಕು.

ತಾ ಏತಾಃ ಸಪ್ತದಶಾನ್ವಾಹ ರೂಪಸಮೃದ್ಧಾ ಏತದ್ವೈ ಯಜ್ಞಸ್ಯ ಸಮೃದ್ಧಂ ಯದ್ರೂಪಸಮೃದ್ಧಂ ಯತ್ಕರ್ಮ ಕ್ರಿಯಮಾಣ-ಮೃಗಭಿವದತಿ ತಾಸಾಂ ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ತಾ ಏಕವಿಂಶತಿಃ ಸಂಪದ್ಯಂತ ಏಕವಿಂಶೋ ವೈ ಪ್ರಜಾಪತಿ-ರ್ದ್ವಾದಶ ಮಾಸಾಃ ಪಂಚರ್ತವಸ್ತ್ರಯ ಇಮೇ ಲೋಕಾ ಅಸಾವಾದಿತ್ಯ ಏಕವಿಂಶಃ ।

ಮಂತ್ರಗತಸಂಖ್ಯಾದಿಕಂ ದರ್ಶಯತಿ—

ಈಗ ಈ ಕರ್ಮದಲ್ಲಿ ಪ್ರಯುಕ್ತವಾಗಿರುವ ಮಂತ್ರಸಂಖ್ಯಾದಿವಿವರಗಳನ್ನು ತಿಳಿಸುವರು. ಈ ಕರ್ಮದಲ್ಲಿ ಒಟ್ಟು ಮಂತ್ರಸಂಖ್ಯೆಯು ಹದಿನೇಳು. ಈ ಹದಿನೇಳು ಮಂತ್ರಗಳೂ ಈ ಅಗ್ನೀಷೋಮಪ್ರಣಯನವೆಂಬ ಕರ್ಮದ ವಿವರಗಳನ್ನು ತಿಳಿಸುವವು. ಕರ್ಮಕ್ಕೆ ಅನುಸಾರವಾಗಿರುವ ಅರ್ಥವಿವರಣೆಗಳನ್ನೊಳಗೊಂಡ ಮಂತ್ರಪಠನದಿಂದ ಕರ್ಮವು ಸಮೃದ್ಧಿಯನ್ನೈದುವುದು. ಆ ಹದಿನೇಳು ಮಂತ್ರಗಳಲ್ಲಿ ಮೊದಲನೆಯ ಮಂತ್ರವನ್ನೂ ಕೊನೆಯ ಮಂತ್ರವನ್ನೂ ಮೂರು ಮೂರಾವರ್ತಿ ಪಠಿಸುವುದು ರೂಢಿಯು. ಆದ್ದರಿಂದ ಒಟ್ಟು (೩+೧೫+೩=೨೧) ಮಂತ್ರಸಂಖ್ಯೆಯು ಇಪ್ಪತ್ತೊಂದಾಯಿತು. ಈ ಇಪ್ಪತ್ತೊಂದು ಎಂಬ ಸಂಖ್ಯೆಯು ಪ್ರಜಾಪತಿಯ ಸಂಕೇತವಾಗಿರುವುದು. ಹೇಗೆಂದರೆ ಹನ್ನೆರಡು ಮಾಸಗಳು (ಒಂದು ಸಂವತ್ಸರದಲ್ಲಿ); ಐದು ಋತುಗಳು (ಹೇಮಂತಶಿಶಿರ ಎಂಬ ಎರಡು ಋತುಗಳೂ ಒಂದೇ ಋತುವೆಂಬ ಭಾವನೆ); ಮೂರು ಲೋಕಗಳು; ಮತ್ತು ಈ ಆದಿತ್ಯನು, ಇವೆಲ್ಲವೂ ಸೇರಿ ಇಪ್ಪತ್ತೊಂದು ಸಂಖ್ಯೆಯಾಯಿತು. ಇವಲ್ಲದೆ ಹನ್ನೆರಡು ಮಾಸಗಳು, ಐದು ಋತುಗಳು ಕಾಲವಾಚಕವಾಗಿರುವವು; ಮೂರು ಲೋಕಗಳು ದೇಶವಾಚಕವಾಗಿರುವವು; ಈ ಆದಿತ್ಯನು (ಕಣ್ಣಿಗೆ ಕಾಣಿಸುವುದರಿಂದ) ವಸ್ತುಸ್ವರೂಪನಾಗಿರುವನು ಆದ್ದರಿಂದ ಈ ಇಪ್ಪತ್ತೊಂದು ಸಂಖ್ಯೆಯು ಕಾಲದೇಶವಸ್ತುಸ್ವರೂಪನಾದ ಪ್ರಜಾಪತಿಯನ್ನು ನಿರ್ದೇಶಿಸುವುದು ಎಂದಭಿಪ್ರಾಯವು.

ಉತ್ತಮಾ ಪ್ರತಿಷ್ಠಾ ತದ್ದೈವಂ ಕ್ಷತ್ರಂ ಸಾ ಶ್ರೀಸ್ತದಾಧಿಪತ್ಯಂ ತದ್ಬ್ರಧ್ನಸ್ಯ ವಿಷ್ಟಪಂ ತತ್ಪ್ರಜಾಪತೇರಾಯತನಂ ತತ್ಸ್ವಾ-ರಾಜ್ಯಂ ॥

ಉಕ್ತಸಂಖ್ಯಾಪ್ರಶಂಸಾರ್ಥಮೇಕವಿಂಶತಿಸಂಖ್ಯಾಪೂರಣ ಆದಿತ್ಯೇ ಬಹೂನ್ಗುಣಾನ್ದ-ರ್ಶಯತಿ ॥ ಯೋಽಯಮಾದಿತ್ಯೋಽಸಾವುತ್ತಮಾ ಪ್ರತಿಷ್ಠಾ ॥ ತಲ್ಲೋಕಾನಾಂ ಸ್ಥೈರ್ಯೇಣಾ-ವಸ್ಥಾನಾತ್ ॥ ತದಾದಿತ್ಯಸ್ವರೂಪಮೇವ ದೈವಂ ಕ್ಷತ್ರಂ ದೇವಸಂಬಂಧಿನೀ ಕ್ಷತ್ರಜಾತಿಃ ॥ 'ಆದಿತ್ಯೋ ವೈ ದೈವಂ ಕ್ಷತ್ರಂ' ಇತ್ಯನ್ಯತ್ರಾಭಿಧಾನಾತ್ ॥ ಸಾ ಶ್ರೀರಾದಿತ್ಯಪ್ರಾಪ್ತಿರೇವ ಭೋ-ಗ್ಯವಸ್ತುಸಂಪತ್ತಿಃ ॥ ತದಾದಿತ್ಯಮಂಡಲಮಾಧಿಪತ್ಯಂ ಸ್ವಾಮಿತ್ವಪ್ರಾಪಕಂ ॥ 'ಆದಿತ್ಯ ಏಷಾಂ ಭೂತಾನಾಮಧಿಪತಿಃ' ಇತಿ ಶ್ರವಣಾತ್ ॥ ತನ್ಮಂಡಲಂ ಬ್ರಧ್ನಸ್ಯಾದಿತ್ಯಸ್ಯ ವಿಷ್ಟಪಂ ಸ್ಥಾನ-ಭೂತಂ ತದೇವ ಮಂಡಲಂ ಪ್ರಜಾಪತೇರಪ್ಯಾಯತನಂ ಸ್ಥಾನಂ ॥ ಆದಿತ್ಯಮಂಡಲೇ ಪ್ರಜಾ-ಪತ್ಯುಪಾಸನಸ್ಯ ಅಭಿಧಾನಾತ್ ॥ ತದೇವ ಮಂಡಲಂ ಸ್ವಾರಾಜ್ಯಂ ಪಾರತಂತ್ರ್ಯಾಭಾವಾತ್ ॥

ಈ ಆದಿತ್ಯನು ಅತ್ಯಂತ ಉನ್ನತಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿರುವನು ; ಅವನು ದೇವತೆಗಳ ನಿವಾಸಸ್ಥಾನವಾಗಿರುವನು ; ಎಂದರೆ ಸ್ವರ್ಗಾದಿಲೋಕಗಳಿಗೆ ಆಧಾರಭೂತನಾಗಿರುವನು. ಈ ಆದಿತ್ಯನೇ ಸಕಲಭೋಗ್ಯವಸ್ತುಗಳಿಗೆ ಆಶ್ರಯಭೂತನಾಗಿರುವನು. (ಆದಿತ್ಯನಿಂದಲೇ ಸಮಸ್ತವಸ್ತುಗಳ ಉತ್ಪತ್ತಿಯಾಗಿರುವುದು) ; ಈ ಆದಿತ್ಯಮಂಡಲವು ಸಮಸ್ತ ಪ್ರಾಣಿಗಳಿಗೂ ಅಧಿಪತಿಯಂತಿರುವುದು. ಎಂದರೆ ಸಮಸ್ತ ಚರಾಚರವರ್ಗವೂ ಆದಿತ್ಯನಿಗೆ ಅಧೀನವು ; ಈ ಆದಿತ್ಯಮಂಡಲವೇ ಎಂದರೆ ಆದಿತ್ಯನ ಸ್ಥಾನವೇ ಪ್ರಜಾಪತಿಯ ಆಯತ ಎಂದರೆ ಸ್ವಸ್ಥಾನಭೂತವಾಗಿರುವುದು. (ಏಕಂದರೆ ತತ್ತ್ವಜ್ಞಾನಿಗಳು ಪ್ರಜಾಪತಿಯನ್ನು ಎಂದರೆ ಪರಬ್ರಹ್ಮನನ್ನು ಆದಿತ್ಯಮಂಡಲದಲ್ಲಿರುವಂತೆ ಧ್ಯಾನಿಸಿ ಉಪಾಸಿಸುತ್ತಾರೆ) ; ಈ ಆದಿತ್ಯಮಂಡಲವು ಇತರರ ಅಧೀನಕ್ಕೊಳಪಡದ ಸ್ವರ್ಗಾಧಿಪತ್ಯವಾಗಿರುವುದು.

**ಋಧ್ನೋತ್ಯೇತಮ್ಮೈವೈತಾಭಿರೇಕವಿಂಶತ್ಯೈಕವಿಂಶತ್ಯಾ ॥**

**ಉಪಸಂಹರತಿ--ಏಕವಿಂಶತಿ ಸಂಖ್ಯಾಭಿರೇತಾಭಿರ್ಋಗ್ಭಿರೇತಂ ಯಜಮಾನಂ ಸಮೃದ್ಧಂ ಕರೋತ್ಯೇವ ॥ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥**

ಹೋತೃವು ಈ ಕರ್ಮವನ್ನು ಇಪ್ಪತ್ತೊಂದು ಋಕ್ಕುಗಳ ಪಠನದಿಂದ ಸಮಾಪ್ತಿಗೊಳಿಸಿ ಯಜಮಾನನಿಗೆ ಸಮೃದ್ಧಿಯುಂಟಾಗುವಂತೆ ಮಾಡುವನು.

*English Translation*

**(The bringing of Agni and Soma to the place of the Uttaru Vedi)**

When Agni and Soma are brought, the Adhvaryu calls upon (the Hotar) to repeat appropriate mantras.

He (first) repeats a verse addressed to Savitar savir hi deva prathamaya (As'v. S'r S. 4, 10. Atharv. 7, 14, 3). They ask: why does he repeat a verse addressed to Savitar, when Agni and Soma are brought? (The answer is:) Savitar rules over generation. Under the recital of this verse, they (the priests) carry both (Agni and Soma) as being produced by Savitar. Therefore he repeats a verse addressed to Savitar.

He repeats a verse addressed to Brahmanaspatih: praitu Brahmanaspatih (1, 40, 3). They ask: why does he repeat a verse addressed to Brahmanaspati when Agni and Soma are brought? (The answer is): Brihaspati (the same as Brahmanaspati) is Brahma. By repeating this verse, he makes Brahma the leader (purogava) of both (Agni and Soma, and the sacrificer being provided with the Brahma, does not suffer any injury.

By repeating the second half verse (of pravitu Brahmanaspatih) pra devi etu sunrita, he provides the sacrifice with a good omen. Thence he repeats a verse addressed to Brahmanaspati.

He repeats a triplet in the Gayatri metre, which is addressed to Agni: Hota devo amartya (3, 27, 7).

When the King Soma had been carried once (to the place of the Uttara Vedi), then the Asuras and demons sought to kill the king between the place called Sadas and the two Havirdhanas. Agni saved him by assuming an illusory form (maya) as is said in the words of the mantra (just quoted): parastad eti mayaya, i.e., he walks before him by assuming an illusory form. In this way Agni saved Soma. Therefore they hold before him (Soma) fire.

He repeats the triplet: upa tra agne dive (1, 1, 7, 9, 11), and the single verse: upa priyum (9, 67, 29). For these two Agnis, that one which has been taken first, and the other which was brought afterwards, have the power of injuring the sacrificer, when they are fighting (with one another as to whom the oblation belongs). By repeating these three verses, and the single one (in addition to them), he thus reconciles them in a friendly way, and puts them (back) in their proper places without any injury being done either to himself or the sacrificer.

When the oblation is given to the fire, he repeats: agne jushasva prati harya (1, 144, 7). By repeating this verse, he gives (this) oblation to Agni as a "favour" (on account of the term "jushasva" take it favourably contaioed in it).

When the King Soma is carried (to the Sadas) the Hotar repeats the triplet of verses, commencing with; somo jagati gatuvid (3, 62, 13-15), which is in the Gayatri metre, and addressed to Soma. By repeating it, he thus makes prosper Soma by means of his own deity (the verses being addressed to Sama) and his own metre (Gayatri). The words (in the last verse of this triplet in question being repeated) is just about taking his seat (in the Sadas), are to be repeated by the Hotar after having gone beyond the place of the Agnidhriya hearth, when turning his back to it.

He repeats a verse addressed to Vishnu: tam asya raja varunas (1, 56, 4) i.e., "The King Varuna and the As'vins follow the wisdom of the leader of thr Maruts (Vishnu): Vishnu is possessed of the highest power by means of which he, surrounded by his friends, uncovers the stable of darkness (night) to make broad daylight. Vishnu is the doorkeeper of the gods. Thence he opens the door for him (for Soma's admission) when this verse is being repeated.

He repeats: antas'cha praga aditir (4, 48, 2), when Soma is about to be put in the Sadas. When Soma has taken his seat, the Hotar repeats: soyeno na yonim sadanam (9, 71, 6), i.e., "the god (Soma) takes his golden seat just as the

ತ್ವೇನ ಯೂಪಶಕಲಮೇತಂ ಸ್ವರುನಾಮಕಂ ಸ್ವಲ್ಪಂ ಕಾಷ್ಠಖಂಡಮುಪಶ್ಯನ್ ॥ ತಸ್ಮಾದಿದಾನೀಂತನೋ ಯಜಮಾನಸ್ತಸ್ಮಿನ್ಯೂಪಪ್ರಹರಣಕಾಲೇ ತಂ ಸ್ವರುಮನುಪ್ರಹರೇತ್ ॥ ಏತಚ್ಚ ಶಾಖಾಂತರೇ ಶ್ರೂಯತೇ—' ದೇವಾ ವೈ ಸಂಸ್ಥಿತೇ ಸೋಮೇ ಪ್ರಸ್ರುಚೋಽಹರನ್ಪ್ರ ಯೂಪಂ ತೇಽಮನ್ಯಂತ ಯಜ್ಞವೇಶಸಂ ವಾ ಇದಂ ಕುರ್ಮ ಇತಿ ತೇ ಪ್ರಸ್ತರಸ್ರುಚಾಂ ನಿಷ್ಕ್ರಯಣಮಪಶ್ಯನ್ ॥ ಸ್ವರುಂ ಯೂಪಸ್ಯ ಸಂಸ್ಥಿತೇ ಸೋಮೇ ಪ್ರಸ್ತರಂ ಪ್ರಹರತಿ ಸ್ವರುಮಯಜ್ಞವೇಶಸಾಯ ' ಇತಿ ॥ ತಥಾಸತಿ ಯೂಪಪ್ರಹರಣೇ ಯಃ ಕಾಮ ಉಕ್ತಃ ಸ ಕಾಮಸ್ತತ್ರ ಸ್ವರುಪ್ರಹರಣೇ ಪ್ರಾಪ್ತೋ ಭವತೀತಿ ಯೂಪಪ್ರತಿನಿಧಿತ್ವೇನ ಸ್ವರೋಃ ಪ್ರಕ್ಷಿಪ್ತತ್ವಾತ್ ॥ ಯಶ್ಚ ಯೂಪಸ್ಥಾನೇ ಪಶುಪ್ರಾಪ್ತಿಲಕ್ಷಣಃ ಕಾಮ ಉಕ್ತಃ ಸೋಽಪಿ ತತ್ರ ಪ್ರಕ್ಷೇಪಣಪಕ್ಷೇ ಪ್ರಾಪ್ತೋ ಭವತಿ ಯೂಪಸ್ಯ ಸ್ವರೂಪೇಣಾವಸ್ಥಿತತ್ವಾತ್ ॥ ತದೇತತ್ಸ್ವರುಪ್ರಹರಣಮಾಪಸ್ತಂಬೇನ ದರ್ಶಿತಂ— ' ಜುಹ್ವಾಂ ಸ್ವರುಮವಧಾಯಾನೂಯಾಜಾಂತೇ ಜುಹೋತಿ ದ್ಯಾಂ ತೇ ಧೂಮೋ ಗಚ್ಛತು ' ಇತಿ ॥

ಈಗ ಇಲ್ಲಿ ಒಂದು ಸಂಶಯವು ತಲೆದೋರುವುದು. ಹಿಂದೆ ಹೇಳಿದಂತೆ ಪಶುಗಳನ್ನೂ ಅನ್ನಾದ್ಯಾಹಾರಗಳನ್ನೂ ಬಯಸುವ ಯಜಮಾನನು ತನ್ನ ಯಜ್ಞದಲ್ಲಿ ನೆಟ್ಟಿರುವ ಯೂಪಸ್ತಂಭವನ್ನು ಕೀಳದೇ ಹಾಗೆಯೇ ಬಿಟ್ಟಿರಬೇಕು. ಸ್ವರ್ಗಾಪೇಕ್ಷಿಯಾದ ಯಜಮಾನನು ಯೂಪವನ್ನು ಕಿತ್ತು ಅಗ್ನಿಯಲ್ಲಿ ಹಾಕಬೇಕು ಎಂದಿರುವುದು. ಆದರೆ ಇವೆರಡು ಕ್ರಮಗಳೂ ಪರಸ್ಪರ ವಿರೋಧವಾಗಿರುವುದರಿಂದ ಪಶುಗಳನ್ನೂ (ಅನ್ನಾದ್ಯಾಹಾರಗಳನ್ನೂ) ಸ್ವರ್ಗವನ್ನು ಎಂದರೆ ಇವೆರಡನ್ನೂ ಬಯಸುವ ಯಜಮಾನನು ಏನುಮಾಡಬೇಕು? ಎಂದರೆ, ಈಚಿನ ಕೆಲವರು ಎಂದರೆ ಋಷಿಗಳಲ್ಲದ ಯಜ್ಞಾನುಷ್ಠಾನಕುಶಲರು ತಾವು ಯೂಪವನ್ನು ನಿರ್ಮಿಸುವಾಗ ಎಂದರೆ ಕೆತ್ತುವಾಗ ಕೆಳಗೆ ಬಿದ್ದಿದ್ದ ಯೂಪದ ಒಂದು ಚೂರು ಅಥವಾ ಚಕ್ಕೆಯನ್ನು ಕಂಡರು. ಆ ಚಕ್ಕೆಯು ಇವರ ದೃಷ್ಟಿಗೆ ಬಿದ್ದಕೂಡಲೇ ಆ ಚಕ್ಕೆಯೇ ಯೂಪದ ಪ್ರತಿನಿಧಿಯಾಗಿರುವುದೆಂದೂ ಆದುದರಿಂದ ದೊಡ್ಡದಾಗಿರುವ ಯೂಪಕ್ಕೆ ಬದಲಾಗಿ ಯೂಪದ ಒಂದು ಸಣ್ಣ ಚಕ್ಕೆಯನ್ನೇ ಹೋಮಮಾಡಿದಲ್ಲಿ ಪೂರ್ತಾ ಯೂಪವನ್ನೇ ಹೋಮಮಾಡಿದಂತೆ ಆಗುವುದೆಂದೂ ತಿಳಿದರು. ಅಗ್ನಿಯಲ್ಲಿ ಯೂಪಪ್ರಹರಣ ಮಾಡುವುದರಿಂದ ಯಾವಯಾವ ಇಷ್ಟಾರ್ಥಗಳು ಸಿದ್ಧಿಸುವವೋ ಅವೆಲ್ಲವೂ ಯೂಪದ ಒಂದು ಸಣ್ಣತುಂಡನ್ನೇ ಹೋಮಮಾಡುವುದರಿಂದ ಉಂಟಾಗುವವು. ಎಂದರೆ ದೊಡ್ಡ ಯೂಪಸ್ತಂಭವನ್ನು ಕೀಳದೆ ಹಾಗೆಯೇ ಬಿಟ್ಟಿರುವುದರಿಂದ ಯಜಮಾನನಿಗೆ ಪಶುಗಳು ಮತ್ತು ಅನ್ನಾದ್ಯಾಹಾರಗಳೂ, ಸಣ್ಣತುಂಡನ್ನು ಯೂಪಕ್ಕೆ ಬದಲಾಗಿ ಹೋಮಮಾಡುವುದರಿಂದ ಸ್ವರ್ಗಲೋಕವೂ ಲಭಿಸುವುದರಿಂದ ಯೂಪಪ್ರಹರಣಕ್ಕೆ ಬದಲಾಗಿ **ಸ್ವರು** ಅಥವಾ ಯೂಪಶಕಲವನ್ನು (ಯೂಪದ ಒಂದು ಸಣ್ಣತುಂಡು) ಹೋಮಮಾಡುವುದೇ ರೂಢಿಯಲ್ಲಿ ಬಂದಿತು. ಈ ವಿಷಯದಲ್ಲಿ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ—

> ದೇವಾ ವೈ ಸಗ್ಂಸ್ಥಿತೇ ಸೋಮೇ ಪ್ರಸ್ರುಚೋಽಹರನ್ಪ್ರ ಯೂಪಂ ತೇಽಮನ್ಯಂತ ಯಜ್ಞವೇಶಸಂ ವಾ ಇದಂ ಕುರ್ಮ ಇತಿ ತೇ ಪ್ರಸ್ತರಗ್ಂ ಸ್ರುಚಾಂ ನಿಷ್ಕ್ರಯಣಮಪಶ್ಯನ್ ಸ್ವರುಂ ಯೂಪಸ್ಯ ಸಗ್ಂಸ್ಥಿತೇ ಸೋಮೇ ಪ್ರಪ್ರಸ್ತರಗ್ಂ ಹರತಿ ಜುಹೋತಿ ಸ್ವರುಮಯಜ್ಞವೇಶಸಾಯ ॥ (ತೈ.ಸಂ. ೬-೩-೪-೯)

ಎಂದು ಹೇಳಿರುವುದು. ಯೂಪಪ್ರಹರಣವಿಷಯದಲ್ಲಿ ಆಪಸ್ತಂಬಶ್ರೌತಸೂತ್ರದಲ್ಲಿಯೂ **ಜುಹ್ವಾಂ ಸ್ವರುಮವಧಾಯಾನೂಯಾಜಾಂತೇ ಜುಹೋತಿ— ದ್ಯಾಂ ತೇ ಧೂಮೋ ಗಚ್ಛತು**(ಆಪ.ಶ್ರೌ.ಸೂ. ೭-೨೭-೪) ಎಂದು ಹೇಳಿರು

ವುದು. ಎಂದರೆ ಅನೂಯಾಜಹೋಮಾನಂತರ ಸ್ವರು ಅಥವಾ ಯೂಪಶಕಲವನ್ನು ಜುಹುವಿನಲ್ಲಿ (ಹೋಮಮಾಡುವ ಮರದ ಸೌಟು) ಇಟ್ಟು ದ್ಯಾಂ ತೇ ಧೂಮೋ ಗಚ್ಛತು ಎಂಬ ಮಂತ್ರದಿಂದ ಹೋಮಮಾಡಬೇಕು ಎಂದು ಹೇಳಿರುವುದು. ಆದುದರಿಂದ ಸ್ವರು ಅಥವಾ ಯೂಪಶಕಲವನ್ನು ಹೋಮಮಾಡುವುದರಿಂದ ಯೂಪವನ್ನು ಪೂರ್ತಾ ಹೋಮಮಾಡಿದ ಫಲವೂ ಮತ್ತು ಯೂಪವನ್ನು ಹೋಮಮಾಡದೆ ಹಾಗೆಯೇ ಬಿಟ್ಟಿದ್ದರೆ ಉಂಟಾಗುವ ಪಶುಪ್ರಾಪ್ತಿ ಮೊದಲಾದ ಫಲವೂ ಸಹ ಲಭಿಸುವುದೆಂದು ತಾತ್ಪರ್ಯವು.

ಇದುವರೆಗೂ ಹೇಳಿದ ವಿಷಯಗಳೆಲ್ಲವೂ ಹೋತೃ ಅಥವಾ ಹೋತೃವರ್ಗದ ಋತ್ವಿಕ್ಕುಗಳು ನೆರವೇರಿಸಬೇಕಾದ ಯೂಪಪ್ರತಿಷ್ಠಾಪನಾಕ್ರಮವು. ಇದಲ್ಲದೆ ಅಧ್ವರ್ಯು ಮೊದಲಾದವರು ಯೂಪಸ್ಥಾಪನವಿಷಯದಲ್ಲಿ ನೆರವೇರಿಸಬೇಕಾದ ಇನ್ನೂ ಕೆಲವು ವಿಧಿಗಳೂ ಕಾರ್ಯಕಲಾಪಗಳೂ ಇರುವವು. ಅವುಗಳು ಯಜುರ್ವೇದದ ತೈತ್ತಿರೀಯ ಸಂಹಿತೆಯ ೧-೩-೫; ೧-೩-೬; ೬-೩-೩; ೬-೩-೪; ಎಂಬ ಅನುವಾಕಗಳಲ್ಲಿ ಉಕ್ತವಾಗಿರುವವು. ಇವುಗಳಲ್ಲಿ ೧-೩-೫ ನೇ ಅನುವಾಕವು ಯೂಪಚ್ಛೇದನವಿಧಿಯನ್ನೂ, ೧-೩-೬ ನೇ ಅನುವಾಕವು ಯೂಪಸ್ಥಾಪನವನ್ನೂ, ೬-೩-೩ ನೇ ಅನುವಾಕವು ಯೂಪವಿಧಿಯನ್ನೂ, ೬-೩-೪ ನೇ ಅನುವಾಕವು ಯೂಪಪ್ರೋಕ್ಷಣಾದಿವಿಧಿಗಳನ್ನು ವರ್ಣಿಸುವವು. ಮೊದಲಿನ ಎರಡು ಅನುವಾಕಗಳಲ್ಲಿ ಪಠಿಸಬೇಕಾದ ಮಂತ್ರಗಳು ಮಾತ್ರವಿರುವವು. ಕೊನೆಯ ಎರಡು ಅನುವಾಕಗಳಲ್ಲಿ ಮಂತ್ರಗಳ ಬ್ರಾಹ್ಮಣವಿರುವುದು ಎಂದರೆ ಆ ಮಂತ್ರಗಳಿಗೆ ವಿನಿಯೋಗಕ್ರಮವೂ ಅರ್ಥವಿವರಣೆಯೂ ಇರುವುದು. ಇವುಗಳೆಲ್ಲಾ ಯಜುರ್ವೇದಕ್ಕೆ ಸಂಬಂಧಪಟ್ಟಿರುವುದರಿಂದ ಅವುಗಳ ವಿವರಣೆಯು ಇಲ್ಲಿ ಅನಾವಶ್ಯಕವು. ಯಜುರ್ವೇದಸಂಹಿತೆಯಲ್ಲಿ ಅಥವಾ ಋ.ಸಂ. ಭಾಗ ೧೬ ಪುಟಗಳು ೬೦-೭೨ ನೇ ಪುಟಗಳಲ್ಲಿ ನಾವು ವಿಸ್ತಾರವಾಗಿ ವಿವರಿಸಿರುವುದನ್ನು ನೋಡಿ ತಿಳಿದುಕೊಳ್ಳಬಹುದು.

### ಅಗ್ನೀಷೋಮೀಯಪಶುವಿನ ವಿಷಯ

**ಸರ್ವಾಭ್ಯೋ ವಾ ಏಷ ದೇವತಾಭ್ಯ ಆತ್ಮಾನಮಾಲಭತೇ ಯೋ ದೀಕ್ಷತೇಽಗ್ನಿಃ ಸರ್ವಾ ದೇವತಾಃ, ಸೋಮಃ ಸರ್ವಾ ದೇವತಾ ಸ ಯದಗ್ನೀಷೋಮೀಯಂ ಪಶುಮಾಲಭತೇ ಸರ್ವಾಭ್ಯ ಏವ ತದ್ದೇವತಾಭ್ಯೋ ಯಜಮಾನ ಆತ್ಮಾನಂ ನಿಷ್ಕ್ರೀಣೀತೇ ।**

ಅಥಾಗ್ನೀಷೋಮೀಯಪಶ್ವಾಲಂಭಂ ವಿಧತ್ತೇ—ಯೋ ಯಜಮಾನೋ ದೀಕ್ಷತೇ ಸೋಮಯಾಗೇ ದೀಕ್ಷಾಂ ಪ್ರಾಪ್ನೋತಿ ಸ ಯಜಮಾನಃ ಸರ್ವದೇವಾರ್ಥಮಾತ್ಮಾನಮೇವ ಪಶುತ್ವೇನಾಲಬ್ಧುಮುಪಕ್ರಮತೇ ॥ ಅತ್ರ ಚ ಯೋಽಗ್ನಿರ್ಯಶ್ಚ ಸೋಮಸ್ತಾವುಭೌ ಸರ್ವದೇವತಾತ್ಮಕಾವಗ್ನೇರಾಹುತ್ಯಧಿಕರಣತ್ವೇನ ಸೋಮಸ್ಯ ಚ ಹೋಮದ್ರವ್ಯತ್ವೇನ ಚ ಸರ್ವೋಪಕಾರಿತ್ವಾತ್ ॥ ತಥಾ ಸತ್ಯಗ್ನೀಷೋಮೀಯಪಶ್ವಾಲಂಭನೇನ ಸರ್ವದೇವತಾನಾಂ ಸಕಾಶಾದ್ಯಜಮಾನಃ ಸ್ವಾತ್ಮಾನಂ ನಿಷ್ಕ್ರೀಣೀತವಾನ್ಭವತಿ ॥ ತಸ್ಮಾದಗ್ನೀಷೋಮೀಯಪಶುರಾಲಬ್ಧವ್ಯಃ॥ ಸೋಽಯಮರ್ಥಃ ಶ್ರುತ್ಯಂತರೇ ಸಂಗೃಹೀತಃ ॥ 'ಪುರಾ ಖಲು ವಾವೈಷ ಮೇಧಾಯಾಽಽತ್ಮಾನಮಾರಭ್ಯ ಚರತಿ ಯೋ ದೀಕ್ಷತೇ ಯದಗ್ನೀಷೋಮೀಯಂ ಪಶುಮಾಲಭತ ಆತ್ಮನಿಷ್ಕ್ರಯಣಮೇವಾಸ್ಯ' ಇತಿ ॥

ಇಲ್ಲಿ ಅಗ್ನೀಷೋಮೀಯಪಶುವೆಂದರೇನು? ಇದನ್ನು ಯಾವ ದೇವತೆಗಳನ್ನುದ್ದೇಶಿಸಿ ಏತಕ್ಕಾಗಿ ಸಮರ್ಪಿಸಬೇಕು ಎಂಬ ವಿಷಯವನ್ನು ಇಲ್ಲಿ ವಿವರಿಸಲಾಗುವುದು. ಯಜ್ಞಮಾಡುವ ಯಜಮಾನನು ಸೋಮಯಾಗವನ್ನು ಮಾಡುವುದಕ್ಕಾಗಿ ದೀಕ್ಷೆಯನ್ನು ಕೈಗೊಳ್ಳುವಾಗ (ಈ ದೀಕ್ಷಾಕ್ರಮವನ್ನು ಹಿಂದೆಯೇ ವಿವರಿಸಲಾಗಿದೆ) ದೇವತೆಗಳ ತೃಪ್ತ್ಯರ್ಥವಾಗಿ ತನ್ನನ್ನೇ ಯಜ್ಞಪಶುವನ್ನಾಗಿ ಅರ್ಪಿಸಿದಂತೆ ಭಾವಿಸಲಾಗುವುದು. ಆದರೆ ತಾನೇ ಪಶುವಾದಲ್ಲಿ ಯಜ್ಞದ ಕಾರ್ಯಕಲಾಪಗಳು ಮುಂದು ವರೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಯಜ್ಞಪಶುವಿಗಾಗಿ ಒಂದು ಆಡನ್ನು ತನ್ನ ಪರವಾಗಿ ಎಲ್ಲಾ ದೇವತೆಗಳನ್ನುದ್ದೇಶಿಸಿ ಸಮರ್ಪಿಸಿ ಆ ಮೂಲಕ ತಾನು ಬಿಡುಗಡೆಯನ್ನು ಹೊಂದುವನು. **ಅಗ್ನಿಃ ಸರ್ವಾ ದೇವತಾಃ । ಸೋಮಃ ಸರ್ವಾ ದೇವತಾಃ** ಎಂದರೆ ಅಗ್ನಿಯು ಸಮಸ್ತದೇವತೆಗಳ ಸ್ವರೂಪನು, ಸೋಮದೇವತೆಯೂ ಸಹ ಸಮಸ್ತ ದೇವತೆಗಳನ್ನು ಪ್ರತಿನಿಧಿಸ ತಕ್ಕವನು ಆದ್ದರಿಂದ ಈ ಇಬ್ಬರು ದೇವತೆಗಳಿಗೆ ಪಶುವನ್ನು ಸಮರ್ಪಿಸುವುದರಿಂದ ಸಮಸ್ತದೇವತೆಗಳಿಗೂ ಪಶುವನ್ನು ಅರ್ಪಿಸಿ ದಂತಾಗುವುದು. ಇದಲ್ಲದೆ ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಆಹುತಿಗಳನ್ನು ಅರ್ಪಿಸಬೇಕಾಗಿರುವುದು. ಸೋಮವು ಹೋಮದ್ರವ್ಯಾತ್ಮಕವಾಗಿರುವುದು. ಆದ್ದರಿಂದ ದೇವತೆಗಳಿಗೆ ಆಹುತಿಯು (ಪಶುವು) ಸೇರಬೇಕಾದರೆ ಅಗ್ನಿಯೂ, ಸೋಮನೂ ಅವಶ್ಯಕವಾಗಿ ಬೇಕೇಬೇಕು. ಈ ಕಾರಣಗಳಿಗಾಗಿ ಅಗ್ನಿ ಮತ್ತು ಸೋಮದೇವತೆಗಳಿಗೆ ಪಶುವನ್ನು ಅರ್ಪಿಸುವುದು ಸಹಜ ವಾಗಿದೆ. ಈ ವಿಷಯವು ಶ್ರುತ್ಯಂತರದಲ್ಲಿ ಎಂದರೆ ತೈತ್ತಿರೀಯಸಂಹಿತೆಯಲ್ಲಿ—**ಪುರಾ ಖಲು ವಾವೈಷ ಮೇಧಾಯಾ- ತ್ಮಾನಮಾರಭ್ಯ ಚರತಿ ಯೋ ದೀಕ್ಷಿತೋ ಯದಗ್ನೀಷೋಮೀಯಂ ಪಶುಮಾಲಭತ ಆತ್ಮನಿಷ್ಕ್ರಯಣ ಮೇವಾಸ್ಯ** (ತೈ. ಸಂ. ೬-೧-೧೧-೬) ಎಂದು ಹೇಳಿರುವುದು. ಈ ಅಗ್ನೀಷೋಮೀಯಪಶುವನ್ನು ಸೋಮಯಾಗದಲ್ಲಿ ಸೋಮರಸವನ್ನು ಹಿಂಡುವ ಸುತ್ಯಾದಿನದ ಹಿಂದಿನ ದಿನದಲ್ಲಿ ಅರ್ಪಿಸುವುದು ರೂಢಿಯಾಗಿದೆ.

ತದಾಹುರ್ದ್ವಿರೂಪೋಽಗ್ನೀಷೋಮೀಯಃ ಕರ್ತವ್ಯೋ ದ್ವಿದೇವತ್ಯೋ ಹೀತಿ ತತ್ತನ್ನಾದೃತ್ಯಂ ಪೀವ ಇವ ಕರ್ತವ್ಯಃ ಪೀವೋರೂಪಾ ವೈ ಪಶವಃ ಕೃಶಿತ ಇವ ಖಲು ವೈ ಯಜಮಾನೋ ಭವತಿ ತದ್ಯತ್ಪೀವಾ ಪಶುರ್ಭವತಿ ಯಜಮಾನಮೇವ ತತ್ಸ್ವೇನ ಮೇಧೇನ ಸಮರ್ಧಯತಿ ।

ಅಥ ಪೂರ್ವೋತ್ತರಪಕ್ಷಾಭ್ಯಾಂ ಪಶುಶರೀರಸ್ಯ ರೂಪವಿಶೇಷಂ ನಿಶ್ಚಿನೋತಿ ॥ ತತ್ತ- ತ್ರಾಗ್ನೀಷೋಮೀಯಪಶೌ ಬ್ರಹ್ಮವಾದಿನಃ ಪೂರ್ವಪಕ್ಷಮಾಹುಃ । ಯಸ್ಮಾದಸ್ಯ ಪಶೋರ- ಗ್ನಿಶ್ಚ ಸೋಮಶ್ಚೇತ್ಯೇತೇ ದ್ವೇ ದೇವತೇ ತಸ್ಮಾತ್ತದನುಸಾರೇಣ ಯಃ ಪಶುರ್ದ್ವಿರೂಪಃ ಶುಕ್ಲ- ಕೃಷ್ಣಾದಿವರ್ಣದ್ವಯೋಪೇತಃ ಸ ಕರ್ತವ್ಯ ಇತಿ ತದೇತದ್ಬ್ರಹ್ಮವಾದಿಮತಮನಾದರಣೀಯಂ॥ ಕಿಂತು ಪೀವ ಇವ ಶರೀರಪುಷ್ಟ್ಯಾ ಸ್ಥೂಲಏವ ಪಶುಃ ಕರ್ತವ್ಯಃ॥ಲೋಕೇ ಹಿ ಪಶವಃ ಪೀವೋ- ರೂಪಾ ವೈ ಮೇದೋವೃದ್ಧ್ಯಾ ವೈ ಪ್ರಾಯೇಣ ಸ್ಥೂಲರೂಪಾ ಏವ ಭವಂತಿ॥ ಯಜಮಾನಸ್ತು ಪಶ್ವನುಷ್ಠಾನದಿನೇ ಕೃಶಿತ ಇವೋಪಸದ್ದಿನೇಷು ಸ್ವಲ್ಪಕ್ಷೀರಾಹಾರೇಣ ತದಾನೀಂ ಕೃಶ ಏವ ಭವತಿ ॥ ತತ್ತಥಾಸತಿ ಯದ್ಯಯಂ ಪಶುಃ ಸ್ಥೂಲೋ ಭವೇತ್ತತ್ತೇನ ಪಶುಸ್ಥಾಲ್ಯೇನ ಕೃಶಶ- ರೀರಂ ಯಜಮಾನಮೇವ ಸ್ವೇನ ಮೇಧೇನ ಸ್ವಕೀಯಯಜ್ಞಸಾಧನರೂಪೇಣ ಸಮೃದ್ಧಂ ಕರೋತಿ ॥

ಕೆಲವರು ಎಂದರೆ ಬ್ರಹ್ಮವಾದಿಗಳು (ಯಜ್ಞಾನುಷ್ಠಾನಕುಶಲರು) ಈ ಅಗ್ನೀಷೋಮೀಯ ಪಶುವು ಅಗ್ನಿ ಮತ್ತು ಸೋಮದೇವತೆಗಳಗೆ ಅರ್ಪಿತವಾಗುವುದರಿಂದ ಆ ದೇವತೆಗಳ ರೂಪಕ್ಕನುಸಾರವಾಗಿ ಬಿಳೀ ಮತ್ತು ಕಪ್ಪುಬಣ್ಣಗಳಿಂದ ಕೂಡಿದ್ದಾಗಿರಬೇಕೆಂದು ಹೇಳುವರು. ಆದರೆ ಇದು ಸರಿಯಲ್ಲ ಎಂದರೆ ಈ ವಿಷಯಕ್ಕೆ ವಿಶೇಷಗಮನವನ್ನೂ ಕೊಡಬೇಕಾಗಿಲ್ಲ. ಪಶುವು ಧಷ್ಟಪುಷ್ಟವಾಗಿ ಇದ್ದರೆ ಸಾಕು. ಪಶುಗಳು ಯಾವಾಗಲೂ ಧಷ್ಟಪುಷ್ಟವಾಗಿಯೇ ಇರಬೇಕು. ಹಾಗಿರುವುದೇ ಅವುಗಳ ಸ್ವಭಾವವು. ಆದರೆ ಯಜಮಾನನು ಮಾತ್ರ ಆ ಕಾಲದಲ್ಲಿ ಕೃಶನಾಗಿರುವನು ದೀಕ್ಷಾಬದ್ಧನಾದಮೇಲೆ ಉಪವಾಸಾದಿಗಳನ್ನು ಅಲ್ಪಾಹಾರವಾದ ಕ್ಷೀರ (ಹಾಲು)ವನ್ನು ಮಾತ್ರ ಸೇವಿಸುತ್ತಿರುವುದರಿಂದ ಅವನ ಶರೀರವು ಕೃಶವಾಗಿಯೇ ಇರುವುದು. ಆದ್ದರಿಂದ ಪುಷ್ಟವಾದ ಪಶುವನ್ನು ಅರ್ಪಿಸುವುದರಿಂದ ಯಜ್ಞವು ಸರಿಯಾಗಿ ನೆರವೇರಿ ಯಜಮಾನನ ಶರೀರವೂ ಪುಷ್ಟಿಯನ್ನು ಪಡೆಯುವುದು.

ತದಾಹುರ್ನಾಗ್ನೀಷೋಮೀಯಸ್ಯ ಪಶೋರಶ್ನೀಯಾತ್ಪುರುಷಸ್ಯ ವಾ ಏಷೋಽಶ್ನಾತಿ ಯೋಽಗ್ನೀಷೋಮೀಯಸ್ಯ ಪಶೋರಶ್ನಾತಿ ಯಜಮಾನೋ ಹ್ಯೇತೇನಾತ್ಮಾನಂ ನಿಷ್ಕ್ರೀಣೀತ ಇತಿ । ತತ್ತಸ್ಮಾದೃತ್ಯಂ ವಾತ್ರಘ್ನಂ ವಾ ಏತದ್ಧವಿರ್ಯದಗ್ನೀಷೋಮೀಯೋಽಗ್ನೀಷೋಮಾಭ್ಯಾಂ ವಾ ಇಂದ್ರೋ ವೃತ್ರಮಹಂಸ್ತಾವೇನಮಬ್ರೂತಾಮಾವಾಭ್ಯಾಂ ವೈ ವೃತ್ರಮವಧೀರ್ವರಂ ತೇ ವೃಣಾವಹಾ ಇತಿ ವೃಣಾಥಾಮಿತಿ ತಾವೇತಮೇವ ವರಮವೃಣಾತಾಂ ಶ್ವಃ ಸುತ್ಯಾಯಾಂ ಪಶುಂ ಸ ಏನಯೋರೇಷೋಽಚ್ಯುತೋ ವರವೃತೋ ಹ್ಯೇನಯೋಸ್ತಸ್ಮಾತ್ತಸ್ಯಾಶಿತವ್ಯಂ ಚೈವ ಲೀಪ್ಸಿತವ್ಯಂ ಚ ॥

ಪುನರಪಿ ಪೂರ್ವೋತ್ತರಪಕ್ಷಾಭ್ಯಾಂ ಪಶುಲಕ್ಷಣಸ್ಯ ಹವಿಷಃ ಶೇಷಭಕ್ಷಣಮುಪಪಾದಯಿತುಂ ಪೂರ್ವಪಕ್ಷಮಾಹ—ತತ್ತತ್ರ ಪಶೌ ಪೂರ್ವಪಕ್ಷಿಣ ಆಹುರಗ್ನೀಷೋಮೀಯಸ್ಯ ಪಶೋರ್ಮಾಂಸಂ ನಾಶ್ನೀಯಾದ್ಯಸ್ತದ್ಭಕ್ಷಯತ್ಯಸೌ ಪುರುಷಸ್ಯ ಮಾಂಸಮೇವ ಭಕ್ಷಯತಿ । ಯಸ್ಮಾದ್ಯಜಮಾನ ಏತೇನ ಪಶುನಾ ಸ್ವಾತ್ಮಾನಂ ನಿಷ್ಕ್ರೀಣೀತೇ ತಸ್ಮಾತತ್ಸ್ವರೂಪೋಽಯಂ ಪಶುಃ ॥ ಇತಿಶಬ್ದಃ ಪೂರ್ವಪಕ್ಷಸಮಾಪ್ತ್ಯರ್ಥಃ ॥ ತಂ ನಿರಾಕೃತ್ಯ ಸಿದ್ಧಾಂತಮಾಹ—ತತ್ಪೂರ್ವಪಕ್ಷಿಭಿರುಕ್ತಮನಾದರಣೀಯಂ ಯೋಽಗ್ನೀಷೋಮೀಯಃ ಪಶುರಸ್ತಿ ಏತದ್ವಾರ್ತ್ರಘ್ನಂ ವೃತ್ರಹತ್ಯಾನಿಮಿತ್ತಂ ಹವಿಃ ॥ ಕಥಮೇತದಿತಿ ತದುಚ್ಯತೇ— ಅಗ್ನೀಷೋಮಾಭ್ಯಾಂ ನಿಮಿತ್ತಭೂತಾಭ್ಯಾಂ ಇಂದ್ರೋ ವೃತ್ರಂ ಹತವಾನ್ ॥ ಅಸ್ಯಾರ್ಥಸ್ಯ ಶ್ರುತ್ಯಂತರದ್ಯೋತನಾರ್ಥೋ ವೈ ಶಬ್ದಃ ॥ ಸೋಽಯಮರ್ಥಃ ಶ್ರುತ್ಯಂತರೇ ತ್ವಷ್ಟಾ ಹತಪುತ್ರ ಇತ್ಯನುವಾಕೇ ಪ್ರಪಂಚಿತಃ । ವೃತ್ರೇ ಹತೇ ಸತೀಂದ್ರಂ ಪ್ರತ್ಯಗ್ನೀಷೋಮಾವೇವಮಬ್ರೂತಾಂ ಹೇ ಇಂದ್ರ ವಾಂ ನಿಮಿತ್ತಂ ವೃತ್ರಂ ಹತವಾನಸಿ॥ ಅತೋ ವೃತ್ರವಧಸ್ಯ ನಿಮಿತ್ತಭೂತಾವಾವಾಂ ತವ ಸಕಾಶಾದ್ವರಂ ಪ್ರಾರ್ಥ-

ಯಾವಹೈ । ಇತ್ಯುಕ್ತ್ವಾ ವರಂ ಪ್ರಾರ್ಥಿತವಂತೌ ಶ್ವಃ ಸುತ್ಯಾಯಾಂ ಪರೇದ್ಯುಃ ಸೋಮಾಭಿಷವೇ ಪ್ರಸಕ್ತೇಸತಿ ಪೂರ್ವದಿನೇ ಪಶುರೂಪಂ ವರಂ ವೃತವಂತೌ ॥ ಸ ಏಷ ಪಶುರೇನಯೋರಗ್ನೀಷೋಮಯೋರಚ್ಯುತೋಽವಶ್ಯಂ ಕರ್ತವ್ಯಃ ॥ ವರೇಣ ವೃತತ್ವಾತ್ । ತಸ್ಮಾದೇವಂ ಪ್ರಶಸ್ತತ್ವಾತ್ತಸ್ಯ ಪಶೋರ್ಮಾಂಸಮಶಿತವ್ಯಂ ಚೈವ ಸರ್ವದಾ ಭಕ್ಷಿತವ್ಯಮೇವ ॥ ನ ಕೇವಲಂ ಭಕ್ಷಣಂ ಕಿಂತು ಲೀಪ್ಸಿತವ್ಯಂ ಚ ಭಕ್ಷಣಾತ್ಪೂರ್ವಮಾದರೇಣ ಮಹತಾ ಲಬ್ಧುಮೇಷ್ಟವ್ಯಮಪಿ॥ ತಾವೇತೌ ಪೂರ್ವೋತ್ತರಪಕ್ಷೌ ಶಾಖಾಂತರೇ ಸಂಗೃಹೀತೌ ॥ ‘ ತಸ್ಮಾನ್ನಾಽಽವಶ್ಯಂ ಪುರುಷನಿಷ್ಕ್ರಯಣಮಥೋ ಖಲ್ವಾಹುರಗ್ನೀಷೋಮಾಭ್ಯಾಂ ವಾ ಇಂದ್ರೋ ವೃತ್ರಮಹನ್ನಿತಿ ಯದಗ್ನೀಷೋಮೀಯಂ ಪಶುಮಾಲಭತೇ ವಾರ್ತ್ರಘ್ನ ಏವಾಸ್ಯ ಸ ತಸ್ಮಾದ್ವಾಽಽಶ್ಯಂ ” ಇತಿ ॥ ಅತ್ರ ಮೀಮಾಂಸಾ—ಪ್ರಥಮಾಧ್ಯಾಯೇ ಚತುರ್ಥಪಾದೇ ಚಿಂತಿತಂ—

“ ಯಜಮಾನಃ ಪ್ರಸ್ತರೋಽತ್ರ ಗುಣೋ ವಾ ನಾಮ ವಾ ಸ್ತುತಿಃ ॥
ಸಾಮಾನಾಧಿಕರಣ್ಯೇನ ಸ್ಯಾದೇಕಸ್ಯಾನ್ಯನಾಮತಾ ॥
ಗುಣೋ ವಾ ಯಜಮಾನೋಽಸ್ತು ಕಾರ್ಯೇ ಪ್ರಸ್ತರವರ್ತಿ(ಲಕ್ಷಿ)ತೇ ॥
ಅಂಶಾಂಶಿತ್ವಾದ್ಯಭಾವೇನ ಪೂರ್ವವನ್ನಾತ್ರ ಸಂಸ್ತುತಿಃ ॥
ಸರ್ವ(ಅರ್ಥ)ಭೇದಾದನಾಮತ್ವಂ ಗುಣಶ್ಚೇತ್ಪ್ರಹ್ರಿಯೇತ ಸಃ ” ॥

ಯಾಗಸಾಧನತಾದ್ವಾರಾ ಪ್ರಧಾನ(ವಿಧೇಯ)ಪ್ರಸ್ತರಸ್ತುತಿಃ । ಇದಮಾಮ್ನಾಯತೇ ॥ ‘ ಯಜಮಾನಃ ಪ್ರಸ್ತರಃ ’ ಇತಿ ॥ ತತ್ರ ಯಜಮಾನಸ್ಯ ಪ್ರಸ್ತರಶಬ್ದೋ ನಾಮಧೇಯಂ ಯಾಗೇನೇತ್ಯಾದಾವಿವ ಸಾಮಾನಾಧಿಕರಣ್ಯಾದಿತ್ಯೇಕಃ ಪಕ್ಷಃ ॥ ಗುಣವಿಧಿರಿತ್ಯಪರಸ್ತತ್ರಾಪಿ ಯಜಮಾನಕಾರ್ಯೇ ಜಪಾದೌ ಪ್ರಸ್ತರಸ್ಯಾಚೇತನಸ್ಯ ಸಾಮರ್ಥ್ಯಾಭಾವಾತ್ ॥ ಪ್ರಸ್ತರಕಾರ್ಯೇ ಸ್ರುಗ್ಧಾರಣಾದೌ ಯಜಮಾನಸ್ಯ ಶಕ್ತತ್ವಾದ್ಯಜಮಾನರೂಪೋ ಗುಣೋ ವಿಧೀಯತೇ । ಏವಂಸತಿ ಪಶ್ಚಾಚ್ಛ್ರುತಸ್ಯ ಪ್ರಸ್ತರಶಬ್ದಸ್ಯ ಕಾರ್ಯಲಕ್ಷಕತ್ವೇಽಪಿ ಪ್ರಥಮಶ್ರುತೋ ಯಜಮಾನಶಬ್ದೋ ಮುಖ್ಯವೃತ್ತಿರ್ಭವಿಷ್ಯತಿ ॥ ನ ಚಾತ್ರ ಪೂರ್ವನ್ಯಾಯೇನ ಸ್ತುತಿಃ ಸಂಭವತಿ । ಅಷ್ಟಾಕಪಾಲದ್ವಾದಶಕಪಾಲಯೋರಿವಾಂಶಾಂಶಿತ್ವಾಭಾವಾತ್ ॥ ವಾಯುರ್ವೈ ಕ್ಷೇಪಿಷ್ಠಾ ದೇವತಾ, ಊರ್ಜೋಽವರುಧ್ಯಾ ಇತಿವತ್ಸ್ತುತಿರಿತಿ ಚೇತ್ । ನ, ಪ್ರಸ್ತಾರಾದಿಧರ್ಮವತ್ಕಸ್ಯಚಿದುತ್ಕರ್ಷಸ್ಯ ಅಪ್ರತೀತೇಃ ॥ ತಸ್ಮಾನ್ನಾಮಗುಣಯೋರನ್ಯತರತ್ವಮಿತಿಪ್ರಾಪ್ತೇ ಬ್ರೂಮಃ ॥ ಗೋಮಹಿಷಯೋರಿವಾ[ರ್ಥಭೇದಸ್ಯಾ]ತ್ಯಂತಪ್ರಸಿದ್ಧತ್ವಾನ್ನ ನಾಮಧೇಯತ್ವಂ ಯುಕ್ತಂ ॥ ಗುಣಪಕ್ಷೇಽಗ್ನೌ ಪ್ರಹರಣಸ್ಯ ಪ್ರಸ್ತರವಿಷಯತ್ವಾದ್ಯಜಮಾನೇ ಪ್ರಹೃತೇ ಸತಿ ಕರ್ಮಲೋಪಃ ಸ್ಯಾತ್ ॥ ತಸ್ಮಾತ್ಪ್ರಸ್ತರಶಬ್ದೋ ಯಜಮಾನಶಬ್ದೇನ ಸ್ತೂಯತೇ ॥ ಯಥಾ ಸಿಂಹೋ ದೇವದತ್ತ ಇತ್ಯತ್ರ ಸಿಂಹಗುಣೇನ ಶೌರ್ಯಾದಿನೋಪೇತೋ ದೇವದತ್ತಃ ಸಿಂಹ ಇತ್ಯಾಖ್ಯಾಯತೇ ತಥಾ ಯಜಮಾನಗುಣೇನ ಯಾಗಸಾಧನತ್ವೇನ ಯುಕ್ತಃ ಪ್ರಸ್ತರೋ ಯಜಮಾನಶಬ್ದೇನ ಸ್ತೂಯತೇ ॥ ಏವಂ ಯಜಮಾನೋ ಯೂಪೋ ಯಜಮಾನಃ ಪ್ರಸ್ತರ ಇತ್ಯಾದಿಷು ದ್ರಷ್ಟವ್ಯಂ ॥

ಚತುರ್ಥಾಧ್ಯಾಯಸ್ಯ ದ್ವಿತೀಯಪಾದೇ ಚಿಂತಿತಂ—

" ಸ್ವಯಂ ಕುರುತ ಇತ್ಯತ್ರ ಸ್ವರುರ್ಯೂಪಾತ್ಪೃಥಕ್ಕ್ರಿಯಾಂ ॥
ಪ್ರಯೋಜಯೇನ್ನ ವಾದ್ಯೋಽಸ್ತು ವಿಶಿಷ್ಟಸ್ಯ ವಿಧಾನತಃ ॥
ಆದ್ಯಸ್ಯ ಯೂಪಖಂಡಸ್ಯ ಸ್ವರೌ ತಸ್ಯ ವಿಶೇಷಣೇ ।
ವಿಹಿತೇ ಲಾಘವಂ ತಸ್ಮಾದನುನಿಷ್ಪನ್ನ ಏವ ಸಃ " ॥

ಅಗ್ನೀಷೋಮೀಯಪಶೌ ಶ್ರೂಯತೇ—' ಯೂಪಸ್ಯ ಸ್ವರುಂ ಕರೋತಿ ' ಇತಿ ತತ್ರ ಯೂಪೋ ಯಥಾ ಛೇದನಸ್ಯ ಪ್ರಯೋಜಕಸ್ತಥಾ ಸ್ವರುಶ್ಛೇದನಂ ಪ್ರಯೋಜಯತಿ ॥ ಕುತಃ ಕರೋತೀತ್ಯನೇನ ವಿಶಿಷ್ಟವಿಧಿಪ್ರತೀತೇಃ । ಕರೋತಿಧಾತೋರ್ಭಾವನಾ ಮುಖ್ಯೋಽರ್ಥಃ । ತತ್ರ ಯೂಪಶಬ್ದೋಪಲಕ್ಷಿತಃ ಖದಿರಾದಿವೃಕ್ಷಃ ಕರಣಂ ಛೇದನಾದಿರಿತಿಕರ್ತವ್ಯತಾ ಛಿನ್ನೇನ ವೃಕ್ಷೇಣ ಸ್ವರುರುತ್ಪಾದನೀಯ ಇತಿ ವಿಶಿಷ್ಟವಿಧಿಃ । ಉತ್ಪನ್ನಸ್ಯ ಸ್ವರೋರ್ವಿನಿಯೋಗ ಏವಮಾಮ್ನಾತಃ— ' ಸ್ವರುಣಾ ಪಶುಮನಕ್ತಿ ' ಇತಿ।ತಸ್ಮಾತ್ಸ್ವರುಶ್ಛೇದನಸ್ಯ ಪ್ರಯೋಜಕ ಇತಿ ಪ್ರಾಪ್ತೇ ಬ್ರೂಮಃ । ವಕ್ಷ್ಯಮಾಣ(ಛಿದ್ಯಮಾನ)ಸ್ಯ ಯೂಪಸ್ಯ ಯಃ ಪ್ರಥಮಃ ಪತಿತಃ ಶಕಲಃ ಸ ಸ್ವರುರಿತಿ ಸ್ವರುತ್ವನಾಮಮಾತ್ರವಿಧೇರ್ಲಾಘವಾತ್ಸ್ವರುರ್ನ ಚ್ಛೇದನಸ್ಯ ಪ್ರಯೋಜಕಃ ಕಿಂತು ಯೂಪಪ್ರಯುಕ್ತೇ ಛೇದನೇ ಸ್ವಯಮನುನಿಷ್ಪದ್ಯತೇ ॥

ಅಗ್ನೀಷೋಮೀಯಪಶುವನ್ನು ಅಗ್ನಿಯಲ್ಲಿ ಆಹುತಿಪೂರ್ವಕವಾಗಿ ದೇವತೆಗಳಿಗೆ ಅರ್ಪಿಸಿದನಂತರ ಉಳಿಯುವ ಹೋಮಶೇಷವನ್ನು ಭಕ್ಷಿಸಬೇಕೇ ಬೇಡವೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದು. ಕೆಲವರು ಅದನ್ನು ಭಕ್ಷಿಸಕೂಡ ದೆಂದು ಹೇಳುವರು. ಏಕೆಂದರೆ ಯಜಮಾನನು ತನ್ನನ್ನು ದೇವತೆಗಳಿಗೆ ಪಶುವನ್ನಾಗಿ ಅರ್ಪಿಸಿ ಅನಂತರ ತನ್ನಬಿಡುಗಡೆಗಾಗಿ ಎಂದರೆ ತನಗೆ ಪ್ರತಿನಿಧಿಯಾಗಿ ಈ ಅಗ್ನೀಷೋಮೀಯಪಶುವನ್ನು ಅರ್ಪಿಸುವನು. ಆದ್ದರಿಂದ ಈ ಪಶುವು ಯಜ್ಞಮಾಡುವ ಯಜಮಾನನ ಶರೀರವೇ ಆಯಿತು. ತನ್ನ ಸ್ವಶರೀರವನ್ನು ಭಕ್ಷಿಸುವುದು ನಿಷೇಧವಾದ್ದರಿಂದ ಈ ಅಗ್ನೀಷೋಮೀಯಪಶುವಿನ ಹೋಮಶೇಷವನ್ನು ಯಜಮಾನನು ಭಕ್ಷಿಸಕೂಡದು ಎಂದು ಕೆಲವರು ಹೇಳುವರು (ಇದು ಪೂರ್ವಪಕ್ಷವು.) ಆದರೆ ಇದು ಯುಕ್ತವಲ್ಲ. ಏಕೆಂದರೆ ಈ ಅಗ್ನೀಷೋಮೀಯಪಶುವೆನ್ನುವುದು ನ್ಯಾಯವಾಗಿ ವೃತ್ರನನ್ನು ಸಂಹರಿಸಿದ ಇಂದ್ರನಿಗೇ ಸಲ್ಲತಕ್ಕದ್ದಾಗಿರುವುದು. ಹೇಗೆಂದರೆ ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರಮಾಡುವಾಗ ಅಗ್ನೀಷೋಮದೇವತೆಗಳ ಸಹಾಯದಿಂದಲೇ ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದನು. ತಮ್ಮ ಸಹಾಯದಿಂದ ಇಂದ್ರನು ವೃತ್ರನನ್ನು ವಧಿಸಿದ ರಿಂದ ಅಗ್ನೀಷೋಮದೇವತೆಗಳು ಇಂದ್ರನನ್ನು ಕುರಿತು—ಎಲೈ ಇಂದ್ರನೇ ನೀನು ನಮ್ಮ ಸಹಾಯದಿಂದಲೇ ವೃತ್ರನನ್ನು ಸಂಹರಿಸಲು ಶಕ್ತನಾದೆ. ಆದ್ದರಿಂದ ನಾವು ಮಾಡಿದ ಉಪಕಾರಕ್ಕೆ ಬದಲಾಗಿ ನಮಗೆ ವರವನ್ನು ಕೊಡಬೇಕು ಎಂದು ಪ್ರಾರ್ಥಿಸಲು ಇಂದ್ರನು ಹಾಗೆಯೇ ಆಗಲೆಂದು ವರವನ್ನು ಕೊಟ್ಟನು. ಈ ವಿಷಯವು ತೈತ್ತಿರೀಯಸಂಹಿತೆಯ ತ್ವಷ್ಟಾ ಹತಪುತ್ರಃ ಎಂಬ ಅನುವಾಕದಲ್ಲಿ (ತೈ. ಸಂ. ೨-೪-೧೨-೧) ಉಕ್ತವಾಗಿರುವುದು. ಆ ವರದ ವಿವರವೇನೆಂದರೆ—ಸೋಮಯಾಗದಲ್ಲಿ ಸುತ್ಯಾದಿನ ಎಂದರೆ ಸೋಮರಸವನ್ನು ಹಿಂಡುವ ದಿನದ ಹಿಂದಿನ ದಿನದಲ್ಲಿ ಒಂದು ಪಶುವನ್ನು ಅವಶ್ಯವಾಗಿ ಅರ್ಪಿಸಬೇಕಾಗಿರುವುದು. ಆ ಪಶುವು ನಮ್ಮ ಹೆಸರಿನಿಂದ ಎಂದರೆ ಅಗ್ನೀಷೋಮೀಯಪಶುವೆಂದು ಪ್ರಸಿದ್ಧಿಯಾಗಬೇಕು ಮತ್ತು ಆ ಪಶುವಿನ ಹೋಮಶೇಷವಾದ ಮಾಂಸವನ್ನು ಅವಶ್ಯಕವಾಗಿ ಎಂದರೆ ಪ್ರಯತ್ನಪೂರ್ವಕವಾಗಿ ಭಕ್ಷಿಸಲೇಬೇಕು. ಇದೇ ನಾವು ಕೇಳುವ ವರವು ಎಂದು ಪ್ರಾರ್ಥಿಸಿದರು. ಇಂದ್ರನು ಅದರಂತೆ ವರವನ್ನು ಅನುಗ್ರಹಿಸಿದನು. ಆದ್ದರಿಂದ ಅಗ್ನೀಷೋಮೀಯಪಶುವಿನ ಹೋಮ

ಶೇಷವನ್ನು ಯಜಮಾನನು ಪ್ರಯತ್ನಪೂರ್ವಕವಾಗಿ ಭಕ್ಷಿಸಲೇಬೇಕು. ಈ ವಿಷಯದಲ್ಲಿ ಪೂರ್ವಪಕ್ಷಸಿದ್ಧಾಂತಗಳು ಶ್ರುತ್ಯಂತರದಲ್ಲಿ ವಿಶದವಾಗಿ ಉಕ್ತವಾಗಿರುವುದು— **ತಸ್ಮಾತ್ತಸ್ಯ ನಾಶ್ಯಂ ಪುರುಷನಿಷ್ಕ್ರಯಣ ಇವ ಹ್ಯಥೋ ಖಲ್ವಾಹುರಗ್ನೀಷೋಮಾಭ್ಯಾಂ ವಾ ಇಂದ್ರೋ ವೃತ್ರಮಹನ್ನಿತಿ ಯದಗ್ನೀಷೋಮೀಯಂ ಪಶುಮಾಲಭತೇ ವಾರ್ತ್ರಘ್ನ ಏವಾಸ್ಯ ಸ ತಸ್ಮಾದ್ವಾಶ್ಯಂ** (ತೈ. ಸಂ. ೬-೧-೧೧-೬).



*English Translation*

**(Speculations on the Yupa and the meaning of the sacrificial animal)**

They (the theologians) argue the question; Is the Yupa to remain standing (before the fire), or is it to be thrown (into the fire)? (They answer:) For him who desires cattle it may remain standing. (About this the following story is reported). Once upon a time cattle did not stand still to be taken by the Gods for food. Having run away, they stood still and turning towards the Gods), said repeatedly; you shall not obtain us! No! No! Thereupon the Gods saw that Yupa-weapon which they erected. Thus they frightened the animals, which, then returned to them. That is the reason, that up to this day, the (sacrificial) animals are turned towords the Yupa, (i.e. the head being bent towords the sacrificial post on which they are tied). Then they stood still to be taken by the Gods for their food. (The sacrificial animals of him who has such a knowledge and whose Yupa stands erected, stand still to be taken by him for his food. He (the Adhvaryu) should afterwards throw the Yupa of that sacrificer who desires heaven (into the fire). For the former (sacrificers) actually used to throw the Yupa (into the fire), after it had been used for tying the sacrificial animal to it. For the sacrificer is the Yupa and the bunch of Darbha grass (prastara) is the sacrifices (also), and Agni is the womb of the Gods. by means of the invocation offerings (ahuti) the sacrificer joins the womb of the Gods, and will go with a golden body to the celestial world.

The sarificers who lived after the ancient ones, observed that the svaru being a piece of the Yupa (represents the whole of it). He (who now brings a sacrifice) should, therefore, throw it, at this time, afterwards (into the fire). In this way any thing obtainable through the throwing of the Yupa (into the fire) as well as that one obtainable through its remaining standing, is obtained.

The man who is initiathd (into the sacrificial mysteries) offers himself to all deties. Agni represents all deities, and soma represents all deites. When he (the sacrificer) offers the animal to Agni-Soma he releases himself (by being rpresnted by the animal) from being offered to all deities.

They say : the animal to be offered to Agni-Soma, must be of two colours, because it belongs to two deities. But this (precept) is not to be attended to. A fat animal is to be sacrificed ; because animal are of a fat complexion, and the sacrificer (if compared with them) certainly lean. When the animal is fat, the sacrificer thrives through its marrow.

They say : " do not eat from the animal offerd to Agni-Soma." Who eats from this animal, eats from humen flesh ; because the sacrificer releases himself (from beiag sacrificed) by means of the animal." But this (precept) is not to be attended to.

The animal offered to Agni-Soma is an offering to Vritraghna (Indra). For Indra slew Vritra through Agni-Soma. Both then said to him : " thou hast slain Vritra through us ; let us choose a boon from thee. Choose yourslves answeaed he. Thus they choose this boon from him. Thus they receive (now as their food) the animal which is sacrificed the day previous to the Soma feast.

This is their everlasting portion choosen by them. Thence one ought to take pieces of it, and eat them.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಷ್ಠಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.



# ಅಥ ಷಷ್ಠಾಧ್ಯಾಯೇ ಚತುರ್ಥಃ ಖಂಡಃ

## ಆರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಆಪ್ರೀಸೂಕ್ತಗಳು – ಹನ್ನೊಂದು ಪ್ರಯಾಜಹೋಮಗಳು ಇತ್ಯಾದಿ. ]

ಇದುವರೆಗೂ ಅಗ್ನೀಷೋಮೀಯಪಶುವಿನ ವಿಷಯವನ್ನು ಹೇಳಿ ಇನ್ನುಮುಂದೆ ಆಪ್ರೀಸೂಕ್ತಗಳ ಮತ್ತು ಹನ್ನೊಂದು ಪ್ರಯಾಜಹೋಮಗಳ ವಿಷಯವನ್ನು ಈ ಅಧ್ಯಾಯದ ಕೊನೆಯವರೆಗೂ ವಿವರಿಸುವರು.

**ಆಪ್ರೀಭಿರಾಪ್ರೀಣಾತಿ । ತೇಜೋ ವೈ ಬ್ರಹ್ಮವರ್ಚಸಮಾಪ್ರಿಯಸ್ತೇಜಸೈವೈನಂ ತದ್ಬ್ರಹ್ಮವರ್ಚಸೇನ ಸಮರ್ಧಯತಿ ।**

**ಅಗ್ನೀಷೋಮೀಯಂ ಪಶುಂ ವಿಧಾಯ ತತ್ರೈಕಾದಶ ಪ್ರಯಾಜಾನ್ವಿಧತ್ತೇ—ತೇಷಾಂ ಪ್ರಯಾಜಾದೀನಾಂ ಯಾಜ್ಯಾಃ ಪ್ರೀತಿಹೇತುತ್ವಾದಾಪ್ರೀಶಬ್ದೇನೋಚ್ಯಂತೇ ॥ ಏತಚ್ಚ ಶಾಖಾಂತರೇ ಶ್ರುತಂ—'ಆಪ್ರೀಭಿರಾಪ್ನುರ್ವನ್, ತದಾಪ್ರೀಣಾಮಾಪ್ರಿತ್ವಂ' ಇತಿ ॥ ತಾಭಿರಾಪ್ರೀಸಂಜ್ಞಕಾಭಿಃ ಪ್ರಯಾಜಾದಿಭಿರಾಪ್ರೀಣಾತಿ ದೇವತಾಃ ಸರ್ವತ್ರ ಪ್ರೀಣಯೇತ್ತತ್ಪ್ರೀತ್ಯರ್ಥಂ ಯಾಜ್ಯಾಃ ಪಠೇದಿತ್ಯರ್ಥಃ ॥ ತಾಃ ಪ್ರಶಂಸತಿ—ಆಜ್ಯದ್ರವ್ಯಕತ್ವಾತ್ತೇಜಸ್ತ್ವಂ ಶಾಸ್ತ್ರೀಯಸಂಸ್ಕಾರಸಾಧನತ್ವಾದ್ಬ್ರಹ್ಮವರ್ಚಸತ್ವಂ ತೇನ ಯಾಜ್ಯಾ ಪಾಠೇನ ಯಜಮಾನಸ್ಯ ತದುಭಯಂ ಸಮೃದ್ಧಂ ಭವತಿ ॥**

ಮೊದಲು ಆಪ್ರೀಸೂಕ್ತಗಳೆಂದರೇನು, ಈ ಸೂಕ್ತಗಳಿಗೆ ಈ ಹೆಸರು ಏತಕ್ಕೆ ಬಂದಿತು ಎಂಬ ವಿಷಯವನ್ನು ವಿವರಿಸಲಾಗುವುದು. ಆಪ್ರೀಸೂಕ್ತಗಳ ಸ್ವರೂಪ ಮತ್ತು ಕರ್ಮಾಚರಣೆಯಲ್ಲಿ ಅವುಗಳು ಹೊಂದಿರುವ ಸ್ಥಾನಗಳನ್ನು ತಿಳಿಯಬೇಕಾದರೆ ನಮಗಿರುವ ಆಧಾರಗಳು ಎರಡುಬಗೆಯಾಗಿವೆ. ಒಂದನೆಯದು—ಬ್ರಾಹ್ಮಣಾದಿಶ್ರುತಿವಾಕ್ಯಗಳು ; ಎರಡನೆಯದು - ನಿರುಕ್ತಾದಿ ನಿರ್ವಚನವಾಕ್ಯಗಳು ಎಂದರೆ ಯಾಸ್ಕರ ನಿರುಕ್ತ ಮತ್ತು ಶೌನಕರ ಬೃಹದ್ದೇವತಾಗ್ರಂಥ. ಈ ಎರಡು ಬಗೆಯ ಆಧಾರಗಳಲ್ಲಿ ನಿರುಕ್ತಾದಿ ನಿರ್ವಚನವಾಕ್ಯಗಳು ಹೆಚ್ಚು ಯುಕ್ತಿಯುಕ್ತವಾಗಿಯೂ ಶಾಸ್ತ್ರೀಯವಾದ ವಿವರಣೆಗಳಿಂದಲೂ ಕೂಡಿವೆ.

**ಆಪ್ರೀಭಿರಾಪ್ರೀಣಾತಿ । ತೇಜೋ ವೈ ಬ್ರಹ್ಮವರ್ಚಸಮಾಪ್ರಿಯಸ್ತೇಜಸೈವೈನಂಬ್ರಹ್ಮವರ್ಚಸೇನ ಸಮರ್ಧಯತಿ ।** (ಐ. ಬ್ರಾ. ಅ. ೬. ಖಂ. ೪.)

ಎಂದರೆ ಈ ಆಪ್ರೀಸೂಕ್ತಗಳಿಂದ ಹೋತೃವು ಹೋಮಮಾಡಿ ದೇವತೆಗಳನ್ನು ತೃಪ್ತಿ (ಸಂತೋಷ)ಪಡಿಸುತ್ತಾನೆ. ಆದ್ದರಿಂದ ಈ ಸೂಕ್ತಗಳಿಗೆ ಆಪ್ರೀಸೂಕ್ತಗಳೆಂದು ಹೆಸರು. ಈ ಸೂಕ್ತದ ಮಂತ್ರಗಳಿಂದ ಹೋಮಮಾಡುವಾಗ ಆಜ್ಯಾಹುತಿಗಳನ್ನು ಅರ್ಪಿಸುವುದರಿಂದಲೂ ಆಜ್ಯವು (ತುಪ್ಪವು) ತೇಜೋಯುತವಾದುದರಿಂದಲೂ ಈ ಆಜ್ಯಾಹುತಿಗಳು ಯಜಮಾನನಿಗೆ

ತೇಜಸ್ಸಮೃದ್ಧಿಯನ್ನುಂಟುಮಾಡುವವು. ಮತ್ತು ಈ ಆಹುತಿಗಳನ್ನೂ ಆಹುತಿದ್ರವ್ಯಗಳನ್ನೂ ಶಾಸ್ತ್ರೀಯವಾಗಿ (ಮಂತ್ರಪುರಸ್ಸರವಾಗಿ, ವಿಧ್ಯುಕ್ತವಾಗಿ) ಸಂಸ್ಕಾರಮಾಡಿ ಅಗ್ನಿಯಲ್ಲಿ ಹೋಮಮಾಡುವುದರಿಂದ ಇವುಗಳ ಯಜಮಾನನಿಗೆ ಬ್ರಹ್ಮವರ್ಚಸ್ಸನ್ನೂ ಉಂಟುಮಾಡುವವು.

**ತದ್ಯದಾಪ್ರೀಣಾತಿ । ತಸ್ಮಾದಾಪ್ರಿಯೋ ನಾಮ ।** (ಕೌ. ಬ್ರಾ. ೧೦-೩)

ಈ ಸೂಕ್ತಗಳು ದೇವತೆಗಳನ್ನು ತೃಪ್ತಿಪಡಿಸುವುದರಿಂದ ಇವುಗಳಿಗೆ ಆಪ್ರಿಯವೆಂಬ ಹೆಸರುಬಂದಿದೆ.

**ಆಪ್ರೀಭಿರಾಪ್ನುವನ್ । ತದಾಪ್ರೀಣಾಮಾಪ್ರಿತ್ವಂ ॥** (ತೈ. ಬ್ರಾ. ೨-೨-೮-೬)

ಋತ್ವಿಗ್ಯಜಮಾನಾದಿಗಳ ಈ ಆಪ್ರೀಸೂಕ್ತಗಳಿಂದ ದೇವತೆಗಳನ್ನು ತೃಪ್ತಿಪಡಿಸುವರು. ಆದ್ದರಿಂದ ಈ ಸೂಕ್ತಗಳಿಗೆ ಆಪ್ರೀಸೂಕ್ತಗಳೆಂದು ಹೆಸರಾಯಿತು.

**ಯದೇತಾನ್ಯಾಪ್ರಿಯಾ ಆಜ್ಯಾನಿ ಭವಂತಿ । ಆತ್ಮಾನಮೇವೈತೈರಾಪ್ರೀಣಾತಿ ।** (ತಾ. ಬ್ರಾ. ೧೫-೮-೨)

ಆಪ್ರೀಸೂಕ್ತಗಳ ಮಂತ್ರಗಳಿಂದ ಆಜ್ಯವನ್ನು ಅಗ್ನಿಯಲ್ಲಿ ಹೋಮಮಾಡಿ ಋತ್ವಿಜರು ದೇವತೆಗಳನ್ನು ಸಂತೋಷಪಡಿಸುತ್ತಾರೆ. ಆ ಮೂಲಕ ಯಜಮಾನನಿಗೂ ತೃಪ್ತಿಯುಂಟಾಗುತ್ತದೆ.

**ಅಥಾಪ್ರೀಭಿಶ್ಚರಂತಿ । ಯೋ ದೀಕ್ಷತೇ ತಸ್ಯ ರಿರಿಚಾನ ಇವ ಆತ್ಮಾ ಭವತಿ । ತಮೇ-ತಾಭಿರಾಪ್ರೀಭಿರಾಪ್ಯಾಯಯಂತಿ । ತದ್ಯದಾಪ್ಯಾಯಯಂತಿ । ತಸ್ಮಾದಾಪ್ರಿಯೋ ನಾಮ । ತಸ್ಮಾದಾಪ್ರೀಭಿಶ್ಚರಂತಿ । ತೇ ವಾ ಏತ ಏಕಾದಶಪ್ರಯಾಜಾ ಭವಂತಿ ।** (ಶ. ಬ್ರಾ. ೩-೮-೧)

ಎಂದು ಶತಪಥಬ್ರಾಹ್ಮಣದಲ್ಲಿಯೂ ಹೇಳಿದೆ. ಮೇಲೆ ಹೇಳಿದವುಗಳೆಲ್ಲವೂ ಶ್ರುತಿವಾಕ್ಯಗಳು. ಈಗ ನಿರ್ವಚನವಾಕ್ಯಗಳನ್ನು ವಿವರಿಸುವೆವು—

**ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾತ್ ? ಆಪ್ನೋತೇಃ ಪ್ರೀಣಾತೇರ್ವಾ ಆಪ್ರೀ-ಭಿರಾಪ್ರೀಣಾತಿ** (ನಿ. ೮-೨-೧)

ಎಂದು ಯಾಸ್ಕರು ಪ್ರಾರಂಭಮಾಡಿ ಈ ಅಧ್ಯಾಯದ ಪರಿಸಮಾಪ್ತಿಯವರೆಗೂ ವಿಸ್ತಾರವಾಗಿ ಆಪ್ರೀಸೂಕ್ತಗಳನ್ನು ವಿವರಿಸಿದ್ದಾರೆ. ಈಗ ಆಪ್ರೀಸೂಕ್ತಗಳನ್ನು ವಿವರಿಸೋಣ. ಆಪ್ರಿಯಃ ಎಂದರೇನು ? ಈ ಸೂಕ್ತಗಳು ದೇವತೆಗಳನ್ನು ಸೇರಿ ಅವರ ಹೃದಯಸ್ಪರ್ಶಮಾಡಿ ಅವರನ್ನು ಸಂತೋಷಗೊಳಿಸುವುದರಿಂದ ಈ ಸೂಕ್ತಗಳಿಗೆ ಆಪ್ರೀಸೂಕ್ತಗಳೆಂದು ಹೆಸರು ಎಂದು ಯಾಸ್ಕರು ಆಪ್ರೀಸೂಕ್ತಗಳ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಬ್ರಾಹ್ಮಣಾದಿವಾಕ್ಯಗಳ ಅಭಿಪ್ರಾಯವನ್ನು ತಿಳಿಸಿದಾರೆ. ಅಲ್ಲದೆ **ಕಾತ್ಥಕ್ಯ, ಶಾಕಪೂಣಿ, ಮಾಧ್ಯಮಿಕ** ಮೊದಲಾದ ಆಚಾರ್ಯರ ಅಭಿಪ್ರಾಯಗಳನ್ನೂ ಉದಹರಿಸಿದ್ದಾರೆ. ಕಾತ್ಥಕ್ಯಾದಿಗಳು ಯಾಜ್ಞಿಕರೇ ಆದರೂ ಸಹ ಅವರು ಬ್ರಾಹ್ಮಣಾದಿಗಳಲ್ಲಿ ಹೇಳಿರತಕ್ಕ ನಿರ್ವಚನಗಳನ್ನು ಅನೇಕ ಸಂದರ್ಭಗಳಲ್ಲಿ ಒಪ್ಪುವುದಿಲ್ಲವೆಂಬುದನ್ನು ಆಯಾ ಋಕ್ಕಿನ ನಿರ್ವಚನದಲ್ಲಿ ತಿಳಿಸಲಾಗಿದೆ. ಈ ಎಲ್ಲಾ ಅಭಿಪ್ರಾಯಗಳನ್ನೂ ತಿಳಿಸಿ ಯಾಸ್ಕರು ಕೊನೆಗೆ ತಮ್ಮ ಖಚಿತವಾದ ಅಭಿಪ್ರಾಯವನ್ನು ತಿಳಿಸಿದ್ದಾರೆ. ಉದಾಹರಣೆಗೆ—ಆಪ್ರೀದೇವತೆಗಳ ವಿಚಾರವಾಗಿ ಬ್ರಾಹ್ಮಣಾದಿಗಳಲ್ಲಿ ಹೇಳಿರುವ ಅಭಿಪ್ರಾಯಗಳು ಹೇಗಿವೆಯೆಂದು ಮೊದಲು ಅದನ್ನೆಲ್ಲಾ ಸಂಗ್ರಹಿಸಿದ್ದಾರೆ—

ಇತೀಮಾ ಆಪ್ರೀದೇವತಾ ಅನುಕ್ರಾಂತಾಃ । ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ ? ಆಗ್ನೇಯಾ ಇತ್ಯೇಕೇ । ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನೂಯಾಜಾ ಇತಿ ಚ ಬ್ರಾಹ್ಮಣಂ ॥ ಛಂದೋದೇವತಾ ಇತ್ಯಪರಂ । ಛಂದಾಂಸಿ ವೈ ಪ್ರಯಾಜಾಶ್ಛಂದಾಸ್ಯನೂಯಾಜಾ ಇತಿ ಚ ಬ್ರಾಹ್ಮಣಂ ॥ ಋತುದೇವತಾ ಇತ್ಯಪರಂ । ಋತವೋ ವೈ ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ ॥ ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾಃ ಪಶವೋಽನುಯಾಜಾ ಇತಿ ಚ ಬ್ರಾಹ್ಮಣಂ ॥ ಪ್ರಾಣದೇವತಾ ಇತ್ಯಪರಂ । ಪ್ರಾಣಾ ವೈ ಪ್ರಯಾಜಾ ಪ್ರಾಣಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ॥ಆತ್ಮದೇವತಾ ಇತ್ಯಪರಂ । ಆತ್ಮಾ ವೈ ಪ್ರಯಾಜಾ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ ॥ ಆಗ್ನೇಯಾ ಇತಿ ತು ಸ್ಥಿತಿಃ । ಭಕ್ತಿಮಾತ್ರಮಿತರಂ ॥ (ನಿ. ೮-೨೨)

ಎಂದು ನಾನಾಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಅಭಿಪ್ರಾಯ ಭೇದಗಳನ್ನು ಸೂಚಿಸಿ ಕೊನೆಗೆ ಬ್ರಾಹ್ಮಣವಾಕ್ಯಗಳಲ್ಲಿ ಹೇಳಿರುವ ಅಭಿಪ್ರಾಯವನ್ನನುಸರಿಸಿ ಕೆಲವರು ಈ ಆಪ್ರೀಸೂಕ್ತಗಳು ಛಂದೋದೇವತೆಗಳನ್ನನುಸರಿಸಿವೆಯೆಂದೂ (ಶ. ಬ್ರಾ. ೧-೩-೨-೯) ಇನ್ನು ಕೆಲವರು ಋತ್ವಾತ್ಮಕವಾದ ದೇವತೆಗಳನ್ನುದ್ದೇಶಿಸಿವೆಯೆಂದೂ (ಶ. ಬ್ರಾ. ೧-೩-೨-೮) ಇತರರು ಯಾಗಪಶುವನ್ನುದ್ದೇಶಿಸಿವೆಯೆಂದೂ (ಕೌ. ಬ್ರಾ. ೩-೪) ಮತ್ತೆ ಕೆಲವರು ಪ್ರಾಣಾತ್ಮಕವಾದ ದೇವತೆಗಳನ್ನುದ್ದೇಶಿಸಿವೆಯೆಂದೂ (ಐ. ಬ್ರಾ. ೧-೧೧; ಶ. ಬ್ರಾ. ೧೧-೨-೭-೨೭) ಮತ್ತೆ ಕೆಲವರು ಈ ಮಂತ್ರಗಳು ಆತ್ಮನನ್ನೇ ಉದ್ದೇಶಿಸಿವೆಯೆಂದೂ (ತೈ. ಸಂ. ೬-೧-೫-೪) ಹೇಳಿರುವುದನ್ನೆಲ್ಲಾ ಸಂಗ್ರಹಿಸಿ ಹೇಳಿ ಅನಂತರ—

ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ
ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ ॥
(ಋ. ಸಂ. ೧೦-೫೧-೯)

ಎಂಬ ಋಕ್ಕನ್ನುದಹರಿಸಿ ಅದರಲ್ಲಿ ಹೇಳಿರುವಂತೆ ಪ್ರಯಾಜಾ ಮತ್ತು ಅನುಯಾಜಾ ಮಂತ್ರಗಳು ಅಗ್ನಿಯನ್ನೇ ಉದ್ದೇಶಿಸಿವೆ ಎಂದು ತಮ್ಮ ಕೊನೆಯ ನಿರ್ಧಾರವನ್ನು ತಿಳಿಸಿದ್ದಾರೆ.

ಋಗ್ವೇದಸಂಹಿತೆಯಲ್ಲಿ ಒಟ್ಟು ೧೦ ಆಪ್ರೀಸೂಕ್ತಗಳಿವೆ. ಇವುಗಳಲ್ಲಿ ಇಧ್ಮಃ, ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾಹೋತಾರಾ (ಪ್ರಚೇತಸಾ), ತಿಸ್ರೋ ದೇವ್ಯಃ (ಸರಸ್ವತೀಳಾಭಾರತ್ಯಃ), ತ್ವಷ್ಟಾ, ವನಸ್ಪತಿಃ ಸ್ವಾಹಾಕೃತಯಃ ಎಂಬ ದೇವತಾಕವಾದ ಹನ್ನೊಂದು ಮಂತ್ರಗಳಿವೆ. ಆದರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯದಲ್ಲಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವಲ್ಲಿ ನರಾಶಂಸಃ ಎಂಬ ದೇವತೆಗೆ ಬದಲಾಗಿ ತನೂನಪಾತ್ ಎಂಬ ಎರಡು ದೇವತೆಗಳನ್ನು ಸ್ತುತಿಸಲಾಗಿದೆ. ಈ ಅರ್ಥಕ್ಕನುಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ—

೧. ಸುಸಮಿದ್ಧೋ ನ ಆ ವಹ— ಋ. ಸಂ. ೧-೧೩ (ಮೇಧಾತಿಥಿಃ ಕಾಣ್ವಃ)
೨. ಸಮಿದ್ಧೋ ಅಗ್ನ ಆ ವಹ— ಋ. ಸಂ. ೧-೧೪೨ (ದೀರ್ಘತಮಾ ಔಚಥ್ಯಃ)

ಈ ಎರಡು ಸೂಕ್ತಗಳೂ ಒಂದುಗುಂಪು. ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯದೇವತೆಗಳ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಸೂಕ್ತಗಳಿಗೆ ಉಭಯವಂತಿ ಸೂಕ್ತಾನಿ ಎಂದು ಹೆಸರು ಪ್ರಸಿದ್ಧವಾಗಿರು

ವುದು. ಮತ್ತು ೧-೧೪೨ ನೇ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟರೆ, ಹನ್ನೊಂದು ಪ್ರಯಾಜಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

೧. ಜುಷಸ್ವ ನಃ ಸಮಿಧಮಗ್ನೇ—ಋ. ಸಂ. ೭-೨ (ಮೈತ್ರಾವರುಣಿರ್ವಸಿಷ್ಠಃ)
೨. ಸುಸಮಿದ್ಧಾಯ ಶೋಚಿಷೇ—ಋ. ಸಂ. ೫-೫ (ವಸುಶ್ರುತ ಆತ್ರೇಯಃ)
೩. ಇಮಾಂ ಮೇ ಅಗ್ನೇ ಸಮಿಧಂ—ಋ. ಸಂ. ೧೦-೭೦ (ಸುಮಿತ್ರೋ ವಾಧ್ರ್ಯಶ್ವಃ)
೪. ಸಮಿದ್ಧೋ ಅಗ್ನಿರ್ನಿಹಿತಃ—ಋ. ಸಂ. ೨-೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳೂ ಒಂದುಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸದೇವತಾಕವಾದ ಒಂದೊಂದು ಋಕ್ಕುಗಳಿವೆ. ಇವುಗಳಿಗೆ **ನರಾಶಂಸವಂತಿ ಸೂಕ್ತಾನಿ** ಎಂಬ ಹೆಸರು ಪ್ರಸಿದ್ಧವಾಗಿದೆ.

೧. ಸಮಿದ್ಧೋ ಅದ್ಯ ರಾಜಸಿ—ಋ. ಸಂ. ೧-೧೮೮ (ಅಗಸ್ತ್ಯೋಮೈತ್ರಾವರುಣಿಃ)
೨. ಸಮಿತ್ಸಮಿತ್ಸುಮನಾ—ಋ. ಸಂ. ೩-೪ (ಗಾಥಿನೋ ವಿಶ್ವಾಮಿತ್ರಃ)
೩. ಸಮಿದ್ಧೋ ವಿಶ್ವತಸ್ಪತಿಃ—ಋ. ಸಂ. ೯-೫ (ಕಾಶ್ಯಪೋಽಸಿತೋ ದೇವಲೋ ವಾ)
೪. ಸಮಿದ್ಧೋ ಅದ್ಯ ಮನುಷೋ—ಋ. ಸಂ. ೧೦-೧೧೦ (ಜಮದಗ್ನಿರ್ಭಾರ್ಗವಃ)

ಎಂಬ ಈ ನಾಲ್ಕು ಸೂಕ್ತಗಳೂ ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸ ದೇವತೆಗೆ ಬದಲಾಗಿ ತನೂನಪಾತ್ ಎಂಬ ದೇವತೆಯನ್ನುದ್ದೇಶಿಸಲಾದ ಒಂದೊಂದು ಋಕ್ಕುಗಳಿವೆ. ಆದುದರಿಂದ ಇವುಗಳಿಗೆ **ತನೂನಪಾತ್ವಂತಿ ಸೂಕ್ತಾನಿ** ಎಂದು ಹೆಸರು.

ಈ ಎಲ್ಲಾ ಆಪ್ರೀಸೂಕ್ತಗಳಲ್ಲಿಯೂ ದೇವತೆಗಳನ್ನು ಮೇಲೆ ಹೇಳಿದ ಕ್ರಮದಲ್ಲಿಯೇ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಸ್ತುತಿಸಲಾಗಿದೆ. ಮೇಲೆ ಹೇಳಿದ ಆಪ್ರೀಸೂಕ್ತಗಳಲ್ಲದೆ—

**ಪ್ರೈಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ**
**ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ।**
**ಸೌತ್ರಾಮಣಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।**
**ಪುರುಷಸ್ಯ ತು ಯನ್ಮೇಧೇ ಯಜುಷ್ಷ್ವೇವ ತು ತಾನಿ ಷಟ್ ।**
**ಅತ್ರೈವ ಪ್ರೈಷಸೂಕ್ತಂ ಸ್ಯಾನ್ನ ಯಜುಃಷ್ವಾದ್ರಿಯೇತ ತತ್ ॥**

(ಬೃ. ದೇ. ಅ. ೨. ಶ್ಲೋ. ೧೫೨-೧೫೪)

ಪ್ರೈಷಸೂಕ್ತವನ್ನು ಸೇರಿಸಿಕೊಂಡರೆ ಒಟ್ಟು ಹನ್ನೊಂದು ಆಪ್ರೀಸೂಕ್ತಗಳಾಗುವವು. ಪ್ರೈಷಸೂಕ್ತವು ಮುಖ್ಯವಾಗಿ ಯಜುರ್ವೇದಕ್ಕೆ ಸಂಬಂಧಪಟ್ಟಿರುವುದರಿಂದ ಅದನ್ನು ಬಿಟ್ಟರೆ ಋಗ್ವೇದದಲ್ಲಿ ಒಟ್ಟು ಹತ್ತು ಆಪ್ರೀಸೂಕ್ತಗಳಿರುವವು. ಇವುಗಳಿಲ್ಲದೆ, ಸೌತ್ರಾಮಣಿ ಎಂಬ ಯಾಗಕ್ಕೆ ಸಂಬಂಧಪಟ್ಟಂತೆ ಮೂರು ಆಪ್ರೀಸೂಕ್ತಗಳೂ, ಪ್ರಾಜಾಪತ್ಯ, ಅಶ್ವಮೇಧ, ಪುರುಷಮೇಧ ಎಂಬ ಯಾಗಗಳಿಗೆ ಸಂಬಂಧಪಟ್ಟಂತೆ ಒಂದೊಂದು ಆಪ್ರೀಸೂಕ್ತವೂ ಒಟ್ಟು ಆರು ಆಪ್ರೀಸೂಕ್ತಗಳು ಯಜುರ್ವೇದಕ್ಕೆ ಸಂಬಂಧಪಟ್ಟಂತಿರುವವು. ಈ ಆರು ಆಪ್ರೀಸೂಕ್ತಗಳಲ್ಲಿ ಶುಕ್ಲಯಜುರ್ವೇದದ ವಾಜಸನೇಯಸಂಹಿತೆಯಲ್ಲಿರುವ ವಾ. ಸಂ. ೨೮,೧-೧೧ ; ಶುಕ್ಲಯಜ. ಕಾಣ್ವಸಂಹಿತೆ. ೩೦,೧-೧೧ ; ತೈ. ಬ್ರಾ. ೩-೬-೨ ; ಕಾಠಕಸಂಹಿತಾ. ೧೫,೧೩ ; ಮೈತ್ರಾಯಣೀಯ ಸಂಹಿತಾ. ೪,೧೩,೨. ರವರೆಗಿನ ಪ್ರೈಷಮಂತ್ರಗಳು ಮಾತ್ರ ವಿಮರ್ಶಾರ್ಹವು. ಉಳಿದ ಐದು ಸೂಕ್ತಗಳನ್ನು ಇಲ್ಲಿ ವಿವೇಚಿಸ

ಬೇಕಾದ ಅವಶ್ಯಕತೆ ಇಲ್ಲ. ಪ್ರಕೃತಸಂದರ್ಭದಲ್ಲಿ ನಾವು ತೈತ್ತಿರೀಯಬ್ರಾಹ್ಮಣದಲ್ಲಿರುವ ಪ್ರೈಷಸೂಕ್ತದ ಮಂತ್ರಗಳನ್ನು ಇಲ್ಲಿ ಕೊಟ್ಟಿದ್ದೇವೆ. ಶುಕ್ಲಯಜುರ್ವೇದದ ವಾಜಸನೇಯ ಮತ್ತು ಕಾಣ್ವಶಾಖೆಯ ಪ್ರೈಷಮಂತ್ರಗಳು ಒಂದುವಿಧವಾಗಿರುವುದು. ಕೃಷ್ಣಯಜುರ್ವೇದದ ತೈತ್ತಿರೀಯಶಾಖೆ, ಮೈತ್ರಾಯಣೀಯಶಾಖೆ, ಕಾಠಕಶಾಖೆಯ ಪಾಠಗಳು ಒಂದುವಿಧವಾಗಿರುವುದು. ಅಲ್ಪಸ್ವಲ್ಪ ವ್ಯತ್ಯಾಸವಿದೆಯೋ ಹೊರತು ಬಹಳ ವ್ಯತ್ಯಾಸವಿಲ್ಲ.

ಈ ಆಪ್ರೀಸೂಕ್ತಗಳನ್ನು ಪಶುಹೋಮಮಾಡುವಾಗ ಏಕಾದಶ (ಹನ್ನೊಂದು) ಪ್ರಯಾಜ ಹೋಮಗಳನ್ನು ಮಾಡುವುದಕ್ಕಾಗಿ ಪಠಿಸುವರು. **ಏಕಾದಶಾವದಾನಾನ್ಯವರ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶಃ** (ತೈ. ಸಂ, ೬-೬-೧೧-೩) ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ. ಈ ಆಪ್ರೀಸೂಕ್ತಗಳನ್ನು ಪಠಿಸಿ ಪಶುಹೋಮಮಾಡುವಾಗ ಒಂದು ವಿಶೇಷನಿಯಮವಿರುವುದು. ಆಯಾ ಗೋತ್ರೋತ್ಪನ್ನರಾದ ಯಜ್ಞಕರ್ತರು ಯಜ್ಞಮಾಡುವಾಗ ಆಯಾ ಋಷಿ (ತಮ್ಮ ಗೋತ್ರದ ಋಷಿ) ಪ್ರಾಣೀತವಾದ ಆಪ್ರೀಸೂಕ್ತಗಳನ್ನೇ ಪಠಿಸಬೇಕೆಂಬ ನಿಯಮವಿರುವುದು. (ಆ. ೩-೨) ಈ ಆಪ್ರೀಸೂಕ್ತಗಳಲ್ಲಿ ಉಕ್ತವಾಗಿರುವ ಹನ್ನೊಂದು (ಅಥವಾ ಹನ್ನೆರಡು) ದೇವತೆಗಳ ವಿಷಯವಾಗಿ ವಿಸ್ತಾರವಾದ ವಿವರಣೆಯನ್ನು ನಾವು ಋಗ್ವೇದಸಂಹಿತೆಯ ಭಾಗ ೧೧-೨೨೩ ; ೧೧-೨೧೨ ; ೧೪-೬೬೫ ; ೧೫-೬೭೨ ; ೨೧-೬೪೮ ; ೨೮-೬೦೨ ; ೨೮-೭೫೬ ; ೩೦-೩೨೨ ಪೇಜುಗಳಲ್ಲಿ ಬರೆದಿರುವುದನ್ನು ವಾಚಕರು ಅಲ್ಲಿ ಓದಿ ತಿಳಿಯಬಹುದು.

ಯಾಗಾದಿಕರ್ಮಗಳಲ್ಲಿ ಆಪ್ರೀಸೂಕ್ತಗಳಾಗಿರುವ ಸ್ಥಾನಮಾನಗಳ ವಿಷಯದಲ್ಲಿಯೂ ದೇವತೆಗಳ ವಿಷಯದಲ್ಲಿಯೂ ಪ್ರಾಚೀನವೈದಿಕಪಂಡಿತರಲ್ಲಿಯೇ ಅಭಿಪ್ರಾಯ ಭೇದವಿದ್ದರೂ ಸಹ ಆಪ್ರೀಸೂಕ್ತಗಳೆಲ್ಲದರಲ್ಲೂ ಅನೇಕ ಸಮಾನಧರ್ಮಗಳಿರುವವು. ಅವುಗಳ ರಚನೆಯಲ್ಲಿಯೂ ವಿಷಯನಿರೂಪಣೆಯಲ್ಲಿಯೂ ಒಂದು ನಿರ್ದಿಷ್ಟವಾದ ಕ್ರಮವೂ ಸಂಸ್ಕಾರವೂ ಇರುವುದರಿಂದ ಎಲ್ಲವೂ ಏಕಕಾಲದಲ್ಲಿ ರಚಿಸಲ್ಪಟ್ಟವೆಂದಾಗಲೀ ಅಥವಾ ಒಂದಕ್ಕೊಂದಕ್ಕೆ ಸಂಬಂಧವಿಲ್ಲವೆಂದಾಗಲೀ ಹೇಳುವುದಕ್ಕಾಗುವುದಿಲ್ಲ. ನಾಲ್ಕನೆಯ ಮತ್ತು ಆರನೆಯ ಮಂಡಲಗಳ ಋಷಿಗಳನ್ನು ಬಿಟ್ಟು ಉಳಿದ ಮಂಡಲಗಳ ಋಷಿಗಳೆಲ್ಲರೂ ತಮ್ಮತಮ್ಮ ಮನೆತನದ ಸಾಂಪ್ರದಾಯಿಕವಾದ ಆಪ್ರೀಸೂಕ್ತಗಳನ್ನು ಹೊಂದಿವಾರೆ. ಎಂಟನೇ ಮಂಡಲದ ಕಾಣ್ವಸಂತತಿಯವರಿಗೆ ಪ್ರತೇಕವಾದ ಆಪ್ರೀಸೂಕ್ತವಿಲ್ಲದಿದ್ದರೂ ಸಹ ಅವರು ೧ ನೇ ಮಂಡಲದ ೧೩ ನೆಯ ಸೂಕ್ತವನ್ನೇ ಉಪಯೋಗಿಸಿಕೊಳ್ಳುವುದು ಪ್ರಸಿದ್ಧವಾಗಿದೆ. ಆದರೆ ನಾಲ್ಕು ಮತ್ತು ಆರನೆಯ ಮಂಡಲದ ಋಷಿಗಳಿಗೆ ಇದರ ಅವಶ್ಯಕತೆಯು ಇಲ್ಲದಿರುವುದಕ್ಕೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ. ಅಥವಾ ವಾಮದೇವ ಮತ್ತು ಭಾರದ್ವಾಜಸಂತತಿಯವರು ಇತರ ಋಷಿಗಳ ಆಪ್ರೀಸೂಕ್ತಗಳನ್ನು ಪಠಿಸುತ್ತಾರೆ.

ಇದುವರೆಗೂ ಆಪ್ರೀಸೂಕ್ತಗಳ ಸಾಮಾನ್ಯವಿವರಣೆಯನ್ನೂ ಅವುಗಳಲ್ಲಿ ನಿರ್ದಿಷ್ಟವಾದ ದೇವತೆಗಳ ಸ್ವರೂಪವನ್ನೂ ವಿವರಿಸಲಾಯಿತು. ಈಗ ಸಮಿದಾದಿ ಹನ್ನೊಂದು ದೇವತೆಗಳನ್ನು ಉದ್ದೇಶಿಸಿ ಏತಕ್ಕಾಗಿ ಹೋಮಮಾಡಬೇಕು, ಆ ಹೋಮಗಳಿಂದ ಲಭಿಸುವ ಫಲವೇನು ಎಂಬುದನ್ನು ಪ್ರತ್ಯೇಕವಾಗಿ ವಿವರಿಸಲಾಗುವುದು.

**ಸಮಿಧೋ ಯಜತಿ । ಪ್ರಾಣಾ ವೈ ಸಮಿಧಃ ಪ್ರಾಣಾ ಹೀದಂ ಸರ್ವಂ ಸಮಿಂಧತೇ ಯದಿದಂ ಕಿಂಚ ಪ್ರಾಣಾನೇವ ತತ್ಪ್ರೀಣಾತಿ ಪ್ರಾಣಾನ್ಯಜಮಾನೇ ದಧಾತಿ ॥**

**ಪ್ರಥಮಂ ಪ್ರಯಾಜಂ ವಿಧತ್ತೇ—ಸಮಿನ್ನಾಮಕದೇವತಾತ್ವಾದ್ಯಾಗೋಽಪಿ ಸಮಿಧ ಇತ್ಯನೇನ ಶಬ್ದೇನೋಚ್ಯತೇ ॥ ಸಮಿನ್ನಾಮಕ ಯಾಗಂ ಕುರ್ಯಾದಿತ್ಯರ್ಥಃ ॥ ಯದ್ವಾ ಹೌತ್ರ-**

ಪ್ರಕರಣತ್ವಾತ್ಸಮಿದ್ದೇವತಾವಿಷಯಾಂ ಯಾಜ್ಯಾಂ ಪಠೇದಿತ್ಯರ್ಥಃ । ತತ್ಪ್ರಕಾರಂ ಬೌಧಾಯನ ಆಹ 'ಯದಾ ಜಾನಾತಿ ಸಮಿದ್ಭ್ಯಃ ಪ್ರೇಷ್ಯೇತಿ ತನ್ಮೈತ್ರಾವರುಣಃ ಪ್ರೇಷ್ಯತಿ ಹೋತಾಯಕ್ಷದಗ್ನಿಂ ಸಮಿಧಾ ಸುಷಮಿಧಾ ಸಮಿದ್ಧಮಿತ್ಯಥ ಹೋತಾ ಯಜತಿ ಸಮಿದ್ಧೋ ಅದ್ಯ ಮನುಷೋ ದುರೋಣೇ ತಾವೇವಮೇವ ವ್ಯತಿಷಂಗಮುತ್ತರೇಣ ಮೈತ್ರಾವರುಣಃ ಪ್ರೇಷ್ಯತಿ, ಉತ್ತರೇಣೋತ್ತರೇಣ ಹೋತಾ ಯಜತಿ' ಇತಿ ॥ ಅಸ್ಯಾಯಮರ್ಥಃ ॥ ಸಮಿದ್ಭ್ಯಃ ಪ್ರೇಷ್ಯೇತಿ ಮಂತ್ರೇಣಾಧ್ವರ್ಯುರ್ಮೈತ್ರಾವರುಣಂ ಪ್ರೇಷ್ಯತಿ ತದಾನೀಮಯಂ ಮೈತ್ರಾವರುಣಃ ಪ್ರೈಷಸೂಕ್ತೇನ ಹೋತಾ ಯಕ್ಷದಗ್ನಿಂ ಸಮಿಧೇತ್ಯನೇನ ಪ್ರಥಮಮಂತ್ರೇಣ ಹೋತಾರಂ ಪ್ರೇಷ್ಯತಿ ಹೋತಾಽಪ್ಯಾಪ್ರೀಸೂಕ್ತೇ ಸಮಿದ್ಧೋ ಅದ್ಯೇತ್ಯೇತಾಂ ಪ್ರಥಮಯಾಜ್ಯಾಂ ಪಠತಿ । ಏವಮುತ್ತರತ್ರಾಧ್ವರ್ಯುರ್ಮೈತ್ರಾವರುಣಹೋತಾರೌ ಪರಸ್ಪರಸನ್ನಿಧೌ ಸ್ವಸ್ವಮಂತ್ರಯಾಗಂ ಕುರ್ಯಾತಮಿತಿ ತತ್ರ ಪ್ರಥಮಾ ಯಾಜ್ಯೇತಿ । ಅಥ ಸಮಿದ್ದೇವತಾಂ ಪ್ರಶಂಸತಿ—ಸಮಿಧಃ ಸಮಿಂಧನಸ್ಯ ಸಮ್ಯಕ್ಪ್ರಕಾಶಹೇತವಃ ಪ್ರಥಮಪ್ರಯಾಜದೇವತಾಃ । ಪ್ರಾಣಸ್ವರೂಪದೇವತಾಯಾ ಏಕತ್ವೇಽಪಿ ಸಮಿಧ ಇತಿ ಬಹುವಚನಂ ಪೂಜಾರ್ಥಂ ॥ ಜಗತಿ ಯತ್ಕಿಂಚಿದಿದಂ ಶರೀರಜಾತಮಸ್ತಿ ತತ್ಸರ್ವಂ ಪ್ರಾಣಾಃ ಸಮಿಂಧತೇ ಪ್ರಕಾಶಯಂತ್ಯತಸ್ತೇಷಾಂ ಸಮಿದ್ರೂಪತ್ವಂ ತತ್ತೇನ ಯಾಜ್ಯಾಪಾಠೇನ ಪ್ರಾಣಾನೇವ ತೋಷಯತಿ ತದ್ಯಜಮಾನೇಽಪಿ ಪ್ರಾಣಾನ್ಸಂಪಾದಯತಿ । ಅತ್ರ ಪ್ರಯಾಜಾನಾಂ ಕ್ರಮೇಣ ಸಮಿಧಸ್ತನೂನಪಾನ್ನರಾಶಂಸ ಇಳೋ ಬರ್ಹಿರ್ದುರ ಉಷಾಸಾನಕ್ತಾ ದೈವ್ಯಾಹೋತಾರಾ ತಿಸ್ರೋದೇವ್ಯಸ್ತ್ವಷ್ಟಾ ವನಸ್ಪತಿಃ ಸ್ವಾಹಾಕೃತಯ ಇತ್ಯೇತಾ ದೇವತಾಃ ॥ ವಸಿಷ್ಠಶುನಕಾತ್ರಿವಧ್ರ್ಯಶ್ವರಾಜನ್ಯಾನಾಂ ನರಾಶಂಸೋ ದ್ವಿತೀಯಃ । ಅನ್ಯೇಷಾಂ ತನೂನಪಾದ್ದ್ವಿತೀಯಾ(ಯಃ)

ಪ್ರಯಾಜಹೋಮಗಳಿಗಾಗಿ ಈ ಆಪ್ರೀಸೂಕ್ತದ ಹನ್ನೊಂದು ಮಂತ್ರಗಳನ್ನು ಪಠಿಸಿ ಪ್ರತ್ಯೇಕವಾಗಿ ಹನ್ನೊಂದು ಆಹುತಿಗಳನ್ನು ಅಗ್ನಿಯಲ್ಲಿ ಅರ್ಪಿಸುವರೆಂದು ಹಿಂದೆಯೇ ಹೇಳಿರುವುದಷ್ಟೆ. ಈ ಪ್ರಯಾಜಾಹುತಿಗಳ ಉದ್ದೇಶವೇನೆಂದರೆ—ಯಜ್ಞದಲ್ಲಿ ಸಂದರ್ಭಾನುಸಾರವಾಗಿ ಕೆಲವು ದೇವತೆಗಳನ್ನು ಮಾತ್ರ ತೃಪ್ತಿಪಡಿಸಲಾಗುವುದು ಎಲ್ಲಾ ದೇವತೆಗಳನ್ನು ಉದ್ದೇಶಿಸಿ ಹೋಮಮಾಡುವುದು ಸಾಧ್ಯವಿಲ್ಲ. ಆದ್ದರಿಂದ ಆಯಾ ಯಾಗಗಳಲ್ಲಿ ನಿರ್ದಿಷ್ಟರಾಗದ ದೇವತೆಗಳ ಪ್ರೀತ್ಯರ್ಥವಾಗಿ ಈ ಪ್ರಯಾಜ ಹೋಮಗಳನ್ನು ಮಾಡುವುದು ರೂಢಿಯಾಗಿದೆ. ಆದರೆ ಎಲ್ಲಾ ಯಾಗಗಳಲ್ಲಿಯೂ ಹನ್ನೊಂದು ಪ್ರಯಾಜಹೋಮಗಳಿರುವುದಿಲ್ಲ; ಅವುಗಳ ಸಂಖ್ಯೆಯು ವ್ಯತ್ಯಾಸವಾಗಿರುವುದು. ಹೇಗೆಂದರೆ—ದರ್ಶಪೂರ್ಣಮಾಸ ಮೊದಲಾದ ಇಷ್ಟಿಗಳಲ್ಲಿ **ಪಂಚ ಪ್ರಯಾಜಾ ಇಜ್ಯಂತೇ**—ಎಂದು ಐದು (ಆ.ಸೂ. ೧-೫) ಪ್ರಯಾಜಾಹುತಿಗಳಿರುವವು; ಚಾತುರ್ಮಾಸ್ಯೇಷ್ಟಿಯಲ್ಲಿ—**ನವ ಪ್ರಯಾಜಾ ಇಜ್ಯಂತೇ । ನವಾನೂಯಾಜಾಃ**—ಎಂದು ಒಂಭತ್ತು (ಆ.ಸೂ. ೨-೧೬) ಪ್ರಯಾಜಾಹುತಿಗಳಿರುವವು. ಪಶುಬಂಧಯಾಗಗಳಲ್ಲಿ (ಎಂದರೆ ಪಶುಯಾಗಗಳಲ್ಲಿ) ಹನ್ನೊಂದು ಪ್ರಯಾಜಾಹುತಿಗಳಿರುವವು. (ಆ. ಸೂ. ೩-೨) ಪಶುವನ್ನು ಉಪಯೋಗಿಸದೆ ಮಾಡುವ ಇಷ್ಟಿಗಳಲ್ಲಿ ಈ ಪ್ರಯಾಜಾಹುತಿಗಳನ್ನು ಆಜ್ಯ (ತುಪ್ಪ)ದಿಂದ ಮಾಡುವರು. ಪಶುಯಾಗಗಳಲ್ಲಿ ಪಶುವಿನ ಬೇರೆಬೇರೆ ಭಾಗಗಳನ್ನು ಆಹುತಿಯಾಗಿ ಅಗ್ನಿಯಲ್ಲಿ ಅರ್ಪಿಸಿ ಹೋಮಮಾಡುವರು.

ಈ ಪ್ರಯಾಜಹೋಮಗಳನ್ನು ಮಾಡುವ ಕ್ರಮವು ಈರೀತಿ ಇರುವುದು. ಮೊದಲು ಅಧ್ವರ್ಯುವು (ಹೋತೃವರ್ಗದ) ಮೈತ್ರಾವರುಣನೆಂಬ ಋತ್ವಿಜನನ್ನುದ್ದೇಶಿಸಿ ಪ್ರಯಾಜಾಹುತಿ ಮಂತ್ರಗಳನ್ನು ಪಠಿಸುವಂತೆ ಪ್ರೈಷಮಂತ್ರದಿಂದ

ನಿರ್ದೇಶಿಸುವನು. ಅನಂತರ ಮೈತ್ರಾವರುಣನು ಹೋತೃವನ್ನುದ್ದೇಶಿಸಿ ಪುನಃ ಪ್ರಯಾಜಮಂತ್ರಗಳನ್ನು ಪಠಿಸುವಂತೆ ಪ್ರೈಷ ಮಂತ್ರದಿಂದ ನಿರ್ದೇಶಿಸುವನು. ಹನ್ನೊಂದು ಆಹುತಿಗಳಲ್ಲಿ ಪ್ರತಿ ಆಹುತಿಗೂ ಪ್ರತ್ಯೇಕವಾಗಿ ಪ್ರೈಷಮಂತ್ರವನ್ನು ಪಠಿಸ ಬೇಕು. ಪ್ರಕೃತಸಂದರ್ಭದಲ್ಲಿ ಸಾಯಣರು ಬೋಧಾಯನಶ್ರೌತಸೂತ್ರದಲ್ಲಿ ಹೇಳಿರುವಂತೆ ಪ್ರೈಷಮಂತ್ರದ ಕ್ರಮವನ್ನು ವಿವರಿಸಿರುವರು. ಈ ಪ್ರೈಷಮಂತ್ರಗಳು ತೈ. ಬ್ರಾ. ೩-೬-೨ ನೇ ಸೂಕ್ತದಲ್ಲಿಯೂ ವಾ. ಸಂ. ೨೮,೧-೧೧ ಕಾಣ್ವ. ಸಂ. ೩೦,೧-೧೧ ; ಕಾಠಕಸಂಹಿತೆ. ೧೫,೧೩ ; ಮೈತ್ರಾಯಣೀಯಸಂಹಿತೆ. ೪,೧೩,೨ ರಲ್ಲಿಯೂ ಉಕ್ತವಾಗಿರುವುದು. ಬೌಧಾಯನರು ಇದನ್ನೇ ಉಪಯೋಗಿಸಿದಾರೆ. ಆದರೆ ನಾವು ವಾಜಸನೇಯಸಂಹಿತೆಗೂ ತೈತ್ತಿರೀಯಬ್ರಾಹ್ಮಣಕ್ಕೂ ಸರಿಹೋಗುವ ೩-೬-೨ ನೇ ಸೂಕ್ತದಲ್ಲಿ ಹೇಳಿರುವ ಮಂತ್ರಗಳನ್ನೆ ಇಲ್ಲಿ ಉದಹರಿಸಿ ವಿವರಿಸಿದ್ದೇವೆ.

ಅನಂತರ ಮೈತ್ರಾವರುಣನು ಅಧ್ವರ್ಯುವಿನಿಂದ ಪ್ರೈಷಮಂತ್ರದ ಮೂಲಕ ನಿರ್ದಿಷ್ಟನಾದಕೂಡಲೇ ಅವನು (ಮೈತ್ರಾವರುಣನು) ಹೋತೃವನ್ನುದ್ದೇಶಿಸಿ ಪ್ರಥಮ ಪ್ರಯಾಜಾಹುತಿಗಾಗಿ--

**ಹೋತಾ ಯಕ್ಷದಗ್ನಿಗ್ಂ ಸಮಿಧಾ ಸುಷಮಿಧಾ ಸಮಿದ್ಧಂ ನಾಭಾ ಪೃಥಿವ್ಯಾಸಂಗಥೇವಾಮುಸ್ಯ ।**
**ವರ್ಷ್ಮನ್ದಿವ ಇಡಸ್ಪದೇ ವೇತ್ವಾಜ್ಯಸ್ಯ ಹೋತರ್ಯಜ ॥** (ತೈ.ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಬಳಿಕ ಹೋತೃವು ಪ್ರಥಮ ಪ್ರಯಾಜಮಂತ್ರವಾದ ಸಮಿದ್ದೇವತಾಕ ವಾದ ಮಂತ್ರವನ್ನು ಈರೀತಿ ಪಠಿಸುವನು--

**ಯೋ ಯಜಾಮಹೇ ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ । ಆ ಚ ವಹ ಮಿತ್ರಮಹಶ್ಚಿಕಿತ್ವಾನ್ ತ್ವಂ ದೂತಃ ಕವಿರಸಿ ಪ್ರಚೇತಾಃ ವೌಷಟ್ ।** (ಋ. ಸಂ. ೧೦-೧೧೦-೧)

ಎಂಬ ಋಕ್ಕನ್ನು ಪಠಿಸುವನು. ಮೈತ್ರಾವರುಣನು ಪಠಿಸುವ ಪ್ರತಿ ಪ್ರೈಷಮಂತ್ರವೂ **ಹೋತಾ ಯಕ್ಷತ್** ಎಂದು ಪ್ರಾರಂಭವಾಗುವುದು. ಹೋತೃವು ಪಠಿಸುವ ಮಂತ್ರವು **ಯೋ ಯಜಾಮಹೇ** ಎಂದು ಪ್ರಾರಂಭವಾಗಿ ನಿರ್ದಿಷ್ಟ ಋಕ್ಕನ್ನು ಪಠಿಸಿದನಂತರ **ವೌಷಟ್** ಎಂಬ ಶಬ್ದದಿಂದ ಅಂತ್ಯವಾಗುವುದು. ಪ್ರತಿಯೊಂದು ಪ್ರಯಾಜಾಹುತಿಯಲ್ಲಿಯೂ ಇದೇ ಕ್ರಮ ವಿರುವುದು. ಪ್ರೈಷಮಂತ್ರಗಳೂ ಋಕ್ಕುಗಳು ಮಾತ್ರ ಬೇರೆಬೇರೆ. ಇಲ್ಲಿಂದ ಮುಂದೆ ಈರೀತಿ ವಿವರಿಸುವುದರಿಂದ ಗ್ರಂಥ ವಿಸ್ತರವಾಗುವುದು. ಅದರ ಅವಶ್ಯಕತೆಯೂ ಇರುವುದಿಲ್ಲ. ಆದ್ದರಿಂದ ಈ ಪ್ರಕರಣದ (ಖಂಡದ) ಕೊನೆಯಲ್ಲಿ ಪ್ರೈಷಸೂಕ್ತದ ಹನ್ನೊಂದು (ಹನ್ನೆರಡು) ಮಂತ್ರಗಳನ್ನು ಕ್ರಮವಾಗಿ ಕೊಟ್ಟಿರುವೆವು. ಇವುಗಳನ್ನು ಮೈತ್ರಾವರುಣನು ಪಠಿಸಿದನಂತರ ಆಯಾ ಗೋತ್ರದ ಯಜಮಾನರು ಅನುಸರಿಸಬೇಕಾಗಿರುವಂತೆ ಹೋತೃವು ಆಯಾ ಋಷಿಗಳಿಂದ ದೃಷ್ಟವಾದ ಆಪ್ರೀಸೂಕ್ತದ ಮಂತ್ರ ಗಳನ್ನು ಪಠಿಸಿ ಪ್ರಯಾಜಹೋಮಗಳನ್ನು ಮಾಡಲು ಸಹಾಯಕನಾಗುವನು.

ಇನ್ನು ಆಪ್ರೀಸೂಕ್ತದ ಹನ್ನೊಂದು ಮಂತ್ರಗಳಲ್ಲಿ ಪ್ರತಿಯೊಂದನ್ನೂ ಪಠಿಸಿ ಹೋಮಮಾಡುವುದರಿಂದ ಉಂಟಾಗುವ ಫಲಪ್ರಾಪ್ತಿಯನ್ನು ವಿವರಿಸುವರು- **ಸಮಿಧೋ ಯಜತಿ........ಯಜಮಾನೇ ದದಾತಿ । ಸಮಿಧಃ** ಎಂಬ ಶಬ್ದವು ಅತ್ಯಂತ ಪ್ರಕಾಶಮಾನವಾದ ಎಂಬರ್ಥವನ್ನು ಸೂಚಿಸುವುದು, ಎಂದರೆ ಅತ್ಯಂತಪ್ರಕಾಶಮಾನನಾದ ಮತ್ತು ಮೊದಲನೆಯ ಪ್ರಯಾಜದೇವತೆಯಾದ ಅಗ್ನಿಯನ್ನು ಸೂಚಿಸುವುದು. ಇಲ್ಲಿ ಅಗ್ನಿಯು ಒಬ್ಬನೇ ದೇವತೆಯಾದರೂ **ಸಮಿಧಃ** ಎಂಬ ಬಹು ವಚನಪ್ರಯೋಗವು ಅಗ್ನಿಯ ಪೂಜಾರ್ಹತೆಯನ್ನು ಸೂಚಿಸುವುದಕ್ಕಾಗಿ ಎಂದರೆ ಗೌರವಾರ್ಥವಾಗಿ ಉಪಯೋಗಿಸಲ್ಪಟ್ಟಿರುವುದು. ಅದರಂತೆಯೇ ಪ್ರಾಣದೇವತೆಯನ್ನೂ ಬಹುವಚನಪ್ರಯೋಗದಿಂದಲೇ ನಿರ್ದೇಶಿಸಿದೆ. ಜಗತ್ತಿನಲ್ಲಿ ಶರೀರಯುಕ್ತವಾದ ಪ್ರಾಣ-

ಗಳೆಲ್ಲವೂ ತಮ್ಮಲ್ಲಿರುವ ಪ್ರಾಣಗಳಿಂದಲೇ ಪ್ರಕಾಶಮಾನವಾಗಿರುತ್ತವೆ ಎಂದರೆ ಚೈತನ್ಯವಾಗಿರುತ್ತವೆ. ಸಮಿದ್ದೇವತೆಯೂ ಪ್ರಕಾಶಯುಕ್ತನಾಗಿರುವುದರಿಂದ ಆವನೂ ಪ್ರಾಣಸ್ವರೂಪನು. ಇಂತಹ ಪ್ರಕಾಶಮಾನನಾದ ಸಮಿದ್ದೇವತೆಯನ್ನು ಎಂದರೆ ಅಗ್ನಿಯನ್ನು ಪ್ರಯಾಜಹೋಮದಿಂದ ತೃಪ್ತಿಪಡಿಸುವುದರಿಂದ ಯಜ್ಞಮಾಡುವ ಯಜಮಾನನಲ್ಲಿರುವ ಪ್ರಾಣಗಳನ್ನು ಚೇತೋಯುಕ್ತವನ್ನಾಗಿ ಮಾಡಿ ಪ್ರಕಾಶಪಡಿಸಿದಂತಾಗುವುದು. ಎಂದರೆ ಯಜಮಾನನಲ್ಲಿ ಪ್ರಾಣಗಳು (ಅಥವಾ ಚೈತನ್ಯವು) ಸ್ಫೂರ್ತಿಗೊಂಡು ತುಂಬುವವು. ಯಜಮಾನನು ಅತ್ಯಂತ ಉತ್ಸಾಹಯುಕ್ತನಾಗುವನು ಎಂದಭಿಪ್ರಾಯವು. ಈ ಆಪ್ರೀಸೂಕ್ತಗಳಲ್ಲಿ ಕ್ರಮವಾಗಿ— **ಸಮಿಧಃ । ತನೂನಪಾತ್ । ನರಾಶಂಸಃ । ಇಳಃ । ಬರ್ಹಿಃ । ದುರಃ । ಉಷಾಸಾನಕ್ತಾ । ದೈವ್ಯಾಹೋತಾರಾ । ತಿಸ್ರೋ ದೇವ್ಯಃ । ತ್ವಷ್ಟಾ । ವನಸ್ಪತಿಃ । ಸ್ವಾಹಾಕೃತಯಃ ।** ಎಂಬ ದೇವತೆಗಳು ಸ್ತುತರಾಗಿರುವರು. ವಸಿಷ್ಠಶುನಕ ಅತ್ರಿ ವಧ್ರ್ಯಶ್ವ ಎಂಬ ಋಷಿಗಳ ಗೋತ್ರದವರು ಈ ಸೂಕ್ತದ ಎರಡನೇ ಮಂತ್ರಕ್ಕಾಗಿ ನರಾಶಂಸದೇವತಾಕವಾದ ಮಂತ್ರವನ್ನು ಮಾತ್ರ ಪಠಿಸಬೇಕು. ತನೂನಪಾದ್ದೇವತಾಕ ಮಂತ್ರವನ್ನು ಪಠಿಸಕೂಡದು. ಇತರ ಗೋತ್ರದವರು ತನೂನಪಾತ್ ಎಂಬ ದೇವತಾಕವಾದ ಮಂತ್ರವನ್ನು ಮಾತ್ರ ಪಠಿಸಬೇಕು. ನರಾಶಂಸದೇವತಾಕವಾದ ಮಂತ್ರವನ್ನು ಪಠಿಸಕೂಡದು. ಈ ವಿಷಯವನ್ನು ನಾವು ಹಿಂದೆಯೇ ಹೇಳಿದ್ದೇವೆ. ಈಗ ತನೂನಪಾತ್ ಎಂಬ ಎರಡನೆಯ ದೇವತೆಯನ್ನುದ್ದೇಶಿಸಿ ಹೋಮಮಾಡುವುದರಿಂದ ಲಬ್ಧವಾಗುವ ಫಲವನ್ನು ವಿವರಿಸುವರು—

**ತನೂನಪಾತಂ ಯಜತಿ ಪ್ರಾಣೋ ವೈ ತನೂನಪಾತ್ಸ ಹಿ ತನ್ವಃ ಪಾತಿ ಪ್ರಾಣಮೇವ ತತ್ಪ್ರೀಣಾತಿ ಪ್ರಾಣಂ ಯಜಮಾನೇ ದಧಾತಿ ॥**

**ತದ್ದೇವತಾವಿಷಯಾಂ ದ್ವಿತೀಯಾಂ ಯಾಜ್ಯಾಂ ವಿಧತ್ತೇ—ಅತ್ರಾಧ್ವರ್ಯುರ್ಪ್ರೈಷಪ್ರಕಾರಮಾಪಸ್ತಂಬ ಆಹ—'ಸಮಿಧ್ಭ್ಯಃ ಪ್ರೇಷ್ಯೇತಿ ಪ್ರಥಮಂ ಸಂಪ್ರೇಷ್ಯತಿ ಪ್ರೇಷ್ಯ ಪ್ರೇಷ್ಯೇತೀತರಾನ್' ಇತಿ ॥ ಅತೋಽಸ್ಮಾದ್ವಿತೀಯಪರ್ಯಾಯೇ ಪ್ರೇಷ್ಯೇತಿ ಮಂತ್ರೇಣಾಧ್ವರ್ಯುರ್ಮೈತ್ರಾವರುಣಂ ಪ್ರೇಷ್ಯತಿ॥ ಸ ಚ ಮೈತ್ರಾವರುಣಃ ಪ್ರೈಷಸೂಕ್ತಗತೇನ ಹೋತಾ ಯಕ್ಷತ್ತನೂನಪಾತಮಿತ್ಯನೇನ ದ್ವಿತೀಯಮಂತ್ರೇಣ ಹೋತಾರಂ ಪ್ರೇಷ್ಯತಿ । ಸ ತು ಹೋತಾಽಽಪ್ರೀಸೂಕ್ತಗತಾಂ ತನೂನಪಾದಿತ್ಯೇತಾಂ ದ್ವಿತೀಯಾಂ ಯಾಜ್ಯಾಂ ಪಠೇತ್ ॥ ತನೂಂ ಶರೀರಂ ನ ಪಾತಯತೀತಿ ತನೂನಪಾತ್ ಶರೀರೇ ವಸತಿ ಪ್ರಾಣೇ ನ ಪತತಿ ಕಿಂತು ಪ್ರಾಣಃ ಶರೀರಾಣಿ ಚಾಲಯತ್ಯತಸ್ತನೂನಪಾದ್ದೇವಸ್ಯ ಪ್ರಾಣರೂಪತ್ವಂ ॥**

ಅನಂತರ ಅಧ್ವರ್ಯುವು ಮುಂದಿನ ಪ್ರೈಷಮಂತ್ರವನ್ನು ಪಠಿಸುವನು. ಅದನ್ನು ಆಪಸ್ತಂಬರು—**ಸಮಿಧ್ಭ್ಯಃ ಪ್ರೇಷ್ಯೇತಿ ಪ್ರಥಮಂ ಸಂಪ್ರೇಷ್ಯತಿ ಪ್ರೇಷ್ಯ ಪ್ರೇಷ್ಯೇತೀತರಾನ್** (ಆಪ. ಶ್ರೌ. ೭-೧೪-೭) ಎಂಬ ಸೂತ್ರದಿಂದ ಹೇಳಿರುವರು. ಎಂದರೆ ಪ್ರಥಮ ಪ್ರಯಾಜದೇವತೆಯಾದ ಸಮಿಧಃ ಎಂಬ ದೇವತೆಯನ್ನುದ್ದೇಶಿಸಿ ಹೋಮಮಾಡಿದನಂತರ ದ್ವಿತೀಯ ಪ್ರಯಾಜಮಂತ್ರವನ್ನು ಪಠಿಸುವುದಕ್ಕಾಗಿ ಮೈತ್ರಾವರುಣನನ್ನುದ್ದೇಶಿಸಿ ಪ್ರೈಷಮಂತ್ರದಿಂದ ನಿರ್ದೇಶಿಸಿದಕೂಡಲೇ ಮೈತ್ರಾವರುಣನು ಹೋತೃವನ್ನುದ್ದೇಸಿಸಿ—

**ಹೋತಾ ಯಕ್ಷತ್ತನೂನಪಾತಮುದಿತೇರ್ಗರ್ಭಂ ಭುವನಸ್ಯ ಗೋಪಾಂ । ಮಧ್ವಾದ್ಯ ದೇವೋ ದೇವೇಭ್ಯೋ ದೇವಯಾನಾನ್ಪಥೋ ಅನಕ್ತು ವೇತ್ವಾಜ್ಯಸ್ಯ ಹೋತರ್ಯಜ ॥**

(ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ಆಪ್ರೀಸೂಕ್ತದಲ್ಲಿರುವ ತನೂನಪಾದ್ದೇವತಾಕವಾದ ಋಕ್ಕನ್ನು ಪಠಿಸುವಂತೆ ನಿರ್ದೇಶಿಸುವನು. ಹೋತೃವು ಆ ಋಕ್ಕನ್ನು ಪಠಿಸುವನು.

ಇಲ್ಲಿ ತನೂನಪಾತ್ ಶಬ್ದವಿವರಣೆಯು ಈರೀತಿ ಇರುವುದು. **ತನುಂ** ಎಂದರೆ ಶರೀರವು. **ನ ಪಾತಯತೀತಿ ನಪಾತ್**–ಅದನ್ನು ಬಿದ್ದುಹೋಗದಂತೆ ಎಂದರೆ ನಾಶವಾಗದಂತೆ ಕಾಪಾಡುವುದು ಪ್ರಾಣವು. ಶರೀರದಲ್ಲಿ ಪ್ರಾಣವಿರುವವರೆಗೂ ಶರೀರವು ನಾಶವಾಗುವುದಿಲ್ಲ. ಆದ್ದರಿಂದ ತನೂನಪಾತ್ ಎಂದರೆ ಪ್ರಾಣವು. ತನೂನಪಾದ್ದೇವತೆಯನ್ನು ಹೋಮದಿಂದ ತೃಪ್ತಿಪಡಿಸುವುದರಿಂದ ಪ್ರಾಣವನ್ನು ತೃಪ್ತಿಪಡಿಸಿದಂತೆ ಆಯಿತು. ಅಂತಹ ತೃಪ್ತಿಯುತವಾದ ಪ್ರಾಣವು ಯಜ್ಞಮಾಡುವ ಯಜಮಾನನಲ್ಲಿ ಪ್ರಾಣವನ್ನು ಎಂದರೆ ಚೈತನ್ಯವನ್ನೂ ಉತ್ಸಾಹವನ್ನೂ ತುಂಬುವುದು ಎಂದಭಿಪ್ರಾಯವು. ಈಗ ಪ್ರಕಾರಾಂತರವಾದ ಎರಡನೇ ಪ್ರಯಾಜದೇವತೆಯನ್ನು ಎಂದರೆ ನರಾಶಂಸದೇವತೆಯನ್ನು ಪ್ರಶಂಸಿಸಲಾಗುವುದು.

ನರಾಶಂಸಂ ಯಜತಿ ಪ್ರಜಾ ವೈ ನರೋ ವಾಕ್ಶಂಸಃ ಪ್ರಜಾಂ ಚೈವ ತದ್ವಾಚಂ ಚ ಪ್ರೀಣಾತಿ ಪ್ರಜಾಂ ಚ ವಾಚಂ ಚ ಯಜಮಾನೇ ದಧಾತಿ ॥

ದ್ವಿತೀಯಪ್ರಯಾಜಯಾಜ್ಯಾಂತರಂ ವಿಧತ್ತೇ—ಅಧ್ವರ್ಯುಪ್ರೇಷಿತೋ ಮೈತ್ರಾವರುಣೋ ಹೋತಾ ಯಕ್ಷನ್ನರಾಶಂಸಮಿತಿ ಮಂತ್ರೇಣ ಹೋತಾರಂ ಪ್ರೇಷ್ಯತಿ ಹೋತಾ ನರಾಶಂಸಸ್ಯೇತಿ ಯಾಜ್ಯಾಂ ಪಠೇತ್ ॥ ನರಾನ್ಮನುಷ್ಯಾನ್ ಶಂಸತಿ ವಾಚಾ ಸ್ತೌತೀತಿ ನರಾಶಂಸಃ । ತಥಾಸತಿ ಪ್ರಜಾಯಾ ನರಶಬ್ದ ವಾಚ್ಯತ್ವಾದ್ವಾಚಶ್ಚ ಶಂಸನಹೇತುತ್ವಾದುಭಯಪ್ರೀತಿರ್ಯಜಮಾನೇಽಪಿ ತದುಭಯಸಂಪತ್ತಿಃ । ಅನಯೋರುಭಯೋರ್ಮಂತ್ರಯೋರಧಿಕಾರಿಭೇದೇನ ವ್ಯವಸ್ಥಾಮಾಪಸ್ತಂಬ ಆಹ–'ನರಾಶಂಸೋ ದ್ವಿತೀಯಃ ಪ್ರಯಾಜೋ ವಸಿಷ್ಠಶುನಕಾನಾಂ ತನೂನಪಾದಿತರೇಷಾಂ ಗೋತ್ರಾಣಾಂ' ಇತಿ ॥

ಹಿಂದಿನಂತೆಯೇ ಅಧ್ವರ್ಯುಪ್ರೇರಿತನಾದ ಮೈತ್ರಾವರುಣನು ಹೋತೃವನ್ನುದ್ದೇಶಿಸಿ—

ಹೋತಾ ಯಕ್ಷನ್ನರಾಶಗ್ಂಸಂ ನೃಶಸ್ತ್ರಂ ನೄಗ್ಂಪ್ರಣೇತ್ರಂ । ಗೋಭಿರ್ವಪಾವಾನ್ಸ್ಯಾದ್ವೀರೈಃ ಶಕ್ತೀವಾನ್ರಥೈಃ ಪ್ರಥಮಯಾವಾ ಹಿರಣ್ಯೈಶ್ಚಂದ್ರೀ ವೇತ್ವಾಜ್ಯಸ್ಯ ಹೋತರ್ಯಜ ॥ (ತೈ. ಬ್ರಾ. ೩.೬-೨)

ಎಂಬ ಪ್ರೈಷಮಂತ್ರದಿಂದ ನರಾಶಂಸದೇವತಾಕವಾದ ಮಂತ್ರವನ್ನು ಪಠಿಸುವಂತೆ ನಿರ್ದೇಶಿಸುವನು. ಅದರಂತೆ ಹೋತೃವು ಆ ಮಂತ್ರವನ್ನು ಪಠಿಸುವನು. ನರಾಶಂಸಶಬ್ದದಲ್ಲಿ ನರಃ ಎಂಬ ಶಬ್ದಕ್ಕೆ ಪ್ರಜೆಗಳೆಂದೂ ಶಂಸಃ ಎಂಬ ಶಬ್ದಕ್ಕೆ ವಾಕ್ಯಗಳಿಂದ ಪ್ರಶಂಸಿಸುವುದು ಎಂದರ್ಥವು. ಈ ದೇವತೆಯನ್ನು ತೃಪ್ತಿಪಡಿಸುವುದರಿಂದ ಯಜ್ಞಮಾಡುವ ಯಜಮಾನನಿಗೆ ಪ್ರಜೆಗಳ ಪ್ರೀತ್ಯಾದರಗಳು ಲಭಿಸಿ ಪ್ರಶಂಸಾರ್ಹನಾಗುವನು. ಈ ನರಾಶಂಸದೇವತಾಕವಾದ ಪ್ರಯಾಜಹೋಮವು ವಸಿಷ್ಠ ಶುನಕಗೋತ್ರದವರಿಗೆ ಎರಡನೆಯ ಪ್ರಯಾಜಹೋಮಮಂತ್ರವಾಗಿರುವುದು. ಈಗ ಮೂರನೆಯ ಪ್ರಯಾಜದೇವತೆಯಾದ **ಇಳಃ** ಎಂಬ ದೇವತೆಯನ್ನು ಪ್ರಶಂಸಿಸುವರು—

**ಇಳೋ ಯಜತ್ಯನ್ನಂ ವಾ ಇಳೋಽನ್ನಮೇವ ತತ್ಪ್ರೀಣಾತ್ಯನ್ನಂ ಯಜಮಾನೇ ದಧಾತಿ ।**

ತೃತೀಯಾಂ ಪ್ರಯಾಜಯಾಜ್ಯಾಂ ವಿಧತ್ತೇ—ಹೋತಾ ಯಕ್ಷತ್ [೧. ೧೪೯. ೧೦] ಅಗ್ನಿಮೀಳೆ [೧. ೧. ೧.] ಈಳಿತ ಇತಿ ಪ್ರೇಷಿತೋ ಹೋತಾಽಽಜುಹ್ವಾನ ಇತ್ಯೇತಾಂ ಯಾಜ್ಯಾಂ ಪಠೇತ್ ॥ ಇಷ್ಯತ ಇತಿ ವ್ಯುತ್ಪತ್ತ್ಯಾಽನ್ನಮಿಟ್ಶಬ್ದವಾಚ್ಯಂ ॥

ಮೂರನೇ ಪ್ರಯಾಜಮಂತ್ರವನ್ನು ಪಠಿಸುವುದಕ್ಕಾಗಿ ಅಧ್ವರ್ಯುಪ್ರೇರಿತನಾದ ಮೈತ್ರಾವರುಣನು—

**ಹೋತಾ ಯಕ್ಷದಗ್ನಿಮಿಡ ಈಡಿತೋ ದೇವೋ ದೇವಾಗ್‍ಂ ಆವಕ್ಷದ್ದೂತೋ ಹವ್ಯವಾಡಮೂರಃ । ಉಪೇಮಂ ಯಜ್ಞಮುಪೇಮಾಂ ದೇವೋ ದೇವಹೂತಿಮವತ್ವ್ವೇತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨).

ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು **ಆಜುಹ್ವಾನ ಈಡ್ಯೋ ವಂದ್ಯಶ್ಚ** (ಋ.ಸ. ೧೦-೧೧೦-೩) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ಈ ಋಕ್ಕಿನಲ್ಲಿ ಇಳಃ ಎಂಬ ದೇವತೆಯನ್ನು ಸ್ತುತಿಸಲಾಗಿದೆ. **ಇಷ್ಯತ ಇತಿ ಇಳಃ** ಎಲ್ಲರಿಂದಲೂ ಅಪೇಕ್ಷಿಸಲ್ಪಡುವುದರಿಂದ ಇಳಃ ಎಂದರೆ ಅನ್ನವೆಂದರ್ಥವು. ಈ ದೇವತೆಯನ್ನು ತೃಪ್ತಿಪಡಿಸುವುದರಿಂದ ಯಜಮಾನನು ಅನ್ನ (ಆಹಾರ) ಸಮೃದ್ಧಿಯಿಂದ ಕೂಡಿರುವನು.

**ಬರ್ಹಿರ್ಯಜತಿ ಪಶವೋ ವೈ ಬರ್ಹಿಃ ಪಶೂನೇವ ತತ್ಪ್ರೀಣಾತಿ ಪಶೂನ್ಯಜಮಾನೇ ದಧಾತಿ ॥**

ಚತುರ್ಥೀಂ ವಿಧತ್ತೇ—ಹೋತಾ ಯಕ್ಷದ್ಬರ್ಹಿಃ ಸುಷ್ಟರೀಮಿತಿ ಮಂತ್ರೇಣ ಪ್ರೇಷಿತೋ ಹೋತಾ ಪ್ರಾಚೀನಂ ಬರ್ಹಿರಿತ್ಯೇತಾಂ ಯಾಜ್ಯಾಂ ಪಠೇತ್ ॥ ಬೃಂಹಣಸ್ಯ ಪೋಷಣಸ್ಯ ಹೇತುರ್ಬರ್ಹಿಃ ಪಶವಶ್ಚ ಕ್ಷೀರಾದಿದಾನೇನ ತಾದೃಶತ್ವಾದ್ಬರ್ಹಿಃ ಸ್ವರೂಪಾಃ ॥

ನಾಲ್ಕನೇ ಪ್ರಯಾಜಮಂತ್ರಪಠನಕ್ಕಾಗಿ ಮೈತ್ರಾವರುಣನು—

**ಹೋತಾ ಯಕ್ಷದ್ಬರ್ಹಿಸ್ಸುಷ್ಟರೀಮೋರ್ಣಮ್ರದಾಃ ಅಸ್ಮಿನ್ಯಜ್ಞೇ ವಿ ಚ ಪ್ರ ಚ ಪ್ರಥತಾಗ್‍ಂ ಸ್ವಾಸಸ್ಥಂ ದೇವೇಭ್ಯಃ । ಏಮೇನದದ್ಯ ವಸವೋ ರುದ್ರಾ ಆದಿತ್ಯಾಸ್ಸದಂತು ವೇತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ಹೋತೃವನ್ನು ನಿರ್ದೇಶಿಸಿದಕೂಡಲೇ ಹೋತೃವು—**ಪ್ರಾಚೀನಂ ಬರ್ಹಿಃ** (ಋ. ಸಂ. ೧೦-೧೧೦-೪) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ಬೃಂಹಣವೆಂದರೆ ಪೋಷಣವು. ಈ ಪೋಷಣೆಗೆ ಸಹಾಯಕಾರಿಯಾದುದರಿಂದ ಈ ಹುಲ್ಲಿಗೆ **ಬರ್ಹಿಃ** ಎಂಬ ಬರ್ಹಿದೇವತಾಕವಾದ ಮಂತ್ರದಿಂದ ಬರ್ಹಿದೇವತೆಯನ್ನು ತೃಪ್ತಿಪಡಿಸಿದರೆ ಆದರಿಂದ ಪಶುಗಳಿಗೆ ತೃಪ್ತಿಯುಂಟಾಗಿ ಯಜ್ಞಮಾಡುವ ಯಜಮಾನನ ಪಶುಗಳು ಸಮೃದ್ಧಿಯನ್ನೈದುವವು.

**ದುರೋ ಯಜತಿ ವೃಷ್ಟಿರ್ವೈ ದುರೋ ವೃಷ್ಟಿಮೇವ ತತ್ಪ್ರೀಣಾತಿ ವೃಷ್ಟಿಮನ್ನಾದ್ಯಂ ಯಜಮಾನೇ ದಧಾತಿ ॥**

**ಅಥ ಪಂಚಮೀಂ ವಿಧತ್ತೇ— ಹೋತಾ ಯಕ್ಷದ್ದುರ ಋಷ್ವಾ ಇತ್ಯಾದಿನಾ ಮಂತ್ರೇಣ ಪ್ರೇಷಿತೋ ವ್ಯಚಸ್ವತೀರುರ್ವಿಯೇತ್ಯೇತಾಂ ಯಾಜ್ಯಾಂ ಪಠೇತ್ ॥ ದುರೋ ದ್ವಾರದೇವತಾಂ ವೃಷ್ಟಿಶ್ಚ ಜೀವನದ್ವಾರಾ ॥**

ಐದನೆಯ ಯಾಜ್ಯಾಮಂತ್ರಪಠನಕ್ಕಾಗಿ ಮೈತ್ರಾವರುಣನು—

**ಹೋತಾ ಯಕ್ಷದ್ದುರ ಋಷ್ವಾಃ ಕವಷ್ಯೋಽಕೋಷಧಾವನೀರುದಾತಾಭಿರ್ಜಿಹತಾಂ ವಿ ಪಕ್ಷೋಭಿಃ ಶ್ರಯಂತಾಂ । ಸುಪ್ರಾಯಣಾ ಅಸ್ಮಿನ್ಯಜ್ಞೇ ವಿಶ್ರಯಂತಾಮೃತಾವೃಧೋ ವಿಯಂತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ಹೋತೃವನ್ನು ನಿರ್ದೇಶಿಸಿದಕೂಡಲೇ ಹೋತೃವು–**ವ್ಯಚಸ್ವತೀರುರ್ವಿಯಾ** (ಋ.ಸಂ. ೧೦-೧೧೦-೫) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ದುರಃ ಎಂದರೆ (ಯಜ್ಞಶಾಲೆಯ) ದ್ವಾರದೇವತೆಗಳು. ಈ ದ್ವಾರ ದೇವತೆಗಳು ವೃಷ್ಟಿಗೆ (ಮಳೆಗೆ) ಅಭಿಮಾನಿದೇವತೆಗಳು. ಇವರನ್ನು ತೃಪ್ತಿಪಡಿಸುವುದರಿಂದ ವೃಷ್ಟಿದೇವತೆಯನ್ನು ತೃಪ್ತಿಪಡಿಸಿದಂತಾಗುವುದು. ವೃಷ್ಟಿದೇವತೆಯು ತೃಪ್ತಿಯಾಗಿ ಯಥೇಚ್ಛವಾಗಿ ವೃಷ್ಟಿ (ಮಳೆ)ಯನ್ನು ಸುರಿಸಿ ಯಜಮಾನನು ಆಹಾರ ಸಮೃದ್ಧಿಯಿಂದ ತೃಪ್ತನಾಗುವಂತೆ ಮಾಡುವಳು.

**ಉಷಾಸಾನಕ್ತಾ ಯಜತ್ಯಹೋರಾತ್ರೇ ವಾ ಉಷಾಸಾನಕ್ತಾಹೋರಾತ್ರೇ ಏವ ತತ್ಪ್ರೀಣಾತ್ಯಹೋರಾತ್ರಯೋರ್ಯಜಮಾನಂ ದಧಾತಿ ॥**

**ಷಷ್ಠೀಂ ವಿಧತ್ತೇ— ಹೋತಾ ಯಕ್ಷದುಷಾಸಾನಕ್ತೇತಿ ಮಂತ್ರೇಣ ಪ್ರೇಷಿತ ಆ ಸುಷ್ವಯಂತೀತ್ಯಾದಿಕಾಂ ಯಾಜ್ಯಾಂ ಪಠೇತ್ । ಉಷಃಶಬ್ದಸ್ಯ ನಕ್ತಶಬ್ದಸ್ಯ ಚಾಹೋರಾತ್ರವಿಷಯತ್ವಂ ಲೋಕಪ್ರಸಿದ್ಧಂ ॥**

ಅನಂತರ ಮೈತ್ರಾವರುಣನು ಆರನೆಯ ಯಾಜ್ಯಾಮಂತ್ರಪಠನಕ್ಕಾಗಿ—

**ಹೋತಾ ಯಕ್ಷದುಷಾಸಾನಕ್ತಾ ಬೃಹತೀ ಸುಪೇಶಸಾ ನೄಗ್ಂಃ ಪತಿಭ್ಯೋ ಯೋನಿಂ ಕೃಣ್ವಾನೇ । ಸಗ್ಂಸ್ಮಯಮಾನೇ ಇಂದ್ರೇಣ ದೇವೈರೇದಂ ಬರ್ಹಿಸ್ಸೀದತಾಂ ವೀತಾಮಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸಿದಕೂಡಲೇ ಹೋತೃವು—**ಆ ಸುಷ್ವಯಂತೀ** (ಋ. ಸಂ. ೧೦-೧೧೦-೬) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ಇಲ್ಲಿ ಉಷಾಸಾನಕ್ತಾ ಎಂದರೆ ಅಹೋರಾತ್ರೆಗಳು ಎಂಬುದು ಪ್ರಸಿದ್ಧವು. ಈ ದೇವತೆಗಳನ್ನು ತೃಪ್ತಿಪಡಿಸುವುದರಿಂದ ಯಜಮಾನನು ಜೀವಿತಕಾಲದ ಅಹೋರಾತ್ರೆಗಳು ವೃದ್ಧಿಯನ್ನೈದುವವು ಎಂದರೆ ಯಜಮಾನನ ಆಯುಃಪರಿಮಿತಿಯು ವೃದ್ಧಿಯನ್ನೈದುವುದು.

**ದೈವ್ಯಾ ಹೋತಾರಾ ಯಜತಿ ಪ್ರಾಣಾಪಾನೌ ವೈ ದೈವ್ಯಾ ಹೋತಾರಾ ಪ್ರಾಣಾಪಾನಾವೇವ ತತ್ಪ್ರೀಣಾತಿ ಪ್ರಾಣಾಪಾನೌ ಯಜಮಾನೇ ದಧಾತಿ ॥**

**ಸಪ್ತಮೀಂ ವಿಧತ್ತೇ— ಹೋತಾ ಯಕ್ಷದ್ದೈವ್ಯಾ ಹೋತಾರೇತಿ ಮಂತ್ರೇಣ ಪ್ರೇಷಿತೋ ದೈವ್ಯಾ ಹೋತಾರಾ ಪ್ರಥಮೇತಿ ಯಾಜ್ಯಾಂ ಪಠೇತ್ ॥**

ಅನಂತರ ಮೈತ್ರಾವರುಣನು ಏಳನೆಯ ಯಾಜ್ಯಾಮಂತ್ರಪಠನಕ್ಕಾಗಿ—

**ಹೋತಾ ಯಕ್ಷದ್ದೈವ್ಯಾ ಹೋತಾರಾ ಮಂದ್ರಾ ಪೋತಾರಾ ಕವೀ ಪ್ರಚೇತಸಾ। ಸ್ವಿಷ್ಟಮದ್ಯಾನ್ಯಃ ಕರದಿಷಾ ಸ್ವಭಿಗೂರ್ತಮನ್ಯ ಊರ್ಜಾ ಸತವಸೇಮಂ ಯಜ್ಞಂ ದಿವಿ ದೇವೇಷು ಧತ್ತಾಂ ವೀತಾಮಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು— **ದೈವ್ಯಾ ಹೋತಾರಾ** (ಋ. ಸಂ. ೧೦-೧೧೦-೭) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ದೈವ್ಯಾಹೋತಾರಾ ಎಂದರೆ ದೇವತೆಗಳ ಯಜ್ಞದಲ್ಲಿ ಹೋತೃಪಾತ್ರವನ್ನು ವಹಿಸುವವರು. ಸಾಯಣರು ಭೂಮಿಯಲ್ಲಿರುವ ಅಗ್ನಿ, ಅಂತರಿಕ್ಷದಲ್ಲಿ ಮೇಘಗಳಲ್ಲಿರುವ ವಿದ್ಯುದಗ್ನಿ ಎಂಬ ಎರಡು ಅಗ್ನಿಗಳೇ ಈ ದೈವ್ಯಾ ಹೋತಾರಾ ಎಂಬ ದೇವತೆಗಳು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಪ್ರಕೃತಸಂದರ್ಭದಲ್ಲಿ ದೈವ್ಯಾ ಹೋತಾರಾ ಎಂದರೆ ಪ್ರಾಣಾಪಾನಗಳೆಂಬ ಉಚ್ಛ್ವಾಸನಿಃಶ್ವಾಸವಾಯುಗಳು ಎಂಬರ್ಥವು ಉಕ್ತವಾಗಿರುವುದು. ಉಚ್ಛ್ವಾಸವೆಂದರೆ ಹೊರಗಿನ ಗಾಳಿಯನ್ನು ದೇಹದೊಳಕ್ಕೆ ಎಳೆದುಕೊಳ್ಳುವುದು; ನಿಃಶ್ವಾಸವೆಂದರೆ ದೇಹದೊಳಗಿರುವ ವಾಯುವನ್ನು ಹೊರದೂಡುವುದು. ಈ ಉಚ್ಛ್ವಾಸನಿಃಶ್ವಾಸಗಳಿಲ್ಲದೆ ಯಾವ ಪ್ರಾಣಿಗಳು ಬದುಕುವಂತಿಲ್ಲ. ಆದ್ದರಿಂದ ಈ ಪ್ರಾಣಾಪಾನಗಳು ದೇಹಧಾರಣೆಗೆ ಅತ್ಯವಶ್ಯಕವೆಂದಾಯಿತು. ಆದ್ದರಿಂದ ಈ ದೈವ್ಯಾ ಹೋತಾರಾ ಎಂಬ ಪ್ರಾಣಾಪಾನದೇವತೆಗಳನ್ನು ತೃಪ್ತಿಪಡಿಸುವುದರಿಂದ ಯಜಮಾನನು ನಿರ್ಬಾಧಿತವಾಗಿ (ಉಚ್ಛ್ವಾಸನಿಃಶ್ವಾಸಗಳಮೂಲಕ) ಜೀವಿಸಲು ಅನುಕೂಲವಾಗುವುದು.

**ತಿಸ್ರೋ ದೇವೀರ್ಯಜತಿ ಪ್ರಾಣೋ ವಾ ಅಪಾನೋ ವ್ಯಾನಸ್ತಿಸ್ರೋ ದೇವ್ಯಸ್ತಾ ಏವ ತತ್ಪ್ರೀಣಾತಿ ತಾ ಯಜಮಾನೇ ದಧಾತಿ ॥**

**ಅಷ್ಟಮೀಂ ವಿಧತ್ತೇ— ಹೋತಾ ಯಕ್ಷತ್ತಿಸ್ರ ಇತ್ಯಾದಿಮಂತ್ರೇಣ ಪ್ರೇಷಿತ ಆ ನೋ ಯಜ್ಞಮಿತಿ ಯಾಜ್ಯಾಂ ಪಠೇತ್ ॥ ಇಳಾ ಸರಸ್ವತೀ ಭಾರತೀತಿಶಬ್ದೈರಭಿಧೇಯಾ ದೇವ್ಯೋ ಯಥಾ ತಿಸ್ರ ಏವಂ ಪ್ರಾಣಾಪಾನವ್ಯಾನಾ ಅಪಿ ಸಂಖ್ಯಾಸಾಮ್ಯಾತ್ತಿಸ್ರೋ ದೇವ್ಯಃ ॥**

ಅನಂತರ ಮೈತ್ರಾವರುಣನು ಎಂಟನೆಯ ಯಾಜ್ಯಾಮಂತ್ರಕ್ಕಾಗಿ—

**ಹೋತಾ ಯಕ್ಷತ್ತಿಸ್ರೋ ದೇವೀರಪಸಾಮಪಸ್ತಮಾ ಅಚ್ಛಿದ್ರಮದ್ಯೇದಮಪಸ್ತನ್ವತಾಂ। ದೇವೇಭ್ಯೋ ದೇವೀರ್ದೇವಮಪೋ ವಿಯಂತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ—**ಆ ನೋ ಯಜ್ಞಂ** (ಋ. ಸಂ. ೧೦-೧೧೦-೮) ಎಂಬ ಯಾಜ್ಯಾ ಮಂತ್ರವನ್ನು ಪಠಿಸುವನು. ಸಾಧಾರಣವಾಗಿ ತಿಸ್ರೋ ದೇವ್ಯಃ ಎಂದರೆ ಇಳಾ, ಸರಸ್ವತೀ ಭಾರತೀ ಎಂಬ ದೇವತೆಗಳು. ಇವರು ಅನ್ನ, ವಾಕ್ಕು, ಪೃಥಿವಿಗೆ ಅಭಿಮಾನಿದೇವತೆಗಳು. ಪ್ರಕೃತಸಂದರ್ಭದಲ್ಲಿ ಈ ಮೂವರು ದೇವತೆಗಳು ಪ್ರಾಣ, ಅಪಾನ ವ್ಯಾನ ಎಂಬ ಮೂರು ಪ್ರಾಣವಾಯುಗಳಿಗೆ ಅಧಿದೇವತೆಗಳು ಪ್ರಾಣವಾಯುವೆಂದರೆ ಉಚ್ಛ್ವಾಸ (ಒಳಗೆ ಎಳೆದುಕೊಳ್ಳುವ ವಾಯು) ಅಪಾನವಾಯುವೆಂದರೆ ಶರೀರದಿಂದ ಹೊರದೂಡುವ ನಿಃಶ್ವಾಸವಾಯುವು; ವ್ಯಾನವಾಯುವೆಂದರೆ ಶರೀರದ ಎಲ್ಲಾ ಭಾಗಗಳಲ್ಲಿಯೂ ತುಂಬಿ ಸಂಚಾರಮಾಡುವ ವಾಯುವು. ಈ ಮೂರುವಿಧ ವಾಯುಗಳೂ ಜೀವಿಸಲು ಅತ್ಯವಶ್ಯಕವಾಗಿರುವವು. ಈ ತಿಸ್ರೋ ದೇವ್ಯಃ ಎಂಬ ಪ್ರಾಣಾಪಾನವ್ಯಾನದೇವತೆಗಳನ್ನು ತೃಪ್ತಿಪಡಿಸುವುದರಿಂದ ಯಜಮಾನನ ಶರೀರದಲ್ಲಿರುವ ಈ ಮೂರು ವಿಧ ಪ್ರಾಣವಾಯುಗಳು ತೃಪ್ತಿಯನ್ನು ಹೊಂದಿ ಅವು ತಮ್ಮ ತಮ್ಮ ಕರ್ತವ್ಯವನ್ನು ಮಾಡುವುದರ ಮೂಲಕ ಯಜಮಾನನ ಆಯುರ್ವೃದ್ಧಿಗೆ ಕಾರಣವಾಗಿರುವವು ಎಂದಭಿಪ್ರಾಯವು.

**ತ್ವಷ್ಟಾರಂ ಯಜತಿ ವಾಗ್ವೈ ತ್ವಷ್ಟಾ ವಾಗ್ಘೀದಂ ಸರ್ವಂ ತಾಷ್ಟೀವ ವಾಚಮೇವ ತತ್ಪ್ರೀಣಾತಿ ವಾಚಂ ಯಜಮಾನೇ ದಧಾತಿ ।**

**ನವಮೀಂ ವಿಧತ್ತೇ– ಹೋತಾ ಯಕ್ಷತ್ತ್ವಷ್ಟಾರಮಿತಿ ಮಂತ್ರೇಣ ಪ್ರೇಷಿತೋ ಹೋತಾ ಯ ಇಮೇ ದ್ಯಾವಾಪೃಥಿವೀ ಇತಿ ಯಾಜ್ಯಾಂ ಪಠೇತ್ ॥ ತಕ್ಷೂ ತ್ವಕ್ಷೂ ತನೂಕರಣ ಇತ್ಯತ್ರ ತ್ವಕ್ಷೇತ್ಯಾದಿಧಾತೋರುತ್ಪನ್ನಃ ಶಬ್ದಸ್ತ್ವಷ್ಟಾರಂ ದೇವತಾಮಾಚಷ್ಟೇ । ವಾಚಶ್ಚ ತಕ್ಷಣಹೇತುತ್ವಾತ್ತ್ವಷ್ಟೃತ್ವಂ ತದೇವ ವಾಗ್ಘೀತ್ಯನೇನ ಸ್ಪಷ್ಟೀಕ್ರಿಯತೇ—ಯಸ್ಮಾದಿದಂ ಸರ್ವಂ ಜಗದ್ವಾಕ್ತಾಷ್ಟೀವ ತಕ್ಷತೀವ ಯಥಾ ತಕ್ಷಣೇನ ಕಾಷ್ಠಂ ಪ್ರೌಢಮಪಿ ಸೂಕ್ಷ್ಮಂ ಭವತಿ ॥ ಏವಂ ಮಹಾಂತೋಽಪಿ ಪರ್ವತಾದಯೋಽಲ್ಪೇನೈವ ಗೃಹ್ಯಂತೇ । ತದೇತಜ್ಜಗತ್ತಷ್ಟಮಿವ ಭವತಿ ॥**

ಅನಂತರ ಮೈತ್ರಾವರುಣನು—

**ಹೋತಾ ಯಕ್ಷತ್ತ್ವಷ್ಟಾರಮಚಿಷ್ಟುಮಪಾಕಗ್ಂ ರೇತೋಧಾಂ ವಿಶ್ರವಸಂ ಯಶೋಧಾಂ । ಪುರುರೂಪಮಕಾಮಕರ್ಶನಗ್ಂ ಸುಪೋಷಃ ಪೋಷೈಃ ಸ್ಯಾತ್ಸುವೀರೋ ವೀರೈರ್ವೇತ್ವಾಜ್ಯಸ್ಯ ಹೋತರ್ಯಜ ॥** (ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು– **ಯ ಇಮೇ ದ್ಯಾವಾಪೃಥಿವೀ** (ಋ.ಸಂ. ೧೦-೧೧೦-೯) ಎಂಬ ಒಂಭತ್ತನೆಯ ಯಾಜ್ಯಾಮಂತ್ರವನ್ನು ಪಠಿಸುವನು. ತ್ವಷ್ಟಾ ಎಂದರೆ ವಾಕ್ಕು ಅಥವಾ ವಾಗಭಿಮಾನಿ ದೇವತೆ. ತ್ವಷ್ಟೃಶಬ್ದವು ತ್ವಕ್ಷಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಧಾತುವಿಗೆ ಪ್ರಕಾಶಪಡಿಸು, ಸ್ಪಷ್ಟಪಡಿಸು ಎಂದರ್ಥವು. ವಾಕ್ಯದಿಂದ ಎಂದರೆ ಮಾತನಾಡುವುದರಿಂದ ಎಲ್ಲವನ್ನೂ ಸ್ಪಷ್ಟಪಡಿಸಬಹುದು ಎಂದರೆ ಚೆನ್ನಾಗಿ ತಿಳಿಸಬಹುದು. ಇದಲ್ಲದೆ ತಕ್ಷತಿ ಎಂಬ ಧಾತುವಿಗೆ ಕೆತ್ತು, ನಯಮಾಡು ಎಂದೂ ಅರ್ಥವಾಗುವುದು. ಭಾರಿಯಾದ ಮರವನ್ನು ಕೆತ್ತುವುದರಿಂದ ಸಣ್ಣದಾಗುವುದು. ಅದರಂತೆ ಪರ್ವತಾದಿಗಳು ಬಹಳ ದೊಡ್ಡದಾಗಿದ್ದರೂ ಒಂದು ಸಣ್ಣಶಬ್ದದಿಂದ ಅವನ್ನು ಸೂಚಿಸಬಹುದು. ಎಂದರೆ ಜಗತ್ತಿನಲ್ಲಿರುವ ಯಾವ ವಸ್ತುವನ್ನಾಗಲಿ, ಅದು ಸಣ್ಣದಾಗಿರಲಿ ಅಥವಾ ದೊಡ್ಡದಾಗಿರಲಿ, ಒಂದು ಸಾಧಾರಣ ಶಬ್ದದಿಂದ ಸೂಚಿಸಬಹುದು. ಈ ವಿಧವಾದ ಶಕ್ತಿಯು ವಾಕ್ಕಿಗೆ ಎಂದರೆ ಶಬ್ದಕ್ಕಿರುವುದು. ಆದ್ದರಿಂದ ಈ ವಾಗಭಿಮಾನಿಯಾದ ತ್ವಷ್ಟೃದೇವತೆಯನ್ನು ತೃಪ್ತಿಪಡಿಸುವುದರಿಂದ ಯಜಮಾನನ ವಾಕ್ಸಂಪತ್ತಿಯು ಅಭಿವೃದ್ಧಿಯಾಗುವುದು.

**ವನಸ್ಪತಿಂ ಯಜತಿ ಪ್ರಾಣೋ ವೈ ವನಸ್ಪತಿಃ ಪ್ರಾಣಮೇವ ತತ್ಪ್ರೀ-ಣಾತಿ ಪ್ರಾಣಂ ಯಜಮಾನೇ ದಧಾತಿ ।**

**ದಶಮೀಂ ವಿಧತ್ತೇ—ಹೋತಾ ಯಕ್ಷದ್ವನಸ್ಪತಿಮಿತ್ಯಾದಿ ಮಂತ್ರೇಣ ಪ್ರೇಷಿತ ಉಪಾ-ವಸೃಜದಿತಿ ಯಾಜ್ಯಾಂ ಪಠೇತ್ ॥ ವನಸ್ಪತಿಜನ್ಯಫಲಾನಾಂ ಪ್ರಾಣಾವಸ್ಥಿತಿಹೇತುತ್ವಾದ್ವನ-ಸ್ಪತೇಃ ಪ್ರಾಣತ್ವಂ ॥**

ಅನಂತರ ಮೈತ್ರಾವರುಣನು ಹತ್ತನೇ ಯಾಜ್ಯಾಮಂತ್ರಪಠನಕ್ಕಾಗಿ—

**ಹೋತಾ ಯಕ್ಷದ್ವನಸ್ಪತಿಮುಪಾವಸ್ರಕ್ಷದ್ಧಿಯೋ ಜೋಷ್ಟಾರಗ್ಂ ಶಶಮನ್ನರಃ । ಸ್ವದಾತ್ಸ್ವಧಿತಿರ್ಋತುಥಾದ್ಯ ದೇವೋ ದೇವೇಭ್ಯೋ ಹವ್ಯಾವಾಡ್ವೇತ್ವಾಜ್ಯಸ್ಯ ಹೋತರ್ಯಜ ॥**

(ತೈ. ಬ್ರಾ. ೩-೬-೨)

ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು— **ಉಪಾವಸೃಜತ್** (ಋ. ಸಂ. ೧೦-೧೧೦-೧೦) ಎಂಬ ಯಾಜ್ಯಾಮಂತ್ರವನ್ನು ಪಠಿಸುವನು. ವನಸ್ಪತಿಯೆಂದರೆ ಪ್ರಾಣವು. ಪ್ರಾಣಿಗಳು ಜೀವಿಸಿರುವುದಕ್ಕೆ ಆಹಾರವು ಬೇಕಷ್ಟೆ. ಆ ಆಹಾರವು ವನಸ್ಪತಿಗಳಿಂದ (ವೃಕ್ಷ, ಸಸ್ಯಾದಿಗಳು) ಒದಗಿಸಲ್ಪಡುವುದು. ಆದ್ದರಿಂದ ವನಸ್ಪತಿಯೇ ಪ್ರಾಣ (ಪ್ರಾಣಾಧಾರ ವಸ್ತು)ವೆಂದು ಹೇಳಲ್ಪಡುವುದು. ಈ ವನಸ್ಪತಿದೇವತೆಯನ್ನು ತೃಪ್ತಿಪಡಿಸುವುದರಿಂದ ಯಜಮಾನನು ಪ್ರಾಣಾಧಾರಕವಾದ ಆಹಾರಾದಿಗಳಿಂದ ಕೂಡಿ ಸಮೃದ್ಧಿಯನ್ನೈದುವನು.

**ಸ್ವಾಹಾಕೃತೀರ್ಯಜತಿ ಪ್ರತಿಷ್ಠಾ ವೈ ಸ್ವಾಹಾಕೃತಯಃ ಪ್ರತಿಷ್ಠಾ-ಯಾಮೇವ ತದ್ಯಜ್ಞಮಂತತಃ ಪ್ರತಿಷ್ಠಾಪಯತಿ ॥**

**ಏಕಾದಶೀಂ ವಿಧತ್ತೇ—ಹೋತಾ ಯಕ್ಷದಗ್ನಿಂ ಸ್ವಾಹೇತಿ ಮಂತ್ರೇಣ ಪ್ರೇಷಿತಃ ಸದ್ಯೋ ಜಾತ ಇತಿ ಯಾಜ್ಯಾಂ ಪಠೇತ್ ॥ ಸ್ವಾಹಾಕೃತೀನಾಮಾಹುತಿಸಮಾಪ್ತಿಹೇತುತ್ವಾ-ತ್ಪ್ರತಿಷ್ಠಾತ್ವಂ ತನ್ಮಂತ್ರಪಾಠೇನೈನಂ ಯಜ್ಞಮಂತತಃ ಸಮಾಪ್ತ್ಯವಸರೇ ಪ್ರತಿಷ್ಠಾಯಾಮೇವ ವೈಕಲ್ಯರಾಹಿತ್ಯರೂಪಾಯಾಂ ಪ್ರತಿಷ್ಠಾಪಯತಿ ॥**

ಅನಂತರ ಮೈತ್ರಾವರುಣನು ಹನ್ನೊಂದನೆಯ ಯಾಜ್ಯಾಮಂತ್ರಪಠನಕ್ಕಾಗಿ—

**ಹೋತಾ ಯಕ್ಷದಗ್ನಿಗ್ಂ ಸ್ವಾಹಾಜ್ಯಸ್ಯ ಸ್ವಾಹಾ ಮೇದಸಃ ಸ್ವಾಹಾ ಸ್ತೋಕಾನಾಗ್ ಸ್ವಾಹಾ ಸ್ವಾಹಾಕೃತೀನಾಗ್ ಸ್ವಾಹಾ ಹವ್ಯಸೂಕ್ತೀನಾಂ । ಸ್ವಾಹಾ ದೇವಾಗ್ಂ ಆಜ್ಯಪಾನ್ತ್ಸ್ವಾ-ಹಾಗ್ನಿಗ್ಂ ಹೋತ್ರಾಜ್ಜುಷಾಣಾ ಅಗ್ನ ಆಜ್ಯಸ್ಯ ವಿಯಂತು ಹೋತರ್ಯಜ ॥**

(ತೈ. ಬ್ರಾ. ೩-೬-೨-)

ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಹೋತೃವು—**ಸದ್ಯೋ ಜಾತೋ ವ್ಯಮಿಮೀತ** (ಋ. ಸಂ. ೧೦-೧೧೦-೧೧) ಎಂಬ ಹನ್ನೊಂದನೆಯ ಯಾಜ್ಯಾಮಂತ್ರವನ್ನು ಪಠಿಸುವನು. ಸ್ವಾಹಾಕೃತಿಗಳು ಎಂದರೆ ಸ್ವಾಹಾಕಾರಪೂರ್ವಕ ವಾಗಿ ಮಾಡುವ ಹೋಮಗಳು.

ಸ್ವಾಹಾಶಬ್ದದ ವಿವರಣೆಯು ಈರೀತಿ ಇರುವುದು—ಸ್ವಾಹಾಶಬ್ದವು ಶ್ಲೋಕಃ, ಧಾರಾ ಮೊದಲಾದ ೫೭ ವಾಙ್ನಾಮಗಳಲ್ಲಿ ಪಠಿತವಾಗಿರುವುದು. (ನಿ. ೨-೨೩) ಸ್ವಾಹಾ ಎಂದರೆ ವಾಕ್ಯವು. ಇದು ಸಾಮಾನ್ಯಾರ್ಥವು. ಅವಯವಾರ್ಥವೇನೆಂದರೆ—**ಸ್ವಾಹೇತ್ಯೇರತ್ ಸು ಆಹೇತಿ ವಾ ಸ್ವ ವಾಗಾಹೇತಿ ವಾ ಸ್ವಾಂ ಪ್ರಾಹೇತಿ ವಾ ಸ್ವಾಹುತಂ ಹವಿರ್ಜುಹೋತೀತಿ ವಾ** (ನಿ ೮-೨೧) ಎಂದು ಯಾಸ್ಕರು ಹೇಳಿದಾರೆ. ಸು+ಆಹ=ಚೆನ್ನಾಗಿ ಹೇಳಿದನು ಎಂದರೆ ದೇವತೆಗಳ ಗುಣಗಾನವನ್ನು ಋತ್ವಿಜನು ಚೆನ್ನಾಗಿಮಾಡಿರುವುದರಿಂದ ಸ್ವಾಹಾ ಎಂದಾಯಿತು; **ಸ್ವಾ ವಾಗಾಹೇತಿ ವಾ**=ಸ್ವಕೀಯವಾದ ವಾಕ್, ವಾಕ್ಯವು ತಂ ಸ್ವಾಗಾಭ್ಯವದಜ್ಜುಹುಧೀತಿ ತತ್ಸ್ವಾಹಾಕಾರಸ್ಯ ಜನ್ಮ (ತೈ. ಬ್ರಾ. ೨-೧-೨-೨) ಸ್ವಕೀಯವಾದ ವಾಕ್ ಎಂದರೆ ಹೋಮಮಾಡುವಾಗ ಮಂತ್ರದ ಕೊನೆಯಲ್ಲಿ ಇಲ್ಲದಿರುವ ತನ್ನ ಸ್ವಂತ ಪದವಾದ ಸ್ವಾಹಾ ಎಂಬ ಶಬ್ದವನ್ನು ಸೇರಿಸಿ ಹೋಮಮಾಡುವುದರಿಂದ ಸ್ವಂತಶಬ್ದಕ್ಕೂ (ವಾಕ್) ಆಹ ಎಂದರ್ಥವು; **ಸ್ವಂ ಪ್ರಾಹೇತಿ ವಾ** ಇದಕ್ಕೆ ಮೇಲೆ ಹೇಳಿದ ಅರ್ಥವೇ ಅನ್ವಯಿಸುವುದು, ವ್ಯುತ್ಪತ್ತಿಮಾತ್ರ ಬೇರೆ; **ಸ್ವಾಹುತಂ ಹವಿರ್ಜುಹೋತೀತಿ ವಾ**=ಋತ್ವಿಜನು ತಾನು ಹೋಮಮಾಡುವ ಹವಿಸ್ಸನ್ನು ಸ್ವಾಹಾ ಎಂಬ ಶಬ್ದೋಚ್ಚಾರಣೆ ಮೂಲಕ ಹೋಮಮಾಡುವುದರಿಂದ ಎಂದರೆ ಅಗ್ನಿಯಲ್ಲಿ ಹವಿಃಪ್ರಧಾನಮಾಡುವುದರಿಂದ ಈ ಶಬ್ದಕ್ಕೆ ಸ್ವಾಹಾ ಎಂದು ಹೆಸರು. ಇದು ಯಾಸ್ಕರ ವಿವರಣೆಯು. ಸ್ವಾಹಾ ಎಂಬ ಶಬ್ದಾಂತ್ಯವಾದ ಮಂತ್ರಗಳಿಂದ ದೇವತೆಗಳಿಗೆ ಹರ್ಷವಾಗುವುದರಿಂದ ಯಜ್ಞದಲ್ಲಿ ಸ್ವಾಹಾಶಬ್ದಕ್ಕೆ ಮಹತ್ತವಾದ ಸ್ಥಾನವಿದೆ. (ಋ. ಸಂ. ಭಾಗ ೩೦ ಪುಟ ೩೬೭–೩೬೮ ನೋಡಿ) ಇದಲ್ಲದೆ ಸ್ವಾಹಾಕೃತಿಗಳು ಪ್ರಾಧಾನ್ಯತೆಯ ಅಥವಾ ಗಣ್ಯತೆಯ ಪ್ರತೀಕವಾಗಿರುವುದು. ಆದುದರಿಂದ ಈ ಸ್ವಾಹಾಕೃತಿಗಳು ಯಜ್ಞಸಮಾಪ್ತಿ ಸೂಚಕವಾಗಿರುವವು. ಎಂದರೆ ಯಜ್ಞಸಮಾಪ್ತ್ಯನಂತರ ಯಜ್ಞಮಾಡುವ ಯಜಮಾನನಿಗೆ ಜನರಲ್ಲಿ ಗಣ್ಯತೆಯನ್ನು ಗಳಿಸಿಕೊಡುವವು.

ಕೊನೆಯ ಪ್ರಯಾಜಮಂತ್ರವಾದ ಈ ಸ್ವಾಹಾಕೃತಿಯನ್ನುದ್ದೇಶಿಸಿ ಹೋಮಮಾಡುವಾಗ ಒಂದು ವಿಶೇಷವಿರುವುದು. ಯಜ್ಞದಲ್ಲಿ ನಿರ್ದಿಷ್ಟರಾದ ದೇವತೆಗಳೆಲ್ಲರನ್ನೂ ಪ್ರತ್ಯೇಕಪ್ರತ್ಯೇಕವಾಗಿ ಸ್ವಾಹಾಕಾರದೊಡನೆ ಉಚ್ಚರಿಸಿ ಹೋಮವನ್ನು ಮಾಡುವರು ಮತ್ತು ಇದರಂತೆ ಆಜ್ಯಪಾಃ ಎಂದರೆ ಆಜ್ಯವನ್ನು (ಕರಗಿದ ತುಪ್ಪವನ್ನು) ಪಾನಮಾಡುವ ಕೆಲವು ದೇವತೆಗಳನ್ನು ಉದ್ದೇಶಿಸಿ ಹೋಮಮಾಡಲ್ಪಡುವುದು. ಉದಾಹರಣೆಗಾಗಿ ದೀಕ್ಷಣೀಯೇಷ್ಟಿಯಲ್ಲಿ ಈ ಸ್ವಾಹಾಕೃತಿಯನ್ನು ಹೋಮಮಾಡುವ ವಿಧಾನವು ಈರೀತಿ ಇರುವುದು—**ಯೇ೩ ಯಜಾಮಹೇ ಸ್ವಾಹಾಗ್ನಿಂ ಸ್ವಾಹಾ ಸೋಮಂ ಸ್ವಾಹಾಗ್ನಾವಿಷ್ಣೂ ಸ್ವಾಹಾ ದೇವಾ ಆಜ್ಯಪಾ ಜುಷಾಣಾ ಅಗ್ನ ಆಜ್ಯಸ್ಯ ವಿಯಂತು ವೌ೩ಷಟ್ ॥** ಎಂದು. ಎಂದರೆ ಈ ಯಜ್ಞದಲ್ಲಿ ನಾವು ಯಾವ ದೇವತೆಗಳನ್ನು ನಿರ್ದೇಶಿಸಿ ಹೋಮಮಾಡುವೆವೋ ಅಂತಹ ದೇವತೆಗಳಾದ ಅಗ್ನಿ, ಸೋಮ, ಅಗ್ನಾವಿಷ್ಣು (ಅಗ್ನಿ ಮತ್ತು ವಿಷ್ಣು) ಮತ್ತು ಆಜ್ಯವನ್ನು ಪಾನಮಾಡುವ ದೇವತೆಗಳು ನಮ್ಮ ಯಜ್ಞದಲ್ಲಿ ನಾವು ಆಹುತಿಪೂರ್ವಕವಾಗಿ ಅರ್ಪಿಸುವ ಆಜ್ಯವನ್ನು ಸ್ವೀಕರಿಸಿ ತೃಪ್ತರಾಗಲಿ ಎಂದು ಈ ಮಂತ್ರದ ಅರ್ಥವು. ಆದ್ದರಿಂದ ಬೇರೆಬೇರೆ ಯಜ್ಞಗಳಲ್ಲಿ ಈ ಸ್ವಾಹಾಕೃತಿಹೋಮವು ಅಲ್ಲಿ ನಿರ್ದಿಷ್ಟರಾದ ದೇವತೆಗಳಿಗನುಸಾರವಾಗಿ ಬೇರೆಬೇರೆಯಾಗಿರುವುದು.

**ತಾಭಿರ್ಯಥಋಷ್ಯಾಪ್ರೀಣೀಯಾದ್ಯದ್ಯಥಋಷ್ಯಾಪ್ರೀಣಾತಿ ಯಜಮಾನಮೇವ ತದ್ಬಂಧುತಾಯಾ ನೋತ್ಸೃಜತಿ ॥**

**ದಶಕೋ** ಬಹುವಿಧಾನಾಮಾಪ್ರೀಸೂಕ್ತಾನಾಮಾಮ್ನಾತತ್ವಾದ್ವಿಕಲ್ಪಃ **ಸ್ಯಾದಿತ್ಯಾಶಂ**ಕ್ಯಾಧಿಕಾರಿಭೇದೇನ ವ್ಯವಸ್ಥಾಂ ವಿಧತ್ತೇ—**ನೋತ್ಸೃಜತಿ** ನ ನಿಃಸಾರಯತಿ ॥

ಋಗ್ವೇದದಲ್ಲಿ ಹತ್ತು ಆಪ್ರೀಸೂಕ್ತಗಳಿರುವವೆಂದು ಹಿಂದೆ ಹೇಳಿದೆಯಷ್ಟೆ. ಇವುಗಳು ಅನೇಕ ಋಷಿಗಳಿಂದ ದೃಷ್ಟವಾಗಿರುವವು. ಆದ್ದರಿಂದ ಯಜ್ಞಮಾಡುವ ಯಜಮಾನನು ಈ ೧೦ ಆಪ್ರೀಸೂಕ್ತಗಳಲ್ಲಿ ಯಾವುದನ್ನು ಉಪಯೋಗಿಬೇಕೆಂಬ ಅನುಮಾನ ಉಂಟಾಗುವುದು ಸಹಜವು. ಈ ಅನುಮಾನಕ್ಕೆ ಕಾರಣವಿಲ್ಲ. ಏಕೆಂದರೆ ಯಜ್ಞಮಾಡುವ ಯಜಮಾನನು ಯಾವ ಗೋತ್ರದವನಾಗಿರುವನೋ ಆ ಗೋತ್ರದ ಋಷಿಯಿಂದ ದೃಷ್ಟವಾದ ಆಪ್ರೀಸೂಕ್ತದಿಂದಲೇ ಹೋಮಮಾಡಬೇಕು. ಎಂದರೆ ತನ್ನ ವಂಶದ ಮೂಲಪುರುಷನಾದ ಋಷಿಯಿಂದ ದೃಷ್ಟವಾದ ಆಪ್ರೀಸೂಕ್ತದಿಂದಲೇ ಹೋಮಮಾಡಬೇಕು. ಹೀಗೆ ಮಾಡುವುದರಿಂದ ಯಜ್ಞಮಾಡುವ ಯಜಮಾನನಿಗೂ ತನ್ನ ಮೂಲಪುರುಷನ ಸಂತತಿಯವರಿಗೂ ಇರುವ ಸಂಬಂಧವು ತಪ್ಪಿ ಹೋಗದಂತೆ ಶಾಶ್ವತವಾಗಿ ನಡೆದುಕೊಂಡುಬರಲು ಸಹಾಯವಾಗುವುದು.

ಇದರ ಕ್ರಮವು ಹೇಗೆಂದರೆ—

ಕಣ್ವಾಂಗಿರಸೋಽಗಸ್ತ್ಯ ಶುನಕಾ ವಿಶ್ವಾಮಿತ್ರೋಽತ್ರಿರೇವ ಚ ।
ವಸಿಷ್ಠಃ ಕಶ್ಯಪೋ ವಾಧ್ರ್ಯಶ್ವೋ ಜಮದಗ್ನಿರಥೋತ್ತಮಃ ॥

ಎಂದು ಶೌನಕರು ಹೇಳಿರುವರು. ಇದಲ್ಲಿದೆ—

ಏಭಿಶ್ಚೈಕೋನಪಂಚಾಶತ್ಪ್ರವರಂ ಜಗದನ್ವಿತಂ ।
ಗೋತ್ರಾಣಾಂ ತು ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ಊನಪಂಚಾಶದೇವೈಷಾಂ ಪ್ರವರಾಃ ಸರ್ವಸೂತ್ರಿತಾಃ ॥

ಎಂದು ಹೇಳಿರುವುದು. ಗೋತ್ರಗಳು ಸಾವಿರ, ಲಕ್ಷಗಟ್ಟಲೆ ಇರುವವು. ಆದರೆ ಆ ಗೋತ್ರಗಳಿಗೆ ಮೂಲಪುರುಷರಾದ ಋಷಿಗಳ ಪ್ರವರವು ೪೯ ಮಾತ್ರವಿರುವವು.

ಕಣ್ವಗೋತ್ರಪ್ರಸೂತಾನಾಂ ಸುಸಮಿದ್ಧೋ ನ ಆಹವ ।
ಅಂಗಿರಃ ಪ್ರವರ್ಷೀಣಾಂ ಸಮಿದ್ಧೋ ಅಗ್ನ ಆವಹ ॥
ಅಗಸ್ತ್ಯಗೋತ್ರಜಾತಾನಾಂ ಸಮಿದ್ಧೋ ಅದ್ಯ ರಾಜಸಿ ।
ಸಮಿದ್ಧೋ ಅಗ್ನಿರ್ನಿಹಿತಃ ಶುನಕಾನಾಂ ಭವೇದಿದಂ ॥
ವಿಶ್ವಾಮಿತ್ರಪ್ರವರಾಣಾಂ ಸಮಿತ್ಸಮಿದಿತಿ ತ್ವಿದಂ ।
ಅತ್ರಿಗೋತ್ರಪ್ರಸೂತಾನಾಂ ಸುಸಮಿದ್ಧಾಯ ಶೋಚಿಷೇ ॥
ವಸಿಷ್ಠಗೋತ್ರಜಾತಾನಾಂ ಜುಷಸ್ವ ನ ಇದಂ ಭವೇತ್ ।
ಕಶ್ಯಪಪ್ರವರಾಣಾಂ ತು ಸಮಿದ್ಧೋ ವಿಶ್ವತಸ್ಪತಿಃ ॥
ಇಮಾಂ ಮೇ ಅಗ್ನೇ ಸಮಿಧಂ ಭವೇತ್ ವಧ್ರ್ಯಶ್ವಗೋತ್ರಿಣಾಂ ॥
ಸಮಿದ್ಧೋ ಅದ್ಯ ಮನುಷೋ ಜಮದಗ್ನ್ಯೃಷಿಗೋತ್ರಿಣಾಂ ॥

ಎಂದು ಹೇಳಿರುವುದು. ಎಂದರೆ ಕಣ್ವಗೋತ್ರದವರು—ಸುಸಮಿದ್ಧೋ ನ ಆವಹ (ಋ. ಸಂ. ೧-೧೩) ಎಂಬ ಆಪ್ರೀಸೂಕ್ತವನ್ನು ಪಠಿಸಬೇಕು. ಅದರಂತೆಯೇ ಅಂಗಿರಸಗೋತ್ರದವರು ಸಮಿದ್ಧೋ ಅಗ್ನ ಆವಹ (ಋ. ಸಂ. ೧-೧೪೨) ಎಂಬ ಸೂಕ್ತವನ್ನೂ, ಅಗಸ್ತ್ಯಗೋತ್ರದವರು ಸಮಿದ್ಧೋ ಅದ್ಯ ರಾಜಸಿ (ಋ. ಸಂ. ೧-೧೮೮) ಎಂಬ ಸೂಕ್ತವನ್ನೂ, ಶುನಕಗೋತ್ರದವರು ಸಮಿದ್ಧೋ ಅಗ್ನಿರ್ನಿಹಿತಃ (ಋ. ಸಂ. ೨-೩) ಎಂಬ ಸೂಕ್ತವನ್ನೂ, ವಿಶ್ವಾಮಿತ್ರಗೋತ್ರದವರು ಸಮಿತ್ಸಮಿತ್ಸುಮನಾಃ (ಋ. ಸಂ. ೩-೪) ಎಂಬ ಸೂಕ್ತವನ್ನೂ, ಅತ್ರಿಗೋತ್ರದವರು ಸುಸಮಿದ್ಧಾಯ ಶೋಚಿಷೇ (ಋ. ಸಂ.

೫-೫) ಎಂಬ ಸೂಕ್ತವನ್ನೂ, ವಸಿಷ್ಠಗೋತ್ರದವರು **ಜುಷಸ್ವ ನಃ ಸಮಿಧಮಗ್ನೇ** (ಋ.ಸಂ. ೭-೨) ಎಂಬ ಸೂಕ್ತವನ್ನೂ, ಕಶ್ಯಪಗೋತ್ರದವರು **ಸಮಿದ್ಧೋ ವಿಶ್ವತಸ್ಪತಿಃ** (ಋ.ಸಂ. ೯-೫) ಎಂಬ ಸೂಕ್ತವನ್ನೂ, ವಧ್ರ್ಯಶ್ವಗೋತ್ರದವರು **ಇಮಾಂ ಮೇ ಅಗ್ನೇ ಸಮಿಧಂ** (ಋ. ಸಂ. ೧೦-೭೦) ಎಂಬ ಸೂಕ್ತವನ್ನೂ, ಜಮದಗ್ನಿಗೋತ್ರದವರು **ಸಮಿದ್ಧೋ ಅದ್ಯ ಮನುಷೋ** (ಋ. ಸಂ. ೧೦-೧೧೦) ಎಂಬ ಸೂಕ್ತವನ್ನೂ ಪಠಿಸಬೇಕು ಎಂದಭಿಪ್ರಾಯವು.



*English Translation*

**(The Apri verses)**

The Hotar repeats the Apri verses. These are brightness and sacred knowledge. Through brightness and sacred knowledge the Hotar thus makes live the sacrificer.

(Frist) he recites a Yajya verse for the wooden sticks (samidhah) whih are used as fuel. These are the vital airs. The vital airs kindle this whole universe (give life to it). Thus he pleases the vital airs and puts them in the sacrificer.

He repeats a Vajya verse for Tanunpat. The air inhaled (prana) is Tanunapat, because it preserves (apat) the bodies (tanvah). Thus he pleases the air inhaled and puts it in the sacrificer.

He repeats a Yaja verse for Narasamsa. Nara means offspring, s'amsa speech. Thus he pleases offspring and speech, and puts them in the sacrificer.

He repeats the Yajya for Ilha. Ilah means food. Thus he pleases food and puts food in the sacrificer.

He repeats a Yajya for the Barhis (sacred grass). Barhis is cattle. Thus he pleases the cattle and puts it in the sacrificer.

He repeats the Yajya for the gates (of the sacrificial place). The gates are the rain. Thus he pleases the cattle and puts it in the sacrificer.

He repeats the Yajya for the gates (of the sacrificial place). The gates are the rain. Thus he pleases (fertility) and puts it into the sacrificer.

He repeats the Yajya for Dawn Night. Dawn and Night are day and night. Thus he pleases day and night and puts them into the sacrificer.

He repeats a Yajya for the two Divine Hotars; the air inhaled and exhalred are the two Divine Hotars. Thus he pleases them and puts them into the sacrificer.

He repeats a Yajya for three Goddesses. These three Goddesses are the air inhaled, the air exhaled, and the air circulating in the body. Thus he pleases them and puts them into the sacrificer.

He repeats Yajya for Tvashtar. Taashter is speech a shapes (tashti), as it were, the whole universe. Thus he pleases speech, and puts it into the sacrificer.

He repeats a Yajya for Vanspati (trees). Vanspati is the life. Thus he pleases life and puts it into the sacrificer.

He repeats a Yajya for the Svahakrities. These are a firm footing. Thus he puts the sacrificer on firm footing.

He ought to repeat such Apri verses, as are traceable to a Rishi (of the family of the sacrificer). By doing so the Hotar keeps the sacrificer within the relationship (of his ancestors).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಷಷ್ಠಾಧ್ಯಾಯೇ ಚತುರ್ಥಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದ ನಾಲ್ಕನೆಯ ಖಂಡವು ಸಮಾಪ್ತವಾದುದು.**



# ಅಥ ಷಷ್ಠಾಧ್ಯಾಯೇ ಪಂಚಮಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಪರ್ಯಗ್ನಿಕರಣ (ಯಜ್ಞಪಶುವಿನ ಸುತ್ತಲೂ ಅಗ್ನಿಯನ್ನು ಪ್ರದಕ್ಷಿಣೆಯಾಗಿ ತೆಗೆದುಕೊಂಡು ಹೋಗುವುದು) ]

ಇದುವರೆಗೂ ಆಪ್ರೀಸೂಕ್ತದ ಮಂತ್ರಗಳಿಂದ ಹೋಮ ಮಾಡುವ ವಿಧಾನವನ್ನೂ ಅದರಿಂದ ಯಜಮಾನನಿಗೆ ಲಭಿಸುವ ಫಲವನ್ನೂ ವಿವರಿಸಿದ್ದಾಯಿತು. ಈಗ ಪರ್ಯಗ್ನಿಕರಣವೆಂಬ ಸಂಸ್ಕಾರವಿಶೇಷವನ್ನು ವಿವರಿಸುವರು-ಪ್ರರ್ಯಗ್ನಿಕರಣವೆಂದರೆ ಆಹವನೀಯಾಗ್ನಿ ಕುಂಡದಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದುಕೊಂಡು ಮಂತ್ರಪೂರ್ವಕವಾಗಿ ಯಜ್ಞಪಶುವಿನ ಸುತ್ತಲೂ ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಸುತ್ತುವುದು.

ಈ ವಿಷಯವು ಆಪಸ್ತಂಬ ಶ್ರೌತಸೂತ್ರದಲ್ಲಿ- **ಆಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪರಿವಾಜಪತಿಃ ಕವಿರಿತಿ ತ್ರಿಃಪ್ರದಕ್ಷಿಣಂ ಪರ್ಯಗ್ನಿಕರೋತಿ ಪಶುಂ** (ಆಪ. ಶ್ರೌ. ಸೂ. ೭-೧೫-೨) ಎಂದು ಹೇಳಿರುವುದು ಎಂದರೆ

ಆಗ್ನೀಧ್ರನೆಂಬ ಋತ್ವಿಜನು ಆಹವನೀಯಾಗ್ನಿ ಕುಂಡದಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ಯೂಪಸ್ತಂಬಕ್ಕೆ ಕಟ್ಟಿರುವ ಯಜ್ಞಪಶುವಿನ ಸುತ್ತಲೂ ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಸುತ್ತುವನು ಎಂದರ್ಥವು.

ಈ ಕಾರ್ಯದಲ್ಲಿ ಪಠಿಸಬೇಕಾದ ಮಂತ್ರವನ್ನು ಪಠಿಸುವುದಕ್ಕಾಗಿ ಅಧ್ವರ್ಯುವು ಮೈತ್ರಾವರುಣನಿಗೆ ಪ್ರೈಷಮಂತ್ರದಿಂದ ನಿರ್ದೇಶಿಸುವನು—

ಪರ್ಯಗ್ನಯೇ ಕ್ರಿಯಮಾಣಾಯಾನುಬ್ರೂಹೀತ್ಯಾಹಾಧ್ವರ್ಯುಃ ॥

ಆಪ್ರಿಯೋ ವಿಧಾಯ ಪರ್ಯಗ್ನಿಕರಣಾ ಋಚೋ ವಿಧಾತುಮಾದೌ ಪ್ರೈಷಮಂತ್ರಂ ವಿಧತ್ತೇ—ಪರ್ಯಗ್ನಿಕರಣಸ್ಯ ಸ್ವರೂಪಮಾಪಸ್ತಂಬೋ ದರ್ಶಯತಿ—'ಆಹವನೀಯಾದುಲ್ಮುಕಮಾದಾಯಾಽಽಗ್ನೀಧ್ರಃ ಪರಿ ವಾಜಪತಿಃ' [೪. ೧೫. ೩.] ಇತಿ ತ್ರಿಃ ಪ್ರದಕ್ಷಿಣಂ ಪರ್ಯಗ್ನಿಕರೋತಿ ಪಶುಂ ಇತಿ ॥ ಏವಂ ಪರಿತಃ ಕ್ರಿಯಮಾಣಾಯಾಗ್ನಯೇ ಯೋಗ್ಯಾ ಋಚೋ ಹೇ ಮೈತ್ರಾವರುಣ ತ್ವಮನುಬ್ರೂಹಿ ॥ ಅನೇನೈವ ಮಂತ್ರೇಣಾಧ್ವರ್ಯುಃ ಪ್ರೇಷಯೇತ್ ॥

ಎಂಬ ಪ್ರೈಷಮಂತ್ರದಿಂದ ಅಧ್ವರ್ಯುವು ಮೈತ್ರಾವರುಣ (ಹೋತೃವರ್ಗದ ಋತ್ವಿಕ್) ನನ್ನು ನಿರ್ದೇಶಿಸಿದ ಕೂಡಲೇ ಮೈತ್ರಾವರುಣನು—

ಅಗ್ನಿರ್ಹೋತಾ ನೋ ಅಧ್ವರ ಇತಿ ತೃಚಮಾಗ್ನೇಯಂ ಗಾಯತ್ರಮನ್ವಾಹ ಪರ್ಯಗ್ನಿಕ್ರಿಯಮಾಣೇ ಸ್ವಯೈವೈನಂ ತದ್ದೇವತಯಾಸ್ವೇನ ಛಂದಸಾ ಸಮರ್ಧಯತಿ ।

ಮೈತ್ರಾವರುಣೇನಾನುವಕ್ತವ್ಯಾಸ್ತಿಸ್ರ ಋಚೋ ವಿಧತ್ತೇ—ಪಶೋಃ ಪರಿತೋಽಗ್ನಿರಿತ್ಯಸ್ಮಿನ್ನರ್ಥೇ ಪರ್ಯಗ್ನೀತ್ಯುಚ್ಯತೇ । ತಸ್ಮಿನ್ಕ್ರಿಯಮಾಣೇ ತೃಚಂ ಮೈತ್ರಾವರುಣೋಽನುಬ್ರೂಯಾತ್ ॥ ತದಾಹಾಽಽಶ್ವಲಾಯನಃ—'ಪ್ರೇಷಿತೋ ಮೈತ್ರಾವರುಣೋಽಗ್ನಿರ್ಹೋತಾ ನ ಇತಿ ತೃಚಂ ಪರ್ಯಗ್ನಯೇಽನ್ವಾಹ' ಇತಿ ॥ ತೃಚಸ್ಯಾಽಽದಾವಗ್ನಿರಿತ್ಯುಕ್ತತ್ವಾದಾಗ್ನೇಯತ್ವಂ ಛಂದಶ್ಚ ತೃಚಸ್ಯ ಗಾಯತ್ರಂ ಪರಿತಃ ಕ್ರಿಯಮಾಣೋಽಗ್ನಿರೇವ ಮಂತ್ರಪ್ರತಿಪಾದ್ಯೋಽಪಿ ॥ ಸ ಏವಾತಃ ಸ್ವಯೈವ ದೇವತಯೇತ್ಯುಚ್ಯತೇ ॥ ಅಗ್ನಿಗಾಯತ್ರ್ಯೋರ್ಮುಖಜತ್ವಸಾಮ್ಯಾಚ್ಛಂದಸಃ ಸ್ವತ್ವಂ ॥ ನೋಽಸ್ಮಾಕಮಧ್ವರೇ ಯಜ್ಞೇಽಯಮಗ್ನಿರ್ಹೋತಾ ಯಜ್ಞನಿಷ್ಪಾದಕ ಇತಿ ತಸ್ಯ ಪಾದಸ್ಯಾರ್ಥಃ ॥

ಅಗ್ನಿರ್ಹೋತಾ ನೋ ಅಧ್ವರೇ ವಾಜೀ ಸನ್ಪರಿಣೀಯತೇ ।
ದೇವೋ ದೇವೇಷು ಯಜ್ಞಿಯಃ ॥
ಪರಿ ತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವ ।
ಆ ದೇವೇಷು ಪ್ರಯೋ ದಧತ್ ॥

**ಪರಿ ವಾಜಪತಿಃ ಕವಿರಗ್ನಿರ್ಹವ್ಯಾನ್ಯಕ್ರಮೀತ್ ।**
**ದಧದ್ರತ್ನಾನಿ ದಾಶುಷೇ ॥**

(ಯ. ಸಂ ೪-೧೫-೧, ೨, ೩)

ಎಂಬ ಮೂರು ಗಾಯತ್ರೀ ಛಂದಸ್ಸಿನ ಮಂತ್ರಗಳನ್ನು ಪಠಿಸುವನು. ಪರ್ಯಗ್ನಿಕರಣವೆಂದರೆ—ಪಶುವಿನ ಸುತ್ತಲೂ ಅಗ್ನಿಯನ್ನು ತೆಗೆದುಕೊಂಡು ಹೋಗುವುದು ಎಂದರ್ಥವು. ಈ ಕಾರ್ಯವನ್ನು ಮಾಡುವಾಗ ಮೈತ್ರಾವರುಣನು ಮೇಲೆ ಹೇಳಿದ ಗಾಯತ್ರೀ ಛಂದಸ್ಸಿನ ಮೂರು ಮಂತ್ರಗಳನ್ನು ಪಠಿಸಬೇಕು. ಈ ವಿಷಯದಲ್ಲಿ ಆಶ್ವಲಾಯನರು—**ಪ್ರೇಷಿತೋ ಮೈತ್ರಾವರುಣೋಽಗ್ನಿರ್ಹೋತಾ ನ ಇತಿ ತೃಚಂ ಪರ್ಯಗ್ನಯೇಽನ್ವಾಹ** (ಆಶ್ವ. ಶ್ರೌ. ಸೂ ೩-೨-೯) ಎಂದು ಹೇಳಿರುವರು. ಈ ಮೂರು ಋಕ್ಕುಗಳು ಗಾಯತ್ರೀಛಂದಸ್ಸಿನವು, ದೇವತೆಯು ಅಗ್ನಿಯು ; ಗಾಯತ್ರೀ ಛಂದಸ್ಸು ಅಗ್ನಿಗೆ ಪ್ರಿಯವಾದವು. ಆದ್ದರಿಂದ ಋತ್ವಿಜನು ಅಗ್ನಿಗೆ ಪ್ರಿಯವಾದ ಎಂದರೆ ತನ್ನ ಸ್ವಂತವಾದ ಛಂದಸ್ಸಿನ ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸುವುದರಿಂದ ಹೋಮನಿಷ್ಪಾದಕನಾದ ಅಗ್ನಿಯು ಪ್ರೀತನಾಗಿ ಯಜಮಾನನಿಗೆ ಸಮೃದ್ಧಿಯನ್ನುಂಟುಮಾಡುವನು ಈ ಮಂತ್ರದ ಮೊದಲನೆಯ ಪಾದದ ಅರ್ಥವು. ಇನ್ನು ಎರಡನೆಯ ಪಾದದ ಅರ್ಥವನ್ನು ವಿವರಿಸುವರು—

## ವಾಜೀ ಸನ್ಪರಿಣೀಯತ ಇತಿ ವಾಜಿನಮಿವ ಹ್ಯೇನಂ ಸಂತಂ-ಪರಿಣಯಂತಿ ॥

**ದ್ವಿತೀಯಂ ಪಾದಮನೂದ್ಯ ವ್ಯಾಚಷ್ಟೇ- ಅಯಮಗ್ನಿರ್ವಾಜ್ಯನ್ನಪ್ರದಾನೇನಾನ್ನವಾನ್ಗತಿಮಾನ್ವಾ ತಾದೃಶಃ ಸನ್ನೃತ್ವಿಗ್ಭಿಃ ಪಶೋಃ ಪರಿತೋ ನೀಯತೇ ತತ್ಪಾದಪಾಠೇನೈನಮಗ್ನಿಂ ವಾಜಿನಮೇವ ಸಂತಮೃತ್ವಿಜಃ ಪರಿತೋ ನಯಂತಿ ।**

ವಾಜಂ ಎಂದರೆ ಅನ್ನವು, ಆಹಾರವು ; ವಾಜೀ ಎಂದರೆ ಅನ್ನಪ್ರದನಾದ ಅಥವಾ ಆಹಾರಪ್ರದನಾದ ಅಗ್ನಿಯು ಯಜ್ಞಪಶುವಿನ ಸುತ್ತಲೂ ಋತ್ವಿಜರಿಂದ ಒಯ್ಯಲ್ಪಡುತ್ತಾನೆ. ಅಥವಾ—ವಾಜೀ ಎಂದರೆ ಅಶ್ವವು, ಕುದುರೆಯು ; ಅಶ್ವವನ್ನು ಕೊಂಡೊಯ್ಯುವಂತೆ ಋತ್ವಿಜರು ಈ ಅಗ್ನಿಯನ್ನು ಪಶುವಿನ ಸುತ್ತಲೂ ಒಯ್ಯುವರು ಎಂದರ್ಥವು.

## ಪರಿತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವೇತ್ಯೇಷ ಹಿ ರಥೀರಿವಾಧ್ವರಂ ಪರಿಯಾತಿ ।

**ದ್ವಿತೀಯಸ್ಯಾಃ ಋಚಃ ಪೂರ್ವಾರ್ಧಮನೂದ್ಯ ತಾತ್ಪರ್ಯಂ ದರ್ಶಯತಿ ॥**

ಎರಡನೆಯ ಋಕ್ಕಿನ ಪೂರ್ವಾರ್ಧವನ್ನು ವಿವರಿಸುವರು – ರಥದಲ್ಲಿ ಕುಳಿರುವ ರಥಿಕನಂತೆ ಅಗ್ನಿಯು ಯಜ್ಞವನ್ನು (ಯಜ್ಞದ ಪಶುವನ್ನು) ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಸುತ್ತಿಬರುವನು. ಮತ್ತು ದೇವತೆಗಳಿಗೆ ಹೋಮದಲ್ಲಿ ಅರ್ಪಿಸುವ ಹವಿಸ್ಸನ್ನು ಒಯ್ಯುವನು.

## ಪರಿ ವಾಜಪತಿಃ ಕವಿರಿತ್ಯೇಷ ಹಿ ವಾಜಾನಾಂ ಪತಿಃ ।

**ತೃತೀಯಸ್ಯಾ ಋಚಃ ಪ್ರಥಮಪಾದಮನೂದ್ಯ ವ್ಯಾಚಷ್ಟೇ—ಕವಿರನೂಚಾನಃ । 'ಯೇ ವಾ ಅನೂಚಾನಾಸ್ತೇ ಕವಯಃ' ಇತಿ ಶ್ರುತೇಃ ॥ ತಾದೃಶೋಽಗ್ನಿರ್ವಾಜಪತಿರನ್ನಸ್ವಾಮೀ ॥ ಏಷ ಹೀತ್ಯಾದಿನಾ ತದರ್ಥಪ್ರಸಿದ್ಧಿರಿತ್ಯುಚ್ಯತೇ । ಅನ್ನಭಕ್ಷಕತ್ವಾದ್ವಾಜಪತಿಃ ॥**

ಇನ್ನು ಮೂರನೆಯ ಋಕ್ಕಿನ ಪ್ರಥಮಪಾದವನ್ನು ವಿವರಿಸುವರು. ಇಲ್ಲಿ **ವಾಜಪತಿಃ** ಮತ್ತು **ಕವಿಃ** ಎಂಬ ಎರಡು ಪದಗಳು ಅಗ್ನಿಗೆ ವಿಶೇಷಣಪದಗಳಾಗಿವೆ. ವಾಜಪತಿಃ ಎಂದರೆ ಅನ್ನಕ್ಕೆ ಅಥವಾ ಆಹಾರಕ್ಕೆ ಸ್ವಾಮಿಯು; ಕವಿಃ ಎಂದರೆ ಋಷಿಯು, ಬಹುಕಾಲದವನು. **ಯೇ ವಾ ಅನೂಚಾನಾಸ್ತೇ ಕವಯಃ** ಎಂದು ಶ್ರುತಿವಾಕ್ಯವಿರುವುದು. ಅಲ್ಲದೆ **ಏತೇ ವೈ ಕವಯೋ ಯದೃಷಯಃ** (ಶ.ಬ್ರಾ. ೧-೪-೨-೮) ಋಷಿಗಳಿಗೆ ಕವಿಗಳೆಂದೂ ಹೆಸರು ಎಂದು ಶತಪಥ ಬ್ರಾಹ್ಮಣದಲ್ಲಿಯೂ ಹೇಳಿದೆ. ಇಲ್ಲಿ ಹಿ ಶಬ್ದ ಪ್ರಯೋಗವು ಪ್ರಸಿದ್ಧಾರ್ಥವನ್ನು ಸೂಚಿಸುವುದು. ಇಂತಹ ಅಗ್ನಿಯು ಹವಿಸ್ಸಿನ (ಪಶುವಿನ) ಸುತ್ತಲೂ ಸುತ್ತಿಬರುವನು ಮತ್ತು ಯಜ್ಞಮಾಡುವ ಯಜಮಾನನಿಗೆ ರತ್ನಾದ್ಯೈಶ್ವರ್ಯಗಳನ್ನು ಅನುಗ್ರಹಿಸುವನು ಎಂದು ಮೂರನೆಯ ಋಕ್ಕಿನ ತಾತ್ಪರ್ಯವು.

## ಅತ ಉಪಪ್ರೇಷ್ಯ ಹೋತರ್ಹವ್ಯಾ ದೇವೇಭ್ಯ ಇತ್ಯಾಹಾಧ್ವರ್ಯುಃ ।

**ಅಥ ಹೋತಾರಂ ಪ್ರತಿ ಮೈತ್ರಾವರುಣಪ್ರೈಷಾರ್ಥಂ ಮೈತ್ರಾವರುಣಂ ಪ್ರತ್ಯಧ್ವರ್ಯೋಃ ಪ್ರೈಷಮಂತ್ರಂ ವಿಧತ್ತೇ— ಅತಃ ಪರ್ಯಗ್ನಿಕರಣಾನುವಚನಾದೂರ್ಧ್ವಮಧ್ವರ್ಯುರುಪಪ್ರೇಷ್ಯೇತ್ಯಾದಿಕಂ ಪ್ರೈಷಮಂತ್ರಂ ಪಠೇತ್ ॥ ಹೋತರ್ದೇವೇಭ್ಯೋ ಹವೀಂಷ್ಯುಪಪ್ರೇಷ್ಯ ಪ್ರೇರಯೇತಿ ತಸ್ಯಾರ್ಥಃ॥ ಅತ್ರ ಮೈತ್ರಾವರುಣಸ್ಯ ಹೋತೃಸಮೀಪೇ ವರಣೀಯತ್ವಾದ್ಧೋತೃಶಬ್ದ ಉಪಲಕ್ಷಕಃ ॥ ತಥಾ ಸತಿ ಮೈತ್ರಾವರುಣಂ ಪ್ರತ್ಯಧ್ವರ್ಯೋರ್ಮಂತ್ರೋ ಭವಿಷ್ಯತಿ ॥**

ಪರ್ಯಗ್ನಿಕರಣಾನಂತರ ಅಧ್ವರ್ಯುವು ಮೈತ್ರಾವರುಣನನ್ನುದ್ದೇಶಿಸಿ- **ಉಪ ಪ್ರೇಷ್ಯ ಹೋತಃ ಹವ್ಯಾದೇವೇಭ್ಯಃ** (ತೈ. ಬ್ರಾ. ೩-೬-೫) ಎಂಬ ಉಪಪ್ರೈಷ ಮಂತ್ರದಿಂದ ನಿರ್ದೇಶಿಸುವನು. ಉಪಪ್ರೈಷವೆಂದರೆ **ಆಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೈಷ ಉಪಪ್ರೈಷಃ** । ಒಂದಾವರ್ತಿ ಒಂದು ಕಾರ್ಯನಿರ್ವಹಣೆಗಾಗಿ ಪ್ರೈಷಮಂತ್ರವನ್ನು ಉಚ್ಚರಿಸಿದ ಮೇಲೆ ಅದೇ ಕಾರ್ಯದಲ್ಲಿ ನಡೆಸಬೇಕಾದ ಹೊಸಕಾರ್ಯಗಳನ್ನು ನೆರವೇರಿಸುವುದಕ್ಕಾಗಿ (Additional instructions) ನಿರ್ದೇಶಿಸುವ ಪ್ರೈಷಮಂತ್ರವು. ಇದರ ಅರ್ಥವೇನೆಂದರೆ—ಎಲೈ ಮೈತ್ರಾವರುಣನೇ, ದೇವತೆಗಳಿಗೆ ಹವಿಸ್ಸನ್ನು ಅರ್ಪಿಸಲು ಮಂತ್ರಗಳನ್ನು ಹೇಳುವಂತೆ ಹೋತೃವಿಗೆ ಉಪಪ್ರೈಷಮಂತ್ರದಿಂದ ಜ್ಞಾಪಕಮಾಡು. ಎಂದು ಈ ವಿಷಯದಲ್ಲಿ ಆಪಸ್ತಂಬ ಶ್ರೌತಸೂತ್ರವು— **ಆಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೇಷ್ಯತಿ ಉಪಪ್ರೇಷ್ಯ ಹೋತರ್ಹವ್ಯಾ ದೇವೇಭ್ಯಃ** (ಆಪ.ಶ್ರೌ.ಸೂ. ೭-೧೫-೭) ಎಂದು ನಿರ್ದೇಶಿಸುವುದು.

## ಅಜ್ಯೈದಗ್ನಿರಸನದ್ವಾಜಮಿತಿ ಮೈತ್ರಾವರುಣ ಉಪಪ್ರೈಷಂ ಪ್ರತಿಪದ್ಯತೇ ।

**ಅಥ ಮೈತ್ರಾವರುಣೇನ ಪಠನೀಯಂ ಮಂತ್ರಂ ವಿಧತ್ತೇ—ಅತ್ರ ಶಾಮಿತ್ರದೇಶಂ ಪ್ರತಿ ನೀಯಮಾನಸ್ಯ ಪಶೋಃ ಪುರತೋ ಯ ಉಲ್ಮುಕಾಕಾರೋಽಗ್ನಿರ್ಗಚ್ಛತಿ ಸೋಽಗ್ನಿರಜ್ಯೈಜ್ಜಯತು ॥ ಪಶೋಃ ಪುರಸ್ತಾದಗ್ನೇರ್ಗಮನಂ ಶಾಖಾಂತರೇ ಶ್ರೂಯತೇ—"ಅಗ್ನಿನಾ ಪುರಸ್ತಾದೇತಿ ರಕ್ಷಸಾಮಪಹತ್ಯೈ" ಇತಿ ॥ ತಸ್ಯಾಗ್ನೇರ್ಜಯೋ ನಾಮ ಹವಿಃಸಂಪಾದನಸಾಮರ್ಥ್ಯಂ ಸೋಽಗ್ನಿರ್ವಾಜಮಸ್ಮಿನ್ ಹವಿರ್ಲಕ್ಷಣಮಸನತ್ ॥ ಅಸ್ಯ ಮಂತ್ರಸ್ಯಾಂತರುಪಪ್ರೇಷ್ಯ ಹೋತ-**

**ಹವ್ಯಾ ದೇವೇಭ್ಯ ಇತಿ ಶ್ರೂಯತೇ ॥ ಯತೋ ಹೋತಾರಂ ಪ್ರತಿ ಮೈತ್ರಾವರುಣೋ ಮುಖ್ಯಸ್ಯಾಧ್ವರ್ಯುಪ್ರೈಷಸ್ಯ ಸಮೀಪವರ್ತಿತ್ವಾದಯಮುಪಪ್ರೇಷ್ಯಃ ॥**

ಅನಂತರ ಅಧ್ವರ್ಯುಪ್ರೇರಿತನಾದ ಮೈತ್ರಾವರುಣನು ಹೋತೃವನ್ನು ಕುರಿತು— **ಅಜ್ಜೈದಗ್ನಿಃ । ಅಸನದ್ವಾಜಂ ನಿ । ದೇವೋ ದೇವೇಭ್ಯೋ ಹವ್ಯಾವಾಟ್ । ಪ್ರಾಂಜೋಬಿರ್ಹಿನ್ವಾನಃ । ಧೇನಾಭಿಃ ಕಲ್ಪಮಾನಃ । ಯಜ್ಞಸ್ಯಾಯುಃ ಪ್ರತಿರನ್ ॥** (ತೈ.ಬ್ರಾ. ೩-೬-೫ ; ಮೈ.ಸಂ. ೪-೧೩-೨೪ ; ಕಾಠ.ಸಂ. ೧೬-೨೧) ಎಂಬ ಪ್ರೈಷಮಂತ್ರವನ್ನು ಪಠಿಸುವನು. ಇಲ್ಲಿ **ಅಜ್ಜೈದಗ್ನಿಃ** ಎಂದರೆ ಪರ್ಯಗ್ನಿಕರಣಾನಂತರ ವಧಸ್ಥಾನಕ್ಕೆ ಒಯ್ಯಲ್ಪಡುವ ಪಶುವಿನ ಮುಂದುಗಡೆ (ಕೊಳ್ಳಿಯ ರೂಪದಲ್ಲಿ) ತೆಗೆದುಕೊಂಡು ಹೋಗುವ ಅಗ್ನಿಯು ಜಯಿಸಲಿ ಎಂದರೆ ಮಂಗಳವನ್ನುಂಟುಮಾಡಲಿ. ಪಶುವಿನ ಮುಂಭಾಗದಲ್ಲಿ ಒಯ್ಯಲ್ಪಡುವ ಅಗ್ನಿಯ ವಿಷಯದಲ್ಲಿ ಶಾಖಾಂತರದಲ್ಲಿ ಈ ರೀತಿ ಹೇಳಲ್ಪಟ್ಟಿರುವುದು— **ಅಗ್ನಿನಾ ಪುರಸ್ತಾದೇತಿ ರಕ್ಷಸಾಮಪಹತ್ಯೈ ।** (ತೈ.ಸಂ. ೬-೩-೮-೨) ಎಂದರೆ ಯಜ್ಞವಿಘ್ನವನ್ನುಂಟುಮಾಡುವ ರಾಕ್ಷಸರ ನಾಶಕ್ಕಾಗಿ ಅಗ್ನಿಯು ಯಜ್ಞಪಶುವಿನ ಮುಂಭಾಗದಲ್ಲಿ ಒಯ್ಯಲ್ಪಡುವನು. ಅಗ್ನಿಯು ಜಯಿಸಲಿ ಎಂದರೆ ಅಗ್ನಿಗೆ ಹವಿಃಸಂಪಾದಸಾಮರ್ಥ್ಯವಿರುವುದರಿಂದ ಹವಿರ್ಲಕ್ಷಣರೂಪವಾದ ಅನ್ನವನ್ನು ಒದಗಿಸಲಿ ಎಂದಭಿಪ್ರಾಯವು. ಈ ಮಂತ್ರವನ್ನು ಹೇಳುವಾದ ಅಧ್ವರ್ಯುವು ಮೈತ್ರಾವರುಣನ ಸಮೀಪದಲ್ಲಿರುವನು. ಆದ್ದರಿಂದ ಆವನನ್ನುದ್ದೇಶಿಸಿ ಅಧ್ವರ್ಯುವು ಪ್ರೈಷಮಂತ್ರದಿಂದ ನಿರ್ದೇಶಿಸುವನು. ಸಮೀಪದಲ್ಲಿರುವ (ಉಪ) ಮೈತ್ರಾವರುಣನನ್ನುದ್ದೇಶಿಸಿ ಪಠಿಸುವ ಪ್ರೈಷಮಂತ್ರಕ್ಕೆ ಉಪಪ್ರೈಷವೆಂದು ಹೆಸರು. ಅಧ್ವರ್ಯುವಿನಿಂದ ನಿರ್ದಿಷ್ಟನಾದನಂತರ ಮೈತ್ರಾವರುಣನು ಹೋತೃವನ್ನು ಪ್ರೈಷಮಂತ್ರದಿಂದ ನಿರ್ದೇಶಿಸುವನು. ಈ ರೀತಿ ಪ್ರೈಷಮಂತ್ರದಿಂದ ನಿರ್ದೇಶಿಸುವ ಅಧಿಕಾರವನ್ನು ಸೂಚಿಸುವುದಕ್ಕಾಗಿ ಮೈತ್ರಾವರುಣನಿಗೆ ಒಂದು ದಂಡವು (ಕೋಲು) ಕೊಡಲ್ಪಡುವುದು. ಅದನ್ನು ಹಿಡಿದುಕೊಂಡು ತನ್ನ ಅಧಿಕಾರವನ್ನು ಚಲಾಯಿಸುವಂತೆ ಪ್ರೈಷಮಂತ್ರವನ್ನುಚ್ಚರಿಸುವನು. ಈ ವಿಷಯದಲ್ಲಿ— **ಕ್ರೀತೇ ಸೋಮೇ ಮೈತ್ರಾವರುಣಾಯ ದಂಡಂ ಪ್ರಯಚ್ಛತಿ ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ ತಾಮೃತ್ವಿಜೋ ಯಜಮಾನೇ ಪ್ರತಿಷ್ಠಾಪಯಂತಿ** (ತೈ.ಸಂ. ೬-೧-೪-೨) ಎಂದು ತೈತ್ತಿರೀಯ ಸಂಹಿತಾವಾಕ್ಯವಿರುವುದು.

**ತದಾಹುರ್ಯದಧ್ವರ್ಯುರ್ಹೋತಾರಮುಪಪ್ರೇಷ್ಯಥ ಕಸ್ಮಾನ್ಮೈತ್ರಾವರುಣ ಉಪಪ್ರೈಷಂ ಪ್ರತಿಪದ್ಯತ ಇತಿ । ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ ಮನಸಾ ವಾ ಇಷಿತಾ ವಾಗ್ವದತಿ ಯಾಂ ಹ್ಯನ್ಯಮನಾ ವಾಚಂ ವದತ್ಯಸುರ್ಯಾ ವೈ ಸಾ ವಾಗದೇವಜುಷ್ಟಾ ತದ್ಯನ್ಮೈತ್ರಾವರುಣ ಉಪಪ್ರೈಷಂ ಪ್ರತಿಪದ್ಯತೇ ಮನಸೈವ ತದ್ವಾಚಮೀರಯತಿ ತನ್ಮನಸೇರಿತಯಾ ವಾಚಾ ದೇವೇಭ್ಯೋ ಹವ್ಯಂ ಸಂಪಾದಯತಿ॥**

**ಅತ್ರ ಬ್ರಹ್ಮವಾದಿನಾಂ ಚೋದ್ಯಂ ವೈಯಧಿಕರಣ್ಯರೂಪಮುದ್ಭಾವಯತಿ—ಅಧ್ವರ್ಯುಪ್ರಯುಕ್ತೇ ಮಂತ್ರೇ ಹೋತುಃ ಸಂಬೋಧಿತತ್ವಾನ್ಮೈತ್ರಾವರುಣಸ್ಯ ಮಂತ್ರಪಾಠೇ ವೈಯಧಿಕರಣ್ಯಂ । ತಸ್ಯ ಚೋದ್ಯಸ್ಯ ಪರಿಹಾರಂ ದರ್ಶಯತಿ—ಯಜ್ಞಪುರುಷಸ್ಯ ಮೈತ್ರಾವರುಣೋ ಮನಃಸ್ಥಾನೀಯೋ ಹೋತಾ ತು ವಾಕ್ಸ್ಥಾನೀಯಃ ॥ ಲೋಕೇ ಹಿ ಮನಸೈವ**

ಪ್ರೇರಿತಾ ವಾಕ್ಯಬ್ದಮುಚ್ಚಾರಯತಿ ॥ ಯದಾ ತ್ವನ್ಯಮನಸ್ಕಃ ಪುರುಷೋ ವಾಚಂ ಬ್ರೂತೇ ಸಾ ವಾಗಸುರ್ಯಾಽಸುರಾಣಾಂ ಪ್ರಿಯಾ ನ ತು ದೇವಜುಷ್ಟಾ ದೇವಾನಾಂ ನ ಪ್ರಿಯಾ॥ ತಥಾ ಸತಿ ಯದಿ ಮೈತ್ರಾವರುಣಃ ಪ್ರಥಮಮುಪಪ್ರೈಷಂ ಬ್ರೂತೇ ॥ ಮನಸೈವ ವಾಕ್ಪ್ರೇರಿತಾ ಭವತಿ॥ ತತೋ ಮನಸಾ ಪ್ರೇರಿತಯಾ ವಾಚಾ ದೇವೇಭ್ಯೋ ಹವ್ಯಂ ಸಂಪಾದಿತಂ ಭವತಿ ॥ ಅನ್ಯಥಾ ತದ್ಧವಿರಸುರೇಭ್ಯಃ ಸಂಪಾದಿತಂ ಸ್ಯಾತ್ ॥ ತಸ್ಮಾದಧ್ವರ್ಯುಣಾ ಹೋತರಿತ್ಯೇವಂ ಸಂಬೋಧಿತೇಽಪಿ ಮೈತ್ರಾವರುಣೋಕ್ತಪ್ರೈಷಪೂರ್ವಕಮೇವ ಹೋತೃವಚನಂ ಯುಕ್ತಮ್ ॥

ಇಲ್ಲಿ ಬ್ರಹ್ಮವಾದಿಗಳು (ಯಜ್ಞಾನುಷ್ಠಾನಕುಶಲರು) ಹೀಗೆ ಹೇಳುವರು. ಅಧ್ವರ್ಯುವು ಪ್ರೈಷಮಂತ್ರವನ್ನು ನಿರ್ದೇಶಿಸುವಾಗ ಯಾಜ್ಯಾಮಂತ್ರವನ್ನು ಪಠಿಸುವ ಹೋತೃವನ್ನು ನೇರವಾಗಿ ನಿರ್ದೇಶಿಸುವ ಬದಲು ಮೈತ್ರಾವರುಣನಿಗೆ ಪ್ರೈಷಮಂತ್ರವನ್ನು ತಿಳಿಸುವುದೂ ಅನಂತರ ಮೈತ್ರಾವರುಣನು ಹೋತೃವನ್ನು ನಿರ್ದೇಶಿಸುವುದೂ ಸಹ ವ್ಯರ್ಥವಲ್ಲವೇ? ಅಧ್ವರ್ಯುವು ಒಂದಾವರ್ತಿಯೇ ಹೋತೃವನ್ನು ಏತಕ್ಕೆ ನಿರ್ದೇಶಿಸಬಾರದು? ಎಂದರೆ, ಅದಕ್ಕೆ ಸಮಾಧಾನವನ್ನು ಈ ರೀತಿ ಹೇಳುವರು—ಯಜ್ಞಪುರುಷನಿಗೆ ಅಥವಾ ಯಜ್ಞಕ್ಕೆ ಮೈತ್ರಾವರುಣನು ಮನಃಸ್ಥಾನೀಯನಾಗಿರುವನು ಎಂದರೆ ಮನಸ್ಸಿನಂತೆ ಇರುವನು. ಹೋತೃವು ವಾಕ್‌ಸ್ಥಾನೀಯನಾಗಿರುವನು ಎಂದರೆ ವಾಕ್ಯದಂತೆ ಇರುವನು. ಲೋಕವ್ಯವಹಾರದಲ್ಲಿ ಮನಸ್ಸಿನಲ್ಲಿ ಪ್ರೇರಿತವಾದದ್ದನ್ನು ವಾಕ್ಯ (ಮಾತಿನ) ಮೂಲಕ ಉಚ್ಚಾರಮಾಡುವುದು ರೂಢಿಯು. ಪುರುಷನು ಅನ್ಯಮನಸ್ಕನಾಗಿದ್ದರೆ ಅವನು ಪಠಿಸುವ ವಾಕ್ಯವು ಅರ್ಥಹೀನವಾಗಿದ್ದು ದೇವತೆಗಳನ್ನು ತೃಪ್ತಿಪಡಿಸುವುದಿಲ್ಲ, ಅಸುರರಿಗೆ ತೃಪ್ತಿಯನ್ನುಂಟುಮಾಡುವುದು. ಹೀಗಿರುವುದರಿಂದ ಮನಸ್ಸಿನ ಸ್ಥಾನದಲ್ಲಿರುವ ಮೈತ್ರಾವರುಣನು ಮೊದಲು ಪ್ರೈಷಮಂತ್ರವನ್ನು ಹೇಳುವನು. ಆದರಿಂದ ಆ ವಾಕ್ಯವು ಮನಸ್ಸಿನಿಂದ ಪ್ರೇರಿತವಾದಂತೆ ಆಗುವುದು. ಮನಸ್ಸಿನಿಂದ ಪ್ರೇರಿತವಾದಮೇಲೆ ಹೋತೃವು ಪಠಿಸುವ ವಾಕ್ಯವು ಮಾತಿನಿಂದ ಹೇಳಿದಂತೆ ಆಗಿ ದೇವತೆಗಳಿಗೆ ಹವ್ಯವನ್ನು ಒಯ್ದು ಅವರಿಗೆ ತೃಪ್ತಿಯನ್ನುಂಟುಮಾಡುವುದು. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ಹವ್ಯವು ಅಸುರರಿಗೆ ಹೋಗಿ ಸೇರುವುದು. ಆದ್ದರಿಂದ ಅಧ್ವರ್ಯುವಿನಿಂದ ಮೊದಲು ಮೈತ್ರಾವರುಣನು ಪ್ರೇರಿತನಾಗಿ ಅನಂತರ ಮೈತ್ರಾವರುಣನು ಮಂತ್ರವನ್ನು ಪಠಿಸುವಂತೆ ಹೋತೃವನ್ನು ನಿರ್ದೇಶಿಸಿದ ಬಳಿಕ ಹೋತೃವು ಪ್ರಸಕ್ತಮಂತ್ರವನ್ನು ಸ್ಪಷ್ಟವಾಗಿ ಉಚ್ಚರಿಸಿ ಪಠಿಸುವನು. ಈ ವಿಷಯದಲ್ಲಿ ಒಂದೆರಡು ಶ್ರುತಿವಾಕ್ಯಗಳ ಉದಾಹರಣೆಗಳನ್ನು ಇಲ್ಲಿ ಕೊಡುತ್ತೇವೆ—

ಮನಃ ಪೂರ್ವರೂಪಂ ವಾಗುತ್ತರರೂಪಂ ಮನಸಾ ವಾ ಅಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಂ ॥ (ಐ. ಆ. ೩-೧-೧)

ತಸ್ಮಾದ್ಯತ್ಪುರುಷೋ ಮನಸಾಭಿಗಚ್ಛತಿ । ತದ್ವಾಚಾ ವದತಿ । ತತ್ಕರ್ಮಣಾ ಕರೋತಿ ॥ (ತೈ. ಆ. ೧-೨೩-೧)

ಯದ್ಧ್ಯೈ ಹೃದಯೇನಭಿಗಚ್ಛತಿ ತಜ್ಜಿಹ್ವಯಾ ವದತಿ ಯಜ್ಜಿಹ್ವಯಾ ವದತಿ ತದುರಸೋಽಧಿ ನಿರ್ವದತಿ । (ತೈ. ಸಂ. ೬-೩-೧೦-೪)

## *English Translation*

**(The carrying of five round the sacrificial animal)**

When the fire is carried round (the animal) the Adhvaryu says to the Hotar : repeat (they mantras). The Hotar then repeats this triplet of verses,

addressed to Agni and composed in the Gayatri metre: agnir hota no adhvare (4, 15, 1-3) i. e. (1) Agni, our priest, is carried round about like a horse, who is among Gods the God of sacrifices. (2) Like a charioteer Agni passes thrice by the sacrifice; to the Gods he carries the offering. (3) The master of food, the seer Agni, went round the offerings; he bestows riches on the sacrificer.

When the fire is carried round (the animal) then he makes him (Agni) prosper by means of his own deity and his own metre. "As a horse he is carried" means: they carry him as if he were a horse, round about. Like a charioteer Agni passes thrice by the sacrifice means: he goes round the sacrifice like a charioteer (swiftly). He is called vajspati (master of food) because he is the master of (different kinds of) food.

The Adhvaryu says give Hotar: the additional order for despatching offerings to the Cods.

Then the Maitravaruna proceeds to give his orders by the words, may Agni be victorious, may be grant us food:

They ask: why does the Maitravaruna proceed to give his orders, of the Adhavaryu orders the Hotar to recite? (the answer is:) The Maitravaruna is the mind of the sacrifice; the Hotar is the speech of the sacrifice; for speech speaks only if driven (sent) by the mind; because an other-minded speaks the speech of the Asuras which is not agreeable to the Devas. If the Maitravaruna proceeds to give orders, he stirs up speech by means of the mind. Speech being stirred up by his mind, he secures the offering to the Gops (by preventing the Asuras from taking possession of it).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಷ್ಠಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



# ಅಥ ಷಷ್ಠಾಧ್ಯಾಯೇ ಷಷ್ಠಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಯಜ್ಞಪಶುವನ್ನು ಕೊಲ್ಲುವಕಾಲದಲ್ಲಿ ಪಠಿಸಬೇಕಾದ ಮಂತ್ರಗಳು ಇತ್ಯಾದಿ]



ಮೈತ್ರಾವರುಣನು ಉಪಪ್ರೈಷಮಂತ್ರವನ್ನು ಪಠಿಸಿದನಂತರ ಹೋತೃವು ಅಧ್ರಿಗು ಎಂಬ ಪಶುವನ್ನು ಕೊಲ್ಲುವ ಪುರುಷನನ್ನು ಕುರಿತು ಹೇಳುವನು. ಇದನ್ನು ಬೋಧಾಯನರು ಈರೀತಿ ತಿಳಿಸಿರುವರು— **ಯದಾ ಜಾನಾತ್ಯುಪಪ್ರೇಷ್ಯ ಹೋತರ್ಹವ್ಯಾ ದೇವೇಭ್ಯ ಇತಿ ತಂ ಮೈತ್ರಾವರುಣಃ ಪ್ರೇಷ್ಯತ್ಯಜ್ಯೈದಗ್ನಿರಿತ್ಯಥ ಹೋತಾಧ್ರಿಗುಮನ್ವಾಹ ದೈವ್ಯಾಃ ಶಮಿತಾರ ಇತಿ**—ಎಂದರೆ ಮೈತ್ರಾವರುಣನು **ಹೋತರ್ಹವ್ಯಾ ದೇವೇಭ್ಯ** ಎಂಬ ಉಪಪ್ರೈಷಮಂತ್ರವನ್ನು ಪಠಿಸಿದನಂತರ ಹೋತೃವು **ಅಜ್ಯೈದಗ್ನಿ** ಎಂಬ ಮಂತ್ರವನ್ನು ಪಠಿಸುವನು. ಬಳಿಕ ಹೋತೃವು ಅಧ್ರಿಗುವನ್ನು ಕುರಿತು **ದೇವ್ಯಾಃ ಶಮಿತಾರಃ** ಎಂಬ ಮಂತ್ರದ ಮೂಲಕ ಪಶುವನ್ನು ಕೊಲ್ಲುವುದಕ್ಕಾಗಿ ನಿರ್ದೇಶಿಸುವನು.

> ದೈವ್ಯಾಃ ಶಮಿತಾರ ಆರಭಧ್ವಮುತ ಮನುಷ್ಯಾ ಇತ್ಯಾಹ ಯೇ ಚೈವ ದೇವಾನಾಂ ಶಮಿತಾರೋ ಯೇ ಚ ಮನುಷ್ಯಾಣಾಂ ತಾನೇವ ತತ್ಸಂಶಾಸ್ತಿ ॥

ಮೈತ್ರಾವರಣೋಪಪ್ರೈಷಾದೂರ್ಧ್ವಂ ಹೋತುರಧ್ರಿಗುಪ್ರೈಷೋ ಬೋಧಾಯನೇನ ದರ್ಶಿತಃ—'ಯದಾ ಜಾನಾತ್ಯುಪಪ್ರೇಷ್ಯ ಹೋತರ್ಹವ್ಯಾ ದೇವೇಭ್ಯ ಇತಿ ತಂ ಮೈತ್ರಾವರುಣಃ ಪ್ರೇಷ್ಯತ್ಯಜ್ಯೈದಗ್ನಿರಿತ್ಯಥ ಹೋತಾಽಧ್ರಿಗುಮನ್ವಾಹ ದೈವ್ಯಾಃ ಶಮಿತಾರಃ' ಇತಿ ॥ ಅಧ್ರಿಗುಃ ಕಶ್ಚಿದ್ದೇವಃ ಪಶುವಿಶಸನಸ್ಯ ಕರ್ತಾ ತಂ ಪ್ರತಿ ಹೋತಾ ದೈವ್ಯಾಃ ಶಮಿತಾರ ಇತ್ಯಾದಿಕಂ ಪ್ರೈಷಮಂತ್ರಮನುಬ್ರೂಯಾದಿತಿ ತಸ್ಯ ಸೂತ್ರವಾಕ್ಯಸ್ಯಾರ್ಥಃ ॥ ತಮಿಮಂ ಸೂತ್ರೋಕ್ತಮರ್ಥಂ ವಿಧತ್ತೇ— ಹೇ ದೈವ್ಯಾ ದೇವಸಂಬಂಧಿನಃ ಶಮಿತಾರಃ ಪಶುವಿಶಸನಕಾರಿಣಃ ಆರಭಧ್ವಂ ವಿಶಸನಸ್ಯೋಪಕ್ರಮಂ ಕುರುತೋತ ಮನುಷ್ಯಾ ಅಪಿ ಮನುಷ್ಯರೂಪಾ ಅಪಿ ಶಮಿತಾರ ಆರಭಧ್ವಮಿತ್ಯಾದಿಕಮಧ್ರಿಗುಪ್ರೈಷಮಂತ್ರಂ ಹೋತಾ ಪಠೇತ್ ॥ ಯಥೋಕ್ತಮಂತ್ರಸ್ಯ ಪ್ರಥಮಪಾದಂ ವ್ಯಾಚಷ್ಟೇ—ತತ್ತೇನ ಪ್ರಥಮಪಾದಭಾಗೇನ ದ್ವಿವಿಧಜಾತೀಯಾನ್ ಶಮಿತೄನ್ಪ್ರೇರಯತಿ ॥

ಯಜ್ಞದಲ್ಲಿ ಪಶುವನ್ನು ಕೊಲ್ಲುವುದಕ್ಕಾಗಿ ನಿಯಮಿತನಾದ ಪುರುಷನನ್ನು ಶಮಿತೃ ಎಂದು ಕರೆಯುವರು. ದೇವತೆಗಳು ಮಾಡುವ ಯಜ್ಞದಲ್ಲಿ ಈ ಶಮಿತೃಗಳು ಇಬ್ಬರಿರುವರು—ಅಧ್ರಿಗು ಮತ್ತು ವಿಪಾಪ (ಅಥವಾ ಅಪಾಪ) ಎಂದು ಇವರ ಹೆಸರು. ಈ ವಿಷಯವು—

ಅಧ್ರಿಗುಶ್ಚಾಪಾಪಶ್ಚ । ಉಭೌ ದೇವಾನಾಗ್‌ಂ ಶಮಿತಾರೌ । ತಾವಿಮಂ ಪಶುಗ್‌ಂ ಶ್ರಪಯತಾಂ ಪ್ರವಿದ್ವಾಗ್‌ಂಸೌ । ಯಥಾಯಥಾಸ್ಯ ಶ್ರಪಣಂ ತಥಾತಥಾ ॥

(ತೈ. ಬ್ರಾ. ೩-೬-೬)

ಅಧ್ರಿಗುಶ್ಚ ವಿಪಾಪಶ್ಚ ದೇವಾನಾಗ್‌ಂ ಶಮಿತಾರೌ ।
ತಾ ಏನಂ ಪ್ರವಿದ್ವಾಗ್‌ಂಸೌ ಶ್ರಪಯತಂ ಯಥಾಸ್ಯ ಶ್ರಪಣಂ ತಥಾ ।

(ಮೈತ್ರಾಯಣೀಯಸಂಹಿತಾ. ೪-೧೩-೪)

ದೈವ್ಯಾಶ್ಶಮಿತಾರ ಉತ ಚ ಮನುಷ್ಯಾ ಆರಭಧ್ವಂ (ಕಾಠಕಸಂಹಿತಾ. ೧೬-೨೧)

ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಹೇಳಲ್ಪಟ್ಟಿರುವುದು. ಸಾಯಣರು ಅಧ್ರಿಗುಶಬ್ದಕ್ಕೆ— ಕಶ್ಚಿದ್ದೇವಃ ಪಶುವಿಶಸನಸ್ಯ ಕರ್ತಾ ಯಜ್ಞಪಶುವನ್ನು ಕೊಂದು ಅದನ್ನು ಹೋಮಮಾಡುವುದಕ್ಕಾಗಿ ಸಣ್ಣಸಣ್ಣ ತುಂಡುಗಳಾಗಿ ಕತ್ತರಿಸುವ ಒಬ್ಬ ದೇವತೆಯು ಎಂದರ್ಥವನ್ನು ಹೇಳಿರುವರು. ಹೋತೃವು ಶಮಿತೃವನ್ನು ಕುರಿತು ಹೇಳುವ ಮಂತ್ರವು ಈರೀತಿ ಇರುವುದು—

ದೈವ್ಯಾಶ್ಶಮಿತಾರ ಉತ ಮನುಷ್ಯಾ ಆರಭಧ್ವಂ । ಉಪ ನಯತ ಮೇಧ್ಯಾ ದುರಃ । ಆಶಾಸಾನಾ ಮೇಧಪತಿಭ್ಯಾಂ ಮೇಧಂ । ಪ್ರಾಸ್ಮಾ ಅಗ್ನಿಂ ಭರತ । ಸ್ತೃಣೀತ ಬರ್ಹಿಃ । ಅನ್ವೇನಂ ಮಾತಾ ಮನ್ಯತಾಂ । ಅನು ಪಿತಾ । ಅನು ಭ್ರಾತಾ ಸಗರ್ಭ್ಯಃ । ಅನು ಸಖಾ ಸಯೂಥ್ಯಃ । ಉದೀಚೀನಾಗ್‌ಂ ಅಸ್ಯ ಪದೋ ನಿಧತ್ತಾಂ । ಸೂರ್ಯಂ ಚಕ್ಷುರ್ಗಮಯತಾತ್ । ವಾತಂ ಪ್ರಾಣಮನ್ವವ ಸೃಜತಾತ್ । ದಿಶಃ ಶ್ರೋತ್ರಂ । ಅಂತರಿಕ್ಷಮಸುಂ । ಪೃಥಿವೀಗ್‌ಂ ಶರೀರಂ । ಏಕಧಾಸ್ಯ ತ್ವಚಮಾಚ್ಛ್ಯತಾತ್ । ಪುರಾ ನಾಭ್ಯಾ ಅಪಿಶಸೋ ವಪಾಮುತ್ಖಿದತಾತ್ । ಅಂತರೇವೋಷ್ಮಾಣಂ ವಾರಯತಾತ್ । ಶ್ಯೇನಮಸ್ಯ ವಕ್ಷಃ ಕೃಣುತಾತ್ । ಪ್ರಶಸಾ ಬಾಹೂ । ಶಲಾ ದೋಷಣೀ । ಕಶ್ಯಪೇವಾಗ್‌ಂಸಾ । ಅಚ್ಛಿದ್ರೇ ಶ್ರೋಣೀ । ಕವಷೋರೂ ಸ್ರೇಕಪರ್ಣಾಷ್ಠೀವಂತಾ । ಷಡ್ವಿಂಶತಿರಸ್ಯ ವಂಕ್ರಯಃ । ತಾ ಅನುಷ್ಠ್ಯೋಚ್ಚ್ಯಾವಯತಾತ್ । ಗಾತ್ರಂಗಾತ್ರಮಸ್ಯಾನೂನಂ ಕೃಣುತಾತ್ । ಊವಧ್ಯಗೋಹಂ ಪಾರ್ಥಿವಂ ಖನತಾತ್ । ಅಸ್ನಾ ರಕ್ಷಃ ಸಗ್‌ಂ ಸೃಜತಾತ್ । ವನಿಷ್ಠುಮಸ್ಯ ಮಾ ರಾವಿಷ್ಟ । ಉರೂಕಂ ಮನ್ಯಮಾನಃ । ನೇದ್ವಸ್ತೋಕೇ ತನಯೇ । ರವಿತಾರವಚ್ಛಮಿತಾರಃ । ಅಧ್ರಿಗೋ ಶಮೀಧ್ವಂ । ಸುಶಮಿ ಶಮೀಧ್ವಂ । ಶಮೀಧ್ವಮಧ್ರಿಗೋ ॥ (ತೈ. ಬ್ರಾ. ೩-೬-೬ ; ಕಾಠಕಸಂ. ೧೬-೨೧ ; ಮೈ. ಸಂ. ೪-೧೩-೪)

ಇದರ ಅರ್ಥವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವರು. ಎಲೈ ದೇವಸಂಬಂಧಿಗಳಾದ ಶಮಿತೃಗಳೇ ಎಂದರೆ ಪಶುವನ್ನು ವಧೆಮಾಡುವವರೇ, ಮತ್ತು ಮನುಷ್ಯಸಂಬಂಧಿಗಳಾದ ಶಮಿತೃಗಳೇ ಈಗ ನೀವು ಪಶುವನ್ನು ಕೊಂದು ಅದನ್ನು ಕತ್ತರಿಸುವ ಕೆಲಸವನ್ನು ಆರಂಭಿಸಿ ಎಂದು ಹೋತೃವು ಹೇಳಿ ದೇವತೆಗಳ ಮತ್ತು ಮಾನವರ ಶಮಿತೃಗಳನ್ನು ಅವರ ಕಾರ್ಯದಲ್ಲಿ ಪ್ರೋತ್ಸಾಹಿಸಿ ಉಭಯವಿಧ ಶಮಿತೃಗಳನ್ನು ಪ್ರಶಂಸೆಮಾಡುವನು.

**ಉಪನಯತ ಮೇಧ್ಯಾ ದುರ ಆಶಾಸಾನಾ ಮೇಧಪತಿಭ್ಯಾಂ ಮೇಧಮಿತಿ ಪಶುರ್ವೈ ಮೇಧೋ ಯಜಮಾನೋ ಮೇಧಪತಿರ್ಯ-**

ಜಮಾನಮೇವ ತತ್ಸ್ವೇನ ಮೇಧೇನ ಸಮರ್ಧಯತಿ । ಅಥೋ ಖಲ್ವಾಹುರ್ಯಸ್ಯೈ ವಾವ ಕಸ್ಯೈ ಚ ದೇವತಾಯೈ ಪಶುರಾಲಭ್ಯತೇ ಸೈವ ಮೇಧಪತಿರಿತಿ ಸ ಯದ್ಯೇಕದೇವತ್ಯಃ ಪಶುಃ ಸ್ಯಾನ್ಮೇಧಪತಯ ಇತಿ ಬ್ರೂಯಾದ್ಯದಿ ದ್ವಿದೇವತ್ಯೋ ಮೇಧಪತಿಭ್ಯಾಮಿತಿ ಯದಿ ಬಹುದೇವತ್ಯೋ ಮೇಧಪತಿಭ್ಯ ಇತ್ಯೇತದೇವ ಸ್ಥಿತಂ ।

ಮಂತ್ರಸ್ಯ ದ್ವಿತೀಯಭಾಗಮನುವದತಿ—ಪ್ರಾರಂಭೇ ಕಿಂ ಕರ್ತವ್ಯಮಿತಿ ಚೇತ್ । ತದುಚ್ಯತೇ॥ಮೇಧ್ಯಾ ಮೇಧಾರ್ಹಾ ದುರೋ ದ್ವಾರೋ ಹವಿರ್ಮಾರ್ಗಾನ್ವಿಶಸನಹೇತೀರ್ವೋಪನಯತ ಸಂನಿಧಾಪಯತ ಮೇಧಪತಿಭ್ಯಾಂ ಯಜ್ಞಸ್ವಾಮಿಪತ್ನೀಯಜಮಾನಾರ್ಥಮಗ್ನೀಷೋಮದೇವತಾರ್ಥಂ ವಾ ಮೇಧಂ ಯಜ್ಞಮಾಶಾಸಾನಾಃ ಪ್ರಾರ್ಥಯಮಾನಾ ಹೇ ಶಮಿತಾರೋ ಯೂಯಮುಪನಯತ ॥ ಅತ್ರ ಮೇಧಶಬ್ದಂ ಮೇಧಪತಿಶಬ್ದಂ ಚ ವ್ಯಾಚಷ್ಟೇ—ಮತಾಂತರಾನುಸಾರೇಣ ಮೇಧಪತಿಶಬ್ದಸ್ಯಾರ್ಥಂ ದರ್ಶಯತಿ--ಅಸ್ತು ಮೇಧಪತಿಶಬ್ದೋ ದೇವತಾಪರಸ್ತಾವತಾ ಚ ಕೋ ಲಾಭ ಇತ್ಯಾಶಂಕ್ಯಾಹ—

ಈಗ ಪಶುವಧಾರ್ಥವಾಗಿ ಮಾಡಬೇಕಾದ ಕಾರ್ಯವನ್ನು ವಿವರಿಸುವರು. ಹೋತೃವು ಶಮಿತೃಗಳನ್ನು ಉದ್ದೇಶಿಸಿ ಹೀಗೆ ಹೇಳುವನು – ಎಲೈ ಶಮಿತೃಗಳೇ, ಯಜ್ಞನಿರ್ವಾಹಕರಾದ ಯಜಮಾನ ಮತ್ತು ಅವನ ಪತ್ನಿಯ ಅಥವಾ ಯಜ್ಞದೇವತೆಗಳಾದ ಅಗ್ನಿ ಮತ್ತು ಸೋಮದೇವತೆಗಳ ಸೌಕರ್ಯಕ್ಕಾಗಿ ಅಥವಾ ತೃಪ್ತಿಗಾಗಿ ಯಜ್ಞಪಶುವನ್ನು ಯಜ್ಞಶಾಲೆಯ ದ್ವಾರದ ಮೂಲಕ ವಧಸ್ಥಾನಕ್ಕೆ ತೆಗೆದುಕೊಂಡು ಹೋಗುವುದಕ್ಕಾಗಿ ಕರೆದುಕೊಂಡು ಬನ್ನಿ. ಮತ್ತು ಪಶುವನ್ನು ಕೊಲ್ಲುವುದಕ್ಕಾಗಿ ಬೇಕಾಗುವ ಸಲಕರಣೆಗಳನ್ನು ಸಿದ್ಧಮಾಡಿಕೊಳ್ಳಿ ಎಂದು ಹೇಳುವನು. ಮೇಧ, ಮೇಧಪತಿ ಎಂಬ ಶಬ್ದಗಳ ಪ್ರಯೋಗವಿರುವುದನ್ನು ವಿವರಿಸಬೇಕಾಗಿದೆ. ಮೇಧ ಅಥವಾ ಮೇಧ್ಯ ಎಂದರೆ ಯಜ್ಞದಲ್ಲಿ ಹೋಮಮಾಡುವುದಕ್ಕಾಗಿ ಯೋಗ್ಯವಾದ ವಸ್ತುವು ಎಂದರೆ ಹವಿಸ್ಸು. ಇಲ್ಲಿ ಪಶುವನ್ನೇ ಹೋಮಮಾಡುವುದರಿಂದ ಪಶುವನ್ನೇ ಮೇಧವೆಂದು ಹೇಳುವರು. ಆ ಪಶುವನ್ನು ಸಂಪಾದಿಸಿ ತಂದ ಯಜ್ಞಮಾಡುವ ಯಜಮಾನನಿಗೆ ಮೇಧಪತಿಯೆಂದು ಹೆಸರು. ಯಜಮಾನನು ಸಂಪಾದಿಸಿ ತಂದ ಪಶುವನ್ನು ನಿರ್ದಿಷ್ಟ ದೇವತೆಗಳ ಪ್ರೀತ್ಯರ್ಥವಾಗಿ ಹೋಮಮಾಡುವುದರಿಂದ ಯಜಮಾನನಿಗೆ ಸಮೃದ್ಧಿಯುಂಟಾಗುವುದು. ಈಗ ಇಲ್ಲಿ ಕೆಲವರು ಮೇಧಪತಿಶಬ್ದಕ್ಕೆ ಬೇರೆ ಅರ್ಥವನ್ನು ಕಲ್ಪಿಸುವರು. ಅದರಂತೆ ಮೇಧಪತಿಯೆಂದರೆ ಮೇಧ (ಪಶುವನ್ನು) ಹೋಮ ಮೂಲಕ ಸ್ವೀಕರಿಸುವ ದೇವತೆಗಳು ಎಂದರ್ಥವು. ಎಂದರೆ ಯಾರ ಪ್ರೀತ್ಯರ್ಥವಾಗಿ ಪಶುಗಳನ್ನು ತಂದಿಡಲ್ಪಟ್ಟಿರುವುದೋ ಆ ದೇವತೆಗಳು. ಈ ಅರ್ಥವನ್ನು ಸ್ವೀಕರಿಸುವ ಸಂದರ್ಭದಲ್ಲಿ ಉದ್ದಿಷ್ಟದೇವತೆಯು ಒಬ್ಬನಾಗಿದ್ದ ಪಕ್ಷದಲ್ಲಿ ಮಂತ್ರವನ್ನುಚ್ಚರಿಸುವಾಗ **ಮೇಧಪತಯೇ** ಎಂಬ ಏಕವಚನಶಬ್ದವನ್ನು ಪ್ರಯೋಗಿಸಬೇಕು. ದೇವತೆಗಳು ಇಬ್ಬರಾಗಿದ್ದಲ್ಲಿ **ಮೇಧಪತಿಭ್ಯಾಂ** ಎಂಬ ದ್ವಿವಚನಶಬ್ದವನ್ನು, ಅನೇಕ ದೇವತೆಗಳಿದ್ದಲ್ಲಿ **ಮೇಧಪತಿಭ್ಯಃ** ಎಂಬ ಬಹುವಚನಶಬ್ದವನ್ನು ಪ್ರಯೋಗಿಸಬೇಕು. ಹೀಗೆ ಸಂದರ್ಭಾನುಸಾರವಾಗಿ **ಮಂತ್ರ**ಗಳಲ್ಲಿ ವಚನವಿಭಕ್ತಿಗಳನ್ನು ವ್ಯತ್ಯಾಸಮಾಡಿ ಪಠಿಸುವುದಕ್ಕೆ **ಊಹ**ವೆಂದು ಹೆಸರು.

## ಪ್ರಾಸ್ಮಾ ಅಗ್ನಿಂ ಭರತೇತಿ ।

ತೃತೀಯಭಾಗಮನುವದತಿ । ಅಸ್ಮೈ ಪಶ್ವರ್ಥಂ ಹೇ ಶಮಿತಾರೋಽಗ್ನಿಂ ಪ್ರಭರತ ಪ್ರಥಮಂ ನಯತ ॥

ಪಶುವನ್ನು ವಧಿಸುವ ಎಲೈ ಶಮಿತೃಗಳೇ, ಈಗ ನೀವು ವಧಿಸಲು ಸಿದ್ಧಪಡಿಸುತ್ತಿರುವ ಈ ಪಶುವಿನ ಸಹಾಯಾರ್ಥವಾಗಿ ಮೊದಲು ಎಂದರೆ ಪಶುವಿನ ಮುಂದುಗಡೆ ಅಗ್ನಿಯನ್ನು (ಬೆಂಕಿಯನ್ನು) ಒಯ್ಯಿರಿ. ಪಶುವಿನ ಮುಂಭಾಗದಲ್ಲಿ ಅಗ್ನಿಯನ್ನು ಏತಕ್ಕೆ ವಹಿಸಬೇಕು ? ಹಾಗೆ ವಹಿಸುವುದರಿಂದ ಪಶುವಿಗೆ ಹೇಗೆ ಸಹಾಯವಾದಂತಾಯಿತು ? ಈ ವಿಷಯಗಳನ್ನು ವಿವರಿಸುವುದಕ್ಕಾಗಿ ಈ ಸಂಬಂಧವಾದ ಒಂದು ಪೂರ್ವೇತಿಹಾಸವನ್ನು ಇಲ್ಲಿ ವಿವರಿಸುವರು.

ಪಶುರ್ವೈ ನೀಯಮಾನಃ ಸ ಮೃತ್ಯುಂ ಪ್ರಾಪಶ್ಯತ್ಸ ದೇವಾನ್ನಾನ್ವಕಾಮಯತೈತುಂ ತಂ ದೇವಾ ಅಬ್ರುವನ್ನೇಹಿ ಸ್ವರ್ಗಂ ವೈ ತ್ವಾ ಲೋಕಂ ಗಮಯಿಷ್ಯಾಮ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮೇ ಯುಷ್ಮಾಕಮೇಕಃ ಪುರಸ್ತಾದೇತ್ವಿತಿ ತಥೇತಿ ತಸ್ಯಾಗ್ನಿಃ ಪುರಸ್ತಾದೈತ್ಸೋಽಗ್ನಿಮನು ಪ್ರಾಚ್ಯವತ ತಸ್ಮಾದಾಹುರಾಗ್ನೇಯೋ ವಾವ ಸರ್ವಃ ಪಶುರಗ್ನಿಂ ಹಿ ಸೋಽನು ಪ್ರಾಚ್ಯವತೇತಿ ತಸ್ಮಾದ್ವಸ್ಯಾಗ್ನಿಂ ಪುರಸ್ತಾದ್ಧರಂತಿ ॥

ಅಗ್ನೇಃ ಪ್ರಥಮತೋ ನಯನಮುಪಪಾದಯಿತುಮಾಖ್ಯಾಯಿಕಾಮಾಹ—ಶಾಮಿತ್ರದೇಶಂ ಪ್ರತಿನೀಯಮಾನಃ ಪಶುಃ ಪ್ರತ್ಯಕ್ಷೇಣ ಮೃತ್ಯುಂ ದೃಷ್ಟವಾನ್ ॥ ತತಃ ಸ ಪಶುರ್ದೇವಾನನ್ವೇತುಂ ನಾನ್ವಕಾಮಯತಾಽಽಗಂತುಂ ನೈಚ್ಛತ್ ॥ ತತೋ ದೇವಾಃ ಪಶುಂ ಪ್ರತ್ಯೇವಮಬ್ರುವನ್ಹೇ ಪಶೋ ತ್ವಮಾಗಚ್ಛ ತ್ವಯಾ ಸಹ ವಯಂ ಸರ್ವೇ ಸ್ವರ್ಗಂ ಗಚ್ಛಾಮ ಇತಿ ॥ ಪಶುಶ್ಚ ತದಂಗೀಕೃತ್ಯ ದೇವಾನ್ಪ್ರತ್ಯೇವಮಬ್ರವೀತ್ ॥ ಯುಷ್ಮಾಕಂ ಮಧ್ಯೇ ಕಶ್ಚಿದ್ದೇವೋ ಮಮ ಪುರಸ್ತಾದ್ಗಚ್ಛತ್ವಿತಿ ॥ ತದ್ವಚನಮಂಗೀಕೃತ್ಯಾಗ್ನಿರ್ದೇವಸ್ತಸ್ಯ ಪಶೋಃ ಪುರಸ್ತಾದಗಚ್ಛತ್ ॥ ತತಃ ಸ ಪಶುಸ್ತಮಗ್ನಿಮನು ಸ್ವಯಮಪಿ ತುಷ್ಟಃ ಸನ್ಪ್ರಕರ್ಷೇಣಾಗಚ್ಛತ್ ॥ ತಸ್ಮಾದಗ್ನಿಂ ಪ್ರಭರತೇತ್ಯೇತದ್ಯುಕ್ತಂ ॥ ಉಕ್ತಮರ್ಥಂ ಲೋಕಪ್ರಸಿಧ್ಯಾ ದೃಢಯತಿ—ಯಸ್ಮಾದಗ್ನಿಮನು ಪಶುಃ ಪ್ರಾಗಚ್ಛತ್ ತಸ್ಮಾದಾಗ್ನೇಯಃ ಸರ್ವಃ ಪಶುರಿತ್ಯೇವಂ ಯಾಜ್ಞಿಕಲೋಕಪ್ರಸಿದ್ಧಿಃ ॥ ಅತ ಏವ ಸರ್ವಂ ಪಶುಮಗ್ನಾ ಜುಹ್ವತಿ ॥ ಯಸ್ಮಾದೇವಂ ಪ್ರಸಿದ್ಧಿಸ್ತಸ್ಮಾದೇವ ಕಾರಣಾತ್ಪಶೋಃ ಪುರಸ್ತಾದಗ್ನಿಂ ನಯೇಯುರಿತ್ಯೇತಮರ್ಥಂ ಪ್ರಸಂಗಾದ್ವಿಧತ್ತೇ—ತಸ್ಮಾದು ತಸ್ಮಾದೇವ—

ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಯಜ್ಞಕ್ಕಾಗಿ ನಿರ್ದಿಷ್ಟವಾದ ಪಶುವನ್ನು ವಧಸ್ಥಾನಕ್ಕೆ ಕರೆದೊಯ್ಯಲು ಉದ್ಯುಕ್ತರಾದರು. ಆಗ ಪಶುವು ತನ್ನನ್ನು ಕೊಲ್ಲುವರೆಂದೂ ತನಗೆ ಮೃತ್ಯುವು ಸನ್ನಿಹಿತವಾಗಿರುವುದೆಂದೂ ಕಂಡುಕೊಂಡಿತು. ಆದ್ದರಿಂದ ಅದು ದೇವತೆಗಳೊಡನೆ ವಧಸ್ಥಾನಕ್ಕೆ ಹೋಗಲು ಇಚ್ಛಿಸಲಿಲ್ಲ. ತಾನು ಅಲ್ಲಿಗೆ ಬರುವುದಿಲ್ಲವೆಂದು ನಿರಾಕರಿಸಿತು.

ಆಗ ದೇವತೆಗಳು ಆ ಪಶುವನ್ನು ಸಮಾಧಾನಪಡಿಸುತ್ತಾ ಇಂತೆಂದರು--ಎಲೈ ಪಶುವೇ, ನೀನು ಹೆದರಬೇಡ, ನೀನು ನಮ್ಮ ಜತೆಯಲ್ಲಿ ಬಾ, ನಿನ್ನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವೆವು ಎನ್ನಲು ಪಶುವು—ಒಳ್ಳೇದು ಹಾಗೆಯೇ ಆಗಲಿ, ನಾನು ನಿಮ್ಮ ಜತೆಯಲ್ಲಿ ಬರಲು ಒಪ್ಪುವೆನು ಆದರೆ ನಾನೇ ಮುಂದೆ ಹೋಗುವುದಿಲ್ಲ, ನಿಮ್ಮಲ್ಲಿ ಯಾರಾದರೊಬ್ಬರು ಮುಂದೆ ಹೋಗಲಿ, ಅವನನ್ನನುಸರಿಸಿ ಅವನ ಹಿಂದೆ ನಾನು ಹೋಗುವೆನು ಎಂದಿತು. ದೇವತೆಗಳು ಆ ಮಾತಿಗೆ ಒಪ್ಪಿದ್ದರಿಂದ ದೇವತೆಗಳಲ್ಲಿ ಒಬ್ಬನಾದ ಅಗ್ನಿಯು ಮುಂದೆ ಹೊರಟನು. ಪಶುವು ಅವನನ್ನು ಹಿಂಬಾಲಿಸಿತು. ಆದ್ದರಿಂದ ಪಶುಹೋಮಗಳಲ್ಲಿ ಪಶುವನ್ನು ವಧಸ್ಥಾನಕ್ಕೆ ಒಯ್ಯುವಾಗ ಮೊದಲು ಎಂದರೆ ಪಶುವಿನ ಮುಂಭಾಗದಲ್ಲಿ ಅಗ್ನಿಯನ್ನು ತೆಗೆದುಕೊಂಡುಹೋಗುವರು. ಈ ಕಾರಣದಿಂದ ಅಗ್ನಿಗೂ ಪಶುವಿಗೂ ಒಂದುವಿಧವಾದ ಸಂಬಂಧವು ಉಂಟಾದಹಾಗಾಯಿತು. ಅದ್ದರಿಂದಲೇ **ಆಗ್ನೇಯಾಃ ಪಶವಃ** ಎಂದು ಹೇಳುವರು ಮತ್ತು ಹೋಮದ್ರವ್ಯವಾದ ಪಶುವನ್ನು ಒಯ್ಯುವಾಗ ಅದರ ಮುಂದೆ ಅಗ್ನಿಯನ್ನು ಒಯ್ಯುವುದು ರೂಢಿಯಲ್ಲಿ ಬಂದಿತು. ಈ ವಿಚಾರದಲ್ಲಿ **ಅಗ್ನಿನಾ ಪುರಸ್ತಾದೇತಿ ರಕ್ಷಸಾಮಪಹತ್ಯೈ** ಎಂದು ತೈತ್ತಿರೀಯಸಂಹಿತಾವಾಕ್ಯವಿರುವುದು (ತೈ. ಸಂ. ೬-೩-೮) ಮತ್ತು " **ಪ್ರಾಸ್ಮಾ ಅಗ್ನಿಂ ಭರತ ಸ್ತೃಣೀತ ಬರ್ಹಿರಿತಿ ಹೋತುರಭಿಜ್ಞಾಯಾಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪೂರ್ವಃ ಪ್ರತಿಪದ್ಯತೇ**- ಹೋತೃವು **ಪ್ರಾಸ್ಮಾ ಅಗ್ನಿಂ ಭರತ** ಎಂಬ ವಾಕ್ಯವನ್ನು ಉಚ್ಚರಿಸಿದಕೂಡಲೇ ಆಗ್ನೀಧ್ರನೆಂಬ ಋತ್ವಿಜನು ಆಹವನೀಯಾಗ್ನಿ ಕುಂಡದಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದುಕೊಂಡು ಪಶುವಿನ ಮುಂದುಗಡೆ ಹೊರಡುವನು " ಎಂಬ ಆಪಸ್ತಂಬ ಶ್ರೌತಸೂತ್ರದ ವಾಕ್ಯವು (ಆಪ. ಶ್ರೌ. ಸೂ. ೭-೧೫-೮) ಈ ವಿಷಯವನ್ನು ಸಮರ್ಥಿಸುವುದು.

**ಸ್ತೃಣೀತ ಬರ್ಹಿರಿತ್ಯೋಷಧ್ಯಾತ್ಮಾ ವೈ ಪಶುಃ ಪಶುಮೇವ ತತ್ಸರ್ವಾತ್ಮಾನಂ ಕರೋತಿ**

**ಚತುರ್ಥಭಾಗಮನೂದ್ಯ ವ್ಯಾಚಷ್ಟೇ—ಸಂಜ್ಞಪನಸ್ಥಾನಂ ನೀತಸ್ಯ ಪಶೋರಧಸ್ತಾದುಪಾಕರಣಸಾಧನಯೋರ್ಬರ್ಹಿಷೋರನ್ಯತರದ್ಬರ್ಹಿರ್ಹೇ ಶಮಿತಾರ ಉಪಕ್ಷಿಪತ ॥ ಪಶುಭಕ್ಷಿತಾನಾಮೋಷಧೀನಾಂ ಪಶ್ವವಯವತ್ವೇನ ಪರಿಣತತ್ವಾತ್ಪಶೋರೋಷಧ್ಯಾತ್ಮತ್ವಮತಸ್ತದ್ಭಾಗಪಾಠೇನ ಪಶುಂ ಸರ್ವೌಷಧ್ಯಾತ್ಮಾನಂ ಕರೋತಿ ॥**

ಅನಂತರ ಹೋತೃವು **ಸ್ತೃಣೀತ ಬರ್ಹಿಃ**-ಎಲೈ ಪಶುವನ್ನು ವಧಿಸುವ ಶಮಿತೃಗಳೇ ನೀವು ಈಗ ಪಶುವನ್ನು ಕಟ್ಟುವ ಸ್ಥಳವಲ್ಲಿ ನೆಲದಮೇಲೆ **ಬರ್ಹಿಃ** ಎಂಬ ಹುಲ್ಲನ್ನು ಹರಡಿರಿ. ಪಶುವು ನಿಲ್ಲುವ ಸ್ಥಳವು ಮೆತ್ತಗಿರುವುದಕ್ಕಾಗಿ ಹುಲ್ಲನ್ನು ಹಾಸಿರಿ ಎಂದು ಹೇಳುವನು. ಹುಲ್ಲನ್ನು ಏತಕ್ಕಾಗಿ ಹರಡಬೇಕು ? ಹುಲ್ಲಿಗೂ ಪಶುವಿಗೂ ಏನು ಸಂಬಂಧ ? ಎಂದರೆ ಪಶುವು ಯಾವಾಗಲೂ ತನ್ನ ಆಹಾರಕ್ಕಾಗಿ ಹುಲ್ಲನ್ನು ತಿನ್ನುವುದು. ಇಲ್ಲಿ ಹುಲ್ಲು ಸಸ್ಯವಾದ್ದರಿಂದ ಅದನ್ನು ಓಷಧಿಶಬ್ದದಿಂದ ಕರೆಯಲಾಗಿದೆ. ಪಶುವು ಹುಲ್ಲನ್ನು ತಿಂದು ಜೀವಿಸುವುದರಿಂದ ಪಶುವು (ಎಂದರೆ ಪಶುವಿನ ಅವಯವಗಳು) ಹುಲ್ಲು ಅಥವಾ ಓಷಧಿ ರೂಪವಾಗಿದೆ. ಆದ್ದರಿಂದ ಹೋತೃವು ಪಶುವಿಗೆ ಹುಲ್ಲನ್ನು ನೀಡುವಂತೆ (ಹರಡುವಂತೆ, ಋತ್ವಿಕ್ಕುಗಳಿಗೆ ಹೇಳುವುದರಿಂದ ಪಶುವನ್ನು ಓಷಧಿರೂಪವನ್ನಾಗಿ ಪುಷ್ಟಾಂಗವುಳ್ಳದ್ದನ್ನಾಗಿ ಮಾಡಿದಂತಾಯಿತೆಂದಭಿಪ್ರಾಯವು.

**ಅನ್ವೇನಂ ಮಾತಾ ಮನ್ಯತಾಮನು ಪಿತಾನು ಭ್ರಾತಾ ಸಗರ್ಭ್ಯೋಽನು ಸಖಾ ಸಯೂಥ್ಯ ಇತಿ ಜನಿತ್ರೈರೇವೈನಂ ತತ್ಸಮನುಮತಮಾಲಭಂತೇ ।**

**ಪಂಚಮಭಾಗಮನೂದ್ಯ ವ್ಯಾಚಷ್ಟೇ—ಸಂಜ್ಞಪ್ಯಮಾನಮೇನಂ ಪಶುಂ ಮಾತ್ರಾದ-ಯೋಽಂಗೀ ಕುರ್ವತಾಂ ॥ ಸಮಾನೇ ಗರ್ಭೇ ಭವಃ ಸಗರ್ಭ್ಯ ಏಕೋದರೋ ಭ್ರಾತೃವಿಶೇಷಣ-ಮೇತತ್, ಸಮಾನೇ ಯೂಥೇ ಭವಃ ಸಯೂಥ್ಯಃ ಪಶುಸಮೂಹಾದ್ವ್ಯಾವರ್ತಕವಿಶೇಷಣಮೇ-ತತ್ ॥ ತದ್ಭಾಗಪಾಠೇನೈನಂ ಪಶುಂ ಜನಿತ್ರ್ಯಾದಿಜನ್ಮಸಂಬಂಧಿಭಿಃ ಪಶ್ವಂತರೈರನುಜ್ಞಾತಂ ಕೃತ್ವಾ ಪಶ್ಚಾದಾಲಭಂತೇ ॥**

ಅನಂತರ ಋತ್ವಿಕ್ಕುಗಳು ಎಂದರೆ ಪಶುವಧಕ್ಕಾಗಿ ನಿಯಮಿತರಾದ ಶಮಿತೃಗಳು **ಅನ್ವೇನಂ ಮಾತಾಮನ್ಯತಾಮನು ಪಿತಾನು ಭ್ರಾತಾ ಸಗರ್ಭ್ಯೋಽನು ಸಖಾ ಸಯೂಥ್ಯ** ಎಂಬ ಮಂತ್ರವನ್ನು ಪಠಿಸಿ ಪಶುವನ್ನು ವಧಸ್ಥಾನಕ್ಕೆ ಒಯ್ಯುವರು. ಈ ಮಂತ್ರದ ಅರ್ಥವೇನೆಂದರೆ—ಈ ಯಜ್ಞದಲ್ಲಿ ವಧಿಸುವುದಕ್ಕಾಗಿ ನಿರ್ದಿಷ್ಟವಾಗಿರುವ ಈ ಪಶುವಿನ ತಾಯಿ, ತಂದೆ, ಒಡಹುಟ್ಟಿದ ಸಹೋದರರು, ಸ್ನೇಹಿತರು, ಹಿಂಡಿನಲ್ಲಿರುವ ಇತರ ಪಶುಗಳು ಇವರೆಲ್ಲರೂ ಈ ಪಶುವನ್ನು ಯಜ್ಞಕ್ಕಾಗಿ ವಧಿಸುವ ಕಾರ್ಯಕ್ಕೆ ಒಪ್ಪಿಗೆಯನ್ನು ನೀಡಲಿ ಎಂದು. ಈರೀತಿ ಪಶುವಿನ ಸಂಬಂಧಿಗಳ ಅನುಜ್ಞೆಯನ್ನು ಪಡೆದು (ಪಡೆದಂತೆ ಭಾವಿಸಿ) ಪಶುವನ್ನು ವಧಸ್ಥಾನಕ್ಕೆ ಒಯ್ಯುವರು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆ ಈರೀತಿ ಹೇಳಿರುವುದು—**ದೇವತ್ರಾ-ಯಂತಮವಸೇ ಸಖಾಯೋಽನು ತ್ವಾ ಮಾತಾಪಿತರೋ ಮದಂತ್ವಿತ್ಯಾಹಾನುಮತಮೇವೈನಂ ಮಾತ್ರಾ ಪಿತ್ರಾ ಸುವರ್ಗಂ ಲೋಕಂ ಗಮಯತಿ** (ತೈ. ಸಂ. ೬-೩-೧೧)

## ಉದೀಚೀನಾಂ ಅಸ್ಯ ಪದೋ ನಿಧತ್ತಾತ್ಸೂರ್ಯಂ ಚಕ್ಷುರ್ಗಮಯ-ತಾದ್ವಾತಂ ಪ್ರಾಣಮನ್ವವಸೃಜತಾದಂತರಿಕ್ಷಮಸುಂ ದಿಶಃ ಶ್ರೋತ್ರಂ ಪೃಥಿವೀಂ ಶರೀರಮಿತ್ಯೇಷ್ವೇವೈನಂ ತಲ್ಲೋಕೇಷ್ವಾ-ದಧಾತಿ ॥

**ಷಷ್ಠಂ ಭಾಗಮನೂದ್ಯ ವ್ಯಾಚಷ್ಟೇ—ಸಂಜ್ಞಪ್ಯಮಾನಸ್ಯ ಪಶೋಃ ಪದಃ ಪಾದಾನು-ದೀಚೀನಾನುತ್ತರದಿಗ್ಗತಾನ್ನಿಧತ್ತಾತ್ಸ್ಥಾಪಯತ ॥ ಚಕ್ಷುರಿಂದ್ರಿಯಂ ಸೂರ್ಯದೇವತಾಂ ಪ್ರಾಪಯತ ॥ ಪ್ರಾಣಂ ವಾಯುದೇವತಾಂ ಪ್ರತ್ಯನ್ವವಸೃಜತಾತ್ಪ್ರಾಪಯತ ॥ ಅಸುಂ ಜೀವಮಂತರಿಕ್ಷಂ ಪ್ರಾಪಯತ ॥ ಶ್ರೋತ್ರಂ ದಿಗ್ದೇವತಾಂ ಪ್ರಾಪಯತ । ಶರೀರಂ ಪೃಥಿವೀಂ ಪ್ರಾಪಯತ । ತದ್ಭಾಗಪಾಠೇನೈನಂ ಪಶುಮೇಷ್ವೇವ ಯಥೋಕ್ತದೇವತಾಸಂಬಂಧಿಷು ಲೋಕೇಷು ಸ್ಥಾಪಯತಿ ॥**

ಪಶುವನ್ನು ವಧಿಸುವ ಕಾಲದಲ್ಲಿ ಪಶುವಿನ ಕಾಲುಗಳು ಉತ್ತರದಿಕ್ಕಿಗೆ ಚಾಚಿರಬೇಕು. ಎಲೈ ಶಮಿತೃಗಳೇ ಆ ಪಶುವಿನ ಕಣ್ಣುಗಳು ಸೂರ್ಯನನ್ನು ಸೇರುವಂತೆ ಮಾಡಿರಿ. ಪ್ರಾಣವು ವಾಯುದೇವತೆಯನ್ನು ಸೇರಲಿ. ಪ್ರಾಣವು (ಜೀವವು) ಅಂತರಿಕ್ಷದಲ್ಲಿ ಲೀನವಾಗಲಿ. ಕಿವಿಗಳು ದಿಕ್ಕುಗಳನ್ನು ಎಂದರೆ ದಿಗ್ದೇವತೆಗಳನ್ನು ಆಶ್ರಯಿಸಲಿ. ಶರೀರವು ಪೃಥಿವಿಯಲ್ಲಿ ಲೀನವಾಗಲಿ. ಈರೀತಿ ಮಾಡುವುದರಿಂದ ಪಶುವಿನ ನಾನಾ ಅವಯವಗಳು ಅಥವಾ ಇಂದ್ರಿಯಗಳು ತಮ್ಮ ಮೂಲಸ್ಥಾನವನ್ನು ಸೇರಿದಂತಾಗುವುದು.

ಏಕಧಾಽಸ್ಯತ್ವಚಮಾಚ್ಛ್ಯತಾತ್ಪುರಾ ನಾಭ್ಯಾ ಅಪಿ ಶಸೋ ವಪಾಮು-
ತ್ಖಿದತಾದಂತರೇವೋಷ್ಮಾಣಂ ವಾರಯಧ್ವಾದಿತಿ ಪಶುಷ್ವೇವ
ತತ್ಪ್ರಾಣಾನ್ದಧಾತಿ ।

ಸಪ್ತಮಭಾಗಮನೂದ್ಯ ವ್ಯಾಚಷ್ಟೇ— ಏಕಧೈಕವಿಧಯಾ ವಿಚ್ಛೇದರಾಹಿತ್ಯೇನಾಸ್ಯ ತ್ವಚಮಾಚ್ಛ್ಯತಾತ್ ಸಮಂತಾಚ್ಛಿನ್ನಾಂ ಕುರುತ ॥ ನಾಭ್ಯಾ ಅಪಿ ಶಸಶ್ಛೇದಾತ್ಪೂರ್ವಮೇವ ವಪಾಮುತ್ಖಿದತಾತ್ ಉದ್ಧರತ ॥ ಊಷ್ಮಾಣಮುಚ್ಛ್ವಾಸಮಂತರೇವ ವಾರಯಧ್ವಾನ್ನಿವಾರಯತ ಪಿಹಿತಾಸ್ಯಂ ಸಂಜ್ಞಪಯತೇತ್ಯರ್ಥಃ ॥ ತದ್ಭಾಗಪಾಠೇನ ಪಶುಷ್ವೇವ ಪ್ರಾಣಾನ್ಸಂಪಾದಯತಿ ॥

ಪಶುವಿನ ಚರ್ಮವನ್ನು ಸುಲಿಯುವಾಗ ಅದನ್ನು ತುಂಡುತುಂಡಾಗಿ ಕತ್ತರಿಸದೆ ಚರ್ಮವೆಲ್ಲಾ ಒಂದೇ ಆಗಿರುವಂತೆ ಕತ್ತರಿಸಿ ತೆಗೆಯಬೇಕು. ನಾಭಿಪ್ರದೇಶವನ್ನು ಕತ್ತರಿಸುವುದಕ್ಕೆ ಮುಂಚೆ ವಪೆಯನ್ನು (Omentum) ಕತ್ತರಿಸಿ ತೆಗೆಯಬೇಕು. ಪಶುವನ್ನು ವಧಿಸುವಾಗ ಅದರ ಬಾಯನ್ನು ಕೈಯಿಂದ ಘಟ್ಟಿಯಾಗಿ ಹಿಡಿದು ಅದು ಉಸರಾಡದಂತೆ ಮಾಡಿ ವಧಿಸಬೇಕು. ಪಶುವಿನ ಉಸಿರು ಹೊರಗೆ ಹೋಗದಂತೆ ಮಾಡುವುದರಿಂದ ಪಶುವಿನ ಪ್ರಾಣವಾಯುವು ಪಶುವಿನಲ್ಲಿಯೇ ಇದ್ದಂತಾಗುವುದು.

ಶ್ಯೇನಮಸ್ಯ ವಕ್ಷಃ ಕೃಣುತಾತ್ಪ್ರಶಸಾ ಬಾಹೂ ಶಲಾ ದೋಷಣೀ ಕಶ್ಯ-
ಪೇವಾಂಸಾಽಚ್ಛಿದ್ರೇ ಶ್ರೋಣೀ ಕವಷೋರೂ ಸ್ರೇಕಪರ್ಣಾಽ-
ಷ್ಠೀವಂತಾ ಷಡ್ವಿಂಶತಿರಸ್ಯ ವಂಕ್ರಯಸ್ತಾ ಅನುಷ್ಠ್ಯೋಚ್ಚ್ಯಾ-
ವಯತಾದ್ಗಾತ್ರಂ ಗಾತ್ರಮಸ್ಯಾನೂನಂ ಕೃಣುತಾದಿತ್ಯಂಗಾ-
ನ್ಯೇವಾಸ್ಯ ತದ್ಗಾತ್ರಾಣಿ ಪ್ರೀಣಾತಿ ॥

ಅಷ್ಟಮಭಾಗಮನೂದ್ಯ ವ್ಯಾಚಷ್ಟೇ—ಶ್ಯೇನಂ ಶ್ಯೇನಾಕೃತಿಕಮಸ್ಯ ಪಶೋರ್ವಕ್ಷಃ ಕುರುತ । ಬಾಹೂ ಪ್ರಶಸಾ ಪ್ರಕೃಷ್ಟಚ್ಛೇದನೌ ಕುರುತ ॥ ದೋಷಣೀ ಪ್ರಕೋಷ್ಠೌ ಶಲಾ ಕೃಣುತಾಚ್ಛಲಾಕಾಕಾರೌ ಕುರುತ ॥ ಉಭಾವಪ್ಯಂಸೌ ಕಶ್ಯಪಾಕಾರೌ ಕುರುತ ॥ ಶ್ರೋಣೀ ಉಭೇ ಅಪ್ಯಚ್ಛಿದ್ರೇ ಅನೂನೇ ಕುರುತ ॥ ಕವಷೋರೂ ಕವಷಾಕಾರಾವೂರೂ ಸ್ರೇಕಪರ್ಣಾ ಕರವೀರಪತ್ರಾಕಾರಾವಷ್ಠೀವಂತಾವೂರೂ ಮೂಲಯುಕ್ತೌ ಕುರುತ ॥ ಅಸ್ಯ ಪಶೋರ್ವಂಕ್ರಯೋ ವಕ್ರಾಣೀ ಪಾರ್ಶ್ವಾಸ್ಥೀನಿ ಷಡ್ವಿಂಶತಿರ್ಭವಂತಿ । ತಾಃ ಸರ್ವಾ ಅನುಷ್ಠ್ಯಾನುಕ್ರಮೇಣ ಸ್ವಸ್ಥಾನಗತಾಸ್ವ್ಯುಚ್ಚ್ಯಾವಯತೋದ್ಧರತ ॥ ಗಾತ್ರಂ ಗಾತ್ರಂ ಸರ್ವಮುಪ್ಯದನೀಯಮಂಗಮನೂನಂ ಕೃಣುತಾದವಿಕಲಂ ಕುರುತ ॥ ತದ್ಭಾಗಪಾಠೇ ತಸ್ಯ ಪಶೋರಂಗಾನ್ಯೇವಾವಯವರೂಪಾಣ್ಯೇವ ಗಾತ್ರಾಣಿ ಪ್ರೀಣಾತಿ ॥ ಗಾತ್ರಶಬ್ದಃ ಶರೀರೇ ತದವಯವೇ ಚ ವರ್ತತೇ ॥ ಅತೋಽತ್ರಾವಯವ ವಿವಕ್ಷಾಂ ದ್ಯೋತಯಿತುಮಂಗಾನೀತಿ ನಿರ್ದೇಶಃ ॥

ಯಜ್ಞಪಶುವಿನ ವಧಕಾರ್ಯದಲ್ಲಿ ಪ್ರವೃತ್ತರಾದ ಎಲೈ ಶಮಿತೃಗಳೇ, ವಧಾನಂತರ ಈ ಯಜ್ಞಪಶುವನ್ನು ನೀವು ಕತ್ತರಿಸುವಾಗ ಇದರ ಹೃದಯವನ್ನು ಶ್ಯೇನಪಕ್ಷಿಯ ಆಕಾರದ ಹಾಗೆ ಇರುವಂತೆ ಕತ್ತರಿಸಬೇಕು. ಮತ್ತು ಈ ಯಜ್ಞಪಶುವಿನ ಬಾಹುಗಳನ್ನು ಎಂದರೆ ಹಿಂದಿನ ಎರಡು ಕಾಲುಗಳನ್ನು ಕತ್ತರಿಸುವ ಎರಡು ಮಚ್ಚಿನಂತೆ ಇರುವ ಹಾಗೆಯೂ (ಮಚ್ಚು-ಸ್ವಲ್ಪ ಬಗ್ಗಿರುವ ಸಣ್ಣ ಕತ್ತಿ) ಮುಂದಿನ ಕಾಲುಗಳನ್ನು ನೀಳವಾದ ಸಲಾಕಿಗಳಂತೆಯೂ, ಎರಡು ಭುಜಗಳನ್ನು ಎರಡು ಕೂರ್ಮಾಕೃತಿಗಳಂತೆಯೂ ಇರುವ ಹಾಗೆ ಕತ್ತರಿಸಬೇಕು. ಅದರ ಸೊಂಟವು ಅಥವಾ ಮಧ್ಯಭಾಗವು ಚೂರುಚೂರಾಗದಂತೆ ಒಂದೇ ತುಂಡಾಗಿರುವಂತೆ ಕತ್ತರಿಸಬೇಕು. ಅದರ ತೊಡೆಗಳು ಕವಚಾಕಾರ (Shieldr) ವಾಗಿರಬೇಕು. ಅದರ ಮಂಡಿಯ ಚಿಪ್ಪುಗಳು ಕರವೀರಪತ್ರಾಕಾರವಾಗಿರಬೇಕು ಮತ್ತು ಆ ಪಶುವಿನ ಎದೆಯ ಗೂಡಿನ ಬಗ್ಗಿರುವ ಇಪ್ಪತ್ತಾರು ಎಲುಬುಗಳನ್ನು ಅಲ್ಲಿರುವಂತೆ ಕ್ರಮವಾಗಿ ತೆಗೆದಿರಿಸಬೇಕು. ಪಶುವಿನ ಅವಯವಗಳನ್ನು ಸ್ವಲ್ಪವೂ ಛಿದ್ರವಾಗದಂತೆ ಪೂರ್ಣವಾಗಿರುವಂತೆ ಕತ್ತರಿಸಬೇಕು. ಹೀಗೆ ಮಾಡಿದರೆ ಅದರ ಅಂಗಗಳು ಅಥವಾ ಅವಯವಗಳು ಯಜ್ಞಾರ್ಹಗಳಾಗುವವು.

**ಊವಧ್ಯಗೋಹಂ ಪಾರ್ಥಿವಂ ಖನತಾದಿತ್ಯಾಹೌಷಧಂ ವಾ ಊವ-**
**ಧ್ಯಮಿಯಂ ವಾ ಓಷಧೀನಾಂ ಪ್ರತಿಷ್ಠಾ ತದೇನತ್ಸ್ವಾಯಾ-**
**ಮೇವ ಪ್ರತಿಷ್ಠಾಯಾಮಂತತಃ ಪ್ರತಿಷ್ಠಾಪಯತಿ ||**

ನವಮಭಾಗಮನೂದ್ಯ ವ್ಯಾಚಷ್ಟೇ– ಊವಧ್ಯಗೋಹಂ ಪುರೀಷಗೂಹನಸ್ಥಾನಂ ಪಾರ್ಥಿವಂ ಖನತಾತ್ ಪೃಥಿವೀಸಂಬಂಧಮೇವ ಖನತ || ಅತ್ರೋವಧ್ಯಶಬ್ದೇನೌಷಧಮೇವೋಚ್ಯತೇ ಪುರೀಷಸ್ಯ ಪಶುಭಕ್ಷಿತಸ್ಯೌಷಧಿವಿಕಾರತ್ವಾತ್ | ಓಷಧೀನಾಂ ಚೇಯಮೇವ ಭೂಮಿಃ ಪ್ರತಿಷ್ಠಾಽಽಶ್ರಯಃ || ತತ್ತಥಾ ಸತ್ಯೇನಮೂವಧ್ಯಂ ಸ್ವಕೀಯಾಯಾಮೇವ ಪ್ರತಿಷ್ಠಾಯಾಂ ಭೂಮಿರೂಪಾಯಾಮಂತತಃ ಪಶುವಿಶಸನಾಂತೇ ಪ್ರತಿಷ್ಠಾಪಯತಿ ||

ಅತ್ರ ಮೀಮಾಂಸಾ— ನವಮಾಧ್ಯಾಯೇ ಚಿಂತಿತಂ ||
" ಅವಿಕಾರೋ ವಿಕಾರೋ ವಾ ಸ್ಯಾನ್ಮೇಧಪತಿಶಬ್ದಯೋಃ ||
ವಿಕಾರೇ ಸ್ವಾಮಿದೇವಾರ್ಥ ಏಕಾರ್ಥೋ ವಾಂತಿಮೇಽಪಿ ಕಿಮ್ ||
ಸ್ವಾಮ್ಯರ್ಥೋ ದೇವತಾರ್ಥೋ ವಾ ಸ್ಯಾದನ್ಯಾಯ್ಯತ್ವತೋಽಗ್ರಿಮಃ ||
ಅರ್ಥಸತ್ವಾ (ಭೇದಾ)ದ್ವಿಕಾರೋಽತ್ರ ದ್ವಾವರ್ಥೌ ಶಬ್ದಯೋರ್ದ್ವಯೋಃ ||
ಮಂತ್ರೈಕ್ಯಾದರ್ಥ ಏಕೋಽತ್ರ ಸ್ವಾಮ್ಯಸ್ಮಿನ್ನ್ಯಾಯಾಯಾ ದ್ವಿತಾ ||
ದೇವಾರ್ಥಾಶೀರ್ದೇವ ಏಕೋಽಧಿಷ್ಠಾನೇ ದ್ವೇ ದ್ವಿಧೇರಣಂ " ||

ಅಧ್ರಿಗುಪ್ರೈಷನಿಗದಸ್ಯಾಽಽದಾವಿದಮಾಮ್ನಾಯತೇ – " ದೈವ್ಯಾಃ ಶಮಿತಾರ ಆರಭಧ್ವಮುತ ಮನುಷ್ಯಾ ಉಪನಯತ ಮೇಧ್ಯಾ ದುರ ಆಶಾಸಾನಾ ಮೇಧಪತಿಭ್ಯಾಂ ಮೇಧಂ " ಇತಿ || ಶಾಖಾಂತರೇ ತು ಮೇಧಪತಯೇ ಮೇಧಮಿತಿ|| ಅಯಮರ್ಥಃ || ಶಮಿತಾರಃ ಪಶುಘಾತಿನೋ ದ್ವಿವಿಧಾ ದೈವ್ಯಾ ಮಾನುಷಾಶ್ಚ, ತಾನುಭಯಾನ್ಸಂಬೋಧ್ಯ ಹೋತಾಕರ್ತವ್ಯವಿಶೇಷಾನ್ನಿರ್ದಿಶತಿ—' ಪ್ರಾರಂಭಃ ಕರ್ತವ್ಯೋ ಮೇಧೋ ಯಜ್ಞಸ್ತದ್ಯೋಗಾದ್ದು(ಗ್ಯಾನ್ದ್ವ)ರಃ ಪದಾರ್ಥಾನ್ಹಿಂಸಾಹೇತೂನಿಹಾಽಽನಯತ || ಕಿಂ ಕುರ್ವಂತಃ | ಯಜ್ಞಪತಿಭ್ಯಾಂ ಯಜ್ಞಪತಯೇ ವಾ

ಯಜ್ಞಮಾಶಾಸಾನಾ ಇತಿ ॥ ತತ್ರೈಕವಚನಾಂತಸ್ಯ ದ್ವಿವಚನಾಂತಸ್ಯ ಚ ಮೇಧಪತಿಶಬ್ದಸ್ಯ ಬಹುಪಶುಯುಕ್ತಾಸು ವಿಕೃತಿಷ್ವನೂಹ ಊಹೋ ವೇತಿ ಸಂಶಯಃ॥ ಊಹಪಕ್ಷೇಽಪಿ ಕಿಮೇಕವಚನಾಂತಸ್ಯ ಯಜಮಾನೋಽರ್ಥೋ ದ್ವಿವಚನಾಂತಸ್ಯಾಗ್ನೀಷೋಮೌ ದೇವತಾರ್ಥ ಇತ್ಯೇವಮರ್ಥಭೇದಃ ಕಿಂವಾ ಶಬ್ದದ್ವಯಸ್ಯೈಕ ಏವಾರ್ಥ ಇತಿ ಸಂಶಯಃ ॥ ಏಕಾರ್ಥತ್ವಪಕ್ಷೇಽಪಿ ಯಜಮಾನವಾಽರ್ಥೋ ದೇವತೈವೇತಿ ಸಂಶಯಃ ॥ ಅತ್ರಾಗ್ನೀಷೋಮೀಯೇ ಪಶೌ ಯಜಮಾನೋಽಗ್ನೀಷೋಮೌ ಪಶುಶ್ಚೇತಿ ತ್ರಯೋ ಮೇಧಸ್ಯ ಪತಯಸ್ತೇಷ್ವೇಕವಚನಸ್ಯ ದ್ವಿವಚನಸ್ಯ ಚಾನ್ಯಾಯನಿಗದತ್ವೇನ ಪ್ರಕೃತಾವವಿವಕ್ಷಿತಸ್ಯ ವಚನಸ್ಯ ವಿಕೃತಾವನೂಹ ಇತ್ಯಾದ್ಯಃ ಪಕ್ಷಃ ॥ ಪ್ರಕೃತೌ ಸಮವೇತಾರ್ಥೇ ಸಂಪಾದಯಿತುಂ ಶಕ್ಯೇ ಸತ್ಯನ್ಯಾಯನಿಗದತ್ವಾಭಾವಾದ್ವಿಕೃತಾವೂಹಃ ಕರ್ತವ್ಯ ಇತಿ ದ್ವಿತೀಯಃ ಪಕ್ಷಃ ॥ ಅಸ್ಮಿನ್ದ್ವಿತೀಯಪಕ್ಷೇಪಿ ಪ್ರಕೃತಾವುಪನ್ಯಸ್ತಪ್ರಕಾರೇಣಾರ್ಥಭೇದಾದ್ವಿಕೃತಿಷು ದ್ವಿಬಹು ಯಜಮಾನಯುಕ್ತಾಸ್ವಹೀನಾದಿಷು ಯಜಮಾನಾನುಸಾರೇಣೈಕವಚನಾಂತ ಊಹನೀಯಃ ॥ ಅನೇಕಪಶುಯುಕ್ತಾಸು ವಿಕೃತಿಷು ದೇವತಾನುಸಾರೇಣ ದ್ವಿವಚನಾಂತ ಊಹನೀಯಃ ॥ ಸೋಽಯಂ ಶಾಖಾವಿಕಲ್ಪೇ ಪ್ರಥಮಃ ಪಕ್ಷಃ ॥ ಶಾಖಾಭೇದೇನ ಪಾಠಭೇದೇಽಪಿ ಮಂತ್ರಭೇದಾಭಾವಾದರ್ಥಭೇದೋ ನ ಯುಕ್ತಃ ಕಿಂ ತ್ವೇಕ ಏವಾರ್ಥ ಇತಿ ಪಕ್ಷಾಂತರಂ॥ ತದಾಪಿ ದೇವತಾಯಾಃ ಸಂಪ್ರದಾನತ್ವೇನ ಸ್ವಾಮಿತ್ವಾಭಾವಾನ್ಮೇಧಪತಿಶಬ್ದಯೋಗ್ಯತಾ ನಾಸ್ತೀತಿ ಯಜಮಾನ ಏವ ತಚ್ಛಬ್ದಾರ್ಥಃ ॥ ತಸ್ಮಿನ್ಯಜಮಾನ ಏಕತ್ವಂ ಜಾಯಯಾ ಸಹ ದ್ವಿತ್ವಮಿತ್ಯೇಕವಚನದ್ವಿವಚನೇ ಉಭೇ ಅಪಿ ಸಮವೇತಾರ್ಥೇ ॥ ತತೋ ಯಜಮಾನದ್ವಯೋಪೇತಾಯಾಂ ವಿಕೃತಾವೇಕವಚನಾಂತೋ ದ್ವಿತ್ವೇನೋಹನೀಯೋ ದ್ವಿವಚನಾಂತೋ ಬಹುತ್ವೇನೇತಿ ಪೂರ್ವಃ ಪಕ್ಷಃ ॥ ಮೇಧಸ್ಯ ಯಜಮಾನಾರ್ಥತ್ವೇನೈವಾಶಾಸನೀಯತ್ವಸ್ಯ ಸಿದ್ಧತ್ವಾದ್ದೇವತಾರ್ಥತ್ವಂ ತ್ವಾಶಾಸಾನೀಯಂ ॥ ತತೋ ಮೇಧಮಾಶಾಸಾನಾ ಇತ್ಯೇತದ್ದೇವತಾಯಾಂ ಸಮವೇತಾರ್ಥಸಂಪ್ರದಾನಸ್ಯಾಪ್ಯುದ್ದೇಶ್ಯತ್ವೇನ ಪ್ರಾಧಾನ್ಯಾನ್ಮೇಧಪತಿತ್ವಮವಿರುದ್ಧಂ ॥ ದೇವತ್ವಾಕಾರಾಣೈಕತ್ವಾದಗ್ನಿತ್ವಸೋಮತ್ವಾಕಾರೇಣ ದ್ವಿತ್ವಾಚ್ಚೈಕವಚನದ್ವಿವಚನೇ ಉಪಪನ್ನೇ ॥ ತಸ್ಮಾದ್ದೇವತಾನುಸಾರೇಣ ವಿಕೃತಾವೂಹ ಇತಿ ಸಿದ್ಧಾಂತಃ ॥

ತತ್ರೈವಾನ್ಯಚ್ಚಿಂತಿತಂ—

" ಆದಿತ್ಯೇಷ್ವೇಕವಾಚ್ಯೇಷ ಊಹ್ಯೋ ನೋ ವೋಹ್ಯತೇಽನ್ಯವತ್ ॥
ಗಣಾರ್ಥತ್ವಾದನೂಹೋಽತೋ ವಿಕಲ್ಪಃ ಪ್ರಕೃತಾವಿವ " ॥

ಪ್ರಜಾಪಶುಸಂಪತ್ತಿಕಾಮಸ್ಯ ಬಹುದೇವತ್ಯಃ ಪಶುರಾಮ್ನಾಯತೇ—' ಯಃ ಕಾಮಯೇತ ಪ್ರಥೇಯಂ ಪಶುಭಿಃ ಪ್ರ ಪ್ರಜಯಾ ಜಾಯೇಯೇತಿ ಸ ಏತಾಮವಿಂ ವಶಾಮಾದಿತ್ಯೇಭ್ಯಃ ಕಾಮಾಯಾಽಽಲಭೇತ ' ಇತಿ ॥ ವಶಾ ವಂಧ್ಯಾ ಕಾಮಾಯ ಕಾಮುಕೇಭ್ಯ ಇತ್ಯರ್ಥಃ ॥ ಅತ್ರ ಚೋದಕಪ್ರಾಪ್ತೋ ಮೇಧಪತಯ ಇತ್ಯೇಕವಚನಾಂತಃ ಶಬ್ದ ಆದಿತ್ಯಾನಾಂ ಬಹುತ್ವಾದ್ಬಹುವಚನಾಂತತ್ವೇನೋಹನೀಯಃ ॥ ಯಥಾ ಮೇಧಪತಿಭ್ಯಾಮಿವ ದ್ವಿವಚನಾಂತ ಊಷ್ಯತೇ ॥ ಯಥಾ ವಾ ಪ್ರಾಸ್ಮಾ ಇತ್ಯೇಕವಚನಾಂತ ಊಹ್ಯತೇ ತದ್ವಿದಿತಿ । ಚೇತ್ ॥ ನೈವಂ

ಪ್ರಕೃತಾವಗ್ನೀಷೋಮಯೋರ್ಗಣೈಕತ್ವನೇಕವಚನಾಂಕೋ ಬ್ರೂತೇ ॥ ಆದಿತ್ಯಾನಾಮಪಿ ಗಣೈಕತ್ವಂ ಸಮಾನಮಿತ್ಯನೂಹಃ ॥ ತಸ್ಮಾದವಿಕೃತ ಏಕವಚನಾಂತ ಇತರೇಣ ಸಹ ಪ್ರಕೃತಾವಿವಾತ್ರಾಪಿ ವಿಕಲ್ಪ್ಯತೇ ।

ತತ್ರೈವಾನ್ಯಚ್ಚಿಂತಿತಂ—

" ಕೃಷ್ಣಗ್ರೀವಾದಿಕೇಽನೂಹ ಊಹೋ ವಾ ನಾಸ್ಯಪೂರ್ವವತ್ ॥
ದೇವತ್ವಂ ನ ಗಣಸ್ಯಾತ ಊಹೋ ಬಹ್ವಭಿಧಿತ್ಸಯಾ " ॥

ಯೂಪೈಕಾದಶಿನ್ಯಾಮಗ್ನ್ಯಾದಿದೇವತಾಕಾಃ ಪಶವ ಆಮ್ನಾತಾಃ । -ಪ್ರೈವಾಽಽಗ್ನೇಯೇನ ವಾಪಯತಿ ಮಿಥುನಂ ಸಾರಸ್ವತ್ಯಾ ಕರೋತಿ ರೇತಃ ಸೌಮ್ಯೇನ ದಧಾತಿ ಪ್ರಜನಯತಿ ಪೌಷ್ಣೇನ " ಇತ್ಯಾದಿನಾ॥ತೇ ಚ ಸ್ವನಾಮಭಿರನ್ಯತ್ರಾಽಽಮ್ನಾತಾಃ—' ಆಗ್ನೇಯಃ ಕೃಷ್ಣಗ್ರೀವಃ ಸಾರಸ್ವತೀ ಮೇಷೀ ಬಭ್ರುಃ ಸೌಮ್ಯಃ ಪೌಷ್ಣಃ ಶ್ಯಾಮಃ ' ಇತ್ಯಾದಿನಾ ॥ ತತ್ರಾಸ್ಯೈಕವಚನಾಂತಸ್ಯ ಮೇಧಪತಿಶಬ್ದಸ್ಯಾಽಽದಿತ್ಯೇಷ್ಟಿವ ನೋಹ ಇತಿ ಚೇತ್ ॥ ನೈವಂ ವೈಷಮ್ಯಾತ್ ॥ ಆದಿತ್ಯಗಣಸ್ಯ ತತ್ರ ದೇವತ್ವಮಿಹತ್ವೇಕೈಕಸ್ಯ ಪೃಥಗ್ದೇವತ್ವಮತೋ ಬಹೂನ್ದೇವಾನಭಿಧಾತುಂ ಬಹುವಚನಾಂತತ್ವಮೂಹನೀಯಂ ।

ತತ್ರೈವಾನ್ಯಚ್ಚಿಂತಿತಂ—

" ದ್ವಿಪಶ್ವೋಶ್ಚಕ್ಷುರಾದ್ಯೂಹೋ ನ ವೋಹಃ ಪಶುಭೇದತಃ ॥
ತೇಜೋಮಾತ್ರಸ್ಯ ಸೂರ್ಯಾದಾವೇಕೀಭಾವಾದನೂಹನಮ್ " ॥

ಅಗ್ನಿಷೋಮೀಯಪಶಾವಧ್ರಿಗುಪ್ರೈಷೇ ಪಶುಸಂಬಂಧಿಚಕ್ಷುರಾದೀನಾಂ ಸೂರ್ಯಾದಿ ಸಂಸರ್ಗ ಆಮ್ನಾಯತೇ—ಸೂರ್ಯಂಚಕ್ಷುರ್ಗಮಯತಾದ್ವಾತಂ ಪ್ರಾಣಮನ್ವವಸೃಜತಾದಂತರಿಕ್ಷಮಸುಂ ದಿಶಃ ಶ್ರೋತ್ರಂ" ಇತ್ಯಾದಿ॥ಮೈತ್ರಂ ಶ್ವೇತಮಾಲಭೇತ ವಾರುಣಂ ಕೃಷ್ಣಮಿತಿ ವಿಹಿತಯೋರ್ದ್ವಯೋಃ ಪಶ್ವೋರ್ಮಂತ್ರಗತಾಶ್ಚಕ್ಷುರಾದಿಶಬ್ದಾ ದ್ವಿವಚನಾಂತತ್ವೇನೋಹನೀಯಾಃ॥ ಕುತಃ, ಪಶುಭೇದೇನ ಚಕ್ಷುರಾದೀನಾಂ ಭೇದಾದಿತಿ ಚೇತ್ । ನೈವಂ । ನ ಖಲ್ವತ್ರೇಂದ್ರಿಯಾಧಿಷ್ಠಾನಂ ಶರೀರಗತಗೋಲಕಂ ಚಕ್ಷುಃಶಬ್ದೇನ ವಿವಕ್ಷಿತಂ ॥ ತದ್ವಿವಕ್ಷಾಯಾಮೇಕಸ್ಮಿನ್ಪಶೌ ಗೋಲಕಭೇದಾದೇಕವಚನಾಂತಚಕ್ಷುಃಶಬ್ದಸ್ಯಾನನ್ವಯಪ್ರಸಂಗಾದ್ಗೋಲಕಸ್ಯ ಸೂರ್ಯಾದಿಪ್ರಾಪ್ತ್ಯಸಂಭವಾಚ್ಚ॥ಯತ್ತು ರೂಪದರ್ಶನಾದಿಸಾಮರ್ಥ್ಯಂ ಲಕ್ಷಣಂ ತೇಜೋಮಾತ್ರಂ ತದತ್ರ ಚಕ್ಷುರಾದಿಶಬ್ದೈರ್ವಿವಕ್ಷಿತಂ ॥ ತಚ್ಚ ಪಶ್ವೋರ್ನೇಕತ್ವೇಽಪಿ ತತೋ ನಿರ್ಗತ್ಯ ಸೂರ್ಯಾದಾವೇಕೀಭೂತತ್ವಾತ್ಸಮುದ್ರ ಪ್ರವಿಷ್ಟನದೀವನ್ನ ಭೇದೇನಾವತಿಷ್ಠತೇ ॥ ತಸ್ಮಾನ್ನಾಸ್ತ್ಯೂಹಃ ॥

ತತ್ರೈವಾನ್ಯಚ್ಚಿಂತಿತಂ—

" ಏಕಧೇತ್ಯವಿಕಾರಃ ಸ್ಯಾದಭ್ಯಾಸೋ ವಾ ಸಹತ್ವತಃ ॥
ಆದ್ಯೋ ನೈವಂ ಪ್ರಾಕೃತಸ್ಯ ಸಕೃತ್ತ್ವಸ್ಯೋಚಿತತ್ವತಃ " ॥

ತಸ್ಮಿನ್ನೇವಾಧ್ರಿಗುಪ್ರೈಷೇ ಶ್ರೂಯತೇ—' ಏಕಧಾಽಸ್ಯ ತ್ವಚಮಾಚ್ಛ್ಯತಾತ್ ' ಇತಿ ॥ ಛಿಂಧೀತ್ಯರ್ಥಃ । ತತ್ರ ದ್ವಯೋಃ ಪಶ್ವೋರೇಕಧೇತ್ಯಸ್ಯ ಶಬ್ದಸ್ಯ ನಾಸ್ತಿ ವಿಕಾರಃ । ಕುತಃ,

ತಸ್ಯ ಶಬ್ದಸ್ಯ ಸಹತ್ವನಾಚಿತ್ವಾರೇಕಧಾ ಗಾಃ ಪಾಯಯತೀತ್ಯತ್ರ ಯೌಗಪದ್ಯೇ ಪ್ರಯೋಗದರ್ಶನಾತ್ ॥ ಪಶ್ವನೇಕತ್ವೇಽಪಿ ತ್ವಗುತ್ಪಾಟನಸ್ಯೈಕಕಾಲೀನತ್ವಂ ಬಹುಪುರುಷಕರ್ತೃಕತ್ವಂ ಚ ಘಟಿತ ಇತಿ ಪ್ರಾಪ್ತೇ ಬ್ರೂಮಃ ॥ ಪ್ರಕೃತಾವೇಕಸ್ಮಿನ್ಪಶೌ ಯೌಗಪದ್ಯಲಕ್ಷಣೋಽರ್ಥೋ ನ ಸಂಭವತಿ ತತಃ ಸ್ವಕೃತ್ತ್ವಂ ತಸ್ಯ ಶಬ್ದಸ್ಯಾರ್ಥಃ ॥ ತ್ವಗಿಯಮವಯವಶೋ ಬಹುಕೃತೋ ನ ಚ್ಛೇತ್ತವ್ಯಾ ಕಿಂತು ಸರ್ವಾಽಪಿ ಸಕೃದೇಕಪ್ರಯತ್ನೇನೇತ್ಯುಕ್ತಂ ಭವತಿ ॥ ಯತ್ಪ್ರಕೃತೌ ಸಕೃತ್ತ್ವಂ ತದೇವ ವಿಕೃತಾವುಚಿತಂ ॥ ತತಃ ಪ್ರತಿಪಶು ಸಕೃತ್ತ್ವಮಭಿಧಾತುಮೇಕಧೇತ್ಯಯಂ— ಮಂತ್ರೋಽಭ್ಯಸಿತವ್ಯಃ ॥

ತತ್ರೈವಾನ್ಯಚ್ಚಿಂತಿತಂ—

“ ಸಾದೃಶ್ಯಮುತ ಸಾಕಲ್ಯಂ ಶ್ಯೇನಾದ್ಯುಕ್ತೌ ವಿವಕ್ಷಿತಂ ॥
ಪ್ರಸಿದ್ಧಸಂನಿಧೇರಾದ್ಯಸ್ತತ್ಸತ್ತ್ವಾದಖಿಲೋದ್ಧೃತಿಃ ” ॥

ಅಧ್ರಿಗುಪ್ರೈಷೇ ವಚನಮೇತದಾಮ್ನಾಯತೇ-“ ಶ್ಯೇನಮಸ್ಯ ವಕ್ಷಃ ಕೃಣುತಾತ್ ” ಇತಿ ॥ ತತ್ರ ಯಥಾಽಮೀ ಪಿಷ್ಟಪಿಂಡಾಃ ಸಿಂಹಾಃ ಕ್ರಿಯಂತಾಮಿತ್ಯುಕ್ತೇ ಪ್ರಸಿದ್ಧಸಿಂಹಸನ್ನಿಧಾನಾತ್ಪಿಷ್ಟಪಿಂಡೇಷು ಸಿಂಹಸಾದೃಶ್ಯಂ ಕರ್ತವ್ಯತಯಾ ಪ್ರತೀಯತೇ ತಥೈವಾಸ್ಯ ಪಶೋರ್ವಕ್ಷಃ ಶ್ಯೇನಂ ಕೃಣುತಾದಿತ್ಯತ್ರ ಶ್ಯೇನಸಾದೃಶ್ಯಂ ವಕ್ಷಸಿ ಕರ್ತವ್ಯತಯಾ ಪ್ರತೀಯತೇ॥ ತತೋ ಬಹು (ವಕ್ಷ) ಉದ್ಧೃತ್ಯ ಕರ್ತನಾದ್ಯುಪಾಯೇನ ಪಕ್ಷಚರಣಖುರಾದಿಕಂ ಸಂಪಾದ್ಯ ಶ್ಯೇನ ಸಂಸ್ಥಾನಂ ಕರ್ತವ್ಯಮಿತಿ ಪ್ರಾಪ್ತೇ ಬ್ರೂಮಃ ॥ ವಕ್ಷಸಿ ಶ್ಯೇನಸಾದೃಶ್ಯಂ ಸ್ವತ ಏವ ಪೂರ್ವಮಸ್ತಿ ॥ ತತೋ ಯಥಾ ತನ್ನ ನಶ್ಯತಿ ತಥಾ ಸಾಕಲ್ಯೇನೋದ್ಧರಣೀಯಮಿತಿ ವಿವಕ್ಷಯಾ ಶ್ಯೇನಶಬ್ದಃ ಪ್ರಯುಜ್ಯತೇ ॥ ತಥಾ ಸತಿ ಹವಿರವಿಕಲಂ ಭವತಿ ॥ ಅಂಸಾದಿಷ್ವನೇನೈವ ನ್ಯಾಯೇನ ಸಾಕಲ್ಯವಿವಕ್ಷಯಾ ತತ್ತದ್ರೂಪೋಕ್ತಿಃ ದ್ರಷ್ಟವ್ಯಾ ॥ ಏತದೇವಾಭಿಪ್ರೇತ್ಯ ಶ್ರೂಯತೇ ॥ ‘ ಗಾತ್ರಂ ಗಾತ್ರಮಸ್ಯಾನೂನಂ ಕೃಣುತಾತ್ ’ ಇತಿ ॥

ತತ್ರೈವಾನ್ಯಚ್ಚಿಂತಿತಂ—

“ ಪ್ರಶಸೇತ್ಯಸಿದರ್ಥಃ ಸ್ಯಾತ್ಸ್ತುತಿರ್ವಾ ಛೇದನಾದಸಿಃ ॥
ಸ್ತುತಿಃ ಕಾರ್ತ್ಸ್ನ್ಯಯ ಬಾಹ್ವೋಃ ಸ್ಯಾತ್ಸ್ವಧಿತಿಶ್ಛೇದಸಾಧನಂ ” ॥

ಅಧ್ರಿಗುಪ್ರೈಷೇ ವಾಕ್ಯಾಂತರಮಾಮ್ನಾತಂ। ಪ್ರಶಸಾ ಬಾಹೂ ಇತಿ। ಶಸು ಹಿಂಸಾಯಾಮಿತ್ಯಸ್ಮಾದ್ಧಾತೋಃ ಸೋಪಸರ್ಗಾದುತ್ಪನ್ನಸ್ಯ ಸಕಾರಾಂತಪ್ರಾತಿಪದಿಕಸ್ಯ ತೃತೀಯೈಕವಚನಾಂತಸ್ಯ ಪ್ರಶಸೇತಿ ರೂಪಂ ಭವತಿ ॥ ತಚ್ಚಾಸಿವಾಚಕಂ ತದೇತತ್ಕೇನಚಿದ್ಬ್ರಾಹ್ಮಣವಾಕ್ಯೇನಾನೂದ್ಯತೇ-ದಶ ಪ್ರಯಾಜಾನಿಷ್ಟ್ವಾ ಶಾಸಮಾಹರೇತಿ ॥ ಅಸಿರ್ವೈ ಶಾಸ ಇತ್ಯಾಚಕ್ಷತ ಇತಿ ॥ ಸೋಽಯಮಸಿರ್ಬಾಹ್ವೋಶ್ಛೇದನಹೇತುಸ್ತಸ್ಮಾದ್ದೃಷ್ಟಾರ್ಥಲಾಭಾದಸಿಃ ಪ್ರಶಸೇತ್ಯಸ್ಯ ಪದಸ್ಯಾರ್ಥ ಇತಿಚೇತ್ । ನೈವಂ ॥ ಶಂಸು ಸ್ತುತಾವಿತ್ಯಸ್ಮಾದ್ಧಾತೋರಯಮುತ್ಪನ್ನಃ ॥ ಪ್ರಶಸ್ತಾವಿತ್ಯಸ್ಯ ದ್ವಿತೀಯಾದ್ವಿವಚನಾಂತಸ್ಯ ಶಬ್ದಸ್ಯ ಛಾಂದಸೇ ತಕಾರಲೋಪ ಆಕಾರಾದೇಶೇ ಚ ಕೃತೇ ಪ್ರಶಸೇತಿ

ಭವತಿ ॥ ಬಾಹ್ವೋಃ ಪ್ರಶಸ್ತತ್ವಂ ನಾಮ ಕಾರ್ತ್ಸ್ನ್ಯಂ ಪ್ರಶಸ್ತಾ ಬಾಹೂ ಕೃಣುತಾದಿತ್ಯುಕ್ತೇ ನಿಃಶೇಷೇಣೋದ್ಧರ್ತವ್ಯೌ ಬಾಹೂ ಇತ್ಯೇತಾದೃಶೋ ದೃಷ್ಟೋಽರ್ಥೋ ಲಭ್ಯತೇ ॥ ನಾತ್ರ ಚ್ಛೇದನಸಾಧನತ್ವಮಸೇಃ ಸಂಭವತಿ ಸ್ವಧಿತೇಸ್ತತ್ಸಾಧನತ್ವೇನ ವಿಹಿತತ್ವಾತ್ ॥ ತಸ್ಮಾತ್ಸ್ತುತಿ ದೇವಾಸ್ಯ ಶಬ್ದಸ್ಯಾರ್ಥಃ ॥ ತಥಾ ಸತಿ ಬಾಹುವೃದ್ಧೌ ಬಹುವಚನಾಂತತ್ವೇನ ಪ್ರಶಸೇತಿ ಪದಮೂಹನೀಯಂ ॥

ತತ್ರೈವಾನ್ಯಚ್ಚಿಂತಿತಂ—

“ ಷಡ್ವಿಂಶತಿರ್ವಂಕ್ರಯೋಽಸ್ಯೇತ್ಯನೂಹಃ ಸ್ಯಾದುತೋಹ್ಯತೇ ॥
ಊಹೇಽಪಿ ವಚನಾನ್ಯತ್ವಮಸ್ಯೇತ್ಯಾವರ್ತ್ಯತೇಽಥವಾ ॥
ಷಡ್ವಿಂಶತೇರುತಾಭ್ಯಾಸಃ ಸಮಸ್ತೋಕ್ತಿರ್ಭವೇದುತ ॥
ಅನೂಹೋಽಕರಣತ್ವೇನ ದೃಷ್ಟಲಾಭಾತ್ತದೂಹನಂ ॥
ಸಂಖ್ಯಾಯಾಶ್ಚ ಪಶೋರ್ಯುಕ್ತೇರ್ವಂಕ್ರೀಣಾಂ ಮುಖ್ಯತಾವಶಾತ್ ॥
ಅಮೀ ಪಕ್ಷಾಯುಜ್ಯಂತೇಽನ್ತ್ಯಸ್ತಾ ಅನುಷ್ಠ್ಯೇತಿ ಶೇಷತಃ ” ॥

ಅಧ್ರಿಗುಪ್ರೈಷೇ ವಾಕ್ಯಮಿದಮಾಮ್ನಾಯತೇ– ‘ ಷಡ್ವಿಂಶತಿರಸ್ಯ ವಂಕ್ರಯಸ್ತಾ ಅನುಷ್ಠ್ಯೋಚ್ಚ್ಯಾವಯತಾತ್ ’ ಇತಿ ॥ ಅಯಮರ್ಥಃ ॥ ವಂಕ್ರಯೋ ವಕ್ರಾಣಿ ಪಾರ್ಶ್ವಾಸ್ಥೀನಿ ತಾನ್ಯಸ್ಯ ಪಶೋಃ ಷಡ್ವಿಂಶತಿಸಂಖ್ಯಾಕಾನ್ಯೇಕೈಕಸ್ಮಿನ್ಪಾರ್ಶ್ವೇ ತ್ರಯೋದಶಾನಾಮವಸ್ಥಿತತ್ವಾತ್ ॥ ವಂಕ್ರೀರನುಷ್ಠ್ಯಾನುಷ್ಠಾಯಾನುಕ್ರಮೇಣ ಗಣಯಿತ್ವೇತಿ ಯಾವತ್ ॥ ಉಚ್ಚ್ಯಾವಯತಾದುದ್ಧರತಾದಿತಿ ॥ ಸೋಽಯಂ ಮಂತ್ರೋ ವಂಕ್ರೀಣಾಮುದ್ಧರಣೇ ಕರಣತಯಾ ನ ವಿನಿಯುಕ್ತಃ ಕಿಂ ತು ಸಂಜ್ಞಪನಾತ್ಪ್ರಾಕ್ಪಶೌ ನೀಯಮಾನೇ ಹೋತ್ರಾ ಪ್ರಯುಜ್ಯತೇ ॥ ತತೋಽಸಮವೇತಾರ್ಥತ್ವಾದನೂಹ ಇತ್ಯಾದ್ಯಃ ಪಕ್ಷಃ । ಅಕರಣತ್ವೇಽಪಿ ನಾದೃಷ್ಟಾರ್ಥತ್ವಂ ವಕ್ಷ್ಯಮಾಣಾರ್ಥಸ್ಮಾರಕತ್ವೇನ ದೃಷ್ಟಾರ್ಥಲಾಭಾತ್ ॥ ತಸ್ಮಾತ್ಪ್ರಕೃತೌ ಸಮವೇತಾರ್ಥತಯಾ ವಿಕೃತಾವೂಹಃ॥ ತದಾಽಪಿ ಚತ್ವಾರಃ ಪಕ್ಷಾಃ ॥ ತತ್ರ ಸಂಖ್ಯಾ ಮುಖ್ಯತ್ವೇನ ಪ್ರಕಾಶ್ಯತೇ ॥ ತೇನ ದ್ವಯೋಃ ಪಶ್ವೋರ್ದ್ವಿಗುಣಿತಾಂ ಷಡ್ವಿಂಶತಿಸಂಖ್ಯಾಂ ಪ್ರಕಾಶಯಿತುಂ ದ್ವಿವಚನಾಂತತಯಾ ಷಡ್ವಿಂಶತಿಶಬ್ದ ಊಹನೀಯ ಇತ್ಯಾದ್ಯಃ ಪಕ್ಷಃ ॥ ಪಶೋಶ್ಚೋದಿತತ್ವೇನ ಮುಖ್ಯತ್ವಾತ್ತದ್ವಾಚಕಂ ಷಷ್ಠ್ಯಂತಮಸ್ಯೇತಿ ಪದಂ ಪಶ್ವನುಸಾರೇಣಾಽಽವರ್ತನೀಯಮಿತಿ ದ್ವಿತೀಯಃ ಪಕ್ಷಃ ॥ ಯುಕ್ತಿರ್ಯೋಗಃ ॥ ಷಡ್ವಿಂಶತಿ ಸಂಖ್ಯಾಯಾಶ್ಚ ಪಶುನಾ ಸಹ ಸಂಬಂಧಾತ್ತಸ್ಯ ಮುಖ್ಯತ್ವಾತ್ಪ್ರತಿಪಶು ವಿಭಕ್ತಸಂಖ್ಯಾಂ ಪ್ರಕಾಶಯಿತುಂ ಷಡ್ವಿಂಶತಿಪದಸ್ಯಾಭ್ಯಾಸ ಇತಿ ತೃತೀಯಃ ಪಕ್ಷಃ ॥ ಅತ್ರ ಸರ್ವತ್ರ ಮುಖ್ಯಾನುಸಾರೇಣ ಪದಾಂತರಾಣ್ಯೂಹನೀಯಾನಿ ॥ ಸಂಖ್ಯೇಯಾನಾಂ ವಂಕ್ರೀಣಾಂ ಮುಖ್ಯತ್ವಾತ್ತಾಸಾಮಿಯತ್ತಾ ಸಮಸ್ಯ ವಕ್ತವ್ಯಾ ॥ ತತೋ ದ್ವಾಪಂಚಾಶದನಯೋರ್ವಂಕ್ರಯೋಽಷ್ಟಸಪ್ತತಿರೇಷಾಂ ವಂಕ್ರಯ ಇತ್ಯೇವಂ ಯಥಾಯೋಗಮೂಹನೀಯಮಿತಿ ಚತುರ್ಥಃ ಪಕ್ಷಃ ॥ ಅಯಮೇವ ಸಿದ್ಧಾಂತೋ ವಾಕ್ಯಶೇಷಾನುಗುಣ್ಯಾತ್ ॥ ತಾ ಅನುಷ್ಠ್ಯೇತ್ಯಯಂ ವಾಕ್ಯಶೇಷಃ ॥ ಸ ಚ ವ್ಯಾಖ್ಯಾತಃ ॥

ಭೂಮಿಯಲ್ಲಿ ಒಂದು ಹಳ್ಳವನ್ನು ತೋಡಿ ಅದರಲ್ಲಿ ಪಶುವಿನ ಮಲವನ್ನು (ಅಮೇಧ್ಯ-excvements) ಹುಗಿದು ಮಣ್ಣಿನಿಂದ ಮುಚ್ಚಿರಿ. ಏಕೆಂದರೆ, ಪಶುವಿನ ಮಲವು ಅದರ ಆಹಾರವಾದ ಹುಲ್ಲು ಮತ್ತು ಸೊಪ್ಪುಗಳಿಂದ ಕೂಡಿರುವುದು. ಈ ಸಸ್ಯವು ಭೂಮಿಯಲ್ಲಿ ಉತ್ಪನ್ನವಾಗುವುದರಿಂದ ಸಸ್ಯದಿಂದ ಉಂಟಾದ ಪಶುವಿನ ಮಲವನ್ನು ಅದರ ಸ್ವಸ್ಥಾನವಾದ ಭೂಮಿಯಲ್ಲಿಯೇ ಹುಗಿಯುವುದು ನ್ಯಾಯವಾಗಿದೆ. ಆದ್ದರಿಂದ ಹೋತೃವು ಹಾಗೆ ಮಾಡುವಂತೆ ಶಮಿತೃಗಳಿಗೆ ತಿಳಿಸುವುದು ನ್ಯಾಯವಾಗಿದೆ.



*English Translation*

**(The formula to be recited at the slaughter of the animal. See As'v. S'r. S. 3, 3)**

The Hotar then says (to the slaughters): Ye divine slaughterers, commence (your work), as well as ye who are human! that is to say, he orders all the slaughterers among gods as well as among men (to commence).

Bring hither the instruments for killing, ye who are ordering the sacrifice, in behalf of the two masters of the sacrifice.

The animal is the offering, the sacrificer the master of the offering. Thus he (the Hotar) makes prosper the sacrificer by means of his (the sacrificer's) own offering. Thence they truly say: for whatever deity the animal is killed, that one is the master of the offering. If the animal is to be offered to one deity only, the priest should say: medhapataye "to the master of the sacrifice (singular)"; if to two deities then he should use the dual " to both the masters of the offering," and if to several deities, then he should use the plural "to the masters of the offering". This is the established custom.

Bring ye for him fire! For the animal when carried (to the slaughter) saw death before it. Not wishing to go to the gods, the gods, said to it: Come, we will bring thee to heaven! The animal consented and said: One of you should walk before me.

They consented. Agni then walked before it, and it followed after Agni. Thence they say, every animal belongs to Agni, for it followed after him. Thence they carry before the animal fire (Agni).

Spread the (sacred) grass! The animal lives on herbs. He (the Hotar) thus provides the animal with its entire soul (the herbs being supposed to form part of it).

The mother, the father, the brother, sister, friend, and companion give this (animal) up (for being slaughtered)! When these words are pronounced, they seize the animal which is (regarded as) entirely given up by its relations (parents, & c.).

Turn its feet north wards! Make its eye go to the sun, dismiss its breath to the wind, its life to the air, its hearing to the directions, its body to the earth. In this way he (the Hotar) places it (connects it) with these worlds.

Take off the skin entrie (without cutting it). Before opening the navel tear out the omentum! Stop its breathing within (by stopping its mouth)! Thus he (the Hotar) puts its breath in the animals.

Make of its breats a piece like an eagle, of its arms (two pieces like) two hatchets, of its foreams (two pieces like) spikes, of its shoulders (two pieces like) two kashyapas, its lions should be unbroken (entire); (make of) its things (two pieces like) two shields of the two keepans (two pieces like) two oleander leaves; take out its twenty six ribs according to their order; preaserve every limb of it in its integrity. Thus he benefits all its limbs.

Dig a ditch in the earth to hide its excrements. The excrements consist of vegetable food; for the earth is the place for the herbs. Thus the Hotar puts then (the excrements) finally in their proper place.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಷ್ಠಾಧ್ಯಾಯಸ್ಯ ಷಷ್ಠಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು.



# ಅಥ ಷಷ್ಠಾಧ್ಯಾಯೇ ಸಪ್ತಮಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ ಯದ್ಯಪ್ಯಧ್ರಿಗುಪ್ರೈಷಮಂತ್ರೋ ...... ವ್ಯಾಚಷ್ಟೇ ]



ಅಸ್ನಾ ರಕ್ಷಃ ಸಂಸೃಜತಾದಿತ್ಯಾಹ ತುಷೈರ್ವೈ ಫಲೀಕರಣೈರ್ದೇವಾ ಹವಿರ್ಯಜ್ಞೇಭ್ಯೋ ರಕ್ಷಾಂಸಿ ನಿರಭಜನ್ನಸ್ನಾ ಮಹಾಯಜ್ಞಾತ್ಸ ಯದಸ್ನಾ ರಕ್ಷಃ ಸಂಸೃಜತಾದಿತ್ಯಾಹ ರಕ್ಷಾಂಸ್ಯೇವ ತತ್ಸ್ವೇನ ಭಾಗಧೇಯೇನ ಯಜ್ಞಾನ್ನಿರವದಯತೇ ।

ಯದ್ಯಪ್ಯಧ್ರಿಗುಪ್ರೈಷಮಂತ್ರೋ ನ ಸಮಾಪ್ತಸ್ತಥಾಽಪ್ಯನಂತರಭಾಗೇ ಬಹುವಕ್ತವ್ಯಸದ್ಭಾವಾತ್ ಖಂಡಾಂತರಂ ಕೃತಂ ॥

ದಶಮಂ ಭಾಗಮನೂದ್ಯ ವ್ಯಾಚಷ್ಟೇ—ಅಸ್ನಾಽಸೃಜಾರುಧಿರೇಣ ರಕ್ಷಃ ಸಂಸೃಜತಾನ್ಮಾಂಸಾಭಿಲಾಷವ್ಯಾವೃತ್ತ್ಯರ್ಥಂ ರಾಕ್ಷಸಾನ್ರಕ್ತೇನೈವ ಸಂಯೋಜಯತ ॥ ಏನಂ ಮಂತ್ರಭಾಗಂ ಹೋತಾ ಬ್ರೂಯಾತ್ ॥ ಕಿಮರ್ಥಮೇತದಿತಿ ತದುಚ್ಯತೇ ॥ ಪುರಾ ದೇವಾಸ್ತುಷೈರ್ವ್ರೀಹಿಗತೈರ್ಹೇಯಾಂಶೈಃ ಫಲೀಕರಣೈಸ್ತಂಡುಲಲೇಶೈಶ್ಚ ದರ್ಶಪೂರ್ಣಮಾಸಾದಿಹವಿರ್ಯಜ್ಞೇಷು ಸಮಾಗತಾನಿ ರಕ್ಷಾಂಸಿ ತೋಷಯಿತ್ವಾ ತೇಭ್ಯೋ ಯಜ್ಞೇಭ್ಯೋ ನಿರಭಜನ್ಸ್ವವಿಭಾಗರಹಿತಾನ್ಯಕುರ್ವನ್ । ಮಹಾಯಜ್ಞೇ ಜ್ಯೋತಿಷ್ಟೋಮಾದಿಕೇ ಸಮಾಗತಾನಿ ರಕ್ಷಾಂಸಿ ಪಶುರಕ್ತೇನ ತೋಷಯಿತ್ವಾ ತಸ್ಮಾದ್ಯಜ್ಞಾನ್ನಿರಭಜನ್ನಿಃಸಾರಿತವನ್ತಃ । ಹವಿರ್ಯಜ್ಞೇಭ್ಯೋ ನಿಃಸಾರಣಂ ಶಾಖಾಂತರೇ ದರ್ಶಪೂರ್ಣಮಾಸಪ್ರಕರಣೇ ಮಂತ್ರವ್ಯಾಖ್ಯಾನೇ ಸಮಾಮ್ನಾತಮ್—'ರಕ್ಷಸಾಂ ಭಾಗೋಽಸೀತ್ಯಾಹ ತುಷೈರೇವ ರಕ್ಷಾಂಸಿ ನಿರವದಯತೇ' ಇತಿ ॥ ತದೇತದಾಪಸ್ತಂಬೇನೋಕ್ತಂ—'ಮಧ್ಯಮೇ ಪುರೋಡಾಶಕಪಾಲೇ ತುಷಾನೋಪ್ಯ ರಕ್ಷಸಾಂ ಭಾಗೋಽಸೀತ್ಯಧಸ್ತಾತ್ಕೃಷ್ಣಾಜಿನಸ್ಯೋಪವಸತಿ' ಇತಿ ಮಹಾಯಜ್ಞಾನ್ನಿಃಸರಣಮಗ್ನೀಷೋಮೀಯಪಶುಪ್ರಕರಣೇ ತೈತ್ತಿರೀಯೈರಾಮ್ನಾತಂ—'ರಕ್ಷಸಾಂ ಭಾಗೋಽಸೀತಿ ಸ್ಥವಿಮತೋ ಬರ್ಹಿರಜ್ಯಾಽಪಾಸ್ಯತ್ಯಸ್ನೈವ ರಕ್ಷಾಂಸಿ ನಿರವದಯತಃ' ಇತಿ॥ ಸ್ಥವಿಮತಃ ಸ್ಥಾಲ್ಯಯುಕ್ತೇ ಬರ್ಹಿರ್ಮೂಲಭಾಗ ಇತ್ಯರ್ಥಃ ॥ ಏತದಪಿ ಸೂತ್ರಕಾರೇಣ ಸ್ಪಷ್ಟೀಕೃತಂ—'ಬರ್ಹಿಷೋಽಗ್ರಂ ಸವ್ಯೇನ ಪಾಣಿನಾಽಽದತ್ತೇ' ತಂ ಮಧ್ಯಂ ಯತ ಆಚ್ಛೃತಿ ತದುಭಯತೋ ಲೋಹಿತೇನಾಜ್ಯಾ...

**ರಕ್ಷಸಾಂ ಭಾಗೋಽಸೀತ್ಯುತ್ತರಮುಪರಮುವಾಂತರದೇಶಂ ನಿರಸ್ಯ' ಇತಿ || ಏವಂ ಸತಿ ಯದ್ಯಸ್ನಾ ರಕ್ಷ ಇತಿ ಭಾಗಂ ಪಠೇತ್ತದಾನೀಂ ರಕ್ಷಾಂಸಿ ಸ್ವಕೀಯಭಾಗೇನ ಯುಕ್ತಾನಿ ಕೃತ್ವಾ ಮಹಾಯಜ್ಞಾನ್ನಿರವದಯತೇ ನಿಃಸಾರಯತಿ ||**

ಈ ಅಧ್ಯಾಯದ ಹಿಂದಿನ ಖಂಡದಲ್ಲಿ ಎಂದರೆ ಆರನೆಯ ಖಂಡದಲ್ಲಿ ಅಧ್ರಿಗುಪ್ರೈಷಮಂತ್ರಗಳ ವಿವರಣೆಯು ಸಮಾಪ್ತವಾಗಿರುವುದಿಲ್ಲವಾದ್ದರಿಂದಲೂ ಈ ವಿಷಯದಲ್ಲಿ ಹೇಳಬೇಕಾದ ವಿಷಯಗಳು ಹೆಚ್ಚಾಗಿರುವುದರಿಂದಲೂ ಈ ಏಳನೆಯ ಖಂಡದಲ್ಲಿಯೂ ಹಿಂದಿನ ಖಂಡದ ವಿಷಯವನ್ನೇ ಮುಂದರಿಸಲಾಗುವುದು. ಈಗ ಹತ್ತನೆಯ ಭಾಗವನ್ನು ಹೇಳುವರು.

ಯಜ್ಞಮಾಡುವಾಗ, ಪಿಶಾಚಗಳು, ರಕ್ಷೋಗಣಗಳು ಮೊದಲಾದ ದುಷ್ಟಶಕ್ತಿಗಳು ಯಜ್ಞಕ್ಕೆ ವಿಘ್ನವನ್ನುಂಟುಮಾಡುವವು ಎಂಬ ಭಾವನೆಯು ಯಜ್ಞಕರ್ತರಲ್ಲಿರುವುದರಿಂದ ಋತ್ವಿಕ್ಕುಗಳು ದೇವತೆಗಳನ್ನು ಹೋಮಗಳಿಂದ ತೃಪ್ತಿಪಡಿಸುವಂತೆಯೇ ಈ ದುಷ್ಟಶಕ್ತಿಗಳನ್ನು ಅವುಗಳಿಗೆ ತಕ್ಕ ದ್ರವ್ಯಗಳಿಂದ ತೃಪ್ತಿಪಡಿಸಿ ಸಮಾಧಾನಮಾಡುವುದು ರೂಢಿಯಲ್ಲಿ ಬಂದಿದೆ. ಸಮಾಧಾನಗೊಂಡ ದುಷ್ಟಶಕ್ತಿಗಳು ಯಜ್ಞಕ್ಕೆ ಯಾವ ತೊಂದರೆಯನ್ನೂ ಉಂಟುಮಾಡದೆ ದೂರ ಹೊರಟುಹೋಗುವವು ಎಂಬ ಭಾವನೆಯು ಇರುವುದರಿಂದ ಆ ವಿಷಯವನ್ನೇ ಇಲ್ಲಿ ಹೇಳಲಾಗಿದೆ. ಯಜ್ಞಗಳಲ್ಲಿ ಮುಖ್ಯವಾಗಿ—

**ಮಹಾಯಜ್ಞಾಃ ಸೋಮಯಾಗಾ ಹವಿರ್ಯಜ್ಞಾಸ್ತತೋಽಪರೇ |**
**ನಿರ್ಭಜೇರರ್ಥ ಆತ್ಮೀಯಭಾಗಪ್ರಾಪ್ತೇ ಪ್ರಪೃಷ್ಟತಾ ||**

ಎಂಬ ಉಕ್ತಿಯ ಪ್ರಕಾರ ಎರಡು ವಿಭಾಗಗಳಿರುವವು. ಸೋಮಯಾಗವೇ ಮೊದಲಾದ ಪಶುಹೋಮಮಾಡುವ ಯಜ್ಞಗಳಿಗೆ ಮಹಾಯಜ್ಞಗಳೆಂದೂ, ಹವಿಸ್ಸು, ಪುರೋಡಾಶ ಮೊದಲಾದ ಹವಿರ್ದ್ರವ್ಯಗಳನ್ನುಪಯೋಗಿಸಿ ಹೋಮಮಾಡುವ ದರ್ಶಪೂರ್ಣಮಾಸ ಮೊದಲಾದ ಯಜ್ಞಗಳಿಗೆ ಹವಿರ್ಯಜ್ಞಗಳೆಂದೂ ಕರೆಯುವುದು ರೂಢಿಯಾಗಿದೆ. ಆದ್ದರಿಂದ ಹೋತೃವು—**ಅಸ್ನಾ ರಕ್ಷಃ ಸಂಸೃಜತಾದಿತ್ಯಾಹ** ಎಂದು ಹೇಳುವನು. ಎಂದರೆ ಕತ್ತರಿಸಿದ ಪಶುವಿನ ರಕ್ತದಿಂದ ರಾಕ್ಷಸಾದಿ ದುಷ್ಟಶಕ್ತಿಗಳಿಂದ ತೃಪ್ತಿಪಡಿಸಿ ಕಳುಹಿಸಬೇಕು. ರಕ್ಷೋಗಣಗಳು ಪಿಶಾಚಾದಿಗಳು ಮೊದಲಾದ ದುಷ್ಟಶಕ್ತಿಗಳು ಮಾಂಸವನ್ನು ಅಪೇಕ್ಷಿಸುವುದರಿಂದ ಅವುಗಳ ಪ್ರೀತ್ಯರ್ಥವಾಗಿ ಪಶುವಿನ ರಕ್ತವನ್ನು ಕೊಟ್ಟು ತೃಪ್ತಿಪಡಿಸಲಾಗುವುದು. ಏಕೆಂದರೆ ಹೋಮಾರ್ಥವಾಗಿ ಎಂದರೆ ದೇವತೆಗಳ ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಹೋಮಮಾಡಲು ತೆಗೆದಿಟ್ಟಿರುವ ಮಾಂಸವನ್ನು ಅಪೇಕ್ಷಿಸದಂತೆ ಮಾಡುವುದಕ್ಕಾಗಿಯೇ ರಕ್ತವನ್ನು ಕೊಟ್ಟು ಕಳುಹಿಸುವುದು ರೂಢಿಯಾಗಿದೆ. ಹೀಗೆ ಏತಕ್ಕೆ ಮಾಡಬೇಕೆಂದರೆ ಪೂರ್ವದಲ್ಲಿ ದೇವತೆಗಳು ದರ್ಶಪೂರ್ಣಮಾಸಾದಿ ಹವಿರ್ಯಜ್ಞಗಳನ್ನು ಮಾಡಿದಾಗ ರಾಕ್ಷಸಾದಿಗಳ ಬಾಧೆಗಳುಂಟಾಗದಿರಲೆಂದು (ಹವಿರ್ದ್ರವ್ಯಗಳನ್ನು ಸಿದ್ಧಪಡಿಸುವಾಗ ವ್ಯರ್ಥವಾಗಿ ಉಳಿಯುವ) ಭತ್ತದ ಹೊಟ್ಟು, ಅಕ್ಕಿಯ ನುಚ್ಚು ಮೊದಲಾದ ಅನುಪಯುಕ್ತ ದ್ರವ್ಯಗಳನ್ನು ರಾಕ್ಷಸಾದಿಗಳಿಗೆ ಕೊಟ್ಟು ಅವರನ್ನು ತೃಪ್ತಿಪಡಿಸಿ ದೇವತೆಗಳಿಗೆ ಉದ್ದಿಷ್ಟವಾದ ಪುರೋಡಾಶ, ಆಜ್ಯ ಮೊದಲಾದವುಗಳಲ್ಲಿ ಅವರಿಗೆ ಭಾಗವಿಲ್ಲದಂತೆ ಮಾಡಿ ಅವರನ್ನು ಕಳುಹಿಸಿದ್ದರು. ಆದ್ದರಿಂದ ಆ ಕ್ರಮವನ್ನನುಸರಿಸಿ ಜ್ಯೋತಿಷ್ಟೋಮಾದಿ ಮಹಾಯಜ್ಞಗಳಲ್ಲಿ ಯಜ್ಞಪಶುವನ್ನು ಕತ್ತರಿಸುವಾಗ ಕೆಳಗೆ ಬೀಳುವ ರಕ್ತವನ್ನು ರಕ್ಷೋಗಣಗಳಿಗೆ ಕೊಟ್ಟು ತೃಪ್ತಿಪಡಿಸಿ ದೂರ ಹೋಗುವಂತೆ ಮಾಡುವುದು ರೂಢಿಯಲ್ಲಿ ಬಂದಿದೆ. ಈ ವಿಷಯವು ಹವಿರ್ಯಜ್ಞಪ್ರಕರಣವನ್ನು ವಿವರಿಸುವಾಗ—**ರಕ್ಷಸಾಂ ಭಾಗೋಽಸೀತ್ಯಾಹ | ತುಷೈರೇವ ರಕ್ಷಾಗ್ಂಸಿ ನಿರವದಯತೇ** (ತೈ.ಬ್ರಾ. ೩-೨-೫) ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದೆ. ಅದನ್ನೇ ಆಪಸ್ತಂಬ ಶ್ರೌತಸೂತ್ರದಲ್ಲಿ—**ಮಧ್ಯಮೇ ಪುರೋಡಾಶಕಪಾಲೇ ತುಷಾನೋಪ್ಯ ರಕ್ಷಸಾಂ ಭಾಗೋಽಸೀತ್ಯಧಸ್ತಾತ್ಕೃಷ್ಣಾಜಿನಸ್ಯೋಪವಪತಿ** ಎಂದು ಹೇಳಿದೆ. ಮಹಾಯಜ್ಞಪ್ರಕರಣದಲ್ಲಿ ಈ ವಿಷಯವಾಗಿ—**ರಕ್ಷಸಾಂ ಭಾಗೋಽಸೀತಿ ಸ್ಥವಿಮತೋ ಬರ್ಹಿರಕ್ತ್ವಾಪಾಸ್ಯತ್ಯಸ್ರೈವ ರಕ್ಷಾಗ್ಂಸಿ ನಿರವದಯತೇ |**

(ತೈ.ಸಂ.೬-೩-೯-೨)ಎಂದು ತೈತ್ತಿರೀಯಸಂಹಿತೆಯಲ್ಲಿ ವಿವರಿಸಿದೆ. ಇದನ್ನೇ—**ಬರ್ಹಿಷೋಽಗ್ರಂ ಸವ್ಯೇನ ಪಾಣಿನಾದತ್ತೇ। ಅಥ ಮಧ್ಯಂ ಯತ ಆರ್ಛತಿ ತದುಭಯತೋ ಲೋಹಿತೇನಾಂಕ್ತ್ವಾ ರಕ್ಷಸಾಂ ಭಾಗೋಽಸೀತ್ಯುತ್ತರ ಮಪರ ಮಪಾಂತರದೇಶಂ ನಿರಸ್ಯ** (ಆಪ. ಶ್ರೌ. ಸೂ. ೭-೧೮-೧೩, ೧೪) ಆಪಸ್ತಂಬ ಶ್ರೌತಸೂತ್ರದಲ್ಲಿ ಹೇಳಿದೆ. ಎಂದರೆ ದರ್ಭೆಯ ಕಂತೆಯ ಅಗ್ರ (ತುದಿ) ಭಾಗವನ್ನು ಬಲಗೈಯಿಂದ ಹಿಡಿದುಕೊಂಡು ತಳಭಾಗವನ್ನು ಮಧ್ಯಭಾಗವನ್ನು ಪಶುವಿನ ರಕ್ತದಲ್ಲಿ ಅದ್ದಿ ಆ ರಕ್ತವನ್ನುದ್ದೇಶಿಸಿ **ರಕ್ಷಸಾಂ ಭಾಗೋಽಸಿ** (ತೈ. ಸಂ. ೧-೧-೫-೨) ಎಲೈ ರಕ್ತವೇ ನೀನು ರಾಕ್ಷಸಾದಿಗಳ ಭಾಗವಾಗಿದ್ದೀಯೆ ಎಂದು ಹೇಳಿ ಆ ದರ್ಭೆಯಲ್ಲಿರುವ ರಕ್ತವನ್ನು ಕೃಷ್ಣಾಜಿನದ ತಳಭಾಗದಲ್ಲಿ ಹಿಂಪಡಿಸಬೇಕು. ಹೀಗೆ ಮಾಡುವುದರಿಂದ ರಕ್ಷೋಗಣಗಳಿಗೆ ಅವರ ಯಜ್ಞಭಾಗವನ್ನು ಕೊಟ್ಟಂತಾಗುವುದು ಮತ್ತು ಅದರಿಂದ ಅವರು ತೃಪ್ತಿಯನ್ನು ಹೊಂದಿ ಯಜ್ಞಗಳಿಗೆ ತೊಂದರೆಮಾಡದೆ ಹೊರಟುಹೋಗುವರು ಎಂಬ ಪ್ರತೀತಿ ಇದೆ.

**ತದಾಹುರ್ನ ಯಜ್ಞೇ ರಕ್ಷಸಾಂ ಕೀರ್ತಯೇತ್ಕಾನಿ ರಕ್ಷಾಂಸ್ಯೃತೇರಕ್ಷಾ ವೈ ಯಜ್ಞ ಇತಿ ।**

**ಅಥಾಸ್ನೇತ್ಯೇತಸ್ಯ ಮಂತ್ರಭಾಗಸ್ಯ ಪಾಠಂ ಪೂರ್ವಪಕ್ಷತ್ವೇನಾಽಽಕ್ಷಿಪತಿ—ತತ್ತತ್ರ ಮಂತ್ರಭಾಗೇ ಚೋದ್ಯವಾದಿನ ಆಹುಃ । ಕಥಮಿತಿ, ಉಚ್ಯತೇ ॥ ಯಜ್ಞೇ ಪ್ರವರ್ತಮಾನೇ ಸತಿ ಕಾನಿಚಿದಪಿ ರಕ್ಷಾಂಸಿ ನ ಕೀರ್ತಯೇತ್ ॥ ಜಾತಿವಿಶೇಷಾನಪೇಕ್ಷ್ಯ ಬಹುವಚನನಿರ್ದೇಶಃ । ರಾಕ್ಷಸಾವಾಂತರಜಾತೀನಾಂ ಮಧ್ಯೇ ರಾಕ್ಷಸಮಸುರಂ ಪಿಶಾಚಂ ವಾ ನ ಕಂಚಿದಪಿ ಕೀರ್ತಯೇತ್ ॥ ಜಾತಿವಿಶೇಷಾಃ ಶ್ರುತ್ಯಂತರೇ ಸೃಷ್ಟ್ಯದ್ವಯೋಪನ್ಯಾಸೇ ಶ್ರೂಯಂತೇ—‘ದೇವಾ ಮನುಷ್ಯಾಃ ಪಿತರಸ್ತೇಽನ್ಯತ ಆಸನ್ನಸುರಾ ರಕ್ಷಾಂಸಿ ಪಿಶಾಚಾಸ್ತೇಽನ್ಯತಃ’ ಇತಿ । ಅಕೀರ್ತನೇ ಹೇತುಮೃತೇ ರಕ್ಷಾ ಇತಿ ಪದೇನೋಪನ್ಯಸ್ಯತಿ ॥ ತದೇತತ್ಸಮಸ್ತಮೇಕಮೇವಂ ಪದಂ । ಋತ ಶಬ್ದೋ ವರ್ಜನವಾಚೀ ॥ ವರ್ಜಿತಂ ರಕ್ಷೋ ಯಸ್ಮಿನ್ಯಜ್ಞೇ ಸೋಽಯಮೃತೇರಕ್ಷಾಃ ॥ ಯಜ್ಞೋ (ಜ್ಞೇ) ಹಿ ಹವಿರ್ಭಾಗತ್ವಾದ್ದೇವಾ ಏವ ನಾಮಗ್ರಹಣ ಮರ್ಹಂತಿ ನ ತು ರಕ್ಷಃ ಪ್ರಭೃತಯಃ ॥ ತಸ್ಮಾದೇತಂ ಮಂತ್ರಭಾಗಂ ನ ಕೀರ್ತಯೇದಿತ್ಯಾಕ್ಷೇಪವಾದಿನಾಮಭಿಪ್ರಾಯಃ ॥**

ಮೇಲೆ ರಕ್ಷೋಗಣಗಳನ್ನುದ್ದೇಶಿಸಿ **ರಕ್ಷಸಾಂ ಭಾಗೋಽಸಿ** ಇತ್ಯಾದಿ ಮಂತ್ರಗಳನ್ನು ಪಠಿಸಬೇಕೆಂದು ಹೇಳಿದೆಯಷ್ಟೆ. ಈ ವಿಷಯದಲ್ಲಿ ಯಜ್ಞವಿಮರ್ಶಕರು ಒಂದು ಸಂದೇಹವನ್ನು ವ್ಯಕ್ತಪಡಿಸುವರು; ಯಜ್ಞಾದಿಗಳನ್ನು ಮಾಡುವಾಗ **ಋತೇ ರಕ್ಷಾ ವೈ ಯಜ್ಞಃ** ಎಂಬ ವಿಧಿಯಪ್ರಕಾರ ರಕ್ಷೋಗಣಗಳ ಹೆಸರನ್ನು ಯಜ್ಞಗಳಲ್ಲಿ ಉಚ್ಚರಿಸಬಾರದು ಎಂದಿದೆಯಷ್ಟೆ. ಆದ್ದರಿಂದ ಇಲ್ಲಿ ರಕ್ಷೋಗಣಗಳ ಹೆಸರನ್ನು ಉಚ್ಚರಿಸುವುದು ತಪ್ಪು. ರಕ್ಷೋಗಣಗಳೆಂದರೆ ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವಂತೆ **ದೇವಾ ಮನುಷ್ಯಾಃ ಪಿತರಸ್ತೇಽನ್ಯತ ಆಸನ್ನಸುರಾ ರಕ್ಷಾಗ್ಂಸಿ ಪಿಶಾಚಾಸ್ತೇಽನ್ಯತಃ** (ತೈ. ಸಂ. ೨-೪-೧-೧) ರಾಕ್ಷಸರು, ಅಸುರರು, ಪಿಶಾಚಾದಿ ದುಷ್ಟಶಕ್ತಿಗಳು ಎಂದರ್ಥವು ರಕ್ಷೋಗಣಗಳಲ್ಲಿ ಈ ರೀತಿ ಪ್ರಭೇದಗಳಿರುವುದರಿಂದ ಇಲ್ಲಿ **ರಕ್ಷಾಗ್ಂಸಿ** ಎಂಬ ಶಬ್ದದ ಬಹುವಚನ ಪ್ರಯೋಗವಿದೆ. ಮತ್ತು **ಋತೇ ರಕ್ಷಾಗ್ಂಸಿ** ಎಂದು ಹೇಳಿರುವುದರಿಂದ ರಕ್ಷೋಗಣಗಳನ್ನು ಬಿಟ್ಟು ಎಂದರ್ಥವು—**ಋತೇ** ಶಬ್ದಕ್ಕೆ ಹೊರತು, ಬಿಟ್ಟು ಎಂದರ್ಥವು. ಎಂದರೆ ಯಜ್ಞಗಳಲ್ಲಿ ರಾಕ್ಷಸಾದಿಗಳನ್ನು ಬಿಟ್ಟು ದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞಕ್ಕೆ **ಋತೇ ರಕ್ಷಾ ವೈ ಯಜ್ಞಃ**

ಋತೇ ರಕ್ಷಾಃ ಎಂದು ಹೆಸರು, ಮುಖ್ಯಾಭಿಪ್ರಾಯವೇನೆಂದರೆ—ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಪ್ರದಾನಮಾಡುವಾಗ ದೇವತೆಗಳ ಹೆಸರುಗಳನ್ನು ಮಾತ್ರ ಉಚ್ಚರಿಸಬೇಕು, ರಕ್ಷೋಗಣಗಳ ಹೆಸರುಗಳನ್ನು ಉಚ್ಚರಿಸಕೂಡದು. ಆದ್ದರಿಂದ ಇಲ್ಲಿ ರಕ್ಷೋಗಣಗಳ ಹೆಸರುಗಳನ್ನು ಉಚ್ಚರಿಸುವುದು ತಪ್ಪಲ್ಲವೇ ಎಂದರೆ ಅದಕ್ಕೆ ಸಮಾಧಾನವನ್ನೂ ಹೇಳುವರು—

**ತದು ವಾ ಆಹುಃ ಕೀರ್ತಯೇದೇವ । ಯೋ ವೈ ಭಾಗಿನಂ ಭಾಗಾನ್ನುದತೇ ಚಯತೇ ವೈನಂ ಸ ಯದಿ ವೈನಂ ನ ಚಯತೇಽಥ ಪುತ್ರಮಥ ಪೌತ್ರಂ ಚಯತೇ ತ್ವೇವೈನಮಿತಿ ।**

**ಸಮಾಧತ್ತೇ—ತದು ವೈ ತಸ್ಮಿನ್ನೇವಾಸ್ನಾ ರಕ್ಷ ಇತಿ ಮಂತ್ರಭಾಗೇ ಸಂಪ್ರದಾಯವಿದಃ ಸಮಾಧಾನಮಾಹುಃ ॥ ಯದ್ಯಪಿ ತತ್ರ ರಕ್ಷೋನಾಮಾಸ್ತಿ ತಥಾಽಪಿ ತಂ ಭಾಗಂ ಕೀರ್ತಯೇದೇವ ॥ ತತ್ರೋಪಪತ್ತಿಮಾಹ ಯಃ ಪುಮಾನ್ಭಾಗಿನಂ ಭಾಗಾರ್ಹಂ ಸಂತಮನ್ಯಂ ಪುರುಷಂ ತದೀಯಾದ್ಭಾಗಾನ್ನುದತೇ ನಾಶಯತ್ಯೇನಂ ವಿನಾಶಯಿತಾರಂ ಸ ನಷ್ಟಭಾಗಃ ಸಂಶ್ಚಯತೇ ವೈನಂ ಚ್ಯಾವಯತ್ಯೇವ ॥ ಯದಿ ವಾ ಯದಾ ಕದಾಚಿದ್ವಿನಾಶಯಿತುಃ ಪ್ರಾಬಲ್ಯೇ ಸತಿ ತದಾನೀಮೇನಂ ನ ಚಯತೇ ನ ಚ್ಯಾವಯತಿ ॥ ಅಥಾಪಿ ಕಾಲಾಂತರೇ ತದೀಯಂ ಪುತ್ರಂ ಪಿತೃದ್ವೇಷೇಣ ವಿನಾಶಯತಿ ತದಾಪ್ಯಶಕ್ತೌ ಪೌತ್ರಂ ವಾ ವಿನಾಶಯತಿ । ಕಿಂ ಬಹುನಾ ಭಾಗಭ್ರಷ್ಟೋ ಮನಸಿ ದ್ವೇಷಂ ಗೃಹೀತ್ವಾ ಸ್ವವಿರೋಧಿನಮೇನಂ ಭ್ರಂಶಯಿತಾರಂ ಯದಾ ಕದಾಚಿತ್ಕೇನಾಪಿ ದ್ವಾರೇಣ ಚಯತೇ ತ್ವೇವ ವಿನಾಶಯತ್ಯೇವೇತ್ಯನೇನಾಭಿಪ್ರಾಯೇಣ ಮಂತ್ರಭಾಗಂ ಕೀರ್ತಯೇದೇವೇತ್ಯಭಿಜ್ಞೈರುಕ್ತಂ ॥ ಯದ್ಯಪಿ ರಕ್ಷಸಾಂ ಹವಿರ್ಭಾಗೋ ನಾಸ್ತಿ ತಥಾಽಪಿ ಯಜ್ಞೇ ತುಷಕಣಾದಿ ದೇವಾನರ್ಹಭಾಗೋಽಸ್ತ್ಯೇವ ತಸ್ಮಾತ್ಕೀರ್ತನಪಕ್ಷ ಏವ ಯುಕ್ತಃ ॥**

ಯಜ್ಞಾನುಷ್ಠಾನಕ್ರಮವನ್ನು ಚೆನ್ನಾಗಿ ಬಲ್ಲ ಸಂಪ್ರದಾಯವನ್ನು ಚೆನ್ನಾಗಿ ತಿಳಿದವರು ಈ ರೀತಿ ಹೇಳುವರು—ಯಜ್ಞಗಳಲ್ಲಿ ಯಜ್ಞಭಾಗಾರ್ಹರಾದವರು ಸಾಧುಪುರುಷರಾಗಲಿ ಎಂದರೆ ದೇವತೆಗಳಾಗಿರಲಿ ಅಥವಾ ದುಷ್ಟರಾಗಿರಲಿ ಅವರ ಹೆಸರುಗಳನ್ನು ಉಚ್ಚರಿಸಲೇ ಬೇಕು. ರಕ್ಷೋಗಣಗಳು ದುಷ್ಟರು, ಆದ್ದರಿಂದ ಇವರ ನಾಮೋಚ್ಚಾರಣೆಯನ್ನು ಮಾಡುವುದಿಲ್ಲ ಎಂದ ಯಜ್ಞಕರ್ತನು ಅವರುಗಳ ಹೆಸರುಗಳನ್ನು ಪಠಿಸದೇ ಬಿಟ್ಟದ್ದೇ ಆದರ ಆ ರಕ್ಷೋಗಣಗಳು ಎಂದರೆ ರಕ್ಷಸರು, ಅಸುರರು, ಪಿಶಾಚಾದಿಗಳು ಆ ಯಜ್ಞಮಾಡುವ ಯಜಮಾನನಿಗೆ ಕೆಡಕನ್ನುಂಟುಮಾಡುವರು. ಒಂದು ವೇಳೆ ಅದು ಸಾಧ್ಯವಾಗದಿದ್ದಲ್ಲಿ ಆ ಯಜಮಾನನ ಪುತ್ರರಿಗಾಗಲಿ, ಅಥವಾ ಅವನ ಪೌತ್ರ (ಮೊಮ್ಮಕ್ಕಳು) ರಿಗಾಗಲಿ ಕೆಡಕನ್ನುಂಟುಮಾಡುವರು. ಯಜ್ಞಭಾಗಾರ್ಹರಾದವರ ಹೆಸರನ್ನು (ಅವರು ಒಳ್ಳೆಯವರಾಗಿರಲಿ ಅಥವಾ ಕೆಟ್ಟವರಾಗಿರಲಿ) ಅವರ ಹೆಸರುಗಳನ್ನು ಪಠಿಸಲೇಬೇಕು ಇಲ್ಲದಿದ್ದರೆ ಯಜಮಾನನಿಗೆ ಅಥವಾ ಅವನ ಪುತ್ರ ಪೌತ್ರಾದಿಗಳಿಗೆ ವಿನಾಶವು ತಪ್ಪಿದ್ದಲ್ಲ. ಆದ್ದರಿಂದ ಅವರ ಹೆಸರುಗಳನ್ನು ಪಠಿಸುವುದೇ ಯುಕ್ತವು.

**ಸ ಯದಿ ಕೀರ್ತಯೇದುಪಾಂಶು ಕೀರ್ತಯೇತ್ತಿರ ಇವ ವಾ ಏತದ್ವಾಚೋ ಯದುಪಾಂಶು ತಿರ ಇವೈತದ್ಯದ್ರಕ್ಷಾಂಸಿ ।**

ತತ್ರ್ಯೃತಸ್ಯ ಮಂತ್ರಭಾಗಸ್ಯ ಕೀರ್ತನೇ ಕಂಚಿದ್ವಿಶೇಷಂ ವಿಧತ್ತೇ—ಸ ಯಾಜ್ಞಿಕೋ ಯಜ್ಞೇ ರಕ್ಷಸಾಂ ನಾಮಧೇಯಂ ದ್ವೇಷಪರಿಹಾರಾಯ ಯದಿ ಕೀರ್ತಯೇತ್ತದಾಽಪ್ಯುಪಾಂಶು ಪರ್ಯೈರ್ಯಥಾ ನ ಶ್ರೂಯೇತ ತಥಾ ಕೀರ್ತಯೇತ್ ॥ ವಾಚಃ ಸಂಬಂಧಿ ಯದುಪಾಂಶು ಕೀರ್ತನಮೇತತ್ತಿರ ಇವ ತಿರೋಹಿತಮಿವ ಭವತಿ ॥ ಯಥಾ ಕುಡ್ಯಾದಿವ್ಯವಹಿತಂ ಸ್ತಂಭಾದಿಕಂ ಚಕ್ಷುಷಾ ನ ದೃಶ್ಯತೇ ತಥೈವೋಪಾಂಶುಕಥಿತಂ ನ ಶ್ರೂಯತೇ ॥ ರಕ್ಷಾಂಸೀತಿ ಯದಸ್ತ್ಯೇತ-ದಪಿ ತಿರ ಇವ ಚೋರವದ್ಯಜ್ಞೇ ರಕ್ಷಸಾಂ ಗೂಢಚಾರಿತ್ವಾತ್ ॥ ತಸ್ಮಾತ್ತದೀಯಕೀರ್ತನ-ಸ್ಯೋಪಾಂಶುತ್ವಂ ಯುಕ್ತಂ ॥

ಈ ಮಂತ್ರವನ್ನು ಪಠಿಸುವುದರಲ್ಲಿ ಒಂದು ವಿಶೇಷವಿದೆ. ಹೋತೃವು ಈ ಮಂತ್ರವನ್ನು (ರಕ್ಷಸಾಂ ಭಾಗೋಽಸಿ) ಪಠಿಸುವಾಗ ಅದನ್ನು ಬಹಳ ಮೆತ್ತಿನ ಎಂದರೆ ಯಾರಿಗೂ ಕೇಳಿಸದಂತೆ ಅತ್ಯಂತ ಸಣ್ಣ ಧ್ವನಿಯಲ್ಲಿ ಹೇಳಬೇಕು. ಗೋಡೆಯಲ್ಲಿ ಸೇರಿಸಿ ಕಟ್ಟಿರುವ ಕಂಭವು ಜನರ ಕಣ್ಣಿಗೆ ಯಾವರೀತಿ ಕಾಣಿಸುವುದಿಲ್ಲವೋ ಅದರಂತೆ ಸಣ್ಣ ಧ್ವನಿಯಲ್ಲಿ ಪಠಿಸುವ ಈ ಮಂತ್ರವೂ ಇತರರಿಗೆ ಕೇಳಿಸದಂತಿರಬೇಕು. ಏಕೆಂದರೆ ಈ ರಾಕ್ಷಸಾದಿಗಳು ಕಳ್ಳರಂತೆ ಯಾರ ಕಣ್ಣಿಗೂ ಬೀಳದೆ ಯಜ್ಞಗಳಲ್ಲಿ ಗೂಢವಾಗಿ ಸಂಚರಿಸುವುದು. ಇವರ ಸ್ವಭಾವವು ಈ ಸ್ವಭಾವಕ್ಕನುಗುಣವಾಗಿ ಇವರಿಗೆ ಸಂಬಂಧಪಟ್ಟ ಮಂತ್ರವನ್ನು ಉಪಾಂಶುಸ್ವರದಿಂದ ಎಂದರೆ ಮೆತ್ತನೆಯ ಸ್ವರದಿಂದ ಪಠಿಸುವುದು ಯುಕ್ತವಾಗಿರುವುದು.

## ಅಥ ಯದುಚ್ಚೈಃ ಕೀರ್ತಯೇದೀಶ್ವರೋ ಹಾಸ್ಯ ವಾಚೋ ರಕ್ಷೋ-ಭಾಷೋ ಜನಿತೋಃ

ವಿಪಕ್ಷೇ ಬಾಧಂ ದರ್ಶಯತಿ—ಅಥೋಪಾಂಶುತ್ವೈಲಕ್ಷಣ್ಯೇನ ಯದ್ಯುಚ್ಚೈಃ ಕೀರ್ತ-ಯೇದಸ್ಯ ಕೀರ್ತಯಿತುಃ ಸಂಬಂಧಿನೀರ್ವಾಚೋ ರಕ್ಷೋಭಾಷೋ ಜನಿತೋರ್ಜನಯಿತು-ಮಯಮೀಶ್ವರೋ ಭವತಿ ॥ ರಕ್ಷೋಭಿರ್ಭಾಷ್ಯತ ಇತಿ ರಕ್ಷೋಭಾಷ್, ಇತ್ಯಸ್ಯ ಸ್ತ್ರೀಲಿಂಗಸ್ಯ ದ್ವಿತೀಯಾಬಹುವಚನಂ ರಕ್ಷೋಭಾಷ ಇತಿ ॥ ತದೇತದ್ವಾಚ ಇತ್ಯಸ್ಯ ವಿಶೇಷಣಂ ॥ ಅಸ್ಯೋ-ಚ್ಚೈಃ ಕೀರ್ತಯಿತುರ್ಯಾ ವಾಚಃ ಸಂತಿ ತಾಃ ಸರ್ವಾದಕ್ಷಃ ಪ್ರೋಕ್ತವಾಗ್ರೂಪೇಣೋತ್ಪಾ-ದಯಿತುಮಯಂ ಸಂಕೀರ್ತಯಿತಾ ಸಮರ್ಥೋ ಭವತೀತಿ ॥

ಒಂದು ವೇಳೆ ಮೇಲೆ ಹೇಳಿದ ಕ್ರಮಕ್ಕೆ ವಿರುದ್ಧವಾಗಿ ಹೋತೃವು ಈ ರಕ್ಷಃಸಂಬಂಧವಾದ ಮಂತ್ರವನ್ನು ಘಟ್ಟಿಯಾದ ಸ್ವರದಿಂದ ಉಚ್ಚರಿಸಿದ್ದೇ ಆದರೆ ಉಂಟಾಗುವ ಹಾನಿಯನ್ನು ವಿವರಿಸುವರು. ರಾಕ್ಷಸಾದಿಗಳು ಮಾತನಾಡುವ ಧ್ವನಿಯು ಘಟ್ಟಿಯಾಗಿಯೂ ಇರುವುದು. ಆದ್ದರಿಂದ ಹೋತೃವು ಈ ಮಂತ್ರವನ್ನು ಘಟ್ಟಿಯಾಗಿ ಪಠಿಸಿದರೆ ಆ ಮಂತ್ರೋಚ್ಚಾರಣೆಯು ರಾಕ್ಷಸರ ಭಾಷೆಯಂತಿರುವುದು. ಅದರಿಂದ ಯಾರಿಗೂ ಒಳ್ಳೆಯದಾಗುವುದಿಲ್ಲ.

## ಯೋಽಯಂ ರಾಕ್ಷಸೀಂ ವಾಚಂ ವದತಿ ಸಃ

ಕೋಽಯಂ ಸಮರ್ಥ ಇತ್ಯಾಶಂಕ್ಯ ತಂ ವಿಶೇಷಾಕಾರೇಣ ದರ್ಶಯತಿ—ಲೋಕೇ ಯಃ ಪುಮಾನ್ ರಕ್ಷಸಾಂ ವಾಚಂ ಪರಭರ್ತ್ಸನರೂಪಾಮುಚ್ಚಧ್ವನಿತ್ವೇನ ಭೀತಿಕರೀಂ ವಾಚಂ ಬ್ರೂತೇ ಸ ಪುಮಾಂಸ್ತಾನುಪ್ಯುಚ್ಚೈಃ ಕೀರ್ತಯನ್ರಕ್ಷಸಾಂ ವಾಗುತ್ಪಾದಕೋ ಭವತಿ ॥

ಲೋಕವ್ಯವಹಾರದಲ್ಲಿ ಒಬ್ಬರನ್ನೊಬ್ಬರು ಬೈಯ್ಯುವಾಗ ಅಥವಾ ಜಗಳವಾಡುವಾಗ ಘಟ್ಟಿಯಾದ ಧ್ವನಿಯಿಂದ ಕಿರಿಚಿಕೊಳ್ಳುವುದು ಸ್ವಾಭಾವಿಕವಷ್ಟೆ. ಈರೀತಿ ಭಯಂಕರವಾಗಿ ಅರಿಚಿಕೊಳ್ಳುವುದು ರಾಕ್ಷಸರ ಸ್ವಭಾವಕ್ಕೆ ಅನುಗುಣವಾದ್ದರಿಂದ ಯಾವ ಪುರುಷನು ಈ ಮಂತ್ರವನ್ನು ಘಟ್ಟಿಯಾಗಿ ಉಚ್ಚರಿಸುವನೋ ಅವನು ರಾಕ್ಷಸ ಭಾಷೆಯನ್ನು ಮಾತನಾಡಿದಂತೆಯೇ ಆಗುವುದು. ಇದು ನಿಷಿದ್ಧವು.

## ಯಾಂ ವೈ ದೃಪ್ತೋ ವದತಿ ಯಾಮುನ್ಮತ್ತಃ ಸಾ ವೈ ರಾಕ್ಷಸೀ ವಾಕ್ ।

ಕಾಽಸೌ ರಾಕ್ಷಸೀ ವಾಗಿತ್ಯಾಽಽಶಂಕ್ಯಾಹ—ಧನವಿದ್ಯಾದಿನಾ ದೃಪ್ತೋ ದರ್ಪಂ ಪ್ರಾಪ್ತಃ ಪರತಿರಸ್ಕಾರಹೇತುಂ ಯಾಂ ವಾಚಂ ವದತ್ಯುನ್ಮತ್ತಶ್ಚ ಬುದ್ಧಿರಾಹಿತ್ಯಾತ್ಪೂರ್ವಾಪರಸಂಬಂಧ-ರಹಿತಾಂ ಯಾಂ ವಾಚಂ ವದತಿ ಸೇಯಮುಭಯವಿಧಾಽಪಿ ರಾಕ್ಷಸೀ ವಾಕ್ ॥

ಧನವಿದ್ಯಾದಿಗಳಿಂದ ಗರ್ವಿತನಾಗಿ ಇತರರನ್ನು ತಿರಸ್ಕಾರಭಾವದಿಂದ ಹಂಗಿಸಿ ತುಚ್ಛವಾದ ಮಾತುಗಳನ್ನಾಡುವವನೂ, ಬುದ್ಧಿಯಿಲ್ಲದೆ (ಕುಡುಕನಾಗಿ) ಪೂರ್ವಾಪರಸಂಬಂಧವಿಲ್ಲದ ಮಾತುಗಳನ್ನು ಆಡುವವನೂ, ಈ ಎರಡುವಿಧವಾದ ಮನುಷ್ಯರೂ ಮಾತನಾಡುವಾಗ ಉಪಯೋಗಿಸುವ ಭಾಷೆಗೆ ರಾಕ್ಷಸೀಭಾಷೆಯೆಂದು ಹೆಸರು.

## ನಾತ್ಮಾನಾ ದೃಪ್ಯತಿ ನಾಸ್ಯ ಪ್ರಜಾಯಾಂ ದೃಪ್ತ ಆಜಾಯತೇ ಯ ಏವಂ ವೇದ ।

ಏತದ್ವೇದನಂ ಪ್ರಶಂಸತಿ—ವೇದಿತಾ ಸ್ವಯಮಪಿ ದರ್ಪಂ ನ ಪ್ರಾಪ್ನೋತಿ ತದಾ ಸ್ವೀಯಾಯಾಂ ಪ್ರಜಾಯಾಂ ಕಶ್ಚಿದಪಿ ದೃಪ್ತೋ ನೋತ್ಪದ್ಯತೇ ॥

ಮೇಲೆ ಹೇಳಿದ ರೀತಿ ತುಚ್ಛವಾದ ಭಾಷೆಯನ್ನು ಆಡದವನೂ, ಈ ವಿಷಯವನ್ನು ತಿಳಿದವನೂ ಅಹಂಕಾರಕ್ಕೆ ಒಳಗಾಗುವುದಿಲ್ಲ ಮತ್ತು ಅವನ ವಂಶದಲ್ಲಿ ಯಾರೂ ಅಹಂಕಾರಿಗಳಾಗಿರುವುದಿಲ್ಲ.

## ವನಿಷ್ಠುಮಸ್ಯ ಮಾ ರಾವಿಷ್ಟೋರೂಕಂ ಮನ್ಯಮಾನಾ ನೇದ್ವಸ್ತೋಕೇ ತನಯೇ ರವಿತಾ ರವಚ್ಛಮಿತಾರ ಇತಿ ಯೇ ಚೈವ ದೇವಾನಾಂ ಶಮಿತಾರೋ ಯೇ ಚ ಮನುಷ್ಯಾಣಾಂ ತೇಭ್ಯ ಏವೈನಂ ತತ್ಪರಿದದಾತಿ ।

ಏಕಾದಶಂ ಭಾಗಮನೂದ್ಯ ವ್ಯಾಚಷ್ಟೇ—ಹೇ ಶಮಿತಾರೋ ದೈವ್ಯಾ ಮಾನುಷ್ಯಾಶ್ಚ ವನಿಷ್ಠುಂ ವಪಾಯಾಃ ಸಮೀಪವರ್ತಿನಂ ಮಾಂಸಖಂಡಮಸ್ಯ ಪಶೋಃ ಸಂಬಂಧಿನಮೂರೂಕ-ಮುಲೂಕಾಖ್ಯಂ ಪಕ್ಷಿಸದೃಶಂ ಮನ್ಯಮಾನಾ ವಿಶೇಷಾಕಾರೇಣ ವಿಜಾನಂತೋ ಮಾ ರಾವಿಷ್ಟ ನೈವ ಲವನಂ ಕುರುತ ॥ ಉಲೂಕಸದೃಶೋ ವನಿಷ್ಠುರ್ಯಥಾ ವರ್ತತೇ ತಥೈವೋದ್ಧರತ ನ ತು ಮಧ್ಯೇ ಛಿನ್ನಂ ಕುರುತೇತ್ಯರ್ಥಃ ॥ ಏವಂ ಕುರ್ವತಾಂ ವೋ ಯುಷ್ಮಾಕಂ ಸಂಬಂಧಿನಿ

ತೋಕೇ ಪುತ್ರೇ ತನಯೇ ತದೀಯಾಪತ್ಯೇ ಚ ರವಿತಾ ಶಬ್ದಯಿತಾ ನೇನ್ನೈವ ರವದ್ಧ್ಯಾ ಯಾತ್ ॥ ಯಥಾ ಶಾಸ್ತ್ರಂ ಛೇದನೇ ಕ್ರಿಯಮಾಣೇ ಭವತಾಂ ಗೃಹೇ ಪುತ್ರಪೌತ್ರಾದಿಕಂ ನಿಮಿತ್ತೀಕೃತ್ಯ ರೋದಿತಾ ನ ಭವಿಷ್ಯತೀತ್ಯರ್ಥಃ ॥ ತದ್ಭಾಗಪಾಠೇನ ದೇವಾನಾಂ ಮಧ್ಯೇ ಯೇ ಶಮಿತಾರಃ ಸಂತಿ ಮನುಷ್ಯಾಣಾಂ ಚ ಮಧ್ಯೇ ಯೇ ಸಂತಿ ತೇಭ್ಯ ಏವ ಸರ್ವೇಭ್ಯ ಏನಂ ಪನಿಷ್ಟುಂ ಪರಿದದಾತ್ಯನ್ಯೈಕಲ್ಪಾಯ ಸಮರ್ಪಯತಿ ॥

ಹನ್ನೊಂದನೆಯ ಭಾಗವನ್ನು ಈಗ ವಿವರಿಸುವರು. ದೇವತೆಗಳ ಸಂಬಂಧಿಗಳಾದ ಮತ್ತು ಮನುಷ್ಯಸಂಬಂಧಿಗಳಾದ ಎಲ್ಲಾ ಶಮಿತೃಗಳೇ (ಎಂದರೆ ದೇವತೆಗಳು ಮಾಡುವ ಯಜ್ಞಗಳಲ್ಲಿ ಪಶುವನ್ನು ವಧಿಸುವ ಕಾರ್ಯದಲ್ಲಿ ಉದ್ಯುಕ್ತರಾದ ಶಮಿತೃಗಳು ಮತ್ತು ಮಾನವರು ಮಾಡುವ ಯಜ್ಞದಲ್ಲಿ ಪಶುವಧಾರ್ಥವಾಗಿ ನಿಯೋಜಿತರಾದ ಶಮಿತೃಗಳು **ಅಧ್ರಿಗುಶ್ಚಾಪಾಪಶ್ಚೋಭೌ ದೇವಾನಾಂ ಶಮಿತಾರೌ** (ತೈ. ಬ್ರಾ. ೩-೬-೬-೪) ಎಂದರೆ ದೇವತೆಗಳ ಶಮಿತೃಗಳಿಗೆ ಅಧ್ರಿಗು ಮತ್ತು ಅಪಾಪ ಎಂಬ ಹೆಸರಿರುವುದು. ಇವರು ಇಬ್ಬರು, ಎಂದಭಿಪ್ರಾಯವು. ನೀವು ಪಶುವನ್ನು ವಧಿಸಿ ಕತ್ತರಿಸುವಾಗ ವಪೆಯ ಸಮೀಪದಲ್ಲಿರುವ ಮಾಂಸ ಖಂಡವನ್ನು (entrails) ಕತ್ತರಿಸಬೇಡಿ ಆ ಮಾಂಸಖಂಡವು ಗೂಬೆಯೆಂಬ (owl) ಪಕ್ಷಿಯ ಆಕಾರದಲ್ಲಿ ಇರುವುದನ್ನು ಗಮನಿಸಿ ಅದನ್ನು ಕತ್ತರಿಸದೆ ಹಾಗೆಯೇ ಬಿಟ್ಟುಬಿಡಿ. ಈರೀತಿ ನೀವು ಮಾಡಿದ ಪಕ್ಷದಲ್ಲಿ ನಿಮ್ಮ ಗೃಹದಲ್ಲಿ ನಿಮ್ಮ ಮಕ್ಕಳು, ಮೊಮ್ಮಕ್ಕಳು ಮೊದಲಾದ ಸಂತತಿಗಳು ಮೃತರಾಗುವುದಿಲ್ಲ. ಮತ್ತು ಆ ಸಂತತಿಗಳ ಮರಣದಿಂದ ಉಂಟಾಗಬಹುದಿಂದ ದುಃಖ ಸೂಚಕ ರೋದನಧ್ವನಿಯು ಸಹ ಕೇಳಿಬರುವುದಿಲ್ಲ. ಆದ್ದರಿಂದ ಮೇಲೆ ಹೇಳಿದಂತೆ ಕತ್ತರಿಸುವುದಕ್ಕಾಗಿ ದೇವತೆಗಳ ಯಜ್ಞಗಳಲ್ಲಿ ಭಾಗವಹಿಸುವ ಶಮಿತೃಗಳಿಗೂ ಮಾನವರು ಮಾಡುವ ಯಜ್ಞಗಳಲ್ಲಿ ಪಶುವಧೆಯನ್ನು ಮಾಡುವ ಶಮಿತೃಗಳಿಗೂ ಕತ್ತರಿಸುವುದಕ್ಕಾಗಿ ಈ ಯಜ್ಞಪಶುವನ್ನು ಕೊಡಲಾಗಿದೆ.

ಅಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗಾ
೩ ಉ ಇತಿ ತ್ರಿರ್ಬ್ರೂಯಾದಪಾಪೇತಿ ಚಾಧ್ರಿಗುರ್ವೈ
ದೇವಾನಾಂ ಶಮಿತಾಽಪಾಪೋ ನಿಗ್ರಭೀತಾ ಶಮಿತೃಭ್ಯಶ್ಚೈವೈನಂ
ತನ್ನಿಗ್ರಭೀತೃಭ್ಯಶ್ಚ ಸಂಪ್ರಯಚ್ಛತಿ ॥

ದ್ವಾದಶಂ ಭಾಗಮನೂದ್ಯ ವ್ಯಾಚಷ್ಟೇ--ಹೇಽಧ್ರಿಗೋ, ಏತನ್ನಾಮಕದೇವೇಷು ಶಮಿತೃಷು ಮುಖ್ಯದೇವಾ ಯೂಯಂ ಸರ್ವೇ ಶಮೀಧ್ವಂ ವಿಶಸನಾದಿನಾ ಪಶು ಸಂಸ್ಕುರುಧ್ವಂ॥ ಪುನರಪಿ ವಿಶೇಷಾಕಾರೇಣೋಚ್ಯತೇ ಸುಶಮಿ ಸುಷ್ಠು ಶಮನಂ ಶಾಸ್ತ್ರೀಯಂ ವಿಶಸನಂ ಯಥಾ ಭವತಿ ತಥಾ ಶಮೀಧ್ವಂ ಶಮಯತ ಸಂಜ್ಞಪಯತ ॥ ಅಧ್ರಿಗಾದೌ ಪ್ಲುತಿರ್ದೂರಾದಾಹ್ವಾನಾರ್ಥಾ ॥ ಓಕಾರಸ್ಯ ಪ್ಲುತಿವೇಲಾಯಾಮಾಕಾರ ಉಕಾರಶ್ಚೇತಿ ವರ್ಣದ್ವಯಂ ಸಂಪದ್ಯತೇ ॥ ತಥಾವಿಧಾ ಯೂಯಮಿತರೈಃ ಸಹ ಯೂಯಂ ಸುಶಮೀಧ್ವಂ ಸರ್ವಥಾ ಶಮಯತ ನ ತೂಪಚರಿತಂ ಶಮನಂ ಕುರುತ ॥ ಕ್ರೂರಕರ್ಮೇತಿ ಕೃತ್ವಾ ತದುಪೇಕ್ಷಣಂ ಮಾಭೂದಿತಿ ಪುನಃಪುನರ್ವಚನಂ ॥ ಅಧ್ರಿಗೋ ಶಮೀಧ್ವಮಿತ್ಯಾದಿಕಂ ವಾಕ್ಯತ್ರಯಸಮುದಾಯಂ ತ್ರಿವಾರಮಾವರ್ತಯೇತ್ ॥ ಅಪಾಪೇತ್ಯಪಿ ತತ್ಸಂಬಂಧಿನಂ ತ್ರಿವಾರಮಾವರ್ತಯೇತ್ ॥ ತದೇತದಾಶ್ವ-

**ಲಾಯನ ಆಹ—'ಅಧ್ರಿಗ್ವಾದಿ ತ್ರಿರುಕ್ತ್ವಾ' ಇತಿ ॥ ಅಧ್ರಿಗೋ(?) ಅಪಾಪದೇವಃ । ಸೋಽಯ-ಮಪಾಪನಾಚೀ ಶಾಖಾಂತರೇ ಪಠ್ಯತೇ—'ಅಧ್ರಿಗುಶ್ಚಾಪಾಪಶ್ಚೋಭೌ ದೇವಾನಾಂ ಶಮಿ-ತಾರೌ' ಇತಿ ॥ ಅತ್ರ ತು ತದವಾಂತರವಿಶೇಷೋಽಭಿಧೀಯತೇ ॥ ದೇವಾನಾಂ ಮಧ್ಯೇ ಯಃ ಶಮಿತಾ ಹಂತಾ ಸೋಽಧ್ರಿಗುರ್ಯಶ್ಚ ಧ್ಯಾನಾದಿನಾ ನಿಗ್ರಭೀತಾ ನಿಗ್ರಹಸ್ಯ ಕರ್ತಾ ಸೋಽಯ-ಮಪಾಪಸ್ತದ್ಭಾಗಪಾಠೇನಾಧ್ರಿಗುಪ್ರಭೃತಿಭ್ಯಃ ಶಮಿತೃಭ್ಯಶ್ಚಾಪಾಪಪ್ರಭೃತಿಭ್ಯೋ ನಿಗ್ರಹೀ-ತೃಭ್ಯಶ್ಚೈನಂ ಪಶುಂ ಸಂಜ್ಞಪನಾಯ ಪ್ರಯಚ್ಛತಿ ॥**

ಈಗ ಹನ್ನೆರಡನೆಯ ಭಾಗವನ್ನು ವಿವರಿಸುವರು. ಹೋತೃವು ಶಮಿತೃಗಳನ್ನು ಉದ್ದೇಶಿಸಿ ಈರೀತಿ ಹೇಳುವನು—ಎಲೈ ಅಧ್ರಿಗುವೇ (ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಿಸುವವನೇ) ಮತ್ತು ನಿನ್ನ ಸಹಾಯಕನಾದ ಅಪಾಪನೆಂಬ ದೇವತೆಯೇ ನೀವು ಈಗ ಈ ಯಜ್ಞಪಶುವನ್ನು ವಧಿಸಿರಿ ಮತ್ತು ಶಾಸ್ತ್ರೋಕ್ತರೀತಿಯಿಂದ ಅದರ ಅವಯವಗಳನ್ನು ಆಹುತ್ಯರ್ಪಣೆಗೆ ಅನುಕೂಲವಾಗುವಂತೆ ಕತ್ತರಿಸಿರಿ ಎಂದು ಹೇಳುವನು. ಈ ಅರ್ಥವನ್ನು ವಿವರಿಸುವ—**ಅಧ್ರಿಗೋ ಶಮೀಧ್ವಂ ಸುಶಮಿ ಶಮೀಧ್ವಂ ಶಮೀಧ್ವಮಧ್ರಿಗಾ ೩ ಉ ಇತಿ** (ತೈ. ಬ್ರಾ. ೩-೬-೪; ಕಾಠಕ. ೧೬-೨೧; ಮೈತ್ರಾಯಣೀಯಸಂಹಿತಾ ೪-೧೩-೨೫) ಎಂಬ ಈ ಮಂತ್ರವನ್ನು ಮೂರಾವರ್ತಿ ಪಠಿಸಬೇಕು (ಆಶ್ವ. ಶ್ರೌ. ಸೂ. ೩-೩-೪) ಏಕೆಂದರೆ ಈ ಪಶುವಧವೆಂಬ ಕರ್ಮವನ್ನು ಚೆನ್ನಾಗಿಯೂ ಶಾಸ್ತ್ರೋಕ್ತವಾಗಿಯೂ ಮಾಡಬೇಕೆಂದು ತಿಳಿಸುವುದಕ್ಕಾಗಿ ಮೂರಾವರ್ತಿ ಹೇಳಿ ಸ್ಪಷ್ಟವಾದ ಸೂಚನೆಯನ್ನು ಕೊಡಲಾಗಿರುವುದು. ಅಧ್ರಿಗುವೆಂದರೆ ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಿಸುವವನು; ಅಪಾಪ (ಅಥವಾ ವಿಪಾಪ) ನೆಂಬುವನು ದೇವತೆಗಳ ಯಜ್ಞದಲ್ಲಿ ಪಶುವನ್ನು ವಧಕಾಲದಲ್ಲಿ ಕಿರಿಚಿಕೊಳ್ಳದಂತೆ ಅದರ ಬಾಯನ್ನು ಗಟ್ಟಿಯಾಗಿ ಹಿಡಿದುಕೊಂಡು ವಧಕಾರ್ಯಕ್ಕೆ ಸಹಾಯಮಾಡುವವನು. ಯಜ್ಞದಲ್ಲಿ ಮಾಡುವ ವಧಕಾರ್ಯವು ಪಾಪವಲ್ಲ ಎಂದು ತಿಳಿಸುವುದಕ್ಕಾಗಿಯೇ ಈ ಋತ್ವಿಜನಿಗೆ ಅಪಾಪ ಅಥವಾ ವಿಪಾಪನೆಂದು ಹೆಸರಿರುವುದು. ಪಶುವಧಾನಂತರ ಅದರ ಅವಯವಗಳನ್ನು ಶಾಸ್ತ್ರೋಕ್ತವಾಗಿ ಕತ್ತರಿಸಿರಿ ಎಂದು ಅಧ್ರಿಗು ಮತ್ತು ಅಪಾಪ ಎಂಬ ದೇವತೆಗಳನ್ನು ನಿರ್ದೇಶಿಸಿ ಹೇಳಲಾಗಿದೆ. ಮೇಲಿನ ವಾಕ್ಯದಲ್ಲಿ ನಿಗ್ರಭೀತಾ ಎಂಬ ಶಬ್ದಪ್ರಯೋಗವಿದೆ. ಅಪಾಪನೆಂಬ ಋತ್ವಿಜನು ಪಶುವಿನ ಮುಖವನ್ನು ಹಿಡಿದು ಅದು ಅರಚಿಕೊಳ್ಳದಂತೆ ಸಹಾಯಮಾಡುವುದರಿಂದ ಅವನಿಗೆ ನಿಗೃಭೀತಾ ಎಂಬ ಹೆಸರೂ ಇರುವುದು. ಪಶುವನ್ನು ವಧಿಸುವುದಕ್ಕಾಗಿಯೂ ವಧಿಸಿದನಂತರ ಅದನ್ನು ಕ್ರಮವಾಗಿ ಕತ್ತರಿಸುವುದಕ್ಕಾಗಿಯೂ ಅಧ್ರಿಗು ಮೊದಲಾದವರ ವಶಕ್ಕೆ ಪಶುವನ್ನು ಕೊಡಲಾಗುವುದು ಎಂದು ಮುಖ್ಯಾಭಿಪ್ರಾಯವು. ಮೇಲಿನ ವಾಕ್ಯದಲ್ಲಿ **ಅಧ್ರಿಗಾ ೩ ಉ** ಎಂದು ಮೂರು ಮಾತ್ರೆಗಳಕಾಲ ಪ್ಲುತವು ಉಕ್ತವಾಗಿದೆ. ಅಧ್ರಿಗೋ ಎಂದು ಸಂಬೋಧನವನ್ನು ಒತ್ತಿಹೇಳಿ ಸ್ಪಷ್ಟಪಡಿಸುವುದಕ್ಕಾಗಿ ಕಡೆಯ ಅಕ್ಷರವಾದ (ಗೋ) ಓಕಾರದ ಮಧ್ಯೆ (ಅ+ಉ) ಮೂರು ಮಾತ್ರೆಗಳಕಾಲವನ್ನು ಸೂಚಿಸುವ ೩ ಎಂಬ ಪ್ಲುತವನ್ನು ಇಲ್ಲಿ ಉಪಯೋಗಿಸಲಾಗಿದೆ.

**ಶಮಿತಾರೋ ಯದತ್ರ ಸುಕೃತಂ ಕೃಣವಥಾಸ್ಮಾಸು ತದ್ಯದ್ದುಷ್ಕೃತ-ಮನ್ಯತ್ರ ತದಿತ್ಯಾಹಾಗ್ನಿರ್ವೈ ದೇವಾನಾಂ ಹೋತಾಽಽಸೀತ್ಸ ಏನಂ ವಾಚಾ ವ್ಯಶಾದ್ವಾಚಾ ವಾ ಏನಂ ಹೋತಾ ವಿಶಾಸ್ತಿ ತದ್ಯದರ್ವಾಗ್ಯತ್ಪರಃ ಕೃಂತಂತಿ ಯದುಲ್ಬಣಂ ಯದ್ವಿಥುರಂ ಕ್ರಿಯತೇ ಶಮಿತೃಭ್ಯಶ್ಚೈವೈನತ್ತನ್ನಿಗ್ರಭೀತೃಭ್ಯಶ್ಚ ಸಮನುದಿಶತಿ**

ಸ್ವಸ್ತ್ಯೇವ ಹೋತೋನ್ಮುಚ್ಯತೆ ಸರ್ವಾಯುಃ ಸರ್ವಾಯು-
ತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥

ಅಧ್ರಿಗುಮಂತ್ರಪಾಠಾನಂತರಂ ಜಪಂ ವಿಧತ್ತೇ--ಹೇ ಶಮಿತಾರೋ ಯದತ್ರ ಪಶುವಿ-ಶಸನಕರ್ಮಣಿ ಯತ್ಸುಕೃತಂ ಕೃಣವಥಾಸ್ಮಾಸು ತತ್ ॥ ತತ್ರ ಯದ್ದುಷ್ಕೃತಮನ್ಯತ್ರ ತದಿತಿ ಜಪಿತ್ವಾ ದಕ್ಷಿಣಾವೃದಾವರ್ತತ ಇತಿ ॥ ಏತನ್ಮಂತ್ರಾರ್ಥಮಗ್ನಿರ್ವೇತ್ಯಾದಿನೋಚ್ಯತೇ । ಯದಾ ದೇವಾ ಯಜ್ಞಂ ಕುರ್ವಂತಿ ತದಾನೀಂ ತೇಷಾಂ ಮಧ್ಯೇಽಗ್ನಿರೇವ ಹೋತಾಽಭೂತ್ । ಸ ಏನಂ ಪಶುಂ ವಾಚಾಽಧ್ರಿಗುಪ್ರೈಷರೂಪಯಾ ವ್ಯಶಾದ್ವಿಶಸನಂ ಕೃತವಾನ್ ॥ ಅಧ್ರಿಗುಪ್ರೈಷ ಆರ-ಭಧ್ವಂ ಶಮೀಧ್ವಮಿತ್ಯಾದಿ ಪ್ರೇರಣವಾಚಕಾನಾಂ ಪದಾನಾಂ ಬಹೂನಾಂ ವಿದ್ಯಮಾನತ್ವಾದ-ಸ್ತ್ಯೇವ ಹೋತುರ್ವಾಚಿಕಂ ವಿಶಸನಂ ॥ ತಥಾ ಸತಿ ಪಶೋರವಾರ್ಗ್ಭಾಗೇ ಯತ್ಕೃಂತಂತಿ ಯಚ್ಚ ಪರಃ ಪರಭಾಗ ಉತ್ತಮಾಂಗೇ ಕೃಂತಂತಿ ತಸ್ಮಿನ್ನುಭಯಸ್ಮಿನ್ನಪಿ ಚ್ಛೇದನೇ ಯದು-ಲ್ಬಣಂ ಶಾಸ್ತ್ರಾರ್ಥಾದತಿರಿಕ್ತಂ ಕ್ರಿಯತೇ ಯಚ್ಚ ವಿಥುರಂ ನ್ಯೂನಂ ಕ್ರಿಯತೇ ತತ್ಸರ್ವಮೇನ-ತ್ಪಲುಶಮಿತೃಭ್ಯೋ ನಿಗ್ರಭೀತೃಭಿಶ್ಚ ಸಮನುದಿಶತಿ ತೇನ ಮಂತ್ರಜಪೇನ ಸಮ್ಯಕ್ಕಥಯತೀತಿ ವಾಚಾ ಹೋತಾ ಸ್ವಸ್ತ್ಯೇವ ಕ್ಷೇಮೇಣೈವ ಪಾಪಾನ್ಮುಚ್ಯತೇ ಸರ್ವಾಯುರ್ಮೃತ್ಯುರಹಿತಶ್ಚ ಭವತಿ ಯಜಮಾನಸ್ಯಾಪ್ಯಪಮೃತ್ಯುರಾಹಿತ್ಯಾಯ ॥ ಏತದ್ವೇದನಂ ಪ್ರಶಂಸತಿ ॥ ಅತ್ರ ಮೀಮಾಂಸಾ । ನವಮಾಧ್ಯಾಯಸ್ಯ ತೃತೀಯಪಾದೇ ಚಿಂತಿತಂ ॥

" ಪಕ್ಷೇ ವಪಾ ವಾಽಥೋರೂಕೋ ರಲಯೋರವಿಶೇಷತಃ ॥
ಪಕ್ಷೇ ವಪಾ ಸಂನಿಧಾನಾದ್ಭ್ರಾಂತಿಚ್ಛೇದನಿಷೇಧತಃ ॥ "

ಅಧ್ರಿಗುಪ್ರೈಷವಚನ ಆಮ್ನಾಯತೇ—' ವನಿಷ್ಠುಮಸ್ಯ ಮಾ ರಾವಿಷ್ಟೋರೂಕಂ ಮನ್ಯ-ಮಾನಾಃ " ಇತಿ ॥ ವನಿಷ್ಠುರ್ವಪಾಸಮೀಪವರ್ತೀ ಕಶ್ಚಿತ್ಪಶ್ವಂಗವಿಶೇಷಃ ॥ ತಂ ಮಾ ರಾವಿಷ್ಟ ತಸ್ಯ ಲವನಂ ಮಾ ಕುರುತೇತಿ ವ್ಯತ್ಯಯೇನ ಲಕಾರಸ್ಯ ರೇಫಃ ॥ ಕಿಂ ಕುರ್ವಂತ ಉಲೂಕಂ ಮನ್ಯಮಾನಾಃ ॥ ವನಿಷ್ಠಾವರೂಕಶಬ್ದಃ ಸಾದೃಶ್ಯಲಕ್ಷಕಃ ॥ ವಿಶೇಷೇಣ ಮನ್ಯಮಾನಾ ಮಾ ಲಾವಿಷ್ಟೇತಿ ವಾಕ್ಯಾರ್ಥಃ ॥ ತಸ್ಮಾದುರೂಕಶಬ್ದಃ ಪಕ್ಷೀತಿ ಪ್ರಾಪ್ತೇ ಬ್ರೂಮಃ ॥ ಉರೂಕ-ಶಬ್ದೇನಾತ್ರ ವಪಾ ಲಕ್ಷ್ಯತೇ ವನಿಷ್ಠುಸಂನ್ನಿಧಾನಾತ್ ॥ ಸಾಹಿತ್ಯಸನ್ನಿಧಾನಾದುರೂಕತ್ವಭ್ರಾಂತಿ-ರ್ವನಿಷ್ಠೌ ಸಂಭವತಿ ॥ ಭ್ರಾಂತಿಪ್ರಾಪ್ತಂ ಲವನಮತ್ರ ನಿಷಿಧ್ಯತೇ ॥ ಉರೂಕಂ ಮನ್ಯಮಾನಾ ವನಿಷ್ಠುಂ ಮಾ ರಾವಿಷ್ಟೇತ್ಯುಕ್ತತ್ವಾತ್ ॥ ವಪಾಲವನಕಾಲೇ ಭ್ರಾಂತ್ಯಾ ವನಿಷ್ಠೌ ಯಲ್ಲವನಂ ತಸ್ಯ ನಿಷೇಧೇ ಸತಿ ದೃಷ್ಟಾರ್ಥೋ ಲಭ್ಯತೇ ಭ್ರಾಂತಿನಿವಾರಣಸ್ಯ ದೃಷ್ಟತ್ವಾತ್ ॥ ತ್ವತ್ಪಕ್ಷೇ ವನಿಷ್ಠೋರ್ಲವನಮೇವ ನಾಸ್ತಿ ತಚ್ಚಾಯುಕ್ತಂ ಹೃದಯಾದ್ಯಂಗವದ್ವನಿಷ್ಠೋರ್ಲವಿತವ್ಯ-ತ್ವಾತ್ ॥ ವನಿಷ್ಠುಮಗ್ನಿಧ್ರೇ ಷಡವತ್ತಂ ಸಂಪಾದಯತೀತ್ಯಾದ್ಯನುಷ್ಠಾನಾತ್ ॥ ತತೋ ಲವನನಿಷೇಧಸ್ಯಾಸಮವೇತಾರ್ಥತ್ವೇನಾದೃಷ್ಟಾರ್ಥೋ ಮಂತ್ರಪಾಠಃ ॥ ತಸ್ಮಾದ್ವಪಾವಚನ ಉರೂಕಶಬ್ದಃ ॥ ಯದ್ಯಪಿ ವಪಾಯಾಮಪ್ರಸಿದ್ಧಸ್ತಥಾಽಪ್ಯುರು ವಿಸ್ತೀರ್ಣಮುಕೋ ಮೇದೋ

**ಯತ್ರೇತ್ಯವಯವಾರ್ಥದ್ವಾರಾ ಮೇದಸ್ವಿನ್ಯಾಂ ವಪಾಯಾಂ ಯುಕ್ತ ಉರೂಕಶಬ್ದಃ ॥ ಏವಂ ಸತ್ಯನೇಕವಪಾಸು ವಿಕೃತಿಷ್ವೇಕವಚನಾಂತ ಉರೂಕಶಬ್ದ ಊಹನೀಯಃ ॥**

ಅಧ್ರಿಗುಮಂತ್ರಪಾಠಾನಂತರ ಜಪವಿಧಾನವನ್ನು ತಿಳಿಸುವರು. ಎಲೈ ಶಮಿತೃಗಳೇ, ಈ ಪಶುಚ್ಛೇದನಕರ್ಮದಲ್ಲಿ ನಿಮ್ಮಿಂದ ಆಚರಿಸಲ್ಪಟ್ಟ ಪಶುವಿನ ಶ್ವಾಸಬಂಧನ ಮತ್ತು ಪ್ರಾಣಾಪಹರಣವು ಸಹ ಈ ಪಂತ್ರಪಠನದಿಂದ ನಿವಾರಿಸಲ್ಪಡುತ್ತದೆ. ಹಾಗೆಯೇ ಪಶುವಿನ ಅಂಗಗಳನ್ನು ಛೇದನಮಾಡುವಾಗ (ಶಾಸ್ತ್ರಕ್ಕೆ ವ್ಯತಿರಿಕ್ತವಾಗಿ) ಎಲ್ಲೆಲ್ಲಿ ಯಾವರೀತಿ ಕತ್ತರಿಸಬೇಕೋ ಅದರಂತಾಗದೆ ಕೆಲವುಕಡೆ ಬೇಗನೆ, ಕೆಲವುಕಡೆ ನಿಧಾನ, ಕೆಲವುಕಡೆ ಕಮ್ಮಿಯಾಗಿ, ಕೆಲವುಕಡೆ ಹೆಚ್ಚಾಗಿ ಕತ್ತರಿಸಲ್ಪಡುವುದು ಮೊದಲಾದ ದೋಷಗಳೆಲ್ಲವೂ ನಿವಾರಿಸಲ್ಪಡುತ್ತವೆ. ಹಿಂದೆ ದೇವತೆಗಳು ಯಜ್ಞಮಾಡಿದಾಗ ಅವರ ಯಜ್ಞದಲ್ಲಿ ಅಗ್ನಿಯು ಹೋತೃವೆಂಬ ಋತ್ವಿಜನಾಗಿದ್ದನು. ಆಗ ಪಶುಚ್ಛೇದನಕಾರ್ಯಕ್ಕಾಗಿ ಅಗ್ನಿಯು ಅಧ್ರಿಗುಪ್ರೈಷರೂಪವಾದ ವಾಕ್ಯಗಳನ್ನು ಪಠಿಸಿ ಶಮಿತೃ ಮತ್ತು ನಿಗೃಭೀತೃಗಳ (ಪಶುವನ್ನು ಕೊಲ್ಲುವವರ ಮತ್ತು ಶ್ವಾಸಬಂಧನಮಾಡುವವರ) ಲೋಪದೋಷಗಳನ್ನು ಪಾಪಗಳನ್ನು ಪರಿಹಾರವಾಗುವಂತೆ ಮಾಡಿದನು. ಆದ್ದರಿಂದಲೇ ಈಗಲೂ ಆ ಪದ್ಧತಿಯೇ ನಡೆದುಕೊಂಡುಬಂದಿದೆ. ಈ ಕ್ರಮವನ್ನು ಅನುಸರಿಸುವುದರಿಂದ ಹೋತೃವು ಸಮಸ್ತಪಾಪಗಳಿಂದಲೂ ಮುಕ್ತನಾಗಿ ದೀರ್ಘಾಯುಸ್ಸನ್ನು ಪಡೆಯುತ್ತಾನೆ ಮತ್ತು ಈ ವಿಷಯವನ್ನು ಚೆನ್ನಾಗಿ ತಿಳಿದು ಅದರಂತೆ ಆಚರಿಸುವ ಪುರುಷನೂ ಸಹ ದೀರ್ಘಾಯುಸ್ಸನ್ನು ಪಡೆಯುತ್ತಾನೆ.

*English Translation*

Present the evil spirits with the blood! For the gods having deprived (once) the evil spirits of their share in the Haviryajnas (such as the Full and New-moon offerings) apportioned to them the husks and smallest grains, and after having them turned out of the great sacrifice (such of the Soma and animal sacrifices), presented to them the blood. Thence the Hotar pronounces the words: present the evil spirits with the blood! By giving them this share he deprives the evil spirits of any other share in the sacrifice. They say: one should not address the evil spirits in the sacrifice, any evil spirits whichever they might be (Rakshas, Asuras, & c.); for the sacrifice is to be without the evil spirits (not to be disturbed by them). But others say: one should address them; for who deprives any one, entitled to a share, of this share, will be punished (by him whom he deprives); and if he himself does not suffer the penalty, then his son, and if his son be spared, then his son, and if his son he spared, then his grandson will suffer it, and thus he resents on him (the son or grandson) what he wanted to resent on you.

However, if the Hotar addressed them, he should do so with a low voice. For both, the low voice and the evil spirits, are, as it were, hidden. If he addressed them with a loud voice, then such one speaks in the voice of the evil spirits, and is capable of producing Rakshas-sounds (a horrible, terrific voice). The voice in which the haughty man and the drunkard speak, is that of the evil

spirits (Rakshas). He who has such a knowledge will neither himself become haughty, nor will such a man be among his offspring.

Do not cut the entrails which resemble on owl (when taking out the omentum), nor should among your children, O slaughterers! or among their offspring, any one be found who might cut them. By speaking these words, he presents these entrails to the slaughterers among the gods as well as to those among men.

The Hotar shall then say thrice: O Adhrigu (and ye others), kill (the animal), do it well, kill it, O Adhrigu. After the animal has been killed, (he should say thrice:) For may it (the consequences of murder) be (from us). For Adhrigu among the gods is he who silences (the animal) and the Apapa (away, away!) is he who puts it down, By speaking those words he surrenders the animal to those who silence it (by stopping its mouth), and to those who butcher it.

The Hotar then mutters (he makes japa): "O slaughterers! may all good you might do abide by us! and all mischief you might do go elsewhere." The Hotar gives by (this) speech the order (for killing the animal), for Agni had given the order for killing (the animal) with the same words when he was the Hotar of the gods.

By those words (the japa mentioned) the Hotar removes (all evil consequences) from those who suffocate the animal and those who butcher it, in all that they might trangress the rule by cutting one piece too soon, the other too late, or by cutting a too large, or a too small piece. The Hotar enjoying this happiness clears himself (from all guilt), and attains the full length of his life (and it serves the sacrificer) for obtaining his full life. He who has such a knowledge, attains the full length of his life.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಷ್ಠಾಧ್ಯಾಯಸ್ಯ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು
ಸಮಾಪ್ತವಾದುದು.



# ಅಥ ಷಷ್ಠಾಧ್ಯಾಯೇ ಅಷ್ಟಮಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ ಯಜ್ಞಾರ್ಹವಾದ ಪಶುಗಳ ವಿಷಯ—ಪುರೋಡಾಶವೂ ಸಹ ಪಶುಯಾಗದ ಆಹುತ್ಯರ್ಪಣದ ಭಾಗವು ]



**ಪುರುಷಂ ವೈ ದೇವಾಃ ಪಶುಮಾಲಭಂತ ತಸ್ಮಾದಾಲಬ್ಧಾನ್ಮೇಧ ಉದಕ್ರಾಮತ್ಸೋಽಶ್ವಂ ಪ್ರಾವಿಶತ್ತಸ್ಮಾದಶ್ವೋ ಮೇಧ್ಯೋಽಭವದಥೈನಮುತ್ಕ್ರಾಂತಮೇಧಮತ್ಯಾರ್ಜಂತ ಸ ಕಿಂಪುರುಷೋಽಭವತ್**

ಅಧಿಗುಪ್ರೈಷಂ ಸಮಾಪ್ಯ ಪುರೋಡಾಶಂ ವಿಧಾತುಂ ಬಹುಭಿಃ ಪರ್ಯಾಯೈರುಪೇತಾ ಕಾಚಿದಾಖ್ಯಾಯಿಕೋಚ್ಯತೇ ॥ ತತ್ರ ಪ್ರಥಮಂ ಪರ್ಯಾಯಂ ದರ್ಶಯತಿ ॥ ಪುರಾ ಕದಾಚಿದ್ದೇವಾಃ ಸ್ವಕೀಯೇ ಯಜ್ಞೇ ಪುರುಷಂ ಮನುಷ್ಯಂ ಪಶುಮಾಲಭಂತ ಪಶುಂ ಕೃತ್ವಾ ತೇನ ಪಶುನಾ ಯಷ್ಟುಮುದ್ಯುಕ್ತಾಃ । ತಸ್ಮಾದಾಲಬ್ಧಾದ್ಯಷ್ಟುಮುದ್ಯುಕ್ತಾನ್ಮನುಷ್ಯಪಶೋರ್ನಿರ್ಗತೋ ಮೇಧ್ಯೋ ಯಜ್ಞಯೋಗ್ಯೋ ಹವಿರ್ಭಾಗ ಉದಕ್ರಾಮನ್ಮನುಷ್ಯಂ ಪರಿತ್ಯಜ್ಯಾನ್ಯತ್ರಾಗಚ್ಛತ್ ॥ ಗತ್ವಾ ಚ ಸ ಭಾಗೋಽಶ್ವಂ ಪ್ರಾವಿಶತ್ ॥ ಯಸ್ಮಾದೇವಂ ತಸ್ಮಾದಶ್ವೋ ಯಜ್ಞಯೋಗ್ಯೋಽಭವತ್ ॥ ಅಥ ತದಾನೀಮುತ್ಕ್ರಾಂತಮೇಧಂ ಪರಿತ್ಯಕ್ತಹವಿರ್ಭಾಗಮೇನಂ ಮನುಷ್ಯಂ ದೇವಾ ಅತ್ಯಾರ್ಜಂತಾತಿಶಯೇನ ವರ್ಜಿತವಂತಸ್ತಸ್ಮಿನ್ಪಶುತ್ವಮಪಿ ನಾಕುರ್ವನ್ ॥ ದೇವೈಃ ಸ್ವೀಕೃತ್ಯ ಪರಿತ್ಯಕ್ತಃ ಸ ಮನುಷ್ಯಃ ಕಿಂಪುರುಷಃ ಕಿಂನರಾವಾಂತರಜಾತೀಯಃ ॥

ಅಧ್ರಿಗು ಪ್ರೈಷಮಂತ್ರವನ್ನು ಮುಗಿಸಿ ಪಶುಹೋಮಸಂಬಂಧವಾದ ಪುರೋಡಾಶವನ್ನು (ಹೋಮಮಾಡುವುದಕ್ಕೆ ಉಪಯೋಗಿಸುವ, ಮಣ್ಣಿನ ಹೆಂಚಿನಮೇಲೆ ಬೇಯಿಸಿದ ಹಿಟ್ಟಿನಿಂದ ಮಾಡಿದ ಒಂದುವಿಧವಾದ ರೊಟ್ಟಿಗೆ ಪುರೋಡಾಶವೆಂದು ಹೆಸರು) ಮಾಡುವ ಕ್ರಮವನ್ನು ವಿವರಿಸುವರು. ಈ ವಿಚಾರದಲ್ಲಿ ಅನೇಕ ಪರ್ಯಾಯಗಳಿಂದ (ವ್ಯತ್ಯಾಸ, ಬದಲಾವಣೆ) ಕೂಡಿದ ಒಂದು ಉಪಾಖ್ಯಾನವನ್ನು ಹೇಳುವರು.

ಪೂರ್ವಕಾಲದಲ್ಲಿ ಒಂದಾನೊಂದು ಸಮಯದಲ್ಲಿ ದೇವತೆಗಳು ಯಜ್ಞಮಾಡಿದಾಗ ಯಜ್ಞಪಶುವಿಗಾಗಿ ಒಬ್ಬ ಪುರುಷನನ್ನು ಸಿದ್ಧಪಡಿಸಿದರು. ಆ ಪುರುಷನನ್ನೇ ಯಜ್ಞಪಶುವನ್ನಾಗಿ ಸ್ವೀಕರಿಸಿ ಯಜ್ಞಮಾಡಲು ಪ್ರಾರಂಭಿಸಿದಾಗ ಆ ಪುರುಷಪಶುವಿನಲ್ಲಿ ಯಜ್ಞಾರ್ಹಭಾಗವಾಗಿದ್ದ ಎಂದರೆ ದೇವತೆಗಳು ಯಜ್ಞದಲ್ಲಿ ಆಹುತಿಗಳ ಮೂಲಕ ಭಕ್ಷಿಸಲು ಯೋಗ್ಯವಾಗಿದ್ದ

ಮೇಧವೆಂಬ (ಮಾಂಸ) ಭಾಗವು ಪುರುಷಪಶುವನ್ನು ತ್ಯಜಿಸಿ ಭಯದಿಂದ ಓಡಿಹೋಗಿ ಒಂದು ಅಶ್ವ (ಕುದುರೆ)ದಲ್ಲಿ ಸೇರಿಕೊಂಡಿತು. ಯಜ್ಞಾರ್ಹವಾದ ಮೇಧವು ಸೇರಿದ್ದರಿಂದ ಅಶ್ವವು ಯಜ್ಞಾರ್ಹವಾದ ಯಜ್ಞಪಶುವಾಯಿತು. ಯಜ್ಞಾರ್ಹವಾದ ಮೇಧವು ಪುರುಷಪಶುವಿನಲ್ಲಿ ಇಲ್ಲದ್ದನ್ನು ಕಂಡು ಅದು ಯಜ್ಞಕ್ಕೆ ಯೋಗ್ಯವಲ್ಲವೆಂದು ತಿಳಿದು ಅದನ್ನು ದೇವತೆಗಳು ತ್ಯಜಿಸಿದರು. ದೇವತೆಗಳು ತ್ಯಜಿಸಿದ್ದರಿಂದ ಆ ಪುರುಷನು ಕಿಂಪುರುಷನಾಗಿ ಎಂದರೆ ಕುರೂಪಿಯಾದ (ವಿಕಾರಾಕೃತಿಯುಳ್ಳ) ಬದಲಾವಣೆಯನ್ನು ಹೊಂದಿದನು.

ತೇಽಶ್ವಮಾಲಭಂತ ಸೋಽಶ್ವಾದಾಲಬ್ಧಾದುದಕ್ರಾಮತ್ಸ ಗಾಂ ಪ್ರಾವಿಶತ್ತಸ್ಮಾದ್ಗೌರ್ಮೇಧ್ಯೋಽಭವದಥೈನಮುತ್ಕ್ರಾಂತಮೇಧಮತ್ಯಾರ್ಜಂತ ಸ ಗೌರಮೃಗೋಽಭವತ್ ।

ದ್ವಿತೀಯಂ ಪರ್ಯಾಯಂ ದರ್ಶಯತಿ—ಆಲಬ್ಧಾದಶ್ವಾನ್ಮೇಧೋ ಯಜ್ಞಯೋಗ್ಯಭಾಗ ಉತ್ಕ್ರಮ್ಯ ಗಾಂ ಪ್ರಾವಿಶತ್ಸ ಗೌರ್ಯಜ್ಞಯೋಗ್ಯ ಆಸೀತ್ ॥ ತದಾನೀಮಯೋಗ್ಯತ್ವೇನ ತ್ಯಕ್ತಃ ಸೋಽಶ್ವೋಃ ಗೌರಮೃಗೋಽಭವದ್ಯಸ್ಯ ಶೃಂಗಾವಪಿ ಲೋಮಶೌ ಭವತಃ ॥

(ಎರಡನೆಯ ಬದಲಾವಣೆಯನ್ನು ಹೇಳುವರು) ಅನಂತರ ದೇವತೆಗಳು ಯಜ್ಞಾರ್ಹವಾದ ಮೇಧಭಾಗವಿದ್ದ ಅಶ್ವವನ್ನು ಯಜ್ಞಪಶುವನ್ನಾಗಿ ಸ್ವೀಕರಿಸಿದರು. ಅದನ್ನು ಕಂಡು ಮೇಧವು ಅಶ್ವವನ್ನು ಬಿಟ್ಟು ಓಡಿಹೋಗಿ ಗೌರಮೃಗದಲ್ಲಿ (gayal) ಸೇರಿಕೊಂಡಿತು. ಆದ್ದರಿಂದ ಗೌರಮೃಗವು ಯಜ್ಞಾರ್ಹವಾಗಿಯೂ ಮೇಧವಿಲ್ಲದ ಅಶ್ವವು ಯಜ್ಞಕ್ಕೆ ಅಯೋಗ್ಯವಾಗಿಯೂ ಆಯಿತು.

ತೇ ಗಾಮಾಲಭಂತ ಸ ಗೋರಾಲಬ್ಧಾದುದಕ್ರಾಮತ್ಸೋಽವಿಂ ಪ್ರಾವಿಶತ್ತಸ್ಮಾದವಿರ್ಮೇಧ್ಯೋಽಭವದಥೈನಮುತ್ಕ್ರಾಂತಮೇಧಮತ್ಯಾರ್ಜಂತ ಸ ಗವಯೋಽಭವತ್ತೇಽವಿಮಾಲಭಂತಸೋಽವೇರಾಲಬ್ಧಾದುದಕ್ರಾಮತ್ಸೋಽಜಂ ಪ್ರಾವಿಶತ್ತಸ್ಮಾದಜೋ ಮೇಧ್ಯೋಽಭವದಥೈನಮುತ್ಕ್ರಾಂತಮೇಧಮತ್ಯಾರ್ಜಂತ ಸ ಉಷ್ಟ್ರೋಽಭವತ್ ।

ತೃತೀಯಪರ್ಯಾಯಂ ದರ್ಶಯತಿ—ಅಜಾದಯಃ ಪ್ರಸಿದ್ಧಾಃ । ಉಷ್ಟ್ರೋ ದೀರ್ಘಗ್ರೀವಃ ॥

(ಮೂರನೆಯ ಮತ್ತು ನಾಲ್ಕನೆಯ ಪರ್ಯಾಯಗಳನ್ನು ಹೇಳುವರು) ಅನಂತರ ದೇವತೆಗಳು ಮೇಧವು ಸೇರಿಕೊಂಡಿದ್ದ ಗೌರಮೃಗವನ್ನು ಯಜ್ಞಪಶುವನ್ನಾಗಿ ಸ್ವೀಕರಿಸಿದರು. ಇದನ್ನು ಕಂಡು ಮೇಧವು ಗೌರಮೃಗವನ್ನು ತ್ಯಜಿಸಿ ಕುರಿಯ ದೇಹದಲ್ಲಿ ಸೇರಿಕೊಂಡಿತು. ಆದ್ದರಿಂದ ಕುರಿಯು ಯಜ್ಞಾರ್ಹವಾದ ಪಶುವಾಯಿತು. ಹಿಂದಿನಂತೆಯೇ ದೇವತೆಗಳು ಮೇಧವಿಲ್ಲದಿದ್ದ ಗೌರಮೃಗವನ್ನು ತ್ಯಜಿಸಿ ಕುರಿಯನ್ನು ಯಜ್ಞಪಶುವನ್ನಾಗಿ ಸ್ವೀಕರಿಸಿದರು. ಬಳಿಕ ಕುರಿಯಲ್ಲಿದ್ದ ಮೇಧವು ಕುರಿಯನ್ನು ತ್ಯಜಿಸಿ ಆಡಿನಲ್ಲಿ ಹೋಗಿ ಸೇರಿಕೊಂಡಿತು. ಬಳಿಕ ಮೇಧವಿಲ್ಲದ ಕುರಿಯು ಒಂದು ಒಂಟೆಯ ಆಕಾರವನ್ನು ಪಡೆಯಿತು.

**ಸೋಽಜೇ ಜ್ಯೋಕ್ತಮಾಮಿವಾರಮತ ತಸ್ಮಾದೇಷ ಏತೇಷಾಂ ಪಶೂನಾಂ ಪ್ರಯುಕ್ತತಮೋ ಯದಜಃ ।**



ಅಜಂ ಪುನರಪಿ ಪ್ರಶಂಸತಿ—ಸ ಮೇಧಾಖ್ಯೋ ಯಜ್ಞಯೋಗ್ಯಭಾಗಸ್ತಸ್ಮಿನ್ನಜೇ ಜ್ಯೋಕ್ತಮಾಮಿವಾತಿಶಯೇನ ಚಿರಕಾಲಮೇವಾರಮತ ಕ್ರೀಡಿತವಾಂಸ್ತಸ್ಮಾಚ್ಚಿರಕಾಲಮೇವ ಸದ್ಭಾವಾದ್ಯೋಽಯಮಜೋಽಸ್ತಿ ಸ ಏಷ ಏತೇಷಾಂ ಪೂರ್ವೋಕ್ತಾನಾಂ ಪಶೂನಾಂ ಮಧ್ಯೇ ಪ್ರಯುಕ್ತತಮಃ ಶಿಷ್ಟೈರತಿಶಯೇನ ಪ್ರಯುಕ್ತಃ ॥

ಆಡಿನ ವಿಷಯದಲ್ಲಿ ಒಂದು ವಿಶೇಷವಿರುವುದು. ಮೇಧವೆಂಬ ಯಜ್ಞಾರ್ಹಭಾಗವು ಒಂದು ಪ್ರಾಣಿಯಿಂದ ಮತ್ತೊಂದು ಪ್ರಾಣಿಯಲ್ಲಿ ಹೋಗಿ ಸೇರಿಕೊಂಡಿತೆಂದು ಇದುವರೆಗೂ ಹೇಳಿದೆಯಷ್ಟೆ. ಆದರೆ ಇದು ಯಾವ ಪ್ರಾಣಿಯಲ್ಲಿಯೂ ಬಹಳಹೊತ್ತು ಇರದೆ ಆಡಿನಲ್ಲಿ ಮಾತ್ರ ಬಹುಕಾಲ ನೆಲೆಸಿದ್ದಿತು. ಆದ್ದರಿಂದ ಈ ಆಡೆಂಬ ಪ್ರಾಣಿಯು ಹಿಂದೆ ಹೇಳಿದ ಪ್ರಾಣಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ಯಜ್ಞಾರ್ಹಪಶುವೆಂದು ಶಿಷ್ಟರಿಂದ ಪರಿಗ್ರಹಿಸಲ್ಪಟ್ಟಿರುವುದು. ಯಜ್ಞಗಳಲ್ಲಿ ಈಗಲೂ ಇದನ್ನು ಪಶುವನ್ನಾಗಿ ಉಪಯೋಗಿಸುವ ರೂಢಿ ಇದೆ.

**ತೇಽಜಮಾಲಭಂತ ಸೋಽಜಾದಾಲಬ್ಧಾದುದಕ್ರಾಮತ್ಸ ಇಮಾಂ ಪ್ರಾವಿಶತ್ತಸ್ಮಾದಿಯಂ ಮೇಧ್ಯಾಽಭವದಥೈನಮುತ್ಕ್ರಾಂತ-ಮೇಧಮತ್ಯಾರ್ಜಂತ ಸ ಶರಭೋಽಭವತ್ ।**

ಪಂಚಮಂ ಪರ್ಯಾಯಂ ದರ್ಶಯತಿ ॥ ಇಮಾಂ ಪೃಥಿವೀಂ । ಶರಭೋಽಷ್ಟಭಿಃ ಪಾದೈರುಪೇತಃ ಸಿಂಹಘಾತೀ ಮೃಗವಿಶೇಷಃ ॥

(ಐದನೆಯ ಪರ್ಯಾಯವನ್ನು ಹೇಳುವರು) ಅನಂತರ ದೇವತೆಗಳು ಆಡನ್ನು ತಮ್ಮ ಯಜ್ಞಪಶುವನ್ನಾಗಿ ಮಾಡಿ ಅದನ್ನು ಕೊಂದರು. ಕೂಡಲೇ ಅದರಲ್ಲಿದ್ದ ಯಜ್ಞಾರ್ಹವಾದ ಮೇಧವು ಆಡನ್ನು ತ್ಯಜಿಸಿ ಭೂಮಿಯನ್ನು ಪ್ರವೇಶಿಸಿ ಅಲ್ಲಿಯೇ ನೆಲೆಸಿದ್ದಿತು. ಮೇಧವು ಆಡನ್ನು ತ್ಯಜಿಸಿದನಂತರ ಆ ಆಡು ಎಂಟು ಪಾದಗಳುಳ್ಳದ್ದೂ ಸಿಂಹವನ್ನು ಆಹಾರವಾಗಿ ಭಕ್ಷಿಸುವುದೂ ಆದ ಶರಭವೆಂಬ ಮೃಗದ ರೂಪವನ್ನು ಪಡೆಯಿತು.

**ತ ಏತ ಉತ್ಕ್ರಾಂತಮೇಧಾ ಅಮೇಧ್ಯಾಃ ಪಶವಸ್ತಸ್ಮಾದೇತೇಷಾಂ ನಾಶ್ನೀಯಾತ್ ।**

ಅತ್ರ ಪ್ರಸಂಗಾತ್ಕಂಚಿದ್ಧರ್ಮವಿಶೇಷಂ ದರ್ಶಯತಿ—ಮನುಷ್ಯಾಶ್ವಗೋವ್ಯಜೇಭ್ಯೋ ಮೇಧಸ್ಯೋತ್ಕ್ರಮಣಕ್ರಮೇಣ ನಿಷ್ಪನ್ನಾಸ್ತ ಏತೇ ಕಿಂಪುರುಷಾದಯೋ ಮೇಧರಾಹಿತ್ಯಾದ್ಯ-ಜ್ಞಯೋಗ್ಯಾಃ ಪಶವೋ ನಾಽಽಸನ್ ॥ ಅತ ಏತೇಷಾಂ ಪಶೂನಾಂ ಸಂಬಂಧಿ ಮಾಂಸಂ ನಾಶ್ನೀಯಾತ್ ॥

ಹಿಂದೆ ಹೇಳಿದ ಕಿಂನರ, ಅಶ್ವ, ಗೋವು, ಕುರಿ, ಆಡು ಎಂಬ ಈ ಐದು ಮೃಗಗಳಲ್ಲಿ ಯಜ್ಞಾರ್ಹವಾದ ಮೇಧವು ಸ್ವಲ್ಪಕಾಲವಿದ್ದು ಅಲ್ಲಿಂದ ಬಿಟ್ಟುಹೋದ್ದರಿಂದ ಈ ಮೃಗಗಳು ಯಜ್ಞಕ್ಕೆ ಯೋಗ್ಯವಾದ ಪಶುಗಳಾಗಲಿಲ್ಲ. ಆದ್ದರಿಂದ ಈ ಪ್ರಾಣಿಗಳ ಮಾಂಸವನ್ನು ತಿನ್ನಬಾರದು.

**ತಮಸ್ಯಾಮನ್ವಗಚ್ಛನ್ಸೋಽನುಗತೋ ವ್ರೀಹಿರಭವತ್ತದ್ಯತ್ಪಶೌ ಪುರೋ-ಳಾಶಮನುನಿರ್ವಪಂತಿ ಸಮೇಧೇನ ನಃ ಪಶುನೇಷ್ಟಮಸತ್ಕೇ-ವಲೇನ ನಃ ಪಶುನೇಷ್ಟಮಸದಿತಿ॥**

ಅತ್ರ ಪುರೋಡಾಶಂ ವಿಧತ್ತೇ—ತಂ ಮೇಧಾಖ್ಯಂ ಹವಿರ್ಭಾಗಮಸ್ಯಾಂ ಪೃಥಿವ್ಯಾಂ ಪ್ರವಿಷ್ಟಂ ಗ್ರಹೀತುಂ ದೇವಾ ಅನ್ವಗಚ್ಛನ್ ॥ ಸ ಚ ಮೇಧೋ ದೇವೈರನುಗತ ಉತ್ಕ್ರಾಂತುಮ-ಶಕ್ತಃ ಸನ್ಸಹಸಾ ವ್ರೀಹಿರಭವತ್ ॥ ತಥಾ ಸತಿ ಯದಿ ಪಶೌ ಪುರೋಡಾಶಮನುನಿರ್ವಪಂತಿ ಪಶ್ವಾಲಂಭಾನಂತರಮೇವ ನಿರ್ವಪೇಯುಸ್ತದಾನೀಂ ನೋಽಸ್ಮಾಕಂ ಸಮೇಧೇನ ಯಜ್ಞ-ಯೋಗ್ಯಹವಿರ್ಭಾಗಯುಕ್ತೇನ ಪಶುನೇಷ್ಟಮಸದಿಷ್ಟಂ ಭವತಿ ॥ ಪುರೋಡಾಶನಿರ್ವಾಪ-ಕರ್ತೄಣಾಂ ಕೋಽಭಿಪ್ರಾಯ ಇತಿ ಸೋಽಭಿಧೀಯತೇ ॥ ನೋಽಸ್ಮಾಕಂ ಕೇವಲೇನ ಸಾಧ-ನಾಂತರನಿರಪೇಕ್ಷೇಣ ಮೇಧ ಪೂರ್ಣೇನ ಪಶುನೇಷ್ಟಮಸ್ತ್ವಿತಿ ತದಭಿಪ್ರಾಯಃ ॥

ಈಗ ಪುರೋಡಾಶದ ವಿಷಯವನ್ನು ಹೇಳುವರು. ಮೇಲೆ ಹೇಳಿದಂತೆ ಯಜ್ಞಾರ್ಹವಾದ ಮೇಧಭಾಗವು ಭೂಮಿಯನ್ನು ಪ್ರವೇಶಿಸಿತಷ್ಟೆ. ಅದನ್ನು ಸ್ವೀಕರಿಸುವುದಕ್ಕೆ ದೇವತೆಗಳು ಅದರ ಸಮೀಪಕ್ಕೆ ಹೋಗಿ ಅದರ ಸುತ್ತಲೂ ಮುತ್ತಿಕೊಂಡರು. ಆಗ ಮೇಧವು ಅಲ್ಲಿಂದ ತಪ್ಪಿಸಿಕೊಂಡುಹೋಗಲು ಯಾವ ಮಾರ್ಗವನ್ನೂ ಕಾಣದೆ ಆ ಭೂಮಿಯಮೇಲೆಯೇ ವ್ರೀಹಿ (ಭತ್ತ-riee) ಎಂಬ ಧಾನ್ಯವಾಗಿ ಬೆಳೆಯಿತು. ಪಶುಹೋಮಾನಂತರ ಪುರೋಡಾಶವನ್ನು ಹೋಮಮಾಡುವುದಕ್ಕಾಗಿ ಆಹುತಿಯನ್ನಾಗಿ ಅರ್ಪಿಸಲು ಸಾರಭೂತವಾದ ಮತ್ತು ಮೇಧಯುಕ್ತವಾದ ಹವಿಸ್ಸಿಗಾಗಿ ಈ ವ್ರಿಹಿಯು (ಎಂದರೆ ವ್ರೀಹಿಯಿಂದ ಮಾಡಲ್ಪಟ್ಟ ಪುರೋಡಾಶವು) ಉಪಯುಕ್ತವಾಗುವುದೆಂದು ದೇವತೆಗಳಿಗೆ ಕಂಡುಬಂದಿತು.

**ಸಮೇಧೇನ ಹಾಸ್ಯ ಪಶುನೇಷ್ಟಂ ಭವತಿ ಕೇವಲೇನ ಹಾಸ್ಯ ಪಶು-ನೇಷ್ಟಂ ಭವತಿ ಯ ಏವಂ ವೇದ ॥**

ವೇದನಂ ಪ್ರಶಂಸತಿ—ಸಮೇಧೇನೇತ್ಯಸ್ಯೈವ ವಾಕ್ಯಸ್ಯ ವ್ಯಾಖ್ಯಾನಂ ಕೇವಲೇನೇ-ತ್ಯಾದಿ । ತದೇತತ್ಸರ್ವಂ ಶ್ರುತ್ಯಂತರಸಂಗೃಹೀತಂ ॥ 'ಪಶುಮಾಲಭ್ಯ ಪುರೋಡಾಶಂ ನಿರ್ವಪತಿ ಸಮೇಧಮೇವೈನಮಾಲಭತೇ' ಇತಿ ॥ ಅತ್ರ ಮೀಮಾಂಸಾ ॥

"ಉಪಕಾರೀ ಸಂಸ್ಕೃತಿರ್ವಾ ಪುರೋಡಾಶಃ ಪಶೂದಿತಃ ॥
ತದ್ಧಿತೋಕ್ತ್ಯಾ ದ್ವಯೋರ್ದೇವಭೇದಾದುಪಕೃತಿರ್ಮತಾ ॥
ಸಂದಂಶಾನ್ನಿಶ್ಚಿತೇಽಂಗತ್ವೇ ದೃಷ್ಟೋಽರ್ಥಃ ಸ್ಮೃತಿಸಂಸ್ಕೃತಿಃ ॥
ದೇವಾಂತರಂ ಚೇದ್ವಿಕೃತಮ(ತಾವ)ಗ್ನೀಷೋಮನಿವರ್ತನಂ" ॥

ಜ್ಯೋತಿಷ್ಟೋಮಾಂಗಭೂತಾಗ್ನೀಷೋಮೀಯಪಶೌ ಶ್ರೂಯತೇ—‘ಅಗ್ನೀಷೋಮೀಯಸ್ಯ ವಪಾಂ ಪ್ರಚರ್ಯಾಗ್ನೀಷೋಮೀಯಮೇಕಾದಶಕಪಾಲಂ ನಿರ್ವಪತಿ’ ಇತಿ ॥ ತತ್ರ ಪಶಾವುಕ್ತಃ ಪುರೋಡಾಶಃ ಸ ಕಿಂ ಪಶೋರಾರಾದುಪಕಾರಕ ಉತ ಪಶುದೇವತಾಸಂಸ್ಕಾರಕ ಇತಿ ಸಂದೇಹಃ । ತತ್ರಾಗ್ನೀಷೋಮೀಯಂ ಪಶುಮಾಲಭೇತೇತಿ ಪಶುವಿಧೌ ತದ್ಧಿತೋಕ್ತ್ಯಾಽಗ್ನೀಷೋಮದೇವತಾ ಯಥಾ ಗುಣತ್ವೇನ ಪಶೌ ವಿಧೀಯತೇ ತಥಾ ಪಶುಪುರೋಡಾಶೇಽಪಿ । ತಥಾ ಸತಿ ವಿಧಿಭೇದೇನ ವಿಧೇಯದೇವತಾಭೇದಾತ್ಸಂಸ್ಕಾರೋ ನ ಯುಕ್ತಃ । ಗುಣತ್ವಂ ಚ ಸಂಸ್ಕಾರ್ಯವಿರೋಧೀತಿ ಪೂರ್ವೋಕ್ತಂ ತಸ್ಮಾತ್ಪಶೋರಾರಾದುಪಕಾರಕ ಇತಿ ಪ್ರಾಪ್ತೇ ಬ್ರೂಮಃ ॥ ದೇವತಾಭೇದವಾದಿನಾ ತಾವದಿದಂ ವಕ್ತವ್ಯಂ ಪಶುಃ ಪುರೋಡಾಶಶ್ಚೇತ್ಯುಭೌ ಕಿಂ ಸ್ವತಂತ್ರೌ ಯಾಗೌ ಕಿಂ ವಾಽಂಗಾಂಗಿರೂಪೌ ತತ್ರಾಪಿ ಕಿಮಂಗಂ ಕಿಂ ವಾಽಂಗೀತಿ॥ತತ್ರ ಪಶುಧರ್ಮೈರುಭಯತಃ ಸಂದಷ್ಟಸ್ಯ ಪುರೋಡಾಶಸ್ಯ ಸ್ವತಂತ್ರಾಂಗಿತ್ವೇ ತಯೋಃ ಪಶುಪ್ರಕರಣಪಾಠಬಾಧ್ಯತ್ವಾದಭಿಮತಮುಪಕಾರಕತ್ವಂ ನ ಸಿಧ್ಯೇತ್॥ಅಂಗತ್ವೇಽಪಿ ದೃಷ್ಟಸಂಭವಾದದೃಷ್ಟಕಲ್ಪನಮನ್ಯಾಯ್ಯಂ ॥ ಭವತಿ ಚಾತ್ರ ದೃಷ್ಟಂ ಪುರೋಡಾಶವಾಕ್ಯೇನ ತದ್ಧಿತಾಂತಪದೇನ ಪಶುವಾಕ್ಯಗತಾಯಾ ದೇವತಾಯಾ ಅನುವಾದೇ ಸತಿ ತದೀಯಸ್ಮರಣಪೂರ್ವಕನಿರ್ವಾಪೇ ಪಶುದೇವತಾಯಾಃ ಸಂಸ್ಕ್ರಿಯಮಾಣತ್ವಾತ್ ॥ ಏವಂ ಚ ಸತಿ ಪಶುವಾಕ್ಯೇ ಗುಣತ್ವೇನ ಪ್ರತೀತಾಯಾಃ ಪುರೋಡಾಶವಾಕ್ಯೇ ಪ್ರಾಧಾನ್ಯಾವಗಮಾತ್ಸಂಸ್ಕಾರ್ಯತ್ವಮವಿರುದ್ಧಂ । ತಸ್ಮಾತ್ಪಶುದೇವತಾಸಂಸ್ಕಾರಃ ಪುರೋಡಾಶಃ । ಏವಂ ಚ ಸತ್ಯಗ್ನೀಷೋಮೀಯಪಶುವಿಕೃತೌ ವಾಯವ್ಯಪಶಾವಗ್ನೀಷೋಮದೇವತಾಯಾಂ ನಿವೃತ್ತಾಯಾಂ ತದೀಯಪುರೋಡಾಶೇಽಪಿ ಸಾ ನಿವರ್ತತ ಇತಿ ಬಾಧಃ ಫಲಿಷ್ಯತಿ ॥

ದ್ವಾದಶಾಧ್ಯಾಯಸ್ಯ ಪ್ರಥಮಪಾದೇ ಚಿಂತಿತಂ—

“ಪಶ್ವರ್ಥಾನುಷ್ಠಿತೈರ್ನಾಸ್ತಿ ಪುರೋಡಾಶ ಉಪಕ್ರಿಯಾ ॥
ಅಸ್ತಿ ವಾ ವಿಧ್ಯಭಾವಾನ್ನೋ ಹ್ಯರ್ಥತಸ್ತ್ವಸ್ತು ಲೋಕವತ್” ॥

ಅಗ್ನೀಷೋಮೀಯೇ ಪಶೌ ಯಾನಿ ಚೋದಕಪ್ರಾಪ್ತಾನಿ ಪ್ರಯಾಜಾದೀನ್ಯಂಗಾನ್ಯನುಷ್ಠಿತಾನಿ ತೈಃ ಪಶುಪುರೋಡಾಶ ಉಪಕಾರೋ ನಾಸ್ತಿ ॥ ಕುತಃ, ತದುಪಕಾರಬೋಧಕಸ್ಯ ವಿಧೇರಭಾವಾತ್ ॥ ಚೋದಕಸ್ತು ದರ್ಶಪೂರ್ಣಮಾಸವತ್ಪಶುರನುಷ್ಠೇಯ ಇತ್ಯೇವಂರೂಪತ್ವಾತ್ಪಶಾವೇವೋಪಕಾರಂ ಬೋಧಯತಿ । ನನು ಪುರೋಡಾಶಸ್ಯಾಪೀಷ್ಟಿವಿಕೃತಿತ್ವಾತ್ತತ್ರಾಪಿ ಚೋದಕೋಽಸ್ತೀತಿ ಚೇತ್। ಬಾಢಂ । ಅತ ಏವ ಭಿನ್ನಚೋದಕಬಲಾತ್ಪುರೋಡಾಶೋಪಕಾರಾಯ ಪ್ರಯಾಜಾದ್ಯಂಗಾನಿ ಪೃಥಗನುಷ್ಠೇಯಾನೀತಿ ಪ್ರಾಪ್ತೇ ಬ್ರೂಮಃ ॥ ಯದ್ಯಪಿ ಪಶ್ವರ್ಥೈಃ ಪುರೋಡಾಶಸ್ಯೋಪಕಾರ ಇತ್ಯೇತಾದೃಶಂ ಶಾಸ್ತ್ರಂ ನಾಸ್ತಿ ತಥಾಽಪ್ಯಯಮುಪಕಾರೋಽರ್ಥಪ್ರಾಪ್ತೋ ನ ನಿವಾರಯಿತುಂ ಶಕ್ಯತೇ ॥ ಯಥಾ ಪ್ರದೀಪಸ್ಯ ವೇದಿಕಾರ್ಯೇ ನಿರ್ಮಿತಸ್ಯಾರ್ಥಸಿದ್ಧಂ ಮಾರ್ಗಪ್ರಕಾಶಕತ್ವಮನಿವಾರ್ಯಂ ತಥಾ ಪಶುತಂತ್ರಮಧ್ಯೇಽನುಷ್ಠೀಯಮಾನಸ್ಯ ಪುರೋಡಾಶಸ್ಯ ಪಶ್ವರ್ಥೈರಂಗೈರುಪಕಾರಃ ಕೇನ ವಾರ್ಯೇತ ॥ ತಸ್ಮಾದನ್ಯಾರ್ಥೈರಪ್ಯಸ್ತೂಪಕಾರಃ ॥

ಯಾವ ಪುರುಷನು, ಈ ವ್ರೀಹಿಯಿಂದ ಮಾಡಲ್ಪಟ್ಟ ಪುರೋಡಾಶವು ಯಜ್ಞಸಾರಭೂತವಾದ ಮೇಧದಿಂದ ಪೂರ್ಣವಾಗಿರುವುದೆಂದು ತಿಳಿಯುವನೋ ಅವನಿಂದ ಮಾಡಲ್ಪಡುವ ಈ ವ್ರೀಹಿ ಅಥವಾ ಪುರೋಡಾಶಹೋಮವು ಪಶುಹೋಮದಿಂದಲೇ ಪೂರ್ಣಗೊಳಿಸಲ್ಪಡುವಂತೆ ಫಲಪ್ರದವಾಗುವುದು. ಈ ವಿಷಯವೆಲ್ಲವೂ ತೈ. ಸಂ. ೬-೩-೧೦-೧ ಪಶುಮಾಲಭ್ಯ ಪುರೋಡಾಶಂ ನಿರ್ವಪತಿ ; ಸಮೇಧಮೇವೈನಮಾಲಭತೇ ; ಇತ್ಯಾದಿ ಶ್ರುತಿವಾಕ್ಯಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದು.

---

*English Translation*

**(The animals fit for being sacrificed. The offering of the Purodasa forming part of the animal sacrifice).**

The Gods killed a man for their sacrifice. But that part in him which was fit for being made an offering, went out aud entered a horse. Thence the horse became an animal fit for being sacrificed. The Gods then dismissed that man after that part which was only fit for being offered had gone from him, whereupon he became deformed.

The Gods killed the horse; but the part fit for being sacrificed (the medha) went out of it, and entered an ox; thence the ox became an animal fit for being sacrificed. The Gods then dismissed (this horse) after the sacrificial part had gone from it, whereupon it turned to a white dear.

The Gods killed the ox; but the part fit for being sacrificed went out of the ox, and entered a sheep, thence the sheep became fit for being sacrified. The Gods then dismissed the ox which turned to a gayal (bos goaevns).

The Gods killed the sheep; but the part fit for being sacrificed went out of the sheep, and entered a goat; thence the goat became fit for bieng sacrificed. The Gods dismissed the sheep, which turned to a camel.

The sacrificial part (the medha) remained for the longest time (longer than in the other animals) in the goat; thence is the goat among all these animals pre-eminently fit (for being sacrificed).

The Gods killed the goat; but the part fit for being sacrificed went out of it, and entered the earth. Thence the earth is fit for being offered. The Gods then dismissed the goat, which turns to a Sarabha.

All these animals from which the sacrificial part had gone, are unfit for being sacrificed, thence one should not eat (their flesh).

After the sacrificial part had entered the earth, the Gods surrounded it (so that no escape was possible); it then turned to rice. When they (therefore) divide the Purodasa into parts, after they have killed the animal then they do it, wishing "might our animal sacrifice be performed with the sacrificial part (which is contained in the rice of the Purodasa)! might our sacrificial part be provided with the whole sacrificial essense!" The sacrificial animal of him who has such a knowledge becomes then provided with the sacrificial part, with the whole sacrificial essence.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಷಷ್ಠಾಧ್ಯಾಯೇ ಅಷ್ಟಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದ ಎಂಟನೆಯ ಖಂಡವು ಸಮಾಪ್ತವಾದುದು.**



# ಅಥ ಷಷ್ಠಾಧ್ಯಾಯೇ ನವಮಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು



[ ಪುರೋಡಾಶಕ್ಕೂ ಯಜ್ಞಪಶುವಿನ ಆಹುತ್ಯರ್ಪಣೆಗೂ ಇರುವ ಸಂಬಂಧ. ವಪಾ ಮತ್ತು ಪುರೋಡಾಶಾಹುತಿಗಳು ]

ಇದುವರೆಗೆ ಪಶು ಮತ್ತು ಪುರೋಡಾಶಗಳ ವಿಷಯವನ್ನು ಸೂಕ್ಷ್ಮವಾಗಿ ಹೇಳಿ ಈಗ ವಪಾ ಹೋಮದಲ್ಲಿ ಯಾಜ್ಯಾ ಮಂತ್ರಗಳನ್ನು ವಿವರಿಸುವುದಕ್ಕಾಗಿ ಪುರೋಡಾಶಕ್ಕೂ ಪಶುವಿನ ಅಂಗಗಳಿಗೂ ಇರುವ ಸಾದೃಶ್ಯವನ್ನು ಹೇಳುವರು.

**ಸ ವಾ ಏಷ ಪಶುರೇವಾಲಭ್ಯತೇ ಯತ್ಪುರೋಳಾಶಃ, ತಸ್ಯ ಯಾನಿ ಕಿಂಶಾರೂಣಿ ತಾನಿ ರೋಮಾಣಿ ಯೇ ತುಷಾಃ ಸಾ ತ್ವಗ್ಯೇ ಫಲೀಕರಣಾಸ್ತದಸೃಗ್ಯತ್ಪಿಷ್ಟಂ ಕಿಕ್ನಸಾಸ್ತನ್ಮಾಂಸಂ ಯತ್ಕಿಂಚಿತ್ಕಂ ಸಾರಂ ತದಸ್ಥಿ ।**

**ವಿಹಿತಂ ಪಶುಪುರೋಡಾಶಂ ಪ್ರಶಸ್ಯ ಪಶ್ಚಾದ್ವಪಾದಿಯಾಜ್ಯಾ ವಿವಕ್ಷುರಾದೌ ತಂ ಪ್ರಶಂಸತಿ— ಪಶುಶರೀರಸಾದೃಶ್ಯಾದಯಂ ಪುರೋಡಾಶೋಽನುಷ್ಠಿತಃ ಪಶ್ವಾಲಂಭ ಏವ ಭವತಿ ॥ ತದೇತತ್ಸಾದೃಶ್ಯಂ ವಿಶದಯತಿ ತಸ್ಯ ವ್ರೀಹಿಬೀಜಸ್ಯ ಸಂಬಂಧೀನಿ ಯಾನಿ ಕಿಂಶಾರೂಣಿ**

ಬುಸಪಲಾಲಾದೀನಿ ತಾನಿ ಪಶುರೋಮಸ್ಥಾನೀಯಾನಿ ಯೇ ತುಷಾಸ್ತಂಡುಲವೇಷ್ಟನರೂಪಾಃ ಪ್ರಥಮಾವಘಾತೇನ ಪರಿತ್ಯಾಜ್ಯಾಃ ಸಾ ತುಷಸಮುಷ್ಟಿಃ । ಪಶುತ್ವಕ್ಸ್ಥಾನೀಯಾ ಯೇ ಫಲೀ-ಕರಣಾಸ್ತಂಡುಲಶ್ವೈತ್ಯಾರ್ಥೇನಾವಘಾತೇನ ಹೇಯಾ ಅಂಶಾಸ್ತತ್ಸರ್ವಮಸೃಕ್ಪಶುರಕ್ತಸ್ಥಾ-ನೀಯಂ ॥ ಯತ್ಪಿಷ್ಟಂ ತಂಡುಲಪೇಷಣೇನ ನಿಷ್ಪನ್ನಂ ಪಿಂಡಯೋಗ್ಯಂ ರೂಪಂ ಯೇ ಚ ಕಿಕ್ನಸಾಃ ಸೂಕ್ಷ್ಮಾಃ ಪಿಷ್ಟಾವಯವಾಸ್ತತ್ಸರ್ವಂ ಪಶುಮಾಂಸಸ್ಥಾನೀಯಂ ॥ ಯತ್ಕಿಂಚಿತ್ಕಂ ಸಾರಂ ಸ್ವಾರ್ಥೇ ಕಪ್ರತ್ಯಯಃ ಕಿಂಚಿದನ್ಯದ್ವ್ರೀಹಿಸಂಬಂಧಿಕಾಠಿನ್ಯರೂಪಂ ಸಾರಂ ತದಸ್ಥಿ ತತ್ಪಶೋರಸ್ಥಿಸ್ಥಾನೀಯಂ ॥ ಏವಂ ಪಶುಸಾಮ್ಯಾತ್ಪುರೋಡಾಶಸ್ಯ ಪಶುತ್ವಂ ।

ಹವಿರ್ಯಜ್ಞದಲ್ಲಿ ಹೋಮಾರ್ಥವಾಗಿ ಉಪಯೋಗಿಸಲ್ಪಡುವ ಪುರೋಡಾಶವೇ ವಧಿಸಲ್ಪಟ್ಟ ಯಜ್ಞಪಶುವೆಂದು ಭಾವಿಸಲ್ಪಡುವುದು. ಪುರೋಡಾಶಕ್ಕೂ ಯಜ್ಞಪಶುವಿಗೂ ಸಾದೃಶ್ಯವಿರುವುದು. ಹೇಗೆಂದರೆ—ವ್ರೀಹಿ ಅಥವಾ ಭತ್ತವನ್ನು ಅಕ್ಕಿಮಾಡುವಾಗ ಭತ್ತದಿಂದ ಹೊರಡುವ ಜಳ್ಳು ಮತ್ತು ಹುಲ್ಲು ಇವುಗಳೇ ಯಜ್ಞಪಶುವಿನ ರೋಮಗಳು; ಅಕ್ಕಿಯನ್ನು ಕುಟ್ಟುವಾಗ ಕಾಳುಗಳನ್ನು ಆವರಿಸಿರುವ ಹೊಟ್ಟೇ ಪಶುವಿನ ಚರ್ಮವೆಂದು ಹೇಳಲ್ಪಡುವುದು. ಭತ್ತದ ಹೊಟ್ಟಿಗೂ ಅಕ್ಕಿಗೂ ಮಧ್ಯದಲ್ಲಿರುವ ತೌಡೇ ಪಶುವಿನ ರಕ್ತವೆಂದು ಹೇಳಲ್ಪಡುವುದು; ಪುರೋಡಾಶವನ್ನು ಮಾಡುವುದಕ್ಕಾಗಿ ಅಕ್ಕಿಯನ್ನು ಬೀಸುವಾಗ ದೊರೆಯುವ ಹಿಟ್ಟೇ ಅದನ್ನು ನೀರಿನಿಂದ ಕಲಸಿದಮೇಲೆ ಪಶುವಿನ ಮಾಂಸವು. ಅಕ್ಕಿಯ ಕಾಳುಗಳ ಮಧ್ಯಭಾಗದಲ್ಲಿರುವ ಘಟ್ಟಿಯಾದ ಸಾರಭಾಗವೇ ಪಶುವಿನ ಮೂಳೆಗಳೆಂದು ಹೇಳಲ್ಪಡುವುದು.

**ಸರ್ವೇಷಾಂ ವಾ ಏಷ ಪಶೂನಾಂ ಮೇಧೇನ ಯಜತೇ ಯಃ ಪುರೋಳಾಶೇನ ಯಜತೇ ತಸ್ಮಾದಾಹುಃ ಪುರೋಳಾಶಸತ್ರಂ ಲೋಕ್ಯಮಿತಿ ।**

ಏವಂ ಸತಿ ಯತ್ಫಲಿತಂ ತದ್ದರ್ಶಯತಿ ॥ ಪುರೋಡಾಶಯಾಗ ಏವ ಸರ್ವಪಶುಸಂಬಂಧಿ-ಯಜ್ಞಯೋಗ್ಯಹವಿರ್ಯಾಗಃ । ಸರ್ವಪಶುಸಂಬಂಧಶ್ಚ ಪುರುಷಂ ವೈ ದೇವಾ ಇತ್ಯಾದಿನಾ ಪ್ರಪಂಚಿತಃ । ಲೌಕಿಕೋಕ್ತ್ಯಾ ಪ್ರಾಶಸ್ತ್ಯಂ ದೃಢಯತಿ—ಯಸ್ಮಾತ್ಪುರೋಳಾಶಯಾಗಃ ಸರ್ವಪಶುಸಾರಭೂತಸ್ತಸ್ಮಾತ್ಪುರೋಡಾಶಾನುಷ್ಠಾನಂ ಲೋಕ್ಯಂ ಪ್ರೇಕ್ಷಣೀಯಮಿತಿ ಯಾ-ಜ್ಞಿಕಾ ಆಹುಃ ॥ ಅತ ಏವ ಪ್ರೈಷಮಂತ್ರೇ ಪುರೋಡಾಶಾಗ್ಂ ಅಲಂಕುರ್ವಿತ್ಯೇವಮಾಮ್ನಾತಂ ॥

ಈರೀತಿ ಪಶುವಿನಲ್ಲಿರತಕ್ಕ ಮುಖ್ಯಭಾಗಗಳೆಲ್ಲಾ ಪುರೋಳಾಶದಲ್ಲಿಯೂ ಇರುವುದರಿಂದ ಯಾವ ಪುರುಷನು ಪುರೋಳಾಶದಿಂದ ಹೋಮಮಾಡಿ ಯಜ್ಞಕರ್ಮವನ್ನು ನಿರ್ವಹಿಸುವನೋ ಅವನು ಪಶುವನ್ನೇ ಉಪಯೋಗಿಸಿ ಯಜ್ಞಮಾಡಿದ ಫಲವನ್ನು ಹೊಂದುವನು. ಎಂದರೆ, ಪುರೋಳಾಶವನ್ನು ಉಪಯೋಗಿಸಿ ಯಜ್ಞಮಾಡಿದರೆ ಪಶುವನ್ನು ವಧಿಸಿ ಯಜ್ಞವನ್ನು ಮಾಡಿದಂತೆಯೇ ಆಗುವುದು. ಆದ್ದರಿಂದ ಪುರೋಳಾಶಸಹಿತವಾದ ಯಜ್ಞವನ್ನು ಪುರುಷನು ಅವಶ್ಯಕವಾಗಿ ನೋಡಿ ನಿರ್ವಹಿಸಬೇಕು. ಪುರೋಳಾಶವು ಯಜ್ಞಪಶುವಿನ ಸಾರಭೂತವಾಗಿರುವುದೆಂದೂ ಆದ್ದರಿಂದ ಯಜ್ಞಮಾಡುವ ಪುರುಷನು ಪುರೋಡಾಶಾನುಷ್ಠಾನಪೂರ್ವಕವಾಗಿ ಯಜ್ಞವನ್ನು ಮಾಡಬೇಕೆಂದು ಯಜ್ಞಾನುಷ್ಠಾನಕರ್ಮಕುಶಲರಾದವರು ಹೇಳುವರು. ಈ ವಿಷಯದಲ್ಲಿ ಪುರೋಡಾಶಾಗ್ಂ ಅಲಂಕುರು ಎಂದು ಶತಪಥಬ್ರಾಹ್ಮಣವಾಕ್ಯವಿರುವುದು (ಶ. ಬ್ರಾ. ೪-೨-೫-೧೧)

ಯುವಮೇತಾನಿ ದಿವಿ ರೋಚನಾನ್ಯಗ್ನಿಶ್ಚ ಸೋಮ ಸಕ್ರತೂ ಅಧತ್ತಂ । ಯುವಂ ಸಿಂಧೂಁರಭಿಶಸ್ತೇರವದ್ಯಾದಗ್ನೀಷೋಮಾವಮುಂಚತಂ ಗೃಭೀತಾನಿತಿ ವಪಾಯೈ ಯಜತಿ ।

ಅಥ ವಪಾದೀನಾಂ ಕ್ರಮೇಣ ಯಾಜ್ಯಾ ವಿವಕ್ಷುರಾದೌ ವಪಾಯಾಜ್ಯಾಂ ವಿಧತ್ತೇ—ಹೇ ಸೋಮ ತ್ವಂ ಚಾಗ್ನಿಶ್ಚ ಯುವಮೇತಾವುಭೌ ಯುವಾಮೇತಾನಿ ಸರ್ವೈರ್ದೃಶ್ಯಮಾನಾನಿ ರೋಚನಾನಿ ಪ್ರಕಾಶರೂಪಾಣಿ ನಕ್ಷತ್ರಾದೀನಿ ದಿವಿ ದ್ಯುಲೋಕೇಽಧತ್ತಂ ॥ ಕೀದೃಶೌ ಯುವಾಂ ಸಕ್ರತೂ ಸಮಾನಕರ್ಮಾಣೌ ಹೇಽಗ್ನೀಷೋಮೌ ಯುವಾಂ ಸ್ವಕೀಯತ್ವೇನ ಸ್ವೀಕೃತಾನ್ಸಿಂಧೂನ್ಸಮುದ್ರವತ್ಪ್ರೌಢಾನ್ರಾಜಾಮಾತ್ಯಾದೀನ್ಪುರುಷಾನ್ಯಜಮಾನಾದೀನ್ವಾಽಭಿಶಸ್ತೇಃ ಸಂಗ್ರಾಮಾದಿಷು ಬ್ರಾಹ್ಮಣವಧಾದಿರೂಪಾದಪವಾದಾದವದ್ಯಾತ್ತನ್ನಿಮಿತ್ತದುರಿತಾಚ್ಚಾಮುಂಚತಂ ಮುಕ್ತಾನಕುರುತಂ । ಏತತ್ಪಶ್ವಾದಿಕರ್ಮಾನುಷ್ಠಾನೇನ ಜನಾಪವಾದೋ ದುರಿತಂ ಚ ನಶ್ಯತೀತ್ಯರ್ಥಃ ॥ ವಪಾಯೈ ಯಜತೀತಿ ವಪಾಹೋಮಾರ್ಥಮೃಚಂ ಯಾಜ್ಯಾತ್ವೇನ ಪಠೇದಿತ್ಯರ್ಥಃ ॥

ಈಗ ವಪಾಹೋಮಕ್ಕಾಗಿ ಉಪಯೋಗಿಸಲ್ಪಡುವ ಯಾಜ್ಯಾ ಮೊದಲಾದ ಮಂತ್ರಗಳನ್ನು ವಿವರಿಸುವರು. ಇವುಗಳಲ್ಲಿ **ಯುವಮೇತಾನಿ ದಿವಿ ರೋಚನಾನಿ** (ಋ.ಸಂ. ೧-೯೩-೫) ಎಂಬ ಋಕ್ಕನ್ನು ವಪಾಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸುವರು. ಈ ಋಕ್ಕಿನ ಅರ್ಥವಿವರಣೆಯು ಈರೀತಿ ಇರುವುದು—ಎಲೈ ಅಗ್ನಿ ಮತ್ತು ಸೋಮದೇವತೆಗಳೇ, ನೀವಿಬ್ಬರೂ ಸಮಾನವಾದ ಕ್ರಿಯೆಯುಳ್ಳವರು ಎಂದರೆ ಇಬ್ಬರೂ ಒಂದೇವಿಧವಾದ ಕರ್ಮವನ್ನು ಮಾಡತಕ್ಕವರು. ನಮ್ಮ ಕಣ್ಣಿಗೆ ಗೋಚರವಾಗುವ ಮತ್ತು ಪ್ರಕಾಶಮಾನಗಳಾದ ಈ ನಕ್ಷತ್ರಮಂಡಲಗಳನ್ನು ನೀವಿಬ್ಬರೂ ದ್ಯುಲೋಕದಲ್ಲಿ ಒಟ್ಟಿಗೆ ಎತ್ತಿ ಹಿಡಿದಿದ್ದೀರಿ. ಮತ್ತು ಸಮುದ್ರದಂತೆ ಅತಿಶಯ ಸಾಮರ್ಥ್ಯವುಳ್ಳ ರಾಜ ಮತ್ತು ಅವನ ಸಹಾಯಕರನ್ನು ಅಥವಾ ಯಜ್ಞ ಮಾಡುವ ಯಜಮಾನನೇ ಮೊದಲಾದ ಪುರುಷರನ್ನು, ಯುದ್ಧಾದಿಕರ್ಮಗಳಲ್ಲಿ ಅವರು ಮಾಡಿರಬಹುದಾದ ಬ್ರಾಹ್ಮಣವಧಾದಿ ದುಷ್ಕೃತ್ಯರೂಪವಾದ ಪಾಪಗಳಿಂದ ಬಿಡುಗಡೆಮಾಡಿ ಶುದ್ಧಿಮಾಡುತ್ತೀರಿ. ಎಂದು ಈ ಋಕ್ಕಿನ ಅಭಿಪ್ರಾಯವು. ಎಂದರೆ ಪಶುಯಜ್ಞಮಾಡುವುದರಿಂದ ಯಜಮಾನನಿಗೆ ಉಂಟಾಗಿರುವ ಜನಾಪವಾದವೂ ಪಾಪವೂ ನಾಶವಾಗುವುದೆಂದಭಿಪ್ರಾಯವು. ಈ ವಿಧವಾದ ಅರ್ಥವುಳ್ಳ ಈ ಋಕ್ಕನ್ನು ಯಜ್ಞದಲ್ಲಿ ವಪಾಹೋಮಮಾಡುವಾಗ ಯಾಜ್ಯಾಮಂತ್ರಕ್ಕಾಗಿ ಉಪಯೋಗಿಸಬೇಕು.

ಸರ್ವಾಭಿರ್ವಾ ಏಷ ದೇವತಾಭಿರಾಲಬ್ಧೋ ಭವತಿ ಯೋ ದೀಕ್ಷಿತೋ ಭವತಿ ತಸ್ಮಾದಾಹುರ್ನ ದೀಕ್ಷಿತಸ್ಯಾಶ್ನೀಯಾದಿತಿ ಸ ಯದಗ್ನೀಷೋಮಾವಮುಂಚತಂ ಗೃಭೀತಾನಿತಿ ವಪಾಯೈ ಯಜತಿ ಸರ್ವಾಭ್ಯ ಏವ ತದ್ದೇವತಾಭ್ಯೋ ಯಜಮಾನಂ ಪ್ರಮುಂಚತಿ ತಸ್ಮಾದಾಹುರಾಶಿತವ್ಯಂ ವಪಾಯಾಂ ಹುತಾಯಾಂ ಯಜಮಾನೋ ಹಿ ಸ ತರ್ಹಿ ಭವತೀತಿ

ಪೂರ್ವೋತ್ತರಪಕ್ಷಾಭ್ಯಾಮೇತಾಂ ಯಾಜ್ಯಾಂ ಪ್ರಶಂಸತಿ– ಯಃ ಪುಮಾನ್ಯಜ್ಞಾರ್ಥಂ ದೀಕ್ಷಿತೋ ಭವತ್ಯೇವ ಸರ್ವಾಭಿರಪಿ ದೇವತಾಭಿಃ ಸ್ವಕೀಯಹವಿರ್ದಾನಾರ್ಥಮಾರಬ್ಧಃ ಸ್ವೀಕೃತೋ ಭವತಿ॥ ತಸ್ಮಾದೇತದೀಯಸ್ಯ ದ್ರವ್ಯಸ್ಯ ದೇವತಾಭಿರವರುದ್ಧತ್ವಾದ್ದೀಕ್ಷಿತಸ್ಯ ಗೃಹೇ ನಾಶ್ನಿಯಾದಿತ್ಯೇವಂ ಪೂರ್ವಪಕ್ಷಿಣ ಆಹುಃ ॥ ತತ್ರ ಹೋತಾ ಯದ್ಯಗ್ನೀಷೋಮಾವಮುಂಚತಂ ಗೃಭೀತಾನಿತ್ಯೇತಂ ಯಾಜ್ಯಾಯಾಶ್ಚತುರ್ಥಪಾದಂ ಪಠೇತ್ತದಾ ತೇನ ಪಾಠೇನ ಸರ್ವಾಭ್ಯೋ ದೇವತಾಭ್ಯೋ ಯಜಮಾನಂ ಹೋತಾ ಮೋಚಯತಿ ॥ ತಸ್ಮಾತ್ಕಾರಣಾದ್ವಪಾಹೋಮೇ ನಿಷ್ಪನ್ನೇ ಸತಿ ತದ್ಗೃಹೇ ಭೋಕ್ತವ್ಯಂ॥ ತರ್ಹಿ ತಸ್ಮಿನ್ವಪಾಹೋಮೋತ್ತರಕಾಲೇ ಸ ದೀಕ್ಷಿತೋ ಯಜಮಾನೋ ಭವತಿ॥ ಪೂರ್ವಂ ತು ದೀಕ್ಷಿತ ಏವ ನ ತು ಯಜಮಾನಃ॥ ಇದಾನೀಂ ಯಾಗಸ್ಯ ನಿಷ್ಪನ್ನತ್ವಾದಯಂ ಯಜಮಾನಃ। ತಥಾಸತಿ ದೇವತಾವರೋಧಾನ್ಮುಕ್ತಸ್ಯ ಗೃಹೇ ಭೋಕ್ತುಂ ಶಕ್ಯಮಿತಿ ಸಿದ್ಧಾಂತಿನ ಆಹುಃ ॥

ಈ ಯಾಜ್ಯಾಮಂತ್ರ ಹೋಮವಿಷಯದಲ್ಲಿ ಒಂದು ವೈಶಿಷ್ಟ್ಯವಿರುವುದು. ಯಜ್ಞಾರ್ಥವಾಗಿ ದೀಕ್ಷೆಯನ್ನು ಕೈಗೊಂಡವನು ದೀಕ್ಷಿತನೆನಿಸುವನು. ಅವನು ಮಾಡುವ ಹೋಮವೇ ಮೊದಲಾದ ಕಾರ್ಯಗಳೆಲ್ಲವೂ ದೇವತೆಗಳನ್ನುದ್ದೇಶಿಸಿಯೇ ಮಾಡುವುದರಿಂದ ಆ ದೀಕ್ಷಿತನೂ ದೇವತೆಗಳ ಪೈಕಿ ಒಬ್ಬನೆಂದು ದೇವತೆಗಳಿಂದ ಪರಿಗಣಿಸಲ್ಪಡುವನು. ಆದ್ದರಿಂದ ದೀಕ್ಷಿತನು ಮಾಡುವ ಹೋಮವು ದೇವತೆಗಳಿಗೆ ಸೇರುವುದರಿಂದ ದೇವತೆಗಳ ಪೈಕಿ ಒಬ್ಬನಾದ ದೀಕ್ಷಿತನಿಗೂ ಸೇರಿದಂತಾಗುವುದು ಎಂದರೆ ಹೋಮಮಾಡಿದನಂತರ ದೀಕ್ಷಿತನು ಏನನ್ನು ತಿನ್ನಬಾರದು. ದೇವತೆಗಳ ಜತೆಯಲ್ಲಿಯೇ ಹೋಮದ್ರವ್ಯವನ್ನು ಸ್ವೀಕರಿಸಿರುವುದರಿಂದ ಅದನ್ನು ತಿಂದಂತಾಯಿತು ಪುನಃ ತಿನ್ನಬೇಕಾಗಿಲ್ಲ ಎಂದು ಕೆಲವರು ಹೇಳುವರು. ಆದರೆ ಯಾಜ್ಯಾಮಂತ್ರದ ಕೊನೆಯ ಪಾದದಲ್ಲಿ ಯದಗ್ನೀಷೋಮಾವಮುಂಚತಂ ಎಂದು ಹೇಳಿರುವುದರಿಂದ ಅಗ್ನೀಸೋಮದೇವತೆಗಳ ಹೋಮಮಾಡುವ ದೀಕ್ಷಿತನನ್ನು ಯಜ್ಞದೀಕ್ಷೆಯಿಂದ ಬಿಡುಗಡೆಮಾಡಲಿ ಎಂಬ ಪ್ರಾರ್ಥನೆಗೆ ಅನುಸಾರವಾಗಿ ಆ ದೇವತೆಗಳು ಅವನನ್ನ ದೀಕ್ಷೆಯಿಂದ ಮುಕ್ತನನ್ನಾಗಿ ಮಾಡುವರು. ಆದ್ದರಿಂದ ಅವನು ಯಾಜ್ಯಾಹೋಮಾನಂತರ ದೀಕ್ಷಿತನೆನಿಸುವುದಿಲ್ಲ. ಯಜ್ಞಮಾಡುವ ಯಜಮಾನನೆನಿಸುವನು. ಆದ್ದರಿಂದಲೇ ಮೇಲೆ ಹೇಳಿದ ನಿಯಮವು ಎಂದರೆ ದೀಕ್ಷಿತನು ಏನನ್ನೂ ತಿನ್ನಕೂಡದೆಂಬ ನಿಯಮವು ಯಜಮಾನನಿಗೆ ಅನ್ವಯಿಸುವುದಿಲ್ಲ. ದೀಕ್ಷೆಯಿಂದ ಮುಕ್ತನಾದ ಯಜಮಾನನು ಆಹಾರವನ್ನು ಸ್ವೀಕರಿಸಬಹುದು ಎಂದು ಸಿದ್ಧಾಂತಿಗಳು ಹೇಳುವರು.

**ಆಽನ್ಯಂ ದಿವೋ ಮಾತರಿಶ್ವಾ ಜಭಾರೇತಿ ಪುರೋಳಾಶಸ್ಯ ಯಜತಿ ಅಮಥ್ನಾದನ್ಯಂ ಪರಿ ಶ್ಯೇನೋ ಅದ್ರೇರಿತೀತ ಇವ ಚ ಹ್ಯೇಷ ಇತ ಇವ ಚ ಮೇಧಃ ಸಮಾಹೃತೋ ಭವತಿ ।**

ಅಥ ಪುರೋಡಾಶಸ್ಯ ಯಾಜ್ಯಾಂ ವಿಧತ್ತೇ— ದ್ವಿತೀಯ ಪಾದಮನೂದ್ಯ ಪಾದದ್ವಯಸ್ಯ ಸಹೈವ ತಾತ್ಪರ್ಯಂ ದರ್ಶಯತಿ—ಮಾತರಿಶ್ವಾ ವಾಯುರನ್ಯಮಗ್ನೀಷೋಮಯೋರನ್ಯತರಂ ಸೋಮಾಖ್ಯದೇವಂ ದಿವೋ ದ್ಯುಲೋಕಾದಾಜಭಾರಾಽಽಹೃತವಾನ್॥ ಗಾಯತ್ರೀರೂಪಂ ಕೃತ್ವಾ ವಾಯುಃ ಸೋಮಮಾನೀತವಾನ್ । ಇತಿ ಪ್ರಥಮಪಾದಸ್ಯಾರ್ಥಃ। ಶ್ಯೇನೋ ಬಲವತ್ಪಕ್ಷೀ ತಾದೃಶೋಽಧ್ವರ್ಯುರನ್ಯಮುಭಯೋರ್ದೇವಯೋರನ್ಯತರಮಗ್ನಿಮದ್ರೇಃ ಪರ್ವತಜನ್ಯಾ-

ತ್ಕಾಷ್ಠಾದರಣಿರೂಪಾತ್ಸರ್ಯುರ್ನಮಥ್ನಾತ್ಪರಿತೋ ಮಥನಂ ಕೃತವಾನಿತಿ ದ್ವಿತೀಯಪಾದಾರ್ಥಃ ॥ ಏಷ ಮೇಧೋ ಯಜ್ಞಯೋಗ್ಯಃ ಪುರೋಡಾಶೋಽಪೀತ ಏ(ಇ)ವ ಚೇತ ಇವ ಚಾಸ್ಮಾನ್ಮನುಷ್ಯಾದಸ್ಮಾದಶ್ವಾದ್ಗೋರವೇರಜಾಚ್ಚ ಭೂಮ್ಯಾಃ ಸಮಾಹೃತಃ। ಏವಂ ಸತೀತಸ್ತತಃ ಆನಯನಸಾಮ್ಯಾತ್ಪುರೋಡಾಶಸ್ಯೇಯಮಗ್ನೀಷೋಮಪ್ರತಿಪಾದಿಕಾ ಯಾಜ್ಯಾ ಯೋಗ್ಯೇತ್ಯರ್ಥಃ ॥

ವಪಾಹೋಮದ ಯಾಜ್ಯಾಮಂತ್ರವನ್ನು ಹೇಳಿದನಂತರ ಈಗ ಪುರೋಡಾಶಹೋಮದ ಯಾಜ್ಯಾಮಂತ್ರವನ್ನು ವಿವರಿಸುವರು. **ಆನ್ಯಂ ದಿವೋ ಮಾತರಿಶ್ವಾ ಜಭಾರ** ಎಂಬ ಮಂತ್ರವು (ಋ. ಸಂ. ೧-೯೩-೬) ಪುರೋಡಾಶಹೋಮದ ಯಾಜ್ಯಾಮಂತ್ರವು. ಈ ಮಂತ್ರದ ಅರ್ಥವು ಈರೀತಿ ಇರುವುದು---ಅಗ್ನೀಷೋಮದೇವತೆಗಳಲ್ಲಿ ಒಬ್ಬನಾದ ಸೋಮನನ್ನು ವಾಯುವು ಗಾಯತ್ರೀರೂಪವನ್ನು (ಶ್ಯೇನಪಕ್ಷಿಯರೂಪವನ್ನು) ಧರಿಸಿ ಸ್ವರ್ಗಲೋಕದಿಂದ ಭೂಮಿಗೆ ತಂದನು. ಇದು ಪ್ರಥಮ ಪಾದದ ತಾತ್ಪರ್ಯವು. ಇನ್ನೊಬ್ಬ ದೇವತೆಯಾದ ಅಗ್ನಿಯನ್ನು ಅಧ್ವರ್ಯುವು ಕಲ್ಲಿನಂತೆ ಕಠಿಣವಾದ ಅರಣಿಗಳಲ್ಲಿ ಮಥಿಸಿ ಉತ್ಪತ್ತಿಮಾಡಿದನು. ಇದು ಎರಡನೆಯ ಪಾದದ ಅರ್ಥವು. ಈ ಯಜ್ಞಯೋಗ್ಯವಾದ ಪುರೋಡಾಶವೂ ಸಹ ಹಿಂದೆ (ಐ.ಬ್ರಾ. ಅಧ್ಯಾಯ ೬ ಖಂಡ ೮ ರ ಪ್ರಾರಂಭದಲ್ಲಿ) ಹೇಳಿದಂತೆ ಮನುಷ್ಯ, ಅಶ್ವ, ಗೋವು, ಕುರಿ, ಮೇಕೆ, ಭೂಮಿ ಇವುಗಳಿಂದ (ಅನುಕ್ರಮವಾಗಿ) ತಂದದ್ದಾಗಿದೆ. ಈರೀತಿ ಅಗ್ನೀಸೋಮದೇವತೆಗಳಿಗೂ, ಪುರೋಡಾಶಕ್ಕೂ ಆನಯನ ಎಂದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತರುವ ಕಾರ್ಯವು ಸಮಾನವಾಗಿರುವುದರಿಂದ ಈ ಪುರೋಡಾಶವು ಈ ದೇವತೆಗಳಿಗೆ ಅರ್ಪಿಸಲು ಯೋಗ್ಯವಾಗಿದೆ ಮತ್ತು ಈ ಮಂತ್ರದಲ್ಲಿ ಅದನ್ನು ಹೇಳಿರುವುದರಿಂದ ಈ ಮಂತ್ರವು ಪುರೋಡಾಶಹೋಮದ ಯಾಜ್ಯಾಮಂತ್ರವಾಗಿರಲು ಅರ್ಹವಾಗಿದೆ. [**ಆನ್ಯಂ ದಿವೋ** ಎಂಬ ಈ ಮಂತ್ರದ ಇಲ್ಲಿರುವ ಸಾಯಣಭಾಷ್ಯಕ್ಕೂ ಋಗ್ವೇದಸಂಹಿತೆಯಲ್ಲಿರುವ (ಋ. ಸಂ. ೧-೯೩-೬) ಸಾಯಣಭಾಷ್ಯಕ್ಕೂ ಸ್ವಲ್ಪ ವ್ಯತ್ಯಾಸವಿದೆ ಮತ್ತು ಅಗ್ನಿಮಥನ ವಿಚಾರವನ್ನೂ ಸ್ವರ್ಗದಿಂದ ಸೋಮನನ್ನು ಗಾಯತ್ರಿಯು ಭೂಮಿಗೆ ತಂದ ವಿಚಾರವನ್ನು ನಾವು ಋಕ್ಸಂಹಿತೆಯಲ್ಲಿ ಅನೇಕಕಡೆ ವಿಸ್ತಾರವಾಗಿ ವಿವರಿಸಿದ್ದೇವೆ. ಅದನ್ನು ಅಲ್ಲಿ ನೋಡಿ ತಿಳಿಯಬಹುದು].

ಸ್ವದಸ್ವ ಹವ್ಯಾ ಸಮಿಷೋ ದಿದೀಹೀತಿ ಪುರೋಳಾಶಸ್ವಿಷ್ಟಕೃತೋ ಯಜತಿ ಹವಿರೇವಾಸ್ಮಾ ಏತತ್ಸ್ವದಯತೀಷಮೂರ್ಜಮಾತ್ಮನ್ಧತ್ತೇ ।

ಪುರೋಡಾಶಸಂಬಂಧಿಸ್ವಿಷ್ಟಕೃತೋ ಯಾಜ್ಯಾಂ ವಿಧತ್ತೇ—ಹೇ ಸ್ವಿಷ್ಟಕೃದಗ್ನೇ ಹವ್ಯಾ ಹವೀಂಷಿ ಸ್ವದಸ್ವ ಸ್ವಾದೂನಿ ಕುರ್ವಿಷೋಽನ್ನಾನಿ ಸಂದಿದೀಹಿ ಸಮ್ಯಕ್ಪ್ರಯಚ್ಛೇತಿ(ತ್ಯೇ)ತಸ್ಯ ಪಾದಸ್ಯಾರ್ಥಃ ॥ ತಾಮೇತಾಂ ಯಾಜ್ಯಾಂ ಪ್ರಶಂಸತಿ—ಏತೇನ ಯಾಜ್ಯಾಪಾಠೇನಾಸ್ಮೈ ಕರ್ಮಸಿದ್ಧ್ಯರ್ಥಂ ಯಜಮಾನಾರ್ಥಂ ವಾ ಹವಿರೇವ ಸ್ವಾದೂ ಕರೋತಿ ಯ ಇಷಮೋದನಮೂರ್ಜಂ ಕ್ಷೀರಾದಿರಸಂ ಚಾಽಽತ್ಮನ್ಧತ್ತೇ ಹೋತಾ ಸ್ವಾತ್ಮನಿ ಸಂಪಾದಯತಿ ॥

ಈಗ ಪುರೋಡಾಶಹೋಮದ ಅಂತ್ಯದಲ್ಲಿ ಮಾಡುವ ಸ್ವಿಷ್ಟಕೃದ್ಧೋಮದ ಯಾಜ್ಯಾಮಂತ್ರವನ್ನು ವಿವರಿಸುವರು. **ಸ್ವದಸ್ವ ಹವ್ಯಾ ಸಮಿಷೋ ದಿದೀಹಿ** (ಋ. ಸಂ. ೩-೫೪-೨೨) ಎಂಬ ಮಂತ್ರವು ಸ್ವಿಷ್ಟಕೃದ್ಧೋಮದ ಯಾಜ್ಯಾಮಂತ್ರವು. ಎಲೈ ಸ್ವಿಷ್ಟಕೃದಗ್ನಿಯೇ (ಸ್ವಿಷ್ಟಕೃತ್ ಎಂದರೆ ಹವಿಸ್ಸನ್ನು ರುಚಿಕರವಾಗಿ ಮಾಡುವ ಎಂದರ್ಥವು) ನಿನ್ನಲ್ಲಿ ಹೋಮಮಾಡುವ

ಈ ಪುರೋಡಾಶವೆಂಬ ಹವಿಸ್ಸನ್ನು ದೇವತೆಗಳಿಗೆ ರುಚಿಕರವಾಗುವಂತೆ ಮಾಡು. ಮತ್ತು ಯಜ್ಞಮಾಡುವ ಯಜಮಾನನಿಗೆ (ಅಥವಾ ಹೋಮಮಾಡುವ ಹೋತೃವಿಗೆ) ಅನ್ನಾದ್ಯಾಹಾರವನ್ನೂ ರಸರೂಪವಾದ ಕ್ಷೀರಾದಿಗಳನ್ನು ಚೆನ್ನಾಗಿ ಒದಗಿಸಿಕೊಡು ಎಂದು ಈ ಋಕ್ಕಿನ ಮೊದಲನೆಯ ಪಾದದ ಅಭಿಪ್ರಾಯವು. ಈ ಅರ್ಥವಿರುವ ಈ ಯಾಜ್ಯಾಮಂತ್ರದಿಂದ ಪುರೋಡಾಶವನ್ನು ಹೋಮಮಾಡುವ ಹೋತೃವು ಹವಿಸ್ಸನ್ನು ದೇವತೆಗಳಿಗೆ ರುಚಿಕರವಾಗಿರುವಂತೆ ಮಾಡುವುದಲ್ಲದೆ ತನಗೂ ಯಜ್ಞಮಾಡುವ ಯಜಮಾನನಿಗೂ ಅನ್ನಾದ್ಯಾಹಾರಗಳನ್ನೂ ರಸರೂಪವಾದ ಕ್ಷೀರಾದಿಗಳನ್ನೂ ದೊರಕಿಸುತ್ತಾನೆ.

**ಇಳಾಮುಪಹ್ವಯತೇ ಪಶವೋ ವಾ ಇಳಾ ಪಶೂನೇವ ತದುಪಹ್ವ-
ಯತೇ ಪಶೂನ್ಯಜಮಾನೇ ದಧಾತಿ ॥**

ಪುರೋಡಾಶೀಯ ಸ್ವಿಷ್ಟಕೃದ್ಭಾಗಾದೂರ್ಧ್ವಂ ಪಶುಪುರೋಡಾಶಸಂಬಂಧೀಳೋಪಾಹ್ವಾನಂ ವಿಧತ್ತೇ—ಇಳೋಪಹೂತಾ ಸಹ ದಿವೇತ್ಯಾದಿನಾ ಸೂತ್ರಗತೇನ, ಉಪಹೂತಂ ರಥಂತರಂ ಸಹ ಪೃಥಿವ್ಯೇತ್ಯಾದಿನಾ ಶಾಖಾಂತರಾಮ್ನಾತೇನ ಮಂತ್ರೇಣ ವೇಳಾಖ್ಯಾಂ ದೇವತಾಮುಪಹ್ವಯತೇ ॥ ಗೌರ್ವಾ ಅಸ್ಯೈ ಶರೀರಮಿತಿ ಶ್ರುತ್ಯಂತರಾದಿಷ್ಟದೇವತಾಯಾಃ ಪಶುರೂಪತ್ವಂ। ತತ್ತೇನೋಪಹ್ವಾನೇನ ಪಶೂನೇವಾಽಽಹ್ವಯತಿ । ಯಜಮಾನೇ ಚ ಪಶೂನ್ಸಂಪಾದಯತಿ ।

ಮೇಲೆ ಹೇಳಿದ ಸ್ವಿಷ್ಟಕೃದ್ಧೋಮಾನಂತರ ಹೋತೃವು ಇಳಾ ಎಂಬ ದೇವತೆಯನ್ನು ಆಹ್ವಾನಮಾಡುವನು ಎಂದರೆ ಪ್ರಾರ್ಥಿಸಿ ಕರೆಯುವನು. ಈ ವಿಷಯದಲ್ಲಿ—ಇಳೋಪಹೂತಾ ಸಹ ದಿವಾ (ಆ.ಶ್ರೌ. ೧-೬-೬) ಎಂಬ ಸೂತ್ರವಾಕ್ಯವನ್ನಾಗಲಿ, **ಉಪಹೂತಂ ರಥಂತರಂ** (ತೈ. ಬ್ರಾ. ೩-೫-೮-೧) ಎಂಬ ತೈತ್ತಿರೀಯ ಬ್ರಾಹ್ಮಣ ಮಂತ್ರವನ್ನಾಗಲಿ ಉಪಯೋಗಿಸಿ ಇಳೋಪಾಹ್ವಾನವನ್ನು ಮಾಡಬಹುದು. ಶತಪಥಬ್ರಾಹ್ಮಣ ವಾಕ್ಯದಂತೆ (ತೈ. ಸಂ. ೧-೬-೨ ಮತ್ತು ಶ. ಬ್ರಾ. ೧-೮-೧-೨೪) **ಗೌರ್ವಾ ಅಸ್ಯೈ ಶರೀರಂ**—ಇಳಾ ಎಂದರೆ ಗೋವುಗಳು, ಪಶುಗಳು. ಆದ್ದರಿಂದ ಹೋತೃವು ಇಳೋಪಾಹ್ವಾನಮಾಡುವುದರಿಂದ ಯಜ್ಞಮಾಡುವ ಯಜಮಾನನಲ್ಲಿ ಪಶುಸಮೃದ್ಧಿಯುನ್ನುಂಟಾಗುವುದು.



*English Translation*

**(The relation of the rice cake offering to that of flesh. The Vapa and Purodasa offerings.)**

The Purodasa (offered at the animal sacrifice) is the animal which is killed. The chaff and straw of the rice of which it consits are the hairs of the animal, its husks the skin, its smallest practicles the blood, all the fine parcticles to which the (cleaned) rice is ground (for making, by kneading it with water, a ball) represent the flesh of the animal, and watever other substantial part is in the rice, are the bones (of the animal). He who offers to Purodasa offers the acrificial substance of all animals (for the latter is contained in the rice of the Purodasa). Thence they say : the performance of the Purodasa offerihg is to be attended to.

Now he recites the Yajya for the Vapa (which is about to be offered) yuvam etani divi, i. e. "Ye, O Agni and Soma, have placed, by your joint labours, those lights ou the sky ! ye, Agni and Soma, have liberated the rivers which had been taken (by demons), from imprecation and defilment. (Rigveda 1, 93. 5)

The man who is initiated into the sacrificial mystry (the Dikshita) is seized by all the Gods (as their property). Thence they say : he should not eat of a thing dedicated to the Gods. But others say : he should eat when the Vapa is offerd ; for the Hotar liberates the sacrificr from the Gods by the last words of the mantra just mentioned : "Ye, Agni and Soma, have liberated the rivers which had been taken." Consequently he becomes a sacrificer (a yajamana), and ceases to pelong as a Dikshita exclusive to the Gods.

Now follows tha Yajya verse for the Purodasa (mentioned) : auyam divo matarisva (1, 93, 6) i. e. Matarisva brought from heaven another Soma, and the eagle struck out another Agni, fire of the rock &c. (On account of the meaning of the last words "and the eagle," &c. The verse is used as Yajya for the Purodasa offering.) For it expresses the idea, thai the sacrificial essence had gone out and had been taken away (from man, horse, &c.) as it were, just as (Agni) had come out (of the rock).

With the vere : Taste (O Agni) the offerings, burn them well, &c., (3, 54, 22), the Hotar makes the Svishtakrit of the Purodasa. By this mantra the Hotar makes the sacrificer enjoy such an offering (to be granted by the Gods in return to the gift), and acquires for himself food and milky essences.

He now calls the Ila (and eats from the Purodasa). For Ila means cattle : by doing so, he therefore calls cattle, and provides the sacrificer with them.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಷಷ್ಠಾಧ್ಯಾಯೇ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಆರನೆಯ ಅಧ್ಯಾಯದ ಒಂಭತ್ತನೆಯ ಖಂಡವು ಸಮಾಪ್ತವಾದುದು



# ಅಥ ಷಷ್ಠಾಧ್ಯಾಯೇ ದಶಮಃ ಖಂಡಃ

## ಆರನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ ಪಶುಹೋಮದಲ್ಲಿ ಪಶುವಿನ ಶರೀರದ ನಾನಾ ಅಂಗಗಳ ಹೋಮವಿಧಾನವು; ಮನೋತಾ ಎಂದ ಸೂಕ್ತದ ವಿವರಣೆ ]



ಮನೋತಾಯೈ ಹವಿಷೋಽವದೀಯಮಾನಸ್ಯಾನುಬ್ರೂಹೀತ್ಯಾಹಾ-
ಧ್ವರ್ಯುಃ ॥

ಅಥ ಹೃದಯಾದ್ಯಂಗರೂಪಸ್ಯ ಪ್ರಧಾನಹವಿಷೋಽವದಾನಕಾಲೇ ಕಿಂಚಿತ್ಸೂಕ್ತಂ ವಿಧಾತುಂ ಪ್ರೈಷಮಂತ್ರಂ ವಿಧತ್ತೇ—

ದೇವಾನಾಂ ಮನಾಂಸ್ಯೋತಾನಿ ದೃಢಂ ಪ್ರವಿಷ್ಟಾನಿ ಯಸ್ಯಾಂ ದೇವತಾಯಾಂ ಸಾ ಮನೋತಾ ತದರ್ಥಂ ಹೃದಯಾದ್ಯೇಕಾದಶಾಂಗರೂಪಂ ಹವಿರವದೀಯತೇ ತಸ್ಯ ಹವಿಷೋಽನುಕೂಲಾ ಋಚೋಽನುಬ್ರೂಹೀತ್ಯಧ್ವರ್ಯುಃ ಪ್ರೈಷಮಂತ್ರಂ ಪಠೇತ್ ॥

ಪಶುಯಜ್ಞದ ಒಂದು ಭಾಗವಾದ ಮೇಲೆ ಹೇಳಿದ ವಪಾ ಮತ್ತು ಪುರೋಡಾಶ ಹೋಮಾನಂತರ ಅಧ್ವರ್ಯುವರ್ಗದವರು ವಿಧಿಸಲ್ಪಟ್ಟ ಯಜ್ಞಪಶುವಿನ ನಾನಾ (ಹನ್ನೊಂದು) ಅಂಗಗಳನ್ನು ಅಗ್ನಿಯಲ್ಲಿ ಹೋಮಮಾಡುವರು. ಈ ಹೋಮಗಳನ್ನು ಮಾಡುವಾಗ ಅಧ್ವರ್ಯುವು ಜುಹೂ ಮತ್ತು ಉಪಭೃತ್ ಎಂಬ ಹೋಮಮಾಡುವುದಕ್ಕಾಗಿ ನಿರ್ಮಿಸಲ್ಪಟ್ಟ ಎರಡು ಮರದ ಸೌಟುಗಳನ್ನು ತನ್ನ ಕೈಗಳಲ್ಲಿ ಹಿಡಿದಿರುವನು. ಎಂದರೆ ಉಪಭೃತ್ ಎಂಬ ಸೌಟನ್ನು ಕೆಳಗೆ ಹಿಡಿದು ಅದರ ಮೇಲೆ ಜುಹೂ ಎಂಬ ಸೌಟನ್ನು ಹಿಡಿದಿರುವನು. ಹೋಮಮಾಡಲ್ಪಡುವ ಪಶುವಿನ ಅಂಗಗಳು ಯಾವವೆಂದರೆ—ಪಶುವಿನ ಹೃದಯ, ಜಿಹ್ವಾ (ನಾಲಗೆ), ಎದೆ, ಮೂಳೆಯಿಂದ ಸಹಿತವಾದ ಉದರದ ಎರಡು ಪಕ್ಕೆಗಳು ಯಕೃತ್ (Liver) ಎರಡು ವಪಾಗಳು (reins) ಎರಡು ಭಾಗದ ಭುಜ, ಸೊಂಟದ ಬಲಭಾಗ, (anus) ಮಧ್ಯಭಾಗವು; ಈ ಅಂಗಗಳನ್ನೆಲ್ಲಾ ಜುಹೂ ಎಂಬ ಸೌಟಿನಲ್ಲಿಟ್ಟು ಅಧ್ವರ್ಯುವು ಹೋಮಮಾಡುವನು. ಉಳಿದ ಭಾಗಗಳು ಎಂದರೆ ಬಲಭುಜದ ಭಾಗವು, ಬಹಳ ಸಣ್ಣದಾಗಿರುವ—(anus) ಮೂರನೆಯ ಭಾಗವು, ಸೊಂಟದ ಎಡಭಾಗವು; ಇವುಗಳನ್ನು ಉಪಭೃತ್ ಎಂಬ ಸೌಟಿನಲ್ಲಿಟ್ಟು ಹೋಮಮಾಡುವನು. ಇವುಗಳಲ್ಲದೆ ಪಶುವಿನ ಅಂಗಭಾಗವು (Penis-ವರ್ಷಿಷ್ಠ)—(the straight gul)-ವನಿಷ್ಠ ಮತ್ತು ಬಾಲವು, ಇವುಗಳನ್ನೂ ಹೋಮಮಾಡುವುದಕ್ಕಾಗಿ ಕತ್ತರಿಸಲ್ಪಡುವವು. ಹೋಮಮಾಡುವಾಗ ಪಶುವಿನ ಈ ಅಂಗಗಳನ್ನು ತುಪ್ಪದಲ್ಲಿ ಕರೆದು ಅಥವಾ ತೊಟ್ಟಿಕ್ಕುವಂತೆ ತುಪ್ಪದಲ್ಲಿ ಅದ್ದಿ ಹೋಮಮಾಡಬೇಕಾಗಿರುವುದು. ಈ ಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ—ಮನೋತಾಯೈ ಹವಿಷೋಽವದೀಯಮಾನಸ್ಯಾನುಬ್ರೂಹಿ ಎಂಬ ಪ್ರೈಷ ಮಂತ್ರದಿಂದ ನಿರ್ದೇಶಿಸಿ, ಎಲೈ ಹೋತೃವೇ ದೇವತೆಗಳನ್ನುದ್ದೇಶಿಸಿ ಪಶುವಿನ ಅಂಗಗಳನ್ನು ಹೋಮಮಾಡುವುದಕ್ಕಾಗಿ

ಮನೋತಾ ಸೂಕ್ತದ ಮಂತ್ರಗಳನ್ನು ಪಠಿಸು ಎಂದು ನಿರ್ದೇಶಿಸುವನು. ಮನೋತಾಸೂಕ್ತವೆಂದರೆ ಯಾವ ಸೂಕ್ತದ ಮಂತ್ರಗಳಲ್ಲಿ ದೇವತೆಗಳ ಮನಸ್ಸು ದೃಢವಾಗಿ ನೆಲೆಸಿರುವುದೋ ಆ ಸೂಕ್ತವೆಂದರ್ಥವು. ಋ. ಸಂ. ೬-೧-೧ ನಲ್ಲಿ ಉಕ್ತವಾಗಿರುವ **ತ್ವಂ ಹ್ಯಗ್ನೇ ಪ್ರಥಮೋ ಮನೋತಾ** ಎಂದು ಪ್ರಾರಂಭವಾಗುವ ಮಂತ್ರವೇ ಆ ಸೂಕ್ತವು. ಇದನ್ನು ಮೈತ್ರಾವರುಣವೆಂಬ ಋತ್ವಿಜನು ಪಠಿಸುವನು. ಪಶುವಿನ ಹೃದಯಾದಿ ಹನ್ನೊಂದು ಅಂಗಗಳನ್ನು ಹೋಮಮಾಡುವಾಗ ದೇವತೆಗಳ ಪ್ರೀತ್ಯರ್ಥವಾಗಿ ಈ ಮನೋತಾಸೂಕ್ತದ ಮಂತ್ರಗಳನ್ನು ಪಠಿಸಬೇಕು. ಇದಕ್ಕಾಗಿಯೇ ಅಧ್ವರ್ಯುವು ಮೇಲೆ ಹೇಳಿದಂತೆ ಪಶುವಿನ ಹನ್ನೊಂದು ಅಂಗಗಳನ್ನು ಹೋಮಮಾಡುವುದಕ್ಕಾಗಿ ಮನೋತಾ ಸೂಕ್ತದ ಮಂತ್ರಗಳನ್ನೇ ಪಠಿಸಬೇಕೆಂದು ಪ್ರೈಷಮಂತ್ರದಿಂದ ನಿರ್ದೇಶಿಸುವನು.

ತ್ವಂ ಹ್ಯಗ್ನೇ ಪ್ರಥಮೋ ಮನೋತೇತಿ ಸೂಕ್ತಮನ್ವಾಹ । ತದಾಹುರ್ಯದನ್ಯದೇವತ್ಯ ಉತ ಪಶುರ್ಭವತ್ಯಥ ಕಸ್ಮಾದಾಗ್ನೇಯ್ಯಾರೇವ ಮನೋತಾಯೈ ಹವಿಷೋಽವದೀಯಮಾನಸ್ಯಾನ್ವಾಹೇತಿ ತಿಸ್ರೋ ವೈ ದೇವಾನಾಂ ಮನೋತಾಸ್ತಾಸು ಹಿ ತೇಷಾಂ ಮನಾಂಸ್ಯೋತಾನಿ ವಾಗ್ವೈ ದೇವಾನಾಂ ಮನೋತಾ ತಸ್ಯಾಂ ಹಿ ತೇಷಾಂ ಮನಾಂಸ್ಯೋತಾನಿ ಗೌರ್ವೈ ದೇವಾನಾಂ ಮನೋತಾ ತಸ್ಯಾಂ ಹಿ ತೇಷಾಂ ಮನಾಂಸ್ಯೋತಾನ್ಯಗ್ನಿರ್ವೈ ದೇವಾನಾಂ ಮನೋತಾ ತಸ್ಮಿನ್ಹಿ ತೇಷಾಂ ಮನಾಂಸ್ಯೋತಾನ್ಯಗ್ನಿಃ ಸರ್ವಾ ಮನೋತಾ ಅಗ್ನೌ ಮನೋತಾಃ ಸಂಗಚ್ಛಂತೇ ತಸ್ಮಾದಾಗ್ನೇಯ್ಯಾರೇವ ಮನೋತಾಯೈ ಹವಿಷೋಽವದೀಯಮಾನಸ್ಯಾನ್ವಾಹ ॥

ಸೂಕ್ತಂ ವಿಧತ್ತೇ—ತ್ವಂ ಹ್ಯಗ್ನ ಇತ್ಯಾದಿಕಂ ತ್ರಯೋದಶರ್ಚಂ ಸೂಕ್ತಂ ತನ್ಮೈತ್ರಾವರುಣೋ ಬ್ರೂಯಾತ್ । ತದಾ ಹ ಬೌಧಾಯನಃ—'ಯದಾ ಜಾನಾತಿ ಮನೋತಾಯೈ ಹವಿಷೋಽವದೀಯಮಾನಸ್ಯಾನುಬ್ರೂಹೀತಿ ತದಾ ಮೈತ್ರಾವರುಣೋ ಮನೋತಾಮನ್ವಾಹ—ತ್ವಂ ಹ್ಯಗ್ನೆ ಪ್ರಥಮ ಇತಿ ॥ ಅತ್ರ ವೈಯಧಿಕರಣ್ಯಲಕ್ಷಣಂ ಚೋದ್ಯಮವತಾರಯತಿ । ಅತ್ರ ಹವಿರಗ್ನೀಷೋಮದೇವತ್ಯಂ ಸೂಕ್ತಗತಾ ಋಚಃ ಕೇವಲಾಗ್ನಿದೇವತಾಕಾಸ್ತತ್ರ ಯಸ್ಮಾತ್ಕಾರಣಾತ್ಪಶುರನ್ಯದೇವತ್ಯ ಉತ ದೇವತಾಂತರಯುಕ್ತಃ ಖಲು ಭವತಿ । ತಸ್ಮಾತ್ಕಾರಣಾದ್ವೈಯಧಿಕರಣ್ಯಮಿದಂ ತಚ್ಚಾಯುಕ್ತಮಿತಿ ಬ್ರಹ್ಮವಾದಿನಶ್ಚೋದ್ಯಮಾಹುಃ ॥ ತಸ್ಯ ಸಮಾಧಾನಂ ದರ್ಶಯತಿ—ವಾಗ್ಗೌರಗ್ನಿರಿತ್ಯೇತಾಸು ದೇವತಾಸು ದೇವಮನಃಸಮಾಸಕ್ತತ್ವಾತ್ತಿಸ್ರೋಽಪಿ ದೇವತಾ ಮನೋತೇತ್ಯುಚ್ಯಂತೇ ॥ ತಾಶ್ಚ ತಿಸ್ರಃ ಸರ್ವಾ ಮನೋತಾ ಅಗ್ನಿಸ್ವರೂಪಾ ಏವಾಗ್ನೌ ತಾಸಾಂ ಸಂಗತತ್ವಾತ್ ॥ ಸಂಗತಿಶ್ಚ ತದೀಯಹವಿಷೋಽಗ್ನ್ಯಾಧಾರಕತ್ವಾತ್ ॥ ತಸ್ಮಾದಗ್ನೇರ್ಮುಖ್ಯತ್ವಾದಗ್ನಿದೇವತಾಕಾ ಋಚೋಽನುಬ್ರೂಯಾತ್ ॥

ಅನಂತರ ಅಧ್ವರ್ಯುವು ಹೋತೃವನ್ನು ಉದ್ದೇಶಿಸಿ—ಪಶುಹೋಮಕ್ಕಾಗಿ ಮನೋತಾ ಎಂಬ ಸೂಕ್ತವನ್ನು ಪಠಿಸಬೇಕೆಂದು ಪ್ರೈಷಮಂತ್ರದಿಂದ ನಿರ್ದೇಶಿಸುನು. **ತ್ವಂ ಹ್ಯಗ್ನೇ ಪ್ರಥಮೋ ಮನೋತಾ** ಎಂಬ ಋಗ್ವೇದದ ೬ನೇ ಮಂಡಲದಲ್ಲಿ ಮೊದಲನೇ ಸೂಕ್ತವು. ಇದರಲ್ಲಿ ೧೩ ಋಕ್ಕುಗಳಿವೆ. ಇವುಗಳಲ್ಲಿ ೧೧ ಋಕ್ಕುಗಳನ್ನೆ ಉಪಯೋಗಿಸಿ ಪಶುವಿನ ಹನ್ನೊಂದು ಅಂಗಗಳನ್ನು ಹೋಮಮಾಡುವರು. ಈ ವಿಷಯ ವು—**ಏಕಾದಶಾವದಾನಾನ್ಯವದ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶ** ಎಂದು ತೈತ್ತಿರೀಯ ಸಂಹಿತೆಯಲ್ಲಿ (ತೈ.ಸಂ. ೬-೩-೧೦) ಹೇಳಿದೆ ಮತ್ತು ಹೋಮಮಾಡುವಾಗ ಪಶುವಿನ ಅಂಗಗಳಲ್ಲಿ ಮೊದಲು ಹೃದಯವನ್ನೂ ಅನಂತರ ಜಿಹ್ವೆ(ನಾಲಗೆ)ಯನ್ನೂ ಅನಂತರ ಉರಸ್ಸು ಎಂಬ ಭಾಗಗಳನ್ನು ಕ್ರಮವಾಗಿ ಹೋಮಮಾಡಬೇಕು. ಏಕೆಂದರೆ ಹೃದಯದಲ್ಲಿ (ಮನಸ್ಸಿನಲ್ಲಿ) ಉಂಟಾಗುವ ಭಾವನೆಯು ನಾಲಗೆಯ ಮೂಲಕ (ವಾಕ್ಯದ ಮೂಲಕ) ಇತರರಿಗೆ ತಿಳಿಸಲ್ಪಡುವುದು. ಆದ್ದರಿಂದ ಮೊದಲು ಹೃದಯವೆಂಬ ಅಂಗವನ್ನು ಅನಂತರ ಜಿಹ್ವೆಯನ್ನು ಅನಂತರ ಇತರ ಅಂಗಗಳನ್ನೂ ಹೋಮಮಾಡಬೇಕಾಗಿರುವುದು. **ಹೃದಯಸ್ಯಾಗ್ರೇಽವದ್ಯತ್ಯಥ ಜಿಹ್ವಾಯಾ ಅಥ ವಕ್ಷಸೋ ಯದ್ವೈ ಹೃದಯೇನಾಭಿಗಚ್ಛತಿ ತಜ್ಜಿಹ್ವಯಾ ವದತಿ ಯಜ್ಜಿಹ್ವಯಾ ವದತಿ ತದುರಸೋಽಧಿನಿರ್ವದತಿ** (ತೈ. ಸಂ. ೬-೩-೧೦) ಎಂದು ಶ್ರುತಿವಾಕ್ಯವು ಹೇಳುವುದು. ಪಶುವಿನ ಹನ್ನೊಂದು ಅಂಗಗಳನ್ನು ಹತ್ತು ಪ್ರಾಣಗಳು ಮತ್ತು ಆತ್ಮಾ ಇವುಗಳಿಗೆ ಹೋಲಿಸಲಾಗಿರುವುದು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಮುಖ್ಯವಾದ ಐದು ಪ್ರಾಣವಾಯುಗಳು, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬ ಐದು ಉಪಪ್ರಾಣಗಳು ಆತ್ಮಾ ಎಂಬುವುದೂ ಸೇರಿ ಹನ್ನೊಂದು ಪ್ರಾಣಗಳಾಗುವವು. ಈ ಸಂದರ್ಭದಲ್ಲಿ ಒಂದು ವಿಲಕ್ಷಣವಾದ ಕ್ರಿಯೆಯು ಉಂಟಾಗುವುದಕ್ಕೆ ಅವಕಾಶವಿರುವುದು. ಏನೆಂದರೆ ಈ ಪಶುಹೋಮಕ್ಕಾಗಿ ಉಪಯೋಗಿಸುವ ಮಂತ್ರವು ಕೇವಲ ಅಗ್ನಿದೇವತಾಕವಾಗಿಯೇ ಇದೆ. ಆದರೆ ಪಶುವಿನ ಅಂಗಗಳು ಅಗ್ನಿ ಮತ್ತು ಸೋಮದೇವತೆಗಳನ್ನು ಉದ್ದೇಶಿಸಿ ಹೋಮಮಾಡಲ್ಪಡುತ್ತವೆ. ಇದು ಸರಿಯೇ ಎಂದರೆ ಈ ಮನೋತಾ ದೇವತೆಗಳ ಸ್ವರೂಪವು ಮೂರು ವಿಧವಾಗಿದೆ. ಹೇಗೆಂದರೆ ಮನೋತಾದೇವತೆಗಳ ಮನಸ್ಸು **ವಾಗ್ವೈ ದೇವಾನಾಂ ಮನೋತ** (ಎಂದರೆ ವೇದಮಂತ್ರ) ದಲ್ಲಿ ನೆಲಸಿರುತ್ತವೆ. ಆದ್ದರಿಂದ ಆ ದೇವತೆಗಳನ್ನು ಸ್ತುತಿಸುವ ಮಂತ್ರ ಪಠನೆಯಿಂದ ಹೋಮಮಾಡಬೇಕು. ಎರಡನೆಯ ಕಾರಣವೆಂದರೆ **ಗಾವೋ ಹಿ ದೇವಾನಾಂ ಮನೋತಾ** ದೇವತೆಗಳ ಮನಸ್ಸು ಗೋವುಗಳಲ್ಲಿ ಎಂದರೆ ಗೋವುಗಳಿಂದ ಉತ್ಪನ್ನವಾದ ಹವಿಸ್ಸಿನಲ್ಲಿ (ಆಜ್ಯ) ಆಸಕ್ತವಾಗಿರುತ್ತವೆ. ಮೂರನೆಯ ಕಾರಣವೆಂದರೆ, ಹವಿಸ್ಸನ್ನು ದೇವತೆಗಳಿಗೆ ಸಮರ್ಪಿಸಬೇಕಾದರೆ ಅದನ್ನು ಅಗ್ನಿಯಲ್ಲಿ ಹೋಮಮಾಡುವುದರ ಮೂಲಕ ಸಮರ್ಪಿಸಬೇಕಾಗುವುದು. ಅಗ್ನಿಯೇ ಹವಿಸ್ಸನ್ನು ದೇವತೆಗಳಿಗೆ ಒಯ್ಯುವುದರಿಂದ ಅಗ್ನಿಯಲ್ಲಿಯೇ ದೇವತೆಗಳ ಮನಸ್ಸು ಲೀನವಾಗಿರುವುದು. ಈ ಮೂರು ಕಾರಣಗಳಿಗಾಗಿ ಅದರಲ್ಲಿಯೂ ಹವಿಸ್ಸು ಅಗ್ನಿಯ ಮೂಲಕ ದೇವತೆಗಳಿಗೆ ಸೇರಬೇಕಾಗಿರುವುದರಿಂದ ಈ ಮನೋತಾದೇವತೆಗಳಲ್ಲಿ ಅಗ್ನಿಯೇ ಮುಖ್ಯವು. **ಅಗ್ನಿರ್ವೈ ದೇವಾನಾಂ ಮನೋತಾ** ಆದ್ದರಿಂದ ಅಗ್ನಿಯನ್ನು ಪ್ರತಿಪಾದಿಸುವ ಮಂತ್ರಪಠನದಿಂದ ಇತರ ಮನೋತಾ ದೇವತೆಗಳನ್ನು ಪಠಿಸಿದಂತಾಗುವುದು, ಮನೋತಾ ದೇವತೆಗಳೆಲ್ಲರೂ ಅಗ್ನಿಸ್ವರೂಪರು ಎಂದಭಿಪ್ರಾಯವು.

ಅಗ್ನೀಷೋಮಾ ಹವಿಷಃ ಪ್ರಸ್ಥಿತಸ್ಯೇತಿ ಹವಿಷೋ ಯಜತಿ ಹವಿಷ
ಇತಿ ರೂಪಸಮೃದ್ಧಾ ಪ್ರಸ್ಥಿತಸ್ಯೇತಿ ರೂಪಸಮೃದ್ಧಾ ಸರ್ವಾಭಿ-
ಹಾರ್ಯಸ್ಯ ಸಮೃದ್ಧಿಭಿಃ ಸಮೃದ್ಧಂ ಹವ್ಯಂ ದೇವಾನಾಮಪ್ಯೇತಿ ಯ
ಏವಂ ವೇದ ॥

ಅಥ ಹೃದಯಾದ್ಯಂಗರೂಪಸ್ಯ ಪ್ರಧಾನಹವಿಷೋ ಯಾಜ್ಯಾಂ ವಿಧತ್ತೇ—ಅಗ್ನೀಷೋಮೇತ್ಯಾದಿಕಾಂ ಯಾಜ್ಯಾಂ ಪಠೇದಿತ್ಯರ್ಥಃ ॥ ಅಸ್ಯಾ ಯಾಜ್ಯಾಯಾ ಹವಿರಾನುಕೂಲ್ಯಂ ದರ್ಶಯತಿ—ಇದಂ ಹೃದಯಾದಿಕಂ ಹವಿಃ ಪ್ರಸ್ಥಿತಂ ವೇದ್ಯಾಮಾಸಾದಿತಂ ಯಾಜ್ಯಾಯಾಂ ಹವಿಷಃ ಪ್ರಸ್ಥಿತಸ್ಯೇತಿ ಪದದ್ವಯಂ ಶ್ರುತಂ ತಸ್ಮಾದಿಯಮನುಕೂಲಾ॥ವೇದನಂ ಪ್ರಶಂಸತಿ—ಹವಿಷೋ ಯಥಾ ಶಾಸ್ತ್ರಮವದಾನಪಾಕವಿಶೇಷಃ ಪರಸ್ಪರಂ ಹೃದಯಾದೀನಾಮಸಂಕೀರ್ಣತ್ವಮಿತ್ಯಾದಯೋ ಯಾಃ ಸಮೃದ್ಧಯೋಽಪೇಕ್ಷಿತಾಸ್ತಾಭಿಃ ಸಂಪೂರ್ಣಂ ಭೂತ್ವಾ ತದ್ಧವಿರ್ದೇವಾನ್ಪ್ರಾಪ್ನೋತಿ—

ಈಗ ಪಶುವಿನ ಹೃದಯಾದಿ ಅಂಗಗಳನ್ನು ಹೋಮಮಾಡುವಾಗ ಪಠಿಸಬೇಕಾದ ಯಾಜ್ಯಾಮಂತ್ರವನ್ನು ನಿರ್ದೇಶಿಸುವರು. ಅಗ್ನೀಷೋಮಾ ಹವಿಷಃ ಪ್ರಸ್ಥಿತಸ್ಯ (ಋ.ಸಂ. ೧-೯೩-೭) ಎಂಬ ಋಕ್ಕೇ ಆ ಯಾಜ್ಯಾಮಂತ್ರವು. ಯಜ್ಞದಲ್ಲಿ ಮಾಡಬೇಕಾದ ಪ್ರತಿಯೊಂದು ಕರ್ಮಮಾಡುವಾಗಲೂ ಅದನ್ನು ಮಂತ್ರಪೂರ್ವಕವಾಗಿಯೇ ಮಾಡಬೇಕು. ಆ ಮಂತ್ರವು ಆ ಕರ್ಮಕ್ಕೆ ಅನುಸಾರವಾಗಿರಬೇಕು ಎಂದರೆ ಕರ್ಮಸ್ವರೂಪವನ್ನು ವಿವರಿಸುವಂತಿರಬೇಕು. ಇಂತಹ ಮಂತ್ರಕ್ಕೆ ರೂಪಸಮೃದ್ಧಿ ಎಂದು ಹೆಸರು. ಮೇಲೆ ಹೇಳಿದ ಅಗ್ನೀಷೋಮಾ ಹವಿಷಃ ಪ್ರಸ್ಥಿತಸ್ಯ ಎಂಬ ಮಂತ್ರದಲ್ಲಿರುವ ಹವಿಷಃ ಎಂಬ ಶಬ್ದವು ಪಶುವಿನ ಹೃದಯಾದಿ ಅಂಗಗಳನ್ನು ಸೂಚಿಸುವುದು; ಪ್ರಸ್ಥಿತಸ್ಯ ಎಂಬ ಶಬ್ದವು ಆ ಹವಿಸ್ಸು ಯಜ್ಞವೇದಿಲ್ಲಿಯಲ್ಲಿ ಹೋಮಾರ್ಥವಾಗಿ ಸಿದ್ಧಪಡಿಸಿ ಇಡಲಾಗಿದೆ ಎಂಬುದನ್ನು ಸೂಚಿಸುವುದು; ಅಗ್ನೀಷೋಮಾ ಎಂಬ ಶಬ್ದವು ಹವಿಸ್ಸನ್ನು ಯಾವ ದೇವತೆಗಳನ್ನು ಉದ್ದೇಶಿಸಿ ಅರ್ಪಿಸಲ್ಪಡುವುದೋ ಆ ದೇವತೆಗಳ ಹೆಸರನ್ನು ಸೂಚಿಸುವುದಾಗಿರುವುದು. ಆದ್ದರಿಂದ ಹವಿಷಃ, ಪ್ರಸ್ಥಿತಸ್ಯ ಇತ್ಯಾದಿ ಶಬ್ದಗಳು ಯಜ್ಞದ ಹೋಮಕರ್ಮವನ್ನು ವಿವರಿಸುವುದಾದ್ದರಿಂದ ರೂಪಸಮೃದ್ಧಾ ಎಂದು ಹೇಳಲ್ಪಡುವುದು. ಇಂತಹ ರೂಪಸಮೃದ್ಧಿ ಶಬ್ದಗಳಿಂದ ಕೂಡಿದ ಮಂತ್ರವನ್ನು ಪಠಿಸಿ ಹೋಮಮಾಡುವುದರಿಂದ ನಿರ್ದಿಷ್ಟವಾದ ಹವಿಸ್ಸು ದೇವತೆಗಳನ್ನು ಸೇರಿ ಯಜ್ಞಕರ್ಮವನ್ನು ಪೂರ್ಣಗೊಳಿಸುವುದು. ಇದನ್ನು ತಿಳಿದು ಹೋಮಮಾಡುವವನು ಯಜ್ಞದ ಸಂಪೂರ್ಣ ಫಲವನ್ನು ಪಡೆಯುವನು. ಇಲ್ಲಿ ಹವಿಸ್ಸು ಎಂದರೆ ದೇವತೆಗಳನ್ನುದ್ದೇಶಿಸಿ ಹೋಮಮಾಡುವುದಕ್ಕಾಗಿ ಸಿದ್ಧಪಡಿಸಲ್ಪಟ್ಟ ದ್ರವ್ಯವು ಎಂದರೆ ಆಜ್ಯ (ತುಪ್ಪ) ಪಶುವಿನ ಹೃದಯಾದಿ ಅಂಗ ಇತ್ಯಾದಿ. ಅವದಾನವೆಂದರೆ ಒಂದಾವರ್ತಿ ಹೋಮಮಾಡುವುದಕ್ಕೆ ಬೇಕಾಗುವ ಹವಿಸ್ಸುಮಾತ್ರ. ಪಶುವಿನ ಹೃದಯಾದಿ ಅಂಗಗಳನ್ನು ಒಂದೇ ಆವರ್ತಿ ಹೋಮಮಾಡುವುದಿಲ್ಲ. ಒಂದೊಂದು ಅಂಗವನ್ನು ಒಂದೊಂದಾವರ್ತಿ ಪ್ರತ್ಯೇಕವಾದ ಮಂತ್ರಪಠನೆಯ ಮೂಲಕ ಹೋಮಮಾಡಬೇಕು. ಇವುಗಳಿಗೆ ಏಕಾದಶಾವದಾನ ಎಂದು ಹೆಸರು.

ವನಸ್ಪತಿಂ ಯಜತಿ ಪ್ರಾಣೋ ವೈ ವನಸ್ಪತಿಃ ಜೀವಂ ಹಾಸ್ಯ ಹವ್ಯಂ ದೇವಾನಸ್ಯೇತಿ ಯತ್ರೈವಂ ವಿದ್ವಾನ್ವನಸ್ಪತಿಂ ಯಜತಿ ।

ಅಥ ವನಸ್ಪತಿಯಾಗಂ ವಿಧತ್ತೇ—ವನಸ್ಪತಿರ್ವೃಕ್ಷಃ ತಥಾವಿಧಶರೀರಯುಕ್ತಾಂ ದೇವತಾಂ ಯಜೇತ್ ॥ ತತ್ಪ್ರಕಾರ ಆಪಸ್ತಂಬೇನ ದರ್ಶಿತಃ । 'ಜುಹ್ವಾಮುಪಸ್ತೀರ್ಯ ಸಕೃತ್ಪೃಷದಾಜ್ಯಸ್ಯೋಪಹೃತ್ಯ ದ್ವಿರಭಿಘಾರ್ಯ ವನಸ್ಪತಯೇಽನುಬ್ರೂಹಿ ವನಸ್ಪತಯೇ ಪ್ರೇಷ್ಯೇತಿ ಸಂಪ್ರೇಷ್ಯ ವಷಟ್ಕೃತೇ ಜುಹೋತಿ' ಇತಿ ॥ ಅತ್ರ ವನಸ್ಪತೇರ್ವೃಕ್ಷಶರೀರಸ್ಯ ಜೀವಾವಿಷ್ಟತ್ವಾತ್ಪ್ರಾಣರೂಪತ್ವಂ ॥ ಯಷ್ಟುರ್ವೇದನಂ ಪ್ರಶಂಸತಿ । ವಿದುಷೋ ಯಷ್ಟುರ್ಹವಿರೇವಂ ಪ್ರಾಣೋಪೇತಂ ಚೇತನಂ ಭೂತ್ವಾ ತದ್ಧವಿರ್ದೇವಾನಾಪ್ನೋತಿ ॥

ಪಶುಹೋಮಾನಂತರ ವನಸ್ಪತಿಹೋಮವನ್ನು ಮಾಡಬೇಕು. ಇಲ್ಲಿ ವನಸ್ಪತಿಯೆಂದರೆ ಪಶುವನ್ನು ಕಟ್ಟಿದ್ದ ಮರದ ಯೂಪಸ್ತಂಭವು. ಇದು ವೃಕ್ಷದಿಂದ ನಿರ್ಮಿತವಾದದ್ದರಿಂದ ವನಸ್ಪತಿಯೆಂದು ಕರೆಯುವ ರೂಢಿ ಇರುವುದು. ಅಧ್ವರ್ಯುವು ಹೋತೃವನ್ನುದ್ದೇಶಿಸಿ **ವನಸ್ಪತಯೇಽನುಬ್ರೂಹಿ** ಎಂದು ಪ್ರೈಷಮಂತ್ರದಿಂದ ನಿರ್ದೇಶಿಸಲ್ಪಟ್ಟಮೇಲೆ ಆ ಮಂತ್ರವನ್ನು ಪಠಿಸುವನು. ಆಪಸ್ತಂಬಋಷಿಯು ಈ ವಿಷಯದಲ್ಲಿ—**ಜುಹ್ವಾಮುಪಸ್ತೀರ್ಯ ಸಕೃತ್ ಪೃಷದಾಜಸ್ಯೋಪಹೃತ್ಯ ದ್ವಿರಭಿಘಾರ್ಯ ವನಸ್ಪತಯೇಽನುಬ್ರೂಹಿ ವನಸ್ಪತಯೇ ಪ್ರೇಷ್ಯೇತಿ ಸಂಪ್ರೇಷೌ ವಷಟ್‌ಕೃತೇ ಜುಹೋತಿ** (ಆಪ.ಶ್ರೌ. ೭-೨೫-೧೫) ಎಂದು ಹೇಳಿರುವರು. ಎಂದರೆ, ಪ್ರೈಷಮಂತ್ರದಿಂದ ಹೋತೃವನ್ನುದ್ದೇಶಿಸಿ **ವನಸ್ಪತಯೇಽನು-ಬ್ರೂಹಿ** ವನಸ್ಪತಿದೇವತೆಯನ್ನುದ್ದೇಶಿಸಿ ಹೋಮಾರ್ಥವಾಗಿ ನಿರ್ದಿಷ್ಟಮಂತ್ರವನ್ನು ಪಠಿಸು ಎಂದು ಹೇಳಿದಕೂಡಲೇ ಹೋತೃವು ಈ ಮಂತ್ರವನ್ನು ಪಠಿಸುವನು—**ದೇವೇಭ್ಯೋ ವನಸ್ಪತ ಹವೀಂಷಿ ಹಿರಣ್ಯಪರ್ಣ ಪ್ರದಿವಸ್ತೇ ಅರ್ಥಂ । ಪ್ರದಕ್ಷಿ-ಣಿದ್ರಶನಯಾ ನಿಯೂಯ ಋತಸ್ಯ ವಕ್ಷಿ ಪಥಿಭೀ ರಜಿಷ್ಠೈಃ ॥** ಇದು ಅನುವಾಕ್ಯಾಮಂತ್ರವು. ಅನಂತರ ಹೋತೃವು—**ಯೇ ಯಜಾಮಹೇ । ವನಸ್ಪತೆ ರಶನಯಾ ನಿಯೂಯ ದೇವಾನಾಂ ಪಾಥ ಉಪವಕ್ಷಿ ವಿದ್ವಾನ್ । ವಹ ದೇವತ್ರಾ ದಿಧಿಷೋ ಹವೀಂಷಿ ಪ್ರ ಚ ದಾತಾರಮಮೃತೇಷು ವೋಚಃ ವೌಷಟ್** ಎಂಬುದು ಯಾಜ್ಯಾಮಂತ್ರವು.

ಇದರ ಮುಖ್ಯಾಭಿಪ್ರಾಯವೇನೆಂದರೆ—ಅಧ್ವರ್ಯುವು ವಪಾಹೋಮಾನಂತರ (ವಪಾ ಎಂದರೆ ಪಶುವಿನ ಅಂಗಗಳನ್ನು ಬೇಯಿಸಿದ ಜಲವು) ವನಸ್ಪತಿ ಹೋಮಮಾಡುವುದಕ್ಕಾಗಿ ಜುಹೂ ಎಂಬ ದೊಡ್ಡ ಮರದ ಸೌಟಿನಲ್ಲಿ ಒಂದು ಮರದ ಅಥವಾ ಗಿಡದ ತುಂಡನ್ನು ಇರಿಸಿ ಅದಕ್ಕೆ ಪೃಷದಾಜ್ಯದಿಂದ (ಪೃಷದಾಜ್ಯವೆಂದರೆ ಮೊಸರಿನಿಂದ ಮಿಶ್ರವಾದ ತುಪ್ಪ) ಸವರಿ ತುಪ್ಪದಿಂದ ಎರಡಾವರ್ತಿ ಚುಮುಕಿಸಿ ಅಥವಾ ಚಳೆದು ಮೇಲೆ ಹೇಳಿದ ಮಂತ್ರಪಠನಾನಂತರ ವಷಟ್ಕಾರಪೂರ್ವಕವಾಗಿ ಹೋಮಮಾಡು ವನು. ವನಸ್ಪತಿ ಎಂದರೆ ವೃಕ್ಷಕ್ಕೆ ಪ್ರಾಣವಿರುವುದರಿಂದ ವನಸ್ಪತಿಯನ್ನುದ್ದೇಶಿಸಿ ಹೋಮಮಾಡುವ ಹವಿಸ್ಸು ಸಚೇತನ ಎಂದರೆ ಪ್ರಾಣಯುಕ್ತವಾಗಿರುವುದು. ಇದನ್ನು ತಿಳಿದು ವಿದ್ವಾಂಸನಾದ ಋತ್ವಿಜನು ಹೋಮಮಾಡಿದರೆ ಆ ಹವಿಸ್ಸು ದೇವತೆಗಳಿಗೆ ಸೇರಿ ಅವರಿಗೆ ಚೇತನವನ್ನುಂಟುಮಾಡುವುದು.

**ಸ್ವಿಷ್ಟಕೃತಂ ಯಜತಿ ಪ್ರತಿಷ್ಠಾ ವೈ ಸ್ವಿಷ್ಟಕೃತ್ಪ್ರತಿಷ್ಠಾಯಾಮೇವ ತದಜ್ಞಮಂತತಃ ಪ್ರತಿಷ್ಠಾಪಯತಿ ।**

ಅಥ ಸ್ವಿಷ್ಟಕೃದ್ಯಾಗಂ ವಿಧತ್ತೇ—ವೈಕಲ್ಯಪರಿಹಾರೇಣ ಸ್ವಿಷ್ಟಕೃತ್ತ್ವಾಪಾದನಾ-ತ್ಸ್ವಿಷ್ಟಕೃತಃ ಪ್ರತಿಷ್ಠಾತ್ವಂ । ತದ್ಯಾಗಾನುಷ್ಠಾನೇ ನೇಮಂ ಯಜ್ಞಮಂತತಃ ಸಮಾಪ್ತ್ಯವಸರೇ ಪ್ರತಿಷ್ಠಾಯಾಂ ಸ್ಥಾಪಯತಿ ॥

ಅನಂತರ ಅಧ್ವರ್ಯುವು ಸ್ವಿಷ್ಟಕೃತ್ ಎಂಬ ಹೋಮವನ್ನು ನೆರವೇರಿಸುವನು. ಈ ಸ್ವಿಷ್ಟಕೃದ್ಯಾಗವು ಹೋಮ ಸಮಾಪ್ತಿಯೆಂದು ಹೇಳಲ್ಪಡುವುದು. ಮತ್ತು ಈ ಸ್ವಿಷ್ಟಕೃದ್ಧೋಮದ ಅನುವಾಕ್ಯಾಮಂತ್ರವು **ಪಿಪ್ರೀಹಿ ದೇವಾನುಶತೋ** (ಋ. ಸಂ. ೧೦-೧-೩ ಆಶ್ವ. ಶ್ರೌ. ಸೂ. ೧-೬) ಎಂಬ ಋಕ್ಕು ಮತ್ತು **ಅಗ್ನೇ ಯದದ್ಯ** (ಋ.ಸಂ. ೪-೧೫-೧೪) ಎಂಬ ಋಕ್ಕು ಯಾಜ್ಯಾಮಂತ್ರವು. ಆದರೆ ಈ ಸ್ವಿಷ್ಟಕೃದ್ಧೋಮದಲ್ಲಿ ಈ ಪಶುಹೋಮದ ದೇವತೆಗಳೆಲ್ಲರನ್ನೂ ಎಂದರೆ **ಅಗ್ನಿ, ಸೋಮ, ಅಗ್ನೀಷೋಮ,** ಇಂದ್ರಾಗ್ನೀ **ಅಶ್ವಿನೌ, ವನಸ್ಪತಿ, ದೇವಾ** ಆಜ್ಯಪಾ ಎಂಬ ದೇವತೆಗಳ ಹೆಸರನ್ನು ಪಠಿಸಬೇಕಾಗಿ ರುವುದು. ದೇವಾ ಆಜ್ಯಪಾ ಎಂದರೆ ಆಜ್ಯ (ತುಪ್ಪ)ವನ್ನು ಪಾನಮಾಡುವ ಅಥವಾ ಆಜ್ಯಹೋಮದಿಂದ ತೃಪ್ತಿಹೊಂದುವ

ದೇವತೆಗಳೆಂದರ್ಥ. ಆದ್ದರಿಂದಲೂ ಈ ದೇವತೆಗಳ ಹೆಸರುಗಳು ಋಗ್ವೇದದ ಯಾಜ್ಯಾಮಂತ್ರದಲ್ಲಿ ಒಂದೆಡೆ ಇಲ್ಲದಿರುವುದರಿಂದಲೂ ಇವರುಗಳ ಹೆಸರುಗಳನ್ನು ಸೂಚಿಸುವ ಪ್ರತ್ಯೇಕ ಮಂತ್ರಗಳನ್ನು ಪಠಿಸುವುದು ರೂಢಿಯಲ್ಲಿದೆ. ಈ ಮಂತ್ರಗಳು ಆಶ್ವಲಾಯನ ಶ್ರೌತಸೂತ್ರದಲ್ಲಿಯೂ, ಯಜುರ್ವೇದದಲ್ಲಿಯೂ ಉಕ್ತವಾಗಿದೆ. ಇವುಗಳನ್ನು ಇಲ್ಲಿ ಕೊಡಲಾಗಿದೆ—

ಹೋತಾ ಯಕ್ಷದಗ್ನಿಂ ಸ್ವಿಷ್ಟಕೃತಮಯಾಳಗ್ನಿರಗ್ನೇರಾಜ್ಯಸ್ಯ ಹವಿಷಃ ಪ್ರಿಯಾಧಾಮಾನ್ಯಯಾಟ್ಸೋಮಸ್ಯಾಜ್ಯಸ್ಯ ಹವಿಷಃ ಪ್ರಿಯಾ ಧಾಮಾನ್ಯಯಾಳಗ್ನೀಷೋಮಯೋಶ್ಛಾಗಸ್ಯ ಹವಿಷಃ ಪ್ರಿಯಾ ಧಾಮಾನ್ಯಯಾಳಿಂದ್ರಾಗ್ನ್ಯೋಶ್ಛಾಗಸ್ಯ ಹವಿಷಃ ಪ್ರಿಯಾ ಧಾಮಾನ್ಯಯಾಳಶ್ವಿನೋಶ್ಛಾಗಸ್ಯ ಹವಿಷಃ ಪ್ರಿಯಾ ಧಾಮಾನ್ಯಯಾಡ್ವನಸ್ಪತೇಃ ಪ್ರಿಯಾ ಪಾಥಾಂಸ್ಯಯಾಡ್ದೇವಾನಾಮಾಜ್ಯಪಾನಾಂ ಪ್ರಿಯಾ ಧಾಮಾನಿ ಯಕ್ಷದಗ್ನೇರ್ಹೋತುಃ ಪ್ರಿಯಾ ಧಾಮಾನಿ ಯಕ್ಷತ್ಸ್ವಂ ಮಹಿಮಾನಮಾಯಜತಾಮೇಜ್ಯಾ ಇಷಃ ಕೃಣೋತು ಸೋ ಅಧ್ವರಾ ಜಾತವೇದಾ ಜುಷತಾಂ ಹವಿರ್ಹೋತರ್ಯಜ. (ಆ. ಶ್ರೌ. ಸೂ. ೧-೬)

ಪಿಪ್ರೀಹಿ ದೇವಾಗ್‌ಂ ಉಶತೋ ಯವಿಷ್ಠ । ವಿದ್ವಾಗ್‌ಂ ಋತೂ ಗ್‌ಂ ಋತುಪತೆ ಯಜೇಹ । ಯೇ ದೈವ್ಯಾ ಋತ್ವಿಜಸ್ತೇಭಿರಗ್ನೇ । ತ್ವಗ್‌ಂ ಹೋತೄಣಾಮಸ್ಯಾ ಯಜಿಷ್ಠಃ । ಅಗ್ನಿಗ್‌ಂ ಸ್ವಿಷ್ಟಕೃತಂ । ಅಯಾಡಗ್ನಿರಗ್ನೇಃ ಪ್ರಿಯಾ ಧಾಮಾನಿ । ಅಯಾಟ್ ಸೋಮಸ್ಯ ಪ್ರಿಯಾ ಧಾಮಾನಿ । ಅಯಾಡಗ್ನೇಃ ಪ್ರಿಯಾ ಧಾಮಾನಿ । ಅಯಾಟ್ ಪ್ರಜಾಪತೇಃ ಪ್ರಿಯಾ ಧಾಮಾನಿ । ಅಯಾಡಗ್ನೀಷೋಮಯೋಃ ಪ್ರಿಯಾ ಧಾಮಾನಿ । ಅಯಾಡಿಂದ್ರಾಗ್ನಿಯೋಃ ಪ್ರಿಯಾ ಧಾಮಾನಿ । ಅಯಾಡಿಂದ್ರಸ್ಯ ಪ್ರಿಯಾ ಧಾಮಾನಿ । ಅಯಾಣ್ಮಹೇಂದ್ರಸ್ಯ ಪ್ರಿಯಾ ಧಾಮಾನಿ । ಅಯಾಡ್ದೇವಾನಾಮಾಜ್ಯಪಾನಾಂ ಪ್ರಿಯಾ ಧಾಮಾನಿ । ಯಕ್ಷದಗ್ನೇರ್ಹೋತುಃ ಪ್ರಿಯಾ ಧಾಮಾನಿ । ಯಕ್ಷತ್ಸ್ವಂ ಮಹಿಮಾನಂ । ಆಯಜತಾಮೇಜ್ಯಾ ಇಷಃ । ಕೃಣೋತು ಸೋ ಅಧ್ವರಾ ಜಾತವೇದಾಃ । ಜುಷತಾಗ್‌ಂ ಹವಿಃ ॥ ಅಗ್ನೇ ಯದದ್ಯ ವಿಶೋ ಅಧ್ವರಸ್ಯ ಹೋತಃ । ಪಾವಕ ಶೋಚೇ ವೇಷ್ಟ್ವಗ್‌ಂ ಹಿ ಯಜ್ವಾ । ಋತಾ ಯಜಾಸಿ ಮಹಿನಾ ವಿ ಯದ್ಭೂಃ । ಹವ್ಯಾ ವಹ ಯವಿಷ್ಠ ಯಾ ತೇ ಅದ್ಯ ॥ (ತೈ. ಬ್ರಾ. ೩-೫-೧೦-೫,೬)

ಮೇಲಿನ ಎರಡು ಮಂತ್ರಗಳಲ್ಲಿ ಮೊದಲನೆಯದು ಆಶ್ವಲಾಯನಗೃಹ್ಯ ಸೂತ್ರದಲ್ಲಿ ಹೇಳಿದೆ. ಎರಡನೆಯದು ಯಜುರ್ವೇದ ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿದೆ. ಈ ಎರಡನೆಯ ಮಂತ್ರದಲ್ಲಿ ಮೊದಲಿನ ನಾಲ್ಕು ವಾಕ್ಯಗಳು ಅನುವಾಕ್ಯಾಮಂತ್ರವು. ಕೊನೆಯ ನಾಲ್ಕು ವಾಕ್ಯಗಳು ಯಾಜ್ಯಾಮಂತ್ರವು. ಯಾಜ್ಯಾಮಂತ್ರವನ್ನು ಪಠಿಸುವಾಗ ಮೊದಲು **ಯೇ ಯಜಾಮಹೇ** ಎಂಬ ಶಬ್ದಗಳನ್ನು ಪ್ರಾರಂಭದಲ್ಲಿ ಪಠಿಸಿ ಕೊನೆಯಲ್ಲಿ **ವೌಷಟ್** ಎಂಬ ವಷಟ್ಕಾರಶಬ್ದವನ್ನು ಉಚ್ಚರಿಸಿ ಹೋಮಮಾಡಬೇಕು. ಇದು ಸ್ವಿಷ್ಟಕೃನ್ಮಂತ್ರಹೋಮದ ಕ್ರಮವು.

**ಇಳಾಮುಪಹ್ವಯತೇ ಪಶವೋ ವಾ ಇಳಾ ಪಶೂನೇವ ತದುಪಹ್ವಯತೇ ಪಶೂನ್ಯಜಮಾನೇ ದಧಾತಿ ದಧಾತಿ ॥**

ಇಳೋಪಹ್ವಾನಂ ವಿಧತ್ತೇ— ಪೂರ್ವವದ್ವ್ಯಾಖ್ಯೇಯಂ । ಪುರೋಡಾಶೇಡಾ ಪೂರ್ವಖಂಡೇಽಭಿಹಿತೇಹ ತು ಪಶ್ವಿಡೇತಿ ವಿಶೇಷಃ ॥ ಅತ್ರ ಸರ್ವತ್ರ ಯದ್ಯಚ್ಚೋದಕತಃ ಪ್ರಾಪ್ತಂ ತಸ್ಯ ಸರ್ವಸ್ಯ ವಿಧಿಮನೂದ್ಯ ಪ್ರಶಂಸಾ ಕೃತೇತಿ ದ್ರಷ್ಟವ್ಯಂ । ದಧಾತೀತಿ ಪದಾಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಅತ್ರ ಮೀಮಾಂಸಾ । ದಶಮಾಧ್ಯಾಯಸ್ಯ ತೃತೀಯಪಾದೇ ಚಿಂತಿತಂ ।
“ ಮನೋತಾಮಂತ್ರ ಊಹೋಽಸ್ತಿ ವಾಯವ್ಯೇ ನಾಸ್ತಿ ವಾಽಸ್ತ್ಯಸೌ ॥
ಆಗ್ನೇಯ್ಯೇವೇತಿ ವಚನಂ ಪ್ರಕೃತೌ ಸಾರ್ಥಕಂ ಯತಃ ॥
ಅಗ್ನೀಷೋಮಾವಗ್ನಿನೈವ ಲಕ್ಷ್ಯೇತಾಂ ವಚನಂ ವಿನಾ ॥
ಅನರ್ಥಕಾತ್ತತ್ರ ವಾಕ್ಯಾದ್ವಿಕೃತಾವೂಹವಾರಣಂ ” ॥

ತ್ವಂ ಹ್ಯಗ್ನೇ ಪ್ರಥಮೋ ಮನೋತಾ [೬. ೧. ೧.] ಇತ್ಯಯಂ ಮನೋತಾಮಂತ್ರೋಽಗ್ನೀಷೋಮೀಯಪಶೌ ಪಠಿತಃ । ವಾಯವ್ಯಪಶಾವಯಂ ಚೋದಕಪ್ರಾಪ್ತಃ । ತತ್ರ ತ್ವಂ ಹಿ ವಾಯೋ ಪ್ರಥಮ ಇತ್ಯೇವಮೂಹೋಽಸ್ತಿ । ಯತ್ತು ವಚನಂ ಯದ್ಯಪ್ಯನ್ಯದೇವತ್ಯಃ ಪಶುರಾಗ್ನೇಯ್ಯೇವ ಮನೋತಾ ಕಾರ್ಯೇತಿ ತತ್ಪ್ರಕೃತೌ ಪಠಿತಂ ತತ್ರೈವ ವಚನಂ ಸಾರ್ಥಕಂ ॥ ದ್ವಿದೇವತ್ಯಪಶಾವೇಕವಚನಮಂತ್ರಸ್ಯ ಪ್ರಕರಣಪಠಿತಸ್ಯಾಪ್ಯಯೋಗ್ಯತ್ವಶಂಕಯಾ ಪುನರ್ವಿಧಾನಾರ್ಥತ್ವಾತ್ ॥ ನೈವಂ ॥ ಛತ್ರಿಣೋ ಗಚ್ಛಂತೀತ್ಯಾದಿವನ್ಮಂತ್ರಗತಸ್ಯಾಗ್ನಿಶಬ್ದಸ್ಯಾಗ್ನೀಷೋಮಲಕ್ಷಕತ್ವೇನಾಯೋಗ್ಯತ್ವಶಂಕಾಯಾ ಅನುದಯಾತ್ ॥ ಅತಃ ಪ್ರಕೃತಾವನರ್ಥಕಂ ತದ್ವಾಕ್ಯಂ ವಿಕೃತಾವೂಹ ನಿವಾರಣೇನ ಚರಿತಾರ್ಥಂ ಭವತಿ । ತಸ್ಮಾದೂಹೋ ನಾಸ್ತಿ ॥

ಸ್ವಿಷ್ಟಕೃದ್ಧೋಮಾನಂತರ ಇಳೋಪಾಹ್ವಾನವನ್ನು ಮಾಡಬೇಕು. ಇಲ್ಲಿಗೆ ಪಶುಹೋಮವು ಸಮಾಪ್ತಿಯಾದಂತಾಗುವುದು. ಆಗ ಹೋಮಮಾಡಿ ಉಳಿದ ಹೋಮಶೇಷವನ್ನು ಎಂದರೆ ಪಶುವಿನ ವಪಾ ಮುಂತಾದ ಭಾಗಗಳನ್ನು ಯಜ್ಞದಲ್ಲಿ ಪಾತ್ರವಹಿಸುವ ಋತ್ವಿಕ್ಕುಗಳೂ ಯಜಮಾನನೂ ಭಕ್ಷಿಸುವರು. ಭಕ್ಷಣಮಾಡುವುದಕ್ಕೆ ಪೂರ್ವದಲ್ಲಿ ಇಳಾ ಎಂಬ ಆಹಾರಕ್ಕೆ ಅಭಿಮಾನಿಯಾದ ದೇವತೆಯನ್ನು ಪ್ರಾರ್ಥಿಸಿ ಆಹ್ವಾನಮಾಡಿ ಅನಂತರ ಭಕ್ಷಿಸಬೇಕು. ಇದನ್ನೇ ಇಳಾ ಆಹ್ವಾನವೆಂದು ಹೇಳಿರುವರು. ಇಳಾ ಎಂದರೆ ಆಹಾರದ ಅಥವಾ ಹೋಮಶೇಷವನ್ನು ತುಂಬಿರುವ ತಟ್ಟೆಯನ್ನು ಅಧ್ವರ್ಯುವು ಕೈಯಲ್ಲಿ ಹಿಡಿದು ಕೆಳಗಿನ ಮಂತ್ರಗಳನ್ನು ಪಠಿಸಿ ಇಳೋಪಾಹ್ವಾನಮಾಡಿ ಅನಂತರ ಹೋಮಶೇಷವನ್ನು ಭಕ್ಷಿಸಬೇಕು. ಪ್ರತಿಯೊಂದು ಇಷ್ಟಿಯ ಕೊನೆಯಲ್ಲಿಯೂ ಹೋಮಶೇಷವನ್ನು ಭಕ್ಷಿಸುವ ಸಂದರ್ಭದಲ್ಲಿ ಈ ಕ್ರಮವನ್ನೇ ಅನುಸರಿಸಬೇಕು. ಹಿಂದಿನ ಖಂಡದ ಕೊನೆಯಲ್ಲಿ ಪುರೋಡಾಶಭಕ್ಷಣಮಾಡುವಾಗ ಈ ಕ್ರಮವನ್ನೇ ಹೇಳಿದೆ. (ಪುಟ........) ಇಡೋಪಾಹ್ವಾನದ ಮಂತ್ರಗಳು ಈರೀತಿ ಇವೆ—

ಇಡೋಪಹೂತಾ ಸಹ ದಿವಾ...........(ಆಶ್ವ. ಶ್ರೌ. ಸೂ. ೧-೭) ಇಡಾಮುಪಹ್ವಯತೇ ಪಶವೋ ವಾ ಇಡಾ ಪಶೂನೇವೋಪಹ್ವಯತೇ ಚತುರುಪಹ್ವಯತೇ ಚತುಷ್ಪಾದೋ ಹಿ ಪಶವಃ........ಇತ್ಯಾದಿ ॥ (ತೈ. ಸಂ. ೨-೬-೭-೩)

ಉಪಹೂತಗ್ಂ ರಥಂತರಗ್ಂ ಸಹ ಪೃಥಿವ್ಯಾ । ಉಪ ಮಾ ರಥಂತರಗ್ಂ ಸಹ ಪೃಥಿವ್ಯಾ ಹ್ವಯತಾಂ । ಉಪಹೂತಂ ವಾಮದೇವ್ಯಗ್ಂ ಸಹಾಂತರಿಕ್ಷೇಣ । ಉಪ ಮಾ ವಾಮ-

ದೇವ್ಯಂ ಸಹಾಂತರಿಕ್ಷೇಣ ಹ್ವಯತಾಂ । ಉಪಹೂತಂ ಬೃಹತ್ಸಹ ದಿವಾ । ಉಪ ಮಾ ಬೃಹತ್ಸಹ ದಿವಾ ಹ್ವಯತಾಂ । ಉಪಹೂತಾಸ್ಸಪ್ತ ಹೋತ್ರಾಃ । ಉಪ ಮಾ ಸಪ್ತ ಹೋತ್ರಾ ಹ್ವಯಂತಾಂ । ಉಪಹೂತಾ ಧೇನುಸ್ಸಹ ಋಷಭಾ । ಉಪ ಮಾ ಧೇನುಸ್ಸಹಋಷಭಾ ಹ್ವಯಂತಾಂ । ಉಪಹೂತೋ ಭಕ್ಷಸ್ಸಖಾ । ಉಪ ಮಾ ಭಕ್ಷಸ್ಸಖಾ ಹ್ವಯಂತಾಂ । ಉಪಹೂತಾಂ ೪ ಹೋ । ಇಡೋಪಹೂತ । ಉಪಹೂತೇಡಾ । ಉಪೋ ಅಸ್ಮಾಗ್ಂ ಇಡಾ ಹ್ವಯತಾಂ ಇಡೋಪಹೂತಾ । ಉಪಹೂತೇಡಾ ಮಾನವೀ ಘೃತಪದೀ ಮೈತ್ರಾವರುಣೀ । ಬ್ರಹ್ಮ ದೇವಕೃತಮುಪಹೂತಂ । ದೈವ್ಯಾ ಅಧ್ವರ್ಯವ ಉಪಹೂತಾಃ । ಉಪಹೂತಾ ಮನುಷ್ಯಾಃ । ಯ ಇಮಂ ಯಜ್ಞಮವಾನ್ । ಯೇ ಯಜ್ಞಪತಿಂ ವರ್ಧಾನ್ । ಉಪಹೂತೇ ದ್ಯಾವಾಪೃಥಿವೀ । ಪೂರ್ವಜೇ ಋತಾವರೀ । ದೇವೀ ದೇವಪುತ್ರೇ । ಉಪಹೂತೋಽಯಂ ಯಜಮಾನಃ । ಉತ್ತರಸ್ಯಾಂ ದೇವಯಜ್ಯಾಯಾಮುಪಹೂತಃ । ಭೂಯಸಿ ಹವಿಷ್ಕರಣ ಉಪಹೂತಃ । ದಿವ್ಯೇ ಧಾಮನ್ನುಪಹೂತಃ । ಇದಂ ಮೇ ದೇವಾ ಹವಿರ್ಜುಷಂತಾಮಿತಿ ತಸ್ಮಿನ್ನುಪಹೂತಃ । ವಿಶ್ವಮಸ್ಯ ಪ್ರಿಯಮುಪಹೂತಂ । ವಿಶ್ವಸ್ಯ ಪ್ರಿಯಸ್ಯೋಪಹೂತಸ್ಯೋಪಹೂತಃ ॥

(ತೈ. ಬ್ರಾ. ೬-೫-೮-೧,೨,೩)

ಈರೀತಿ ಇಡಾ ಎಂಬ ದೇವತೆಯನ್ನು ಪ್ರಾರ್ಥಿಸಿ ಆಹ್ವಾನಮಾಡಿ ಹೋಮಶೇಷವನ್ನು ಭಕ್ಷಿಸಿದ ಅನಂತರ ಪಶುಹೋಮವು ಪರಿಸಮಾಪ್ತಿಯಾಗುವುದು. ಈ ಖಂಡದಲ್ಲಿ ಹೇಳಿರುವ ಮನೋತಾದೇವತೆಗಳ ವಿಷಯದಲ್ಲಿ ಮೀಮಾಂಸಾಸೂತ್ರವನ್ನು ವಿಮರ್ಶೆಮಾಡುವರು.



*English Translation*

**(The offering of parts of the body of the animal, The Manota)**

The Adhvaryu now says (to the Hotar): recite the verses appropriate to the offering of the parts of the sacrificial animal which are cut off for the Manota. He then repeats the hymn: Thou, O Agni, art the first Manota (6, 1) (This hymn being exclusively devoted to Agni), and the sacrificial animal belonging to another deity (besides Agni, viz. Soma), they ask: Why does he recite verses (exclusively) addressed to Agni, when the sacrificial parts (of the animal) intended for the Manota are being cut off? (The answer is:) There are three Manotas among the gods, in which all their thoughts are plotted and women, viz. Vach (speech) Gaus (the cow), and Agni, in every one of whom the thoughts of the gods are plotted and woven; but Agni is the complete Manota (the centre for all thoughts); for in him all Manotas are gathered. From this reason the

priest repeats verses as Anuvakyas addressed to Agni on that occasion. By the verse: "O Agni, Soma, eat the food which is waiting for you &c. (1, 93, 7)," he makes the Yajya to the offering. This verse ensures, on account of the words "food" (havisho) and "waiting for you" (prasthitasya) success. For the offering of him who has such a knowledge ensures success and goes to the gods (only) by means of all parts of a particular ceremony being well performed.

He gives an offering to Vanaspati (the vegetable kingdom). Vanaspati is the vital air, therefore the offering of him who, knowing this sacrifice to Vanaspati, goes endowed with life to the gods.

He gives an offering to the Swishtakrit. The Swishtakrit is the footing on which he finally places the sacrificer.

He calls Ila. The cattle are Ila. By calling her, he calls cattle and provides the sacrificer with them.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಷಷ್ಠಾಧ್ಯಾಯಸ್ಯ ದಶಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಷಷ್ಠೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಆರನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು ಸಮಾಪ್ತವಾದುದು.



# ಅಥೈತರೇಯಬ್ರಾಹ್ಮಣೇ ಸಪ್ತಮಾಧ್ಯಾಯೇ ಪ್ರಥಮಃ ಖಂಡಃ

## ಏಳನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಪಶುಹೋಮದಲ್ಲಿ ಕೆಲವು ವಿಶೇಷ ವಿಷಯಗಳು ಮತ್ತು ಪ್ರಾತರನುವಾಕಮಂತ್ರಪಠನಕ್ರಮವು ]



ಯೂಪೋಽಥ ಯೂಪಾಂಜನಮಾಪ್ರಿಯಶ್ಚ
ಪರ್ಯಗ್ನ್ಯುಪಪ್ರೈಷಮಥಾಧ್ರಿಗುಶ್ಚ ।
ಪಶೌ ಪುರೋಡಾಶವಿಧಿರ್ಮನೋತಾ
ವನಸ್ಪತಿಸ್ಸ್ವಿಷ್ಟಕೃದಿಡಾಸ್ತುತಿಶ್ಚ ॥

**ಅಥ ಸಪ್ತಮಾಧ್ಯಾಯೇ ಪಶುಪ್ರೈಷಪ್ರಾತರನುವಾಕೌ ವಕ್ತವ್ಯೌ ತತ್ರ ಪರ್ಯಗ್ನಿಕರಣಸ್ತುತ್ಯರ್ಥಾಮಾಖ್ಯಾಯಿಕಾಮಾಹ—**

ಈ ಏಳನೆಯ ಅಧ್ಯಾಯದಲ್ಲಿ ಪಶುಪ್ರೈಷ ಮತ್ತು ಪ್ರಾತರನುವಾಕಮಂತ್ರಗಳನ್ನು ವಿವರಿಸುವರು. ಈ ವಿವರಣೆಗಳಿಗೆ ಪೂರ್ವಪೀಠಿಕೆಯಾಗಿ ಪರ್ಯಗ್ನಿಕರಣ ಎಂಬ ವಿಷಯದಲ್ಲಿ ಒಂದು ಉಪಾಖ್ಯಾನವನ್ನು ವಿವರಿಸುವರು—

ದೇವಾ ವೈ ಯಜ್ಞಮತನ್ವತ ತಾಂಸ್ತನ್ವಾನಾನಸುರಾ ಅಭ್ಯಾಯನ್ಯಜ್ಞವೇಶಸಮೇಷಾಂ ಕರಿಷ್ಯಾಮ ಇತಿ ತಾನಾಪ್ರೀತೇ ಪಶೌ ಪುರ ಇವ ಪರ್ಯಗ್ನೇರ್ಯೂಪಂ ಪ್ರತಿ ಪುರಸ್ತಾದುಪಾಯಂಸ್ತೇ ದೇವಾಃ ಪ್ರತಿಬುಧ್ಯಾಗ್ನಿಮಯೀಃ ಪುರಸ್ತ್ರಿಪುರಂ ಪರ್ಯಾಸ್ಯಂತ ಯಜ್ಞಸ್ಯ ಚಾತ್ಮನಶ್ಚ ಗುಪ್ತ್ಯೈ ತಾ ಏಷಾಮಿಮಾ ಅಗ್ನಿಮಯ್ಯಃ ಪುರೋ ದೀಪ್ಯಮಾನಾ ಭ್ರಾಜಮಾನಾ ಅತಿಷ್ಠಂಸ್ತಾ ಅಸುರಾ ಅನಪಧೃಷ್ಯೈವಾಪಾದ್ರವಂಸ್ತೇಽಗ್ನಿನೈವ ಪುರಸ್ತಾದಸುರರಕ್ಷಾಂಸ್ಯಪಾಘ್ನತಾಗ್ನಿನಾ ಪಶ್ಚಾತ್ ॥

**ಪುರಾ ಕದಾಚಿದ್ದೇವಾ ಯಜ್ಞಮತನ್ವತ ವಿಸ್ತಾರಿತವಂತಃ । ಯದ್ಯಪಿ ಪೂರ್ವಮೀಮಾಂಸಾಕರ್ತೃಭಿರ್ನವಮಾಧ್ಯಾಯೇ ದೇವಾನಾಮಶರೀರತ್ವಾತ್ಕರ್ಮಾಧಿಕಾರೋ ನಾಸ್ತೀತ್ಯುಕ್ತಂ ತಥಾಪಿ ಪ್ರಶಂಸಾರ್ಥತ್ವೇನ ಸ್ವಾರ್ಥತಾತ್ಪರ್ಯಾಭಾವಾದವಿರೋಧಃ । ಯದ್ವೋತ್ತರಮೀಮಾಂಸಾಕರ್ತೃಭಿಃ ಶರೀರಮಂಗೀಕೃತ್ಯ ವಿದ್ಯಾಧಿಕಾರೋಪಪಾದನಾದಿತರೇಷಾಂ ಶರೀರ-**

**ರಾಹಿತ್ಯವ್ಯೃತ್ತಿಗಾದಿವತ್ಕರ್ಮಕಾಲೇ ಪ್ರತ್ಯಕ್ಷಶರೀರಂ ನಾಸ್ತೀತಿ ತದಭಿಪ್ರಾಯಂ । ಕರ್ಮಾಧಿಕಾರನಿರಾಕರಣಸ್ಯ ಕರ್ಮಸಾಧ್ಯಸ್ಯ ಸ್ವರ್ಗಸ್ಯ ಪ್ರಾಪ್ತತ್ವಾತ್ತತ್ಪ್ರಯೋಜನಾಭಾವಾಭಿಪ್ರಾಯಂ । ಜಗದನುಗ್ರಹಾರ್ಥಂ ತು ತೇಷಾಂ ಶರೀರಿಣಾಮಸ್ತ್ಯೇವಾಧಿಕಾರ ಇತ್ಯಭಿಪ್ರೇತ್ಯ ಯಜ್ಞಮತನ್ವತೇತ್ಯತ್ರೋಚ್ಯತೇ । ತಾನ್ದೇವಾನ್ಯಜ್ಞವಿಸ್ತಾರಿಣೋಽಭಿಲಕ್ಷ್ಯಾಸುರಾ ಆಗಚ್ಛನ್ । ಕೇನಾಭಿಪ್ರಾಯೇಣೇತಿ ತದುಚ್ಯತೇ । ಏಷಾಂ ದೇವಾನಾಂ ಯಜ್ಞವೇಶಸಂ ಯಜ್ಞವಿಘಾತಂ ಕರಿಷ್ಯಾಮ ಇತಿ ತದಭಿಪ್ರಾಯಃ । ಕದಾ ಕುತ್ರ ಸಮಾಗತಾ ಇತಿ ತದುಚ್ಯತೇ । ಪಶಾವಾಪ್ರೀತೇ ಪ್ರಯಾಜೈಸ್ತರ್ಪಿತೇ ಸತಿ ಪರ್ಯಗ್ನೇಃ ಪುರ ಇವ ಪರ್ಯಗ್ನಿಕರಣಾತ್ಪೂರ್ವಸ್ಮಿನ್ಕಾಲೇ ಯೂಪಂ ಪ್ರತಿ ಪುರಸ್ತಾತ್ಪೂರ್ವದೇಶೇ ತಾನ್ದೇವಾನಸುರಾ ಉಪಾಗಚ್ಛನ್ । ತೇ ದೇವಾಸ್ತದಾಗಮನಂ ನಿಶ್ಚಿತ್ಯಾಗ್ನಿಮಯೀಃ ಪುರೋಽಗ್ನಿಪ್ರಾಕಾರಾಸ್ತ್ರಿಪುರಂ ವೇಷ್ಟನತ್ರಯಂ ಯಥಾ ಭವತಿ ತಥಾ ಪರ್ಯಾಸ್ಯಂತ ಪಶೋಃ ಪುರತಃ ಪ್ರಕ್ಷಿಪ್ತವಂತಃ । ತಚ್ಚ ಪ್ರಕ್ಷೇಪಣಂ ಯಜ್ಞಸ್ಯ ದೇವಾನಾಂ ಸ್ವರೂಪಸ್ಯ ಚ ರಕ್ಷಣಾಯ ಭವತಿ । ಏಷಾಂ ದೇವಾನಾಂ ಸಂಬಂಧಿನ್ಯಸ್ತಾಃ ಪುರಃ ಪಶೋಃ ಪರಿತೋ ಜ್ವಲಂತ್ಯೋಽನ್ಧಕಾರಂ ನಿವರ್ತ್ಯ ತಂ ದೇಶಂ ಪ್ರಕಾಶಯಂತ್ಯೋಽತಿಷ್ಠನ್ । ತಾ ಅಗ್ನಿಮಯೀಃ ಪುರೋಽನಪಧೃಷ್ಯೈವ ತಿರಸ್ಕಾರಮಕೃತ್ವೈವಾಪಾದ್ರವನ್ನಪಗತಾಃ । ತತ್ರ ದೇವಾಸ್ತೇನ ಚ ಪ್ರಾಕಾರರೂಪೇಣಾಗ್ನಿನಾ ಪೂರ್ವಸ್ಯಾಂ ದಿಶ್ಯಸುರಾನ್ರಕ್ಷಾಂಸಿ ಚ ಹತವಂತಃ ಪಶ್ಚಾದಪ್ಯಗ್ನಿನೈವ ಹತವಂತಃ ॥**

ಪೂರ್ವಕಾಲದಲ್ಲಿ ದೇವತೆಗಳು ಯಜ್ಞವನ್ನು ಮಾಡುತ್ತಿದ್ದರು. ಇಲ್ಲಿ ಭಾಷ್ಯಕಾರರು ಒಂದು ವಿಷಯವನ್ನು ವಿಮರ್ಶೆ ಮಾಡಿರುವರು. ಪೂರ್ವಮೀಮಾಂಸಾಕರ್ತೃಗಳಾದ ಜೈಮಿನಿಋಷಿಯು ಪೂರ್ವಮೀಮಾಂಸಾಸೂತ್ರಗ್ರಂಥದ ಒಂಭತ್ತನೆಯ ಅಧ್ಯಾಯದಲ್ಲಿ ದೇವತೆಗಳಿಗೆ ಭೌತಿಕಶರೀರವಿಲ್ಲದಿರುವುದರಿಂದ ಅವರು ಯಜ್ಞಮಾಡಲು ಸಾಧ್ಯವಿಲ್ಲವೆಂದು ವಾದಿಸಿರುವರು. ಆದರೆ ಅದನ್ನು ಒಪ್ಪುವ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಇದಲ್ಲದೆ ಉತ್ತರಮೀಮಾಂಸಾಕರ್ತೃಗಳಾದ ಬಾದರಾಯಣರು ದೇವತೆಗಳಿಗೆ ಶರೀರ ಉಂಟೆಂದು ಅಂಗೀಕಾರಮಾಡಿಹಾರೆ. ಯಜ್ಞಾದಿಕರ್ಮಗಳ ಉದ್ದೇಶವು ಸ್ವರ್ಗಪ್ರಾಪ್ತಿಯು. ದೇವತೆಗಳು ಸ್ವರ್ಗದಲ್ಲಿಯೇ ವಾಸಿಸುವುದರಿಂದ ಪುನಃ ಸ್ವರ್ಗಪ್ರಾಪ್ತಿಯು ಅನವಶ್ಯಕ ಅಥವಾ ಅಸಂಭವವು. ಜಗದನುಗ್ರಹಾರ್ಥವಾಗಿ ದೇವತೆಗಳು ಶರೀರವನ್ನು ಅಂಗೀಕರಿಸಿ ಯಜ್ಞಾದಿಗಳಲ್ಲಿ ಭಾಗವಹಿಸುವರೆಂದೂ ಹಾಗೆ ಮಾಡುವುದೂ ನ್ಯಾಯವೆಂದೂ ಪ್ರತಿಪಾದನೆಮಾಡಿದಾರೆ. ಇದಲ್ಲದೆ ಇನ್ನೂ ಒಂದು ವಿಷಯವನ್ನು ಯೋಚಿಸಬೇಕಾಗಿರುವುದು. ದೇವತೆಗಳು ಸ್ವರ್ಗಕ್ಕೆ ಹೋಗುವುದಕ್ಕೆ ಮುಂಚೆ ಮನುಷ್ಯರಂತೆ ಯಜ್ಞಾದಿಕರ್ಮಗಳಲ್ಲಿ ನಿರತರಾಗಿದ್ದರು ಎಂದು ಭಾವಿಸುವುದು ತಪ್ಪಲ್ಲ. ಏಕೆಂದರೆ—**ಸಾಧ್ಯಾ ವೇ ದೇವಾ ಅಸ್ಮಿನ್ ಲೋಕ ಆಸನ್** (ತೈ. ಸಂ.) ಎಂಬಲ್ಲಿಯೂ **ಯಜ್ಞೇನ ಯಜ್ಞಮಯಜಂತ ದೇವಾಃ ............ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ** (ಋ. ಸಂ. ೧೦-೯-೧೬) ಎಂಬಲ್ಲಿಯೂ ದೇವತೆಗಳು ಈ ಲೋಕದಲ್ಲಿಯೇ ಮೊದಲು ಇದ್ದರೆಂದೂ ಆಗ ಇವರು ಯಜ್ಞಾದಿಕರ್ಮಗಳನ್ನು ಮಾಡುತ್ತಿದ್ದರೆಂದೂ ಋಗ್ವೇದ ಯಜುರ್ವೇದಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ದೇವತೆಗಳು ಮನುಷ್ಯರಂತೆ ಯಜ್ಞಾದಿಕರ್ಮಗಳಲ್ಲಿ ಪ್ರವೃತ್ತರಾಗಿದ್ದರು ಎಂಬ ವಿಚಾರದಲ್ಲಿ ಬಾಧಕವೇನೂ ಇರುವುದಿಲ್ಲ. ಇದಲ್ಲದೆ ಆಧುನಿಕ ವಿದ್ವಾಂಸರ ಪರಿಶೋಧನೆಗಳಿಂದ ಇನ್ನೊಂದು ವಿಷಯವು ವ್ಯಕ್ತಪಡುವುದು. ದೇವತೆಗಳು ಎಂದರೆ ಬಹು ಹಿಂದಿನಕಾಲದಲ್ಲಿ ಎಂದರೆ ವೇದಕಾಲದಲ್ಲಿ ಹಿಂದೂದೇಶದಲ್ಲಿ ಹೊಸದಾಗಿ ಬಂದು ನೆಲಸಿದ ಮತ್ತು ನೆಲೆಸುತ್ತಿದ್ದ ಆರ್ಯಜನರು ಯಜ್ಞಯಾಗಾದಿಗಳಲ್ಲಿ ನಿರತರಾದ ಋಷಿಗಳೇ ಮುಂತಾದವರು. ಅಸುರರೆಂದರೆ ಈ ದೇಶದ ಪೂರ್ವ

ನಿವಾಸಿಗಳಾದ ಕಪ್ಪು ಜನರು. ಇವರು ಅನಾಗರಿಕರಾಗಿ ಬೇಟೆ ಮುಂತಾದವುಗಳಿಂದ ಜೀವಿಸುತ್ತಿದ್ದರು. ಇವರು ಯಾವಾಗಲೂ ಆರ್ಯರನ್ನು ವಿರೋಧಿಸುತ್ತಾ ಅವರೊಡನೆ ಯುದ್ಧವನ್ನು ಮಾಡುತ್ತಿದ್ದರು, ಈ ವಿಷಯದಲ್ಲಿ ಋಗ್ವೇದದಲ್ಲಿಯೂ ಯಜುರ್ವೇದ ದಲ್ಲಿಯೂ ಅನೇಕಕಡೆ **ದೇವಾಸುರಾಃ ಸಂಯುತ್ತಾ ಆಸನ್** ಇತ್ಯಾದಿ ವಾಕ್ಯಗಳಿಂದ ಕೂಡಿದ ಅನೇಕ ವರ್ಣನೆಗಳಿವೆ. ಇವರೊಡನೆ ಯುದ್ಧಮಾಡಿ ಇವರನ್ನು ಸೋಲಿಸುವುದು ಆರ್ಯರಿಗೆ ತುಂಬಾ ಶ್ರಮಸಾಧ್ಯವಾಗಿತ್ತು. ಈ ಕಾರಣಕ್ಕಾಗಿಯೇ ಋಗ್ವೇದದ ಅನೇಕ ಮಂತ್ರಗಳಲ್ಲಿ ವೀರರಾದ ಪುತ್ರರನ್ನು ಕೊಡಬೇಕೆಂದು ಋಷಿಗಳು ದೇವತೆಗಳನ್ನು ಪ್ರಾರ್ಥಿಸಿದಾರೆ. ಮತ್ತು ಯುದ್ಧಕಾಲದಲ್ಲಿ ಆರ್ಯರು ಯಾವ ಭೇದಭಾವವನ್ನೂ ಇಡದೆ ಋಷಿಗಳಾದಿಯಾಗಿ ಎಲ್ಲರೂ ತಮಗೆ ಸಮಾನ ಶತ್ರುಗಳಾದ ಈ ಪೂರ್ವನಿವಾಸಿಗಳೊಡನೆ ಯುದ್ಧಮಾಡುತ್ತಿದ್ದರು. ಆದ್ದರಿಂದ ಈ ಪೂರ್ವನಿವಾಸಿಗಳು ಅಥವಾ ಅಸುರರು ಕಾರಣವಿಲ್ಲದಿದ್ದರೂ ಆರ್ಯಜನರೊಡನೆ ಯುದ್ಧಮಾಡುವುದು ಅವರ ಯಜ್ಞಯಾಗಾದಿಗಳಿಗೆ ತೊಂದರೆಯನ್ನುಂಟುಮಾಡುವುದೂ ಆ ಕಾಲದಲ್ಲಿ ಸಾಮಾನ್ಯವಾಗಿತ್ತು. ಇನ್ನು ಪ್ರಕೃತವಿಷಯವನ್ನು ವಿಮರ್ಶಿಸೋಣ. ಯಜ್ಞಕಾಲದಲ್ಲಿ ಆಪ್ರೀಸೂಕ್ತವನ್ನು ಪಠಿಸಿ ಪಶುಹೋಮ ಕ್ಕಾಗಿ ಯೂಪಸ್ತಂಭದ ಸಮೀಪದಲ್ಲಿ ಯಜ್ಞಪಶುವನ್ನು ಸಿದ್ಧಗೊಳಿಸುತ್ತಿರುವಾಗ ಈ ಅಸುರರು ದೇವತೆಗಳ ಯಜ್ಞಕ್ಕೆ ವಿಘ್ನ ವನ್ನುಂಟುಮಾಡಬೇಕೆಂದು ಅಲ್ಲಿಗೆ ಬಂದರು. ಆಗ ದೇವತೆಗಳು ಇದನ್ನು ತಿಳಿದು ತಮ್ಮ ಯಜ್ಞಕ್ಕೆ ವಿಘ್ನವುಂಟಾಗದಂತೆ ಮಾಡುವುದಕ್ಕಾಗಿ ಪಶುವನ್ನು ಕಟ್ಟಿರುವ ಯೂಪದ ಸುತ್ತಲೂ ಅಗ್ನಿ (ಬೆಂಕಿ)ಯಿಂದ ಕೂಡಿದ ಮೂರು ಪ್ರಾಕಾರಗಳನ್ನು (ಆವರಣಗಳನ್ನು) ರಚಿಸಿದರು. ಈ ಬೆಂಕಿಯ ಪ್ರಾಕಾರಗಳು ಪ್ರಕಾಶಮಾನವಾಗಿ ಬೆಳಗುತ್ತಾ ವಿರೋಧಿಗಳಾದ ಯಾರೂ ಅದರ ಸಮೀಪಕ್ಕೆ ಬರಲು ತಡೆಯನ್ನುಂಟುಮಾಡಿತ್ತು. ಅಸುರರು ಇದನ್ನು ಕಂಡು ಆ ಅಗ್ನಿಪ್ರಾಕಾರವನ್ನು ಭೇದಿಸಲಾಗದೆ ದೇವತೆ ಗಳಿಗೆ ಹೆದರಿ ಓಡಿಹೋದರು. ದೇವತೆಗಳ ಈ ಅಗ್ನಿಪ್ರಾಕಾರದ ಸಹಾಯದಿಂದ ಅಸುರರನ್ನು ಪೂರ್ವದಿಕ್ಕಿನಲ್ಲಿಯೂ ಪಶ್ಚಿಮದಿಕ್ಕಿನಲ್ಲಿಯೂ ಹೊಡೆದೋಡಿಸಿದರು.

**ತಥೈವೈತದ್ಯಜಮಾನಾ ಯತ್ಪರ್ಯಗ್ನಿಕುರ್ವಂತ್ಯಗ್ನಿಮಯೀರೇವ ತತ್ಪುರಸ್ತ್ರಿಪುರಂ ಪರ್ಯಸ್ಯಂತೇ ಯಜ್ಞಸ್ಯ ಚಾತ್ಮನಶ್ಚ ಗುಪ್ತ್ಯೈ ತಸ್ಮಾತ್ಪರ್ಯಗ್ನಿ ಕುರ್ವಂತಿ ತಸ್ಮಾತ್ಪರ್ಯಗ್ನಯೇಽನ್ವಾಹ । ತಂ ವಾ ಏತಂ ಪಶುಮಾಪ್ರೀತಂ ಸಂತಂ ಪರ್ಯಗ್ನಿಕೃತಮುದಂಚಂ ನಯಂತಿ ತಸ್ಯೋಲ್ಮುಕಂ ಪುರಸ್ತಾದ್ಧರಂತಿ । ಯಜಮಾನೋ ವಾ ಏಷ ನಿದಾನೇನ ಯತ್ಪಶುರನೇನ ಜ್ಯೋತಿಷಾ ಯಜಮಾನಃ ಪುರೋಜ್ಯೋತಿಃ ಸ್ವರ್ಗಂ ಲೋಕಮೇಷ್ಯತೀತಿ ತೇನ ಜ್ಯೋತಿಷಾ ಯಜಮಾನಃ ಪುರೋ ಜ್ಯೋತಿಃ ಸ್ವರ್ಗಂ ಲೋಕ-ಮೇತಿ ॥**

ಅಥ ಪರ್ಯಗ್ನಿಕರಣಂ ವಿಧತ್ತೇ । ಯಥಾ ದೇವೈರಗ್ನಿಪ್ರಾಕಾರಾಃ ಕೃತಾಸ್ತಥೈವೈತ-ದ್ಯಜಮಾನಾನಾಂ ಪರ್ಯಗ್ನಿಕರಣಂ। ಅತೋ ಯದ್ಯೇತತ್ಕುರ್ಯುಸ್ತದಾನೀಮಗ್ನಿಪ್ರಾಕಾರವೇ-ಷ್ಟನಂ ಪಶೋಃ ಪರಿತಃ ಪ್ರಕ್ಷಿಪಂತಿ । ತಚ್ಚ ಯಜ್ಞಸ್ಯ ಚಾತ್ಮನಶ್ಚ ರಕ್ಷಣಾಯ ಭವತಿ । ತಸ್ಮಾ-ದವಶ್ಯಂ ಪರ್ಯಗ್ನಿಕರಣಮಪೇಕ್ಷಿತಂ ತದರ್ಥಮನುವಚನಂ ಚಾಪೇಕ್ಷಿತಂ । ತತ್ರ ಪರ್ಯ-

ಗ್ನಿಕರಣಮಾಪಸ್ತಂಬೋ ವಿಸ್ಪಷ್ಟಯತಿ—ಆಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪರಿ ವಾಜಪತಿಃ ಕವಿಃ (ಋ. ಸಂ. ೪-೧೫-೩) ಇತಿ ತ್ರಿಃ ಪ್ರದಕ್ಷಿಣಂ ಪರ್ಯಗ್ನಿಕರೋತಿ ಪಶುಮಿತಿ । ಅನುವಚನಂ ಪೂರ್ವಮೇವಾಗ್ನಿರ್ಹೋತಾ (ಋ. ಸಂ. ೪-೧೫-೧) ಇತ್ಯಾದಿನಾ ದರ್ಶಿತಂ । ಪರ್ಯಗ್ನಿಕರಣಾದೂರ್ಧ್ವಂ ಪಶೋಃ ಶಾಮಿತ್ರದೇಶಂ ಪ್ರತ್ಯಾನಯನಂ ವಿಧತ್ತೇ ಪ್ರಯಾಜೈ-ಸ್ತೋಷಿತಂ ಪರ್ಯಗ್ನಿಕರಣೇನ ರಕ್ಷಿತಂ ಪಶುಮುದಙ್ಮುಖಂ ಕೃತ್ವಾ ನಯೇಯುಃ । ನೀಯ-ಮಾನಸ್ಯ ಪಶೋಃ ಪುರತೋ ನೇತವ್ಯಂ ವಿಧತ್ತೇ। ತದೇತದುಭಯಮಾಪಸ್ತಂಬೇನ ಸ್ಪಷ್ಟೀಕೃತಂ ಆಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪೂರ್ವಃ ಪ್ರತಿಪದ್ಯತೇ ಶಮಿತಾ ಪಶುಂ ನಯತಿ ಉರೋರಂತರಿಕ್ಷೇತ್ಯಂತರಾ ಚಾತ್ವಾಲೋತ್ಕರಾವುದಂಚಂ ಪಶುಂ ನಯಂತಿ ಇತಿ। ಪಶೋಃ ಪುರತೋ ವಹ್ನಿನಯನಂ ಪ್ರಶಂಸತಿ । ಯಃ ಪಶುರಸ್ತ್ಯೇಷ ನಿದಾನೇನ ಸೂಕ್ಷ್ಮದೃ-ಷ್ಟಿನಿರೂಪಣೇನ ಯಜಮಾನ ಏವ ಭವತಿ । ಪಶುನಾ ಸ್ವಾತ್ಮನೋ ನಿಷ್ಕ್ರೇತತ್ವಾತ್ಪಶೋರ್ಯ-ಜಮಾನತ್ವಂ । [ನಿಷ್ಕ್ರಯಣಂ ಚ ಪೂರ್ವಮೇವಾತ್ಮನಿಷ್ಕ್ರಯಣಮೇವಾಸ್ಯ ಸ ದೃಢಯತಿ। ಶ್ರುತ್ಯಂತರೋದಾಹರಣೇನ ದರ್ಶಿತಂ] ಪಶೋಃ ಪುರತೋ ನೀಯಮಾನಜ್ಯೋತಿಷಾ ಯಜ-ಮಾನಃ ಪುರೋವರ್ತಿದೀಪಯುಕ್ತೋ ಭೂತ್ವಾ ಸ್ವರ್ಗಂ ಲೋಕಂ ಪ್ರಯಾಸ್ಯತಿ ಯಥಾ ರಾಜಾಮಾತ್ಯಾದಿಃ ಪರ್ಯಟನೇ ರಾತ್ರೌ ಪುರೋವರ್ತಿದೀಪಯುಕ್ತೋ ಗಚ್ಛತಿ ತದ್ವದಿತ್ಯಭಿ-ಪ್ರೇತ್ಯೋಲ್ಮುಕಂ ಪುರಸ್ತಾನ್ನಯಂತಿ । ತದಭಿಪ್ರಾಯಾನುಸಾರೇಣೈವ ಯಜಮಾನೋಽಪಿ ತಥಾ ಸ್ವರ್ಗಂ ಲೋಕಂ ಪ್ರಾಪ್ನೋತಿ। ತದೇತದಗ್ನೇಃ ಪುರತೋ ನಯನಂ ಶಾಖಾಂತರೇಽಪ್ಯಾ-ಮ್ನಾತಂ—ಯರ್ಹಿ ಪಶುಮಾಪ್ರೀತಮುದಂಚಂ ಪಶುಂ ನಯಂತಿ ತರ್ಹಿ ತಸ್ಯ ಪಶುಶ್ರಪಣ-ಮಾಹರೇತ್ತೇನೈವೈನಂ ಭಾಗಿನಂ ಕರೋತಿ ಇತಿ ॥

ಈಗ ಪರ್ಯಗ್ನಿಕರಣವಿಧಾನವನ್ನು ವಿವರಿಸುವರು. ಹಿಂದೆ ದೇವತೆಗಳು ಯಾವ ಪ್ರಕಾರವಾಗಿ ಯಜ್ಞವನ್ನೂ ಪಶುವನ್ನೂ ಅಸುರರಿಂದ ರಕ್ಷಿಸುವುದಕ್ಕಾಗಿ ಪಶುವನ್ನು ಅಗ್ನಿಮಯವಾದ (ಬೆಂಕಿಯಿಂದ ಕೂಡಿದ) ಮೂರು ಪ್ರಾಕಾರಗಳಿಂದ ಸುತ್ತುವರಿದು ರಕ್ಷಿಸಿದರೋ ಅದರಂತೆ ಈಗ ಯಜ್ಞಮಾಡುವ ಯಜಮಾನನು ಸಹ ಪರ್ಯಗ್ನಿಕರಣವೆಂಬ ಕರ್ಮವನ್ನು ಮಾಡುವನು. ದೇವತೆಗಳು ಪಶುವಿನ ಸುತ್ತಲೂ ಮೂರು ಅಗ್ನಿಪ್ರಾಕಾರಗಳನ್ನು ನಿರ್ಮಿಸಿದ ಸಂಕೇತವಾಗಿ ಈಗ ಯಜ್ಞದಲ್ಲಿ ಪಶುವಿನ ಸುತ್ತಲೂ ಅಗ್ನಿಯನ್ನು (ಉರಿಯುತ್ತಿರುವ ಕೊಳ್ಳಿಯನ್ನು) ಮೂರಾವರ್ತಿ ತೆಗೆದುಕೊಂಡು ಹೋಗಿ ಈ ಕರ್ಮವನ್ನು ನೆರವೇರಿಸುವರು. ಆದಕ್ಕಾಗಿ ಈ ಕರ್ಮವು ಅವಶ್ಯವೆನಿಸುವುದು. ಪರ್ಯಗ್ನಿಕರಣವಿಷಯದಲ್ಲಿ ಆಪಸ್ತಂಬಮಹರ್ಷಿಯು ಇಂತು ಹೇಳಿರುವರು—**ಆಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪರಿ ವಾಜಪತಿಃ ಕವಿರಿತಿ ತ್ರಿಃ ಪ್ರದಕ್ಷಿಣಂ ಪರ್ಯಗ್ನಿಕರೋತಿ ಪಶುಂ** (ಆಪ. ಶ್ರೌ. ಸೂ. ೭-೧೫-೨) ಇತಿ । ಎಂದರೆ ಆಗ್ನೀಧ್ರನೆಂಬ ಋತ್ವಿಜನು ಅಧ್ವರ್ಯುವಿನ ಸೂಚನೆಮೇರೆಗೆ ಆಹವನೀಯ ಎಂಬ ಅಗ್ನಿಕುಂಡದಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದು ಹಿಡಿದುಕೊಂಡು ಪರಿ ವಾಜಪತಿ ಕವಿಃ ಎಂಬ ಋಕ್ಕನ್ನು ಪಠಿಸುವಾಗ ಪಶುವಿನ ಸುತ್ತಲೂ ಮೂರಾವರ್ತಿ ಪ್ರದಕ್ಷಿಣೆಮಾಡುವನು. ಈ ವಿಷಯದಲ್ಲಿ—**ಪರ್ಯಗ್ನಯೇ ಕ್ರಿಯಮಾಣಾಯಾನು ಬ್ರೂಹಿ** ಎಂದು ಅಧ್ವರ್ಯುವು ಹೇಳಿರುವುದನ್ನು ಹಿಂದೆಯೇ (೬ ನೇ ಅಧ್ಯಾಯ ೫ ನೇ ಖಂಡ) ಹೇಳಲಾಗಿದೆ. ಅದರಂತೆ ಮೈತ್ರಾವರುಣನೆಂಬ ಋತ್ವಿಜನು **ಅಗ್ನಿರ್ಹೋತಾ ನೋ ಅಧ್ವರ** (ಋ.ಸಂ. ೧-೧೫-೧,೨,೩) ಇತ್ಯಾದಿ ಗಾಯತ್ರೀಛಂದಸ್ಸಿನ ಮೂರು ಋಕ್ಕುಗಳನ್ನು ಪಠಿಸುವನು. ಅನಂತರ ಪಶುವನ್ನು ವಧಮಾಡುವ

ಶಮಿತೃವೆಂಬ ಋತ್ವಿಜನು ಪ್ರಯಾಜಾದಿ ಕರ್ಮಗಳಿಗಿಂತ ಸಂಸ್ಕೃತವಾದ ಪಶುವನ್ನು ಉತ್ತರಾಭಿಮುಖವಾಗಿ ಒಯ್ಯುವನು. ಹಾಗೆ ಒಯ್ಯುವಾಗ ಆಗ್ನೀಧ್ರನು ಉರಿಯುತ್ತಿರುವ ಕೊಳ್ಳಿಯನ್ನು ಪಶುವಿನ ಮುಂದೆ ಹಿಡಿದುಕೊಂಡು ಹೋಗುವನು. ಈ ವಿಷಯದಲ್ಲಿ ಆಪಸ್ತಂಬರು—**ಆಹವನೀಯಾದುಲ್ಮುಕಮಾದಾಯಾಗ್ನೀಧ್ರಃ ಪೂರ್ವಃ ಪ್ರತಿಪದ್ಯತೇ । ಶಮಿತಾ ಪಶುಂ ನಯತಿ । ಉರೋರಂತರಿಕ್ಷೇತ್ಯಂತರಾ ಚಾತ್ವಾಲೋತ್ಕರಾವುದಂಚಂ ಪಶುಂ ನಯಂತಿ** (ಆಪ. ಶ್ರೌ. ಸೂ. ೭-೧೫-೮,೯,೧೦) ಎಂದು ಹೇಳಿರುವರು. ಪಶುವಿನ ಮುಂದುಗಡೆ ಕೊಳ್ಳಿಯನ್ನು ಹಿಡಿದುಕೊಂಡು ಹೋಗುವುದು ಏತಕ್ಕೆಂದರೆ—ಇಲ್ಲಿ ಯಜ್ಞಪಶುವೇ ಯಜಮಾನನ ಸ್ವರೂಪವಾಗಿರುವುದು. ಈ ವಿಷಯವನ್ನು ೬ ನೇ ಅಧ್ಯಾಯದ ೩ ನೆಯ ಖಂಡದಲ್ಲಿ ವಿವರಿಸಲಾಗಿದೆ. ಆದ್ದರಿಂದ ಪಶುವಿನ ಮುಂದುಗಡೆ ಉರಿಯುತ್ತಿರುವ ಕೊಳ್ಳಿಯನ್ನು ಹಿಡಿದುಕೊಂಡು ಹೋದಂತಾಗುವುದು ಎಂದರೆ ದೀಪವು ಮಾರ್ಗದರ್ಶನಮಾಡುತ್ತಾ ಯಜಮಾನನನ್ನು ಸ್ವರ್ಗಲೋಕದ ಬಳಿಗೆ ಕೊಂಡೊಯ್ಯುವುದು. ಹೇಗೆಂದರೆ ರಾಜನಾಗಲೀ, ಅವನ ಮಂತ್ರಿ ಮೊದಲಾದ ಮುಖ್ಯಾಧಿಕಾರಿಗಳಾಗಲಿ ರಾತ್ರಿವೇಳೆ ಎಲ್ಲಿಗಾದರೂ ಹೋಗುವಾಗ ಅವರಿಗೆ ಮಾರ್ಗವು ಸ್ಪಷ್ಟವಾಗಿ ಕಾಣುವಂತೆ ಅವರ ಮುಂದೆ ಭೃತ್ಯಾದಿಗಳು ಪ್ರಕಾಶಮಾನವಾದ ದೀಪವನ್ನು ಕೊಂಡೊಯ್ಯುವುದು ರೂಢಿಯಷ್ಟೆ. ಅದರಂತೆ ಯಜಮಾನಸ್ವರೂಪವಾದ ಪಶುವಿನಮುಂದೆ ಪ್ರಕಾಶಮಾನವಾದ ಕೊಳ್ಳಿಯನ್ನು ಹಿಡಿದುಕೊಂಡು ಹೋಗುವುದರಿಂದ ಯಜಮಾನನ ಮುಂದೆ ಸ್ವರ್ಗದ ಮಾರ್ಗಾನುಕ್ರಮಣಕ್ಕಾಗಿ ದೀಪವನ್ನು ಒಯ್ದಂತಾಗಿ ಯಜಮಾನನು ಸ್ವರ್ಗಲೋಕವನ್ನು ಸೇರುವುದಕ್ಕೆ ಅನುಕೂಲವಾಗುವುದು. ಪಶುವಿನ ಮುಂದೆ ಅಗ್ನಿಯನ್ನು ಕೊಂಡೊಯ್ಯುವ ವಿಷಯದಲ್ಲಿ ತೈತ್ತಿರೀಯಸಂಹಿತೆಯು ಈರೀತಿ ಹೇಳುವುದು—**ಯರ್ಹಿ ಪಶುಮಾಪ್ರೀತಮುದಂಚಂ ಪಶುಂ ನಯಂತಿ ತರ್ಹಿ ತಸ್ಯ ಪಶುಶ್ರಪಣಗ್ಂ ಹರೇತ್ ತೇನೈವೈನಗ್ಂ ಭಾಗಿನಂ ಕರೋತಿ** (ತೈ. ಸಂ. ೩-೧-೩-೨)

ತಂ ಯತ್ರ ನಿಹನಿಷ್ಯಂತೋ ಭವಂತಿ ತದಧ್ವರ್ಯುರ್ಬರ್ಹಿರಧಸ್ತಾದುಪಾಸ್ಯಂತಿ ಯದೇವೈನಮುದ ಆಪ್ರೀತಂ ಸಂತಂ ಪರ್ಯಗ್ನಿಕೃತಂ ಬಹಿರ್ವೇದಿ ನಯಂತಿ ಬರ್ಹಿಷದಮೇವೈನಂ ತತ್ಕುರ್ವಂತಿ ॥

ಶಾಮಿತ್ರದೇಶಂ ನೀತಸ್ಯ ಪಶೋರ್ಹನನಸ್ಥಲೇ ಬರ್ಹಿಪ್ರಕ್ಷೇಪಂ ವಿಧತ್ತೇ । ತಂ ಪಶುಂ ಯಸ್ಮಿನ್ದೇಶೇ ಹನಿಷ್ಯಾಮ ಇತ್ಯೇವಂ ಮನ್ಯಂತೇ ತಸ್ಮಿನ್ದೇಶೇಽಧ್ವರ್ಯುರ್ಭೂಮೌ ಬರ್ಹಿಃ ಪ್ರಕ್ಷಿಪೇತ್ । ತದೇತಚ್ಛಾಖಾಂತರೇ ಸಮಂತ್ರಕಮಾಮ್ನಾತಂ । ಪೃಥಿವ್ಯಾಃ ಸಂಪೃಚಃ ಪಾಹೀತಿ ಬರ್ಹಿರುಪಾಸ್ಯತ್ಯಸ್ಕಂದಾಯಾಸ್ಕನ್ನಂ ಹಿ ತದ್ಯದ್ಬರ್ಹಿಷಿ ಸ್ಕಂದತ್ಯಥೋ ಬರ್ಹಿಷದಮೇವೈನಂ ಕರೋತಿ । ಇತಿ । ತದೇತದಾಪಸ್ತಂಬೇನ ಸ್ಪಷ್ಟೀಕೃತಂ—ಅಥ ಪರ್ಯಗ್ನಿಕೃತ ಉಲ್ಮುಕಂ ನಿದಧಾತಿ ಸ ಶಾಮಿತ್ರಸ್ತಂ ದಕ್ಷಿಣೇನ ಪ್ರತ್ಯಂಚಂ ಪಶುಮವಸ್ಥಾಪ್ಯ ಪೃಥಿವ್ಯಾಃ ಸಂಪೃಚಃ ಪಾಹೀತಿ ತಸ್ಯಾಧಸ್ತಾದ್ಬರ್ಹಿರುಪಾಸ್ಯತ್ಯುಪಾಕರಣಯೋರನ್ಯತರತ್ತಸ್ಮಿನ್ ಸಂಜ್ಞಪಯಂತಿ ಪ್ರತ್ಯಕ್‌ಶಿರಸಮುದೀಚೀನಪಾದಮಿತಿ । ಪಶೋರಧೋ ಬರ್ಹಿಷ್ಪ್ರಕ್ಷೇಪಂ ಪ್ರಶಂಸತಿ । ಪ್ರಯಾಜೈಸ್ಪ್ರೋಕ್ಷಿತಂ ಪರ್ಯಗ್ನಿಕರಣೇನ ರಕ್ಷಿತಂ ಪಶುಂ ಸೌಮಿಕವೇದೇರ್ಬಹಿರ್ಭಾಗೇ ಸಂಜ್ಞಪನಾಯ ನಯಂತೀತ್ಯದೋ ಯದಸ್ತಿ ತದಾನೀಮೇನಂ ಪಶುಂ ಬರ್ಹಿಷದಮೇವ ದರ್ಭೇಽವಸ್ಥಿತಮೇವ ಕುರ್ವಂತಿ । ಯದ್ವಾ ಬರ್ಹಿಷದಂ ಯಜ್ಞೇಽವಸ್ಥಿತಂ ವೇದ್ಯಾಮವಸ್ಥಿತಂ ಕುರ್ವಂತಿ ಬಾಹ್ಯದೇಶೇ ನಯನದೋಷಂ ಪರಿಹರತೀತ್ಯರ್ಥಃ ॥

ವಧಸ್ಥಾನಕ್ಕೆ ಒಯ್ಯಲ್ಪಡುವ ಪಶುವಿನ ಕೆಳಭಾಗದಲ್ಲಿ ಬರ್ಹಿಃ ಎಂಬ ಹುಲ್ಲನ್ನು ಅಥವಾ ದರ್ಭೆಯನ್ನು ಹಾಸುವರು. ಆ ಪಶುವನ್ನು ಯಾವ ಸ್ಥಳದಲ್ಲಿ ಕೊಲ್ಲಬೇಕೆಂದು ಉದ್ದೇಶಿಸಿರುವರೋ ಆ ಪ್ರದೇಶದಲ್ಲಿ ಅಧ್ವರ್ಯುವು ಭೂಮಿಯ ಮೇಲೆ ಬರ್ಹಿಃ ಎಂಬ ದರ್ಭೆಯನ್ನು ಹರಡುವನು. ಈ ವಿಷಯವು ಶಾಖಾಂತರ ಎಂದರೆ ತೈತ್ತಿರೀಯ ಸಂಹಿತೆಯಲ್ಲಿ— **ಪೃಥಿವ್ಯಾಃ ಸಂಪೃಚಃ ಪಾಹೀತಿ ಬರ್ಹಿರುಪಾಸ್ಯತ್ಯಸ್ಕಂದಾಯಾಸ್ಕನ್ನಗ್ಂ ಹಿ ತದ್ಯದ್ಬರ್ಹಿಷಿ ಸ್ಕಂದತ್ಯಥೋ ಬರ್ಹಿಷದಮೇವೈನಂ ಕರೋತಿ** (ತೈ. ಸಂ. ೬-೩-೮-೨) ಎಂದು ಹೇಳಲಾಗಿದೆ. ಇದಲ್ಲದೆ ಆಪಸ್ತಂಬರೂ ಕೂಡ—ಅಭಿಪರ್ಯಗ್ನಿಕೃತೇ ದೇಶೇ ಉಲ್ಮುಕಂ ನಿದಧಾತಿ । ಸ ಶಾಮಿತ್ರಃ ತಂ ದಕ್ಷಿಣೇನ ಪ್ರತ್ಯಂಚಂ ಪಶುಮವಸ್ಥಾಪ್ಯ ಪೃಥಿವ್ಯಾಃ ಸಂಪೃಚಃ ಪಾಹೀತಿ ತಸ್ಯಾಧಸ್ತಾದ್ಬರ್ಹಿರುಪಾಸ್ಯತ್ಯುಪಾಕರಣಯೋರನ್ಯತರಂ ತಸ್ಮಿನ್ ಸಂಜ್ಞಪಯಂತಿ ಪ್ರತ್ಯಕ್ ಶಿರಸಮುದೀಚೀನಪಾದಂ (ಆಪ. ಶ್ರೌ. ಸೂ. ೭-೧೬-೨, ೩, ೪, ೫) ಎಂದು ಸ್ಪಷ್ಟವಾಗಿ ಹೇಳಿರುವರು. ಪ್ರಯಾಜಾದಿಮಂತ್ರಗಳಿಂದ ಸಂಸ್ಕೃತವೂ ಪರ್ಯಗ್ನಿಕರಣದಿಂದ ರಕ್ಷಿಸಲ್ಪಟ್ಟಿರುವುದೂ ಆದ ಆ ಪಶುವನ್ನು ಯಜ್ಞವೇದಿಯ ಹೊರಗಡೆ ದರ್ಭೆಯನ್ನು ಹರಡಿರುವ ಸ್ಥಳದಲ್ಲಿ ನಿಲ್ಲಿಸುವರು. ಯಜ್ಞವೇದಿಯ ಹೊರಗಡೆ ಪಶುವನ್ನು ನಿಲ್ಲಿಸುವುದರಿಂದ ದೃಷ್ಟಿದೋಷವು ಪರಿಹಾರವಾದಂತಾಗುವುದು.

**ತಸ್ಯೋವಧ್ಯಗೋಹಂ ಖನಂತಿ । ಔಷಧಂ ವಾ ಊವಧ್ಯಮಿಯಂ ವಾ ಓಷಧೀನಾಂ ಪ್ರತಿಷ್ಠಾ ತದೇನತ್ಸ್ವಾಯಾಮೇವ ಪ್ರತಿಷ್ಠಾಯಾಮಂತತಃ ಪ್ರತಿಷ್ಠಾಪಯಂತಿ ।**

**ಪಶೋ ಪುರೀಷಸ್ಥಾಪನಾರ್ಥಮವಟಖನನಂ ವಿಧತ್ತೇ । ಊವಧ್ಯಂ ಪುರೀಷಂ ತಸ್ಯ ಗೋಹಂ ಗೋಪನಸ್ಥಾನಂ ತತ್ಕುರ್ಯುಃ । ಅಸ್ಯ ಖನನಸ್ಯ ಕಾಲ ಆಪಸ್ತಂಬೇನ ದರ್ಶಿತಃ— ಊವಧ್ಯಗೋಹಂ ಪಾರ್ಥಿವಂ ಖನತಾದಿತ್ಯಭಿಜ್ಞಾಯೋವಧ್ಯಗೋಹಂ ಖನಂತೀತಿ । ಹೋತಾ ತ್ವಧ್ರಿಗುಪ್ರೈಷಮಂತ್ರೇ ಯದೋವಧ್ಯಗೋಹಮಿತಿ ವಾಕ್ಯಂ ಪಠತಿ ತದಾ ಖನೇದಿತ್ಯರ್ಥಃ । ತದೇತದೂವಧ್ಯಗೋಹಖನನಂ ಪ್ರಶಂಸತಿ । ತದೇತದರ್ಥವಾದವಾಕ್ಯಂ ಪೂರ್ವಾಧ್ಯಾಯಮಂತ್ರಪ್ರಸಂಗೇ ವ್ಯಾಖ್ಯಾತಂ ।**

ಪಶುವಿನ ಮಲಮೂತ್ರವನ್ನು ವಿಸರ್ಜಿಸುವುದಕ್ಕಾಗಿ ಒಂದು ಸಣ್ಣ ಹಳ್ಳವನ್ನು ತೋಡುವರು. ಈ ವಿಷಯದಲ್ಲಿ ಆಪಸ್ತಂಬರು— **ಊವಧ್ಯಗೋಹಂ ಪಾರ್ಥಿವಂ ಖನತಾದಿತ್ಯಭಿಜ್ಞಾಯೋವಧ್ಯಗೋಹಂ ಖನಂತೀತಿ** (ಆಪ. ಶ್ರೌ. ಸೂ. ೭-೧೬-೧) ಎಂದು ಹೇಳಿರುವರು. ಹೋತೃವು ಅಧ್ರಿಗುಪ್ರೈಷಮಂತ್ರದಲ್ಲಿ— **ಯದೋವಧ್ಯಗೋಹಂ** ಎಂಬ ವಾಕ್ಯವನ್ನು ಪಠಿಸುವಾಗ ಈ ಹಳ್ಳವನ್ನು ತೋಡಬೇಕೆಂದು ಹೇಳಲಾಗಿದೆ. ಈ ವಿಷಯವನ್ನು ಹಿಂದಿನ ಅಧ್ಯಾಯದಲ್ಲಿಯೇ ಹೇಳಲಾಗಿದೆ. ಪಶುವು ತೃಣಾದಿ (ಹುಲ್ಲು) ಗಳನ್ನು ತಿನ್ನುವುದರಿಂದ ಅದರ ಮಲವೂ ಸಹ ತೃಣವಿಕಾರದಿಂದ ಕೂಡಿದ್ದಾಗಿದೆ. ಈ ತೃಣಮೊದಲಾದವು ಭೂಮಿಯಲ್ಲಿ ಬೆಳೆಯುವುದರಿಂದ ತೃಣವಿಕಾರವಾದ ಅದರ ಮಲವನ್ನು ಹಾಕುವುದಕ್ಕೆ ಭೂಮಿಯೇ ಸರಿಯಾದ ಸ್ಥಾನವು. ಆದ್ದರಿಂದ ಭೂಮಿಯಲ್ಲಿ ಹಳ್ಳವನ್ನು ತೋಡಿ ಅದರಲ್ಲಿ ಪಶುವಿನ ಮಲವನ್ನು ಹಾಕುವುದು ನ್ಯಾಯವಾಗಿದೆ.

**ತದಾಹುರ್ಯದೇಷ ಹವಿರೇವ ಯತ್ಪಶುರಥಾಸ್ಯ ಬಹ್ವಸ್ಯೈತಿ ಲೋಮಾನಿ ತ್ವಗಸೃಕ್ಕುಷ್ಠಿಕಾಃ ಶಫಾ ವಿಷಾಣೇ ಸ್ಕಂದತಿ ಪಿಶಿತಂ ಕೇನಾಸ್ಯ ತದಾಪೂರ್ಯತ ಇತಿ ॥**

ಅಥ ಪಶುಪುರೋಡಾಶಂ ಪ್ರಶಂಸಿತುಂ ಪ್ರಶ್ನಮುತ್ಥಾಪಯತಿ—ತತ್ರತ್ರ ಪಶೌ ಚೋದ್ಯವಾದಿನ ಆಹುಃ । ಯದ್ಯದಾ ಯಃ ಪಶುರಸ್ತ್ಯೇಷ ಸರ್ವೋಽಪಿ ಹವಿರೇವ ಕೃತ್ಸ್ನಸ್ಯ ಪಶೋರುಪಾಕೃತತ್ವಾತ್ । ಅಥ ತದಾನೀಂ ಕಸ್ಯಾಪ್ಯವಯವಸ್ಯಾಪನಯೋ ನ ಯುಕ್ತಃ। ಇಹ ತು ಬಹ್ವವಯವಜಾತಮಪೈತಿ । ತದ್ಯಥಾ ಲೋಮಾನಿ ರೋಮಾಣಿ ತ್ವಕ್ಚರ್ಮಾಸೃಗ್ರಕ್ತಂ ಕುಷ್ಠಿಕಾ ಉದರವರ್ತಿನೋ ಭಕ್ಷಿತಾಸ್ತೃಣಾದಯಃ ಶಫಾಃ ಖುರಾ ವಿಷಾಣೇ ಶೃಂಗದ್ವಯಮೇತತ್ಸರ್ವಮಪಪ್ಯೈತ್ಯಗ್ನೌ ಹೋಮಾಭಾವಾತ್ । ಕಿಂಚ ಪಿಶಿತಂ ಮಾಂಸಂ ಯತ್ಕಿಂಚಿತ್ಸ್ಕಂದತಿ ಭೂಮೌ ಪತತಿ ತದಪ್ಯಪೈತಿ । ಏವಂ ಸತಿ ಕೇನ ಪ್ರಕಾರೇಣಾಸ್ಯ ಪಶೋಃ ಸಂಬಂಧಿ ತತ್ಸರ್ವಮವಯವಜಾತಂ ಸಮಂತಾತ್ಪೂರ್ಯತ ಇತಿ ಪ್ರಶ್ನಃ ।

ಕೆಲವರು ಹೀಗೆ ಹೇಳುವರು—ಯಜ್ಞಪಶುವೆಂದರೆ ಅದು ಯಜ್ಞಕುಂಡದಲ್ಲಿ ದೇವತೆಗಳ ಪ್ರೀತ್ಯರ್ಥವಾಗಿ ಹೋಮ ಮಾಡುವುದಕ್ಕಾಗಿ ನಿರ್ದಿಷ್ಟವಾದ ಹವಿಸ್ಸಿನಂತಿರುವುದು. ಆದರೆ ಪಶುವಿನ ಹೃದಯಾದ್ಯಂಗಗಳನ್ನು ಹೋಮಮಾಡುವಾಗ ಪಶುವಿನ ಎಲ್ಲಾ ಅಂಗಗಳನ್ನು ಉಪಯೋಗಿಸಿ ಹೋಮಮಾಡುವುದಿಲ್ಲ. ಎಂದರೆ, ಪಶುವಿನ ರೋಮಗಳು (ಕೂದಲುಗಳು), ಚರ್ಮ, ರಕ್ತ, ಪಶುವಿನ ಉದರದಲ್ಲಿ ಜೀರ್ಣವಾಗದೆ ಉಳಿದಿರುವ ಆಹಾರ, ಗೊರಸುಗಳು, ಎರಡು ಕೊಂಬುಗಳು ಹೋಮ ಮಾಡುವಾಗ ಕೆಳಗೆ ನೆಲದಮೇಲೆ ಬೀಳುವ ಮಾಂಸದ ಚೂರುಗಳು ಇವುಗಳು ಹೋಮಾರ್ಥವಾಗಿ ಉಪಯೋಗಿಸಲ್ಪಡುವುದಿಲ್ಲ. ಆದ್ದರಿಂದ ಪಶುವಿನ ಸರ್ವಾಂಗಗಳನ್ನೂ ಅಗ್ನಿಯಲ್ಲಿ ಹೋಮಮಾಡುವರು ಎಂದು ಹೇಳುವುದು ತಪ್ಪಲ್ಲವೇ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವರು.

**ಯದೇವೈತತ್ಪಶೌ ಪುರೋಳಾಶಮನು ನಿರ್ವಪಂತಿ ತೇನೈವಾಸ್ಯ ತದಾಪೂರ್ಯತೇ ।**

ತಸ್ಯೋತ್ತರಮಾಹ । ಪಶ್ವಾಲಂಭನಮನುಸೃತ್ಯ ಪುರೋಳಾಶಂ ನಿರ್ವಪಂತೀತಿ ಯದಿದಮಸ್ತಿ ತೇನೈವಾಸ್ಯ ಪಶೋಃ ಸಂಬಂಧಿ ತತ್ಸರ್ವಮವಯವಜಾತಂ ಪೂರಿತಂ ಭವತಿ ।

ಪಶುವನ್ನು ಹೋಮಾರ್ಥವಾಗಿ ನಿರ್ದೇಶಿಸುವಾಗ ಪಶುಹೋಮಕಾಲದಲ್ಲಿ (ಎಂದರೆ ಪಶುಹೋಮಕ್ಕೆ ಪೂರ್ವದಲ್ಲಿ) ಪುರೋಡಾಶಹೋಮವನ್ನು ಮಾಡುವರು. ಈ ಪುರೋಡಾಶವು ಪಶುಸಂಬಂಧವಾದ ಎಂದರೆ ಪಶುವಿನಿಂದ ಉತ್ಪನ್ನವಾದ ಪದಾರ್ಥಗಳಿಂದ ಮಾಡಲ್ಪಟ್ಟಿರುವುದು. ಅದನ್ನು ಹೋಮಮಾಡುವುದರಿಂದ ಪಶುವಿನ ಸಮಸ್ತ ಅಂಗಗಳಿಂದಲೂ ಹೋಮ ಮಾಡಿದಂತಾಗುವುದು ಎಂದಭಿಪ್ರಾಯವು.

**ಪಶುಭ್ಯೋ ವೈ ಮೇಧಾ ಉದಕ್ರಾಮಂಸ್ತೌ ವ್ರೀಹಿಶ್ಚೈವ ಯವಶ್ಚ ಭೂತಾವಜಾಯೇತಾಂ ತದ್ಯತ್ಪಶೌ ಪುರೋಳಾಶಮನುನಿರ್ವಪಂತಿ ಸಮೇಧೇನ ನಃ ಪಶುನೇಷ್ಟಮಸತ್ಕೇವಲೇನ ನಃ ಪಶುನೇಷ್ಟಮಸದಿತಿ ।**

ತದೇತದುಪಪಾದಯತಿ-ಮನುಷ್ಯಾಶ್ವಾದಿಭ್ಯಃ ಸಕಾಶಾನ್ಮೇಧಾ ಯಜ್ಞಯೋಗ್ಯಾ ಭಾಗಾ ಉದಕ್ರಮನ್ । ತದೇತತ್ಪುರುಷಂ ವೈ ದೇವಾ ಇತ್ಯಸ್ಮಿನ್ಖಂಡೇ ಪ್ರಪಂಚಿತಂ । ಉತ್ಕ್ರಾಂತಮೇಧಾ ಭೂಮೌ ಪ್ರವಿಶ್ಯ ವ್ರೀಹಿರ್ಯವಶ್ಚೇತಿ ಯೌ ಧಾನ್ಯವಿಶೇಷೌ ವಿದ್ಯೇತೇ ತಾವುಭೌ ಭೂಮೌ ತದ್ರೂಪತಾಂ ಪ್ರಾಪ್ತಾವಜಾಯೇತಾಂ ಭೂಮೇಃ ಸಕಾಶಾದುತ್ಪನ್ನೌ । ತದ್ಯತ್ಪಶಾವಿತ್ಯಾದಿಕಂ ತಸ್ಮಿನ್ನೇವ ಖಂಡೇ ವ್ಯಾಖ್ಯಾತಂ ॥

ಪೂರ್ವದಲ್ಲಿ ಮನುಷ್ಯರೇ ಮೊದಲಾದವರಲ್ಲಿದ್ದ ಯಜ್ಞಯೋಗ್ಯವಾದ ಸತ್ವಾಂಶವು ಕಾರಣಾಂತರದಿಂದ ಹೊರಟು ಹೋದುವು. ಈ ವಿಷಯವು ಹಿಂದಿನ ಅಧ್ಯಾಯದಲ್ಲಿ ಪುರುಷಂ ವೈ ದೇವಾ ಎಂಬ ಖಂಡದಲ್ಲಿ ಹೇಳಲಾಗಿದೆ. (ಐ. ಬ್ರಾ. ೬-೮) ಹಾಗೆ ಹೊರಟುಹೋದ ಸತ್ವಾಂಶವು ಭೂಮಿಯನ್ನು ಪ್ರವೇಶಿಸಿ ಅಲ್ಲಿ ಯವ ಮತ್ತು ವ್ರೀಹಿ ಎಂಬ ಧಾನ್ಯರೂಪದಿಂದ ಹುಟ್ಟಿದವು. ಈ ವಿಷಯವನ್ನು ಸಹ ಆ ಖಂಡದಲ್ಲಿಯೇ (ಐ. ಬ್ರಾ. ೬-೮) ಹೇಳಲಾಗಿದೆ. ಈ ಯಜ್ಞಾರ್ಹವಾದ ಧಾನ್ಯಗಳಿಂದ ಮಾಡಿದ ಪುರೋಡಾಶವನ್ನು ಪಶುವಿನ ಪೂರ್ತಾ ಭಾಗಗಳನ್ನೆಲ್ಲವನ್ನೂ ಹೋಮಮಾಡಿದಂತಾಗುವುದೆಂದು ತಿಳಿಯಬೇಕು.

ಸಮೇಧೇನ ಹಾಸ್ಯ ಪಶುನೇಷ್ಟಂ ಭವತಿ ಕೇವಲೇನ ಹಾಸ್ಯ ಪಶು-ನೇಷ್ಟಂ ಭವತಿ ಯ ಏವಂ ವೇದ ॥

ತದೇತದ್ವೇದನಂ ಪ್ರಶಂಸತಿ । ಏತದಪಿ ತತ್ರೈವ ವ್ಯಾಖ್ಯಾತಂ । ಪುನರಪ್ಯತ್ರೋಕ್ತಿ-ರ್ಯವಪ್ರಶಂಸಾರ್ಥಾ । ಪೂರ್ವತ್ರ ವ್ರೀಹಿಮಾತ್ರೇ ಪ್ರಾಶಸ್ತ್ಯಂ ಇಹ ತು ವ್ರೀಹಿಯವಾವು-ಭಾವಪಿ ಪ್ರಶಸ್ಯೇತೇ ಇತ್ಯ(ತಿ)ವಿಶೇಷಃ ॥

ಮೇಲೆ ಹೇಳಿದಂತೆ ಯಜ್ಞಾರ್ಹವೂ ಸತ್ವಪೂರ್ಣವೂ ಆದ ವ್ರೀಹಿಯವಮಯವಾದ ಪುರೋಳಾಶದಿಂದ ಹೋಮ ಮಾಡುವುದರಿಂದ ಪೂರ್ತಾ ಪಶುವಿನಿಂದ ಹೋಮಮಾಡಿದಂತಾಗುವುದು ಎಂಬ ವಿಚಾರವನ್ನು ಯಾವ ಪುರುಷನು ತಿಳಿದು ಹೋಮಮಾಡುವನೋ ಆ ಪುರುಷನು ಮಾಡುವ ಯಜ್ಞದಲ್ಲಿ ಈ ಪುರೋಳಾಶಹೋಮದಿಂದ ಪಶುವಿನ ಪೂರ್ತಾ ಹೋಮ ಮಾಡಿದಂತಾಗಿ ಅವನು ಯಜ್ಞದ ಪೂರ್ಣಫಲವನ್ನು ಪಡೆಯುವನು. ಹಿಂದೆ ವ್ರೀಹಿಧಾನ್ಯವನ್ನು ಮಾತ್ರ ಪ್ರಶಂಸಿಸಲಾಗಿತ್ತು. ಈಗ ವ್ರೀಹಿ ಮತ್ತು ಯವ ಎಂಬ ಎರಡುವಿಧ ಧಾನ್ಯಗಳನ್ನು ಇಲ್ಲಿ ಪ್ರಶಂಸಿಸಲಾಗಿದೆ ಎಂಬುವುದೇ ವಿಶೇಷವು.

ಅಥ ಮೀಮಾಂಸಾ ॥ ಅತ್ರ ಯದೇಷ ಹವಿರೇವ ಯತ್ಪಶುರಿತ್ಯುಕ್ತಂ ತತ್ರ ಕಶ್ಚಿದ್ವಿಶೇಷೋ ದಶಮಾಧ್ಯಾಯಸ್ಯ ಸಪ್ತಮಪಾದೇ ಚಿಂತಿತಃ--

ಪಶುಃ ಕೃತ್ಸ್ನೋ ಹವಿಃ ಕಿಂ ವಾ ಪ್ರತ್ಯಂಗಂ ಹವಿರನ್ಯತಾ ।
ಆದ್ಯಶ್ಚೋದನಯಾ ನ್ಯೈವಮವದಾನಪೃಥಕ್ತ್ವತಃ ಇತಿ ॥

ಅಗ್ನೀಷೋಮೀಯಂ ಪಶುಮಾಲಭೇತೇತ್ಯತ್ರ ಕೃತ್ಸ್ನಸ್ಯ ಪಶೋರೇಕಹವಿಷ್ಟ್ವಂ ಯುಕ್ತಂ । ಕುತಃ । ಅಗ್ನೀಷೋಮದೇವತಾಂ ಪ್ರತಿ ದ್ರವ್ಯತ್ವೇನ ಪಶೋಶ್ಚೋದಿತತ್ವಾತ್ । ನ ಹಿ ಹೃದಯಾದ್ಯಂಗಂ ಸಾಕ್ಷಾತ್ಪಶುರ್ಭವತೀತಿ ಪ್ರಾಪ್ತೇ ಬ್ರೂಮಃ । ಹೃದಯಸ್ಯಾಗ್ರೇಽವ ದ್ಯತ್ಯಥ ಜಿಹ್ವಾಯಾ ಅವದ್ಯತಿ ವಕ್ಷಸೋಽವದ್ಯತಿ ದೋಷ್ಣೋರವದ್ಯತಿ ಪಾರ್ಶ್ವಯೋರವದ್ಯ-ತೀತ್ಯಾದಿನಾ ಹೃದಯಾದ್ಯಂಗಾನಾಮವದಾನಾನಿ ಪೃಥಗಾಮ್ನಾಯಂತೇ । ಅವದಾನಂ ಚ

ಹವಿಷ್ಟ್ವಪ್ರಯೋಜಕಃ ಸಂಸ್ಕಾರಃ ಪುರೋಡಾಶಾದಾ ಹೋತುಮನುವದೀಯಮಾನತ್ವದರ್ಶ-ನಾತ್ । ಹವಿಃಶಬ್ದಃ ಸ್ವಕರ್ಮವ್ಯುತ್ಪತ್ತ್ಯಾ ಹೋಮಯೋಗ್ಯಂ ದ್ರವ್ಯಂ ಬ್ರೂತೇ । ಪಶ್ವಾಕೃತಿ-ಚೋದನಾ ತು ಹೃದಯಾದ್ಯಂಗದ್ವಾರೇಣ । ತಸ್ಮಾತ್ಪ್ರತ್ಯಂಗಂ ಹವಿರ್ಭೇದಃ ॥

*English Translation*

## SECOND CHAPTER

**(The remaining rites of the animal sacrifice. The Pratar-anuvaka)**

(Why fire is carried round the sacrificial aninal)

The Devas spread the sacrifice. When doing so, the Asuras attacked them, intending to put an obstacle in their way (to prevent the successful performance of the sacrifice). The attack was made against the sacrificial post from the eastern direction after the animal had been consecrated by the Apri verses (see 2, 4) and before the fire was carried round the animal. The Devas awoke, and surrounded for their own protection, as well as for that of the sacrifice, (the place) with a threefold wall resembling fire. The asuras seeing those walls shining and blazing, did not venture an attack, but ran away. Thus the Devas defeated the Asuras on the eastern side as well as on the western. For this reason the sacrificers perform the rite of carrying the round (the animal), when consecrated, and have a mantra recited; for they thus surround the animal, with a three-fold wall shinking like fire for their own protection and that of the sacrifice.

After the animal is consecrated, and fire carried around it, they take it northwards. They carry before it a firebrand, meaning thereby that the animal is ultimately the sacrificer himself; they believe that he will go to heaven having that light (the firebrand) carried before him. And in this way he really goes to heaven.

The Adhvaryu throws sacred grass (barhis) on the spot where they are to kill the animal. When they carry it outside the Vedi, after having consecrated and carried fire round it, they make it sit on the sacred grass (barhis).

They dig a ditch for its excrements. The excrements consist of herbs; the earth is the proper place for herbs; thus puts them at the end in their proper place (by throwing them into a ditch. dng in the earth).

They say: when the animal is the offering, then many parts (of this offering) go off (are not used), such as hairs, skin, blood, half-digested food, hoofs, the two horns, some pieces of flesh which fall to the ground (South being the case) in what way then is the deficiency made up? The answer is if they sacrifice Purodas divided into its proper parts along with the animal, then the animal sacrifice is made complete. When the sacrificial essence had gone from the animals, both rice and barley sprang out of it. When they offer Purodas divided into its proper parts along with the animal, then they should think, "our animal was sacrificed with the sacrificial essence in it; our animal has been sacrificed in its entirety." The animal of him who has this knowledge is sacrificed in its entirety.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದ ಮೊದಲನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತಮಾಧ್ಯಾಯೇ ದ್ವಿತೀಯಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ವಪಾಹೋಮಕಾಲದಲ್ಲಿ ತೊಟ್ಟಿಕ್ಕುವ ದ್ರವ್ಯಗಳ ಹೋಮ ಇತ್ಯಾದಿ ]

ತಸ್ಯ ವಪಾಮುತ್ಖಿದ್ಯಾಹರಂತಿ ತಾಮಧ್ವರ್ಯುಃ ಸ್ರುವೇಣಾಭಿಘಾರ-
ಯನ್ನಾಹ ಸ್ತೋಕೇಭ್ಯೋಽನುಬ್ರೂಹೀತಿ ತದ್ಯತ್ಸ್ತೋಕಾ
ಶ್ಚ್ಯೋತಂತಿ ಸರ್ವದೇವತ್ಯಾ ವೈ ಸ್ತೋಕಾ ನೇನ್ಮ ಇಮೇಽನಭಿ
ಪ್ರೀತಾ ದೇವಾನ್ಗಚ್ಛಾನಿತಿ ।

ಅಥ ಸ್ತೋಕಾನುವಚನೀಯಾ ವಿಧಾತುಮಾದಾ ಪ್ರೈಷಮಂತ್ರಂ ವಿಧತ್ತೇ । ತಸ್ಯ ಪಶೋರ್ವಪಾಮುದರಗತಾಂ ವಸ್ತ್ರಸದೃಶೀಮುತ್ಖಿದ್ಯೋದ್ಧೃತ್ಯ ಹೋಮಾರ್ಥಮಾಹರಂತಿ ।

ತಾಂ ಚ ವಪಾಮಧ್ವರ್ಯುರಭಿಘಾರಯನ್ಪ್ರೈಷಮಂತ್ರಂ ಬ್ರೂಯಾತ್ । ತದೇತದಾಪಸ್ತಂಬೋ ವಿಶದಯತಿ—ತ್ವಾಮು ತೇ ದಧಿರೇ ಹವ್ಯವಾಹಮಿತಿ ಸ್ರುವೇಣ ವಪಾಮಭಿಜುಹೋತಿ ಪ್ರಾದುರ್ಭೂತೇಷು ಸ್ತೋಕೇಷು ಸ್ತೋಕೇಭ್ಯೋಽನುಬ್ರೂಹೀತಿ ಸಂಪ್ರೇಷ್ಯತಿ ಇತಿ । ತಸ್ಯ ಪ್ರೈಷಿಕಸ್ಯ ತಾತ್ಪರ್ಯಂ ದರ್ಶಯತಿ । ತತ್ತಸ್ಯಾಂ ವಪಾಯಾಂ ತದಾನೀಮೇವ ಕ್ಲಿನ್ನಾಯಾಮಾರ್ದ್ರಾಯಾಂ ಶ್ರಪ್ಯಮಾಣಾಯಾಂ ಯದಾ ಸ್ತೋಕಾನೀರಬಿಂದವಃ ಶ್ಚೋತಂತಿ ನಿರ್ಗತ್ಯಾಧಃ ಪತಂತಿ ತದಾನೀಂ ಸರ್ವದೇವತಾನಾಂ ಪ್ರಿಯತ್ವಾದಿಮೇ ಸ್ತೋಕಾಃ ಸ್ವಯಮನಭಿಪ್ರೀತಾ ಅಸ್ಮಾಸು ಪ್ರೀತಿರಹಿತಾ ದೇವಾನ್ಗಚ್ಛಾನ್ಗಮಿಷ್ಯಂತಿ । ತಥಾ ಸತಿ ಮಹದೇತದಸ್ಮಾಕಂ ಭಯಕಾರಣಂ ತನ್ಮಾ ಭೂದಿತ್ಯಭಿಪ್ರೇತ್ಯ ಸ್ತೋಕಪ್ರೀಣನಾರ್ಥಮಿದಂ ಪ್ರೈಷಾನುವಚನಂ । ಅತ್ರ ನೇದಿತ್ಯಯಂ ಶಬ್ದಃ ಪರಿಭಯಾರ್ಥಃ ।

ಈಗ ಸ್ತೋಕಾನುವಚನ ಮಂತ್ರಗಳನ್ನು ಪಠಿಸುವುದಕ್ಕಾಗಿ ಮೊದಲು ಪ್ರೈಷಮಂತ್ರವನ್ನು ಪಠಿಸಬೇಕಾಗಿರುವುದು ಆ ಪಶುವಿನ ಉದರದಲ್ಲಿರುವ ಬಟ್ಟೆಯಂತೆ ತೆಳ್ಳಗೆ ಕಾಣುವ ವಪಾ ಎಂಬ ಭಾಗವನ್ನು ಉದರದಿಂದ ಕಿತ್ತು ಹೋಮಾರ್ಥವಾಗಿ ಅಲ್ಲಿಗೆ ತರುವರು. ಆಗ ಅಧ್ವರ್ಯುವು ಆ ವಪಾ ಎಂಬ ಭಾಗವನ್ನು ತುಪ್ಪದಿಂದ ನೆನೆಯಿಸಿ ಪ್ರೇಷಮಂತ್ರವನ್ನು ಪಠಿಸುವನು. ಈ ವಿಷಯದಲ್ಲಿ ಆಪಸ್ತಂಬರು—**ತ್ವಾ ಮುತೇ ದಧಿರೇ ಹವ್ಯವಾಹಮಿತಿ ಸ್ರುವೇಣ ವಪಾಮಭಿಜುಹೋತಿ । ಪ್ರಾದುರ್ಭೂತೇಷು ಸ್ತೋಕೇಷು ಸ್ತೋಕೇಭ್ಯೋಽನುಬ್ರೂಹೀತಿ ಸಂಪ್ರೇಷ್ಯತಿ** (ಆಪ. ಶ್ರೌ. ಸೂ. ೭-೨೦-೨,೩) ಎಂದು ಹೇಳಿರುವರು. ಪ್ರೈಷಮಂತ್ರವನ್ನು ಏತಕ್ಕೆ ಹೇಳಬೇಕು ಎಂದರೆ, ವಪಾದಿಂದ ತೊಟ್ಟಿಕ್ಕುತ್ತಿರುವ ಬಿಂದುಗಳು ಹೋಮಮೂಲಕವಾಗಿ ಸಮಸ್ತದೇವತೆಗಳಿಗೂ ಸೇರಬೇಕಾಗಿರುವುದು. ಹಾಗೆ ಮಂತ್ರಪೂರ್ವಕವಾಗಿ ಹೋಮಮಾಡದಿದ್ದರೂ ಅವು ಕೆಳಗೆ ಭೂಮಿಯಮೇಲೆ ಬಿದ್ದು ಕಡೆಗೆ ದೇವತೆಗಳಿಗೆ ಸೇರಿಯೇಸೇರುವುದು. ಆದರೆ ಮಂತ್ರಪೂರ್ವಕವಾಗಿ ಹೋಮ ಮಾಡದಿದ್ದರೆ ಆ ಬಿಂದುಗಳು ದೇವತೆಗಳನ್ನು ಸೇರಿದರೂ ಯಜ್ಞಮಾಡುವ ಮನುಷ್ಯರಿಗೆ ಒಳ್ಳೆಯದಾಗುವುದಿಲ್ಲ. ಏಕೆಂದರೆ ಅದರಿಂದ ದೇವತೆಗಳು ಪ್ರೀತರಾಗುವುದಿಲ್ಲ. ಆದ್ದರಿಂದ ಮಂತ್ರಪೂರ್ವಕವಾಗಿಯೇ ಹೋಮಮಾಡಬೇಕು. ಅದಕ್ಕಾಗಿ **ಸ್ತೋಕೇಭ್ಯೋಽನುಬ್ರೂಹಿ** ಎಂದು ಅಧ್ವರ್ಯುವು ಹೋತೃವಿಗೆ ನಿರ್ದೇಶಿಸುವನು.

**ಜುಷಸ್ವ ಸಪ್ರಥಸ್ತಮಮಿತ್ಯನ್ವಾಹ ವಚೋ ದೇವಪ್ಸರಸ್ತಮಂ । ಹವ್ಯಾ ಜುಹ್ವಾನ ಆಸನೀತಿ ಅಗ್ನೇರೇವೈನಾಂಸ್ತದಾಸ್ಯೇ ಜುಹೋತಿ ।**

ಅಥಾನುವಚನಂ ವಿಧತ್ತೇ । ತಸ್ಯಾನುವಚನಸ್ಯ ಕಾಲ ಆಶ್ವಲಾಯನೇನ ದರ್ಶಿತಃ—ವಪಾಯಾಂ ಶ್ರಪ್ಯಮಾಣಾಯಾಂ ಪ್ರೇಷಿತಃ ಸ್ತೋಕೇಭ್ಯೋಽನ್ವಾಹ ಜುಷಸ್ವ ಇತಿ । ಅತ್ರಾನುವಚನವಕ್ತಾ ಮೈತ್ರಾವರುಣಃ । ತದಾಹ ಬೋಧಾಯನಃ—ಯದಾ ಜಾನಾತಿ ಸ್ತೋಕೇಭ್ಯೋಽನುಬ್ರೂಹೀತಿ ತದಾ ಮೈತ್ರಾವರುಣಃ ಸ್ತೋಕೀಯಾ ಅನ್ವಾಹ ಜುಷಸ್ವ ಸಪ್ರಥಸ್ತಮಮಿತಿ । ತಸ್ಯಾ ಋಚೋ ದ್ವಿತೀಯತೃತೀಯಪಾದಮನುವದತಿ । ಸರ್ವಸ್ಯಾ ಋಚೋಽಯಮರ್ಥಃ । ಹೇ ಅಗ್ನೇ ಹವ್ಯಾ ಹವೀಂಷ್ಯಸ್ಮದೀಯಾನಿ ಆಸನ್ಯಾಸ್ಯೇ ಮುಖೇ ಜುಹ್ವಾನಃ ಪ್ರಕ್ಷಿಪನ್ವಚೋಽ-

ಸ್ಮದೀಯಂ ಸ್ತೋತ್ರಂ ಜುಷಸ್ವ ಸೇವಸ್ವ । ಕೀದೃಶಂ ವಚಃ ಸಪ್ರಥಸ್ತಮಮತಿಶಯೇನ ಪ್ರಥಸಾ ವಿಸ್ತರೇಣ ಸಹಿತಂ ದೇವಪ್ಸರಸ್ತಮಂ ದೇವಾನಾಮತಿಶಯೇನ ಪ್ರೀಣಯಿತೃ । ಅತ್ರಾಽಽಸನೀತಿ ಪದಸ್ಯಾಭಿಪ್ರಾಯಂ ದರ್ಶಯತಿ । ತತ್ತೇನ ಮಂತ್ರಪಾಠೇನ ಸ್ತೋಕಾನಗ್ನೇರೇವ ಮುಖೇ ಜುಹೋತಿ ।

ಪ್ರೈಷಮಂತ್ರದ ಅನುವಚನವನ್ನು ಹೇಳುವರು. ಜುಷಸ್ವ ಸಪ್ರಥಸ್ತಮಮಿತ್ಯನ್ವಾಹ ಎಂಬ ಪ್ರೈಷಮಂತ್ರವನ್ನು ಪಠಿಸಿದಕೂಡಲೇ ಮೈತ್ರಾವರುಣನೆಂಬ ಹೋತೃವಿನ ಸಹಾಯಕನು ಜುಷಸ್ವ ಸಪ್ರಥಸ್ತಮಂ (ಋ. ಸಂ. ೧-೭೫-೧) ಎಂಬ ಮಂತ್ರವನ್ನು ಪಠಿಸುವನು. ಹೋತೃವಿನ ಸಹಾಯಕನಾದ ಮೈತ್ರಾವರುಣನು ಪಠಿಸುವ ಮಂತ್ರಕ್ಕೆ ಅನುವಚನವೆಂದು ಹೆಸರು. ಇದನ್ನು ಯಾವಾಗ ಹೇಳಬೇಕೆಂದರೆ-ಆಶ್ವಲಾಯನರು—ವಪಾಯಾಂ ಶ್ರಪ್ಯಮಾಣಾಯಾಂ ಪ್ರೇಷಿತಃ ಸ್ತೋಕೇಭ್ಯೋಽನ್ವಾಹ ಜುಷಸ್ವ ಸಪ್ರಥಸ್ತಮಮಿಮಂ ನೋ ಯಜ್ಞಮಿತಿ (ಆ. ಶ್ರೌ. ೩-೪-೧) ಎಂದು ಹೇಳಿರುವರು. ಬೋಧಾಯನರು ಸಹ—ಯದಾ ಜಾನಾತಿ ಸ್ತೋಕೇಭ್ಯೋಽನುಬ್ರೂಹೀತಿ ತದಾ ಮೈತ್ರಾವರುಣಃ ಸ್ತೋಕೀಯಾ ಅನ್ವಾಹ ಜುಷಸ್ವ ಸಪ್ರಥಸ್ತಮಮಿತಿ ಎಂದು ಹೇಳಿರುವರು. ಈ ಋಕ್ಕಿನ ಮುಖ್ಯಾರ್ಥವೇನೆಂದರೆ ಎಲೈ ಅಗ್ನಿಯೇ ನಾವು ನಿನ್ನ ಮುಖದಲ್ಲಿ (ಅಗ್ನಿಯಲ್ಲಿ) ಹೋಮಮಾಡುವ ನಮ್ಮ ಹವಿಸ್ಸನ್ನು ಮತ್ತು ಸ್ತೋತ್ರವನ್ನು ಸೇವಿಸು. ಈ ನಮ್ಮ ಸ್ತೋತ್ರವು ವಿಸ್ತಾರವಾಗಿಯೂ ದೇವತೆಗಳಿಗೆ ಅತ್ಯಂತ ಪ್ರೀತಿಕರವಾಗಿಯೂ ಇರುವುದು ಎಂಬರ್ಥವುಳ್ಳ ಮಂತ್ರದಿಂದ ಅಗ್ನಿಯಲ್ಲಿ ಹೋಮಮಾಡುವರು.

ಇಮಂ ನೋ ಯಜ್ಞಮಮೃತೇಷು ಧೇಹೀತಿ ಸೂಕ್ತಮನ್ವಾಹ । ಇಮಾ ಹವ್ಯಾ ಜಾತವೇದೋ ಜುಷಸ್ವೇತಿ ಹವ್ಯಜುಷ್ಟಿಮಾಶಾಸ್ತೇ । ಸ್ತೋಕಾನಾಮಗ್ನೇ ಮೇದಸೋ ಘೃತಸ್ಯೇತಿ ಮೇದಸಶ್ಚ ಹಿ ಘೃತಸ್ಯ ಚ ಭವಂತಿ । ಹೋತಃ ಪ್ರಾಶಾನ ಪ್ರಥಮೋ ನಿಷದ್ಯೇತ್ಯಗ್ನಿರ್ವೈ ದೇವಾನಾಂ ಹೋತಾಽಗ್ನೇ ಪ್ರಾಶಾನ ಪ್ರಥಮೋ ನಿಷದ್ಯೇತ್ಯೇವ ತದಾಹ ।

ಅನುವಚನೀಯಾಮೇಕಾಮೃಚಂ ವಿಧಾಯ ಪುನರಪ್ಯನುವಚನೀಯಂ ಪಂಚರ್ಚಂ ಸೂಕ್ತಂ ವಿಧತ್ತೇ । ಜಾತವೇದ ಇತಿ ಸಂಬೋಧನಂ ವಕ್ಷ್ಯತೇ । ನೋಽಸ್ಮದೀಯಮಿಮಂ ಯಜ್ಞಮಮೃತೇಷು ದೇವೇಷು ಧೇಹಿ ಸ್ಥಾಪಯ । ದ್ವಿತೀಯಪಾದಮನೂದ್ಯ ವ್ಯಾಚಷ್ಟೇ । ಜುಷಸ್ವೇತ್ಯಭಿಧಾನಾದ್ಧವಿಃಸೇವಾಯಾಃ ಪ್ರಾರ್ಥನಂ । ತೃತೀಯಪಾದಮನೂದ್ಯ ವ್ಯಾಚಷ್ಟೇ । ಹೇ ಅಗ್ನೇ ಮೇದಸೋ ವಪಾಯಾ ಹೂಯಮಾನಸ್ಯ ಚ ಘೃತಸ್ಯ ಯೇ ಸ್ತೋಕಾ ಬಿಂದವಃ ಸಂತಿ ತೇಷಾಂ ಮಧ್ಯೇ ಸ್ವಾದೂನ್ಬಿಂದೂನಿತ್ಯಧ್ಯಾಹಾರಃ । ಪ್ರಾಶಾನೇತಿ ವಕ್ಷ್ಯಮಾಣೇನಾನ್ವಯಃ । ಅತ್ರ ಯೇ ಸ್ತೋಕಃ ಪತಂತಿ ಯಸ್ಮಾನ್ಮೇದಸಶ್ಚ ಘೃತಸ್ಯ ಚ ಸಂಬಂಧಿನೋ ಭವಂತಿ ತಸ್ಮಾದ್ಯುಕ್ತೋಽಯಂ ವಾದಃ । ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ । ಹೇ ಹೋತರ್ಹೋಮನಿಷ್ಪಾದಕಾಗ್ನೇ ತ್ವಂ ಪ್ರಥಮೋ ಮುಖ್ಯಃ ಸನ್ನಿಷದ್ಯೋಪವಿಶ್ಯ ಸ್ತೋಕಾನ್ಪ್ರಾಶಾನ

**ಭಕ್ಷಯ। ಯದ್ಯಪಿ ಹೋತೃಶಬ್ದೋಽತ್ರ ಪ್ರಯುಕ್ತಸ್ತಥಾಪ್ಯಗ್ನೇರೇವ ದೇವಹೋತೃತ್ವಾದ-ಗ್ನಿನೇವ ಸಂಬೋಧ್ಯ ಚತುರ್ಥಪಾದೋ ಬ್ರೂತೇ।**

ಜುಷಸ್ವ ಎಂಬ ಅನುವಚನಮಂತ್ರದ ಅರ್ಥಾನುವಾದವನ್ನು ತಿಳಿಸಿದ ಬಳಿಕ **ಇಮಂ ನೋ ಯಜ್ಞಮಮೃತೇಷು** (ಋ. ಸಂ. ೩-೨೧-೧) ಎಂಬ ಐದು ಋಕ್ಕಿನ ಸೂಕ್ತವನ್ನು ಅನುವಚನಮಂತ್ರವನ್ನಾಗಿ ಮೈತ್ರಾವರುಣನು ಪಠಿಸುವನು. ಈ ಋಕ್ಕುಗಳನ್ನು ವಿಶದವಾಗಿ ಸ್ಪಷ್ಟಪಡಿಸುವರು. ಜಾತವೇದ ಎಂಬ ಶಬ್ದವು ಅಗ್ನಿಯನ್ನು ಸಂಬೋಧಿಸಲು ಉಪಯೋಗಿಲಾಗಿದೆ. ಎಲೈ ಅಗ್ನಿಯೇ, ನಾವು ಮಾಡುವ ಈ ಯಜ್ಞವನ್ನು (ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು) ಮರಣರಹಿತರಾದ ದೇವತೆಗಳಿಗೆ ಅರ್ಪಿಸು ಎಂದು ಪ್ರಥಮಪಾದದ ತಾತ್ಪರ್ಯವು; ಎಲೈ ಅಗ್ನಿಯೇ ಈಗ ನಾವು ಅರ್ಪಿಸುವ ಈ ಹವಿಸ್ಸನ್ನು ಸೇವಿಸು ಎಂಬ ಪ್ರಾರ್ಥನೆಯು ಎರಡನೆಯ ಪಾದದಲ್ಲಿ ಉಕ್ತವಾಗಿದೆ; ಎಲೈ ಅಗ್ನಿಯೇ ನಾವು ಹೋಮಮಾಡುತ್ತಿರುವ ಈ ವಪಾದಿಂದ ತೊಟ್ಟಿಕ್ಕುತ್ತಿರುವ ರಸದ ಮತ್ತು ತುಪ್ಪದ ಬಿಂದುಗಳು ಬಹಳ ಮಧುರವಾಗಿರುವುದರಿಂದ ಅವುಗಳನ್ನು ಭಕ್ಷಿಸು ಎಂದು ಮೂರನೆಯ ಪಾದದ ಅಭಿಪ್ರಾಯವು; ಎಲೈ ಹೋತೃ ಅಥವಾ ಹೋಮನಿಷ್ಪಾದಕನಾದ ಅಗ್ನಿಯೇ, ನೀನು ದೇವತೆಗಳಲ್ಲಿ ಬಹಳ ಮುಖ್ಯನಾದವನು. ದೇವತೆಗಳಿಗೆ ಎಂದರೆ ದೇವತೆಗಳು ಮಾಡುವ ಯಜ್ಞದಲ್ಲಿ ಹೋತೃವೆಂಬ ಋತ್ವಿಜನ ಪಾತ್ರವನ್ನು ವಹಿಸುವವನು. ಅಂತಹ ನೀನು ಈ ನಮ್ಮ ಯಜ್ಞವೇದಿಯಲ್ಲಿ ಕುಳಿತು ನಾವು ಅರ್ಪಿಸುತ್ತಿರುವ ವಪಾದಿಂದ ತೊಟ್ಟಿಕ್ಕುವ ರಸದ ಮತ್ತು ಘೃತದ ಬಿಂದುಗಳನ್ನು ಸೇವಿಸು (ಭಕ್ಷಿಸು) ಎಂದು ನಾಲ್ಕನೆಯ ಪಾದದ ಮುಖ್ಯಾರ್ಥವು.

**ಘೃತವಂತಃ ಪಾವಕ ತೇ ಸ್ತೋಕಾ ಶ್ಚೋತಂತಿ ಮೇದಸ ಇತಿ ಮೇದ-ಸಶ್ಚಹ್ಯೇವ ಹಿ ಘೃತಸ್ಯ ಚ ಭವಂತಿ। ಸ್ವಧರ್ಮಂ ದೇವವೀ-ತಯೇ ಶ್ರೇಷ್ಠಂ ನೋ ಧೇಹಿ ವಾರ್ಯಮಿತ್ಯಾಶಿಷಮಾಶಾಸ್ತೇ।**

**ಅಸ್ಮಿನ್ಸೂಕ್ತೇ ದ್ವಿತೀಯಸ್ಯಾ ಋಚಃ ಪೂರ್ವಾರ್ಧಮನೂದ್ಯ ವ್ಯಾಚಷ್ಟೇ। ಹೇ ಪಾವಕ ಶೋಧಕಾಗ್ನೇ ತೇ ತ್ವದರ್ಥಂ ಮೇದಸೋ ವಪಾಯಾಃ ಸಂಬಂಧಿನೋ ಘೃತವಂತೋ ಘೃತ-ಸಹಿತಾಃ ಸ್ತೋಕಾ ಬಿಂದವಃ ಶ್ಚೋತಂತಿ। ಅತ್ರ ಮೇದಃಸಂಬಂಧೇ ಘೃತಸಂಬಂಧೇ ಚ ಪೃಥ-ಕ್ಪ್ರಸಿದ್ಧಿಂ ವಕ್ತುಂ ಮೇದಸಶ್ಚ ಹ್ಯೇವ ಹಿ ಘೃತಸ್ಯ ಚೇತಿ ಹಿಶಬ್ದದ್ವಯಂ। ಉತ್ತರಾರ್ಧಮನೂದ್ಯ ವ್ಯಾಚಷ್ಟೇ। ದೇವವೀತಯೇ ದೇವಾನಾಂ ಭಕ್ಷಣಾಯ ನೋಽಸ್ಮಾಕಂ ಸ್ವಧರ್ಮಂ ಕುಲೋಚಿತಯಾಗಾದಾವನುಷ್ಠಾನರೂಪಂ ಧರ್ಮಂ ದೇಹಿ ಸಂಪಾದಯ। ಕೀದೃಶಂ ಧರ್ಮಂ ಶ್ರೇಷ್ಠಮತಿಪ್ರಶಸ್ತಂ। ಅತ ಏವ ವಾರ್ಯಂ ಸರ್ವೈರ್ವರಣೀಯಂ। ಅತ್ರ ಸ್ವಧರ್ಮಂ ಧೇಹೀ-ತ್ಯನೇನಾಽಽಶೀಃ ಪ್ರತೀಯತೇ।**

ಮೇಲೆ ಹೇಳಿದ ಐದು ಋಕ್ಕಿನ **ಇಮಂ ನೋ ಯಜ್ಞಂ** ಎಂಬ ಸೂಕ್ತದಲ್ಲಿ ಈಗ ಎರಡನೆಯ ಋಕ್ಕಿನ ಅರ್ಥವನ್ನು ವಿಶದಪಡಿಸುವರು. ಎಲೈ ಶೋಧಕನಾದ ಎಂದರೆ ಮನುಷ್ಯರಿಗೆ ಪರಿಶುದ್ಧಿಯನ್ನುಂಟುಮಾಡುವ ಎಲೈ ಅಗ್ನಿಯೇ ನಾವು ಅರ್ಪಿಸುವ ವಪಾ ಅಥವಾ ಮೇದಸ್ಸಿನಿಂದ ತೊಟ್ಟಿಕ್ಕುತ್ತಿರುವ ರಸದ ಮತ್ತು ತುಪ್ಪದ ಬಿಂದುಗಳನ್ನು ಸೇವಿಸು ಎಂದು ಈ ಋಕ್ಕಿನ ಪೂರ್ವಾರ್ಧದ ಅಭಿಪ್ರಾಯವು; ಇಲ್ಲಿ ಹಿ ಎಂಬ ಶಬ್ದವು ಎರಡಾವರ್ತಿ ಪ್ರಯೋಗಿಸಿರುವುದರಿಂದ ವಪಾದಿಂದ ತೊಟ್ಟಿಕ್ಕುತ್ತಿರುವ ಸಾರಭೂತವಾದ ರಸ ಮತ್ತು ಅದಕ್ಕೆ ಹಾಕಿರುವ ಘೃತದ ಬಿಂದುಗಳು ಎಂಬ ಎರಡು ದ್ರವ್ಯಗಳನ್ನು ಪ್ರತ್ಯೇಕವಾಗಿ ಸ್ಪಷ್ಟಪಡಿಸು

ವುದಕ್ಕಾಗಿ ಇಲ್ಲಿ ದ್ವಿರುಕ್ತವಾಗಿದೆ ಎಂದು ತಿಳಿಯಬೇಕು. ಎಲೈ ಅಗ್ನಿಯೇ, ದೇವತೆಗಳ ಭಕ್ಷಣಕ್ಕಾಗಿ ನಾವು ನಮ್ಮ ಸ್ವಧರ್ಮ ರೂಪವಾದ ಯಜ್ಞಾದಿಗಳಲ್ಲಿ ನಿನಗೆ ಅರ್ಪಿಸುವ ಹವಿಸ್ಸನ್ನು ಭಕ್ಷಿಸು ಮತ್ತು ಎಲ್ಲರೂ ಅಪೇಕ್ಷಿಸುವ ಶ್ರೇಷ್ಠವಾದ ಶ್ರೇಯಸ್ಸನ್ನು ನಮಗೆ ಅನುಗ್ರಹಿಸು ಎಂಬ ಪ್ರಾರ್ಥನೆಯು ಈ ಋಕ್ಕಿನ ಉತ್ತರಾರ್ಧದಲ್ಲಿ ಉಕ್ತವಾಗಿದೆ.

**ತುಭ್ಯಂ ಸ್ತೋಕಾ ಘೃತಶ್ಚುತೋಽಗ್ನೇ ವಿಪ್ರಾಯ ಸಂತ್ಯೇತಿ ಘೃತಶ್ಚುತೋ ಹಿ ಭವಂತಿ । ಋಷಿಃ ಶ್ರೇಷ್ಠಃ ಸಮಿಧ್ಯಸೇ ಯಜ್ಞಸ್ಯ ಪ್ರಾವಿತಾ ಭವೇತಿ ಯಜ್ಞಸಮೃದ್ಧಿಮಾಶಾಸ್ತೇ ।**

ತೃತೀಯಸ್ಯಾ ಋಚಃ ಪೂರ್ವಾರ್ಧಮನೂದ್ಯ ವ್ಯಾಚಷ್ಟೇ । ಸಂತಿರ್ದಾನಂ ತಾಮರ್ಹತೀತಿ ಸಂತ್ಯೋ ಹೇ ಸಂತ್ಯ ಫಲಪ್ರದಾನಕುಶಲಾಗ್ನೇ ವಿಪ್ರಾಯ ಮೇಧಾವಿನೇ ತುಭ್ಯಂ ತ್ವದರ್ಥಂ ಸ್ತೋಕಾ ಬಿಂದವೋ ಘೃತಶ್ಚುತೋ ಘೃತಸ್ರಾವಿಣೋ ವರ್ತಂತೇ । ಅತ್ರ ಘೃತಸ್ರಾವಿತ್ವಪ್ರಸಿದ್ಧಿಂ ಹಿಶಬ್ದೇನ ದರ್ಶಯತಿ । ಉತ್ತರಾರ್ಧಮನೂದ್ಯ ವ್ಯಾಚಷ್ಟೇ । ಹೇ ಅಗ್ನೇ ಋಷಿರ್ದ್ರಷ್ಟಾ ಶ್ರೇಷ್ಠಃ ಪ್ರಶಸ್ತತಮಶ್ಚ ಸಮಿಧ್ಯಸೇಽಸ್ಮಾಭಿಃ ಪ್ರಜ್ವಾಲ್ಯಸೇ । ಅತೋ ಯಜ್ಞಸ್ಯಾಸ್ಮದೀಯಸ್ಯ ಪ್ರಾವಿತಾ ಪ್ರಕರ್ಷೇಣ ರಕ್ಷಿತಾ ಭವ । ಅತ್ರ ಯಜ್ಞರಕ್ಷಣವಚನೇನ ಯಜ್ಞಸಮೃದ್ಧಿಪ್ರಾರ್ಥನಂ ॥

ಈಗ ಮೂರನೆಯ ಋಕ್ಕಿನ ಅರ್ಥವನ್ನು ವಿವರಿಸುವರು. ಭಾಷ್ಯಕಾರರು ಸಂತ್ಯ ಎಂಬ ಶಬ್ದಕ್ಕೆ ಈರೀತಿ ಅರ್ಥ ಮಾಡಿರುವರು. ಸಂತಿ ಎಂದರೆ ದಾನವು, ಸಂತ್ಯ ಎಂದರೆ ದಾನಾರ್ಹನು, ದಾನಾದಿಗಳನ್ನು ಕೊಡಲು ಸಮರ್ಥನಾದವನು. ಆದ್ದರಿಂದ ಸಂತ್ಯ ಎಲೈ ಯಜ್ಞಾದಿಕರ್ಮಗಳಿಗೆ ಉಚಿತ ಫಲಪ್ರದನಾದ ಅಗ್ನಿಯೇ, ಬಹಳ ಬುದ್ಧಿವಂತನಾದ ನಿನಗಾಗಿ ತುಪ್ಪದಿಂದ ಸ್ರವಿಸುತ್ತಿರುವ ಈ ಬಿಂದುಗಳು ಸಿದ್ಧಪಡಿಸಲ್ಪಟ್ಟಿವೆ. ಇಲ್ಲಿ ಹಿ ಶಬ್ದಪ್ರಯೋಗವು ಈ ವಿಷಯವನ್ನು ಎಂದರೆ ಘೃತದಿಂದ ಚೆನ್ನಾಗಿ ನೆನೆಸಲ್ಪಟ್ಟು ಎಂದರೆ ತುಪ್ಪದಲ್ಲಿ ಅದ್ದಲ್ಪಟ್ಟು ತೊಟ್ಟಿಕ್ಕುತ್ತಿದೆಯೆಂಬ ವಿಷಯವನ್ನು ಸ್ಪಷ್ಟೀಕರಿಸುವುದು. ಇದು ಈ ಋಕ್ಕಿನ ಪೂರ್ವಾರ್ಧದ ಅರ್ಥವಿವರಣೆಯು; ಎಲೈ ಋಷಿಗಳಿಂದ ಸ್ತುತಿಸಲ್ಪಡುವವನೂ ಶ್ರೇಷ್ಠನೂ ಆದ ಎಲೈ ಅಗ್ನಿಯೇ, ನೀನು ನಮ್ಮಿಂದ ಅಗ್ನಿಕುಂಡದಲ್ಲಿ ಹೊತ್ತಿಸಲ್ಪಟ್ಟವನಾಗಿ ಚೆನ್ನಾಗಿ ಬೆಳಗುತ್ತಿರುವೆ. ಆದ್ದರಿಂದ ನೀನು ನಮ್ಮ ಯಜ್ಞವನ್ನು ಚೆನ್ನಾಗಿ ಎಂದರೆ ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವಂತೆ ರಕ್ಷಿಸು ಎಂದರೆ ಯಜ್ಞಸಮೃದ್ಧಿಯುಂಟಾಗುವಂತೆ ಅನುಗ್ರಹಿಸು ಎಂದು ಉತ್ತರಾರ್ಧದ ಅಭಿಪ್ರಾಯ.

**ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವ ಸ್ತೋಕಾಸೋ ಅಗ್ನೇ ಮೇದಸೋ ಘೃತಸ್ಯೇತಿ ಮೇದಸಶ್ಚ ಹ್ಯೇವ ಹಿ ಘೃತಸ್ಯ ಚ ಭವಂತಿ । ಕವಿಶಸ್ತೋ ಬೃಹತಾ ಭಾನುನಾಽಽಗಾ ಹವ್ಯಾ ಜುಷಸ್ವ ಮೇಧಿರೇತಿ ಹವ್ಯಜುಷ್ಟಿಮೇವಾಽಽಶಾಸ್ತೇ ॥**

ಚತುರ್ಥ್ಯಾ ಋಚಃ ಪೂರ್ವಾರ್ಧಮನೂದ್ಯ ವಾಚಷ್ಟೇ । ಹೇ ಅಧ್ರಿಗೋ ಘೃತರಶ್ಮೇ ಹೇ ಶಚೀವಃ ಶಕ್ತಿಮನ್ನಗ್ನೇ ಮೇದಸೋ ವಪಾಯಾಃ ಸಂಬಂಧಿನೋ ಘೃತಸ್ಯ ಸ್ತೋಕಾಸೋ

ಬಿಂದವಸ್ತುಭ್ಯಂ ತ್ವದರ್ಥಂ ಶ್ಚೋತಂತಿ ಕ್ಷರಂತಿ । ಅತ್ರಾಪಿ ಹಿಶಬ್ದದ್ವಯಂ ಪೂರ್ವವತ್ । ಉತ್ತರಾರ್ಧಮನೂದ್ಯ ವ್ಯಾಚಷ್ಟೇ । ಹೇ ಅಗ್ನೇ ತ್ವಂ ಕವಿಶಸ್ತೋ ವಿದ್ವದ್ಭಿರೃತ್ವಿಗ್ಭಿಃ ಸ್ತುತಃ ಸಸ್ಪೃಹತಾ ಭಾನುನಾ ಮಹತಾ ತೇಜಸಾ ಯುಕ್ತ ಆಗಾ ಆಗಚ್ಛ । ಹೇ ಮೇಧಿರ ಯಜ್ಞ-ಯೋಗ್ಯಾಸ್ಮದೀಯಾನಿ ಹವ್ಯಾನಿ ಜುಷಸ್ವ । ತದೇತದ್ಧವಿಃಸೇವಾಯಾಃ ಪ್ರಾರ್ಥನಂ ॥

ಈಗ ನಾಲ್ಕನೆಯ ಋಕ್ಕಿನ ಅರ್ಥವನ್ನು ವಿವರಿಸುವರು.] ಹೇ ಅಧ್ರಿಗೋ-ಘೃತದಿಂದ ಪೂರ್ವವಾದ ರಶ್ಮಿಯುಳ್ಳವನೂ, ಅತ್ಯಂತಬಲಶಾಲಿಯೂ ಆದ ಎಲೈ ಅಗ್ನಿಯೇ, ನಾವು ನಿನಗಾಗಿ ಅರ್ಪಿಸಿರುವ ಈ ವಪಾದಿಂದ ತೊಟ್ಟಿಕ್ಕುತ್ತಿರುವ ರಸಬಿಂದುಗಳೂ ತುಪ್ಪದ ಬಿಂದುಗಳೂ ನಿನಗಾಗಿ ಸ್ರವಿಸುತ್ತಾ ಸಿದ್ಧಪಡಿಸಲ್ಪಟ್ಟಿವೆ. ಇಲ್ಲಿಯೂ ಹಿ ಶಬ್ದದ ಪ್ರಯೋಗವು ಹಿಂದಿನಂತೆಯೇ. ಇದು ಋಕ್ಕಿನ ಪೂರ್ವಾರ್ಧದ ವಿವರಣೆಯು; ಎಲೈ ಅಗ್ನಿಯೇ ನೀನು ಕವಿಗಳಾದ ಋತ್ವಿಕ್ಕುಗಳಿಂದ ಸ್ತುತಿಸಲ್ಪಡುವವನು, ಅತ್ಯಂತ ದೊಡ್ಡದಾದ ಮತ್ತು ಪ್ರಕಾಶಮಾನವಾದ ಕಾಂತಿಯಿಂದ ಬೆಳಗುತ್ತಿರುವವನು. ಇಂತಹ ನೀನು ಈ ನಮ್ಮ ಯಜ್ಞಭೂಮಿಗೆ ಬಂದು ನಾವು ನಿನಗಾಗಿ ಅರ್ಪಿಸುವ ಯಜ್ಞಯೋಗ್ಯವಾದ ಹವಿಸ್ಸುಗಳನ್ನು ಸೇವಿಸು ಎಂಬ ಪ್ರಾರ್ಥನೆಯು ಉತ್ತರಾರ್ಧದಲ್ಲಿ ಸೂಚಿತವಾಗಿದೆ.

ಓಜಿಷ್ಠಂ ತೇ ಮಧ್ಯತೋ ಮೇದ ಉದ್ಧೃತಂ ಪ್ರ ತೇ ವಯಂ ದದಾ-
ಮಹೇ । ಶ್ಚೋತಂತಿ ತೇ ವಸೋ ಸ್ತೋಕಾ ಅಧಿತ್ವಚಿ ಪ್ರತಿ
ತಾನ್ದೇವಶೋ ವೀಹೀತಿ । ಅಭ್ಯೇವೈನಾಂಸ್ತದ್ವಷಟ್ಕರೋತಿ
ಯಥಾ ಸೋಮಸ್ಯಾಗ್ನೇ ವೀಹೀತಿ ।

ಪಂಚಮ್ಯಾ ಋಚಶ್ಚತುರೋಽಪಿ ಪಾದಾನನುವದತಿ । ಹೇ ಅಗ್ನೇ ತ್ವದರ್ಥಮೋಜಿಷ್ಠಂ ಬಲವತ್ತಮಂ ಮೇದೋ ವಪಾರೂಪಂ ಮಧ್ಯತಃ ಪಶೋರ್ಮಧ್ಯಭಾಗಾದುದ್ಧೃತಮುತ್ಕೃಷ್ಯ ಸಂಪಾದಿತಂ ವಯಂ ಯಜಮಾನಾಸ್ತೇ ತುಭ್ಯಂ ಪ್ರದದಾಮಹೇ ಪ್ರಕರ್ಷೇಣ ದದ್ಮಃ । ಹೇ ವಸೋ ಸರ್ವೇಷಾಂ ನಿವಾಸಹೇತೋಽಧಿತ್ವಚಿ ವಪಾಯಾಮಧಿಶ್ರಿತಾಃ ಸ್ತೋಕಾ ಬಿಂದವಸ್ತೇ ತ್ವದರ್ಥಂ ಶ್ಚೋತಂತಿ ಕ್ಷರಂತಿ । ದೇವಶಸ್ತತ್ತದ್ದೇವತುಷ್ಟ್ಯರ್ಥಂ ತಾನ್ಸ್ತೋಕಾನ್ಪ್ರತಿ ವೀಹಿ ಪ್ರತ್ಯೇಕಂ ಪಿಬ । ಏತನ್ಮಂತ್ರತಾತ್ಪರ್ಯಂ ದರ್ಶಯತಿ । ತತ್ತೇನ ಮಂತ್ರಪಾಠೇನೈತಾ-ನ್ಸ್ತೋಕಾನಭಿವಷಟ್ಕಾರಮಂತ್ರಂ ಪಠತಿ । ಯಥಾ ಸೋಮಸ್ಯೇತ್ಯಾದಿಮಂತ್ರಸ್ತದ್ವತ್ ।

ಈಗ ಐದನೆಯ ಋಕ್ಕಿನ ಮಂತ್ರದ ಅರ್ಥವನ್ನು ವಿವರಿಸುವರು-ಎಲೈ ಅಗ್ನಿಯೇ ನಿನಗಾಗಿ ಪುಷ್ಟಿಪ್ರದವೂ ಮೇದೋರೂಪವೂ ಆದ ಈ ವಪಾಭಾಗವನ್ನು ಪಶುವಿನ ಶರೀರದ ಮಧ್ಯಭಾಗದಿಂದ (ಉದರದಿಂದ) ಹೊರತೆಗೆದು ಯಜಮಾನನೇ ಮೊದಲಾದ ನಾವುಗಳು ಸಿದ್ಧಪಡಿಸಿ ಹವಿಸ್ಸಿನ ರೂಪದಲ್ಲಿ ನಿನಗೆ ಅರ್ಪಿಸುವೆವು. ಎಲೈ ವಸತಿದಾಯಕನಾದ ಅಗ್ನಿಯೇ, ಬೇಯಿಸಿದ ಈ ವಪಾದಿಂದ ಸ್ರವಿಸುತ್ತಿರುವ ಈ ಬಿಂದುಗಳು ನಿನಗಾಗಿ ಸಿದ್ಧಪಡಿಸಲ್ಪಟ್ಟು ಜಿನುಗುತ್ತಿವೆ. ದೇವತೆಗಳ ಪ್ರೀತ್ಯರ್ಥವಾಗಿ ಸ್ರವಿಸುತ್ತಿರುವ ಆ ಬಿಂದುಗಳನ್ನು ಪ್ರತ್ಯೇಕವಾಗಿ ಪಾನಮಾಡು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ರೀತಿ ಮಂತ್ರಪಠನಾನಂತರ ವಷಟ್ಕಾರವನ್ನು ಮಂತ್ರಾಂತ್ಯದಲ್ಲಿ ಪಠಿಸಿ ಹೋಮ ಮಾಡುವರು. ಎಲೈ ಅಗ್ನಿಯೇ ಸೋಮವನ್ನು ಪಾನಮಾಡು ಎಂದು ಅಗ್ನಿಯಲ್ಲಿ ಹೋಮಮಾಡುವಂತೆಯೇ ಈಗಲೂ ಹೋಮಮಾಡಬೇಕು.

**ತದ್ಯತ್ಸ್ತೋಕಾ ಶ್ಚ್ಯೋತಂತಿ ಸರ್ವದೇವತ್ಯಾ ವೈ ಸ್ತೋಕಾಸ್ತಸ್ಮಾದಿಯಂ ಸ್ತೋಕಶೋ ವೃಷ್ಟಿರ್ವಿಭಕ್ತೋಪಾಚರತಿ ॥**

ಇದಾನೀಂ ಸ್ತೋಕಾನ್ಪ್ರಶಂಸತಿ । ತತ್ಸಸ್ಯಾಂ ವಪಾಯಾಂ ಯದ್ಯಸ್ಮಾತ್ಕಾರಣಾತ್ಸ್ತೋಕಾ ಶ್ಚ್ಯೋತಂತಿ ತೇ ಚ ಸ್ತೋಕಾಃ ಸರ್ವಾಸಾಂ ದೇವತಾನಾಂ ಪ್ರಿಯಾ ಏವ ತಸ್ಮಾದ್ದೇವಾನುಗ್ರಹಾದಿಯಂ ವೃಷ್ಟಿರ್ಲೋಕೇ ಸ್ತೋಕಶಃ ಪ್ರತಿಬಿಂದುಭಿರ್ವಿಭಕ್ತಾ ಸತೀ ಭೂಸಮೀಪಮಾಗಚ್ಛತಿ ॥

ಈಗ ವಪಾದಿಂದ ತೊಟ್ಟಿಕ್ಕುವ ಬಿಂದುಗಳನ್ನು ಪ್ರಶಂಸೆಮಾಡುವರು. ವಪಾದಿಂದ ತೊಟ್ಟು ತೊಟ್ಟಾಗಿ ಕೆಳಗೆ ಬೀಳುತ್ತಿರುವ ಆ ಬಿಂದುಗಳು ಸಮಸ್ತ ದೇವತೆಗಳಿಗೂ ಪ್ರಿಯವಾಗಿರುವವು ಮತ್ತು ಇವು ಎಲ್ಲಾ ದೇವತೆಗಳಿಗೂ ಸೇರುವವು ಎಂದು ಹೇಳಲ್ಪಡುತ್ತವೆ. ವಪಾದಿಂದ ಜಿನುಗಿ ಭೂಮಿಯಲ್ಲಿ ಬೀಳುತ್ತಿರುವ ಬಿಂದುಗಳು ಭೂಮಿಯ ಮೇಲೆ ಬೀಳುವ ಮಳೆಯ ಹನಿಗಳಂತೆ ಕಾಣುತ್ತಿರುವವು. ಈ ಬಿಂದುಗಳು ಪ್ರತ್ಯೇಕವಾಗಿ ಬೀಳುವುದನ್ನು ತೈತ್ತಿರೀಯಸಂಹಿತೆಯು ಈರೀತಿ ತಿಳಿಸುತ್ತವೆ. ವಾಯೋ ವೀಹಿ ಸ್ತೋಕಾನಾಮಿತ್ಯಾಹ । ತಸ್ಮಾದ್ವಿಭಕ್ತಾಃ ಸ್ತೋಕಾ ಅವಪದ್ಯಂತೆ (ತೈ. ಸಂ. ೬-೩-೯)



*English Translation*

**(The offering of the drops which fall from the omentum)**

After the Vapa (omentum) has been torn out (of the belly), they bring it (to the fire for being fried). The Adhvaryu causes to drip out of a Sruva drops of hot melted butter. When the drops are falling to (the ground), the Adhvaryu orders the Hotar to recite the mantra approiate to the drops (falling down). For the drops belong to all deities. He might think, they are not mine. (I, the priest, have nothing to do with them): they may, therefore, uninvited go to the Gods; (but he ought to repeat mantras for them).

He repeats the Anuvakya (for the drops) "Be favonrable to our loud voice (to be heard at a distance) which is agreeble to the Gods, when swallowing our offerings with thy mouth! (1, 75; 1)". By this mantra he throws the drop into the mouth of Agni. He further repeats the hymn: "bring this our sacrifice among the Gods" (3, 2, 1). By the words (of the second pada of the first verse :) be favourale to our offerings. In the words (in the third pada of the first verse :) "eat, O Agni, the drops of the marrow (and the) melted butter," the drops of the marrow and the melted butter are mentioned. The words (of the fourth pada of the first verse :) "eat, O Hotar, having first taken thy seat!" Agni (for he is the Hotar of the Gods) eat, after having taken &c.

(In the first half of the second vere :) " the drops of melted butter drip for thee, O purifier, from the marrow, " the drops both of the melted butter and the marrow are mentioned. (By the second half :) Grant us the best things which are desirable, for worshipping (thee) in the proper way," he pronounces a blessing.

(In the first half of third verse :) " O ! Agni ! these drops are dripping melted butter for thee, the wise, who art to be worshippied with gifts," the drops (of marrow) are described as " dripping melted butter." (By the second half :) " thou, the best Rishi art kindled ; be a carrier of the sacrifice !" he (the priest) orders the sacrifice to be successful.

(In the first half of the fourth verse :) " to thee, O Adhrigu ! drop the drops of marrow and melted butter, O Agni ! thou strong one ! " the drops both of the marrow and melted butter are mentioned. (By the second half :) " mayst thou, praised by poets, come to us with thy brightly shining flame ! kindly accept our offerings, O wise !" the priest asks the acceptance of the offerings.

(After the recital ot the fifth verse :) " we offer to thee the most juicy marrow (the Vapa) taken out of the belly : these drops of melted butter drip on this thin skin (the Vapa), carry them severally up to the Gods ! " the priest pronounces the formula Vaushat ! for the drops (and thus concludes the offering of the drops).

He then repeats the same formula (the Anuvashatkara as if sacrificing the Soma,) O Agni, enjoy the Soma ! (using instead of "Soma" the word " drop "). Those drops belong to all the Gods. Thence the rain falls, divided in drops, down upon the earth.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು



# ಅಥ ಸಪ್ತಮಾಧ್ಯಾಯೇ ತೃತೀಯಃ ಖಂಡಃ

## ಏಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಸ್ವಾಹಾಕೃತಿ ಮತ್ತು ವಪಾಹೋಮದ ವಿಶೇಷಸಂಗತಿಗಳು ]



ತದಾಹುಃ ಕಾಃ ಸ್ವಾಹಾಕೃತೀನಾಂ ಪುರೋನುವಾಕ್ಯಾಃ ಕಃ ಪ್ರೈಷಃ ಕಾ ಯಾಜ್ಯೇತಿ । ಯ ಏವೈತಾ ಅನ್ವಾಹೈತಾಃ ಪುರೋನು-ವಾಕ್ಯಾ ಯಃ ಪ್ರೈಷಃ ಸ ಪ್ರೈಷೋ ಯಾ ಯಾಜ್ಯಾ ಸಾ ಯಾಜ್ಯಾ ।

ಅಥ ವಪಾಪ್ರಶಂಸಾಂ ಹೃದಿ ನಿಧಾಯ ತದುಪಯೋಗಿನಂ ಕಂಚಿತ್ಪ್ರಶ್ನಮುತ್ಥಾಪಯತಿ । ಸ್ವಾಹಾಕೃತಿ ಶಬ್ದೇನಾಂತಿಮಪ್ರಯಾಜದೇವತಾ ಉಚ್ಯಂತೇ । ತಾಸಾಂ ದೇವತಾನಾಂ ಪುರೋನುವಾಕ್ಯಾಪ್ರೈಷಯಾಜ್ಯಾಸು ಜ್ಞಾನರಹಿತಾ ಬ್ರಹ್ಮವಾದಿನಃ ಪೃಚ್ಛಂತಿ । ತಸ್ಯ ಪ್ರಶ್ನಸ್ಯೋತ್ತರಮಾಹ । ವಪಾಸಂಬಂಧಿ ಸ್ತೋಕಾರ್ಥಂ ಪ್ರೇಷಿತೋ ಮೈತ್ರಾವರುಣೋ ಜುಷಸ್ವೇತ್ಯಾದಯೋ ಯಾ ಏವೈತಾ ಅನ್ವಾಹ ಏತಾ ಏವ ಸ್ವಾಹಾಕೃತೀನಾಂ ಪುರೋನುವಾಕ್ಯಾ ಭವಂತಿ । ನ ತ್ವನ್ಯಾಃ ಸಂತಿ । ಅನೇನ ವಪಾಪ್ರಶಂಸಾ ಸೂಚಿತಾ । ಪ್ರೈಷಸೂಕ್ತೇ ಹೋತಾ ಯಕ್ಷದಗ್ನಿಂ ಸ್ವಾಹಾಜ್ಯಸ್ಯೇತಿ ಪ್ರಯಾಜಾಂತಿಮೋ ಯಃ ಪ್ರೈಷ ಆಮ್ನಾತಃ ಸ ಏಷ ಪ್ರೈಷಃ। ಆಪ್ರೀಸೂಕ್ತೇ ಯೇಯಮುತ್ತಮಾ ಯಾಜ್ಯಾರೂಪೇಣಾಮ್ನಾತಾ ಸೈವ ಸ್ವಾಹಾಕೃತಿದೇವತಾನಾಂ ಯಾಜ್ಯಾ । ತದೇತತ್ಸರ್ವಮಜ್ಞಾನಪ್ರಶ್ನೋತ್ತರಂ ॥

ಇದುವರೆಗೆ ವಪಾಪ್ರಶಂಸೆಯನ್ನು ಮಾಡಿ ಈಗ ಈ ವಿಷಯದಲ್ಲಿ ಕೆಲವರು ಅಜ್ಞಾನಿಗಳು ಒಂದು ಪ್ರಶ್ನೆಯನ್ನು ಕೇಳುವರು—ಸ್ವಾಹಾಕೃತಿದೇವತೆಗಳಿಗೆ ಹೇಳಬೇಕಾದ ಪುರೋನುವಾಕ್ಯಾಮಂತ್ರವು ಯಾವುದು? ಪ್ರೈಷಮಂತ್ರವು ಯಾವುದು? ಮತ್ತು ಯಾಜ್ಯಾಮಂತ್ರವು ಯಾವುದು? ಎಂದು. ಇದಕ್ಕೆ ಉತ್ತರವನ್ನು ಹೇಳುವರು. ವಪಾಸಂಬಂಧವಾದ ಸ್ತೋಕಾ ಎಂಬ ಬಿಂದುಗಳ ಹೋಮಕ್ಕಾಗಿ ಯಾವ ದೇವತೆಗಳನ್ನುದ್ದೇಶಿಸಿ ಜುಷಸ್ವ ಮೊದಲಾದ ಪುರೋನುವಾಕ್ಯಾ ಮಂತ್ರಗಳಿವೆಯೋ ಅದೇ ಮಂತ್ರಗಳು ಸ್ವಾಹಾಕೃತಿದೇವತೆಗಳಿಗೂ ಅನ್ವಯಿಸುವುವು. ಇವಲ್ಲದೆ ಬೇರೆ ಮಂತ್ರಗಳಿಲ್ಲ. ಇದರಿಂದ ವಪಾಪ್ರಾಶಸ್ತ್ಯವು ಹೇಳಿದಂತಾಯಿತು. ಪ್ರೈಷಸೂಕ್ತದಲ್ಲಿ ಹೋತೃವು—**ಯಕ್ಷದಗ್ನಿಂ ಸ್ವಾಹಾಜ್ಯಸ್ಯ** (ತೈ. ಬ್ರಾ. ೩-೬-೩-೧೨) ಎಂಬ ಮಂತ್ರವನ್ನು ಪಠಿಸುವನೋ ಅದೇ ಈ ಸ್ವಾಹಾಕೃತಿದೇವತೆಗಳಿಗೂ ಪ್ರೈಷಮಂತ್ರವು. ಮತ್ತು ಆಪ್ರೀಸೂಕ್ತದಲ್ಲಿ ಕೊನೆಯ ದೇವತೆಗಳಾದ ಸಾಹಾಕೃತಿದೇವತೆಗಳಿಗೆ ಯಾವ ಯಾಜ್ಯಾಮಂತ್ರವು (ತೈ. ಬ್ರಾ. ೩-೬-೪-೧೨) ಉಕ್ತವಾಗಿದೆಯೋ ಅದೇ

ಮಂತ್ರವು ಇಲ್ಲಿಯೂ ಯಾಜ್ಯಾ ಮಂತ್ರವಾಗಿರುವುದು. ಆದ್ದರಿಂದ ಈ ಪ್ರಶ್ನೋತ್ತರವು ತಿಳುವಳಿಕೆಯುಳ್ಳವರಿಂದ ಮಾಡಲ್ಪಟ್ಟಿರುವುದಿಲ್ಲ.

**ತದಾಹುಃ ಕಾ ದೇವತಾಃ ಸ್ವಾಹಾಕೃತಯ ಇತಿ । ವಿಶ್ವೇ ದೇವಾ ಇತಿ ಬ್ರೂಯಾತ್ । ತಸ್ಮಾತ್ಸ್ವಾಹಾಕೃತಂ ಹವಿರದಂತು ದೇವಾ ಇತಿ ಯಜಂತೀತಿ ॥**

ಪುನರಪಿ ತಥಾವಿಧಂ ಪ್ರಶ್ನಾಂತರಮುತ್ಥಾಪಯತಿ । ಅಗ್ನಿವಾಯ್ವಾದಿವತ್ಸ್ವಾಹಾಕೃತ್ಯಾಖ್ಯಾ ಅಪಿ ಪ್ರಸಿದ್ಧಾಃ ಕಾಶ್ಚಿನ್ನ ಸಂತಿ ತಸ್ಮಾದೇತಾಃ ಕಾ ಇತ್ಯಜ್ಞಾತ್ವಾ ಪ್ರಶ್ನಃ। ತಸ್ಯೋತ್ತರಂ ದರ್ಶಯತಿ । ಪ್ರಸಿದ್ಧಾ ಯೇ ದೇವಾಃ ಸಂತಿ ತೇ ಸರ್ವೇ ಸ್ವಾಹಾಕೃತ್ಯಾಖ್ಯಾ ಇತ್ಯಭಿಜ್ಞಾತ ಉತ್ತರಂ ಬ್ರೂಯಾತ್ । ತದೇತದುಪಪಾದಯತಿ । ಅಸ್ಯಾ ಅಂತಿಮಪ್ರಯಾಜಯಾಜ್ಯಾಯಾಶ್ಚತುರ್ಥಪಾದ ಏವಮಾಮ್ನಾತಃ ಸ್ವಾಹಾಕೃತಂ ಹವಿರದಂತು ದೇವಾ ಇತಿ । ತಸ್ಯ ಪಾದಸ್ಯಾಯಮರ್ಥಃ । ಸ್ವಾಹಾಕಾರೇಣ ಸಂಸ್ಕೃತಂ ಹವಿಃ ಸರ್ವೇ ದೇವಾ ಭಕ್ಷಯಂತ್ವಿತಿ । ಏವಂ ಸತಿ ಸ್ವಾಹಾಕೃತಿನಾಮಕಾಃ ಸರ್ವೇ ದೇವಾಸ್ತಸ್ಮಾತ್ಸ್ವಾಹಾಕೃತಮಿತ್ಯಾದಿಪಾದಸಹಿತೇನ ಮಂತ್ರೇಣಾಂತಿಮಂ ಪ್ರಯಾಜಂ ಯಜತಿ । ಮಂತ್ರಲಿಂಗಮೇವಂ ಸ್ವಾಹಾಕೃತಿಶಬ್ದೇನ ಸರ್ವದೇವತಾಭಿದಾನೇ ಪ್ರಮಾಣಮಿತ್ಯರ್ಥಃ । ಪಶೋಃ ಪರ್ಯಗ್ನಿಕರಣಾತ್ಪೂರ್ವಂ ಪ್ರಯಾಜಕಾಲೇ ದಶೈವ ಪ್ರಯಾಜಾ ಇಷ್ಟ್ವಾ ಅಂತಿಮಪ್ರಯಾಜಸ್ತ್ವವಸ್ಥಾಪಿತಃ । ತದುಕ್ತಮಾಪಸ್ತಂಬೇನ—ದಶೇಷ್ಟ್ವೈಕಾದಶಾಯಾಜ್ಯಮವಶಿನಷ್ಟಿ ಇತಿ । ಸೋಽಯಮವಶಿಷ್ಟೋಽನ್ತಿಮಪ್ರಯಾಜೋ ಜುಷಸ್ವ ಸಪ್ರಥಸ್ತಮಂ (ಋ. ಸಂ. ೧-೭೫-೧) ಇತ್ಯಾದಿಃ ಸ್ತೋಕಾನುವಚನಾದೂರ್ಧ್ವಂ ವಪಾಹೋಮಾತ್ಪ್ರಾಗಿಜ್ಯತೇ । ಅತೋ ವ್ಯವಹಿತತ್ವಾದಂತಿಮಪ್ರಯಾಜವಿಷಯಃ ಪುರೋಽನುವಾಕ್ಯಾಪ್ರೈಷಪ್ರಯಾಜ್ಯಾಪ್ರಶ್ನೋ ಯುಕ್ತಃ । ವಪಾಸಮೀಪವರ್ತಿತ್ವಾದೇವ ಸ್ತೋಕಾನುವಚನಮಂತ್ರಾಣಾಮೇತದೀಯಪುರೋಽನುವಾಕ್ಯಾತ್ವಂ ಚೋಪಪನ್ನಂ । ಅನುಷ್ಠಾನಸ್ಯ ವ್ಯವಧಾನೇಽಪಿ ಪ್ರೈಷಯಾಜ್ಯೇ ತತ್ತದನುವಾಕೋಕ್ತೇ ಏವೇತಿ ಸ್ಮರ್ಯತೇ ॥

ಕೆಲವರು ಮತ್ತೆ ಪ್ರಶ್ನೆಮಾಡುವರು—ಸ್ವಾಹಾಕೃತಿದೇವತೆಗಳೆಂದರೆ ಯಾರು? ಅಗ್ನಿ, ವಾಯು ಮೊದಲಾದ ದೇವತೆಗಳಂತೆ ಪ್ರಸಿದ್ಧರಾದ ಸ್ವಾಹಾಕೃತಿದೇವತೆಗಳು ಯಾರೂ ಇಲ್ಲವಲ್ಲ. ಆದ್ದರಿಂದ ಅವರು ಯಾರು ಎನ್ನುತ್ತಾರೆ. ಅದಕ್ಕೆ ಪ್ರತ್ಯುತ್ತರವಾಗಿ ವಿಶ್ವೇದೇವತೆಗಳೇ (ಎಲ್ಲಾ ದೇವತೆಗಳೇ) ಆ ಸ್ವಾಹಾಕೃತಿಯ ದೇವತೆಗಳು ಎಂದು ಹೇಳಬೇಕು. ಈ ಸ್ವಾಹಾಕೃತಿಗೆ ಪ್ರಸಿದ್ಧರಾದ ದೇವತೆಗಳೇ ಇರುವರು. ಹೇಗೆಂದರೆ ಪ್ರಯಾಜ ಮಂತ್ರಗಳಲ್ಲಿ ಕೊನೆಯದಾದ ಮಂತ್ರದ ನಾಲ್ಕನೆಯ ಪಾದದಲ್ಲಿ-**ತಸ್ಮಾತ್ಸ್ವಾಹಾಕೃತಂ ಹವಿರದಂತು ದೇವಾಃ** ಎಂದು ಹೇಳಲಾಗಿದೆ (ಋ. ಸಂ ೧೦-೧೧೦-೧೧) ಇದರ ಅರ್ಥವೇನೆಂದರೆ. ಸ್ವಾಹಕಾರ ಮಂತ್ರದಿಂದ ಸುಸಂಸ್ಕೃತವಾದ ಈ ಆಜ್ಯದ ಹವಿಸ್ಸನ್ನು ಸಮಸ್ತ ದೇವತೆಗಳೂ ಭಕ್ಷಿಸಲಿ ಎಂದು. ಆದ್ದರಿಂದ ಸ್ವಾಹಾಕಾರ ಮಂತ್ರದಿಂದ ಪ್ರಯಾಜ ಹೋಮದ ಕೊನೆಯಮಂತ್ರವನ್ನು ಸರ್ವದೇವತೆಗಳನ್ನೂ ನಿರ್ದೇಶಿಸುವ ಶಬ್ದವಾಗಿರುವುದು. ಪಶುವಿನ ಪರ್ಯಗ್ನಿಕರಣಕ್ಕೆ ಪೂರ್ವದಲ್ಲಿ ಪ್ರಯಾಜಕಾಲದಲ್ಲಿ ಹತ್ತು ಹೋಮಗಳನ್ನು ಮಾತ ಮಾಡುವರು. ಕೊನೆಯದಾದ (ಸ್ವಾಹಾಕೃತಿಯೆಂಬ) ಹನ್ನೊಂದನೆಯ ಹೋಮವು ಇನ್ನೂ ಮಾಡದೆ ಹಾಗೆಯೆ

ಉಳಿದಿರುವುದು. ಈ ವಿಷಯವನ್ನು ಆಪಸ್ತಂಬರು—**ದಶೇಷ್ಟ್ವೈಕಾದಶ ಯಾಜ್ಯಾಮುವಶಿನಷ್ಟಿ** । (ಆಪ. ಶ್ರೌ. ಸೂ ೭-೧೪-೮) ಈ ಉಳಿದಿರುವ ಹನ್ನೊಂದನೆಯ ಪ್ರಯಾಜಮಂತ್ರವು ಯಾವುದು? ಎಂದರೆ **ಜುಷಸ್ವ ಸಪ್ರಥಸ್ತಮಂ** ಎಂಬ ಸ್ತೋಕಾನುವಚನ ಮಂತ್ರವು. ಇದನ್ನು ವಪಾಹೋಮಕ್ಕೆ ಪೂರ್ವಭಾವಿಯಾಗಿ ಉಪಯೋಗಿಸುವರು ಈ ರೀತಿ ವ್ಯವಸ್ಥೆಯಾಗಿರುವುದರಿಂದ ಕೊನೆಯ ಪ್ರಯಾಜಮಂತ್ರವು ಯಾವುದು, ಪುರೋನುವಾಕ್ಯಾಪ್ರೈಷಯಾಜ್ಯಾ ಮಂತ್ರಗಳು ಯಾವುವು ಎಂಬ ಪ್ರಶ್ನೆಯು ಯುಕ್ತವು. ವಪಾಸಮೀಪದಲ್ಲಿರುವುದರಿಂದ ಸ್ತೋಕ(ಬಿಂದುಗಳ) ಅನುವಚನ ಮಂತ್ರಗಳು. ಎಂದರೆ ಪುರೋನುವಾಕ್ಯಾ ಮಂತ್ರಗಳು ಹಿಂದಿನಂತೆಯೇ ಇರುವುವು. ಅನುಷ್ಠಾನಕಾಲದಲ್ಲಿ ಪ್ರೈಷ ಮತ್ತು ಯಜ್ಯಾಮಂತ್ರಗಳು ಆಯಾ ಅನುವಾಕ್ಯಮಂತ್ರಗಳ ಅನುಸಾರವಾಗಿಯೇ ಇರುವುವು. ಈ ವಿಷಯವು ತೈತ್ತಿರೀಯ ಬ್ರಾಹ್ಮಣದಲ್ಲಿ (ತೈ. ಬ್ರಾ ೩-೬-೩-೪) ಹೇಳಲ್ಪಟ್ಟಿರುವುದನ್ನು ಗಮನಿಸಬಹುದು.

> ದೇವಾ ವೈ ಯಜ್ಞೇನ ಶ್ರಮೇಣ ತಪಸಾಹುತಿಭಿಃ ಸ್ವರ್ಗಂ ಲೋಕಮಜಯಂಸ್ತೇಷಾಂ ವಪಾಯಾಮೇವ ಹುತಾಯಾಂ ಸ್ವರ್ಗೋ ಲೋಕಃ ಪ್ರಖ್ಯಾಯತ ತೇ ವಪಾಮೇವ ಹುತ್ವಾನಾದೃತ್ಯೇತರಾಣಿ ಕರ್ಮಾಣ್ಯೂರ್ಧ್ವಾಃ ಸ್ವರ್ಗಂ ಲೋಕಮಾಯಂಸ್ತತೋ ವೈ ಮನುಷ್ಯಾಶ್ಚ ಋಷಯಶ್ಚ ದೇವಾನಾಂ ಯಜ್ಞವಾಸ್ತ್ವಭ್ಯಾಯನ್ಯಜ್ಞಸ್ಯ ಕಿಂಚಿದೇಷಿಷ್ಯಾಮಃ ಪ್ರಜ್ಞಾತ್ಯಾ ಇತಿ ತೇಽಭಿತಃ ಪರಿಚರಂತ ಐತ್ಪಶುಮೇವ ನಿರಾನ್ತ್ರಂ ಶಯಾನಂ ತೇ ವಿದುರಿತ್ಯನ್ವಾವ ಕಿಲ ಪಶುರ್ಯಾವತೀ ವಪೇತಿ ಸ ಏತಾವಾನೇವ ಪಶುರ್ಯಾವತೀ ವಪಾ ॥

ಅಥ ವಪಾಹೋಮಂ ಪ್ರಶಂಸಿತುಮಾಖ್ಯಾಯಿಕಾಮಾಹ । ಪುರಾ ಕದಾಚಿದ್ದೇವಾ- ಜ್ಯೋತಿಷ್ಟೋಮಾದಿಯಾಗೇನ ತೀರ್ಥಯಾತ್ರಾದಿಶ್ರಮೇಣ ಕೃಚ್ಛ್ರಚಾಂದ್ರಾಯಣಾದಿತಪಸಾ ಕೂಷ್ಮಾಂಡಗಣಹೋಮಾದಿಗತಾಭಿರಾಹುತಿಭಿಶ್ಚ ಸ್ವರ್ಗಂ ಲೋಕಮಜಯನ್ಸ್ವೀಕೃತವಂತಃ । ತೇಷಾಂ ದೇವಾನಾಂ ಯಜ್ಞಮಧ್ಯೇ ವಪಾಯಾಮೇವ ಹುತಾಯಾಂ ಸ್ವರ್ಗಃ ಪ್ರಖ್ಯಾತೋಽಭೂತ್ । ತತಸ್ತೇ ದೇವಾ ವಪಾಮೇವ ಹುತ್ವೋತ್ತರಕಾಲೀನಾನಿ ಸರ್ವಾಣಿ ಕರ್ಮಾಣ್ಯನಾದೃತ್ಯೋರ್ಧ್ವಾಭಿಮುಖಾಃ ಸ್ವರ್ಗಂ ಲೋಕಂ ಪ್ರಾಪ್ತಾಃ । ಅನಂತರಂ ಮನುಷ್ಯಾಶ್ಚ ಋಷಯಶ್ಚ ಯಜ್ಞಸಂಬಂಧಿ ಕಿಂಚಿದುತ್ತಮಮಂಗಮನ್ವಿಷ್ಯ ನಿಶ್ಚೇಷ್ಯಾಮ ಇತಿ ವಿಚಾರ್ಯ ತತ್ಪ್ರಜ್ಞಾಯ ಯಜ್ಞಾನಾಂ ಜ್ಞಾನಾಯ ದೇವಾನಾಂ ಯಜ್ಞಭೂಮಿಂ ಪ್ರತ್ಯಾಗಚ್ಛನ್ । ಆಗತ್ಯ ಚ ತೇ ಮನುಷ್ಯಾದಯಸ್ತದನ್ವೇಷಣಾರ್ಥಂ ತಸ್ಯಾಂ ಯಜ್ಞಭೂಮೌ ಪರಿತಶ್ಚರಂತಃ । ನಿರಾನ್ತ್ರಂ ನಿರಂಗಂ ಶಯಾನಂ ಭೂಮೌ ಪತಿತಂ ಪಶುಮೇವೈತ್ಪ್ರಾಪ್ತವಂತಃ । ವಪಾಯಾ ದೇವೈರುತ್ಕೃತ್ಯ ಹುತತ್ವಾದಯಂ ಪಶುರ್ನಿರಾನ್ತ್ರೋ ದೃಷ್ಟಃ । ಯದ್ಯಪ್ಯಾನ್ತ್ರಶಬ್ದಃ ಪುರೀತದ್ವಾಚೀ ತಥಾಪ್ಯತ್ರ ತೇನ ವಪೋಪಲಕ್ಷ್ಯತೇ । ಮನುಷ್ಯಾದಯಃ ಸ್ವಮನಸ್ಯೇವಂ ವಿದುರ್ನಿಶ್ಚಿತವಂತಃ—ವಪಾ ಯಾವತೀ ವಿದ್ಯತ ಏತಾವಾನೇವ ಕಿಲ ಪಶುರನ್ಯಥಾ ಕಥಂ ದೇವಾ

**ವಪಾಮೇವ ಹುತ್ವಾ ಶಿಷ್ಟಾನ್ಯಂಗಾನ್ಯುಪೇಕ್ಷಿತವಂತಃ । ತಥಾ ಪಶೌ ಸಾರಭೂತಮಂಗಂ ವಪೇತಿ । ಆಖ್ಯಾಯಿಕಾಮುಖೇನ ವಪಾಂ ಪ್ರಶಸ್ಯ ಶ್ರುತಿಃ ಸ್ವಯಮಪಿ ಸಾಕ್ಷಾತ್ಪ್ರಶಂಸತಿ । ಪಶುಶರೀರಮಧ್ಯೇ ವಪಾ ಯಾವತೀ ವಿದ್ಯತ ಏತಾವಾನೇವ ಮುಖ್ಯಃ ಪಶುಃ ಹವಿರದಂತು ದೇವಾ ಇತಿ ಮಂತ್ರೇ ವಪಾಯಾಃ ಸರ್ವದೇವಹವಿಷ್ಟ್ವಾಭಿಧಾನಾತ್ ।**

ಈಗ ವಪಾಹೋಮದ ಪ್ರಾಶಸ್ತ್ಯವನ್ನು ವರ್ಣಿಸುವುದಕ್ಕಾಗಿ ಒಂದು ಆಖ್ಯಾಯಿಕೆಯನ್ನು ಹೇಳುವರು—ಪೂರ್ವದಲ್ಲಿ ದೇವತೆಗಳು ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡಿಯೂ, ತೀರ್ಥಯಾತ್ರಾದಿಗಳನ್ನು ಕೃಚ್ಛ್ರಚಾಂದ್ರಾಯಣಾದಿ ಕ್ಲೇಶಕರವಾದ ತಪಸ್ಸನ್ನು ಕೈಗೊಂಡು ಕೂಶ್ಮಾಂಡಹೋಮ, ಗಣಹೋಮ ಮೊದಲಾದ ಅನೇಕ ಹೋಮಗಳನ್ನು ಮಾಡಿಯೂ ಅವುಗಳ ಫಲರೂಪವಾಗಿ ಸ್ವರ್ಗಲೋಕವನ್ನು ಪಡೆದರು. ದೇವತೆಗಳು ಮಾಡಿದ ಯಜ್ಞಗಳ ಮಧ್ಯದಲ್ಲಿ ವಪಾಹೋಮವನ್ನು ಮಾಡಿದ ಕೂಡಲೇ ಅವರಿಗೆ ಸ್ವರ್ಗಲೋಕವು ಕೈವಶವಾಯಿತು. ಆದ್ದರಿಂದ ದೇವತೆಗಳು ವಪಾಹೋಮಾನಂತರ ಉಳಿದ ಇತರ ಕರ್ಮಗಳೆಲ್ಲವನ್ನೂ ಅಲಕ್ಷಿಸಿ ಎಂದರೆ ಅಷ್ಟಕ್ಕೇ ಬಿಟ್ಟು ಸ್ವರ್ಗಲೋಕಕ್ಕೆ ಹೊರಟುಹೋದರು. ಕೆಲವು ಕಾಲದ ಮೇಲೆ ಮನುಷ್ಯರೂ ಋಷಿಗಳೂ ಅಲ್ಲಿಗೆ ಬಂದು ಈ ದೇವತೆಗಳು ಸ್ವರ್ಗಲೋಕಕ್ಕೆ ಹೇಗೆ ಹೋದರು? ಇವರು ಮಾಡಿದ ಕರ್ಮಗಳಲ್ಲಿ ಅತ್ಯಂತ ಫಲಪ್ರದವಾದುದು ಯಾವುದು? ಎಂದು ತಿಳಿದುಕೊಳ್ಳಲು ದೇವತೆಗಳ ಯಜ್ಞಭೂಮಿಯನ್ನೆಲ್ಲಾ ಚೆನ್ನಾಗಿ ಹುಡುಕಿ ನೋಡಿದರು. ಮನುಷ್ಯರು ಯಜ್ಞಭೂಮಿಯನ್ನು ಚೆನ್ನಾಗಿ ಪರಿಶೋಧಿಸಿ ನೋಡುತ್ತಿರುವಾಗ ಆ ಯಜ್ಞಭೂಮಿಯಲ್ಲಿ ಮೃತವಾದ ಒಂದು ಪಶುವು ಬಿದ್ದಿರುವುದು ಕಂಡು ಬಂದಿತು. ಅದರ ಉದರವು ಸೀಳಲ್ಪಟ್ಟು ಅಲ್ಲಿರಬೇಕಾದ ಮುಖ್ಯವಾದ ವಪಾ ಮೊದಲಾದ ಅಂಗಗಳು ಇಲ್ಲದಿರುವುದು ಕಂಡು ಬಂದಿತು. ಆದ್ದರಿಂದ ದೇವತೆಗಳು ಪಶುವಿನ ಉದರದಲ್ಲಿದ್ದ ವಪಾ ಎಂಬ ಅಂಗವನ್ನು ಹೋಮಮಾಡಿಯೇ ಸ್ವರ್ಗಲೋಕವನ್ನು ಪಡೆದರು ಎಂದು ಮನುಷ್ಯರು ಊಹಿಸುವುದೇನೂ ಕಷ್ಟವಾಗಲಿಲ್ಲ. (ಇಲ್ಲಿ ಆಂತ್ರಶಬ್ದಕ್ಕೆ ಉದರದಲ್ಲಿರುವ ಪುರೀಷ ಅಥವಾ ಮಲವೆಂದು ಅರ್ಥವಿದ್ದರೂ ಇಲ್ಲಿ ಸಂದರ್ಭಾನುಸಾರ ಆಂತ್ರವೆಂದರೆ ವಪಾ ಎಂದೇ ಅರ್ಥಮಾಡಬೇಕೆಂದು ಭಾಷ್ಯಕಾರರು ಹೇಳುವರು). ಮತ್ತು ಮನುಷ್ಯರು ಆಗ ಯೋಚಿಸಿದ್ದೇನೆಂದರೆ—ಇಲ್ಲಿರುವ ಪಶುವಿನ ಅಂಗಗಳೆಲ್ಲಾ ಪೂರ್ಣವಾಗಿವೆ. ಉದರದಲ್ಲಿದ್ದ ವಪಾಮಾತ್ರ ಇರುವುದಿಲ್ಲ. ಏತಕ್ಕಾಗಿ ಎಂದರೆ ಪಶುವಿನ ಇತರ ಅಂಗಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿರುವುದಿಲ್ಲ. ವಪಾ ಎಂಬ ಅಂಗಕ್ಕೆ ಮಾತ್ರ ಹೆಚ್ಚಿನ ಪ್ರಾಶಸ್ತ್ಯವಿರುವುದು. ಅದು ಎಲ್ಲಾ ಅಂಗಗಳಲ್ಲಿಯೂ ಶ್ರೇಷ್ಠವಾಗಿಯೂ ಸಾರವತ್ತಾಗಿಯೂ ಇರುವುದು. ಆದ್ದರಿಂದ ವಪಾ ಅಂಗವನ್ನು ಹೋಮಮಾಡಿಯೇ ದೇವತೆಗಳು ಸ್ವರ್ಗಲೋಕವನ್ನು ಪಡೆದರು. ಆದಕಾರಣವೇ ಹವಿರದಂತು ದೇವಾಃ ಎಂದು ವಪಾಹೋಮವನ್ನೇ ದೇವತೆಗಳು ಬಹಳವಾಗಿ ಪ್ರೀತಿಸುವರು ಮತ್ತು ಭಕ್ಷಿಸುವರು ಎಂದು ಹೇಳಿದೆ.

ಅಥ ಯದೇನಂ ತೃತೀಯಸವನೇ ಶ್ರಪಯಿತ್ವಾ ಜುಹ್ವತಿ ಭೂಯಸೀ-
ಭಿರ್ನ ಆಹುತಿಭಿರಿಷ್ಟಮಸತ್ಕೇವಲೇನ ನಃ ಪಶುನೇಷ್ಟಮಸದಿತಿ ।
ಭೂಯಸೀಭಿರ್ಹಾಸ್ಯಾಹುತಿಭಿರಿಷ್ಟಂ ಭವತಿ ಕೇವಲೇನ ಹಾಸ್ಯ
ಪಶುನೇಷ್ಟಂ ಭವತಿ ಯ ಏವಂ ವೇದ ॥

**ನನು ಸುತ್ಯಾದಿನೇ ಸವನೀಯಪಶೋರ್ವಪಾಂ ಪ್ರಾತಃಸವನೇ ಹುತ್ವಾ ಶಿಷ್ಟಾನಿ ಹೃದಯಾದ್ಯಂಗಾನಿ ತೃತೀಯಸವನೇ ಪಕ್ತ್ವಾ ಯಜಮಾನಾ ಜುಹ್ವತಿ । ವಪಾಮಾತ್ರಸ್ಯ ಪಶುಸ್ವರೂಪತ್ವೇ ತೃತೀಯಸವನೇ ಪಶುಶೇಷಂ ಜುಹ್ವತಾಂ ಕೋಽಭಿಪ್ರಾಯ ಇತ್ಯಾಶಂಕ್ಯಾಹ ।**

**ಅಥ ವಪಾಯಾಃ ಪಶುಸಾರತ್ವೇ ಸತ್ಯೇನಮುವಶಿಷ್ಟಂ ಪಶುಂ ತೃತೀಯಸವನೇ ಶ್ರಪಯಿತ್ವಾ ಜುಹ್ವತೀತಿ ಯದಸ್ತಿ ತತ್ರ ಜುಹ್ವತಾಮಯಮಭಿಪ್ರಾಯಃ । ಯದ್ಯಪಿ ವಪಾಯಾಗ ಏವ ಸ್ವರ್ಗಾಯ ಪರ್ಯಾಪ್ತಸ್ತಥಾಪಿನೋಽಸ್ಮಾಕಂ ಭೂಯಸೀಭಿರ್ಬಹುಲಾಭಿರಾಹುತಿಭಿರಿಷ್ಟಮಸ್ತು ಕೇವಲೇನ ದ್ರವ್ಯಾಂತರನಿರಪೇಕ್ಷೇಣ ನಿರವಶೇಷೇಣ ನೋಽಸ್ಮದೀಯೇನ ಪಶುನೇಷ್ಟಮಸ್ತ್ವಿತಿ। ಅತ್ರಾಧಿಕಂ ನೈವ ದೋಷಾಯೇತಿ ಲೌಕಿಕನ್ಯಾಯೇನ ತೃತೀಯಸವನೇ ಪಶ್ವಂಗಹೋಮೋ ನ ತು ವಪಾಯಾಂ ನ್ಯೂನತ್ವಬುದ್ಧ್ಯೇತ್ಯರ್ಥಃ । ವೇದನಂ ಪ್ರಶಂಸತಿ ।**

ಈಗ ಸುತ್ಯಾದಿನದಲ್ಲಿ ಎಂದರೆ ಸೋಮಲತೆಗಳಿಂದ ವಿಧ್ಯುಕ್ತವಾಗಿ ಸೋಮರಸವನ್ನು ಹಿಂಡುವುದಕ್ಕಾಗಿ ಪ್ರತ್ಯೇಕವಾಗಿ ನಿರ್ದಿಷ್ಟವಾದ ದಿನದ ಪ್ರಾತಃಕಾಲದಲ್ಲಿ ನಡೆಸುವ ಪ್ರಾತಃಸವನವೆಂಬ ಕರ್ಮದಲ್ಲಿ ಪಶುವಿನ ವಪಾ ಅಂಗವನ್ನು ಮಾತ್ರ ಹೋಮಮಾಡಿ ಉಳಿದ ಹೃದಯಾದಿ ಇತರ ಅಂಗಗಳನ್ನು ತೃತೀಯಸವನಕಾಲದಲ್ಲಿ (ಸಾಯಂಕಾಲದಲ್ಲಿ) ಬೇಯಿಸಿ ಯಜ್ಞ ಮಾಡುವ ಯಜಮಾನರು ಹೋಮಮಾಡುತ್ತಾರೆ. ಹೀಗೆ ಮಾಡುವುದು ರೂಢಿಯಲ್ಲಿದೆ. (ಸವನವೆಂದರೆ ಸೋಮರಸವನ್ನು ಮಂತ್ರಪೂರ್ವಕವಾಗಿ ಹಿಂಡುವ ಕರ್ಮವು.) ಈ ಕರ್ಮವು ಆ ದಿನ ಮೂರಾವರ್ತಿ ನಡೆಯುವುದು. ಪ್ರಾತಃಕಾಲದಲ್ಲಿ ನಡೆಯುವ ಕರ್ಮಕ್ಕೆ ಪ್ರಾತಃಸವನವೆಂದೂ, ಮಧ್ಯಾಹ್ನಕಾಲದಲ್ಲಿ ನಡೆಯುವ ಕರ್ಮಕ್ಕೆ ಮಾಧ್ಯಂದಿನಸವನವೆಂದೂ, ಸಾಯಂಕಾಲದಲ್ಲಿ ನಡೆಯುವ ಕರ್ಮಕ್ಕೆ ತೃತೀಯಸವನವೆಂದೂ ಹೆಸರು. ಹೀಗೆ ಮಾಡುವುದರಿಂದ ಎಂದರೆ ಪಾತಸ್ಸವನ ಕಾಲದಲ್ಲಿ ಪಶುವಿನ ವಪಾಮಾತ್ರವನ್ನು ಹೋಮಮಾಡುವುದರಿಂದ ಮತ್ತು ತೃತೀಯಸವನಕಾಲದಲ್ಲಿ ಪಶುವಿನ ಉಳಿದ ಅಂಗಗಳನ್ನು ಹೋಮಮಾಡುವುದರಿಂದ ಪೂರ್ತಾ ಪಶುವನ್ನು ಹೋಮಮಾಡಿದಂತಾಯಿತೇ ಎಂದರೆ ಪಶುವಿನ ಅಂಗಗಳಲ್ಲಿ ವಪಾಭಾಗವು ಅತ್ಯಂತ ಸಾರವತ್ತಾದುದರಿಂದ ಅದನ್ನು ಹೋಮಮಾಡಿದರೆ ಪೂರ್ತಾ ಪಶುವನ್ನು ಹೋಮಮಾಡಿದಂತೆಯೇ ಆಗುವುದು. ಪಶುವಿನ ವಪಾಭಾಗವನ್ನು ಹೋಮಮಾಡುವುದರಿಂದ ಸ್ವರ್ಗಪ್ರಾಪ್ತಿಯಾಗುವುದೆಂದು ಹೇಳಿರುವುದರಿಂದ ವಪಾ ಹೋಮಮಾಡಿದ ಮೇಲೆ ಯಜ್ಞದ ಪೂರ್ಣ ಫಲವು ದೊರೆತೇ ದೊರೆಯುವುದು. ಎಂದ ಬಳಿಕ ತೃತೀಯಸವನದಲ್ಲಿ ಪಶುವಿನ ಉಳಿದ ಅಂಗಗಳನ್ನು ಬೇಯಿಸಿ ಹೋಮಮಾಡಬೇಕಾದ ಅವಶ್ಯಕತೆ ಏನು? ಏನೂ ಇಲ್ಲ. ಪಶುವಿನ ಇತರ ಅಂಗಗಳು ಸಿದ್ಧವಾಗಿರುವಾಗ ಅವುಗಳು ಏತಕ್ಕೆ ವ್ಯರ್ಥವಾಗಬೇಕೆಂದು ಅವೆಲ್ಲವನ್ನೂ ಹೋಮಮಾಡುವರು. ಆದ್ದರಿಂದ ಪಶುವಿನ ಎಲ್ಲಾ ಅಂಗಗಳನ್ನೂ ಹೋಮಮಾಡಿದಂತಾಗಿ ಎಂದರೆ ಅನೇಕ ಹೋಮಗಳನ್ನು ಹೋಮಮಾಡಿದಂತಾಗಿ ಪೂರ್ಣಪಶುವಿನ ಹೋಮ ಮಾಡಿದ ಫಲವು ದೊರೆಯುವುದು. ಈ ವಪಾಹೋಮದಿಂದ ಪಶುವಿನ ಇತರ ಅಂಗಗಳ ಅನೇಕ ಹೋಮಗಳನ್ನು ಮಾಡಿದ ಫಲವು ದೊರೆಯುವುದೆಂದು ಯಾವ ಯಜಮಾನನು ತಿಳಿದು ಅದರಂತೆ ಆಚರಿಸುವನೋ ಅವನು ಪೂರ್ಣಪಶುವಿನ ಎಲ್ಲಾ
ಅಂಗಗಳನ್ನು ಹೋಮಮಾಡಿದಂತಾಗಿ ಅವನಿಗೆ ಯಜ್ಞದ ಪೂರ್ಣಫಲವು ದೊರೆಯುವುದು. ೩

*English Translation*

**(On the Svahakritis and the offering of the Vapa.)**

They ask: which are the Puronuvakyas, the Praishas and the Yajyas for the call: Svaha? (The answer is:) The Puronyvakyas are just the same as those recited (for the drops), the Praishas and the Yajyas are also the same.

They further ask; which are the deities for these Svahakritis? (To this) one should auswer, the Visve devah; for there are (at the end) of the Yajya the words, "may the gods cat the oblation over which Svaha! is spoken."

The gods conquered by means of the sacrifice, austerities, penances and sacrificial oblations the heavenly world, After the Vapa had been offered, the heavenly world became apparent to them. Regardless of all the other rites, they went up to heaven by means of the oblation of the Vapa (alone). Thereupon Men and Rishis went to the sacrificial place of the gods (to see) whether they might not obtain something worth knowing. Having gone round about and searched all the place, they found nothing but a disembowelled auimal lying there. Thence they learnt that verily the value of the animol (for sacrifices) consists only in its Vapa, which part is just as much as the whole animal.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತಮಾಧ್ಯಾಯೇ ಚತುರ್ಥಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



**ಸಾ ವಾ ಏಷಾಽಮೃತಾಹುತಿರೇವ ಯದ್ವಪಾಹುತಿರಮೃತಾಹುತಿರಗ್ನ್ಯಾಹುತಿರಮೃತಾಹುತಿರಾಜ್ಯಾಹುತಿರಮೃತಾಹುತಿಃ ಸೋಮಾಹುತಿರೇತಾ ವಾ ಅಶರೀರಾ ಆಹುತಯೋ ಯಾ ವೈ ಕಾಶ್ಚಾಶರೀರಾ ಆಹುತಯೋಽಮೃತತ್ವಮೇವ ತಾಭಿರ್ಯಜಮಾನೋ ಜಯತಿ ॥**

ಆಜ್ಯಾದ್ಯಾಹುತೀನಾಂ ಪ್ರಾಶಸ್ತ್ಯಪ್ರಸಿದ್ಧೇಸ್ತದ್ವದ್ವಪಾಹುತಿರಪಿ ಪ್ರಶಸ್ತೇತಿ ವಿವಕ್ಷಯಾ ತಾಭಿಃ ಸಹೈತಾಮಾಹುತಿಂ ಪ್ರಶಂಸತಿ । ಯಾ ವಪಾಹುತಿರಸ್ತಿ ಸೈಷಾ ಸ್ವಯಮಮೃ-

ತಾಹುತಿರ್ದೇವಾನಾಮಮೃತೇ ಯಾವತೀ ಪ್ರೀತಿಸ್ತಾವತ್ಪ್ರೀತೇರ್ವಪಾಹುತೌ ವಿದ್ಯಮಾನತ್ವಾತ್ । ಆತಿಥ್ಯಕರ್ಮಸು ಮಥಿತಸ್ಯಾಗ್ನೇರಾಹವನೀಯಾಗ್ನೌ ಪ್ರಕ್ಷೇಪರೂಪಾ ಯೇಯಮಾಹುತಿಃ ಸಾಪ್ಯಮೃತಾಹುತಿಃ । ಅಮೃತತ್ವಾಖ್ಯಸ್ಯ ದೇವತ್ವಸ್ಯ ಪ್ರಾಪ್ತಿಹೇತುತ್ವಾತ್ । ಯಾಪ್ಯನ್ಯಾ ಕಾಚಿದಾಜ್ಯಾಹುತಿಃ ಸಾಪ್ಯಮೃತಾಹುತಿರಮೃತಂ ವಾ ಆಜ್ಯಮಿತಿ ಶ್ರುತೇಃ । ಯಾಪ್ಯನ್ಯಾ ಸೋಮಾಹುತಿಃ ಸಾಪಿ ಅಪಾಮ ಸೋಮಮಮೃತಾ ಅಭೂಮ (ಋ. ಸಂ. ೮-೪೮-೩) ಇತಿ ಸೋಮಸ್ಯಾಮೃತತ್ವಪ್ರಾಪ್ತಿಸಾಧನತ್ವಶ್ರವಣಾತ್ । ಯಾ ಏತಾಶ್ಚತಸ್ರ ಆಹುತಯಸ್ತಾಃ ಸರ್ವಾ ಅಶರೀರಾಃ ಶೀಘ್ರಮರಣಯುಕ್ತಶರೀರಪ್ರಾಪ್ತಿಸಾಧನತ್ವಾಭಾವಾತ್ । ಅತ ಏವ ಯಾಃ ಕಾಶ್ಚಿದಶರೀರಾ ಆಹುತಯಃ ಸಂತಿ ತಾಭಿರ್ಯಜಮಾನಶ್ಚಿರಜೀವಿನೋ ರೂಪಮಮೃತತ್ವಂ ದೇವತ್ವಮೇವ ಪ್ರಾಪ್ನೋತಿ ।

ಆಜ್ಯಾಹುತಿಗಳು ಯಾವರೀತಿ ಪ್ರಸಿದ್ಧವಾಗಿರುವವೋ ಅದರಂತೆ ವಪಾಹುತಿಗಳೂ ಸಹ ಪ್ರಸಿದ್ಧವಾಗಿರುವವು ಎಂದು ವಪಾಹುತಿಗಳ ಪ್ರಾಶಸ್ತ್ಯವನ್ನು ವಿವರಿಸುತ್ತಾರೆ. ವಪಾಹುತಿಯೆಂಬುವುದು ಅಮೃತಾಹುತಿಯಂತಿರುವುದು. ದೇವತೆಗಳಿಗೆ ಅಮೃತದಲ್ಲಿ ಯಾವರೀತಿ ಪ್ರೀತಿ ಇರುವುದೋ ಅದೇರೀತಿ ವಪಾಹುತಿಯಲ್ಲಿಯೂ ಇರುವುದು. ಅಮೃತಾಹುತಿಯೆಂದರೆ ಯಾವುದು? ಅಗ್ನಿಮಥನಕಾಲದಲ್ಲಿ ಆತಿಥ್ಯವೆಂಬ ಕರ್ಮದಲ್ಲಿ ಆಹವನೀಯಾಗ್ನಿಯಲ್ಲಿ ಮಾಡುವ ವಿಶೇಷವಾದ ಆಹುತಿಗೆ ಅಮೃತಾಹುತಿಯೆಂದು ಹೆಸರು. ಈ ಆಹುತಿಯಿಂದ ದೇವತೆಗಳಿಗೆ ಅಮೃತತ್ವ (ಮರಣರಹಿತತ್ವ) ಉಂಟಾಗುವುದರಿಂದ ಈ ಆಹುತಿಗೆ ಅಮೃತಾಹುತಿಯೆಂದು ಹೆಸರು ಬಂದಿರುವುದು; ಇದಲ್ಲದೆ ಆಜ್ಯಾಹುತಿಗೂ ಅಮೃತಾಹುತಿಯೆಂದು ಹೆಸರು. **ಅಮೃತಂ ವಾ ಆಜ್ಯಂ** ಎಂದು ಶ್ರುತಿವಾಕ್ಯವಿರುವುದು ಎಂದರೆ ಆಜ್ಯವು ಅಮೃತಸ್ವರೂಪವಾಗಿರುವುದು; ಸೋಮಾಹುತಿಗೂ ಅಮೃತಾಹುತಿಯೆಂದು ಹೆಸರು. **ಅಪಾಮ ಸೋಮಮಮೃತಾ ಅಭೂಮ** (ಋ. ಸಂ. ೮-೪೮-೩) ಸೋಮರಸವನ್ನು ಪಾನ ಮಾಡುವುದರಿಂದ ನಾವು ಮರಣರಹಿತವಾಗಿ ಆಗೋಣ ಎಂದು ಶ್ರುತಿವಾಕ್ಯವು ಹೇಳುವುದರಿಂದ ಸೋಮಾಹುತಿಯೂ ಅಮೃತಾಹುತಿಯೇ ಆಗಿರುವುದು. ಈ ನಾಲ್ಕು ಅಮೃತಾಹುತಿಗಳೂ ಅಶರೀರವೆಂದು ಹೇಳಲ್ಪಡುವವು. ಏಕೆಂದರೆ ಮರಣವನ್ನುಂಟು ಮಾಡುವ ಶರೀರಪ್ರಾಪ್ತಿಯನ್ನು ಹೋಗಲಾಡಿಸಿ ಯಜಮಾನನಿಗೆ ಮೋಕ್ಷವನ್ನುಂಟುಮಾಡುವವು. ಆದ್ದರಿಂದ ಅಶರೀರ (ಮರಣರಹಿತತ್ವ)ವನ್ನುಂಟುಮಾಡಬಲ್ಲ ಈ ಆಹುತಿಗಳು ಯಜ್ಞಮಾಡುವ ಯಜಮಾನನಿಗೆ ಚಿರಜೀವನರೂಪವಾದ ಅಮೃತತ್ವ ಅಥವಾ ದೇವತ್ವವನ್ನು ಉಂಟುಮಾಡುವುದು.

ಸಾ ವಾ ಏಷಾ ರೇತ ಏವ ಯದ್ವಪಾ ಪ್ರೇವ ವೈ ರೇತೋ ಲೀಯತೇ ಪ್ರೇವ ವಪಾ ಲೀಯತೇ ಶುಕ್ಲಂ ವೈ ರೇತಃ ಶುಕ್ಲಾ ವಪಾಽಶರೀರಂ ವೈ ರೇತೋಽಶರೀರಾ ವಪಾ ಯದ್ವೈ ಲೋಹಿತಂ ಯನ್ಮಾಂಸಂ ತಚ್ಛರೀರಂ ತಸ್ಮಾದ್ಬ್ರೂಯಾದ್ಯಾವದಲೋಹಿತಂ ತಾವತ್ಪರಿವಾಸಯೇತಿ ।

ಪುನಃ ಪ್ರಕಾರಾಂತರೇಣ ವಪಾಂ ಪ್ರಶಂಸತಿ । ಯೇಯಂ ವಪಾಸ್ತಿ ಸೇಯಂ ರೇತ ಏವ ತತ್ಸಾದೃಶ್ಯಾತ್ । ಕಥಂ ಸಾದೃಶ್ಯಮಿತಿ ತದುಚ್ಯತೇ । ರೇತೋ ಯೋನ್ಯಾಂ ನಿಷಿಕ್ತಂ ಸತ್ಪ್ರಲೀ-

ಯತ ಏವ ವಪಾಪ್ಯಗ್ನೌ ಹುತಾ ಪ್ರಲೀಯತ ಏವ । ಇದಮೇಕಂ ಸಾದೃಶ್ಯಂ ಶುಕ್ಲವರ್ಣತ್ವಂ ದ್ವಿತೀಯಮಶರೀರತ್ವಂ ತೃತೀಯಂ । ತಸ್ಮಾತ್ಪ್ರಜೋತ್ಪಾದಕರೇತೋವದ್ವಪಾ ಪ್ರಶಸ್ತಾ । ನ ಚ ವಪಾಯಾಃ ಶರೀರಮಧ್ಯೇಽವಸ್ಥಾನಾಚ್ಛರೀರತ್ವಂ ಶಂಕನೀಯಂ । ಯದೇವ ಲೋಹಿತಂ ರಕ್ತಮಸ್ತಿ ಯಚ್ಚ ಮಾಂಸಂ । ಅನೇನ ಮುಗ್ಧಬಾಲಾದಿಪ್ರಸಿದ್ಧಾಸ್ತ್ವಗಸ್ಥ್ಯವಯವಾ ಉಪಲಕ್ಷ್ಯಂತೇ । ಅತೋ ಬಾಲಾದಿಪ್ರಸಿದ್ಧಂ ರಕ್ತಮಾಂಸಾದಿಕಮೇವ ಮುಖ್ಯಂ ಶರೀರಂ । ನ ತು ವಪಾಯಾಂ ರೇತಸಿ ವಾ ಬಾಲಪ್ರಸಿದ್ಧಿರಸ್ತಿ । ತತಸ್ತಯೋರಶರೀರತ್ವಂ । ಯಸ್ಮಾದ್ವಪಾಶರೀರಯೋರ್ವಿಭಾಗ ಉಕ್ತಸ್ತಸ್ಮಾದ್ಯಾಜ್ಞಿಕೋ ವಪೋದ್ಧರಣಕರ್ತಾರಂ ಪ್ರತ್ಯೇವಂ ಬ್ರೂಯಾತ್ । ವಪಾಯಾಃ ಸ್ವರೂಪಂ ಯಾವದಲೋಹಿತಂ ರಕ್ತರಹಿತಂ ಶ್ವೇತಂ ಭವತಿ ತಾವತ್ಸರ್ವಂ ಪರಿವಾಸಯ ಚ್ಛಿಂದೀತಿ । ತದೇವ ವಪಾ ಪ್ರಶಸ್ತಾ ।

ಮತ್ತೆ ಪ್ರಕಾರಾಂತರವಾಗಿ ವಪಾಪ್ರಶಂಸನೆಮಾಡುವರು. ಈ ವಪಾ ಎಂಬುವುದು ರೇತಸ್ಸು ಅಥವಾ ವೀರ್ಯವಿದ್ದಂತೆ ಇರುವುದು, ಒಂದೇವಿಧವಾಗಿರುವುದು. ಹೇಗೆಂದರೆ ವೀರ್ಯವು ಯೋನಿಯಲ್ಲಿ ಬಿಡಲ್ಪಟ್ಟಮೇಲೆ ಅಲ್ಲಿ ಎಂದರೆ ಗರ್ಭಕೋಶದಲ್ಲಿ ಲೀನವಾಗುವುದು ಎಂದರೆ ಅಲ್ಲಿ ಸೇರಿಹೋಗಿ ಅದೃಶ್ಯವಾಗುವುದು; ಅಗ್ನಿಯಲ್ಲಿ ಹೋಮಮಾಡಲ್ಪಟ್ಟನಂತರ ವಪಾ ಸಹ ಕೂಡಲೇ ಸುಟ್ಟುಹೋಗಿ ಅಗ್ನಿಯಲ್ಲಿ ಲೀನವಾಗಿ ಅದೃಶ್ಯವಾಗುವುದು. ಇದು ಒಂದು ಹೋಲಿಕೆಯು. ವೀರ್ಯವು ಬೆಳ್ಳಗಿರುವುದು, ವಪಾ ಸಹ ಬೆಳ್ಳಗಿರುವುದು. ಇದು ಎರಡನೆಯ ಹೋಲಿಕೆಯು ಅಶರೀರತ್ವವು ಮೂರನೆಯ ಹೋಲಿಕೆಯು. ವೀರ್ಯಕ್ಕಾಗಲೀ, ವಪಾಕ್ಕಾಗಲಿ ಶರೀರಾದ್ಯವಯವಗಳು ಇರುವುದಿಲ್ಲ. ಇದು ಮೂರನೆಯ ಹೋಲಿಕೆಯು. ಸಂತಾನವನ್ನು ಉತ್ಪತ್ತಿಮಾಡುವ ರೇತಸ್ಸಿನಂತೆ ವಪಾ ಸಹ ಪ್ರಶಸ್ತವಾಗಿರುವುದು. ಆದರೆ ಇಲ್ಲಿ ಒಂದು ಸಂಶಯವು ತಲೆದೋರುವುದು. ವಪಾ ಎಂಬುದು (ಪ್ರಾಣಿಯ) ಶರೀರಮಧ್ಯದಲ್ಲಿರುವುದರಿಂದ ಅದಕ್ಕೆ ಶರೀರವಿದ್ದಂತಾಗಲಿಲ್ಲವೇ ಎಂದರೆ ಹಾಗಲ್ಲ. ಶರೀರದಲ್ಲಿ ರಕ್ತ, ಮಾಂಸ, ಮೂಳೆ ಮೊದಲಾದವು ಇರುವುದು ಬಾಲಕರಿಗೂ ಸಹ ತಿಳಿದಿರುವುದು. ಆದರೆ ಶರೀರದಲ್ಲಿರುವ ವೀರ್ಯ ಮತ್ತು ವಪಾ ಇವುಗಳಿರುವ ವಿಷಯವು ಮುಗ್ಧಬಾಲಕರಿಗೆ ತಿಳಿದಿರುವುದಿಲ್ಲ. ಕೇವಲ ರಕ್ತಮಾಂಸಗಳೇ ಶರೀರವೆಂದೂ ವಪಾ ಮತ್ತು ರೇತಸ್ಸುಗಳು ಶರೀರಾವಯವಗಳಲ್ಲಿ ಸೇರಿಲ್ಲವೆಂದೂ ಮುಗ್ಧಬಾಲಕರ ಅಭಿಪ್ರಾಯವಾಗಿರುವುದರಿಂದ ವಪಾ ಮತ್ತು ರೇತಸ್ಸಿಗೆ ಅಶರೀರ ಅಥವಾ ಶರೀರರಾಹಿತ್ಯವಿರುವುದೆಂದು ಹೇಳಲ್ಪಡುವುದು. ಶರೀರಕ್ಕೂ ವಪಾಕ್ಕೂ ಇರುವ ಭೇದವು ಇದರಿಂದ ಹೇಳಿದಂತಾಯಿತು. ಆದ್ದರಿಂದಲೇ ಯಜ್ಞದಲ್ಲಿ ಋತ್ವಿಕ್ಕು ಮೊದಲಾದವರು ಪ್ರಾಣಿಯ ಶರೀರವನ್ನು ಕತ್ತರಿಸುತ್ತಿರುವ ಶಮಿತೃ ಮೊದಲಾದವರನ್ನು ಉದ್ದೇಶಿಸಿ—ಎಲೈ ಶಮಿತೃವೇ, ರಕ್ತದಿಂದಲೂ ಮಾಂಸದಿಂದಲೂ ವಪಾವನ್ನು ಬೇರ್ಪಡಿಸಿ ಕತ್ತರಿಸಿ ಎಂದರೆ ವಪಾ ರಕ್ತದಿಂದ ಸಿಕ್ತವಾಗಿ ಕೆಂಪಾಗಿರಕೂಡದು. ಮಾಂಸದ ಚೂರುಗಳು ಅದಕ್ಕೆ ಅಂಟಿಕೊಂಡಿರಕೂಡದು. ಆರೀತಿ ವಪಾಭಾಗವನ್ನು ಪ್ರತ್ಯೇಕವಾಗಿ ಕತ್ತರಿಸು ಎಂದು ಹೇಳುವರು.

**ಸಾ ಪಂಚವತ್ತಾ ಭವತಿ ಯದ್ಯಪಿ ಚತುರವತ್ತೀ ಯಜಮಾನಃ ಸ್ಯಾದಥ ಪಂಚಾವತ್ತೈವ ವಪಾ । ಆಜ್ಯಸ್ಯೋಪಸ್ತೃಣಾತಿ ಹಿರಣ್ಯಶಲ್ಕೋ ವಪಾ ಹಿರಣ್ಯಶಲ್ಕ ಆಜ್ಯಸ್ಯೋಪರಿಷ್ಟಾದಭಿಘಾರಯತಿ ।**

ತಸ್ಯಾ ಅವದಾನೇ ವಿಶೇಷಂ ವಿಧತ್ತೇ। ದ್ವಿವಿಧಾ ಯಜಮಾನಾಶ್ಚತುರವತ್ತಿನಃ ಪಂಚಾವತ್ತಿನಶ್ಚೇತಿ । ಚತುರ್ಭಿರವದಾನೈರ್ಯುಕ್ತಶ್ಚತುರವತ್ತೀ ಪಂಚಭಿರ್ಯುಕ್ತಾಃ ಪಂಚಾವತ್ತಿನಃ। ಏವಂ ಸ್ಥಿತೇ ವಪಾ ಪಂಚಭಿರವದಾನೈರ್ಯುಕ್ತಾ ಕರ್ತವ್ಯಾ । ತತ್ರ ಪಂಚಾವತ್ತಿನೋ ಯಜಮಾನಸ್ಯ ಸ್ವತ ಏವ ಪಂಚಾವದಾನಾನಿ ಪ್ರಾಪ್ತಾನಿ ಯಸ್ತು ಚತುರವತ್ತೀ ತಸ್ಯಾಪಿ ಪಂಚಾವದಾನಾನಿ ವಪಾಯಾಂ ಕುರ್ಯಾತ್ । ತಾನ್ಯೇತಾನಿ ಪಂಚಾಪಿ ವಿಭಜ್ಯ ದರ್ಶಯತಿ । ಆಜ್ಯಸ್ಯಾಜ್ಯೇನೇತ್ಯರ್ಥಃ । ತದೇತದಾಪಸ್ತಂಬೇನ ಸ್ಪಷ್ಟಮುಕ್ತಂ—ಜುಹ್ವಾಮುಪಸ್ತೀರ್ಯ ಹಿರಣ್ಯಶಕಲಮವಧಾಯ ಕೃತ್ಸ್ನಾಂ ವಪಾಮವದಾಯ ಹಿರಣ್ಯಶಕಲಮುಪರಿಷ್ಟಾತ್ಕೃತ್ವಾಭಿಘಾರಯತ್ಯೇವಂ ಪಂಚವತ್ತಾ ಭವತಿ ಚತುರವತ್ತಿನೋಽಪಿ ಪಂಚಾವತ್ತ್ಯೈವ ಸ್ಯಾದಿತಿ ।

ವಪಾಹೋಮಮಾಡುವಾಗ ಒಂದು ವಿಶೇಷಸಂಗತಿ ಇರುವುದು. ಅದನ್ನು ವಿವರಿಸುವರು. ಅವದಾನ ಅಥವಾ ಅವತ್ತಾ ಎಂದರೆ ಒಂದಾವರ್ತಿ ಹೋಮಮಾಡುವುದಕ್ಕೆ ಸಾಕಾಗುವಷ್ಟು ಹೋಮದ್ರವ್ಯವನ್ನು ಮರದ ಸೌಟನಲ್ಲಿ ತೆಗೆದುಕೊಂಡು ಹೋಮಮಾಡುವುದು. ಯಜ್ಞಮಾಡುವ ಯಜಮಾನರಲ್ಲಿ ಎರಡುವಿಧ ಸಂಪ್ರದಾಯವಿರುವುದು. ಕೆಲವರು ನಾಲ್ಕಾವರ್ತಿ ಹೋಮಮಾಡುವರು, ಕೆಲವರು ಐದಾವರ್ತಿ ಹೋಮಮಾಡುವರು. ಈರೀತಿ ಎರಡುವಿಧಗಳಿದ್ದರೂ ವಪಾಹೋಮಮಾಡುವಾಗ ಮಾತ್ರ ಎರಡುವಿಧ ಯಜಮಾನರೂ ಐದಾವರ್ತಿಯೇ ಹೋಮಮಾಡಬೇಕು. ಎಂದರೆ ನಾಲ್ಕಾವರ್ತಿ ಹೋಮಮಾಡುವ ಸಂಪ್ರದಾಯವಿರುವ ಯಜಮಾನನು ವಪಾಹೋಮವನ್ನು ಮಾಡುವಾಗ ಐದಾವರ್ತಿಯೇ ಮಾಡಬೇಕು. ಈ ಐದುವಿಧ ಹೋಮದ್ರವ್ಯಗಳೆಂದರೆ—ಆಜ್ಯ, ಹಿರಣ್ಯಶಕಲ (ಚಿನ್ನದ ತುಂಡು), ವಪಾ, ಹಿರಣ್ಯಶಕಲಸಹಿತವಾದ ಆಜ್ಯ, ಇವೆಲ್ಲದರಮೇಲೆ ಸುರಿಯುವ ಆಜ್ಯ. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳುವರು—**ಜುಹ್ವಾಮುಪಸ್ತೀರ್ಯ ಹಿರಣ್ಯಶಕಲಮವದಾಯ ಕೃತ್ಸ್ನಾಂ ವಪಮವದಾಯ ಹಿರಣ್ಯಶಕಲಮುಪರಿಷ್ಟಾತ್ ಕೃತ್ವಾಭಿಘಾರಯತಿ** (ಆಪ. ಶ್ರೌ. ಸೂ. ೭-೨೦-೯,೧೦,೧೧) ಎಂದರೆ ಹೋಮಮಾಡುವಾಗ ಜುಹೂ ಎಂಬ ಮರದ ಸೌಟನ್ನು ತೆಗೆದುಕೊಂಡು ಅದರಲ್ಲಿ ಆಜ್ಯವನ್ನು ಹಾಕಿ ಆಮೇಲೆ ಚಿನ್ನದ ತುಂಡನ್ನು ಇಟ್ಟು ಅದನ್ನು ಆಜ್ಯದಿಂದ ಲೇಪಿಸಿ ಬಳಿಕ ಚಿನ್ನದ ತುಂಡನ್ನು ಎಲ್ಲಕ್ಕು ಮೇಲಿಟ್ಟು ಅದನ್ನು ತುಪ್ಪದಿಂದ ಅಭಿಘಾರಮಾಡಿ ಹೋಮಮಾಡಬೇಕು ಎಂದು. ಹೀಗೆ ಮಾಡುವುದರಿಂದ ಪಂಚಾವದಾನ ಎಂದರೆ ಐದಾವರ್ತಿ ಪ್ರತ್ಯೇಕ ದ್ರವ್ಯವನ್ನು ತೆಗೆದುಕೊಂಡಂತೆ ಆಗುವುದು. ನಾಲ್ಕಾವರ್ತಿ ಅವದಾನಮಾಡುವವರೂ ಹೀಗೆ ಮಾಡುವುದರಿಂದ ಐದಾವರ್ತಿಮಾಡಿದಂತಾಗುವುದು. ಈ ಐದು ಅವದಾನಗಳು ಯಾವವೆಂದರೆ—(೧) ಆಜ್ಯ (೨) ವಪಾ (೩) ವಪಾನಂತರ ಆಜ್ಯ (೪) ಹಿರಣ್ಯಶಕಲ ಅಥವಾ ಚಿನ್ನದ ತಗಡು (೫) ಹಿರಣ್ಯಶಕಲಾನಂತರ ಆಜ್ಯ.

## ತದಾಹುರ್ಯದ್ಧಿರಣ್ಯಂ ನ ವಿದ್ಯೇತ ಕಥಂ ಸ್ಯಾದಿತಿ ದ್ವಿರಾಜ್ಯಸ್ಯೋಪಸ್ತೀರ್ಯ ವಪಾಮವದಾಯ ದ್ವಿರುಪರಿಷ್ಟಾದಭಿಘಾರಯತಿ ॥

ಹಿರಣ್ಯರಹಿತಸ್ಯ ಪ್ರಕಾರಾಂತರೇಣ ಪಂಚಾವದಾನಾನಿ ಪಶ್ನೋತ್ತರಾಭ್ಯಾಂ ದರ್ಶಯತಿ ।

ಒಂದುವೇಳೆ ಹಿರಣ್ಯಶಕಲ ಅಥವಾ ಚಿನ್ನವು ದೊರೆಯದೇ ಇದ್ದರೆ ಏನುಮಾಡಬೇಕು? ಎಂದರೆ ಜುಹೂ ಎಂಬ ಮರದ ಸೌಟನಲ್ಲಿ ಆಜ್ಯವನ್ನು ಎರಡಾವರ್ತಿಯೂ ಅನಂತರ ವಪಾ ಭಾಗವನ್ನೂ ಅನಂತರ ಪುನಃ ಆಜ್ಯವನ್ನು ಎರಡಾವರ್ತಿಯೂ ಹಾಕಿ ಹೋಮಮಾಡಬೇಕು. ಹೇಗೆಂದರೆ—(೧) ಆಜ್ಯ (೨) ಆಜ್ಯ (೩) ವಪಾ (೪) ಆಜ್ಯ (೫) ಆಜ್ಯ. ಹೀಗೆ ಹಿರಣ್ಯಶಕಲಕ್ಕೆ ಬದಲಾಗಿ ಆಜ್ಯವನ್ನೇ ಇನ್ನೊಂದಾವರ್ತಿ ಹೆಚ್ಚಾಗಿ ಹಾಕಿ ಹೋಮಮಾಡಿದರೆ ಐದಾವರ್ತಿ ಅವದಾನದಿಂದ ಹೋಮಮಾಡಿದಂತಾಗುವುದು.

ಅಮೃತಂ ವಾ ಆಜ್ಯಮಮೃತಂ ಹಿರಣ್ಯಂ ತತ್ರ ಸ ಕಾಮ ಉಪಾಪ್ತೋ ಯ ಆಜ್ಯೇ ತತ್ರ ಸ ಕಾಮ ಉಪಾಪ್ತೋ ಯೋ ಹಿರಣ್ಯೇ ತತ್ಪಂಚ ಸಂಪದ್ಯಂತೇ ॥

ಆಜ್ಯಸ್ಯ ಹಿರಣ್ಯಪ್ರತಿನಿಧಿತ್ವಮುಪಪಾದಯತಿ—ಆಜ್ಯಸ್ಯ ಸ್ವಾದುತ್ವೇನ ಹಿರಣ್ಯಸ್ಯ ಚ ದರ್ಶನೀಯತ್ವೇನ ಪ್ರಿಯತ್ವಾದಮೃತತ್ವಮೇವಂ ಸತಿ ಯತ್ರ ಹಿರಣ್ಯಂ ಪ್ರಕ್ಷಿಪ್ಯತೇ ತತ್ರಾಜ್ಯ-ಪ್ರಯುಕ್ತೋ ಯಃ ಕಾಮಃ ಸ ಪ್ರಾಪ್ತೋ ಭವತಿ । ಯತ್ರ ತ್ವಾಜ್ಯಂ ಪ್ರಕ್ಷಿಪ್ಯತೇ ತತ್ರ ಹಿರಣ್ಯ-ಪ್ರಯುಕ್ತೋ ಯಃ ಕಾಮಃ ಸ ಪ್ರಾಪ್ತೋ ಭವತಿ । ತಸ್ಮಾದಾಜ್ಯೇನ ಹಿರಣ್ಯೇನ ಪಂಚಾವದಾ-ನಾನಿ ಸಂಪದ್ಯಂತೇ ॥

ಹಿರಣ್ಯಕ್ಕೆ (ಚಿನ್ನಕ್ಕೆ) ಬದಲಾಗಿ ಆಜ್ಯವನ್ನು ಉಪಯೋಗಿಸುವ ವಿಷಯವನ್ನು ಸ್ಪಷ್ಟವಾಗಿ ವಿವರಿಸುವರು. ಆಜ್ಯವು ಅಮೃತಸ್ವರೂಪವು. ಹಿರಣವೂ (ಚಿನ್ನವೂ) ಅದರ ವರ್ಚಸ್ಸಿನಿಂದ ಎಲ್ಲರಿಗೂ ಪ್ರಿಯವಾಗಿರುವುದು. ಆದ್ದರಿಂದ ಅಮೃತ ಸ್ವರೂಪವೆಂದೇ ಹೇಳಲ್ಪಡುವುದು ಆದ್ದರಿಂದ ಎರಡೂ ಅಮೃತಸ್ವರೂಪವಾಗಿರುವವು. ಚಿನ್ನಕ್ಕೆ ಬದಲಾಗಿ ಆಜ್ಯವನ್ನು (ಇನ್ನೊಂದಾವರ್ತಿ ಹೆಚ್ಚಾಗಿ) ಹಾಕಿ ಹೋಮಮಾಡಿದಲ್ಲಿ ಯಜಮಾನನು ತನ್ನ ನಿರ್ದಿಷ್ಟವಾದ ಫಲವನ್ನು ಪಡೆಯುವನು. ಎಂದರೆ ಚಿನ್ನವನ್ನು ಹಾಕಿ ಹೋಮಮಾಡುವುದರಿಂದ ಯಾವ ಫಲವನ್ನು ಪಡೆಯುವನೋ ಅಂತಹ ಫಲವನ್ನೇ ಇನ್ನೊಂದಾವರ್ತಿ ಆಜ್ಯವನ್ನು ಹಾಕಿ ಹೋಮಮಾಡುವುದರಿಂದ ಯಜಮಾನನು ಪಡೆಯುವನು. ಹೀಗೆ ಮಾಡುವುದರಿಂದ (ಹಿರಣ್ಯವನ್ನು ಹಾಕ ದಿದ್ದರೂ) ಐದಾವರ್ತಿ ಅವದಾನಕರ್ಮಮಾಡಿದಂತಾಗುವುದು.

ಪಾಂಕ್ತೋಽಯಂ ಪುರುಷಃ ಪಂಚಧಾ ವಿಹಿತೋ ಲೋಮಾನಿ ತ್ವಙ್ಮಾಂಸಮಸ್ಥಿಮಜ್ಜಾ ಸ ಯಾವಾನೇವ ಪುರುಷಸ್ತಾವಂತಂ ಯಜಮಾನಂ ಸಂಸ್ಕೃತ್ಯಾಗ್ನೌ ದೇವಯೋನ್ಯಾಂ ಜುಹೋತ್ಯ-ಗ್ನಿರ್ವೈ ದೇವಯೋನಿಃ ಸೋಽಗ್ನೇರ್ದೇವಯೋನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ ಊರ್ಧ್ವಃ ಸ್ವರ್ಗಂ ಲೋಕಮೇತಿ ॥

ಅವದಾನಗತಾಂ ಪಂಚಸಂಖ್ಯಾಂ ಪ್ರಶಂಸತಿ । ಪಂಚಸಂಖ್ಯಾಯೋಗಾತ್ಪುರುಷಸ್ಯ ಪಾಂಕ್ತತ್ವಂ ತದ್ಯೋಗಾಚ್ಚ ಲೋಮಾದಿಭಿಃ ಪಂಚಭಿರ್ನಿಷ್ಪಾದಿತತ್ವಾತ್ । ತಸ್ಮಾತ್ಪಂಚಭಿರವ-ದಾನೈಃ ಪುರುಷೋ ಯಾವಲ್ಲೋಮಾದಿಪಂಚಾವಯವೋಪೇತೋಽಸ್ತಿ ತಾವಂತಂ ಸರ್ವಮಪಿ ಯಜಮಾನಂ ಸಂಸ್ಕೃತ್ಯಾಗ್ನೌ ದೇವತ್ವಪ್ರಾಪ್ತಿಕಾರಣೇ ಹುತವಾನ್ಭವತಿ । ಅಗ್ನೇಶ್ಚ ಯಾಗ-ದ್ವಾರಾ ದೇವಜನ್ಮಕಾರಣತ್ವಾತ್ । ಏವಂ ಸತಿ ಸ ಯಜಮಾನೋ ದೇವತ್ವಕಾರಣಾದಗ್ನೇಃ ಸ್ವೇನಾನುಷ್ಠಿತಾಭ್ಯ ಆಹುತಿಭ್ಯಃ ಸಮುತ್ಪಿರೂಪೇಣೋತ್ಪದ್ಯ ಸುವರ್ಣವರ್ಣಶರೀರಯುಕ್ತ ಊರ್ಧ್ವಗಾಮೀ ಸ್ವರ್ಗಂ ಪ್ರಾಪ್ನೋತಿ ॥

ಇದುವರೆಗೆ ಹೇಳಿದ ಐದು ಅವದಾನಗಳನ್ನು ಪ್ರಶಂಸೆಮಾಡುತ್ತಾರೆ—ಈ ಐದು ಅವದಾನಹೋಮಗಳ ಪ್ರತೀಕವಾಗಿ ಪುರುಷನ ಶರೀರವು ರೋಮಗಳು, ಚರ್ಮ, ಮಾಂಸ, ಮೂಳೆ, ಮಜ್ಜಾ ಎಂಬ ಐದುವಿಧ ದ್ರವ್ಯಗಳಿಂದ ನಿರ್ಮಿತವಾಗಿದೆ. ಆದ್ದರಿಂದ ಋತ್ವಿಜನು ಲೋಮಾದಿ ಪಂಚದ್ರವ್ಯಯುಕ್ತನಾದ ಯಜಮಾನನ ಪ್ರತೀಕವಾಗಿ ವಪಾಹೋಮವನ್ನು ಐದು ಅವದಾನಗಳಿಂದ ಕೂಡಿ ಹೋಮಮಾಡುವನು ಮತ್ತು ಈರೀತಿ ದೇವಯೋನಿಯಾದ ಅಗ್ನಿಯಲ್ಲಿ ಹೋಮಮಾಡುವುದರಿಂದ ಯಜಮಾನನು ಸಂಸ್ಕರಿಸಲ್ಪಟ್ಟು ದೇವತೆಗಳ ಗರ್ಭಯೋನಿಯೆನಿಸಿರುವ ಅಗ್ನಿಯಲ್ಲಿ ಆಹುತಿಗಳ ಮೂಲಕ ವೃದ್ಧಿಯನ್ನೈದಿ ಸುವರ್ಣಮಯವಾದ ದಿವ್ಯಶರೀರವುಳ್ಳವನಾಗಿ ಊರ್ಧ್ವಲೋಕವಾದ ಸ್ವರ್ಗವನ್ನು ಪಡೆಯುವನು.



*English Translation*

The oblation of the Vapa is just like an oblation of ambrosia, such oblations of ambrosia are besides the throwing of the fire produced by the friction of wooden sticks into the sacrificial hearth, the oblation of Ajya and that of Roma. All these oblations are without an apparent body (they disappear at once when thrown into the fire). With such bodiless oblations the sacrificer conquers the heavenly world. The Vapa is just like sperm; for just as the sperm (when effused) is lost in the womb, the Vapa is lost (disappears in the fire on account of its thinness) Further, the Vapa is whie like sperm, and without a substantial body just as sperm. Blood and flesh making up the substance of the body, the Hotar therefore should say (to the Adhvaryu), Cut off all that has no blood.

The Vapa oblation must consist of five parts, even if there are only four parts (all except the gold plate) at the sacrificer's disposal· The priest first puts melted butter for the Vapa in the ladle, then follows a thin gold plate, the Vapa, the melted butter for the gold plate. and lastly the dripping of melted butter on the whole·

They ask: if there is no gold to be had, what should he do then? (The answer is:) he should first put twice melted butter in the ladle, then the Vapa, and drip twice hot melted butter on it. The melted butter is ambrosia, the gold is also ambrosia. Therefore everything wished for (by the sacrificer) when throwing the melted butter and the gold (in the ladle) is attainable. Together with the melted butter (to be taken twice), and the gold, the Vapa oblation consists of five parts.

Man is composed of five parts, viz·, hairs, skin, flesh. bones and marrow. The priest having (by the Vapa oblation) made the sacrificer just such a man (composed of five parts), offers him in Agni, who is the womb of the gods. For

Agni is the womb of the gods; after having grown together in Agni's womb with the (different other) oblations, he then goes up to heaven with a golden body.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಸಪ್ತಮಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತಮಾಧ್ಯಾಯೇ ಪಂಚಮಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಸುತ್ಯಾದಿನದ ಪ್ರಾತಃಕಾಲದಲ್ಲಿ ಪಠಿಸಬೇಕಾದ ಪ್ರಾತರನುವಾಕದ ವಿವರಣೆ ಇತ್ಯಾದಿ.]



ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ । ಏತೇ ವಾವ ದೇವಾಃ ಪ್ರಾತರ್ಯಾವಾಣೋ ಯದಗ್ನಿರುಷಾ ಅಶ್ವಿನೌ ತ ಏತೇ ಸಪ್ತಭಿಃ ಸಪ್ತಭಿಶ್ಛಂದೋಭಿರಾಗಚ್ಛಂತಿ ।

ಅಥ ಪ್ರಾತರನುವಾಕೋ ವಕ್ತವ್ಯಃ । ತದರ್ಥಮಾದೌ ಪ್ರೈಷಂ ವಿಧತ್ತೇ । ಸುತ್ಯಾದಿನೇ ಪ್ರಾತಃಕಾಲೇ ಯಾಂತಿ ಯಜ್ಞಭೂಮಿಂ ಗಚ್ಛಂತೀತಿ ಪ್ರಾತರ್ಯಾವಾಣಸ್ತಾದೃಶೇಭ್ಯೋ ದೇವೇಭ್ಯಸ್ತತ್ಪ್ರೀತ್ಯರ್ಥಂ ಹೇ ಹೋತರನುಕೂಲಾ ಋಚೋ ಬ್ರೂಹಿ ತಮೇತಂ ಪ್ರೈಷಮಂತ್ರಮಧ್ವರ್ಯುಃ ಪಠೇತ್ । ತಂ ಮಂತ್ರಂ ವ್ಯಾಚಷ್ಟೇ । ಯೋಽಯಮಗ್ನಿರ್ಯಾ ಚೋಷಃಕಾಲಾಭಿಮಾನಿನೀ ದೇವತಾ ಯೌ ಚಾಶ್ವಿನಾವೇತ ಏವ ದೇವಾಃ ಪ್ರೈಷಮಂತ್ರೇ ಪ್ರಾತರ್ಯಾವಾಣ ಇತಿ ವಿಶೇಷ್ಯಂತೇ । ತತ್ಕಥಮಿತಿ ತದುಚ್ಯತೇ । ತ ಏತೇ ದೇವಾಃ ಪ್ರತ್ಯೇಕಂ ಸಪ್ತಚ್ಛಂದೋಯುಕ್ತಾಭಿರ್ಋಗ್ಭಿರ್ಯಜ್ಞಭೂಮಿಮಾಗಚ್ಛಂತಿ ತಸ್ಮಾತ್ಪ್ರಾತರ್ಯಾವಾಣಃ । ಸಪ್ತಭಿಃ ಸಪ್ತಭಿರಿತಿ ವೀಪ್ಸಾ ಪ್ರತ್ಯೇಕಂ ಸಂಖ್ಯಾನ್ವಯಾರ್ಥಾ । ತಾಶ್ಚ ಋಚಃ ಸರ್ವಾ ಆಶ್ವಲಾಯನೇನಾಪೋ ರೇವತೀಃ ಕ್ಷಯಥ (ಋ. ಸಂ. ೧-೩೦-೧೨) ಇತ್ಯಾದಿಗ್ರಂಥೇನೋದಾಹೃತಾಃ (ಆಶ್ವ. ಶ್ರೌ. ಸೂ. ೪-೧೦-೨) ತತ್ರ—

ಉಪ ಪ್ರಯಂತಃ (ಋ. ಸಂ. ೧-೭೪-೧) ಇತ್ಯಾದಿಷು ಛಂದೋ ಗಾಯತ್ರಂ ।
ತ್ವಮಗ್ನೇ ವಸೂನ್ (ಋ. ಸಂ. ೧-೪೫-೧) ಇತ್ಯಾದಿಷ್ವನುಷ್ಟುಪ್ ಛಂದಃ ।
ಅಬೋಧ್ಯಗ್ನಿಃ (ಋ. ಸಂ. ೫-೧-೧) ಇತ್ಯಾದಿಷು ತ್ರಿಷ್ಟುಪ್ ಛಂದಃ ।
ಏನಾ ವೋ ಅಗ್ನಿಂ (ಋ. ಸಂ. ೭-೧೬-೧) ಇತ್ಯಾದಿಷು ಬೃಹತೀಛಂದಃ ।
ಅಗ್ನೇ ವಾಜಸ್ಯ (ಋ. ಸಂ. ೧-೭೯-೪) ಇತ್ಯಾದಿಷೂಷ್ಣಿಕ್ ಛಂದಃ ।
ಜನಸ್ಯ ಗೋಪಾ (ಋ. ಸಂ. ೫-೧೧-೧) ಇತ್ಯಾದಿಷು ಜಗತೀಛಂದಃ ।
ಅಗ್ನಿಂ ತಂ ಮನ್ಯೇ (ಋ. ಸಂ. ೫-೬-೧) ಇತ್ಯಾದಿಷು ಪಂಕ್ತಿಶ್ಛಂದಃ ।
ತಾನ್ಯೇತಾನಿ ಸಪ್ತಛಂದಾಂಸ್ಯಾಗ್ನೇಯೇ ಕ್ರತೌ ಪ್ರಾತರನುವಾಕೇ ದ್ರಷ್ಟವ್ಯಾನಿ ॥

ಪ್ರತಿ ಷ್ಯಾ ಸೂನರೀ (ಋ. ಸಂ. ೪-೫೨-೧) ಇತ್ಯಾದಿಷು ಗಾಯತ್ರೀಛಂದಃ ।
ಉಷೋ ಭದ್ರೇಭಿಃ (ಋ. ಸಂ. ೧-೪೯-೧) ಇತ್ಯಾದಿಷ್ವನುಷ್ಟುಪ್ ।
ಇದಂ ಶ್ರೇಷ್ಠಂ (ಋ. ಸಂ. ೧-೧೧೩-೧) ಇತ್ಯಾದಿಷು ತ್ರಿಷ್ಟುಪ್ ।
ಪ್ರತ್ಯು ಅದರ್ಶಿ (ಋ. ಸಂ. ೭-೮೧-೧) ಇತ್ಯಾದಿಷು ಬೃಹತೀ ।
ಉಷಸ್ತಚ್ಚಿತ್ರಮಾಭರ (ಋ. ಸಂ. ೧-೯೨-೧೩) ಇತ್ಯಾದಿಷೂಷ್ಣಿಕ್ ।
ಏತಾ ಉ ತ್ಯಾ (ಋ. ಸಂ. ೧-೯೨-೧) ಇತ್ಯಾದಿಷು ಜಗತೀ ।
ಮಹೇ ನೋ ಅದ್ಯ (ಋ. ಸಂ. ೫-೭೯-೧) ಇತ್ಯಾದಿಷು ಪಂಕ್ತಿಃ
ತಾನ್ಯೇತಾನ್ಯುಷಸ್ಯ ಪ್ರಾತರನುವಾಕೇ ಸಪ್ತ ಛಂದಾಂಸಿ ॥

ಏಷೋ ಉಷಾ (ಋ. ಸಂ. ೧-೪೬-೧) ಇತ್ಯಾದಿಷು ಗಾಯತ್ರೀ ।
ಯದದ್ಯ (ಋ. ಸಂ. ೫-೭೩-೧) ಇತ್ಯಾದಿಷ್ವನುಷ್ಟುಪ್ ।
ಆಭಾತ್ಯಗ್ನಿಃ (ಋ. ಸಂ. ೫-೭೬-೧) ಇತ್ಯಾದಿಷು ತ್ರಿಷ್ಟುಪ್ ।
ಇಮಾ ಉ ವಾಂ (ಋ.ಸಂ. ೭-೭೪-೧) ಇತ್ಯಾದಿಷು ಬೃಹತೀ ।
ಅಶ್ವಿನಾ ವರ್ತಿಃ (ಋ. ಸಂ. ೧-೯೨-೧೬) ಇತ್ಯಾದಿಷೂಷ್ಣಿಕ್ ।
ಅಬೋಧ್ಯಗ್ನಿರ್ಜ್ಮ (ಋ. ಸಂ. ೧-೧೫೭-೧) ಇತ್ಯಾದಿಷು ಜಗತೀ ।
ಪ್ರತಿ ಪ್ರಿಯತಮಂ (ಋ. ಸಂ. ೫-೭೫-೧) ಇತ್ಯಾದಿಷು ಪಂಕ್ತಿಃ ।
ತಾನ್ಯೇತಾನ್ಯಾಶ್ವಿನೇ ಪ್ರಾತರನುವಾಕೇ ಸಪ್ತ ಛಂದಾಂಸಿ ।
ತೈರೇತೈಃ ಸಪ್ತಭಿಃ ಸಪ್ತಭಿಃ ಪ್ರತ್ಯೇಕಂ ಛಂದೋಭಿರ್ದೇವಾನಾಮಾಗಮನಂ ದ್ರಷ್ಟವ್ಯಂ ॥

ಈಗ ಪ್ರಾತರನುವಾಕಮಂತ್ರಗಳನ್ನು ಪಠಿಸುವುದಕ್ಕಾಗಿ ಅಧ್ವರ್ಯುವು ಹೋತೃವನ್ನುದ್ದೇಶಿ ಎಲೈ ಹೋತೃವೇ ಪ್ರಾತರನುವಾಕಮಂತ್ರಗಳನ್ನು ಪಠಿಸು ಎಂದು ನಿರ್ದೇಶಿಸುವನು. ಸುತ್ಯಾದಿನದ (ಸೋಮರಸವನ್ನು ಹಿಂಡುವ ದಿನ) ಪ್ರಾತಃ ಕಾಲದಲ್ಲಿ ಯಾವ ದೇವತೆಗಳು ಯಜ್ಞಭೂಮಿಗೆ ಬರುವರೋ ಅವರ ಪ್ರೀತ್ಯರ್ಥವಾಗಿ ಈ ಸಂದರ್ಭಕ್ಕೆ ಅನುಕೂಲವಾದ ಮಂತ್ರ ಗಳನ್ನು ಪಠಿಸು ಎಂದು ಹೇಳಿದ ಕೂಡಲೇ ಹೋತೃವು ಪ್ರಾತರನುವಾಕಮಂತ್ರಗಳನ್ನು ಪಠಿಸುವನು. ಪ್ರಾತಃಕಾಲದಲ್ಲಿ ಯಜ್ಞ ಭೂಮಿಗೆ ಬರುವ ದೇವತೆಗಳು ಯಾರೆಂದರೆ—ಅಗ್ನಿ, ಉಷೋದೇವತೆ, ಅಶ್ವಿನೀದೇವತೆಗಳು. ಇವರಿಗೆ ಪ್ರಾತರ್ಯಾವಾಣ ದೇವತೆಗಳೆಂದು ಹೆಸರು. ಈ ಮೂವರು ದೇವತೆಗಳಲ್ಲಿ ಪ್ರತಿಯೊಬ್ಬರನ್ನು ಪ್ರತ್ಯೇಕವಾಗಿ ಗಾಯತ್ರ್ಯಾದಿ ಏಳು ಛಂದಸ್ಸು

ಗಳಿಂದ ಕೂಡಿದ ಮಂತ್ರಗಳಿಂದ ಆಹ್ವಾನಿತವಾಗಿ ಯಜ್ಞಭೂಮಿಗೆ ಬರುವುದರಿಂದ ಇವರಿಗೆ ಪ್ರಾತರ್ಯಾವಾಣದೇವತೆಗಳೆಂದು ಹೆಸರು ಬಂದಿರುವುದು. ಏಳುವಿಧ ಛಂದಸ್ಸುಗಳಿಂದ ಕೂಡಿರುವ ಮಂತ್ರಗಳು ಯಾವುವು ಎಂಬುದನ್ನು ಆಶ್ವಲಾಯನರು ತಮ್ಮ ಸೂತ್ರದಲ್ಲಿ ಹೇಳಿದಾರೆ (ಆ. ಶ್ರೌ. ಸೂ ೪-೧೩-೭) ಅದನ್ನು ನಾವು ಇಲ್ಲಿ ತಿಳಿಸುತ್ತೇವೆ.

ಇಲ್ಲಿ ಪ್ರಾತರನುವಾಕವೆಂದರೇನೆಂಬುದನ್ನು ವಿವರಿಸುವುದು ಅವಶ್ಯಕವಾಗಿದೆ. ಅಗ್ನಿಷ್ಟೋಮ ಮೊದಲಾದ ಸೋಮಯಾಗವನ್ನು ಮಾಡುವಾಗ ಸೋಮರಸವನ್ನು ಹಿಂಡಿ ತೆಗೆಯುವ ದಿನಕ್ಕೆ ಸುತ್ಯಾದಿನ ಅಥವಾ ಸ್ತುತ್ಯಾದಿನವೆಂದು ಹೆಸರು. ಈ ದಿವಸದ ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕೆ ಮುಂಚೆ ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನು ಬ್ರೂಹಿ** ಎಂಬ ಪ್ರೈಷಮಂತ್ರವನ್ನು ಪಠಿಸಿದ ಕೂಡಲೇ ಹೋತೃವು ಕೆಲವು ಮಂತ್ರಗಳನ್ನು ಪಠಿಸುವನು. ಇವುಗಳಿಗೆ ಪ್ರಾತರನುವಾಕಮಂತ್ರಗಳೆಂದು ಹೆಸರು.

ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಹೋತೃವು ಕೆಲವು ಕ್ರಮವನ್ನು ಅನುಸರಿಸಬೇಕು. ಯಜ್ಞದಲ್ಲಿ ಪ್ರಧಾನಋತ್ವಿಕ್ ಪಾತ್ರವನ್ನು ವಹಿಸಿರುವ ಅಧ್ವರ್ಯುವು ಇತರ ಋತ್ವಿಕ್ಕುಗಳನ್ನುದ್ದೇಶಿಸಿ ಇಂತಹ ಕಾರ್ಯವನ್ನು ನೀನು ಮಾಡಬೇಕು ಎಂದು ಪದೇಪದೇ ಹೇಳಬೇಕಾಗುತ್ತದೆ. ಇಂತಹ ವಾಕ್ಯಗಳಿಗೆ ಪ್ರೈಷಗಳೆಂದು ಹೆಸರು. ಪ್ರಕೃತಸಂದರ್ಭದಲ್ಲಿ ಅಧ್ವರ್ಯುವು ಹೋತೃವನ್ನುದ್ದೇಶಿಸಿ—**ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನು ಬ್ರೂಹಿ**—ಎಲೈ ಹೋತೃವೇ ಪ್ರಾತಃಕಾಲದಲ್ಲಿ ಯಜ್ಞಭೂಮಿಗೆ ಬರಬೇಕಾಗಿರುವ ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕ ಮಂತ್ರಗಳನ್ನು ಹೇಳು ಎಂದು ಹೇಳುವನು. ಆಗ ಹೋತೃವು ಆಗ್ನೀಧ್ರವೆಂಬ ಅಗ್ನಿಕುಂಡದ ಸಮೀಪಕ್ಕೆ ಹೋಗಿ ಅಲ್ಲಿ ವಾಕ್ಶುದ್ಧಿಗಾಗಿ ಒಂದು ಆಜ್ಯಾಹುತಿಯನ್ನೂ ಆಹವನೀಯಾಗ್ನಿಯಲ್ಲಿ ಎರಡು ಆಜ್ಯಾಹುತಿಗಳನ್ನೂ ವಿಧ್ಯುಕ್ತಮಂತ್ರಗಳಿಂದ ಹೋಮಮಾಡುವನು. ಬಳಿಕ ಹವಿರ್ಧಾನವೆಂಬ ಶಾಲೆಯನ್ನು ಪೂರ್ವದ್ವಾರದಿಂದ ಪ್ರವೇಶಿಸಿ ಅಲ್ಲಿರುವ ಸೋಮಲತೆಗಳು ತುಂಬಿದ ಗಾಡಿಗಳ ಸಮೀಪದಲ್ಲಿ ಕುಳಿತು ಮೊದಲು ಈ ಮಂತ್ರವನ್ನು ಪಠಿಸುವನು—

**ಆಪೋ ರೇವತೀಃಕ್ಷಯಥಾ ಹಿ ವಸ್ವಃ ಕ್ರತುಂ ಚ ಭದ್ರಂ ಬಿಭೃತಾಮೃತಂ ಚ ।**
**ರಾಯಶ್ಚ ಸ್ಥ ಸ್ವಪತ್ಯಸ್ಯ ಪತ್ನೀಃ ಸರಸ್ವತೀಃ ತದ್ಗೃಣತೇ ವಯೋಧಾತ್ ॥**

(ಋ. ಸಂ ೧೦-೩೦-೧೨)

ಅನಂತರ ಪ್ರಾತರ್ಯಾವಾಣ ದೇವತೆಗಳಾದ ಅಗ್ನಿ, ಉಷಸ್ಸು ಅಶ್ವಿನೀದೇವತೆಗಳು ಇವರನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸುವನು. ಇವು ಮೂರುಭಾಗಗಳಾಗಿವೆ. ಅಗ್ನಿಯನ್ನುದ್ದೇಶಿಸಿ ಹೇಳುವ ಮಂತ್ರಗಳಿಗೆ ಆಗ್ನೇಯಕ್ರತುವೆಂದೂ, ಉಷಸ್ಸನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಉಷಸ್ಯಕ್ರತುವೆಂದೂ, ಅಶ್ವಿನೀದೇವತೆಗಳನ್ನುದ್ದೇಶಿಸಿ ಪಠಿಸುವ ಮಂತ್ರಗಳಿಗೆ ಆಶ್ವಿನಕ್ರತುವೆಂದೂ ಹೆಸರು. ಇಲ್ಲಿ ಪ್ರತಿ ದೇವತೆಯನ್ನೂ ಉದ್ದೇಶಿಸುವ ಮಂತ್ರಗಳು ಏಳುವಿಧ ಛಂದಸ್ಸುಗಳಿಂದಲೂ ಕೂಡಿರಬೇಕೆಂದು ತಿಳಿಸಲು **ಸಪ್ತಭಿಃ ಸಪ್ತಭಿಃ** ಎಂದು ದ್ವಿರುಕ್ತಿ ಇದೆ. ಅದರಂತೆ ಈ ಮಂತ್ರಗಳ ವಿವರಣೆಯು ಈ ರೀತಿ ಇದೆ—

**ಉಪಪ್ರಯಂತಃ** (ಋ. ಸಂ ೧-೭೪-೧) ಮೊದಲಾದುವು ಗಾಯತ್ರೀ ಛಂದಸ್ಸಿನ ಮಂತ್ರಗಳು
**ತ್ವಮಗ್ನೇವಸೂನ್** (ಋ. ಸಂ ೧-೪೫-೧) ಮೊದಲಾದುವು ಅನುಷ್ಟುಪ್ ಛಂದಸ್ಸಿನವು
**ಅಬೋಧ್ಯಗ್ನಿಃ** (ಋ. ಸಂ ೫-೧-೧) ಮೊದಲಾದುವು ತ್ರಿಷ್ಟುಪ್ ಛಂದಸ್ಸಿನವು
**ಏನಾವೋ ಅಗ್ನಿಂ** (ಋ. ಸಂ ೭-೧೬-೧) ಮೊದಲಾದವು ಬೃಹತೀ ಛಂದಸ್ಸು
**ಅಗ್ನೇವಾಜಸ್ಯ** (ಋ. ಸಂ ೧-೭೯-೪) ಮೊದಲಾದವು ಉಷ್ಣಿಕ್ ಛಂದಸ್ಸು

**ಜನಸ್ಯ ಗೋಪಾ** (ಋ. ಸಂ ೫-೧೧-೧) ಮೊದಲಾದುವು ಜಗತೀ ಛಂದಸ್ಸು
**ಅಗ್ನಿಂ ತಂ ಮನ್ಯೇ** (ಋ. ಸಂ ೫-೬-೧) ಮೊದಲಾದುವು ಪಂಕ್ತಿಶ್ಛಂದಸ್ಸು

ಏಳು ಛಂದಸ್ಸುಗಳಿಂದ ಕೂಡಿದ ಈ ಏಳು ಮಂತ್ರಗಳೂ ಅಗ್ನಿ ದೇವತೆಯನ್ನುದ್ದೇಶಿಸುವ ಪ್ರಾತರನುವಾಕದಲ್ಲಿ ಪಠಿಸುವ ಆಗ್ನೇಯಕ್ರತು ಸಂಬಂಧವಾದ ಮಂತ್ರಗಳು.

**ಪ್ರತಿ ಷ್ಯಾ ಸೂನರೀ** (ಋ. ಸಂ ४-೫೨-೧) ಮೊದಲಾದುವು ಗಾಯತ್ರೀ ಛಂದಸ್ಸು
**ಉಷೋ ಭದ್ರೇಭಿಃ** (ಋ. ಸಂ ೧-೪೯-೧) ಮೊಲಾದುವು ಅನುಷ್ಟುಪ್ ಛಂದಸ್ಸು
**ಇದಂ ಶ್ರೇಷ್ಠಂ** (ಋ. ಸಂ ೧-೧೧೩-೧) ಮೊದಲಾದುವು ತ್ರಿಷ್ಟುಪ್ ಛಂದಸ್ಸು
**ಪ್ರತ್ಯು ಅದರ್ಶಿ** (ಋ. ಸಂ ೭-೮೧-೧) ಮೊದಲಾದುವು ಬೃಹತೀ ಛಂದಸ್ಸು
**ಉಪಸ್ತುಚ್ಚಿತ್ರಮಾಭರ** (ಋ. ಸಂ ೧-೯೨-೧೩) ಮೊದಲಾದುವು ಉಷ್ಣಿಕ್ ಛಂದಸ್ಸು
**ಏತಾ ಉತ್ಯಾ** (ಋ. ಸಂ ೧-೯೨-೧) ಮೊದಲಾದುವು ಜಗತೀ ಛಂದಸ್ಸು
**ಮಹೇ ನೋ ಅದ್ಯ** (ಋ. ೫-೭೯-೧) ಮೊದಲಾದುವು ಪಂಕ್ತಿಶ್ಛಂದಸ್ಸು

ಈ ಏಳೂ ಉಷೋ ದೇವತೆಯನ್ನುದ್ದೇಶಿಸಿ ಪ್ರಾತರನುವಾಕದಲ್ಲಿ ಪಠಿಸುವ ಉಷಸ್ಯಕ್ರತುವೆಂಬ ಮಂತ್ರಗಳು.

**ಏಷೋ ಉಷಾ** (ಋ. ಸಂ ೧-೪೬-೧) ಮೊದಲಾದವು ಗಾಯತ್ರೀ ಛಂದಸ್ಸು
**ಯುದದ್ಯ** (ಋ. ಸಂ ೫-೭೩-೧) ಮೊದಲಾದುವು ಅನುಷ್ಟುಪ್ ಛಂದಸ್ಸು
**ಆ ಭಾತ್ಯಗ್ನಿಃ** (ಋ. ಸಂ ೫-೭೬-೧) ಮೊದಲಾದುವು ತ್ರಿಷ್ಟುಪ್ ಛಂದಸ್ಸು
**ಇಮಾ ಉ ವಾಂ** (ಋ. ಸಂ ೭-೭४-೧) ಮೊದಲಾದುವು ಬೃಹತೀ ಛಂದಸ್ಸು
**ಅಶ್ವಿನಾ ವರ್ತಿಃ** (ಋ. ಸಂ ೧-೯೨-೧೯) ಮೊದಲಾದುವು ಉಷ್ಣಿಕ್ ಛಂದಸ್ಸು
**ಅಬೋಧ್ಯಗ್ನಿರ್ಜ್ಮ** (ಋ. ಸಂ ೧೫೭-೧) ಮೊದಲಾದುವು ಜಗತೀಛಂದಸ್ಸು
**ಪ್ರತಿಪ್ರಿಯತಮಂ** (ಋ. ಸಂ ೫-೭೫-೧) ಮೊದಲಾದುವು ಪಂಕ್ತಿಶ್ಛಂದಸ್ಸು

ಈ ಏಳೂ ಪ್ರಾತರುವಾಕ ಮಂತ್ರದಲ್ಲಿ ಅಶ್ವಿನೀದೇವತೆಗಳನ್ನುದ್ದೇಶಿಸಿದ ಆಶ್ವಿನಕ್ರತುಸಂಬಂಧವಾದ ಮಂತ್ರಗಳು

**ಆಽಸ್ಯ ದೇವಾಃ ಪ್ರಾತರ್ಯಾವಾಣೋ ಹವಂ ಗಚ್ಛಂತಿ ಯ ಏವಂ ವೇದ ।**

**ಏತದ್ವೇದನಂ ಪ್ರಶಂಸತಿ । ಹೂಯತೇಽತ್ರೇತಿ ಹವೋ ಯಜ್ಞೋಽಸ್ಯ ವೇದಿತುರ್ಹವಮುಕ್ತಾ ದೇವಾಃ ಪ್ರಾಪ್ನುವಂತಿ ॥**

ಮೇಲೆ ಹೇಳಿದ ಪ್ರಾತರನುವಾಕಮಂತ್ರ ಪಠನದ ಕ್ರಮವನ್ನು ಯಾವ ಯಜಮಾನನು ತಿಳಿದು ಅದರಂತೆ ದೇವತೆಗಳನ್ನು ಆಹ್ವಾನಮಾಡುವನೋ ಆ ಯಜಮಾನನ ಯಜ್ಞಭೂಮಿಗೆ ಆ ದೇವತೆಗಳು ಬರುವರು.

**ಪ್ರಜಾಪತೌ ವೈ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತ್ಯುಭಯೇ ದೇವಾಸುರಾ ಯಜ್ಞಮುಪಾವಸನ್ನಸ್ಮಭ್ಯಮನುವಕ್ಷ್ಯತ್ಯಸ್ಮಭ್ಯಮಿತಿ ಸ ವೈ ದೇವೇಭ್ಯ ಏವಾನ್ವಬ್ರವೀತ್**

**ಪ್ರೈಷಮಂತ್ರೇ ದೇವೇಭ್ಯೋಽನು ಬ್ರೂಹೀತಿ ಯದುಕ್ತಂ ತದುಪಪಾದಯಿತುಂ ಪ್ರಾತರನುವಾಕಸ್ಯ ದೇವಸಂಬಂಧಂ ವಿಶದಯತಿ । ಪುರಾ ಕದಾಚಿತ್ಕಸ್ಮಿಂಶ್ಚಿದ್ಯಜ್ಞೇ ಪ್ರಜಾಪತಿಃ ಸ್ವಯಂ ಹೋತಾ ಭೂತ್ವಾ ಪ್ರಾತರನುವಾಕಮನುವಕ್ತುಮುದ್ಯತಸ್ತಸ್ಮಿನ್ನನುವಕ್ಷ್ಯತಿ ದೇವಾ-ಶ್ಚಾಸುರಾಶ್ಚಾಸ್ಮಭ್ಯಮಸ್ಮದರ್ಥಮೇವಾನುವಕ್ಷ್ಯತೀತಿ ಪ್ರತ್ಯೇಕಮಭಿಪ್ರೇತ್ಯ ತಂ ಯಜ್ಞ-ಮುಪೇತ್ಯ ತತ್ರಾಽಽಸನ್ನಿತಿ । ಅಸ್ಮಭ್ಯಮಿತಿ ವೀಪ್ಸಾ ವರ್ಗದ್ವಯಸ್ಯ ಪ್ರತ್ಯೇಕಮನ್ವಯಾರ್ಥಂ । ತದಾನೀಂ ಪ್ರಜಾಪತಿರಸುರಾನುಪೇಕ್ಷ್ಯ ದೇವಾರ್ಥಮೇವಾನ್ವಬ್ರವೀತ್ । ತತಃ ಪ್ರಾತರನು-ವಾಕಸ್ಯ ಪೂರ್ವೋಕ್ತೈರಗ್ನ್ಯಾದಿಭಿರ್ದೇವಸಂಬಂಧಃ ॥**

ಹಿಂದೆ ಪ್ರೈಷಮಂತ್ರದಲ್ಲಿ ದೇವತೆಗಳನ್ನುದ್ದೇಶಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕೆಂದು ಹೇಳಲಾಗಿದೆಯಷ್ಟೆ ಈ ಪ್ರಾತರನುವಾಕಮಂತ್ರವು ದೇವತೆಗಳನ್ನೇ ಉದ್ದೇಶಿಸಿ ಪಠಿಸಲ್ಪಡುವುದೆಂದೂ ಆದ್ದರಿಂದ ಇದು ದೇವತಾಸಂಬಂಧವಾದ ಮಂತ್ರವೆಂಬುದನ್ನೂ ವಿಶದಪಡಿಸುವರು—

ಪೂರ್ವದಲ್ಲಿ ಒಂದಾನೊಂದು ಯಜ್ಞಮಾಡುತ್ತಿದ್ದಾಗ ಸ್ವಯಂ ಪ್ರಜಾಪತಿಯೇ ಹೋತೃವಿನ ಪಾತ್ರವನ್ನು ವಹಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸಲು ಪ್ರಾರಂಭಿಸಿದನು. ಆಗ ದೇವತೆಗಳೂ ಮತ್ತು ಅಸುರರೂ ಇಂತು ಯೋಚಿಸಿದರು. ಈ ಪ್ರಜಾಪತಿಯು ತಮ್ಮನ್ನೇ ಉದ್ದೇಶಿಸಿ ಎಂದರೆ ದೇವತೆಗಳು ತಮ್ಮನ್ನೇ ಎಂದೂ, ಅಸುರರೂ ತಮ್ಮನ್ನೇ ಉದ್ದೇಶಿಸಿ ಮಂತ್ರಪಠನಮಾಡುವನೆಂದೂ ಯೋಚಿಸಿ ಅಲ್ಲಿಯೇ ಕುಳಿತಿದ್ದರು. ಆದರೆ ಆಗ ಪ್ರಜಾಪತಿಯು ಅಸುರರನ್ನು ಅಲಕ್ಷಿಸಿ ದೇವತೆಗಳನ್ನು ಮಾತ್ರ ಉದ್ದೇಶಿಸಿ ಅವರ ಪರವಾಗಿ ಪ್ರಾತರನುವಾಕಮಂತ್ರಗಳನ್ನು ಪಠಿಸಿದನು. ಆದ್ದರಿಂದ ಆ ಕಾಲದಿಂದಲೂ ಪ್ರಾತರನುವಾಕಮಂತ್ರಗಳು ದೇವತೆಗಳಿಗೇ ಸಂಬಂಧಪಟ್ಟದ್ದಾಗಿರುವುದು.

ತತೋ ವೈ ದೇವಾ ಅಭವನ್ಪರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

**ಪ್ರಾತರನುವಾಕಸ್ಯ ದೇವೋತ್ಕರ್ಷಹೇತುತ್ವಂ ತದಭಾವಸ್ಯಾಸುರಪರಾಭವಹೇತುತ್ವಂ ಚ ದರ್ಶಯತಿ । ಅಭವನ್ಭೂತಿಮುತ್ಕರ್ಷಂ ಪ್ರಾಪ್ತಾಃ । ಅಸುರಾಸ್ತು ಪರಾಭವನ್ನಪಕರ್ಷಂ ಪ್ರಾಪ್ತಾಃ । ವೇದನಂ ಪ್ರಶಂಸತಿ । ಆತ್ಮನಾ ಭವತಿ ಸ್ವಯಮುತ್ಕೃಷ್ಟೋ ಭವತಿ । ತದೀಯಸ್ತು ಭ್ರಾತೃವ್ಯಃ ಪರಾಭವತಿ ।**

ಆದ್ದರಿಂದ ಎಂದರೆ ಪ್ರಜಾಪತಿಯು ಪ್ರಾತರನುವಾಕಮಂತ್ರಗಳನ್ನು ದೇವತೆಗಳ ಪರವಾಗಿ ಪಠಿಸಿದ್ದರಿಂದ ದೇವತೆಗಳು ಎಲ್ಲಾ ಕಾರ್ಯಗಳಲ್ಲಿಯೂ ಯಶಸ್ವಿಯಾಗಿ ಜಯವನ್ನು ಗಳಿಸಿದರು. ಅಸುರರು ಅಪಜಯವನ್ನು ಹೊಂದಿದರು. ಆದ್ದರಿಂದ ಈ ವಿಷಯವನ್ನು ತಿಳಿದ ಯಜಮಾನನು ಯಜ್ಞಾದಿಕರ್ಮಗಳಲ್ಲಿ ಯಶಸ್ವಿಯಾಗಿ ಜಯವನ್ನು ಗಳಿಸುವುದಲ್ಲದೆ ತನ್ನ ಶತ್ರುಗಳನ್ನೂ ಸೋಲಿಸಿ ಅಭಿವೃದ್ಧಿಯನ್ನು ಪಡೆಯುವನು.

ಪ್ರಾತರ್ವೈ ಸ ತಂ ದೇವೇಭ್ಯೋಽನ್ವಬ್ರವೀದ್ಯತ್ಪ್ರಾತರನ್ವಬ್ರವೀತ್ತ-ತ್ಪ್ರಾತರನುವಾಕಸ್ಯ ಪ್ರಾತರನುವಾಕತ್ವಂ ।

ಪ್ರಾತರನುವಾಕಶಬ್ದಸ್ಯ ನಿರ್ವಚನಂ ದರ್ಶಯತಿ । ಪ್ರಾತಃಕಾಲ ಏವ ಸ ಪ್ರಜಾಪತಿಸ್ತಮನುವಾಕಮೃಕ್ಸಮೂಹಂ ದೇವಾರ್ಥಮನುಕ್ರಮೇಣಾಬ್ರವೀತ್ । ಯಸ್ಮಾದೇವಂ ತಸ್ಮಾತ್ಪ್ರಾತರನುವಾಕ ಇತಿ ನಾಮ ಸಂಪನ್ನಂ ।

ಪ್ರಾತರನುವಾಕವೆಂದು ಈ ಮಂತ್ರಸಮೂಹಕ್ಕೆ ಹೆಸರು ಏತಕ್ಕೆ ಬಂದಿತೆಂದರೆ, ಪೂರ್ವದಲ್ಲಿ ಪ್ರಜಾಪತಿಯು ದೇವತೆಗಳನ್ನು ಆಹ್ವಾನಿಸುವಾಗ ಈ ಮಂತ್ರಸಮೂಹವನ್ನೂ ಪ್ರಾತಃಕಾಲದಲ್ಲಿ ಪಠಿಸಿದ್ದರಿಂದ ಆ ಮಂತ್ರಗಳಿಗೆ ಪ್ರಾತರನುವಾಕವೆಂಬ ಹೆಸರು ಬಂದಿತು.

ಮಹತಿ ರಾತ್ರ್ಯಾ ಅನೂಚ್ಯಃಸರ್ವಸ್ಯೈ ವಾಚಃ ಸರ್ವಸ್ಯ ಬ್ರಹ್ಮಣಃ ಪರಿಗೃಹೀತ್ಯೈ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ತಸ್ಯ ವಾಚಂ ಪ್ರೋದಿತಾಮನುಪ್ರವದಂತಿ ತಸ್ಮಾನ್ಮಹತಿ ರಾತ್ರ್ಯಾ ಅನೂಚ್ಯಃ । ಪುರಾ ವಾಚಃ ಪ್ರವದಿತೋರನೂಚ್ಯಃ । ಯದ್ವಾಚಿ ಪ್ರೋದಿತಾಯಾಮನುಬ್ರೂಯಾದನ್ಯಸ್ಯೈವೇನಮುದಿತಾನುವಾದಿನಂ ಕುರ್ಯಾತ್ । ತಸ್ಮಾನ್ಮಹತಿ ರಾತ್ರ್ಯಾ ಅನೂಚ್ಯಃ । ಪುರಾ ಶಕುನಿವಾದಾದನುಬ್ರೂಯಾತ್ । ನಿರ್ಋತೇರ್ವಾ ಏತನ್ಮುಖಂ ಯದ್ವಯಾಂಸಿ ಯಚ್ಛಕುನಯಸ್ತದ್ಯತ್ಪುರಾ ಶಕುನಿವಾದಾದನುಬ್ರೂಯಾನ್ಮಾ ಯಜ್ಞಯಾಂ ವಾಚಂ ಪ್ರೋದಿತಾಮನು ಪ್ರವದಿಷ್ಮೇತಿ ತಸ್ಮಾನ್ಮಹತಿ ರಾತ್ರ್ಯಾ ಅನೂಚ್ಯಃ ॥

ತಸ್ಯ ಪ್ರಾತರನುವಾಕಸ್ಯ ಕಾಲವಿಶೇಷಂ ವಿಧತ್ತೇ । ರಾತ್ರ್ಯಾಃ ಪೂರ್ವಸ್ಯಾಪವಸಥ್ಯಾಖ್ಯಸ್ಯ ದಿನಸ್ಯಾಗ್ನೀಷೋಮೀಯಪಶ್ವನುಷ್ಠಾನಯುಕ್ತಸ್ಯ ಯಾ ರಾತ್ರಿಸ್ತಸ್ಯಾ ರಾತ್ರೇಃ ಸಂಬಂಧಿನಿ ಶೇಷೇ ಮಹತ್ಯವತಿಷ್ಠಮಾನೇ ಸತಿ ಪ್ರಾತರನುವಾಕಾಖ್ಯ ಋಕ್ಸಮೂಹೋ ವಕ್ತವ್ಯಃ । ಏತದುಕ್ತಂ ಭವತಿ—ಯಸ್ಮಿನ್ಕಾಲೇ ಪ್ರಾರಬ್ಧಃ ಪ್ರಾತರನುವಾಕಸ್ತಮುಸೋಪಘಾತಾತ್ಪೂರ್ವಮೇವ ಸಮಾಪಯಿತುಂ ಶಕ್ಯಃ ಸ್ಯಾತ್ತದಾ ಪ್ರಾರಬ್ಧವ್ಯ ಇತಿ । ತಥಾವಿಧಮನುವಚನಂ ಲೌಕಿಕ್ಯಾಃ ಸರ್ವಸ್ಯಾ ವಾಚೋ ಬ್ರಹ್ಮಣೋ ವೇದಸ್ಯ ಸರ್ವಸ್ಯಾಪಿ ಪರಿಗ್ರಹಾಯ ಭವತಿ । ಯೋ ವಾ ಇತ್ಯಾದಿನಾ ಲೌಕಿಕೋ ನ್ಯಾಯ ಉಚ್ಯತೇ । ಲೋಕೇ ಯಃ ಪುಮಾನ್ಭವತ್ಯೈಶ್ವರ್ಯಂ ಪ್ರಾಪ್ನೋತಿ ಯಶ್ಚ ವಿದ್ಯಾವೃತ್ತಾದಿಭಿಃ ಶ್ರೇಷ್ಠತ್ವಂ ಪ್ರಾಪ್ನೋತಿ ತಸ್ಯೋಭಯವಿಧಸ್ಯ ಪುರುಷಸ್ಯ ಸಂಬಂಧಿನೀಂ ವಾಚಂ ಪ್ರೋದಿತಾಂ ಪ್ರಥಮತ ಉಕ್ತಾಮನು ಪಶ್ಚಾತ್ಸರ್ವೇ ಭೃತ್ಯಾಃ ಶಿಷ್ಯಾಶ್ಚ ಪ್ರವದಂತಿ । ತಸ್ಮಾತ್ತತ್ರಾಪಿ ರಾಜಾಚಾರ್ಯಾದಿ ವಾಕ್ಸ್ಥಾನೀಯಃ ಪ್ರಾತರನುವಾಕಃ ಸ್ವೇತರವೈದಿಕಲೌಕಿಕಸರ್ವವಾಕ್ಪ್ರವೃತ್ತೇಃ ಪೂರ್ವಂ ರಾತ್ರ್ಯಾಃ ಸಂಬಂಧಿನಿ

ಮಹತ್ಯವಶಿಷ್ಟೇ ಕಾಲೇ ಪಾಶ್ಚಾತ್ಯಯಾಮೇಽನುವಕ್ತವ್ಯಃ। ಯದ್ಯಪ್ಯಯಮುಷಃಕಾಲೋ ನ ತು ಪ್ರಾತಃಕಾಲಸ್ತಥಾಪಿ ಪ್ರಾತಃಕಾಲಸಮೀಪವರ್ತಿತ್ವಾತ್ಪ್ರಾತರನುವಾಕತ್ವಂ ದ್ರಷ್ಟವ್ಯಂ। ಪಾಶ್ಚಾತ್ಯಯಾಮೇಽಪಿ ಕಿಂಚಿದ್ವಿಶೇಷಂ ವಿಧತ್ತೇ। ರಾತ್ರೌ ನಿದ್ರಾಂ ಕುರ್ವಂತಃ ಪ್ರಾಣಿನ ಉಷಃಕಾಲೇ ಪ್ರಬುಧ್ಯ ವಾಚಂ ಪ್ರವದಂತಿ ತಸ್ಮಾತ್ಪ್ರವದಿತೋಃ ಪ್ರವಚನಾತ್ಪೂರ್ವಮೇವಾಯಮನುವಕ್ತವ್ಯಃ। ವಿಪಕ್ಷೇ ಬಾಧಕಮಾಹ। ನಿದ್ರಾಂ ಪರಿತ್ಯಜ್ಯ ಪ್ರಬುದ್ಧೈಃ ಪುರುಷೈರ್ವಾಚಿ ಪ್ರೋದಿತಾಯಾಂ ಯದಿ ಪಶ್ಚಾದ್ಬ್ರೂಯಾತ್ತದಾನೀಮೇತಂ ಪ್ರಾತರನುವಾಕಮುದಿತಾನುವಾದಿನಂ ಕುರ್ಯಾದನ್ಯೈರುದಿತಾ ಯಾ ವಾಕ್ತದನುವಾದಿತ್ವೇ ಸತಿ ಭೃತ್ಯಾದಿ ಶಿಷ್ಯಾದಿರೂಪತ್ವಂ ಸ್ಯಾನ್ನ ತು ರಾಜಾಚಾರ್ಯಾದಿರೂಪತ್ವಂ। ಸ್ವಪಕ್ಷಂ ನಿಗಮಯತಿ। ಅಪರಂ ವಿಶೇಷಂ ವಿಧತ್ತೇ। ಶಕುನಯಃ ಪಕ್ಷಿಣ ಉಷಃಕಾಲೇ ಪ್ರಬುದ್ಧಾ ವದಂತಿ ಧ್ವನಿಂ ಕುರ್ವಂತಿ ತಸ್ಮಾದ್ವಾದಾತ್ಪೂರ್ವಮೇವಾನುಬ್ರೂಯಾತ್। ತದೇತದುಪಪಾದಯತಿ। ನಿರ್ಋತಿಃ ಕಾ ಚಿದ್ರಾಕ್ಷಸರೂಪಾ ಮೃತ್ಯುದೇವತಾ। ಯಾನಿ ವಯಾಂಸಿ ಯೇ ಚ ಶಕುನಯ ಏತತ್ಸರ್ವಂ ಮೃತ್ಯುದೇವತಾಯಾ ಮುಖಂ। ಅತ್ರ ವಯಃಶಬ್ದೇನ ಪಕ್ಷಿಸಾಮಾನ್ಯಮುಚ್ಯತೇ ಶಕುನಿಶಬ್ದೇನ ಪಕ್ಷಿವಿಶೇಷಃ। ಯೇಷಾಂ ಸಂಚಾರಾದಧ್ವನೀಷ್ಟಾನಿಷ್ಟಸೂಚಕತಯಾ ಮನುಷ್ಯಾ ವ್ಯವಹರಂತಿ ತೇ ಶಕುನಯಃ। ಯಸ್ಮಾದುಭಯಂ ಮೃತ್ಯುಮುಖಂ ತದ್ಯದಿ ತದುಭಯಧ್ವನೇಃ ಪುರಾನುಬ್ರೂಯಾತ್ತದಾನೀಂ ಪ್ರೋದಿತಾಂ ಪ್ರಥಮತ ಉಕ್ತಾಮಯಜ್ಞಿಯಾಂ ಯಜ್ಞಸಂಬಂಧರಹಿತಾಂ ವಾಚಮನು ಮಾ ಪ್ರವದಿಷ್ಮ ಪ್ರಾತರನುವಾಕಂ ಪಶ್ಚಾದುಕ್ತವಂತೋ ಮಾ ಭವಾಮೇತಿ ಹೋತುರಭಿಪ್ರಾಯೋ ಭವತಿ। ಅತೋ ಮಹತಿ ರಾತ್ರಿವಿಶೇಷೇಽವಸ್ಥಿತೇ ಸತಿ ಶಕುನಿವಾದಶಂಕಾನುದಯಾತ್ತದಾನೀಮೇವಾನೂಚ್ಯಃ ॥

ಪ್ರಾತರನುವಾಕಮಂತ್ರಗಳನ್ನು ಯಾವಕಾಲದಲ್ಲಿ ಪಠಿಸಬೇಕು ಎಂಬುದನ್ನು ಇಲ್ಲಿ ವಿಶದವಾಗಿ ಹೇಳುತ್ತಾರೆ. ಅಗ್ನೀಷೋಮೀಯ ಸಂಬಂಧವಾದ ಪಶುಹೋಮವನ್ನು ಮಾಡಿದ ದಿನದ ರಾತ್ರಿಕಾಲದಲ್ಲಿ ಸುಮಾರು ಅರ್ಧರಾತ್ರಿ ಕಳೆದನಂತರ ಇನ್ನೂ ಬೇಕಾದಷ್ಟು ರಾತ್ರಿಕಾಲ ಇರುವಾಗಲೇ ಪ್ರಾತರನುವಾಕಮಂತ್ರಗಳನ್ನು ಪಠಿಸಲು ಪ್ರಾರಂಭಿಸಬೇಕು. ಹೇಗೆಂದರೆ— ಅಪರರಾತ್ರೆಯಲ್ಲಿ ಪ್ರಾರಂಭಿಸಬೇಕಾದ ಪ್ರಾತರನುವಾಕಮಂತ್ರಗಳು ರಾತ್ರೆಯು ಮುಗಿದು ಬೆಳಕು ಹರಿಯುವದರೊಳಗಾಗಿ ಮುಗಿಸಲ್ಪಡಬೇಕು. ಎಂದರೆ ಉಷಃಕಾಲಕ್ಕೆ ಮುಂಚೆಯೇ ಮಂತ್ರಪಠನವು ಮುಗಿಯುವಂತೆ ರಾತ್ರೆಕಾಲವು ಬಹಳವಾಗಿರುವಾಗಲೇ ಪ್ರಾತರನುವಾಕಮಂತ್ರಗಳನ್ನು ಪಠಿಸಲು ಪ್ರಾರಂಭಮಾಡಬೇಕು. ಈ ಪ್ರಾತರನುವಾಕಮಂತ್ರಗಳು ವೇದಮಂತ್ರಗಳಾಗಿರುವುದರಿಂದ ಇತರ ಎಲ್ಲ ಮಾತುಗಳಿಗಿಂತಲೂ ಶಬ್ದಗಳಿಂತಲೂ ಇವಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ಕೊಡಬೇಕು. ಮನುಷ್ಯರು ರಾತ್ರೆಕಾಲದಲ್ಲಿ ಮಲಗಿದ್ದು ನಿದ್ರೆಯಿಂದ ಎದ್ದಕೂಡಲೆ ಲೋಕವ್ಯವಹಾರಾರ್ಥವಾಗಿ ಮಾತುಗಳನ್ನಾಡುವರು. ಪ್ರಾತರನುವಾಕಮಂತ್ರಗಳು ವೇದಮಂತ್ರಗಳಾಗಿ ಲೌಕಿಕಮಾತುಗಳಿಗಿಂತ ಶ್ರೇಷ್ಠವಾದದ್ದರಿಂದ ರಾತ್ರೆಯಲ್ಲಿ ಎದ್ದಕೂಡಲೆ ಇತರ ಮಾತುಗಳಲ್ಲಿ ತೊಡಗುವುದಕ್ಕಿಂತ ಪೂರ್ವಭಾವಿಯಾಗಿಯೇ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಆದ್ದರಿಂದಲೇ ಎಲ್ಲಕ್ಕಿಂತ ಮೊದಲೇ ಎಂದರೆ ಬೆಳಗಾಗುವುದಕ್ಕಿಂತ ಮೊದಲೇ ರಾತ್ರಿಕಾಲ ಬಹಳವಿರುವಾಗಲೇ ಈ ಮಂತ್ರಗಳನ್ನು ಪಠಿಸಬೇಕೆಂದು ನಿಯಮವಿರುವುದು. ಇದಲ್ಲದೆ ಇದಕ್ಕೆ ಇನ್ನೂ ಒಂದು ಕಾರಣವಿರುವುದು. ರಾಜನು ಆಡುವ ಮಾತುಗಳನ್ನು ಅವನ ಪ್ರಜೆಗಳು ಅನುಮೋದಿಸುವರು ಎಂದರೆ ಅವನು ಹೇಳಿದಂತೆಯೇ ತಾವೂ ಹೇಳುವರು. ಹಾಗೆಯೇ ಗುರುವು ಹೇಳಿದವಾಕ್ಯವನ್ನು ಶಿಷ್ಯರು ವ್ಯತ್ಯಾಸವಿಲ್ಲದೆ ಹಾಗೆಯೇ ಹೇಳುವರು. ಅದೇ ರೀತಿ ರಾಜಾ ಮತ್ತು ಗುರುವಿನ ಸ್ಥಾನದಲ್ಲಿರುವ ಪ್ರಾತರನುವಾಕ

ಮಂತ್ರಗಳಿಗೆ ಮೊದಲ ಸ್ಥಾನವಿರುವುದು. ಲೌಕಿಕವಾದ ಮಾತುಗಳಿಗೆ ಎರಡನೆಯ ಸ್ಥಾನವಿರುವುದು. ಎಂದರೆ ಮೊದಲು ಬಹಳ ರಾತ್ರಿಯಿರುವಾಗಲೇ ಪ್ರಥಮಸ್ಥಾನಕ್ಕೆ ಅರ್ಹವಾದ ಪ್ರಾತರನುವಾಕಮಂತ್ರಗಳನ್ನು ಪಠಿಸಿ ಅನಂತರ ರಾತ್ರಿಕಳೆದು ಬೆಳಗಾದ ಮೇಲೆ ದ್ವಿತೀಯಸ್ಥಾನಕ್ಕೆ ಅರ್ಹವಾದ ವ್ಯಾವಹಾರಿಕ ಭಾಷೆಗೆ ಅವಕಾಶಕೊಡುವರು (ಎಂದರೆ ನಿತ್ಯೋಪಯೋಗವಾದ ಮಾತುಗಳನ್ನಾಡುವರು) ಈ ಕಾರಣಗಳಿಗಾಗಿಯೇ ರಾತ್ರಿಕಾಲ ಬಹಳವಾಗಿರುವಾಗಲೇ ಲೋಕವ್ಯವಹಾರದ ಮಾತುಗಳು ಇಲ್ಲದಿರುವಾಗ ಪ್ರಾತರನುವಾಕವನ್ನು ಪ್ರಾರಂಭಿಸಬೇಕು. ಈ ವಿಷಯದಲ್ಲಿ—**ಪುರಾ ವಾಚಃ ಪ್ರವದಿತೋಃ ಪ್ರಾತರನುವಾಕಮುಪಾಕರೋತಿ ಯಾವತ್ಯೇವ ವಾಕ್ ತಾಮವರುಂಧೇ** (ತೈ.ಸಂ. ೬-೪-೩) ಎಂದು ಶ್ರುತಿವಾಕ್ಯವಿರುವುದು. ಎಂದರೆ ಪ್ರಾತಃಕಾಲದಲ್ಲಿ ಇತರ ಮಾತುಗಳು ಅಥವಾ ಪ್ರಾಣಿಗಳ ಶಬ್ದಗಳು ಕೇಳಿಸುವುದಕ್ಕೆ ಮುಂಚಿತವಾಗಿಯೇ ಈ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಪ್ರಾಣಿಗಳು ಎಂದರೆ ಪಕ್ಷ್ಯಾದಿಗಳು. ಇವುಗಳಲ್ಲಿ ಎರಡು ವಿಧ. ನೆಲದಮೇಲೆ ಸಂಚಾರ ಮಾಡುವ ಕೋಳಿ ಮೊದಲಾದವುಗಳಿಗೆ ಶಕುನಪಕ್ಷಿಗಳೆಂದು ಹೆಸರು. ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಗಳಿಗೆ ವಯಾಂಸಿ ಎಂದು ಹೆಸರು. ಈ ಎರಡುವಿಧ ಪಕ್ಷಿಗಳು ಅದರಲ್ಲಿಯೂ ಪ್ರಾತಃಕಾಲಕ್ಕೆ ಮುಂಚಿತವಾಗಿಯೇ ಕೂಗುವ ಸ್ವಭಾವವುಳ್ಳ ಕೋಳಿಗಳ ಶಬ್ದವು ಕೇಳಿಬರುವುದಕ್ಕಿಂತ ಮುಂಚಿತವಾಗಿಯೇ ಪ್ರಾತರನುವಾಕವನ್ನು ಆರಂಭಿಸಬೇಕು. ನಿರ್ಋತಿಯೆಂದರೆ ಮೃತ್ಯು ದೇವತೆಯು. ಶಕುನಿ (ಕೋಳಿ) ಮತ್ತು ಇತರ ಪಕ್ಷಿಗಳು ಮೃತ್ಯುದೇವತೆಯ ಮುಖವೆಂದು ಹೇಳಲ್ಪಡುವುದು. ಇಂತಹ ನಿಂದನೀಯವಾದ ಪಕ್ಷಿಗಳ ಯಜ್ಞಯೋಗ್ಯವಲ್ಲದ ಅಪಸ್ವರಗಳು ಕೇಳಿಬರುವುದಕ್ಕಿಂತ ಮೊದಲೇ ಈ ಪ್ರಾತರನುವಾಕವನ್ನು ಪಠಿಸಬೇಕು. ಈ ಎಲ್ಲಾ ಕಾರಣಗಳಿಗಾಗಿ ಪ್ರಾತರನುವಾಕಮಂತ್ರಗಳನ್ನು ಪ್ರಾತಃಕಾಲ, ಉಷಃಕಾಲಗಳು ಉದಯಿಸುವುದಕ್ಕಿಂತ ಬಹಳ ಮುಂಚೆಯೇ ಎಂದರೆ ರಾತ್ರಿಕಾಲ ಬಹಳವಾಗಿರುವಾಗಲೇ (ಅರ್ಧರಾತ್ರಿಯಾದಕೂಡಲೇ) ಪಠಿಸಲು ಪ್ರಾರಂಭಿಸಬೇಕೆಂದು ಹೋತೃ ಮೊದಲಾದ ಯಜ್ಞಕರ್ತರ ಅಭಿಪ್ರಾಯವಿರುವುದು.

ಅಥೋ ಖಲು ಯದೈವಾಧ್ವರ್ಯುರುಪಾಕುರ್ಯಾದಥಾನು-
ಬ್ರೂಯಾತ್ । ಯದಾ ವಾ ಅಧ್ವರ್ಯುರುಪಾಕರೋತಿ
ವಾಚೈವೋಪಾಕರೋತಿ ವಾಚಾ ಹೋತಾನ್ವಾಹ ವಾಗ್ಘಿ ಬ್ರಹ್ಮ
ತತ್ರ ಸ ಕಾಮ ಉಪಾಪ್ತೋ ಯೋ ವಾಚಿ ಚ ಬ್ರಹ್ಮಣಿ ಚ ॥

ಪಕ್ಷಾಂತರಂ ವಿಧತ್ತೇ । ಅಧ್ವರ್ಯೋರುಪಾಕರಣಂ ಪ್ರೈಷಮಂತ್ರಪಾಠಃ । ಸ ಏವ ಪ್ರಾತರನುವಾಕಸ್ಯ ಕಾಲಃ । ತದೇತದುಪಪಾದಯತಿ । ಅಧ್ವರ್ಯೋರುಪಾಕರಣಂ ಪ್ರೈಷ-ಮಂತ್ರರೂಪಯಾ ವೈದಿಕವಾಚೈವ ಸಂಪದ್ಯತೇ । ಹೋತುರನುವಚನಮಪಿ ವೈದಿಕವಾಚಾ ಭವತಿ ಯಸ್ಮಾದುಭಯವಿಧಾ ವಾಗ್ಬ್ರಹ್ಮ ವೇದರೂಪಂ ತಸ್ಮಾದುಪಕರಣಾನಂತರ ಭಾವಿನಾನು-ವಚನೇನ ಲೌಕಿಕವಾಚಿ ವೈದಿಕವಾಚಿ ಯತ್ಫಲಂ ಭಾವಿನಂ ತತ್ಪ್ರಾಪ್ನೋತಿ।ಅತ್ರ ಕಾಲವಿಶೇಷಃ ಶಾಖಾಂತರೇಽಪ್ಯಾಮ್ನಾತಃ । ಪುರಾ ವಾಚಃ ಪ್ರವದಿತೋಃ ಪ್ರಾತರನುವಾಕಮುಪಾಕರೋತಿ ಯಾವತ್ಯೇವ ವಾಕ್ತಾಮವರುಂಧೇ ಇತಿ । ಉಪಾಕರಣಂ ಚಾಪಸ್ತಂಬೇನ ಸ್ಪಷ್ಟೀಕೃತಂ—ಪುರಾ ವಾಚಃ ಪುರಾ ವಾ ವಯೋಭ್ಯಃ ಪ್ರವದಿತೋಃ ಪ್ರಾತರನುವಾಕಮುಪಾಕರೋತಿ ಪ್ರಾತರ್ಯಾ-ವಭ್ಯೋ ದೇವೇಭ್ಯೋಽನು ಬ್ರೂಹಿ ಬ್ರಹ್ಮನ್ವಾಚಂ ಯಚ್ಛ ಪ್ರತಿಪ್ರಸ್ಥಾತಃ ಸವನೀಯಾನ್ನಿರ್ವಪ ಸುಬ್ರಹ್ಮಣ್ಯ ಸುಬ್ರಹ್ಮಣ್ಯಾಮಾಹ್ವಯೇತಿ ಸಂಪ್ರೇಷ್ಯತಿ ॥ ಇತಿ ॥

ಪ್ರಾತರನುವಾಕಮಂತ್ರಪಠನ ವಿಚಾರದಲ್ಲಿ ಪಕ್ಷಾಂತರವನ್ನು ವಿವರಿಸುವರು. ಅಧ್ವರ್ಯುವು ಹೋತೃವನ್ನುದ್ದೇಶಿಸಿ ಪ್ರಾತರನುವಾಕಮಂತ್ರಪಠನಕ್ಕಾಗಿ ಯಾವಾಗ ಪ್ರೈಷಮಂತ್ರದಿಂದ ನಿರ್ದೇಶಿಸುವನೋ ಆಗಲೇ ಪ್ರಾತರನುವಾಕಮಂತ್ರಪಠನಕ್ಕೆ ಕಾಲವು. ಅದನ್ನು ಇನ್ನೂ ಸ್ಪಷ್ಟವಾಗಿ ವಿವರಿಸುವರು. ಅಧ್ವರ್ಯುವು ತಾನು ಮಾಡಬೇಕಾದ ಕೆಲಸವನ್ನು ಪ್ರೈಷಮಂತ್ರ ರೂಪವಾದ ವೈದಿಕವಾಕ್ಯದಿಂದ ನಿರ್ದೇಶಿಸುವನು. ಅದಕ್ಕನುಸಾರವಾಗಿ ಹೋತೃವೂ ಸಹ ಪ್ರಾತರನುವಾಕಮಂತ್ರಗಳನ್ನು ವೈದಿಕವಾಕ್ಯರೂಪದಿಂದಲೇ ಪಠಿಸಿ ನಿರ್ವಹಿಸುನು. ಈರೀತಿ ಅಧ್ವರ್ಯು ಮತ್ತು ಹೋತೃಗಳೆಂಬ ಇಬ್ಬರು ಋತ್ವಿಜರೂ ವೈದಿಕ ಮಂತ್ರಗಳಿಂದ ವಾಕ್ ಮತ್ತು ವೇದರೂಪವಾದ ಬ್ರಹ್ಮ ಅಥವಾ ಮಂತ್ರವನ್ನು ಪಠಿಸಿ ಕಾರ್ಯವನ್ನು ನಿರ್ವಹಿಸುವುದರಿಂದ ವೈದಿಕ ಮತ್ತು ಲೌಕಿಕಭಾಷೆಗಳಲ್ಲಿ ನೆರವೇರಿಸುವ ಕರ್ಮಕ್ಕೆ ಯಾವ ಫಲವಿರುವುದೋ ಆ ಫಲವನ್ನು ಯಜಮಾನನು ನಿಶ್ಚಯವಾಗಿ ಪಡೆಯುತ್ತಾನೆ. ಈ ಮಂತ್ರಪಠಣದ ಕಾಲವಿಶೇಷವನ್ನು ತೈತ್ತಿರೀಯಸಂಹಿತೆಯಲ್ಲಿ ಸ್ಪಷ್ಟವಾಗಿ ತಿಳಿಸಿರುವುದು—**ಪುರಾ ವಾಚಃ ಪ್ರವದಿತೋಃ ಪ್ರಾತರನುವಾಕಮುಪಾಕರೋತಿ ಯಾವತ್ಯೇವ ವಾಕ್ ತಾಮವರುಂಧೇ** (ತೈ. ಸಂ. ೯-೪-೩-೧) ಎಂದರೆ ಪ್ರಾತಃಕಾಲವಾಗುವುದಕ್ಕೆ ಮುಂಚೆಯೇ ಇತರ ಶಬ್ದಗಳು ಕೇಳಿಬರುವುದಕ್ಕಿಂದ ಪೂರ್ವದಲ್ಲಿಯೇ ಪ್ರಾತರನುವಾಕಮಂತ್ರಗಳನ್ನು ಹೋತೃವು ಪಠಿಸುವನು. ಈ ಮಂತ್ರರೂಪವಾದ ವಾಕ್ಯದಿಂದ ಯಾವ ಫಲವು ನಿರ್ದಿಷ್ಟವಾಗಿರುವುದೋ ಅದನ್ನು ಪಡೆಯುತ್ತಾನೆ. ಎಂದು ಮತ್ತು ಆಪಸ್ತಂಬರು ಸಹ ಈ ವಿಷಯವನ್ನು ಸ್ಪಷ್ಟವಾಗಿ ವಿವರಿಸುವರು—**ಪುರಾ ವಾಚಃ ಪುರಾ ವಾ ವಯೋಭ್ಯಃ ಪ್ರವದಿತೋಃ ಪ್ರಾತರನುವಾಕಮುಪಾಕರೋತಿ । ಪ್ರಾತರ್ಯಾವಭ್ಯೋ ದೇವೇಭ್ಯ ಅನುಬ್ರೂಹಿ ಬ್ರಹ್ಮನ್ ವಾಚಂ ಯಚ್ಛ ಪ್ರತಿಪ್ರಸ್ಥಾತಃ ಸವನೀಯಾನ್ ನಿರ್ವಪ ಸುಬ್ರಹ್ಮಣ್ಯ ಸುಬ್ರಹ್ಮಣ್ಯಾಮಾಹ್ವಯೇತಿ ಸಂಪ್ರೇಷ್ಯತಿ** (ಆಪ. ಶ್ರೌ. ೧೨-೩-೧೪,೧೫) ಎಂದು.



*English Translation*

### On the repetition of the Pratar-anuvaka, or early morning prayer, on the day of the Soma libation).

The Adhvaryu orders the Hotar to repeat the mantras appropriate for the Gods, who appear in the early morning. These Gods are Agni, Ushas (dawn), and the Ashvins (twilight); they come, if each of them is addressed in mantras of seven different metres. They come on the call of him who has such knowledge.

As Prajapati, when he himself was once Hotar, was just about to repeat the Pratar-anuvaka, in the presece of both the Devas and Asuras, the first thought he will repeat the Pratar-anuvaka for our benefit; the latter believed, he will do so for us. He then repeated it for the Devas. Thence the Devas became masters of the Asuras. He who has such a knowledge becomes master of his enemy, adversary, and gainsayer. It is called Pratar-anuvaka, (morning prayer); for Prajapathi prayed it early in the morning. It is to be repeated in the

dead of night. For people follow in their sayings him who posses the whole speech, and the full Brahma, and who has obtained the leadership.

Therefore the Pratar-anuvaka is to be repeated in the dead of night; for it must be repeated before people commence talking. Should he, however, repeat the Pratar-anuvaka after people have commenced talking, he would make the Pratar-anuvaka (which) should be the first speech uttered in the morning follow the speech of another. (Such being contrary to its nature) it must be repeated in the dead of night. He should repeat it even before the voice of the cock is heard. For all the birds, including the cock, are the mouth (the very end) of the Goddess Nirriti (destruction, death). If he thus repeats the Pratar-anuvaka by this verse, at which all the Gods felt joy; for each of them thought, he first has mentioned me; they all then felt joy when he was repeating the Pratar-anuvaka. He who has such a knowledge (i. e. who commences his Pratar-anuvaka by the same verse,) commences his Pratar-anuvaka with a joint address to all the Gods.

The Devas were afraid of the Asuras robbing them of their early morning sacrifice, (the Pratar-anuvaka), for they (the Asuras) were so very strong and powerful. But Indra said to them: "do not be afraid! I shall strike them with three-fold power of my morning thunderbolt." He then repeated the verse mentioned (10, 30, 12). This verse is in three respects, a thunderbolt, viz., it contaius "the destroying waters" (apo nuptryo), it is in the Irishtubh (Indra's) metre, and it contains "speech" (it is recited with a loud voice). With this thunderbolt he struck and destroyed them. Thence the Devas became masters of the Asuras. He who has such a knowledge, becomes master of his enemy, adversary and gainsayer.

They say: he should be the Hotar who produces in this verse (when reciting it) the number containing all metres. This is the case, if it be repeated thrice. this the production of the metres.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು



# ಅಥ ಸಪ್ತಮಾಧ್ಯಾಯೇ ಷಷ್ಠಃ ಖಂಡಃ

**ಏಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು**





ಪ್ರಜಾಪತೌ ವೈ ಸ್ವಯಂ ಹೋತರಿ ಪ್ರಾತರನುವಾಕಮನುವಕ್ಷ್ಯತಿ ಸರ್ವಾ ದೇವತಾ ಆಶಂಸಂತಮಾಮಭಿ ಪ್ರತಿಪತ್ಸ್ಯತಿ ಮಾಮ-ಭೀತಿ ಸ ಪ್ರಜಾಪತಿರೈಕ್ಷತ ಯದ್ಯೇಕಾಂ ದೇವತಾಮಾದಿಷ್ಟಾ-ಮಭಿ ಪ್ರತಿಪತ್ಸ್ಯಾಮೀತರಾಮೇಕೇನ ದೇವತಾ ಉಪಾಪ್ತಾ ಭವಿಷ್ಯಂತೀತಿ ಸ ಏತಾಮೃಚಮಪಶ್ಯದಾಪೋ ರೇವತೀರಿ-ತ್ಯಾಪೋ ವೈ ಸರ್ವಾ ದೇವತಾ ರೇವತ್ಯಃ ಸರ್ವಾ ದೇವತಾಃ ಸ ಏತಯರ್ಚಾ ಪ್ರಾತರನುವಾಕಂ ಪ್ರತ್ಯಪದ್ಯತ ತಾಃ ಸರ್ವಾ ದೇವತಾಃ ಪ್ರಾಮೋದಂತ ಮಾಮಭಿ ಪ್ರತ್ಯಪಾದಿ ಮಾಮಭೀತಿ ॥

ಅಥ ಪ್ರಾತರನುವಾಕೇ ಪ್ರಥಮಾಮೃಚಂ ವಿಧಾತುಮಾಖ್ಯಾಯಿಕಾಮಾಹ-ಪ್ರಜಾ-ಪತೌ ವೈ ಸ್ವಯಮೇವ ಹೋತೃತ್ವಂ ಪ್ರಾಪ್ಯ ಕಸ್ಮಿಂಶ್ಚಿದ್ಯಜ್ಞೇ ಪ್ರಾತರನುವಾಕಮನುವಕ್ತು-ಮುದ್ಯುಕ್ತೇ ಸತಿ ಸರ್ವಾ ಅಪಿ ದೇವತಾಃ ಪ್ರತ್ಯೇಕಂ ಮಾಮಭಿಲಕ್ಷ್ಯ ಪ್ರತಿಪತ್ಸ್ಯತಿ ಪ್ರಾರಂಭಂ ಕರಿಷ್ಯತೀತ್ಯೇವಮಾಶಂಸಂತಾಪೇಕ್ಷಾಂ ಕೃತವಂತಃ । ಮಾಮಭೀತಿ ವೀಪ್ಸಾ ಸರ್ವಸಂಗ್ರ-ಹಾರ್ಥಾ । ಮದ್ದೇವತ್ಯಯೈವರ್ಚಾ ಪ್ರಾರಂಭ ಇತಿ ಸರ್ವಾಸಾಂ ದೇವತಾನಾಂ ಪ್ರತ್ಯೇಕಮಾ-ಶಾಮವಲೋಕ್ಯ ಸ ಪ್ರಜಾಪತಿಃ ಸ್ವಮನಸಿ ವಿಚಾರಿತವಾನ್ । ಸ ಏವ ವಿಚಾರೋ ಯದಿತ್ಯಾ-ದಿನಾ ಸ್ಪಷ್ಟೀಕ್ರಿಯತೇ । ಆದಿಷ್ಟಾಂ ಕೇನಚಿನ್ಮಂತ್ರೇಣ ಪ್ರತಿಪಾದಿತಾಮೇಕಾಂ ದೇವತಾಮ-ಭಿಲಕ್ಷ್ಯ ಯದ್ಯಹಂ ಪ್ರತಿಪತ್ಸ್ಯಾಮಿ ಪ್ರಾರಂಭಂ ಕರಿಷ್ಯಾಮಿ ತದಾನೀಮಿತರಾ ದೇವತಾಃ ಕುಪ್ಯೇಯುರಿತಿ ಶೇಷಃ । ತಸ್ಮಾತ್ಕಾರಣಾನ್ಮೇ ಮಮ ಕೇನ ಪ್ರಕಾರೇಣ ದೇವತಾಃ ಸರ್ವಾ ಅಪ್ಯುಪಾಪ್ತಾ ಉಪಕ್ರಮೇ ಪ್ರಾಪ್ತಾ ಭವಿಷ್ಯಂತಿ । ಏವಂ ವಿಚಾರ್ಯ ಸ ಪ್ರಜಾಪತಿಃ ಸರ್ವದೇವತಾಸಿದ್ಧ್ಯರ್ಥಮಾಪೋ ರೇವತೀಃ ಕ್ಷಯಥಾ ಹಿ ವಸ್ವ ಇತ್ಯೇತಾಮೃಚಮಪಶ್ಯತ್ । ತತ್ರಾಪ್ಶಬ್ದೇನ ರೇವತೀಶಬ್ದೇನ ಚ ಸರ್ವಾ ದೇವತಾ ಉಕ್ತಾ ಭವಂತಿ । ಆಪ್ನುವಂತೀತ್ಯಾಪಃ । ರಾಯೋ ಧನಾನಿ ಯಾಸಾಂ ಸಂತೀತಿ ರೇವತ್ಯಃ । ಯಜ್ಞಭೂಮಿಪ್ರಾಪ್ತಿರ್ಧನವತ್ತ್ವಂ ಚ ಸರ್ವಾಸು ದೇವತಾಸು ವಿದ್ಯತೇ ತಸ್ಮಾತ್ಸರ್ವದೇವತಾ ಪ್ರತಿಪಾದಿಕೇಯಮೃಕ್ । ಸ ಪ್ರಜಾಪತೀ ರೇವತ್ಯೈವೋಪಕ್ರಾಂತವಾನ್ । ತೇನ ಸರ್ವಾ ದೇವತಾಃ ಪ್ರತ್ಯೇಕಂ ಮಾಮಭಿಲಕ್ಷ್ಯ ಪ್ರಾರಂಭಃ ಕೃತ ಇತಿ ಪ್ರಹೃಷ್ಟವತ್ಯಃ । ವೀಪ್ಸಾ ಪೂರ್ವವತ್ ॥

ಈಗ ಪ್ರಾತರನುವಾಕಮಂತ್ರಗಳಲ್ಲಿ ಮೊದಲನೆಯ ಋಕ್ಕನ್ನು ಪ್ರಾರಂಭಿಸುವ ಸಂದರ್ಭದಲ್ಲಿ ಒಂದು ಆಖ್ಯಾಯಿಕೆಯನ್ನು ಹೇಳುವರು. ಹಿಂದೆ ಹೇಳಿದಂತೆ ಸ್ವಯಂ ಪ್ರಜಾಪತಿಯೇ ಒಂದಾನೊಂದು ಯಜ್ಞದಲ್ಲಿ ಹೋತೃವಿನ ಪಾತ್ರವನ್ನು ವಹಿಸಿ ಪ್ರಾತರನುವಾಕಮಂತ್ರಗಳನ್ನು ಪಠಿಸಲು ಉದ್ಯುಕ್ತನಾದಾಗ ದೇವತೆಗಳೆಲ್ಲರೂ ಇಂತು ಯೋಚಿಸಿದರು. ಈ ಪ್ರಜಾಪತಿಯು ಪ್ರಾತರನುವಾಕಮಂತ್ರಗಳನ್ನು ಪಠಿಸಲು ಉದ್ಯುಕ್ತನಾಗಿರುವನು. ಈ ಸಂದರ್ಭದಲ್ಲಿ ದೇವತೆಯಾದ ನನ್ನನ್ನೇ ಉದ್ದೇಶಿಸಿ ಮೊದಲನೆಯ ಮಂತ್ರವನ್ನು ಪಠಿಸುವನು ಎಂದರೆ ನನ್ನನ್ನು ಸ್ತೋತ್ರಮಾಡುವುದನ್ನೇ ಮೊದಲು ಪ್ರಾರಂಭಿಸುವನು ಎಂದು ಪ್ರತಿಯೊಬ್ಬರೂ ತಮ್ಮ ತಮ್ಮಲ್ಲಿಯೇ ಯೋಚಿಸತೊಡಗಿದರು. ಪ್ರತಿಯೊಬ್ಬ ದೇವತೆಯೂ ತನ್ನನ್ನೇ ಮೊದಲು ಸ್ತುತಿಸುವನೆಂದು ತಿಳಿದು ಎಲ್ಲರೂ ಕುತೂಹಲಯುಕ್ತರಾಗಿ ಕೂಡಿರುವಾಗ ಇದನ್ನು ತಿಳಿದು ಆ ಪ್ರಜಾಪತಿಯು ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು—ಈಗ ನಾನು ಯಾರಾದರೊಬ್ಬ ದೇವತೆಯನ್ನು ಮಾತ್ರ ಮೊದಲು ಸ್ತುತಿಸಲು ಪ್ರಾರಂಭಿಸಿದರೆ ಉಳಿದ ಇತರ ದೇವತೆಗಳಿಗೆಲ್ಲಾ ಕೋಪ ಬರುವುದು. ಆದ್ದರಿಂದ ಎಲ್ಲಾ ದೇವತೆಗಳನ್ನೂ ಏಕಕಾಲದಲ್ಲಿ ಸ್ತುತಿಸುವ ಮಂತ್ರವನ್ನು ಪಠಿಸಿದಲ್ಲಿ ಈ ವಿವಾದವು ಪರಿಹಾರವಾಗುವುದು ಎಂದು ಯೋಚಿಸಿ ಸಮಸ್ತ ದೇವತೆಗಳ ಸ್ತುತಿಯನ್ನೂ ಒಳಗೊಂಡ **ಆಪೋ ರೇವತೀಃ ಕ್ಷಯಥಾ ಹಿ ವಸ್ವಃ** (ಋ. ಸಂ. ೧೦-೩೦-೧೨) ಎಂಬ ಋಕ್ಕನ್ನು ಕಂಡುಕೊಂಡನು. ಈ ಋಕ್ಕಿನಲ್ಲಿರುವ ಆಪಃ ಎಂಬ ಶಬ್ದವು ಸಮಸ್ತ ದೇವತೆಗಳನ್ನೂ ಪ್ರತಿಪಾದಿಸುವುದು (**ಆಪೋ ವೈ ಸರ್ವಾ ದೇವತಾಃ**) ಎಂದು ಶ್ರುತಿವಾಕ್ಯವಿರುವುದು. ಹಾಗೆಯೇ ರಾಯಃ-ಧನಗಳು ಯಾರಲ್ಲಿ ಇವೆಯೋ ಅವರು (ದೇವತೆಗಳು) ರೇವತ್ಯಃ ಎಂದು ಕರೆಯಲ್ಪಡುತ್ತಾರೆ. ಏಕೆಂದರೆ ಯಜ್ಞಭೂಮಿಗೆ ಬರುವುದು ಮತ್ತು ಬಹಳ ಧನವನ್ನು ಹೊಂದಿರುವುದು ಈ ಎರಡು ಗುಣಗಳೂ ದೇವತೆಗಳಲ್ಲಿರುವವು. ಆದ್ದರಿಂದ ರೇವತ್ಯ ಎಂಬ ಶಬ್ದವೂ ಸಮಸ್ತ ದೇವತೆಗಳನ್ನೂ ಸೂಚಿಸುವುದು. ಆದ್ದರಿಂದ ಆಪಃ ಮತ್ತು ರೇವತ್ಯಃ ಎಂಬ ಎರಡು ಶಬ್ದಗಳಿರುವ **ಆಪೋ ರೇವತೀಃ ಕ್ಷಯಥಾ ಹಿ ವಸ್ವ** ಎಂಬ ಋಕ್ಕನ್ನೇ ಆರಿಸಿಕೊಂಡು ಆ ಮಂತ್ರದಿಂದಲೇ ಪ್ರಾತರನುವಾಕಮಂತ್ರಗಳನ್ನು ಪ್ರಾರಂಭಮಾಡಿದನು. ಇದರಿಂದ ಸಮಸ್ತದೇವತೆಗಳಲ್ಲಿ ಪ್ರತಿಯೊಬ್ಬರೂ ತಮ್ಮನ್ನೇ ಉದ್ದೇಶಿಸಿ ಈ ಪ್ರಜಾಪತಿಯು ಪ್ರಾತರನುವಾಕಮಂತ್ರವನ್ನು ಪ್ರಾರಂಭಮಾಡಿ ಪಠಿಸುತ್ತಿರುವನೆಂದು ತಿಳಿದು ಸಂತೋಷಪಟ್ಟರು.

**ಸರ್ವಾ ಹಾಸ್ಮಿನ್ದೇವತಾಃ ಪ್ರಾತರನುವಾಕಮನುಬ್ರುವತಿ ಪ್ರಮೋದಂತೇ । ಸರ್ವಾಭಿರ್ಹಾಸ್ಯ ದೇವತಾಭಿಃ ಪ್ರಾತರನುವಾಕಃ ಪ್ರತಿಪನ್ನೋ ಭವತಿ ಯ ಏವಂ ವೇದ ।**

**ಅಥಾರ್ಥವಾದೇನ ವಿಧಿಮುನ್ನಯತಿ । ಸ ಏತಯರ್ಚಾ ಪ್ರಾತರನುವಾಕಂ ಪ್ರತಿಪದ್ಯೇತ ಇತಿ ಶೇಷಃ । ಯಃ ಪುಮಾನಾಪೋ ರೇವತೀರಿತ್ಯೇತಯಾ ಪ್ರಾತರನುವಾಕಂ ಪ್ರಾರಭತೇಽಸ್ಮಿನ್ಪ್ರಾರಭ್ಯಾನುಬ್ರುವತಿ ಸರ್ವಾ ದೇವತಾಃ ಪ್ರಹೃಷ್ಯಂತಿ ತಸ್ಮಾದನಯೈವರ್ಚಾ ಪ್ರಾರಭೇತೇತಿ ವಿಧಿರುನ್ನೇಯಃ । ವೇದನಂ ಪ್ರಶಂಸತಿ-ತದೇತದಾಶ್ವಲಾಯನೇನಾಭಿಹಿತಂ — ಅಂತರೇಣ ಯುಗಧುರಾವುಪವಿಶ್ಯ ಪ್ರೇಷಿತಃ ಪ್ರಾತರನುವಾಕಮನುಬ್ರೂಯಾನ್ಮಂದ್ರೇಣಾಪೋ ರೇವತೀಃ ಕ್ಷಯಥಾ ಹಿ ವಸ್ವ ಉಪ ಪ್ರಯಂತ ಇತಿ ಸೂಕ್ತೇ ಇತಿ ।**

ಇದರ ವಿಧಿಯನ್ನು ಹೇಳುವರು. ಯಾವ ಪುರುಷನು ಈ ಆಪೋ ರೇವತೀಃ ಎಂಬ ಋಕ್ಕಿನಿಂದ ಪ್ರಾತರನುವಾಕಮಂತ್ರಗಳನ್ನು ಪ್ರಾರಂಭಿಸಿ ಪಠಿಸುವನೋ ಅವನ ಮಂತ್ರಪಠನದಿಂದ ಸಮಸ್ತದೇವತೆಗಳೂ ಸಂತುಷ್ಟರಾಗುವರು. ಆದ್ದರಿಂದ ಬುದ್ಧಿವಂತನಾದ ಪುರುಷನು ಈ ಋಕ್ಕಿನಿಂದಲೇ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕೆಂದು ವಿಧಿಯು ಇರುವುದು. ಈ

ವಿಚಾರದಲ್ಲಿ ಆಶ್ವಲಾಯನರು ಹೀಗೆ ಹೇಳಿರುವರು— **ಅಂತರೇಣ ಯುಗಧುರಾವುಪವಿಶ್ಯ ಪ್ರೇಷಿತಃ ಪ್ರಾತರನುವಾಕಮನುಬ್ರೂಯಾನ್ಮಂದ್ರೇಣಾಪೋ ರೇವತೀಃ ಕ್ಷಯಥಾ ಹಿ ವಸ್ವ ಇತಿ ಸೂಕ್ತೇ ಇತಿ** (ಆಶ್ವ. ಶ್ರೌ. ಸೂ. ೪-೧೩-೬, ೭) ಎಂದರೆ, ಅಧ್ವರ್ಯುವು ಪ್ರೈಷಮಂತ್ರದಿಂದ ಹೋತೃವನ್ನು ನಿರ್ದೇಶಿಸಿದ ಕೂಡಲೇ ಹೋತೃವು ಹವಿರ್ಧಾನವೆಂಬ ಸೋಮಲತೆಗಳನ್ನು ತುಂಬಿದ ಎರಡು ಗಾಡಿಗಳ ನೊಗಗಳ ಮಧ್ಯದಲ್ಲಿ ಕುಳಿತು ಮೆತ್ತನೆಯ ಸ್ವರದಿಂದ **ಆಪೋ ರೇವತೀಃ** ಎಂಬ ಋಕ್ಕಿನಿಂದ ಆರಂಭಿಸಿ ಪ್ರಾತರನುವಾಕ ಮಂತ್ರಗಳನ್ನು ಪಠಿಸಬೇಕು. ಈ ಕ್ರಮದಿಂದ ಯಾವ ಪುರುಷನು ಪ್ರಾತರನುವಾಕಮಂತ್ರಗಳನ್ನು ಪಠಿಸುವನೋ ಅವನ ಮಂತ್ರಪಠನದಿಂದ ಸಮಸ್ತ ದೇವತೆಗಳೂ ಸಂತುಷ್ಟರಾಗಿ ಅವನ ಮಂತ್ರಪಠನವು ಯಶಸ್ವಿಯಾಗುವುದು.

ತೇ ದೇವಾ ಅಬಿಭಯುರಾದಾತಾರೋ ವೈ ನ ಇಮಂ ಪ್ರಾತರ್ಯಜ್ಞಮಸುರಾ ಯಥೌಜೀಯಾಂಸೋ ಬಲೀಯಾಂಸ ಏವಮಿತಿ ತಾನಬ್ರವೀದಿಂದ್ರೋ ಮಾ ಬಿಭೀತ ತ್ರಿಷಮೃದ್ಧಮೇಭ್ಯೋಽಹಂ ಪ್ರಾತರ್ವಜ್ರಂ ಪ್ರಹರ್ತಾಸ್ಮೀತ್ಯೇತಾಂ ವಾವ ತದೃಚಮಬ್ರವೀದ್ವಜ್ರಸ್ತೇನ ಯದಪೋನಪ್ತ್ರೀಯಾ ವಜ್ರಸ್ತೇನ ಯತ್ತ್ರಿಷ್ಟುಬ್ವಜ್ರಸ್ತೇನ ಯದ್ವಾಕ್ತಮೇಭ್ಯಃ ಪ್ರಾಹರತ್ತೇನೈನಾನಹಂಸ್ತತೋ ವೈ ದೇವಾ ಅಭವನ್ಪರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

ಆಪೋ ರೇವತೀರಿತ್ಯೇತಾಮೃಚಮಾಖ್ಯಾಯಿಕಯಾ ಪ್ರಶಂಸತಿ—ಪುರಾ ಕದಾಚಿತ್ಪ್ರಜಾಪತೌ ಪ್ರಾತರನುವಾಕಮನುಬ್ರುವತಿ ಸತಿ ತತ್ಸಮೀಪ ಆಗತಾ ದೇವಾ ಅಬಿಭಯುರ್ಭೀತಿಂ ಪ್ರಾಪ್ತಾಃ । ಕೇನಾಭಿಪ್ರಾಯೇಣೇತಿ ತದುಚ್ಯತೇ । ಯಥಾ ಲೋಕೇ ಕೇಚಿಚ್ಛತ್ರವ ಓಜಸೋಽತಿಶಯೇನೌಜಸಾ ಸಪ್ತಧಾತುನಾ ಯುಕ್ತತ್ವಾತ್ಪುಷ್ಟಶರೀರಾ ಬಲೀಯಾಂಸೋ ಮಹತಾ ಸೈನ್ಯೇನ ಯುಕ್ತತ್ವಾದತಿಶಯೇನ ಪ್ರಾಬಲ್ಯಾದಾಗತ್ಯ ಧನಮುಪಹರಂತಿ, ಏವಮಸುರಾ ನೋಽಸ್ಮದೀಯಮಿಮಂ ಪ್ರಾತರ್ಯಜ್ಞಂ ಪ್ರಾತರನುವಾಕರೂಪಮಾದಾತಾರೋ ವಾ ಆದಾಸ್ಯಂತ್ಯೇವಾಪಹರಿಷ್ಯಂತ್ಯೇವೇತಿ । ತದಾನೀಮಿಂದ್ರೋ ಮಾ ಬಿಭೀತ ಭೀತಿಂ ಮಾ ಕುರುತೇತಿ ತಾನ್ದೇವಾನಬ್ರವೀತ್ । ಕಥಂ ಭೀತ್ಯಾ ಅಭಾವ ಇತಿ ತದುಚ್ಯತೇ । ಅಹಮಿಂದ್ರ ಏಭ್ಯೋಽಸುರೇಭ್ಯೋಽಸುರವಿನಾಶಾರ್ಥಂ ಪ್ರಾತಃಕಾಲೇ ತ್ರಿಷಮೃದ್ಧಂ ತ್ರಿಭಿಃ ಪ್ರಕಾರೈಃ ಸಮೃದ್ಧಂ ಪ್ರಬಲಂ ವಜ್ರಂ ಪ್ರಹರ್ತಾಸ್ಮಿ ತೇಷಾಮುಪರಿ ಪ್ರಕ್ಷೇಪ್ಸ್ಯಾಮಿ । ತತೋ ಹೇ ದೇವಾ ಅಸ್ಮಾಕಂ ಭೀತಿರ್ಮಾಭೂತ್ । ಇತ್ಯುಕ್ತ್ವಾ ತತ್ತದಾನೀಮೇತಾಂ ವಾವಾಪೋ ರೇವತೀರಿತಿ ಯಾಸ್ತಿ ತಾಮೃಚಮೇವಾಬ್ರವೀತ್ । ತಸ್ಯಾ ಋಚಸ್ತ್ರಿಪ್ರಕಾರವಜ್ರತ್ವಂ ಕಥಮಿತಿ ತದುಚ್ಯತೇ । ಯದ್ಯಸ್ಮಾತ್ಕಾರಣಾದಪೋನಪ್ತ್ರೀಯಾ ಸಾ ಋಗಪೋನಪ್ತೃದೇವತಾಕಾ । ತಥಾ ಚಾನುಕ್ರಮಣಿಕಾಕಾರಃ—ಯಸ್ಮಿನ್ಸೂಕ್ತೇ ಸಾಸ್ತಿ ತಸ್ಯ ಸೂಕ್ತಸ್ಯ ದೇವತಾಂ ಬ್ರೂತೇ ಪ್ರದೇ-

ವತ್ರಾ ಪಂಚೋನಾ ಕವಷ ಐಲೂಷ ಆಪಮುಪೋನಪ್ತ್ರೀಯಂ ವಾ ಇತಿ । ತೇನಾಪೋನಪ್ತೃದೇವತಾಕತ್ವೇನ ಕಾರಣೇನಾಯಂ ಮಂತ್ರೋ ವಜ್ರಃ ಸಂಪನ್ನಃ । ಸೋಽಯಮೇಕಃ ಪ್ರಕಾರಃ । ಅಪೋನಪ್ತಾ ದೇವೋಽತಿಕ್ರೂರಸ್ತತ್ತದೀಯಾಯಾ ಋಚೋ ವಜ್ರತ್ವಂ ಯುಕ್ತಂ । ಯಸ್ಮಾದಿಯಂ ತ್ರಿಷ್ಟುಪ್‌ಛಂದಸ್ಕಾ ತೇನಾಪಿ ಪ್ರಕಾರೇಣ ವಜ್ರತ್ವಂ । ಇಂದ್ರಿಯಂ ವೈ ವೀರ್ಯಂ ತ್ರಿಷ್ಟುಬಿತಿ ಶ್ರುತ್ಯಂತರೇ ವೀರ್ಯರೂಪತ್ವಶ್ರವಣಾದ್ವಜ್ರತ್ವಂ । ಸೋಽಯಂ ದ್ವಿತೀಯಃ ಪ್ರಕಾರಃ । ಯಸ್ಮಾದಿಯಂ ವಾಗ್ರೂಪಾ ತೇನಾಪಿ ಪ್ರಕಾರೇಣ ವಜ್ರತ್ವಂ । ಸ ವಾಗ್ವಜ್ರೋ ಯಜಮಾನಂ ಹಿನಸ್ತೀತ್ಯತ್ರ ಶಬ್ದರೂಪಾಯಾ ವಾಚೋ ವಜ್ರತ್ವಶ್ರವಣಾತ್ । ಸೋಽಯಂ ತೃತೀಯಃ ಪ್ರಕಾರಃ । ತಮೇವಂ ತ್ರಿಷಮೃದ್ಧಮೃಗ್ರೂಪಂ ವಜ್ರಮೇಭ್ಯೋಽಸುರೇಭ್ಯಃ ಪ್ರಾಹರತ್ತೇನೈನಾನಸುರಾನಹನದ್ಧತವಾನ್ । ತತ ಏವಾಸುರವಧಾದ್ದೇವಾ ವಿಜಯಿನೋಽಭವನ್ನಸುರಾಶ್ಚ ಪರಾಭವನ್ । ವೇದನಂ ಪ್ರಶಂಸತಿ । ಪೂರ್ವವದ್ವ್ಯಾಖ್ಯೇಯಂ ॥

ಪ್ರಾತರನುವಾಕಮಂತ್ರಗಳಲ್ಲಿ ಪ್ರಾರಂಭದ ಋಕ್ಕಾದ ಆಪೋ ರೇವತೀಃ ಎಂಬ ಋಕ್ಕಿನ ವಿಷಯವಾಗಿ ಒಂದು ಆಖ್ಯಾಯಿಕೆಯನ್ನು ಹೇಳುವರು—ಪೂರ್ವದಲ್ಲಿ ಒಂದು ಯಜ್ಞದಲ್ಲಿ ಪ್ರಜಾಪತಿಯು ಪ್ರಾತರನುವಾಕಮಂತ್ರಗಳನ್ನು ಪಠಿಸುತ್ತಿರುವಾಗ ಯಜ್ಞಭೂಮಿಯಲ್ಲಿ ಯಜ್ಞಾರ್ಥವಾಗಿ ಬಂದ ದೇವತೆಗಳು ಬಹಳ ಭಯಪಟ್ಟರು. ಏಕೆಂದರೆ, ಲೋಕವ್ಯವಹಾರದಲ್ಲಿ ಅತ್ಯಂತ ತೇಜಸ್ಸಿನಿಂದ ಕೂಡಿದವರೂ ಬಲಶಾಲಿಗಳೂ ಧಷ್ಟಪುಷ್ಟಶರೀರಳ್ಳವರೂ ಆದ ಶತ್ರುಗಳು ದೊಡ್ಡಸೈನ್ಯಸಮೇತರಾಗಿ ಬಂದು ರಾಜ್ಯದಲ್ಲಿರುವ ಸಜ್ಜನರ ಧನಾದಿಗಳನ್ನು ಕೊಳ್ಳೆಹೊಡೆದು ಅಪಹರಿಸುವುದು ರೂಢಿಯಷ್ಟೆ. ಅದರಂತೆ ದುರ್ಜನರೂ ಅತ್ಯಂತ ಬಲಶಾಲಿಗಳೂ ಆದ ಅಸುರರು ಯಜ್ಞಭೂಮಿಗೆ ಬಂದು ದೇವತೆಗಳಿಗೆ ಸಂಬಂಧಪಟ್ಟ ಪ್ರಾತರನುವಾಕರೂಪವಾದ ಯಜ್ಞವನ್ನು ಅಪಹರಿಸುವರೆಂದು ದೇವತೆಗಳು ಬಹಳ ಭಯಯುಕ್ತರಾಗಿದ್ದರು. ಆಗ ಇಂದ್ರನು ಆ ದೇವತೆಗಳನ್ನು ನೋಡಿ ಎಲೈ ದೇವತೆಗಳಿರಾ, ಹೆದರಬೇಡಿ ನಿಮ್ಮ ಪರವಾಗಿ ನಾನಿದೇನೆ. ಈಗ ನಾನು ಅಸುರರನ್ನು ನಾಶಮಾಡುವುದಕ್ಕಾಗಿ ಪ್ರಾತಃಕಾಲದಲ್ಲಿ ಮೂರು ವಿಧವಾದ ಶಕ್ತಿಯುಳ್ಳ ವಜ್ರಾಯುಧವನ್ನು ಎಂದರೆ ವಜ್ರಾಯುಧದಂತೆ ತೀಕ್ಷ್ಣಸ್ವಭಾವವುಳ್ಳ ವಾಗ್ರೂಪವಾದ ಮಂತ್ರವನ್ನು ಉಪಯೋಗಿಸುತ್ತೇನೆ ಆ ವಾಗ್ವಜ್ರದಿಂದ ಪ್ರಬಲರಾದ ಅಸುರರನ್ನು ಪ್ರಹರಿಸಿ ನಾಶಮಾಡುತ್ತೇನೆ. ಆದ್ದರಿಂದ ನೀವು ಭಯಪಡಬೇಡಿ ಎಂದು ಧೈರ್ಯವನ್ನು ಹೇಳಿ ಬಳಿಕ **ಆಪೋ ರೇವತೀಃ** ಎಂಬ ಋಕ್ಕನ್ನು ಪಠಿಸಿದನು. ಈ ಋಕ್ಕಿನ ಶಕ್ತಿಯು ಹೇಗೆ ವಜ್ರದಂತೆ ವಿನಾಶಕಾರಿಯಾಗಿರುವುದೆಂಬುದನ್ನು ಹೇಳುತ್ತಾರೆ. ಈ ಆಪೋ ರೇವತಿಃ ಎಂಬ ಋಕ್ಕು ಅಪೋನಪ್ತ್ರೀಯ ದೇವತಾಕವಾದುದು ಎಂದರೆ ಯಜ್ಞಕರ್ಮಕ್ಕೆ ಜಲಾನಯನಕ್ಕಾಗಿ ಮಾಡುವ ಅಪೋನಪ್ತ್ರೀಯವೆಂಬ ಒಂದು ಕರ್ಮವಿಶೇಷವು (ಇದರ ವಿವರಣೆಯು ಮುಂದಿನ ಅಧ್ಯಾಯದಲ್ಲಿದೆ) ಈ ಕರ್ಮದಲ್ಲಿ ಈ ಋಕ್ಕು ಮತ್ತು ಈ ಋಕ್ಕಿರುವ ಸೂಕ್ತವೂ ಮುಖ್ಯ ಪಾತ್ರವನ್ನು ವಹಿಸಿದೆ. ಅನುಕ್ರಮಣಿಕೆಯಲ್ಲಿ—**ಪ್ರದೇವತ್ರಾ ಪಂಚೋನಾ ಕವಷ ಐಲೂಷ ಆಪಮುಪೋನಪ್ತ್ರೀಯಂ ವಾ** ಎಂದು ಹೇಳಿದೆ. ಎಂದರೆ **ಪ್ರದೇವತ್ರಾ** ಎಂಬ ಸೂಕ್ತವು (ಋ. ಸಂ. ೧೦-೩೦) ಅಪೋನಪ್ತೃದೇವತಾಕವಾದುದು. ಅಥವಾ ಆಪ ಎಂದರೆ ಇದಕ್ಕೆ ಅಬ್ದೇವತೆಗಳೇ ದೇವತೆಗಳು. ಅಬ್ದೇವತೆಗಳಿಗೂ ವರುಣನಿಗೂ ಸಂಬಂಧವಿರುವುದು. ಅಪೋನಪ್ತ್ರೀಯಕರ್ಮಕ್ಕೆ ದೇವತಾಕವಾದ ಈ ಮಂತ್ರಕ್ಕೆ ವಜ್ರದ ಶಕ್ತಿಯಿರುವುದು ಎಂದರೆ ಈ ಮಂತ್ರವು ಶತ್ರುಗಳಿಗೆ ವಜ್ರಾಯುಧಸ್ವರೂಪವಾಗಿರುವುದು. ಇದು ಮೊದಲನೆಯ ಪ್ರಕಾರವು. ಈ ಋಕ್ಕು ತ್ರಿಷ್ಟುಪ್‌ಛಂದಸ್ಕವಾಗಿರುವುದು. **ಇಂದ್ರಿಯಂ ವೈ ವೀರ್ಯಂ ತ್ರಿಷ್ಟುಪ್** (ತೈ. ಬ್ರಾ. ೧-೭-೬) ಎಂದು ಶ್ರುತಿವಾಕ್ಯವಿರುವುದು. ಆದ್ದರಿಂದ ತ್ರಿಷ್ಟುಪ್‌ಛಂದಸ್ಕವಾದ ಈ ಋಕ್ಕಿಗೆ ಅತ್ಯಂತ ಶಕ್ತಿಸಾಮರ್ಥ್ಯಗಳಿರುವವು. ಇದಲ್ಲದೆ ಈ ತ್ರಿಷ್ಟುಪ್‌ಛಂದಸ್ಸು ಇಂದ್ರನ ಸ್ವಕೀಯಛಂದಸ್ಸಾಗಿರುವುದು.

ಇಂದ್ರನ ಆಯುಧವು ವಜ್ರಾಯುಧವು. ಈ ಕಾರಣಗಳಿಂದ ಈ ಋಕ್ಕು ವಜ್ರಾಯುಧಸ್ವರೂಪವೆಂದು ಹೇಳಲ್ಪಡುವುದು. ಇದು ಎರಡನೆಯ ಪ್ರಕಾರವು. ಈ ಋಕ್ಕು ವಾಗ್ರೂಪವಾಗಿರುವುದು. ವಜ್ರಾಯುಧವು ವಾಗ್ರೂಪವಾಗಿಯೂ ಇರುವುದು. **ಸ ವಾಗ್ವಜ್ರೋ ಯಜಮಾನಂ ಹಿನಸ್ತಿ** (ಪಾಣಿನೀಯಶಿಕ್ಷಾ ೧೦-೪) ಎಂಬ ವಾಕ್ಯದಂತೆ ಕ್ರೂರವಾದ ವಾಕ್ಯವು ವಜ್ರಾಯುಧದಂತೆ ತೀಕ್ಷ್ಣವಾಗಿರುವುದು. ಈರೀತಿ ಶಬ್ದ ಅಥವಾ ವಾಗ್ರೂಪವಾದ ಈ ಋಕ್ಕು ವಜ್ರಾಯುಧದಂತಿರುವುದು ಇದು ಮೂರನೆಯ ಪ್ರಕಾರವು. ಈರೀತಿಯಾದ ಎಂದರೆ ಮೂರುವಿಧವಾದ ಪ್ರಕ್ರಿಯೆಗಳುಳ್ಳ (**ತ್ರಿಸಧಸ್ಥಂ**) ವಾಗ್ರೂಪವಾದ ವಜ್ರಾಯುಧದಿಂದ (**ಆಪೋ ರೇವತೀಃ** ಎಂಬ ಮಂತ್ರಪಠನದಿಂದ) ಇಂದ್ರನು ಅಸುರರನ್ನು ಪ್ರಹರಿಸಿ ಅವರನ್ನು ಸಂಹರಿಸಿದನು. ಇದರಿಂದ ದೇವತೆಗಳು ಭಯವನ್ನು ತ್ಯಜಿಸಿ ವಿಜಯಶಾಲಿಗಳಾದರು. ಅಸುರರು ಪರಾಜಿತರಾಗಿ ಓಡಿಹೋದರು. ಆದ್ದರಿಂದ ಈ ಋಕ್ಕಿನ ಈ ವಿಧವಾದ ಮಂತ್ರಾರ್ಥವನ್ನು ಯಾವ ಪುರುಷನು ಚೆನ್ನಾಗಿ ತಿಳಿದು ಪ್ರಾತರನುವಾಕಮಂತ್ರಪಠನಮಾಡುವನೋ ಅವನು ತನ್ನ ಶತ್ರುಗಳೆಲ್ಲರನ್ನೂ ಪರಾಭವಗೊಳಿಸಿ ತನ್ನ ಕಾರ್ಯದಲ್ಲಿ ಯಶಸ್ವಿಯಾಗುವನು.

**ತದಾಹುಃ ಸ ವೈ ಹೋತಾ ಸ್ಯಾದ್ಯ ಏತಸ್ಯಾಮೃಚಿ ಸರ್ವಾಣಿ ಛಂದಾಂಸಿ ಪ್ರಜನಯೇದಿತ್ಯೇಷಾ ವಾವ ತ್ರಿರನೂಕ್ತಾ ಸರ್ವಾಣಿ ಛಂದಾಂಸಿ ಭವತ್ಯೇಷಾ ಛಂದಸಾಂ ಪ್ರಜಾತಿಃ ॥**

**ಅಸ್ಯಾ ಋಚಸ್ತ್ರಿರಾವೃತ್ತಿಂ ವಿಧತ್ತೇ । ತತ್ತಸ್ಯಾಮಾಪೋ। ರೇವತೀರಿತ್ಯೃಚಿ ಬ್ರಹ್ಮವಾದಿನ ಏವಮಾಹುಃ--ಯಃ ಪುಮಾನೇತಸ್ಯಾಮೃಚಿ ಸರ್ವಾಣಿ ಛಂದಾಂಸ್ಯುತ್ಪಾದಯೇತ್ಸ ಏವ ಮುಖ್ಯೋ ಹೋತಾ ಸ್ಯಾನ್ನ ತ್ವನ್ಯ ಇತಿ । ಏತದ್ಬ್ರಹ್ಮವಾದಿನಾಂ ವಚನಂ ಶ್ರುತ್ವಾ ಕಶ್ಚಿದಭಿಜ್ಞಃ ಸರ್ವಛಂದಸಾಮುತ್ಪಾದನಪ್ರಕಾರಂ ಬ್ರೂತೇ । ಯೇಯಮೃಗನೂಕ್ತಾ ಸೇಯಮೇವ ತ್ರಿಃ ಪಠಿತಾ ಸತೀ ಸರ್ವಛಂದಸಾಂ ಸ್ವರೂಪಂ ಭವತಿ । ಇಯಂ ತ್ರಿಷ್ಟುಬ್ರೂಪತ್ವಾಚ್ಚತುಶ್ಚತ್ವಾರಿಂಶದಕ್ಷರಾ । ತಸ್ಯಾಂ ತ್ರಿರಾವೃತ್ತಾಯಾಂ ದ್ವಾತ್ರಿಂಶದಧಿಕಶತಾಕ್ಷರಾಣಿ ಸಂಪದ್ಯಂತೇ । ತೇಷು ಜಗತ್ಯಾದೀನ್ಯಧಿಕಾಕ್ಷರಾಣಿ ಗಾಯತ್ರ್ಯಾದೀನಿ ನ್ಯೂನಾಕ್ಷರಾಣಿ ಸರ್ವಛಂದಾಂಸಿ ಸಂಪಾದಯಿತುಂ ಶಕ್ಯತೇ । ತಸ್ಮಾದೇಷಾ ಸರ್ವೇಷಾಂ ಛಂದಸಾಂ ಪ್ರಜಾತಿರುತ್ಪತ್ತಿಸ್ಥಾನಂ । ಯದ್ಯೇಷಾ ತ್ರಿರಾವೃತ್ತಿಃ ಸೂತ್ರಕಾರೇಣ ನೋಕ್ತಾ ತರ್ಹಿ ಸರ್ವಛಂದೋಽನ್ತರ್ಭಾವನೇಯಮೃಚಃ ಪ್ರಶಂಸಾಸ್ತು ॥**

**ಆಪೋ ರೇವತೀಃ** ಎಂಬ ಋಕ್ಕನ್ನು ಮೂರಾವೃತ್ತಿ ಪಠಿಸಬೇಕೆಂದು ನಿಯಮವಿದೆ. ಅದಕ್ಕೆ ಕಾರಣವೇನೆಂಬುದನ್ನು ವಿವರಿಸುತ್ತಾರೆ. ಈ ವಿಚಾರದಲ್ಲಿ ಬ್ರಹ್ಮವಾದಿಗಳು ಈರೀತಿ ಹೇಳುತ್ತಾರೆ. ಯಾವ ಪುರುಷನು ಈ ಋಕ್ಕನ್ನು ಪಠಿಸುವಾಗ ಸಮಸ್ತ ಛಂದಸ್ಸುಗಳನ್ನೂ ಪಠಿಸಿದಂತೆ ಕಾರ್ಯನಿರ್ವಹಣೆಮಾಡುತ್ತಾನೋ ಆ ಪುರುಷನೇ ಋತ್ವಿಗ್ಜನರಲ್ಲಿ ಪ್ರಾಧಾನ್ಯತೆಯನ್ನು ಪಡೆದವನೂ ಹೋತೃವಿನ ಪಾತ್ರವನ್ನು ನಿರ್ವಹಿಸಲು ದಕ್ಷನಾದವನೂ ಆಗುತ್ತಾನೆ. ಮತ್ತೊಬ್ಬನಿಂದ ಈ ಕೆಲಸ ಸಾಧ್ಯವಿಲ್ಲ. ಈ ವಿಧವಾದ ಬ್ರಹ್ಮವಾದಿಗಳ ವಚನವನ್ನು ಕೇಳಿದ ವಿವೇಕಿಯಾದ ಒಬ್ಬ ಪುರುಷನು ಅವರ ಅಭಿಪ್ರಾಯವನ್ನು ವಿಶದವಾಗಿ ಸ್ಪಷ್ಟಪಡಿಸುವನು. ಹೇಗೆಂದರೆ— ಈ **ಆಪೋ ರೇವತೀಃ** ಎಂಬ ಋಕ್ಕನ್ನು ಮೂರಾವೃತ್ತಿ ಪಠಿಸಿದರೆ ಅದು ಸಮಸ್ತಛಂದಸ್ಸುಗಳ ಸ್ವರೂಪವನ್ನು ಪಡೆಯುತ್ತದೆ. ಈ ಋಕ್ಕು ತ್ರಿಷ್ಟುಪ್‌ಛಂದಸ್ಕವಾಗಿರುವುದರಿಂದ ಇದರಲ್ಲಿ ನಲವತ್ತನಾಲ್ಕು ಅಕ್ಷರಗಳಿರುವವು.

ಇದನ್ನು ಮೂರಾವೃತ್ತಿಪಠಿಸುವುದರಿಂದ ಒಟ್ಟು ೧೩೨ ಅಕ್ಷರಗಳನ್ನು ಪಠಿಸಿದಂತಾಯಿತು. ಈ ೧೩೨ ಅಕ್ಷರಗಳಲ್ಲಿ ಹೆಚ್ಚು ಅಕ್ಷರಗಳುಳ್ಳ ಗಾಯತ್ರ್ಯಾದಿಛಂದಸ್ಸುಗಳೂ ಸಹ ಇರಲು ಸಾಧ್ಯವಾಗುತ್ತದೆ.

ಉಕ್ತಾದ್ಯುತ್ಕೃತಿಪರ್ಯನ್ತಾ ಛಂದಃ ಷಡ್ವಿಂಶತಿಸ್ತು ಯಾ ।
ಚತುರೂರ್ಧ್ವಾ ಚತುಷ್ಕಾದ್ಯಾ ಚತುಯು೯ಕ್ತ ಶತಾಂತಿಮಾ ॥
ತ್ರಿರುಕ್ತ್ವಾ ತ್ರಿಷ್ಟುಭಃ ಸಾ ತು ಸರ್ವಾನ್ತರ್ಭವತೀಹ ವೈ ।
ಚತುಶ್ಚತ್ವಾರಿಂಶದ್ವರ್ಣಾ ತ್ರಿಷ್ಟುಪ್ ತಸ್ಯಾಸ್ತ್ರಿರುಕ್ತತಃ ।
ಸಂಪದ್ಯಂತೇ ಯತೋ ವರ್ಣಾ ದ್ವಾತ್ರಿಂಶದಧಿಕಂ ಶತಂ ।
ಷಡ್ವಿಂಶತ್ಯಾಶ್ಛಂದ ಉಕ್ತಮೇಷು ಚೋನಾಧಿಕಂ ದ್ವಯಂ ॥

ಇತ್ಯಾದಿ. ಕೆಲವರ ಅಭಿಪ್ರಾಯದಂತೆ—ವಿರಾಟ್-೨೦ (ಪಾದಮಾತ್ರ), ಗಾಯತ್ರೀ-೪, ಉಷ್ಣಿಕ್-೮, ಅನುಷ್ಟುಪ್-೧೨, ಬೃಹತೀ-೧೬, ಪಂಕ್ತಿ-೨೦, ತ್ರಿಷ್ಟುಪ್-೨೪, ಜಗತೀ-೧೮=ಒಟ್ಟು ೧೩೨ ಅಕ್ಷರಗಳು. ಈ ವಿಭಾಗವು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಗ್ರಂಥಕಾರರ ಅಭಿಪ್ರಾಯದಲ್ಲಿ ಈ ಋಕ್ಕಿನ ಮೂರಾವರ್ತಿ ಪಠನದಿಂದ ಲಭ್ಯವಾಗುವ ೧೩೨ ಅಕ್ಷರಗಳಲ್ಲಿ ಪ್ರಚಾರದಲ್ಲಿರುವ ಯಾವ ಛಂದಸ್ಸಿನ ಮಂತ್ರವಾದರೂ ಇರಲು ಸಾಧ್ಯವೆಂದು ಹೇಳಿರುವುದು ಕಂಡುಬರುತ್ತದೆ.



## *English Translation*

Prajapati being just about to repeat the Pratar-anuvaka, when he was himself Hotar (at his own sacrifice), all the gods were in a state of anxious expectation, as to who of them would be first mentioned. Prajapati looked about (and, seeing the state of anxiety in which the gods were, thought), if I commence by addressing (the mantra) to one deity only, how will the other deities have a share (in such an invocation)? He then saw (with his mental eyes) the verse: apo reratis, i.e. the wealthy waters (10, 30, 12). Apo, i.e. waters means all deities, and revatih (rich) means also all deities. He thus commenced the Pratar-anuvaka by this verse, at which all the gods felt joy: (for each of them thought), he first has mentioned me; they all then felf joy when he was repeating the Pratar-anuvaka. He who has such a knowledge (i.e. who commences his Pratar-anuvaka by the same verse), commences his Pratar-anuvaka with a joint address to all the gods.

The Devas were afraid of the Asuras robbing them of their early morning sacrifice (the Pratar-anuvaka), for they (the Asuras) were so very strong and powerful. But Indra said to them: "do not be afraid! I shall strike them with the three-fold power of my morning thunderbolt." He then repeated the verse

mentioned (10, 30, 12). This verse is in three respects a thunderbolt, viz. it contains "the destroying waters" (apo noptryo), it is in the Trishtub (Indra's) metre, and it contains "speech" (it is recited with a loud voice). With this thunderbolt he struck and destroyed them. Thence the Devas became masters of the Asuras. He who has such a knowledge, becomes master of his enemy, adversary, and gainsayer.

They say: he should be the Hotar who produces in this verse (when reciting it) the number containing all metres. This is the case, if it be repeated thrice. This is the production of the metres.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.



## ಅಥ ಸಪ್ತಮಾಧ್ಯಾಯೇ ಸಪ್ತಮಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



**ಶತಮನೂಚ್ಯಮಾಯುಷ್ಕಾಮಸ್ಯ ಶತಾಯುರ್ವೈ ಪುರುಷಃ ಶತ-ವೀರ್ಯಃ ಶತೇಂದ್ರಿಯ ಆಯುಷ್ಯೇವೈನಂ ತದ್ವೀರ್ಯ ಇಂದ್ರಿಯೇ ದಧಾತಿ ॥**

ಅಥ ಪ್ರಾಥರನುವಾಕಗತಾನಾಮೃಚಾಂ ಕಾಮ್ಯಾ ವಿಶೇಷಾ ವಕ್ತವ್ಯಾಃ । ತತ್ರಾಯು-ರರ್ಥಂ ಶತಸಂಖ್ಯಾಂ ವಿಧತ್ತೇ । ಅಪಮೃತ್ಯುರಹಿತಮಾಯುರ್ಯಃ ಕಾಮಯತೇ ತಸ್ಯರ್ಚಾಂ ಶತಮನೂಚ್ಯಂ । ಋಗ್ವಿಶೇಷಾಸ್ತು ಸೂತ್ರಾಂತರೇ ದ್ರಷ್ಟವ್ಯಾಃ । ಶತಸಂಖ್ಯಾಕಾ ವತ್ಸರಾ ಆಯುರ್ಯಸ್ಯ ಮನುಷ್ಯಸ್ಯ ಸೋಽಯಂ ಶತಾಯುಃ ಧರ್ಮಸಂಪಾದಿತಸ್ಯಾಪಮೃತ್ಯೋರ-ಭಾವೇ ಸಂವತ್ಸರಶತಂ ಮನುಷ್ಯಾ ಜೀವಂತಿ । ದಶಸಂಖ್ಯಾಕಾನೀಂದ್ರಿಯಾಣಿ ಪ್ರತ್ಯೇಕಂ ದಶಸು ನಾಡೀಷು ವರ್ತಮಾನತ್ವಾತ್ತನ್ಮಿಲಿತ್ವಾ ಶತೇಂದ್ರಿಯಾಣಿ ಭವಂತಿ । ತತಸ್ತದ್ವ್ಯಾಪಾರಾಣಾಮಪಿ ಶತತ್ವೇನ ಶತವೀರ್ಯತ್ವಂ । ತಸ್ಮಾಚ್ಛತಾನುವಚನೇನ ತತ್ಸಂಖ್ಯಾಕ ಆಯುಷಿ ವೀರ್ಯ ಇಂದ್ರಿಯೇ ಚೈನಂ ಯಜಮಾನಂ ಸ್ಥಾಪಯತಿ ॥

ಈ ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಆಗ್ನೇಯಕ್ರತು, ಉಷಸ್ಯಕ್ರತು, ಆಶ್ವಿನಕ್ರತು ಎಂಬ ಮೂರು ಭಾಗಗಳಲ್ಲಿಯೂ ಪ್ರತ್ಯೇಕವಾಗಿ ಏಳುವಿಧದ ಛಂದಸ್ಸುಗಳಿಂದ ಸಹಿತವಾದ ಮಂತ್ರಗಳನ್ನು ಪಠಿಸಬೇಕೆಂದು ಹಿಂದೆಯೇ ಹೇಳಿದೆ ಯಷ್ಟೆ. ಆದರೆ ಪ್ರಾತರನುವಾಕದಲ್ಲಿ ಒಟ್ಟು ಎಷ್ಟು ಮಂತ್ರಗಳಿರಬೇಕು ಎಂಬುದನ್ನು ವಿವರಿಸಿಲ್ಲ. ಏಕೆಂದರೆ ಯಜ್ಞದಲ್ಲಿ ಯಜಮಾನನು ಪಡೆಯುವ ನಾನಾವಿಧ ಫಲಗಳನ್ನನುಸರಿಸಿ ಪ್ರಾತರನುವಾಕದ ಮಂತ್ರಗಳ ಸಂಖ್ಯೆಯು ವ್ಯತ್ಯಾಸವಾಗುವುದು. ಯಾವ ಸಂಖ್ಯೆಯ ಮಂತ್ರಗಳನ್ನು ಪಠಿಸಿದರೆ ಯಾವ ಫಲವು ಲಭಿಸುವುದೆಂಬ ವಿಷಯವನ್ನು ಈಗ ವಿವರಿಸಲಾಗುವುದು. ಯಜ್ಞಮಾಡುವ ಯಜಮಾನನು ಪೂರ್ಣಾಯುಸ್ಸಿನವರೆಗೂ ಜೀವಿಸಬೇಕೆಂದು ಅಪೇಕ್ಷಿಸಿದರೆ ಆಗ ಅವನು ಒಂದುನೂರುಸಂಖ್ಯೆ ಯಷ್ಟು ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಮನುಷ್ಯನ ಪೂರ್ಣಾಯುಸ್ಸೆಂದರೆ ಒಂದು ನೂರು ವರ್ಷಗಳು. ಆಕಸ್ಮಿಕ ಮೃತ್ಯು ಎಂದರೆ ಅಪಮೃತ್ಯುವಿಗೆ ವಶನಾಗದಿದ್ದಲ್ಲಿ ಒಬ್ಬ ಮನುಷ್ಯನ ಪೂರ್ಣಾಯುಸ್ಸು ಒಂದು ನೂರು ವರ್ಷಗಳೆಂದು ಹೇಳಲ್ಪಡುವುದು. ಆದ್ದರಿಂದ ಪೂರ್ಣಾಯುಸ್ಸಿನವರೆಗೆ ಎಂದರೆ ನೂರು ವರ್ಷಗಳ ವರೆಗೆ ಜೀವಿಸಬೇಕೆಂದು ಅಪೇಕ್ಷಿಸುವ ಪುರುಷನು ಒಂದು ನೂರು ಸಂಖ್ಯೆಯಷ್ಟು ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಹಾಗೆ ಮಾಡಿದರೆ ನೂರುವರ್ಷ ಆಯುಸ್ಸು ಮತ್ತು ಶತಸಂಖ್ಯಾಕವಾದ ಇಂದ್ರಿಯ ಮತ್ತು ಸಾಮರ್ಥ್ಯಗಳು ಲಭಿಸುವವು. ಇಂದ್ರಿಯಗಳು ಹತ್ತು, ಕರ್ಮೇಂದ್ರಿಯಗಳು ಐದು, ಜ್ಞಾನೇಂದ್ರಿಯಗಳು ಐದು ಒಟ್ಟು ಹತ್ತು. ಇವುಗಳಿಗೆ ಸಂಬಂಧಿಸಿದ ಹತ್ತು ಹತ್ತು ನಾಡಿಗಳೂ ಸೇರಿ ಒಟ್ಟು ಶತಸಂಖ್ಯಾಕವಾದ ಇಂದ್ರಿಯಗಳೆನಿಸುವವು. ಇವುಗಳಿಂದ ಲಭಿಸುವ ವೀರ್ಯ ಅಥವಾ ಶಕ್ತಿಸಾಮರ್ಥ್ಯಗಳೂ ಶತಸಂಖ್ಯಾಕವಾಗಿಯೇ ಇರುವವು. (ಕೆಲವರು ಶತಶಬ್ದಕ್ಕೆ ಬಹುವಿಧ, ಅನೇಕ ಎಂಬರ್ಥವನ್ನೂ ಹೇಳುವರು) ಆದ್ದರಿಂದ ಆ ಪುರುಷನು ನೂರುವರ್ಷಗಳವರೆಗೆ ಬದುಕುವುದಲ್ಲದೆ ಅವನ ಜೀವಮಾನಕಾಲದಲ್ಲೆಲ್ಲಾ ಎಲ್ಲಾ ಇಂದ್ರಿಯಗಳಲ್ಲಿಯೂ ಶಕ್ತಿ ಸಾಮರ್ಥ್ಯಗಳಿಂದ ಕೂಡಿ ಆರೋಗ್ಯವಂತನಾಗಿ ಜೀವಿಸುವನು. ಈ ವಿಧವಾದ ಫಲಗಳೆಲ್ಲವೂ ನೂರು ಪ್ರಾತರನುವಾಕಮಂತ್ರ ಗಳನ್ನು ಯಜ್ಞದಲ್ಲಿ ಪಠಿಸುವ ಯಜಮಾನನಿಗೆ ದೊರೆಯುವವು.

**ತ್ರೀಣಿ ಚ ಶತಾನಿ ಷಷ್ಟಿಶ್ಚಾನೂಚ್ಯಾನಿ ಯಜ್ಞಕಾಮಸ್ಯ ತ್ರೀಣಿ ಚ ವೈ ಶತಾನಿ ಷಷ್ಟಿಶ್ಚ ಸಂವತ್ಸರಸ್ಯಾಹಾನಿ ತಾವಾನ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಪ್ರಜಾಪತಿರ್ಯಜ್ಞಃ । ಉಪೈನಂ ಯಜ್ಞೋ ನಮತಿ ಯಸ್ಯೈವಂ ವಿದ್ವಾಂಸ್ತ್ರೀಣಿ ಚ ಶತಾನಿ ಷಷ್ಟಿಂ ಚಾನ್ವಾಹ ॥**

**ಅಹೀನರಾತ್ರಾದ್ಯುತ್ತರಕ್ರತುಕಾಮಸ್ಯ ಸಂಖ್ಯಾಂತರಂ ವಿಧತ್ತೇ। ಷಷ್ಟ್ಯುತ್ತರಶತತ್ರಯ- ದಿವಸಪರಿಮಿತೋ ಯಃ ಸಂವತ್ಸರಃ ಕಾಲಾತ್ಮಾ ಸ ಏವ ಪ್ರಜಾಪತಿಃ । ಸಂವತ್ಸರಾದಿ ಕಾಲ- ವಿಶೇಷಣಂ। ಪ್ರಜಾಪತಿಸೃಷ್ಟತ್ವೇನ ತದಭೇದೋಪಚಾರಃ । ತಥಾ ಯಜ್ಞಸ್ಯಾಪಿ ತೇನ ಸೃಷ್ಟ- ತ್ವಾತ್ತದ್ರೂಪತ್ವಂ। ಏವಂ ಸತಿ ಷಷ್ಟ್ಯುತ್ತರಶತತ್ರಯಸಂಖ್ಯಾಯಾಃ ಸಂವತ್ಸರ ಪ್ರಜಾಪತಿದ್ವಾರಾ ಯಜ್ಞಸಂಬಂಧಾದುತ್ತರಕ್ರತುಪ್ರಾಪ್ತಿಹೇತುತ್ವಂ ಭವತಿ । ಹೋತುರ್ವೇದನಂ ಪ್ರಶಂಸತಿ ।**

ಅಹೀನ ಮೊದಲಾದ ವರ್ಷಾಕಾಲವೆಲ್ಲಾ ಯಜ್ಞಮಾಡಬೇಕೆಂದು ಬಯಸುವ ಯಜಮಾನನು ಎಷ್ಟು ಮಂತ್ರಗಳನ್ನು ಹೇಳಬೇಕೆಂಬುದನ್ನು ವಿವರಿಸುವರು. ಸಂವತ್ಸರಕಾಲದಲ್ಲಿ ಅನೇಕ ಯಜ್ಞಗಳನ್ನು ಮಾಡಬಯಸುವ ಯಜಮಾನನು (ಹೋತೃವಿನ ಮೂಲಕ) ೩೬೦ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಒಂದು ಸಂವತ್ಸರದಲ್ಲಿ ೩೬೦ ದಿನಗಳಿರುವವು. ಸಂವತ್ಸರವು ಒಂದು ಮುಖ್ಯವಾದ ಕಾಲವಿಭಾಗವು. ಆದರೂ ಕಾಲವನ್ನು ಅಥವಾ ಕಾಲಸ್ವರೂಪನಾದ ಪ್ರಜಾಪತಿಯನ್ನು

ಯನ್ನು ನಿರ್ದೇಶಿಸುವಾಗ ಸಂವತ್ಸರಶಬ್ದವನ್ನು ಉಪಯೋಗಿಸಲಾಗುವುದು. **ದ್ವಾದಶ ಮಾಸಾಃ ಪಂಚರ್ತವಃ ಸ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ** ಎಂಬ ಶ್ರುತಿವಾಕ್ಯದಂತೆ ಹನ್ನೆರಡುಮಾಸಗಳು ಅಥವಾ ಐದು ಋತುಗಳು ಒಂದು ಸಂವತ್ಸರವೆನಿಸುವುದು. ಈ ಸಂವತ್ಸರಾತ್ಮಕನೇ ಎಂದರೆ ಕಾಲಾತ್ಮಕನೇ ಪ್ರಜಾಪತಿಯು. ಅಥವಾ, **ಸಪ್ತದಶ ಪ್ರಜಾಪತಿಃ** ಹನ್ನೆರಡು ಮಾಸಗಳು ಮತ್ತು ಐದು ಋತುಗಳೂ ಸೇರಿ ಸಪ್ತದಶ ಎಂದರೆ ಹದಿನೇಳು ಎಂಬ ಸಂಖ್ಯೆಯಾಗುವುದು. ಈ ಸಪ್ತದಶ ಸಂಖ್ಯೆಯು ಪ್ರಜಾಪತಿಯನ್ನು ನಿರ್ದೇಶಿಸುವುದು. ಮತ್ತು **ಪ್ರಜಾಪತಿರ್ಯಜ್ಞಃ** ಪ್ರಜಾಪತಿಯೇ ಯಜ್ಞಸ್ವರೂಪನಾಗಿರುವನು ಎಂದಿರುವುದರಿಂದ ಸಂವತ್ಸರ ಅಥವಾ ಕಾಲವೂ ಯಜ್ಞವೂ ಎರಡೂ ಪ್ರಜಾಪತಿಸ್ವರೂಪವಾಗಿಯೇ ಇರುವವು. ಪ್ರಜಾಪತಿಯೇ ಕಾಲವನ್ನೂ ಯಜ್ಞವನ್ನೂ ಸೃಷ್ಟಿಮಾಡಿರುವನು ಈ ವಿಷಯವನ್ನೆಲ್ಲಾ ತಿಳಿದ ಹೊತೃವು ಯಜ್ಞದಲ್ಲಿ ೩೬೦ ಪ್ರಾತರನುವಾಕಮಂತ್ರಗಳನ್ನು ಪಠಿಸಿದರೆ ಯಜಮಾನನ ಯಜ್ಞವು ಸಮೃದ್ಧಿಯಾಗಿ ಯಜಮಾನನು ಯಜ್ಞದ ಪೂರ್ಣಫಲವನ್ನು ಪಡೆಯುವನು.

ಸಪ್ತ ಚ ಶತಾನಿ ವಿಂಶತಿಶ್ಚಾನೂಚ್ಯಾನಿ ಪ್ರಜಾಪಶುಕಾಮಸ್ಯ ಸಪ್ತ ಚ ವೈ ಶತಾನಿ ವಿಂಶತಿಶ್ಚ ಸಂವತ್ಸರಸ್ಯಾಹೋರಾತ್ರಾಸ್ತಾವಾನ್ಸಂವತ್ಸರಃ ಸಂವತ್ಸರಃ ಪ್ರಜಾಪತಿರ್ಯಂ ಪ್ರಜಾಯಮಾನಂ ವಿಶ್ವಂ ರೂಪಮಿದಮನು ಪ್ರಜಾಯತೇ ಪ್ರಜಾಪತಿಮೇವ ತತ್ಪ್ರಜಾಯಮಾನಂ ಪ್ರಜಯಾ ಪಶುಭಿರನು ಪ್ರಜಾಯತೇ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ॥

ಅಥ ಪ್ರಜಾಂ ಪಶೂಂಶ್ಚ ಕಾಮಯಮಾನಸ್ಯ ಪೂರ್ವಸಂಖ್ಯಾಯಾ ದ್ವಿಗುಣಾಂ ಸಂಖ್ಯಾಂ ವಿಧತ್ತೇ। ಸಂವತ್ಸರಗತಾನಾಮಹ್ನಾಂ ರಾತ್ರೀಣಾಂ ಚ ಪೃಥಗ್ಗಣನಾ ಯಾಂ ಮಿಲಿತ್ವಾ ವಿಂಶತ್ಯಧಿಕಸಪ್ತಶತಸಂಖ್ಯಾ ಸಂವತ್ಸರೇ ಸಂಪದ್ಯತೇ। ಸಂವತ್ಸರಸ್ಯ ಚ ಪ್ರಜಾಪತಿತ್ವಮುಕ್ತಂ। ಏತಾವತಾ ವಿಂಶತ್ಯುತ್ತರಸಪ್ತಶತಸಂಖ್ಯಾಯಾಃ ಪ್ರಜಾಪತಿಸಂಬಂಧೋ ದರ್ಶಿತಃ। ಯಂ ಪ್ರಜಾಯಮಾನಮಿತ್ಯಾದಿನಾ ಕಾಮ್ಯಮಾನಾನಾಂ ಪ್ರಜಾನಾಂ ಪಶೂನಾಂ ಚ ಪುರುಷಮನು ವಿಶ್ವರೂಪಮಿದನೋಷಧಿವನಸ್ಪತ್ಯಾದಿಸ್ಥಾವರಂ ಭ್ರಾತೃಭಗಿನೀಗೋಮಹಿಷ್ಯಾದಿಕಂ ಜಂಗಮಂ ಚ ಸರ್ವಂ ಪ್ರಜಾಯತೇ ತತ್ತದ್ಗೃಹೇ ಪ್ರಜಾಯಮಾನಂ ಪ್ರಜಾಪತಿಮೇವಾನು ಪ್ರಜಾಪಶುರೂಪೇಣ ಸರ್ವಮುತ್ಪದ್ಯತೇ। ಏತದುಕ್ತಂ ಭವತಿ। ಕಸ್ಯಚಿದ್ಧನಿಕಸ್ಯ ಪುತ್ರ ಉತ್ಪದ್ಯಮಾನೇ ಸತಿ ಕುಟುಂಬಾಭಿವೃದ್ಧ್ಯಾ ತಜ್ಜೀವನಾರ್ಥಂ ಸಸ್ಯಾದಿನಿಷ್ಪತ್ತಿಂ ಗೋಮಹಿಷ್ಯಾದಿಸಂಪತ್ತಿಂ ಚ ಸ ಧನಿಕಃ ಪ್ರಭೂತಾಂ ಕರೋತಿ। ತಸ್ಯ ಪುತ್ರಸ್ಯ ಭ್ರಾತೃಭಗಿನ್ಯಾದಯೋಽಪಿ ಪುನರ್ಜಾಯಂತೇ। ತತ್ರ ಚ ಸ್ಥಾವರಜಂಗಮರೂಪಾಣಾಂ ಪ್ರಜಾನಾಂ ಪಾಲನಹೇತುತ್ವಾದಯಂ ಜಾಯಮಾನಃ ಪುತ್ರ ಏವ ಚ ಪ್ರಜಾಪತಿಃ। ಅತಃ ಪ್ರಜಾಪತಿದ್ವಾರಾ ಪ್ರಜಾಪಶುಸಂಬಂಧೋಽಪಿ ಭವತೀತಿ। ತಸ್ಮಾದಿಯಂ ಸಂಖ್ಯಾ ಯಜಮಾನಸ್ಯ ಪ್ರಜಾತ್ಯೈ ಪ್ರಜಾಪಶೂತ್ಪಾದನಾಯ ಸಂಪದ್ಯತೇ। ವೇದನಂ ಪ್ರಶಂಸತಿ।

ಪ್ರಜೆಗಳನ್ನು ಎಂದರೆ ಪುತ್ರಾದಿಸಂತಾನವನ್ನೂ ಪಶು ಮೊದಲಾದ ಸಂಪತ್ತನ್ನೂ ಅಪೇಕ್ಷಿಸುವ ಪುರುಷನು ಹಿಂದೆ ಹೇಳಿದ ಎರಡರಷ್ಟು ಸಂಖ್ಯೆಯ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕೆಂದು ಹೇಳುವರು. ಒಂದು ಸಂವತ್ಸರದಲ್ಲಿ ೩೬೦ ದಿನಗಳಿರುವವು. ಒಂದು ದಿನದಲ್ಲಿ ರಾತ್ರಿ, ಹಗಲು ಎಂಬ ಎರಡು ಭಾಗಗಳಿರುವವು. ಆದ್ದರಿಂದ ಒಂದು ದಿನವನ್ನು ರಾತ್ರಿ ಹಗಲು ಎಂದು ಎರಡು ವಿಭಾಗಗಳನ್ನಾಗಿ ಪರಿಗಣಿಸಿದರೆ ಒಂದು ಸಂವತ್ಸರದಲ್ಲಿ ೩೬೦ ರ ಎರಡರಷ್ಟು ಎಂದರೆ ೭೨೦ ಹಗಲು ರಾತ್ರಿ ವಿಭಾಗಗಳಾಗಿರುವವು. ಸಂವತ್ಸರವು ಪ್ರಜಾಪತಿಸ್ವರೂಪವೆಂದು ಹಿಂದೆಯೇ ಹೇಳಿದೆ. ಆದ್ದರಿಂದ ಸಂವತ್ಸರದ ವಿಭಾಗಗಳೇ ಆದ ೩೬೦ ಹಗಲುಗಳು ಮತ್ತು ೩೬೦ ರಾತ್ರಿಗಳೂ ಸೇರಿ ಆಗುವ ಒಟ್ಟು ೭೨೦ ಕಾಲವಿಭಾಗಗಳಿಗೂ ಪ್ರಜಾಪತಿಯ ಸಂಬಂಧ ವಿರುವುದು. ಮತ್ತು ಈಗಿರುವ ಪ್ರಜೆ ಮತ್ತು ಪಶುಗಳಲ್ಲದೆ ಮುಂದೆ ಉತ್ಪನ್ನರಾಗುವ ಪ್ರಜೆಗಳಿಗೂ ಪಶುಗಳಿಗೂ ಪ್ರಜಾಪತಿಯ ಸಂಬಂಧವಿರುವುದು. ಏಕೆಂದರೆ ಪ್ರಜಾಪತಿಯೇ ಎಲ್ಲವನ್ನೂ ಸೃಷ್ಟಿಸುವವನು. ಹೇಗೆಂದರೆ ಲೋಕವ್ಯವಹಾರದಲ್ಲಿ ಒಂದಾನೊಂದು ಮನೆಯಲ್ಲಿ ಹುಟ್ಟುವ ಪುರುಷನನ್ನನುಸರಿಸಿ ಎಂದರೆ ಪುರುಷನಿಗೆ ಸೇರಿರುವಂತೆ ಅವನಿಗೆ ಅಣ್ಣ, ತಮ್ಮ, ಅಕ್ಕ, ತಂಗಿ, ಗೋವುಗಳು, ಎಮ್ಮೆಗಳು ಇತರ ಚರಸಂಪತ್ತು ಇವುಗಳೆಲ್ಲಾ ಹುಟ್ಟಿ ಬೆಳೆಯುವವು. ಈ ವಿಧವಾದ ಪ್ರಜಾ ಮತ್ತು ಪಶುಸಂಪತ್ತಿಯೂ ಚರಸಂಪತ್ತೂ ಸಹ ಪ್ರಜಾಪತಿಯ ದೆಸೆಯಿಂದಲೇ ಉಂಟಾಗಿರುವವು. ಅಥವಾ ಪ್ರಜಾಪತಿಯೇ ಪ್ರಜಾಪಶುಗಳ ರೂಪದಿಂದ ಉತ್ಪನ್ನನಾಗಿರುವನು ಎಂದೂ ಹೇಳಬಹುದು. ಈ ವಿಷಯವನ್ನು ಇನ್ನೂ ಸ್ಪಷ್ಟಪಡಿಸುವರು—ಒಬ್ಬಾನೊಬ್ಬ ಧನಿಕನಿಗೆ ಪುತ್ರನು ಜನಿಸಿದಾಗ ಆ ಧನಿಕನು ಆ ಪುತ್ರನ ಮುಂದಿನ ಜೀವನಾರ್ಥವಾಗಿ ತನ್ನಲ್ಲಿರುವ ಭೂಮಿ ಮೊದಲಾದ ಕ್ಷೇತ್ರಗಳಲ್ಲಿ ಸಸ್ಯಾದಿ ಸಂಪತ್ತನ್ನು ಅಭಿವೃದ್ಧಿಪಡಿಸುವುದಲ್ಲದೆ, ಗೋವುಗಳು, ಎಮ್ಮೆಗಳು ಮೊದಲಾದ ಪಶುಸಂಪತ್ತನ್ನೂ ವೃದ್ಧಿಪಡಿಸುವನು. ಕೆಲವು ಕಾಲಾನಂತರ ಆ ಪುತ್ರನಿಗೆ ಸಹೋದರರು ಭಗಿನಿಯರೂ ಹುಟ್ಟುತ್ತಾರೆ. ಇದೇರೀತಿ ಅವನ ಅಥವಾ ಪುತ್ರನ ಸಂಸಾರವು ಬೆಳೆಯುತ್ತಾಹೋದಹಾಗೆಲ್ಲಾ ಕುಟುಂಬಕ್ಕೆ ಸೇರಿದ ಗೋಮಹಿಷ್ಯಾದಿಸಂಪತ್ತು ಚರಸಂಪತ್ತು ವೃದ್ಧಿಯಾಗುತ್ತಲೇ ಇರುವವು. ಈರೀತಿ ವೃದ್ಧಿಯಾಗುವ ಸಂತಾನ ಮತ್ತು ಪಶುಸಂಪತ್ತಿಗೆ ಪ್ರಜಾಪತಿಯೇ ಕಾರಣಭೂತನಾಗಿರುವನು. ಈ ಕಾರಣಗಳಿಂದ ಪುರುಷನ ಸಂತತಿ ಮತ್ತು ಪಶುಸಂಪತ್ತು ವೃದ್ಧಿಯಾಗಬೇಕಾದರೆ ಇವುಗಳಿಗೆ ಕಾರಣಭೂತನಾದ ಪ್ರಜಾಪತಿಯು ಸಂತುಷ್ಟನಾಗಬೇಕು. ಪ್ರಜಾಪತಿಯು ಸಂತುಷ್ಟನಾಗಬೇಕಾದರೆ ಪ್ರಜಾಪತಿಯ ಸ್ವರೂಪವೇ ಆದ ಸಂವತ್ಸರದಲ್ಲಿ ಹಗಲು ರಾತ್ರಿಗಳಷ್ಟು ಸಂಖ್ಯೆಯ ಮಂತ್ರಗಳನ್ನು ಪಠಿಸಬೇಕು. ಆದ್ದರಿಂದ ಈ ವಿಷಯಗಳನ್ನೆಲ್ಲಾ ತಿಳಿದಿರುವ ಯಾವ ಪುರುಷನು ಸಂವತ್ಸರದ ವಿಭಾಗಗಳಷ್ಟು ಎಂದರೆ ೭೨೦ (ಹಗಲು ಮತ್ತು ರಾತ್ರಿಗಳೂ ಸೇರಿ) ಸಂಖ್ಯೆಯಷ್ಟು ಪ್ರಾತರನುವಾಕಮಂತ್ರಗಳನ್ನು ಪಠಿಸುವನೋ ಆ ಪುರುಷನು ಪ್ರಜೆಗಳನ್ನೂ (ಪುತ್ರಾದಿಸಂತಾನಗಳನ್ನೂ) ಗೋಮಹಿಷ್ಯಾದಿಪಶುಸಂಪತ್ತನ್ನೂ ಪಡೆದು ಸಮೃದ್ಧಿಯನ್ನೈದುವನು.

**ಅಷ್ಟೌ ಶತಾನ್ಯನೂಚ್ಯಾನ್ಯಬ್ರಾಹ್ಮಣೋಕ್ತಸ್ಯ ಯೋ ವಾ ದುರುಕ್ತೋಕ್ತಃ ಶಮಲಗೃಹೀತೋ ಯಜೇತಾಷ್ಟಾಕ್ಷರಾ ವೈ ಗಾಯತ್ರೀ ಗಾಯತ್ರ್ಯಾ ವೈ ದೇವಾಃ ಪಾಪ್ಮಾನಂ ಶಮಲಮಪಾಘ್ನತ ಗಾಯತ್ರ್ಯೈವಾಸ್ಯ ತತ್ಪಾಪ್ಮಾನಂ ಶಮಲಮಪಹಂತಿ ಅಪ ಪಾಪ್ಮಾನಂ ಹತೇ ಯ ಏವಂ ವೇದ ।**

ಅಥ ದುರ್ಬ್ರಾಹ್ಮಣತ್ವ ಪರಿಹಾರಕಾಮಸ್ಯ ಸಂಖ್ಯಾಂತರಂ ವಿಧತ್ತೇ। ಅಬ್ರಾಹ್ಮಣತ್ವೇನ ಸ್ಮೃತಿಷು ಯೋಽಭಿಹಿತಃ ಸೋಽಯಮಬ್ರಾಹ್ಮಣೋಕ್ತೋ ರಾಜಸೇವಾಧಿಕಾರೀ । ಸ್ಮೃತಿವಾಕ್ಯಂ ಚಾತ್ರ ಪೂರ್ವಮೇವೋದಾಹೃತಂ । ತಾದೃಶಸ್ಯಾಷ್ಟೌ ಶತಾನ್ಯನುಬ್ರೂಯಾತ್ ।

**ಅಥವಾ ಯೋ ವಾ ದುರುಕ್ತೋಕ್ತೋ ದುರುಕ್ತೇನಾಪವಾದೇನ ಜನೈರ್ವ್ಯವಹೃತಃ ಸ ಶಮಲಗೃಹೀತೋ ಮಲಿನೇನ ಲೋಕವಿರುದ್ಧೇನ ಸ್ವೀಕೃತಸ್ತಾದೃಶೋ ಯದಾ ಯಜೇತ ತದಾಷ್ಟಾಶತಾನ್ಯನು ಬ್ರೂಯಾತ್। ಗಾಯತ್ರ್ಯಾ ಅಷ್ಟಾಕ್ಷರತ್ವಾತ್ತಯಾ ಚ ಮಲಿನಸ್ಯ ಪಾಪಸ್ಯ ದೇವೈರ್ವಿನಾಶಿತತ್ವಾತ್ ಅಷ್ಟಸಂಖ್ಯಾಮನು ತಿಷ್ಠನ್ಗಾಯತ್ರ್ಯೈವ ಮಲಿನಂ ಪಾಪಂ ವಿನಾಶಯತಿ। ವೇದನಂ ಪ್ರಶಂಸತಿ। ಅಪಹಂತೀತ್ಯರ್ಥಃ।**

ಈಗ ಬ್ರಾಹ್ಮಣಕರ್ಮಕ್ಕೆ ವಿರುದ್ಧವಾಗಿ ಆಚರಿಸುವ ಯಜಮಾನನ ವಿಷಯದಲ್ಲಿ ಪ್ರಾತರನುವಾಕಮಂತ್ರಗಳ ಸಂಖ್ಯೆಯನ್ನು ನಿರ್ದೇಶಿಸುವರು. ಅಬ್ರಾಹ್ಮಣನಾದವನು ಯಜ್ಞಮಾಡುವಾಗ ಪ್ರಾತರನುವಾಕಮಂತ್ರಗಳ ಸಂಖ್ಯೆಯು ಎಂಟನೂರು ಇರಬೇಕೆಂದು ಹೇಳುವರು. ಅಬ್ರಾಹ್ಮಣನೆಂದರೆ ಯಾರು? ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ್ದರೂ ಬ್ರಾಹ್ಮಣನಂತೆ ಅಥವಾ ಬ್ರಾಹ್ಮಣನಿಯಮಗಳಿಗೆ ವಿರುದ್ಧವಾಗಿ ಆಚರಿಸುವವನು ಅಬ್ರಾಹ್ಮಣನೆನಿಸುವನು. ಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳಲ್ಲಿ ಯಾವ ಪುರುಷನು ಅಬ್ರಾಹ್ಮಣನೆಂದು ಹೇಳಲ್ಪಟ್ಟಿರುವನೋ ಅವನು ಅಬ್ರಾಹ್ಮಣನು. ಹೇಗೆಂದರೆ—

**ಅಬ್ರಾಹ್ಮಣಾಸ್ತು ಷಟ್ ಪ್ರೋಕ್ತಾ ಇತಿ ಶಾತಾತಪೋಽಬ್ರವೀತ್।**
**ಆದ್ಯಸ್ತು ರಾಜಭೃತ್ಯಃ ಸ್ಯಾದ್ದ್ವಿತೀಯಃ ಕ್ರಯವಿಕ್ರಯೀ॥**
**ತೃತೀಯೋ ಬಹುಯಾಜೀ ಸ್ಯಾಚ್ಚತುರ್ಥೋ ಗ್ರಾಮಯಾಜಕಃ।**
**ಪಂಚಮಃ ಪ್ರಭುರೇತೇಷಾಂ ಗ್ರಾಮಸ್ಯ ನಗರಸ್ಯ ಚ॥**
**ಅನಾಗತಾಂ ತು ಯಃ ಪೂರ್ವಾಂ ಸಾದಿತ್ಯಾಂ ಚೈವ ಪಶ್ಚಿಮಾಂ।**
**ನೋಪಾಸೀತ ದ್ವಿಜಃ ಸಂಧ್ಯಾಂ ಬ್ರಹ್ಮಬಂಧುಃ ಸ ಗರ್ಹಿತಃ॥**

ಎಂದು ಶಾತಾಪರು ಹೇಳಿರುವರು. ಎಂದರೆ ರಾಜಭೃತ್ಯ ಎಂದರೆ ರಾಜನ ಆಜ್ಞಾನುಸಾರವಾಗಿ ಅವನ ಕೈಕೆಳಗೆ ಧನಕ್ಕಾಗಿ ಕೆಲಸಮಾಡುವ ಅಧಿಕಾರಿಯು; ಧಾನ್ಯಾದಿಗಳನ್ನೂ ಇತರ ವಸ್ತುಗಳನ್ನೂ ಕೊಂಡು ಮಾರುವವನು. ಎಂದರೆ ವ್ಯಾಪಾರಮಾಡುವವನು; ದುಡ್ಡು ಸಂಪಾದನೆಯೇ ಮುಖ್ಯವೆಂದು ಪರಿಗಣಿಸಿ ಪಾತ್ರಾಪಾತ್ರವಿವೇಚನೆ ಇಲ್ಲದೆ ಯಾರೆಂದರೆ ಅವರಿಗೆ ಯಜ್ಞಾದಿಕರ್ಮಗಳನ್ನು ಮಾಡಿಸುವವನು; ಹಳ್ಳಿಯ ಪುರೋಹಿತನು ಎಂದರೆ ವೇದಮಂತ್ರಾದಿಗಳನ್ನು ಸರಿಯಾಗಿ ಅಧ್ಯಯನಮಾಡದೆ ಕರ್ಮಗಳಲ್ಲಿ ಮಂತ್ರಕ್ರಿಯಾಲೋಪಗಳನ್ನು ಮಾಡುತ್ತಾ ಅಜ್ಞರಾದ ಶೂದ್ರಾದಿಗಳಿಗೆ ಕರ್ಮಗಳನ್ನು ಮಾಡಿಸಿ ಧನವನ್ನು ಸಂಪಾದನೆಮಾಡುವವನು; ಮೇಲೆ ಹೇಳಿದ ಜನಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಅವರಿಂದ ಸ್ವಪ್ರಯೋಜನವನ್ನು ಪಡೆಯುವವನು; ಪ್ರಾತಃಸಾಯಂಸಂಧ್ಯಾಕಾಲಗಳಲ್ಲಿ ಸೂರ್ಯನು ಉದಯಿಸುವುದಕ್ಕೆ ಬಹುಮುಂಚಿತವಾಗಿ ಅಥವಾ ಬಹುಕಾಲದ ಮೇಲಾಗಲಿ ಸಂಧ್ಯಾದಿಕರ್ಮಗಳನ್ನು ಮಾಡುವವನು ಅಥವಾ ಕರ್ಮವನ್ನೇ ಮಾಡದಿರುವವನು; ಈ ಆರು ವರ್ಗಕ್ಕೆ ಸೇರಿದವರು ಅಬ್ರಾಹ್ಮಣರೆಂದು ಪರಿಗಣಿಸಲ್ಪಟ್ಟಿರುವರು; ಇವರಲ್ಲಿ ಯಾರಾದರೂ ಯಜ್ಞಮಾಡಿದಲ್ಲಿ ಅವನ ಯಜ್ಞದಲ್ಲಿ ಹೋತೃವು ೮೦೦ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಅಥವಾ **ದುರುಕ್ತೋಕಃ** ಎಂದರೆ ಕೆಟ್ಟ ಅಪವಾದಕ್ಕೆ ಗುರಿಯಾಗಿರುವವನು, ಕೆಟ್ಟಕೆಲಸಗಳನ್ನು ಮಾಡಿದವನೆಂದು ಪ್ರಸಿದ್ಧಿಯಾಗಿರುವವನು. ಇಂತಹ ಯಜಮಾನನೂ ಸಹ ಮಾಡುವ ಯಜ್ಞದಲ್ಲಿ ಹೋತೃವು ೮೦೦ ಸಂಖ್ಯೆಯಷ್ಟು ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಈ ೮೦೦ ಸಂಖ್ಯೆಯು ಏತಕ್ಕೆ ನಿರ್ದಿಷ್ಟವಾಗಿರುವುದೆಂದರೆ, ಗಾಯತ್ರೀಮಂತ್ರವು ಗಾಯತ್ರೀಛಂದಸ್ಸಿನದು. ಈ ಛಂದಸ್ಸಿನ ಮಂತ್ರದಲ್ಲಿ ಪಾದಕ್ಕೆ ಎಂಟು ಅಕ್ಷರವಿರುವುದು. ಗಾಯತ್ರೀಮಂತ್ರಕ್ಕೆ ಪಾಪವನ್ನು ನಾಶಮಾಡುವ ಸಾಮರ್ಥ್ಯವಿರುವುದು. ಎಂದರೆ ಗಾಯತ್ರೀಮಂತ್ರವನ್ನು ಜಪಿಸುವವನ ಪಾಪಗಳನ್ನು ದೇವತೆಗಳು ಪರಿಹರಿಸುವರು. ಆದ್ದರಿಂದ ಗಾಯತ್ರೀಛಂದಸ್ಸಿನ

ಪಾದದಲ್ಲಿರುವ ೮ ಅಕ್ಷರಗಳ ಸಂಕೇತವಾಗಿ ೮೦೦ ಸಂಖ್ಯೆಯಷ್ಟು ಮಂತ್ರಗಳನ್ನು ಪಠಿಸಿದಲ್ಲಿ ಅಬ್ರಾಹ್ಮಣನಾದ ಯಜಮಾನನ ಪಾಪಗಳು ಪರಿಹಾರವಾಗುವವು ಎಂದು ಪ್ರಸಿದ್ಧಿಯು. ಆದ್ದರಿಂದ ಈ ವಿಷಯಗಳೆಲ್ಲವನ್ನು ತಿಳಿದ ಯಾವ ಪುರುಷನು ಪ್ರಾತರನುವಾಕಪಠನದಲ್ಲಿ ೮೦೦ ಸಂಖ್ಯೆಯಷ್ಟು ಮಂತ್ರಗಳನ್ನು ಪಠಿಸುವನೋ ಅವನು ತನ್ನ ಮತ್ತು ಯಜಮಾನನ ಪಾಪಗಳನ್ನು ಪರಿಹರಿಸಲು ಶಕ್ತನಾಗುತ್ತಾರೆ.

ಸಹಸ್ರಮನೂಚ್ಯಂ ಸ್ವರ್ಗಕಾಮಸ್ಯ ಸಹಸ್ರಾಶ್ವೀನೇ ವಾ ಇತಃ ಸ್ವರ್ಗೋ ಲೋಕಃ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಸಂಪತ್ತ್ಯೈ ಸಂಗತ್ಯೈ ॥

ಸಂಖ್ಯಾಂತರಂ ವಿಧತ್ತೇ । ಪ್ರಬಲೋಽಶ್ವ ಏಕೇನ್ನಾಹ್ನಾ ಯಾವಂತಿ ಯೋಜನಾನಿ ಗಚ್ಛತಿ ತಾವದ್ಯೋಜನಪರಿಮಿತೋ ದೇಶೋ ಆಶ್ವೀನಃ । ಸ ಚ ಸಹಸ್ರಸಂಖ್ಯಯಾ ಗುಣಿತಃ ಸಹಸ್ರಾಶ್ವೀನಃ । ಅಶ್ವಸ್ಯೈಕಾಹಗಮಃ ಇತಿ ಪಾಣಿನೀಯಸೂತ್ರಾದಾಶ್ವೀನಶಬ್ದನಿಷ್ಪತ್ತಿಃ । ಇತೋ ಭೂಲೋಕಾದಾರಭ್ಯ ಸಹಸ್ರಾಶ್ವೀನ ಊರ್ಧ್ವದೇಶೇ ಸ್ವರ್ಗೋ ಲೋಕೋ ವರ್ತತೇ । ಅತಃ ಸಹಸ್ರಸಂಖ್ಯಾ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಪ್ರಾಪ್ತ್ಯೈ ಭವತಿ । ಪ್ರಾಪ್ತಸ್ಯ ಸಂಪತ್ತ್ಯೈ ಸ್ವಾಪೇಕ್ಷಿತಸರ್ವಭೋಗ್ಯವಸ್ತುಸಂಪಾದನಾಯ ಭವತಿ । ಸಂಪನ್ನಸ್ಯ ಚ ಸಂಗತ್ಯೈ ಮಹತಾ-ಮಿಂದ್ರಾದಿದೇವಾನಾಂ ಪ್ರೀತಿಪೂರ್ವಕಸಂಬಂಧಾಯ ಭವತಿ ॥

ಸಹಸ್ರಸಂಖ್ಯೆಯಲ್ಲಿ ಪ್ರಾತರನುವಾಕಮಂತ್ರಗಳನ್ನು ಪಠಿಸುವುದರ ಫಲವನ್ನು ಹೇಳುತ್ತಾರೆ. ಈ ಪ್ರಾತರನುವಾಕ ಮಂತ್ರಗಳನ್ನು ಸಾವಿರಸಂಖ್ಯೆಯಷ್ಟು ಪಠಿಸುವುದರಿಂದ ಯಜ್ಞಮಾಡುವ ಯಜಮಾನನು ಸ್ವರ್ಗಲೋಕವನ್ನು ಪಡೆಯುವನು. ಏಕೆಂದರೆ—ಒಂದು ಶಕ್ತಿಯುತವಾದ ಕುದುರೆಯ ಮೇಲೆ ಒಬ್ಬ ಮನುಷ್ಯನು ಅನೇಕ ಯೋಜನೆಗಳನ್ನು ಅತಿಕ್ರಮಿಸಬಹುದು. ಆ ರೀತಿ ಒಂದು ದಿವಸದಲ್ಲಿ ಎಷ್ಟು ಯೋಜನಗಳನ್ನು ಅತಿಕ್ರಮಿಸುವನೋ ಅಷ್ಟು ದೂರಕ್ಕೆ ಆಶ್ವೀನವೆಂದು ಹೆಸರು. ಸ್ವರ್ಗ ಲೋಕವು ಈ ಭೂಮಿಯಿಂದ ಊರ್ಧ್ವಾಭಿಮುಖವಾಗಿ ಒಂದುಸಾವಿರ ಆಶ್ವೀನದಷ್ಟು ದೂರವಿರುವುದು ಎರವರೆ ಒಬ್ಬ ಮನುಷ್ಯನು ಪ್ರಬಲವಾದ ಒಂದು ಕುದುರೆಯ ಮೇಲೆ ಕುಳಿತು ಎಡಬಿಡದೆ ಒಂದುಸಾವಿರ ದಿನಪರ್ಯಂತರ ಪ್ರಯಾಣಮಾಡುವಷ್ಟು ದೂರ ದಲ್ಲಿ ಸ್ವರ್ಗಲೋಕವಿರುವುದು. ಆದ್ದರಿಂದ ಅಷ್ಟು ದೂರವಿರುವ ಸ್ವರ್ಗಲೋಕವನ್ನು ಪಡೆಯಬೇಕಾದರೆ ಯಜ್ಞಕರ್ತನು ಒಂದು ಸಾವಿರ ಸಂಖ್ಯೆಯಷ್ಟು ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಈ ವಿಷಯವನ್ನು ತಿಳಿದ ಪುರುಷನು ಆರೀತಿ ಸಹಸ್ರಸಂಖ್ಯೆಯಷ್ಟು ಮಂತ್ರಗಳನ್ನು ಪಠಿಸಿದಲ್ಲಿ ಅವನು ತಾನು ಅಪೇಕ್ಷಿಸುವ ಭೋಗಭಾಗ್ಯಾದಿಸಂಪತ್ತನ್ನು ಅನುಭವಿಸುವುದಲ್ಲದೆ ಇಂದ್ರಾದಿದೇವತೆಗಳ ಅನುಗ್ರಹರೂಪವಾದ ಪ್ರೀತಿಸಂಬಂಧವನ್ನೂ ಪಡೆದು ಕೊನೆಗೆ ಸ್ವರ್ಗಲೋಕವನ್ನೂ ಪಡೆಯುವನು.

ಅಪರಿಮಿತಮನೂಚ್ಯಮಪರಿಮಿತೋ ವೈ ಪ್ರಜಾಪತಿಃ ಪ್ರಜಾಪ-ತೇರ್ವಾ ಏತದುಕ್ಥಂ ಯತ್ಪ್ರಾತರನುವಾಕಸ್ತಸ್ಮಿನ್ಸರ್ವೇ ಕಾಮಾ ಅವರುಧ್ಯಂತೇ ಸ ಯದಪರಿಮಿತಮನ್ವಾಹ ಸರ್ವೇಷಾಂ ಕಾಮಾನಾಮವರುದ್ಧ್ಯೈ ಸರ್ವಾನ್ಕಾಮಾನವರುಂಧೇ ಯ ಏವಂ ವೇದ ತಸ್ಮಾದಪರಿಮಿತಮೇವಾನೂಚ್ಯಂ ॥

ಸರ್ವಕಾಮಸಿದ್ಧ್ಯರ್ಥಮಿಯತ್ತಾಪರಿಚ್ಛೇದರಾಹಿತ್ಯಸಂಖ್ಯಾಮಭಿಧತ್ತೇ । ಶತಂ ಸಹಸ್ರಮಿತ್ಯಾನಿ ಸಂಖ್ಯಾಪರಿಮಾಣಂ ಪರಿತ್ಯಜ್ಯ ಮಧ್ಯರಾತ್ರಾದೂರ್ಧ್ವಮುಪಕ್ರಮ್ಯ ಸೂರ್ಯೋದಯಾತ್ಪ್ರಾಚೀನಕಾಲೇ ಯಾವತೀರನುವಕ್ತುಂ ಶಕ್ತಿರಸ್ತಿ ತಾವತೀರನುಬ್ರೂಯಾತ್ । ಜಗತ್ಕಾರಣಭೂತಃ ಪ್ರಜಾಪತಿಶ್ಚಾಪರಿಮಿತಃ । ನ ಹೇತಾವದಸ್ಯ ಸ್ವರೂಪಮಿತಿ ಪ್ರಜಾಪತಿಃ ಪರಿಮಾತುಂ ಶಕ್ಯತೇ । ಯಃ ಪ್ರಾತರನುವಾಕೋಽಸ್ತಿ ತದೇತತ್ತಾದೃಶಸ್ಯ ಪ್ರಜಾಪತೇರುಕ್ಥಂ ಪ್ರಿಯಂ ಶಸ್ತ್ರಮತಸ್ತಸ್ಮಿನ್ಪ್ರಾತರನುವಾಕೇ ಸರ್ವೇ ಕಾಮಾ ಅಂತರ್ಭವಂತಿ । ಏವಂ ಸತಿ ಸ ಹೋತಾ ಯದ್ಯಪರಿಮಿತಮನುಬ್ರೂಯಾತ್ತದಾನೀಂ ತದನುವಚನಂ ಸರ್ವಕಾಮಾಪ್ತ್ಯೈ ಭವತಿ । ವೇದನಂ ಪ್ರಶಂಸತಿ । ಬಹುಫಲಹೇತುತ್ವಾದಪರಿಮಿತಪಕ್ಷಮಾದರೇಣ ನಿಗಮಯತಿ ॥

ಈಗ ಸಮಸ್ತಕಾಮಗಳ (ಅಪೇಕ್ಷೆಗಳ) ಸಿದ್ಧ್ಯರ್ಥವಾಗಿ ಪಠಿಸಬೇಕಾದ ಮಂತ್ರಸಂಖ್ಯೆಯು ಎಷ್ಟಿರಬೇಕೆಂಬುದನ್ನು ತಿಳಿಸುತ್ತಾರೆ. ಸಮಸ್ತಕಾಮಗಳ ಸಿದ್ಧಿಗಾಗಿ ಇದುವರೆಗೆ ಹೇಳಿದಂತೆ ನೂರು, ಸಹಸ್ರ ಮೊದಲಾದ ಪರಿಮಿತಸಂಖ್ಯೆಯನ್ನು ತ್ಯಜಿಸಿ ಅಪರಿಮಿತವಾದ ಎಂದರೆ ಬಹಳವಾದ ಮಂತ್ರಗಳನ್ನು ಪಠಿಸಬೇಕು. ಹೇಗೆಂದರೆ—ಮಧ್ಯರಾತ್ರಿಯು ಕಳೆದಕೂಡಲೇ ಅಲ್ಲಿಂದ ಮುಂದಕ್ಕೆ ಸೂರ್ಯೋದಯಕಾಲ ಪ್ರಾರಂಭವಾಗುವ ಕಾಲಕ್ಕೆ ಸ್ವಲ್ಪ ಮುಂಚಿತವಾಗಿ ಇರುವ ಈ ಮಧ್ಯವರ್ತಿಕಾಲದಲ್ಲೆಲ್ಲಾ ಎಷ್ಟು ಮಂತ್ರಗಳನ್ನು ಪಠಿಸಲು ಸಾಧ್ಯವಾಗುತ್ತದೆಯೋ ಅಷ್ಟುಮಂತ್ರಗಳನ್ನು ಪಠಿಸಬೇಕು. ಜಗತ್ಕಾರಣಭೂತನಾದ ಪ್ರಜಾಪ್ರತಿಯು ಅಪರಿಮಿತನು ಎಂದರೆ ಅವನಿಗೆ ಆದ್ಯಂತಗಳಿಲ್ಲ. ಅವನ ಶಕ್ತಿಸಾಮರ್ಥ್ಯಗಳಿಗೂ ಆದ್ಯಂತಗಳಿಲ್ಲ. ಆ ಪ್ರಜಾಪತಿಯ ಶಕ್ತಿಸಾಮರ್ಥ್ಯಗಳು ಇಷ್ಟೇ ಸರಿ ಎಂದು ಅಳತೆಮಾಡಿ ಹೇಳಲು ಸಾಧ್ಯವಿಲ್ಲ. ಇಂತಹ ಸರ್ವಸಾಮರ್ಥ್ಯಗಳುಳ್ಳ ಪ್ರಜಾಪತಿಗೆ ಈ ಪ್ರಾತರನುವಾಕಮಂತ್ರಗಳೂ, ಶಸ್ತ್ರ ಮತ್ತು ಉಕ್ಥಮಂತ್ರಗಳೂ ಬಹಳ ಪ್ರಿಯವಾಗಿರುವವು. ಆದ್ದರಿಂದ ಈ ಪ್ರಾತರನುವಾಕಮಂತ್ರಗಳಲ್ಲಿ ಸಮಸ್ತಕಾಮಗಳೂ ಅಂತರ್ಭೂತವಾಗಿವೆ ಎಂದರೆ ಸಮಸ್ತಕಾಮಗಳನ್ನೂ ಪೂರೈಸಲು ಈ ಪ್ರಾತರನುವಾಕಮಂತ್ರಗಳಿಗೆ ಶಕ್ತಿ ಇದೆ. ವಸ್ತುಸ್ಥಿತಿಯು ಹೀಗಿರುವುದರಿಂದ ಹೋತೃವು ಅಪರಿಮಿತವಾದ ಮಂತ್ರಗಳನ್ನು ಪಠಿಸಿದ್ದೇ ಆದರೆ ಅವನ ಮಂತ್ರಪಠನವು ಸಮಸ್ತಕಾಮಗಳ ತೃಪ್ತಿಗೆ ಸಾಧಕವಾಗುವುದು. ಈ ವಿಷಯವನ್ನು ತಿಳಿದ ಯಾವ ಪುರುಷನು ಅಪರಿಮಿತವಾದ ಪ್ರಾತರನುವಾಕ ಮಂತ್ರಗಳನ್ನು ಪಠಿಸುವನೋ ಅವನು ಸಮಸ್ತಕಾಮಗಳನ್ನೂ ಪಡೆಯುವನು. ಆದುದರಿಂದ ಯಾವಾಗಲೂ ಪ್ರಾತರನುವಾಕಮಂತ್ರಪಠನಮಾಡುವಾಗ ಅಪರಿಮಿತಸಂಖ್ಯೆಯ ಮಂತ್ರಗಳನ್ನೇ ಪಠಿಸಬೇಕು.

### ಸಪ್ತಾಗ್ನೇಯಾನಿ ಛಂದಾಂಸ್ಯನ್ವಾಹ ಸಪ್ತ ವೈ ದೇವಲೋಕಾಃ ಸರ್ವೇಷು ದೇವಲೋಕೇಷು ರಾಧ್ನೋತಿ ಯ ಏವಂ ವೇದ ।

ಪ್ರಾತರನುವಾಕಗತಾಸ್ವೃಕ್ಷು ಛಂದೋವಿಶೇಷಾನ್ವಿಧತ್ತೇ । ಪ್ರಾತರನುವಾಕೇ ತ್ರಯೋ ಭಾಗಾಃ । ತತ್ರ ಪ್ರಥಮೋ ಭಾಗ ಆಗ್ನೇಯಃ । ತಸ್ಮಿಂಶ್ಚ ಗಾಯತ್ರ್ಯನುಷ್ಟುಪ್ ತ್ರಿಷ್ಟುಬ್ಬೃಹತ್ಯುಷ್ಣಿಗ್ಜಗತೀ ಪಂಕ್ತಿರಿತಿ ಸಪ್ತಭಿಶ್ಛಂದೋಭಿರ್ಯುಕ್ತಾ ಋಚೋಽನುಬ್ರೂಯಾತ್ । ದೇವಾನಾಂ ಸಂಬಂಧಿನೋ ಬಹುಲೋಕಯುಕ್ತಾ ಲೋಕವಿಶೇಷಾಃ ಸಪ್ತ । ತಸ್ಮಾಚ್ಛಂದಸಾಂ ಸಪ್ತಸಂಖ್ಯಾ ಪ್ರಶಸ್ತಾ । ವೇದನಂ ಪ್ರಶಂಸತಿ । ಭೂಲೋಕಾದಯಃ ಸತ್ಯಲೋಕಾಂತಾಃ ಸಪ್ತ ವೈ ದೇವಲೋಕಾ ದ್ರಷ್ಟವ್ಯಾಃ ॥

ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಯಾವ ಯಾವ ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕೆಂಬುದನ್ನು ನಿರ್ದೇಶಿಸುತ್ತಾರೆ. ಪ್ರಾತರನುವಾಕಮಂತ್ರಗಳಲ್ಲಿ ಮೂರುಭಾಗಗಳಿರುವವು. ಅವುಗಳಲ್ಲಿ ಅಗ್ನಿದೇವತೆಯ ಸಂಬಂಧವಾದ ಮಂತ್ರಗಳು ಆಗ್ನೇಯಕ್ರತುವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವವು. ಅವುಗಳಲ್ಲಿ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ ಪಂಕ್ತಿ ಎಂಬ ಏಳುವಿಧ ಛಂದಸ್ಸಿನಿಂದ ಕೂಡಿದ ಋಕ್ಕುಗಳನ್ನು ಪಠಿಸಬೇಕು. ಏಕೆಂದರೆ ಅಗ್ನಿಯು ದೇವತೆಗಳಿಗೂ ಮನುಷ್ಯರಿಗೂ ಯಜ್ಞಮೂಲಕವಾಗಿ ಸಂಬಂಧವನ್ನು ಕಲ್ಪಿಸುವವನು ಅಲ್ಲದೆ ದೇವತೆಗಳಲ್ಲಿಯೂ ಮುಖ್ಯನು. ದೇವಲೋಕಗಳು ಎಂದರೆ ದೇವತೆಗಳು ವಾಸಮಾಡುವ ಲೋಕಗಳು ಏಳು ಆದ್ದರಿಂದ ಈ ಸಪ್ತಲೋಕಗಳ ಪ್ರಾಪ್ತಿಗಾಗಿ ಏಳುವಿಧ ಛಂದಸ್ಸುಗಳಿಂದ ಕೂಡಿದ ಪ್ರಾತರನುವಾಕಮಂತ್ರಗಳನ್ನು ಪಠಿಸಬೇಕು. ಆದ್ದರಿಂದ ಯಾವ ಪುರುಷನು ಈ ವಿಷಯವನ್ನು ತಿಳಿದು ಏಳು ವಿಧ ಛಂದಸ್ಸುಗಳಿಂದ ಕೂಡಿದ ಆಗ್ನೇಯಕ್ರತುಮಂತ್ರಗಳನ್ನು ಪ್ರಾತರನುವಾಕದಲ್ಲಿ ಪಠಿಸುವನೋ ಅವನು ಪೃಥಿವಿಯಿಂದ ಊರ್ಧ್ವಭಾಗದಲ್ಲಿರುವ ಸತ್ಯಲೋಕದ ವರೆಗಿನ ಸಪ್ತಲೋಕಗಳನ್ನೂ ಪಡೆಯುವನು.

**ಸಪ್ತೋಷಸ್ಯಾನಿ ಛಂದಾಂಸ್ಯನ್ವಾಹ ಸಪ್ತ ವೈ ಗ್ರಾಮ್ಯಾಃ ಪಶವಃ ।**
**ಅವಗ್ರಾಮ್ಯಾನ್ಪಶೂನ್ರುಂಧೇ ಯ ಏವಂ ವೇದ ॥**

**ಪ್ರಾತರನುವಾಕಸ್ಯ ದ್ವಿತೀಯಭಾಗೇ ಛಂದಾಂಸಿ ವಿಧತ್ತೇ । ಯಥಾ ಪ್ರಥಮಭಾಗಸ್ಯ ಅಗ್ನಿರ್ದೇವತಾ ತಥಾ ದ್ವಿತೀಯಭಾಗಸ್ಯೋಷಾ ದೇವತಾ ತಸ್ಮಾದುಷಃ ಪ್ರತಿಪಾದಿಕಾಸ್ವೃಕ್ಷು ಪೂರ್ವವದ್ಗಾಯತ್ರ್ಯಾದೀನಿ ಸಪ್ತ ಛಂದಾಸಿ ದ್ರಷ್ಟವ್ಯಾನಿ । ಗ್ರಾಮೇ ಭವಾ ಗ್ರಾಮ್ಯಾಃ ಪಶವಸ್ತೇ ಚ ಸಪ್ತ । ತಥಾ ಚ ಬೌಧಾಯನಃ—ಸಪ್ತ ಗ್ರಾಮ್ಯಾಃ ಪಶವೋಽಜಾಶ್ವೋ ಗೌರ್ಮಹಿಷೀ ವರಾಹೋ ಹಸ್ತ್ಯಶ್ವತರೀ ಚ ಇತಿ । ಆಪಸ್ತಂಬಮತಾನುಸಾರಿಣಸ್ತ್ವೇವಂ ವರ್ಣಯಂತಿ—**

**ಅಜಾವಿಕಂ ಗವಾಶ್ವಂ ಚ ಗರ್ದಭೋಷ್ಟ್ರನರಸ್ತಥಾ ।**
**ಸಪ್ತ ವೈ ಗ್ರಾಮ್ಯಪಶವೋ ಗೀಯಂತೇ ಕವಿಸತ್ತಮೈಃ ॥**

**ತಸ್ಮಾದತ್ರ ಸಪ್ತಸಂಖ್ಯಾಯುಕ್ತಾ । ವೇದನಂ ಪ್ರಶಂಸತಿ ॥**

ಪ್ರಾತರನುವಾಕಮಂತ್ರಗಳಲ್ಲಿ ಎರಡನೆಯ ಭಾಗದ ಮಂತ್ರಗಳಿಗೆ ಛಂದಸ್ಸನ್ನು ಹೇಳುತ್ತಾರೆ. ಮೊದಲನೆಯ ಭಾಗಕ್ಕೆ ಅಗ್ನಿಯು ದೇವತೆಯಾಗಿರುವಂತೆ ಎರಡನೆಯ ಭಾಗದ ಮಂತ್ರಗಳಿಗೆ ಉಷಸ್ಸು ದೇವತೆಯು. ಆದ್ದರಿಂದ ಪ್ರಾತರನುವಾಕಮಂತ್ರಗಳಲ್ಲಿ ಉಷೋದೇವತೆಯನ್ನು ಪ್ರತಿಪಾದಿಸುವ ಮಂತ್ರಗಳಲ್ಲಿ ಹಿಂದಿನಂತೆ ಏಳುವಿಧ ಛಂದಸ್ಸಿನಿಂದ ಕೂಡಿದ ಋಕ್ಕುಗಳನ್ನು ಪಠಿಸಬೇಕು. ಈ ರೀತಿ ಪಠಿಸಿದರೆ ಯಜ್ಞಮಾಡುವ ಯಜಮಾನನಿಗೆ ಏಳುವಿಧ. ಗ್ರಾಮ್ಯ ಎಂದರೆ ಗ್ರಾಮಗಳಲ್ಲಿ ಸಾಕಲಾಗಿರುವ ಏಳುವಿಧ ಪಶುಗಳ ಸಮೃದ್ಧಿಯುಂಟಾಗುವುದು. ಈ ವಿಷಯದಲ್ಲಿ ಬೌಧಾಯನರು—**ಸಪ್ತ ಗ್ರಾಮ್ಯಾಃ ಪಶವೋಽಜಾಶ್ವೋ ಗೌರ್ಮಹಿಷೀ ವರಾಹೋ ಹಸ್ತ್ಯಶ್ವತರೀ ಚ** ಎಂದು ಹೇಳಿರುವರು ಎಂದರೆ ಇವರ ಮತಾನುಸಾರವಾಗಿ ಆಡು, ಕುದುರೆ, ಗೋವುಗಳು, ಎಮ್ಮೆಗಳು, ಹಂದಿ, ಆನೆ, ಕತ್ತೆ ಎಂಬ ಏಳುವಿಧ ಪ್ರಾಣಿಗಳು ಗ್ರಾಮ್ಯಪಶುಗಳೆಂದು ಹೇಳಲ್ಪಡುವವು. ಆಪಸ್ತಂಬರ ಮತಾನುಸಾರವಾಗಿ—ಆಡು, ಕುರಿ, ಗೋವುಗಳು, ಕುದುರೆ, ಕತ್ತೆ, ಒಂಟೆ, ಮನುಷ್ಯರು (ಸೇವಕರಾದ ಶೂದ್ರಾದಿಗಳು) ಎಂಬ ಈ ಏಳುವಿಧ ಗ್ರಾಮ್ಯಪಶುಗಳೆಂದು ಹೇಳಲ್ಪಡುವರು. ಆದ್ದರಿಂದ ಏಳುವಿಧ ಛಂದಸ್ಸುಗಳನ್ನು ಪಠಿಸಬೇಕು. ಈ ವಿಷಯವನ್ನು ತಿಳಿದ ಯಜ್ಞಕರ್ತನು ಪ್ರಾತರನುವಾಕಮಂತ್ರಪಠನಮಾಡುವಾಗ ಉಷಸ್ಯಕ್ರತು

ಸಂಬಂಧವಾದ ಮಂತ್ರಗಳಲ್ಲಿ ಗಾಯತ್ರ್ಯಾದಿ ಏಳು ವಿಧ ಛಂದಸ್ಸಿನ ಋಕ್ಕುಗಳನ್ನು ಪಠಿಸಿದಲ್ಲಿ ಅವನು ಈ ಏಳುವಿಧ ಗ್ರಾಮ್ಯ ಪಶುಗಳ ಸಮೃದ್ಧಿಯನ್ನು ಪಡೆದು ಸುಖಿಸುತ್ತಾನೆ.

**ಸಪ್ತಾಶ್ವಿನಾನಿ ಛಂದಾಂಸ್ಯನ್ವಾಹ ಸಪ್ತಧಾ ವೈ ವಾಗವದತ್ತಾವದ್ವೈ ವಾಗವದತ್ಸರ್ವಸ್ಯೈ ವಾಚಃ ಸರ್ವಸ್ಯ ಬ್ರಹ್ಮಣಃ ಪರಿಗೃಹೀತ್ಯೈ॥**

ತೃತೀಯಭಾಗಛಂದಾಂಸಿ ವಿಧತ್ತೇ। ತೃತೀಯಭಾಗಸ್ಯಾಶ್ವಿನೌ ದೇವತಾ ತತ್ಸಂಬಂಧಿನೀಃ ಸಪ್ತ ಛಂದೋಯುಕ್ತಾ ಋಚೋಽನುಬ್ರೂಯಾತ್ । ಲೋಕೇ ಗಾನರೂಪಾ ಯಾ ವಾಗಸ್ತಿ ಸಾ ಸಪ್ತಧಾವದತ್ಷಡ್ಜಋಷಭಾದಿಸ್ವರೋಪೇತಾ ಪ್ರವೃತ್ತಾ ತಾವದೇವ ವೈದಿಕವಾಗಪ್ಯವದತ್ಸಾಮ್ನಿ ಕೃಷ್ಟಪ್ರಥಮದ್ವಿತೀಯಾದೀನಾಂ ಸಪ್ತಸ್ವರಾಣಾಮಧೀಯಮಾನತ್ವಾತ್ । ಅತೋಽತ್ರ ಸಪ್ತಸಂಖ್ಯಾ ಲೌಕಿಕ್ಯಾಃ ಸರ್ವಸ್ಯಾ ವಾಚೋ ವೇದಸ್ಯ ಚ ಸರ್ವಸ್ಯ ಪರಿಗ್ರಹಾಯ ಭವತಿ। ತ್ರಿಷ್ವಪ್ಯೇಷ್ವಾಗ್ನೇಯೌಷಸ್ಯಾಶ್ವಿನಭಾಗೇಷು ಛಂದಾಂಸ್ಯಸ್ಮಾಭಿಃ ಪೂರ್ವಮೇವೋದಾಹೃತ್ಯ ಪ್ರದರ್ಶಿತಾನಿ॥

ಈಗ ಪ್ರಾತರನುವಾಕಮಂತ್ರಗಳಲ್ಲಿ ಮೂರನೆಯ ಭಾಗವಾದ ಆಶ್ವಿನಕ್ರತುವೆಂಬ ಭಾಗದ ಮಂತ್ರಗಳನ್ನು ವಿವರಿಸುವರು. ಈ ಮೂರನೆಯ ಭಾಗಕ್ಕೆ ಅಶ್ವಿನೀದೇವತೆಗಳು ದೇವತೆಯು. ಇಲ್ಲಿಯೂ ಸಹ ಅಶ್ವಿನೀದೇವತೆಗಳ ಪರವಾದ ಋಕ್ಕುಗಳನ್ನು ಗಾಯತ್ರ್ಯಾದಿ ಏಳುಛಂದಸ್ಸುಗಳ ಋಕ್ಕುಗಳಿಂದಲೂ ಪಠಿಸಬೇಕು. ಲೋಕವ್ಯವಹಾರದಲ್ಲಿ ಗಾನರೂಪವಾದ ವಾಕ್ಯಕ್ಕೆ ಎಂದರೆ ಸಂಗೀತಸಾಹಿತ್ಯದಲ್ಲಿ ಷಡ್ಜ, ಋಷಭ ಮೊದಲಾದ ಏಳುವಿಧ ಸ್ವರಭೇದಗಳಿರುವವು. ಇದಲ್ಲದೆ ವೈದಿಕವಾಕ್ಯಗಳಿಂದ ಕೂಡಿದ ಸಾಮವೇದದಲ್ಲಿಯೂ ಕೃಷ್ಟ ಪ್ರಥಮ ದ್ವಿತೀಯ ಮೊದಲಾದ ಏಳು ವಿಧ ಸ್ವರಗಳಿರುವವು. ಆದ್ದರಿಂದ ಲೌಕಿಕ ಮತ್ತು ವೈದಿಕವಾಕ್ಯಗಳೆರಡರಲ್ಲಿಯೂ ಏಳುವಿಧ ಪ್ರಭೇದಗಳಿರುವುದು ಕಂಡುಬರುತ್ತದೆ. ಆದ್ದರಿಂದ ಹಿಂದೆ ಆಗ್ನೇಯ ಉಶಸ್ಯಕ್ರತುಗಳಿಗೆ ಹೇಳಿದಂತೆ ಆಶ್ವಿನಕ್ರತುಮಂತ್ರಗಳಲ್ಲಿಯೂ ಏಳುವಿಧ ಛಂದಸ್ಸಿನ ಮಂತ್ರಗಳನ್ನೇ ಪಠಿಸಬೇಕು.

**ತಿಸ್ರೋ ದೇವತಾ ಅನ್ವಾಹ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಏಷಾಮೇವ ಲೋಕಾನಾಮಭಿಜಿತ್ಯೈ ॥**

ಭಾಗತ್ರಯೇ ದೇವತಾತ್ರಯಂ ವಿಧತ್ತೇ । ಅಗ್ನಿರುಷಾಶ್ವಿನಾವಿತಿ ದೇವತಾತ್ರಯಂ। ಯಥಾ ಗುಣತ್ರಯಮೇಲನರೂಪಾ ರಜ್ಜುಸ್ತ್ರಿವೃದೇವಮೇತೇ ಪೃಥಿವ್ಯಂತರಿಕ್ಷದ್ಯುಲೋಕಾಃ ಪರಸ್ಪರಮಿಲಿತಾಸ್ತ್ರಿವೃತಃ । ಯದ್ವೈಕೈಕಸ್ಮಿಂಲ್ಲೋಕೇ ಸತ್ವರಜಸ್ತಮೋಗುಣಭೇದೇನಾಸ್ಯೋತ್ತಮಮಧ್ಯಮಾಧಮರೂಪತ್ವಾತ್ಪ್ರತ್ಯೇಕಂ ತ್ರಿವೃತ್ತ್ವಮತೋ ದೇವತಾ ತ್ರಿಸಂಖ್ಯಾ ಲೋಕತ್ರಯಜಯಾಯ ಭವತಿ ।

ಈ ಪ್ರಾತರನುವಾಕಮಂತ್ರಗಳಲ್ಲಿ ಒಟ್ಟು ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳು ಎಂಬ ಮೂರು ದೇವತೆಗಳನ್ನು ಸ್ತುತಿಸಲಾಗಿದೆ. ಏತಕ್ಕೆಂದರೆ—ಗುಣತ್ರಯದಿಂದ ಕೂಡಿದ ಪೃಥಿವಿ, ಅಂತರಿಕ್ಷ, ದ್ಯುಲೋಕಗಳೆಂಬ ಮುಖ್ಯಲೋಕಗಳ ಸಂಖ್ಯೆಯು ಮೂರು; ಉತ್ತಮ, ಮಧ್ಯಮ, ಅಧಮ ಗುಣಗಳ ಸಂಬಂಧವಿರುವ ಎಂದರೆ ಸತ್ವರಜಸ್ತಮೋಗುಣಾತ್ಮಕವಾದ

ಈ ಮೂರುಲೋಕಗಳು ಪರಸ್ಪರ ಮಿಲಿತವಾಗಿವೆ ಎಂದರೆ ಒಂದಕ್ಕೊಂದು ಸಂಬಂಧಪಟ್ಟಿವೆ. ಈ ಕಾರಣಗಳಿಂದಲೂ ಈ ಮೂರು ಲೋಕಗಳ ಪ್ರಾಪ್ತಿಗೋಸ್ಕರವಾಗಿಯೂ ಮೂರು (ಸಂಖ್ಯೆಯ) ದೇವತೆಗಳನ್ನು ಇಲ್ಲಿ ಸ್ತುತಿಸಲಾಗಿದೆ.

*English Translation*

He who wishes for long life, should repeat a hunderd verse· For the full life of a man is a hundred years; he has besidesp a hundred powers, and a hundred senses· (By repeating one hundred verses) the priest secures to the sacrificer his full age, his (mental and bodily powers, and his senses·

He who wishes for performing successfully the subsequent great sacrifices, should repeat 360 verses· For the year consists of 360 days; such a year is meant here. The year is Prajapati· Prajapati is the sacrifice. The intelligent Hotar who recites 360 verses turns in this way the sacrifice regarded as a divine being, the mediator between Gods and men towards the sacrificer·

He who wishes for children and cattle should repeat 720 verses. For so many days and nights make year (one of 360 days) Prajapati is the year· For after he is produced (prajayamana), the whole universe is produced (prajayate)· He who has such a knowledge, obtains, if being born after Prajapati (by means of the sacrifice) chilbren and cattle·

If any one who is not recognized as a Brahman, or one who has a bad reputation on account of being charged with crimes, should bring a sacrifice, then 800 verses should be repeated. The Gayatri consits of eight syllables (three times eight). The Gods being of the nature of the Gayatri, removed the evil consequences of sin and crime. He who has such a knowledge, removes the evil conseqnences of sin and crime from himself by means of the Gayatri.

He who wishes for heaven should repeat a thousand verses. For the heavenly world is at a distance of about 1000 days' travelling on horseback from here (this earth)· (To repeat a thousand verses, is done) for reaching the heavenly world everywhere. (He who then wishes) for acquisition of things to be enjoyed and of communion with the Gods, should recite an unlimited number of verses. For Prajapati is boundless. To Prajapati belongs the recitation which makes up the Prataranuvaka. Therein are all desires contained. When he repeats an unlimited number (it is done) to obtain fulfilment of all desires· He who has such a knowledge obtains fulfilment of all wishes.

Thence one should repeat an unlimited number of verses. He repeats verses of seven kinds of metres for Agni, for there are seven worlds of the Gods.

He who has such a knowledge becomes succesful in all of them. He repeats verses of seven kinds of metres for Ushas; for there are seven kinds of cattle in villages. He who has such a knowledge, obtains these seven kinds of cattle in the villages.

He vepeats seven kinds of verses for tha Asvins; for speech spoke in seven (different tones). In as many tones (i. e. seven) then spoke speech (in all made men.) (These seven tones are made) for comprising the whole speech (the wordly talk and singing), the whole Brahma. He repeats verses for three deities; for three worlds are three-fold. (This repetition therefore severs) for conquering (all) these worlds of the Gods.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಏಳನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು



## ಅಥ ಸಪ್ತಮಾಧ್ಯಾಯೇ ಅಷ್ಟಮಃ ಖಂಡಃ

### ಏಳನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



**ತದಾಹುಃ ಕಥಮನೂಚ್ಯಃ ಪ್ರಾತರನುವಾಕ ಇತಿ । ಯಥಾ ಛಂದಸಮನೂಚ್ಯಃ ಪ್ರಾತರನುವಾಕಃ ಪ್ರಜಾಪತೇರ್ವಾ ಏತಾನ್ಯಂಗಾನಿ ಯಚ್ಛಂದಾಂಸ್ಯೇಷ ಉ ಏವ ಪ್ರಜಾಪತಿರ್ಯೋ ಯಜತೇ ತದ್ಯಜಮಾನಾಯ ಹಿತಂ ॥**

ಅಥ ತಸ್ಯ ಪ್ರಾತರನುವಾಕಸ್ಯಾನುವಚನಪ್ರಕಾರವಿಶೇಷಂ ನಿರ್ಣೇತುಂ ಪ್ರಶ್ನಮವತಾರಯತಿ । ಕಿಮೇಕೈಕಸ್ಮಿನ್ಭಾಗೇ ಗಾಯತ್ರ್ಯಾದೀನಿ ಛಂದಾಂಸ್ಯನುಕ್ರಮೇಣೈವಾನುವಕ್ತವ್ಯಾನಿ ಆಹೋಸ್ವಿದನ್ಯಥೇತ್ಯೇಕಃ ಸಂಶಯಃ । ಅನುಕ್ರಮಪಕ್ಷೇಽಪಿ ಕಿಂ ಪಾದೇ ಪಾದೇಽವಸಾನಂ ಕೃತ್ವಾನುವಚನೀಯಂ, ಆಹೋಸ್ವಿತ್ತತ್ತದರ್ಧೇಽವಸಾನಂ ಕೃತ್ವೇತಿ ದ್ವಿತೀಯಃ ಸಂಶಯಃ । ತತ್ರ ಪ್ರಶ್ನೋತ್ತರಮಾಹ । ಅನುಕ್ರಮೇಣಾವಸ್ಥಿತಾನಿ ಗಾಯತ್ರ್ಯಾದೀನಿ ಛಂದಾಂಸ್ಯನತಿಕ್ರ-

ನ್ಯೇತಿ ಯಥಾಛಂದಸಂ ಛಂದಃಕ್ರಮೇಣೈವಾಯಮನುವಚನೀಯಶ್ಛಂದಸಾಂ ಪ್ರಜಾಪತಿ-ಸೃಷ್ಟತ್ವೇನ ತದವಯವತ್ವಾತ್ । ಯಜಮಾನಸ್ಯ ಚ ಪ್ರಜಾಪತಿಪದಪ್ರಾಪ್ತಿಯೋಗ್ಯತ್ವೇನ ಪ್ರಜಾಪತಿರೂಪತ್ವಾತ್ತದಂಗರೂಪಚ್ಛಂದಸಾಂ ಕ್ರಮೇಣಾನುವಚನಂ ಯಜಮಾನಾಯಾವ-ಯವವಿಪರ್ಯಾಸರಾಹಿತ್ಯೇನ ಹಿತಂ ಭವತಿ । ತಸ್ಮಾಚ್ಛಂದಃಕ್ರಮೇಣೈವಾನುವಕ್ತವ್ಯಂ ।

ಪ್ರಾತರನುವಾಕಮಂತ್ರಗಳನ್ನು ಪಠಿಸುವ ಕ್ರಮವು ಹೇಗೆ ಎಂಬ ವಿಷಯದಲ್ಲಿ ಪ್ರಶ್ನೋತ್ತರರೂಪದಲ್ಲಿ ವಿವರಣೆಯನ್ನು ತಿಳಿಸುವರು. ಕೆಲವರು ಹೀಗೆ ಹೇಳುತ್ತಾರೆ—ಪ್ರತಿಯೊಂದು ಭಾಗದಲ್ಲಿಯೂ (ಆಗ್ನೇಯಕ್ರತು ಇತ್ಯಾದಿ) ಗಾಯತ್ರ್ಯಾದಿ ಛಂದಸ್ಸಿನ ಮಂತ್ರಗಳನ್ನು ಛಂದಸ್ಸಿನ ಕ್ರಮಾನುಸಾರವಾಗಿ ಎಂದರೆ ಗಾಯತ್ರೀಛಂದಸ್ಸಿನ ಮಂತ್ರಗಳು ಮುಗಿದಮೇಲೆ ಬೇರೆ ಛಂದಸ್ಸುಗಳು, ಅದಾದಮೇಲೆ ಮುಂದಿನ ಛಂದಸ್ಸುಗಳು ಇತ್ಯಾದಿ ಕ್ರಮವನ್ನನುಸರಿಸಿ ಪಠಿಸಬೇಕೇ ಅಥವಾ ಬೇರೆ ಯಾವುದಾದರೂ ಕ್ರಮವನ್ನನುಸರಿಸಬೇಕೆ? ಎಂಬುದು ಮೊದಲನೆಯ ಸಂಶಯವು. ಇದಲ್ಲದೆ ಛಂದೋಽನುಕ್ರಮವಾಗಿ ಹೇಳಿದರೂ ಪ್ರತಿಮಂತ್ರವನ್ನೂ ಪಾದಪಾದಕ್ಕೆ ನಿಲ್ಲಿಸಿ ಹೇಳಬೇಕೆ? ಎಂಬುದು ಎರಡನೆಯ ಸಂಶಯವು. ಇದಕ್ಕೆ ಉತ್ತರವನ್ನು ಹೇಳುತ್ತಾರೆ ಮಂತ್ರಗಳನ್ನು ಛಂದೋಽನುಕ್ರಮವಾಗಿ ಹೇಳಬೇಕು. ಎಂದರೆ ಮೊದಲು ಗಾಯತ್ರೀಛಂದಸ್ಸಿನ ಮಂತ್ರಗಳನ್ನು ಹೇಳಿ ಮುಗಿಸಿ ಅನಂತರ ಬೇರೆ ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕು. ಈ ಕ್ರಮವನ್ನು ಬಿಟ್ಟು ಬೇರೆ ಕ್ರಮವನ್ನು ಅನುಸರಿಸಬಾರದು. ಛಂದಸ್ಸುಗಳು ಪ್ರಜಾಪತಿಯ ಅಂಗಗಳ ಸ್ವರೂಪವಾಗಿರುವವು. ಯಜ್ಞಮಾಡುವ ಯಜಮಾನನೂ ಸಹ ಪ್ರಜಾಪತಿಸ್ಥಾನ ಪ್ರಾಪ್ತಿಗಾಗಿ ಯಜ್ಞಾದಿಕರ್ಮಗಳನ್ನು ಮಾಡುವುದರಿಂದ ಮೇಲೆ ಹೇಳದ ಕ್ರಮವನ್ನೇ ಅನುಸರಿಸಿ ಪಠಿಸಬೇಕು ಯಜಮಾನನಿಗೂ ಈ ಕ್ರಮವೇ ಅನ್ವಯಿಸುವುದು. ಇದರಿಂದ ಯಜಮಾನನಿಗೂ ಹಿತವುಂಟಾಗುವುದು. ಛಂದಸ್ಸುಗಳು ಪ್ರಜಾಪತಿಯ ಅಂಗಗಳು ಎಂಬ ವಿಚಾರದಲ್ಲಿ ಈರೀತಿ ಹೇಳಿರುವುದು—**ತಸ್ಯೋಷ್ಣಿಕ್ ಲೋಮಾನಿ ತ್ವಕ್ ಗಾಯತ್ರೀ ತ್ರಿಷ್ಟುಪ್ ಮಾಂಸಮನುಷ್ಟುಪ್ ಸ್ನಾವಾನ್ಯಸ್ಥಿ ಜಗತೀ ಪಂಕ್ತಿರ್ಮಜ್ಜಾ ಪ್ರಾಣೋ ಬೃಹತೀ ಸ ಛಂದೋಭಿಶ್ಛನ್ನೋ ಯಚ್ಛಂದೋಭಿಶ್ಛನ್ನಸ್ತಸ್ಮಾಚ್ಛಂದಸೀತ್ಯಾ ಚಕ್ಷತೇ** (ಐತರೇಯಾರಣ್ಯಕ. ೨-೧-೬) ಎಂದರೆ ಉಷ್ಣಿಕ್-ಪ್ರಜಾಪತಿಯ ಲೋಮಗಳು (ಕೂದಲುಗಳು); ತ್ವಕ್-ಗಾಯತ್ರೀಛಂದಸ್ಸೇ ಪ್ರಜಾಪತಿಯ ಚರ್ಮವು; ತ್ರಿಷ್ಟುಪ್‌ಛಂದಸ್ಸು-ಮಾಂಸವು; ಅನುಷ್ಟುಪ್‌ಛಂದಸ್ಸು-ಸ್ನಾಯುಗಳು; ಜಗತೀಛಂದಸ್ಸು-ಮೂಳೆಗಳು; ಪಂಕ್ತಿಛಂದಸ್ಸು-ಮಜ್ಜಾ; ಬೃಹತೀಛಂದಸ್ಸು-ಪ್ರಾಣವು; ಈ ವಿಧದಾದ ಅವಯವಗಳಿಂದ ಪ್ರಜಾಪತಿಯ ಶರೀರವು ಆಚ್ಛಾದಿತವಾಗಿರುವುದು ಎಂದು ಐತರೇಯಾರಣ್ಯಕದ ವಾಕ್ಯವಿರುವುದು.

**ಪಚ್ಛೋಽನೂಚ್ಯಃ ಪ್ರಾತರನುವಾಕಶ್ಚತುಷ್ಪಾದಾ ವೈ ಪಶವಃ ಪಶೂ-ನಾಮವರುದ್ಧ್ಯೈ । ಅರ್ಧರ್ಚಶ ಏವಾನೂಚ್ಯೋ ಯಥೈವೈನ ಮೇತದನ್ವಾಹ ಪ್ರತಿಷ್ಠಾಯಾ ಏವ ದ್ವಿಪ್ರತಿಷ್ಠೋ ವೈ ಪುರುಷ-ಶ್ಚತುಷ್ಪಾದಾಃ ಪಶವೋ ಯಜಮಾನಮೇವ ತದ್ದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ತಸ್ಮಾದರ್ಧರ್ಚಶ ಏವಾನೂಚ್ಯಃ ॥**

ದ್ವಿತೀಯವಿಚಾರೇ ಪೂರ್ವಪಕ್ಷಮಾಹ । ಪಚ್ಛ ಏಕೈಕಸ್ಮಿನ್ಪಾದೇಽವಸಾಯೇತ್ಯರ್ಥಃ । ಸಿದ್ಧಾಂತಮಾಹ । ಅರ್ಧರ್ಚಶ ಏಕೈಕಸ್ಮಿನ್ನೃಚೋಽರ್ಧೇಽವಸಾಯಾವಸಾಯ ಪ್ರಾತರನು-

ವಾಕೋಽನೂಚ್ಯಃ । ಏವಕಾರಃ ಪೂರ್ವಪಕ್ಷವ್ಯಾವೃತ್ತ್ಯರ್ಥಃ । ಯಥೈವೇತ್ಯಾದಿನಾರ್ಧರ್ಚಶ-ಇತ್ಯೇತದೇವ ಸ್ಪಷ್ಟೀಕ್ರಿಯತೇ । ಏನಮರ್ಥಂ ಯಯೈವ ಯೇನೈವ ಪ್ರಕಾರೇಣೈತದಸ್ಯಾಧ್ಯಯನಕಾಲೀನಂ ಗುರೂಚ್ಚಾರಣಮನು ಯಥಾಧ್ಯಯನಕಾಲೇ ಪ್ರತ್ಯರ್ಧಮವಸಾಯಾಹ ಪಠತಿ ತಥೈವ ಪ್ರಾತರನುವಾಕಾನುಷ್ಠಾನಕಾಲೇಽಪಿ । ನ ತ್ವತ್ರ ಋಗಂತೇ ಪ್ರಣವಪ್ರಕ್ಷೇಪಾದಿವತ್ಕಿಂಚಿನ್ನೂತನಂ ಕರ್ತವ್ಯಮಸ್ತಿ । ತದೇತದರ್ಧರ್ಚಶೋಽನುವಚನಂ ಪ್ರತಿಷ್ಠಾಯಾ ಏವ ಯಜಮಾನಸ್ಯ ಪ್ರತಿಷ್ಠಾರ್ಥಮೇವ ಭವತಿ । ತತ್ಕಥಮಿತಿ ತದೇವೋಚ್ಯತೇ । ಯಥೈಕಸ್ಯಾ ಋಚೋ ದ್ವೇ ಅರ್ಧರ್ಚೇ ಏವಂ ಪುರುಷೋ ದ್ವಿಪ್ರತಿಷ್ಠಃ ಪ್ರತಿತಿಷ್ಠತಿ ಸ್ಥೈರ್ಯೇಣಾವಸ್ಥಿತೋ ಭವತ್ಯಾಭ್ಯಾಂ ಪಾದಾಭ್ಯಾಮಿತಿ ಪ್ರತಿಷ್ಠೇ ದ್ವೇ ಪಾದೌ ಪ್ರತಿಷ್ಠೇ ಯಸ್ಯಾಸೌ ದ್ವಿಪ್ರತಿಷ್ಠಃ । ಪಶೂನಾಂ ಚತ್ವಾರಃ ಪಾದಃ । ತಥಾ ಸತಿ ಪಾದಚತುಷ್ಟಯೋಪೇತಾಸ್ವೃಕ್ಷು ದ್ವಾಭ್ಯಾಮರ್ಧಾಭ್ಯಾಮವಸಾನಯುಕ್ತಾಭ್ಯಾಮನುವಚನೇ ಕೃತೇ ಸತಿ ದ್ವಿಪ್ರತಿಷ್ಠಂ ದ್ವಿಪಾದಂ ಯಜಮಾನಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ । ತಸ್ಮಾದರ್ಧರ್ಚಶ ಏವಾನುವಚನಂ ಯುಕ್ತಂ ॥

ಈಗ ಎರಡನೆಯ ಸಂಶಯಕ್ಕೆ ಪರಿಹಾರವನ್ನು ತಿಳಿಸುವರು. ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಪ್ರತಿ ಋಕ್ಕನ್ನೂ ಪಾದ ಪಾದವಾಗಿ ನಿಲ್ಲಿಸಿ ಪಠಿಸಬೇಕು. ಪಶುಗಳಿಗೆ ನಾಲ್ಕು ಪಾದಗಳಿರುವವು. ಆದ್ದರಿಂದ ಪಶುಗಳ ಪ್ರಾಪ್ತಿಗಾಗಿ ಪ್ರಾತರನುವಾಕಮಂತ್ರಗಳ ಋಕ್ಕುಗಳನ್ನು ಪಾದಪಾದಕ್ಕೆ ನಿಲ್ಲಿಸಿ ಹೇಳಬೇಕು. ಈ ವಿಷಯವಲ್ಲಿ ಕೊನೆಯ ಸಿದ್ಧಾಂತವನ್ನು ಹೇಳುವರು. ಋಕ್ಕುಗಳನ್ನು ಅರ್ಧಋಕ್ಕುಗಳಿಗೆ ನಿಲ್ಲಿಸಿ ಪಠಿಸಬೇಕು. ಹೇಗೆಂದರೆ ಅಧ್ಯಯನಕಾಲದಲ್ಲಿ ಗುರುಗಳು ಹೇಳಿದ್ದನ್ನು ಶಿಷ್ಯನು ಯಾವರೀತಿ ಪುನಃ ಉಚ್ಚರಿಸುತ್ತಾನೆಯೋ ಆರೀತಿ ಪಠಿಸಬೇಕು. ಶಿಷ್ಯನ ಅನುಕೂಲಕ್ಕಾಗಿ ಒಂದು ಋಕ್ಕಿನಲ್ಲಿ ಅರ್ಧಭಾಗವನ್ನು ಮಾತ್ರ ಗುರುವು ಹೇಳಿಕೊಡುವನು. ಅಷ್ಟನ್ನೇ ಶಿಷ್ಯನು ಪುನಃ ಉಚ್ಚರಿಸುವನು. ಅದರಂತೆ ಇಲ್ಲಿಯೂ ಅರ್ಧಾರ್ಧ ಋಕ್ಕುಗಳನ್ನೇ ನಿಲ್ಲಿಸಿ ನಿಲ್ಲಿಸಿ ಪಠಿಸಬೇಕು. ಈರೀತಿ ಪಠಿಸುವಾಗ ಋಕ್ಕುಗಳ ಕೊನೆಯಲ್ಲಿ ಓಂ ಎಂಬ ಪ್ರಣವ ಅಕ್ಷರವನ್ನು ಸೇರಿಸಿ ಪಠಿಸಬೇಕಾಗಿರುವುದಿಲ್ಲ. ಈರೀತಿ ಅರ್ಧಾರ್ಧ ಋಕ್ಕುಗಳನ್ನು ಪಠಿಸಿದರೆ ಯಜ್ಞಮಾಡುವ ಯಜಮಾನನಿಗೆ ಪ್ರತಿಷ್ಠೆಯು (ಜನರಲ್ಲಿ ಗಣ್ಯತೆಯು) ಲಭಿಸುವುದು. ಹೇಗೆಂದರೆ---ಪ್ರತಿ ಋಕ್ಕಿನಲ್ಲಿಯೂ ಎರಡು ಅರ್ಧ ಋಕ್ಕುಗಳಿರುವವು. ಎರಡು ಅರ್ಧ ಋಕ್ಕುಗಳನ್ನು ಪ್ರತ್ಯೇಕವಾಗಿ ಪಠಿಸುವುದರಿಂದ ಯಜಮಾನನಿಗೆ ಎರಡುವಿಧ ಪ್ರತಿಷ್ಠೆಯು ಲಭಿಸುವುದು. ಒಂದು ಋಕ್ಕಿನಲ್ಲಿ ನಾಲ್ಕು ಪಾದಗಳಿರುವವು. ಪಶುಗಳಿಗೂ ನಾಲ್ಕುಪಾದಗಳಿರುವವು. ಹೀಗಿರುವಾಗ ನಾಲ್ಕು ಪಾದಗಳುಳ್ಳ ಋಕ್ಕುಗಳನ್ನು ಎರಡು ಅರ್ಧ ಋಕ್ಕುಗಳನ್ನಾಗಿ ಪಠಿಸಿದರೆ ನಾಲ್ಕು ಪಾದಗಳುಳ್ಳ ಪಶುಗಳಿಗೆ ಎರಡು ಪಾದಗಳುಳ್ಳ ಯಜಮಾನನು ಅಧಿಪತಿಯಾಗಿ ಎಂದರೆ ಪಶುಗಳ ವಿಷಯದಲ್ಲಿ ಯಜಮಾನನು ಸಮೃದ್ಧಿಯನ್ನು ಪಡೆಯುವನು ಎಂದಭಿಪ್ರಾಯವು. ಆದ್ದರಿಂದ ಪ್ರಾತರನುವಾಕಮಂತ್ರಗಳನ್ನು ಪಠಿಸುವಾಗ ಅರ್ಧ ಋಕ್ಕುಗಳಿಗೆ ನಿಲ್ಲಿಸಿ ಪಠಿಸಬೇಕು.

**ತದಾಹುರ್ಯದ್ವ್ಯೂಳ್ಹಃ ಕಥಮವ್ಯೂಳ್ಹೋ ಭವತೀತಿ ಯದೇವಾಸ್ಯ ಬೃಹತೀ ಮಧ್ಯಾನ್ನೈತೀತಿ ಬ್ರೂಯಾತ್ತೇನೇತಿ ।**

ತತ್ರ ಪ್ರಾತರನುವಾಕಕ್ರಮಮಾಕ್ಷಿಪ್ಯ ಸಮಾಧತ್ತೇ । ಛಂದಸಾಂ ಯೋಽಯಮನುಕ್ರಮಃ ಸೋಽಯಮನುಕ್ರಮಣಿಕಾಕಾರೇಣ ದರ್ಶಿತಃ । ಅಥ ಛಂದಾಂಸಿ ಗಾಯತ್ರ್ಯುಷ್ಣಿಗನುಷ್ಟುಬ್ಬೃಹತೀಪಂಕ್ತಿ ತ್ರಿಷ್ಟುಪ್ ಜಗತ್ಯತಿಜಗತೀ ಶಕ್ವರ್ಯತಿ ಶಕ್ವರ್ಯಷ್ಟ್ಯತ್ಯಷ್ಟೀ ಧೃತ್ಯತಿ-

ಧೃತಯಶ್ಚತುರ್ವಿಂಶತ್ಯಕ್ಷರಾದೀನಿ ಚತುರುತ್ತರಾಣಿ ಇತಿ । ಚತುರ್ವಿಂಶತ್ಯಕ್ಷರೋಪೇತಾಂ ಗಾಯತ್ರೀಮಾರಭ್ಯೋತ್ತರೋತ್ತರಂ ಛಂದಶ್ಚತುರ್ಭಿಶ್ಚತುರ್ಭಿರಕ್ಷರೈರಧಿಕಮಿತ್ಯರ್ಥಃ । ತಮೇತಂ ಛಂದಸಾಂ ಕ್ರಮಂ ವಿಪರ್ಯಸ್ಯ ಪ್ರಾತರನುವಾಕೇ ಕ್ರಮಾಂತರಮೂಹಿತಂ ಗಾಯತ್ರ್ಯನುಷ್ಟುಪ್ ತ್ರಿಷ್ಟುಬ್ಬೃಹತ್ಯುಷ್ಣಿಗ್ಜಗತೀ ಪಂಕ್ತಿರಿತಿ । ಸೋಽಯಂ ಕ್ರಮೋಽಸ್ಮಾಭಿರಾಶ್ವಲಾಯನೋಕ್ತ ಕ್ರಮೇಣ ಪೂರ್ವಮೇವೋದಾಹೃತಃ । ತಸ್ಮಾತ್ಪ್ರಾತರನುವಾಕೋಕ್ತಕ್ರಮಸ್ಯ ವಿಪರ್ಯಯೇಣೋಹನಾದಯಂ ವ್ಯೂಢಃ ಸಂಪನ್ನಃ । ಸೋಽಯಮನುಚಿತಃ । ತಸ್ಮಾತ್ಕಥಮವ್ಯೂಳ್ಹೋ ಭವತೀತಿ ಪ್ರಶ್ನ ಆಕ್ಷೇಪೇ ವಾ ಯದೇವೇತ್ಯಾದಿಕಮುತ್ತರಂ ಯಸ್ಮಾದೇವ ಕಾರಣಾಚ್ಛಂದಃಕ್ರಮೋಽನುಷ್ಠಾನಕ್ರಮೋ ವಾಸ್ಯ ಪ್ರಾತರನುವಾಕಸ್ಯ ಮಧ್ಯಾದ್ಬೃಹತೀಛಂದೋ ನೈತಿ ನಾಪಗಚ್ಛತೀತ್ಯುತ್ತರಮಭಿಜ್ಞೋ ಬ್ರೂಯಾತ್ತೇನ ಕಾರಣೇನಾಯಮವ್ಯೂಳ್ಹಃ ಸಂಪನ್ನ ಇತ್ಯವಗಂತವ್ಯಂ ॥

ಈಗ ಪ್ರಾತರನುವಾಕಮಂತ್ರಗಳಲ್ಲಿ ಪಠಿಸುವ ಛಂದಸ್ಸುಗಳ ಕ್ರಮವನ್ನು ವಿವರಿಸಲಾಗುವುದು. ಮೂಲವಾಕ್ಯದಲ್ಲಿ ಪ್ರೌಷ್ಠವೆಂದರೆ ಹಿಂದಿನ ಋಕ್ಕಿನಲ್ಲಿ ಹೇಳಿರುವ ಅಕ್ಷರಸಂಖ್ಯೆಗಿಂತ ಹೆಚ್ಚು ಅಕ್ಷರಗಳಿರುವುದು ಎಂದು. ಈ ಛಂದಸ್ಸುಗಳ ಕ್ರಮವನ್ನು ಅನುಕ್ರಮಣಿಕಾಕಾರರು ಈರೀತಿ ಹೇಳಿರುವರು— **ಅಥ ಛಂದಾಂಸಿ ಗಾಯತ್ರ್ಯುಷ್ಣಿಗನುಷ್ಟುಪ್ ಬೃಹತೀ ಪಂಕ್ತಿ ತ್ರಿಷ್ಟುಬ್ಜಗತ್ಯತಿಜಗತೀ ಶಕ್ವರ್ಯತಿಶಕ್ವರ್ಯಷ್ಟ್ಯತ್ಯಷ್ಟಿಧೃತ್ಯತಿಧೃತಯಶ್ಚತುರ್ವಿಂಶತ್ಯಕ್ಷರಾದೀನಿ ಚತುರುತ್ತರಾಣಿ** ಇತಿ (ಕಾತ್ಯಾಯನಸೂ. ಛಂದೋಽನುಕ್ರಮಣಿಕಾ. ಅ. ೧-೧) ಎಂದರೆ ಛಂದಸ್ಸುಗಳಲ್ಲಿ ಗಾಯತ್ರೀ, ಉಷ್ಣಿಕ್ ಅನುಷ್ಟುಪ್ ಬೃಹತೀ ಪಂಕ್ತಿ ತ್ರಿಷ್ಟುಪ್ ಜಗತೀ, ಅತಿಜಗತಿ, ಶಕ್ವರೀ, ಅತಿಶಕ್ವರೀ ಅಷ್ಟಿ, ಅತ್ಯಷ್ಟಿ, ಧೃತಿ ಅತಿಧೃತಿ ಎಂಬ ಹೆಸರಿನ ಛಂದಸ್ಸುಗಳಿರುವವು. ಇವುಗಳಲ್ಲಿ ಗಾಯತ್ರೀಛಂದಸ್ಸಿಗೆ ೨೪ ಅಕ್ಷರಗಳಿರುವವು. ಅಲ್ಲಿಂದ ಮುಂದಕ್ಕೆ ಕ್ರಮವಾಗಿ ಪ್ರತಿಛಂದಸ್ಸಿಗೂ ನಾಲ್ಕು ಅಕ್ಷರಗಳಂತೆ ಹೆಚ್ಚುತ್ತಾಹೋಗುವವು ಎಂದಿದಾರೆ. ಈ ಕ್ರಮವನ್ನನುಸರಿಸಿ ಪ್ರಾತರನುವಾಕಮಂತ್ರ ಪಠನದಲ್ಲಿ ೨೪ ಅಕ್ಷರಗಳುಳ್ಳ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಪ್ರಾರಂಭಮಾಡಿ ಅಲ್ಲಿಂದ ಮುಂದಕ್ಕೆ ಕ್ರಮಕ್ರಮವಾಗಿ ಹೆಚ್ಚು ಸಂಖ್ಯೆಯ ಅಕ್ಷರಗಳುಳ್ಳ ಛಂದಸ್ಸಿನ ಮಂತ್ರಗಳನ್ನು ಪಠಿಸಬೇಕು. ಹೇಗೆಂದರೆ—ಗಾಯತ್ರಿ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿ ಎಂಬ ಛಂದಸ್ಸುಗಳನ್ನು ಒಂದಾದನಂತರ ಮುಂದಿನ ಛಂದಸ್ಸುಗಳನ್ನು ಪಠಿಸಬೇಕು. ಛಂದೋಽನುಕ್ರಮಣಿಯ ಸೂತ್ರಕಾರರ ಮತಕ್ಕೂ ಇಲ್ಲಿ ಹೇಳಿರುವ ಕ್ರಮಕ್ಕೂ ವ್ಯತ್ಯಾಸವಿರುವುದು. ಛಂದೋಽನುಕ್ರಮಣಿಯಂತೆ—

> ಗಾಯತ್ರ್ಯುಷ್ಣಿಗನುಷ್ಟುಪ್ ಬೃಹತೀ ಪಂಕ್ತಿರೇವ ಚ ।
> ತ್ರಿಷ್ಟುಪ್ ಚ ಜಗತೀತ್ಯೇವಂ ಸ್ವಕ್ರಮಶ್ಚತುರುತ್ತರಃ ।
> ಛಂದಸಾಮತ್ರ ತು ಪುನರ್ವ್ಯೂಳ್ಹೋ ವ್ಯುತ್ಕ್ರಮತಃ ಖಲು ।

ಈ ಕ್ರಮದ ಪ್ರಕಾರ ಗಾಯತ್ರೀ ಛಂದಸ್ಸಿನ ಅನಂತರ ಉಷ್ಣಿಕ್ ಆಗುವುದಿಲ್ಲ. ಅನುಷ್ಟುಪ್ ಬರಬೇಕಾಗುವುದು. ಆದ್ದರಿಂದ ಸರಿಯಾದ ಕ್ರಮವು ಯಾವುದೆಂದರೆ—

> ಗಾಯತ್ರ್ಯನುಷ್ಟುಪ್ ಚ ಬೃಹತೀ ಚೋಷ್ಣಿಗೇವ ಚ ।
> ಜಗತೀ ಪಂಕ್ತಿರಿತ್ಯತ್ರ ಭವೇದವ್ಯೂಳ್ಹತಾಕ್ರಮಂ ॥

ಎಂದರೆ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್, ಬೃಹತೀ, ಉಷ್ಣಿಕ್, ಜಗತೀ ಪಂಕ್ತಿ ಎಂಬಿವೇ ಆ ಏಳು ಛಂದಸ್ಸುಗಳು. ಈ ವಿಷಯವನ್ನು ಆಶ್ವಲಾಯನರು ಹಿಂದೆಯೇ ಹೇಳಿರುವರು. ಮೇಲೆ ಹೇಳಿದ ಗಾಯತ್ರ್ಯಾದಿ ಏಳು ಛಂದಸ್ಸುಗಳಲ್ಲಿ ಗಾಯತ್ರೀ, ಅನುಷ್ಟುಪ್, ತ್ರಿಷ್ಟುಪ್ ಬೃಹತೀ ಎಂಬ ಮೊದಲಿನ ನಾಲ್ಕು ಛಂದಸ್ಸುಗಳು ಒಂದಕ್ಕಿಂತ ಮುಂದಿನದು ಕ್ರಮವಾಗಿ ನಾಲ್ಕು ಅಕ್ಷರಗಳಷ್ಟು ಅಧಿಕವಾಗಿರುವುದು. ಇದನ್ನೇ ವ್ಯೂಳ್ಹವೆಂದು ಹೇಳುವರು. ಆದರೆ ಈ ಕ್ರಮವು ಅವ್ಯೂಳ್ಹವೂ ಆಗಿರುವುದೆಂದು ಹೇಳಲಾಗಿದೆ. ಹೇಗೆಂದರೆ, ಈ ಏಳು ಛಂದಸ್ಸುಗಳಲ್ಲಿ ಬೃಹತೀಛಂದಸ್ಸು ಮಧ್ಯದಲ್ಲಿದೆ. ಅಲ್ಲಿಂದ ಮುಂದಕ್ಕಿರುವ ಉಷ್ಣಿಕ್ ಛಂದಸ್ಸಿನ ಅಕ್ಷರಗಳು ಬೃಹತೀಛಂದಸ್ಸಿಗಿಂತ ನಾಲ್ಕು ಅಕ್ಷರ ಅಧಿಕವಾಗಿಲ್ಲ. ಆದರೆ ಉಷ್ಣಿಕ್ ಜಗತೀ ಪಂಕ್ತಿ ಎಂಬ ಈ ಮೂರು ಛಂದಸ್ಸುಗಳೂ ಒಂದಕ್ಕಿಂತ ಮುಂದಿನದು ನಾಲ್ಕು ಅಕ್ಷರಗಳಷ್ಟು ಅಧಿಕವಾಗಿವೆ. ಎಂದರೆ ಏಳು ಛಂದಸ್ಸುಗಳಲ್ಲಿ ಮಧ್ಯದಲ್ಲಿರುವ ಬೃಹತೀಛಂದಸ್ಸಿನ ಪೂರ್ವಭಾಗದಲ್ಲಿ ಇರುವ ಗಾಯತ್ರ್ಯಾದಿಛಂದಸ್ಸುಗಳು ನಾಲ್ಕು ಅಕ್ಷರದಂತೆ ಅಧಿಕಾಕ್ಷರವುಳ್ಳವು. ಮಧ್ಯದಲ್ಲಿರುವ ಛಂದಸ್ಸಾದ ಬೃಹತೀ ಅದನಂತರ ಉಷ್ಣಿಕ್ ಮೊದಲಾದ ಕೊನೆಯ ಮೂರು ಛಂದಸ್ಸುಗಳು ಬೃಹತೀ ಛಂದಸ್ಸಿನಿಂದ ಮುಂದುವರೆಯದೆ ಉಷ್ಣಿಕ್‌ಛಂದಸ್ಸಿನಿಂದಲೇ ಪ್ರತ್ಯೇಕವಾಗಿ ನಾಲ್ಕು ಅಕ್ಷರಗಳಂತೆ ಅಧಿಕಸಂಖ್ಯೆಯಲ್ಲಿರುವವು. ಈ ಕ್ರಮವು ಅವ್ಯೂಳ್ಹವೆನಿಸುವುದು. ಆದ್ದರಿಂದ ಈ ಛಂದಸ್ಸುಗಳ ಕ್ರಮದಿಂದ ಪ್ರಾತರನುವಾಕಮಂತ್ರಗಳನ್ನು ಪಠಿಸುವುದು ವ್ಯೂಳ್ಹ ಮತ್ತು ಅವ್ಯೂಳ್ಹ ಎಂಬ ಎರಡು ಕ್ರಮಗಳಿಗೂ ಹೊಂದಿಕೊಂಡಿರುವುದು ಎಂದು ತಿಳಿಯಬೇಕು.

ಆಹುತಿಭಾಗಾ ವಾ ಅನ್ಯಾ ದೇವತಾ ಅನ್ಯಾಃ ಸ್ತೋಮಭಾಗಾಶ್ಛಂದೋಭಾಗಾಸ್ತಾ ಯಾ ಅಗ್ನಾವಾಹುತಯೋ ಹೂಯಂತೇ ತಾಭಿರಾಹುತಿಭಾಗಾಃ ಪ್ರೀಣಾತ್ಯಥ ಯತ್ಸ್ತುವಂತಿ ಚ ಶಂಸಂತಿ ಚ ತೇನ ಸ್ತೋಮಭಾಗಾಶ್ಛಂದೋಭಾಗಾಃ । ಉಭಯ್ಯೋ ಹಾಸ್ಯೈತಾ ದೇವತಾಃ ಪ್ರೀತಾ ಅಭೀಷ್ಟಾ ಭವಂತಿ ಯ ಏವಂ ವೇದ ॥

ಅಥ ಪ್ರಾತರನುವಾಕಂ ಪ್ರಶಂಸತಿ । ಅನ್ಯಾಃ ಕಾಶ್ಚಿದ್ದೇವತಾ ಅಗ್ನೌ ಹೂಯಮಾನಾಮಾಹುತಿಂ ಭಜಂತ ಇತ್ಯಪರಾಃ ಕಾಶ್ಚಿದ್ದೇವತಾಃ ಸಾಮ್ನ ಆವೃತ್ತಿಪ್ರಕಾರಭೇದೇನ ನಿಷ್ಪನ್ನ-ತ್ರಿವೃತ್ಪಂಚದಶಾದಿಸ್ತೋಮಂ ಭಜಂತೇ । ಅಪರಾಃ ಕಾಶ್ಚಿದ್ದೇವತಾ ಋುಗ್ಗತಗಾಯತ್ರ್ಯಾದಿ ಛಂದೋ ಭಜಂತೇ । ಏವಂ ಸತಿ ತಾ ವಿಧಿವಾಕ್ಯೇಷು ಪ್ರಸಿದ್ಧಾ ಆಹುತಯೋ ಯಾಃ ಸಂತಿ ತಾಭಿರಾಹುತಿಭಾಗಾನಾಂ ದೇವತಾನಾಂ ಪ್ರೀತಿಃ । ಉದ್ಗಾತಾರಃ ಸ್ತೋಮಯುಕ್ತೈಃ ಸಾಮಭಿಃ ಸ್ತುವಂತೀತಿ ಯತ್ತೇನ ಸ್ತೋಮಭಾಗಾನಾಂ ಪ್ರೀತಿಃ ಹೋತಾರಶ್ಛಂದೋಯುಕ್ತಾಭಿರ್ಋಗ್ಭಿಃ ಶಂಸಂತೀತಿ ಯತ್ತೇನ ಛಂದೋಭಾಗಾನಾಂ ಪ್ರೀತಿಃ । ವೇದನಂ ಪ್ರಶಂಸತಿ । ಆಹುತಿಭಾಗಾ ಏಕೋ ರಾಶಿಃ ಸ್ತೋಮಭಾಗಾಂಶ್ಛಂದೋ ಭಾಗಾಶ್ಚ ದ್ವಿತೀಯೋ ರಾಶಿಃ। ಏತಾ ಉಭಯವಿಧಾ ಅಪಿ ದೇವತಾ ವೇದನೇನ ಪ್ರೀತಾಃ ಸತ್ಯೋ ವೇದಿತುರಭೀಷ್ಟಪ್ರದಾ ಭವಂತಿ । ಶಂಸನೇನ ಛಂದೋಭಾಗಾನಾಂ ಪ್ರೀತ್ಯಭಿಧಾನಾತ್ಪ್ರಾತರನುವಾಕಸ್ಯ ಪ್ರಶಂಸಾ ಸಂಪನ್ನಾ ॥

ಈಗ ಪ್ರಾತರನುವಾಕಮಂತ್ರಗಳ ಪ್ರಾಶಸ್ತ್ಯವನ್ನು ಹೇಳುವರು. ದೇವತೆಗಳಲ್ಲಿ ಕೆಲವರು ಅಗ್ನಿಯಲ್ಲಿ ಹೋಮ ಮಾಡುವ ಆಹುತಿ (ಹೋಮ) ಗಳಲ್ಲಿ ಪ್ರೀತಿಯುಳ್ಳವರು. ಇನ್ನು ಕೆಲವರು ಸಾಮವೇದರೀತಿಯಲ್ಲಿ ಆವೃತ್ತಿಭೇದಗಳಿಂದ ಲಭಿಸುವ ತ್ರಿವೃತ್ ಪಂಚವಶ ಮೊದಲಾದ ಸ್ತೋಮಗಳಲ್ಲಿ (ಸ್ತೋತ್ರಗಳಲ್ಲಿ) ಪ್ರೀತಿಯುಳ್ಳವರು. ಇನ್ನೂ ಕೆಲವು ದೇವತೆಗಳು ಋಗ್ವೇದಮಂತ್ರಗಳಾದ ಗಾಯತ್ರೀ ಮೊದಲಾದ ಛಂದಸ್ಸಿನಿಂದ ಕೂಡಿದ ಋಕ್ಕುಗಳಲ್ಲಿ ಪ್ರೀತಿಯುಳ್ಳವರು. ಹೀಗಿರುವಾಗ ಯಜ್ಞಾದಿಕರ್ಮಗಳಲ್ಲಿ ವಿಧಿವಾಕ್ಯಗಳಿಂದ ಪ್ರಸಿದ್ಧವಾದ ಎಂದರೆ ನಿರ್ದಿಷ್ಟವಾದ ಆಹುತಿಗಳಲ್ಲಿ ಪ್ರೀತಿಯಿರುವ ದೇವತೆಗಳು ಆಹುತಿಭಾಗದೇವತೆಗಳೆಂದೂ, ಸಾಮವೇದಮಂತ್ರಗಳನ್ನು ಸ್ವರಯುಕ್ತವಾಗಿ ಗಾನಮಾಡುವ ಉದ್ಗಾತೃಗಳೆಂಬ ಋತ್ವಿಜರು ಗಾನಮಾಡುವ ಸ್ತೋಮವೆಂಬ ಸಾಮಮಂತ್ರಗಳಲ್ಲಿ ಪ್ರೀತಿಯುಳ್ಳವರು. ಸ್ತೋಮಭಾಗದೇವತೆಗಳೆಂದೂ, ಋಗ್ವೇದದ ಗಾಯತ್ರ್ಯಾದಿ ಛಂದಸ್ಸುಗಳಿಂದ ಕೂಡಿದ ಋಙ್ಮಂತ್ರಗಳನ್ನು ಹೋತೃವರ್ಗದ ಋತ್ವಿಜರು ಸ್ವರಸಹಿತವಾಗಿ ಪಠಿಸುವುದನ್ನು ಪ್ರೀತಿಸುವ ದೇವತೆಗಳು ಛಂದೋಭಾಗದೇವತೆಗಳೆಂದೂ ಕರೆಯಲ್ಪಡುವರು. ಈ ಮೂರುವಿಧ ದೇವತೆಗಳಲ್ಲಿ ಆಹುತಿಭಾಗ ದೇವತೆಗಳು ಒಂದು ಗುಂಪು; ಸ್ತೋಮಭಾಗ ಮತ್ತು ಛಂದೋಭಾಗದೇವತೆಗಳೂ ಸೇರಿ ಎರಡನೆಯ ಗುಂಪು. ಈ ಎರಡುವಿಧ ಗುಂಪಿನ ದೇವತೆಗಳೂ ತಮ್ಮ ತಮ್ಮ ಭಾಗವಾದ ಆಹುತಿ ಮತ್ತು ಸ್ತೋಮ (ಎಂದರೆ ಸ್ತೋತ್ರರೂಪವಾದ ಮಂತ್ರಪಠನ)ಗಳಿಂದ ಪ್ರೀತರಾಗಿ ಯಜ್ಞಮಾಡುವ ಯಜಮಾನಾದಿಗಳಿಗೆ ಯೋಗ್ಯವಾದ ಫಲವನ್ನನುಗ್ರಹಿಸುವರು. ಈ ವಿಷಯಗಳನ್ನೆಲ್ಲಾ ಚೆನ್ನಾಗಿ ತಿಳಿದು ಅದರಂತೆ ದೇವತೆಗಳನ್ನು ತೃಪ್ತಿಪಡಿಸುವ ಯಜಮಾನನು ತನ್ನ ಅಭೀಷ್ಟಗಳನ್ನು ಪಡೆಯುತ್ತಾನೆ.

ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ
ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ
ವಷಟ್ಕಾರಶ್ಚೈತೇ ದೇವಾಃ ಸೋಮಪಾ ಏಕಾದಶ ಪ್ರಯಾಜಾ
ಏಕಾದಶಾನುಯಾಜಾ ಏಕಾದಶೋಪಯಾಜಾ ಏತೇಽಸೋಮ-
ಪಾಃ ಪಶುಭಾಜನಾಃ ಸೋಮೇನ ಸೋಮಪಾನ್ ಪ್ರೀಣಾತಿ
ಪಶುನಾ ಅಸೋಮಪಾನ್ । ಉಭಯ್ಯೋ ಹಾಸ್ಯೈತಾ ದೇವತಾಃ
ಪ್ರೀತಾ ಅಭೀಷ್ಟಾ ಭವಂತಿ ಯ ಏವಂ ವೇದ ॥

ವಿಭಿನ್ನೇ ಪ್ರೀತಿನಿಮಿತ್ತೇ ದೃಷ್ಟಾಂತಮಭಿಪ್ರೇತ್ಯ ಸೋಮಂ ಪಶುಂ ಪ್ರಶಂಸತಿ । ವಸ್ವಾದೀನಾಂ ವಷಟ್ಕಾರಾಂತಾನಾಂ ದೇವಾನಾಂ ಸೋಮಪಾನೇನ ಪ್ರೀತಿಃ । ಹೋತಾ ಯಕ್ಷದಗ್ನಿಮಿತ್ಯಾದಿಮೈತ್ರಾವರುಣಪ್ರೈಷಮಂತ್ರೇಷು ಸಮಿದ್ಧೋ ಅದ್ಯೇತ್ಯಾದಿಯಾಜ್ಯಾಸು ಚಾಭಿಹಿತಾಃ ಸಮಿದಾದ್ಯಾ ಏಕಾದಶ ಪ್ರಯಾಜದೇವತಾಃ । ದೇವಂ ಬರ್ಹಿಃ ಸುದೇವಮಿತ್ಯಾದಿ ಮೈತ್ರಾವರುಣಪ್ರೈಷಮಂತ್ರೇಷು ದೇವಂ ಬರ್ಹಿರ್ವಸುವನ ಇತ್ಯಾದಿ ಯಾಜ್ಯಾಸು ಚಾಭಿಹಿತಾ ಬರ್ಹಿರಾದ್ಯಾ ಏಕಾದಶಾನುಯಾಜದೇವತಾಃ । ಸಮುದ್ರಂ ಗಚ್ಛ ಸ್ವಾಹೇತ್ಯಾದಿ ಮಂತ್ರೋಕ್ತಾಃ ಸಮುದ್ರಾದಯ ಏಕಾದಶೋಪಯಾಜದೇವತಾಃ । ಸರ್ವಾ ಅಪಿ ಸೋಮಪಾನವರ್ಜಿತಾಃ ಪಶುಮೇವ ಭಜಂತೇ । ತಾಸಾಂ ಪಶುನಾ ತೃಪ್ತಿಃ । ವೇದನಂ ಪ್ರಶಂಸತಿ । ಅತ್ರ ಸೋಮಪಾನಾಮಸೋಮಪಾನಾಂ ಚ ಭಿನ್ನಪ್ರೀತಿನಿಮಿತ್ತತಯಾ ಛಂದೋಭಾಗಾನಾಂ ದೇವತಾನಾಮಿತರದೇವತಾವಿಲಕ್ಷಣಂ ಪ್ರೀತಿನಿಮಿತ್ತಂ ಪ್ರಾತರನುವಾಕ ಇತ್ಯಭಿಪ್ರಾಯಃ ॥

ಸೋಮಪಾನಮಾಡುವವರು, ಮಾಡದೇ ಇರುವವರು ಎಂದು ದೇವತೆಗಳಲ್ಲಿ ಎರಡು ವಿಭಿನ್ನ ಗುಂಪುಗಳಿರುವವಷ್ಟೆ ಅವರಲ್ಲಿರುವ ಭೇದಗಳನ್ನೂ ಅವರು ಸೇವಿಸುವ ಸೋಮ ಮತ್ತು ಪಶು ಎಂಬ ಆಹುತಿಗಳನ್ನೂ ಪ್ರಶಂಸಿಸುತ್ತಾರೆ. ದೇವತೆಗಳಲ್ಲಿ ಸೋಮಪಾನಮಾಡುವವರು ೩೩ ಮಂದಿ ಸೋಮಪಾನಮಾಡದಿರುವವರು ೩೩ ಮಂದಿ. ಇವರುಗಳು ಯಾರು ಯಾರೆಂದರೆ— ಎಂಟು ಮಂದಿ ವಸುಗಳು, ಹನ್ನೊಂದು ಮಂದಿ ರುದ್ರರು, ಹನ್ನೆರಡುಮಂದಿ ಆದಿತ್ಯರು, ಪ್ರಜಾಪತಿ ಮತ್ತು ವಷಟ್ಕಾರಾಭಿಮಾನಿ ದೇವತೆಯು ಇವರು ಸೇರಿ ೩೩ ಮಂದಿ ದೇವತೆಗಳು ಸೋಮಪಾನಮಾಡುವವರು; ವಷಟ್ಕಾರವೆಂದರೆ ಹೋಮ ಮಾಡುವಾಗ ಮಂತ್ರಾಂತ್ಯದಲ್ಲಿ ವೌಷಟ್ ಎಂಬ ಶಬ್ದವನ್ನು ಸೇರಿಸಿ ಪಠಿಸಿ ಹೋಮಮಾಡುವರು. ಇದಕ್ಕೆ ವಷಟ್ಕಾರವೆಂದು ಹೆಸರು. ಈ ವಷಟ್ಕಾರವಿಚಾರವಾಗಿ ಮುಂದೆ ವಿಸ್ತಾರವಾಗಿ ತಿಳಿಸಲಾಗುವುದು. ಇನ್ನು ಸೋಮಪಾನಮಾಡದಿರುವ ದೇವತೆಗಳಾರೆಂದರೆ—ಹನ್ನೊಂದು ಮಂದಿ ಪ್ರಯಾಜದೇವತೆಗಳು, ಹನ್ನೊಂದು ಮಂದಿ ಅನುಯಾಜದೇವತೆಗಳು, ಹನ್ನೊಂದು ಮಂದಿ ಉಪಯಾಜದೇವತೆಗಳು ಒಟ್ಟು ೩೩ ದೇವತೆಗಳು ಸೋಮಪಾನಮಾಡುವುದಿಲ್ಲ. ಇವರು ಆಹುತಿರೂಪದಲ್ಲಿ ಅಗ್ನಿಯಲ್ಲಿ ಅರ್ಪಿಸುವ ಪಶುವಿನಿಂದ ತೃಪ್ತರಾಗುತ್ತಾರೆ.

ಸೋಮಪಾನಮಾಡುವ ದೇವತೆಗಳು—ಎಂಟು ಮಂದಿ ವಸುಗಳು ಅವರು ಯಾರೆಂದರೆ—**ಅಗ್ನಿಶ್ಚ ಜಾತವೇದಾಶ್ಚ । ಸಹೋಜಾ ಅಜಿರಾ ಪ್ರಭುಃ । ವೈಶ್ವಾನರೋ ನರ್ಯಾಪಾಶ್ಚ । ಪಂಕ್ತಿರಾಧಾಶ್ಚ ಸಪ್ತಮಃ । ವಿಸರ್ಪೇವಾಷ್ಟಮೋಽಗ್ನೀನಾಂ । ಏತೇಽಷ್ಟೌ ವಸವಃ ಕ್ಷಿತಾ ಇತಿ ।** (ತೈತ್ತಿರೀಯ ಆರಣ್ಯಕ ೧-೯-೧)

ಎಂದರೆ—ಅಗ್ನಿ, ಜಾತವೇದ, ಸಹೋಜಾಃ, ಅಜಿರಾಃ, ವೈಶ್ವಾನರ, ನರ್ಯಪಾ, ಪಂಕ್ತಿರಾಧಾ, ವಿಸರ್ಪಿ ಎಂಬುವರು ಅಷ್ಟವಸುಗಳೆಂದು ಹೇಳಲ್ಪಡುವರು.

ಏಕಾದಶರುದ್ರರು–**ಪ್ರಭ್ರಾಜಮಾನಾ ವ್ಯವದಾತಾಃ । ಯಾಶ್ಚ ವಾಸುಕಿವೈದ್ಯುತಾಃ । ರಜತಾಃ ಪರುಷಾಃ ಶ್ಯಾಮಾಃ । ಕಪಿಲಾ ಅತಿಲೋಹಿತಾಃ । ಊರ್ಧ್ವಾ ಅವಪತಂತಾಶ್ಚ । ವೈದ್ಯುತ ಇತ್ಯೇಕಾದಶ ॥** (ತೈ. ಆ. ೧-೯-೪) ಪ್ರಭ್ರಾಜಮಾನಾಃ ವ್ಯವದಾತಾಃ ವಾಸುಕಿವೈದ್ಯುತಾಃ ರಜತಾಃ ಪರುಷಾಃ ಶ್ಯಾಮಾಃ ಕಪಿಲಾಃ ಅತಿಲೋಹಿತಾಃ ಊರ್ಧ್ವಾಃ ಅವಪತಂತಾಃ ವೈದ್ಯುತ ಎಂಬುವರು ಹನ್ನೊಂದುಮಂದಿ ರುದ್ರರು.

ದ್ವಾದಶಾದಿತ್ಯರು–ಹನ್ನೆರಡುಮಾಸಗಳಿಗೂ ಅಧಿಪತಿಗಳಾದವರು ದ್ವಾದಶಾದಿತ್ಯರು. **ದ್ವಾದಶ ವೈ ಮಾಸಾಃ ಸಂವತ್ಸರಸ್ಯೈತ ಆದಿತ್ಯಾಃ । ಏತೇ ಹೀದಗ್ಂ ಸರ್ವಮಾದದಾನಾ ಸಂತಿ । ತೇ ಯಾದಿದಗ್ಂ ಸರ್ವಮಾದದಾನಾ ಸಂತಿ ತಸಾದಾದಿತ್ಯಾ ಇತಿ** (ಬೃ.ಉಪ. ೩-೯-೫) ಬೇರೆವಿಧವಾಗಿ ಕೆಲವರು ತ್ವಷ್ಟಾ ಸವಿತಾ ಭಗಃ ಸೂಯಃ ಪೂಷಾ, ವಿಷ್ಣುಃ ವಿಶ್ವಾನರಃ ವರುಣಃ ಕೇಶೀ. ವೃಷಾಕಪಿಃ, ಯಮಃ ಅಜ ಏಕಪಾತ್ ಎಂದು ಹೇಳುವರು. ಮತ್ತು ಮಹಾಭಾರತ ಮುಂತಾದ ಪುರಾಣಗ್ರಂಥಗಳಲ್ಲಿ—ಮಿತ್ರ ರವಿ ಸೂರ್ಯ ಭಾನು ಖಗ ಹಿರಣ್ಯಗರ್ಭ ಮರೀಚ ಆದಿತ್ಯ ಸವಿತೃ ಅರ್ಯಮಾ, ಅರ್ಕ, ಪೂಷಾ ಎಂದು ಹೇಳಿದೆ. ಇವರ ಜತೆಗೆ ಪ್ರಜಾಪತಿ ಮತ್ತು ವಷಟ್ಕಾರ ಸೇರಿದರೆ ಒಟ್ಟು ೩೩ ಮಂದಿ ದೇವತೆಗಳಾಗುವರು ಇವರೆಲ್ಲಾ ಸೋಮಪಾನದಿಂದ ಪ್ರೀತರಾಗುವರು.

ಸೋಮಪಾನವನ್ನು ಮಾಡದಿರುವ, ಪಶುಹೋಮದಿಂದ ಪ್ರೀತರಾಗುವ ದೇವತೆಗಳು ಮೂವತ್ತಮೂರು ಮಂದಿ. ಅವರಲ್ಲಿ ೧೧ ಮಂದಿ ಪ್ರಯಾಜಹೋಮದ ದೇವತೆಗಳು. ೧೧ ಮಂದಿ ಅನುಯಾಜದೇವತೆಗಳು. ೧೧ ಮಂದಿ ಉಪಯಾಜ ದೇವತೆಗಳು. ಒಟ್ಟು ೩೩ ಮಂದಿ ಅಸೋಮಪದೇವತೆಗಳಿರುವರು.

**ಸಮಿದಾದ್ಯಾಃ ಪ್ರಯಾಜಸ್ಥಾ ಬರ್ಹಿರಾದಯ ಏವಂ ತು ।**
**ಅನುಯಾಜಗತಾ ದೇವಾ ಉಪಯಾಜಗತಾಸ್ತು ವೈ ।**

ಸಮುದ್ರಂ ಗಚ್ಛಾದಿಮಂತ್ರೈರೇಕಾದಶಭಿರೇವತು ।
ಅನುಯಾಜವಷಟ್ಕಾರತುಲ್ಯಕಾಲಹುತಾ ಹಿ ಯೇ ।
ಗುದಕಾಂಡಹವಿಷ್ಕಾಶ್ಚ ತ್ರಯಸ್ತ್ರಿಂಶದಿಮೇ ಖಲು ।
ಪಶುಸ್ಥಾನಾಃ ಸೋಮಪಾನರಹಿತಾ ಇತಿ ಗೃಹ್ಯತಾಂ ॥

ಪ್ರಯಾಜದೇವತೆಗಳು ೧೧ ಮಂದಿ – ಸಮಿಧಃ ತನೂನಪಾತ್ ಇಳಾ ಬರ್ಹಿಃ ದ್ವಾರಃ ಉಷಾಸಾನಕ್ತಾ ದೈವ್ಯಾಹೋತಾರಾ ತಿಸ್ರೋ ದೇವ್ಯಃ (ಇಳಾ ಸರಸ್ವತೀ ಭಾರತೀ) ತ್ವಷ್ಟಾ ವನಸ್ಪತಿಃ ಸ್ವಾಹಾಕೃತಯಃ ॥ ಇವರು ಹನ್ನೊಂದುಮಂದಿ ಪ್ರಯಾಜದೇವತೆಗಳು ಇವರನ್ನು ಆಪ್ರೀಸೂಕ್ತಮಂತ್ರಗಳಿಂದ ಪಶುಹೋಮದ ಮೂಲಕ ತೃಪ್ತಿಪಡಿಸಲಾಗುವುದು (ತೈ. ಬ್ರಾ. ೩-೬-೨,೩)

ಅನುಯಾಜದೇವತೆಗಳು ೧೧ ಮಂದಿ— ಬರ್ಹಿಃ ದ್ವಾರಃ ಉಷಾಸಾನಕ್ತಾ ಜೋಷ್ಟ್ರೀ ಊರ್ಜಾಹುತೀ ದೇವ್ಯಾಹೋತಾರಾ ತಿಸ್ರೋದೇವ್ಯಃ (ಇಳಾ ಸರಸ್ವತೀ ಭಾರತೀ) ನರಾಶಂಸಃ ವನಸ್ಪತಿಃ ಬರ್ಹಿಃ ಸ್ವಿಷ್ಟಕೃದಗ್ನಿಃ ॥ ಇವರು ಅನುಯಾಜದೇವತೆಗಳು (ತೈ.ಬ್ರಾ. ೩-೬-೧೩,೧೪)

ಉಪಯಾಜದೇವತೆಗಳು ೧೧ ಮಂ— ಸಮುದ್ರ ಅಂತರಿಕ್ಷ ಸವಿತಾ ಅಹೋರಾತ್ರೇ ಮಿತ್ರಾವರುಣೌ ಸೋಮೋ ಯಜ್ಞಃ ಛಂದಾಂಸಿ ದ್ಯಾವಾಪೃಥಿವೀ ನಭಃ ಅಗ್ನಿರ್ವೈಶ್ವಾನರ ॥ ಇವರು ಉಪಯಾಜದೇವತೆಗಳು (ತೈ. ಸಂ. ೧-೩-೧೧) ಒಟ್ಟು ೩೩ ಮಂದಿ ಸೋಮಪಾನರಹಿತರಾದ ದೇವತೆಗಳು.

ಸೋಮಪಾನ ಮಾಡುವ ಮತ್ತು ಮಾಡದಿರುವ ದೇವತೆಗಳನ್ನು ತೃಪ್ತಿಪಡಿಸುವ ರೀತಿಗಳು ಬೇರೆಬೇರೆಯಾಗಿರುವವು. ಆದರಂತೆ ಆಹುತಿಭಾಗದೇವತೆಗಳೂ ಸ್ತೋಮ ಮತ್ತು ಛಂದೋಭಾಗದೇವತೆಗಳು ಪ್ರತ್ಯೇಕರೀತಿಯಿಂದ ತೃಪ್ತಿಗೊಳ್ಳುತ್ತಾರೆ. ಸೋಮಪಾನ ಮಾಡದ ದೇವತೆಗಳು ಪಶುಹೋಮದಿಂದಲೂ, ಸ್ತೋಮ ಮತ್ತು ಛಂದೋಭಾಗದೇವತೆಗಳು ಪ್ರಾತರನುವಾಕಾದಿ ಮಂತ್ರಗಳಿಂದಲೂ ತೃಪ್ತಿಗೊಳ್ಳುವರು. ಈ ವಿಷಯಗಳನ್ನೆಲ್ಲಾ ತಿಳಿದ ಯಾವ ಯಜಮಾನನು ಮೇಲೆ ಹೇಳಿದಂತೆ ಆಚರಿಸುತ್ತಾನೆಯೋ ಆವನು ಉಭಯ ವಿಧದೇವತೆಗಳನ್ನು ತೃಪ್ತಿಪಡಿಸಿ ಅದರಿಂದ ತನ್ನ ಅಭೀಷ್ಟವನ್ನೆಲ್ಲಾ ಪಡೆಯುತ್ತಾನೆ.

ಅಭೂದುಷಾ ರುಶತ್ಪಶುರಿತ್ಯುತ್ತಮಯಾ ಪರಿದಧಾತಿ । ತದಾಹುರ್ಯಂ ತ್ರೀನ್ಕ್ರತೂನನ್ವಾಹಾಗ್ನೇಯಮುಷಸ್ಯಮಾಶ್ವಿನಂ ಕಥಮಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತೀತಿ ।

ತಸ್ಯ ಪ್ರಾತರನುವಾಕಸ್ಯ ಸಮಾಪ್ತಿಮೃಚಂ ವಿಧತ್ತೇ । ಅತ್ರ ಕಂಚಿದಾಕ್ಷೇಪಮುತ್ಥಾಪಯತಿ । ಕ್ರತುಶಬ್ದಃ ಸೋಮಯಾಗಸಂಬಂಧಿನಃ ಪ್ರಾತರನುವಾಕ ಭಾಗಾನುಪಲಕ್ಷಯತಿ । ತೇ ಚ ಭಾಗಾಸ್ತ್ರಯ ಆಗ್ನೇಯ ಉಷಸ್ಯ ಆಶ್ವಿನಶ್ಚೇತಿ । ತತ್ರ ಸರ್ವಾನಸೌ ಹೋತಾ ಬ್ರೂತೇ ತದಾನೀಮೇಕಯರ್ಚಾ ಪರಿಧಾನಂ ಕುರ್ವತೋಽಸ್ಯ ಹೋತುಸ್ತ್ರಯೋ ಭಾಗಾಃ ಸರ್ವೇಽಪಿ ಕಥಂ ಸಮಾಪಿತಾ ಭವಂತೀತ್ಯಾಕ್ಷೇಪಮಾಹುಃ ॥

ಈಗ ಪ್ರಾತರನುವಾಕಮಂತ್ರಗಳ ಸಮಾಪ್ತಿಕ್ರಮವನ್ನು ವಿವರಿಸುವರು— **ಅಭೂದುಷಾ ರುಶತ್ಪಶುಃ** (ಋ. ಸಂ. ೫-೭೫-೯) ಎಂಬ ಋಕ್ಕನ್ನು ಪಠಿಸಿ ಹೋತೃವು ಪ್ರಾತರನುವಾಕಮಂತ್ರಗಳನ್ನು ಸಮಾಪ್ತಿಗೊಳಿಸುವನು. ಇಲ್ಲಿ ಕೆಲವರು ಒಂದು ಆಕ್ಷೇಪಣೆಯನ್ನು ಎತ್ತುವರು—ಕ್ರತುಶಬ್ದವು ಸೋಮಯಾಗಸಂಬಂಧವಾದ ಪ್ರಾತರನುವಾಕಮಂತ್ರಗಳನ್ನು ಸೂಚಿಸುವುದು ಈ ಮೂರುಕ್ರತುಗಳಿಗೂ ಪ್ರತ್ಯೇಕವಾಗಿ ಅಗ್ನಿ, ಉಷಸ್ಸು, ಅಶ್ವಿನೀದೇವತೆಗಳೆಂದು ಬೇರೆಬೇರೆ ದೇವತೆಗಳಿರುವರು. ಈ ಮಂತ್ರ ಗಳೆಲ್ಲವನ್ನೂ ಹೋತೃವೇ ಪಠಿಸುವನು. ಹೀಗಿರುವಾಗ ಈ ಮೂರು ಕ್ರತುಸಂಬಂಧವಾದ ಮಂತ್ರಗಳನ್ನೂ ಒಂದೇ ಋಕ್ಕನ್ನು ಪಠಿಸಿ ಹೇಗೆ ಸಮಾಪ್ತಿಗೊಳಿಸುವನು? ಮೂರುಕ್ರತುಗಳಿಗೂ ಪ್ರತ್ಯೇಕವಾಗಿ ಮೂರು ಋಕ್ಕುಗಳನ್ನು ಪಠಿಸಬೇಕಲ್ಲವೇ ಎಂದು ಕೆಲವರು ಆಕ್ಷೇಪನೆತ್ತುವರು.

ಅಭೂದುಷಾರುಶತ್ಪಶುರಿತ್ಯುಷಸೋ ರೂಪಮಾಗ್ನಿರಧಾಯ್ಯೃತ್ವಿಯ ಇತ್ಯಗ್ನೇರಯೋಜಿ ವಾಂ ವೃಷಣ್ವಸೂ ರಥೋ ದಸ್ರಾವ-ಮರ್ತ್ಯೋ ಮಾಧ್ವೀ ಮಮ ಶ್ರುತಂ ಹವಮಿತ್ಯಶ್ವಿನೋರೇ-ವಮು ಹಾಸ್ಯೈಕಯರ್ಚಾ ಪರಿದಧತಃ ಸರ್ವೇ ತ್ರಯಃ ಕ್ರತವಃ ಪರಿಹಿತಾ ಭವಂತಿ ಭವಂತಿ ||

ತಚ್ಚ ಸಮಾಧಾನಂ ದರ್ಶಯತಿ । ಯೇಯಮುಷಾಃ ಸೂರ್ಯೋದಯಾತ್ಪೂರ್ವಭಾ-ವಿನೀ ಸೇಯಂ ರುಶತ್ಪಶುರಭೂತ್ । ರುಶಂತಃ ಪರಸ್ಪರಧ್ವನಿಂ ಕುರ್ವಂತಃ ಪಶವೋ ಯಸ್ಯಾ-ಮುಷಸಿ ಸೇಯಂ ರುಶತ್ಪಶುಃ । ರಾತ್ರೌ ನಿದ್ರಾಂ ಕುರ್ವಂತಃ ಪಶವಃ ಉಷಃಕಾಲೇ ಪ್ರಾಪ್ತೇ ಧ್ವನಿಂ ಕುರ್ವಂತೀತಿ ಪ್ರಸಿದ್ಧಮೇತತ್ । ಉಷೋದೇವತಾಯಾ ಅಸ್ಮಿನ್ಪಾದೇಽಭಿಹಿತತ್ವಾ-ದಯಂ ಪ್ರಥಮಃ ಪಾದ ಉಷಸೋ ರೂಪಮನುಕೂಲ ಇತ್ಯರ್ಥಃ । ಋತ್ವಿಯೋಽರಣಿಮಥನ-ರೂಪ ಋತುಕಾಲೇ ಭವಸ್ತಾದೃಶೋಽಗ್ನಿರಾ ಸಮಂತಾದಧಾಯ್ಯಾಧಾನೇನ ಸಂಪಾದಿತಃ । ಅತ್ರಾಗ್ನೇರಭಿಧಾನಾದ್ದ್ವಿತೀಯಪಾದೋಽಗ್ನೇ ರೂಪಂ । ವೃಷಣ್ವಸೂ ವರ್ಷಮಾಣಧನೌ ದಸ್ರೌ ಹೇ ಅಶ್ವಿನೌ ದೇವೌ ವಾಂ ಯುವಯೋರಮರ್ತ್ಯೋ ರಥೋ ಮನುಷ್ಯಾಣಾಮಯೋಗ್ಯಃ ಸಮೀಚೀನೋ ರಥೋಽಯೋಜ್ಯಶ್ವಾಭ್ಯಾಂ ಯೋಜಿತಃ । ಅತೋ ಮಾಧ್ವೀ ಮಧುರಯಾ ವಾಚಾ ಮಮ ಹವಂ ಮದೀಯಮಾಹ್ವಾನಂ ಶ್ರುತಂ ಯುವಾಂ ಶೃಣುತಂ । ಅಸ್ಮಿನ್ನುತ್ತರಾ-ರ್ಧೇಽಶ್ವಿನೋರಭಿಧಾನಾದಯಮರ್ಧೋಽಶ್ವಿನೋ ರೂಪಂ । ತಸ್ಮಾದೇಕಯರ್ಚಾ ದೇವತಾ-ತ್ರಯಪ್ರತಿಪಾದಿಕಯೈತಮೇವ ಪ್ರಾತರನುವಾಕಂ ಪರಿದಧತಃ ಸಮಾಪಯತೋಽಸ್ಯ ಹೋತು-ಸ್ತ್ರಯಃ ಕ್ರತವಃ ಪ್ರಾತರನುವಾಕಭಾಗಾಃ ಸರ್ವೇ ಪರಿಹಿತಾಃ ಸಮಾಪಿತಾ ಭವಂತಿ । ಪದಾ-ಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ||

ಈ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವರು. ಪರಿಸಮಾಪ್ತಿಯ ಋಕ್ಕು ಹೀಗಿರುವುದು—

**ಅಭೂದುಷಾ ರುಶತ್ಪಶುರಾಗ್ನಿರಧಾಯ್ಯೃತ್ವಿಯಃ ।**
**ಅಯೋಜಿ ವಾಂ ವೃಷಣ್ವಸೂ ರಥೋ ದಸ್ರಾವಮರ್ತ್ಯೋ ಮಾಧ್ವೀ ಮಮ**
**ಶ್ರುತಂ ಹವಂ ||** (ಋ. ಸಂ. ೫-೭೫-೯)

ಈ ಋಕ್ಕಿನ ಪ್ರಥಮಪಾದದಲ್ಲಿ ಉಷೋದೇವತೆಯೂ ದ್ವಿತೀಯಪಾದದಲ್ಲಿ ಅಗ್ನಿಯೂ ತೃತೀಯ ಚತುರ್ಥಪಾದದಲ್ಲಿ ಅಶ್ವಿನಿದೇವತೆಗಳೂ ಸ್ತುತರಾಗಿರುವರು. ಹೇಗೆಂದರೆ— **ಅಭೂದುಷಾ ರುಶತ್ಪಶುಃ** ಎಂಬ ಪ್ರಥಮಪಾದದಲ್ಲಿ—ರಾತ್ರಿಕಾಲದಲ್ಲಿ ನಿದ್ರೆಮಾಡುತ್ತಿದ್ದ ಪಶುಗಳು ಉಷಃಕಾಲದಲ್ಲಿ ಎಚ್ಚರಗೊಂಡು ಕೂಗುವುದು ಲೋಕಪ್ರಸಿದ್ಧವಾಗಿದೆ. ಈರೀತಿ ಧ್ವನಿಗೈಯ್ಯುತ್ತಿರುವ ಪಶುಸಮೂಹವು ಉಷೋದೇವತೆಯು ಆವಿರ್ಭವಿಸಿರುವಳೆಂಬುದನ್ನು ಸೂಚಿಸುವುದು. ಆದ್ದರಿಂದ ಉಷೋದೇವತೆಯ ಉದಯವನ್ನು ಪ್ರತಿಪಾದಿಸುವ ಈ ಋಕ್ಕಿನ ಪ್ರಥಮಪಾದವು ಉಷೋದೇವತೆಯ ಸ್ತುತಿಯಾಗಿದೆ. ಇನ್ನು ಎರಡನೆಯಪಾದವಾದ— **ಅಗ್ನಿರಧಾಯ್ಯೃತ್ವಿಯಃ** ಎಂಬ ದ್ವಿತೀಯಾರ್ಧದಲ್ಲಿ ಅಗ್ನಿಯ ಪ್ರಶಂಸೆ ಇದೆ. ಋತ್ವಿಕ್ಕುಗಳು ಉಷಃಕಾಲದಲ್ಲಿ ಎದ್ದು ಅಗ್ನಿಮಥನ ಮೊದಲಾದ ಯಜ್ಞಕಾರ್ಯಗಳಲ್ಲಿ ತೊಡಗಿ ಯಜ್ಞಕ್ಕಾಗಿ ಅಗ್ನಿಯನ್ನು ಮಥನಮಾಡಿ ಉತ್ಪಾದನೆ ಮಾಡುವರು. ಅಗ್ನಿರುತ್ಪಾದನವನ್ನು ವಿವರಿಸುವ ಈ ಎರಡನೆಯ ಪಾದವು ಅಗ್ನಿದೇವತೆಯನ್ನು ಸ್ತುತಿಸುವುದಾಗಿದೆ. ಇನ್ನು ಮೂರು ನಾಲ್ಕನೆಯಪಾದಗಳು— **ಅಯೋಜಿ ವಾಂ ವೃಷಣ್ವಸೂ ರಥೋ ದಸ್ರಾವಮರ್ತ್ಯೋ ಮಾಧ್ವೀ ಮಮ ಶ್ರುತಂ** ಹವಂ ॥ ಅಶ್ವಿನಿದೇವತೆಗಳನ್ನು ಸ್ತುತಿಸುತ್ತವೆ. ಧನಪ್ರದರಾದ ಎಲೈ ಅಶ್ವಿನೀದೇವತೆಗಳೇ ಈ ಉಷಃಕಾಲದಲ್ಲಿ ದೇವಯೋಗ್ಯವಾದ (ಮನುಷ್ಯರಿಗೆ ಯೋಗ್ಯವಲ್ಲದ) ನಮ್ಮ ರಥವು ಅಶ್ವಗಳಿಂದ ಹೂಡಲ್ಪಟ್ಟಿದೆ. ಎಲೈ ಅಶ್ವಿನೀದೇವತೆಗಳೇ, ಮಧುರವಾದ ವಾಕ್ಯದಿಂದ ಕೂಡಿದ ನನ್ನ ಆಹ್ವಾನರೂಪವಾದ ಪ್ರಾರ್ಥನೆಯನ್ನು ಕೇಳಿರಿ ಎಂಬುದೇ ಈ ೩-೪ ನೇ ಪಾದಗಳ ಅಭಿಪ್ರಾಯವು. ಈ ಋಕ್ಕಿನ ಉತ್ತರಾರ್ಧವು ಅಶ್ವಿನೀದೇವತೆಗಳನ್ನು ಪ್ರತಿಪಾದಿಸುವುದು. ಆದ್ದರಿಂದ ಈ ಋಕ್ಕಿನಲ್ಲಿ ಉಷಸ್ಸು, ಅಗ್ನಿ, ಅಶ್ವಿನೀದೇವತೆಗಳು ಎಂಬ ಮೂರು ದೇವತೆಗಳನ್ನು ಸ್ತುತಿಸಿರುವುದರಿಂದ ಪ್ರಾತರನುವಾಕಮಂತ್ರಗಳಿಗೆ ಮುಖ್ಯದೇವತೆಗಳಾದ ಅಗ್ನಿಕ್ರತು, ಉಷಸ್ಯಕ್ರತು, ಆಶ್ವಿನಕ್ರತು ಎಂಬ ಮೂರು ಪ್ರತ್ಯೇಕಭಾಗಗಳಿಗೂ ದೇವತೆಗಳಾದವರನ್ನು ಸ್ತುತಿಸಲಾಗಿದೆ. ಆದ್ದರಿಂದ ಈ ಒಂದು ಋಕ್ಕಿನ ಪಠನದಿಂದಲೇ ಪ್ರಾತರನುವಾಕಮಂತ್ರಗಳ ಮೂರು ವಿಭಾಗಗಳನ್ನು ಸಮಾಪ್ತಿಗೊಳಿಸಿದಂತಾಯಿತು ಎಂಬ ಸಮಾಧಾನವು ಸಮಂಜಸವಾಗಿರುವುದು.

### *English Translation*

They ask: how should the Pratar-anuvaka be repeated! It is to be repeated according to the metres (verses of the same metre to be put together). The metres are the limbs of Prajapati. He who brings the sacrifice is Prajati. For the benefit of the sacrificer the several verses of the Pratar-anuvaka are to be recited pada (foot) by pada. For cattle has four feet, (if he do so) he obtains cattle. He should repeat it by half verses. When he repeats it in this way, (then he does so for securing) a footing (to the sacrificer). Man has two legs, and animals have four. He thus places the two-legged sacrificer among the four-legged animals. Thence he should repeat the Peatar anuvaka only by half verses.

They ask: the (metres of the) Pratar-anuvaka being developed, how do they become then under-devloped? The answer should be: it the Brihati metre is not moved from its centre.

Some deities have a share in the invocation offerings, others in the Stomas (the chants of the Sama singers), others in the metrical verses (chhandas)

repeated by the Hotar. By means of the invocation offerings (ahutis) one makes pleased those deities who have a share in these offerings, and by means of the chants and recitations those also who have their shares in the Stomas and metres. He who has such a knowledge, makes pleased and well-disposed both parties of deities (those who have their share in the invocation offerings, and those who have theirs in the Stomas and metes).

There are thirty-three Gods who drink Soma and thirty-three who do not drink Soma.

The Soma-drinking gods are: eight Vasus, eleven Rudras, twelve Adityas, Prajapati and Vashat-kara. The not Soma-drinking gods are: eleven Prayajas, eleven Anuyajas and eleven Upajayas. They have their share in the sacrificial animal. With Soma he pleases the Soma-drinking deities with the animal those who do not drink Soma. Thus, he who has a such a knowledge, makes both parties pleased and well-disposed.

He concludes with the verse: abhud usha rusat-pasur (5, 75, 9) i.e., aurora appeared with the roaring cattle.

They ask: if he repeats three liturgies (kratus) addressed to Agni, Ushas and the Asvins, how can his concluding (the whole liturgy) with one verse only accounted be for? (The answer) is: all three deities are contained in this verse. (The first pada:) "aurora appeared with the roaring cattle," is approriate to Ushas. (The second pada:) "Agni is put in at the proper time, belongs to Agni. (The second half verse:) "O, ye mighty (brothers) your immortal carriage is yoked, hear my sweet voice!" belongs to the Asvins. When he thus concludes with this one verse, then all three liturgies have their place in it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಸಪ್ತಮಾಧ್ಯಾಯೇ ಅಷ್ಟಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಸಪ್ತಮೋಽಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಏಳನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.

ಏಳನೆಯ ಅಧ್ಯಾಯವು ಸಮಾಪ್ತವು.



# ಅಥೈತರೇಯಬ್ರಾಹ್ಮಣೇ ಅಷ್ಟಮಾಧ್ಯಾಯೇ ಪ್ರಥಮಃ ಖಂಡಃ

## ಎಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



ಋಷಯೋ ವೈ ಸರಸ್ವತ್ಯಾಂ ಸತ್ರಮಾಸತ ತೇ ಕವಷಮೈಲೂಷಂ ಸೋಮಾದನಯನ್ದಾಸ್ಯಾಃ ಪುತ್ರಃ ಕಿತವೋಽಬ್ರಾಹ್ಮಣಃ ಕಥಂ ನೋ ಮಧ್ಯೇಽದೀಕ್ಷಿಷ್ಟೇತಿ ತಂ ಬಹಿರ್ಧನ್ವೋದವಹನ್ನತ್ರೈನಂ ಪಿಪಾಸಾ ಹಂತು ಸರಸ್ವತ್ಯಾ ಉದಕಂ ಮಾ ಪಾದಿತಿ ಸ ಬಹಿರ್ಧನ್ವೋದೂಳ್ಹಃ ಪಿಪಾಸಯಾ ವಿತ್ತ ಏತ ದಪೋನಪ್ತ್ರೀಯಮಪಶ್ಯತ್ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ತೇನಾಪಾಂ ಪ್ರಿಯಂ ಧಾಮೋಪಾಗಚ್ಛತ್ತಮಾಪೋಽನೂದಾಯಂಸ್ತಂ ಸರಸ್ವತೀ ಸಮಂತಂ ಪರ್ಯಧಾವತ್



ಪರ್ಯಗ್ನ್ಯಾದೇರ್ವಿಶೇಷಾಂಶ್ಚ ಸ್ತೋಕಾಃ ಸ್ವಾಹಾಕೃತೀರಪಿ ।<br>
ವಪಾಂ ಚಾಧೀಯತೇ ಪ್ರಾತರನುವಾತವಿಧಿಃ ಪರಂ ॥

ಅಥಾಪೋನಪ್ತ್ರೀಯಾದಯೋ ವಕ್ತವ್ಯಾಃ । ತದರ್ಥಮಾದಾವಾಖ್ಯಾಯಿಕಾಮಾಹ-ಭೃಗ್ವಂಗಿರರಸಃಪ್ರಭೃತಯ ಋಷಯಃ ಕದಾಚಿತ್ಸರಸ್ವತ್ಯಾಮೇತನ್ನಾಮಕನದೀತೀರೇ ಸತ್ರಮಾಸತ । ದ್ವಾದಶಾಹಮಾರಭ್ಯೋಪರಿತನಂ ತ್ರಯೋದಶರಾತ್ರಾದಿಕಂ ಬಹುಯಜಮಾನಕಂ ಕರ್ಮ ಸತ್ರಮಿತ್ಯುಚ್ಯತೇ । ತದುದ್ದಿಶ್ಯ ತತ್ರ ಸ್ಥಿತವಂತಃ ಸತ್ರಮನ್ವತಿಷ್ಠನ್ನಿತ್ಯರ್ಥಃ । ತದಾನೀಂ ತೇಷಾಂ ಮಧ್ಯೇ ಕಶ್ಚಿದಿಲೂಷಾಖ್ಯಸ್ಯ ಪುರುಷಸ್ಯ ಪುತ್ರಃ ಕವಷನಾಮಕೋಽವಸ್ಥಿತೋಽಭೂತ್। ತೇ ಚ ಋಷಯಸ್ತಂ ಕವಷಂ ಸೋಮಯಾಗಾನ್ನಿಸ್ಸಾರಿತವಂತಃ । ತೇಷಾಮಭಿಪ್ರಾಯ ಉಚ್ಯತೇ । ದಾಸ್ಯಾಃ ಪುತ್ರ ಇತ್ಯುಕ್ತಿರಧಿಕ್ಷೇಪಾರ್ಥಾ । ಕಿತವೋ ದ್ಯೂತಕಾರಸ್ತಸ್ಮಾದಬ್ರಾಹ್ಮಣೋಽಯಂ । ಈದೃಶೋ ನೋಽಸ್ಮಾಕಂ ಶಿಷ್ಟಾನಾಂ ಮಧ್ಯೇ ಸ್ಥಿತ್ವಾ ಕಥಂ ದೀಕ್ಷಾಂ ಕೃತವಾನಿತಿ ತೇಷಾಮಭಿಪ್ರಾಯಃ । ತಂ ಕವಷಂ ಸರಸ್ವತೀತೀರಾದ್ಬಹಿರ್ದೂರೇ ಧನ್ವ ಜಲರಹಿತಾಂ ಭೂಮಿಂ ಪ್ರತ್ಯುದವಹನ್ನುದ್ಧೃತವಂತೋ ಬಲಾದಪಸಾರಿತವಂತಃ । ಧನ್ವದೇಶೇ ಬಲಾತ್ಪ್ರೇರಯಿತೄಣಾಮಯಮಭಿಪ್ರಾಯಃ।ಅತ್ರ ಜಲವರ್ಜಿತದೇಶ ಏನಂ ಕವಷಂ ಪಿಪಾಸಾ ಮಾರಯತು

ಸರಸ್ವತ್ಯಾ ನದ್ಯಾಃ ಪವಿತ್ರ ಮುದಕಮಯಂ ಪಾಪಿಷ್ಠೋ ಮಾ ಪಿಬತ್ವಿತಿ । ಸ ಚ ಕವಷೋಽತ್ರ ಸರಸ್ವತ್ಯಾ ಬಹಿರ್ದೂರಂ ಧನ್ವ ನಿರ್ಜಲಂ ದೇಶಂ ಪ್ರತ್ಯುದೂಳ್ಹ ಉತ್ಕರ್ಷೇಣಾಪಸಾರಿತಃ ಪಿಪಾಸಯಾ ವಿಶ್ಲೋ ಲಬ್ಧ ಆಕ್ರಾಂತಸ್ತತ್ಪರಿಹಾರಾರ್ಥಮೇತತ್ಪ್ರ ದೇವತ್ರೇತ್ಯಾದಿಕಮಪೋನಪ್ತೃದೇವತಾಕಂ ಸೂಕ್ತಂ ವೇದಮಧ್ಯೇ ವಿಚಾರ್ಯಾಪಶ್ಯತ್ । ತೇನ ಸೂಕ್ತೇನ ಜಪಿತೇನಾಪಾಂ ಜಲಾಭಿಮಾನಿನೀನಾಂ ದೇವತಾನಾಂ ಪ್ರಿಯಂ ಸ್ಥಾನಮುಪಾಗಚ್ಛತ್ । ತಂ ಜಾಗತಮಾಪೋ ದೇವತಾ ಅನೂದಾಯನ್ನನುಗ್ರಹೇಣೋತ್ಕರ್ಷೋ ಯಥಾ ಭವತಿ ತಥಾ ಪ್ರಾಪ್ತವತ್ಯಃ । ತತಃ ಸರಸ್ವತೀ ನದೀ ತಂ ಕವಷಂ ಪರ್ಯಧಾವತ್ಪರಿತಃ ಪ್ರವಾಹವೇಗೇನ ಪ್ರವೃತ್ತಾಸೀತ್ ।

ಈ ಅಧ್ಯಾಯದಲ್ಲಿ ಅಪೋನಪ್ತ್ರೀಯಕರ್ಮ ಮೊದಲಾದವನ್ನು ಹೇಳುತ್ತಾರೆ. ಈ ಸಂದರ್ಭದಲ್ಲಿ ಒಂದು ಆಖ್ಯಾಯಿಕೆಯನ್ನು (ಪೂರ್ವೇತಿಹಾಸವನ್ನು) ಹೇಳುತ್ತಾರೆ—

ಪೂರ್ವದಲ್ಲಿ ಭೃಗುಗಳು, ಅಂಗಿರಸರು ಮೊದಲಾದ ಕೆಲವು ಋಷಿಗಳು ಸರಸ್ವತೀನದಿಯ ತೀರದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಸತ್ರಯಾಗವೆಂದರೆ, ಹನ್ನೆರಡು ದಿನಗಳಿಗೆ ಕಮ್ಮಿ ಇಲ್ಲದೆ ಹದಿಮೂರು ಹದಿನಾಲ್ಕು ಇತ್ಯಾದಿ ಹೆಚ್ಚುದಿನಗಳ ವರೆಗೆ ನಡೆಯುವ ಯಾಗವಿಶೇಷವು. ಈ ವಿಧವಾದ ಯಾಗದಲ್ಲಿ ಅನೇಕ ಯಜಮಾನರಿರುವರು. ಎಂದರೆ ಅನೇಕರು ಒಟ್ಟಾಗಿ ಸೇರಿ ಈ ಯಾಗವನ್ನು ಮಾಡುವರು. ಆ ಯಜ್ಞವೇದಿಯಲ್ಲಿ ಭೃಗು ಎಂಬ ಹೆಸರಿನ ಋಷಿಗಳು, ಅಂಗಿರಸರು ಮೊದಲಾದ ಅನೇಕ ಋಷಿಗಳು ಸೇರಿದ್ದರು. ಅವರ ಮಧ್ಯದಲ್ಲಿ ಇಲೂಷನೆಂಬುವನ ಪುತ್ರನಾದ ಕವಷನೆಂಬುವನೂ ಕುಳಿತಿದ್ದನು. ಇವನು ಜಾತಿಯಲ್ಲಿ ಶೂದ್ರನು ಮತ್ತು ದಾಸಿಯಪುತ್ರನು. ಇವನು ಯಜ್ಞದೀಕ್ಷಿತರಾದ ತಮ್ಮ ಮಧ್ಯದಲ್ಲಿ ಬಂದು ಕುಳಿತಿರುವುದನ್ನು ಋಷಿಗಳು ನೋಡಿ—ಇದೇನು, ದಾಸಿಯಪುತ್ರನೂ ಜೂಜುಗಾರನೂ ಆದ ಈ ಕವಷನು ಇಲ್ಲಿಗೆ ಬಂದು ನಮ್ಮ ಮಧ್ಯದಲ್ಲಿ ಕುಳಿತುಕೊಳ್ಳುವುದೆಂದರೇನು ? ಇವನು ಬ್ರಾಹ್ಮಣನಲ್ಲ. ಬ್ರಾಹ್ಮಣನಲ್ಲದವನು ಶಿಷ್ಟಾಚಾರಸಂಪನ್ನರಾದ ಋಷಿಗಳ ಮಧ್ಯದಲ್ಲಿ ಬಂದು ಕುಳಿತು ಯಜ್ಞಯಾಗಾದಿಗಳ ವಿಧಿನಿಯಮಾದಿಗಳ ರಹಸ್ಯವನ್ನು ಅರಿಯುವುದುಂಟೇ ? ಇದು ಲೋಕವಿರುದ್ಧವು ಎಂದು ಹೇಳಿ ಆ ಕವಷನನ್ನು ಬಲವಂತದಿಂದ ಯಜ್ಞಶಾಲೆಯಿಂದಾಚೆಗೆ ಹೋಗುವಂತೆ ಹೊಡೆದಟ್ಟಿದರು. ಮತ್ತು ಪವಿತ್ರವಾದ ಈ ಸರಸ್ವತೀನದಿಯ ಜಲವನ್ನು ಪಾನಮಾಡಲು ಈ ಪಾಪಿಷ್ಠನು ಅರ್ಹನಲ್ಲವೆಂದು ಬಗೆದು ಅವನನ್ನು ಸರಸ್ವತೀನದಿಯಿಂದ ಬಹು ದೂರಪ್ರದೇಶದಲ್ಲಿರುವ ನೀರೂ ನೆರಳಿಲ್ಲದ ಒಂದು ಮರಳುಕಾಡಿಗೆ ಬಲವಂತದಿಂದ ಕೊಂಡೊಯ್ದು ಅಲ್ಲಿ ಬಾಯಾರಿಕೆಯಿಂದ ಇವನು ಸಾಯಲಿ ಎಂದು ಅವನನ್ನು ಅಲ್ಲಿ ಬಿಟ್ಟುಬಂದರು. ನೀರೂ ನೆರಳೂ ಇಲ್ಲದ ಆ ಮರಳ್ಗಾಡಿನಲ್ಲಿ ಕವಷನು ಬಾಯಾರಿಕೆಯಿಂದ ಬಳಲಿ ಬೆಂಡಾಗಿ ವ್ಯಥೆಪಡುತ್ತಿದ್ದಾಗ ಇವನಿಗೆ **ಪ್ರ ದೇವತ್ರಾ ಬ್ರಹ್ಮಣೇ** (ಋ. ಸಂ. ೧೦-೩೦) ಎಂಬ ಸೂಕ್ತವು ಗೋಚರಿಸಿತು. ಆಗ ಅವನು ಆ ಮಂತ್ರವನ್ನು ಜಪಮಾಡಲಾಗಿ ಜಲಾಭಿಮಾನಿದೇವತೆಗಳ ಅನುಗ್ರಹದಿಂದ ಜಲಸಮೃದ್ಧಿಯಿಂದ ಕೂಡಿದ ಒಂದು ಪ್ರದೇಶವು ಇವನಿಗೆ ಗೋಚರವಾಯಿತು. ಅಲ್ಲಿಗೆ ಇವನು ಹೋದಕೂಡಲೇ ಜಲಾಭಿಮಾನಿದೇವತೆಗಳೂ ಸರಸ್ವತೀನದೀಯೂ ಇವನನ್ನು ಅನುಗ್ರಹಾತ್ಮಕದೃಷ್ಟಿಯಿಂದ ಸ್ವಾಗತಿಸಿ ಇವನ ಸುತ್ತಲೂ ಪ್ರವಾಹೋದಕದಿಂದ ವ್ಯಾಪಿಸಿದರು.

ತಸ್ಮಾದ್ಧಾಪ್ಯೇತರ್ಹಿ ಪರಿಸಾರಕಮಿತ್ಯಾಚಕ್ಷತೇ ಯದೇನಂ ಸರಸ್ವತೀ ಸಮಂತಂ ಪರಿಸಸಾರ ॥

ಉಕ್ತಮರ್ಥಂ ಲೋಕಪ್ರಸಿದ್ಧ್ಯಾ ದ್ರಢಯತಿ । ಯದ್ಯಸ್ಮಿನ್ಸ್ಥಾನೇ ಸರಸ್ವತೀ ನದ್ಯೇನಂ ಕವಷಂ ಸಮಂತಂ ಸರ್ವಾಸು ದಿಕ್ಷು ಪರಿಸಸಾರ ತತ್ಸ್ಥಾನಮೇತರ್ಹ್ಯಪ್ಯೇತಸ್ಮಿನ್ನಪಿ ಕಾಲೇ ತೀರ್ಥವಿಶೇಷಾಭಿಜ್ಞಾಃ ಪುರಾಣಕರ್ತಾರಃ ಪರಿಸಾರಕಮಿತ್ಯೇತನ್ನಾಮ್ನಾ ವ್ಯವಹರಂತಿ

ಈರೀತಿ ಸರಸ್ವತೀನದಿಯು ತನ್ನ ಪ್ರವಾಹದಿಂದ ಈ ಕವಷವನ್ನು ಸುತ್ತುವರೆದ ಪ್ರದೇಶವನ್ನು ಪರಿಸಾರಕವೆಂಬ ಶ್ರೇಷ್ಠವಾದ ತೀರ್ಥವಿಶೇಷವೆಂದು ಪುರಾಣಾಭಿಜ್ಞರು ಹೇಳುವರು. ಏಕೆಂದರೆ, ಈ ಕವಷನ ಸುತ್ತಲೂ ಸರಸ್ವತಿಯು ವ್ಯಾಪಿಸಿದ್ದರಿಂದ (ಏನಂ ಪರಿಸಸಾರ) ಈ ಪ್ರದೇಶಕ್ಕೆ ಪರಿಸಾರಕವೆಂಬ ಹೆಸರು ಅನ್ವರ್ಥನಾಮವಾಯಿತು ಎಂದಭಿಪ್ರಾಯವು.

ತೇ ವಾ ಋಷಯೋಽಬ್ರುವನ್ವಿದುರ್ವಾ ಇಮಂ ದೇವಾ ಉಪೇಮಂ ಹ್ವಯಾಮಹಾ ಇತಿ ತಥೇತಿ ತಮುಪಾಹ್ವಯಂತ ತಮುಪಹೂಯೈತದಪೋನಪ್ತ್ರೀಯಮಕುರ್ವತ ಪ್ರ ದೇವತ್ರಾ ಬ್ರಹ್ಮಣೇ ಗಾತುರೇತ್ವಿತಿ ತೇನಾಪಾಂ ಪ್ರಿಯಂ ಧಾಮೋಪಾಗಚ್ಛನ್ನುಪ ದೇವಾನಾಂ ॥

ಸರಸ್ವತೀನದಿಯು ತನ್ನ ಪ್ರವಾಹದಿಂದ ಕವಷನನ್ನು ಸುತ್ತುಗಟ್ಟಿ ಅವನಿಗೆ ಅನುಗ್ರಹಮಾಡಿದುದನ್ನು ಋಷಿಗಳು ನೋಡಿ ತಮ್ಮತಮ್ಮಲ್ಲಿ ಇಂತೆಂದರು— ಈ ಕವಷನು ಸರಸ್ವತಿಯೇ ಮೊದಲಾದ ಜಲಾಭಿಮಾನಿದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿರುವನು. ಇವನಲ್ಲಿ ಜೂಜುಗಾರನ ದೋಷಗಳಾವವೂ ಇರುವಂತೆ ಕಾಣುವುದಿಲ್ಲ. ಅವನನ್ನು ನಮ್ಮ ಬಳಿಗೆ ಬರುವಂತೆ ಹಿಂದಕ್ಕೆ ಕರೆಯೋಣ ಎಂದು ನಿಶ್ಚಯಿಸಿ ಆ ಕವಷನನ್ನು ಹಿಂದಕ್ಕೆ ಬರುವಂತೆ ಪ್ರಾರ್ಥಿಸಿ ಕರೆದರು ಮತ್ತು ಅವನಿಂದ ದೃಷ್ಟವಾದ ಪ್ರ ದೇವತ್ರಾ ಬ್ರಹ್ಮಣೇ ಎಂಬ ಸೂಕ್ತವನ್ನೂ ಅಪೋನಪ್ತ್ರೀಯವೆಂಬ ಕರ್ಮವನ್ನು ಸಾಂಗಗೊಳಿಸಿ ಜಲದೇವತೆಗಳ ಮತ್ತು ಇತರ ದೇವತೆಗಳ ಪ್ರಿಯಸ್ಥಾನವನ್ನು ಎಂದರೆ ಅನುಗ್ರಹವನ್ನು ಸಂಪಾದಿಸಿದರು.

ಉಪಾಪಾಂ ಪ್ರಿಯಂ ಧಾಮ ಗಚ್ಛತ್ಯುಪ ದೇವಾನಾಂ ಜಯತಿ ಪರಮಂ ಲೋಕಂ ಯ ಏವಂ ವೇದ ಯಶ್ಚೈವಂ ವಿದ್ವಾನೇತದಪೋನಪ್ತ್ರೀಯಂ ಕುರುತೇ ॥

ಏತದ್ವೇದನಪೂರ್ವಕಮನುಷ್ಠಾನಂ ಚ ಪ್ರಶಂಸತಿ । ಯಸ್ಮಾದೇವಂ ಪ್ರಶಸ್ತಂ ತಸ್ಮಾದಪೋನಪ್ತ್ರೀಯಂ ಕುರ್ಯಾದಿತಿ ವಿಧಿರುನ್ನೇಯಃ ॥

ಯಾವ ಪುರುಷನು ಮೇಲೆ ಹೇಳಿದ ವಿಷಯಗಳನ್ನು ತಿಳಿದುಕೊಂಡು ಅಪೋನಪ್ತ್ರೀಯವೆಂಬ (ಯಜ್ಞಕ್ಕಾಗಿ ನದೀ ಮೊದಲಾದ ಜಲಾಶಯಗಳಿಂದ ವಿಧ್ಯುಕ್ತವಾಗಿ ನೀರನ್ನು ತರುವುದು) ಕರ್ಮವನ್ನು ಸಾಂಗಗೊಳಿಸುವನೋ ಆ ಪುರುಷನು ದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿ ಉತ್ತಮವಾದ ಲೋಕವನ್ನು ಪಡೆಯುವನು.

ಕೌಷೀತಕೀಬ್ರಾಹ್ಮಣದಲ್ಲಿಯೂ ಈ ವಿಷಯವು ವರ್ಣಿತವಾಗಿರುವುದನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಿದೇವೆ— ಪೂರ್ವದಲ್ಲಿ ಮಾಧ್ಯಮರೆಂಬ ಋಷಿಗಳು ಸರಸ್ವತೀನದಿಯ ದಡದಲ್ಲಿ ಸತ್ರಯಾಗವನ್ನು ಮಾಡುತ್ತಿದ್ದರು. ಇಲ್ಲಿ ಮಾಧ್ಯಮರು

ಎಂದರೆ ಋಗ್ವೇದದಲ್ಲಿರುವ ೧೦ ಮಂಡಲಗಳಲ್ಲಿ ಮೊದಲನೆಯ ಮಂಡಲವನ್ನೂ ಕೊನೆಯ, ೧೦ ನೆಯ ಮಂಡಲಗಳನ್ನೂ ಬಿಟ್ಟರೆ ಮಧ್ಯದಲ್ಲಿರುವ ೬ ಮಂಡಲಗಳಲ್ಲಿರುವ ಸೂಕ್ತಗಳಿಗೆ ದ್ರಷ್ಟೃಗಳಾದ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ, ವಸಿಷ್ಟ, ಕಣ್ವ ಎಂಬ ಋಷಿಗಳು ಮತ್ತು ಅವರ ವಂಶಜರಾದ ಋಷಿಗಳು ಎಂದರ್ಥವು. ಈ ಋಷಿಗಳು ಸರಸ್ವತೀ ನದೀತೀರದಲ್ಲಿ ಯಜ್ಞಮಾಡುತ್ತಿದ್ದಾಗ ಅವರ ಮಧ್ಯದಲ್ಲಿ ಕವಷನೆಂಬುವನು ಬಂದು ಕುಳಿತಿದ್ದನು. ಅವನನ್ನು ನೋಡಿ ಋಷಿಗಳು ಕೋಪದಿಂದ—ಎಲೈ ಕವಷನೇ, ನೀನು ದಾಸಿಯ ಪುತ್ರನು, ಬ್ರಾಹ್ಮಣನಲ್ಲ. ನಿನ್ನ ಜತೆಯಲ್ಲಿ ಕುಳಿತು ನಾವು ಏನನ್ನೂ ತಿನ್ನುವುದಿಲ್ಲ. ಮತ್ತು ಪಾನಮಾಡುವುದಿಲ್ಲ. ಆದ್ದರಿಂದ ನೀನು ಈ ಪ್ರದೇಶವನ್ನು ಬಿಟ್ಟು ಹೊರಟುಹೋಗು ಎಂದು ಗದರಿಸಿದರು. ಆ ಮಾತನ್ನು ಕೇಳಿ ಕವಷನು ಕೋಪದಿಂದ ಆ ಸ್ಥಳವನ್ನು ಬಿಟ್ಟೆದ್ದು ಸರಸ್ವತೀನದಿಯ ಬಳಿಗೆ ಓಡಿಹೋಗಿ ಆ ದೇವತೆಯನ್ನು **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಸೂಕ್ತದಿಂದ ಸ್ತುತಿಸಿ ಆ ದೇವತೆಯ ಅನುಗ್ರಹವನ್ನು ಪಡೆದನು. ಸರಸ್ವತಿಯು ಅವನ ಸ್ತುತಿಯಿಂದ ಸಂತುಷ್ಟಳಾಗಿ ಅವನು ಹೋದಕಡೆಯಲ್ಲೆಲ್ಲಾ ಅವನನ್ನೇ ಅನುಸರಿಸಿ ಹೋಗುತ್ತಿದ್ದಳು. ಇದನ್ನು ನೋಡಿ ಋಷಿಗಳು—ಇವನು ದೋಷಯುಕ್ತನಲ್ಲ. ಆದ್ದರಿಂದ ಇವನನ್ನು ಹಿಂದಕ್ಕೆ ಕರೆಯೋಣ ಎಂದು ಯೋಚಿಸಿ ಅವನ ಬಳಿಗೆ ಹೋಗಿ—ಎಲೈ ಕವಷನೇ, ಇಗೋ ನಿನಗೆ ನಮಸ್ಕಾರವು. ನೀನು ಋಷಿಗಳಾದ ನಮ್ಮಲ್ಲಿ ಶ್ರೇಷ್ಠನಾಗಿರುವೆ. ನಾವು ಮಾಡಿದ ಅಪರಾಧವನ್ನು ಕ್ಷಮಿಸು, ನಮ್ಮನ್ನು ಹಿಂಸಿಸಬೇಡ. ಸರಸ್ವತೀನದಿಯೂ ನಿನ್ನನ್ನು ಹಿಂಬಾಲಿಸುತ್ತಿರುವಳು. ನಿನ್ನಲ್ಲಿ ಯಾವ ದೋಷವೂ ಇಲ್ಲ. ಎಂದು ನಾನಾವಿಧವಾಗಿ ಪ್ರಾರ್ಥಿಸಿ ಅವನನ್ನು ತಮ್ಮ ಯಜ್ಞದಲ್ಲಿ ನೇತೃವನ್ನಾಗಿ ಮಾಡಿ ಅವನ ಕೋಪವನ್ನು ಸಮಾಧಾನಮಾಡಿದರು. ಇದೇ ಕವಷಋಷಿಯ ಮಹಾತ್ಮೆಯು ಮತ್ತು ಈ ಋಷಿಯಿಂದಲೇ ದೃಷ್ಟವಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಸೂಕ್ತವೂ ಮುಂದಿನ ನಾಲ್ಕು ಸೂಕ್ತಗಳೂ ಪ್ರಸಿದ್ಧವಾಗಿರುವವು.

**ಪ್ರ ದೇವತ್ರಾ ಬ್ರಹ್ಮಣೇ** ಎಂಬ ಈ ಸೂಕ್ತದ ಋಕ್ಕುಗಳನ್ನುಪಯೋಗಿಸಿ ಅಪೋನಪ್ತ್ರೀಯವೆಂಬ ಯಜ್ಞಾಂಗ ಕರ್ಮವನ್ನು ಆಚರಿಸುವರು. ಅಪೋನಪ್ತ್ರೀಯವೆಂದರೆ ವಸತೀವರೀ ಎಂಬ ಪಾತ್ರೆಯಲ್ಲಿರುವ ನೀರನ್ನೂ ಏಕಧನಾ ಎಂಬ ಮತ್ತೊಂದು ಪಾತ್ರೆಯಲ್ಲಿರುವ ನೀರನ್ನೂ ವಿಧ್ಯುಕ್ತವಾಗಿಯೂ ಮಂತ್ರಪೂರ್ವಕವಾಗಿಯೂ ಸೇರಿಸುವುದು.

ಹೋತೃವು ಪ್ರಾತರನುವಾಕ ಮಂತ್ರಗಳನ್ನು ಪಠಿಸಿದನಂತರ ಅಧ್ವರ್ಯುವು, ಹೋತೃವನ್ನುದ್ದೇಶಿಸಿ **ಪರಿಹಿತೇಽಪ ಇಷ್ಯ ಹೋತಃ** ಎಂಬ ಪ್ರೈಷಮಂತ್ರದಿಂದ ನಿರ್ದೇಶಿಸುವನು. ಅದಕ್ಕೆ ಪ್ರತ್ಯುತ್ತರವಾಗಿ ಹೋತೃವು **ಅಪೋನಪ್ತ್ರೀಯಾ ಅನ್ವಾಹ**—ಎಂದರೆ ಅಪೋನಪ್ತ್ರೀಯಕರ್ಮದಲ್ಲಿ ಪಠಿಸಬೇಕಾದ ಋಕ್ಕುಗಳನ್ನು ಪಠಿಸುವನು ಅನಂತರ ಅಧ್ವರ್ಯುವು ಪ್ರೈಷಮಂತ್ರಗಳ ಮೂಲಕ ಚಮಸಾಧ್ವರ್ಯು, ಮೈತ್ರಾವರಣ ಏಕಧನಾಪಾತ್ರೆಯನ್ನು ಹಿಡಿದಿರುವವನು ಇವರನ್ನು ಬರುವಂತೆ ಹೇಳುವನು, ಯಜಮಾನನ ಪತ್ನಿಯನ್ನು ಕರೆತರುವಂತೆ ನೇಷ್ಟ್ರವೆಂಬ ಋತ್ವಿಜನಿಗೆ ನಿರ್ದೇಶಿಸುವನು. ಬಳಿಕ ಎಲೈ ಆಗ್ನೀಧ್ರನೇ ಹೋತೃವಿನ ಚಮಸಪಾತ್ರೆಯನ್ನೂ ವಸತೀವರೀಕಲಶವನ್ನೂ ಚಾತ್ವಾಲ (ಒಂದು ಸಣ್ಣ ಹಳ್ಳ) ದಲ್ಲಿ ಪರಸ್ಪರಾಭಿಮುಖವಾಗುವಂತೆ ಇರಿಸು ಎಂದು ಹೇಳುವನು. ಅನಂತರ ಚಮಸಾಧ್ವರ್ಯುವು ಚಮಸವನ್ನು ತರುವನು. ಏಕಧನಾಪಾತ್ರೆಯನ್ನು ಹಿಡಿದಿರುವವರು ಮೂರು ಪಾತ್ರೆಗಳನ್ನು ತರುವರು ಅನಂತರ ಅಧ್ವರ್ಯುವು ಆ ಮೂರು ಪಾತ್ರೆಗಳಲ್ಲಿಯೂ ಒಂದೊಂದು ದರ್ಭೆಯನ್ನು ಹಾಕಿ ಶುದ್ಧಿಗೊಳಿಸುವನು. ನೇಷ್ಟೃವು ಯಜಮಾನನ ಪತ್ನಿಯನ್ನು ಕರೆತರುವನು. ಆಕೆಯು ತನ್ನ ಕೈಯಲ್ಲಿ ಒಂದು ಪಾತ್ರೆಯನ್ನು ಹಿಡಿದುಕೊಳ್ಳುವಳು. ಅನಂತರ ಅಧ್ವರ್ಯುವು ಎಲ್ಲಾ ಪಾತ್ರೆಗಳಲ್ಲಿಯೂ ಒಂದೊಂದು ದರ್ಭೆಯನ್ನಿಟ್ಟು ದೇವೀರಾಪಃ ಎಂಬ ಮಂತ್ರವನ್ನು ಪಠಿಸಿ ನಾಲ್ಕು ಸ್ರುವಗಳ (ಸ್ರುವವೆಂದರೆ ಹೋಮಮಾಡುವುದಕ್ಕೆ ಉಪಯೋಗಿಸುವ ಮರದ ಸೌಟು) ತುಂಬ ಆಜ್ಯವನ್ನು (ತುಪ್ಪವನ್ನು) ಸುರಿದು ಹೋಮಮಾಡುವನು. ಬಳಿಕ ಅಧ್ವರ್ಯುವು ಹೋತೃ ಮತ್ತು ಮೈತ್ರಾವರುಣರ ಚಮಸಗಳನ್ನು ಏಕಧನಾಪಾತ್ರೆಯ ಉದಕಸಹಿತವಾಗಿ ವಸತೀವರೀಕಲಶದ ಸಮೀಪಕ್ಕೆ

ತಂದು ಆದರ ನೀರನ್ನು ಹೋತೃವಿನ ಚಮಸಪಾತ್ರೆಗೂ ಅದರಿಂದ ಮೈತ್ರಾವರಣನ ಪಾತ್ರೆಗೂ ಪುನಃ ಮೈತ್ರಾವರುಣನ ಪಾತ್ರೆಯಿಂದ ಹೋತೃವಿನ ಚಮಸಕ್ಕೂ ಸುರಿಯುವನು. ಹೋತೃವಿನ ಚಮಸಕ್ಕೆ ನೀರನ್ನು ಸುರಿಯುವಾಗ ಹೋತೃವು ಅಧ್ವರ್ಯುವನ್ನುದ್ದೇಶಿಸಿ ಅನೇರಾಪೋಽಧ್ವರ್ಯಾ೩ ಉ ಎಂದು ಮೂರಾವರ್ತಿ ಕೇಳುವನು. ಅದಕ್ಕೆ ಅಧ್ವರ್ಯುವು ಉತೇವನನ್ನಮುತೇಮಾಃಪಶ್ಯ ಎಂದು ಪ್ರತ್ಯುತ್ತರವನ್ನು ಹೇಳುವನು. ಅನಂತರ ಹೋತೃವು ಆ ಉದಕಗಳನ್ನುದ್ದೇಶಿಸಿ ಪ್ರತ್ಯುತ್ಥಾಪನವನ್ನು ಮಾಡುವನು.

ಈ ಅಪೋನಪ್ತ್ರೀಯವೆಂಬ ಕರ್ಮವಿಧಾನವು ಈ ಐತರೇಯ ಬ್ರಾಹ್ಮಣದಲ್ಲಿಯೂ ತೈತ್ತಿರೀಯಸಂಹಿತೆಯಲ್ಲಿಯೂ ಪ್ರತ್ಯೇಕವಾಗಿ ಹೇಳಲ್ಪಟ್ಟಿರುವುದು. ತೈತ್ತಿರೀಯ ಸಂಹಿತೆಯಲ್ಲಿ (ಯಜುರ್ವೇದದಲ್ಲಿ) ಅಧ್ವರ್ಯುವು ಆಚರಿಸಬೇಕಾದ ಕ್ರಮವೂ, ಐತರೇಯ ಬ್ರಾಹ್ಮಣದಲ್ಲಿ ಹೋತೃವು ಪಠಿಸಬೇಕಾದ ಮಂತ್ರಗಳೂ ಹೇಳಲ್ಪಟ್ಟಿರುವುವು. ಹೋತೃವು ಪಠಿಸಬೇಕಾದ ಮಂತ್ರಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ. ಪ್ರಾತರನುವಾಕಪಠನಾನಂತರ ಅಧ್ವರ್ಯುವು ಹೋತೃವನ್ನು ಉದ್ದೇಶಿಸಿ ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಹೋತೃವು ಅಪೋನಪ್ತ್ರೀಯ ಸಂಬಂಧವಾದ ಮಂತ್ರಗಳನ್ನು ಪಠಿಸುವನು. ಈ ಮಂತ್ರಪಠನದಲ್ಲಿ ಒಂದು ಕ್ರಮವನ್ನು ಅನುಸರಿಸಬೇಕು. ಅದನ್ನು ಇಲ್ಲಿ ಹೇಳಲಾಗಿದೆ—

ತತ್ಸಂತತಮನುಬ್ರೂಯಾತ್ ಸಂತತವರ್ಷೀ ಹ ಪ್ರಜಾಭ್ಯಃ ಪರ್ಜನ್ಯೋ ಭವತಿ ಯತ್ರೈವಂ ವಿದ್ವಾನ್ತ್ಸಂತತಮನ್ವಾಹ ಯದವಗ್ರಾಹಮನುಬ್ರೂಯಾಜ್ಜೀಮೂತವರ್ಷೀ ಹ ಪ್ರಜಾಭ್ಯಃ ಪರ್ಜನ್ಯಃಸ್ಯಾತ್ತಸ್ಮಾತ್ತತ್ಸಂತತಮೇವಾನೂಚ್ಯಂ । ತಸ್ಯ ತ್ರಿಃ ಪ್ರಥಮಾಂ ಸಂತತಮನ್ವಾಹ ತೇನೈವಂ ತತ್ಸರ್ವಂ ಸಂತತಮನೂಕ್ತಂ ಭವತಿ ॥

ತಸ್ಮಿನ್ನಪೋನಪ್ತ್ರೀಯಸೂಕ್ತೇ ಪ್ರಾತರನುವಾಕವತ್ಪ್ರಸಕ್ತಮರ್ಧರ್ಚೇಽವಸಾನಂ ನಿವಾರಯಿತುಂ ನೈರಂತರ್ಯಂ ವಿಧತ್ತೇ । ಹೋತುರ್ವೇದನಂ ಪ್ರಶಂಸತಿ ಪರ್ಜನ್ಯೋ ಮೇಘಃ ಸಂತತವರ್ಷೀ ನೈರಂತರ್ಯೇಣ ವೃಷ್ಟಿಮಾನ್ಯಾವತೀ ವೃಷ್ಟಿರಪೇಕ್ಷಿತಾ ಸಾ ಸಂಪೂರ್ಣಾ ಭವತೀತ್ಯರ್ಥಃ । ವಿಪಕ್ಷೇ ಬಾಧಕಪೂರ್ವಕಂ ಸ್ವಪಕ್ಷಮುಪಸಂಹರತಿ । ಅವಗ್ರಾಹಂ ತಸ್ಮಿಂಸ್ತಸ್ಮಿನ್ನರ್ಧರ್ಚೇ ಪಾದೇ ಪಾದೇ ವಾವಗೃಹ್ಯಾವಗೃಹ್ಯ ಪುನಃಪುನರವಸಾನಂ ಕೃತ್ವಾ ಯದ್ಯನುಬ್ರೂಯಾತ್ತದಾ ಪ್ರಜೋಪಕಾರಾರ್ಥಂ ಪ್ರವೃತ್ತಃ ಪರ್ಜನ್ಯೋ ಜೀಮೂತವರ್ಷೀ ಸ್ಯಾತ್ । ಜೀಮೂತಃ ಪರ್ವತಃ । ಜೀಮೂತೌ ಮೇಘಪರ್ವತಾವಿತ್ಯುಕ್ತತ್ವಾತ್ । ಅನುಪಯುಕ್ತೇ ಪರ್ವತ ಏವ ವರ್ಷತಿ ನ ತೂಪಯುಕ್ತೇಷು ಸಸ್ಯೇಷ್ವಿತ್ಯರ್ಥಃ । ಯಸ್ಮಾದೇವಂ ತಸ್ಮಾದವಗ್ರಹೋ ನ ಕಾರ್ಯಃ ಕಿಂತು ಸಂತತಮೇವಾನೂಚ್ಯಂ । ತಸ್ಮಿನ್ಸೂಕ್ತೇ ಪ್ರಥಮಾಯಾ ಋಚ ಆವೃತ್ತಿಸಹಿತಂ ಸಾಂತತ್ಯಂ ವಿಧೀಯತೇ । ಅಸ್ಯ ಸೂಕ್ತಸ್ಯ ಪ್ರಥಮಾಯಾಸ್ತ್ರಿರಾವೃತ್ತಿಃ ಸಾಂತತ್ಯೇನ ಸರ್ವಸ್ಯಾಪಿ ಸೂಕ್ತಸ್ಯ ಸಾಂತತ್ಯಂ ಸಿಧ್ಯತಿ । ಪ್ರಥಮಾಯಾಂ ಸಾಂತತ್ಯಮಾಶ್ವಲಾಯನೋ ದರ್ಶಯತಿ—ಅರ್ಧರ್ಚಕಾರಂ ಪ್ರಥಮಾಮೃಗಾನಾನಮುತ್ತರಾಃ ಇತಿ । ತ್ರಿರಾವೃತ್ತಾಯಾಃ

**ಪ್ರಥಮಾಯಾ ಅರ್ಧತ್ರಯೇಣಾವಸಾನಂ ಕೃತ್ವಾ ಪಠೇದುತ್ತರಾಸಾಮೃಚಾಮವಸಾನಂ ಕೃತ್ವಾ ಪಾಠಃ ಕರ್ತವ್ಯ ಇತ್ಯರ್ಥಃ ||**

ಅಪೋನಪ್ತ್ರೀಯವೆಂಬ ಈ ಕರ್ಮದಲ್ಲಿ ಪಠಿಸಬೇಕಾದ ಪ್ರ ದೇವತ್ರಾ ಬ್ರಹ್ಮಣೇ ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಎಲ್ಲಿಯೂ ಮಧ್ಯದಲ್ಲಿ ನಿಲ್ಲಿಸದೆ ಒಂದೇಸಮನೆ ಧಾರಾಕಾರವಾಗಿ ಪಠಿಸಬೇಕು. ಹೀಗೆ ಪಠಿಸಿದರೆ ಪರ್ಜನ್ಯದೇವನು ಸಂತತವಾಗಿ ಪ್ರಜೆಗಳಿಗೆ ಉಪಕಾರವಾಗುವಂತೆ ವೃಷ್ಟಿಯನ್ನು ಸುರಿಸುವನು. ಹಾಗಲ್ಲದೆ ಋಕ್ಕುಗಳನ್ನು ಪಾದಗಳಲ್ಲಿ ಅಥವಾ ಅರ್ಧಋಕ್ಕುಗಳಲ್ಲಿ ಅಥವಾ ಋಕ್ಕುಗಳ ಅಂತ್ಯದಲ್ಲಿ ನಿಲ್ಲಿಸಿ ನಿಲ್ಲಿಸಿ ಪಠಿಸಿದರೆ ಪರ್ಜನ್ಯನು ವೃಷ್ಟಿಯನ್ನು ಯಾರಿಗೂ ಉಪಯೋಗವಿಲ್ಲದಂತೆ ಪರ್ವತಾದಿಗಳಮೇಲೆ ಸುರಿಸುವನು. ಸಸ್ಯಾದಿಗಳಮೇಲೆ ಸುರಿಸುವುದಿಲ್ಲ ಆದ್ದರಿಂದ ಈ ಸೂಕ್ತವನ್ನು ಮಧ್ಯೆ ಎಲ್ಲಿಯೂ ನಿಲ್ಲಿಸದೆ ಕೊನೆಯವರೆಗೂ ಒಂದೇಸಮನಾಗಿ ಪಠಿಸಬೇಕು. ಆದರೆ ಈ ಸೂಕ್ತದಲ್ಲಿರುವ ಎಲ್ಲಾ ಋಕ್ಕುಗಳನ್ನೂ ಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸದಂತೆ ಪಠಿಸುವುದು ಅಸಾಧ್ಯವಲ್ಲವೇ ಎಂದರೆ ಆರೀತಿ ಮಾಡುವುದಕ್ಕೆ ಬದಲಾಗಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಸ್ವಲ್ಪವೂ ನಿಲ್ಲಿಸದಂತೆ ಮೂರಾವರ್ತಿ ಪಠಿಸಿದಲ್ಲಿ ಸೂಕ್ತವನ್ನೇ ನಿಲ್ಲಿಸದೆ ಪಠಿಸಿದಂತಾಗುವುದು. ಈ ವಿಷಯದಲ್ಲಿ ಆಶ್ವಲಾಯನರು— **ಅಧ್ಯರ್ಧಕಾರಂ ಪ್ರಥಮಾಮೃಗಾವಾನಮುತ್ತರಾಃ** (ಆಶ್ವ. ಶ್ರೌ. ಸೂ. ೫-೧-೫) ಎಂದು ಹೇಳಿರುವರು.

## *English Translation*

(The Apo naptriyam cermony. The Upamsu and antaryama oblations. The Hotar has no share in the Bahishpavamana meal. The libation for Mitra-Varuna to be mixed with milk. On the Purodasas belonging to the libations. Havishpamkti. Akshara-pankti. Narasamasa-pankti. Savana-pankti).

### (Story of the Sudra Rishi Kavasha)

The Rishis, when once holding a sacrificial session on the banks of the Sarasvati, expelled Kavasha, the son of Ilusha from their Soma sacrifice, saying- How should the son of a slave-girl, a gamester, who is no Brahman remain among us and become initiated (into all sacrificial rites) ?. They turned him out of the place into a desert, saying, that he should die by thirst, and not drink the water of the Sarasvati. After having been driven (from this place) into a desert, he, being vexed by thirst, saw (the mantra called) Apo mantriyam : pra devatra brahmane gatur elu &c., may there be a way leading to the Gods for the Brahman (may he be received among them). By this means he obtained the favour of the waters. They went out (of their house) to meet him. Sarasvati surrounded him on all sides. Therefore that place is called Parisaraka (from enam-kavsham-parisya). As Sarsvati had surrounded him on all sides, the Rishis said, the Gods know him ; let us call him back. All consented, and called him back. After having called him back, they made Apo naptriyam, by repeating : pra devatra brahmane (10, 30) ; by its means they obtained the favour

of the waters and of the Gods. He who having this knowledge, makes the Apo naptriyam obtains the favour of the waters and the Gods, and conquers the highest world (the heavenly-world).

He should repeat it without stopping. (If he do so) the God of rain (Parjanya) will bless his children with incessant rain. Should he stop in regular intervals, when repeating the hymn, as usual, then the rain-God would keep away in the clouds the rain from his children. Thence it is to be repeated without stopping. If he repeats thrice the first verse of this hymn without stopping in this manner the whole of the hymn becomes repeated without stopping.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟಮಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎಂಟನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



## ಅಥ ಅಷ್ಟಮಾಧ್ಯಾಯೇ ದ್ವಿತೀಯಃ ಖಂಡಃ

### ಎಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



ತಾ ಏತಾ ನವಾನಂತರಾಯಮನ್ವಾಹ ಹಿನೋತಾನೋ ಅಧ್ವರಂ ದೇವಯಜ್ಯೇತಿ ದಶಮೀಂ । ಆವರ್ವೃತತೀರಧ ನು ದ್ವಿಧಾರಾ ಇತ್ಯಾವೃತ್ತಾಸ್ವೇಕಧನಾಸು ॥

ತತ್ಸೂಕ್ತವಚನೇ ಪ್ರಕಾರವಿಶೇಷಂ ವಿಧತ್ತೇ । ಪ್ರದೇವತ್ರೇತ್ಯಾರಭ್ಯ ನವಸಂಖ್ಯಾಕಾ ಋಚೋ ಯಾಃ ಸಂತಿ ತಾಸಾಂ ದ್ವಯೋರ್ಋಚೋರ್ಮಧ್ಯೇಽನ್ತರಾಯೋ ವಿಚ್ಛೇದೋ ನ ಭವತಿ ತಥಾನುಬ್ರೂಯಾತ್ । ಅಪರಂ ವಿಶೇಷಂ ವಿಧತ್ತೇ । ಅಧ್ಯಯನಕ್ರಮೇಣಾವರ್ವೃತತೀರಿತಿ ದಶಮೀ ತಾಂ ಪರಿತ್ಯಜ್ಯ ತದುತ್ತರಭಾವಿನೀಂ ಹಿನೋತಾ ನ ಇತಿ ದಶಮೀಂ ಕೃತ್ವಾನುಬ್ರೂಯಾತ್ । ಪರಿತ್ಯಕ್ತಾಯಾಸ್ತಸ್ಯಾ ಅನುವಚನೇ ಕಾಲವಿಶೇಷಂ ವಿಧತ್ತೇ । ಅತ್ರಾಯಂ ಪ್ರಯೋಗಕ್ರಮಃ । ಸುತ್ಯಾದಿನಾತ್ಪೂರ್ವಸ್ಮಿನ್ದಿನೇಽಗ್ನೀಷೋಮೀಯಂ ಪಶುಮನುಷ್ಠಾಯ ವಸತೀವರೀಸಂಜ್ಞಿತಾಃ ಸೋಮಾಭಿಷವಕಾಲೇ ಸವನೀಯಾ ಅಪಃ

**ಸ್ಥಾನೀಯ ವೇದ್ಯಾಮುಪಸ್ಥಾಪ್ಯ ಮಧ್ಯರಾತ್ರಾದೂರ್ಧ್ವಂ ನಿದ್ರಾಂ ಪರಿತ್ಯಜ್ಯಾಗ್ನೀಧ್ರಧಿಷ್ಣ್ಯಾ-ದೀಂಸ್ತತ್ತನ್ಮಂತ್ರೈರಭಿಮೃಶ್ಯ ಸೋಮಾದೀನಾಂ ಪಾತ್ರಾಣ್ಯಾಸಾದ್ಯ ಪ್ರಾತರನುವಾಕಾರ್ಥಂ ಹೋತಾರಂ ಸಂಪ್ರೇಷ್ಯ ಪ್ರಾತರನುವಾಕಾಂತೇ ಶೃಣೋತ್ವಗ್ನಿರಿತಿ ಮಂತ್ರೇಣ ಹುತ್ವಾ ತತ ಏಕಧನಾ ಅಪ ಆನೇತುಂ ಗಚ್ಛನ್ನಪೋನಪ್ತ್ರೀಯಸೂಕ್ತಾರ್ಥಂ ಹೋತಾರಂ ಸಂಪ್ರೇಷ್ಯೈಕಧನಾ ಅಪ ಆನಯೇದಿತಿ । ಸೋಽಯಂ ಪ್ರಯೋಗಕ್ರಮ ಆಧ್ವರ್ಯವಸೂತ್ರೇಷು ದ್ರಷ್ಟವ್ಯಃ । ತತ್ರ ಹೋತಾರಂ ಪ್ರತ್ಯಪೋನಪ್ತ್ರೀಯವಿಷಯೇ ಪ್ರೈಷಮಾಪಸ್ತಂಬೋ ದರ್ಶಯತಿ—ಯತ್ರಾಭಿ-ಜಾನಾತ್ಯಭೂದುಷಾ ರುಶತ್ಪಶುರಿತಿ ತತ್ಪ್ರಚರಣ್ಯಾ ಜುಹೋತಿ ಶೃಣೋತ್ವಗ್ನಿಃ ಸಮಿಧಾ ಹವಂ ಮ ಇತ್ಯಪರಂ ಚತುರ್ಗೃಹೀತಂ ಗೃಹೀತ್ವಾ ಸಂಪ್ರೇಷ್ಯತ್ಯಪ ಇಷ್ಯ ಹೋತರ್ಮೈತ್ರಾವರುಣಸ್ಯ ಚಮಸಾಧ್ವರ್ಯವಾದ್ರವೈಕಧನಿನ ಆದ್ರವತ ನೇಷ್ಟಃ ಪತ್ನೀಮುದಾನಯೋನ್ನೇತರ್ಹೋತೃ-ಚಮಸೇನ ವಸತೀವರೀಭಿಶ್ಚ ಚಾತ್ವಾಲಂ ಪ್ರತ್ಯಾಸ್ಸ್ವ ಇತಿ । ಅಸ್ಮಾತ್ಪ್ರೈಷಾದೂರ್ಧ್ವಂ ಹೋತಾ ಸೂಕ್ತಮನುಬ್ರೂಯಾತ್ । ತದಾ ಹಾಶ್ವಲಾಯನಃ—ಪರೀಹಿತೇಽಪ ಇಷ್ಯ ಹೋತರಿತ್ಯುಕ್ತೋಽನಭಿಹಿಂಕೃತ್ಯಾಪೋನಪ್ತ್ರೀಯಾ ಅನ್ವಾಹ ಇತಿ । ತತ್ರ ಪೂರ್ವೋಕ್ತದಶ-ಮಾಸಹಿತಾ ಋಚೋಽನೂಚ್ಯೈಕಧನಿನಃ ಪುರುಷಾಃ ಪ್ರೇಷಿತಾಃ ಸಂತ ಏಕಧನಾಖ್ಯಾ ಅಪೋ ಘಟೈರ್ಗೃಹೀತ್ವಾ ಯದಾ ಜಲಸಮೀಪಾದಾವರ್ತಂತೇ ತದಾನೀಂ ತಾಸ್ವೇಕಧನಾಸ್ವಪ್ಸ್ವನ್ವ-ತ್ತಾಸು ಸತೀಷು ತದಾವೃತ್ತಿಂ ಪ್ರತೀಕ್ಷಮಾಣೋ ಹೋತಾ ಪೂರ್ವಂ ಪರಿತ್ಯಕ್ತಾಮಾವರ್ತತ-ತೀರಿತ್ಯೇತಾಮೃಚಂ ತಸ್ಮಿನ್ಕಾಲೇಽನುಬ್ರೂಯಾದಿತ್ಯರ್ಥಃ ॥**

**ಪ್ರದೇವತ್ರಾ** ಎಂಬ ಸೂಕ್ತದ ಮಂತ್ರಗಳನ್ನು ಪಠಿಸುವಾಗ ಒಂದು ವಿಶೇಷಕ್ರಮವಿರುವುದು. ಸೂಕ್ತದ ಮೊದಲನೆಯ ಋಕ್ಕಾದ **ಪ್ರ ದೇವತ್ರಾ ಬ್ರಹ್ಮಣೇ** ಎಂಬ ಮಂತ್ರವನ್ನಾರಂಭಿಸಿ ಒಂಭತ್ತನೆಯ ಋಕ್ಕಿನ ಸಮಾಪ್ತಿವರೆಗೂ ಪಠಿಸಿ ಅನಂತರ ಹನ್ನೊಂದನೆಯ ಋಕ್ಕಾದ **ಹಿನೋತಾ ನೋ ಅಧ್ವರಂ** (೧೦-೩೦-೧೧) ಎಂಬ ಋಕ್ಕನ್ನು ಪಠಿಸಬೇಕು. ಅನಂತರ **ಆವರ್ವೃತತೀರಧ** ಎಂಬ ೧೦ ನೇ ಋಕ್ಕನ್ನು ಪಠಿಸಬೇಕು.

ಇಲ್ಲಿ ಪ್ರಯೋಗಕ್ರಮವನ್ನು ಸೂಕ್ಷ್ಮವಾಗಿ ವಿವರಿಸುವುದು ಆವಶ್ಯಕವಾಗಿದೆ. ಸುತ್ಯಾದಿನದ ಎಂದರೆ ಸೋಮರಸವನ್ನು ಹಿಂಡುವ ಹಿಂದಿನ ದಿನ ಅಗ್ನಿಷೋಮೀಯಸಂಸ್ಕಾರಾನಂತರ ವಸತೀವರೀಸಂಜ್ಞಕವಾದ ಉದಕಗಳನ್ನು ಸೋಮಾಭಿಷವ ಕಾಲದಲ್ಲಿ ಉಪಯೋಗಿಸುವುದಕ್ಕಾಗಿ ಯಜ್ಞವೇದಿಯಲ್ಲಿ ಸ್ಥಾಪಿಸಬೇಕು. ಮಧ್ಯರಾತ್ರಿಯು ಕಳೆದನಂತರ ನಿದ್ರೆಯನ್ನು ತ್ಯಜಿಸಿ ಎದ್ದು ಆಗ್ನೀಧ್ರಧಿಷ್ಣ್ಯಾದಿ (ಅಗ್ನಿಕುಂಡ)ಗಳನ್ನು ಆಯಾ ಮಂತ್ರಗಳಿಂದ ಅಭಿಮರ್ಶನೆಮಾಡಿ ಸೋಮಾಭಿಷವಕ್ಕಾಗಿ ಬೇಕಾಗುವ ಪಾತ್ರೆಗಳನ್ನು ಆಸಾದನೆ(ಸಂಸ್ಕಾರ) ಮಾಡಿ ಪ್ರಾತರನುವಾಕಮಂತ್ರಪಠನಕ್ಕಾಗಿ ಹೋತೃವನ್ನು ಪ್ರೈಷಮಂತ್ರಧಿಂದ ನಿರ್ದೇಶಿಸಬೇಕು. ಪ್ರಾತರನುವಾಕಪಠನಾನಂತರ **ಶೃಣೋತ್ವಗ್ನಿಃ** (ತೈ. ಸಂ. ೧-೩-೧೩) ಎಂಬ ಮಂತ್ರದಿಂದ ಆಹುತಿ ಯನ್ನರ್ಪಿಸಿ ಏಕಧನಾಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೋಗುವಾಗ ಅಪೋನಪ್ತ್ರೀಯಸೂಕ್ತಪಠನಕ್ಕಾಗಿ ಹೋತೃವನ್ನು ದ್ದೇಶಿ ಪ್ರೈಷಮಂತ್ರದಿಂದ **ಏಕಧನಾ ಅಪ ಆನಯ** ಎಂದು ನಿರ್ದೇಶಿಸಬೇಕು. ಈ ಕ್ರಮಗಳೆಲ್ಲಾ ಅಧ್ವರ್ಯುಪ್ರಯೋಗದಲ್ಲಿ ವಿವರಿಸಲಾಗುವುದು. ಈ ವಿಷಯದಲ್ಲಿ ಆಪಸ್ತಂಬಮಹರ್ಷಿಯು **ಯತ್ರಾಭಿಜಾನಾತ್ಯಭೂದುಷಾ** ಇತ್ಯಾದಿ ಸೂಕ್ತವಾಕ್ಯ ಗಳಿಂದ ಕಾರ್ಯಕ್ರಮವನ್ನು ನಿರ್ದೇಶಿಸುವರು (ಆಪ. ಶ್ರೌ. ಸೂ. ೧೨-೫-೧,೨) ಆಶ್ವಲಾಯನರೂ ಸಹ ಹೋತೃಸಂಬಂಧವಾದ ಮಂತ್ರಾದಿಗಳ ಪಠನವಿಷಯದಲ್ಲಿ **ಪರಿಹಿತೇಽಪ ಇಷ್ಯ ಹೋತಃ** ಇತ್ಯಾದಿ ವಾಕ್ಯಗಳಿಂದ (ಆಶ್ವ. ಶ್ರೌ. ಸೂ. ೫-೧-೧)

ಕ್ರಮವನ್ನು ನಿರ್ದೇಶಿಸುವರು. ಅನಂತರ ಸೂಕ್ತದ ಹತ್ತು ಋಕ್ಕುಗಳ (೧ ರಿಂದ ೯ ಮತ್ತು ೧೧ ನೇ ಋಕ್ಕು) ಪಠನಾನಂತರ ಏಕಧನಾಪಾತ್ರೆಗಳಲ್ಲಿ ನೀರನ್ನು ತರುವುದಕ್ಕಾಗಿ ಹೊರಟ ಪುರುಷರು ತಮ್ಮ ತಮ್ಮ ಪಾತ್ರೆಗಳಲ್ಲಿ ನೀರನ್ನು ತುಂಬಿಕೊಂಡು ನದಿಯಿಂದ ಹಿಂತಿರುಗುವಾಗ ಹೋತೃವು ಸೂಕ್ತದ ಹತ್ತನೆಯ ಋಕ್ಕಾದ **ಆವರ್ವೃತತೀರಧ** (ಋ. ಸಂ. ೧೦-೩೦-೧೦) ಎಂಬ ಋಕ್ಕನ್ನು ಪಠಿಸುವನು.

**ಪ್ರತಿ ಯದಾಪೋ ಅದೃಶ್ರಮಾಯತೀರಿತಿ ಪ್ರತಿದೃಶ್ಯಮಾನಾಸು ಆ ಧೇನವಃ ಪಯಸಾ ತೂರ್ಣ್ಯರ್ಥಾ ಇತ್ಯುಪಾಯತೀಷು ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ಸಮಾಯತೀಷು ।**

ಋಗಂತರಕಾಲಂ ವಿಧತ್ತೇ । ತಾ ಏಕಧನಾಖ್ಯಾ ಆಪೋ ಗ್ರಹಣಸ್ಥಾನಾತ್ಪ್ರತಿನಿವೃತ್ಯ ತೈಃ ಪುರುಷೈರಾನೀಯಮಾನಾ ಯದಾ ಹೋತ್ರಾ ದೃಶ್ಯಂತೇ ತದಾನೀಂ ಪ್ರತಿ ಯದಾಪ ಇತ್ಯೇತಾಮೃಚಮನುಬ್ರೂಯಾತ್ । ಪುನರಪ್ಯೃಗಂತಕಾಲಂ ವಿಧತ್ತೇ । ಹೋತ್ರಾ ದೃಷ್ಟಾಸ್ತಾ ಏಕಧನಾಖ್ಯಾ ಆಪೋ ಯದಾ ಚಾತ್ವಾಲಸಮೀಪಂ ಪ್ರತ್ಯಾಗಚ್ಛಂತಿ ತದಾನೀಮುಪಾಯತೀಷು ಸಮೀಪಮಾಗಚ್ಛಂತೀಷು ತಾಸು ಆ ಧೇನವ ಇತ್ಯೇತಾಮೃಚಂ ಬ್ರೂಯಾತ್ । ಪುನರಪ್ಯೃಗಂತರಕಾಲಂ ವಿಧತ್ತೇ । ಪೂರ್ವತ್ರೋನ್ನೇತರ್ಹೋತೃಚಮಸೇನ ವಸತೀವರೀಭಿಶ್ಚ ಚಾತ್ವಾಲಂ ಪ್ರತ್ಯಾಸ್ಸ್ವೇತ್ಯಾಪಸ್ತಂಬಸೂತ್ರೋಕ್ತಃ ಪ್ರೈಷ ಉದಾಹೃತಸ್ತತ ಉನ್ನೇತಾ ಹೋತೃಸಂಬಂಧಿನಂ ಚಮಸಂ ವಸತೀವರ್ಯಾಖ್ಯಾಃ ಪೂರ್ವದಿನಾನೀತಾ ಅಪಶ್ಚಾತ್ವಾಲಸಮೀಪೇ ಸಮಾನಯತಿ । ಮೈತ್ರಾವರುಣಸ್ಯ ಚಮಸಾಧ್ವರ್ಯವಾದ್ರವೇತಿ ಪ್ರೇಷಿತತ್ವಾನ್ಮೈತ್ರಾವರುಣಸ್ಯ ಪರಿಚಾರಕಶ್ಚಮಸಾಧ್ವರ್ಯುರಪಿ ತದೀಯಂ ಚಮಸಂ ಚಾತ್ವಾಲಸಮೀಪೇ ಸಮಾನಯತಿ । ತೇನ ಹೋತೃಚಮಸೇನ ವಸತೀವರ್ಯೋ ಗೃಹ್ಯಂತೇ । ತತೋ ವಸತೀವರೀಸಹಿತೇ ಹೋತೃಚಮಸೇ ಮೈತ್ರಾವರುಣಚಮಸಗತಾಸ್ವೇಕಧನಾಸ್ವಧ್ವರ್ಯುಣಾ ಸಮೀಪನೀತಾಸು ಸಂಯೋಜಯಿತುಂ ಸಮಾಗತಾಸು ಸಮನ್ಯಾ ಯಂತೀತಾದಿಕಾಮೃಚಮನುಬ್ರೂಯಾತ್ । ತಮೇತಮನುವಚನಕಾಲಮಾಪಸ್ತಂಬೋ ವಿಶದಯತಿ--ಹೋತೃಚಮಸೇನ ವಸತೀವರೀಭ್ಯೋ ನಿಷಿಚ್ಯೋಪರಿ ಚಾತ್ವಾಲೇ ಹೋತೃಚಮಸಂ ಮೈತ್ರಾವರುಣಚಮಸಂ ಚ ಸಗ್ಗ್ಸ್ಪರ್ಶ್ಯ ವಸತೀವರೀರ್ವ್ಯಾನಯತಿ ಸಮನ್ಯಾ ಯಂತೀತ್ಯಭಿಜ್ಞಾಯ ಹೋತೃಚಮಸಾನ್ಮೈತ್ರಾವರುಣಚಮಸ ಆನಯತಿ ಮೈತ್ರಾವರುಣಚಮಸಾದ್ಧೋತೃಚಮಸ ಏತದ್ವಾ ವಿಪರೀತಮಿತಿ ।

ನೀರನ್ನು ಏಕಧನಾಪಾತ್ರೆಗಳಲ್ಲಿ ತುಂಬಿಕೊಂಡು ನದೀತೀರದಿಂದ ಹಿಂತಿರುಗಿ ಹೊರಟು ಬರುವಾಗ ನೀರಿನಿಂದ ತುಂಬಿದ ಆ ಏಕಧನಾಪಾತ್ರೆಗಳನ್ನು ಪುರುಷರು ಹೊತ್ತುಕೊಂಡು ಬರುತ್ತಿರುವುದನ್ನು ಹೋತೃವು ನೋಡಿದಾಗ **ಪ್ರತಿ ಯದಾಪಃ** (ಋ. ಸಂ. ೧೦-೩೦-೧೩) ಎಂಬ ಮಂತ್ರವನ್ನು ಪಠಿಸುವನು. ಆ ಏಕಧನಾಪಾತ್ರೆಗಳಲ್ಲಿರುವ ಉದಕಗಳು ಚಾತ್ವಾಲಪ್ರದೇಶವನ್ನು (ಚಾತ್ವಾಲವೆಂದರೆ ಉಪಯೋಗವಿಲ್ಲದ ವಸ್ತುಗಳನ್ನು ಬಿಸಾಡುವುದಕ್ಕಾಗಿ ತೋಡಿರುವ ಒಂದು ಸಣ್ಣ ಹಳ್ಳ ಅಥವಾ ಗುಂಡಿ) ತಲಪಿದಾಗ **ಆ ಧೇನವಃ ಪಯಸಾ** (ಋ. ಸಂ. ೫-೪೩-೪) ಎಂಬ ಮಂತ್ರವನ್ನು ಪಠಿಸುವನು.

ಇಲ್ಲಿ ವಿವರಣೆಯು ಅವಶ್ಯಕವು. **ಉನ್ನೇತರ್ಹೋತೃಚಮಸೇನ ವಸತೀವರೀಭಿಶ್ಚ ಚಾತ್ವಾಲಂ** (ಆಪ. ಶ್ರೌ. ಸೂ. ೧೨-೫-೨) ಎಂದು ಅಧ್ವರ್ಯುವು ಪ್ರೈಷಮಂತ್ರದಿಂದ ನಿರ್ದೇಶಿಸಿದ ಕೂಡಲೇ ಉನ್ನೇತೃವೆಂಬ ಋತ್ವಿಜನು ಹೋತೃ ಸಂಬಂಧವಾದ ಚಮಸವನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಹಿಂದಿನ ದಿನವೇ ಇಟ್ಟಿದ್ದ ನೀರನ್ನು ಚಾತ್ವಾಲದ ಸಮೀಪಕ್ಕೆ ಒಯ್ಯುವನು. ಅನಂತರ **ಮೈತ್ರಾವರುಣಸ್ಯ ಚಮಸಾಧ್ವರ್ಯ ವಾದ್ರವ** ಎಂಬ ಪ್ರೈಷಮಂತ್ರದಂತೆ ಮೈತ್ರಾವರುಣನೆಂಬ ಋತ್ವಿಜನ ಪರಿಚಾರಕನಾದ ಚಮಸಾಧ್ವರ್ಯುವು ಮೈತ್ರಾವರುಣಚಮಸವನ್ನೂ ಚಾತ್ವಾಲದ ಸಮೀಪಕ್ಕೆ ತರುವನು. ಇಲ್ಲಿ ಹೋತೃಚಮಸವೆಂದರೆವಸತೀವರೀಪಾತ್ರೆಯಲ್ಲಿರುವ ಉದಕಗಳು ಎಂದೂ ಮೈತ್ರಾವರುಣಚಮಸವೆಂದರೆ ಏಕಧನಾಪಾತ್ರೆಗಳಲ್ಲಿರುವ ಉದಕಗಳೂ ಎಂದೂ ತಿಳಿಯಬೇಕು. ಅನಂತರ ವಸತೀವರ್ಯುದಕಸಹಿತವಾದ ಹೋತೃಚಮಸದಲ್ಲಿ ಮೈತ್ರಾವರುಣ ಚಮಸಗಳಲ್ಲಿರುವ ಏಕಧನಾಪಾತ್ರೆಗಳ ಉದಕಗಳನ್ನು ಅಧ್ವರ್ಯುವು ಒಂದರಲ್ಲೊಂದನ್ನು ಪರಸ್ಪರ ಸೇರಿಸಿ ಮಿಶ್ರಮಾಡುವನು. ಮಿಶ್ರಮಾಡುವ ಕಾಲದಲ್ಲಿ ಹೋತೃವು **ಸಮನ್ಯಾ ಯಂತ್ಯುಪ** (ಋ. ಸಂ. ೨-೩೫-೩) ಎಂಬ ಋಕ್ಕನ್ನು ಪಠಿಸುವನು. ಈ ವಿಷಯವನ್ನು ಆಪಸ್ತಂಬಮಹರ್ಷಿಯು— **ಹೋತೃಚಮಸೇನ ವಸತೀವರೀಭ್ಯಃ** (ಆಪ. ಶ್ರೌ. ಸೂ. ೧೨-೬-೧,೨) ಎಂದು ಮೊದಲಾಗುವ ಸೂತ್ರದಿಂದ ಸ್ಪಷ್ಟವಾಗಿ ವಿವರಿಸುವರು. ಈ ಋಕ್ಕುಗಳ ವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು. ಅದನ್ನು ಇಲ್ಲಿ ವಿವರಿಸಲಾಗಿದೆ—

ಆಪೋ ವಾ ಅಸ್ಪರ್ಧಂತ ವಯಂ ಪೂರ್ವಂ ಯಜ್ಞಂ ವಕ್ಷ್ಯಾಮೋ ವಯಮಿತಿ ಯಾಶ್ಚೇಮಾಃ ಪೂರ್ವೇದ್ಯುರ್ವಸತೀವರ್ಯೋ ಗೃಹ್ಯಂತೇ ಯಾಶ್ಚ ಪ್ರಾತರೇಕಧನಾಸ್ತಾ ಭೃಗುರಪಶ್ಯದಾಪೋ ವೈ ಸ್ಪರ್ಧಂತ ಇತಿ ತಾ ಏತಯರ್ಚಾ ಸಮಜ್ಞಪಯತ್ಸಮನ್ಯಾ ಯಂತ್ಯುಪ ಯಂತ್ಯನ್ಯಾ ಇತಿ ತಾಃ ಸಮಜಾನತ ಸಂಜಾನಾನಾ ಹಾಸ್ಯಾಪೋ ಯಜ್ಞಂ ವಹಂತಿ ಯ ಏವಂ ವೇದ

ಏತಸ್ಯಾ ಋಚಃ ಪ್ರಶಂಸಾರ್ಥಮಾಖ್ಯಾಯಿಕಾಮಾಹ । ಪೂರ್ವೇದ್ಯುಃ ಸಂಪಾದಿತಾ ವಸತೀವರ್ಯಾಖ್ಯಾ ಯಾ ಆಪೋ ಯಾಶ್ಚ ಪರೇದ್ಯುಃ ಸಂಪಾದಿತಾ ಏಕಧನಾಖ್ಯಾಸ್ತಾ ಉಭಯವಿಧಾ ಅಪಿ ಯಜ್ಞನಿರ್ವಹಣೇ ಪೂರ್ವಭಾವಿತ್ವಾರ್ಥಮನ್ಯೋನ್ಯಂ ಸ್ಪರ್ಧಾಂ ಕೃತವತ್ಯಃ । ತದಾನೀಂ ಭೃಗುನಾಮಕ ಋಷಿರಾಪ ಏವ ಪರಸ್ಪರಂ ಸ್ಪರ್ಧಂತ್ಯ ಇತ್ಯಪಶ್ಯತ್ । ಅರ್ಥವಾದತ್ವಾದಚೇತನಾನಾಂ ಸ್ಪರ್ಧಾಯಾಂ ನ ಚೋದನೀಯಂ । ಯದಾ ತತ್ತದಭಿಮಾನಿನೀ ದೇವತಾಸ್ಪರ್ಧತೇತ್ಯವಗಂತವ್ಯಂ । ತತೋ ಭೃಗುಃ ಸ್ಪರ್ಧಾಂ ದೃಷ್ಟ್ವಾ ಸಮನ್ಯಾ ಯಂತೀತ್ಯೇತಯರ್ಚಾ ತಾ ಉಭಯೀರಪಃ ಸಮಜ್ಞಪಯತ್ಸಂಜ್ಞಾನಂ ಪರಸ್ಪರಮೈಕಮತ್ಯಂ ಪ್ರಾಪಯತ್ । ತತೋ ಮಂತ್ರಸಾಮರ್ಥ್ಯಾತ್ತಾ ಉಭಯವಿಧಾ ಆಪಃ ಸಮಜಾನತೈಕಮತ್ಯಂ ಪ್ರಾಪ್ತಾಃ । ವೇದನಂ ಪ್ರಶಂಸತಿ । ಯಾ ವಸತೀವರ್ಯೋ ಯಾಶ್ಚೈಕಧನಾಸ್ತಾ ದ್ವಿವಿಧಾ ಅಪಿ ಸಂಜಾನಾನಾಃ ಪರಸ್ಪರೈಕಮತ್ಯಂ ಪ್ರಾಪ್ತಾ ಅಸ್ಯ ವಿದುಷೋ ಯಜ್ಞಂ ನಿರ್ವಹಂತಿ ॥

ಸೋಮಾಭಿಷವಣಕ್ಕೆ ಹಿಂದಿನ ದಿನವೇ ತಂದ ನೀರನ್ನು ವಸತೀವರೀ ಎಂಬ ಪಾತ್ರೆಯಲ್ಲಿ ಶೇಖರಿಸಿಟ್ಟಿರುವರು. ಸೋಮಾಭಿಷವಣದ (ಸೋಮರಸವನ್ನು ಹಿಂಡುವ) ದಿನವೇ ಎಂದರೆ ಆದಿನ ಪ್ರಾತಃಕಾಲದಲ್ಲಿ ನದಿಯಿಂದ ಹೊಸದಾಗಿ ಆಗತಾನೇ

ತಂದ ನೀರನ್ನು ಏಕಧನಾ ಎಂಬ ಪಾತ್ರೆಗಳಲ್ಲಿ ತುಂಬಿಟ್ಟಿರುವರು. ಈ ಎರಡುವಿಧ ಪಾತ್ರೆಗಳಲ್ಲಿದ್ದ ಉದಕಗಳು ಪೂರ್ವದಲ್ಲಿ ಯಜ್ಞನಿರ್ವಹಣೆಯ ವಿಷಯದಲ್ಲಿ ಪರಸ್ಪರ ಅಸೂಯೆಯಿಂದ ಸ್ಪರ್ಧಿಸಿದವು. ಎಂದರೆ ತಾವೇ ಮೊದಲು ಯಜ್ಞನಿರ್ವಹಣೆ ಮಾಡಲು ಶಕ್ತರೆಂದು ವಸತೀವರ್ಯುದಕಗಳೂ (ಅಥವಾ ಆ ಉದಕಾಭಿಮಾನಿದೇವತೆಗಳೂ) ತಮಗೆ ಹೆಚ್ಚಿನ ಶಕ್ತಿ ಇರುವುದೆಂದೂ ಅದರಂತೆ ಏಕಧನಾ ಪಾತ್ರೆಗಳಲ್ಲಿರುವ ಉದಕಗಳು ತಮಗೇ ಹೆಚ್ಚಿನ ಶಕ್ತಿ ಇರುವುದೆಂದೂ ಪರಸ್ಪರ ಸ್ಪರ್ಧೆಯಿಂದ ಹೋರಾಡುತ್ತಿದ್ದುದನ್ನು ಭೃಗುವೆಂಬ ಋಷಿಯು ನೋಡಿ **ಸಮನ್ಯಾ ಯಂತಿ** (ಋ ಸಂ ೨-೩೫-೩) ಎಂಬ ಋಕ್ಕನ್ನು ಪಠಿಸಿ ಆ ಎರಡು ವಿಧವಾದ ಉದಕಗಳಿದ್ದ ಪರಸ್ಪರ ವೈಷಮ್ಯವನ್ನು ಪರಿಹರಿಸಿ ಅವುಗಳನ್ನು ಸಾಂತ್ವವಚನಗಳಿಂದ ಸಮಾಧಾನಮಾಡಿ ಅವುಗಳಿಗೆ ಪರಸ್ಪರ ಏಕಮತ್ಯವನ್ನುಂಟುಮಾಡಿದನು. ಆ ಮಂತ್ರಸಾಮರ್ಥ್ಯದಿಂದ ಆ ಉಭಯವಿಧ ಉದಕಗಳು ತಮ್ಮ ತಮ್ಮ ವಿವಾದಗಳನ್ನು ಬದಿಗೊತ್ತಿ ಯಜ್ಞನಿರ್ವಹಣಕಾಯದಲ್ಲಿ ಏಕಮತ್ಯದಿಂದ ಪ್ರವರ್ತಿಸತೊಡಗಿದವು. ಈ ವಿಷಯವನ್ನು ತಿಳಿದಿರುವ ಯಜಮಾನನು ತನ್ನ ಯಜ್ಞಕಾರ್ಯಗಳನ್ನು ವಿವಾದಾದಿಗಳಿಲ್ಲದೆ ಪರಸ್ಪರ ಏಕಮತ್ಯದಿಂದ ನಿರ್ವಿಘ್ನವಾಗಿ ನೆರವೇರಿಸಲು ಶಕ್ತನಾಗುವನು.

ಆಪೋ ನ ದೇವೀರುಪಯಂತಿ ಹೋತ್ರಿಯಮಿತಿ ಹೋತೃಚಮಸೇ
ಸಮವನೀಯಮಾನಾಸ್ವನ್ವಾಹ ವಸತೀವರೀಷ್ವೇಕಧನಾಸು ಚ

ಋಗಂತರಕಾಲಂ ವಿಧತ್ತೇ । ಏತಾಸು ದ್ವಿವಿಧಾಸ್ವಪ್ಸು ಹೋತೃಚಮಸೇ ಸಿಚ್ಯಮಾನಾಸು ತಸ್ಮಿನ್ಕಾಲ ಆಪೋ ನ ದೇವೀರಿತ್ಯೇತಾಮೃಚಮನುಬ್ರೂಯಾತ್ ॥

ವಸತೀವರೀ ಮತ್ತು ಏಕಧನಾಪಾತ್ರೆಗಳಲ್ಲಿದ್ದ ಉಭಯ ಉದಕಗಳನ್ನು ಹೋತೃಚಮಸದಲ್ಲಿ ಸುರಿದಮೇಲೆ ಹೋತೃವು **ಆಪೋ ನ ದೇವೀರುಪಯಂತಿ** (ಋ.ಸಂ ೧-೮೩-೨) ಎಂಬ ಮಂತ್ರವನ್ನು ಪಠಿಸುವನು.

ಅಪೇರಪೋಽಧ್ವರ್ಯಾ೩ ಉ ಇತಿ ಹೋತಾಧ್ವರ್ಯುಂ ಪೃಚ್ಛತಿ ।
ಆಪೋ ವೈ ಯಜ್ಞೋಽವಿದೋ ಯಜ್ಞಾಂ೩ ಇತ್ಯೇ ವ ತದಾಹ
ಉತೇಮನನ್ನಮುರಿತ್ಯಧ್ವರ್ಯುಃ ಪ್ರತ್ಯಾಹ ಉತೇಮಾಃ
ಪಶ್ಯೇತ್ಯೇವ ತದಾಹ ॥

ಅಥ ಹೋತುಃ ಕಂಚಿದ್ಯಜುರಾತ್ಮಕಂ ಮಂತ್ರಂ ವಿಧತ್ತೇ । ಹೇ ಅಧ್ವರ್ಯೋ ದ್ವಿವಿಧಾ ಅಪಃ ಕಿಮವೇರ್ಲಬ್ಧವಾನಸಿ । ಅಸ್ಮಿನ್ಮಂತ್ರೇ ಪ್ಲುತಿಃ ಪ್ರಶ್ನಾರ್ಥಾ । ತಮೇತಂ ಮಂತ್ರಂ ವ್ಯಾಚಷ್ಟೇ । ಏತದ್ದ್ವಿವಿಧಾ ಅಪ್ಯಾಪಃ ಸೋಮಾಭಿಷವಸಾಧನತ್ವೇನ ಯಜ್ಞನಿರ್ವಾಹಕತ್ವಾದ್ಯಜ್ಞಸ್ವರೂಪಾ ಏವ । ತಥಾ ಸತಿ ಯಜ್ಞಮಬ್ರೂಪಮವಿದಃ ಕಿಂ ಲಬ್ಧವಾನಸೀತ್ಯನೇನ ಪ್ರಕಾರೇಣ ತದಾಹ ತನ್ಮಂತ್ರವಾಕ್ಯಂ ಬ್ರೂತೇ । ಯಜ್ಞಾ೩ ಮಿತಿ ಪ್ಲುತಿಃ ಪೂರ್ವವತ್ । ಅಧ್ವರ್ಯೋಃ ಪ್ರತ್ಯುತ್ತರಮಂತ್ರಂ ವಿಧತ್ತೇ । ಉತಶಬ್ದೋಽಪಿಶಬ್ದಾರ್ಥಃ । ಈಮಿತಿ ವಾಕ್ಯಪೂರಣಾರ್ಥೋ ನಿಪಾತ ಇಮಾ ಇತ್ಯಸ್ಮಿನ್ನರ್ಥೇ ವರ್ತತೇ । ಇಮಾ ದ್ವಿವಿಧಾ ಅಪ್ಯಾಪೋಽನನ್ನಮುರತಿಶಯೇನೋಪನತಾಃ ಪ್ರಾಪ್ತಾ ಇತಿ । ಏತಮಧ್ವರ್ಯೋರುತ್ತರಮಂತ್ರಂ

ವ್ಯಾಚಷ್ಟೇ । ಇಮಾ ದ್ವಿವಿಧಾ ಅಪ್ಯಪೋ ಹೇ ಹೋತಃ ಪಶ್ಯೇತ್ಯನೇನ ಪ್ರಕಾರೇಣ ತನ್ಮಂತ್ರ-ವಾಕ್ಯಂ ಬ್ರೂತೇ । ಶಾಖಾಂತರೇಽಪ್ಯೇತತ್ಸರ್ವಂ ಶ್ರುತಂ । ಅಧ್ವರ್ಯೋಽವೇರಪಾ ಇತ್ಯಾ-ಹೋತೇಮುನನ್ನಮುರುತೇಮಾಃ ಪಶ್ಯೇತಿ ವಾವೈತದಾಹೇತಿ ।

ಅನಂತರ ಹೋತೃವು ಬಂದು ಯಜುರ್ಮಂತ್ರವನ್ನು ಪಠಿಸಿ (ತೈ. ಸಂ ೯-೪-೩-೪) ಅಧ್ವರ್ಯುವನ್ನು ಕುರಿತು—ಎಲೈ ಅಧ್ವರ್ಯುವೇ, ಈಗ ನೀನು ಎರಡು ವಿಧವಾದ ಉದಕಗಳನ್ನು ಪಡೆದಿದ್ದೀಯಲ್ಲವೇ? ಎಂದು ಪ್ರಶ್ನಿಸುವನು (ಇಲ್ಲಿ ಪ್ಲುತವು ಪ್ರಶ್ನಾರ್ಥವನ್ನು ಸೂಚಿಸುವುದು) ಎರಡುವಿಧ ಉದಕಗಳೆಂದರೆ ಹಿಂದೆ ಹೇಳಿದಂತೆ ವಸತೀವರೀ ಮತ್ತು ಏಕಧನಾಪಾತ್ರೆಗಳಲ್ಲಿರುವ ಉದಕಗಳು. ಈ ಉದಕಗಳು ಸೋಮಾಭಿಷವಣಕಾಲದಲ್ಲಿ ಯಜ್ಞನಿರ್ವಹಣೆಗಾಗಿ ಉಪಯೋಗಿಸಲ್ಪಡುವವು. ಆದ್ದರಿಂದ ಯಜ್ಞವು ಅಬ್ರೂಪ ಎಂದರೆ ಉದಕಸ್ವರೂಪವೆಂದು ಹೇಳಲ್ಪಡುವುದು. ಈ ಪ್ರಶ್ನೆಗೆ ಅಧ್ವರ್ಯುವು ಉತ್ತರವೀಯುತ್ತಾ ಎಲೈ ಹೋತೃವೇ ನೀನು ಕೇಳಿದ ಎರಡುವಿಧ ಉದಕಗಳನ್ನು ಯಜ್ಞನಿರ್ವಹಣಾರ್ಥವಾಗಿ ನಾನು ಪಡೆದಿರುವೆನು, ನೋಡು ಎಂದು ಹೇಳುವನು—ಈ ವಿಷಯವು ಶಾಖಾಂತರದಲ್ಲಿ ಎಂದರೆ ತೈತ್ತಿರೀಯಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು—**ಅಧ್ವರ್ಯೋಽವೇರಪಾ ಇತ್ಯಾಹೋತೇಮುನನ್ನಮುರುತೇಮಾಃ ಪಶ್ಯೇತಿ ವಾವೈತದಾಹ** (ತೈ. ಸಂ. ೯-೪-೩-೪)

ತಾಸ್ವಧ್ವರ್ಯೋ ಇಂದ್ರಾಯ ಸೋಮಂ ಸೋತಾ ಮಧುಮಂತಂ ವೃಷ್ಟಿವನಿಂ ತೀವ್ರಾಂತಂ ಬಹುರಮಧ್ಯಂ ವಸುಮತೇ ರುದ್ರ-ವತ ಆದಿತ್ಯವತ ಋಭುಮತೇ ವಿಭುಮತೇ ವಾಜವತೇ ಬೃಹಸ್ಪ-ತಿವತೇ ವಿಶ್ವದೇವ್ಯಾವತೇ । ಯಸ್ಯೇಂದ್ರಃ ಪೀತ್ವಾ ವೃತ್ರಾಣಿ ಜಂಘನತ್ಪ್ರ ಸ ಜನ್ಯಾನಿ ತಾರಿಷೋ ೩ ಮಿತಿ ಪ್ರತ್ಯುತ್ತಿಷ್ಠತಿ ॥

ಅಥ ಕಿಂಚಿನ್ನಿಗದರೂಪೇಣ ಮಂತ್ರೇಣ ಹೋತುಃ ಪ್ರತ್ಯುತ್ಥಾನಂ ವಿಧತ್ತೇ । ತಾಸ್ವಿ-ತ್ಯಾದಿರೋಮಿತ್ಯಂತೋ ನಿಗದಸ್ತೇನ ಮಂತ್ರೇಣ ಹೋತಾ ದ್ವಿವಿಧಾನಾಮಪ್ಯಪಾಂ ಪ್ರತ್ಯು-ತ್ಥಾನಂ ಕುರ್ಯಾತ್।ಹೇ ಅಧ್ವರ್ಯೋ ದ್ವಿವಿಧಾಸ್ವಪ್ಸು ಸೋಮಂ ಸೋತಾ ಸೋಮಸ್ಯಾಭಿಷ-ವಕರ್ತಾ ಭವ । ಕೀದೃಶಂ ಸೋಮಂ ಮಧುಮಂತಂ ಮಾಧುರ್ಯರಸೋಪೇತಂ ವೃಷ್ಟಿವನಿಂ ವೃಷ್ಟೇಃ ಸಂಭಜನಕರ್ತಾರಂ ವೃಷ್ಟಿಪ್ರದಮಿತ್ಯರ್ಥಃ । ತೀವ್ರಾಂತಂ ತೀವ್ರಮವಶ್ಯಂಭಾವಿ ಫಲ-ಮಂತೇ ಯಸ್ಯ ಸೋಮಸ್ಯ ಸೋಽಯಂ ತೀವ್ರಾಂತಃ । ಅವಿಘ್ನೇನ ಸೋಮಯಾಗೇ ಸಮಾಪ್ತೇ ಸತಿ ಸರ್ವಥಾ ಫಲತ್ಯೇವೇತ್ಯರ್ಥಃ । ಬಹುರಮಧ್ಯಂ ಬಹುಲಮಂಗಾದಿಕಮನುಷ್ಠಾನಂ ಮಧ್ಯೇ ಪ್ರಾರಂಭಸಮಾಪ್ತ್ಯೋರಂತರಾಲೇ ಯಸ್ಯಾಸೌ ಬಹುರಮಧ್ಯಃ । ಋತ್ವಿಗ್ವರಣಮಾರಭ್ಯೋದ-ವಸಾನೀಯೇಷ್ಟೇಃ ಪೂರ್ವಂ ದೀಕ್ಷಣೀಯಾದ್ಯಂಗಕರ್ಮಭಿರುಪಾಂಶ್ವಂತರ್ಯಾಮಗ್ರಹಾದಿ-ಭಿಶ್ಚ ಪ್ರಧಾನೈರನುಷ್ಠಾನಬಾಹುಲ್ಯಂ ಪ್ರಸಿದ್ಧಂ । ಕೀದೃಶಾಯೇಂದ್ರಾಯ । ವಸುರುದ್ರಾ-ದಿತ್ಯೈರನ್ಯೈರಪ್ಯೃಭುಭಿರ್ದೇವೈರ್ವಿಭುಭಿಃ ಸಮರ್ಥೈರ್ಭೃತ್ಯೈರ್ವಾಜೇನಾನ್ನೇನ ಬೃಹಸ್ಪತಿನಾ ಸರ್ವದೇವಹಿತೈರ್ಭಾಗ್ಯೈಶ್ಚ ಯುಕ್ತಸ್ತೇನ ವಸ್ವಾದಿಮತೇ ಅಯಮಿಂದ್ರೋ ಯಸ್ಯ ಸೋಮಸ್ಯ ವಲ್ಲೀರೂಪಸ್ಯ ರಸಂ ಪೀತ್ವಾ ವೃತ್ರಾಣಿ ಯಜಮಾನಸ್ಯ ಶತ್ರೂನ್ಪಾಪಾನಿ ಚ

**ಜಂಘನದ್ವಿನಾಶಿತವಾಂಸ್ತಾದೃಶಂ ಸೋಮಮಿತಿ ಪೂರ್ವತ್ರಾನ್ವಯಃ । ಅಥವಾ ಯಸ್ಯ ಯಜಮಾನಸ್ಯ ಸಂಬಂಧಿನಂ ಸೋಮಂ ಪೀತ್ವೇತಿ ವ್ಯಾಖ್ಯೇಯಂ । ಸ ಯಜಮಾನೋ ಜನ್ಯಾನಿ ಜನೇ ಸಂಭಾವಿತಾನಿ ಪಾಪಾನಿ ಪ್ರತಾರಿಷತ್ಪ್ರಕರ್ಷೇಣ ತೀರ್ಣವಾನ್ಭವತಿ । ಓಮಿತ್ಯಂಗೀಕಾರಾರ್ಥಃ । ಅಯಂ ಯುಕ್ತಾರ್ಥ ಏವಮೇವೇತ್ಯಂಗೀಕಾರಾರ್ಥಃ ।**

ಈ ಮೇಲಿನ ಮಂತ್ರವನ್ನು ಪಠಿಸಿ ಹೋತೃವು ಉದಕಾಭಿಮಾನಿ ದೇವತೆಗಳನ್ನುದ್ದೇಶಿಸಿ ಪ್ರತ್ಯುತ್ಥಾನವನ್ನು ಮಾಡಬೇಕು, ಎಂದರೆ ಎದ್ದುನಿಂತುಕೊಂಡು ಪ್ರಾರ್ಥಿಸಬೇಕು. ಎಲೈ ಅಧ್ವರ್ಯುವೇ, ಈಗ ನೀನು ಪಡೆದಿರುವ ವಸತೀವರೀ ಮತ್ತು ಏಕಧನಾ ಎಂಬ ಎರಡುವಿಧ ಉದಕಗಳ ಸಹಾಯದಿಂದ ಸೋಮಾಭಿಷವವನ್ನು ಮಾಡು ಎಂದರೆ ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆದು ಇಂದ್ರನ ಪಾನಾರ್ಥವಾಗಿ ಸಿದ್ಧಪಡಿಸು. ಸೋಮರಸವು ಹೇಗಿರಬೇಕೆಂದರೆ--ಮಧುರ (ಸಿಹಿ) ರಸದಿಂದ ಯುಕ್ತವಾಗಿ ಸಿಹಿಯಾಗಿಯೂ, ವೃಷ್ಟಿ (ಮಳೆ)ಯನ್ನುಂಟುಮಾಡುವುದಾಗಿಯೂ, ಬೇಗನೆ ಫಲವನ್ನು ಕೊಡುವುದಾಗಿಯೂ, ಅನೇಕವಿಧವಾದ ಕರ್ಮಾಂಗಯುಕ್ತವಾಗಿಯೂ ಇರಬೇಕು. ಇಲ್ಲಿ **ಮಧುಮಂತಂ** ಎಂಬ ಶಬ್ದಕ್ಕೆ ಸೋಮರಸವು ಜೇನುತುಪ್ಪದಂತೆ ಸಿಹಿಯಾಗಿರಬೇಕು ಅಥವಾ ರುಚಿಕರವಾಗಿರಬೇಕು. **ವೃಷ್ಟಿವನಿಂ** ವೃಷ್ಟಿಪ್ರದವಾದುದು ಎಂದರೆ ಈ ಸೋಮಪಾನದಿಂದ ಇಂದ್ರನು ತೃಪ್ತನಾಗಿ ಆ ಹರ್ಷದಿಂದ ಮೇಘಗಳನ್ನು ನೀಳ ವೃಷ್ಟಿಯನ್ನು ಸುರಿಸುವಂತೆ ಮಾಡುವನು. **ತೀವ್ರಾಂತಂ** ವಿಘ್ನರಹಿತವಾಗಿ ಯಜ್ಞವು ಸಮಾಪ್ತಿಯಾಗಿ ಅದರ ಫಲವು ಬೇಗನೆ ಪ್ರಾಪ್ತವಾಗುವುದು ಎಂದರ್ಥವು. ಬಹುರ (ಲ) ಮಧ್ಯಂ— ಯಜ್ಞದಲ್ಲಿ ಅನೇಕವಿಧವಾದ ಉಪಕರ್ಮಗಳಿರುವವು. ಋತ್ವಿಗ್ವರಣದಿಂದ ಪ್ರಾರಂಭವಾಗಿ ಸಮಾಪ್ತಿಯವರೆಗೆ ಅನೇಕವಿಧ ಯಜ್ಞಾಂಗಕರ್ಮಗಳಿರುವವು. ಆದ್ದರಿಂದ ಈ ಅನೇಕ ಕರ್ಮಗಳ ನಿರ್ವಹಣೆಗೆ ಸಾಧನವಾದ ಸೋಮರಸವು ಈವಿಧ ಗುಣಗಳುಳ್ಳ ಸೋಮರಸವನ್ನು ಇಂದ್ರನ ಪಾನಾರ್ಥವಾಗಿ ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು. ಈ ಸೋಮರಸವು ಇಂದ್ರನಿಗೊಬ್ಬನಿಗೆ ಮಾತ್ರವೇ ಎಂದರೆ, ಇಂದ್ರನಿಗೂ ಇಂದ್ರನೊಡನಿರುವ ಇತರ ದೇವತೆಗಳಿಗೂ ಪಾನಾರ್ಥವಾಗಿ ಎಂದರ್ಥವು. ಆ ದೇವತೆಗಳು ಯಾರಾರೆಂದರೆ--**ವಸುಮತೇ ರುದ್ರವತೇ ಆದಿತ್ಯವತೇ ಋಭುಮತೇ ವಿಭುಮತೇ ವಾಜವತೇ ಬೃಹಸ್ಪತಿವತೇ ವಿಶ್ವದೇವ್ಯಾವತೇ ।** ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಋಭು, ವಿಭು, ವಾಜ ಎಂಬ ಮೂರುಮಂದಿ (ಸಹೋದರರಾದ) ಋಭುಗಳು, ಬೃಹಸ್ಪತಿಯು, ವಿಶ್ವೇದೇವತೆಗಳು. ಈ ಮೊದಲಾದ ದೇವತೆಗಳಿಂದ ಸಹಿತನಾದ ಇಂದ್ರನ ಪಾನಾರ್ಥವಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸು ಎಂದಭಿಪ್ರಾಯವು. ಇಂತಹ ಸೋಮರಸವನ್ನು ಪಾನಮಾಡಿ ಇಂದ್ರನು ಯಜ್ಞಮಾಡುವ ಯಜಮಾನನ ಶತ್ರುಗಳನ್ನೂ ಪಾಪಗಳನ್ನೂ ನಾಶಮಾಡಲು ಸಮರ್ಥನಾಗುವನು. ಅಂತಹ ಸೋಮರಸವನ್ನು, ಎಲೈ ಅಧ್ವರ್ಯುವೇ, ನೀನು ಸಿದ್ಧಪಡಿಸು ಎಂದು ಮಂತ್ರಾಭಿಪ್ರಾಯವು. ಈ ಮಂತ್ರವನ್ನು ಪಠಿಸಿ ಕೊನೆಯಲ್ಲಿ ಓಂ ಎಂಬ ಪ್ರಣವಮಂತ್ರವನ್ನು ಪಠಿಸಿ ಹೋತೃವು ಎದ್ದುನಿಂತುಕೊಂಡು ಪ್ರಾರ್ಥಿಸುವನು.

**ಪ್ರತ್ಯುತ್ಥೇಯಾ ವಾ ಆಪಃ ಪ್ರತಿ ವೈ ಶ್ರೇಯಾಂಸಮಾಯಂತಮುತ್ತಿ-ಷ್ಠಂತಿ ತಸ್ಮಾತ್ಪ್ರತ್ಯುತ್ಥೇಯಾಃ ಅನುಪರ್ಯಾವೃತ್ಯಾಃ ಅನು ವೈ ಶ್ರೇಯಾಂಸಂ ಪರ್ಯಾವರ್ತಂತೇ ತಸ್ಮಾದನುಪರ್ಯಾವತ್ಯಾಃ ಅನುಬ್ರುವತ್ಯೈವಾನುಪ್ರಪತ್ಯವ್ಯಂ ।**

**ಏತನ್ಮಂತ್ರಸಾಧ್ಯಂ ಪ್ರತ್ಯುತ್ಥಾನಮುಪಪಾದಯತಿ । ಯಾಶ್ಚ ದ್ವಿವಿಧಾ ಆಪಸ್ತಾಃ ಪ್ರತ್ಯುತ್ಥೇಯಾ ಏವ । ದರ್ಶನಾನಂತರಮೇವ ಪ್ರತ್ಯುತ್ಥಾನಂ ಕರ್ತವ್ಯಂ । ಲೋಕೇಽಪಿ**

**ಶ್ರೇಯಾಂಸಮತಿಪ್ರಶಸ್ತಮಾಚಾರ್ಯಪಿತ್ರಾದಿಕಮಾಯಾಂತಂ ಸ್ವಸಂಮುಖತ್ವೇನ ಸಮಾಗಚ್ಛಂತಂ ಪ್ರತಿ ಶಿಷ್ಯಪುತ್ರಾದಯ ಉತ್ತಿಷ್ಠಂತ್ಯೇವ । ತಸ್ಮಾದತಿಪ್ರಶಸ್ತಾ ಆಪಃ ಪ್ರತ್ಯುತ್ಥಾನಯೋಗ್ಯಾಃ । ನ ಕೇವಲಂ ಪ್ರತ್ಯುತ್ಥಾನಂ ಕಿಂ ತ್ವನುವರ್ತನಮಪಿ ಕರ್ತವ್ಯಮಿತಿ ವಿಧತ್ತೇ । ಅನು ಪೃಷ್ಠತಃ ಪರ್ಯಾವೃತ್ತ್ಯಾಃ ಪರಿತಃ ಸಂಚರಣಯೋಗ್ಯಾ ದ್ವಿವಿಧಾ ಆಪಃ । ತದೇತದುಪಪಾದಯತಿ । ಶ್ರೇಯಾಂಸಮಾಚಾರ್ಯಾದಿಕಮನುಗಮ್ಯ ಶಿಷ್ಯಾದಯಃ ಪರಿತಃ ಸಂಚರಂತಿ ತಸ್ಮಾದತ್ರಾಪಿ ಶಿಷ್ಯಸ್ಥಾನೀಯೇನ ಹೋತ್ರಾ ಪೂರ್ವೋಕ್ತಮಪೋನಪ್ತ್ರೀಯಂ ನಿಗದಮನುಬ್ರುವತೈವ ತಾಸಾಮಪಾಂ ಪೃಷ್ಠತೋಽನುಗಂತವ್ಯಂ ॥**

ಈ ಎರಡುವಿಧ ಉದಕಗಳಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಎದ್ದು ನಿಲ್ಲಬೇಕು. ಲೋಕವ್ಯವಹಾರದಲ್ಲಿ ಯಾರಾದರೂ ದೊಡ್ಡವರು ಬಂದರೆ, ಎಂದರೆ ಗುರುಗಳು, ಹಿರಿಯರು, ತಂದೆ ಮೊದಲಾದವರು ಬಂದರೆ ಅವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಶಿಷ್ಯ, ಪುತ್ರ ಮೊದಲಾದವರು ಎದ್ದು ನಿಲ್ಲುವುದು ರೂಢಿಯಷ್ಟೆ. ಆದರಂತೆ ಇಲ್ಲಿಯೂ ಪೂಜಾರ್ಹವಾದ ಯಜ್ಞಕರ್ಮಗಳಿಗೆ ಅತ್ಯವಶ್ಯಕಗಳಾದ ಈ ಎರಡುವಿಧ ಉದಕಗಳಿಗೆ ಗೌರರವವನ್ನು ಸೂಚಿಸುವುದಕ್ಕಾಗಿ ಋತ್ವಿಗಾದಿಗಳು ಎದ್ದು ನಿಲ್ಲಬೇಕು ಅಷ್ಟೇ ಅಲ್ಲ. ಗೌರವಾರ್ಹರಾದವರು ಅತ್ತಿತ್ತ ಸಂಚರಿಸುವಾಗ ಅವರನ್ನು ಅನುಸರಿಸಿ ಅವರ ಹಿಂದೆ ಇದ್ದು ವಿನಯದಿಂದ ಮರ್ಯಾದೆಮಾಡುವುದೂ ಸಹಜವಾಗಿದೆ. ಅದರಂತೆ ಇಲ್ಲಿಯೂ ಮಾಡಬೇಕೆಂದಭಿಪ್ರಾಯವು.

**ಈಶ್ವರೋ ಹ ಯದ್ಯಪ್ಯನ್ಯೋ ಯಜೇತಾಥ ಹೋತಾರಂ ಯಶೋಽ-<br>ರ್ತೋಸ್ತಸ್ಮಾದನುಬ್ರುವತೈವಾನುಪ್ರಪತ್ತವ್ಯಂ ॥**

**ಯದ್ಯಪಿ ಹೋತಾ ಯಾಗಕರ್ತಾ ನ ಭವತ್ಯಥಾಪ್ಯನುವ್ರಜಂತಂ ಹೋತಾರಂ ಯಶಃ ಕೀರ್ತಿರರ್ತೋರೀಶ್ವರೋ ಹ ಪ್ರಾಪ್ತುಂ ಸಮರ್ಥೈವ । ತಸ್ಮಾತ್ಕೀರ್ತಿಹೇತುತ್ವಾದನುಬ್ರುವತೈವ ಹೋತ್ರಾ ತಾಸಾಮಪಾಮನುಗಮನಂ ಕರ್ತವ್ಯಂ ।**

ಒಂದುವೇಳೆ ಹೋತೃವು ಯಜ್ಞದಲ್ಲಿ ಭಾಗವಹಿಸುವವನಲ್ಲವಾದರೂ ಮಂತ್ರವನ್ನು ಪಠಿಸುವ ಹೋತೃವು ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿ ಹೋದಲ್ಲಿ ಅವನಿಗೆ ಕೀರ್ತಿಯೂ ಪ್ರಾಧಾನ್ಯತೆಯೂ ಲಭಿಸುವುದು. ಆದ್ದರಿಂದ ಮಂತ್ರಪಠನಮಾಡುವವರು ಅವಶ್ಯಕವಾಗಿ ಆ ಉದಕಗಳನ್ನು ಅನುಸರಿಸಿ ಹೋಗಬೇಕು. ಹೀಗೆ ಅನುಸರಿಸಿ ಹೋಗುವ ಕಾಲದಲ್ಲಿ ಈ ಕರ್ಮದಲ್ಲಿ ಇನ್ನು ಪಠಿಸದಿರುವ—

**ಅಂಬಯೋ ಯಂತ್ಯಧ್ವಭಿರಿತ್ಯೇತಾಮನು ಬ್ರುವನ್ನನು ಪ್ರಪದ್ಯೇತ ।<br>ಜಾಮಯೋ ಅಧ್ವರಿಯತಾಂ । ಪೃಂಚತೀರ್ಮಧುನಾ ಪಯ<br>ಇತಿ ಯೋಽಮಧ್ಯನ್ವೋ ಯಶೋಽರ್ತೋರ್ಬುಭೂಷೇತ್ ।**

**ನನು ಪ್ರ ದೇವತ್ರೇತ್ಯಾದೀನಾಮೃಚಾಂ ತಾಸ್ವಧ್ವರ್ಯವಿತ್ಯಾದಿನಿಗದಸ್ಯ ಚ ಪೂರ್ವಮೇವಾನೂಕ್ತತ್ವಾದಿತಃ ಪರಮನುಗಮನಕಾಲೇ ಕಿಮನುವಕ್ತವ್ಯಮಿತ್ಯಾಶಂಕ್ಯಾನುವಕ್ತವ್ಯಾಮವಶಿಷ್ಟಾಮೃಚಂ ವಿಧತ್ತೇ । ಅಸ್ಯಾ ಋಚೋ ದ್ವಿತೀಯತೃತೀಯಪಾದಾವನುವದತಿ-ತಸ್ಯಾಯಮರ್ಥಃ । ಅಂಬೇತ್ಯವ್ಯಯಂ ಮಾತೃವಾಚಕಂ ತದ್ರೂಪತ್ವಂ ಯಾತೀತ್ಯಂಬಯಾಃ ।**

ಛಾಂದಸೋ ಹ್ರಸ್ವಃ । ಮಾತೃಸಮಾನಾ ಏತಾ ದ್ವಿವಿಧಾ ಆಪೋಽಧ್ವಭಿರ್ನಾನಾವಿಧೈರ್ಮಾರ್ಗೈ-ರ್ಯಂತಿ ಗಚ್ಛಂತಿ । ಕೀದೃಶ್ಯಃ । ಅಧ್ವರೀಯತಾಮಧ್ವರಂ ಯಜ್ಞಮಾತ್ಮನ ಇಚ್ಛತಾಂ ಯಜ-ಮಾನಾನಾಂ ಜಾಮಯಃ ಸನಾಭಯೋ ಭ್ರಾತೃಸ್ಥಾನೀಯಾ ಇತ್ಯರ್ಥಃ । ತಥಾ ಸ್ವಕೀಯಂ ಪಯ ಉದಕಂ ಮಧುನಾ ಮಧುರೇಣ ಸೋಮರಸೇನ ಪೃಂಚತೀಃ ಸಂಯೋಜಯಂತ್ಯಃ । ಅಸ್ಯಾ-ಮೃಚಿ ಮಧುಶಬ್ದತಾತ್ಪರ್ಯಂ ದರ್ಶಯತಿ । ಯಃ ಪುಮಾನ್ಪೂರ್ವಮಧ್ವರ್ಯೋ ಮಧುರಸಂ ಸೋಮಂ ನಾರ್ಹತಿ ಸ ಯದಿ ಯಶೋಽರ್ಥೀ ಸೋಮಯಾಗನಿಮಿತ್ತಾಂ ಕೀರ್ತಿಂ ಪ್ರಾಪ್ತುಂ ಸಮರ್ಥೋ ಭವಿತುಮಿಚ್ಛೇತ್ಸ ಪುಮಾನ್ಪೂರ್ವೋಕ್ತಾಮನುಬ್ರುವನ್ನನು ಪ್ರಪದ್ಯೇತೇತ್ಯ-ನ್ವಯಃ ॥

ಅಂಬಯೋ ಯಂತಿ (ಋ. ಸಂ. ೧-೨೩-೧೬) ಎಂಬ ಮಂತ್ರವನ್ನು ಪಠಿಸಬೇಕು. ಈ ಋಕ್ಕಿನ ಅರ್ಥವನ್ನು ವಿವರಿಸುವರು — ಅಂಬ ಎಂಬ ಶಬ್ದವು ಗೌರವವನ್ನು ಸೂಚಿಸುವ ಮಾತೃವಾಚಕಶಬ್ದವು. ಅಂಬಯಃ ಎಂದರೆ ತಾಯಿಯರಂತೆ ಗೌರವಾನ್ವಿತರಾದ ಈ ಉದಕಗಳು ಎಂದರ್ಥವು. ಮಾತೃಸಮಾನರಾದ ಈ ಎರಡುವಿಧ ಉದಕಗಳು ನಾನಾ ವಿಧ ಮಾರ್ಗಗಳಿಂದ ಹೋಗುತ್ತಾರೆ. ಇವರು ಯಜ್ಞವನ್ನು ನೆರವೇರಿಸಬೇಕೆಂದು ಬಯಸುವ ಯಜಮಾನನಿಗೆ ಭಗಿನಿ ಎಂದರೆ ಸಹೋದರಿಯರಂತೆ ಹಿತವನ್ನು ಬಯಸುವವರು ಮತ್ತು ಮಧುರವಾದ ತಮ್ಮ ಉದಕಗಳಿಂದ ಎಲ್ಲರನ್ನೂ ತೃಪ್ತಿಗೊಳಿಸುವವರು. ಯಾವ ಪುರುಷನು ಇದುವರೆಗೆ ಸೋಮರಸದ ರುಚಿಯನ್ನು ಕಂಡರಿಯನೋ ಮತ್ತು ಸೋಮಯಾಗವನ್ನು ಮಾಡಿ ಕೀರ್ತಿ ಸಂಪಾದಿಸಬೇಕೆಂದು ಅಪೇಕ್ಷಿಸುವನೋ ಅಂತಹ ಪುರುಷನು ಮಂತ್ರಪಠನಪೂರ್ವಕವಾಗಿ ಈ ಉದಕಗಳಿಗೆ ಗೌರವವನ್ನು ಸೂಚಿಸಿ ಅವುಗಳನ್ನು ಅನುಸರಿಸಿಹೋದರೆ ಅವನ ಇಷ್ಟಾರ್ಥವು ಸಿದ್ಧಿಸುವುದು.

ಅಮೂರ್ಯಾ ಉಪಸೂರ್ಯೇ ಯಾಭಿರ್ವಾ ಸೂರ್ಯಃ ಸಹೇತಿ ತೇಜಸ್ಕಾಮೋ ಬ್ರಹ್ಮವರ್ಚಸಕಾಮಃ ಅಪೋ ದೇವೀರುಪ-ಹ್ವಯೇ ಯತ್ರ ಗಾವಃ ಪಿಬಂತಿ ನ ಇತಿ ಪಶುಕಾಮಃ ತಾ ಏತಾಃ ಸರ್ವಾ ಏವಾನುಬ್ರುವನ್ನನುಪ್ರಪದ್ಯೇತೈತೇಷಾಂ ಕಾಮಾನಾಮವರುದ್ಧ್ಯೈ ೪೮ ॥

ಋಗಂತರಂ ಫಲವಿಶೇಷಾಯ ವಿಧತ್ತೇ । ಶರೀರಕಾಂತಿಂ ಶ್ರುತಾಧ್ಯಯನಸಂಪತ್ತಿಂ ಚ ಕಾಮಯಮಾನಃ ಪುಮಾನಮೂರ್ಯಾ ಇತ್ಯೇತಾಮೃಚಮನುಬ್ರೂಯಾತ್ । ಫಲಾಂತರಾ-ರ್ಥಮೃಗಂತರಂ ವಿಧತ್ತೇ । ಪಶುಪ್ರಾಪ್ತ್ಯರ್ಥಮಪೋ ದೇವೀರಿತ್ಯೇತಾಮೃಚಮನು-ಬ್ರೂಯಾತ್ । ಅಂಬಯೋ ಯಂತ್ಯಮೂರ್ಯಾ ಅಪೋ ದೇವೀರಿತ್ಯೇತಾಸಾಂ ತಿಸೃಣಾಂ ವಿಧಿಮುಪಸಂಹರತಿ । ಅಥವಾ ನಿತ್ಯಾನುಷ್ಠಾನಾರ್ಥೋಽಯಂ ಪುನರ್ವಿಧಿಃ । ಏತೇಷಾಮಿತ್ಯಾ-ದಿಸ್ತತ್ಪ್ರಶಂಸಾರ್ಥಃ ।

ಮುಂದಿನ ಋಕ್ಕಿನಲ್ಲಿ ಫಲಾಂತರಗಳನ್ನು ಹೇಳುವರು— ಅಮೂರ್ಯಾ ಉಪ ಸೂರ್ಯೇ (ಋ. ಸಂ. ೧-೨೩-೧೭) ಎಂಬ ಋಕ್ಕನ್ನು ಪಠಿಸಿದಲ್ಲಿ ಅಧ್ಯಯನ ಸಂಪತ್ತಿನಿಂದ ತೇಜಸ್ವಿಯೂ ಬ್ರಹ್ಮವರ್ಚಸ್ವಿಯೂ ಆಗುವನು. ಪಶುಸಂಪತ್ತನ್ನು

ಅಪೇಕ್ಷಿಸುವ ಪುರುಷನು **ಅಪೋ ದೇವೀರುಪ ಹ್ವಯೇ** (ಋ. ಸಂ. ೧೧-೩೩-೧೮) ಎಂಬ ಋಕ್ಕನ್ನು ಪಠಿಸಬೇಕು. ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುಲಿಚ್ಛಿಸುವವನು ಮೇಲೆ ಹೇಳಿದ ಮೂರು ಋಕ್ಕುಗಳನ್ನೂ ಪಠಿಸಬೇಕು.

**ಏತಾನ್ಕಾಮಾನವರುಂಧೇ ಯ ಏವಂ ವೇದ ।**

**ವೇದನಂ ಪ್ರಶಂಸತಿ ।**

ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖಿಸುವನು.

**ಏಮಾ ಅಗ್ಮನ್ರೇವತೀರ್ಜೀವಧನ್ಯಾ ಇತಿ ಸಾದ್ಯಮಾನಾಸ್ವನ್ವಾಹ ವಸತೀವರೀಷ್ವೇಕಧನಾಸು ಚ । ಆಗ್ಮನ್ನಾಪ ಉಶತೀರ್ಬರ್ಹಿ-ರೇದಮಿತಿ ಸನ್ನಾಸು ಸ ಏತಯಾ ಪರಿದಧಾತಿ ॥**

**ಋಗಂತರಸ್ಯ ಕಾಲಂ ವಿಧತ್ತೇ। ಉಕ್ತಾ ದ್ವಿವಿಧಾ ಆಪೋ ಯದಾ ವೇದ್ಯಾಂ ಸಾದ್ಯಂತೇ ತದಾನೀಮೇಮಾ ಅಗ್ಮನ್ನಿತ್ಯೇತಾಮನುಬ್ರೂಯಾತ್ । ಋಗಂತರೇಣ ಸಮಾಪ್ತಿಂ ವಿಧತ್ತೇ । ದ್ವಿವಿಧಾಸ್ವಪ್ಸು ವೇದ್ಯಾಂ ಸ್ಥಾಪಿತಾಸ್ವಾಗ್ಮನ್ನಾಪ ಇತ್ಯೇತಾಮೃಚಮನುಬ್ರೂಯಾತ್ । ಸೋಽನುವಕ್ತಾ ಹೋತೈತಯೈವರ್ಚಾನುವಚನಂ ಸಮಾಪಯೇತ್ ।**

ಮೇಲೆ ಹೇಳಿದ ಎರಡುವಿಧ ಉದಕಗಳು ಎಂದರೆ ವಸತೀವರೀ ಮತ್ತು ಏಕಧನಾಪಾತ್ರೆಗಳ ಉದಕಗಳು ಉತ್ತರವೇದಿಯ ಸಮೀಪಕ್ಕೆ ಒಯ್ಯಲ್ಪಡುವಾಗ ಹೋತೃವು—**ಏಮಾ ಅಗ್ಮನ್ರೇವತೀಃ** (ಋ. ಸಂ. ೧೦-೩೦-೧೪) ಎಂಬ ಋಕ್ಕನ್ನು ಪಠಿಸಬೇಕು ಮತ್ತು ಆ ಉಭಯವಿಧ ಉದಕಗಳು ವೇದಿಯಲ್ಲಿ ಸ್ಥಾಪಿತವಾದನಂತರ ಹೋತೃವು **ಆಗ್ಮನ್ನಾಪ** (ಋ. ಸಂ. ೧೦-೩೦-೧೫) ಎಂಬ ಋಕ್ಕನ್ನು ಈ ಅಪೋನಪ್ತ್ರೀಯಕರ್ಮದಲ್ಲಿ ಕೊನೆಯ ಋಕ್ಕನ್ನಾಗಿ ಪಠಿಸಿ ಈ ಕರ್ಮವನ್ನು ಸಮಾಪ್ತಿಗೊಳಿಸಬೇಕು.

*English Translation*

**(The cermony of mixing the Vasativari and Ekdhana waters)**

After having repeated these first nine verses (of the hymn 10, 30,) in the same order as they follow one another in the Samhita, he repeats the 11th verse, hinota no adhvaram &c., as the tenth, and after it, he adds the 10th: avarvitair, when the waters filled jars by the Ekadhnins are turned away from the river or tank whence they have been taken to the sacrificial compound. When they are seen by the Hotar he repeats: prati yad apo adri.ram (10, 3013) When the waters approach (the Chatvala), then he repeats the verre: adhenavah payasi (5, 43). When the (Vasativari and Ekadhna) waters are joined together (in the Chamasas of the Hotar and Maittavaruna) then the Hotar repeats: samanya yanti (2, 35, 3).

(To illustrate the origin of this rite following story is related.)

Both kinds of waters, those called Vasativari, which were brought the day previous to the Soma feast, and those called Ekadhnas, which were brought on the very morning (of the Soma feast), were once jealous of one another, as to which should first carry up the sacrifice. Bhrigu becoming aware of their jealousy, bade them to be quiet, with the verse: sam anya yanti &c. He restored peace among them. The waters of him who, having such a knowledge, restores peace among them (in this manner) will carry his sacrifice.

When both kinds of waters the Vastivaris and the Ekadhanas are poured together in the Chamasa of the Hotar, he repeats: apo na devir upayanti (1, 83, 2). Then the Hotar asks the Adhvayu, has thou obtained the waters? For the waters are the sacrifiice. (The question therfore means: have you obtained the sacrifice? The advharyu answers: these waters are completely obtained. This means: see these waters.

(The Hotar now addresses to the Adhvaryu the following words:) "With these waters you will spueeze, O Adhvaryu, for Indra, the Soma, the honey-like, the rain-giving, the inevitably successfull-making at the end, after having included so many cermonies (from the first to the last); you will squeeze for him (Indra), who is joined by the Vasus, Rudras, Adityas, Ribhus, who has power, who has food, who is joined by Brihaspati, and by all Gods; (you will squeeze the Soma) of which Indra (formerly) drank, slew his enemies, and overcame his adversasies. Om!" (After having spoken these words) the Hotar rises from his seat (to shew his respect). Respect is to be paid to the waters by rising, just as people rise to salute a distinguished person who is coming near. Thence the waters are to be saluted by rising from the seat, and turning towards them. For in the same manner people salute a distinguished man. Therefore, the Hotar must go behind the waters for saluting them. For the Hotar, even if another one brings the sacrifice, has in this way the power of earning fame. Therefore the repeater of the mantra should go behind them. When going behind them he repeats: ambayo yanty anvabhi (1, 23, 16) i. e. the waters which are the friends of the sacrificers come on various ways mixing their own liquid with honey. (In the word madhu, honey, there is an allusion to Soma) If a man who has not tasted formerly the Soma juice should wish to earn fame (he ought to repeat this verse). If he wishes for beauty, or for the acquirment of sacred knowledge (Brahma splendour), he should repeat the verse, amur ya upa surye (1, 23, 17). If he wishes for cattle, he should repeat, apo devir upahvaye (1, 23, 18). Should he when repeating all these vereses go behind (the waters),

he would obtain fulfilment of all these wishes. He who knows this, obtains these wishes.

When the Vasativari and Ekadhanas are being put on the Vedi then he repeats, iman revatir jiva shanya (10, 30, 14); and with the verse, aymann apah (10, 30, 15), he concludes when they are actually put on the Vedi.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟಮಾಧ್ಯಾಯೇ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎಂಟನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು



## ಅಥ ಅಷ್ಟಮಾಧ್ಯಾಯೇ ತೃತೀಯಃ ಖಂಡಃ

### ಎಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



ಶಿರೋ ವಾ ಏತದ್ಯಜ್ಞಸ್ಯ ಯತ್ಪ್ರಾತರನುವಾಕಃ ಪ್ರಾಣಾಪಾನಾ ಉಪಾಂಶ್ವಂತರ್ಯಾಮೌ ವಜ್ರ ಏವ ವಾಙ್ನಾಹುತಯೋರುಪಾಂಶ್ವಂತರ್ಯಾಮಯೋರ್ಹೋತಾ ವಾಚಂ ವಿಸೃಜೇತ ॥

ಪೂರ್ವಸ್ಮಿನ್ಖಂಡೇ ದ್ವಿವಿಧಾಸ್ವಪ್ಸು ವೇದ್ಯಾಂ ಸಾದಿತಾಸ್ವಪೋನಪ್ತ್ರೀಯಾನುವಚನಸ್ಯ ಸಮಾಪನಮುಕ್ತಂ । ತತ್ರ ಸಾದನಪ್ರಕಾರ ಆಪಸ್ತಂಬೇನ ದರ್ಶಿತಃ--ಅಪರಯಾ ದ್ವಾರಾ ಹವಿರ್ಧಾನಮಪಃ ಪ್ರಪಾದಯತಿ ಪೂರ್ವಯಾ ಗತಶ್ರಿಯಃ ಪೂರ್ವಯಾ ಯಜಮಾನಃ ಪ್ರಪದ್ಯತೇ ದಕ್ಷಿಣಸ್ಯ ಹವಿರ್ಧಾನಸ್ಯ ಪ್ರಧುರೇ ಪ್ರಚರಣೀಯಗ್ಂ ಸಾದಯತಿ ಯಂ ಕಾಮಯೇತ ಪಂಡಕಃ ಸ್ಯಾದಿತಿ ತಂ ಪ್ರಚರಣ್ಯೋಪಸ್ಪೃಶೇದೇತಸ್ಯೈವ ಹವಿರ್ಧಾನಸ್ಯಾಧಸ್ತಾತ್ಪುರೋಕ್ಷಂ ಮೈತ್ರಾವರುಣಚಮಸಮುತ್ತರಸ್ಯಾಂ ವರ್ತನ್ಯಾಂ ಪುರಶ್ಚಕ್ರಗ್ಂ ಹೋತೃಚಮಸಮುತ್ತರಸ್ಯ ಹವಿರ್ಧಾನಸ್ಯಾಧಸ್ತಾತ್ಪುರೋಕ್ಷಂ ವಸತೀವರೀಃ ಪಶ್ಚಾದಕ್ಷಮೇಕಧನಾ ಏತದ್ವಾ ವಿಪರೀತಮುದೋ ಯಜಮಾನೋಽನುಪ್ರಪದ್ಯತೇ ಇತಿ । ಏವಂ ಸಾದಿತಾಸ್ವಪ್ಸ್ವಪೋನಪ್ತ್ರೀಯಾ ಋಚಃ ಸಮಾಪ್ಯ ಹೋತಾವತಿಷ್ಠತೇ । ತತೋಽಧ್ವರ್ಯುರ್ದಧಿಗ್ರಹೇಣಾಂಶುಗ್ರಹೇಣಾದಾಭ್ಯಗ್ರಹೇಣೋಪಾಂಶುಗ್ರಹೇಣಾಂತರ್ಯಾಮಗ್ರಹೇಣ ಕ್ರಮಾತ್ಪ್ರಚರತಿ ತಾವದಯಂ ಹೋತಾ ವಾಚಂ ನಿಯಮ್ಯೈವಾಸ್ತೇ । ತದಿದಂ ವಿಧತ್ತೇ ।

**ಯೋಽಯಂ ಪ್ರಾತರನುವಾಕಃ ಪೂರ್ವಮುಕ್ತಃ ಸೋಽಯಂ ಯಜ್ಞಸ್ಯ ಶಿರಸ್ಥಾನೀಯ ಉಪಾಂಶ್ವಂತರ್ಯಾಮಗ್ರಹೌ ಪ್ರಾಣಾಪಾನಸ್ಥಾನೀಯೌ ಏಷ ತೇ ಯೋನಿಃ ಪ್ರಾಣಾಯ ತ್ವಾ ಏಷ ತೇ ಯೋನಿರಪಾನಾಯ ತ್ವೇತಿ ತದೀಯಮಂತ್ರಯೋಃ ಶ್ರವಣಾತ್ । ಹೋತುರ್ಯಾ ವಾಕ್ಸಾ ವಜ್ರಸ್ಥಾನೀಯಾ । ಅತ ಏವಾನ್ಯತ್ರ ಶ್ರೂಯತೇ । ಯದ್ವೈ ಹೋತಾಧ್ವರ್ಯುಮಭ್ಯಾಹ್ವಯತೇ ವಜ್ರಮೇವಮಭಿಪ್ರವರ್ತಯತಿ ಇತಿ । ಏವಂ ಸತ್ಯಧ್ವರ್ಯುಣೋಪಾಂಶ್ವಂತರ್ಯಾಮಗ್ರಹಯೋರ್ಹುತಯೋಃ ಸತೋಃ ಪಶ್ಚಾದ್ಧೋತಾ ವಾಚಂ ವಿಸೃಜೇತ । ತಾವತ್ಪರ್ಯಂತಂ ವಾಚಂ ನಿಯಚ್ಛೇತ್ ॥**

ಹಿಂದಿನ ಖಂಡದಲ್ಲಿ ವಸತೀವರೀ ಮತ್ತು ಏಕಧನಾ ಎಂಬ ಎರಡು ವಿಧವಾದ ಉದಕಗಳನ್ನು ಯಜ್ಞವೇದಿಯಲ್ಲಿ ಸ್ಥಾಪಿಸಿಡುವ ಅಪ್ತೋನಪ್ತ್ರೀಯವೆಂಬ ಕರ್ಮಾಂಗವನ್ನು ವಿವರಿಸಿದ್ದಾಯಿತು. ಈ ಸ್ಥಾಪನ ಪ್ರಕಾರವನ್ನು ಆಪಸ್ತಂಬರು— **ಅಪರಯಾ ದ್ವಾರಾ ಹವಿರ್ಧಾನಮುಪಃ ಪ್ರಪಾದಯತಿ .... .... ಯಜಮಾನೋಽನುಪ್ರಪದ್ಯತೇ** (ಆಪ. ಶ್ರೌ. ಸೂ. ೧೨-೬-೯ ರಿಂದ ೧೩-೪) ಎಂದು ಹೇಳಿರುವರು. ಈ ಪ್ರಕಾರವಾಗಿ ಎರಡುವಿಧ ಉದಕಗಳ ಸಾದನಾಕ್ರಮದ ವಿಷಯದಲ್ಲಿ ಅಪ್ತೋನಪ್ತ್ರೀಯಕರ್ಮಕ್ಕೆ ಸಂಬಂಧಪಟ್ಟ ಋಕ್ಕುಗಳನ್ನು ಹೋತೃವು ಪಠಿಸಿ ಮುಗಿಸಿ ಬಳಿಕ ಸುಮ್ಮನೆ ನಿಂತಿರುವನು. ಆಗ ಅಧ್ವರ್ಯುವು ದಧಿಗ್ರಹ, ಉಪಾಂಶುಗ್ರಹ, ಅದಾಭ್ಯಗ್ರಹ, ಉಪಾಂಶುಗ್ರಹ, ಅಂತರ್ಯಾಮಗ್ರಹ ಎಂಬ ಸೋಮರಸವನ್ನು ತುಂಬಿಡುವ ಪಾತ್ರೆಗಳನ್ನು ಆಸಾದನೆ (ಸಂಸ್ಕಾರ) ಮಾಡುವನು. ಇದು ಮುಗಿಯುವವರೆಗೂ ಹೋತೃವು ಯಾವ ಮಂತ್ರವನ್ನು ಉಚ್ಚರಿಸದೆ ಸುಮ್ಮನೆ ಇರುವನು.

ಇಲ್ಲಿ ಗ್ರಹವೆಂದರೇನೆಂಬುವುದನ್ನು ವಿವರಿಸುವುದು ಅವಶ್ಯಕವು. ಪಾತ್ರೆಯೆಂದರೆ ಹೂಜಿಯಂತಿರುವ, ಬಾಯಿ ಸಣ್ಣಗಿರುವ ದೊಡ್ಡಮರದ ಪಾತ್ರೆಯು. ಗ್ರಹವೆಂದರೆ ಬಟ್ಟಲಿನಂತಿರುವ ಮಣ್ಣಿನ ಅಥವಾ ಮರದ ಪಾತ್ರೆಯು. ಪಾತ್ರೆಯಲ್ಲಿ ಸೋಮರಸವನ್ನು ತುಂಬಿ ಅದನ್ನು ಹೋಮಮಾಡಿ ಪಾನಮಾಡುವುದಕ್ಕಾಗಿ ಪಾತ್ರೆಯಮೇಲೆ ಬಟ್ಟಲಿನಂತಿರುವ ಗ್ರಹವನ್ನು ಮುಚ್ಚಿಡುವರು. ಈ ಕ್ರಮವು ಸೋಮಪಾನಮಾಡುವ ಪ್ರತಿದೇವತೆಗಳಿಗೂ ಬೇರೆಬೇರೆ ಇರುವುವು. ಪ್ರಾರಂಭದಲ್ಲಿ ಎಂದರೆ ಸೋಮರಸವನ್ನು ಲತೆಗಳಿಂದ ಜಜ್ಜಿ ಹಿಂಡಿ ತೆಗೆದಮೇಲೆ ಪಾತ್ರೆಗಳಿಗೆ ತುಂಬಿದ ಬಳಿಕ **ಉಪಾಂಶು ಮತ್ತು ಅಂತರ್ಯಾಮ** ಎಂಬ ಎರಡು ಗ್ರಹಗಳಲ್ಲಿರುವ ಸೋಮರಸವನ್ನು ಆಹವನೀಯವೆಂಬ ಅಗ್ನಿಕುಂಡದಲ್ಲಿ ಅಧ್ವರ್ಯುವು ಹೋಮಮಾಡುವನು. ಅನಂತರ ಇತರ ಗ್ರಹಗಳಿಗೆ ಸಂಬಂಧಪಟ್ಟ ಹೋಮಾದಿಗಳನ್ನು ನೆರವೇರಿಸಬೇಕು. ಪ್ರಾತರನುವಾಕವು ಯಜ್ಞಕ್ಕೆ ಶಿರಸ್ಥಾನೀಯವಾಗಿರುವುದು ಎಂದರೆ ಶರೀರಕ್ಕೆ ಶಿರಸ್ಸು ಮುಖ್ಯವಾಗಿರುವಂತೆ ಯಜ್ಞಕ್ಕೆ ಪ್ರಾತರನುವಾಕವು ಮುಖ್ಯವಾಗಿರುವುದು. ಎಲ್ಲಕ್ಕಿಂತ ಮೊದಲು ಉಪಾಂಶು ಮತ್ತು ಅಂತರ್ಯಾಮಗ್ರಹಗಳಿಂದ ಹೋಮಮಾಡುವುದರಿಂದ ಈ ಎರಡು ಗ್ರಹಗಳು ಯಜ್ಞಕ್ಕೆ ಪ್ರಾಣಾಪಾನಗಳೆಂದು ಹೇಳಲ್ಪಡುವವು. ಎಂದರೆ ಶರೀರಕ್ಕೆ ಪ್ರಾಣವು ಹೇಗೆ ಪ್ರಾಧಾನ್ಯವೋ ಹಾಗೆ ಯಜ್ಞಕ್ಕೆ ಈ ಎರಡು ಗ್ರಹಗಳೂ ಪ್ರಧಾನಭೂತವಾಗಿರುವವು. ಈ ಎರಡು ಗ್ರಹಗಳನ್ನು ಹೋಮಮಾಡುವಾಗ ಮಾತ್ರ ಹೋತೃವು ಮಂತ್ರಗಳನ್ನು ಪಠಿಸುವನು. ಇದರಲ್ಲಿ ಒಂದು ಕ್ರಮವಿರುವುದು ಉಪಾಂಶುಗ್ರಹ ಹೋಮಮಾಡುವಾಗ ಹೋತೃವು ಉಸಿರನ್ನು ಹೆಚ್ಚಾಗಿ ಒಳಕ್ಕೆ ಎಳೆದುಕೊಂಡು ಅಂತರ್ಯಾಮಗ್ರಹಹೋಮಮಾಡುವಾಗ ಅದನ್ನು ಹೊರಕ್ಕೆ ಬಿಡುವನು. ಅನಂತರ ಯಾವ ಮಂತ್ರವನ್ನೂ ಉಚ್ಚರಿಸದೆ ಸುಮ್ಮನೆ ನಿಂತಿರುವನು. ಆಗ ಅಧ್ವರ್ಯುವು ಇತರ ಗ್ರಹಗಳನ್ನು ಹೋಮಮಾಡುವಾಗ **ಏಷ ತೇ ಯೋನಿಃ ಪ್ರಾಣಾಯ ತ್ವಾ** ಮತ್ತು **ಏಷ ತೇ ಯೋನಿರಪಾನಾಯ ತ್ವಾ** ಎಂದು (ತೈ.ಸಂ. ೧-೪-೨, ३)ಮಂತ್ರಗಳನ್ನು

ಹೇಳುತ್ತಾ ಹೋಮಮಾಡುವನು. ಆ ಕಾಲದಲ್ಲಿ ಹೋತೃವು ಏನನ್ನೂ ಪಠಿಸದೆ ಸುಮ್ಮನೆ ಇರುವನು. ಎಲ್ಲವನ್ನು ಅಧ್ವರ್ಯುವೇ ಮಾಡುವನು ಏಕೆಂದರೆ ಹೋತೃವಿನ (ಮಂತ್ರಸಹಿತವಾದ) ವಾಕ್ಯವು ಈ ಕಾಲದಲ್ಲಿ ವಜ್ರಾಯುಧಸ್ವರೂಪ ವಾಗಿರುವುದು. ಈ ವಜ್ರಾಯುಧದಿಂದ ಕೆಡಕಾಗದಂತೆ ಇರುವುದಕ್ಕಾಗಿ ಹೋತೃವು ಮಂತ್ರಗಳನ್ನು ಪಠಿಸುವುದಿಲ್ಲ. ಈ ವಿಷಯದಲ್ಲಿ – **ಯದ್ವೈ ಹೋತಾಧ್ವರ್ಯುಮಭ್ಯಾಹ್ವಯತೇ ವಜ್ರಮೇನಮಭಿಪ್ರವರ್ತಯತಿ** (ತೈ. ಸಂ. ೩-೨-೯) ಎಂದು ತೈತ್ತಿರೀಯ ಶ್ರುತಿಯಲ್ಲಿ ಹೇಳಿರುವುದು. ಆದ್ದರಿಂದ ಈ ಹೋಮವಾಗುವವರೆಗೂ ಹೋತೃವು ಸುಮ್ಮನಿದ್ದು ಅನಂತರ ಮಂತ್ರಾದಿಗಳನ್ನು ಪಠಿಸಬೇಕು.

**ಯದಹುತಯೋರುಪಾಂಶ್ವಂತರ್ಯಾಮಯೋರ್ಹೋತಾ ವಾಚಂ ವಿಸೃಜೇತ ವಾಚಾ ವಜ್ರೇಣ ಯಜಮಾನಸ್ಯ ಪ್ರಾಣಾನ್ವೀಯಾದ್ಯ ಏನಂ ತತ್ರ ಬ್ರೂಯಾದ್ವಾಚಾ ವಜ್ರೇಣ ಯಜಮಾನಸ್ಯ-ಪ್ರಾಣಾನ್ವ್ಯಗಾತ್ಪ್ರಾಣ ಏನಂ ಹಾಸ್ಯತೀತಿ ಶಶ್ವತ್ತಥಾ ಸ್ಯಾತ್ತ-ಸ್ಮಾನ್ನಾಹುತಯೋರುಪಾಂಶ್ವಂತರ್ಯಾಮಯೋರ್ಹೋತಾ ವಾಚಂ ವಿಸೃಜೇತ ।**

ವಿಪಕ್ಷಬಾಧಕಪೂರ್ವಕಂ ಸ್ವಪಕ್ಷಮುಪಸಂಹರತಿ । ಉಪಾಂಶ್ವಂತರ್ಯಾಮಹೋಮಾತ್ಪೂರ್ವಂ ವಾಚಂ ವಿಸೃಜನ್ ಹೋತಾ ವಾಗ್ವಜ್ರೇಣ ಯಜಮಾನಸ್ಯ ಪ್ರಾಣಾನ್ವೀಯಾ-ದ್ವಿಗತಾನ್ಕುರ್ಯಾತ್।ಕಥಂ ಪ್ರಾಣವಿಗಮ ಇತಿ ತದುಚ್ಯತೇ। ತತ್ರ ತಸ್ಮಿನ್ಹೋತುರ್ವಾಗ್ವಿಸರ್ಗೇ ಸತಿ ಯಃ ಕಶ್ಚಿದಾಗತ್ಯಾಯಂ ಹೋತಾ ವಾಗ್ವಜ್ರೇಣ ಯಜಮಾನಸ್ಯ ಪ್ರಾಣಾನ್ವ್ಯಗಾದ್ವಿಗತಾ-ನಕರೋತ್ತಸ್ಮಾತ್ಪ್ರಾಣ ಏನಂ ಯಜಮಾನಂ ಹಾಸ್ಯತಿ ಪರಿತ್ಯಜತೀತ್ಯೇನಂ ಹೋತಾರಂ ಪ್ರತಿಬ್ರೂಯಾತ್ । ತದಾನೀಂ ತೇನ ಪುರುಷೇಣ ಹೋತರಿ ಶಪ್ತೇ ಸತಿ ತದೀಯಶಾಪೋ ನ ಶಶ್ವತ್ತಥಾ ಸ್ಯಾದವಶ್ಯಂ ಯಜಮಾನಪ್ರಾಣವಿಗಮೋ ಹೋತುಸ್ತದ್ವಧಪ್ರತ್ಯವಾಯಶ್ಚ ಭವೇತ್। ತಸ್ಮಾನ್ನಾಹುತಯೋರುಪಾಂಶ್ವಂತರ್ಯಾಮಯೋರ್ಹೋತಾ ವಾಚಂ ವಿಸೃಜೇತ ।

ಈ ವಿಷಯದಲ್ಲಿ ಪ್ರತಿಪಕ್ಷಬಾಧಕವನ್ನು ಹೇಳಿ ಸ್ವಪಕ್ಷವನ್ನು ಸಮರ್ಥಿಸುವರು. ಉಪಾಂಶು ಮತ್ತು ಅಂತರ್ಯಾಮ ಗ್ರಹಗಳ ಹೋಮ ಮುಗಿಯುವದಕ್ಕೆ ಮುಂಚಿತವಾಗಿ ಹೋತೃವು ಮಾತನಾಡಿದ್ದೇ ಆದರೆ ಆಯುಧಸ್ವರೂಪವಾದ ಆ ಹೋತೃವಿನ ವಾಕ್ಯದಿಂದ ಯಜ್ಞಮಾಡುವ ಯಜಮಾನನ ಪ್ರಾಣವು ಹೋಗುವುದು. ಇದನ್ನು ಕಂಡ ಒಬ್ಬಾನೊಬ್ಬ ಪುರುಷನು— ಈ ಹೋತೃವು ತನ್ನ ವಾಗ್ವಜ್ರದಿಂದ ಯಜ್ಞಮಾಡುವ ಯಜಮಾನನ ಪ್ರಾಣಾಪಹರಣವನ್ನು ಮಾಡಿರುವನು. ಆದ್ದರಿಂದ ಈ ಹೋತೃವಿನ ಪ್ರಾಣವೂ ಹೋಗುವುದು ಎಂದು ಹೇಳುವನು. ಅದು ಹಾಗೆಯೇ ಆಗುವುದು. ಆದ್ದರಿಂದ ಉಪಾಂಶು ಮತ್ತು ಅಂತರ್ಯಾಮಗ್ರಹಗಳ ಹೋಮವಾಗುವವರೆಗೂ ಹೋತೃವು ವಾಕ್ಯವನ್ನು ಉಚ್ಚರಿಸದೆ ನಿಯಮದಿಂದಿದ್ದು ಆ ಹೋಮಗಳು ಮುಗಿದ ಮೇಲೆ ಮಾತನಾಡಬೇಕು.

**ಪ್ರಾಣಂ ಯಚ್ಛ ಸ್ವಾಹಾ ತ್ವಾ ಸುಹವ ಸೂರ್ಯಾಯೇತ್ಯುಪಾಂಶು-ಮನುಮಂತ್ರಯೇತ ತಮಭಿ ಪ್ರಾಣೇತ್ಪ್ರಾಣ ಪ್ರಾಣಂ ಮೇ**

**ಯಚ್ಛೇತ್ಯಪಾನಂ ಯಚ್ಛ ಸ್ವಾಹಾ ತ್ವಾ ಸುಹವ ಸೂರ್ಯಾ-
ಯೇತ್ಯಂತರ್ಯಾಮಮನುಮಂತ್ರಯೇತ ತಮಭ್ಯಪಾನೇದ-
ಪಾನಾಪಾನಂ ಮೇ ಯಚ್ಛೇತಿ ವ್ಯಾನಾಯತ್ವೇತ್ಯುಪಾಂಶು-
ಸವನಂ ಗ್ರಾವಾಣಮಭಿಮೃಶ್ಯ ವಾಚಂ ವಿಸೃಜತೇ ॥**

ಉಪಾಂಶ್ವಂತರ್ಯಾಮಹೋಮಾದೂರ್ಧ್ವಂ ವಾಗ್ವಿಸರ್ಗಪ್ರಕಾರಂ ವಿಧತ್ತೇ । ಶೋಭನೋ ಹವೋ ಹೋಮೋ ಯಸ್ಯೇತ್ಯುಪಾಂಶುಗ್ರಹಸ್ಯ ಸೋಽಯಂ ಸುಹವೋ ಹೇ ಸುಹವ ಸೂರ್ಯಾಯ ತ್ವದಭಿಮಾನಿಸೂರ್ಯದೇವತಾಪ್ರೀತ್ಯರ್ಥಂ ತ್ವೋಪಾಂಶುಗ್ರಹರೂಪಂ ಸ್ವಾಹಾ ಸುಷ್ಠು ಹುತಂ ಕರೋಮಿ । ಅತೋ ಯಜಮಾನಸಂಬಂಧಿನಂ ಪ್ರಾಣಂ ಯಚ್ಛ ದೇಹೀತ್ಯನೇನ ಮಂತ್ರೇಣೋಪಾಂಶುಗ್ರಹಸ್ಯಾನುಮಂತ್ರಣಂ ಕುರ್ಯಾದಿತಿ । ಅನ್ವೀಕ್ಷ್ಯ ಮಂತ್ರಣಮನುಮಂತ್ರಣಂ । ತತಸ್ತಮಭಿ ಪ್ರಾಣೇತ್ತಮುಪಾಂಶುಗ್ರಹಮಭಿಲಕ್ಷ್ಯೋಚ್ಛ್ವಾಸಂ ಕುರ್ಯಾತ್ । ತತ್ರ ಪ್ರಾಣೇತ್ಯಾದಿಕೋ ಮಂತ್ರೋ ಹೇ ಪ್ರಾಣರೂಪೋಪಾಂಶುಗ್ರಹ ಮೇ ಮಹ್ಯಂ ಪ್ರಾಣಂ ಯಚ್ಛ ದೇಹಿ । ಹೇ ಸುಹವಾಂತರ್ಯಾಮಗ್ರಹೇತ್ಯೇತಾವಾನ್ವಿಶೇಷಃ । ಅನ್ಯತ್ಪೂರ್ವವತ್ । ಅಪಾನೇನ್ನಿಶ್ವಾಸಂ ಕುರ್ಯಾತ್ । ಉಪಾಂಶುಗ್ರಹಾರ್ಥಂ ಸೋಮಾಭಿಷವಹೇತುರ್ಯಃ ಪಾಷಾಣಸ್ತಂ ವ್ಯಾನಾಯ ತ್ವೇತಿ ಮಂತ್ರೇಣಾಭಿಮೃಶೇತ್ । ಹೇ ಪಾಷಾಣೋಪಾಂಶುಸವನಾಖ್ಯ ತ್ವಾಂ ಪ್ರಾಣಾಪಾನಯೋರ್ಮಧ್ಯವರ್ತಿ ವ್ಯಾನವಾಯುಸಿಧ್ಯರ್ಥಮಭಿಮೃಶಾಮೀತಿ ಶೇಷಃ । ಅಭಿಮರ್ಶನಾದೂರ್ಧ್ವಂ ಮೌನಂ ಪರಿತ್ಯಜ್ಯ ವಾಗ್ವ್ಯವಹಾರಂ ಕುರ್ಯಾತ್ ॥

ಉಪಾಂಶುಗ್ರಹಹೋಮಾನಂತರ ವಾಗ್ವ್ಯವಹಾರಕ್ರಮವನ್ನು ವಿವರಿಸುವರು. ಉಪಾಂಶುಗ್ರಹಹೋಮ ಮಾಡುವಾಗ ಹೋತೃವು ಮೆತ್ತನೆಯ ಸ್ವರದಿಂದ – **ಪ್ರಾಣಂ ಯಚ್ಛ ಸ್ವಾಹಾ ತ್ವಾ ಸುಹವ ಸೂರ್ಯಾಯ** ಎಂದು ಹೇಳಿ ಉಪಾಂಶು ಗ್ರಹವನ್ನು ನೋಡಬೇಕು. ಚೆನ್ನಾಗಿ ಹೋಮಮಾಡಲ್ಪಡುವ ಎಲೈ ಉಪಾಂಶುಗ್ರಹವೇ ನಿನ್ನ ಅಭಿಮಾನಿದೇವತೆಯಾದ ಸೂರ್ಯನ ಪ್ರೀತ್ಯರ್ಥವಾಗಿ ಈಗ ಚೆನ್ನಾಗಿ ಹೋಮವನ್ನು ಮಾಡುತ್ತೇನೆ ಆದ್ದರಿಂದ ಯಜಮಾನನ ಪ್ರಾಣವನ್ನು ಕೊಡು (ಉಳಿಸು) ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಮೆಲ್ಲನೆ ಹೇಳಿ ಉಪಾಂಶುಗ್ರಹವನ್ನು ನೋಡಿ ಉಚ್ಛ್ವಾಸವನ್ನು (ಪ್ರಾಣವಾಯುವನ್ನು) ಶರೀರದೊಳಕ್ಕೆ ಎಳೆದುಕೊಳ್ಳಬೇಕು. ಹೀಗೆ ಪ್ರಾಣವಾಯುವನ್ನು ಒಳಕ್ಕೆ ಎಳೆದುಕೊಳ್ಳುವಾಗ (inhale) **ತಮಭಿ ಪ್ರಾಣೇತ್ಪ್ರಾಣ ಪ್ರಾಣಂ ಮೇ ಯಚ್ಛ** ಎಲೈ ಪ್ರಾಣರೂಪವಾದ ಉಪಾಂಶುಗ್ರಹವೇ ಈಗ ನಾನು ಉಚ್ಛ್ವಾಸಮಾಡುವ ಕಾಲದಲ್ಲಿ ನನಗೆ ಪ್ರಾಣವಾಯುವನ್ನು ಕೊಡು ಎಂಬ ಅರ್ಥವುಳ್ಳ ಮಂತ್ರವನ್ನು ಮೆಲ್ಲನೆ ಉಚ್ಚರಿಸಬೇಕು. ಇದಾದಬಳಿಕ ಅಂತರ್ಯಾಮಗ್ರಹದ ಹೋಮಮಾಡುವಾಗ– **ಅಪಾನಂ ಯಚ್ಛ ಸ್ವಾಹಾ ತ್ವಾ ಸುಹವ ಸೂರ್ಯಾಯ** ಎಂಬ ಮಂತ್ರವನ್ನು ಮೆಲ್ಲಗೆ ಹೇಳಿ ಅಂತರ್ಯಾಮಗ್ರಹವನ್ನು ನೋಡುತ್ತಾ **ತಮಭ್ಯಪಾದೇದಪಾನಂ ಯಚ್ಛ** ಎಂಬ ಮಂತ್ರವನ್ನು ಮೆಲ್ಲಗೆ ಉಚ್ಚರಿಸಿ ಹಿಂದೆ ದೇಹದಲ್ಲಿ ಉಚ್ಛ್ವಾಸಮಾಡಿದ್ದ (inhaled) ಪ್ರಾಣವಾಯುವನ್ನು ಹೊರಕ್ಕೆ ನಿಃಶ್ವಾಸ ರೂಪದಿಂದ ಬಿಡಬೇಕು. ಹೊರಕ್ಕೆ ಬಿಡುವಾಗ ಆ ವಾಯುವಿಗೆ ಅಪಾನವಾಯುವೆಂದು ಹೆಸರು (exhaled) ಈ ಮಂತ್ರಗಳ ಅರ್ಥವೂ ಹಿಂದಿನಂತೆಯೇ ಇರುವುದು. ಪ್ರಾಣ ಎಂಬ ಶಬ್ದಕ್ಕೆ ಬದಲಾಗಿ ಅಪಾನಶಬ್ದವಿರುವುದು ಎಲೈ ಅಪಾನವಾಯುವೇ

ನಿನ್ನ ಅಭಿಮಾನಿದೇವತೆಯಾದ ಸೂರ್ಯನ ಪ್ರೀತ್ಯರ್ಥವಾಗಿ ಅಂತರ್ಯಾಮಗ್ರಹದ ಹೋಮವನ್ನು ಮಾಡುವೆನು. ಎಲೈ ಅಪಾನವಾಯುವೇ ನೀನು ಯಜಮಾನನ ಪ್ರಾಣವನ್ನು ಉಳಿಸು ಮತ್ತು ನೀನು ನನ್ನ ಶರೀರದಲ್ಲಿದ್ದು ನಿಃಶ್ವಾಸರೂಪದಿಂದ ಹೊರಟು ನನಗೆ ಸುಖವನ್ನುಂಟುಮಾಡು ಎಂದು ಮಂತ್ರದ ಮುಖ್ಯಾಭಿಪ್ರಾಯ. ಹೀಗೆ ಹೇಳಿ ಅಂತರ್ಯಾಮಗ್ರಹಹೋಮಾನಂತರ ಉಸಿರನ್ನು (ನಿಃಶ್ವಾಸವನ್ನು) ಬಿಡಬೇಕು. ಅನಂತರ ಸೋಮರಸವನ್ನು ಜಜ್ಜುವುದಕ್ಕೆ ಉಪಯೋಗಿಸಿದ್ದ ಕಲ್ಲನ್ನು ಕೈಯಿಂದ ಸ್ಪರ್ಶನೆಮಾಡಬೇಕು ಹೀಗೆ ಸ್ಪರ್ಶಿಸುವಾಗ **ವ್ಯಾನಾಯ ತ್ವಾ** ಎಂಬ ಮಂತ್ರವನ್ನು ಹೇಳಬೇಕು. ವ್ಯಾನವೆಂದರೆ ಪ್ರಾಣ ಮತ್ತು ಅಪಾನವಾಯುಗಳ ಮಧ್ಯದಲ್ಲಿ ಸಂಚರಿಸುವ ವಾಯುವು. ಇದರ ಸಿದ್ಧ್ಯರ್ಥವಾಗಿ, ಎಲೈ ಪಾಷಾಣವೇ (ಕಲ್ಲೇ) ನಿನ್ನನ್ನು ನಾನು ಅಭಿಮರ್ಶನಮಾಡುತ್ತೇನೆ (ಮುಟ್ಟುತ್ತೇನೆ) ಎಂದು ಹೇಳಿ ಆ ಪಾಷಾಣವನ್ನು ಮುಟ್ಟಿ ಅನಂತರ ಇದುವರೆಗೂ ಮಾತನಾಡದೆ ಮೌನದಿಂದ ಇದ್ದುದನ್ನು ಬಿಟ್ಟು ಮತ್ತೆ ಮುಂಚಿನಂತೆ ವಾಗ್ವ್ಯವಹಾರವನ್ನು ಮಾಡಬೇಕು.

**ಆತ್ಮಾ ವಾ ಉಪಾಂಶುಸವನ ಆತ್ಮನ್ಯೇವ ತದ್ಧೋತಾ ಪ್ರಾಣಾನ್ಪ್ರತಿ-**
**ಧಾಯ ವಾಚಂ ವಿಸೃಜತೇ ಸರ್ವಾಯುಃ ಸರ್ವಾಯುತ್ವಾಯ**
**ಸರ್ವಮಾಯುರೇತಿ ಯ ಏವಂ ವೇದ ॥**

**ಉಪಾಂಶುಸವನಮಭಿಮರ್ಶನಮುಪಪಾದಯತಿ । ಯೋಽಯಮುಪಾಂಶುಸವನೋ ಗ್ರಾವಾ ಸೋಽಯಮಾತ್ಮಾ ವೈ ಶರೀರಮೇತತ್ತದೀಯಾಭಿಮರ್ಶನೇನಾಯಂ ಹೋತಾ ಶರೀರ ಏವ ಪ್ರಾಣಾನವಸ್ಥಾಪ್ಯ ಸ್ವಯಂ ಶತಸಂವತ್ಸರಪರಿಮಿತೇನ ಸರ್ವೇಣಾಯುಷಾ ಯುಕ್ತೋ ವಾಚಂ ವಿಸೃಜತೇ । ತಚ್ಚ ಯಜಮಾನಸ್ಯ ಸಂಪೂರ್ಣಾಯುಃಪ್ರಾಪ್ತಯೇ ಭವತಿ । ವೇದನಂ ಪ್ರಶಂಸತಿ ।**

ಉಪಾಂಶುಸವನಕ್ಕೆ ಎಂದರೆ ಉಪಾಂಶುಗ್ರಹದ ಹೋಮಕ್ಕಾಗಿ ಉಪಯೋಗಿಸುವ ಸೋಮರಸವನ್ನು ಜಜ್ಜಿ ಹಿಂಡಲು ಉಪಯೋಗಿಸುವ ಕಲ್ಲು (ಗ್ರಾವಾ) ಶರೀರದಲ್ಲಿರುವ ಆತ್ಮವೆಂದು ಹೇಳಲ್ಪಡುವುದು. ಆದ್ದರಿಂದ ಈ ಕಲ್ಲನ್ನು ಅಭಿಮರ್ಶನ ಮಾಡುವಾಗ ಆತ್ಮವು ಹೋತೃವಿನ ಮತ್ತು ಯಜಮಾನನ ಶರೀರದಲ್ಲಿ ಸ್ಥಾಪಿಸಿದಂತಾಗಿ ಹೋತೃವಿನ ಪೂರ್ಣಾಯುಸ್ಸಿಗೆ ಎಂದರೆ ನೂರುವರ್ಷಕಾಲ ಜೀವಿಸಿರುವುದಕ್ಕೆ ಸಾಧ್ಯವಾಗುವುದು ಮತ್ತು ಇದು ಯಜ್ಞಮಾಡುವ ಯಜಮಾನನ ಸಂಪೂರ್ಣಾಯುಸ್ಸಿಗೂ ಕಾರಣವಾಗುವುದು. ಈ ವಿಷಯವನ್ನು ತಿಳಿದಿರುವ ಪುರುಷನು ತಾನು ಮಾಡುವ ಯಜ್ಞಕರ್ಮದಿಂದ ಸಂಪೂರ್ಣಾಯುಸ್ಸನ್ನು ಪಡೆಯುವನು.



*English Translation*

**(The libations from the Upamsus and Antaryama Grahas. The haling in and out of the air by the Hotar).**

The Pratar-Anuvaka is the head of the sacrifice (Soma sacrifice). The Upamasu and Antaryama Grahas are the air inhaled (Prana) and the air exhaled (apana). Speeh is the weapon. Therefore the Hotar should not make his

voice heard before the libations from the Upamasu and Antaryama grahs are poured into the fire. Should the Hotar make his voice heard before these two have been poured into the fire, then he would carry off the vital airs of the sacrificer by means of the speech, which is a weapon. For if he do so some one should say to the Hotar afterwards, that he has made the vital airs of the sacrificer go off, (and he the Hotar) would lose his life. It happens always thus. Thence the Hotar should not make his voice heard, before the libations from the Upamasu and Antaryama grahas are poured into the fire. He should mutter the words: keep in the air inhaled! Svaha! (I emit) thee, O speech of good call for pleasing the sun (which is thy presiding deity). He should then draw in the air, and say (with a low voice): "O breath, who goes in my body keep in body, the breath!" He should, when the libation from the Antaryama graha is givan, mutter the words: "keep in the air exhaled! Svaha! (O emit) thee, O speech of good call for pleasing the sun." (After having spoken these words) he should halt out the air, and say, "O air, haled out, keep this very air which is to be haled out, in my body." By the words "(I emit) thee (O speech) for the air, circulating in my body." He then touches the stone used to squeeze the Soma Juice for the Upamsu graha and makes his voice heard. This stone to squeeze the Soma juice for the Upamsu graha is the soul. The Hotar after having put (thus) the vital airs in his own self, emits his voice, and attains his full age (100 years). Like wise does he who has such a knowledge.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಎಂಟನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು.



# ಅಥ ಅಷ್ಟಮಾಧ್ಯಾಯೇ ಚತುರ್ಥಃ ಖಂಡಃ

## ಎಂಟನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಬಹಿಷ್ಪವಮಾನಸಂಬಂಧವಾದ ಚರುಭಕ್ಷಣೆಯಲ್ಲಿ ಹೋತುವಿಗೆ ಪಾತ್ರವಿಲ್ಲ ಮತ್ತು ಮಿತ್ರಾವರುಣರಿಗೆ ಅರ್ಪಿಸುವ ಸೋಮಾಹುತಿಯನ್ನು ಹಾಲಿನಿಂದ ಮಿಶ್ರಿತವನ್ನಾಗಿ ಮಾಡಬೇಕು. ]

**ತದಾಹುಃ ಸರ್ಪೇತ್ ನ ಸರ್ಪೇತ್ ಇತಿ ಸರ್ಪೇದಿತಿ ಹೈಕ ಆಹುರುಭಯೇಷಾಂ ವಾ ದೇವಮನುಷ್ಯಾಣಾಂ ಭಕ್ಷೋ ಯದ್ಬಹಿಷ್ಪವಮಾನಸ್ತಸ್ಮಾದೇನಮಭಿಸಂಗಚ್ಛಂತ ಇತಿ ವದಂತಃ । ತತ್ತನ್ನಾದೃತ್ಯಂ ॥**

ಅಂತರ್ಯಾಮಗ್ರಹಹೋಮಾದೂರ್ಧ್ವಂ ಮಹಾಭಿಷವಂ ಕೃತ್ವೈಂದ್ರವಾಯವಮಾರಭ್ಯ ಯವಮತ್ಯಂತಗ್ರಹಾರ್ಥಂ ತತ್ತತ್ಪಾತ್ರೇಷು ಸೋಮಂ ಗೃಹೀತ್ವಾ ಸಾದಿತೇಷು ವೈಪ್ರುಷಾನ್ ಹೋಮಾನ್ಹುತ್ವಾ ಬಹಿಷ್ಪವಮಾನಾರ್ಥಂ ಪ್ರಸರ್ಪಯೇಯುಃ । ಪ್ರಸರ್ಪಣಪ್ರಕಾರಮಾಪಸ್ತಂಬ ಆಹ—ಸಪ್ತಹೋತಾರಂ ಮನಸಾನುದ್ರುತ್ಯಾಹವನೀಯೇ ಸಗ್ರಹಂ ಹುತ್ವೋದಂಚಃ ಪ್ರಹ್ವಾ ಬಹಿಷ್ಪವಮಾನಾರ್ಥಂ ಪಂಚರ್ತ್ವಿಜಃ ಸಮನ್ವಾರಬ್ಧಾಃ ಸರ್ಪಂತ್ಯಧ್ವರ್ಯುಂ ಪ್ರಸ್ತೋತಾನ್ವಾರಭತೇ ಪ್ರಸ್ತೋತಾರಂ ಪ್ರತಿಹರ್ತಾ ಪ್ರತಿಹರ್ತಾರಮುದ್ಗಾತೋದ್ಗಾತಾರಂ ಬ್ರಹ್ಮಾ ಬ್ರಹ್ಮಾಣಂ ಯಜಮಾನಃ ಇತಿ । ಆಶ್ವಲಾಯನೋಽಪ್ಯಾಹ ಅಧ್ವರ್ಯುಮುಖಾಃ ಸಮನ್ವಾರಬ್ಧಾಃ ಸರ್ಪಂತ್ಯಾತೀರ್ಥದೇಶಾತ್ತತ್ಸ್ತೋತ್ರಾಯೋಪವಿಶಂತ್ಯುದ್ಗಾತಾರಮಭಿಮುಖಾಸ್ತಾನ್ಹೋತಾನುಮಂತ್ರಯತೇಽತ್ರೈವಾಸೀನೋ ಯೋ ದೇವಾನಾಮಿಹ ಇತಿ ॥

ತತೋ ಹೋತುಃ ಸರ್ಪಣಂ ನಿವಾರಯಿತುಂ ಪೂರ್ವಪಕ್ಷಮುಪನ್ಯಸ್ಯತಿ—ತತ್ರತ್ರೈಂದ್ರವಾಯವಾದಿಗ್ರಹಣಾದೂರ್ಧ್ವಕಾಲೇಽಧ್ವರ್ಯುಪ್ರಮುಖಾಣಾಂ ಸರ್ಪಣೇ ಕೇಚಿದಾಹುರ್ವಿಚಾರಯಂತಿ । ಕಿಮಯಂ ಹೋತಾ ತೈಃ ಸಹ ಸರ್ಪೇನ್ನವೇತಿ । ವಿಚಾರಾರ್ಥೇ ಪ್ಲುತಿಃ । ಅಯಂ ಹೋತಾಪಿ ಸರ್ಪೇದಿತಿ ಕೇಚಿತ್ಪೂರ್ವಪಕ್ಷಿಣ ಆಹುಃ । ತತ್ರೋಪಪತ್ತಿಂ ಚ ಕಥಯಂತಿ । ಉದ್ಗಾತೃಭಿರ್ಗೇಯಮುಪಾಸ್ಮೈ ಗಾಯತಾ ನರಃ (ಋ. ಸಂ. ೯-೧೧-೧) ಇತ್ಯಾದಿಕಂ ಸ್ತೋತ್ರಂ ಬಹಿಷ್ಪವಮಾನಶಬ್ದೇನೋಚ್ಯತೇ । ಯೋ ಬಹಿಷ್ಪವಮಾನ ಏಷ ಏವ ದೇವಾನಾಂ ಮನುಷ್ಯಾಣಾಂ ಚೋಭಯೇಷಾಂ ಭಕ್ಷಃ । ತೇನ ಹಿ ತೇ ಸರ್ವೇ ತೃಪ್ಯಂತಿ । ಅತ ಏವ ಪೂರ್ವತ್ರ ಸ್ತೋಮಭಾಗಾನಾಂ ಸ್ತೋತ್ರೇಣ ಪ್ರೀತಿಃ ಶ್ರುತಾ । ತಸ್ಮಾತ್ಕಾರಣಾದೇನಂ ಬಹಿಷ್ಪವಮಾನಂ

**ದೇವಮನುಷ್ಯಾಃ ಸರ್ವೇಽಭಿಸಂಗಚ್ಛಂತ ಇತ್ಯೇತಾಮುಪಪತ್ತಿಂ ವದಂತಃ । ಪೂರ್ವಪಕ್ಷಿಣೋ ಯದಾಹುಸ್ತನ್ನಿರಾಕರೋತಿ । ತಸ್ಮಿನ್ಸರ್ಪಣೇ ತತ್ಪೂರ್ವಪಕ್ಷಿಮತಂ ನಾದರಣೀಯಂ ॥**

ಹಿಂದಿನ ಖಂಡದಲ್ಲಿ ಹೇಳಿದಂತೆ ಅಂತರ್ಯಾಮಗ್ರಹಹೋಮಾನಂತರ ಸೋಮಾಭಿಷವವನ್ನು ಎಂದರೆ ಸೋಮಲತೆಗಳನ್ನು ಕಲ್ಲಿನಿಂದ ಜಜ್ಜಿ ರಸವನ್ನು ಹಿಂಡಿ ಇಂದ್ರವಾಯುವ ಮೊದಲಾದ ಗ್ರಹ(ಪಾತ್ರೆ)ಗಳಲ್ಲಿ ಆಯಾ ಗ್ರಹಹೋಮಾರ್ಥವಾಗಿ ಸೋಮರಸವನ್ನು ತುಂಬಿ ವೃಪ್ರಷಮಾಡಿ ಅನಂತರ ಬಹಿಷ್ಪವಮಾನಸ್ತೋತ್ರವೆಂಬ ಸಾಮಗಾನವನ್ನು ಮಾಡುವುದಕ್ಕಾಗಿ ಐದು ಮಂದಿ ಋತ್ವಿಜರು ಹೊರಕ್ಕೆ ಹೋಗುವರು. ಇದರಲ್ಲಿ ಒಂದು ವಿಶೇಷವೇನೆಂದರೆ— ಈ ಸ್ತೋತ್ರವನ್ನು ಇತರ ಸ್ತೋತ್ರಗಳಂತೆ ಸದಃ ಎಂಬ ಮಂಡಪದ ಮಧ್ಯದಲ್ಲಿ ಔದುಂಬರ ಶಾಖಾಸಂಬಂಧವಾದ ಕಂಬದ ಸಮೀಪದಲ್ಲಿ ಕುಳಿತು ಪಠಿಸುವ ರೂಢಿ ಇಲ್ಲ. ಆದರೆ ಋತ್ವಿಜರು ಸದಸ್ಸಿನಿಂದ ಹೊರಕ್ಕೆ ಹೋಗಿ ಅದನ್ನು ಪಠಿಸುತ್ತಾರೆ. ಋತ್ವಿಜರು ಹೊರಗೆ ಹೋಗುವ ಕ್ರಮವನ್ನು ಆಪಸ್ತಂಬರು ಈರೀತಿ ಹೇಳಿದಾರೆ— **ಸಪ್ತಹೋತಾರಂ ಮನಸಾನುದ್ರುತ್ಯಾಹವನೀಯೇ ಸಗ್ರಹಂ ಹುತ್ವೋದಂಚಃ ಪ್ರಹ್ವಾ ಬಹಿಷ್ಪವಮಾನಾಯ ಪಂಚರ್ತ್ವಿಜಃ ಸಮನ್ವಾರಬ್ಧಾಃ ಸರ್ಪಂತಿ । ಅಧ್ವರ್ಯುಂ ಪ್ರಸ್ತೋತಾನ್ವಾರಭತೇ, ಪ್ರಸ್ತೋತಾರಂ ಪ್ರತಿಹರ್ತಾ ಪ್ರತಿಹರ್ತಾರಮುದ್ಗಾತೋದ್ಗಾತಾರಂ ಬ್ರಹ್ಮಾ ಬ್ರಹ್ಮಾಣಂ ಯಜಮಾನಃ** (ಆಪ. ಶ್ರೌ. ೧೨-೧೬-೧೭ ಮತ್ತು ೧೨-೧೭-೧) ಮತ್ತು ಆಶ್ವಲಾಯನರೂ ಸಹ— **ಅಧ್ವರ್ಯುಮುಖಾಃ ಸಮನ್ವಾರಬ್ಧಾಃ ಸರ್ಪಂತ್ಯಾತೀರ್ಥದೇಶಾತ್ ಸ್ತೋತ್ರಾಯೋಪ ವಿಶಂತ್ಯುದ್ಗಾತಾರಮಭಿಮುಖಾಸ್ತಾನ್ ಹೋತಾನುಮಂತ್ರಯತೇಽತ್ರ್ಯಾಸೀನೋ ಯೋ ದೇವಾನಾಮಿಹ** (ಆಶ್ವ. ಶ್ರೌ. ೮-೧೩-೨೩) ಎಂದು ಹೇಳಿದಾರೆ ಎಂದರೆ ಬಹಿಷ್ಪವಮಾನವೆಂಬ ಸಾಮಗಾನಸ್ತೋತ್ರವನ್ನು ಪಠಿಸಿ ಗಾನಮಾಡುವುದಕ್ಕಾಗಿ ಅಧ್ವರ್ಯು, ಪ್ರಸ್ತೋತಾ, ಪ್ರತಿಹರ್ತಾ, ಉದ್ಗಾತೃ, ಬ್ರಹ್ಮಾ ಎಂಬ ಐದುಮಂದಿ ಋತ್ವಿಜರು ತಾವು ಇದುವರೆಗೂ ಕುಳಿತಿದ್ದ ಸದಸ್ಸಿನಿಂದ ಹೊರಹೊರಟು ಚಾತ್ವಾಲ ಎಂಬ ಪ್ರದೇಶದ ಕಡೆ ಬಂದು ಅಲ್ಲಿ ಉದ್ಗಾತೃವಿನ ಅಭಿಮುಖವಾಗಿ ಕುಳಿತುಕೊಳ್ಳುತ್ತಾರೆ. ಸದಸ್ಸಿನಿಂದ ಹೊರಹೊರಡುವಾಗ ಮೊದಲು ಅಧ್ವರ್ಯುವೂ ಅನಂತರ ಅವನ ಕೈಹಿಡಿದುಕೊಂಡು ಅವನ ಹಿಂದೆ ಪ್ರಸ್ತೋತೃವೂ, ಅವನ ಹಿಂದೆ ಅವನ ಕೈಯನ್ನು ಹಿಡಿದುಕೊಂಡು ಪ್ರತಿಹರ್ತೃವೂ, ಅವನ ಹಿಂದೆ ಉದ್ಗಾತೃವೂ, ಅವನ ಹಿಂದೆ ಬ್ರಹ್ಮನೂ ಒಬ್ಬರು ಮತ್ತೊಬ್ಬರ ಕೈಯನ್ನು ಹಿಡಿದುಕೊಂಡು ಹೊರಗೆ ಬರುತ್ತಾರೆ.

ಹೀಗೆ ಹೊರಗೆ ಬರುವಾಗ ಹೋತೃವೆಂಬ ಋತ್ವಿಜನೂ ಅವರ ಜೊತೆಯಲ್ಲಿ ಹೊರಡಬೇಕೇ, ಅಥವಾ ಹೊರಡಕೂಡದೇ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ. ಕೆಲವರು ಹೊರಡಬೇಕೆಂದೂ ಮತ್ತೆ ಕೆಲವರು ಹೊರಡಕೂಡದೆಂದೂ ಹೇಳುತ್ತಾರೆ. ಅಲ್ಲಿ ಉಪಯೋಗಿಸಿರುವ ೩ ಎಂಬ ಪ್ಲುತವು ಈ ವಿಚಾರದಲ್ಲಿ ಸಂಶಯವಿರುವುದನ್ನು ಸೂಚಿಸುತ್ತದೆ. ಬಹಿಷ್ಪವಮಾನಸ್ತೋತ್ರವನ್ನು ಗಾನಮಾಡುವುದಕ್ಕೆ ಪೂರ್ವದಲ್ಲಿ ಮೇಲೆ ಹೇಳಿದ ಐದು ಜನ ಋತ್ವಿಜರು ಆ ಸಂಬಂಧವಾದ ಚರುವನ್ನು ಭಕ್ಷಿಸಿ ಅನಂತರ ಗಾನಮಾಡುವುದು ರೂಢಿಯು. ಗಾನಮಾಡುವುದಕ್ಕೆ ಮೊದಲು ಬಹಿಷ್ಪವಮಾನದ ಮಂತ್ರವನ್ನು ಋಗ್ವೇದದ ಋಕ್ಕುಗಳಿಂದ ಹೋತೃವು ಪಠಿಸಿದ ಮೇಲೆ ಬಳಿಕ ಸಾಮಗಾನವನ್ನು ಪ್ರಾರಂಭಿಸುವುದೂ ರೂಢಿಯು. ಆದ್ದರಿಂದ ಹೋತೃವೂ ಸಹ ಚರುಭಕ್ಷಣಾರ್ಥವಾಗಿ ಅಧ್ವರ್ಯು ಮೊದಲಾದ ಐದುಮಂದಿ ಋತ್ವಿಜರೊಡನೆ ಹೊರಕ್ಕೆ ಹೊರಟುಬರಬೇಕೆಂದು ಪೂರ್ವಪಕ್ಷಿಯರ (ಕೆಲವರ) ಮತವು. ಏಕೆಂದರೆ ಸಾಮಗಾನಮಾಡುವವರಲ್ಲಿ ಮುಖ್ಯವಾದ ಉದ್ಗಾತೃವು ಗಾನಮಾಡುವ **ಉಪಾಸ್ಮೈ ಗಾಯತಾ ನರಃ** ಎಂಬ ಗಾನವು (ಸಾ.ಸಂ. ೧-೧-೧ ರಿಂದ ೯) ಬಹಿಷ್ಪವಮಾನಸ್ತೋತ್ರದ ಆದಿಯಲ್ಲಿ ಗಾನಮಾಡಲ್ಪಡುವದು. ಅದು ಋಗ್ವೇದದಲ್ಲಿಯೂ (ಋ. ಸಂ. ೯-೧೧-೧) ಇರುವುದರಿಂದ ಹೋತೃವು ಅದನ್ನು ಮೊದಲು ಪಠಿಸಬೇಕಾಗಿರುವುದು. ಅದು ದೇವತೆಗಳಿಗೂ ಮನುಷರಿಗೂ ಭಕ್ಷರೂಪ (ಆಹಾರ) ವಾಗಿರುವುದು. ಈ ಗಾನದಿಂದ ದೇವ

ಮನುಷ್ಯರು ತೃಪ್ತಿಗೊಳ್ಳುವರು. ಈ ಕಾರಣಕ್ಕಾಗಿ ಹೋತೃವೂ ಸಹ ಅಧ್ವರ್ಯು ಮೊದಲಾದ ಐದುಮಂದಿ ಋತ್ವಿಜರೊಡನೆ ಹೊರಡಬೇಕು ಎಂದು ವಾದಿಸುವರು. ಆದರೆ **ತತ್ತನ್ನಾದೃತ್ಯಂ** ಎಂದು ಹೇಳಿರುವ ಪ್ರಕಾರ ಮೇಲೆ ಹೇಳಿದ ವಾದವನ್ನು ಅಂಗೀಕರಿಸುವುದಕ್ಕಾಗುವುದಿಲ್ಲ.

[ಬಹಿಷ್ಪವಮಾನದ ಮಂತ್ರಗಳು ಈರೀತಿ ಇವೆ—**ಉಪಾಸ್ಮೈ ಗಾಯತಾ ನರಃ** ಎಂದು ಮೊದಲಾಗುವ ಮೂರು ಮಂತ್ರಗಳು (ಸಾ. ಸಂ. ಉತ್ತರಾರ್ಚಿಕಾ ೧-೧, ೨, ೩) ; **ದವಿದ್ಯುತತ್ಯಾ ರುಚಾ** ಎಂಬ ಮೂರು ಮಂತ್ರಗಳು (ಸಾ. ಸಂ. ಅಲ್ಲಿಯೇ ಇವೆ); **ಪವಮಾನಸ್ಯ ತೇ ಕವೇ** (ಸಾ. ಸಂ. ಅಲ್ಲಿಯೇ ಇವೆ) ಎಂಬ ಮೂರು ಮಂತ್ರಗಳು, ಒಟ್ಟು ಒಂಭತ್ತು ಮಂತ್ರಗಳಿಗೆ ಬಹಿಷ್ಪವಮಾನಸ್ತೋತ್ರವೆಂದು ಹೆಸರು. ಈ ಒಂಭತ್ತು ಮಂತ್ರಗಳೂ **ಪವಮಾನಃ ಸೋಮಃ** ಎಂಬ ದೇವತೆಯನ್ನೇ ಸ್ತುತಿಸುವುದರಿಂದಲೂ ಈ ಸ್ತೋತ್ರವನ್ನು ಇತರ ಸ್ತೋತ್ರಗಳಂತೆ ಸದಸ್ಸಿನ ಮಂಡಪದಲ್ಲಿ ಪಠಿಸದೆ ಹೊರಕ್ಕೆ ಹೋಗಿ ಋತ್ವಿಜರು ಪಠಿಸುವುದರಿಂದಲೂ ಈ ಸ್ತೋತ್ರಕ್ಕೆ ಬಹಿಷ್ಪವಮಾನಸ್ತೋತ್ರವೆಂದು ಹೆಸರು.]

**ಯತ್ಸರ್ಪೇದೃಚಮೇವ ತತ್ಸಾಮ್ನೋಽನುವರ್ತ್ಮಾನಂ ಕುರ್ಯಾದ್ಯ ಏನಂ ತತ್ರ ಬ್ರೂಯಾದನುವರ್ತ್ಮಾನ್ವಾ ಅಯಂ ಹೋತಾ ಸಾಮಗಸ್ಯಾಭೂದುದ್ಗಾತರಿ ಯಶೋಽಧಾದಚ್ಯೋಷ್ಟಾಯತ-ನಾಚ್ಚ್ಯೋಷ್ಯತ ಆಯತನಾದಿತಿ ಶಶ್ವತ್ತಥಾ ಸ್ಯಾತ್ ।**

**ವಿಪಕ್ಷೇ ಬಾಧಂ ದರ್ಶಯತಿ ಯದ್ಯಯಂ ಹೋತಾ ತೈಃ ಸಹ ಸರ್ಪೇತ್ತದಾನೀಂ ಸ್ವಕೀಯಮೃಚಮೇವ ಸಾಮ್ನೋಽನುವರ್ತ್ಮಾನಂ ಪೃಷ್ಠಗಾಮಿನೀಂ ಕುರ್ಯಾತ್ । ತಚ್ಚಾ-ಯುಕ್ತಂ। ಋಚ ಆಧಾರತ್ವಾತ್। ಸಾಮ್ನ ಆಧೇಯತ್ವಾತ್ಪಶ್ಚಾದ್ಭಾವಿ। ಅತ ಏವ ಛಂದೋಗಾ ಆಮನಂತಿ—ತದೇತಸ್ಯಾಮೃಚ್ಯಧ್ಯೂಢಃ ಸಾಮ ತಸ್ಮಾದೃಚ್ಯಧ್ಯೂಢಂ ಸಾಮ ಗೀಯತೇ ಇತಿ। ತತಃ ಪುರೋಗಾಮಿನ್ಯಾ ಋಚಃ ಪಶ್ಚಾದ್ಭಾವಿತ್ವಮಯುಕ್ತಂ। ತತ್ರ ಹೋತುಃ ಸರ್ಪಣೇ ಯಃ ಕಶ್ಚಿದಾಗತ್ಯೈನಂ ಹೋತಾರಂ ಬ್ರೂಯಾದಯಂ ಹೋತಾ ಸಾಮಗಸ್ಯೋದ್ಗಾತುರನುವರ್ತ್ಮಾ ನ್ವೈ ಪೃಷ್ಠಗಾಮ್ಯೇವಾಭೂತ್। ಅತೋ ಹೋತಾ ಸ್ವಕೀಯಾಂ ಯಶಃ ಕೀರ್ತಿಮುದ್ಗಾತರ್ಯ-ಧಾತ್ಸ್ಥಾಪಿತವಾನ್। ಸ್ವಯಮಾಯತನಾತ್ಸ್ವಕೀಯಪದಾದಚ್ಯೋಷ್ಟ ಚ್ಯುತವಾನ್ । ಇತಃ ಪರಮಪಿ ಚ್ಯೋಷ್ಯತೇ ಸ್ವಕೀಯಸ್ಥಾನಾತ್ಪ್ರಚ್ಯುತೋ ಭವಿಷ್ಯತೀತ್ಯೇವಂ ಪುರುಷಾಂತರೇಣ ಶಪ್ತಸ್ಯ ಹೋತುರವಶ್ಯಂ ತಥಾ ಭವೇತ್ ।**

ಹಿಂದೆ ಹೇಳಿದ ಪೂರ್ವಪಕ್ಷವಾದದಲ್ಲಿ ಬಾಧಕವನ್ನು ತೋರಿಸಿ ಅದನ್ನು ನಿವಾರಣೆಮಾಡುತ್ತಾರೆ. ಬಹಿಷ್ಪವಮಾನ ಸ್ತೋತ್ರಪಠನಕ್ಕಾಗಿ ಅಧ್ವರ್ಯು ಮೊದಲಾದ ಐದುಮಂದಿ ಋತ್ವಿಜರು ಹೊರಹೊರಟಾಗ ಹೋತೃವೂ ಅವರ ಜತೆಯಲ್ಲಿ ಹೊರಟದ್ದೇ ಆದರೆ ಆಗ ಹೋತೃವಿನ ವೇದವಾದ ಋಗ್ವೇದವು ಸಾಮವೇದವನ್ನು ಅನುಸರಿಸಿದಂತಾಗುವುದು. ಹೋತೃವೂ ಸಹ ಸಾಮಗಾನಮಾಡುವವರನ್ನು ಅನುಸರಿಸಿ ಹೋದಂತಾಗುವುದು. ಋಗ್ವೇದವು ಯಾವಾಗಲೂ ಎಲ್ಲಾ ವೇದಗಳಿಗೂ ಆಧಾರವು. ಅದನ್ನನುಸರಿಸಿ ಇತರ ವೇದಗಳು ಇರುವವು. ಸಾಮಗಾನಮಾಡುವವರನ್ನು ಹೋತೃವು ಅನುಸರಿಸಿ ಹೋದಲ್ಲಿ ಆಗ ಸಾಮವೇದವನ್ನು ಋಗ್ವೇದವು ಅನುಸರಿಸಿ ಹೋದಂತಾಗುವುದು. ಇದು ಅಯುಕ್ತವು. ಯಾವಾಗಲೂ ಋಗ್ವೇದಕ್ಕೇ

ಪ್ರಾಧಾನ್ಯತೆ ಇರಬೇಕು. ಛಾಂದೋಗ್ಯೋಪನಿಷತ್ತಿನಲ್ಲಿ **ತದೇತಸ್ಯಾಮೃಚ್ಯಧ್ಯೂಢಂ ಸಾಮ ತಸ್ಮಾದೃಚ್ಯಧ್ಯೂಢಂ ಸಾಮಗೀಯತೇ** (ಛಾ. ಉ. ೧-೬-೧) ಎಂದು ಹೇಳಿದೆ. ಎಂದರೆ ಸಾಮವೇದವು ಯಾವಾಗಲೂ ಋಗ್ವೇದವನ್ನೇ ಅನುಸರಿಸಿದೆ. ಆದ್ದರಿಂದ ಸಾಮಗಾನಮಾಡುವವರು ಋಗ್ವೇದಮಂತ್ರಗಳನ್ನೇ ಅನುಸರಿಸಿ ಸಾಮಗಾನಮಾಡುತ್ತಾರೆ. ಆದ್ದರಿಂದ ಮೊದಲು ಋಗ್ವೇದದ ಋಕ್ಕುಗಳಿಗೆ ಪ್ರಾಧಾನ್ಯತೆಯನ್ನು ಕೊಟ್ಟು ಅವುಗಳನ್ನು ಹೋತೃವು ಪಠಿಸಿದನಂತರ ಆ ಋಕ್ಕುಗಳಿಗೆ ಸಾಮವನ್ನು ಗಾನಮಾಡುವರು. ಇದಲ್ಲದೆ ಹೋತೃವು ಸಾಮಗರನ್ನು ಅನುಸರಿಸಿ ಹೋದಲ್ಲಿ ಹೋತೃವು ತನ್ನ ಸ್ಥಾನಮಾನಗಳನ್ನೂ ಕೀರ್ತಿಯನ್ನೂ ಕಳೆದುಕೊಂಡು ಸಾಮಗಾಯಕರನ್ನು ಅನುಸರಿಸಿ ಹೋಗುವನೆಂದು ಇತರರು ಹೀಯಾಳಿಸುವರು. ಉದ್ಗಾತೃವಿಗೆ ತನ್ನ ಯಶಸ್ಸನ್ನೂ ಸ್ಥಾನಮಾನಮರ್ಯಾದೆಗಳನ್ನೂ ಒಪ್ಪಿಸಿ ಈ ಹೋತೃವು ತನ್ನ ಸ್ವಕೀಯ ಪದವಿಯನ್ನು ಕಳೆದುಕೊಂಡಿರುವನೆಂದು ಎಲ್ಲರೂ ಹೇಳಲು ಕಾರಣವಾಗುವುದು. ನಿಜಸ್ಥಿತಿಯೂ ಹಾಗೆಯೇ ಆಗುವ ಸಂಭವವುಂಟು. ಆದ್ದರಿಂದ ಹೋತೃವು ಅಧ್ವರ್ಯು ಮೊದಲಾದ ಬಹಿಷ್ಪವಮಾನಗಾಯಕರೊಡನೆ ಹೊರಕ್ಕೆ ಹೋಗದೆ ತನ್ನ ಸ್ವಸ್ಥಾನದಲ್ಲಿಯೇ ಕುಳಿತಿರಬೇಕು.

**ತಸ್ಮಾತ್ತತ್ರೈವಾಸೀನೋಽನುಮಂತ್ರಯೇತ । ಯೋ ದೇವಾನಾಮಿಹ ಸೋಮಪೀಥೋ ಯಜ್ಞೇ ಬರ್ಹಿಷಿ ವೇದ್ಯಾಮ್ । ತಸ್ಯಾಪಿ ಭಕ್ಷಯಾಮಸೀತಿ ಏವಮು ಹಾಸ್ಯಾತ್ಮಾ ಸೋಮಪೀಥಾದನಂತರಿತೋ ಭವತಿ ।**

ಸರ್ಪಣಂ ನಿವಾರ್ಯಾನುಮಂತ್ರಣಂ ವಿಧತ್ತೇ । ಯಸ್ಮಾತ್ಸರ್ಪಣೇ ದೋಷಾಃ ಸಂತಿ ತಸ್ಮಾದ್ಯತ್ರ ಪೂರ್ವಮುಪಸ್ಥಿತಸ್ತತ್ರೈವಾಸೀನ ಇತರೇಷಾಂ ಸರ್ಪಣಮನ್ವೀಕ್ಷ್ಯಾನುಮಂತ್ರಯೇತ । ತಸ್ಮಿನ್ನನುಮಂತ್ರಣೇ ಮಂತ್ರಂ ದರ್ಶಯತಿ । ಇಹ ದೇಶೇ ಕ್ರಿಯಮಾಣೋ ಯಃ ಸೋಮಯಾಗಸ್ತಸ್ಮಿನ್ಯಾ ವೇದಿರ್ಯಚ್ಚ ತತ್ರತ್ಯಂ ಬರ್ಹಿಸ್ತತ್ರ ಸರ್ವದೇವಾನಾಂ ಸಂಬಂಧೀ ಸೋಮಪೀಥಃ ಸೋಮಯಾಗರೂಪೋ ಬಹಿಷ್ಪವಮಾನಾಖ್ಯೋ ಯೋ ಭಕ್ಷೋಽಸ್ತಿ ತಸ್ಯಾಪ್ಯಂಶಂ ವಯಂ ಭಕ್ಷಯಾಮ ಇತ್ಯೇಷೋಽನುಮಂತ್ರಣಮಂತ್ರಃ । ತಂ ಪ್ರಶಂಸತಿ । ಏವಮೇವಾನುಮಂತ್ರಣೇ ಸತ್ಯಸ್ಯ ಹೋತುರಾತ್ಮಾ ಜೀವಃ ಸೋಮಪಾನಾತ್ಕದಾಚಿದಪ್ಯಂತರಿತೋ ನ ಭವತಿ ।

ಹೋತೃವು ಬಹಿಷ್ಪವಮಾನಪಠನಕ್ಕಾಗಿ ಅಧ್ವರ್ಯ್ವಾದಿ ಋತ್ವಿಜರ ಜೊತೆಯಲ್ಲಿ ಹೊರಕ್ಕೆ ಹೋಗಬೇಕಾಗಿಲ್ಲವೆಂಬ ಅಂಶವನ್ನು ದೃಢಪಡಿಸಿ ಈಗ ಹೋತೃವು ಕುಳಿತಲ್ಲಿಯೇ ಪಠಿಸಬೇಕಾದ ಮಂತ್ರಕ್ರಮವನ್ನು ವಿವರಿಸುವರು. ಹೊರಕ್ಕೆ ಹೋಗುವ ವಿಷಯದಲ್ಲಿ ದೋಷಗಳಿರುವುದರಿಂದ ಅದನ್ನು ಬಿಟ್ಟು ತಾನು ಕುಳಿತ ಸ್ಥಳದಿಂದಲೇ ಇತರ ಋತ್ವಿಜರು ಹೊರಗೆ ಹೋಗುತ್ತಿರುವುದನ್ನು ನೋಡುತ್ತಾ ಮಂತ್ರವನ್ನು ಪಠಿಸುವನು. ಆ ಮಂತ್ರವು ಯಾವುದೆಂದರೆ— **ಯೋ ದೇವಾನಾಮಿಹ ಸೋಮಪೀಥೋ ಯಜ್ಞೇ ಬರ್ಹಿಷಿ ವೇದ್ಯಾಂ ತಸ್ಯಾಪಿ ಭಕ್ಷಯಾಮಸೀತಿ ।** ಇದರ ಅರ್ಥವು– ಈ ಪ್ರದೇಶದಲ್ಲಿ ಆಚರಿಸಲ್ಪಡುವ ಯಾವ ಸೋಮಯಾಗವುಂಟೋ ಆ ಯಾಗದ ಯಜ್ಞವೇದಿಯಲ್ಲಿರುವ ಬರ್ಹಿಸ್ಸೆಂಬ ದರ್ಭ ಆಸನದ ಮೇಲೆ ಇಡಲ್ಪಟ್ಟಿರುವ ಸೋಮಯಾಗರೂಪವಾದ ಮತ್ತು ದೇವತೆಗಳ ಸಂಬಂಧವಾದ ಬಹಿಷ್ಪವಮಾನವೆಂಬ ಹೆಸರಿನ ಯಾವ

ಚರುಭಕ್ಷಣವುಂಟೋ ಅದರ ಸ್ವಲ್ಪಭಾಗವನ್ನು ನಾವು ಭಕ್ಷಿಸುವೆವು ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಪ್ರಶಂಸೆಮಾಡುತ್ತಾ—**ಏವಮು ಹಾಸ್ಯಾತ್ಮಾ ಸೋಮಪೀಥಾದನಂತರಿತೋ ಭವತಿ**—ಎಂದರೆ ಈರೀತಿ ಮಂತ್ರಪಠನಾನಂತರ ಈ ಹೋತೃವಿನ ಆತ್ಮವು ಯಾವಾಗಲೂ ಬಹಿಷ್ಪವಮಾನಸ್ತೋತ್ರವನ್ನು ಪಠಿಸುವ ಸಾಮಗಾಯಕರು ಪಾನಮಾಡುವ ಸೋಮರಸದಿಂದ ಬೇರೆಯಾಗುವುದಿಲ್ಲ ಎಂದರೆ ಯಾವಾಗಲೂ ಅದರಲ್ಲಿ ಆಸಕ್ತಿಯನ್ನೇ ಹೊಂದಿರುವುದು.

**ಅಥೋ ಬ್ರೂಯಾನ್ಮುಖಮಸಿ ಮುಖಂ ಭೂಯಾಸಮಿತಿ ಮುಖಂ ವಾ ಏತದ್ಯಜ್ಞಸ್ಯ ಯದ್ಬಹಿಷ್ಪವಮಾನಃ ಮುಖಂ ಸ್ವೇಷು ಭವತಿ ಶ್ರೇಷ್ಠಃ ಸ್ವಾನಾಂ ಭವತಿ ಯ ಏವಂ ವೇದ ।**

ಮಂತ್ರಾಂತರಂ ಚ ವಿಧತ್ತೇ । ಪೂರ್ವೋಕ್ತಾನ್ಮಂತ್ರಾದನಂತರಂ ಮುಖಮಿತ್ಯಾದಿಕಮಪಿ ಮಂತ್ರಂ ಬ್ರೂಯಾತ್ । ಹೇ ಬಹಿಷ್ಪವಮಾನ ಯಜ್ಞಸ್ಯ ತ್ವಂ ಮುಖಮಸಿ ಯಜ್ಞಮಧ್ಯೇ ಮುಖ್ಯೋಽಸಿ । ಅತಸ್ತ್ವತ್ಪ್ರಸಾದಾದಹಮಪಿ ಮುಖಂ ಮುಖ್ಯೋ ಭೂಯಾಸಂ । ಏತಂ ಮಂತ್ರಂ ಪ್ರಶಂಸತಿ । ಸ್ತೋತ್ರೇಷು ಸರ್ವೇಷ್ವಾದ್ಯತ್ವಾದ್ಬಹಿಷ್ಪವಮಾನಸ್ಯ ಮುಖ್ಯತ್ವಂ । ವೇದನಂ ಪ್ರಶಂಸತಿ । ಮುಖತ್ವಂ ಲೋಕವ್ಯವಹಾರಪ್ರವರ್ತಕತ್ವಂ ಶ್ರೇಷ್ಠತ್ವಂ ವಿದ್ಯಾವಿತ್ತಾದಿಸಂಪತ್ತಿಃ । ಅಥ ಸವನೀಯಪುರೋಡಾಶೇಷು ಯೋಽಯಂ ಮೈತ್ರಾವರುಣೀ ಪಯಸ್ಯಾಸ್ತಿ ತತ್ಸದ್ಭಾವ ಆಪಸ್ತಂಬೇನ ದರ್ಶಿತಃ—ಪ್ರಾಗ್ವಂಶೇ ಪ್ರತಿಪ್ರಸ್ಥಾತಾ ಸವನೀಯಾನ್ನಿರ್ವಪತಿ ಸರ್ವೇ ಯವಾ ಭವಂತಿ ಲಾಜಾರ್ಥಾನ್ಪರಿಹಾಪ್ಯೇಂದ್ರಾಯ ಹರಿವತೇ ಧಾನಾ ಇಂದ್ರಾಯ ಪೂಷಣ್ವತೇ ಕರಂಭಂ ಸರಸ್ವತ್ಯೈ ಭಾರತ್ಯೈ ಪರಿವಾಪಮಿಂದ್ರಾಯ ಪುರೋಡಾಶಂ ಮಿತ್ರಾವರುಣಾಭ್ಯಾಂ ಪಯಸ್ಯಾಂ ಇತಿ ॥

ಈಗ ಮತ್ತೊಂದು ಮಂತ್ರವನ್ನು ವಿವರಿಸುವರು—**ಅಥೋ ಬ್ರೂಯಾನ್ಮುಖಮಸಿ ಮುಖಂ ಭೂಯಾಸಮಿತಿ ಮುಖಂ ವಾ ಏತದ್ಯಜ್ಞಸ್ಯ ಯದ್ಬಹಿಷ್ಪವಮಾನಃ॥** ಹಿಂದೆ ಹೇಳಿದ ಮಂತ್ರಪಠನಾನಂತರ ಮುಖಮಸಿ ಮುಖಂ ಇತ್ಯಾದಿ ಮಂತ್ರವನ್ನು ಪಠಿಸಬೇಕು. ಈ ಮಂತ್ರದ ಅರ್ಥವು—ಎಲೈ ಬಹಿಷ್ಪವಮಾನಸ್ತೋತ್ರವೇ, ನೀನು ಯಜ್ಞಕ್ಕೆ ಮುಖ್ಯನಾಗಿರುತ್ತಿ. ಎಂದರೆ ಯಜ್ಞಕಲಾಪಗಳ ಮಧ್ಯದಲ್ಲಿ ಮುಖ್ಯಪಾತ್ರವನ್ನು ವಹಿಸುತ್ತೀಯೆ. ಆದ್ದರಿಂದ ನಿನ್ನ ಅನುಗ್ರಹದಿಂದ ನಾನೂ ಸಹ ಜನರಲ್ಲಿ ಮುಖ್ಯ ಅಥವಾ ಪ್ರಾಧಾನ್ಯತೆಯನ್ನು ಪಡೆಯುವಂತಾಗಲಿ ಎಂದು ಈ ಮಂತ್ರದ ಅರ್ಥವು, ಈ ಬಹಿಷ್ಪವಮಾನಸ್ತೋತ್ರದ ಪ್ರಾಧಾನ್ಯತೆಯನ್ನು ಪ್ರಶಂಸಿಸುವರು—ಈ ಬಹಿಷ್ಪವಮಾನಸ್ತೋತ್ರವು ಎಲ್ಲಾ ಸಾಮಗಾನ ಸ್ತೋತ್ರಗಳಿಗಿಂತ ಮೊದಲು ಗಾನಮಾಡಲ್ಪಡುವುದರಿಂದ ಯಜ್ಞದಲ್ಲಿ ಇದು ಅತಿ ಮುಖ್ಯವಾದ ಸ್ತೋತ್ರವೆಂದು ಪರಿಗಣಿಸಲ್ಪಡುವುದು. ಶರೀರಕ್ಕೆ ಮುಖವು ಯಾವರೀತಿ ಶ್ರೇಷ್ಠವೋ ಅದೇ ರೀತಿ ಈ ಬಹಿಷ್ಪವಮಾನಸ್ತೋತ್ರವು ಯಜ್ಞಕ್ಕೆ ಮುಖದಂತಿರುವುದು. ಸ್ತೋತ್ರಸಂಬಂಧವಾದ ಮೂರು ಸೂಕ್ತಗಳನ್ನು (ಉಪಾಸ್ಮೈ; ದವಿದ್ಯುತತ್ಯಾ; ಪವಮಾನಸ್ಯ ತೇ ಎಂಬ ಮೂರು ಸೂಕ್ತಗಳನ್ನು) ಪಠಿಸಿದ ಮೇಲೆ ಪ್ರಾತಸ್ಸವನಕರ್ಮದಲ್ಲಿ ಗಾಯತ್ರಸಾಮದಿಂದ ನಾಲ್ಕು ಆಜ್ಯಸ್ತೋತ್ರಗಳನ್ನು ಗಾನಮಾಡುತ್ತಾರೆ. ಅನಂತರ ಮೂರು ಸೂಕ್ತಗಳನ್ನು ಮತ್ತು ಐದು ಬೇರೆ ಮಾಧ್ಯಂದಿನ ಪವಮಾನಸ್ತೋತ್ರಗಳನ್ನು ಮಾಧ್ಯಂದಿನ ಸವನದಲ್ಲಿ ಗಾನಮಾಡುತ್ತಾರೆ. ಇದಲ್ಲದೆ ರಥಂತರ, ವಾಮದೇವ್ಯ, ನೌಧಸ, ಕಾಲೇಯ ಎಂಬ ಸಾಮಗಳಿಂದ ಕೂಡಿದ ನಾಲ್ಕು ಪೃಷ್ಠಸ್ತೋತ್ರಗಳನ್ನೂ ಮಾಧ್ಯಂದಿನಸವನದಲ್ಲಿಯೇ ಗಾನಮಾಡುವರು. ಬಳಿಕ ಗಾಯತ್ರ, ಸಂಹಿತ, ಸಫ, ಪೌಷ್ಕಲ.

ಶ್ಯಾವಾಶ್ಯ, ಅಂಧೀಗವ ಎಂಬ ಆರು ಆರ್ಭವ ಪವಮಾನಸ್ತೋತ್ರಗಳನ್ನು ತೃತೀಯಸವನಕಾಲದಲ್ಲಿ ಗಾನಮಾಡುತ್ತಾರೆ. ಈಗ ಮೈತ್ರಾವರುಣಪುರೋಡಾಶ ಎಂದರೆ ಮಿತ್ರಾವರುಣದೇವತೆಗಳಿಗೆ ಅರ್ಪಿಸುವ ಪುರೋಡಾಶಕ್ಕೆ ಹಾಲನ್ನು ಮಿಶ್ರಮಾಡಬೇಕೆಂಬ ವಿಷಯದಲ್ಲಿ ಆಪಸ್ತಂಬರು—**ಪ್ರಾಗ್ವಂಶೇ ಪ್ರತಿಪ್ರಸ್ಥಾತಾ ಸವನೀಯಾನ್ನಿರ್ವಪತಿ ಸರ್ವೇ ಯವಾ ಭವಂತಿ ಲಾಜಾರ್ಥಾನ್ಪರಿಹಾಪ್ಯೈಂದ್ರಾಯ ಹರಿವತೇ ಧಾನಾ ಇಂದ್ರಾಯ ಪೂಷಣ್ವತೇ ಕರಂಭಂ ಸರಸ್ವತ್ಯೈ ಭಾರತ್ಯೈ ಪರಿವಾಪಮಿಂದ್ರಾಯ ಪುರೋಡಾಶಂ ಮಿತ್ರಾವರುಣಾಭ್ಯಾಂ ಪಯಸ್ಯಾಂ** (ಆಪ. ಶ್ರೌ. ೧೨-೪-೪, ೫, ೬) ಎಂದು ಹೇಳಿದಾರೆ. ಈ ವಿಷಯದಲ್ಲಿ ಒಂದು ಆಖ್ಯಾಯಿಕೆಯನ್ನು ಎಂದರೆ ಪೂರ್ವೇತಿಹಾಸವನ್ನು ಹೇಳುತ್ತಾರೆ.

ಆಸುರೀ ವೈ ದೀರ್ಘಜಿಹ್ವೀ ದೇವಾನಾಂ ಪ್ರಾತಸ್ಸವನಮವಾಲೇಟ್ ತದ್ವ್ಯಮಾದ್ಯತ್ತೇ ದೇವಾಃ ಪ್ರಾಜಿಜ್ಞಾಸಂತ ತೇ ಮಿತ್ರಾವರುಣಾವಬ್ರುವನ್ಯುವಮಿದಂ ನಿಷ್ಕುರುತಮಿತಿ ತೌ ತಥೇತ್ಯಬ್ರೂತಾಂ ತೌ ವೈ ವೋ ವರಂ ವೃಣಾವಹಾ ಇತಿ ವೃಣಾಥಾಮಿತಿ ತಾವೇತಮೇವ ವರಮವೃಣಾತಾಂ ಪ್ರಾತಃಸವನೇ ಪಯಸ್ಯಾಂ ಸೈನಯೋರೇಷಾಚ್ಯುತಾ ವರವೃತಾ ಹ್ಯೇನಯೋಸ್ತದ್ಯದಸ್ಯೈ ವಿಮತ್ತಮಿವ ತದಸ್ಯೈ ಸಮೃದ್ಧಂ ವಿಮತ್ತಮಿವ ಹಿ ತೌ ತಯಾ ನಿರಕುರುತಾಂ ॥

ತಾಮೇತಾಂ ಪಯಸ್ಯಾಂ ಪ್ರಶಂಸಿತುಮಾಖ್ಯಾಯಿಕಾಮಾಹ—ದೀರ್ಘಾ ಜಿಹ್ವಾ ಯಸ್ಯಾಃ ಸಾ ದೀರ್ಘಜಿಹ್ವೀ । ಅಸುರಜಾತಾವುತ್ಪನ್ನತ್ವಾದಾಸುರೀ । ತಥಾ ಚ ತಲವಕಾರಾ ಆಮನಂತಿ—ದೀರ್ಘಜಿಹ್ವೀ ವಾ ಅಸುರ್ಯಾ ಸಾ ಇತಿ । ಸಾ ಚ ದೇವಾನಾಂ ಸಂಬಂಧಿ ಪ್ರಾತಃಸವನಮವಾಲೇಟ್ । ಸ್ವಕೀಯಯಾ ಜಿಹ್ವಯಾ ತಸ್ಯಾವಲೇಹಂ ಕೃತವತೀ । ತಚ್ಚ ಪ್ರಾತಃಸವನಂ ವಿಷಜಿಹ್ವಾಲೇಹನೇನ ವ್ಯಮಾದ್ಯದ್ವಿವಿಧಂ ಮತ್ತಮಭೂತ್ । ಸರ್ವಸ್ಯಾಪಿ ಸವನಪ್ರಯೋಗಸ್ಯ ವಿಪರ್ಯಾಸೋ ಜಾತಃ । ತೇ ದೇವಾಸ್ತತ್ಪರಿಹಾರೋಪಾಯಂ ಪ್ರಾಜಿಜ್ಞಾಸಂತ ಪ್ರಕರ್ಷೇಣ ವಿಚಾರಿತವಂತಃ । ವಿಚಾರ್ಯ ಚ ತತ್ಪರಿಹಾರಸಮರ್ಥೌ ಮಿತ್ರಾವರುಣಾವಬ್ರುವನ್ ಹೇ ಮಿತ್ರಾವರುಣೌ ಯುವಂ ಯುವಾಮುಭಾವಿದಂ ಪ್ರಾತಸ್ಸವನಂ ನಿಷ್ಕುರುತಂ ನಿರ್ಗತದೋಷಂ ಕುರುತಂ । ತತ್ತಾವದಂಗೀಕೃತ್ಯ ದೇವೇಭ್ಯೋ ವರಂ ಯಾಚಿತ್ವಾ ಪ್ರಾತಸ್ಸವನಗತಾಂ ಪಯಸ್ಯಾಮೇವ ಸ್ವಕೀಯವರತ್ವೇನ ವೃತವಂತೌ । ಪಯಸಿ ಭವಾ ಆಮಿಕ್ಷಾ ಪಯಸ್ಯಾ । ಸೈಷಾ ವರವೃತತ್ವಾದೇನಯೋಃ ಕದಾಚಿದಪ್ಯವಿಚ್ಯುತಾ । ತತ್ರ ಪ್ರಾತಸ್ಸವನೇ ಯದಂಗಮಸ್ಯಾ ಅನಯಾ ದೀರ್ಘಜಿಹ್ವಯಾ ವಿಮತ್ತಮಿವ ಕೃತಮಾಸೀತ್ । ತತ್ಸರ್ವಮಸ್ಯಾ ಅನಯಾ ಪಯಸ್ಯಯಾ ಸಮೃದ್ಧಮಾಸೀತ್ । ಯಸ್ಮಾದ್ವಿಮತ್ತಮಿವ ಸ್ಥಿತಂ ಪ್ರಾತಸ್ಸವನಂ ತೌ ಮಿತ್ರಾವರುಣೌ ತಯಾ ಪಯಸ್ಯಯಾ ನಿರಕುರುತಾಂ ನಿವಾರಿತವಂತೌ ತಸ್ಮಾತ್ಸಮೃದ್ಧಿರ್ಯುಕ್ತಾ ॥

ಪೂರ್ವದಲ್ಲಿ ದೀರ್ಘಜಿಹ್ವೀ ಎಂಬ ಹೆಸರಿನ ಓರ್ವ ಅಸುರಸ್ತ್ರೀ ಇದ್ದಳು. ಅವಳ ನಾಲಿಗೆಯು ಅತಿ ಉದ್ದವಾಗಿದ್ದುದರಿಂದ ಅವಳಿಗೆ ದೀರ್ಘಜಿಹ್ವೀ ಎಂದರೆ ಉದ್ದವಾದ ನಾಲಿಗೆ ಉಳ್ಳವಳು ಎಂದು ಹೆಸರಿದ್ದಿತು. ಆ ಅಸುರಸ್ತ್ರೀಯು ಒಂದಾನೊಂದು ಕಾಲದಲ್ಲಿ ದೇವತೆಗಳಿಗಾಗಿ ಸಿದ್ಧಪಡಿಸಿಟ್ಟಿದ್ದ ಪ್ರಾತಸ್ಸವನವನ್ನು ಎಂದರೆ ಪ್ರಾತಃಕಾಲದಲ್ಲಿ ಅರ್ಪಿಸಲ್ಪಡುವ ಸೋಮರಸವನ್ನು ತನ್ನ ನಾಲಿಗೆಯಿಂದ ನೆಕ್ಕಿದಳು. ಹೀಗೆ ನೆಕ್ಕಿದ್ದರಿಂದ ಆ ಸೋಮರಸದಲ್ಲಿದ್ದ ಸಾರವು ಹೋಯಿತು ಎಂದರೆ ಮದವನ್ನು ಅಥವಾ ಹರ್ಷವನ್ನುಂಟುಮಾಡುವ ಸಾರವತ್ತಾದ ಭಾಗವು ಆ ಸೋಮರಸದಿಂದ ಹೊರಟುಹೋಯಿತು. ಇದನ್ನು ಕಂಡು ದೇವತೆಗಳು ತಮ್ಮತಮ್ಮಲ್ಲೇ ಚರ್ಚೆಮಾಡಿ ಒಂದು ನಿರ್ಧಾರಕ್ಕೆಬಂದರು. ಬಳಿಕ ಅವರು ಮಿತ್ರಾವರುಣರೆಂಬ ದೇವತೆಗಳನ್ನು ಕರೆದು—ಎಲೈ ಮಿತ್ರಾವರುಣರೇ, ಈಗ ದೇವತೆಗಳಿಗಾಗಿ ಸಿದ್ಧಪಡಿಸಲ್ಪಟ್ಟಿದ್ದ ಪ್ರಾತಃಸವನದ ಸೋಮರಸವು ದೀರ್ಘಜಿಹ್ವಿ ಎಂಬ ಅಸುರಸ್ತ್ರೀಯ ಜಿಹ್ವಾಸ್ಪರ್ಶದಿಂದ ದೂಷಿತವಾಗಿದೆ ಮತ್ತು ಆ ರಸವು ತನ್ನ ಸಾರವನ್ನು ಕಳೆದುಕೊಂಡಿದೆ ಇದನ್ನು ನೀವು ಮುಂಚಿನಂತೆ ಸರಿಪಡಿಸಬೇಕು ಎಂದರೆ ದೇವತೆಗಳಿಗೆ ಪಾನಯೋಗ್ಯವಾಗುವಂತೆ ರಸವತ್ತಾಗಿ ಮಾಡಬೇಕು ಎಂದು ಪ್ರಾರ್ಥಿಸಿದರು. ದೇವತೆಗಳ ಪ್ರಾರ್ಥನೆಯನ್ನು ಕೇಳಿ ಮಿತ್ರಾವರುಣರು ಹಾಗೆಯೇ ಆಗಲೆಂದೊಪ್ಪಿದರು. ಆದರೆ ಅವರು ದೇವತೆಗಳನ್ನುದ್ದೇಶಿಸಿ—ಎಲೈ ದೇವತೆಗಳೇ ನೀವು ಹೇಳಿದಂತೆ ಮಾಡುತ್ತೇವೆ. ಆದರೆ ಹಾಗೆ ಮಾಡಿದ್ದಕ್ಕಾಗಿ ನಮಗೆ ನೀವು ಒಂದು ವರವನ್ನು ಕೊಡಬೇಕು ಎನ್ನಲು ದೇವತೆಗಳು ವರವನ್ನು ಕೇಳಿ ನಾವು ಕೊಡುತ್ತೇವೆ ಎಂದೊಪ್ಪಿದರು. ಬಳಿಕ ಮಿತ್ರಾವರುಣರು—ಪ್ರಾತಸ್ಸವನದಲ್ಲಿ ತಮಗೆ ಅರ್ಪಿಸುವ ಸೋಮರಸದಲ್ಲಿ ಹಾಲಿನ (ಮೊಸರಿನ?) ಕೆನೆಯನ್ನು ಬೆರೆಸಿ ಅರ್ಪಿಸಬೇಕು. ಮುಂದೆಯೂ ಹೀಗೆಯೇ ಮಾಡಬೇಕು. ಇದೇ ನಾವು ಕೇಳುವ ವರವು ಎಂದು ಹೇಳಿ ದೇವತೆಗಳ ಸಮ್ಮತಿಯನ್ನು ಪಡೆದು ದೂಷಿತವಾದ ಸೋಮರಸವನ್ನು ಪೂರ್ವದಂತೆ ಶುದ್ಧಿಮಾಡಿ ಅದನ್ನು ಮದಕರವನ್ನಾಗಿಯೂ ಸಮೃದ್ಧವನ್ನಾಗಿಯೂ ಮಾಡಿದರು.



## *English Translation*

### (The Hotar has no share in the Bahish-pavamana meal. The Soma libation for Mitra-Varuna to be mixed with milk).

After the libations from the Upamsu and Antaryama have been poured into the fire, the Soma squeezed and pured in the different vessels-grahas—such as Aindravayana & c., which are then kept in readiness for making the libations, five of the priests; Adhvaryu, Prastotar, Pratihartar, Udgatar, and Brahma, one holding the hand of the other-Samanvaradha-walk in the direction of the Chatvala, and ultimately take their seats for performing the ceremony of the Stotra, i.e. chanting a sacred verse-a Ṡaman. Now the question is, whether the Hotar is allowed to walk or not at the same time that the other priests just mentioned do so.)

At that (occasion, when the priests walk) they (the theologians) ask, whether he (the Hotar) ought to walk or not (together with the others). Some say, he ought to walk; for this meal in honour of the Bahish-pavamana-stotra (which is about to be performed by the Sama singers) is enjoyed equally by

both gods and men; thence (both gods and men) participate in it. But those who say so are not to be attended to; should he walk (along with the Sama singers). then he would make the Rik (which is repeated by the Hotar) follow the Saman, (If any one should see him do so) he at that occasion should tell him: "the Hotar here has been behind the Sama singers, and ceded his fame to the Udgatar: he has fallen from his place and will (in future) also fall from it." So it always happens to the Hotar (who walks after the Sama singers). Therefore he ought to remain where he is sitting, and repeat the following Anumantrana verse: "which Soma draught here at the sacrifice, placed on the sacred grass, on the altar, belongs to the gods, of this we also enjoy a share." Thus the soul of the Hotar is not excluded from that Soma draught (which is drunk by the Sama singers after the Bahish-pavamana Saman is over). Then (after having repeated the mantra mentioned) he ought to repeat: "thou art the mouth of the sacrifice: might I become the mouth first among my people also! For the Bahish-pavamina draught is the very mouth of the sacrifice (sacrificial personage.)" He who has such a knowledge, becomes the mouth of his own people, the chief among his own people.

An Asura woman, Dirghajivi (long-tongued) licked the morning libation of the Gods. It consepuently became inebriating everywhere. The Gods wished to remedy this, and said to Mitra and Varuna: "you two ought to take off this the inebriating quality from the Soma)." They said: "Yes but let us choose a boon from you." The Gods said: Choose! They chose at the morning libation curd of milk whey (payasa) in milk. This is their everlasting share; that is, the boon chosen by them. What had been made by her (the Asura woman) inebriating, that was made good (again) by the curd, for both Mitra and Varuna removed, through this curd, the inebriating quality, as it were (from the Soma juice.)

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟಮಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎಂಟನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ಅಷ್ಟಮಾಧ್ಯಾಯೇ ಪಂಚಮಃ ಖಂಡಃ

## ಎಂಟನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಪುರೋಡಾಶದ ಸ್ವರೂಪವು ಮತ್ತು ವಿವರಣೆಯು ]



**ದೇವಾನಾಂ ವೈ ಸವನಾನಿ ನಾಧ್ರಿಯಂತ ತ ಏತಾನ್ಪುರೋಳಾಶಾನ-ಪಶ್ಯಂಸ್ತಾನನುಸವನಂ ನಿರವಪನ್ಸವನಾನಾಂ ಧೃತ್ಯೈ ತತೋ ವೈ ತಾನಿ ತೇಷಾಮಧ್ರಿಯಂತ ತದ್ಯದನುಸವನಂ ಪುರೋಳಾಶಾ ನಿರುಪ್ಯಂತೇ ಸವನಾನಾಮೇವ ಧೃತ್ಯೈ ತಥಾ ಹಿ ತಾನಿ ತೇಷಾ-ಮಧ್ರಿಯಂತ ।**

ಅಥ ಸವನೀಯಪುರೋಡಾಶಾನ್ವಿಧಾತುಮಾದಾ ಕಥಾಮಾಹ । ಯಾನಿ ಪ್ರಾತಸ್ಸವನ-ಮಾಧ್ಯಂದಿನಸವನತೃತೀಯಸವನಾನಿ ಸಂತಿ ತಾನಿ ತ್ರೀಣಿ ದೇವಾನಾಮರ್ಥೇ ನಾಧ್ರಿಯಂತ ನೈವ ಧೃತಾನಿ ದೈನ್ಯೈರವರೋದ್ಧುಮಶಕ್ಯಾನ್ಯಾಸನ್ । ತೇ ದೇವಾಸ್ತದ್ಧಾರಣಹೇತೂನ್ಪಂಚ ಪುರೋಡಾಶಾನ್ದೃಷ್ಟ್ವಾ ತಾನ್ಪ್ರತಿಸವನಂ ನಿರವಪಂಸ್ತೈಃ ಪುರೋಡಾಶೈಸ್ತುಷ್ಟಾನಿ ಸವನಾನಿ ದೇವಾನಾಮರ್ಥೇ ಧೃತಾನ್ಯಾಸನ್ । ಆಖ್ಯಾಯಿಕಯಾ ಪ್ರಶಸ್ಯ ಪುರೋಡಾಶಾನ್ವಿಧತ್ತೇ । ತತ್ತ-ಸ್ಮಾದ್ದೇವೈರ್ನಿರುಪ್ತತ್ವಾದ್ಯದಿ ಯಜಮಾನಾಃ ಪ್ರತಿಸವನಂ ಪುರೋಳಾಶಾ ನಿರುಪ್ಯೇರಂಸ್ತದಾ ಸ ನಿರ್ವಾಪಃ ಸವನಾನಾಂ ಧಾರಣಾಯ ಭವತಿ । ತಥಾ ತೇನೈವ ಹಿ ಪ್ರಕಾರೇಣ ತಾನಿ ಸವನಾನಿ ತೇಷಾಂ ದೇವಾನಾಮರ್ಥೇ ಧ್ರಿಯಂತೇಽತೋ ಮನುಷ್ಯಾಣಾಮಪಿ ನಿರ್ವಾಪ ಏವ ಧಾರಣೋಪಾಯಃ ॥

ಈಗ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಕಾಲಗಳಲ್ಲಿ ಉಪಯೋಗಿಸುವ ಪುರೋಳಾಶದ ವಿಷಯವನ್ನು ವಿವರಿಸುತ್ತಾರೆ. ಪೂರ್ವದಲ್ಲಿ ಸವನಕಾಲಗಳಲ್ಲಿ ಅರ್ಪಿಸುತ್ತಿದ್ದ ಹೋಮದ್ರವ್ಯಗಳು ಅದರಲ್ಲಿಯೂ ಸೋಮರಸವು ಸ್ಥಿರವಾಗಿ ನಿಲ್ಲದೆ ದೇವತೆಗಳ ಕೈಗೆ ಸಿಕ್ಕುತ್ತಿರಲಿಲ್ಲ. ಆಗ ದೇವತೆಗಳು ಸವನಕರ್ಮದಲ್ಲಿ ಸಿದ್ಧಪಡಿಸಿಟ್ಟಿದ್ದ ಪುರೋಡಾಶ (ಚರು)ವನ್ನು ನೋಡಿ, ಇದರಿಂದ ತಮಗೆ ಸಹಾಯವಾಗಬಹುದೆಂದು ಯೋಚಿಸಿ ಆ ಪುರೋಡಾಶಗಳಲ್ಲಿ ಐದು ಭಾಗಗಳನ್ನು ತೆಗೆದುಕೊಂಡು ಹೋಮಮಾಡಿದರು. ಅದರಿಂದ ಸಂತುಷ್ಟವಾದ ಸವನಗಳು ದೇವತೆಗಳಿಗೆ ಸಿಕ್ಕುವಂತಾಯಿತು. ಎಂದರೆ ದೇವತೆಗಳು ಮೂರು ಸವನಗಳಲ್ಲಿಯೂ ಅರ್ಪಿಸಲ್ಪಡುವ ಹವಿಸ್ಸನ್ನು ಪಡೆಯಲು ಸಾಧ್ಯವಾಯಿತು. ಆದ್ದರಿಂದ ಸವನೀಯಹವಿಸ್ಸು ದೇವತೆಗಳಿಗೆ ದೊರೆತು ಅವರಲ್ಲಿ ಸ್ಥಿರವಾಗಿ ನಿಲ್ಲುವುದಕ್ಕಾಗಿ ಮನುಷ್ಯರು ಪ್ರತಿಸವನದಲ್ಲಿಯೂ ಪುರೋಡಾಶ

ವನ್ನು ಹೋಮಮಾಡುವರು. ಹೀಗೆ ಮಾಡುವುದರಿಂದ ದೇವತೆಗಳಿಗೂ ಮನುಷ್ಯರಿಗೂ ಸವನಗಳು ಸಿಕ್ಕಿ ಅವು ಸ್ಥಿರವಾಗಿ ನೆಲೆಸುವುದಕ್ಕಾಗಿ ಪುರೋಡಾಶಹೋಮವನ್ನು ಅವಶ್ಯಕವಾಗಿ ಮಾಡಬೇಕಾಗಿರುವುದು.

**ಪುರೋ ವಾ ಏತಾನ್ದೇವಾ ಅಕ್ರತ ಯತ್ಪುರೋಳಾಶಾಸ್ತತ್ಪುರೋ-ಳಾಶಾನಾಂ ಪುರೋಳಾಶತ್ವಂ ॥**

ಯತ್ಪುರೋಳಾಶಾಃ ಸಂತ್ಯೇತಾನ್ದೇವಾಃ ಪುರೋ ವೈ ಸೋಮಾಹುತಿಭ್ಯಃ ಪುರಸ್ತಾ-ದೇವಾಕ್ರತ ಕೃತವಂತಸ್ತಸ್ಮಾತ್ಪುರೋಡಾಶೇತಿ ನಾಮ ಸಂಪನ್ನಂ । ದಾಶೃ ದಾನ ಇತಿ ಧಾತುಃ ಪುರತೋ ದೀಯಮಾನಂ ಹವಿರಿತ್ಯರ್ಥಃ । ಯದ್ಯಪ್ಯತ್ರ ಧಾನಾದಿಷು ಹವಿಷ್ಷು ಚತುರ್ಥ ಏವ ಪುರೋಡಾಶಸ್ತಥಾಪಿ ಚ್ಛತ್ರಿನ್ಯಾಯೇನ ಧಾನಾದೀನಾಂ ಸರ್ವೇಷಾಂ ಪುರೋಡಾಶತ್ವೋಪ-ಚಾರಃ ಯದಾ ಪುರಶ್ಶಬ್ದ ಏವಂ ವ್ಯಾಖ್ಯೇಯಃ । ಸವನಾನಾಂ ಧಾರಣಾರ್ಥಂ ದೇವಾ ಏತಾನಿ ಹವೀಂಷಿ ದುರ್ಗಮಾಣಿ ಪುರಾಣ್ಯಕುರ್ವತೇತಿ । ಯದಿ ಪುರಸ್ತಾದ್ಯದಿ ವಾ ಪುರಾಣಿ ಸರ್ವಥಾಪಿ ಪುರೋಡಾಶಶಬ್ದೋ ನಿಷ್ಪದ್ಯತೇ ।

ಈಗ ಪುರೋಳಾಶಶಬ್ದದ ನಿಷ್ಪತ್ತಿಯನ್ನು ವಿವರಿಸುವರು—ದೇವತೆಗಳು ಇತರ ಸೋಮಾಹುತಿಗಳಿಗಿಂತ ಮೊದಲೇ ಈ ಪುರೋಡಾಶಾಹುತಿಯನ್ನು ಮಾಡಿದ್ದರಿಂದ ಇದಕ್ಕೆ ಪುರೋಡಾಶವೆಂಬ ಹೆಸರು ಬಂದಿತು. ಪುರಃ-ಪೂರ್ವದಲ್ಲಿ, ಎಲ್ಲಕ್ಕಿಂತ ಮೊದಲು ದಾಶೃ-ದಾನ(ಆಹುತಿ ಕೊಡುವುದು) ಎಂದು ಪುರೋಡಾಶ ಶಬ್ದಕ್ಕೆ ಅವಯವಾರ್ಥವಿರುವುದರಿಂದ ಪುರೋಡಾಶವೆಂದರೆ ಮೊದಲು ಕೊಡುವ ಆಹುತಿ ಎಂದರ್ಥವು. (ಪುರೋದಾಸ್ಯತೇ ಇತಿ ಪುರೋಡಾಃ) ಯಜ್ಞದಲ್ಲಿ ಅರ್ಪಿಸುವ ಹವಿಸ್ಸುಗಳ ಪಟ್ಟಿಯಲ್ಲಿ—ಧಾನಾಃ, ಕರಂಭಃ, ಪರಿವಾಪಃ, ಪುರೋಡಾಶ ಎಂದು ಪುರೋಡಾಶಕ್ಕೆ ನಾಲ್ಕನೆಯ ಸ್ಥಾನವಿದ್ದರೂ ಸವನಾಹುತಿಗಳಿಗೆ (ಸೋಮಾಹುತಿಗಳಿಗೆ) ಪೂರ್ವದಲ್ಲಿಯೇ ಇದನ್ನು ಅರ್ಪಿಸುವುದರಿಂದ ಇದಕ್ಕೆ ಪುರೋಡಾಶವೆಂಬ ಹೆಸರು ಬಂದಿರುವುದು. ಅಥವಾ ಸವನಗಳ ಧಾರಣಾರ್ಥವಾಗಿ ದೇವತೆಗಳು ಈ ಪುರೋಡಾಶಹವಿಸ್ಸುಗಳನ್ನು ದುರ್ಗಮವಾದ ಪುರಗಳನ್ನಾಗಿ ಮಾಡಿದರು. ಎಂಬ ಅರ್ಥದಿಂದಲೂ ಪುರೋಡಾಶಶಬ್ದದ ನಿಷ್ಪತ್ತಿಯಿರುವುದು. ಎಂದರೆ ಸೋಮಾಹುತಿಗಳಿಗಿಂತ ಮೊದಲು ಇದನ್ನು ಉಪಯೋಗಿಸುವುದರಿಂದಾಗಲೀ, ದುರ್ಗಮವಾದ ಪುರಗಳಿಂದಾಗಲಿ ಅರ್ಥವಿರುವುದರಿಂದ ಪುರೋಡಾಶಶಬ್ದವು ವ್ಯುತ್ಪನ್ನವಾಗಿದೆ.

**ತದಾಹುರನುಸವನಂ ಪುರೋಳಾಶಾನ್ನಿರ್ವಪೇದಷ್ಟಾಕಪಾಲಂ ಪ್ರಾತ-ಸ್ಸವನಏಕಾದಶಕಪಾಲಂ ಮಾಧ್ಯಂದಿನೇ ಸವನೇ ದ್ವಾದಶಕ-ಪಾಲಂ ತೃತೀಯಸವನೇ ತಥಾಹಿ ಸವನಾನಾಂ ರೂಪಂ ತಥಾ ಛಂದಸಾಮಿತಿ । ತತ್ತನ್ನಾದೃತ್ಯಮೈಂದ್ರಾ ವಾ ಏತೇ ಸರ್ವೇ ನಿರುಪ್ಯಂತೇ ಯದನುಸವನಂ ಪುರೋಳಾಶಾಸ್ತಸ್ಮಾತ್ತಾನೇಕಾ-ದಶಕಪಾಲಾನೇವ ನಿರ್ವಪೇತ್ ॥**

ಅಥ ಪುರೋಡಾಶಸ್ವರೂಪವಿಶೇಷಂ ನಿರ್ಧಾರಯಿತುಂ ಪೂರ್ವಪಕ್ಷಮಾಹ ತತ್ರೇಷು ಪುರೋಡಾಶೇಷು ಪೂರ್ವಪಕ್ಷಿಣ ಆಹುಃ । ಪ್ರತಿಸವನಂ ನಿರ್ವಪಣೀಯೇಷು ಪುರೋಡಾಶೇಷು

**ಕ್ರಮೇಣ ಕಪಾಲಸಂಖ್ಯಾಷ್ಟತ್ವಾದಿಸಂಖ್ಯಾ ದ್ರಷ್ಟವ್ಯಾ ಸವನಾನಾಂ ರೂಪಸ್ಯ ತಥಾವಿಧತ್ವಾತ್ । ತಚ್ಚ ಛಂದೋದ್ವಾರೇಣ ದ್ರಷ್ಟವ್ಯಂ । ಗಾಯತ್ರೀ ತ್ರಿಷ್ಟುಬ್ಜಗತೀ ಚೇತಿ ಛಂದಾಂಸಿ ಸವನನಿಷ್ಪಾದಕಾನಿ ಗಾಯತ್ರಂ ಪ್ರಾತಸ್ಸವನಂ ತ್ರೈಷ್ಟುಭಂ ಮಾಧ್ಯಂದಿನಂ ಜಾಗತಂ ತೃತೀಯಸವನಮಿತಿ ಶ್ರುತ್ಯಂತರಾತ್ । ತಥಾ ಸತಿ ತತ್ತಚ್ಛಂದೋಗತಾಕ್ಷರಸಂಖ್ಯಾನುಸಾರೇಣ ಕಪಾಲಸಂಖ್ಯಾ ಯುಕ್ತೇತಿ ಪೂರ್ವಪಕ್ಷಃ । ತಂ ನಿರಾಕೃತ್ಯ ಸಿದ್ಧಾಂತಂ ದರ್ಶಯತಿ । ಪಂಚಸು ಹವಿಷ್ಷು ಧಾನಾದಿಷು ಮಧ್ಯೇ ಚತುರ್ಥಸ್ಯ ಪುರೋಡಾಶಸ್ಯೈಂದ್ರದೇವತಾಕತ್ವಾದೈಂದ್ರಶ್ಚಾನ್ಯತ್ರೈಕಾದಶಕಪಾಲ ಏವ ಪ್ರಾಯೇಣ ವಿಧೀಯತ ಇತಿ ತತ್ಪ್ರಯತ್ನಾವಗಮಾದತ್ರಾಪಿ ತ್ರಿಷ್ವಪಿ ಸವನೇಷ್ವೈಂದ್ರಾನ್ಪುರೋಡಾಶಾನೇಕಾದಶಕಪಾಲಾನೇವ ನಿರ್ವಪೇತ್ । ಶಾಖಾಂತರೇಽಪಿ ವಿಲೋಮತ್ವದೋಷೇಣ ಪೂರ್ವಪಕ್ಷಂ ನಿರಾಕೃತ್ಯ ಸಿದ್ಧಾಂತೋಽಭಿಹಿತಃ— ಏಕಾದಶಕಪಾಲಾನೇವ ಪ್ರಾತಸ್ಸವನೇ ಕುರ್ಯಾದೇಕಾದಶಕಪಾಲಾನ್ಮಾಧ್ಯಂದಿನೇ ಸವನ ಇತ್ಯಾದಿ । ಆಪಸ್ತಂಬಸ್ತ್ವನ್ಯಶಾಖಾಭೇಧಮನುಸೃತ್ಯ ಪಕ್ಷದ್ವಯಮಪ್ಯುದಾಹರತಿ— ಅಷ್ಟೌ ಪುರೋಡಾಶಕಪಾಲಾನನುಸವನಮೇಕೇ ಸಮಾಮನಂತಿ ಇತಿ ॥**

ಈಗ ಪುರೋಡಾಶಸ್ವರೂಪವನ್ನು ವಿವರಿಸುವರು. ಈ ವಿಷಯದಲ್ಲಿ ಮೊದಲು ಪೂರ್ವಪಕ್ಷವನ್ನು ಹೇಳುತ್ತಾರೆ. ಪ್ರತಿಸವನದಲ್ಲಿಯೂ ಅರ್ಪಿಸಲ್ಪಡುವ ಪುರೋಡಾಶ ಕಪಾಲಗಳ ಸಂಖ್ಯೆಯು ಎಂಟು, ಹನ್ನೊಂದು, ಹನ್ನೆರಡು ಎಂದಿರಬೇಕು (ಪುರೋಡಾಶಕಪಾಲವೆಂದರೆ— ಮಣ್ಣಿನ ಹೆಂಚಿನಮೇಲೆ ಬೇಯಿಸಿದ ಕಲಸಿದ ಹಿಟ್ಟು ಅಥವಾ ರೊಟ್ಟಿ) ಏಕೆಂದರೆ ಆಯಾ ಸವನಗಳಿಗೆ ತಕ್ಕಂತೆ ಕಪಾಲಗಳ ಸಂಖ್ಯೆ ಇರಬೇಕು. ಪ್ರಾತಸ್ಸವನದಲ್ಲಿ ಎಂಟು ಕಪಾಲಗಳಮೇಲೆ ಪಕ್ವಮಾಡಿದ ಪುರೋಡಾಶವನ್ನು (ಅಷ್ಟಾಕಪಾಲ) ಉಪಯೋಗಿಸಬೇಕು. ಅದರಂತೆ ಮಾಧ್ಯಂದಿನಸವನದಲ್ಲಿ ಹನ್ನೊಂದು ಅಕ್ಷರಗಳ ಪಾದವಿರುವ ತ್ರಿಷ್ಟುಬ್ ಛಂದಸ್ಸಿನ ಪ್ರಯೋಗವಿರುವುದರಿಂದ ಹನ್ನೊಂದು ಕಪಾಲಗಳನ್ನೂ, ತೃತೀಯಸವನದಲ್ಲಿ ಹನ್ನೆರಡು ಅಕ್ಷರಗಳ ಪಾದವಿರುವ ಜಗತೀಛಂದಸ್ಸಿನ ಪ್ರಯೋಗವಿರುವುದರಾದ ಹನ್ನೆರಡು ಕಪಾಲಗಳನ್ನು ಉಪಯೋಗಿಸಬೇಕು. ಈ ವಿಷಯದಲ್ಲಿ— **ಅಷ್ಟಾಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಸ್ಸವನಂ ಪ್ರಾತಸ್ಸವನಮೇವ ತೇನಾಪ್ನೋತಿ........ಏಕಾದಶಾಕ್ಷರಾ ತ್ರಿಷ್ಟುಪ್ ತ್ರೈಷ್ಟುಭಂ ಮಾಧ್ಯಂದಿನಂ ಸವನಂ........ದ್ವಾದಶಾಕ್ಷರಾ ಜಗತೀ ಜಾಗತಂ ತೃತೀಯಸವನಂ** (ತೈ. ಸಂ. ೨-೨-೯) ಎಂದೂ **ತಂ ವಸವೋಷ್ಟಾಕಪಾಲೇನ ಪ್ರಾತಸ್ಸವನೇ ಭಿಷಜ್ಯನ್ ರುದ್ರಾ ಏಕಾದಶಕಪಾಲೇನ ಮಾಧ್ಯಂದಿನೇ ಸವನೇ, ವಿಶ್ವೇದೇವಾ ದ್ವಾದಶಕಪಾಲೇನ ತೃತೀಯಸವನೇ** (ತೈ. ಬ್ರಾ. ೧-೫-೧೧-೩) ಎಂದೂ ತೈತ್ತಿರೀಯ ಶ್ರುತಿವಾಕ್ಯವಿರುವುದು. ಆದ್ದರಿಂದ ಆಯಾ ಸವನಗಳಲ್ಲಿ ಉಪಯೋಗಿಸುವ ಛಂದಸ್ಸಿನ ಪಾದಗಳಲ್ಲಿರುವ ಅಕ್ಷರ ಸಂಖ್ಯೆಗೆ ಅನುಸಾರವಾಗಿ ಪ್ರಾತಸ್ಸವನದಲ್ಲಿ ಎಂಟು ಕಪಾಲಗಳನ್ನೂ, ಮಾಧ್ಯಂದಿನಸವನದಲ್ಲಿ ಹನ್ನೊಂದು ಕಪಾಲಗಳನ್ನೂ, ತೃತೀಯಸವನದಲ್ಲಿ ಹನ್ನೆರಡು ಕಪಾಲಗಳನ್ನೂ ಉಪಯೋಗಿಸಬೇಕು. ಇದು ಪೂರ್ವಪಕ್ಷವು.

ಸಿದ್ಧಾಂತವು ಈರೀತಿ ಇರುವುದು— ಮೇಲೆ ಹೇಳಿದ ಪೂರ್ವಪಕ್ಷದ ನ್ಯಾಯವನ್ನು ಅಂಗೀಕರಿಸಬಾರದು. ಏಕೆಂದರೆ ಸವನಗಳಲ್ಲಿ ಪುರೋಡಾಶವನ್ನು ಇಂದ್ರನನ್ನುದ್ದೇಶಿಸಿಯೇ ಅರ್ಪಿಸುವುದರಿಂದ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯ ಸವನಗಳೆಂಬ ಮೂರುಸವನಗಳಲ್ಲಿಯೂ ಹನ್ನೊಂದು ಸಂಖ್ಯೆಯು ಕಪಾಲಗಳನ್ನೇ ಉಪಯೋಗಿಸಬೇಕು. ಐದು ವಿಧವಾದ ಹವಿಸ್ಸುಗಳಲ್ಲಿ ಪುರೋಡಾಶವು ನಾಲ್ಕನೆಯದಾಗಿದ್ದು ಇಂದ್ರದೇವತಾಕವಾಗಿರುವುದರಿಂದ ಇಂದ್ರನಿಗೆ ಸಾಮಾನ್ಯವಾಗಿ ಉಪಯೋಗಿಸಲ್ಪಡುವ ಹನ್ನೊಂದು ಕಪಾಲಗಳನ್ನೇ ಇಲ್ಲಿಯೂ ಎಂದರೆ ಮೂರುಸವನಗಳಲ್ಲಿಯೂ ಉಪಯೋಗಿಸುವುದು ನ್ಯಾಯವು.

ತೈತ್ತಿರೀಯ ಶ್ರುತಿಯಲ್ಲಿಯೂ ಸಹ—**ಏಕಾದಶಕಪಾಲಾನೇವ ಪ್ರಾತಸ್ಸವನೇ ಕುರ್ಯಾತ್ ಏಕಾದಶಕಪಾಲಾನ್ಮಾಧ್ಯಂದಿನೇ ಸವನೇ** ಇತ್ಯಾತಿ (ತೈ. ಬ್ರಾ. ೧-೫-೧೧-೪) ಎಂದು ಹೇಳಿರುವುದು ಎಂದರೆ ಪ್ರಾತಸ್ಸವನ ಮೊದಲಾದ ಮೂರು ಸವನಗಳಲ್ಲಿಯೂ ಹನ್ನೊಂದು ಕಪಾಲಗಳನ್ನೇ ಉಪಯೋಗಿಸಬೇಕು. ಆದರೆ ಆಪಸ್ತಂಬರು ಈ ಎರಡು ಪಕ್ಷಗಳನ್ನು ಉದಹರಿಸಿರುವರು—**ಅಷ್ಟೌ ಪುರೋಡಾಶಕಪಾಲಾನ್ಯೇಕಾದಶ ಮಾಧ್ಯಂದಿನೇ ದ್ವಾದಶ ತೃತೀಯಸವನೇ । ಸರ್ವಾನ್ಯೈಂದ್ರಾನೇಕಾದಶಕಪಾಲಾನನುಸವನಮೇಕೇ ಸಮಾನಂತಿ** (ಆಪ. ಶ್ರೌ. ೧೨-೪-೧-೨) ಎಂದರೆ ಕೆಲವರು ಪ್ರಾತಸ್ಸವನ್ನದಲ್ಲಿ ಎಂಟು ಕಪಾಲಗಳನ್ನು ಮಾಧ್ಯಂದಿನಸವನದಲ್ಲಿ ಹನ್ನೊಂದು ಕಪಾಲಗಳನ್ನೂ, ತೃತೀಯಸವನದಲ್ಲಿ ಹನ್ನೆರಡು ಕಪಾಲಗಳನ್ನೂ ಉಪಯೋಗಿಸಬೇಕೆಂದು ಹೇಳುತ್ತಾರೆ. ಮತ್ತೆ ಕೆಲವರು ಮೂರು ಸವನಗಳಲ್ಲಿಯೂ ಹನ್ನೊಂದು, ಹನ್ನೊಂದು ಕಪಾಲಗಳನ್ನೇ (ಇಂದ್ರದೇವತಾಕವಾಗಿರುವುದರಿಂದ) ಉಪಯೋಗಿಸಬೇಕೆಂದು ಹೇಳುತ್ತಾರೆ. ಎಂದು ಪಕ್ಷದ್ವಯವನ್ನೂ ಉದಾಹರಿಸುತ್ತಾರೆ.

ತದಾಹುರ್ಯತೋ ಘೃತೇನಾಕ್ತಂ ಸ್ಯಾತ್ತತಃ ಪುರೋಳಾಶಸ್ಯ ಪ್ರಾಶ್ನೀಯಾತ್ಸೋಮಪೀಥಸ್ಯ ಗುಪ್ತ್ಯೈ ಘೃತೇನ ಹಿ ವಜ್ರೇಣೇಂದ್ರೋ ವೃತ್ರಮಹನ್ನಿತಿ । ತತ್ತನ್ನಾದೃತ್ಯಂ ಹವಿರ್ವಾ ಏತದ್ಯದುತ್ಪೂತಂ ಸೋಮಪೀಥೋ ವಾ ಏಷ ಯದುತ್ಪೂತಂ ತಸ್ಮಾತ್ತಸ್ಯ ಯತ ಏವ ಕುತಶ್ಚ ಪ್ರಾಶ್ನೀಯಾತ್ಸರ್ವತೋ ವಾ ಏತಾಃ ಸ್ವಧಾ ಯಜಮಾನಮುಪಕ್ಷರಂತಿ ಯದೇತಾನಿ ಹವೀಂಷ್ಯಾಜ್ಯಂ ಧಾನಾಃ ಕರಂಭಃ ಪರಿವಾಪಃ ಪುರೋಳಾಶಃ ಪಯಸ್ಯೇತಿ ಸರ್ವತ ಏವೈನಂ ಸ್ವಧಾ ಉಪಕ್ಷರಂತಿ ಯ ಏವಂ ವೇದ ।

ಅಥ ತತ್ಪುರೋಡಾಶಶೇಷಭಕ್ಷಣೇ ಕಂಚಿತ್ಪೂರ್ವಪಕ್ಷಮುಪನ್ಯಸ್ಯತಿ । ತತ್ಸೋಮಪಾನಸ್ಯ ರಕ್ಷಣಾಯ ಭವತಿ । ಯಸ್ಮಾದಿಂದ್ರೋ ಘೃತಮೇವ ವಜ್ರಂ ಕೃತ್ವಾ ತೇನ ವೃತ್ರಂ ಹತವಾಂಸ್ತಸ್ಮಾತ್ತಸ್ಯ ಕ್ರೂರತ್ವಾತ್ ಘೃತರಹಿತಂ ಸಕಲಂ ಭಕ್ಷ್ಯಮಿತಿ ಪೂರ್ವಪಕ್ಷಿಣ ಆಹುಃ । ತಂ ನಿರಾಕೃತ್ಯ ಸಿದ್ಧಾಂತಂ ದರ್ಶಯತಿ । ಘೃತರಹಿತಭಾಗ ಏವ ಭಕ್ಷಣೀಯ ಇತಿ ಮತಂ ನಾದರಣೀಯಂ। ಉತ್ಪವನಸಂಸ್ಕಾರರಹಿತಸ್ಯ ಘೃತಸ್ಯ ವಜ್ರತ್ವೇಽಪಿ ಯದುತ್ಪೂತಂ ಘೃತಂ ತದ್ಧವಿರೇವ। ಕಿಂಚ ಯದುತ್ಪೂತಂ ತತ್ಸೋಮಪೀಥಸದೃಶಮೇವ । ತಸ್ಮಾತ್ತಸ್ಯ ಪುರೋಡಾಶಸ್ಯ ಯತಃ ಕುತಶ್ಚ ಘೃತಯುಕ್ತಾದ್ಘೃತರಹಿತಾದ್ವಾ ಯಸ್ಮಾತ್ಕಸ್ಮಾದಪಿ ಭಾಗಾತ್ಪ್ರಾಶ್ನೀಯಾತ್ । ಆಜ್ಯಂ ಧಾನಾದೀನಿ ಯಾನಿ ಹವೀಂಷಿ ಸಂತಿ ತಾ ಏತಾಃ ಸರ್ವತಸ್ಸ್ವಧಾನ್ನಂ ತದ್ರೂಪಾ ಏವ ಭೂತ್ವಾ ಯಜಮಾನಮುಪಕ್ಷರಂತಿ ಸ್ರವಂತಿ । ತಸ್ಮಾತ್ಸರ್ವತಃ ಪ್ರಾಶನಮುಪಪನ್ನಂ। ವೇದನಂ ಪ್ರಶಂಸತಿ॥

ಈಗ ಹವಿಶ್ಶೇಷವಾದ ಪುರೋಡಾಶಭಕ್ಷಣವಿಷಯದಲ್ಲಿ ಪೂರ್ವಪಕ್ಷದ ವಾದವನ್ನು ಹೇಳಿ ಸಿದ್ಧಾಂತವನ್ನು ವಿವರಿಸುತ್ತಾರೆ. ಹೋಮಮಾಡಿ ಉಳಿಯುವ ಪುರೋಡಾಶವನ್ನು ಭಕ್ಷಿಸುವುದು ರೂಢಿಯಷ್ಟೆ. ಹಾಗೆ ಭಕ್ಷಿಸುವ ಕಾಲದಲ್ಲಿ ಆಜ್ಯ ಎಂದರೆ ತುಪ್ಪದಿಂದ ಸವರಲ್ಪಟ್ಟಿರುವ (ಘೃತಮಿಶ್ರವಾದ) ಪುರೋಡಾಶಭಾಗವನ್ನು ಬಿಟ್ಟು ಆಜ್ಯಮಿಶ್ರವಿಲ್ಲದ ಬೇರೆ ಭಾಗವನ್ನು

ಮಾತ್ರ ಭಕ್ಷಿಸಬೇಕು. ಏಕೆಂದರೆ ಇಂದ್ರನು ವೃತ್ರವನ್ನು ಸಂಹರಿಸುವಾಗ ಆಜ್ಯದಿಂದ ವಜ್ರಾಯುಧವನ್ನು ರೂಪಿಸಿಕೊಂಡು ಅದರಿಂದ ವೃತ್ರಾಸುರನನ್ನು ಕೊಂದನೆಂದು ಪ್ರಸಿದ್ಧಿಯಿದೆ.

ಘೃತೇನ ವಜ್ರಭೂತೇನ ವೃತ್ರಮಿಂದ್ರೋ ಜಘಾನ ಹ ।
ಸೋಮಸ್ಯ ಘೃತಸಂಯೋಗೇ ವಧಶಂಕಾ ಭವೇದಿಹ ॥

ಎಂಬ ವಚನಪ್ರಕಾರ ಇಂದ್ರನು ಆಜ್ಯಸಂಬಂಧವಾದ ವಜ್ರಾಯುಧದಿಂದ ವೃತ್ರನನ್ನು ಸಂಹರಿಸಿದ ಕಾರಣ ವೃತ್ರಹತ್ಯಾದೋಷವು ಆಜ್ಯಕ್ಕೆ ಸಂಭವಿಸಿದಂತಾಯಿತು. ಆದ್ದರಿಂದ ಆಜ್ಯವು ದೂಷಿತವಾದುದು. ಆಜ್ಯಸಂಯೋಗದಿಂದ ದೂಷಿತವಾದ ಪುರೋಡಾಶವನ್ನೂ ಸೋಮವನ್ನೂ ಸೇವಿಸುವುದು ಯೋಗ್ಯವಲ್ಲ. ಸೇವಿಸಿದಲ್ಲಿ ವಧಾದೋಷವು ಸೇವಿಸಿದವನಿಗೂ ಬರುವುದು ಎಂದು ಪ್ರತೀತಿ ಇದೆ. ಆದ್ದರಿಂದ ಪುರೋಡಾಶಶೇಷವನ್ನು ಭಕ್ಷಿಸುವಾಗ ಆಜ್ಯಮಿಶ್ರವಿಲ್ಲದ ಭಾಗವನ್ನು ಮಾತ್ರ ಭಕ್ಷಿಸಬೇಕು ಎಂದು ಪೂರ್ವಪಕ್ಷವಾದಿಗಳು ಹೇಳುವರು.

ಆದರೆ ಈ ವಾದವನ್ನು ಒಪ್ಪಬೇಕಾಗಿಲ್ಲ. ಏಕೆಂದರೆ ಘೃತದಿಂದ ಇಂದ್ರನ ವಜ್ರಾಯುಧವು ನಿರ್ಮಿತವಾಗಿದ್ದರೂ ಯಜ್ಞದಲ್ಲಿ ಉಪಯೋಗಿಸಲ್ಪಡುವ ಆಜ್ಯವು (ಕರಗಿಸಿದ ತುಪ್ಪ) ಮಂತ್ರಪೂರ್ವಕವಾಗಿ ಉತ್ಪವನವಿಧಿಯಿಂದ ಸಂಸ್ಕರಿಸಲ್ಪಟ್ಟು ಶುದ್ಧವಾಗಿಯೂ ದೋಷರಹಿತವಾಗಿಯೂ ಇರುವುದು. ಹೀಗೆ ಸಂಸ್ಕಾರದಿಂದ ಶುದ್ಧವಾದ ಆಜ್ಯವು ಸೋಮದಂತೆಯೂ ಇತರ ಹವಿಸ್ಸುಗಳಂತೆಯೂ ಶುದ್ಧವಾಗಿಯೇ ಇರುವುದು. ಆದ್ದರಿಂದ ಪುರೋಡಾಶವು ಆಜ್ಯಮಿಶ್ರವಾಗಿರಲಿ ಇಲ್ಲದಿರಲಿ ಅದರಲ್ಲಿ ಯಾವ ಭಾಗವನ್ನಾದರೂ ಭಕ್ಷಿಸಬಹುದು. ಹಾಗೆ ಮಾಡುವುದರಲ್ಲಿ ದೋಷವೇನೂ ಇರುವುದಿಲ್ಲ. ಆಜ್ಯ, ಧಾನಾ ಮೊದಲಾದ ಎಲ್ಲಾ ಹವಿಸ್ಸುಗಳೂ ಅವನ್ನು ಸೇವಿಸುವ ಯಜಮಾನನಿಗೆ ಸಮೃದ್ಧಿಯನ್ನುಂಟುಮಾಡುವವು. ಈ ಹವಿಸ್ಸುಗಳು ಯಾವುವೆಂದರೆ—

ಆಜ್ಯಂ ಸರ್ಪಿರ್ಯವಾ ಧೃಷ್ಟಾ ಧಾನಾಃ ಸ್ಯುರ್ವ್ರೀಹಯೋಽಪಿ ವಾ ।
ಮುಕುಳಾ ಲಾಜಾಃ ಕರಂಭಃ ಪರಿವಾಪಸ್ತು ಲಾಜಕಃ ।
ಪಯಸ್ಯಾ ದಧ್ಯುಪಾಹಿತೇ ತಪ್ತೇ ಕ್ಷೀರೇ ಸಮುದ್ಧೃತಾ ।
ಪ್ರಾಪ್ತ್ಯರ್ಥಃ ಕ್ಷರತಿರ್ಧಾತುರ್ಯಜಮಾನಮುಪ ಪ್ರತಿ ॥

ಆಜ್ಯ, (ಪಯಸ್ಯಾ) ಧಾನಾ, ಕರಂಭ, ಪರಿವಾಪ, ಪುರೋಡಾಶ ಎಂಬ ಐದು ದ್ರವ್ಯಗಳೂ ಹವಿಸ್ಸೆಂದು ಹೇಳಲ್ಪಡುವವು. ಆಜ್ಯವೆಂದರೆ ಕರಗಿಸಿದ ತುಪ್ಪ; ಧಾನಾ ಎಂದರೆ ಹುರಿದ ಅಕ್ಕಿ; ಕರಂಭವೆಂದರೆ ಗೋಧಿಹಿಟ್ಟನ್ನು ಮೊಸರು ಮತ್ತು ನೀರಿನಿಂದ ಕಲಸಿ ಚೆನ್ನಾಗಿ ನಾದಿ ಮುದ್ದೆಯಾಗಿಮಾಡಿರುವುದು; ಪರಿವಾಪವೆಂದರೆ ಅರಳು; ಪಯಸ್ಯಾ ಎಂದರೆ ಹಾಲನ್ನು ಕಾಸಿ ಹೆಪ್ಪು ಹಾಕಿ ಅದರಿಂದ ಉಂಟಾಗುವ ಮೊಸರು; ಪುರೋಡಾಶವೆಂದರೆ ಹಿಟ್ಟನ್ನು (ಅಕ್ಕಿ ಅಥವಾ ಗೋಧಿ) ನೀರಿನಿಂದ ಚೆನ್ನಾಗಿ ಕಲಸಿ ಉಂಡೆಯನ್ನಾಗಿ ಮಾಡಿ ತೆಳುವಾಗಿ ತಟ್ಟಿ ಕಪಾಲವೆಂಬ ಮಣ್ಣಿನ ಹಂಚಿನ ಮೇಲೆ ಬೇಯಿಸಿರುವುದು. (ರೊಟ್ಟಿ) ಈ ಹವಿಸ್ಸುಗಳಲ್ಲಿ ಯಾವುದೇ ಆದರೂ ಆಜ್ಯಮಿಶ್ರವಾಗಿರಲಿ ಇಲ್ಲದಿರಲಿ ಅದನ್ನು ಭಕ್ಷಿಸಬಹುದು. ಏಕೆಂದರೆ ಹವಿಶ್ಶೇಷಕ್ಕೆ ಮಿಶ್ರಿತವಾದ ಆಜ್ಯವು ಮಂತ್ರಪುರಸ್ಸರವಾಗಿ ಶುದ್ಧಿಗೊಳಿಸಲ್ಪಟ್ಟಿರುವುದರಿಂದ ಅದನ್ನು ಭಕ್ಷಿಸುವುದು ದೋಷಾರ್ಹವಲ್ಲ. ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ಅನ್ನಸಮೃದ್ಧಿಯನ್ನು ಪಡೆದು ಸುಖಿಸುವನು.

*English Translation*

**(Purodasa offerings for the libations)**

The libations (savanaui) of the Gods did not hold (they were about falling down). The Gods saw the rice cakes (Paradosas). They portioned them out for each libations that they hold together the libations. Their libations were held together. When, therefore (at the libations) rice cakes are portioned out for holding together the libations, the libations offered by the sacrificers are then really held together. The Gods made these rice cakes before the Soma offering. Thence it is called purodasa from puro before.

About this they say : for each libation one ought to portion out rice cakes, one of eight potsherds (a ball put on eight kapalas) at the morning, one of eleven potsherds at the midday, and one of twelve at the evening libation. For the form of the libations is defined by the metres. But this opinion is not to be attended to. For all the rice cakes, which are portioned out for each libation, are Indra's. Thence they ought to be put (at all three libations) on eleven potsherds only.

About this they say : one ought to eat of such a portion of a rice cake which is not besmeared with melted butter in order to protect the Soma draught. For Indra slew with melted butter as his thunderbolt Vritra. But this opinion is is not to be attended to. For the offering besmeared with butter is a liquid sprinkled (into the fire,) and the Soma draught is such a liquid sprinkled into the fire. (Both-Ghee and Soma-being thus of the same nature) the sacrificer should eat any part of the offering (whether bessared with ghee or not).

These offerings, viz., melted butter, fried grains of barley (dhanah), karamha, parivapa, purodosa, and payasa, come by themselves to the sacrificers from every direction. To him who has such a knowledge come these offerings by themselves.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಅಷ್ಟಮಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಎಂಟನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.



# ಅಥ ಅಷ್ಟಮಾಧ್ಯಾಯೇ ಷಷ್ಠಃ ಖಂಡಃ

## ಎಂಟನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ಹವಿಷ್ಪಂಕ್ತಿ, ಅಕ್ಷರಪಂಕ್ತಿ, ನರಾಶಂಸಪಂಕ್ತಿ, ಸವನಪಂಕ್ತಿ ]

**ಯೋ ವೈ ಯಜ್ಞಂ ಹವಿಷ್ಪಂಕ್ತಿಂ ವೇದ ಹವಿಷ್ಪಂಕ್ತಿನಾ ಯಜ್ಞೇನ ರಾಧ್ನೋತಿ ಧಾನಾಃ ಕರಂಭಃ ಪರಿವಾಪಃ ಪುರೋಡಾಶಃ ಪಯಸ್ಯೇತ್ಯೇಷ ವೈ ಯಜ್ಞೋ ಹವಿಷ್ಪಂಕ್ತಿರ್ಹವಿಷ್ಪಂಕ್ತಿನಾ ಯಜ್ಞೇನ ರಾಧ್ನೋತಿ ಯ ಏವಂ ವೇದ ॥**

ವಿಹಿತಾನ್ಸವನೀಯಪುರೋಡಾಶಾನ್ಧಾನಾದಿರೂಪಾನ್ಪ್ರಶಂಸತಿ । ಹವಿಷಾಂ ಧಾನಾದಿದ್ರವ್ಯರೂಪಾಣಾಂ ಪಂಕ್ತಿಃ ಸಮೂಹೋ ಯಸ್ಮಿನ್ಸೋಮಯಾಗೇ ಸೋಽಯಂ ಹವಿಷ್ಪಂಕ್ತಿಸ್ತಾದೃಶಂ ಯಜ್ಞಂ ಯೋ ವೇದ ಸ ತಥೈವ ತಾದೃಶೇನ ಯಜ್ಞೇನ ಸಮೃದ್ಧೋ ಭವತಿ । ಭೃಷ್ಟಾ ಯವತಂಡುಲಾ ಧಾನಾಃ । ತದಾಹಾಪಸ್ತಂಬಃ—ಕಪಾಲಾನಾಮುಪಧಾನಕಾಲೇ ಪೃಥಮುಕಪಾಲಮಂತ್ರೇಣ ಧಾನಾರ್ಥಂ ಲಾಜಾರ್ಥಂ ಕಪಾಲೇ ಅಧಿಶ್ರಿತ್ಯ ತಂಡುಲಾನೋಪ್ಯ ಧಾನಾಃ ಕರೋತಿ ವ್ರೀಹೀನೋಪ್ಯ ಲಾಜಾನ್ಕರೋತಿ ಪುರೋಡಾಶಮಧಿಶ್ರಿತ್ಯಾಮಿಕ್ಷಾವತ್ಪಯಸ್ಯಾಂ ಕರೋತ್ಯುದ್ವಾಸನಕಾಲೇ ಧಾನಾ ಉದ್ವಾಸ್ಯ ವಿಭಾಗಮಂತ್ರೇಣ ವಿಭಜ್ಯಾರ್ಧಾ ಆಜ್ಯೇನ ಸಂಯೌತ್ಯರ್ಧಾಃ ಪಿಷ್ಟ್ವಾನಾತ್ಮಾವೃತಾ ಸಕ್ತೂನ್ಕರೋತಿ ಮಂಥಂ ಸಂಯುತಂ ಕರಂಭ ಇತ್ಯಾಚಕ್ಷತೇ ಲಾಜಾನ್ಪರಿವಾಪ ಇತಿ ನ ವೈ ಲಾಜೇಭ್ಯಃ ಸ್ತುಷಾನ್ಸಂಹರತಿ ಇತಿ ॥ ಪುರೋಡಾಶಃ ಪ್ರಸಿದ್ಧಃ । ಅನ್ಯೇ ಧಾನಾಕರಂಭಪರಿವಾಪಪಯಸ್ಯಾಶಬ್ದಾ ಆಪಸ್ತಂಬೇನ ವ್ಯಾಖ್ಯಾತಾಃ। ಏತೈರ್ಹವಿರ್ಭಿರ್ಯುಕ್ತೋ ಯಜ್ಞೋ ಹವಿಷ್ಪಂಕ್ತಿಃ । ಹವಿಷ್ಪಂಕ್ತಿನೇತ್ಯಾದಿಪುನರ್ವಚನಮುಪಸಂಹಾರಾರ್ಥಂ । ಯದ್ವಾ ಪೂರ್ವಂ ವೇದನಪೂರ್ವಕಾನುಷ್ಠಾನಪ್ರಶಂಸೇಹ ತು ವೇದನಮಾತ್ರಪ್ರಶಂಸಾ ದ್ರಷ್ಟವ್ಯಾ । ಹವಿಷಾಂ ಪಂಚಸಂಖ್ಯಾನಾಂ ಸಮೂಹರೂಪಾ ಯಾ ಪಂಕ್ತಿಃ ಸಾ ಶಾಖಾಂತರೇಽಪ್ಯಾಮ್ನಾತಾ ಬ್ರಹ್ಮವಾದಿನೋ ವದಂತಿ ನರ್ಚಾ ನ ಯಜುಷಾ ಪಂಕ್ತಿರಾಪ್ಯತೇಽಥ ಕಿಂ ಯಜ್ಞಸ್ಯ ಪಾಂಕ್ತತ್ವಮಿತಿ । ಧಾನಾಃ ಕರಂಭಃ ಪರಿವಾಪಃ ಪುರೋಳಾಶಃ ಪಯಸ್ಯಾ ತೇನ ಪಂಕ್ತಿರಾಪ್ಯತೇ ತದ್ಯಜ್ಞಸ್ಯ ಪಾಂಕ್ತತ್ವಂ ಇತಿ । ಅತ್ರಾರ್ಥವಾದೇನ ಧಾನಾದೀನಾಂ ಪುರೋಡಾಶದ್ರವ್ಯಾಣಾಂ ವಿಧಿರುನ್ನೇತವ್ಯಃ ॥

ಈಗ ಯಜ್ಞಗಳಲ್ಲಿ ನಡೆಯುವ ಸವನಕರ್ಮಸಂಬಂಧವಾದ ಪುರೋಡಾಶಾದಿಗಳನ್ನೂ ಧಾನಾದಿಹೋಮ ದ್ರವ್ಯಗಳನ್ನೂ ವಿವರಿಸುವರು. ಧಾನಾದಿ ದ್ರವ್ಯರೂಪವಾದ ಹೋಮದ್ರವ್ಯಗಳ ಸಮೂಹವು ಅಥವಾ ಪಂಕ್ತಿಯು ಯಾವ ಹೋಮಯಾಗದಲ್ಲಿ ಕಂಡುಬರುವುದೋ ಎಂದರೆ ವಿನಿಯೋಗಮಾಡಲ್ಪಡುವುದೋ ಅಂತಹ ಯಜ್ಞಕ್ಕೆ ಹವಿಷ್ಪಂಕ್ತಿ ಯೆಂದು ಹೆಸರು. ಈ ವಿಧವಾದ ಯಜ್ಞಸ್ವರೂಪವನ್ನು ತಿಳಿದು ಯಾವ ಪುರುಷನು ಅದರಂತೆ ಆಚರಿಸುವನೋ ಅವನು ಆ ಯಜ್ಞಾನುಷ್ಠಾನದಿಂದ ಸಕಲ ಸಮೃದ್ಧಿಯನ್ನೂ ಪಡೆಯುವನು. ಚೆನ್ನಾಗಿ ಹುರಿದ ಯವ ಅಥವಾ ತಂಡುಲ(ಅಕ್ಕಿ) ಗೆ ಧಾನಾಃ ಎಂದು ಹೆಸರು. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳಿರುವರು— **ಕಪಾಲಾನಾಮುಪಧಾನಕಾಲೇ ಪ್ರಥಮಕಪಾಲಮಂತ್ರೇಣ ಧಾನಾರ್ಥಂ ಲಾಜಾರ್ಥಂ ಕಪಾಲೇ ಅಧಿಶ್ರಿತ್ಯ ತಂಡುಲಾನೋಪ್ಯ ಧಾನಾಃ ಕರೋತಿ।ವ್ರೀಹೀನೋಪ್ಯ ಲಾಜಾನ್ಕರೋತಿ । ಪುರೋಡಾಶಮಧಿಶ್ರಿತ್ಯ ಆಮಿಕ್ಷಾವತ್ಪಯಸ್ಯಾಂ ಕರೋತಿ । ಉದ್ವಾಸನಕಾಲೇ ಧಾನಾ ಉದ್ವಾಸ್ಯ ವಿಭಾಗಮಂತ್ರೇಣ ವಿಭಜ್ಯಾರ್ಧಾ ಆಜ್ಯೇನ ಸಂಯೌತಿ । ಅರ್ಧಾಃ ಪಿಷ್ಟ್ವಾನಾಮೂಪೃತಾಃ ಸಕ್ತೂನ್ ಕರೋತಿ । ಮಂಥಂ ಸಂಯುತಂ ಕರಂಭ ಇತ್ಯಾಚಕ್ಷತೇ । ಲಾಜಾ ಪರಿವಾಪ ಇತಿ । ಸಖೈರ್ಲಾಜೇಭ್ಯಃ ಸ್ತುಷಾನ್ ಸಂಹರತಿ** (ಆಪ. ಶ್ರೌ. ೧೨-೪-೯ ರಿಂದ ೧೪) ಎಂದರೆ ಅದರ ವಿವರಣೆಯು ಹೀಗಿರುವುದು— ಕಪಾಲಗಳನ್ನು ಸಿದ್ಧಪಡಿಸುವಾಗ ಎಂದರೆ ಮಣ್ಣಿನಿಂದ ಕಪಾಲ ಅಥವಾ ಹಂಚನ್ನು (ಕಾವಲಿ) ನಿರ್ಮಿಸುವಾಗ ಮೊದಲನೆಯ ಕಪಾಲವನ್ನು ನಿರ್ಮಿಸಿದನಂತರ ಅದರ ಮೇಲೆ ಅಕ್ಕಿಯನ್ನು ಹುರಿದು ಧಾನಾಃ ಎಂಬ ದ್ರವ್ಯವನ್ನು ಸಿದ್ಧಪಡಿಸಬೇಕು ಮತ್ತು ಆ ಕಪಾಲದ ಮೇಲೆ ಭತ್ತವನ್ನು ಹಾಕಿ ಅರಳನ್ನು ಸಿದ್ಧಪಡಿಸಬೇಕು ಈ ಅರಳಿಗೆ ಪರಿವಾಪವೆಂದು ಹೆಸರು. ಪುರೋಡಾಶವೆಂದರೆ ಎಲ್ಲರಿಗೂ ಗೊತ್ತಿರುವಂತೆ ಅಕ್ಕಿಯ ಹಿಟ್ಟನ್ನು ಚೆನ್ನಾಗಿ ಕಲಿಸಿ ಉಂಡೆಗಳನ್ನಾಗಿ ಮಾಡಿ ಕ್ಲಿಪ್ತಸಂಖ್ಯೆಯ ಕಪಾಲಗಳ ಮೇಲೆ ಬೇಯಿಸಿ ಸಿದ್ಧಪಡಿಸಬೇಕು. ಧಾನಾ ಎಂಬ ದ್ರವ್ಯವನ್ನು ಎರಡು ಭಾಗಮಾಡಿ ಒಂದಕ್ಕೆ ಆಜ್ಯವನ್ನು ಬೆರೆಸಿ ಮತ್ತೊಂದು ಭಾಗವನ್ನು ಹಿಟ್ಟನ್ನು ಮಾಡಿ ಅದಕ್ಕೆ ಅದನ್ನು ಕಲಸಿ ಸಕ್ತುವನ್ನಾಗಿ (ಹಿಟ್ಟಿನ ಉಂಡೆ) ಮಾಡಬೇಕು. ಮೊಸರಿನಿಂದ ಕಲಸಿದ ಹಿಟ್ಟಿಗೆ ಕರಂಭವೆಂದು ಹೆಸರು. ಅರಳಿಗೆ ಪರಿವಾಪವೆಂದು ಹೆಸರು. ಆ ಅರಳಿನಲ್ಲಿರುವ ಭತ್ತದ ಹೊಟ್ಟನ್ನು ಕೈಯಲ್ಲಿನ ಉಗುರುಗಳಿಂದ ತೆಗೆದುಹಾಕಬೇಕು ಎಂದು. ಧಾನಾ–ಕರಂಭ–ಪರಿವಾಪ–ಪಯಸ್ಯಾ – ಪುರೋಡಾಶ ಎಂಬ ಹವಿರ್ದ್ರವ್ಯಗಳಿಂದ ಯುಕ್ತವಾದ ಯಜ್ಞಕ್ಕೆ ಹವಿಷ್ಪಂಕ್ತಿಯೆಂದು ಹೇಳಲ್ಪಡುವುದು. ಈ ಐದು ವಿಧವಾದ ಹವಿಷ್ಪಂಕ್ತಿಯು ಶಾಖಾಂತರದಲ್ಲಿ ಎಂದರೆ ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ಹೇಳಲ್ಪಟ್ಟಿರುವುದು— **ಬ್ರಹ್ಮವಾದಿನೋ ವದಂತಿ ನರ್ಚಾ ನ ಯಜುಷಾ ಪಂಕ್ತಿರಾಪ್ಯತೇಽಥ ಕಿಂ ಯಜ್ಞಸ್ಯ ಪಾಂಕ್ತತ್ವಮಿತಿ । ಧಾನಾಃ, ಕರಂಭಃ ಪರಿವಾಪಃ ಪುರೋಡಾಶಃ ಪಯಸ್ಯಾ; ತೇನ ಪಂಕ್ತಿರಾಪ್ಯತೇ । ತದ್ಯಜ್ಞಸ್ಯ ಪಾಂಕ್ತತ್ವಂ** (ತೈ. ಸಂ. ೬-೫-೧೧-೪, ೫) ಎಂದರೆ ಬ್ರಹ್ಮವಾದಿಗಳು ಈರೀತಿ ಹೇಳುತ್ತಾರೆ. ಋಗ್ವೇದದ ಋಕ್ಕುಗಳಿಂದಾಗಲಿ, ಯಜುರ್ವೇದದ ಮಂತ್ರಗಳಿಂದಾಗಲಿ ಯಜ್ಞಕ್ಕೆ ಹವಿಷ್ಪಂಕ್ತಿಯೆಂಬ ಹೆಸರು ಬರುವುದಿಲ್ಲ. ಆದರೆ ಧಾನಾಃ ಕರಂಭಃ ಪರಿವಾಪಃ ಪುರೋಡಾಶ, ಪಯಸ್ಯಾ ಎಂಬ ಐದುವಿಧ ಹವಿರ್ದ್ರವ್ಯಗಳಿಂದ ಯಜ್ಞಕ್ಕೆ ಪಾಂಕ್ತತ್ವ (ಹವಿಷ್ಪಂಕ್ತಿ) ಎಂಬ ಹೆಸರು ಉಂಟಾಗುವುದು ಎಂದಿದೆ.

**ಯೋ ವೈ ಯಜ್ಞಮಕ್ಷರಪಂಕ್ತಿಂ ವೇದಾಕ್ಷರಪಂಕ್ತಿನಾ ಯಜ್ಞೇನ**
**ರಾಧ್ನೋತಿ ಸುಮತ್ಪದ್ವಗ್ದ ಇತ್ಯೇಷ ವೈ ಯಜ್ಞೋಽಕ್ಷರಪಂಕ್ತಿ**
**ರಕ್ಷರಪಂಕ್ತಿನಾ ಯಜ್ಞೇನ ರಾಧ್ನೋತಿ ಯ ಏವಂ ವೇದ ॥**

**ಅನೇನೈವ ನ್ಯಾಯೇನಾಕ್ಷರಾಣಾಂ ಪಂಚಾನಾಂ ವಿಧ್ಯನ್ವಯನಂ ದರ್ಶಯತಿ–ಪಂಚಸಂಖ್ಯಾಕಾನಾಮಕ್ಷರಾಣಾಂ ಸಮೂಹೋಽಕ್ಷರಪಂಕ್ತಿಃ ಸು ಇತ್ಯೇಕಮಕ್ಷರಂ ಮದಿತಿ ದ್ವಿತೀಯ-**

ಮಕ್ಷರಂ ಪದಿತಿ ತೃತೀಯಮಕ್ಷರಂ ವಗಿತಿ ಚತುರ್ಥಮಕ್ಷರಂ ದೇ ಇತಿ ಪಂಚಮಮಕ್ಷರಂ ತಾನ್ಯೇತಾನ್ಯಕ್ಷರಾಣಿ ಹೋತೃಜಪಾದೌ ಪ್ರಯೋಕ್ತವ್ಯಾನಿ । ತಥಾ ಚ ಸಂಪ್ರದಾಯವಿದ ಆಹುಃ—

ಏತದ್ಧೋತೃಜಪಾಖ್ಯಸ್ಯ ಚಾದಿತೋಽಕ್ಷರಪಂಚಕಂ ।
ಏಕೈಕಮಕ್ಷರಂ ಚಾತ್ರ ಪರಸ್ಯ ಬ್ರಹ್ಮಣೋ ವಪುಃ ॥
ಸುಪೂಜಿತಂ ಮತ್ಪ್ರಹೃಷ್ಟಂ ಪತ್ಸರ್ವವ್ಯಾಪಿ ತಚ್ಚ ವಕ್ ।
ಸರ್ವಸ್ಯ ವಕ್ತೃ ಬ್ರಹ್ಮೈವ ದೇ ಫಲಾನಾಂ ಪ್ರದಾತೃ ತತ್ ॥ ಇತಿ

ಅನ್ಯತ್ ಪೂರ್ವವದ್ವ್ಯಾಖ್ಯೇಯಂ ॥

ಹಿಂದೆ ಹೇಳಿದ ಕ್ರಮದಂತೆಯೇ ಎಂದರೆ ಯಜ್ಞದ ಹವಿಷ್ಪಂಕ್ತಿಕ್ರಮದಂತೆಯೇ ಈಗ ಯಜ್ಞದ ಅಕ್ಷರಪಂಕ್ತಿಯ ಕ್ರಮವನ್ನು ವಿವರಿಸುವರು. ಐದು ಅಕ್ಷರಗಳ ಸಮೂಹಕ್ಕೆ ಅಕ್ಷರಪಂಕ್ತಿಯೆಂದು ಹೆಸರು. ಯಾವವೆಂದರೆ—ಸು ಎಂಬುವುದು ಮೊದಲನೆಯ ಅಕ್ಷರವು; ಮತ್ ಎಂಬುವುದು ಎರಡನೆಯ ಅಕ್ಷರವು; ಪತ್ ಎಂಬುವದು ಮೂರನೆಯ ಅಕ್ಷರವು ವಕ್ ಎಂಬುವುದು ನಾಲ್ಕನೆಯ ಅಕ್ಷರವು; ದೇ ಎಂಬುವುದು ಐದನೆಯ ಅಕ್ಷರವು ಈ ಐದು ಅಕ್ಷರಗಳೂ (ಸುಮತ್ಪದ್ವಗ್ದೇ) ಹೋತೃವಿನಿಂದ ಜಪಿಸಲ್ಪಡಬೇಕು. ಈ ವಿಷಯದಲ್ಲಿ ಸಂಪ್ರದಾಯವನ್ನು ಬಲ್ಲವರು ಹೀಗೆ ಹೇಳುತ್ತಾರೆ—

ಏತದ್ಧೋತೃಜಪಾಖ್ಯಸ್ಯ ತ್ವಾದಿತೋಽಕ್ಷರಪಂಚಕಂ ।
ಏಕೈಕಮಕ್ಷರಂ ಚಾತ್ರ ಪರಸ್ಯ ಬ್ರಹ್ಮಣೋ ವಿದುಃ ॥
ಸುಪೂಜಿತಂ ಮತ್ ಪ್ರಹೃಷ್ಟಂ ಪತ್ ಸರ್ವವ್ಯಾಪಿ ತಚ್ಚ ವಕ್ ।
ಸರ್ವಸ್ಯ ವಕ್ತೃ ಬ್ರಹ್ಮೈವ ದೇ ಫಲಾನಾಂ ಪ್ರದಾತೃ ತತ್ ಇತಿ ॥

ಮೇಲೆ ಹೇಳಿದ ಐದು ಅಕ್ಷರಗಳುಳ್ಳ ಸುಮತ್ಪದ್ವಗ್ದೇ ಎಂಬ ಮಂತ್ರವು ಹೋತೃವಿನಿಂದ ಜಪಿಸಲ್ಪಡಬೇಕು. ಈ ಮಂತ್ರದ ಪ್ರತಿಯೊಂದು ಅಕ್ಷರವೂ ಪರಬ್ರಹ್ಮವನ್ನೇ ವರ್ಣಿಸಿ ಸ್ತುತಿಸುವುದು. ಹೇಗೆಂದರೆ—ಸು ಎಂದರೆ ಪೂಜಿತವಾದ; ಮತ್-ಪ್ರಹೃಷ್ಟವಾದ; ಪತ್-ಸರ್ವವ್ಯಾಪಿಯಾದ ವಕ್-ಸರ್ವದಾ ಇರುವ ಅಥವಾ ಸಮಸ್ತವನ್ನೂ ಹೇಳುವ ಪರಬ್ರಹ್ಮನು; ದೇ-ಎಂದರೆ ಯಜ್ಞಾದಿಕರ್ಮಗಳಿಗೆ ಫಲವನ್ನು ಕೊಡುವವನಾಗಿರುವನು ಎಂದು. ಭಟ್ಟಭಾಸ್ಕರರೆಂಬ ಭಾಷ್ಯಕಾರರೂ ಸಹ ಈ ಮಂತ್ರಕ್ಕೆ ಸುಷ್ಠು ಮಾದ್ಯಂತಿ ಇತಿ ಸುಮದಃ ಈದೃಶಾ ಭವಂತಿ ಯಸ್ಯಾಃ ಪ್ರಪತ್ತಾರಃ ಯಸ್ಯಾಶ್ಚ ವಕ್ತಾರಃ ಸ್ತೋತಾರಃ ಯಸ್ಯೈ ಚ ಹವೀಂಷಿ ದಾತಾರಃ ಸಾ ಸುಮತ್ಪದ್ವಗ್ದಾ ಇತಿ ।

**ಯೋ ವೈ ಯಜ್ಞಂ ನರಾಶಂಸಪಂಕ್ತಿಂ ವೇದ ನರಾಶಂಸಪಂಕ್ತಿನಾ ಯಜ್ಞೇನ ರಾಧ್ನೋತಿ ದ್ವಿನರಾಶಂಸಂ ಪ್ರಾತಸ್ಸವನಂ ದ್ವಿನರಾಶಂಸಂ ಮಾಧ್ಯಂದಿನಂ ಸವನಂ ಸಕೃನ್ನರಾಶಂಸಂ ತೃತೀಯಸವನಮೇಷ ವೈ ಯಜ್ಞೋ ನರಾಶಂಸಪಂಕ್ತಿರ್ನರಾಶಂಸಪಂಕ್ತಿನಾ ಯಜ್ಞೇನ ರಾಧ್ನೋತಿ ಯ ಏವಂ ವೇದ॥**

ತಥಾ ಪಂಚವಿಧನಾರಾಶಂಸವಿಧ್ಯಮ್ನಾಯನಂ ದರ್ಶಯತಿ । ಭಕ್ಷಿತಾಪ್ಯಾಯಿತಾನಾಂ ಸಾದಿತಾನಾಂ ಚಮಸಾನಾಂ ನಾರಾಶಂಸಶಬ್ದಃ ಸಂಜ್ಞಾ । ಅತ ಉಕ್ತಮಾಚಾರ್ಯೇಣಾಪಸ್ತ-

ಯಿತಾಂಶ್ಚಮಸಾನ್ನಾದಯಂತಿ ತೇ ನಾರಾಶಂಸಾ ಭವಂತೀತಿ । ಭಕ್ಷಿತೇಷು ಚಮಸೇಷು ಪುನಃ ಪೂರಣಮಾಪ್ಯಾಯನಂ । ತಥಾವಿಧಾಶ್ಚಮಸಾಃ ಪ್ರಾತಸ್ಸವನೇ ದ್ವಿಃ ಪ್ರಯುಜ್ಯಂತೇ ತಥಾ ಮಾಧ್ಯಂದಿನಸವನೇಽಪಿ ತೃತೀಯಸವನೇ ತು ಸಕೃದೇವ । ಏವಂ ಪಂಚಸಂಖ್ಯೋಪೇತತ್ವಾನ್ನರಾಶಂಸಾನಾಂ ಪಂಕ್ತಿರ್ಯಜ್ಞೇ ವಿದ್ಯತೇ ॥

ಈಗ ಪಂಚವಿಧ ನಾರಾಶಂಸಪಂಕ್ತಿಯನ್ನು ವಿವರಿಸುತ್ತಾರೆ. ಯಜ್ಞದಲ್ಲಿ ಸೋಮಪಾನಮಾಡುವ ಮರದ ಬಟ್ಟಲಿಗೆ (ಪಾತ್ರೆಗೆ) ಚಮಸವೆಂದು ಹೆಸರು. ನರಾಶಂಸವೆಂದರೆ ಸೋಮಪಾನಮಾಡುವ ಚಮಸಪಾತ್ರೆಯು. ಈ ಚಮಸಪಾತ್ರೆಯಿಂದ ಒಂದಾವರ್ತಿ ಸೋಮಪಾನಮಾಡಿದ ಮೇಲೆ ಪುತ್ತೆ ಪಾನಮಾಡುವುದಕ್ಕಾಗಿ ಪುನಃ ಚಮಸಕ್ಕೆ ಸೋಮವನ್ನು ತುಂಬುವುದಕ್ಕೆ ಆಪ್ಯಾಯನವೆಂದು ಹೆಸರು. ಈ ವಿಧವಾದ ಆಪ್ಯಾಯನವು ಪ್ರಾತಸ್ಸವನಕಾಲದಲ್ಲಿ ಎರಡಾವರ್ತಿಯೂ, ಮಾಧ್ಯಂದಿನಸವನದಲ್ಲಿ ಎರಡಾವರ್ತಿಯೂ, ತೃತೀಯಸವನದಲ್ಲಿ ಒಂದಾವರ್ತಿಯೂ ಆಚರಿಸಲ್ಪಡುವುದು. ಒಟ್ಟು ಮೂರು ಸವನಗಳಿಂದ ಐದಾವರ್ತಿ ಆಪ್ಯಾಯನವು ನಡೆಯುವುದರಿಂದ ಯಜ್ಞಕ್ಕೆ ನರಾಶಂಸಪಂಕ್ತಿ ಎಂಬ ಹೆಸರು ಬಂದಿರುವುದು. ಇದನ್ನು ತಿಳಿದು ಆಚರಿಸುವ ಪುರುಷನು ಯಜ್ಞಾನುಷ್ಠಾನದಿಂದ ಸಂಪೂರ್ಣಫಲವನ್ನು ಹೊಂದುವನು.

ಯೋ ವೈ ಯಜ್ಞಂ ಸವನಪಂಕ್ತಿಂ ವೇದ ಸವನಪಂಕ್ತಿನಾ ಯಜ್ಞೇನ ರಾಧ್ನೋತಿ ಪಶುರುಪವಸಥೇ ತ್ರೀಣಿ ಸವನಾನಿ ಪಶುರನೂಬಂಧ್ಯ ಇತ್ಯೇಷ ವೈ ಯಜ್ಞಃ ಸವನಪಂಕ್ತಿಃ ಸವನಪಂಕ್ತಿನಾ ಯಜ್ಞೇನ ರಾಧ್ನೋತಿ ಯ ಏವಂ ವೇದ ॥

ತಥೈವ ಸವನಪಂಕ್ತಿಂ ದರ್ಶಯತಿ । ಪರೇದ್ಯುರ್ಯಕ್ಷ್ಯಮಾಣಸ್ಯ ಯಜಮಾನಸ್ಯ ಸಮೀಪೇ ಪೂರ್ವೇದ್ಯುರ್ದೇವತಾಸ್ತದೀಯಂ ಯಜ್ಞಂ ಪ್ರತೀಕ್ಷಮಾಣಾ ವಸಂತಿ ತಸ್ಮಾದುಪ ಸಮೀಪೇ ವಸಂತ್ಯಸ್ಮಿನ್ದಿವಸ ಇತಿ ಪೂರ್ವದಿವಸಮುಪವಸಥಾಖ್ಯೇ ಪೂರ್ವದಿವಸೇ ಯಃ ಪಶುರಗ್ನೀಷೋಮೀಯಃ ಸೋಽಪ್ಯತ್ರ ಸವನಸಮೀಪವರ್ತಿತ್ವಾತ್ಸವನತ್ವೇನ ಗಣ್ಯತೇ । ಪ್ರಾತಸ್ಸವನಾದೀನಿ ತು ತ್ರೀಣಿ ಪ್ರಸಿದ್ಧಾನ್ಯೇವ ಸವನಾನಿ । ಸವನೇಭ್ಯ ಊರ್ಧ್ವಮನುಷ್ಠೇಯೋಽನೂಬಂಧ್ಯಾಖ್ಯಃ ಪಶುರಪಿ ಪೂರ್ವವತ್ಸವನತ್ವೇನ ಗಣ್ಯತೇ । ಅತಃ ಪಂಚಾನಾಂ ಸವನಾನಾಂ ಪಂಕ್ತ್ಯಾ ಸಮೂಹೇನ ಯುಕ್ತೋ ಯೋ ಯಜ್ಞ ಏಷ ಏವ ಸವನಪಂಕ್ತಿಃ । ಏವಂ ಹವಿಷ್ಪಂಕ್ತಿಪ್ರಸಂಗೇನಾಕ್ಷರ ಪಂಕ್ತಿರ್ನರಾಶಂಸಪಂಕ್ತಿಃ ಸವನಪಂಕ್ತಿಶ್ಚೇತ್ಯೇತಾವದಭಿಹಿತಂ । ಏತದೇವಾಭಿಪ್ರೇತ್ಯ ತತ್ರ ತತ್ರ ಪಾಂಕ್ತೋ ಯಜ್ಞ ಇತಿ ಶ್ರೂಯತೇ ।

ಈಗ ಸವನಪಂಕ್ತಿಯನ್ನು ವಿವರಿಸುತ್ತಾರೆ. ಮುಂದಿನ ದಿನ ಯಜ್ಞಮಾಡುತ್ತಿರುವ ಯಜಮಾನನ ಸಮೀಪದಲ್ಲಿ ಹಿಂದಿನ ದಿನದ ದೇವತೆಗಳು ಯಜ್ಞದ ಕಾರ್ಯಕಲಾಪಗಳನ್ನು ನೋಡುತ್ತಾ (ಉಪ) ಸಮೀಪದಲ್ಲಿ (ವಸಥ) ವಾಸಮಾಡುತ್ತಿರುವುದರಿಂದ ಸವನಗಳ ಹಿಂದಿನ ದಿನಕ್ಕೆ ಉಪವಸಥ ಎಂದು ಹೆಸರು. ಆದಿನ ಅಗ್ನೀಷೋಮೀಯ ದೇವತೆಗಳನ್ನುದ್ದೇಶಿಸಿ ಒಂದು ಪಶುಯಾಗವನ್ನು ಮಾಡುವರು. ಈ ಪಶುಯಾಗವು ಪ್ರಾತಸ್ಸವನಾದಿ ಸವನತ್ರಯಗಳಿಗೆ ಸಮೀಪಕಾಲದಲ್ಲಿಯೇ ನಡೆಯುವುದರಿಂದ ಈ ಪಶುಯಾಗವೂ ಒಂದು ಸವನವೆಂದು ಪರಿಗಣಿಸಲ್ಪಡುವುದು. ಪ್ರಾತಃಸವನ, ಮಾಧ್ಯಂದಿನಸವನ, ತೃತೀಯ ಸವನಗಳೆಂಬ ಮೂರು ಸವನಗಳು ಪ್ರಸಿದ್ಧವಾಗಿಯೇ ಇವೆ. ಈ ಸವನಗಳ ಅನುಷ್ಠಾನಾನಂತರ (ಎಂದರೆ ಅವಭೃತಾನಂತರ)

ಅನೂಬಂಧ್ಯ ಎಂಬ ಪಶುಯಾಗವೂ ಸಹ ಆಚರಿಸಲ್ಪಡುವದು. ಈ ಅನೂಬಂಧ್ಯವೂ ಸಹ ಹಿಂದಿನಂತೆ ಒಂದು ಸವನವೆಂದೇ ಪರಿಗಣಿಸಲ್ಪಡುವುದು ಎಂದರೆ, ಉಪವಸಥವೆಂಬ ದಿನದಲ್ಲಿ ಆಚರಿಸಲ್ಪಡುವ ಅಗ್ನೀಷೋಮೀಯವಾದ ಪಶುಯಾಗ ಮುಂದಿನ ದಿನದಲ್ಲಿ ಆಚರಿಸಲ್ಪಡುವ ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳು, ಮುಂದಿನ ದಿನ ಅವಭೃತಾನಂತರ ಆಚರಿಸಲ್ಪಡುವ ಒಂದು ಪಶುಯಾಗ ಈ ಐದು ಕರ್ಮಗಳೂ ಐದು ಸವನಗಳೆಂದು ಪ್ರಸಿದ್ಧಿಯಾಗಿರುವವು. ಆದ್ದರಿಂದ ಈ ಪಂಚ ಸವನಗಳಿಗೆ ಸವನಪಂಕ್ತಿಯೆಂದು ಹೆಸರು. ಈ ರೀತಿಯಾಗಿ ಹವಿಷ್ಪಂಕ್ತಿ, ಅಕ್ಷರಪಂಕ್ತಿ, ನರಾಶಂಸಪಂಕ್ತಿ, ಸವನಪಂಕ್ತಿ ಎಂಬ ಯಜ್ಞದ ಸ್ವರೂಪಗಳನ್ನು ಯಾವ ಪುರುಷನು ತಿಳಿದು ಅದರಂತೆ ಆಚರಿಸುವನೋ ಅವನು ಯಜ್ಞದ ಫಲವಾದ ಸಕಲ ಸಮೃದ್ಧಿಯನ್ನೂ ಪಡೆದು ಸುಖಿಸುವನು.

**ಹರಿವಾ಼ ಇಂದ್ರೋ ಧಾನಾ ಅತ್ತು ಪೂಷಣ್ವಾನ್ಕರಂಭಂ ಸರಸ್ವತೀವಾ-ನ್ಭಾರತೀವಾನ್ಪರಿವಾಪ ಇಂದ್ರಸ್ಯಾಪೂಪ ಇತಿ ಹವಿಷ್ಪಂಕ್ತ್ಯಾ ಯಜತಿ ॥**

ಅಥ ಪ್ರಕೃತಾನಾಂ ಸವನೀಯಪುರೋಡಾಶಾನಾಂ ಕ್ರಮೇಣ ಯಾಜ್ಯಾ ವಿಧತ್ತೇ । ಹರಿನಾಮಾನೌ ದ್ವಾವಶ್ವಾವಸ್ಯ ಸ್ತ ಇತಿ ಹರಿವಾನಿಂದ್ರಃ । ಸೋಽಯಂ ಧಾನಾ ಅತ್ತು ಭಕ್ಷಯತು । ಸೇಯಂ ಪ್ರಥಮಹವಿಷೋ ಯಾಜ್ಯಾ । ಪೋಷಕತ್ವಾತ್ಪಶವಃ ಪೂಷಞ್ಛಬ್ದೇನೋಚ್ಯತೇ । ತತ್ಸ್ವಾಮೀ ದೇವಃ ಪೂಷಣ್ವಾನ್ಸ ತು ಕರಂಭಮತ್ತ್ವಿತ್ಯನುವರ್ತತೇ । ಸೇಯಂ ದ್ವಿತೀಯಹವಿಷೋ ಯಾಜ್ಯಾ । ಸರಸ್ವತೀ ವಾಕ್ಸಾಽಸ್ಯಾಸ್ತೀತಿ ದೇವವಿಶೇಷಃ ಸರಸ್ವತೀವಾನ್ । ಸ ಏವ ಭಾರತೀವಾನ್ । ಅಯಂ ವಿಶೇಷಣದ್ವಯೋಪೇತೋ ದೇವಃ ಪರಿವಾಪಃ ಪರಿವಾಪಾಖ್ಯಂ ಹವಿರತ್ತು । ಇಯಂ ತೃತೀಯಸ್ಯ ಯಾಜ್ಯಾ । ಇಂದ್ರಸ್ಯಾಪೂಪಃ ಪುರೋಡಾಶಃ ಪ್ರಿಯ ಇತಿ ಶೇಷಃ । ತಥಾ ಸತೀಂದ್ರೋಽಪೂಪಮತ್ತ್ವಿತ್ಯರ್ಥಾದವಗಮ್ಯತೇ । ಸೇಯಂ ಚತುರ್ಥಹವಿಷೋ ಯಾಜ್ಯಾ । ಪಂಚಮಹವಿಃಸ್ವರೂಪಾಯಾಃ ಪಯಸ್ಯಾಯಾಃ ಶಾಖಾಂತರಾದತ್ರೋಪಸಂಹರ್ತವ್ಯಾ । ಏವಂ ಹವಿಷ್ಪಂಕ್ತ್ಯಾಯಜತಿ ಹವಿಷ್ಪಂಕ್ತಿವಿಷಯಾಂ ಯಾಜ್ಯಾಂ ಪಠೇದಿತ್ಯರ್ಥಃ ॥

ಇದುವರಿಗೂ ಹೇಳಿದ ಹವಿಷ್ಪಂಕ್ತಿ ಮೊದಲಾದ ನಾಲ್ಕು ಪಂಚಪಂಕ್ತಿಗಳಿಗೆ ಅವಶ್ಯಕವಾದ ಯಾಜ್ಯಾ (ಹೋಮ ಮಾಡುವ) ಮಂತ್ರಗಳನ್ನು ವಿವರಿಸುತ್ತಾರೆ. **ಹರಿವಾ಼ ಇಂದ್ರೋ ಧಾನಾ ಅತ್ತು** ಹರೀ ಎಂಬ ಎರಡು ಹಳದೀಬಣ್ಣದ ಅಶ್ವಗಳಿಂದ ಸಹಿತನಾದ ಇಂದ್ರನು ಧಾನಾ ಎಂದರೆ ಹುರಿದ ಧಾನ್ಯವನ್ನು ಭಕ್ಷಿಸಲಿ. ಈ ಮಂತ್ರವು ಮೊದಲನೆಯ ಹವಿಷ್ಪಂಕ್ತಿಯ ಹವಿಸ್ಸನ್ನು ಹೋಮಮಾಡುವಾಗ ಪಠಿಸಬೇಕಾದ ಯಾಜ್ಯಾಮಂತ್ರವು; ಜನಗಳನ್ನು ಪೋಷಿಸುವುದರಿಂದ ಗವಾದಿ ಪ್ರಾಣಿಗಳಿಗೆ ಪಶುಗಳೆಂದು ಹೆಸರು. ಈ ಪಶುಗಳಿಗೆ ಸ್ವಾಮಿಯಾದ ಯಾವ ದೇವನಿರುವನೊ ಅವನಿಗೆ ಪೂಷಣ್ವಾನ್ ಎಂದು ಹೆಸರು. ಈ ಪೂಷಣ್ವಾನ್ ಎಂಬ ದೇವತೆಯು ಕರಂಭ ಎಂಬ ದಧಿಮಿಶ್ರಿತವಾದ ಪಿಷ್ಟವನ್ನು ಭಕ್ಷಿಸಲಿ ಎಂಬರ್ಥವುಳ್ಳ **ಪೂಷಣ್ವಾನ್ ಕರಂಭಮತ್ತು** ಎಂಬ ವಾಕ್ಯವು ದ್ವಿತೀಯಾಕ್ಷರಪಂಕ್ತಿಯ ಹವಿಸ್ಸಿನ ಯಾಜ್ಯಾಮಂತ್ರವು; ಸರಸ್ವತೀವಾನ್ **ಭಾರತೀವಾನ್ ಪರಿವಾಪ ಅತ್ತು** ಎಂಬುದು ಮೂರನೆಯ ನರಾಶಂಸಪಂಕ್ತಿಯ ಹವಿಸ್ಸಿನ ಯಾಜ್ಯಾಮಂತ್ರವು. ಸರಸ್ವತೀ ಎಂದರೆ ವಾಕ್. ವಾಕ್ಛಕ್ತಿಯುಳ್ಳ ದೇವತೆಗೆ ಸರಸ್ವತೀವಾನ್ ಎಂದು ಹೆಸರು ಅವನಿಗೆ ಭಾರತೀವಾನ್ ಶರೀರವನ್ನು ಧರಿಸಿರುವ ಪ್ರಾಣಕ್ಕೆ ಧಾರಕನಾದುದರಿಂದ ಭಾರತೀವಾನ್ ಎಂದೂ ಹೆಸರು. ಈ ದೇವನು ಪರಿವಾಪ ಎಂದರೆ ಅರಳನ್ನು ಭಕ್ಷಿಸಲಿ ಎಂದು ಈ ವಾಕ್ಯದ ಅರ್ಥವು; **ಇಂದ್ರೋಽಪೂಪಮತ್ತು** ಎಂಬುದು ನಾಲ್ಕನೆಯ ಸವನಪಂಕ್ತಿಯ ಹವಿಸ್ಸಿಗೆ ಯಾಜ್ಯಾಮಂತ್ರವು.

ಅಪೂಪವೆಂದರೆ ಪುರೋಡಾಶವು. ಇಂದ್ರನಿಗೆ ಪುರೋಡಾಶವು ಪ್ರಿಯವಾದದು. ಆದ್ದರಿಂದ ಇಂದ್ರನು ಪುರೋಡಾಶವನ್ನು ಭಕ್ಷಿಸಲಿ ಎಂಬ ಅರ್ಥವುಳ್ಳ ಈ ವಾಕ್ಯದ ನಾಲ್ಕನೆಯ ಸವನಪಂಕ್ತಿಯ ಹವಿಸ್ಸಿನ ಯಾಜ್ಯಾಮಂತ್ರವು. ಐದನೆಯ ಪಯಸ್ಯಾ ಎಂಬ ಹವಿಸ್ಸಿನ ವಿಷಯವು ಇಲ್ಲಿ ತಿಳಿಸಲ್ಪಟ್ಟಿಲ್ಲ. ಆದ್ದರಿಂದ ಅದನ್ನು ಹೇಳುವ ಆವಶ್ಯಕತೆ ಇಲ್ಲ. ಆದರೂ ಈ ವಿಷಯದಲ್ಲಿ— **ತದಶ್ವಿನೌ ಧಾನಾಭಿರಭಿಷಜ್ಯತಾಂ । ಪೂಷಾ ಕರಂಭೇಣ । ಭಾರತೀ ಪರಿವಾಪೇಣ । ಮಿತ್ರಾವರುಣೌ ಪಯಸ್ಯಾ ।** ಎಂದು ತೈತ್ತಿರೀಯಬ್ರಾಹ್ಮಣವಾಕ್ಯವಿರುವುದು (ತೈ. ಬ್ರಾ. ೧-೫-೧೧-೨).

**ಋಕ್ಸಾಮೇ ವಾ ಇಂದ್ರಸ್ಯ ಹರೀ । ಪಶವಃ ಪೂಷಾನ್ನಂ ಕರಂಭಃ । ಸರಸ್ವತೀವಾನ್ಭಾರತೀವಾನಿತಿ ವಾಗೇವ ಸರಸ್ವತೀ ಪ್ರಾಣೋ ಭರತಃ । ಪರಿವಾಪ ಇಂದ್ರಸ್ಯಾಪೂಪ ಇತ್ಯನ್ನಮೇವ ಪರಿವಾಪ ಇಂದ್ರಿಯಮಪೂಪಃ ।**

ಪ್ರಥಮಯಾಜ್ಯಾಂ ವ್ಯಾಚಷ್ಟೇ । ಋಗ್ದೇವತಾ ಸಾಮದೇವತಾ ಚೇತ್ಯುಭಯದೇವತಾ ರೂಪಾವಿಂದ್ರಸ್ಯಾಶ್ವಾವತೋ- ಹರಿವಾನಿತಿ ಮಂತ್ರೋಕ್ತಿರಿತ್ಯರ್ಥಃ । ದ್ವಿತೀಯಯಾಜ್ಯಾಂ ವ್ಯಾಚಷ್ಟೇ । ಪೋಷಕತ್ವಾತ್ಪಶೂನಾಂ ಪೂಷತ್ವಂ ಸ್ವಾದುಪೋಷಕತ್ವಾತ್ಕರಂಭಸ್ಯಾನ್ನತ್ವಮತಃ ಪಶುಸ್ವಾಮಿನಃ ಕರಂಭೋ ಯೋಗ್ಯ ಇತ್ಯರ್ಥಃ । ತೃತೀಯಯಾಜ್ಯಾಂ ವ್ಯಾಖ್ಯಾಪೂರ್ವಂ ವ್ಯಾಚಷ್ಟೇ । ಅತ್ರ ಸರಸ್ವತೀವಾನ್ಭರತೀವಾನಿತಿ ವ್ಯಾಖ್ಯೇಯಮನೂದ್ಯ ವಾಗಿತ್ಯಾದಿನಾ ತದ್ವ್ಯಾಖ್ಯಾನಂ ಕ್ರಿಯತೇ । ವಾಗೇವ ಸರಸ್ವತೀತ್ಯೇತಲ್ಲೋಕಪ್ರಸಿದ್ಧಂ ನ ತ್ವತ್ರ ಕಿಂಚಿದ್ವಕ್ತವ್ಯಮಸ್ತೀತ್ಯೇಪಶಬ್ದಸ್ಯಾರ್ಥಃ । ಶರೀರಭರಣಹೇತುತ್ವಾತ್ಪ್ರಾಣೋ ಭರತಶಬ್ದವ್ಯಾಚಃ । ತದೀಯವೃತ್ತಿರ್ಭಾರತೀ ತದುಭಯೋಪೇತಂ ಮತ್ಪ್ರತ್ಯಯಸ್ಯಾರ್ಥ ಇತಿ ದ್ರಷ್ಟವ್ಯಂ । ತೃತೀಯಯಾಜ್ಯಾಯಾ ಉತ್ತರಾರ್ಧಂ ಚತುರ್ಥಯಾಜ್ಯಾಂ ಚಾನೂದ್ಯ ವ್ಯಾಚಷ್ಟೇ । ಪರಿವಾಪಶಬ್ದವಾಚ್ಯಾನಾಂ ಲಾಜಾನಾಂ ಮೃದುತ್ವೇನಾತ್ತುಂ ಸುಕರತ್ವಾದನ್ನತ್ವಂ । ಇಂದ್ರಿಯವೃದ್ಧಿಹೇತುತ್ವಾದಪೂಪಸ್ಯೇಂದ್ರಿಯತ್ವಂ । ಅತ್ರ ಹರಿಪೂಷಾದಿವಿಶೇಷಣರೂಪದೇವತಾ ಭೇದಾದ್ಯಾಜ್ಯಭೇದೇಽಪಿ ಯಜನೀಯಸ್ಯ ವಿಶೇಷಸ್ಯೇಂದ್ರಸ್ಯೈಕತ್ವಾದೇಕಯಾಜ್ಯಾತ್ವಮಭಿಪ್ರೇತ್ಯ ಹವಿಷ್ಪಂಕ್ತ್ಯಾ ಯಜತೀತ್ಯೇಕ ಪ್ರಧಾನವಿಧಿರಿತಿ ದ್ರಷ್ಟವ್ಯಂ ॥

ಹಿಂದೆ ಹೇಳಿದ ಯಾಜ್ಯಾಮಂತ್ರಗಳ ಸ್ವರೂಪವನ್ನು ವಿವರಿಸುತ್ತಾರೆ—ಋಗ್ವೇದಕ್ಕೆ ಅಭಿಮಾನಿಯಾದ ದೇವತೆಯೂ ಸಾಮವೇದಕ್ಕೆ ಅಭಿಮಾನಿಯಾದ ದೇವತೆಯೂ ಇಂದ್ರನ ಎರಡು ಅಶ್ವಗಳೆಂದು ಕರೆಯಲ್ಪಡುವರು. ಎಂದರೆ ಇಂದ್ರನು ಋಕ್ಸಾಮಮಂತ್ರಗಳಿಂದ ಸ್ತುತಿಸಲ್ಪಡುವನು ಎಂದು ಇದರ ಅಂತರಾರ್ಥವು. ಆದ್ದರಿಂದ ಈ ಎರಡುವಿಧ ಅಶ್ವಗಳಿಂದ ಕೂಡಿದ ಇಂದ್ರನಿಗೆ ಹರಿವಾನ್ ಎಂಬ ಹೆಸರು ಬಂದಿರುವುದು. ಇದು ಮೊದಲನೆಯ ಯಾಜ್ಯಾಮಂತ್ರದ ಅರ್ಥವು; ಜನರನ್ನು ಪೋಷಣೆಮಾಡುವುದರಿಂದ ಪಶುಗಳಿಗೆ ಪಶು ಎಂಬ ಹೆಸರು ಅನ್ವರ್ಥವಾಗಿರುವುದು. ಇಂತಹ ಪಶುಗಳಿಗೆ ಸಾಮಿಯಾದ ಪೂಷಣ್ವಾನ್ ಎಂಬ ದೇವನು ಕರಂಭ ಎಂಬ ದಧಿಪಿಷ್ಟಮಿಶ್ರಿತವಾದ ಹವಿಸ್ಸಿಗೆ ಯೋಗ್ಯನಾಗಿರುವನು. ಇದು ದ್ವಿತೀಯ ಯಾಜ್ಯಾಮಂತ್ರದ ಅರ್ಥವು; ಸರಸ್ವತೀ ಎಂದರೆ ವಾಕ್ಯವು. ಭಾರತೀ ಎಂದರೆ ಶರೀರದಲ್ಲಿ ಪ್ರಾಣವನ್ನು ಧರಿಸುವುದಕ್ಕೆ ಭರತ ಶಬ್ದವು ವಿವೃತವಾಗಿರುವುದು. ಆದ್ದರಿಂದ ವಾಕ್ಸಂಪತ್ತನ್ನೂ ಪ್ರಾಣಧಾರಣಶಕ್ತಿಯನ್ನೂ ಹೊಂದಿರುವ ದೇವನನು ಪರಿವಾಪ

ಎಂದರೆ ಅರಳನ್ನು ಭಕ್ಷಿಸಲು ಯೋಗ್ಯನು ಅರಳು ಸಹ ಅನ್ನದಂತೆ ಮೃದುವಾಗಿಯೂ ಪುಷ್ಟಿಕರವಾಗಿಯೂ ಇರುವುದರಿಂದ ಈ ದೇವನೇ ಇದಕ್ಕೆ ಯೋಗ್ಯನು ಇದು ತೃತೀಯಯಾಜ್ಯಾಮಂತ್ರದ ಅರ್ಥವು. ಇಂದ್ರಿಯವೃದ್ಧಿಯನ್ನುಂಟುಮಾಡುವ ಶಕ್ತಿಯು ಅಪೂಪಕ್ಕೆ ಇರುವುದರಿಂದ ಈ ಅಪೂಪ (ಪುರೋಡಾಶ) ಭಕ್ಷಣವು ಇಂದ್ರನಿಗೆ ಯೋಗ್ಯವು. ಇಲ್ಲಿ ನಾಲ್ಕುವಿಧ ಹವಿಷ್ಪಂಕ್ತಿಗಳಿಗೆ ಬೇರೆ ಬೇರೆ ವಿಧವಾದ ಹವಿರ್ದ್ರವ್ಯಗಳನ್ನೂ ಯಾಜ್ಯಮಂತ್ರಗಳನ್ನೂ ನಿರ್ದೇಶಿಸಿದ್ದರೂ ಈ ಹವಿಸ್ಸುಗಳಿಗೂ, ಯಾಜ್ಯಾಮಂತ್ರ ಗಳಿಗೂ ಮುಖ್ಯವಾಗಿ ಇಂದ್ರನೇ ಉದ್ದಿಷ್ಟನಾಗಿರುವುದರಿಂದ ಈ ಹವಿಸ್ಸುಗಳೂ, ಮಂತ್ರಗಳೂ ಇಂದ್ರನನ್ನೇ ಉದ್ದೇಶಿಸಿ ಹೇಳಲ್ಪಟ್ಟಿರುವವೆಂದು ತಿಳಿಯಬೇಕು.

**ಏತಾಸಾಮೇವ ತದ್ದೇವತಾನಾಂ ಯಜಮಾನಂ ಸಾಯುಜ್ಯಂ ಸರೂಪತಾಂ ಸಲೋಕತಾಂ ಗಮಯತಿ ಗಚ್ಛತಿ ಶ್ರೇಯಸಃ ಸಾಯುಜ್ಯಂ ಗಚ್ಛತಿ ಶ್ರೇಷ್ಠತಾಂ ಯ ಏವಂ ವೇದ ।**

ಹೋತುರುಕ್ತಯಾಜ್ಯಾವೇದನಂ ಪ್ರಶಂಸತಿ । ಯ ಏವಂ ವೇದಿತಾ ಹೋತಾ ಯಜಮಾನಮಿಂದ್ರಾದಿದೇವತಾನಾಂ ಸಾಯುಜ್ಯಂ ಸಹವಾಸಂ ಸಮಾನಶರೀರತ್ವಂ ಸಲೋಕತಾಮೇಕಲೋಕಾವಸ್ಥಾನಂ ಚ ಪ್ರಾಪಯತಿ । ಸ್ವಯಂ ಚ ಹೋತಾ ಶ್ರೇಯಸೋಽತಿಪ್ರಶಸ್ತಸ್ಯೇಂದ್ರಾದೇಃ ಸಾಯುಜ್ಯಂ ಸಹವಾಸಂ ಪ್ರಾಪ್ನೋತಿ ಭಾಗಾಧಿಕ್ಯೇನ ಶ್ರೇಷ್ಠತಾಂ ಚ ಪ್ರಾಪ್ನೋತಿ ।

ಹೋತೃವು ಪಠಿಸಬೇಕಾದ ಮೇಲೆ ಹೇಳಿದ ಯಾಜ್ಯಾಮಂತ್ರಗಳನ್ನು ಪ್ರಶಂಸಿಸುವರು—ಮೇಲೆ ಹೇಳಿದ ಹವಿಷ್ಪಂಕ್ತಿ ಮೊದಲಾದ ಪಂಚಪಂಕ್ತಿಗಳಿಗೆ ಉಕ್ತವಾಗಿರುವ ಯಾಜ್ಯಾಮಂತ್ರಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ಅದರಂತೆ ಅನುಷ್ಠಾನ ಮಾಡುವ ಹೋತೃವು ಯಜ್ಞಮಾಡುವ ಯಜಮಾನನಿಗೆ ಇಂದ್ರಾದಿದೇವತೆಗಳ ಸಾಯುಜ್ಯ ಎಂದರೆ ಸಹವಾಸವನ್ನೂ, ಆ ದೇವತೆಗಳ ಸಮಾನರೂಪವನ್ನೂ, ಆ ಲೋಕಗಳಲ್ಲಿ ವಾಸಮಾಡಲು ಅರ್ಹತೆಯನ್ನೂ ಹೊಂದಿಸಿಕೊಡುವನು ಎಂದರೆ ಉಂಟು ಮಾಡುವನು. ಇದಲ್ಲದೆ ಆ ಹೋತೃವೂ ಸಹ ತಾನೂ ಇಂದ್ರಾದಿದೇವತೆಗಳ ಸಹವಾಸ ಸಮಾನರೂಪ, ಅವರ ಲೋಕದಲ್ಲಿ ವಾಸ ಇವುಗಳನ್ನೂ ಪಡೆಯುವುದಲ್ಲದೆ ಜನರಲ್ಲಿ ಶ್ರೇಷ್ಠತೆಯನ್ನು ಎಂದರೆ ಗಣ್ಯತೆಯನ್ನು ಪಡೆಯುವನು.

**ಹವಿರಗ್ನೇ ವೀಹೀತ್ಯನುಸವನಂ ಪುರೋಳಾಶಃ ಸ್ವಿಷ್ಟಕೃತೋ ಯಜತಿ ಅವತ್ಸಾರೋ ವಾ ಏತೇನಾಗ್ನೇಃ ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯದುಪಾಗ್ನೇಃ ಪ್ರಿಯಂ ಧಾಮ ಗಚ್ಛತಿ ಜಯತಿ ಪರಮಂ ಲೋಕಂ ಯ ಏವಂ ವೇದ ಯಶ್ಚೈವಂ ವಿದ್ವಾನೇತಯಾ ಹವಿಷ್ಪಂಕ್ತ್ಯಾ ಯಜತೇ ಯಜತೀತಿ ಚ ಯಜತೀತಿ ಚ ॥**

ಸವನೀಯಪುರೋಡಾಶಸಂಬಂಧಿನಃ ಸ್ವಿಷ್ಟಕೃತೋ ಯಾಜ್ಯಾಂ ವಿಧತ್ತೇ । ಹೇಽಗ್ನ ಇದಮಸ್ಮಾಭಿರ್ದತ್ತಂ ಹವೀಂಷಿ ಭಕ್ಷಯ । ಏತಾಮೇವ ತ್ರಿಷ್ವಪಿ ಸವನೇಷು ಯಾಜ್ಯಾಂ

ಪಠೇತ್ । ಏತಾಮೇವ ಪ್ರಶಂಸತಿ । ಅವತ್ಸಾರನಾಮಕಃ ಕಶ್ಚಿದೃಷಿರ್ಹವಿರಿತ್ಯೇತೇನ ಮಂತ್ರೇಣಾಗ್ನಿದೇವತಾಯಾಃ ಪ್ರಿಯಂ ಸ್ಥಾನಂ ಪ್ರಾಪ್ಯ ತತ ಊರ್ಧ್ವಂ ತತೋಽಪ್ಯುತ್ಕೃಷ್ಟಂ ಲೋಕಂ ಜಿತವಾನ್ । ಅತ್ರ ಸರ್ವತ್ರ ಯಜುಃಸ್ವರೂಪೈವ ಯಾಜ್ಯಾ । ತದೇತನ್ಮಂತ್ರವೇದನಂ ತತ್ಪೂರ್ವಕಮನುಷ್ಠಾನಂ ಚ ಪ್ರಶಂಸತಿ । ಯಸ್ಯ ತ್ರಿವೇದಿನಃ ಫಲತಯಾ ಹವಿಷ್ಪಂಕ್ತಿಂ ಸ್ವಾರ್ಥಮನುತಿಷ್ಠತೋ ಯಜಮಾನಸ್ಯ ಪರಾರ್ಥಂ ಯಾಜ್ಯಾಂ ಪಠತೋ ಹೋತುಶ್ಚ ಫಲಂ ಭವತಿ । ಉಭಯವಿವಕ್ಷಯಾತ್ಮನೇಪದಪರಸ್ಮೈಪದಪ್ರಯೋಗಃ ।

ಪ್ರಾತಸ್ಸವನಾದಿ ಸವನತ್ರಯಗಳಲ್ಲಿ ಹೋಮಮಾಡಬೇಕಾದ ಸ್ವಿಷ್ಟಕೃದ್ಧೋಮದ ಯಾಜ್ಯಾಮಂತ್ರವನ್ನು ವಿವರಿಸುವರು—**ಹವಿರಗ್ನೇ ವೀಹೀತ್ಯನುಸವನಂ ಪುರೋಳಾಶಃ ಸ್ವಿಷ್ಟಕೃತೋ ಯಜತಿ** । ಎಲೈ ಅಗ್ನಿಯೇ, ಇಲ್ಲಿ ನಾವು ನಿನಗಾಗಿ ಅರ್ಪಿಸುವ ಹವಿಸ್ಸನ್ನು (ಪುರೋಳಾಶವನ್ನು) ಭಕ್ಷಿಸು ಎಂಬುದೇ ಈ ಸ್ವಿಷ್ಟಕೃದ್ಧೋಮದ ಯಾಜ್ಯಾಮಂತ್ರವು. ಇವನ್ನು ಮೂರು ಸವನಗಳಲ್ಲಿಯೂ ಉಪಯೋಗಿಸಬೇಕು. ಈ ಹೋಮದ ಪ್ರಶಂಸೆಯು ವಿಶೇಷವಾಗಿರುವುದು. ಪೂರ್ವದಲ್ಲಿ ಅವತ್ಸಾರನೆಂಬ ಮಂತ್ರದ್ರಷ್ಟೃವಾದ ಓರ್ವ ಋಷಿಯು ಯಜ್ಞದಲ್ಲಿ ಹವಿಷ್ಪಂಕ್ತಿಸಂಬಂಧವಾದ ಹೋಮಮಾಡುವಾಗ ಅಗ್ನಿಯನ್ನುದ್ದೇಶಿಸಿ ಈ ಮಂತ್ರದಿಂದ ಸ್ವಿಷ್ಟಕೃದ್ಧೋಮಮಾಡಿ ಅಗ್ನಿಲೋಕದಲ್ಲಿ ಅತ್ಯಂತ ಪ್ರಿಯವೂ ಶ್ರೇಷ್ಠವೂ ಆದ ಪದವಿಯನ್ನು ಪಡೆದನು. ಮತ್ತು ಅಗ್ನಿಲೋಕಕ್ಕಿಂತಲೂ ಉತ್ಕೃಷ್ಟವಾದ ಲೋಕವನ್ನು ಪಡೆದನು. ಈ ಸವನಗಳಲ್ಲೆಲ್ಲಾ ಯಜುಸ್ಸ್ವರೂಪವಾದ (ಎಂದರೆ ಯಜುರ್ವೇದದ ವಾಕ್ಯಗಳೇ) ಮಂತ್ರಗಳೇ ಯಾಜ್ಯಾಮಂತ್ರಗಳಾಗಿರುವವು. ಆದ್ದರಿಂದ ಈ ಸವನಗಳ ಅನುಷ್ಠಾನವನ್ನೂ ಅವುಗಳ ಯಾಜ್ಯಾಮಂತ್ರಗಳ ಸ್ವರೂಪವನ್ನೂ ತಿಳಿದು ಅದರಂತೆ ಆಚರಿಸುವ ಹೋತೃವು ಪರಾರ್ಥವಾಗಿ ಎಂದರೆ ಯಜ್ಞಮಾಡುವ ಯಜಮಾನನಿಗಾಗಿಯೂ ಸ್ವಾರ್ಥಕ್ಕಾಗಿ ಎಂದರೆ ಮಂತ್ರಗಳನ್ನು ಪಠಿಸುವ ತನಗಾಗಿಯೂ ಯಜ್ಞಕರ್ಮದ ವಿಶೇಷಫಲಗಳನ್ನು ಗಳಿಸಲು ಶಕ್ತನಾಗುವನು. ಇಲ್ಲಿ ಯಜತೇ ಮತ್ತು ಯಜತಿ ಎಂಬ ಧಾತುಗಳ ಆತ್ಮನೇಪದ ಮತ್ತು ಪರಸ್ಮೈಪದಗಳ ಪ್ರಯೋಗವಿರುವುದರಿಂದ ಇದು ಹೋತೃವು ಮಾಡಬೇಕಾದ ಪರಾರ್ಥ (ಯಜಮಾನನಿಗಾಗಿ) ಮತ್ತು ಸ್ವಾರ್ಥ (ತನಗಾಗಿ) ಕಾರ್ಯಗಳನ್ನು ವಿವರಿಸುವುದಾಗಿರುವುದು.

*English Translation*

**(Havish-pamkti. Akshara-pamkti. Naras'amsa-pamkti. Savana-pamkti.)**

He who knows the offering consisting of five parts prospers by means of this offering. The offering consisting of five parts (havishpamkti) comprises (the following five things): fried grains of barley karambha, parivapam purodasa and payasa.

He who knows the Akshara-pamti, sacrifice (offering of five syllables) prospers by means of this very sacrifice. The Aksharapamti comprises the following five sylables: su, mat, pad, vag, de. He who has such a knowledge, prospers by the sacrifice consisting of five syllables.

He who knows the Narasamsa-pamkti sacrifice prospers by means of it. For two Naras'amsa offerings belong to the morning, two to the midday, and one to the evening libation. This is the Naras'amasa-pamkti sacrifice. He who has such a knowledge prospers by it.

He who knows the Savana-pamfiti sacrifice prospers by it. This Savana-pamkti sacrifice consists of the animal which is sacrificed the day previous to the Soma feast (pas'ur uparasathe), the three libations (savanani) and the animal to be sacrificeq after the Soma feast is over (pas'ur anubandhyh). This is the Savana-pamkti sacrifice. He who has such a knowledge prospers by means of the Savana-pamkti sacrifice.

The Yajya-mantra for the havish-pamkti is: "may Indra which his two yellow horses eat the fried grains first part of the havish-pamkti, with Pushan the karambha; may the parivapa be enjoyed by Sarasvati and Bharati, and the cake (Apupa-purodasa) by Indra!" The two yellow horses (hari) of Indra are the Rik and Saman. Pushan (the guardian of flocks, the divine herdsman) is cattle and karambha is food. As to the words: sarasvati-van and bharativan, Sarasvati is speech, and Bharata (bearer) means vital air. Parivapa is food, and apupa is sharpness of senses.

By repeating this Yajya-mantra the Hotar makes the sacrificer join those deities, assume the same form, and occupy the same place with them. He (the Hotar) who has such a knowledge becomes also joined to the best beings and obtains the highest bliss.

The Yajya-mantra for the Svishtakrit of the Purodasa offering at each libation is "Agni, eat the offering."

By repeating this mantra, Avatsara (an ancient Rishi) obtained Agni's favour and conguered the highest world. The same happens to him who has such a knowledge, and who knowing it has this havish-pamkti offered (i. e. the sacrificer) or repeats the Yajya-mantra belonging to it (i.e. the Hotar).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಅಷ್ಟಮಾಧ್ಯಾಯಸ್ಯ ಷಷ್ಠಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಅಷ್ಟಮೋಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಎಂಟನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.

ಎಂಟನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ನವಮಾಧ್ಯಾಯೇ ಪ್ರಥಮಃ ಖಂಡಃ

### ಒಂಭತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಒಂಭತ್ತನೆಯ ಅಧ್ಯಾಯದಲ್ಲಿ—ದ್ವಿದೇವತ್ಯಗ್ರಹಗಳಿಂದ ಎಂದರೆ ಇಬ್ಬರು ದೇವತೆಗಳ (ಒಟ್ಟಾಗಿ) ಗ್ರಹಪಾತ್ರೆಗಳಿಂದ ಮಾಡಲ್ಪಡುವ ಆಹುತಿಗಳು ; ಎಂದರೆ ಐಂದ್ರವಾಯವ (ಇಂದ್ರ ಮತ್ತು ವಾಯು) ಮೈತ್ರಾವರುಣ (ಮಿತ್ರ ಮತ್ತು ವರುಣ) ಅಶ್ವಿನೀದೇವತೆಗಳಿಗೆ ಸಂಬಂಧಪಟ್ಟ ಗ್ರಹಪಾತ್ರೆಗಳಿಂದ ಮಾಡಲ್ಪಡುವ ಆಹುತಿಸ್ವರೂಪವು ; ಋತುಯಾಜಹೋಮಗಳು ; ಉಪಾಂಶುಗ್ರಹಗಳು ]



[ಪ್ರಥಮಖಂಡದಲ್ಲಿ—ಸೋಮಪಾನವನ್ನು ಮಾಡುವುದಕ್ಕಾಗಿ ಯಾರಿಗೆ ಪ್ರಥಮ ಸ್ಥಾನವು ಲಭಿಸಬೇಕೆಂಬ ಬಗ್ಗೆ ದೇವತೆಗಳಲ್ಲಿ ನಿರ್ದಿಷ್ಟಗುರಿಯನ್ನು ತಲಪಲು ಓಡುವ ಸ್ಪರ್ಧೆ. ಐಂದ್ರವಾಯವಗ್ರಹದ ಸ್ವರೂಪವು. ಭರತರೆಂಬುವರ ವಿಶೇಷ ಪದ್ಧತಿಯ ವಿಷಯದಲ್ಲಿ ವಿವರಣೆಯು.]

ದೇವಾ ವೈ ಸೋಮಸ್ಯ ರಾಜ್ಞೋಽಗ್ರಪೇಯೇ ನ ಸಮಪಾದಯನ್ನಹಂ ಪ್ರಥಮಃ ಪಿಬೇಯಮಹಂ ಪ್ರಥಮಃ ಪಿಬೇಯಮಿತ್ಯೇವಾಕಾಮಯಂತ ತೇ ಸಂಪಾದಯಂತೋಽಬ್ರುವನ್ ಹಂತಾಜಿಮಯಾಮ ಸ ಯೋ ನ ಉಜ್ಜೇಷ್ಯತಿ ಸ ಪ್ರಥಮಃ ಸೋಮಸ್ಯ ಪಾಸ್ಯತೀತಿ·ತಥೇತಿ ತ ಆಜಿಮಯುಸ್ತೇಷಾಮಾಜಿಂ ಯತಾಮಭಿಸೃಷ್ಟಾನಾಂ ವಾಯುರ್ಮುಖಂ ಪ್ರಥಮಃ ಪ್ರತ್ಯಪದ್ಯತಾಥೇಂದ್ರೋಽಥ ಮಿತ್ರಾವರುಣಾವಥಾಶ್ವಿನೌ ।

ಅಪೋನಪ್ತ್ರೀಯತಚ್ಛೇಷ ಉಪಾಂಶ್ವಾದಿಗ್ರಹಾ ಅಪಿ ।
ಸವನೀಯಾಃ ಪುರೋಡಾಶಾಃ ಪವಮಾನಾಯ ಸರ್ಪಣಂ ॥

ಇದಾನೀಮೈಂದ್ರವಾಯವಾದೀನ್ದ್ವಿದೇವತ್ಯಾನ್ಗ್ರಹಾನ್ವಿಧಾತುಮಾಖ್ಯಾಯಿಕಾಮಾಹ —ಪುರಾ ಕದಾಚಿದ್ದೇವಾಃ ಸೋಮಸ್ಯಾಗ್ರಪೇಯೇ ಪ್ರಥಮಪಾನೇ ನಿಮಿತ್ತಭೂತೇ ಸತಿ ನ ಸಮಪಾದಯನ್ಸಂಪಾದನಂ ಸಂಪತ್ತಿಂ ನ ಪ್ರಾಪ್ತಾಃ ಕಿಂತ್ವಹಮೇವ ಪ್ರಥಮಃ ಪಿಬೇಯಮಿತಿ ಸರ್ವೇಽಪ್ಯಕಾಮಯಂತ ಸರ್ವೇ ಸಮಯಬಂಧಪುರಸ್ಸರಮಾಜಿಂ ಧಾವನಾವಧಿಂ ಕಂಚಿದ್ವೃಕ್ಷಂ ಪಾಷಾಣಮನ್ಯದ್ವಾ ಕಿಂಚಿದಯಾಮ ಪ್ರಾಪ್ನವಾಮ । ಸ ಯೋ ಯಃ ಕಶ್ಚಿದಪಿ ನೋಽಸ್ಮಾಕಂ ಮಧ್ಯ ಉಜ್ಜೇಷ್ಯತಿ ತಸ್ಮಿನ್ಧಾವನ ಉತ್ಕರ್ಷೇಣ ಜಯಂ ಪ್ರಾಪ್ಸ್ಯತಿ ಸ ಏಕ ಏವ ಪ್ರಥಮೋ

**ಭೂತ್ವಾ ಸೋಮಸ್ಯ ಸೋಮಂ ಪಾಸ್ಯತಿ । ತೇ ದೇವಾಸ್ತಥೇತ್ಯಂಗೀಕೃತ್ಯಾಜಿಂ ಧಾವನಮರ್ಯಾದಾಮಯುಃ ಪ್ರಾಪ್ತವಂತಃ । ಆಜಿಂ ಯತಾಂ ಪ್ರಾಪ್ನುವತಾಮಭಿಸೃಷ್ಟಾನಾಮಭಿತಃ ಪ್ರವೃತ್ತಾನಾಂ ತೇಷಾಂ ಮಧ್ಯೇ ವಾಯುಃ ಪ್ರಥಮೋ ಭೂತ್ವಾ ಮುಖಮವಧೇಃ ಸಂಮುಖಂ ತಂ ಪ್ರತ್ಯಪದ್ಯತ । ವಾಯೋಃ ಪೃಷ್ಠತ ಇಂದ್ರಸ್ತಸ್ಯ ಪೃಷ್ಠತೋ ಮಿತ್ರಾವರುಣೌ ತಯೋಃ ಪೃಷ್ಠತೋಽಶ್ವಿನಾವೇವಂ ಕ್ರಮೇಣ ಸರ್ವೇ ಧಾವನಂ ಪ್ರಾರಬ್ಧವಂತಃ ॥**

ಈಗ ಐಂದ್ರವಾಯವಾದಿದ್ವಿದೇವತ್ಯಗ್ರಹಗಳ ವಿಷಯವನ್ನು ವಿವರಿಸುವುದಕ್ಕೆ ಮೊದಲು ಈ ವಿಷಯದಲ್ಲಿ ಒಂದು ಪೂರ್ವೇತಿಹಾಸವನ್ನು ಹೇಳುತ್ತಾರೆ—ಪೂರ್ವದಲ್ಲಿ ದೇವತೆಗಳೆಲ್ಲರೂ ಸೇರಿ ಸೋಮಪಾನಮಾಡಬೇಕೆಂದು ಅಪೇಕ್ಷಿಸಿದಾಗ ತಮ್ಮಲ್ಲಿ ಯಾರು ಮೊದಲು ಸೋಮಪಾನವನ್ನು ಮಾಡಬೇಕೆಂದು ವಿವಾದವುಂಟಾಗಲು, ಅವರಲ್ಲಿ ನಾನು ಮೊದಲು, ತಾನು ಮೊದಲು ಪಾನಮಾಡಬೇಕೆಂದು ಚರ್ಚೆಗಾರಂಭವಾಯಿತು. ಈ ವಿಷಯವು ಯಾವ ರೀತಿಯಲ್ಲಿಯೂ ಇತ್ಯರ್ಥವಾಗದ್ದರಿಂದ ಅವರೆಲ್ಲರೂ ಸೇರಿ ಸಮಾಲೋಚನೆಮಾಡಿ ಅವರು ತಮ್ಮತಮ್ಮಲ್ಲಿಯೇ ಒಂದು ಒಪ್ಪಂದಕ್ಕೆ ಬಂದರು. ಏನೆಂದರೆ, ನಾವೆಲ್ಲರೂ ಸೇರಿ ಒಂದು ಸ್ಪರ್ಧೆಯನ್ನು ಏರ್ಪಡಿಸೋಣ, ಅದರಲ್ಲಿ ಗೆದ್ದವರು ಮೊದಲು ಸೋಮಪಾನಮಾಡಲು ಅರ್ಹರಾಗುವರು ಎಂದು. ಅದಕ್ಕೆ ಎಲ್ಲರೂ ಒಪ್ಪಲು ಆಗ ಒಂದು ಸ್ಥಳದಿಂದ ದೂರದಲ್ಲಿರುವ ಮತ್ತೊಂದು ಸ್ಥಳಕ್ಕೆ ಓಡಿಹೋಗಿ ಅಲ್ಲಿರುವ ಒಂದು ಕಲ್ಲುಬಂಡೆಯನ್ನಾಗಲಿ, ವೃಕ್ಷವನ್ನಾಗಲಿ ಮೊದಲು ಸಮೀಪಿಸಿದವರು ಗೆದ್ದವರೆಂದು ಭಾವಿಸಬೇಕು ಎಂದು ಸ್ಪರ್ಧೆಯು ನಿಶ್ಚಯವಾಯಿತು ಈರೀತಿ ಗೆದ್ದವರು ನಮ್ಮಗಳ ಮಧ್ಯದಲ್ಲಿ ಜಯಶಾಲಿಯಾಗಿ ಮೊದಲು ಸೋಮಪಾನವನ್ನು ಮಾಡಬೇಕು ಎಂಬ ಒಪ್ಪಂದಕ್ಕೆ ಎಲ್ಲರೂ ಸಮ್ಮತಿಸಲು ಎಲ್ಲಾ ದೇವತೆಗಳೂ ಏಕಕಾಲದಲ್ಲಿ ಓಡಲು ಪ್ರಾರಂಭಿಸಿದರು. ಓಡುತ್ತಿರುವ ಎಲ್ಲಾ ದೇವತೆಗಳಲ್ಲಿ ವಾಯುವು ಎಲ್ಲರಿಗಿಂತಲೂ ಮುಂದಾಗಿ ನಿರ್ದಿಷ್ಟಸ್ಥಳವನ್ನು ಸೇರಿದನು. ಇಂದ್ರನು ವಾಯುವಿನ ಹಿಂಭಾಗದಲ್ಲಿಯೇ ಬಂದು ಎರಡನೆಯವನಾದನು. ಅನಂತರ ಇಂದ್ರನ ಹಿಂದೆ ಮಿತ್ರಾವರುಣರೂ, ಅವರ ಹಿಂದೆ ಅಶ್ವಿನೀದೇವತೆಗಳೂ ಓಡಿಬಂದು ನಿರ್ದಿಷ್ಟ ಸ್ಥಳವನ್ನು ಸೇರಿದರು. ಆದುದರಿಂದ ವಾಯುವೇ ಎಲ್ಲರಿಗಿಂತಲೂ ಮುಂದಾಗಿ ಓಡಿ ಜಯಶಾಲಿಯಾದನು.

ಸೋಽವೇದಿಂದ್ರೋ ವಾಯುರುದ್ವೈ ಜಯತೀತಿ ತಮನು ಪರಾಪತತ್ಸಹ ನಾವಥೋಜ್ಜಯಾವೇತಿ ಸ ನೇತ್ಯಬ್ರವೀದಹಮೇವೋಜ್ಜೇಷ್ಯಾಮೀತಿ ತೃತೀಯಂ ಮೇಽಥೋಜ್ಜಯಾವೇತಿ ನೇತಿ ಹೈವಾಬ್ರವೀದಹಮೇವೋಜ್ಜೇಷ್ಯಾಮೀತಿ ತುರೀಯಂ ಮೇಽಥೋಜ್ಜಯಾವೇತಿ ತಥೇತಿ ತಂ ತುರೀಯೇಽತ್ಯಾರ್ಜತ ತತ್ತುರೀಯಭಾಗಿಂದ್ರೋಽಭವತ್ರಿಭಾಗ್ವಾಯುಃ ॥

**ತಸ್ಮಿನ್ಧಾವನೇ ವಾಯೋರಿಂದ್ರಸ್ಯ ಚ ಪರಸ್ಪರಂ ಸಂವಾದಂ ದರ್ಶಯತಿ । ಅಯಂ ವಾಯುರುತ್ಕರ್ಷೇಣ ಜಯತ್ಯೇವೇತಿ ಸ ಇಂದ್ರೋಽವೇತ್ಸ್ವಮನಸಿ ಜ್ಞಾತವಾನ್ ಜ್ಞಾತ್ವಾ ಚ ತಂ ವಾಯುಮನು ಪೃಷ್ಠತಃ ಪರಾಪತತ್ಸಹಸ್ವಾಧಾವತ್ । ಆಗತ್ಯ ಚೇದಮುಕ್ತವಾನ್ ಹೇ ವಾಯೋ ನಾವಾವಯೋರುಭಯೋಃ ಸಹ ಸೋಮಪಾನಮಸ್ತು ತದರ್ಥಂ ಮಮಾರ್ಥಂ । ಅಥ ತಸ್ಮಾತ್ಕಾರಣಾದಾವಾಮುಭೌ ಸಹೈವೋತ್ಕರ್ಷೇಣ ಜಯಂ ಪ್ರಾಪ್ನವಾವೇತಿ । ಸ**

ವಾಯುರ್ನೇತಿ ನಿರಾಕೃತ್ಯಾಹಮೇಕ ಏವೋಜ್ಜೇಷ್ಯಾಮೀತ್ಯಬ್ರವೀತ್ । ತತಃ ಸ ಇಂದ್ರ ಏವ-ಮುವಾಚ ಮಮಾರ್ಧಂ ಮಾ ಭೂತ್ಕಿಂತು ತೃತೀಯಂ ತ್ರಿಷು ಭಾಗೇಷು ಭಾಗೋಽಸ್ತು ತವ ದ್ವೌ ಭಾಗೌ । ಅಥೈವಂ ಸತಿ ಸಹೈವಾವಾಮುಜ್ಜಯಾವೇತಿ । ಪುನರಪಿ ನೇತ್ಯೇವ ನಿರಾಕೃತ್ಯ ಸ ವಾಯುರಹಮೇವೋಜ್ಜೇಷ್ಯಾಮೀತ್ಯಬ್ರವೀತ್ । ತತಃ ಸ ಇಂದ್ರಃ ಪುನರಪ್ಯುವಾಚ ತೃತೀಯೋ ಮಾ ಭೂತ್ಕಿಂ ತು ಮೇ ತುರೀಯಮಸ್ತು ಚತುರ್ಥಭಾಗೋಽಸ್ತು ತವ ತ್ರಯೋ ಭಾಗಾ ಅಥೈವಂ ಸತ್ಯಾವಾಮುಭಾವುಜ್ಜಯಾವೇತಿ । ತತೋ ವಾಯುರಂಗೀಕೃತ್ಯ ತಮಿಂದ್ರಂ ತುರೀ-ಯೇ ಚತುರ್ಥಭಾಗೇಽತ್ಯಾರ್ಜತಾತಿಶಯೇನ ಸ್ಥಾಪಿತವಾನ್ । ತಸ್ಮಾತ್ಕಾರಣಾದಿಂದ್ರಶ್ಚತು-ರ್ಥಾಂಶಭಾಗಭೂತ್ । ವಾಯುರಂಶತ್ರಯಭಾಗವಾನ್ ॥

ವಾಯುವೂ ಅವನ ಹಿಂದೆ ಇಂದ್ರನೂ ಓಡುತ್ತಿರುವಾಗ ಅವರಲ್ಲಿ ಈರೀತಿ ಪರಸ್ಪರ ಸಂವಾದವುಂಟಾಯಿತು. ವಾಯುವು ವೇಗವಾಗಿ ಓಡುತ್ತಿರುವುದನ್ನು ಅವನ ಹಿಂದಿದ್ದ ಇಂದ್ರನು ಕಂಡು ಈ ವಾಯುವೇ ಎಲ್ಲರಿಗಿಂತಲೂ ಮುಂಚಿತವಾಗಿ ಓಡಿ ಜಯಶಾಲಿಯಾಗುವನು. ಏನಾದರೂ ಮಾಡಿ ನಾನೂ ಇವನ ಜತೆಗೇ ಓಡಿ ಗೆಲ್ಲಬೇಕು ಎಂದು ನಿಶ್ಚಯಿಸಿ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ವಾಯುವಿನ ಸಮೀಪದಲ್ಲಿಯೇ ಓಡಿದನು. ಆದರೂ ವಾಯುವನ್ನು ಹಿಂದಕ್ಕೆ ಹಾಕಿ ತಾನು ಮುಂದುವರಿಯುವ ಸೂಚನೆಯು ಕಾಣದಿರಲು ಆಗ ಇಂದ್ರನು ವಾಯುವನ್ನು ಕುರಿತು--ಎಲೈ ವಾಯುವೇ, ನಾವಿಬ್ಬರೂ ಎಲ್ಲರಿಗಿಂತಲೂ ಮುಂದಾಗಿರುವೆವು. ಆದ್ದರಿಂದ ನಾವಿಬ್ಬರೂ ಗೆದ್ದಂತೆ ಭಾವಿಸಿ ಪ್ರಥಮ ಸೋಮಪಾನವನ್ನು ಇಬ್ಬರೂ ಹಂಚಿಕೊಳ್ಳೋಣ, ನನಗರ್ಧ, ನಿನಗರ್ಧ. ಈರೀತಿ ಇಬ್ಬರೂ ಸಹಕರಿಸಿ ಜಯವನ್ನು ಸಂಪಾದಿಸೋಣ ಎಂದನು. ಆ ಮಾತನ್ನು ಕೇಳಿ ವಾಯುವು—ಎಲೈ ಇಂದ್ರನೇ, ನಿನಗಿಂತಲೂ ನಾನು ಸ್ವಲ್ಪಮಟ್ಟಿಗಾದರೂ ಮುಂದಾಗಿಯೇ ಇರುವೆನು. ಆದ್ದರಿಂದ ನಾನೊಬ್ಬನೇ ಜಯಶಾಲಿಯಾಗುವೆನು. ಪ್ರಥಮಸೋಮಪಾನದಲ್ಲಿ ಎಲ್ಲವೂ ನನಗೇ ಸೇರಬೇಕು, ನಿನಗೆ ಅರ್ಧವನ್ನು ಕೊಡುವುದಕ್ಕಾಗುವುದಿಲ್ಲ ಎಂದನು. ಆಗ ಇಂದ್ರನು—ಒಳ್ಳೇದು ಹಾಗಾದರೆ ನನಗೆ ಅರ್ಧಭಾಗ ಬೇಡ, ಮೂರುಭಾಗಗಳಲ್ಲಿ ಎರಡನ್ನು ನೀನು ತೆಗೆದುಕೊ ನನಗೆ ಒಂದುಭಾಗವನ್ನು ಮಾತ್ರ ಕೊಡು ಎನ್ನಲು, ವಾಯುವು ಅದಕ್ಕೂ ಒಪ್ಪದೆ, ಹೇಗಾದರೂ ನಾನೇ ಗೆಲ್ಲುವೆನು, ಎಲ್ಲಾ ಭಾಗವೂ ನನಗೇ ಸೇರುವುದು, ನಿನಗೆ ಮೂರರಲ್ಲಿ ಒಂದುಭಾಗವನ್ನು ಕೊಡಲೂ ನನಗಿಷ್ಟವಿಲ್ಲ ಎಂದನು. ಆಗ ಇಂದ್ರನು ಮತ್ತೆ ವಾಯುವನ್ನು ಪ್ರಾರ್ಥಿಸುತ್ತಾ ನನಗೆ ಮೂರರಲ್ಲೊಂದುಭಾಗವೂ ಬೇಡ, ಇನ್ನೂ ಕಡಿಮೆಯಾಗಿ ಎಂದರೆ ನಾಲ್ಕರಲ್ಲೊಂದುಭಾಗವನ್ನು ಕೊಟ್ಟರೆಸಾಕು. ಅದಕ್ಕಾದರೂ ಒಪ್ಪು ಎಂದು ಹೇಳಲು ವಾಯುವು ಹಾಗೆಯೇ ಆಗಲೆಂದು ಅದಕ್ಕೊಪ್ಪಿದನು. ಆದ್ದರಿಂದ ಐಂದ್ರವಾಯುವಗ್ರಹದಲ್ಲಿ ಎಂದರೆ (ಇಂದ್ರ ಮತ್ತು ವಾಯು ಇಬ್ಬರೂ ಸೇರಿ ಸೋಮಪಾನ ಮಾಡುವಾಗ) ಇಂದ್ರನಿಗೆ ಒಂದುಭಾಗವೂ ವಾಯುವಿಗೆ ಮೂರುಭಾಗವೂ ಇರಬೇಕೆಂದು ವ್ಯವಸ್ಥೆಯಾಯಿತು.

**ತೌ ಸಹೈವೇಂದ್ರವಾಯೂ ಉದಜಯತಾಂ ಸಹ ಮಿತ್ರಾವರುಣೌ ಸಹಾಶ್ವಿನೌ ತ ಏಷಾಮೇತೇ ಯಥೋಜ್ಜಿತಂ ಭಕ್ಷಾ ಇಂದ್ರ-ವಾಯ್ವೋಃ ಪ್ರಥಮೋಽಥ ಮಿತ್ರಾವರುಣಯೋರಥಾಶ್ವಿನೋಃ ।**

ಅಥ ವಿಜಯಕ್ರಮೇಣ ಸೋಮಪಾನಕ್ರಮಂ ದರ್ಶಯತಿ । ಇಂದ್ರವಾಯೂ ಉಭೌ ಸಹೈವೋದಜಯತಾಂ ಧಾವತಾಮವಧಿದೇಶಂ ಪ್ರಾಪ್ನುತಾಂ । ತಯೋಃ ಪೃಷ್ಠತೋ ಮಿತ್ರಾ-ವರುಣೌ ಪರಸ್ಪರಂ ಸಹ ಪ್ರಾಪ್ನುತಃ । ತಯೋಃ ಪೃಷ್ಠತೋಽಶ್ವಿನೌ ಸಹ ಪ್ರಾಪ್ನುತಃ । ಏಷಾಂ

**ದೇವಾನಾಂ ಯಥೋಜ್ಜಿತಂ ತತ್ತಜ್ಜಯಮನತಿಕ್ರಮ್ಯ ತ ಏತೇ ಭಕ್ತಾಃ ಸೋಮಪಾನರೂಪಾ ಅಭವನ್ನಿಂದ್ರವಾಯ್ವೋಃ ಪ್ರಥಮಂ ಸೋಮಪಾನಂ ತತೋ ಮಿತ್ರಾವರುಣಯೋಃ ಸೋಮ-ಪಾನಂ ತತೋಽಶ್ವಿನೋಃ ಸೋಮಪಾನಮಿತ್ಯೇವಂ ದ್ವಿದೇವತ್ಯಗ್ರಹಾಣಾಂ ಕ್ರಮೋ ವ್ಯವಸ್ಥಿತಃ॥**

ಈರೀತಿ ಇಂದ್ರ ಮತ್ತು ವಾಯುವು ಸಹಕರಿಸಿ ಸ್ಪರ್ಧೆಯನ್ನು ಗೆದ್ದು ನಿರ್ದಿಷ್ಟಪ್ರದೇಶವನ್ನು ಮೊದಲು ತಲುಪಿದರು. ಅವರ ಹಿಂದೆ ಮಿತ್ರಾವರುಣರೂ ಬಂದು ಸೇರಿದರು. ಅವರ ಹಿಂದೆ ಅಶ್ವಿನೀದೇವತೆಗಳು ಬಂದರು. ಆದ್ದರಿಂದ ಈ ದೇವತೆಗಳ ಮಧ್ಯದಲ್ಲಿ ಅವರ ಸ್ಪರ್ಧೆಯಲ್ಲಿ ಯಾವ ಯಾವ ಸ್ಥಾನವನ್ನು ಪಡೆದರೋ ಆ ಕ್ರಮದಲ್ಲಿ ಅವರು ಸೋಮಪಾನಕ್ಕೆ ಅರ್ಹರಾದರು. ಎಂದರೆ ಮೊದಲು ಇಂದ್ರ, ವಾಯುಗಳು ಅನಂತರ ಮಿತ್ರಾವರುಣರು ಅವರ ಅನಂತರ ಅಶ್ವಿನೀದೇವತೆಗಳು ಸೋಮಪಾನಮಾಡಲು ವ್ಯವಸ್ಥೆಯುಂಟಾಯಿತು. ಹೀಗೆ ಇಬ್ಬಿಬ್ಬರು ದೇವತೆಗಳು ಸೇರಿ ಸೋಮಪಾನಮಾಡುವ ವ್ಯವಸ್ಥೆ ರೂಢಿಗೆ ಬಂದಿತು ಎಂದು ದ್ವಿದೇವತ್ಯಗ್ರಹದ ಕ್ರಮವು. (ಎಂದರೆ ಇಬ್ಬರು ದೇವತೆಗಳು ಒಟ್ಟಿಗೆ ಸೇರಿ ಸೋಮಪಾನಮಾಡುವ ಕ್ರಮವು) ರೂಢಿಗೆಬಂದಿತು.

## ಸ ಏಷ ಇಂದ್ರತುರೀಯೋ ಗ್ರಹೋ ಗೃಹ್ಯತೇ ಯದೈಂದ್ರವಾಯವಃ ॥

**ಇದಾನೀಮೈಂದ್ರವಾಯವಗ್ರಹಂ ವಿಧತ್ತೇ । ಯೋಽಯಮಿಂದ್ರವಾಯುದೇವತಾಕೋ ಗ್ರಹಃ ಸ ಏಷ ಇಂದ್ರತುರೀಯ ಇಂದ್ರಸ್ಯ ತುರೀಯಭಾಗೋ ಯಸ್ಮಿನ್ಗ್ರಹೇ ಸೋಽಯಮಿಂ-ದ್ರತುರೀಯಸ್ತಾದೃಶಂ ಗ್ರಹಂ ಗೃಹ್ಣೀಯಾತ್ ॥**

ಆದ್ದರಿಂದ ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದುಭಾಗಮಾತ್ರ ಸೋಮಪಾನದಲ್ಲಿ ವ್ಯವಸ್ಥೆ ಇರುವುದು.

## ತದೇತದೃಷಿಃ ಪಶ್ಯನ್ನಭ್ಯನೂವಾಚ ನಿಯುತ್ವಾ ಇಂದ್ರಸಾರಥಿರಿತಿ ।

**ಉಕ್ತಭಾಗವಿಶೇಷಂ ಮಂತ್ರಸಂವಾದೇನ ದ್ರಢಯತಿ । ತದೇತಚ್ಚತುರ್ಥಭಾಗತ್ವಂ ದಿವ್ಯದೃಷ್ಟ್ಯಾ ಪಶ್ಯನ್ಕಶ್ಚಿನ್ಮಂತ್ರಾತ್ಮಕ ಋಷಿಸ್ತೇನ ಮಂತ್ರೇಣಾಭ್ಯನೂವಾಚ ಸಾಕಲ್ಯೇನ ತದು-ಕ್ತವಾನ್ । ನಿಯುತ್ವಾನಿತ್ಯಾದಿಕೋ ಮಂತ್ರಃ । ನಿಯುತ್ವಚ್ಛಬ್ದೋ ವಾಯುಸಂಬಂಧಿನಾಂ ಮಂತ್ರಾಣಾಂ ವಾಚಕಃ।ಅಥ ವಾಯುಂ ನಿಯುತಃ ಸಶ್ಚತಸ್ವಾ ಇತ್ಯಾದಿಮಂತ್ರೇಷ್ವಭಿಧಾನಾತ್। ನಿಯುತೋ ಯಸ್ಯ ವಾಯೋಃ ಸಂತಿ ಸೋಽಯಂ ನಿಯುತ್ವಾನಿಂದ್ರಃ ಸಾರಥಿರ್ಯಸ್ಯ ವಾಯೋಃ ಸೋಽಯಮಿಂದ್ರಸಾರಥಿಃ । ಅತ್ರ ಸಾರಥಿತ್ವಾಭಿಧಾನಾದಿಂದ್ರಸ್ಯ ಚತುರ್ಥಭಾಗ-ಪ್ರಾಪ್ತಿರ್ದರ್ಶಿತಾ ॥**

ಐಂದ್ರವಾಯವಗ್ರಹದಲ್ಲಿ ಇಂದ್ರನಿಗೆ ನಾಲ್ಕರಲ್ಲಿ ಒಂದುಭಾಗವಿರುವುದನ್ನು ಋಷಿಯು ದಿವ್ಯದೃಷ್ಟಿಯಿಂದ ತಿಳಿದು— **ಶತೇನಾ ನೋ ಅಭಿಷ್ಟಿಭಿರ್ನಿಯುತ್ವಾ ಇಂದ್ರಸಾರಥಿಃ । ವಾಯೋ ಸುತಸ್ಯ ತೃಂಪತಂ** (ಋ.ಸಂ. ೪-೪೬-೨) ಎಂಬ ಋಕ್ಕಿನಲ್ಲಿ ಈ ವಿಷಯವನ್ನು **ನಿಯುತ್ವಾ ಇಂದ್ರಸಾರಥಿಃ** ಎಂಬ ವಾಕ್ಯದಿಂದ ವ್ಯಕ್ತಪಡಿರುವನು. ಇಲ್ಲಿ **ನಿಯುತೋ ವಾಯೋಃ** ಎಂಬ ನಿರುಕ್ತವಚನದಂತೆ (ನಿ. ೨-೨೮) ನಿಯುತ ಎಂಬ ಅಶ್ವಗಳು ವಾಯುದೇವನ ವಾಹನವೆಂದು ಪ್ರಸಿದ್ಧವು. ಆದ್ದರಿಂದ ನಿಯುತ್ವಚ್ಛಬ್ದವು ವಾಯುಸಂಬಂಧವನ್ನು ಸೂಚಿಸುವುದು. **ಅಥ ವಾಯುಂ ನಿಯುತಃ ಸಶ್ಚತಸ್ವಾಃ** (ತೈ. ಬ್ರಾ. ೨-೮-೧-೧) ಇತ್ಯಾದಿ ಮಂತ್ರಗಳು ಈ ವಿಷಯವನ್ನು ಸಮರ್ಥಿಸುವವು. **ಇಂದ್ರಸಾರಥಿಃ** ಎಂಬ ಶಬ್ದಕ್ಕೆ

ವಾಯುವಿಗೆ ಸಾರಥಿಯಾದ ಇಂದ್ರನು ಎಂದಭಿಪ್ರಾಯವು. ಇಂದ್ರನು ವಾಯುವಿಗೆ ಸಾರಥಿಸ್ಥಾನದಲ್ಲಿರುವುದರಿಂದ ಇಂದ್ರನಿಗೆ ಪ್ರಥಮಸೋಮಪಾನದಲ್ಲಿ ಚತುರ್ಥಾಂಶಮಾತ್ರವಿರುವುದೆಂದು ಇದರಿಂದ ಸೂಚಿತವಾಗುವುದು.

**ತಸ್ಮಾದ್ಧಾಪ್ಯೇತರ್ಹಿ ಭರತಾಃ ಸತ್ವನಾಂ ವಿತ್ತಿಂ ಪ್ರಯಂತಿ ತುರೀಯೇ ಹ್ಯೇವ ಸಂಗ್ರಹೀತಾರೋ ವದಂತೇಽಮುನ್ಯೈವಾನೂಕಾಶೇನ ಯದದ ಇಂದ್ರಃ ಸಾರಥಿರಿವ ಭೂತ್ವೋದಜಯತ್ ।**

ಉಕ್ತಮರ್ಥಂ ಲೋಕವ್ಯವಹಾರೇಣ ದ್ರಢಯತಿ । ಯಸ್ಮಾತ್ಸಾರಥಿರೂಪಸ್ಯೇಂದ್ರಸ್ಯ ಚತುರ್ಥಭಾಗಃ ಪೂರ್ವಂ ಪ್ರತ್ತಸ್ತಸ್ಮಾದ್ಧ ತತ ಏವ ಕಾರಣಾದೇತರ್ಹ್ಯಪೀದಾನೀಮಪಿ ಭರತಾ ಭರಃ ಸಂಗ್ರಾಮಸ್ತಂ ತನ್ವಂತಿ ವಿಸ್ತಾರಯಂತೀತಿ ಭರತಾ ಯೋದ್ಧಾರಃ ಸತ್ವನಾಂ ಸಾರಥೀನಾಂ ವಿತ್ತಿಂ ವೇತನಾಂ ಜೀವಿತರೂಪಾಂ ಪ್ರಯಂತಿ ಪ್ರಕರ್ಷೇಣ ಸಂಪಾದಯಂತಿ । ತೇ ಚ ಸಂಗ್ರಹೀತಾರಃ ಸಾರಥಯಸ್ತುರೀಯೇ ಹ್ಯೇವ ಯುದ್ಧಲಬ್ಧಸ್ಯ ದ್ರವ್ಯಸ್ಯ ಚತುರ್ಥಭಾಗ ಏವ ವದಂತೇಽಸ್ಮಾಕಮೇತಾವದುಚಿತಮಿತಿ ಕಥಯಂತಿ । ತದೌಚಿತ್ಯೇ ಯುಕ್ತಿಮಾಹ । ಅಮುನ್ಯೈವ ಪೂರ್ವೋಕ್ತೇನ್ಯೈವಾನೂಕಾಶೇನ ದೃಷ್ಟಾಂತೇನ । ಸ ಏವ ದೃಷ್ಟಾಂತೋ ಯದದ ಇತ್ಯಾದಿನಾ ಸ್ಪಷ್ಟೀಕ್ರಿಯತೇ । ಯಸ್ಮಾತ್ಕಾರಣಾದಿಂದ್ರೋ ವಾಯೋಃ ಸಾರಥಿರಿವ ಭೂತ್ವಾದಶ್ಚತುರ್ಥಾಂಶರೂಪಂ ಸೋಮಾತ್ಮಕಂ ಧನಮುದಜಯತ್ತಸ್ಮಾಲ್ಲೋಕೇಽಪಿ ತಥೈವ ಪ್ರವೃತ್ತಮಿತ್ಯರ್ಥಃ ॥

ಮೇಲೆ ಹೇಳಿದ ವಿಷಯವನ್ನು ಲೋಕವ್ಯವಹಾರದೃಷ್ಟಿಯಿಂದ ಉದಾಹರಣೆಮೂಲಕವಾಗಿ ವಿಶದಪಡಿಸುವದು. ಯುದ್ಧದಲ್ಲಿ ಯೋಧರಾದವರು ರಥಗಳಲ್ಲಿ ಕುಳಿತು ತಮ್ಮ ಸಾರಥಿಯ ಸಹಾಯದಿಂದ ಜಯಶೀಲರಾಗಿ ಶತ್ರುಗಳ ಧನಾದಿಗಳನ್ನು ಆಕ್ರಮಿಸುವರು. ಆರೀತಿ ಆಕ್ರಮಿಸಿದಾಗ ಆ ಧನಾದಿಗಳಲ್ಲಿ ಒಂದು ಭಾಗವನ್ನು ಎಂದರೆ ನಾಲ್ಕರಲ್ಲಿ ಒಂದು ಭಾಗವನ್ನು ತಮಗೆ ಸಹಾಯಕರಾದ ಸಾರಥಿಗಳಿಗೆ ಕೊಡುವರು. ಈ ಪದ್ಧತಿಯು ಲೋಕವ್ಯವಹಾರದಲ್ಲಿ ರೂಢಿಯಲ್ಲಿದೆ. ಅದರಂತೆ ದೇವತೆಗಳು ಏರ್ಪಡಿಸಿದ್ದ ಈ ಸ್ಪರ್ಧೆಯಲ್ಲಿ ಇಂದ್ರನು ವಾಯುವಿಗೆ ಸಾರಥಿಯಾಗಿ ವಾಯುವು ಜಯಶೀಲನಾದ್ದರಿಂದ ಸ್ಪರ್ಧೆಯಲ್ಲಿ ದೊರೆತ ಪ್ರಥಮಸೋಮಪಾನದಲ್ಲಿ ಚತುರ್ಥಾಂಶವು ಇಂದ್ರನ ಭಾಗವಾಯಿತು. ಇಂದ್ರನು ಚತುರ್ಥಾಂಶವನ್ನು ವಾಯುವಿಗೆ ಸಾರಥಿಯಾಗಿ ಗಳಿಸಿದನು ಎಂದು ಮುಖ್ಯಾಭಿಪ್ರಾಯವು.

## *English Translation*

(The Dvidevaiya Graha libations, i. e., the libation poured from the Aindravayava, Maitravaruna, and Asvina Grahas. Rityyajas. The Silent Praise)

**(Story of a race run by the Gods for obtaining the right to drink first from a Soma libation. The Aindravayava Graha. Explanation of a certain custom with the Bharatas).**

The Gods could not agree as to who of them should first taste the Soma juice. They all wished for it, each saying: "might I drink first, might I drink first." They came at length to an understanding. They said:" Well, let us

run a race. He of us who will be victor, shall first taste the Soma juice." So they did. Among all those who ran the race, Vayu first arrived at the goal; next Mitra and Varuna, then the As'vins. Indra thinking he would be before hand with Vayu, ran as fast as he could and fell down close to him. He then said, "We both have arrived. at the goal together; let both of us be winners of the race." Vayu answerd, "No! I alone am the winner of the race." Indra said, "Let the third part (of the prize) be mine; let both of us be winners of the race!" Vayu said, "No! I alone am winner of the race." Indra said, "Let the fourth part of the prize be mine; let us both be winners of the race!" To this Vayu agreed, and invested him with the right to the fourth part of the first Soma cup presented. Thence Indra is entitled only to the fourth part; but Vayu to three parts. Thus Indra and Vayu won the race together; next followed Mitra and Varuna together, and then the Ashvins.

According to the order in which they arrived at the goal, they obtained their shares in the Soma juice. The first portion belongs to Indra and Vayu, then follows that of Mitra and Varuna and lastly that of the Ashvins.

The Aindravayara Soma jar (graha) is that one in which Indra enjoys the fourth part. Just this (fourth part as belonging to Indra) was seen (by means of revelation) by a Rishi. He then repeated the mantra appropriate to it, niyutran ind'ah sarathir, i. e. Vayn and Indra his carriage driver! Thence when nowadays the Bharatas spoil their enemies conquered in the battle field, those charioters who seize the booty, say in imitation of that example set by Indra, who won his race only by becoming the charioteer of Vayu, "the fourth part of the booty is ours alone."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ನವಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು ಸಮಾಪ್ತವಾದುದು.



# ಅಥ ನವಮಾಧ್ಯಾಯೇ ದ್ವಿತೀಯಃ ಖಂಡಃ

## ಒಂಭತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಐಂದ್ರವಾಯವ, ಮೈತ್ರಾವರುಣ ಮತ್ತು ಆಶ್ವಿನಗ್ರಹ ಆಹುತಿಗಳ ವಿಷಯದಲ್ಲಿ ಅಂತರಾರ್ಥವಿವರಣೆಯು; ಐಂದ್ರವಾಯವಗ್ರಹಾಹುತಿಯ ಎರಡು ಪುರೋನುವಾಕ್ಯಗಳು]

ತೇ ವಾ ಏತೇ ಪ್ರಾಣಾ ಏವ ಯದ್ದ್ವಿದೇವತ್ಯಾಃ । ವಾಕ್ಚ ಪ್ರಾಣಶ್ಚೈಂದ್ರವಾಯವಶ್ಚಕ್ಷುಶ್ಚ ಮನಶ್ಚ ಮೈತ್ರಾವರುಣಃ ಶ್ರೋತ್ರಂ ಚಾತ್ಮಾ ಚಾಶ್ವಿನಃ ॥

ಅಥೈಂದ್ರವಾಯವಮೈತ್ರಾವರುಣಾಶ್ವಿನಾಖ್ಯಾನ್ದ್ವಿದೇವತ್ಯಗ್ರಹಾನ್ಪ್ರಾಣರೂಪತ್ವೇನ ಪಶಂಸತಿ । ತೇಷಾಂ ತ್ರಯಾಣಾಂ ಪ್ರಾಣರೂಪತ್ವಂ ವಿಭಜ್ಯ ದರ್ಶಯತಿ । ಉಚ್ಛ್ವಾಸಾದಿವೃತ್ತಿಭೇದವರ್ತೀ ವಾಯುಃ ಪ್ರಾಣಃ । ವಾಗಾದೀನೀಂದ್ರಿಯಾಣಿ । ತೇಷಾಂ ಪ್ರಾಣರೂಪತ್ವಾಭಾವೇಽಪಿ ಪ್ರಾಣಾಧೀನವೃತ್ತಿಲಾಭತ್ವೇನ ಪೂರ್ವತ್ರ ಪ್ರಾಣಾ ಇತಿ ನಿರ್ದೇಶಃ ಕೃತಃ । ಇಮಮರ್ಥಂ ವಾಜಸನೇಯಿನ ಆಮನಂತಿ । ತ ಏತಸ್ಯೈವ ಸರ್ವೇ ರೂಪಮಭವಂಸ್ತಸ್ಮಾದೇತ ಏತೇನಾಖ್ಯಾಯಂತೇ ಪ್ರಾಣಾ ಇತಿ । ತತ್ರ ವಾಯುರೂಪೇ ತ್ವಮುಖ್ಯಃ ಪ್ರಾಣೋ ವಾಕ್ಚೇತ್ಯೇತದುಭಯಮೈಂದ್ರವಾಯವಗ್ರಹಸ್ವರೂಪಂ ಚಕ್ಷುರ್ಮನಶ್ಚಾತೀಂದ್ರಿಯದ್ವಯಂ ಮೈತ್ರಾವರುಣಗ್ರಹಸ್ವರೂಪಂ ಶ್ರೋತ್ರಂ ಜೀವಾತ್ಮಾ ಚೇತ್ಯುಭಯಮಾಶ್ವಿನಗ್ರಹಸ್ವರೂಪಂ ।

ಈಗ ಐಂದ್ರವಾಯವ, ಮೈತ್ರಾವರುಣ, ಆಶ್ವಿನ ಎಂಬ ದ್ವಿದೇವತ್ಯಗ್ರಹಗಳನ್ನು ಪ್ರಾಣಸ್ವರೂಪದೃಷ್ಟಿಯಿಂದ ವಿವರಿಸುತ್ತಾರೆ. ಈ ಮೂರು ದ್ವಿದೇವತ್ಯಗ್ರಹಗಳಲ್ಲಿ ಯಾವ ಯಾವ ಪ್ರಾಣಾದಿಸ್ವರೂಪಗಳಿರುವವು ಎಂಬುದನ್ನು ಹೇಳಲಾಗುವುದು. ಉಚ್ಛ್ವಾಸನಿಃಶ್ವಾಸಗಳಿಗೆ ಕಾರಣಭೂತನಾದ ವಾಯುವು ಪ್ರಾಣವೆಂದು ಹೇಳಲ್ಪಡುವುದು. ವಾಗಾದಿಂದ್ರಿಯಗಳು ಪ್ರಾಣಸ್ವರೂಪವಲ್ಲದಿದ್ದರೂ ಅವುಗಳು ಪ್ರಾಣಕ್ಕೆ ಅಧೀನವಾಗಿರುವುದರಿಂದ ಅವುಗಳನ್ನು ಪ್ರಾಣಗಳೆಂದೇ ಪರಿಗಣಿಸಲ್ಪಟ್ಟಿರುವವು. ಶತಪಥಬ್ರಾಹ್ಮಣದಲ್ಲಿ ಈರೀತಿ ಹೇಳಿದೆ—**ತ ಏತಸ್ಯೈವ ಸರ್ವೇ ರೂಪಮಭವಂಸ್ತಸ್ಮಾದೇತ ಏತೇನಾಖ್ಯಾಯಂತೇ ಪ್ರಾಣಾಃ** (ಶತ. ಬ್ರಾ. ೧೪-೪-೩-೩೨) ಇಲ್ಲಿ ವಾಯುವು ಮುಖ್ಯವಾದ ಪ್ರಾಣವು. ಪ್ರಾಣ ಮತ್ತು ವಾಗಾದೀಂದ್ರಿಯಗಳು ಐಂದ್ರವಾಯವಗ್ರಹಸ್ವರೂಪವು; ಚಕ್ಷು (ಕಣ್ಣು) ಮತ್ತು ಮನಸ್ಸುಗಳು ಮೈತ್ರಾವರುಣಗ್ರಹಸ್ವರೂಪವು; ಶ್ರೋತ್ರಂ (ಕಿವಿ) ಜೀವಾತ್ಮಾ ಇವೆರಡೂ ಆಶ್ವಿನಗ್ರಹಸ್ವರೂಪವು.

ತಸ್ಯ ಹೈತಸ್ಯೈಂದ್ರವಾಯವಾಸ್ಯಾಪ್ಯೇಕೇಽನುಷ್ಟುಭೌ ಪುರೋನು-
ವಾಕ್ಯೇ ಕುರ್ವಂತಿ ಗಾಯತ್ರ್ಯೌ ಯಾಜ್ಯೇ । ವಾಕ್ಚ ವಾ ಏಷ
ಪ್ರಾಣಶ್ಚ ಗ್ರಹೋ ಯದೈಂದ್ರವಾಯವಸ್ತದಪಿ ಚ್ಛಂದೋಭ್ಯಾಂ
ಯಥಾಯಥಂ ಕ್ಲೃಪ್ಸ್ಯೇತೇ ಇತಿ ॥

ವಕ್ಷ್ಯಮಾಣಯಾಜ್ಯಾನುವಾಕ್ಯೋಪಯೋಗಿತ್ವೇನ ಪ್ರಾಣರೂಪತಯಾಪ್ರಶಸ್ಯೈಂದ್ರ-ವಾಯವಗ್ರಹಸ್ಯ ಯಾಜ್ಯಾನುವಾಕ್ಯೇ ವಿಧಾತುಂ ಪೂರ್ವಪಕ್ಷಮಾಹ । ಯೋಽಯಮೈಂದ್ರ-ವಾಯವಗ್ರಹಃ ಪೂರ್ವಮುಕ್ತಸ್ತಸ್ಯೈಕೇ ಹ ಯಾಜ್ಞಿಕಾ ಅನುಷ್ಟುಪ್‌ಛಂದಸ್ಕೇ ಋಚೌ ಪುರೋನುವಾಕ್ಯೇ ಕೃತ್ವಾ ಗಾಯತ್ರೀಛಂದಸ್ಕೇ ಋಚೌ ಯಾಜ್ಯೇ ಇತಿ ಕುರ್ವಂತಿ । ಅಪಿಶ-ಬ್ದೋಽನರ್ಥಕಃ । ಯದಾಪಿ ಕುರ್ವಂತೀತ್ಯೇವಂ ಪೂರ್ವಪಕ್ಷಾನುಪಾದಾರ್ಥೋ ವಾ । ತೇಷಾಂ ಪೂರ್ವಪಕ್ಷಿಣಾಮಭಿಪ್ರಾಯಂ ದರ್ಶಯತಿ । ಯೋಽಯಮೈಂದ್ರವಾಯವಗ್ರಹಃ ಸ ಏಷ ಪ್ರಾಣಾತ್ಮಕಸ್ತತ್ರೇಂದ್ರೋ ವಾಚೋ ವ್ಯಾಕರಣರೂಪಾಯಾಃ ಕರ್ತಾ ತಾಮಿಂದ್ರೋ ಮಧ್ಯ-ತೋಽವಕ್ರಮ್ಯ ವ್ಯಾಕರೋದಿತಿ ಶ್ರುತ್ಯಂತರಾದತ ಇಂದ್ರದ್ವಾರಾ ವಾಗ್ರೂಪತ್ವಂ । ಯಃ ಪ್ರಾಣಃ ಸ ವಾಯುರಿತಿ ಶ್ರುತ್ಯಂತರಾತ್ಪ್ರಾಣರೂಪತ್ವಂ। ತಾವುಭಾವಪಿ ಯಥೋಕ್ತಾಭ್ಯಾಮನುಷ್ಟುಪ್-ಗಾಯತ್ರೀಛಂದೋಭ್ಯಾಂ ಯಥಾಯಥಂ ಸ್ವಸ್ವಸಂಬಂಧಮನತಿಕ್ರಮ್ಯ ಕ್ಲೃಪ್ಸ್ಯೇತೇ ಕಲ್ಪಿತೌ ಭವಿಷ್ಯತಃ । ವಾಗ್ವಾ ಅನುಷ್ಟುಬಿತಿ ಶ್ರುತ್ಯಂತರಾದನುಷ್ಟುಪ್‌ಛಂದಸೋ ವಾಗ್ರೂಪತ್ವಂ । ಪ್ರಾಣೋ ವಾ ಗಾಯತ್ರೀತಿ ಶ್ರುತ್ಯಂತರಾದ್ಗಾಯತ್ರ್ಯಾಃ ಪ್ರಾಣರೂಪತ್ವಂ । ಅತ್ರ ಮಂತ್ರ-ವಿಶೇಷಾಃ ಶಾಖಾಂತರೇ ದ್ರಷ್ಟವ್ಯಾಃ । ಸೋಽಯಂ ಪೂರ್ವಪಕ್ಷಿಣಾಮಭಿಪ್ರಾಯಃ ॥

ಮುಂದೆ ಹೇಳಲ್ಪಡುವ ಯಾಜ್ಯಾನುವಾಕ್ಯಮಂತ್ರಗಳನ್ನು ವಿವರಿಸುವ ಸಂದರ್ಭದಲ್ಲಿ ಪ್ರಾಣಸ್ವರೂಪವೆಂದು ಹೇಳಲ್ಪಟ್ಟಿರುವ ಐಂದ್ರವಾಯವಗ್ರಹದ ಯಾಜ್ಯಾ ಮತ್ತು ಅನುವಾಕ್ಯಾಮಂತ್ರಗಳನ್ನು ವಿವರಿಸಲು ಉದ್ದೇಶಿಸಿ ಪೂರ್ವಪಕ್ಷವನ್ನು ಹೇಳುತ್ತಾರೆ. ಹಿಂದೆ ಹೇಳಲ್ಪಟ್ಟಿದ್ದ ಐಂದ್ರವಾಯವಗ್ರಹಕ್ಕೆ ಯಾಜ್ಯಾನುವಾಕ್ಯಾಮಂತ್ರಗಳನ್ನು ನಿರ್ದೇಶಿಸುವಾಗ ಕೆಲವುಂದಿ ಯಾಜ್ಞಿಕರು ಹೀಗೆ ಹೇಳುತ್ತಾರೆ—ಅನುಷ್ಟುಬ್ ಛಂದಸ್ಸಿನ ಎರಡು ಋಕ್ಕುಗಳನ್ನು ಪುರೋನುವಾಕ್ಯಾಮಂತ್ರಗಳನ್ನಾಗಿಯೂ ಗಾಯತ್ರೀಛಂದಸ್ಕವಾದ ಎರಡು ಋಕ್ಕುಗಳನ್ನು ಯಾಜ್ಯಾಮಂತ್ರಗಳನ್ನಾಗಿಯೂ ಪಠಿಸಬೇಕೆಂದು ಹೇಳುತ್ತಾರೆ. (ಇಲ್ಲಿ ಇರುವ ಅಪಿ ಎಂಬ ಶಬ್ದಕ್ಕೆ ವಿಶೇಷಾರ್ಥವೇನೂ ಇರುವುದಿಲ್ಲ). ಐಂದ್ರವಾಯುವಗ್ರಹದಲ್ಲಿ ಇಂದ್ರ ಮತ್ತು ವಾಯು ಎಂಬ ಇಬ್ಬರು ದೇವತೆಗಳಿರುವರಷ್ಟೆ. ಅವರಲ್ಲಿ ಇಂದ್ರನು ಪ್ರಾಣಾತ್ಮಕನು ಮತ್ತು ವಾಕ್ಯಕ್ಕೆ ವ್ಯಾಕರಣಕರ್ತನೂ ಆಗಿರುವನು. ಈ ವಿಷಯದಲ್ಲಿ—**ತಾಮಿಂದ್ರೋ ಮಧ್ಯತೋ ವಾಚಂ ವ್ಯಾಕರೋತ್** (ತೈ. ಸಂ. ೬-೪-೭-೪) ಎಂದು ತೈತ್ತಿರೀಯ ಶ್ರುತಿ ವಾಕ್ಯವಿರುವುದು ಆದ್ದರಿಂದ ಇಂದ್ರನ ಮೂಲಕವಾಗಿ ವಾಗ್ವ್ಯವಹಾರವು ನಡೆಯುವುದು. ಶರೀರದಲ್ಲಿ ಯಾವ ಪ್ರಾಣವು ನೆಲಸಿರುವುದೋ ಅದು ವಾಯುರೂಪದಿಂದಿರುವುದು. ಈ ಎರಡೂ ಎಂದರೆ ವಾಕ್ ಮತ್ತು ಪ್ರಾಣಗಳು ಅನುಷ್ಟುಪ್ ಮತ್ತು ಗಾಯತ್ರೀಛಂದಸ್ಸುಗಳ ಸಂಬಂಧವನ್ನು ಹೊಂದಿರುವವು **ವಾಗ್ವಾ ಅನುಷ್ಟುಪ್** ಎಂದರೆ ಅನುಷ್ಟುಪ್‌ಛಂದಸ್ಸು ವಾಗ್ರೂಪವಾಗಿಯೂ **ಪ್ರಾಣೋ ವಾ ಗಾಯತ್ರೀ** ಎಂದು ಗಾಯತ್ರೀಛಂದಸ್ಸು ಪ್ರಾಣರೂಪವಾಗಿಯೂ ಇರುವವು. ಆದುದರಿಂದ ವಾಕ್‌ಪ್ರಾಣರೂಪಗಳಾದ ಐಂದ್ರವಾಯುವಗ್ರಹಗಳ ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳು ಅನುಷ್ಟುಪ್ ಮತ್ತು ಗಾಯತ್ರೀಛಂದಸ್ಸಿನ ಮಂತ್ರಗಳಾಗಿರಬೇಕು.—ಇದು ಪೂರ್ವಪಕ್ಷದವರ ವಾದವು.

ತತ್ತಸ್ಮಾದೃತ್ಯಂ ವ್ಯೃದ್ಧಂ ವಾ ಏತದ್ಯಜ್ಞೇ ಕ್ರಿಯತೇ ಯತ್ರ ಪುರೋ-ಸುವಾಕ್ಯಾ ಜ್ಯಾಯಸೀ ಯಾಜ್ಯಾಯೈ ಯತ್ರ ವೈ ಯಾಜ್ಯಾ ಜ್ಯಾಯಸೀ ತತ್ಸಮೃದ್ಧಮಥೋ ಯತ್ರ ಸಮೇ ಯಸ್ಯೋ ತತ್ಕಾಮಾಯ ತಥಾ ಕುರ್ಯಾತ್ಪ್ರಾಣಸ್ಯ ಚ ವಾಚಶ್ಚಾತ್ರೈವ ತದುಪಾಪ್ತಂ ।

ಪೂರ್ವಪಕ್ಷನಿರಾಕರಣಪೂರ್ವಕಸಿದ್ಧಾಂತಂ ದರ್ಶಯತಿ । ತತ್ಪೂರ್ವಪಕ್ಷಮತಂ ನಾದ-ರಣೀಯಂ । ತತ್ರ ಹೇತುರುಚ್ಯತೇ । ಯಸ್ಮಿನ್ಕರ್ಮಣಿ ಯಾಜ್ಯಾಯಾಃ ಸಕಾಶಾತ್ ಪುರೋ-ನುವಾಕ್ಯಾಕ್ಷರೈರಭ್ಯಧಿಕಾ ತತ್ಕರ್ಮ ವ್ಯೃದ್ಧಂ ಸಮೃದ್ಧಿರಹಿತಂ ॥ ಪೂರ್ವಪಕ್ಷಿಣಶ್ಚಾತ್ರ ನ್ಯೂನಾಂ ಯಾಜ್ಯಾಂ ಪುರೋನುವಾಕ್ಯಾಮಧಿಕಾಂ ಕುರ್ವಂತಿ ॥ ತಸ್ಮಾದೇತನ್ಮತಮಯುಕ್ತಂ ॥ ಯತ್ರ ವೈ ಯಸ್ಮಿಂಸ್ತು ಕರ್ಮಣಿ ಪುರೋನುವಾಕ್ಯಾಯಾಃ ಸಕಾಶಾದಭ್ಯಧಿಕಾ ಯಾಜ್ಯಾ ಭವತಿ ತತ್ಕರ್ಮ ಸಮೃದ್ಧಂ । ಅಪಿ ಚ ಯತ್ರ ಕರ್ಮಣಿ ಯಾಜ್ಯಾನುವಾಕ್ಯೇ ಸಮೇ ಭವತಸ್ತ-ದಪಿ ಕರ್ಮಸಮೃದ್ಧಂ । ಸಾಮ್ಯಪಕ್ಷೇಽನ್ಯೋಽಪಿ ಗುಣೋಽಸ್ತಿ ತತ್ಕಥಮಿತಿ ತದುಚ್ಯತೇ । ಪ್ರಾಣ-ಸ್ಯಚ ವಾಚಶ್ಚ ಪ್ರಾಣವಾಚೋರ್ಮಧ್ಯೇ ಯಸ್ಯ ಯಸ್ಯ ವಸ್ತುನಃ ಕಾಮಾಯಾಪೇಕ್ಷಿತಫಲ-ಸಿದ್ಧಯೇ ತತ್ತಥಾಕುರ್ಯಾತ್ ತೇನ ಪೂರ್ವೋಕ್ತಪ್ರಕಾರೇಣ ಅನುಷ್ಟುಬ್ಜ್ಯಾಯತ್ರೀಜನ್ಯಮ-ನುಷ್ಠಾನಂ ಪೂರ್ವಪಕ್ಷೀ ಕುರ್ವೀತ ತತ್ಸರ್ವಂ ವಿಫಲಂ । ತ(ಅ)ತ್ರೈವ ಯಾಜ್ಯಾನುವಾ-ಕ್ಯಯೋಃ ಸಾಮ್ಯಾನುಷ್ಠಾನ ಏವೋಪಾಪ್ತಂ ಶೀಘ್ರಂ ಪ್ರಾಪ್ತಂ ಭವತಿ ॥ ತಸ್ಮಾತ್ಸಾಮ್ಯಪಕ್ಷಏವ ಆದರಣೀಯ ಇತ್ಯರ್ಥಃ ॥

ಈ ಪೂರ್ವಪಕ್ಷದವರ ವಾದವು ಸರಿಯಲ್ಲವೆಂದು ಹೇಳಿ ಅದನ್ನು ನಿರಾಕರಿಸುತ್ತಾರೆ. ಯಾವ ಕರ್ಮದಲ್ಲಿ ಯಾಜ್ಯಾ ಮಂತ್ರದ ಅಕ್ಷರಗಳಿಗಿಂತ ಪುರೋನುವಾಕ್ಯಾಮಂತ್ರದ ಅಕ್ಷರಗಳು ಅಧಿಕವಾಗಿರುವವೋ ಆ ಕರ್ಮವು ಯಜಮಾನನಿಗೆ ಸಮೃದ್ಧಿಯನ್ನುಂಟುಮಾಡುವುದಿಲ್ಲ. ಮೇಲೆ ಹೇಳಿದ ಪೂರ್ವಪಕ್ಷವಾದದಲ್ಲಿ ಪುರೋನುವಾಕ್ಯಾಮಂತ್ರದ ಅಕ್ಷರಸಂಖ್ಯೆಯು ಯಾಜ್ಯಾ ಮಂತ್ರದ ಅಕ್ಷರಸಂಖ್ಯೆಗಿಂತ ಅಧಿಕವಾಗಿರುವುದರಿಂದ, ಆ ವಿಧವು ಅಯುಕ್ತವು; ಯಾವ ಕರ್ಮದಲ್ಲಿ ಪುರೋನುವಾಕ್ಯಾಮಂತ್ರಕ್ಕಿಂತ ಯಾಜ್ಯಾಮಂತ್ರವು ಅಕ್ಷರಸಂಖ್ಯೆಯಲ್ಲಿ ಹೆಚ್ಚಾಗಿರುವುದೋ ಆ ಕರ್ಮವು ಸಮೃದ್ಧಿಯನ್ನುಂಟುಮಾಡುವುದು. ಮತ್ತು ಯಾವ ಕರ್ಮದಲ್ಲಿ ಯಾಜ್ಯಾ ಮತ್ತು ಪುರೋನುವಾಕ್ಯಾಮಂತ್ರಗಳು ಅಕ್ಷರಸಂಖ್ಯೆಯಲ್ಲಿ ಸಮವಾಗಿರುವವೋ ಆ ಕರ್ಮವೂ ಸಹ ಸಮೃದ್ಧಿಯನ್ನೇ ಉಂಟುಮಾಡುವುದು. ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳು ಅಕ್ಷರಸಂಖ್ಯೆಯು ಸಮವಾಗಿರುವ ವಿಷಯದಲ್ಲಿ ಇನ್ನೂ ಒಂದು ಅನುಕೂಲವಿರುವುದು. **ಪ್ರಾಣಸ್ಯ ಚ ವಾಚಶ್ಚ ಕಾಮಾಯ**—ಎಂದರೆ ಪ್ರಾಣ ಮತ್ತು ವಾಕ್ಕುಗಳ ಮಧ್ಯದಲ್ಲಿ ಯಾವ ಯಾವ ಅಭಿಲಾಷೆಗಳಿರುವವೋ ಅವುಗಳು ಸಿದ್ಧಿಸುವವು. ಆದ್ದರಿಂದ ಎರಡು ಮಂತ್ರಗಳ ಅಕ್ಷರಸಂಖ್ಯೆಯು ಸಮವಾಗಿರುವಂತೆ ಪ್ರಯತ್ನ ಮಾಡಬೇಕು. ಈ ಕಾರಣಗಳಿಗಾಗಿ ಹಿಂದೆ ಹೇಳಿದ ಪೂರ್ವಪಕ್ಷವಾದವು ನಿಷ್ಫಲವೆನಿಸುವುದು. ಸಮಸಂಖ್ಯೆಯ ಅಕ್ಷರಗಳುಳ್ಳ ಮಂತ್ರಪ್ರಯೋಗದಿಂದ ಯಜಮಾನನ ಇಷ್ಟಾರ್ಥಸಿದ್ಧಿಯು ಶೀಘ್ರವಾಗಿಯೇ ಫಲಿಸುವುದು ಆದ್ದರಿಂದ ಸಾಧ್ಯವಾದಷ್ಟಿಗೂ ಸಮಸಂಖ್ಯೆಯ ಅಕ್ಷರಗಳುಳ್ಳ ಮಂತ್ರಗಳನ್ನೇ ಯಾವಾಗಲೂ ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳನ್ನಾಗಿ ಉಪಯೋಗಿಸಬೇಕು.

**ವಾಯವ್ಯಾ ಪೂರ್ವಾ ಪುರೋನುವಾಕ್ಯೈಂದ್ರವಾಯವ್ಯುತ್ತರೈವಂ ಯಾಜ್ಯಯೋಃ ಸಾ ಯಾ ವಾಯವ್ಯಾ ತಯಾ ಪ್ರಾಣಂ ಕಲ್ಪಯತಿ ವಾಯುರ್ಹಿ ಪ್ರಾಣೋಽಥ ಯೈಂದ್ರವಾಯವೀ ತಸ್ಯೈ ಯದೈಂದ್ರಂ ಪದಂ ತೇನ ವಾಚಂ ಕಲ್ಪಯತಿ ವಾಗ್ಘ್ಯೈಂದ್ರ್ಯಥೋ ತಂ ಕಾಮಮಾಪ್ನೋತಿ ಯಃ ಪ್ರಾಣೇ ಚ ವಾಚಿ ಚ ನ ಯಜ್ಞೇ ವಿಷಮಂ ಕರೋತಿ ।**

ಸಾಮ್ಯಪಕ್ಷೇ ಪೂರ್ವಪಕ್ಷ್ಯಭಿಪ್ರೇತಂ ಪ್ರಯೋಜನಂ ಕಥಂ ಸಿಧ್ಯೇದಿತ್ಯಾಶಂಕ್ಯಾಹ— ದ್ವಯೋಃ ಪುರೋನುವಾಕ್ಯಯೋರ್ಮಧ್ಯೇ ಯಾ ಪೂರ್ವಾ ಪುರೋನುವಾಕ್ಯಾ ಸಾ ವಾಯವ್ಯಾ ವಾಯುದೇವತಾಕಾ ವಾಯವಾಯಾಹಿ ದರ್ಶತ [೧-೧-೨] ಇತ್ಯಸ್ಯಾಮೃಚಿ ವಾಯೋಃ ಶ್ರವಣಾತ್॥ ಯಾ ತೂತ್ತರಾ ಪುರೋನುವಾಕ್ಯಾ ಸೇಯಮೈಂದ್ರವಾಯವೀ । ಇಂದ್ರ ವಾಯೂ ಇಮೇ ಸುತಾಃ [೧-೧-೪] ಇತ್ಯಸ್ಯಾಮೃಚೀಂದ್ರವಾಯ್ವೋಃ ಶ್ರವಣಾತ್ । ಏವಂ ಯಾಜ್ಯಯೋರಪಿ ದ್ರಷ್ಟವ್ಯಂ । ಉಭಯೋರ್ಯಾಜ್ಯಯೋರ್ಮಧ್ಯೇ ಯಾ ಪೂರ್ವಾ ಸಾ ವಾಯವ್ಯಾ । ಅಗ್ರಂ ಪಿಬಾಮಧೂನಾಂ [೪-೪೬-೧] ಇತ್ಯಸ್ಯಾಮೃಚಿ ಸುತಂ ವಾಯೋ ದಿವಿಷ್ಟಿಷ್ವಿತಿ ವಾಯೋಃ ಶ್ರವಣಾತ್ ॥ ಯೋತ್ತರಾ ಯಾಜ್ಯಾ ಸೇಂದ್ರವಾಯವೀ । ಶತೇನಾನೋ ಅಭಿಷ್ಟಿಭಿಃ [೪-೪೬-೨] ಇತ್ಯಸ್ಯಾಮೃಚಿ ನಿಯುತ್ವಾಂ ಇಂದ್ರಸಾರಥಿರಿತೀಂದ್ರಃ ಶ್ರೂಯತೇ ವಾಯೋಸುತಸ್ಯೇತಿ ವಾಯುರಪಿ ಶ್ರೂಯತೇ । ತಸ್ಮಾದಿಯಮೈಂದ್ರವಾಯವೀ ॥ ಏವಂ ಸತಿ ಯಾ ವಾಯವ್ಯಾ ಪುರೋನುವಾಕ್ಯಾ ಯಾಜ್ಯಾ ಚ ತಯಾ ಪ್ರಾಣಃ ಕಲ್ಪಿತಃ ಸ್ವವ್ಯಾಪಾರಸಮರ್ಥೋ ಭವತಿ ಯಃ ಪ್ರಾಣಃ ಸ ವಾಯುರಿತಿ ಶ್ರುತ್ಯಂತರೇಣ ವಾಯುಪ್ರಾಣಯೋರೇಕತ್ವಸ್ಯ ಪೂರ್ವಪಕ್ಷಿಣಾಪ್ಯಂಗೀಕರ್ತವ್ಯತ್ವಾತ್ ॥ ಅಥ ಯೈಂದ್ರವಾಯವೀ ಪುರೋನುವಾಕ್ಯಾ ಯಾ ಯಾಜ್ಯಾ ವಾ ತಸ್ಯೈ ತಸ್ಯಾಮುಭಯವಿಧಾಯಾಂ ಯದೈಂದ್ರಮಿಂದ್ರಸಂಬನ್ಧಿ ಪದಂ ವಿದ್ಯತೇ ತೇನ ಪದೇನ ವಾಚಂ ಕಲ್ಪಯತಿ ಸಮರ್ಥಾಂ ಕರೋತಿ । ಹಿ ಯಸ್ಮಾತ್ಕಾರಣಾದ್ವಾಗೈಂದ್ರೀಂದ್ರಸ್ಯ ವ್ಯಾಕರಣಕರ್ತೃತ್ವಾತ್ ॥ ತಸ್ಮಾದ್ವಾಚೌ ಸಾಮರ್ಥ್ಯಂ ಭವತಿ । ಏವಮನುತಿಷ್ಠನ್ಪುರುಷೋ ವಾಕ್ಪ್ರಾಣಯೋರ್ಯಃ ಕಾಮೋಽಸ್ತಿ ತಂ ಪ್ರಾಪ್ನೋತಿ ಯಜ್ಞೇ ಚ ಛಂದಃಸಾಮ್ಯಂ ವಿಷಮಮನುಷ್ಠಾನಂ ನ ಕರೋತಿ ॥

ಸಮಸಂಖ್ಯೆಯ ಅಕ್ಷರಗಳುಳ್ಳ ಯಾಜ್ಯಾಪುರೋನುವಾಕ್ಯಾಮಂತ್ರಗಳ ಪ್ರಯೋಗದಿಂದ ಪ್ರಯೋಜನವು ಹೇಗೆ ಲಭಿಸುವುದು ಎಂಬುದನ್ನು ವಿಶದಪಡಿಸುವರು. ಎರಡು ಪುರೋನುವಾಕ್ಯಗಳಲ್ಲಿ (ವಾಯು ಮತ್ತು ಇಂದ್ರ ಎಂಬ ಎರಡು ದೇವತೆಗಳಿಗೆ ಎರಡು ಪುರೋನುವಾಕ್ಯಗಳು) ಮೊದಲನೆಯ ಪುರೋನುವಾಕ್ಯವು ವಾಯುದೇವತಾಕವು. **ವಾಯವಾ ಯಾಹಿ ದರ್ಶತ** (ಋ. ಸಂ. ೧-೨-೧) ಎಂಬುದೇ ಆ ಮಂತ್ರವು. ಇದರಲ್ಲಿ ವಾಯುದೇವತೆಯ ಪ್ರಶಂಸೆಯು ಮಾತ್ರ ಇದೆ. ಎರಡನೆಯ ಪುರೋನುವಾಕ್ಯದ **ಇಂದ್ರವಾಯೂ ಇಮೇ ಸುತಾಃ** (ಋ. ಸಂ. ೧-೨-೪) ಎಂಬ ಮಂತ್ರದಲ್ಲಿ ಇಂದ್ರ ಮತ್ತು ವಾಯುದೇವತೆಗಳಿಬ್ಬರ ಪ್ರಶಂಸೆಯೂ ಇರುವುದು. ಆದ್ದರಿಂದ ಈ ಮಂತ್ರವು ಐಂದ್ರವಾಯವೀ ಎನಿಸುವುದು. ಇದರಂತೆಯೇ

ಯಾಜ್ಯಾಮಂತ್ರಗಳಲ್ಲಿಯೂ ಕ್ರಮವು ಇರುವುದು. ಹೇಗೆಂದರೆ - **ಅಯಂ ಓಬಾ ಮಧೂನಾಂ** (ಋ. ಸಂ. ೪-೪೬-೧) ಎಂಬ ಯಾಜ್ಯಾಮಂತ್ರದ ಮೊದಲನೆಯ ಋಕ್ಕಿನಲ್ಲಿ **ಸುತಂ ವಾಯೋ ದಿವಿಷ್ಟಿಷು** ಎಂದು ವಾಯುವಿನ ಹೆಸರು ಮಾತ್ರ ಇರುವುದು ಎರಡನೆಯ ಯಾಜ್ಯಾಮಂತ್ರವಾದ **ಶತೇನಾ ನೋ ಅಭಿಷ್ಟಿಭಿಃ** (ಋ. ಸಂ. ೪-೪೬-೨) ಎಂಬ ಋಕ್ಕಿನಲ್ಲಿ **ನಿಯುತ್ವಾ ಇಂದ್ರಸಾರಥಿಃ** ಮತ್ತು **ವಾಯೋ ಸುತಸ್ಯ** ಎಂದು ಇಂದ್ರ ಮತ್ತು ವಾಯುದೇವತೆಗಳಿಬ್ಬರ ಹೆಸರುಗಳೂ ಇರುವವು. ಆದುದರಿಂದ ಈ ಋಕ್ಕಿಗೆ ಐಂದ್ರವಾಯವೀ ಎಂದು ಹೆಸರು. ಮಂತ್ರಗಳು ಹೀಗಿರುವುದರಿಂದ, ಎಂದರೆ ಮೊದಲನೆಯ ಪುರೋನುವಾಕ್ಯಾಮಂತ್ರವೂ, ಮೊದಲನೇ ಯಾಜ್ಯಾಮಂತ್ರವೂ ವಾಯುದೇವತಾಕವಾಗಿ ಮಾತ್ರವಿರುವುದರಿಂದ ವಾಯುವಿನ ಸ್ವವ್ಯಾಪಾರವಾದ ಪ್ರಾಣಕಲ್ಪನೆಯು (ನೆಲೆಸುವಿಕೆ) ಸ್ಥಿರವಾಗಿ ಇದ್ದಂತಾಯಿತು. **ಯಃ ಪ್ರಾಣಃ ಸ ವಾಯುಃ** ಎಂದು ಶ್ರುತಿವಾಕ್ಯವಿರುವುದರಿಂದಲೂ ಇದನ್ನು ಪೂರ್ವಪಕ್ಷಿಗಳೂ ಅಂಗೀಕರಿಸುವುದರಿಂದಲೂ ಈ ಸಮರ್ಥನೆಯು ಯುಕ್ತವಾಗಿರುವುದು. ಇನ್ನು ಇಂದ್ರ ಮತ್ತು ವಾಯುದೇವತೆಗಳಿಬ್ಬರನ್ನೂ ಸ್ತುತಿಸುವ, ಐಂದ್ರವಾಯವೀ ಎಂದು ಹೇಳಲ್ಪಡುವ ಪುರೋನುವಾಕ್ಯಾ ಮತ್ತು ಯಾಜ್ಯಾಮಂತ್ರಗಳಲ್ಲಿಯೂ ಇಂದ್ರ ಎಂಬ ಪದದ ಪ್ರಯೋಗವಿರುವುದರಿಂದ ಅದು ವಾಕ್ಸಾಮರ್ಥ್ಯವನ್ನುಂಟುಮಾಡುವುದು. ಏಕೆಂದರೆ ಹಿಂದೆ ಹೇಳಿದಂತೆ ಇಂದ್ರನು ವ್ಯಾಕರಣಕರ್ತೃವಾಗಿರುವನು. ಮಂತ್ರಗಳಲ್ಲಿ ರೀತಿ ಇಂದ್ರವಾಯುಗಳ ಸಂಬಂಧವಿರುವುದರಿಂದ ಯಜ್ಞಮಾಡುವ ಪುರುಷನಿಗೆ ವಾಕ್ ಪ್ರಾಣಗಳ ಸಂಬಂಧವಾದ ಯಾವ ಇಷ್ಟಾರ್ಥಗಳಿರುವವೋ ಅವೆಲ್ಲವೂ ಸಿದ್ಧಿಸುವವು. ಆದುದರಿಂದ ಈ ವಿಷಯಗಳೆಲ್ಲವನ್ನೂ ಎಂದರೆ ಛಂದಸ್ಸುಗಳ ಸಾಮ್ಯವನ್ನು ಅವುಗಳ ಅನುಷ್ಠಾನವನ್ನೂ ತಿಳಿದು ಅದರಂತೆ ಆಚರಿಸುವ ಪುರುಷನು ವಾಕ್ಪ್ರಾಣಗಳಿಗೆ ಸಂಬಂಧಪಡುವ ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು.

## *English Translation*

**(On the meaning of the libations from the Aindravayava, Maitravaruna, and As'vina Grahas. The two Anuvakyas for the Aindravayava Graha.)**

The Soma jars (graha) which belong to two deities are the vital airs. The Aindravayava jar is speech and breath, the Maitravaruna jar is eye and mind; the As'vina jar is ear and soul. Soffie (sacrificial priests) use two verses in the Anushtubh metre as Puronuvakyas, and two in the Gayatri metre as Yajyas when offering the Soma juice from the Aindravayava jar. As the Aindravayava jar represents speech and breath, thus the proper metres (Anushtubh being speech, and Gayatry breath) will be applied. But this practice ought not to be observed. For where the Puronuvakya mantra exceeds in syllables the Yajya mantra, there is no success in the sacrifice, but where the the Yajya exceeds the puronuvakya in syllables there is success.

Likewise success is not obtained (by using the same metres for Anuvakya and Yajya mantras.) In order to obtain any desire whatever, referring to speech and breath, the Hotar ought to do so (i. e. to repeat two verses in the Anustubh metre as Anuvakyas, and two in the Gayatri metres as Yajya mantras). In this way all he disres will be fulfilled. The first Puronuvakya belongs te Vayu

(1, 2, 1) the first Puronuvakya belongs to Vayu (1, 2, 1) The second to Indra and Vayu (1, 2, 4). By that Yajya which belongs to Vayu, the Hotar makes (produces) breath in the sacrificer. For Vayu wind is breath and by means of that pada (foot) of the Indra-Vayu-Yajya mantra, which refers to breath and speech, without producing any inequality (by having the one set of mantras too long, the other too short) in the sacrifice.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ನವಮಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



## ಅಥ ನವಮಾಧ್ಯಾಯೇ ತೃತೀಯಃ ಖಂಡಃ

### ಒಂಭತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಐಂದ್ರವಾಯವ, ಮೈತ್ರಾವರುಣ, ಆಶ್ವಿನಗ್ರಹಪಾತ್ರೆಗಳಿಂದ ಹೋತೃವು ಸೋಮಪಾನಮಾಡುವಾಗ ಆಚರಿಸಬೇಕಾದ ವಿಧಿಗಳು. ಈ ಕರ್ಮಗಳಲ್ಲಿ ಪಠಿಸಬೇಕಾದ ಮಂತ್ರಗಳು ]

**ಪ್ರಾಣಾ ವೈ ದ್ವಿದೇವತ್ಯಾ ಏಕಪಾತ್ರಾ ಗೃಹ್ಯಂತೇ ತಸ್ಮಾತ್ಪ್ರಾಣಾ ಏಕನಾಮಾನೋ ದ್ವಿಪಾತ್ರಾ ಹೂಯಂತೇ ತಸ್ಮಾತ್ಪ್ರಾಣಾ ದ್ವಂದ್ವಂ ।**

ಅಥ ದ್ವಿದೈವತ್ಯಾನಾಮೈಂದ್ರವಾಯವಮೈತ್ರಾವರುಣಾಶ್ವಿನಗ್ರಹಾಣಾಂ ತ್ರಯಾಣಾಂ ಗ್ರಹಣಹೋಮಯೋಃ ಪಾತ್ರವೈಷಮ್ಯಂ ವಿಧತ್ತೇ—

ದ್ವೇ ದೇವತೇ ಯುಗ್ಮರೂಪೇ ಯೇಷಾಂ ಗ್ರಹಾಣಾಂ ತೇ ದ್ವಿದೇವತ್ಯಾಃ । ಇಂದ್ರಶ್ಚ ವಾಯುಶ್ಚೇತ್ಯೇಕಂ ಯುಗ್ಮಂ ॥ ಮಿತ್ರಶ್ಚ ವರುಣಶ್ಚೇತಿ ದ್ವಿತೀಯಂ ಯುಗ್ಮಂ ಯಾವಶ್ವಿನಾ ತಾ ತೃತೀಯಂ ಯುಗ್ಮಂ ॥ ತ ಏತೇ ದ್ವಿದೇವತ್ಯಗ್ರಹಾಃ ಪ್ರಾಣಾ ವೈ, ಇಂದ್ರಿಯರೂಪಾ ಏವ, ವಾಗ್ವಾ ಐಂದ್ರವಾಯವಶ್ಚಕ್ಷುರ್ಮೈತ್ರಾವರುಣಃ ಶ್ರೋತ್ರಮಾಶ್ವಿನ ಇತಿ ಶ್ರುತ್ಯಂತರಾತ್ ॥

ತೇ ಚ ಗ್ರಹಾ ಏಕಪಾತ್ರಾ ಗೃಹೀತವ್ಯಾ ಇಂದ್ರವಾಯ್ವೋರೇಕಸ್ಮಿನ್ಪಾತ್ರೇ ಗ್ರಹಣಂ ಮಿತ್ರಾವರುಣಯೋರೇಕಸ್ಮಿನ್ನಶ್ವಿನೋರೇಕಸ್ಮಿನ್ನಿತಿ ॥ ಯಸ್ಮಾತ್ಪ್ರಾಣರೂಪಾಣಾಂ ಗ್ರಹಾಣಾಂ ಏಕಪಾತ್ರತ್ವಂ ತಸ್ಮಾದ್ವಾಕ್ಚಕ್ಷುಃ ಶ್ರೋತ್ರರೂಪಾಃ ಪ್ರಾಣಾ ಏಕನಾಮಾನಃ ಪ್ರಾಣಾ ಇತ್ಯೇವಮೇತೇಷಾಂ ನಾಮ ॥ ತೇ ಚ ಗ್ರಹಾ ಹೋಮಕಾಲೇ ದ್ವಿಪಾತ್ರಾ ಹೋತವ್ಯಾಸ್ತತ್ರದ್ಗ್ರಹಣಪಾತ್ರೇಣಾಧ್ವರ್ಯುರ್ಜುಹೋತಿ ಪ್ರತಿಪ್ರಸ್ಥಾತಾ ಪಾತ್ರಾಂತರೇಣ ಜುಹೋತೀತಿ ॥ ಯಸ್ಮಾದ್ಧೋಮಕಾಲೇ ಪಾತ್ರದ್ವಯಂ ತಸ್ಮಾಚ್ಚಕ್ಷುರಾದಯಃ ಪ್ರಾಣಾಃ ಸ್ವಸ್ವಗೋಲಕೇಷು ದ್ವಂದ್ವಂ ದ್ವೌ ದ್ವೌ ಭೂತ್ವಾ ವರ್ತಂತೇ ॥ ಅಯಮರ್ಥಃ ಶ್ರುತ್ಯಂತರೇಣ ಪ್ರಶ್ನೋತ್ತರಾಭ್ಯಾಮಾಮ್ನಾತಃ 'ಬ್ರಹ್ಮವಾದಿನೋ ವದಂತಿ, ತಸ್ಮಾತ್ಸತ್ಯಾದೇಕಪಾತ್ರಾ ದ್ವಿದೇವತ್ಯಾ ಗೃಹ್ಯಂತೇ ದ್ವಿಪಾತ್ರಾ ಹೂಯಂತ ಇತಿ ಯದೇಕಪಾತ್ರಾ ಗೃಹ್ಯಂತೇ ತಸ್ಮಾದೇಕೋಽಂತರತಃ ಪ್ರಾಣೋ ದ್ವಿಪಾತ್ರಾ ಹೂಯಂತೇ ತಸ್ಮಾದ್ದ್ವೌದ್ವೌ ಬಹಿಷ್ಟಾಃ ಪ್ರಾಣಾಃ' ಇತಿ । ಹೋಮಕಾಲೇ ದ್ವಿಪಾತ್ರತ್ವಮಾಪಸ್ತಂಬೇನ ಸ್ಪಷ್ಟೀಕೃತಂ "ಹವಿರ್ಧಾನಂ ಗಚ್ಛನ್ಸಂಪ್ರೇಷ್ಯತಿ ವಾಯವ ಇಂದ್ರವಾಯುಭ್ಯಾಮನುಬ್ರೂಹೀತ್ಯುಪಯಾಮಗೃಹೀತೋಽಸಿ ವಾಕ್ಷಸದಸೀತ್ಯಾದಿತ್ಯಪಾತ್ರೇಣ ಪ್ರತಿಪ್ರಸ್ಥಾತಾ ದ್ರೋಣಕಲಶಾದೈಂದ್ರವಾಯವಸ್ಯ ಪ್ರತಿನಿಗ್ರಾಹ್ಯಂ ಗೃಹೀತ್ವಾ ನ ಸಾದಯತ್ಯೈಂದ್ರವಾಯವಮಾದಾಯಾಧ್ವರ್ಯುರ್ದ್ರೋಣಕಲಶಾಚ್ಚ ಪರಿಪ್ಲವಯಾ (ಯ) ರಾಜಾನಮುಭೌ ನಿಷ್ಕ್ರಮ್ಯ ದಕ್ಷಿಣತೋಽವಸ್ಥಾಯ ದಕ್ಷಿಣಂ ಪರಿಧಿಸಂಧಿಮನ್ವವಹೃತ್ಯಾಧ್ವರೋ ಯಜ್ಞೋಽಯಮಸ್ತು ದೇವಾ ಇತಿ ಪರಿಪ್ಲವಯಾಘಾರಮಾಘಾರಯತ್ಯಾಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೇಷ್ಯತಿ ವಾಯವ ಇಂದ್ರವಾಯುಭ್ಯಾಂ ಪ್ರೇಷ್ಯ ವಷಟ್ಕೃತೇ ಜುಹೋತ್ಯೇವಮುತ್ತರಾಭ್ಯಾಂ ಗ್ರಹಾಭ್ಯಾಂ ಪ್ರಚರತ" ಇತಿ ।

ಈಗ ದ್ವಿದೇವತೆಗಳ (ಇಬ್ಬಿಬ್ಬರು ದೇವತೆಗಳು ಒಟ್ಟಿಗೆ ಸೇರಿರುವ) ಎಂದರೆ ಐಂದ್ರವಾಯವ, ಮೈತ್ರಾವರುಣ, ಆಶ್ವಿನ ಎಂಬ ಮೂರುವಿಧ ದ್ವಿದೇವತೆಗಳ ಸಂಬಂಧವಾದ ಗ್ರಹ (ಸೋಮಪಾನಪಾತ್ರೆ) ಮತ್ತು ಹೋಮವಿಧಾನಗಳಲ್ಲಿ ಇರುವ ವಿವಿಧ ಕ್ರಮಗಳನ್ನು ವಿವರಿಸುತ್ತಾರೆ. ದ್ವಿದೇವತ್ಯ ಎಂದರೆ ಸೋಮಪಾನ ಅಥವಾ ಹೋಮಮಾಡುವಾಗ ಇಬ್ಬರು ದೇವತೆಗಳಿಗೂ ಒಂದೇ ಪಾತ್ರೆಯನ್ನು ಉಪಯೋಗಿಸುವುದರಿಂದ ಆ ಇಬ್ಬರು ದೇವತೆಗಳಿಗೆ ದ್ವಿದೇವತ್ಯ ಎಂದು ಹೆಸರು. ಈ ದ್ವಿದೇವತೆಗಳು ಯಾರಾರೆಂದರೆ—ಇಂದ್ರ ಮತ್ತು ವಾಯುಗಳು ಸೇರಿ ಒಂದುಗುಂಪು. ಇವರಿಗೆ ಐಂದ್ರವಾಯವ ಎಂದು ಹೆಸರು; ಹಾಗೆಯೇ ಮಿತ್ರ ಮತ್ತು ವರುಣ ಎಂಬಿಬ್ಬರೂ ಸೇರಿ ಮತ್ತೊಂದುಗುಂಪು. ಇವರಿಗೆ ಮೈತ್ರಾವರುಣ ಎಂದು ಹೆಸರು; ಯಾವಾಗಲೂ ಜತೆಯಲ್ಲಿಯೇ ಇರುವ (ಇಬ್ಬರು) ಅಶ್ವಿನೀದೇವತೆಗಳದೇ ಮತ್ತೊಂದುಗುಂಪು. ಇವರಿಗೆ ಆಶ್ವಿನ ಎಂದು ಹೆಸರು. ಈರೀತಿ ದ್ವಿದೇವತೆಗಳ ಮೂರುಗುಂಪು ಇರುವುದು. ಪ್ರಾಣಗಳು ಇಂದ್ರಿಯರೂಪಗಳಾಗಿರುವವು ಎಂದರೆ ಇಂದ್ರಿಯಗಳಾದ ವಾಕ್, ಚಕ್ಷು (ಕಣ್ಣು) ಶ್ರೋತ್ರ (ಕಿವಿ) ಇವೆಲ್ಲವೂ ಇಲ್ಲಿ ಪ್ರಾಣಗಳೆಂದೇ ಕರೆಯಲ್ಪಟ್ಟಿರುವವು. ಈ ವಿಷಯದಲ್ಲಿ—**ವಾಗ್ವಾ ಐಂದ್ರವಾಯವಶ್ಚಕ್ಷುರ್ಮೈತ್ರಾವರುಣಃ ಶ್ರೋತ್ರಮಾಶ್ವಿನಃ** (ತೈ. ಸಂ. ೬-೪-೯-೪) ಎಂದು ಶ್ರುತಿವಾಕ್ಯವಿರುವುದು. ಒಂದು ಗುಂಪಿನಲ್ಲಿ ಇಬ್ಬಿಬ್ಬರು ದೇವತೆಗಳಿದ್ದರೂ ಇಬ್ಬರು ದೇವತೆಗಳಿಗೂ ಒಂದೇ ಪಾತ್ರೆಯನ್ನು ಉಪಯೋಗಿಸುವರು. ಇಂದ್ರ ಮತ್ತು ವಾಯುಗಳಿಗೆ ಒಂದು ಪಾತ್ರೆ; ಮಿತ್ರ ಮತ್ತು ವರುಣರಿಗೆ ಒಂದು ಪಾತ್ರೆ; ಅಶ್ವಿನಿದೇವತೆಗಳಿಗೆ ಒಂದು ಪಾತ್ರೆ ಪ್ರಾಣರೂಪವಾದ ಗ್ರಹಗಳಿಗೆ ಒಂದೇಪಾತ್ರೆಯಿರುವುದರಿಂದ ವಾಕ್, ಚಕ್ಷು, ಶ್ರೋತ್ರ ರೂಪವಾದ ಎಲ್ಲಾ ಪ್ರಾಣಗಳಿಗೂ (ಇಂದ್ರಿಯಗಳಿಗೂ) ಪ್ರಾಣ

ಎಂಬ ಒಂದೇ ಹೆಸರಿರುವುದು. ಆದರೆ ಹೋಮಕಾಲದಲ್ಲಿ ಈ ದ್ವಿದೇವತೆಗಳಿಗೆ (ಪ್ರತಿಯೊಂದು ಗುಂಪಿಗೂ) ಎರಡು ಪಾತ್ರೆಗಳನ್ನು ಉಪಯೋಗಿಸುವರು. ಒಂದು ಪಾತ್ರೆಯಿಂದ ಅಧ್ವರ್ಯುವೂ ಇನ್ನೊಂದರಿಂದ ಅಧ್ವರ್ಯುವಿನ ಸಹಾಯಕನಾದ ಪ್ರತಿಪ್ರಸ್ಥಾತೃವೆಂಬ ಋತ್ವಿಜನೂ ಹೋಮಮಾಡುವರು. ಹೀಗೆ ಎರಡೆರಡು ಪಾತ್ರೆಗಳಿಂದ ಹೋಮಮಾಡುವ ರೂಢಿಯಿರುವುದರಿಂದ ಪ್ರತಿಯೊಂದು ಗುಂಪಿಗೂ ಪ್ರಾಣಭೂತವಾದ ಇಂದ್ರಿಯಗಳು ಎರಡೆರಡು ಇರುವವು. ಹೇಗೆಂದರೆ ಕಣ್ಣುಗಳು ಎರಡು, ಕಿವಿಗಳು ಎರಡು ಇತ್ಯಾದಿ. ಈ ಅಭಿಪ್ರಾಯವು ತೈತ್ತಿರೀಯಸಂಹಿತೆಯಲ್ಲಿ ಸ್ಪಷ್ಟವಾಗಿ ಹೇಳಿರುವುದು—**ಬ್ರಹ್ಮವಾದಿನೋ ವದಂತಿ ತಸ್ಮಾತ್ಸತ್ಯಾದೇಕಪಾತ್ರಾ ದ್ವಿದೇವತ್ಯಾ ಗೃಹ್ಯಂತೇ ದ್ವಿಪಾತ್ರಾ ಹೂಯಂತ ಇತಿ। ಯದೇಕಪಾತ್ರಾ ಗೃಹ್ಯಂತೇ ತಸ್ಮಾದೇಕೋತ್ತರತಃ ಪ್ರಾಣೋ—ದ್ವಿಪಾತ್ರಾ ಹೂಯಂತೇ ತಸ್ಮಾದ್ದ್ವೌದ್ವೌ ಬಹಿಷ್ಟಾತ್ಪ್ರಾಣಾಃ** (ತೈ. ಸಂ. ೬-೪-೯-೩) ಎಂದರೆ, ಬ್ರಹ್ಮವಾದಿಗಳು ಈರೀತಿ ಪ್ರಶ್ನೆಮಾಡುವರು ದ್ವಿದೇವತ್ಯ ದೇವತೆಗಳ ವಿಷಯದಲ್ಲಿ ಇಬ್ಬರು ದೇವತೆಗಳಿಗೂ ಒಂದೇ ಗ್ರಹಪಾತ್ರೆಯನ್ನು ಉಪಯೋಗಿಸುವರು ಆದರೆ ಹೋಮಕಾಲದಲ್ಲಿ ಮಾತ್ರ ಎರಡು ಪಾತ್ರೆಗಳನ್ನು ಉಪಯೋಗಿಸುವರು. ಇದು ಹೇಗೆ ಸರಿಹೋಗುವುದು ? ಅದಕ್ಕೆ ಸಮಾಧಾನವು—ದ್ವಿದೇವತೆಗಳ ಸಂಬಂಧವಾದ ಪ್ರಾಣ ಅಥವಾ ಇಂದ್ರಿಯಗಳು ಜತೆಜತೆಯಾಗಿದ್ದರೂ ಪ್ರಾಣವು ಒಂದೇ ಆಗಿರುವುದು. ಆದರೆ ಪ್ರಾಣರೂಪವಾದ ಇಂದ್ರಿಯಗಳು ಜತೆಯಾಗಿ ಎಂದರೆ ಎರಡೆರಡಾಗಿ ವ್ಯವಹರಿಸುವುದರಿಂದ ಎಂದರೆ ಎರಡು ಕಣ್ಣುಗಳು, ಎರಡು ಕಿವಿಗಳು ಇವುಗಳಿಂದ ವ್ಯವಹರಿಸುವುದರಿಂದ ಹೋಮಕಾಲದಲ್ಲಿ ಎರಡು ಪಾತ್ರೆಗಳನ್ನು ಉಪಯೋಗಿಸುವರು. ಪ್ರಾಣವು ಒಂದೇ ಆದರೂ ಅದು ನೋಡುವುದು ಎರಡುಕಣ್ಣುಗಳಿಂದ; ಎರಡು ಕಿವಿಗಳಿಂದ ಇತ್ಯಾದಿ. ಆಪಸ್ತಂಬಮಹರ್ಷಿಯು ಈ ವಿಷಯವನ್ನು ವಿವರಿಸುತ್ತಾ ಹೀಗೆ ಹೇಳಿರುವರು—**ಹವಿರ್ಧಾನಂ ಗಚ್ಛನ್ಸಂಪ್ರೇಷ್ಯತಿ ವಾಯುವ ಇಂದ್ರವಾಯುಭ್ಯಾಮನುಬ್ರೂಹೀತ್ಯುಪಯಾಮಗೃಹಿತೋಽಸಿ ವಾಕ್ಸಸದಸೀತ್ಯಾದಿತ್ಯಪಾತ್ರೇಣ ಪ್ರತಿಪ್ರಸ್ಥಾತಾ ದ್ರೋಣಕಲಶಾದೈಂದ್ರವಾಯುವಸ್ಯ ಪ್ರತಿನಿಗ್ರಾಹ್ಯಂ ಗೃಹಿತ್ವಾ ನ ಸಾದಯತ್ಯೈಂದ್ರವಾಯುವಮಾದಾಯಾಧ್ವರ್ಯುರ್ದ್ರೋಣಕಲಶಾಚ್ಚ ಪರಿಪ್ಲವಯಾ ರಾಜಾನಮುಭೌ ನಿಷ್ಕ್ರಮ್ಯ ದಕ್ಷಿಣತೋಽವಸ್ಥಾಯ ದಕ್ಷಿಣಂ ಪರಿಧಿಸಂಧಿಮನ್ವವಹೃತಾಧ್ವರೋ ಯಜ್ಞೋಽಯಮಸ್ತು ದೇವಾ ಇತಿ ಪರಿಪ್ಲವಯಾಘಾರಮಾಘಾರಯತ್ಯಾಶ್ರಾವ್ಯ ಪ್ರತ್ಯಾಶ್ರಾವಿತೇ ಸಂಪ್ರೇಷ್ಯತಿ ವಾಯುವ ಇಂದ್ರವಾಯುಭ್ಯಾಂ ಪ್ರೇಷ್ಯ ವಷಟ್ಕೃತೇ ಜುಹೋತ್ಯೇವಮುತ್ತರಾಭ್ಯಾಂ ಗ್ರಹಾಭ್ಯಾಂ ಪ್ರಚರತೇ ಇತಿ** (ಆಪ. ಶ್ರೌ. ೧೨-೨೦-೧೮ ರಿಂದ ೨೪)

**ಯೋನ್ವೈವಾಧ್ವರ್ಯುರ್ಯಜುಷಾ ಪ್ರಯಚ್ಛತಿ ತೇನ ಹೋತಾ ಪ್ರತಿಗೃಹ್ಣಾತಿ ಏಷಃ ವಸುಃ ಪುರೂವಸುರಿಹ ವಸುಃ ಪುರೂವಸುರ್ಮಯಿ ವಸುಃ ಪುರೂವಸುರ್ವಾಕ್ಪಾ ವಾಚಂ ಮೇ ಪಾಹೀತ್ಯೈಂದ್ರವಾಯುವಂ ಭಕ್ಷಯತೀತಿ ಉಪಹೂತಾ ವಾಕ್ಸಹ ಪ್ರಾಣೇನೋಪ ಮಾಂ ವಾಕ್ಸಹ ಪ್ರಾಣೇನ ಹ್ವಯತಾಮುಪಹೂತಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾ ಉಪ ಮಾಮೃಷಯೋ ದೈವ್ಯಾಸೋ ಹ್ವಯಂತಾಂ ತನೂಪಾವಾನಸ್ತನ್ವಸ್ತಪೋಜಾ ಇತಿ ಪ್ರಾಣಾ ವಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾಸ್ತಾನೇವ ತದುಪಹ್ವಯತೇ ॥**

ಅಥ ಹೋತುಃ ಗ್ರಹಶೇಷಭಕ್ಷಪ್ರತಿಗ್ರಹಮಂತ್ರಂ ವಿಧತ್ತೇ— ಅಧ್ವರ್ಯೋಃ ಪ್ರದಾನಮಂತ್ರ ಆಪಸ್ತಂಬೇನ ದರ್ಶಿತಃ—"ಗ್ರಹಮಧ್ವರ್ಯುರಾದಾಯ ಕ್ಷಿಪ್ರಗ್‌ಂ ಹೋತಾರಮನುದ್ರುತ್ಯ ಮಯಿ ವಸುಃ ಪುರೋ ವಸುರಿತಿ ಗ್ರಹಗ್‌ಂಹೋತ್ರೇ ಪ್ರಯಚ್ಛತ್ಯೇತೇನೈವ ಹೋತಾ ಪ್ರತಿಗೃಹ್ಯದಕ್ಷಿಣ ಊರಾವಾಸಾದ್ಯ ಹಸ್ತಾಭ್ಯಾಂ ನಿಗೃಹ್ಯಾಸ್ತೇ" ಇತಿ ಅಥ ಹೋತುಃ ಸಮಂತ್ರಕಂ ಭಕ್ಷಣಂ ವಿಧತ್ತೇ— ಏಷ ಐಂದ್ರವಾಯು ವಗ್ರಹೋ ವಸುರ್ನಿವಾಸಹೇತುಃ ಪುರೂವಸುಃ ಪ್ರಭೂತನಿವಾಸಹೇತುಃ । ತಸ್ಮಿಂಲ್ಲೋಕೇ ನಿವಾಸಹೇತುರಿತ್ಯಾಕಾಂಕ್ಷಾನಿವೃತ್ಯರ್ಥಮಿಹ ವಸುರಿತ್ಯಾದಿಕಮುಚ್ಯತೇ ॥ ಅಸ್ಮಿನ್ನೇವ ಮನುಷ್ಯಲೋಕೇ ನಿವಾಸಂ ಕರೋತಿ ತತ್ರಾಪಿ ಪ್ರಭೂತನಿವಾಸಂ ಕರೋತಿ ॥ ಕಸ್ಮಿನ್ಪುರುಷೇ ಗ್ರಹಸ್ಯ ನಿವಾಸ ಇತ್ಯಾಕಾಂಕ್ಷಾನಿವೃತ್ತ್ಯರ್ಥಂ ಮಯಿ ವಸುರಿತ್ಯಾದಿಕಮುಚ್ಯತೇ ॥ ಮಯಿ ಹೋತರಿ ನಿವಸತಿ । ತದಾಪಿ ಪ್ರಭೂತನಿವಾಸಂ ಕರೋತಿ ॥ ಸ ತಾದೃಶೋ ಗ್ರಹೋ ವಾಕ್ಪಾ ವಾಚಂ ಪಾಲಯತಿ । ಹೇ ಗ್ರಹಮೇ ವಾಚಂ ಪಾಲಯೇತ್ಯನೇನ ಮಂತ್ರೇಣೈಂದ್ರವಾಯುವಶೇಷಂ ಭಕ್ಷಯೇತ್ ॥ ತಸ್ಯ ಮಂತ್ರಸ್ಯಾವಶಿಷ್ಟಭಾಗಂ ಪಠತಿ— ಪ್ರಾಣೇನ ಸಹ ವಾಗ್ದೇವತಾಮಯೋಪಹೂತಾಽನುಜ್ಞಾತಾ ತಸ್ಮಾತ್ಪ್ರಾಣಸಹಿತಾ ಸಾ ವಾಗ್ದೇವತಾಮಾಮುಪಹ್ವಯತಾ ಮನುಜಾನಾತು ತಥರ್ಷಯ ಉಪಹೂತಾ ಮಯಾನುಜ್ಞಾತಾಃ । ಕೀದೃಶಾ ಋಷಯೋ ದೈವ್ಯಾಸೋ ದೇವೇಷು ಭವಾಃ ತನೂಪಾವಾನೋಽಸ್ಮಚ್ಛರೀರಪಾಲಕಾಸ್ತನ್ವಃ ಶರೀರಸ್ಯಾಸ್ಮದೀಯಸ್ಯ ಸಂಬಂಧಿನ ಇತಿಶೇಷಃ ॥ ತಪೋಜಾಃ ಪೂರ್ವಜನ್ಮಾನುಷ್ಠಿತಾತ್ತಪಸೋ ಜಾತಾಃ ॥ ಯಸ್ಮಾದೀದೃಶಾ ಋಷಯೋ ಮಯಾನುಜ್ಞಾತಾಸ್ತಸ್ಮಾತ್ತೇಽಪಿ ಯಥೋಕ್ತವಿಶೇಷಣಾ ಮಾಮುಪಹ್ವಯನ್ತಾಮನುಜಾನಂತು ಇತ್ಯೇಷ ಮಂತ್ರಶೇಷಃ ॥ ಅಸ್ಯ ಶೇಷಸ್ಯ ತಾತ್ಪರ್ಯಂ ದರ್ಶಯತಿ— ಯಥೋಕ್ತವಿಶೇಷಣವಿಶಿಷ್ಟಾ ಋಷಯಃ ಪ್ರಾಣಸ್ವರೂಪಾ ಏವ । ತಸ್ಮಾತ್ತೇನ ಮಂತ್ರಶೇಷಪಾಠೇನ ತಾನೇವ ಪ್ರಾಣಾನನುಜಾನಾತಿ ।

ಈಗ ದ್ವಿದೇವತ್ಯಗ್ರಹಹೋಮಾನಂತರ ಹೋತೃವು ಹೋಮಶೇಷವನ್ನು ಭಕ್ಷಿಸುವಾಗ ಅಧ್ವರ್ಯುವಿನಿಂದ ಹೋಮಶೇಷವನ್ನು ಸ್ವೀಕಾರಮಾಡುವಾಗ ಪಠಿಸಬೇಕಾದ ಮಂತ್ರವನ್ನು ವಿವರಿಸಲಾಗುವುದು. ಅಧ್ವರ್ಯುವು ಯಜುರ್ವೇದದ ಮಂತ್ರವನ್ನು ಪಠಿಸಿ ಗ್ರಹಶೇಷವನ್ನು ಹೋತೃವಿಗೆ ಕೊಡುವನು. ಹೋತೃವೂ ಸಹ ಯಜುರ್ಮಂತ್ರದಿಂದಲೇ ಅದನ್ನು ಸ್ವೀಕರಿಸಿ ಭಕ್ಷಿಸುವನು. ಈ ವಿಷಯದಲ್ಲಿ ಆಪಸ್ತಂಬರು ಹೀಗೆ ಹೇಳಿರುವರು— **ಗ್ರಹಮಧ್ವರ್ಯುರಾದಾಯ ಕ್ಷಿಪ್ರಗ್‌ಂ ಹೋತಾರಮನುದ್ರುತ್ಯ ಮಯಿ ವಸುಃ ಪುರೋವಸುರಿತಿ ಗ್ರಹಗ್‌ಂ ಹೋತ್ರೇ ಪ್ರಯಚ್ಛತ್ಯೇತೇನೈವ ಹೋತಾ ಪ್ರತಿಗೃಹ್ಯ ದಕ್ಷಿಣ ಊರಾವಾಸಾದ್ಯ ಹಸ್ತಾಭ್ಯಾಂ ವಿಗೃಹ್ಯಾಸ್ತೇ ।** (ಆಪ. ಶ್ರೌ. ೧೨-೨೧-೫-೬) ಎಂದರೆ ಅಧ್ವರ್ಯುವು ಗ್ರಹಶೇಷವನ್ನು ತೆಗೆದುಕೊಂಡು ಬೇಗನೆ ಹೋತೃವಿನ ಸಮೀಪಕ್ಕೆ ಹೋಗಿ **ಮಯಿ ವಸುಃ ಪುರೂವಸುಃ** ಎಂಬ ಯಜುರ್ಮಂತ್ರವನ್ನು ಹೇಳಿ ಹೋಮಶೇಷವನ್ನು ಹೋತೃವಿಗೆ ಕೊಡುವನು. ಹೋತೃವೂ ಸಹ ಬಲಗಾಲಿನ ಮಂಡಿಯನ್ನು ಊರಿ ಅದೇ ಮಂತ್ರದಿಂದ ಹೋಮಶೇಷವನ್ನು ಅಧ್ವರ್ಯುವಿನಿಂದ ಭಕ್ಷಣಾರ್ಥವಾಗಿ ಎರಡು ಕೈಗಳಿಂದಲೂ ಸ್ವೀಕರಿಸುವನು. ಆನಂತರ ಹೋತೃವು ಮುಂದೆ ಹೇಳುವ— **ಏಷ ವಸುಃ ಪುರೂವಸುರಿಹ ವಸುಃ ಪುರೂವಸುರ್ಮಯಿ ವಸುಃ ಪುರೂವಸುರ್ವಾಕ್ಪಾ ವಾಚಂ ಮೇ ಪಾಹಿ** ಎಂಬ ಮಂತ್ರವನ್ನು ಪಠಿಸಿ ಹೋಮಶೇಷವನ್ನು ಭಕ್ಷಿಸುವನು. ಈ ಮಂತ್ರದ ಅರ್ಥವು— **ಏಷಃ**- ಈ ಐಂದ್ರವಾಯುವಗ್ರಹ (ಹೋಮಶೇಷವು) **ವಸುಃ**- ವಸತಿದಾಯಕವು (ವಾಸಸ್ಥಾನವನ್ನುಂಟು

ಮಾಡುವುದು) **ಪುರೂವಸುಃ**-ಬಹಳವಾದ ಅಥವಾ ದೊಡ್ಡದಾದ ವಸತಿದಾಯಕವು. **ಇಹ ವಸುಃ**-ಈ ಲೋಕದಲ್ಲಿ ವಸತಿಯನ್ನುಂಟುಮಾಡುವುದು; **ಮಯಿ ವಸುಃ**-ಹೋತೃವಾದ ನನ್ನಲ್ಲಿ ಅತ್ಯಧಿಕವಾದ ನಿವಾಸಸ್ಥಾನಕ್ಕೆ ಕಾರಣನಾಗಿರುವುದು. ಈ ಗ್ರಹಶೇಷವು **ವಾಕ್ಪಾ**-ನನ್ನ ವಾಕ್ಸಾಮರ್ಥ್ಯವನ್ನು ಕಾಪಾಡುವುದು; ಆದ್ದರಿಂದ ಎಲೈ ಗ್ರಹಶೇಷವೇ **ವಾಚಂ ಮೇ ಪಾಹಿ**-ನನ್ನ ವಾಕ್ಸಾಮರ್ಥ್ಯವನ್ನು ಕಾಪಾಡು ಎಂದು ಈ ಮಂತ್ರದ ಅರ್ಥವು. ಈ ಮಂತ್ರವನ್ನು ಉಚ್ಚರಿಸಿ ಹೋತೃವು ಐಂದ್ರವಾಯವಗ್ರಹದ ಹೋಮಶೇಷವನ್ನು ಭಕ್ಷಿಸಬೇಕು. ಭಕ್ಷಣಾನಂತರ ಮಂತ್ರದ ಉಳಿದ ಭಾಗವನ್ನು ಹೋತೃವು ಪಠಿಸುವನು— **ಉಪಹೂತಾ ವಾಕ್ಸಹ ಪ್ರಾಣೇನೋಪ ಮಾಂ ವಾಕ್ ಸಹ ಪ್ರಾಣೇನ ಹ್ವಯತಾಮುಪಹೂತಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾ ಉಪ ಮಾ ಋಷಯೋ ದೈವ್ಯಾಸೋ ಹ್ವಯಂತಾಂ ತನೂಪಾವಾನಸ್ತನ್ವಸ್ತಪೋಜಾ ಇತಿ** ಇದರ ಅರ್ಥವು—ಪ್ರಾಣದಿಂದ ಕೂಡಿದ ವಾಗ್ದೇವತೆಯು ನನ್ನಿಂದ ಆಹ್ವಾನಿಸಲ್ಪಡುವಳು (ಕರೆಯಲ್ಪಡುವಳು) ಆದ್ದರಿಂದ ಪ್ರಾಣದಿಂದ ಸಹಿತಳಾದ ವಾಗ್ದೇವತೆಯೂ ಸಹ ನನ್ನ ಆಹ್ವಾನವನ್ನು ಸ್ವೀಕರಿಸಿ ತಾನೂ ನನ್ನನ್ನು ಆಹ್ವಾನಿಸಲಿ (ಅಥವಾ ನನ್ನ ಪ್ರಾರ್ಥನೆಯನ್ನು ಮನ್ನಿಸಲಿ); ಹಾಗೆಯೇ ದೇವತೆಗಳ ಸಂಬಂಧವಿರುವವರೂ ನಮ್ಮ ಶರೀರಗಳ ಸಂರಕ್ಷಕರೂ, ನಮ್ಮ ಶರೀರಸಂಬಂಧಿಗಳೂ (ಎಂದರೆ ನಮ್ಮ ಪೂರ್ವಜರೂ) ಹಿಂದಿನ ಜನ್ಮದಲ್ಲಿ ಮಾಡಿದ ತಪಸ್ಸಿನ ಫಲದಿಂದ ಈಗ ಋಷಿಗಳಾಗಿರುವವರೂ ಆದ ಯಾವ ಋಷಿಗಳಿರುವರೋ ಅವರನ್ನು ನಾನು ಪ್ರಾರ್ಥಿಸಿ ಆಹ್ವಾನಿಸುತ್ತೇನೆ. ಅವರೂ ಸಹ ನನ್ನ ಈ ಪ್ರಾರ್ಥನೆಯನ್ನು ಮನ್ನಿಸಿ ನನ್ನನ್ನು ಕರೆಯಲಿ ಎಂದು ಈ ಮಂತ್ರದ ಅರ್ಥವು. ಇದರ ಮುಖ್ಯಾಭಿಪ್ರಾಯವೇನೆಂದರೆ ಮೇಲೆ ಹೇಳಿದ ಗುಣವಿಶಿಷ್ಟರಾದ ಋಷಿಗಳೆಂದರೆ ಪ್ರಾಣಸ್ವರೂಪರೇ ಆಗಿರುವರು. ಇಂತಹ ಪ್ರಾಣಸ್ವರೂಪರಾದ ಋಷಿಗಳನ್ನು ಮೇಲೆ ಹೇಳಿದ ಮಂತ್ರಪಾಠದಿಂದ ಹೋತೃವು ಪ್ರಾರ್ಥಿಸಿ ಕರೆಯುವನು.

**ಏಷ ವಸುರ್ವಿದದ್ವಸುರಿಹ ವಸುರ್ವಿದದ್ವಸುರ್ಮಯಿ ವಸುರ್ವಿದದ್ವಸುಶ್ಚಕ್ಷುಷ್ಪಾಶ್ಚಕ್ಷುರ್ಮೇ ಪಾಹೀತಿ ಮೈತ್ರಾವರುಣಂ ಭಕ್ಷಯತ್ಯುಪಹೂತಂ ಚಕ್ಷುಸ್ಸಹ ಮನಸೋಪ ಮಾಂ ಚಕ್ಷುಃ ಸಹ ಮನಸಾ ಹ್ವಯತಾಮುಪಹೂತಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾ ಉಪ ಮಾಮೃಷಯೋದೈವ್ಯಾಸೋ ಹ್ವಯಂತಾಂ ತನೂಪಾವಾನಸ್ತನ್ವಸ್ತಪೋಜಾ ಇತಿ ಪ್ರಾಣಾ ವಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾಸ್ತಾನೇವ ತದುಪಹ್ವಯತೇ ॥**

**ಮೈತ್ರಾವರುಣಗ್ರಹಸ್ಯ ಸಮಂತ್ರಕಂ ಶೇಷಭಕ್ಷಣಂ ಮಂತ್ರಶೇಷವ್ಯಾಖ್ಯಾನಂ ಚ ದರ್ಶಯತಿ — ಏಷ ಮೈತ್ರಾವರುಣಗ್ರಹೋ ವಿದದ್ವಸುಜ್ಞಾನಪೂರ್ವಕನಿವಾಸಹೇತುರನ್ಯತ್ಸರ್ವಂ ಪೂರ್ವವತ್ ॥**

ಈಗ ಮೈತ್ರಾವರುಣಗ್ರಹದ ಹೋಮಶೇಷದ ಭಕ್ಷಣಮಂತ್ರವನ್ನೂ ಅನಂತರ ಪಠಿಸಬೇಕಾದ ಶೇಷಮಂತ್ರವನ್ನೂ ವಿವರಿಸುವರು. **ಏಷ ವಸುರ್ವಿದದ್ವಸು** ಇತ್ಯಾದಿ ಈ ಮೈತ್ರಾವರುಣಗ್ರಹದ ಹೋಮಶೇಷವು ಜ್ಞಾನಪೂರ್ವಕವಾದ

ವಸತಿದಾಯಕವು ; ಬಹಳವಾದ ಅಥವಾ ದೊಡ್ಡದಾದ ಜ್ಞಾನಪ್ರದವಾದ ವಸತಿದಾಯಕವು; ಈ ಮನುಷ್ಯಲೋಕದಲ್ಲಿ ಬಹಳವಾದ ಜ್ಞಾನವನ್ನುಂಟುಮಾಡುವುದು. ಹೋತೃವಾದ ನನ್ನಲ್ಲಿ ಬಹಳವಾದ ಜ್ಞಾನವನ್ನು ಉಂಟುಮಾಡುವುದಾಗಿರುವುದು. ಎಲೈ ಮೈತ್ರಾವರುಣಗ್ರಹಶೇಷವೇ, ನನ್ನ ಚಕ್ಷುಶ್ಶಕ್ತಿಯನ್ನು (ಕಣ್ಣುಗಳಿಂದ ನೋಡುವ ಸಾಮರ್ಥ್ಯವನ್ನು) ಕಾಪಾಡು ಎಂಬ ಅರ್ಥವುಳ್ಳ ಈ ಮಂತ್ರವನ್ನು ಉಚ್ಚರಿಸಿ ಹೋತೃವು ಮೈತ್ರಾವರುಣಗ್ರಹದ ಹೋಮಶೇಷವನ್ನು ಭಕ್ಷಿಸಬೇಕು. ಬಳಿಕ ಮಂತ್ರಶೇಷವನ್ನು ಪಠಿಸಬೇಕು. ಮನಸ್ಸಿನಿಂದ ಅಥವಾ ಜ್ಞಾನದಿಂದ ಸಹಿತವಾದ ಚಕ್ಷುರಧಿದೇವತೆಯನ್ನು ನಾನು ಪ್ರಾರ್ಥಿಸಿ ಕರೆಯುತ್ತೇನೆ. ಆ ಚಕ್ಷುರಧಿದೇವತೆಯೂ ಸಹ ನನ್ನ ಪ್ರಾರ್ಥನೆಯನ್ನು ತಿಳಿದು ನನ್ನನ್ನು ಆಹ್ವಾನಿಸಲಿ ಹಾಗೆಯೇ ಜ್ಞಾನ ಚಕ್ಷುಸ್ಸಿನಿಂದ ಕೂಡಿದವರೂ ದೇವತಾತ್ಮಕರೂ ನಮ್ಮ ಶರೀರಗಳ ರಕ್ಷಕರೂ ಪೂರ್ವಜನ್ಮದ ತಪಃಫಲದಿಂದ ಋಷಿಗಳಾಗಿ ಜನಿಸಿದವರೂ ಪ್ರಾಣ ಜ್ಞಾನಸ್ವರೂಪರಾದ ಋಷಿಗಳನ್ನು ಪ್ರಾರ್ಥಿಸಿ ಕರೆಯುತ್ತೇನೆ. ಆ ಋಷಿಗಳೂ ಸಹ ನನ್ನ ಈ ಆಹ್ವಾನವನ್ನು ಸ್ವೀಕರಿಸಿ ನನ್ನನ್ನೂ ಆಹ್ವಾನಿಸಲಿ.

ಏಷ ವಸುಃ ಸಂಯದ್ವಸುರಿಹ ವಸುಃ ಸಂಯದ್ವಸುರ್ಮಯಿ ವಸುಃ ಸಂಯದ್ವಸುಃ ಶ್ರೋತ್ರಪಾಃ ಶ್ರೋತ್ರಂ ಮೇ ಪಾಹಿತ್ಯಾಶ್ವಿನಂ ಭಕ್ಷಯತ್ಯುಪಹೂತಂ ಶ್ರೋತ್ರಂ ಸಹಾತ್ಮನೋಪ ಮಾಂ ಶ್ರೋತ್ರಂ ಸಹಾತ್ಮನಾ ಹ್ವಯತಾಮುಪಹೂತಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತಪೋಜಾ ಉಪಮಾಮೃಷಯೋ ದೈವ್ಯಾಸೋ ಹ್ವಯಂತಾಂ ತನೂಪಾವಾನಸ್ತನ್ವಸ್ತಪೋಜಾ ಇತಿ ಪ್ರಾಣಾ ವಾ ಋಷಯೋ ದೈವ್ಯಾಸಸ್ತನೂಪಾವಾನಸ್ತನ್ವಸ್ತ-ಪೋಜಾಸ್ತಾನೇವ ತದುಪಹ್ವಯತೇ ।

ಆಶ್ವಿನಗ್ರಹಶೇಷಸ್ಯ ಸಮಂತ್ರಕಂ ಭಕ್ಷಣಂ ಮಂತ್ರಶೇಷವ್ಯಾಖ್ಯಾನಂ ಚ ದರ್ಶಯತಿ—ಏಷ ಆಶ್ವಿನಗ್ರಹಃ ಸಂಯದ್ವಸುರ್ನಿಯತನಿವಾಸಃ । ಅಥವಾ ವಸುಶಬ್ದಃ ಸರ್ವತ್ರ ಧನಪರತ್ವೇನ ವ್ಯಾಖ್ಯೇಯಃ । ಮಂತ್ರಶೇಷಸ್ಯ ಪೃಥಕ್ಪಾಠೋ ವ್ಯಾಖ್ಯೇಯತ್ವಪ್ರದರ್ಶನಾರ್ಥಃ ।

ಈಗ ಆಶ್ವಿನಗ್ರಹಹೋಮಶೇಷದ ಭಕ್ಷಣಮಂತ್ರವನ್ನೂ ಉಳಿದ ಪ್ರಾರ್ಥನಾರೂಪವಾದ ಮಂತ್ರಶೇಷವನ್ನೂ ವಿವರಿಸುವರು—ಈ ಆಶ್ವಿನಗ್ರಹದ ಹೋಮಶೇಷವು ನಿಯತವಾದ ವಸತಿದಾಯಕವು ಅಥವಾ ಧನಪ್ರದವು. ಈ ಹೋಮಶೇಷವು ಈ ಮನುಷ್ಯಲೋಕದಲ್ಲಿ ಬಹಳವಾದ ಧನಪ್ರದವಾಗಿರುವುದು. ಹೋತೃವಾದ ನನ್ನಲ್ಲಿಯೂ ಧನವನ್ನುಂಟುಮಾಡಲಿ. ಈ ಶೇಷವು ಶ್ರೋತ್ರ ಎಂದರೆ ಕಿವಿಗಳ ಅಥವಾ ಕೇಳುವ ಸಾಮರ್ಥ್ಯವನ್ನು ನನ್ನಲ್ಲಿ ಉಂಟುಮಾಡಲಿ. ನನ್ನ ಶ್ರವಣೇಂದ್ರಿಯಗಳನ್ನು ಕಾಪಾಡಲಿ ಎಂಬ ಅರ್ಥವುಳ್ಳ ಈ ಮಂತ್ರವನ್ನು ಪಠಿಸಿ ಹೋತೃವು ಆಶ್ವಿನಗ್ರಹ ಹೋಮಶೇಷವನ್ನು ಭಕ್ಷಿಸಬೇಕು ಬಳಿಕ ಶೇಷ ಮಂತ್ರವನ್ನು ಪಠಿಸಬೇಕು. ಮನಸ್ಸು ಅಥವಾ ಆತ್ಮದಿಂದ ಸಹಿತವಾದ ಶ್ರೋತ್ರಾಭಿಮಾನಿದೇವತೆಯನ್ನು ನಾನು ಆಹ್ವಾನಿಸುತ್ತೇನೆ. ಆ ಶ್ರೋತ್ರಾಭಿಮಾನಿದೇವತೆಯೂ ಸಹ ಮನಸ್ಸಿನಿಂದ ಸಹಿತವಾಗಿ ನನ್ನನ್ನು ಆಹ್ವಾನಿಸಲಿ. ಮನಸ್ಸಿನಿಂದ ಅಥವಾ ಆತ್ಮದಿಂದ ಕೂಡಿದ ಶ್ರವಣೇಂದ್ರಿಯಯುಕ್ತರೂ, ದೇವತಾಸ್ವರೂಪರೂ, ನಮ್ಮ ಶರೀರಗಳ ಸಂರಕ್ಷರೂ, ನಮ್ಮ ಪೂರ್ವಜರೂ, ತಮ್ಮ ಪೂರ್ವಜನ್ಮದ ತಪಃಪ್ರಭಾವದಿಂದ ಋಷಿಗಳಾಗಿ ಜನಿಸಿರುವವರೂ ಪ್ರಾಣಸ್ವರೂಪರೂ ಆದ ಶ್ರೋತ್ರೇಂದ್ರಿಯಸಹಿತರೂ

ಆದ ಋಷಿಗಳನ್ನು ಪ್ರಾರ್ಥಿಸಿ ಕರೆಯುತ್ತೇನೆ. ಆ ಋಷಿಗಳೂ ಸಹ ನನ್ನ ಆಹ್ವಾನವನ್ನು ಸ್ವೀಕರಿಸಿ ನನ್ನನ್ನು ಆಹ್ವಾನಿಸಲಿ ಎಂದು ಮಂತ್ರದ ಅಭಿಪ್ರಾಯವು.

**ಪುರಸ್ತಾತ್ಪ್ರತ್ಯಂಚಮೈಂದ್ರವಾಯವಂ ಭಕ್ಷಯತಿ ತಸ್ಮಾತ್ಪುರಸ್ತಾ-ತ್ಪ್ರಾಣಾಪಾನೌ ಪುರಸ್ತಾತ್ಪ್ರತ್ಯಂಚಂ ಮೈತ್ರಾವರುಣಂ ಭಕ್ಷಯತಿ ತಸ್ಮಾತ್ಪುರಸ್ತಾಚ್ಚಕ್ಷುಷೀ ಸರ್ವತಃ ಪರಿಹಾರಮಾಶ್ವಿನಂ ಭಕ್ಷ-ಯತಿ ತಸ್ಮಾನ್ಮನುಷ್ಯಾಶ್ಚ ಪಶವಶ್ಚ ಸರ್ವತೋ ವಾಚಂ ವದಂತೀಂ ಶೃಣ್ವಂತಿ ॥**

ಭಕ್ಷಣೇ ಕಂಚಿದ್ವಿಶೇಷಂ ವಿಧತ್ತೇ—ಪ್ರಾಙ್ಮುಖೋ ಹೋತಾ ಸ್ವಸ್ಯ ಪುರಸ್ತಾತ್ಸಂತಮೈಂ-ದ್ರವಾಯವಂ ಪ್ರತ್ಯಂಚಂ ಸ್ವವಕ್ತ್ರಸಮೀಪವರ್ತಿನಂ ಕೃತ್ವಾ ಭಕ್ಷಯೇತ್ ॥ ಅತಏವ ಪುರುಷಸ್ಯ ಪ್ರಾಣಾಪಾನವಾಯೂ ಪುರೋಭಾಗೇ ಸಂಪನ್ನೌ ॥ ಮೈತ್ರಾವರುಣೇಽಪಿ ಸಮಾನನ್ಯಾಯಃ । ಆಶ್ವಿನಂ ತು ಸರ್ವತಃ ಪರಿಹಾರಂ ಸರ್ವಾಸು ದಿಕ್ಷು ಪರಿತೋ ಹರಣಂ ಕೃತ್ವಾ ಶಿರಃ ಪ್ರದಕ್ಷಿಣೀ ಕೃತ್ಯೇತ್ಯರ್ಥಃ । ಯಸ್ಮಾಚ್ಛ್ರೋತ್ರರೂಪಸ್ಯ ಆಶ್ವಿನಸ್ಯ ಪರಿತೋ ಹರಣಂ ತಸ್ಮಾಚ್ಛ್ರೋತ್ರೇಣ ಸರ್ವತಃ ಶೃಣ್ವಂತಿ ಪುರತಃ ಪೃಷ್ಠತಃ ಪಾರ್ಶ್ವಯೋರ್ವಾಚಂ ವದಂತೀಂ ಸ್ವಾರ್ಥಮಭಿದ-ಧಾನಾಂ ವಾಚಂ ಶೃಣ್ವಂತಿ । ಯಥಾ ಹೋತುರೀದೃಶ್ಯಂ ಭಕ್ಷಣಂ ತಥಾಽಧ್ವರ್ಯೋರಪಿ ಶಾಖಾಂತರೇ ಶ್ರುತಂ—"ವಾಗ್ವಾ ಐಂದ್ರವಾಯವಶ್ಚಕ್ಷುರ್ಮೈತ್ರಾವರುಣಃ ಶ್ರೋತ್ರಮಾಶ್ವಿನಃ ಪುರಸ್ತಾದೈಂದ್ರವಾಯವಂ ಭಕ್ಷಯತಿ ತಸ್ಮಾತ್ಪುರಸ್ತಾದ್ವಾಚಾ ವದತಿ ಪುರಸ್ತಾನ್ಮೈತ್ರಾವರುಣಂ ತಸ್ಮಾತ್ಪುರಸ್ತಾಚ್ಚಕ್ಷುಷಾ ಪಶ್ಯತಿ ಸರ್ವತಃ ಪರಿಹಾರಮಾಶ್ವಿನಂ ತಸ್ಮಾತ್ಸರ್ವತಃ ಶ್ರೋತ್ರೇಣ ಶೃಣೋತಿ" ಇತಿ ॥

ಹೋಮಶೇಷ ಭಕ್ಷಣಪ್ರಕಾರದಲ್ಲಿ (ಸೋಮಪಾನದಲ್ಲಿ) ಕೆಲವು ವಿಶೇಷ ಕ್ರಮವನ್ನು ವಿವರಿಸುವರು. ಹೋತೃವು ಐಂದ್ರವಾಯವಗ್ರಹಶೇಷವನ್ನು ಭಕ್ಷಿಸುವಾಗ ಆ ಹೋಮಶೇಷದ ಪಾತ್ರೆಯನ್ನು ತನ್ನ ಮುಖದಮುಂದೆ ಇಟ್ಟುಕೊಂಡು ತಾನೂ ಪೂರ್ವಾಭಿಮುಖನಾಗಿ ಭಕ್ಷಣಮಾಡಬೇಕು. ಏಕೆಂದರೆ (ಐಂದ್ರವಾಯವಗ್ರಹಾತ್ಮಕವಾದ) ಪ್ರಾಣ ಮತ್ತು ಅಪಾನವಾಯುಗಳು ಎಂದರೆ ಉಚ್ಛ್ವಾಸ ನಿಃಶ್ವಾಸರೂಪವಾದ ವಾಯುಗಳು (ಉಸರಾಡುವುದು) ಪುರುಷನ ಮುಖದ ಮುಂಭಾಗದಲ್ಲಿಯೇ ತಮ್ಮ ಕಾರ್ಯಕಲಾಪಗಳನ್ನು ನಡೆಸುವವು. ಹಾಗೆಯೇ ಮೈತ್ರಾವರುಣಗ್ರಹದ ಶೇಷವನ್ನೂ ಸಹ ಪ್ರಾಙ್ಮುಖನಾಗಿ ಮೇಲೆ ಹೇಳಿದಂತೆಯೇ ಮಾಡಬೇಕು. ಏಕೆಂದರೆ (ಮೈತ್ರಾವರುಣಗ್ರಹಾತ್ಮಕವಾದ) ಚಕ್ಷುರ್ವ್ಯಾಪಾರಗಳು (ಕಣ್ಣಿನಿಂದ ನೋಡುವ ಕಾರ್ಯಗಳು) ಪುರುಷನ ಮುಂದುಗಡೆಯೇ ನಡೆಯುವವು, ಕಣ್ಣುಗಳು ಪುರುಷನ ಮುಖದ ಮುಂಭಾಗದಲ್ಲಿಯೇ ಇರುವವು. ಆದರೆ ಆಶ್ವಿನಗ್ರಹದ ಶೇಷಭಾಗವನ್ನು ಭಕ್ಷಿಸುವಾಗ ಹೋತೃವು ಹವಿಶ್ಶೇಷವಿರುವ ಪಾತ್ರೆಯನ್ನು ತನ್ನ ಮುಖದ ಮುಂದೆಯೂ, ಹಿಂದುಗಡೆಯಲ್ಲಿಯೂ, ಎಡಬಲಪಕ್ಕಗಳಲ್ಲಿಯೂ ಎಂದರೆ ಎಲ್ಲಾಕಡೆಗಳಲ್ಲಿಯೂ ಹಿಡಿದುಕೊಂಡು ಸ್ವಲ್ಪಸ್ವಲ್ಪ ಭಕ್ಷಿಸುತ್ತಿರಬೇಕು. ಏಕೆಂದರೆ ಆಶ್ವಿನಗ್ರಹಾತ್ಮಕವಾದ ಶ್ರೋತ್ರೇಂದ್ರಿಯವು (ಕಿವಿಗಳು) ಮನುಷ್ಯರು ಅಥವಾ ಪಶುಪ್ರಾಣಿಗಳು ಹಿಂದೆ, ಮುಂದೆ, ಪಕ್ಕಗಳಲ್ಲಿ (ಎಂದರೆ ಸಮಸ್ತದಿಕ್ಕುಗಳಲ್ಲಿ) ಮಾಡುವ ಸಕಲವಿಧ ಶಬ್ದಗಳನ್ನು ಕೇಳಬಲ್ಲವು. ಹೋತೃವು ಮಾಡುವ ಈವಿಧ ಭಕ್ಷಣವನ್ನು ಅಧ್ವರ್ಯುವು ಸಹ ಈ ಕ್ರಮದಂತೆಯೇ ಮಾಡುವನು. ಈ ವಿಷಯವಾಗಿ ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ

ಹೀಗೆ ಹೇಳಿರುವುದು—ವಾಗ್ವಾ ಐಂದ್ರವಾಯವಶ್ಚಕ್ಷುರ್ಮೈತ್ರಾವರುಣಃ ಶ್ರೋತ್ರಮಾಶ್ವಿನಃ ಪುರಸ್ತಾದೈಂದ್ರವಾಯವಂ ಭಕ್ಷಯತಿ ತಸ್ಮಾತ್ಪುರಸ್ತಾದ್ವಾಚಾ ವದತಿ ಪುರಸ್ತಾನ್ಮೈತ್ರಾವರುಣಂ ತಸ್ಮಾತ್ಪುರಸ್ತಾಚ್ಚಕ್ಷುಷಾ ಪಶ್ಯತಿ ಸರ್ವತಃ ಪರಿಹಾರಮಾಶ್ವಿನಂ ತಸ್ಮಾತ್ಸರ್ವತಃ ಶ್ರೋತ್ರೇಣ ಶೃಣೋತಿ (ತೈ. ಸಂ. ೬-೪-೯-೪) ಇದರ ಅರ್ಥವೂ ಮೇಲೆ ಹೇಳಿದಂತೆಯೇ ಇರುವುದು.

### *English Translation*

### (The rite of drinking from the Aindravayana, Maitravaruna, and As'vina grass by the Hotar. The formulas repeated at those occasions.)

The Soma offerings belonging to two deities are the vital airs, but they are offered in the same jar for both deities; for the reason is, that all the vital airs are of one and the same nature. They are sacrificed from two grahas (jars with small cups, for the vital airs are a pair (such as the eyes). When (after the Sama offering has been given to the two respective deities) the Adhvaryu hands over (the Soma cup to drink of the remainder of the juice) to the Hotar, he receives it with the same mantra by which the Adhvaryu presents it to him. By the words: "This is a good, this is a multitude of goods; "here is good, a multitude of goods; in me is the good (when the Soma is drunk), a multitude of goods; ruler of speech! protect my speech!" the Hotar drinks Soma from the Aindravayava graha. (Then he repeats): "Speech with breath is called hither (by me); may speech with breath call also me! The divine Rishis, the protectors of our bodies, who are from austerities (tapoja) are called hither by me! may the divine Rishis, the protectors of our bodies, who are born from austerities' call (also) me!" By the divine Rishis, who are the protectors of our bodies, the vital airs are to be understood. Thus he calls (invites the Rishis).

(By the words): "This is a good which has knowledge; here is a good which has knowledge; in me is a good which has knowledge; ruler of the eye, " the Hotar drinks Soma from the Maitravaruna graha. (Then he repeats): "The eye with the mind is called hither. May the eye with the mind call (also) me! The divine Rishis," & c. (just as above).

(By the words): "This is a good, a good which is lasting; here is a good, a good which is lasting; in me is a good, a good which is lasting; ruler of the sense of hearing! protect my sense of hearing!" the Hotar drinks Soma from the As'vina graha. Then he repeats: "The sense of hearing with the soul is called thither; may the sense of hearing with the soul call also me! The divine Rishis," & c. (just as above).

When drinking from the Aindravayava graha, the Hotar facing the cup turns its mouth towards his face (and drinks): for the inhaled and exhaled airs are in his front. In the same manner he drinks from the Maitravaruna jar; for the two eyes are in his front. When drinking from the As'vina jar, he turns its mouths round about; for men and animals hear speech sounding from all sides.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ನವಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



## ಅಥ ನವಮಾಧ್ಯಾಯೇ ಚತುರ್ಥಃ ಖಂಡಃ

### ಒಂಭತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ದ್ವಿದೇವತ್ಯಗ್ರಹಗಳ ಹೋಮಮಾಡುವಾಗ ಪಠಿಸಬೇಕಾದ ಯಾಜ್ಯಾಮಂತ್ರಗಳ ವಿವರಣೆ; ಅನುವಷಟ್ಕಾರದ ಕ್ರಮವಿಲ್ಲ; ಯಾಜ್ಯಾಮಂತ್ರಗಳ ಆಗುರವು ]

ಪ್ರಾಣಾ ವೈ ದ್ವಿದೇವತ್ಯಾ ಅನವಾನಂ ದ್ವಿದೇವತ್ಯಾನ್ಯಜೇತ್ಪ್ರಾಣಾನಾಂ ಸಂತತ್ಯೈ ಪ್ರಾಣಾನಾಮವ್ಯವಚ್ಛೇದಾಯ ಪ್ರಾಣಾ ವೈ ದ್ವಿದೇವತ್ಯಾ ನ ದ್ವಿದೇವತ್ಯಾನಾಮನುವಷಟ್ಕುರ್ಯಾತ್ । ಯದ್ದ್ವಿದೇವತ್ಯಾನಾಮನುವಷಟ್ಕುರ್ಯಾದಸಂಸ್ಥಿತಾನ್ಪ್ರಾಣಾನ್ಸಂಸ್ಥಾಪಯೇತ್ಸಂಸ್ಥಾ ವಾ ಏಷಾ ಯದನುವಷಟ್ಕಾರೋ ಯ ಏನಂ ತತ್ರ ಬ್ರೂಯಾದಸಂಸ್ಥಿತಾನ್ಪ್ರಾಣಾನ್ಸಮತಿಷ್ಠಿಪತ್ಪ್ರಾಣ ಏನಂ ಹಾಸ್ಯತೀತಿ ಶಶ್ವತ್ತಥಾ ಸ್ಯಾತ್ತಸ್ಮಾನ್ನ ದ್ವಿದೇವತ್ಯಾನಾಮನುವಷಟ್ಕುರ್ಯಾತ್ ॥

ಅಥ ದ್ವಿದೇವತ್ಯಗ್ರಹೇಷು ಹೋತ್ರಾಽಪ್ರಯೋಕ್ತವ್ಯಾನಾಂ ಮಂತ್ರಾಣಾಂ ಮಧ್ಯೇಽನುಚ್ಛ್ವಾಸಂ ವಿಧತ್ತೇ— ದ್ವಿದೇವತ್ಯಗ್ರಹೇಷು ಯಾಜ್ಯಾಂ ಪಠನ್ಹೋತಾಽನವಾನಂ ಯಜೇನ್ಮಂತ್ರಮಧ್ಯ ಉಚ್ಛ್ವಾಸಮಕೃತ್ವಾ ಯಜೇತ್ ॥ ದ್ವಿದೇವತ್ಯಾನಾಂ ಪ್ರಾಣರೂಪತ್ವಾದಯಂ ನೈರಂತರ್ಯಪಾಠಃ ಪ್ರಾಣಾನಾಂ ಸಂತತಾವಸ್ಥಾಪನಾಯ ಭವತಿ ॥ ತತಸ್ತೇಷಾಂ ವ್ಯವಚ್ಛೇದೋ ನ ಭವತಿ । ಸಂತತಿರವ್ಯವಚ್ಛೇದಶ್ಚೇತ್ಯೇಕ ಏವಾರ್ಥೋಽನ್ವಯವ್ಯತಿರೇಕಾಭ್ಯಾಮುಚ್ಯತೇ ॥ ಇತರೇಷು ಗ್ರಹೇಷು ಯಾಜ್ಯಾಂತೇ ವಷಟ್ಕಾರೇಣ ಸಕೃದ್ಧುತ್ವಾ ಸೋಮಸ್ಯಾಗ್ನೇ ವೀಹೀತ್ಯನುವಷಟ್ಕಾರೇಣ ಪುನರ್ಯಜಂತಿ ॥ ಅತಃ ಪ್ರಸಕ್ತಮನುವಷಟ್ಕಾರಮಂತ್ರಂ ನಿಷೇಧತಿ—

ವಿಪಕ್ಷೇ ಬಾಧಪುರಸ್ಸರಂ ಸ್ವಪಕ್ಷಂ ನಿಗಮಯತಿ — ಯದಿ ಹೋತಾ ದ್ವಿದೇವತ್ಯೇಷ್ವನುವಷಟ್ಕಾರಮಂತ್ರಂ ಪಠೇತ್ತದಾನೀಮಸಂಸ್ಥಿತಾನಸಮಾಪ್ತಾನನುಪರತಾನ್ಪ್ರಾಣಾನ್ಸಂಸ್ಥಾಪಯೇದುಪರತಾನ್ಕುರ್ಯಾತ್ ॥ ಯೋಽಯಮನುವಷಟ್ಕಾರ ಏಷೈವ ಸಂಸ್ಥಾ ಗ್ರಹಸ್ಯ ಸಮಾಪ್ತಿಃ । ಅತೋ ಗ್ರಹರೂಪಾಣಾಂ ಪ್ರಾಣಾನಾಮುಪರತಿಃ ಸ್ಯಾತ್ ॥ ತತ್ರಾನುವಷಟ್ಕಾರಕಾಲೇ ಯಃ ಕೋಽಪ್ಯೇನಂ ಹೋತಾರಂ ಬ್ರೂಯಾಚ್ಛಪೇತ್ ॥ ಕಥಮಿತಿ ತದುಚ್ಯತೇ ॥ ಅನುಪರತಾನ್ಪ್ರಾಣಾನುಪರತಾನಕರೋತ್ ತಸ್ಮಾದೇನಂ ಹೋತಾರಂ ಪ್ರಾಣಃ ಪರಿತ್ಯಜತೀತಿ ॥ ತತೋಽಪರಾಧಿನೋ ಹೋತುರವಶ್ಯಂ ತಥಾ ಭವೇತ್ । ತಸ್ಮಾದೇತೇಷ್ವನುವಷಟ್ಕಾರಮಂತ್ರಂ ನ ಪಠೇತ್ ॥

ದ್ವಿದೇವತ್ಯಗ್ರಹಗಳ ಹೋಮಕಾಲದಲ್ಲಿ ಹೋತೃವಿನಿಂದ ಪಠಿಸಲ್ಪಡುವ ಮಂತ್ರಗಳ ಮಧ್ಯದಲ್ಲಿ ಉಚ್ಛ್ವಾಸ (ಉಸಿರಾಡುವುದು) ಕ್ರಮವನ್ನು ವಿವರಿಸಲಾಗುವುದು. ದ್ವಿದೇವತ್ಯಗ್ರಹಹೋಮಕಾಲದಲ್ಲಿ ಹೋತೃವು ಯಾಜ್ಯಾಮಂತ್ರವನ್ನು ಪಠಿಸುವಾಗ ಮಂತ್ರಮಧ್ಯದಲ್ಲಿ ಎಲ್ಲಿಯೂ ನಿಲ್ಲಿಸದೆ ಉಸಿರನ್ನು (ಉಚ್ಛ್ವಾಸವನ್ನು) ಒಳಕ್ಕೆ ಎಳೆದುಕೊಳ್ಳದೆ ಮಂತ್ರೋಚ್ಚಾರಣೆ ಮಾಡಿ ಹೋಮಮಾಡಬೇಕು. ದ್ವಿದೇವತ್ಯಗ್ರಹಗಳು ಪ್ರಾಣರೂಪಗಳಾಗಿರುವುದರಿಂದ ಪ್ರಾಣರೂಪಗಳಾದ ಉಚ್ಛ್ವಾಸ, ನಿಃಶ್ವಾಸಗಳು ಮಧ್ಯದಲ್ಲಿ ನಿಲ್ಲದಂತೆ ಮಾಡುವುದಕ್ಕಾಗಿ ಮಂತ್ರವನ್ನು ಎಲ್ಲಿಯೂ ನಿಲ್ಲಿಸದೆ ನಿರಂತರವಾಗಿ ಪಠಿಸಬೇಕು ಮಂತ್ರಮಧ್ಯದಲ್ಲಿ ಉಚ್ಛ್ವಾಸವನ್ನು ಮಾಡಿದರೆ (ಉಸಿರನ್ನು ತೆಗೆದುಕೊಂಡರೆ) ಮಂತ್ರವನ್ನು ಮಧ್ಯ ನಿಲ್ಲಿಸಿದಂತಾಗುವುದು. ಹಾಗಾಗದಿರುವುದಕ್ಕಾಗಿ ದ್ವಿದೇವತ್ಯಗ್ರಹಹೋಮಕಾಲದಲ್ಲಿ ಯಾಜ್ಯಾಮಂತ್ರವನ್ನು ಪಠಿಸುವಾಗ ಉಚ್ಛ್ವಾಸದ ನಿಷೇಧವು ಉಕ್ತವಾಗಿರುವುದು. ಇತರ ಗ್ರಹಗಳ ಹೋಮಕಾಲದಲ್ಲಿ ಯಾಜ್ಯಾಮಂತ್ರದ ಪಠನಾಂತ್ಯದಲ್ಲಿ ವಷಟ್ಕಾರಮಂತ್ರದಿಂದ ಒಂದಾವರ್ತಿ ಹೋಮಮಾಡಿ ಸೋಮದ್ರವ್ಯವನ್ನು ಉದ್ದೇಶಿಸಿ **ಅಗ್ನೇ ವೀಹಿ** ಎಂಬ ಅನುವಷಟ್ಕಾರಮಂತ್ರದಿಂದ ಇನ್ನೊಂದಾವರ್ತಿ ಹೋಮಮಾಡುವುದು ಪದ್ಧತಿಯು. ಆದರೆ ದ್ವಿದೇವತ್ಯಗ್ರಹಹೋಮಕಾಲದಲ್ಲಿ ಅನುವಷಟ್ಕಾರಕ್ರಮವನ್ನು ಆಚರಿಸಕೂಡದು. ಏಕೆಂದರೆ ದ್ವಿದೇವತ್ಯಗ್ರಹಗಳು ಪ್ರಾಣಸ್ವರೂಪವಾಗಿರುವವು. ಈ ದ್ವಿದೇವತ್ಯಗ್ರಹಗಳಿಗೆ ಅನುವಷಟ್ಕಾರಕ್ರಮವನ್ನು ಮಾಡಿದರೆ ಉಚ್ಛ್ವಾಸನಿಃಶ್ವಾಸರೂಪವಾದ ಪ್ರಾಣವಾಯುವಿನ ಸಂಚಾರಕ್ಕೆ ತಡೆಯನ್ನುಂಟುಮಾಡಿದಂತಾಗುವುದು. ಅದರಿಂದ ಪ್ರಾಣವು ಶರೀರವನ್ನು ಬಿಟ್ಟುಹೋಗುವುದು. ಆದ್ದರಿಂದ ದ್ವಿದೇವತ್ಯಗ್ರಹಗಳ ವಿಷಯದಲ್ಲಿ ಅನುವಷಟ್ಕಾರವನ್ನು ಆಚರಿಸಲೇ ಕೂಡದು. ಒಂದುವೇಳೆ ಹೋತೃವು ದ್ವಿದೇವತ್ಯಗ್ರಹಗಳ ವಿಷಯದಲ್ಲಿ ಅನುವಷಟ್ಕಾರವನ್ನು ಮಾಡಿದ್ದೇ ಆದರೆ ಚಲಿಸುತ್ತಿರುವ ಪ್ರಾಣವಾಯುಗಳನ್ನು ಒಂದೆಡೆ ತಡೆದು ನಿಲ್ಲಿಸಿದಂತಾಗಿ ಪ್ರಾಣವಾಯುವಿನ ಸಂಚಾರವು ನಿಂತುಹೋಗಿ ಮರಣವು ಸಂಭವಿಸುವುದು. ಈ ಅನುವಷಟ್ಕಾರವು ಗ್ರಹಕ್ಕೆ ಎಂದರೆ ಗ್ರಹರೂಪವಾದ ಪ್ರಾಣಗಳಿಗೆ ಸಮಾಪ್ತಿ (ಕೊನೆ) ರೂಪವಾಗಿರುವುದು. ಆದ್ದರಿಂದ ಹೋತೃವು ಪ್ರಮಾದದಿಂದ ಅನುವಷಟ್ಕಾರಮಂತ್ರವನ್ನು ಉಚ್ಚರಿಸಿದರೆ ಅಲ್ಲಿರುವ ಯಾವನಾದರೊಬ್ಬ ಪುರುಷನು ಈ ಹೋತೃ

ವನ್ನು ಉದ್ದೇಶಿಸಿ ಹೀಗೆ ಹೇಳಬಹುದು—ಎಲೈ ಹೋತೃವೇ ನೀನು ಈಗ ಅನುವಷಟ್ಕಾರಮಂತ್ರವನ್ನು ಉಚ್ಚರಿಸಿ ಅದರ ಫಲವಾಗಿ ಶರೀರದಲ್ಲಿ ಸಂಚಾರಮಾಡುತ್ತಿರುವ ಪ್ರಾಣವಾಯುಗಳನ್ನು ತಡೆದು ನಿಲ್ಲಿಸಿರುವೆ. ಆದ್ದರಿಂದ ಪ್ರಾಣವಾಯುವು ಈ ಹೋತೃವನ್ನೂ ಪರಿತ್ಯಜಿಸಿ ಹೊರಟುಹೋಗಬಹುದು ಎಂದು. ಹೀಗೆ ಹೇಳುವುದರಿಂದ ಅಪರಾಧಿಯಾದ ಹೋತೃವಿಗೆ ಮರಣ ವುಂಟಾಗುವ ಸಂಭವವೇ ಇರುವುದು. ಆದ್ದರಿಂದ ದ್ವಿದೇವತ್ಯಗ್ರಹಹೋಮಮಾಡುವಾಗ ಅನುವಷಟ್ಕಾರವನ್ನು ಆಚರಿಸಲೇ ಕೂಡದು. (ವಷಟ್ಕಾರ ಮತ್ತು ಅನುವಷಟ್ಕಾರಗಳ ಸ್ವರೂಪ ಮತ್ತು ವಿವರಗಳನ್ನು ಮುಂದೆ ೧೧ನೆಯ ಅಧ್ಯಾಯದ ೫-೮ ಖಂಡಗಳಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು).

**ತದಾಹುರ್ದ್ವಿರಾಗೂರ್ಯ ಮೈತ್ರಾವರುಣೋ ದ್ವಿಃ ಪ್ರೇಷ್ಯತಿ ಸಕೃದಾಗೂರ್ಯ ಹೋತಾ ದ್ವಿರ್ವಷಟ್ಕರೋತಿ ಕಾ ಹೋತುರಾಗೂರಿತಿ ॥**

**ಅಥೈಂದ್ರವಾಯವೇ ಕಂಚಿದ್ವಿಶೇಷಂ ವಕ್ತುಂ ಪ್ರಶ್ನಮುತ್ಥಾಪಯತಿ—ಆಗೂಃಶಬ್ದೇನ ಪ್ರತಿಜ್ಞಾಽಭಿಧೀಯತೇ । ಮೈತ್ರಾವರುಣೋ ದ್ವಿರಾಗೂರ್ಯ ದ್ವಿಃ ಪ್ರತಿಜ್ಞಾಯ ದ್ವಿಃ ಪ್ರೇಷ್ಯತಿ । ದ್ವಾವಸ್ಯ ಪ್ರೈಷಮಂತ್ರೌ ಹೋತಾ ಯಕ್ಷದ್ವಾಯುಮಗ್ರೇ ಗಾಮಿತ್ಯೇಕೋ ಹೋತಾ ಯಕ್ಷದಿಂದ್ರವಾಯೂ ಅರ್ಹನ್ತೇತಿ ದ್ವಿತೀಯಃ । ತಯೋರುಭಯೋರಸ್ಯಾದಾವಯಂ ಹೋತಾ ಯಕ್ಷದಿತಿ ದ್ವಿಃ ಪ್ರತಿಜಾನಾತಿ । ದ್ವಯೋರ್ಮಂತ್ರಯೋರಂತೇ ಹೋತರ್ಯಜ ಹೋತರ್ಯಜೇತಿ ದ್ವಿಃ ಪ್ರೇಷ್ಯತಿ । ಹೋತಾ ತ್ವಗ್ರಂ ಪಿಬಾ ಮಧೂನಾಮಿತ್ಯಾದಿಕೇ ದ್ವೇ ಯಾಜ್ಯೇ ಪಠಿತುಮಾದೌ ಯೇ ಯಜಾಮಹ ಇತಿ ಸಕೃದೇವ ಪ್ರತಿಜಾನೀತೇ । ದ್ವಯೋರ್ಯಾಜ್ಯಯೋರಂತೇ ವೌಷಡ್ವೌಷಡಿತಿ ದ್ವಿರ್ವಷಟ್ಕರೋತಿ । ತಚ್ಚ ನ್ಯಾಯೇನ ದ್ವಿತೀಯಮಂತ್ರಾದಾವಪಿ ಯೇ ಯಜಾಮಹ ಇತ್ಯಾಗೂಃಕರಣಮಪೇಕ್ಷಿತಂ । ತಚ್ಚ ನ ಕ್ರಿಯತೇ ತಸ್ಮಾದ್ಧೋತುರ್ದ್ವಿತೀಯಯಾಜ್ಯಾದಾವಾಗೂಃ ಕಾ ನಾಮ ಸ್ಯಾದಿತಿ ಪ್ರಶ್ನಃ ।**

ಐಂದ್ರವಾಯವಗ್ರಹವಿಚಾರದಲ್ಲಿ ಒಂದು ವಿಶೇಷಸಂಗತಿಯನ್ನು ಪ್ರಸ್ತಾಪಿಸುವರು—ಕೆಲವರು ಹೀಗೆ ಹೇಳುವರು—**ಆಗೂಃ** ಎಂಬ ಶಬ್ದವು ಪ್ರತಿಜ್ಞೆ ಎಂಬ ಅರ್ಥವನ್ನು ಸೂಚಿಸುವುದು. ಮೈತ್ರಾವರುಣನೆಂಬ ಋತ್ವಿಜನು ಎರಡಾವರ್ತಿ ಪ್ರತಿಜ್ಞೆ ಮಾಡಿ ಎರಡಾವರ್ತಿ ಪ್ರೈಷಮಂತ್ರದಿಂದ ಹೋತೃವನ್ನು ನಿರ್ದೇಶಿಸುವನು. (ಪ್ರೈಷಮಂತ್ರವೆಂದರೆ ಇಂತಹ ಮಂತ್ರವನ್ನು ಹೇಳಬೇಕೆಂದು ಹೋತೃವಿಗೆ ಕೊಡುವ ನಿರ್ದೇಶವು). ಆ ಎರಡು ಪ್ರೈಷಮಂತ್ರಗಳಾವವು ಎಂದರೆ— **ಹೋತಾ ಯಕ್ಷದ್ವಾಯುಮಗ್ರೇಗಾಂ** ಎಂಬುದು ಒಂದು ಪ್ರೈಷಮಂತ್ರವು; **ಹೋತಾಯಕ್ಷದಿಂದ್ರವಾಯೂ ಅರ್ಹಂತ** ಎಂಬುದು ಎರಡನೆಯ ಪ್ರೈಷಮಂತ್ರವು (ಆ. ಶ್ರೌ. ೫-೫-೩) ಈ ಎರಡು ಪ್ರೈಷಮಂತ್ರಗಳನ್ನು ಹೇಳುವಾಗ ಮೈತ್ರಾವರುಣನು ಪ್ರೈಷಮಂತ್ರದ ಆದಿಯಲ್ಲಿ **ಹೋತಾಯಕ್ಷತ್** (ಹೋತೃವು ಪಠಿಸಲಿ) ಎಂಬ ಶಬ್ದಗಳನ್ನು ಸೇರಿಸಿ ಎರಡಾವರ್ತಿ ಪಠಿಸುವನು. ಈ ಪ್ರೈಷ ಮಂತ್ರಗಳ ಕೊನೆಯಲ್ಲಿ **ಹೋತರ್ಯಜ ಹೋತರ್ಯಜ** (ಎಲೈ ಹೋತೃವೇ ಯಾಜ್ಯಾಮಂತ್ರವನ್ನು ಪಠಿಸು) ಎಂಬ ಶಬ್ದಗಳನ್ನು ಸೇರಿಸಿ ಎರಡಾವರ್ತಿ ಪಠಿಸುವನು. ಈ ಎರಡು ಪ್ರೈಷ್ಯಮಂತ್ರಗಳಿಗೆ ಉತ್ತರರೂಪವಾಗಿ ಹೋತೃವು **ಅಯಂ ಪಿಬಾ ಮಧೂನಾಂ** (ಋ. ಸಂ. ೪-೪೬-೧,೨) ಎಂಬ ಎರಡು ಯಾಜ್ಯಾಮಂತ್ರಗಳನ್ನು ಪಠಿಸುವನು. ಹಾಗೆ ಪಠಿಸುವಾಗ ಮಂತ್ರದ ಪ್ರಾರಂಭದಲ್ಲಿ **ಯೇ ಯಜಾಮಹೇ** ಎಂಬ ಶಬ್ದಗಳನ್ನು (ಈ ಶಬ್ದಗಳನ್ನು ಪ್ರತಿಯೊಂದು ಯಾಜ್ಯಾಮಂತ್ರದ ಆದಿಯಲ್ಲಿಯೂ

ಸೇರಿಸಿ ಪಠಿಸುವುದು ರೂಢಿಯು) ಒಂದಾವರ್ತಿ ಮಾತ್ರ ಸೇರಿಸಿ ಪಠಿಸುವನು. ಇಲ್ಲಿ **ಅಯಂ ಪಿಬಾ ಮಧೂನಾಂ** ಮತ್ತು **ಶತೇನಾ ನೋ ಅಭಿಷ್ಟಿಭಿ** ಎರಡು ಪ್ರತ್ಯೇಕ ಯಾಜ್ಯಾಮಂತ್ರಗಳಿದ್ದರೂ ಹೋತೃವು **ಯೇ ಯಜಾಮಹೇ** ಎಂಬ ಶಬ್ದಗಳನ್ನು ಆದಿಯಲ್ಲಿ ಒಂದಾವರ್ತಿ ಮಾತ್ರ ಸೇರಿಸಿ ಪಠಿಸುವನು. ಆದರೆ ಮಂತ್ರಾಂತ್ಯದಲ್ಲಿ ಪಠಿಸಬೇಕಾದ **ವೌಷಟ್** ಎಂಬ ಶಬ್ದವನ್ನು **ವೌಷಟ್, ವೌಷಟ್** ಎಂದು ಎರಡಾವರ್ತಿ (ಎರಡು ಮಂತ್ರಗಳಿಗೂ ಒಟ್ಟಿಗೆ ಸೇರಿಸಿ) ಪಠಿಸುವನು. ಹೀಗೆ ಮಾಡುವುದರಿಂದ ಎಂದರೆ ಎರಡು ಯಾಜ್ಯಾಮಂತ್ರಗಳ ಕೊನೆಯಲ್ಲಿ ಪಠಿಸಬೇಕಾದ **ವೌಷಟ್** ಎಂಬ ಶಬ್ದವನ್ನು ಎರಡಾವರ್ತಿ ಪಠಿಸಿ ಆದಿಯಲ್ಲಿ ಪಠಿಸಬೇಕಾದ **ಯೇ ಯಜಾಮಹೇ** ಎಂಬ ಶಬ್ದಗಳನ್ನು (ಎರಡುಮಂತ್ರಗಳಿಗೂ) ಒಂದಾವರ್ತಿ ಮಾತ್ರ ಪಠಿಸುವುದು ಸರಿಯೇ? ಪ್ರಾರಂಭದಲ್ಲಿ ಎರಡನೇ ಯಾಜ್ಯಾಮಂತ್ರದ ವಿಷಯದಲ್ಲಿ ಹೋತೃವು ಮಾಡಿದ ಪ್ರತಿಜ್ಞೆ (ಆಗೂಃ) ಏನಾಯಿತು? ಆದ್ದರಿಂದ ಹೋತೃವು ಎರಡನೇ ಯಾಜ್ಯಾಮಂತ್ರದ ಆದಿಯಲ್ಲಿಯೂ **ಯೇ ಯಜಾಮಹೇ** ಎಂಬ ಶಬ್ದಗಳನ್ನು ಸೇರಿಸಿಯೇ ಪಠಿಸಬೇಕು. ಇದು ಪೂರ್ವಪಕ್ಷವಾದವು.

ಪ್ರಾಣಾ ವೈ ದ್ವಿದೇವತ್ಯಾ ಆಗೂರ್ವಜ್ರಸ್ತದ್ಯದತ್ರ ಹೋತಾಂತರೇಣಾ-
ಗುರೇತಾಗುರಾ ವಜ್ರೇಣ ಯಜಮಾನಸ್ಯ ಪ್ರಾಣಾನ್ವೀಯಾದ್ಯ
ಏನಂ ತತ್ರ ಬ್ರೂಯಾದಾಗುರಾ ವಜ್ರೇಣ ಯಜಮಾನಸ್ಯ
ಪ್ರಾಣಾನ್ವ್ಯಗಾತ್ಪ್ರಾಣ ಏನಂ ಹಾಸ್ಯತೀತಿ ಶಶ್ವತ್ತಥಾ ಸ್ಯಾ-
ತ್ತಸ್ಮಾತ್ತತ್ರ ಹೋತಾಂತರೇಣ ನಾಗುರೇತ ॥

**ದ್ವಿತೀಯಯಾಜ್ಯಾದೌ ಮಾ ಭೂದೇವಾಗೂರಿತ್ಯೇತದುತ್ತರಂ ವಿಪಕ್ಷಬಾಧಪೂರ್ವಕಂ ದರ್ಶಯತಿ—ದ್ವಿದೇವತ್ಯಗ್ರಹಾಃ ಪ್ರಾಣರೂಪಾ ಯೇಯಮಾಗೂರ್ಯೇ ಯಜಾಮಹ ಇತಿ ಪ್ರತಿಜ್ಞಾ ಸಾ ವಜ್ರರೂಪಾ। ತಥಾ ಸತ್ಯತ್ರ ಕರ್ಮಣ್ಯಂತರೇಣ ಯಾಜ್ಯಯೋರ್ಮಧ್ಯೇ ಯದಿ ಹೋತಾऽऽಗುರೇತ ಪ್ರತಿಜಾನೀಯಾತ್ತದಾನೀಮಾಗೂಃಸ್ವರೂಪೇಣ ವಜ್ರೇಣ ಯಜಮಾನಸ್ಯ ಪ್ರಾಣಾನ್ವೀಯಾದ್ವಿಗತಾನ್ಕುರ್ಯಾತ್ ॥ ತತ್ರ ತಸ್ಯಾಮಾಗುರಿ ಕ್ರಿಯಮಾಣಾಯಾಂ ಯಃ-ಕೋऽಪ್ಯೇನಂ ಹೋತಾರಂ ಶಪೇತ್ ॥ ಕಥಮಿತಿ ತದುಚ್ಯತೇ ॥ ಆಗುರಾ ವಜ್ರೇಣ ಹೋತಾ ಯಜಮಾನಸ್ಯ ಪ್ರಾಣಾನ್ವ್ಯಗಾದ್ವಿಗತಾನಕರೋತ್ ॥ ತಸ್ಮಾತ್ಪ್ರಾಣ ಏನಂ ಯಜಮಾನಂ ಹೋತಾರಂ ವಾ ಪರಿತ್ಯಜತೀತಿ। ತೇನ ಕೃತಃ ಶಾಪೋऽವಶ್ಯಂ ತಥೈವ ಸ್ಯಾತ್ತಸ್ಮಾತ್ತತ್ರ ತಯೋ-ರ್ಯಾಜ್ಯಯೋರಂತರೇಣ ಮಧ್ಯೇ ಹೋತಾ ನಾಗುರೇತ ॥**

ಈ ಪೂರ್ವಪಕ್ಷವು ಸರಿಯಾದುದಲ್ಲವೆಂದು ತೋರಿಸಿ ಎರಡನೆ ಯಾಜ್ಯಾಮಂತ್ರದ ಆದಿಯಲ್ಲಿ ಆಗೂಃಕರಣವು (ಪ್ರತಿಜ್ಞೆಯು) ಎಂದರೆ ಮಂತ್ರಾದಿಯಲ್ಲಿ **ಯೇ ಯಜಾಮಹೇ** ಎಂಬ ಶಬ್ದಗಳನ್ನು ಸೇರಿಸಿ ಪಠಿಸುವುದು ಯುಕ್ತವಲ್ಲವೆಂಬುದನ್ನು ಸಿದ್ಧಾಂತದ ಮೂಲಕ ವಿವರಿಸುತ್ತಾರೆ. ದ್ವಿದೇವತ್ಯಗ್ರಹಗಳು ಪ್ರಾಣಸ್ವರೂಪವಾಗಿರುವವು ಮತ್ತು ಆಗೂಃಕರಣವು ಎಂದರೆ ಮಂತ್ರಾದಿಯಲ್ಲಿ **ಯೇ ಯಜಾಮಹೇ** ಎಂಬ ಶಬ್ದಗಳನ್ನು ಸೇರಿಸಿ ಪಠಿಸುವ ಪ್ರತಿಜ್ಞೆಯು ಯಾವದಿರುವುದೋ ಅದು ವಜ್ರಾಯುಧರೂಪವಾಗಿರುವುದು. ಹೀಗಿರುವಾಗ ಈ ಎರಡು ಯಾಜ್ಯಾಮಂತ್ರಗಳನ್ನು ಒಟ್ಟಿಗೆ ಪಠಿಸುವಾಗ ಮಧ್ಯದಲ್ಲಿ ಹೋತೃವು ಆಗೂಃಕರಣವನ್ನು (**ಯೇ ಯಜಾಮಹೇ** ಎಂದು ಮಂತ್ರಮಧ್ಯದಲ್ಲಿ ಸೇರಿಸುವುದು) ಮಾಡಿದ್ದೇ ಆದರೆ ಆಗ ಆಗೂಃಕರಣರೂಪವಾದ ವಜ್ರಾಯುಧದಿಂದ ಯಜ್ಞಮಾಡುತ್ತಿರುವ ಯಜಮಾನನ ಪ್ರಾಣಗಳನ್ನು ಬಿಟ್ಟುಹೋಗುವಂತೆ (ಎಂದರೆ

ಮೃತನಾಗುವಂತೆ) ಮಾಡಿದಂತಾಗುವುದು. ಹೋತೃವು ಮಂತ್ರಮಧ್ಯದಲ್ಲಿ ಈರೀತಿ ಆಗೂಃಕರಣವನ್ನು ಮಾಡಿದ್ದೇ ಆದರೆ ಅಲ್ಲಿ ಯಜ್ಞಕರ್ಮವನ್ನು ತಿಳಿದಿರುವ ಯಾವನಾದರೊಬ್ಬ ಪುರುಷನು ಹೋತೃವನ್ನು ಶಪಿಸಬಹುದು-ಈ ಹೋತೃವು ಆಗುರಾ ಎಂಬ ವಜ್ರಾಯುಧದಿಂದ ಯಜಮಾನನ ಪ್ರಾಣಗಳು ಅವನನ್ನು ಬಿಟ್ಟುಹೋಗುವಂತೆ ಮಾಡಿರುವನು. ಆದ್ದರಿಂದ ಈ ಹೋತೃವಿನ ಪ್ರಾಣವೂ ಹೊರಟುಹೋಗುವುದು ಎಂದು ಶಪಿಸಿದರೆ ಅದು ಹಾಗೆಯೇ ಆಗುವುದು. ಆದ್ದರಿಂದ ಈ ಎರಡು ಯಾಜ್ಯಾಮಂತ್ರಗಳ ಮಧ್ಯದಲ್ಲಿ ಹೋತೃವು ಆಗೂಃಕರಣವನ್ನು ಮಾಡಲೇಬಾರದು.

**ಅಥೋ ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ ಮನಸಾ ವಾ ಇಷಿತಾ ವಾಗ್ವದತಿ ಯಾಂ ಹ್ಯನ್ಯಮನಾ ವಾಚಂ ವದತ್ಯಸುರ್ಯಾ ವೈ ಸಾ ವಾಗದೇವಜುಷ್ಟಾ ತದ್ಯದೇ-ವಾತ್ರ ಮೈತ್ರಾವರುಣೋ ದ್ವಿರಾಗುರುತೇ ಸೈವ ಹೋತು-ರಾಗೂಃ ॥**

ತತ್ರೈವ ಯುಕ್ತ್ಯಂತರಮಾಹ—ಅಪಿ ಚ ಮೈತ್ರಾವರುಣೋ ಯಜ್ಞಸ್ಯ ಮನಸ್ಥಾ-ನೀಯೋ ಹೋತಾ ತು ವಾಕ್ಸ್ಥಾನೀಯಃ । ಲೋಕೇ ಹಿ ಮನಸಾ ಪ್ರೇರಿತಾ ವಾಗ್ವಕ್ತೃಮ್ಯಂ ಬ್ರೂತೇ ॥ ಯಸ್ತ್ವನ್ಯಮನಸ್ಕೋ ಯಾಂ ವಾಚಂ ವದತಿ ತತ್ರ ಸಾ ವಾಗಸುರೇಭ್ಯಸ್ತಾಮ-ಸೇಭ್ಯೋ ಹಿತಾ ತೇಷಾಮಸಂಬಂಧಪ್ರಲಾಪಪ್ರಿಯತ್ವಾತ್ ॥ ನ ತ್ವಸೌ ವಾಕ್ ಸಾತ್ವಿಕಾನಾಂ ದೇವಾನಾಂ ಪ್ರಿಯಾ ॥ ತಸ್ಮಾನ್ಮನಃಪೂರ್ವಿಕೈವ ವಾಗ್ವಕ್ತವ್ಯಾ ॥ ತಥಾ ಸತ್ಯತ್ರ ಮನೋ-ರೂಪೋ ಮೈತ್ರಾವರುಣೋ ದ್ವಿರಾಗುರತ ಇತಿ ಯದಸ್ತಿ ಸೈವ ತತ್ಪ್ರೇಷಿತಸ್ಯ ವಾಗ್ರೂಪಸ್ಯ ಹೋತುರಾಗೂರ್ದ್ವಿತೀಯಾ ಭವಿಷ್ಯತಿ । ತಸ್ಮಾದ್ಯಾಜ್ಯಯೋರ್ಮಧ್ಯೇ ಹೋತಾ ನಾಗುರೇತ ॥

ಈ ವಿಷಯದಲ್ಲಿ ಮತ್ತೊಂದು ಯುಕ್ತಿಯನ್ನೂ ಹೇಳುವರು. ಮೈತ್ರಾವರುಣನೆಂಬ ಋತ್ವಿಜನು ಯಜ್ಞಕ್ಕೆ ಮನಃಸ್ಥಾನೀಯನು ಎಂದರೆ ಶರೀರಕ್ಕೆ ಮನಸ್ಸು ಹೇಗೆ ಮುಖ್ಯವಾಗಿರುವುದೋ ಹಾಗೆ ಯಜ್ಞಕ್ಕೆ ಮನಸ್ಸಿನ ಸ್ಥಾನದಲ್ಲಿರುವನು ಎಂದರೆ ಮುಖ್ಯಚಾಲಕನಾಗಿರುವನು. ಹಾಗೆಯೇ ಹೋತೃವೆಂಬ ಋತ್ವಿಜನು ಯಜ್ಞಕ್ಕೆ ವಾಕ್ಸ್ಥಾನೀಯನು ಎಂದರೆ ಯಜ್ಞದಲ್ಲಿ ಆಯಾಕಾಲಕ್ಕೆ ಬೇಕಾದ ಮಂತ್ರಗಳನ್ನು ಪಠಿಸುವ ಋತ್ವಿಜನಾಗಿರುವನು. ಮುಖ್ಯಾಭಿಪ್ರಾಯವೇನೆಂದರೆ ಯಜ್ಞಕ್ಕೆ ಮೈತ್ರಾವರುಣನೇ ಮನಸ್ಸು, ಹೋತೃವೇ ಮಾತನಾಡುವ ಬಾಯಿಯು. ಲೋಕವ್ಯವಹಾರದಲ್ಲಿ ಮನಸ್ಸಿನಲ್ಲಿ ಉದ್ಭವಿಸುವ ಭಾವಗಳನ್ನು ಪುರುಷನು ಮಾತುಗಳಿಂದ ಎಲ್ಲರಿಗೂ ತಿಳಿಯುವಂತೆ ವ್ಯಕ್ತವಾಗಿ ಹೇಳುವನು. ಈ ವಿಷಯದಲ್ಲಿ—**ಯದ್ಧ್ಯೈ ಮನ-ಸಾಭಿಗಚ್ಛತಿ ತದ್ವಾಚಾ ವದತಿ** ಎಂದು ಶ್ರುತಿವಾಕ್ಯವಿರುವುದು. ವಸ್ತುಸ್ಥಿತಿಯು ಹೀಗಿರುವಾಗ ಯಾವನಾದರೂ ಒಬ್ಬ ಪುರುಷನು ಅನ್ಯಮನಸ್ಕನಾಗಿ ಏನಾದರೂ ಮಾತನಾಡಿದರೆ ಅದು ಸಮಯೋಚಿತವಲ್ಲದ ಅಸಂಬದ್ಧವಾಗಿರುವುದರಿಂದ ಮನುಷ್ಯರಿಗೆ ಪ್ರಿಯವಾಗಿರುವುದಿಲ್ಲ ಅಸುರರಿಗೆ ಮಾತ್ರ ಹಿತವೆನಿಸಬಹುದು. ಸಾತ್ವಿಕರಾದ ಪುರುಷರಿಗೂ ದೇವತೆಗಳಿಗೂ ಪ್ರಿಯವಾಗಿರುವುದಿಲ್ಲ. ಆದ್ದರಿಂದ ಯಾವ ಮಾತನ್ನಾಡಬೇಕಾದರೂ ಚೆನ್ನಾಗಿ ಆಲೋಚಿಸಿ ಮನಃಪೂರ್ವಕವಾಗಿಯೇ ಮಾತನಾಡಬೇಕು. ಆದ್ದರಿಂದ ಯಜ್ಞದ ಮನಸ್ಸೆಂದು ಪರಿಗಣಿಸಿಟ್ಟಿರುವ ಮೈತ್ರಾವರುಣನು ಎರಡಾವರ್ತಿ ಆಗೂಃಕರಣವನ್ನು ಮಾಡಿದರೂ ಹೋತೃವು ಆ ಆಗೂಃಕರಣದ ಸರಿಯಾದ ಅರ್ಥವನ್ನು ತಿಳಿದು ಎರಡನೇ ಮಂತ್ರದ ಆದಿಯಲ್ಲಿ ಎಂದರೆ ಎರಡು ಯಾಜ್ಯಾ ಮಂತ್ರಗಳ ಮಧ್ಯದಲ್ಲಿ ಆಗೂಃಕರಣವನ್ನು ಮಾಡಬಾರದು.

*English Translation*

**(On the repetition of the two Yajya mantras for libation from the Dvidetya-grahas. No Anuvashatkara allowed. On the Agur for those Yajyas.)**

The Soma belonging to two deities are the vital airs. The Hotar ought to repeat the two Yajya mantras for the offering poured out of such a jar without stopping (at the end of the first mantra) in order to keep together the vital airs and to prevent their being cut off. The Soma jars belonging to two deities are the vital airs. (Thence) the Hotar should not make the Anuvashatkara (i.e. not pronounce the formula : "Agni, eat the Soma" With the formula Vaushat! after the Yajya has been repeated). If he do so, then he stops the circulation of the vital airs which are not stopped in any other way. For this formula (the Anuvashatkara) is a stop. (If one should observe a Hotar repeat the Anuvashatkara) one ought to tell him, that he had stopped the vital airs, which are not stopped (otherwise), and that he would (consequently) lose his life. This always happens. Thence he ought not to repeat that formula (the Anuvashatkara) when pouring oblations from the Soma jars belonging to two deities.

They ask, (what is the reason that) the Maitravaruna priest gives twice his assent that the Yajya mantra should be repeated, and calls twice (upon the Hotar) to do so whilst the Hotar declares his readiness to repeat the Yajya mantra only once, and (concludes with) pronouncing twice, Vaushat! Vaushat! (instead of doing once)? What is the (meaning) of the Hotar's declaration of his readiness to repeat the Yajya mantra (that he repeats it only once at the begining and not before the second mantras)?

(The answer is) The Soma jars belonging to two deities are the vital airs. The Agur formula is the thunderbolt. If therefore the Hotar were to put between (the two Yajya mantras) the Agur formula, he would deprive the sacrificer of his life (as if striking him) with a weapon like the thunderbolt. (If one should observe a Hotar doing so), one ought to tell him, that for having, by means of the Agur weapon, deprived the sacrificer of his life, he himself would also lose his life Thus it always happens. (Therefore) the Hotar ought not to repeat the Agur formula in the midst of the two Yajya mantras.

And further the Maitravaruna priest is the mind of the sacrifice, and the Hotar its speech. Speech speaks only when instigated by the mind (to do so). If any one utters speech different from what he thinks, such a speech is liked only by the Asuras, but not by the Devas. The Agur formula of the Hotar is

contained in the two Agur formulas (hota yakshat) pronounced at this (occasion) by the Maitravaruna priest.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ನವಮಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ನವಮಾಧ್ಯಾಯೇ ಪಂಚಮಃ ಖಂಡಃ

### ಒಂಭತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಋತುಯಾಜಗಳು ]

**ಪ್ರಾಣಾ ವಾ ಋತುಯಾಜಾಸ್ತದ್ಯದೃತುಯಾಜೈಶ್ಚರಂತಿ ಪ್ರಾಣಾನೇವ ತದ್ಯಜಮಾನೇ ದಧತಿ ॥**

**ಋತುಗ್ರಹಯಾಗಾನ್ವಿಧತ್ತೇ—ಮಧುಮಾಧವಾದಯ ಋತುದೇವಾ ಯತ್ರೇಜ್ಯಂತೇ ತ ಏತ ಋಜುಯಾಜಾಸ್ತೇ ಚ ಪ್ರಾಣಸ್ವರೂಪಾಃ । ಪ್ರಾಣಶಬ್ದೇನ ಪ್ರಾಣಾಪಾನವ್ಯಾನಾಸ್ತ್ರಯೋಽಪಿ ವಿವಕ್ಷಿತಾಃ ॥ ತೈಃ ಋತುಯಾಜೈರನುತಿಷ್ಠೇಯುಃ ತೇನ ಪ್ರಾಣಾನೇವ ಯಜಮಾನೇ ಸ್ಥಾಪಯಂತಿ ।**

ಈಗ ಋತುಗ್ರಹಯಾಗದ ವಿಷಯವನ್ನು ವಿವರಿಸಲಾಗುವುದು. ಋತುಗಳೆಂದರೆ—ವಸಂತ, ಗ್ರೀಷ್ಮ, ವರ್ಷಾ, ಶರತ್, ಹೇಮಂತ, ಶಶಿರ ಎಂಬ ಆರು ಋತುಗಳು ಇರುವವು. ಎರಡೆರಡು ಮಾಸಗಳಿಗೆ ಒಂದೊಂದು ಋತುವಿರುವುದು. ಚೈತ್ರ ವೈಶಾಖಮಾಸಗಳಿಗೆ ವಸಂತಋತುವೆಂದೂ, ಜ್ಯೇಷ್ಠ ಆಷಾಢಗಳಿಗೆ ಗ್ರೀಷ್ಮಋತುವೆಂದೂ, ಶ್ರಾವಣ ಭಾದ್ರಪದಮಾಸಗಳಿಗೆ ವರ್ಷಾಋತುವೆಂದೂ, ಆಶ್ವಯುಜ ಕಾರ್ತೀಕಮಾಸಗಳಿಗೆ ಶರದೃತುವೆಂದೂ, ಮಾರ್ಗಶಿರ ಪುಷ್ಯಮಾಸಗಳಿಗೆ ಹೇಮಂತಋತುವೆಂದೂ, ಮಾಘ ಫಾಲ್ಗುಣಮಾಸಗಳಿಗೆ ಶಿಶಿರಋತುವೆಂದೂ ಹೆಸರುಗಳಿರುವವು. ಈ ವಿಷಯದಲ್ಲಿ— **ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ, ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ, ನಭಶ್ಚ ನಭಸ್ಯಶ್ಚ ವಾರ್ಷಿಕಾವೃತೂ, ಇಷಶ್ಚೋರ್ಜಶ್ಚ ಶಾರದಾವೃತೂ, ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ, ತಪಶ್ಚ ತಪಸ್ಯಶ್ಚ ಶೈಶಿರಾವೃತೂ**

(ತೈ. ಸಂ. ೪-೪-೧೧-೧) ಎಂದು ತೈತ್ತಿರೀಯಶ್ರುತಿವಾಕ್ಯವಿರುವುದು. ಮಧು (ಚೈತ್ರ) ಮಾಧವ (ವೈಶಾಖ) ಮೊದಲಾದ ಮಾಸಗಳಿಂದ ಕೂಡಿದ ವಸಂತಾದಿ ಆರು ಋತುಗಳು ಯಾವ ಯಾಗದಲ್ಲಿ ಆರಾಧಿಸಲ್ಪಡುವವೋ ಆ ಯಾಗಕ್ಕೆ **ಋತುಯಾಜಾಃ** ಎಂದು ಹೆಸರು. ಈ ಋತುಗಳು ಪ್ರಾಣಸ್ವರೂಪವಾಗಿರುವವು ಎಂದರೆ ಇಲ್ಲಿ ಪ್ರಾಣಶಬ್ದಕ್ಕೆ ಪ್ರಾಣ, ಅಪಾನ, ವ್ಯಾನ ಎಂಬ ಮೂರು ಪ್ರಾಣಗಳು ಎಂಬ ಅರ್ಥವು ಸೂಚಿತವಾಗುವುದು. ಈ ಋತುಯಾಜಗಳನ್ನು ವಿಧ್ಯುಕ್ತವಾಗಿ ಆಚರಿಸಿದರೆ ಅದರಿಂದ ಯಜ್ಞಮಾಡುವ ಯಜಮಾನನಲ್ಲಿ ಪ್ರಾಣಗಳನ್ನು ದೃಢವಾಗಿ ಸ್ಥಾಪಿಸಲಾಗುವುದು ಎಂದರೆ ಯಜಮಾನನಿಗೆ ಪ್ರಾಣಾಪಾಯವುಂಟಾಗುವುದಿಲ್ಲ ಎಂದಭಿಪ್ರಾಯವು.

ಷಳ್ ಋತುನೇತಿ ಯಜಂತಿ ಪ್ರಾಣಮೇವ ತದ್ಯಜಮಾನೇ ದಧತಿ ಚತ್ವಾರ ಋತುಭಿರಿತಿ ಯಜಂತ್ಯಪಾನಮೇವ ತದ್ಯಜಮಾನೇ ದಧತಿ ದ್ವಿರೃತುನೇತ್ಯುಪರಿಷ್ಟಾದ್ವ್ಯಾನಮೇವ ತದ್ಯಜಮಾನೇ ದಧತಿ ಸ ವಾ ಅಯಂ ಪ್ರಾಣಸ್ತ್ರೇಧಾ ವಿಹಿತಃ ಪ್ರಾಣೋಽಪಾನೋ ವ್ಯಾನ ಇತಿ ತದ್ಯದೃತುನ ಋತುಭಿರೃತುನೇತಿ ಯಜಂತಿ ಪ್ರಾಣಾನಾಂ ಸಂತತ್ಯೈ ಪ್ರಾಣಾನಾಮವ್ಯವಚ್ಛೇದಾಯ ॥

ಋತುಗ್ರಹಾಶ್ಚ ದ್ವಾದಶಸಂಖ್ಯಾಕಾಸ್ತತ್ರಾದ್ಯೇಷು ಷಟ್ಸು ಕಂಚಿದ್ವಿಶೇಷಂ ವಿಧತ್ತೇ -- ಅಧ್ವರ್ಯುಣಾ ಪ್ರೇಷಿತೋ ಮೈತ್ರಾವರುಣಃ ಪ್ರೈಷಸೂಕ್ತಗತೈರ್ಮಂತ್ರೈಃ ಕ್ರಮೇಣ ಹೋತ್ರಾದೀನ್ಪ್ರೇಷ್ಯತಿ ತೇನ ಪ್ರೇಷಿತಾ ಹೋತ್ರಾದಯಃ ಋತುನಾ ಸೋಮಮಿತ್ಯೇವಂ ಯಜೇಯುಃ । ಏತೇಷಾಂ ಷಣ್ಣಾಮೃತುಯಾಜಾನಾಂ ಪ್ರಾಣಸ್ವರೂಪತ್ವಾದ್ಧೋತ್ರಾದಯಃ ಷಡಪಿ ಯಜಮಾನೇ ಪ್ರಾಣಂ ಸ್ಥಾಪಯಂತಿ ॥ ಸಪ್ತಮಮಾರಭ್ಯ ದಶಮಾಂತೇ ವಿಶೇಷಂ ವಿಧತ್ತೇ- ಅಧ್ವರ್ಯುಣಾ ಪ್ರೇಷಿತೋ ಮೈತ್ರಾವರುಣಃ ಪ್ರೈಷಸೂಕ್ತಗತೈಃ ಸಪ್ತಮಾದಿಭಿಶ್ಚತುರ್ಭಿರ್ಮಂತ್ರೈಃ ಹೋತ್ರಾದೀನ್ಕ್ರಮೇಣ ಚತುರಃ ಪ್ರೇಷ್ಯತಿ । ತ ಋತುಭಿಃ ಸೋಮಮಿತಿ ಬಹುವಚನಾಂತಪ್ರಯೋಗೇಣ ಚತ್ವಾರೋಽಪಿ ಯಜೇಯುಃ ತೇಷಾಂ ಚತುರ್ಣಾಂ ಋತುಯಾಜಾನಾಂ ಅಪಾನವಾಯುಸ್ವರೂಪತ್ವಾತ್ತದ್ಯಾಗೇನ ಅಪಾನಮೇವ ಯಜಮಾನೇ ಸ್ಥಾಪಯಂತಿ । ಏಕಾದಶದ್ವಾದಶಯೋರ್ವಿಶೇಷಂ ವಿಧತ್ತೇ- ಅಧ್ವರ್ಯುಪ್ರೇಷಿತೋ ಮೈತ್ರಾವರುಣಃ ಪ್ರೈಷಸೂಕ್ತಗತಾಭ್ಯಾಮೇಕಾದಶದ್ವಾದಶಾಭ್ಯಾಂ ಮನ್ತ್ರಾಭ್ಯಾಂ ಪ್ರೇಷ್ಯತಿ । ತೇನ ಪ್ರೇಷಿತಾವಧ್ವರ್ಯುಯಜಮಾನೌ ಋತುನಾ ಸೋಮಮಿತ್ಯೇಕವಚನಾಂತಪ್ರಯೋಗೇಣ ಯಜೇತಾಮಂತ್ಯಯೋರ್ದ್ವಯೋರ್ಯಾಗಯೋಃ ವ್ಯಾನಸ್ವರೂಪತ್ವಾತ್ ತದ್ಯಾಗೇನ ವ್ಯಾನಮೇವ ಯಜಮಾನೇ ಸರ್ವೇಽಪ್ಯೃತ್ವಿಜಃ ಸ್ಥಾಪಯಂತಿ । ಅನೇನೈವ ಕ್ರಮೇಣ ಮೈತ್ರಾವರುಣಂ ಪ್ರತ್ಯಧ್ವರ್ಯೋಃ ಪ್ರೈಷ ಆಪಸ್ತಂಬೇನ ದರ್ಶಿತಃ—“ಋತುನಾ ಪ್ರೇಷ್ಯತಿ ತ್ರಿಷ್ವಾದ್ಯೇಷ್ವಧ್ವರ್ಯುಃ ಸಂಪ್ರೇಷ್ಯತ್ಯೇವಂ ಪ್ರತಿಪ್ರಸ್ಥಾತಾ ಪಾತ್ರಯೋರ್ಮುಖೇ ಪರ್ಯಾವೃತ್ಯರ್ತುಭಿಃ ಪ್ರೇಷ್ಯತಿ

ದ್ವಯೋರಧ್ವರ್ಯುರ್ರೇವಂ ಪ್ರತಿಪ್ರಸ್ಥಾತಾ ಪುನಃ ಪರ್ಯಾವೃತ್ಯರ್ತುನಾ ಪ್ರೇಷ್ಯೇತಿ ಸಕೃದ-ಧ್ವರ್ಯುರೇವಂಪ್ರತಿಪ್ರಸ್ಥಾತಾ " ಇತಿ॥ತದೇಕವಚನಾಂತಬಹುವಚನಾಂತೈಕವಚನಾಂತೈರ್ಋತು-ಶಬ್ದೈರುದಾಹೃತಃ ಪ್ರೈಷಸ್ತೈತ್ತಿರೀಯಬ್ರಾಹ್ಮಣೇ ಸಂಗೃಹ್ಯಾಮ್ನಾತಃ--ಋತುನಾ ಪ್ರೇಷ್ಯತಿ ಷಟ್ಕೃತ್ವ ಆಹ ಷಡ್ವಾ ಋತವ ಋತೂನೇವ ಪ್ರೀಣಾತಿ ಋತುಭಿರಿತಿ ಚತುಶ್ಚತುಷ್ಪದ ಏವ ಪಶೂನ್ಪ್ರೀಣಾತಿದ್ವಿಃ ಪುನಃ ಋರ್ತುನಾಽಽಹ ದ್ವಿಪದ ಏವ ಪ್ರೀಣಾತಿ " ಇತಿ। ತಾನೇತಾನೃತು-ಯಾಜಾನ್ಪ್ರಶಂಸತಿ— ಶರೀರಮಧ್ಯೇ ಸ್ಥಿತಸ್ಯ ಪ್ರಾಣವಾಯೋಃ ಪ್ರಾಣಾಪಾನವ್ಯಾನಾಖ್ಯಾಭಿಃ ವೃತ್ತಿಭಿಸ್ತ್ರಿವಿಧತ್ವಾದೃತುಶಬ್ದಪ್ರಯೋಗೇಣ ತ್ರಿವಿಧೇನ ಯಜಮಾನಸ್ಯ ಪ್ರಾಣಾಃ ಸಂತತಾ ಭವಂತಿ ನ ತು ವ್ಯವಚ್ಛಿದ್ಯಂತೇ ।

ಋತುಗ್ರಹಗಳು ಹನ್ನೆರಡು ಇರುವವು ಅವುಗಳಲ್ಲಿ ಮೊದಲನೆಯ ಆರು ಗ್ರಹಗಳ ವಿಚಾರದಲ್ಲಿ ಕೆಲವು ವಿಶೇಷ ಸಂಗತಿಗಳನ್ನು ವಿವರಿಸಲಾಗುವುದು. ಅಧ್ವರ್ಯುವಿನ ಆದೇಶದಂತೆ ಮೈತ್ರಾವರುಣನೆಂಬ ಋತ್ವಿಜನು ಪ್ರೈಷಮಂತ್ರಗಳ ಮೂಲಕವಾಗಿ ಹೋತೃವರ್ಗದ ಋತ್ವಿಜರನ್ನು ನಿರ್ದೇಶಿಸುವನು. ಅವನ ನಿರ್ದೇಶದಂತೆ ಹೋತ್ರಾದಿ ಋತ್ವಿಜರು **ಋತುನಾ ಸೋಮಂ** ಇತ್ಯಾದಿ ಮಂತ್ರಗಳನ್ನು ಪಠಿಸುವರು. **ಋತುನಾ** ಎಂದು ಏಕವಚನಾಂತವಾದ ಆರು ಋತುಯಾಜಮಂತ್ರಗಳಿಂದ ಹೋತ್ರಾದಿ ಋತ್ವಿಜರು ಯಜ್ಞಮಾಡುವ ಯಜಮಾನನಲ್ಲಿ ಪ್ರಾಣವನ್ನು (ಪ್ರಾಣವಾಯುವನ್ನು) ಸ್ಥಿರವಾಗಿ ನಿಲ್ಲುವಂತೆ ಸ್ಥಾಪಿಸುವರು. ಏಕೆಂದರೆ ಋತುಯಾಜಮಂತ್ರಗಳು ಪ್ರಾಣಸ್ವರೂಪವಾಗಿರುವವು. ಇದರಂತೆಯೇ ಮೈತ್ರಾವರುಣನಿಂದ ನಿರ್ದಿಷ್ಟರಾದ ಹೋತ್ರಾದಿಗಳು ಮುಂದಿನ ನಾಲ್ಕುಮಂತ್ರಗಳನ್ನು **ಋತುಭಿಃ** ಎಂಬ ಬಹುವಚನಾಂತಪದಗಳಿಂದ ಸಹಿತವಾಗಿ ಪಠಿಸಿ ನಾಲ್ಕುಮಂದಿ ಋತ್ವಿಜರು ಹೋಮಮಾಡುವರು. **ಋತುಭಿಃ** ಎಂಬ ಬಹುವಚನಾಂತವಾದ ಋತುಯಾಜಮಂತ್ರಗಳಿಂದ ನಾಲ್ಕುಮಂದಿ ಋತ್ವಿಜರು ಯಜಮಾನನಲ್ಲಿ ಅಪಾನವೆಂಬ ವಾಯುವನ್ನು ಸ್ಥಾಪಿಸುವರು. ಪುನಃ ಮೈತ್ರಾವರುಣನಿಂದ **ಋತುನಾ ಸೋಮಂ** ಎಂದು ನಿರ್ದಿಷ್ಟರಾದ ಅಧ್ವರ್ಯು ಮತ್ತು ಯಜಮಾನರೆಂಬ ಇಬ್ಬರು ಹನ್ನೊಂದು ಮತ್ತು ಹನ್ನೆರಡನೆಯ ಮಂತ್ರಗಳನ್ನು **ಋತುನಾ ಸೋಮಂ** ಎಂದು ಏಕವಚನಾಂತ ಮಂತ್ರವನ್ನು ಪಠಿಸಿ ಹೋಮಮಾಡಿ ಯಜಮಾನನಲ್ಲಿ ವ್ಯಾನವಾಯುವನ್ನು ಸ್ಥಾಪಿಸುವರು. ಮತ್ತು ಕೊನೆಯ ಎರಡು ಹೋಮಗಳನ್ನು ಮಾಡುವಾಗ ಎಲ್ಲಾ ಋತ್ವಿಜರೂ ಸೇರಿ ಮಂತ್ರಗಳನ್ನು ಪಠಿಸಿ ಯಜಮಾನನಲ್ಲಿ ವ್ಯಾನವಾಯುವನ್ನು ಸ್ಥಾಪಿಸುವರು. ಈ ಕ್ರಮವನ್ನನುಸರಿಸಿ ಅಧ್ವರ್ಯುವು ಪ್ರೈಷಮಂತ್ರಗಳ ಪಠನಕ್ಕಾಗಿ ಮೈತ್ರಾವರುಣನಿಗೆ ಕೊಡುವ ಆದೇಶವನ್ನು ಆಪಸ್ತಂಬರು ಹೀಗೆ ವಿವರಿಸಿರುವರು—**ಋತುನಾ ಪ್ರೇಷ್ಯತಿ ತ್ರಿಷ್ವಾದ್ಯೇಷ್ವಧ್ವರ್ಯುಃ ಸಂಪ್ರೇಷ್ಯತ್ಯೇವಂ ಪ್ರತಿಪ್ರಸ್ಥಾತಾ ಪಾತ್ರಯೋರ್ಮುಖೇ ಪರ್ಯಾ-ವೃತ್ಯರ್ತುಭಿಃ ಪ್ರೇಷ್ಯತಿ ದ್ವಯೋರಧ್ವರ್ಯುರೇವಂ ಪ್ರತಿಪ್ರಸ್ಥಾತಾ ಪುನಃ ಪರ್ಯಾವೃತ್ಯರ್ತುನಾ ಪ್ರೇಷ್ಯೇತಿ ಸಕೃದಧ್ವರ್ಯುರೇವಂ ಪ್ರತಿಪ್ರಸ್ಥಾತಾ ಇತಿ** (ಆಪ. ಶ್ರೌ. ೧೨-೨೬-೧೭ ರಿಂದ ೧೯) ಋತುಯಾಜಹೋಮಕ್ರಮವು ಈರೀತಿ ಇರುವುದು. ಮೊದಲು ಆರು ಋತುಯಾಜಹೋಮಗಳು ಏಕವಚನಾಂತವಾಗಿರುವವು. ಇವು ಯಜಮಾನನಲ್ಲಿ ಪ್ರಾಣವಾಯುವನ್ನು ಸ್ಥಾಪಿಸುವವು. ಅನಂತರ ಮುಂದಿನ ನಾಲ್ಕು ಹೋಮಗಳು (೭ ರಿಂದ ೧೦) ಬಹುವಚನಾಂತವಾಗಿದ್ದು ಯಜಮಾನನಲ್ಲಿ ಅಪಾನವಾಯುವನ್ನು ಸ್ಥಾಪಿಸುವವು. ಕೊನೆಯ ಎರಡು (೧೧ ಮತ್ತು ೧೨) ಮಂತ್ರಗಳು ಮತ್ತೆ ಏಕವಚನಾಂತವಾಗಿದ್ದು ಯಜಮಾನನಲ್ಲಿ ವ್ಯಾನವಾಯುವನ್ನು ಸ್ಥಾಪಿಸುವವು. ಈ ಸಂಬಂಧವಾದ ಪ್ರೈಷಮಂತ್ರಗಳ ವಿಷಯವನ್ನು ತೈತ್ತಿರೀಯಸಂಹಿತೆಯಲ್ಲಿ ಹೀಗೆ ಹೇಳಿದೆ—**ಋತುನಾ ಪ್ರೇಷ್ಯೇತಿ ಷಟ್ಕೃತ್ವ ಆಹ ಷಡ್ವಾ ಋತವ ಋತೂನೇವ ಪ್ರೀಣಾತ್ಯೃತುರ್ಭಿರಿತಿ ಚತುಶ್ಚತುಷ್ಪದ ಏವ ಪಶೂನ್ಪ್ರೀಣಾತಿ ದ್ವಿಃ ಪುನರ್ಋತುನಾಹ**

**ದ್ವಿಪದ ಏವ ಪ್ರೀಣಾತಿ** (ತೈ. ಸಂ. ೬-೫-೩-೨) ಎಂದರೆ ಮೊದಲ ಆರು ಮಂತ್ರಗಳು **ಋತುನಾ** ಎಂದು ಏಕವಚನಾಂತವಾಗಿದ್ದು ವಸಂತಾದಿ ಆರು ಋತುಗಳನ್ನು ತೃಪ್ತಿಗೊಳಿಸುವವು; ಮುಂದಿನ ನಾಲ್ಕು ಮಂತ್ರಗಳು **ಋತುಭಿಃ** ಎಂದು ಬಹುವಚನಾಂತವಾಗಿದ್ದು ನಾಲ್ಕು ಕಾಲುಗಳುಳ್ಳ ಪಶುಗಳನ್ನು ತೃಪ್ತಿಗೊಳಿಸುವವು; ಕೊನೆಯ ಎರಡು ಮಂತ್ರಗಳು ಪುನಃ **ಋತುನಾ** ಎಂದು ಏಕವಚನಾಂತವಾಗಿದ್ದು ಎರಡು ಪಾದಗಳಿರುವ ಮನುಷ್ಯರನ್ನು ತೃಪ್ತಿಗೊಳಿಸುವವು ಎಂದಭಿಪ್ರಾಯವು. ಋತುಯಾಜಸ್ವರೂಪವನ್ನು ಪ್ರಶಂಸಿಸುವರು. ಈ ಋತುಯಾಜಗಳು ಪ್ರಾಣಸ್ವರೂಪವಾಗಿರುವವು. ಪ್ರಾಣವು ಮೂರು ವಿಧವಾಗಿರುವುದು— ಪ್ರಾಣ, ಅಪಾನ ಮತ್ತು ವ್ಯಾನ ಎಂದು. ಇವುಗಳನ್ನು ಉದ್ದೇಶಿಸಿ ಹೋಮಮಾಡುವಾಗ ಪ್ರಾಣವಾಯುವನ್ನುದ್ದೇಶಿಸಿ **ಋತುನಾ** ಎಂದು ಏಕವಚನಾಂತವಾಗಿ ಆರು ಮಂತ್ರಗಳಿಂದಲೂ ಅಪಾನವಾಯುವನ್ನು **ಋತುಭಿಃ** ಎಂದು ಬಹುವಚನಾಂತವಾದ ನಾಲ್ಕು ಮಂತ್ರಗಳಿಂದಲೂ ವ್ಯಾನವಾಯುವನ್ನು **ಋತುನಾ** ಎಂದು ಏಕವಚನಾಂತವಾದ ಎರಡು ಮಂತ್ರಗಳಿಂದಲೂ ಹೋಮಮಾಡಬೇಕು. (ಪ್ರಾಣವೆಂದರೆ ಉಚ್ಛ್ವಾಸರೂಪವಾದ ವಾಯುವು; ಅಪಾನವೆಂದರೆ ನಿಃಶ್ವಾಸರೂಪವಾದ ವಾಯುವು; ವ್ಯಾನವೆಂದರೆ ಹೃದಯಮಧ್ಯದಲ್ಲಿ ನಿಂತು ಸಂಚರಿಸುವ ವಾಯುವು). ಈ ಋತುಯಾಜಹೋಮವಿಧಾನದಿಂದ ಉಚ್ಛ್ವಾಸರೂಪವಾದ ಪ್ರಾಣ, ನಿಃಶ್ವಾಸರೂಪವಾದ ಅಪಾನ, ಸಂಚಾರರೂಪವಾದ ವ್ಯಾನ ಎಂಬ ಮೂರುವಿಧ ಪ್ರಾಣಸ್ವರೂಪವಾದ ವಾಯುಗಳನ್ನು ಯಜ್ಞಮಾಡುವ ಯಜಮಾನನಲ್ಲಿ ಶಾಶ್ವತವಾಗಿ ಸ್ಥಾಪಿಸಲಾಗುವುದು. ಅವುಗಳು ಯಜಮಾನನ ಶರೀರದಿಂದ ಹೊರಟುಹೋಗುವ ಸಂಭವವಿರುವುದಿಲ್ಲ.

**ಪ್ರಾಣಾ ವಾ ಋತುಯಾಜಾ ನರ್ತುಯಾಜಾನಾಮನು ವಷಟ್ಕು-**
**ರ್ಯಾದಸಂಸ್ಥಿತಾ ವಾ ಋತವ ಏಕೈಕ ಏವ ಯದೃತುಯಾ-**
**ಜಾನಾಮನು ವಷಟ್ಕುರ್ಯಾದಸಂಸ್ಥಿತಾನೃತೂನ್ಸಂಸ್ಥಾಪಯೇ-**
**ತ್ಸಂಸ್ಥಾ ವಾ ಏಷಾ ಯದನುವಷಟ್ಕಾರೋ ಯ ಏನಂ ತತ್ರ**
**ಬ್ರೂಯಾದಸಂಸ್ಥಿತಾನೃತೂನ್ಸಮತಿಷ್ಠಿಪದುಷ್ಷಮಂ ಭವಿಷ್ಯ-**
**ತೀತಿ ಶಶ್ವತ್ತಥಾ ಸ್ಯಾತ್ತಸ್ಮಾನ್ನರ್ತುಯಾಜಾನಾಮನುವಷಟ್ಕು-**
**ರ್ಯಾತ್ ॥**

ತೇಷು ಋತುಯಾಜೇಷ್ವನುವಷಟ್ಕಾರಂ ನಿಷೇಧತಿ—ಲೋಕೇ ವಸಂತಾದ್ಯೃತವೋಽಸಂಸ್ಥಿತಾ ಅಸಮಾಪ್ತಾ ಅನುಪರತಾ ಏಕಸ್ಯೈಕಸ್ಯಾನಂತರಮೇವ ದ್ವಿತೀಯ ಇತ್ಯೇವಮೇಕೈಕಕ್ರಮೇಣ ವಸಂತಗ್ರೀಷ್ಮವರ್ಷಾಶರದ್ಧೇಮಂತಶಿಶಿರಾಖ್ಯಾಃ ಪ್ರತ್ಯೇಕಂ ಮಾಸದ್ವಯೇನ ದ್ವಾದಶಮಾಸಾತ್ಮಕಾ ಘಟೀಯಂತ್ರವತ್ಪುನಃಪುನರಾವರ್ತಂತೇ ॥ ಅತೋ ನ ಕದಾಚಿದಪಿ ಋತೂನಾಮುಪರತಿರಸ್ತಿ ॥ ವಿಪಕ್ಷಬಾಧಕಪೂರ್ವಕಂ ಸ್ವಪಕ್ಷಮುಪಸಂಹರತಿ—ದುಃಷಮಂ ರೋಗದಾರಿದ್ರ್ಯರೂಪಂ ವಿಷಮಂ ಕಿಂಚಿದಸ್ವಾಸ್ಥ್ಯಂ । ಅನ್ಯತ್ಪೂರ್ವವದ್ವ್ಯಾಖ್ಯೇಯಂ ॥

ಈ ಋತುಯಾಜಹೋಮಮಾಡುವಾಗ ಅನುವಷಟ್ಕಾರವನ್ನು ಮಾಡಕೂಡದೆಂದು ನಿಷೇಧವನ್ನು ವಿಶದಪಡಿಸಿರುವರು ಈ ಋತುಯಾಜಗಳು ಪ್ರಾಣಸ್ವರೂಪವಾಗಿರುವವು. ಆದ್ದರಿಂದ ಅನುವಷಟ್ಕಾರವನ್ನು ಮಾಡಕೂಡದು. ಲೋಕವ್ಯವಹಾರದಲ್ಲಿ ನೋಡುವಾಗ ವಸಂತಾದಿಋತುಗಳು ಯಾವಾಗಲೂ ವಿಚ್ಛಿತ್ತಿಯಿಲ್ಲದೆ ಸಂತತವಾಗಿ ನಡೆದುಬರುತ್ತಿರುವವು. ವಸಂತಋತುವಾದ

ಕೂಡಲೇ ಗ್ರೀಷ್ಮ, ಗ್ರೀಷ್ಮವಾದಕೂಡಲೇ ವರ್ಷಾ ಇತ್ಯಾದಿಯಾಗಿ ಒಂದು ಋತುವಾದಕೂಡಲೇ ಮತ್ತೊಂದರಂತೆ ಎಡೆಬಿಡದೆ ನಡೆದುಬರುತ್ತಿರುವವು ಇವಕ್ಕೆ ಕೊನೆಮೊದಲಿಲ್ಲ. ಅನುವಷಟ್ಕಾರವು ವಜ್ರಾಯುಧಸ್ವರೂಪವಾಗಿರುವುದರಿಂದ ಅದನ್ನು ಈ ಋತು ಯಾಜಹೋಮದಲ್ಲಿ ಮಾಡಕೂಡದು. ಹಾಗೆ ಮಾಡಿದ್ದೇ ಆದರೆ ಪ್ರಕೃತಿನಿಯಮದಂತೆ ನಡೆದುಬರುತ್ತಿರುವ ಋತುಗಳ ಸ್ವಭಾವದಲ್ಲಿ ಬದಲಾವಣೆಯುಂಟಾಗಬಹುದು ಎಂದರೆ ವಸಂತಋತುವಿನಲ್ಲಿ ಇರುವ ಸ್ವಭಾವವು ಬದಲಾವಣೆಯಾಗಿ ವರ್ಷಾ ಋತುವಿನ ಸ್ವಭಾವವು ಉಂಟಾಗಬಹುದು. ಎಂದರೆ ಒಂದು ಋತುವಿನ ಸ್ವಭಾವವು ಮತ್ತೊಂದು ಋತುವಿನಲ್ಲಿ ಉಂಟಾಗಿ ಅದರಿಂದ ರೋಗರುಜಿನಾದಿಗಳು ಸಂಭವಿಸುವ ಅಪಾಯವಿರುವುದು. ಆದ್ದರಿಂದ ಪ್ರಕೃತಿನಿಯಮಕ್ಕೆ ತೊಂದರೆಯುಂಟಾಗದಂತೆಯೂ ಋತುಗಳು ಸ್ವಾಭಾವಿಕವಾಗಿ ಯಾವಾಗಲೂ ನಡೆದುಬರುವುದಕ್ಕಾಗಿಯೂ ಋತುಯಾಜಹೋಮಗಳನ್ನು ಮಾಡುವಾಗ ಅನುವಷಟ್ಕಾರವನ್ನು ಮಾಡಕೂಡದು.

### *English Translation*

**(Rituyajas)**

The mantras repeated for the offerings to the Ritus (seasons) are the vital airs. By performing them, they (the priests) provide the sacrificer with vital airs. By repeating six mantras containing the singular rituna to the Ritus, they provide him with the air exhaled (apana); by repeating, at last, two mantras containing the singular rituna they provide him with the circulating vital air (vyama). For the vital airs are three-fold viz., air inhaled, air exhaled, and the air circulating in the body. (These Ritu offerings being made in three sections) in the first (series of mantras when six are given) the singular rituna is used; in the second the plural ritubhir; and in the third the singular again rituna are applied. (This is done) to keep together the vital airs, to prevent them from being cut off.

The Ritu Yajas are the vital airs. (Thence) the Hotar ought not to repeat the Anuvashatkara. For the Ritus have no end; one (always) follows the Anuvashatkara) when making the offerings to the Ritus, he would bring the endless seasons (their endless succession) to a stand still. For this formula is a stand still. Who therefore should repeat it would bring the Ritus to a stand still and difficulty would be created (for the sacrifice). This always happens. Thence he ought not to repeat that formula, when repeating the mantras for the offerings to the Ritus.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ನವಮಾಧ್ಯಾಯೇ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಒಂಭತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು.**



# ಅಥ ನವಮಾಧ್ಯಾಯೇ ಷಷ್ಠಃ ಖಂಡಃ

## ಒಂಭತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ ಹೋತೃವಿನ ಪುರೋಡಾಶಭಕ್ಷಣವು ಮತ್ತು ಗ್ರಹಶೇಷವಾದ ಸೋಮಪಾನವು ]

ಪ್ರಾಣಾ ವೈ ದ್ವಿದೇವತ್ಯಾಃ ಪಶವ ಇಳಾ ದ್ವಿದೇವತ್ಯಾನ್ಭಕ್ಷಯಿತ್ವೇಳಾ-ಮುಪಹ್ವಯತೇ ಪಶವೋ ವಾ ಇಳಾ ಪಶೂನೇವ ತದುಪಹ್ವ-ಯತೇ ಪಶೂನ್ಯಜಮಾನೇ ದಧಾತಿ ।

ಸವನೀಯಪಶುಪುರೋಡಾಶಪ್ರಚಾರಾದೂರ್ಧ್ವಂ ತದಂಗಮಿಡೋಪಹ್ವಾನಮವ-ಸ್ಥಾಪ್ಯ ದ್ವಿದೇವತ್ಯಗ್ರಹಪ್ರಚಾರಃ ಕೃತಃ । ತತ ಊರ್ಧ್ವಂ ತದ್ಗ್ರಹಶೇಷಭಕ್ಷಣಮಪಿ ಪ್ರಾಪ್ತಂ ತತ್ರ ಇಳೋಪಹ್ವಾನಗ್ರಹಶೇಷಭಕ್ಷಣಯೋಃ ಕಿಂ ಪೂರ್ವಂ ಕಿಮಪರಮಿತಿ ಕ್ರಮಸ್ಯ ಜ್ಞಾತು-ಮಶಕ್ಯತ್ವಾತ್ತಂ ಕ್ರಮಂ ವಿಧತ್ತೇ—ದ್ವಿದೇವತ್ಯಾನಾಂ ವಾಗಾದಿಪ್ರಾಣರೂಪತ್ವಂ ಪೂರ್ವಮೇ-ವೋಕ್ತಮಿಡಾದೇವತಾ ಚ ಗೌರ್ವಾ ಅಸ್ಯೈ ಶರೀರಮಿತಿ ಶ್ರುತೇಃ ಪಶುರೂಪಾ ॥ ತತ್ರೈವಂ ಸ್ಥಿತೇ ಪ್ರಥಮತೋ ದ್ವಿದೇವತ್ಯಗ್ರಹಶೇಷಾನ್ ಭಕ್ಷಯಿತ್ವಾ ಪಶ್ಚಾದಿಳೋಪಹ್ವಾನಂ ಕುರ್ಯಾತ್ ॥ ತಥಾ ಸತೀಡಾಯಾಃ ಪಶುರೂಪತ್ವೇನ ಪಶುನೇವೋಪಹೂತವಾನ್ಭವತಿ ॥ ತಾಂಶ್ಚ ಪಶೂನ್ಸ್ವ-ಕೀಯೈಃ ಪ್ರಾಣೈಃ ಸುಸ್ಥಿತೇ ಯಜಮಾನೇ ಸ್ಥಾಪಯತಿ । ಅಯಮೇವಾರ್ಥೋ ವ್ಯತಿರೇಕ-ಮುಖೇನ ಶ್ರುತ್ಯಂತರೇ ಪ್ರತಿಷ್ಠಾಪಿತಃ—"ಪ್ರಾಣಾ ವಾ ಏತೇ ಯದ್ದ್ವಿದೇವತ್ಯಾಃ ಪಶವ ಇಳಾ ಯದಿಡಾಂ ಪೂರ್ವಾಂ ದ್ವಿದೇವತ್ಯೇಭ್ಯ ಉಪಹ್ವಯೇತ ಪಶುಭಿಃ ಪ್ರಾಣಾನನ್ತರ್ದಧೀತ ಪ್ರಮಾಯುಕಃ ಸ್ಯಾದ್ದ್ವಿದೇವತ್ಯಾನ್ಭಕ್ಷಯಿತ್ವೇಡಾಮುಪಹ್ವಯತೇ ಪ್ರಾಣಾನೇವಾಽಽತ್ಮನ್ಧಿತ್ವಾ ಪಶೂನುಪಹ್ವಯತೇ" ಇತಿ॥ ಇತ್ಥಂ ದ್ವಿದೇವತ್ಯಭಕ್ಷಣಸ್ಯ ಪೂರ್ವಭಾವಿತ್ವಮಿಳೋಪಹ್ವಾನಸ್ಯ ಪಶ್ಚಾದ್ಭಾವಿತ್ವಂ ಚ ವ್ಯವಸ್ಥಾಪಿತಂ ॥ ತದೇತದಿಡಾಪಾತ್ರೇ ಭಾಗಮವದಾಯ ಕ್ರಿಯಮಾಣ-ಮುಪಹ್ವಾನಂ ॥

ಪ್ರಾತಸ್ಸವನಾದಿ ಸವನಕರ್ಮಗಳಲ್ಲಿ ಆಚರಿಸಲಾಗುವ ಪುರೋಡಾಶಹೋಮ, ಅದರ ಅಂಗಭೂತವಾದ ಇಳೋಪಹ್ವಾನ (ಇಳಾ ಎಂಬ ದೇವತೆಯನ್ನು ಪ್ರಾರ್ಥಿಸಿ ಕರೆಯುವುದು) ಇತ್ಯಾದಿ ಕ್ರಮಗಳನ್ನು ವಿವರಿಸಿ ದ್ವಿದೇವತ್ಯಗ್ರಹಹೋಮಾದಿಗಳ ವಿಷಯವನ್ನು ಇದುವರೆಗೂ ವಿವರಿಸಿದ್ದಾಯಿತು. ಈಗ ಹೋಮಾನಂತರ ಹವಿಶ್ಶೇಷವಾದ ಪುರೋಡಾಶ ಭಕ್ಷಣವನ್ನು ಮಾಡಬೇಕಾಗಿರುವುದು. ಈ ಸಂದರ್ಭದಲ್ಲಿ ಮೊದಲು ಇಳೋಪಹ್ವಾನವನ್ನು ಮಾಡಬೇಕೇ ಅಥವಾ ಗ್ರಹಹೋಮಶೇಷಭಕ್ಷಣವನ್ನು

ಮಾಡಬೇಕೇ ಎಂಬ ಸಂಶಯವು ಉಂಟಾಗುವುದು ಸಹಜವಷ್ಟೆ. ಇದರ ಕ್ರಮವನ್ನು ಈಗ ವಿವರಿಸಲಾಗುವುದು. ದ್ವಿದೇವತ್ಯ ಗ್ರಹಗಳು ವಾಗಾದಿ ಪ್ರಾಣಸ್ವರೂಪಗಳಾಗಿರುವವೆಂದು ಹಿಂದೆಯೇ ಹೇಳಿರುವುದಷ್ಟೆ. ಇಳಾ ಎಂಬ ದೇವತೆಯು ಪಶುರೂಪ ವಾಗಿರುವುದು. **ಗೌರ್ವಾ ಅಸ್ಯೈ ಶರೀರಂ** ಎಂಬ ಶ್ರುತಿವಾಕ್ಯವು ಇದನ್ನು ಸಮರ್ಥಿಸುವುದು. ಹೀಗಿರುವುದರಿಂದ ಮೊದಲು ದ್ವಿದೇವತ್ಯಗ್ರಹಶೇಷವಾದ ಹವಿಸ್ಸನ್ನು ಭಕ್ಷಿಸಿ ಅನಂತರ ಇಳೋಪಹ್ವಾನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಎಂದರೆ ಪಶುರೂಪದಿಂದ ಇರುವ ಇಳಾದೇವತೆಯನ್ನು ಉಪಹ್ವಾನಮಾಡುವುದರಿಂದ ಪಶುಗಳನ್ನು ಉಪಹ್ವಾನಮಾಡಿದಂತಾಯಿತು. ಮತ್ತು ತನ್ನ ಪ್ರಾಣಗಳಿಂದ ಸುದೃಢನಾಗಿರುವ ಯಜಮಾನನಲ್ಲಿ ಆ ಪಶುಸಂಪತ್ತನ್ನು ಸ್ಥಾಪಿಸಿದಂತಾಗುವುದು. ಈ ಅರ್ಥವಿರುವ ಶ್ರುತಿವಾಕ್ಯವು ಈರೀತಿ ಇರುವುದು— **ಪ್ರಾಣಾ ವಾ ಏತೇ ಯದ್ದ್ವಿದೇವತ್ಯಾಃ ಪಶವ ಇಡಾ । ಯದಿಡಾಂ ಪೂರ್ವಾಂ ದ್ವಿದೇವತ್ಯೇಭ್ಯ ಉಪಹ್ವಯೇತ ಪಶುಭಿಃ ಪ್ರಾಣಾನಂತರ್ದಧೀತ ಪ್ರಮಾಯುಕಃ ಸ್ಯಾತ್ । ದ್ವಿದೇವತ್ಯಾನ್ ಭಕ್ಷಯಿತ್ವೇಡಾಮುಪಹ್ವಯತೇ ಪ್ರಾಣಾನೇವಾತ್ಮನ್ ಧಿತ್ವಾ ಪಶೂನುಪಹ್ವಯತೇ** (ತೈ. ಸಂ. ೬-೪-೯-೩) ಎಂದರೆ ಈ ದ್ವಿದೇವತ್ಯಗ್ರಹಗಳು ಪ್ರಾಣಸ್ವರೂಪವಾಗಿರುವವು, ಇಳಾದೇವತೆಯು ಪಶುಸ್ವರೂಪವು. ಹೀಗಿರುವಾಗ ಮೊದಲು ದ್ವಿದೇವತ್ಯಗ್ರಹಹೋಮಶೇಷದ ಭಕ್ಷಣಕ್ಕೆ ಮೊದಲು ಇಡೋಪಹ್ವಾನವನ್ನು ಮಾಡಿದ್ದೇ ಆದರೆ ಅದರಿಂದ ಪಶುಗಳ ಪ್ರಾಣಕ್ಕೆ ಹಾನಿಯನ್ನುಂಟುಮಾಡಿದಂತಾಗುವುದು. ಇದು ಬಹಳ ಪ್ರಮಾದಕರವು. ಆದ್ದರಿಂದ ಹೀಗೆಮಾಡದೆ ಮೊದಲು ದ್ವಿದೇವತ್ಯ ಗ್ರಹಶೇಷದ ಭಕ್ಷಣೆಯನ್ನು ಮಾಡಿ ಅನಂತರ ಇಡೋಪಹ್ವಾನವನ್ನು ಮಾಡಬೇಕು. ಹೀಗೆ ಮಾಡುವುದರಿಂದ ಪಶುಗಳ ಪ್ರಾಣಕ್ಕೆ ಯಾವ ಹಾನಿಯೂ ಉಂಟಾಗುವುದಿಲ್ಲ. ಇಳಾಪಾತ್ರಿಯನ್ನು (ಹೋಮಶೇಷವಿರುವ ಪಾತ್ರೆ) ತೆಗೆದು ಕೈಯಲ್ಲಿ ಹಿಡಿದು ಕೊಂಡು ಇಡೋಪಹ್ವಾನವನ್ನು ಮಾಡಬೇಕು ಇಡೋಪಹ್ವಾನದ ಕ್ರಮವನ್ನು ನಾವು ಹಿಂದೆಯೇ ವಿವರಿಸಿದ್ದೇವೆ.

**ತದಾಹುರವಾಂತರೇಳಾಂ ಪೂರ್ವಾಂ ಪ್ರಾಶ್ನೀಯಾ೩ತ್ ಹೋತೃಚಮಸಂ ಭಕ್ಷಯೇ೩ತ್ ಇತಿ । ಅವಾಂತರೇಳಾಮೇವ ಪೂರ್ವಾಂ ಪ್ರಾಶ್ನೀಯಾದಥ ಹೋತೃಚಮಸಂ ಭಕ್ಷಯೇತ್ । ಯದ್ವಾವ ದ್ವಿದೇವತ್ಯಾನ್ಪೂರ್ವಾನ್ಭಕ್ಷಯತಿ ತೇನಾಸ್ಯ ಸೋಮಪೀಥಃ ಪೂರ್ವೋ ಭಕ್ಷಿತೋ ಭವತಿ ತಸ್ಮಾದವಾಂತರಮೇವ ಪೂರ್ವಾಂ ಪ್ರಾಶ್ನೀಯಾದಥ ಹೋತೃಚಮಸಂ ಭಕ್ಷಯೇತ್ತದುಭಯತೋಽನ್ನಾದ್ಯಂ ಪರಿಗೃಹ್ಣಾತಿ ಸೋಮಪೀಥಾಭ್ಯಾಮನ್ನಾದ್ಯಸ್ಯ ಪರಿಗೃಹೀತ್ಯೈ ।**

**ಯಾ ತು ಹೋತುರ್ಹಸ್ತೇ ಸಂಪಾದಿತಾವಾಂತರೇಡಾ ತತ್ಪ್ರಾಶನಸ್ಯ ಹೋತೃಚಮಸಭಕ್ಷಣಸ್ಯ ಚ ಪೌರ್ವಾಪರ್ಯಂ ವಿಚಾರ್ಯ ನಿಶ್ಚಿನೋತಿ—ವಿಚಾರಾರ್ಥಂ ಪ್ಲುತಿದ್ವಯಂ । ಅವಾಂತರೇಳಾಪ್ರಾಶನಂ ಪೂರ್ವಭಾವಿ ಚಮಸಭಕ್ಷಣಂ ಪಶ್ಚಾದ್ಭಾವೀತಿ ನಿರ್ಣಯಃ ॥ ತದೇತದುಪಪಾದಯತಿ—ದ್ವಿದೇವತ್ಯಾನಾಂ ಭಕ್ಷಣಂ ಪೂರ್ವಭಾವೀತಿ ಯದಸ್ತಿ ತೇನ ಸೋಮಪಾನರೂಪಸ್ಯ ಭಕ್ಷಸ್ಯ ಇಡಾಪ್ರಾಶನಾತ್ಪೂರ್ವತ್ವಂ ಸಿಧ್ಯತಿ । ತತ ಇಳಾಂ ಪ್ರಾಶ್ಯ ಹೋತೃಚಮಸಭಕ್ಷಣೇ ಸತಿ ಉಪರಿಷ್ಟಾದಪಿ ಸೋಮಭಕ್ಷಣಸಿದ್ಧೇರಿಡಾಯಾ ಉಭಯತಃ ಪಾರ್ಶ್ವ-**

ದ್ವಯೋಽಪಿ ಸೋಮಪಾನಾಭ್ಯಾಂ ಅಯಂ ಹೋತಾನ್ನಾದ್ಯಂ ಪರಿಗೃಹ್ಣಾತಿ॥ ತಚ್ಚ ಯಜಮಾನಸ್ಯ ಅನ್ನಾದ್ಯಪರಿಗ್ರಹಾಯ ಭವತಿ ॥

ಇಳೋಪಹ್ವಾನಕ್ಕೆ ಮೊದಲು ದ್ವಿದೇವತ್ಯಗ್ರಹದ ಹೋಮಶೇಷವನ್ನು ಭಕ್ಷಿಸಬೇಕೆಂದು ಹಿಂದೆ ಹೇಳಿದೆಯಷ್ಟೆ. ಆದರೆ ಇಲ್ಲಿ ದ್ವಿದೇವತ್ಯಗ್ರಹಗಳ ಹೋಮಶೇಷವು ಎರಡು ವಿಧವಾಗಿರುವುದು—ಪುರೋಡಾಶ ಮತ್ತು ಸೋಮ ; ಈ ಎರಡುವಿಧ ಹೋಮಶೇಷಗಳಲ್ಲಿ ಯಾವುದನ್ನು ಮೊದಲು ಭಕ್ಷಿಸಬೇಕು ಎಂಬ ವಿಷಯವನ್ನು ಈಗ ಚರ್ಚಿಸಿ ನಿರ್ಧರಿಸುವರು. ಇಲ್ಲಿ ೩ ಎಂಬ ಪ್ಲುತಿಯು ಹೇಗೆ ಮಾಡಬೇಕು ಎಂಬ ಸಂಶಯವನ್ನು ವ್ಯಕ್ತಪಡಿಸುವುದು. ಮೊದಲು ಪುರೋಡಾಶವನ್ನು ಭಕ್ಷಿಸಿ ಅನಂತರ ಸೋಮರಸವನ್ನು ಪಾನಮಾಡಬೇಕು. ದ್ವಿದೇವತ್ಯಗ್ರಹಗಳ ಹೋಮಶೇಷವನ್ನು ಮೊದಲು ಭಕ್ಷಿಸಬೇಕು ಎಂದು ಹೇಳಿರುವುದರಿಂದ ಸೋಮಪಾನರೂಪವಾದ ಭಕ್ಷಣವನ್ನೇ ಮೊದಲು ಮಾಡಬೇಕೆಂಬ ಅರ್ಥವು ಭಾಸವಾಗುವುದು. ಆದ್ದರಿಂದ ಹೋತೃವು ಮೊದಲು ದ್ವಿದೇವತ್ಯಗ್ರಹಗಳ ಹೋಮಶೇಷವಾದ ಸೋಮಪಾನವನ್ನು ಪಾನಮಾಡಿ ಅನಂತರ ತನ್ನ ಹಸ್ತದಲ್ಲಿರುವ ಪುರೋಡಾಶವನ್ನು ಭಕ್ಷಿಸಬೇಕು. ಬಳಿಕ ದ್ವಿದೇವತ್ಯಗ್ರಹಪಾತ್ರೆಯಿಂದ ಹೋತೃವು ತನ್ನ ಚಮಸಪಾತ್ರೆಗೆ (ಸೋಮಪಾನ ಮಾಡುವ ಸಣ್ಣ ಮರದ ಬಟ್ಟಲು) ಸೋಮವನ್ನು ಸುರಿದುಕೊಂಡು ಪಾನಮಾಡಬೇಕು. ಎಂದರೆ ಹೋತೃವು ಮೊದಲು ಗ್ರಹಪಾತ್ರೆಯಿಂದ (ದೊಡ್ಡಪಾತ್ರೆ) ಸೋಮಪಾನಮಾಡಿ ಅನಂತರ ಪುರೋಡಾಶವನ್ನು ಭಕ್ಷಿಸಿ ಅನಂತರ ತನ್ನ ಚಮಸವೆಂಬ ಸಣ್ಣ ಬಟ್ಟಲಿನಿಂದ ಸೋಮಪಾನಮಾಡಬೇಕು. ಹೀಗೆ ಮಾಡುವುದರಿಂದ ಹೋತೃವು ಪುರೋಡಾಶ ಭಕ್ಷಣಕ್ಕೆ ಮೊದಲು, ಒಂದಾವರ್ತಿಯೂ ಭಕ್ಷಣಾನಂತರ ಮತ್ತೊಂದಾವರ್ತಿಯೂ ಒಟ್ಟು ಎರಡಾವರ್ತಿ ಸೋಮಪಾನಮಾಡಿದಂತಾಗುವುದು. ಈ ಎರಡುವಿಧ ಸೋಮಪಾನದಿಂದಲೂ, ಪುರೋಡಾಶಭಕ್ಷಣದಿಂದಲೂ ತನಗೂ ಯಜ್ಞಮಾಡುವ ಯಜಮಾನನಿಗೂ ಪುಷ್ಟಿಯನ್ನೂ ಅನ್ನಾದ್ಯಾಹಾರವನ್ನೂ ಉಂಟುಮಾಡುವನು.

ಪ್ರಾಣಾ ವೈ ದ್ವಿದೇವತ್ಯಾ ಆತ್ಮಾ ಹೋತೃಚಮಸೋ ದ್ವಿದೇವತ್ಯಾನಾಂ
ಸಂಸ್ರವಾನ್ ಹೋತೃಚಮಸೇ ಸಮವನಯತ್ಯಾತ್ಮನ್ನೇವ
ತದ್ಧೋತಾ ಪ್ರಾಣಾನ್ಸಮವನಯತೇ ಸರ್ವಾಯುಃ ಸರ್ವಾ-
ಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥

ದ್ವಿದೇವತ್ಯಗ್ರಹವಿಶೇಷಸ್ಯ ಬಿಂದೋರ್ಹೋತೃಚಮಸೇ ಪ್ರಕ್ಷೇಪಂ ವಿಧತ್ತೇ ॥ ಸಂಸ್ರವಾಬಿಂದವಸ್ತತ್ಪ್ರಕ್ಷೇಪೇಣ ದ್ವಿದೇವತ್ಯರೂಪಾನ್ಪ್ರಾಣಾನ್ ಆತ್ಮನ್ಯೇವ ಶರೀರೇ ಹೋತೃಚಮಸರೂಪೇ ಹೋತಾ ಪ್ರಕ್ಷಿಪತಿ । ಪ್ರಾಣಾನಾಮವಸ್ಥಾಪನಾತ್ಸ್ವಯಂ ಸರ್ವಾಯುರಪಮೃತ್ಯುರಹಿತೋ ಭವತಿ ॥ ತದ್ಯಜಮಾನಸ್ಯ ಸರ್ವಾಯುತ್ವಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ ।

ದ್ವಿದೇವತ್ಯಗ್ರಹಪಾತ್ರೆಯಿಂದ ಹೋತೃಚಮಸಪಾತ್ರೆಗೆ ಸೋಮವನ್ನು ಸುರಿಯುವ ರೀತಿಯನ್ನು ವಿವರಿಸುವರು. ದ್ವಿದೇವತ್ಯಗ್ರಹಪಾತ್ರೆಗಳು ಪ್ರಾಣಸ್ವರೂಪವಾಗಿರುವವು. ಹೋತೃವಿನ ಚಮಸಪಾತ್ರೆಯು ಅವನ ಆತ್ಮಸ್ವರೂಪವಾಗಿರುವುದು. ದ್ವಿದೇವತ್ಯಗ್ರಹಪಾತ್ರೆಯಿಂದ ಹೋತೃವಿನ ಚಮಸಪಾತ್ರೆಗೆ ಸೋಮರಸವನ್ನು ಸುರಿಯುವಾಗ ದ್ವಿದೇವತ್ಯರೂಪವಾದ ಪ್ರಾಣಗಳನ್ನು ಹೋತೃವಿನ ಆತ್ಮನಲ್ಲಿ ಎಂದರೆ ಶರೀರದಲ್ಲಿ ಸ್ಥಾಪಿಸಿದಂತಾಗುವುದು. ಈ ವಿಧವಾದ ಪ್ರಾಣಸ್ಥಾಪನದಿಂದ ಹೋತೃವು ಅಪಮೃತ್ಯುರಹಿತನಾಗಿ ಪೂರ್ಣಾಯುಸ್ಸನ್ನು ಪಡೆಯುವುದಲ್ಲದೆ ಯಜ್ಞಮಾಡುವ ಯಜಮಾನನಿಗೂ ಪೂರ್ಣಾಯುಸ್ಸನ್ನು

ಉಂಟುಮಾಡುವನು. ಈ ವಿಷಯವನ್ನು ತಿಳಿದು ಆದರಂತೆ ಆಚರಿಸುವ ಪುರುಷನೂ ಸಹ ದೀರ್ಘಾಯುಸ್ಸನ್ನು ಪಡೆದು ಸುಖಿಸುವನು.

*English Translation*

**(The Hotar eats the Purodasa and drinks from the Grahas)**

The Soma jars belonging to two deities, are the vital airs, and cattle is food (ila). Thence after having drunk from the Soma jars belonging to two deities, he calls Ila (food). Ila is cattle. He thus calls cattle and (consequently) provides the sacrificer with cattle.

They ask, should the Hotar first eat the food (remainder of the Purodasa offering previous to the Soma offering) which he has in his hand, or should he drink first from his Soma cups (chamasa)? (The answer is) he should first eat the food which he has in his hand, then he may drink Soma from his cup. In consequence of the circumstance that he first drinks from the Soma jars (grahas) belonging to two deities the Soma draught is first (before he takes any other food) enjoyed by him. Therefore (after having tasted already the Soma juice by drinking from the Grahas belonging to two deities) he ought to eat the food (Purodasa) which he has in his hand, and then drink from his own cup (chamasa). In this way he takes for himself nourishment of both kinds (food and drink).

By taking both Soma draughts from the graha and the chamasa he obtains for himself nourishment of all kinds.

(The Hotar pours some drops of Soma from the Graha into his Chamasa: the meaning of this proceeding is given in the following:)

The Soma jars belonging to two deities are the vital airs: the Chamasa of the Hotar is the soul. By pouring drops from the Soma jars belonging to two deities in the Chamasa of the Hotar, the Hotar puts (in his own body) the vital airs for obtaining his full age. He who has such a knowledge attains to his full age (100 years).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ನವಮಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಒಂಭತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.



# ಅಥ ನವಮಾಧ್ಯಾಯೇ ಸಪ್ತಮಃ ಖಂಡಃ

## ಒಂಭತ್ತನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ ತೂಷ್ಣಿಂ ಶಂಸ ಎಂಬ ಮೌನವಾಗಿ ಆಚರಿಸುವ ಪ್ರಾರ್ಥನೆಯ ಸ್ವರೂಪವು ಇತ್ಯಾದಿ ]

ದೇವಾ ವೈ ಯದೇವ ಯಜ್ಞೇಽಕುರ್ವಂಸ್ತದಸುರಾ ಅಕುರ್ವಂಸ್ತೇ ಸಮಾವದ್ವೀರ್ಯಾ ಏವಾಸನ್ನ ವ್ಯಾವರ್ತಂತ ತತೋ ವೈ ದೇವಾ ಏತಂ ತೂಷ್ಣೀಂಶಂಸಮಪಶ್ಯಂಸ್ತಮೇಷಾಮಸುರಾ ನಾನ್ವವಾಯಂಸ್ತೂಷ್ಣೀಂಸಾರೋ ವಾ ಏಷ ಯತ್ತೂಷ್ಣೀಂಶಂಸಃ ॥

ಅಥ ತೂಷ್ಣೀಂಶಂಸವಿಧಾನಾರ್ಥಂ ಇತಿಹಾಸಮಾಹ—ದೇವಾಃ ಪುರಾ ಸ್ವಕೀಯೇ ಯಜ್ಞೇ ಯದೇವಾಂಗಮನ್ವತಿಷ್ಠನ್ ಅಸುರಾ ಅಪ್ಯವೇಕ್ಷ್ಯ ತದೇವಾನ್ವತಿಷ್ಠನ್ ॥ ತದಾ ತೇ ದೇವಾಶ್ಚಾಸುರಾಶ್ಚ ಪರಸ್ಪರಸಮಾವದ್ವೀರ್ಯಾಸ್ತುಲ್ಯಸಾಮರ್ಥ್ಯಾ ಏವಾಭವನ್ನೇಕಸ್ಯ ವರ್ಗಸ್ಯ ಸಾಮರ್ಥ್ಯಾಧಿಕ್ಯಂ ಇತರಸ್ಯ ತು ನ್ಯೂನಮಿತ್ಯೇವಂ ವ್ಯಾವೃತ್ತಿಂ ನ ಪ್ರಾಪ್ತಾಃ ತತೋ ದೇವಾಃ ಸಾಮರ್ಥ್ಯಾಧಿಕ್ಯಲಕ್ಷಣವ್ಯಾವೃತ್ತಿಹೇತುಂ ವೇದೇಷ್ವನ್ವಿಚ್ಛಂತ ಏತಂ ವಕ್ಷ್ಯಮಾಣಂ ತೂಷ್ಣೀಂಶಂಸಂ ತದುಪಾಯತ್ವೇನ ದೃಷ್ಟವಂತಃ । ಸರ್ವೇಷ್ವಪಿ ಶಸ್ತ್ರೇಷ್ವೃಚಃ ಪಠ್ಯಂತೇ ॥ ಅಸ್ಮಿಂಸ್ತು ಶಸ್ತ್ರೇ ನ ಪಠ್ಯಂತ ಇತಿ ತೂಷ್ಣೀಂಶಂಸತ್ವಂ ॥ ಋಕ್ಪಾಠರಾಹಿತ್ಯೇನ ಗೂಢಮೇಷಾಂ ದೇವಾನಾಂ ತಂ ತೂಷ್ಣೀಂಶಂಸಮಸುರಾ ನಾನ್ವವಾಯನ್ ನಾನುಗತವಂತಃ । ಏತದನುಷ್ಠಾನಮವಿಜ್ಞಾಯ ನ ಕೃತವಂತ ಇತ್ಯರ್ಥಃ । ಯೋಽಯಂ ತೂಷ್ಣೀಂಶಂಸ ಏಷ ತೂಷ್ಣೀಂಸಾರೋ ವಾ ಋಕ್ಪಾಠರಾಹಿತ್ಯಲಕ್ಷಣಾತ್ತೂಷ್ಣೀಂಭಾವ ಏವಾಸ್ಮಿನ್ಶಸ್ತ್ರೇ ಶಸ್ತಃ ॥ ಅಸುರಾಣಾಂ ತು ನಿಷ್ಫಲಂ ತೂಷ್ಣೀಮವಸ್ಥಾನಮಿತಿ ನಿಶ್ಚಯಃ ॥

ಈಗ ತೂಷ್ಣೀಂಶಂಸವೆಂಬ ಮಂತ್ರಸ್ವರೂಪವನ್ನು ವಿವರಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುತ್ತಾರೆ— ಪೂರ್ವದಲ್ಲಿ ದೇವತೆಗಳು ಯಜ್ಞಮಾಡಿದಾಗ ಯಾವಯಾವ ಕರ್ಮಾನುಷ್ಠಾನಗಳನ್ನು ಹೇಗೆಹೇಗೆ ಆಚರಿಸಿದರೋ ಹಾಗೆಯೇ ಅಸುರರೂ ಆಚರಿಸುತ್ತಾ ಬಂದರು. ಆದ್ದರಿಂದ ದೇವತೆಗಳೂ, ಅಸುರರೂ ಶಕ್ತಿಸಾಮರ್ಥ್ಯಾದಿಗಳಲ್ಲಿ ಒಬ್ಬರಿಗೊಬ್ಬರು ಸಮನಾಗಿದ್ದರು ಎಂದರೆ ದೇವತೆಗಳಿಗೂ ಅಸುರರಿಗೂ ಶಕ್ತಿಸಾಮರ್ಥ್ಯಗಳಲ್ಲಿ ಯಾವವಿಧವಾದ ಹೆಚ್ಚುಕಡಿಮೆಯೂ ಇರಲಿಲ್ಲ. ಆಗ ದೇವತೆಗಳು ಹೇಗಾದರೂ ಮಾಡಿ ಅಸುರರಿಗಿಂತ ಅಧಿಕ ಸಾಮರ್ಥ್ಯವುಳ್ಳವರಾಗಬೇಕೆಂದು ಯೋಚಿಸಿ ತಮ್ಮ ಬುದ್ಧಿಶಕ್ತಿ ಅಥವಾ ಜ್ಞಾನದೃಷ್ಟಿಯಿಂದ ತೂಷ್ಣೀಂಶಂಸವೆಂಬ ಮಂತ್ರವನ್ನು ಕಂಡುಕೊಂಡರು. ಕೆಲವು ಶಸ್ತ್ರಮಂತ್ರಗಳಲ್ಲಿ ಋಗಾದಿಮಂತ್ರಗಳು

ಘಟ್ಟಿಯಾಗಿ ಉಚ್ಚರಿಸಲ್ಪಡುವವು. ಕೆಲವು ಶಸ್ತ್ರಮಂತ್ರಗಳಲ್ಲಿ ಕೆಲವು ಮಂತ್ರಗಳ ಉಚ್ಚಾರಣೆಯು ಮಾಡಲ್ಪಡದೆ ಗೂಢವಾಗಿ ಮಾಡಲ್ಪಡುವುದು. ದೇವತೆಗಳು ತೂಷ್ಣೀಂಶಂಸವೆಂಬ ಮಂತ್ರವನ್ನು ಅಸುರರಿಗೆ ತಿಳಿಯದಂತೆ ಗೂಢವಾಗಿ ತಮ್ಮಲ್ಲಿಯೇ ಇಟ್ಟುಕೊಂಡರು. ಅಸುರರಿಗೆ ಇದರ ವಿಷಯವು ತಿಳಿಯಲೇ ಇಲ್ಲ. ಆದ್ದರಿಂದ ಅವರು ಇದರ ಅನುಷ್ಠಾನವನ್ನು ಆಚರಿಸಲಾಗಲಿಲ್ಲ. ಈ ತೂಷ್ಣೀಂಶಂಸವೆಂಬ ಮಂತ್ರಭಾಗವು ಶಸ್ತ್ರಮಂತ್ರಗಳಲ್ಲಿ ಋಙ್ಮಂತ್ರಗಳ ಮೂಲಕ ಪಠಿಸಲ್ಪಡದೆ ಕೇವಲ ಉಪಾಂಶು (ಮೆತ್ತನೆಯ) ಸ್ವರದಿಂದ ಉಚ್ಚರಿಸಲ್ಪಡುವುದರಿಂದ ಇದು ಮಂತ್ರಗಳಲ್ಲಿ ಸಾರಭೂತವಾಗಿರುವುದು. ಈ ತೂಷ್ಣೀಂಶಂಸಮಂತ್ರವನ್ನು ಘಟ್ಟಿಯಾಗಿ ಉಚ್ಚರಿಸದೆ ಮೆತ್ತನೆಯ ಉಪಾಂಶುಸ್ವರದಿಂದ ಪಠಿಸುತ್ತಿದ್ದುದರಿಂದ ಅಸುರರಿಗೆ ಇದು ಇಳಿಯಲಿಲ್ಲ. ದೇವತೆಗಳು ಯಾವ ಮಂತ್ರವನ್ನೂ ಪಠಿಸದೆ ಮೌನಭಾವದಿಂದಿರುವರೆಂದು ಅಸುರರು ಭಾವಿಸಿದರು.

ದೇವಾ ವೈ ಯಂ ಯಮೇವ ವಜ್ರಮಸುರೇಭ್ಯ ಉದಯಚ್ಛಂಸ್ತಂ ತಮೇಷಾಮಸುರಾಃ ಪ್ರತ್ಯಬುಧ್ಯಂತ ತತೋ ವೈ ದೇವಾ ಏತಂ ತೂಷ್ಣೀಂಶಂಸಂ ವಜ್ರಮಪಶ್ಯಂಸ್ತಮೇಭ್ಯ ಉದಯಚ್ಛಂಸ್ತ-ಮೇಷಾಮಸುರಾ ನ ಪ್ರತ್ಯಬುಧ್ಯಂತ ತಮೇಭ್ಯಃ ಪ್ರಾಹರಂ-ಸ್ತೇನೈನಾನಪ್ರತಿಬುದ್ಧೇನಾಘ್ನಂಸ್ತತೋ ವೈ ದೇವಾ ಅಭವನ್ಪ-ರಾಸುರಾಃ ಭವತ್ಯಾತ್ಮನಾ ಪರಾಸ್ಯ ದ್ವಿಷನ್ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ॥

ಅಸ್ಯ ತೂಷ್ಣೀಂಶಂಸಸ್ಯ ಅಸುರವಿನಾಶಹೇತುತ್ವಂ ದರ್ಶಯತಿ—ದೇವಾ ಅಸುರವಿನಾ-ಶಾರ್ಥಮಾಯುಧರೂಪಂ ಮಂತ್ರರೂಪಮಾಭಿಚಾರರೂಪಂ ವಾ ಯಂ ಯಂ ವಜ್ರಂ ಪ್ರತ್ಯುಕ್ತ-ವಂತ ಏಷಾಂ ದೇವಾನಾಂ ತಂ ತಂ ವಜ್ರಮಸುರಾಃ ಪ್ರತ್ಯಬುಧ್ಯಂತ ತದಾ ತದಾ ಪ್ರತೀಕಾರಂ ಕುರ್ವಂತಿ । ತತೋ ದೇವಾ ಏತಂ ತೂಷ್ಣೀಂಶಂಸಂ ವಜ್ರತ್ವೇನ ದೃಷ್ಟ್ವಾ ತದಸುರವಿನಾಶಾರ್ಥಂ ಪ್ರಯುಕ್ತವಂತಃ ॥ ಅಸುರಾಸ್ತು ದೇವಾನಾಂ ತಂ ತೂಷ್ಣೀಂಶಂಸಮಜ್ಞಾತ್ವಾ ಪ್ರತೀಕಾರಂ ನ ಕೃತವಂತಃ ॥ ತತೋ ನಿರ್ವಿಘ್ನೇನ ದೇವಾಸ್ತಂ ತೂಷ್ಣೀಂಶಂಸಂ ವಜ್ರಮಸುರಾಣಾಮುಪರಿ ಪ್ರಾಹರ್ಷ ತದ್ವಿನಾಶಾರ್ಥಂ ಪ್ರಯುಕ್ತವಂತಃ । ಅಸುರೈರವಿಜ್ಞಾತೇನ ತೇನೈವ ಅಸುರಾನ್ಹತ-ವಂತಃ । ತತೋ ದೇವಾ ವಿಜಯಿನೋಽಭವನ್ ಮುಖ್ಯೇಷ್ವಸುರೇಷು ಹತೇಷ್ವವಶಿಷ್ಟಾ ಅಸುರಾಃ ಪರಾಭೂತಾಃ ॥ ಏತದ್ವೇದನಂ ಪ್ರಶಂಸತಿ ॥

ಹೀಗಿರುವಾಗ ದೇವತೆಗಳಿಗೂ ಅಸುರರಿಗೂ ಪರಸ್ಪರ ಯುದ್ಧವು ಸಂಭವಿಸಿತು. ಆಗ ಆ ಯುದ್ಧದಲ್ಲಿ ದೇವತೆಗಳು ಅಸುರರಮೇಲೆ ಯಾವಯಾವ ಆಯುಧಗಳನ್ನು ಮಂತ್ರರೂಪವಾದ ಅಭಿಚಾರ (ಮಾಯ)ವನ್ನೂ ವಜ್ರಾಯುಧವನ್ನೂ ಪ್ರಯೋಗಿಸಿದರೋ ಅಸುರರೂ ಸಹ ಆಯಾಯ ಆಯುಧಗಳನ್ನು ಅದೇವಿಧವಾದ ಆಯುಧಗಳಿಂದ ಎದುರಿಸಿ ಪ್ರತೀಕಾರವನ್ನು ಮಾಡುತ್ತಿದ್ದರು. ಆಗ ದೇವತೆಗಳು ಅಸುರರು ಸೋಲದಿರುವುದನ್ನು ನೋಡಿ ನಮ್ಮಲ್ಲಿರುವ ಈ ತೂಷ್ಣೀಂಶಂಸವೆಂಬ ಮಂತ್ರಸ್ವರೂಪವಾದ ವಜ್ರಾಯುಧವು ಶತ್ರುಗಳನ್ನು ನಾಶಮಾಡುವುದರಲ್ಲಿ ಶಕ್ತಿಸಾಮರ್ಥ್ಯವುಳ್ಳದ್ದಾಗಿರುವುದು ಎಂದು ಯೋಚಿಸಿ ಆ ತೂಷ್ಣೀಂಶಂಸವೆಂಬ ವಜ್ರಾಯುಧವನ್ನು ಅಸುರರಮೇಲೆ ಪ್ರಯೋಗಿಸಿದರು. ಆಗ ಅಸುರರು ಈ ತೂಷ್ಣೀಂಶಂಸವೆಂಬ ಆಯುಧದ ಸ್ವರೂಪವನ್ನು

ತಿಳಿಯದೆ ಇದ್ದುದರಿಂದ ಅದಕ್ಕೆ ಪ್ರತಿಯಾಗಿ ದೇವತೆಗಳಮೇಲೆ ಪ್ರತೀಕಾರವನ್ನು ಕೈಗೊಳ್ಳಲಾಗಲಿಲ್ಲ. ಇದನ್ನು ಕಂಡು ದೇವತೆಗಳು ಅಸುರರಮೇಲೆ ತೂಷ್ಣೀಂಶಂಸವನ್ನು ನಿರ್ವಿಘ್ನವಾಗಿ ಪ್ರಯೋಗಿಸುತ್ತಾ ಬಂದರು. ಅಸುರರು ಇದರ ಸ್ವರೂಪವನ್ನು ತಿಳಿಯಲು ಅಸಮರ್ಥರಾದ್ದರಿಂದ ಅದಕ್ಕೆ ಪ್ರತೀಕಾರವನ್ನು ಮಾಡಲು ಸಾಧ್ಯವಿಲ್ಲದೆ ದೇವತೆಗಳಿಂದ ಹತರಾದರು. ಆಗ ದೇವತೆಗಳು ಯುದ್ಧದಲ್ಲಿ ವಿಜಯಶಾಲಿಗಳಾದರು. ಅಳಿದುಳಿದ ಅಸುರರು ಪರಾಜಿತರಾಗಿ ಓಡಿಹೋದರು. ಆದ್ದರಿಂದ ಈ ವಿಷಯವನ್ನು ತಿಳಿದಿರುವ ಪುರುಷನು ತನ್ನನ್ನು ದ್ವೇಷಿಸುವ ಶತ್ರುಗಳನ್ನು ಪರಾಭವಗೊಳಿಸಿ ತಾನೇ ಜಯಶಾಲಿಯಾಗುವನು.

ತೇ ವೈ ದೇವಾ ವಿಜಿತಿನೋ ಮನ್ಯಮಾನಾ ಯಜ್ಞಮತನ್ವತ ತಮೇಷಾಮಸುರಾ ಅಭ್ಯಾಯನ್ಯಜ್ಞವೇಶಸಮೇಷಾಂ ಕರಿಷ್ಯಾಮ ಇತಿ ತಾನ್ಸಮಂತಮೇವೋದಾರಾನ್ಪರಿಯತ್ತಾನುದಪಶ್ಯಂಸ್ತೇಽಬ್ರುವನ್ಸಂಸ್ಥಾಪಯಾಮೇಮಂ ಯಜ್ಞಂ ಯಜ್ಞಂ ನೋಽಸುರಾ ಮಾ ವಧಿಷುರಿತಿ ತಥೇತಿ ತಂ ತೂಷ್ಣೀಂಶಂಸೇ ಸಂಸ್ಥಾಪಯನ್ಭೂರಗ್ನಿರ್ಜ್ಯೋತಿರ್ಜ್ಯೋತಿರಗ್ನಿರಿತ್ಯಾಜ್ಯಪ್ರಉಗೇ ಸಂಸ್ಥಾಪಯನ್ನಿಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರ ಇತಿ ನಿಷ್ಕೇವಲ್ಯಮರುತ್ವತೀಯೇ ಸಂಸ್ಥಾಪಯನ್ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯ ಇತಿ ವೈಶ್ವದೇವಾಗ್ನಿಮಾರುತೇ ಸಂಸ್ಥಾಪಯಂಸ್ತಮೇವಂ ತೂಷ್ಣೀಂಶಂಸೇ ಸಂಸ್ಥಾಪಯಂಸ್ತಮೇವಂ ತೂಷ್ಣೀಂಶಂಸೇ ಸಂಸ್ಥಾಪ್ಯ ತೇನಾರಿಷ್ಟೇನೋದೃಚಮಾಶ್ನುವತ ॥

ಅಥೋಪಾಖ್ಯಾನಮುಖೇನೈವ ತೂಷ್ಣೀಂಶಂಸಸ್ಯ ಸ್ವರೂಪಂ ದರ್ಶಯತಿ—ಮುಖ್ಯಾನಾಮಸುರಾಣಾಂ ಹತತ್ವಾತ್ತೇ ದೇವಾ ವಿಜಿತಿನೋ ವಿಜಯವಂತೋ ವಯಮಿತಿ ಮನ್ಯಮಾನಾಃ ಯಜ್ಞಂ ವಿಸ್ತಾರಿತವಂತಃ । ಏಷಾಂ ದೇವಾನಾಂ ಯಜ್ಞಮಭಿಲಕ್ಷ್ಯ ಅಸುರಾಸ್ತತ್ರ ಗತಾಃ । ಕೇನಾಭಿಪ್ರಾಯೇಣೇತಿ ತದುಚ್ಯತೇ । ಏಷಾಂ ದೇವಾನಾಂ ಯಜ್ಞವೇಶಸಂ ಯಜ್ಞವಿಘಾತಂ ಕರಿಷ್ಯಾಮ ಇತಿ ತದಭಿಪ್ರಾಯಃ । ತತೋ ದೇವಾಃ ಸಮಂತಮೇವ ಪುರತಃ ಪೃಷ್ಠತಃ ಪಾರ್ಶ್ವಯೋಶ್ಚ ಸಮಾಗತಾನುದಾರಾನುದ್ಧತಾನ್ಪರಿಯತ್ತಾನತ್ಯಂತಸನ್ನಿಭಾನುದಪಶ್ಯನ್ ಉದಙ್ಮುಖಾಃ ಸಂತೋ ದೃಷ್ಟವಂತಃ । ದೃಷ್ಟ್ವಾ ಚ ಪರಸ್ಪರಮಿದಮಬ್ರುವನ್॥ ಇಮಂ ಯಜ್ಞಂ ಸಂಸ್ಥಾಪಯಾಮಃ ಶೀಘ್ರಂ ಸಮಾಪಯಾಮಃ ತಥಾ ಸತಿ ನೋಽಸ್ಮದೀಯಂ ಯಜ್ಞಮಸುರಾ ಮಾ ವಧಿಷುರ್ಮಾ ವಿನಾಶಯಂತು ವಿಲಂಬೇ ಸತಿ ವಿನಾಶಯಿಷ್ಯಂತಿ ತನ್ಮಾ ಭೂದಿತಿ ॥ ತದ್ವಚನಂ ಪರಸ್ಪರಮಂಗೀಕೃತ್ಯ ಸ್ವಕೀಯಂ ತಂ ಯಜ್ಞಂ ತೂಷ್ಣೀಂಶಂಸೇ ಸಂಸ್ಥಾಪಯನ್ ಶೀಘ್ರಂ ಸಮಾಪಿತವಂತಃ । ಯದ್ವಾ ತೂಷ್ಣೀಂಶಂಸಸ್ಯ ವಜ್ರರೂಪೇಣ ರಕ್ಷಕತ್ವಾದ್ರಕ್ಷಾರ್ಥಂ ತಸ್ಮಿನ್ ಸ್ಥಾಪಿತವಂತಃ ।

**ಕೋಽಯಂ ತೂಷ್ಣಿಂ ಶಂಸ ಇತಿ ಸ ಉಚ್ಯತೇ ॥ ಭೂರಗ್ನಿರ್ಜ್ಯೋತಿರಗ್ನಿರಿತ್ಯೇಷ ನವಾಕ್ಷರಾತ್ಮಕೋ ಮಂತ್ರ ಏಕಸ್ತೂಷ್ಣೀಂಶಂಸಭಾಗಃ । ಆಜ್ಯಂ ಪ್ರಉಗಂ ಚೇತ್ಯುಭೇ ಪ್ರಾತಃಸವನಕಾಲೀನೇ ಶಸ್ತ್ರೇ ತದುಭಯಮುಪ್ಯುಕ್ತೇ ತೂಷ್ಣೀಂಶಂಸಭಾಗೇ ಸ್ಥಾಪಿತವಂತಃ । ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರ ಇತ್ಯೇಷ ದಶಾಕ್ಷರಾತ್ಮಕೋ ಮಂತ್ರೋ ದ್ವಿತೀಯಸ್ತೂಷ್ಣೀಂಶಂಸಭಾಗಃ । ನಿಷ್ಕೇವಲ್ಯಂ ಮರುತ್ವತೀಯಂ ಚೇತ್ಯುಭೇ ಮಾಧ್ಯಂದಿನಸವನಕಾಲೀನೇ ಶಸ್ತ್ರೇ ತದುಭಯಮಿಂದ್ರೋ ಜ್ಯೋತಿರಿತ್ಯಸ್ಮಿಂಸ್ತೂಷ್ಣೀಂಶಂಸಭಾಗೇ ಸ್ಥಾಪಿತವಂತಃ । ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯ ಇತ್ಯೇಷ ನವಾಕ್ಷರಾತ್ಮಕೋ ಮಂತ್ರಸ್ತೃತೀಯಸ್ತೂಷ್ಣೀಂಶಂಸಭಾಗಃ । ವೈಶ್ವದೇವಮಾಗ್ನಿಮಾರುತಂ ಚೇತ್ಯುಭೇ ತೃತೀಯಸವನಕಾಲೀನೇ ಶಸ್ತ್ರೇ ತದುಭಯಂ ಸೂರ್ಯೋಜ್ಯೋತಿರಿತ್ಯಾದಿಕೇ ತೂಷ್ಣೀಂಶಂಸಭಾಗೇ ಸ್ಥಾಪಿತವಂತಃ । ತಂ ಸವನತ್ರಯಗತೈಃ ಷಡ್ಭಿಃ ಶಸ್ತ್ರೈಃ ಉಪೇತಂ ಯಜ್ಞಮೇವಮುಕ್ತೇನ ಪ್ರಕಾರೇಣ ತೂಷ್ಣೀಂಶಂಸೇ ಸ್ಥಾಪಿತವಂತ ಇತ್ಯೇವಮುಕ್ತಾರ್ಥಸ್ಯ ಉಪಸಂಹಾರಃ ಪುನಸ್ತಮೇವಮಿತ್ಯಾದಿಃ ॥ ಉಕ್ತಾರ್ಥಾನುವಾದಷಡ್ವಿಧಶಸ್ತ್ರಸಂಸ್ಥಾಪನಾದೂರ್ಧ್ವಮರಿಷ್ಟೇನ ಹಿಂಸಾರಹಿತೇನ ತೇನ ಯಜ್ಞೇನೋದೃಚಮುತ್ತಮಾಮೃಚಂ ಯಜ್ಞಸಮಾಪ್ತಿಮಾಶ್ನುವತ ಪ್ರಾಪ್ತವಂತಃ ॥**

ಒಂದು ಉಪಾಖ್ಯಾನದ ಮೂಲಕ ತೂಷ್ಣೀಂಶಂಸಮಂತ್ರದ ಸ್ವರೂಪವನ್ನು ವಿವರಿಸುತ್ತಾರೆ. ಯುದ್ಧದಲ್ಲಿ ಅಸುರರಲ್ಲಿ ಮುಖ್ಯ ನಾಯಕರಾದವರು ಮಡಿದು ಉಳಿದವರು ಓಡಿಹೋದನಂತರ ದೇವತೆಗಳು ತಮಗೆ ವಿಜಯವು ಲಭಿಸಿತೆಂದು ತಿಳಿದು, ಹಿಂದೆ ಮಾಡುತ್ತಿದ್ದ ಯಜ್ಞವನ್ನು ಮುಂದುವರೆಸಿದರು. ಆಗ ಅಸುರರಲ್ಲಿ ಪರಾಜಿತರಾಗಿ ಓಡಿಹೋಗಿದ್ದ ಕೆಲವರು ಹಿಂತಿರುಗಿ ಬಂದು ದೇವತೆಗಳು ಮತ್ತೆ ಯಜ್ಞಮಾಡುವುದನ್ನು ನೋಡಿ ಅದಕ್ಕೆ ವಿಘ್ನವನ್ನುಂಟುಮಾಡಲು ಪ್ರಯತ್ನಿಸಿದರು. ಆಗ ದೇವತೆಗಳು ತಮ್ಮ ಯಜ್ಞವೇದಿಕೆಯ ಸಮೀಪಕ್ಕೆ ನಾನಾಕಡೆಗಳಿಂದಲೂ ಎಂದರೆ ಹಿಂದುಗಡೆ, ಮುಂದುಗಡೆ, ಎಡಬಲಪಕ್ಕಗಳು ಮುಂತಾದ ಸರ್ವದಿಕ್ಕುಗಳಿಂದಲೂ ಉದ್ಧಟತನದಿಂದ ಸಮೀಪಕ್ಕೆ ನುಗ್ಗಿ ಬರುತ್ತಿರುವುದನ್ನು ನೋಡಿ ತಮ್ಮತಮ್ಮಲ್ಲಿ ಇಂತೆಂದರು— ಈ ಯಜ್ಞವನ್ನು ನಾವು ಬೇಗನೆ ಮುಗಿಸಬೇಕು. ವಿಳಂಬಮಾಡಿದಲ್ಲಿ ಈ ಅಸುರರು ನಮ್ಮ ಯಜ್ಞವನ್ನು ಧ್ವಂಸಮಾಡಿ ಹಾಳುಮಾಡುವರು. ಆದ್ದರಿಂದ ಬೇಗನೆ ಮುಗಿಸಬೇಕು ಎಂದು ನಿಶ್ಚಯಿಸಿ ಅಸುರರಿಂದ ಯಜ್ಞಕ್ಕೆ ಕೇಡುಂಟಾಗದಿರುವುದಕ್ಕಾಗಿ ವಜ್ರಾಯುಧ ಸ್ವರೂಪವಾಗಿರುವ ತೂಷ್ಣೀಂಶಂಸ ಮಂತ್ರದಲ್ಲಿ ತಮ್ಮ ಯಜ್ಞವನ್ನು ಸ್ಥಾಪಿಸಿಟ್ಟರು. ಹೇಗೆಂದರೆ— ಆ ತೂಷ್ಣೀಂಶಂಸದ ಮಂತ್ರವು ಯಾವುದೆಂದರೆ– **ಭೂರಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ** ಎಂಬ ಒಂಭತ್ತು ಅಕ್ಷರಗಳುಳ್ಳ ಮಂತ್ರವು ತೂಷ್ಣೀಂಶಂಸಮಂತ್ರದ ಒಂದುಭಾಗವು. ಇದಕ್ಕೆ ಆಜ್ಯಶಸ್ತ್ರ ಮತ್ತು ಪ್ರಉಗಶಸ್ತ್ರ ಎಂಬ ಎರಡು ಶಸ್ತ್ರಮಂತ್ರಗಳನ್ನೂ ಪಠಿಸಿ ಅವುಗಳ ಮಧ್ಯದಲ್ಲಿ ತೂಷ್ಣೀಂಶಂಸಮಂತ್ರದ ಒಂದುಭಾಗದಲ್ಲಿ ತಮ್ಮ ಯಜ್ಞವನ್ನು ಸ್ಥಾಪಿಸಿಟ್ಟರು; ಬಳಿಕ **ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರಃ** ಎಂಬ ಹತ್ತು ಅಕ್ಷರಗಳುಳ್ಳ ಮಂತ್ರವು ತೂಷ್ಣೀಂಶಂಸಮಂತ್ರದ ಎರಡನೆಯಭಾಗವು. ಇದಕ್ಕೆ ನಿಷ್ಕೇವಲ್ಯಶಸ್ತ್ರ, ಮರುತ್ವತೀಯಶಸ್ತ್ರಗಳೆಂದು ಎರಡು ಶಸ್ತ್ರಮಂತ್ರಗಳಿರುವವು. ಈ ಶಸ್ತ್ರಮಂತ್ರಗಳನ್ನು ಮಾಧ್ಯಂದಿನ ಸವನಕಾಲದಲ್ಲಿ ಪಠಿಸಿದನಂತರ ಆ ಎರಡು ಶಸ್ತ್ರಮಂತ್ರಗಳ ಮಧ್ಯದಲ್ಲಿ ತೂಷ್ಣೀಂಶಂಸಮಂತ್ರದ ಇಂದ್ರೋಜ್ಯೋತಿಃ ಎಂಬ ಎರಡನೆಯ ಭಾಗದಲ್ಲಿ ತಮ್ಮ ಯಜ್ಞವನ್ನು ಸ್ಥಾಪಿಸಿಟ್ಟರು; ಅನಂತರ **ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯಃ** ಎಂಬುದು ಒಂಭತ್ತು ಅಕ್ಷರಗಳುಳ್ಳ ಮೂರನೆಯಮಂತ್ರವು. ಇದು ತೂಷ್ಣೀಂಶಂಸಮಂತ್ರದ ಮೂರನೆಯಭಾಗವು. ಇದಕ್ಕೆ ಸೇರಿದಂತೆ ವೈಶ್ವದೇವಶಸ್ತ್ರ, ಅಗ್ನಿಮಾರುತಶಸ್ತ್ರ ಎಂಬ ಎರಡು ಶಸ್ತ್ರಮಂತ್ರಗಳಿರುವವು. ಈ ಎರಡು ಶಸ್ತ್ರಮಂತ್ರಗಳನ್ನು ತೃತೀಯ

ಸವನದಲ್ಲಿ ಪಠಿಸಿದನಂತರ ಆ ಶಸ್ತ್ರಮಂತ್ರಗಳ ಮಧ್ಯಭಾಗದಲ್ಲಿ ಎಂದರೆ ತೂಷ್ಣೀಂಶಂಸಮಂತ್ರದ ಮೂರನೆಯಭಾಗ ಮಧ್ಯದಲ್ಲಿ ತಮ್ಮ ಯಜ್ಞವನ್ನು ದೇವತೆಗಳು ಸ್ಥಾಪಿಸಿಟ್ಟರು. ಈರೀತಿ ತೂಷ್ಣೀಂಶಂಸಮಂತ್ರದಲ್ಲಿ ಆರು ಶಸ್ತ್ರಮಂತ್ರಗಳ ಮಧ್ಯದಲ್ಲಿ ದೇವತೆಗಳು ತಮ್ಮ ಯಜ್ಞಕರ್ಮವನ್ನು ಸ್ಥಾಪಿಸಿದ್ದರಿಂದ ಅವರ ಯಜ್ಞವು ಅಸುರರ ಯಾವ ಹಿಂಸೆಗೂ ಒಳಗಾಗದೆ ಕೊನೆಯ ಮಂತ್ರಪಠನದವರೆಗೂ ನಿರ್ವಿಘ್ನವಾಗಿ ನಡೆದು ಪರಿಸಮಾಪ್ತಿಯಾಯಿತು.

**ಸ ತದಾ ವಾವ ಯಜ್ಞಃ ಸಂತಿಷ್ಠತೇ ಯದಾ ಹೋತಾ ತೂಷ್ಣೀಂಶಂ-ಸಂ ಶಂಸತಿ ।**

ಇತ್ಥಮಾಖ್ಯಾಯಿಕಾಮುಖೇನ ತೂಷ್ಣೀಂಶಂಸಸ್ವರೂಪಮಭಿಧಾಯ ತದನುಷ್ಠಾನಂ ವಿಧತ್ತೇ—ಯಸ್ಮಿನ್ಕಾಲೇ ಹೋತಾ ತಮಿಮಂ ಮಂತ್ರಂ ಶಂಸೇತ್ ತದೈವ ಸ ಯಜ್ಞೋ ನಿರ್ವಿಘ್ನಃ ಸಮಾಪ್ಯತೇ ॥ ತಸ್ಮಾದ್ಧೋತ್ರಾ ತಚ್ಛಸ್ತ್ರಂ ಶಂಸನೀಯಂ ॥ ತತ್ಪ್ರಕಾರ ಆಶ್ವಲಾಯನೇನ ದರ್ಶಿತಃ—ಸುಮತ್ಪದ್ವಗ್ದೇಪಿತಾ ಮಾತರಿಶ್ವಾಽಚ್ಛಿದ್ರಾ ಪದಾಧಾದಚ್ಛಿದ್ರೋಕ್ಥಾ ಕವಯಃ ಶಂಸನ್ ಸೋಮೋ ವಿಶ್ವವಿನ್ನೀಥಾ ನಿನೇಷದ್ಬೃಹಸ್ಪತಿರುಕ್ಥಾಮದಾನಿ ಶಂಸಿಷದ್ವಾಗಾಯುರ್ವಿಶ್ವಾಯುರ್ವಿಶ್ವಮಾಯುಃ ಕ ಇದಂ ಶಂಸಿಷ್ಯತಿ ಸ ಇದಂ ಶಂಸಿಷ್ಯತೀತಿ ಜಪಿತ್ವಾನಭಿಹಿಂಕೃತ್ಯ ಶೋಂಸಾವೋಮಿತ್ಯುಚ್ಚೈರಾಹೂಯ ತೂಷ್ಣೀಂಶಂಸಂ ಶಂಸೇದುಪಾಂಶು ಸಪ್ರಣವಮುಸಂತನ್ವನ್ನೇಷ ಆಹಾವಃ ಪ್ರಾತಸ್ಸವನೇ ಶಸ್ತ್ರಾದಿಷು ಇತಿ। ಅಸ್ಯಾಯಮರ್ಥಃ। ಋತುಪಾತ್ರಭಕ್ಷಣಾನಂತರಂ ಹೋತುರ್ಮುಖತ ಆಸೀನೋಽಧ್ವರ್ಯುಃ ಪರಾಙ್ಮುಖಸ್ಸನ್ನಾವರ್ತತೇ ತದಾನೀಂ ಹೋತಾ ಸುಮದಿತ್ಯಾದಿ ಸ ಇದಂ ಶಂಸಿಷ್ಯತೀತ್ಯಂತಂ ಮಂತ್ರಂ ಜಪಿತ್ವಾ ಅಭಿಹಿಂಕಾರಮಕೃತ್ವಾ ಶೋಂಸಾವೋಮಿತ್ಯನೇನ ಮಂತ್ರೇಣಾಧ್ವರ್ಯುಮುಚ್ಚೈರಾಹೂಯ ಭೂರಗ್ನಿರಿತ್ಯಾದಿಕಂ ಪ್ರಣವಸಹಿತಮುಪಾಂಶು ಪಠೇತ್ಪ್ರಣವೇನ ಸಹಾಸಂತತಮವಿಚ್ಛೇದನಂ ಕುರ್ಯಾತ್ ॥ ಏಷ ಶೋಂಸಾವೋಮಿತಿ ಮಂತ್ರೋಽಧ್ವರ್ಯೋರಾಹ್ವಾನರೂಪತ್ವಾದಾಹಾವ ಇತ್ಯುಚ್ಯತೇ। ಸ ಚ ಪ್ರಾತಃಸವನೇ ಶಸ್ತ್ರಾದಿಷು ಪ್ರವರ್ತತೇ ಇತಿ ॥

ಈರೀತಿ ಆಖ್ಯಾಯಿಕಾ (ಇತಿಹಾಸ) ಮುಖಾಂತರ ತೂಷ್ಣೀಂಶಂಸಮಂತ್ರದ ಸ್ವರೂಪವನ್ನು ಹೇಳಿದ ಬಳಿಕ ಅದರ ಅನುಷ್ಠಾನವನ್ನು ಹೇಳಲಾಗುವುದು. ಹೋತೃವು ಯಾವಾಗ ಈ ತೂಷ್ಣೀಂಶಂಸಮಂತ್ರವನ್ನು ಹೇಳಿ ಮುಗಿಸುವನೋ ಆಗ ಯಜ್ಞವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗುವುದು. ಆದ್ದರಿಂದ ಹೋತೃವು ಈ ಶಸ್ತ್ರಮಂತ್ರವನ್ನು ಪಠಿಸಬೇಕು. ಇದರ ವಿಧಾನವನ್ನು ಆಶ್ವಲಾಯನರು ಈರೀತಿ ಹೇಳಿದಾರೆ—**ಸುಮತ್ಪದ್ವಗ್ದೇ ಪಿತಾ ಮಾತರಿಶ್ವಾಚ್ಛಿದ್ರಾ ಪದಧಾದಚ್ಛಿದ್ರೋಕ್ಥಾ ಕವಯಃ ಶಂಸನ್ಸೋಮೋ ವಿಶ್ವವಿನ್ನೀಥಾ ನಿನೇಷದ್ಬೃಹಸ್ಪತಿರುಕ್ಥಾಮದಾನಿ ಶಂಸಿಷದ್ವಾಗಾಯುರ್ವಿಶ್ವಮಾಯುಃಕ ಇದಂ ಶಂಸಿಷ್ಯತಿ ಸ ಇದಂ ಸಂಸಿಷ್ಯತೀತಿ ಜಪಿತ್ವಾನಭಿಹಿಂಕೃತ್ಯ ಶೋಂಸಾವೋಮಿತ್ಯುಚ್ಚೈರಾಹೂಯ ತೂಷ್ಣೀಂಶಂಸಂ ಶಂಸೇದುಪಾಂಶು ಸಪ್ರಣವಮುಸಂತನ್ವನ್ನೇಷ ಆಹಾವಃ ಪ್ರಾತಃ ಸವನೇ ಶಸ್ತ್ರಾದಿಷು ॥** (ಆ. ಶ್ರೌ. ೫-೯-೧, ೨) ಇದರ ಅರ್ಥವು—ಋತುಪಾತ್ರಹೋಮಶೇಷದ ಭಕ್ಷಣಾನಂತರ ಹೋತೃವಿನ ಮುಂಭಾಗದಲ್ಲಿ ಅಧ್ವರ್ಯುವು ಪರಾಙ್ಮುಖನಾಗಿ (ಅಂದರೆ ಬೇರೆ ಕಡೆ ಮುಖಮಾಡಿ) ಕುಳಿತುಕೊಂಡಿರುವನು. ಆಗ ಹೋತೃವು **ಸುಮತ್ಪದ್ವಗ್ದೇ** ಎಂದು ಮೊದಲಾದ **ಸ ಇದಗ್ಂಶಂಸಿಷ್ಯತಿ** ಎನ್ನುವವರೆಗೆ ಇರುವ (ಮೇಲೆ ಹೇಳಿರುವ) ಮಂತ್ರವನ್ನು

ಜಪಮಾಡಿ ಹಿಂ ಎಂದು ಹಿಂಕಾರವನ್ನು ಉಚ್ಚರಿಸಿ **ಶೋಂಸಾವೋಂ** ಎಂಬ ಮಂತ್ರದಿಂದ ಅಧ್ವರ್ಯುವನ್ನು ಉಚ್ಚಸ್ವರದಿಂದ ಕರೆದು **ಭೂರಗ್ನಿ** ಎಂದು ಮೊದಲಾದ ಮಂತ್ರವನ್ನು ಪ್ರಣವ (ಓಂ) ಪೂರ್ವಕವಾಗಿ ಪಠಿಸಬೇಕು. ಓಂಕಾರದಿಂದ ಮೊದಲು ಮಾಡಿ ಮಂತ್ರಾಂತ್ಯದವರಿವಿಗೂ ಎಲ್ಲಿಯೂ ನಿಲ್ಲಿಸಬಾರದು. ಈ **ಶೋಂಸಾವೋಂ** ಎಂಬ ಮಂತ್ರವು ಅಧ್ವರ್ಯುವನ್ನು ಕರೆಯುವುದಕ್ಕೆ ಉಪಯೋಗಿಸುವುದರಿಂದ ಇದಕ್ಕೆ ಆಹಾವ ಎಂದು ಹೆಸರು. ಈ ಮಂತ್ರವು ಪ್ರಾತಃಸವನಕಾಲದಲ್ಲಿ ಶಸ್ತ್ರಾದಿ ಮಂತ್ರಗಳಲ್ಲಿ ಉಪಯೋಗಿಸಲ್ಪಡುವುದು.

ಸ ಯ ಏನಂ ಶಸ್ತೇ ತೂಷ್ಣೀಂಶಂಸ ಉಪ ವಾ ವದೇದನು ವಾ ವ್ಯಾಹರೇತ್ತಂ ಬ್ರೂಯಾದೇಷ ಏವೈತಾಮಾರ್ತಿಮಾರಿಷ್ಯತಿ ಪ್ರಾತರ್ವಾವ ವಯಮದ್ಯೇಮಂ ಶಸ್ತೇ ತೂಷ್ಣೀಂಶಂಸೇ ಸಂಸ್ಥಾಪಯಾಮಸ್ತಂ ಯಥಾ ಗೃಹಾನಿತಂ ಕರ್ಮಣಾನುಸಮಿಯಾದೇವಮೇವೈನಮಿದಮನುಸಮಿಮ ಇತಿ ಸ ಹ ವಾವ ತಾಮಾರ್ತಿಮೃಚ್ಛತಿ ಯ ಏವಂ ವಿದ್ವಾಂಸಂಶಸ್ತೇ ತೂಷ್ಣೀಂಶಂಸ ಉಪವಾ ವದತ್ಯನು ವಾ ವ್ಯಾಹರತಿ ತಸ್ಮಾದೇವಂ ವಿದ್ವಾಂಸಂಶಸ್ತೇ ತೂಷ್ಣೀಂಶಂಸೇ ನೋಪವದೇನ್ನಾನುವ್ಯಾಹರೇತ್ ॥

ಉಕ್ತಂ ತೂಷ್ಣೀಂಶಂಸನಂ ಪ್ರಶಂಸತಿ—ಹೋತ್ರಾ ತೂಷ್ಣೀಂಶಂಸೇ ಶಸ್ತೇ ಸತ್ಯೇನಂ ಹೋತಾರಂ ಸ ಉಪವದೇದ್ವಾಽನುವ್ಯಾಹರೇದ್ವಾ ಯಃ ಕೋಽಪ್ಯನ್ಯಃ ಪುರುಷೋ ನಿಂದೇಚ್ಛಪೇದ್ವಾ । ಉಪವಾದೋ ನಿಂದಾಽನುವ್ಯಾಹಾರಃ ಶಾಪಃ । ತದಾನೀಮಯಂ ಹೋತಾ ನಿಂದಿತಾರಂ ಶಪ್ತಾರಂ ವಾ ಬ್ರೂಯಾತ್ ॥ ಕಥಂ ಬ್ರೂಯಾದಿತಿ ತದುಚ್ಯತೇ । ಯೋ ನಿಂದಿತಾ ಶಪ್ತಾ ವಾಸ್ತ್ಯೇಷ ಏವ ನಿಂದಾರೂಪಾಂ ಶಾಪರೂಪಾಂ ವಾಽರ್ತಿಂ ವಿನಾಶಮಾರಿಷ್ಯತಿ ಪ್ರಾಪ್ಸ್ಯತಿ ನ ತ್ವಹಂ ಪ್ರಾಪ್ಸ್ಯಾಮಿ ॥ ತತ್ರ ಹೇತುರುಚ್ಯತೇ ॥ ಪ್ರಾತರ್ವಾವ ಪ್ರಾತಸ್ಸವನ ಏವ ವಯಂ ಹೋತಾರೋಽದ್ಯ ಅಸ್ಮಿನ್ದಿವಸೇ ಅಸ್ಮಾಭಿಃ ಶಸ್ತೇ ತೂಷ್ಣೀಂ ಶಂಸೇ ತಮಿಮಂ ಯಜ್ಞಂ ಸಂಸ್ಥಾಪಯಾಮಃ ಸಮಾಪಯಾಮೋ ಯಥಾ ಲೋಕೇ ಗೃಹಾನಿತಂ ಸ್ವಕೀಯಾನ್ಗೃಹಾನ್ಪ್ರಾಪ್ತಮತಿಥಿಂ ಕರ್ಮಣಾ ಆತಿಥ್ಯಸತ್ಕಾರರೂಪೇಣಾನುಸಮಿಯಾದಾನುಕೂಲ್ಯೇನ ಸಮ್ಯಕ್ಪ್ರಾಪ್ನುಯಾದುಪಚರೇದಿತ್ಯರ್ಥಃ ॥ ಏವಮೇವಮುಪೀದಂ ತೂಷ್ಣೀಂಶಂಸಾನುಷ್ಠಾನಂ ಕೃತ್ವೈನಂ ಯಜ್ಞಮನುಸಮಿಮ ಆನುಕೂಲ್ಯೇನ ಸಮ್ಯಕ್ಪ್ರಾಪ್ನುಮ ಉಪಚಾರಾಯ ಇತ್ಯರ್ಥಃ ॥ ಏಷ ಏವೇತ್ಯಾದಿಕೋಽನುಸಮಿಮ ಇತ್ಯಂತೋ ನಿಂದಾಶಾಪಪರಿಹಾರ್ಥೋ ಮಂತ್ರಃ । ತಂ ಹೋತಾ ಬ್ರೂಯಾತ್ । ತಸ್ಮಿನ್ನುಕ್ತೇ ಸತಿ ಯಃ ಪುಮಾನ್ಸ್ವಯಂ ವಿದ್ವಾನೇವ ಸಂಸ್ತೂಷ್ಣೀಂಶಂಸಸ್ಯ ಶಂಸನಾದೂರ್ಧ್ವಂ ನಿಂದತಿ ಶಪತಿ ವಾ ಸ ಏವ ತಾಮಾರ್ತಿಂ ಪ್ರಾಪ್ನೋತಿ । ತಸ್ಮಾತ್ಕಾರಣಾದೇವಮುಕ್ತಾರ್ಥಂ ವಿದ್ವಾನ್ಪುರುಷಸ್ತೂಷ್ಣೀಂಶಂಸಪಾಠಾದೂರ್ಧ್ವಂ ಹೋತಾರಂ ನ ನಿಂದೇನ್ನಾಪಿ ಶಪೇತ್ ॥

ಇದುವರೆಗೂ ವಿವರಿಸಿದ ತೂಷ್ಣೀಂಶಂಸಮಂತ್ರವನ್ನು ಪ್ರಶಂಸೆಮಾಡುವರು. ಹೋತೃವು ತೂಷ್ಣೀಂಶಂಸಮಂತ್ರವನ್ನು ಪಠಿಸಿದ ಮೇಲೆ ಯಾವನಾದರೊಬ್ಬ ಪುರುಷನು ಆ ಹೋತೃವನ್ನು ಕೆಟ್ಟ ಭಾಷೆಯಿಂದ ನಿಂದಿಸಿದರೆ ಅಥವಾ ಶಪಿಸಿದರೆ ಆಗ ಹೋತೃವು ಆ ನಿಂದಕನಾದ ಪುರುಷನನ್ನು ದ್ವೇಶಿಸಿ ಹೀಗೆ ಹೇಳಬೇಕು. (ಇಲ್ಲಿ ಹೇಳಿರುವ ಉಪವಾದಶಬ್ದಕ್ಕೆ ನಿಂದೆಯೆಂದೂ ಅನುವ್ಯಾಹಾರಶಬ್ದಕ್ಕೆ ಶಾಪವೆಂದೂ ಅರ್ಥಮಾಡಿದಾರೆ). ಯಾರು ಮಂತ್ರವಕ್ತೃವಾದ ನನ್ನನ್ನು ನಿಂದಿಸುವನೋ ಅಥವಾ ಶಪಿಸುವನೋ ಅವನೇ ನಿಂದಾರೂಪವೂ ಶಾಪರೂಪವೂ ಆದ ಕೆಡಕನ್ನು ಅಥವಾ ವಿನಾಶವನ್ನು ಹೊಂದುವನು. ನನಗೆ ಏನೂ ಕೆಡಕಾಗುವುದಿಲ್ಲ. ಏಕೆಂದರೆ ಪ್ರಾತಸ್ಸವನಕಾಲದಲ್ಲಿ ಋತ್ವಿಜರಾದ ನಾವು (ಹೋತೃಮೊದಲಾದವರು) ಈ ದಿವಸ ತೂಷ್ಣೀಂಶಂಸವೆಂಬ ಈ ಮಂತ್ರವನ್ನು ಪಠಿಸಿ ಯಜ್ಞವನ್ನು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳಿಸಿರುವೆವು. ಲೋಕವ್ಯವಹಾರದಲ್ಲಿ ಮನೆಗೆ ಬಂದ ಅತಿಥಿಯನ್ನು ನಾನಾವಿಧ ಉಪಚಾರಗಳಿಂದ ಸತ್ಕರಿಸುವರೋ ಅದರಂತೆ ನಾವು ಅತಿಥಿಸ್ಥಾನದಲ್ಲಿರುವ ಈ ಯಜ್ಞವನ್ನು ತೂಷ್ಣೀಂಶಂಸ ಎಂಬ ಮಹಾ ಮಂತ್ರಾದಿಪಠನಪೂರ್ವಕ ಆತಿಥ್ಯೋಪಚಾರಗಳಿಂದ ಸತ್ಕರಿಸಿ ಯಜ್ಞಸಮಾಪ್ತಿಯನ್ನು ಮಾಡಿರುವೆವು. ಮಂತ್ರದಲ್ಲಿ ಉಕ್ತವಾಗಿರುವ **ಏಷ ಏನ್ಮೈತಾಮಾರ್ತಿಮಾರಿಷ್ಯತಿ** ಎಂದು ಮೊದಲಾಗಿ **ಇದಮುನುಸಮಿಮು** ಎನ್ನುವವರೆಗೆ ಇರುವ ಮಂತ್ರವು ನಿಂದಾಶಾಪಪರಿಹಾರವನ್ನುಂಟುಮಾಡುವ ಮಂತ್ರವಾಗಿರುವುದು. ಅದನ್ನು ಹೋತೃವು ಪಠಿಸಬೇಕು. ಅದನ್ನು ಹೋತೃವು ಪಠಿಸಿದಮೇಲೂ ವಿದ್ವಾಂಸನೂ ಯಜ್ಞಾನುಷ್ಠಾನಕ್ರಮವನ್ನರಿತವನೂ ಆದ ಯಾವನಾದರೊಬ್ಬ ಪುರುಷನು ಹೋತೃವನ್ನು ನಿಂದಿಸಿದರೆ ಅಥವಾ ಶಪಿಸಿದರೆ ಹಾಗೆ ನಿಂದಿಸುವ ಪುರುಷನೇ ಕಷ್ಟಕ್ಕೀಡಾಗುವನು. ಆದ್ದರಿಂದ, ಎಲ್ಲವನ್ನೂ ತಿಳಿದ ವಿದ್ವಾಂಸನಾದ ಪುರುಷನು ಹೋತೃವನ್ನು ತೂಷ್ಣೀಂಶಂಸ ಮಂತ್ರಪಠನಾನಂತರ ನಿಂದಿಸಬಾರದು, ಶಪಿಸಲೂ ಬಾರದು.



## *English Translation*

### (The origin of the tushnim samasa, i.e., silent praise, explained)

The Asuras performed at the sacrifice all that the Devas performed. The Asuras became thus of equal power (with the Devas) and did not yield to them in any respect. Thereupon the Devas saw by their mental eyes the tushnim samsa, i.e., silent praise. The Asuras not knowing it did not perform this ceremony of the Devas. This "silent praise" is the silent (latent) essence of the mantras. Whatever weapon (vajra) the Devas raised against the Asuras, the latter got (always) aware of them. The Devas then saw (by their mental eyes) the "silent praise" as their weapon; they raised it, but the Asuras did not get aware of it. The Devas aimed with it a blow at the Asuras and defeated the latter, who did not perceive the weapon which was aimed at them. Thereupon the Devas became masters of the Asuras. He who has such a knowledge becomes master of his enemy, adversary and hater.

The Devas thinking themselves to be victors spread the sacrifice (i.e. made preparations for performing it.) The Asuras came near it intending to disturb it.

When the Devas saw the most daring of the Asuras draw near from all quarters, they said: let us finish this sacrifice, lest the Asuras slay us. So they did. They finished it by repeating the "silent praise." (The words which constitute the "silent praise" now follow.) By the words, bhur agnir jyotir jyotir agnih, they finished The Ajya and Prauga Shastras (the two principal liturgies at the morning libation); By the words indro jyotir bhuvo jyotir indrah they finished the Nishkevalya and Marutvatiya Shastras (the two principal liturgies at the midday libation). By the words, surya jyotir jyotih svah suryah, they finished the Vaisvadeva and Agnimaruta Shastras (the two liturgies of the evening libation).

Thus they finished the sacrifice by the "silent praise." Having thus finished the sacrifice by means "of the silent praise" they obtained the last mantra required for the safety of the sacrifice. The sacrifice is finished when the Hotar repeats the " silent praise ".

Should any one abuse the Hotar or curse him after having repeated the "silent praise," he should tell him (the man who abuses or curses him) that he (the abuser) would be hurt by dôing so.

(In order to make abuses or curses retort upon their author, the Hotar repeats the following mantra:) "At morning we (the Hotars) finish to-day this sacrifice after having repeated the "silent paaise". Just as one receives a guest (who comes to our houses) with ceremony, in the same way we receive (the sacrifice as our guest with due honours) by repeating this (silent praise). He who having such a knowledge should abuse or curse the Hotar after he has repeated the "silent praise", suffers injury. Thence he who has such a knowledge should not abuse or curse, after the "silent praise" has been repeated.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ನವಮಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಒಂಭತ್ತನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವು.



# ಅಥ ನವಮಾಧ್ಯಾಯೇ ಅಷ್ಟಮಃ ಖಂಡಃ

## ಒಂಭತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ ತೂಷ್ಣೀಂಶಂಸಮಂತ್ರದ ಅರ್ಥವಿವರಣೆಯು ]



**ಚಕ್ಷೂಂಷಿ ವಾ ಏತಾನಿ ಸವನಾನಾಂ ಯತ್ತೂಷ್ಣೀಂಶಂಸೋ ಭೂರಗ್ನಿ-ರ್ಜ್ಯೋತಿರ್ಜ್ಯೋತಿರಗ್ನಿರಿತಿ ಪ್ರಾತಸ್ಸವನಸ್ಯ ಚಕ್ಷುಷೀ ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರ ಇತಿ ಮಾಧ್ಯಂದಿನಸ್ಯ ಸವ-ನಸ್ಯ ಚಕ್ಷುಷೀ ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯ ಇತಿ ತೃತೀಯಸವನಸ್ಯ ಚಕ್ಷುಷೀ ॥**

ಅಥ ಪ್ರಕಾರಾಂತರೇಣ ತೂಷ್ಣೀಂಶಂಸಂ ಪ್ರಶಂಸತಿ । ಯತ್ತೂಷ್ಣೀಂಶಂಸೋಽಸ್ತ್ಯೇತಾನ್ಯೇವ ತದ್ಗತಾನಿ ಪದಾನಿ ತ್ರಯಾಣಾಂ ಸವನಾನಾಂ ಚಕ್ಷುಃಸ್ಥಾನೀಯಾನಿ । ಕಥಮೇತದಿತಿ ತದೇವ ಸ್ಪಷ್ಟೀಕ್ರಿಯತೇ ಭೂರಗ್ನಿರ್ಜ್ಯೋತಿರಿತಿ ಪ್ರಥಮಸ್ಯ ತೂಷ್ಣೀಂಶಂಸಪಾದಸ್ಯ ಪೂರ್ವೋ ಭಾಗಃ ॥ ಸ ಚ ಪ್ರಾತಃಸವನಸ್ಯ ದಕ್ಷಿಣಚಕ್ಷುಃಸ್ಥಾನೀಯಃ ॥ ಜ್ಯೋತಿರಗ್ನಿರಿತ್ಯಯಮುತ್ತರ-ಭಾಗೋ ವಾಮಚಕ್ಷುಃಸ್ಥಾನೀಯೋ ಭೂಲೋಕವರ್ತೀ ಯೋಽಗ್ನಿಃ ಸ ಏವ ಗೋಲಕದ್ವಯೇ ಪ್ರಕಾಶಕ ಇತ್ಯರ್ಥಃ॥ಇಂದ್ರೋ ಜ್ಯೋತಿರಿತ್ಯಯಂ ದ್ವಿತೀಯಸ್ಯಪೂರ್ವೋ ಭಾಗೋ ಮಾಧ್ಯಂ-ದಿನಸ್ಯ ಸವನಸ್ಯ ದಕ್ಷಿಣಂ ಚಕ್ಷುಃ ॥ ಭುವೋ ಜ್ಯೋತಿರಿತ್ಯಯಮುತ್ತರೋ ಭಾಗೋ ವಾಮಚ-ಕ್ಷುರಂತರಿಕ್ಷಲೋಕವರ್ತೀ ಪರಮೈಶ್ವರ್ಯಪ್ರಯುಕ್ತೋ ವಾಯುರ್ಗೋಲಕದ್ವಯೇ ಭಾಸಕ ಇತ್ಯರ್ಥಃ । ಸೂರ್ಯೋ ಜ್ಯೋತಿರಿತ್ಯೇಷ ತೃತೀಯಸ್ಯ ಪೂರ್ವಭಾಗಃ ತೃತೀಯಸವನಸ್ಯ ದಕ್ಷಿಣಂ ಚಕ್ಷುಃ ॥ ಜ್ಯೋತಿಃ ಸ್ವಃ ಸೂರ್ಯ ಇತ್ಯಯಮುತ್ತರೋ ಭಾಗೋ ವಾಮಚಕ್ಷುಃ ಸ್ವರ್ಲೋಕವರ್ತೀ ಸೂರ್ಯೋ ಗೋಲಕದ್ವಯೇ ಭಾಸಕ ಇತ್ಯರ್ಥಃ ॥

ಈಗ ತೂಷ್ಣೀಂಶಂಸಮಂತ್ರವನ್ನು ಪ್ರಕಾರಾಂತರವಾಗಿ ವರ್ಣಿಸುವರು. ತೂಷ್ಣೀಂಶಂಸಮಂತ್ರದಲ್ಲಿರುವ ಪದಗಳು ಅಥವಾ ಶಬ್ದಗಳು ಪ್ರಾತಸ್ಸವನಾದಿ ಮೂರು ಸವನಗಳಿಗೆ ಕಣ್ಣುಗಳಂತಿರುವವು. ಅದು ಹೇಗೆಂದರೆ—ತೂಷ್ಣೀಂಶಂಸದ ಮೊದಲನೆಯ ಪಾದದಲ್ಲಿರುವ **ಭೂರಗ್ನಿರ್ಜ್ಯೋತಿಃ** ಎಂಬ ಮಂತ್ರದ ಪೂರ್ವಭಾಗವು ಪ್ರಾತಸ್ಸವನದ ಬಲಗಣ್ಣಿನಂತಿರುವುದು **ಜ್ಯೋತಿರಗ್ನಿಃ** ಎಂಬ ಮಂತ್ರದ ಉತ್ತರಭಾಗವು ಎಡಗಣ್ಣಿನಂತಿರುವುದು. ಭೂಲೋಕದಲ್ಲಿ ವಾಸಿಸುವ ಅಗ್ನಿಯು ಈ ಎರಡು ಕಣ್ಣುಗಳಿಗೂ ಪ್ರಕಾಶವನ್ನುಂಟುಮಾಡುವವನಾಗಿರುವನು. **ಇಂದ್ರೋ ಜ್ಯೋತಿಃ** ಎಂಬ ಎರಡನೆಯ ಮಂತ್ರದ ಪೂರ್ವ

ಭಾಗವು ಮಾಧ್ಯಂದಿನಸವನಕ್ಕೆ ಬಲಗಣ್ಣಾಗಿರುವುದು; **ಭುವೋ ಜ್ಯೋತಿಃ** ಎಂಬ ಮಂತ್ರದ ಉತ್ತರಾರ್ಧವು ಮಾಧ್ಯಂದಿನ ಸವನದ ಎಡಗಣ್ಣಾಗಿರುವುದು. ಅಂತರಿಕ್ಷಲೋಕವಾಸಿಯೂ ಪರಮೈಶ್ವರ್ಯಯುಕ್ತನೂ ಆದ ವಾಯುದೇವನು ಈ ಎರಡು ಕಣ್ಣುಗಳಿಗೂ ಪ್ರಕಾಶಕನಾಗಿರುವನು. **ಸೂರ್ಯೋ ಜ್ಯೋತಿಃ** ಎಂಬ ಮಂತ್ರದ ಪೂರ್ವಭಾಗವು ತೃತೀಯಸವನದ ಬಲ ಗಣ್ಣಾಗಿರುವುದು. **ಜ್ಯೋತಿಃ ಸ್ವಃ ಸೂರ್ಯಃ** ಎಂಬ ಮಂತ್ರದ ಉತ್ತರಾರ್ಧವು ತೃತೀಯಸವನದ ಎಡಗಣ್ಣಾಗಿರುವುದು. ಸ್ವರ್ಗಲೋಕದಲ್ಲಿ ಬೆಳಗುತ್ತಿರುವ ಸೂರ್ಯದೇವನು ಈ ಎರಡು ಕಣ್ಣುಗಳಿಗೂ ಪ್ರಕಾಶಪ್ರದನಾಗಿರುವನು.

**ಚಕ್ಷುಷ್ಮದ್ಭಿಃ ಸವನೈ ರಾಧ್ನೋತಿ ಚಕ್ಷುಷ್ಮದ್ಭಿಃ ಸವನೈಃ ಸ್ವರ್ಗಂ ಲೋಕಮೇತಿ ಯ ಏವಂ ವೇದ ॥**

**ವೇದನಂ ಪ್ರಶಂಸತಿ—ರಾಧಿರಿಹಲೋಕೇ ಸಮೃದ್ಧಿಃ ॥**

ಯಾವ ಪುರುಷನು ಈ ತೂಷ್ಣೀಂಶಂಸಮಂತ್ರದ ಸ್ವರೂಪವನ್ನು ತಿಳಿದಿರುವನೋ ಅವನು ಚಕ್ಷುಃಸ್ವರೂಪವಾದ ಪ್ರಾತಃ ಸವನಾದಿ ಸವನಗಳಿಂದ ಸಮೃದ್ಧಿಯನ್ನು ಪಡೆಯುವನು ಮತ್ತು ಚಕ್ಷುರಾತ್ಮಕವಾದ ಸವನಗಳ ಮೂಲಕವೇ ಸ್ವರ್ಗಲೋಕವನ್ನು ಪಡೆದು ಸುಖಿಸುವನು.

**ಚಕ್ಷುರ್ವಾ ಏತದ್ಯಜ್ಞಸ್ಯ ಯತ್ತೂಷ್ಣೀಂಶಂಸ ಏಕಾ ಸತೀ ವ್ಯಾಹೃತಿ-ರ್ದ್ವೇಧೋಚ್ಯತೇ ತಸ್ಮಾದೇಕಂ ಸಚ್ಚಕ್ಷುರ್ದ್ವೇಧಾ ॥**

**ತೂಷ್ಣೀಂಶಂಸಸ್ಯ ಚಕ್ಷುಃಸ್ವರೂಪಮುಪಪಾದಯತಿ — ಯದ್ಯಪಿ ಭೂರಿತ್ಯೇಷೈವ ವ್ಯಾಹೃತಿಸ್ತಥಾಽಪಿ ತದ್ಯೋಗಾದಗ್ನಿರ್ಜ್ಯೋತಿರಿತ್ಯಪಿ ಪದದ್ವಯಂ ವ್ಯಾಹೃತಿತ್ವೇನೋಚ್ಯತೇ ॥ ಸೇಯಂ ವ್ಯಾಹೃತಿರೇಕೈವ ಸತ್ಯಾರೋಹಾವರೋಹಾಭ್ಯಾಂ ದ್ವೇಧೋಚ್ಯತೇ । ಯಸ್ಮಾದೇವಂ ತಸ್ಮಾಚ್ಚಕ್ಷುರಿಂದ್ರಿಯಮಪ್ಯೇಕಮೇವ ಸದ್ಗೋಲಕದ್ವಯೇ ದ್ವೇಧಾ ವರ್ತತೇ ॥ ತಸ್ಮಾಚ್ಚ-ಕ್ಷುಷ್ಟ್ವಂ ಯುಕ್ತಂ ।**

ತೂಷ್ಣೀಂಶಂಸಮಂತ್ರದ ಚಕ್ಷುಸ್ಸ್ವರೂಪವನ್ನು ವಿವರಿಸುವರು. **ಭೂಃ** ಎಂಬ ವ್ಯಾಹೃತಿಯು ಒಂದೇ ಆಗಿದ್ದರೂ ಅದರ ಸಂಬಂಧದಿಂದ **ಜ್ಯೋತಿಃ** ಎಂಬ ಪದದ್ವಯವು (ಎಂದರೆ ಮಂತ್ರದಲ್ಲಿ **ಜ್ಯೋತಿಃ** ಎಂಬ ಪದವು ಎರಡಾವರ್ತಿ ಇರುವುದು) ವ್ಯಾಹೃತಿಯೆಂದೇ ಹೇಳಲ್ಪಡುವುದು. ಈ ವ್ಯಾಹೃತಿಯು **ಜ್ಯೋತಿಃ** ಎಂಬ ಶಬ್ದವು ಒಂದೇ ಆಗಿದ್ದರೂ ಆರೋಹಾವ ರೋಹಕ್ರಮದಿಂದ ಮಂತ್ರದಲ್ಲಿ ಎರಡಾವರ್ತಿ ಪಠಿತವಾಗಿರುವುದು. ಆರೋಹಾವರೋಹವೆಂದರೆ **ಅಗ್ನಿರ್ಜ್ಯೋತಿರ್ಜ್ಯೋತಿ-ರಗ್ನಿಃ** ಎಂಬ ಮಂತ್ರದಲ್ಲಿ **ಅಗ್ನಿರ್ಜ್ಯೋತಿಃ** ಎಂಬಲ್ಲಿ ಜ್ಯೋತಿಶ್ಶಬ್ದವು ಅಗ್ನಿಶಬ್ದಾನಂತರವೂ **ಜ್ಯೋತಿರಗ್ನಿಃ** ಎಂಬಲ್ಲಿ ಜ್ಯೋತಿಶ್ಶಬ್ದವು ಅಗ್ನಿಶಬ್ದಕ್ಕೆ ಪೂರ್ವದಲ್ಲಿಯೂ ಪಠಿತವಾಗಿರುವುದು. ಈರೀತಿ ಒಂದೇ ಶಬ್ದವು ಎರಡಾವರ್ತಿ ಹಿಂದುಮುಂದಾಗಿ ಪಠಿತವಾಗಿರುವುದಕ್ಕೆ ಆರೋಹಾವರೋಹವೆಂದು ಹೆಸರು. ಜ್ಯೋತಿಶ್ಶಬ್ದವು ಎರಡಾವರ್ತಿ ಪಠಿತವಾಗಿರುವುದರಿಂದ ಅದು ಎರಡು ಚಕ್ಷುಗಳನ್ನು ಸೂಚಿಸುವುದು. ಆದರೆ ಎರಡು ಚಕ್ಷುಸ್ಸುಗಳೂ ಸೇರಿ ಒಂದೇವಿಧವಾದ ದೃಷ್ಟಿವ್ಯಾಪಾರದಲ್ಲಿ ಆಸಕ್ತವಾಗಿರುವುದರಿಂದ ಚಕ್ಷುಸ್ತತ್ತ್ವವು ಒಂದೇ ಆಗಿರುವುದು. ಆದುದರಿಂದ ಈ ಚಕ್ಷುಸ್ಸನ್ನು ಸೂಚಿಸುವುದಕ್ಕೆ ಜ್ಯೋತಿಃ ಎಂಬ ಒಂದೇ ವ್ಯಾಹೃತಿಯು ಸಾಕಾಗಿರುವುದು. ಭೂರಾದಿವ್ಯಾಹೃತಿಗಳು ಲೋಕತ್ರಯವನ್ನು ಸೂಚಿಸುವವು. ಈ ವಿಷಯದಲ್ಲಿ—**ಸೋಽತಾಮ್ಯತ್ ।**

ಸಭೂರಿತಿ ವ್ಯಾಹರತ್........ಸ ಭುವ ಇತಿ ವ್ಯಾಹರತ್........ಸ ಸುವರಿತಿ ವ್ಯಾಹರತ್ । ಏತಾ ವೈ ವ್ಯಾಹೃತಯ ಇಮೇ ಲೋಕಾಃ (ತೈ. ಬ್ರಾ. ೨-೨-೪-೩). ಭೂಃ ಭುವಃ ಸುವಃ ಎಂಬ ಮೂರು ವ್ಯಾಹೃತಿಗಳೂ ಭೂಮ್ಯಂತರಿಕ್ಷ ಸ್ವರ್ಗಲೋಕಗಳನ್ನು ಸೂಚಿಸುವವು.

ಮೂಲಂ ವಾ ಏತದ್ಯಜ್ಞಸ್ಯ ಯತ್ತೂಷ್ಣೀಂಶಂಸೋ ಯಂ ಕಾಮ-
ಯೇತಾನಾಯತನವಾನ್ಸ್ಯಾದಿತಿ ನಾಸ್ಯ ಯಜ್ಞೇ ತೂಷ್ಣೀಂಶಂಸಂ
ಶಂಸೇದುನ್ಮೂಲಮೇವ ತದ್ಯಜ್ಞಂ ಪರಾಭವಂತಮನು ಪರಾ-
ಭವತಿ ॥

ಪುನರಪಿ ಪ್ರಕಾರಾಂತರೇಣ ಪ್ರಶಂಸತಿ — ಯಂ ಯಜಮಾನಮುದ್ದಿಶ್ಯ ಹೋತಾ ದ್ವೇಷಾದೇವಂ ಕಾಮಯೇತಾನಾಯತನವಾನ್ಸ್ವರ್ಗಸಾಧನರೂಪೇಣಾಽಽಯತನೇನಾಽಽಶ್ರಯರೂಪೇಣ ರಹಿತೋಽಯಂ ಯಜಮಾನಃ ಸ್ಯಾದಿತಿ ತದಾನೀಮಸ್ಯ ದ್ವಿಷಸ್ಯ ಯಜಮಾನಸ್ಯ ಯಜ್ಞೇ ತೂಷ್ಣೀಂಶಂಸಂ ಹೋತಾ ನ ಶಂಸೇತ್ ॥ ತಥಾ ಸತಿ ವೃಕ್ಷಮೂಲವದ್ಯಜ್ಞಮೂಲತ್ವೇನ ಅವಸ್ಥಿತಸ್ಯ ತೂಷ್ಣೀಂಶಂಸಸ್ಯ ಪಾಠಾಭಾವಾದಯಂ ಯಜ್ಞೋ ಮೂಲರಹಿತಃ ಪರಾಭವತಿ ವಿನಶ್ಯತಿ । ತಮನು ಯಜಮಾನೋಽಪಿ ವಿನಶ್ಯತಿ । ತದೇವಂ ದ್ವೇಷ್ಯಸ್ಯ ವಿನಾಶಹೇತುತ್ವೇನ ಪ್ರಶಂಸಾ ಕೃತಾ ॥

ಈ ತೂಷ್ಣೀಂಶಂಸಮಂತ್ರವನ್ನು ಪ್ರಕಾರಾಂತವಾಗಿ (ಬೇರೆವಿಧವಾಗಿ) ಪ್ರಶಂಸೆಮಾಡುವರು. ವೃಕ್ಷಕ್ಕೆ ಬೇರು ಯಾವ ರೀತಿ ಮೂಲವಾಗಿರುವುದೋ ಅದೇರೀತಿ ಯಜ್ಞಕ್ಕೆ ತೂಷ್ಣೀಂಶಂಸಮಂತ್ರವು ಮೂಲವಾಗಿರುವುದು. ಯಜ್ಞಮಾಡುವ ಯಜಮಾನನಿಗೂ ಹೋತೃವಿಗೂ ಕಾರಣಾಂತರದಿಂದ ದ್ವೇಷಾಸೂಯೆಗಳು ಇದ್ದು ಯಜಮಾನನಿಗೆ ಕೆಡಕಾಗಲಿ ಎಂಬ ಅಪೇಕ್ಷೆಯು ಹೋತೃವಿಗಿದ್ದರೆ ಎಂದರೆ ಸ್ವರ್ಗಸಾಧನಭೂತವಾದ ಈ ಯಜ್ಞಾನುಷ್ಠಾನದಿಂದ ಯಜಮಾನನಿಗೆ ಸ್ವರ್ಗಪ್ರಾಪ್ತಿಯು ಆಗಬಾರದೆಂದು ಹೋತೃವಿನ ಅಪೇಕ್ಷೆಯಾಗಿದ್ದರೆ ಆಗ ಹೋತೃವು ಯಜ್ಞದಲ್ಲಿ ತೂಷ್ಣೀಂಶಂಸ ಮಂತ್ರವನ್ನು ಪಠಿಸಬಾರದು. ಹಾಗೆ ತೂಷ್ಣೀಂಶಂಸ ಮಂತ್ರಪಠನವಿಲ್ಲದಿದ್ದ ಯಜ್ಞವು ಬುಡವನ್ನು ಕಡಿದ ವೃಕ್ಷದಂತೆ ನಾಶವನ್ನೈದುವದು. ಆ ಯಜ್ಞವನ್ನನುಸರಿಸಿ ಯಜಮಾನನೂ ನಾಶವನ್ನೈದುವನು. ಈ ಮಂತ್ರವು ದ್ವೇಷಿಗಳಿಗೆ ವಿನಾಶಹೇತುವಾದುದೆಂದು ಪ್ರಕಾರಾಂತವಾಗಿ ತೂಷ್ಣೀಂಶಂಸ ಮಂತ್ರದ ಪ್ರಶಂಸೆಯು ಇಲ್ಲಿ ಮಾಡಲ್ಪಟ್ಟಿರುವುದು.

ತದು ವಾ ಆಹುಃ ಶಂಸೇದೇವಾಪಿ ವೈತದೃತ್ವಿಜೇಽಹಿತಂ ಯದ್ಧೋತಾ
ತೂಷ್ಣೀಂಶಂಸಂ ನ ಶಂಸತ್ಯೃತ್ವಿಜಿ ಹಿ ಸರ್ವೋ ಯಜ್ಞಃ
ಪ್ರತಿಷ್ಠಿತೋ ಯಜ್ಞೇ ಯಜಮಾನಸ್ತಸ್ಮಾಚ್ಛಂಸ್ತವ್ಯಃ ಶಂಸ್ತವ್ಯಃ ॥

ಪುನರಪಿ ಋತ್ವಿಜೋ ಹೋತುರನುಕೂಲತ್ವೇನ ಪ್ರಶಂಸತಿ—ತದು ವೈ ತತ್ರೈವ ತೂಷ್ಣೀಂಶಂಸವಿಷಯೇ ಬ್ರಹ್ಮವಾದಿನ ಆಹುಃ । ಕಿಮಿತಿ ತದುಚ್ಯತೇ ॥ ಯದ್ಯಪಿ ಯಜಮಾನೇ ಪ್ರೀತಿರಹಿತೋ ಹೋತಾ ತಥಾಪಿ ಶಂಸೇದೇವ ॥ ಅಪಿ ವೇತಿ ಪೂರ್ವೋಕ್ತಾಪೇಕ್ಷಯಾ

ಪಕ್ಷಾಂತರೋಪನ್ಯಾಸಾರ್ಥಃ । ಹೋತಾ ನ ಶಂಸತೀತಿ ಯದಸ್ತಿ ತದೇತದೃತ್ವಿಜೇ ಹೋತ್ರೇ-ಪ್ಯಭಿಹಿತಂ ಭ್ರಷ್ಟೇ ಯಜ್ಞೇ ದಕ್ಷಿಣಾಯಾ ಅಲಾಭಾತ್ ॥ ಯಸ್ಮಾದೃತ್ವಿಜಿ ಸರ್ವೋ ಯಜ್ಞಃ ಪ್ರತಿಷ್ಠಿತಸ್ತಸ್ಮಾದ್ಯಜ್ಞಯಜಮಾನಯೋಃ ಪ್ರತಿಷ್ಠಾದ್ವಾರಾ ಹೋತುರ್ಹಿತತ್ವೇನಾಯಂ ತೂಷ್ಣೀಂಶಂಸಃ ಶಂಸ್ತವ್ಯಃ । ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಹಿಂದೆ ಯಜಮಾನನಿಗೆ ಕೇಡನ್ನು ಬಯಸುವ ವಿಚಾರದಲ್ಲಿ ಈ ಮಂತ್ರದ ಶಕ್ತಿಯನ್ನು ಪ್ರಶಂಸಿಸಲಾಯಿತು. ಈಗ ಹೋತೃವಿಗೂ ಋತ್ವಿಕ್ಕುಗಳಿಗೂ ಈ ಮಂತ್ರಶಂಸನದಿಂದ ಹೇಗೆ ಅನುಕೂಲವಾಗುವುದೆಂಬುದನ್ನು ವಿವರಿಸುತ್ತಾರೆ. ಬ್ರಹ್ಮವಾದಿಗಳು ತೂಷ್ಣೀಂಶಂಸದ ವಿಷಯದಲ್ಲಿ ಹೀಗೆ ಹೇಳುತ್ತಾರೆ—ಯಜ್ಞಮಾಡುವ ಯಜಮಾನನ ವಿಷಯದಲ್ಲಿ ಹೋತೃವಿಗೆ ಪ್ರೀತಿ ಇರಲಿ, ಇಲ್ಲದಿರಲಿ ಹೋತೃವು ತೂಷ್ಣೀಂಶಂಸವನ್ನು ಪಠಿಸಲೇಬೇಕು. ಯಜಮಾನನ ವಿಷಯದಲ್ಲಿ ಪ್ರೀತಿಯಿಲ್ಲ ಎಂಬ ಕಾರಣದಿಂದ ಹೋತೃವು ಈ ಮಂತ್ರಪಠನವನ್ನು ಮಾಡದೆ ಇರಕೂಡದು. ಏಕೆಂದರೆ ಈ ಮಂತ್ರಪಠನವಿಲ್ಲದಿದ್ದರೆ ಋತ್ವಿಜನಾದ ಹೋತೃವಿಗೂ ಒಳ್ಳೆಯದಾಗುವುದಿಲ್ಲ. ಮಂತ್ರಪಠನಾಭಾವದಿಂದ ಯಜ್ಞವು ಕೆಟ್ಟುಹೋದಲ್ಲಿ ಹೋತೃವಿಗೆ ಸಲ್ಲಬೇಕಾದ ದಕ್ಷಿಣೆಯು ಎಂದರೆ ಸಂಭಾವನೆಯು ದೊರೆಯುವುದಿಲ್ಲ. ಮತ್ತು ಋತ್ವಿಜನಲ್ಲಿ (ಹೋತೃವಿನಲ್ಲಿ) ಯಜ್ಞವು ಪ್ರತಿಷ್ಠಿತವಾಗಿರುವುದು ಎಂದರೆ ಯಜ್ಞವು ಸಾಂಗವಾಗಿ ನೇರವೇರುವ ಹೊಣೆಯು ಋತ್ವಿಜನನ್ನೇ ಅವಲಂಬಿಸಿರುವುದು. ಯಜ್ಞವು ಯಜಮಾನನಲ್ಲಿ ಪ್ರತಿಷ್ಠಿತವಾಗಿರುವುದು. ಆದುದರಿಂದ ಯಜ್ಞವು ಸರಿಯಾಗಿ ನಡೆಯುವುದಕ್ಕಾಗಿಯೂ ಯಜಮಾನನ ಹಿತಕ್ಕಾಗಿಯೂ ತೂಷ್ಣೀಂಶಂಸಮಂತ್ರವನ್ನು ಹೋತೃವು ಪಠಿಸಲೇಬೇಕು. ಅದು ಅವನ ಕರ್ತವ್ಯವು.



*English Translation*

**(On the meaning of the Silent Praise)**

The "silent praise" are the eyes of the (three) libations. Rhur agnir, & c., are the two eyes of the morning libation. Indro jyotir & c. are the two eyes of the midday libation. Suryo jyotir & c. are the two eyes of the evening libation. He who has such a knowledge prospers by means of the three libations which are provided with eyes, and goes by means of such libations to the celestial world.

This "silent praise" is the eye of the sacrifice (the sacrificial man). There being only one of the "great words" (bhar, bhuvah, svar), (in the "silent praise" of every libation) it must be repeated twice, for though the eye is according to its substance only one, it is double in its appearance.

The "silent praise" is the root of the sacrifice. Should a Hotar wish to deprive any sacrificer of his standing place, then he must not at his sacrifice

repeat the "silent praise;" the sacrificer then perishes along with his sacrifice (the sacrificial personage) which thus has become rootless.

About this they say: the Hotar ought to recite (it at any rate); for it is for the priest's own benefit when the Hotar repeats the "silent praise". In the priest rests the whole sacrifice. and the sacrificer in the sacrifice. Thence the "silent praise", ought to be repeated.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ನವಮಾಧ್ಯಾಯಸ್ಯ ಅಷ್ಟಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ನವಮೋಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಒಂಭತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.

ಒಂಭತ್ತನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ದಶಮಾಧ್ಯಾಯೇ ಪ್ರಥಮಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಹೋತೃವಿನ ಪುರೋಡಾಶಭಕ್ಷಣವು ಮತ್ತು ಗ್ರಹಶೇಷವಾದ ಸೋಮಪಾನವು ]

---

ಬ್ರಹ್ಮ ವಾ ಆಹಾವಃ ಕ್ಷತ್ರಂ ನಿವಿದ್ವಿಟ್‌ಸೂಕ್ತಮಾಹ್ವಯತೇಽಥ ನಿವಿದಂ ದಧಾತಿ ಬ್ರಹ್ಮಣ್ಯೇವ ತತ್ಕ್ಷತ್ರಮನುನಿಯುನಕ್ತಿ ನಿವಿದಂ ಶಸ್ತ್ವಾ ಸೂಕ್ತಂ ಶಂಸತಿ ಕ್ಷತ್ರಂ ವೈ ನಿವಿದ್ವಿಟ್‌ಸೂಕ್ತಂ ಕ್ಷತ್ರ ಏವ ತದ್ವಿಶಮನುನಿಯುನಕ್ತಿ ॥

ಋತುಯಾಜಾ ದ್ವಿದೇವತ್ಯಾಸ್ತದ್ವಿಶೇಷಫಲಾ ಸ್ತುತಿಃ ॥
ತೂಷ್ಣೀಂಶಂಸಪ್ರಶಂಸಾ ಚ ನವಮಾಧ್ಯಾಯಚೋದನಾ ॥

ಅಥಾಹಾವಾದಯೋ ವಕ್ತವ್ಯಾಸ್ತ್ರಿಹಾವಂ ನಿವಿದಂ ಸೂಕ್ತಂ ಚ ವಿಧತ್ತೇ—ಶೋಂಸಾವೋಮಿತ್ಯನೇನ ಮಂತ್ರೇಣ ಶಂಸನಕಾಲೇ ಹೋತಾಧ್ವರ್ಯುರ್ಮಾಹ್ವಯತಿ ಸೋಯಮಾಹಾವಃ । ಅಗ್ನಿರ್ದೇವೇದ್ಧ ಇತ್ಯಾದಿಭಿರ್ದ್ವಾದಶಭಿರ್ವಕ್ಷ್ಯಮಾಣೈಃ ಪದೈರ್ಯುಕ್ತಾ ತತ್ಸಮೂಹರೂಪಾ ನಿವಿತ್॥ ಪ್ರವೋ ದೇವಾಯಾಗ್ನಯ [೩-೧೩-೧] ಇತ್ಯಾದಿಕಂ ಸಪ್ತರ್ಚಂ ಸೂಕ್ತಂ । ತದೇತತ್ತ್ರಯಂ ಕ್ರಮೇಣ ಬ್ರಾಹ್ಮಣಕ್ಷತ್ರಿಯವೈಶ್ಯರೂಪಂ ತತ್ರ ಬ್ರಾಹ್ಮಣರೂಪತ್ವೇನ ಪ್ರಥಮಮಾಹ್ವಯಂತೇ ಮಂತ್ರೇಣಾಧ್ವರ್ಯೋರಾಹ್ವಾನಂ ಕುರ್ಯಾತ್ ॥ ಅಥಾನಂತರಂ ಕ್ಷತ್ರಿಯರೂಪತ್ವೇನ ನಿವಿದಂ ದಧಾತಿ ಅಗ್ನಿರ್ದೇವೇದ್ಧ ಇತ್ಯಾದಿಪದಸಮೂಹಂ ವಪೇತ್ತಥಾ ಸತಿ ಬ್ರಹ್ಮಣ್ಯೇವ ಬ್ರಾಹ್ಮಣಜಾತಾವೇವ ಕ್ಷತ್ರಂ ಕ್ಷತ್ರಿಯಜಾತಿಮನುನಿಯುನಕ್ತಿ ॥ ಪ್ರಥಮತೋ ಬ್ರಾಹ್ಮಣಜಾತಿಃ ಪಶ್ಚಾತ್ಕ್ಷತ್ರಿಯಜಾತಿರಿತ್ಯೇವಂ ನಿಯೋಗಃ ಕೃತೋ ಭವೇತ್ ॥ ತಾಂ ನಿವಿದಂ ಶಸ್ತ್ವಾ ಪಶ್ಚಾತ್ಪ್ರವೋ ದೇವಾಯೇತಿಸೂಕ್ತಂ ಶಂಸೇತ್ ॥ ತಥಾಸತಿ ಕ್ಷತ್ರಿಯಜಾತಿರೂಪಾಯಾಂ ನಿವಿದಿ ವೈಶ್ಯಜಾತಿರೂಪಂ ಸೂಕ್ತಮನುನಿಯುನಕ್ತಿ ಆನುಕೂಲ್ಯೇನ ಪಶ್ಚಾದವಸ್ಥಾಪಯತಿ । ಯಃ ಪೂರ್ವಮುಕ್ತಸ್ತೂಷ್ಣೀಂಶಂಸೋ ಯೋ ಚ ನಿವಿತ್ಸೂಕ್ತೇ ತದೇತತ್ತ್ರಯಮಾಜ್ಯನಾಮಕಶಸ್ತ್ರಸ್ಯ ರೂಪಂ ॥ ತದುಕ್ತಂ ಸಂಪ್ರದಾಯವಿದ್ಭಿಃ ॥ "ತೂಷ್ಣೀಂಶಂಸನಿವಿತ್ಸೂಕ್ತೈರಾಜ್ಯಶಸ್ತ್ರಂ ತ್ರಿಪರ್ವಕಂ" ಇತಿ ॥

ಹಿಂದಿನ (ಒಂಭತ್ತನೆಯ) ಅಧ್ಯಾಯದಲ್ಲಿ ದ್ವಿದೇವತ್ಯಗ್ರಹಗಳ ವಿಷಯವನ್ನೂ, ಋತುಯಾಜಾಹೋಮವನ್ನೂ ತೂಷ್ಣೀಂಶಂಸ ಎಂಬ ಮಂತ್ರದ ವಿಷಯವನ್ನೂ ಹೇಳಿದ್ದಾಯಿತು. ಈಗ ಆಜ್ಯಶಸ್ತ್ರವೆಂಬ ಮಂತ್ರದ ವಿಭಾಗಗಳಾದ ಆಹಾವ,

ನಿವಿತ್, ಸೂಕ್ತ ಎಂಬ ವಿಭಾಗಗಳ ವಿಷಯವನ್ನು ವಿವರಿಸುವರು. ಶಸ್ತ್ರಮಂತ್ರಗಳನ್ನು ಹೋತೃವು ಪಠಿಸುವುದಕ್ಕೆ ಪೂರ್ವದಲ್ಲಿ ಅಧ್ವರ್ಯುವು ಹೋತೃವಿಗೆ ಇಂತಹ ಮಂತ್ರಗಳನ್ನು ಪಠಿಸಬೇಕೆಂದು ಪ್ರೈಷಮಂತ್ರಗಳಿಂದ ನಿರ್ದೇಶಿಸುವನು. ಈ ಪ್ರೈಷ ಮಂತ್ರಗಳಿಂದ ನಿರ್ದೇಶಿಸುವುದಕ್ಕಾಗಿ ಅಧ್ವರ್ಯುವಿಗೆ ಹೋತೃವು **ಶಂಸಾವೋಂ** ಎಂಬ ಮಂತ್ರದಿಂದ ಆಹ್ವಾನಮಾಡುವನು. ಆಹ್ವಾನಮಾಡುವುದಕ್ಕಾಗಿ ಪಠಿಸುವ **ಶಂಸಾವೋಂ** ಎಂಬ ಮಂತ್ರಕ್ಕೆ ಆಹಾವ ಎಂದು ಹೆಸರು; **ಅಗ್ನಿರ್ದೇವೇದ್ಧಃ** ಎಂದು ಮೊದಲಾಗುವ ಹನ್ನೆರಡು ವಾಕ್ಯಗಳಿಂದ ಕೂಡಿರುವ ಮಂತ್ರಸಮೂಹಕ್ಕೆ ನಿವಿತ್ ಎಂದು ಹೆಸರು. ಆ ಹನ್ನೆರಡು ವಾಕ್ಯಗಳು ಯಾವವೆಂದರೆ— ಅಗ್ನಿರ್ದೇವೇದ್ಧಃ । ಅಗ್ನಿಃ **ಸುಷಮಿತ್ । ಹೋತಾ ದೇವವೃತಃ । ಹೋತಾ ಮನುವೃತಃ । ಪ್ರಣೀರ್ಯಜ್ಞಾನಾಂ । ರಥೀರಧ್ವರಾಣಾಂ । ಅತೂರ್ತೋ ಹೋತಾ । ತೂರ್ಣಿರ್ಹವ್ಯವಾಟ್ । ಆ ದೇವೋ ದೇವಾನ್ । ಯಕ್ಷದಗ್ನಿರ್ದೇವೋ ದೇವಾನ್ । ಸೋ ಅಧ್ವರಾ ಕರತಿ ಜಾತವೇದಾಃ** (ಆ.ಶ್ರೌ. ಸೂ. ೧-೧ರಿಂದ ೧೨. ಈ ಹನ್ನೆರಡು ವಾಕ್ಯಗಳಿಗೆ ನಿವಿತ್ ಎಂದು ಹೆಸರು. ಇವುಗಳನ್ನು ಮುಂದಿನ ಖಂಡದಲ್ಲಿ ವಿಶೇಷರೀತಿಯಿಂದ ವಿವರಿಸಲಾಗುವುದು ; **ಪ್ರ ವೋ ದೇವಾಯಾಗ್ನಯೇ** ಎಂದು ಪ್ರಾರಂಭವಾಗುವ ಏಳು ಋಕ್ಕುಗಳಿರುವ ಸೂಕ್ತಕ್ಕೆ (ಋ. ಸಂ. ೩-೧೩) ಸೂಕ್ತವೆಂದು ಹೆಸರು. ಈ ಮೂರು ಮಂತ್ರಗಳು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಸ್ವರೂಪಗಳೆಂದು ಹೇಳಲ್ಪಡುವವು. ಇವುಗಳಲ್ಲಿ ಮೊದಲನೆಯದಾದ ಆಹಾವ (ಆಹ್ವಯತೇ) ಎಂಬ ಮಂತ್ರದಿಂದ ಅಧ್ವರ್ಯುವನ್ನು ಆಹ್ವಾನಮಾಡಬೇಕು. ಅನಂತರ ಕ್ಷತ್ರಿಯಸ್ವರೂಪವಾದ ಅಗ್ನಿರ್ದೇವೇದ್ಧ ಮೊದಲಾದ ನಿವಿತ್ ಮಂತ್ರಸಮೂಹವನ್ನು ಪಠಿಸಬೇಕು. ಹೀಗೆ ಮಾಡುವುದರಿಂದ ಬ್ರಾಹ್ಮಣಜಾತಿಯಲ್ಲಿ ಕ್ಷತ್ರಿಯಜಾತಿಯನ್ನು ಸೇರಿಸಿದಂತಾಗುವುದು ಎಂದರೆ ಮೊದಲು ಬ್ರಾಹ್ಮಣಜಾತಿಯೆಂದೂ ಅನಂತರ ಕ್ಷತ್ರಿಯಜಾತಿಯೆಂದೂ ಹೇಳಿದಂತಾಗುವುದು. ಹೀಗೆ ನಿವಿನ್ಮಂತ್ರವನ್ನು ಪಠಿಸಿ ಬಳಿಕ **ಪ್ರ ವೋ ದೇವಾಯ** ಎಂಬ ಸೂಕ್ತವನ್ನು ಪಠಿಸಬೇಕು. ಹೀಗೆ ಮಾಡುವುದರಿಂದ ಕ್ಷತ್ರಿಯಜಾತಿಯಲ್ಲಿ ವೈಶ್ಯಜಾತಿಯನ್ನು ಸೇರಿಸಿದಂತಾಗುವುದು. ಎಂದರೆ ಕ್ಷತ್ರಿಯ ಜಾತಿಯ ಅನಂತರ ವೈಶ್ಯಜಾತಿಯೆಂದು ಹೇಳಿದಂತಾಯಿತು. ಹೀಗೆ ಈ ಮೂರನ್ನೂ ಎಂದರೆ ಮೊದಲು (ಹಿಂದೆ) ಹೇಳಿದ ತೂಷ್ಣೀಂಶಂಸ ಎಂಬ ಮಂತ್ರ, ನಿವಿನ್ಮಂತ್ರ, ಸೂಕ್ತಮಂತ್ರ ಈ ಮೂರನ್ನೂ ಸೇರಿಸಿದರೆ ಆಜ್ಯಶಸ್ತ್ರವೆಂದಾಗುವುದು. ಈ ವಿಷಯವು ಸಂಪ್ರದಾಯವನ್ನು ತಿಳಿದ ತಜ್ಞರಿಂದ **ತೂಷ್ಣೀಂಶಂಸನಿವಿತ್ಸೂಕ್ತೈರಾಜ್ಯಶಸ್ತ್ರಂ ತ್ರಿಪೂರ್ವಕಂ** ಎಂದು ಹೇಳಲ್ಪಟ್ಟಿರುವುದು.

ಯಂ ಕಾಮಯೇತ ಕ್ಷತ್ರೇಣೈನಂ ವ್ಯರ್ಧಯಾನೀತಿ ಮಧ್ಯ ಏತಸ್ಯೈ ನಿವಿದಃ ಸೂಕ್ತಂ ಶಂಸೇತ್ಕ್ಷತ್ರಂ ವೈ ನಿವಿದ್ವಿಟ್ಸೂಕ್ತಂ ಕ್ಷತ್ರೇಣೈವೈನಂ ತದ್ವ್ಯರ್ಧಯತಿ । ಯಂ ಕಾಮಯೇತ ವಿಶೈನಂ ವ್ಯರ್ಧಯಾನೀತಿ ಮಧ್ಯ ಏತಸ್ಯ ಸೂಕ್ತಸ್ಯ ನಿವಿದಂ ಶಂಸೇತ್ಕ್ಷತ್ರಂ ವೈ ನಿವಿದ್ವಿಟ್ಸೂಕ್ತಂ ವಿಶೈವೈನಂ ತದ್ವ್ಯರ್ಧಯತಿ ।

**ಅಥ ಕಂಚಿದಭಿಚಾರಪ್ರಯೋಗಂ ವಿಧತ್ತೇ ಯೇಯಂ ದ್ವಾದಶಪದಾತ್ಮಿಕಾ ನಿವಿದಸ್ತಿ ತಸ್ಯಾ ಮಧ್ಯೇ ಸೂಕ್ತಶಂಸನೇ ಸತಿ ಕ್ಷತ್ರಿಯಜಾತಿರೂಪಾಯಾ ನಿವಿದಃ ಖಂಡಿತತ್ವಾದೇನಂ ಯಜಮಾನಂ ಕ್ಷತ್ರಿಯಜಾತ್ಯಾ ವ್ಯೃದ್ಧಂ ವಿಯುಕ್ತಂ ವಿರೋಧಿನಂ ಕರೋತಿ । ಅತೋ ಯಜಮಾನಮುದ್ದಿಶ್ಯ ಹೋತ್ರಾ ಯತ್ಕಾಮಿತಂ ತತ್ಸಿಧ್ಯತೀತ್ಯುಕ್ತಂ ಭವತಿ॥ ಅಭಿಚಾರಾಂತರಂ**

**ವಿಧತ್ತೇ— ಪ್ರ ವೋ ದೇವಾಯೇತ್ಯಸ್ಯ ಸೂಕ್ತಸ್ಯ ವೈಶ್ಯಸ್ಥಾನೀಯಸ್ಯ ಮಧ್ಯೇ ನಿವಿದಃ ಶಂಸನೇ ಸತಿ ವೈಶ್ಯಜಾತೇಃ ಖಂಡಿತತ್ವಾತ್ತದ್ವಿರೋಧೋ ಯಜಮಾನಸ್ಯ ಭವತಿ ||**

ಈಗ ಈ ಮಂತ್ರಗಳ ಪ್ರಯೋಗವಿಚಾರದಲ್ಲಿ ಯಜ್ಞಮಾಡುವ ಯಜಮಾನನಿಗೆ ಕೇಡನ್ನು ಬಯಸುವ ಋತ್ವಿಜನು ಮಂತ್ರಪಠನಕ್ರಮದಲ್ಲಿ ವ್ಯತ್ಯಾಸವನ್ನುಂಟುಮಾಡಿದರೆ ಯಜಮಾನನಿಗೆ ಕೆಡಕಾಗುವುದು. ಹೇಗೆಂದರೆ—ನಿವಿನ್ಮಂತ್ರಗಳ ಪಠನಾನಂತರದಲ್ಲಿ ಸೂಕ್ತಮಂತ್ರಪಠನವನ್ನು ಮಾಡಬೇಕೆಂದು ಹಿಂದೆ ಹೇಳಿದೆಯಷ್ಟೆ. ಅದಕ್ಕೆ ವಿರುದ್ಧವಾಗಿ ನಿವಿನ್ಮಂತ್ರಗಳ ಮಧ್ಯದಲ್ಲಿ ಸೂಕ್ತಮಂತ್ರವನ್ನು ಸೇರಿಸಿ ಪಠಿಸುವುದರಿಂದ ಕ್ಷತ್ರಿಯಜಾತಿರೂಪವಾದ ನಿವಿನ್ಮಂತ್ರಗಳ ವಿಚ್ಛಿತ್ತಿಯುಂಟಾಗುವುದು. ಎಂದರೆ ಯಜ್ಞಮಾಡುವ ಯಜಮಾನನ (ರಾಜನ) ಶಕ್ತಿಸಾಮರ್ಥ್ಯಗಳಿಗೆ ಹಾನಿಯುಂಟಾಗುವುದು. ಇದರಿಂದ ಯಜಮಾನನಿಗೆ ಕೇಡನ್ನು ಬಯಸುವ ಹೋತೃವಿನ ಉದ್ದೇಶವು ಈಡೇರಿದಂತಾಗುವುದು. ಇದಲ್ಲದೆ ಸೂಕ್ತಮಂತ್ರಗಳ ಮಧ್ಯದಲ್ಲಿ ನಿವಿತ್‌ಮಂತ್ರಗಳನ್ನು ಹೋತೃವು ಪಠಿಸಿದಲ್ಲಿ ವೈಶ್ಯಜಾತಿಯರೂಪವಾದ ಸೂಕ್ತಮಂತ್ರಗಳ ವಿಚ್ಛಿತ್ತಿಯು ಆಗುವುದರಿಂದ ಯಜ್ಞಮಾಡುವ ಯಜಮಾನನಿಗೆ (ರಾಜನಿಗೆ) ವೈಶ್ಯಜಾತಿಯ ಸಹಕಾರವು ಅಥವಾ ಬೆಂಬಲವು ತಪ್ಪಿಹೋಗಿ ಪ್ರಜಗಳ ವಿರೋಧವುಂಟಾಗುವುದು.

**ಯಮು ಕಾಮಯೇತ ಸರ್ವಮೇವಾಸ್ಯ ಯಥಾಪೂರ್ವಮೃಜು-ಕ್ಲೃಪ್ತಂ ಸ್ಯಾದಿತ್ಯಾಹ್ವಯೇತಾಥ ನಿವಿದಂ ದಧ್ಯಾದಥ ಸೂಕ್ತಂ ಶಂಸೇತ್ಸೋ ಸರ್ವಸ್ಯ ಕ್ಲೃಪ್ತಿಃ ||**

**ಪ್ರತಿಕೂಲಂ ಪ್ರಯೋಗದ್ವಯಂ ವಿಧಾಯಾನುಕೂಲಂ ಪ್ರಯೋಗಂ ವಿಧತ್ತೇ— ಯಮು ಯಂ ತು ಯಜಮಾನಂ ಪ್ರತಿ | ಪೂರ್ವೋಕ್ತಸ್ಯ ದ್ವೇಷ್ಯಸ್ಯ ಯಜಮಾನಸ್ಯ ವ್ಯಾವೃತ್ತ್ಯರ್ಥ ಉಶಬ್ದಃ | ಅಸ್ಯ ಯಜಮಾನಸ್ಯ ಸರ್ವಮೇವ ಬ್ರಾಹ್ಮಣಕ್ಷತ್ರಿಯವೈಶ್ಯಜಾತಿರೂಪಂ ಯಥಾಪೂರ್ವಮುತ್ತಮಜಾತೇಃ ಪೂರ್ವಮನತಿಕ್ರಮ್ಯ ಋಜುಕ್ಲೃಪ್ತಂ ಸಮ್ಯಕ್ಸಮ್ಪಾದಿತಂ ಸ್ಯಾದಿತಿ ಕಾಮಯಾಮಾನಃ ಶೋಂಸಾವೋಮಿತ್ಯಾಹಾವಃ ಪ್ರಥಮಸ್ತತೋಽಗ್ನಿರ್ದೇವೇದ್ಧ ಇತಿ ನಿವಿತ್ತತಃ ಪ್ರವೋ ದೇವಾಯೇತಿ ಸೂಕ್ತಂ ಶಂಸೇತ್|| ಸೋ ಸೈವೋಕ್ತಾನುಪೂರ್ವೀ ತಿರೇವ ಸರ್ವಸ್ಯ ಜಾತಿತ್ರಯಸ್ಯ ಕ್ಲೃಪ್ತಿಃ ಸಮೀಚೀನಕಲ್ಪನಾ ಭವತಿ ||**

ಯಜ್ಞಮಾಡುವ ಯಜಮಾನನಿಗೆ ಪ್ರತಿಕೂಲವಾಗದೆ ಅನುಕೂಲವೇ ಆಗಬೇಕೆಂದು ಬಯಸುವ ಹೋತೃವು ಹಿಂದೆ ಹೇಳಿದ ಕ್ರಮದಲ್ಲಿ ಮಂತ್ರತ್ರಯಗಳನ್ನು ಪಠಿಸಬೇಕು. ಹೇಗೆಂದರೆ—ಮೊದಲು ಆಹಾವ (ಆಹ್ವಾನ) ಅನಂತರ ನಿವಿತ್, ಬಳಿಕ ಸೂಕ್ತಮಂತ್ರ. ಇವುಗಳನ್ನು ಕ್ರಮವಾಗಿ ಪಠಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಯಾವ ಕೆಡಕೂ ಆಗುವುದಿಲ್ಲ. ಅವನ ಪ್ರಭುತ್ವವು ನ್ಯೂನವಾಗದೆ ಪ್ರಜೆಗಳ ಸಹಕಾರವೂ ದೊರೆಯುವುದು. ಆದ್ದರಿಂದ ಮೊದಲು **ಶೋಂಸಾವೋಂ** ಎಂಬ ಆಹಾವ, ಅನಂತರ **ಅಗ್ನಿರ್ದೇವೇದ್ಧಃ** ಎಂಬ ನಿವಿನ್ಮಂತ್ರ, ಬಳಿಕ **ಪ್ರ ವೋ ದೇವಾಯ** ಎಂಬ ಸೂಕ್ತಮಂತ್ರ ಇವುಗಳನ್ನು ಒಂದಾಗುತ್ತಲೊಂದನ್ನು ಕ್ರಮವಾಗಿ ಪಠಿಸಿದಲ್ಲಿ ಯಜಮಾನನ ಅಭಿವೃದ್ಧಿಗೆ ಕುಂದುಂಟಾಗದೆ ಸರ್ವಸಮೃದ್ಧಿಯು ಸಿದ್ಧಿಸುವುದು.

**ಪ್ರಜಾಪತಿರ್ವಾ ಇದಮೇಕ ಏವಾಗ್ರ ಆಸ ಸೋಽಕಾಮಯತ ಪ್ರಜಾಯೇಯ ಭೂಯಾನ್ಸ್ಯಾಮಿತಿ ಸ ತಪೋಽತಪ್ಯತ ಸ**

ವಾಚಮುಯಚ್ಛತ್ಸ ಸಂವತ್ಸರಸ್ಯ ಪರಸ್ತಾದ್ವ್ಯಾಹರದ್ದ್ವಾದಶ-
ಕೃತ್ವೋ ದ್ವಾದಶಪದಾ ವಾ ಏಷಾ ನಿವಿದೇತಾಂ ವಾವ ತಾಂ
ನಿವಿದಂ ವ್ಯಾಹರತ್ತಾಂ ಸರ್ವಾಣಿ ಭೂತಾನ್ಯನ್ವಸೃಜ್ಯಂತ ।

ಅಥ ನಿವಿದಃ ಪ್ರಶಂಸಿತುಮಾಹ—

ಇದಮಿದಾನೀಂ ದೃಶ್ಯಮಾನಂ ಜಗದಗ್ರೇ ಸೃಷ್ಟೇಃ ಪೂರ್ವಂ ಪುರಾ ಪ್ರಜಾಪತಿರೀಶ್ವರ ಏಕ ಏವ ಆಸ ವೈ ॥ ಸ ಚಾಕಾಮಯತಾಹಮೇವ ಪ್ರಜಾಯೇಯ ಪ್ರಜಾರೂಪೇಣೋತ್ಪದ್ಯೇಯ । ತಥಾ ಸತಿ ಪೂರ್ವಸ್ಮಾದದ್ವಿತೀಯರೂಪಾದ್ಭೂಯಾನತಿ ಪ್ರಭೂತಃ ಸ್ಯಾಮಿತಿ ಕಾಮಯಿತ್ವಾ ಸ ಪ್ರಜಾ-ಪತಿಃ ಸೃಷ್ಟಿಸಾಧನಂ ತಪಃ ಕೃತವಾನ್ ॥ ತಸ್ಮಿಂಸ್ತಪಸಿ ವಾಚಮುಯಚ್ಛನ್ಮೌನವ್ರತಂ ಕೃತವಾನ್ । ತಥಾ ಕೃತ್ವಾ ಸಂವತ್ಸರಾದೂರ್ಧ್ವಂ ದ್ವಾದಶಕೃತ್ವೋ ವಾಚಮುಚ್ಚಾರಿತವಾನ್ । ಸೇಯ-ಮುಚ್ಚಾರಿತಾ ವಾಗೇಷಾ ದ್ವಾದಶಪದೋಪೇತಾ ನಿವಿತ್ಸಂಪನ್ನಾ । ತಾಮೇತಾಮೇವ ನಿವಿದಂ ಪ್ರಜಾಪತಿರ್ವ್ಯಾಹೃತವಾನ್ ॥ ತಾಂ ನಿವಿದಮನು ತತ್ಸಾಮರ್ಥ್ಯಾತ್ಸರ್ವಾಣಿ ಭೂತಾನ್ಯನ್ವ-ಸೃಜ್ಯಂತ ॥

ಈಗ ನಿವಿನ್ಮಂತ್ರಗಳನ್ನು ಪ್ರಶಂಸೆಮಾಡುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳಲಾಗುವುದು. ಪೂರ್ವದಲ್ಲಿ ಎಂದರೆ ಈ ಜಗತ್ತು ಸೃಷ್ಟಿಯಾಗುವುದಕ್ಕೆ ಪೂರ್ವದಲ್ಲಿ ಸರ್ವೇಶ್ವರನಾದ ಪ್ರಜಾಪತಿ (ಪರಬ್ರಹ್ಮ) ಒಬ್ಬನು ಮಾತ್ರ ಇದ್ದನು. ಅವನು ಇಂತು ಅಪೇಕ್ಷಿಸಿದನು—ನಾನು ಪ್ರಜೆಗಳನ್ನು ಎಂದರೆ ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿಸಬೇಕು (ಎಂದರೆ ಅವ್ಯಕ್ತ ರೂಪದಿಂದ ಎಲ್ಲೆಲ್ಲೂ ತಾನೇತಾನಾಗಿ ವ್ಯಾಪಿಸಿರುವ ತಾನು ಬಹುರೂಪಗಳಿಂದ ವ್ಯಕ್ತವಾಗಿ ಜಗದ್ರೂಪವಾಗಿ ಮಾಡಬೇಕೆಂದು ಯೋಚಿಸಿದನು) ಎಂದು ಯೋಚಿಸಿ ಸೃಷ್ಟಿಸಾಧನವಾದ ತಪಸ್ಸನ್ನು ಮಾಡಿದನು. (ಇಲ್ಲಿ ತಪಸ್ಸೆಂದರೆ ಹೀಗೆ ಮಾಡಬೇಕೆಂದು ಧ್ಯಾನಮಾಡುವುದು). ಬಳಿಕ ಮೌನದಿಂದ ಧ್ಯಾನಿಸುತ್ತಿದ್ದ ಆ ಪ್ರಜಾಪತಿಯು ವಾಗ್ರೂಪವಾದ ಕೆಲವು ಶಬ್ದಗಳನ್ನು ಉಚ್ಚರಿಸಿದನು. ಆ ಶಬ್ದಗಳೇ ಹನ್ನೆರಡು ವಾಕ್ಯಗಳಿಂದ ಕೂಡಿದ ಈ ನಿವಿನ್ಮಂತ್ರಗಳಾದವು. ಈ ನಿವಿನ್ಮಂತ್ರಗಳ ಸಾಮರ್ಥ್ಯ ದಿಂದ ಸರ್ವಭೂತಗಳೂ (ಸಕಲ ಜಗತ್ತೂ) ಉತ್ಪನ್ನವಾದವು.

ತದೇತದೃಷಿಃ ಪಶ್ಯನ್ನಭ್ಯನೂವಾಚ ಸ ಪೂರ್ವಯಾ ನಿವಿದಾ ಕವ್ಯ-
ತಾಽಽಯೋರಿಮಾಃ ಪ್ರಜಾ ಅಜನಯನ್ಮನೂನಾಮಿತಿ ।

ಉಕ್ತಾರ್ಥಂ ದೃಢಯಿತುಂ ಕಂಚಿನ್ಮಂತ್ರಮುದಾಹರತಿ — ತದೇತತ್ಪ್ರಜಾಪತೇಃ ಸರ್ಜನಂ ದಿವ್ಯದೃಷ್ಟ್ಯಾ ಪಶ್ಯನ್ಕುತ್ಸನಾಮಕೋ—ಮಹರ್ಷಿರ್ಮಂತ್ರೇಣಾಭ್ಯನೂವಾಚ । ಸ ಪೂರ್ವಯೇತ್ಯಾದಿರ್ಮಂತ್ರಃ । ಸ ಪ್ರಜಾಪತಿಃ ಪೂರ್ವಯಾ ಪ್ರಥಮಂ ಪ್ರಾದುರ್ಭೂತಯಾ ನಿವಿದಾ ದ್ವಾದಶರೂಪಯಾ ಕವ್ಯತಾ ಕವಿತ್ವಂ ಶಬ್ದಪ್ರಸೃಷ್ಟ್ಯುತ್ಪನ್ನಮಾಯೋರಾಗತವಾನ್ಪ್ರಸ್ತುನಾ-ನಿತ್ಯರ್ಥಃ ॥ ತತ ಊರ್ಧ್ವಂ ಮನೂನಾಂ ವೈವಸ್ವತಾದೀನಾಂ ಸಂಬನ್ಧಿನೀರಿಮಾ ಬ್ರಾಹ್ಮಣ-ಕ್ಷತ್ರಿಯಾದಿರೂಪಾಃ ಪ್ರಜಾ ಅಜನಯದಿತ್ಯಯಂ ಮನ್ತ್ರಃ ಪೂರ್ವೋಕ್ತಮೇವಾರ್ಥಂ ಬ್ರೂತೇ ॥

ಪ್ರಜಾಪತಿಯ ಈ ವಿಧವಾದ ಸೃಷ್ಟಿಕ್ರಮವನ್ನು ಕುತ್ಸನೆಂಬ ಒಬ್ಬ ಋಷಿಯು ತನ್ನ ದಿವ್ಯದೃಷ್ಟಿಯಿಂದ ನೋಡಿ ಕಂಡುಹಿಡಿದನು. ಈ ವಿಷಯವು (ಋ.ಸಂ. ೧-೯೬-೨) ಸ ಪೂರ್ವಯಾ ಎಂಬ ಋಕ್ಕಿನಲ್ಲಿ ಉಕ್ತವಾಗಿದೆ. ಪ್ರಜಾಪತಿಯು ಪ್ರಥಮದಲ್ಲಿ ಉಚ್ಚರಿಸಿದ ಹನ್ನೆರಡು ವಾಕ್ಯಸಮೂಹಗಳುಳ್ಳ ನಿವಿನ್ಮಂತ್ರದಿಂದ ಕವಿತ್ವ ಎಂದರೆ ಕಾವ್ಯರೂಪವಾದ ಶಬ್ದಗಳು ಉಂಟಾಗಿ ಅದರಿಂದ ಪ್ರಜೆಗಳ ಉತ್ಪಾದನೆಗೆ ಕಾರಣವಾಯಿತು. ಬಳಿಕ ವೈವಸ್ವತಾದಿಮನುಗಳ ಸಂಬಂಧವಾದ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾನಾವಿಧವಾದ ಪ್ರಜೆಗಳನ್ನು (ಆ ನಿವಿನ್ಮಂತ್ರಗಳ ಸಹಾಯದಿಂದ) ಸೃಷ್ಟಿಮಾಡಿದನು.

**ತದ್ಯದೇತಾಂ ಪುರಸ್ತಾತ್ಸೂಕ್ತಸ್ಯ ನಿವಿದಂ ದಧಾತಿ ಪ್ರಜಾತ್ಯೈ ಪ್ರಜಾ-ಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ನಿವಿದಂ ಪ್ರಶಸ್ಯ ತದನುಷ್ಠಾನಂ ಪ್ರಶಂಸತಿ—ಯಸ್ಮಾತ್ಪ್ರಜಾಪತಿನೈವಂ ಕೃತಂ ತಸ್ಮಾ-ದ್ಯದಿ ಹೋತಾ ಸೂಕ್ತಸ್ಯ ಪುರಸ್ತಾದೇತಾಂ ನಿವಿದಂ ದಧ್ಯಾತ್ತದಾ ಸಾ ನಿವಿದ್ಯಜಮಾನಸ್ಯ ಪ್ರಜಾತ್ಯೈ ಪ್ರಜೋತ್ಪಾದನಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ—

ಮೇಲೆ ಹೇಳಿದಂತೆ ನಿವಿನ್ಮಂತ್ರಗಳ ಪ್ರಾಶಸ್ತ್ಯವನ್ನು ತಿಳಿಸಿದನಂತರ ಆ ಮಂತ್ರಗಳ ಅನುಷ್ಠಾನಕ್ರಮವನ್ನು ತಿಳಿಸುತ್ತಾರೆ. ಸೃಷ್ಟಿಗೆ ಪೂರ್ವದಲ್ಲಿ ಪ್ರಜಾಪತಿಯು ಈ ನಿವಿನ್ಮಂತ್ರಗಳನ್ನು ಉಚ್ಚರಿಸಿದನಷ್ಟೆ. ಆ ಕ್ರಮವನ್ನನುಸರಿಸಿಯೂ ಹೋತೃವು ಸೂಕ್ತಮಂತ್ರಪಠನಮಾಡುವುದಕ್ಕೆ ಮೊದಲು ಈ ನಿವಿನ್ಮಂತ್ರಗಳನ್ನು ಪಠಿಸುವನು. ಇದೇ ರೂಢಿಯಾಯಿತು. ಇದರಿಂದ ಯಜ್ಞಮಾಡುವ ಯಜಮಾನನ ಸಂತತಿಯು ಅಭಿವೃದ್ಧಿಯಾಗುವುದಕ್ಕೆ ಸಹಾಯವಾಗುವುದು. ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ಪ್ರಜೆಗಳನ್ನೂ (ಸಂತಾನವನ್ನು) ಪಶುಸಂಪತ್ತನ್ನೂ ಪಡೆದು ಸುಖಿಸುವನು.

*English Translation*

**(The different parts of the Aiya Shastra: Ahavan, Nivid, Sukta)**

The call, s'omsavom (called ahava) is the Brahma; the address (Nivid) is the kshatram (royal power) and the hymn (sukta) are the subjects (vis·). By repeating first the call s'omsavom (representing the Brahma), and then settling forth the titles (representing the royal power), the Hotar joins subsequently the Kshatram to the Brahma. By repeating the Nivid before he recites the hymn, he joins subsequently the subjects to the Kshatram, the Kshatram being the Nivid, and the hymn the subjects.

Should the Hotar wish to deprive the sacrificer of his Kshatram, he has only to put in the midst of the Nivid the hymn. By doing so, he deprives him of his Kshatram.

Should the Hotar wish to deprive the sacrificer of his subjects (his income & c.) he has only to put in the midst of the hymn the Nivid. By doing so he deprives the sacrificer of his subjects.

But Should he wish to perform the sacrifice in such a way as to keep the sacrificer in the proper possession of all he had (Brahma, Kshatra or Vis) then he must first repeat the ahava (s'omsavom), the nivid and (lastly) the sukta (hymn). This is the proper performance for all the (three castes).

Prajapati was in the beginning only one (not distinguished from the world). He felt a desire of creating beings and thus multiplying himself. Therefore he underwent austerities, and remained silent. After a year had elapsed, he uttered twelve times (words) which constitute the Nivid of twelve sentences, After this Nivid had been pronounced, all creatures were produced.

(That the world had been created by means of the Nivid) this saw (also) a Rishi (Kutsa by name) when repeating the following verse in which there is an allusion to it: sa purvaya nivida (1, 96, 2) i.e. "he (Agni) created through the first Nivid, through the praise of life in songs, all the creatures of the Manus, (regents of large periods of time): through his lustre shining everywhere (he made) the heavens and water; the gods (priests) kept Agni (back on earth), the giver of treasures."

This is the reason that the Hotar gets offspring, when he puts the Nivid before the hymn (sukta). He who has such a knowledge is blessed with children and cattle.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



# ಅಥ ದಶಮಾಧ್ಯಾಯೇ ದ್ವಿತೀಯಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ನಿವಿನ್ಮಂತ್ರಗಳ ಅರ್ಥವಿವರಣೆ ]



ಅಗ್ನಿರ್ದೇವೇದ್ಧ ಇತಿ ಶಂಸತ್ಯಸೌ ವಾ ಅಗ್ನಿರ್ದೇವೇದ್ಧ ಏತಂ ಹಿ ದೇವಾ ಇನ್ಧತ ಏತಮೇವ ತದೇತಸ್ಮಿಂಲ್ಲೋಕ ಆಯಾತಯತಿ ।

ದ್ವಾದಶಪದೋಪೇತಾಯಾ ನಿವಿದಃ ಪ್ರಥಮಂ ಪದಂ ವಿಧತ್ತೇ—ದೇವೈರಿದ್ಧಃ ಪ್ರಜ್ವಲಿತೋಽಗ್ನಿರಿತ್ಯೇಷ ನಿವಿದಿ ಪ್ರಥಮಭಾಗಸ್ಯಾರ್ಥಃ । ತಂ ಭಾಗಂ ಹೋತಾ ಶಂಸೇದಸೌ ವಾ ಆದಿತ್ಯಮಂಡಲೇಽವಸ್ಥಿತ ಏವ ಪ್ರಕಾಶೋ ದೇವೈರಿದ್ಧೋಽಗ್ನಿಃ । ಯಸ್ಮಾದೇತಂ ದ್ಯುಲೋಕವರ್ತಿನಂ ಪ್ರಕಾಶಂ ದೇವಾ ಇಂಧಕ ಇದ್ಧಂ ದೀಪಿತಂ ಸಮೃದ್ಧಂ ಕುರ್ವಂತಿ ತತ್ತೇನ ಪ್ರಥಮಭಾಗಪಾಠೇನ ಏತಮೇವಾದಿತ್ಯರೂಪಂ ಪ್ರಕಾಶಮೇತಸ್ಮಿನ್ ದ್ಯುಲೋಕ ಆಯಾತಯತಿ ಪ್ರಸಾದಯತಿ ॥

ಹನ್ನೆರಡು ವಾಕ್ಯಗಳಿಂದ ಕೂಡಿದ ನಿವಿನ್ಮಂತ್ರಗಳ ಅರ್ಥವಿವರಣೆಯನ್ನು ಪ್ರಾರಂಭಿಸುತ್ತಾ ಮೊದಲು ಪ್ರಥಮವಾಕ್ಯದ ವಿವರಣೆ ಮಾಡುವರು—ಅಗ್ನಿರ್ದೇವೇದ್ಧಃ ಎಂಬುದು ನಿವಿನ್ಮಂತ್ರಗಳಲ್ಲಿ ಮೊದಲನೆಯದು. ಇದನ್ನು ಹೋತೃವು ಪಠಿಸಬೇಕು. ಮೊದಲು ಅಗ್ನಿಯನ್ನು ದೇವತೆಗಳು ಹೊತ್ತಿಸಿದರು. ಎಂದರೆ ಪ್ರಜ್ವಲಿಸುವಂತೆ ಮಾಡಿದರು. ಸ್ವರ್ಗದಲ್ಲಿ ಎಂದರೆ ಅಂತರಿಕ್ಷದಲ್ಲಿ ಬೆಳಗುತ್ತಿರುವ ಆದಿತ್ಯಮಂಡಲದಲ್ಲಿ ಯಾವ ಅಗ್ನಿ ಇರುವುದೋ ಆ ಅಗ್ನಿಯೇ ದೇವತೆಗಳಿಂದ ಪ್ರಜ್ವಲಿತವಾದುದು. ಈ ಸೂರ್ಯಮಂಡಲರೂಪವಾದ ಅಗ್ನಿಯು ದೇವತೆಗಳಿಂದ ಹೊತ್ತಿಸಲ್ಪಟ್ಟು ಎಲ್ಲೆಲ್ಲಿಯೂ ಪ್ರಕಾಶಿಸುತ್ತಿರುವುದು ಎಂದು ಈ ಮಂತ್ರದ ಅರ್ಥವು.

ಅಗ್ನಿರ್ಮನ್ವಿದ್ಧ ಇತಿ ಶಂಸತ್ಯಯಂ ವಾ ಅಗ್ನಿರ್ಮನ್ವಿದ್ಧ ಇಮಂ ಹಿ ಮನುಷ್ಯಾ ಇಂಧತೇಽಗ್ನಿಮೇವ ತದಸ್ಮಿಂಲ್ಲೋಕೇ ಆಯಾತಯತಿ ।

ದ್ವಿತೀಯ ಪದಂ ವಿಧತ್ತೇ — ಅಂಗಾರರೂಪೋಽಗ್ನಿರ್ಭೂರ್ಲೋಕವರ್ತೀ ಮನುಷ್ಯೈಃ ಪ್ರಜ್ವಾಲ್ಯತೇ । ಅನ್ಯತ್ಪೂರ್ವವತ್ ॥

ಎರಡನೇ ಮಂತ್ರದ ಅರ್ಥವು— **ಅಗ್ನಿರ್ಮನ್ವಿದ್ಧಃ** ಎಂಬುದು ಎರಡನೆಯ ಮಂತ್ರವು. ಈ ಅಗ್ನಿಯು ಮನುಷ್ಯರಿಂದ ಹೊತ್ತಿಸಲ್ಪಟ್ಟು ಈ ಭೂಲೋಕದಲ್ಲಿ ಪ್ರಕಾಶಿಸುತ್ತಿರುವುದು ನಾವು ಪ್ರತ್ಯಕ್ಷವಾಗಿ ನೋಡುತ್ತಿರುವ ಅಗ್ನಿ (ಬೆಂಕಿ)ಯೇ ಇದು. ಇದು ಭೂಲೋಕವಾಸಿಗಳಿಗೆ ಔಷ್ಣ್ಯವನ್ನೂ ಪ್ರಕಾಶವನ್ನೂ ಒದಗಿಸುವದು.

**ಅಗ್ನಿಃ ಸುಷಮಿದಿತಿ ಶಂಸತಿ ವಾಯುರ್ವಾ ಅಗ್ನಿಃ ಸುಷಮಿದ್ವಾಯುರ್ಹಿ ಸ್ವಯಮಾತ್ಮಾನಂ ಸಮಿಂಧೇ ಸ್ವಯಮಿದಂ ಸರ್ವಂ ಯದಿದಂ ಕಿಂಚ ವಾಯುಮೇವ ತದಂತರಿಕ್ಷಲೋಕ ಆಯಾತಯತಿ**

**ತೃತೀಯಂ ಪದಂ ವಿಧತ್ತೇ— ಶೋಭನಾ ಸಮಿತ್ಪ್ರಕಾಶನಂ ಸಂಚರಣರೂಪಂ ಯಸ್ಯ ವಾಯೋಃ ಸೋಽಯಂ ಸುಷಮಿತ್ ॥ ತಸ್ಯಾಗ್ನಿತ್ವಂ ಗತಿಹೇತುತ್ವಾದ್ಯೌಗಿಕಂ । ಅಗಿ ಗತಾವಿತ್ಯಸ್ಮಾದ್ಧಾತೋರುತ್ಪನ್ನೋಽಯಂ ಶಬ್ದಃ । ಪ್ರಥಮಪರ್ಯಾಯೇಽಪ್ಯಾದಿತ್ಯಪರತ್ವಂ ಏವಂ ಯೋಜನೀಯಂ । ವಾಯುರ್ಹಿ ಸ್ವಾತ್ಮಾನಂ ಸರ್ವಂ ಜಗಚ್ಚ ಸಮಿಂಧೇ ಸಮ್ಯಕ್ಪ್ರಕಾಶಯತಿ ವ್ಯಾಪಾರಕ್ಷಮಂ ಕರೋತೀತ್ಯರ್ಥಃ ॥**

ಅನಂತರ ಹೋತೃವು ಅಗ್ನಿಃಸುಷಮಿತ್ ಎಂಬ ಮೂರನೆಯ ಮಂತ್ರವನ್ನು ಪಠಿಸುವನು. ನಮ್ಮ ಸುತ್ತಲೂ ಆವರಿಸಿರುವ ವಾಯುವೇ ಈ ಅಗ್ನಿಯು. ಅಗಿ-ಗತೌ ಎಂಬ ಧಾತುವಿನಿಂದ ಅಗ್ನಿಶಬ್ದವು ನಿಷ್ಪನ್ನವಾಗಿದೆ. ವಾಯು ಯಾವಾಗಲೂ ಸಂಚರಿಸುವುದರಿಂದ (ಬೀಸುವುದರಿಂದ) ಅಗ್ನಿಯೆಂಬ ಹೆಸರು ಬಂದಿದೆ. ಈ ವಾಯುರೂಪವಾದ ಅಗ್ನಿಯು ಸಮಸ್ತಪ್ರಾಣಿಗಳ ಶರೀರದಲ್ಲಿ ಸಂಚರಿಸುತ್ತಾ ಅವುಗಳ ಸಂಚಾರ ಮೊದಲಾದ ವ್ಯಾಪಾರಗಳಲ್ಲಿ ಸಹಾಯಕವಾಗಿ ಬೆಳಗುತ್ತಿರುವುದು. ಎರಡನೆಯ ಮಂತ್ರವು ಭೂಲೋಕದ ಅಗ್ನಿಪರವಾಗಿದ್ದು ಮನುಷ್ಯಾದಿ ಸಮಸ್ತಪ್ರಾಣಿಗಳಿಗೂ ಉಷ್ಣತೆಯನ್ನೂ ಪ್ರಕಾಶವನ್ನೂ ಒದಗಿಸಿ ಬೆಳಗುತ್ತಿರುವುದು. ಮೂರನೆಯ ಮಂತ್ರವು ವಾಯುರೂಪದಿಂದಿರುವ ಈ ಅಗ್ನಿಯು ಸಮಸ್ತಪ್ರಾಣಿಗಳ ಶರೀರದಲ್ಲಿದ್ದು ಅವುಗಳ ವ್ಯಾಪಾರಗಳಿಗೆ ಸಹಾಯಕವಾಗಿರುವುದು ಎಂಬರ್ಥವನ್ನು ಸೂಚಿಸುವುದು.

**ಹೋತಾ ದೇವವೃತ ಇತಿ ಶಂಸತ್ಯಸೌ ವೈ ಹೋತಾ ದೇವವೃತ ಏಷ ಹಿ ಸರ್ವತೋ ದೇವೈರ್ವೃತ ಏತಮೇವ ತದೇತಸ್ಮಿಂಲ್ಲೋಕ ಆಯಾತಯತಿ ।**

**ಚತುರ್ಥಪದಂ ವಿಧತ್ತೇ — ಅಸಾವಾದಿತ್ಯಃ ಸ್ವೋದಯಾಸ್ತಮಯಾಭ್ಯಾಂ ಸಾಯಂ ಪ್ರಾತರ್ಹೋಮನಿಮಿತ್ತೇನ ಹೋತಾ ಸ ವೈ ದ್ಯುಲೋಕೇ ವರ್ತಮಾನತ್ವಾದ್ದೇವೈರ್ವೃತಃ ।**

ಅನಂತರ ಹೋತೃವು ನಾಲ್ಕನೆಯ ಮಂತ್ರವನ್ನು ಪಠಿಸುವನು. **ಹೋತಾ ದೇವವೃತಃ** ಎಂಬುವುದೇ ನಾಲ್ಕನೆಯ ಮಂತ್ರವು. ಅಂತರಿಕ್ಷದಲ್ಲಿ ಬೆಳಗುತ್ತಿರುವ ಆದಿತ್ಯನು ಉದಯಾಸ್ತಮಯ ಕಾಲಗಳಲ್ಲಿ ನಡೆಯುವ ಹೋಮಾದಿಗಳಲ್ಲಿ ಸಹಾಯಕನಾಗಿ ಬೆಳಗುತ್ತಿರುವನು. ಸ್ವರ್ಗದಲ್ಲಿ ಇವನ ಸುತ್ತಲೂ ದೇವತೆಗಳು ನೆಲಸಿರುವುದರಿಂದ ಇವನು ದೈವೈರ್ವೃತಃ ಎಂದು ಹೇಳಲ್ಪಡುವನು.

**ಹೋತಾ ಮನುರ್ವೃತ ಇತಿ ಶಂಸತ್ಯಯಂ ವಾ ಅಗ್ನಿರ್ಹೋತಾ ಮನುರ್ವೃತೋಽಯಂ ಹಿ ಸರ್ವತೋ ಮನುಷ್ಯೈರ್ವೃತೋಽಗ್ನಿಮೇವ ತದಸ್ಮಿಂಲ್ಲೋಕ ಆಯಾತಯತಿ ॥**

ಪಂಚಮಂ ಪದಂ ವಿಧತ್ತೇ — ಭೂಲೋಕೇಽವಸ್ಥಿತೋಽಗ್ನಿಃ ಹೋಮಾಧಿಕರಣತ್ವಾದ್ಧೋತಾ ಯಜಮಾನರ್ತ್ವಿಗ್ಭಿಶ್ಚೇಷ್ಟಿತತ್ವಾನ್ಮನುರ್ವೃತಃ ॥

ಬಳಿಕ ಹೋತೃವು ಹೋತಾ ಮನುರ್ವೃತಃ ಎಂಬ ಐದನೆಯ ಮಂತ್ರವನ್ನು ಪಠಿಸುವನು. ಭೂಲೋಕದಲ್ಲಿರುವ ಈ ಅಗ್ನಿಯ ಸಮೀಪದಲ್ಲಿ ಹೋಮಾದಿ ಕಾಲಗಳಲ್ಲಿ ಹೋತೃ, ಯಜಮಾನ ಮೊದಲಾದವರು ಯಜ್ಞಕರ್ಮದಲ್ಲಿ ನಿರತರಾಗಿರುವುದರಿಂದ ಈ ಅಗ್ನಿಯು ಮನುಷ್ಯರಿಂದ ಪರಿವೃತನಾಗಿರುವನೆಂದು ಈ ಮಂತ್ರದ ಅರ್ಥವು.

**ಪ್ರಣೇರ್ಯಜ್ಞಾನಾಮಿತಿ ಶಂಸತಿ ವಾಯುರ್ವೈ ಪ್ರಣೇರ್ಯಜ್ಞಾನಾಂ ಯದಾ ಹಿ ಪ್ರಾಣಿತ್ಯಥ ಯಜ್ಞೋಽಥಾಗ್ನಿಹೋತ್ರಂ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ।**

ಷಷ್ಠಂ ಪದಂ ವಿಧತ್ತೇ — ಯಜ್ಞಾನ್ಪ್ರಕರ್ಷೇಣ ನಯತಿ ವಾಯುಸ್ತಸ್ಮಾದೇಷ ಯಜ್ಞಾನಾಂ ಪ್ರಣೀಃ ಯಸ್ಮಿನ್ಕಾಲೇ ಪುರುಷಃ ಪ್ರಾಣಿತಿ ಪ್ರಾಣವಾಯುನಾ ಚೇಷ್ಟತೇ ತದಾ ಯಜ್ಞೋ ಭವತಿ । ತಸ್ಯೈವ ವ್ಯಾಖ್ಯಾನಮುದಾಹರಣರೂಪಂ ಅಥಾಗ್ನಿಹೋತ್ರಮಿತಿ ಪ್ರಾಣವಾಯುಚೇಷ್ಟಯಾ ಅಗ್ನಿಹೋತ್ರಕರಣಾದಿವ್ಯಾಪಾರಾ ನಿಷ್ಪದ್ಯಂತೇ ॥

ಹೋತೃವು ಪ್ರಣೇರ್ಯಜ್ಞಾನಾಂ ಎಂಬ ಆರನೆಯ ಮಂತ್ರವನ್ನು ಪಠಿಸುವನು. ವಾಯುವೇ (ವಾಯುರೂಪದಿಂದಿರುವ ಅಗ್ನಿಯೇ) ಪ್ರಣೀಃ ಎಂದರೆ ಯಜ್ಞದ ನೇತೃ (ನಾಯಕ)ನೆಂದು ಹೇಳಲ್ಪಡುವುದು. ಯಜ್ಞಾದಿಕರ್ಮಗಳಲ್ಲಿ ವಾಯುವು ಮನುಷ್ಯರಲ್ಲಿ ಉಚ್ಛ್ವಾಸನಿಶ್ವಾಸ ರೂಪದಿಂದಿದ್ದು ಅವರು ಅಗ್ನಿಹೋತ್ರಾದಿ ಯಜ್ಞಾಂಗಕರ್ಮಗಳಲ್ಲಿ ಪಾತ್ರವಹಿಸಲು ಸಹಾಯಕನಾಗಿರುವನು. ವಾಯುಸಂಚಾರವಿಲ್ಲದೆ ಮನುಷ್ಯಾದಿ ಪ್ರಾಣಿಗಳು ಯಾವ ಕಾರ್ಯವನ್ನೂ ಮಾಡಲು ಶಕ್ತರಾಗುವುದಿಲ್ಲ. ಆದ್ದರಿಂದ ವಾಯುವು ಮನುಷ್ಯರಿಗೆ ಅವರ ಶರೀರಗಳಲ್ಲಿ ಸಂಚಾರಮೂಲಕ ಶಕ್ತಿಸಾಮರ್ಥ್ಯಗಳನ್ನೊದಗಿಸಿ ಅವರು ಅಗ್ನಿಹೋತ್ರಾದಿ ಕರ್ಮಗಳಲ್ಲಿ ನಿರತರಾಗುವಂತೆ ಮಾಡುವುದರಿಂದ ವಾಯುರೂಪದಿಂದಿರುವ ಈ ಅಗ್ನಿಯು ಯಜ್ಞದ ನೇತೃ ಎಂದರೆ ಯಜ್ಞದ ನಿರ್ವಾಹಕನೆಂದು ಹೇಳಲ್ಪಡುವನು.

**ರಥೀರಧ್ವರಾಣಾಮಿತಿ ಶಂಸತ್ಯಸೌ ವೈ ರಥೀರಧ್ವರಾಣಾಮೇಷ ಹಿ ಯದ್ಧೈತಚ್ಚರತಿ ರಥೀರಿವೈತಮೇವ ತದೇತಸ್ಮಿಂಲ್ಲೋಕ ಆಯಾತಯತಿ ।**

ಸಪ್ತಮಂ ಪದಂ ವಿದತ್ತೇ—ಅಸಾವಾದಿತ್ಯೋಽಧ್ವರಾಣಾಂ ಪ್ರಕಾಶನಾಯ ರಥೀರ್ಭವತಿ ರಥವಾನ್ಭೂತ್ವಾ ಸಂಚರತಿ । ಅಯಮೇವಾರ್ಥ ಏಷ ಹೀತ್ಯಾದಿನೋಚ್ಯತೇ । ಯಥಾ ಲೋಕೇ

**ರಥೀರಿವ ಕಶ್ಚನ ರಥವಾನೇವ್ಮೈತದ್ಗಂತವ್ಯಸ್ಥಾನಂ ಪ್ರತಿ ಚರತಿ ತಥೈಷ ಆದಿತ್ಯೋಽಪಿ ರಥಯುಕ್ತ ಏವ ಚರತಿ। ಶಾಖಾಂತರೇ ತು ತದೀಯರಥಪ್ರದರ್ಶನಪೂರ್ವಕಮೇವ ಮಂತ್ರೋ ವ್ಯಾಖ್ಯಾತಃ 'ರಥೀರಧ್ವರಾಣಾಮಿತ್ಯಾಹ, ಏಷ ಹಿ ದೇವರಥಃ' ಇತಿ।**

ಬಳಿಕ ಹೋತೃವು ರಥೀರಧ್ವರಾಣಾಂ ಎಂಬ ಏಳನೆಯ ನಿವಿನ್ಮಂತ್ರವನ್ನು ಪಠಿಸುವನು. ದ್ಯುಲೋಕದಲ್ಲಿ (ಅಂತರಿಕ್ಷದಲ್ಲಿ) ಪ್ರಕಾಶಿಸುತ್ತಾ ಸಂಚರಿಸುತ್ತಿರುವ ಆದಿತ್ಯನೇ ರಥೀಃ ಎಂದರೆ ರಥಸಂಚಾರಿಯು ಎಂದು ಹೇಳಲ್ಪಡುವನು. ಲೋಕವ್ಯವಹಾರದಲ್ಲಿ ಒಬ್ಬ ಪುರುಷನು ಒಂದು ಸ್ಥಳದಿಂದ ಮತ್ತೊಂದುಸ್ಥಳಕ್ಕೆ ಹೋಗುವಾಗ ರಥದಲ್ಲಿ ಕುಳಿತು ಹೋಗುವಂತೆ ಈ ಆದಿತ್ಯನು ರಥಸಂಚಾರಿಯಾಗಿ ಯಜ್ಞಕರ್ಮವನ್ನು ನಿರ್ವಹಿಸಲು ಬೆಳಗುತ್ತಿರುವನು. ಶಾಖಾಂತರದಲ್ಲಿ ಎಂದರೆ ತೈತ್ತಿರೀಯ ಸಂಹಿತೆಯಲ್ಲಿ ಆದಿತ್ಯನ ರಥಪ್ರದರ್ಶನದ ವಿಚಾರವಾಗಿ—**ರಥೀರಧ್ವರಾಣಾಮಿತ್ಯಾಹ ಏಷ ಹಿ ದೇವರಥಃ** (ತೈ. ಸಂ. ೨-೫-೯-೨) ಎಂದು ಹೇಳಿರುವುದು.

**ಅತೂರ್ತೋ ಹೋತೇತಿ ಶಂಸತ್ಯಯಂ ವಾ ಅಗ್ನಿರತೂರ್ತೋ ಹೋತೇಮಂ ಹ ನ ಕಶ್ಚನ ತಿರ್ಯಂಚಂ ತರತ್ಯಗ್ನಿಮೇವ ತದಸ್ಮಿಂಲ್ಲೋಕ ಆಯಾತಯತಿ।**

**ಅಷ್ಟಮಂ ಪದಂ ವಿಧತ್ತೇ—ಭೂಲೋಕವರ್ತೀ ವಹ್ನಿರತೂರ್ತಃ ಕೇನಾಪ್ಯತೀರ್ಣಃ ಮಾರ್ಗಮಧ್ಯೇ ತಿರ್ಯಂಚಂ ಮಾರ್ಗಸ್ಯಾವರೋಧಕತ್ವೇನಾವಸ್ಥಿತಂ ಪ್ರೌಢಂ ದಾವಾಗ್ನಿಂ ಕಶ್ಚಿದಪಿ ತರಿತುಂ ನ ಸಮರ್ಥಃ॥**

ಹೋತೃವು ಅನಂತರ **ಅತೂರ್ತೋ ಹೋತಾ** ಎಂಬ ಎಂಟನೆಯ ಮಂತ್ರವನ್ನು ಪಠಿಸುವನು. ಭೂಲೋಕದಲ್ಲಿರುವ ಅಗ್ನಿಯು (ಬೆಂಕಿಯು) ದಾಟಲಶಕ್ಯವಾದುದು. ಎಂದರೆ ಮಾರ್ಗಮಧ್ಯದಲ್ಲಿ ಉರಿಯುತ್ತಿರುವ ದಾವಾಗ್ನಿಯನ್ನು (ಕಾಡುಕಿಚ್ಚು) ದಾಟಲು ಯಾವ ಪುರುಷನೂ ಸಮರ್ಥನಾಗುವುದಿಲ್ಲ.

**ತೂರ್ಣಿರ್ಹವ್ಯವಾಳಿತಿ ಶಂಸತಿ ವಾಯುರ್ವೈ ತೂರ್ಣಿರ್ಹವ್ಯವಾಡ್ವಾಯುರ್ಹೀದಂ ಸರ್ವಂ ಸದ್ಯಸ್ತರತಿ ಯದಿದಂ ಕಿಂಚ ವಾಯುರ್ದೇವೇಭ್ಯೋ ಹವ್ಯಂ ವಹತಿ ವಾಯುಮೇವ ತದಂತರಿಕ್ಷಲೋಕ ಆಯಾತಯತಿ॥**

**ನವಮಂ ಪದಂ ವಿಧತ್ತೇ—ತರತೀತಿತೂರ್ಣಿಃ । ವಾಯೋಃ ಸರ್ವತರಣಸಾಮರ್ಥ್ಯಂ ಪ್ರಸಿದ್ಧಂ। ಹವ್ಯಂ ವಹತೀತಿಹವ್ಯವಾಡ್ಹವಿರ್ವಹನಸ್ಯ ಕ್ರಿಯಾರೂಪಸ್ಯ ವಾಯುನಿಷ್ಪಾದ್ಯತ್ವಾದಸೌ ಹವ್ಯಂ ವಹತಿ।**

ಅನಂತರ ಹೋತೃವು **ತೂರ್ಣಿರ್ಹವ್ಯವಾಟ್** ಎಂಬ ಒಂಭತ್ತನೆಯ ಮಂತ್ರವನ್ನು ಪಠಿಸುವನು. ಈ ವಾಕ್ಯವು ವಾಯುಸ್ವರೂಪನಾದ ಅಗ್ನಿಯನ್ನು ಸೂಚಿಸುವುದು. ತರತಿಧಾತುವಿನಿಂದ ತೂರ್ಣಿಶಬ್ದವು ನಿಷ್ಪನ್ನವಾಗಿದೆ. ವಾಯುವು

ಸಮಸ್ತವಸ್ತುಗಳನ್ನು ದಾಟಕೊಂಡುಹೋಗುವದು. ಇದಲ್ಲದೆ ವಾಯುರೂಪದಿಂದಿರುವ ಅಗ್ನಿಯು **ಹವ್ಯವಾಟ್** ಎಂದರೆ ದೇವತೆಗಳಿಗೆ ಅಗ್ನಿಯಲ್ಲಿ ಆಹುತಿರೂಪದಿಂದ ಅರ್ಪಿಸಿದ ಹೋಮದ್ರವ್ಯವನ್ನು ವಹಿಸಿ ಅವರ ಬಳಿಗೊಯ್ಯುವುದು. ಈ ಕಾರಣ ಗಳಿಂದ ಅಂತರಿಕ್ಷದಲ್ಲಿ ವಾಯುರೂಪದಿಂದ ಸಂಚರಿಸುತ್ತಿರುವ ಅಗ್ನಿಯು **ತೂರ್ಣಿರ್ಹವ್ಯಹಾಟ್** ಎಂದು ಈ ಮಂತ್ರದಲ್ಲಿ ವಿವರಿಸಲ್ಪಟ್ಟಿರುವುದು.

**ಆ ದೇವೋ ದೇವಾನ್ವಕ್ಷದಿತಿ ಶಂಸತ್ಯಸೌ ವೈ ದೇವೋ ದೇವಾನಾವ-ಹತ್ಯೇತಮೇವ ತದೇತಸ್ಮಿಂಲ್ಲೋಕ ಆಯಾತಯತಿ ||**

**ದಶಮಂ ಪದಂ ವಿಧತ್ತೇ — ಅಸಾವಾದಿತ್ಯೋ ದೇವಃ ಸ್ವೋದಯಾಸ್ತಮಯಾಭ್ಯಾಂ ಹೋಮಕಾಲಸೂಚನೇನ ದೇವಾನಾವಕ್ಷತ್ ಆವಹತಿ |**

**ಹೋತೃವು ಆ ದೇವೋ ದೇವಾನ್ವಕ್ಷತ್** ಎಂಬ ಹತ್ತನೆಯ ಮಂತ್ರವನ್ನು ಪಠಿಸುವನು. ಇಲ್ಲಿ ದೇವಶಬ್ದವು ನಮಗೆ ಪ್ರತ್ಯಕ್ಷವಾಗಿ ಕಾಣುತ್ತಿರುವ ಆದಿತ್ಯನನ್ನು ಸೂಚಿಸುವುದು. ಈ ಆದಿತ್ಯದೇವನು ಉದಯಾಸ್ತಮಯಕಾಲಗಳಲ್ಲಿ ನಡೆಯುವ ಹೋಮಾದಿಗಳಲ್ಲಿ ದೇವತೆಗಳನ್ನು ಯಜ್ಞಭೂಮಿಗೆ ಕರೆತರುವನು ಎಂದು ಈ ಮಂತ್ರದ ಅರ್ಥವು.

**ಯಕ್ಷದಗ್ನಿರ್ದೇವೋ ದೇವಾನಿತಿ ಶಂಸತ್ಯಯಂ ವಾ ಅಗ್ನಿರ್ದೇವೋ ದೇವಾನ್ಯಜತ್ಯಗ್ನಿಮೇವ ತದಸ್ಮಿಂಲ್ಲೋಕ ಆಯಾತಯತಿ |**

**ಏಕಾದಶಂ ಪದಂ ವಿಧತ್ತೇ—ಅಯಂ ಭೂಮೌ ದೃಶ್ಯಮಾನೋಽಗ್ನಿರ್ದೇವೋ ದೇವಾ-ನ್ಯಜತೀತಿ ಪ್ರಸಿದ್ಧಂ ||**

**ಯಕ್ಷದಗ್ನಿರ್ದೇವೋ ದೇವಾನ್** ಎಂಬುದು ಹನ್ನೊಂದನೆಯ ಮಂತ್ರವು. ಇಲ್ಲಿ ದೇವಃ ಎಂದರೆ ಭೂಮಿಯಲ್ಲಿ ನಮಗೆ ಪರಿಚಿತನಾದ ಅಗ್ನಿಯು (ಬೆಂಕಿಯು) ಈ ಅಗ್ನಿಯು ನಾವು ಮಾಡುವ ಯಜ್ಞಯಾಗಾದಿಗಳಲ್ಲಿ ದೇವತೆಗಳನ್ನು ಆಹ್ವಾನ ಮಾಡುವನು ಎಂದರೆ ಹೋಮದ್ರವ್ಯಸೇವನೆಗಾಗಿಯೂ ಮತ್ತು ನಾವು ಮಾಡುವ ಸ್ತೋತ್ರರೂಪವಾದ ಪ್ರಾರ್ಥನೆಯನ್ನು ಕೇಳುವುದಕ್ಕಾಗಿಯೂ ಯಜ್ಞವೇದಿಗೆ ಕರತರುವನು.

**ಸೋ ಅಧ್ವರಾ ಕರತಿ ಜಾತವೇದಾ ಇತಿ ಶಂಸತಿ ವಾಯುರ್ವೈ ಜಾತವೇದಾ ವಾಯುರ್ಹೀದಂ ಸರ್ವಂ ಕರೋತಿ ಯದಿದಂ ಕಿಂಚ ವಾಯುಮೇವ ತದಂತರಿಕ್ಷಲೋಕ ಆಯಾತಯತಿ ||**

**ದ್ವಾದಶಂ ಪದಂ ವಿಧತ್ತೇ—ಉಚ್ಛ್ವಾಸನಿಃಶ್ವಾಸಪ್ರದಾನೇನ ಜಾತಂ ಪ್ರಾಣಿನಂ ವೇದಯತಿ ಜೀವನಯುಕ್ತತ್ವೇನ ಜ್ಞಾಪಯತೀತಿ ವಾಯುರ್ಜಾತವೇದಾಃ | ಸ ಚಾಧ್ವರಾ ಸರ್ವಯಜ್ಞಾ-ನ್ಕರೋತಿ ನಿಷ್ಪಾದಯತಿ ವ್ಯಾಪಾರರೂಪಸ್ಯಾನುಷ್ಠಾನಸ್ಯ ವಾಯ್ವಧೀನತ್ವಾತ್ || ಏಷ ದ್ವಾದ-ಶಸು ಪದೇಷು ಸೂರ್ಯಾಗ್ನಿವಾಯವಃ ಚತುರಾವೃತ್ತಾಃ |**

ಅನಂತರ ಹೋತೃವು **ಸೋ ಅಧ್ವರಾ ಕರತಿ ಜಾತವೇದಾಃ** ಎಂಬ ನಿವಿನ್ಮಂತ್ರಗಳಲ್ಲಿ ಹನ್ನೆರಡನೆಯ (ಮತ್ತು ಕೊನೆಯ) ಮಂತ್ರವನ್ನು ಪಠಿಸುವನು. ಇಲ್ಲಿ **ಜಾತವೇದಾಃ** ಎಂಬ ಶಬ್ದಕ್ಕೆ ಸಮಸ್ತಜಂತುಗಳ ಅಥವಾ ಪ್ರಾಣಿಗಳ ವ್ಯವಹಾರಾದಿಗಳನ್ನು ತಿಳಿದಿರುವವನು ಎಂದರ್ಥವು. ಉಚ್ಛ್ವಾಸನಿಃಶ್ವಾಸರೂಪದಿಂದ ಸಮಸ್ತಪ್ರಾಣಿಗಳ ಶರೀರಗಳಲ್ಲಿಯೂ ಸಂಚರಿಸುವ ಈ ವಾಯುವೇ ಜಾತವೇದಾಃ ಎಂಬ ಹೆಸರಿನಿಂದ ಪ್ರಸಿದ್ಧನಾದ ಅಗ್ನಿಯು. ಈ ಜಾತವೇದನಾಮಕನಾದ ಅಗ್ನಿಯು ವಾಯುರೂಪದ ತನ್ನ ನಾನಾವಿಧ ವ್ಯಾಪಾರಗಳಿಂದ ಮನುಷ್ಯರಿಗೆ ಸಹಾಯಕನಾಗಿ ಯಜ್ಞಕರ್ಮವನ್ನು ನಿರ್ವಹಿಸುವನು ಎಂದಭಿಪ್ರಾಯವು.

## *English Translation*

### (The several words of the Nivid are explained)

The Hotar repeats: Agnir deveddhah, i.e. Agni lighted by the gods. The Agni lighted by the gods is that Agni (in heaven); for the gods kindled him; by these words he (the Hotar) has command over that Agni in that world (the fire in heaven).

The Hotar repeats: Agnir manviddhah, i.e. Agni lighted by men. The Agni lighted by men is this one (on earth): for men lighted him. Thus he has command over Agni who is in this world (on earth).

The Hotar repeats: Agnih sushamit, i.e. Agni who lights well. This is Vayu. For Vayu lights himself through himself and all that exists. Thus he has command over Vayu in the airy region.

He repeats: hota devarritah, i.e. the Hotar chosen by the gods. The Hotar chosen by the gods is that Agni (in heaven). For he is everywhere chosen by the gods. Thus he has command over him in that world (heaven).

He repeats: hota manuvritah, i.e., the Hotar chosen by men. The Hotar chosen by men is the Agni (on earth). For this Agni is everywhere chosen by men. Thus the Hotar has command over Agni in this world.

He repeats: pranir yajnanam, i.e. the carrier of sacrifices. Vayu is the carrier of sacrifices. For when he blows (praniti) then the sacrifice exists, and consequently the Agnihotram. Thus he has command over Vayu in the airy region.

He repeats: rathir adhvaranam, i,e. proprietor of the carriage laden with offerings. The prqprietor of the carriage laden with offerings is that one (Agni

in heaven, Aditya). For he moves to his place (to which he wlshes to go) just as one who has a carriage. Thus the Hotar has command over him (Agni) in this world.

He repeats: aturto hota, i.e. the Hotar who is not to be overcome. This Agni (the Agni on earth) is the Hotar who is not to be overcome. None can comc across his way. Thus the Hotar has command over Agni in this world (on earth).

He repeats: turnir havyavat, i.e. the runner who carries the offerings. Vayu is the runner who carries the offerings. For Vayu runs in an instant through the whole universe; he carries the offerings to the gods, Thus he has command over Vayu in ihe airy region.

He repeats: a devo devan vakshat, i.e. may the god bring hither the gods, That god (Agni in heaven) is it who brings hither the gods. Thus he has command over that (Agni) in that world.

He repeats: yakshad agnir devo devan, i.e. may Agni the god repeat the sacrificial mantras addressed to the gods. This Agni is it who repeats the sacrificial mantras addressed to the gods. Thus he has command over Agni in this world.

He repeats: so adhvara karati jatavedah, i.e. may Jatavedas (Agni) prepare the sacred food. Vayu is Jatavedas. Vayu makes the whole universe. Thus he has command over Vayu in the airy region.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದಶಮಾಧ್ಯಾಯಸ್ಯ ದ್ವಿತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು
ಸಮಾಪ್ತವಾದುದು.



# ಅಥ ದಶಮಾಧ್ಯಾಯೇ ತೃತೀಯಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಆಜ್ಯಶಸ್ತ್ರದ ಸೂಕ್ತಪಠನಕ್ರಮದಲ್ಲಿ ಕೆಲವು ವಿಶೇಷಸಂಗತಿಗಳು ]



**ಪ್ರ ವೋ ದೇವಾಯಾಗ್ನಯ ಇತ್ಯನುಷ್ಟುಭಃ । ಪ್ರಥಮೇ ಪದೇ ವಿಹರತಿ ತಸ್ಮಾತ್ ಸ್ತ್ರ್ಯೂರೂ ವಿಹರತಿ ಸಮಸ್ಯತ್ಯುತ್ತರೇ ಪದೇ ತಸ್ಮಾತ್ಪುಮಾನೂರೂ ಸಮಸ್ಯತಿ ತನ್ಮಿಥುನಂ ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ।**

ನಿವಿದೋ ಯಾನಿ ದ್ವಾದಶಪದಾನಿ ಭಾಗರೂಪಾಣಿ! ತಾನ್ಯುಕ್ತಾನಿ । ಅಥ ತದನಂತರ-ಭಾವಿ ಸೂಕ್ತಂ ವಿಧತ್ತೇ—ಪ್ರ ವ ಇತ್ಯಾದಿ ಸೂಕ್ತಸ್ಯ ಪ್ರತೀಕಂ ತಸ್ಮಿನ್ಸೂಕ್ತೇ ಯಾಃ ಸಪ್ತಸಂ-ಖ್ಯಾತಾ ಅನುಷ್ಟುಪ್ಛಂದಸ್ಕಾ ಋಚಃ ಸಂತಿ ತಾಃ ಶಂಸೇದಿತಿ ಶೇಷಃ । ಪ್ರಥಮಾಯಾಮೃಚಿ ಯೌ ಪ್ರಥಮದ್ವಿತೀಯಪಾದೌ ತಯೋರ್ವಿಹರಣಂ ವಿಧತ್ತೇ — ವಿಹರಣಂ ಪೃಥಕ್ಕರಣಂ ದ್ವಯೋಃ ಪಾದಯೋರ್ಮಧ್ಯೇ ವಿಹಾರಂ ವಿಚ್ಛೇದಂ ಕೃತ್ವಾ ಪಠೇತ್ ॥ ಯಸ್ಮಾದತ್ರ ಪಾದ-ಯೋಃ ಪರಸ್ಪರವಿಯೋಗಸ್ತಸ್ಮಾಲ್ಲೋಕೇಽಪಿ ಸ್ತ್ರೀ ಸಂಭೋಗಕಾಲೇ ಸ್ವಕೀಯೇ ಊರೂ ವಿಹರತಿ ವಿಯೋಜಯತಿ ॥ ತಸ್ಯಾಮೃಚಿ ತೃತೀಯಚತುರ್ಥಪಾದಯೋರವಿಚ್ಛೇದಂ ವಿಧತ್ತೇ-ಯಸ್ಮಾತ್ತೃತೀಯಚತುರ್ಥಪಾದಯೋರುತ್ತರಾರ್ಧಗತಯೋಃ ಸಂಯೋಜನಂ ತಸ್ಮಾಲ್ಲೋ-ಕೇಽಪ್ಯುಪರಿವರ್ತೀ ಪುಮಾನ್ ಭೋಗಕಾಲೇ ಸ್ವಕೀಯೇ ಊರೂ ಸಮಸ್ಯತಿ ಸಂಯೋಜಯತಿ ತದುಭಯಂ ಮಿಲಿತ್ವಾ ಮಿಥುನಂ ಭವತಿ ತಸ್ಮಾದುಕ್ಥಮುಖೇ ಶಸ್ತ್ರಸ್ಯೋಪಕ್ರಮೇ ಮಿಥುನ-ಮೇವ ಕರೋತಿ । ತಚ್ಚ ಯಜಮಾನಸ್ಯ ಪ್ರಜನನಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ—

ಇದುವರೆಗೂ ನಿವಿನ್ಮಂತ್ರಗಳ ಹನ್ನೆರಡು ವಾಕ್ಯಗಳನ್ನು ವಿವರಿಸಿದ್ದಾಯಿತು. ಈಗ ಸೂಕ್ತಭಾಗವನ್ನು ವಿವರಿಸಲಾಗುವುದು. **ಪ್ರ ವೋ ದೇವಾಯಾಗ್ನಯೇ** ಎಂದು ಹೇಳಿರುವುದರಿಂದ ಆ ಸೂಕ್ತವನ್ನು(ಋ.ಸಂ. ೩-೧೩) ಪಠಿಸಬೇಕೆಂದು ಅರ್ಥವು. ಈ ಸೂಕ್ತದಲ್ಲಿ ಏಳು ಋಕ್ಕುಗಳಿರುವುವು. ಇವೆಲ್ಲವೂ ಅನುಷ್ಟುಪ್ ಛಂದಸ್ಸಿನವು. ಮೊದಲನೆಯ ಋಕ್ಕಿನಲ್ಲಿರುವ ಪ್ರಥಮ ದ್ವಿತೀಯಪಾದಗಳನ್ನು ಪಠಿಸುವಾಗ ಅವುಗಳ ಮಧ್ಯದಲ್ಲಿ ನಿಲ್ಲಿಸಿ ಹೇಳಬೇಕು. ಇಲ್ಲಿ ಉಪಯೋಗಿಸಿರುವ **ವಿಹರತಿ** ಎಂಬ ಪದಕ್ಕೆ ವಿಚ್ಛೇದನ ಅಥವಾ ನಿಲ್ಲಿಸಿ ಹೇಳುವುದು ಎಂದರ್ಥವು. ಇದನ್ನು ಸ್ತ್ರೀಪುರುಷರ ಸಂಭೋಗಕ್ಕೆ ಹೋಲಿಸಿರುವರು.

ಸಂಭೋಗಕಾಲದಲ್ಲಿ ಸ್ತ್ರೀಯು ತನ್ನ ಎರಡು ತೊಡೆಗಳನ್ನು ಅಗಲಿಸಿ ಮಲಗಿಕೊಳ್ಳುವಳು. ಆದ್ದರಿಂದ (ಅದರಂತೆ) ಒಂದು ಪಾದವನ್ನು ಪಠಿಸಿ ಅನಂತರ ಸ್ವಲ್ಪ ಬಿಟ್ಟು ಎರಡನೆಯ ಪಾದವನ್ನು ಪಠಿಸಬೇಕು. ಆದರೆ ಮೂರು ಮತ್ತು ನಾಲ್ಕನೆಯ ಪಾದಗಳನ್ನು ಪಠಿಸುವಾಗ ಹೀಗೆ ಮಾಡದೆ ಎರಡು ಪಾದಗಳನ್ನು ಒಟ್ಟಿಗೆ ಸೇರಿಸಿ ಪಠಿಸಬೇಕು. ಏಕೆಂದರೆ ಪುರುಷನು ಸ್ತ್ರೀಯೊಂದಿಗೆ ಸಂಭೋಗಿಸುವಾಗ ತನ್ನ ಎರಡು ತೊಡೆಗಳನ್ನು ಅಗಲಿಸದೆ ಒಳಗೆ ಸೇರಿಸಿ ಸಂಭೋಗಿಸುವನು. ಅದರಿಂದ ಎಂದರೆ ಈ ರೀತಿ ಸಂಭೋಗಿಸುವುದರಿಂದ ಮಿಥುನವಾಗಿ (ಪರಸ್ಪರ ಸಂಭೋಗವಾಗಿ) ಅದರಿಂದ ಸಂತಾನವುಂಟಾಗುವುದು. ಶಸ್ತ್ರಮಂತ್ರಪಠನದ ಪ್ರಾರಂಭದಲ್ಲಿ ಈ ಕ್ರಮುವನ್ನನುಸರಿಸುವುದರಿಂದ ಯಜ್ಞಮಾಡುವ ಯಜಮಾನನಿಗೆ ಪುತ್ರಸಂತಾನವೂ ಪಶುಸಂಪತ್ತಿಯೂ ಲಭಿಸುವುದು. ಯಾವ ಪುರುಷನು ಈ ಕ್ರಮುವನ್ನರಿತು ಅದರಂತೆ ಆಚರಿಸುವನೋ ಅವನು ಪುತ್ರ ಸಂತಾನವನ್ನೂ ಪಶುಸಂಪತ್ತಿಯನ್ನೂ ಪಡೆದು ಸುಖಿಸುವನು.

ಪ್ರ ವೋ ದೇವಾಯಾಗ್ನಯ ಇತ್ಯೇವಾನುಷ್ಟುಭಃ ಪ್ರಥಮೇ ಪದೇ ವಿಹರತಿ ವಜ್ರಮೇವ ತತ್ಪರೋವರೀಯಾಂಸಂ ಕರೋತಿ ಸಮಸ್ಯತ್ಯೇವೋತ್ತರೇ ಪದೇ ಆರಂಭಣತೋ ವೈ ವಜ್ರಸ್ಯಾಣಿ- ಮಾಥೋ ದಂಡಸ್ಯಾಥೋ ಪರಶೋರ್ವಜ್ರಮೇವ ತತ್ಪ್ರಹರತಿ ದ್ವಿಷತೇ ಭ್ರಾತೃವ್ಯಾಯ ವಧಂ ಯೋಽಸ್ಯಸ್ತೃತ್ಯಸ್ತಸ್ಮೈ ಸ್ತರ್ತವೈ॥

ಪುನರಪ್ಯುಕ್ತಮೇವಾನೂದ್ಯ ಪ್ರಕಾರಾಂತರೇಣ ಪ್ರಶಂಸತಿ— ಇತ್ಯೇವಾನುಷ್ಟುಭ ಇತಿ ಯೋಽಯಮೇವಕಾರಃ ಸ ಪೂರ್ವಸ್ಯೈವಾನುವಾದೋ ನ ತು ನೂತನವಿಧಿರಿತಿ ಜ್ಞಾಪನಾರ್ಥಃ। ಪರೋವರೀಯಾಂಸಂ ಪರಸ್ಯುತ್ತರಭಾಗೇಽತಿಶಯೇನ ಸ್ಥೂಲಮೀದೃಶಂ ವಜ್ರಂ ಸೂಕ್ತಪಠನೇನ ಸಂಪಾದಯತಿ। ಪ್ರಥಮಾಯಾಋಚ ಉತ್ತರಾರ್ಧೇ ಪದೇ ತತ್ಪಾದಯೋಃ ಸಮಸನಂ ತದಪಿ ವಜ್ರಸಾದೃಶ್ಯಾರ್ಥಂ ವಜ್ರಸ್ಯ ಹ್ಯಾರಂಭಣತೋಽಣಿಮಾ ಮೂಲೇ ಸೌಕ್ಷ್ಮ್ಯಮಿತ್ಯರ್ಥಃ। ವಜ್ರ- ಶಬ್ದೇನ ಖಡ್ಗಾದಿರೂಪಮಾಯುಧಮಭಿಧೀಯತೇ। ತಸ್ಯ ಹಿ ಮೂಲೇ ಮುಷ್ಟಿಬಂಧನಸ್ಥಾನೇ ಸೂಕ್ಷ್ಮತಾ ಭವತ್ಯುಪರಿ ತು ವಿಸ್ತಾರಃ। ದಂಡಶಬ್ದೇನ ಗದಾ ವಿವಕ್ಷಿತಾ। ಸಾಪಿ ಹಸ್ತಗ್ರಹಣ- ಸ್ಥಾನೇ ಮೂಲೇ ಸೂಕ್ಷ್ಮಾ ಪ್ರಹಾರಸ್ಥಾನೇಽಗ್ರೇ ಸ್ಥೂಲಾ। ಪರಶುರಪಿ ತಥಾವಿಧಃ। ಯಥಾ- ಯಂ ತ್ರಿವಿಧೋ ವಜ್ರ ಏವಮಿದಮಪಿ ಸೂಕ್ತಂ ಪ್ರಥಮಾರ್ಧರ್ಚಪಾದವಿಹರಣೇನ ಸೂಕ್ಷ್ಮ- ಮುತ್ತರಾರ್ಧರ್ಚಪಾದಸಮಾಸೇನ ಸ್ಥೂಲಂ। ಅತ ಈದೃಶಂ ಸೂಕ್ತರೂಪಂ ವಜ್ರಮೇವ ದ್ವೇಷಂ ಕುರ್ವತೋ ಭ್ರಾತೃವ್ಯಸ್ಯ ವಧಮುದ್ದಿಶ್ಯ ಪ್ರಹರತಿ। ಯಃ ಶತ್ರುರಸ್ಯ ಸ್ತೃತ್ಯೋ ಹಂತವ್ಯಸ್ತಸ್ಮೈ ಸ್ತರ್ತವೈ ತಸ್ಯ ಹಿಂಸಾಯೈ ಭವತಿ॥

ಮೇಲೆ ಹೇಳಿದ ವಿಷಯವನ್ನೇ ಮತ್ತೊಂದು ವಿಧವಾಗಿ ವಿಶದಪಡಿಸುವರು. ಪ್ರ ವೋ ದೇವಾಯಾಗ್ನಯೇ ಎಂದು ಪ್ರಥಮಪಾದವನ್ನು ಪಠಿಸಿದನಂತರ ಹೋತೃವು ನಿಲ್ಲಿಸುವನು. ಅನಂತರ ಎರಡನೇ ಪಾದವನ್ನು ಪಠಿಸುವನು. ಹೀಗೆ ಮಾಡುವುದರಿಂದ ಈ ಮಂತ್ರವು ವಜ್ರಾಯುಧಕ್ಕೆ ಸಮನಾಗುವುದು. ವಜ್ರಾಯುಧ ಅಥವಾ ಕೊಡಲಿಯ ತುದಿಯಲ್ಲಿ ಚೂಪಾಗಿಯೂ (ಹರಿತವಾಗಿಯೂ) ಮೂಲಭಾಗದಲ್ಲಿ ದಪ್ಪನಾಗಿಯೂ ಇರುವುದು. ಅದರಂತೆ ಋಕ್ಕಿನ ಪ್ರಥಮಪಾದವನ್ನು

ಪಠಿಸಿ ಸ್ವಲ್ಪಕಾಲ ನಿಲ್ಲಿಸಿ ಎರಡನೆಯ ಪಾದವನ್ನೂ ಪಠಿಸುವುದರಿಂದ ಆಯುಧವನ್ನು ಹರಿತವಾಗಿ ಮಾಡಿದಂತಾಗುವುದು. ಋಕ್ಕಿನ ಉತ್ತರಾರ್ಧದ ಎರಡುಪಾದಗಳನ್ನೂ ನಿಲ್ಲಿಸದೆ ಒಟ್ಟಿಗೆ ಸೇರಿ ಪಠಿಸುವುದರಿಂದ ಆಯುಧದ ಮೂಲಭಾಗವು ದಪ್ಪನಾಗಿ ಇರುವಂತಾಗುವುದು. ಅಥವಾ ಇದನ್ನು ಪ್ರಕಾರಾಂತರವಾಗಿ ಹೇಳಬಹುದು. ಕೊಡಲಿಯು ಅಥವಾ ಕತ್ತಿ ಮೊದಲಾದ ಆಯುಧದ ಹಿಡಿಯು ಮುಷ್ಟಿಯಲ್ಲಿ ಹಿಡಿಯಲು ಅನುಕೂಲವಾಗುವಂತೆ ಸಣ್ಣವಾಗಿರುವುದು. ತುದಿಯು ಎಂದರೆ ಕತ್ತರಿಸುವ ಭಾಗವು ಹರಿತವಾಗಿಯೂ ಅಗಲವಾಗಿಯೂ ಇರುವುದು. ಈ ವಿಧವಾದ ಆಯುಧವು ಶತ್ರುಗಳನ್ನು ಪ್ರಹರಿಸಲು ಸಮರ್ಥ-ವಾಗುವುದು. ಅದರಂತೆ ಪಠನಕ್ರಮವ್ಯತ್ಯಾಸದಿಂದ ಸೂಕ್ತವೂ ಸಹ ಯಜಮಾನನ ಶತ್ರುಗಳನ್ನು ನಾಶಮಾಡುವ ಕಾರ್ಯದಲ್ಲಿ ಅಥವಾ ಹಿಂಸಿಸುವ ಕಾರ್ಯದಲ್ಲಿ ಸಮರ್ಥವಾಗಿರುವುದು.

## *English Translation*

**(On the recitation of the Sukta of the Ajya Shastra. The peculiar recitation of the first verse represents population.)**

(When the Hotar repeats) the (seven) Anushtubh verses: pra vo devaya agnaye (3, 13) he separates the first pada (from the second one). For a female diviarcates her thighs (at the time of coitus). He joins the last two padas (when repeating the hymn) For a male contracts his thighs (at the time of coitus). This represents copulation. Thus he performs the act of copulation in a mystical way) at the very beginning of the recitation of the Ajya Shastra in order to produce (offspring and cattle for the sacrificer). He who has such a knowledge is blessed with the production of offspring and cattle.

By separating the two first padas when repeating (this hymn) he thus makes the hindpart of the weapon (represented by the Ajya Shastra) very thick and by joining the two latter padas (of the hymn) he makes its forepart thin, (The same is the case with) an iron club or with an axe (that is to say, the forepart, the shaft is thin, and the iron part of them thick). Thus he strikes a blow with the weapon at his enemy and adversary. Whatever (enemy) of his is to be put down, this weapon will accomplish it.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹತ್ತನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವು.



# ಅಥ ದಶಮಾಧ್ಯಾಯೇ ಚತುರ್ಥಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ ಆಗ್ನೀಧ್ರೀಯಸ್ಥಾನದಿಂದ ನೇರವಾಗಿ ಹೋತೃವರ್ಗದ ಋತ್ವಿಜರು ಧಿಷ್ಣಿಯಾ ಎಂಬ ಅಗ್ನಿಕುಂಡದ ಬಳಿಗೆ ಹೋಗುವ ವಿಚಾರ; ಆಜ್ಯ ಆಜ್ಯಶಸ್ತ್ರಕ್ಕೆ ಆ ಹೆಸರು ಹೇಗೆ ಬಂತೆಂಬ ವಿಚಾರ; ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರವು ಇಂದ್ರಾಗ್ನಿಗಳನ್ನೇ ಉದ್ದೇಶಿಸಿರುವ ವಿಚಾರ ]

---

**ದೇವಾಸುರಾ ವಾ ಏಷು ಲೋಕೇಷು ಸಮಯತಂತ ತೇ ವೈ ದೇವಾಃ ಸದ ಏವಾಽಽಯತನಮಕುರ್ವತ ತಾನ್ಸದಸೋಽಜಯಂಸ್ತ ಆಗ್ನೀಧ್ರಂಸಂಪ್ರಾಪದ್ಯಂತ ತೇ ತತೋ ನ ಪರಾಜಯಂತ ತಸ್ಮಾದಾಗ್ನೀಧ್ರ ಉಪವಸಂತಿ ನ ಸದಸ್ಯಾಗ್ನೀಧ್ರೇ ಹ್ಯಧಾರಯಂತ ಯದಾಗ್ನೀಧ್ರೇಽಧಾರಯಂತ ತದಾಗ್ನೀಧ್ರಸ್ಯಾಽಽಗ್ನೀಧ್ರತ್ವಂ ।**

ಅಥಾಽಽಗ್ನೀಧ್ರೀಯವಾಸಾದಿಸಿಧ್ಯರ್ಥಮಾಖ್ಯಾಯಿಕಾಮಾಹ -- ಪುರಾ ಕದಾಚಿದ್ದೇವಾಶ್ಚಾಸುರಾಶ್ಚ ಲೋಕವಿಷಯೇ ಸಮಯತಂತ ಸಂಗ್ರಾಮಂ ಕೃತವಂತಃ । ವಯಮೇವೈಷು ಲೋಕೇಷು ನಿವಸಾಮೋ ನ ತು ಯೂಯಮಿತ್ಯೇವಂ ಪರಸ್ಪರಸ್ಪರ್ಧಾ ॥ ತದಾನೀಂ ದೇವಾಃ ಸೌಮಿಕವೇದ್ಯಾಂ ಪ್ರಾಗ್ವಂಶಸ್ಯ ಪೂರ್ವಸ್ಯಾಂ ದಿಶಿ ಯೇಯಂ ಸದೋಽಭಿಧಾನಾ ಶಾಲಾ ತಾಮೇವ ಸ್ವಸ್ಯ ನಿವಾಸಸ್ಥಾನಂ ಕೃತವಂತಃ । ತತ್ರಾವಸ್ಥಿತಾಂಸ್ತಾನ್ದೇವಾನಸುರಾಃ ಸದಸೋಽಜಯಂಜಿತ್ವಾ ಸದಸೋ ನಿಃಸಾರಿತವಂತ ಇತ್ಯರ್ಥಃ । ತತೋ ದೇವಾ ನಿರ್ಗತಾಸ್ಸಂತ ಆಗ್ನೀಧ್ರಾಭಿಧಾಂ ಶಾಲಾಂ ಪ್ರಾಪ್ತವಂತಃ ॥ ತೇ ದೇವಾಃ ಪ್ರಾಪ್ಯ ತತ ಆಗ್ನೀಧ್ರೀಯಂ ನ ಪರಾಜಯಂತ ತತ್ರಾಸುರಾಣಾಮೇವ ಪರಾಜಯೋ ನ ತು ದೇವಾನಾಂ। ಯಸ್ಮಾದೇವಂ ತಸ್ಮಾದಾಗ್ನೀಧ್ರೀಯಶಾಲಾಯಾಮುಪವಸಥೇ ದಿನೇ ಯಜಮಾನಾ ಉಪವಸಂತಿ । ಅಗ್ನಿಸಮೀಪೇ ನಿವಸೇಯುಃ ನ ತು ಸದಸಿ ನಿವಾಸಃ ಕರ್ತವ್ಯಃ ॥ ಆಗ್ನೀಧ್ರೇ ಹಿ ದೇವಾಃ ಪಲಾಯನಂ ಪರಿತ್ಯಜ್ಯ ಸ್ವಾತ್ಮಾನಂ ಧಾರಿತವಂತಸ್ತಸ್ಮಾತ್ತತ್ರ ನಿವಾಸೋ ಯುಕ್ತಃ । ಯಸ್ಮಾದಾಗ್ನೀಧ್ರೇ ಧಾರಿತವಂತಃ ತಸ್ಮಾದಾಗ್ನೀಧ್ರನಾಮ ಸಂಪನ್ನಂ ॥ ಅಗ್ನಿಸಮೀಪೇ ಸ್ವಾತ್ಮಧಾರಣಸ್ಯ ಪ್ರವೃತ್ತಿನಿಮಿತ್ತತ್ವಾತ್ ॥

ಪೂರ್ವದಲ್ಲಿ ದೇವತೆಗಳಿಗೂ ಅಸುರರಿಗೂ ತಮ್ಮ ನಿವಾಸಸ್ಥಾನದ ವಿಷಯದಲ್ಲಿ ಪರಸ್ಪರ ವಿವಾದವುಂಟಾಗಿ ಅವರಲ್ಲಿ ಯುದ್ಧವು ನಡೆಯುವಂತಾಯಿತು. ಆಗ ದೇವತೆಗಳು ಯಜ್ಞವೇದಿಯ ಪೂರ್ವಭಾಗದಲ್ಲಿ, ಸದಸ್ಸೆಂಬ ಹೆಸರಿನಿಂದ ಪ್ರಸಿದ್ಧವಾದ ಪ್ರದೇಶದಲ್ಲಿ ಕುಳಿತು ಯಜ್ಞಮಾಡುತ್ತಿದ್ದರು. ಅಸುರರು ದೇವತೆಗಳೊಡನೆ ಯುದ್ಧಮಾಡಿ ಅವರನ್ನು ಸೋಲಿಸಿ ಅವರು ಕುಳಿತಿದ್ದ ಸದಸ್ಸೆಂಬ ಪ್ರದೇಶದಿಂದ ಅವರನ್ನು ಓಡಿಸಿದರು. ಹಾಗೆ ಪರಾಜಿತರಾಗಿ ಓಡಿಹೋದ ದೇವತೆಗಳು ಅಲ್ಲಿಂದ ಹೊರಟು ಯಜ್ಞವೇದಿಯ ಮತ್ತೊಂದು ಪ್ರದೇಶವಾದ ಆಗ್ನೀಧ್ರೀಯಶಾಲೆಯನ್ನು ಪ್ರವೇಶಿಸಿ ಅಲ್ಲಿ ಕುಳಿತುಕೊಂಡರು. ಆಗ್ನೀಧ್ರಿಯವೆಂಬುದು ಒಂದು ಅಗ್ನಿ ಕುಂಡವು. ಅಲ್ಲಿಗೆ ಹೋಗಿ ದೇವತೆಗಳು ಕುಳಿತುಕೊಂಡಮೇಲೆ ಅಸುರರು ಅವರನ್ನು ಜಯಿಸಲು ಸಮರ್ಥರಾಗಲಿಲ್ಲ. ಆದ್ದರಿಂದ ಆಗ್ನೀಧ್ರೀಯವೆಂಬ ಅಗ್ನಿಕುಂಡದ ಸಮೀಪದಲ್ಲಿ ದೇವತೆಗಳು ಕುಳಿತು ನಿರ್ಭಯವಾಗಿ ಯಜ್ಞಮಾಡಲುಪಕ್ರಮಿಸಿದರು. ಈ ಕ್ರಮವೇ ಈಗಲೂ ಬಳಕೆಯಲ್ಲಿದೆ. ಎಂದರೆ ಸದಃಸ್ಥಾನದಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವ ರೂಢಿಯಲ್ಲದೆ ಆಗ್ನೀಧ್ರಿಯವೆಂಬ ಅಗ್ನಿಕುಂಡದ ಸಮೀಪದಲ್ಲಿ ಯಜಮಾನಾದಿಋತ್ವಿಜರು ಕುಳಿತು ಶಸ್ತ್ರಮಂತ್ರಗಳನ್ನು ಪಠಿಸುವರು. ಆಗ್ನೀಧ್ರೀಯವೆಂಬ ಅಗ್ನಿಕುಂಡದ ಸಮೀಪದಲ್ಲಿ ದೇವತೆಗಳು ಯಾವ ಭಯವೂ ಇಲ್ಲದೆ ದೃಢವಾಗಿ ನಿಲ್ಲಲು ಅನುಕೂಲವಾದ್ದರಿಂದ ಈ ಪ್ರದೇಶಕ್ಕೆ ಎಂದರೆ ಈ ಅಗ್ನಿಕುಂಡದ ಸಮೀಪ ಪ್ರದೇಶಕ್ಕೆ ಆಗ್ನೀಧ್ರವೆಂಬ ಹೆಸರು ಅನ್ವರ್ಥವಾಯಿತು.

ತೇಷಾಂ ವೈ ದೇವಾನಾಮಸುರಾಃ ಸದಸ್ಯಾನಗ್ನೀನ್ನಿರ್ವಾಪಯಾಂ-
ಚಕ್ರುಸ್ತೇ ದೇವಾ ಆಗ್ನೀಧ್ರಾದೇವ ಸದಸ್ಯಾನಗ್ನೀನ್ವಿಹರಂತ
ತೈರಸುರರಕ್ಷಾಂಸ್ಯಪಾಘ್ನತ ತಥೈವೈತದ್ಯಜಮಾನಾ ಆಗ್ನೀಧ್ರಾ-
ದೇವ ಸದಸ್ಯಾನಗ್ನೀನ್ವಿಹರಂತ್ಯಸುರರಕ್ಷಾಂಸ್ಯೇವ ತದಪಘ್ನತೇ ।

ಅಥ ಸದಸ್ಯವಸ್ಥಿತೇಷು ಧಿಷ್ಣ್ಯೇಷು ಅಗ್ನೀಧ್ರಾದಗ್ನಿವಿಹರಣಂ ವಿಧತ್ತೇ — ಪುರಾ ದೇವಾನಾಂ ಸಂಬಂಧಿನೋ ಯೇಽಗ್ನಯಃ ಸದಸ್ಯವಸ್ಥಿತೇಷು ಧಿಷ್ಣ್ಯೇಷು ಆಸಂಸ್ತಾನ್ಸರ್ವಾನ್ದೇವ ಪಲಾಯನೇನ ಸದಃಪ್ರವಿಷ್ಟಾ ಅಸುರಾ ನಿರ್ವಾಪಯಾಂಚಕ್ರುಃ ಜಲಪ್ರಕ್ಷೇಪೇಣ ಅಗ್ನೀನ್ ಶಾಂತಾನಕುರ್ವನ್ ॥ ತದಾನೀಂ ತೇ ದೇವಾ ಆಗ್ನೀಧ್ರೇ ಸ್ಥಿತ್ವಾ ತತ್ರತ್ಯಾನ್ಸದಸ್ಯಾನಗ್ನೀನ್ವಿಹರಂತ ಸದಸ್ಯವಸ್ಥಿತೇಷು ಧಿಷ್ಣ್ಯೇಷು ಪೃಥಕ್ಪೃಥಗಗ್ನೀನ್ವಿಹೃತವಂತಃ ಸ್ಥಾಪಿತವಂತಃ । ತೈಃ ಪ್ರಬಲೈ-ರಗ್ನಿಭಿರಸುರಾನ್ರಕ್ಷಾಂಸಿ ಚ ಸದಸಿ ಹತವಂತಃ । ಯಥಾ ದೇವೈರ್ವಿಹರಣಂ ಕೃತಂ ತಥೈ-ವೈತಸ್ಮಿನ್ನಪಿ ಕಾಲೇ ಯಜಮಾನಾ ಆಗ್ನೀಧ್ರಾದೇವ ವಹ್ನೇಃ ಸದಸ್ಯಾನಗ್ನೀನ್ವಿಹರೇಯುಃ । ತೇನ ವಿಹರಣೇನ ಅಸುರಾನ್ರಕ್ಷಾಂಸಿ ಚ ತದಪಘ್ನತೇ ತತ್ತದಾನೀಂ ನಾಶಯಂತಿ । ಸೋಽಯ-ಮರ್ಥಸ್ಸರ್ವೋಽಪಿ ಶಾಖಾಂತರೇ ಸಂಗೃಹ್ಯಾಮ್ನಾತಃ—'ದೇವಾ ವೈ ಯಜ್ಞಂ ಪರಾಜಯಂತ ತಮಾಗ್ನೀಧ್ರಾತ್ಪುನರಪಾಜಯನ್ನೈತದ್ವೈ ಯಜ್ಞಸ್ಯಾಪರಾಜಿತಂ ಯದಾಗ್ನೀಧ್ರಂ ಯದಾ-ಗ್ನೀಧ್ರಾದ್ಧಿಷ್ಣಿಯಾನ್ವಿಹರಂತಿ ಯದೇವ ಯಜ್ಞಸ್ಯಾಪರಾಜಿತಂ ತತ ಏವೈನಂ ಪುನಸ್ತನುತೇ" ಇತಿ ।

ದೇವತೆಗಳು ಮೊದಲು ಕುಳಿತಿದ್ದ ಸದಸ್ಥಾನದಿಂದ ಪರಾಜಿತರಾಗಿ ಓಡಿಹೋದಮೇಲೆ ಅಸುರರು ಅಲ್ಲಿಗೆ ಬಂದು ಅಲ್ಲಿದ್ದ ಧಿಷ್ಣ್ಯ ಮೊದಲಾದ ಸ್ಥಳಗಳಲ್ಲಿದ್ದ ಅಗ್ನಿಗಳನ್ನು ನೀರನ್ನು ಸುರಿದು ಆರಿಸಿದರು. ಅಲ್ಲಿ ಅಗ್ನಿಕುಂಡಗಳಲ್ಲಿದ್ದ ಅಗ್ನಿಗಳೆಲ್ಲಾ

ಆರಿಹೋದವು. ಆಗ ದೇವತೆಗಳು ಆಗ್ನೀಧ್ರೀಯವೆಂಬ ಅಗ್ನಿಕುಂಡದ ಅಗ್ನಿಯಿಂದ ಅಗ್ನಿಯನ್ನು ಬೇರೆಬೇರೆಯಾಗಿ ತಂದು ಪೂರ್ವದಲ್ಲಿದ್ದ ಅಗ್ನಿಕುಂಡಗಳಲ್ಲಿ ಹಾಕಿ ಅಗ್ನಿಯನ್ನು ಪ್ರಜ್ವಲನಗೊಳಿಸಿದರು. ಪ್ರಜ್ವಲಿತವಾದ ಈ ಅಗ್ನಿಗಳ ಮೂಲಕ ದೇವತೆಗಳು ಅಸುರರನ್ನು ಅಲ್ಲಿಂದ ಓಡಿಸಿ ತಮ್ಮ ಪೂರ್ವದ ಸ್ಥಳಗಳನ್ನು ಪುನಃ ಆಕ್ರಮಿಸಿದರು. ಧಿಷ್ಣ್ಯ ಎಂಬ ಸ್ಥಾನದಿಂದ ಮಾರ್ಜಾಲೀಯಸ್ಥಾನದವರೆಗೆ ನೇರವಾಗಿ ಎಂಟು ಅಗ್ನಿಗಳು ಸ್ಥಾಪಿತವಾಗಿರುವವು. ಅವು ಹೋತೃವರ್ಗದ ಋತ್ವಿಜರ ಸಮೀಪದಲ್ಲಿದ್ದು ಮಾರ್ಜಾಲೀಯದಿಂದ ಆಗ್ನೀಧ್ರದವರೆಗೆ ವಿಸ್ತರಿಸಿರುವವು. ಇವುಗಳು ಒಟ್ಟು ಎಂಟು. ಮಾರ್ಜಾಲೀಯ, ಮೈತ್ರಾವರುಣ, ಹೋತೃ, ಬ್ರಾಹ್ಮಣಾಚ್ಛಂಸಿ, ಪೋತೃ, ನೇಷ್ಟೃ, ಅಚ್ಛಾವಾಕ ಮತ್ತು ಅಗ್ನೀತ್ ಎಂಬ ಋತ್ವಿಜರ ಸಮೀಪದಲ್ಲಿರುವ ಎಂಟು ಅಗ್ನಿಕುಂಡಗಳು. ಈರೀತಿಯಾಗಿ ದೇವತೆಗಳು ಅಸುರರಿಂದ ಆರಿಸಲ್ಪಟ್ಟಿದ್ದ ಅಗ್ನಿಯನ್ನು ಆಗ್ನೀಧ್ರಕುಂಡದಿಂದ ಅಗ್ನಿಯನ್ನು ತಂದು ಪುನಃ ಹೊತ್ತಿಸಿದ್ದರಿಂದ ಈ ಸಂಪ್ರದಾಯವೇ ಈಗಲೂ ಅನುಸರಿಸಲ್ಪಡುತ್ತಿರುವುದು. ಎಂದರೆ ಯಜ್ಞ ಮಾಡುವಾಗ ಯಜಮಾನರು ಆಗ್ನೀಧ್ರಕುಂಡದಿಂದ ಅಗ್ನಿಯನ್ನು ತಂದು ಇತರ ಅಗ್ನಿಕುಂಡಗಳಿಗೆ ಹಾಕಿ ಹೊತ್ತಿಸುವುದು ರೂಢಿಯಲ್ಲಿ ಬಂದಿರುವುದು. ಈ ಅಗ್ನಿವಿಹರಣಕ್ರಮದಿಂದ ದೇವತೆಗಳು ಅಸುರರನ್ನು ಓಡಿಸದಂತೆ ಯಜ್ಞಮಾಡುವ ಯಜಮಾನರು ಯಜ್ಞಕ್ಕೆ ವಿಘ್ನಕಾರಿಗಳಾದ ಅಸುರರನ್ನೂ ರಾಕ್ಷಸರನ್ನೂ ಇತರ ದುಷ್ಟಶಕ್ತಿಗಳನ್ನೂ ನಾಶಮಾಡಲು ಸಮರ್ಥರಾಗುವರು. ಈ ವಿಷಯವು—**ದೇವಾ ವೈ ಯಜ್ಞಂ ಪರಾಜಯಂತ ತಮಾಗ್ನೀಧ್ರಾತ್ಪುನರಪಾಜಯನ್ನೇತದ್ವೈ ಯಜ್ಞಸ್ಯಾಪರಾಜಿತಂ ಯದಾಗ್ನೀಧ್ರಂ ಯದಾಗ್ನೀಧ್ರಾದ್ಧಿಷ್ಣಿಯಾನ್ವಿಹರಂತಿ ಯದೇವ ಯಜ್ಞಸ್ಯಾಪರಾಜಿತಂ ತತ ಏವೈನಂ ಪುನಸ್ತನುತೇ** (ತೈ. ಸಂ. ೬-೩-೧) ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿರುವುದು.

**ತೇ ವೈ ಪ್ರಾತರಾಜ್ಯೈರೇವಾಜಯಂತ ಆಯನ್ಯದಾಜ್ಯೈರೇವಾಜಯಂತ ಆಯಂಸ್ತದಾಜ್ಯಾನಾಮಾಜ್ಯತ್ವಂ ।**

ಇತ್ಥಂ ಶಂಸನಸ್ಥಾನಗತೇಷು ಧಿಷ್ಣ್ಯೇಷ್ವಗ್ನಿವಿಹರಣಂ ವಿಧಾಯ ತತ್ರ ಶಂಸನೀಯಾನಾಂ ಶಸ್ತ್ರಾಣಾಂ ಯದೇತದಾಜ್ಯನಾಮಕತ್ವಂ ತದೇತಚ್ಛಬ್ದನಿರ್ವಚನೇನ ವಿಸ್ಪಷ್ಟಯತಿ—ತ ಏವ ದೇವಾಃ ಪ್ರಾತಃಸವನೇ ಯಾನ್ಯಾಜ್ಯನಾಮಕಾನಿ ಶಸ್ತ್ರಾಣಿ ತೈರೇವಾऽऽಸಮಂತಾಜ್ಜಯಂ ಪ್ರಾಪ್ನುವಂತಃ ಆಗಚ್ಛನ್ ॥ ಯಸ್ಮಾದೇವಂ ತಸ್ಮಾದಾಸಮಂತಾಜ್ಜಯಂತ್ಯೇಭಿರಿತಿ ವ್ಯುತ್ಪತ್ತ್ಯಾ ಶಸ್ತ್ರಾಣಾಮಾಜ್ಯನಾಮ ಸಂಪನ್ನಂ ॥ ಅನೇನೈವ ನ್ಯಾಯೇನ ಸಾಮವೇದೇ ಪಂಚದಶಾನ್ಯಾಜ್ಯಾನೀತಿ ವಾಕ್ಯೇನ ವಿಹಿತಾನಾಂ ಪಂಚದಶಸ್ತೋಮಯುಕ್ತಾನಾಂ ಸ್ತೋತ್ರಾಣಾಮಾಜ್ಯನಾಮತ್ವಂ ದ್ರಷ್ಟವ್ಯಂ ॥

ಆಜ್ಯಶಸ್ತ್ರಕ್ಕೆ ಆ ಹೆಸರು ಬರಲು ಕಾರಣವೇನೆಂಬುದನ್ನು ವಿವರಿಸುತ್ತಾರೆ. ಪೂರ್ವದಲ್ಲಿ ದೇವತೆಗಳು ಆಗ್ನೀಧ್ರೀಯವೆಂಬ ಅಗ್ನಿಕುಂಡದಿಂದ ಅಗ್ನಿಯನ್ನು ತಂದು ಅಸುರರಿಂದ ಆರಿಸಲ್ಪಟ್ಟ ಇತರ ಅಗ್ನಿಕುಂಡಗಳಲ್ಲಿ ಹಾಕಿ ಅವುಗಳನ್ನು ಹೊತ್ತಿಸಿ ಅನಂತರ ಪ್ರಾತಸ್ಸವನಕಾಲದಲ್ಲಿ ಆಜ್ಯಶಸ್ತ್ರಮಂತ್ರಗಳನ್ನು ಪಠಿಸಿ ಅವುಗಳ ಸಹಾಯದಿಂದ ಅಸುರರನ್ನು ಜಯಿಸಿದರು. ಅಸುರರನ್ನು ಎಲ್ಲಾಕಡೆಯಲ್ಲಿಯೂ ಜಯಿಸಲು ಸಾಧ್ಯವಾದಕಾರಣ ಈ ಮಂತ್ರಕ್ಕೆ ಆಜ್ಯಶಸ್ತ್ರವೆಂಬ ಹೆಸರುಬಂದಿತು. **ಜಿ (ಜಯ್)**– ಜಯಿಸು ಎಂಬ ಧಾತುವಿಗೆ **ಆ**–ಸುತ್ತಲೂ ಎಂಬ ಉಪಸರ್ಗವು ಸೇರಿ ಸುತ್ತಲೂ (ಸರ್ವಸ್ಥಳಗಳಲ್ಲಿಯೂ) ಜಯಿಸಲು ಸಾಧಕವಾದ್ದರಿಂದ ಈ ಶಸ್ತ್ರಮಂತ್ರಕ್ಕೆ ಆಜ್ಯಶಸ್ತ್ರವೆಂಬ ಹೆಸರುಬಂದಿತು.

ತಾಸಾಂ ವೈ ಹೋತ್ರಾಣಾಮಾಯತೀನಾಮಾಜಯಂತೀನಾಮಚ್ಛಾ-
ವಾಕೀಯಾಽಹೀಯತ ತಸ್ಯಾಮಿಂದ್ರಾಗ್ನೀ ಅಧ್ಯಾಸ್ತಾಮಿಂ-
ದ್ರಾಗ್ನೀ ವೈ ದೇವಾನಾಮೋಜಿಷ್ಠೌ ಬಲಿಷ್ಠೌ ಸಹಿಷ್ಠೌ ಸತ್ತಮೌ
ಪಾರಯಿಷ್ಣುತಮೌ ತಸ್ಮಾದೈಂದ್ರಾಗ್ನಮಚ್ಛಾವಾಕಃ ಪ್ರಾತ-
ಸ್ಸವನೇ ಶಂಸತೀಂದ್ರಾಗ್ನೀ ಹಿ ತಸ್ಯಾಮಧ್ಯಾಸ್ತಾಂ ।

ಅಥಾಚ್ಛಾವಾಕಸ್ಯ ಶಸ್ತ್ರಂ ವಿಧತ್ತೇ — ಪ್ರಶಾಸ್ತಾ ಬ್ರಾಹ್ಮಣಾಚ್ಛಂಸ್ಯಚ್ಛಾವಾಕ ಇತ್ಯೇತೇ ಶಸ್ತ್ರಿಣೋ ಹೋತ್ರಕಾ ಯದ್ಯಪಿ ಪುರುಷಾಸ್ತಥಾಪಿ ತದೀಯತನುವಿವಕ್ಷಯಾ ತಾಸಾಮಿತ್ಯಾದಿಸ್ತ್ರೀಲಿಂಗ ನಿರ್ದೇಶಃ ॥ ಯಾಸ್ತನವಃ ಪೂರ್ವಮಸುರಾನಪಾಘ್ನತ ತಾಸಾಮೇವ ಹೋತ್ರಾಣಾಂ ಹೋತ್ರಕತನೂನಾಮಾಯತೀನಾಂ ಸದಃ ಪ್ರವೇಷ್ಟುಮಾಗಚ್ಛಂತೀನಾಂ ಆಜಯಂತೀನಾಂ ಸರ್ವತೋ ಜಯಂ ಪ್ರಾಪ್ನುವತೀನಾಂ ಮಧ್ಯೇಽಚ್ಛಾವಾಕೀಯಾಽಚ್ಛಾವಾ-ಕಸಂಬಂಧಿನೀ ತನುರಹೀಯತ ಹೀನಾಭೂತ್ ಸದಸಮಾಗಂತುಂ ನಾಶಕ್ನೋದಿತ್ಯರ್ಥಃ ॥ ತದ-ನುಗ್ರಹಾರ್ಥಂ ತಸ್ಯಾಂ ತನ್ವಾಮಿಂದ್ರಾಗ್ನೀ ಅಧ್ಯಾಸ್ತಾಮಧಿಷ್ಠಾಯ ನಿವಾಸಂ ಕೃತವಂತೌ ॥ ಯುಜ್ಯತೇ ಹೀಂದ್ರಾಗ್ನ್ಯೋರನುಗ್ರಹೀತೃತ್ವಂ ಯಸ್ಮಾದ್ದೇವಾನಾಂ ಮಧ್ಯ ಇಂದ್ರಾಗ್ನೀ ಓಜಿಷ್ಠಾವೋಜಸಾ ಬಲಹೇತುನಾಽಷ್ಟಮಧಾತುನಾಽತ್ಯಂತಮುಪೇತಾವತ ಏವ ಬಲಿಷ್ಠಾವತಿ-ಶಯೇನ ಶರೀರಶಕ್ತಿಯುಕ್ತೌ ತತ ಏವ ಸಹಿಷ್ಠಾವತಿಶಯೇನ ಶತ್ರೂನಭಿಭವಿತಾರೌ ಸ್ವಭಕ್ತ-ವಿಷಯೇ ತು ಸತ್ತಮಾವತಿಶಯೇನ ಸಂತೌ ಸನ್ಮಾರ್ಗವರ್ತಿನಾವನುಗ್ರಹೀತಾರಾವಿತ್ಯರ್ಥಃ ॥ ಅತ ಏವ ಪಾರಯಿಷ್ಣುತಮೌ । ಸ್ವಭಕ್ತೈರನುಷ್ಠೀಯಮಾನಂ ಕರ್ಮಾತಿಶಯೇನ ಪಾರಂ ನೇತುಂ ಸದೋದ್ಯುಕ್ತೌ ॥ ತಸ್ಮಾದಯಮಚ್ಛಾವಾಕ ಇಂದ್ರಾಗ್ನೀದೇವತಾಕಂ ಶಸ್ತ್ರಂ ಪ್ರಾತಃ ಸವನೇ ಶಂಸೇತ್ ॥ ಇಂದ್ರಾಗ್ನೀ ಆ ಗತಮಿತ್ಯಾದಿಕಂ ತಚ್ಛಸ್ತ್ರಂ ಯಸ್ಮಾದಿಂದ್ರಾಗ್ನೀ ತಸ್ಯಾಮ-ಚ್ಛಾವಾಕತನ್ವಾಮಧ್ಯಾಸ್ತಾಂ ತಸ್ಮಾದೈಂದ್ರಾಗ್ನಶಸ್ತ್ರಂ ತಸ್ಯ ಯುಕ್ತಂ ॥

ಹೀಗೆ ಆಜ್ಯಶಸ್ತ್ರಮಂತ್ರಗಳ ಸಹಾಯದಿಂದ ಹೋತೃವರ್ಗದ ಋತ್ವಿಕ್ಕುಗಳು ಅಸುರರನ್ನು ಓಡಿಸಿ ತಾವು ಹಿಂದೆ ಕುಳಿತಿದ್ದ ಸದಃಸ್ಥಾನವನ್ನು ಪ್ರವೇಶಿಸಿದಾಗ ಅವರಲ್ಲಿದ್ದ ಎಂದರೆ ಪ್ರಶಾಸ್ತಾ, ಬ್ರಾಹ್ಮಣಾಚ್ಛಂಸೀ ಮತ್ತು ಅಚ್ಛಾವಾಕ ಎಂಬ ಮೂವರು ಹೋತೃವರ್ಗದ ಋತ್ವಿಜರಲ್ಲಿ ಅಚ್ಛಾವಾಕನ ಶರೀರವು ಕಂಡುಬರಲಿಲ್ಲ. ಏಕೆಂದರೆ ಇಂದ್ರ ಮತ್ತು ಅಗ್ನಿ ಎಂಬ ದೇವತೆಗಳು ಅಚ್ಛಾವಾಕನ ಶರೀರದಲ್ಲಿ ತಮ್ಮ ನಿವಾಸವನ್ನು ಸ್ಥಾಪಿಸಿ ಅಲ್ಲಿಯೇ ಇದ್ದರು. ದೇವತೆಗಳಲ್ಲಿ ಈ ಇಂದ್ರಾಗ್ನಿಗಳು ಬಹಳ ಬಲಿಷ್ಠರು, ಪರಾಕ್ರಮಶಾಲಿಗಳು, ಶತ್ರುಗಳನ್ನು ಪರಾಭವಗೊಳಿಸುವವರು. ತಮ್ಮನ್ನು ನಂಬಿದವರನ್ನು ಅನುಗ್ರಹಿಸ ತಕ್ಕವರು. ಇಂತಹ ಇಂದ್ರಾಗ್ನಿಗಳು ಅನುಗ್ರಹಬುದ್ಧಿಯಿಂದ ಅಚ್ಛಾವಾಕನಲ್ಲಿದ್ದರು. ಆದ್ದರಿಂದ ಇಂದ್ರಾಗ್ನಿಗಳಿಂದ ಅನುಗೃಹೀತ ನಾದ ಅಚ್ಛಾವಾಕನೆಂಬ ಋತ್ವಿಜನು ಪ್ರಾತಸ್ಸವನಕಾಲದಲ್ಲಿ **ಇಂದ್ರಾಗ್ನೀ ಆಗತಂ ಸುತಂ** (ಋ. ಸಂ. ೩-೧೨) ಎಂಬ ಸೂಕ್ತ ಸಹಿತವಾದ ಶಸ್ತ್ರಮಂತ್ರವನ್ನು ಪಠಿಸಬೇಕಾದುದು ಯುಕ್ತವು.

**ತಸ್ಮಾದು ಪುರಸ್ತಾದನ್ಯೇ ಹೋತ್ರಕಾಃ ಸದಃ ಪ್ರಸರ್ಪಂತಿ ಪಶ್ಚಾಽಚ್ಛಾ ವಾಕಃ ಪಶ್ಚೇವ ಹಿ ಹೀನೋಽನುಸಂಜಿಗಮಿಷತಿ ।**

ಇದಾನೀಮಚ್ಛಾವಾಕಸ್ಯ ಸದಃ ಪ್ರವೇಶೇ ವಿಶೇಷಂ ವಿಧತ್ತೇ—ಯಸ್ಮಾದಚ್ಛಾವಾಕವ್ಯತಿರಿಕ್ತಾಃ ಪ್ರಶಾಸ್ತ್ರಾದಯೋ ಹೋತ್ರಕಾಃ ಸಹಸಾ ಗಂತುಂ ಶಕ್ನುವಂತಿ ನ ತ್ವಚ್ಛಾವಾಕಸ್ತಸ್ಮಾತ್ಪ್ರಶಾಸ್ತ್ರಾದಯಃ ಪುರಸ್ತಾತ್ಸದಃ ಪ್ರಸರ್ಪೇಯುಃ ॥ ಅಚ್ಛಾವಾಕಸ್ತು ಪಶ್ಚಾತ್ಪ್ರಸರ್ಪೇತ್ ॥ ಲೋಕೇಽಪಿ ಹಿ ಹೀನೋಽಶಕ್ತಃ ಪಶ್ಚೇವ ಹಿ ಪಶ್ಚಾದೇವ ಹಿ ಜಿಗಮಿಷತೀತಿ ಪ್ರಸಿದ್ಧಂ । ಅತ್ರ ಪುರಸ್ತಾತ್ಪಶ್ಚಾಚ್ಛಬ್ದೌ ದೇಶತಃ ಕಾಲತಶ್ಚೇತಿ ವೇದಿತವ್ಯೌ ॥

ಈ ಕಾರಣದಿಂದಲೇ ಪ್ರಶಾಸ್ತಾ ಮೊದಲಾದ ಋತ್ವಿಜರು ಸದಸ್ಸ್ಥಾನವನ್ನು ಪ್ರವೇಶಿಸುವಾಗ ಪ್ರಶಾಸ್ತಾ ಮತ್ತು ಬ್ರಾಹ್ಮಣಾಚ್ಛಂಸಿ ಎಂಬುವರು ಮೊದಲು ಪ್ರವೇಶಿಸುವರು ಅಚ್ಛಾವಾಕನು ಕೊನೆಯಲ್ಲಿ ಪ್ರವೇಶಿಸುವನು. ಲೋಕವ್ಯವಹಾರದಲ್ಲಿಯೂ ಹೀಗೆಯೇ ಕಂಡುಬರುವುದು. ಯುದ್ಧದಲ್ಲಿ ಗೆದ್ದವರು ಮೊದಲು ಬರುವರು ತಪ್ಪಿಸಿಕೊಂಡಿದ್ದವರು ಅನಂತರ ಹಿಂದೆ ಬರುವರು.

**ತಸ್ಮಾದ್ಯೋ ಬ್ರಾಹ್ಮಣೋ ಬಹ್ವೃಚೋ ವೀರ್ಯವಾನ್ಸ್ಯಾತ್ಸೋಽಸ್ಯಾಚ್ಛಾವಾಕೀಯಾಂ ಕುರ್ಯಾತ್ತೇನೈವ ಸಾಹೀನಾ ಭವತಿ ॥**

ಅಚ್ಛಾವಾಕೀಯ ಶಸ್ತ್ರಂ ಪ್ರಶಂಸತಿ—ಯಸ್ಮಾದಿಂದ್ರಾಗ್ನೀ ತಸ್ಯಾಂ ತನ್ವಾಮಧಿಷ್ಠಾಯ ನಿವಸತಸ್ತಸ್ಮಾಲ್ಲೋಕೇ ಯಃ ಕೋಽಪಿ ಬ್ರಾಹ್ಮಣೋ ಬಹ್ವೃಚ ಋಗ್ವೇದಾಧ್ಯಾಯೀ ವೀರ್ಯವಾನ್ವೇದಪಾಠಸಾಮರ್ಥ್ಯಾತಿಶಯೋಪೇತಃ ಸ್ಯಾತ್ ಸೋಽಸ್ಯ ಯಜಮಾನಸ್ಯ ಅಚ್ಛಾವಾಕೀಯಾಂ ಕುರ್ಯಾದಚ್ಛಾವಾಕಸಂಬಂಧನ್ಯೈಂದ್ರಾಗ್ನಶಸ್ತ್ರಂ ಪಠೇತ್ ॥ ತೇನೈವ ಪಾಠೇನ ಸಾ ತದೀಯತನುರಹೀನಾ ವ್ಯವಹರ್ತುಂ ಸಮರ್ಥಾ ಭವತಿ ॥

ಇಂದ್ರಾಗ್ನಿದೇವತೆಗಳು ಅಚ್ಛಾವಾಕನ ಶರೀರದಲ್ಲಿ ವಾಸಿಸುವರೆಂದೂ ಅಚ್ಛಾವಾಕನೇ ಇಂದ್ರಾಗ್ನೀ ಆಗತಂ ಎಂಬ ಮಂತ್ರವನ್ನು ಪಠಿಸಿ ಇಂದ್ರಾಗ್ನಿಗಳನ್ನು ಆಹ್ವಾನಮಾಡುವುದರಿಂದಲೂ ಅಚ್ಛಾವಾಕನೆಂಬ ಋತ್ವಿಜನು ಬಹ್ವೃಚ ಎಂದರೆ ಋಗ್ವೇದವನ್ನು ಚೆನ್ನಾಗಿ ಅಧ್ಯಯನಮಾಡಿದವನಾಗಿಯೂ, ಸ್ಪಷ್ಟವಾಗಿ ಮಂತ್ರೋಚ್ಚಾರಣೆ ಮಾಡುವವನಾಗಿಯೂ ಇರಬೇಕು. ಲೋಕವ್ಯವಹಾರದಲ್ಲಿ ಎಂದರೆ ಈಗಲೂ ಇದೇ ಕ್ರಮವನ್ನನುಸರಿಸಿ ಅಚ್ಛಾವಾಕನೆಂಬ ಋತ್ವಿಜನ ಪಾತ್ರವನ್ನು ಯಜ್ಞದಲ್ಲಿ ನಿರ್ವಹಿಸುವ ಪುರುಷನು ಇಂದ್ರಾಗ್ನಿಗಳನ್ನು ಸ್ತುತಿಸುವ ಶಸ್ತ್ರಮಂತ್ರಗಳನ್ನು ಪಠಿಸಬೇಕಾಗಿರುವುದು. ಆದ್ದರಿಂದ ಅಚ್ಛಾವಾಕನು ಮಂತ್ರಗಳನ್ನು ಚೆನ್ನಾಗಿ ಪಠಿಸಲು ಶರೀರದಾರ್ಢ್ಯವುಳ್ಳವನಾಗಿಯೂ ಸುಮರ್ಥನಾಗಿಯೂ ಇರಬೇಕು.



## *English Translation*

**(Why the Hotari priests repair to the Dhishnyas or fire places, stretching a straight line from the Agnidhra hearth. On the name of the Ajya Shastra. The Shastras of the Acchavaka belongs to Indra Agni.)**

The Devas and the Asuras were fighting in these worlds. The Devas had made the Sadas (sitting place) of the priests (on the right side of the Uttara Vedi) their residence. But the Asuras turned them out of it. They then repaired to the Agnidhra hearth (on the left of the Uttara Vedi). Thence they were not conpuered by the Asuras. Therefore the priests take their seats near the Agnidhra, and not in the Sadas. For when sitting near the Agnidhra, they are held (from dhri to hold). Thence that hearth is called Agnidhara.

The Asuras extinguished the fires of the sitting place of the Devas. But the Devas took the fires (which they required) for their sitting places from the Agnidhra. By means of them they defeated the Asuras and Rakshas, and drove them out. Thence the sacrificers, by taking out the different fires (required) from the Agnidhra, defeat the Asuras and Rakshas and turn them out.

They conquered (ajayanta) by means of the (four) Ajya Shastras at the morning libation and entered the place which they had conquered. Thence the name ajya (from ji to conquer, and a-ya to come near, enter).

Among the boidies of the minor Hotri priests (Maitravaruna, Brahmanachhansi, and Acchavaka) that of the Achhavaka was missing when they conquered and entered the place; for in his body Agni and Indra had taken up their abode. Agni and Indra are of all the Gods the strongest mightiest, defeating best (the enemies) the most excellent, saving best (their friends). Thence the Shastra of the Achhavaka at the morning libation belongs to Indra and Agni (whilst in those of the other Hotri priests Agni alone is praised). For Indra and Agni took their abode in his (the Achhvak's) body. Thence the other Hotri priests walk first to their sitting places, and last comes the Achhavake. For he who is behind, is missing, he will join (the others) at a later time.

Thence the sacrificer should have a very strong Bahvricha Brahmana to repeat the Achhavaka Shastra, for only when (if be strong) his (the priest's) body will not be missing.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.

# ಅಥ ದಶಮಾಧ್ಯಾಯೇ ಪಂಚಮಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ ಆಜ್ಯಶಸ್ತ್ರ ಮತ್ತು ಪ್ರಉಗಶಸ್ತ್ರಗಳ ಅರ್ಥವಿವರಣೆಯು ; ಈ ಶಸ್ತ್ರಮಂತ್ರಗಳಿಗೂ ಇದೇ ವಿಧವಾದ ಸ್ತೋತ್ರ (ಸಾಮವೇದದ) ಮಂತ್ರಗಳಿಗೂ ಇರುವ ಸಂಬಂಧಹೋತೃವು ಪಠಿಸಬೇಕಾದ ಯಾಜ್ಯಾಮಂತ್ರವು ]

**ದೇವರಥೋ ವಾ ಏಷ, ಯದ್ಯಜ್ಞಸ್ತಸ್ಯೈತಾರವಂತರೌ ರಶ್ಮೀ ಯದಾ-ಜ್ಯಪ್ರಉಗೇ ತದ್ಯದಾಜ್ಯೇನ ಪವಮಾನಮನುಶಂಸತಿ ಪ್ರಉಗೇ-ಣಾಜ್ಯಂ ದೇವರಥಸ್ಯೈವ ತದಂತರೌ ರಶ್ಮೀ ವಿಹರತ್ಯಲೋ-ಭಾಯ ॥**

**ಅಥಾಜ್ಯಶಸ್ತ್ರಸ್ಯ ಬಹಿಷ್ಪವಮಾನಸ್ತೋತ್ರೋತ್ತರತ್ವಂ ಪ್ರಉಗಶಸ್ತ್ರಸ್ಯಾಽಽಜ್ಯಸ್ತೋತ್ರೋ-ತ್ತರತ್ತ್ವಂ ವಿಧತ್ತೇ—ಯೋ ಯಜ್ಞೋಽಸ್ತ್ಯೇಷ ದೇವಾನಾಂ ರಥ ಏವ ತಸ್ಯ ರಥರೂಪಸ್ಯ ರಥಸ್ಯಾಜ್ಯಂ ಪ್ರಉಗಂ ಚ ಯಚ್ಛಸ್ತ್ರದ್ವಯಂ ತದಂತರೌ ರಶ್ಮೀ ಅಶ್ವಬಂಧನರಜ್ಜೂ ರಥಸ್ಯೋ-ಪರ್ಯವಸ್ಥಿತೇನ ಸಾರಥಿನಾ ಧ್ರಿಯಮಾಣತ್ವಾತ್ತಯೋರಭ್ಯಂತರತ್ವಂ ॥ ಯಸ್ಮಾದೇವಂ ತಸ್ಮಾದ್ಯದ್ಯಾಜ್ಯಶಸ್ತ್ರೇಣ ಬಹಿಷ್ಪವಮಾನಮನು ಪಶ್ಚಾತ್ ಶಂಸೇತ್ ಪ್ರಉಗಶಸ್ತ್ರೇಣ ಚಾಜ್ಯ-ಸ್ತೋತ್ರಮನುಶಂಸೇತ್ ತದಾನೀಂ ದೇವರಥಸ್ಯೈವ ಸಂಬಂಧಿನೌ ಅಭ್ಯಂತರೌ ರಶ್ಮೀ ಪ್ರಗ್ರಹೌ ವಿಹರತಿ ವಿಶೇಣ ಸಂಪಾದಯತಿ । ತಚ್ಚಾಲೋಭಾಯ ವ್ಯಾಮೋಹರಾಹಿತ್ಯಾಯ ಸಂಪದ್ಯತೇ । ರಶ್ಮಿರಾಹಿತ್ಯೇ ದುಷ್ಟಾಭ್ಯಾಮಶ್ವಾಭ್ಯಾಂ ಯತ್ರ ಕ್ವಾಪಿ ದುರ್ಗಮೇ ದೇಶೇ ರಥನಯನೇ ಸತಿ ರಥಭಂಗರೂಪೋ ವ್ಯಾಮೋಹಃ ಸ್ಯಾತ್ತನ್ಮಾ ಭೂದಿತಿ ಶಸ್ತ್ರದ್ವಯಂ ಕ್ರಮೇಣ ಪ್ರಯೋಕ್ತವ್ಯಂ॥**

ಯಜ್ಞವು ದೇವತೆಗಳ ರಥವೆಂದು ಹೇಳಲ್ಪಡುವುದು. ಎಂದರೆ ಇಲ್ಲಿ ಯಜ್ಞವನ್ನು ರಥಕ್ಕೆ ಹೋಲಿಸಿ ವರ್ಣಿಸಲಾಗಿದೆ. ರಥಕ್ಕೂ ಕುದುರೆಗಳಿಗೂ ಇರುವ ಸಂಬಂಧವೆಂದರೆ ಕುದುರೆಗಳ ಲಗಾಮುಗಳು. ಈ ಲಗಾಮುಗಳ ಸಹಾಯದಿಂದ ಸಾರಥಿಯು ರಥವನ್ನು ಹೇಗೆಬೇಕಾದರೂ ನಡೆಸಲು ಅಥವಾ ನಿಲ್ಲಿಸಲು ಸಮರ್ಥನಾಗುವನು. ಆದ್ದರಿಂದ ಈ ಲಗಾಮುಗಳು ರಥಚಾಲನಕ್ಕೆ ಅವಶ್ಯಕವು. ಈ ಯಜ್ಞವೆಂಬ ರಥಕ್ಕೆ ಆಜ್ಯಶಸ್ತ್ರ ಮತ್ತು ಪ್ರಉಗಶಸ್ತ್ರ ಎಂಬ ಎರಡು ಶಸ್ತ್ರಮಂತ್ರಗಳೇ ಎರಡು ಲಗಾಮುಗಳು (ಹಗ್ಗಗಳು) ಬಹಿಷ್ಪವಮಾನಸ್ತೋತ್ರಪಠನಾನಂತರ ಆಜ್ಯಶಸ್ತ್ರವನ್ನೂ ಅನಂತರ ಪ್ರಉಗಶಸ್ತ್ರವನ್ನೂ ಪಠಿಸಬೇಕು. ಸ್ತೋತ್ರವೆಂದರೆ ಸಾಮವೇದಿಗಳು ಯಜ್ಞದಲ್ಲಿ ಗಾನಮಾಡುವ ಮಂತ್ರವಿಶೇಷವು. ಶಸ್ತ್ರವೆಂದರೆ ಋಗ್ವೇದಿಗಳಾದ ಹೋತೃವರ್ಗದವರು ಪಠಿಸಬೇಕಾದ ಋಗ್ವೇದಮಂತ್ರಗಳು. ಸಾಧಾರಣವಾಗಿ ಪ್ರತಿಯೊಂದು ಸ್ತೋತ್ರಕ್ಕೂ ಅನುರೂಪವಾದ ಒಂದು ಶಸ್ತ್ರಮಂತ್ರ

ವಿರುವುದು. ಆದ್ದರಿಂದ ಎಷ್ಟು ಸ್ತೋತ್ರಗಳಿರುವವೋ ಅಷ್ಟೇ ಸಂಖ್ಯೆಯ ಶಸ್ತ್ರಮಂತ್ರಗಳೂ ಇರುವವು. ಆದ್ದರಿಂದ ಸಾಮಗಾಯಕರು ಬಹಿಷ್ಪವಮಾನಸ್ತೋತ್ರವೆಂಬ ಸಾಮಗಾನವನ್ನು ಗಾನಮಾಡಿದನಂತರ ಹೋತೃವು ಆಜ್ಯಶಸ್ತ್ರಮಂತ್ರವನ್ನೂ ಅನಂತರ ಪ್ರಉಗಶಸ್ತ್ರಮಂತ್ರವನ್ನೂ ಪಠಿಸುವನು. ಹೀಗೆ ಮಾಡುವುದರಿಂದ ರಥದ (ಎಂದರೆ ರಥಕ್ಕೆ ಕಟ್ಟಿರುವ ಅಶ್ವಗಳ) ಲಗಾಮುಗಳು ಸಾರಥಿಸ್ಥಾನದಲ್ಲಿರುವ ಹೋತೃವಿನ ಅಧೀನದಲ್ಲಿದ್ದು ರಥವು ವಿಘ್ನಗಳಿಲ್ಲದೆ ಸುಲಭವಾಗಿ ಮುಂದೆಸಾಗಲು ಅನುಕೂಲವಾಗುವುದು. ಲೋಕವ್ಯವಹಾರದಲ್ಲಿಯೂ ಸಾರಥಿಯು ಲಗಾಮುಗಳ ಸಹಾಯದಿಂದ ರಥದ ಅಶ್ವಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ರಥವನ್ನು ಎಂತಹ ದುರ್ಗಮವಾದ ಸ್ಥಳದಲ್ಲಿಯೂ ಯಾವ ಆತಂಕವೂ ಇಲ್ಲದೆ ನಡೆಸಲು ಸಮರ್ಥನಾಗುವನು.

ತಾವನು ಕೃತಿಂ ಮನುಷ್ಯರಥಸ್ಯೈವಾಂತರೌ ರಶ್ಮೀ ವಿಹರಂತ್ಯಲೋಭಾಯ ನಾಸ್ಯ ದೇವರಥೋ ಲುಭ್ಯತಿ ನ ಮನುಷ್ಯರಥೋ ಯ ಏವಂ ವೇದ ।

**ಲೌಕಿಕಫಲಪ್ರದರ್ಶನೇಽತ್ರೈವ ರಶ್ಮಿಸ್ಥಾನೀಯಂ ಶಸ್ತ್ರದ್ವಯಂ ಪ್ರಶಂಸತಿ–ತಾಂ ಕೃತಿಂ ದೇವರಥೇ ಶಸ್ತ್ರದ್ವಯರೂಪರಶ್ಮಿಕರಣಮನು ಪಶ್ಚಾನ್ಮನುಷ್ಯರಥಸ್ಯೈವಾಂತರೌ ಸಾರಥಿನಾ ಗ್ರಹಣಯೋಗ್ಯೌ ರಶ್ಮೀ ಪ್ರಗ್ರಹೌ ವಿಹರಂತಿ ಸಂಪಾದಯಂತಿ । ತಚ್ಚ ಮನುಷ್ಯರಥಸ್ಯಾಲೋಭಾಯ ಸಂಪದ್ಯತೇ । ಅಭಗ್ನೋ ಮನುಷ್ಯರಥೋ ಯಜಮಾನಸ್ಯ ಸಂಭವತೀತ್ಯರ್ಥಃ, ವೇದನಂ ಪ್ರಶಂಸತಿ—**

ಲೋಕವ್ಯವಹಾರದಲ್ಲಿ ಮನುಷ್ಯರು ಕುಳಿತು ರಥಸಂಚಾರಮಾಡುವಾಗ ಸಾರಥಿಯು ಕುದುರೆಗಳ ಎರಡು ಲಗಾಮುಗಳನ್ನು ಬೇರೆಬೇರೆಯಾಗಿ ತನ್ನ ಕೈಗಳಲ್ಲಿ ಹಿಡಿದು ರಥವನ್ನು ಸರಿಯಾಗಿ ನಡೆಸುವನು. ರಥಸಂಚಾರಕ್ಕೆ ಯಾವತೊಂದರೆಯೂ ಉಂಟಾಗುವುದಿಲ್ಲ. ಅದರಂತೆ ದೇವರಥವಾದ ಯಜ್ಞವನ್ನು ನಡೆಸುವುದರಲ್ಲಿ ಎಂದರೆ ನಿರ್ವಹಿಸುವುದರಲ್ಲಿ ಸಾರಥಿಸ್ಥಾನದಲ್ಲಿರುವ ಹೋತೃವು ಲಗಾಮುಗಳೆಂದು ಹೇಳಲ್ಪಡುವ ಆಜ್ಯ ಮತ್ತು ಪ್ರಉಗಶಸ್ತ್ರಗಳ ಪಠನದಿಂದ ದೇವರಥರೂಪವಾದ ಯಜ್ಞವನ್ನು ಚೆನ್ನಾಗಿ ನಿರ್ವಹಿಸುವನು. ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ಯಾವ ವಿಘ್ನಗಳಿಗೂ ಒಳಗಾಗದೆ ಯಜ್ಞವನ್ನು ಸಾಂಗವಾಗಿ ನಿರ್ವಹಿಸುವನು.

ತದಾಹುರ್ಯಥಾ ವಾವ ಸ್ತೋತ್ರಮೇವಂ ಶಸ್ತ್ರಂ ಪಾವಮಾನೀಷು ಸಾಮಗಾಃ ಸ್ತುವತ ಆಗ್ನೇಯಂ ಹೋತಾಜ್ಯಂ ಶಂಸತಿ ಕಥಮಸ್ಯ ಪಾವಮಾನ್ಯೋಽನುಶಸ್ತಾ ಭವಂತೀತಿ ಯೋ ವಾ ಅಗ್ನಿಃ ಸ ಪವಮಾನಃ ತದಪ್ಯೇತದೃಷಿಣೋಕ್ತಮಗ್ನಿರ್ಋಷಿಃ ಪವಮಾನ ಇತಿ ಏವಮು ಹಾಸ್ಯಾಗ್ನೇಯೀಭಿರೇವ ಪ್ರತಿಪದ್ಯಮಾನಸ್ಯ ಪಾವಮಾನ್ಯೋಽನುಶಸ್ತಾ ಭವಂತಿ ।

ಇದಾನೀಂ ಸ್ತೋತ್ರಶಸ್ತ್ರಯೋಃ ವೈಯಧಿಕರಣ್ಯರೂಪಂ ಚೋದ್ಯಮುದ್ಭಾವಯತಿ— ತತ್ತಸ್ಮಿನ್ನಾಜ್ಯಶಸ್ತ್ರೇ ಬ್ರಹ್ಮವಾದಿನ ಆಹುಶ್ಚೋದಯಂತಿ । ಯಥೈವ ಸ್ತೋತ್ರಂ ಸಾಮಗೈ-ರುಕ್ತಂ ತಥೈವ ಬಹ್ವೃಚೈಃ ಶಸ್ತ್ರಂ ವಕ್ತವ್ಯಂ ಸ್ತುತಮನುಶಂಸತೀತಿ ವಿಧಾನಾತ್ ॥ ಅತ್ರ ತು ಸಾಮಗಾ ಉಪಾಸ್ಮೈ ಗಾಯತಾ ನರಃ ಪವಮಾನಾಯ (೯-೧೧-೧) ಇತ್ಯಾದಿಷು ಪಾವ-ಮಾನೀಷು ಪವಮಾನದೇವತಾಕಾಸ್ವೃಕ್ಷು ಬಹಿಷ್ಪವಮಾನಾಖ್ಯೇನಸ್ತೋತ್ರೇಣ ಸ್ತುವತೇ ॥ ಬಹ್ವೃಚಸ್ತು ಹೋತಾ ಪ್ರ ವೋ ದೇವಾಯಾಗ್ನಯ ಇತ್ಯಾದಿಕಮಾಜ್ಯಶಸ್ತ್ರಂ ಶಂಸತಿ ತಥಾ ಸತಿ ಕಥಮಸ್ಯ ಹೋತುಃ ಪಾವಮಾನ್ಯ ಋಚೋಽನುಶಸ್ತಾ ಭವೇಯುಃ । ನ ಹಿ ಪವಮಾನಃ ಶಸ್ತ್ರಸ್ಯ ದೇವತಾ ಕಿಂತ್ವಗ್ನಿರಿತಿ ಚೋದ್ಯಂ ॥ ತಸ್ಯ ಪರಿಹಾರಮಾಹ— ಅಗ್ನಿಪವಮಾನದೇ-ವತಯೋಃ ಪರಸ್ಪರಪ್ರೀತ್ಯಾಽಭೇದಾದಾಗ್ನೇಯಮಪಿ ಸೂಕ್ತಂ ಪಾವಮಾನಮಿತಿ ವಕ್ತುಂ ಶಕ್ಯತೇ ॥ ತೇನ ಪಾವಮಾನ್ಯೋಽನುಶಸ್ತಾಃ ಸಂಪದ್ಯಂತೇ । ಅಗ್ನಿಪವಮಾನಯೋರೇಕತ್ವೇ ಕಂಚಿನ್ಮಂತ್ರಮುದಾಹರತಿ- ಋಷಿರತೀಂದ್ರಿಯದ್ರಷ್ಟಾ ಯೋಽಯಮಗ್ನಿಃ ಸ ಏವ ಪವಮಾನೋ ವಾಯುಃ ಪ್ರೀತ್ಯತಿಶಯೇನೈಕತ್ವಪ್ರತಿಭಾಸಾತ್ ॥ ಯದ್ವಾ ಶೋಧಕತ್ವಾದಗ್ನಿರೇವ ಪವಮಾನ ಇತಿ ಮಂತ್ರಾರ್ಥಃ॥ಪರಿಹಾರಮುಪಪಾದ್ಯ ನಿಗಮಯತಿ- ಅಗ್ನಿದೇವತಾಕಾಭಿಃ ಸೂಕ್ತಗತಾಭಿಃ ಋಗ್ಭಿಃ ಶಸ್ತ್ರಂ ಪ್ರಾರಭಮಾಣಸ್ಯ ಹೋತುರ್ಬಹಿಷ್ಪವಮಾನಸ್ತೋತ್ರಗತಾಃ ಪವಮಾನದೇವ-ತಾಕಾ ಋಚೋಽನುಶಸ್ತಾ ಭವಂತಿ ॥

ಕೆಲವರು ಬ್ರಹ್ಮವಾದಿಗಳು (ಅಥವಾ ಯಜ್ಞಾನುಷ್ಠಾನಕುಶಲರು) ಈರೀತಿ ಪ್ರಶ್ನೆಮಾಡುವರು—ಸಾಮಗಾಯಕರು ಗಾನಮಾಡುವ ಸಾಮಗಾನಮಂತ್ರಕ್ಕೆ ಹೋತೃವು ಪಠಿಸುವ ಶಸ್ತ್ರಮಂತ್ರವು ಅನುರೂಪವಾಗಿರಬೇಕೆಂದು ಹಿಂದೆ ಹೇಳಿದೆಯಷ್ಟೆ. ಎಂದರೆ ಶ್ರುತಿವಾಕ್ಯವು ಹೇಳುವಂತೆ **ಸ್ತುತಮನುಶಂಸತಿ ಶಾಂತ್ಯೈ** ಸಾಮಗಾನವನ್ನನುಸರಿಸಿ ಅದೇರೀತಿಯಾಗಿರುವ ಶಸ್ತ್ರ ಮಂತ್ರವನ್ನು ಪಠಿಸಬೇಕು ಎಂದು ಹೇಳಿರುವುದು ಮತ್ತು ನಿರುಕ್ತಕಾರರಾದ ಯಾಸ್ಕರೂ ಸಹ **ಋಗ್ಭಿಃ ಸ್ತುವಂತಿ ಯಜು-ರ್ಭಿರ್ಯಜಂತಿ, ಸಾಮಭಿಃಸ್ತುವಂತಿ** (ನಿರುಕ್ತ-೧೩-೭) ಎಂದು ಹೇಳಿರುವರು. ಎಂದರೆ ಒಬ್ಬ ದೇವತೆಯ ವಿಷಯದಲ್ಲಿ ಪಠಿಸುವ ಮಂತ್ರಗಳು ಪರಸ್ಪರ ಅನುರೂಪವಾಗಿರಬೇಕು. ಋಗ್ವೇದದ ಮಂತ್ರಗಳಿಂದ ಋತ್ವಿಜರು ದೇವತೆಯನ್ನು ಸ್ತುತಿಸು-ತ್ತಾರೆ; ಯಜುರ್ವೇದದ ಮಂತ್ರಗಳಿಂದ ಯಜ್ಞದ ಕಾರ್ಯಕಲಾಪಗಳನ್ನು ನಡೆಸಿ ಆರಾಧಿಸುತ್ತಾರೆ; ಸಾಮವೇದಮಂತ್ರಗಳಿಂದ ಗಾನಮಾಡುತ್ತಾರೆ. ಈ ಮೂರುವೇದಗಳ ಮಂತ್ರಗಳೂ ಸಂಬಂಧಪಟ್ಟ ದೇವತೆಯ ಪರವಾಗಿಯೇ ಇರಬೇಕು. ಇತ್ಯಾದಿ. ಪ್ರಸಕ್ತಸಂದರ್ಭದಲ್ಲಿ ಬಹಿಷ್ಪವಮಾನಸ್ತೋತ್ರಪಠನಾನಂತರ ಆಜ್ಯಶಸ್ತ್ರ ಮತ್ತು ಪ್ರಉಗಶಸ್ತ್ರಮಂತ್ರಗಳನ್ನು ಪಠಿಸಬೇಕೆಂದಿದೆ. ಸಾಮಗರು ಗಾನಮಾಡುವ ಬಹಿಷ್ಪವಮಾನಸ್ತೋತ್ರದಲ್ಲಿ **ಉಪಾಸ್ಮೈ ಗಾಯತಾ ನರಃ ಪವಮಾನಾಯ** (ಸಾ. ಸಂ. ೧-೧-೧; ೧-೯) ಇತ್ಯಾದಿ ಮಂತ್ರಗಳು (ಪವಮಾನ) ಸೋಮದೇವತೆಯ ಪರವಾಗಿವೆ. ಹೋತೃವು ಪಠಿಸುವ ಆಜ್ಯಶಸ್ತ್ರದ **ಪ್ರ ವೋ ದೇವಾಯಾಗ್ನಯೇ** ಇತ್ಯಾದಿಮಂತ್ರಗಳು ಅಗ್ನಿಪರವಾಗಿವೆ. ಹೀಗಿರುವಾಗ ಬಹಿಷ್ಪವಮಾನಸ್ತೋತ್ರಮಂತ್ರಗಳಿಗೂ, ಆಜ್ಯಶಸ್ತ್ರಮಂತ್ರಗಳಿಗೂ ಪರಸ್ಪರ ಅನುರೂಪವು ಹೇಗೆ ಉಂಟಾಗುವುದು? ಈರೀತಿ ಪ್ರಶ್ನೆಗೆ ಪರಿಹಾರವನ್ನು ಇಲ್ಲಿ ತಿಳಿಸಿರುವರು— ಅಗ್ನಿದೇವತೆಗೂ, ಪವಮಾನ (ಸೋಮ) ದೇವತೆಗೂ ಭೇದವೇನೂ ಇಲ್ಲ. ಈ ದೇವತೆಗಳು ಪರಸ್ಪರ ಪ್ರೀತಿಸೌಹಾರ್ದ್ರಗಳಿಂದ ಕೂಡಿರುವರು. ಈ ವಿಷಯದಲ್ಲಿ ಒಬ್ಬ ಋಷಿಯು— **ಅಗ್ನಿರ್ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ । ತಮೀಮಹೇ ಮಹಾಗಯಂ** (ಋ. ಸಂ. ೯-೬೬-೨೦) ಎಂದು ಹೇಳಿರುವನು. ಅಗ್ನಿಯೆಂದು ಹೇಳಲ್ಪಡುವ ದೇವತೆಯೇ

ಪವಮಾನದೇವತೆಯು. ಪ್ರೀತ್ಯತಿಶಯದಿಂದ ಇಬ್ಬರಿಗೂ ವಿಶೇಷಭೇದವಿಲ್ಲ ಅಥವಾ ಪವಮಾನಶಬ್ದಕ್ಕೆ ಶುದ್ಧಿಯನ್ನುಂಟು ಮಾಡುವ ಎಂದರ್ಥವಿರುವುದು. ಅಗ್ನಿಯೂ ಶುದ್ಧಿಕಾರಕನಾದುದರಿಂದ ಈ ಗುಣವು ಇಬ್ಬರೂ ದೇವತೆಗಳಲ್ಲಿಯೂ ಇರುವುದೇ ಇವರುಗಳ ಅಭೇದಕ್ಕೆ ಕಾರಣವು. ಈ ಕಾರಣಗಳಿಂದ ಬಹಿಷ್ಪವನಸ್ತೋತ್ರಗತವಾದ ಮಂತ್ರಗಳಿಗೆ ಹೋತೃವು ಪಠಿಸುವ ಆಜ್ಯಶಸ್ತ್ರಮಂತ್ರಗಳು ಅನುರೂಪವಾಗಿಯೇ ಇರುವವು ಎಂದು ಭಾವಿಸಬೇಕು.

**ತದಾಹುರ್ಯಥಾ ವಾವ ಸ್ತೋತ್ರಮೇವಂ ಶಸ್ತ್ರಂ ಗಾಯಿತ್ರೀಷು ಸಾಮಗಾಃ ಸ್ತುವತ ಆನುಷ್ಟುಭಂ ಹೋತಾಜ್ಯಂ ಶಂಸತಿ ಕಥ-ಮಸ್ಯ ಗಾಯತ್ರ್ಯೋಽನುಶಸ್ತಾ ಭವಂತೀತಿ ।**

ದೇವತಾಪ್ರಯುಕ್ತಂ ವೈಯಧಿಕರಣ್ಯಂ ಪರಿಹೃತ್ಯ ಛಂದಃಪ್ರಯುಕ್ತಂ ವೈಯಧಿಕರಣ್ಯ-ರೂಪಂ ಚೋದ್ಯಂ ಪೂರ್ವವದುದ್ಭಾವಯತಿ—ಬಹಿಷ್ಪವಮಾನಸ್ತೋತ್ರಗತಾ ಉಪಾಸ್ಮೈ ಗಾಯತಾ [೯-೧೧-೧] ಇತ್ಯಾದ್ಯಾ ಋಚೋ ಗಾಯತ್ರೀಚ್ಛಂದಸ್ಕಾಃ ಪ್ರ ವೋ ದೇವಾಯ [೩-೧೩-೧] ಇತ್ಯಾದಿಕಮಾಜ್ಯಶಸ್ತ್ರಮನುಷ್ಟುಪ್ಛಂದಸ್ಕಮಿತಿ ವೈಯಧಿಕರಣ್ಯಂ ಚೋದ್ಯಂ ॥

ಬ್ರಹ್ಮವಾದಿಗಳು ಮತ್ತೆ ಪ್ರಶ್ನೆಮಾಡುವರು-ಬಹಿಷ್ಪವಮಾನಸ್ತೋತ್ರದಲ್ಲಿ ಸಾಮಗರು ಗಾನಮಾಡುವ **ಉಪಾಸ್ಮೈ-ಗಾಯತಾ ನರಃ** (ಸಾ. ವೇ. ೧೧-೧; ೧-೯) ಮೊದಲಾದ ಮಂತ್ರಗಳು ಗಾಯತ್ರೀ ಛಂದಸ್ಸಿನವು. ಆಜ್ಯಶಸ್ತ್ರದಲ್ಲಿ ಹೋತೃವು ಪಠಿಸುವ **ಪ್ರ ವೋ ದೇವಾಯ** (ಋ.ಸಂ. ೩-೧೩-೧ ರಿಂದ ೭) ಇತ್ಯಾದಿ ಮಂತ್ರಗಳು ಅನುಷ್ಟುಪ್‌ಛಂದಸ್ಸಿನವು. ಹೀಗಿರುವಲ್ಲಿ ಈ ಮಂತ್ರಗಳಿಗೆ ಪರಸ್ಪರ ಅನುರೂಪವು ಹೇಗೆ ಆಗುವುದು? ಛಂದಸ್ಸುಗಳಲ್ಲಿಯೂ ಸಹ ಅನುರೂಪವಿರಬೇಕೆಂದು ವಿಧಿ ಇರುವುದರಿಂದ ಇದು ವಿರೋಧವಲ್ಲವೇ? ಎಂದರೆ ಅದಕ್ಕೆ ಸಮಾಧಾನವನ್ನು ಹೇಳುವರು.

**ಸಂಪದೇತಿ ಬ್ರೂಯಾತ್. ಸಪ್ತೈತಾ ಅನುಷ್ಟುಭಸ್ತಾಸ್ತ್ರಿಃ ಪ್ರಥಮ-ಯಾ ತ್ರಿರುತ್ತಮಯೈಕಾದಶ ಭವಂತಿ ವಿರಾಡ್ಯಾಜ್ಯಾ ದ್ವಾದಶೀ ನ ವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ ತಾಃ ಷೋಳಶ ಗಾಯತ್ರ್ಯೋ ಭವಂತಿ ಏವಮು ಹಾಸ್ಯಾನು-ಷ್ಟುಬ್ಭಿರೇವ ಪ್ರತಿಪದ್ಯಮಾನಸ್ಯ ಗಾಯತ್ರ್ಯೋಽನುಶಸ್ತಾ ಭವಂತಿ ।**

ತಸ್ಯ ಪರಿಹಾರಮಾಹ — ಅನುಷ್ಟುಪ್ಸು ಗಾಯತ್ರೀತ್ವೇ ಸಂಪಾದಿತೇ ಸತಿ ತಯಾ ಸಂಪದಾ ವೈಯಧಿಕರಣ್ಯಪರಿಹಾರಾದನುಕೂಲಶಂಸನಂ ಭವತೀತಿ ಪರಿಹಾರಂ ಬ್ರೂಯಾತ್ ॥ ಸಂಪಾದನಪ್ರಕಾರಂ ದರ್ಶಯತಿ— ಆದ್ಯಂತಯೋಃ ಋಚೋಸ್ತ್ರಿರಾವೃತ್ತೌ ಸತ್ಯಾಂ ಸ್ವಭಾವತಃ ಸಪ್ತಾನಾಮನುಷ್ಟುಭಾಮೇಕಾದಶತ್ವಂ ಸಂಪದ್ಯತೇ ॥ ಅಗ್ನ ಇಂದ್ರಶ್ಚೇತಿ ಯಾಜ್ಯಾ ವಿರಾಟ್ಛಂ-ದಸ್ಕಾ ॥ ಸಾ ದ್ವಾದಶ್ಯನುಷ್ಟುಬಿತಿ ಗಣನೀಯಾ । ಯದ್ಯಪಿ ತಸ್ಯಾ ವಿರಾಜಸ್ತ್ರಯಸ್ತ್ರಿಂಶದಕ್ಷ-ರತ್ವಾದೇಕಮಕ್ಷರಮನುಷ್ಟುಪ್ತ್ವಾದತಿರಿಚ್ಯತೇ ತಥಾಪ್ಯಲ್ಪೇನ ವೈಕಲ್ಯೇನ ಛಂದಸ್ತ್ವಂ

**ನಾಪ್ಯೈತೀತಿ ನ್ಯಾಯಃ ಪೂರ್ವಮುಪ್ಯುದಾಹೃತಃ । ಏವಂ ಸತಿ ದ್ವಾದಶಸ್ವಪ್ಯನುಷ್ಟುಪ್ಸು ದ್ವಾದಶ-ಪಾದಾನಪನೀಯಾವಶಿಷ್ಟೈಃ ಪಾದೈಸ್ತ್ರಿಪದಾ ಗಾಯತ್ರ್ಯೋ ದ್ವಾದಶ ಸಂಪಾದನೀಯಾಃ । ಅಪನೀತೈಶ್ಚ ಪಾದೈಶ್ಚತಸ್ರೋ ಗಾಯತ್ರ್ಯ ಇತ್ಯನೇನ ಪ್ರಕಾರೇಣ ಷೋಡಶಸಂಖ್ಯಾಕಾ ಗಾಯತ್ರ್ಯ ಏವ ಸಂಪದ್ಯಂತೇ ॥ ಪರಿಹಾರಂ ನಿಗಮಯತಿ—**

ಇಲ್ಲಿ ಪ್ರತಿಯೊಂದು ಮಂತ್ರದಲ್ಲಿಯೂ ಎಷ್ಟು ಅಕ್ಷರಗಳಿರುವವು ಎಂಬುದನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ. ಒಟ್ಟು ಮಂತ್ರಗಳಲ್ಲೆಲ್ಲಾ ಇರುವ ಅಕ್ಷರಗಳ ಮೊತ್ತವನ್ನು (ಸಂಖ್ಯೆ) ಮಾತ್ರ ಗಣನೆಗೆ ತೆಗೆದುಕೊಳ್ಳಬೇಕು, ಹೇಗೆಂದರೆ ಶಸ್ತ್ರಮಂತ್ರದ ಸೂಕ್ತದಲ್ಲಿ ಒಟ್ಟು ೭ ಅನುಷ್ಟುಪ್‌ಛಂದಸ್ಸಿನ ಋಕ್ಕುಗಳಿರುವುವು ಈ ಋಕ್ಕುಗಳನ್ನು ಪಠಿಸುವಾಗ ಮೊದಲನೆಯ ಮತ್ತು ಕೊನೆಯ ಋಕ್ಕುಗಳನ್ನೂ ಮೂರು ಮೂರಾವರ್ತಿ ಪಠಿಸಬೇಕೆಂಬ ಕ್ರಮವಿರುವುದರಿಂದ ಒಟ್ಟು ೧೧ ಋಕ್ಕುಗಳಿದ್ದಂತಾಯಿತು. ಇದರ ಜತೆಗೆ ಯಾಜ್ಯಾಮಂತ್ರವನ್ನು ಸೇರಿಸುವ ರೂಢಿಇದೆ. **ಅಗ್ನ ಇಂದ್ರಶ್ಚ** (ಋ. ಸಂ. ೩-೧೫-೪) ಎಂಬ ವಿರಾಟ್ ಛಂದಸ್ಸಿನ ಮಂತ್ರವೇ ಆ ಯಾಜ್ಯಾಮಂತ್ರವು. ಈ ವಿರಾಟ್‌ಛಂದಸ್ಸಿನಲ್ಲಿ ೩೩ ಅಕ್ಷರಗಳಿರುವ ಅನುಷ್ಟುಪ್ ಛಂದಸ್ಸಿಗೆ ಸರಿಸಮಾನವೆಂದು ಪರಿಗಣಿಸಲ್ಪಡುವುದು ಛಂದಸ್ಸುಗಳಲ್ಲಿ ಒಂದೆರಡು ಅಕ್ಷರಗಳ ವ್ಯತ್ಯಾಸವು ಗಮನಾರ್ಹವಾದುದಲ್ಲ. ಆದರಿಂದ ಯಾಜ್ಯಾಮಂತ್ರವಾದ ವಿರಾಟ್‌ಛಂದಸ್ಸಿನ ಮಂತ್ರವೂ ಸೇರಿ ಒಟ್ಟು ಸೂಕ್ತದ ಮಂತ್ರಗಳ ಸಂಖ್ಯೆಯು ೧೨ (ಅನುಷ್ಟುಪ್-ಛಂದಸ್ಸಿನ) ಮಂತ್ರಗಳೆಂದಾಯಿತು. ಅನುಷ್ಟುಪ್‌ಛಂದಸ್ಸಿನ ಮಂತ್ರದಲ್ಲಿ ಎಂಟು ಅಕ್ಷರಗಳ ನಾಲ್ಕು ಪಾದಗಳಿರುವವು-ಗಾಯತ್ರೀಛಂದಸ್ಸಿನ ಮಂತ್ರಗಳಲ್ಲಿ ಎಂಟು ಅಕ್ಷರಗಳ ಮೂರು ಪಾದಗಳಿರುವವು. ಆದ್ದರಿಂದ ೧೨ ಅನುಷ್ಟುಪ್‌ಛಂದಸ್ಸಿನ ಮಂತ್ರಗಳಲ್ಲಿ ಒಟ್ಟು ಎಂಟಕ್ಷರಗಳ ೪೮ ಪಾದಗಳಿರುವವು. ಈ ೪೮ ಪಾದಗಳಿಗೆ ಗಾಯತ್ರೀಛಂದಸ್ಸಿನ (ಮೂರು ಪಾದಗಳ) ೧೬ ಮಂತ್ರಗಳು ಸಮಾನವು. ಎಂದರೆ ೧೨ ಅನುಷ್ಟುಪ್‌ಛಂದಸ್ಸಿನ ಮಂತ್ರಗಳಿಗೆ ೧೬ ಗಾಯತ್ರೀಛಂದಸ್ಸಿನ ಮಂತ್ರಗಳು ಸಮಾನವು. ಆದ್ದರಿಂದ ಅನುಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಕೂಡಿದ ಶಸ್ತ್ರಮಂತ್ರವೂ, ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಕೂಡಿದ ಸ್ತೋತ್ರಮಂತ್ರವೂ ಅಕ್ಷರಸಂಖ್ಯೆಯಲ್ಲಿ ಸರಿಸಮಾನವು ಎಂದಾಯಿತು.

ಅಗ್ನ ಇಂದ್ರಶ್ಚ ದಾಶುಷೋ ದುರೋಣ ಇತ್ಯಾಗ್ನೇಂದ್ರ್ಯಾ ಯಜತಿ ನ ವಾ ಏತಾವಿಂದ್ರಾಗ್ನೀ ಸಂತೌ ವ್ಯಜಯೇತಾಮಾಗ್ನೇಂದ್ರೌ ವಾ ಏತೌ ಸಂತೌ ವ್ಯಜಯೇತಾಂ ತದ್ಯದಾಗ್ನೇಂದ್ರ್ಯಾ ಯಜತಿ ವಿಜಿತ್ಯಾ ಏವ ।

**ಇದಾನೀಮೈಂದ್ರಾಗ್ನಗ್ರಹಸ್ಯ ಯಾಜ್ಯಾಂ ವಿಧತ್ತೇ—ನನ್ವೈಂದ್ರಾಗ್ನಗ್ರಹೇ ಪೂರ್ವ-ಭಾವಿತ್ವಮಿಂದ್ರಸ್ಯ ಪ್ರತೀಯತೇಽಗ್ನೇಸ್ತು ಪಶ್ಚಾದ್ಭಾವಿತ್ವಂ ॥ ಯಾಜ್ಯಾಯಾಂ ತು ತದ್ವಿಪ-ರ್ಯಯಃ ಕಸ್ಮಾತ್ಕ್ರಿಯತ ಇತ್ಯಾಶಂಕ್ಯಾಹ—ಅಸುರೈಃ ಸಹ ದೇವಾನಾಂ ವಿಜಯಯುದ್ಧೇ ಸತಿ ವಿಜಯಾರ್ಥಮಿಂದ್ರಸ್ಯ ಪುರೋಗಮನಮಗ್ನೇಃ ಪಶ್ಚಾದ್ಗಮನಮಿತ್ಯೇವಂ ನ ಸಂಪನ್ನಂ ॥ ಕಿಂ ತ್ವಗ್ನಿಃ ಪುರೋಗತ ಇಂದ್ರಸ್ತು ಪಶ್ಚಾದ್ಗತಃ । ಅತೋ ವಿಜಯಕಾಲೀನಕ್ರಮೇಣೈವ ಅಗ್ನಿ-ಪೂರ್ವಕತ್ವಪ್ರತಿಪಾದಕಯಾ ಯಜನೇ ಸತಿ ಯಜಮಾನಸ್ಯ ವಿಜಯಾಯ ಸಂಪದ್ಯತ ಏವ ॥**

ಈಗ ಆಜ್ಯಶಸ್ತ್ರಮಂತ್ರಸಂಬಂಧವಾದ ಐಂದ್ರಾಗ್ನಗ್ರಹದ ಯಾಜ್ಯಾಮಂತ್ರವನ್ನು ವಿವರಿಸುವರು—**ಅಗ್ನ ಇಂದ್ರಶ್ಚ ದಾಶುಷೋ ದುರೋಣೇ** (ಋ. ಸಂ ೩-೧೫-೪) ಎಂಬುದೇ ಆ ಯಾಜ್ಯಾಮಂತ್ರವು. ಐಂದ್ರಾಗ್ನಗ್ರಹವೆಂದರೆ ಇಂದ್ರ

ಮತ್ತು ಅಗ್ನಿ ಎಂಬ ಇಬ್ಬರು ದೇವತೆಗಳಿಗೆ ಸಂಬಂಧಪಟ್ಟ ಗ್ರಹಪಾತ್ರೆಯು. ಇದರಲ್ಲಿ ಮೊದಲು ಇಂದ್ರನೂ ಅನಂತರ ಅಗ್ನಿಯೂ ಇರುವರು. ಮಂತ್ರವೂ ಇದೇ ರೀತಿಯಲ್ಲಿರಬೇಕು. ಆದರೆ ಯಾಜ್ಯಾಮಂತ್ರವು ಹಾಗಿಲ್ಲದೆ **ಅಗ್ನ ಇಂದ್ರಶ್ಚ** ಎಂದರೆ ಮೊದಲು ಅಗ್ನಿಯೂ ಅನಂತರ ಇಂದ್ರನೂ ಇರುವರು ಇದು ಹೇಗೆ? ಎಂದರೆ ದೇವಾಸುರರ ಯುದ್ಧಕಾಲದಲ್ಲಿ ದೇವತೆಗಳಲ್ಲಿ ಇಂದ್ರಾಗ್ನಿಗಳ ಒಟ್ಟಿಗೆ ಇದ್ದು ಯುದ್ಧ ಮಾಡಿದ್ದರೂ ಅವರಲ್ಲಿ ಇಂದ್ರನು ಮುಂದಿರಲಿಲ್ಲ. ಅಗ್ನಿಯೇ ಮುಂದಾಗಿದ್ದನು- ಅಗ್ನಿಯು ಮುಂದಾಗಿಯೂ ಅನಂತರ ಇಂದ್ರನೂ ಈ ರೀತಿ ಇಬ್ಬರೂ ಸೇರಿ ಅಸುರರೊಡನೆ ಯುದ್ಧಮಾಡಿ ಜಯವನ್ನು ಗಳಿಸಿದರು. ಆದ್ದರಿಂದ ಈ ಜಯಸಂಪಾದನೆಯ ಪ್ರತೀಕವಾಗಿ ಯಾಜ್ಯಾಮಂತ್ರದಲ್ಲಿ ಮೊದಲು ಅಗ್ನಿಯ ಹೆಸರೂ ಅನಂತರ ಇಂದ್ರನ ಹೆಸರೂ ಇರುವುದು. ಈ ಕಾರಣದಿಂದ ಅಗ್ನಿಪೂರ್ವಕವಾಗಿ ಯಾಜ್ಯಾಮಂತ್ರವನ್ನು ಪಠಿಸಿ ಯಜ್ಞಮಾಡಿದರೆ ಯಜಮಾನನಿಗೆ ವಿಜಯವು ಲಭಿಸುವುದು.

ಸಾ ವಿರಾಟ್ ತ್ರಯಸ್ತ್ರಿಂಶದಕ್ಷರಾ ಭವತಿ ತ್ರಯಸ್ತ್ರಿಂಶದ್ವೈ ದೇವಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚ ತತ್ಪ್ರಥಮ ಉಕ್ಥಮುಖೇ ದೇವತಾ ಅಕ್ಷರಭಾಜಃ ಕರೋತ್ಯಕ್ಷರಮಕ್ಷರಮೇವ ತದ್ದೇವತಾ ಅನುಪ್ರಪಿಬಂತಿ ದೇವ- ಪಾತ್ರೇಣೈವ ತದ್ದೇವತಾಸ್ತೃಪ್ಯಂತಿ ।

ಯಾಜ್ಯಾಗತಾನ್ಯಕ್ಷರಾಣಿ ಪ್ರಶಂಸತಿ—ಅಕ್ಷರಾಣಾಂ ದೇವತಾನಾಂ ಚ ಸಂಖ್ಯಾ- ಸಾಮ್ಯಂ ॥ ಉಕ್ಥಮುಖೇ ಶಸ್ತ್ರಾಣಾಂ ಮಧ್ಯೇ ಮುಖ್ಯೇ ಪ್ರಥಮ ಆಜ್ಯಶಸ್ತ್ರೇ ದೇವತಾಃ ಪ್ರತ್ಯೇಕಮಕ್ಷರಭಾಜಃ ಕರೋತಿ ತಾಸ್ತತ್ತದಕ್ಷರಮೇವಾನುಸೃತ್ಯ ತಾ ದೇವತಾಃ ಸೋಮಂ ಪ್ರಕರ್ಷೇಣ ಪಿಬಂತಿ ॥ ತಥಾ ಸತಿ ಸ್ವಯೋಗ್ಯೇನಾಕ್ಷರರೂಪೇಣ ದೇವಪಾತ್ರೇಣೈವ ದೇವತಾ- ಸ್ತೃಪ್ತಾ ಭವಂತೀತಿ ॥

ಯಾಜ್ಯಾಮಂತ್ರವಾದ ವಿರಾಟ್‌ಛಂದಸ್ಸಿನಲ್ಲಿ ಮೂವತ್ತಮೂರು ಅಕ್ಷರಗಳಿರುವವು. ದೇವತೆಗಳ ಸಂಖ್ಯೆಯೂ ಮೂವತ್ತಮೂರು. ಹೇಗೆಂದರೆ. ವಸುಗಳು ಎಂಟುಮಂದಿ, ರುದ್ರರು ಹನ್ನೊಂದು ಮಂದಿ, ಆದಿತ್ಯರು ಹನ್ನೆರಡುಮಂದಿ ಇವರ ಜತೆಗೆ ಪ್ರಜಾಪತಿ ಮತ್ತು ವಷಟ್ಕಾರ ಎಂಬ ದೇವತೆಗಳೂ ಸೇರಿ ಒಟ್ಟು ಮೂವತ್ತಮೂರು ಮಂದಿ ದೇವತೆಗಳಾಗುವರು. ಆದ್ದರಿಂದ ಯಾಜ್ಯಾಮಂತ್ರದ ಅಕ್ಷರಸಂಖ್ಯೆಗೆ ಅನುಸಾರವಾಗಿ ದೇವತೆಗಳ ಸಂಖ್ಯೆಯೂ ಇರುವುದು, ಮತ್ತು ಯಜ್ಞದಲ್ಲಿ ಪಠಿಸುವ ಶಸ್ತ್ರಮಂತ್ರಗಳಲ್ಲಿ ಮೊದಲನೆಯದೂ, ಅತಿಮುಖ್ಯವೂ ಆದ ಆಜ್ಯಶಸ್ತ್ರದ ಯಾಜ್ಯಾಮಂತ್ರದ ಅಕ್ಷರಸಂಖ್ಯೆಯನ್ನನುಸರಿಸಿ ಮೂವತ್ತಮೂರು ಮಂದಿ ದೇವತೆಗಳು ತಮ್ಮ ತಮ್ಮ ಗ್ರಹಪಾತ್ರೆಗಳಿಂದ ಯಥೋಚಿತವಾಗಿ ಸೋಮಪಾನಮಾಡಿ ತೃಪ್ತಿಯನ್ನು ಹೊಂದುವರು.

ತದಾಹುರ್ಯಥಾ ವಾವ ಶಸ್ತ್ರಮೇವಂ ಯಾಜ್ಯಾಗ್ನೇಯಂ ಹೋತಾಜ್ಯಂ ಶಂಸತ್ಯಥ ಕಸ್ಮಾದಾಗ್ನೇಂದ್ರ್ಯಾ ಯಜತೀತಿ ।

ಶಸ್ತ್ರಯಾಜ್ಯಯೋಃ ದೇವತಾಪ್ರಯುಕ್ತಂ ವೈಯಧಿಕರಣ್ಯಂ ಚೋದ್ಯಮುದ್ಭಾವಯತಿ—ಶಸ್ತ್ರಸ್ಯಾಗ್ನಿರೇಕ ಏವ ದೇವತಾ ಯಾಜ್ಯಾಯಾಸ್ತ್ವಗ್ನಿರಿಂದ್ರಶ್ಚೇತಿ ದ್ವಯೋರ್ಮಿಲಿತಯೋರ್ದೇವತಾತ್ವಮಿತಿ ವೈಯಧಿಕರಣ್ಯಂ ॥

ಕೆಲವರು ಹೀಗೆ ಪ್ರಶ್ನೆಮಾಡುವರು. ಹೋತೃವು ಪಠಿಸುವ ಆಜ್ಯಶಸ್ತ್ರಮಂತ್ರವು ಅಗ್ನಿಪರವಾಗಿ ಮಾತ್ರ ಇರವುದು. ಆದರೆ ಹೋತೃವು ಅಗ್ನಿ ಮತ್ತು ಇಂದ್ರ ಎಂಬ ಇಬ್ಬರು ದೇವತೆಗಳ ಪರವಾಗಿರುವ ಯಾಜ್ಯಾಮಂತ್ರದಿಂದ ಹೋಮಮಾಡುವುದು ಯುಕ್ತವೇ ? ಎಂದರೆ ಇದಕ್ಕೆ ಪರಿಹಾರವನ್ನು ಹೇಳುವರು.

ಯಾ ವಾ ಆಗ್ನೇಂದ್ರ್ಯೈಂದ್ರಾಗ್ನೀ ವೈ ಸಾ ಸೇಂದ್ರಾಗ್ನಮೇತದುಕ್ಥಂ ಗ್ರಹೇಣ ಚ ತೂಷ್ಣೀಂಶಂಸೇನ ಚ ।

ಅಸ್ಯ ಚೋದ್ಯಸ್ಯ ಪರಿಹಾರಮಾಹ—ಯೇಯಮಾಗ್ನೇಂದ್ರೀ ಯಾಜ್ಯಾ ಸೇಯಮೈಂದ್ರಾಗ್ನ್ಯಪಿ ಭವತಿ । ದ್ವಯೋಃ ಪೌರ್ವಾಪರ್ಯಮವಿಸಂವಾದೇಽಪಿ ತಸ್ಯಾ ಋಚೋ ದ್ವಿದೇವತ್ಯತ್ವಸದ್ಭಾವಾದ್ದೇವತಯೋಃ ಕ್ರಮವಿಪರ್ಯಾಸಮಾತ್ರೇಽಂಗೀಕೃತೇ ಸತಿ ಯಾಜ್ಯಾಯಾ ಐಂದ್ರಾಗ್ನತ್ವಮುಪಚರಿತಂ ಯಥಾ ಸಂಪದ್ಯತೇ ತಥಾ ಸತ್ಯೈಂದ್ರಾಗ್ನತ್ವಸ್ಯೋಪಚರಿತಸ್ಯ ಯಾಜ್ಯಾಶಸ್ತ್ರಯೋಃ ಸದ್ಭಾವಾನ್ನಾಸ್ತಿ ವೈಯಧಿಕರಣ್ಯಂ ॥

ಐಂದ್ರಾಗ್ನಗ್ರಹವೆಂದು ಹೇಳುವಾಗ ಮೊದಲು ಇಂದ್ರ ಅನಂತರ ಅಗ್ನಿ ಎಂಬ ಕ್ರಮಕ್ಕೂ ಯಾಜ್ಯಾಮಂತ್ರದ ಮೊದಲು ಅಗ್ನಿ ಅನಂತರ ಇಂದ್ರ ಎಂಬ ಕ್ರಮಕ್ಕೂ ಅರ್ಥದಲ್ಲಿ ಹೆಚ್ಚು ವ್ಯತ್ಯಾಸವಿರುವುದಿಲ್ಲ. ಅದರಂತೆ ಆಜ್ಯಶಸ್ತ್ರಮಂತ್ರದಲ್ಲಿಯೂ ತೂಷ್ಣೀಂಶಂಸಮಂತ್ರದಲ್ಲಿಯೂ ಗ್ರಹದಲ್ಲಿಯೂ ಇಂದ್ರಾಗ್ನಿಗಳ ಹೆಸರು ಮಿಳಿತವಾಗಿಯೇ ಪಠಿತವಾಗುವುದರಿಂದ ಯಾಜ್ಯಾಮಂತ್ರಕ್ಕೂ ಶಸ್ತ್ರಮಂತ್ರಕ್ಕೂ ಅರ್ಥವಿನಿಯೋಗಗಳಲ್ಲಿ ವಿಶೇಷವ್ಯತ್ಯಾಸವೇನೂ ಕಂಡುಬರುವುದಿಲ್ಲ.

ಇಂದ್ರಾಗ್ನೀ ಆಗತಂ ಸುತಂ ಗೀರ್ಭಿರ್ನಭೋ ವರೇಣ್ಯಂ । ಅಸ್ಯ ಪಾತಂ ಧಿಯೇಷಿತೇತ್ಯೈಂದ್ರಾಗ್ನಮಧ್ವರ್ಯುರ್ಗ್ರಹಂ ಗೃಹ್ಣಾತಿ ಭೂರಗ್ನಿರ್ಜ್ಯೋತಿರ್ಜ್ಯೋತಿರಗ್ನಿರಿಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರಃ ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯ ಇತಿ ಹೋತಾ ತೂಷ್ಣೀಂಶಂಸಂ ಶಂಸತಿ ತದ್ಯಥೈವ ಶಸ್ತ್ರಮೇವಂ ಯಾಜ್ಯಾ ॥

ಆಜ್ಯಶಸ್ತ್ರಸ್ಯ ಗ್ರಹದ್ವಾರಕಂ ತೂಷ್ಣೀಂಶಂಸದ್ವಾರಕಂ ಚೈಂದ್ರಾಗ್ನತ್ವಂ ದರ್ಶಯತಿ—ಹೇ ಇಂದ್ರಾಗ್ನೀ ಸುತಮಭಿಷುತಂ ಸೋಮಂ ಪ್ರತ್ಯಾಗತಮಾಗಚ್ಛತಂ । ಕೀದೃಶಂ ಸುತಂ ಗೀರ್ಭಿಃ ಸ್ತುತಿಭಿರ್ಯುಕ್ತಮಿತಿ ಶೇಷಃ । ನಭ ಆಕಾಶಸ್ವರೂಪಮಾಕಾಶವನ್ಮಹದಿತ್ಯರ್ಥಃ ॥ ವರೇಣ್ಯಂ ವರಣೀಯಂ । ಆಗತ್ಯ ಚ ಯುವಾಂ ಧಿಯೇಷಿತಾ ಸ್ವಬುಧ್ಯಾ ಪ್ರೇಷಿತೌ ಸಂತಾವಸ್ಯ

ಸೋಮಸ್ಯ ಸಾರಂ ಪಾತಂ ಪಿಬತಂ ॥ ಇತ್ಯನೇನೈಂದ್ರಾಗ್ನದೇವತಾಕಮಂತ್ರೇಣಾಧ್ವರ್ಯುರೈಂದ್ರಾಗ್ನಂ ಗ್ರಹಂ ಗೃಹ್ಣಾತಿ।ತೂಷ್ಣೀಂಶಂಸೇ ಭೂರಗ್ನಿರಿತ್ಯಗ್ನಿರಾಮ್ನಾತ ಇಂದ್ರೋ ಜ್ಯೋತಿರಿತೀಂದ್ರೋಽಪ್ಯಾಮ್ನಾತಃ ತತ ಉಭಯಸದ್ಭಾವಾತ್ತೂಷ್ಣೀಂಶಂಸೋಽಪ್ಯೈಂದ್ರಾಗ್ನ ಈದೃಶಸ್ಯ ಗ್ರಹಸ್ಯ ತೂಷ್ಣೀಂಶಂಸಸ್ಯ ಸಂಬಂಧಾದಾಜ್ಯಶಸ್ತ್ರಮಪ್ಯೈಂದ್ರಾಗ್ನಂ ಭವತಿ । ತಸ್ಮಾಚ್ಛಸ್ತ್ರಯಾಜ್ಯಯೋರೈಂದ್ರಾಗ್ನತ್ವಸಂಪಾದನಾನ್ನಾಸ್ತಿ ವೈಯಧಿಕರಣ್ಯಂ ॥

ಮೇಲೆ ಹೇಳಿದ ವಿಷಯದಲ್ಲಿ ಇನ್ನೂ ಒಂದಂಶವಿರುವುದು. ಅಧ್ವರ್ಯುವು ಗ್ರಹಪಾತ್ರೆಯನ್ನು ತೆಗೆದುಕೊಳ್ಳುವಾಗ **ಇಂದ್ರಾಗ್ನೀ ಆಗತಂ ಸುತಂ ಗೀರ್ಭಿರ್ನಭೋ ವರೇಣ್ಯಂ । ಅಸ್ಯ ಪಾತಂ ಧಿಯೇಷಿತಾ** (ಋ.ಸಂ. ೩-೧೨-೧) ಎಂಬ ಮಂತ್ರವನ್ನು ಪಠಿಸುವನು. ಇದರ ಅರ್ಥವು—ಎಲೈ ಇಂದ್ರ ಮತ್ತು ಅಗ್ನಿ ದೇವತೆಗಳೇ, ಸ್ತೋತ್ರಗಳಿಂದ ಪ್ರಶಂಸಿಸಲ್ಪಡುವುದೂ, ಆಕಾಶಕ್ಕೆ ಯಾವರೀತಿ ಮಿತಿಯಿಲ್ಲವೋ ಆ ರೀತಿ ಅಮಿತವಾದ ಮಹತ್ವವುಳ್ಳದ್ದೂ, ಈಗತಾನೇ (ನಿಮಗಾಗಿ) ಹಿಂಡಿ ಸಿದ್ಧಪಡಿಸಲ್ಪಟ್ಟಿರುವುದೂ ಆದ ಈ ಸೋಮರಸವನ್ನು ಲಕ್ಷಿಸಿ ಇಲ್ಲಿಗೆ ದಯಮಾಡಿಸಿ ಮತ್ತು ಈ ಸೋಮರಸದಲ್ಲಿ ನಿಮಗೆ ಸಲ್ಲಬೇಕಾದ ಭಾಗವನ್ನು ಮನಃಪೂರ್ವಕವಾಗಿ ಪಾನಮಾಡಿ ಎಂದಿರುವುದು. ಈ ಮಂತ್ರದಲ್ಲಿ ಇಂದ್ರ ಮತ್ತು ಅಗ್ನಿ ಎಂಬಿಬ್ಬರನ್ನೂ ಸ್ತುತಿಸಲಾಗಿದೆ. ಮತ್ತು ತೂಷ್ಣೀಂಶಂಸವೆಂಬ ಮಂತ್ರದಲ್ಲಿಯೂ—**ಭೂರಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ । ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರಃ ।** ಎಂದು ಅಗ್ನಿ ಮತ್ತು ಇಂದ್ರ ಎಂಬ ದೇವತೆಗಳ ಪ್ರಶಂಸೆಯೂ ಇರುವುದು. ಈ ಕಾರಣಗಳಿಂದ ಎಂದರೆ ಗ್ರಹಪಾತ್ರೆಯನ್ನು ಸ್ವೀಕರಿಸುವಾಗ ಪಠಿಸುವ ಮಂತ್ರದಲ್ಲಿಯೂ ತೂಷ್ಣೀಂಶಂಸ ಮಂತ್ರದಲ್ಲಿಯೂ ಇಂದ್ರಾಗ್ನಿಗಳ ಹೆಸರುಗಳು ಪಠಿತವಾಗಿರುವುದರಿಂದ ಆಜ್ಯಶಸ್ತ್ರಮಂತ್ರದಲ್ಲಿಯೂ ಈ ಇಂದ್ರಾಗ್ನಿಗಳ ಸಂಬಂಧವು ಇದ್ದಂತೆಯೇ ಆಯಿತು. ಆದ್ದರಿಂದ ಶಸ್ತ್ರಮಂತ್ರಕ್ಕೂ ಯಾಜ್ಯಾಮಂತ್ರಕ್ಕೂ ಪರಸ್ಪರ ವಿರೋಧವೇನೂ ಇರುವುದಿಲ್ಲ.



*English Translation*

### On the meaning of the Ajya and Pra-uge Shastras. How they correspond with their respective Stotras. On the Yajya of the Hotar).

The sacrifice is the carriage of the Gods. The Ajaya and Pra-uga Shastras are the two reins between (the carriage and the horses). By repeating the Ajya Shastra after the Pavamanah Stotra (has been sung by the Sama singers), and the Pra-uga after the Ajya Stotra, the Hotar holds asunder the reins of the carriage of the Gods in order to prevent it from being broken to pieces. In imitation thereof charioteers hold asunder the reins of human carriages. Neither the divine nor the human carriage of him who has such a knowledge will be broken.

They (the theologians) ask: how does the Ajya Shastra of the Hotar, which belongs to Agni, correspond with the Pavamanya verses (for the fermenta-

tion of the Soma juice) which are chanted by the Sama singers, (the rule being) that the Shastra should be just like the Stotra ? (The answer is :) Agni is pavamanah, i. e, purifying, as even a Rishi (already) said : Agnir rishih pavamanah (9, 66, 20). The Ajya Shastra which begins with verses addressed to Agni, thus corresponds with the Pavamanya verses of the Stotra (for Agni is also pavamanah).

They ask : Why is the Stotram of the Sama singers in the Gayatri, and the Ajya Shastra of the Hotar in the Anushtubh metre, (the rule being) that the Stotram must be like the Shastram (i. e. both must be of the same metre) ? He ought to answer : one ought to look only to the total. There are seven verses, (i. e. the hymn of the Ajya Shastra) in the Anushtubh metre ; by repeating the first and last verses thrice, the number is brought to eleven ; as the twelfth verse the Yajya in the Virat metre is to be counted, for the metres are not changed by an excess of one or two syllbles. These twelve (Anushtubhs) are equal to sixteen Gayatris. The Shastra being in the Anushtubh metre corresponds with the Gayatries of the Storam (the metres thus being equalized).

The Yaja mantra (belonging to the Ajya Shastra of the Hotar) is, agna indras'cha das'usho (3, 25, 4). Instead of the regular order indrayani there is agna indras'cha in the Yajya, Agni (thus being first ; but this must be so, for) these two (deities) did not conquer, as indragni, but they conquered, when being made Agnendrau. The reason that the Hotar repeats a Yajya verse addressed to Agni-Indra is that he might be victorious. This verse is in the Virat metre, which consists of thirty-three syllables. There are thirty-three Gods, viz., eight Vasus. eleven Rudras, twelve Adityas, one Prajapati and one Vashtakara. Thus he makes the deities participate in the syllables at the very first recitation (the Ajya Shastra being the first among the twelve recitations of the Soma-day). According to the order of the (thirty-three) syllables, the Gods severally (one after the other) drink (the Soma). Thus the deities are satisfied by the vessel holding the Gods.

They ask, Why is the Yajya verse addressed to Agni-Indra, whilst the Ajya Shastra of the Hotar belongs to Agni alone, (the rule being) that the Yajya verse is to correspond with the Shastra (to which it belongs) ? (The Agni-Indra-Yajya is the same with the Indra-Agni one ; and this Shastra belongs to Indra-Agni, as may be seen from the (Aindragna) Graha (mantra), and the " silent praise " (used at this occasion). For the Adhvaryu takes the Graha under the recital of the following mantra : indragni agatam (3, 12, 1. Vajasaneya-Samhita 7, 31), i. e. " Come ye, Indra and Agni ! to the Soma juice (which is like a) fine

cloud, Drink of it, driven by your mind." The "silent praise" is, bhiur agnir jyotir jyotir agnir indro jyotir bhuvao jyotir indrah; suryo jyotir jyotir svah suryah. Thus the Yajya verse is in accordance with the Shastram.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹತ್ತನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವು.**



# ಅಥ ದಶಮಾಧ್ಯಾಯೇ ಷಷ್ಠಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ದ್ವಿದೇವತ್ಯಗ್ರಹಗಳಿಂದ ಹೋಮಮಾಡುವುದಕ್ಕೆ ಪೂರ್ವಭಾವಿಯಾಗಿ ಪಠಿಸುವ ಜಪಮಂತ್ರ ಮತ್ತು ಅದರ ಅರ್ಥವಿವರಣೆಯು]

## ಹೋತೃಜಪಂ ಜಪತಿ ರೇತಸ್ತತ್ಸಿಂಚತಿ ।

ಪೂರ್ವತ್ರ ಪರಾಙಧ್ವರ್ಯಾವಿತ್ಯಾದ್ಯಾಶ್ವಲಾಯನಸೂತ್ರೋದಾಹರಣೇನ ಹೋತುರ್ಯೋ ಜಪೋ ದರ್ಶಿತಸ್ತಮಿಮಂ ಜಪಂ ವಿಧತ್ತೇ—ಹೋತುಃ ಕರ್ತವ್ಯೋ ಯೋ ಜಪಸ್ತಮನುತಿಷ್ಠೇತ್ । ತೇನ ಪ್ರಜೋತ್ಪಾದನಾರ್ಥಮಾದೌ ರೇತಃ ಸಿಕ್ತಂ ಭವತಿ ॥

ಹಿಂದೆ ಎಂದರೆ ತೂಷ್ಣೀಂಶಂಸಮಂತ್ರವನ್ನು ಪಠಿಸುವ ಸಂದರ್ಭದಲ್ಲಿ (೯ ನೇ ಅಧ್ಯಾಯದ ೭ ನೇ ಖಂಡದಲ್ಲಿ ಹೇಳಿರುವಂತೆ) **ಪರಾಙ್ಧ್ವರ್ಯೋ**—ಎಲೈ ಅಧ್ವರ್ಯುವೇ, ನಿನ್ನಮುಖವನ್ನು ಬೇರೆಕಡೆಗೆ ಎಂದರೆ ಅಭಿಮುಖವಲ್ಲದಂತೆ ಅಥವಾ ಹಿಂದಕ್ಕೆ ಮಾಡು ಎಂದು ಹೇಳಿ ಶಸ್ತ್ರಮಂತ್ರವನ್ನು ಪ್ರಾರಂಭಿಸುವುದಕ್ಕೆ ಪೂರ್ವಭಾವಿಯಾಗಿ ತೂಷ್ಣೀಂಶಂಸವೆಂಬ ಮಂತ್ರವನ್ನು (ಉಪಾಂಶು ಅಥವಾ ಮೆತ್ತನೆಯ ಧ್ವನಿಯಿಂದ ಹೇಳುವ ಮಂತ್ರ)ವನ್ನು ಪಠಿಸುವನಷ್ಟೆ. ಅದನ್ನು ಇಲ್ಲಿ ಸ್ಪಷ್ಟವಾಗಿ ಅರ್ಥವಿವರಣೆ ಮಾಡುವರು. ಈ ತೂಷ್ಣೀಂಶಂಸ ಎಂಬ ಮಂತ್ರಕ್ಕೆ ನಿವಿತ್ ಎಂದೂ ಹೆಸರು. ಈ ನಿವಿನ್ಮಂತ್ರವನ್ನು ಶಸ್ತ್ರಮಂತ್ರದ ಪ್ರಾರಂಭದಲ್ಲಿ ಆಹ್ವಾನಮಾಡಲ್ಪಡುವ ದೇವತೆ ಅಥವಾ ದೇವತೆಗಳ ಗುಣಗಾನವನ್ನು ಮಾಡುವುದಕ್ಕಾಗಿ ಉಪಯೋಗಿಸುವರು. ಹೋತೃವು ಮಾಡುವ ಈ ಜಪಕ್ಕೆ ಎಂದರೆ ಸಣ್ಣಧ್ವನಿಯಿಂದ ಉಚ್ಚರಿಸುವ ಮಂತ್ರಕ್ಕೆ ರೇತಃ ಅಥವಾ ವೀರ್ಯಸೇಚನವನ್ನು ಹೋಲಿಸಿರುವರು. ಪುರುಷನು ಸ್ತ್ರೀಯೊಡನೆ ಕಲೆತು ಮಾಡುವ ವೀರ್ಯಸೇಚನೆಯ ಕಾಲದಲ್ಲಿ ಯಾವಶಬ್ದವನ್ನೂ ಮಾಡದೆ ಸಮೀಪದಲ್ಲಿರುವವರಿಗೂ ತಿಳಿಯದಂತೆ ರಹಸ್ಯವಾಗಿ ಹೇಗೆ ಮಾಡುವನೋ ಅದರಂತೆ ಹೋತೃವು ಶಸ್ತ್ರಮಂತ್ರವನ್ನು ಪಠಿಸುವುದಕ್ಕೆ

ಪೂರ್ವಭಾವಿಯಾಗಿ ದೇವತೆಗಳ ಗುಣಗಾನರೂಪವಾದ ಈ ನಿವಿನ್ಮಂತ್ರ ಅಥವಾ ತೂಷ್ಣೀಂಶಂಸವೆಂಬ ಮಂತ್ರವನ್ನು ಮೆತ್ತನೆಯ (ಗಟ್ಟಿಯಾಗಿಲ್ಲದ) ಧ್ವನಿಯಿಂದ ಪಠಿಸುವನು. ಆ ಮಂತ್ರವನ್ನು ಆಶ್ವಲಾಯನಶ್ರೌತಸೂತ್ರದಲ್ಲಿ ಈರೀತಿ ಹೇಳಿದೆ—**ಸುಮತ್ಪದಗ್ನೇ ಪಿತಾ ಮಾತಾರಿಶ್ವಾಚ್ಛಿದ್ರಾ ಪದಾ ಧಾಚ್ಛಿದೋಕ್ಥಾ ಕವಯಃ ಶಂಸನ್ । ಸೋಮೋ ವಿಶ್ವವಿನ್ನೀಥಾ ನಿನೇಷದ್ಬೃಹಸ್ಪತಿರುಕ್ಥಾಮುದಾನಿ ಶಂಸಿಷತ್ ವಾಗಾಯುರ್ವಿಶ್ವಾಯುರ್ವಿಶ್ವಮಾಯುಃ ಕ ಇದಂ ಶಂಸಿಷ್ಯತಿ ಸ ಇದಂ ಶಂಸಿಷ್ಯತಿ** (ಶ್ರೌ. ಸೂ. ೫-೯-೧) ಈ ಮಂತ್ರದ ಭಾಗಗಳನ್ನು ಒಂದೊಂದಾಗಿ ತೆಗೆದುಕೊಂಡು ವಿವರಿಸುವರು. ಪ್ರಜೋತ್ಪಾದನೆ ಮಾಡುವುದಕ್ಕಾಗಿ ಮೊದಲು ಮಾಡಬೇಕಾದ ಕಾರ್ಯವೆಂದರೆ ಪುರುಷನು ಸ್ತ್ರೀಯೋನಿಯಲ್ಲಿ ವೀರ್ಯವನ್ನು ಸೇಚನೆಮಾಡುವ ಈ ಕಾರ್ಯವು ರಹಸ್ಯವಾಗಿ ನಡಯುವುದು. ಆದರಂತೆ ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವುದಕ್ಕೆ ಪೂರ್ವಭಾವಿಯಾಗಿ ಈ ತೂಷ್ಣೀಂಶಂಸವೆಂಬ ಮಂತ್ರದ ಜಪವನ್ನು ರಹಸ್ಯವಾಗಿ ಎಂದರೆ ಯಾರಿಗೂ ಕೇಳಿಸದಿರುವ ಮೆತ್ತನೆಯ ಧ್ವನಿಯಲ್ಲಿ ಹೋತೃವು ಮಾಡುವನು.

## ಉಪಾಂಶು ಜಪತ್ಯುಪಾಂಶ್ವಿವ ವೈ ರೇತಸಃ ಸಿಕ್ತಿಃ ।

**ಹೋತುಃ ಕರ್ತವ್ಯೋ ಯೋ ಜಪಸ್ತಮನು ತಿಷ್ಠೇತ್ ॥ ತೇನ ಪ್ರಜೋತ್ಪಾದನಾರ್ಥಮಾದೌ ರೇತಃ ಸಿಕ್ತಂ ಭವತಿ ॥ ತತ್ರೋಚ್ಚಾರಣಪ್ರಕಾರವಿಶೇಷಂ ವಿಧತ್ತೇ—ಓಷ್ಠಸ್ಪಂದನಮೇವ ಪರೈರ್ದೃಶ್ಯತೇ ನ ತು ಶಬ್ದಃ ಶ್ರೂಯತೇ ತಾದೃಶಮುಪಾಂಶುತ್ವಂ ॥ ಲೌಕಿಕೇ ರೇತಃ ಸೇಚನೇಽಪಿ ಧ್ವನೇರಶ್ರವಣಾದ್ಯುಕ್ತಂ ತಥಾವಿಧತ್ವಂ ॥**

ಮಂತ್ರಜಪಮಾಡುವಾಗ ತುಟಿಗಳ ಚಲನಮಾತ್ರ ಕಂಡುಬರುವುದು. ಶಬ್ದ ಅಥವಾ ಧ್ವನಿಯು ಕೇಳಿಸುವುದಿಲ್ಲ. ಪುರುಷನು ಸ್ತ್ರೀಯೋನಿಯಲ್ಲಿ ಮಾಡುವ ವೀರ್ಯಸೇಚನಕಾಲದಲ್ಲಿಯೂ ಯಾವ ಶಬ್ದವೂ ಕೇಳಿಸುವುದಿಲ್ಲ. ಆದರಂತೆ ಈ ಮಂತ್ರಜಪವನ್ನು ಮಾಡಬೇಕು.

## ಪುರಾಹಾವಾಜ್ಜಪತಿ ಯದ್ವೈ ಕಿಂಚೋರ್ಧ್ವಮಾಹಾವಾಚ್ಛಸ್ತ್ರಸ್ಯೈವ ತತ್ ।

**ತಸ್ಯ ಜಪಸ್ಯ ಶೋಂಸಾವೋಮಿತ್ಯೇತಸ್ಮಾದಾಹಾವಾತ್ಪೂರ್ವಭಾವಿತ್ವಂ ವಿಧತ್ತೇ—ಅಧ್ವರ್ಯುರಾಹ್ವಯತೇ ಯೇನ ಶೋಂಸಾವೋಮಿತಿ ಮಂತ್ರೇಣ ತಸ್ಮಾತ್ಪೂರ್ವಭಾವೀ ಹೋತೃಜಪಃ । ತಥಾ ಚಾಶ್ವಲಾಯನೇನೋದಾಹೃತಂ—" ಜಪಿತ್ವಾಽನಭಿಹಿಂಕೃತ್ಯ ಶೋಂಸಾವೋಮಿತ್ಯುಚ್ಚೈರಾಹೂಯ " ಇತಿ । ಆಹಾವಾದೂರ್ಧ್ವಂ ಯತ್ಕಿಂಚಿತ್ಪಠ್ಯತೇ ತತ್ಸರ್ವಂ ಶಸ್ತ್ರಸ್ಯೈವ ಸಂಬಂಧಿ ಭವೇತ್ ॥ ಆಹಾವಮಂತ್ರೇಣ ಶಸ್ತ್ರಾನುಜ್ಞಾನಸ್ಯ ಪ್ರಷ್ಟತ್ವಾತ್ ॥ ಅತೋ ಹೋತೃಜಪಸ್ಯ ಶಸ್ತ್ರಾಂತರ್ಭಾವಂ ನಿವಾರಯಿತುಂ ಪೂರ್ವಕಾಲೀನತ್ವಂ ॥**

ಹಿಂದೆ **ಶಂಸಾವೋಂ** ಎಂಬ ಆಹಾವಮಂತ್ರವನ್ನು ಶಸ್ತ್ರಮಂತ್ರಗಳನ್ನು ಪಠಿಸುವುದಕ್ಕೆ ಮೊದಲು ಪಠಿಸಬೇಕೆಂದು ಹೇಳಿದೆಯಷ್ಟೆ. ಅದಕ್ಕಿಂತಲೂ ಮೊದಲು ಈ ಮಂತ್ರಜಪವನ್ನು ಹೋತೃವು ಮೆತ್ತನೆಯಧ್ವನಿಯಲ್ಲಿ ಮಾಡಬೇಕು. ಈ ಮಂತ್ರಜಪವು ಮುಗಿದನಂತರ ಹೋತೃವು ಶಸ್ತ್ರಮಂತ್ರವನ್ನು ಪಠಿಸುವುದಕ್ಕೆ ಮೊದಲು ಶಂಸಾವೋಂ ಎಂದು ಆಹಾವಮಂತ್ರ

ವನ್ನು ಘಟ್ಟಿಯಾದ ಧ್ವನಿಯಲ್ಲಿ ಹೇಳಿ ಅನಂತರ ಶಸ್ತ್ರಮಂತ್ರವನ್ನು ಪಠಿಸಲು ಪ್ರಾರಂಭಿಸಬೇಕು. ಆಶ್ವಲಾಯನಶ್ರೌತಸೂತ್ರದಲ್ಲಿ **ಜಪಿತ್ವಾನಭಿಹಿಂಕೃತ್ಯ ಶೋಂಸಾವೋಮಿತ್ಯುಚ್ಚೈರಾಹೂಯ** (ಆಶ್ವ. ಶ್ರೌ. ಸೂ. ೫-೯-೧) ಎಂದು ಹೇಳಿರುವುದು. ಎಂದರೆ ಮಂತ್ರಜಪಾನಂತರ **ಶಂಸಾವೋಂ** ಎಂಬ ಆಹಾವಮಂತ್ರವನ್ನೂ ಉಚ್ಚಸ್ವರದಿಂದ ಹೇಳಬೇಕು. ಆಹಾವಾನಂತರ ಪಠಿಸುವ ಮಂತ್ರವೆಲ್ಲವೂ ಶಸ್ತ್ರಮಂತ್ರಗಳೆಂದು ತಿಳಿಯಬೇಕು.

**ಪರಾಂಚಂ ಚತುಷ್ಪದ್ಯಾಸೀನಮಭ್ಯಾಹ್ವಯತೇ ತಸ್ಮಾತ್ಪರಾಂಚೋ ಭೂತ್ವಾ ಚತುಷ್ಪಾದೋ ರೇತಃ ಸಿಂಚಂತಿ ।**

ಅಥಾಹಾವೇ ಪ್ರಕಾರವಿಶೇಷಂ ವಿಧತ್ತೇ—ಅಸ್ಮಿನ್ಕಾಲೇ ಅಧ್ವರ್ಯುಃ ಪರಾಙ್ಭವತಿ ಹೋತುರ್ವಿಮುಖೋ ಭವತಿ ॥ ತಥಾ ಚತುಷ್ಪದೀ ಗೌರಿವ ಹಸ್ತೌ ಭೂಮಾವವಸ್ಥಾಪ್ಯಾಽಽಸೀನೋ ಭವತಿ ॥ ತಾದೃಶಮಧ್ವರ್ಯುಂ ಸಂಬೋಧ್ಯಾಭಿಮುಖೋ ಯಥಾ ಭವತಿ ತಥಾ ಹೋತಾ ಶೋಂಸಾವೋಮಿತಿ ಮಂತ್ರೇಣಾಽಽಹ್ವಯತೇ । ಯಸ್ಮಾದಾಹ್ವಾನಕಾಲ ಈದೃಶೋಽಧ್ವರ್ಯುಸ್ತಸ್ಮಾಲ್ಲೋಕೇಽಪಿ ಚತುಷ್ಪಾದೋ ಗವಾದಯಃ ಪರಾಂಚಃ ಸಂಭೋಗಾವಸ್ಥಾಯಾಂ ಪರಸ್ಪರಾಭಿಮುಖರಹಿತಾ ಭೂತ್ವಾ ರೇತಃ ಸಿಂಚಂತಿ ।

ಹೋತೃವು ಆಹಾವಮಂತ್ರವನ್ನು ಪಠಿಸುವುದಕ್ಕೆ ಮೊದಲು ಎಂದರೆ ಮಂತ್ರಜಪಕಾಲದಲ್ಲಿ ಅಧ್ವರ್ಯುವು ಹೋತೃವಿಗೆ ವಿಮುಖನಾಗಿ ಎಂದರೆ ಹೋತೃವಿನ ಮುಖಕ್ಕೆ ತಿರುಗಿಕೊಳ್ಳದೆ ಬೇರೆಕಡೆ ತಿರುಗಿಕೊಂಡು ಪಶುಗಳ ಆಕಾರದಂತೆ ನೆಲಕ್ಕೆ ಕೈಗಳನ್ನು ಊರಿ ಎಂದರೆ ಪಶುಗಳು ನಾಲ್ಕು ಕಾಲುಗಳನ್ನು ಊರಿಕೊಂಡು ನಿಂತಿರುವಂತೆ ಎರಡು ಕೈಗಳನ್ನು ಎರಡು ಕಾಲುಗಳನ್ನು ಊರಿ ಅಧ್ವರ್ಯುವು ಪಶುವಿನ ಆಕಾರದಲ್ಲಿರುವನು. ಏಕೆಂದರೆ ನಾಲ್ಕು ಪಾದಗಳಿರುವ ಪಶುಗಳು ವೀರ್ಯಸೇಚನಕಾಲದಲ್ಲಿ ಒಂದರ ಮುಖವನ್ನು ಮತ್ತೊಂದು ನೋಡದೆ ಪರಸ್ಪರ ವಿಮುಖವಾಗಿ ವೀರ್ಯಸೇಚನಮಾಡುವವು. ಅದನ್ನು ಸೂಚಿಸುವುದಕ್ಕಾಗಿ ಅಧ್ವರ್ಯುವು ತನ್ನ ಹಸ್ತಪಾದಗಳನ್ನು ನೆಲದಮೇಲೆ ಊರಿನಿಂತು ಹೋತೃವಿನ ಮಂತ್ರಜಪವು ಮುಗಿಯುವವರೆಗೂ ಹಾಗೆಯೇ ಇರುವನು. ಮಂತ್ರಜಪಾನಂತರ ಆ ವಿಧವಾದ ಪಶುವಿನ ಆಕಾರವು ಆವಶ್ಯಕವಲ್ಲದ್ದರಿಂದ ಹೋತೃವು **ಶಂಸಾವೋಂ** ಎಂದು ಘಟ್ಟಿಯಾದ ಧ್ವನಿಯಿಂದ ಅಧ್ವರ್ಯುವನ್ನು ಎಚ್ಚರಿಸಿ ಕೂಗಿ ಅನಂತರ ಶಸ್ತ್ರಮಂತ್ರಪಠನಮಾಡುವನು.

**ಸನ್ಯಙ್ದ್ವಿಪಾದ್ಭವತಿ ತಸ್ಮಾತ್ಸನ್ಯಂಚೋ ಭೂತ್ವಾ ದ್ವಿಪಾದೋ ರೇತಃ ಸಿಂಚಂತಿ ।**

ಆಹಾವಾದೂರ್ಧ್ವಮಧ್ವರ್ಯೋಶ್ಚತುಷ್ಪಾತ್ತ್ವಂ ಪರಿತ್ಯಜ್ಯ ಸನ್ಯಗುತ್ಥಾನಂ ವಿಧತ್ತೇ—ಊರ್ಧ್ವತ್ವೇನೋತ್ಥಾನಂ ಸನ್ಯಕ್ತ್ವಂ ತಥಾವಿಧಾ ಭೂತ್ವಾ ರೇತಸ್ಸಿಂಚಂತಿ । ಜಪಿತವ್ಯೋ ಯೋ ಮಂತ್ರಸ್ತಸ್ಯಾಽಽದೌ ಸುಮತ್ಪದ್ವಗ್ದ ಇತಿ ಪಂಚಾಕ್ಷರಾಣಿ ಪಠಿತವ್ಯಾನಿ । ತಾನಿ ಚ ಪೂರ್ವಮನೇನಾಕ್ಷರಪಙ್ಕ್ತಿಪ್ರಶಂಸಾಯಾಂ ವಿಹಿತಾನಿ ।

ಹೋತೃವು **ಶಂಸಾವೋಂ** ಎಂಬ ಆಹಾವಮಂತ್ರದಿಂದ ಹೋತೃವನ್ನು ಎಚ್ಚರಿಸಿದ ಕೂಡಲೇ ಅಧ್ವರ್ಯುವು ತನ್ನ ಹಸ್ತಪಾದಗಳನ್ನು ನೆಲದಮೇಲೆ ಪಶುವಿನ ಆಕಾರದಂತಿದ್ದ ತನ್ನ ಶರೀರವನ್ನು ಬದಲಾಯಿಸಿ ಮನುಷ್ಯರಂತೆ ತನ್ನ ಎರಡುಕಾಲುಗಳ

ಮೇಲೆ ನಿಲ್ಲುವನು. ಏಕೆಂದರೆ ಮನುಷ್ಯರು ಸಂಭೋಗಕಾಲದಲ್ಲಿ ಪಶುಗಳಂತೆ ಪರಸ್ಪರ ವಿಮುಖರಾಗಿ ವರ್ತಿಸದೆ, ಸ್ತ್ರೀಪುರುಷ ರಿಬ್ಬರೂ ಪರಸ್ಪರ ಅಭಿಮುಖರಾಗಿ ಇದ್ದು ಸಂಭೋಗಕಾರ್ಯವನ್ನು ನೆರವೇರಿಸುವರು. ಎಂದರೆ ಪುರುಷನು ಸ್ತ್ರೀಯೋನಿಯಲ್ಲಿ ವೀರ್ಯಸೇಚನವನ್ನು ಮಾಡುವಾಗ ಸ್ತ್ರೀಯ ಮತ್ತು ಪುರುಷನ ಮುಖಗಳು ಪರಸ್ಪರ ಅಭಿಮುಖವಾಗಿರುವವು.

ಪಿತಾ ಮಾತರಿಶ್ವೇತ್ಯಾಹ ಪ್ರಾಣೋ ವೈ ಪಿತಾ ಪ್ರಾಣೋ ಮಾತರಿಶ್ವಾ ಪ್ರಾಣೋ ರೇತೋ ರೇತಸ್ತತ್ಸಿಂಚತಿ ।

**ತೇಭ್ಯ ಊರ್ಧ್ವಂ ಯೋ ಜಪಿತವ್ಯೋ ಮಂತ್ರಸ್ತಸ್ಯ ಪ್ರಥಮಭಾಗಮನೂದ್ಯ ವ್ಯಾಚಷ್ಟೇ—ತಸ್ಮಿನ್ಮಂತ್ರೇ ಯಜಮಾನಸ್ಯ ನೂತನಂ ಜನ್ಮ ಸಂಪಾದ್ಯತೇ ॥ ಅತೋಽತ್ರಮಾತರಿಶ್ವಾ ವಾಯುಃ ಪಿತೃತ್ವೇನ ವರ್ಣ್ಯತೇ ॥ ತಮಿಮಂ ಪಿತೇತ್ಯಾದಿಕಂ ಮಂತ್ರಂ ಹೋತಾ ಬ್ರೂಯಾತ್ ॥ ಪ್ರಾಣ ಏವ ಲೋಕೇ ಪಿತಾ ಮೃತಾತ್ಪಿತೃದೇಹಾಜ್ಜನ್ಮಾಸಂಭವಾತ್ ॥ ವಾಯುಶ್ಚ ಪ್ರಾಣಃ ಪ್ರಾಣಸ್ಯ ವಾಯುಕಾರ್ಯತ್ವಾತ್ । ರೇತಶ್ಚ ಪ್ರಾಣಃ ಪ್ರಾಣಯುಕ್ತಸ್ಯೈವ ರೇತಸೋ ಜನನ ಹೇತುತ್ವಾತ್ । ಅತ ಏವಾರಣ್ಯಕೇ ಸಮಾಮ್ನಾಸ್ಯತೇ—' ಯದ್ವಾ ಋತೇ ಪ್ರಾಣಾದ್ರೇತಃ ಸಿಚ್ಯೇತ ಪೂಯೇನ್ನ ಸಂಭವೇತ್ " ಇತಿ। ತತ್ತೇನ ಪ್ರಥಮಭಾಗಪಾಠೇನ ಯಜಮಾನಪುನರ್ಜನ್ಮಾರ್ಥಂ ರೇತಃ ಸಿಕ್ತಂ ಭವತಿ ।**

ಈಗ ಜಪಮಂತ್ರದ ಅರ್ಥವಿವರಣೆಮಾಡುತ್ತಾರೆ—ಈ ಮಂತ್ರದಲ್ಲಿ ಯಜ್ಞಮಾಡುವ ಯಜಮಾನನ ನೂತನ ಜನ್ಮವನ್ನು ವರ್ಣಿಸಲಾಗಿದೆ. ಯಾವ ಪುರುಷನು ಜನಿಸಬೇಕಾದರೂ ಅವನು ಜನಿಸುವುದಕ್ಕೆ ಪೂರ್ವದಲ್ಲಿ ಅವನ ಜನ್ಮಕ್ಕೆ ಕಾರಣ ಭೂತನಾದ ಒಬ್ಬ ತಂದೆ ಇರಬೇಕಷ್ಟೆ. ಇಲ್ಲಿ ಮಾತರಿಶ್ವಾ ಎಂದರೆ ವಾಯುವೇ ತಂದೆಯು. ಆದ್ದರಿಂದ ತಂದೆಯೆಂಬ ಅರ್ಥ ವಿರುವ ಈ ಮಂತ್ರವನ್ನು ಹೋತೃವು ಮೊದಲು ಪಠಿಸಬೇಕು. ಲೋಕವ್ಯವಹಾರದಲ್ಲಿಯೂ ಹೀಗೆಯೇ ಇರುವುದು ಪ್ರಾಣವೇ ತಂದೆಯು ಎಂದರೆ ಜನ್ಮದಾತನು. ಪ್ರಾಣವಿಲ್ಲದ ಮೃತಶರೀರದಿಂದ ಪುತ್ರಸಂತಾನವು ಆಗುವುದಿಲ್ಲ; ವಾಯುವೇ ಪ್ರಾಣವು. ಎಂದರೆ ಶ್ವಾಸೋಚ್ಛ್ವಾಸರೂಪವಾದ ವಾಯುಸಂಚಾರವು ದೇಹದಲ್ಲಿದ್ದರೆ ಮಾತ್ರ ಪ್ರಾಣವಿರುವುದೆಂದು ಹೇಳುತ್ತಾರೆ. ವಾಯು ಸಂಚಾರವಿಲ್ಲದಿದ್ದರೆ ಪ್ರಾಣವೂ ಇರುವುದಿಲ್ಲ. ಆದ್ದರಿಂದ ವಾಯುವೇ ಪ್ರಾಣವು. ರೇತಸ್ಸು ಎಂದರೆ ಪುರುಷನ ವೀರ್ಯವೇ ಪ್ರಾಣವು. ಏಕೆಂದರೆ ರೇತಸ್ಸಿನಿಂದ ಪ್ರಾಣವಿರುವ ಶಿಶುವಿನ ಜನನವಾಗುವುದು. ಆದ್ದರಿಂದ ರೇತಸ್ಸು ಅಥವಾ ಪುರುಷನ ವೀರ್ಯವು ಪ್ರಾಣಯುಕ್ತವಾಗಿಯೇ ಇರುವುದು. ಐತರೇಯಾರಣ್ಯಕದಲ್ಲಿಯೂ (ಐ. ಆ. ೩-೨-೨-೫) ಈ ರೀತಿ ಹೇಳಿರುವುದು **ಯದ್ವಾ ಋತೇ ಪ್ರಾಣಾದ್ರೇತಃ ಸಿಚ್ಯೇತ ಪೂಯೇನ್ನ ಸಂಭವೇತ್.** ಮೇಲೆ ಹೇಳಿದ ಪ್ರಕಾರ ಮಂತ್ರಪಠನದಿಂದ. ಯಜಮಾನನ ಪುನರ್ಜನ್ಮಪ್ರಾಪ್ತಿಗಾಗಿ (ಜನ್ಮವು ಶುದ್ಧಿಯಾಗುವುದೇ ಪುನರ್ಜನ್ಮವೆಂದು ಹೇಳಲ್ಪಡುವುದು) ರೇತಸ್ಸಿಂಚನೆ ಯೆಂಬ ಅರ್ಥವನ್ನು ಸೂಚಿಸುವ ಮೇಲ್ಕಂಡ ಮಂತ್ರವನ್ನು ಹೋತೃವು ಪಠಿಸಬೇಕು.

ಅಚ್ಛಿದ್ರಾ ಪದಾಽಥಾ ಇತಿ ರೇತೋ ವಾ ಅಚ್ಛಿದ್ರಮತೋ ಹ್ಯಚ್ಛಿದ್ರಃ ಸಂಭವತಿ ।

**ದ್ವಿತೀಯಭಾಗಮನೂದ್ಯ ವ್ಯಾಚಷ್ಟೇ—ಸ ವಾಯುರೂಪಃ ಪಿತಾ ಛಿದ್ರರಹಿತಂ ಪದಂ ಪ್ರಾಪಣೀಯಂ ರೇತೋಽಥಾ ಗರ್ಭಾಶಯೇ ಸ್ಥಾಪಿತವಾನ್ । ಅತ್ರೋಕ್ತಮಚ್ಛಿದ್ರಂ ವಸ್ತು ರೇತ ಏವ । ಅತೋ ಹಿ ರೇತಸಃ ಪುಮಾನಚ್ಛಿದ್ರ ಉತ್ಪದ್ಯತೇ ॥**

ಇದೇ ಮಂತ್ರದ ಎರಡನೆಯ ಭಾಗವು. ಆ ವಾಯುರೂಪವಾದ ತಂದೆಯು ಛಿದ್ರರಹಿತವಾದ (ಎಲ್ಲಿಯೂ ನಿಲ್ಲಿಸದಿರುವ) ರೇತಸ್ಸನ್ನು ಸ್ತ್ರೀಗರ್ಭದಲ್ಲಿ ಸ್ಥಾಪಿಸುವನು. ಅದರಿಂದ ಸಮಸ್ತ ಅಂಗಗಳಿಂದ ಪೂರ್ಣವಾದ ಶಿಶುವು ಜನಿಸುವುದು.

**ಅಚ್ಛಿದ್ರೋಕ್ಥಾ ಕವಯಃ ಶಂಸನ್ನಿತಿ ಯೇ ವಾ ಅನೂಚಾನಾಸ್ತೇ ಕವಯಸ್ತ ಇದಮಚ್ಛಿದ್ರಂ ರೇತಃ ಪ್ರಜನಯನ್ನಿತ್ಯೇವ ತದಾಹ।**

ತೃತೀಯಭಾಗಮನೂದ್ಯ ವಾಚಷ್ಟೇ—ಕವಯಃ ಪುರುಷಾಃ ಅಚ್ಛಿದ್ರೋಕ್ಥಾ ಶಂಸಂ-ಛಿದ್ರರಹಿತಮುಕ್ಥಂ ಶಸ್ತ್ರಂ ಶಂಸಂತಿ । ಅತ್ರ ಕವಿಶಬ್ದೇನಾನೂಚಾನಾಃ ಷಡಂಗಸಹಿತವೇದಾಧ್ಯಾಯಿನ ಉಚ್ಯಂತೇ ॥ ತೇ ಚೇದಚ್ಛಿದ್ರಂ ರೇತಃ ಪ್ರಜನಯನ್ನುತ್ಪಾದಯಂತೀತ್ಯನೇನೈವ ಪ್ರಕಾರೇಣ ತದಚ್ಛಿದ್ರೋಕ್ಥೇತಿ ವಾಕ್ಯಮಾಹ ಬ್ರೂತೇ ॥

ಇದು ಮಂತ್ರದ ಮೂರನೆಯ ಭಾಗವು—ಕವಿಗಳು ಎಂದರೆ ಪುರುಷರು ಅಚ್ಛಿದ್ರವಾದ ಎಂದರೆ ಛಿದ್ರರಹಿತವಾದ, ಮಧ್ಯೆ ನಿಲ್ಲಿಸದೆ ಉಚ್ಚರಿಸುವ ವೇದಮಂತ್ರವನ್ನು ಪಠಿಸುತ್ತಾರೆ. ಇಲ್ಲಿ ಕವಿಗಳು ಎಂದರೆ ಹಿಂದಿನ ಸಂಪ್ರದಾಯಕ್ಕೆ ಅನುಸಾರವಾಗಿ ಷಡಂಗಸಹಿತವಾದ ವೇದಾಧ್ಯಯನವನ್ನು ಮಾಡಿದವರು ಎಂದರ್ಥವು. ಇಂತಹ ಪುರುಷರು ಅಚ್ಛಿದ್ರವಾದ ಮಂತ್ರಪಠನವನ್ನು ಮಾಡುತ್ತಾರೆ. ಇದರಿಂದ ಲೋಕವ್ಯವಹಾರದಲ್ಲಿ ಪುರುಷರು ಸ್ತ್ರೀಯೋನಿಯಲ್ಲಿ ವೀರ್ಯಸೇಚನೆಮಾಡುವಾಗ ಆ ಕಾರ್ಯದಲ್ಲಿ ಮಧ್ಯೆ ವಿಚ್ಛಿತ್ತಿಯಿಲ್ಲದಂತೆ ರೇತಸ್ಸೇಚನವನ್ನು ಹೇಗೆ ಮಾಡಿ ಮುಗಿಸುತ್ತಾರೆಯೋ ಅದರಂತೆ ಪುರುಷರು ಮಂತ್ರವನ್ನು ಎಲ್ಲಿಯೂ ನಿಲ್ಲಿಸದೆ ಕ್ರಮವಾಗಿ ಪಠಿಸುತ್ತಾರೆ ಎಂದಭಿಪ್ರಾಯವು.

**ಸೋಮೋ ವಿಶ್ವವಿನ್ನೀಥಾ ನಿನೇಷದ್ಬೃಹಸ್ಪತಿರುಕ್ಥಾಮುದಾನಿ ಶಂಸಿಷದಿತಿ ಬ್ರಹ್ಮ ವೈ ಬೃಹಸ್ಪತಿಃ ಕ್ಷತ್ರಂ ಸೋಮಃ ಸ್ತುತಶಸ್ತ್ರಾಣಿ ನೀಥಾನಿ ಚೋಕ್ಥಾಮುದಾನಿ ಚ ದೈವೇನ ಚೈವೈತದ್ಬ್ರಹ್ಮಣಾ ಪ್ರಸೂತೋ ದೈವೇನ ಚ ಕ್ಷತ್ರೇಣೋಕ್ಥಾನಿ ಶಂಸತಿ ಏತೌ ಹ ವಾ ಅಸ್ಯ ಸರ್ವಸ್ಯ ಪ್ರಸವಸ್ಯೇಶಾತೇ ಯದಿದಂ ಕಿಂಚ ತದ್ಯದೇತಾಭ್ಯಾಮಪ್ರಸೂತಃ ಕರೋತ್ಯಕೃತಂ ತದಕೃತಮಕರಿತಿ ವೈ ನಿಂದಂತಿ ಕೃತಮಸ್ಯ ಕೃತಂ ಭವತಿ ನಾಸ್ಯಾಕೃತಂ ಕೃತಂ ಭವತಿ ಯ ಏವಂ ವೇದ।**

ಚತುರ್ಥಭಾಗಮನೂದ್ಯ ವ್ಯಾಚಷ್ಟೇ—ವಿಶ್ವವಿತ್ಸರ್ವಜ್ಞಃ ಸೋಮೋ ನೀಥಾನಿ ನೇತವ್ಯಾನುಷ್ಠೇಯಾನಿ ಸ್ತೋತ್ರಶಸ್ತ್ರಾಣಿ ನಿನೇಷನ್ನೇತುಮಿಚ್ಛಾಂ ಕೃತವಾನಿತ್ಯರ್ಥಃ । ತಥಾ ಬೃಹಸ್ಪತಿರುಕ್ಥಾಮುದಾನಿ ಶಸ್ತ್ರರೂಪಾಣಿ ಸಂತೋಷಕಾರಣಾನಿ ಶಂಸಿಷಚ್ಛಂಸಿತುಮಿಚ್ಛತಿ ಶಸ್ತವಾನಿತ್ಯರ್ಥಃ । ಅಸ್ಮಿನ್ಭಾಗೇ ಬೃಹಸ್ಪತಿಸೋಮಶಬ್ದಾಭ್ಯಾಂ ಬ್ರಾಹ್ಮಣಕ್ಷತ್ರಿಯಜಾತಿದ್ವಯಂ ದೈವಂ ವಿವಕ್ಷಿತಂ । ನೀಥಶಬ್ದೇನೋಕ್ಥಾಮುದಶಬ್ದೇನ ಚ ಸ್ತೋತ್ರಶಸ್ತ್ರಾಣಿ ವಿವಕ್ಷಿತಾನಿ । ಅತ-

ಏವೈತದ್ಭಾಗಪಾಠೇ ಸತಿ ದೇವಸಂಬಂಧಿನಾ ಬ್ರಾಹ್ಮಣೇನ ಕ್ಷತ್ರಿಯೇಣ ಚ ಪ್ರೇರಿತಃ ಶಸ್ತ್ರಾಣಿ ಶಂಸತಿ। ಸೋಮಬೃಹಸ್ಪತ್ಯೋಃ ಸರ್ವಕರ್ಮಪ್ರೇರಕತ್ವಪ್ರಸಿದ್ಧಿಂ ದರ್ಶಯತಿ—ಯಜ್ಞೋಽನು-ಷ್ಠೇಯಂ ಯತ್ಕಿಂಚಿದಸ್ತ್ಯಸ್ಯ ಸರ್ವಸ್ಯ ಪ್ರಸವೋ ಯತ್ಪ್ರೇರಣಂ ತಸ್ಯ ಸೋಮಬೃಹಸ್ಪತೀ ಏವ ಸ್ವಾಮಿನೌ॥ ವ್ಯತಿರೇಕಮುಖೇನೈತದೇವ ದ್ರಢಯತಿ--ತತ್ತಥಾ ದ್ವಯೋಃ ಪ್ರೇರಣಸ್ವಾ-ಮಿತ್ವೇ ಸತಿ ಯದಂಗನೇತಾಭ್ಯಾಮಪ್ರೇರಿತಃ ಕರೋತಿ ತದಂಗಮಕೃತಮೇವ ಭವತಿ॥ ಲೋಕೇಽಪಿ ಸ್ವಾಮ್ಯನುಜ್ಞಾಮಂತರೇಣ ಯತ್ಕ್ರಿಯತೇ ತತ್ತತ್ರಾಕೃತಮಕರಕರ್ತವ್ಯಂ ಕೃತ-ವಾನಿತಿ ಜನಾ ನಿಂದಂತಿ। ವೇದನಂ ಪ್ರಶಂಸತಿ—ಅಸ್ಯ ವೇದಿತುಃ ಕೃತಂ ಕರ್ತವ್ಯಮೇವ ಕೃತಂ ಭವತಿ ನ ತ್ವಕೃತಮಕರ್ತವ್ಯಂ ಕೃತಂ ಭವತಿ॥

ಇದು ಮಂತ್ರದ ನಾಲ್ಕನೆಯ ಭಾಗವು—ಇಲ್ಲಿ ಬೃಹಸ್ಪತಿಯೆಂದರೆ ಬ್ರಹ್ಮ; ಸೋಮ ಎಂದರೆ ಸಾಮಗಾಯಕರಿಂದ ಸ್ತುತಿಸಲ್ಪಡುವ ಸೋಮದೇವತೆಯು ಕ್ಷತ್ರಸ್ವರೂಪವೆಂದು ಹೇಳಲ್ಪಡುವುದು. ನೀಥಾನಿ ಮತ್ತು ಉಕ್ಥಾಮದಾನಿ ಎಂದರೆ ಪಠಿಸಲ್ಪಡಬೇಕಾದ ಸ್ತೋತ್ರ ಮತ್ತು ಶಸ್ತ್ರಮಂತ್ರಗಳು. ಸರ್ವಜ್ಞನಾದ ಸೋಮದೇವತೆಯನ್ನು ಪ್ರತಿನಿಧಿಸುವ ಕ್ಷತ್ರಸ್ವರೂಪವು ಸಾಮಗಾನರೂಪವಾದ ಸ್ತೋತ್ರಗಳನ್ನು ಪಠಿಸುವುದಕ್ಕೂ, ಹಾಗೆಯೇ ಬ್ರಹ್ಮಸ್ವರೂಪವನ್ನು ಪ್ರತಿನಿಧಿಸುವ ಬೃಹಸ್ಪತಿಯು ಋಗ್ವೇದಸಂಬಂಧವಾದ ಶಸ್ತ್ರಮಂತ್ರಗಳನ್ನು ಪಠಿಸುವುದಕ್ಕು ಪ್ರೇರಕರಾಗಿರುವರು. ಆದ್ದರಿಂದ ದೇವಸಂಬಂಧಿಯಾದ ಕ್ಷತ್ರ ಮತ್ತು ಬ್ರಹ್ಮಸ್ವರೂಪವಾದ ಶಕ್ತಿಗಳಿಂದ ಪ್ರೇರಿತರಾಗಿ ಬ್ರಾಹ್ಮಣರಾದ ಋತ್ವಿಜರು ಸಾಮಗಾನರೂಪವಾದ ಸ್ತೋತ್ರಗಳನ್ನೂ ಋಗ್ವೇದಮಂತ್ರಗಳಾದ ಶಸ್ತ್ರಮಂತ್ರಗಳನ್ನೂ ಪಠಿಸುವರು. ಯಜ್ಞಕರ್ಮಗಳಲ್ಲಿ ಪಠಿಸಲ್ಪಡುವ ಸಮಸ್ತ ಮಂತ್ರಗಳಿಗೂ ಮತ್ತು ಆಚರಿಸಲ್ಪಡುವ ಕರ್ಮಗಳಿಗೂ ಸೋಮ ಮತ್ತು ಬೃಹಸ್ಪತೀಗಳೇ ಅಧಿಪತಿಗಳು ಎಂದರೆ ಕಾರಣಕರ್ತರು. ಆದ್ದರಿಂದ ಸೋಮ ಬೃಹಸ್ಪತಿಗಳಿಂದ ಪ್ರೇರಿತರಾಗದೆ ಮಾಡಲ್ಪಡುವ ಯಾವ ಕರ್ಮವೂ ಮಾಡಲ್ಪಟ್ಟಂತೆಯೇ ಆಗುವುದಿಲ್ಲ. ಅದೆಲ್ಲಾ ಅಕೃತ ಕರ್ಮವೇ ಆಗುವುದು ಎಂದು ಜನರು ನಿಂದಿಸುತ್ತಾರೆ. ಲೋಕವ್ಯವಹಾರದಲ್ಲಿಯೂ ಸಹ ಒಡೆಯನ ಅನುಮತಿಯಿಲ್ಲದೆ ಭೃತ್ಯರಿಂದ ಮಾಡಲ್ಪಡುವ ಕೆಲಸಕಾರ್ಯಗಳಿಗೆ ಮನ್ನಣೆ ಇರುವುದಿಲ್ಲ. ಆದ್ದರಿಂದ ಯಜ್ಞಕರ್ಮಗಳಲ್ಲಿ ಸೋಮಬೃಹಸ್ಪತಿಗಳಿಂದ ಪ್ರೇರಿತರಾಗಿ ಕರ್ಮವನ್ನು ಮಾಡಿದರೆ ಆ ಕರ್ಮವು ಸರಿಯಾದ ಕರ್ಮವೆನಿಸುವುದು. ಹಾಗಲ್ಲದೆ ಎಂದರೆ ಸೋಮ ಬೃಹಸ್ಪತಿಗಳ ಅನುಮತಿಯಿಲ್ಲದೆ ಮಾಡಿದ ಕರ್ಮವು ಎಂದಿಗೂ ಕರ್ಮವೆನಿಸಲ್ಪಡುವುದಿಲ್ಲ. ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ತನ್ನ ಕರ್ತವ್ಯಕರ್ಮವನ್ನು ನೆರವೇರಿಸಿದಂತಾಗುತ್ತದೆ.

**ವಾಗಾಯುರ್ವಿಶ್ವಾಯುರ್ವಿಶ್ವಮಾಯುರಿತ್ಯಾಹ ಪ್ರಾಣೋ ವಾ ಆಯುಃ ಪ್ರಾಣೋ ರೇತೋ ವಾಗ್ಯೋನಿರ್ಯೋನಿಂ ತದುಪ-ಸಂಧಾಯ ರೇತಃ ಸಿಂಚತಿ।**

ಪಂಚಮಭಾಗಮನೂದ್ಯ ವ್ಯಾಚಷ್ಟೇ—ಯೇಯಂ ವಾಗಿಂದ್ರಿಯರೂಪಾ ಯದಪ್ಯಾ-ಯುರ್ಜೀವನಂ ತದುಭಯಮಸ್ತ್ವಿತಿ ಶೇಷಃ। ನ ಚಾತ್ರಾಽಽಯುರಲ್ಪಂ ವಿವಕ್ಷಿತಂ ಕಿಂತು ವಿಶ್ವಾಯುರ್ವಿಶ್ವಂ ಸಮಸ್ತಂ ಶತಸಂವತ್ಸರಪರಿಮಿತಮಾಯುರ್ವಿವಕ್ಷಿತಂ। ತಸ್ಮಾದ್ವಿಶ್ವಮಾಯು-ರ್ಯಜಮಾನಃ ಪ್ರಾಪ್ನೋತ್ವಿತ್ಯಧ್ಯಾಹಾರಃ। ತಮಿಮಂ ಭಾಗಂ ಪಠೇತ್। ಅತ್ರಾಽಽಯುಃ

**ಶಬ್ದೇನ ಪ್ರಾಣ ಏವ ವಿವಕ್ಷ್ಯತೇ । ಯಾವದ್ಧ್ಯಸ್ಮಿಞ್ಶರೀರೇ ಪ್ರಾಣೋ ವಸತಿ ತಾವದಾಯುರಿತಿ-ಶ್ರುತೇಃ । ರೇತಸಃ ಪ್ರಾಣತ್ವಂ ಪೂರ್ವಮೇವೋದಾಹೃತಂ । ವಾಕ್ಶಬ್ದೇನ ಯೋನಿರುಪಲಕ್ಷ್ಯತೇ । ತಥಾ ಸತಿ ತದ್ಭಾಗಪಾಠೇನ ಯೋನಿಮುಪಸಂಧಾಯ ಗರ್ಭಸ್ಥಾನಮಭಿಲಕ್ಷ್ಯ ರೇತಃ ಸಿಂಚತಿ ।**

ಇದು ಮಂತ್ರದ ಐದನೆಯ ಭಾಗವು—ಪ್ರಾಣವೇ ಆಯುಸ್ಸು. ಆಯುಸ್ಸೆಂದರೆ ಪುರುಷನ ಜೀವಿತಕಾಲವು. ಶರೀರದಲ್ಲಿ ಯಾವ ಕಾಲದವರೆಗೆ ಪ್ರಾಣವಾಯುವಿನ ಸಂಚಾರವಿರುವುದೋ ಅಲ್ಲಿಯವರೆಗೆ ಪುರುಷನಿಗೆ ಆಯುಸ್ಸಿರುವುದೆಂದು ತಿಳಿಯಬೇಕು. ಪುರುಷನ ಆಯುಸ್ಸು ಒಂದುನೂರು ವರ್ಷಗಳು. ಇಲ್ಲಿ ವಾಕ್‌ಶಬ್ದವು ಯೋನಿಯನ್ನು ಸೂಚಿಸುವುದು. ಪ್ರಾಣವೆಂದರೆ ರೇತಸ್ಸು ಅಥವಾ ರೇತಶ್ಶಬ್ದವು ಪ್ರಾಣವಾಯುವನ್ನು ಸೂಚಿಸುವುದು. ಆದ್ದರಿಂದ ಸ್ತ್ರೀಯೋನಿಯಲ್ಲಿ ರೇತಸ್ಸೇಚನಮಾಡುವುದರಿಂದ ಪ್ರಾಣವಾಯುವಿನಿಂದ ಕೂಡಿದ ಪುರುಷನು ಉತ್ಪನ್ನನಾಗಿ ಬಹುಕಾಲ ಆಯುಸ್ಸನ್ನು ಪಡೆದು ಜೀವಿಸಿರುವಂತೆ ಈ ಮಂತ್ರಪಠನದಿಂದ ಯಜಮಾನನ ಆಯುಃಪ್ರಮಾಣವು ಹೆಚ್ಚಿ ಸುಖವಾಗಿ ಜೀವಿಸುವನು ಎಂದಭಿಪ್ರಾಯವು.

**ಕ ಇದಂ ಶಂಸಿಷ್ಯತಿ ಸ ಇದಂ ಶಂಸಿಷ್ಯತೀತ್ಯಾಹ ಪ್ರಜಾಪತಿರ್ವೈ ಕಃ ಪ್ರಜಾಪತಿಃ ಪ್ರಜನಯಿಷ್ಯತೀತ್ಯೇವ ತದಾಹ ॥**

**ಷಷ್ಠಂ ಭಾಗಮನೂದ್ಯ ವ್ಯಾಚಷ್ಟೇ—ಕಃ ಪ್ರಜಾಪತಿರಿದಂ ಶಸ್ತ್ರಂ ಶಂಸಿಷ್ಯತಿ ಶಂಸಿತು-ಮಿಚ್ಛತ್ಯತಃ ಸ ಏವೇದಂ ಶಂಸಿಷ್ಯತಿ ತಮಿಮಮಂತಿಮಭಾಗಂ ಬ್ರೂಯಾತ್ ॥ ಅತ್ರ ಕಶಬ್ದೇನ ಪ್ರಜಾಪತಿ(ತೇ)ರುಕ್ತತ್ವಾತ್ಸಏವ ಯಜಮಾನಮುತ್ಪಾದಯಿಷ್ಯತೀತ್ಯನೇನೈವ ಪ್ರಕಾರೇಣ ತನ್ಮಂತ್ರವಾಕ್ಯಂ ಬ್ರೂತೇ ॥**

ಮಂತ್ರದ ಆರನೆಯ ಭಾಗವನ್ನು ವಿವರಿಸುವರು—ಇಲ್ಲಿ ಕಃ ಎಂದರೆ ಯಾವ ಪುರುಷನು ಎಂಬರ್ಥವಲ್ಲದೆ ಕಃ ಎಂಬ ಶಬ್ದಕ್ಕೆ ಪ್ರಜಾಪತಿ ಎಂದೂ ಅರ್ಥವಾಗುವುದು. ಎಂದರೆ ಈ ಮಂತ್ರವನ್ನು ಪಠಿಸುವ ಪುರುಷನು ಪ್ರಜಾಪತಿಸ್ವರೂಪನು ಎಂದೇ ಭಾವಿಸಬೇಕು. ಆದ್ದರಿಂದ ಪ್ರಜಾಪತಿಯೇ ಈ ಶಸ್ತ್ರಮಂತ್ರವನ್ನು ಪಠಿಸುವನು ಮತ್ತು ಈ ಯಜ್ಞಮಾಡುವ ಯಜಮಾನನನ್ನು ಉತ್ಪನ್ನಮಾಡುವನು. ಎಂದರೆ ಈ ಮಂತ್ರಪಠನದಿಂದ ಯಜಮಾನನ ಶರೀರವು ಶುದ್ಧಿಯಾಗಿ ಅವನು ಪುನರ್ಜನ್ಮತಾಳಿದಂತೆ ಆಗುವನು. ಈ ಕಾರ್ಯವನ್ನು ಪ್ರಜಾಪತಿಯೇ ಮಂತ್ರಪಠನದಿಂದ ನೆರವೇರಿಸುವನು ಎಂದಭಿಪ್ರಾಯವು.

*English Translation*

**(The Japa which is repeated before the libations from the Dvidevatya Grahas are given. Its several sentences explained.)**

The Japa which the Hotar mutters, is the seed. The effusion of seed is inaudible ; so is the Japa. It is, as it were, the effusion of the seed.

He mutters the Japa before the call, s'omsavom. For all that is repeated after the call, s'omsavom, forms part of the Shastra. The Hotar addresses this call (s'omsavom) to the Adhvaryu when the latter with his face turned away is

lying prostate on the earth (using the two hands as two forelegs like beasts). For four-footed beings (animals) emit their sperms (at the time of copulation) having turned their faces away from one another. He (the Adhvaryu) then stands upright on his two legs. For two-footed beings (men) emit their sperms when facing one another in a straight line.

(The several sentences of the Japa are now explained).

He mutters, pita mataris'va. The breath is pita (father), and the breath is mataris'va, the breath is seed.

By repeating these words, he (the Hotar) emits the seed (for a spiritual birth).

Achhidra pada dha (Achhidra, i. e., without breach is seed. Thence a being which is unbroken (a whole) rises out of the seed.

Achhidra uktha kavayah s'amsann. Those who have learnt by heart (the mantras) are called kavis. The sentence means: "they produced this unbroken (matter) i. e., the seed."

Somo vis'vavid—sams'ishat. Brihaspati is Brahma; the Soma who is praised by the singers, is the Kshatram. The nithani and uktha madani are the Shastras. By repeating this sentence the Hotar recites his Shastras, instigated (prasuta) by the divine Brahma and by the divine Kshatra. Both these (Brihaspati and Soma) preside over the whole creation, whatever exists. For all that the Hotar is doing without being incited by these two (deities) is not done. (Just as) they reproach one (in eommon life, when something is done without order, saying) he has done what was not done (not to be done). Of him who has such a knowledge all that is done, and nothing that is done be undone.

Vag-ayur. Ayuh (life) is breath: seed is breath; the womb is vach. Ry repeating this sentence he pours the seed into the womb,

Kaidam-samsishyati. Kah (who?) is Prajapati. The meaning of the sentence is Prajapati will generate.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದಶಮಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು.



# ಅಥ ದಶಮಾಧ್ಯಾಯೇ ಸಪ್ತಮಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ ಹಿಂದೆ ಹೇಳಿದ ತೂಷ್ಣೀಂಶಂಸಮಂತ್ರದ ಆರು ವಿಭಾಗಗಳ ಅರ್ಥವಿವರಣೆ ಇತ್ಯಾದಿ ; ಮತ್ತು ಪುರೋರುಕ್ ಮಂತ್ರದ ಹನ್ನೆರಡು ವಿಭಾಗಗಳು ; ಪುರೋರುಕ್ ಮಂತ್ರದಲ್ಲಿ ಜಾತವೇದಾಃ ಎಂಬ ಶಬ್ದವು ಹೇಗೆ ಬಂದಿತು ? ]



**ಆಹೂಯ ತೂಷ್ಣೀಂಶಂಸಂ ಶಂಸತಿ ರೇತಸ್ತತ್ಸಿಕ್ತಂ ವಿಕರೋತಿ ಸಿಕ್ತಿರ್ವಾ ಅಗ್ರೇऽಥ ವಿಕೃತಿಃ**

**ಆಹಾವಾತ್ಪೂರ್ವಕಾಲೀನಂ ಜಪಮುಕ್ತ್ವಾ ಉತ್ತರಕಾಲೀನಂ ತೂಷ್ಣೀಂಶಂಸಂ ವಿಧತ್ತೇ—ಶೋಂಸಾವೋಮಿತಿ ಮಂತ್ರೇಣ ಅಧ್ವರ್ಯುಮುಪಹೂಯ ಪಶ್ಚಾತ್ತೂಷ್ಣೀಂಶಂಸಂ ಪಠೇತ್ ॥ ತಥಾ ಸತಿ ಹೋತೃಜಪೇನ ಸಿಕ್ತಂ ರೇತೋऽನೇನ ವಿಕರೋತಿ ಪಿಂಡಾದ್ಯಾಕಾರ ವಿಕಾರಂ ರೇತಸಿ ಜನಯತಿ । ಸೇಕಃ ಪೂರ್ವಭಾವೀ ವಿಕಾರಃ ಪಶ್ಚಾದ್ಭವತೀತಿ ಯುಕ್ತೋऽಯಂ ಕ್ರಮಃ ।**

ಶಸ್ತ್ರಮಂತ್ರಪಠನಕ್ಕೆ ಪೂರ್ವಭಾವಿಯಾಗಿ ಹೋತೃವು **ಶೋಂಸಾವೋಂ** ಎಂಬ ಆಹಾವಮಂತ್ರದಿಂದ ಅಧ್ವರ್ಯುವನ್ನು ಎಚ್ಚರಿಸಿ ಕರೆದು ಶಸ್ತ್ರಮಂತ್ರವನ್ನು ಪಠಿಸುವನು. ಶಸ್ತ್ರಮಂತ್ರಪಠನಕ್ಕೆ ಪೂರ್ವದಲ್ಲಿ ತೂಷ್ಣೀಂಶಂಸಮಂತ್ರವನ್ನು ಪಠಿಸುವನು. ಇದು ಶಸ್ತ್ರಮಂತ್ರಕ್ಕೆ ಪೂರ್ವಭಾವಿಯಾಗಿ ಪಠಿಸುವ ತೂಷ್ಣೀಂಶಂಸಮಂತ್ರವು. ಇದನ್ನು ರೇತಸ್ಸೇಚನ ಅಥವಾ ಬೀಜೋತ್ಪಾದನೆಗೆ ಹೋಲಿಸಿರುವರು. ಅನಂತರ ಎಂದರೆ ಶಸ್ತ್ರಪಠನಾನಂತರ ಮತ್ತೊಂದಾವರ್ತಿ ತೂಷ್ಣೀಂಶಂಸಮಂತ್ರವನ್ನು ಹೋತೃವು ಪಠಿಸುವನು. ಇದಕ್ಕೆ ಉತ್ತರಕಾಲೀನ ಅಥವಾ ಅನಂತರ (ಎರಡನೆಯಸಲ) ಪಠಿಸುವ ತೂಷ್ಣೀಂಶಸಮಂತ್ರವು. ಇದನ್ನು ಬೀಜವಪನಾನಂತರ(ರೇತಸ್ಸೇಚನಾನಂತ)ಆ ವೀರ್ಯವು ಪಿಂಡಾದ್ಯಾಕಾರವನ್ನು ಅವಯವಸಹಿತ ಹೊಂದಿ ಮಾರ್ಪಡುವ ಕ್ರಮಕ್ಕೆ ಹೋಲಿಸಿರುವರು. ಈ ವಿಧವಾದ ಕ್ರಮವು ಯುಕ್ತವೇ ಆಗಿರುವುದು.

**ಉಪಾಂಶು ತೂಷ್ಣೀಂಶಂಸಂ ಶಂಸತ್ಯುಪಾಂಶ್ವಿವ ವೈ ರೇತಸಃ ಸಿಕ್ತಿಃ ತಿರ ಇವ ತೂಷ್ಣೀಂಶಂಸಂ ಶಂಸತಿ ತಿರ ಇವ ವೈ ರೇತಾಂಸಿ ವಿಕ್ರಿಯಂತೇ ।**

ಶಂಸನಕಾಲೇ ಧ್ವನಿರಾಹಿತ್ಯಂ ವಿಧತ್ತೇ — ಪರ್ಯೈರ್ಧ್ವನೇರಪ್ರಸಾದಕರಿತಸದೃಶಂ ಭವತೀತ್ಯಸ್ಯ ತೂಷ್ಣೀಂಶಂಸ ಇತಿ ನಾಮಧೇಯಂ । ತಸ್ಮಾತ್ತದನುಸಾರೇಣೋಪಾಂಶೂಚ್ಚಾರ-

ಯೇತ್ ॥ ರೇತಃಸೇಕೋಽಪ್ಯುಪಾಂಶುಸದೃಶೋ ರಹಸಿ ಕ್ರಿಯಮಾಣತ್ವಾತ್॥ ಉಪಾಂಶುತ್ವೇನ ಹೋತೃ ಜಪಸಾಮ್ಯಪ್ರಸಕ್ತೌ ವೈಷಮ್ಯಂ ವಿಧತ್ತೇ— ಯಥಾ ಕುಡ್ಯಗೃಹಾದಿವ್ಯವಹಿತಮನ್ಯೈರಧೀಯಮಾನಂ ವಾಕ್ಯಮೀಷತ್ಪ್ರತೀಯತೇ ನ ತು ಸ್ಪಷ್ಟಂ ತದ್ವತ್ತೂಷ್ಣೀಂಶಂಸೋಽಪ್ಯಸ್ಪಷ್ಟೋ ಯಥಾ ಭವತಿ ತಥಾ ಶಂಸೇತ್ ॥ ತದಿದಂ ತಿರ ಇವೇತ್ಯುಚ್ಯತೇ ಹೋತೃಜಪಾದೀಷದುಚ್ಚೈರಿತ್ಯರ್ಥಃ ।

ಈ ತೂಷ್ಣೀಂಶಂಸಮಂತ್ರಜಪಕಾಲದಲ್ಲಿ ಮಂತ್ರವನ್ನು ಸಮೀಪದಲ್ಲಿ ಇತರರಿಗೆ ಕೇಳಿಸದಂತೆ ಬಹು ಸಣ್ಣಧ್ವನಿಯಿಂದ ಉಚ್ಚರಿಸುವುದೇ ರೂಢಿಯು. ಆದ್ದರಿಂದಲೇ ಈ ಮಂತ್ರಕ್ಕೆ ತೂಷ್ಣೀಂಶಂಸಂ— ಬಹುಮಟ್ಟಿಗೆ ಸಣ್ಣಧ್ವನಿಯಿಂದ ಉಚ್ಚರಿಸುವ ಮಂತ್ರವೆಂದು ಹೆಸರು. ಪುರುಷನಿಂದ ಸ್ತ್ರೀಯೋನಿಯಲ್ಲಿ ಮಾಡುವ ವೀರ್ಯಸೇಚನವೂ ಸಹ ಸದ್ದಿಲ್ಲದೆ ರಹಸ್ಯಸ್ಥಳದಲ್ಲಿ ನಡೆಯುವುದರಿಂದ ವೀರ್ಯಸೇಚನಕ್ಕೂ ತೂಷ್ಣೀಂಶಂಸ ಮಂತ್ರಪಠನಕ್ಕೂ ಹೋಲಿಕೆಯನ್ನು ಹೇಳಲಾಗಿದೆ. ಹೋತೃವು ಈ ಮಂತ್ರವನ್ನು ಜಪಿಸುವಾಗ ಸಮೀಪದಲ್ಲಿರುವವರಿಗೂ ಸ್ಪಷ್ಟವಾಗಿ ಕೇಳಿಸದಂತೆ ಉಚ್ಚರಿಸಬೇಕು. ರಹಸ್ಯದಲ್ಲಿ ಮಾಡಲ್ಪಡುವ ರೇತಸ್ಸೇಚನವೂ ಸಹ ಇತರರಿಗೆ ತಿಳಿಯುವುದಿಲ್ಲ.

**ಷಟ್ಪದಂ ತೂಷ್ಣೀಂಶಂಸಂ ಶಂಸತಿ ಷಡ್ವಿಧೋ ವೈ ಪುರುಷಃ ಷಳಂಗ ಆತ್ಮಾನಾಮೇವ ತತ್ ಷಡ್ವಿಧಂ ಷಳಂಗಂ ವಿಕರೋತಿ ।**

ತೂಷ್ಣೀಂಶಂಸಸ್ಯೇಯತ್ತಾಂ ವಿಧತ್ತೇ—ಷಟ್ಪದಂ ಷಡ್ಭಾಗಂ । ಭೂರಗ್ನಿರ್ಜ್ಯೋತೀರಿತ್ಯೇಕೋ ಭಾಗೋ ಜ್ಯೋತಿರಗ್ನಿರಿತಿ ದ್ವಿತೀಯೋ ಭಾಗಃ । ಏವಮುತ್ತರತ್ರಾಪಿ ದ್ರಷ್ಟವ್ಯಂ । ತಥಾವಿಧಶಂಸನೇ ಪುರುಷಸಾಮ್ಯಂ ಭವತಿ । ಪುರುಷಸ್ಯ ಷಡ್ವಿಧತ್ವಮೇವ ಷಳಂಗ ಇತ್ಯನೇನ ಸ್ಪಷ್ಟೀ ಕ್ರಿಯತೇ ॥ ಪುರುಷಾವಯವಷಟ್ಕಂ ಶಾಖಾಂತರೇ ದರ್ಶಿತಂ—'ಷೋಢಾ ವಿಹಿತೋ ವೈ ಪುರುಷ ಆತ್ಮಾ ಚ ಶಿರಶ್ಚತ್ವಾರ್ಯಂಗಾನಿ' ಇತಿ । ದ್ವೌ ಹಸ್ತೌ ದ್ವೌ ಪಾದಾವಿತ್ಯಂಗಚತುಷ್ಟಯಂ । ಆತ್ಮಶಬ್ದೋ ಮಧ್ಯದೇಹವಾಚೀ । ಭಾಗತ್ರಯೋಪೇತೇ ತೂಷ್ಣೀಂಶಂಸೇ ತತ್ತದ್ಭಾಗಮಧ್ಯೇಷ್ವವಸಾನೇ ಷಡ್ಭಾಗತ್ವಂ ಭವತಿ । ಆಶ್ವಲಾಯನ ಆಹ—"ಭೂರಗ್ನಿ ಜ್ಯೋತೀ ಜ್ಯೋತಿರಗ್ನೀಂ ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರೋಂ ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯೋಮಿತಿ ತ್ರಿಪದಸ್ತೂಷ್ಣೀಂಶಂಸೋ ಯದ್ಯು ವೈ ಷಟ್ಪದಃ ಪೂರ್ವೈರ್ಜ್ಯೋತಿಃಶಬ್ದೈರಗ್ನೇಽವಸ್ಯೇತ್" ಇತಿ ॥ ಅತಃ ಷಟ್ಪದೇ ತೂಷ್ಣೀಂಶಂಸೇನ ಯಜಮಾನಸ್ಯ ಶರೀರಮೇವ ಷಡಂಗೋಪೇತಂ ಕೃತ್ವಾ ವಿಕರೋತಿ ।

ಈ ತೂಷ್ಣೀಂಶಂಸಮಂತ್ರವು ಆರುಭಾಗಗಳುಳ್ಳದ್ದಾಗಿರುವುದು. ಪುರುಷನೂ ಸಹ ಆರುವಿಧವಾದ ಅವಯವಗಳುಳ್ಳವನಾಗಿರುವನು. ತೂಷ್ಣೀಂಶಂಸಮಂತ್ರದ ಆರುಭಾಗಗಳಾವವೆಂದರೆ— **ಭೂರಗ್ನಿರ್ಜ್ಯೋತಿಃ** ಎಂಬುದು ಮೊದಲನೆಯ ಭಾಗ; **ಜ್ಯೋತಿರಗ್ನಿಃ** ಎಂಬುದು ಎರಡನೆಯ ಭಾಗ; **ಇಂದ್ರೋ ಜ್ಯೋತಿರ್ಭುವಃ** ಎಂಬುದು ಮೂರನೆಯ ಭಾಗ; **ಜ್ಯೋತಿರಿಂದ್ರಃ** ಎಂಬುದು ನಾಲ್ಕನೆಯ ಭಾಗ; **ಸೂರ್ಯೋ ಜ್ಯೋತಿಃ** ಎಂಬುದು ಐದನೆಯ ಭಾಗ; **ಜ್ಯೋತಿಃ ಸ್ವಃ**

**ಸೂರ್ಯಃ** ಎಂಬುದು ಆರನೆಯ ಭಾಗವು. ಪುರುಷನಿಗೂ ಇದರಂತೆ ಆರುಭಾಗ ಅಥವಾ ಅಂಗಗಳಿರುವವು. ಎರಡು ಕೈಗಳು, ಎರಡು ಕಾಲುಗಳು, ಆತ್ಮಾ ಮತ್ತು ಶಿರಸ್ಸು ಎಂಬಿವೇ ಪುರುಷನ ಆರು ಅಂಗಗಳು. ಇದನ್ನು— **ಷೋಢಾ ವಿಹಿತೋ ವೈ ಪುರುಷ ಆತ್ಮಾ ಚ ಶಿರಶ್ಚತ್ವಾರ್ಯಂಗಾನಿ** (ತೈ. ಸಂ. ೫-೬-೯-೧) ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ. ಇಲ್ಲಿ ಆತ್ಮಶಬ್ದವೆಂದರೆ ಶರೀರದ ಮಧ್ಯಭಾಗವು ಎಂದರ್ಥವು. ಹಿಂದೆ ತೂಷ್ಣೀಂಶಂಸಮಂತ್ರವು ಭಾಗತ್ರಯ ಎಂದರೆ ಮೂರುಭಾಗ ಗಳುಳ್ಳದ್ದಾಗಿರುವುದೆಂದು ಹೇಳಲಾಗಿದ್ದರೂ ಈ ಮೂರುಭಾಗಗಳಲ್ಲಿ ಪ್ರತಿಯೊಂದರಲ್ಲಿಯೂ ಎರಡೆರಡು ಭಾಗಗಳಿರುವುದರಿಂದ ಒಟ್ಟು ಮಂತ್ರದಲ್ಲಿ ಆರುಭಾಗಗಳಿದ್ದಂತಾಯಿತು. ಆಶ್ವಲಾಯನರೂ ಸಹ ಈರೀತಿ ಹೇಳಿರುವರು— **ಭೂರಗ್ನಿರ್ಜ್ಯೋತಿ-ರ್ಜ್ಯೋತಿಃ ರಗ್ನೀಂ ಇಂದ್ರೋ ಜ್ಯೋತಿರ್ಭುವೋ ಜ್ಯೋತಿರಿಂದ್ರೋ ಸೂರ್ಯೋ ಜ್ಯೋತಿರ್ಜ್ಯೋತಿಃ ಸ್ವಃ ಸೂರ್ಯೋಮಿತಿ ತ್ರಿಪದಸ್ತೂಷ್ಣೀಂಶಂಸೋ ಯದ್ಯು ವೈ ಷಟ್ಪದಃ ಪೂರ್ವೈರ್ಜ್ಯೋತಿಃ ಶಬ್ದೈರಗ್ನೇಽವಸ್യೇತ್** (ಆಶ್ವ. ಶ್ರೌ. ಸೂ. ೬-೯-೧೧) ಎಂದು ಹೇಳಿರುವರು. ಆದ್ದರಿಂದ ಆರುಭಾಗಗಳುಳ್ಳ ತೂಷ್ಣೀಂಶಂಸ ಮಂತ್ರಪಠನದಿಂದ ಯಜ್ಞಮಾಡುವ ಯಜಮಾನನ ಆರು ಅವಯವಗಳಿಂದ ಸಹಿತವಾದ ಶರೀರವನ್ನು ವೃದ್ಧಿಪಡಿಸಲಾಗುವುದು.

ತೂಷ್ಣೀಂಶಂಸಂ ಶಸ್ತ್ವಾ ಪುರೋರುಚಂ ಶಂಸತಿ ರೇತಸ್ತದ್ವಿಕೃತಂ ಪ್ರಜನಯತಿ ವಿಕೃತಿರ್ವಾ ಅಗ್ರೇಽಥ ಜಾತಿಃ ।

ಏತದನಂತರಂ ನಿವಿದೋ ವಿಧತ್ತೇ— ಪ್ರ ವೋ ದೇವಾಯೇತ್ಯಾದಿಸೂಕ್ತಾತ್ಪುರತೋ ದೀಪ್ಯತೇ ರೋಚತ ಇತಿ ಪುರೋರುಕ್ಛಬ್ದೇನ ನಿವಿದುಚ್ಯತೇ ॥ ತಾಂ ತೂಷ್ಣೀಂಶಂಸಾದೂರ್ಧ್ವಂ ಪಠೇತ್ ॥ ತೇನೋರ್ಧ್ವಪಾಠೇನ ಷಡಂಗತಯಾ ವಿಕೃತಂ ರೇತಃ ಶರೀರರೂಪೇಣೋತ್ಪಾದಿತಂ ಭವತಿ । ವಿಕಾರಃ ಪೂರ್ವಭಾವೀ ಜನ್ಮ ಪಶ್ಚಾದ್ಭಾವಿ । ತಸ್ಮಾತ್ತದಾನಂತರ್ಯಂ ನಿವಿದೋ ಯುಕ್ತಂ ॥

ತೂಷ್ಣೀಂಶಂಸಮಂತ್ರವನ್ನು ಪಠಿಸಿದಮೇಲೆ ಪುರೋರುಕ್ ಅಥವಾ ನಿವಿನ್ಮಂತ್ರವನ್ನು ಪಠಿಸಬೇಕು. **ಪ್ರ ವೋ ದೇವಾಯ** ಎಂಬ ಸೂಕ್ತವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಯಾವ (ದೇವತೆಗಳ ಗುಣಗಾನರೂಪವಾದ) ನಿವಿನ್ಮಂತ್ರ ವನ್ನು ಪಠಿಸುವರೋ ಆ ನಿವಿನ್ಮಂತ್ರಕ್ಕೆ ಪುರೋರುಕ್ (ಪೂರ್ವಭಾವಿಯಾಗಿ ಪಠಿಸಲ್ಪಡುವ ಮಂತ್ರ) ಎಂದು ಹೆಸರು. ಈ ಪುರೋರುಕ್ ಅಥವಾ ನಿವಿನ್ಮಂತ್ರವನ್ನು ತೂಷ್ಣೀಂಶಂಸಮಂತ್ರಾನಂತರ ಪಠಿಸಬೇಕು. ಹೀಗೆ ಪಠಿಸುವುದರಿಂದ ರೇತಸ್ಸು ಅಥವಾ ಬೀಜರೂಪವಾದ ವೀರ್ಯವು ವಿಕೃತಿಯಾಗಿ ಎಂದರೆ ಅಂಗಾದ್ಯವಯವರೂಪವಾಗಿ ಮಾರ್ಪಡುವುದು. ಈರೀತಿ ಬೀಜವು (ರೇತಸ್ಸು) ಅವಯವಸಹಿತವಾಗಿ ಮಾರ್ಪಟ್ಟನಂತರ ಜನ್ಮವು ಉಂಟಾಗುವುದು. ಆದರಂತೆ ತೂಷ್ಣೀಂಶಂಸಾನಂತರ ನಿವಿನ್ಮಂತ್ರ ಪಠನವು ಯುಕ್ತವು.

ಉಚ್ಚೈಃ ಪುರೋರುಚಂ ಶಂಸತ್ಯುಚ್ಚೈರೇವೈನಂ ತತ್ಪ್ರಜನಯತಿ ।

ಹೋತೃಜಪಗತಂ ಯದುಪಾಂಶುತ್ವಂ ತೂಷ್ಣೀಂಶಂಸಗತಂ ಚ ಯದೀಷದುಚ್ಚಧ್ವನಿತ್ವಂ ತಸ್ಮಾದುಭಯಸ್ಮಾದ್ವೈಲಕ್ಷಣ್ಯಂ ನಿವಿದೋ ವಿಧತ್ತೇ—ಉತ್ಪಾದನಕಾಲೇ ಪ್ರಸವವೇದನಯಾ ತನ್ಮಾತೋಚ್ಚೈರ್ಧ್ವನಿಂ ಕರೋತಿ । ತದಿದಮುಚ್ಚೈಃ ಪ್ರಜನಯತೀತ್ಯುಚ್ಯತೇ ॥

ಹೋತೃವು ತೂಷ್ಣೀಂಶಂಸಮಂತ್ರವನ್ನು ಮೆಲ್ಲಗೆ ಅಸ್ಪಷ್ಟಧ್ವನಿಯಿಂದ ಜಪಮಾಡಬೇಕೆಂದು ಹಿಂದೆಯೇ ಹೇಳಿದೆಯಷ್ಟೆ. ಅದಕ್ಕೆ ವಿರುದ್ಧವಾಗಿ ಪುರೋರುಕ್ ಅಥವಾ ನಿವಿನ್ಮಂತ್ರವನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಏಕೆಂದರೆ ಲೋಕವ್ಯವಹಾರದಲ್ಲಿ ಶಿಶುವು ಪ್ರಸವವಾಗುವಾಗ ಅದರ ತಾಯಿಯು ಪ್ರಸವವೇದನೆಯಿಂದ ಘಟ್ಟಿಯಾಗಿ ನರಳುತ್ತಾ ಶಿಶುವನ್ನು ಪ್ರಸವಿಸುವಳು. ಅವಳ ರೋದನವು ಎಲ್ಲರಿಗೂ ಕೇಳಿಸುವುದು. ಅದರಲ್ಲಿ ಯಾವ ರಹಸ್ಯವೂ ಇಲ್ಲ. ಇದು ಎಲ್ಲರಿಗೂ ತಿಳಿದ ವಿಷಯವೇ. ಅದರಂತೆಯೇ ಜನನರೂಪವಾದ ಪುರೋರುಕ್ ಅಥವಾ ನಿವಿನ್ಮಂತ್ರವನ್ನು ಪಠಿಸುವಾಗ ಯಾವ ಮುಚ್ಚುಮರೆಯೂ ಇಲ್ಲದೆ ಮಂತ್ರವನ್ನು ಘಟ್ಟಿಯಾಗಿ ಉಚ್ಚರಿಸಬೇಕು ಎಂದಭಿಪ್ರಾಯವು.

**ದ್ವಾದಶಪದಾಂ ಪುರೋರುಚಂ ಶಂಸತಿ ದ್ವಾದಶ ವೈ ಮಾಸಾಃ ಸಂವತ್ಸರಃ ಸಂವತ್ಸರಃ ಪ್ರಜಾಪತಿಃ ಸೋಽಸ್ಯ ಸರ್ವಸ್ಯ ಪ್ರಜನಯಿತಾ ಸ ಯೋಽಸ್ಯ ಸರ್ವಸ್ಯ ಪ್ರಜನಯಿತಾ ಸ ಏವೈನಂ ತತ್ಪ್ರಜಯಾ ಪಶುಭಿಃ ಪ್ರಜನಯತಿ ಪ್ರಜಾತ್ಯೈ ।**

**ನಿವಿದಾಂ ನ್ಯೂನಾಧಿಕಭಾಗಶಂಕಾವ್ಯುದಾಸಾಯ ಸಂಖ್ಯಾಂ ವಿಧತ್ತೇ–ನಿವಿದೋ ದ್ವಾದಶ ಭಾಗಾಃ ಪೂರ್ವಮೇವ ತದ್ವ್ಯಾಖ್ಯಾನೇ ವಿವೇಚಿತಾಃ । ಅತೋ ಮಾಸಸಂಖ್ಯಾಸಾಮ್ಯಾನ್ಮಾಸಸಂವತ್ಸರದ್ವಾರಾ ಸರ್ವಸ್ಯ ಜಗತ ಉತ್ಪಾದಕತ್ವೇನ ಪ್ರಸಿದ್ಧಃ ಪ್ರಜಾಪತಿರೇವೇಯಂ ಪುರೋರುಗ್ಭವತಿ । ತಾದೃಶ್ಯಾಃ ಪಾಠೇ ಸತಿ ಪ್ರಸಿದ್ಧಃ ಸರ್ವಸ್ಯೋತ್ಪಾದಕೋ ಯಃ ಪ್ರಜಾಪತಿರಸ್ತಿ ಸ ಏವೈನಂ ಯಜಮಾನಂ ಪ್ರಜಾಪಶುಸಹಿತಂ ಪ್ರಜನಯತಿ ॥ ತಸ್ಮಾದೇತಚ್ಛಂಸನಂ ಪ್ರಜಾತ್ಯೈ ಸಂಪದ್ಯತೇ ॥**

ನಿವಿನ್ಮಂತ್ರಗಳಲ್ಲಿರುವ ಹನ್ನೆರಡು ವಿಭಾಗಗಳನ್ನು ಸಂಶಯಾಸ್ಪದವಿಲ್ಲದಂತೆ ಸೂಚಿಸಿರುವರು. ನಿವಿನ್ಮಂತ್ರಗಳು ಹನ್ನೆರಡು ವಿಭಾಗಗಳುಳ್ಳವು ಎಂದು ಹಿಂದೆಯೇ ಹೇಳಿದೆ. ಏಕೆಂದರೆ ಸಂವತ್ಸರದಲ್ಲಿ ಹನ್ನೆರಡು ಮಾಸಗಳಿರುವವು. ಕಾಲಸ್ವರೂಪವನ್ನು ಸೂಚಿಸುವ ಸಂವತ್ಸರವೇ ಪ್ರಜಾಪ್ರತಿಯು. ಎಂದರೆ ಕಾಲಾತ್ಮಕನಾದ ಪ್ರಜಾಪ್ರತಿಯೇ (ಪರಬ್ರಹ್ಮನೇ) ಕಾಲವನ್ನು ಸೂಚಿಸುವ ಸಂವತ್ಸರಸ್ವರೂಪನು. ಈ ಕಾಲಾತ್ಮಕನಾದ ಪ್ರಜಾಪತಿಯೇ ಸಮಸ್ತ ವಿಶ್ವಕ್ಕೂ (ಪ್ರಪಂಚಗಳಿಗೂ) ಉತ್ಪಾದಕನು. ಸಮಸ್ತ ವಿಶ್ವಕ್ಕೂ ಯಾವ ಪ್ರಜಾಪತಿಯು ಉತ್ಪಾದಕನೋ ಆ ಪ್ರಜಾಪತಿಯೇ ಈ ಯಜಮಾನನಿಗೂ ಉತ್ಪಾದಕನಾಗಿಯೇ ಇರುವನು. ಮತ್ತು ಈ ಯಜ್ಞಮಾಡುವ ಯಜಮಾನನಿಗೆ ಪುತ್ರಾದಿಸಂತಾನಗಳನ್ನೂ ಪಶುಸಂಪತ್ತನ್ನೂ ಅನುಗ್ರಹಿಸಿ ಅವನನ್ನು ಕಾಪಾಡುವನು. ಆದ್ದರಿಂದ ಪ್ರಜಾ ಮತ್ತು ಪಶುಸಂಪತ್ತುಗಳ ಅಭಿವೃದ್ಧಿಗಾಗಿ ಈ ಪುರೋರುಕ್ ಮಂತ್ರವನ್ನು ಅವಶ್ಯಕವಾಗಿ ಪಠಿಸಬೇಕು.

**ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ । ಜಾತವೇದಸ್ಯಾಂ ಪುರೋರುಚಂ ಶಂಸತಿ ಜಾತವೇದೋನ್ಯಂಗಾಂ ।**

**ವೇದನಂ ಪ್ರಶಂಸತಿ—**

**ದೇವತಾದ್ವಾರಾ ಪುರೋರುಚಂ ಪ್ರಶಂಸತಿ — ಜಾತವೇದಾ ದೇವತಾ ಯಸ್ಯಾಃ ಪುರೋರುಚಃ ಸಾ ಜಾತವೇದಸ್ಯಾ ॥ ಜಾತವೇದಃಶಬ್ದರೂಪಂ ನ್ಯಂಗಂ ನಿತರಾಮಂಗಂ ಚಿಹ್ನಂ**

ಯಸ್ಯಾಃ ಪುರೋರುಚಃ ಸಾ ಜಾತವೇದೋನ್ಯಂಗಾ ತಸ್ಯಾಃ ಪುರೋರುಚೋಂತಿಮೇ ಭಾಗೇ ಸೋ ಅಧ್ವರಾ ಕರತಿ ಜಾತವೇದಾ ಇತಿ ಜಾತವೇದಃ ಶಬ್ದಃ ಪಠ್ಯತೇ ॥

ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ಪ್ರಜೆ ಎಂದರೆ ಪುತ್ರಸಂತಾನವನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು. ಈ ಪುರೋರುಕ್ ಎಂಬ ನಿವಿನ್ಮಂತ್ರವು ಜಾತವೇದಸ್ಯಾ ಎಂದರೆ ಜಾತವೇದಾ (ಅಗ್ನಿ) ದೇವತಾಕ ವೆಂದು ಹೇಳಲ್ಪಡುವುದು. ಏಕೆಂದರೆ ಈ ಪುರೋರುಕ್ ಅಥವಾ ನಿವಿನ್ಮಂತ್ರಗಳ ಕೊನೆಯ ಭಾಗದಲ್ಲಿ **ಸೋ ಅಧ್ವರಾ ಚರತಿ ಜಾತಾವೇದಾಃ** ಎಂದು ಹೇಳಲ್ಪಟ್ಟಿರುವುದರಿಂದ ಈ ನಿವಿನ್ಮಂತ್ರವು ಜಾತವೇದಸ್ಯಾ ಎಂದು ನಿಶ್ಚಯವಾಗಿ ಹೇಳಬಹುದಾಗಿದೆ.

ತದಾಹುರ್ಯತ್ತೃತೀಯಸವನಮೇವ ಜಾತವೇದಸ ಆಯತನಮಥ ಕಸ್ಮಾತ್ಪ್ರಾತಃಸವನೇ ಜಾತವೇದಸ್ಯಾಂ ಪುರೋರುಚಂ ಶಂಸತೀತಿ ॥

ಉಕ್ತಮರ್ಥಮಾಕ್ಷಿಪತಿ--ತೃತೀಯಸವನಸ್ಯ ಜಾತವೇದಸಂ ಪ್ರತ್ಯಾಯತನತ್ವಮಾಗ್ನಿಮಾರುತಶಸ್ತ್ರೇ ದೇವತ್ವಾದವಗಂತವ್ಯಂ । ತಥಾ ಚ ಸಂಪ್ರದಾಯವಿದ ಆಹುಃ—" ಜಾತವೇದಾಸ್ತು ದೇವೋಽಯಂ ವರ್ತತೇ ಆಗ್ನಿಮಾರುತೇ " ಇತಿ ॥ ಯಸ್ಮಾದೇವಂ ತಸ್ಮಾತ್ಪ್ರಾತಃ ಸವನೇ ಜಾತವೇದಸ್ಯಾಯಾಃ ಶಂಸನೇ ಕಾರಣಂ ನಾಸ್ತೀತ್ಯಾಕ್ಷೇಪಂ ತದ್ವಾದಿನ ಆಹುಃ ।

ಕೆಲವರು ಹೀಗೆ ಹೇಳುವರು—ತೃತೀಯಸವನಕಾಲದಲ್ಲಿ ಜಾತವೇದಾಃ ಎಂಬ ದೇವತೆಯೇ ಈ ಕರ್ಮಕ್ಕೆ ಮುಖ್ಯ ದೇವತೆಯಾಗಿರುವುದು ಆದ್ದರಿಂದ ತೃತೀಯಸವನದಲ್ಲಿ (ಅಗ್ನಿಮಾರುತಶಸ್ತ್ರದಲ್ಲಿ) ಆ ದೇವತೆಯನ್ನು ಪುರೋರುಕ್ ಮಂತ್ರದಿಂದ ಸ್ತುತಿಸುವುದು ನ್ಯಾಯವಾಗಿದೆ. ಆದರೆ ಪ್ರಾತಃಸವನದಲ್ಲಿ ಜಾತವೇದೋದೇವತೆಗೆ ಸಂಬಂಧಪಟ್ಟ ಪುರೋರುಕ್ ಮಂತ್ರವನ್ನು ಪಠಿಸಲು ಕಾರಣವೇನು ?

ಪ್ರಾಣೋ ವೈ ಜಾತವೇದಾಃ ಸ ಹಿ ಜಾತಾನಾಂ ವೇದ ಯಾವತಾಂ ವೈ ಸ ಜಾತಾನಾಂ ವೇದ ತೇ ಭವಂತಿ ಯೇಷಾಮು ನ ವೇದ ಕಿಮು ತೇ ಸ್ಯುರ್ಯೋ ವಾ ಆಜ್ಯ ಆತ್ಮಸಂಸ್ಕೃತಿಂ ವೇದ ತತ್ಸುವಿದಿತಂ ।

ತಸ್ಯ ಪರಿಹಾರಂ ದರ್ಶಯತಿ—ಅತ್ರ ಜಾತವೇದಃಶಬ್ದೇನ ಪ್ರಾಣ ಏವಾಭಿಧೀಯತೇ ನ ತ್ವಗ್ನಿಃ । ಅತ ಏವಾಂತಿಮಭಾಗವ್ಯಾಖ್ಯಾನೇ ವಾಯುರ್ವೈ ಜಾತವೇದಾ ಇತ್ಯಾಮ್ನಾತಂ । ಯಸ್ಮಾತ್ಸ ಪ್ರಾಣೋ ಜಾತಾನಾಮುತ್ಪನ್ನಾನಾಂ ಶರೀರಾಣಾಂ ಸ್ವರೂಪಂ ವೇದ ಜಾನಾತಿ ಲಭತ ಇತ್ಯರ್ಥಃ । ತಸ್ಮಾತ್ಪ್ರಾಣಸ್ಯ ಜಾತವೇದಾ ಇತಿ ನಾಮಧೇಯಂ । ಏವಂ ಸತಿ ಪ್ರಾಣೋ ಯಾವತಾಮುತ್ಪನ್ನಾನಾಂ ಶರೀರಾಣಾಂ ಸ್ವರೂಪಂ ವೇದ ಲಭತೇ ತೇ ದೇಹಾ ಭವಂತಿ ಸತ್ತಾಂ ಭಜಂತೇ । ಯೇಷಾಂ ತು ದೇಹಾನಾಂ ಸ್ವರೂಪಂ ಪ್ರಾಣೋ ನ ವೇದ ನ ಲಭತೇ ತೇ ದೇಹಾಃ

**ಕಿಮು ಸ್ಯುಃ ಕಿಮು ವಿದ್ಯಮಾನತಾಂ ಭಜೇಯುಃ ನ ಭಜೇಯುರಿತ್ಯರ್ಥಃ । ಏವಂ ಸತಿ ಜಾತವೇದೋನಾಮುಕಸ್ಯ ಪ್ರಾಣಸ್ಯ ಪ್ರತಿಪಾದಿಕಾಯಾಃ ಪುರೋರುಚೋಂತಃಪಾಠೇ ಯಜಮಾನೋ ಲಬ್ಧಪ್ರಾಣಃ ಸನ್ವಿದ್ಯಮಾನೋ ಭವತಿ ॥ ಅನ್ಯಥಾಯಮುಸತ್ಕಲ್ಪಃ ಸ್ಯಾತ್ ॥ ಏವಮುಕ್ತಪ್ರಕಾರೇಣ ಯೋ ಯಜಮಾನ ಆಜ್ಯಶಸ್ತ್ರೇ ಪುನರ್ಜನ್ಮಸ್ವರೂಪಾಂ ಸಂಸ್ಕೃತಿಂ ವೇದ ತತ್ತಸ್ಯ ಯಜಮಾನಸ್ಯ ಸುವಿದಿತಂ ಸಮ್ಯಗ್ಜ್ಞಾನಮುತ್ಪನ್ನಂ॥ ಅನೇನ ಹೋತೃಜಪಮಿತ್ಯಾರಭ್ಯ ಪ್ರೋಕ್ತೇ ಪ್ರಘಟ್ಟಕೇಽವಸ್ಥಿತಸ್ಯಾರ್ಥವಾದಸ್ಯ ಸರ್ವಸ್ಯಾಪ್ಯುಪಸಂಹಾರೋ ಜಾತಃ ॥**

ಅದು ಹೇಗೆಂದರೆ—ಇಲ್ಲಿ ಜಾತವೇದಶ್ಶಬ್ದಕ್ಕೆ ಅರ್ಥವೇನೆಂದರೆ ಶರೀರದಲ್ಲಿರುವ ಪ್ರಾಣವು ತನ್ನ ಶರೀರದ ನಾನಾ ಭಾಗಗಳ ಸ್ವರೂಪವನ್ನು ಚೆನ್ನಾಗಿ ತಿಳಿದಿರುವುದು. ಉತ್ಪನ್ನವಾದ ಶರೀರದಲ್ಲಿರುವ ಇಂದ್ರಿಯಗಳ ಮತ್ತು ಅವಯವಾದಿಗಳ ಸ್ವರೂಪವನ್ನು ಚೆನ್ನಾಗಿ ತಿಳಿದಿರುವುದರಿಂದಲೇ ಈ ಪ್ರಾಣಕ್ಕೆ ಜಾತವೇದಾಃ ಎಂಬ ಹೆಸರು ಬಂದಿದೆ. ಈ ಪ್ರಾಣವು ಉತ್ಪನ್ನವಾದ (ಹುಟ್ಟಿರುವ ಅಥವಾ ಮುಂದೆ ಹುಟ್ಟುವ) ಸಮಸ್ತ ಪ್ರಾಣಿಗಳ ಶರೀರಗಳ ಸ್ವರೂಪವನ್ನು ಚೆನ್ನಾಗಿ ತಿಳಿದಿರುವುದು. ಈ ಪ್ರಾಣವು ತಿಳಿಯದಿರುವ ಪ್ರಾಣಿಗಳಾಗಲಿ ಪ್ರಾಣಿಗಳ ಶರೀರಗಳಾಗಲೀ ಯಾವುದೂ ಇರುವುದಿಲ್ಲ. ಆದ್ದರಿಂದ ಜಾತವೇದಸ್ವರೂಪವಾದ ಅಥವಾ ಜಾತವೇದೋನಾಮುಕವಾದ ಈ ಪುರೋರುಕ್‌ಮಂತ್ರಪಠನದಿಂದ ಯಜ್ಞಮಾಡುವ ಯಜಮಾನನ ಪ್ರಾಣವು ಶಕ್ತಿಸಾಮರ್ಥ್ಯವುಳ್ಳದ್ದಾಗಿರುವುದು. ಇಲ್ಲದಿದ್ದರೆ ಶಕ್ತಿಸಾಮರ್ಥ್ಯಗಳಿರುವುದಿಲ್ಲ. ಈ ಪ್ರಕಾರವಾಗಿ ಆಜ್ಯಶಸ್ತ್ರಮಂತ್ರಗಳಲ್ಲಿ ಹೇಳಲ್ಪಟ್ಟಿರುವ ಪುನರ್ಜನ್ಮಸ್ವರೂಪವನ್ನೂ ಸಂಸ್ಕೃತಿಯನ್ನೂ ಯಾವ ಯಜಮಾನನು ತಿಳಿದುಕೊಂಡು ಅದರಂತೆ ಆಚರಿಸುವನೋ ಆ ಯಜಮಾನನು ಉತ್ತಮವಾದ ಜ್ಞಾನವನ್ನು ಪಡೆಯುವನು. ಈ ಪ್ರಕಾರವಾಗಿ ಹೋತೃಜಪ ಎಂದು ಪ್ರಾರಂಭಿಸಿ ಇದುವರೆಗೂ ಹೇಳಿರುವ ಅನೇಕವಿಷಯಗಳ ಉಪಸಂಹಾರವು ಎಂದರೆ ಸಮಾಪ್ತಿಯು ಹೇಳಲ್ಪಟ್ಟಿರುವುದು.

## *English Translation*

**(On the meaning of the six members of the "silent praise," and the twelve members of the Purouk. Why Jalavedas is mentioned in the Puroruk. The meaning of the Ajya-Sukta.)**

Having called s'omasavom he recites the "silent praise." This transforms the seed (represented by the Japa). First the effusion of the seed takes place; then follows its transformation.

He repeats the "silent praise without proper articulation of the voice" (in order to make its proper words unintelligible even to those who stand nearest). For in the same way the seeds are transformed (going across one another).

He repeats the "silent praise" in six padas (i. e. stopping six times). For man is six-fold, having six limbs. Thus he produces by transformation the soul as six-fold, consisting of six parts.

After having repeated the "silent praise" he repeats the Puroruk (Nivid 2, 34). Thus he brings forth (as a brith) the seed which had been transformed. The transformation (of the seed) occurs first: then follows birth.

He repeats the Puroruk with a loud voice· Thus he brings him (the mystical body of the sacrificer) forth with a loud voice (crying)·

He repeats it in twelve padas. The year has twelve months: Prajapati is the year; he is the producer of the whole universe· He who is the producer of the whole universe produces also him (the sacrificer) and (provides him) with offspring and cattle for propagation. He who has such a knowledge prospers in offspring and cattle.

He repeats a Puoruk addressed to Jatavedas (Agni) the word Jatavedas occurring in the last (twelfth) part of it.

They ask, Why do they repeat at the morning libation a Puroruk addressed to Jatavedas, whereas this deity has its proper place at the evening libation? (The answer is) Jatavedas is life. For he knows (veda) all that are bron. As many as he knows of are born, (jatanam) so many (only) exist. How could those exist of whom he does not know (that they are born?) Whosover (what sacrificer) knows that he himself is made a new man (by means of the Ajya Shastra, he has a good knowledge.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹತ್ತನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.



# ಅಥ ದಶಮಾಧ್ಯಾಯೇ ಅಷ್ಟಮಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು

[ ಆಜ್ಯಸೂಕ್ತದ ಅರ್ಥವಿವರಣೆ ಇತ್ಯಾದಿ ]

**ಪ್ರ ವೋ ದೇವಾಯಾಗ್ನಯ ಇತಿ ಶಂಸತಿ ಪ್ರಾಣೋ ವೈ ಪ್ರ ಪ್ರಾಣಂ ಹೀಮಾನಿ ಸರ್ವಾಣಿ ಭೂತಾನ್ಯನು ಪ್ರಯಂತಿ ಪ್ರಾಣಮೇವ ತತ್ಸಂಭಾವಯತಿ ಪ್ರಾಣಂ ಸಂಸ್ಕರುತೇ ।**

ಅಥ ಸೂಕ್ತಗತಾಂ ಪ್ರಥಮಾಮೃಚಂ ವಿಧತ್ತೇ—ಅಸ್ಯಾಃ ಪ್ರಥಮಾಯಾ ಋಚ ಆದೌ ಪ್ರೇತಿಶಬ್ದಃ ಶ್ರೂಯತೇ ಸ ಪ್ರಾಣಸ್ವರೂಪಃ । ನಾಮ್ನ ಆದ್ಯಕ್ಷರಸಾಮ್ಯಾತ್ ॥ ಹಿ ಯಸ್ಮಾತ್ಕಾರಣಾತ್ಸರ್ವಾಣೀಮಾನಿ ಭೂತಾನಿ ಜೀವಜಾತಾನಿ ಪ್ರಾಣಮನು ಪ್ರಯಂತಿ । ಪ್ರಾಣಃ ಪ್ರಥಮತೋ ಗಚ್ಛತಿ ತಮನು ಪಶ್ಚಾದ್ದೇಹಾಃ ಪ್ರಯಂತಿ ಪ್ರಾಣಪ್ರೇರಣಾದೂರ್ಧ್ವಂ ದೇಹಾನಾಂ ಚಲನಾತ್ ॥ ತತ್ತಥಾಸತಿ ಪ್ರಶಬ್ದಪ್ರಯುಕ್ತಾಯಾ ಋಚಃ ಶಂಸನೇನ ಪ್ರಾಣಂ ಸಂಭಾವಯತಿ ಸಂಭಾವಿತಂ ಪೂಜಿತಂ ಕರೋತಿ । ಅನಯಾ ಪೂಜಯಾ ಪ್ರಾಣಃ ಸಂಸ್ಕೃತಃ ಸನ್ಸ್ವವ್ಯಾಪಾರಸಮರ್ಥೋ ಭವತಿ । ತಸ್ಮಾತ್ಪ್ರ ವೋ ದೇವಾಯೇತ್ಯೇಷಾ ಶಂಸನೀಯಾ ॥

ಈ ಆಜ್ಯಸೂಕ್ತವಾದ **ಪ್ರ ವೋ ದೇವಾಯಾಗ್ನಯೇ** (ಋ. ಸಂ. ೩-೧೩)ಎಂಬ ಸೂಕ್ತದ ಮೊದಲನೆಯ ಋಕ್ಕಿನ ಅರ್ಥವಿವರಣೆಯನ್ನು ಪ್ರಾರಂಭಿಸುವರು. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ ಪ್ರ ಎಂಬ ಶಬ್ದವಿರುವುದು. ಈ ಪ್ರ ಎಂಬ ಶಬ್ದವು ಪ್ರಾಣಸ್ವರೂಪವು. ಏಕೆಂದರೆ ಪ್ರ ಮತ್ತು ಪ್ರಾಣ ಎಂಬ ಎರಡುಶಬ್ದಗಳಲ್ಲಿಯೂ ಮೊದಲನೆಯ ಅಕ್ಷರವು ಪ್ರ ಎಂದಿರುವುದು. ಸಮಸ್ತ ಭೂತಗಳೂ ಎಂದರೆ ಜೀವಜಂತುಗಳೂ ಪ್ರಾಣವನ್ನೇ ಆಶ್ರಯಿಸಿ ವ್ಯವಹರಿಸುವವು. ಎಂದರೆ ಸಮಸ್ತಪ್ರಾಣಿಗಳಿಗೂ ಪ್ರಾಣವೇ ಆಧಾರಭೂತವಾಗಿರುವುದು. ಪ್ರಾಣವಿಲ್ಲದಿದ್ದರೆ ಯಾವ ಜೀವಜಂತುವೂ ಚಲಿಸುವುದಿಲ್ಲ. ಪ್ರಾಣದ ಪ್ರೇರಣೆಯಿಂದಲೇ ಶರೀರದ ಚಲನಾದಿಕಾರ್ಯಗಳು ನಡೆಯುವವು. ಹೀಗಿರುವುದರಿಂದ ಪ್ರಾಣಸ್ವರೂಪವಾದ ಪ್ರ ಎಂಬ ಶಬ್ದದಿಂದ ಕೂಡಿದ ಋಕ್ಕನ್ನು ಪಠಿಸುವುದರಿಂದ ಪ್ರಾಣಕ್ಕೆ ಪೂಜ್ಯತೆಯನ್ನು ಕೊಟ್ಟಂತಾಗುವುದು. ಈ ವಿಧವಾದ ಪೂಜ್ಯತೆ ಅಥವಾ ಗೌರವವನ್ನು ಕೊಡುವುದರಿಂದ ಪ್ರಾಣವು ಗೌರವಿಸಲ್ಪಟ್ಟು ಸ್ವವ್ಯಾಪಾರಗಳಲ್ಲಿ ಶಕ್ತಿಸಾಮರ್ಥ್ಯಗಳನ್ನು ಪಡೆಯುವುದು. ಆದ್ದರಿಂದಲೇ **ಪ್ರ ವೋ ದೇವಾಯ** ಎಂಬ ಮೊದಲನೆಯ ಋಕ್ಕನ್ನು ಪಠಿಸಬೇಕು.

**ದೀದಿವಾಂಸಮಪೂರ್ವ್ಯಮಿತಿ ಶಂಸತಿ ಮನೋ ವೈ ದೀದಾಯ ಮನಸೋ ಹಿ ನ ಕಿಂಚನ ಪೂರ್ವಮಸ್ತಿ ಮನ ಏವ ತತ್ಸಂಭಾವಯತಿ ಮನಃ ಸಂಸ್ಕುರುತೇ ।**

ದ್ವಿತೀಯಾಮೃಚಂ ವಿಧತ್ತೇ — ಯದ್ಯಪ್ಯಧ್ಯಯನ ಕ್ರಮೇಣೇಯಮೃಕ್ಪಂಚಮೀ ತಥಾಪಿ ದ್ವಿತೀಯಾತ್ವೇನ ಪ್ರಯೋಕ್ತವ್ಯಾ । ಬ್ರಾಹ್ಮಣಕ್ರಮಸ್ಯಾನುಷ್ಠಾನಾರ್ಥತ್ವಾತ್ ॥ ದೀದಿವಾಸಂ ದೀಪ್ತಿಮಂತಮಪೂರ್ವಮಸ್ಮಾದನ್ಯೇನ ಪೂರ್ವೇಣ ರಹಿತಮಿತ್ಯೇತಾಭ್ಯಾಂ ಮಂತ್ರಪದಾಭ್ಯಾಂ ಮನೋಽಭಿಧೀಯತೇ ॥ ತಚ್ಚ ಮನಃ ಸರ್ವಾರ್ಥಪ್ರಕಾಶಕತ್ವಾದ್ದೀದಾಯ ದೀಪ್ತಿಯುಕ್ತಂ ಭವತಿ ॥ ತಥಾ ಮನಸೋಽಪಿ ನ ಕಿಂಚಿದಪೀಂದ್ರಿಯಂ ವ್ಯಾಪಾರವನ್ನಾಸ್ತಿ ಮನಸಾ ಸಂಕಲ್ಪಿತೇಷ್ವರ್ಥೇಷು ಪಶ್ಚಾದ್ವಾಗಾದೀಂದ್ರಿಯಾಣಾಂ ವ್ಯಾಪ್ರಿಯಮಾಣತ್ವಾತ್ ॥ ಅತ ಏವಾರಣ್ಯಕಾಂಡೇ ವಕ್ಷ್ಯತಿ—'ಮನಸಾ ವಾಽಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ" ಇತಿ ॥ ಅತೋ ದೀದಿವಾಂಸಮಪೂರ್ವಮಿತಿ ಪದದ್ವಯಾರ್ಥಸ್ಯ ಮನಸಿ ವಿದ್ಯಮಾನತ್ವಾತ್ತಚ್ಛಂಸನೇನ ಮನಸಃ ಸಂಭಾವನಾಸಂಸ್ಕಾರೌ ಸಂಪದ್ಯೇತೇ ॥ ಅತ್ರಾಧ್ಯಯನಕ್ರಮಾದನ್ಯಮನುಷ್ಠಾನಕ್ರಮಮಭಿಪ್ರೇತ್ಯ ಆಶ್ವಲಾಯನ ಆಹ—"ಅನುಬ್ರಾಹ್ಮಣಂ ವಾಽಽನುಪೂರ್ವ್ಯಂ" ಇತಿ ॥

ಈಗ ಎರಡನೆಯ ಋಕ್ಕಿನ ಅರ್ಥವಿವರಣೆ ಮಾಡುವರು— ಈ ಋಕ್ಕಿನಲ್ಲಿ ದೀದಿವಾಂಸಮಪೂರ್ವ್ಯಂ ಎಂದು ಪಠಿಸಲಾಗಿದೆ. ಸೂಕ್ತದಲ್ಲಿ ಈ ಋಕ್ಕನ್ನು ಅಧ್ಯಯನಕ್ರಮದಲ್ಲಿ ಐದನೆಯ ಋಕ್ಕನ್ನಾಗಿ ಭಾವಿಸಲಾಗಿದ್ದರೂ ಇಲ್ಲಿ ಎರಡನೆಯ ಋಕ್ಕೆಂದು ಪರಿಗಣಿಸಲಾಗಿದೆ. ಈ ಋಕ್ಕಿನಲ್ಲಿರುವ **ದೀದಿವಾಂಸಂ**—ದೀಪ್ತಿ ಅಥವಾ ಪ್ರಕಾಶವುಳ್ಳ **ಅಪೂರ್ವ್ಯಂ**—ಅದ್ವಿತೀಯವಾದ ಎಂದರೆ ಅಸದೃಶವಾದ **ಮನಃ**— ಮನಸ್ಸನ್ನು **ಶಂಸತಿ**—ಪ್ರಶಂಸೆಮಾಡಲಾಗುತ್ತದೆ. **ಮನಸೋ ಹಿ ನ ಕಿಂಚನ ಪೂರ್ವಮಸ್ತಿ**—ಮನುಷ್ಯನಲ್ಲಿ ಇರುವ ಅಂಗ ಅಥವಾ ಅವಯವಗಳಲ್ಲೆಲ್ಲಾ ಮನಸ್ಸೇ ಶ್ರೇಷ್ಠವಾದದ್ದು. ಯಾವ ಕೆಲಸ ಮಾಡಬೇಕಾದರೂ ಮೊದಲು ಮನಸ್ಸಿನ ಸಹಾಯ ಬೇಕೇಬೇಕು. ಏಕೆಂದರೆ ಮೊದಲು ಇಂತಹ ಕೆಲಸವನ್ನು ಮಾಡುತ್ತೇನೆಂದು ಮನಸ್ಸಿನಲ್ಲಿ ಭಾವನೆಯನ್ನು ಮಾಡಿಕೊಳ್ಳುತ್ತಾನೆ. ಅನಂತರ ಅದನ್ನು ಕಾರ್ಯರೂಪಕ್ಕೆ ತರುವಾಗ ಇತರ ಅಂಗಗಳ ಸಹಾಯವನ್ನು ಪಡೆದು ನೆರವೇರಿಸುತ್ತಾನೆ. ಆದ್ದರಿಂದ ಎಲ್ಲಕ್ಕಿಂತಲೂ ಮೊದಲು ಮನಸ್ಸಿನ ಸಹಾಯವು ಅತ್ಯವಶ್ಯಕವಾಗಿ ಬೇಕು. ಮನಸ್ಸಿನಲ್ಲಿ ಒಂದು ಕಾರ್ಯವು ಸ್ಫುರಿಸುವುದಕ್ಕೆ ದೀಪ್ತಿ (ದೀದಿವಾಂಸ) ಎಂದು ಹೇಳುವುದುಂಟು. ಅನಂತರ ಅದನ್ನು ಕಾರ್ಯರೂಪಕ್ಕೆ ತರುವಾಗ ಮನಸ್ಸಿನ ಸಂಸ್ಕಾರವು ಬೇಕಾಗುವುದು. ತೈತ್ತಿರೀಯಸಂಹಿತೆಯಲ್ಲಿ ಈ ವಿಷಯವು ಸ್ಪಷ್ಟವಾಗಿ ಹೇಳಿದೆ— **ಯದ್ಧಿ ಹೃದಯೇನಾಭಿಗಚ್ಛತಿ । ತದ್ವಾಚಾವದತಿ । ತತ್ಕರ್ಮಣಾ ಕರೋತಿ ।** ಮೊದಲು ಹೃದಯದಲ್ಲಿ ಎಂದರೆ ಮನಸ್ಸಿನಲ್ಲಿ ಒಂದು ವಿಷಯವು ಸ್ಫೂರ್ತಿಗೊಳ್ಳುವುದು. ಅನಂತರ ಅದನ್ನ ಮಾತಿನರೂಪದಲ್ಲಿಡುವನು. ಅನಂತರ ಅದನ್ನು ಕಾರ್ಯರೂಪಕ್ಕೆ ತರುವನು ಎಂದು. ಎಂದರೆ ಯಾವ ಕಾರ್ಯ ಮಾಡಬೇಕಾದರೂ ಮೊದಲು ಮನಸ್ಸಿನ ಸಹಾಯವು ಬೇಕೇಬೇಕು. ಆದ್ದರಿಂದ ಮನಸ್ಸು ದೀಪ್ತಿಯುತವಾದದ್ದೆಂದು ಹೇಳಲ್ಪಡುವುದು. ಐತರೇಯಾರಣ್ಯಕದಲ್ಲಿ ಈರೀತಿ ಹೇಳಲಾಗಿರುವುದು—**ಮನಸಾ ವಾಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ** ಮೊದಲು ಮನಸ್ಸಿನಲ್ಲಿ ಒಂದು ಕಾರ್ಯವನ್ನು ಮಾಡಬೇಕೆಂಬ ಬುದ್ಧಿಯು (ಸಂಕಲ್ಪವು) ಹುಟ್ಟುವುದು. ಅನಂತರ ಆ ವಿಷಯವನ್ನೇ ವಾಕ್ಯರೂಪದಲ್ಲಿ ಇತರರಿಗೆ ತಿಳಿಯುವಂತೆ ವ್ಯವಹರಿಸಲಾಗುವುದು ಎಂದು. ಅಧ್ಯಯನಕ್ರಮಪ್ರಕಾರ ಒಂದಾಗುತ್ತಲೊಂದು ಋಕ್ಕನ್ನು ಕ್ರಮವಾಗಿ ಪಠಿಸದೇ ಇದ್ದರೂ ಇಲ್ಲಿ ಅರ್ಥವಿವರಣೆಯು ಹೊಂದಿಕೊಳ್ಳುವುದಕ್ಕಾಗಿ ಕ್ರಮವನ್ನು ಬಿಟ್ಟು ಸಂದರ್ಭಾನುಸಾರವಾಗಿ ವಿವರಿಸಲಾಗುವುದು. ಈ ವಿಷಯದಲ್ಲಿ ಆಶ್ವಲಾಯನರು— **ಅನುಬ್ರಾಹ್ಮಣಂ ವಾನುಪೂರ್ವ್ಯಂ** ಎಂದು ಹೇಳಿರುವರು. ಆಜ್ಯಶಸ್ತ್ರದಲ್ಲಿ ಈ ಋಕ್ಕಿನ ಪಠನದಿಂದ ಯಜ್ಞಮಾಡುವ ಯಜಮಾನನಲ್ಲಿ ಮನಸ್ಸು ಎಂದರೆ ಮನೋನಿಷ್ಠೆಯು ಸ್ಥಾಪಿಸಲ್ಪಟ್ಟು ಎಂದರೆ ದೃಢವಾಗಿ ನೆಲೆಗೊಂಡು ಅದರಿಂದ ಇತರ ಕಾರ್ಯನಿರ್ವಹಣೆಮಾಡಲು ಸಹಾಯವಾಗುವುದು.

**ಸ ನಃ ಶರ್ಮಾಣಿ ವೀತಯ ಇತಿ ಶಂಸತಿ ವಾಗ್ವೈ ಶರ್ಮ ತಸ್ಮಾದ್ವಾ-ಚಾನುವದಂತಮಾಹ ಶರ್ಮವದಾಸ್ಮಾ ಆಯಾಂಸೀತಿ ವಾಚ-ಮೇವ ತತ್ಸಂಭಾವಯತಿ ವಾಚಂ ಸಂಸ್ಕುರುತೇ ॥**

ಅಧ್ಯಯನಕ್ರಮೇಣ ಚತುರ್ಥೀಮನುಷ್ಟ್ಮಾನಾಯ ತೃತೀಯಾತ್ವೇನ ವಿಧತ್ತೇ— ಸೋಽಗ್ನಿರ್ನೋಽಸ್ಮಾಕಂ ವೀತಯೇ ಕಾಮಾಯ ಶರ್ಮಾಣಿ ಸುಖಾನಿ ಯಚ್ಛತ್ವಿತಿ ಮಂತ್ರ ಪಾದಸ್ಯಾರ್ಥಃ । ಅತ್ರ ಶರ್ಮಶಬ್ದೇನ ವಾಗೇವ ವಿವಕ್ಷಿತಾ ॥ ಯಸ್ಮಾದೇವಂ ತಸ್ಮಾಲ್ಲೋಕೇ ಸ್ವಗುರೂಕ್ತಮರ್ಥಂ ಸ್ವವಾಚಾ ಸಮ್ಯಗನುವದಂತಂ ಪುರುಷಮಿತರಃ ಪ್ರಾಮಾಣಿಕ ಏವಮಾಹ॥ ಅಸ್ಮೈ ಗುರೂಕ್ತಾರ್ಥಸ್ಯ ಸಮ್ಯಗನುವಾದಿನೇ ಶಿಷ್ಯಾಯ ಶರ್ಮವತ್ಸುಖಯುಕ್ತಂ ಜೀವನಂ ಸಂಪನ್ನಂ ಯಸ್ಮಾತ್ತಸ್ಮಾದ್ಧೇ ಶಿಷ್ಯಾಽಽಯಾಂಸಿ ಸಮಂತತೋ ನಿಯತೋಽಸ್ಮಿ ॥ ಆಙ್ಪೂರ್ವಸ್ಯ 'ಯಮ ಉಪರಮೇ' ಇತ್ಯಸ್ಯ ಧಾತೋಶ್ಛಾಂದಸಂ ರೂಪಂ ॥ ಆಸ್ಮಾ ಇತ್ಯಾಕಾರಶ್ಚ ಛಾಂದಸಃ । ಇತ್ಯೇವಂ ವಾಙ್ನಿಯಮಿತಸ್ಯ ಸುಖಸ್ಯ ಲೌಕಿಕೇನೋಚ್ಯಮಾನತ್ವಾನ್ಮಂತ್ರೋಕ್ತಶರ್ಮಶಬ್ದೇನ ವಾಗ್ವಿವಕ್ಷೋಪಪನ್ನಾ ॥ ತನ್ಮಂತ್ರಪಾಠೇನ ವಾಚಃ ಸಂಭಾವನಾಸಂಸ್ಕಾರೌ ಭವತಃ ।

ಈಗ ಈ ಶಸ್ತ್ರಮಂತ್ರದಲ್ಲಿ ಮೂರನೆಯ ಋಕ್ಕಾದ **ಸ ನಃ ಶರ್ಮಾಣಿ ವೀತಯೇ** ಎಂಬ ಋಕ್ಕನ್ನು ಹೋತೃವು ಪಠಿಸುವನು. ಅಧ್ಯಯನಕ್ರಮದಲ್ಲಿ ಈ ಋಕ್ಕು ಸೂಕ್ತದ ನಾಲ್ಕನೆಯ ಋಕ್ಕಾಗಿರುವುದು. ಶರ್ಮ ಎಂದರೆ ಸುಖವು. ಇಲ್ಲಿ ವಾಗ್ವೈ ಶರ್ಮ ಎಂದು ಹೇಳಲಾಗಿದೆ. ಸುಖವು ವಾಕ್ಯರೂಪಾಗಿರುವುದು. ಈ ಋಕ್ಕಿನ ಪಠನದಿಂದ ಹೋತೃವು ಯಜಮಾನನಲ್ಲಿ ವಾಕ್ಕನ್ನು (ಸುಖವನ್ನು) ಸ್ಥಾಪಿಸುವನು. ಆ ವಾಕ್ಯವು ಯಜಮಾನನಲ್ಲಿ ನೆಲೆಗೊಂಡು ಅವನು ಮಾಡುವ ಕಾರ್ಯನಿರ್ವಹಣೆಗೆ ಸಹಾಯಭೂತವಾಗಿರುವುದು. ಮಂತ್ರಾರ್ಥವು ಈರೀತಿ ಇರುವುದು. **ಸಃ**–ಅಗ್ನಿಯು **ನಃ**-ನಮ್ಮ **ವೀತಯೇ**–ಇಷ್ಟಾರ್ಥಗಳ ಪ್ರಾಪ್ತಿಗಾಗಿ **ಶರ್ಮಾಣಿ**–ಸುಖ(ವಾದ ಮಾರ್ಗ)ಗಳನ್ನು **ಯಚ್ಛತು**–ಕೊಡಲಿ ಎಂದು ಮಂತ್ರದ ಮೊದಲನೆಯಪಾದದ ಅರ್ಥವು. ಇಲ್ಲಿ **ಶರ್ಮಾಣಿ** ಎಂಬ ಪದವು ವಾಕ್ಕು ಎಂಬ ಅರ್ಥವನ್ನೇ ಸೂಚಿಸುವುದು. ಹೇಗೆಂದರೆ, ಲೋಕವ್ಯವಹಾರದಲ್ಲಿ ಗುರುವು ಶಿಷ್ಯನಿಗೆ ಹಿತವನ್ನು ಉಂಟುಮಾಡುವುದಕ್ಕಾಗಿ ವಾಕ್ಯದಿಂದಲೇ ಉಪದೇಶಮಾಡುವನು. ಉಪದೇಶರೂಪವಾದ ವಾಕ್ಯವೇ ಶಿಷ್ಯನಿಗೆ ಹಿತವನ್ನು (ಸುಖವನ್ನು) ಉಂಟುಮಾಡುವುದು. ಇದು ಪ್ರಸಿದ್ಧವು. ಆದ್ದರಿಂದ ಈ ಋಕ್ಕನ್ನು ಹೋತೃವು ಪಠಿಸುವುದರಿಂದ ಯಜಮಾನನಲ್ಲಿ ವಾಗ್ರೂಪವಾದ ನಿಯಮನವು ಸ್ಥಾಪಿತವಾದಂತಾಗಿ ಕಾರ್ಯನಿರ್ವಹಣೆಗೆ ಸಹಾಯಕ ವಾಗುವುದು.

**ಉತ ನೋ ಬ್ರಹ್ಮನ್ನವಿಷ ಇತಿ ಶಂಸತಿ ಶ್ರೋತ್ರಂ ವೈ ಬ್ರಹ್ಮ ಶ್ರೋತ್ರೇಣ ಹಿ ಬ್ರಹ್ಮ ಶೃಣೋತಿ ಶ್ರೋತ್ರೇ ಬ್ರಹ್ಮ ಪ್ರತಿಷ್ಠಿತಂ ಶ್ರೋತ್ರಮೇವ ತತ್ಸಂಭಾವಯತಿ ಶ್ರೋತ್ರಂ ಸಂಸ್ಕರುತೇ ॥**

ಅಧ್ಯಯನಕ್ರಮೇಣ ಷಷ್ಠೀಮೃಚಮನುಷ್ಟ್ಮಾನಾಯ ಚತುರ್ಥೀತ್ವೇನ ವಿಧತ್ತೇ— ಉತಾಪಿ ಚ ಹೇ ಬ್ರಹ್ಮನ್ದೇವೇಷು ಬ್ರಾಹ್ಮಣರೂಪಾಗ್ನೇ ನೋಽಸ್ಮಾನವಿಷೋ ರಕ್ಷಸಿ ॥ ಅಸ್ಮಿನ್ಮಂತ್ರೇ ಬ್ರಹ್ಮಶಬ್ದೇನ ಶ್ರೋತ್ರಮುಪಲಕ್ಷ್ಯ ಶ್ರೋತ್ರೇಣ ಹಿ ಬ್ರಹ್ಮ ವೇದಂ ಪುರುಷಃ ಶೃಣೋತಿ ।

**ಶ್ರೋತ್ರೇಽವಗತಂ ಬ್ರಹ್ಮ ವೇದವಾಕ್ಯಂ ಪ್ರತಿಷ್ಠಿತಂ ಕದಾಚಿದಪ್ಯವಿಸ್ಮೃತಂ ಭವತಿ ॥ ತಸ್ಮಾತ್ತನ್ಮಂತ್ರಪಾಠೇನ ಶ್ರೋತ್ರಸ್ಯ ಸಂಭಾವನಾಸಂಸ್ಕಾರೌ ಭವತಃ ।**

ಅಧ್ಯಯನಕ್ರಮದಿಂದ ಆರನೆಯ ಋಕ್ಕಿನ **ಉತ ನೋ** ಎಂಬ ಋಕ್ಕನ್ನು ಶಸ್ತ್ರಮಂತ್ರದ ನಾಲ್ಕನೆಯ ಋಕ್ಕನ್ನಾಗಿ ಪಠಿಸುವನು. ಇಲ್ಲಿ ಬ್ರಹ್ಮಶಬ್ದವು ಶ್ರೋತ್ರ (ಕಿವಿ) ಎಂಬ ಅರ್ಥವನ್ನು ಸೂಚಿಸುವುದು. ಶ್ರೋತ್ರದಿಂದಲೆ (ಕಿವಿ) ಬ್ರಹ್ಮ ಎಂದರೆ ವೇದವಾಕ್ಯವನ್ನು ಪುರುಷನು ಕೇಳಲು ಸಮರ್ಥನಾಗುವನು. ಆದ್ದರಿಂದ ಶ್ರೋತ್ರೇಂದ್ರಿಯದಲ್ಲಿಯೇ ವೇದಮಂತ್ರವು ಸ್ಥಾಪಿತವಾಗಿ ನೆಲೆಸಿರುವುದು. ಈ ಋಕ್ಕನ್ನು ಹೋತೃವು ಶಸ್ತ್ರಮಂತ್ರದಲ್ಲಿ ಪಠಿಸುವುದರಿಂದ ವೇದಮಂತ್ರವು ಎಂದರೆ ಅದನ್ನು ಕೇಳುವುದಕ್ಕೆ ಸಾಧನವಾದ ಶ್ರೋತ್ರೇಂದ್ರಿಯವು ಯಜಮಾನನಲ್ಲಿ ನೆಲೆಗೊಂಡು ಅವನು ನೆರವೇರಿಸುವ ಕಾರ್ಯನಿರ್ವಹಣೆಗೆ ಸಹಾಯಕವಾಗುವುದು. ಮಂತ್ರದ ಅರ್ಥವು-**ಉತ** ಮತ್ತು **ಹೇ ಬ್ರಹ್ಮನ್**-ದೇವತೆಗಳಲ್ಲಿ ಬ್ರಾಹ್ಮಣಸ್ವರೂಪನಾದ ಎಲೈ ಅಗ್ನಿಯೇ **ನಃ**-ನಮ್ಮನ್ನು ಎಂದರೆ ಯಜಮಾನ ಮತ್ತು ಋತ್ವಿಜರನ್ನು **ಅವಿಷಃ**-ಕಾಪಾಡುವವನಾಗು ಎಂದು ಪೂರ್ವಪಾದದ ಅರ್ಥವು. ಈ ಮಂತ್ರದಲ್ಲಿ ಬ್ರಹ್ಮ ಎಂಬ ಶಬ್ದವು ಶ್ರೋತ್ರೇಂದ್ರಿಯವೆಂಬ ಅರ್ಥವನ್ನು ಸ್ಪಷ್ಟಪಡಿಸುವುದು. ಏಕೆಂದರೆ ಶ್ರೋತ್ರೇಂದ್ರಿಯದ ಮೂಲಕವಾಗಿಯೇ ಪುರುಷನು ವೇದಮಂತ್ರಗಳನ್ನು ಅಥವಾ ವೇದಪುರುಷನನ್ನು ತಿಳಿದುಕೊಳ್ಳಲು ಸಮರ್ಥನಾಗುವನು. ಎಂದರೆ ಶ್ರೋತ್ರೇಂದ್ರಿಯದಲ್ಲಿಯೇ ಬ್ರಹ್ಮ ಅಥವಾ ವೇದವಾಕ್ಯವು ದೃಢವಾಗಿ ಸ್ಥಾಪಿತವಾಗಿ ನೆಲೆಸಿರುವುದು. ಶ್ರೋತ್ರೇಂದ್ರಿಯದ ಮೂಲಕ ಕೇಳಿ ತಿಳಿದವಿಷಯವು ಯಾವಾಗಲೂ ಮರೆಯಲ್ಪಡುವುದಿಲ್ಲ. ಆದ್ದರಿಂದ ಈ ಋಕ್ಕಿನ ಪಠನದಿಂದ ಶ್ರೋತ್ರೇಂದ್ರಿಯವು ಯಜಮಾನನಲ್ಲಿ ದೃಢವಾಗಿ ನೆಲೆಸಿ ಅವನು ಮಾಡುವ ಯಜ್ಞಾದಿ ಕಾರ್ಯನಿರ್ವಹಣೆಯಲ್ಲಿ ಸಹಾಯಕವಾಗುವುದು.

**ಸ ಯಂತಾ ವಿಪ್ರ ಏಷಾಮಿತಿ ಶಂಸತ್ಯಪಾನೋ ವೈ ಯಂತಾಪಾನೇನ ಹ್ಯಯಂ ಯತಃ ಪ್ರಾಣೋ ನ ಪರಾಙ್ ಭವತ್ಯಪಾನಮೇವ ತತ್ಸಂಭಾವಯತ್ಯಪಾನಂ ಸಂಸ್ಕುರುತೇ ॥**

**ಅಧ್ಯಯನಕ್ರಮೇಣ ತೃತೀಯಾಮೃಚಮನುಷ್ಠಾನಾಯ ಪಂಚಮೀತ್ವೇನ ವಿಧತ್ತೇ— ಸೋಗ್ನಿರ್ವಿಪ್ರೋ ದೇವೇಷು ಬ್ರಾಹ್ಮಣಃ ಸ ಏಷಾಂ ಮನುಷ್ಯವಿಪ್ರಾಣಾಂ ಯಂತಾ ನಿಯಮನಕರ್ತಾ ॥ ಅಸ್ಮಿನ್ಮಂತ್ರೇ ಯಂತೃಶಬ್ದೇನಾಪಾನವಾಯುರುಪಲಕ್ಷ್ಯತೇ ॥ ನಿಃಶ್ವಾಸರೂಪೇಣಾಪಾನೇನ ಯತೋ ನಿಯಮಿತಃ ಪ್ರಾಣವಾಯುಃ ಪರಾಙ್ಭವತಿ ಪರಂ ಬಾಹ್ಯಂ ದೂರದೇಶಮಂಚತಿ ಗಚ್ಛತೀತಿ ಪರಾಙ್ । ಯದ್ಯಯಂ ಬಹಿರ್ಮುಖ ಉಚ್ಛ್ವಾಸರೂಪಃ ಪ್ರಾಣವಾಯುರಪಾನವಾಯುನಾ ನ ನಿಯಮ್ಯೇತ ತದಾ ಬಹಿರೇವ ಗಚ್ಛೇನ್ನಪುನರ್ನಿವರ್ತೇತ ॥ ತತಃ ಪುರುಷೋ ಮ್ರಿಯೇತಾತೋಽಪಾನಸ್ಯ ನಿಯಂತೃತ್ವಂ ಯುಕ್ತಂ ॥ ಏತನ್ಮಂತ್ರಪಾಠೇನಾಪಾನವಾಯೋಃ ಸಂಭಾವನಾಸಂಸ್ಕಾರೌ ಭವತಃ ॥**

ಈಗ ಸ ಯಂತಾ ವಿಪ್ರ ಏಷಾಂ ಎಂಬ ಮುಂದಿನ ಋಕ್ಕನ್ನು ಪಠಿಸುವನು. ಈ ಋಕ್ಕು ಅಧ್ಯಯನಕ್ರಮದಿಂದ ಸೂಕ್ತದಲ್ಲಿ ಮೂರನೆಯ ಋಕ್ಕಾದರೂ (ಋ. ಸಂ. ೩-೧೩-೩) ಶಸ್ತ್ರಮಂತ್ರದಲ್ಲಿ ಐದನೆಯ ಋಕ್ಕೆಂದು ಭಾವಿಸಲ್ಪಡುವುದು. **ಸ ಯಂತಾ ವಿಪ್ರ ಏಷಾಮಿತಿ ಶಂಸತಿ** ಎಂದು ಋಕ್ಕಿನ ಮೊದಲನೆಯ ಪಾದವನ್ನು ಹೋತೃವು ಪಠಿಸುವನು. ಇಲ್ಲಿ ಯಂತಾ

ಎಂದರೆ ನಿಯಮನಶಕ್ತಿಯು ಅರ್ಥಾತ್ ಅಪಾನವಾಯುವು. **ವಿಪ್ರಃ**-ದೇವತೆಗಳಲ್ಲಿ ಬ್ರಾಹ್ಮಣಸ್ವರೂಪನಾದ **ಸಃ**-ಅಗ್ನಿಯು **ವಿಶಾಂ**-ಮನುಷ್ಯರಾದ ಬ್ರಾಹ್ಮಣರುಗಳಿಗೆ **ಯಂತಾ**-ನಿಯಮನಕರ್ತೃವು ಎಂದರೆ ಹೀಗೆಯೇ ಮಾಡಬೇಕೆಂಬ ಆಜ್ಞೆಯಿಂದ ತನ್ನ ವಶದಲ್ಲಿಟ್ಟುಕೊಳ್ಳುವವನು. ಈ ಋಕ್ಕಿನಲ್ಲಿ **ಯಂತಾ** ಎಂಬ ಶಬ್ದವು ಅಪಾನವಾಯು ಎಂಬರ್ಥವನ್ನು ಸೂಚಿಸುತ್ತದೆ. ಈ ಅಪಾನವಾಯುವು ಹೇಗೆ ನಿಯಂತೃವೆಂಬುದನ್ನು ಹೇಳಲಾಗುವುದು. ಶರೀರದೊಳಕ್ಕೆ ಪ್ರಾಣವಾಯುವು ಉಚ್ಛ್ವಾಸರೂಪದಿಂದ ಪ್ರವೇಶಿಸುವುದು. ಅದು ತನ್ನ ಕಾರ್ಯವನ್ನು (ರಕ್ತಶುದ್ಧಿ) ಮಾಡಿದನಂತರ ಅದು ಅಶುದ್ಧವಾಗಿ ಶರೀರದಲ್ಲಿ ಇರಲು ಅಯೋಗ್ಯವಾಗುವುದು. ಆದ್ದರಿಂದ ಅದು ಹೊರಕ್ಕೆ ಹೋಗಲೇಬೇಕು. ಹೀಗೆ ಹೊರಗೆ ಹೋಗುವಾಗ ಆ ವಾಯುವಿಗೆ ಅಪಾನವಾಯುವೆಂದು ಹೆಸರು. ಅದು ಶರೀರದಿಂದ ನಿಃಶ್ವಾಸರೂಪದಲ್ಲಿ ಹೊರಟುಹೋಗುವುದು. ಅದು ಹೋಗದಿದ್ದರೆ ಮುಂದೆ ಉಚ್ಛ್ವಾಸರೂಪವಾದ ಪ್ರಾಣವಾಯುವು ಮತ್ತೆ ಶರೀರದೊಳಕ್ಕೆ ಪ್ರವೇಶಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರಾಣವಾಯುವು ಶರೀರದೊಳಗೆ ಪ್ರವೇಶಿಸಲು ಮತ್ತು ನಿಃಶ್ವಾಸರೂಪದಿಂದ ಹೊರಹೊರಡಲು ಈ ಅಪಾನವಾಯು ಸಹಕರಿಸಬೇಕಾಗಿರುವುದು. ಈ ವಿಧವಾದ ಸಹಕಾರವನ್ನೇ ಇಲ್ಲಿ ನಿಯಂತೃತ್ವವೆಂದು ಹೇಳಲಾಗಿದೆ. ಆದ್ದರಿಂದ ಯಜ್ಞಮಾಡುವ ಯಜಮಾನನಲ್ಲಿ ಹೋತೃವು ಈ ಋಕ್ಕಿನ ಪಠನದಿಂದ ಅಪಾನವಾಯುವನ್ನು ನೆಲೆಗೊಳಿಸುವನು. ಅದರಿಂದ ಯಜಮಾನನ ಕಾರ್ಯನಿರ್ವಹಣೆಗೆ ಸಹಾಯವಾಗುವುದು.

**ಋತಾವಾ ಯಸ್ಯ ರೋದಸೀ ಇತಿ ಶಂಸತಿ ಚಕ್ಷುರ್ವಾ ಋತಂ ತಸ್ಮಾದ್ಯತರೋ ವಿವಿದಮಾನಯೋರಾಹಾಹಮನುಷ್ಠ್ವಾ ಚಕ್ಷುಷಾದರ್ಶಮಿತಿ ತಸ್ಯ ಶ್ರದ್ದಧತಿ ಚಕ್ಷುರೇವ ತತ್ಸಂಭಾವಯತಿ ಚಕ್ಷುಃ ಸಂಸ್ಕುರುತೇ ॥**

**ಅಧ್ಯಯನಕ್ರಮೇಣ ದ್ವಿತೀಯಾಮೃಚಂ ಷಷ್ಠೀತ್ವೇನಾನುಷ್ಠಾನಾಯ ವಿಧತ್ತೇ— ರೋದಸೀ ದ್ಯಾವಾಪೃಥಿವ್ಯೌ ಯಸ್ಯಾಗ್ನೇರ್ಋತಾವಾ ಸತ್ಯವತ್ಯೌ ॥ ಅಸ್ಮಿನ್ಮಂತ್ರಗತಋತಶಬ್ದೇನ ಚಕ್ಷುರುಪಲಕ್ಷ್ಯತೇ ॥ ಯಸ್ಮಾದೇವಂ ತಸ್ಮಾಲ್ಲೋಕೇ ವಿವಿದಮಾನಯೋಃ ಪುರುಷಯೋರ್ಮಧ್ಯೇ ಯತರಃ ಪುಮಾನೇವಮಾಹ । ಕಥಮಿತಿ ತದುಚ್ಯತೇ ॥ ಅಹಮನುಷ್ಠ್ವಾಽನುಷ್ಠಿತ್ವಾ ಪ್ರಯತ್ನೇನ ಚಕ್ಷುಷಾಽದರ್ಶಂ ದೃಷ್ಟವಾನಸ್ಮೀತಿ ॥ ತಸ್ಯ ಶ್ರದ್ದಧತಿ ತದೀಯವಚನಂ ಸರ್ವೇ ವಿಶ್ವಸಂತಿ ॥ ದೂರಸ್ಥೇ ಚೂತವೃಕ್ಷೇ ಫಲಮಸ್ತಿ ನ ವೇತಿ ನಿಶ್ಚೇತುಂ ರಾಜಾ ದ್ವೌ ಪುರುಷೌ ಪ್ರೇಷಯತಿ ತಯೋರಲಸಃ ಕಶ್ಚಿದಾಪಾತತೋ ದೃಷ್ಟ್ವಾ ನಾಸ್ತೀತಿ ಬ್ರೂತೇ । ಅಪರಸ್ತು ತತ್ರ ಪ್ರಯತ್ನೇನ ದೃಷ್ಟ್ವಾ ಯತ್ರಕ್ವಾಪಿ ಪರ್ಣೇನಾಚ್ಛನ್ನಂ ಫಲಂ ಸಮ್ಯಗ್ದೃಷ್ಟವಾನಸ್ಮೀತಿ ಬ್ರೂತೇ ॥ ತಸ್ಯ ವಚನೇ ಸರ್ವೇಷಾಂ ವಿಶ್ವಾಸೋ ಜಾಯತೇ ॥ ತಸ್ಮಾತ್ಸಮ್ಯಗ್ದರ್ಶಿನಶ್ಚಕ್ಷುಷ ಋತತ್ವಂ ಯುಕ್ತಂ।ಏತನ್ಮಂತ್ರಪಾಠೇನ ಚಕ್ಷುಸಃ ಸಂಭಾವನಾಸಂಸ್ಕಾರೌ ಭವತಃ॥**

ಈಗ ಹೋತೃವು **ಋತಾವಾ ಯಸ್ಯ ರೋದಸೀ** ಎಂಬ ಋಕ್ಕನ್ನು ಪಠಿಸುವನು. ಅಧ್ಯಯನಕ್ರಮದಿಂದ ಈ ಋಕ್ಕು ಸೂಕ್ತದ ಎರಡನೆಯ ಋಕ್ಕಾದರೂ (ಋ. ಸಂ. ೩-೧೩-೨) ಶಸ್ತ್ರಮಂತ್ರಪ್ರಕಾರ ಇದು ಆರನೆಯ ಋಕ್ಕೆನಿಸುವುದು. ಈ ಋಕ್ಕಿನ ಮೊದಲನೆಯಪಾದದ ಅರ್ಥವು— **ರೋದಸೀ**-ಈ ದ್ಯಾವಾಪೃಥಿವಿಗಳು (ಭೂಮ್ಯಂತರಿಕ್ಷಗಳು) **ಯಸ್ಯ**-ಯಾವ ಅಗ್ನಿಗೆ **ಋತವಾ**-ಸತ್ಯಸ್ವರೂಪವಾದವು. ಭೂಮ್ಯಂತರಿಕ್ಷಗಳು ಅಗ್ನಿಯ ಇರುವಿಕೆಗೆ ಅತ್ಯವಶ್ಯಕವು. ಇವು ಇಲ್ಲದಿದ್ದರೆ ಅಗ್ನಿಯು ಇರಲು ಸಾಧ್ಯವಿಲ್ಲ. **ಋತಾವಾ** ಎಂಬ ಶಬ್ದಕ್ಕೆ ಸತ್ಯಸ್ವರೂಪವು ಎಂದರ್ಥವು. ಈ ಶಬ್ದಕ್ಕೆ (ಸತ್ಯ) ಚಕ್ಷುರಿಂದ್ರಿಯವು (ಕಣ್ಣು)

ಎಂಬರ್ಥವು ಭಾಸವಾಗುತ್ತದೆ. ಚಕ್ಷುರಿಂದ್ರಿಯವು ಸತ್ಯವನ್ನೇ ಸೂಚಿಸುತ್ತದೆ ಎಂಬ ವಿಷಯದಲ್ಲಿ ಒಂದು ಉದಾಹರಣೆಯನ್ನು ಕೊಡುತ್ತಾರೆ. ಯಾವುದಾದರೂ ದೂರದಲ್ಲಿರುವ ಒಂದು ವಸ್ತುವಿನ ವಿಷಯದಲ್ಲಿ ಸೇರಿದ ಜನರ ಮಧ್ಯದಲ್ಲಿ ವಿವಾದ ಉಂಟಾದಾಗ ಒಬ್ಬ ಪುರುಷನು-ಈ ವಿಚಾರದಲ್ಲಿ ಅವಶ್ಯಕವಿಲ್ಲ. ನಾನು ಅಲ್ಲಿಗೆ ಹೋಗಿ ಅದನ್ನು ನನ್ನ ಕಣ್ಣಿನಿಂದಲೇ ನೋಡಿದ್ದೇನೆ. ಅದು ಹೀಗೆಯೇ ಇದೆ ಎಂದು ಹೇಳಿದಾಗ ಜನರು ಅವನ ಮಾತನ್ನು ನಂಬುವರು. ತಾವು ಅದನ್ನು ನೋಡಿಲ್ಲದಿದ್ದರೂ ನೋಡಿರುವ ಪುರುಷನ ಮಾತನ್ನೇ ಸರಿ ಎಂದು ನಂಬುವರು. ಈ ವಿಷಯದಲ್ಲಿ ಮತ್ತೊಂದು ಉದಾಹರಣೆಯನ್ನು ಇಲ್ಲಿ ಹೇಳಿರುವರು. ಒಬ್ಬ ರಾಜನು ಮತ್ತು ಅವನ ಪರಿವಾರದವರು ಒಂದೆಡೆ ಸೇರಿದ್ದಾಗ ದೂರದಲ್ಲಿದ್ದ ಒಂದು ಮಾವಿನಮರದ ಪ್ರಸ್ತಾಪವು ಬಂದಿತು. ಆಗ ಜನರು--ಆ ಮಾವಿನಮರದಲ್ಲಿ ಹಣ್ಣುಗಳಿಲ್ಲ. ಎಲ್ಲರೂ ಹೀಗೆಯೇ ಹೇಳುವರು ಆದ್ದರಿಂದ ಅದರಲ್ಲಿ ಹಣ್ಣುಗಳಿಲ್ಲವೆಂದು ತಿಳಿಯಬೇಕು ಎಂದು ಹೇಳಿದರು. ಆಗ ಅಲ್ಲಿದ್ದ ಮತ್ತೊಬ್ಬ ಪುರುಷನು ರಾಜನನ್ನುದ್ದೇಶಿಸಿ—ನಾನು ಈಗತಾನೇ ಆ ಮಾವಿನ ಮರದ ಸಮೀಪಕ್ಕೆ ಹೋಗಿಬಂದಿರುವೆನು. ಆ ಮರದಲ್ಲಿ ಎಲೆಗಳಿಂದ ಮುಚ್ಚಿರುವ ಅನೇಕ ಹಣ್ಣುಗಳಿರುವುದನ್ನು ಈ ನನ್ನ ಕಣ್ಣುಗಳಿಂದಲೇ ನೋಡಿರುವೆನು. ಆದ್ದರಿಂದ ಆ ಮರದಲ್ಲಿ ಹಣ್ಣುಗಳು ಇವೆ. ಈ ವಿಷಯದಲ್ಲಿ ಸಂಶಯಪಡಬೇಕಾಗಿಲ್ಲ ಎಂದು ಹೇಳುವನು. ಅದನ್ನು ಕೇಳಿ ರಾಜನೂ ಅವನ ಪರಿವಾರದವರೂ ಆ ಪುರುಷನು ಹೇಳಿದಂತೆ ಅದರಲ್ಲಿ ಫಲಗಳಿರುವುದನ್ನು ಅವನು ಕಣ್ಣಿನಿಂದ ನೋಡಿ ಹೇಳಿರುವುದರಿಂದ ಆ ವಿಷಯವನ್ನು ನಂಬಲೇಬೇಕು ಎಂದು ನಿಶ್ಚಯಮಾಡುವರು. ಆದ್ದರಿಂದ ಕಣ್ಣಿನಲ್ಲಿ ಕಂಡಿದ್ದು ಯಾವಾಗಲೂ ಸತ್ಯವು. ಅದು (ಕಣ್ಣು) ಯಾವಾಗಲೂ ಸುಳ್ಳು ಹೇಳುವುದಿಲ್ಲ. ಈ ವಿಷಯದಲ್ಲಿ ತೈತ್ತಿರೀಯ ಬ್ರಾಹ್ಮಣವು ಹೀಗೆ ಹೇಳುವುದು—

ಅನೃತಂ ವೈ ವಾಚಾ ವದತಿ । ಅನೃತಂ ಮನಸಾ ಧ್ಯಾಯತಿ । ಚಕ್ಷುರ್ವೈ ಸತ್ಯಂ ।
ಅದ್ರಾಗಿತ್ಯಾಹ । ಅದರ್ಶಮಿತಿ । ತತ್ಸತ್ಯಂ ॥ (ತೈ. ಬ್ರಾ. )

ಇದರ ಅರ್ಥವು—ಒಬ್ಬ ಪುರುಷನು ಬಾಯಲ್ಲಿ ಎಂದರೆ ಮಾತಿನಿಂದ ಸುಳ್ಳನ್ನು ಹೇಳಬಹುದು. ಮನಸ್ಸಿನಲ್ಲಿಯೂ ಸುಳ್ಳನ್ನು ಯೋಚಿಸಬಹುದು. ಆದರೆ ಕಣ್ಣಿನಲ್ಲಿ ಒಂದು ವಸ್ತುವನ್ನು ಅಥವಾ ಒಂದು ಕಾರ್ಯವನ್ನು ನೋಡುವಾಗ ಆ ಕಣ್ಣು ಎಂದರೆ ಚಕ್ಷುರಿಂದ್ರಿಯವು ಸುಳ್ಳು ಸಂಗತಿಯನ್ನು ಮನಸ್ಸಿಗೆ ತಿಳಿಸುವುದಿಲ್ಲ. ಇದ್ದುದನ್ನು ಇದ್ದಂತೆಯೇ ತಿಳಿಸುವುದು. ಅನೇಕರು ಕಿವಿಯಿಂದ ಒಂದು ಸಂಗತಿಯನ್ನು ಕೇಳಿದೆವೆಂದು ಹೇಳಿದರೂ ಅದನ್ನು ನಂಬುವುದು ಸಾಧ್ಯವಿಲ್ಲ. ಆದರೆ ಅದೇ ಸಂಗತಿಯನ್ನು ಓರ್ವ ಪುರುಷನು ನಾನು ನನ್ನ ಕಣ್ಣಿನಿಂದಲೇ ನೋಡಿದೆನು ಎಂದು ಹೇಳುವಾಗ ಅದು ಸತ್ಯವೇ ಆಗಿರುವುದು ಎಂದು. ಆದ್ದರಿಂದ ಚಕ್ಷುರಿಂದ್ರಿಯಕ್ಕೂ ಸತ್ಯಕ್ಕೂ ನಿಕಟವಾದ ಸಂಬಂಧವಿರುವುದು. ಆದ್ದರಿಂದ ಈ ಋಕ್ಕನ್ನು ಹೋತೃವು ಪಠಿಸಿ ಯಜಮಾನನಲ್ಲಿ ಚಕ್ಷುರಿಂದ್ರಿಯವನ್ನು ನೆಲೆಸುವಂತೆ ಮಾಡುವನು. ಅದರಿಂದ ಯಜಮಾನನು ಕಾರ್ಯನಿರ್ವಹಣೆ ಮಾಡುವುದರಲ್ಲಿ ಸಾಮರ್ಥ್ಯವನ್ನು ಪಡೆಯುವನು.

ನೂ ನೋ ರಾಸ್ವ ಸಹಸ್ರವತ್ತೋಕವತ್ಪುಷ್ಟಿಮದ್ವಸ್ವಿತ್ಯುತ್ತಮಯಾ ಪರಿದಧಾತ್ಯಾತ್ಮಾ ವೈ ಸಮಸ್ತಃ ಸಹಸ್ರವಾಂಸ್ತೋಕವಾನ್ಪುಷ್ಟಿಮಾನಾತ್ಮಾನಮೇವ ತತ್ಸಮಸ್ತಂ ಸಂಭಾವಯತ್ಯಾತ್ಮಾನಂ ಸಮಸ್ತಂ ಸಂಸ್ಕುರುತೇ ॥

ಅಧ್ಯಯನಕ್ರಮೇಣಾನುಷ್ಠಾನಕ್ರಮೇಣ ಚ ಸಪ್ತಮ್ಯಾ ಶಸ್ತ್ರಸಮಾಪ್ತಿಂ ವಿಧತ್ತೇ—ಯದ್ವಸು ಧನಂ ಸಹಸ್ರವತ್ಸಹಸ್ರಸಂಖ್ಯೋಪೇತಂ ತೋಕವದಪತ್ಯೋಪೇತಂ ಪುಷ್ಟಿಮತ್ಸಮ್ಯ-

ದ್ಧಿಯುಕ್ತಮಸ್ತಿ ತಾದೃಶಂ ಧನಂ ನೋಽಸ್ಮಭ್ಯಂ ನು ಕ್ಷಿಪ್ರಮೇವ ರಾಸ್ವ ಹೇಽಗ್ನೇ ದೇಹಿ ॥ ಅನಯಾಽಽನ್ತಿಮಯಾಽಽಜ್ಯಶಸ್ತ್ರಂ ಸಮಾಪಯೇತ್ ॥ ಅತ್ರ ಸಮಸ್ತಃ ಪೂರ್ವೋಕ್ತಃ ಪ್ರಾಣಮನೋವಾಗಾದಿಭಿಃ ಸರ್ವೈರಿಂದ್ರಿಯೈಃ ಸಂಪೂರ್ಣ ಆತ್ಮಾ ವೈ ಪುರುಷ ಏವ ಸಹಸ್ರಸಂಖ್ಯೋಪೇತಧನಯುಕ್ತೋ ಬಹುಭಿರಪತ್ಯೈರುಪೇತಃ ಸಮೃದ್ಧಿಯುಕ್ತಶ್ಚ ವಿವಕ್ಷಿತಃ । ಅತಸ್ತತ್ಪಾಠೇನ ತಾದೃಶಸ್ಯ ಪುರುಷಸ್ಯೈವ ಸಂಭಾವನಾಸಂಸ್ಕಾರೌ ಭವತಃ ॥

ಅನಂತರ ಹೋತೃವು **ನೂ ನೋ ರಾಸ್ವ** ಎಂಬ ಋಕ್ಕನ್ನು ಪಠಿಸುವನು ಇದು ಅಧ್ಯಯನಕ್ರಮದಿಂದಲೂ ಶಸ್ತ್ರಮಂತ್ರಕ್ರಮದಿಂದಲೂ ಏಳನೆಯ ಋಕ್ಕಾಗಿರುವುದು. ಮತ್ತು ಎರಡು ವಿಧದಿಂದಲೂ ಕೊನೆಯ ಋಕ್ಕಾಗಿರುವುದು. ಈ ಋಕ್ಕನ್ನು ಪಠಿಸಿ ಹೋತೃವು ಆಜ್ಯಶಸ್ತ್ರವನ್ನು ಸಮಾಪ್ತಿಗೊಳಿಸುವನು. ಇದರ ಅರ್ಥವು—ಆತ್ಮವೇ ಸಮಸ್ತವೂ ಆಗಿರುವುದು. ಎಂದರೆ ಎಲೈ ಅಗ್ನಿಯೇ, **ಸಹಸ್ರವತ್** ಅಪರಿಮಿತವಾದ **ಯತ್ ವಸುಂ**—ಯಾವ ಧನವಿರುವುದೋ ಅದನ್ನು **ತೋಕವತ್**—ಪುತ್ರಪೌತ್ರಾದಿಸಂತತಿಯನ್ನೂ **ಪುಷ್ಟಿಮತ್**—ಧಾನ್ಯಾದಿಸಮೃದ್ಧಿಯನ್ನೂ ಇಂತಹ ವಸ್ತುಗಳೆಲ್ಲವನ್ನೂ **ನಃ**—ನಮಗೆ **ನು**—ಜಾಗ್ರತೆಯಾಗಿ ರಾಸ್ವ—ಕೊಡು ಎಂದು ಈ ಋಕ್ಕಿನಲ್ಲಿ ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಈ ಕೊನೆಯ ಋಕ್ಕಿನಿಂದ ಆಜ್ಯಶಸ್ತ್ರಮಂತ್ರವನ್ನು ಸಮಾಪ್ತಿಗೊಳಿಸಬೇಕು. ಇಲ್ಲಿ **ಸಮಸ್ತಃ** ಎಂದರೆ ಹಿಂದೆ ಹೇಳಿದ ಮನಸ್ಸು, ವಾಕ್ಕು ಮೊದಲಾದ ಸರ್ವೇಂದ್ರಿಯಗಳಿಂದ ಕೂಡಿದುದೂ, ಪುತ್ರಾದಿಸಂತತಿ, ಧಾನ್ಯಾದಿಸಮೃದ್ಧಿ ಇವುಗಳಿಂದಲೂ ಯುಕ್ತವಾದ ಅಭೀಷ್ಟಗಳೆಂದು ಅರ್ಥವು. ಇವುಗಳಿಂದ ಕೂಡಿದ ಆತ್ಮಕ್ಕೆ ಸಂಪೂರ್ಣವಾದ ಅಭೀಷ್ಟಪ್ರದವೆಂದು ಹೆಸರು. ಯಜ್ಞಮಾಡುವ ಯಜಮಾನನಿಗೆ ಇಂತಹ ಸಮೃದ್ಧಿಯನ್ನು ಅಗ್ನಿಯು ದಯಪಾಲಿಸಲೆಂಬ ಪ್ರಾರ್ಥನೆಯು ಈ ಆಜ್ಯಶಸ್ತ್ರದ ಕೊನೆಯ ಋಕ್ಕಿನಲ್ಲಿ ಹೇಳಲಾಗಿದೆ.

**ಯಾಜ್ಯಯಾ ಯಜತಿ ಪ್ರತ್ತಿರ್ವೈ ಯಾಜ್ಯಾ ಪುಣ್ಯೈವ ಲಕ್ಷ್ಮೀಃ ಪುಣ್ಯಾಮೇವ ತಲ್ಲಕ್ಷ್ಮೀಂ ಸಂಭಾವಯತಿ ಪುಣ್ಯಾಂ ಲಕ್ಷ್ಮೀಂ ಸಂಸ್ಕುರುತೇ ॥**

ಶಸ್ತ್ರಸ್ಯಾಂತೇ ಯಾಜ್ಯಾಂ ವಿಧತ್ತೇ—ಅಗ್ನ ಇಂದ್ರಶ್ಚೇತಿ ಯೇಯಂ ಯಾಜ್ಯಾ ಪೂರ್ವಮುಕ್ತಾ ತಯಾ ಯಜತಿ ಯಾಗಾರ್ಥಂ ಯಾಜ್ಯಾಂ ಪಠೇತ್ ॥ ಯಾಜ್ಯಾ ಚ ಪ್ರತ್ತಿರ್ವೈ ಪ್ರದಾನರೂಪೈವ ॥ ತಥಾ ಚ ಹವಿಷ ಆದಾನಪ್ರದಾನೇ ಕ್ರಮೇಣ ಪುರೋಽನುವಾಕ್ಯಾಯಾಜ್ಯಾಧೀನೇ ಶ್ರುತ್ಯಂತರೇ ಶ್ರೂಯೇತೇ 'ಪುರೋಽನುವಾಕ್ಯಯಾಽಽದತ್ತೇ ಪ್ರಯಚ್ಛತಿ ಯಾಜ್ಯಯಾ' ಇತಿ ॥ ಅತಃ ಪ್ರದಾನರೂಪತ್ವಾದಿಯಂ ಪುಣ್ಯೈವ ಲಕ್ಷ್ಮೀಃ ॥ ಶಾಸ್ತ್ರೀಯತ್ವಾತ್ಪುಣ್ಯತ್ವಂ ॥ ಫಲಸ್ಯ ಲಬ್ಧಿಹೇತುತ್ವಾಲ್ಲಕ್ಷಣಸ್ಯ ದರ್ಶನಹೇತುತ್ವಾದ್ವಾ ಲಕ್ಷ್ಮೀತ್ವಂ ॥ ಅತೋ ಯಾಜ್ಯಾಪಾಠೇನ ಪುಣ್ಯಾಯಾ ಏವ ಲಕ್ಷ್ಮ್ಯಾಃ ಸಂಭಾವನಾಸಂಸ್ಕಾರೌ ಭವತಃ ॥

ಇದುವರೆಗೂ ಆಜ್ಯಶಸ್ತ್ರದ ಏಳು ಋಕ್ಕುಗಳನ್ನು ವಿವರಿಸಿ ಈಗ ಆಜ್ಯಶಸ್ತ್ರದ ಯಾಜ್ಯಾಮಂತ್ರವನ್ನು ಹೇಳುವರು.

ಅಗ್ನ ಇಂದ್ರಶ್ಚ ದಾಶುಷೋ ದುರೋಣೆ ಸುತಾವತೋ ಯಜ್ಞಮಿಹೋಪ ಯಾತಂ ।
ಅಮರ್ಧಂತಾ ಸೋಮಪೇಯಾಯ ದೇವಾ ॥ (ಋ. ಸಂ. ૩-೨೫-೪)

ಇದು ಯಾಜ್ಯಾಮಂತ್ರವು. ಶಸ್ತ್ರಮಂತ್ರವನ್ನು ಪಠಿಸಿದನಂತರ ಯಾಜ್ಯಾಮಂತ್ರವನ್ನು ಪಠಿಸಿ ಹೋಮಮಾಡಬೇಕು. **ಪ್ರತ್ತಿರ್ವೈ ಪ್ರದಾನರೂಪೈವ ಪ್ರತ್ತಿಃ** ಎಂದರೆ ಪ್ರದಾನ ಆಹುತಿಯನ್ನು ಕೊಡುವುದು ಎಂದರೆ ಅಗ್ನಿಯಲ್ಲಿ ಹೋಮಮಾಡುವುದು. ಹವಿಸ್ಸನ್ನು ಆದಾನಪ್ರದಾನ (ತೆಗೆದುಕೊಂಡು ಹೋಮಮಾಡುವುದು) ಎಂಬ ಕ್ರಮದಿಂದ ಪುರೋನುವಾಕ್ಯಾಯಾಜ್ಯಾ ಮಂತ್ರಗಳ ಪಠನಪೂರ್ವಕವಾಗಿ ಹೋಮಮಾಡಬೇಕು ಹೇಗೆಂದರೆ **ಪುರೋನುವಾಕ್ಯಯಾದತ್ತೇ ಪ್ರಯುಚ್ಛತಿ ಯಾಜ್ಯಯಾ**— ಎಂದರೆ ದೇವತೆಯ ಗುಣಗಾನರೂಪವಾದ ಮಂತ್ರಕ್ಕೆ ಪುರೋನುವಾಕ್ಯಾ ಎಂದು ಹೆಸರು. ಇದನ್ನು ಆಹುತಿಗೆ ಮೊದಲು ದೇವತಾಹ್ವಾನರೂಪವಾಗಿ ಪಠಿಸಬೇಕು ಆಗ ಹವಿಸ್ಸನ್ನು ಹೋಮಮಾಡಲು ಕೈಗೆ ತೆಗೆದುಕೊಳ್ಳಬೇಕು ಅನಂತರ ದೇವತೆಯ ಪ್ರೀತ್ಯರ್ಥವಾಗಿ ಯಾಜ್ಯಾಮಂತ್ರದಿಂದ ಹೋಮಮಾಡಬೇಕು. ಈರೀತಿ ಹೋಮಮಾಡುವ ಮಂತ್ರಕ್ಕೆ ಯಾಜ್ಯಾ ಮಂತ್ರವೆಂದು ಹೆಸರು. ಈ ಎರಡುಮಂತ್ರಗಳಲ್ಲಿ ಮೊದಲು ಪುರೋನುವಾಕ್ಯಾಮಂತ್ರವನ್ನು ಪಠಿಸಿ ಅನಂತರ ಯಾಜ್ಯಾಮಂತ್ರವನ್ನು ಪಠಿಸಿ ಮಂತ್ರಾಂತ್ಯದಲ್ಲಿ ಹವಿಸ್ಸನ್ನು ಹೋಮಮಾಡಬೇಕು ಇದು ಕ್ರಮವು. ಹಿಂದೆ ಪ್ರತ್ತಿ ಎಂದರೆ ಪ್ರದಾನವು ಎಂದು ಹೇಳಿದೆಯಷ್ಟೆ. ಆದ್ದರಿಂದ ಈ ಪ್ರದಾನರೂಪವಾದ ಅರ್ಪಣೆಯು ಶೋಭನಕರವಾದ ಲಕ್ಷ್ಮೀ ಅಥವಾ ಶ್ರೇಯಸ್ಸನ್ನು ಮಾಡುವುದು. ಮತ್ತು ಶೋಭನಕರವಾದ ಲಕ್ಷ್ಮೀ ಅಥವಾ ಸಂಪತ್ತಿಗೆ ಕಾರಣಭೂತವಾಗಿರುವುದು. ಆದ್ದರಿಂದ ಈ ಯಾಜ್ಯಾಮಂತ್ರಹೋಮದಿಂದ ಯಜಮಾನನಿಗೆ ಶ್ರೇಯಸ್ಸೂ ಸಂಪತ್ತೂ ಲಭಿಸುವುದು.

**ಸ ಏವಂ ವಿದ್ವಾಂಶ್ಛಂದೋಮಯೋ ದೇವತಾಮಯೋ ಬ್ರಹ್ಮಮಯೋಽಮೃತಮಯಃ ಸಂಭೂಯ ದೇವತಾ ಅಪ್ಯೇತಿ ಯ ಏವಂ ವೇದ ॥ ಯೋ ವೈ ತದ್ವೇದ ಯಥಾ ಛಂದೋಮಯೋ ದೇವತಾಮಯೋ ಬ್ರಹ್ಮಮಯೋಽಮೃತಮಯಃ ಸಂಭೂಯ ದೇವತಾ ಅಪ್ಯೇತಿ ತತ್ ಸುವಿದಿತಂ ॥**

ಉಕ್ತಕ್ರಮೇಣಾನುಷ್ಠಾತೃವೇದಿತ್ರೋಃ ಫಲಂ ದರ್ಶಯತಿ— ಏವಂ ವಿದ್ವಾನಿತ್ಯತ್ರಾನುತಿಷ್ಠನ್ನಿತ್ಯಧ್ಯಾಹಾರ್ಯಂ । ವೇದನಪೂರ್ವಕೋಽನುಷ್ಠಾತಾ ಗಾಯತ್ರ್ಯಾದಿಚ್ಛಂದಃಸ್ವರೂಪೋಽಗ್ನ್ಯಾದಿದೇವತಾಸ್ವರೂಪ ಋಗಾದಿವೇದಸ್ವರೂಪೋ ಮರಣರಹಿತೋ ಮೋಕ್ಷಸ್ವರೂಪಃ ಸನ್ಸಂಭೂಯ ಸರ್ವಂ ಜಗದೇಕೀಕೃತ್ಯ ಸರ್ವಾ ದೇವತಾಃ ಪ್ರಾಪ್ನೋತಿ । ತದೇತದನುಷ್ಠಾತುಃ ಫಲಮ್ ॥ ಯ ಏವಂ ವೇದೇತ್ಯತ್ರಾಪಿ ವಿದುಷಃ ಫಲತ್ವೇನ ಛಂದೋಮಯತ್ವಾದಿಕಮಾವರ್ತನೀಯಂ ॥ ಅಥವಾ ಯ ಏವಂ ವೇದೇತ್ಯುಕ್ತಸ್ಯೈವ ಸ ಏವಂ ವಿದ್ವಾನಿತ್ಯನೂದ್ಯಮಾನತ್ವಾನ್ನೇದಂ ವಾಕ್ಯಮಾವರ್ತನೀಯಂ॥ವೇದನಮಾತ್ರಸ್ಯ ಕಥಮೀದೃಶಂ ಫಲಮಿತ್ಯಾಶಂಕ್ಯ ಸುವೇದನತ್ವಾದುಕ್ತಂ ಫಲಮಿತ್ಯೇತದ್ದರ್ಶಯತಿ--- ಯೇನ ಪ್ರಕಾರೇಣ ಛಂದಃ ಪ್ರಾಪ್ತ್ಯಾದಿಪೂರ್ವಕಂ ಸರ್ವದೇವತಾಪ್ರಾಪ್ತಿರ್ಭವತಿ ತತ್ತಾದೃಶಂ ಪ್ರಕಾರಂ ಯೋ ವೇದ ತದ್ವೇದನಂ ಸುವಿದಿತಂ ಶೋಭನಜ್ಞಾನಂ ತಸ್ಮಾದುಕ್ತಂ ಫಲಮಿತ್ಯರ್ಥಃ ॥

ಮೇಲೆ ಹೇಳಿದ ಕ್ರಮವನ್ನು ಅನುಸರಿಸಿ ಅನುಷ್ಠಾನಮಾಡುವ ಪುರುಷನು, ಈ ವಿಷಯವನ್ನು ತಿಳಿದಿರುವ ಪುರುಷನೂ ಸಹ ಪಡೆಯುವ ಫಲವನ್ನು ವಿವರಿಸುತ್ತಾರೆ— ಇದುವರೆಗೂ ಹೇಳಿದಂತೆ ಈ ಆಜ್ಯಶಸ್ತ್ರಮಂತ್ರದ ಕ್ರಮವನ್ನು, ಅನುಷ್ಠಾನವನ್ನೂ

ಆಚರಿಸುವ ವಿವೇಕಿಯಾದ ಪುರುಷನು ಗಾಯತ್ರ್ಯಾದಿಛಂದಸ್ಸ್ವರೂಪವೂ, ವಹ್ನ್ಯಾದಿ ದೇವತಾಸ್ವರೂಪವೂ, ಋಗಾದಿದೇವತಾ ಸ್ವರೂಪವೂ, ಮರಣರಹಿತವಾದ ಮೋಕ್ಷಸ್ವರೂಪವೂ ಆದ ಉತ್ತಮಪದವಿಯನ್ನು ಪಡೆದು ಸಮಸ್ತದೇವತೆಗಳ ಅನುಗ್ರಹದಿಂದ ಸಮಸ್ತಸುಖವನ್ನೂ ಅನುಭವಿಸುವನು. ಮೇಲೆಹೇಳಿದ ಫಲಗಳೆಲ್ಲವೂ ಅನುಷ್ಠಾನಕರ್ತೃವಿಗೆ ಮಾತ್ರ ಲಭಿಸುವುದೆಂದು ತಿಳಿಯ ಬಾರದು. ಈ ವಿಷಯಗಳನ್ನೆಲ್ಲಾ ಚೆನ್ನಾಗಿ ತಿಳಿದುಕೊಂಡು ಅದರಂತೆ ಆಚರಿಸುವ ಕಾರ್ಯಕ್ಕೆ ಯಾವ ವಿವೇಕಿಯಾದ ಪುರುಷನು ಕಾರಣಕರ್ತನಾಗುವನೊ ಅವನೂ ಸಹ ಮೇಲೆ ಹೇಳಿದ ಫಲಗಳನ್ನು ಪಡೆದು ಸುಖಿಸುವನು ಎಂದಭಿಪ್ರಾಯವು.

## ಇತ್ಯಧ್ಯಾತ್ಮಮಥಾಧಿದೈವತಂ ॥

**ಉಕ್ತವಕ್ಷ್ಯಮಾಣಯೋಃ ಶಂಕಾಪರಿಹಾರಾಯ ವಿಭಾಗಂ ದರ್ಶಯತಿ—ಆತ್ಮಾನಂ ಶರೀರಮಧಿಕೃತ್ಯ ವರ್ತತ ಇತ್ಯಧ್ಯಾತ್ಮಂ ॥ ಅಸ್ಮಿನ್ಖಂಡೇ ಶರೀರರೂಪತ್ವೇನ ಪ್ರಶಂಸನಮಾಜ್ಯ ಶಸ್ತ್ರಸ್ಯೋಕ್ತಂ ॥ ಉತ್ತರಖಂಡೇ ತ್ವಧಿದೈವತಂ ದೇವತಾವಿಷಯಮಾಜ್ಯಶಸ್ತ್ರಪ್ರಶಂಸನ- ಮುಚ್ಯತೇ ॥**

ಇದುವರೆಗೂ ವಿವರಿಸಿದ ವಿಷಯಗಳನ್ನು ವಿಶದವಾಗಿ ಹೇಳುವರು—**ಶರೀರಮಧಿಕೃತ್ಯಾತ್ಮಂ ಅಧ್ಯಾತ್ಮಂ**— ಶರೀರಕ್ಕೆ ಸಂಬಂಧಪಟ್ಟಂಥಾ ಹಿತವಚನಗಳನ್ನು ತಿಳಿಸುವ ವಿಷಯಕ್ಕೆ ಅಧ್ಯಾತ್ಮವೆಂದು ಹೆಸರು. ದೇವತಾವಿಷಯವಾಗಿ ಹೇಳಲಾಗುವ ವಿಷಯಕ್ಕೆ **ಅಧಿದೈವತಂ** ಎಂದು ಹೆಸರು. ಇದುವರೆಗೂ ಶರೀರಕ್ಕೆ ಸಂಬಂಧಪಟ್ಟ ವಿಷಯಗಳನ್ನು ಎಂದರೆ ಅಧ್ಯಾತ್ಮವಿಚಾರವನ್ನು ಈ ಖಂಡದಲ್ಲಿ ಹೇಳಿದ್ದಾಯಿತು. ಇನ್ನು ದೇವತಾವಿಷಯವಾದ (ಆಜ್ಯಶಸ್ತ್ರಕ್ಕೆ ಸಂಬಂಧಪಟ್ಟ) ಅಧಿದೈವತವೆಂಬ ವಿಷಯವನ್ನು ಮುಂದಿನ ಖಂಡದಲ್ಲಿ ವಿವರಿಸಲಾಗುವುದು.

### *English Translation*

He repeats (the hymn) pra vo devaya Agnaye (3, 13). (The word) pra means prana (life). For all these beings move only after having been endowed with prana. Thus the Hotar produces the prana (for the sacrificer) and makes it ready (for use).

He repeats, didivamsam apurvyam (3, 13, 5). For the mind has become shining (didaya), and nothing exists anterior (apurvyam) to the mind. Thus he produces the mind (of the sacrificer), and makes it (ready for use).

He repeats, sa nah s'armani vitaye. Vach is s'arma (refuge). For they say about one who is repeating with his speech (the words of another). "I have stopped his talkativeness (s'armavat)." By repeating this verse the Hotar produces speech (in the sacrificer), and makes it ready for use.

He repeats, uta no brahman. Brahma is the sense of hearing. For by means of the ear one hears the Brahma; Brahma is placed in the ear. By

repeating this verse he produces (in the sacrificer) the sense of hearing, and makes it ready (for use).

He repeats, sa yanta vipra. The air exhaled is Yanta, i. e., restrainer. For the air inhaled (prana) is held back by the air exhaled (apana), and does (consequently) not turn away. By repeating this verse he produces the apana (in the sacrificer), and makes it ready (for use).

He repeats, ritara yasya rodasi. Rita i. e., true is the eye. |For if two men have a dispute with one another (about anything), they believe him who says, "I have seen it by exertion of (my own) eyes." By repeating this verse he produces the eye (in the sacrificer), and makes it ready for use.

With the verse, nu no rasva, he concludes. The whole (man) "endowed with thousand-fold gifts, with offspring, and thriving well," is the atma (soul). By repeating this verse he thus produces the soul as the aggregate man, and makes it reody for use.

He repeats a Yajya mantra. The yajya is a gift, meritorious, and fortune. By repeating it, he makes him (the sacrificer) a pure (Goddess) of fortune and prepares her for assisting him.

He who has such a knowledge merges into the deities, after having been identified with the metres, the deities, the Brahma, and immortality. He who thus knows how to become identified with metres &c. has (certainly) a good knowledge; it is beyond the soul and beyoned any deity, (i. e. this knowledge is of higher value than the soul, or any God).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದಶಮಾಧ್ಯಾಯೇ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹತ್ತನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವು.



# ಅಥ ದಶಮಾಧ್ಯಾಯೇ ನವಮಃ ಖಂಡಃ

## ಹತ್ತನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು



**ಷಟ್ಪದಂ ತೂಷ್ಣೀಂಶಂಸಂ ಶಂಸತಿ ಷಡ್ವಾ ಋತವ ಋತೂನೇವ ತತ್ಕಲ್ಪಯತ್ಯೃತೂನಪ್ಯೇತಿ ॥**

**ಪೂರ್ವೋಕ್ತಕ್ರಮೇಣೈವ ದೇವತಾವಿಷಯಶಸ್ತ್ರಪ್ರಶಂಸನಂ ವಿವಕ್ಷಿತ್ವಾ ಪ್ರಥಮಂ ಭೂರಗ್ನಿರಿತ್ಯಸ್ಯ ಪ್ರಶಂಸಾಂ ದರ್ಶಯತಿ—ಭೂರಗ್ನಿರಿತ್ಯಾದೀನಾಂ ಭಾಗಾನಾಂ ಷಟ್ಸಂಖ್ಯಾಸಾಮ್ಯಾದೃತುತ್ವೇ ಸತಿ ತತ್ಪಾಠೇನ ಋತೂನ್ಸ್ವಭೋಗಪ್ರದಾನಸಮರ್ಥಾನ್ಕರೋತಿ ॥ ತತ ಋತೂನ್ದೇವಾನ್ಪ್ರಾಪ್ನೋತಿ ॥**

ಹಿಂದೆ ಹೇಳಿದಂತೆ ತೂಷ್ಣೀಂಶಂಸಂ ಮೊದಲಾದ ಮಂತ್ರಗಳ ಆಯಾ ದೇವತಾವಿಭಾಗಗಳನ್ನು ವಿವರಿಸಿ ಆ ದೇವತೆಗಳ ಸ್ವರೂಪವನ್ನೂ ಅವರಿಂದ ಲಭಿಸುವ ಫಲಾದಿಗಳನ್ನೂ ಈ ಖಂಡದಲ್ಲಿ ವಿಶದವಾಗಿ ತಿಳಿಸುವರು. ಪ್ರಾರಂಭದಲ್ಲಿ—**ಷಟ್ ಪದಂ ತೂಷ್ಣೀಂಶಂಸಂ ಶಂಸತಿ**—ಮೊದಲು ತೂಷ್ಣೀಂಶಂಸವೆಂಬ, ಹೋತೃವು ಜಪಿಸುವ ಮಂತ್ರವಿಶೇಷವನ್ನು ವಿಶದೀಕರಿಸುವರು. ಈ ತೂಷ್ಣೀಂಶಂಸವೆಂಬ ಹೋತೃವಿನ ಜಪಮಂತ್ರದಲ್ಲಿ ಷಟ್ ಪದ ಎಂದರೆ ಆರುಪದಗಳುಳ್ಳ ಆರು ವಿಭಾಗಗಳಿರುವವು. ಋತುಗಳೂ ಆರು ಇರುವವು—**ಮಧುಶ್ಚ ಮಾಧವಶ್ಚ .ವಾಸಂತಿಕಾವೃತೂ** ಚೈತ್ರವೈಶಾಖಮಾಸಗಳೆರಡೂ ಸೇರಿ ವಸಂತಋತುವೆನಿಸುವುದು. **ಶುಕ್ರಶ್ಚ ಶುಚಿಶ್ಚ ಗ್ರೀಷ್ಮಾವೃತೂ** ಜ್ಯೇಷ್ಠ ಆಷಾಢಮಾಸಗಳೆರಡೂ ಸೇರಿ ಗ್ರೀಷ್ಮರ್ತುವೆನಿಸುವುದು. **ನಭಶ್ಚ ನಭಸ್ಯಶ್ಚ ವರ್ಷಾವೃತೂ**-ಶ್ರಾವಣ ಭಾದ್ರಮಾಸಗಳೆರಡೂ ಸೇರಿ ವರ್ಷರ್ತುವೆನಿಸುವುದು. **ಉಷಶ್ಚೋರ್ಜಶ್ಚ ಶಾರದಾವೃತೂ** ಆಶ್ವಯುಜ ಕಾರ್ತಿಕಮಾಸಗಳೆರಡೂ ಸೇರಿ ಶರದೃತುವೆನಿಸುವುದು. **ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ** ಮಾರ್ಗಶಿರ ಪುಷ್ಯ ಎಂಬ ಎರಡು ಮಾಸಗಳೂ ಸೇರಿ ಹಿಮಂತಋತುವೆನಿಸುವುದು. **ತಪಶ್ಚ ತಪಸ್ಯಶ್ಚ ಶೈಶಿರಾವೃತೂ** ಮಾಘ, ಫಾಲ್ಗುಣ ಎಂಬ ಎರಡು ಮಾಸಗಳೂ ಸೇರಿ ಶಿಶಿರಋತುವೆನಿಸುವುದು. ಆದ್ದರಿಂದ ಒಂದು ಸಂವತ್ಸರದಲ್ಲಿ ಆರು ಋತುಗಳಿರುವವು. ಮೇಲೆ ಹೇಳಿದ ತೂಷ್ಣೀಂಶಂಸವೆಂಬ ಮಂತ್ರದಲ್ಲಿಯೂ ಆರು ವಿಭಾಗಗಳಿರುವವು. ಆದ್ದರಿಂದ ಇವುಗಳೆರಡಕ್ಕೂ ಹೋಲಿಕೆಯಿದೆ. ತೂಷ್ಣೀಂಶಂಸವೆಂಬ ಮಂತ್ರವನ್ನು ಜಪಿಸುವವನು ಸಂವತ್ಸರದಲ್ಲಿರುವ ವಸಂತಾದಿ ಆರು ಋತುಗಳನ್ನೂ ತೃಪ್ತಿಪಡಿಸಿದಂತಾಗುವುದು. ಈರೀತಿ ಋತುಗಳನ್ನು ತೃಪ್ತಿಪಡಿಸುವುದರಿಂದ ಈ ಆರು ಋತುಗಳು ಅಥವಾ ಋತುಗಳ ಅಭಿಮಾನಿದೇವತೆಗಳು ಋತುಗಳ ಪ್ರತೀಕವಾದ ತೂಷ್ಣೀಂಶಂಸದ ಜಪಕರ್ತೃವಿಗೆ ಆರು ಋತುಕಾಲಗಳಲ್ಲಿಯೂ ಲಭಿಸಬಹುದಾದ ಆಯುರಾರೋಗ್ಯಾದಿ ಸಂಪತ್ತುಗಳನ್ನು ಅನುಗ್ರಹಿಸುವರು ಎಂದಭಿಪ್ರಾಯವು.

**ದ್ವಾದಶಪದಾಂ ಪುರೋರುಚಂ ಶಂಸತಿ ದ್ವಾದಶ ವೈ ಮಾಸಾ ಮಾಸಾನೇವ ತತ್ಕಲ್ಪಯತಿ ಮಾಸಾನಪ್ಯೇತಿ ॥**

**ನಿವಿದಃ ಪ್ರಶಂಸಾಂ ದರ್ಶಯತಿ – ನಿವಿದಾಂ ಪಾಠೇನ ಮಧುಮಾಧವಾದೀನ್ಮಾಸಾನ್ಸ್ವಾತ್ಮಭೋಗಾಯ ಸಂಪಾದಯತಿ ಪ್ರಾಪ್ನೋತಿ ಚ ॥**

ಪುರೋರುಕ್ ಅಥವಾ ನಿವಿತ್ ಎಂದು ಹೇಳಲ್ಪಡುವ ಪದಗಳು (ಅಥವಾ ಭಾಗಗಳು) ಹನ್ನೆರಡು ಇವೆ. ಒಂದು ಸಂವತ್ಸರದಲ್ಲಿಯೂ ಹನ್ನೆರಡು ಮಾಸ (ತಿಂಗಳು)ಗಳಿವೆ. ಆದ್ದರಿಂದ ಇವೆರಡಕ್ಕೂ ಸಾಮ್ಯವಿದ್ದಂತಾಯಿತು. ಮೇಲೆ ಹೇಳಿದ ಈ ಪುರೋರುಕ್ ಪಠನದಿಂದ ಹನ್ನೆರಡುಮಂದಿ ಮಾಸಾಭಿಮಾನಿದೇವತೆಗಳನ್ನು ತೃಪ್ತಿಪಡಿಸಿದಂತಾಗುವುದು.

**ಪ್ರ ವೋ ದೇವಾಯಾಗ್ನಯ ಇತಿ ಶಂಸತ್ಯಂತರಿಕ್ಷಂ ವೈ ಪ್ರಾಂತರಿಕ್ಷಂ ಹೀಮಾನಿ ಸರ್ವಾಣಿ ಭೂತಾನ್ಯನುಪ್ರಯಂತ್ಯಂತರಿಕ್ಷಮೇವ ತತ್ಕಲ್ಪಯತ್ಯಂತರಿಕ್ಷಮಪ್ಯೇತಿ**

**ಸೂಕ್ತಪ್ರಥಮಾಮೃಚಂ ಪ್ರಶಂಸತಿ – ಸರ್ವೇ ಪ್ರಾಣಿನೋಽಂತರಿಕ್ಷಮನುಸೃತ್ಯ ತಿಷ್ಠಂತಿ ತಸ್ಮಿನ್ನವಕಾಶೇ ಪ್ರಕೃಷ್ಟಗಮನಾದಂತರಿಕ್ಷಸ್ಯ ಪ್ರಶಬ್ದವಾಚ್ಯತ್ವಂ ॥**

ಈಗ ಆಜ್ಯಶಸ್ತ್ರಮಂತ್ರಗಳನ್ನು ಒಂದೊಂದಾಗಿ ವಿವರಿಸುವರು— **ಪ್ರ ವೋ ದೇವಾಯ** (ಋ. ಸಂ. ೩-೧೩-೧) ಎಂಬ ಋಕ್ಕು ಆಜ್ಯಶಸ್ತ್ರಸೂಕ್ತದ ಮೊದಲನೆಯ ಋಕ್ಕು. ಅಂತರಿಕ್ಷಕ್ಕೆ ಪ್ರಾಂತರಿಕ್ಷವೆಂದೂ ಹೆಸರು. ಏಕೆಂದರೆ ಅಂತರಿಕ್ಷದ (ಅವಕಾಶದ) ಮೂಲಕವೇ ಸಮಸ್ತ ಪ್ರಾಣಿಗಳೂ ಜೀವಿಸಿರಲು ಸಾಧ್ಯವಾಗಿರುವುದರಿಂದ ಅಂತರಿಕ್ಷದ ಪ್ರಾಧಾನ್ಯತೆಯು ಇರುವುದು. ಆದ್ದರಿಂದ ಈ ಪ್ರಾಧಾನ್ಯತೆಯನ್ನು ತೋರಿಸುವುದಕ್ಕಾಗಿ ಅಂತರಿಕ್ಷ ಶಬಕ್ಕೆ ಪ್ರ ಎಂಬ ಉಪಸರ್ಗವನ್ನು ಸೇರಿಸಿ ಪ್ರಾಂತರಿಕ್ಷಂ ಎಂದು ಕರೆಯುವ ರೂಢಿ ಇದೆ. ಇದ್ದರಿಂದ ಪ್ರ ಎಂಬ ಶಬ್ದಕ್ಕೆ ಅಂತರಿಕ್ಷವೆಂಬ ಅರ್ಥವು ಸೂಚಿತವಾಗುವುದು. ಈ **ಪ್ರ ವೋ ದೇವಾಯ** ಎಂಬ ಮೊದಲನೆಯ ಋಕ್ಕಿನ ಪಠನದಿಂದ ಪ್ರಶಬ್ದವಾಚ್ಯವಾದ ಅಂತರಿಕ್ಷ (ಅಂತರಿಕ್ಷಾಭಿಮಾನಿದೇವತೆ)ಯನ್ನು ಪ್ರಶಂಸಿಸಿದಂತಾಗುವುದು.

**ದೀದಿವಾಂಸಮಪೂರ್ವ್ಯಮಿತಿ ಶಂಸತ್ಯಸೌ ವೈ ದೀದಾಯ ಯೋಽಸೌ ತಪತ್ಯೇತಸ್ಮಾದ್ಧಿ ನ ಕಿಂಚನ ಪೂರ್ವಮಸ್ತ್ಯೇತಮೇವ ತತ್ಕಲ್ಪಯತ್ಯೇತಮಪ್ಯೇತಿ ॥**

**ಅನುಷ್ಠಾನಕ್ರಮೇಣ ದ್ವಿತೀಯಾಮೃಚಂ ಪ್ರಶಂಸತಿ — ಯೋಽಸಾವಾದಿತ್ಯಸ್ತಪತಿ ಜಗತಿ ಸಂತಾಪಂ ಕರೋತ್ಯಸೌ ವೈ ದೀದಾಯ ದೀಪ್ಯತೇ ॥ ತಸ್ಯೋದಯಾತ್ಪೂರ್ವಮಂಧಕಾರೇ ಕಿಮಪಿ ಪ್ರಾಣಿಜಾತಂ ಸ್ವವ್ಯಾಪಾರಕರ್ತೃ ನಾಸ್ತಿ ॥ ತಸ್ಮಾದಾದಿತ್ಯಸ್ಯ ದೀದಿವಾಂಸಮಪೂರ್ವ್ಯಮಿತಿ ಪದದ್ವಯಾಭಿಧೇಯತ್ವಂ ॥**

ಶಸ್ತ್ರಮಂತ್ರಪ್ರಕಾರ ಎರಡನೆಯಋಕ್ಕನ್ನು ವಿವರಿಸುವರು. **ದೀದಿವಾಂಸಮಪೂರ್ವ್ಯಮಿತಿ** (ಋ. ಸಂ. ೩-೧೩-೫) **ದೀದಿವಾಂಸಂ** ಎಂದರೆ **ಯೋಽಸೌ ಆದಿತ್ಯಃ ತಪತಿ ಜಗತಿ ಸಂತಾಪಂ ಕರೋತಿ**—ಈ ಜಗತ್ತನ್ನೇ ಬೆಳಗುವ ಸೂರ್ಯನಿಗೆ ದೀದಿವಾಂಸಂ ಎಂದು ಹೆಸರು. ಈ ಸೂರ್ಯನು ಉದಯಿಸಿದಾಗಲೇ ಸಮಸ್ತ ಪ್ರಾಣಿಗಳೂ ತಮ್ಮ ತಮ್ಮ

ವ್ಯವಹಾರಗಳಲ್ಲಿ ತೊಡಗುವವು. ಸೂರ್ಯನಿಲ್ಲದೆ ಜಗತ್ತಿನಲ್ಲಿ ಯಾವ ಕೆಲಸವೂ ನಡೆಯುವಂತಿಲ್ಲ. ಮತ್ತು ಅಪೂರ್ವ್ಯಂ ಎಂಬುದು ಸೂರ್ಯನಿಗೆ ವಿಶೇಷಣವು ಸಮಸ್ತ ಪ್ರಾಣಿಗಳಿಗಿಂತಲೂ, ಜಗತ್ತಿಗಿಂತಲೂ ಸೂರ್ಯನೇ ಮೊದಲಿನವನಾದ್ದರಿಂದ ಎಂದರೆ ಈ ಜಗದಾದಿಗಳಿಗಿಂತ ಸೂರ್ಯನು ಪರಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವುದರಿಂದ ಇವನಿಗೆ ಅಪೂರ್ವ್ಯಂ ಎಲ್ಲರಿಗಿಂತಲೂ ಮೊದಲಿನವನು ಎಂದು ಹೇಳುವುದು ನ್ಯಾಯವಾಗಿದೆ.

**ಸ ನಃ ಶರ್ಮಾಣಿ ವೀತಯ ಇತಿ ಶಂಸತ್ಯಗ್ನಿರ್ವೈ ಶರ್ಮಾಣ್ಯನ್ನಾದ್ಯಾನಿ ಯಚ್ಛತ್ಯಗ್ನಿಮೇವ ತತ್ಕಲ್ಪಯತ್ಯಗ್ನಿಮುಪೈತಿ ॥**

ತೃತೀಯಾಮೃಚಂ ದರ್ಶಯತಿ—ಸುಖಕರಾಣ್ಯತ್ತುಂ ಯೋಗ್ಯಾನ್ಯನ್ನಾನಿ ಪಾಕೇನ ಪ್ರಯಚ್ಛತೀತ್ಯಗ್ನೇಃ ಶರ್ಮಶಬ್ದವಾಚ್ಯತ್ವಂ ।

ಮೂರನೆಯ ಋಕ್ಕಾದ **ಸ ನಃ ಶರ್ಮಾಣಿ ವೀತಯೇ** (ಋ. ಸಂ. ೩-೧೩-೪) ಎಂಬ ಋಕ್ಕನ್ನು ವಿವರಿಸುವರು. ಸಮಸ್ತರಿಗೂ ಸುಖವನ್ನು ಕೊಡುವವನು ಅಗ್ನಿಯೇ ಆದ್ದರಿಂದ ಇಲ್ಲಿ **ಸ ನಃ** ಅಗ್ನಿಯೇ ನಮಗೆ ಪಾಕ ಮೊದಲಾದ ಸಮಸ್ತ ಸುಖವನ್ನೂ ಕೊಡಲಿ ಎಂದರ್ಥವು. ನಾವು ತಿನ್ನುವುದಕ್ಕೆ ಯೋಗ್ಯವಾಗಿರುವಂತೆ ಪಾಕಾದಿಗಳಿಗೆ ಅಗ್ನಿಯು ಸಹಾಯಕನಾಗಿರುವನು. ಈ ಮಂತ್ರಪಠನದಿಂದ ಅಗ್ನಿಯ ಸ್ಥಾನವನ್ನು ಪಡೆಯುವನು.

**ಉತ ನೋ ಬ್ರಹ್ಮನ್ನವಿಷ ಇತಿ ಶಂಸತಿ ಚಂದ್ರಮಾ ವೈ ಬ್ರಹ್ಮ ಚಂದ್ರಮಸಮೇವ ತತ್ಕಲ್ಪಯತಿ ಚಂದ್ರಮಸಮುಪೈತಿ ॥**

ಚತುರ್ಥೀಮೃಚಂ ದರ್ಶಯತಿ— ನಕ್ಷತ್ರಾದಿಪ್ರಕಾಶೇಷು ಬೃಹತ್ತ್ವಾಚ್ಚಂದ್ರಮಸೋ ಬ್ರಹ್ಮತ್ವಂ ॥

ಇನ್ನು ನಾಲ್ಕನೆಯ ಋಕ್ಕಾದ **ಉತ ನೋ ಬ್ರಹ್ಮನ್ನವಿಷಃ** (ಋ. ಸಂ. ೩-೧೩-೬) ಎಂಬ ಋಕ್ಕನ್ನು ಪಠಿಸುವನು. ಇಲ್ಲಿ ಬ್ರಹ್ಮಶಬ್ದಕ್ಕೆ ಚಂದ್ರನೆಂದು ಅರ್ಥವನ್ನು ಮಾಡಬೇಕು. ಆಕಾಶದಲ್ಲಿ ನಕ್ಷತ್ರಗಳೊಡನೆ ಇರುವ ಚಂದ್ರನು ಬಹು ದೊಡ್ಡದಾಗಿರುವುದರಿಂದ ಚಂದ್ರನನ್ನು ಬ್ರಹ್ಮಶಬ್ದದಿಂದ ಸಂಬೋಧಿಸಲಾಗಿದೆ. ಈ ಮಂತ್ರಪಠನದಿಂದ ಚಂದ್ರಲೋಕಪ್ರಾಪ್ತಿಯುಂಟಾಗುವುದು.

**ಸ ಯಂತಾ ವಿಪ್ರ ಏಷಾಮಿತಿ ಶಂಸತಿ ವಾಯುರ್ವೈ ಯಂತಾ ವಾಯುನಾ ಹೀದಂ ಯತಮಂತರಿಕ್ಷಂ ನ ಸಮೃಚ್ಛತಿ ವಾಯುಮೇವ ತತ್ಕಲ್ಪಯತಿ ವಾಯುಮುಪೈತಿ ॥**

ಪಂಚಮೀಮೃಚಂ ದರ್ಶಯತಿ—ಇದಂ ದೃಶ್ಯಮಾನಂ ಸೂರ್ಯಚಂದ್ರನಕ್ಷತ್ರಾದಿಮಂಡಲಂ ಸರ್ವಂ ವಾಯುನಾ ಯತಂ ನಿಯಮಿತಂ ಸದಂತರಿಕ್ಷಂ ನ ಸಮೃಚ್ಛತಿ ಸಮ್ಯಙ್ನಪ್ರಾಪ್ನೋತಿ ॥ ವಾಯುನಿಯಮಾಭಾವೇ ಸಮ್ಯಕ್ಪ್ರಾಪ್ತ್ಯಭಾವಾದಂತರಿಕ್ಷಸ್ಯ ನಿರವಧಿಕತ್ವೇನ ತಸ್ಮಿನ್ಯತ್ರ ಕ್ವಾಪಿ ಗಚ್ಛೇದಿತ್ಯರ್ಥಃ ॥ ತಸ್ಮಾದ್ವಾಯುರೇವ ನಿಯಂತಾ ॥

ಈಗ ಐದನೆಯ ಋಕ್ಕಾದ **ಸ ಯಂತಾ ವಿಪ್ರ** (ಋ. ಸಂ. ೩-೧೩-೩) ಎಂಬ ಮಂತ್ರವನ್ನು ಪಠಿಸುವನು. ಇಲ್ಲಿ **ಯಂತಾ** ಎಂದರೆ ಈ ಜಗತ್ತಿನ ನಿಯಂತೃವು ವಾಯು ದೇವತೆಯೆಂದು ಹೇಳಲ್ಪಡುವುದು. ವಾಯುವು ಅಂತರಿಕ್ಷಕ್ಕೆ ನಿಯಂತೃವು ಎಂದರೆ ಪಾಲಕನು. ವಾಯುವಿನ ಮತ್ತು ಅಂತರಿಕ್ಷದ ನಿಯಮನವಿಲ್ಲದಿದ್ದರೆ ಸೂರ್ಯಚಂದ್ರಾದಿಮಂಡಲಗಳೆಲ್ಲವೂ ತಮ್ಮ ತಮ್ಮ ಮಾರ್ಗಗಳನ್ನು ಅತಿಕ್ರಮಿಸಿ ಹೋಗುವ ಸಂಭವವಿದೆ. ಆದ್ದರಿಂದ ಅಂತರಿಕ್ಷದ ಪಾಲಕನಾದ ವಾಯುದೇವತಾಕವಾದ ಮಂತ್ರಪಠನದಿಂದ ವಾಯುದೇವತೆಯ ಉಚ್ಚಸ್ಥಾನವನ್ನು ಪಡೆಯುವನು.

**ಋತಾವಾ ಯಸ್ಯ ರೋದಸೀ ಇತಿ ಶಂಸತಿ ದ್ಯಾವಾಪೃಥಿವೀ ವೈ ರೋದಸೀ ದ್ಯಾವಾಪೃಥಿವೀ ಏವ ತತ್ಕಲ್ಪಯತಿ ದ್ಯಾವಾಪೃಥಿವೀ ಅಪ್ಯೇತಿ ॥**

**ಷಷ್ಠೀಮೃಚಂ ದರ್ಶಯತಿ — ರೋದಃಶಬ್ದವಾಚ್ಯತ್ವಂ ದ್ಯಾವಾಪೃಥಿವ್ಯೋರ್ಲೋಕೇಽಪಿ ಪ್ರಸಿದ್ಧಂ ॥**

ಆರನೆಯ ಋಕ್ಕಾದ **ಋತಾವಾ ಯಸ್ಯ ರೋದಸೀ** (ಋ. ಸಂ. ೩-೧೩-೨) ಎಂಬ ಮಂತ್ರವನ್ನು ಪಠಿಸುವನು. ಇಲ್ಲಿ **ರೋದಸೀ** ಎಂದರೆ ದ್ಯಾವಾಪೃಥಿವೀ (ಭೂಮ್ಯಾಕಾಶಗಳು) ಈ ಮಂತ್ರಾದಿದೇವತೆಯಾಗಿ ದ್ಯಾವಾಪೃಥಿವಿಗಳನ್ನು ಭಾವಿಸಿ ಪಠಿಸುವುದರಿಂದ ದ್ಯಾವಾಪೃಥಿವಿಗಳಲ್ಲಿ ಉತ್ತಮಸ್ಥಾನವನ್ನು ಪಡೆಯುವನು.

**ನೂ ನೋ ರಾಸ್ವ ಸಹಸ್ರವತ್ತೋಕವತ್ಪುಷ್ಟಿಮದ್ವಸ್ವಿತ್ಯುತ್ತಮಯಾ ಪರಿದಧಾತಿ ಸಂವತ್ಸರೋ ವೈ ಸಮುಸ್ತಃ ಸಹಸ್ರವಾಂಸ್ತೋಕವಾನ್ಪುಷ್ಟಿಮಾನ್ಸಂವತ್ಸರಮೇವ ತತ್ಸಮುಸ್ತಂ ಕಲ್ಪಯತಿ ಸಂವತ್ಸರಂ ಸಮುಸ್ತಮುಪ್ಯೇತಿ ॥**

**ಸಪ್ತಮೀಮೃಚಂ ದರ್ಶಯತಿ — ಚೈತ್ರಾದಿ ಫಾಲ್ಗುನಾಂತಃ ಸಮುಸ್ತಃ ಸಂವತ್ಸರಃ ಸಹಸ್ರಾದಿವಿಶೇಷಣಯುಕ್ತಃ । ಸಂವತ್ಸರೇಣ ಹಿ ಧನಿಕಾನಾಂ ವೃದ್ಧಿಃ ಸಹಸ್ರಸಂಖ್ಯಾಕಾ ಸಂಪದ್ಯತೇ ॥ ತೋಕಾನ್ಯಪತ್ಯಾನಿ ಗರ್ಭಧಾರಣಮಾರಭ್ಯ ಸಂವತ್ಸರಮಧ್ಯ ಏವೋತ್ಪದ್ಯಂತೇ ॥ ರೋಗೈಃ ಕೃಶಾನಾಂ ಶರೀರಾಣಾಮಾರೋಗ್ಯೇ ಸತಿ ಸಂವತ್ಸರಮಧ್ಯೇ ಪುಷ್ಟಿರ್ಭವತಿ ॥**

ಈಗ ಏಳನೆಯ ಮತ್ತು ಕೊನೆಯದಾದ **ನೂ ನೋ ರಾಸ್ವ** (ಋ. ಸಂ. ೩-೧೩-೭) ಎಂಬ ಮಂತ್ರವನ್ನು ಪಠಿಸಿ ಈ ಆಧಿದೈವತವೆಂಬ ಭಾಗಪಿವರಣೆಯನ್ನು ಸಮಾಪ್ತಿಗೊಳಿಸುವನು. ಈ ಮಂತ್ರಕ್ಕೆ ಸಂವತ್ಸರವೇ ಅಧಿದೇವತೆಯು. **ಸಮುಸ್ತಃ** ಎಂಬ ಶಬ್ದವೇ ಸಂವತ್ಸರವೆಂದು ಹೇಳಲ್ಪಡುವುದು. ಈ ಸಂವತ್ಸರದಲ್ಲಿ ಚೈತ್ರಾದಿಫಾಲ್ಗುನಾಂತ್ಯದವರೆಗೆ ಹನ್ನೆರಡು ಮಾಸಗಳಿರುವವು. ಈ ಹನ್ನೆರಡು ಮಾಸಗಳ ಕಾಲದಲ್ಲಿ ಪುರುಷನು ಧಾನ್ಯಾದಿಸಮೃದ್ಧಿಯನ್ನು ಹೊಂದುವನು. ಈ ಅವಧಿಯಲ್ಲಿ ಗರ್ಭಧಾರಣ ಮೊದಲುಗೊಂಡು ಪುತ್ರೋತ್ಪತ್ತಿಯು ಆಗುವುದರಿಂದ ಈ ಕಾಲವು ಸಂತಾನಾಭಿವೃದ್ಧಿಗೂ ಕಾರಣವಾಗಿರುವುದು ಮತ್ತು ಈ ಕಾಲದಲ್ಲಿ ಕಾರಣಾಂತರಿಂದ ವ್ಯಾಧಿಪೀಡಿತನಾದವನು ಬೇಗನೆ ಚೇತರಿಸಿಕೊಂಡು ಪೂರ್ವದಂತೆ ಧಷ್ಟಪುಷ್ಟವಾದ

ಶರೀರವುಳ್ಳವನಾಗಿ ಶೋಭಿಸುವನು. ಆದ್ದರಿಂದ ಸಮಸ್ತವೆಂಬ ಪದಕ್ಕೆ ಸಂವತ್ಸರ ಎಂಬ ಅಭಿಮಾನಿದೇವತೆಯೆಂದು ಭಾವಿಸಿ ಮಂತ್ರಪಠನಮಾಡುವ ಪುರುಷನು ಈ ಸಂವತ್ಸರಕಾಲದಲ್ಲಿ ಸಕಲಸಮೃದ್ಧಿಯನ್ನೂ ಪಡೆಯುವನು.

**ಯಾಜ್ಯಾಯಾ ಯಜತಿ ವೃಷ್ಟಿರ್ವೈ ಯಾಜ್ಯಾ ವಿದ್ಯುದೇವ ವಿದ್ಯು-ದ್ಧೀದಂ ವೃಷ್ಟಿಮನ್ನಾದ್ಯಂ ಸಂಪ್ರಯಚ್ಛತಿ ವಿದ್ಯುತಮೇವ ತತ್ಕಲ್ಪಯತಿ ವಿದ್ಯುತಮಪ್ಯೇತಿ ॥**

ಶಸ್ತ್ರಯಾಜ್ಯಾಂ ದರ್ಶಯತಿ—ಯಾಜ್ಯಯಾ ಪ್ರಕ್ಷಿಪ್ತಂ ಹವಿರ್ವೃಷ್ಟಿಪರ್ಯವಸಿತಂ ಭವತಿ ॥ ತಥಾ ಚ ಸ್ಮರ್ಯತೇ—

"ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ॥
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ" ಇತಿ ॥

ವೃಷ್ಟಿಶ್ಚ ವಿದ್ಯುತ್ಪುರಸ್ಸರತ್ವಾದ್ವಿದ್ಯುದೇವ । ಯಸ್ಮಾನ್ಮೇಘೇಷೂತ್ಪನ್ನಾ ವಿದ್ಯುದ್ವೃಷ್ಟಿಂ ಸಂಪಾದ್ಯ ತದ್ದ್ವಾರೇಣಾನ್ನಂ ಪ್ರಯಚ್ಛತಿ ತಸ್ಮಾದ್ವೃಷ್ಟಿರ್ವಿದ್ಯುದೇವ ॥

ಈಗ ಈ ಆಜ್ಯಶಸ್ತ್ರಮಂತ್ರದ ಯಾಜ್ಯಾಮಂತ್ರವನ್ನು ಪ್ರಶಂಸಿಸುವರು. ಅನಂತರ ಯಾಜ್ಯಾಮಂತ್ರದಿಂದ ಹೋಮ ಮಾಡುವನು. ಈರೀತಿ ಮಾಡುವ ಯಾಜ್ಯಾಹುತಿಯೇ ವೃಷ್ಟಿಪ್ರದವೆಂದು (ಮಳೆ ಹುಯ್ಯುವುದಕ್ಕೆ ಕಾರಣವೆಂದು) ತಿಳಿಯಬೇಕು. ಈ ವೃಷ್ಟಿಗೆ ವಿದ್ಯುತ್ತೇ ಕಾರಣವು. ಈ ವಿದ್ಯುತ್ತೇ ಮೇಘಗಳನ್ನು ಪ್ರಚೋದಿಸಿ ಮಳೆಗರೆಯುವಂತೆ ಮಾಡಿ ಆ ವೃಷ್ಟಿಯಿಂದ ಭೂಮಿಯಮೇಲೆ ಸಸ್ಯಾದಿಗಳು ಉತ್ಪನ್ನವಾಗಲೂ ಆ ಮೂಲಕ ಅನ್ನಾದ್ಯಾಹಾರಗಳು ದೊರೆಯುವಂತೆ ಆಗಲೂ ಕಾರಣವಾಗಿರುವುದು. ಆದ್ದರಿಂದ ಯಾಜ್ಯಾಮಂತ್ರಪೂರ್ವಕವಾದ ಆಹುತಿಯು ಅನ್ನಾದ್ಯಾಹಾರಪ್ರದವೆಂದೂ ಇದಕ್ಕೆ ವಿದ್ಯುತ್ತೇ ಪ್ರೇರಕವೆಂದೂ ಹೇಳಲ್ಪಡುವುದು. ಈ ವಿಷಯದಲ್ಲಿ—

ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।
ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥
(ಮನುಸಂಹಿತಾ ೩-೭೬)

ಎಂಬ ಮನುಶಾಸ್ತ್ರದ ಆಧಾರವಿರುವುದು. ಎಂದರೆ—ಯಜ್ಞಾದಿಗಳಲ್ಲಿ ದೇವತೆಗಳನ್ನುದ್ದೇಶಿಸಿ ಮಂತ್ರಪೂರ್ವಕವಾಗಿ ಅರ್ಪಿಸಲ್ಪಟ್ಟ ಆಹುತಿಗಳು ಸೂರ್ಯನನ್ನು ಸೇರುವವು. ಆ ಸೂರ್ಯನಿಂದ ವೃಷ್ಟಿಯು (ಮಳೆಯು) ಉಂಟಾಗುವುದು. ವೃಷ್ಟಿಯಿಂದ ಸಸ್ಯಾದಿ ಆಹಾರೋತ್ಪತ್ತಿಯೂ ಆಹಾರದಿಂದ ಪ್ರಜಾಭಿವೃದ್ಧಿಯೂ ಉಂಟಾಗುವುದು ಎಂದು.

**ಸ ಏವಂ ವಿದ್ವಾನೇತನ್ಮಯೋ ದೇವತಾಮಯೋ ಭವತಿ ಭವತಿ ॥**

ವೇದನಂ ಪ್ರಶಂಸತಿ—
ಏತನ್ಮಯೋ ವಸಂತಗ್ರೀಷ್ಮಾದಿವಿದ್ಯುದಂತವಸ್ತುಮಯೋ ಭೂತ್ವಾ ತದಭಿಮಾನಿದೇವತಾನಾಂ ಭೋಗಂ ಪ್ರಾಪ್ನೋತಿ ॥ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಮೇಲೆ ಹೇಳಿದ ಮಂತ್ರಗಳನ್ನು ಒಟ್ಟಾಗಿ ಪ್ರಶಂಸೆಮಾಡುವರು—ವಿವೇಕಿಯಾದ ಯಾವ ಪುರುಷನು ಇದುವರೆಗೂ ಹೇಳಿದ ಎಂದರೆ ವಸಂತಗ್ರೀಷ್ಮಾದಿವಿದ್ಯುದಂತದವರೆಗೆ ಹೇಳಿರುವ ಆಯಾ ಅಭಿಮಾನಿದೇವತೆಗಳನ್ನು ಧ್ಯಾನಿಸಿ ಮಂತ್ರಪಠನ ಪೂರ್ವಕವಾಗಿ ಕರ್ಮಗಳನ್ನು ಆಚರಿಸುವನೋ ಆ ಪುರುಷನು ಆಯಾ ಅಭಿಮಾನಿದೇವತೆಗಳ ಅನುಗ್ರಹಕ್ಕೆ ಪಾತ್ರನಾಗಿ ಆಯಾ ದೇವತೆಗಳಿಂದ ಲಬ್ಧವಾಗುವ ಭೋಗಭಾಗ್ಯಗಳಿಗೆ ಪಾತ್ರನಾಗಿ ಸುಖದಿಂದ ಜೀವಿಸುವನು.



*English Translation*

**(The meaning of the several verses of the Ajya Sukta)**

He repeats the "silent praise" in six padas. There are six seasons. By doing so he makes the seasons and enters them.

He repeats the Puroruk in twelve padas. There are twelve months. By doing so he makes the month and enters them.

He repeats, pra vo devaya. Pra is the air. For all beings go after air. By repeating this verse he makes the air. and enters it.

He repeats, didivansam. The sun is didaya, nothing is earlier than the sun. By repeating this verse he makes the sun and enters it.

He repeats, sa nah s'armani vitaye. S'armani (places of refuge) means Agni. He gives nourishment. By repeating this verse he makes Agni and enters Agni.

He repeats, uta no brahman. The moon is Brahma. By repeating this verse he makes the moon and enters her.

He repeats, sa yanta, Vayu is yanta (the restrainer); for by Vayu (wind) the universe is kept up, who prevents the air from gathering in the atmosphere only. By repeating this verse he makes Vayu and enters him.

He repeats, ritava yasya rodasi. Heaven and earth are the two rodas. Thus he makes heaven and earth and enters them.

He concludes with the verse, nu no rasva. The year is a whole with thousend-fold gifts, produces, and well-being. Thus he makes the year as a whole and enters it.

He repeats a Yajya mantra. The Yajya is rain, (and rain is) lightning. For lightning (produces) rain, and rain gives food. Thus he makes lightning and enters it. He who has such a knowledge becomes identified with all these things and with the deities.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದಶಮಾಧ್ಯಾಯಸ್ಯ ನವಮಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ದಶಮಾಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಹತ್ತನೆಯ ಅಧ್ಯಾಯದಲ್ಲಿ ಒಂಭತ್ತಯ ಖಂಡವು ಸಮಾಪ್ತವಾದುದು.

ಹತ್ತನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ಏಕಾದಶಾಧ್ಯಾಯೇ ಪ್ರಥಮಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ ಅಧ್ಯಾಯ—ಪ್ರಉಗಶಸ್ತ್ರ, ವಷಟ್ಕಾರ, ನಿವಿನ್ಮಂತ್ರಗಳು ]



[ ಪ್ರಥಮಖಂಡ—ಪ್ರಉಗಶಸ್ತ್ರ ಮತ್ತು ಆಶಸ್ತ್ರಮಂತ್ರದ ದೇವತೆಗಳು ]



ಗ್ರಹೋಕ್ಥಂ ವಾ ಏತದ್ಯತ್ಪ್ರಉಗಂ ನವ ಪ್ರಾತರ್ಗ್ರಹಾ ಗೃಹ್ಯಂತೇ
ನವಭಿರ್ಬಹಿಷ್ಪವಮಾನೇ ಸ್ತುವತೇ ಸ್ತುತೇ ಸ್ತೋಮೇ ದಶಮಂ
ಗೃಹ್ಣಾತಿ ಹಿಂಕಾರ ಇತರಾಸಾಂ ದಶಮಃ ಸೋ ಸಾ ಸಂಮಾ ॥

ಆಹಾವಂ ನಿವಿದಃ ಸೂಕ್ತಮುಚ್ಛಾವಾಕಸ್ಯ ಚೋದನಂ ॥
ಯಜಮಾನಪುನರ್ಜನ್ಮ ಬ್ರುವತೇ ಸಾಧಿದೈವತಂ ॥ ೧ ॥

ಇತ್ಥಮಾಜ್ಯಶಸ್ತ್ರಂ ನಿರೂಪ್ಯ ಪ್ರಉಗಶಸ್ತ್ರಂ ನಿರೂಪಯಿತುಂ ಪ್ರಸ್ತೌತಿ- ಪ್ರಉಗಾಖ್ಯಂ ಯಚ್ಛಸ್ತ್ರಮಸ್ತಿ ತದ್ಗ್ರಹೋಕ್ಥಂ ವೈ ॥ ಐಂದ್ರವಾಯವಾದಿಗ್ರಹಾಣಾಂ ಉಕ್ಥಂ ಗ್ರಹೋಕ್ಥಂ ತದೀಯದೇವತಾ ಪ್ರಶಂಸಾರೂಪಮಿತ್ಯರ್ಥಃ ॥ ನವೇತ್ಯಾದಿನಾ ಗ್ರಹಸಂಬಂಧ ಏವ ಸ್ಪಷ್ಟೀಕ್ರಿಯತೇ ॥ ಪ್ರಾತಃ ಸವನ ಐಂದ್ರವಾಯವಮೈತ್ರಾವರುಣಾದಯಃ ಧಾರಾಗ್ರಹಾ ನವಸಂಖ್ಯಾಕಾ ಗೃಹ್ಯಂತೇ ॥ ಗೃಹೀತಾಶ್ಚಾಧ್ವರ್ಯುಣಾ ॥ ತಥಾ ಬಹಿಷ್ಪವಮಾನಾಖ್ಯೇ ಸ್ತೋತ್ರ ಉದ್ಗಾತಾರೋ ನವಭಿರ್ನವಸಂಖ್ಯಾಕಾಭಿಃ ಋಗ್ಭಿಃ ಸ್ತುವತೇ ॥ ಉಪಾಸ್ಮೈ ಗಾಯತೇತ್ಯೇಕಸ್ತೃಚಃ ॥ ದವಿದ್ಯುತತ್ಯೇತಿ ದ್ವಿತೀಯಃ ॥ ಪವಸ್ವೇತಿ ತೃತೀಯಃ ॥ ಏತೇಷು ತ್ರಿಷು ತೃಚೇಷು ನವಸಂಖ್ಯಾಕಾ ಋಚೋ ವಿದ್ಯಂತೇ ॥ ತಾ ಆವೃತ್ತಿರಹಿತಾ ಗೀಯಂತೇ ॥ ಏವಂ ಸ್ತೋಮೇ ಬಹಿಷ್ಪವಮಾನಸ್ತೋತ್ರ ಉದ್ಗಾತೃಭಿಃ ಸ್ತುತೇ ಸತಿ ಅಧ್ವರ್ಯುರ್ದಶಮಂ ಗ್ರಹಮಾಶ್ವಿನಾಖ್ಯಂ ಗೃಹ್ಣಾತಿ ॥ ಯದ್ಯಪ್ಯಾಧ್ವರ್ಯವಯೋರ್ಮಂತ್ರಬ್ರಾಹ್ಮಣಕಾಂಡಯೋರಾಶ್ವಿನಗ್ರಹೋ ಧಾರಾಗ್ರಹೇಷು ತೃತೀಯತ್ವೇನಾಮ್ನಾತಸ್ತಥಾಪ್ಯಸೌ ದಶಮತ್ವೇನ ಗ್ರಹೀತವ್ಯಃ ॥ ಆಶ್ವಿನೋ ದಶಮೋ ಗೃಹ್ಯತೇ ತಂ ತೃತೀಯಂ ಜುಹ್ವತ ಇತಿ ಶ್ರುತ್ಯಂತರವಚನಾತ್ ॥ ತಥಾ ಚ ಗ್ರಹೇಷು ದಶಮಃ ಸಂಪನ್ನಃ ॥ ತಥೈವೇತರಾಸಾಂ ಬಹಿಷ್ಪವಮಾನಸ್ತೋತ್ರಗತಾನಾಂ ಋಚಾಂ ಹಿಂಕಾರೋ ದಶಮತ್ವೇನ ಗಣನೀಯಃ ॥ ತಥಾಸತಿ ಗ್ರಹಾಣಾಂ ಸ್ತೋತ್ರಿಯಾಣಾಂ ಚ ಸಂಖ್ಯಾ

**ಸಾಮ್ಯಂ ಭವತಿ ॥ ತದಿದಂ ಸೋಸಾ ಸಮ್ಮೇತಿ ವಾಕ್ಯೇನೋಚ್ಯತೇ ॥ ಉಕಾರೋ ನಿಪಾತಃ ಸಮುಚ್ಚಯಾರ್ಥಃ ಸ ಸ್ತ್ರೀಲಿಂಗಾಭ್ಯಾಂ ತಚ್ಛಬ್ದಾಭ್ಯಾಂ ಸಂಪದ್ಯತೇ ತಥಾ ಸತಿ ಸಾತ್ರ ಗ್ರಹ-ಸಂಖ್ಯಾ ಸಾ ಚ ಸ್ತೋತ್ರಿಯಸಂಖ್ಯೇತ್ಯುಕ್ತಂ ಭವತಿ ॥ ಸಮ್ಮೇತ್ಯತ್ರ ದ್ವಿತೀಯೋ ಮಕಾರಶ್ಛಾಂ-ದಸಃ ॥ ತಸ್ಮಿನ್ನಪಗತೇ ಸತಿ ಸಮಾ ತುಲ್ಯೇತ್ಯುಕ್ತಂ ಭವತಿ ॥ ಏವಂ ಯಥಾ ಸಾಂತಬಹಿಷ್ಪವ-ಮಾನಸ್ತೋತ್ರಸ್ಯ ಗ್ರಹಸಂಬಂಧಸ್ತಥಾ ಪ್ರಉಗಶಸ್ತ್ರಸ್ಯಾಪಿ ಗ್ರಹಸಂಬಂಧೋ ದ್ರಷ್ಟವ್ಯ ಇತ್ಯ-ಭಿಪ್ರಾಯಃ ॥**

ಇದುವರೆವಿಗೂ ಹಿಂದಿನ ಖಂಡದಲ್ಲಿ ಆಜ್ಯಶಸ್ತ್ರಮಂತ್ರ ಮತ್ತು ಅವುಗಳ ವಿಷಯವನ್ನು ವಿವರಿಸಿ ಈಗ ಪ್ರಉಗಶಸ್ತ್ರ ಮಂತ್ರಗಳನ್ನು ವಿವರಿಸಲು ಪ್ರಾರಂಭಿಸುವರು. **ಗ್ರಹೋಕ್ಥಂ ವಾ ಏತದ್ಯತ್ಪ್ರಉಗಂ**—ಇಲ್ಲಿ ಗ್ರಹವೆಂದರೆ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಸೋಮಾಹುತಿಗಳನ್ನು ಅರ್ಪಿಸುವುದಕ್ಕಾಗಿ ಪ್ರತಿದೇವತೆಗೂ ಬೇರೆಬೇರೆ ಸೋಮರಸವನ್ನು ತುಂಬಿ ಸಿದ್ಧಪಡಿಸಿರುವ ಪಾತ್ರೆಯು. ಈ ಒಂದೊಂದು ಪಾತ್ರೆ (ಗ್ರಹ)ಯಲ್ಲಿರುವ ಸೋಮರಸವನ್ನು ಪ್ರತ್ಯೇಕವಾಗಿ ಮಂತ್ರಪೂರ್ವಕವಾಗಿ ಹೋಮಮಾಡಬೇಕಾಗಿರುವುದು. ಹೀಗೆ ಹೋಮಮಾಡುವ ಮಂತ್ರಗಳಿಗೆ ಉಕ್ಥವೆಂದು ಹೇಳುವರು. ಉಕ್ಥವೆಂದರೆ ಸ್ತೋತ್ರವು. ಗ್ರಹೋಕ್ಥವೆಂದರೆ ಗ್ರಹಗಳನ್ನು (ಗ್ರಹಗಳನ್ನು ಉದ್ದೇಶಿಸಿರುವ ದೇವತೆಗಳನ್ನು) ಸ್ತುತಿಸುವ ಸ್ತೋತ್ರವು. ಇಲ್ಲಿ ಗ್ರಹೋಕ್ಥವೆಂದರೆ, ಪ್ರಉಗಶಸ್ತ್ರ ಎಂದು ಹೇಳಲ್ಪಡುವ ಶಸ್ತ್ರಮಂತ್ರವು ಎಂದು ಅರ್ಥವು. ಈ ಪ್ರಉಗಶಸ್ತ್ರಮಂತ್ರ ಪ್ರಕಾರ ನಾನಾ (ನಿರ್ದಿಷ್ಟ) ದೇವತೆಗಳನ್ನು ಒಂದೊಂದು ಮಂತ್ರದಿಂದ ಆಹ್ವಾನಮಾಡಿ ಹೋಮಮಾಡಲಾಗುವುದು. ಈಗ ಪ್ರಾತಸ್ಸವನಕಾಲದಲ್ಲಿ ಒಂಭತ್ತು ಗ್ರಹಗಳನ್ನು ಸಿದ್ಧಪಡಿಸಿ ಉಪಯೋಗಿಸುವರು. ಗ್ರಹವೆಂದರೆ—**ಗೃಹ್ಣಾತೀತಿ ಗ್ರಹಃ** ಹೋಮಾರ್ಥವಾಗಿ ಸ್ವೀಕರಿಸಿ ಸಿದ್ಧಪಡಿಸುವ ಪಾತ್ರೆಯು. ಹಿಂದೆ ಹೇಳಿದಂತೆ ಬಹಿಷ್ಪವಮಾನಶಸ್ತ್ರದಲ್ಲಿ ಒಂಭತ್ತು ಮಂತ್ರ ಅಥವಾ ಋಕ್ಕುಗಳಿರುವವು. ಅವು ಯಾವವೆಂದರೆ **ಉಪಾಸ್ಮೈ**—ಎಂಬ ಮೂರುಋಕ್ಕುಗಳು (ಸಾಮವೇದಸಂಹಿತಾ ಉತ್ತರಾರ್ಚಿಕಾ ೧-೧,೨,೩) **ದವಿದ್ಯುತತ್ಯಾ** ಎಂಬ ಮೂರು ಋಕ್ಕುಗಳು (ಸಾಮ. ಸಂ. ೨-೧,೨,೩) **ಪವಸ್ವ** ಎಂಬ ಮೂರುಋಕ್ಕುಗಳು (ಸಾಮ. ಸಂ. ೩-೧,೨,೩) ಒಟ್ಟು ಒಂಭತ್ತು ಋಕ್ಕುಗಳು. ಇವೇ ಬಹಿಷ್ಪವಮಾನವೆಂಬ ಆಜ್ಯಶಸ್ತ್ರದ ಒಂಭತ್ತು ಮಂತ್ರಗಳು. ಈ ಮಂತ್ರಗಳಲ್ಲಿ ಒಂದೊಂದನ್ನು ಉದ್ಗಾತೃವು ಪಠಿಸುವಾಗ ಅಧ್ವರ್ಯುವು ಒಂದೊಂದು ಗ್ರಹವನ್ನು ತೆಗೆದುಕೊಳ್ಳಬೇಕೆಂದು ಹೇಳಿರುವುದು. ಈ ಮಂತ್ರಗಳನ್ನು ಪಠಿಸುವಾಗ **ಹಿಂ** ಎಂಬ ಹಿಂಕಾರವನ್ನು ಸೇರಿಸಿ ಪಠಿಸುವರು. ಈ ಹಿಂಕಾರವೂ ಒಂದು ಪ್ರತ್ಯೇಕ ಮಂತ್ರವೆಂದು ಪರಿಗಣಿಸಲ್ಪಟ್ಟಿರುವುದು. ಆದ್ದರಿಂದ ಹಿಂದೆ ಹೇಳಿದ ಪ್ರಕಾರ ಒಂಭತ್ತು ಮಂತ್ರಗಳಿಂದ ಒಂಭತ್ತು ಗ್ರಹಗಳನ್ನು ತೆಗೆದುಕೊಂಡ ನಂತರ **ಹಿಂ** ಎಂಬ ಮಂತ್ರಪೂರ್ವಕವಾಗಿ ಹತ್ತನೆಯ ಗ್ರಹವನ್ನೂ ಎಂದರೆ ಆಶ್ವಿನಗ್ರಹವನ್ನು ತೆಗೆದುಕೊಳ್ಳುವ ರೂಢಿ ಇದೆ. ಈ ಹತ್ತುಗ್ರಹಗಳೂ ಇವುಗಳ ಹತ್ತು ಮಂತ್ರಗಳೂ ಸಮನಾಗಿರುವವು ಎಂದು ಹೇಳುವುದಕ್ಕಾಗಿಯೇ **ಸೋ ಸಾ ಸಂಮಾ**—ಈ ಹಿಂಕಾರವೆಂಬ ಮಂತ್ರವೂ ಹಿಂದಿನ ಮಂತ್ರಗಳೊಡನೆ ಸರಿಸಮಾನವಾಗಿರುವುದೆಂದು ಈ ವಾಕ್ಯದಿಂದ ಹೇಳಲಾಗಿದೆ. ಪ್ರಕೃತಸಂದರ್ಭದಲ್ಲಿ ಪ್ರಉಗ ಎಂಬ ಶಸ್ತ್ರಮಂತ್ರಕ್ಕೆ ಇಲ್ಲಿ **ಗ್ರಹೋಕ್ಥಂ** ಎಂದರೆ ಐಂದ್ರವಾಯುವಾದಿ ಗ್ರಹಗಳನ್ನು ಪ್ರಶಂಸಿಸುವ ಸ್ತೋತ್ರವೆಂದು ಹೆಸರಿನಿಂದ ಕರೆಯಲಾಗಿದೆ.

ಅಗ್ನಿಷ್ಟೋಮಯಾಗದಲ್ಲಿ (ಈಗ ವಿವರಿಸುತ್ತಿರುವ) ಒಟ್ಟು ೩೩ ಗ್ರಹಗಳಿರುವವು. ಅವು ಯಾವವೆಂದರೆ—ಪ್ರಾತಸ್ಸವನ ಕಾಲದಲ್ಲಿ ೨೪ ಗ್ರಹಗಳು ಅವು ಯಾವವೆಂದರೆ—ಉಪಾಂಶುಗ್ರಹ ಎಂಬುವುದು ಒಂದು; ಅಂತರ್ಯಾಮ, ಐಂದ್ರವಾಯುವ, ಮೈತ್ರಾವರುಣ, ಆಶ್ವಿನ, ಶುಕ್ರ, ಮಂಥೀ, ಆಗ್ರಯಣಃ, ಉಕ್ಥ್ಯಃ, ಧ್ರುವಃ ಎಂಬ ಒಂಭತ್ತು ಗ್ರಹಗಳೂ ಧಾರಾಗ್ರಹಗಳೆಂದು ಹೇಳಲ್ಪಡುವವು; ಇವುಗಳಲ್ಲದೆ ಋತುಗ್ರಹಗಳು ೧೨ ಮತ್ತು ಐಂದ್ರಾಗ್ನ, ವೈಶ್ವದೇವ ಎಂಬ ೨ ಗ್ರಹಗಳು. ಇವೆಲ್ಲವೂ ಸೇರಿ

೨೪ ಗ್ರಹಗಳಾಗುವವು. ಇವು (೨೪) ಪ್ರಾತಸ್ಸವನಕ್ಕೆ ಸಂಬಂಧಪಟ್ಟ ಗ್ರಹಗಳು. ಇನ್ನು ಮಾಧ್ಯಂದಿನಸವನಕ್ಕೆ ಸಂಬಂಧಪಟ್ಟ ಗ್ರಹಗಳು ಯಾವವೆಂದರೆ—ಮರುತ್ವತೀಯಾಃ ೩; ಮಾಹೇಂದ್ರ ೪; ಒಟ್ಟು ೭ ಗ್ರಹಗಳು ಮಾಧ್ಯಂದಿನಸವನಕ್ಕೆ ಸೇರಿದವುಗಳು. ತೃತೀಯಸವನಕ್ಕೆ—ಆದಿತ್ಯಃ, ಸಾವಿತ್ರಃ, ವೈಶ್ವದೇವಃ, ಪಾತ್ನೀವತಃ, ಹಾರಿಯೋಜನ ಎಂಬ ಐದು ಗ್ರಹಗಳು ತೃತೀಯ ಸವನಕ್ಕೆ ಸಂಬಪಟ್ಟವು.

ಅತ್ಯಗ್ನಿಷ್ಟೋಮವೆಂಬ ಯಾಗದಲ್ಲಿ ಹಿಂದೆ ಹೇಳಿರುವ ಗ್ರಹಗಳಲ್ಲದೆ ಇನ್ನೂ ನಾಲ್ಕು ಗ್ರಹಗಳು ಹೆಚ್ಚಾಗಿರುವವು. ಅವು ಯಾವವೆಂದರೆ—ಅಂಶು, ಅದಾಭ್ಯಃ, ದಧಿಗ್ರಹಃ ಮತ್ತು ಷೋಡಶೀ ಎಂದು.

ಹಿಂದೆ ಅಂತರ್ಯಾಮಾದಿ ಧ್ರುವಗ್ರಹದವರೆಗೆ ಇರುವ ಒಂಭತ್ತು ಗ್ರಹಗಳಿಗೆ ಧಾರಾಗ್ರಹಗಳೆಂದು ಹೆಸರು ಎಂದು ಹಿಂದೆ ಹೇಳಲಾಗಿದೆಯಷ್ಟೆ. ಆ ಹೆಸರು ಈ ಗ್ರಹಗಳಿಗೆ ಹೇಗೆ ಬಂದಿತೆಂಬ ವಿಷಯದಲ್ಲಿ ಕಾತ್ಯಾಯನ ಋಷಿಗಳು ಆ ಗ್ರಹಗಳ ಲಕ್ಷಣವನ್ನು ಹೀಗೆ ಹೇಳಿದಾರೆ—**ಉನ್ನೇತಾ ಆಧವನೀಯಕಲಶಾದುದಂಚೇನ ಸೋಮಮಾದಾಯ ಯಜಮಾನಹಸ್ತಸ್ಥಿತೇ ಹೋತೃಚಮಸೇ ನಿಗ್ರಾಭ್ಯಾಸ್ವಾಸಿಂಚತಿ । ತತಃ ಯಜಮಾನಃ ನಿಗ್ರಾಭ್ಯಾಃ ಪವಿತ್ರೇ ದ್ರೋಣಕಲಶಸ್ಯೋಪರಿ ಉದ್ಗಾತೃಭಿರ್ವಿಸ್ತಾರ್ಯ ಧೃತೇ ಆಸಿಂಚತಿ ಸಂತತಂ । ತತಃ ಸಂತತಂ ಸ್ರವಂತ್ಯಾ ಧಾರಾಯಾಃ ಸಕಾಶಾತ್ ಅಂತರ್ಯಾಮಾದೀನ್ ಧ್ರುವಗ್ರಹಾಂತಾನ್ ನವ ಗ್ರಹಾನ್ ಗೃಹ್ಣಾತೀತ್ಯತ ಏವೈತೇ ಧಾರಾಗ್ರಹಾ ಉಚ್ಯಂತೇ ॥** (ಕಾತ್ಯಾಯನ ಶ್ರೌತಸೂತ್ರ. ೯-೫-೧೭; ೬-೧) (ಆಪಸ್ತಂಬ ಶ್ರೌತಸೂತ್ರ. ೧೨-೧೨-೧೨ ಮತ್ತು ೧೩-೫ ಮತ್ತು ೧೨-೧೪-೧೧) ಇತ್ಯಾದಿ.

## ವಾಯವ್ಯಂ ಶಂಸತಿ ತೇನ ವಾಯವ್ಯ ಉಕ್ಥವಾನ್ ।

ಅಥ ಪ್ರಉಗಶಸ್ತ್ರೇ ವಿದ್ಯಮಾನಾನಾಂ ತೃಚಾಂ ಮಧ್ಯೇ ಪ್ರಥಮಂ ತ್ರ್ಯಚಂ ವಿಧತ್ತೇ—ವಾಯುದೇವತಾ ಯಸ್ಯ ತ್ರ್ಯಚಸ್ಯ ಸೋಽಯಂ ವಾಯವ್ಯೋ ವಾಯವಾಯಾಹಿ ದರ್ಶತೇತ್ಯಾದಿಕಸ್ತಂ ಶಂಸೇತ್ ॥ ತೇನ ಶಂಸನೇನ ವಾಯವ್ಯೋ ಗ್ರಹ ಉಕ್ತವಾಞ್ಛಸ್ತ್ರವಾನ್ಭವತಿ ॥ ಯದ್ಯಪಿ ವಾಯವ್ಯಃ ಪೃಥಗ್ಗ್ರಹೋ ನಾಸ್ತಿ ತಥಾಪ್ಯೈಂದ್ರವಾಯವಸ್ಯ ಗ್ರಹಸ್ಯ ಪೂರ್ವೋ ಭಾಗೋ ವಾಯವ್ಯ ಇತ್ಯುಚ್ಯತೇ ॥ ಸ ಚ ಪ್ರಥಮಮಾವಾಯೋ ಭೂಷ [೭-೯೨-೧] ಇತ್ಯನೇನ ಕೇವಲವಾಯುದೇವತಾಕೇನ ಮಂತ್ರೇಣ ಗೃಹ್ಯತೇ ॥ ತೇನ ವಾಯವ್ಯೋ ಭವತಿ ॥ ಪಶ್ಚಾದಿಂದ್ರವಾಯೂ ಇಮೇ ಸುತಾಃ [೧-೨-೪] ಇತ್ಯನೇನೇಂದ್ರಸಹಿತ ವಾಯುದೇವತಾಕೇನ ಮಂತ್ರೇಣ ಗೃಹ್ಯತೇ ॥ ತೇನೈಂದ್ರವಾಯವೋಽಪಿ ಭವತಿ॥ ಅತ ಏವ ವಾಯವೇ ದ್ವಿರ್ಗ್ರಹಣಂ ತೈತ್ತಿರೀಯಾ ಅಧೀಯತೇ–"ಸಕೃದಿಂದ್ರಾಯ ಮಧ್ಯತೋ ಗೃಹ್ಯತೇ ದ್ವಿರ್ವಾಯವೇ" ಇತಿ ॥ ತತ್ರ ಪ್ರಥಮಭಾಗರೂಪೋ ವಾಯವ್ಯೋ ಗ್ರಹಃ ಕೇವಲೇನ ವಾಯವ್ಯ ತ್ರ್ಯಚೇನ ಶಸ್ತ್ರವಾನ್ಸಂಪದ್ಯತೇ ॥

ಈಗ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವುದಕ್ಕೆ ಪ್ರಾರಂಭಮಾಡಿ ಮೊದಲನೆಯದಾದ **ವಾಯವ್ಯಂ** ಎಂದರೆ ವಾಯು ದೇವತಾಕವಾದ ತೃಚವನ್ನು (ತೃಚವೆಂದರೆ ಮೂರು ಋಕ್ಕುಗಳು) ಹೋತೃವು ಪಠಿಸುವನು. ಈ ತೃಚವು ಯಾವುದೆಂದರೆ—**ವಾಯವಾ ಯಾಹಿ ದರ್ಶತ** (ಋ. ಸಂ. ೧-೨-೧,೨,೩) ಎಂದು ಪ್ರಾರಂಭವಾಗುವ ಮೂರು ಋಕ್ಕುಗಳು. ಈ ಮೂರು ಋಕ್ಕುಗಳಿಗೂ ವಾಯುವು ದೇವತೆಯಾದ್ದರಿಂದ ಈ ಮಂತ್ರಪಠನದಿಂದ ವಾಯುವನ್ನು ಪ್ರಶಂಸೆಮಾಡಿದಂತಾಯಿತು. ಇಲ್ಲಿ

ಇನ್ನೊಂದು ಸಂಶಯವು ತಲೆದೋರುವುದು. ವಾಯುದೇವತೆಯು ಪ್ರತ್ಯೇಕವಾಗಿ ಗ್ರಹ (ಹೋಮಮಾಡುವ ಪಾತ್ರೆ)ಯನ್ನು ಹೊಂದಿಲ್ಲ. ಇಂದ್ರ ವಾಯು ಎಂಬ ದ್ವಿದೇವತ್ಯಗ್ರಹಗಳಲ್ಲಿ ವಾಯುದೇವತೆಯೂ ಒಬ್ಬನು. ಆದ್ದರಿಂದ ವಾಯುವಿಗೆ ಪ್ರತ್ಯೇಕ ಗ್ರಹವಿಲ್ಲ. ಆದ್ದರಿಂದ ವಾಯುವನ್ನು ಮಾತ್ರ ಸ್ತುತಿಸಿ ಗ್ರಹಪಾತ್ರೆಯನ್ನು ಸ್ವೀಕರಿಸುವಾಗ ಕೇವಲ ವಾಯುದೇವತಾಕವಾದ **ಆ ವಾಯೋ ಭೂಷ** (ಋ. ಸಂ. ೭-೯೨-೧) ಎಂಬ ಋಕ್ಕನ್ನು ಪಠಿಸಲಾಗುವುದು. ಇದರಿಂದ ಕೇವಲ ವಾಯುದೇವತಾಕವಾದ ಗ್ರಹವನ್ನು ಸ್ವೀಕರಿಸಿದಂತೆ ಆಗುವುದು. ಅನಂತರ ಇಂದ್ರದೇವತಾಕವಾದ ಗ್ರಹವನ್ನು ಸ್ವೀಕರಿಸುವಾಗ **ಇಂದ್ರವಾಯೂ ಇಮೇ ಸುತಾಃ** (ಋ. ಸಂ. ೧-೨-೪) ಎಂಬ ಮಂತ್ರವನ್ನು ಪಠಿಸುವುದರಿಂದ ಇಂದ್ರ ಮತ್ತು ವಾಯುದೇವತೆಗಳಿಬ್ಬರನ್ನೂ ಸ್ತುತಿಸಿದಂತಾಗುವುದು. ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯಲ್ಲಿ—**ಸಕೃದಿಂದ್ರಾಯ ಮಧ್ಯತೋ ಗೃಹ್ಯತೇ ದ್ವಿರ್ವಾಯವೇ** (ತೈ. ಸಂ. ೬-೪-೭-೪) ಎಂದು ಹೇಳಿರುವುದು. ಎಂದರೆ ದ್ವಿದೇವತ್ಯಗ್ರಹವಾದ ಐಂದ್ರವಾಯವಗ್ರಹ ಹೋಮಕಾಲದಲ್ಲಿ ಆ ಒಂದು ಗ್ರಹದಿಂದ ಮಧ್ಯಭಾಗದಲ್ಲಿ ಸೋಮವನ್ನು ತೆಗೆದುಕೊಂಡು ಇಂದ್ರನಿಗಾಗಿಯೂ ಎರಡಾವರ್ತಿ ತೆಗೆದುಕೊಂಡು, ವಾಯುವಿಗಾಗಿಯೂ ಹೋಮಮಾಡಬೇಕು. ಈ ದ್ವಿದೇತ್ಯಗ್ರಹವಾದ ಐಂದ್ರವಾಯುವ್ಯಗ್ರಹದಲ್ಲಿ ಮೊದಲಭಾಗವು ವಾಯುವಿಗೂ ಅನಂತರ ಇಂದ್ರನಿಗೂ ಸೇರಬೇಕು. ವಾಯುವಿಗೆ ಮೂರುಭಾಗವೂ ಇಂದ್ರನಿಗೆ ಒಂದುಭಾಗವೂ ಸೇರಬೇಕು. ಈ ಕ್ರಮವನ್ನನುಸರಿಸಿ ಹೋಮಮಾಡಬೇಕು.

ಈ ಪ್ರಉಗಶಸ್ತ್ರದ ವಿಚಾರದಲ್ಲಿ ಒಂದೆರಡು ವಿಷಯಗಳನ್ನು ಇಲ್ಲಿ ತಿಳಿಸಬೇಕಾಗಿದೆ. ಈ ಶಸ್ತ್ರವು ಸೋಮಾಭಿಷವಣದ ದಿವಸ ಪ್ರಾತಃಕಾಲದಲ್ಲಿ ಹೋತೃವಿನಿಂದ ಪಠಿಸಲ್ಪಡುವುದು. ಈ ಶಸ್ತ್ರಪಠನದಿಂದ ಯಜ್ಞಮಾಡುವ ಯಜಮಾನನಿಗೆ ಸಮೃದ್ಧಿಯಾದ ಅನ್ನಾದ್ಯಾಹಾರಗಳು ಲಭಿಸುವುವೆಂಬ ಭಾವನೆ ಇದೆ. ಈ ಶಸ್ತ್ರಮಂತ್ರಗಳಲ್ಲಿ ಅನೇಕದೇವತೆಗಳ ಪ್ರಶಂಸೆ ಇದೆ. ಈ ದೇವತೆಗಳ ಸ್ತೋತ್ರದಲ್ಲಿ ಏಳು ವಿಭಾಗಗಳಿವೆ. ಇವುಗಳ ಮಧ್ಯದಲ್ಲಿ ಇತರ ಸ್ತೋತ್ರಗಳಲ್ಲಿರುವಂತೆ ನಿವಿತ್, ಪ್ರಗಾಥ, ಧಾಯ್ಯ ಸೂಕ್ತ ಮೊದಲಾದವುಗಳನ್ನು ಸೇರಿಸಿ ಹೇಳಿವ ರೂಢಿ ಇಲ್ಲ. ಆದರೆ ದೇವತೆಗಳ ಪ್ರಶಂಸಾರೂಪವಾದ **ಪುರೋರುಕ್** ಎಂಬ ಶಬ್ದಗಳನ್ನೂ, ಹಿಂಕಾರವನ್ನೂ **ಶೋಂ ಸಾವೋಂ** ಮಂತ್ರಗಳ ಆದಿಯಲ್ಲಿ ಸೇರಿಸಿ ಪಠಿಸುವ ರೂಢಿ ಮೊದಲಿನಿಂದಲೂ ಇದೆ. ಉದಾಹರಣೆಗಾಗಿ ಈ ಏಳುಭಾಗಗಳ ಪ್ರಾರಂಭದಲ್ಲಿಯೂ ಈ ಪದಗಳನ್ನು ಸೇರಿಸಿ ಪಠಿಸುವ ಮಂತ್ರಗಳನ್ನು ಇಲ್ಲಿ ವಿವರಿಸಲಾಗಿದೆ. **ಪುರೋರುಕ್** ಮೊದಲಾದ ಪದಗಳ ವಿವರಣೆಯನ್ನು ಈ ಅಧ್ಯಾಯದ ಒಂಭತ್ತನೆಯ ಖಂಡದಲ್ಲಿ ತಿಳಿಸಲಾಗಿದೆ. ಈಗ ವಾಯುದೇವತಾಕವಾದ ಗ್ರಹಮಂತ್ರವು ಈರೀತಿ ಇರುವುದು –

**ಹಿಂ ಭೂರ್ಭುವಃ ಸ್ವರೋಂ ಶೋಂ ೩ ಸಾವೋಂ ವಾಯುರಗ್ರೇಗಾ ಯಜ್ಞಪ್ರೀಃ । ಸಾಕಂಗನ್ಮನಸಾ ಯಜ್ಞಂ । ಶಿವೋ ನಿಯುದ್ಭಿಃ ಶಿವಾಭಿೋಂ । ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।ತೇಷಾಂ ಪಾಹಿ ಶ್ರುಧೀ ಹವಂ ॥ ವಾಯ ಉಕ್ಥೇಭಿರ್ಜರಂತೇ ತ್ವಾಮಚ್ಛಾ ಜರಿತಾರಃ । ಸುತಸೋಮಾ ಅಹರ್ವಿದಃ ॥ ವಾಯೋ ತವ ಪ್ರಪೃಂಚತೀ ಧೇನಾ ಜಿಗಾತಿ ದಾಶುಷೇ । ಉರೂಚೀ ಸೋಮಪೀತಯೇ ॥** (ಋ. ಸಂ. ೧-೨-೧,೨,೩)

ಇದು ಪುರೋರುಕ್‌ಸಹಿತವಾದ ವಾಯುದೇವತಾತ್ಮಕನಾದ ತೃಚವು. ಇದರಂತೆ ಪ್ರಉಗಶಸ್ತ್ರದ ಪ್ರತಿವಿಭಾಗಕೂ ಆಯಾ ದೇವತಾತ್ಮಕವಾದ ಪುರೋರುಕ್‌ಸಹಿತವಾದ ತೃಚಗಳಿರುವವು. ಈ ಮಂತ್ರಗಳನ್ನು ಹೋತೃವು ಪಠಿಸುವನು. ಈ ರೂಢಿಯು ಬಹುಕಾಲದಿಂದಲೂ ನಡೆದುಬರುತ್ತಿರುವುದು.

## ಐಂದ್ರವಾಯವಂ ಶಂಸತಿ ತೇನೈಂದ್ರವಾಯವ ಉಕ್ಥವಾನ್

**ದ್ವಿತೀಯಂ ತ್ರ್ಯೃಚಂ ವಿಧತ್ತೇ-ಇಂದ್ರಶ್ಚ ವಾಯುಶ್ಚ ಮಿಲಿತ್ವಾ ದೇವತಾ ಯಸ್ಯ ತ್ರ್ಯೃಚಸ್ಯ ಸೋऽಯಮೈಂದ್ರವಾಯವ ಇಂದ್ರವಾಯೂ ಇಮೇ ಸುತಾಃ [೧-೨-೪] ಇತ್ಯಾದಿಕಸ್ತಂ ಶಂಸೇತ್ ॥ ತಚ್ಛಂಸನೇನೈಂದ್ರವಾಯುವಗ್ರಹಸ್ಯ ಉತ್ತರಭಾಗಃ ಶಸ್ತ್ರವಾನ್ಭವತಿ ॥**

ಈಗ ಎರಡನೆಯ ತೃಚವನ್ನು ವಿವರಿಸುವರು. ಈ ತೃಚದಲ್ಲಿ ಇಂದ್ರ ಮತ್ತು ವಾಯು ಎಂಬ ಎರಡು ದೇವತೆಗಳ ಪ್ರಶಂಸೆ ಇದೆ. ಇದು ದ್ವಿದೇವತ್ಯಗ್ರಹ ಮಂತ್ರವೆಂದು ಹೇಳಲ್ಪಡುವುದು. **ಇಂದ್ರ ವಾಯೂ ಇಮೇ ಸುತಾಃ** (ಋ. ಸಂ. ೧-೨-೪,೫,೬) ಎಂಬುದೇ ಈ ತೃಚವು. ಇದನ್ನು ಪಠಿಸುವುದರಿಂದ ಐಂದ್ರವಾಯವಗ್ರಹದ ಉತ್ತರಭಾಗವು ಪಠಿಸಿದಂತಾಗುವುದು. ಮೊದಲಿನ ವಾಯುದೇವತಾತ್ಮಕಮಾತ್ರವಾದ ತೃಚವನ್ನು ಮೇಲೆ ಹೇಳಲಾಗಿದೆ. ಈಗ ಈ ತೃಚದ ಪುರೋರುಕ್ ಮತ್ತು ಮಂತ್ರವು ಈರೀತಿ ಇದೆ—

**ಶೋಂ೩ ಶಾವೋಂ೩ ಹಿರಣ್ಯವರ್ತನೀ ನರಾ ದೇವಾ ಪತೀ ಅಭಿಷ್ಟಯೇ । ವಾಯುಃ-ಶ್ಚೇಂದ್ರಶ್ಚ ಸುಮುಖೋಂ೩ ॥ ಇಂದ್ರವಾಯೂ ಇಮೇ ಸುತಾ ಉಪಪ್ರಯೋಭಿರಾಗತಂ । ಇಂದವೋ ವಾಮುಶಂತಿ ಹಿ ॥ ವಾಯವಿಂದ್ರಶ್ಚ ಚೇತಥಃ ಸುತಾನಾಂ ವಾಜಿನೀವಸೂ । ತಾವಾ ಯಾತಮುಪ ದ್ರವತ್ ।.ವಾಯವಿಂದ್ರಶ್ಚ ಸುನ್ವತ ಆಯಾತಮುಪ ನಿಷ್ಕೃತಂ। ಮಕ್ಷ್ವಿ೩ತ್ಥಾ ಧಿಯಾ ನರಾ ॥** (ಋ. ಸಂ. ೧-೨-೪,೫,೬)

ಇದು ಪುರೋರುಕ್ ಸಹಿತವಾದ ಐಂದ್ರವಾಯವಗ್ರಹದ ಪ್ರಸಂಸೆಯು. ಇದು ಪ್ರಉಗಶಸ್ತ್ರದ ಎರಡನೆಯ ಭಾಗವು. ಇದನ್ನು ಹೋತೃವು ಪಠಿಸುವನು.

## ಮೈತ್ರಾವರುಣಂ ಶಂಸತಿ ತೇನ ಮೈತ್ರಾವರುಣ ಉಕ್ಥವಾನ್ ॥

**ತೃತೀಯಂ ತ್ರ್ಯೃಚಂ ವಿಧತ್ತೇ — ಮಿತ್ರೋ ವರುಣಶ್ಚ ಮಿಲಿತ್ವಾ ದೇವತಾ ಯಸ್ಯ ತ್ರ್ಯೃಚಸ್ಯ ಸೋऽಯಂ ಮೈತ್ರಾವರುಣೋ ಮಿತ್ರಂ ಹುವೇ ಪೂತದಕ್ಷಂ [೧-೨-೭] ಇತ್ಯಾದಿಕಃ॥ ಶಂಸತೀತ್ಯಾದಿಕಂ ಪೂರ್ವವದ್ಯೋಜ್ಯಂ ॥**

ಮೈತ್ರಾವರುಣ ಗ್ರಹವೆಂದರೆ ಮಿತ್ರ ಮತ್ತು ವರುಣ ಎಂಬ ಇಬ್ಬರು ದೇವತೆಗಳು ಸೇರಿರುವ ದ್ವಿದೇವತ್ಯಗ್ರಹವು ಈ ಮೈತ್ರಾವರುಣ ಗ್ರಹಪಠನದಿಂದ ಮಿತ್ರಾವರುಣ ದೇವತೆಗಳು ಸುಪ್ರೀತರಾಗುವರು. ಮಂತ್ರವು ಈರೀತಿ ಇರುವುದು.

**ಶೋಂ೦೩ ಸಾವೋಂ೩ ಕಾವ್ಯಾ ರಾಜಾನಾ ಕ್ರತ್ವಾ ದಕ್ಷಸ್ಯ ದುರೋಣೇ । ರಿಶಾದಸಾ ಸಧಸ್ಥ ಓಂ೩ ॥ ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ । ಧಿಯಂ ಘೃತಾಚೀಂ ಸಾಧಂತಾ। ಋತೇನ ಮಿತ್ರಾವರುಣಾವೃತಾ ವೃಧಾ ವೃತಸ್ಪೃಶಾ । ಕ್ರತುಂ ಬೃಹಂತಮಾಶಾಥೇ ॥ ಕವೀ ನೋ ಮಿತ್ರಾವರುಣಾ ತವಿಜಾತಾ ಉರುಕ್ಷಯಾ । ದಕ್ಷಂ ದಧಾತೇ ಅಪಸಂ ॥**

(ಋ. ಸಂ. ೧-೨-೭,೮,೯)

ಇದು ಪುರೋರುಕ್‌ಸಹಿತವಾದ ಮೈತ್ರಾವರುಣ ಗ್ರಹಮಂತ್ರವು. ಇದನ್ನು ಹೋತೃವು ಪಠಿಸುವನು.

## ಆಶ್ವಿನಂ ಶಂಸತಿ ತೇನಾಶ್ವಿನ ಉಕ್ಥವಾನ್ ।

**ಚತುರ್ಥಂ ತ್ರ್ಯೃಚಂ ವಿಧತ್ತೇ — ಆಶ್ವಿನೌ ಮಿಳಿತ್ವಾ ದೇವತಾ ಯಸ್ಯ ತ್ರ್ಯೃಚಸ್ಯ ಸೋಽಯಮಾಶ್ವಿನೋಽಶ್ವಿನಾ ಯಜ್ವರೀರಿಷಃ [೧-೩-೧] ಇತ್ಯಾದಿಕಃ ॥**

ಅನಂತರ ಆಶ್ವಿನಗ್ರಹಮಂತ್ರವನ್ನು ಹೋತೃವು ಪಠಿಸುವನು. ಇದರಿಂದ ಅಶ್ವಿನೀ ದೇವತಾಕವಾದ ಮೂರು ಋಕ್ಕುಗಳಿರುವ ಮಂತ್ರವನ್ನು ಪಠಿಸಿದಂತಾಗುವುದು.

**ಶೋಂ೩ಸಾವೋಂ ೩ ದೈವ್ಯಾ ಅಧ್ವರ್ಯೂ ಆಗತಂ ರಥೇನ ಸೂರ್ಯತ್ವಚಾ । ಮಧ್ವಾ ಯಜ್ಞಂ ಸಮಂಜಾಥೋಂ೩ ॥ ಅಶ್ವಿನಾ ಯಜ್ವರೀರಿಷೋ ದ್ರವತ್ಪಾಣೀ ಶುಭಸ್ಪತೀ । ಪುರುಭುಜಾ ಚನಸ್ಯ ತಂ ॥ ಅಶ್ವಿನಾ ಪುರುದಂಸಸಾ ನರಾ ಶವೀರಯಾ ಧಿಯಾ । ಧಿಷ್ಣ್ಯಾ ವನತಂ ಗಿರಃ । ದಸ್ರಾ ಯುವಾ ತವಃ ಸುತಾ ನಾಸತ್ಯಾ ವೃಕ್ತಬರ್ಹಿಷಃ । ಆ ಯಾತಂ ರುದ್ರವರ್ತನೀ ॥**
(ಋ. ಸಂ. ೧-೩-೧,೨,೩)

ಅಶ್ವಿನೀ ದೇವತೆಗಳನ್ನು ಸ್ತುತಿಸುವ ಈ ಮೂರು ಋಕ್ಕುಗಳು ಆಶ್ವಿನಗ್ರಹತೃಚವೆಂದು ಹೇಳಲ್ಪಡುವುದು. ಇದನ್ನು ಹೋತೃವು ಪಠಿಸುವನು.

## ಐಂದ್ರಂ ಶಂಸತಿ ತೇನ ಶುಕ್ರಮಂಥಿನಾ ಉಕ್ಥವಂತೌ ॥

**ಪಂಚಮಂ ತ್ರ್ಯೃಚಂ ವಿಧತ್ತೇ—ಇಂದ್ರೋ ದೇವತಾ ಯಸ್ಯ ತೃಚಸ್ಯ ಸೋಽಯಮೈಂದ್ರ ಇಂದ್ರಾಽಽಯಾಹಿ ಚಿತ್ರಭಾನೋ [೧-೩-೪] ಇತ್ಯಾದಿನ್ಯೈಂದ್ರಸ್ತ್ರ್ಯೃಚಃ । ತೇನ ಶುಕ್ರಗ್ರಹಮಂಥಿಗ್ರಹಯೋರುಭಯೋಃ ಶಸ್ತ್ರವತ್ತ್ವಂ ॥**

ಇಂದ್ರದೇವತಾತ್ಮಕವಾದ ಮಂತ್ರಕ್ಕೆ ಐಂದ್ರಿಋಕ್ ಎಂದು ಹೆಸರು. ಈ ತೃಚದ ಪಠನದಿಂದ ಶುಕ್ರಗ್ರಹ ಮತ್ತು ಮಂಥೀಗ್ರಹಗಳನ್ನು ಪ್ರಶಂಸಿಸಿದಂತಾಗುವುದು.

**ಶೋಂ೩ಸಾವೋಂ೩ ಇಂದ್ರ ಉಕ್ಥೇಭಿರ್ಮಂದಿಷ್ಠೋ ವಾಜಾನಾಂ ಚ ವಾಜಪತಿಃ । ಹರಿವಾಂ ಸುತಾನಾಂ ಸ ಖೋಂ । ಇಂದ್ರಾಯಾ ಹಿ ಚಿತ್ರಭಾನೋ ಸುತಾ ಇಮೇ ತ್ವಾಯವಃ । ಅಣ್ವೀಭಿಸ್ತನಾ ಪೂತಾಸಃ ॥ ಇಂದ್ರಾಯಾಹಿ ಧಿಯೋ ಷಿತೋ ವಿಪ್ರಜೂತಃ ಸುತಾವತಃ । ಉಪ ಬ್ರಹ್ಮಾಣಿ ವಾಘತಃ ॥ ಇಂದ್ರಾ ಯಾಹಿ ತೂತುಜಾನ ಉಪ ಬ್ರಹ್ಮಾಣಿ ಹರಿವಃ। ಸುತೇ ದಧಿಷ್ವ ನಶ್ಚನಃ ॥ (ಋ.ಸಂ. ೧-೩-೪, ೫, ೬).**

ಈ ತೃಚವನ್ನು ಪಠಿಸುವುದರಿಂದ ಶುಕ್ರ ಮತ್ತು ಮಂಥೀಗ್ರಹಗಳನ್ನು ಪ್ರಶಂಸಿಸಿದಂತಾಗುವುದು. ಇದನ್ನು ಹೋತೃವು ಪಠಿಸುವನು.

## ವೈಶ್ವದೇವಂ ಶಂಸತಿ ತೇನಾಗ್ರಯಣ ಉಕ್ಥವಾನ್ ॥

ಓಮಾಸಶ್ಚರ್ಷಣೀಧೃತ ಎಂದು ಪ್ರಾರಂಭವಾಗುವ ಮೂರು ಋಕ್ಕುಗಳು ವೈಶ್ವದೇವಸ್ತೃಚವು. ಇದು ಅಗ್ರಯಣ ಗ್ರಹದ ಪ್ರಶಂಸೆಯು. ಮತ್ತು ಇದು ವೈಶ್ವದೇವತಾಕವಾದ್ದರಿಂದ ವಿಶ್ವದೇವತೆಗಳನ್ನೂ ಸ್ತುತಿಸಿದಂತಾಗುವುದು. ಗ್ರಹಗಳಿಗೂ ಮಂತ್ರದಲ್ಲಿ ನಿರ್ದಿಷ್ಟರಾದ ದೇವತೆಗಳಿಗೂ ಪರಸ್ಪರ ಸಂಬಂಧವಿರುವುದು. ಎಂದರೆ ಮಂತ್ರದಲ್ಲಿ ನಿರ್ದಿಷ್ಟರಾದ ದೇವತೆಗಳೇ ಆಯಾ ಗ್ರಹಗಳಿಗೂ ದೇವತೆಗಳಾಗಿರುವರು.

**ವೈಶ್ವದೇವಂ ಶಂಸತಿ ತೇನಾಗ್ರಯಣ ಉಕ್ಥವಾನ್ ॥**

ಷಷ್ಠೀ ತೃಚಂ ವಿಧತ್ತೇ— ಓಮಾಸಶ್ಚರ್ಷಣೀಧೃತಃ [೧-೩-೭] ಇತ್ಯೇಷ ವೈಶ್ವದೇವಸ್ತೃಚಃ ॥ ತೇನಾಽಽಗ್ರಯಣಗ್ರಹಸ್ಯ ಶಸ್ತ್ರವತ್ತ್ವಂ ತಥಾಪಿ ವಿಶ್ವೇದೇವದೇವತಾಕತ್ವಾದ್ವೈಶ್ವದೇವಂ ॥ ಏವಂ ಸರ್ವತ್ರ ಗ್ರಹಶಸ್ತ್ರಯೋರೇಕದೇವತಾಕತ್ವಂ ದ್ರಷ್ಟವ್ಯಂ ॥

ಓಮಾಸಶ್ಚರ್ಷಣೀಧೃತಃ ಎಂಬ ಮೂರು ಋಕ್ಕುಗಳು ವಿಶ್ವೇದೇವತೆಗಳನ್ನು ಸ್ತುತಿಸುವ ಮಂತ್ರಗಳು. ಇವುಗಳನ್ನು ಪಠಿಸುವುದರಿಂದ ಆಗ್ರಯಣಗ್ರಹಗಳನ್ನು ಪ್ರಶಂಸಿಸಿದಂತಾಗುವುದು. ಈ ವೈಶ್ವದೇವಮಂತ್ರಗಳಿಗೂ ಆಗ್ರಯಣಗ್ರಹಗಳಿಗೂ ಯಾವಾಗಲೂ ಸಂಬಂಧವಿರುವುದು. ಆ ಮಂತ್ರಗಳು ಯಾವವೆಂದರೆ—

ಶೋಂ೩ಸಾವೋಂ೩ ವಿಶ್ವಾನ್ದೇವಾನ್ ಹವಾಮಹೇಽಸ್ಮಿನ್ಯಜ್ಞೇ ಸುಪೇಶಸಃ । ತ ಇಮಂ ಯಜ್ಞಮಾಗಮನ್ । ದೇವಾಸೋ ದೇವ್ಯಾಧಿಯಾ । ಜುಷಾಣಾ ಅಧ್ವರೇ ಸದೋ ಯೇ ಯಜ್ಞಸ್ಯ ತನೂಕೃತಃ । ವಿಶ್ವ ಆಸೋಮಪೀತಯೋಂ೩ । ಓಮಾಸಶ್ಚರ್ಷಣೀಧೃತೋ ವಿಶ್ವೇ ದೇವಾಸ ಆ ಗತ । ದಾಶ್ವಾಂಸೋ ದಾಶುಷಃ ಸುತಂ ॥ ವಿಶ್ವೇ ದೇವಾಸೋ ಅಪ್ತುರಃ ಸುತಮಾಗಂತ ತೂರ್ಣಯಃ । ಉಸ್ರಾ ಇವ ಸ್ವಸರಾಣಿ ॥ ವಿಶ್ವೇ ದೇವಾಸೋ ಅಸ್ರಿಧ ಏಹಿಮಾಯಾಸೋ ಅದ್ರುಹಃ । ಮೇಧಂ ಜುಷಂತ ವಹ್ನಯಃ ॥ (ಋ. ಸಂ. ೧-೩-೭,೮,೯)

ಈ ಮಂತ್ರದ ಪುರೋರುಕ್‌ಸಹಿತವಾದ ವಿಶ್ವೇದೇವತಾತ್ಮಕವಾದ ತೃಚವು. ಇದನ್ನು ಪಠಿಸುವುದರಿಂದ ಅಗ್ರಯಣ ಗ್ರಹಗಳನ್ನು ಪ್ರಶಂಸಿಸಿದಂತಾಗುವುದು.

**ಸಾರಸ್ವತಂ ಶಂಸತಿ ನ ಸಾರಸ್ವತೋ ಗ್ರಹೋಽಸ್ತಿ ವಾಕ್ತು ಸರಸ್ವತೀ ಯೇ ತು ಕೇ ಚ ವಾಚಾ ಗ್ರಹಾ ಗೃಹ್ಯಂತೇ ತೇಽಸ್ಯ ಸರ್ವೇ ಶಸ್ತ್ರೋಕ್ಥಾಃ ॥**

ಸಪ್ತಮಂ ತೃಚಂ ವಿಧತ್ತೇ—ಪಾವಕಾ ನಃ ಸರಸ್ವತೀ [೧-೩-೧೦] ಇತ್ಯಾದಿಕಃ ಸಾರಸ್ವತಃ ಸ್ತೃಚಃ ॥ ನನು ಪೂರ್ವವದತ್ರಾಪಿ ಗ್ರಹಸ್ಯ ಶಸ್ತ್ರವತ್ತ್ವಂ ಕುತೋ ನೋಪನ್ಯಸ್ಯತ ಇತ್ಯಾಶಂಕ್ಯಾಹ—ಅಧ್ವರ್ಯವಮಂತ್ರಕಾಂಡೇ ಸಾರಸ್ವತಮಂತ್ರಸ್ಯಾಪಠಿತತ್ವಾದ್ಬ್ರಾಹ್ಮಣೇ ವಿಧ್ಯಭಾವಾಚ್ಚ ಗ್ರಹಾಭಾವಃ ॥ ತರ್ಹಿ ಗ್ರಹೋಕ್ಥೇಽಸ್ಮಿನ್ನಸ್ಯ ಸಾರಸ್ವತಸ್ಯ ತೃಚಸ್ಯ ಕಿಮರ್ಥಂ ಶಂಸನಮಾಮ್ನಾತಮಿತ್ಯಾಶಂಕ್ಯಾಽಽಹ—ಸರಸ್ವತೀ ಹಿ ವಾಗ್ದೇವತಾ । ಗ್ರಹಾಣಾಂ ಚ ವಾಚಾ ಗೃಹ್ಯಮಾಣತ್ವಾತ್ಸಾರಸ್ವತತ್ವಂ ॥ ತೇನ ಸರ್ವೇಽಪಿ ಗ್ರಹಾಃ ಶಸ್ತ್ರೋಕ್ಥಾಃ ಪಠಿತಶಸ್ತ್ರಾ ಭವಂತಿ ॥

ಪಾವಕಾನಃ ಸರಸ್ವತೀ ಎಂದು ಮೊದಲಾಗುವ ಮೂರು ಋಕ್ಕುಗಳು ಸಾರಸ್ವತ ತೃಚವು. ಆದರೆ ಸಾರಸ್ವತ ಗ್ರಹ ಎಂಬ ಪ್ರತ್ಯೇಕಗ್ರಹವಿರುವುದಿಲ್ಲ. ಆಧ್ವರ್ಯವಕಾಂಡದಲ್ಲಿಯೂ ಬ್ರಾಹ್ಮಣದಲ್ಲಿಯೂ ಸಾರಸ್ವತಗ್ರಹ ಸಂಬಂಧವಾದ ವಿಧಿಯು ಕಂಡುಬರುವುದಿಲ್ಲ. ಆದರೂ ಶಸ್ತ್ರಮಂತ್ರಗಳಲ್ಲಿ ಸಾರಸ್ವತಸ್ತೃಚವನ್ನು ಪಠಿಸುವ ರೂಢಿ ಇರುವುದು ಪ್ರತ್ಯೇಕಗ್ರಹ ವಿಲ್ಲದಿದ್ದಮೇಲೆ ಸಾರಸ್ವತಮಂತ್ರವನ್ನು ಏತಕ್ಕೆ ಪಠಿಸಬೇಕು ಎಂಬ ಶಂಕೆಯು ಉಂಟಾದಲ್ಲಿ ಅದಕ್ಕೆ ಸಮಾಧಾನವನ್ನು ಹೇಳುವರು—ಸರಸ್ವತಿಯು ವಾಗ್ದೇವತೆಯು ಎಂದರೆ ಮಂತ್ರರೂಪವಾದ ವಾಕ್ಯಗಳಿಗೆ ಅಭಿಮಾನಿದೇವತೆಯು ಗ್ರಹಮಂತ್ರ ಗಳನ್ನೆಲಾ ವಾಕ್ಯಾಭಿಮಾನಿಯಾದ ಸರಸ್ವತೀದೇವತಾಸಂಬಂಧ ಮಂತ್ರಗಳನ್ನೂ ಪಠಿಸುವುದು ನ್ಯಾಯವಾಗಿದೆ. ಮತ್ತು ಮಂತ್ರಾಭಿಮಾನಿಯಾದ ಸಾರಸ್ವತಮಂತ್ರಗಳನ್ನು ಪಠಿಸುವುದರಿಂದ ಎಲ್ಲಾ ಗ್ರಹಗಳನ್ನೂ ವಾಕ್ಯರೂಪವಾದ ಮಂತ್ರಗಳಿಂದ ಸ್ತುತಿಸಿದಂತಾಗುವುದು. ಆದ್ದರಿಂದ ಸಾರಸ್ವತಸ್ತೃಚವನ್ನು ಪಠಿಸುವುದು ಯುಕ್ತವು. ಆ ಮಂತ್ರವು ಯಾವುವೆಂದರೆ—

**ಶೋಂ ೩ ಸಾವೋಂ ೦೩ ವಾಚಮುಹಂ ದೇವೀಂ ವಾಚಸ್ಮಿನ್ಯಜ್ಞೇ ಸುಪೇಶಸಾ ಸರಸ್ವತೀಂ ಹವಾಮಹೋಂ । ಪಾವಕಾನಃ ಸರಸ್ವತೀ ವಾಜೇಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ॥ ಚೋದಯಿತ್ರೀ ಸೂನೃತಾನಾಂ ಚೇತಂತೀ ಸುಮತೀನಾಂ । ಯಜ್ಞಂ ದಧೇ ಸರಸ್ವತೀ ॥ ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿರಾಜತಿ ॥**

(ಋ. ಸಂ ೧-೩-೧೦, ೧೦, ೧೨)

ಇದು ಸರಸ್ವತೀ ದೇವತಾಕವಾದ ತೃಚವು ಎಂದರೆ ಮೂರು ಋಕ್ಕುಗಳು.

**ಉಕ್ಥಿನೋ ಭವಂತಿ ಯ ಏವಂ ವೇದ ॥**

**ವೇದನಂ ಪ್ರಶಂಸತಿ—ತಸ್ಯ ವೇದಿತುಃ ಸರ್ವೇ ಗ್ರಹಾಃ ಶಸ್ತ್ರವಂತೋ ಭವಂತಿ ಗ್ರಹ-ದೇವತಾಸ್ತುಷ್ಯಂತೀತ್ಯರ್ಥಃ ॥**

ಈ ಪ್ರಉಗ ಶಾಸ್ತ್ರದಲ್ಲಿ ಒಟ್ಟು ಒಂಬತ್ತು ಗ್ರಹಗಳಿರುವವು. ಅವು ಯಾವವೆಂದರೆ—ಉಪಾಂಶು, ಅಂತರ್ಯಾಮ, ವ್ಯಾಯವ್ಯ, ಐಂದ್ರವಾಯವ, ಮೈತ್ರಾವರಣ, ಆಶ್ವಿನ ಶುಕ್ರ ಮಂಥೀ ಆಗ್ರಯಣ. ಈ ಗ್ರಹಗಳಿಂದ ಮಾಡುವ ಆಹುತಿಗಳು ಬಹಿಷ್ಪವಮಾನ ಮತ್ತು ಪ್ರಉಗಶಸ್ತ್ರಮಂತ್ರಗಳಿಗೆ ಸಂಬಂಧಪಟ್ಟವು. ಈ ವಿಷಯಗಳನ್ನೆಲ್ಲಾ ಯಾವ ಪುರುಷನು ತಿಳಿದು ಅದರಂತೆ ಆಚರಿಸುವನೋ ಅವನು ಆಯಾ ಗ್ರಹಗಳ ಮತ್ತು ದೇವತೆಗಳ ಸ್ತೋತ್ರಗಳನ್ನು ವಿಧಿವತ್ತಾಗಿ ಪಠಿಸಿದಂತೆ ಆಗುವನು.

*English Translation*

**(The Pra-uga Shastra. Vashatkara. The Nivids)**

**The Pra-uga Shastra**

The Pra-uga Shastra is the recitation appropriate to the Soma offerings from the Grahas. Nine such Grahas are taken at the morning. With nine verses forming the Bahish-pavamana chant, they are praised by singers. After the singers have finished their chant, the adhvaryu takes the tenth Graha (for the Asvins); the sound "him" uttered by singers when chanting the other verses,

counts as the tenth part. Thus, an equality, of the Grahas and verses of the chant is obtained.

The Hotar repeats a triplet addressed to Vayu (1, 2, 1-3). By this the Vayu graha is celebrated. He repeats a triplet addressed to Indra-Vayu (1, 2, 4-6). By this the Indra-Vayn graha is celebrated. He repeats a triplet addressed to Mitra-Varuna. By this the Mitra-Varuna graha is celebrated. He repeats a triplet addressed to the As'vins (1, 3, 1-3). By this the As'vin graha is celebrated. He repeats a triplet addressed to Indra (1, 3, 4-6). By this the Sukra and Manti grahas are celebrated. He repeats a triplet addressed to the Visve Devah (1, 3, 7-9). By this the Agrayana graha is celebrated. He repeats a triplet addressed to Sarasvati graha (no such vessel as in the other cases). Sarsvati is speech. Whatever grahas are taken by means of speech (under recital of a mantra), all these are celebrated by means of Shastras. He who has such a knowledge gets (thus) celebrated (all his Grahas).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



## ಅಥ ಏಕಾದಶಾಧ್ಯಾಯೇ ದ್ವಿತೀಯಃ ಖಂಡಃ

### ಹನ್ನೊಂದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ ಪ್ರಉಗಶಸ್ತ್ರದ ನಾನಾಭಾಗಗಳ ಅರ್ಥವು ಮತ್ತು ವಿವರಣೆಯು ]

---

ಅನ್ನಾದ್ಯಂ ವಾ ಏತೇನಾವರುಂಧೇ ಯತ್ಪ್ರಉಗಮನ್ಯಾನ್ಯಾ ದೇವತಾ
ಪ್ರಉಗೇ ಶಸ್ಯತೇಽನ್ಯದನ್ಯದುಕ್ಥಂ ಪ್ರಉಗೇ ಕ್ರಿಯತೇ ||

ವಿಹಿತಂ ಪ್ರಉಗಶಸ್ತ್ರಂ ಪ್ರಶಂಸತಿ—ಯದೇತತ್ಪ್ರ ಉಗಾಖ್ಯಂ ಶಸ್ತ್ರಮಸ್ತಿ ತದೇತ-
ದತ್ತುಂ ಯೋಗ್ಯಸ್ಯಾನ್ನಸ್ಯ ಸಾಧನಮುತಸ್ತೇನಾನ್ನಂ ಪ್ರಾಪ್ನೋತಿ || ಯಸ್ಮಾದಸ್ಮಿನ್ಶಸ್ತ್ರೇ ಪೃಥ-

**ಗೇವ ದೇವತಾ ಶಸ್ಯತೇ ॥ ಪ್ರಥಮತೃಚೇ ಕೇವಲೋ ವಾಯುರ್ದ್ವಿತೀಯಸ್ಮಿನ್ನಿಂದ್ರವಾಯೂ ತೃತೀಯಸ್ಮಿನ್ ಮಿತ್ರಾವರುಣಾದಿರ್ದೇವತಾಭೇದಃ ॥ ಯಥೈವ ದೇವತಾ ಭಿದ್ಯತೇ ತಥೈತಸ್ಮಿನ್ಶಸ್ತ್ರೇಽನ್ಯದನ್ಯದುಕ್ಥಂ ವಾಯವಾಯಾಹೀಂದ್ರವಾಯೂ ಇತ್ಯಾದಿಕಂ ಪರಸ್ಪರವಿಲಕ್ಷಣಂ ಶಸ್ತ್ರಾಂಗಂ ಕ್ರಿಯತೇ ॥ ತಸ್ಮಾದೋದನಶಾಕಸೂಪಾದಿವಿಲಕ್ಷಣಭಕ್ಷ್ಯಭೋಜ್ಯಲೇಹ್ಯಪೇಯಚೋಷ್ಯಸಾಮ್ಯಾದನ್ನಾದ್ಯಹೇತುತ್ವಂ ಯುಕ್ತಂ ॥**

ಈಗ ಪ್ರಉಗಶಸ್ತ್ರವನ್ನು ವಿಶೇಷರೀತಿಯಿಂದ ಪ್ರಶಂಸೆ ಮಾಡುವರು—ಈ ಪ್ರಉಗ ಎಂಬ ಶಸ್ತ್ರವು ಮನುಷ್ಯರಿಗೆ ಆಹಾರಾರ್ಥವಾಗಿ ಯಾವ ಯಾವ ವಸ್ತುಗಳಿರುವವೋ ಅವುಗಳಿಗೆ ಸಾಧನರೂಪವಾಗಿರುವುದು. ಆದ್ದರಿಂದ ಈ ಶಸ್ತ್ರಪಠನದಿಂದ ಅನ್ನಾದ್ಯಾಹಾರಗಳು ಲಭಿಸುವವು. ಈ ಶಸ್ತ್ರಮಂತ್ರದಲ್ಲಿ ಒಂದೇ ದೇವತೆಯ ಸ್ತೋತ್ರಗಳಿರುವುದಿಲ್ಲ. ಬೇರೆ ಬೇರೆ ದೇವತೆಗಳ ಪ್ರಶಂಸೆಗಳಿರುವವು. ಮೊದಲಿನ ತೃಚದಲ್ಲಿ ವಾಯುದೇವತೆಯ ಪ್ರಶಂಸೆ ಇರುವುದು. ಎರಡನೆಯ ತೃಚದಲ್ಲಿ ಇಂದ್ರ ಮತ್ತು ವಾಯು ಎಂಬ ಎರಡುದೇವತೆಗಳ ಪ್ರಶಂಸೆ ಇರುವುದು. ಮೂರನೆಯ ತೃಚದಲ್ಲಿ ಮಿತ್ರಾವರುಣರ ಪ್ರಶಂಸೆ ಇರುವುದು ಇತ್ಯಾದಿ. ಈ ರೀತಿ ದೇವತಾ ಭೇದಗಳಿಗನುಸಾರವಾಗಿ ಸ್ತೋತ್ರಮಂತ್ರಗಳೂ ಬೇರೆ ಬೇರೆಯಾಗಿರುವವು. ಈ ಮಂತ್ರಗಳು ಒಂದಕ್ಕೊಂದು ಸಂಬಂಧವಿಲ್ಲದೆ ಪರಸ್ಪರ ವಿಲಕ್ಷಣಗಳಾಗಿರುವವು. **ವಾಯವಾಯಾಹಿ** ಎಂಬುದು ಮೊದಲಿನ ತೃಚವು **ಇಂದ್ರವಾಯೂ** ಎಂಬುದು ಎರಡನೆಯ ತೃಚವು ಇತ್ಯಾದಿ. ಹೀಗೆ ಪರಸ್ಪರ ಭಿನ್ನವಾಗಿರುವುದರಿಂದ ಈ ಭಿನ್ನಮಂತ್ರಗಳಿಂದ ಲಭಿಸುವ ಅನ್ನಾದ್ಯಾಹಾರಗಳೂ ಭಿನ್ನಭಿನ್ನವಾಗಿಯೇ ಇರುವವು. ಕೇವಲ ಅನ್ನವೊಂದೇ ಆಹಾರವೆನಿಸುವುದಿಲ್ಲ. ಆದಕ್ಕೆ ಸಹಾಯಕವಾಗಿ ಅನ್ನ ಹುಳಿ, ಪಲ್ಯ ತೊವ್ವೆ ಶಾಕಗಳು ಇವೆಲ್ಲವೂ ಸೇರಿ ಆಹಾರವೆನಿಸುವುದು. ಇವೆಲ್ಲವೂ, ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ ಮೊದಲಾದ ಷಡ್ರಸೋಪೇತವಾದ ಭೋಜನವೆನಿಸುವುದು. ಇದನ್ನೆಲ್ಲಾ ಹೊಂದಿಸುವುದಕ್ಕೆ ಸಾಧನವಾಗಿ ನಾನಾವಿಧ ಮಂತ್ರಗಳೂ ಈ ಶಸ್ತ್ರಮಂತ್ರದಲ್ಲಿ ಸೇರಿಸುವವು.

ಅನ್ಯದನ್ಯದಸ್ಯಾನ್ನಾದ್ಯಂ ಗೃಹೇಷು ಧ್ರಿಯತೇ ಯ ಏವಂ ವೇದ ॥

ವೇದನಂ ಪ್ರಶಂಸತಿ—ಅನ್ಯದನ್ಯತ್ಪರಸ್ಪರವಿಲಕ್ಷಣಂ ಮಧುರಾಮ್ಲಾದಿರೂಪಂ ॥

ಈ ಮಂತ್ರಗಳ ಫಲವನ್ನು ಹೇಳುವರು—ಈ ಪರಸ್ಪರ ವಿಲಕ್ಷಣವಾದ ಮಂತ್ರಗಳಿಂದ ಮಧುರಾದಿ ನಾನಾವಿಧ ಅನ್ನಗಳು ಲಭಿಸುವುವೆಂದು ಯಾವ ಪುರುಷನು ತಿಳಿದು ಅದರಂತೆ ಆಚರಿಸುವನೋ ಆ ಪುರುಷನು ವಿವಿಧರೂಪವಾದ ಅನ್ನದ್ಯಾಹಾರಗಳನ್ನು ಪಡೆದು ಸುಖಿಸುವನು.

ಏತದ್ಧ ವೈ ಯಜಮಾನಸ್ಯಾಧ್ಯಾತ್ಮತಮಮಿವೋಕ್ಥಂ ಯತ್ಪ್ರಉಗಂ
ತಸ್ಮಾದೇನೇನೈತದುಪೇಕ್ಷ್ಯತಮಮಿವೇತ್ಯಾಹುರೇತೇನ ಹ್ಯೇನಂ
ಹೋತಾ ಸಂಸ್ಕರೋತೀತಿ ॥

**ಪ್ರಕಾರಾಂತರೇಣ ಪ್ರಉಗಂ ಪ್ರಶಂಸತಿ—ಪ್ರಉಗಾಖ್ಯಂ ಯಚ್ಛಸ್ತ್ರಮಸ್ತಿ ಏತದೇವ ಯಜಮಾನಸ್ಯ ಅಧ್ಯಾತ್ಮತಮಮಿವ ॥ ಆತ್ಮಾನಂ ಶರೀರಮಧಿಕೃತ್ಯ ವರ್ತತ ಇತ್ಯಧ್ಯಾತ್ಮಂ ಶರೀರಸಂಬಂಧೀತ್ಯರ್ಥಃ ॥ ಪೂರ್ವತ್ರಾಽಽಜ್ಯಶಸ್ತ್ರಸ್ಯ ಯಜಮಾನಶರೀರನಿಷ್ಪತ್ತಿಹೇತುತ್ವಾಭಿಧಾನಾತ್ತದಪ್ಯಧ್ಯಾತ್ಮಂ ॥ ಇದಂ ತೂತ್ಪನ್ನಸ್ಯ ಶರೀರಸ್ಯ ಸಂಸ್ಕಾರತ್ವಾದತಿಶಯೇನೈನಾ-**

ಧ್ಯಾತ್ಮಂ ॥ ಯಸ್ಮಾದೇವಂ ತಸ್ಮಾದನೇನ ಯಜಮಾನೇನೈತತ್ಪ್ರಉಗಶಸ್ತ್ರಮುಪೇಕ್ಷ್ಯತಮುಮಿನಾತಿಶಯೇನೋಪ ಸಮೀಪ ಈಕ್ಷಣೀಯಮಾದರಣೀಯಮಿತ್ಯರ್ಥಃ ॥ ಇತ್ಯೇವಮಭಿಜ್ಞಾ ಆಹುಃ । ತೇಷಾಮಯಮಭಿಪ್ರಾಯಃ । ಏತೇನ ಪ್ರಉಗಶಸ್ತ್ರೇಣೈನಂ ಯಜಮಾನಮಾಜ್ಯಶಸ್ತ್ರಾದುತ್ಪನ್ನಂ ಹೋತಾ ಸಂಸ್ಕರೋತಿ ತಸ್ಮಾದಾದರಣಂ ಯುಕ್ತಂ ॥

ಈ ಪ್ರಉಗಶಸ್ತ್ರವನ್ನು ಪ್ರಕಾರಾಂತರವಾಗಿ ಎಂದರೆ ಬೇರೆವಿಧವಾಗಿ ಪ್ರಶಂಸೆಮಾಡುವರು. ಈ ಪ್ರಉಗಶಸ್ತ್ರವು ಯಜಮಾನನನ್ನು ಅಧ್ಯಾತ್ಮತಮವಾಗಿಯೂ ರಕ್ಷಿಸುವುದು. ಅಧ್ಯಾತ್ಮವೆಂದರೆ—ಶರೀರಮಧಿಕೃತ್ಯ ವರ್ತತ ಇತ್ಯಧ್ಯಾತ್ಮಂ । ಶರೀರಕ್ಕೆ ಸಂಬಂಧಪಟ್ಟ ವಿಷಯಗಳನ್ನೊಳಗೊಂಡಿರುವುದಕ್ಕೆ ಅಧ್ಯಾತ್ಮವೆಂದು ಹೆಸರು. ಹಿಂದೆ ಆಜ್ಯಶಸ್ತ್ರದಲ್ಲಿ ಹೇಳಿರುವ ವಿಷಯಗಳು ಯಜಮಾನನ ನಿಷ್ಪತ್ತಿಗೆ ಕಾರಣಭೂತವಾಗಿರುವುದರಿಂದ ಅವು ಅಧ್ಯಾತ್ಮವೆಂದು ಹೇಳಲಾಗಿದೆ. ಈ ರೀತಿ ಆಧ್ಯಾತ್ಮಿಕವಾಗಿ ಹೊಸದಾಗಿ ಉತ್ಪನ್ನವಾಗಿರುವುದೆಂದು ಹೇಳಲಾಗಿದೆ. ಈಗ ಆ ರೀತಿ ಉತ್ಪನ್ನವಾದ ಶರೀರಕ್ಕೆ ಅನ್ನಾದ್ಯಾಹಾರಗಳಿಂದ ಸಂಸ್ಕಾರರೂಪವಾದ ಅಭಿವೃದ್ಧಿಯಾಗುವುದು. ಈ ವಿಷಯವನ್ನು ಎಂದರೆ ಯಜಮಾನನ ಶರೀರಕ್ಕೆ ಸಂಬಂಧಪಟ್ಟ ಅವಯವಾದಿಗಳ ಶಕ್ತಿಸಾಮರ್ಥ್ಯಗಳನ್ನು ಪ್ರಉಗಶಸ್ತ್ರವು ಹೇಗೆ ಅಭಿವೃದ್ಧಿಮಾಡುವುದೆಂದು ಮುಂದೆ ವಿವರಿಸಲಾಗುತ್ತದೆ.

**ವಾಯವ್ಯಂ ಶಂಸತಿ ತಸ್ಮಾದಾಹುರ್ವಾಯುಃ ಪ್ರಾಣಃ ಪ್ರಾಣೋ ರೇತೋ ರೇತಃ ಪುರುಷಸ್ಯ ಪ್ರಥಮಂ ಸಂಭವತಃ ಸಂಭವತೀತಿ ಯದ್ವಾಯವ್ಯಂ ಶಂಸತಿ ಪ್ರಾಣಮೇವಾಸ್ಯ ತತ್ಸಂಸ್ಕರೋತಿ ॥**

ಅಥ ಪ್ರಥಮಂ ತ್ರೃಚಂ ವಿಹಿತಮನೂದ್ಯ ಸ್ತೌತಿ—ಪೂರ್ವೋಕ್ತೋ ವಿಧಿರ್ವಾಯವ್ಯಂ ಶಂಸತೀತಿ ವಾಕ್ಯೇನಾನೂದ್ಯತೇ ॥ ಯಸ್ಮಾದ್ವಾಯವ್ಯಂ ಶಂಸನೀಯಂ ತಸ್ಮಾದಭಿಜ್ಞಾ ಏವಮಾಹುಃ ಪ್ರಾಣಸ್ಯ ವಾಯುಕಾರ್ಯತ್ವೇನ ವಾಯುರೇವ ಪ್ರಾಣಃ ॥ ರೇತಸಃ ಪ್ರಾಣಧಾರಕಶರೀರನಿಷ್ಪಾದಕತ್ವಾದ್ರೇತಃ ಪ್ರಾಣಃ ಪ್ರಾಣಸ್ವರೂಪಂ ॥ ತತ್ಸದೃಶಂ ರೇತಃ ಸಂಭವತ ಉತ್ಪಾದ್ಯಮಾನಸ್ಯ ಪುರುಷಸ್ಯ ದೇಹಸ್ಯ ಕಾರಣತ್ವೇನ ಪಿತೃದೇಹೇ ಪ್ರಥಮಂ ಸಂಭವತಿ ॥ ಏವಮಭಿಜ್ಞೈರುಕ್ತತ್ವಾದ್ವಾಯವ್ಯಸ್ತ್ರೃಚಃ ಸಮೀಚೀನಃ ॥ ತಚ್ಛಂಸನೇನ ಹೋತಾ ಯಜಮಾನಸ್ಯ ಪ್ರಾಣಮೇವ ಸಂಸ್ಕರೋತಿ ॥

ಈಗ ಮೊದಲನೆಯ ತೃಚದಲ್ಲಿ ಎಂದರೆ ವಾಯುದೇವತೆಯನ್ನು ಉದ್ದೇಶಿಸಿ ಪಠಿಸಲಾಗುವ ಮೊದಲಿನ ಮೂರು ಋಕ್ಕುಗಳನ್ನು ಪ್ರಶಂಸಿಸುವರು—ಈ ಪ್ರಉಗ ಶಸ್ತ್ರಮಂತ್ರದಲ್ಲಿ ಮೊದಲಿನ ತೃಚವೇ ವಾಯುದೇವತಾತ್ಮಕವಾದುದು. ಏಕೆಂದರೆ ಪ್ರಾಣವು ವಾಯುರೂಪದಿಂದ ದೇಹದಲ್ಲಿ ನೆಲೆಸಿ ಸಂಚರಿಸುವುದರಿಂದ ತಿಳಿದವರು ವಾಯುವನ್ನೇ ಪ್ರಾಣವೆಂದು ಹೇಳುವರು. ಈ ಪ್ರಾಣಕ್ಕೆ ಆಧಾರಭೂತವಾದುದೇ ಶರೀರವು. ಈ ಶರೀರೋತ್ಪಾದನೆಗೆ ರೇತಸ್ಸೇ (ಪುರುಷನ ವೀರ್ಯವೇ) ಕಾರಣಭೂತವಾಗಿರುವುದು. ಎಂದರೆ ಪ್ರಾಣಸ್ವರೂಪವಾಗಿರುವ ಈ ವಿಧವಾದ ರೇತಸ್ಸು ತಂದೆಯ ದೇಹದಲ್ಲಿ ಮೊದಲು ಉತ್ಪನ್ನವಾಗುವುದು. ಆ ತಂದೆಯಲ್ಲಿ ಉಂಟಾಗುವ ಪ್ರಾಣರೂಪವಾದ ರೇತಸ್ಸೇ ಮುಂದೆ ಬೀಜರೂಪವಾಗಿ ಮುಂದೆ ಹುಟ್ಟತಕ್ಕ ಪುರುಷನಿಗೆ ಕಾರಣವಾಗಿರುವುದು. ಎಂದು ಈ ವಿಷಯವನ್ನು ತಿಳಿದವರು ಹೇಳುವರು. ಆದ್ದರಿಂದ ಹೋತೃವು ವಾಯುದೇವತಾಕವಾದ ತೃಚವನ್ನು ಪಠಿಸುವುದರಿಂದ ಯಜ್ಞಮಾಡುವ ಯಜಮಾನನಲ್ಲಿ ಎಂದರೆ ಯಜಮಾನನ ಶರೀರದಲ್ಲಿ ಪ್ರಾಣವನ್ನು ಸ್ಥಾಪಿಸಿದಂತಾಗುವುದು.

ಇಲ್ಲಿ ಒಂದು ವಿಷಯವನ್ನು ವಿವರಿಸಬೇಕಾಗಿದೆ. ಯಜ್ಞಮಾಡುವ ಯಜಮಾನ, ಅವನ ಶರೀರ ಮತ್ತು ಆ ಶರೀರದಲ್ಲಿ ಪ್ರಾಣ ಮೊದಲಾದವು ನೆಲೆಸಿದ್ದರೂ ಅವು ಯಜ್ಞಾರ್ಹವಾಗಿರುವುದಿಲ್ಲ. ಆ ಪ್ರಾಣಾದಿಗಳನ್ನು ಮಂತ್ರಾದಿಗಳಿಂದ ಸಂಸ್ಕಾರ ಮಾಡಿ ಯಜ್ಞಾರ್ಹವಾಗುವಂತೆ ಶುದ್ಧಿಮಾಡಬೇಕಾಗಿರುವುದು. ಆದಕ್ಕಾಗಿಯೇ ಪ್ರಾಣಾದಿಗಳಿಗೆ ಮುಖ್ಯದೇವತೆಯಾದ ವಾಯು ಮುಂತಾದ ದೇವತೆಗಳನ್ನು ವಿಧಿವತ್ತಾಗಿ ಪಠಿಸಿ ಯಜಮಾನನ ಅವಯವಗಳನ್ನು ಸಂಸ್ಕಾರದಿಂದ ಶುದ್ಧಿಮಾಡಲಾಗುವುದು. ಈ ವಿಧಾನವನ್ನೇ ಎಂದರೆ ಯಾವ ಯಾವ ದೇವತೆಗಳನ್ನು ಯಾವ ಯಾವ ಮಂತ್ರಗಳಿಂದ ಹೇಗೆ ಸಂಸ್ಕಾರ ಮಾಡಬೇಕೆಂಬ ಕ್ರಮವನ್ನು ಇಲ್ಲಿಯೂ ಮುಂದೂ ತಿಳಿಸಲಾಗಿದೆ.

**ಐಂದ್ರವಾಯವಂ ಶಂಸತಿ ಯತ್ರ ವಾವ ಪ್ರಾಣಸ್ತದಪಾನೋ ಯದ್ಯೈಂದ್ರವಾಯವಂ ಶಂಸತಿ ಪ್ರಾಣಾಪಾನಾವೇವಾಸ್ಯ ತತ್ಸಂಸ್ಕರೋತಿ ॥**

**ದ್ವಿತೀಯಂ ವಿಧಿಮನೂದ್ಯ ಸ್ತೌತಿ—ಉಚ್ಛ್ವಾಸರೂಪಃ ಪ್ರಾಣೋ ಯತ್ರಾಸ್ತಿ ತತ್ರ ನಿಶ್ವಾಸರೂಪೋಽಪಾನೋಽಪ್ಯಸ್ತಿ ॥ ಇಂದ್ರವಾಯೂ ಚ ಪ್ರಾಣಾಪಾನಸ್ವರೂಪೌ ॥ ತಸ್ಮಾತ್ತೇನ ಸೂಕ್ತೇನ ಪ್ರಾಣಾಪಾನಯೋಃ ಸಂಸ್ಕಾರಃ ॥**

ಈಗ ಎರಡನೆಯ ವಿಧಿಯಪ್ರಕಾರವಾಗಿ ಸ್ತುತಿಸುವರು— ಇಂದ್ರ ಮತ್ತು ವಾಯು ದ್ವಿದೇವತೆಗಳನ್ನು ಆಯಾ ದೇವತೆಗಳ ಸಂಬಂಧವಾದ ಮಂತ್ರಗಳಿಂದ ಸ್ತುತಿಸುವರು. ಹಿಂದೆ ಶರೀರದಲ್ಲಿ ನೆಲೆಸಿರುವ ಪ್ರಾಣವೆಂಬ ವಾಯುವಿನ ವಿಷಯವನ್ನು ಹೇಳಲಾಯಿತು. ಶರೀರದಲ್ಲಿ ಪ್ರಾಣರೂಪವಾದ ವಾಯುವು ಇದ್ದಮೇಲೆ ಅಲ್ಲಿ ಅಪಾನವಾಯುವೂ ಇರಲೇಬೇಕು. ಇಲ್ಲಿ ಉಚ್ಛ್ವಾಸರೂಪವೂ ನಿಃಶ್ವಾಸರೂಪವೂ ಆದ ಎರಡುವಿಧ ವಾಯುಗಳಿಗೆ ಇಂದ್ರವಾಯು ಎಂಬಿಬ್ಬರು ದೇವತೆಗಳಾಗಿರುವರು. ಈ ಪ್ರಾಣಾಪಾನಸ್ವರೂಪರಾದ ಇಂದ್ರವಾಯುಗಳೆಂಬ ದೇವತಾದ್ವಯಸಂಬಂಧವಾದ ಮಂತ್ರಗಳನ್ನು ಪಠಿಸುವುದರಿಂದ ಹೋತೃವು ಯಜಮಾನನ ಪ್ರಾಣ ಮತ್ತು ಅಪಾನ ಎಂಬ ಎರಡುವಿಧ ಎಂದರೆ ಉಚ್ಛ್ವಾಸ ಮತ್ತು ನಿಃಶ್ವಾಸ ಎಂಬ ವಾಯುಗಳನ್ನು ಸಂಸ್ಕರಿಸಿದಂತಾಗುವುದು.

**ಮೈತ್ರಾವರುಣಂ ಶಂಸತಿ ತಸ್ಮಾದಾಹುಶ್ಚಕ್ಷುಃ ಪುರುಷಸ್ಯ ಪ್ರಥಮಂ ಸಂಭವತಃ ಸಂಭವತೀತಿ ಯನ್ಮೈತ್ರಾವರುಣಂ ಶಂಸತಿ ಚಕ್ಷುರೇವಾಸ್ಯ ತತ್ಸಂಸ್ಕರೋತಿ ॥**

**ತೃತೀಯಂ ವಿಧಿಮನೂದ್ಯ ಸ್ತೌತಿ—ಶ್ರುತ್ಯಂತರೇ ಚಕ್ಷುರ್ಮಿತ್ರಾವರುಣ ಇತಿ ಮಿತ್ರಾವರುಣಸಂಬದ್ಧಸ್ಯ ಗ್ರಹಸ್ಯ ಚಕ್ಷುಷ್ಟ್ವಾಭಿಧಾನಾತ್ತೃಚೋಽಪಿ ಚಕ್ಷುಃಸ್ವರೂಪ ಏವ ॥ ತಚ್ಚಕ್ಷುರನ್ಯಸ್ಮಾಚ್ಛ್ರೋತ್ರಾದೀಂದ್ರಿಯಾತ್ಪ್ರಥಮಮುತ್ಪದ್ಯತೇ ॥ ಅಸ್ಯಾರ್ಥಸ್ಯಾಽಽಗಮಾಗಮ್ಯತ್ವಾದಾಹುರಭಿಜ್ಞಾ ಇತ್ಯುಕ್ತಂ ॥ ಏವಂವಿಧಚಕ್ಷುಃಸ್ವರೂಪೇಣ ಮೈತ್ರಾವರುಣತೃಚೇನ ಯಜಮಾನಚಕ್ಷುಷಃ ಸಂಸ್ಕಾರಃ ॥**

ಈಗ ಮೂರನೆಯ ವಿಧಿಪ್ರಕಾರ ಸ್ತುತಿಸುವರು. ತೈತ್ತಿರೀಯಸಂಹಿತೆಯಲ್ಲಿ ಚಕ್ಷುರ್ಮೈತ್ರಾವರುಣಃ (ತೈ. ಸಂ. ೬-೪-೬-೪) ಎಂದು ಹೇಳಿರುವ ಪ್ರಕಾರ ಮಿತ್ರಾವರುಣರು ಚಕ್ಷುಃಸ್ವರೂಪರು. ಈ ಚಕ್ಷುಸ್ಸುಗಳು (ಕಣ್ಣುಗಳ) ಶರೀರದಲ್ಲಿ ಶ್ರೋತ್ರಾದಿ ಇತರ ಇಂದ್ರಿಯಗಳಿಗಿಂತ ಮೊದಲು ಉತ್ಪನ್ನವಾಗುವವು. ಈ ವಿಷಯವನ್ನು ಆಗಮಶಾಸ್ತ್ರಾಭಿಜ್ಞರು ಹೇಳುವರು. ಆದ್ದರಿಂದ ಮೈತ್ರಾವರುಣ ದೇವತಾಸಂಬಂಧವಾದ ತೃಚದ ಪಠನದಿಂದ ಹೋತೃವು ಯಜಮಾನನ ಚಕ್ಷುಸ್ಸುಗಳನ್ನು ಸಂಸ್ಕಾರ ಮಾಡಿದಂತಾಗುವುದು.

ಆಶ್ವಿನಂ ಶಂಸತಿ ತಸ್ಮಾತ್ಕುಮಾರಂ ಜಾತಂ ಸಂವದಂತ ಉಪ ವೈ ಶುಶ್ರೂಷತೇ ನಿ ವೈ ಧ್ಯಾಯತೀತಿ ಯದಾಶ್ವಿನಂ ಶಂಸತಿ ಶ್ರೋತ್ರಮೇವಾಸ್ಯ ತತ್ಸಂಸ್ಕರೋತಿ ॥

ಚತುರ್ಥಂ ವಿಧಿಮನೂದ್ಯ ಸ್ತೌತಿ — ಉತ್ಪನ್ನಂ ಬಾಲಂ ಮುಗ್ಧಮೇವೇಕ್ಷಮಾಣಾ ಮಾತಾಪಿತ್ರಾದಯಃ ಪರಸ್ಪರಮೇವಮಾಹುಃ—ನಾನಾವಿಧೈರುಪಲಾಲನೈರಾಹೂತೋ ಬಾಲಕೋಽಸ್ಮನ್ಮುಖಮವಲೋಕಯತಿ ಯಸ್ಮಾದಯಮಸ್ಮದೀಯಾಂ ವಾಚಂ ಶ್ರೋತುಮಿಚ್ಛತಿ ನೈರಂತರ್ಯೇಣಾವಲೋಕನೇನ ಮಾಮೇವ ಧ್ಯಾಯತೀತಿ ॥ ತದೇತನ್ಮಿತ್ರಾವರುಣಾನುಗ್ರಹಕೃತಂ । ತಸ್ಮಾತ್ತಚ್ಛಂಸನೇನ ಶ್ರೋತ್ರಸ್ಯ ಸಂಸ್ಕಾರಃ ॥

ಈಗ ನಾಲ್ಕನೆಯ ವಿಧಿಪ್ರಕಾರ ಸ್ತುತಿಸುವರು—ಹೊಸದಾಗಿ ಹುಟ್ಟಿದ ಕುಮಾರರನನ್ನು ನೋಡಿ ಆ ಬಾಲಕನ ತಂದೆ ತಾಯಿಗಳು ಈರೀತಿ ಹೇಳುವರು—ನಾನಾವಿಧ ರೂಪಸೌಂದರ್ಯಾದಿಗಳಿಂದ ಬೆಳಗುವ ಈ ಬಾಲಕನು ನಮ್ಮ ಮುಖವನ್ನು ಸುಮ್ಮನೆ ನೋಡುವನು. ಆದ್ದರಿಂದ ನಾವು ಮುದ್ದಿಸಿ ಆಡುವ ಮಾತುಗಳನ್ನು ಕೇಳಲು ಆತುರಪಡುವನು. ನಮ್ಮನ್ನೇ ಒಂದೇ ಸಮನಾಗಿ ನೋಡುತ್ತಿರುವುದರಿಂದ ನಮ್ಮ ಮಾತುಗಳನ್ನು ಕೇಳಲು ಬಯಸುವನು. ಈ ಬಾಲಕನು ಕಿವಿಗಳಿಂದ ಕೇಳುವ ಶಕ್ತಿಯು ಅಶ್ವಿನೀದೇವತೆಗಳ ಅನುಗ್ರಹದಿಂದ ಉಂಟಾಗುವುದು. ಆದ್ದರಿಂದ ಶ್ರೋತ್ರೇಂದ್ರಿಯಗಳಿಗೆ ಅಧಿಪತಿಗಳಾದ ಅಶ್ವಿನೀ ಸಂಬಂಧವಾದ ತೃಚಪಠನದಿಂದ ಹೋತೃವು ಯಜಮಾನನಲ್ಲಿ ಶ್ರೋತ್ರೇಂದ್ರಿಗಳನ್ನು (ಕಿವಿಗಳಿಂದ ಕೇಳುವ ಸಾಮರ್ಥ್ಯವನ್ನು) ಸ್ಥಾಪಿಸಿದಂತಾಗುವುದು.

ಐಂದ್ರಂ ಶಂಸತಿ ತಸ್ಮಾತ್ಕುಮಾರಂ ಜಾತಂ ಸಂವದಂತೇ ಪ್ರತಿಧಾರಯತಿ ವೈ ಗ್ರೀವಾ ಅಥೋ ಶಿರ ಇತಿ ಯದೈಂದ್ರಂ ಶಂಸತಿ ವೀರ್ಯಮೇವಾಸ್ಯ ತತ್ಸಂಸ್ಕರೋತಿ ॥

ಪಂಚಮಂ ವಿಧಿಮನೂದ್ಯ ಸ್ತೌತಿ—ದೋಲಾಯಾಂ ಶಯಾನಂ ಬಾಲಮವೇಕ್ಷ್ಯ ಪರಸ್ಪರಮೇವಮಾಹುಃ— ಅಯಮಿದಾನೀಂ ಗ್ರೀವಾಃ ಪ್ರತಿಧಾರಯತಿ, ಉತ್ಥಾತುಮಾದೌ ಗಲಮುನ್ನಮಯತಿ ತತಃ ಶಿರ ಉನ್ನಮತೀತಿ ॥ ಏತಸ್ಯ ವ್ಯಾಪಾರಸ್ಯ ವೀರ್ಯನಿಮಿತ್ತತ್ವಾದಿಂದ್ರಸ್ಯ ಚ ವೀರ್ಯಪ್ರದತ್ವಾತ್ತದೀಯತ್ಯೃಚೇನ ಶಕ್ತೇಃ ಸಂಸ್ಕಾರಃ ॥

ಐದನೆಯ ವಿಧಿಪ್ರಕಾರ ಸ್ತುತಿಸುವರು—ಹೊಸದಾಗಿ ಹುಟ್ಟಿದ ಬಾಲಕನ ತಂದೆತಾಯಿಗಳು ತೊಟ್ಟಿಲಿನಲ್ಲಿ ಮಲಗಿರುವ ಕುಮಾರನನ್ನು ನೋಡಿ ಹೀಗೆ ಹೇಳುವರು—ಈ ಮಗುವು ಮಲಗಿರುವಾಗ ಏನೂ ಕಾಣಿಸುವುದಿಲ್ಲ. ಎತ್ತಿಕೊಂಡರೆ ಇದರ ಕತ್ತು ವಾಲಾಡಿ ಬೀಳುವಂತಾಗುವುದು. ಕತ್ತನ್ನು ನೆಟ್ಟಗೆ ನಿಲ್ಲಿಸಿಕೊಳ್ಳಲು ಇದಕ್ಕೆ ಶಕ್ತಿಸಾಲದು. ಆದ್ದರಿಂದ ಕತ್ತು ಮತ್ತು ತಲೆಯು ಅಳ್ಳಾಡದಂತೆ ಸ್ಥಿರವಾಗಿ ನಿಂತಿರಲು ಶಕ್ತಿಬೇಕು. ಈ ವಿಧವಾದ ಶಕ್ತಿ ಉಂಟಾಗುವುದಕ್ಕಾಗಿ ವೀರ್ಯಾಭಿಮಾನಿದೇವತೆಯಾದ ಇಂದ್ರನನ್ನು ತೃಚದಿಂದ ಸ್ತುತಿಸಬೇಕಾಗಿರುವುದು. ಆದ್ದರಿಂದ ಹೋತೃವು ಇಂದ್ರದೇವತಾತ್ಮಕವಾದ ತೃಚವನ್ನು ಪಠಿಸಿ ಯಜಮಾನನಲ್ಲಿ ಬಾಲಕನಲ್ಲಿ ಉಂಟಾಗಬೇಕಾದ ಶಕ್ತಿಯನ್ನು ಸ್ಥಾಪಿಸುವನು.

**ವೈಶ್ವದೇವಂ ಶಂಸತಿ ತಸ್ಮಾತ್ಕುಮಾರೋ ಜಾತಃ ಪಶ್ಚೇವ ಪ್ರಚರತಿ ವೈಶ್ವದೇವಾನಿ ಹ್ಯಂಗಾನಿ ಯದ್ವೈಶ್ವದೇವಂ ಶಂಸತ್ಯಂಗಾನ್ಯೇವಾಸ್ಯ ತತ್ಸಂಸ್ಕರೋತಿ ॥**

ಷಷ್ಠಂ ವಿಧಿಮನೂದ್ಯ ಸ್ತೌತಿ—ಉತ್ಪನ್ನೋ ಬಾಲಃ ಪಶ್ಚೇವ ದರ್ಶನಶ್ರವಣಗ್ರೀವೋನ್ನಮನಾದಿಕ್ರಿಯಾಭ್ಯಃ ಪಶ್ಚಾದೇವ ಸಮರ್ಥಃ ಸನ್ಹಸ್ತಾಭ್ಯಾಂ ಪಾದಾಭ್ಯಾಂ ಚೇತಸ್ತತಃ ಪ್ರಚರತಿ ॥ ಹಸ್ತಾದೀನ್ಯಂಗಾನಿ ಚ ಬಹುದೇವತಾಕಾನಿ ॥ ತಸ್ಮಾದ್ವೈಶ್ವದೇವತೃಚೇನಾಂಗಸಂಸ್ಕಾರಃ ॥

ಈಗ ಆರನೆಯ ವಿಧಿಪ್ರಕಾರ ಸ್ತುತಿಸುವರು—ಹುಟ್ಟಿದ ಬಾಲಕನು, ಕಣ್ಣುಗಳಿಂದ ನೋಡುವುದೂ, ಕಿವಿಗಳಿಂದ ಕೇಳುವುದೂ ಮುಖವನ್ನು ಪಕ್ಕಗಳಿಗೆ ತಿರುಗಿಸುವುದೂ ಮೊದಲಾದ ಅಂಗಚೇಷ್ಟೆಗಳನ್ನು ಮಾಡಲು ಸಮರ್ಥನಾದಮೇಲೆ ತನ್ನ ಕೈಗಳನ್ನೂ ಕಾಲುಗಳನ್ನೂ ಉಪಯೋಗಿಸಿ (ಅಂಬೆಗಾಲಿನಿಂದ) ಮುಂದುಮುಂದಕ್ಕೆ ಹೋಗಲು ಪ್ರಯತ್ನಿಸುವನು. ಈ ರೀತಿ ಮುಂದುಮುಂದಕ್ಕೆ ಚಲಿಸುವುದಕ್ಕೆ ಕೈ, ಕಾಲು ಉದರ ಮುಂತಾದ ಅನೇಕ ಅಂಗಗಳ ಸಹಾಯವು ಬೇಕಾಗುವುದು. ಈ ವಿಧವಾದ ಶಕ್ತಿಸಾಮರ್ಥ್ಯಗಳಿಗೆ ವೈಶ್ವದೇವಮಂತ್ರಪಠನವು ಆವಶ್ಯಕವು. ವಿಶ್ವೇದೇವತೆಗಳು ಅನೇಕರಿರುವರು. ಬಾಲಕನ ಅವಯವಗಳೂ ಅನೇಕವಿರುವವು. ಆದ್ದರಿಂದ ಅನೇಕ ಅಂಗಗಳ ಶಕ್ತಿಸಾಮರ್ಥ್ಯಗಳಿಗಾಗಿ ಹೋತೃವು ವಿಶ್ವೇದೇವತಾತ್ಮಕವಾದ ತೃಚವನ್ನು ಪಠಿಸಿ ಯಜಮಾನನಲ್ಲಿ ಅನೇಕ ಅಂಗಗಳಲ್ಲಿ ಶಕ್ತಿಸಾಮರ್ಥ್ಯಗಳನ್ನು ಸ್ಥಾಪಿಸುವನು.

**ಸಾರಸ್ವತಂ ಶಂಸತಿ ತಸ್ಮಾತ್ಕುಮಾರಂ ಜಾತಂ ಜಘನ್ಯಾ ವಾಗಾವಿಶತಿ ವಾಗ್ಘಿ ಸರಸ್ವತೀ ಯತ್ಸಾರಸ್ವತಂ ಶಂಸತಿ ವಾಚಮೇವಾಸ್ಯ ತತ್ಸಂಸ್ಕರೋತಿ ॥**

ಸಪ್ತಮಂ ವಿಧಿಮನೂದ್ಯ ಸ್ತೌತಿ ॥ ಹಸ್ತಪಾದಪ್ರಚಾರಾವಸ್ಥಾಯಾ ಊರ್ಧ್ವಂ ವಕ್ತುಮಾರಭತೇ ॥ ಅತೋ ಜಘನ್ಯಾ ವಾಗಿತ್ಯುಚ್ಯತೇ ॥ ವಾಚಃ ಸರಸ್ವತೀರೂಪತ್ವಾತ್ತದೀಯತೃಚೇನ ತಸ್ಯಾಃ ಸಂಸ್ಕಾರಃ ॥

ಈಗ ಏಳನೆಯ ವಿಧಿಪ್ರಕಾರ ಸ್ತುತಿಸುವರು—ಕುಮಾರನು (ಬಾಲಕನು) ಕೈ ಕಾಲುಗಳನ್ನು ಉಪಯೋಗಿಸಿ ಮುಂದುಮುಂದಕ್ಕೆ ಅಂಬೆಗಾಲಿನಿಂದ ಸಂಚರಿಸುವಂತಾದಾಗ ಸಣ್ಣ ಸಣ್ಣ ತೊದಲುವ ಮಾತುಗಳನ್ನು ಆಡಲು ಪ್ರಾರಂಭಿಸುವನು.

ಆದ್ದರಿಂದ ಕಾಲುಗಳಿಂದ ಚಲಿಸುವಂತೆ ಆದಾಗ ಮಾತನಾಡಲು ಪ್ರಾರಂಭಿಸುವನು ಎಂದು ಹೇಳಲಾಗಿದೆ. ವಾಕ್ಯಗಳಿಗೂ ಅವುಗಳನ್ನು ಉಚ್ಚರಿಸುವುದಕ್ಕೂ ವಾಗಭಿಮಾನಿಯಾದ ಸರಸ್ವತಿಯು ದೇವತೆಯು. ಆದ್ದರಿಂದ ವಾಗಭಿಮಾನಿಯಾದ ಸರಸ್ವತೀ ದೇವತಾತ್ಮಕ ತೃಚವನ್ನು ಪಠಿಸುವುದರಿಂದ ಹೋತೃವು ಯಜಮಾನನಲ್ಲಿ ವಾಕ್ಸಾಮರ್ಥ್ಯವನ್ನು ಸ್ಥಾಪಿಸಿದಂತಾಗುವುದು.

ಏಷ ವೈ ಜಾತೋ ಜಾಯತೇ ಸರ್ವಾಭ್ಯ ಏತಾಭ್ಯೋ ದೇವತಾಭ್ಯಃ ಸರ್ವೇಭ್ಯ ಉಕ್ಥೇಭ್ಯಃ ಸರ್ವೇಭ್ಯಶ್ಛಂದೋಭ್ಯಃ ಸರ್ವೇಭ್ಯಃ ಪ್ರಉಗೇಭ್ಯಃ ಸರ್ವೇಭ್ಯಃ ಸವನೇಭ್ಯೋ ಯ ಏವಂ ವೇದ ಯಸ್ಯ ಚೈವಂ ವಿದುಷ ಏತಚ್ಛಂಸಂತಿ ॥

**ವೇದಿತಾರಮನುಷ್ಠಾತಾರಂ ಚ ಪ್ರಶಂಸತಿ—ಯೋ ಹೋತಾ ಯಥೋಕ್ತಪ್ರಕಾರೇಣ ವೇದೈಷ ಏವ ಪೂರ್ವಂ ಸ್ವ ಮಾತೃಪಿತೃಭ್ಯಾಂ ಜಾತೋಽಪಿ ಪುನರ್ದೇವತಾಭ್ಯೋ ಜಾತೋ ಭವತಿ ॥ ಯಥೋಕ್ತಾರ್ಥಂ ವಿದುಷೋ ಯಸ್ಯ ಯಜಮಾನಸ್ಯ ಹೋತಾರ ಏತತ್ಪ್ರಉಗಂ ಶಂಸಂತಿ ಸೋಽಪಿ ಯಜಮಾನೋ ದೇವತಾದಿಭ್ಯಃ ಪುನರ್ಜಾಯತೇ ॥ ದೇವತಾ ವಾಯ್ವಾದಯಃ ॥ ಉಕ್ಥಾನ್ಯಾಜ್ಯಪ್ರಉಗಾದೀನಿ ॥ ಛಂದಾಂಸಿ ಗಾಯತ್ರ್ಯಾದೀನಿ ॥ ಪ್ರಉಗಾಣಿ ತದವಯವಾಸ್ತ್ರ್ಯಚಾಃ ॥ ಸವನಾನಿ ತ್ರೀಣಿ ಪ್ರಸಿದ್ಧಾನಿ ॥ ಏತೇಭ್ಯಃ ಸರ್ವೇಭ್ಯಃ ಪುನರುತ್ಪತ್ತಿಃ ॥**

ಮೇಲೆ ಹೇಳಿದ ವಿಷಯಗಳೆಲ್ಲವನ್ನೂ ತಿಳಿದಿರುವ ಮತ್ತು ಅದರಂತೆ ಆಚರಿಸುವ ಪುರುಷನನ್ನು ಪ್ರಶಂಸೆಮಾಡುವರು—ಯಾವ ಹೋತೃವು ಈ ಕೆಳಗಿನ ವಿಷಯಗಳನ್ನು ತಿಳಿದುಕೊಂಡಿರುವನೋ ಎಂದರೆ ಕುಮಾರನು ಮೊದಲು ತನ್ನ ತಂದೆ ತಾಯಿಗಳಿಂದ ಉತ್ಪನ್ನನಾದಕೂಡಲೇ ಪ್ರಾಣಾದಿ ಇಂದ್ರಿಯಗಳ ಪಟುತ್ವವನ್ನು ಹೊಂದಿರುವನು. ಆದರೂ ಮೇಲೆ ಹೇಳಿದ ಮಂತ್ರಪೂರ್ವಕವಾದ ಸಂಸ್ಕಾರಾದಿಗಳಿಂದ ದೇವತೆಗಳಿಂದ ಪುನಃ ಉತ್ಪನ್ನನಾದಂತೆ ಭಾವಿಸಲ್ಪಡುವನು. ಈ ವಿಷಯಗಳೆಲ್ಲವನ್ನೂ ತಿಳಿದಿರುವ ಹೋತೃವೂ ಕೂಡ ದೇವತಾದಿಗಳಿಂದ ಉತ್ಪನ್ನವಾದ ಶರೀರವುಳ್ಳವನಾಗಿರುವನೆಂದು ಭಾವಿಸಲ್ಪಡುವನು. ಆದ್ದರಿಂದ ಪ್ರಉಗಶಸ್ತ್ರವನ್ನು ಪಠಿಸುವ ಹೋತೃವೂ ಅವುಗಳಿಂದ ಸಂಸ್ಕರಿಸಲ್ಪಟ್ಟ ಯಜಮಾನನೂ ಶುದ್ಧಿಯನ್ನು ಹೊಂದಿ ದೇವತೆಗಳಿಂದ ಪುನರ್ಜನ್ಮವನ್ನು ಪಡೆದಂತೆ ಭಾವಿಸಲ್ಪಡುವರು. ಇಲ್ಲಿ ಹೇಳಿರುವ ದೇವತೆಗಳೆಂದರೆ—ವಾಯ್ವಾದಿದೇವತೆಗಳು; ಉಕ್ಥಾನಿ ಎಂದರೆ ಆಜ್ಯ ಮತ್ತು ಪ್ರಉಗಶಸ್ತ್ರಗಳು; ಛಂದಾಂಸಿ ಎಂದರೆ ಗಾಯತ್ರಿಯೇ ಮೊದಲಾದ ಛಂದಸ್ಸುಗಳು. ಪ್ರಉಗಾನಿ ಎಂದರೆ ಪ್ರಉಗವೆಂಬ ಶಸ್ತ್ರಕ್ಕೆ ಸಂಬಂಧಪಟ್ಟ ಮಂತ್ರಗಳು. ಈ ಮಂತ್ರಗಳು ತೃಚ ಎಂದರೆ ಮೂರು ಮೂರು ಋಕ್ಕುಗಳನ್ನೊಳಗೊಂಡಿರುವವು ಮತ್ತು ಈ ಮೂರು ಋಕ್ಕುಗಳೂ ಒಂದೇ ದೇವತೆಯನ್ನು ಪ್ರಶಂಸಿಸುವವು. ಸವನಾನಿ ಎಂದರೆ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಗಳೆಂದು ಪ್ರಸಿದ್ಧಿಯಾಗಿರುವವು. ಈ ವಿಧವಾದ ಸಮಸ್ತ ಮಂತ್ರ ಮತ್ತು ಕಾರ್ಯ ಕಲಾಪಗಳಿಂದ ಯಜಮಾನನಿಗೆ ದೇವತಾ ಸಂಬಂಧವಾದ ಪುನರ್ಜನ್ಮವು ಸಂಸ್ಕಾರದಿಂದ ಲಭಿಸುವುದೆಂದು ತಿಳಿಯಬೇಕು.

*English Translation*

**(On the meaning of the several parts of the Pra-uga Shastra)**

By means of the Pra-uga Shastra one obtains food. In (each part of) the Para-uga Shastra, there is always another deity praised, and (thus) always another being celebrated. He who has such a knowledge keeps different kinds

of food in his Grahas. The Pra-uga Shastra is, as it were, most intimately connected with the sacrificer. Thence they say, the gratest attention is to be paid to it by the sacrificer. For by means of it the Hotar makes him (his new body) ready.

He repeats a triplet addressed to Vayu, because they say, life is Vayu, seed is life. Seed is first produced (in the body) before a man is produced (out of it). By repeating a triplet addressed to Vayu, the Hotar makes the prana (air inhaled) of the sacrificer.

He repeats a triplet addressed to Indra and Vayu. Where there is prana (air inhaled), there is apana (air exhaled). By repeating a triplet addressed to Indra and Vayu he thus makes the prana and apana of the sacrificer.

He repeats a triplet, addressed to Mitra-Varuna. That is done, becacse they say, the eye is first produced when a human being is being called into existnce. By repeating a triplet, addressed to Mitra-Varuna, he thus makes eyes to the sacrificer.

He repeats a triplet, addressed to the As'vins. because parents say in their conversations about a child when it is born, "it has the desire of listening (to us); it is very attentive." By repeating a triplet, addressed to the As'vins, he makes to the sacrificer the sense of hearing.

He repeats triplet, addressed to Indra. Because parents say in their conversations about a child when it is born, "it endeavours to raise its neck, then its head." By repeating a triplet, addressed to Indra, he makes to the sacrificer, strength.

He repeats a triplet, addressed to Visve Devah. Because a child when it is born, uses hands, and feet after (it has been able to use the eye, ear and to raise its neck). The limbs (for they are many) belong to the Visve Devah, i. e. All Gods. By repeating a triplet, addressed to the Visve Devah, he thus makes the limbs to the sacrificer.

He repeats a triplet, addressed to Sarasvati. Because Speech enters the child, when it is born, last. Sarasvati is speech. By repeating a triplet, addressed to Sarasvati, he thus makes speech to the sacrificer.

The Hotar who has such a knowledge, as well as the sacrificer for whom the Hotri priests repeat the recitations (Shastras) are, though already born (from

their mother), born again from all these deities, from all the recitation (Shastras) from all the metres, from all the triplets of the Pra-uga Shastra, from all the (three) libations.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಏಕಾದಶಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



# ಅಥ ಏಕಾದಶಾಧ್ಯಾಯೇ ತೃತೀಯಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ ಪ್ರಉಗಶಸ್ತ್ರವನ್ನು ಯಥಾವಿಧಿಯಾಗಿ ಪಠಿಸದೇ ಇರುವುದರಿಂದ ಹೋತೃವು ಯಜ್ಞಮಾಡುವ ಯಜಮಾನನಿಗೆ ಕೆಡುಕು ಅಥವಾ ಮರಣವುಂಟುಮಾಡಲು ಸಮರ್ಥನಾಗಿರುವನು ಎಂಬ ವಿಚಾರವು ]

**ಪ್ರಾಣಾನಾಂ ವಾ ಏತದುಕ್ಥಂ ಯತ್ಪ್ರಉಗಂ ಸಪ್ತ ದೇವತಾಃ ಶಂಸತಿ ಸಪ್ತ ವೈ ಶೀರ್ಷನ್ಪ್ರಾಣಾಃ ಶೀರ್ಷನ್ನೇವ ತತ್ಪ್ರಾಣಾನ್ದಧಾತಿ ॥**

ಪ್ರಕಾರಾಂತರೇಣ ಪ್ರಉಗಶಸ್ತ್ರಂ ಪ್ರಶಂಸತಿ — ಶಿರೋಗತಸಪ್ತಚ್ಛಿದ್ರವರ್ತಿಪ್ರಾಣಾನಾಂ ಪೂರ್ವೋಕ್ತ ಸಪ್ತತೃಚಗತವಾಯ್ವಾದಿದೇವತಾನಾಂ ಚ ಸಂಖ್ಯಾಸಾಮ್ಯಾಚ್ಛಸ್ತ್ರಸ್ಯ ಪ್ರಾಣರೂಪತ್ವಂ ತೇನ ಯಜಮಾನಸ್ಯ ಶಿರಸಿ ಪ್ರಾಣಧಾರಣಂ ಭವತಿ ॥

ಶಿರಸ್ಸಿನಲ್ಲಿ (ತಲೆಯಲ್ಲಿ) ದೇಹಕ್ಕೆ ಸಂಬಂಧಪಟ್ಟಂತೆ ಏಳು ರಂಧ್ರ ಅಥವಾ ಛಿದ್ರಗಳಿರುವವು—ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ನಾಸಿಕ ರಂಧ್ರಗಳು ಮತ್ತು ಒಂದು ಬಾಯಿ ಇವು ಏಳೂ ಪ್ರಾಣವಾಯುಗಳ ಸಂಚಾರಕ್ಕಾಗಿ ನಿರ್ಮಿತವಾಗಿರುವ ಏಳು ಛಿದ್ರಗಳು. ಈ ಏಳುವಿಧ ಪ್ರಾಣಗಳನ್ನು ಈ ಪ್ರಉಗಶಸ್ತ್ರದಲ್ಲಿ ಏಳು ಪ್ರತ್ಯೇಕ ತೃಚಗಳಿಂದ ಸ್ತುತಿಸಿ ವರ್ಣಿಸಲಾಗಿದೆ. ಈ ವಿಧವಾದ ಸ್ತುತಿಯಿಂದ ಯಜಮಾನನ ಏಳು ಪ್ರಾಣಗಳೂ ಶಿರಸ್ಸಿನಲ್ಲಿ ದೃಢವಾಗಿ ನೆಲೆಗೊಳ್ಳುವವು.

**ಕಿಂ ಸ ಯಜಮಾನಸ್ಯ ಪಾಪಭದ್ರಮಾದ್ರಿಯೇತೇತಿ ಹ ಸ್ಮಾಹ ಯೋಽಸ್ಯ ಹೋತಾ ಸ್ಯಾದಿತ್ಯತ್ರೈವೈನಂ ಯಥಾ ಕಾಮಯೇತ ತಥಾ ಕುರ್ಯಾತ್ ॥**

**ಅಥ ಪ್ರಶ್ನೋತ್ತರಾಭ್ಯಾಂ ಪ್ರಉಗಶಸ್ತ್ರಸ್ಯ ಸಾಮರ್ಥ್ಯಂ ದರ್ಶಯತಿ—ಅಸ್ಯ ಯಜಮಾನಸ್ಯ ಯೋ ಹೋತಾ ಸ್ಯಾತ್ಸ ತಸ್ಯ ಪಾಪಭದ್ರಂ ಕಿಮಾದ್ರಿಯೇತ ॥ ಪಾಪಮನಿಷ್ಟಫಲಂ ಭದ್ರಮಿಷ್ಟಫಲಂ ॥ ತಾದೃಶಂ ಕಿಂ ಫಲಂ ಸಂಪಾದಯಿತುಂ ಸಮರ್ಥ ಇತಿ ಪ್ರಶ್ನಃ ॥ ಅತ್ರೈವ ಜನ್ಮನ್ಯೇನಂ ಯಜಮಾನಂ ಪ್ರತಿ ಯಥಾ ಹೋತಾ ಕಾಮಯೇತ ತಥಾ ಕರ್ತುಂ ಶಕ್ನೋತೀತ್ಯುತ್ತರಂ ॥**

ಈಗ ಪ್ರಉಗಶಸ್ತ್ರದ ಸಾಮರ್ಥ್ಯವನ್ನು ಪ್ರಶ್ನೋತ್ತರಮೂಲಕ ವಿವರಿಸುವರು—ಯಜಮಾನನು ಮಾಡುವ ಯಜ್ಞದಲ್ಲಿ ಹೋತೃವೆಂಬ ಋತ್ವಿಜನಿರುವನಷ್ಟೆ. ಅವನು ಯಜಮಾನನಲ್ಲಿ ನಿಷ್ಠೆ ಉಳ್ಳವನಾಗಿದ್ದರೆ ಯಜಮಾನನಿಗೆ ಅನಿಷ್ಟಫಲವನ್ನು (ಕೆಡಕನ್ನು) ಮಾಡಬಲ್ಲನೇ ಅಥವಾ ಶುಭಫಲವನ್ನು ಎಂದರೆ ಒಳ್ಳೆಯದಾಗುವುದನ್ನು ಮಾಡಬಲ್ಲನೇ? ಈ ಎರಡು ವಿಧವಾದ ಇಷ್ಟ ಅನಿಷ್ಟ ಎಂಬ ಫಲಗಳಲ್ಲಿ ಯಾವುದನ್ನು ಬೇಕಾದರೂ ಮಾಡಲು ಹೋತೃವು ಸಮರ್ಥನೇ? ಎಂಬುದು ಪ್ರಶ್ನೆಯು. ಇದಕ್ಕೆ ಉತ್ತರವನ್ನು ಈರೀತಿ ಹೇಳುವರು—ಹೋತೃವಾದವನು ಇಷ್ಟಪಟ್ಟಲ್ಲಿ ಯಜಮಾನನಿಗೆ ಇಷ್ಟ ಎಂದರೆ ಉತ್ತಮ ಫಲವನ್ನು ಉಂಟುಮಾಡಬಲ್ಲನು ಮತ್ತು ಇಷ್ಟಪಟ್ಟಲ್ಲಿ ಅನಿಷ್ಟ ಎಂದರೆ ಅಶುಭವನ್ನೂ (ಕೆಡಕನ್ನೂ) ಮಾಡಬಲ್ಲನು. ಎಂದೇ ಪ್ರಶ್ನೆಗೆ ಉತ್ತರವನ್ನು ಹೇಳಬೇಕಾಗುವುದು. ಈ ವಿಷಯವನ್ನು ಮುಂದೆ ವಿವರಿಸಲಾಗುವುದು.

**ಯಂ ಕಾಮಯೇತ ಪ್ರಾಣೇನೈನಂ ವ್ಯರ್ಧಯಾನೀತಿ ವಾಯವ್ಯಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವ ತಲ್ಲುಬ್ಧಂ ಪ್ರಾಣೇನೈವೈನಂ ತದ್ವ್ಯರ್ಧಯತಿ ॥**

**ತತ್ರ ಪ್ರಥಮತೃಚಪ್ರಯುಕ್ತಮನಿಷ್ಟಂ ದರ್ಶಯತಿ—ಯಂ ಯಜಮಾನಮುದ್ದಿಶ್ಯ ಹೋತಾ ಕಾಮಯೇತ । ಕಥಮಿತಿ ತದುಚ್ಯತೇ ॥ ಏನಂ ಯಜಮಾನಂ ಪ್ರಾಣೇನ ವ್ಯರ್ಧಯಾನಿ ವ್ಯೃದ್ಧಂ ವಿಯುಕ್ತಂ ಕರವಾಣೀತಿ ॥ ಏವಂ ಕಾಮಯಮಾನೋ ಹೋತಾಽಸ್ಯ ಯಜಮಾನಸ್ಯ ಸಂಬಂಧಿನಂ ವಾಯವ್ಯಂ ತ್ರ್ಯೃಚಂ ಲುಬ್ಧಂ ವ್ಯಾಮೂಢಂ ಯಥಾ ಭವತಿ ತಥಾ ಶಂಸೇತ್ ॥ ಲುಭ ವಿಮೋಹನ ಇತಿ ಧಾತುಃ । ವ್ಯಾಮೋಹಪ್ರಕಾರ ಉಚ್ಯತೇ ॥ ಏಕಾಮೃಚಂ ವಾ ತದೀಯಮೇಕಂ ಪದಂ ವಾಽತೀಯಾತ್ ಸ್ತಂಭಯೇನ್ನ ಪಠೇದಿತ್ಯರ್ಥಃ ॥ ತಾವತಾ ತತ್ತ್ರ್ಯೃಚಸ್ವರೂಪಂ ಲುಬ್ಧಂ ವ್ಯಾಮೂಢಂ ಭವತಿ । ತಥಾ ಸತಿ ಪ್ರಾಣರೂಪತ್ವೇನ ಪೂರ್ವಂ ನಿರೂಪಿತಸ್ಯ ವಾಯೋಃ ಕ್ರೋಧಾದೇನಂ ಯಜಮಾನಂ ಪ್ರಾಣೇನ ವಿಯೋಜಯತಿ ॥**

ಈಗ ಮೊದಲನೇ ತೃಚದ ಪ್ರಯೋಗದಿಂದ ಸಂಭವಿಸಬಹುದಾದ ಅನಿಷ್ಟವನ್ನು ತಿಳಿಸುವರು. ಕೆಲವರು ಈರೀತಿ ಕೇಳುವರು—ಯಜ್ಞಮಾಡುವ ಯಜಮಾನನಿಗೆ ಯಜ್ಞಕ್ಕೆ ಸಹಕಾರಿಯಾಗಿ ಒಬ್ಬ ಪ್ರಉಗಶಸ್ತ್ರವನ್ನು ಪಠಿಸುವ ಹೋತೃವೆಂಬ

ಋತ್ವಿಜನಿರುವನಷ್ಟೆ. ಆ ಹೋತೃವು ಇಷ್ಟಪಟ್ಟಲ್ಲಿ ತನ್ನ ಯಜಮಾನನಿಗೆ ಒಳ್ಳೆಯದನ್ನಾಗಲಿ, ಕೆಟ್ಟದ್ದನ್ನಾಲಿ ಮಾಡಲು ಸಮರ್ಥನೇ ? ಎಂದು ಈ ಪ್ರಶ್ನೆಗೆ ಉತ್ತರವಾಗಿ ಈರೀತಿ ಹೇಳಬೇಕಾಗಿರುವುದು. ಹೋತೃವಿಗೆ ಹೇಗೆ ಮನಸ್ಸುಬರುವುದೋ ಹಾಗೆ ಮಾಡಬಹುದು. ಎಂದರೆ ತನ್ನ ಯಜಮಾನನಿಗೆ ಒಳ್ಳೆಯವನ್ನು ಮಾಡಬೇಕೆಂದು ಹೋತೃವು ಇಷ್ಟಪಟ್ಟಲ್ಲಿ ಪ್ರಉಗ ಶಸ್ತ್ರದ ಮಂತ್ರಗಳನ್ನು ಸ್ವಲ್ಪವೂ ಲೋಪವಿಲ್ಲದಂತೆ ವಿಧಿವತ್ತಾಗಿ ಪಠಿಸುವನು. ಇದರಿಂದ ಯಜಮಾನನಿಗೆ ಒಳ್ಳೆಯ ಫಲಪ್ರಾಪ್ತಿಯಾಗುವುದು. ಹಾಗಿಲ್ಲದೆ ಹೋತೃವಿಗೂ ಯಜಮಾನನಿಗೂ ಮನಸ್ಸು ಸರಿಯಾಗಿಲ್ಲದೆ ಹೋತೃವು ಯಜಮಾನನಿಗೆ ಕೆಡಕನ್ನೇ ಉಂಟುಮಾಡಬೇಕೆಂದು ಬಯಸಿದಲ್ಲಿ ಆಗ ಹೋತೃವು ಪ್ರಉಗಶಸ್ತ್ರದ ವಾಯವ್ಯ ತೃಚವನ್ನು ತಪ್ಪುತಪ್ಪಾಗಿ ಪಠಿಸುವನು. ಎಂದರೆ ವಾಯವ್ಯತೃಚದಲ್ಲಿ ಮಂತ್ರಗಳನ್ನು ಸರಿಯಾಗಿ ಪಠಿಸದೆ ಹಿಂದುಮುಂದಾಗಿಯೂ ಅಥವಾ ಮಧ್ಯದಲ್ಲಿ ಒಂದು ಪಾದವನ್ನು ಬಿಟ್ಟೊ ಅಥವಾ ಬೇರೆವಿಧವಾಗಿ ಲೋಪದೋಷಗಳಿಂದ ಕೂಡಿಯೂ ಮಂತ್ರವನ್ನು ಪಠಿಸಿದರೆ ಆಗ ಯಜಮಾನನಿಗೆ ನಿಶ್ಚಯವಾಗಿಯೂ ಕೆಡಕುಂಟಾಗುವುದು. ವಾಯುದೇವತಾಕವಾದ ತೃಚವು ಪ್ರಾಣಸ್ವರೂಪವಾದ್ದರಿಂದ ಆ ತೃಚವನ್ನು ಲೋಪದೋಷದಿಂದ ಪಠಿಸಿದಲ್ಲಿ ಯಜಮಾನನಿಗೆ ಪ್ರಾಣವು ಶರೀರದಿಂದ ಹೊರಟುಹೋಗುವುದು. ಎಂದರೆ ಯಜಮಾನನಿಗೆ ಮೃತ್ಯುವು ಸಂಭವಿಸುವುದು. ಇಷ್ಟೆಲ್ಲಾ ಕೆಡಕು ಹೋತೃವಿನ ಲೋಪದೋಷಪೂರ್ವಕವಾದ ವಾಯವ್ಯತೃಚದ ಪಠನದಿಂದ ಉಂಟಾಗುವುದು.

ಯಂ ಕಾಮಯೇತ ಪ್ರಾಣಾಪಾನಾಭ್ಯಾಮೇನಂ ವ್ಯರ್ಧಯಾನೀ-
ತ್ಯೈಂದ್ರವಾಯವಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ
ವಾತೀಯಾತ್ತೇನೈವ ತಲ್ಲುಬ್ಧಂ ಪ್ರಾಣಾಪಾನಾಭ್ಯಾಮೇವೈನಂ
ತದ್ವ್ಯರ್ಧಯತಿ ॥

ದ್ವಿತೀಯತ್ರ್ಯೃಚನಿಮಿತ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಎರಡನೆಯ ತೃಚವನ್ನು ಸರಿಯಾಗಿ ಪಠಿಸದಿರುವುದರಿಂದ ಸಂಭವಿಸುವ ಅನಿಷ್ಟವನ್ನು ತಿಳಿಸುವರು—ಇಂದ್ರವಾಯವ್ಯವೆಂಬ ದ್ವಿದೇವತಾತ್ಮಕವಾದ ತೃಚದ ಪಠನದಲ್ಲಿ ಹೋತೃವು ಲೋಪದೋಷಗಳನ್ನುಂಟುಮಾಡಿದರೆ ಆಗ ಯಜಮಾನನಿಗೆ ಉಚ್ಛ್ವಾಸನಿಃಶ್ವಾಸರೂಪವಾದ ಪ್ರಾಣಾಪಾನವಾಯುಗಳಿಂದ ತೊಂದರೆಯುಂಟಾಗಿ ಮರಣವು ಸಂಭವಿಸುವುದು.

ಯಂ ಕಾಮಯೇತ ಚಕ್ಷುಷೈನಂ ವ್ಯರ್ಧಯಾನೀತಿ ಮೈತ್ರಾವರುಣ-
ಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವ
ತಲ್ಲುಬ್ಧಂ ಚಕ್ಷುಷೈವೈನಂ ತದ್ವ್ಯರ್ಧಯತಿ ॥

ತೃತೀಯತ್ರ್ಯೃಚನಿಮಿತ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹೋತೃವು ತನ್ನ ಯಜಮಾನನಿಗೆ ಕಣ್ಣುಕಾಣಿಸದಂತಾಗಿ ಚಕ್ಷುರಿಂದ್ರಿಯವು ಊನವಾಗುವಂತೆ ಬಯಸಿದರೆ ಆಗ ಚಕ್ಷುಸ್ಸುಗಳಿಗೆ ಅಧಿಪತಿಗಳಾದ ಮಿತ್ರಾವರುಣರ ತೃಚವನ್ನು ಲೋಪದೋಷಪೂರ್ವಕವಾಗಿ ಪಠಿಸಿದಲ್ಲಿ ಆಗ ಮಿತ್ರಾವರುಣರ ಅನುಗ್ರಹವು ಇಲ್ಲದಂತಾಗಿ ಯಜಮಾನನ ಚಕ್ಷುರಿಂದ್ರಿಯಕ್ಕೆ ನ್ಯೂನತೆಯುಂಟಾಗುವುದು.

**ಯಂ ಕಾಮಯೇತ ಶ್ರೋತ್ರೇಣೈನಂ ವ್ಯರ್ಧಯಾನೀತ್ಯಾಶ್ವಿನಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವ ತಲ್ಲುಬ್ಧಂ ಶ್ರೋತ್ರೇಣೈವೈನಂ ತದ್ವ್ಯರ್ಧಯತಿ ॥**

ಚತುರ್ಥತ್ರ್ಯೃಚಪ್ರಯುಕ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹೋತೃವು ತನ್ನ ಯಜಮಾನನಿಗೆ ಕಿವಿಯು ಕೇಳಿಸದಂತೆ (ಕಿವುಡನಾಗುವಂತೆ) ಶ್ರೋತ್ರೇಂದ್ರಿಯಗಳು ನ್ಯೂನವಾಗಬೇಕೆಂದು ಬಯಸಿದರೆ ಆಗ ಪ್ರಉಗಶಸ್ತ್ರ ಮಂತ್ರಗಳಲ್ಲಿ ಶ್ರೋತ್ರೇಂದ್ರಿಗಳಿಗೆ ಅಧಿಪತಿಗಳಾದ ಅಶ್ವಿನೀದೇವತೆಗಳಿಗೆ ಸಂಬಂಧಪಟ್ಟ ತೃಚವನ್ನು ಲೋಪದೋಷಪುರಸ್ಸರವಾಗಿ ಪಠಿಸಿದಲ್ಲಿ ಆಗ ಅಶ್ವಿನೀದೇವತೆಗಳ ಅನುಗ್ರಹವು ಲಭಿಸದಂತಾಗಿ ಯಜಮಾನನ ಶ್ರೋತ್ರೇಂದ್ರಿಯಗಳು ನ್ಯೂನತೆಯನ್ನು ಹೊಂದುವವು.

**ಯಂ ಕಾಮಯೇತ ವೀರ್ಯೇಣೈನಂ ವ್ಯರ್ಧಯಾನೀತ್ಯೈಂದ್ರಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವ ತಲ್ಲುಬ್ಧಂ ವೀರ್ಯೇಣೈವೈನಂ ತದ್ವ್ಯರ್ಧಯತಿ ॥**

ಪಂಚಮತ್ರ್ಯೃಚಪ್ರಯುಕ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹೋತೃವು ತನ್ನ ಯಜಮಾನನ ವೀರ್ಯ ಎಂದರೆ ಶಕ್ತಿಸಾಮರ್ಥ್ಯಗಳಿಗೆ ಕುಂದುಂಟಾಗಬೇಕೆಂದು ಬಯಸಿದರೆ ಆಗ ಪ್ರಉಗಶಸ್ತ್ರಮಂತ್ರಗಳಲ್ಲಿ ವೀರ್ಯಾಭಿಮಾನಿಯಾದ ಇಂದ್ರದೇವತಾತ್ಮಕವಾದ ತೃಚವನ್ನು ಲೋಪದೋಷಸಹಿತವಾಗಿ ಪಠಿಸಿದಲ್ಲಿ ಆಗ ಯಜಮಾನನ ಶಕ್ತಿಸಾಮರ್ಥ್ಯಗಳಿಗೆ ಕುಂದುಂಟಾಗುವುದು.

**ಯಂ ಕಾಮಯೇತಾಂಗೈರೇನಂ ವ್ಯರ್ಧಯಾನೀತಿ ವೈಶ್ವದೇವಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವ ತಲ್ಲುಬ್ಧ ಮಂಗೈರೇವೈನಂ ತದ್ವ್ಯರ್ಧಯತಿ ॥**

ಷಷ್ಠತ್ರ್ಯೃಚಪ್ರಯುಕ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹೋತೃವು ತನ್ನ ಯಜಮಾನನಿಗೆ ಹಸ್ತಪಾದಾದ್ಯಂಗಗಳು ವಿಕಲವಾಗುವಂತೆ ಬಯಸಿದಲ್ಲಿ ಆಗ ಪ್ರಉಗಶಸ್ತ್ರಮಂತ್ರದ ವಿಶ್ವೇದೇವತೆಗಳ ಸಂಬಂಧವಾದ ತೃಚವನ್ನು ಲೋಪದೋಷಗಳಿಂದ ಸಹಿತವಾಗಿರುವಂತೆ ಪಠಿಸಿದಲ್ಲಿ ಆಗ ವಿಶ್ವೇದೇವತೆಗಳ ಅನುಗ್ರಹದಿಂದ ವಂಚಿತನಾಗಿ ಯಜಮಾನನ ಹಸ್ತಪಾದಾದಿಗಳ ಅಂಗವಿಕಲನವುಂಟಾಗುವುದು.

**ಯಂ ಕಾಮಯೇತ ವಾಚೈನಂ ವ್ಯರ್ಧಯಾನೀತಿ ಸಾರಸ್ವತಮಸ್ಯ ಲುಬ್ಧಂ ಶಂಸೇದೃಚಂ ವಾ ಪದಂ ವಾತೀಯಾತ್ತೇನೈವಂ ತಲ್ಲುಬ್ಧಂ ವಾಚೈವೈನಂ ತದ್ವ್ಯರ್ಧಯತಿ ॥**

ಸಪ್ತಮತ್ರ್ಯೃಚಪ್ರಯುಕ್ತಮನಿಷ್ಟಂ ದರ್ಶಯತಿ—ಪೂರ್ವವದ್ವ್ಯಾಖ್ಯೇಯಂ ॥

ಹೋತೃವು ತನ್ನ ಯಜಮಾನನ ವಾಕ್ಸಾಮರ್ಥ್ಯವು ಲುಪ್ತವಾಗಿ ಮಾತನಾಡುವುದಕ್ಕಾಗದೆ ಮೂಕನಂತಾಗಲು ಇಷ್ಟ ಪಟ್ಟರೆ ಆಗ ಹೋತೃವು ಪ್ರಉಗಶಸ್ತ್ರಮಂತ್ರದಲ್ಲಿ ಸರಸ್ವತೀದೇವತಾತ್ಮಕವಾದ ತೃಚವನ್ನು ಪಠಿಸುವಾಗ ಲೋಪದೋಷಗಳುಂಟಾಗುವಂತೆ ಮಾಡಿದರೆ ಆಗ ಯಜಮಾನನಿಗೆ ವಾಕ್ಸಾಮರ್ಥ್ಯದಲ್ಲಿ ಎಂದರೆ ಮಾತನಾಡುವುದರಲ್ಲಿ ಶಕ್ತಿಯು ಹೋಗಿ ಮೂಕನಂತಾಗುವನು.

ಯಮು ಕಾಮಯೇತ ಸರ್ವೈರೇನಮಂಗೈಃ ಸರ್ವೇಣಾಽಽತ್ಮನಾ ಸಮರ್ಧಯಾನೀತ್ಯೇತದೇವಾಸ್ಯ ಯಥಾಪೂರ್ವಮೃಜುಕ್ಲೃಪ್ತಂ ಶಂಸೇತ್ಸರ್ವೈರೇವೈನಂ ತದಂಗೈಃ ಸರ್ವೇಣಾಽಽತ್ಮನಾ ಸಮರ್ಧಯತಿ ॥

ಅಥಾಸ್ಯ ಶಸ್ತ್ರಸ್ಯೇಷ್ಟಫಲಸಾಮರ್ಥ್ಯಂ ದರ್ಶಯತಿ—ಪೂರ್ವೋಕ್ತಾನಿ ಪ್ರಾಣಾದೀನಿ ಸರ್ವಾಣ್ಯಂಗಾನಿ ॥ ಸಂಪೂರ್ಣೋ ದೇಹಃ ಸರ್ವ ಆತ್ಮಾ ॥ ತತ್ಸಮೃದ್ಧಿಕಾಮೋ ಹೋತಾಽಸ್ಯ ಯಜಮಾನಸ್ಯ ಸಂಬಂಧಿ ತದೇವ ಪ್ರಉಗಶಸ್ತ್ರಂ ಯಥಾಪೂರ್ವಂ ಗುರೋಃ ಸಮೀಪೇ ಪುರಾ ಯೇನ ಕ್ರಮೇಣ ಪಠಿತಂ ತಥೈವ ಋಜುಕ್ಲೃಪ್ತಂ ಕಸ್ಯಚಿದವಯವಸ್ಯಾನ್ಯಥಾತ್ವಾಭಾವಾದೃಜುತ್ವಂ ತಥಾ ಕ್ಲೃಪ್ತಂ ಸಂಪಾದಿತಂ ಕೃತ್ವಾ ಶಂಸೇತ್ ॥ ತತಃ ಕಾಮ್ಯಮಾನಸಮೃದ್ಧಿಃ ಸಿಧ್ಯತಿ ॥

ಇದುವರೆಗೂ ಹೋತೃವು ಮಾಡಬಹುದಾದ ಇಷ್ಟಾನಿಷ್ಟಗಳನ್ನು ಹೇಳಿ ಈಗ ಶಸ್ತ್ರಮಂತ್ರದಿಂದ ಲಭಿಸತಕ್ಕ ಫಲವಿಶೇಷಗಳನ್ನು ವಿವರಿಸುವರು. ಹಿಂದೆ ಹೇಳಿದ ಪ್ರಾಣವೇ ಮೊದಲಾದವುಗಳು ಸಮಸ್ತ ಅಂಗಗಳೆಂದು ಹೇಳಲ್ಪಡುವವು. ಈ ಸಮಸ್ತ ಅಂಗಗಳಿಂದ ಕೂಡಿದ್ದರೆ ದೇಹವು ಸಂಪೂರ್ಣವಾಗಿ ಆತ್ಮಸಹಿತವಾಗಿರುವುದೆಂದು ಹೇಳಲ್ಪಡುವುದು. ಈಗ ಹೋತೃವು ಯಜಮಾನನಿಗೂ ತನಗೂ ಸಮೃದ್ಧಿಯುಂಟಾಗಬೇಕೆಂದು ಬಯಸಿದರೆ ಆಗ ಹೋತೃವು ಯಜಮಾನನ ಯಜ್ಞದಲ್ಲಿ ಪ್ರಉಗಶಸ್ತ್ರವನ್ನು ಪಠಿಸುವಾಗ ತಾನು ಪೂರ್ವದಲ್ಲಿ ಯಾವರೀತಿ ಗುರುವಿನ ಸನ್ನಿಧಿಯಲ್ಲಿ ಮಂತ್ರಗಳನ್ನು ಅಭ್ಯಾಸಮಾಡಿ ಕಲಿತನೋ ಅದೇ ಕ್ರಮದಲ್ಲಿ ಸರಿಯಾದ ಕ್ರಮದಲ್ಲಿ ಸ್ವರಸಹಿತವಾಗಿ ಮತ್ತು ಯಾವ ವಿಧವಾದ ಲೋಪದೋಷಗಳಿಗೂ ಅವಕಾಶವಿಲ್ಲದಂತೆ ಬಹು ಎಚ್ಚರಿಕೆಯಿಂದ ಮಂತ್ರಗಳನ್ನು ಪಠಿಸಬೇಕು. ಹೀಗೆ ಮಾಡುವುದರಿಂದ ತನ್ನ ಮತ್ತು ಯಜಮಾನನ ಇಷ್ಟಾರ್ಥಸಿದ್ಧಿಗಳೂ, ಅಪೇಕ್ಷೆಗಳೂ ನೆರವೇರುವವು.

ಸರ್ವೈರಂಗೈಃ ಸರ್ವೇಣಾತ್ಮನಾ ಸಮೃಧ್ಯತೇ ಯ ಏವಂ ವೇದ ॥

ವೇದನಂ ಪ್ರಶಂಸತಿ—ಸ್ಪಷ್ಟೋಽರ್ಥಃ ॥

ಮೇಲೆ ಹೇಳಿದ ವಿಷಯಗಳನ್ನು ಸರಿಯಾಗಿ ತಿಳಿದುಕೊಂಡು ಯಾವ ಪುರುಷನು ಅದರಂತೆ ಆಚರಿಸುವನೋ ಅವನು ಸಮಸ್ತ ಅಂಗಗಳಿಂದಲೂ ಶಕ್ತಿಸಹಿತನಾಗಿಯೂ ಆತ್ಮದಿಂದ ಹರ್ಷಚಿತ್ತನಾಗಿ ಸಕಲಸಮೃದ್ಧಿಗಳನ್ನೂ ಪಡೆದು ಸುಖಿಸುವನು.



*English Translation*

**(The Hotar has it in his power to deprive the Sacrificer of his life, & c. by not repeating the several parts of the Pra-uga Shastra in the proper way).**

This Pra-uga Shastra represents the vital airs. The Hotar addressed his recitation to seven deities. For there are seven vital airs in the head. By doing so the Hotar places the vital airs in the head (of the sacrificer).

There is the question asked, whether the Hotar might be able to produce woe as well as happiness to the sacrificer? (The answer is) He who might be the Hotar of the sacrificer at that time (when the Pra-uga Shastra is to be repeated) can do with him what he pleases. If he think, "I will separate him from his vital airs," he need only repeat the triplet addressed to Vayu confusedly, or forego a pada, by which means the (several parts of the) triplet became confused. In this manner he separates him (the sacrificer) whom he wishes so to separate, from his vital airs.

Should he think, "I will separate him from his prana, and apana," he need only repeat the triplet addressed to Indra-Vayu confusedly or forego a pada. In this way the triplet becomes confused, and he thus separates the sacrificer, whom he wishes so to separate, from his prana and apana.

Should he think, "I will separate the sacrificer from his eye," he need only repeat the triplet addressed to Mitra-Varuna confusedly, or forego a pada. In this way the triplet becomes confused, and he thus separates the sacrificer, whom he wishes so to separate from his eye.

Should he think, "I will separate him from the sense of hearing, he need only repeat the triplet addressed to the As'vins confusedly, or forego a pada. In this way the triplet becomes confused, and he, separates the sacrificer, whom he wishes to separate, from the sense of hearing.

Should he think, "I will sepate him from his strength," he need only repeat the triplet addressed to Indra confusedly, or forego a pada. In this way the triplet becomes confused, and he separates him whom he wishes so to separate, from his strength.

Should he think, "I will separate him from his limbs," he need only repeat the triplet addressed to the Visve Devah confusedly, or forego a pada. In this way the triplet becomes confused, and he separates the sacrificer, whom he wishes so to separate, from his limbs.

Should he think, "I will separate him from his speech," he need only repeat the triplet addressed to Sarasvati confusedly or forego a pada. In this way the triplet becomes confused, and he separates the sacrificer, whom he wishes so to separate, from his speech.

Should he think, "I will keep him joined with all his limbs and his soul," he ought to repeat the triplet, as it was first told (to him by his master) in the right way. Thus he keeps him joined with all his limbs and his whole soul. He who has such a knowledge remains joined with all his limbs and the whole soul.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಏಕಾದಶಾಧ್ಯಾಯೇ ತೃತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.**



## ಅಥ ಏಕಾದಶಾಧ್ಯಾಯೇ ಚತುರ್ಥಃ ಖಂಡಃ

**ಹನ್ನೊಂದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು**



[ಪ್ರಉಗಶಸ್ತ್ರಮಂತ್ರಗಳ ದೇವತೆಗಳೆಲ್ಲರೂ ಅಗ್ನಿದೇವತೆಯ ಬೇರೆ ಬೇರೆ ರೂಪಾಂತರಗಳೆಂದು ಎಂದರೆ ಸ್ವರೂಪವೆಂದೇ ಹೇಳಲ್ಪಡುವರು.]

ತದಾಹುರ್ಯಥಾ ವಾವ ಸ್ತೋತ್ರಮೇವಂ ಶಸ್ತ್ರಮಾಗ್ನೇಯೀಷು ಸಾಮಗಾ ಸ್ತುವತೇ ವಾಯವ್ಯಯಾ । ಹೋತಾ ಪ್ರತಿಪದ್ಯತೇ ಕಥಮಸ್ಯಾಗ್ನೇಯ್ಯೋಽನುಶಸ್ತಾ ಭವಂತೀತಿ ॥

ಅಥಸ್ತೋತ್ರಶಸ್ತ್ರಯೋಃ ದೇವತಾವೈಲಕ್ಷಣ್ಯಸ್ವರೂಪಮಾಕ್ಷೇಪಮುತ್ಥಾಪಯತಿ — ಸಾಮಗಾನಾಂ ಯಾನ್ಯಾಜ್ಯಶಸ್ತ್ರಾಣಿ ತದೃಚ ಆಗ್ನೇಯ್ಯ ಆಮ್ನಾತಾಃ ॥ ಅಗ್ನ ಆಯಾಹಿ [೬-೧೬-೧೦] ಇತ್ಯಾದಿಷು ಸಾಮಗೈರಾಜ್ಯಸ್ತೋತ್ರಪಾಠಾತ್ ॥ ಹೋತಾ ತು ವಾಯವಾಯಾಹಿ

[೫-೫೧-೫] ಇತ್ಯನಯಾ ವಾಯವ್ಯಯಾ ಪ್ರಉಗಶಸ್ತ್ರಂ ಪ್ರಾರಭತೇ ॥ ಅತೋಽನೇನ ವಿಲಕ್ಷಣ-ದೇವತಾಕೇನ ಶಸ್ತ್ರೇಣಾಗ್ನೇಯ್ಯ ಋಚಃ ಕಥಮನುಶಸ್ತಾ ಭವಂತಿ ॥ ಅನುಕೂಲಶಂಸನಾ-ಭಾವೇ ಸ್ತುತಮನುಶಂಸತೀತಿ ಶಾಖಾಂತರಂ ವಿರುಧ್ಯೇತೇತ್ಯಾಕ್ಷೇಪಃ ॥

ಶಸ್ತ್ರಮಂತ್ರ ಮತ್ತು ಸಾಮವೇದಸಂಬಂಧವಾದ ಸ್ತೋತ್ರಮಂತ್ರಗಳನ್ನು ಪಠಿಸುವಾಗ ಋಗ್ವೇದಸಂಬಂಧವಾದ ಶಸ್ತ್ರಮಂತ್ರಗಳಿಗೂ ಸಾಮವೇದಸಂಬಂಧವಾದ ಸ್ತೋತ್ರಮಂತ್ರಗಳಿಗೇ ದೇವತಾಸಂಬಂಧ ವಿಷಯದಲ್ಲಿ ಐಕ್ಯತೆಯಿರಬೇಕೆಂದು ಅನೇಕಕಡೆ ಹೇಳಲಾಗಿದೆ. ಎಂದರೆ ಋಗ್ವೇದಮಂತ್ರಗಳಿಗೂ ಸಾಮವೇದಮಂತ್ರಗಳಿಗೂ ಒಂದೇವಿಧವಾದ ದೇವತೆಗಳನ್ನು ಉದ್ದೇಶಿಸಿ ಹೇಳಬೇಕೆಂದಿದೆ. ಆದರೆ ಸಾಮವೇದಿಗಳು ಆಜ್ಯಸ್ತೋತ್ರಗಳನ್ನು ಗಾನಮಾಡುವಾಗ ಅವರು ಪಠಿಸುವ ಮಂತ್ರಗಳಿಗೆ ಅಗ್ನಿಯು ದೇವತೆಯು **ಅಗ್ನ ಆಯಾಹಿ** (ಸಾಮ. ಉ. ಆ. ೧-೧-೪ ರಿಂದ ೭) ಇತ್ಯಾದಿ ಮಂತ್ರಗಳಲ್ಲಿ ಅಗ್ನಿಯನ್ನು ಮಾತ್ರ ಸ್ತುತಿಸಲಾಗಿದೆ. ಆದರೆ ಋಗ್ವೇದದ ಹೋತೃವು ಆಜ್ಯಸ್ತೋತ್ರವನ್ನು ಅನುಸರಿಸಿ ಪಠಿಸುವ ಪ್ರಉಗಶಸ್ತ್ರಮಂತ್ರದಲ್ಲಿ **ವಾಯುವಾ ಯಾಹಿ** (ಋ. ಸಂ. ೧-೨-೧) ಎಂದು ವಾಯುದೇವತಾತ್ಮಕವಾದ ಮಂತ್ರವನ್ನು ಪಠಿಸುವನು. ಇದು ಅಸಮಂಜಸವಲ್ಲವೇ ? ಏಕೆಂದರೆ **ಸ್ತುತಮನುಶಂಸತಿ** (ತಾ. ಬ್ರಾ. ೯-೮-೧೦) ಇತ್ಯಾದಿ ವಾಕ್ಯಗಳು ಇದಕ್ಕೆ ವಿರುದ್ಧವಾಗಿರುವವು. ಇದು ಆಕ್ಷೇಪವು.

## ಅಗ್ನೇರ್ವಾ ಏತಾಃ ಸರ್ವಾಸ್ತನ್ವೋ ಯದೇತಾ ದೇವತಾಃ ।

ತಸ್ಯೋತ್ತರಂ ದರ್ಶಯತಿ—ಸಪ್ತಸು ತ್ರ್ಯೃಚೇಷು ಯಾ ಏತಾ ವಾಯ್ವಾದಯೋ ದೇವತಾಃ ಪ್ರತೀಯಂತೇ ತಾಃ ಸರ್ವಾ ಅಗ್ನೇರೇವ ಶರೀರಭೂತಾಃ ॥ ಅತೋಽಗ್ನಿವಿಷಯ-ಮೇವ ಕೃತ್ಸ್ನಂ ಶಸ್ತ್ರಂ ಸಂಪದ್ಯತ ಇತಿ ಸ್ತೋತ್ರಗತಾ ಆಗ್ನೇಯ್ಯ ಋಚೋಽನುಶಸ್ತಾ ಭವಂತಿ ॥

ಈ ಆಕ್ಷೇಪಕ್ಕೆ ಉತ್ತರವನ್ನು ಹೇಳುವರು. ಈಗ ಹೋತೃವು ಪಠಿಸುವ ಪ್ರಉಗಶಸ್ತ್ರದ ಮಂತ್ರಗಳಾದ **ವಾಯುವಾ ಯಾಹಿ** (ಋ. ಸಂ. ೧-೨-೧,೨,೩) ಎಂದು ಮೊದಲಾದ ಏಳು ಬೇರೆಬೇರೆ ದೇವತಾಕವಾದ ತೃಚಗಳಿರುವವು. ಇವಕ್ಕೆ ವಾಯುವೇ ಮೊದಲಾದ ದೇವತೆಗಳು ಉಕ್ತವಾಗಿದ್ದರೂ ಈ ಏಳು ತೃಚಗಳ ದೇವತೆಗಳೆಲ್ಲರೂ ಅಗ್ನಿಯ ಶರೀರಭೂತರಾಗಿರುವ ರೆಂದು ಪರಿಗಣಿಸಲ್ಪಟ್ಟಿರುವರು. ಆದ್ದರಿಂದ ಈ ಶಸ್ತ್ರಮಂತ್ರದಲ್ಲೆಲ್ಲಾ ತೃಚಗಳಲ್ಲಿಯೂ ಅಗ್ನಿಮಾತ್ರ ಸ್ತುತಿಸಲ್ಪಟ್ಟಿರುವನೆಂದು ತಿಳಿಯಬೇಕು. ಆದ್ದರಿಂದ ಸಾಮಗರ ಸ್ತೋತ್ರಗಳಲ್ಲಿರುವ ಮಂತ್ರಗಳಿಗೂ ಋಗ್ವೇದಮಂತ್ರಗತವಾದ ಋಕ್ಕುಗಳಿಗೂ ದೇವತಾ ವಿಷಯದಲ್ಲಿ **ಅನುಶಸ್ತಾ** ಎಂದರೆ ಪರಸ್ಪರ ಹೊಂದಿಕೊಂಡು ಇರುವದೆಂದಭಿಪ್ರಾಯವು.

## ಸ ಯದಗ್ನಿಃ ಪ್ರವಾನಿವ ದಹತಿ ತದಸ್ಯ ವಾಯವ್ಯಂ ರೂಪಂ ತದಸ್ಯ ತೇನಾನುಶಂಸತಿ ॥

ಅಗ್ನೇಃ ಪ್ರಥಮತ್ರ್ಯೃಚಪ್ರತಿಪಾದಿತಾಯಾ ವಾಯುದೇವತಾಯಾಃ ಸ್ವರೂಪಂ ದರ್ಶ-ಯತಿ—ಪ್ರವಾನಿವ ಪ್ರಕರ್ಷವಾನೇವ ಸನ್ನಧಿಕ ಜ್ವಾಲಯಾ ದಹತ್ಯಗ್ನಿರಿತಿ ಯದಸ್ತಿ ತತ್ಪ್ರಕ-ರ್ಷಾತ್ಮಕಂ ವಾಯುಸಂಬಂಧಿರೂಪಂ ॥ ವಾಯುನಾ ಜ್ವಾಲಾಽಽಧಿಕ್ಯೋದಯಾ ॥ ಅತೋಽಸ್ಯ ಪ್ರಉಗಶಸ್ತ್ರಸ್ಯ ಸಂಬಂಧಿನಾ ವಾಯುರೂಪೇಣಾಯಂ ಹೋತಾ ತದಗ್ನಿರೂಪಮನುಶಂಸತಿ ॥

ಅಗ್ನಿಗೆ ಅನುರೂಪವಾಗಿ ಹೋತೃವು ಪ್ರಥಮ ತೃಚವನ್ನು ಪಠಿಸುವನು. ಅದು **ವಾಯವಾ ಯಾಹಿ** ಎಂದು ಮೊದಲಾಗುವ ಮೂರು ಋಕ್ಕುಗಳು ಇವು ವಾಯುದೇವತಾಕವಾದರೂ ಅಗ್ನಿಯ (ಪ್ರಕಾರಾಂತರ ರೂಪ) ಸ್ವರೂಪವೆಂದೇ ಪರಿಗಣಿಸಲ್ಪಟ್ಟಿರುವುದು. ಹೇಗೆಂದರೆ ಮೇಲಿನ ವಾಕ್ಯದಲ್ಲಿ **ಪ್ರವಾನಿವ** ಎಂದು ಹೇಳಲಾಗಿದೆ. ಎಂದರೆ **ಪ್ರಕರ್ಷವಾನಿವ** ಉತ್ಕೃಷ್ಟವಾಗಿ, ಬಹಳ ಅಧಿಕವಾಗಿ ಎಂದರ್ಥವು. ಅಗ್ನಿಯು ಚೆನ್ನಾಗಿ ಅಥವಾ ಅಧಿಕವಾಗಿ ದಹಿಸುವುದಕ್ಕೆ ವಾಯುವಿನ ಸಹಾಯವು ಅವಶ್ಯಕವಾಗಿ ಬೇಕೇಬೇಕು. ಗಾಳಿಯು (ವಾಯುವು) ಬೀಸುವುದರಿಂದಲೇ ಅಗ್ನಿಯು ಪ್ರಕರ್ಷವಾಗಿ ಎಂದರೆ ಜಾಜ್ವಲ್ಯಮಾನವಾಗಿ ದಹಿಸುವುದು ಪ್ರಸಿದ್ಧವಾಗಿಯೇ ಇದೆ. ಆದ್ದರಿಂದ ಅಗ್ನಿಯು ದಹಿಸುವ ಕಾರ್ಯಕ್ಕೆ ವಾಯುವು ಸಹಾಯ ಮಾಡಿದಂತಾಯಿತು. ಎಂದರೆ ವಾಯುವು ಅಗ್ನಿಯ ರೂಪಾಂತರವೇ ಎಂದು ಹೇಳಿದಂತಾಯಿತು. ಆದ್ದರಿಂದ ಪ್ರಉಗಶಸ್ತ್ರ ಸಂಬಂಧವಾದ ವಾಯುದೇವತಾಕವಾದ ಮಂತ್ರಪಠನದಿಂದ ಹೋತೃವು ಅಗ್ನಿಯ ರೂಪವನ್ನು ಪ್ರಶಂಸಿಸಿದಂತಾಯಿತು.

**ಅಥ ಯದ್ದ್ವೈಧಮಿವ ಕೃತ್ವಾ ದಹತಿ ದ್ವೌ ವಾ ಇಂದ್ರವಾಯೂ ತದಸ್ಯೈಂದ್ರವಾಯವಂ ರೂಪಂ ತದಸ್ಯ ತೇನಾನುಶಂಸತಿ ॥**

ದ್ವಿತೀಯತ್ರ್ಯೃಚಪ್ರತಿಪಾದಿತಾಯಾ ಇಂದ್ರವಾಯುದೇವತಾಯಾಃ ಸಾರೂಪ್ಯಂ ದರ್ಶಯತಿ— ಜ್ವಾಲಾದ್ವಯಮಿವ ಕೃತ್ವಾ ಯದಾ ದಹತಿ ತದಾ ದ್ವಿತೀಯಸಾಮ್ಯಾತ್ತಜ್ಜ್ವಾಲಾದ್ವಯಮಿಂದ್ರವಾಯುಸಂಬಂಧಿರೂಪಂ ಭವತಿ ಅನ್ಯತ್ಪೂರ್ವವತ್ ॥

ಈಗ ಪ್ರಉಗಶಸ್ತ್ರಮಂತ್ರದಲ್ಲಿರುವ ಎರಡನೆಯ ತೃಚವಾದ ಇಂದ್ರವಾಯುದೇವತೆಗಳ ಮತ್ತು ಅಗ್ನಿಸಾರೂಪ್ಯವನ್ನು ವಿವರಿಸುವರು—ಅಗ್ನಿಯು ದಹಿಸುವಾಗ ಎರಡು ಜ್ವಾಲೆಗಳಿಂದ ದಹಿಸುವುದು. ಈ ಎರಡು ಜ್ವಾಲೆಗಳು ಇಂದ್ರವಾಯುಗಳ ರೂಪಾಂತರವು. ಎರಡು ಜ್ವಾಲೆಗಳಿರುವುದರಿಂದ ಇಂದ್ರ ಮತ್ತು ವಾಯು ಎಂಬ ಎರಡು ದೇವತೆಗಳ ರೂಪವನ್ನು ಪ್ರದರ್ಶಿಸಿದಂತಾಯಿತು. ಆದ್ದರಿಂದ ಅಗ್ನಿಗೂ ಇಂದ್ರವಾಯು ಸಾರೂಪ್ಯವನ್ನೇ ಹೇಳಿದಂತಾಯಿತು. ಈ ಇಂದ್ರವಾಯುದೇವತಾಕವಾದ ತೃಚಪಠನದಿಂದ ಹೋತೃವು ಅಗ್ನಿಯನ್ನು ಅನುಶಂಸನೆಮಾಡಿದಂತಾಯಿತು.

**ಅಥ ಯದುಚ್ಚ ಹೃಷ್ಯತಿ ನಿ ಚ ಹೃಷ್ಯತಿ ತದಸ್ಯ ಮೈತ್ರಾವರುಣಂ ರೂಪಂ ತದಸ್ಯ ತೇನಾನು ಶಂಸತಿ ಸ ಯದಗ್ನಿರ್ಘೋರಸಂಸ್ಪರ್ಶಸ್ತದಸ್ಯ ವಾರುಣಂ ರೂಪಂ ತಂ ಯದ್ಘೋರಸಂಸ್ಪರ್ಶಂ ಸಂತಂ ಮಿತ್ರಕೃತ್ಯೇವೋಪಾಸತೇ ತದಸ್ಯ ಮೈತ್ರಂ ರೂಪಂ ತದಸ್ಯ ತೇನಾನುಶಂಸತಿ ॥**

ತೃತೀಯತ್ರ್ಯೃಚೇ ಸಾರೂಪ್ಯಂ ದರ್ಶಯತಿ — ಜ್ವಲತೋಽಗ್ನೇರೌನ್ನತ್ಯಮುದ್ಧರ್ಷಃ ॥ ಜ್ವಾಲಾಶಾಂತ್ಯಾ ನೀಚತ್ವಂ ನಿಹರ್ಷಃ ॥ ತದುಭಯಂ ಮಿತ್ರಾವರುಣಸಂಬಂಧಿರೂಪಂ ॥ ಮಿತ್ರಂ ದೃಷ್ಟವತೋ ಹರ್ಷೇಣೋನ್ನತತ್ವಾನ್ಮಿತ್ರರೂಪಂ ॥ ವರುಣಸಂಬಂಧಿನೀನಾಮಪಾಂ ನೀಚಗಾಮಿತ್ವಾದಿತದತ್ ವರುಣಸ್ಯ ರೂಪಂ ॥ ತದೀಯತ್ರ್ಯೃಚೇನಾಗ್ನಿರನುಶಸ್ತೋ ಭವತಿ ॥ ತತ್ರೈವ ಯುಕ್ತ್ಯಂತರಮಾಹ— ಸೋಽಗ್ನಿರ್ಘೋರಸಂಸ್ಪರ್ಶ ಉಷ್ಣಸಂಸ್ಪರ್ಶ ಇತಿ ಯದಸ್ತಿ ತಸ್ಮಾಗ್ನೇ-

ರ್ವರುಣಸಂಬಂಧಿ ರೂಪಂ ವರುಣಸ್ಯೋಗ್ರತ್ವಾತ್ ॥ ಘೋರಸಂಸ್ಪರ್ಶಂ ಸಂತಂ ಸ್ಪ್ರಷ್ಟುಮಶಕ್ಯಮಪಿ ತಮಗ್ನಿಂ ಶೀತಾರ್ತಾಃ ಪ್ರಾಣಿನೋ ಮಿತ್ರಕೃತ್ಯಾ ಮಿತ್ರಸ್ಯ ಕೃತಿಃ ಕಾರ್ಯಂ ಸಮೀಪೇಽವಸ್ಥಾನಂ ತೇನೈವೈನಮುಪಾಸತೇ ಶೀತಪರಿಹಾರಾಯ ಹಸ್ತಾವುದರಂ ಪೃಷ್ಠಂ ಚ ವಹ್ನಿಸಮೀಪೇ ಪ್ರತಾಪಯಂತೋ ವಹ್ನಿಂ ಸೇವಂತೇ ॥ ತದೇತತ್ಸೇವನಮಗ್ನೇರ್ಮಿತ್ರಸಂಬಂಧಿರೂಪಂ ॥ ತತೋಽಸ್ಯಾಗ್ನೇಃ ಸಂಬಂಧಿನಾ ತೇನ ಮೈತ್ರಾವರುಣರೂಪೇಣಾಯಂ ಹೋತಾ ವಹ್ನಿಮನುಶಂಸತಿ ॥

ಈಗ ಮೂರನೆಯ ತೃಚದಲ್ಲಿರುವ ಸಾರೂಪ್ಯವನ್ನು ವಿವರಿಸುವರು—ಅಗ್ನಿಯು ಜ್ವಲಿಸುತ್ತಿರುವಾಗ ಅದರ ಜ್ವಾಲೆಯು ಕೆಲವು ವೇಳೆ ಬಹಳ ಉನ್ನತವಾಗಿ ಮೇಲಕ್ಕೇಳುವುದು. ಅದೇ ಅಗ್ನಿಯು ಆರಿಹೋಗುವ ಸಮಯದಲ್ಲಿ ಅದರ ಜ್ವಾಲೆಯು ಕಮ್ಮಿಯಾಗಿ ಶಾಂತನಾಗುವುದು. ಈ ಉಚ್ಚ ಮತ್ತು ನೀಚರೂಪವಾದ ಅಗ್ನಿಯ ರೂಪಪ್ರಭೇದಗಳು ಮಿತ್ರಾವರುಣರ ರೂಪಾಂತರಗಳೆಂದು ಹೇಳಲ್ಪಡುವವು. ಹೇಗೆಂದರೆ ಮಿತ್ರನ ರೂಪಾಂತರವಾದ ಅಗ್ನಿಯ ಜ್ವಾಲೆಯು ಮೇಲಕ್ಕೆ ಏರಿದಾಗ ನೋಡುವವರಿಗೆ ಅತ್ಯಾನಂದವಾಗುವುದು. ಇದು ಅಗ್ನಿಯ ಮಿತ್ರಸಂಬಂಧವಾದ ರೂಪಾಂತರವು. ವರುಣನು (ಎಂದರೆ ವರುಣಸಂಬಂಧಿಯಾದ ಉದಕವು) ಯಾವಾಗಲೂ ತಗ್ಗು ಎಂದರೆ ಹಳ್ಳಪ್ರದೇಶದಲ್ಲಿ ಇರುವುದು. ಈರೀತಿ ನೀರಿನಿಂದ ತುಂಬಿರುವ ಆಳವಾದ ಸರೋವರವನ್ನೂ ಅಥವಾ ಸಮುದ್ರವನ್ನೂ ನೋಡಿದರೆ ಯಾರಿಗಾದರೂ ಭಯವುಂಟಾಗುವುದು. ಆದ್ದರಿಂದ ತಗ್ಗಿನಲ್ಲಿರುವ ವರುಣನ ರೂಪವು ಅಗ್ನಿಯ ಶಾಂತಸ್ಥಿತಿ (ಆರಿಹೋಗುತ್ತಿರುವ) ಯಲ್ಲಿರುವ ರೂಪಾಂತರವು. ಆದ್ದರಿಂದ ಮಿತ್ರಾವರುಣರ ರೂಪಗಳು ಅಗ್ನಿಯ ಪ್ರಾಕಾರಾಂತರ ರೂಪಗಳು ಅಥವಾ ಅಗ್ನಿಯ ಸಾರೂಪ್ಯವೆಂದು ಹೇಳಲ್ಪಡುವವು. ಈ ಸಾರೂಪ್ಯವನ್ನು ಪ್ರಕಾರಾಂತರವಾಗಿ ವರ್ಣಿಸುವರು. ಅಗ್ನಿಯು ಘೋರಸಂಸ್ಪರ್ಶನೆಂದು ಹೇಳುವರು. ಏಕೆಂದರೆ ಬೆಂಕಿಯು ಶರೀರಕ್ಕೆ ತಗಲಿದರೆ ಉಷ್ಣಾಧಿಕ್ಯದಿಂದ ಶರೀರವು ಸುಟ್ಟುಹೋಗಿ ಘಾಯಗಳಾಗುವ ಸಂಭವವುಂಟು. ಈರೀತಿಯಾದ ಅಗ್ನಿಯ ಉಗ್ರಸ್ವರೂಪವನ್ನೇ ಕೆಲವರು ವರುಣನ ಪ್ರಕಾರಾಂತರವಾದ ರೂಪವೆಂದು ಹೇಳುವರು. ಆದರೆ ಶೀತಕಾಲದಲ್ಲಿಯೂ ಚಳಿಯಾದಾಗಲೂ ಮನುಷ್ಯಾದಿಗಳು ಅಗ್ನಿಯ ಸಮೀಪದಲ್ಲಿ ಕುಳಿತು ಕೈಕಾಲುಗಳಿಂದ ಅದರ ಹಿತಕರವಾದ ಔಷ್ಣ್ಯವನ್ನು ಸೇವಿಸುತ್ತಾ ಆನಂದಪಡುವರು. ಈರೀತಿ ಸೇವನೆಮಾಡಲ್ಪಡುವ ಅಗ್ನಿಯು ಮಿತ್ರನ ರೂಪಾಂತರವೆಂದು ಹೇಳಲ್ಪಡುವುದು. ಆದ್ದರಿಂದ ಅಗ್ನಿಗೆ ಮಿತ್ರಾವರುಣರೆಂಬ ಪ್ರಕಾರಾಂತರ ಅಥವಾ ಸಾರೂಪ್ಯಗಳಿರುವುದರಿಂದ ಹೋತೃವು ಮಿತ್ರಾವರುಣದೇವತಾತ್ಮಕವಾದ ತೃಚವನ್ನು ಅಗ್ನಿಸಂಬಂಧವಾದ ಸ್ತೋತ್ರವನ್ನನುಸರಿಸಿ ಪಠಿಸುವುದು ಯುಕ್ತವು.

**ಅಥ ಯದೇನಂ ದ್ವಾಭ್ಯಾಂ ಬಾಹುಭ್ಯಾಂ ದ್ವಾಭ್ಯಾಮರಣೀಭ್ಯಾಂ ಮಂಥಂತಿ ದ್ವೌ ವಾ ಅಶ್ವಿನೌ ತದಸ್ಯಾಶ್ವಿನಂ ರೂಪಂ ತದಸ್ಯ ತೇನಾನುಶಂಸತಿ ॥**

ಚತುರ್ಥತ್ರ್ಯೃಚೇ ಸಾರೂಪ್ಯಂ ದರ್ಶಯತಿ—ಅಶ್ವಿನೋರ್ದ್ವಿತ್ವಾದ್ಧಸ್ತದ್ವಯೋನಾರಣಿದ್ವಯೇನ ಚ ಮಂಥನಮಸ್ಯಾಗ್ನೇರಾಶ್ವಿನಂ ರೂಪಂ ॥

ಈಗ ನಾಲ್ಕನೇ ತೃಚದೇವತೆಗಳಾದ ಅಶ್ವಿನೀದೇವತೆಗಳಿಗೂ ಅಗ್ನಿಗೂ ಇರುವ ಸಾರೂಪ್ಯವನ್ನು ಹೇಳುವರು—

ಯಜ್ಞಾದಿಗಳಲ್ಲಿ ಅಗ್ನಿಯನ್ನು ಉತ್ಪತ್ತಿಮಾಡುವಾಗ ಮರದ ಎರಡು ತುಂಡುಗಳನ್ನು ಅಥವಾ ಅರಣಿಗಳನ್ನು ಉಪಯೋಗಿಸಿ ಅವುಗಳಿಂದ ಎರಡು ಕೈಗಳಿಂದಲೂ ಬಲವಾಗಿ ಕಡೆದು ಅಗ್ನಿಯನ್ನು ಉತ್ಪತ್ತಿಮಾಡುವರು. ಹೀಗೆ ಉತ್ಪತ್ತಿ

ಮಾಡುವಾಗ ಬಾಹುಸ್ವರೂಪರಾದ ಇಬ್ಬರು ಅಶ್ವಿನೀದೇವತೆಗಳ ಸಹಕಾರವೂ ಬೇಕಾಗುವುದು ಆದ್ದರಿಂದ ಉತ್ಪತ್ತಿಯಾದ ಅಗ್ನಿಗೆ ಅಶ್ವಿನೀದೇವತೆಗಳು ಸಾರೂಪ್ಯಭಾವದಿಂದ ಇರುವರು. ಆದ್ದರಿಂದ ಅಗ್ನಿಯ ಅನಂತರ ಅಶ್ವಿನೀದೇವತೆಗಳನ್ನು ಅನುಸರಿಸಿ ಸ್ತುತಿಸುವುದು ಯುಕ್ತವು.

**ಅಥ ಯದುಚ್ಚೈರ್ಘೋಷ ಸ್ತನಯನ್ಬಬಾ ಕುರ್ವನ್ನಿವ ದಹತಿ ಯಸ್ಮಾದ್ಭೂತಾನಿ ವಿಜಂತೇ ತದಸ್ಯೈಂದ್ರಂ ರೂಪಂ ತದಸ್ಯ ತೇನಾನುಶಂಸತಿ ॥**

ಪಂಚಮ ತ್ರ್ಯೃಚೇ ಸಾರೂಪ್ಯಂ ದರ್ಶಯತಿ—ಸ್ತನಯನ್ ಧ್ವನಿಂ ಕುರ್ವನ್ ॥ ಸ ಏವ ಧ್ವನಿಭಿಸ್ತ್ರಿಭಿರ್ವಿಕಾರೈರನುಕ್ರಿಯತೇ ॥ ಯತ ಈದೃಶಾದ್ಧ್ವನಿಸಹಿತಾದಗ್ನೇ ರೂಪಾದ್ಭೂತಾನಿ ಪ್ರಾಣಿನೋ ವಿಜಂತೇ ಬಿಭ್ಯತಿ । ತದ್ಭಯಕಾರಣಧ್ವನಿಸಹಿತಮಿಂದ್ರಸ್ಯ ಸಂಗ್ರಾಮಾರ್ಥಮಾಸ್ಫೋಟನಂ ಕುರ್ವತಃ ಶತ್ರುಭಯಕಾರಿಣೋ ರೂಪಂ ॥

ಈಗ ಐದನೇ ತೃಚದೇವತೆಗಳ ಸ್ವರೂಪವನ್ನು ವಿವರಿಸುವರು—ಅಗ್ನಿಯು ದಹಿಸುತ್ತಿರುವಾಗ ಬ ಬ ಬ ಎಂದು ಘಟ್ಟಿಯಾಗಿ ಶಬ್ದಮಾಡುತ್ತಾ ದಹಿಸುವನು. ಈ ಧ್ವನಿಯನ್ನು ಕೇಳಿ ಅಗ್ನಿ ಭಯದಿಂದ ಸಮಿಪದಲ್ಲಿದ್ದ ಪ್ರಾಣಿಗಳೆಲ್ಲವೂ ಭಯದಿಂದ ಓಡಿಹೋಗುವವು. ಇಂದ್ರನು ಯುದ್ಧಾದಿಗಳಲ್ಲಿ ವಜ್ರಾಯುಧದಿಂದ ಭಯಂಕರವಾಗಿ ಶಬ್ದಮಾಡುವುದೇ ಇಂದ್ರನ ಪ್ರಕಾರಾಂತರವಾದ ರೂಪವು. ಇದೇ ಅಗ್ನಿಯ ಸಾರೂಪ್ಯವಾಗಿರುವುದು. ಆದ್ದರಿಂದ ಹೋತೃವು ಅಗ್ನಿಯನಂತರ ಅವನ ಸಾರೂಪ್ಯವಾದ ಇಂದ್ರ ದೇವತೆಯನ್ನು ಸ್ತುತಿಸುವುದು ಯುಕ್ತವು.

**ಅಥ ಯದೇನಮೇಕಂ ಸಂತಂ ಬಹುಧಾ ವಿಹರಂತಿ ತದಸ್ಯ ವೈಶ್ವದೇವಂ ರೂಪಂ ತದಸ್ಯ ತೇನಾನುಶಂಸತಿ ।**

ಷಷ್ಠತ್ರ್ಯೃಚೇ ಸಾರೂಪ್ಯಂ ದರ್ಶಯತಿ—ಅಗ್ನೇರಾಹವನೀಯಾದಿಸ್ಥಾನೇಷ್ವಾಗ್ನೀಧ್ರಾದಿಧಿಷ್ಣ್ಯೇಷು ಚ ಬಹುಧಾ ವಿಹರಣಂ ಯದಸ್ತಿ ತದ್ವಿಶ್ವೇಷಾಂ ದೇವಾನಾಂ ರೂಪಂ ತೇಷಾಮಪಿ ಬಹುತ್ವಾತ್ ॥

ಆರನೆಯ ತೃಚದಲ್ಲಿ ಹೇಳಿರುವ ದೇವತೆಗಳ ಸಾರೂಪ್ಯವನ್ನು ತಿಳಿಸುವರು. ಅಗ್ನಿಯು ಉರಿಯುತ್ತಿರುವಾಗ ಒಂದೇ ಸ್ಥಳದಲ್ಲಿ ಒಂದೇ ಅಗ್ನಿಯಾಗಿರುವನು. ಬೇರೆ ಬೇರೆ ಕಡೆಗಳಲ್ಲಿ ಅಗ್ನಿಯನ್ನು ಹೊತ್ತಿಸುವುದಕ್ಕಾಗಿ ಮೊದಲಿದ್ದ ಒಂದೇ ಅಗ್ನಿಯಿಂದಲೇ ಸ್ವಲ್ಪಭಾಗವನ್ನು ತೆಗೆದುಕೊಂಡು ಹೊತ್ತಿಸಿ ಅನೇಕ ಅಗ್ನಿಗಳನ್ನಾಗಿ ಮಾಡುವರು. ಎಂದರೆ ಒಂದೇ ಆಗಿದ್ದ ಅಗ್ನಿಯು ಅನೇಕ ರೂಪಗಳನ್ನು ಹೊಂದುವನು. ಈ ಅನೇಕ ರೂಪಗಳೇ ಅಗ್ನಿಯ ರೂಪಾಂತರಗಳೆಂದು ಅಥವಾ ವಿಶ್ವೇದೇವತೆಗಳೆಂದು ಹೇಳಲ್ಪಡುವರು. ಅಗ್ನಿಗೂ ವಿಶ್ವೇದೇವತೆಗಳಿಗೂ ಇದರಿಂದ ಸಾರೂಪ್ಯವಿದ್ದಂತಾಯಿತು ಆದ್ದರಿಂದ ಹೋತೃವು ಅಗ್ನಿಯ ಸ್ತುತಿಯನಂತರದಲ್ಲಿ ಅವನನ್ನನುಸರಿಸಿ ವಿಶ್ವೇದೇವತೆಗಳನ್ನು ಸ್ತುತಿಸುವುದು ಯುಕ್ತವು.

**ಅಥ ಯತ್ಸ್ಫೂರ್ಜಯನ್ವಾಚಮಿವ ವದನ್ದಹತಿ ತದಸ್ಯ ಸಾರಸ್ವತಂ ರೂಪಂ ತದಸ್ಯ ತೇನಾನುಶಂಸತಿ ॥**

**ಸಪ್ತಮತ್ರ್ಯೃಚೇ ಸಾರೂಪ್ಯಂ ದರ್ಶಯತಿ–ಯಥಾ ಜನೋ ವಾಚಂ ವದತಿ ತಥೈವಾಗ್ನಿಃ ಸ್ಫೂರ್ಜಯತಿ, ಈಷದ್ವಿಚ್ಛಿದ್ಯ ವಿಲಕ್ಷಣೋಚ್ಚಾರಣಮಿವ ಶಬ್ದಂ ಕರೋತಿ ॥ ತದೇತದ್ವಾಗುಚ್ಚಾರಣಸದೃಶಂ ಧ್ವನಿಕರಣಂ ಸರಸ್ವತೀಸಂಬದ್ಧಂ ರೂಪಂ ॥**

ಏಳನೆಯ ತೃಚದೇವತೆಯ ಸಾರೂಪ್ಯವನ್ನು ವಿವರಿಸುವರು—ಅಗ್ನಿಯು ದಹಿಸುತ್ತಿರುವಾಗ ಚಟ ಚಟ ಎಂಬ ಶಬ್ದಗಳು ಕೇಳಿ ಬರುತ್ತಿರುವವು. ಈ ಶಬ್ದಗಳು ಮನುಷ್ಯರು ಆಡುವ ಒಂದುವಿಧ ಅಸ್ಪಷ್ಟಮಾತಿನಂತಿರುವವು. ಈ ವಿಧವಾದ (ಅಗ್ನಿಯಿಂದ ಹೊರಡುವ) ಶಬ್ದವೇ ಸರಸ್ವತೀದೇವತೆಯ ರೂಪಾಂತರವು ಎಂದರೆ ಅಗ್ನಿಯ ಸಾರೂಪ್ಯವು. ಸರಸ್ವತಿಯು ವಾಗಭಿಮಾನಿಯಾದ್ದರಿಂದ ಅಗ್ನಿಯು ದಹಿಸುವಾಗ ಮಾಡುವ ಅಸ್ಪಷ್ಟಧ್ವನಿಗೂ ಅಭಿಮಾನಿಯಾದಂತಾಗುವುದು. ಆದ್ದರಿಂದ ಸರಸ್ವತೀದೇವತೆಯು ಅಗ್ನಿಯ ಪ್ರಕಾರಾಂತರ ರೂಪವು. ಹೋತೃವು ಈ ತೃಚವನ್ನು ಪಠಿಸುವುದರಿಂದ ಅಗ್ನಿಯ ಪ್ರಕಾರಾಂತರ ರೂಪವಾದ ಸರಸ್ವತೀದೇವತಾಕಾರವಾದ (ಅಗ್ನಿಸಾರೂಪ್ಯದ) ಮಂತ್ರವನ್ನು ಪಠಿಸಿದಂತಾಯಿತು.

### ಏವಮು ಹಾಸ್ಯ ವಾಯವ್ಯಯೈವ ಪ್ರತಿಪದ್ಯಮಾನಸ್ಯ ತೃಚೇನ ತೃಚೇನೈವೈತಾಭಿರ್ದೇವತಾಭಿಃ ಸ್ತೋತ್ರಿಯೋಽನುಶಸ್ತೋ ಭವತಿ ॥

**ಇತ್ಥಮಗ್ನೇರ್ವಾಯ್ವಾದಿದೇವತಾನಾಂ ಚ ಸಾರೂಪ್ಯದ್ವಾರಾಽನುಶಂಸನಮುಪಪಾದ್ಯೋಪಸಂಹರತಿ—ಏವಮು ಹಾನೇನೈವೋಕ್ತಪ್ರಕಾರೇಣ ವಾಯವಾಯಾಹೀತ್ಯೇತಯಾ ವಾಯುದೇವತಾಕಯೈವರ್ಚಾ ಶಸ್ತ್ರಂ ಪ್ರಾರಭಮಾಣಸ್ಯ ಹೋತುಸ್ತೇನ ತೇನೋಕ್ತತ್ರ್ಯೃಚೇನೈವ ಪ್ರತಿಪಾದಿತಾಭಿರ್ವಾಯ್ವಾದಿದೇವತಾಭಿರಗ್ನಿಸದೃಶೀಭಿಃ ಸ್ತೋತ್ರಿಯಃ ಸ್ತೋತ್ರಸಂಬಂಧೀ ತ್ರ್ಯೃಚೋ ಅಗ್ನಆಯಾಹೀತ್ಯಾದಿಕ ಆಗ್ನೇಯೋಽಪ್ಯನುಶಸ್ತೋ ಭವತಿ ॥ ತಸ್ಯಾನುಷ್ಠಾನಂ ಯಥಾ ಭವತಿ ತಥಾ ಪ್ರಉಗಶಸ್ತ್ರಮನುಷ್ಠಿತಂ ಭವತೀತ್ಯರ್ಥಃ ॥**

ಈರೀತಿಯಾಗಿ ಮೇಲೆ ಹೇಳಿದ ವಾಯವ್ಯಾದಿ ಏಳು ತೃಚಮಂತ್ರಗಳ ದೇವತೆಗಳಿಗೂ ಅಗ್ನಿಗೂ ಇರುವ ಸಾರೂಪ್ಯವನ್ನು ವಿವರಿಸಿ ಈಗ ಈ ವಿಷಯವನ್ನು ಉಪಸಂಹರಿಸುವರು—ಈರೀತಿ ಮೇಲೆ ವಿವರಿಸಿದ ರೀತಿಯಂತೆ ಎಂದರೆ **ವಾಯವಾಯಾಹಿ** ಎಂದು ಮುಂತಾದ ವಾಯುದೇವತಾಕವೂ ಇತರ ದೇವತಾಕವೂ ಆದ ಏಳು ತೃಚಗಳ ದೇವತೆಗಳಿಗೆ ಎಂದರೆ ವಾಯು ಮೊದಲಾದ ಏಳು ವಿಧ ದೇವತೆಗಳಿಗೆ ಮತ್ತು ಅಗ್ನಿಗೆ ಇರುವ ಸಾರೂಪ್ಯವನ್ನು ವಿವರಿಸಿ ಈ ದೇವತೆಗಳನ್ನೆಲ್ಲಾ ಸ್ತುತಿಸಿದ್ದರಿಂದ ಅಗ್ನಿಯ ಪ್ರಕಾರಾಂತರ ರೂಪಗಳನ್ನೇ ವಿವರಿಸಿದ್ದಾಯಿತೆಂದೂ, ಸಾಮಗರು ಗಾನಮಾಡುವ **ಅಗ್ನ ಆಯಾಹಿ** ಮೊದಲಾದ ಅಗ್ನಿಪರವಾದ ಸ್ತೋತ್ರಿಯ ಮಂತ್ರಗಳಿಗೆ ಅನುಸಾರವಾಗಿಯೇ ಎಂದರೆ (ಅಗ್ನಿಪರವಾಗಿ ಅಥವಾ ಅಗ್ನಿಯ ರೂಪಾಂತರಗಳ) ಹೋತೃವು ಎಲ್ಲಾ ಮಂತ್ರಗಳನ್ನು ಸರಿಯಾಗಿಯೇ ಪಠಿಸಿರುವನೆಂದೂ ಹೇಳಿಯಾಯಿತು. ಇದರಿಂದ **ಸ್ತುತಮನುಶಂಸತಿ** ಎಂಬ ವಿಧಿ ಪ್ರಕಾರ ಸಾಮಗಾನಸ್ತೋತ್ರಕ್ಕೂ ಶಸ್ತ್ರಮಂತ್ರಗಳಿಗೂ ದೇವತೆಗಳ ವಿಷಯದಲ್ಲಿ ಅನುಶಸ್ತವಾಗಿ ಎಂದರೆ ಒಂದಕ್ಕೊಂದು ವಿರೋಧವಿಲ್ಲದಂತೆ ಪರಸ್ಪರ ಅನುಕೂಲದಿಂದ ಮಂತ್ರಗಳನ್ನು ಯಾವ ನ್ಯೂನತೆಯೂ ಇಲ್ಲದೆ ಪಠಿಸಲಾಯಿತೆಂದೂ ಹೇಳಿ ಈ ವಿಷಯವನ್ನು ಇಲ್ಲಿಗೆ ಉಪಸಂಹಾರಮಾಡಿರುವರು.

### ವಿಶ್ವೇಭಿಃ ಸೋಮ್ಯಂ ಮಧ್ವಗ್ನ ಇಂದ್ರೇಣ ವಾಯುನಾ । ಪಿಬಾ ಮಿತ್ರಸ್ಯ ಧಾಮಭಿರಿತಿ ವೈಶ್ವದೇವಮುಕ್ಥಂ ಶಸ್ತ್ವಾ ವೈಶ್ವದೇವ್ಯಾ ಯಜತಿ ಯಥಾಭಾಗಂ ತದ್ದೇವತಾಃ ಪ್ರೀಣಾತಿ ॥

ಅಥ ಶಸ್ತ್ರಯಾಜ್ಯಾಂ ವಿಧತ್ತೇ--ಹೇಽಗ್ನೇ ವಿಶ್ವೇಭಿಃ ಸರ್ವೈರ್ದೇವೈಃ ಸಹ ವಿಶೇಷತ ಇಂದ್ರೇಣ ವಾಯುನಾ ಚ ಸಹ ತಥಾ ಮಿತ್ರಸ್ಯ ಧಾಮಭಿಃ ಸ್ಥಾನೈರ್ಯುಕ್ತಃ ಸನ್ಸೋಮ್ಯಂ ಮಧು ಸೋಮಸಂಬಂಧಿನಂ ಮಧುರಂ ರಸಂ ಪಿಬ ॥ ವಿಶ್ವೇಭಿರಿತ್ಯಾದಿಕಾ ಸೇಯಮೃಗ್ವೈಶ್ವದೇವೀ ತಯಾ ಯಜತಿ ತಾಂ ಯಾಜ್ಯಾಂ ಪಠೇತ್॥ ಕದಾ ಪಠೇದಿತಿ ತದುಚ್ಯತೇ । ವೈಶ್ವದೇವಂ ಬಹುದೇವತಾಕಮುಕ್ಥಂ ಶಸ್ತ್ರಂ ಪ್ರಉಗನಾಮಕಂ ಶಸ್ತ್ವಾ ಪಶ್ಚಾತ್ಪಠೇತ್ ॥ ತಥಾ ಸತಿ ಸ್ವಸ್ವಭಾಗಮನತಿಕ್ರಮ್ಯ ಸರ್ವಾ ದೇವತಾಸ್ತರ್ಪಯತಿ ।

ಈಗ ಇದುವರೆಗೂ ಹೇಳಿದ ಪ್ರಉಗಶಸ್ತ್ರಮಂತ್ರದ ಯಾಜ್ಯಾಮಂತ್ರವನ್ನು ವಿವರಿಸುವರು—ಪ್ರಉಗಶಸ್ತ್ರದಲ್ಲಿ ಹೇಳಿರುವಂತೆ ವಾಯು, ಇಂದ್ರವಾಯು, ಮಿತ್ರಾವರುಣ, ಅಶ್ವಿನೀದೇವತೆಗಳು, ಇಂದ್ರ, ಸರಸ್ವತೀ, ಅಶ್ವಿನೀದೇವತೆಗಳು ಎಂಬ ಏಳು ವಿಧವಾದ ಮಂತ್ರಗಳನ್ನು ಪಠಿಸಿ ಈಗ ಹೋತೃವು ಈ ದೇವತೆಗಳನ್ನುದ್ದೇಶಿಸಿ ಒಂದು ಯಾಜ್ಯಾಮಂತ್ರವನ್ನು ಪಠಿಸಿ ಈ ಶಸ್ತ್ರವನ್ನು ಸಮಾಪ್ತಿಗೊಳಿಸುವನು. ಈ ಯಾಜ್ಯಾಮಂತ್ರವು—

ವಿಶ್ವೇಭಿಃ ಸೋಮ್ಯಂ ಮಧ್ವಗ್ನ ಇಂದ್ರೇಣ ವಾಯುನಾ
ಪಿಬಾ ಮಿತ್ರಸ್ಯ ಧಾಮಭಿಃ ॥ (ಋ. ಸಂ. ೧-೧೪-೧೦)

ಎಂದು ಪಠಿಸುವನು. ಇದೇ ಆ ಯಾಜ್ಯಾಮಂತ್ರವು. ಇದರಲ್ಲಿ ಇದುವರೆಗೂ ಹೇಳಿದ ದೇವತೆಗಳ ಹೆಸರುಗಳನ್ನೆಲ್ಲಾ ಒಳಗೊಂಡಿರುವುದು. ಈ ಮಂತ್ರಪಠನದಿಂದ ಆ ದೇವತೆಗಳಿಗೆ ಸಂತೋಷವುಂಟಾಗುವುದು. ಇದರ ಅರ್ಥವು—ಎಲೈ ಅಗ್ನಿಯೇ, ಇಂದ್ರನಿಂದಲೂ ವಾಯುವಿನಿಂದಲೂ ಮಿತ್ರನಸ್ಥಾನದಲ್ಲಿರುವ ಮಿತ್ರಾವರುಣ ಮತ್ತು ಸಮಸ್ತದೇವತೆಗಳಿಂದಲೂ ಕೂಡಿ ನೀನು (ನಾವು ಈ ಯಜ್ಞದಲ್ಲಿ ಸಿದ್ಧಪಡಿಸಿರುವ) ಸಿಹಿಯಾಗಿಯೂ ರುಚಿಕರವಾಗಿಯೂ ಇರುವ ಈ ಸೋಮರಸವನ್ನು ಪಾನಮಾಡು ಎಂದು ಈ ಮಂತ್ರದ ಅರ್ಥವು. ಇದರಲ್ಲಿ ಸಮಸ್ತದೇವತೆಗಳ ವಿಷಯವೂ ಇರುವುದರಿಂದ ಈ ಮಂತ್ರಕ್ಕೆ ವೈಶ್ವದೇವೀಋಕ್ ಎಂದು ಹೆಸರು. ಪ್ರಉಗಶಸ್ತ್ರಮಂತ್ರಗಳನ್ನೆಲ್ಲಾ ಪಠಿಸಿದಮೇಲೆ ಬಹುದೇವತಾಕವಾದ ಈ ಯಾಜ್ಯಾಮಂತ್ರವನ್ನು ಪಠಿಸಬೇಕು. ಈ ಮಂತ್ರಪಠನದಿಂದ ಆಯಾ ದೇವತೆಗಳು ತಮ್ಮತಮ್ಮ ಭಾಗಗಳನ್ನು ಹೊಂದಿ ತೃಪ್ತಿಪಡುವರು.

## *English Translation*

### (All the Dieties of the Pra-uga Shastra are said to be forms of Agni)

They ask, how (can it be accounted for) that the verses addressed to Agni which the Sama singers chant, are celebrated by a recitation of the Hotar commencing with a verse addressed to Vayu, (the rule being) that the Shastra exactly corresponds to the Stotra? (The answer is) Those deities are only the bodies of Agni. When Agni is blazing up, as it were, that is his Vayu (wind) form. Thus he celebrates by means of this (Vayu form) that (Agni form).

Divided into two halves, the fire burns. Indra and Vayu are two. That is his Indra-Vayu form Thus he celebrates by means of this (Indra-Vayu form) that (Agni form).

It moves up and down (when being lighted or extinguished); This is his Mitra-Varuna from. Thus he celebrates by means of this (Mitra-Varuna form) that (Agni form).

The dangerous touch of Agni is his Varuna form. His Mitra form is (shown in the fact) that men who make friends with him may sit near him though his touch be dangerous. Thus he celebrates by means of these (Mitra and Varuna forms) that (Agni form).

His As'vina form is that they produce him by friction through two arms and two wooden sticks, the As'vins being two. Thus he celebrates by means of this (As'vina form) that (Agni form).

That he burns with a loud crackling voice, imitating the sound bababa as it were, on account of which all beings flee trembling from him, this is his Indra form. Thus the Hotar celebrates by means of the (Indra form) and that (Agni form).

That they divide him into many parts (when taking fire from the hearth) though he is only one, this is his Visve Devah form. Thus the Hotar celebrates by means of this (Visve Devah form) that (Agni form).

That he burns with a roaring noise, uttering speech, as it were, this is his Sarasvati form. Thus the Hotar celebrates by means of this (Sarasvati form) and that (Agni form).

In this way the triplet of the Sama singers becomes celebrated, notwithstanding these (different) deities in the several triplets, for him who thus has commenced (the Shastra) with a verse addressed to Vayu.

Having repeated the Shastra addressed to all the gods (Pra-uga), he recites a Yajya mantra addressed to the Visve Devah (all gods): Vis'vebhih somyan madhvagna (1, 14, 10). Thus he satisfies all deities, giving to each his due share.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ಏಕಾದಶಾಧ್ಯಾಯೇ ಪಂಚಮಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ವಷಟ್ಕಾರ ಮತ್ತು ಅನುವಷಟ್ಕಾರಸ್ವರೂಪ]

---

## ಪೂರ್ವಪೀಠಿಕೆ

ಇಲ್ಲಿ ವಷಟ್ಕಾರವೆಂದರೇನು? ಇದನ್ನು ಏತಕ್ಕಾಗಿ ಪಠಿಸಬೇಕು? ಇದರ ಸ್ವರೂಪ ಮತ್ತು ಸಂಕೇತಗಳೇನು? ಇತ್ಯಾದಿ ವಿಷಯಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವಾಗಿದೆ. ಯಜ್ಞಾದಿಗಳಲ್ಲಿ ನಾನಾದೇವತೆಗಳಿಗೆ ಹವಿಸ್ಸನ್ನರ್ಪಿಸಬೇಕಾದರೆ—ಆ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲವಾದ್ದರಿಂದ—ಆ ದೇವತೆಗಳನ್ನುದ್ದೇಶಿಸಿ ಆ ದೇವತಾಕವಾದ ಮಂತ್ರಗಳನ್ನು ಪಠಿಸಿ ಅಗ್ನಿಯಲ್ಲಿ ಹೋಮಮಾಡುವರು. ಆರೀತಿ ಹೋಮಮಾಡುವಾಗ ಮಂತ್ರದ ಕೊನೆಯಲ್ಲಿ **ಸ್ವಾಹಾ** ಅಥವಾ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಪಠಿಸಿ ಹೋಮಮಾಡುವರು. ಹೋಮಮಾಡುವುದಕ್ಕೆ ಪೂರ್ವಭಾವಿಯಾಗಿ ಕೆಲವು ನಿಯಮಗಳನ್ನನುಸರಿಸಬೇಕಾಗಿರುವುದು. ಹವಿಸ್ಸನ್ನರ್ಪಿಸಬೇಕಾಗಿರುವ ದೇವತೆಯನ್ನು ಮೊದಲು ದೇವತಾಕವಾದ ಸ್ತೋತ್ರಾದಿಗಳಿಂದ ಗುಣವರ್ಣನೆ ಮಾಡುವ ಮಂತ್ರಗಳನ್ನು ಪಠಿಸುವರು. ಈ ಗುಣವರ್ಣನೆ ಮಾಡುವಾಗ ಮಂತ್ರಗಳಿಗೆ ಶಸ್ತ್ರಮಂತ್ರ ಮತ್ತು ನಿವಿತ್ ಮಂತ್ರಗಳೆಂದು ಹೆಸರು. ನಿವಿನ್ಮಂತ್ರದಲ್ಲಿ ಆ ದೇವತೆಯ ವಿಶೇಷ ಗುಣವರ್ಣನೆ ಇರುವುದರಿಂದ ನಿವಿನ್ಮಂತ್ರವನ್ನು ಶಸ್ತ್ರಮಂತ್ರಗಳ ಮಧ್ಯದಲ್ಲಿ (ಆದಿಯಲ್ಲಿ) ಸೇರಿಸಿ ಪಠಿಸುವರು. ಈರೀತಿ ಉದ್ದಿಷ್ಟಗುಣವರ್ಣನೆಯಾದನಂತರ ಮತ್ತೊಂದು ಮಂತ್ರದಿಂದ ದೇವತೆಯನ್ನು ಯಜ್ಞಭೂಮಿಗೆ ಬರಬೇಕೆಂದು ಹೋತೃವೆಂಬ ಋತ್ವಿಜನು ಆಹ್ವಾನ ಮಾಡುವನು. ಈ ಆಹ್ವಾನಮಾಡುವ ಮಂತ್ರಕ್ಕೆ **ಅನುವಾಕ್ಯಾ** ಅಥವಾ ಪುರೋನುವಾಕ್ಯಾಮಂತ್ರವೆಂದು ಹೆಸರು. ಅನಂತರ ದೇವತೆಯು ಆಹ್ವಾನವನ್ನು ಮನ್ನಿಸಿ ಯಜ್ಞಭೂಮಿಗೆ ಬಂದು ಬರ್ಹಿಃ ಎಂಬ ದರ್ಭಾಸನದ ಮೇಲೆ ಕುಳಿತುಕೊಂಡಿರುವನೆಂದು ಭಾವಿಸಿ ಮತ್ತೊಂದು ಮಂತ್ರದಿಂದ ಅಧ್ವರ್ಯುವೆಂಬ ಋತ್ವಿಜನು ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವನು. ಹೋಮ ಮಾಡುವಾಗ ಪಠಿಸುವ ಮಂತ್ರಕ್ಕೆ **ಯಾಜ್ಯಾ** ಎಂದು ಹೆಸರು. ಈ ಯಾಜ್ಯಾಮಂತ್ರದ ಕೊನೆಯಲ್ಲಿಯೇ ಸ್ವಾಹಾ ಅಥವಾ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಹೋಮಮಾಡುವರು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಡುವೆವು. ಪ್ರಕೃತ ವಿಷ್ಣುವನ್ನೇ ಉದ್ದೇಶಿಸಿ ಹೋಮಮಾಡಬೇಕಾದ ಸಂದರ್ಭದಲ್ಲಿ ವಿಷ್ಣುದೇವತಾಕವಾದ **ನೂಮರ್ತೋದಯತೇ** (೭ ನೇ ಮಂಡಲದ ನೂರನೆಯ ಸೂಕ್ತ) ಎಂಬ ಸೂಕ್ತವನ್ನು ಅಚ್ಛಾವಾಕನೆಂಬ ಋತ್ವಿಜನು ಶಸ್ತ್ರಮಂತ್ರಗಳಿಗಾಗಿ ಪಠಿಸುವನು. ಈ ಮಂತ್ರಗಳ ಮಧ್ಯದಲ್ಲಿ ವಿಷ್ಣುವಿನ ಗುಣಗಾನವನ್ನು ಮಾಡುವ ಕೆಲವು ಮಂತ್ರಗಳನ್ನು ಎಂದರೆ **ಪ್ರತತ್ತೇ ಅದ್ಯ** ಎಂದು ಮೊದಲಾಗುವ (ಋ. ಸಂ ೭-೧೦೦-೫ ರಿಂದ೭-೧೦೦-೭ ರವರೆಗಿನ) ಮೂರು ಋಕ್ಕುಗಳನ್ನು ನಿವಿನ್ಮಂತ್ರಗಳನ್ನಾಗಿ ಸೇರಿಸಿ ಪಠಿಸುವನು. ಅನಂತರ ವಿಷ್ಣುದೇವತೆಯನ್ನು ಆಹ್ವಾನಮಾಡುವುದಕ್ಕಾಗಿ—

**ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ।**
**ಉದಸ್ತಭ್ನಾನ್ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ ॥**

(ಋ. ಸಂ. ೭-೯೯-೨)

ಎಂಬ ಋಕ್ಕನ್ನು ಪಶುಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಿ ವಿಷ್ಣುದೇವತೆಯನ್ನು ಹೋತೃವು ಆಹ್ವಾನ ಮಾಡುವನು. ಅನಂತರ—

ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।
ಪ್ರ ವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥

(ಋ. ಸಂ ೭-೧೦೦-೩)

ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸುವನು. ಈ ಮಂತ್ರದ ಕೊನೆಯಲ್ಲಿ ಇರುವ **ಸ್ಥವಿರಸ್ಯ ನಾಮ** ಎಂಬ ಶಬ್ದಗಳನಂತರ ವೌಷಟ್ ಎಂಬ ಶಬ್ದವನ್ನು ಸೇರಿಸಿ **ಸ್ಥವಿರಸ್ಯ ನಾಮ ವೌಷಟ್** ಎಂದು ಪಠಿಸುತ್ತಾ ಪಶುವಿನ ವಪಾ ಎಂಬ ಅವಯವವನ್ನು ಅಗ್ನಿಯಲ್ಲಿ ಹೋಮಮಾಡುವನು. ಪ್ರತಿದೇವತೆಯನ್ನೂ ಉದ್ದೇಶಿಸಿ ಹೋಮಮಾಡುವಾಗಲೂ ಈ ಕ್ರಮವನ್ನನುಸರಿಸಬೇಕು. ಆದರೆ ಪ್ರತಿದೇವತೆಗೂ ಮಂತ್ರಗಳು ಬೇರೆ ಬೇರೆ. ಇದಲ್ಲದೆ ಹೋಮದ್ರವ್ಯವು ಆಜ್ಯ, ಹವಿಸ್ಸು. ಪುರೋಡಾಶ, ವಪಾ ಇತ್ಯಾದಿ ಅನೇಕ ವಿಧವಾಗಿರುವವು. ಇದಕ್ಕನುಸಾರವಾಗಿ ಮಂತ್ರಗಳೂ ಬೇರೆಬೇರೆಯಾಗಿರುವವು. ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿರುವ ಮಂತ್ರಗಳು ವಪಾಹೋಮಕ್ಕೆ ಮಾತ್ರ ಸಂಬಂಧಪಟ್ಟಿರುವ ಮಂತ್ರಗಳಾಗಿವೆ. ಇದರಂತೆ ಪುರೋಡಾಶಹೋಮಕ್ಕೂ, ಹವಿಸ್ಸಿನ ಹೋಮಕ್ಕೂ ಪ್ರತ್ಯೇಕ ಮಂತ್ರಗಳಿರುವವು. ಮತ್ತು ಬೇರೆಬೇರೆ ಯಜ್ಞಗಳಲ್ಲಿ ಬೇರೆ ಬೇರೆ ಮಂತ್ರಗಳನ್ನು ಉಪಯೋಗಿಸಬೇಕಾಗುವುದು.

ಇನ್ನು ವಷಟ್ಕಾರದ ಸ್ವರೂಪ ಮತ್ತು ಸಂಕೇತವೇನು? ಇದನ್ನು ಮಂತ್ರದ ಕೊನೆಯಲ್ಲಿ ಏತಕ್ಕಾಗಿ ಉಪಯೋಗಿಸಬೇಕು ಎಂಬ ವಿಷಯವನ್ನು ಪರಿಶೀಲಿಸಬೇಕಾಗಿರುವುದು. ಈ ವಿಷಯವನ್ನು ಇಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ.

**ಪೂರ್ವಪೀಠಿಕೆ ಸಮಾಪ್ತವು.**



## ದೇವಪಾತ್ರಂ ವಾ ಏತದ್ಯದ್ವಷಟ್ಕಾರೋ ವಷಟ್‌ಕರೋತಿ ದೇವಪಾತ್ರೇಣೈವ ತದ್ದೇವತಾಸ್ತರ್ಪಯತಿ ॥

ಅಥ ಶಸ್ತ್ರಯಾಜ್ಯಾಂತೇ ಪಠನೀಯಂ ವಷಟ್ಕಾರಂ ವಿಧತ್ತೇ—ವೌಷಡಿತಿ ಮಂತ್ರೋ ವಷಟ್ಕಾರಃ । ಸ ಚ ದೇವಪಾತ್ರಂ ದೇವಾನಾಂ ಪಾನಸಾಧನಂ ತಸ್ಮಾದ್ವಷಟ್ಕುರ್ಯಾದ್ವೌಷಡಿತ್ಯೇವ ಪಠೇತ್॥ತಥಾ ಸತಿ ದೇವಾನಾಮುಚಿತೇನೈವ ಪಾನಸಾಧನೇನ ಸರ್ವಾ ದೇವತಾಸ್ತರ್ಪಯತೀತಿ ॥

ಈಗ ವಷಟ್ಕಾರ ಮತ್ತು ಅನುವಷಟ್ಕಾರಗಳ ಸ್ವರೂಪವನ್ನು ವಿವರಿಸಲಾಗುವುದು. ಹೋಮಮಾಡುವಾಗ ಮಂತ್ರಾಂತ್ಯದಲ್ಲಿ **ವೌಷಟ್** ಎಂದು ಪಠಿಸುವ ಶಬ್ದಕ್ಕೆ ವಷಟ್ಕಾರವೆಂದು ಹೆಸರು. ದೇವತೆಗಳಿಗೆ ಹವಿಸ್ಸನ್ನು ಭಕ್ಷಣಾರ್ಥವಾಗಿ ಅರ್ಪಿಸುವಾಗ ಲೋಕವ್ಯವಹಾರದಲ್ಲಿ ರೂಢಿಯಾಗಿರುವಂತೆ ಒಂದು ಪಾತ್ರೆ ಅಥವಾ ತಟ್ಟೆಯಲ್ಲಿ ಇಟ್ಟು ಅರ್ಪಿಸಬೇಕಷ್ಟೆ. ಪಾತ್ರೆಯಲ್ಲಿಟ್ಟು ಅರ್ಪಿಸುವುದರಿಂದ ಅದನ್ನು ಭಕ್ಷಿಸಲು ಅನುಕೂಲವಾಗುವುದು. ಯಜ್ಞದಲ್ಲಿ ದೇವತೆಗಳು ಹವಿಸ್ಸನ್ನು ಭಕ್ಷಿಸುವಾಗ ಅವರು ಅಪ್ರತ್ಯಕ್ಷರಾಗಿರುವುದರಿಂದ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವುದರ ಮೂಲಕ ದೇವತೆಗಳಿಗೆ ಹವಿಸ್ಸು ಅರ್ಪಿತವಾಗುವುದು ಎಂದರೆ ತನ್ನಲ್ಲಿ ದೇವತೆಗಳನ್ನುದ್ದೇಶಿಸಿ ಹೋಮಮಾಡಿದ ಹವಿಸ್ಸನ್ನು ಅಗ್ನಿಯು ದೇವತೆಗಳಿಗೆ

ತಲಪಿಸುವನು. ಹೋಮಮಾಡುವಾಗ ಹವಿಸ್ಸನ್ನಿಡುವ ಪಾತ್ರೆಯನ್ನು ದೇವತೆಗಳ ಮುಂದೆ ಇಡುವುದು ಹೇಗೆ? ಇದು ಸಾಧ್ಯವಿಲ್ಲ. ಆದ್ದರಿಂದ ಪಾತ್ರೆಗೆ ಬದಲಾಗಿ ಮಂತ್ರವನ್ನೇ ಪಠಿಸಿ ಅದನ್ನೇ ಪಾತ್ರೆಯೆಂದು ಭಾವಿಸಲಾಗಿರುವುದು. **ವೌಷಟ್** ಎಂಬ ಮಂತ್ರವೇ ಈ ಪಾತ್ರೆಯು. ಮಂತ್ರಾಂತ್ಯದಲ್ಲಿ **ವೌಷಟ್** ಎಂದು ಉಚ್ಚರಿಸಿದರೆ ಮಂತ್ರಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಭಕ್ಷಿಸಲು ಅನುಕೂಲವಾಗುವಂತೆ ಪಾತ್ರೆಯಲ್ಲಿಟ್ಟು ಅರ್ಪಿಸಿದಂತಾಗುವುದು. ಆದ್ದರಿಂದ **ವೌಷಟ್** ಎಂಬ ಶಬ್ದವು ದೇವತೆಗಳಿಗೆ ಪಾನಸಾಧನವಾದ ಪಾತ್ರೆಯು. ಈ ಕಾರಣಕ್ಕಾಗಿ ಎಂದರೆ ದೇವತೆಗಳಿಗೆ ಪಾತ್ರೆಯಲ್ಲಿಟ್ಟು ಹವಿಸ್ಸನ್ನು ಅರ್ಪಿಸಿ ತೃಪ್ತಿಪಡಿಸುವುದಕ್ಕಾಗಿಯೇ ಹೋತೃವು ಮಂತ್ರಾಂತ್ಯದಲ್ಲಿ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಪಠಿಸಿ ಹೋಮಮಾಡುವನು. ಇದು ವಷಟ್ಕಾರದ ಶಬ್ದಾರ್ಥವು.

**ಅನುವಷಟ್ಕರೋತಿ ತದ್ಯಥಾದೋಽಶ್ವಾನ್ವಾ ಗಾ ವಾ ಪುನರಭ್ಯಾಕಾರಂ ತರ್ಪಯಂತ್ಯೇವಮೇವೈತದ್ದೇವತಾಃ ಪುನರಭ್ಯಾಕಾರಂ ತರ್ಪಯಂತಿ ಯದನುವಷಟ್ಕರೋತಿ ॥**

ತತ ಊರ್ಧ್ವಂ ಪಠನೀಯಮನುವಷಟ್ಕಾರಮಂತ್ರಂ ವಿಧತ್ತೇ — **ಸೋಮಸ್ಯಾಗ್ನೇ ವೀಹೀತ್ಯಯಂ** ಮಂತ್ರೋಽನುವಷಟ್ಕಾರಸ್ತಂ ಪಠೇತ್ ॥ ತತ್ರ ಲೋಕೇಽದಃ ಕಿಂಚಿದಿದಂ ನಿದರ್ಶನಮಸ್ತಿ॥ ಕಥಮಿತಿ ತದುಚ್ಯತೇ॥ ಯಥಾ ಮನುಷ್ಯಾಃ ಸ್ವಕೀಯಾನಶ್ವಾನ್ವಾ ಸ್ವಕೀಯಾ ಗಾ ವಾ ಪುನರಭ್ಯಾಕಾರಂ ಪೌನಃಪುನ್ಯೇನ ತೃಣೋದಕಾದಿಭಿರಭಿಮುಖೀಕೃತ್ಯಾಭಿಮುಖೀಕೃತ್ಯ ತರ್ಪಯಂತಿ ಕಂಡೂಯನೇನ ಪ್ರಿಯಶಬ್ದೇನ ವಾ ಲಾಲಯಿತ್ವಾ ಯಥೇಷ್ಟಘಾಸಂ ಪ್ರಯಚ್ಛಂತಿ, ಏವಮೇವೈತೇನಾನುವಷಟ್ಕಾರೇಣ ಪುನಃಪುನರ್ದೇವತಾ ಅಭಿಮುಖೀಕೃತ್ಯ ಯಜಮಾನೋ ಹವಿಷಾ ತರ್ಪಯತಿ ॥

ಇನ್ನು ಅನುವಷಟ್ಕಾರದ ಅರ್ಥವನ್ನು ವಿವರಿಸುವರು. ಲೋಕವ್ಯವಹಾರದಲ್ಲಿ ಜನರು ಅಶ್ವಗಳಿಗೂ, ಗೋವುಗಳಿಗೂ ಇತರ ಪ್ರಾಣಿಗಳಿಗೂ ಹುಲ್ಲು ಮೊದಲಾದ ಆಹಾರವನ್ನು ಅವುಗಳ ಮುಂದಿಟ್ಟು ತಿನ್ನುವಂತೆ ಪ್ರಿಯಶಬ್ದಗಳಿಂದ ಲಾಲಿಸುವಂತೆ ದೇವತೆಗಳಿಗೆ ಅಗ್ನಿಯ ಮೂಲಕವೇ ಹವಿಸ್ಸನ್ನು ಅರ್ಪಿಸಬೇಕಾಗಿರುವುದರಿಂದ

**ಅಗ್ನೇ ವೀಹಿ ಪುರೋಡಾಶಮಾಹುತಂ ತಿರೋಅಹ್ನ್ಯಂ ।**
**ಸಹಸಃ ಸೂನುರಸ್ಯಧ್ವರೇ ಹಿತಃ ॥** (ಋ. ಸಂ. ೨-೨೮-೩)

ಅಥವಾ

**ಅಗ್ನೇ ವೀಹಿ ಹವಿಷಾ ಯಕ್ಷಿ ದೇವಾನ್ತ್ಸ್ವಧ್ವರಾ ಕೃಣುಹಿ ಜಾತವೇದಃ ।**
(ಋ. ಸಂ. ೩-೧೭-೩)

ಎಂಬ ಋಕ್ಕನ್ನು ಪಠಿಸಬೇಕು. ಎಲೈ ಅಗ್ನಿಯೇ, ಈ ಹವಿಸ್ಸನ್ನು ಅಥವಾ ಪುರೋಡಾಶವನ್ನು ಭಕ್ಷಿಸು ಅಥವಾ ಈ ಸೋಮರಸವನ್ನು ಪಾನಮಾಡು. ನಿನ್ನಲ್ಲಿ ಹೋಮಮೂಲಕವಾಗಿ ಅರ್ಪಿಸುವ ಈ ಹವಿಸ್ಸನ್ನು ದೇವತೆಗಳಿಗೆ ತಲಪಿಸು. ಎಂಬರ್ಥವಿರುವ ಈ ಋಕ್ಕನ್ನು ದೇವತೆಗಳ ಪ್ರೀತ್ಯರ್ಥವಾಗಿ ಪಠಿಸಬೇಕು. ಇದಕ್ಕೆ ಅನುವಷಟ್ಕಾರವೆಂದು ಹೆಸರು.

**ಇಮಾನೇವಾಗ್ನೀನುಪಾಸತ ಇತ್ಯಾಹುರ್ಧಿಷ್ಣ್ಯಾನಥ ಕಸ್ಮಾತ್ಪೂರ್ವ-ಸ್ಮಿನ್ನೇವ ಜುಹ್ವತಿ ಪೂರ್ವಸ್ಮಿನ್ವಷಟ್ಕುರ್ವಂತೀತಿ । ಯದೇವ ಸೋಮಸ್ಯಾಗ್ನೇ ವೀಹೀತ್ಯನುವಷಟ್ಕರೋತಿ ತೇನ ಧಿಷ್ಣ್ಯಾ-ನ್ಪ್ರೀಣಾತಿ ॥**

ಅನುವಷಟ್ಕಾರಪ್ರಶಂಸಾರ್ಥಂ ಚೋದ್ಯಮುದ್ಭಾವಯತಿ — ಸೋಮಮಧ್ಯವರ್ತಿಷು ಧಿಷ್ಣ್ಯೇಷ್ವಾಗ್ನೀಧ್ರಾದ್ಯಗ್ನಯೋ ಯೇ ವಿಹಿತಾನಗ್ನೀನೃತ್ವಿಜಃ ಸಮೀಪೇ ಸ್ಥಿತ್ವೋಪಾಸತ ಏವ ಸೇವಂತ ಏವ ಕೇವಲಂ ನ ತು ತೇಷು ಜುಹ್ವತಿ ನಾಪಿ ವಷಟ್ಕುರ್ವಂತಿ । ಪೂರ್ವಸ್ಮಿನ್ನೇವೋ-ತ್ತರವೇದಿಸ್ಥಿತೇಽಗ್ನಾವೃತ್ವಿಜೋ ಜುಹ್ವತಿ ಚ ತತ್ರೈವ ವಷಟ್ಕುರ್ವಂತಿ ಚ ॥ ಅಥೈವಂ ಸತಿ ಧಿಷ್ಣ್ಯಗತಾನಾಮಗ್ನೀನಾಂ ಪ್ರೀತಿರ್ನಾಸ್ತಿ ॥ ಕಸ್ಮಾದೇವಂ ವೈಷಮ್ಯಂ ಕ್ರಿಯತ ಇತಿ ಚೋದ್ಯ-ವಾದಿನ ಆಹುಃ ॥ ತತ್ರೋತ್ತರಂ ದರ್ಶಯತಿ—ಹೇಽಗ್ನ ಇತಿ ಜಾತ್ಯಾಕಾರೇಣಾಗ್ನಿಂ ಸಂಬೋಧ್ಯ ಸೋಮಸ್ಯ ಸೋಮರಸಂ ವೀಹಿ ಪಿಬೇತ್ಯೇವಂ ಮಂತ್ರೇಣ ಹೋತಾನುವಷಟ್ಕರೋತೀತಿ ಯದಸ್ತಿ ತೇನ ಧಿಷ್ಣ್ಯಾನಗ್ನೀನ್ಹೋತಾ ತರ್ಪಯತಿ । ತಸ್ಮಾನ್ನ ವೈಷಮ್ಯಂ ॥

ಅನುವಷಟ್ಕಾರವನ್ನು ಪ್ರಶಂಸೆಮಾಡುವುದಕ್ಕಾಗಿ ಇಲ್ಲಿ ಒಂದು ವಿಷಯವನ್ನು ವಿವರಿಸುವರು—ಕೆಲವರು ಈರೀತಿ ಕೇಳುವರು—ಉತ್ತರವೇದಿಯಲ್ಲಿ ಒಂದು ಅಗ್ನಿ (ಕುಂಡ) ಇರುವುದು ಮತ್ತು ಧಿಷ್ಣ್ಯವೆಂಬ ಇತರ ಅಗ್ನಿಕುಂಡಗಳೂ ಸೋಮದ ಸಮೀಪದಲ್ಲಿಯೇ ಇರುವವು. ಆದರೆ ಇವುಗಳ ಸಮೀಪದಲ್ಲಿ ಅನೇಕ ಇತರ ಋತ್ವಿಜರು ಕುಳಿತು ಮಂತ್ರಾದಿಗಳಿಂದ ಅಗ್ನಿಯನ್ನು ಪ್ರಶಂಸೆಮಾಡುತ್ತಿರುವರು. ಆದರೆ ಹಿಂದೆ ಹೇಳಿದಂತೆ ಉತ್ತರವೇದಿಯಲ್ಲಿರುವ ಅಗ್ನಿಯಲ್ಲಿಯೇ ಋತ್ವಿಜರು ದೇವತೆಗಳಿಗೆ ಸಂಬಂಧಪಟ್ಟ ಎಲ್ಲಾ ಆಹುತಿಗಳನ್ನೂ ಹೋಮಮಾಡುವರು. ವಷಟ್ಕಾರವನ್ನೂ ಆ ಅಗ್ನಿಯಲ್ಲಿಯೇ ಹೋಮಮಾಡುವರು. ಧಿಷ್ಣ್ಯಾದಿ ಇತರ ಅಗ್ನಿಗಳ ಸಮೀಪದಲ್ಲಿ ಕುಳಿತಿದ್ದರೂ ಆ ಧಿಷ್ಣ್ಯಾದಿ ಅಗ್ನಿಗಳಲ್ಲಿ ಯಾವ ಆಹುತಿಗಳನ್ನೂ ಹೋಮಮಾಡುವುದಿಲ್ಲ. ಹೀಗೆ ಮಾಡುವುದು ಸರಿಯೇ? ಅಗ್ನಿಗಳಲ್ಲಿ ಉತ್ತರವೇದಿಯಲ್ಲಿರುವ. ಅಗ್ನಿಗೂ ಧಿಷ್ಣ್ಯಾಗ್ನಿಗಳಿಗೂ ಪಕ್ಷಪಾತ ಅಥವಾ ವೈಷಮ್ಯವನ್ನು ತೋರಿಸುವುದು ಸರಿಯೇ? ಎಂದು ಆಕ್ಷೇಪಮಾಡುವರು. ಇದಕ್ಕೆ ಸಮಾಧಾನವನ್ನು ಹೇಳುವರು—ಅನುವಷಟ್ಕಾರಮಾಡುವಾಗ ಅಗ್ನೇ ವೀಹಿ-ಎಲೈ ಅಗ್ನಿಯೇ ಈ ಸೋಮವನ್ನು ಭಕ್ಷಿಸು ಎಂದು ಅಗ್ನಿಯನ್ನು ಪ್ರಾರ್ಥಿಸಿ ಆಹುತಿಯನ್ನು ಅರ್ಪಿಸಲಾಗುವುದು. ಎಂದರೆ ಅನುವಷಟ್ಕಾರಮಾಡುವಾಗ ಉತ್ತರವೇದಿಸ್ಥಿತ ಅಗ್ನಿಯನ್ನಾಗಲಿ, ಧಿಷ್ಣ್ಯಾಗ್ನಿಗಳನ್ನಾಗಲಿ ಯಾವುದನ್ನೂ ನಿರ್ದೇಶಮಾಡಿ ಹೇಳದೆ ಸುಮ್ಮನೆ ಎಲೈ ಅಗ್ನಿಯೇ, ಸೋಮರಸವನ್ನು ಪಾನಮಾಡು ಎಂದುಮಾತ್ರ ಸಂಬೋಧಿಸಲಾಗುವುದು. ಇದರಿಂದ ಉತ್ತರವೇದಿಯಲ್ಲಿರುವ ಅಗ್ನಿಯನ್ನೇ ಪ್ರತ್ಯೇಕವಾಗಿ ಉದ್ದೇಶಿಸಿ ಹೇಳಿದಂತಾಗಲಿಲ್ಲ. ಎಲ್ಲಾ ಅಗ್ನಿಗಳನ್ನೂ (ಧಿಷ್ಣ್ಯಾಗ್ನಿಗಳನ್ನೂ) ಉದ್ದೇಶಿಸಿ ಅನುವಷಟ್ಕಾರಮಂತ್ರವನ್ನು ಹೇಳಿದಂತಾಯಿತು. ಆದ್ದರಿಂದ ಅಗ್ನಿಗಳಲ್ಲಿ ಒಂದೊಂದಕ್ಕೆ ವೈಷಮ್ಯವನ್ನು ತೋರಿಸಿದಂತಾಗಲಿಲ್ಲ. ಅಗ್ನಿಗಳೆಲ್ಲವೂ ಸುಪ್ರೀತವಾಗಿಯೇ ಇರುವವು ಎಂದು ಆಕ್ಷೇಪಣೆಗೆ ಸಮಾಧಾನವನ್ನು ಹೇಳಿರುವರು.

**ಅಸಂಸ್ಥಿತಾನ್ಸೋಮಾನ್ ಭಕ್ಷಯಂತೀತ್ಯಾಹುರ್ಯೇಷಾಂ ನಾನುವ-ಷಟ್ಕರೋತಿ ಕೋ ನು ಸೋಮಸ್ಯ ಸ್ವಿಷ್ಟಕೃದ್ಭಾಗ ಇತಿ ॥**

ಯದ್ವಾವ ಸೋಮಸ್ಯಾಗ್ನೇ ವೀಹೀತ್ಯನುವಷಟ್ಕರೋತಿ ತೈನೈವ ಸಂಸ್ಥಿತಾನ್ಸೋಮಾನ್ಭಕ್ಷಯಂತಿ ಸ ಉ ಏವ ಸೋಮಸ್ಯ ಸ್ವಿಷ್ಟ-ಕೃದ್ಭಾಗೋ ವಷಟ್ಕರೋತಿ ॥

ಪ್ರಕಾರಾಂತರೇಣ ಪ್ರಶಂಸಿತುಂ ಪುನಶ್ಚೋದ್ಯದ್ವಯಮುದ್ಭಾವಯತಿ—ಯೇಷಾಂ ದ್ವಿದೇವತ್ಯಗ್ರಹಾಣಾಮರ್ಥೇ ಹೋತಾ ನಾನು ವಷಟ್ಕರೋತಿ ತೇ ದ್ವಿದೇವತ್ಯಾಃ ಸೋಮಾ ಅಸಂಸ್ಥಿತಾ ಅಸಮಾಪ್ತಾ ದೇವತಾರ್ಥಹೋಮಸ್ಯಾಸಮಾಪ್ತೇಃ ಕಥಮೃತ್ವಿಜಸ್ತಾನ್ದ್ವಿದೇವತ್ಯಾ-ನ್ಭಕ್ಷಯಂತೀತ್ಯೇಕೇ ಚೋದ್ಯಮಾಹುಃ ॥ ದರ್ಶಪೂರ್ಣಮಾಸಾದಿಷು ಸ್ವಿಷ್ಟಕೃದ್ಭಾಗೇನ ತತಃ ಪೂರ್ವೇಷಾಂ ಹವಿಷಾಂ ಸಂಸ್ಕಾರೋ ಭವತಿ॥ ತತಃ ಸೋಮಸ್ಯಾಪಿ ಸಂಸ್ಕಾರಾಯ ಕೋ ನಾಮ ಸ್ವಿಷ್ಟಕೃದ್ಭಾಗ ಇತಿ ದ್ವಿತೀಯಂ ಚೋದ್ಯಂ ॥ ತತ್ರೋತ್ತರಮಾಹ—ಮಂತ್ರೇ ಸೋಮಸ್ಯೇತಿ ಜಾತಿಮಾತ್ರಮುದ್ದಿಶ್ಯಾನುವಷಟ್ಕರೋತೀತಿ ಯದೇವಾಸ್ತಿ ತೇನೈವಾನುವಷಟ್ಕಾರರಹಿತಾ ದ್ವಿದೇವತ್ಯಾದಯಃ ಸರ್ವೇ ಸೋಮಾಃ ಸಂಸ್ಥಿತಾಃ ಸಮಾಪ್ತಾಸ್ತಸ್ಮಾತ್ಸಂಸ್ಥಿತಾನೇವ ದ್ವಿದೇವ-ತ್ಯಾನೃತ್ವಿಜೋ ಭಕ್ಷಯಂತಿ ॥ ಸ ಉ ಏವ ಯಥೋಕ್ತೋಽನುವಷಟ್ಕಾರ ಏವ ಸೋಮಸ್ಯ ಸ್ವಿಷ್ಟಕೃದ್ಭಾಗೋಽತೋ ವಷಟ್ಕರೋತಿ ॥ ಉಕ್ತಸ್ಯ ಸರ್ವಸ್ಯ ಪ್ರಯೋಜನಸ್ಯ ಸಿಧ್ಯರ್ಥಮನು-ವಷಟ್ಕುರ್ಯಾದಿತ್ಯರ್ಥಃ ॥

ಮೇಲೆ ಹೇಳಿದ ವಿಷಯವನ್ನು ಬೇರೆವಿಧವಾಗಿ ಪ್ರಶಂಸೆಮಾಡಿ ವಿವರಿಸುವರು—ಈ ಪ್ರಉಗಶಸ್ತ್ರಮಂತ್ರಗಳಲ್ಲಿರುವ ದ್ವಿದೇವತ್ಯಗ್ರಹಗಳ ವಿಷಯದಲ್ಲಿ ಹೋತೃವು ವಷಟ್ಕಾರವನ್ನು ನೆರವೇರಿಸುವುದಿಲ್ಲ. ಆ ದ್ವಿದೇವತ್ಯ ದೇವತೆಗಳಿಗೆ ಸಂಬಂಧಪಟ್ಟ ಸೋಮವು ಸಂಪೂರ್ಣವಾಗಿ ಸಂಸ್ಕರಿಸಲ್ಪಟ್ಟಿರುವುದಿಲ್ಲ. ಎಂದರೆ ಹೋಮಸಮಾಪ್ತಿಯಾಗಿರುವುದಿಲ್ಲ. ಆದ್ದರಿಂದ ಹೋಮ ಸಮಾಪ್ತಿಯಾಗಿರುವುದಿಲ್ಲ. ಆದ್ದರಿಂದ ಹೋಮಸಂಸ್ಕಾರವು ಪೂರ್ತಿಯಾಗಿಲ್ಲದಿರುವಾಗ ಋತ್ವಿಜರು ಆ ದ್ವಿದೇವತ್ಯಹೋಮ ವನ್ನು ಹೇಗೆ ಭಕ್ಷಿಸಲು ಸಾಧ್ಯ? ಎಂದು ಕೆಲವರು ಆಕ್ಷೇಪವನ್ನು ಎತ್ತುವರು. ಇದು ಮೊದಲನೆಯ ಆಕ್ಷೇಪಣೆಯು. ದರ್ಶ ಪೂರ್ಣಮಾಸಾದಿಯಾಗಗಳಲ್ಲಿ ಸ್ವಿಷ್ಟಕೃದ್ಧೋಮಕ್ಕೆ ಪೂರ್ವಭಾವಿಯಾಗಿ ಹವಿಸ್ಸುಗಳ ಸಂಸ್ಕಾರವನ್ನು ಮಾಡಲಾಗಿರುತ್ತೆ. ಸಂಸ್ಕಾರವಾದ ಹವಿಸ್ಸಿನಿಂದ ಸ್ವಿಷ್ಟಕೃದ್ಧೋಮವನ್ನು ಮಾಡಲು ಅಡ್ಡಿ ಇರುವುದಿಲ್ಲ. ಆದರೆ ಇಲ್ಲಿ ಸೋಮಾಹುತಿಗಳ ಸಂಸ್ಕಾರವು ಆಗಿರುವುದಿಲ್ಲವಾದ್ದರಿಂದ ಈ ವಿಧವಾದ ಸಂಸ್ಕಾರವಿಲ್ಲದ ಸೋಮರಸದಿಂದ ಸ್ವಿಷ್ಟಕೃದ್ಧೋಮವನ್ನು ಮಾಡುವುದು ಹೇಗೆ? ಎಂದು ಆಕ್ಷೇಪಿಸುವರು. ಇದು ಎರಡನೆಯ ಆಕ್ಷೇಪಣೆಯು. ಈಗ ಇವುಗಳಿಗೆ ಉತ್ತರವನ್ನು ಹೇಳುವರು—ಮಂತ್ರದಲ್ಲಿ ಸುಮ್ಮನೆ ಯಾವ ಉದ್ದಿಶ್ಯವನ್ನೂ ವ್ಯಕ್ತಪಡಿಸದೆ ಅಗ್ನೇ ವೀಹಿ ಎಂದು ಸೋಮದ ಅನುವಷಟ್ಕಾರವನ್ನು ಮಾಡುವರು. ಈರೀತಿ ಅನುವಷಟ್ಕಾರಮಾಡುವಾಗ ಈ ಅನುವಷಟ್ಕಾರಕ್ಕಾಗಿ ಇರುವ ಸೋಮವನ್ನು ಸಂಸ್ಕಾರಮಾಡಿರುವುದಿಲ್ಲ. ಆದ್ದರಿಂದ ಅನುವಷಟ್ಕಾರರಹಿತವಾದ ದ್ವಿದೇವತ್ಯಸಂಬಂಧವಾದ ಉಳಿದ ಎಲ್ಲಾ ಸೋಮಗಳೂ ಸಂಸ್ಕಾರದಿಂದ ಸಮಾಪ್ತವಾಗಿರುವವೆಂದು ಭಾವಿಸಬೇಕು. ಇವುಗಳನ್ನು ಋತ್ವಿಜರು ಭಕ್ಷಿಸುವರು ಅದರಿಂದ ಬಾಧಕವೇನೂ ಇರುವುದಿಲ್ಲ. ಸೋಮರಸಕ್ಕೆ ಪ್ರತ್ಯೇಕವಾದ ಸಂಸ್ಕಾರವು ಸ್ವಿಷ್ಟಕೃದ್ಧೋಮಕ್ಕಾಗಿ ಮಾಡಲ್ಪಡದಿದ್ದರೂ ಸೋಮದ ಅನುವಷಟ್ಕಾರವನ್ನೇ ಸಂಸ್ಕಾರವೆಂದು ತಿಳಿಯಬೇಕು. ಎಂದರೆ ಅನುವಷಟ್ಕಾರದಿಂದಲೇ ಸೋಮದ ಸಂಸ್ಕಾರವೂ ಆಗುವುದು ಮತ್ತು ಸ್ವಿಷ್ಟಕೃದ್ಧೋಮ ಮಾಡಿದಂತೆಯೂ ಆಗುವುದು. ಸ್ವಿಷ್ಟಕೃದ್ಧೋಮವನ್ನು ಬೇರೆ ಮಾಡಬೇಕಾಗಿಲ್ಲ. ಅನುವಷಟ್ಕಾರವೇ ಸಾಕಾಗಿರುವುದು.

*English Translation*

**(On the Vashatkara and Anuvashatkara)**

The Vashatkara (the formula vaushat!) is the drinking vessel of the gods. By making the Vashatkara the Hotar satisfies the deities with (presenting) a drinking vessel.

He makes the Anuvashatkara (the formula) "Agni, eat!"). In this way he satisfies the deities by repeatedly placing before them the Vashatkara (representing the drinking vessel), just as men place before their horses or cows repeatedly grass, water & c.

They ask, Why do they sacrifice in the same Agni (the Agni of the Uttara Vedi) where they did it before, and make the Vashatkara there, when sitting near the Dhishnya fires (after having left the place near the Uttara Vedi)? (The answer is) by making the Anuvashatkara "Agni, taste the Soma!" he makes there the Vashatkara and pleases the Dhishnyas.

They ask, Which is the Svishtakrit portion of the Soma at those offerings, of which the priest tastes without haviug finished them, and without making the Anuvashatkara? (The answer is) By repeating the Anuvashatkara (when repeating the Yajyas for the Shastras), "Agni, taste the Soma!" they (complete the ceremony and) drink from the Soma juice after the completion (of the ceremony). This very (Anuvashatkara) is the Svishtakrit portion of the Soma. (Thence) he makes the Vashatkara (and Anuvashatkara).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ಏಕಾದಶಾಧ್ಯಾಯೇ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



# ಅಥ ಏಕಾದಶಾಧ್ಯಾಯೇ ಷಷ್ಠಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ವಷಟ್ಕಾರ ಮತ್ತು ಅದರ ನಾನಾ ಭಾಗಗಳ ಅರ್ಥವಿವರಣೆಯು]



**ವಜ್ರೋ ವಾ ಏಷ ಯದ್ವಷಟ್ಕಾರೋ ಯಂ ದ್ವಿಷ್ಯಾತ್ತಂ ಧ್ಯಾಯೇ-
ದ್ವಷಟ್ಕರಿಷ್ಯಂಸ್ತಸ್ಮಿನ್ನೇವ ತಂ ವಜ್ರಮಾಸ್ಥಾಪಯತಿ ॥**

ಅಥ ವಷಟ್ಕಾರಮಾಶ್ರಿತ್ಯೈವಾಭಿಚಾರಪ್ರಯೋಗ ಉಚ್ಯತೇ—ವಷಟ್ಕಾರಸ್ಯ ವಜ್ರರೂಪತ್ವಾತ್ತತ್ಕಾಲಧ್ಯಾನೇ ಚ ದ್ವೇಷ್ಯೇ ವಜ್ರಪ್ರಹಾರೋ ಭವತಿ ॥

ವಷಟ್ಕಾರವು ವಜ್ರಾಯುಧದಂತಿರುವ ಒಂದು ಪ್ರಬಲವಾದ ಆಯುಧವು. ಯಜ್ಞಮಾಡುವ ಯಜಮಾನನಿಗೆ ಶತ್ರುವಿದ್ದು ಅವನನ್ನು ನಾಶಮಾಡಬೇಕೆಂಬ ಮನಸ್ಸಿದ್ದರೆ ಈ ವಷಟ್ಕಾರದಿಂದ ಆಹುತಿಯನ್ನರ್ಪಿಸುವಾಗ ಆ ಶತ್ರುವು ನಾಶವಾಗಲಿ ಎಂದು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹೋಮಮಾಡಿದರೆ ವಷಟ್ಕಾರವು ಆ ಶತ್ರುವನ್ನು ವಜ್ರಾಯುಧದ ಪ್ರಹಾರದಂತೆ ಪ್ರಹರಿಸಿ ಸಂಹರಿಸುವುದು.

**ಷಳಿತಿ ವಷಟ್ಕರೋತಿ ಷಡ್ವಾ ಋತವಾ ಋತೂನೇವ ತತ್ಕಲ್ಪಯತ್ಯೃ-
ತೂನ್ಪ್ರತಿಷ್ಠಾಪಯತ್ಯೃತೂನ್ವೈ ಪ್ರತಿತಿಷ್ಠತ ಇದಂ ಸರ್ವಮನು
ಪ್ರತಿತಿಷ್ಠತಿ ಯದಿದಂ ಕಿಂಚ ॥**

ಅಥ ವೌಷಡಿತ್ಯಸ್ಯ ವಷಟ್ಕಾರಸ್ಯೋತ್ತರಭಾಗಂ ಪ್ರಶಂಸತಿ—ಷಡಿತ್ಯನೇನ ಮಂತ್ರಭಾಗೇಣ ವಸಂತಾದಿಷಡೃತುಸಂಖ್ಯಾಯಾ ಬುದ್ಧಿಸ್ಥತ್ವಾದೃತೂನ್ಕಲ್ಪಯತಿ ಸ್ವಸ್ವಪ್ರಯೋಜನಸಮರ್ಥಾನ್ಕರೋತಿ ॥ ತಾವತರ್ತವೋ ವ್ಯಾಕುಲತಾಮಂತರೇಣ ಪ್ರತಿತಿಷ್ಠತಿ ॥

ವೌಷಟ್ ಎಂಬ ಶಬ್ದದಲ್ಲಿ ಷಟ್ ಎಂಬ ಪದವಿರುವುದಷ್ಟೆ. ಇಲ್ಲಿ ಷಟ್ ಎಂದರೆ ಆರು ಋತುಗಳು ಎಂದರ್ಥವು. ಒಂದು ವರ್ಷದಲ್ಲಿ ಆರು ಋತುಗಳಿರುವವು. ಆದ್ದರಿಂದ ವಷಟ್ಕಾರದಿಂದ ಹವಿಸ್ಸನ್ನರ್ಪಿಸಿದರೆ ಅವನು ಆರು ಋತುಗಳನ್ನು ತೃಪ್ತಿಪಡಿಸಿದಂತಾಗುವುದು. ಇಷ್ಟೇ ಅಲ್ಲ. ಎಲ್ಲವನ್ನೂ ತೃಪ್ತಿಪಡಿಸಿದಂತಾಗುವುದರಿಂದ ಅವನು ಸಮಸ್ತ ಕಾರ್ಯಗಳಲ್ಲಿಯೂ ಜಯಶೀಲನಾಗುವನು. ಈ ವಿಷಯವನ್ನೇ ಮುಂದಿನ ವಾಕ್ಯದಲ್ಲಿ ವಿವರಿಸುವರು.

ಪ್ರತಿತಿಷ್ಠತಿ ಯ ಏವಂ ವೇದ ತದು ಹ ಸ್ಮಾಹ ಹಿರಣ್ಯದನ್ಬೈದ ಏತಾನಿ ವಾ ಏತೇನ ಷಟ್‌ಪ್ರತಿಷ್ಠಾಪಯತಿ ದ್ಯೌರಂತರಿಕ್ಷೇ ಪ್ರತಿಷ್ಠಿತಾಂತರಿಕ್ಷಂ ಪೃಥಿವ್ಯಾಂ ಪೃಥಿವ್ಯಪ್ಸ್ವಾಪಃ ಸತ್ಯೇ ಸತ್ಯಂ ಬ್ರಹ್ಮಣಿ ಬ್ರಹ್ಮ ತಪಸೀತ್ಯೇತಾ ಏವ ತತ್ಪ್ರತಿಷ್ಠಾಃ ಪ್ರತಿತಿಷ್ಠಂತೀರಿದಂ ಸರ್ವಮನು ಪ್ರತಿತಿಷ್ಠತಿ ಯದಿದಂ ಕಿಂಚ ಪ್ರತಿತಿಷ್ಠತಿ ಯ ಏವಂ ವೇದ ॥

ತತ್ಪ್ರತಿಷ್ಠಾರ್ಥಂ ಪ್ರಾಮಾಣಿಕಪುರುಷವಚನೋದಾಹರಣೇನ ದ್ರಢಯತಿ—ಹಿರಣ್ಯಮಯಾ ದಂತಾ ಯಸ್ಯಾಸೌ ಹಿರಣ್ಯದನ್ ॥ ಬಿದಸ್ಯ ಪುತ್ರೋ ಬೈದಃ ತಾದೃಶೋ ಮುನಿಸ್ತದು ಹ ತದೇವ ವಚನಮಾಹ ಸ್ಮ ॥ ಕಿಂ ವಚನಮಿತಿ ತದುಚ್ಯತೇ ॥ ಏತಾನ್ಯೇವ ದ್ಯುಲೋಕಾದೀನಿ ಬ್ರಹ್ಮಾಂತಾನಿ ಷಟ್ಸ್ಥಾನಾನಿ ಯಾನಿ ಸಂತ್ಯೇತಾನ್ಯೇವೈತೇನ ವಷಟ್ಕಾರೇಣ ಹೋತಾ ಪ್ರತಿಷ್ಠಾಪಯತಿ ॥ ತತ್ರ ದ್ಯುಲೋಕಸ್ಯಾದಧಸ್ತಾದಂತರಿಕ್ಷಂ ತಸ್ಮಾದಂತರಿಕ್ಷೇ ದ್ಯುಲೋಕ ಆಶ್ರಿತಃ ॥ ತಚ್ಚಾಂತರಿಕ್ಷಂ ಪೃಥಿವ್ಯಾಮಾಶ್ರಿತಂ ॥ ಪೃಥಿವೀ ಚಾಧೋವರ್ತಿನೀಷ್ವಪ್ಸ್ವಾಶ್ರಿತಾ ॥ ಆಪಶ್ಚ ಸತ್ಯೇ ಸಮಾಶ್ರಿತಾಃ ॥ ಜನೇಷು ಸತ್ಯವಾದಿಷು ಸತ್ಸು ಯಥಾಕಾಲಂ ವೃಷ್ಟಿಸಂಭವಾತ್ ॥ ಸತ್ಯಂ ಬ್ರಹ್ಮಣಿ ವೇದೇ ಪ್ರತಿಷ್ಠಿತಂ ॥ ಈದೃಶಮಾಚರಣಂ ಸತ್ಯಮಿತಿ ವೇದೇನೈವಾವಗಮಾತ್ ॥ ವೇದಸ್ತಪಸಿ ವಷಟ್ಕಾರಮಂತ್ರಾನುಷ್ಠಾನರೂಪೇ ಪ್ರತಿಷ್ಠಿತಃ ॥ ವೇದಸ್ಯಾನುಷ್ಠಾನಪ್ರತಿಪಾದನಾರ್ಥತ್ವಾತ್ ॥ ಇತ್ಯನೇನ ಪ್ರಕಾರೇಣೈತಾ ದ್ಯುಲೋಕಾದಯ ಏವ ಯಥಾವತ್ತೇನ ವಷಟ್ಕಾರೇಣ ಯದಾ ಪರಸ್ಪರಪ್ರತಿಷ್ಠಿತಾ ಭವಂತಿ ತದಾನೀಂ ಪ್ರತಿಷ್ಠಾರೂಪಾಸ್ತಾಃ ಪೃಥಿವ್ಯಾದ್ಯಾ ಏಕೈಕತ್ರ ಪ್ರತಿಷ್ಠಿತಾಸ್ಸಂತಿ ॥ ತಾ ಅನು ಪಶ್ಚಾದ್ಯದಿದಂ ಕಿಂಚ ಜಗದಸ್ತಿ ತತ್ಸರ್ವಂ ಪ್ರತಿತಿಷ್ಠತಿ ॥ ಯ ಏವಂ ವೇದಿತಾ ಸ ಚ ಪ್ರತಿತಿಷ್ಠತಿ ॥

ಸುವರ್ಣಮಯವಾದ ದಂತಪಂಕ್ತಿಗಳುಳ್ಳ ಬಿದಋಷಿಯ ಪುತ್ರನು ಈ ವಿಷಯದಲ್ಲಿ ಈ ರೀತಿ ಹೇಳಿರುವನು—ಸ್ವರ್ಗಲೋಕವೇ ಮೊದಲಾದ ಬ್ರಹ್ಮದವರೆಗಿನ ಆರುಸ್ಥಾನಗಳನ್ನು ವಷಟ್ಕಾರದಿಂದ ಹೋತೃವು ಪ್ರತಿಷ್ಠಿಸಿದಂತಾಗುವುದು. ಎಂದರೆ ಸ್ವರ್ಗದ ಕೆಳಭಾಗದಲ್ಲಿ ಅಂತರಿಕ್ಷವಿರುವುದರಿಂದ ಅಂತರಿಕ್ಷದ ಮೇಲೆ ಸ್ವರ್ಗವಿದ್ದಂತಾಯಿತು. ಹಾಗೆಯೇ ಅಂತರಿಕ್ಷವು ಪೃಥಿವಿಯ ಮೇಲೆಯೂ, ಪೃಥಿವಿಯು ಕೆಳಭಾಗದಲ್ಲಿರುವ ನೀರಿನ ಮೇಲೆಯೂ ನೀರುಸತ್ಯದ ಮೇಲೆಯೂ ಪ್ರತಿಷ್ಠಿತವಾಗಿದೆ. ಜನರು ಸತ್ಯವಾದಿಗಳಾಗಿದ್ದಲ್ಲಿ ಕಾಲಕಾಲಕ್ಕೆ ಮಳೆಯಾಗುವುದು ಸಂಭವವು. ಆದ್ದರಿಂದ ಸತ್ಯದಲ್ಲಿ ನೀರು ಪ್ರತಿಷ್ಠಿತವಾಗಿದೆ ಎಂದು ಹೇಳಿದೆ. ಆ ಸತ್ಯವು ಬ್ರಹ್ಮನಲ್ಲಿ (ವೇದದಲ್ಲಿ) ಯೂ ಬ್ರಹ್ಮವು ವಷಟ್ಕಾರರೂಪವಾದ ತಪಸ್ಸಿನಲ್ಲಿಯೂ ಪ್ರತಿಷ್ಠಿತವಾಗಿದೆ. ಆದ್ದರಿಂದ ವಷಟ್ಕಾರದಲ್ಲಿ ಸಮಸ್ತ ಜಗತ್ತೂ ನೆಲೆಸಿರುವುದೆಂದು ತಿಳಿಯಬೇಕು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಅವನು ಸರ್ವವನ್ನು ಜಯಿಸಿದಂತಾಗುವುದು.

ವೌಷಳಿತಿ ವಷಟ್ಕರೋತ್ಯಸೌ ವಾವ ವಾವೃತವಃ ಷಳೇತಮೇವ ತದೃತುಷ್ವಾದಧಾತ್ಯೃತುಷು ಪ್ರತಿಷ್ಠಾಪಯತಿ ಯಾದೃಗಿವ ವೈ ದೇವೇಭ್ಯಃ ಕರೋತಿ ತಾದೃಗಿವಾಸ್ಮೈ ದೇವಾಃ ಕುರ್ವಂತಿ ॥

ಅಥ ವಷಟ್ಕಾರಮಂತ್ರಸ್ಯ ಪೂರ್ವೋತ್ತರಭಾಗಾವುಭೌ ಪ್ರಶಂಸತಿ— ಮಂತ್ರೇ ಪೂರ್ವಭಾಗೋ ವೌಶಬ್ದೋ ನಿಪಾತತ್ವಾದ್ವಾ ಗತಿಪ್ರಜನೇತ್ಯಾದಿಧಾತುಜತ್ವಾದ್ವಾ ಗಮನಸ್ವಭಾವಮಾದಿತ್ಯಮಭಿಧತ್ತೇ ॥ ತದೇತದಭಿಪ್ರೇತ್ಯಾಸೌ ವಾವ ವಾವಿತ್ಯುಕ್ತಂ ॥ ವಸಂತಾದ್ಯಾ ಋತವಃ ಸಂಖ್ಯಾವಶಾತ್‌ಷಡಿತ್ಯಭಿಧೀಯಂತೇ ॥ ತನ್ಮಂತ್ರಪಾಠೇನೈತಮೇವ ವೌಶಬ್ದಾಭಿಧೇಯಮಾದಿತ್ಯಂ ಷಟ್ಛಬ್ದಾಭಿಧೇಯೇಷ್ವೃತುಷ್ವಾದಧಾತಿ ॥ ನ ಕೇವಲಮಾಧಾನಮಾತ್ರಂ ಕಿಂತು ತೇಷ್ವೃತುಷು ಪ್ರತಿಷ್ಠಾಪಯತಿ ಸ್ಥೈರ್ಯೇಣಾವಸ್ಥಾಪಯತಿ ॥ ಏವಂ ಸತ್ಯಸೌ ಹೋತಾ ದೇವೇಭ್ಯೋ ಯಾದೃಶಮೇವ ಪ್ರಯೋಜನಂ ಕರೋತಿ ತಾದೃಶಮೇವ ಪ್ರತಿಷ್ಠಾರೂಪಂ ಪ್ರಯೋಜನಮಸ್ಮೈ ಹೋತ್ರೇ ತದ್ವಾರೇಣ ಯಜಮಾನಾಯ ದೇವಾಃ ಕುರ್ವಂತಿ ॥

ವಷಟ್ಕಾರ ಮಂತ್ರದ ಪೂರ್ವೋತ್ತರಭಾಗಗಳನ್ನು ಎಂದರೆ ಮೊದಲು ಮತ್ತು ಕೊನೆಯ ಭಾಗಗಳನ್ನು ಪ್ರಶಂಸೆ ಮಾಡುವರು. ವಷಟ್ಕಾರ ಮಂತ್ರದ ಪೂರ್ವಭಾಗ ಎಂದರೆ ಮೊದಲಿನ ಅಕ್ಷರವು ವೌ (ವೌಷಟ್) ಎಂದಿರುವುದು. ಈ ವೌ ಎಂಬುದು ನಿಪಾತ ಎಂದರೆ ಅವ್ಯಯವು. ಇದಕ್ಕೆ ಧಾತುಸಂಬಂಧವಾದ ನಿಷ್ಪತ್ತಿಯನ್ನು ಹೇಳುವುದಾದರೆ—ವೀ—ಗತಿವ್ಯಾಪ್ತಿಪ್ರಜನಕಾಂತ್ಯಸನಖಾದನೇಷು ಎಂಬ ಧಾತುಪಾಠದ ಪ್ರಕಾರವಾಗಿ ಅರ್ಥವಿರುವುದರಿಂದ ಇಲ್ಲಿ ವೀ ಎಂಬ ಧಾತುವಿಗೆ ಗಮನವೆಂಬ ಅರ್ಥವನ್ನು ಹೇಳಬೇಕು ಎಂದರೆ ಗಮನಸ್ವಭಾವವುಳ್ಳ ಆದಿತ್ಯನೆಂದಾಯಿತು. ಅಸೌ ವಾವ ವೌ ಆದ್ದರಿಂದ ವೌ ಎಂಬ ಪದಕ್ಕೆ ಆದಿತ್ಯನೆಂದರ್ಥವಾಯಿತು. ಇನ್ನು ವೌಷಟ್ ಎಂಬ ಶಬ್ದದಲ್ಲಿ ವೌ ಶಬ್ದವಾದಮೇಲೆ ಷಟ್ ಎಂಬ ಶಬ್ದವು ಉಳಿದಿರುವುದು. ಷಟ್ ಎಂದರೆ ಆರು ಎಂಬ ಸಂಖ್ಯಾವಾಚಕವು; ಇಲ್ಲಿ ಷಟ್ ಎಂದರೆ ಆರು ಋತುಗಳು ಎಂದರ್ಥವು. ಆದ್ದರಿಂದ ವೌಷಟ್ ಎಂಬ ಪದದ ಒಟ್ಟರ್ಥವು—(ಸಂವತ್ಸರದ) ಆರು ಋತುಗಳಲ್ಲಿ (ಎಂದರೆ ಸರ್ವಕಾಲದಲ್ಲಿಯೂ) ಆದಿತ್ಯನನ್ನು ಸ್ಥಾಪಿಸಿದಂತಾಯಿತು ಎಂದು ಈ ವೌಷಟ್ ಶಬ್ದದ ಅರ್ಥವು. ಆದ್ದರಿಂದ ಹೋತೃವು ಪಠಿಸುವ ವೌಷಟ್ ಎಂಬ ಮಂತ್ರದಿಂದ ದೇವತೆಗಳಲ್ಲಿ ಆದಿತ್ಯನನ್ನು ಸ್ಥಾಪಿಸಿದಂತಾಯಿತು. ಈ ವಿಧವಾದ ಪ್ರಯೋಜನವು ದೇವತೆಗಳಿಗೆ ಲಭಿಸಿದ್ದರಿಂದ ದೇವತೆಗಳೂ ಸಹ ಸಂತೋಷಗೊಂಡು ಹೋತೃವಿಗೂ, ಯಜಮಾನನಿಗೂ ಬೇಕಾದ ಪ್ರಯೋಜನವನ್ನೇ ಉಂಟುಮಾಡುವರು.

## *English Translation*

**(On the meaning of the Vashatkara and its different parts.)**

The Vashatkara is a weapon. If one has an enemy (and wishes to destroy him) one has only to think of him when making the Vashatkara in order to strike him a blow with a weapon (in the form of the Vashatkora).

The word shat (six) is contained in the formula vau-shat (the so called Vashatkara). There are six seasons. Thus he makes the seasons and establishes them, To him who is estadlished in the seaons becomes afterwards (also) established in all other things. He who has such a knowledge obtains a firm footing.

Hiranyadan, the son of Beda, said about this (the Vashatkara) as follows: By this part (shat-six) of the formula vaushat, the Hotar establishes these six

things. The sky rests on the air the air on the earth ; the earth on the waters, the waters on the reality (satya) ; the reality on thp Brahma ; the Brahma on the concentrated heat of meditation (tapas). If these places are established, than all things are consequently established. He who has shch a knowledge has firm footing.

The part vau of the formula vaushat means the six seasons. By repeating the Vashatkara the Hotar places the sacrificer in the seasons, gives him a footing on them. Just as he does unto the Gods do unto him.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ಷಷ್ಠಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.**



## ಅಥ ಏಕಾದಶಾಧ್ಯಾಯೇ ಸಪ್ತಮಃ ಖಂಡಃ

### ಹನ್ನೊಂದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ವಷಟ್ಕಾರದ ಮೂರು ಪ್ರಭೇದಗಳು—ವಜ್ರ, ಧಾಮಚ್ಛತ್ ಮತ್ತು ರಿಕ್ತ ಎಂದು ವಷಟ್ಕಾರವನ್ನು ಯಾವ ಧ್ವನಿಯಲ್ಲಿ ಹೇಳಬೇಕು ? ವಷಟ್ಕಾರವನ್ನು ಸರಿಯಾದ ಕ್ರಮದಲ್ಲಿ ಉಚ್ಚರಿಸದೇ ಇರುವುದರಿಂದ ಹೋತೃವು ಯಜ್ಞಮಾಡುವ ಯಜಮಾನನಿಗೆ ಕೆಡಕನ್ನುಂಟುಮಾಡಬಹುದು]



ವಷಟ್ಕಾರಗಳಲ್ಲಿ ಮೂರು ಪ್ರಭೇದಗಳಿರುವವು. ಅವುಗಳ ಸ್ವರೂಪವನ್ನು ವಿವರಿಸುವರು. ವಷಟ್ಕಾರಗಳಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂದು ಮೂರುವಿಧವು.

ತ್ರಯೋ ವೈ ವಷಟ್ಕಾರಾ ವಜ್ರೋ ಧಾಮಚ್ಛದ್ರಿಕ್ತಃ ॥ ಸ ಯಮೇ-
ವೋಚ್ಚೈರ್ಬಲಿ ವಷಟ್ಕರೋತಿ ಸ ವಜ್ರಃ ತಂ ತಂ ಪ್ರಹರತಿ
ದ್ವಿಷತೇ ಭ್ರಾತೃವ್ಯಾಯ ವಧಂ ಯೋಽಸ್ಯ ಸ್ತೃತ್ಯಸ್ತಸ್ಮೈ
ಸ್ತರ್ತವೈ ತಸ್ಮಾತ್ಸ ಭ್ರಾತೃವ್ಯವತಾ ವಷಟ್ಕೃತ್ಯಃ ॥

ಅಥ ಫಲವಿಶೇಷಾರ್ಥಂ ವಷಟ್ಕಾರಸ್ಯಾವಾಂತರಭೇದಾನಾಹ—ವಜ್ರ ಇತಿ ಪ್ರಥಮಸ್ಯ ವಷಟ್ಕಾರಭೇದಸ್ಯ ನಾಮ ॥ ಧಾಮಚ್ಛದಿತಿ ದ್ವಿತೀಯಸ್ಯ ॥ ರಿಕ್ತ ಇತಿ ತೃತೀಯಸ್ಯ ॥ ತೇಷಾಂ ಮಧ್ಯೇ ವಜ್ರಸ್ಯ ಸ್ವರೂಪಂ ದರ್ಶಯತಿ ॥ ಸ ಹೋತಾ ಯಮೇವ ಮಂತ್ರಮುಚ್ಚೈರ್ಯಥಾ ಭವತಿ ಬಲಿ ಚ ಯಥಾ ಭವತಿ ತಥಾ ವಷಟ್ಕರೋತಿ ಸ ಮಂತ್ರರೂಪೋ ವಷಟ್ಕಾರೋ ವಜ್ರ ಇತ್ಯುಚ್ಯತೇ ॥ ಅತ್ರೋಚ್ಚೈಃಶಬ್ದೇನ ಧ್ವನೇರಾಧಿಕ್ಯಮುಚ್ಯತೇ ಬಲಿಶಬ್ದೇನಾಕ್ಷರಪಾರುಷ್ಯಂ ತದುಭಯಯುಕ್ತೋ ವಜ್ರಃ ॥ ತಸ್ಯ ಪ್ರಯೋಗಂ ವಿಧತ್ತೇ—ಯೋ ದ್ವೇಷ್ಯೋ ಯಜಮಾನಸ್ಯಸ್ತೃತ್ಯೋ ಹಂತವ್ಯೋ ಭವತಿ ತಸ್ಮೈ ಸ್ತರ್ತವೈ ತಂ ಹಂತುಂ ದ್ವಿಷತೇ ದ್ವೇಷಂ ಕುರ್ವತೇ ಭ್ರಾತೃವ್ಯಾಯ ಶತ್ರವೇ ತಂ ತಂ ವಧಂ ಪ್ರಹರತಿ ॥ ವಧಶಬ್ದೋ ಹನನಸಾಧನಂ ವಜ್ರಂ ಬ್ರೂತೇ॥ ಯದಾ ಯದಾಽಪೇಕ್ಷಿತಸ್ತದಾ ತದೇತಿ ವಿವಕ್ಷಯಾ ತಂತಮಿತಿ ವೀಪ್ಸಾ ॥ ಯಸ್ಮಾತ್ಪ್ರಹರಣಹೇತುರ್ವಜ್ರಸ್ತಸ್ಮಾತ್ಸ ವಜ್ರೋ ಭ್ರಾತೃವ್ಯವತಾ ಯಜಮಾನೇನ ವಷಟ್ಕೃತ್ಯೋ ವಷಟ್ಕಾರರೂಪೇಣ ಪ್ರಯೋಕ್ತವ್ಯಃ ॥ ಹೋತೃಪ್ರಯೋಗ ಏವ ಯಜಮಾನಪ್ರಯೋಗಃ ॥ ದಕ್ಷಿಣಯಾ ಹೋತುಃ ಕ್ರೀತತ್ವಾತ್ ॥

ಈಗ ವಜ್ರ ಎಂಬ ಪ್ರಭೇದದ ಸ್ವರೂಪವನ್ನು ವಿವರಿಸುವರು— ಈ ವಷಟ್ಕಾರವನ್ನು ಹೋತೃವು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸುವುದರಿಂದ ಇದಕ್ಕೆ ವಜ್ರವೆಂಬ ಹೆಸರು ಬಂದಿರುವುದು. ಯಜ್ಞಮಾಡುವ ಯಜಮಾನನು ಯಾವಾಗ ತನಗೆ ಶತ್ರುಗಳಾದವರನ್ನು ಸಂಹಾರಮಾಡಬೇಕೆಂದು ಅಪೇಕ್ಷಿಸುವನೋ ಆಗ ಈ ವಷಟ್ಕಾರವನ್ನು ಪ್ರಯೋಗಿಸುವುದರಿಂದ ಅದು ವಜ್ರಾಯುಧರೂಪದಿಂದ ಯಜಮಾನನ ಶತ್ರುವನ್ನು ಪ್ರಹರಿಸಿ ನಾಶಮಾಡುವುದು. ಆದುದರಿಂದ ಶತ್ರುನಾಶವನ್ನು ಅಪೇಕ್ಷಿಸುವ ಯಜಮಾನನು ವಜ್ರರೂಪವಾದ ಈ ವಷಟ್ಕಾರವನ್ನು ಉಪಯೋಗಿಸಬೇಕು.

**ಅಥ ಯಃ ಸಮಃ ಸಂತತೋಽನಿರ್ಹಾಣರ್ಚಃ ಸ ಧಾಮಚ್ಛತ್ । ತಂ ತಂ ಪ್ರಜಾಶ್ಚ ಪಶವಶ್ಚಾನೂಪತಿಷ್ಠಂತೇ ತಸ್ಮಾತ್ಸ ಪ್ರಜಾಕಾಮೇನ ಪಶುಕಾಮೇನ ವಷಟ್ಕೃತ್ಯಃ ॥**

ಧಾಮಚ್ಛಬ್ದಃ ಸ್ವರೂಪಂ ದರ್ಶಯತಿ—ಯೋ ವಷಟ್ಕಾರಃ ಪೂರ್ವೋಕ್ತಬಲಿತ್ವಾದಿದೋಷರಹಿತೋ ಯಥಾಽಧೀತಸ್ತಥೈವೋಚ್ಚಾರಿತಃ ಸಂತತೋ ಯಾಜ್ಯಯಾ ಸಹ ವಿಚ್ಛೇದರಹಿತೋ ನಿಃಶೇಷೇಣ ಹಾನಂ ಪರಿತ್ಯಾಗೋ ಯಸ್ಯಾ ಋಚಃ ಸಾ ನಿರ್ಹಾಣಾ ॥ ತಥಾವಿಧಾ ತಾದೃಗ್ಯಾಜ್ಯಾ ರೂಪಾ ಯಸ್ಯ ವಷಟ್ಕಾರಸ್ಯ ಸೋಽಯಂ ನಿರ್ಹಾಣರ್ಚಃ ॥ ಯಾಜ್ಯಾಪಾಠಹೀನ ಇತ್ಯರ್ಥಃ ॥ ತದ್ವೈಲಕ್ಷಣ್ಯಾದನಿರ್ಹಾಣರ್ಚಃ ಸಂಪೂರ್ಣಯಾಜ್ಯಾಪಾಠೋಪೇತ ಇತ್ಯರ್ಥಃ ॥ ಈದೃಶೋ ವಷಟ್ಕಾರೋ ಧಾಮಚ್ಛದಿತಿ ಧಾಮ ಯಜ್ಞಸ್ಥಾನಂ ತತ್ರ ಯಥಾ ರಕ್ಷಾಂಸಿ ನ ಪ್ರವಿಶಂತಿ ತಥಾ ಛಾದಯತಿ ಸ ಧಾಮಚ್ಛತ್ ॥ ತಸ್ಯ ಪ್ರಯೋಗಂ ವಿಧತ್ತೇ—ಪ್ರಜಾಭಿಃ ಪಶುಭಿಶ್ಚಾಸ್ವಯಾರ್ಥಂ ತಂ ತಮಿತಿ ವೀಪ್ಸಾ ತಂ ವಷಟ್ಕಾರಂ ಧಾಮಚ್ಛದಂ ಪ್ರಜಾಶ್ಚ ಪಶವಶ್ಚ ಸೇವಂತೇ ॥ ತಸ್ಮಾತ್ತಾದೃಕ್ಕಾಮೇನ ಧಾಮಚ್ಛದ್ವಷಟ್ಕಾರಃ ಪ್ರಯೋಕ್ತವ್ಯಃ ॥

ಈ **ಧಾಮಚ್ಛತ್** ಎಂಬ ಎರಡನೆಯ ಪ್ರಭೇದದ ಸ್ವರೂಪವನ್ನು ವಿವರಿಸುರು—ಇಲ್ಲಿ ವಷಟ್ಕಾರವನ್ನು ಉಚ್ಚರಿಸುವ ವಿಧಾನದಲ್ಲಿ ವಿವರಣೆಯು ಆವಶ್ಯಕವು. ಯಾಜ್ಯಾಮಂತ್ರದ ಕೊನೆಯಲ್ಲಿ **ವೌಷಟ್** ಎಂಬ ವಷಟ್ಕಾರವನ್ನು ಉಚ್ಚರಿಸುವುದರಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂಬ ವಷಟ್ಕಾರದ ಮೂರು ಪ್ರಭೇದಗಳಿಗನುಸಾರವಾಗಿ ಮೂರು ವಿಧವಾಗಿ ಉಚ್ಚರಿಸಬೇಕಾಗಿರುವುದು. ವಜ್ರವೆಂಬ ವಷಟ್ಕಾರದ ಪ್ರಭೇದವನ್ನು ಉಪಯೋಗಿಸುವಾಗ ಯಾಜ್ಯಾಮಂತ್ರವನ್ನು ಸಾಧಾರಣ ಧ್ವನಿಯಿಂದ ಉಚ್ಚರಿಸುತ್ತಾ ಕೊನೆಯಲ್ಲಿ **ವೌಷಟ್** ಎಂಬುದನ್ನು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸಬೇಕು. ಮತ್ತು ಯಾಜ್ಯಾಮಂತ್ರದ ಕೊನೆಯಲ್ಲಿ ಅಕ್ಷರಕ್ಕೆ ಓಂಕಾರವನ್ನು ಸೇರಿಸಿ ಎಂದರೆ ಕೊನೆಯ ಅಕ್ಷರವನ್ನು ಓಂಕಾರಸ್ವರದಿಂದ ಕೂಡಿರುವಂತೆ ಉಚ್ಚರಿಸಿ ಅನಂತರ **ವೌಷಟ್** ಎಂಬುದನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಹಿಂದೆ ಉದಾಹರಣೆಯಾಗಿ ಕೊಟ್ಟಿರುವ—

**ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।**
**ಪ್ರ ವಿಷ್ಣುರಸ್ತುತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥**

ಎಂಬ ಋಕ್ಕಿನಲ್ಲಿ ಕೊನೆಯ ಭಾಗವು **ಸ್ಥವಿರಸ್ಯನಾಮ** ಎಂದಿರುವುದು ಇದಕ್ಕೆ ಓಂಕಾರವನ್ನು ಸೇರಿಸಿದರೆ **ಸ್ಥವಿರಸ್ಯ ನಾಮೋಂ** ಎಂದಾಗುವುದು. ಈರೀತಿ ಈ ಋಕ್ಕನ್ನು **ಸ್ಥವಿರಸ್ಯ ನಾಮೋಂ** ಎಂದು ಸಮಧ್ವನಿಯಿಂದ ಉಚ್ಚರಿಸಿ ಅನಂತರ **ವೌಷಟ್** ಎಂಬ ಶಬ್ದವನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಈ ಕ್ರಮವು ವಜ್ರವೆಂಬ ವಷಟ್ಕಾರವನ್ನು ಉಚ್ಚರಿಸುವ ವಿಧಾನವು. ಈಗ **ಧಾಮಚ್ಛತ್** ಎಂಬ ವಷಟ್ಕಾರವನ್ನು ಉಚ್ಚರಿಸಬೇಕಾದರೆ ಯಾಜ್ಯಾಮಂತ್ರವನ್ನು ಯಾವ ವ್ಯತ್ಯಾಸವೂ ಇಲ್ಲದಂತೆ ಎಂದರೆ **ಸ್ಥವಿರಸ್ಯ ನಾಮ** ಎಂದುಮಾತ್ರ ಉಚ್ಚರಿಸಿ (ಕೊನೆಯಲ್ಲಿ ಓಂಕಾರವಿಲ್ಲದೆ) ಅನಂತರ ವೌಷಟ್ ಎಂಬ ಶಬ್ದವನ್ನು ಪಠಿಸಬೇಕು. ಇದು ಧಾಮಚ್ಛತ್ ಎಂಬ ವಷಟ್ಕಾರವನ್ನು ಉಚ್ಚರಿಸುವ ಕ್ರಮವು. ಪ್ರಜೆಗಳನ್ನೂ ಪಶುಗಳನ್ನೂ ಅಪೇಕ್ಷಿಸುವ ಯಜಮಾನನು ಈ ವಿಧವಾದ **ಧಾಮಚ್ಛತ್** ಎಂಬ ವಷಟ್ಕಾರ ವಿಧಾನದಿಂದ ಹೋಮಮಾಡಬೇಕು.

**ಅಥ ಯೇನೈವ ಷಳವರಾಧ್ನೋತಿ ಸ ರಿಕ್ತಃ । ರಿಣಕ್ತ್ಯಾತ್ಮಾನಂ ರಿಣಕ್ತಿ ಯಜಮಾನಂ ಪಾಪೀಯಾನ್ವಷಟ್ಕರ್ತಾ ಭವತಿ ಪಾಪೀಯಾನ್ಯಸ್ಮೈ ವಷಟ್ಕರೋತಿ ತಸ್ಮಾತ್ತಸ್ಯಾಶಾಂ ನೇಯಾತ್ ॥**

**ರಿಕ್ತಸ್ಯ ಸ್ವರೂಪಂ ದರ್ಶಯತಿ—ಷಟ್ಶಬ್ದೋ ವಷಟ್ಕಾರಮಭಿಧತ್ತೇ ಭೀಮಸೇನೋ ಭೀಮ ಇತಿವದೇಕದೇಶೇನ ವ್ಯವಹಾರಾತ್ ॥ ಯೇನೈವೋಚ್ಚಾರಣೇನ ಷಳವರಾಧ್ನೋತಿ ವಷಟ್ಕಾರೋಽವರಾಧಂ ಸಮೃದ್ಧ್ಯಭಾವಂ ಪ್ರಾಪ್ನೋತಿ ॥ ನೀಚೋಚ್ಚಾರಣೇನ ವಷಟ್ಕಾರಸ್ಯ ಸಮೃಧ್ಯಭಾವಃ॥ ಸ ತಥೋಚ್ಚಾರಿತೋ ವಷಟ್ಕಾರೋ ರಿಕ್ತ ಇತ್ಯುಚ್ಯತೇ ॥ ಉಚ್ಚಧ್ವನಿಯೋಗ್ಯೇ ತದಭಾವೇ ರಿಕ್ತಪ್ರಾಯತ್ವಾತ್ ॥ ತಮೇತಂ ರಿಕ್ತಂ ನಿಂದತಿ — ರಿಕ್ತಾಖ್ಯೋ ವಷಟ್ಕಾರಃ ಪ್ರಯುಜ್ಯಮಾನಃ ಸನ್ಹೋತುರಾತ್ಮಾನಂ ರಿಣಕ್ತಿ ರಿಕ್ತೀಕರೋತಿ ಸಮೃದ್ಧಿಹೀನಂ ದರಿದ್ರಂ ಕರೋತೀತ್ಯರ್ಥಃ ॥ ತಥಾ ಯಜಮಾನಮಪಿ ರಿಣಕ್ತಿ ॥ ಅತಸ್ತೇನ ವಷಟ್ಕರ್ತಾ ಹೋತಾ ಪಾಪೀಯಾನ್ಭವತಿ ॥ ಅತ್ಯನ್ತನರಕಸಾಧನಪಾಪೇನ ಯುಕ್ತೋ ಭವತಿ ॥ ತಸ್ಮೈ ಯಜಮಾನಾಯ ವಷಟ್ಕರೋತಿ ಸೋಽಪಿ ಪಾಪೀಯಾನ್ಭವತಿ ॥ ತಸ್ಮಾತ್ತಸ್ಯ ವಷಟ್ಕಾರಸ್ಯಾಶಾಂ ನೇಯಾನ್ನ ಪ್ರಾಪ್ನುಯಾದಿಚ್ಛಾಮಪಿ ನ ಕುರ್ಯಾತ್ಕಿಮುತ ಪ್ರಯೋಗಮಿತ್ಯರ್ಥಃ ॥**

ರಿಕ್ತವೆಂಬ ಪ್ರಭೇದದ ಸ್ವರೂಪವನ್ನು ವಿವರಿಸುವರು—**ವೌಷಟ್** ಶಬ್ದವನ್ನು ಉಚರಿಸುವಾಗ **ಷಟ್** ಎಂಬ ಪದವನ್ನು ಮೆಲ್ಲಗೆ ಅಲ್ಪಧ್ವನಿಯಿಂದ ಉಚ್ಚರಿಸಿದರೆ ಆ ವಷಟ್ಕಾರವು ರಿಕ್ತವೆನಿಸುವುದು. ರಿಕ್ತವೆಂದರೆ ಇಲ್ಲದಿರುವುದು ಎಂದರ್ಥವು. ಆದ್ದರಿಂದ ಈ ರಿಕ್ತವಷಟ್ಕಾರದಿಂದ ಹೋಮಮಾಡಿದರೆ ಯಜ್ಞಮಾಡುವ ಯಜಮಾನನಿಗೆ ಏನೂ ಇಲ್ಲದ ರಿಕ್ತದೆಶೆಯುಂಟಾಗುವುದಲ್ಲದೆ ಪಾಪವು ಸಂಭವಿಸುವದು, ಹೋಮವನ್ನು ಮಾಡಿಸುವ ಋತ್ವಿಜನೂ ಪಾಪಿಷ್ಠನೇ ಆಗುವನು. ಆದ್ದರಿಂದ ಶ್ರೇಯಸ್ಸನ್ನು ಬಯಸುವ ಯಜಮಾನನಾಗಲಿ, ಋತ್ವಿಜನಾಗಲಿ ಈ ರಿಕ್ತವಷಟ್ಕಾರವನ್ನು ಯಾವಾಗಲೂ ಉಪಯೋಗಿಸಬಾರದು.

ಕಿಂ ಸ ಯಜಮಾನಸ್ಯ ಪಾಪಭದ್ರಮಾದ್ರಿಯೇತೇತಿ ಹ ಸ್ಮಾಹ ಯೋಽಸ್ಯ ಹೋತಾ ಸ್ಯಾದಿತ್ಯತ್ರ್ಯೈವೈನಂ ಯಥಾ ಕಾಮಯೇತ ತಥಾ ಕುರ್ಯಾತ್ ॥

ಪ್ರಶ್ನೋತ್ತರಾಭ್ಯಾಂ ವಷಟ್ಕಾರಸ್ಯೇಷ್ಟಾನಿಷ್ಟಫಲಪ್ರಾಪ್ತಿಸಾಮರ್ಥ್ಯಂ ದರ್ಶಯತಿ—ತದೇತದ್ವಾಕ್ಯಂ ಪ್ರಾಣಾನಾಂ ವಾ ಏತದುಕ್ಥಮಿತ್ಯಸ್ಮಿನ್ಖಂಡೇ ಪ್ರಉಗವಿಷಯಂ ಯಥಾ ವ್ಯಾಖ್ಯಾತಂ ತಥೈವಾತ್ರ ವಷಟ್ಕಾರವಿಷಯಂ ವ್ಯಾಖ್ಯಾತವ್ಯಮಿತಿ ॥

ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಹೋತೃವೆಂಬ ಋತ್ವಿಜನು ಯಜ್ಞಮಾಡುವ ಯಜಮಾನನಿಗೆ ಶುಭವನ್ನಾಗಲಿ, ಅಶುಭವನ್ನಾಗಲಿ ಮಾಡಬೇಕೆಂದು ಇಷ್ಟಪಟ್ಟರೆ ಅದರಂತೆ ಮಾಡಬಹುದು. ಹೋತೃವು ಯಾವರೀತಿ ಇಷ್ಟಪಟ್ಟರೆ ಆರೀತಿ ಮಾಡಬಹುದು.

ಯಂ ಕಾಮಯೇತ ಯಥೈವಾನೀಜಾನೋಽಭೂತ್ತಥೈವೇಜಾನಃ ಸ್ಯಾದಿತಿ ಯಥೈವಾಸ್ಯ ಋಚಂ ಬ್ರೂಯಾತ್ತಥೈವಾಸ್ಯ ವಷಟ್ಕುರ್ಯಾತ್ಸದೃಶಮೇವೈನಂ ತತ್ಕರೋತಿ ॥ ಯಂ ಕಾಮಯೇತ ಪಾಪೀಯಾನ್ಸ್ಯಾದಿತ್ಯುಚ್ಚೈಸ್ತರಾಮಸ್ಯ ಋಚಮುಕ್ತ್ವಾ ಶನೈಸ್ತರಾಂ ವಷಟ್ಕುರ್ಯಾತ್ಪಾಪೀಯಾಂಸಮೇವೈನಂ ತತ್ಕರೋತಿ ॥

ಅನಿಷ್ಟಫಲಸಾಧನತ್ವಂ ದರ್ಶಯತಿ—ಅನೀಜಾನೋಽಕೃತಯಜ್ಞಃ ಪುರುಷೋ ಯಥೈವ ಫಲರಹಿತೋಽಭೂತ್ತಥೈವೇಜಾನಃ ಕೃತಯಜ್ಞೋಽಪಿ ಫಲರಹಿತಃ ಸ್ಯಾದಿತಿ ಯಂ ಯಜಮಾನಂ ಹೋತಾ ಕಾಮಯೇತಾಸ್ಯ ಯಜಮಾನಸ್ಯ ಯೇನ ಸ್ವರೇಣ ಯಾಜ್ಯಾಂ ಬ್ರೂಯಾತ್ತೇನೈವ ಸ್ವರೇಣ ವಷಟ್ಕಾರಮಪಿ ಬ್ರೂಯಾತ್ ॥ ತಥಾ ಸತ್ಯೇನಂ ಕೃತಯಜ್ಞಂ ಯಜ್ಞರಹಿತೇನ ಸದೃಶಂ ಫಲರಹಿತಂ ಕರೋತಿ । ಅನಿಷ್ಟಫಲಾಂತರಸಾಧನತ್ವಂ ದರ್ಶಯತಿ—ಪಾಪೀಯಾನ್ದರಿದ್ರೋ ನರಕಯೋಗ್ಯೋ ವಾ ಯಜಮಾನಃ ಸ್ಯಾದಿತಿ ಕಾಮಯಮಾನೋ ಹೋತರ್ಚಮತಿಶಯೇನೋಚ್ಚೈರ್ಯ ವಷಟ್ಕಾರಮತಿಶಯೇನ ನೀಚೈರ್ಬ್ರೂಯಾತ್ ॥ ತಥಾ ಸತ್ಯೇನಂ ಯಜಮಾನಂ ಪಾಪೀಯಾಂಸಮೇವ ಕರೋತಿ ॥

ಹೇಗೆಂದರೆ ಯಜಮಾನನಿಗೆ ಯಜ್ಞಮಾಡಿದ್ದಕ್ಕೆ ಸರಿಯಾದ ಫಲವು ಲಭಿಸಬಾರದೆಂದು ಹೋತೃವಿಗೆ ಇಷ್ಟವಿದ್ದರೆ ಆಗ ಹೋತೃವು ಯಾಜ್ಯಾಮಂತ್ರವನ್ನು ಸಾಧಾರಣರೀತಿಯಲ್ಲಿ ಉಚ್ಚರಿಸಿ ವಷಟ್ಕಾರವನ್ನು ಘಟ್ಟಿಯಾಗಿ ಉಚ್ಚರಿಸುವುದಕ್ಕೆ ಬದಲಾಗಿ ಯಾಜ್ಯಾ ಮತ್ತು ವಷಟ್ಕಾರಮಂತ್ರಗಳನ್ನು ಸಮನಾದ ಒಂದೇ ಧ್ವನಿಯಿಂದ ಉಚ್ಚರಿಸದರೆ ಯಜಮಾನನಿಗೆ ಯಜ್ಞಮಾಡಿದ ಫಲವು ಲಭಿಸುವುದಿಲ್ಲ. ಯಜಮಾನನಿಗೆ ಯಜ್ಞಫಲವು ಲಭಿಸದೆ ಪಾಪವು ಮಾತ್ರ ಸಂಭವಿಸಬೇಕೆಂದು ಹೋತೃವಿನ ಇಷ್ಟವಾದರೆ ಆಗ ಅವನು ಯಾಜ್ಯಾಮಂತ್ರದ ಋಕ್ಕನ್ನು ಘಟ್ಟಿಯಾದ ಧ್ವನಿಯಲ್ಲಿಯೂ ವಷಟ್ಕಾರವನ್ನು ಮೆತ್ತನೆಯ ಧ್ವನಿಯಲ್ಲಿಯೂ ಪಠಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಪಾಪವು ಸಂಭವಿಸುವುದು.

**ಯಂ ಕಾಮಯೇತ ಶ್ರೇಯಾನ್ಸ್ಯಾದಿತಿ ಶನೈಸ್ತರಾಮಸ್ಯ ಋಚಮು ಕ್ತ್ವೋಚ್ಚೈಸ್ತರಾಂ ವಷಟ್ಕುರ್ಯಾಚ್ಛ್ರಿಯ ಏವೈನಂ ತಚ್ಛ್ರಿಯಮಾದಧಾತಿ ॥**

ಅಥೇಷ್ಟಫಲಸಾಧನತ್ವಂ ದರ್ಶಯತಿ—ಶ್ರೇಯಾನ್ ದಾರಿದ್ರ್ಯರಹಿತಃ ಪಾಪರಹಿತಶ್ಚ ಯಜಮಾನಃ ಸ್ಯಾದಿತಿ ಕಾಮಯಮಾನೋ ಹೋತರ್ಚಂ ಯಾಜ್ಯಾಂ ಶನೈರುಚ್ಚಾರ್ಯ ವಷಟ್ಕಾರಮತಿಶಯೇನೋಚ್ಚೈರುಚ್ಚಾರಯೇತ್ ॥ ತಚ್ಚ ಶ್ರಿಯೇ ಸಂಪದರ್ಥಮೇವ ಭವತಿ ॥ ತೇನ ಪ್ರಯೋಗೇಣೈನಂ ಯಜಮಾನಂ ಶ್ರಿಯಾಮೈಹಿಕಾಮುಷ್ಮಿಕಸಂಪದಿ ಸ್ಥಾಪಯತಿ ॥

ಹಾಗಲ್ಲದೆ ಯಜಮಾನನಿಗೆ ಶ್ರೇಯಸ್ಸುಂಟಾಗಬೇಕೆಂದು ಹೋತೃವು ಬಯಸಿದಲ್ಲಿ ಆಗ ಯಾಜ್ಯಾಮಂತ್ರವನ್ನು ಮೆತ್ತನೆಯ ಧ್ವನಿಯಲ್ಲಿಯೂ ವಷಟ್ಕಾರವನ್ನು ಘಟ್ಟಿಯಾದ ಧ್ವನಿಯಲ್ಲಿಯೂ ಉಚ್ಚರಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಶ್ರೇಯಸ್ಸುಂಟಾಗುವುದು.

**ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ಯಾಜ್ಯಾವಷಟ್ಕಾರಯೋರ್ನೈರಂತರ್ಯಂ ವಿಧತ್ತೇ—ಋಚಾ ಯಾಜ್ಯಯಾ ಸಹ ಸಂತತಂ ನಿರಂತರಂ ಯಥಾ ಭವತಿ ತಥಾ ವಷಟ್ಕೃತ್ಯಂ ವಷಟ್ಕಾರ ಉಚ್ಚಾರಣೀಯಃ ॥ ತಚ್ಚ ಯಜಮಾನಸ್ಯ ಶ್ರೇಯಃಸಂತತ್ಯೈ ಸಂಪದ್ಯತೇ । ವೇದನಂ ಪ್ರಶಂಸತಿ -- ಸಂಧೀಯತೇ ಸಂಯುಜ್ಯತೇ ॥

ಯಾಜ್ಯಾಮಂತ್ರವನ್ನೂ ವಷಟ್ಕಾರವನ್ನೂ ಉಚ್ಚರಿಸುವಾಗ ಮುಖ್ಯವಾದ ಒಂದು ವಿಷಯವನ್ನು ಗಮನಿಸಬೇಕು. ಯಾಜ್ಯಾಮಂತ್ರವನ್ನು ಕೊನೆಯವರೆಗೂ ಉಚ್ಚರಿಸಿ ಅನಂತರ ಸ್ವಲ್ಪ ವಿರಾಮವಾದಮೇಲೆ ವಷಟ್ಕಾರವನ್ನು ಉಚ್ಚರಿಸಕೂಡದು. ವಷಟ್ಕಾರವನ್ನು ಯಾಜ್ಯಾಮಂತ್ರದ ಒಂದು (ಕೊನೆಯ) ಭಾಗವೆಂದೇ ಭಾವಿಸಿ ಋಕ್ಕಿನ ಪ್ರಾರಂಭದಿಂದ ವೌಷಟ್ ಎನ್ನುವ ವರೆವಿಗೂ ಮಧ್ಯೆ ಎಲ್ಲಿಯೂ ಸ್ವಲ್ಪವೂ ನಿಲ್ಲಿಸದೆ ಸಂತತಧಾರಾಕಾರವಾಗಿ ಉಚ್ಚರಿಸಬೇಕು. ಈ ವಿಷಯವನ್ನು ತಿಳಿದಿರುವವನು ಪ್ರಜೆಗಳನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

*English Translation*

**(The three kinds of the Vashatkara ; vajra, damachhad, and rikta. In what tone the Vashatkara is to be repeated. The Hotar can, by not repeating it properly, injure the sacrificer).**

There are three kinds of the Vashatkara, vajra (weapon), damacchad (who covers beings) and rikta (empty, void).

It is a vajra (weapon) in consequence of its being pronounced with a loud and stroug voice by the Hotar. With it he strikes, whenever he pleases, a blow to his enemy and adversary who is to be put down by him, in order to put him down. Thence is this weapon, in the form of the Vashatkara, to be used by the sacrificer who has enemies.

It is dhamachhad, i.e., protecting the beings, on account of its being pronounced as an integral part of the verse to which it belongs without omitting any part of it. Children and cattle stand near this part of the Vashatkara and follow it. Thence ought he who desires children and cattle to make this Vashatkara.

It is rikta, i.e., void, the syllable shat being pronounced with a low accent. He thus makes void (rikta) the soul, and the sacrificer. He who makes such a Vashatkara become a great sinner, and also he for whom such a Vashatkara is made. Thence he should not wish to make it.

As regards the question whether the Hotar might make the sacrificer happy or unhappy, the answer is, that he who might be the Hotar of any sacrificer can do so. At this occasion, i. e., at the sacrifice, the Hotar may just do with the sacrificer as he pleases.

Should he wish to deprive the sacrificer of the fruit of his sacrifice, he has only to repeat the (Yajya) verse, and the Vashatkara in the same tone (i. e. monotously). If he do so, he deprives the sacrificer of the fruit of his sacrifice.

Should he wish to make the sacrificer liable to the consequences of a great guilt, he has only to repeat the (Yajya) verse with a very loud voice, and the Vashatkara with a very low one. (If he do so) he makes the sacrificer liable to the conseqences of a great guilt.

Should he wish to make the saerificer very happy, he has to repeat the (Yajya) verse with a very low, and the Vashatkara with a very loud voice. (That is done) for obtaining fortune. By doing so, he puts the sacrificer in the possession of fortune.

The Vashatkara is to form an integral part of the Yajya verse (no stopping between the end of the verse and vaushat being allowed) in order to have an uninterrupted whole. He who has such a knowledge becomes possessed of children and cattle.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ಸಪ್ತಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಏಳನೆಯ ಖಂಡವು ಸಮಾಪ್ತವಾದುದು.**



## ಅಥ ಏಕಾದಶಾಧ್ಯಾಯೇ ಅಷ್ಟಮಃ ಖಂಡಃ

### ಹನ್ನೊಂದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ ವಷಟ್ಕಾರ ಮಂತ್ರ ಪಠನಕ್ರಮದಲ್ಲಿ ಸಂಭವಿಸಬಹುದಾದ ನ್ಯೂನಾತಿರೇಕಗಳಿಂದ ಹೋತೃವಿಗೂ, ಯಜಮಾನನಿಗೂ ಉಂಟಾಗಬಹುದಾದ ಅಪಾಯಗಳ ವಿಷಯದಲ್ಲಿ ಕೆಲವು ವಿಧಿಗಳನ್ನನುಸರಿಸುವುದರಿಂದ ಅಪಾಯಗಳ ನಿವಾರಣೆಯು ]

ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಧ್ಯಾಯೇದ್ವಷಟ್ಕರಿಷ್ಯನ್ಸಾಕ್ಷಾದೇವ ತದ್ದೇವತಾಂ ಪ್ರೀಣಾತಿ ಪ್ರತ್ಯಕ್ಷಾದ್ದೇವತಾಂ ಯಜತಿ ॥

**ಅಥ ಹೋತುರ್ವಷಟ್ಕಾರಕಾಲೇ ದೇವತಾಧ್ಯಾನಂ ವಿಧತ್ತೇ—ಅಧ್ವರ್ಯುರ್ಯಾಂ ದೇವತಾಮುದಿಶ್ಯ ಹವಿರ್ಗೃಹ್ಣಾತಿ ತಾಂ ದೇವತಾಮಯಂ ಹೋತಾ ವಷಟ್ಕರಿಷ್ಯನ್ವಷಟ್ಕಾರಾಯೋದ್ಯುಕ್ತಃ ಸನ್ಧ್ಯಾಯೇನ್ಮನಸಾ ಶಾಸ್ತ್ರೀಯಾಂ ದೇವತಾಮೂರ್ತಿಂ ಸಮ್ಯಗನುಸಂಧಾಯ ಪಶ್ಚಾದ್ವಷಟ್ಕುರ್ಯಾದಿತ್ಯರ್ಥಃ ॥ ಏವಂ ಸತಿ ಸಾಕ್ಷಾದೇವ ಪ್ರತ್ಯಕ್ಷೇಣೈವ ದೇವತಾಂ ತರ್ಪಯತಿ॥ ನ ಕೇವಲಂ ತೃಪ್ತ್ಯರ್ಥಮೇವ ದೇವತಾಯಾಃ ಸಾಕ್ಷಾತ್ಕಾರಃ ಕಿಂತು ಪ್ರತ್ಯಕ್ಷಾತ್ಪ್ರತ್ಯ-**

ಕ್ಷೇಣೈವ ದೇವತಾಂ ಯಜತಿ ಯಾಗಕಾಲೇ ಪ್ರತ್ಯಕ್ಷೇಣ ಪಶ್ಯತೀತ್ಯರ್ಥಃ ॥ ನನು ದೇವತಾ ಚಕ್ಷುಷಾ ನ ದೃಶ್ಯತೇ ಕಥಮಸ್ಯಾಃ ಪ್ರತ್ಯಕ್ಷತ್ವಮಿತಿ ಚೇತ್ ॥ ನಾಯಂ ದೋಷಃ । ಮಾನಸ-ಪ್ರತ್ಯಕ್ಷಸ್ಯ ವಿವಕ್ಷಿತತ್ವಾತ್ ॥ ಯಥಾ ಪುರೋವರ್ತಿನೀ ದೇವತಾ ಚಕ್ಷುಷಾ ದೃಶ್ಯತೇ ತಥೈವ ಚಿಂತ್ಯಮಾನಾಪಿ ಮನಸಾ ದೃಶ್ಯತ ಏವ ॥

ಹೋತೃವು ಪಠಿಸುವ ವಷಟ್ಕಾರಕಾಲದಲ್ಲಿ ದೇವತೆಯನ್ನು ಧ್ಯಾನಿಸುತ್ತಾ ಅದನ್ನು ಮಾಡಬೇಕೆಂಬ ವಿಷಯವನ್ನು ವಿವರಿಸುವರು—ಹೋತೃವು ವಷಟ್ಕಾರವನ್ನು ಪಠಿಸುವಾಗ ಅನುಸರಿಸಬೇಕಾದ ಕೆಲವು ನಿಯಮಗಳಿರುವವು. ಅವುಗಳನ್ನು ತಪ್ಪದೆ ಪಾಲಿಸಬೇಕು. ಇಲ್ಲದಿದ್ದರೆ ಹರಿತವಾದ ಆಯುಧಪ್ರಯೋಗದಿಂದ ಅಪಾಯವು ಸಂಭವಿಸುವಂತೆ ವಷಟ್ಕಾರಪ್ರಯೋಗದಿಂದ ಅನಿಷ್ಟವು ಸಂಭವಿಸುವುದು.

ಹೋತೃವು ಯಾವ ದೇವತೆಯನ್ನು ದ್ವೇಶಿಸಿ ವಷಟ್ಕಾರದಿಂದ ಹೋಮಮಾಡುವನೋ ಆ ದೇವತೆಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಂತ್ರೋಚ್ಚಾರಣೆ ಮಾಡಿ ವಷಟ್ಕಾರದಿಂದ ಹೋಮಮಾಡಬೇಕು. ಹೀಗೆ ಮಾಡಿದರೆ ದೇವತೆಯನ್ನು ಪ್ರತ್ಯಕ್ಷವಾಗುವಂತೆ ಸಾಕ್ಷಾತ್ಕರಿಸಿ ತೃಪ್ತಿಪಡಿಸಿದಂತಾಗುವುದು. ದೇವತೆಗಳನ್ನು ಪ್ರತ್ಯಕ್ಷವಾಗಿ ನೋಡುವುದನ್ನು ಎಂದರೆ ಸಾಕ್ಷಾತ್ಕರಿಸುವುದು ಸಾಧ್ಯವೇ ಎಂದರೆ ಪ್ರತ್ಯಕ್ಷವಾಗಿ ಕಣ್ಣುಗಳಿಂದ ನೋಡುವುದು ಸಾಧ್ಯವಿಲ್ಲ. ಆದರೆ ಮನಸ್ಸಿನಲ್ಲಿ ಧ್ಯಾನಿಸುವುದರಿಂದ ಆ ದೇವತೆಯು ತನ್ನ ಎದುರಿಗೆ ಪ್ರತ್ಯಕ್ಷವಾಗಿರುವಂತೆ ಮನಸ್ಸಿನಲ್ಲಿ ಭಾವಿಸಬಹುದು. ಇದನ್ನೇ ಪ್ರತ್ಯಕ್ಷವೆಂದು ಹೇಳಬಹುದು.

ವಜ್ರೋ ವೈ ವಷಟ್ಕಾರಃ ಸ ಏಷ ಪ್ರಹೃತೋಽಶಾಂತೋ ದೀದಾಯ ತಸ್ಯ ಹೈತಸ್ಯ ನ ಸರ್ವ ಇವ ಶಾಂತಿಂ ವೇದ ನ ಪ್ರತಿಷ್ಠಾಂ ತಸ್ಮಾದ್ಧಾಪ್ಯೇತರ್ಹಿ ಭೂಯಾನಿವ ಮೃತ್ಯುಸ್ತಸ್ಯ ಹೈಷೈವ ಶಾಂತಿರೇಷಾ ಪ್ರತಿಷ್ಠಾ ವಾಗಿತ್ಯೇವ ತಸ್ಮಾದ್ವಷಟ್ಕೃತ್ಯ ವಷಟ್ಕೃತ್ಯ ವಾಗಿತ್ಯನುಮಂತ್ರಯೇತ ಸ ಏನಂ ಶಾಂತೋ ನ ಹಿನಸ್ತಿ ॥

ಹೋತುರ್ವಷಟ್ಕಾರಾದೂರ್ಧ್ವಮನುಮಂತ್ರಣಂ ವಿಧತ್ತೇ— ವಷಟ್ಕಾರಸ್ಯ ವಜ್ರತ್ವ-ಮಸಕೃದುಕ್ತಂ ॥ ಸ ಏವ ವಷಟ್ಕಾರಾತ್ಮಕೋ ವಜ್ರಃ ಪರಸ್ಯೋಪರಿ ಪ್ರಹೃತಃ ಸನ್ನಶಾಂತ ಉಗ್ರೋ ದೀದಾಯ ದೀಪ್ಯತೇ ॥ ತಸ್ಯ ವಜ್ರಸ್ಯ ಶಾಂತಿಮುಪಶಮಪ್ರಕಾರಂ ಸರ್ವ ಇವ ಸರ್ವೋಽಪಿ ಪುರುಷೋ ನ ವೇದ ॥ ಉಪದ್ರವಶಾಂತೇರೂರ್ಧ್ವಂ ವಷಟ್ಕಾರಸ್ಯೋಗ್ರತ್ವಪರಿಹಾ-ರೇಣ ಕ್ವಚಿದವಸ್ಥಾನಂ ಪ್ರತಿಷ್ಠಾ ತಾಮಪಿ ಸರ್ವೋ ನ ವೇದ ॥ ತಸ್ಮಾಚ್ಛಾಂತಿಪ್ರತಿಷ್ಠಾ-ಜ್ಞಾನಾಭಾವಾದೇತರ್ಹ್ಯಪೀದಾನೀಮಪಿ ಲೋಕೇ ಮೃತ್ಯುರ್ಭೂಯಾನಿವ ಬಹುಭೂತ ಏವ ಪ್ರವರ್ತತೇ ॥ ತಸ್ಯ ತಾದೃಶವಷಟ್ಕಾರವಜ್ರಸ್ಯೈಷೈವ ವಕ್ಷ್ಯಮಾಣಾ ಶಾಂತಿಃ ಶಮನೋ-ಪಾಯಃ ॥ ತಥೈಷಾ ವಕ್ಷ್ಯಮಾಣೈವ ಪ್ರತಿಷ್ಠಾ ಪರೋಪದ್ರವರಹಿತಾಽವಸ್ಥಿತಿಃ ॥ ವಾಗಿತ್ಯೇವೇ-ತ್ಯನೇನ ಸಾಽಭಿಧೀಯತೇ ॥ ಉಪರಿಷ್ಟಾದ್ವಕ್ಷ್ಯಮಾಣಸ್ಯ ಮಂತ್ರಸ್ಯ ಸ್ಮರಣಮಿದಂ ॥ ವಾಗೋ-ಜ ಇತ್ಯಾದಿಕೋ ಯೋ ಮಂತ್ರಃ ಸ ಏವಶಮನೋಪಾಯೋ ನ ತ್ವನ್ಯಃ ಕಶ್ಚಿದಸ್ತಿ॥ ತಸ್ಮಾದ್ವಷ

**ಟ್ಕೃತ್ಯ ವಷಟ್ಕೃತ್ಯ ಯದಾ ಯದಾ ವಷಟ್ಕರೋತಿ ತದಾ ತದಾ ವಾಗಿತಿ ಮಂತ್ರೇಣಾನು ಮಂತ್ರಯೇತ ॥ ಸ ವಜ್ರಸ್ತಾವತಾ ಶಾಂತ ಏನಂ ನ ಹಿನಸ್ತಿ । ಅಯಮೇಕಃ ಪಕ್ಷಃ ॥**

ವಷಟ್ಕಾರವು ವಜ್ರಾಯುಧದಂತೆ ತೀಕ್ಷ್ಣವಾದುದೆಂದೂ ಅದನ್ನು ಸರಿಯಾಗಿ ಉಪಯೋಗಿಸದಿದ್ದರೆ ಹಾನಿಯು ತಟ್ಟುವುದೆಂದೂ ಹಿಂದೆಯೇ ಹೇಳಿದೆಯಷ್ಟೆ. ಇದರ ಉಪಯೋಗವನ್ನು ಎಲ್ಲರೂ ತಿಳಿದಿರುವುದಿಲ್ಲ. ಇದರ ಕ್ರಮವನ್ನು ತಿಳಿಯದೆ ಮನಸ್ವಿಯಾಗಿ ಉಪಯೋಗಿಸುವುದರಿಂದ ಯುದ್ಧಗಳಲ್ಲಿ ಅನೇಕರು ಮೃತ್ಯುವಶರಾಗುವಂತೆ ಇಲ್ಲಿಯೂ ವಷಟ್ಕಾರ ಮಂತ್ರದ ಅಪಪ್ರಯೋಗದಿಂದ ಅನೇಕರಿಗೆ ಹಾನಿಯು ತಟ್ಟಬಹುದು. ಆದುದರಿಂದ ಇದರ ಶಾಂತ್ಯರ್ಥವಾಗಿ **ವಾಗೋಜಃ** ಎಂಬ ಮಂತ್ರವನ್ನು ಪಠಿಸಬೇಕು. ಈ ಮಂತ್ರವನ್ನು ಉಚ್ಚರಿಸುವುದರಿಂದ ವಷಟ್ಕಾರದ ಅಪಪ್ರಯೋಗದಿಂದುಂಟಾಗಬಹುದಾದ ಅನಿಷ್ಟವು ಪರಿಹಾರವಾಗುವುದು. ಅನಿಷ್ಟ ಪರಿಹಾರಕ್ಕೆ ಇದಲ್ಲದೆ ಬೇರೆ ಉಪಾಯವಿಲ್ಲ. ಆದ್ದರಿಂದ ಯಜ್ಞಮಾಡುವ ಕಾಲದಲ್ಲಿ ಪ್ರತಿಯೊಂದು ಸಲ ವಷಟ್ಕಾರಾನಂತರದಲ್ಲಿಯೂ **ವಾಗೋಜಃ** ಎಂಬ ಮಂತ್ರವನ್ನು ಉಚ್ಚರಿಸಬೇಕು. ಹೀಗೆ ಮಾಡುತ್ತಿದ್ದರೆ ವಜ್ರರೂಪವಾದ ವಷಟ್ಕಾರದಿಂದ ಯಾವ ಕೆಡಕೂ ಆಗುವುದಿಲ್ಲ. ಈರೀತಿ ಹೇಳುವುದು ಕೆಲವರ ಮತವು. ಇನ್ನು ಕೆಲವರು ಬೇರೆ ವಿಧವಾಗಿ ಹೇಳುವರು.

**ವಷಟ್ಕಾರ ಮಾ ಮಾಂ ಪ್ರಮೃಕ್ಷೋ ಮಾಽಹಂ ತ್ವಾಂ ಪ್ರಮೃಕ್ಷಂ ಬೃಹತಾ ಮನ ಉಪಹ್ವಯೇ ವ್ಯಾನೇನ ಶರೀರಂ ಪ್ರತಿಷ್ಠಾಸಿ ಪ್ರತಿಷ್ಠಾಂ ಗಚ್ಛ ಪ್ರತಿಷ್ಠಾಂ ಮಾ ಗಮಯೇತಿ ವಷಟ್ಕಾರಮ-ನುಮಂತ್ರಯೇತ ॥**

ಪಕ್ಷಾಂತರಮಭಿಪ್ರೇತ್ಯಾನ್ಯೇನ ಮಂತ್ರೇಣಾನುಮಂತ್ರಣಂ ವಿಧತ್ತೇ—ಹೇ ವಷಟ್ಕಾರ ವಜ್ರರೂಪ ಮಾಂ ಯಜಮಾನಂ ಮಾ ಪ್ರಮೃಕ್ಷಃ ಪ್ರಮೃಷ್ಟಂ ವಿನಷ್ಟಂ ಮಾ ಕಾರ್ಷೀಃ ॥ ಅಹಮಪಿ ತ್ವಾಂ ಮಾ ಪ್ರಮೃಕ್ಷಂ ವಿನಷ್ಟಿಂ ಮಾ ಕಾರ್ಷಂ ॥ ಬೃಹತಾ ಪ್ರೌಢೇನ ಯಜ್ಞೇನ ಮನಸ್ತ್ವದೀಯಮುಪಹ್ವಯೇಽನುಜಾನಾಮಿ ॥ ಯಥಾ ವ್ಯಾನೇನ ವ್ಯಾನಾದಿವಾಯುನಾ ಸಹ ತ್ವದೀಯಂ ಶರೀರಮನುಜಾನಾಮಿ ॥ ಅತಸ್ತ್ವಂ ಸರ್ವಸ್ಯ ಪ್ರಾಣಿಸಂಘಸ್ಯ ಪ್ರತಿಷ್ಠಾಽಽಶ್ರ-ಯೋಸಿ ॥ ತದರ್ಥಂ ತ್ವಮಪಿ ಪ್ರತಿಷ್ಠಾಂ ಸ್ಥೈರ್ಯೇಣಾವಸ್ಥಿತಂ ಗಚ್ಛ ॥ ತತೋ ಮಾಮಪಿ ಪ್ರತಿಷ್ಠಾಂ ಸ್ಥೈರ್ಯೇಣಾವಸ್ಥಿತಿಂ ಪ್ರಾಪಯೇತ್ಯನೇನಾನುಮಂತ್ರೇಣಾನುಮಂತ್ರಯೇತ ॥

ಯಜ್ಞಮಾಡುವ ಯಜಮಾನನು ಅನುಮಂತ್ರಣವನ್ನು (ಶಾಂತಿಯನ್ನು) ಕುರಿತು ಈರೀತಿ ಹೇಳಬೇಕು—ಎಲೈ ವಷಟ್ಕಾರವೇ, ನೀನು ಯಜ್ಞಮಾಡುತ್ತಿರುವ ನನ್ನನ್ನು ಆಚೆಗೆ ತಳ್ಳಿ ನಾಶಮಾಡಬೇಡ. ನಾನೂ ನಿನ್ನನ್ನು ನೂಕುವುದಿಲ್ಲ. ನಾನು ಈ ಮಹಾ ಯಜ್ಞಕರ್ಮದಿಂದ ನಿನ್ನ ಮನಸ್ಸನ್ನು ಒಲಿಸಿಕೊಳ್ಳುತ್ತೇನೆ. ವ್ಯಾನಾದಿವಾಯುಗಳಿಂದ ನಿನ್ನ ಶರೀರವನ್ನು ವ್ಯಾಪಿಸಿ ನಿನ್ನೊಡನೆ ಸಹಕರಿಸುತ್ತೇನೆ. ನೀನು ಸಮಸ್ತ ಪ್ರಾಣಿಸಮೂಹಕ್ಕೂ ಆಶ್ರಯಭೂತನಾಗಿರುವೆ. ಆದ್ದರಿಂದ ನೀನು ನಿನ್ನ ಶ್ರೇಷ್ಠವಾದ ಸ್ವಸ್ಥಾನಕ್ಕೆ ತೆರಳು. ನಾನೂ ನನ್ನ ಸ್ವಸ್ಥಾನಕ್ಕೆ ಹೋಗುವಂತೆ ಅನುಗ್ರಹಿಸು ಎಂದು ಯಜಮಾನನು ಪ್ರಾರ್ಥಿಸಬೇಕು.

**ತದು ಹ ಸ್ಮಾಹ ದೀರ್ಘಮೇತತ್ಸದಪ್ರಭ್ವೋಜಃ ಸಹ ಓಜಃ ।**

ತಮಿಮಂ ದ್ವಿತೀಯಪಕ್ಷಂ ನಿಂದಿತ್ವಾ ಮಂತ್ರಾಂತರಂ ದರ್ಶಯತಿ—ತದು ಹ ತತ್ರೈವಾನುಮಂತ್ರಣೇ ಬ್ರಹ್ಮವಾದೀ ಕಶ್ಚಿದಾಹ ಸ್ಮ ॥ ಕಿಮಾಹೇತಿ ತದುಚ್ಯತೇ॥ ಏತತ್ಪೂರ್ವೋಕ್ತಂ ಮಂತ್ರವಾಕ್ಯಂ ದೀರ್ಘಂ ಸದಪಿ ವಜ್ರಂ ಶಮಯಿತುಮಪ್ರಭು ನ ಕ್ಷಮಂ॥ ಕೋಽಸೌಕ್ಷಮೋಮಂತ್ರ ಇತಿ ಸ ಉಚ್ಯತೇ॥ ಓಜಃ ಸಹ ಓಜ ಇತಿ ಪದತ್ರಯಾತ್ಮಕೋ ಮಂತ್ರಃ। ಮಂತ್ರಾರ್ಥಂ ಶ್ರುತಿರೇವ ವ್ಯಾಖ್ಯಾಸ್ಯತಿ ॥

ಬ್ರಹ್ಮವಾದಿಗಳಾದ ಕೆಲವರು ಹೀಗೆ ಹೇಳುವರು— ಈ ಮಂತ್ರವು ಬಹು ದೀರ್ಘವಾಗಿರುವುದು. ಆದ್ದರಿಂದ ಇದನ್ನು ಪಠಿಸುವುದು ತುಂಬಾ ಶ್ರಮವು. ಅದಲ್ಲದೆ ಇದು ವಜ್ರರೂಪವಾದ ವಷಟ್ಕಾರವನ್ನು ಶಮನಗೊಳಿಸುವುದೋ ಇಲ್ಲವೋ? ಆದ್ದರಿಂದ ಚಿಕ್ಕದಾಗಿಯೂ ವಷಟ್ಕಾರವನ್ನು ಶಮನಗೊಳಿಸುವುದೂ ಆದ ಓಜಃ ಸಹ ಓಜಃ ಎಂಬ ಮಂತ್ರವನ್ನು ಪಠಿಸಬಹುದು.

**ಇತ್ಯೇವ ವಷಟ್ಕಾರಮನುಮಂತ್ರಯೇತ ಓಜಶ್ಚ ಹ ವೈ ಸಹಶ್ಚ ವಷಟ್ಕಾರಸ್ಯ ಪ್ರಿಯತಮೇ ತನ್ವೌ ಪ್ರಿಯೇಣೈವೈನಂ ತದ್ಧಾಮ್ನಾ ಸಮರ್ಧಯತಿ ಪ್ರಿಯೇಣ ಧಾಮ್ನಾ ಸಮೃಧ್ಯತೇ ಯ ಏವಂ ವೇದ ॥**

ತೇನ ಮಂತ್ರೇಣಾನುಮಂತ್ರಣಂ ವಿಧತ್ತೇ— ಏವಕಾರಃ ಪೂರ್ವಮಂತ್ರವ್ಯಾವೃತ್ತ್ಯರ್ಥಃ॥ ಮಂತ್ರಪದಯೋರರ್ಥಂ ದರ್ಶಯತಿ—ಸ್ಪಷ್ಟೋಽರ್ಥಃ ॥ ಅನೇನ ಮಂತ್ರೇಣೋಗ್ರತ್ವಶಾಂತಿಂ ದರ್ಶಯತಿ— ಪ್ರಿಯತಮಯೋಃ ಶರೀರಯೋರ್ನಾಮಗ್ರಹಣೇ ಸತಿ ವಷಟ್ಕಾರಸ್ಯೋಗ್ರತ್ವರೂಪಃ ಕೋಪೋ ಗಚ್ಛತಿ ॥ ತತ ಏನಂ ವಷಟ್ಕಾರಃ ಪ್ರಿಯೇಣ ಧಾಮ್ನಾ ಸರ್ವಭೂತಾನಾಮನುಪದ್ರವಕಾರಿಣಾ ಪ್ರಿಯೇಣ ಸ್ವರೂಪೇಣ ಸಮೃದ್ಧಂ ಕರೋತಿ ॥ ಅತ್ರ ಮಂತ್ರಗತೋ ದ್ವಿತೀಯ ಓಜಃಶಬ್ದ ಆದರಾರ್ಥ ಇತ್ಯಭಿಪ್ರಾಯಃ ॥ ವೇದನಂ ಪ್ರಶಂಸತಿ—

ಈ ಮಂತ್ರದಲ್ಲಿ ಮೂರು ಶಬ್ದಗಳು ಮಾತ್ರ ಇರುವವು. ಓಜಃ ಎಂದರೆ ಸಾಮರ್ಥ್ಯವು. ಸಹಃ ಎಂದರೆ ಬಲವು. ಇವೆರಡೂ ವಷಟ್ಕಾರದ ಪ್ರಿಯಶರೀರಗಳೆಂದು ಹೇಳಲ್ಪಡುವವು. ಹೀಗೆ ವಷಟ್ಕಾರಕ್ಕೆ ಪ್ರೀತಿಪಾತ್ರವಾದ ಶರೀರವನ್ನು ಉಚ್ಚರಿಸುವುದರಿಂದ ವಷಟ್ಕಾರಕ್ಕೆ ಮಂತ್ರನ್ಯೂನತೆ ಮೊದಲಾದವುಗಳಿಂದ ಸಂಭವಿಸುವ ಕೋಪಾದಿಗಳು ಶಮನವಾಗಿ ಯಜಮಾನನಿಗೆ ಹಿತವನ್ನುಂಟುಮಾಡುವುದು. ಮಂತ್ರದಲ್ಲಿರುವ ಮೂರನೇ ಪದವಾದ ಓಜಃ ಎಂಬ ಶಬ್ದವು ಆದರಾರ್ಥವಾಗಿ ಪುನಃ ಪ್ರಯುಕ್ತವಾಗಿದೆ. ಇದಕ್ಕೆ ಪ್ರತ್ಯೇಕ ಅರ್ಥವೇನೂ ಇರುವುದಿಲ್ಲ. ಈ ವಿಷಯವನ್ನು ಯಾವ ಪುರುಷನು ಅರಿತಿರುವನೊ ಅವನಿಗೆ ವಷಟ್ಕಾರವು ಸಮೃದ್ಧಿಯನ್ನುಂಟುಮಾಡುವುದು.

**ವಾಕ್ಚ ವೈ ಪ್ರಾಣಾಪಾನೌ ಚ ವಷಟ್ಕಾರಸ್ತ ಏತೇ ವಷಟ್ಕೃತೇ ವಷಟ್ಕೃತೇ ವ್ಯುತ್ಕ್ರಾಮಂತಿ ತಾನನುಮಂತ್ರಯೇತ ವಾಗೋಜಃ**

**ಸಹ ಓಜೋ ಮಯಿ ಪ್ರಾಣಾಪಾನಾವಿತ್ಯಾತ್ಮನ್ಯೇವ ತದ್ಧೋತಾ ವಾಚಂ ಚ ಪ್ರಾಣಾಪಾನೌ ಚ ಪ್ರತಿಷ್ಠಾಪಯತಿ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥**

ಅಥಪ್ರಿಯಶರೀರದ್ವಯವಾಚಕಾಭ್ಯಾಂ ಪದಾಭ್ಯಾಂ ಸಹಿತಮಾದೌ ವಿಹಿತಂ ಮಂತ್ರ-ಮೇವ ಸಿದ್ಧಾಂತಯತಿ— ಯೇಯಂ ವಾಗಸ್ತಿ ಯೌ ಚ ಪ್ರಾಣಾಪಾನೌ ಸ್ತಸ್ತೇ ತ್ರಯೋ ವಷಟ್ಕಾರಸ್ವರೂಪಂ ॥ ಯದಾ ಯದಾ ಹೋತಾ ವಷಟ್ಕರೋತಿ ತದಾ ತದಾ ವಷಟ್ಕಾರರೂಪಾ ಹೋತುರ್ವಾಕ್ಪ್ರಾಣಾಪಾನಾಃ ಶರೀರಾದುತ್ಕ್ರಮಂತ್ಯತಸ್ತನ್ಮಾ ಭೂದಿತಿ ತಾಂಸ್ತ್ರೀನ್ವಾಗಿತ್ಯಾ-ದಿನಾ ಪ್ರಾಣಾಪಾನಾವಿತ್ಯಂತೇನ ಮಂತ್ರೇಣಾನುಮಂತ್ರಯೇತ ॥ ಮಂತ್ರಸ್ಯಾಯಮರ್ಥಃ ॥ ಓಜಃ ಸಹ ಇತ್ಯಾಭ್ಯಾಂ ಪ್ರಿಯಶರೀರಾಭ್ಯಾಮುಪೇತ ಹೇ ವಷಟ್ಕಾರ ತ್ವತ್ಪ್ರಸಾದಾನ್ಮ-ಯ್ಯೋಜೋ ಬಲಮಸ್ತು । ತಥಾ ವಾಕ್ಪ್ರಾಣಾಪಾನಾಃ ಸುಖೇನ ತಿಷ್ಠಂತ್ವಿತಿ ॥ ಅನೇನ ಮಂತ್ರೇಣ ಹೋತಾ ಸ್ವಾತ್ಮನ್ಯೇವ ವಾಚಂ ಚ ಪ್ರಾಣಾಪಾನೌ ಸ್ಥಾಪಯತಿ ॥ ತಾವತಾ ಸ್ವಯಂ ಸರ್ವಾಯುಃ ಶತಸಂವತ್ಸರಪರಿಮಿತೇನಾಽಽಯುಷಾ ಯುಕ್ತೋ ಭವತಿ ॥ ಏತಚ್ಚ ಯಜ-ಮಾನಸ್ಯ ಸರ್ವಾಯುಷ್ಟ್ವಾಯ ಸಂಪದ್ಯತೇ ॥ ಪೂರ್ವತ್ರ ವಷಟ್ಕೃತ್ಯ ವಾಗಿತ್ಯನುಮಂತ್ರ-ಯೇತೇತಿ ವಷಟ್ಕಾರಾನುಮಂತ್ರಣಯೋರೇಕಕರ್ತೃಕತ್ವಮುಕ್ತಂ ॥ ಅತ್ರಾಪ್ಯಾತ್ಮನ್ಯೇವ ತದ್ಧೋತೇತಿ ಬ್ರಾಹ್ಮಣೇ ಹೋತೃಕರ್ತೃಕತ್ವಂ ಪ್ರತೀಯತೇ । ತತೋಽನುಮಂತ್ರಣಸ್ಯ ಯಜಮಾನಕರ್ತೃಕತ್ವಮನ್ಯೈರುಕ್ತಂ ಬಾಧಿತ್ವಾ ಹೋತೃಕರ್ತೃಕತ್ವಮೇವ ದ್ರಷ್ಟವ್ಯಂ ವೇದನಂ ಪ್ರಶಂಸತಿ ॥ ಇತಿ ।

ವಾಕ್ಕು, ಪ್ರಾಣ (ಉಚ್ಛ್ವಾಸ) ಅಪಾನ (ನಿಃಶ್ವಾಸ) ಎಂಬಿವೇ ವಷಟ್ಕಾರದ ಸ್ವರೂಪವು. ಹೋತೃವು ಮಂತ್ರಾಂತ್ಯದಲ್ಲಿ ವಷಟ್ಕಾರವನ್ನು ಉಚ್ಚರಿಸಿದಾಗಲೆಲ್ಲಾ ಈ ವಾಕ್ಕು, ಪ್ರಾಣ, ಅಪಾನಗಳು ಹೋತೃವಿನ ಶರೀರದಿಂದ ಹೊರಕ್ಕೆ ಹೊರಟು ಹೋಗುವವು. ಹಾಗೆ ಆಗದಿರುವುದಕ್ಕಾಗಿಯೇ ಇವುಗಳನ್ನು ಅನುಮಂತ್ರಣದಲ್ಲಿ ಸೇರಿಸಬೇಕು. ವಾಗೋಜಃ ಸಹ ಓಜೋ ಮಯಿ ಪ್ರಾಣಾಪಾನೌ ಎಂಬುದೇ ಆ ಅನುಮಂತ್ರಣವು. ಇದರ ಅರ್ಥವು— ಸಾಮರ್ಥ್ಯ ಮತ್ತು ಬಲಗಳೆಂಬ ಎರಡು ಪ್ರಿಯ ಶರೀರಾತ್ಮಕವಾದ ಎಲೈ ವಷಟ್ಕಾರವೇ, ನಿನ್ನ ಅನುಗ್ರಹದಿಂದ ಸಾಮರ್ಥ್ಯ ಮತ್ತು ಬಲಗಳು ನನ್ನಲ್ಲಿ ನೆಲಸಿರಲಿ. ಮತ್ತು ವಾಕ್, ಪ್ರಾಣ, ಅಪಾನಗಳೂ ಸಹ ನನ್ನ ಶರೀರದಿಂದ ಹೊರಟುಹೋಗದೆ ನನ್ನಲ್ಲಿ ಸ್ಥಿರವಾಗಿರಲಿ ಎಂಬರ್ಥವುಳ್ಳ ಈ ಮಂತ್ರವನ್ನು ಪಠಿಸುವುದರಿಂದ ಹೋತೃವು ಪ್ರಾಣಾಪಾನಗಳನ್ನು ಹೊರಕ್ಕೆ ಹೋಗದಂತೆ ತಡೆದು ತನ್ನಲ್ಲಿ ನಿಲ್ಲಿಸಿರಲು ಸಮರ್ಥನಾಗುವನು. ಮತ್ತು ಈ ಕಾರಣದಿಂದ ತನಗೆ ನಿರ್ದಿಷ್ಟವಾದ (ನೂರುವರ್ಷಗಳವರೆಗೆ) ಪೂರ್ಣಾಯುಸ್ಸನ್ನು ಪಡೆಯುವನು. ಈ ವಿಷಯವನ್ನು ಅರಿತಿರುವ ಪುರುಷನೂ ಸಹ ಪೂರ್ಣಾಯುಸ್ಸನ್ನು ಪಡೆದು ಸುಖಿಸುವನು.



*English Translation*

**(The danger which might be imminent upon the Hotar and sacrificer, in consequence of the Vashatkara weapon, is to be averted by certain formulas.)**

The Hotar ought to think of the deity to whom the oblation is given when he is about to repeat the Vashatkara. Thus he pleases the deity personally, and addresses the Yajya mantra direct to it.

The Vashatkara is a weapon. The weapon is like a flash when one strikes with it without having conjured its evil effects. Not every one knows how to conjure it, nor its (proper) place. Therefore the mantra vag ajah(As'v. S'r S 1, 5) is at such occasions, when even many are killed (as is the case in a battle), the propitiation, and the assignation of the proper place. (after the Vashatkara). For this reason the Hotar has, after every Vashatkara, to repeat the Anumantrana formula, vag ajah. If thus propitiated the Vashatkara does not hurt the sacrificer.

The sacrificer ought to repeat this Anumantrana formula : " O Vashatkara do not sweep me away, I will not sweep thee away. I call hither (thy) mind with great effort, thou art a shelter (having joined thy) body with the air circulating (in my body). Go to (thy) place, let me go to (my) place."

Some one (a theologian) has said : this (just mentioned anumantranam) is too long and has no effect. (Instead of it) the sacrificer ought to repeat after the Voshatkara the words, ojah saha ojah. Ojah (vigour) and shah (strength) are the two most beloved bodies (forms) of the Vashatkara. By making him repeat this Anumantrana formula he this makes the sacrificer prosper through (The Vashatkara's) own nature. He who has such a knowledge prospers through the Vashatkara's own nature.

The Vashatkara is speech, and prana (air inhaled) and apana (air exnaled). These (three) leave as often as a Vashatkara is repeated. (But that ought to be prevented ; thence) he ought to include them (their names) in the Anumantrana formula. (this is done by repeating the following formula) Vag ojag saha oji mayi pranapanau i. e., May speech, vigour, strength and the prana and apana (be) in me ! Thus the Hotar puts speech, prana and apana in himself (he prevents them from going), reaches his full age. He who has such a knowledge reaches his full age.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ**
**ಐತರೇಯಬ್ರಾಹ್ಮಣಭಾಷ್ಯಸ್ಯ ಏಕಾದಶಾಧ್ಯಾಯೇ ಅಷ್ಟಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.**

# ಅಥ ಏಕಾದಶಾಧ್ಯಾಯೇ ನವಮಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು



[ಪ್ರೈಷ, ಪುರೋರುಕ್, ವೇದಿ, ನಿವಿತ್, ಗ್ರಹ ಎಂಬ ಶಬ್ದಗಳ ರೂಪನಿಷ್ಪತ್ತಿಯು ಮತ್ತು ಅವುಗಳ ವಿವರಣೆ ಇತ್ಯಾದಿ]

**ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಂ ಪ್ರೈಷೈಃ ಪ್ರೈಷಮೈಚ್ಛ-
ನ್ಯತ್ಪ್ರೈಷೈಃ ಪ್ರೈಷಮೈಚ್ಛಂಸ್ತತ್ಪ್ರೈಷಾಣಾಂ ಪ್ರೈಷತ್ವಂ ॥**

**ಅಥ ಪ್ರೈಷಾದೀನಾಂ ಪ್ರಶಂಸಾಂ ವಿವಕ್ಷುರಾದೌ ಪ್ರೈಷಾನ್ಪ್ರಶಂಸತಿ ॥ ಜ್ಯೋತಿ-ಷ್ಟೋಮಾಖ್ಯೋ ಯಜ್ಞೋ ಯದಾ ಕೇನಚಿನ್ನಿಮಿತ್ತೇನ ದೇವೇಭ್ಯ ಉದಕ್ರಾಮತ್ತದಾನೀಂ ಉತ್ಕ್ರಾಂತಂ ಯಜ್ಞಂ ಪ್ರೈಷೈರ್ಹೋತಾ ಯಕ್ಷದಗ್ನಿಂ ಸಮಿಧೇತ್ಯೇವಮಾದ್ಯೈಃ ಪ್ರೈಷ-ಮಂತ್ರೈಸ್ತಸ್ಯ ಯಜ್ಞಸ್ಯ ಪ್ರೈಷಮಾಹ್ವಾನಮೈಚ್ಛನ್ ॥ ಯಸ್ಮಾದೇವಂ ತಸ್ಮಾತ್ಪ್ರೈಷಯಂ-ತ್ಯಾಹ್ವಾನಂ ಕುರ್ವಂತ್ಯೇಭಿರಿತಿ ವ್ಯುತ್ಪತ್ತ್ಯಾ ಮಂತ್ರಾಣಾಂ ಪ್ರೈಷನಾಮ ಸಂಪನ್ನಂ ॥**

ಪೂರ್ವದಲ್ಲಿ ಎಂದರೆ ಒಂದಾನೊಂದು ಕಾಲದಲ್ಲಿ ಜ್ಯೋತಿಷ್ಟೋಮವೆಂಬ ಯಜ್ಞವು (ಅಥವಾ ಯಜ್ಞಪುರುಷನು) ಕಾರಣಾಂತರದಿಂದ ಅಸಮಾಧಾನಗೊಂಡು ದೇವತೆಗಳನ್ನು ಬಿಟ್ಟು ಎಲ್ಲಿಗೋ ಹೊರಟುಹೋಯಿತು. ಆಗ ದೇವತೆಗಳಿಗೆ ಬಹಳ ವ್ಯಸನವುಂಟಾಗಿ ಓಡಿಹೋಗಿದ್ದ ಯಜ್ಞವನ್ನು ಹುಡುಕಲು ಪ್ರಾರಂಭಿಸಿದರು. ಆಗ ಹೋತೃವು ಯಜ್ಞಕರ್ಮದಲ್ಲಿ ಆಹ್ವಾನ ಮಾಡುವ (ಪ್ರಾರ್ಥಿಸಿ ಕರೆಯುವ) **ಹೋತಾಯಕ್ಷದಗ್ನಿಂ ಸಮಿಧಾ** (ತೈ. ಬ್ರಾ. ೩-೬-೨-೧ ರಿಂದ ೧೨ ವರೆಗೆ) ಎಂಬ ಮಂತ್ರಗಳನ್ನು ಪಠಿಸುತ್ತಾ ಯಜ್ಞಪುರುಷನನ್ನು ಹುಡುಕಿ ಆಹ್ವಾನಮಾಡಲು ಪ್ರಾರಂಭಿಸಿದನು. **ಪ್ರೈಷಂ ಆಹ್ವಾನ ಮೈಚ್ಛನ್** ಪ್ರೈಷವೆಂದರೆ ಆಹ್ವಾನಪೂರ್ವಕವಾಗಿ ಹುಡುಕಿ ಪ್ರಾರ್ಥಿಸಿ ಕರೆದರು (ದೇವತೆಗಳು) ಎಂದು ಪ್ರೈಷಶಬ್ದಕ್ಕೆ ಅರ್ಥವು ಆದ್ದರಿಂದ ಯಜ್ಞದಲ್ಲಿ ಆಹ್ವಾನಪೂರ್ವಕವಾಗಿ ಪ್ರಾರ್ಥಿಸಿ ದೇವತೆಗಳನ್ನು ಕರೆಯಲು ಉಪಯೋಗಿಸುವ ಮಂತ್ರಕ್ಕೆ ಪ್ರೈಷವೆಂದು ಹೆಸರಾಯಿತು. ಇದೇ ಪ್ರೈಷಶಬ್ದಕ್ಕೆ ಪ್ರೈಷವೆಂದು ಹೆಸರುಬರಲು ಕಾರಣವು. ಈಗಲೂ ಯಜ್ಞದಲ್ಲಿ ಅಧ್ವರ್ಯುವು ಮತ್ತು ಮೈತ್ರಾವರುಣನೆಂಬ ಋತ್ವಿಜರು ನಾನಾ ಕರ್ಮಾಂಗಗಳಲ್ಲಿ ಪಠಿಸಬೇಕಾದ ಮಂತ್ರಗಳನ್ನು ಹೇಳುವಂತೆ ಹೋತೃವಿಗೆ ನಿರ್ದೇಶ ಮಾಡುವ ವಾಕ್ಯಕ್ಕೆ ಅಥವಾ ಮಂತ್ರಕ್ಕೆ ಪ್ರೈಷವೆಂದು ಹೆಸರು.

**ತಂ ಪುರೋರುಗ್ಭಿಃ ಪ್ರಾರೋಚಯನ್ಯತ್ಪುರೋರುಗ್ಭಿಃ ಪ್ರಾರೋಚ-
ಯಂಸ್ತತ್ಪುರೋರುಚಾಂ ಪುರೋರುಕ್ತ್ವಂ**

**ಅಥ ಪುರೋರುಚಃ ಪ್ರಶಂಸತಿ—ವಾಯುರಗ್ರೇ ಗಾ ಇತ್ಯಾದ್ಯಾಃ ಸಪ್ತ ಪುರೋರುಚಃ ॥ ಪ್ರಉಗತ್ಯೃಚಾನಾಂ ಸಪ್ತಾನಾಂ ಪ್ರರೋಚನಹೇತುತ್ವಾತ್ ॥ ತಥಾವಿಧಾಭಿಃ ಪುರೋರುಗ್ಭಿಸ್ತಂ**

ಪೂರ್ವಮಾಹೂತಂ ಯಜ್ಞಂ ದೇವಾಃ ಪ್ರಾರೋಚಯಂಸ್ತಸ್ಯ ಯಜ್ಞಸ್ಯ ರುಚಿಮುತ್ಪಾದಿತ-ವಂತಃ ॥ ಅತಃ ಪುರೋರೋಚನಾಹೇತುತ್ವಾತ್ಪುರೋರುಗಿತಿ ನಾಮ ಸಂಪನ್ನಂ ॥

ಈಗ ಪುರೋರುಕ್ ಎಂಬ ಶಬ್ದವನ್ನು ಪ್ರಶಂಸೆಮಾಡುವರು—ಯಜ್ಞಪುರುಷನನ್ನು ಹುಡುಕುವಾಗ ದೇವತೆಗಳು ತಮ್ಮ ಮುಂದುಗಡೆ ದೀಪವನ್ನು ಹಿಡಿದುಕೊಂಡು (ಪುರಃ ರೋಚಯತಿ ಪ್ರಕಾಶಯತಿ) ಹುಡುಕುತ್ತಿದ್ದುದರಿಂದ ಆ ಕಾರ್ಯಕ್ಕಾಗಿ ಉಪಯೋಗಿಸಿದ ಮಂತ್ರಗಳಿಗೆ ಪುರೋರುಕ್ ಎಂದು ಹೆಸರು. ಪ್ರಉಗಶಸ್ತ್ರದಲ್ಲಿ ಏಳು ತೃಚಗಳಿರುವರು. ಅವು ಯಾವ ವೆಂದರೆ—**ವಾಯುವಾಯಾಹಿ** ಮೊದಲಾದ ಮಂತ್ರಗಳು. ಈ ಮಂತ್ರಗಳನ್ನು ಪಠಿಸುವಾಗ ಪುರೋರುಕ್ (ಋಕ್ಕಿನ ಪೂರ್ವ ಭಾಗದಲ್ಲಿ ಪಠಿಸುವ) ಮಂತ್ರವನ್ನು **ವಾಯುವಾ ಯಾಹಿ** ಎಂಬ ತೃಚದ ಪೂರ್ವದಲ್ಲಿ ಪಠಿಸಬೇಕು. **ವಾಯುರಗ್ರೇಗಾಯಜ್ಞಪ್ರೀಃ** ಎಂಬುದೇ ಆ ಮೊದಲತೃಚದ ಪುರೋರುಕ್ ಮಂತ್ರವು. ಈರೀತಿ ಏಳು ತೃಚಗಳಿಗೂ ಬೇರೆಬೇರೆ ಪುರೋರುಕ್ ಮಂತ್ರಗಳಿರುವವು. (ಮಂತ್ರಗಳ ಆದಿಭಾಗದಲ್ಲಿ) ಪೂರ್ವದಲ್ಲಿ ಪ್ರಕಾಶಪಡಿಸುವುದರಿಂದ ಇವುಗಳಿಗೆ ಪುರೋರುಕ್ ಎಂಬ ಹೆಸರು ಬಂದಿತು. ಇವುಗಳನ್ನು ಯಾವಾಗಲೂ ಋಕ್ಕಿನ ಪ್ರಾರಂಭದಲ್ಲಿಯೇ ಪಠಿಸಬೇಕು.

ತಂ ವೇದ್ಯಾಮನ್ವವಿಂದನ್ಯದ್ವೇದ್ಯಾಮನ್ವವಿಂದಸ್ತದ್ವೇದೇರ್ವೇದಿತ್ವಂ ॥

ವೇದೇಃ ಪ್ರಶಂಸಾಮಾಹ—ತಂ ಪ್ರರೋಚಿತಂ ಯಜ್ಞಂ ಸೌಮಿಕ್ಯಾಂ ವೇದ್ಯಾಮನ್ವ-ವಿಂದನ್ನನುಕೂಲತ್ವೇನೋಪಲಬ್ಧವಂತಃ ॥ ಅತೋ ವೇದನಸ್ಯ ಲಾಭಸ್ಯ ಸ್ಥಾನತ್ವಾದ್ವೇದಿರಿತಿ ನಾಮ ಸಂಪನ್ನಂ ॥

ಯಜ್ಞವನ್ನು ಹುಡುಕುತ್ತಿದ್ದ ದೇವತೆಗಳು ಆ ಯಜ್ಞವನ್ನು ವೇದಿ ಎಂಬ ಯಜ್ಞಭೂಮಿಯಲ್ಲಿ ಕಂಡುಕೊಂಡರು. ಈ ವೇದಿ ಎಂಬ ಸ್ಥಳದಲ್ಲಿ ಈ ಯಜ್ಞವನ್ನು ಕಂಡು ಅದನ್ನು ಪಡೆದದ್ದರಿಂದ ಅದಕ್ಕೆ ವೇದಿ ಎಂಬ ಹೆಸರು ಬಂದಿತು. (ವಿದ್ ಹೊಂದು ಎಂಬ ಧಾತುವಿನಿಂದ ವೇದಿ ಎಂಬ ಶಬ್ದವು ನಿಷ್ಪನ್ನವಾಗಿದೆ.)

ತಂ ವಿತ್ತಂ ಗ್ರಹೈರ್ವ್ಯಗೃಹ್ಣತ ಯದ್ವಿತ್ತಂ ಗ್ರಹೈರ್ವ್ಯಗೃಹ್ಣತ ತದ್ಗ್ರ-ಹಾಣಾಂ ಗ್ರಹತ್ವಂ ।

ಗ್ರಹಪ್ರಶಂಸಾಮಾಹ-ವಿತ್ತಂ ಲಬ್ಧಂ ತಂ ಯಜ್ಞಂ ಗ್ರಹೈರುಪಾಂಶ್ವಂತರ್ಯಾಮಾದಿಭಿ-ರ್ವಿಶೇಷೇಣ ಸ್ವೀಕೃತವಂತಃ ॥ ತಸ್ಮಾದ್ಗ್ರಹಣಸ್ಯ ಸ್ವೀಕಾರಸ್ಯ ಹೇತುತ್ವಾದ್ಗ್ರಹ ನಾಮ ಸಂಪನ್ನಂ ॥

ವೇದಿಯಲ್ಲಿ ಪಡೆದುಕೊಂಡ ಯಜ್ಞವನ್ನು ಗ್ರಹ (ಸೋಮಪಾನ ಮಾಡುವ ಪಾತ್ರೆ)ಗಳಿಂದ ಹಿಡಿದುಕೊಂಡರು. ಗ್ರಹ ವೆಂದರೆ ಉಪಾಂಶು, ಅಂತರ್ಯಾಮ ಮೊದಲಾದ ಗ್ರಹ ಸೋಮಾಹುತಿಗಾಗಿಯೂ ಉಪಯೋಗಿಸುವ ಮರದ ಪಾತ್ರೆಗಳು. ಈ ಗ್ರಹಗಳ ಮೂಲಕ (ಎಂದರೆ ಈ ಗ್ರಹಗಳಲ್ಲಿ ಆಹುತಿಗಳನ್ನು ಅರ್ಪಿಸುವ ಮೂಲಕ) ದೇವತೆಗಳು ಯಜ್ಞವನ್ನು ಹಿಡಿದು ಕೊಂಡರು ಅಥವಾ ಸ್ವೀಕರಿಸುವರು. (ಗ್ರಹ ಎಂಬ ಶಬ್ದವು ಗೃಹ್ಣಾತಿಧಾತುವಿನಿಂದ ನಿಷ್ಪನ್ನವಾಗಿದೆ) ಆದ್ದರಿಂದ ಗ್ರಹಶಬ್ದಕ್ಕೆ ಈ ಹೆಸರು ಬರಲು ಕಾರಣವು.

**ತಂ ವಿತ್ತ್ವಾ ನಿವಿದ್ಭಿರ್ನ್ಯವೇದಯನ್ಯದ್ವಿತ್ತ್ವಾ ನಿವಿದ್ಭಿರ್ನ್ಯವೇದಯಂಸ್ತನ್ನಿವಿದಾಂ ನಿವಿತ್ತ್ವಂ ॥**

ನಿವಿದಾಂ ಪ್ರಶಂಸಾಮಾಹ—ತಂ ಯಜ್ಞಂ ವಿತ್ತ್ವಾ ಲಬ್ಧ್ವಾ ತೇ ದೇವಾಃ ಪರೇಭ್ಯೋ ದೇವೇಭ್ಯೋ ನಿವಿದ್ಭಿಃ ಪೂರ್ವೋಕ್ತದ್ವಾದಶಪದಾದಿರೂಪಾಭಿರ್ನ್ಯವೇದಯನ್ಕಥಿತವಂತಃ ॥ ತಸ್ಮಾನ್ನಿವೇದನಸ್ಯ ಪರಬೋಧನಾರ್ಥಕಥನಸ್ಯ ಹೇತುತ್ವಾನ್ನಿವಿನ್ನಾಮ ಸಂಪನ್ನಂ ॥

ಯಜ್ಞವನ್ನು ಕಂಡು ಅದನ್ನು ಪುನಃ ಪಡೆದಮೇಲೆ ಹೋತೃವು ಇತರ ದೇವತೆಗಳಿಗೆ ಈ ವಿಷಯವನ್ನು ತಿಳಿಸಿದನು. (ನಿವೇದಯತಿ–ತಿಳಿಸಿದನು). ಈ ನಿವಿನ್ಮಂತ್ರಗಳಲ್ಲಿ ಹನ್ನೆರಡು ಪದಗಳಿರುವವು. ಇವುಗಳನ್ನು ಹೋತೃ ಮೊದಲಾದ ಕೆಲವು ದೇವತೆಗಳು ಇತರ ದೇವತೆಗಳಿಗೆ ಇದನ್ನು ನಿವೇದಿಸಿದ್ದರಿಂದ (ತಿಳಿಸಿದ್ದರಿಂದ ನಿವಿತ್ ಶಬ್ದಕ್ಕೆ) ನಿವಿತ್ ಎಂಬ ಹೆಸರು ಬಂದಿತು.

**ಮಹದ್ವಾವ ನಷ್ಟೈಷ್ಯಭ್ಯಲ್ಪಂ ವೇಚ್ಛತಿ ಯತರೋ ವಾವ ತಯೋರ್ಜ್ಯಾಯ ಇವಾಭೀಚ್ಛತಿ ಸ ಏವ ತಯೋಃ ಸಾಧೀಯ ಇಚ್ಛತಿ ಯ ಉ ಏವ ಪ್ರೈತಾನ್ವರ್ಷೀಯಸೋ ವರ್ಷೀಯಸೋ ವೇದ ಸ ಉ ಏವ ತಾನ್ಸಾಧೀಯೋ ವೇದ ನಷ್ಟೈಷ್ಯಂ ಹ್ಯೇತದ್ಯತ್ಪ್ರೈಷಾಃ ॥**

ಅಥ ಪ್ರೈಷಕರ್ತುಃ ಪ್ರವೃದ್ಧತ್ವಗುಣವಿಧಾನಾರ್ಥಂ ಪ್ರಸ್ತೌತಿ—ನಷ್ಟಂ ವಸ್ತು ಪ್ರಯತ್ನೇನ ತತ್ರ ತತ್ರಾನ್ವಿಷ್ಯತೀತಿ ನಷ್ಟೈಷೀ ॥ ತಾದೃಶಃ ಪುರುಷೋ ದ್ವಿವಿಧಃ ॥ ತತ್ರ ಕಶ್ಚಿನ್ಮಹದ್ವಾವ ನಷ್ಟಾದ್ವಸ್ತುನೋಽಧಿಕಮೇವಾಭೀಚ್ಛತಿ ॥ ನಷ್ಟಾದಲ್ಪಂ ವಾನ್ಯಃ ಕಶ್ಚಿದಿಚ್ಛತಿ ॥ ತಯೋರ್ಮಧ್ಯೇ ಯತರೋ ವಾವ ಯ ಏವ ಪುರುಷೋ ಜ್ಯಾಯ ಇವ ಮಹದೇವೇಚ್ಛತಿ ಸ ಏವ ಪುರುಷಸ್ತಯೋರ್ಮಧ್ಯೇ ಸಾಧೀಯೋಽತ್ಯಂತಂ ಸಾಧು ವಸ್ತ್ವಿಚ್ಛತಿ ॥ ಅಲ್ಪಂ ಕಾಮಯಮಾನಸ್ತು ನ ತಥೇತ್ಯರ್ಥಃ ॥ ಅಸ್ತ್ವೇವಂ ಲೌಕಿಕನ್ಯಾಯಃ ಕಿಂ ಪ್ರಕೃತ ಇತ್ಯಾಶಂಕ್ಯಾಹ—ಯ ಉ ಏವ ಯಸ್ತು ಪ್ರೈಷವಕ್ತಾ ಪ್ರೈಷಮಂತ್ರಾನ್ವರ್ಷೀಯಸೋ ವರ್ಷೀಯಸೋಽತಿವೃದ್ಧಾನ್ವೇದ ॥ ಸರ್ವೇಷು ಪ್ರೈಷಮಂತ್ರೇಷು ಪ್ರವೃದ್ಧತ್ವಾರ್ಥಂ ವೀಪ್ಸಾ ಪ್ರಯುಕ್ತಾ ॥ ಪ್ರೈಷಮಂತ್ರಾಃ ಕಸ್ಮಾತ್ಪ್ರವೃದ್ಧಾ ಇತಿ ಚೇತ್, ಪುರೋನುವಾಕ್ಯಾನಾಂ ಸನ್ನಿಹಿತತ್ವಾತ್ತಾಭ್ಯೋಽಧಿಕಾನ್ವರ್ಷೀಯಸ ಇತ್ಯವಗಂತವ್ಯಂ ॥ ಸ ಉ ಏವ ದೀರ್ಘತ್ವಾಭಿಜ್ಞ ಏವ ತಾನ್ಪ್ರೈಷಮಂತ್ರಾನ್ಸಾಧೀಯೋ ವೇದಾತಿಶಯೇನ ಸಮ್ಯಗ್ವೇದ ॥ ನನು ಲೌಕಿಕನ್ಯಾಯೋದಾಹರಣೇ ನಷ್ಟವಸ್ತುನೋಽನ್ವೇಷಣಮುದಾಹೃತಂ ॥ ಇಹ ತು ಪ್ರೈಷಮಂತ್ರಾಣಾಮಭಿವೃದ್ಧಿರುಕ್ತೇತ್ಯತೋ ಲೌಕಿಕೇನಾಸಂಗತಮಿತಿ ಚೇತ್ ॥ ಸಂಗತಮೇವೈತದ್ಧಿ ಯಸ್ಮಾದ್ಯೇ ಪ್ರೈಷಾಃ ಸಂತಿ ತೇ ನಷ್ಟೈಷ್ಯಂ ನಷ್ಟಸ್ಯ ಯಜ್ಞಸ್ಯಾನ್ವೇಷಣಹೇತವಃ ॥

ಲೋಕವ್ಯವಹಾರದಲ್ಲಿ ಕಳೆದುಹೋದ ವಸ್ತುವನ್ನು ಹುಡುಕಿ ಪುನಃ ಪಡೆಯಬೇಕೆಂಬುವವರಲ್ಲಿ ಎರಡುವಿಧವು. ಕಳೆದುಹೋದ ವಸ್ತುವಿನಲ್ಲಿ ಬಹುಭಾಗವಾದರೂ ದೊರೆಯಬೇಕೆಂದು ಹುಡುಕುವವನು ಬಹಳ ವಿವೇಕಿಯು, ಸಾಧುಪುರುಷನು ಕಳೆದುಕೊಂಡ ವಸ್ತುವಿನಲ್ಲಿ ಸ್ವಲ್ಪ ಸಿಕ್ಕಿದರೂ ಸಾಕೆಂದು ತೃಪ್ತಿಪಡುವವನು ಅಲ್ಪಮತಿಯು, ವಿವೇಕಿಯಲ್ಲ. ಪ್ರೈಷಮಂತ್ರಗಳ ಮೂಲಕ ಕಳೆದುಹೋದ ಯಜ್ಞವನ್ನು ಪುನಃ ಪಡೆಯಬೇಕೆಂದು ಪ್ರಯತ್ನಿಸುವುದು ಯುಕ್ತವು. ಈ ಪ್ರೈಷಮಂತ್ರಗಳು ಬಹಳವಾಗಿರುವವು. ಇವುಗಳ ಮೂಲಕ ಯಜ್ಞದ ಬಹುಭಾಗವನ್ನು (ಅಥವಾ ಯಜ್ಞವನ್ನೆಲ್ಲಾ) ಹಿಂದಕ್ಕೆ ಪಡೆದುಕೊಳ್ಳುವುದು ಕಳೆದ ವಸ್ತುವನ್ನು ಹಿಂದಕ್ಕೆ ಪಡೆಯುವಂತೆ ಯುಕ್ತವು ಮತ್ತು ಸಾಧುವು. ಪುರೋನುವಾಕ್ಯಾಮಂತ್ರಗಳನ್ನು ಪಠಿಸುವುದಕ್ಕೆ ಮೊದಲೆಲ್ಲಾ ಪ್ರೈಷಮಂತ್ರಗಳ ಅವಶ್ಯಕತೆ ಇರುವುದರಿಂದ ಪ್ರೈಷಮಂತ್ರಗಳು ಬಹಳವಾಗಿರುವವು. ಇವುಗಳ ಮೂಲಕ ಯಜ್ಞವನ್ನು ಪಡೆಯುವುದು ನಷ್ಟವಸ್ತುವಿನಲ್ಲಿ ಹೆಚ್ಚಾದ ಭಾಗವನ್ನು ಅಪೇಕ್ಷಿಸುವ ಸಾಧುವಾದ ವಿವೇಕಿಯ ಇಷ್ಟದಂತಿರುವುದು. ಆದ್ದರಿಂದ ಹೆಚ್ಚುಭಾಗವನ್ನು ಅಪೇಕ್ಷಿಸುವ ವಿವೇಕಿ ಮತ್ತು ಸಿಕ್ಕಿದಷ್ಟೇ ಸಾಕೆಂದು ಅಲ್ಪಭಾಗದಲ್ಲಿ ತೃಪ್ತಿಪಡುವ ಅಲ್ಪಮತಿ (ವಿವೇಕವಿಲ್ಲದವನು) ಇವರ ಮಧ್ಯದಲ್ಲಿ ಅಧಿಕಭಾಗವನ್ನು ಇಚ್ಛಿಸುವ ವಿವೇಕಿಯಾದ ಪುರುಷನೇ ಶ್ರೇಷ್ಠನೆಂದು ಮುಖ್ಯಾಭಿಪ್ರಾಯವು.

## ತಸ್ಮಾತ್ಪ್ರಹ್ವಸ್ತಿಷ್ಠನ್‌ಪ್ರೇಷ್ಯತಿ ॥

ಪುರೋನುವಾಕ್ಯಾಭ್ಯೋ ದೀರ್ಘತ್ವೇನ ಪ್ರೈಷಾನ್ಪ್ರಶಸ್ಯ ತದುಚ್ಚಾರಣಕಾಲೇ ಪ್ರಹ್ವತ್ವಂ ವಿಧತ್ತೇ— ಯಸ್ಮಾದತಿಶಯೇನ ವೃದ್ಧಾಃ ಪ್ರೈಷಾಸ್ತಸ್ಮಾತ್ತತ್ಪಾಠಕಾಲೇ ಮೈತ್ರಾವರುಣಃ ಪ್ರಹ್ವೋ ವಿನಯೇನ ಕಿಂಚಿದವನತಶಿರಾಸ್ತಿಷ್ಠನ್ನನುಪವಿಷ್ಟೋ ಮಂತ್ರಾನ್ಪಠೇತ್ ॥ ಯಥಾಲೋಕೇ ಪಿತೃಗುರ್ವಾದೀನ್ಪ್ರೃಷ್ಟ್ವಾ ಪ್ರಹ್ವಸ್ತಿಷ್ಠತಿ ತದ್ವತ್ ॥ ಯಥಾ ವಾ ನಷ್ಟವಸ್ತ್ವನ್ವಿಚ್ಛನ್ಪ್ರಹ್ವತಾದಿನಾ ಗುಪ್ತಶ್ಚರತಿ ॥

ಲೋಕವ್ಯವಹಾರದಲ್ಲಿ ತಂದೆ, ಗುರು ಮೊದಲಾದ ಹಿರಿಯರು ಸಮೀಪದಲ್ಲಿ ಕುಳಿತು ಮಾತನಾಡುವಾಗ ವಿನಯದಿಂದ ತಲೆಯನ್ನು ಬಗ್ಗಿಸಿ ಮಾತನಾಡುವಂತೆ ಶ್ರೇಷ್ಠವಾದ ಪ್ರೈಷಮಂತ್ರಗಳನ್ನು ಉಚ್ಚರಿಸುವಾಗ ಮೈತ್ರಾವರುಣನು ನಮ್ರನಾಗಿ ವಿನಯವನ್ನು ಸೂಚಿಸುವುದಕ್ಕಾಗಿ ತಲೆಯನ್ನು ಬಗ್ಗಿಸಿ ಮೆತ್ತನೆಯ ಸ್ವರದಿಂದ ಪ್ರೈಷಗಳಿಂದ ನಿರ್ದೇಶಿಸಿಸಬೇಕೆಂದು ತಿಳಿಸಲಾಗಿದೆ.

### *English Translation*

**Etymology of the words praisha, puroruk, vedi, nivid, graha)**

The sacrifice went away from the gods. They wished it (to return) by means of the Praishas. That is the reason that the Praishas (orders to repeat a mantra given by the Adhvaryu or Mitra Varuna to the Hotar) are called so (from pra plus ish " to wish "). They made it, shine forth (prarochayanti) by means of the puroruks. Thence the puroruk is called so (from prarochayanti). They found it on the Vedi. Thence this place is called Vedi (from vid to find). After having found it, they caught it with the Grahas ; thence they are called so (from

grih to catch, seize). Having found it they announced it to the gods by means of the Nivids. Thence they are called Nivids (from nivedayati he announces).

A person who wishes to recover something lost wants either much (of it) or little. Among two, the elder (most experienced) wishes for the best (portion). He who knows that the praishas are exceedingly strong(give most power), knows (at the same time) that they are the best portion. The praishas being the desire to recover something lost, he (the Mitra-Varuna) repeats them with his head lowered (prahvas) (just as supplicants do).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ಏಕಾದಶಾಧ್ಯಾಯೇ ನವಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಒಂಭತ್ತನೆಯ ಖಂಡವು ಸಮಾಪ್ತವಾದುದು.**



## ಅಥ ಏಕಾದಶಾಧ್ಯಾಯೇ ದಶಮಃ ಖಂಡಃ

### ಹನ್ನೊಂದನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನವೆಂಬ ಮೂರು ಸವನಗಳಲ್ಲಿ ನಿವಿನ್ಮಂತ್ರಗಳಿಗೆ ಇರುವ ಸ್ಥಾನಮಾನಾದಿಗಳ ವಿವರಣೆ]



ಗರ್ಭಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಸ್ಸವನೇ ಧೀಯಂತೇ ತಸ್ಮಾತ್ಪರಾಂಚೋ ಗರ್ಭಾ ಧೀಯಂತೇ ಪರಾಂಚಃ ಸಂಭವಂತಿ ॥

**ಅಥ ನಿವಿದಾಂ ಸವನಭೇದೇನ ಸ್ಥಾನಭೇದಂ ವಿವಕ್ಷುಃ ಪ್ರಾತಃಸವನೇ ಸ್ಥಾನವಿಶೇಷಂ ವಿಧತ್ತೇ—ಅಗ್ನಿರ್ದೇವೇದ್ಧ ಇತ್ಯಾದಯೋ ನಿವಿದಃ ಸಂತಿ ॥ ಏತೇ ನಿವಿದ್ವಿಶೇಷಾ ಉಕ್ಥಾನಾಂ ಶಸ್ತ್ರಾಣಾಂ ಗರ್ಭಾ ವೈ ಗರ್ಭಸ್ಥಾನೀಯಾ ಏವ ॥ ತಥಾ ಸತಿ ಪ್ರಾತಃಸವನಪ್ರಯೋಗೇ**

ಶಸ್ತ್ರಾಣಾಂ ಪುರಸ್ತಾನ್ನಿವಿದೋ ಧೀಯಂತೇ ಸ್ಥಾಪ್ಯಂತೇ ಸ್ಥಾಪಯೇಯುರಿತ್ಯರ್ಥಃ ॥ ಯಸ್ಮಾದ್ಗರ್ಭಸ್ಥಾನೀಯಾನಾಂ ಪುರಃಸ್ಥಾಪನಂ ತಸ್ಮಾಲ್ಲೋಕೇಽಪಿ ಗರ್ಭಾಃ ಪರಾಂಚಃ ಶರೀರೇ ಪರಮುತ್ಕೃಷ್ಟಂ ಪುರೋಭಾಗಮಂಚಂತೋ ಗಚ್ಛಂತೋ ಧೀಯಂತೇ ಧಾರ್ಯಂತೇ ಪ್ರಸವಕಾಲೇಽಪಿ ಪರಾಂಚಃ ಪುರೋಭಾಗಂ ಗಚ್ಛಂತ ಉತ್ಪದ್ಯನ್ತೇ ಪ್ರಯುಕ್ತಾಃ ॥

ಪ್ರಾತಃಸವನಾದಿ ಮೂರುಸವನಗಳಲ್ಲಿ ನಿವಿನ್ಮಂತ್ರಗಳ ಸ್ಥಾನಗಳೇನೆಂಬ ವಿಷಯವನ್ನು ದೃಷ್ಟಾಂತಗಳ ಮೂಲಕ ವಿವರಿಸುತ್ತಾರೆ. ಮೊದಲು ಪ್ರಾತಃಸವನದ ವಿಷಯವನ್ನು ಹೇಳುತ್ತಾರೆ— ಅಗ್ನಿರ್ದೇವೇದ್ಧಃ ಎಂದು ಮೊದಲಾಗುವ ನಿವಿನ್ಮಂತ್ರಗಳು ಹನ್ನೆರಡಿರುವವು. ಈ ನಿವಿನ್ಮಂತ್ರಗಳು ಪ್ರಾತಃಸವನಾದಿಗಳಲ್ಲಿ ಪಠಿಸುವ ಶಸ್ತ್ರಮಂತ್ರಗಳಿಗೆ ಗರ್ಭಸ್ಥಾನೀಯುವೆಂದು ಹೇಳಲ್ಪಡುವವು. ಎಂದರೆ ಬಾಲಕನು ಹುಟ್ಟುವುದಕ್ಕೆ ಪೂರ್ವದಲ್ಲಿ ತಾಯಿಯ ಗರ್ಭದಲ್ಲಿ ಇದ್ದು ಬೆಳೆಯಬೇಕಷ್ಟೆ. ಅದರಂತೆ ಈ ನಿವಿನ್ಮಂತ್ರಗಳೂ ಗರ್ಭಾವಸ್ಥೆಯಲ್ಲಿರುವವೆಂದು ಭಾವಿಸಲಾಗುವುದು. ಆದ್ದರಿಂದ ಪ್ರಾತಃಸವನದಲ್ಲಿ ಈ ನಿವಿನ್ಮಂತ್ರಗಳನ್ನು ಶಸ್ತ್ರಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿಯೇ ಪಠಿಸುವ ರೂಢಿ ಇರುವುದು. ಏಕೆಂದರೆ ಲೋಕವ್ಯವಹಾರದಲ್ಲಿ ಶಿಶುವು ಗರ್ಭದಲ್ಲಿರುವಾಗ ಅದರ ಶಿರಸ್ಸನ್ನು (ತಲೆಯನ್ನು) ಕೆಳಮುಖನಾಗಿಯೇ ಮಾಡಿಕೊಂಡು ಇರುವುದು. ಹುಟ್ಟುವಾಗಲೂ ತಲೆಯನ್ನು ಕೆಳಮುಖನಾಗಿಯೇ ಮಾಡಿಕೊಂಡು ಹುಟ್ಟುವುದು.

**ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ತಸ್ಮಾನ್ಮಧ್ಯೇ ಗರ್ಭಾ ಧೃತಾಃ ॥**

ಮಾಂಧ್ಯದಿನಸವನೇ ಸ್ಥಾನವಿಶೇಷಂ ವಿಧತ್ತೇ— ಯಸ್ಮಾಚ್ಛಸ್ತ್ರಾಣಾಂ ಮಧ್ಯೇ ನಿವಿದಸ್ತಸ್ಮಾದ್ಗರ್ಭಾ ಉದರಮಧ್ಯೇ ಧೀಯಂತೇ ॥

ಮಾಧ್ಯಂದಿನಸವನದಲ್ಲಿ ನಿವಿನ್ಮಂತ್ರಗಳ ಸ್ಥಾನವನ್ನು ನಿರ್ದೇಶಿಸುವರು— ಮಾಧ್ಯಂದಿನಸವನದಲ್ಲಿ ನಿವಿನ್ಮಂತ್ರಗಳನ್ನು ಶಸ್ತ್ರಮಂತ್ರಗಳನ್ನು ಪಠಿಸುವಾಗ ಮಧ್ಯದಲ್ಲಿ ಸ್ಥಾಪಿಸುವರು. ಏಕೆಂದರೆ ಗರ್ಭವು ಮಧ್ಯಕಾಲದಲ್ಲಿ ಉದರಮಧ್ಯದಲ್ಲಿ ಇರುವುದರಿಂದ ನಿವಿನ್ಮಂತ್ರಗಳನ್ನೂ ಶಸ್ತ್ರಮಂತ್ರಗಳ ಮಧ್ಯದಲ್ಲಿಯೇ ಸೇರಿಸುವರು.

**ಯದಂತತಸ್ತೃತೀಯಸವನೇ ಧೀಯಂತೇ ತಸ್ಮಾದಮುತೋಽರ್ವಾಂಚೋ ಗರ್ಭಾಃ ಪ್ರಜಾಯಂತೇ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ತೃತೀಯಸವನಸ್ಥಾನವಿಶೇಷಂ ವಿಧತ್ತೇ— ಅಂತತಃ ಶಸ್ತ್ರಸ್ಯಾನ್ತಿಮೇ ದೇಶ ಏಕಾಮೃಚಂ ಶಿಷ್ಟ್ವಾ ನಿವಿದಃ ಪಠಿತವ್ಯಾಃ ॥ ಯಸ್ಮಾದೇತಾ ಅಂತಿಮದೇಶಭಾಗಿನ್ಯಸ್ತಸ್ಮಾಲ್ಲೋಕೇಽಪಿ ಗರ್ಭಾ ಅಮುತೋ ನಿವಾಸಸ್ಥಾನಾನ್ಮಾತುರುದರಮಧ್ಯಾದರ್ವಾಂಚೋಽಧೋಭಾಗಗತಾಃ ಪ್ರಜಾಯಂತೇ ॥ ತಚ್ಚ ಯಜಮಾನಸ್ಯ ಪ್ರಜನನಾರ್ಥಂ ಭವತಿ ॥ ವೇದನಂ ಪ್ರಶಂಸತಿ ॥

ತೃತೀಯಸವನಕಾಲದಲ್ಲಿ ನಿವಿನ್ಮಂತ್ರಗಳನ್ನು ಶಸ್ತ್ರಮಂತ್ರಗಳ ಕೊನೆಯಲ್ಲಿ ಎಂದರೆ ಅಂತ್ಯದಲ್ಲಿ ಸೇರಿಸುವರು. ಏಕೆಂದರೆ ಗರ್ಭದಲ್ಲಿರುವ ಶಿಶುವು ಹುಟ್ಟುವಾಗ ಅಥವಾ ಹೊರಕ್ಕೆ ಬರುವಾಗ ಅದು ಗರ್ಭದ ಕೊನೆಯಿಂದ ಹೊರಟುಬರುವುದು. ಈರೀತಿ

ಯಾಗಿ ಗರ್ಭಸ್ಥಶಿಶುವಿಗೂ ನಿವಿನ್ಮಂತ್ರಗಳಿಗೂ ಸಾದೃಶ್ಯವಿರುವುದು. ಈ ವಿಷಯವನ್ನು ತಿಳಿದಿರುವ ಪುರುಷನು ಪುತ್ರಾದಿಸಂತತಿಯನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

**ಪೇಶಾ ವಾ ಏತ ಉಕ್ಥಾನಾಂ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಸ್ಸವನೇ ಧೀಯಂತೇ ಯಥೈವ ಪ್ರವಯಣತಃ ಪೇಶಃ ಕುರ್ಯಾತ್ತಾದೃಕ್ತದ್ಯನ್ಮಧ್ಯತೋ ಮಧ್ಯಂದಿನೇ ಧೀಯಂತೇ ಯಥೈವ ಮಧ್ಯತಃ ಪೇಶಃ ಕುರ್ಯಾತ್ತಾದೃಕ್ತದ್ಯದಂತತಸ್ತೃತೀಯಸವನೇ ಧೀಯಂತೇ ಯಥೈವಾವಪ್ರಜ್ಜನತಃ ಪೇಶಃ ಕುರ್ಯಾತ್ತಾದೃಕ್ತತ್ ಸರ್ವತೋ ಯಜ್ಞಸ್ಯ ಪೇಶಸಾ ಶೋಭತೇ ಯ ಏವಂ ವೇದ ॥**

ಸವನತ್ರಯೇ ವಿಹಿತಂ ನಿವಿದಾಂ ಸ್ಥಾನತ್ರಯಂ ಪ್ರಶಂಸತಿ—ಪೇಶಾ ಅಲಂಕಾರಾಃ ವೇಞ್ ತಂತುಸಂತಾನ ಇತಿ ಧಾತೋರ್ವಯನಶಬ್ದೋತ್ಪತ್ತಿಃ ॥ ಕುವಿಂದಸ್ಯ ಯತ್ಪ್ರಾರಂಭೇ ವಯನಂ ತತ್ಪ್ರವಯಣಂ ॥ ಲೋಕೇ ಯಥೈವ ವಾಸಸಃ ಪ್ರವಯಣತೋ ವಯನಪ್ರಾರಂಭೇ ಪೇಶೋಽಲಂಕಾರಂ ಕುರ್ಯಾತ್ ॥ ವರ್ಣಾಂತರೋಪೇತೈಸ್ತಂತುಭಿರಲಂಕಾರಃ ॥ ತಥೈವ ಪ್ರಾತಃಸವನೇ ಶಸ್ತ್ರಾಣಾಂ ಪುರತೋ ನಿವಿತ್ಪಠನಂ ಭವತಿ ॥ ತಚ್ಚ ವಸ್ತ್ರಸ್ಥಾನೀಯಾನಾಮುಕ್ಥಾನಾಂ ಪ್ರಥಮಭಾಗೇಽಲಂಕಾರಾಯ ಸಂಪದ್ಯತೇ ॥ ಶಸ್ತ್ರಮಧ್ಯೇ ತತ್ಪಠನಂ ವಸ್ತ್ರಮಧ್ಯೇ ವರ್ಣಾಂತರೇಣಾಲಂಕಾರಸಮಂ ॥ ಅವಪ್ರಜ್ಜನೋ ವಸ್ತ್ರಸ್ಯಾಂತಭಾಗಸ್ತತ್ರ ಯಥಾ ವರ್ಣಾಂತರೇಣಾಲಂಕಾರಸ್ತಾದೃಗುಕ್ಥಾನಾಮಂತೇ ನಿವಿತ್ಪಠನಂ । ವೇದನಂ ಪ್ರಶಂಸತಿ—

ಪ್ರಾತಃಸವನಾದಿ ಮೂರುಸವನಗಳಲ್ಲಿಯೂ ನಿವಿನ್ಮಂತ್ರಗಳಿಂದುಂಟಾಗುವ ಸ್ಥಾನಮಾನಗಳನ್ನು ಪ್ರಶಂಸೆಮಾಡುವರು. ನಿವಿನ್ಮಂತ್ರಗಳು ಶಸ್ತ್ರಮಂತ್ರಗಳಿಗೆ ರೂಪ ಅಥವಾ ಅಲಂಕಾರಗಳಂತೆ ಇರುವವು. ನೇಕಾರನು (ಬಟ್ಟೆಗಳನ್ನು ನೇಯುವವನು) ಬಟ್ಟೆಯನ್ನು ನೇಯುವಾಗ ಅದರ ಪ್ರಾರಂಭದಲ್ಲಿ ನಾನಾಬಣ್ಣದ ದಾರಗಳನ್ನು ಉಪಯೋಗಿಸಿ ಬಟ್ಟೆಯು ಅಲಂಕಾರವಾಗಿ ಕಾಣುವಂತೆ ಮಾಡಿ ನೇಯುವನು. ಅದರಂತೆಯೇ ಪ್ರಾತಃಸವನಕಾಲದಲ್ಲಿ ಶಸ್ತ್ರಮಂತ್ರಗಳಿಗಿಂತ ಮೊದಲು ಪಠಿಸುವ ನಿವಿನ್ಮಂತ್ರಗಳು ಶಸ್ತ್ರಮಂತ್ರಗಳಿಗೆ ಪ್ರಾರಂಭದ ಅಲಂಕಾರದಂತೆ ಇರುವವು. ಮಾಧ್ಯಂದಿನಸವನದಲ್ಲಿ ಶಸ್ತ್ರಗಳ ಮಧ್ಯದಲ್ಲಿ ಸೇರಿಸಿರುವ ನಿವಿನ್ಮಂತ್ರಗಳು ಬಟ್ಟೆಯ ಮಧ್ಯಭಾಗದಲ್ಲಿ ನೇಕಾರನು ಮಾಡಿ ನೇಯುವ ಅಲಂಕಾರದಂತಿರುವವು. ತೃತೀಯಸವನಕಾಲದಲ್ಲಿ ಶಸ್ತ್ರಮಂತ್ರಗಳ ಅಂತ್ಯದಲ್ಲಿ ಸೇರಿಸುವ ನಿವಿನ್ಮಂತ್ರಗಳು ನೇಕಾರನು ಬಟ್ಟೆಯನ್ನು ನೇಯುವಾಗ ಕೊನೆಯಲ್ಲಿ ಸೇರಿಸಿ ನೇಯುವ ಅಲಂಕಾರಗಳಂತಿರುವವು. ಈರೀತಿ ನಿವಿನ್ಮಂತ್ರಗಳ ಪಠನದಿಂದ ಯಜ್ಞದ ರೂಪವು ಬಹಳ ಚೆನ್ನಾಗಿ ಶೋಭಿಸುವುದು. ಇದನ್ನು ತಿಳಿದು ಅದರಂತೆ ಆಚರಿಸುವ ಪುರುಷನೂ ಚೆನ್ನಾಗಿ ಶೋಭಿಸುವನು.



*English Translation*

**(On the proper place of the Nivids in the three libations)**

The Nivids are the embryos of the Shastras (ukthas). At the morning libation they are put before the Shastras,(ukthas), because the embryos are lying in the womb with their heads turned downward, and thus they are born(the head coming first out of the womb). At the midday libation, the Nivids are put in the midst (of the Shastras). This is done because the embryos have their hold in the middle of the womb. At the evening libation, the Nivids are repeated at the end (of the Shastras) because the embryos are coming down from thence (the womb) when they are brought forth. He who has such a knowledge is blessed with children and cattle.

The Nivids are the decorations of the Shastras. They are put, at the morning libation, before the Shastras, just as a weaver weaves decorations in the beginning of a cloth.

At the midday libation they are put in the midst (of the Shastras), just as a weaver weaves decorations in the midst (of a cloth).

At the evening libation they are put at the end of the Shastras just as the weaver weaves decorations in the end of a cloth (avaprajjana). He who has such a knowledge is ornamented on all parts with the decoration of the sacrifice.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ದಶಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೊಂದನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು
ಸಮಾಪ್ತವಾದುದು.



# ಅಥ ಏಕಾದಶಾಧ್ಯಾಯೇ ಏಕಾದಶಃ ಖಂಡಃ

## ಹನ್ನೊಂದನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು



[ನಿವಿನ್ಮಂತ್ರಗಳನ್ನು ಹೇಗೆ ಪಠಿಸಬೇಕು ಎಂಬ ವಿಚಾರ. ಮಂತ್ರಪಠನದಲ್ಲಿ ಹೆಚ್ಚುಕಡಿಮೆಯಾದರೆ ಅವುಗಳನ್ನು ಹೇಗೆ ಸರಿಪಡಿಸಬೇಕೆಂಬ ವಿಷಯ]



**ಸೌರ್ಯಾ ವಾ ಏತಾ ದೇವತಾ ಯನ್ನಿವಿದಸ್ತದ್ಯತ್ಪುರಸ್ತಾದುಕ್ಥಾನಾಂ ಪ್ರಾತಃಸವನೇ ಧೀಯಂತೇ ಮಧ್ಯತೋ ಮಧ್ಯಂದಿನೇ ತತಸ್ತೃತೀಯಸವನ ಆದಿತ್ಯಸ್ಯೈವ ತದ್ವ್ರತಮನು ಪರ್ಯಾವರ್ತಂತೇ॥**

ಅಥ ನಿವಿದ್ವಿಷಯಂ ಬಹುವಕ್ತವ್ಯಂ ವಿವಕ್ಷುರಾದೌ ಸೂರ್ಯಸಾದೃಶ್ಯೇನ ನಿವಿದಃ ಪ್ರಶಂಸತಿ—ಯಾ ನಿವಿದಃ ಸಂತಿ ತಾ ಏತಾಃ ಸೂರ್ಯಸಂಬಂಧಿನ್ಯ ಏವ ದೇವತಾಃ ॥ ಯಥಾ ಸೂರ್ಯಃ ಪುರಸ್ತಾದುದೇತ್ಯಥ ಮಧ್ಯೇ ಸ್ಥಿತ್ವಾ ಪಶ್ಚಾದಂತೇಽಸ್ತಮೇತಿ ಏವಂ ನಿವಿದೋಽಪಿ ಪುರಸ್ತಾನ್ಮಧ್ಯೇಽಂತೇ ಚ ಸ್ಥಾಪ್ಯಂತೇ ॥ ತಸ್ಮಾದಾದಿತ್ಯಸ್ಯೈವ ವ್ರತಮಾಚರಣಮನು ನಿವಿದಃ ಪರ್ಯಾವರ್ತಂತೇ ॥

ನಿವಿನ್ಮಂತ್ರಗಳ ವಿಷಯದಲ್ಲಿ ಹೇಳಬೇಕಾಗಿರುವುದು ಬಹಳವಾಗಿರುವುದರಿಂದ ಈಗ ಸೂರ್ಯನ ಸಾದೃಶ್ಯದಿಂದ ನಿವಿನ್ಮಂತ್ರಗಳನ್ನು ಪ್ರಶಂಸೆಮಾಡುವರು—ನಿವಿನ್ಮಂತ್ರಗಳೆಲ್ಲಾ ಸೂರ್ಯನ ಸಂಬಂಧವಾದ ದೇವತೆಗಳೆಂದು ಹೇಳಲ್ಪಡುವವು. ಸೂರ್ಯನು ಪ್ರಾತಃಕಾಲದಲ್ಲಿ ಉದಯಿಸುವನು, ಮಧ್ಯಾಹ್ನಕಾಲದಲ್ಲಿ ಅಂತರಿಕ್ಷಮಧ್ಯದಲ್ಲಿರುವನು ಸಾಯಂಕಾಲದಲ್ಲಿ ಅಸ್ತಂಗತನಾಗುವನು (ಮುಳುಗುವನು). ಅದರಂತೆಯೇ ನಿವಿನ್ಮಂತ್ರಗಳನ್ನೂ ಪ್ರಾತಸ್ಸವನದಲ್ಲಿ ಮೊದಲೂ (ಪ್ರಾರಂಭದಲ್ಲಿಯೂ) ಮಾಧ್ಯಂದಿನಸವನದಲ್ಲಿ ಮಧ್ಯದಲ್ಲಿಯೂ ತೃತೀಯಸವನದಲ್ಲಿ ಕೊನೆಯಲ್ಲಿಯೂ ಸೇರಿಸುವರು. ಈ ವಿಧವಾದ ಕರ್ಮಾಚರಣೆಯು ಸೂರ್ಯನ ಗತಿಯಂತೆ ಯಾವಾಗಲೂ ನಡೆದುಬರುತ್ತಿರುವುದು.

**ಪಚ್ಛೋ ವೈ ದೇವಾ ಯಜ್ಞಂ ಸಮಭರಂಸ್ತಸ್ಮಾತ್ಪಚ್ಛೋ ನಿವಿದಃ ಶಸ್ಯಂತೇ ॥**

**ತಾಸಾಂ ನಿವಿದಾಂ ದ್ವಾದಶಪದರೂಪಾಣಾಮೇಕೈಕಸ್ಮಿನ್ಪಾದೇಽವಸಾನಂ ವಿಧತ್ತೇ—ದೇವಾಃ ಪುರಾ ಯಜ್ಞಂ ಪಚ್ಛಃ ಪಾದಶಃ ಸಮಭರನ್ನೇಕೈಕಂ ಭಾಗಂ ಕ್ರಮೇಣ ಸಂಪಾದಿತವಂತ ಇತ್ಯರ್ಥಃ ॥ ತಸ್ಮಾದೇತಾ ನಿವಿದೋಽಪಿ ಪಾದಶಃ ಶಂಸನೀಯಾಃ ॥**

ನಿವಿನ್ಮಂತ್ರಗಳಲ್ಲಿ ಹನ್ನೆರಡು ಪದಗಳಿರುವವಷ್ಟೇ. ಅವುಗಳನ್ನು ಪ್ರತ್ಯೇಕವಾಗಿ ನಿಲ್ಲಿಸಿ ಯಾಕೆ ಹೇಳಬೇಕೆಂಬ ವಿಚಾರವನ್ನು ತಿಳಿಸುವರು—ಪೂರ್ವದಲ್ಲಿ ದೇವತೆಗಳು ಯಜ್ಞವನ್ನು ಮಾಡಿದಾಗ ಒಂದೊಂದಾವರ್ತಿ ಸ್ವಲ್ಪಸ್ವಲ್ಪ ಭಾಗವನ್ನು ಮಾತ್ರ ಮಾಡುತ್ತಿದ್ದರು. ಈರೀತಿ ಹನ್ನೆರಡಾವರ್ತಿ ಮಾಡಿ ಯಜ್ಞವನ್ನು ಮುಗಿಸಿದರು. ಅದಕ್ಕನುಸಾರವಾಗಿ ನಿವಿನ್ಮಂತ್ರಗಳನ್ನೂ ಹನ್ನೆರಡು ಭಾಗಮಾಡಿ ಪಠಿಸಬೇಕಾಯಿತು. ಈಗಲೂ ಅದರಂತೆ ಆಚರಣೆಯಲ್ಲಿರುವುದು.

ಯದ್ವೈ ತದ್ದೇವಾ ಯಜ್ಞಂ ಸಮಭರಂಸ್ತಸ್ಮಾದಶ್ವಃ ಸಮಭವತ್ತ-
ಸ್ಮಾದಾಹುರಶ್ವಂ ನಿವಿದಾಂ ಶಂಸ್ತ್ರೇ ದದ್ಯಾದಿತಿ ತದು ಖಲು
ವರಮೇವ ದದತಿ ॥

ನಿವಿದಾಂ ಶಂಸಕಾಯ ಹೋತ್ರೇಽಶ್ವದಾನಂ ವಿಧತ್ತೇ—ಯದ್ವೈ ಯಸ್ಮಿನ್ನೇವದೇಶೇ ತತ್ತದಾ ದೇವಾ ಯಜ್ಞಂ ಸಂಪಾದಿತವಂತಸ್ತಸ್ಮಾದ್ದೇಶಾದಶ್ವ ಉತ್ಪನ್ನಃ ॥ ಅತಏವಾಭಿಜ್ಞಾ ಇತ್ಯಾಹುಃ ॥ ಕಿಮಾಹುರಿತಿ ತದುಚ್ಯತೇ ॥ ನಿವಿದಾಂ ಶಂಸಕಾಯಾಶ್ವಂ ದದ್ಯಾದಿತಿ ॥ ತದು ಖಲು ತೇನೈವಾಶ್ವದಾನೇನ ವರಮೇವ ಶ್ರೇಷ್ಠಮೇವ ವಸ್ತು ದದತಿ ಪ್ರಯಚ್ಛಂತಿ ॥

ನಿವಿನ್ಮಂತ್ರಗಳನ್ನು ಪಠಿಸುವ ಋತ್ವಿಜನಿಗೆ(ಹೋತೃವಿಗೆ) ಅಶ್ವವನ್ನು ಸಂಭಾವನೆಯಾಗಿ ಕೊಡಬೇಕೆಂಬ ವಿಚಾರವನ್ನು ತಿಳಿಸುವರು—ಹಿಂದೆ ದೇವತೆಗಳು ಯಾವ ಪ್ರದೇಶದಲ್ಲಿ ಯಜ್ಞವನ್ನು ಮಾಡಿ ಮುಗಿಸಿದರೋ (ನಿವಿನ್ಮಂತ್ರಪೂರ್ವಕವಾಗಿ) ಆ ಪ್ರದೇಶದಲ್ಲಿ ಯಜ್ಞಮಾಡಿದ ಫಲವಾಗಿ ಒಂದು ಅಶ್ವವು (ಕುದುರೆಯು) ಉತ್ಪನ್ನವಾಯಿತು. ಆದ್ದರಿಂದ ಕೆಲವು ಅಭಿಜ್ಞರು ಹೀಗೆ ಹೇಳುವರು. ನಿವಿನ್ಮಂತ್ರಪಠನದಿಂದ ದೇವತೆಗಳು ಯಜ್ಞಮಾಡಿದ ಪ್ರದೇಶದಲ್ಲಿ ಅಶ್ವವು ಉತ್ಪನ್ನವಾದ್ದರಿಂದ ಈಗಲೂ ಆ ಕ್ರಮವನ್ನನುಸರಿಸಿ ಮನುಷ್ಯರು ಮಾಡುವ ಯಜ್ಞದಲ್ಲಿಯೂ ನಿವಿನ್ಮಂತ್ರಗಳನ್ನು ಪಠಿಸುವ ಹೋತೃವಿಗೆ ಒಂದು ಅಶ್ವವನ್ನು ಸಂಭಾವನಾರೂಪವಾಗಿ ಕೊಡಬೇಕೆಂದು ಹೇಳುವರು. ಇದೇ ಶ್ರೇಷ್ಠವಾದ ಸಂಭಾವನೆಯು. ಈ ಕ್ರಮವು ಈಗಲೂ ಆಚರಣೆಯಲ್ಲಿರುವುದು.

ನ ನಿವಿದಃ ಪದಮತೀಯಾತ್ ।

ದ್ವಾದಶಸು ನಿವಿತ್ಪದೇಷು ಕಸ್ಯಾಪಿ ಪದಸ್ಯಾತಿಕ್ರಮಂ ನಿಷೇಧತಿ—ಏಕಮಪಿ ಪದಂ ನ ಪರಿತ್ಯಜೇದಿತ್ಯರ್ಥಃ ॥

ಈ ನಿವಿನ್ಮಂತ್ರಪಠನಕಾಲದಲ್ಲಿ ಹೋತೃವು ಎಲ್ಲಿಯೂ ಒಂದು ಪದವನ್ನೂ ಉಚ್ಚರಿಸದೆ ಬಿಡಬಾರದು.

ಯನ್ನಿವಿದಃ ಪದಮತೀಯಾದ್ಯಜ್ಞಸ್ಯ ತಚ್ಛಿದ್ರಂ ಕುರ್ಯಾದ್ಯಜ್ಞಸ್ಯ ವೈ
ಛಿದ್ರಂ ಸ್ರವದ್ಯಜಮಾನೋಽನು ಪಾಪೀಯಾನ್ಭವತಿ ತಸ್ಮಾನ್ನ
ನಿವಿದಃ ಪದಮತೀಯಾತ್ ॥

ವಿಪಕ್ಷಬಾಧಪೂರ್ವಕಂ ಪೂರ್ವಪಕ್ಷಂ ನಿಗಮಯತಿ—ಪದಸ್ಯ ಪರಿತ್ಯಾಗೇ ಯಜ್ಞಸ್ಯ ಛಿದ್ರಂ ಭವತಿ ತಚ್ಚ ಸ್ರವತಿ ತತೋ ಯಜಮಾನೋ ನಿಂದ್ಯೋ ಭವತಿ ತಸ್ಮಾನ್ನಿವಿತ್ಪದಂ ನ ಪರಿತ್ಯಜೇತ್ ॥

ಈ ನಿವಿನ್ಮಂತ್ರವನ್ನು ಸರಿಯಾಗಿ ಪಠಿಸದೆ ತಪ್ಪಿದರೆ ಉಂಟಾಗುವ ಬಾಧಕವನ್ನು ತಿಳಿಸುತ್ತಾರೆ. ಈ ನಿವಿನ್ಮಂತ್ರವನ್ನು ಪಠಿಸುವಾಗ ಎಲ್ಲಿಯೂ ಒಂದು ಪದವನ್ನೂ ಬಿಡದಂತೆ ಪಠಿಸಬೇಕು ಮಧ್ಯದಲ್ಲಿ ಒಂದು ಪದವು ಬಿಟ್ಟುಹೋದರೂ ಯಜ್ಞಕರ್ಮದಲ್ಲಿ ಛಿದ್ರ ಎಂದರೆ ನ್ಯೂನತೆಯುಂಟಾಗುವುದು. ಆದರಿಂದ ಯಜಮಾನನ ನಿಂದ್ಯನಾಗುವನು ಎಂದರೆ ದರಿದ್ರತ್ವವು ಉಂಟಾಗುವುದು ಮತ್ತು ಯಜಮಾನನಿಗೆ ಪಾಪವು ಸಂಭವಿಸುವುದು. ಆದ್ದರಿಂದ ಮಧ್ಯದಲ್ಲಿ ಎಲ್ಲಿಯೂ ಒಂದು ಪದವೂ ಬಿಟ್ಟುಹೋಗದಂತೆ ಮಂತ್ರವನ್ನು ಬಹಳ ಎಚ್ಚರಿಕೆಯಿಂದ ಪಠಿಸಬೇಕು.

**ನ ನಿವಿದಃ ಪದೇ ವಿಪರಿಹರೇದ್ಯನ್ನಿವಿದಃ ಪದೇ ವಿಪರಿಹರೇನ್ಮೋಹಯೇದ್ಯಜ್ಞಂ ಮುಗ್ಧೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ವಿಪರಿಹರೇತ್ ॥**

ಪದಾನಾಂ ವಿಪರ್ಯಾಸಂ ನಿಷೇಧತಿ—ವಿಪರಿಹಾರೋ ವಿಪರ್ಯಾಸಃ ॥ ನಿವಿದಃ ಸಂಬಂಧಿ ಯತ್ಪದದ್ವಯಂ ತನ್ನ ವಿಪರಿಹರೇದ್ವಿಪರೀತತಯಾ ನ ಪಠೇತ್ ॥ ತಥಾ ಸತ್ಯಯಂ ಹೋತಾ ಯಜ್ಞಂ ಮೋಹಯೇದ್ಯಜ್ಞೇ ಭ್ರಾಂತಿಂ ಜನಯೇತ್ತತೋ ಯಜಮಾನೋಽಪಿ ಮುಗ್ಧೋ ಭ್ರಾಂತಃ ಸ್ಯಾತ್ತಸ್ಮಾದ್ವಿಪರ್ಯಾಸೋ ನ ಕರ್ತವ್ಯಃ ॥

ಮಂತ್ರವನ್ನು ಪಠಿಸುವಾಗ ವಿಪರ್ಯಾಸ ಎಂದರೆ ಹೆಚ್ಚುಕಡಿಮೆಯಾಗುವುದನ್ನು ನಿಷೇಧಿಸುತ್ತಾರೆ. ವಿಪರ್ಯಾಸವೆಂದರೆ ವ್ಯತ್ಯಾಸವುಂಟಾಗುವುದು. ಒಂದು ಪದವಾದನಂತರ ಮುಂದಿನ ಪದವನ್ನು ಹೇಳದಿರುವುದು, ಒಂದು ಪದವನ್ನು ಹೇಳುವಾಗ ಎರಡು ಪದಗಳನ್ನು ಒಟ್ಟಾಗಿ ಸೇರಿಸಿ ಹೇಳುವುದು ಮಧ್ಯದಲ್ಲಿ ಒಂದು ಪದವನ್ನು ಬಿಡುವುದು ಇತ್ಯಾದಿ ಹೆಚ್ಚುಕಡಿಮೆಗಳು. ಮಂತ್ರವನ್ನು ಪಠಿಸುವಾಗ ಒಂದೇ ಸಲ ಎರಡು ಪದಗಳನ್ನು ಪಠಿಸದಂತೆ ಎಚ್ಚರಿಕೆಯಿಂದಿರಬೇಕು. ಹೀಗೇನಾದರೂ ಅಚಾತುರ್ಯದಿಂದ ಸಂಭವಿಸಿದ್ದೇ ಆದರೆ ಯಜ್ಞಕರ್ಮದಲ್ಲಿ ಹೋತೃವಿಗೂ ಯಜಮಾನನಿಗೂ ಭ್ರಾಂತಿಯುಂಟಾಗುವುದು. ಆದರಿಂದ ಯಜ್ಞವು ಸರಿಯಾಗಿ ನಡೆಯದೆ ಕೆಟ್ಟುಹೋಗುವುದು. ಆದ್ದರಿಂದ ಮಂತ್ರವಿಪರ್ಯಾಸಕ್ಕೆ ಅವಕಾಶವಿಲ್ಲದಂತೆ ಎಚ್ಚರಿಕೆಯಿಂದ ವರ್ತಿಸಬೇಕು.

**ನ ನಿವಿದಃ ಪದೇ ಸಮಸ್ಯೇದ್ಯನ್ನಿವಿದಃ ಪದೇ ಸಮಸ್ಯೇದ್ಯಜ್ಞಸ್ಯ ತದಾಯುಃ ಸಂಹರೇತ್ಪ್ರಮಾಯುಕೋ ಯಜಮಾನಃ ಸ್ಯಾತ್ತಸ್ಮಾನ್ನ ನಿವಿದಃ ಪದೇ ಸಮಸ್ಯೇತ್ ॥**

ನಿವಿತ್ಪದಸಂಶ್ಲೇಷಣಂ ನಿಷೇಧತಿ — ಪದಯೋಃ ಸಂಶ್ಲೇಷಣೇ ಯಜ್ಞಸ್ಯಾಯುಃ ಸಂಹೃತಂ ಭವೇದ್ಯಜ್ಞೋ ವಿನಶ್ಯೇದಿತ್ಯರ್ಥಃ ॥ ತತೋ ಯಜಮಾನೋ ಮ್ರಿಯೇತ ತಸ್ಮಾತ್ಪದದ್ವಯಂ ನ ಸಂಶ್ಲೇಷಯೇತ್ ॥

ಹೋತೃವು ನಿವಿನ್ಮಂತ್ರಗಳನ್ನು ಪಠಿಸುವಾಗ ಒಂದೊಂದು ಮಂತ್ರದ ಪ್ರಾರಂಭದಲ್ಲಿಯೂ ಒಂದೇ ನಿವಿನ್ಮಂತ್ರದ ಪದವನ್ನು ಪಠಿಸಬೇಕು. ಹೀಗೆ ಮಾಡದೆ ಎರಡು ಅಥವಾ ಹೆಚ್ಚು ನಿವಿನ್ಮಂತ್ರದ ಪದಗಳನ್ನು ಶಸ್ತ್ರಮಂತ್ರಗಳಿಗೆ ಒಟ್ಟಿಗೆ ಸೇರಿಸಿ

ಪಠಿಸಿದರೆ ಯಜ್ಞಕ್ಕೆ ವಿಘಾತವುಂಟಾಗುವುದು ಎಂದರೆ ಯಜ್ಞವು ನಾಶವಾಗುವುದು. ಯಜ್ಞಮಾಡುವ ಯಜಮಾನನಿಗೂ ಮರಣವು ಸಂಭವಿಸುವುದು ಆದ್ದರಿಂದ ಒಂದಕ್ಕಿಂತ ಹೆಚ್ಚು ಪದಗಳು (ನಿವಿನ್ಮಂತ್ರದ)ಒಟ್ಟಿಗೆ ಸೇರದಂತೆ ಎಚ್ಚರಿಕೆಯಿಂದಿರಬೇಕು.

**ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಮಿತ್ಯೇತೇ ಏವ ಸಮಸ್ಯೇದ್ಬ್ರಹ್ಮ ಕ್ಷ-ತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ರಂ ಚ ಸಂಶ್ರಿತೇ**

**ಅನೇನ ನಿಷೇಧೇನ ಸರ್ವೇಷಾಂ ಪದಾನಾಂ ಪರಸ್ಪರವಿಶ್ಲೇಷಣಪ್ರಾಪ್ತೌ ಮಧ್ಯಮ-ಯೋರ್ದ್ವಯೋಃ ಪದಯೋಃ ಸಂಶ್ಲೇಷಂ ವಿಧತ್ತೇ—ನಿವಿತ್ಪದಾನಾಂ ಮಧ್ಯೇ ಪ್ರೇದಂ ಬ್ರಹ್ಮೇ-ತ್ಯೇಕಂ ಪದಂ ಪ್ರೇದಂ ಕ್ಷತ್ರಮಿತ್ಯಪರಂಪದಂ ॥ ಉಭೇ ಏವ ಸಂಶ್ಲೇಷಯೇತ್ ॥ ಏವಕಾರ-ಇತರಸಂಶ್ಲೇಷವ್ಯಾವೃತ್ತ್ಯರ್ಥಃ ॥ ತದೇತನ್ಮೇಲನಂ ಬ್ರಾಹ್ಮಣಕ್ಷತ್ರಿಯಜಾತ್ಯೋಃ ಪರಸ್ಪರಾಶ್ರ-ಯಣಾಯ ಭವತಿ ॥ ತಸ್ಮಾದೇವ ಲೋಕೇ ಜಾತಿದ್ವಯಂ ಪರಸ್ಪರಮಾಶ್ರಿತ್ಯ ತಿಷ್ಠತಿ ॥ ಬ್ರಾಹ್ಮಣೋ ಧರ್ಮಂ ಪ್ರವರ್ತಯತಿ ॥ ಕ್ಷತ್ರಿಯಸ್ತಸ್ಯ ರಕ್ಷಾಂ ಕರೋತಿ ॥**

ನಿವಿನ್ಮಂತ್ರಗಳನ್ನು ಪಠಿಸುವಾಗ ವಿಪರ್ಯಾಸವುಂಟಾಗದಂತೆ ಎಂದರೆ ಎರಡು ಪದಗಳು ಒಂದೆಡೆ ಒಟ್ಟಿಗೆ ಸೇರಿಸಿ ಪಠಿಸದಂತೆ ಎಚ್ಚರಿಕೆಯಿಂದಿರಬೇಕೆಂದು ಹಿಂದೆ ಹೇಳಲಾಗಿದೆಯಷ್ಟೆ. ಆದರೆ ಮಧ್ಯದಲ್ಲಿರುವ ಎರಡು ಪದಗಳನ್ನು ಮಾತ್ರ ಒಟ್ಟಿಗೆ ಸೇರಿಸಿ ಪಠಿಸಬೇಕೆಂಬ ವಿಷಯದಲ್ಲಿ ವಿವರಣೆಯನ್ನು ಮಾಡುವರು. ನಿವಿತ್ಪದಗಳ ಮಧ್ಯದಲ್ಲಿ ಪ್ರೇದಂ ಬ್ರಹ್ಮ ಎಂಬುವುದು ಒಂದು ಪದವು; ಪ್ರೇದಂ ಕ್ಷತ್ರಂ ಎಂಬುದು ಇನ್ನೊಂದು ಪದವು ಇವೆರಡೂ ನಿವಿನ್ಮಂತ್ರಗಳ ಮಧ್ಯದಲ್ಲಿರುವವು. ಇವುಗಳನ್ನು ಮಾತ್ರ ಒಟ್ಟಿಗೆ ಸೇರಿಸಿ ಹೇಳಬೇಕು. ಏಕೆಂದರೆ ಈರೀತಿ ಒಟ್ಟಿಗೆ ಸೇರಿಸುವುದರಿಂದ ಬ್ರಾಹ್ಮಣ ಮತ್ತು ಕ್ಷತ್ರಿಯ ಜಾತಿಗಳೆರಡನ್ನೂ ಒಟ್ಟಿಗೆ ಸೇರಿಸಿದಂತಾಯಿತು. ಹೀಗೆ ಮಾಡುವುದು ಯುಕ್ತವು. ಏಕೆಂದರೆ ಬ್ರಹ್ಮ ಕ್ಷತ್ರ ಜಾತಿಗಳೆರಡೂ ಪರಸ್ಪರ ಆಶ್ರಯಭೂತವಾಗಿರುವವು. ಲೋಕವ್ಯವಹಾರದಲ್ಲಿಯೂ ಈರೀತಿ ನಡೆದುಬರುತ್ತಿರುವುದು. ಬ್ರಾಹ್ಮಣನು ಧರ್ಮದಲ್ಲಿ ಆಸಕ್ತನಾಗಿ ಅದನ್ನು ಇತರರಿಗೆ ತಿಳಿಯಪಡಿಸಿ ಅವರಿಗೆ ಶ್ರೇಯಸ್ಸನ್ನುಂಟುಮಾಡುವನು. ಕ್ಷತ್ರಿಯನಾದ ರಾಜನು ಧರ್ಮವನ್ನೂ ಧರ್ಮಪ್ರವರ್ತಕನಾದ ಬ್ರಾಹ್ಮಣನನ್ನೂ ಸಂರಕ್ಷಿಸುವನು. ಆದ್ದರಿಂದ ಈ ಎರಡು ವರ್ಣಗಳಿಗೂ ಪರಸ್ಪರ ಸಂಶ್ಲೇಷವು ಯುಕ್ತವು.

**ನ ತೃಚಂ ನ ಚತುರ್ಋಚಮತಿಮನ್ಯೇತ ನಿವಿದ್ಧಾನಮೇಕೈಕಂ ವೈ ನಿವಿದಃ ಪದಮೃಚಂ ಸೂಕ್ತಂ ಪ್ರತಿ ತಸ್ಮಾನ್ನ ತೃಚಂ ನ ಚತು-ರ್ಋಚಮತಿಮನ್ಯೇತ ನಿವಿದ್ಧಾನಂ ನಿವಿದಾ ಹ್ಯೇವ ಸ್ತೋತ್ರ-ಮತಿಶಸ್ತಂ ಭವತಿ ॥**

**ನಿವಿತ್ಪದಾನಾಂ ಪ್ರಕ್ಷೇಪಸ್ಯಾಽಽಶ್ರಯಸೂಕ್ತೇ ಕಂಚಿನ್ನಿಯಮಂ ವಿಧತ್ತೇ—ತಿಸ್ರೋ ಋಚೋ ಯಸ್ಮಿನ್ಸೂಕ್ತೇ ತತ್ತೃಚಂ ॥ ಚತಸ್ರ ಋಚೋ ಯಸ್ಮಿನ್ಸೂಕ್ತೇ ತಚ್ಚತುರ್ಋಚಂ ॥ ತಾದೃಶಮುಭಯವಿಧಂ ಸೂಕ್ತಮತಿಕ್ರಮ್ಯ ನಿವಿದ್ಧಾನಂ ನಿವಿತ್ಪದಾನಾಂ ಪ್ರಕ್ಷೇಪಂ ನ ಮನ್ಯೇತ ನ ಚಿಂತಯೇತ್ ॥ ಏತದುಕ್ತಂ ಭವತಿ ॥ ತ್ರಿಚತುರಮಾತ್ರರ್ಚಾತ್ಸೂಕ್ತಾದರ್ವಾಚೀನೇ ಸೂಕ್ತೇ ನಿವಿದಂ ನ ದಧ್ಯಾತ್ಕಿಂತೂಭಯಸ್ಮಿನ್ನೇವ ದಧ್ಯಾದಿತಿ ॥ ನಿವಿದಃ ಸಂಬಂಧಿ ಯದೇಕೈಕಮೇವ**

**ಪದಂ ತದೇವ ಪ್ರತ್ಯೃಚಂ ಪ್ರತಿಸೂಕ್ತಂ ಚ ಸಮರ್ಥಂ ಭವತಿ ॥ ಯಸ್ಮಾದೀದೃಶಂ ಸಾಮರ್ಥ್ಯಂ ತಸ್ಮಾದಿತ್ಯುಕ್ತಾರ್ಥೋಽಪಸಂಹಾರಃ ॥ ಅಧಿಕೇ ಸೂಕ್ತೇ ನಿವಿತ್ಪದೇಷು ಪ್ರಕ್ಷಿಪ್ತೇಷು ನಿವಿದೈವ ಸ್ತೋತ್ರಾತಿಶಂಸನಂ ಕೃತಂ ಭವತಿ ॥ ಋಚಂ ನಾಪೇಕ್ಷೇತ ತದಿತ್ಯರ್ಥಃ ॥**

ನಿವಿತ್ಪದಗಳನ್ನು ಸೇರಿಸಿ ಪಠಿಸಬೇಕಾದ ಸೂಕ್ತಗಳ ವಿಷಯದಲ್ಲಿ ಒಂದು ವಿಶೇಷನಿಯಮವಿರುವುದನ್ನು ತಿಳಿಸುವರು—ತೃಚವೆಂದರೆ ಮೂರು ಋಕ್ಕುಗಳುಮಾತ್ರವೇ ಇರುವ ಸೂಕ್ತವು (ಅಥವಾ ಸೂಕ್ತದ ಭಾಗವು—ಈ ಭಾಗದಲ್ಲಿ ಉದ್ದಿಷ್ಟದೇವತೆಯನ್ನು ಮಾತ್ರ ಪ್ರಶಂಸಿಸಲಾಗಿರಬೇಕು). ಚತುರ್ಋಚವೆಂದರೆ ಮೇಲೆ ಹೇಳಿದ ರೀತಿಯಲ್ಲಿ ನಾಲ್ಕು ಋಕ್ಕುಗಳನ್ನು ಮಾತ್ರ ಒಳಗೊಂಡಿರುವ ಸೂಕ್ತ ಅಥವಾ ಸೂಕ್ತದ ಭಾಗವು. ಈ ಎರಡುವಿಧ ಸೂಕ್ತಗಳನ್ನು ಬಿಟ್ಟು ಬೇರೆವಿಧ ಸೂಕ್ತಗಳಿಗೆ ನಿವಿನ್ಮಂತ್ರದ ಯಾವ ಪದವನ್ನೂ ಸೇರಿಸಿ ಪಠಿಸಬಾರದು. ಎಂದರೆ ಎರಡು ಋಕ್ಕುಗಳ ಸೂಕ್ತವು ತೃಚವೆಂಬ ಸೂಕ್ತಕ್ಕೆ ಋಕ್ಸಂಖ್ಯೆಯಲ್ಲಿ ಕಡಿಮೆಯಾಗುವುದು. ಐದು ಅಥವಾ ಹೆಚ್ಚಿನ ಸಂಖ್ಯೆಯ ಋಕ್ಕುಗಳಿರುವ ಸೂಕ್ತವು ತೃಚ ಅಥವಾ ಚತುರ್ಋಚವೆಂಬ ಉಭಯವಿಧ ಸೂಕ್ತಗಳಲ್ಲಿರುವ ಋಕ್ಸಂಖ್ಯೆಗಳಿಗಿಂತಲೂ ಅಧಿಕ ಸಂಖ್ಯೆಯುಳ್ಳದ್ದಾಗುವುದು. ತೃಚಕ್ಕಿಂತ ಕಮ್ಮಿಯಾಗಲಿ ಚತುರ್ಋಚಕ್ಕಿಂತ ಹೆಚ್ಚಾಗಲಿ ಇರುವ ಋಕ್ಸಂಖ್ಯೆಗಳನ್ನೊಳಗೊಂಡಿರುವ ಸೂಕ್ತಕ್ಕೆ ಅಥವಾ ಸೂಕ್ತದ ಭಾಗಕ್ಕೆ ನಿವಿನ್ಮಂತ್ರಗಳ ಯಾವ ಪದವನ್ನೂ ಸೇರಿಸಿ ಪಠಿಸಕೂಡದೆಂದಭಿಪ್ರಾಯವು. ಹಾಗೆ ಮಾಡಿದಲ್ಲಿ ನಿವಿತ್‌ಪದವು ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳುವುದು. ಇದಲ್ಲದೆ ಅಧಿಕ ಋಕ್ಸಂಖ್ಯೆಗಳಿರುವ ಸೂಕ್ತಕ್ಕೆ ನಿವಿನ್ಮಂತ್ರದ ಪದವನ್ನು ಸೇರಿಸಿದ ಸಾಮಗಾಯಕರು ಪಠಿಸುವ ಸ್ತೋತ್ರಮಂತ್ರದ ಸಂಖ್ಯೆಗಿಂತ ಶಸ್ತ್ರಮಂತ್ರದ ಸಂಖ್ಯೆಯು ಅಧಿಕವಾಗುವುದು. ಅದು ನಿಷಿದ್ಧವು. ಏಕೆಂದರೆ ಸ್ತೋತ್ರಕ್ಕೂ ಶಸ್ತ್ರಮಂತ್ರಕ್ಕೂ ಮಂತ್ರಸಂಖ್ಯೆಯು ಅನುರೂಪವಾಗಿರಬೇಕು ಎಂದರೆ ಎರಡರಲ್ಲಿಯೂ ಮಂತ್ರಸಂಖ್ಯೆಯು ಸಮನಾಗಿರಬೇಕು. ಕಮ್ಮಿಯಾಗಲಿ ಅಧಿಕವಾಗಲಿ ಇರಕೂಡದು. ಇದು ವಿಧಿಯು.

## ಏಕಾಂ ಪರಿಶಿಷ್ಯ ತೃತೀಯಸವನಂ ನಿವಿದಂ ದಧ್ಯಾತ್

**ತೃತೀಯಸವನೇ ವಿಶೇಷಂ ವಿಧತ್ತೇ—ಸೂಕ್ತೇ ಯೇಯಮೃಗಸ್ತ್ಯಾ ತಾಮವಸ್ಥಾಪ್ಯ ತತಃ ಪೂರ್ವಮೇವ ತೃತೀಯ ಸವನೇ ನಿವಿದಂ ಪ್ರಕ್ಷಿಪೇತ್ ॥**

ಆದರೆ ತೃತೀಯಸವನಕಾಲದಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವಾಗ ಹೋತೃವು ಸೂಕ್ತದಲ್ಲಿ ಕಡೆಯ ಒಂದು ಋಕ್ಕು ಮಾತ್ರ ಉಳಿದಿರುವಾಗ ನಿವಿನ್ಮಂತ್ರಗಳನ್ನು ಪಠಿಸಬೇಕು.

## ಯದ್ವೇ ಪರಿಶಿಷ್ಯ ದಧ್ಯಾತ್ಪ್ರಜನನಂ ತದುಪಹನ್ಯಾದ್ಗರ್ಭೈಸ್ತತ್ಪ್ರಜಾ ವ್ಯರ್ಧಯೇತ್ತಸ್ಮಾದೇಕಾಮೇವ ಪರಿಶಿಷ್ಯ ತೃತೀಯಸವನೇ ನಿವಿದಂ ದಧ್ಯಾತ್

**ವಿಪಕ್ಷಬಾಧಪುರಃಸರಂ ಸ್ವಪಕ್ಷಮುಪಸಂಹರತಿ—ಯದಿ ದ್ವೇ ಋಚೌ ಪರಿಶಿಷ್ಯ ತತಃ ಪುರಾ ನಿವಿದಂ ದಧ್ಯಾತ್ತದಾನೀಂ ಪ್ರಜೋತ್ಪಾದನಸಾಧನಂ ವಿನಾಶಯೇತ್ ॥ ಪುತ್ರಾದಯಃ ಪ್ರಜಾ ಗರ್ಭೈರ್ವ್ಯರ್ಧಯೇದ್ವಿಯುಕ್ತಾಃ ಕುರ್ಯಾತ್ ॥ ಪ್ರಜನನಮುಪಹನ್ಯಾದಿತ್ಯನೇನ ಯಜಮಾನಸ್ಯ ಪ್ರಜೋತ್ಪಾದನರಾಹಿತ್ಯಂ ॥ ಪ್ರಜಾ ವ್ಯರ್ಧಯೇದಿತ್ಯನೇನ ಪೂರ್ವಮುತ್ಪನ್ನಾನಾಂ ಪುತ್ರಾದೀನಾಮುಪತ್ಯರಾಹಿತ್ಯಂ ॥ ತಸ್ಮಾದಿತ್ಯುಪಸಂಹಾರಃ ॥**

ಮೇಲೆ ಹೇಳಿದಂತೆ ಮಾಡದೆ ಎಂದರೆ ಒಂದು ಋಕ್ಕು ಉಳಿದಿರುವಾಗ ನಿವಿನ್ಮಂತ್ರವನ್ನು ಪಠಿಸದೆ ಎರಡು ಋಕ್ಕುಗಳು ಉಳಿದಿರುವಾಗ ನಿವಿನ್ಮಂತ್ರವನ್ನು ಪಠಿಸಿದಲ್ಲಿ ಆಗ ಯಜಮಾನನಿಗೆ ಪುತ್ರಾದಿ ಸಂತಾನವುಂಟಾಗಲು ಅಡಚಣೆಯುಂಟಾಗುವುದು. ಎಂದರೆ ಗರ್ಭದಲ್ಲಿಯೇ ಶಿಶುವು ಮೃತವಾಗಿ ಹುಟ್ಟುವ ಸಂಭವವೂ ಈಗ ಹುಟ್ಟಿ ಬೆಳೆಯುತ್ತಿರುವ ಪುತ್ರಾದಿ ಸಂತತಿಗಳ ನಾಶವೂ ಉಂಟಾಗುವ ಸಂಭವವಿರುವುದು.

ನ ಸೂಕ್ತೇನ ನಿವಿದಮತಿಪದ್ಯೇತ ।

**ಅಥ ನಿವಿದ್ಧಾನೀಯೇನ ಸೂಕ್ತೇನ ನಿವಿದತಿಕ್ರಮಂ ನಿಷೇಧತಿ— ಯತ್ಸೂಕ್ತಂ ನಿವಿದ್ಧಾನಾರ್ಹಂ ನಿವಿದಮತಿಕ್ರಮ್ಯ ತೇನ ಸೂಕ್ತೇನ ನ ಪದ್ಯೇತ ನಿವಿತ್ಪ್ರಕ್ಷೇಪಂ ಪರಿತ್ಯಜ್ಯ ಕೇವಲಂ ತತ್ಸೂಕ್ತಂ ನ ಪಠೇದಿತ್ಯರ್ಥಃ ॥**

ಸೂಕ್ತಕ್ಕೆ ನಿವಿತ್ ಪದವನ್ನು ಸೇರಿಸದೆ ಬಿಟ್ಟು ಕೇವಲ ಸೂಕ್ತವನ್ನೇ (ಮಂತ್ರವನ್ನೇ) ಪಠಿಸಬಾರದು.

ಯೇನ ಸೂಕ್ತೇನ ನಿವಿದಮತಿಪದ್ಯೇತ ನ ತತ್ಪುನರುಪನಿವರ್ತೇತ ವಾಸ್ತುಹಮೇವ ತತ್ ॥

**ಪ್ರಮಾದಾನ್ನಿವಿತ್ಪ್ರಕ್ಷೇಪವಿಸ್ಮೃತೌ ಪುನಸ್ತತ್ಸೂಕ್ತೇ ನಿವಿದಂ ಪ್ರಕ್ಷಿಪ್ಯ ಪಾಠೋ ಭ್ರಾಂತ್ಯಾ ಪ್ರಸಕ್ತಸ್ತಂ ನಿಷೇಧತಿ— ನಿವಿದಮತಿಕ್ರಮ್ಯ ಪರಿತ್ಯಜ್ಯ ನಿವಿತ್ಪ್ರಕ್ಷೇಪಯೋಗ್ಯೇನ ಯೇನ ಸೂಕ್ತೇನ ಪದ್ಯೇತಾನುಷ್ಠಾನಂ ಪ್ರಾಪ್ನುಯಾತ್ತದ್ವಿಸ್ಮೃತನಿವಿತ್ಕಂ ಸೂಕ್ತಂ ಪುನರ್ನೋಪನಿವರ್ತೇತ ಭೂಯೋ ನಿವಿದಂ ಪ್ರಕ್ಷಿಪ್ಯ ನ ಪಠೇತ್ ॥ ತತ್ರ ಹೇತುರುಚ್ಯತೇ ॥ ತದ್ವಿಸ್ಮೃತನಿವಿತ್ಕಂ ಸೂಕ್ತಂ ವಾಸ್ತುಹಮೇವ ॥ ವಾಸ್ತುಶಬ್ದೇನ ನಿವಿದಃ ಸ್ಥಾನಮುಚ್ಯತೇ॥ ತಸ್ಯ ಸ್ಥಾನಸ್ಯ ಘಾತಕಂ ತತ್ಸೂಕ್ತಂ ತತಃ ಪುನಃ ಪಾಠಸ್ಯ ನ ಯೋಗ್ಯಂ ॥**

ಒಂದುವೇಳೆ ಪ್ರಮಾದದಿಂದ ಮಂತ್ರದ ಆದಿಯಲ್ಲಿ ನಿವಿತ್ ಪದವನ್ನು ಸೇರಿಸಲು ಮರೆತುಹೋದಲ್ಲಿ ಆಗ ಮಂತ್ರವನ್ನು ಹಾಗೆಯೇ ಪಠಿಸಿದಲ್ಲಿ ಪುನಃ ಸರಿಮಾಡಬೇಕೆಂಬ ಇಚ್ಛೆಯಿಂದ ಮತ್ತೆ ನಿವಿತ್ ಪದವನ್ನು ಸೇರಿಸಿ ಸೂಕ್ತವನ್ನು ಪುನಃ ಪಠಿಸಬಾರದು. ಕೆಟ್ಟುಹೋದದ್ದನ್ನು ಪುನಃ ಸರಿಪಡಿಸಲು ಪ್ರಯತ್ನಿಸಬಾರದು ಎಂದರೆ ನಿವಿತ್ ಪದವಿಲ್ಲದೆ ಪಠಿಸಿದ ಸೂಕ್ತಕ್ಕೆ ಬದಲಾಗಿ ಮತ್ತೊಂದಾವರ್ತಿ ನಿವಿತ್ ಪದವನ್ನು ಸೇರಿಸಿ ಅದೇ ಸೂಕ್ತವನ್ನು ಪಠಿಸಲು ಪ್ರಯತ್ನಮಾಡಬಾರದು. ಏಕೆಂದರೆ ನಿವಿತ್ ಪದಕ್ಕೆ ಯಾವ ಸ್ಥಾನವಿರಬೇಕೋ ಅದನ್ನು ನಾಶಮಾಡಿದಂತಾಗುವುದು ವಾಸ್ತು ಎಂದರೆ ನಿವಿತ್ಪದದ ಸ್ವಂತ ಸ್ಥಾನವು. ಹ ಎಂದರೆ ನಾಶವು. ಘಾತುಕವು ವಾಸ್ತುಹಂ ಎಂದರೆ ಅದರ (ನಿವಿತ್ಪದದ) ಸ್ವಸ್ಥಾನವನ್ನು ಘಾತಿಸಿದಂತಾಗುವುದು. ಈಗ ಏನುಮಾಡಬೇಕೆಂಬ ವಿಷಯವನ್ನು ತಿಳಿಸುತ್ತಾರೆ.

ಅನ್ಯತ್ತದ್ದೈವತಂ ತಚ್ಛಂದಸಂ ಸೂಕ್ತಮಾಹೃತ್ಯ ತಸ್ಮಿನ್ನಿವಿದಂ ದಧ್ಯಾತ್ ॥

**ಕಾ ತರ್ಹಿ ತದಾನೀಂ ನಿವಿದೋ ಗತಿರಿತ್ಯಾಶಂಕ್ಯಾಹ— ಪೂರ್ವಸ್ಯ ನಿವಿದ್ಧಾನೀಯಸ್ಯ ಸೂಕ್ತಸ್ಯ ದೇವತಾ ಯಾದೃಶೀ ಛಂದಶ್ಚ ಯಾದೃಶಂ ತಥಾ ವಿಧಾಭ್ಯಾಂ ದೇವತಾಚ್ಛಂದೋಭ್ಯಾಂ ಯುಕ್ತಮನ್ಯತ್ಕಿಂಚಿತ್ಸೂಕ್ತಮಾಹೃತ್ಯ ತಸ್ಮಿನ್ಸೂಕ್ತೇ ನಿವಿದಂ ಪ್ರಕ್ಷಿಪೇತ್ ॥**

ನಿವಿದ್ ಪದವು ಬಿಟ್ಟುಹೋಗಿ ಕೇವಲ ಸೂಕ್ತವನ್ನೇ ಪಠಿಸಿದ ಸಂದರ್ಭದಲ್ಲಿ(ಮೇಲೆ ಹೇಳಿದ ಸಂದರ್ಭದಲ್ಲಿ) ಆ ಸೂಕ್ತದಂತಿರುವ ಮತ್ತೊಂದು ಸೂಕ್ತವನ್ನು ಎಂದರೆ ಅದೇ ದೇವತೆ, ಅದೇ ಛಂದಸ್ಸು ಇರುವ ಮತ್ತೊಂದು ಸೂಕ್ತವನ್ನು ಆರಿಸಿ ಅದಕ್ಕೆ ಬಿಟ್ಟುಹೋಗಿದ್ದ ನಿವಿತ್ ಪದವನ್ನು ಮೊದಲು ಸೇರಿಸಿ ಅನಂತರ ಸೂಕ್ತವನ್ನು ಪಠಿಸಬೇಕು.

**ಮಾ ಪ್ರ ಗಾಮ ಪಥೋ ವಯಮಿತಿ ಪುರಸ್ತಾತ್ಸೂಕ್ತಸ್ಯ ಶಂಸತಿ ॥**

**ತತ್ರ ಕಂಚಿದ್ವಿಶೇಷಂ ವಿಧತ್ತೇ—ಯಸ್ಮಿನ್ನಾಹೃತೇ ನೂತನೇ ಸೂಕ್ತೇ ನಿವಿತ್ಪ್ರಕ್ಷಿಪ್ಯತೇ ತಸ್ಯ ಪುರಸ್ತಾತ್ತತ್ಪಾಠಾತ್ಪೂರ್ವಂ ಮಾ ಪ್ರ ಗಾಮೇತಿ ಸೂಕ್ತಂ ಶಂಸೇತ್॥ ವಯಂ ಹೋತಾರಃ ಪಥಃ ಶಂಸನಮಾರ್ಗಾತ್ಪರಿಭ್ರಷ್ಟಾಃ ಸಂತೋ ಮಾ ಗಾಮ ಪ್ರಭ್ರಂಶಂ ಮಾ ಪ್ರಾಪ್ನವಾಮೇತಿ ತಸ್ಯ ಪಾದಸ್ಯಾರ್ಥಃ ॥ ಮಾರ್ಗಭ್ರಂಶದೋಷೋಽಸ್ಮಾಕಂ ಮಾ ಭೂದಿತ್ಯಭಿಪ್ರಾಯಃ ॥**

ಈ ಕ್ರಮದಲ್ಲಿ ಒಂದು ವಿಶೇಷಸಂಗತಿ ಇರುವುದು. ಅದನ್ನು ತಿಳಿಸುತ್ತಾರೆ—ಹೊಸದಾಗಿ ಆರಿಸಿ ಪಠಿಸಬೇಕಾದ ಸೂಕ್ತವನ್ನು ಪಠಿಸುವಾಗ ನಿವಿತ್ ಪದಪ್ರಕ್ಷೇಪಾನಂತರ ನೂತನ ಸೂಕ್ತವನ್ನು ಪಠಿಸುವುದಕ್ಕೆ ಮುಂಚೆ, **ಮಾ ಪ್ರ ಗಾಮ ಪಥೋ ವಯಂ** (ಋ.ಸಂ. ೧೦-೫೭-೧) ಎಂಬ ಸೂಕ್ತವನ್ನು ಪಠಿಸಬೇಕು. ಇದರ ಅರ್ಥವು—ಹೋತೃಗಳಾದ ನಾವು ಮಂತ್ರಗಳನ್ನು ಪಠಿಸುವಾಗ ನಿಯೋಜಿತವಾದ ಮಾರ್ಗವನ್ನು ಬಿಟ್ಟುಹೋಗಿ ಭ್ರಷ್ಟರಾಗದಿರಲಿ ಎಂದು ಈ ಮಂತ್ರದ ಅರ್ಥವು. ಯಜ್ಞಕಾರ್ಯಕ್ರಮಗಳಲ್ಲಿ ನಾವು ಸರಿಯಾದ ಮಾರ್ಗವನ್ನು ಅತಿಕ್ರಮಿಸದಿರಲಿ ಎಂದಭಿಪ್ರಾಯವು.

**ಪಥೋ ವಾ ಏಷ ಪ್ರೈತಿ ಯೋ ಯಜ್ಞೇ ಮುಹ್ಯತಿ ಮಾ ಯಜ್ಞಾ-ದಿಂದ್ರ ಸೋಮಿನ ಇತಿ ಯಜ್ಞಾದೇವ ತನ್ನ ಪ್ರಚ್ಯವತೇ ।**

**ದ್ವಿತೀಯಪಾದಸ್ಯ ತಾತ್ಪರ್ಯಂ ದರ್ಶಯತಿ—ಮಾ ಯಜ್ಞಾದಿತ್ಯಾದಿರ್ದ್ವಿತೀಯಃ ಪಾದಸ್ತಸ್ಯಾಯಮರ್ಥಃ । ಹೇ ಇಂದ್ರ ಸೋಮಿನಃ ಸೋಮಯುಕ್ತಾದ್ಯಜ್ಞಾನ್ಮಾ ಪ್ರ ಗಾಮೇತ್ಯನುವರ್ತತೇ ಪ್ರಭ್ರಂಶಂ ಮಾ ಪ್ರಾಪ್ನವಾಮೇತಿ ॥ ಯಃ ಪುಮಾನ್ಯಜ್ಞೇ ಮುಹ್ಯತಿ ಭ್ರಾಂತಿಂ ಪ್ರಾಪ್ನೋತಿ ಏವ ಪುಮಾನವಶ್ಯಂ ಪಥಃ ಪ್ರೈತ್ಯೇವ ಮಾರ್ಗಾದ್ಭ್ರಶ್ಯತ್ಯೇವ । ಅತೋ ಮಾ ಪ್ರ ಗಾಮ ಪಥ ಇತ್ಯೇವತಾ ನ ಪರ್ಯಾಪ್ತಂ ಕಿಂತು ಮಾರ್ಗಭ್ರಂಶಪರಿಹಾರದಾರ್ಢ್ಯಾರ್ಥಂ ಮಾ ಯಜ್ಞಾದಿತ್ಯಪಿ ಪಠನೀಯಂ ॥ ತತ್ಪಾದಪಾಠೇನಾಯಂ ಯಜ್ಞಾನ್ನ ಪ್ರಚ್ಯವತೇ ॥ ಅಥ ವಾ ಪಥೋ ವಾ ಏಷ ಇತ್ಯರ್ಥವಾದಃ ಪೂರ್ವಪಾದಶೇಷತ್ವೇನ ವ್ಯಾಖ್ಯೇಯಃ ॥**

ಮೇಲೆ ಹೇಳಿದ **ಮಾ ಪ್ರ ಗಾಮ** ಎಂಬ ಋಕ್ಕಿನ ಎರಡನೇ ಪಾದದ ಅರ್ಥವನ್ನು ವಿವರಿಸುವರು. ಈ ಋಕ್ಕಿನ ಎರಡನೆಯ ಪಾದವು—**ಮಾ ಯಜ್ಞಾದಿಂದ್ರ ಸೋಮಿನಃ** । ಎಂಬುದು. ಇದರ ಅರ್ಥವು ಎಲೈ ಇಂದ್ರನೇ, ಸೋಮರಸದಿಂದ ಸಿದ್ಧಪಡಿಸಲ್ಪಟ್ಟಿರುವ ಈ ಯಜ್ಞದಿಂದ ಭ್ರಷ್ಟರಾಗದಿರಲಿ ಎಂದರೆ ಭ್ರಾಂತಿಯುಕ್ತರಾಗಿರದಂತಿರಲಿ. ನಮಗೆ ಭ್ರಾಂತಿಯುಂಟಾಗದಿರಲಿ ಎಂದು ಇದರ ಅರ್ಥವು. ಯಾವ ಪುರುಷನು ಭ್ರಾಂತಿಯಿಂದ ಯಜ್ಞಕಾರ್ಯಗಳಲ್ಲಿ ತಪ್ಪಿ ನಡೆಯುವನೋ ಅವನ ಯಜ್ಞವು ಸರಿಯಾದ ರೀತಿಯಲ್ಲಿ ನಡೆಯಲು ಸಾಧ್ಯವಿಲ್ಲ. ಪ್ರಯಾಣದಲ್ಲಿ ನಿರತನಾದ ಪ್ರಯಾಣಿಕನು ಸರಿಯಾದ ಮಾರ್ಗದಲ್ಲಿ ಹೋಗದಿದ್ದರೆ ನಿರ್ದಿಷ್ಟಪ್ರದೇಶವನ್ನು ತಲುಪುವುದಿಲ್ಲ. ಅದರಂತೆ ಯಜ್ಞಮಾಡುವಾಗಲೂ ಸರಿಯಾದ ಕ್ರಮಗಳನ್ನು

ಅನುಸರಿಸದಿದ್ದರೆ ಯಜ್ಞವು ನಿರ್ವಿಘ್ನವಾಗಿ ಸಾಗಿ ಉದ್ದಿಷ್ಟಫಲವನ್ನು ಕೊಡುವುದಿಲ್ಲ. ಆದ್ದರಿಂದ ಸರಿಯಾದ ಮಾರ್ಗದಲ್ಲಿ ನಡೆಯಬೇಕು.

ಮಾಂತಃ ಸ್ಥುರ್ನೋ ಅರಾತಯ ಇತ್ಯರಾತೀಯತ ಏವ ತದಪಹಂತಿ ।

ತೃತೀಯಪಾದಮನೂದ್ಯ ವ್ಯಾಚಷ್ಟೇ— ನೋಽಸ್ಮಾಕಮಂತರ್ಮಧ್ಯೇ ಅರಾತಯಃ ಶತ್ರವೋ ಮಾ ಸ್ಥುರ್ಮಾ ತಿಷ್ಠಂತು ॥ ತತ್ಪಾದಪಾಠೇನಾರಾತೀಯತಃ ಶತ್ರುತ್ವಮಿಚ್ಛತ ಏವ ಪುರುಷಾನಪಹಂತಿ ।

ಈ ಋಕ್ಕಿನ ಮೂರನೆಯ ಪಾದವನ್ನು ವಿವರಿಸುವರು—(ಯಜ್ಞಮಾಡುವ) ನಮ್ಮಗಳ ಮಧ್ಯದಲ್ಲಿ ಶತ್ರುಗಳ (ಎಂದರೆ ಯಜ್ಞಕ್ಕೆ ವಿಘ್ನವನ್ನುಂಟುಮಾಡುವವರು) ಇರದಂತಾಗಲಿ ಎಂದು ಈ ಪಾದದ ಅರ್ಥವು. ಇದರ ಪಠನದಿಂದ ಯಜ್ಞಕ್ಕೆ ವಿಘಾತವನ್ನುಂಡುಮಾಡಬೇಕೆಂದು ಇಚ್ಛಿಸುವ ಶತ್ರುಗಳಿದ್ದಲ್ಲಿ ಅವರು ನಾಶವನ್ನೈದುವರು.

ಯೋ ಯಜ್ಞಸ್ಯ ಪ್ರಸಾಧನಸ್ತಂತುರ್ದೇವೇಷ್ವಾತತಃ । ತಮಾಹುತಂ ನಶೀಮಹೀತಿ ಪ್ರಜಾ ವೈ ತಂತುಃ ಪ್ರಜಾಮೇವಾಸ್ಮಾ ಏತತ್ಸಂತನೋತಿ ॥

ತಸ್ಮಿನ್ಸೂಕ್ತೇ ದ್ವಿತೀಯಾಮೃಚಮನುವದತಿ— ಯಃ ಪುತ್ರೋ ಯಜ್ಞಸ್ಯ ಪ್ರಸಾಧನಃ ಕುಲಪಾರಂಪರ್ಯೇಣ ಯಜ್ಞಸ್ಯ ಪ್ರಕರ್ಷೇಣ ಸಾಧಕೋಽತಏವ ತಂತುರ್ದೇವೇಷ್ವಾತತೋ ದೀರ್ಘತಂತುರಿವ ದೇವೇಷು ವಿಸ್ತಾರಿತಸ್ತಂ ತಥಾವಿದಂ ಪುತ್ರ ಮಾಹುತಂ ಆಹ್ವಾನೇನ ಸಂಪಾದಿತದೇವತಂ ನಶೀಮಹಿ । ಅತ್ರ ನಿಷೇಧಾರ್ಥಃ ಕಶ್ಚಿನ್ನಕಾರೋಽಧ್ಯಾಹರ್ತವ್ಯಃ ॥ ನೈವ ನಾಶಯಾಮ ಇತ್ಯರ್ಥಃ । ಅಸ್ಮಾಭಿಃ ಪ್ರಮಾದೇ ಕೃತೇಽಪ್ಯಸ್ಮತ್ಪುತ್ರಸ್ಯ ದೇವೇಷು ಪ್ರಚಾರಾತ್ಸ ಪ್ರಮಾದಃ ಸಮಾಧೀಯತ ಇತ್ಯರ್ಥಃ ॥ ಅತ್ರ ತಂತುಶಬ್ದಸ್ಯ ತಾತ್ಪರ್ಯಂ ದರ್ಶಯತಿ-ಕುಲಾಚಾರಾದೇರವಿಚ್ಛೇದಹೇತುತ್ವಾತ್ಪುತ್ರರೂಪಾ ಪ್ರಜಾ ತಂತುಶಬ್ದೇನೋಚ್ಯತೇ ॥ ತಥಾ ಸತ್ಯೇತತ್ಪಾಠೇನ ಪ್ರಜಾಮೇವ ಪುತ್ರಾದಿರೂಪಾಮಸ್ಮೈ ಯಜಮಾನಾಯ ಸಂತನೋತ್ಯವಿಚ್ಛಿನ್ನಾಂ ಕರೋತಿ ॥

ಈ ಸೂಕ್ತದಲ್ಲಿ ಎರಡನೆಯ ಋಕ್ಕಿನ ಅರ್ಥವಿವರಣೆ ಮಾಡುವರು-ಮೇಲಿನ ವಾಕ್ಯದಲ್ಲಿರುವುದೇ ಎರಡನೆಯ ಋಕ್ಕು. ಇದರ ಅರ್ಥವು ಈ ರೀತಿ ಇರುವುದು. ಯಜ್ಞಕ್ಕೆ ಉತ್ತಮರೀತಿಯಿಂದ ಅನುಕೂಲಗಳನ್ನು ಒದಗಿಸಿ ಯಜ್ಞವನ್ನು ಚೆನ್ನಾಗಿ ನಿರ್ವಹಿಸುವನೋ ಮತ್ತು ದೇವತೆಗಳಲ್ಲಿ ಯಾವ ನಮ್ಮ ಪುತ್ರನು ಆಹ್ವಾನಮಾಡಿ ಉಪಚರಿಸುವನೋ ಅಂತಹ ಸುಪುತ್ರನನ್ನು ನಾವು ಕಳೆದುಕೊಳ್ಳದಂತಾಗಲಿ. ಎಂದರೆ ನಮ್ಮ ಪುತ್ರರಲ್ಲಿ ಯೋಗ್ಯನಾದವನು ಯಜ್ಞಕ್ಕೆ ಬೇಕಾದ ಸಾಧನಸಂಪತ್ತುಗಳನ್ನು ಒದಗಿಸಲು ಸಮರ್ಥನು. ದೇವತೆಗಳನ್ನು ತೃಪ್ತಿಪಡಿಸುವುದರಲ್ಲಿ ನಮ್ಮ ವಂಶವು ಅವಿಚ್ಛಿನ್ನವಾಗಿ (ಸಂತತವಾಗಿ) ನಡೆದು ಬರುವಂತೆಯೂ ಯಜ್ಞಾದಿ ಕಾರ್ಯಗಳು ವಿಸ್ತಾರವಾಗಿ ಎಂದರೆ ಮೊದಲಿಗಿಂತಲೂ ವಿಜೃಂಭಣೆಯಿಂದ ನೆರವೇರಲು ಕಾರ್ಯದಕ್ಷನಾಗಿಯೂ, ದೇವತೆಗಳನ್ನು ಯಜ್ಞಾದಿಗಳಲ್ಲಿ ಆಹ್ವಾನಮಾಡುವವನಾಗಿಯು ಇರುವನು. ಇಂತಹ ಸುಪುತ್ರನನ್ನು ನಾವು

ವಿಸ್ಮೃತಿಯಿಂದ ಎಂದರೆ ಮಂತ್ರಪಠನಾದಿಗಳಲ್ಲಿ ಲೋಪದೋಷಗಳನ್ನುಂಟು ಮಾಡುವುದರಿಂದ ನಾವು ಕಳೆದುಕೊಳ್ಳದಂತಾಗಲಿ. ಏಕೆಂದರೆ ಮಂತ್ರಪಠನದಲ್ಲಿ ಲೋಪದೋಷಗಳುಂಟಾದರೆ ಅದರಿಂದ ಪುತ್ರಾದಿ ಸಂತತಿಗೆ ಕೇಡುಂಟಾಗುವುದು ಎಂದು ಹಿಂದೆಯೇ ಹೇಳಿದೆಯಷ್ಟೆ. ಆ ವಿಧವಾದ ನ್ಯೂನತೆಗಳು ನಮ್ಮ ಯಜ್ಞದಲ್ಲಿ ಸಂಭವಿಸದಿರಲಿ ಎಂದು ಮುಖ್ಯಾಭಿಪ್ರಾಯವು. ಇಲ್ಲಿ **ತಂತುರ್ದೇವೇಷ್ವಾತತಃ** ಎಂಬ ಶಬ್ದಗಳಿಗೆ ವಿವರಣೆಯು ಅವಶ್ಯಕವು. ತಂತು ಎಂದರೆ ದಾರವು ಬಟ್ಟೆಯನ್ನು ನೇಯುವಾಗ ದಾರವು ಕಿತ್ತುಹೋದರೆ ಬಟ್ಟೆಯು ಸರಿಯಾಗಿ ಉತ್ಪನ್ನವಾಗುವುದಿಲ್ಲ. ಚೆನ್ನಾಗಿ ಆಗಬೇಕೆಂಬ ಬಟ್ಟೆಗೆ ಮಧ್ಯದಲ್ಲಿ ದಾರವು ಕಿತ್ತು ಹೋಗದಿರುವುದು ಅವಶ್ಯಕವು. ಆದರಂತೆಯೇ ನಾವು, ನಮ್ಮ ಸಂತತಿಯಾದ ಪುತ್ರ-ಪೌತ್ರಾದಿಗಳಿಂದ ಸಹಿತವಾದ ವಂಶವು ಅವಿಚ್ಛಿನ್ನವಾಗಿ ನಡೆದು ಬರುತ್ತಿರಬೇಕು. ಅಷ್ಟೇ ಅಲ್ಲದೆ ನಾವು ಮಾಡುತ್ತಿರುವ ಯಜ್ಞಾದಿಗಳನ್ನೂ ದೇವತಾಹ್ವಾನವನ್ನೂ ನಾವು ಮಾಡುತ್ತಿರುವಂತೆಯೇ ನಮ್ಮ ಕಾಲಾನಂತರ ನಮ್ಮ ಪುತ್ರರೂ ಅವರ ಕಾಲಾನಂತರ ಅವರ ಪುತ್ರರೂ (ನಮ್ಮ ಪೌತ್ರರು) ನಮ್ಮಂತೆಯೇ ನಡೆಸಿಕೊಂಡು ಬರಬೇಕು. ಈ ರೀತಿಯಾಗಿ ವಂಶದಲ್ಲಿ ಯಾರಿಂದಲೂ ಯಜ್ಞಾದಿಕಾರ್ಯಗಳು ನಿಲ್ಲಿಸಲ್ಪಡದೆ ನಡೆದುಕೊಂಡು ಹೋಗುವುದಕ್ಕೆ ಅವಿಚ್ಛಿನ್ನ ಅಥವಾ ಸಂತತವಾಗಿ ಸಾಗುವುದು. ಎಂಬರ್ಥವು ಸೂಚಿತವಾಗುತ್ತದೆ. ಇದೇನೆ ಇಲ್ಲಿ ತಂತು ಶಬ್ದದ ಹೋಲಿಕೆಯಿಂದ ವರ್ಣಿಸಲಾಗಿದೆ. ಇದರ ಹಾಗೆಯೇ **ಆತತಃ ವಿಸ್ತೃತಃ** ಎಂಬ ಶಬ್ದಕ್ಕೂ ಅರ್ಥವಿವರಣೆ ಇರುವುದು. ವಿಸ್ತೃತ ಎಂದರೆ ಕಾರ್ಯಕಲಾಪಗಳಲ್ಲಿ ಈಗಿರುವುದಕ್ಕಿಂತಲೂ ಕಡಿಮೆಯಾಗಿದೆ ಇನ್ನೂ ಹೆಚ್ಚು ವಿಜೃಂಭಣೆ ಯಿಂದ ನಡೆಯುವಂತಾಗಲೆಂಬ ಅರ್ಥವನ್ನು ಸೂಚಿಸುವುದು. ಇಲ್ಲಿ ಯಜಮಾನನಿಗೆ ಪ್ರಜೆಗಳೇ ಎಂದರೆ ಪುತ್ರಪೌತ್ರಾದಿಗಳೇ ತಂತುರೂಪದಲ್ಲಿರುವರು (ದಾರದಂತಿರುವರು) ಯಜ್ಞದಲ್ಲಿ ನ್ಯೂನತೆಗಳಿಲ್ಲದಿದ್ದರೆ ಯಜಮಾನರ ಪುತ್ರಪೌತ್ರಾದಿಗಳು ಅವಿಚ್ಛಿನ್ನ ವಾಗಿ ವೃದ್ಧಿಯನ್ನುಹೊಂದಿ ಅವನ ಸಂತತಿಯು ಯಾವಾಗಲೂ ಅಭಿವೃದ್ಧಿಯನ್ನೇ ಹೊಂದುತ್ತಿರುವುದು.

**ಮನೋ ನ್ವಾಹುವಾಮಹೇ ನಾರಾಶಂಸೇನ ಸೋಮೇನೇತಿ ಮನಸಾ ವೈ ಯಜ್ಞಸ್ತಾಯತೇ ಮನಸಾ ಕ್ರಿಯತೇ ॥**

ತೃತೀಯಸ್ಯಾ ಋಚಃ ಪೂರ್ವಾರ್ಧಮನುವದತಿ—ಆಪ್ಯಾಯಿತಾಶ್ಚಮಸಾ ನಾರಾಶಂಸಾಸ್ತತ್ಸಂಬಂಧಿನಾ ಸೋಮೇನ ನು ಕ್ಷಿಪ್ರಮೇವ ಮನೋಽಸ್ಮದೀಯಮಾಹುವಾಮಹೇ ಆಹ್ವಯಾಮಿ॥ ಅಸ್ಯಾರ್ಥಸ್ಯ ತಾತ್ಪರ್ಯಂ ದರ್ಶಯತಿ—ಸರ್ವೋ ಯಜ್ಞೋ ಮನಸೈವ ತಾಯತೇ ವಿಸ್ತಾರ್ಯತೇ ಮನಃಪೂರ್ವಕತ್ವಾದಿತರೇಂದ್ರಿಯಪ್ರವೃತ್ತೇಸ್ತಸ್ಮಿಂಶ್ಚ ಪ್ರಸಾರಿತೇ ಯಜ್ಞೇ ಯೋ ಯಃ ಕರ್ತವ್ಯವಿಶೇಷೋಽಸ್ತಿ ಸ ಸರ್ವೋಽಪಿ ಮನಸಾ ಕ್ರಿಯತೇ ತಸ್ಮಾನ್ಮನಸ ಆಹ್ವಾನಂ ಯಾಗೇ ಜ್ಞಾನೇ ವಾ ಯುಕ್ತಂ ॥

ಈಗ ಸೂಕ್ತದ ಮೂರನೇ ಋಕ್ಕಿನ ಪೂರ್ವಾರ್ಧವನ್ನು ವಿವರಿಸುವರು. ಇಲ್ಲಿ **ನಾರಾಶಂಸ**ವೆಂದರೆ ಸೋಮವನ್ನು ಸಂಸ್ಕಾರಮಾಡಿ ಚಮಸವೆಂಬ ಪಾತ್ರೆಯಲ್ಲಿ ಸಿದ್ಧಪಡಿಸಿಟ್ಟಿರುವ ಸೋಮವೆಂದರ್ಥವು. ಈ ವಿಧವಾದ ಸೋಮದಿಂದ (ಅಥವಾ ಸೋಮಪಾನದಿಂದ) ನಮ್ಮ ಮನಸ್ಸು ಸ್ಥಿಮಿತವಾಗಿ ಸಂತೋಷಗೊಳ್ಳುವುದು. ಇಂತಹ ಮನಸ್ಸು ನಮಗೆ ಉಂಟಾಗಲೆಂದು ಮನಸ್ಸನ್ನು ನಾವು ಆಹ್ವಾನಿಸುವೆವು. ಏಕೆಂದರೆ ಪ್ರಸನ್ನಾತ್ಮಕವಾದ ಮನಸ್ಸಿನಿಂದಲೇ ಯಜ್ಞವು ಈರೀತಿ ಮಾಡಲ್ಪಡಬೇಕೆಂದು ಆಲೋಚಿಸಲಾಗುತ್ತದೆ. ಮನಸ್ಸಿನಿಂದಲೇ ನೆರವೇರಿಸಲ್ಪಡುತ್ತದೆ.

**ಸೈವ ತತ್ರ ಪ್ರಾಯಶ್ಚಿತ್ತಿಃ ಪ್ರಾಯಶ್ಚಿತ್ತಿಃ ॥**

ಅಸ್ಯ ಸೂಕ್ತಸ್ಯ ಪ್ರಥಮತಃ ಪಾಠೇ ಪ್ರಯೋಜನಂ ದರ್ಶಯತಿ—ಮಾ ಪ್ರ ಗಾಮೇತ್ಯಾದಿಸೂಕ್ತಸ್ಯೋಕ್ತಿರೇವ ನಿವಿದತಿಕ್ರಮರೂಪಪ್ರತ್ಯವಾಯಸ್ಯ ಪ್ರಾಯಶ್ಚಿತ್ತಿಃ ॥ ಅಭ್ಯಾಸೋಽಧ್ಯಾಯಸಮಾಪ್ತ್ಯರ್ಥಃ ॥

ಯಜ್ಞಕರ್ಮಾನುಷ್ಠಾನಗಳಲ್ಲಿ ಏನಾದರೂ ನ್ಯೂನಾತಿರಕ್ತಲೋಪದೋಷಗಳುಂಟಾದರೆ ಮೇಲೆ ಹೇಳಿದ **ಮಾ ಪ್ರ ಗಾಮ ಪಥೋ ವಯಂ** (ಋ. ಸಂ. ೧೦-೫೭) ಎಂಬ ಸೂಕ್ತವನ್ನು ಇದುವರೆಗೂ ಹೇಳಿದ ರೀತಿಯಿಂದಲೇ ಪಠಿಸಿ ಕಾರ್ಯನಿರ್ವಹಣೆಯನ್ನು ಮಾಡಬೇಕು. ಇದೇ ಪ್ರಾಯಶ್ಚಿತ್ತಿಯು. ಅಧ್ಯಾಯ ಸಮಾಪ್ತಿಯಾದ್ದರಿಂದ ಪ್ರಾಯಶ್ಚಿತ್ತಿಯೆಂಬ ಪದವನ್ನು ಎರಡಾವರ್ತಿ ಪಠಿಸಲಾಗಿದೆ.



## *English Translation*

**(How the Nivids should be repeated. How to correct mistakes arising from confusion).**

The Nivids are deities connected with the sun. When they are put at the morning libation at the beginning (of the Shastras,) at the midday libation in the midst, and at the evening libation at the end, then they follow the regular course of the sun.

The gods had obtained (once) one portion of the sacrifice after the other (pach-chhas). Thence the Nivids are repeated pada by pada. When the gods had obtained the (whole of the) sacrifice, a horse came out of it. Thence they say, the sacrificer ought to give a horse to the reciter of the Nivids. By doing so (presenting a horse) they present really the most exquisite gift (to the reciter).

The reciter (of the Nivid) ought not to forego any of its padas. Should he do so, he would make a rupture in the sacrifice ; if this (rupture increases,) the sacrificer then becomes guilty of the consequences of a great sin. Thence the reciter ought not to forego any of the padas of the Nivid.

He ought not to invert the order of the two padas of the Nivid. Should he do so, he would confound the sacrifice and the sacrificer would become confounded. Thence he ought not to invert the order of two padas.

He ought not to take together two padas of the Nivid. Should he do so, he would confound the sacrifice, which would prove fatal to the sacrificer. Thence he ought not to take together are two padas of the Nivid when repeating it.

He ought to take together only the two padas, predam brahma and predam kshatram. If he do so, it is done for joining together the Brahma and the Kshatra. Thence the Brahma and Kshatra become joined.

He ought, for the insertion of the Nivid, to select hymns consisting of more than a triplet, or stanza of four verses ; for the several padas of the Nivid ought to correspond, each to the several verses in the hymn. Thence he ought for the insertion of the Nivid to select hymns consisting of more than of stanzas with three or four verses. Through the Nivid the celebration of the Saman is made excessive.

At the eveniug libation he ought to put the Nivid when only one verse (of the Shastra) remains (to be recited.) Should he recite the Nivid when two verses (of the Shastra) are still remaining, he would thus destroy the faculty of generation, and deprive the offspring of their embryos. Thence he ought to repeat the Nivid at the evening libation when only one verse (of the Shastra) remains (to be recited.)

He ought not to let fall tha Nivid beyond the hymn (to which it belongs). Should he, however, do it, he ought not to revert to it again(not to use the hymn), the place (where the Nivid is to be put) being destroyed. He ought (in such a case) to select another hymn which is addressed to the same deity and in the same metre, to put the Nivid into it.

(In such a case) he ought before (repeating the new) Nivid hymn, to recite the hymn : ma pragama patho vayam (10, 57) i. e., let us not go astray. For he loses his way who gets confounded at a sacrifice. (By repeating the second pada) ma yajnad indra sominah (10, 57, 1) i. e., (let us not lose) O Indra, the Soma sacrifice, he prevents the sacrificer from falling out of the sacrifice.(By repeating the third pada) ma antah sthur no aratayah, i. e., " May no wicked men stand among us ! " he turns away all who have wicked designs and defeats them.

In the second verse (of this hymn) yo yajnasya prasadhanas tantur i, e., "Let us recover the same thread which serves for the performance of sacrifice, and is the express in tantar (thread) means offspring spread among the gods by means of which was (hitherto) sacrifiiced (by us.) By repeating it the Hotar spreads (saṃtanoti) offspring for the sacrificer.

(The words of the third verse are) mano nu a huvamahe naras amsena somena i. e., " Now we bring an offering to the mind (manas)by pouring water in the Soma cups (devoting them thus to Narasamsa)."

By means of the mind the sacrifice is spread ; by means of the mind it is performed. This is verily the atonement at that occasion(for the mistake pointed out above).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಸ್ಯ ಏಕಾದಶಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ಏಕಾದಶಾಧ್ಯಾಯಃ ಸಮಾಪ್ತಃ

ಇಲ್ಲಿಗೆ ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಹನ್ನೊಂದನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು ಸಮಾಪ್ತವಾದುದು.

ಹನ್ನೊಂದನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ದ್ವಾದಶೋಽಧ್ಯಾಯೇ ಪ್ರಥಮಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಮರುತ್ವತೀಯ ಮತ್ತು ನಿಷ್ಕೇವಲ್ಯಶಸ್ತ್ರಗಳ ವಿವರಣೆಯು]



[ಆಹಾವ ಮತ್ತು ಪ್ರತಿಗರ ಎಂಬ ವಿಚಾರ]



**ದೇವವಿಶಃ ಕಲ್ಪಯಿತವ್ಯಾ ಇತ್ಯಾಹುಶ್ಛಂದಶ್ಛಂದಸಿ ಪ್ರತಿಷ್ಠಾಪ್ಯಮಿತಿ ಶೋಂಸಾವೋಮಿತ್ಯಾಹ್ವಯತೇ ಪ್ರಾತಃಸವನೇ ತ್ರ್ಯಕ್ಷರೇಣ ಶಂಸಾಮೋದೈವೋಮಿತ್ಯಧ್ವರ್ಯುಃ ಪ್ರತಿಗೃಣಾತಿ ಪಂಚಾಕ್ಷರೇಣ ತದಷ್ಟಾಕ್ಷರಂ ಸಂಪದ್ಯತೇಽಷ್ಟಾಕ್ಷರಾ ವೈ ಗಾಯತ್ರೀ ಗಾಯತ್ರೀಮೇವ ತತ್ಪುರಸ್ತಾತ್ಪ್ರಾತಸ್ಸವನೇಽಚೀಕ್ಲೃಪತಾಂ ಉಕ್ಥಂ ವಾಚೀತ್ಯಾಹ ಶಸ್ತ್ವಾ ಚತುರಕ್ಷರಮೋಮುಕ್ಥಶಾ ಇತ್ಯಧ್ವರ್ಯುಶ್ಚತುರಕ್ಷರಂ ತದಷ್ಟಾಕ್ಷರಂ ಸಂಪದ್ಯತೇಽಷ್ಟಾಕ್ಷರಾ ವೈ ಗಾಯತ್ರೀ ಗಾಯತ್ರೀಮೇವ ತದುಭಯತಃ ಪ್ರಾತಃಸವನೇಽಚೀಕ್ಲೃಪತಾಂ ॥**

ಏಕಾದಶೇಽಥ ಪ್ರಉಗಪ್ರಶಂಸಾ ತತೋ ವಷಟ್ಕಾರಮನುಸ್ತುತಿಂ ಚ ॥
ತತ್ಕರ್ತುರಾತ್ಮನ್ಯನುಮಂತ್ರಣಂ ಚ ತತೋ ನಿವಿತ್ಪ್ರೈಷ ವಿಶೇಷಮಾಹುಃ ॥

ಅಥಾಹಾವಪ್ರತಿಗರಾದಯೋ ವಕ್ತವ್ಯಾಸ್ತತ್ರ ಪ್ರಾತಃಸವನೇ ಹೋತುರಾಹಾವವಚನಮಧ್ವರ್ಯೋಃ ಪ್ರತಿಗರಂ ಚ ವಿಧತ್ತೇ— ದೇವವಿಶೋ ದೇವಾನಾಂ ಸಂಬಂಧಿನ್ಯಃ ಪ್ರಜಾಃ ಸೈನ್ಯರೂಪಾಃ ಕಲ್ಪಯಿತವ್ಯಾಃ ಸಂಪಾದನೀಯಾ ಇತಿ ಬ್ರಹ್ಮವಾದಿನ ಆಹುಃ ॥ ತತ್ಕಥಂ ಸಂಪಾದನಮಿತಿ ತದುಚ್ಯತೇ ॥ ಏಕಂ ಛಂದೋಽನ್ಯಸ್ಮಿಂಶ್ಛಂದಸಿ ಪ್ರತಿಷ್ಠಾಪನೀಯಂ । ತಥಾ ಸತಿ ದೇವವಿಶಃ ಸಂಪದ್ಯಂತ ಇತಿ ಬ್ರಹ್ಮವಾದಿನಾಮಭಿಪ್ರಾಯಃ ॥ ತಸ್ಮಾತ್ತತ್ಸಂಪಾದನಾರ್ಥಂ ಹೋತಾ ಪ್ರಾತಃಸವನೇ ಶೋಂಸಾವೋಮಿತಿ ಮಂತ್ರೇಣಾಧ್ವರ್ಯುಮಾಹ್ವಯತೇ ॥ ತಸ್ಯಾಯಮರ್ಥಃ । ಹೇಽಧ್ವರ್ಯೋ ಶೋಂಸಾವಃ ಶಂಸನಂ ಕುರ್ವತಃ । ಓಮಿತ್ಯನುಜ್ಞಾರ್ಥಂ । ತ್ವಯಾಽನುಜ್ಞಾ

ದೇಯೇತ್ಯುಕ್ತಂ ಭವತಿ ॥ ಸೋಽಯಂ ತ್ರ್ಯಕ್ಷರೋ ಮಂತ್ರಃ । ತತೋಽಧ್ವರ್ಯುಃ ಶಂಸಾಽಽಮೋ ದೈವೋಮಿತಿ ಪಂಚಾಕ್ಷರೇಣ ಪ್ರತಿಗೃಣಾತಿ ಪ್ರತ್ಯುತ್ತರಂ ಬ್ರೂಯಾತ್ ॥ ತಸ್ಯಾಯಮರ್ಥಃ । ಹೇ ಹೋತಸ್ತ್ವಂ ಶಂಸ ತತ್ರಾಮೋದೈವ ಹರ್ಷ ಏವಾಸ್ಮಾಕಮತೋಽನುಜ್ಞಾ ದತ್ತೇತಿ ॥ ತದೇತನ್ಮಂತ್ರದ್ವಯಂ ಮಿಲಿತ್ವಾಽಷ್ಟಾಕ್ಷರಂ ಸಂಪದ್ಯತೇ ಗಾಯತ್ರೀ ಚಾಷ್ಟಾಕ್ಷರಾ ತೇನ ಪ್ರಾತಃಸವನೇ ಪುರಸ್ತಾದಾದಾ ದ್ವಾವಪಿ ಮಿಲಿತ್ವಾ ಗಾಯತ್ರೀಮೇವಾಚೀಕ್ಲೃಪತಾಂ ಕಲ್ಪಿತವಂತೌ ॥ ಶಸ್ತ್ರಾದುತ್ತರಕಾಲೀನೌ ದ್ವಾಭ್ಯಾಂ ಪಠನೀಯೌ ಮಂತ್ರೌ ವಿಧತ್ತೇ—ಹೋತಾ ಶಸ್ತ್ರಂ ಪಠಿತ್ವೋಕ್ಥಂ ವಾಚೀತಿ ಚತುರಕ್ಷರಂ ಮಂತ್ರಂ ಬ್ರೂಯಾತ್ ॥ ಮದೀಯಾಯಾಂ ವಾಚ್ಯುಕ್ಥಂ ಶಸ್ತ್ರಂ ಸಂಪನ್ನಮಿತಿ ತಸ್ಯಾರ್ಥಃ ॥ ತತೋಽಧ್ವರ್ಯುರೋಮುಕ್ಥಶಾ ಇತಿ ಚತುರಕ್ಷರಂ ಮಂತ್ರಂ ಬ್ರೂಯಾತ್ ॥ ಓಮಿತ್ಯಂಗೀಕಾರ ಉಕ್ಥಶಾಸ್ತ್ವಂ ಶಸ್ತ್ರಶಂಸೀ ಭವಸೀತ್ಯರ್ಥಃ ॥ ತದೇತನ್ಮಂತ್ರದ್ವಯಂ ಮಿಲಿತ್ವಾಽಷ್ಟಾಕ್ಷರಂ ಸಂಪದ್ಯತೇ ॥ ಉಭಯತಃ ಶಂಸನಾತ್ಪುರಸ್ತಾತ್ಪಶ್ಚಾಚ್ಚ । ಶೇಷಂ ಪೂರ್ವವತ್ ॥

ಈ ಅಧ್ಯಾಯದಲ್ಲಿ **ಆಹಾವ** ಮತ್ತು **ಪ್ರತಿಗರ** ಎಂಬ ಶಬ್ದಗಳ ಅರ್ಥವಿವರಣೆ ಮಾಡುವರು. ಈಗ ಪ್ರಾತಃಸವನ ಕಾಲದಲ್ಲಿ ಪಠಿಸುವ ಕ್ರಮವನ್ನು ವಿವರಿಸುವರು—ಶಸ್ತ್ರಮಂತ್ರವನ್ನು ಪಠಿಸುವುದಕ್ಕೆ ಪೂರ್ವದಲ್ಲಿ ಅಧ್ವರ್ಯುವು ಹೋತೃವಿಗೆ ಅಭಿಮುಖನಾಗಿ (ಎದುರಿಗೆ) ಇರುವುದಿಲ್ಲ. ಬೇರೆಕಡೆಗೆ ಮುಖಮಾಡಿಕೊಂಡು ಇರುವನು. ಆದ್ದರಿಂದ ಆರೀತಿ ಇರುವ ಅಧ್ವರ್ಯುವಿನ ಗಮನವನ್ನು ಸೆಳೆಯುವುದಕ್ಕಾಗಿ ಹೋತೃವು **ಶಂಸಾವೋಂ** ಎಂದು ಘಟ್ಟಿಯಾಗಿ ಉಚ್ಚರಿಸುವನು. ಇದನ್ನೇ **ಆಹಾವ** (ಎಂದರೆ ಆಹ್ವಾನ, ಕರೆಯುವುದು) ಎಂದು ಹೇಳುವರು. ಇದಕ್ಕೆ ಪ್ರತ್ಯುತ್ತರವಾಗಿ ಅಧ್ವರ್ಯುವು ಹೇಳುವ ಉತ್ತರವೇ ಪ್ರತಿಗರವು.

ಮೇಲಿನ ಬ್ರಾಹ್ಮಣವಾಕ್ಯದಲ್ಲಿ **ದೇವವಿಶಃ** ಎಂಬ ಶಬ್ದಪ್ರಯೋಗವಿದೆ. **ವಿಟ್** ಶಬ್ದಕ್ಕೆ ಪ್ರಜೆ ಅಥವಾ ಸೈನ್ಯ ಎಂಬರ್ಥವಿರುವುದು. ಇಲ್ಲಿ ಹೇಳಿರುವ **ದೇವವಿಶಃ** ಎಂಬ ಶಬ್ದಕ್ಕೆ ದೇವಸಂಬಂಧಿಯಾದ(ದೇವತೆಗಳ) ಸೈನ್ಯರೂಪವಾದ ಪ್ರಜೆಗಳು ಎಂದರ್ಥಮಾಡಿರುವರು. ಇಂತಹ ಪ್ರಜೆಗಳನ್ನು ಹೊಂದಿಸಬೇಕು ಎಂದು ಬ್ರಹ್ಮವಾದಿಗಳು ಹೇಳುವರು. ಹೇಗೆ ಹೊಂದಿಸಬೇಕು ಎಂಬ ವಿಷಯವನ್ನು ಇಲ್ಲಿ ವಿವರಿಸಲಾಗುತ್ತದೆ. ಒಂದು ಛಂದಸ್ಸನ್ನು ಮತ್ತೊಂದು ಛಂದಸ್ಸಿನಲ್ಲಿ ಸ್ಥಾಪಿಸುವುದರಿಂದಲೇ ಈ ಕಾರ್ಯವು ಸಿದ್ಧಿಸುವುದೆಂದು ಬ್ರಹ್ಮವಾದಿಗಳ ಅಭಿಮತವು. ಎಂದರೆ **ದೇವವಿಶಃ** ಅಥವಾ ದೇವಸಂಬಂಧಿಯಾದ ಸೈನ್ಯರೂಪ ವಾದ ಪ್ರಜೆಗಳನ್ನು ಹೊಂದಿಸಿದಂತಾಗುವುದು ಎಂದಭಿಪ್ರಾಯವು. ಇದರ ಕ್ರಮ ಹೇಗೆಂದರೆ—ಪ್ರಾತಃಸವನಕಾಲದಲ್ಲಿ ಹೋತೃವು **ಶಂಸಾವೋಂ** ಎಂಬ ಮಂತ್ರವನ್ನು ಉಚ್ಚರಿಸಿ ಅಧ್ವರ್ಯುವನ್ನು ಆಹ್ವಾನಮಾಡುವನು ಎಂದರೆ ವಿಮುಖನಾಗಿದ್ದ ಅಧ್ವರ್ಯುವಿನ ಲಕ್ಷ್ಯವನ್ನು ಶಸ್ತ್ರಮಂತ್ರಪಠನದಕಡೆಗೆ ತಿರುಗಿಸುವನು. **ಶಂಸಾವೋಂ** ಎಂಬ ಮಂತ್ರದ ಅರ್ಥವು—ಎಲೈ ಅಧ್ವರ್ಯುವೇ, (ಶಸ್ತ್ರಮಂತ್ರಗಳನ್ನು) ಪಠಿಸುತ್ತೇವೆ ಎಂದು ಅಧ್ವರ್ಯುವಿನ ಅನುಜ್ಞೆಯನ್ನು (ಸಮ್ಮತಿಯನ್ನು) ಹೋತೃವು ಕೇಳುವನು. ಎಂದರೆ ಮಂತ್ರಪಠನಕ್ಕೆ ನೀನು (ಅಧ್ವರ್ಯುವು) ಅನುಜ್ಞೆಯನ್ನು ಕೊಡಬೇಕು ಎಂದು ಹೋತೃವು ಅಧ್ವರ್ಯುವನ್ನು ಕೇಳುವನು. ಈ ಮಂತ್ರದಲ್ಲಿ (ಶೋಂಸಾವೋಂ) ಮೂರು ಅಕ್ಷರಗಳಿರುವವು. ಅನಂತರ ಅಧ್ವರ್ಯುವು ಹೋತೃವಿನ ಪ್ರಾರ್ಥನೆಗೆ ಉತ್ತರವಾಗಿ **ಶಂಸಾಮೋದೈವೋಂ** ಎಂದು ಪ್ರತ್ಯುತ್ತರವಾಗಿ ಹೇಳುವನು. ಈ ಮಂತ್ರದಲ್ಲಿ ಐದು ಅಕ್ಷರಗಳಿರುವವು. ಈ ಐದು ಅಕ್ಷರ ಗಳುಳ್ಳ **ಶಂಸಾಮೋದೈವೋಂ** ಎಂಬ ಮಂತ್ರದ ಅರ್ಥವು—ಎಲೈ ಹೋತೃವೇ, ನೀನು ಈ ಮಂತ್ರವನ್ನು ಪಠಿಸು ಈ ವಿಷಯವು ನಮಗೂ ಹರ್ಷದಾಯಕವಾಗಿರುವುದು. ಮಂತ್ರಪಠನಕ್ಕೆ ಅನುಜ್ಞೆಯು ಕೊಡಲಾಗಿರುವುದು ಎಂದು ಈ ಮಂತ್ರದ

ಅರ್ಥವು. ಈ ಎರಡು ಮಂತ್ರಗಳ ಎಂದರೆ **ಶಂಸಾವೋಂ** ಮತ್ತು **ಶಂಸಾಮೋದೈವೋಂ** ಎಂಬ ಎರಡು ಮಂತ್ರಗಳ ಅಕ್ಷರಗಳನ್ನು ಸೇರಿಸಿದರೆ ಒಟ್ಟು ಎಂಟಕ್ಷರಗಳಾಗುವವು. ಗಾಯತ್ರೀಛಂದಸ್ಸಿನ ಪಾದದಲ್ಲಿಯೂ ಎಂಟು ಅಕ್ಷರಗಳಿರುವವು. ಆದ್ದರಿಂದ ಈ ಎರಡು ಮಂತ್ರಗಳನ್ನು ಒಂದಕ್ಕೊಂದನ್ನು ಸೇರಿಸುವುದರಿಂದ ಎಂಟಕ್ಷರಗಳಾಗಿ ಗಾಯತ್ರೀಮಂತ್ರಕ್ಕೆ ಸರಿಸಮನಾಗುವುದು. ಇದರಿಂದ ಪ್ರಾತಸ್ಸವನದಲ್ಲಿ ಗಾಯತ್ರೀಮಂತ್ರವನ್ನು ಸ್ಥಾಪಿಸಿದಂತಾಗುವುದು. ಈ ಕ್ರಮವು ಪ್ರಾತಸ್ಸವನಕಾಲದಲ್ಲಿ ಶಸ್ತ್ರಮಂತ್ರಗಳ ಪಠನೆಗೆ ಪೂರ್ವದಲ್ಲಿ ನಡೆಯಬೇಕಾದ ಕ್ರಮವು.

ಈಗ ಶಸ್ತ್ರಮಂತ್ರಪಠನಾನಂತರ ಈ ಎರಡು ಮಂತ್ರಗಳನ್ನು ಉಚ್ಚರಿಸಬೇಕಾದ ಕ್ರಮವು ವಿವರಿಸಲ್ಪಡುತ್ತದೆ. ಶಸ್ತ್ರಮಂತ್ರಪಠನಾನಂತರ ಹೋತೃವು—**ಉಕ್ಥಂ ವಾಚಿ** ಎಂದು ಉಚ್ಚರಿಸುವನು. ಇದರ ಅರ್ಥವು—ಇದರಲ್ಲಿ ನಾಲ್ಕು ಅಕ್ಷರಗಳಿರುವವು. ಎಲೈ ಅಧ್ವರ್ಯುವೇ ನನ್ನಿಂದ (ನನ್ನವಾಕ್ಯದಲ್ಲಿ-**ವಾಚಿ**) ಈ ಮಂತ್ರವು ಪಠಿಸಲ್ಪಟ್ಟಿತು ಎಂದು ಹೋತೃವು ಹೇಳಿದ ಕೂಡಲೇ ಅಧ್ವರ್ಯುವು ಅದಕ್ಕೆ ಪ್ರತ್ಯುತ್ತರವಾಗಿ **ಓಮುಕ್ಥಶಃ** ಎಂಬ ನಾಲ್ಕು ಅಕ್ಷರಗಳುಳ್ಳ ಮಂತ್ರವನ್ನು ಹೇಳುವನು. ಇದರ ಅರ್ಥವು—ಓಂ ಎಂದರೆ ಅಂಗೀಕಾರಾರ್ಥವು. ಸರಿ, ನೀನು ಶಸ್ತ್ರಮಂತ್ರವನ್ನು ಪಠಿಸಿದ್ದೀಯೆ ಎಂದು ಮೇಲಿನ ಮಂತ್ರದ ಅರ್ಥವು ಆದ್ದರಿಂದ ಈ ಎರಡು ಮಂತ್ರಗಳನ್ನು ಎಂದರೆ **ಉಕ್ಥಂ ವಾಚಿ** ಮತ್ತು **ಓಂ ಉಕ್ಥಶಃ** ಎಂಬ ನಾಲ್ಕೂ ನಾಲ್ಕೂ ಅಕ್ಷರಗಳನ್ನು ಒಟ್ಟಾಗಿ ಸೇರಿಸಿದರೆ ಎಂಟು ಅಕ್ಷರಗಳಾಗುವುವು. ಎಂಟು ಅಕ್ಷರಗಳೆಂದರೆ ಹಿಂದಿನಂತೆ ಗಾಯತ್ರೀ ಮಂತ್ರವನ್ನು ಈಗಲೂ (ಪ್ರಾತಸ್ಸವನಾನಂತ) ಪಠಿಸಿದಂತಾಯಿತು. ಆದ್ದರಿಂದ ಪ್ರಾತಸ್ಸವನಕಾಲದಲ್ಲಿ ಶಸ್ತ್ರಮಂತ್ರಗಳ ಪಠನಕ್ಕೆ ಪ್ರಾರಂಭದಲ್ಲಿಯೂ, ಅನಂತರವೂ ಎಂಟು ಅಕ್ಷರಗಳುಳ್ಳ ಗಾಯತ್ರೀ ಮಂತ್ರವನ್ನು ಈ ಕರ್ಮದಲ್ಲಿ ಪ್ರತಿಷ್ಠಿಸಿದಂತಾಯಿತು. ಏಕೆಂದರೆ ಪ್ರಾತಃಸವನವು ಯಾವಾಗಲೂ ಎಂಟು ಅಕ್ಷರಗಳುಳ್ಳ ಗಾಯತ್ರೀ ಮಂತ್ರಸ್ವರೂಪವಾಗಿರುವುದು. ಇದು ಪ್ರಾತಸ್ಸವನಕರ್ಮದ ಅರ್ಥವಿವರಣೆಯು. ಇನ್ನು ಮಾಧ್ಯಂದಿನಸವನದ ಸ್ವರೂಪವನ್ನು ವಿವರಿಸುವರು.

ಅಧ್ವರ್ಯೋ ಶೋಂಸಾವೋಮಿತ್ಯಾಹ್ವಯತೇ ಮಾಧ್ಯಂದಿನೇ ಷಳ-
ಕ್ಷರೇಣ ಶಂಸಾಮೋದೈವೋಮಿತ್ಯಧ್ವರ್ಯುಃ ಪ್ರತಿಗೃಣಾತಿ
ಪಂಚಾಕ್ಷರೇಣ ತದೇಕಾದಶಾಕ್ಷರಂ ಸಂಪದ್ಯತ ಏಕಾದಶಾಕ್ಷರಾ
ವೈ ತ್ರಿಷ್ಟುಪ್ ತ್ರಿಷ್ಟುಭಮೇವ ತತ್ಪುರುಸ್ತಾನ್ಮಧ್ಯಂದಿನೇಽ-
ಚೀಕ್ಲೃಪತಾಮುಕ್ತಂ ವಾಚೀಂದ್ರಾಯೇತ್ಯಾಹ ಶಸ್ತ್ವಾ
ಸಪ್ತಾಕ್ಷರಮೋಮುಕ್ಥಶಾ ಇತ್ಯಧ್ವರ್ಯುಶ್ಚತುರಕ್ಷರಂ ತದೇ-
ಕಾದಶಾಕ್ಷರಂ ಸಂಪದ್ಯತ ಏಕಾದಶಾಕ್ಷರಾ ವೈ ತ್ರಿಷ್ಟುಪ್
ತ್ರಿಷ್ಟುಭಮೇವ ತದುಭಯತೋ ಮಧ್ಯಂದಿನೇಽಚೀಕ್ಲೃ-
ಪತಾಂ ॥

**ಮಾಧ್ಯಂದಿನಸವನೇ ತದ್ವನ್ಮಂತ್ರಚತುಷ್ಟಯಂ ವಿಧತ್ತೇ—ಪೂರ್ವವದ್ವ್ಯಾಖ್ಯೇಯಂ ॥**

ಈಗ ಮಾಧ್ಯಂದಿನಸವನದಲ್ಲಿ ಉಪಯೋಗಿಸಲ್ಪಡುವ ಆಹಾವ ಮತ್ತು ಪ್ರತಿಗರ ಎಂಬ ಮಂತ್ರಗಳನ್ನು ವಿವರಿಸುವರು. ಕ್ರಮವೆಲ್ಲಾ ಹಿಂದೆ ಹೇಳಿದಂತೆಯೇ ಇರುವುದು. ಆದರೆ ಪ್ರಾತಸ್ಸವನಕ್ಕೆ ಬದಲಾಗಿ ಮಾಧ್ಯಂದಿನಸವನವೆಂದೂ ಗಾಯತ್ರಿಗೆ

ಬದಲಾಗಿ ತ್ರಿಷ್ಟುಪ್ ಎಂದೂ ಹೇಳಬೇಕು. ಇದರ ಕ್ರಮವು ಈರೀತಿ ಇರುವುದು. ಮಾಧ್ಯಂದಿನಸವನದಲ್ಲಿ ಹೋತೃವು ಶಸ್ತ್ರಮಂತ್ರವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಅಧ್ವರ್ಯುವನ್ನುದ್ದೇಶಿಸಿ **ಅಧ್ವರ್ಯೋ ಶೋಂಸಾವೋಂ** ಎಂದು ಆರು ಅಕ್ಷರಗಳ ಆಹಾವಮಂತ್ರವನ್ನು ಪಠಿಸುವನು. ಅದಕ್ಕೆ ಪ್ರತ್ಯುತ್ತರವಾಗಿ ಅಧ್ವರ್ಯುವು **ಶಂಸಾಮೋ ದೈವೋಂ** ಎಂಬ ಐದು ಅಕ್ಷರಗಳ ಪ್ರತಿಗರ ಮಂತ್ರವನ್ನು ಉಚ್ಚರಿಸುವನು. ಅರ್ಥವು ಹಿಂದಿನಂತೆಯೇ ಇರುವುದು. ಆದರೆ ಎರಡು ಮಂತ್ರಗಳಿಂದ ಒಟ್ಟು ಅಕ್ಷರಸಂಖ್ಯೆಯು ೬+೫=೧೧ ಹನ್ನೊಂದಾಗುವುದು. ತ್ರಿಷ್ಟುಪ್ ಛಂದಸ್ಸಿನ ಪಾದದಲ್ಲಿ ಹನ್ನೊಂದು ಅಕ್ಷರಗಳಿರುವವು. ಆದ್ದರಿಂದ ಮಾಧ್ಯಂದಿನ ಸವನಕಾಲದಲ್ಲಿ ಮಂತ್ರಪಠನಕ್ಕೆ ಪೂರ್ವದಲ್ಲಿಯೂ ಮತ್ತು ಅನಂತರದಲ್ಲಿಯೂ ಎರಡುಕಾಲಗಳಲ್ಲಿಯೂ ಹನ್ನೊಂದು ಅಕ್ಷರಗಳುಳ್ಳ ತ್ರಿಷ್ಟುಪ್‌ಛಂದಸ್ಸನ್ನು ಸ್ಥಾಪಿಸಿದಂತಾಯಿತು. ಇದು ಶಸ್ತ್ರಮಂತ್ರಪಠನಕ್ಕೆ ಪೂರ್ವಭಾವಿಯಾಗಿ ಪಠಿಸುವ ಕ್ರಮವು. ಶಸ್ತ್ರಮಂತ್ರಪಠನಾನಂತರ ಹೋತೃವು **ಉಕ್ಥಂ ವಾಚೀಂದ್ರಾಯ** ಎಂಬ ಆರು ಅಕ್ಷರಗಳುಳ್ಳ ಆಹಾವ ಮಂತ್ರವನ್ನು ಪಠಿಸುವನು. ಅರ್ಥವು ಹಿಂದಿನಂತೆಯೇ ಇರುವುದು. ಅನಂತರ ಅಧ್ವರ್ಯುವು ಇದಕ್ಕೆ ಪ್ರತ್ಯುತ್ತರವಾಗಿ ಮೊದಲು ಸಮ್ಮತಿಸೂಚಕವಾಗಿ **ಓಂ** ಎಂದು ಪಠಿಸಿ ಅನಂತರ **ಓಮುಕ್ಥಶಾ** ಎಂದು ನಾಲ್ಕು ಅಕ್ಷರಗಳ ಪ್ರತಿಗರ ಮಂತ್ರವನ್ನು ಉಚ್ಚರಿಸುವನು. ಈ ಎರಡು ಮಂತ್ರಗಳಿಂದ ಒಟ್ಟು ಹನ್ನೊಂದಕ್ಷರಗಳಾಗುವವು. ತ್ರಿಷ್ಟುಪ್‌ಛಂದಸ್ಸಿನ ಪಾದದಲ್ಲಿ ಹನ್ನೊಂದು ಅಕ್ಷರಗಳಿರುವವು. ಆದ್ದರಿಂದ ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರವನ್ನು ಸ್ಥಾಪಿಸಿದಂತಾಯಿತು.

**ಅಧ್ವರ್ಯೋ ಶೋಶೋಂಸಾವೋಮಿತ್ಯಾಹ್ವಯತೇ ತೃತೀಯಸವನೇ ಸಪ್ತಾಕ್ಷರೇಣ ಶಂಸಾಮೋದೈವೋಮಿತ್ಯಧ್ವರ್ಯುಃ ಪ್ರತಿಗೃಣಾತಿ ಪಂಚಾಕ್ಷರೇಣ ತದ್ದ್ವಾದಶಾಕ್ಷರಂ ಸಂಪದ್ಯತೇ ದ್ವಾದಶಾಕ್ಷರಾ ವೈ ಜಗತೀ ಜಗತೀಮೇವ ತತ್ಪುರಸ್ತಾತ್ತೃತೀಯಸವನೇಽಚೀಕ್ಲೃಪತಾಮುಕ್ಥಂ ವಾಚೀಂದ್ರಾಯ ದೇವೇಭ್ಯ ಇತ್ಯಾಹ ಶಸ್ತ್ವೈಕಾದಶಾಕ್ಷರಮೋಮಿತ್ಯಧ್ವರ್ಯುರೇಕಾಕ್ಷರಂ ತದ್ದ್ವಾದಶಾಕ್ಷರಂ ಸಂಪದ್ಯತೇ ದ್ವಾದಶಾಕ್ಷರಾ ವೈ ಜಗತೀ ಜಗತೀಮೇವ ತದುಭಯತಸ್ತೃತೀಯಸವನೇಽಚೀಕ್ಲೃಪತಾಂ ॥**

ತೃತೀಯಸವನೇ ಮಂತ್ರಚತುಷ್ಟಯಂ ವಿಧತ್ತೇ-ಶೋಶೋಮಿತಿ ದ್ವಿರ್ಭಾವಶ್ಛಾಂದಸಃ। ಮಾಧ್ಯಂದಿನಸವನೇ ಕೇವಲಮಿಂದ್ರಾರ್ಥಮೇವ ವಾಚ್ಯುಕ್ಥಂ ಸಂಪನ್ನಮಿತ್ಯುಕ್ತಂ ॥ ಅತ್ರ ತ್ವಿಂದ್ರಾರ್ಥಮಿತರದೇವಾರ್ಥಂ ಚೇತಿ ವಿಶೇಷಃ ॥ ಅನ್ಯತ್ಸರ್ವಂ ಪೂರ್ವವದ್ವ್ಯಾಖ್ಯೇಯಂ ॥

ಈಗ ತೃತೀಯ ಸವನದ ಕ್ರಮವನ್ನು ವಿವರಿಸುವರು—ಈ ತೃತೀಯಸವನದಲ್ಲಿ ಹೋತೃವು ಮಂತ್ರಪಠನಕ್ಕೆ ಪೂರ್ವದಲ್ಲಿ ಅಧ್ವರ್ಯುವನ್ನುದ್ದೇಶಿಸಿ **ಅಧ್ವರ್ಯೋ ಶೋಶೋಂಸಾವೋಂ** ಎಂಬ ಏಳು ಅಕ್ಷರಗಳುಳ್ಳ ಆಹಾವಮಂತ್ರವನ್ನು ಪಠಿಸುವನು. ಅದಕ್ಕೆ ಪ್ರತ್ಯುತ್ತರವಾಗಿ ಅಧ್ವರ್ಯುವು—**ಶಂಸಾಮೋದೈವೋಂ** ಎಂಬ ಐದು ಅಕ್ಷರಗಳುಳ್ಳ ಪ್ರತಿಗರ ಮಂತ್ರದಿಂದ ಹೇಳುವನು. ಈ ರೀತಿ ಈ ಎರಡು ಮಂತ್ರಗಳಿಂದ ೭+೫=೧೨ ಹನ್ನೆರಡು ಅಕ್ಷರಗಳು ಪಾದವಾಗುವುದು. **ಜಗತೀ**

ಛಂದಸ್ಸಿನಲ್ಲಿ ಹನ್ನೆರಡು ಅಕ್ಷರಗಳುಳ್ಳ ಜಗತೀಛಂದಸ್ಸನ್ನು ಸ್ಥಾಪಿಸಿದಂತಾಗಗುವುದು. ಮತ್ತು ಶಸ್ತ್ರಪಠನಾನಂತರದಲ್ಲಿ ಹೋತೃವು ಅಧ್ವರ್ಯುವನ್ನುದ್ದೇಶಿಸಿ—**ಉಕ್ಥಂ ವಾಚೀಂದ್ರಾಯದೇವೇಭ್ಯಃ** ಎಂದ ಹನ್ನೊಂದಕ್ಷರಗಳ ಮಂತ್ರವನ್ನು ಪಠಿಸಿದನಂತರ ಅದಕ್ಕೆ ಸಮ್ಮತಿಸೂಚನೆಗಾಗಿ **ಓಂ** ಎಂದು ಪ್ರತಿಗರವನ್ನು ಅಧ್ವರ್ಯುವು ಪಠಿಸುವನು ಈ ಎರಡು ಮಂತ್ರಗಳಿಂದ ಹನ್ನೆರಡು ಅಕ್ಷರಗಳ ಮಂತ್ರವಾಯಿತು. ಆದ್ದರಿಂದ ಈ ತೃತೀಯ ಸವನದಲ್ಲಿ ಶಸ್ತ್ರಪಠನಕ್ಕೆ ಪೂರ್ವದಲ್ಲಿಯೂ ಮತ್ತು ಅನಂತರವೂ ಹನ್ನೆರಡು ಅಕ್ಷರಗಳ ಪಾದವುಳ್ಳ ಜಗತೀಛಂದಸ್ಸನ್ನು ಸ್ಥಾಪಿಸಿದಂತಾಯಿತು. ಇಲ್ಲಿ ಹೋತೃವು ಪಠಿಸುವ ಮಂತ್ರದಲ್ಲಿ **ದೇವೇಭ್ಯಃ** ಎಂಬ ಪದವು ಇರುವುದರಿಂದ ಅದು ಈ ತೃತೀಯಸವನದಲ್ಲಿ ಇತರ ದೇವತೆಗಳನ್ನೂ ಆಹ್ವಾನಿಸಲಾಗಿದೆಯೆಂಬುದನ್ನು ಸೂಚಿಸುವುದು.

**ತದೇತದೃಷಿಃ ಪಶ್ಯನ್ನಭ್ಯನೂವಾಚ ಯದ್ಗಾಯತ್ರೇ ಅಧಿಗಾಯತ್ರಮಾಹಿತಂ ತ್ರೈಷ್ಟುಭಾದ್ವಾ ತ್ರೈಷ್ಟುಭಂ ನಿರತಕ್ಷತ । ಯದ್ವಾ ಜಗಜ್ಜಗತ್ಯಾಹಿತಂ ಪದಂ ಯ ಇತ್ತದ್ವಿದುಸ್ತೇ ಅಮೃತತ್ವಮಾನಶುರಿತಿ ಏತದ್ವೈ ತಚ್ಛಂದಶ್ಛಂದಸಿ ಪ್ರತಿಷ್ಠಾಪಯತಿ ॥**

ಉಕ್ತಮರ್ಥಂ ಮಂತ್ರಸಂವಾದೇನ ದ್ರಢಯತಿ—ತದೇತದ್ಬ್ರಾಹ್ಮಣೋಕ್ತಂ ಸರ್ವಮೃಷಿರ್ಮಂತ್ರದ್ರಷ್ಟಾ ದಿವ್ಯಜ್ಞಾನೇನ ಪಶ್ಯ್ನ ಮಂತ್ರವಾಕ್ಯೇನಾಭಿತೋಽನುವಚನಂ ಕೃತವಾ್ನ ॥ ತಮೇತಂ ಮಂತ್ರಂ ದರ್ಶಯತಿ—ಶಂಸನಾತ್ಪೂರ್ವಕಾಲೀನೇ ಮಂತ್ರದ್ವಯಾತ್ಮಕೇ ಗಾಯತ್ರೇ ಛಂದಸಿ ತದುತ್ತರಕಾಲೀನಂ ಮಂತ್ರದ್ವಯಾತ್ಮಕಂ ಗಾಯತ್ರಂ ಛಂದೋಽಧ್ಯಾಹಿತಂ ಸಂಪಾದಿತಮಿತಿ ಯದಸ್ತಿ ॥ ಅಥ ಚ ಪೂರ್ವಕಾಲೀನಾನ್ಮಂತ್ರದ್ವಯಾತ್ಮಕಾತ್ತ್ರೈಷ್ಟುಭಾದುತ್ತರಕಾಲೀನಮಂತ್ರದ್ವಯಾತ್ಮಕಂ ತ್ರೈಷ್ಟುಭಂ ನಿರತಕ್ಷತ ನಿಷ್ಪನ್ನಮಿತಿ ಯದಸ್ತಿ । ಅಥ ಜಗಜ್ಜಾಗತಂ ಛಂದಃ ಪೂರ್ವಕಾಲೀನಂ ಜಗತ್ಯುತ್ತರಕಾಲೀನೇ ಜಾಗತೇ ಛಂದಸ್ಯಾಹಿತಂ ಸಂಪಾದಿತಮಿತ್ಯೇತತ್ತ್ರಿವಿಧಂ ಪದಂ ಯದಸ್ತಿ ತತ್ಪದಂ ಯ ಇತ್, ಯ ಏವಾನುಷ್ಠಾತಾರೋ ವಿದುರ್ಜಾನಂತಿ ತೇಽನುಷ್ಠಾತಾರೋಽಮೃತತ್ವಮಾನಶುರ್ದೇವತ್ವಂ ಪ್ರಾಪ್ತವಂತಃ ॥ ಅಸ್ಯಮಂತ್ರಸ್ಯ ತಾತ್ಪರ್ಯಂ ದರ್ಶಯತಿ—ಏತದೃಷಿಪ್ರೋಕ್ತಂ ಮಂತ್ರವಾಕ್ಯಮುತ್ತರಕಾಲೀನೇ ಛಂದಸಿ ತತ್ಪೂರ್ವಕಾಲೀನಂ ಛಂದಃ ಪ್ರತಿಷ್ಠಾಪಯತೀತಿ ತತ್ರಾಽಽಶ್ರಿತಮಿತ್ಯೇವಂ ಪ್ರತಿಪಾದಯತಿ ॥

ಈಗ ಇದುವರೆಗೂ ಹೇಳಿದ ವಿಷಯಗಳನ್ನೆಲ್ಲಾ ಋಷಿಯು ಹಿಂದೆಯೇ ತನ್ನ ಜ್ಞಾನ ದೃಷ್ಟಿಯಿಂದ ತಿಳಿದು ಮಂತ್ರದಲ್ಲಿ ತಿಳಿಸಿರುವನು—ಆ ಮಂತ್ರವು ಈ ರೀತಿ ಇರುವುದು—

**ಯದ್ಗಾಯತ್ರೇ ಅಧಿಗಾಯತ್ರಮಾಹಿತಂ ತ್ರೈಷ್ಟುಭಂ ನಿರತಕ್ಷತ ।**
**ಯದ್ವಾ ಜಗಜ್ಜಗತ್ಯಾಹಿತಂ ಪದಂ ಯ ಇತ್ತದ್ವಿದುಸ್ತೇ ಅಮೃತತ್ವಮಾನಶುಃ ॥**

(ಋ ಸಂ ೧-೧೬೪-೨೩)

ಶಸ್ತ್ರಮಂತ್ರಗಳನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ ಆಹಾವ ಮತ್ತು ಪ್ರತಿಗರಗಳೆಂಬ ಎರಡುಮಂತ್ರಗಳಿಂದ ಲಬ್ಧವಾದ ಎಂಟು ಅಕ್ಷರಗಳುಳ್ಳಗಾಯತ್ರೀ ಮಂತ್ರವನ್ನು ಶಸ್ತ್ರಮಂತ್ರಗಳನ್ನು ಪಠಿಸಿದನಂತರ ಉಚ್ಚರಿಸುವ ಆಹಾವ ಮತ್ತು ಪ್ರತಿಗರ

ಗಳಿಂದ ಲಬ್ಧವಾಗುವ ಗಾಯತ್ರೀಮಂತ್ರದಲ್ಲಿ ವಿಲೀನಗೊಳಿಸುವುದು. ಎಂದರೆ ಮಂತ್ರಗಳ ಪೂರ್ವ ಮತ್ತು ಉತ್ತರಕಾಲಗಳಲ್ಲಿಯೂ ಒಂದೇ ವಿಧವಾದ ಗಾಯತ್ರೀ ಛಂದಸ್ಸನ್ನು ಹೋತೃವು ಹೊಂದಿಸಿ ಪಠಿಸುವನು. ಅದರಂತೆ ಮಾಧ್ಯಂದಿನಸವನ ಮತ್ತು ತೃತೀಯ ಸವನಗಳಲ್ಲಿಯೂ ತ್ರಿಷ್ಟುಪ್ ಮತ್ತು ಜಗತೀಛಂದಸ್ಸಿನ ಮಂತ್ರಗಳನ್ನು ಹೊಂದುವಂತೆ ಸೇರಿಸಿ ಪಠಿಸುವನು. ಎಂದರೆ ಪೂರ್ವಕಾಲೀನ ಮಂತ್ರವೂ ಉತ್ತರಕಾಲೀನ ಮಂತ್ರವೂ ಸರಿಸಮನಾಗಿ ಹೊಂದಿಕೊಂಡಿರುವುದು. ಈ ವಿಷಯಗಳನ್ನು ತಿಳಿದುಕೊಂಡು ಅದರಂತೆ ಆಚರಿಸುವ ಪುರುಷರು ದೇವತ್ವವನ್ನು (ಮರಣರಹಿತವಾದ) ಪಡೆದು ಸುಖಿಸುವರು. ಎಂದು ಮಂತ್ರದ ಮುಖ್ಯಾಭಿಪ್ರಾಯವು.

ಕಲ್ಪಯತಿ ದೇವವಿಶೋ ಯ ಏವಂ ವೇದ ॥

**ಉಕ್ತಾರ್ಥವೇದನಂ ಪ್ರಶಂಸತಿ—ವೇದಿತಾ ದೇವವಿಶೋ ದೇವಸಂಬಂಧಿನೀಃ ಪ್ರಜಾಃ ಸೈನ್ಯರೂಪಾಃ ಸಂಪಾದಯತಿ ॥**

ಇದುವರೆಗೂ ಹೇಳಿರುವ ವಿಷಯಗಳನ್ನು ಚೆನ್ನಾಗಿ ತಿಳಿದು ಅದರಂತೆ ಆಚರಿಸುವ ಪುರುಷನು ದೇವಸಂಬಂಧಿಯಾದ ಮತ್ತು ಸೈನ್ಯರೂಪವಾದ ಪ್ರಜೆಗಳನ್ನು ಪಡೆದು ಸುಖಿಸುವನು.



*English Translation*

**(On the Ahava and Pratigara)**

They (the theologians) say: the subjects of the gods are to be procured. (To achieve this end) one metre is to be put in another metre. (This is done when) the Hotar calls (the Adhvaryu) by somasavam " Let us both repeat, yes !" which (formula) consists of three syllables. At the morning libation the Adhvaryu responds (pratigrinati) (to this formula of three syllables) with one consisting of five; sa, samo daivom. This makes eight on the whole; the Gayatri has eight syllables (i.e. each of its three padas). Thus these two (formulas) make the Gayatri at the commencement of the recitation at the morning libation. After the Hotar has finished his recitation, he uses this (formula of) four syllables; uktham vachi, i.e., the recitation has been read, to which the Adhvaryu (responds) in four syllables; ow ukthas'a, i.e. thou hast repeated the recitation (uktham, shastra). This makes eight syllables. The Gayatri consists of eight syllables. Thus the two (formulas) make at the morning libation the Gayatri at both ends (at the commencement and the eud).

At the midday libation the Hotar calls: Adhvaryu s'omsavam, i.e., " Adhvaryu, let us two repeat! Om!" with six syllables! to which the Adhvaryu responds with five syllables: s'amsamo daivm. This makes eleven syllables.

The Trishtubh has eleven syllables. Thus he makes the Trishtubh at the beginning of the Shastra at the midday. libation After having repeated it, he says. ukiham vachi indraya, i.e., the Shastra has been read for Indra, in seven syllables; to which the Adhvaryu responds in four syllables; om ukthas'a. This makes also eleven syllables. The Trishtubh has eleven syllables. Thus the two formulas make the Trishtubh at both ends of the Shastra at the midday libation.

At the evening libation the Hotar calls: adhvaryu som-spmsavam, in seven syllables, to which the Adhvaryu responds in five syllables: Samsamo daivom. This makes twelve syllables. The Jagati has twelve syllables. Thus (with these two formulas taken together) he makes the Jagati at the beginning of the Shastra at the evening libation. After having repeated the Shastra, he says, in eleven syllables: uktham vachi indraya devebhyah, i.e., "the Shastra has been repeated for Indra," for the Devas, to which the Adhvaryu responds in one syllable: Om! This makes twelve syllables. The Jagati has twelve syllables. Thus the two (formulas) make the Jagati at both ends at the evening libation.

This (the mutual relation of the three chief metres to one another and to the sacrificer) saw a Rishi, and expressed (his opinion) in the mantra; yad gayatre adhi (1, 164, 23) i.e., "those who know that the Gayatri is put over a Gayatri, and that out of a Trishtubh a (another) Trishtub is formed, and a Jagat (Jagati) is put in a Jagat, obtain immortality."

In this way he who has such a knowledge puts metre in metre, and procures "the subjects of the gods."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ದ್ವಿತೀಯಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ದೇವತೆಗಳ ವಿಷಯದಲ್ಲಿ ಯಾವ ದೇವತೆಗಳಿಗೆ ಯಾವ ಛಂದಸ್ಸು ಸಂಬಂಧಪಟ್ಟಿರುವುವೆಂಬ ವಿಚಾರ. ಅನುಷ್ಟುಪ್ ಎಂಬ ಛಂದಸ್ಸು ಪ್ರಜಾಪತಿಗೆ ಸಂಬಂಧಪಟ್ಟುದು.]



ಪ್ರಜಾಪತಿರ್ವೈ ಯಜ್ಞಂ ಛಂದಾಂಸಿ ದೇವೇಭ್ಯೋ ಭಾಗಧೇಯಾನಿ ವ್ಯಭಜತ್ಸ ಗಾಯತ್ರೀಮೇವಾಗ್ನಯೇ ವಸುಭ್ಯಃ ಪ್ರಾತಃಸವನೇಽಭಜತ್ತ್ರಿಷ್ಟುಭಮಿಂದ್ರಾಯ ರುದ್ರೇಭ್ಯೋ ಮಧ್ಯಂದಿನೇ ಜಗತೀಂ ವಿಶ್ವೇಭ್ಯೋ ದೇವೇಭ್ಯ ಆದಿತ್ಯೇಭ್ಯಸ್ತೃತೀಯಸವನೇ ॥

ಅಥಾನುಷ್ಟುಭೋ ಮುಖ್ಯತ್ವೇನ ಪ್ರಶಂಸಾಂ ಕರ್ತುಮಾಖ್ಯಾಯಿಕಾಮಾಹ ॥ ಪುರಾ ಪ್ರಜಾಪತಿಃ ಸರ್ವಂ ಜಗತ್ಸೃಷ್ಟ್ವಾ ಸವನತ್ರಯಾತ್ಮಕಂ ಯಜ್ಞಂ ಗಾಯತ್ರ್ಯಾದೀನಿ ಚ್ಛಂದಾಂಸಿ ಚ ದೇವಾತಾರ್ಥಂ ಭಾಗಧೇಯಾನಿ ಭಾಗವಿಶೇಷರೂಪಾಣಿ ಕೃತ್ವಾ ವ್ಯಭಜದ್ವಿಭಕ್ತವಾನ್ ॥ ಕೇನ ಪ್ರಕಾರೇಣೇತಿ ಸ ಉಚ್ಯತೇ ॥ ಯಜ್ಞೇ ಯತ್ಪ್ರಾತಃಸವನಮಸ್ತಿ ತಸ್ಮಿನ್ಗಾಯತ್ರೀಮೇವಾಗ್ನ್ಯರ್ಥಮಷ್ಟವಸುದೇವಾರ್ಥಂ ಚ ವಿಭಕ್ತವಾನ್ ॥ ಮಾಧ್ಯಂದಿನಸವನೇ ತ್ರಿಷ್ಟುಭಮಿಂದ್ರಾರ್ಥಮೇಕಾದಶರುದ್ರಾರ್ಥಂ ಚ ವಿಭಕ್ತವಾನ್ ॥ ತೃತೀಯಸವನೇ ಜಗತೀಂ ವಿಶ್ವೇಭ್ಯೋ ದೇವೇಭ್ಯ ಆದಿತ್ಯೇಭ್ಯಶ್ಚ ವಿಭಕ್ತವಾನ್ ॥

ಈಗ ಅನುಷ್ಟುಪ್‌ಛಂದಸ್ಸಿನ ಪ್ರಾಧಾನ್ಯತೆಯನ್ನು ಪ್ರಶಂಸಿಸುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು— ಪೂರ್ವದಲ್ಲಿ ಪ್ರಜಾಪತಿಯು ಯಜ್ಞವನ್ನೂ ನಾನಾ ಛಂದಸ್ಸುಗಳನ್ನೂ ದೇವತೆಗಳಿಗೆ ಭಾಗವಾಗಿ ಹಂಚಿಕೊಟ್ಟನು. ವೇದ ಸಾಹಿತ್ಯದಲ್ಲಿ ಪ್ರಜಾಪತಿಯೆಂದರೆ, ಸರ್ವೇಶ್ವರನು, ಪರಬ್ರಹ್ಮನು ಜಗನ್ನಿಯಾಮಕನು, ಸೃಷ್ಟಿಕರ್ತನು. ದೇವತೆಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠನು ಮತ್ತು ಅಧಿಕನಾದವನು ಎಂದಭಿಪ್ರಾಯವು ಸೂಚಿತವಾಗುವುದು. ಈ ಪ್ರಜಾಪತಿಯು ಯಜ್ಞವನ್ನೂ ಛಂದಸ್ಸುಗಳನ್ನೂ ದೇವತೆಗಳಿಗೆ ವಿಭಾಗಿಸಿ ಹಂಚಿದನಂತರ ಆಯಾ ದೇವತೆಗಳಿಗೆ ಲಬ್ಧವಾದ ಭಾಗವು ಅವರಿಗೆ ಸ್ವಕೀಯಭಾಗವೆಂದು ಪರಿಗಣಿಸಲ್ಪಟ್ಟು ಅವರಿಗೆ ಅಗಿನಿಂದ ಬಹಳ ಹಿತಕರವೆನಿಸಿದವು. ಯಾವರೀತಿ ವಿಭಾಗಿಸಲ್ಪಟ್ಟಿತೆಂಬ ವಿಷಯವನ್ನು ಈಗ ತಿಳಿಸುವರು. ಪ್ರಾತಃಸವನಕರ್ಮದಲ್ಲಿ ಪಠಿಸಲ್ಪಡಬೇಕಾದ ಮಂತ್ರಗಳಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳನ್ನು ಅಗ್ನಿಗೂ ಅಷ್ಟವಸುಗಳಿಗೂ ಭಾಗಮಾಡಿಕೊಟ್ಟನು. ಎಂದರೆ ಯಜ್ಞಕರ್ಮದಲ್ಲಿ ಪ್ರಾತಸ್ಸವನವೆಂಬ ಭಾಗವೂ ಗಾಯತ್ರೀಛಂದಸ್ಸಿನ

ಮಂತ್ರಗಳೂ ಅಗ್ನಿಗೂ, ವಸುಗಳಿಗೂ ದೊರೆಯಿತು. ಅನಂತರ ಪ್ರಜಾಪತಿಯು ಮಾಧ್ಯಂದಿನಸವನವನ್ನೂ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೂ ಇಂದ್ರನಿಗೂ, ಏಕಾದಶರುದ್ರರಿಗೂ ಹಂಚಿಕೊಟ್ಟನು. ಮತ್ತು ತೃತೀಯಸವನವೆಂಬ ಯಜ್ಞವಿಭಾಗವನ್ನೂ ಜಗತೀಛಂದಸ್ಸಿನ ಮಂತ್ರಗಳನ್ನೂ ವಿಶ್ವೇದೇವತೆಗಳಿಗೂ ದ್ವಾದಶಾದಿತ್ಯರಿಗೂ ಹಂಚಿಕೊಟ್ಟನು.

ಅಥಾಸ್ಯ ಯತ್ಸ್ವಂ ಛಂದ ಆಸೀದನುಷ್ಟುಪ್ತಾಮುದಂತಮಭ್ಯುದೌಹದಚ್ಛಾವಾಕೀಯಾಮಭಿ ಸೈನಮಬ್ರವೀದನುಷ್ಟುಪ್ತ್ವಂ ನ್ವೇವ ದೇವಾನಾಂ ಪಾಪಿಷ್ಠೋಽಸಿ ಯಸ್ಯ ತೇಽಹಂ ಸ್ವಂ ಛಂದೋಽಸ್ಮಿ ಯಾಂ ಮೋದಂತಮಭ್ಯುದೌಹೀರಚ್ಛಾವಾಕೀಯಾಮಭೀತಿ ತದಜಾನಾತ್ಸ ಸ್ವಂ ಸೋಮಮಾಹರತ್ಸ ಸ್ವೇ ಸೋಮೇಽಗ್ರಂ ಮುಖಮಭಿ ಪರ್ಯಾಹರದನುಷ್ಟುಭಂ ತಸ್ಮಾದನುಷ್ಟುಬಗ್ರಿಯಾ ಮುಖ್ಯಾ ಯುಜ್ಯತೇ ಸರ್ವೇಷಾಂ ಸವನಾನಾಂ ॥

ಏವಂ ಸತ್ಯನುಷ್ಟುಬೇಕಾ ಪರಿಶಿಷ್ಟಾ ತಸ್ಯಾ ವೃತ್ತಾಂತಮಾಹ—ಅಥಾಗ್ನ್ಯಾದೀನಾಂ ವಸ್ವಾದೀನಾಂ ಚ ಚ್ಛಂದೋವಿಭಾಗಾನಂತರಮಸ್ಯ ಪ್ರಜಾಪತೇಃ ಸ್ವಭೂತಮನುಷ್ಟುಬಾಖ್ಯಂ ಯಚ್ಛಂದ ಆಸೀತ್ತಾಮನುಷ್ಟುಭಮುದಂತಮಭಿ ಯಜ್ಞಸ್ಯ ಕಂಚಿತ್ಪ್ರಾಂತದೇಶಮಭಿಲಕ್ಷ್ಯೋದೌಹದಪಸಾರಿತವಾನ್ ॥ ಕುತ್ರ ದೇಶ ಇತಿ ತದುಚ್ಯತೇ—ಅಚ್ಛಾವಾಕೀಯಾಮಭೀತಿ । ಅಚ್ಛಾವಾಕ ವದಸ್ವೇತ್ಯೇವಮಧ್ವರ್ಯುಣಾ ಉಕ್ತೋಽಚ್ಛಾವಾಕೋ ಯಾಂ ಬ್ರೂತೇ ಸೇಯಮೃಗಚ್ಛಾವಾಕೀಯಾ ತಾ ಮಭಿಲಕ್ಷ್ಯೋದೂಢವಾನನುಷ್ಟುಭಮಚ್ಛಾವಾಕೀಯಾಂ ಕೃತವಾನಿತ್ಯರ್ಥಃ ॥ ತೇನ ಕುಪಿತಾ ಸಾನುಷ್ಟುಬೇನ್ಮೈನಂ ಪ್ರಜಾಪತಿಮಬ್ರವೀನ್ಹೇ ಹೇ ಪ್ರಜಾಪತೇ ದೇವಾನಾಂ ಮಧ್ಯೇ ತ್ವಮೇವ ಪಾಪಿಷ್ಠೋಽಸಿ ॥ ಯಸ್ಯ ಪಾಪಿಷ್ಠಸ್ಯ ಪ್ರಜಾಪತೇಸ್ತವಾಽಹಂ ಛಂದೋಽಸ್ಮಿ ॥ ಅಗ್ನಿವಸ್ವಾದಯಃ ಪೂರ್ವಂ ಛಂದೋರಹಿತಾಃ ತಾದೃಶೇಭ್ಯೋಽಪಿ ಛಂದಾಂಸಿ ದತ್ತವಾನಸಿ ॥ ಅಹಂ ತು ಪೂರ್ವಮೇವ ತ್ವದೀಯಾ ತಾದೃಶೀಂ ಮಾಂ ತ್ವತ್ತೋಽಪಸಾರ್ಯಾಚ್ಛಾವಾಕೀಯಾಮಭಿಲಕ್ಷ್ಯೋದೂಢವಾನಸಿ । ಅತೋ ಮದುಪೇಕ್ಷಯಾ ಭವತಃ ಪಾಪಿಷ್ಠತ್ವಮಿತ್ಯನುಷ್ಟುಭೋಽಭಿಪ್ರಾಯಃ ॥ ತತ್ಸರ್ವಮನುಷ್ಟುಭಾ ಪ್ರೋಕ್ತಮುಪಾಲಂಭರೂಪಂ ಪ್ರಜಾಪತಿರ್ಜ್ಞಾತವಾನ್ ॥ ಜ್ಞಾತ್ವಾ ಚ ತದುಪಾಲಂಭಪರಿಹಾರಾರ್ಥಂ ಸ್ವಕೀಯಂ ಸೋಮಯಾಗಮಾಹರತ್ ॥ ಸತು ತಸ್ಮಿನ್ಸೋಮಯಾಗೇಽಗ್ರಂ ಶ್ರೇಷ್ಠಂ ಪ್ರಾರಂಭರೂಪಂ ಯನ್ಮುಖಮಸ್ತಿ ತದಭಿಲಕ್ಷ್ಯಾನುಷ್ಟುಭಂ ಪರ್ಯಾಹರತ್ತತ್ರನೀತವಾನಿತ್ಯರ್ಥಃ ॥ ತಸ್ಮಾದು ತಸ್ಮಾದೇವ ಕಾರಣಾದಿಯಮನುಷ್ಟುಬಗ್ರ್ಯಾ ಶ್ರೇಷ್ಠಾ ಸತೀ ಸರ್ವೇಷಾಂ ಸವನಾನಾಂ ಮುಖ್ಯಾ ಮುಖೇ ಭವಾ ಪ್ರಾರಂಭಕಾಲೀನಾ ಪ್ರಯುಜ್ಯತೇ ॥

ಹೀಗೆ ಪ್ರಜಾಪತಿಯು ಮುಖ್ಯವಾದ ಛಂದಸ್ಸುಗಳಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ ಎಂಬ ಮೂರು ಛಂದಸ್ಸುಗಳನ್ನು ದೇವತೆಗಳಿಗೆ ವಿಭಾಗಿಸಿ ಕೊಟ್ಟನಂತರ ಅನುಷ್ಟುಪ್ ಎಂಬ ಛಂದಸ್ಸು ಹಾಗೆಯೇ ಉಳಿಯಿತು. ಈ ಅನುಷ್ಟುಪ್‌ಛಂದಸ್ಸಿನ

ವಿಚಾರದಲ್ಲಿ ಒಂದು ಇತಿಹಾಸವಿರುವುದು. ಅದರ ವೃತ್ತಾಂತವನ್ನು ಇಲ್ಲಿ ತಿಳಿಸುವರು. ಅನುಷ್ಟುಪ್ ಛಂದಸ್ಸು ಪ್ರಜಾಪತಿಯ ಸ್ವಂತ ಛಂದಸ್ಸಾಗಿರುವುದು. ಇದನ್ನು ಯಾವ ದೇವತೆಗಳಿಗೂ ಕೊಡದೆ ಹಾಗೆಯೇ ಉಳಿದದ್ದರಿಂದ ಅದನ್ನು ನೋಡಿ ಪ್ರಜಾಪತಿಯು ಯಜ್ಞವೇದಿಯಲ್ಲಿದ್ದ ಒಂದು ಭಾಗಕ್ಕೆ ತಳ್ಳಿದನು. ಆ ಪ್ರಾಂತವು ಅಚ್ಛಾವಾಕನನ್ನು ಉದ್ದೇಶಿಸಿ ಎಲೈ ಅಚ್ಛಾವಾಕನೇ, ನೀನು ಮಂತ್ರವನ್ನು ಪಠಿಸು ಎಂದಾಗ ಅಚ್ಛಾವಾಕನು ಯಾವ ಮಂತ್ರವನ್ನು ಪಠಿಸುವನೋ ಅದು ಅಚ್ಛಾವಾಕೀಯ ಮಂತ್ರವೆನಿಸುವುದು. ಈರೀತಿ ಯಾವ ದೇವತೆಯ ಪಾಲಿಗೂ ಬರದೆ ಅಚ್ಛಾವಾಕನು ಅಧ್ವರ್ಯುವಿನ ಆದೇಶದಂತೆ ಅನುಷ್ಟುಪ್ ಛಂದಸ್ಸಿನ ಮಂತ್ರವನ್ನು ಪಠಿಸುವಾಗ ಅನುಷ್ಟುಪ್ ಛಂದಸ್ಸಿಗೆ ಕೋಪಬಂದು ಪ್ರಜಾಪತಿಯೊಡನೆ ಇಂತೆಂದಿತು—ಎಲೈ ಪ್ರಜಾಪತಿಯೇ, ನೀನು ದೇವತೆಗಳಲ್ಲೆಲ್ಲಾ ಪಾಪಿಷ್ಠನು. ಏಕೆಂದರೆ ಅನುಷ್ಟುಪ್ ಛಂದಸ್ಸಿನ ಅಭಿಮಾನಿದೇವತೆಯಾದ ನಾನು ಮೊದಲಿನಿಂದಲೂ ನಿನ್ನ ಸ್ವಂತ ಛಂದಸ್ಸಾಗಿರುವುದು. ಹಾಗಿದ್ದರೂ ನನ್ನನ್ನು ಪರಿಗಣಿಸದೆ ಇತರರಿಗೆ ಉಪಕಾರಮಾಡಿರುವೆ. ಅಗ್ನಿಮುಂತಾದ ದೇವತೆಗಳಿಗೆ ಸ್ವಂತವಾದ ಯಾವ ಛಂದಸ್ಸೂ ಇರಲಿಲ್ಲ. ಅಂತಹ ಸ್ವಂತಛಂದಸ್ಸಿಲ್ಲದವರಿಗೂ ಛಂದಸ್ಸುಗಳನ್ನು ಕೊಟ್ಟಿದ್ದೀಯೆ. ನಾನು ಮೊದಲಿನಿಂದಲೂ ನಿನ್ನವಳಾಗಿದ್ದರೂ ಸಹ ನನ್ನನ್ನು ಉಪೇಕ್ಷಿಸಿ ನಿನ್ನಿಂದ ದೂರವಾಗಿ ಆಚೆಗೆ ತಳ್ಳಿ ಅಚ್ಛಾವಾಕನು ಪಠಿಸುವಂತೆ ಮಾಡಿದ್ದೀಯೆ ಎಂದು ಹೇಳಲು ಪ್ರಜಾಪತಿಯು ತನ್ನ ವಿಷಾದವನ್ನು ಸೂಚಿಸಿ ಅನುಷ್ಟುಪ್ ಛಂದಸ್ಸಿಗೆ ತಕ್ಕ ಪರಿಹಾರವನ್ನು ನೀಡಬೇಕೆಂಬ ಅಪೇಕ್ಷೆಯಿಂದ ಈರೀತಿ ಮಾಡಿದನು. ಅನಂತರ ಪ್ರಜಾಪತಿಯು ತನ್ನ ಸ್ವಂತ ಯಾಗವಾದ ಸೋಮಯಾಗವನ್ನು ಹುಡುಕಿತಂದನು. ಆ ಸೋಮಯಾಗದಲ್ಲಿ ಪ್ರಾರಂಭದ ಭಾಗಗಳನ್ನು ಗಮನಿಸಿ ಅಲ್ಲಿಗೆ ಈ ಅನುಷ್ಟುಪ್ ಛಂದಸ್ಸನ್ನು ತಂದು ಸೇರಿಸಿದನು. ಆಗಿನಿಂದ ಸೋಮಯಾಗದ ಪ್ರಾರಂಭ ಕಾರ್ಯಕಲಾಪಗಳಲ್ಲಿಯೂ ಎಲ್ಲಾ ಸವನಗಳ ಆದಿಯಲ್ಲಿಯೂ ಈ ಅನುಷ್ಟುಪ್ ಛಂದಸ್ಸಿನ ಮಂತ್ರಗಳೇ ಉಪಯೋಗಿಸಲ್ಪಡುತ್ತಾ ಇರುವವು.

ಅಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದ
ಸ್ವೇ ವೈ ಸ ತತ್ಸೋಮೇಽಕಲ್ಪಯತ್ತಸ್ಮಾದ್ಯತ್ರ ಕ್ವ ಚ ಯಜ-
ಮಾನವಶೋ ಭವತಿ ಕಲ್ಪತ ಏವ ಯಜ್ಞೋಽಪಿ ||

ಏತದ್ವೇದನಂ ಪ್ರಶಂಸತಿ—ವೇದಿತಾ ಸ್ವಕೀಯಜ್ಞಾತೀನಾಂ ಮಧ್ಯೇಽಗ್ರೇ ಭವೋಽಗ್ರ್ಯೋ ಜ್ಯೇಷ್ಠೋ ಮುಖ್ಯೋ ವ್ಯವಹಾರನಿರ್ವಾಹಕಃ || ಸ ಶ್ರೇಷ್ಠತಾಂ ವಿದ್ಯಾವೃತ್ತಾದಿಗುಣೈಃ ಶ್ರೇಷ್ಠತ್ವಂ ಪ್ರಾಪ್ನೋತಿ || ಪ್ರಜಾಪತಿನ್ಯಾಯೇನ ಯಜಮಾನಸ್ಯಾಪಿ ಸವನೀಯಯಾಗಾದಾವನುಷ್ಟುಪ್ಪ್ರಯೋಗಂ ದರ್ಶಯತಿ—ಯಸ್ಮಾತ್ಸ ಪ್ರಜಾಪತಿಃ ಸ್ವಕರ್ತೃಕ ಏವ ಸೋಮಯಾಗೇ ತತ್ಸವನೇಷ್ವನುಷ್ಟುಭೋ ಮುಖ್ಯತಾಮಕಲ್ಪಯತ್ತಸ್ಮಾದಿದಾನೀಮಪಿ ಯತ್ರ ಕ್ವಾಪಿ ಯಾಗೇ ಯಜ್ಞೋ ಯಜಮಾನವಶೋ ಭವತಿ || ಸ ಯಜ್ಞೋಽಪಿ ಕಲ್ಪಿತ ಏವ || ಅವೈಕಲ್ಯೇನಾನುಷ್ಠಾಸ್ಯಾಮೀತ್ಯಭಿಪ್ರೇತ್ಯಾನುಷ್ಟುಭಃ ಸವನಾನಾಮಾದೌ ಪ್ರಯೋಗೇ ಸತಿ ಯಜ್ಞಸ್ಯ ಯಜಮಾನವಶತ್ವಂ ತತ್ರ ಯಜ್ಞೋ ವೈಕಲ್ಯರಹಿತೋ ಭವತೀತ್ಯರ್ಥಃ ||

ಮೇಲೆ ಹೇಳಿರುವ ವಿಷಯಗಳನ್ನು ತಿಳಿದು ಅದರಂತೆ ಆಚರಿಸುವ ಪುರುಷನು ತನ್ನ ಸ್ವಜನರ ಮಧ್ಯದಲ್ಲಿ ಶ್ರೇಷ್ಠನೆಂದು ಪರಿಗಣಿಸಲ್ಪಟ್ಟು ಜನರಲ್ಲಿ ಗಣ್ಯತೆಯನ್ನು ಪಡೆಯುವನು. ಸೋಮಯಾಗವು ಅದರ ಅಂಗಗಳಾದ ಸವನಗಳೂ ಪ್ರಜಾಪತಿಯ ಸ್ವಂತವಾದವು ಭಾವಿಸಲ್ಪಟ್ಟಿರುವಂತೆ ಯಜಮಾನನು ಮಾಡುವ ಯಜ್ಞವು ಅದರ ಕರ್ಮಾಂಗಗಳೂ ಯಜ್ಞಮಾಡುವ ಯಜಮಾನನ ಅಧೀನಕ್ಕೆ ಒಳಪಟ್ಟು ಅವನ ಆದೇಶಕ್ಕನುಸಾರವಾಗಿ ಕಾರ್ಯಕಲಾಪಗಳು ನೆರವೇರುವವು. ಪ್ರಜಾಪತಿಯ

ಸ್ವಂತಯಾಗದಲ್ಲಿ ಯಾವರೀತಿ ಕರ್ಮಾರಂಭದಲ್ಲಿ ಅನುಷ್ಟುಪ್‌ಛಂದಸ್ಸುಗಳು ಉಪಯೋಗಿಸಲ್ಪಟ್ಟವೋ ಅದರಂತೆ ಮನುಷ್ಯ ಯಜಮಾನನ ಯಜ್ಞದಲ್ಲಿಯೂ ಕೂಡ ಪ್ರಾರಂಭಕರ್ಮಗಳಲ್ಲಿ ಅನುಷ್ಟುಪ್‌ಛಂದಸ್ಸಿನ ಮಂತ್ರಗಳು ಪಠಿಸಲ್ಪಟ್ಟು ಅದರಿಂದ ಯಜ್ಞವು ಯಾವ ನ್ಯೂನತೆಯನ್ನೂ ಹೊಂದದೆ ಸಾಂಗವಾಗಿಯೂ ನಿರ್ವಿಘ್ನವಾಗಿಯೂ ನೆರವೇರುವುದು.

**ತಸ್ಯೈ ಜನತಾಯೈ ಕಲ್ಪತೇ ಯತ್ರೈವಂ ವಿದ್ವಾನ್ಯಜಮಾನೋ ವಶೀ ಯಜತೇ ॥**

**ಉಕ್ತವಾಕ್ಯಾರ್ಥಮೇವ ವಾಕ್ಯಾಂತರೇಣ ಸ್ಪಷ್ಟೀ ಕರೋತಿ—ಯತ್ರ ಯಸ್ಯಾಂ ಜನಸಭಾಯಾಮೇವಮನುಷ್ಟುಭೋ ಮಹಿಮಾನಂ ವಿದ್ವಾನ್ಯಜಮಾನೋ ವಶೀ ಸ್ವವಶೋ ಭೂತ್ವಾ ತಸ್ಮಿನ್ನನುಷ್ಟುಭಃ ಪ್ರಯೋಗೇ ಸಾವಧಾನೋ ಭೂತ್ವಾ ಯಜತೇ ತಸ್ಯೈ ಜನತಾಯೈ ತಸ್ಯಾಂ ಜನಸಭಾಯಾಂ ಕಲ್ಪತೇ ಯಜ್ಞಃ ಪ್ರಯೋಜನಸಮರ್ಥೋ ಭವತಿ ॥**

ಹಿಂದೆ ಹೇಳಿದ ವಿಷಯವನ್ನೇ ಬೇರೆ ವಾಕ್ಯಗಳಿಂದ ವಿವರಿಸಿ ವಿಶದಪಡಿಸುವರು. ಯಾವ ಯಜಮಾನನು ಮೇಲೆ ಹೇಳಿದ ವಿಷಯಗಳನ್ನೆಲ್ಲಾ ತಿಳಿದು ಅದರಂತೆ ಆಚರಿಸುವನೋ ಅವನು ಮಾಡುವ ಯಜ್ಞವು ಅವನ ಅಧೀನದಲ್ಲಿದ್ದು ಸಾಂಗವಾಗಿ ನೆರವೇರಿ ಆ ಯಜ್ಞವು ಸಮಸ್ತ ಜನಗಳ ಹಿತಕ್ಕಾಗಿ ನೆರವೇರಿದಂತಾಗಿ ಜನಗಳಿಗೆ ಹಿತವನ್ನುಂಟುಮಾಡುವುದು.



## *English Translation*

**(On the distribution of the metres among the gods. Anushtubh Prajapati's metre).**

Pranapati allotted to the deities their (different) parts in the sacrifice and metres. He allotted to Agni and the Vasus at the morning libation the Gayatri, to Indra and the Rudras at the midday libation, the Trishtubh and to the Vis've Devah, and Adityas at the evening libation the Jagati.

His (Prajapati's) own metre was Anushtubh· He pushed it to the end (of the Shastra) of the verse repeated by the Achhavaka. He acknowledged (that he had wronged her). (In order to give redress) he took his own Soma (sacrifice) and put at the beginning, at the very mouth of it, Anushtubh. Thence Anushtubh is joined (to the Shastras) as the first metre, as the very mouth-piece at all libations,

He who has such a knowledge becomes the first, the very mouth (of the others), and attains to supremacy· Prajapati having thus made (the beginning of all libations) at his own Soma sacrifice (with Anushtubh), the sacrificer (who does the same) becomes master of the sacrifice, and the latter becomes (properly)

performed. Wherever a sacrificer has a sacrifice performed so that he remains master of it, it is performed for this (the whole) assemblage of men (who might be with the sacrificer).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ದ್ವಿತೀಯಃ ಖಂಡಃ**

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ತೃತೀಯಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಅಗ್ನಿಯು ದೇವತೆಗಳ ಹೋತೃವಾಗಿದ್ದಾಗ ಹೇಗೆ ಮರಣಭಯವನ್ನು ತಪ್ಪಿಸಿಕೊಂಡನು ಇತ್ಯಾದಿ.]



ಅನುಷ್ಟುಪ್ ಛಂದಸ್ಸಿನ ಮಹಿಮೆಯನ್ನು ಇನ್ನೂ ವ್ಯಕ್ತಪಡಿಸುವುದಕ್ಕಾಗಿ ಇನ್ನೊಂದು ಆಖ್ಯಾಯಿಕೆಯನ್ನು ಹೇಳುವರು—

**ಅಗ್ನಿರ್ವೈ ದೇವಾನಾಂ ಹೋತಾಽಽಸೀತ್ತಂ ಮೃತ್ಯುರ್ಬಹಿಷ್ಪವಮಾ-
ನೇಽಸೀದತ್ಸೋಽನುಷ್ಟುಭಾಜ್ಯಂ ಪ್ರತ್ಯಪದ್ಯತ ಮೃತ್ಯುಮೇವ
ತತ್ಪರ್ಯಕ್ರಾಮತ್ತಮಾಜ್ಯೇಽಸೀದತ್ಸ ಪ್ರಉಗೇಣ ಪ್ರತ್ಯಪದ್ಯತ
ಮೃತ್ಯುಮೇವ ತತ್ಪರ್ಯಕ್ರಾಮತ್ ।**

ಪುನರಪಿ ಪ್ರಕಾರಾಂತರೇಣಾನುಷ್ಟುಭೋ ಮಹಿಮಾನಂ ದರ್ಶಯಿತುಮಾಖ್ಯಾಯಿಕಾಮಾಹ—ಪುರಾ ಕದಾಚಿದ್ದೇವಾನಾಂ ಯಾಗೇಽಗ್ನಿರೇವ ಹೋತಾಭೂತ್ತಮಗ್ನಿಂ ಹೋತಾರಂ ಮೃತ್ಯುರಸೀದದ್ಧ್ವಸ್ತುಂ ಪ್ರಾಪ್ತವಾನ್। ಕಸ್ಮಿನ್ಕಾಲ ಇತಿ ತದುಚ್ಯತೇ ॥ ಬಹಿಷ್ಪವಮಾನಾಖ್ಯೇ ಸ್ತೋತ್ರೇ ಪ್ರಾತಃಸವನಸಂಬಂಧಿನಿ ಉಪಾಸ್ಮೈ ಗಾಯತಾ ನರ ಇತ್ಯಾದ್ಯೃಗಾಶ್ರಯಣೇನ ಸಾಮಗೈಃ ಸ್ತೂಯಮಾನೇ ಸತಿ ಸೋಽಯಮಗ್ನೇರ್ಮೃತ್ಯುಪ್ರಾಪ್ತಿಕಾಲಸ್ತದಾನೀಮಗ್ನಿರ್ಮೃತ್ಯುಂ ಪರಿಹರ್ತುಮನುಷ್ಟುಪ್‌ಛಂದಸ್ಕಯಾ ಪ್ರ ವೋ ದೇವಾಯಾಗ್ನಯ ಇತ್ಯೇತಯರ್ಚಾಽಽಜ್ಯಂ ಶಸ್ತ್ರಂ ಪ್ರಾರಬ್ಧವಾನ್। ತತ್ತೇನಾನುಷ್ಟುಪ್ ಪ್ರಯೋಗೇಣ ಸೋಽಗ್ನಿಸ್ತದಾನೀಮೇವ ಮೃತ್ಯುಂ

**ಪರ್ಯಕ್ರಾಮದತಿಕ್ರಾಂತವಾನ್ । ತತೋಽಗ್ನಿನಾ ಹೋತ್ರಾಽಽಜ್ಯಶಸ್ತ್ರೇ ಶಸ್ಯಮಾನೇ ಸತಿ ತಮಗ್ನಿಂ ಮೃತ್ಯುರಸೀದತ್ಪ್ರಾಪ್ತವಾನ್ । ತದಾ ಸೋಽಗ್ನಿರ್ಮೃತ್ಯುಂ ಪರಿಹರ್ತುಂ ವಾಯವಾಯಾಹೀತ್ಯಾದಿಕೇನ ಸಪ್ತತೃಚಾತ್ಮಕೇನ ಪ್ರಉಗಶಸ್ತ್ರೇಣಾನುಷ್ಟುಭಂ ಪ್ರತ್ಯಪದ್ಯತ ಪ್ರಾರಬ್ಧವಾನ್ । ತತ್ತೇನ ಪ್ರಉಗಪ್ರಯೋಗೇಣ ತದಾನೀಮೇವ ಮೃತ್ಯುಮತಿಕ್ರಾಂತವಾನ್ ॥**

ಪೂರ್ವದಲ್ಲಿ—ಎಂದರೆ ಒಂದಾನೊಂದು ಸಮಯದಲ್ಲಿ ದೇವತೆಗಳು ಯಜ್ಞವನ್ನು ಮಾಡುತ್ತಿದ್ದರು. ಆ ಯಜ್ಞದಲ್ಲಿ ಅಗ್ನಿಯು ಹೋತೃವಿನ ಪಾತ್ರವನ್ನು ವಹಿಸಿ ಮಂತ್ರಗಳನ್ನು ಪಠಿಸುತ್ತಿದ್ದನು. ಆಗ ಸಾಮಗಾಯಕರು ಪ್ರಾತಸ್ಸವನಕಾಲದಲ್ಲಿ **ಉಪಾಸ್ಮೈ ಗಾಯತಾ ನರಃ** ಎಂದು ಬಹಿಷ್ಪವಮಾನಸ್ತೋತ್ರವನ್ನು ಗಾನಮಾಡಿ ಮುಗಿಸಿದಮೇಲೆ ಮೃತ್ಯು(ದೇವತೆಯು) ಅಗ್ನಿಯನ್ನು ಕೊಲ್ಲಲು ಅಲ್ಲಿ ಸಿದ್ಧವಾಗಿಬಂದಿತು. ಇದನ್ನು ತಿಳಿದು ಹೋತೃಪಾತ್ರವನ್ನು ನಿರ್ವಹಿಸುತ್ತಿದ್ದ ಅಗ್ನಿಯು ತಾನು ಪಠಿಸಬೇಕಾದ ಶಸ್ತ್ರಮಂತ್ರವನ್ನು ಅನುಷ್ಟುಪ್ ಛಂದಸ್ಸಿನ ಮಂತ್ರಗಳಿಂದ ಕೂಡಿದ **ಪ್ರವೋ ದೇವಾಯಾಗ್ನಯೇ** ಎಂಬ ಸೂಕ್ತದಿಂದ ಪ್ರಾರಂಭಮಾಡಿ ಪಠಿಸಿದನು. ಇದು ಆಜ್ಯಶಸ್ತ್ರವು. ಇದನ್ನು ಅಗ್ನಿಯು ಪಠಿಸಿ ಮೃತ್ಯುವಶದಿಂದ ಪಾರಾದನು. ಏಕೆಂದರೆ ಅನುಷ್ಟುಪ್‌ಛಂದಸ್ಸಿನ ಮಂತ್ರಗಳ ಮಹತ್ತಿನಿಂದ ಮೃತ್ಯುವಿನ ಆಟವು ಸಾಗಲಿಲ್ಲ. ಆದ್ದರಿಂದ ಮೃತ್ಯುವು ಪುನಃ ಪ್ರಯತ್ನ ಮಾಡಬೇಕೆಂದು ಇಚ್ಛಿಸಿ ಸಾಮಗಾಯಕರು **ಅಗ್ನ ಆಯಾಹಿ** ಎಂದು ಆಜ್ಯಸ್ತೋತ್ರವನ್ನು ಗಾನಮಾಡಿದನಂತರ ಮತ್ತೆ ಅಗ್ನಿಯ ಸಮೀಪಕ್ಕೆ ಬಂದು ಕಾಯುತ್ತಿದ್ದನು. ಇದನ್ನು ತಿಳಿದ ಅಗ್ನಿಯು ಮೃತ್ಯುವಿನ ವಶದಿಂದ ತಪ್ಪಿಸಿಕೊಳ್ಳುವುದಕ್ಕಾಗಿ ವಾಯವಾಯಾಹಿ ಎಂಬ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸಲು ಪ್ರಾರಂಭಿಸಿದನು. ಈ ಪ್ರಉಗಶಸ್ತ್ರಮಂತ್ರಗಳಿಂದಲೂ ಅನುಷ್ಟುಪ್‌ಛಂದಸ್ಸಿನ ಮಂತ್ರಗಳನ್ನೇ ಪಠಿಸಿದಂತಾಗಿ ಅಗ್ನಿಯು ಮೃತ್ಯುವಿನ ವಶಕ್ಕೆ ಈಡಾಗದೆ ಸುರಕ್ಷಿತವಾಗಿ ಪಾರಾದನು.

ತಂ ಮಾಧ್ಯಂದಿನೇ ಪವಮಾನೇಽಸೀದತ್ಸೋಽನುಷ್ಟುಭಾ ಮರುತ್ವತೀಯಂ ಪ್ರತ್ಯಪದ್ಯತ ಮೃತ್ಯುಮೇವ ತತ್ಪರ್ಯಕ್ರಾಮತ್ತಂ ಮಾಧ್ಯಂದಿನೇ ಬೃಹತೀಷು ನಾಶಕ್ನೋತ್ಸತ್ತುಂ ಪ್ರಾಣಾ ವೈ ಬೃಹತ್ಯಃ ಪ್ರಾಣಾನೇವ ತನ್ನಾಶಕ್ನೋದ್ವ್ಯವೈತುಂ ತಸ್ಮಾನ್ಮಾಧ್ಯಂದಿನೇ ಹೋತಾ ಬೃಹತೀಷು ಸ್ತೋತ್ರಿಯೇಣೈವ ಪ್ರತಿಪದ್ಯತೇ ಪ್ರಾಣಾ ವೈ ಬೃಹತ್ಯಃ ಪ್ರಾಣಾನೇವ ತದಭಿಪ್ರತಿಪದ್ಯತೇ ॥

**ಇತ್ಥಂ ಪ್ರಾತಃಸವನೇಽನುಷ್ಟುಭಂ ಮೃತ್ಯುಪರಿಹಾರಹೇತುತ್ವೇನ ಪ್ರಶಸ್ಯ ಮಾಧ್ಯಂದಿನಸವನೇಽಪಿ ತಥಾ ಪ್ರಶಂಸತಿ—ಪ್ರಾತಃಸವನಾನ್ನಿರಾಕೃತೋ ಮೃತ್ಯುರುಚ್ಚಾ ತೇ ಜಾತಮಂಧಸ ಇತ್ಯಾದಿಕೇ ಮಾಧ್ಯಂದಿನಪವಮಾನಸ್ತೋತ್ರೇ ಗೀಯಮಾನೇ ಸತಿ ತಸ್ಮಿನ್ಕಾಲೇ ತಮಗ್ನಿಂ ಹೋತಾರಮಸೀದತ್ಪ್ರಾಪ್ತವಾನ್ । ತದಾನೀಂ ಸೋಽಗ್ನಿರ್ಹೋತಾ ಮೃತ್ಯುಪರಿಹಾರಾಯಾನುಷ್ಟುಪ್ಛಂದಸ್ಕಯಾಽಽತ್ವಾ ರಥಮಿತ್ಯೇತಯರ್ಚಾ ಮರುತ್ವತೀಯಶಸ್ತ್ರಂ ಪ್ರಾರಬ್ಧವಾನ್ ॥ ತತ್ತೇನಾನುಷ್ಟುಪ್ಪ್ರಯೋಗೇಣ ತದಾನೀಮೇವ ಮೃತ್ಯುಮತಿಕ್ರಾಂತವಾನ್ ॥ ಮಾಧ್ಯಂದಿನಪವಮಾನಾನ್ನಿರಾಕೃತೋ ಮೃತ್ಯುರ್ಮಾಧ್ಯಂದಿನಸವನಸಂಬಂಧಿಮರುತ್ವತೀಯಶಸ್ತ್ರೇ ಶಸ್ಯ-**

ಮಾನೇ ಸತಿ ಶಂಸಿತಾರಮಗ್ನಿಂ ಹೋತಾರಂ ಪ್ರಾಪ್ಸ್ಯಾಮೀತಿ ವಿಚಾರ್ಯ ತತ್ರ ಬೃಹತೀ-ಛಂದಸ್ಕಾಸ್ವೃಕ್ಷು ಗೀಯಮಾನಾಸು ತಮಗ್ನಿಂ ಸತ್ತುಂ ಪ್ರಾಪ್ತುಂ ನಾಶಕ್ನೋತ್ ತತ್ರ ಹೇತು-ರುಚ್ಯತೇ । ಬೃಹತೀಛಂದಸ್ಕಾ ಋಚಃ ಪ್ರಾಣಸ್ವರೂಪಾ ಏವ॥ ತತ್ತೇನ ಕಾರಣೇನ ಪ್ರಾಣಾನೇವ ವ್ಯವೈತುಂ ವಿಯೋಜಯಿತುಂ ಮೃತ್ಯುರ್ನಾಶಕ್ನೋತ್ ॥ ಪ್ರಾಣಾಭಿಮಾನಿನೀಭಿರ್ಬೃಹತೀಭಿಃ ಪ್ರಾಣಾನಾಂ ರಕ್ಷಿತತ್ವಾತ್ ॥ ಬೃಹತ್ಯಶ್ಚ ಮರುತ್ವತೀಯಶಸ್ತ್ರಾನಂತರಭಾವಿನಿ ನಿಷ್ಕೇವಲ್ಯಶಸ್ತ್ರೇ ಬಹವೋ ವಿದ್ಯಂತೇ ॥ ತಾಶ್ಚ ಸರ್ವಸ್ಮಿನ್ನೇವ ಮಾಧ್ಯಂದಿನೇ ಸವನೇ ಮೃತ್ಯುಪ್ರವೇಶಂ ನಿವಾರ-ಯಂತಿ ॥ ಯಸ್ಮಾದೇವಂ ಬೃಹತ್ಯೋ ಮೃತ್ಯುಪ್ರವೇಶಂ ನಿವಾರಯಿತುಂ ಸಮರ್ಥಾಸ್ತಸ್ಮಾನ್ಮಾ-ಧ್ಯಂದಿನ ಪ್ರಯೋಗೇ ಹೋತಾ ಬೃಹತೀ ಛಂದಸ್ಕಾಸ್ವೃಕ್ಷು ಸ್ತೋತ್ರಿಯೇಣೈವ ತ್ರ್ಯೃಚೇನ ಶಸ್ತ್ರಂ ಪ್ರಾರಭತೇ ॥ ಯಸ್ಮಿಂಸ್ತ್ರ್ಯೃಚೇ ಸಾಮಗೈಃ ಸ್ತೋತ್ರಂ ಗೀತಂ ಸೋಽಯಂ ತ್ರ್ಯೃಚಃ ಸ್ತೋತ್ರಿಯಸ್ತೇನ ತ್ರ್ಯೃಚೇನ ಪ್ರಾರಂಭೇ ಸತಿ ತತ್ರತ್ಯಾನಾಂ ಬೃಹತೀನಾಂ ಪ್ರಾಣರೂಪತ್ವಾ-ತ್ಪ್ರಾಣಾನೇವಾಭಿಲಕ್ಷ್ಯ ಶಸ್ತ್ರಪ್ರಾರಂಭಂ ಕೃತವಾನ್ಭವತಿ ॥

ಪ್ರಾತಸ್ಸವನಕಾಲದಲ್ಲಿ ಅಗ್ನಿಯನ್ನು ಆಕ್ರಮಿಸಬೇಕೆಂದು ಬಂದ ಮೃತ್ಯುವು ಅಗ್ನಿಯು ಪಠಿಸಿದ ಅನುಷ್ಟುಪ್‌ಛಂದಸ್ಸಿನ ಶಸ್ತ್ರಮಂತ್ರಗಳಿಂದ ಅಗ್ನಿಯನ್ನು ಆಕ್ರಮಿಸಲಾರದೆ ನಿರಾಶೆಗೊಂಡು ಹೊರಟುಹೋಯಿತಷ್ಟೆ. ಈಗ ಮಾಧ್ಯಂದಿನ ಸವನಕಾಲದಲ್ಲಿ ಅಗ್ನಿಯನ್ನು ಆಕ್ರಮಿಸಬೇಕೆಂದು ಉದ್ದೇಶಿಸಿ ಸಾಮಗಾಯಕರು- **ಉಚ್ಚಾ ತೇ ಜಾತಮಂಧಸಃ** (ಋ. ಆ. ೧-೧-೮, ೯, ೧೦) ಎಂಬ ಪವಮಾನಸ್ತೋತ್ರವನ್ನು ಗಾನಮಾಡಿದನಂತರ ಅಗ್ನಿಯ ಸಮೀಪಕ್ಕೆ ಬಂದಿತು. ಇದನ್ನು ತಿಳಿದು ಹೋತೃಸ್ಥಾನದಲ್ಲಿದ್ದ ಅಗ್ನಿಯು ಮೃತ್ಯುಪರಿಹಾರಾರ್ಥವಾಗಿ ಅನುಷ್ಟುಪ್ ಛಂದಸ್ಸಿನ ಋಕ್ಕುಗಳಿಂದ ಕೂಡಿದ **ಆತ್ವಾರಥಂ** ಎಂಬ ಮರುತ್ವತೀಯ ಶಸ್ತ್ರಮಂತ್ರವನ್ನು ಪಠಿಸಲು ಪ್ರಾರಂಭಮಾಡಿದನು. ಈ ಅನುಷ್ಟುಪ್‌ಛಂದಸ್ಕವಾದ ಮಂತ್ರಪಠನದಿಂದ ಅಗ್ನಿಯು ಮೃತ್ಯುವನ್ನು ಪರಿಹರಿಸಿದನು. ಈರೀತಿ ಮಾಧ್ಯಂದಿನ ಪವಮಾನಸ್ತೋತ್ರಗಳಿಂದ ಓಡಿಸಲ್ಪಟ್ಟ ಮೃತ್ಯುವು ಮಾಧ್ಯಂದಿನ ಸವನಸಂಬಂಧವಾದ ಮರುತ್ವತೀಯಶಸ್ತ್ರಮಂತ್ರವನ್ನು ಪಠಿಸುತ್ತಿದ್ದ ಅಗ್ನಿಯನ್ನು ಹಿಡಿಯುವೆನು ಎಂದು ಆಲೋಚಿಸಿ ಅಗ್ನಿಯ ಸಮೀಪವನ್ನೈದಿ ಅಲ್ಲಿ ಕಾದು ಕುಳಿತಿತು. ಆಗ ಹೋತೃವಾದ ಅಗ್ನಿಯು ಮುಂದಿನ ಶಸ್ತ್ರಮಂತ್ರವನ್ನು ಪಠಿಸಬೇಕೆಂದಿರುವಾಗ ಸಾಮಗಾಯಕರು ಬೃಹತೀಛಂದಸ್ಸಿನ ಮಂತ್ರಗಳನ್ನು ಗಾನಮಾಡಲು ಪ್ರಾರಂಭಿಸಿದ್ದರಿಂದ ಮೃತ್ಯುವು ಅಗ್ನಿಯನ್ನು ಆಕ್ರಮಿಸಲು ಸಾಧ್ಯವಾಗಲಿಲ್ಲ. ಏಕೆಂದರೆ-ಬೃಹತೀಛಂದಸ್ಸಿನ ಮಂತ್ರಗಳು ಪ್ರಾಣಸ್ವರೂಪವಾದವುಗಳು. ಆದ್ದರಿಂದ ಪ್ರಾಣಗಳನ್ನು ಶರೀರದಿಂದ ಬೇರ್ಪಡಿಸಿ ಕೊಂಡೊಯ್ಯಲು ಮೃತ್ಯುವಿಗೆ ಸಾಧ್ಯವಾಗಲಿಲ್ಲ. ಏಕೆಂದರೆ ಪ್ರಾಣಸ್ವರೂಪಗಳಾದ ಬೃಹತೀಛಂದಸ್ಸಿನ ಮಂತ್ರಗಳು ಅವುಗಳನ್ನು ಪಠಿಸುವ ಪುರುಷನ ಪ್ರಾಣಗಳನ್ನು ಸಂರಕ್ಷಿಸುವವು (ಕಾಪಾಡುವವು). ಮರುತ್ವತೀಯ ಶಸ್ತ್ರಾನಂತರ ಪಠಿಸಲ್ಪಡುವ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಬೃಹತೀಛಂದಸ್ಸಿನ ಮಂತ್ರಗಳೇ ವಿಶೇಷವಾಗಿರುವವು. ಬಹಳವಾಗಿರುವ ಈ ಬೃಹತೀಛಂದಸ್ಸಿನ ಮಂತ್ರಗಳು ಮಾಧ್ಯಂದಿನಸವನಕಾಲದಲ್ಲಿ ಪಠಿಸಲ್ಪಡುವುದರಿಂದ ಅವುಗಳು ಪಠಿಸುವವರ ಪ್ರಾಣಸಂರಕ್ಷಣೆಯನ್ನು ಮಾಡುವವು. ಆದ್ದರಿಂದ ಈ ಬೃಹತೀಛಂದಸ್ಸುಗಳು ಮೃತ್ಯುವಿನ ಅತಿಕ್ರಮಣವನ್ನು ತಡೆಗಟ್ಟಲು ಸಮರ್ಥವಾಗಿರುವುವು. ಆದ್ದರಿಂದಲೇ ಮಾಧ್ಯಂದಿನ ಸವನಕಾಲದಲ್ಲಿ ಹೋತೃವು ಮಂತ್ರಗಳನ್ನು ಪಠಿಸುವಾಗ ಸಾಮಗಾಯಕರು ಗಾನಮಾಡಲು ಬೃಹತೀ ಛಂದಸ್ಸಿನ ತೃಚ (ಮೂರು ಋಕ್ಕುಗಳು) ಗಳಾದ ಅದೇ ಮಂತ್ರಗಳಿಂದ ಎಂದರೆ ಅದೇ ವಿಧವಾದ ಋಗ್ವೇದ ಶಸ್ತ್ರಮಂತ್ರಗಳಿಂದ ಮಂತ್ರಗಳನ್ನು ಪಠಿಸಲು ಪ್ರಾರಂಭಮಾಡುವನು. ಸಾಮಗಾಯಕರು ಗಾನಮಾಡುವ ತೃಚಕ್ಕೆ (ಮೂರು ಋಕ್ಕುಗಳು) ಸ್ತೋತ್ರವೆಂದು ಹೆಸರು. ಅದೇ ಸ್ತೋತ್ರಿಯದ ಬೃಹತೀ ಛಂದಸ್ಸಿನ ಮಂತ್ರಗಳು ಋಗ್ವೇದದಲ್ಲಿಯೂ ಇರುವುದರಿಂದ ಹೋತೃವು ಶಸ್ತ್ರ ಮಂತ್ರವನ್ನು ಅದೇ ಬೃಹತೀಛಂದಸ್ಕವಾದ ಮಂತ್ರಗಳಿಂದ ಪಠಿಸಲು ಆರಂಭಿಸುವನು.

**ತಂ ತೃತೀಯಸವನೇಽಸೀದತ್ಸೋಽನುಷ್ಟುಭಾ ವೈಶ್ವದೇವಂ ಪ್ರತ್ಯಪದ್ಯತ ಮೃತ್ಯುಮೇವ ತತ್ಪರ್ಯಕ್ರಾಮತ್ ॥**

ಅಥ ತೃತೀಯಸವನೇ ಮೃತ್ಯುಪರಿಹಾರೇಣಾನುಷ್ಟುಭಂ ಪ್ರಶಂಸತಿ—ತ್ರಿಷು ಪವಮಾನೇಷು ಬಹಿಷ್ಪವಮಾನಃ ಪ್ರಥಮಃ ॥ ಮಾಧ್ಯಂದಿನಪವಮಾನೋ ದ್ವಿತೀಯಃ । ಆರ್ಭವಪವಮಾನಸ್ತೃತೀಯಃ। ಮಾಧ್ಯಂದಿನಸವನೇ ಪ್ರವೇಷ್ಟುಮಶಕ್ತೋ ಮೃತ್ಯುಃ ಸ್ವಾದಿಷ್ಠಯೇತ್ಯೇತಸ್ಮಿನ್ನಾರ್ಭವಾಖ್ಯೇ ತೃತೀಯಪವಮಾನಸ್ತೋತ್ರೇ ತೃತೀಯಸವನಗತೇ ಸಾಮಗೈರ್ಗೀಯಮಾನೇ ಸತಿ ತಮಗ್ನಿಂ ಹೋತಾರಂ ಮೃತ್ಯುರಸೀದತ್ ॥ ಸೋಽಪ್ಯಗ್ನಿಸ್ತಂ ವಾರಯಿತುಮನುಷ್ಟುಪ್ಛಂದಸ್ಕಯಾ ತತ್ಸವಿತುರ್ವೃಣೀಮಹ ಇತ್ಯೇತಯರ್ಚಾ ವೈಶ್ವದೇವಾಖ್ಯಂ ಪ್ರಾರಭತ ॥ ತೇನಾನುಷ್ಟುಪ್ಪ್ರಯೋಗೇಣ ತದಾನೀಮೇವ ಮೃತ್ಯುಮತಿಕ್ರಾಂತವಾನಿತ್ಯನುಷ್ಟುಪ್ಸವನತ್ರಯೇ ಶಸ್ತಾ ॥

ಈಗ ತೃತೀಯ ಸವನಕಾಲದಲ್ಲಿಯೂ ಅನುಷ್ಟುಪ್ ಛಂದಸ್ಕವಾದ ಮಂತ್ರಗಳಿಂದ ಮೃತ್ಯುಪರಿಹಾರ ಮಾಡುವುದರಿಂದ ರಿಂದ ಇಲ್ಲಿಯೂ ಅನುಷ್ಟುಪ್ ಛಂದಸ್ಸನ್ನು ಪ್ರಶಂಸಿಸುವರು. ಪವಮಾನ ಸ್ತೋತ್ರಗಳು ಮೂರು ಇರುವುವು. ಬಹಿಷ್ಪವಮಾನ ಸ್ತೋತ್ರವೆಂಬುದು ಮೊದಲನೆಯದು. ಇದನ್ನು ಪ್ರಾತಃಸವನದಲ್ಲಿ ಗಾನಮಾಡುವರು; ಮಾಧ್ಯಂದಿನ ಪವಮಾನಸ್ತೋತ್ರವು ಎರಡನೆಯದು, ಇದನ್ನು ಮಾಧ್ಯಂದಿನ ಸವನದಲ್ಲಿ ಗಾನಮಾಡುವರು. ಆರ್ಭವ ಪವಮಾನ ಸ್ತೋತ್ರವೆಂಬುದು ಮೂರನೆಯದು. **ಸ್ವಾದಿಷ್ಠಯಾ ಮದಿಷ್ಠಯಾ** (ಸಾ. ವೇ. ಉ. ಆ. ೧-೧-೧೫) ಎಂಬ ಈ ಆರ್ಭವಪವಮಾನ ಸ್ತೋತ್ರವನ್ನು ತೃತೀಯ ಸವನದಲ್ಲಿ ಗಾನಮಾಡುವರು. ಈ ಆರ್ಭವಸ್ತೋತ್ರವನ್ನು ಗಾನಮಾಡಿದನಂತರ ಮೃತ್ಯುವು ಹೋತೃವಾದ ಅಗ್ನಿಯನ್ನು ಸಮೀಪಿಸಿತು. ಆದರೆ ಹೋತೃವು ಮೃತ್ಯುಪರಿಹಾರಾರ್ಥವಾಗಿ ಅನುಷ್ಟುಪ್ ಛಂದಸ್ಸಿನ ಮಂತ್ರವಾದ **ತತ್ಸವಿತುರ್ವೃಣೀಮಹೇ** (ಋ. ಸಂ. ೫-೮೨-೧) ಎಂಬ ಮಂತ್ರದಿಂದ ವೈಶ್ವದೇವಶಸ್ತ್ರವನ್ನು ಪಠಿಸಲು ಪ್ರಾರಂಭಿಸಿದನು. ಆದರಿಂದ ಹೋತೃವು ಮೃತ್ಯುವನ್ನು ಅತಿಕ್ರಮಿಸಿ ಪಾರಾದನು. ಈರೀತಿಯಾದ ಅನುಷ್ಟುಪ್ ಛಂದಸ್ಸಿನ ಮಹತ್ವವನ್ನು ಮೂರುಸವನಗಳಲ್ಲಿಯೂ ಪ್ರಶಂಸಿಸಲಾಗಿರುವುದು.

**ತಂ ಯಜ್ಞಾಯಜ್ಞೀಯೇಽಸೀದತ್ಸ ವೈಶ್ವಾನರೀಯೇಣಾಗ್ನಿಮಾರುತಂ ಪ್ರತ್ಯಪದ್ಯತ ಮೃತ್ಯುಮೇವ ತತ್ಪರ್ಯಕ್ರಾಮದ್ವಜ್ರೋ ವೈ ವೈಶ್ವಾನರೀಯಂ ಪ್ರತಿಷ್ಠಾ ಯಜ್ಞಾಯಜ್ಞೀಯಂ ವಜ್ರೇಣೈವ ತತ್ಪ್ರತಿಷ್ಠಾಯಾ ಮೃತ್ಯುಂ ನುದತೇ ಸ ಸರ್ವಾನ್ಪಾಶಾನ್ಸರ್ವಾನ್ ಸ್ಥಾಣೂನ್ಮೃತ್ಯೋರತಿಮುಚ್ಯ ಸ್ವಸ್ತ್ಯೇವೋದಮುಚ್ಯತ ಸ್ವಸ್ತ್ಯೇವ ಹೋತೋನ್ಮುಚ್ಯತೇ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥**

ಅಥ ಯಜ್ಞಾಯಜ್ಞೀಯಾಖ್ಯಂ ಸಾಮ ವೈಶ್ವಾನರೀಯಸೂಕ್ತಂ ಚ ಪ್ರಶಂಸತಿ ॥ ಯಜ್ಞಾಯಜ್ಞಾ ವೋ ಅಗ್ನಯ ಇತ್ಯಸ್ಯಾಮೃಚ್ಯುತ್ಪನ್ನಂ ನಾಮ ಯಜ್ಞಾಯಜ್ಞೀಯಂ

ತತ್ಸಾಮಸಾಧ್ಯೇ ತನ್ನಾಮಕೇ ಸ್ತೋತ್ರೇ ಸಾಮಗೈರ್ಗೀಯಮಾನೇ ಸತಿ ತೃತೀಯಪವಮಾನಾನ್ನಿರಾಕೃತೋ ಮೃತ್ಯುಸ್ತಮಗ್ನಿಂ ಹೋತಾರಂ ಪ್ರಾಪ್ತವಾನ್ ॥ ತತೋಽಗ್ನಿರ್ಹೋತಾ ಮೃತ್ಯುಪರಿಹಾರಾಯ ವೈಶ್ವಾನರಾಯ ಪೃಥುಪಾಜಸೇ ವಿಪ ಇತ್ಯಾದಿನಾ ವೈಶ್ವಾನರೀಯೇಣ ಸೂಕ್ತೇನ ಮರುತ್ವತೀಯಶಸ್ತ್ರಪ್ರಾರಂಭಂ ಕೃತವಾನ್ ॥ ತೇನ ಸೂಕ್ತಪ್ರಯೋಗೇಣ ತದಾನೀಮೇವ ಮೃತ್ಯುಮತಿಕ್ರಾಂತವಾನ್ ॥ ತತ್ರ ವೈಶ್ವಾನರೀಯಂ ಸೂಕ್ತಂ ವಜ್ರಸ್ವರೂಪಂ ॥ ಯಜ್ಞಾಯಜ್ಞೀಯಸ್ತೋತ್ರಂ ತು ಪ್ರತಿಷ್ಠಾ ಸಮಾಪ್ತೇರ್ಹೇತುಃ॥ ತಸ್ಮಾತ್ಸೂಕ್ತರೂಪೇಣ ವಜ್ರೇಣೈವ ಪ್ರತಿಷ್ಠಾಯಾ ಯಜ್ಞಸಮಾಪ್ತೇರ್ಮೃತ್ಯುಮಗ್ನಿರ್ನಿರಾಕುರುತೇ ॥ ಸ ತಾದೃಶೋಽಗ್ನಿಃ ಸರ್ವಾನ್ಪಾಶಾನ್ಮೃತ್ಯುಸಂಬಂಧಿಬಂಧನರಜ್ಜುರೂಪಾಂಸ್ತಥಾ ಮೃತ್ಯೋಃ ಸಂಬಂಧಿನಃ ಸರ್ವಾನ್ಸ್ಥಾಣೂನ್ಕಾಷ್ಠೋಪಲಕ್ಷಿತ ಗದಾದ್ಯಾಯುಧಾನಿ ಮೃತ್ಯೋಃ ಸಕಾಶಾದತಿಮುಚ್ಯ ನಿವಾರ್ಯ ಸ್ವಸ್ತ್ಯೇವ ಕ್ಷೇಮೇಣೈವ ಸ್ವಯಂ ಮೃತ್ಯುಸಕಾಶಾದುನ್ಮುಕ್ತೋಽಭೂತ್ ॥ ಅಗ್ನಿವನ್ಮಾನುಷೋಽಪಿ ಹೋತಾ ತೇನೈವ ಪ್ರಕಾರೇಣಾನುತಿಷ್ಠನ್ಸರ್ವೇಣಾಽಽಯುಷಾ ಯುಕ್ತಃ ಕ್ಷೇಮೇಣೈವ ಮೃತ್ಯೋರುನ್ಮುಚ್ಯತೇ॥ ಅತ್ರ ಸರ್ವತ್ರ ಯೋ ಯೋಽಪೂರ್ವೋಽರ್ಥಃ ತಸ್ಯ ಸರ್ವಸ್ಯಾರ್ಥವಾದಾದೇವ ವಿಧಿರುನ್ನೇಯಃ ॥ ಸೋಽಯಂ ಹೌತ್ರಪ್ರಯೋಗೋ ಯಜಮಾನಸ್ಯ ಸರ್ವಾಯುತ್ವಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ ॥

ಈಗ ಯಜ್ಞಾಯಜ್ಞೀಯಂ ಎಂಬ ಸಾಮಗಾನಸ್ತೋತ್ರವನ್ನೂ ವೈಶ್ವಾನರೀಯವೆಂಬ ಸೂಕ್ತವನ್ನೂ ಪ್ರಶಂಸೆ ಮಾಡುವರು— ಯಜ್ಞಾ ಯಜ್ಞಾ ವೋ ಅಗ್ನಯೇ ಎಂಬ ಋಕ್ಕನ್ನನುಸರಿಸಿ ಗಾನಮಾಡುವ ಸಾಮಮಂತ್ರವು ಯಜ್ಞಾಯಜ್ಞೀಯಂ (ಸಾ. ವೇ. ಉ. ಆ. ೧-೧-೨೦) ಎಂಬ ಸಾಮಗಾನಸ್ತೋತ್ರವೆಂದು ಹೇಳಲ್ಪಡುವುದು. ಈ ಹೆಸರಿನ ಎಂದರೆ ಯಜ್ಞಾಯಜ್ಞೀಯವೆಂಬ ಸ್ತೋತ್ರವನ್ನು ಸಾಮಗರು ಗಾನಮಾಡಿದಕೂಡಲೇ ಮೃತ್ಯುವು ಹೋತೃವಾದ ಅಗ್ನಿಯನ್ನು ಸಮೀಪಿಸಿತು. ಏಕೆಂದರೆ ತೃತೀಯಸವನಕಾಲದಲ್ಲಿಯೂ ಮೃತ್ಯುವಿನ ಆಕ್ರಮಣವು ನಿರಾಕರಿಸಲ್ಪಟ್ಟಿತು. ಆಗ ಹೋತೃವಾದ ಅಗ್ನಿಯು ಮೃತ್ಯುಪರಿಹಾರಾರ್ಥವಾಗಿ ವೈಶ್ವಾನರಾಯ ಪೃಥುಪಾಜಸೇ ಎಂಬ ವೈಶ್ವಾನರೀಯ ಸೂಕ್ತದಿಂದ ಪ್ರಾರಂಭಿಸಿ ಅಗ್ನಿಮಾರುತಶಸ್ತ್ರವನ್ನು ಪಠಿಸಲು ಪ್ರಾರಂಭಮಾಡಿದನು. ಈ ಸೂಕ್ತಪ್ರಯೋಗದಿಂದ ಅಗ್ನಿಯು ಮೃತ್ಯುಪರಿಹಾರವನ್ನು ಮಾಡಲು ಸಾಧ್ಯವಾಯಿತು. ಏಕೆಂದರೆ ಈ ವೈಶ್ವಾನರೀಯಸೂಕ್ತವು ವಜ್ರಾಯುಧಸ್ವರೂಪವುಳ್ಳದ್ದು. ಮತ್ತು ಯಜ್ಞಾಯಜ್ಞೀಯ ಸ್ತೋತ್ರವು ಯಜ್ಞದಲ್ಲಿ ಪಠಿಸುವ ಮಂತ್ರಗಳಲ್ಲಿ ಕೊನೆಯದು. ಆದ್ದರಿಂದ ವಜ್ರಸ್ವರೂಪವಾದ ವೈಶ್ವಾನರಸೂಕ್ತ ಮಂತ್ರಪಠನದಿಂದಲೂ ಅಂತ್ಯಸ್ತೋತ್ರವಾದ ಯಜ್ಞಾಯಜ್ಞೀಯಸ್ತೋತ್ರಗಾನದಿಂದಲೂ ಅಗ್ನಿಗೆ ಮೃತ್ಯುವು ಪರಿಹಾರವಾಯಿತು. ಎಂದರೆ ಹೋತೃಸ್ಥಾನದಲ್ಲಿದ್ದ ಈ ಅಗ್ನಿಯು ಮೃತ್ಯುದೇವತೆಯ ರಜ್ಜುಬಂಧನರೂಪವಾದ ಸಮಸ್ತ ಪಾಶಗಳನ್ನೂ ಮತ್ತು ಮೃತ್ಯುವಿನ (ಮರದಿಂದ ನಿರ್ಮಿತವಾದ) ಗದಾದ್ಯಾಯುಧಗಳ ಪ್ರಹಾರಗಳನ್ನೂ ಪರಿಹರಿಸಿಕೊಂಡು ಮೃತ್ಯುವಿನಿಂದ ಸರ್ವವಿಧದಲ್ಲಿಯೂ ಪಾರಾದನು.

ಇದೇರೀತಿಯಾಗಿ ಅಗ್ನಿಯಂತೆ ಮಂತ್ರಪಠನಾದಿಗಳನ್ನು ಮಾಡುವ ಪುರುಷನು ಎಂದರೆ ಮನುಷ್ಯರು ಮಾಡುವ ಯಜ್ಞದಲ್ಲಿ ಹೋತೃಪಾತ್ರವನ್ನು ವಹಿಸುವ ಋತ್ವಿಜನೂ ಸಹ ಮೃತ್ಯುವಿನ ಪಾಶಾದಿಗಳಿಂದ ಪಾರಾಗಿ ಪೂರ್ಣಾಯುಸ್ಸನ್ನು ಪಡೆಯುವನು. ಯಜ್ಞಮಾಡುವ ಯಜಮಾನನೂ ಪೂರ್ಣಾಯುಸ್ಸನ್ನು ಪಡೆಯುವನು.



## *English Translation*

### (How Agni, as Hotar of the gods, escaped the meshes of Death.)

When Agni was the Hotar of the Gods, Death sitting in the Bahishpa-vamana Stotra lurked for him. By commencing the Ajya Shastra with the Anushtubh metre he overcame death. Death repaired to the Ajya Shastra lurking for Agni. By beginning (to repeat) the Pra-uga Shastra, he overcame Death (again).

At the midday libation Death sat in the Pavamana Stotra lurking for Agni. By commencing the Marutvatiya Shastra with Anushtubh, he overcame Death. Death could not sit, at that libation, in the Brihati verses (repeated by the Hotar at the commencement of the Nishkevalya Shastra). For the Brihatis are life. Thus Death could not take away the life. This is the reason that the Hotar beings (the Nishkevalya Shastra) with the Storiya triplet (corresponding to the Saman which is sung) in the Brihati metre. The Brihatis are life. By commencing his second Shastra (with Brnihatis) he has the preservation of his life in view.

At the evening libation Death sat in the Pavamana Stotra lurking for Agni. By commencing the Vaisiadeva Shastra with Anushtubh, Agni overcame Death. Death repaired to the Yajna yajniya Saman. By commencing the Agni-Maruta Shastra with a hymn addressed to Vais vanara, he overcame Death. For the hymn addressed to Vais vanara is a weapon; the Yajna yajniya Saman is the place. By repeating the Vais vanara hymn he thus turns Death out of his place.

Having escaped all the meshes of Death, and his clubs, Agni came off in safety. The Hotar who has such a knowledge comes off in safety, preserving his life to its full extent, and attains to his full age (of a hundred years).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾದಶಾಧ್ಯಾಯಸ್ಯ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ಚತುರ್ಥಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಮರುತ್ವತೀಯ ಶಸ್ತ್ರದ ವಿವರಣೆ. ಇಂದ್ರನು ಯಾರಿಗೂ ಕಾಣದಂತೆ ಅವಿತುಕೊಂಡಿರುವುದು. ಅವನನ್ನು ಹೇಗೆ ಹುಡುಕಿದರು ಇತ್ಯಾದಿ]



ಇಂದ್ರೋ ವೈ ವೃತ್ರಂ ಹತ್ವಾ ನಾಸ್ತೃಷೀತಿ ಮನ್ಯಮಾನಃ ಪರಾಃ ಪರಾವತೋಽಗಚ್ಛತ್ಸ ಪರಮಾವೇವ ಪರಾವತಮಗಚ್ಛದನುಷ್ಟುಬ್ವೈ ಪರಮಾ ಪರಾವದ್ವಾಗ್ವಾ ಅನುಷ್ಟುಪ್ಸ ವಾಚಂ ಪ್ರವಿಶ್ಯಾಶಯತ್ತಂ ಸರ್ವಾಣಿ ಭೂತಾನಿ ವಿಭಜ್ಯಾನ್ವೈಚ್ಛಂಸ್ತಂ ಪೂರ್ವೇದ್ಯುಃ ಪಿತುರೋಽವಿಂದನ್ನುತ್ತರಮಹರ್ದೇವಾಸ್ತಸ್ಮಾತ್ಪೂರ್ವೇದ್ಯುಃ ಪಿತೃಭ್ಯಃ ಕ್ರಿಯತ ಉತ್ತರಮಹರ್ದೇವಾನ್ಯಜಂತೇ ॥

ಅಥ ಮರುತ್ವತೀಯಶಸ್ತ್ರಮಾರಭ್ಯತೇ । ತತ್ರಾಯಂ ಸಂಗ್ರಹಶ್ಲೋಕಃ ।

"ಪ್ರತಿಪದನುಚರಾವನುಪ್ರಗಾಥೋ ಹರಿನಿಹವೋಽಥ ಬೃಹಸ್ಪತೇರ್ಧ್ರುವಶ್ಚ ।
ಧ್ರುವವಿಧಿವಿಹಿತಾಸ್ತಥಾಥ ಧಾಯ್ಯಾ ವಿತನನಮತ್ರ ಮರುತ್ವತೀಯಸೂಕ್ತೇ'' ॥

ತತ್ರಾಽಽತ್ವಾ ರಥಮಿತಿ ಮರುತ್ವತೀಯಸ್ಯ ಪ್ರತಿಪದನುಷ್ಟುಪ್ತಾಂ ಪ್ರಶಂಸಿತುಮಾಹ— ಇಂದ್ರಃ ಪುರಾ ವೃತ್ರನಾಮಕಂ ದೈತ್ಯಂ ಹತ್ವಾ ನಾಸ್ತೃಷಿ ಅಹಂ ನ ಹಿಂಸಿತವಾನಸ್ಮೀತಿ ಮನ್ಯಮಾನಸ್ತದೀಯಮಜೀವನಮಾಶಂಕ್ಯ ತಸ್ಮಾದ್ಭೀತಃ ಪರಾಃ ಪರಾವತೋಽಭ್ಯಧಿಕಾ ದೂರಭೂಮೀರಗಚ್ಛತ್ ॥ ಸೋಽಯಂ ತಾವತಾಪ್ಯಸಂತುಷ್ಟಃ ಪರಮಾಮೇವಾಭ್ಯಧಿಕಾಮೇವ ಪರಾವತಂ ದೂರಭೂಮಿಂ ಪುನರಪ್ಯಗಚ್ಛತ್ ॥ ಅಧಿಕಾಭ್ಯೋ ದೂರಭೂಮಿಭ್ಯೋಽಪ್ಯತ್ಯಂತಮಧಿಕಾ ದೂರಭೂಮಿಃ ಕೇತಿ ಚೇತ್ಸೇಯಮುಚ್ಯತೇ ॥ ಅನುಷ್ಟುಬ್ವೈ ಪರಮಾ ಪರಾವದಭ್ಯಧಿಕಾ ದೂರಭೂಮಿಃ ॥ ತಸ್ಯಾಮನುಷ್ಟುಭಿ ಪ್ರವಿಷ್ಟಸ್ಯ ಚಕ್ಷುಷಾದ್ರಷ್ಟುಮಶಕ್ಯತ್ವಾತ್ ॥ ಅನುಷ್ಟುಪ್ಚ ವಾಕ್ಸ್ವರೂಪಾ । ತತಃ ಸ ಇಂದ್ರೋ ವಾಚಂ ಪ್ರವಿಶ್ಯ ತತ್ರ ಶಯನಂ ಕೃತವಾನ್ ॥ ತಮಿಂದ್ರಂ ಸರ್ವಾಣಿ ಭೂತಾನಿ ಸರ್ವೇಷು ದೇಶೇಷು ವಿಭಜ್ಯಾನ್ವೈಚ್ಛನ್ ॥ ತಮನ್ವೇಷ್ಟುಮೇಕ ಏಕಸ್ಮಿನ್ದೇಶೇ ಗತೋಽನ್ಯೋ ದೇಶಾಂತರಮಿತ್ಯೇತಾದೃಶೋ ವಿಭಾಗ ಇತ್ಯರ್ಥಃ ॥ ತಮನ್ವಿಷ್ಯ-

**ಮಾಣಮಿಂದ್ರಂ ಪಿತರೋ ಯಾಗದಿನಾತ್ಪೂರ್ವೇದ್ಯುರವಿಂದನ್ನಲಭಂತ ॥ ದೇವಾಸ್ತೂತ್ತರ-ಮುಹರುತ್ತರಸ್ಮಿನ್ನಹನ್ಯವಿಂದ ॥ ಯಸ್ಮಾದೇವಂ ತಸ್ಮಾಲ್ಲೋಕೇऽಪಿ ಪೂರ್ವೇದ್ಯುರಮಾ-ವಾಸ್ಯಾಯಾಂ ಪಿತೃಭ್ಯಃ ಕ್ರಿಯತೇ । ಉತ್ತರಮುಹರುತ್ತರಸ್ಮಿನ್ನಹನಿ ಪ್ರತಿಪದ್ದಿನೇ ದರ್ಶ-ಪೂರ್ಣಮಾಸಯಾಗದಿನೇ ದೇವಾನ್ಯಜಂತೇ ॥ ಇಂದ್ರಸ್ಯ ರಕ್ಷಕತ್ವಾತ್ಪ್ರಶಸ್ತಾऽನುಷ್ಟುಬಿತಿ ತಾತ್ಪರ್ಯಾರ್ಥಃ ॥**

**ಆ ತ್ವಾ ರಥಂ** ಎಂದು ಪ್ರಾರಂಭವಾಗುವ ಮಂತ್ರಗಳು ಮರುತ್ವತೀಯಸೂಕ್ತವು. (ಋ. ಸಂ. ೮-೩೭-೧,೨,೩) ಇದರ ಮೊದಲನೆಯ ಋಕ್ಕು ಅನುಷ್ಟುಪ್‌ಛಂದಸ್ಸವು. ಇದನ್ನು ಈಗ ಪ್ರಶಂಸೆಮಾಡುವರು—ಪೂರ್ವಕಾಲದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದಾಗ ಇಂದ್ರನು ಇಂತು ಯೋಚಿಸಿದನು—ನಾನು ವೃತ್ರನನ್ನು ಸಂಹಾರ ಮಾಡಿಬಂದನೆಂದೇ ಭಾವಿಸಿರುವನು. ಆದರೆ ಆ ವೃತ್ರಾಸುರನು ನನ್ನ ವಜ್ರಾಯುಧ ಪ್ರಹಾರದಿಂದ ಮೃತನಾದನೋ ಇಲ್ಲವೋ ತಿಳಿಯದು. ಇನ್ನೂ ಅವನಿಗೆ ಕುಟುಕುಜೀವವಿದ್ದರೂ ಇರಬಹುದು. ಸ್ವಲ್ಪಜೀವವಿದ್ದರೂ ಅವನು ಚೇತರಿಸಿಕೊಂಡು ನನಗೆ ತೊಂದರೆಯನ್ನುಂಟು ಮಾಡಬಹುದು ಎಂದು ಭಯಭೀತನಾಗಿ ಇಲ್ಲಿರಬಾರದೆಂದು ಯೋಚಿಸಿ ಅಲ್ಲಿಂದ ಅತಿದೂರವಾದ ಪ್ರದೇಶಕ್ಕೆ ಹೊರಟುಹೋದನು. ಆದರೂ ಅವನಿಗೆ ಮನಸ್ಸಮಾಧಾನವಾಗದೆ ಇನ್ನೂ ಬಹಳ ದೂರವಾದ ಪ್ರದೇಶಕ್ಕೆ ಹೋದನು. ಅತ್ಯಂತ ದೂರವಾದ ಪ್ರದೇಶ ವೆಂದರೆ ಹೀಗೆ ಹೇಳುವರು—**ಅನುಷ್ಟುಪ್ ವೈ ಪರಮಾ ಪರಾವತ್**—ದೂರವಾದ ದೂರಪ್ರದೇಶಕ್ಕಿಂತಲೂ ಅತ್ಯಂತ ದೂರಪ್ರದೇಶವೆಂದರೆ ಅನುಷ್ಟುಪ್ ಎಂಬ ಛಂದಸ್ಸಿನ ಹೆಸರಿನ ಪ್ರದೇಶವು. ಈ ಪ್ರದೇಶದಲ್ಲಿ ಪ್ರವೇಶಿಸಿ ಇದ್ದಲ್ಲಿ ಅದನ್ನು ಕಣ್ಣಿನಿಂದ ನೋಡಿ ಕಂಡುಹಿಡಿಯಲು ಯಾರಿಗೂ ಶಕ್ಯವಿಲ್ಲ. ಮತ್ತು ಈ **ಅನುಷ್ಟುಪ್** ಎಂಬುದು ವಾಕ್ಸರೂಪವು. ಇದನ್ನೆಲ್ಲಾ ತಿಳಿದು ಆ ಇಂದ್ರನು ವಾಕ್ಯವನ್ನು ಪ್ರವೇಶಿಸಿ ಅಲ್ಲಿಯೇ ಗೂಢವಾಗಿ ಮಲಗಿದ್ದನು. ಈ ಮಧ್ಯದಲ್ಲಿ ಇಂದ್ರನನ್ನು ಕಾಣದೆ ಸಮಸ್ತ ಮನುಷ್ಯರೂ ಜೀವಜಂತುಗಳೂ ಇಂದ್ರನನ್ನು ಹುಡುಕುವುದಕ್ಕೆ ಪ್ರಾರಂಭಿಸಿದರು. ಅವರಲ್ಲಿ ಕೆಲವರು ಒಂದು ಪ್ರದೇಶವನ್ನೂ ಮತ್ತೆ ಕೆಲವರು ಬೇರೆ ಪ್ರದೇಶವನ್ನೂ ಸುತ್ತಿ ಅಲೆದಾಡಿ ಹುಡುಕಿದರು. ಆದರೂ ಅವರಿಗೆ ಇಂದ್ರನು ಸಿಕ್ಕಲಿಲ್ಲ. ಹೀಗಿರುವಲ್ಲಿ ಒಂದು ಸಮಯದಲ್ಲಿ ಪಿತೃದೇವತೆಗಳೆಂಬುವರು ಇಂದ್ರನಿರುವ ಪ್ರದೇಶವನ್ನು ಕಂಡುಹಿಡಿದರು. ಅದುವರೆಗೂ ಪಿತೃದೇವತೆಗಳಲ್ಲಿ ಯಾಗಗಳಲ್ಲಿ ಭಾಗವಿರಲಿಲ್ಲ. ಆದರೆ ಇವರು ಇಂದ್ರನಿದ್ದ ಪ್ರದೇಶವನ್ನು ಹುಡುಕಿ ಕಂಡುಹಿಡಿದದ್ದರಿಂದ ಅದರ ಫಲವಾಗಿ ಆ ಲಾಗಾಯಿತು ಪಿತೃಗಳನ್ನು ಮೊದಲು ಆರಾಧಿಸಿ ಅನಂತರ ಮಾರನೆಯದಿನ ದೇವತೆಗಳನ್ನು ಆರಾಧಿಸುವುದು ರೂಢಿ ಯಲ್ಲಿ ಬಂದಿತು. ಎಂದರೆ ಮೊದಲನೆಯ ದಿವಸ ಎಂದರೆ ಅಮಾವಾಸ್ಯೆಯ ದಿನ ಪಿತೃಗಳಿಗೆ ಶ್ರಾದ್ಧವು ಮಾಡಲ್ಪಡುವುದು. ಮಾರನೆಯದಿನ ಎಂದರೆ ಪ್ರತಿಪತ್ ಎಂಬ ಪಕ್ಷದ ಮೊದಲನೆಯ ದಿನ ದರ್ಶಪೂರ್ಣಮಾಸವೆಂಬ ಯಜ್ಞಾನುಷ್ಠಾನವನ್ನು ಆಚರಿಸಿ ದೇವತೆಗಳನ್ನು ತೃಪ್ತಿಪಡಿಸುವರು. ಅನುಷ್ಟುಪ್‌ಛಂದಸ್ಸು ಇಂದ್ರನಿಗೆ ಪ್ರಚ್ಛನ್ನನಾಗಿರಬೇಕೆಂದು ಇಷ್ಟಪಟ್ಟಾಗ ಅವನಿಗೆ ಆಶ್ರಯವನ್ನು ನೀಡಿದ್ದರಿಂದ ಈ ಅನುಷ್ಟುಪ್‌ಛಂದಸ್ಸಿನ ಮಹಿಮೆಯು ಅಧಿಕವಾಯಿತು ಎಂದು ತಾತ್ಪರ್ಯವು.

**ತೇऽಬ್ರುವನ್ನಭಿಷುಣವಾಮೈನ ತಥಾ ವಾವ ನ ಆಶಿಷ್ಟಮಾಗಮಿಷ್ಯ-ತೀತಿ ತಥೇತಿ ತೇऽಭ್ಯಷುಣ್ವಂಸ್ತ ಆ ತ್ವಾ ರಥಂ ಯಥೋತಯ ಇತ್ಯೇವೈನಮಾವರ್ತಯನ್ನಿದಂ ವಸೋ ಸುತಮಂಧ ಇತ್ಯೇ-ವೈಭ್ಯಃ ಸುತಕೀರ್ತ್ಯಾಮಾವಿರಭವದಿಂದ್ರ ನೇದೀಯ ಏದಿಹೀ-ತ್ಯೇವೈನಂ ಮಧ್ಯಂ ಪ್ರಾಪಾದಯಂತ ॥**

ಅಥ ಮರುತ್ವತೀಯ ಶಸ್ತ್ರಸ್ಯ ಪ್ರತಿಪತ್ತ್ಯೃಚಂ ದರ್ಶಯತಿ—ಇಂದ್ರಂ ಲಬ್ಧ್ವಾಽವಸ್ಥಿತಾಸ್ತೇ ದೇವಾಃ ಪರಸ್ಪರಮಿದಮಬ್ರುವನ್ನಭಿಷುಣವಾಮೈವ ವಯಂ ಸರ್ವಥಾ ಸೋಮಸ್ಯಾಭಿಷವಂ ಕರವಾಮ । ತಥಾ ವಾವ ತೇನೈವ ಪ್ರಕಾರೇಣಾಶಿಷ್ಮಮಾಶುತಮಮತಿಶೀಘ್ರಂ ಯಥಾ ಭವತಿ ತಥಾ ನೋಽಸ್ಮಾನಿಂದ್ರ ಆಗಮಿಷ್ಯತೀತಿ ತದ್ವಚನಮಂಗೀಕೃತ್ಯ ತೇ ಸರ್ವೇಽಭ್ಯಷುಣ್ವನ್ನಭಿಷವಂ ಕೃತವಂತಃ ॥ ತಾದೃಶಾಸ್ತೇ ದೇವಾ ಆ ತ್ವಾ ರಥಂ ಯಥೋತಯ ಇತ್ಯನೇನೈವ ಮಂತ್ರೇಣ ತಮಿಂದ್ರಮನುಷ್ಟುಭಃ ಸಕಾಶಾದಭಿಷವದೇಶಂ ಪ್ರತ್ಯಾವರ್ತಯನ್ ॥ ಅತ್ರ ಕಿಂಚಿದಾವೃತ್ತಿವಾಚಕಮಾವರ್ತಯಾಮಸೀತಿ ಪದದ್ವಯಂ ಶ್ರೂಯತೇ ತತ್ಸಾಮರ್ಥ್ಯಾದಿಂದ್ರಸ್ಯಾವೃತ್ತಿರಭೂತ್ ॥ ಇದಂ ವಸೋ ಸುತಮಂಧ ಇತ್ಯಸ್ಮಿನ್ಮಂತ್ರಪಾದೇ ಸುತಶಬ್ದಾರ್ಥಮಭಿಷವವಾಚಿನಾ ಸುತಶಬ್ದೇನೈಭ್ಯೋ ದೇವೇಭ್ಯ ಇಂದ್ರ ಆವಿರಭವತ್ಪ್ರಕಟೋಽಭೂತ್ ॥ ಇಂದ್ರ ನೇದೀಯ ಏದಿಹೀತಿ ಮಂತ್ರಗತೇನ ಸಮೀಪಾಗಮನವಾಚಿನಾ ನೇದೀಯ ಏದಿಹೀತಿ ಪದದ್ವಯೇನೈನಮಿಂದ್ರಂ ಯಾಗದೇಶಮಧ್ಯಂ ಪ್ರಾಪಿತವಂತಃ । ಅನೇನಾರ್ಥವಾದೇನ ತತ್ತನ್ಮಂತ್ರವಿಧಿರುನ್ನೇಯಃ । ಏತದೇವಾಭಿಪ್ರೇತ್ಯಾಽಽಶ್ವಲಾಯನ ಆಹ—'ಮರುತ್ವತೀಯಶಸ್ತ್ರಂ ಶಂಸೇದಧ್ವರ್ಯೋ ಶೋಂಸಾವೋಮಿತಿ ಮಾಂಧ್ಯಂದಿನೇ ಶಸ್ತ್ರಾದಿಷ್ವಾಹಾವ ಆ ತ್ವಾ ರಥಂ ಯಥೋತಯ ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯ ಪ್ರತಿಪದನುಚರಾವಿಂದ್ರ ನೇದೀಯ ಏದಿಹೀತೀಂದ್ರನಿಹವಃ ಪ್ರಗಾಥಃ' ಇತಿ ॥ ಯೇನ ತ್ಯೃಚೇನ ಶಸ್ತ್ರಂ ಪ್ರಾರಭತೇ ಸೋಽಯಂ ತ್ಯೃಚಃ ಪ್ರತಿಪದುಚ್ಯತೇ ॥ ತದನಂತರಭಾವೀ ತ್ರ್ಯೃಚೋಽನುಚರಃ । ಅತ್ರ ಆತ್ವಾ ರಥಮಿದಂ ವಸೋ, ಇತ್ಯೇತೌ ತ್ರ್ಯೃಚೌ ಪ್ರತಿಪದನುಚರೌ ದ್ರಷ್ಟವ್ಯೌ ॥ ತತ ಊರ್ಧ್ವಮಿಂದ್ರನಿಹವಾಖ್ಯ ಇಂದ್ರ ನೇದೀಯ ಇತಿ ಪ್ರಗಾಥ ಋಗ್ದ್ವಯಾತ್ಮಕೋ ದ್ರಷ್ಟವ್ಯ ಇತ್ಯರ್ಥಃ ॥

ಮರುತ್ವತೀಯಶಸ್ತ್ರದ ಮೊದಲನೆಯ ಋಕ್ಕನ್ನು ವಿವರಿಸುವರು—ಇಂದ್ರನು ತಮ್ಮ ಬಳಿಗೆ ಬರದಿರುವುದನ್ನು ಕಂಡು ದೇವತೆಗಳು ಖತಿಗೊಂಡು ತಮ್ಮತಮ್ಮಲ್ಲಿಯೇ ಈರೀತಿ ಮಾತನಾಡಿಕೊಂಡರು. ಸೋಮರಸವು ಇಂದ್ರನಿಗೆ ಹರ್ಷದಾಯಕವು. ಆದ್ದರಿಂದ ನಾವು ಸೋಮರಸವನ್ನು ಇಂದ್ರನಿಗಾಗಿ ಹಿಂಡಿ ಸಿದ್ಧಪಡಿಸೋಣ. ಸೋಮರಸವನ್ನು ನಾವು ಸಿದ್ಧಪಡಿಸಿದರೆ ಇಂದ್ರನು ಅದಷ್ಟು ಶೀಘ್ರವಾಗಿ ನಮ್ಮಬಳಿಗೆ ಬರುವನು ಎಂದು ನಿಶ್ಚಯಿಸಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಿದರು. ಮತ್ತು **ಆ ತ್ವಾ ರಥಂ ಯಥೋತಯೇ** (ಋ. ಸಂ. ೮-೬೮-೧) ಎಂಬ ಅನುಷ್ಟುಪ್ ಛಂದಸ್ಸಿನ ಮಂತ್ರದಿಂದ ಇಂದ್ರನನ್ನು ಪ್ರಾರ್ಥಿಸಿ ತಾವು ಸಿದ್ಧಪಡಿಸಿಟ್ಟುಕೊಂಡಿರುವ ಸೋಮರಸವಿರುವ ಪ್ರದೇಶಕ್ಕೆ ಇಂದ್ರನು ಹಿಂತಿರುಗಿ ಬರಬೇಕೆಂದು ಪ್ರಾರ್ಥಿಸಿದರು. ಮೇಲಿನ ಮಂತ್ರದಲ್ಲಿ **ಆ ವರ್ತಯಾಮಸಿ** ಎಂಬ ಎರಡು ಪದಗಳಿರುವವು. ಈ ಪದಗಳು—ಇಂದ್ರನು ಹಿಂತಿರುಗಿ ಬರಬೇಕೆಂಬ ಅರ್ಥವನ್ನು ಸೂಚಿಸುವವು. ಮತ್ತು **ಇದಂ ವಸೋ ಸುತಮಂಧಃ** (ಋ. ಸಂ. ೮-೨-೧) ಎಂಬ ಋಕ್ಕಿನ ಪಾದದಲ್ಲಿ **ಸುತ** ಸೋಮರಸವನ್ನು ಹಿಂಡಿದ ಎಂಬ ಅರ್ಥವಿರುವ ಪದಪ್ರಯೋಗವಿರುವುದರಿಂದ ಇವೆಲ್ಲವೂ ಇಂದ್ರನಿಗೆ ತಿಳಿದು ಇಂದ್ರನು ಕೂಡಲೇ ಅಲ್ಲಿ ಪ್ರಕಟವಾದನು (ಅಲ್ಲಿಗೆ ಬಂದನು) **ಇಂದ್ರ ನೇದೀಯ ಏದಿಹಿ** (ಋ. ಸಂ. ೮-೫೩-೫) ಎಂಬ ಪಾದದಲ್ಲಿರುವ **ನೇದಿಯಃ ಇಹಿ** ಎಂಬ ಎರಡು ಪದಗಳು ಇಂದ್ರನನ್ನು ಯಾಗಪ್ರದೇಶದ ಮಧ್ಯಭಾಗಕ್ಕೆ ಬರುವಂತೆ ಮಾಡಿದವು. ಮಂತ್ರದಲ್ಲಿರುವ ವಿಧಿವಾಕ್ಯಗಳೇ ಮೇಲ್ಕಂಡ ಅರ್ಥವನ್ನು ಸೂಚಿಸುವವು. ಈ ವಿಷಯದಲ್ಲಿ ಆಶ್ವಲಾಯನರು—**ಮರುತ್ವತೀಯಂ ಶಸ್ತ್ರಂ ಶಂಸೇದಧ್ವರ್ಯೋ ಶೋಂಸಾವೋಮಿತಿ ಮಾಧ್ಯಂದಿನೇ ಶಸ್ತ್ರಾದಿಷ್ವಾಹಾವ ಆ ತ್ವಾಂ ರಥಂ ಯಥೋತಯ ಇದಂ ವಸೋ ಸುತುಮಂಧ ಇತಿ ಮರುತ್ವತೀಯಸ್ಯ ಪ್ರತಿಪದನುಚರಾವಿಂದ್ರ ನೇದೀಯ ಏದಿಹೀತೀಂದ್ರನಿ-**

**ಹವಃ ಪ್ರಗಾಥಃ** ಎಂದು ಹೇಳಿರುವರು (ಆಶ್ವ. ಶ್ರೌ. ಸೂ. ೫-೧೪-೨,೩,೪,೫) ಯಾವ ಋಕ್ಕಿನಿಂದ (ತೃಚದಿಂದ ಎಂದರೆ ಮೂರು ಋಕ್ಕುಗಳಿಂದ) ಶಸ್ತ್ರಮಂತ್ರಗಳನ್ನು ಪ್ರಾರಂಭಿಸಲಾಗುವುದೋ ಆ ತೃಚಕ್ಕೆ **ಪ್ರತಿಪತ್** (ಮೊದಲನೆಯದು) ಎಂದು ಹೆಸರು. ಅನಂತರ ಮುಂದಿನ ತೃಚಕ್ಕೆ **ಅನುಚರಃ** (ಮುಂದಿನದು) ಎಂದು ಹೆಸರು. ಇಲ್ಲಿ ಉಪಯೋಗಿಸಲಾಗಿರುವ **ಆ ತ್ವಾ ರಥಂ** ಎಂಬ ತೃಚವು ಪ್ರತಿಪದ್ಯಚವು; ಅನಂತರ ಉಪಯೋಗಿಸಿರುವ **ಇದಂ ವಸೋ** ಎಂಬ ತೃಚದ ಅನುಚರವೆಂಬ ತೃಚವು. ಅದರ ಮುಂದಿನ ಇಂದ್ರನಿಹವಾಖ್ಯವಾದ **ಇಂದ್ರ ನೇದಿಯಃ** ಎಂಬ ಎರಡು ಋಕ್ಕುಗಳು ಪ್ರಗಾಥವೆನಿಸುವುದು. ಪ್ರಗಾಥದಲ್ಲಿ ಎರಡು ಋಕ್ಕುಗಳಿರುವವು.

ಆಗತೇಂದ್ರೇಣ ಯಜ್ಞೇನ ಯಜತೇ ಸೇಂದ್ರೇಣ ಯಜ್ಞೇನ ರಾಧ್ನೋತಿ ಯ ಏವಂ ವೇದ ॥

**ವೇದನಂ ಪ್ರಶಂಸತಿ—ಆಗತ ಇಂದ್ರೋ ಯಸ್ಮಿನ್ಯಜ್ಞೇ ಸೋಽಯಮಾಗತೇಂದ್ರೋ ವೇದಿತಾ ತಾದೃಶೇನ ಯಜ್ಞೇನ ಯಜತೇ ತಥೇಂದ್ರಸಹಿತೇನ ಯಜ್ಞೇನ ಸಮೃದ್ಧೋ ಭವತಿ ॥**

ಈ ವಿಷಯಗಳನ್ನೆಲ್ಲಾ ತಿಳಿದು ಅದರಂತೆ ಆಚರಿಸುವ ಪುರುಷನು ಮಾಡುವ ಯಜ್ಞದಲ್ಲಿ ಇಂದ್ರನೇ ಸ್ವತಃ ಯಜ್ಞಕ್ಕೆ ಬಂದಂತಾಗಿ ಆ ಯಜ್ಞವು ಇಂದ್ರನ ಸನ್ನಿಧಾನದಿಂದ ನೆರವೇರಿಸಲ್ಪಟ್ಟರೆ ಯಾವ ಫಲವುಂಟಾಗುವುದೋ ಆ ಯಜ್ಞಫಲವನ್ನು ಹೊಂದುತ್ತಾನೆ.



*English Translation*

**(Marutvatiya Shastra, Indra conceals himself. How he was found)**

Indra after having killed Vritra, thought, I might perhaps not have subdued him (apprehending his revival), and went to very distant regions. He (ultimately) arrived at the most distant place. This place is Anushtubh, and Anushtubh is Speech. He having entered speech, lay down in her. All beings scattering themselves here and there went in search of him. The Pitaras (manes) found him one day earlier than the gods. This is the reason that ceremonies are performed in honour of the Pitaras previous to the day on which they sacrifice for the gods. They (the gods) said, "Let us squeeze the Soma juice; (then) Indra will come to us very quickly." So they did. They squeezed the Soma juice. By repeating the verse, a tva ratham (8, 57, 1), they made him (Indra) turn (towards the Soma juice). By the mantra, idam vaso sutam (8, 2, 1), he became visible to the gods on account of the term (suta) i.e., squeezed (contained in it). By the mantra indra nediya ed ihi (8, 53, 5), they made him (Indra) come into the middle (of the sacrificial place).

He who has such a knowledge gets his sacrifice performed in the presence of Indra, and becomes (consequently) successful means of the sacrifice having Indra (Being honoured by his presence).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು ಸಮಾಪ್ತವಾದುದು.



## ಅಥ ದ್ವಾದಶಾಧ್ಯಾಯೇ ಪಂಚಮಃ ಖಂಡಃ

### ಹನ್ನೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ಇಂದ್ರನಿಹವ ಮತ್ತು ಪ್ರಗಾಥಗಳ ವಿವರಣೆ]

ಇಂದ್ರಂ ವೈ ವೃತ್ರಂ ಜಘ್ನಿವಾಂಸಂ ನಾಸ್ತೃತೇತಿ ಮನ್ಯಮಾನಾಃ ಸರ್ವಾ ದೇವತಾ ಅಜಹುಸ್ತಂ ಮರುತ ಏವ ಸ್ವಾಪಯೋ ನಾಜಹುಃ ಪ್ರಾಣಾ ವೈ ಮರುತಃ ಸ್ವಾಪಯಃ ಪ್ರಾಣಾಃ ಹೈವೈನಂ ತಂ ನಾಜಹುಸ್ತಸ್ಮಾದೇಷೋಽಚ್ಯುತಃ ಸ್ವಾಪಿಮಾನ್ಪ್ರ-ಗಾಥಃ ಶಸ್ಯತ ಆಸ್ವಾಪೇ ಸ್ವಾಪಿಭಿರಿತಿ ॥

ಪೂರ್ವೋಕ್ತಮಿಂದ್ರ ನೇದೀಯ ಇತ್ಯಾದಿಕಂ ಪ್ರಗಾಥಂ ಶಂಸಿತುಮಾಖ್ಯಾಯಿಕಾ-ಮಾಹ—ಇಂದ್ರೋ ಯದಾ ವೃತ್ರಂ ಹತವಾಂಸ್ತದಾ ತಮಿಂದ್ರಂ ಸರ್ವಾ ದೇವತಾ ಅಜಹುಃ ಪರಿತ್ಯಕ್ತವತ್ಯಃ ॥ ಕೀದೃಶ್ಯೋ ದೇವತಾಃ ॥ ನಾಸ್ತೃತೇತಿ ನ ಹಿಂಸಿತವಾನಿಂದ್ರ ಇತಿ ಮನ್ಯ-ಮಾನಾಃ । ವೃತ್ರಸ್ಯಾತಿಪ್ರೌಢಶರೀರತ್ವಾತ್ಪ್ರಹಾರಮಾತ್ರೇಣಾಸೌ ನ ಮೃತ ಇತಿ ದೇವಾನಾಂ ಭ್ರಾಂತಿಃ । ಇತರದೇವತಾಭಿಃ ಪರಿತ್ಯಕ್ತಂ ತಮಿಂದ್ರಂ ಮರುತಏವ ನಾಜಹುರ್ನ ಪರಿತ್ಯಕ್ತ-ವಂತಃ । ತದ್ವಿಶೇಷಣಂ ಸ್ವಾಪಯ ಇತಿ । ಸುಷುಪ್ತಿಕಾಲೇಪಿ ವರ್ತಮಾನಾ ಇತ್ಯರ್ಥಃ ॥ ಸ್ವಾಪಿ-

**ಶಬ್ದಾರ್ಥಃ ಶ್ರುತ್ಯೈವ ಪ್ರದರ್ಶ್ಯತೇ । ಪ್ರಾಣಾ ವೈ ದೇಹಮಧ್ಯೇ ವರ್ತಮಾನಾಃ ಪ್ರಾಣಾ ಏವ ಸ್ವಾಪಯೋ ಮರುತಃ ಸ್ವಾಪಕಾಲಾನುವರ್ತಿನೋ ವಾಯವಃ ॥ ಪ್ರಾಣಾನಾಂ ತತ್ಕಾಲಾನುವೃತ್ತಿಮಾಥರ್ವಣಿಕಾಃ ಪ್ರಶ್ನೋತ್ತರಾಭ್ಯಾಮಾಮನಂತಿ ಭಗವನ್ನೇತಸ್ಮಿನ್ಪುರುಷೇ ಕಾನಿ ಸ್ವಪಂತಿ ಕಾನ್ಯಸ್ಮಿನ್ಜಾಗ್ರತೀತಿ ಪ್ರಶ್ನಃ । ಪ್ರಾಣಾಗ್ನಯ ಏವೈತಸ್ಮಿನ್ಪುರೇ ಜಾಗ್ರತೀತ್ಯುತ್ತರಂ । ಏವಂ ವಿಧಾ ಯಸ್ಮಾತ್ಪ್ರಾಣರೂಪಾ ಮರುತ ಏವೈನಮಿಂದ್ರಂ ತದಾನೀಂ ನ ಪರಿತ್ಯಕ್ತವಂತಃ ॥ ತಸ್ಮಾತ್ಕಾರಣಾದೇಷ ಇಂದ್ರ ನೇದೀಯ ಇತ್ಯಾದಿಕಃ ಸ್ವಾಪಿಮಾನ್ಪ್ರಗಾಥೋಽಚ್ಯುತೋ ಮರುತ್ವತೀಯಶಸ್ತ್ರೇ ಸರ್ವಥಾಽಪ್ಯಪರಿತ್ಯಕ್ತಃ ಶಸ್ಯತೇ ಸಾಪಿಶಬ್ದೋ ಯಸ್ಮಿನ್ಪ್ರಗಾಥೇಽಸ್ತಿ-ಸೋಽಯಂ ಸ್ವಾಪಿಮಾನ್ ॥ ಆಸ್ವಾಪೇ ಸ್ವಾಪಿಭಿರಿತ್ಯಯಂ ಪಾದಸ್ತಸ್ಮಿನ್ಪ್ರಗಾಥ ಆಮ್ನಾಯತೇ ತಸ್ಮಾದಯಂ ಸ್ವಾಪಿಮಾನ್ ॥**

ಹಿಂದೆ ಹೇಳಿದ **ಇಂದ್ರ ನೇದಿಯ** ಎಂಬ ಪ್ರಗಾಥವನ್ನು ಪ್ರಶಂಸೆ ಮಾಡುವುದಕ್ಕಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು—ಇಂದ್ರನು ಹಿಂದೆ ವೃತ್ರಾಸುರನನ್ನು ಸಂಹಾರ ಮಾಡಿದಾಗ ಅವನ ಜತೆಯಲ್ಲಿದ್ದ ಇತರ ದೇವತೆಗಳೆಲ್ಲರೂ ಜಿಗುಪ್ಸೆಯಿಂದ ಇಂದ್ರನನ್ನು ತ್ಯಜಿಸಿ (ಅಲ್ಲಿಯೇ ಬಿಟ್ಟು) ಹೊರಟುಹೋದರು. ಏಕೆಂದರೆ ಈ ವೃತ್ರಾಸುರನು ಬಹಳ ದೊಡ್ಡ ಶರೀರವುಳ್ಳವನಾಗಿದ್ದನು. ಇವನನ್ನು ಸಂಹರಿಸುವುದು ತುಂಬಾ ಕಷ್ಟವು. ಆದ್ದರಿಂದ ಇಂದ್ರನು ತನ್ನ ಆಯುಧದಿಂದ ಪ್ರಹರಿಸಿದಮಾತದಿಂದಲೇ ವೃತ್ರಾಸುರನು ಮೃತನಾಗದಿರಬಹುದು. ಅವನು ಮೃತನಾಗಿಯೇ ಇಲ್ಲ ಎಂಬ ಭ್ರಾಂತಿಯಿಂದ ಮತಿಗೆಟ್ಟವರಾಗಿ ಇಂದ್ರನನ್ನು ಆ ಯುದ್ಧದಲ್ಲಿಯೇ ಕೈಬಿಟ್ಟು ತಮ್ಮಪಾಡಿಗೆ ತಾವು ಹೊರಟುಹೋದರು. ಈರೀತಿ ಇತರ ದೇವತೆಗಳೆಲ್ಲರೂ ಯುದ್ಧಸಮಯದಲ್ಲಿ ಇಂದ್ರನಿಗೆ ಕೈಕೊಟ್ಟು ಎಂದರೆ ಸಮಯದಲ್ಲಿ ಸಹಾಯಮಾಡದೆ ಬಿಟ್ಟು ಹೊರಟುಹೋದರೂ ಇಂದ್ರನೊಡನಿದ್ದ ಮರುದ್ದೇವತೆಗಳು ಮಾತ್ರ ಇಂದ್ರನ ಜತೆಯನ್ನು ಬಿಟ್ಟು ಕದಲಲಿಲ್ಲ.

ಇಲ್ಲಿ ಮಂತ್ರದಲ್ಲಿರುವ **ಸ್ವಾಪಯ** ಎಂಬ ಶಬ್ದದ ಅರ್ಥವನ್ನು ವಿವರಿಸಬೇಕಾಗಿರುವುದು. ಈ ಶಬ್ದವು ಇಲ್ಲಿ ಮರುದ್ದೇವತೆಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. **ಸ್ವಾಪಯಃ** ಎಂದರೆ ಸುಷುಪ್ತಿ (ಗಾಢನಿದ್ರೆ) ಕಾಲದಲ್ಲಿಯೂ ಇರುವ ಎಂದರ್ಥವು. ಸ್ವಾಪಿಶಬ್ದದ ಅರ್ಥವನ್ನು ಶ್ರುತಿಯೂ ಈರೀತಿ ಹೇಳುವುದು—**ಪ್ರಾಣಾ ವೈ ದೇಹಮಧ್ಯೆ ವರ್ತಮಾನಾಃ ಪ್ರಾಣಾ ಏವ ಸ್ವಾಪಯೋ ಮರುತಃ ಸ್ವಾಪಕಾಲಾನುವರ್ತಿನೋ ವಾಯವಃ ।** ಶರೀರದಲ್ಲಿ ಯಾವಾಗಲೂ (ಗಾಢನಿದ್ರೆಯಲ್ಲಿಯೂ ಸಹ) ಪ್ರಾಣವಾಯುಗಳು ಸಂಚರಿಸುತ್ತಲೇ ಇರುವವು. ಇವಕ್ಕೆ ವಿಶ್ರಾಂತಿಯೇ ಇರುವುದಿಲ್ಲ. ಎಂತಹ ಗಾಢನಿದ್ರೆಯಲ್ಲಿಯೂ ಉಚ್ಛ್ವಾಸನಿಃಶ್ವಾಸಗಳು (ಉಸಿರಾಡುವುದು) ಎಡಬಿಡದೆ ನಡೆಯುತ್ತಲೇ ಇರುವವು. ಇಲ್ಲಿ ಸ್ವಾಪಯಃ ಎಂದರೆ ಮರುತ್ತುಗಳು ಎಂದರೆ ಸುಷುಪ್ತಿದಶೆಯಲ್ಲಿರುವ ಶರೀರವನ್ನು ಆಶ್ರಯಿಸಿ ಇರುವ ಪ್ರಾಣವಾಯುಗಳು ಎಂದರ್ಥವು. ಆಥರ್ವಣಿಗೋಪನಿಷತ್ತಾದ ಪ್ರಶ್ನೋಪನಿಷತ್ತಿನಲ್ಲಿ ಈ ವಿಚಾರವು ಪ್ರಶ್ನೋತ್ತರ ರೂಪದಲ್ಲಿ ವಿವರಿಸಲ್ಪಟ್ಟಿದೆ—**ಭಗವನ್ನೇತಸ್ಮಿನ್ಪುರುಷೇ ಕಾನಿ ಸ್ವಪಂತಿ? ಕಾನ್ಯಸ್ಮಿನ್ ಜಾಗ್ರತಿ?** (ಪ್ರ. ಉಪ. ೪-೧) ಇದು ಪ್ರಶ್ನೆಯು ಎಂದರೆ ಎಲೈ ಪೂಜ್ಯರೇ, ಈ ಪುರುಷನಲ್ಲಿ ಎಂದರೆ ಪುರುಷಶರೀರದಲ್ಲಿ ನಿದ್ರೆಮಾಡುವ ವಸ್ತುವು ಯಾವುದು? ನಿದ್ರೆಯಿಂದ ಬಿಟ್ಟಿದ್ದಮೇಲೆ ಎಚ್ಚರಗೊಳ್ಳುವುದು ಯಾವುದು? ಈ ಪ್ರಶ್ನೆಗೆ ಉತ್ತರವನ್ನು ಅಲ್ಲಿಯೇ ಹೇಳಿರುವರು—**ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ** (ಪ್ರ. ಉಪ. ೪-೩) ಪುರವೆಂದು ಹೇಳಲ್ಪಡುವ ಈ ಶರೀರದಲ್ಲಿ ನಿದ್ರೆಯೆಂದರೆ ಚಲನಾದಿವ್ಯಾಪಾರವಿಲ್ಲದೆ ಇರುವ ಮತ್ತು ಆ ಸ್ಥಿತಿಯಿಂದ ಎಚ್ಚರಗೊಳ್ಳುವ ವಸ್ತುವೆಂದರೆ **ಪ್ರಾಣಾಗ್ನಯಃ** ಎಂದು ಹೇಳಲ್ಪಡುವ ಅಗ್ನಿಸ್ವರೂಪವಾದ ಪ್ರಾಣವಾಯುಗಳು ಇದೇ ಉತ್ತರವು. ಈ ವಿಧವಾದ ಪ್ರಾಣವಾಯುಗಳ ಸ್ವರೂಪದಿಂದಿರುವ ಮರುದ್ದೇವತೆಗಳು ಆಗ (ಎಂದರೆ ಇತರ ದೇವತೆಗಳು

ಇಂದ್ರನನ್ನು ತ್ಯಜಿಸಿ ಹೋದಕಾಲದಲ್ಲಿಯೂ) ಇಂದ್ರನನ್ನು ಬಿಟ್ಟುಹೋಗದೆ ಅವನ ಸಂಗಡಲೇ ಇದ್ದರು. ಆದ್ದರಿಂದ ಇಂದ್ರ ನೇದೀಯಃ (ಋ. ಸಂ. ೮-೫೩-೫) ಎಂಬ ಸ್ವಾಪಿಮಾನು ಪ್ರಗಾಥವನ್ನು ಮರುತ್ವತೀಯ ಶಸ್ತ್ರಮಂತ್ರಗಳಲ್ಲಿ ತಪ್ಪದೆ ಪಠಿಸುತ್ತಾರೆ.

ಯಾವ ಪ್ರಗಾಥಛಂದಸ್ಸಿನ ಮಂತ್ರದಲ್ಲಿ ಸ್ವಾಪಿ ಎಂಬ ಶಬ್ದವಿರುವುದೋ ಆ ಮಂತ್ರಕ್ಕೆ ಸ್ವಾಪಿಮಾನ್ ಪ್ರಗಾಥವೆಂದು ಹೆಸರು. ಪ್ರಸಕ್ತವಾದ ಋಕ್ಕಿನ ಪಾದದಲ್ಲಿ ಆಸ್ವಾಪೇ ಸ್ವಾಪಿಭಿಃ ಎಂಬ ಶಬ್ದಗಳಿರುವುದರಿಂದ ಈ ಪ್ರಗಾಥಛಂದಸ್ಸಿನ ಋಕ್ಕು ಸ್ವಾಪಿಮಾನ್ ಪ್ರಗಾಥವೆಂದು ಹೇಳಲ್ಪಡುವುದು. ಉದಾಹರಣೆಗಾಗಿ ಒಂದು ಪ್ರಗಾಥವನ್ನು ಇಲ್ಲಿ ಕೊಟ್ಟಿದೆ. ಪ್ರಗಾಥವೆಂದರೆ ಮೊದಲನೆಯ ಋಕ್ಕು ಬೃಹತೀಛಂದಸ್ಕವೂ ಎರಡನೆಯ ಋಕ್ಕು ಸತೋಬೃಹತೀಛಂದಸ್ಕವೂ ಆಗಿರುವ ಎರಡು ಋಕ್ಕುಗಳನ್ನು ಒಳಗೊಂಡಿರುವ ಮಂತ್ರವು—

ಇಂದ್ರ ನೇದೀಯ ಏದಿಹಿ ಮಿತಮೇಧಾಭಿರೂತಿಭಿಃ ।
ಆ ಶಂತಮ ಶಂತಮಾಭಿರಭಿಷ್ಟಿಭಿರಾಸ್ವಾಪೇ ಸ್ವಾಪಿಭಿಃ ॥ (ಋ. ಸಂ. ೮-೫೨-೫)

ಇದು ಬೃಹತೀಛಂದಸ್ಸಿನ ಮಂತ್ರವು—

ಅಜಿತುರಂ ಸತ್ಪತಿಂ ವಿಶ್ವಚರ್ಷಣಿಂ ಕೃಧಿ ಪ್ರಜಾಸ್ವಾಭಗಂ ।
ಪ್ರ ಸೂ ತಿರಾ ಶಚೀಭಿರ್ಯೇ ತ ಉಕ್ಥಿನಃ ಕ್ರತುಂ ಪುನತ ಆನುಷಕ್ ॥
(ಋ. ಸಂ. ೮-೫೩-೬)

ಇದು ಸತೋಬೃಹತೀಛಂದಸ್ಸಿನ ಮಂತ್ರವು. ಈ ವಿಧವಾದ ಎಂದರೆ ಬೃಹತೀ ಮತ್ತು ಸತೋಬೃಹತೀ ಎಂಬ ಛಂದಸ್ಸಿನ ಎರಡು ಋಕ್ಕುಗಳೂ ಸೇರಿ ಪ್ರಗಾಥವೆನಿಸುವುದು.

ಅಪಿ ಹ ಯದ್ಯೈಂದ್ರಮೇವಾತ ಊರ್ಧ್ವಂ ಛಂದಃ ಶಸ್ಯತೇ ತದ್ಧ ಸರ್ವಂ ಮರುತ್ವತೀಯಂ ಭವತ್ಯೇಷ ಚೇದಚ್ಯುತಃ ಸ್ವಾಪಿಮಾನ್ಪ್ರಗಾಥಃ ಶಸ್ಯತ ಆ ಸ್ವಾಪೇ ಸ್ವಾಪಿಭಿರಿತಿ ॥

ಇತ್ಥಮಿಂದ್ರನಿಹವಾಖ್ಯಂ ಪ್ರಗಾಥಂ ಪ್ರಶಸ್ಯ ಪುನರಪಿ ಪ್ರಕಾರಾಂತರೇಣ ತಮೇವ ಪ್ರಶಂಸತಿ । ಅಪಿ ಹಾಪಿ ಚಾತ ಏತತ್ಪ್ರಗಾಥ ಶಂಸನಾದೂರ್ಧ್ವಮಸ್ಮಿನ್ಮರುತ್ವತೀಯಶಸ್ತ್ರೇ ಯದ್ಯೈಂದ್ರಮೇವ ಛಂದ ಇಂದ್ರಸಂಬಂಧ್ಯೇವ ಛಂದಃಶಬ್ದೋಪಲಕ್ಷಿತೋ ಮಂತ್ರಃ ಶಸ್ಯತೇ ತದ್ಧ ಸರ್ವಂ ತದಪಿ ಮಂತ್ರಜಾತಂ ಮರುತ್ವತೀಯಶಸ್ತ್ರಂ ಭವತಿ । ಏಷ ಚೇದಿತ್ಯಾದಿನಾ ತತ್ರ ಯುಕ್ತಿರುಚ್ಯತೇ । ಆಸ್ವಾಪೇ ಸ್ವಾಪಿಭಿರಿತಿಪಾದೋಪೇತತ್ವೇನ ಸ್ವಾಪಿಮಾನೇಷ ಪ್ರಗಾಥೋಽಚ್ಯುತಶ್ಚೇದಪರಿತ್ಯಕ್ತಶ್ಚೇತ್ತದಾ ಮತುತ್ವತೀಯಂ ಭವತಿ ಸ್ವಾಪಿಶಬ್ದವಾಚ್ಯಾನಾಂ ಮರುತಾಂ ಪ್ರತಿಪಾದಕತ್ವಾದಿತ್ಯರ್ಥಃ ॥ ಸೋಽಯಂ ಪ್ರಗಾಥಃ ಶಾಖಾಂತರೇ ದ್ರಷ್ಟವ್ಯಃ ॥

ಈ ಪ್ರಕಾರವಾಗಿ ಇಂದ್ರನಿಹವವೆಂಬ ಪ್ರಗಾಥವನ್ನು ಪ್ರಶಂಸಿಸಿ ಅದನ್ನೇ ಪ್ರಕಾರಾಂತರವಾಗಿ (ಬೇರೊಂದು ವಿಧವಾಗಿ) ಪ್ರಶಂಸೆಮಾಡುವರು—ಮತ್ತು ಹಿಂದೆ ಹೇಳಿರುವಂತೆ ಪ್ರಗಾಥ ಮಂತ್ರಪಠನವಾದಮೇಲೆ ಈ ಮರುತ್ವತೀಯಶಸ್ತ್ರದಲ್ಲಿ ಇಂದ್ರ ಸಂಬಂಧವಾದ ಛಂದಸ್ಸೇ (ಯದ್ಯೈಂದ್ರಮೇವ ಛಂದಃ) ಪ್ರಶಂಸಿಸಲ್ಪಡುವುದು. ಎಂದರೆ ಇಂದ್ರಸಂಬಂಧವಾದ ಪ್ರಗಾಥ

ಮಂತ್ರವನ್ನು ಪಠಿಸಿದಲ್ಲಿ ಅದೆಲ್ಲವೂ ಮರುತ್ವತೀಯಶಸ್ತ್ರವೇ ಆಗುವುದು. ಇದಕ್ಕೆ ಒಂದು ಕಾರಣವೂ ಇರುವುದು. ಈ ಪ್ರಗಾಥ ಮಂತ್ರದಲ್ಲಿ **ಅಸ್ವಾಪೇ ಸ್ವಾಪಿಭಿಃ** ಎಂಬ ಪಾದವಿರುವುದು ಮತ್ತು ಸ್ವಾಪಿಶಬ್ದಪ್ರಯೋಗವೂ ಇರುವುದು. ಆದ್ದರಿಂದ ಇದಕ್ಕೆ **ಸ್ವಾಪಿಮಾನ್‌ಪ್ರಗಾಥ** ಎಂದು ಹೆಸರು. ಆದ್ದರಿಂದ ಈ ಸ್ವಾಪಿಮಾನ್‌ಪ್ರಗಾಥವನ್ನು ಬಿಡದೆ ಸೇರಿಸಿ ಪಠಿಸುವ ಮಂತ್ರವು ಮರುತ್ವತೀಯಶಸ್ತ್ರವೇ ಆಗುವುದು. ಏಕೆಂದರೆ ಸ್ವಾಪಿಶಬ್ದದಿಂದ ಪ್ರತಿಪಾದಿತರಾದ ಮರುದ್ದೇವತೆಗಳ ವಿಷಯವಿರುವುದರಿಂದ ಪ್ರಗಾಥಸಹಿತವಾದ ಈ ಸೂಕ್ತವು ಮರುತ್ವತೀಯಶಸ್ತ್ರವೆಂದೇ ಪರಿಗಣಿಸಲ್ಪಡುವುದು. ಪ್ರಗಾಥದ ವಿವರಣೆಯನ್ನು ಶಾಖಾಂತರದಲ್ಲಿ (ಎಂದರೆ ಬೇರೆ ವೇದದಲ್ಲಿ) ನೋಡಿ ತಿಳಿದುಕೊಳ್ಳಬಹುದು.



*English Translation*

**(Indra-Nihava Pragatha)**

As Indra had killed Vritra, all deities thinking that he had not conquered him, left him. The Maruts alone who are his own relations did not leave him. The "maruto svapayah" (in the verse, indra nediya) are the vital airs. The vital airs did not leave him (Indra). Thence this Pragatha which contains the term svapi (in the pada) a svape svapibhir is constantly repeated (at the midday libation of all Soma sacrificers). When after this (Pragatha) a mantra addressed to Indra is repeated, then all this (is termed) Marutvatiya (Shastra). If this unchangeable Pragatha, containing the term svapi is repeated (then always the Marutvatiya Shastra is made).

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಪಂಚಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಐದನೆಯ ಖಂಡವು ಸಮಾಪ್ತವಾದುದು.**



## ಅಥ ದ್ವಾದಶಾಧ್ಯಾಯೇ ಷಷ್ಠಃ ಖಂಡಃ

### ಹನ್ನೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಬ್ರಹ್ಮಣಸ್ಪತಿಪ್ರಗಾಥವು. ಇಂದ್ರನಿಹವ ಮತ್ತು ಬ್ರಹ್ಮಣಸ್ಪತಿ ಪ್ರಗಾಥವು ಯಾವ ಸ್ತೋತ್ರಗಳಿಗೆ ಸೇರಿರುವವು? ಧಾಯ್ಯಾ ಎಂಬ ಮಂತ್ರಗಳ ವಿವರಣೆ].



**ಬ್ರಾಹ್ಮಣಸ್ಪತ್ಯಂ ಪ್ರಗಾಥಂ ಶಂಸತಿ ಬೃಹಸ್ಪತಿಪುರೋಹಿತಾ ವೈ ದೇವಾ ಅಜಯನ್ಸ್ವರ್ಗೇ ಲೋಕಂ ವ್ಯಸ್ಮಿಂಲ್ಲೋಕೇಽಜಯಂತ ತಥೈ-ವೈತದ್ಯಜಮಾನೋ ಬೃಹಸ್ಪತಿಪುರೋಹಿತ ಏವ ಜಯತಿ ಸ್ವರ್ಗಂ ಲೋಕಂ ವ್ಯಸ್ಮಿಂಲ್ಲೋಕೇ ಜಯತೇ ॥**

ಅಥಾಸ್ಮಿನ್ಮರುತ್ವತೀಯಶಸ್ತ್ರೇ ಪ್ರನೂನಂ ಬ್ರಹ್ಮಣಸ್ಪತಿರಿತ್ಯಾದಿಕಂ ಪ್ರಗಾಥಂ ವಿಧತ್ತೇ-ದ್ವಯೋಃ ಋಚೋಃ ಸಮೂಹಃ ಪ್ರಗಾಥಃ । ತಥಾ ಚಾಶ್ವಲಾಯನ ಆಹ—'ತೃಚಾಃ ಪ್ರತಿ-ಪದನುಚರಾ ದ್ವ್ಯೃಚಾಃ ಪ್ರಗಾಥಾಃ' ಇತಿ । ಋಗ್ದ್ವಯಮೇವಾನುಷ್ಠಾನಕಾಲೇ ತ್ರ್ಯೃಚರೂ-ಪೇಣ ಪ್ರಗ್ರಥ್ಯತೇ । ತಸ್ಮಾದಯಂ ಪ್ರಗಾಥ ಇತ್ಯುಚ್ಯತೇ ॥ ವಿಹಿತಂ ಬ್ರಾಹ್ಮಣಸ್ಪತ್ಯಂ ಪ್ರಶಂ-ಸತಿ । ಯೋಽಯಂ ಪ್ರಗಾಥೇ ಬ್ರಹ್ಮಣಸ್ಪತಿರಾಮ್ನಾತಃ ಸೋಽಯಂ ಬೃಹಸ್ಪತಿಸ್ತಸ್ಯ ಬ್ರಾಹ್ಮಣಜಾತಿಸ್ವಾಮಿತ್ವಾತ್ ॥ ಸ ಚ ಬೃಹಸ್ಪತಿಃ ಪುರೋಹಿತೋ ಯೇಷಾಂ ದೇವಾನಾಂ ತೇ ಬೃಹಸ್ಪತಿಪುರೋಹಿತಾಃ ॥ ತಥಾ ಚ ಶ್ರುತ್ಯಂತರೇ ಸಮಾಮ್ನಾತಂ—'ಬೃಹಸ್ಪತಿರ್ದೇ-ವಾನಾಂ ಪುರೋಹಿತ ಆಸೀತ್' ಇತಿ ॥ ಪೌರೋಹಿತ್ಯಸಿದ್ಧ್ಯರ್ಥಮೇವ ಚತುರ್ವಿಂಶತಿರಾತ್ರ-ನಾಮಕಂ ಸತ್ರಮನ್ವತಿಷ್ಠತ್ ॥ ತದಪಿ ಶ್ರುತ್ಯಂತರಏವಾಽಽಮ್ನಾತಂ । 'ಬೃಹಸ್ಪತಿರಕಾಮಯತ ಯನ್ಮೇ ದೇವಾ ದಧೀರನ್ಗಚ್ಛೇಯಂ ಪುರೋಧಾಮಿತಿ ಸ ಏತಂ ಚತುರ್ವಿಂಶತಿರಾತ್ರಮ-ಪಶ್ಯತ್' ಇತಿ ॥ ತಾದೃಶಾ ಬೃಹಸ್ಪತಿಪುರೋಹಿತಾ ದೇವಾ ಅನೇನ ಪ್ರಗಾಥೇನ ಸೇ ನೋಽಪಿ ಸ್ವರ್ಗಂ ಲೋಕಂ ಜಿತ್ವಾ ಭೂಲೋಕೇಽಪಿ ವಿಜಯಂ ಪ್ರಾಪ್ತಾಸ್ತಥೈವ ತತ್ಪಾಠೇನೇದಾನೀಂತ-ಯಜಮಾನೋಽಪಿ ಯಜಮಾನೋ ಬೃಹಸ್ಪತಿಪುರೋಹಿತ ಏವ ಬೃಹಸ್ಪತ್ಯನುಗ್ರಹಯುಕ್ತ ಏವ ಸಲ್ಲೋಕದ್ವಯಂ ಜಯತಿ ॥

ಈಗ ಮರುತ್ವತೀಯಶಸ್ತ್ರದಲ್ಲಿ—ಪ್ರ ನೂನಂ ಬ್ರಹ್ಮಣಸ್ಪತಿಃ । (ಋ. ಸಂ. ೧-೧೪-೫) ಎಂದು ಮೊದಲಾದ ಪ್ರಗಾಥ ಮಂತ್ರವನ್ನು ವಿವರಿಸುವರು. ಪ್ರಗಾಥವೆಂದರೆ ಇಲ್ಲಿ ಬ್ರಹ್ಮಣಸ್ಪತಿದೇವತಾಕವಾದ ಪ್ರಗಾಥಮಂತ್ರವು. ಪ್ರಗಾಥ

ವೆಂದರೇನೆಂಬ ವಿಷಯದಲ್ಲಿ ಆಶ್ವಲಾಯನರು ಹೀಗೆ ಹೇಳುವರು—**ದ್ವಯೋಃ ಋಚೋಃ ಸಮೂಹಃ ಪ್ರಗಾಥಃ** ಎಂದರೆ ಎರಡು ಋಕ್ಕುಗಳು ಒಂದೆಡೆ ಇದ್ದು ಒಂದೇ ದೇವತೆಯನ್ನು ಪ್ರಶಂಸಿಸುವಹಾಗಿದ್ದರೆ ಆ ಎರಡು ಋಕ್ಕುಗಳಿಗೆ ಪ್ರಗಾಥವೆಂದು ಹೆಸರು. ಈ ಎರಡು ಋಕ್ಕುಗಳಲ್ಲಿ ಮೊದಲನೆಯದು ಬೃಹತೀಛಂದಸ್ಸಿನದೂ ಎರಡನೆಯದು ಸತೋಬೃಹತೀಛಂದಸ್ಸಿನದೂ ಆಗಿರಬೇಕು. ಈ ಎರಡು ಋಕ್ಕುಗಳನ್ನೂ ತೃಚ ಎಂಬ ಮೂರು ಋಕ್ಕುಗಳನ್ನು ಪಠಿಸುವಂತೆ ಅದರ ಸ್ಥಾನದಲ್ಲಿ ಪಠಿಸುವರು. ಆದ್ದರಿಂದ ಈ ಎರಡು ಋಕ್ಕುಗಳಿಗೆ ಪ್ರಗಾಥವೆಂದು ಹೆಸರು.

ಈಗ ಬ್ರಹ್ಮಣಸ್ಪತಿದೇವತಾಕವಾದ ಪ್ರಗಾಥವನ್ನು ಪ್ರಶಂಸಿಸುವರು—ಯಾವ ಪ್ರಗಾಥದಲ್ಲಿ ಬ್ರಹ್ಮಣಸ್ಪತಿದೇವತೆಯನ್ನು ಪ್ರಶಂಸಿಸಲಾಗಿರುವುದೋ ಆ ಪ್ರಗಾಥದಲ್ಲಿ ಉಕ್ತವಾಗಿರುವುದು ಬೃಹಸ್ಪತಿದೇವತೆಯೆಂದು ತಿಳಿಯಬೇಕು. ಯಾವ ದೇವತೆಗಳಿಗೆ ಬೃಹಸ್ಪತಿಯು ಪುರೋಹಿತನಾಗಿರುವನೋ ಆ ದೇವತೆಗಳು ಬೃಹಸ್ಪತಿಪುರೋಹಿತಾಃ ಎಂದು ಕರೆಯಲ್ಪಡುವರು. ತೈತ್ತಿರೀಯ ಸಂಹಿತೆಯಲ್ಲಿಯೂ ಈರೀತಿ ಹೇಳಿರುವುದು—**ಬೃಹಸ್ಪತಿರ್ದೇವಾನಾಂ ಪುರೋಹಿತ ಆಸೀತ್** (ತೈ.ಸಂ. ೬-೪-೧೦-೧) ಪುರೋಹಿತ ಪದವಿಯು ಎಂದರೆ ಸ್ಥಾನವು ಸಿದ್ಧಿಸುವುದಕ್ಕಾಗಿ ಇಪ್ಪತ್ತುನಾಲ್ಕು ರಾತ್ರಿಗಳಕಾಲ (ಇಪ್ಪತ್ತುನಾಲ್ಕು ದಿವಸಗಳಕಾಲ) ಮಾಡಬೇಕಾದುದು ಒಂದು ಸತ್ರಯಾಗವಿರುವುದು. ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿ—**ಬೃಹಸ್ಪತಿರಕಾಮಯತ ಶ್ರನ್ಮೇ ದೇವಾ ದಧೀರನ್ ಗಚ್ಛೇಯಂ ಪುರೋಧಾಮಿತಿ ಸ ಏತಂ ಚತುರ್ವಿಂಶತಿರಾತ್ರಮಪಶ್ಯತ್** (ತೈ. ಸಂ. ೭-೪-೧-೧) ಎಂದು ಹೇಳಿರುವದು. ಬೃಹಸ್ಪತಿಯೂ ಸಹ ಈ ಸತ್ರಯಾಗವನ್ನು ಮಾಡಿ ದೇವತೆಗಳಿಗೆ ಮುಖ್ಯಸ್ಥನಾಗಿಯೂ ಪುರೋಹಿತನಾಗಿಯೂ ಆದನು. ಇಂತಹ ಸಾಮರ್ಥ್ಯವುಳ್ಳ ಬೃಹಸ್ಪತಿಯು ದೇವತೆಗಳಿಗೆ ಪುರೋಹಿತನಾಗಿರುವಾಗ ದೇವತೆಗಳು ಪ್ರಗಾಥವೆಂಬ ಮಂತ್ರದ ಸಹಾಯದಿಂದ ಸ್ವರ್ಗಲೋಕವನ್ನು ಜಯಿಸಿದ್ದಲ್ಲದೆ ಭೂಲೋಕದಲ್ಲಿಯೂ ಎಲ್ಲಾ ಕಡೆಯಲ್ಲಿಯೂ ವಿಜಯಶಾಲಿಗಳಾದರು. ಅದರಂತೆ ಈಗಲೂ ಸಹ ಈ ಪಾಠಪ್ರಯೋಗದಿಂದ ಯಜ್ಞಮಾಡುವ ಯಜಮಾನನು ಬೃಹಸ್ಪತಿ ದೇವತೆಯ ಅನುಗ್ರಹಕ್ಕೆ ಪಾತ್ರನಾಗಿ ಭೂಲೋಕಸ್ವರ್ಗಲೋಕಗಳೆರಡರಲ್ಲಿಯೂ ಜಯವನ್ನು ಗಳಿಸುವನು.

**ತೌ ವಾ ಏತೌ ಪ್ರಗಾಥಾವಸ್ತುತೌ ಸಂತೌ ಪುನರಾದಾಯಂ ಶಸ್ಯೇತೇ ತದಾಹುರ್ಯನ್ನ ಕಿಂಚನಾಸ್ತುತಂ ಸತ್ಪುನರಾದಾಯಂ ಶಸ್ಯ-ತೇಽಥ ಕಸ್ಮಾದೇತೌ ಪ್ರಗಾಥಾವಸ್ತುತೌ ಸನ್ತೌ ಪುನರಾದಾಯಂ ಶಸ್ಯೇತೇ ಇತಿ ।**

ಅತ್ರ ಕಿಂಚಿಚ್ಚೋದ್ಯಮುದ್ಭಾವಯತಿ—ಸಮಾಮ್ನಾತೇ ದ್ವೇ ಏವ ಋಚೌ ಪ್ರಗ್ರಥನೇನ ತ್ರ್ಯೃಚರೂಪತಯಾ ಸಂಪಾದ್ಯೇತೇ ॥ ಪ್ರಗ್ರಥನಪ್ರಕಾರ ಉಚ್ಯತೇ ॥ ಪ್ರ ನೂನಮಿತ್ಯೇಷಾ ಬೃಹತೀಛಂದಸ್ಕಾ । ದ್ವಾದಶಾಕ್ಷರೇಣ ತೃತೀಯಪಾದೇನಾಷ್ಟಾಕ್ಷರೈಶ್ಚಾನ್ಯೈರ್ಯುಕ್ತತಯಾ ಷಟ್ತ್ರಿಂಶದಕ್ಷರಸಂಪತ್ತೇಃ ॥ ಸೇಯಮೃಕ್ಸಕೃತ್ಪಠನೀಯಾ ॥ ಪುನರಪಿ ತತ್ರತ್ಯಮಷ್ಟಮಾಕ್ಷರಂ ಚತುರ್ಥಪಾದಂ ದ್ವಿರಾಮ್ನಾಯ ಷೋಡಶಾಕ್ಷರೋಽರ್ಧರ್ಚಃ ಸಂಪಾದನೀಯಃ । ಇತರಸ್ಯಾ-ಮೃಚಿ ಪ್ರಥಮಪಾದೋ ದ್ವಾದಶಾಕ್ಷರಃ । ದ್ವಿತೀಯಪಾದೋಽಷ್ಟಾಕ್ಷರಃ । ಏತತ್ಸರ್ವಂ ಮಿಲಿತ್ವಾ ದ್ವಿತೀಯಾ ಬೃಹತೀ ಸಂಪದ್ಯತೇ ॥ ತತ್ರತ್ಯಮಂತಿಮಮಷ್ಟಾಕ್ಷರಪಾದಂ ದ್ವಿರಭ್ಯಸ್ಯ ಸಮಾಮ್ನಾತ ಉತ್ತರಾರ್ಧೇ ದ್ವಾದಶಾಕ್ಷರಂ ಪ್ರಥಮಪಾದಮಷ್ಟಾಕ್ಷರಮುತ್ತರಪಾದಂ ಚ ಪಠಿತ್ವಾ ಬೃಹತೀ ಸಂಪಾದನೀಯಾ ॥ ಅಯಮೇವ ಪ್ರಗ್ರಥನಪ್ರಕಾರ ಇಂದ್ರ ನೇದೀಯ ಏದಿ-

ಹೀತ್ಯತ್ರಾಪಿ ಪ್ರಗಾಥೇ ಯೋಜನೀಯಃ ॥ ತಾವೇತೌ ಪ್ರಗಾಥೌ ಪುನರಾದಾಯಂ ಪುನಃಪುನಃ ಪಠಿತನೇವ ಪಾದಮಾದಾಯಾಽಽದಾಯ ಶಸ್ಯೇತೇ ॥ ಸಾಮುಗೈಸ್ತು ಮಾಧ್ಯಂದಿನಪವಮಾನೇ ಪ್ರಗಾಥಾವೇತಾವಸ್ತುತೌ ತೈರಸ್ತುತಯೋರ್ಹೋತ್ರಾ ಶಂಸನಮಯುಕ್ತಂ । ನ ಹ್ಯತ್ರ ಕ್ವಚಿದಪಿ ಸಾಮುಗೈರಸ್ತುತಂ ಮಂತ್ರಜಾತಂ ಪುನಃ ಪುನರಾದಾಯ ಶಸ್ಯಮಾನಂ ದೃಷ್ಟಂ । ಏವಂ ಸತಿ ಕಸ್ಮಾತ್ಕಾರಣಾದಸ್ತು ತಯೋರತ್ರ ಶಂಸನಮಿತಿ ಚೋದ್ಯವಾದಿನ ಆಹುಃ ॥

ಇಲ್ಲಿ ಒಂದು ವಿಶೇಷಸಂಗತಿಯನ್ನು ತಿಳಿಸಲಾಗುವುದು. ಇಲ್ಲಿ ಪ್ರಗ್ರಥನವೆಂಬ ಕ್ರಮಪ್ರಕಾರ ಎರಡು ಋಕ್ಕನ್ನು ತೃಚಕ್ಕೆ ಎಂದರೆ ಮೂರು ಋಕ್ಕುಗಳಿಗೆ ಬದಲಾಗಿ ಪಠಿಸುವರು. ಪ್ರಗ್ರಥನಪ್ರಕಾರವು ಈರೀತಿ ಇರುವುದು— **ಪ್ರ ನೂನಂ ಬ್ರಹ್ಮಣಸ್ಪತಿಃ** ಎಂಬ ಋಕ್ಕು ಬೃಹತೀಛಂದಸ್ಸಿನದು. ಈ ಋಕ್ಕಿನಲ್ಲಿ ಮೂರನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಉಳಿದ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಇರುವವು ಎಂದರೆ ಈ ಬೃಹತೀಛಂದಸ್ಸಿನಲ್ಲಿ ಒಟ್ಟು ಮೂವತ್ತಾರು ಅಕ್ಷರಗಳಿರುವವು. ಈ ಋಕ್ಕನ್ನು ಮೊದಲು ಒಂದಾವರ್ತಿ ಪಠಿಸಬೇಕು. ಅನಂತರ ಎಂಟು ಅಕ್ಷರಗಳುಳ್ಳ ನಾಲ್ಕನೆಯ ಪಾದವನ್ನು ಎರಡಾವರ್ತಿ ಪಠಿಸಬೇಕು. ಇದರಿಂದ ಹದಿನಾರು ಅಕ್ಷರಗಳಾದಂತಾಯಿತು. ಅನಂತರ ಎರಡನೆಯ ಋಕ್ಕಿನ ಮೊದಲನೆಯ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಎರಡನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು. ಇದೆಲ್ಲವನ್ನೂ ಸೇರಿಸಿದರೆ ಎಂದರೆ ಹಿಂದಿನ (ಎಂದರೆ ಮೊದಲನೆಯ) ಋಕ್ಕಿನ ನಾಲ್ಕನೆಯ ಪಾದವನ್ನು ಎರಡಾವರ್ತಿ ಪಠಿಸಿದ ಹದಿನಾರು ಅಕ್ಷರಗಳೂ ಎರಡನೆಯ ಋಕ್ಕಿನ ಮೊದಲನೆಯ ಮತ್ತು ಎರಡನೆಯ ಪಾದಗಳ ಇಪ್ಪತ್ತು (ಹನ್ನೆರಡು ಮತ್ತು ಎಂಟೂ ಸೇರಿ) ಅಕ್ಷರಗಳೂ ಸೇರಿದಲ್ಲಿ ಮೂವತ್ತಾರು ಅಕ್ಷರಗಳ ಬೃಹತೀ ಛಂದಸ್ಸು ನಿಷ್ಪನ್ನವಾಗುವುದು. ಇದು ಎರಡನೆಯ ಬೃಹತೀಛಂದಸ್ಸು. ಮತ್ತು ಎರಡನೆಯ ಋಕ್ಕಿನ ಕೊನೆಯ ಎಂಟು ಅಕ್ಷರಗಳ ಪಾದವನ್ನು ಎರಡಾವರ್ತಿ ಪಠಿಸಿ (೧೬ ಅಕ್ಷರಗಳು) ಇದಕ್ಕೆ ಉತ್ತರಾರ್ಧದ ಮೊದಲನೆಯ ಪಾದದ ಹನ್ನೆರಡು ಅಕ್ಷರಗಳನ್ನು ಮುಂದಿನ ಪಾದದ ಎಂಟು ಅಕ್ಷರಗಳನ್ನೂ ಸೇರಿಸಿದರೆ (೮×೨=೧೬+೧೨+೮=೩೬) ಮೂವತ್ತಾರು ಅಕ್ಷರಗಳಿಂದ ಕೂಡಿದ ಬೃಹತೀಛಂದಸ್ಸಾಗುವುದು. ಇದು ಮೂರನೆಯ ಬೃಹತಿಛಂದಸ್ಸು. ಈರೀತಿ ಎರಡು ಋಕ್ಕನ್ನು ಮೂರು ಋಕ್ಕನ್ನಾಗಿ ಪರಿವರ್ತಿಸುವುದು ಪ್ರಗ್ರಥನಪ್ರಕಾರವೆನಿಸುವುದು. ಹಿಂದೆ ಹೇಳಿದ **ಇಂದ್ರ ನೇದೀಯ ಏದಿಹಿ** ಎಂಬ ಪ್ರಗಾಥದಲ್ಲಿಯೂ ಕೂಡ ಎರಡು ಬೃಹತೀಛಂದಸ್ಸುಗಳನ್ನು ಮೂರನ್ನಾಗಿ ಪರಿವರ್ತಿಸಿ ಪಠಿಸಬೇಕು ಅಲ್ಲಿಯೂ ಇದೇ ಕ್ರಮವು. ಸಾಮಗರು ಮಾಧ್ಯಂದಿನಪವಮಾನ ಸ್ತೋತ್ರವನ್ನು ಗಾನಮಾಡುವಾಗ ಈ ಎರಡು ಪ್ರಗಾಥಮಂತ್ರಗಳನ್ನೂ ಸ್ತುತಿಸಿ ಗಾನಮಾಡುವುದಿಲ್ಲ. ಇತರ ಸಂದರ್ಭಗಳಲ್ಲಿ ಸಾಮಗರು ಗಾನಮಾಡುವ ಮಂತ್ರವನ್ನೇ ಹೋತೃವು ಪುನಃ ಪುನಃ ಪಠಿಸುವನು. ಇಲ್ಲಿ ಸಾಮಗರು ಈ ಎರಡು ಪ್ರಗಾಥಮಂತ್ರಗಳನ್ನು ಗಾನಮಾಡದೇ ಇರುವುದರಿಂದ ಅಂತಹ (ಸಾಮಗರು) ಗಾನಮಾಡದಿರುವ ಮಂತ್ರವನ್ನು ಹೋತೃವು ಪುನಃ ಪುನಃ ಪಠಿಸುವುದು ಯುಕ್ತವೇ ? ಇದಕ್ಕೆ ಕಾರಣವೇನು ? ಎಂದು ಕೆಲವರು ಪ್ರಶ್ನೆ ಮಾಡುವರು.

ಪವಮಾನೋಕ್ಥಂ ವಾ ಏತದ್ಯನ್ಮರುತ್ವತೀಯಂ ಷಟ್ಸು ವಾ ಅತ್ರ ಗಾಯತ್ರೀಷು ಸ್ತುವತೇ ಷಟ್ಸು ಬೃಹತೀಷು ತಿಸೃಷು ತ್ರಿಷ್ಟುಪ್ಸು ಸ ವಾ ಏಷ ತ್ರಿಚ್ಛಂದಾಃ ಪಂಚದಶೋ ಮಾಧ್ಯಂದಿನಃ ಪವಮಾನಸ್ತದಾಹುಃ ಕಥಂ ತ ಏಷ ತ್ರಿಚ್ಛಂದಾಃ ಪಂಚದಶೋ ಮಾಧ್ಯಂದಿನಃ ಪವಮಾನೋಽನುಶಸ್ತೋ ಭವತೀತಿ ॥

ಏತಚ್ಚೋದ್ಯಮನಾಸ್ಥಾಯ ಪರಿಹಾರಮನುಕ್ತ್ವೈವ ಚೋದ್ಯಾಂತರಮುದ್ಭಾವಯತಿ-ಮರುತ್ವತೀಯಶಸ್ತ್ರಂ ಯದಸ್ತಿ ತದೇತತ್ಪವಮಾನೋಕ್ಥಂ ಮಾಧ್ಯಂದಿನಪವಮಾನಸಂಬಂಧಿ-ಶಸ್ತ್ರಂ || ಅತ್ರ ಮಾಧ್ಯಂದಿನಪವಮಾನಸ್ತೋತ್ರ ಉಚ್ಚಾ ತೇ ಜಾತಮಿತ್ಯಾದಿಷು ಷಟ್ಸು ಗಾಯತ್ರೀಷು ಪ್ರಥಮಂ ಸ್ತುವತೇ || ತತಃ ಪುನಾನಃ ಸೋಮೇತ್ಯಾದಿಷು ಷಟ್ಸು ಬೃಹತೀಷು ಸ್ತುವತೇ || ಯದ್ಯಪಿ ದ್ವ್ಯೃಚಾತ್ಮಕಃ ಪ್ರಗಾಥಸ್ತಥಾಪಿ ಪೂರ್ವೋಕ್ತನ್ಯಾಯೇನ ಪ್ರಗ್ರಥ್ಯ ತಿಸ್ರೋ ಬೃಹತ್ಯಃ ಸಂಪಾದನೀಯಾಃ || ತಾಸು ಚ ರೌರವಸಾಮ ಪ್ರಾಗುದ್ಗಾತವ್ಯಂ ತತ ಉಪರಿ ಯೌಧಾಜಯಸಾಮ ಗಾತವ್ಯಂ | ಏವಂ ಸತಿ ತಿಸ್ರೋ ಬೃಹತ್ಯಃ ಸಾಮದ್ವಯಾರ್ಥಂ ದ್ವಿರಾ-ವರ್ತ್ಯಮಾನಾಃ ಷಟ್ಸಂಪದ್ಯಂತೇ || ತಥಾ ಪ್ರ ತು ದ್ರವೇತ್ಯಾದಿಷು ತಿಸೃಷು ತ್ರಿಷ್ಟುಪ್ಸು ಸ್ತುವತೇ | ಏವಂ ಸತಿ ಸ ಏಷ ಮಾಧ್ಯಂದಿನಪವಮಾನಸ್ತ್ರಿಚ್ಛಂದಾ ಭವತಿ || ಗಾಯತ್ರೀಬೃಹತೀತ್ರಿಷ್ಟು-ಬ್ರೂಪಾಣಾಂ ತ್ರಯಾಣಾಂ ಛಂದಸಾಂ ಸದ್ಭಾವಾತ್ || ತಥಾ ಸ ಪವಮಾನಃ ಪಂಚದಶಸ್ತೋ-ಮೋಪೇತಃ || ತಸ್ಯ ಚ ಸ್ತೋಮಸ್ಯ ಪ್ರಕಾರಶ್ಛಂದೋಗಬ್ರಾಹ್ಮಣ ಏವಮಾಮ್ನಾಯತೇ— 'ಪಂಚಭ್ಯೋ ಹಿಂ ಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ ಇತಿ || ಅಸ್ಯಾಯಮರ್ಥಃ || ತ್ರ್ಯೃಚಾತ್ಮಕಮೇಕಂ ಸೂಕ್ತಂ ತ್ರಿರಾವರ್ತನೀಯಂ || ತತ್ರ ಪ್ರಥಮಾವೃತ್ತೌ ಪ್ರಥಮಾಯಾ ಋಚಸ್ತ್ರಿರಭ್ಯಾಸೋ ವಿಧೇಯಃ || ದ್ವಿತೀಯಾವೃತ್ತೌ ಮಧ್ಯಮಾಯಾಃ || ತೃತೀಯಾವೃತ್ತೌ ಚರಮಾಯಾಃ || ಏವಂ ಪ್ರತಿಸಾಮ ಸಾವೃತ್ತಾಭಿಃ ಪಂಚದಶಭಿರ್ಋಗ್ಭಿರುಪೇತತ್ವಾತ್ಪಂಚದಶ ಸ್ತೋಮಾ ಇತಿ || ಏವಂ ಸತ್ಯತ್ರ ಚೋದ್ಯವಾದಿನ ಆಹುಃ || ಹೇ ಹೋತಸ್ತ ಏಷ ಯಥೋಕ್ತಲಕ್ಷಣಃ ಪವಮಾನಃ ಕಥಂ ಮರುತ್ವತೀಯ ಶಸ್ತ್ರೇಣಾನುಶಸ್ತೋ ಭವತಿ || ಅನುಶಂಸನಂ ಚ ನ್ಯಾಯ್ಯಂ || ಯಥಾ ವಾವ ಸ್ತೋತ್ರಮೇವಂ ಶಸ್ತ್ರಮಿತಿ ನ್ಯಾಯಾತ್ || ಅತೋಽತ್ರ ಸ್ತೋತ್ರಶಸ್ತ್ರಯೋರ್ವೈಲಕ್ಷಣ್ಯಮಯುಕ್ತಮಿತಿ ಚೋದ್ಯಾಂತರಂ ||

ಹಿಂದೆ ಹೇಳಿದ ವಿಶೇಷಸಂಗತಿಗೆ ಸರಿಯಾದ ಉತ್ತರವನ್ನು ತಿಳಿಸದೆ ಮತ್ತೊಂದು ವಿಶೇಷಸಂಗತಿಯನ್ನು ತಿಳಿಸುವರು— ಮಾಧ್ಯಂದಿನಕಾಲದಲ್ಲಿ ಹೋತೃವು ಪಠಿಸುವ ಮರುತ್ವತೀಯಶಸ್ತ್ರವು (ಪವಮಾನೋಕ್ಥ್ಯಂ) ಮಾಧ್ಯಂದಿನಪವಮಾನಸಂಬಂಧವಾದ ಶಸ್ತ್ರವೆಂದು ಕರೆಯುವ ರೂಢಿ ಇದೆ. ಈ ವಿಷಯದಲ್ಲಿ ಮಾಧ್ಯಂದಿನಪವಮಾನ ಶಸ್ತ್ರವನ್ನು ಪಠಿಸುವಾಗ **ಉಚ್ಚಾತೇ ಜಾತಂ** ಎಂದು ಮೊದಲಾದ ಆರು ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಗಾನಮಾಡುತ್ತಾರೆ. ಅನಂತರ **ಪುನಾನಃ ಸೋಮ** ಮೊದಲಾದ ಆರು ಬೃಹತೀಛಂದಸ್ಸಿನ ಮಂತ್ರಗಳು ಎರಡು ಋಕ್ಕುಗಳಿಂದ ಕೂಡಿದ ಪ್ರಗಾಥವೇ ಆಗಿದ್ದರೂ ಪ್ರಗ್ರಥನಪ್ರಕಾರದಿಂದ ಬೃಹತೀಛಂದಸ್ಸಿನ ಮೂರು ಋಕ್ಕುಗಳಾಗಿಯೇ ಗಾನಮಾಡಲ್ಪಡುವವು. ಇವುಗಳಾದಮೇಲೆ ರೌರವ ಎಂಬ ಸಾಮವನ್ನೂ ಅನಂತರ **ಯೌಧಾಜಯಂ** ಎಂಬ ಸಾಮವನ್ನೂ ಗಾನಮಾಡಬೇಕು. ಹಿಂದೆ ಹೇಳಿದ ಮೂರು (ಎರಡನ್ನು ಮೂರಾಗಿ) ಬೃಹತೀಛಂದಸ್ಸಿನ ಮಂತ್ರಗಳನ್ನು ಎರಡಾವರ್ತಿ ಗಾನಮಾಡುವುದರಿಂದ ಆರು ಬೃಹತೀಛಂದಸ್ಸಿನ ಮಂತ್ರಗಳನ್ನು ಗಾನಮಾಡಿದಂತಾಯಿತು ಮತ್ತು ಹಾಗೆಯೇ **ಪ್ರತುದ್ರವ** (ಋ. ಆ. ೧,೧,೧೦,೧-೩) ಮೊದಲಾದ ಮೂರು ಮಂತ್ರಗಳನ್ನು ತ್ರಿಷ್ಟುಪ್ ಛಂದಸ್ಸಿನ ಮಂತ್ರಗಳಿಂದ ಗಾನಮಾಡುವರು. ಈರೀತಿ ಗಾನಮಾಡಲ್ಪಡುವ ಮಂತ್ರವು ತ್ರಿಛಂದಸಹಿತವಾದ ಮಾಧ್ಯಂದಿನ

ಪವಮಾನವೆಂದು ಹೇಳಲ್ಪಡುವುದು. ಏಕೆಂದರೆ ಸ್ತೋತ್ರದಲ್ಲಿ ಗಾಯತ್ರಿ, ಬೃಹತೀ, ತ್ರಿಷ್ಟುಪ್ ಎಂಬ ಮೂರು ವಿಧವಾದ ಛಂದಸ್ಸಿನ ಮಂತ್ರಗಳೂ ಇರುವವು. ಮತ್ತು ಈ ಪವಮಾನಸ್ತೋತ್ರವು ಪಂಚದಶಸ್ತೋಮಸಹಿತವಾದುದು. ಈ ಸ್ತೋಮದ ಪ್ರಕಾರವು ಛಂದೋಗ (ಸಾಮವೇದ) ಬ್ರಾಹ್ಮಣದಲ್ಲಿ ಈರೀತಿ ವಿವರಿಸಲ್ಪಟ್ಟಿರುವುದು—**ಪಂಚಭ್ಯೋ ಹಿಂಕರೋತಿ ಸ ತಿಸೃಭಿಃ ಸ ಏಕಯಾ ಸ ಏಕಯಾ । ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ತಿಸೃಭಿಃ ಸ ಏಕಯಾ । ಪಂಚಭ್ಯೋ ಹಿಂ ಕರೋತಿ ಸ ಏಕಯಾ ಸ ಏಕಯಾ ಸ ತಿಸೃಭಿಃ ।** (ತಾಂಡ್ಯಬ್ರಾಹ್ಮಣ ೩-೪-೧) ಇದರ ಅರ್ಥ ವಿವರಣೆಯು—ತೃಚಾತ್ಮಕವಾದ ಒಂದು ಸೂಕ್ತವನ್ನು ಮೂರಾವೃತ್ತಿ ಗಾನಮಾಡಬೇಕು. ಇದನ್ನು ಪಠಿಸುವಾಗ ಮೊದಲಾವೃತ್ತಿಯಲ್ಲಿ ಮೊದಲನೆಯ ಋಕ್ಕನ್ನು ಮೂರಾವರ್ತಿಯೂ ಎರಡನೆಯ ಆವೃತ್ತಿಯಲ್ಲಿ ಮಧ್ಯದ ಋಕ್ಕನ್ನು ಮೂರಾವೃತ್ತಿಯೂ ಮೂರನೆಯ ಆವೃತ್ತಿಯಲ್ಲಿ ಕೊನೆಯ ಋಕ್ಕನ್ನು ಮೂರಾವರ್ತಿಯೂ ಗಾನಮಾಡಬೇಕು. ಈರೀತಿ ಮೂರು ಸಾಮಮಂತ್ರಗಳನ್ನೂ ಈ ಕ್ರಮದಲ್ಲಿ ಗಾನಮಾಡಿದರೆ ಪ್ರತಿಸಾಮವೂ ಹದಿನೈದು ಋಕ್ಕುಗಳಿಂದ ಕೂಡಿದ ಸ್ತೋಮವಾಗುವುದು. ಆದ್ದರಿಂದ ಇವನ್ನು ಪಂಚದಶಸ್ತೋಮವೆಂಬ ಹೆಸರಿನಿಂದ ಕರೆಯುವರು. ಹೀಗಿರುವಾಗ ಕೆಲವರು ಈರೀತಿ ಪ್ರಶ್ನೆಮಾಡುವರು—ಎಲೈ ಹೋತೃವೇ, ಲಕ್ಷಣಸಹಿತವಾದ ಪವಮಾನಸೂಕ್ತದ ಮಂತ್ರಗಳು ಗಾನಮಾಡಲ್ಪಟ್ಟನಂತರ ಅದರ ಅನುಶಂಸನರೂಪವಾಗಿ ಮರುತ್ವತೀಯ ಶಸ್ತ್ರಮಂತ್ರಗಳನ್ನು ಪಠಿಸುವೆ? ಎಂದರೆ ಸ್ತೋತ್ರಮಂತ್ರಗಳಿಗೂ ಶಸ್ತ್ರಮಂತ್ರಗಳಿಗೂ ಸಮನ್ವಯವಿರಬೇಕು ಎಂದರೆ ಒಂದಕ್ಕೊಂದು ಸಾಮ್ಯವಿರಬೇಕು. ಆದ್ದರಿಂದ ಸಾಮಗಾನಮಂತ್ರಗಳಿಗೂ ಶಸ್ತ್ರಮಂತ್ರಗಳಿಗೂ ಸಾಮ್ಯವಿಲ್ಲದಿರುವುದು ಅನ್ಯಾಯವು. ವಾಕ್ಯವೂ ಸಹ—**ಯಥಾ ವಾವ ಸ್ತೋತ್ರಮೇವಂ ಶಸ್ತ್ರಂ** ಎಂದೇ ಹೇಳುವುದು ಎಂದರೆ ಸ್ತೋತ್ರಕ್ಕೆ ಅನುಸಾರವಾಗಿ ಶಸ್ತ್ರವಿರಬೇಕು ಎಂದು. ಆದ್ದರಿಂದ ಸ್ತೋತ್ರಕ್ಕೂ ಶಸ್ತ್ರಕ್ಕೂ ವೈಲಕ್ಷಣ್ಯವು (ಅನುರೂಪವಾಗಿಲ್ಲದಿರುವುದು) ಅಯುಕ್ತವು. ಹೀಗೆಂದು ಚೋದ್ಯವಾದಿಗಳು ಹೇಳುವರು.

**ಯೇ ಏವ ಗಾಯತ್ರ್ಯಾ ಉತ್ತರೇ ಪ್ರತಿಪದೋ ಯೋ ಗಾಯತ್ರೋಽನುಚರಸ್ತಾಭಿರೇವಾಸ್ಯ ಗಾಯತ್ರೋಽನುಶಸ್ತಾ ಭವಂತ್ಯೇತಾಭ್ಯಾಮೇವಾಸ್ಯ ಪ್ರಗಾಥಾಭ್ಯಾಂ ಬೃಹತ್ಯೋಽನುಶಸ್ತಾ ಭವಂತಿ॥**

ತತ್ರ ದ್ವಿತೀಯಸ್ಯ ಚೋದ್ಯಸ್ಯ ತಾವದುತ್ತರಂ ದರ್ಶಯತಿ—ಆ ತ್ವಾ ರಥಮಿತ್ಯಸ್ಮಿನ್ಮರುತ್ವತೀಯಶಸ್ತ್ರಸ್ಯ ಪ್ರತಿಪದ್ರೂಪೇ ತ್ರ್ಯೃಚೇ ಪ್ರಥಮಾ ಋಗನುಷ್ಟುಬ್ಯೇ ಏವೋತ್ತರೇ ಪ್ರತಿಪದಃ ಪ್ರತಿಪದ್ರೂಪೇ ದ್ವೇ ಋಚೌ ಗಾಯತ್ರ್ಯೌ ವಿದ್ಯೇತೇ ಯಶ್ಚಾನ್ಯ ಇದಂ ವಸೋ ಸುತಮಂಧ ಇತ್ಯನುಚರಾಖ್ಯಸ್ತ್ರ್ಯೃಚೋ ಗಾಯತ್ರ ಏತಾಭಿರೇವ ಪಂಚಭಿರ್ಗಾಯತ್ರೀಭಿರಸ್ಯ ಹೋತುಃ ಪವಮಾನಸ್ತೋತ್ರಗತಾ ಗಾಯತ್ರ್ಯೋಽನುಶಸ್ತಾ ಭವಂತಿ॥ ಇಂದ್ರ ನೇದೀಯ ಇತಿ ಯೋಽಯಮಿಂದ್ರನಿಹವಃ ಪ್ರಗಾಥೋ ಯಶ್ಚ ಪ್ರನೂನಂ ಬ್ರಹ್ಮಣಸ್ಪತಿರಿತಿ ಬ್ರಾಹ್ಮಣಸ್ಪತ್ಯಃ ಪ್ರಗಾಥ ಏತಾಭ್ಯಾಮುತ್ತರಾಭ್ಯಾಂ ಪವಮಾನಸ್ತೋತ್ರಗತಾ ಬೃಹತ್ಯೋಽನುಶಸ್ತಾ ಭವಂತಿ ಪ್ರಗ್ರಥನೇನ ಬೃಹತೀಸಂಪಾದನಸ್ಯೋಭಯತ್ರ ಸಮಾನತ್ವಾತ್ ॥ ಯತ್ತು ತ್ರಿಷ್ಟುಭಾಮನುಶಂಸನಂ ತದುಪರಿಷ್ಟಾದಭಿಧಾಸ್ಯತೇ ॥

ಹಿಂದೆ ಹೇಳಿದ ಎರಡು ವಿಶೇಷಸಂಗತಿಗಳಲ್ಲಿ ಮೊದಲನೆಯ ಸಂಗತಿಗೆ ಪ್ರತ್ಯುತ್ತರವನ್ನು ಹೇಳುವರು—**ಆ ತ್ವಾ ರಥಂ** ಎಂದು ಪ್ರಾರಂಭವಾಗುವ ಮರುತ್ವತೀಯಶಸ್ತ್ರದ ಮೊದಲನೆಯ ತೃಚದಲ್ಲಿ ಮೊದಲನೆಯ ಋಕ್ಕು ಅನುಷ್ಟುಪ್ ಛಂದಸ್ಸವು.

ಮುಂದಿನ ಎರಡು ತೃಚಗಳ ಮೊದಲನೆಯ ಋಕ್ಕುಗಳು ಗಾಯತ್ರೀಛಂದಸ್ಕವು. ಮತ್ತು **ಇದಂ ವಸೋ ಸುತಮಂಧಃ** ಎಂಬಲ್ಲಿ ಅನುಚರವಾದ(ಮೊದಲನೆಯ ಋಕ್ಕಿನಿಂದ ಮುಂದಿನ ಋಕ್ಕುಗಳಿಗೆ ಅನುಚರವೆಂದು ಹೆಸರು) ಮೂರು ಋಕ್ಕುಗಳು ಗಾಯತ್ರೀ ಛಂದಸ್ಕವು. ಆದ್ದರಿಂದ ಈಗ ಹೇಳಿದ ಈ ಐದು ಗಾಯತ್ರೀಛಂದಸ್ಕಗಳಾದ ಋಕ್ಕುಗಳಿಂದ ಪವಮಾನಸ್ತೋತ್ರವೆಂಬ ಸಾಮ ಗಾನವನ್ನು ಗಾಯತ್ರೀ ಋಕ್ಕುಗಳನ್ನು ಹೋತೃವು ಅನುಸರಿಸಿ (ಅನುಶಸ್ತ) ಪಠಿಸಿದಂತಾಯಿತು. ಮತ್ತು **ಇಂದ್ರ ನೇದೀಯಃ** ಎಂಬ ಮಂತ್ರವು ಇಂದ್ರನಿಹವ ಪ್ರಗಾಥವು **ಪ್ರ ನೂನಂ ಬ್ರಹ್ಮಣಸ್ಪತಿಃ** ಎಂಬ ಮಂತ್ರವು ಬ್ರಾಹ್ಮಣಸ್ಪತ್ಯಪ್ರಗಾಥವು. ಈ ಎರಡು ಪ್ರಗಾಥಗಳನ್ನು ಹೋತೃವು ಪಠಿಸುವುದರಿಂದ ಪವಮಾನಸ್ತೋತ್ರ (ಸಾಮಗಾನ)ದಲ್ಲಿರುವ ಬೃಹತೀಛಂದಸ್ಸಿನ ಮಂತ್ರ ಗಳನ್ನು ಅನುಸರಿಸಿದಂತಾಯಿತು. ಈರೀತಿ ಪ್ರಗ್ರಥನದಿಂದ (ಪ್ರಗ್ರಥನವೆಂದರೆ ಬೇಕಾದ ಛಂದಸ್ಸಿನ ಋಕ್ಕುಗಳನ್ನು ಇತರ ಋಕ್ಕುಗಳ ಸಹಾಯದಿಂದ ಹೊಂದಿಸುವುದು) ಬೃಹತೀಛಂದಸ್ಸಿನ ಮಂತ್ರಗಳನ್ನು ಹೊಂದಿಸಿ ಪಠಿಸಿದಂತಾಯಿತು. ಎಂದರೆ ಗಾಯತ್ರೀ ಮತ್ತು ಜಗತೀಛಂದಸ್ಸಿನ ಮಂತ್ರಗಳ ಪ್ರಗ್ರಥನವನ್ನು ಈಗ ಹೇಳಿದ್ದಾಯಿತು. ಮುಂದೆ ತ್ರಿಷ್ಟುಪ್‌ಛಂದಸ್ಸಿನ ಅನುಸಂಸನವನ್ನು (ಅನುಶಂಸನವೆಂದರೆ ಅದೇ ಛಂದಸ್ಸಿನ ಋಕ್ಕುಗಳನ್ನು ಅದೇ ಛಂದಸ್ಸಿನ ಮಂತ್ರಗಳಿಂದ ಅನುಸರಿಸಿ ಪಠಿಸು ವುದು) ಹೇಳಲಾಗುವುದು.

**ತಾಸು ವಾ ಏತಾಸು ಬೃಹತೀಷು ಸಾಮಗಾ ರೌರವಯೌಧಾಜ-ಯಾಭ್ಯಾಂ ಪುನರಾದಾಯಂ ಸ್ತುವತೇ ತಸ್ಮಾದೇತೌ ಪ್ರಗಾಥಾ-ವಸ್ತುತೌ ಸಂತೌ ಪುನರಾದಾಯಂ ಶಸ್ಯೇತೇ ತಚ್ಛಸ್ತ್ರೇಣ ಸ್ತೋತ್ರಮನ್ವೈತಿ ।**

**ಅಥ ಪ್ರಸಂಗಾತ್ಪ್ರಥಮಚೋದ್ಯಸ್ಯಾಪಿ ಪರಿಹಾರಂ ದರ್ಶಯನ್ಪುನಃ ಪುನರಾದಾನ-ಸ್ಯಾನುಶಂಸನಂ ದರ್ಶಯತಿ—ಪುನಾನಃ ಸೋಮೇತ್ಯಸ್ಮಿನ್ಪ್ರಗಾಥೇ ಯಾ ಬೃಹತ್ಯಃ ಪ್ರಗ್ರಥ-ನೇನ ಸಂಪಾದಿತಾಸ್ತಾಸ್ವೇವೈತಾಸು ಬೃಹತೀಷು ರೌರವಾಖ್ಯೇನ (ಣ) ಯೌಧಾಜಯಾಖ್ಯೇನ ಚ ಸಾಮ್ನಾ ಪುನಃ ಪುನಃ ಪಠಿತಮೇವ ಪಾದಮಾದಾಯ ಸ್ತುವತೇ । ತಸ್ಮಾದೇತಾವಿಂದ್ರನಿಹವ-ಬ್ರಾಹ್ಮಣಸ್ಪತ್ಯಪ್ರಗಾಥೌ ಸಾಮಗೈರಸ್ತುತಾವಪಿ ಸಂತೌ ಹೋತ್ರಾ ಪುನಃ ಪುನಃ ಪಠಿತಮೇವ ಪಾದಮಾದಾಯ ಶಸ್ಯೇತೇ ॥ ತಥಾ ಚ ಸತ್ಯಯಂ ಹೋತಾ ಸ್ವಕೀಯೇನ ಶಸ್ತ್ರೇಣ ಸ್ತೋತ್ರ-ಮನುಗಚ್ಛತಿ ।**

ಹಿಂದೆ ಹೇಳಿದ ಎರಡು ವಿಶೇಷಸಂಗತಿಗಳಲ್ಲಿ ಮೊದಲನೆಯದಕ್ಕೆ ಪರಿಹಾರವನ್ನು ಸೂಚಿಸುತ್ತಾ ಪುನಃಪುನಃ ಆದಾನದ ಅನುಶಂಸನವನ್ನು ತೋರಿಸುತ್ತಾರೆ — **ಪುನಾನಃ ಸೋಮ** ಎಂಬ ಪ್ರಗಾಥದಲ್ಲಿ ಪ್ರಗ್ರಥನರೂಪದಿಂದ ಹೊಂದಿಸಲಾದ ಬೃಹತೀಛಂದಸ್ಸುಗಳಿರುವವು. ಈ ಬೃಹತೀಛಂದಸ್ಸಿನ ಮಂತ್ರಗಳಲ್ಲಿ ರೌರವ ಮತ್ತು ಯೌಧಾಜಯ ಎಂಬ ಹೆಸರಿನ ಎರಡು ಸಾಮಗಾನಗಳಿಂದ ಪುನಃಪುನಃ ಪಠಿಸಲಾದ ಬೃಹತೀಛಂದಸ್ಸಿನ ಪಾದಗಳಿಂದಲೇ ಸ್ತೋತ್ರಗಾನವನ್ನು ಮಾಡುತ್ತಾರೆ. ಆದ್ದರಿಂದ ಸಾಮಗರು ಇಂದ್ರನಿಹವಬ್ರಾಹ್ಮಣಸ್ಪತ್ಯಗಳೆಂಬ ಎರಡು ಪ್ರಗಾಥಗಳನ್ನು ಗಾನಮಾಡದಿದ್ದರೂ ಹೋತೃವು ಪುನಃಪುನಃ ಪಠಿತವಾದ ಪ್ರಗಾಥಗಳಿಂದಲೆ ಪಾದ ಎಂಬ ಭಾಗಗಳನ್ನು ತೆಗೆದುಕೊಂಡು ಪಠಿಸುವನು. ಹೀಗೆ ಮಾಡುವುದರಿಂದ ಹೋತೃವು ತಾನು ಪಠಿಸ ಬೇಕಾದ ಶಸ್ತ್ರಮಂತ್ರಗಳಿಂದಲೇ ಸಾಮಗರು ಗಾನಮಾಡಿದ ಸ್ತೋತ್ರವನ್ನು ಅನುಸರಿಸಿ ಪಠಿಸಿದಂತಾಯಿತು.

**ಯೇ ಏವ ತ್ರಿಷ್ಟುಭೌ ಧ್ಯಾಯ್ಯೇ ಯತ್ತ್ರೈಷ್ಟುಭಂ ನಿವಿದ್ಧಾನಂ ತಾಭಿರೇವಾಸ್ಯ ತ್ರಿಷ್ಟುಭೋಽನುಶಸ್ತಾ ಭವಂತಿ ॥**

ಇದಾನೀಂ ತ್ರಿಷ್ಟುಭಾಮನುಶಂಸನಂ ದರ್ಶಯತಿ—ಯಥಾ ಸಾಮಿಧೇನೀಷು ಪ್ರಕ್ಷಿಪ್ಯಮಾಣಾನಾಮೃಚಾಂ ಧಾಯ್ಯೇತಿ ಸಂಜ್ಞಾ, ಏವಮತ್ರಾಪಿ । ತಥಾ ಸತ್ಯಗ್ನಿರ್ನೇತಾ ಭಗ ಇವ ಕ್ಷಿತೀನಾಮಿತ್ಯೇಕಾ ಧಾಯ್ಯಾ ತ್ವಂ ಸೋಮಕ್ರತುಭಿರಿತ್ಯಪರಾ । ಯೇ ಏವ ತಿಷ್ಟುಪ್ಛಂದಸ್ಕೇ ಧಾಯ್ಯೇ ವಿದ್ಯೇತೇ ಯಚ್ಚ ತ್ರಿಷ್ಟುಪ್ಛಂದಸ್ಕಂ ಜನಿಷ್ಠಾ ಉಗ್ರ ಇತ್ಯಾದಿಕಂ ನಿವಿದ್ಧಾನಂ ಸೂಕ್ತಂ ॥ ನಿವಿದಾಂ ಪದಾನಿ ಧೀಯಂತೇ ಪ್ರಕ್ಷಿಪ್ಯಂತೇ ಯಸ್ಮಿನ್ಸೂಕ್ತೇ ತನ್ನಿವಿದ್ಧಾನಂ । ತಾಭಿರೇವ ಸೂಕ್ತಗತಾಭಿರ್ಧಾಯ್ಯಾಸಹಿತಾಭಿಸ್ತ್ರಿಷ್ಟುಬ್ಭಿರಸ್ಯ ಹೋತುಃ ಸ್ತೋತ್ರಗತಾಸ್ತ್ರಿಷ್ಟುಭೋಽನುಶಸ್ತಾ ಭವಂತಿ ॥

ಈಗ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳನ್ನು ಅನುಸರಿಸಿ ಹೋತೃವು ಪಠಿಸುವ ಶಸ್ತ್ರಮಂತ್ರಗಳನ್ನು ವಿವರಿಸುವರು—ಹಿಂದೆ ಸಾಮಿಧೇನೀಮಂತ್ರಗಳನ್ನು (ಅಗ್ನಿಮಥನಕಾಲದಲ್ಲಿ ಪಠಿಸುವ ಮಂತ್ರಗಳಿಗೆ ಸಾಮಿಧೇನೀಮಂತ್ರಗಳೆಂದು ಹೆಸರು) ಪಠಿಸುವಾಗ ಆ ಮಂತ್ರಗಳಲ್ಲಿ ನಿರ್ದಿಷ್ಟಸಂಖ್ಯೆಯ ಮಂತ್ರಗಳನ್ನು ಪಡೆಯಬೇಕಾದರೆ ಕೆಲವು ಋಕ್ಕುಗಳನ್ನು ಮಧ್ಯದಲ್ಲಿ ಹೆಚ್ಚಾಗಿ ಸೇರಿಸುವರಷ್ಟೆ. ಇವುಗಳನ್ನು ಧಾಯ್ಯಾಮಂತ್ರಗಳೆಂದು ಕರೆಯುವರು. ಇಲ್ಲಿಯೂ ಹಾಗೆಯೇ. ಆದ್ದರಿಂದ ಇವುಗಳಲ್ಲಿ—**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ** (ಋ. ಸಂ. ೩-೨೦-೪) ಎಂಬುದು ಮೊದಲನೆಯ ಧಾಯ್ಯಾಮಂತ್ರವು; **ತ್ವಂ ಸೋಮ ಕ್ರತುಭಿಃ** (ಋ. ಸಂ. ೧-೯೧-೨) ಎಂಬುದು ಇನ್ನೊಂದು; ಹೀಗಿರುವಾಗ ಇವೆರಡೂ ತ್ರಿಷ್ಟುಪ್‌ಛಂದಸ್ಸಿನ ಧಾಯ್ಯಾಮಂತ್ರಗಳಾದವು ಮತ್ತು **ಜನಿಷ್ಠಾ ಉಗ್ರಃ** (ಋ. ಸಂ. ೧೦-೭೩-೧) ಎಂದು ಮೊದಲಾಗುವ ಒಂದು ನಿವಿದ್ಧಾನಸೂಕ್ತವೂ ಇರುವುದು. **ನಿವಿದ್ಧಾನಸೂಕ್ತವೆಂದರೆ**— ಯಾವ ಸೂಕ್ತದಲ್ಲಿ ನಿವಿತ್‌ಪದಗಳು ಸೇರಿಸಲ್ಪಡುತ್ತವೆಯೋ ಆ ಸೂಕ್ತಕ್ಕೆ ನಿವಿದ್ಧಾನಸೂಕ್ತವೆಂದು ಹೆಸರು. ಈ ನಿವಿದ್ಧಾನಸೂಕ್ತದಲ್ಲಿರುವ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನೂ ಹಿಂದೆ ಹೇಳಿದ ಎರಡು ಧಾಯ್ಯಾಮಂತ್ರಗಳನ್ನೂ (ಇವೂ ತ್ರಿಷ್ಟುಪ್‌ಛಂದಸ್ಸಿನವು) ಹೋತೃವು ಶಸ್ತ್ರಮಂತ್ರಗಳಲ್ಲಿ ಪಠಿಸುವುದರಿಂದ ಸಾಮಗರು ಪಠಿಸುವ ಸಾಮಗಾನಸ್ತೋತ್ರದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳನ್ನು (ಅನುಶಸ್ತ) ಅನುಸರಿಸಿ ಎಂದರೆ ಅನುರೂಪವಾದ ಮಂತ್ರಗಳಿಂದ ಪಠಿಸಿದಂತಾಯಿತು ಎಂದಭಿಪ್ರಾಯವು.

**ಏವಮು ಹಾಸ್ಯೈಷ ತ್ರಿಚ್ಛಂದಾಃ ಪಂಚದಶೋ ಮಾಧ್ಯಂದಿನಃ ಪವಮಾನೋಽನುಶಸ್ತೋ ಭವತಿ ಯ ಏವಂ ವೇದ ॥**

ಉಕ್ತಾರ್ಥವೇದನಂ ಪ್ರಶಂಸತಿ—

ಈರೀತಿ ಮೇಲೆ ಹೇಳಿದ ವಿವರಣೆಗಳನ್ನು ಚೆನ್ನಾಗಿ ಪರಿಶೀಲಿಸಿದರೆ ಮಾಧ್ಯಂದಿನಸವನದಲ್ಲಿ ಸಾಮಗರು ಗಾನಮಾಡುವ ಪಂಚದಶಸ್ತೋಮವೆಂದು ಹೇಳಲ್ಪಡುವ ಪವಮಾನಸ್ತೋತ್ರದಲ್ಲಿರುವ ಮೂರು ವಿಧವಾದ ಛಂದಸ್ಸುಗಳಿಗೆ ಎಂದರೆ ಗಾಯತ್ರೀ, ಬೃಹತೀ, ತ್ರಿಷ್ಟುಪ್ ಎಂಬ ಮೂರುವಿಧ ಛಂದಸ್ಸಿನ ಮಂತ್ರಗಳಿಗೆ ಅನುರೂಪವಾದ (ಅದೇಛಂದಸ್ಸಿನ) ಮಂತ್ರಗಳನ್ನು ಹೋತೃವು ಪಠಿಸಿದನೆಂಬ ವಿಷಯವು ವ್ಯಕ್ತಪಡುವುದು. ಯಾವ ಪುರುಷನು ಈ ವಿಷಯಗಳನ್ನು ತಿಳಿದಿರುವನೋ ಅವನಿಂದ ಉಚ್ಚರಿಸಲ್ಪಡುವ ಮಂತ್ರಗಳು ಅನುರೂಪವಾಗಿರುವವು ಎಂದು ಮುಖ್ಯಾಭಿಪ್ರಾಯವು.

## *English Translation*

### (Brahmanaspati Pragatha. To what Stotras the Indra-Nihava and Brahmanaspati Pragatha belong. The Dhayyas)

He repeats the Pragatha addressed to Brahmanaspati. Led by Brihaspati as Purohita (spiritual guide) the gods conquered the celestial world, and were (also) victorious everywhere in this world. Thus the sacrificer who is led by Brahaspati as his Purohita, conquers the celestial world, and is also victorious everywhere in this world.

These two Pragathas not being accompanied by a chant, are cited with repetition (of the last pada of each verse). They ask, "How it is that these two Pragathas, which are not accompanied by a chant, are recited with repetition (of the last pada of each verse) the rule being that no Shastra verse can be recited with such a repetition if it be not accompanied by a chant?" (The answer is) The Marutvatiya (Shastra) is the recitation for the Pavamana Stotra; they perform this Stotra (in singing) with six verses in the Gayatri, with six in the Brihati, and with three in the Trishtub metres. Thus the Pavamana (Stoma) of the midday libation comprises three metres, and is fiifteen-fold. They ask, "How becomes this Pavamana Stoma celebrated (by a Shastra)?" The two last verses of the Pratipad triplet (8, 57, 1–6) (a tva ratham) are in the Gayatri metre (the first Anushtubh), and also the triplet which forms the sequel (of the Pratipad) is in the Gnyatri metre. Thus the Gayatri verses (of the Pavamana Stotra) become celebrated. By means of these two Pragathas (the Indra-Nihava and Brahmanaspati Pragatha, which are in the Brihati metre) the Brihati verses of the Pavamana Stotra become elebrated.

The sama singers perform this chant with these verses in the Brihati metre by means of the Raurava and Yaudhaja Samans (tunes) repeating thrice (the last pada of each verse). This is the reason that the two Pragathas, though they have no Stoma belonging to them, are recited wifh repeating thrice (the last pada of each verse). Thus the Stotra is in accordance with the Shastra.

Two Dhayyas are in the Trishtubh metre, and also the hymn in which the Nivid is inserted. By these verses (in the Trishtubh metre) are the Trishtubhs of the Stotra celebrated. In this way the Pavamana Stoma comprising three metres. being fifteen-fold, becomes celebrated for him who has such a knowledge.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾದಶಾಧ್ಯಾಯಸ್ಯ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಆರನೆಯ ಖಂಡವು ಸಮಾಪ್ತವಾದುದು.

# ಅಥ ದ್ವಾದಶಾಧ್ಯಾಯೇ ಸಪ್ತಮಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ಧಾಯ್ಯಾಮಂತ್ರಗಳ ಉತ್ಪತ್ತಿಯು, ಅವುಗಳ ಸ್ವಭಾವ ಮತ್ತು ಅರ್ಥವಿವರಣೆ]

---

**ಧಾಯ್ಯಾಃ ಶಂಸತಿ ॥**

**ಮರುತ್ವತೀಯಶಸ್ತ್ರೇ ಪ್ರಕ್ಷೇಪಣೀಯಾ ಋಚೋ ವಿಧತ್ತೇ—ಅಗ್ನಿರ್ನೇತೇತ್ಯೇಕಾ ॥ ತ್ವಂ ಸೋಮ ಕ್ರತುಭಿರಿತಿ ದ್ವಿತೀಯಾ । ಪಿನ್ವಂತ್ಯಪ ಇತಿ ತೃತೀಯಾ । ತಾಃ ಶಂಸೇತ್ ॥**

ಮರುತ್ವತೀಯಶಸ್ತ್ರದಲ್ಲಿ ಮಧ್ಯದಲ್ಲಿ ಸೇರಿಸಲ್ಪಡುವ ಧಾಯ್ಯಾ ಎಂಬ ಕೆಲವು ಋಕ್ಕುಗಳನ್ನು ವಿವರಿಸುವರು—ಇವುಗಳಲ್ಲಿ **ಅಗ್ನಿರ್ನೇತಾ** (ಋ. ಸಂ. ೩-೨೦-೪) ಎಂಬ ಋಕ್ಕು ಮೊದಲನೆಯದು ; **ತ್ವಂ ಸೋಮ ಕ್ರತುಭಿಃ** (ಋ. ಸಂ. ೧-೯೧-೨) ಎಂಬುದು ಎರಡನೆಯದು ; **ಪಿನ್ವಂತ್ಯಪಃ** (ಋ. ಸಂ. ೧- ೬೪-೬) ಎಂಬುದು ಮೂರನೆಯದು.

### ಧಾಯ್ಯಾಭಿರ್ವೈ ಪ್ರಜಾಪತಿರಿಮಾಂಲ್ಲೋಕಾನಧಯದ್ಯಂ ಯಂ ಕಾಮಮಕಾಮಯತ ।

**ತಾಸಾಂ ಪ್ರಶಂಸಾಮಾಹ—ಪುರಾ ಪ್ರಜಾಪತಿರ್ಯಂ ಯಂ ಲೋಕಂ ಕಾಮಿತವಾಂಸ್ತಾನಿಮಾಲ್ಲೋಕಾನುಕ್ತಾಭಿರ್ಧಾಯ್ಯಾಭಿರೇವಾಧಯದಪಿಬತ್ ॥ ಲೋಕಶಬ್ದೇನ ಜಲಂ ॥ ಪಾದವೇದನಾಯಾಂ ಸತಿ ಧಮತೋ ಯಜಮಾನಸ್ಯ (?) ತತ್ಪ್ರಾಪ್ತಿರ್ವಾ ॥**

ಈ ಧಾಯ್ಯಾಮಂತ್ರಗಳನ್ನು ಪ್ರಶಂಸೆಮಾಡುವರು—ಪೂರ್ವದಲ್ಲಿ ಪ್ರಜಾಪತಿಯು ಯಾವ ಯಾವ ಲೋಕಗಳನ್ನು (ಇಲ್ಲಿ ಲೋಕಶಬ್ದಕ್ಕೆ ಜಲವೆಂದರ್ಥವು) ಅಪೇಕ್ಷಿಸಿದನೋ ಅವುಗಳನ್ನು ಈ ಧಾಯ್ಯಾಮಂತ್ರಗಳಿಂದ ಪಾನಮಾಡಿದನು.

### ತಥೈವೈತದ್ಯಜಮಾನೋ ಧಾಯ್ಯಾಭಿರೇವೇಮಾಂಲ್ಲೋಕಾನ್ಧಯತಿ ಯಂ ಯಂ ಕಾಮಂ ಕಾಮಯತೇ ಯ ಏವಂ ವೇದ ಧಾಯ್ಯಾಃ ೩ ॥

**ವೇದನಂ ಪ್ರಶಂಸತಿ—ಯಾ ಏವೋಕ್ತಾಃ ಧಾಯ್ಯಾಃ ಸಂತಿ ತಾಭಿರ್ವೇದಿತಾ ಯಜಮಾನಃ ಕಾಮಿತಂ ಲೋಕಂ ಧಯತಿ । ಅತ್ರ ಧಯತ್ಯಾಭಿರಿತಿ ಧಾಯ್ಯಾಶಬ್ದನಿರ್ವಚನಮರ್ಥಾದ್ದರ್ಶಿತಂ ॥**

ಹಾಗೆಯೇ ಧಾಯ್ಯಾಮಂತ್ರಗಳ ಸ್ವರೂಪವನ್ನು ಯಾವ ಯಜಮಾನನು ತಿಳಿದುಕೊಳ್ಳುವನೋ ಅವನು ಈ ಲೋಕದಲ್ಲಿ ತಾನು ಅಪೇಕ್ಷಿಸುವ ಇಷ್ಟಾರ್ಥಗಳನ್ನೆಲ್ಲಾ ಪಾನಮಾಡುವನು ಎಂದರೆ ಪಡೆದು ಸುಖಿಸುವನು. ಇಲ್ಲಿ **ಯ ಏವಂ ವೇದ ಧಾಯ್ಯಾಃ ೩** ಎಂಬ ಶಬ್ದಗಳೂ ಅದರ ಮುಂದೆ ೩ ಎಂಬ ಪ್ಲುತವೂ ಇರುವುದರಿಂದ ಧಾಯ್ಯಾ ಎಂದರೆ ಏನೆಂಬ ವಿಚಾರವೂ ಅದರ ಸ್ವರೂಪವೂ ಅದನ್ನು ತಿಳಿಯುವ ಬಗೆ ಹೇಗೆ ಎಂಬ ವಿಷಯವೂ ಸೂಚಿತವಾಗುವವು. ಇಲ್ಲಿ ೩ ಎಂಬ ಪ್ಲುತವು ಸಂಶಯವನ್ನು ವ್ಯಕ್ತಪಡಿಸುವುದು.

## ಯತ್ರ ಯತ್ರ ವೈ ದೇವಾ ಯಜ್ಞಸ್ಯ ಛಿದ್ರಂ ನಿರಜಾನಂಸ್ತದ್ಧಾಯ್ಯಾ-ಭಿರಪಿದಧುಸ್ತದ್ಧಾಯ್ಯಾನಾಂ ಧಾಯ್ಯಾತ್ವಂ ।

**ಪ್ರಕಾರಾಂತರೇಣ ಪ್ರಶಂಸಾಮಾಹ—ದೇವಾ ಯದಾ ಯಜ್ಞಸ್ಯ ಚ್ಛಿದ್ರಮಂಗವೈ-ಗುಣ್ಯಂ ಜ್ಞಾತವಂತಸ್ತದಾ ಧಾಯ್ಯಾಭಿರಪಿದಧುರಾಚ್ಛಾದಿತವಂತಸ್ತಸ್ಮಾದ್ಧಧಾತ್ಯಾಭಿರಿತಿ ವ್ಯುತ್ಪತ್ತ್ಯಾ ಧಾಯ್ಯಾತ್ವಂ ಸಂಪನ್ನಂ ॥**

ಧಾಯ್ಯಾ ಎಂಬ ಶಬ್ದವನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು—ದೇವತೆಗಳು ಯಜ್ಞಮಾಡಿದಾಗ ಸಂಭವಿಸಿದ ಲೋಪದೋಷಗಳು ಯಾವವು ಎಂದು ಅವರಿಗೆ ತಿಳಿಯಲಿಲ್ಲ. ಅವುಗಳನ್ನು (ಛಿದ್ರಗಳನ್ನು) ಸರಿಪಡಿಸುವುದಕ್ಕಾಗಿ ಧಾಯ್ಯಾ ಮಂತ್ರಗಳನ್ನು ಉಪಯೋಗಿಸಿ ಸರಿಪಡಿಸಿದರು ಎಂದರೆ ಸಂಭವಿಸಿದ ಛಿದ್ರಗಳನ್ನು ಮುಚ್ಚಿದರು. ಆದ್ದರಿಂದ ಮುಚ್ಚುವುದಕ್ಕಾಗಿ ಈ ಧಾಯ್ಯಾಮಂತ್ರವನ್ನು ಉಪಯೋಗಿಸಿದ್ದರಿಂದ (ಧಾ ಎಂಬ ಧಾತುವಿನಿಂದ, ಎಂದರೆ ಇರಿಸು, ಧರಿಸು, ಮುಚ್ಚು ಎಂಬರ್ಥ ವಿರುವ ಧಾ ಎಂಬ ಧಾತುವಿನಿಂದ ಧಾಯ್ಯಾಶಬ್ದವು ನಿಷ್ಪನ್ನವಾಗಿರುವುದರಿಂದ ಈ ಮಂತ್ರಕ್ಕೆ ಧಾಯ್ಯಾ ಎಂಬ ಹೆಸರು ಬಂದಿತು).

## ಅಚ್ಛಿದ್ರೇಣ ಹಾಸ್ಯ ಯಜ್ಞೇನೇಷ್ಟಂ ಭವತಿ ಯ ಏವಂ ವೇದ ಯದ್ವೇವ ಧಾಯ್ಯಾಃ ೩ ॥

**ವೇದನಂ ಪ್ರಶಂಸತಿ—ಯದ್ವೇವೇತ್ಯತ್ರ ಯೋಽಯಮುಕಾರಃ ಸೋಽಯಂ ಪೂರ್ವೇಣ ಫಲೇನ ಸಮುಚ್ಚಯಾರ್ಥಃ। ನ ಕೇವಲಂ ಪೂರ್ವಂ ಫಲಂ ಕಿಂಚಿತ್ತ್ವಿದಮಪೀತ್ಯರ್ಥಃ। ಅತ್ರ ಪೂರ್ವವತ್ಪ್ಲುತಿಃ ಪ್ರಶಂಸಾದ್ಯೋತನಾರ್ಥಾ ॥**

ಇದರ ಫಲವನ್ನು ಪ್ರಶಂಸೆಮಾಡುವರು. ಯದ್ವೇವಂ ಎಂಬಲ್ಲಿ ಯಾವ ಉಕಾರವಿರುವುದೋ ಅದು ಹಿಂದೆ ಹೇಳಿದ ಫಲವನ್ನು ಸೂಚಿಸುವುದು. ಈ ಮಂತ್ರವನ್ನು ತಿಳಿದಿರುವ ಪುರುಷನು ಹಿಂದೆ ಹೇಳಿದ ಫಲವನ್ನೇ ಅಲ್ಲದೆ ಈಗ ಹೇಳುವ ಫಲವನ್ನೂ ಸಹ ಪಡೆಯುವನು. ೩ ಎಂಬ ಪ್ಲುತಿಯು ಇದರ ಪ್ರಶಂಸೆಯನ್ನು ತಿಳಿಸುವುದಾಗಿದೆ.

## ಸ್ಯೂಮಹೈತದ್ಯಜ್ಞಸ್ಯ ಯದ್ಧಾಯ್ಯಾಸ್ತದ್ಯಥಾ ಸೂಚ್ಯಾ ವಾಸಃ ಸಂದ-ಧದಿಯಾದೇವಮೇವೈತಾಭಿರ್ಯಜ್ಞಸ್ಯ ಛಿದ್ರಂ ಸಂದಧದೇತಿ ಯ ಏವಂ ವೇದ ಯದ್ವೇವ ಧಾಯ್ಯಾಃ ೩ ॥

ಪುನರಪಿ ಪ್ರಕಾರಾಂತರೇಣ ಪ್ರಶಂಸತಿ—

ಹರಿದುಹೋದ ಬಟ್ಟೆಗಳಲ್ಲಿರುವ ಛಿದ್ರಗಳನ್ನು ನಾವು ಯಾವರೀತಿ ಸೂಜಿಯಿಂದ ಹೊಲೆದು ಸರಿಪಡಿಸುತ್ತೇವೆಯೋ ಅದರಂತೆ ಯಜ್ಞಕರ್ಮಾಂಗಗಳಲ್ಲಿ ಸಂಭವಿಸುವ ನ್ಯೂನತೆಗಳನ್ನು ಧಾಯ್ಯಾ ಮಂತ್ರಗಳಿಂದ ಸರಿಪಡಿಸುತ್ತೇವೆ. ಯಾವ ಪುರುಷನು ಈ ವಿಷಯವನ್ನು ತಿಳಿದಿರುವನೋ ಆ ಪುರುಷನು ಮಾಡುವ ಯಜ್ಞದಲ್ಲಿ ಸಂಭವಿಸಬಹುದಾದ ಲೋಪದೋಷಗಳನ್ನು ಸರಿಪಡಿಸಿದಂತಾಗುವುದು.

ತಾನ್ಯ ವಾ ಏತಾನ್ಯುಪಸದಾಮೇವೋಕ್ಥಾನಿ ಯದ್ಧಾಯ್ಯಾ ಅಗ್ನಿ-
ರ್ನೇತೇತ್ಯಾಗ್ನೇಯಿೀ ಪ್ರಥಮೋಪಸತ್ತಸ್ಯಾ ಏತದುಕ್ಥಂ ತ್ವಂ
ಸೋಮಕ್ರತುಭಿರಿತಿ ಸೌಮ್ಯಾ ದ್ವಿತೀಯೋಪಸತ್ತಸ್ಯಾ ಏತದುಕ್ಥಂ
ಪಿನ್ವಂತ್ಯಪ ಇತಿ ವೈಷ್ಣವೀ ತೃತೀಯೋಪಸತ್ತಸ್ಯಾ ಏತದುಕ್ಥಂ ॥

ಪುನರಪಿ ಪ್ರಕಾರಾಂತರೇಣ ಪ್ರಶಂಸತಿ — ಉಪಸದಾಮುರ್ಥವಾದೇಽಗ್ನಿರನೀಕಂ ಸೋಮಃ ಶಲ್ಯೋ ವಿಷ್ಣುಸ್ತೇಜನಮಿತಿ ಪ್ರಸ್ತುತ್ಯಾಗ್ನ್ಯಾದಿದೇವತಾಕಾಸ್ತಿಸ್ರ ಉಪಸದಃ ಸಮಾ-ಮ್ನಾತಾಃ । ಅತ್ರಾಪ್ಯಗ್ನಿರ್ನೇತೇತ್ಯಾದಯಸ್ತತ್ತದ್ದೇವತಾಕಾ ಏವ ಧಾಯ್ಯಾಃ ಶ್ರುತಾಃ । ಏಕೈಕಾ ಧಾಯ್ಯೈಕೈಕಸ್ಯಾ ಉಪಸದಃ ಶಸ್ತ್ರಂ ॥

ಹಿಂದೆ ಹೇಳಿದ ವಿಷಯವನ್ನೇ ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಹಿಂದೆ ಉಪಸದ್ಯಾಗಗಳನ್ನು ಮಾಡಿ ದೇವತೆಗಳು ಅಸುರರನ್ನು ಜಯಿಸಿ ಓಡಿಸಿದರೆಂದು ಹೇಳಲಾಗಿದೆಯಷ್ಟೆ. ಅದರಂತೆ ಈಗಲೂ ಈ ಧಾಯ್ಯಾಮಂತ್ರಗಳನ್ನು ಪಠಿಸುವುದರಿಂದ ಉಪಸತ್ ಎಂಬ ಕಾರ್ಯಕಲಾಪಗಳನ್ನು ಮಾಡಿ ಮುಗಿಸಿದಂತಾಗುವುದು. ಅಗ್ನಿರ್ನೇತಾ (ಋ. ಸಂ.೨-೨೦-೪) ಎಂಬ ಧಾಯ್ಯಾಮಂತ್ರವನ್ನು ಅಗ್ನಿಯನ್ನು ಉದ್ದೇಶಿಸಿ ಪಠಿಸಲಾಗುವುದು. ಈ ಮಂತ್ರಪಠನವೇ ಮೊದಲನೆಯ ಉಪಸತ್; ತ್ವಂ ಸೋಮ ಕ್ರತುಭಿಃ (ಋ. ಸಂ. ೧-೯೧-೨) ಎಂಬ ಸೋಮದೇವತೆಯನ್ನುದ್ದೇಶಿಸಿ ಪಠಿಸುವ ಧಾಯ್ಯಾಮಂತ್ರವು ಎರಡನೆಯ ಉಪಸತ್; ಪಿನ್ವಂತ್ಯಪೋ (ಋ. ಸಂ. ೧-೬೪-೬) ಎಂಬ ವಿಷ್ಣುವನ್ನುದ್ದೇಶಿಸಿ ಪಠಿಸುವ ಧಾಯ್ಯಾಮಂತ್ರವು. ಮೂರನೆಯ ಉಪಸತ್; ಅಗ್ನಿರನೀಕಗ್‌ಂಸೋಮಗ್‌ಂ ಶಲ್ಯಂ ವಿಷ್ಣುಂ ತೇಜನಂ ಎಂದು ತೈತ್ತಿರೀಯಶ್ರುತಿ ಇರುವುದು. ಈರೀತಿ ಅಗ್ನ್ಯಾದಿ ಮೂರು ದೇವತೆಗಳ ಸಂಬಂಧವಾದ ಮೂರು ಉಪಸದಗಳನ್ನು ಹೇಳಿದಂತಾಯಿತು. ಮೇಲೆ ಹೇಳಿದಂತೆ ಒಂದೊಂದು ಧಾಯ್ಯಾಮಂತ್ರವೂ ಒಂದೊಂದು ಉಪಸತ್ತೆಂದು ಭಾವಿಸಲ್ಪಡುವುದು.

ಯಾವಂತಂ ಹ ವೈ ಸೌಮ್ಯೇನಾಧ್ವರೇಣೇಷ್ಟ್ವಾ ಲೋಕಂ ಜಯತಿ
ತಮತ ಏಕೈಕಯೋಪಸದಾ ಜಯತಿ ಯ ಏವಂ ವೇದ
ಯಶ್ಚೈವಂ ವಿದ್ವಾನ್ ಧಾಯ್ಯಾಃ ಶಂಸತಿ ।

ಉಕ್ತಾರ್ಥವೇದನಂ ತತ್ಪೂರ್ವಕಂ ಶಂಸನಂ ಚ ಪ್ರಶಂಸತಿ—ವೇದಿತಾ ಶಂಸಿತಾ ಚೈಕೈಕಧಾಯ್ಯಾರೂಪಯೋಪಸದಾ ಕೃತ್ಸ್ನಂ ಸೋಮಯಾಗಫಲಂ ಪ್ರಾಪ್ನೋತಿ ಉಪಸತ್ಸಂ-ಬಂಧಿಶಸ್ತ್ರತ್ವೇನಾಭಿಹಿತತ್ವಾದುಪಸತ್ತ್ವೋಪಚಾರಃ ॥

ಈಗ ಹೇಳಿದ ಧಾಯ್ಯಾಮಂತ್ರಗಳ ಫಲಾದಿಗಳನ್ನು ಪ್ರಶಂಸೆಮಾಡುವರು. ಈ ಧಾಯ್ಯಾಮಂತ್ರಗಳ ಸ್ವರೂಪವನ್ನೂ ಫಲವನ್ನೂ ತಿಳಿದಿರುವ ಪುರುಷನೂ ಅವುಗಳನ್ನು ಪಠಿಸುವವನೂ ಸಹ ಪ್ರತಿಯೊಂದು ಧಾಯ್ಯಾ ಮಂತ್ರಪಠನದಿಂದ ಒಂದೊಂದು ಉಪಸದವನ್ನು ಆಚರಿಸಿದಂತಾಗಿ ಪೂರ್ತ ಸೋಮಯಾಗದ ಫಲವನ್ನು ಹೊಂದುವನು. ಉಪಸತ್ ಸಂಬಂಧವಾದ ಶಸ್ತ್ರಮಂತ್ರಗಳನ್ನು ಪಠಿಸುವುದರಿಂದ ಇಲ್ಲಿ ಉಪಸತ್ ಎಂಬುದರ ಸಾದೃಶ್ಯವನ್ನು ಔಪಚಾರಿಕವಾಗಿ ಹೇಳಲಾಯಿತು.

## ತದ್ಧೈಕ ಆಹುಸ್ತಾನ್ಮೋ ಮಹ ಇತಿ ಶಂಸೇದೇತಾಂ ವಾವ ವಯಂ ಭರತೇಷು ಶಸ್ಯಮಾನಾಮಭಿವ್ಯಜಾನೀಮ ಇತಿ ವದಂತಃ ॥

ಅತ್ರ ಕಂಚಿತ್ಪೂರ್ವಪಕ್ಷಮುಪನ್ಯಸ್ಯತಿ—ತದ್ಧ ತತ್ರೈವ ತೃತೀಯಧಾಯ್ಯಾವಿಷಯೇ ಕೇಚಿದೇವಮಾಹುಃ ॥ ತಾನ್ಮೋ ಮಹೋ ಮರುತ ಇತ್ಯೇತಾಂ ವೈಷ್ಣವೀಂ ತೃತೀಯಾಂ ಧಾಯ್ಯಾಂ ಶಂಸೇತ್ । ನ ತು ಪಿನ್ವಂತ್ಯಪ ಇತ್ಯೇತಾಂ । ತತ್ರೋಪಪತ್ತಿಂ ಚೈವಮಾಹುಃ ॥ ಬಿಭರ್ತಿ ಫಲಮಿತಿ ಭರೋ ಯಜ್ಞಸ್ತಂ ಭರಂ ತನ್ವಂತೀತಿ ಭರತಾ ಋತ್ವಿಜಸ್ತೇಷು ಪೂರ್ವಕಾಲೀನೇಷು ತಾನ್ಮೋ ಮಹ ಇತ್ಯೇತಾಮೇವರ್ಚಂ ಶಸ್ಯಮಾನಾ ವಯಮಭಿಜಾನೀಮ ಇತಿ ಸ್ವಾನುಭವಮಿತರೇಷಾಮಗ್ರೇ ವದಂತಸ್ತಂ ಪೂರ್ವಪಕ್ಷಮಾಹುಃ ।

ಇಲ್ಲಿ ಕೆಲವರು ಸಂಶಯವನ್ನು ಸೂಚಿಸಿ ಪೂರ್ವಪಕ್ಷವನ್ನು ಈರೀತಿ ವಾದಿಸುವರು—ಇಲ್ಲಿ ಮೇಲೆ ಹೇಳಿದಂತೆ ಮೂರನೇ ಉಪಸತ್ತಿನಲ್ಲಿ ಪಿನ್ವಂತ್ಯಪಃ ಎಂಬ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬಾರದು. ಅದಕ್ಕೆ ಬದಲಾಗಿ ತಾನ್ಮೋ ಮಹೋ ಮರುತಃ (ಋ. ಸಂ. ೨-೨೪-೧೧) ಎಂಬ ಋಕ್ಕನ್ನು ಪಠಿಸಬೇಕು. ಇದು ವಿಷ್ಣುದೇವತಾಕವಾದ ಮಂತ್ರವು. ಇದಕ್ಕೆ ಕಾರಣವನ್ನೂ ಈರೀತಿ ಹೇಳುವರು ಬಿಭರ್ತಿ ಫಲಮಿತಿ ಭರೋ ಯಜ್ಞಃ ಫಲವನ್ನು ಉಂಟುಮಾಡುವುದರಿಂದ ಭರ ಶಬ್ದಕ್ಕೆ ಯಜ್ಞವೆಂದು ಅರ್ಥವು. ತಂ ಭರಂ ತನ್ವಂತೀತಿ ಭರತಾಃ ಋತ್ವಿಜಃ ಆ ಯಜ್ಞವನ್ನು ವಹಿಸಿ ಅದರ ಕರ್ತವ್ಯವನ್ನು ನೆರವೇರಿಸುವರಾದ್ದರಿಂದ ಭರತಾಃ ಎಂದರೆ ಋತ್ವಿಜರು ಎಂದರ್ಥವು. ತಾನ್ಮೋ ಮಹಃ ಎಂದಿರುವುದರಿಂದ ಈ ಋಕ್ಕನ್ನು ಪಠಿಸತಕ್ಕ ನಾವು (ಋತ್ವಿಜರು) ಪೂರ್ವಕಾಲದಿಂದಲೂ ಪ್ರಶಸ್ತಿಯನ್ನು ಪಡೆದಿರುವೆವು. ಎಂದು ತಮ್ಮ ಸ್ವಂತ ಅನುಭವವನ್ನು ತಿಳಿಸಿ ಈ ವಿಧವಾದ ಪೂರ್ವಪಕ್ಷವನ್ನು ಮುಂದಿಡುವರು.

## ತತ್ತನ್ನಾದೃತ್ಯಂ ಯದೇತಾಂ ಶಂಸೇದೀಶ್ವರಃ ಪರ್ಜನ್ಯೋಽವರ್ಷೋಃ ॥

ತಂ ನಿರಾಚಷ್ಟೇ—ತದ್ವಿಷಯಂ ತನ್ಮತಂ ನಾದರಣೀಯಂ ॥ ವಿಪಕ್ಷೇ ಬಾಧಕಂ ದರ್ಶಯತಿ—ಯದಿ ಹೋತಾ ತಾನ್ಮೋ ಮಹ ಇತ್ಯೇತಾಮೃಚಂ ಶಂಸೇತ್ತದಾನೀಂ ಪರ್ಜನ್ಯೋ ಮೇಘಃ ಸ್ವಸ್ವಕಾಲೇಷ್ವವರ್ಷೋರೀಶ್ವರೋ ವೃಷ್ಟಿರಾಹಿತ್ಯಂ ಕರ್ತುಂ ಸಮರ್ಥೋ ಭವತಿ ॥ ವೃಷ್ಟಿರ್ನ ಭವೇತ್ ॥ ವೃಷ್ಟ್ಯನುರೂಪಾಣಾಂ ಪದಾನಾಂ ತಸ್ಯಾಮೃಚ್ಯಭಾವಾದಿತ್ಯರ್ಥಃ ॥

ಮೇಲೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುವರು—ಮೇಲೆ ಹೇಳಿದ ಪೂರ್ವಪಕ್ಷವಾದದಲ್ಲಿ ಹೇಳಿರುವ ವಿಷಯಗಳೆಲ್ಲವೂ ನಂಬಿಕೆಗೆ ಅರ್ಹವಾದವುಗಳಲ್ಲ. ಎಂದರೆ ಆ ವಾದದಲ್ಲಿ ವಿಶ್ವಾಸವನ್ನು ಎಂದರೆ ನಂಬಿಕೆಯನ್ನು ಇಡಬೇಕಾಗಿಲ್ಲ. ಏಕೆಂದರೆ, ಪೂರ್ವಪಕ್ಷದ ವಾದದಂತೆ ಹೋತೃವು ತಾನ್ಮೋ ಮಹಃ ಎಂಬ ಋಕ್ಕನ್ನು ಪಠಿಸಿದ್ದೇ ಆದರೆ ಪರ್ಜನ್ಯದೇವತೆಯು

(ಮೇಘಗಳು) ಆಯಾಕಾಲಗಳಲ್ಲಿ ಸುರಿಸಬೇಕಾದ ಮಳೆಯನ್ನು ಸುರಿಸಲು ಸಾಧ್ಯವಾಗದೆ ವೃಷ್ಟಿಯು ಆಗದೆ ಅನಾವೃಷ್ಟಿಯು ಸಂಭವಿಸಬಹುದು. ಏಕೆಂದರೆ **ತಾನ್ನೋ ಮಹಃ** ಎಂಬ ಋಕ್ಕಿನಲ್ಲಿ ಪರ್ಜನ್ಯ ಅಥವಾ ವೃಷ್ಟಿವಿಷಯವಾದ ಯಾವ ಶಬ್ದಗಳ ಪ್ರಯೋಗವೂ ಇರುವುದಿಲ್ಲ.

> ಪಿನ್ವಂತ್ಯಪ ಇತ್ಯೇವ ಶಂಸೇತ್ ವೃಷ್ಟಿವನಿ ಪದಂ ಮರುತ ಇತಿ ಮಾರುತಮತ್ಯಂ ನ ಮಿಹೇ ವಿನಯಂತೀತಿ ವಿನೀತವದ್ಯದ್ವಿನೀತವತ್ತದ್ವಿಕ್ರಾಂತವದ್ಯದ್ವಿಕ್ರಾಂತವತ್ತದ್ವೈಷ್ಣವಂ ವಾಜಿನಮಿತೀಂದ್ರೋ ವೈ ವಾಜೀ ತಸ್ಯಾಂ ವಾ ಏತಸ್ಯಾಂ ಚತ್ವಾರಿ ಪದಾನಿ ವೃಷ್ಟಿವನಿ ಮಾರುತಂ ವೈಷ್ಣವಮೈಂದ್ರಂ ॥

**ಸಿದ್ಧಾಂತಂ ದರ್ಶಯತಿ—ಇಯಮೇವ ಧಾಯ್ಯಾ ನ ತು ತಾನ್ನೋ ಮಹ ಇತ್ಯಾದಿಕಾಽಪಿ । ವಿಹಿತಾಯಾಮೃಚಿ ವೃಷ್ಟ್ಯನುಕೂಲಸದ್ಭಾವಂ ದರ್ಶಯತಿ—ಅತ್ರ ಪಿನ್ವಂತ್ಯಪ ಇತಿ ಪದಂ ಶ್ರೂಯತೇ ತತ್ಸೇಚನಾರ್ಥಂ ॥ ಪಿವಿ ಸೇಚನ ಇತ್ಯಸ್ಮಾದ್ಧಾತೋರುತ್ಪನ್ನತ್ವಾತ್ । ಅತ ಇದಂ ಪದಂ ವೃಷ್ಟಿವನಿ ವೃಷ್ಟಿಸಂಭಜನಕಾರೀತ್ಯರ್ಥಃ । ಪಿನ್ವನ್ತ್ಯಪೋ ಮರುತ ಇತ್ಯತ್ರ ಮರುತ ಇತಿ ಪದಂ ಮಾರುತಂ ಮರುತಾಂ ವಾಚಕಂ ಪದಂ ತದಪಿ ವೃಷ್ಟ್ಯನುಕೂಲಂ ಪುರೋವಾತಸ್ಯ ವೃಷ್ಟ್ಯಂಗತ್ವಾತ್ ॥ ಅತ್ಯಂ ನ ಮಿಹೇ ವಿನಯಂತಿ ವಾಜಿನಮಿತಿ ತೃತೀಯಪಾದೇ ವಿನೀತವತ್ಪದಮಸ್ತಿ ವಿನಯಂತೀತ್ಯಸ್ಯ ನಯತಿಧಾತುಜನ್ಯತ್ವಾತ್ ॥ ತೇನ ಚ ವಿನಯೇನ ವೃಷ್ಟಿಪಾತನಂ ಲಕ್ಷ್ಯತೇ । ಕಿಂ ಚ ಯದ್ವಿನೀತವತ್ಪದಂ ತದ್ವಿಕ್ರಾಂತವದಿತ್ಯಮುಮರ್ಥಮಾಚಷ್ಟೇ ಧಾತೂನಾಮನೇಕಾರ್ಥತ್ವಾತ್ ॥ ತಥಾ ಸತಿ ಯದ್ವಿಕ್ರಾಂತವತ್ಪದಂ ತದ್ವೈಷ್ಣವಂ ವಿಷ್ಣುಸಂಬಂಧಿ । ಇದಂ ವಿಷ್ಣುರ್ವಿಚಕ್ರಮ ಇತಿ ಶ್ರುತ್ಯಂತರಾತ್ ॥ ತಥಾ ಸತಿ ವೈಷ್ಣವ್ಯಾಸ್ತೃತೀಯಸ್ಯಾ ಉಪಸದಃ ಸಂಬದ್ಧಮಪಿ ಭವತೀತ್ಯರ್ಥಃ ॥ ತಸ್ಮಿನ್ನೇವ ತೃತೀಯಪಾದೇ ವಾಜಿನಮಿತಿ ಪದಂ ವಿದ್ಯತೇ ತತ್ರೇಂದ್ರೋ ವಾಜಿಶಬ್ದಾರ್ಥಃ । ವೃಷ್ಟಿದ್ವಾರಾಽನ್ನಪ್ರದತ್ವೇನ ವಾಜೋಽನ್ನಮಸ್ಯಾಸ್ತೀತಿ ವಕ್ತುಂ ಶಕ್ಯತ್ವಾತ್ ॥ ಉಕ್ತೇನ ಪ್ರಕಾರೇಣ ತಸ್ಯಾಮೇವೈಕಸ್ಯಾಂ ಪಿನ್ವಂತ್ಯಪ ಇತ್ಯೃಚಿ ಚತ್ವಾರಿ ಪದಾನಿ ವೃಷ್ಟೇರನುಕೂಲಾನಿ ವೃಷ್ಟಿವನಿ ಮಾರುತಂ ವೈಷ್ಣವಮೈಂದ್ರಂ ಚೇತಿ । ತಸ್ಮಾದತ್ರ ಪೂರ್ವೋಕ್ತದೋಷೋ ನಾಸ್ತೀತ್ಯರ್ಥಃ ॥**

ಈ ವಿಷಯದಲ್ಲಿ ಸಿದ್ಧಾಂತವನ್ನು ತಿಳಿಸುವರು. ಪಿನ್ವಂತ್ಯಪ ಎಂಬ ಋಕ್ಕನ್ನೇ ಪಠಿಸಬೇಕು. ಇದೇ ಧಾಯ್ಯಾಮಂತ್ರವು. ತಾನ್ನೋ ಮಹಃ ಎಂಬ ಋಕ್ಕಲ್ಲ. ಅದನ್ನು ಪಠಿಸಕೂಡದು. ಪಿನ್ವಂತ್ಯಪ ಎಂಬ ಮಂತ್ರವೇ ವಿಹಿತವಾದುದು. ಇದರಲ್ಲಿ ವೃಷ್ಟಿಗೆ ಸಂಬಂಧಪಟ್ಟ ಪದಗಳು ಇರುವವು. ಹೇಗೆಂದರೆ ಇಲ್ಲಿ **ಪಿನ್ವಂತ್ಯಪಃ** ಎಂಬ ಶಬ್ದಗಳ ಪ್ರಯೋಗವಿದೆ. ಈ ಶಬ್ದಗಳು ಉದಕವನ್ನು ಸೇಚನಮಾಡುತ್ತವೆ (ವೃಷ್ಟಿಯನ್ನು ಸುರಿಸುತ್ತವೆ) ಎಂಬರ್ಥವನ್ನು ಸೂಚಿಸುವವು. **ಪಿವಿ-ಸೇಚನೇ** (ಭ್ವಾದಿ ೫೮೮) ಎಂಬ ಧಾತುಪಾಠದ ಪ್ರಕಾರ ಪಿವಿ ಎಂಬ ಧಾತುವಿಗೆ ಸೇಚನ ಎಂದರೆ ನೀರನ್ನು ಸುರಿಸು ಎಂಬರ್ಥವಿರುವುದು. ಮತ್ತು ಇಲ್ಲಿ ಮರುತಃ ಎಂಬ ಶಬ್ದವೂ ಇದೆ. ಮರುತಃ ಎಂದರೆ ಗಾಳಿಯು ಮಳೆಯನ್ನು ಸುರಿಸು

ವುದಕ್ಕೆ ಸಹಾಯಕವಾಗಿರುವುದು. ಮಳೆ ಹುಯ್ಯುವಾಗ ಗಾಳಿಯೂ ವಿಶೇಷವಾಗಿರುವುದು ಎಲ್ಲರಿಗೂ ತಿಳಿದ ವಿಷಯವೇ. **ಅತ್ಯಂ ನ ಮಿಹೇ ವಿ ನಯಂತಿ ವಾಜಿನಂ** ಎಂದು ಋಕ್ಕಿನ ತೃತೀಯ (ಮೂರನೆಯ) ಪಾದದಲ್ಲಿ ಹೇಳಿದೆ. ಇಲ್ಲಿ **ವಿನೀತವತ್** ಎಂಬ ಪದವಿದೆ. ಈ ಶಬ್ದವು ನಯತಿಧಾತುವಿನಿಂದ ನಿಷ್ಪನ್ನವಾಗಿದೆ. ಈ **ವಿನಯವತ್** ಎಂಬ ಶಬ್ದವು ವೃಷ್ಟಿಪಾತನ–ಮಳೆ ಹುಯ್ಯುವುದು ಎಂಬರ್ಥವನ್ನು ಸೂಚಿಸುತ್ತದೆ. ಮತ್ತು ಈ ವಿನೀತವತ್ ಎಂಬ ಶಬ್ದವು **ವಿಕ್ರಾಂತವತ್** ಎಂಬ ಬೇರೊಂದು ಅರ್ಥವನ್ನೂ ಸೂಚಿಸುವುದು. ಏಕೆಂದರೆ **ಧಾತೂನಾಮನೇಕಾರ್ಥತ್ವಾತ್** ಎಂಬ ವಾಕ್ಯಾನುಸಾರ ಧಾತುಗಳಿಗೆ ಒಂದೇವಿಧವಾದ ಅರ್ಥವಲ್ಲದೆ ಅನೇಕಾರ್ಥಗಳಿರುವವು ಎಂಬುದು ಸ್ಪಷ್ಟವಾಗಿದೆ. ಆದ್ದರಿಂದ **ವಿಕ್ರಾಂತವತ್** ಎಂಬ ಪದವು ವಿಷ್ಣುದೇವತೆಗೆ ಸಂಬಂಧಿಸಿದ್ದು ಎಂದರೆ ವಿಷ್ಣುವಿನ ಗುಣವನ್ನು ತಿಳಿಸುವುದು. **ಇದಂ ವಿಷ್ಣುರ್ವಿಚಕ್ರಮೇ** ಎಂದು ವೇದದಲ್ಲಿ ಬೇರೆಕಡೆ ಹೇಳಿರುವುದು (ಋ. ಸಂ. ೧-೨೨-೧೭). **ವಿಕ್ರಾಂತವತ್** ಮತ್ತು **ವಿಚಕ್ರಮೇ** ಎಂಬ ಶಬ್ದಗಳಿಗೆ ಪರಸ್ಪರ ಸಂಬಂಧ (ಸಾದೃಶ್ಯ)ವಿರುವುದು. ಆದ್ದರಿಂದ ಈ ಋಕ್ಕಿನಲ್ಲಿ ವಿಷ್ಣುಸಂಬಂಧವಿರುವುದು ನ್ಯಾಯವಿದ್ದಂತಾಯಿತು. ಏಕೆಂದರೆ ಮೂರನೆಯ ಉಪಪದದಲ್ಲಿ **ವಿಷ್ಣುಂ ತೇಜನಂ** ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಮತ್ತು ಇದೇ ಪಾದದಲ್ಲಿ **ವಾಜಿನಂ** ಎಂಬ ಶಬ್ದಪ್ರಯೋಗವಿದೆ. ವಾಜಿ ಶಬ್ದಾರ್ಥಕ್ಕೆ ಇಂದ್ರನು ಎಂಬುದು ಯುಕ್ತವು ವಾಜಿ ಎಂದರೆ ಅನ್ನವು. ಇಲ್ಲಿ ಅನ್ನಪ್ರದನಾದ ಇಂದ್ರನನ್ನು **ವಾಜಿನಂ** ಎಂಬ ಶಬ್ದವು ಸೂಚಿಸುವುದು. ಇಂದ್ರನು ವೃಷ್ಟಿಪ್ರದನೂ ಆಗಿರುವನು. ಆದ್ದರಿಂದ **ಪಿನ್ವಂತ್ಯಪಃ** ಎಂಬ ಋಕ್ಕಿನಲ್ಲಿ ವೃಷ್ಟಿಸಂಬಂಧವಾದ ನಾಲ್ಕು ಪದಗಳು–ಎಂದರೆ **ವೃಷ್ಟಿವನಿ, ಮಾರುತಂ, ವೈಷ್ಣವಂ, ಐಂದ್ರಂ** ಎಂಬ ನಾಲ್ಕು ಪದಗಳಿರುವವು. ಆದ್ದರಿಂದ ಪೂರ್ವಪಕ್ಷದಲ್ಲಿರುವ ವಾದವನ್ನು ನಿರಾಕರಿಸಿದಂತಾಯಿತು.

**ಸಾ ವಾ ಏಷಾ ತೃತೀಯಸವನಭಾಜನಾ ಸತೀ ಮಧ್ಯಂದಿನೇ ಶಸ್ಯತೇ ತಸ್ಮಾದ್ಧೇದಂ ಭರತಾನಾಂ ಪಶವಃ ಸಾಯಂಗೋಷ್ಠಾಃ ಸಂತೋ ಮಧ್ಯಂದಿನೇ ಸಂಗವಿನೀಮಾಯಂತಿ ಸೋ ಜಗತೀ ಜಾಗತಾ ಹಿ ಪಶವ ಆತ್ಮಾ ಯಜಮಾನಸ್ಯ ಮಧ್ಯಂದಿನಸ್ತದ್ಯಜಮಾನೇ ಪಶೂನ್ದಧಾತಿ ||**

ಪುನರಪ್ಯೇತಾಮೃಚಂ ಪ್ರಕಾರಾಂತರೇಣ ಪ್ರಶಂಸತಿ—ಯೇಯಂ ಪಿನ್ವಂತ್ಯಪ ಇತ್ಯೃಗಸ್ತಿ ಸೈಷೈವ ತೃತೀಯಸವನಭಾಜನಾ ಜಗತೀಚ್ಛಂದಸ್ಕತ್ವಾಜ್ಜಾಗತಸ್ಯ ತೃತೀಯಸವನಸ್ಯ ಯೋಗ್ಯಾ || ತಾದೃಶೀ ಸತೀ ಹೋತ್ರಾ ಮಧ್ಯಂದಿನೇ ಶಸ್ಯತೇ || ತಸ್ಮಾದೇವ ಕಾರಣಾದಿದಂ ಲೋಕೇ ದೃಶ್ಯತೇ | ಸಾಯಂಕಾಲೇ ಗೋಷ್ಠೇ ವ್ರಜೇ ಯೇ ಪಶವಸ್ತಿಷ್ಠಂತಿ ತೇ ಸಾಯಂಗೋಷ್ಠಾಃ || ಭರತಾನಾಮೃತ್ವಿಜಾಂ ಪಶವಸ್ತಾದೃಶಾಃ ಸಂತೋ ಮಧ್ಯಂದಿನೇ ಸಂಗವಿನೀಂ ಸಂಗವಕಾಲಯೋಗ್ಯಾಂ ಶಾಲಾಮಾಯಂತಿ ಪ್ರಾಪ್ನುವಂತಿ || ಯೇ ಪಶವಃ ಕ್ಷೀರಂ ದುಹಂತಿ ತೇ ಸಾಯಂ ಗೃಹೇ ಸಮಾಗಚ್ಛಂತಿ || ಯೇ ತು ನ ದುಹಂತಿ ತೇ ಸಾಯಂ ವ್ರಜ ಏವ ನಿವಸಂತಿ||ಉಭಯವಿಧಾ ಅಪಿ ತೇ ಮಧ್ಯಾಹ್ನಕಾಲೇ ಘರ್ಮಕಾಲೀನ ಸಂತಾಪನಿವಾರಣಾಯ ನಿರ್ಮಿತಾಂ ಸಂಗವಕಾಲಯೋಗ್ಯಾಂ ಶಾಲಾಮಾಗಚ್ಛಂತಿ ತದೇತನ್ಮಧ್ಯಾನ್ಹಪಾಠನಿಮಿತ್ತಮಿತಿ|| ಕಿಂಚ ಸೋ ಪೂರ್ವೋಕ್ತಾsಪ್ಯೃಗ್ಜಗತೀಛಂದಸ್ಕಾ | ಪಶವಶ್ಚ ಜಗತೀಛಂದಸಾ ಸಹ ಪ್ರಜಾ

**ಯಂತೇ ಮಧ್ಯಂದಿನ ಉತ್ಪನ್ನತ್ವಾತ್ ॥ ಜಾಗತೋ ಮಧ್ಯಂದಿನಕಾಲಶ್ಚ ಯಜಮಾನಸ್ಯಾತ್ಮಾ ॥ ತಥಾ ಸತಿ ತಸ್ಮಿನ್ಕಾಲೇ ಜಗತೀಪಾಠೇನ ಯಜಮಾನೇ ಪಶೂನ್ಸಂಪಾದಯತಿ ॥**

ಹಿಂದೆ ಹೇಳಿದ ಋಕ್ಕನ್ನೇ ಮತ್ತೆ ಪ್ರಕಾರಾಂತರವಾಗಿ ಪ್ರಶಂಸಿಸುವರು— **ಪಿನ್ವಂತ್ಯಪಃ** ಎಂಬ ಹಿಂದೆ ಹೇಳಿದ ಋಕ್ಕು ಜಗತೀಛಂದಸ್ಕವು. ಈ ಛಂದಸ್ಸಿನ ಮಂತ್ರಗಳನ್ನು ತೃತೀಯಸವನದಲ್ಲಿ ಮಾತ್ರ ಉಪಯೋಗಿಸಲು ಅರ್ಹವಾದವುಗಳು. ಹೀಗಿದ್ದರೂ ಇವುಗಳನ್ನು ಹೋತೃವು ಮಾಧ್ಯಂದಿನಸವನದಲ್ಲಿ ಪಠಿಸುವನು. ಆದ್ದರಿಂದ ಲೋಕವ್ಯವಹಾರದಲ್ಲಿ ಈ ಸ್ಥಿತಿಯು ಕಂಡುಬರುವುದು—-ಸಾಯಂಕಾಲದಲ್ಲಿ ಕೊಟ್ಟಿಗೆಯಲ್ಲಿರುವ ಗೋವುಗಳು ಮಧ್ಯಾಹ್ನ ಸಮಯದಲ್ಲಿ ಹಾಲನ್ನು ಕರೆಯುವುದಕ್ಕಾಗಿಯೂ ಮಧ್ಯಾಹ್ನನ ಬಿಸಲಿದ ಬೇಗೆಯಿಂದ ಸುಧಾರಿಸಿಕೊಳ್ಳುವುದಕ್ಕಾಗಿಯೂ ಋತ್ವಿಕ್ಕುಗಳು ಇದಕ್ಕಾಗಿಯೇ ಪ್ರತ್ಯೇಕವಾಗಿ ನಿರ್ಮಿಸಿರುವ ಗುಡಿಸಲುಗಳಿಗೆ ಬರುವವು. ಮುಖ್ಯಾಭಿಪ್ರಾಯವೇನೆಂದರೆ, ಯಾವ ಹಸುಗಳು ಹಾಲನ್ನು ಕೊಡುತ್ತವೆಯೋ ಅವು ಸಾಯಂಕಾಲದಲ್ಲಿ ಮನೆಗೆ ಬರುವವು. ಯಾವ ಹಸುಗಳು ಹಾಲನ್ನು ಕರೆಯುವುದಿಲ್ಲವೋ ಅವು ಸಾಯಂಕಾಲದಲ್ಲಿ ಕೊಟ್ಟಿಗೆಯಲ್ಲಿಯೇ ಇರುವವು. ಈ ಎರಡು ವಿಧವಾದ ಹಸುಗಳು ಎಂದರೆ ಹಾಲನ್ನು ಕರೆಯುವ ಮತ್ತು ಕರೆಯದಿರುವ ಹಸುಗಳು ಮಧ್ಯಾಹ್ನ ಬಿಸಲಿನ ಬೇಗೆಯಲ್ಲಿ ದಣುವಿನ ಪರಿಹಾರಕ್ಕಾಗಿ ತಣ್ಣಗಿರುವ ಗುಡಿಸಲುಗಳಿಗೆ ಬರುವವು. ಇದು ಮಧ್ಯಾಹ್ನ ಕಾಲದಲ್ಲಿ ನಡೆಯುವ ಪದ್ಧತಿಯು. ಹಿಂದೆ ಹೇಳಿದ ಋಕ್ಕು ಜಗತೀಛಂದಸ್ಕವು. ಪಶುಗಳೂ ಸಹ ಜಗತೀಛಂದಸ್ಸಿನಿಂದಲೇ ಉತ್ಪನ್ನವಾಗುತ್ತವೆ. ಇವು ಮಧ್ಯಾಹ್ನಕಾಲದಲ್ಲಿ ಒಟ್ಟಿಗೆ ಸೇರುವುದರಿಂದ ಇವುಗಳಿಗೂ ಜಗತೀಛಂದಸ್ಸುಗಳಿಗೂ ಸಂಬಂಧವಿದ್ದಂತಾಯಿತು. ಮತ್ತು ಮಧ್ಯಾಹ್ನಕಾಲವು ಯಜ್ಞಮಾಡುವ ಯಜಮಾನನ ಆತ್ಮವೆಂದು ಹೇಳಲ್ಪಡುವುದು. ಈ ಕಾರಣಗಳಿಂದ ಮಧ್ಯಾಹ್ನ ಸಮಯದಲ್ಲಿ ಜಗತೀಛಂದಸ್ಸಿನ ಋಕ್ಕುಗಳನ್ನು ಪಠಿಸುವುದರಿಂದ ಯಜಮಾನನಿಗೆ ಪಶುಗಳ ಸಮೃದ್ಧಿಯುಂಟಾಗುವುದು.



## *English Translation*

### (On the origin of the Dayyas, their nature and meaning)

He recites the Dhayyas. Prajapati had (once sucked up from these worlds everything he desired by means of the Dhayyas (from dhe to suck). Thus the sacrificer who has such a knowledge sucks up from these worlds everything he desires. The nature of the Dayyas, is that the gods at a sacrifice wherever they discovered a breach, covered it with a Dhayya ; thence they are so called (from dha to put), The sacrifice of him who has such a knowledge becomes performed without any breach in it.

As to the Dhayyas we sew up with them (every rent in the) sacrifice, juat as we sew np (a rent in) a cloth with a pin that it might become mended. A breach in the sacrifice of him who has such a knowledge becomes thus mended.

As to the Dayyas, they are the recitatious for the Upasads, The verse Agnir neta (3, 20, 4) which is addressed to Agni, is the recitation for the first Upasad ; the verse tvam Soma kratubhih, which is addressed to Soma (1, 21, 2)

is the recitation for the second Upasad; the verse pinvanty apo (1, 64, 6) which is addressed to Vishnu, is the recitation for the third Upasad. Whatever place one may conquer by means of the Soma sacrifice he who having such a knowledge recites the Dayyas, conquers (it only) by the several Upasads.

About this last Dayya some say, the Hotar ought (instead of pinvanty apo) to repeat tan vo maho (2, 34, 11) asserting, "We distinctly know that this verse is repeated (as the third Dayya) among the Bharatas. But this advice is not to be cared for. Should the Hotar repeat that verse (tan vo maho), he would prevent the rain from coming, for Parjanya has power over the rain (but there is no allusion to him in that verse). But if he repeats the verse pinvanty apo where there is a pada referring to rain (the third atyam na mihe), and one referring to the Marutas (the storms accompanying the rain, in the first pada). and the word viniyanti, "they carry off," which refers to Vishnu, whose characteristic feature is said to be vichakrame, i.e. he strode (thrice through the universe), which meaning is also implied in the term vinayanti and (where is further in it) the word vajie (being laden with booty" referring to Indra (then the rain would come). This verse has four padas and (as we have seen) refers to rain, the Marutas, Vishnu and Indra, and though (on account of these allusions just mentioned, and its being in the Jagati metre) properly belonging to the evening libation, it is repeated at the midday libation. Therefore the cattle of the Bharatas which are at their stables at evening (for being milked) repair at noon to a shed erected for giving all the cows shelter (against heat). That verse (pinvanty apo) is in the Jagati metre; cattle are of the Jagati nature; the soul of the sacrificer is the midday. Thus the priest provides cattle for the sacrificer (when he recites this verse as a Dayya at the midday libation).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಏಳನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ಅಷ್ಟಮಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ಮರುತ್ವತೀಯ ಪ್ರಗಾಥವು. ಮರುತ್ವತೀಯಶಸ್ತ್ರದ ನಿವಿತ್ಸೂಕ್ತವು. ನಿವಿತ್ಸೂಕ್ತದ ಮಂತ್ರಗಳನ್ನು ಸರಿಯಾಗಿ ಪಠಿಸದೇ ಇರುವುದರಿಂದ ಹೋತೃವು ಯಜಮಾನನಿಗೆ ಕೆಡಕನ್ನುಂಟುಮಾಡಬಹುದು.]



**ಮರುತ್ವತೀಯಂ ಪ್ರಗಾಥಂ ಶಂಸತಿ ಪಶವೋ ವೈ ಮರುತಃ ಪಶವಃ ಪ್ರಗಾಥಃ ಪಶೂನಾಮುವರುಧ್ಯೈ ।**

ಅಥ ಪ್ರಗಾಥಾಂತರಂ ವಿಧತ್ತೇ-ಯಸ್ಮಿನ್ಪ್ರಗಾಥೇ ಮರುತಃ ಶ್ರೂಯಂತೇ ಸೋಽಯಂ ಮರುತ್ವತೀಯಃ ಪ್ರಗಾಥಃ ಪ್ರ ವ ಇಂದ್ರಾಯ ಬೃಹತೇ ಮರುತೋ ಬ್ರಹ್ಮಾರ್ಚತೇತ್ಯಸ್ಮಿನ್ಪ್ರ-ಗಾಥೇ ಮರುತಃ ಶ್ರೂಯಂತೇ ತಮಿಮಂ ಶಂಸೇತ್ ॥ ಪಶೂನಾಂ ಪ್ರಾವರಣರಾಹಿತ್ಯೇಪ್ಯರಣ್ಯೇ ಸಂಚಾರಕಾಲೇ ವಾಯವೋಽನಗೃಹ್ಯ ನ ತಾನ್ಬಾಧಂತೇ । ತತ್ಸಂಬಂಧಾನ್ಮರುತಾಂ ಪಶುತ್ವಂ ಪ್ರಗಾಥಸ್ಯ ಚ ಪಶುಪ್ರಾಪ್ತಿಹೇತುತ್ವಾತ್ಪಶುತ್ವಮತಃ ಸ ಪ್ರಗಾಥಃ ಪಶುಪ್ರಾಪ್ತ್ಯೈ ಭವತಿ ॥

ಈಗ ಬೇರೆ ಪ್ರಗಾಥವನ್ನು ಪ್ರಶಂಸೆಮಾಡುವರು—ಯಾವ ಪ್ರಗಾಥವಲ್ಲಿ ಮರುದ್ದೇವತೆಗಳು ಸ್ತುತಿಸಲ್ಪಡುವರೋ ಆ ಪ್ರಗಾಥಕ್ಕೆ ಮರುತ್ವತೀಯ ಪ್ರಗಾಥವೆಂದು ಹೆಸರು. ಪ್ರ ವ ಇಂದ್ರಾಯ ಬೃಹತೇ ಮರುತೋ ಬ್ರಹ್ಮಾರ್ಚತ (ಋ. ಸಂ. ೮-೮೯-೩) ಎಂಬ ಪ್ರಗಾಥದಲ್ಲಿ ಮರುದ್ದೇವತೆಗಳನ್ನು ಸ್ತುತಿಸಲಾಗಿರುವುದು. ಏಕೆಂದರೆ ಇದರಲ್ಲಿ ಮರುತಃ ಎಂಬ ಶಬ್ದಪ್ರಯೋಗವಿರುವುದು. ಆದ್ದರಿಂದ ಇದನ್ನು ಪಠಿಸಬೇಕು. ಪ್ರ ವ ಇಂದ್ರಾಯ ಬೃಹತೇ ಎಂಬುದು ಮರುತ್ವತೀಯ ಪ್ರಗಾಥವೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿಯೂ (ಆಶ್ವ. ಶ್ರೌ. ೫-೪-೧೮) ಹೇಳಲ್ಪಟ್ಟಿರುವುದು. ಗೋವು ಮುಂತಾದ ಪಶುಗಳು ಮೇಯುವುದಕ್ಕಾಗಿ ಅರಣ್ಯ ಪ್ರದೇಶಗಳಿಗೆ ಹೋಗುವಾಗ ಅವುಗಳಿಗೆ ಕೊಟ್ಟಿಗೆಯಲ್ಲಿರುವಂತೆ ಯಾವ ಆವರಣವೂ (ಆಚ್ಛಾದನೆಯೂ) ಇರುವುದಿಲ್ಲ. ಆದರೂ ವಾಯುವು (ಗಾಳಿಯು) ಅವುಗಳಿಗೆ ತೊಂದರೆಯನ್ನುಂಟುಮಾಡುವುದಿಲ್ಲ. ಆದ್ದರಿಂದ ಮರುದ್ದೇವತೆಗಳು ಪಶುಗಳ ಅಭಿಮಾನಿಗಳೆಂದು ಹೇಳಬೇಕು. ಪ್ರಗಾಥಮಂತ್ರಪಠನದಿಂದಲೂ ಪಶುಗಳು ಲಭಿಸುವವು. ಆದ್ದರಿಂದ ಪ್ರಗಾಥವನ್ನು ಪಠಿಸುವುದರಿಂದ ಯಜಮಾನನಿಗೆ ಪಶುಸಮೃದ್ಧಿಯುಂಟಾಗುವುದು.

**ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ ಸೂಕ್ತಂ ಶಂಸತಿ ತದ್ವಾ ಏತ-ದ್ಯಜಮಾನಜನನಮೇವ ಸೂಕ್ತಂ ಯಜಮಾನಂ ಹ ವಾ ಏತೇನ ಯಜ್ಞಾದ್ದೇವಯೋನ್ಯೈ ಪ್ರಜನಯತಿ ॥**

**ಅಥ ನಿವಿದ್ಧಾನೀಯಂ ಸೂಕ್ತಂ ವಿಧತ್ತೇ—ಹೋತಾ ಜನಿಷ್ಟಾ ಇತ್ಯಾದಿ ಸೂಕ್ತಂ ಶಂಸೇತ್ತದೇತತ್ಸೂಕ್ತಂ ಯಜಮಾನಜನನಮೇವ ॥ ಕಥಮಿತಿ ತದುಚ್ಯತೇ । ಏತೇನ ಸೂಕ್ತೇನ ಹೋತಾ ಯಜ್ಞಾದಸುಷ್ಮೀಯಮಾನಾದ್ದೇವಯೋನ್ಯೈ ದೇವಲೋಕಸ್ಥಾನಾರ್ಥಂ ಯಜಮಾನಂ ಪ್ರಜನಯತಿ ॥ ತಸ್ಮಾದ್ಯಜಮಾನಜನನತ್ವಂ ॥**

ಈಗ ನಿವಿದ್ಧಾನೀಯ ಸೂಕ್ತವನ್ನು ಹೇಳುವರು—ಜನಿಷ್ಟಾ ಉಗ್ರಃ ಸಹಸೇ ತುರಾಯೇತಿ (ಋ. ಸಂ. ೧೦-೭೩-೧) ಎಂಬ ಸೂಕ್ತವನ್ನು ಹೋತೃವು ಪಠಿಸುವನು. ಈ ಸೂಕ್ತವು ಯಜ್ಞಮಾಡುವ ಯಜಮಾನನ ಪುನರ್ಜನ್ಮಕ್ಕೆ ಎಂದರೆ ದೇವಯೋನಿಯಲ್ಲಿ ಜನಿಸುವುದಕ್ಕೆ ಕಾರಣವೆಂದು ಹೇಳಲ್ಪಡುವುದು. ಏಕೆಂದರೆ ಈ ಸೂಕ್ತಪಠನದಿಂದ ಯಜಮಾನನಿಗೆ ದೇವಲೋಕದಲ್ಲಿ ನಿರ್ದಿಷ್ಟವಾದ ಸ್ಥಾನವು ಲಭಿಸುವುದು. ಇದನ್ನು ದೇವಯೋನಿಯಲ್ಲಿ ಯಜಮಾನನು ಜನನವಾದಂತೆಯೇ ಭಾವಿಸಲಾಗುವುದು.

### ತತ್ಸಂಜಯಂ ಭವತಿ ಸಂ ಚ ಜಯತಿ ವಿ ಚ ಜಯತೇ ।

**ತೇನ ರೂಪೇಣ ಪ್ರಶಸ್ಯ ಪುನಃ ಪ್ರಕಾರಾಂತರೇಣ ಪ್ರಶಂಸತಿ—ಯಸ್ಮಾದೇತೇನ ಸೂಕ್ತೇನ ಸಂಯುಜ್ಯಾಪಿ ಶತ್ರೂನ್ಯಜಮಾನೋ ಜಯತಿ ವಿಯುಜ್ಯಾಪಿ ಜಯತೇ ತಸ್ಮಾತ್ಸೂಕ್ತಂ ಸಂಜಯಂ ಸಮೀಚೀನೋ ಜಯೋ ಯೇನ ಸೂಕ್ತೇನೇತಿ ಸಮಾಸಃ ॥**

ಹಿಂದೆ ಹೇಳಿದ ವಿಷಯವನ್ನೇ ಪ್ರಕಾರಾಂತರವಾಗಿ ಪ್ರಶಂಸೆಮಾಡುವರು—ಈ ಸೂಕ್ತವನ್ನು ಪಠಿಸುವುದರಿಂದ ಯಜಮಾನನು ತನ್ನ ಶತ್ರುಗಳನ್ನು ಜಯಿಸಲು ಸಮರ್ಥನಾಗುವನು. ಇದನ್ನು ಸೇರಿಸದೇ ಪಠಿಸಿದರೂ ಜಯವನ್ನೇ ಪಡೆಯುವನು. ಆದ್ದರಿಂದ ಇದಕ್ಕೆ ಸಂಜಯವೆಂದು ಹೆಸರು. ಈ ಸೂಕ್ತದಿಂದ ಸಮೀಚೀನವಾದ ಜಯವನ್ನು ಪಡೆಯುವುದರಿಂದ ಇದಕ್ಕೆ ಸಂಜಯವೆಂಬ ಹೆಸರು ಬಂದಿದೆ.

### ಏತದ್ವೈ ಗೌರಿವೀತಂ ಗೌರಿವೀತಿರ್ಹ ವೈ ಶಾಕ್ತ್ಯೋ ನೇದಿಷ್ಠಂ ಸ್ವರ್ಗಸ್ಯ ಲೋಕಸ್ಯಾಗಚ್ಛತ್ಸ ಏತತ್ಸೂಕ್ತಮಪಶ್ಯತ್ತೇನ ಸ್ವರ್ಗಂ ಲೋಕಮಜಯತ್ತಥೈವೈತದ್ಯಜಮಾನ ಏತೇನ ಸೂಕ್ತೇನ ಸ್ವರ್ಗಂ ಲೋಕಂ ಜಯತಿ ।

**ಪುನರಪಿ ಪ್ರಕಾರಾಂತರೇಣ ಪ್ರಶಂಸತಿ—ಶಕ್ತಿನಾಮಕಸ್ಯ ಮಹರ್ಷೇಃ ಕುಲೇ ಜಾತಃ ಶಾಕ್ತ್ಯೋ ಗೌರಿವೀತಿನಾಮ ಮಹರ್ಷಿಃ । ಸ ತು ಸ್ವರ್ಗಸ್ಯ ಸಮೀಪಂ ಗತ್ವಾ ಪ್ರವೇಷ್ಟುಮಶಕ್ತಃ ಸಂಸ್ತತ್ಸಾಧನತ್ವೇನೈತತ್ಸೂಕ್ತಂ ದೃಷ್ಟ್ವಾ ತೇನ ಸ್ವರ್ಗಂ ಪ್ರಾವಿಶತ್ ॥ ತಸ್ಮಾದೇತತ್ಸೂಕ್ತಂ ಮಹರ್ಷಿನಾಮ್ನಾ ಗೌರಿವೀತಮಿತ್ಯುಚ್ಯತೇ ॥ ಯಥಾ ಮಹರ್ಷಿಸ್ತಥಾ ಯಜಮಾನೋಽಪ್ಯೇತೇನ ಸೂಕ್ತೇನ ಸ್ವರ್ಗಂ ಪ್ರಾಪ್ನೋತಿ ।**

ಅದನ್ನೇ ಇನ್ನೊಂದುವಿಧವಾಗಿ ಪ್ರಶಂಸೆಮಾಡುವರು—ಪೂರ್ವದಲ್ಲಿ ಶಕ್ತಿ ಎಂಬ ಹೆಸರಿನ ಒಬ್ಬ ಋಷಿಯಿದ್ದನು. ಅವನ ಪುತ್ರನಿಗೆ ಶಾಕ್ತ್ಯನೆಂದು ಹೆಸರು. ಅವನ ಕುಲದಲ್ಲಿ ಹುಟ್ಟಿದ ಒಬ್ಬ ಮಹರ್ಷಿಗೆ ಗೌರಿವೀತಿ ಎಂದು ಹೆಸರು. ಅವನು

ಸ್ವರ್ಗಲೋಕಕ್ಕೆ ಹೋಗುವಾಗ ಅದನ್ನು ಪ್ರವೇಶಿಸಲು ಅವನಿಗೆ ಸಾಧ್ಯವಾಗಲಿಲ್ಲ. ಆಗ ಅವನು ಸ್ವರ್ಗಪ್ರವೇಶಕ್ಕೆ ಏನಾದರೂ ಒಂದು ಸಾಧನವನ್ನು ಕಂಡುಹಿಡಿಯಲು ಯೋಚಿಸುತ್ತಿರುವಾಗ ಈ ಸೂಕ್ತವು ಅವನ ದೃಷ್ಟಿಗೆ ಗೋಚರವಾಯಿತು. ಅದರಿಂದ ಅವನು ಸ್ವರ್ಗವನ್ನು ಪ್ರವೇಶಿಸಿದನು. ಆದ್ದರಿಂದ ಈ ಸೂಕ್ತಕ್ಕೆ ಆ ಮಹರ್ಷಿಯ ಹೆಸರೇ ಪ್ರಸಿದ್ಧವಾಗಿ ಈ ಸೂಕ್ತವು ಗೌರಿವೀತ ಸೂಕ್ತವೆಂದು (ಋ. ಸಂ. ೧೦-೭೩-೧ ರಿಂದ ೧೧) ಕರೆಯಲ್ಪಡುತ್ತದೆ ಹಿಂದೆ ಆ ಮಹರ್ಷಿಯು ಸ್ವರ್ಗಲೋಕವನ್ನು ಪಡೆದಂತೆಯೇ ಯಜ್ಞಮಾಡುವ ಯಜಮಾನನೂ ಈ ಸೂಕ್ತಪಠನದಿಂದ ಸ್ವರ್ಗಲೋಕವನ್ನು ಪಡೆಯುವನು.

**ತಸ್ಯಾರ್ಧಾಃ ಶಸ್ತ್ವಾರ್ಧಾಃ ಪರಿಶಿಷ್ಯ ಮಧ್ಯೇ ನಿವಿದಂ ದಧಾತಿ ॥**

ತಸ್ಮಿನ್ಸೂಕ್ತೇ ನಿವಿತ್ಪ್ರಕ್ಷೇಪಸ್ಯ ಸ್ಥಾನಂ ವಿಧತ್ತೇ—ತಸ್ಯ ಸೂಕ್ತಸ್ಯ ಸಂಬಂಧಿನೀಷ್ವೃಕ್ಷು ಭಾಗದ್ವಯಂ ಕೃತ್ವಾ ದ್ವಯೋರ್ಭಾಗಯೋರ್ಮಧ್ಯ ಇಂದ್ರೋ ಮರುತ್ವಾನಿತ್ಯೇತಾಂ ನಿವಿದಂ ಶಂಸೇತ್ ॥ ನನ್ವಸ್ಮಿನ್ನೇಕಾದಶರ್ಚೇ ಸೂಕ್ತೇ ಸಮಭಾಗೋ ನ ಸಂಭವತೀತಿ ಚೇತ್ತರ್ಹಿ ಪ್ರಥಮಭಾಗೇ ಕಾಂಚಿದಧಿಕಾಂ ಶಸ್ತ್ವಾ ತತ ಊರ್ಧ್ವಂ ಪ್ರಕ್ಷಿಪೇತ್ ॥ ಏಕಾಂ ಭೂಯಸೀಷು ಶಸ್ತ್ವೇತ್ಯುಕ್ತತ್ವಾತ್ ॥

ಈ ಸೂಕ್ತದಲ್ಲಿ ನಿವಿತ್‌ಪ್ರಕ್ಷೇಪಣಸ್ಥಾನವನ್ನು ವಿವರಿಸುವರು—ಈ ಸೂಕ್ತದ ಋಕ್ಕುಗಳನ್ನು ಎರಡು ಸಮಭಾಗಮಾಡಿ ಮಧ್ಯದಲ್ಲಿ ಈ ಇಂದ್ರೋ ಮರುತ್ವಾನ್ ಎಂಬ ನಿವಿತ್ತನ್ನು ಸೇರಿಸಬೇಕು. ಆದರೆ ಈ ಸೂಕ್ತದಲ್ಲಿ ಅಸಮಸಂಖ್ಯೆಯ ಎಂದರೆ ಹನ್ನೊಂದು ಋಕ್ಕುಗಳಿರುವುದರಿಂದ ಇದನ್ನು ಸಮನಾಗಿ ಭಾಗಿಸಲು ಸಾಧ್ಯವಿಲ್ಲ. ಆದ್ದರಿಂದ ಅರ್ಧಕ್ಕಿಂತ ಒಂದು ಹೆಚ್ಚಿನ ಎಂದರೆ ಆರು ಋಕ್ಕುಗಳನ್ನು ಪಠಿಸಿದನಂತರ ಈ ನಿವಿತ್ತನ್ನು ಸೇರಿಸಿ ಪಠಿಸಿ ಅನಂತರ ಉಳಿದ ಐದು ಋಕ್ಕುಗಳನ್ನು ಪಠಿಸಿ ಸೂಕ್ತವನ್ನು ಮುಗಿಸಬೇಕು. ಈ ವಿಚಾರದಲ್ಲಿ **ಏಕಭೂಯಸೋಃ ಶಸ್ತ್ವಾ** ಎಂದು ವಿಧಿವಾಕ್ಯವಿರುವುದು. ಎಂದರೆ ಅಸಮಸಂಖ್ಯೆಯ ಸೂಕ್ತಗಳಲ್ಲಿ ಅರ್ಧಕ್ಕಿಂದ ಒಂದು ಋಕ್ಕನ್ನು ಹೆಚ್ಚಾಗಿ ಪಠಿಸಿ ಅನಂತರ ನಿವಿತ್ಪ್ರಕ್ಷೇಪಣವನ್ನು ಮಾಡಬೇಕು ಎಂದು ವಿಧಿಯಿರುವುದು.

**ಸ್ವರ್ಗಸ್ಯ ಹೈಷ ಲೋಕಸ್ಯ ರೋಹೋ ಯನ್ನಿವಿತ್ ಸ್ವರ್ಗಸ್ಯ ಹೈತಲ್ಲೋಕಸ್ಯಾಕ್ರಮಣಂ ಯನ್ನಿವಿತ್ತಾಮಾಕ್ರಮಮಾಣ ಇವ ಶಂಸೇದುಪೈವ ಯಜಮಾನಂ ನಿಗೃಹ್ಣೀತ ಯೋಽಸ್ಯ ಪ್ರಿಯಃ ಸ್ಯಾದಿತಿ ನು ಸ್ವರ್ಗಕಾಮಸ್ಯ ॥**

ನಿವಿದಂ ಪ್ರಶಂಸತಿ—ರೋಹ ಆರೋಹಣಹೇತುರಿತ್ಯರ್ಥಃ ॥ ತತ್ರ ಸ್ವರವಿಶೇಷಂ ವಿಧತ್ತೇ—ಯೇಯಂ ನಿವಿದಸ್ತಿ ತದೇತತ್ಸ್ವರ್ಗಸ್ಯಾಕ್ರಮಣಂ ಸೋಪಾನಸ್ಥಾನೀಯಂ ತಸ್ಮಾದ್ಯಥಾ ಲೋಕೇ ಸೋಪಾನಾರೋಹಣೇ ಶ್ರಮೇಣ ಪುನಃ ಪುನಃ ಶ್ವಾಸಂ ಕರೋತಿ ತದನುಕಾರಿಣಂ ಸ್ವರಂ ಕೃತ್ವಾ ತಥೈವ ಪಠೇತ್ ॥ ಏವಂ ಪಾಠೇ ಸತ್ಯಸ್ಯ ಯಜಮಾನಸ್ಯ ಯಃ ಪುಮಾನ್ಪ್ರಿಯಃ ಸ್ಯಾತ್ಸ ಪುಮಾನೇತಂ ಯಜಮಾನಮುಪೈವ ಸಮೀಪ ಏವ ನಿಗೃಹ್ಣೀತ ಸ್ವೀಕುರ್ಯಾತ್ ॥ ಇತಿ ನ್ವೇಷ ಏವ ಪ್ರಯೋಗಃ ಸ್ವರ್ಗಕಾಮಸ್ಯಾವಗಂತವ್ಯಃ । ವಕ್ಷ್ಯಮಾಣಪ್ರಯೋಗೇಣ ಸಾಂಕರ್ಯಪರಿಹಾರಾಯ ಸ್ವರ್ಗಕಾಮಸ್ಯೇತ್ಯುಕ್ತಿಃ ॥

ನಿವಿನ್ಮಂತ್ರವನ್ನು ಪ್ರಶಂಸೆಮಾಡುವರು— ರೋಹಃ ಎಂದರೆ ಆರೋಹಣ, ಮೇಲೇರುವುದು. ಈ ನಿವಿತ್‌ಮಂತ್ರಗಳ ಸ್ವರವಿಶೇಷವನ್ನು ಹೇಳುವರು. ನಿವಿತ್ ಎಂಬ ಯಾವ ಮಂತ್ರವಿರುವುದೋ ಅದು ಸ್ವರ್ಗದ ಆಕ್ರಮಣವು ಎಂದರೆ ಇದು ಸ್ವರ್ಗಕ್ಕೆ ಹತ್ತುವ ಮೆಟ್ಟಲಿನಂತೆ ಇರುವುದು. ಮೆಟ್ಟಲುಗಳನ್ನು ಹತ್ತುವಾಗ ಜನರು ಯಾವ ಪ್ರಕಾರವಾಗಿ ಮಧ್ಯ ಮಧ್ಯ ಉಸಿರನ್ನು ಬಿಡುತ್ತಾ ಆಯಾಸದಿಂದ ಏರುವರೋ ಅದರಂತೆ ಈ ನಿವಿನ್ಮಂತ್ರಗಳನ್ನು ಪಠಿಸುವಾಗಲೂ ಮಧ್ಯ ಮಧ್ಯ ಉಸಿರನ್ನು ಬಿಡುತ್ತಾ ಅದಕ್ಕೆ ಅನುಸಾರವಾಗಿ ಸ್ವರವನ್ನು ಸೇರಿಸಿ ಪಠಿಸಬೇಕು. ಹೀಗೆ ಪಠಿಸುವುದಾದರೆ ಯಜಮಾನನಿಗೆ ಪ್ರಿಯನಾದ ಪುರುಷನು ಸಮೀಪದಲ್ಲಿಯೇ ಇದ್ದು ಅವನನ್ನು ಬೀಳದಂತೆ ಹಿಡಿದುಕೊಳ್ಳುವನು. ಸ್ವರ್ಗಕ್ಕೆ ಹತ್ತಿಹೋಗುವಾಗ ಆಯಾಸದಲ್ಲಿ ಯಾವರೀತಿ ಸಮೀಪದಲ್ಲಿರುವವರು ಯಜಮಾನನಿಗೆ ಉಪಚರಿಸುವರೋ ಅದರಂತೆ ಎಂದು ಭಾವಿಸಿ ಇಲ್ಲಿಯೂ ಹಾಗೆ ಮಾಡಬೇಕು. ಇಲ್ಲಿ ಸ್ವರ್ಗಕಾಮಸ್ಯ ಎಂದು ಹೇಳಿರುವುದನ್ನು ಮುಂದಿನವಾಕ್ಯದಲ್ಲಿ ವಿವರಿಸುವರು.

**ಅಥಾಭಿಚರತೋ ಯಃ ಕಾಮಯೇತ ಕ್ಷತ್ರೇಣ ವಿಶಂ ಹನ್ಯಾಮಿತಿ ತ್ರಿಸ್ತರ್ಹಿ ನಿವಿದಾ ಸೂಕ್ತಂ ವಿಶಂಸೇತ್ ಕ್ಷತ್ರಂ ವೈ ನಿವಿದ್ವಿಟ್ ಸೂಕ್ತಂ ಕ್ಷತ್ರೇಣೈವ ತದ್ವಿಶಂ ಹಂತಿ ॥**

**ಅಭಿಚಾರಪ್ರಯೋಗಂ ವಿಧತ್ತೇ—ಕ್ಷತ್ರಿಯಜಾತ್ಯಾ ವೈಶ್ಯಜಾತೇರ್ವಧಂ ಕಾಮಯಮಾನೋ ಯಜಮಾನೋ ನಿವಿದಾ ಸೂಕ್ತಂ ತ್ರಿರ್ವಿಶಂಸೇತ್ ॥ ಏತದುಕ್ತಂ ಭವತಿ—ಸೂಕ್ತಸ್ಯಾಽಽದೌ ಮಧ್ಯೇ ಚಾಂತೇ ಚ ನಿವಿದಂ ದಧ್ಯಾತ್ ॥ ತದುಕ್ತಂ ಸೂಕ್ತವಿಚ್ಛೇದಕಂ ಶಂಸನಮಿತಿ । ನಿವಿದಃ ಕ್ಷತ್ರಿಯಜಾತಿತ್ವಂ ಸೂಕ್ತಸ್ಯ ವೈಶ್ಯಜಾತಿತ್ವಂ ಪೂರ್ವಮೇವಾಽಽಮ್ನಾತಂ । ಅತ ಉಕ್ತಶಂಸನೇನ ಕ್ಷತ್ರಿಯಜಾತ್ಯಾ ವೈಶ್ಯಜಾತಿಂ ಹಂತಿ ॥ ಸೋಽಯಮೇಕೋಽಭಿಚಾರಪ್ರಕಾರಃ ।**

ಅಭಿಚಾರಪ್ರಯೋಗವನ್ನು (ಕೆಡಕುಮಾಡುವುದನ್ನು) ವಿವರಿಸುವರು—ಹೋತೃವು ಕ್ಷತ್ರಿಯನ ಮೂಲಕ ವೈಶ್ಯನನ್ನು ನಾಶಮಾಡಬೇಕೆಂಬ ಮನಸ್ಸುಳ್ಳವನಾಗಿದ್ದರೆ, ಆಗ ನಿವಿನ್ಮಂತ್ರವನ್ನು ಮೂರು ಭಾಗಮಾಡಿ ಬೇರೆಬೇರೆ ಕಡೆಗಳಲ್ಲಿ ಸೇರಿಸಿ ಪಠಿಸಬೇಕು. ಏಕೆಂದರೆ ನಿವಿತ್‌ಮಂತ್ರವು ಕ್ಷತ್ರಸ್ವರೂಪವುಳ್ಳದ್ದು ಎಂದರೆ ಕ್ಷತ್ರಿಯನಂತೆ (ರಾಜನಂತೆ) ಶಕ್ತಿಸಾಮರ್ಥ್ಯವುಳ್ಳದ್ದು. ಇಂತಹ ಸಾಮರ್ಥ್ಯವಿರುವ ಕ್ಷತ್ರಿಯನಿಂದ ವೈಶ್ಯನನ್ನು ನಾಶಮಾಡಲು ಸಾಧ್ಯವಾಗುವುದು. ನಿವಿತ್‌ಮಂತ್ರಗಳನ್ನು ಮೂರು ಭಾಗಮಾಡಿ ಪಠಿಸಬೇಕೆಂದು ಹೇಳಿದೆಯಷ್ಟೆ. ಹೇಗೆಂದರೆ ಸೂಕ್ತದ ಆದಿಯಲ್ಲಿ ಒಂದು ನಿವಿನ್ಮಂತ್ರದ ಭಾಗವನ್ನೂ ಮಧ್ಯದಲ್ಲಿ ಎರಡನೆಯ ಭಾಗವನ್ನೂ ಕೊನೆಯಲ್ಲಿ ಮೂರನೆಯ ಭಾಗವನ್ನೂ ಸೇರಿಸಿ ಪಠಿಸಬೇಕು. ಆದ್ದರಿಂದ ಸೂಕ್ತವನ್ನು ಮೂರು ಭಾಗವನ್ನಾಗಿ ಮಾಡಬೇಕು. **ನಿವಿತ್** ಕ್ಷತ್ರಿಯಜಾತಿಗೆ ಸೇರಿದ್ದು ಎಂದರೆ ಕ್ಷತ್ರಿಯನಿಗೆ (ರಾಜನಿಗೆ) ಇರುವ ಶಕ್ತಿ ಸಾಮರ್ಥ್ಯಗಳು ಅದಕ್ಕೆ ಇರುವವು. ಸೂಕ್ತವು ವೈಶ್ಯಜಾತಿಗೆ ಸೇರಿದುದು. ಆದ್ದರಿಂದ ಕ್ಷತ್ರಿಯಜಾತಿಯ ಶಕ್ತಿಸಾಮರ್ಥ್ಯಗಳಿಂದ ವೈಶ್ಯಜಾತಿಯನ್ನು ನಿಗ್ರಹಿಸಲು ಸಾಧ್ಯವಾಗುವುದು.

**ಯಃ ಕಾಮಯೇತ ವಿಶಾ ಕ್ಷತ್ರಂ ಹನ್ಯಾಮಿತಿ ತ್ರಿಸ್ತರ್ಹಿ ಸೂಕ್ತೇನ ನಿವಿದಂ ವಿಶಂಸೇತ್ ಕ್ಷತ್ರಂ ವೈ ನಿವಿದ್ವಿಟ್‌ಸೂಕ್ತಂ ವಿಶೈವ ತತ್ಕ್ಷತ್ರಂ ಹಂತಿ ॥**

ಅಥೈತದ್ವಿಪರ್ಯಯೇಣಾಭಿಚಾರಂ ವಿಧತ್ತೇ—ನಿವಿತ್ಪದಾನಾಮಾದೌ ಮಧ್ಯೇ ಚಾಂತೇ ಚ ಸೂಕ್ತಂ ಪಠೇತ್ತದೇತನ್ನಿವಿದ್ವಿಚ್ಛೇದರೂಪಂ ಶಂಸನಂ ।

ಮೇಲೆ ಹೇಳಿದ ಅಭಿಚಾರಕಾರ್ಯವನ್ನು ವ್ಯತ್ಯಸ್ತವಾಗಿ ಮಾಡುವ ವಿಧಾನವನ್ನು ವಿವರಿಸುವರು. ಹೋತೃವು ವೈಶ್ಯನ ಮೂಲಕ ಕ್ಷತ್ರಿಯನಿಗೆ ಹಾನಿಯನ್ನು ಬಯಸಿದರೆ ಆಗ ಹೋತೃವು ನಿವಿನ್ಮಂತ್ರಗಳನ್ನು ಮೂರು ವಿಭಾಗವನ್ನಾಗಿ ಮಾಡಿ ಮೊದಲು, ಮಧ್ಯ, ಕೊನೆಯ ವಿಭಾಗಗಳಲ್ಲಿ ಸೂಕ್ತವನ್ನು ಸೇರಿಸಿ ಪಠಿಸಬೇಕು. ಹಿಂದೆ ಹೇಳಿದಂತೆ ನಿವಿತ್ ಕ್ಷತ್ರಸ್ವರೂಪವು ಸೂಕ್ತವು ವಿಟ್‌ಸ್ವರೂಪವು. ಮೊದಲು ಸೂಕ್ತದ ಭಾಗಗಳನ್ನು ಮೊದಲು, ಮಧ್ಯ, ಕೊನೆಯ ಭಾಗಗಳಲ್ಲಿ ಸೂಕ್ತದ ಭಾಗ ಗಳನ್ನೂ ಅನಂತರ ನಿವಿನ್ಮಂತ್ರಗಳ ಭಾಗಗಳನ್ನೂ ಸೇರಿಸಿ ಪಠಿಸಬೇಕು.

ಯ ಉ ಕಾಮಯೇತೋಭಯತ ಏನಂ ವಿಶಃ ಪರ್ಯವಚ್ಛಿನದಾನೀ-ತ್ಯುಭಯತಸ್ತರ್ಹಿ ನಿವಿದಂ ವ್ಯಾಹ್ವಯೀತೋಭಯತ ಏವೈನಂ ತದ್ವಿಶಃ ಪರ್ಯವಚ್ಛಿನತ್ತಿ

ಪ್ರಕಾರಾಂತರೇಣಾಭಿಚಾರಂ ವಿಧತ್ತೇ—ಯಸ್ತು ಹೋತೈನಂ ಯಜಮಾನಮುಭಯತಃ ಪೂರ್ವೋತ್ತರಭಾಗಯೋಃ ಸಂಬಂಧಿನೀರ್ವಿಶಃ ಪ್ರಜಾಃ ಪರ್ಯವಚ್ಛಿನದಾನಿ ಪರಿತೋ ವಿಚ್ಛಿನ್ನಾಃ ಕರವಾಣೀತಿ ಕಾಮಯೇತ ॥ ಸ್ವಸ್ಮಾತ್ಪೂರ್ವಭಾವಿನ್ಯಃ ಪಿತೃಪಿತೃವ್ಯಮಾತುಲಾ-ದಯಃ ಯಾಃ ಪ್ರಜಾಃ ಸ್ವಸ್ಮೋತ್ತರಭಾವಿನ್ಯಃ ಪುತ್ರಜಾಮಾತ್ರಾದಯೋ ಯಾಃ ಪ್ರಜಾ-ಸ್ತಾಸಾಂ ಸರ್ವಾಸಾಮವಚ್ಛೇದಂ ಕರವಾಣೀತ್ಯರ್ಥಃ । ಯದ್ವಾ । ಉಭಯತೋ ಮಾತೃ-ಪಕ್ಷೇ ಪಿತೃಪಕ್ಷೇ ಚ ವಿದ್ಯಮಾನಾನಾಂ ಪ್ರಜಾನಾಮವಚ್ಛೇದಂ ವಿರೋಧಂ ಕರವಾಣೀತ್ಯೇವಂ ಯೋ ಹೋತಾ ಯಜಮಾನಂ ದ್ವೇಷ್ಟಿ ಸ ಹೋತಾ ನಿವಿದಮುಭಯತೋ ನಿವಿದ ಆದಾವಂತೇ ಚ ವ್ಯಾಹ್ವಯೀತ ಪಿವಿಧಮಾಹಾವಂ ಕುರ್ಯಾತ್ ॥ ಆದಾವಪಿ ಶೋಂಸಾವೋಮಿತ್ಯೇತಮಾ-ಹಾವಮಂತ್ರಂ ಪಠೇತ್ ॥ ಅಂತೇಽಪಿ ತಥಾ ಪಠೇದಿತ್ಯರ್ಥಃ । ತಥಾ ಸತ್ಯೇನಂ ಯಜಮಾನಂ ಪೂರ್ವಾಪರಭಾಗಯೋರ್ಮಾತೃಪಿತೃಪಕ್ಷಯೋಶ್ಚ ಪ್ರಜಾಭಿಃ ಸಹಾವಚ್ಛಿನತ್ತಿ ॥

ಮೇಲೆ ಹೇಳಿದ ಅಭಿಚಾರವನ್ನು ಪ್ರಕಾರಾಂತರವಾಗಿ ಹೇಳುವರು – ಯಾವ ಹೋತೃವು ಯಜಮಾನನಿಗೆ ಹಿಂದೆ ಹೇಳಿದ ಎರಡು ವಿಧಗಳಾದ (ಕ್ಷತ್ರ ಮತ್ತು ವಿಶ) ಅಭಿಚಾರಗಳಿಂದ ಹಾನಿಯನ್ನುಂಟುಮಾಡಬೇಕೆಂದು ಬಯಸಿದರೆ, ಮುಂದೆ ಹೇಳುವಂತೆ ಮಾಡಬೇಕು. ಇಲ್ಲಿ ಎರಡುವಿಧ ಹಾನಿಗಳೆಂದರೆ—ತಂದೆ, ತಾತ, ಸೋದರಮಾವ ಮೊದಲಾದ ಹಿರಿಯರು ಒಂದುಕಡೆ. ಪುತ್ರ, ಅಳಿಯ ಮೊದಲಾದ ಕಿರಿಯರು ಮತ್ತೊಂದುಕಡೆ. ಈ ಎರಡುಕಡೆಯ ಸಂಬಂಧಿಗಳಿಗೂ ಕೇಡನ್ನು ಬಯಸಿದರೆ ಅಥವಾ ಮಾತೃಪಕ್ಷೇ ಪಿತೃಪಕ್ಷೇ ಎಂದರೆ ತಂದೆಯಕಡೆಯ ಸಂಬಂಧಿಗಳು ಮತ್ತು ತಾಯಿಯಕಡೆ ಸಂಬಂಧಿಗಳೂ ಎಂದಾದರೂ ಆಗಬಹುದು. ಈ ವಿಧ ಎರಡು ಕಡೆಯವರಿಗೂ ಕೇಡನ್ನು ಬಯಸಿದರೆ ನಿವಿತ್ತುಗಳನ್ನು ಮೊದಲು ಕೊನೆಗಳಲ್ಲಿ ಆಹಾವ ಎಂದರೆ ಶೋಂಸಾವೋಂ ಎಂಬ ಆಹಾವ ಮಂತ್ರಪೂರ್ವಕವಾಗಿ ಪಠಿಸಬೇಕು. ಎಂದರೆ ಆಹಾವ ಮಂತ್ರವನ್ನು ಮೊದಲು ಮತ್ತು ಕೊನೆ ಎರಡು ಕಡೆಗಳಲ್ಲಿಯೂ ಪಠಿಸಬೇಕು. ಹೀಗೆ ಮಾಡಿದಲ್ಲಿ ಯಜಮಾನನ ಸಂಬಂಧಿಗಳಾದ ಮಾತೃ ಪಕ್ಷದ ಮತ್ತು ಪಿತೃಪಕ್ಷದ ಸಂಬಂಧಿಗಳಿಗೆ ಹಾನಿಯು ತಟ್ಟುವುದು.

ಇತಿ ವ್ಯಭಿಚರತ ಇತರಥಾ ತ್ವೇವ ಸ್ವರ್ಗಕಾಮಸ್ಯ ।

ಉಕ್ತವಿಧೀನಾಮಸಾಂಕರ್ಯಾಯ ವ್ಯವಸ್ಥಯಾ ನಿಗಮಯತಿ ॥ ಇತಿ ನು ಯಃ ಕಾಮಯೇತ ಕ್ಷತ್ರೇಣೇತ್ಯಾದ್ಯುಕ್ತ ಏವ ಪ್ರಕಾರೋಽಭಿಚರತೋ ದ್ರಷ್ಟವ್ಯಃ ॥ ಇತರಥಾತ್ವೇವ ಪ್ರಕಾರಾಂತರಂ ತು ಪೂರ್ವೋಕ್ತಂ ಸೂಕ್ತಮಧ್ಯೇ ನಿವಿತ್ಪ್ರಕ್ಷೇಪರೂಪಂ ಸೋಪಾನಾರೋಹಣ ಸದೃಶಸ್ವರೋಪೇತಂ ಸ್ವರ್ಗಕಾಮಸ್ಯ ದ್ರಷ್ಟವ್ಯಂ ।

ಹಿಂದೆ ಹೇಳಿದ ಅಭಿಚಾರ ಮತ್ತು ಸ್ವರ್ಗಾರೋಹ ಎಂಬ ಎರಡು ಭಾಗಗಳನ್ನು ವಿಶದಪಡಿಸುವರು. ಹಿಂದೆ ಹೇಳಿದಂತೆ ನಿವಿನ್ಮಂತ್ರಗಳನ್ನು ಎರಡು ವಿಧವಾಗಿ ಉಪಯೋಗಿಸಬಹುದು. ಅಭಿಚಾರಪಕ್ಷದಲ್ಲಾದರೆ **ಯಃ ಕಾಮಯೇತ** ಇತ್ಯಾದಿ ಹಿಂದೆ ಹೇಳಿದ ಪ್ರಕಾರವಾಗಿ ನಿವಿನ್ಮಂತ್ರಗಳನ್ನು ಮಧ್ಯದಲ್ಲಿ ವಿಭಾಗಿಸಿ ಹಿಂದೆ ಹೇಳಿದಂತೆ ಪಠಿಸಬೇಕು. ಈರೀತಿ ಮಾಡುವುದು ಅಭಿಚಾರ (ಕೆಡಕು) ಮಾಡಿದಂತಾಗುವುದು. ಇನ್ನೊಂದು ವಿಧವೆಂದರೆ **ಸೋಪಾನಾರೋಹಣಸದೃಶಸ್ವರೋಪೇತಂ** ಮೆಟ್ಟಲುಗಳನ್ನು ಹತ್ತುವಾಗ ಮಾಡುವಂತೆ ಸ್ವರಸಹಿತವಾಗಿ ಪಠಿಸುವ ವಿಧಾನವು. ಇದು ಉತ್ತಮ ಫಲವನ್ನುಂಟು ಮಾಡುವುದು.

ವಯಃಸುಪರ್ಣಾ ಉಪಸೇದುರಿಂದ್ರಮಿತ್ಯುತ್ತಮಯಾ ಪರಿದಧಾತಿ ಪ್ರಿಯಮೇಧಾ ಋಷಯೋ ನಾಧಮಾನಾಃ ಅಪ ಧ್ವಾಂತ-ಮೂರ್ಣುಹೀತಿ ಯೇನ ತಮಸಾ ಪ್ರಾವೃತೋ ಮನ್ಯೇತ ತನ್ಮನಸಾ ಗಚ್ಛೇದಪ ಹೈವಾಸ್ಮಾತ್ತಲ್ಲುಪ್ಯತೇ ಪೂರ್ಧಿ ಚಕ್ಷುರಿತಿ ಚಕ್ಷುಷೀ ಮರೀಮೃಜ್ಯೇತ ಆಜರಸಂ ಹ ಚಕ್ಷುಷ್ಮಾನ್ಭವತಿ ಯ ಏವಂ ವೇದ ॥

ಅಂತಿಮಯಾ ಸೂಕ್ತಗತಯರ್ಚಾ ಸಮಾಪ್ತಿಂ ವಿಧತ್ತೇ—ವೇತೇರ್ಧಾತೋರ್ಗತ್ಯ-ರ್ಥಸ್ಯ ವಯ ಇತಿ ರೂಪಂ ಗಮನಕುಶಲಾ ಇತ್ಯರ್ಥಃ ॥ ಅತಏವ ಸುಪರ್ಣಾಃ ಪಕ್ಷಿಸದೃಶಾಃ ಕೇಚಿದಿಂದ್ರಂ ಸ್ವರ್ಗವಾಸಿನ ಉಪಸೇದುಃ ಪ್ರಾಪ್ತವಂತಃ।ಇತಿ ತಸ್ಯ ಪಾದಸ್ಯಾರ್ಥಃ॥ದ್ವಿತೀಯ-ಪಾದಂ ಸುಬೋಧತ್ವಾಭಿಪ್ರಾಯೇಣ ಪಠತಿ । ಗ್ರಂಥತದರ್ಥಾವಧಾರಣಶಕ್ತಿರ್ಮೇಧಾ ಸಾಪ್ರಿಯಾ ಯೇಷಾಮೃಷೀಣಾಂ ತೇ ಪ್ರಿಯಮೇಧಾ ಋಷಯೋಽತೀಂದ್ರಿಯಾರ್ಥದ್ರಷ್ಟಾರೋ ನಾಧಮಾನಾಃ ಕಿಂಚಿತ್ಸ್ವಕಾರ್ಯಂ ಯಾಚಮಾನಾ ಇಂದ್ರಮುಪಸೇದುರಿತಿ ಪೂರ್ವೇಣಾ-ನ್ವಯಃ । ತೃತೀಯಪಾದಸ್ಯ ಪೂರ್ವಭಾಗಮನೂದ್ಯ ವ್ಯಾಚಷ್ಟೇ—ಹೇ ಇಂದ್ರ ಧ್ವಾಂತಂ ತಮೋಽಪೋರ್ಣುಹಿ, ಅಪಸಾರಯ । ಏತಸ್ಮಿನ್ಭಾಗೇ ಪಠಿತೇ ಸತಿ ತಮೋ ಲುಪ್ಯತೇ ॥ ಹೋತಾ ಯೇನ ತಮಸಾ ಪ್ರಾವೃತಶ್ಛಾದಿತೋಽಹಮಿತಿ ಮನ್ಯೇತ ತತ್ತಮೋ ಮನಸಾ ಗಚ್ಛೇತ್ ಧ್ಯಾಯೇತ್ ॥ ತಮೋ ಹಿ ಬಹುವಿಧಂ ದೃಷ್ಟಿನಿರೋಧಕಮೇಕಂ ಮೋಹರೂಪಂ ದ್ವಿತೀಯಂ ಪಾಪರೂಪಂ ತೃತೀಯಂ । ತೇಷಾಂ ಮಧ್ಯೇ ಯೇನ ಸ್ವಸ್ಯ ಬಾಧಾತತ್ತಮ ಏತದ್ಭಾಗಪಾಠ-

ಕಾಲೇ ವಿನಷ್ಟಮಿತಿ ಧ್ಯಾಯೇತ್ ॥ ತಥಾಸತಿ ತತ್ತಮೋಽಸ್ಮಾತ್ಪುರುಷಾದ್ವಿನಶ್ಯತೇವ ॥ ತಸ್ಯ-ಪಾದಸ್ಯೋತ್ತರಭಾಗೇ ಕಿಂಚಿದನುಷ್ಠಾನಂ ವಿಧತ್ತೇ—ಹೇ ಇಂದ್ರ ಚಕ್ಷುಃ ಪೂರ್ಧಿ ದೃಷ್ಟಿಂ ಪೂರಯ। ಏತಂ ಭಾಗಂ ಪಠನ್ಸ್ವೇನ ಹಸ್ತೇನ ಚಕ್ಷುಷೀ ಮರೀಮೃಜ್ಯೇತ ಪುನಃ ಪುನಃ ಶೋಧಯೇತ್ ॥ ವೇದನಂ ಪ್ರಶಂಸತಿ ॥ ಆಜರಸಂ ಜರಾಸಮಾಪ್ತಿಪರ್ಯಂತಂ ॥

ಈ ಸೂಕ್ತದ ಕೊನೆಯ ಋಕ್ಕನ್ನು ವಿವರಿಸಿ ಈ ವಿಷಯವನ್ನು ಸಮಾಪ್ತಿಗಳಿಸುವರು. **ವಯಸ್ಸುಪರ್ಣಾ ಉಪಸೇದುರಿಂದ್ರಂ** ಎಂಬುದೇ ಈ ಸೂಕ್ತದ ಕೊನೆಯ ಋಕ್ಕು. ಗತ್ಯರ್ಥವನ್ನು ಸೂಚಿಸುವ ವೇತಿಧಾತುವಿನಿಂದ ವಯಃ ಎಂಬ ಶಬ್ದವು ನಿಷ್ಪನ್ನವಾಗಿದೆ. **ವಯಃ** ಎಂದರೆ ಗಮನಕುಶಲರು ಎಂದರ್ಥವು. **ಸುಪರ್ಣಾಃ** ಎಂದರೆ ಪಕ್ಷಿಸದೃಶರಾದ ಕೆಲವರು **ಇಂದ್ರಂ** ಸ್ವರ್ಗದಲ್ಲಿರುವ ಇಂದ್ರನನ್ನು **ಉಪಸೇದುಃ** ಸಮೀಪಿಸಿದರು. ಇದು ಮೊದಲನೆಯ ಪಾದದ ಅರ್ಥವು. ಎರಡನೆಯ ಪಾದವು-**ಪ್ರಿಯಮೇಧಾ ಋಷಯೋ ನಾಥಮಾನಾಃ** ಎಂದಿರುವುದು. **ಗ್ರಂಥತದರ್ಥಾವಧಾರಣಶಕ್ತಿರ್ಮೇಧಾ**-ಗ್ರಂಥರಚನೆ ಮತ್ತು ಗ್ರಂಥಗಳಲ್ಲಿರುವ ವಿಷಯಗಳನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ **ಮೇಧಾ**-ಬುದ್ಧಿಶಕ್ತಿಯು ಎಂದರ್ಥವು. ಈ ವಿಧವಾದ ಶಕ್ತಿಯು ಯಾರಲ್ಲಿರುವುದೋ ಅವರಿಗೆ **ಪ್ರಿಯಮೇಧಾಃ** ಎಂದು ಹೆಸರು ಎಂದರೆ ಋಷಿಗಳು. ಋಷಿಗಳು ಎಂದರೆ **ಅತೀಂದ್ರಿಯಾರ್ಥದ್ರಷ್ಟಾರಃ**-ಸಾಧಾರಣ ಜನರ ಮನಸ್ಸೇ ಮೊದಲಾದ ಇಂದ್ರಿಯಗಳಿಗೆ ಗೋಚರವಾಗದ ಎಂದರೆ ತಿಳಿಯಲಾಗದ ವಿಷಯಗಳನ್ನು ಅಥವಾ ವೇದ ವಾಕ್ಯಗಳ ಅರ್ಥವನ್ನು ತಮ್ಮ ಜ್ಞಾನಚಕ್ಷುಸ್ಸುಗಳಿಂದ ತಿಳಿಯಬಲ್ಲವರಿಗೆ ಋಷಿಗಳೆಂದು ಹೆಸರು. **ನಾಥಮಾನಾಃ** ಎಂಬ ಶಬ್ದವು ಋಷಯಃ ಎಂಬ ಪದಕ್ಕೆ ವಿಶೇಷಣವಾಗಿರುವುದು. ಇದರ ಅರ್ಥವೇನೆಂದರೆ ತಮಗೆ ಬೇಕಾದ ಸ್ವಕಾರ್ಯವನ್ನು ಅತ್ಯಲ್ಪವಾಗಿ ಇಂದ್ರನನ್ನು ಪ್ರಾರ್ಥಿಸುವವರು. ಇಂತಹ ಋಷಿಗಳು ಸ್ವರ್ಗದಲ್ಲಿರುವ ಇಂದ್ರನ ಸಮೀಪವನ್ನೈದಿದರು ಎಂದು ಹಿಂದೆ ಹೇಳಿದ ವಾಕ್ಯಕ್ಕೆ ಸಮನ್ವಯವು. ಮೂರನೆಯ ಪಾದದಲ್ಲಿರುವ **ಅಪ ಧ್ವಾಂತಮೂರ್ಣುಹಿ** ಎಂಬುದನ್ನು ವಿವರಿಸುವರು. ಎಲೈ ಇಂದ್ರನೇ, ನಮ್ಮ ಮನಸ್ಸಿಗೆ ಕವಿದಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸು ಎಂದು ಇದರ ಅರ್ಥವು. ಈ ವಾಕ್ಯವನ್ನು ಪಠಿಸುವುದರಿಂದ ಅಂಧಕಾರವು ನಾಶವಾಗುವುದು. ಹೋತೃವು ಮನಸ್ಸಿನಿಂದ ಅಂಧಕಾರವನ್ನು ಪರಿಹರಿಸಬೇಕೆಂದು ಪ್ರಾರ್ಥಿಸುವಾಗ ಮನಸ್ಸಿಗೆ ಹಿಡಿದಿರುವ ಅಜ್ಞಾನಾಂಧಕಾರವೆಂದರ್ಥವು. **ತಮಃ** ಎಂದರೆ ಅಂಧಕಾರವು. ಇದು ಅನೇಕವಿಧವಾಗಿರುವುದು. **ದೃಷ್ಟಿನಿರೋಧಕಮೇಕೇ**-ಕಣ್ಣು ಕಾಣಿಸದಂತೆ ಆವರಿಸಿರುವ ಕತ್ತಲೆಯು ಒಂದುವಿಧ. **ಮೋಹರೂಪಂ ದ್ವಿತೀಯಂ**-ಮನಸ್ಸಿಗೆ ಸರಿಯಾಗಿ ಗೊತ್ತಾಗದೆ ಭ್ರಾಂತಿಯಿಂದಿರುವುದು ಎರಡನೆಯದು. **ಪಾಪರೂಪಂ ತೃತೀಯಂ**-ಪಾಪರೂಪವಾದ ಕಾರಣವು ಮೂರನೆಯದು. ಇವೇ ಮೊದಲಾದ ನಾನಾವಿಧಗಳಾದ ಅಂಧಕಾರಗಳ ಮಧ್ಯದಲ್ಲಿ ತನಗೆ ಯಾವುದರಿಂದ ಬಾಧೆಯುಂಟಾಗುವುದೋ ಅದನ್ನು ಪರಿಹರಿಸಬೇಕೆಂಬ ಪ್ರಾರ್ಥನೆ ಇರುವುದರಿಂದ ಆ ವಿಧವಾದ ಬಾಧೆಯು ಪರಿಹಾರವಾಗುವುದು. ಮೂರನೆಯ ಪಾದದ ಕೊನೆಯ ಭಾಗವು—**ಪೂರ್ಧಿ ಚಕ್ಷುಃ** ಎಂದಿರುವುದು. ಕಣ್ಣನ್ನು ಚೆನ್ನಾಗಿ ತೊಳೆದು ಶುದ್ಧಿಮಾಡು ಎಂದು ಇದರ ಅರ್ಥವು. ಎಲೈ ಇಂದ್ರನೇ, ಕಣ್ಣುಗಳ ದೃಷ್ಟಿಯನ್ನು ಚೆನ್ನಾಗಿ ಕಾಣುವಂತೆ ಮಾಡು ಎಂದಭಿಪ್ರಾಯವು. ಈ ಭಾಗವನ್ನು ಪಠಿಸಿ ತನ್ನ ಕೈನಿಂದ ಕಣ್ಣುಗಳನ್ನು ಪದೇಪದೆ ಒರೆಸಿಕೊಳ್ಳುತ್ತಾ ಚೆನ್ನಾಗಿ ಶುದ್ಧಿಯಾಗುವಂತೆ ಮಾಡಬೇಕು. ಇದು ಈ ಋಕ್ಕಿನ ಅರ್ಥವು. ಈ ವಿಷಯವನ್ನು ಯಾವ ಪುರುಷನು ಚೆನ್ನಾಗಿ ತಿಳಿದು ಆದರಂತೆ ಆಚರಿಸುವನೋ ಆ ಪುರುಷನು ತನ್ನ ಮರಣಪರ್ಯಂತರದವರೆಗೂ ಒಳ್ಳೆಯ ದೃಷ್ಟಿಪಾಟವವನ್ನು ಪಡೆಯುತ್ತಾನೆ.

**ಮುಮುಗ್ಧ್ಯಸ್ಮಾನ್ನಿಧಯೇವ ಬದ್ಧಾನಿತಿ ಪಾಶಾ ವೈ ನಿಧಾ ಮುಮುಗ್ಧ್ಯಸ್ಮಾನ್ಪಾಶಾದಿವ ಬದ್ಧಾನಿತ್ಯೇವ ತದಾಹ ॥**

ಚತುರ್ಥಪಾದಮನೂದ್ಯ ವ್ಯಾಚಷ್ಟೇ—ಹೇ ಇಂದ್ರ ನಿಧಯೇವ ಪಾಶೇನೇವ ತಮುಸಾ ಬದ್ಧಾನಸ್ಮಾನ್ಮುಮುಗ್ಧಿ ಮೋಚಯ । ಅಸ್ಮಿನ್ಪಾದೇ ನಿಧಾಶಬ್ದೇನ ಪಾಶಾ ಬಂಧನಹೇತವೋ ರಜ್ಜವೋ ವಿವಕ್ಷಿತಾಃ ಅತೋ ನಿಧಯೇವ ಬದ್ಧಾನಿತ್ಯುಕ್ತೇ ಪಾಶಾದಿವ ಬದ್ಧಾನಿತ್ಯುಕ್ತಂ ಭವತಿ ॥

ಹಿಂದೆ ಈ ಸೂಕ್ತದ ಕೊನೆಯ ಋಕ್ಕಿನ ಅರ್ಥವನ್ನು ವಿವರಿಸುವಾಗ ಮೂರು ಪಾದಗಳ ಅರ್ಥವನ್ನು ಮಾತ್ರವೇ ವಿವರಿಸಲಾಯಿತು. ಈಗ ಉಳಿದಿರುವ ನಾಲ್ಕನೆಯ ಪಾದದ ಅರ್ಥವನ್ನು ವಿವರಿಸುವರು **ಮುಮುಗ್ಧ್ಯಸ್ಮಾನ್ನಿಧಯೇವ ಬದ್ಧಾನ್** ಎಂಬುದೇ ಆ ನಾಲ್ಕನೆಯ ಪಾದವು. **ನಿಧಾ** ಎಂದರೆ ಪಾಶವು, ಹಗ್ಗವು, ಇಂದ್ರನೇ, ಪಾಶ ಅಥವಾ ಹಗ್ಗಗಳಿಂದ ಬಂಧಿತರಾದ ನಮ್ಮನ್ನು ಎಂದರೆ ಅಜ್ಞಾನಾಂಧಕಾರದಿಂದ ಆವೃತರಾದ ನಮ್ಮನ್ನು ಆ ಅಜ್ಞಾನವೆಂಬ ಕತ್ತಲೆಯಿಂದ ಬಿಡುಗಡೆ ಮಾಡು, ಮುಕ್ತರನ್ನಾಗಿಮಾಡು. ಈ ಪಾದದಲ್ಲಿ **ನಿಧಾ** ಎಂಬ ಶಬ್ದಕ್ಕೆ ಪಾಶ, ಹಗ್ಗ ಎಂದರ್ಥವು. ಇಲ್ಲಿ ಅಜ್ಞಾನವೇ ಪಾಶವು. ಅದರಿಂದ ಕಟ್ಟಿಹಾಕಲ್ಪಟ್ಟ ಎಂದರೆ ಭ್ರಾಂತಿಗೊಂಡಿರುವ ನಮ್ಮನ್ನು ಆ ವಿಧವಾದ ಪಾಶಗಳಿಂದ ಮುಕ್ತರನ್ನಾಗಿ ಮಾಡು ಎಂದು ಇಲ್ಲಿ ಇಂದ್ರನನ್ನು ಪ್ರಾರ್ಥಿಸಲಾಗಿದೆ.

### *English Translation*

**(The Marutvatiya Pragatha. The Nivid hymn of the Marutvatiya Shastra. How the Hotar can injure the sacrificer by misplacing the Nivid).**

He repeats the Marutvatiya Pragatha (pra va indraya brihate, 8,.78, 3). The Marutas are cattle, cattle are the Pragatha (that is to say, the Pragatha is used) for obtaining cattle.

He repeats the hymn janishtha ugrah (10,73). This hymn serves for producing the sacrificer. For by means of it the Hotar brings forth the sacrificer from the sacrifice as the womb of the gods. By this (hymn) victory is obtained; with it the sarificer remains victor, without it he is defeated.

This hymn was seen by the Rishi Gauriviti. Gauriviti the son of Sakti, having come very near the celestial world, saw this hymn (i.e., had it revealed); by means of it he gained heaven. Thus the sacrificer gains by this (hymn) the celestial world.

Having repeated half the number of verses (of the hymn), he leaves out the other half, and inserts the Nivid in the midst (of both parts). The Nivid is the ascent to heaven; it is the ladder for climbing up to heaven. (Therefore) he ought to recite it (stopping at regular intervals) as if he were climbing up (a height) by means of a ladder. Thus he can take along with him (up to the celestial world` that sacrificer to whom he is frieddly. Now he who desires, heaven, avails himself of this opportunity of going thither.

Should the Hotar intend to do any harm (to the sacrificer) thinking. " may I slay the Vis' through the Kshatra," he need only repeat the Nivid in three different places of the hymn (in the commencement, middle and end). For the Nivid is the Kshatram (commanding power), and the hymn the vis (prototype of the Vais'yas); thus he slays the Vis' of any one whom he wishes throngh his Kshatra. Thus he slays the Vis' through the Kshatram.

Should he think, " may I slay the Kshatram through the Vis'," he need only thrice dissect the Nivid through the hymn (by repeating the hymn at the commencement, in the middle, and at the end of the Nivid). The Nivid is the Kshatram, and the hymn is Vis'. He thus slays whosoever Kshatra he wishes by means of the Vis'.

Should he think, " I will cut off from the sacrificer the Vis (relation, subject, off spring) on both sides, " he need only dissect af the beginning and end the Nivid by the call somsavom. Thus he cuts the sacrificer off from his Vis on both sides from father and mother, as well as from his children. Thus he should do who has sinister designs towards the sacrificer. But otherwise in the manner first described he should do to him who desires for heaven (if he be friendly to him).

He concludes with the verse, vayah, suparna upasedur (10, 73, 11) i.e., " the poets with good thoughts have approached Indra, begging liks birds with beautiful wings; uncover him who is enshrouded in darkness; fill the eye with light; release us who are bound by darkness, as it were, with a rope (nidha)." When he repeats the words " uncover him &c. then he should think that the darkness in which he is enshrouded, might go by means of his mind. Thus he rids himself of darkness. By repeating the words " fill the eye " he should repeatedly rub both his eyes. He who has such a knowledge keeps the use of his eyes up to his old age. In the words ' release us ' &c. the word nidha means rope. The meaning is, release us who are tied with a rope, as it were.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಅಷ್ಟಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ನವಮಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು



[ಮರುದ್ದೇವತೆಗಳು ತಮ್ಮದೇ ಆದ ಮರುತ್ವತೀಯಶಸ್ತ್ರದಿಂದ ಏಕೆ ಗೌರವಿಸಲ್ಪಡುವರು?]

**ಇಂದ್ರೋ ವೈ ವೃತ್ರಂ ಹನಿಷ್ಯನ್ಸರ್ವಾ ದೇವತಾ ಅಬ್ರವೀದನು ಮೋಪತಿಷ್ಠಧ್ವಮುಪ ಮಾ ಹ್ವಯಧ್ವಮಿತಿ ತಥೇತಿ ತಂ ಹನಿಷ್ಯಂತ ಆದ್ರವನ್ಸೋಽವೇನ್ಮಾಂ ವೈ ಹನಿಷ್ಯಂತ ಆದ್ರವಂತಿ ಹಂತೇಮಾನ್ಭೀಷಯಾ ಇತಿ ತಾನಭಿಪ್ರಾಶ್ವಸೀತ್ತಸ್ಯ ಶ್ವಸಥಾ-ದೀಷಮಾಣಾ ವಿಶ್ವೇ ದೇವಾ ಅದ್ರವನ್ಮರುತೋ ಹೈನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವೈನ-ಮೇತಾಂ ವಾಚಂ ವದಂತ ಉಪಾತಿಷ್ಠಂತ ।**

ಅಥ ಮರುತ್ವತೀಯಂ ಶಸ್ತ್ರಂ ತದಂತಪಠನೀಯಾಂ ಯಾಜ್ಯಾಂ ಚ ಪ್ರಶಂಸಿತುಮುಪಾ-ಖ್ಯಾನಮಾಹ— ಪುರಾ ಕದಾಚಿದಿಂದ್ರೋ ವೃತ್ರಂ ಹಂತುಮುದ್ಯತಃ ಸರ್ವಾ ಅಪಿ ದೇವತಾಃ ಪ್ರತ್ಯೇವಮಬ್ರವೀತ್ ॥ ಅನು ಮೋಪತಿಷ್ಠಧ್ವಮಾನುಕೂಲ್ಯೇನ ಮಾಂ ಸೇವಧ್ವಂ ॥ ಉಪ ಮಾ ಹ್ವಯಧ್ವಂ ವೃತ್ರವಧಾಯ ಪ್ರವೃತ್ತಂ ಮಾಮುಪಹ್ವಯಧ್ವಮನುಜಾನೀಧ್ವಮಿತಿ ॥ ತತೋಽಂ-ಗೀಕೃತ್ಯ ಸರ್ವೇ ದೇವಾಸ್ತಂ ವೃತ್ರಂ ಹಂತುಮುದ್ಯತಾ ಆಗಚ್ಛನ್ ॥ ತದಾ ಸ ವೃತ್ರೋ ಮಾಂ ಹಂತುಮುದ್ಯತಾ ಆದ್ರವಂತೀತ್ಯವೇತ್ಸ್ವಮನಸಾ ಜ್ಞಾತವಾನ್ ॥ ತತ ಇದಂ ವಿಚಾರಯಾಮಾಸ॥ ಹಂತ ಸಮ್ಯಗ್ಜ್ಞಾತಂ ದೇವನಿವಾರಣೋಪಾಯಸ್ಯ ಪ್ರತಿಭಾತತ್ವಾತ್ ॥ ಇಮಾನ್ದೇವಾನ್ಭೀಷಯೈ, ಅಹಂ ಭೀತಾನ್ಕರವಾಣೀತಿ ವಿಚಾರ್ಯ ತಾನ್ದೇವಾನಭಿಲಕ್ಷ್ಯ ಪ್ರಾಶ್ವಸೀತ್ಪ್ರಶ್ವಾಸಮಕರೋತ್ ॥ ತಸ್ಯ ವೃತ್ರಸ್ಯ ಶ್ವಸಥಾತ್ಪ್ರಶ್ವಾಸಾದೀಷಮಾಣಾ ವಿಧೂತಾಃ ಸರ್ವೇ ದೇವಾಃ ಪಲಾಯನಮ-ಕುರ್ವನ್ ॥ ವೃತ್ರೋ ಹಿ ಸ್ವಜನ್ಮಾನಂತರಂ ಸರ್ವಾಸು ದಿಕ್ಷು ಶರಪಾತಮಾತ್ರದೇಶಂ ಪ್ರಾಪ್ಯ ವೃದ್ಧಿಂ ಗತವಾನ್ ॥ ತಥಾ ಚಾನ್ಯತ್ರ ಶ್ರುತಿಃ—"ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾಲ್ಲೋಕಾನವೃಣೋದ್ಯದಿಮಾಲ್ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ" ॥ ಇತಿ ॥ ತಾದೃಶಸ್ಯ ಪ್ರೌಢಶರೀರಸ್ಯ ಪ್ರಶ್ವಾಸಃ ಪ್ರಲಯಕಾಲೀನವಾಯುಸಮಾನೋಽತಃ ತದೀಯ-ಶ್ವಾಸೇನ ದೇವಾಃ ಪರಮಾಣವ ಇವ ದೂರೇಽಪಸಾರಿತಾಃ । ತದಾನೀಂ ಮರುತ ಏವೈನಮಿಂದ್ರಂ

**ನಾಜಹುರ್ನ ಪರಿತ್ಯಕ್ತವಂತಃ ॥ ಹೇ ಇಂದ್ರ ಭಗವನ್ವೃತ್ರಂ ವಜ್ರೇಣ ಪ್ರಹರ ತೇನ ಪ್ರಹಾರೇಣ ಜಹಿ ಮಾರಯ ತತೋ ವೀರಯಸ್ವ ಸ್ವಕೀಯಂ ವೀರತ್ವಂ ಪ್ರಕಟಯ । ಇತ್ಯನೇನೈವ ಪ್ರಕಾರೇಣ ಏನಮಿಂದ್ರಂ ಪ್ರತ್ಯೇತಾಂ ವಾಚಂ ವದಂತೋ ಮರುತಸ್ತಮಿಂದ್ರಮಸೇವಂತ ॥**

ಈಗ ಮರುತ್ವತೀಯ ಶಸ್ತ್ರಮಂತ್ರವನ್ನೂ ಅದರ ಕೊನೆಯಲ್ಲಿ ಪಠಿಸಬೇಕಾದ ಯಾಜ್ಯಾಮಂತ್ರವನ್ನೂ ಹೇಳುವುದಕ್ಕೆ ಪ್ರಾರಂಭಿಸಿ ಆ ವಿಷಯವಾಗಿ ಒಂದು ಪೂರ್ವೇತಿಹಾಸವನ್ನು ಹೇಳುವರು—

ಪೂರ್ವದಲ್ಲಿ ಇಂದ್ರನು ವೃತ್ರಾಸುರನೊಡನೆ ಯುದ್ಧಮಾಡುವ ಸಂದರ್ಭದಲ್ಲಿ ಇಂದ್ರನ ಜತೆಯಲ್ಲಿದ್ದ ದೇವತೆಗಳು ವೃತ್ರಾಸುರನ ಭಯಂಕರವಾದ ನಿಃಶ್ವಾಸಶಬ್ದಕ್ಕೆ ಹೆದರಿ ಓಡಿಹೋದರು. ಇಂದ್ರನಿಗೆ ದೇವತೆಗಳ ಸಹಾಯವಿಲ್ಲವಾಯಿತು. ಆ ಕಾಲದಲ್ಲಿ ಮರುದ್ದೇವತೆಗಳು ಮಾತ್ರ ಇಂದ್ರನನ್ನು ಬಿಟ್ಟು ಅಗಲದೆ ಇಂದ್ರನ ಸಮೀಪದಲ್ಲಿಯೇ ಇದ್ದು ಅವನಿಗೆ ಯುದ್ಧದಲ್ಲಿ ಪ್ರೋತ್ಸಾಹವನ್ನು ಮಾಡುತ್ತಿದ್ದರು. ಈರೀತಿ ಕಷ್ಟಕಾಲದಲ್ಲಿ ಸಹಾಯಮಾಡಿದ್ದರಿಂದ ಮರುದ್ದೇವತೆಗಳಿಗೂ ಇಂದ್ರನಿಗೂ ದೃಢವಾದ ಸ್ನೇಹವುಂಟಾಯಿತು ಎಂಬ ಪೂರ್ವೇತಿಹಾಸದ ವಿವರಣೆಯು ಇಲ್ಲಿ ಉಕ್ತವಾಗಿದೆ. ಈ ವಿಷಯದ ವಿವರಣೆಯು ಈರೀತಿ ಇದೆ.

ತದೇತದೃಷಿಃ ಪಶ್ಯನ್ನಭ್ಯನೂವಾಚ ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾ ವಿಶ್ವೇ ದೇವಾ ಅಜಹುರ್ಯೇ ಸಖಾಯಃ । ಮರುದ್ಭಿರಿಂದ್ರ ಸಖ್ಯಂ ತೇ ಅಸ್ತ್ವಥೇಮಾ ವಿಶ್ವಾಃ ಪೃತನಾ ಜಯಾಸೀತಿ ॥

**ಉಕ್ತಮರ್ಥಂ ಮಂತ್ರಸಂವಾದೇನ ದ್ರಢಯತಿ—ಕಶ್ಚಿದೃಷಿರ್ದಿವ್ಯಜ್ಞಾನೇನ ತದೇತದ್ದೇವಪಲಾಯನಂ ಪಶ್ಯನ್ವೃತ್ರಸ್ಯೇತ್ಯಾದಿಮಂತ್ರೇಣ ಪ್ರಕಟೀಚಕಾರ ॥ ಹೇ ಇಂದ್ರ ತವ ಸಖಾಯೋ ವಿಶ್ವೇ ದೇವಾ ಯೇ ಸಂತಿ ತೇ ಸರ್ವೇ ವೃತ್ರಸ್ಯ ಶ್ವಸಥಾತ್ಪಲಾಯಮಾನಾಸ್ತ್ವಾಂ ಪರಿತ್ಯಕ್ತವಂತಸ್ತಸ್ಮಾದಿದಾನೀಂ ತೇ ತವ ಮರುದ್ಭಿಃ ಸಹ ಸಖ್ಯಮಸ್ತು । ಅಥಾನಂತರಮಿಮಾಃ ಸರ್ವಾ ವೃತ್ರಸಂಬಂಧಿನೀಃ ಸೇನಾ ಜೇಷ್ಯಸೀತಿ ॥**

ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರಮಾಡಲು ಪ್ರಯತ್ನಮಾಡಿ ಸಕಲ ದೇವತೆಗಳನ್ನೂ ತನ್ನಬಳಿಗೆ ಕರೆದು—ಎಲೈ ದೇವತೆಗಳೇ, ಈಗ ನಾನು ವೃತ್ರಾಸುರನನ್ನು ಸಂಹರಿಸಲು ಉದ್ಯುಕ್ತನಾಗಿರುವೆನು. ನೀವೆಲ್ಲರೂ ನನ್ನೊಡನಿದ್ದು ನನಗೆ ಸಹಾಯಮಾಡಬೇಕು ಎನ್ನಲು ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಇಂದ್ರನ ಜತೆಯಲ್ಲಿಯೇ ಬಂದರು. ವೃತ್ರನು ದೇವತೆಗಳು ಬರುವುದನ್ನು ನೋಡಿ, ಈ ದೇವತೆಗಳು ನನ್ನನ್ನು ಕೊಲ್ಲಲು ಬರುತ್ತಿರುವರು. ಇದಕ್ಕೆ ಒಂದು ಉಪಾಯವನ್ನು ಮಾಡುವೆನು. ನನ್ನ ಶರೀರವನ್ನು ದೊಡ್ಡದಾಗಿ ಬೆಳೆಸಿ ಇವರನ್ನು ಹೆದರಿಸುವೆನು ಎಂದು ಮನಸ್ಸಿನಲ್ಲಿ ಯೋಚಿಸಿದನು. ಅದರಂತೆ ತನ್ನ ಶರೀರವನ್ನು ಅತ್ಯಂತ ದೊಡ್ಡದಾಗಿ ಆಗುವಂತೆ ಮಾಡಿದನು. ಹಿಂದೆ ವೃತ್ರನು ಬೆಳೆಯುತ್ತಿದ್ದಾಗ ಪ್ರತಿದಿನವೂ ಬಿಲ್ಲಿನಿಂದ ಹೊಡೆದ ಬಾಣವು ಎಷ್ಟುದೂರ ಹೋಗುವುದೋ ಅಷ್ಟು ಪ್ರಮಾಣಪರ್ಯಂತರ ಬೆಳೆಯುತ್ತಿದ್ದನೆಂದು—**ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾಂಲ್ಲೋಕಾನವೃಣೋದ್ಯದಿಮಾಂಲ್ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ** ಎಂಬ ಶ್ರುತಿವಾಕ್ಯದಲ್ಲಿ ಹೇಳಿದೆ. ಎಂದರೆ ಈ ಅಸುರನು ಪ್ರತಿದಿನವೂ ಬಿಲ್ಲಿನಿಂದ ಹೊರಟ ಬಾಣವು ಹೋಗುವ ಪ್ರಮಾಣಪರ್ಯಂತ ಬೆಳೆಯುತ್ತಾ ಈ ಲೋಕವನ್ನೆಲ್ಲಾ ಆವರಿಸಿದನು. ಈರೀತಿ ಲೋಕವನ್ನೆಲ್ಲಾ ಆವರಿಸಿದ್ದರಿಂದ ಈ ಅಸುರನಿಗೆ

ವೃತ್ರಾಸುರನೆಂಬ ಹೆಸರು ಬಂದಿತು ಎಂದು ಹಿಂದೆ ಒಂದು ಸಂದರ್ಭದಲ್ಲಿ ಹೇಳಲಾಗಿದೆ. ಬಳಿಕ ವೃತ್ರನು ತನ್ನ ಅತಿ ದೊಡ್ಡದಾದ ಶರೀರವನ್ನು ಪ್ರದರ್ಶಿಸಿ ಭಯಂಕರವಾದ ತನ್ನ ನಿಃಶ್ವಾಸದಿಂದ ದೇವತೆಗಳಿಗೆ ಭಯವನ್ನುಂಟುಮಾಡಿದನು. ದೇವತೆಗಳು ಈ ಅಸುರನ ಬೃಹದಾಕಾರವನ್ನೂ, ಕೆಂಡವನ್ನುಗುಳುವಂತಿರುವ ಇವನ ಭಯಂಕರವಾದ ನಿಃಶ್ವಾಸವನ್ನೂ ಕಂಡು ಭೀತರಾಗಿ ನಾನಾ ದಿಕ್ಕುಗಳಿಗೆ ಓಡಿಹೋದರು. ಆ ಕಾಲದಲ್ಲಿ ಈ ವೃತ್ರಾಸುರನ ನಿಃಸ್ವಾಸರೂಪವಾದ ವಾಯುವು ಸಕಲವನ್ನೂ ಸುಡುತ್ತಿರುವ ಪ್ರಲಯಕಾಲದ ವಾಯುವಿನಂತೆ ಅತಿ ಭಯಂಕರವಾಗಿದ್ದಿತು. ಈ ವಾಯುವಿನ ಮುಂದೆ ದೇವತೆಗಳು ಕೇವಲ ಪರಮಾಣುಗಳಂತೆ ಕಾಣುತ್ತಿದ್ದರು. ಈರೀತಿ ದೇವತೆಗಳು ಹೆದರಿ ಓಡಿಹೋದರೂ ಇಂದ್ರನೊಡನಿದ್ದ ಮರುದ್ದೇವತೆಗಳು ಮಾತ್ರ ಇಂದ್ರನನ್ನು ಬಿಟ್ಟಗಲದೆ— ಎಲೈ ಭಗವಂತನಾದ ಇಂದ್ರನೇ, ಹೆದರಬೇಡ ನಿನ್ನ ವಜ್ರಾಯುಧದಿಂದ ಈ ಅಸುರನನ್ನು ಹೊಡೆದು ಕೊಲ್ಲು ಮತ್ತು ನಿನ್ನ ಪರಾಕ್ರಮವನ್ನು ಜನರಿಗೆ ತಿಳಿಯುವಂತೆ ಪ್ರಕಟಿಸು ಎಂದು ನಾನಾವಿಧವಾಗಿ ಪ್ರೋತ್ಸಾಹಮಾಡುತ್ತಿದ್ದರು.

**ಸೋಽವೇದಿಮೇ ವೈ ಕಿಲ ಮೇ ಸಚಿವಾ ಇಮೇ ಮಾಕಾಮಯಂತ ಹಂತೇಮಾನಸ್ಮಿನ್ನುಕ್ಥ ಆಭಜಾ ಇತಿ ತಾನೇತಸ್ಮಿನ್ನುಕ್ಥ ಆಭಜ-ದಥಹೈತೇ ತರ್ಹ್ಯುಭೇ ಏವ ನಿಷ್ಕೇವಲ್ಯೇ ಉಕ್ಥೇ ಆಸತುಃ । ಮರುತ್ವತೀಯಂ ಗ್ರಹಂ ಗೃಹ್ಣಾತಿ ಮರುತ್ವತೀಯಂ ಪ್ರಗಾಥಂ ಶಂಸತಿ ಮರುತ್ವತೀಯಂ ಸೂಕ್ತಂ ಶಂಸತಿ ಮರುತ್ವತೀಯಾಂ ನಿವಿದಂ ದಧಾತಿ ಮರುತಾಂ ಸಾ ಭಕ್ತಿಃ ॥**

ಅಥ ಮರುತಾಮಿಂದ್ರಕೃತಮುಪಕಾರಂ ದರ್ಶಯತಿ—ಸ ಇಂದ್ರಃ ಸ್ವಮನಸ್ಯವೇದ್ವಿ-ಚಾರಿತವಾ‌ನ್ ॥ ಕಥಮಿತಿ ತದುಚ್ಯತೇ ॥ ಇಮೇ ವೈ ಕಿಲ ಪುರತಃ ಸ್ಥಿತಾ ಮರುತ ಏವ ಮೇ ಸಚಿವಾಃ ಸಖಾಯಃ ॥ ಯಸ್ಮಾದಿಮೇ ಮರುತೋ ಮಾಽಕಾಮಯಂತ ಮಾಮಪೇಕ್ಷಿತವಂತೋ ನ ತು ಪರಿತ್ಯಜ್ಯ ಮಾಂ ಗತಾಸ್ತಸ್ಮಾದಸ್ಮತ್ಸಖಿತ್ವಂ ಹಂತ ಸಮ್ಯಗೇಭಿಃ ಕೃತಮಿತ್ಯಹಂ ದೃಷ್ಟ-ವಾನಸ್ಮಿ ತತ ಇಮಾನ್ಮರುತೋಽಸ್ಮಿನ್ನುಕ್ಥೇ ಮಾಧ್ಯಂದಿನಗತಶಸ್ತ್ರ ಆಭಜೈ ಭಾಗಿನಃ ಕರವಾಣೀತಿ ಮನಸ್ಯೇವಂ ವಿಚಾರ್ಯ ತಥೈವಾಕರೋತ್ ॥ ಅಥಾನಂತರಂ ತರ್ಹಿ ತದಾ ಪ್ರಭೃತಿ, ಏತೇಹ ಮರುತ ಏವ ಶಸ್ತ್ರಭಾಗಿನೋಽಭೂವನ್ನಿತಿ ಶೇಷಃ ॥ ತತಃ ಪೂರ್ವಂ ತು ಮಾಧ್ಯಂದಿನಸವನೇ ನಿಷ್ಕೇವಲ್ಯನಾಮಕೇ ಶಸ್ತ್ರೇ ಕೇವಲೇಂದ್ರದೇವತಾಕೇ ಉಭೇ ಆಸತುಃ ॥ ನ ತು ತತ್ರ ಮರುತಾಂ ಪ್ರವೇಶ ಆಸೀತ್ ॥ ತಸ್ಮಾದಿದಾನೀಂ ಪ್ರವೇಶ ಇಂದ್ರಕೃತ ಉಪಕಾರಃ ॥ ಇಂದ್ರೇಣ ದತ್ತಾನ್ಮರುತಾಂ ಭಾಗಾನ್ಪ್ರದರ್ಶಯತಿ — ಮರುತೋಽಸ್ಯ ಸಂತೀತಿ ತೈಃ ಸಹಿತೋ ಮರುತ್ವಾಂಸ್ತದೀಯಂ ಗ್ರಹಮಧ್ವರ್ಯುರ್ಗೃಹ್ಣಾತಿ । ಹೋತಾ ಪ್ರ ವ ಇಂದ್ರಾಯ ಬೃಹತ ಇತ್ಯೇತಂ ಮರುತ್ವತೀಯಂ ಪ್ರಗಾಥಂ ಶಂಸತಿ ಜನಿಷ್ಠಾ ಉಗ್ರ ಇತ್ಯಾದಿಕಂ ಮರುತ್ವತೀಯಂ ಶಂಸತೀಂದ್ರೋ ಮರುತ್ವಾನಿತ್ಯಾದಿಕಾಂ ಮರುತ್ವತೀಯಾಂ ನಿವಿದಂ ಸೂಕ್ತೇ ಪ್ರಕ್ಷಿಪತಿ । ಗ್ರಹಗ್ರಹಣಾದಿ ಸೂಕ್ತಶಂಸನಾಂತೇ ಮರುತ್ಸಂಬದ್ಧಾ ಸಾ ಮರುತಾಂ ಭಕ್ತಿರ್ಭಾಗಃ ॥

ಈ ವಿಷಯವನ್ನೇ ಋಷಿಯು ತನ್ನ ದಿವ್ಯದೃಷ್ಟಿಯಿಂದ ತಿಳಿದು ಅದನ್ನೇ ಈ ಪ್ರಕೃತಋಕ್ಕಿನಲ್ಲಿ ಹೇಳಿರುವನು—ಎಲೈ ಇಂದ್ರನೇ, ವೃತ್ರಾಸುರನ ಸಂಹಾರಕಾಲದಲ್ಲಿ ನಿನ್ನೊಡನಿದ್ದ ದೇವತೆಗಳೆಲ್ಲರೂ ವೃತ್ರನ ನಿಃಶ್ವಾಸವನ್ನು ಕಂಡು ಹೆದರಿ

ಓಡಿಹೋದರು. ಆದರೆ ನಿನ್ನ ಸ್ನೇಹಿತರಾದ ಮರುತ್ತುಗಳು ಮಾತ್ರ ನಿನ್ನನ್ನು ಬಿಟ್ಟುಹೋಗಲಿಲ್ಲ. ಆದ್ದರಿಂದ ಎಲೈ ಇಂದ್ರನೇ, ಈ ಮರುದ್ದೇವತೆಗಳೊಡನೆ ನಿನ್ನ ಸ್ನೇಹವು ಶಾಶ್ವತವಾಗಿರಲಿ. ನೀನು ಇವರ ಸಹಾಯದಿಂದ ಅನೇಕ ಶತ್ರುಸೇನೆಗಳನ್ನು ಜಯಿಸಲು ಶಕ್ತನಾಗುವೆ ಎಂದು ಋಷಿಯು ಇಂದ್ರನನ್ನು ಸ್ತುತಿಸಿರುವನು.

ಅನಂತರ ಇಂದ್ರನು ತನ್ನ ಮನಸ್ಸಿನಲ್ಲಿ ಈರೀತಿ ಯೋಚಿಸಿದನು--ಈ ಮರುತ್ತುಗಳು ಯುದ್ಧಕಾಲದಲ್ಲಿ ನನ್ನನ್ನು ಬಿಟ್ಟಗಲದೆ ನನ್ನ ಜತೆಯಲ್ಲಿಯೇ ಇದ್ದು ನನಗೆ ಸಹಾಯಮಾಡಿರುವರು. ಆದ್ದರಿಂದ ಇವರು ನನಗೆ ಹಿತಚಿಂತಕರಾದ ಸ್ನೇಹಿತರು. ಇವರಿಗೆ ಏನಾದರೊಂದು ಉಪಕಾರವನ್ನು ಮಾಡಬೇಕು ಎಂದು ಯೋಚಿಸಿ ಮಾಧ್ಯಂದಿನಸವನಕಾಲದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಮರುದ್ದೇವತೆಗಳಿಗೆ ಭಾಗವನ್ನು ಕಲ್ಪಿಸಿದನು. ಹಿಂದೆ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಇಂದ್ರನಿಗೆ ಮಾತ್ರ ಭಾಗವಿದ್ದಿತು. ಮರುದ್ದೇವತೆಗಳಿಗೆ ಯಾವ ಭಾಗವೂ ಇರಲಿಲ್ಲ. ಈಗ ಇಂದ್ರನ ಅನುಗ್ರಹದಿಂದ ಇಂದ್ರನಿಗೂ, ಮರುದ್ದೇವತೆಗಳಿಗೂ ಭಾಗವು ಕಲ್ಪಿತವಾಯಿತು. ಆದ್ದರಿಂದ ಆ ಕಾಲದಲ್ಲಿ ಅಧ್ವರ್ಯುವು ಮರುದ್ದೇವತೆಗಳನ್ನುದ್ದೇಶಿಸಿ ಮರುತ್ವತೀಯ ಗ್ರಹಪಾತ್ರೆಯನ್ನು ಸ್ವೀಕರಿಸುವನು (ಕಲ್ಪಿಸುವನು) ಮರುದ್ದೇವತೆಗಳನ್ನುದ್ದೇಶಿಸಿ ಪ್ರಗಾಥವನ್ನು ಗಾನಮಾಡುವನು. ಅವರನ್ನುದ್ದೇಶಿ ಸೂಕ್ತವನ್ನೂ ಪಠಿಸುವನು. ಶಸ್ತ್ರಮಂತ್ರಗಳ ಮಧ್ಯದಲ್ಲಿ ಮರುದ್ದೇವತಾಕವಾದ ನಿವಿದ್ಧಾನೀಯ ಸೂಕ್ತವನ್ನೂ ಸೇರಿಸಿ ಪಠಿಸುವನು. ಇವೆಲ್ಲವೂ ಇಂದ್ರನು ತನ್ನ ಸ್ನೇಹಿತರಾದ ಮರುದ್ದೇವತೆಗಳಿಗೆ ಯಜ್ಞದಲ್ಲಿ ಕಲ್ಪಿಸಿದ ಭಾಗವು.

ಮರುತ್ವತೀಯಮುಕ್ಥಂ ಶಸ್ತ್ವಾ ಮರುತ್ವತೀಯಯಾ ಯಜತಿ ಯಥಾಭಾಗಂ ತದ್ದೇವತಾಃ ಪ್ರೀಣಾತಿ ॥ ಯೇ ತ್ವಾಹಿಹತ್ಯೇ ಮಘವನ್ನವರ್ಧನ್ಯೇ ಶಾಂಬರೇ ಹರಿವೋ ಯೇ ಗವಿಷ್ಟೌ । ಯೇ ತ್ವಾ ನೂನಮನುಮದಂತಿ ವಿಪ್ರಾಃ ಪಿಬೇಂದ್ರ ಸೋಮಂ ಸಗಣೋ ಮರುದ್ಭಿರಿತಿ ।

ಅಥ ಶಸ್ತ್ರಯಾಜ್ಯಾಂ ವಿಧತ್ತೇ—ಉಕ್ಥಂ ಶಸ್ತ್ರಂ ತಚ್ಛಂಸನಾದೂರ್ಧ್ವಂ ಮರುತ್ವದ್ದೇವತಾಕಾಂ ಶಸ್ತ್ರಯಾಜ್ಯಾಂ ಪಠೇತ್ ॥ ತೇನ ಸ್ವಸ್ವಭಾಗಮನತಿಕ್ರಮ್ಯ ದೇವತಾಸ್ತರ್ಪಯತಿ ॥ ತಾಂ ಮರುತ್ವತೀಯಾಂ ಯಾಜ್ಯಾಂ ದರ್ಶಯತಿ ॥ ಹೇ ಇಂದ್ರ ಅಹಿಹತ್ಯೇ ವೃತ್ರವಧೇ ಯೇ ಮರುತಸ್ತ್ವಾಮವರ್ಧನ್ವರ್ಧಿತವಂತಃ ॥ ಅಹಿ ಶಬ್ದೋ ವೃತ್ರವಾಚೀ । ಅಹಿಮಾಚಕ್ಷತೇ ವೃತ್ರಮಿತಿ ವರರುಚಿವಚನಾತ್ ॥ ಶಂಬರಃ ಕಶ್ಚಿದಸುರಸ್ತತ್ಸಂಬಂಧೀ ವಧಃ ಶಾಂಬರಃ । ತಸ್ಮಿನ್ಯೇ ಮರುತಸ್ತ್ವಾಮವರ್ಧನ್ವರ್ಧಿತವಂತಃ ಇತ್ಯನ್ವಯಃ । ಗವಾಮಿಷ್ಟಿರನ್ವೇಷಣಂ ಗವಿಷ್ಟಿಃ । ಬಲೋ ನಾಮ ಕಶ್ಚಿದಸುರೋ ಗುಹಾಯಾಮಾಸೀತ್ ॥ ಇಂದ್ರಶ್ಚ ತಸ್ಯ ಬಿಲಮುಪೋರ್ಣೋದಿತಿ ಶ್ರುತ್ಯಂತರಾತ್ ॥ ತೇನ ಬಲೇನ ಗಾವೋಽಪಹೃತಾಸ್ತಾಸಾಂ ಗವಾಮನ್ವೇಷಣಮಿಂದ್ರಸಹಿತಾ ಮರುತಃ ಕೃತವಂತಃ ॥ ದೇವಾ ವೈ ಬಲೇ ಗಾಃ ಪರ್ಯಪಶ್ಯನ್ನಿತಿ ಶ್ರುತ್ಯಂತರಾತ್ ॥ ತಾಸಾಂ ಗವಾಮನ್ವೇಷಣೇ ಯೇ ಮರುತಸ್ತ್ವಾಮವರ್ಧಯನ್ ॥ ತಥಾ ಯೇ ಮರುತೋ ನೂನಮದ್ಯಾಪಿ ವಿಪ್ರಾ ಋತ್ವಿಗ್ರೂಪಾ ಭೂತ್ವಾ ತ್ವಾಮನುಮದಂತಿ ಸ್ತೋತ್ರೈರನುದಿನಂ ಹರ್ಷಯಂತಿ ಹೇ ಇಂದ್ರ ತೈರ್ಮರುದ್ಭಿಃ ಸಹಿತಸ್ತ್ವಂ ಸಗಣೋ ಭೂತ್ವಾ ಸೋಮಂ ಪಿಬೇತಿ ಯಾಜ್ಯಾಮಂತ್ರಾರ್ಥಃ ॥

ಮರುತ್ವತೀಯ ಶಸ್ತ್ರಮಂತ್ರಗಳನ್ನು ಪಠಿಸಿದಮೇಲೆ ಹೋತೃವು ಮರುತ್ವದೇವತಾಕವಾದ ಶಸ್ತ್ರಮಂತ್ರಗಳ ಯಾಜ್ಯಾ ಮಂತ್ರವನ್ನು ಪಠಿಸಬೇಕು. ಈ ಯಾಜ್ಯಾಮಂತ್ರಪಠನಪೂರ್ವಕವಾಗಿ ಯಾಜ್ಯಾಹೋಮವನ್ನು ಮಾಡಿ ಮುಗಿಸಿದಮೇಲೆ ಆಯಾ ದೇವತೆಗಳು ತೃಪ್ತರಾಗುವರು.

ಎಲೈ ಇಂದ್ರನೇ ವೃತ್ರನನ್ನು ನೀನು ಸಂಹಾರ ಮಾಡುವಾಗಲೂ ಶಂಬರನೆಂಬ ಅಸುರನನ್ನು ವಧೆಮಾಡುವಾಗಲೂ ಮರುದ್ದೇವತೆಗಳು ನಿನ್ನನ್ನು ಸ್ತುತಿಸಿ ನಿನಗೆ ಸಹಾಯಮಾಡಿದರು. ಮತ್ತು ಬಲ ಎಂಬ ಅಸುರನು ಒಂದು ಗುಹೆಯಲ್ಲಿ ಅಡಗಿ ಕೊಂಡಿದ್ದನು. ಅವನು ದೇವತೆಗಳ ಗೋವುಗಳನ್ನು ಅಪಹರಿಸಿ ಯಾರಿಗೂ ಕಾಣದಂತೆ ಗುಹೆಯಲ್ಲಿ ಅವಿಸಿಟ್ಟಿದ್ದನು. ಅವನನ್ನು ಇಂದ್ರನು ಸಂಹಾರಮಾಡಿ ಗೋವುಗಳನ್ನು ಬಿಡಿಸಿ ತಂದನು. ಈ ವಿಷಯವು ಯಜುರ್ವೇದದಲ್ಲಿ—**ಇಂದ್ರೋ ಬಲಸ್ಯ ಬಿಲಮಪೋರ್ಣೋತ್** (ತೈ. ಸಂ. ೨-೧-೫-೧) ಎಂದು ಹೇಳಿದೆ. ಋತ್ವಿಜರು ಇಂದ್ರನಾದ ನಿನ್ನನ್ನು ಸ್ತುತಿಸಿ ನಿನ್ನ ಕಾರ್ಯ ಗಳನ್ನು ಪ್ರಶಂಸೆಮಾಡಿ ನಿನಗೆ ಹರ್ಷವನ್ನುಂಟುಮಾಡುವರು. ಎಲೈ ಇಂದ್ರನೆ ನಿನ್ನ ಸ್ನೇಹಿತರಾದ ಮರುದ್ಗಣಗಳೊಡನೆ ಬಂದು ಸೋಮಪಾನವನ್ನು ಮಾಡು ಎಂದು ಯಾಜ್ಯಾಮಂತ್ರದ ಅರ್ಥವು.

**ಯತ್ರ ಯತ್ರೈವೈಭಿರ್ವ್ಯಜಯತ ಯತ್ರ ವೀರ್ಯಮಕರೋತ್ತದೇ-**
**ನೈತತ್ಸಮನುವೇದ್ಯೇಂದ್ರೇಣೈನಾನ್ಸಸೋಮಪೀಥಾನ್ಕರೋತಿ ॥**

**ಏತಾಂ ಯಾಜ್ಯಾಂ ಪ್ರಶಂಸತಿ—ಯತ್ರ ಯತ್ರೈವ ಯಸ್ಮಿನ್ಯಸ್ಮಿನ್ವೃತ್ರವಧಾದಿಕೇ ಸ ಇಂದ್ರ ಏಭಿರ್ಮರುದ್ಭಿರ್ವಿಜಯಂ ಪ್ರಾಪ್ತಃ ॥ ಪ್ರಾಪ್ಯ ಚ ಯತ್ರ ಯತ್ರ ಯಸ್ಮಿನ್ನಪಿ ಯುದ್ಧಾದೌ ವೀರ್ಯಂ ಶೌರ್ಯಮಕರೋತ್ತದೇನೈತದಖಿಲಮಿಂದ್ರಾಯ ಸಮನುವೇದ್ಯ ಸಮ್ಯಗನುಕ್ರಮೇಣ ವಿಜ್ಞಾಪ್ಯೇಂದ್ರೇಣ ಸಹೈನಾನ್ಮರುತಃ ಸೋಮಪಾನಸಹಿತಾನ್ಕರೋತಿ ॥**

ಎಲೈ ಇಂದ್ರನೇ, ವೃತ್ರ ಮೊದಲಾದ ಅಸುರರನ್ನು ವಧೆಮಾಡಿದಕಾಲದಲ್ಲಿಯೂ ನಿನ್ನ ಪರಾಕ್ರಮವನ್ನು ಪ್ರದರ್ಶಿಸಿ ಇತರ ಯುದ್ಧಗಳನ್ನು ಮಾಡಿದ ಕಾಲಗಳಲ್ಲಿಯೂ ಆ ನಿನ್ನ ಸಾಹಸಕರ್ಮಗಳನ್ನು ಪ್ರಶಂಸಿಸಿ ನಿನಗೆ ಮಂದಟ್ಟಾಗುವಂತೆ ನಿವೇದನೆಮಾಡಿ ಮರುದ್ದೇವತೆಗಳೊಡನೆ ನಿನ್ನನ್ನು ಸೋಮಪಾನಾರ್ಥವಾಗಿ ಆಹ್ವಾನಮಾಡಿ ನಿನ್ನನ್ನು ಹೋತೃವು (ಮತ್ತು ಯಜ್ಞಮಾಡುವ ಯಜಮಾನನೂ ಸಹ) ಸಂತೋಷಪಡಿಸುತ್ತಾರೆ.



*English Translation*

**[ Why the Marutas are honoured with a separate Shastra ]**

Indra when he was about to kill Vritra. said to all the gods, "stand near me, help me." So they did. They rushed upon Vritra to kill him. He perceived they were rushing upon him for the purpose of killing him. He thought, "I will frighten them." He breathed at them, upon which all the gods were flung away and took to flight; only the Marutas did not leave him (Indra); they exhorted

him by saying, "Strike, O Bhagavanu! kill (Vritra)! Show thy prowess!" This saw a Rishi and recorded it in the verse vritrasya tva svasthad (8, 85, 7) i.e. "all the gods who were associated with Indra left him when flying away by the breathing of Vritra. If thou keepest friendship with the Marutas, thou wilt conquer in all these battles with Vritra."

He (Indra) perceived, "the Marutas are certainly my friends; these (men) love me! well, I shall give them a share in this (my own) celebration (Shastra)." He gave them a share in this celebration. Formerly both (Indra as well as the Marutas) had a place in the Nishkevalya Shastra. (But to reward their great services he granted them more, viz: a separate Marutvatiya Shastra & c.) The share of the Marutas (in the midday libation) is, that the Adhvaryu takes the Marutvatiya Graha, and the Hotar repeats the Marutvatiya Pragatha, the Marutvatiya hymn, and the Marutvatiya Nivid. After having repeated the Marutvatiya Shastra, he recites the Marutvatiya Yajya. Thus he satisfies the deities by giving them their shares. (The Marutvatiya Yajya is) ye trahihatye maghavann (3. 47, 4) i.e., "Drink Indra, the Soma juice, surrounded by the host, the Marutas, who assisted thee, O Maghavam, in the battles with the huge serpent (Ahi)" & c. Wherever Indra remained victor in his various engagements, throngh their assistance, wherever he displayed his prowess, there (in the feast given in his honour) he announced them (the Marutas) as his associates, and made them share in the Soma juice along with him.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ದಶಮಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ಇಂದ್ರನ ಪತ್ನಿಯಾದ ಪ್ರಾಸಹಾದೇವಿಯ ಕಥೆ—ನಿಷ್ಕೇವಲ್ಯಶಸ್ತ್ರದಲ್ಲಿರುವ ಧಾಯ್ಯಾಮಂತ್ರದ ಪೂರ್ವೇತಿಹಾಸ—ರಾಜನು ಶತ್ರುಸೇನೆಯನ್ನು ಸೋಲಿಸುವ ಬಗೆ—ವಿರಾಟ್‌ಛಂದಸ್ಸಿನ ಯಾಜ್ಯಾಮಂತ್ರದಲ್ಲಿ ಎಲ್ಲಾ ದೇವತೆಗಳಿಗೂ ಹವಿರ್ಭಾಗವಿರುವುದು—ಈ ಸಂದರ್ಭದಲ್ಲಿ ವಿರಾಟ್ ಛಂದಸ್ಸಿಗಿರುವ ಪ್ರಾಮುಖ್ಯತೆ.]



ಇಂದ್ರೋ ವೈ ವೃತ್ರಂ ಹತ್ವಾ ಸರ್ವಾ ವಿಜಿತೀರ್ವಿಜಿತ್ಯಾಬ್ರವೀತ್ಪ್ರಜಾಪತಿಮಹಮೇತದಸಾನಿ ಯತ್ತ್ವಮಹಂ ಮಹಾನಸಾನೀತಿ ಸ ಪ್ರಜಾಪತಿರಬ್ರವೀದಥ ಕೋಽಹಮಿತಿ ಯದ್ಯೈವೈತದವೋಚ ಇತ್ಯಬ್ರವೀತ್ತತೋ ವೈ ಕೋ ನಾಮ ಪ್ರಜಾಪತಿರಭವತ್ಕೋ ವೈ ನಾಮ ಪ್ರಜಾಪತಿರ್ಯನ್ಮಹಾನಿಂದ್ರೋಽಭವತ್ತನ್ಮಹೇಂದ್ರಸ್ಯ ಮಹೇಂದ್ರತ್ವಂ ।

ಅಥ ನಿಷ್ಕೇವಲ್ಯಾಖ್ಯಂ ಶಸ್ತ್ರಂ ವಿಧಾತವ್ಯಂ ತಸ್ಯ ಚಾಯಂ ಸಂಗ್ರಹಶ್ಲೋಕಃ-
"ಸ್ತೋತ್ರೇ ಯೋ ಯೋಽನುರೂಪಶ್ಚ ಧಾಯ್ಯಾ ಪ್ರಾಗಾಥಿಕಂ ತಥಾ ॥
ನಿಬದ್ಧಾನೀಯಸೂಕ್ತಂ ಚ ನಿಷ್ಕೇವಲ್ಯೇ ಪ್ರಕೀರ್ತಿತಂ" ಇತಿ ॥ ತದರ್ಥಮಾದಾವುಪಾಖ್ಯಾನಮಾಹ—ಇಂದ್ರಃ ಪುರಾ ವೃತ್ರಂ ಹತ್ವಾ ಸರ್ವಾ ವಿಜಿತೀರ್ಜೇತವ್ಯಾ ಭೂಮೀರ್ವಿಜಿತ್ಯ ಪ್ರಜಾಪತಿಮಿದಮಬ್ರವೀತ್ ॥ ಹೇ ಪ್ರಜಾಪತೇ ತ್ವಮಿದಾನೀಂ ಯದಸಿ, ಏತದಹಮಿತಃ ಪರಮಸಾನಿ ಭವಾನಿ । ಕಿಂ ತದಿತಿ ವೀಕ್ಷಾಯಾಂ ವಿಶೇಷಾಕಾರೇಣೋಚ್ಯತೇ । ಅಹಂ ಮಹಾನಸಾನಿ ಸರ್ವೇಭ್ಯೋ ಭೂತೇಭ್ಯೋಽಧಿಕಃ ಪೂಜ್ಯೋ ಭವಾನೀತಿ ॥ ತತಃ ಸ ಪ್ರಜಾಪತಿರಿದಮಬ್ರವೀತ್ । ಮದೀಯೇ ಮಹತ್ವೇ ತ್ವಯಾ ಸ್ವೀಕೃತೇ ಸತ್ಯನಂತರಮಹಂ ಕೋ ನಾಮ ಭವಿಷ್ಯಾಮೀತಿ । ತತ ಇಂದ್ರ ಇದಮಬ್ರವೀತ್ ॥ ಹೇ ಪ್ರಜಾಪತೇ ಸ್ವಾತ್ಮಾನಮುದ್ದಿಶ್ಯ ನಿವೇದನೇನ ಕ ಇತಿ ಯದೇವೈತದವೋಚಸ್ತದೇವ ತ್ವಂ ಭವೇತಿ ತತ ಆರಭ್ಯ ಕ ಇತ್ಯೇತನ್ನಾಮವಾನ್ಪ್ರಜಾಪತಿರಭೂತ್ । ಏತತ್ಕಶಬ್ದವಾಚ್ಯತ್ವಂ ಸರ್ವತ್ರ ಪ್ರಸಿದ್ಧಂ । ಅತಏವ ಶ್ರುತ್ಯಂತರೇಷು ಪ್ರತಿಗ್ರಹಮಂತ್ರಬ್ರಾಹ್ಮಣ ಏವಮಾಮ್ನಾಯತೇ—ಕ ಇದಂ ಕಸ್ಮಾ ಅದಾದಿತ್ಯಾಹ ಪ್ರಜಾಪತಿರ್ವೈ ಕಃ

**ಪ್ರಜಾಪತಯ ಏವ ತದ್ದದಾತೀತಿ । ಕಶಬ್ದಸ್ಯ ಸುಖವಾಚಿತ್ವಾತ್ತೇನ ಪ್ರಜಾಪತೇರ್ವ್ಯವಹಾರೇ ಸತಿ ಸುಖೀ ಪ್ರಜಾಪತಿರಿತ್ಯುಕ್ತಂ ಭವತಿ ॥ ಪ್ರಜಾಪತಿಗತಂ ಮಹತ್ವಂ ಸ್ವೀಕೃತ್ಯೇಂದ್ರೋ ಯಸ್ಮಾನ್ಮಹಾನಭವತ್ತಸ್ಮಾನ್ಮಹೇಂದ್ರನಾಮ ಸಂಪನ್ನಂ । ಶ್ರುತ್ಯಂತರೇಽಪ್ಯೇತದಾಮ್ನಾತಂ । 'ಇಂದ್ರೋ ವೃತ್ರಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ ಇತಿ ॥**

ಪೂರ್ವದಲ್ಲಿ ಇಂದ್ರನು ವೃತ್ತನನ್ನು ಸಂಹಾರಮಾಡಿದನಂತರ ಭೂಮಂಡಲದ ಸಮಸ್ತ ಪ್ರದೇಶಗಳನ್ನೂ ಜಯಿಸಿ, ಪ್ರಜಾಪತಿಯನ್ನು ಕುರಿತು—ಎಲೈ ಪ್ರಜಾಪತಿಯೇ, ಈಗ ನೀನು ಮಹತ್ಸ್ಥಾನವನ್ನು ಗಳಿಸಿ ಪೂಜ್ಯನಾಗಿರುವಿಯಷ್ಟೆ. ಇನ್ನು ಮೇಲೆ ನಿನ್ನ ಮಹತ್ವಪದವಿಯು ನನಗೆ ಬೇಕು ಎಂದನು. ಅದಕ್ಕೆ ಪ್ರಜಾಪತಿಯು ನನ್ನ ಪದವಿಯನ್ನು ನೀನು ತೆಗೆದುಕೊಂಡರೆ, ಆಗ ನಾನು ಯಾರು (ಕಃ) ನನ್ನ ಸ್ಥಾನಮಾನವೇನು ಎಂದು ಕೇಳಲು, ಅದಕ್ಕೆ ಇಂದ್ರನು—ಎಲೈ ಪ್ರಜಾಪತಿಯೇ, ಈಗ ನೀನೇ ಹೇಳಿದಂತೆ ನಿನ್ನ ಹೆಸರು ಇನ್ನುಮೇಲೆ ಕಃ (ಯಾರು) ಎಂದಾಗುವುದು. ಎಂದರೆ ಕ ಶಬ್ದವಾಚ್ಯನಾಗುವೆ ಎಂದನು. ಆದುದರಿಂದ ಆ ಕಾಲ ಮೊದಲುಗೊಂಡು ಪ್ರಜಾಪತಿಯು ಕ ಶಬ್ದವಾಚ್ಯನಾದನು. ಈ ವಿಷಯವು ಪ್ರಸಿದ್ಧವಾಗಿರುವುದು. ಆದುದರಿಂದಲೇ ಯಾವುದಾದರೂ ದಾನವನ್ನು ಸ್ವೀಕರಿಸುವಾಗ ಪಠಿಸಬೇಕಾದ ಪ್ರತಿಗ್ರಹಮಂತ್ರಗಳಲ್ಲಿ ಈ ವಿಷಯವು ಉಕ್ತವಾಗಿರುವುದು. ಎಂದರೆ—**ಕ ಇದಂ ಕಸ್ಮಾ ಅದಾದಿತ್ಯಾಹ ಪ್ರಜಾಪತಿರ್ವೈ ಕಃ ಪ್ರಜಾಪತಯ ಏವ ತದ್ದದಾತಿ** ಎಂದು ಇತರ ವೇದಗಳ ಬ್ರಾಹ್ಮಣವಾಕ್ಯವಿರುವುದು. ಕ ಶಬ್ದಕ್ಕೆ ಸುಖವೆಂಬ ಅರ್ಥವಿರುವುದರಿಂದ ಪ್ರಜಾಪತಿ ಸಂಬಂಧವಾದ ವ್ಯವಹಾರ ಗಳಲ್ಲಿಯೂ, ವಿಷಯಗಳಲ್ಲಿಯೂ ಪ್ರಜಾಪತಿಯು ಸುಖಸ್ವರೂಪನು ಎಂದೇ ಹೇಳಲ್ಪಡುವುದು. ಈರೀತಿ ಪ್ರಜಾಪತಿಯ ಮಹತ್ತ್ವವನ್ನು ಇಂದ್ರನು ಸ್ವೀಕರಿಸಿದುದರಿಂದ ಇಂದ್ರನಿಗೆ **ಮಹಾನ್** ಎಂಬ ಅಭಿಧಾನವು ಬಂದಿತು. ಎಂದರೆ—ಇಂದ್ರನು ಮಹಾನಿಂದ್ರನಾದನು. ಈ ವಿಷಯವು ಇತರ ವೇದಗಳಲ್ಲಿ—**ಇಂದ್ರೋ ವೃತ್ತಮಹನ್ತಂ ದೇವಾ ಅಬ್ರುವನ್ಮಹಾನ್ವಾ ಅಯಮಭೂದ್ಯೋ ವೃತ್ರಮವಧೀದಿತಿ ತನ್ಮಹೇಂದ್ರಸ್ಯ ಮಹೇಂದ್ರತ್ವಂ ।** ಇಂದ್ರನು ವೃತ್ರನನ್ನು ಸಂಹಾರಮಾಡಿದ ವಿಷಯವನ್ನು ದೇವತೆಗಳು ಪ್ರಶಂಸಿಸುತ್ತಾ ಈ ಇಂದ್ರನು ವೃತ್ರನನ್ನು ಸಂಹಾರಮಾಡಿದ್ದರಿಂದ ಮಹೇಂದ್ರನಾದನು. (ಮಹತ್ವಪದವಿಯನ್ನು ಗಳಿಸಿದನು) ಎಂದರೆ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾದನು. ಇಂದ್ರನಿಗೆ ಮಹೇಂದ್ರನೆಂಬ ಹೆಸರು ಬರಲು ಕಾರಣವು—ಎಂದು ಹೇಳಿದೆ.

**ಸ ಮಹಾನ್ಭೂತ್ವಾ ದೇವತಾ ಅಬ್ರವೀದುದ್ಧಾರಂ ಮ ಉದ್ಧರತೇತಿ ಯಥಾಽಪ್ಯೇತರ್ಹಿ ಇಚ್ಛತಿ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಮಹಾನ್ಭವತಿ ತಂ ದೇವಾ ಅಬ್ರುವನ್ ಸ್ವಯಮೇವ ಬ್ರೂಷ್ವ ಯತ್ತೇ ಭವಿಷ್ಯತೀತಿ ಸ ಏತಂ ಮಾಹೇಂದ್ರಂ ಗ್ರಹಮಬ್ರೂತ ಮಾಧ್ಯಂದಿನಂ ಸವನಾನಾಂ ನಿಷ್ಕೇವಲ್ಯಮುಕ್ಥಾನಾಂ ತ್ರಿಷ್ಟುಭಂ ಛಂದಸಾಂ ಪೃಷ್ಠಂ ಸಾಮ್ನಾಂ ತಮಸ್ಮಾ ಉದ್ಧಾರಮುದಹರನ್ ಉದಸ್ಮಾ ಉದ್ಧಾರಂ ಹರಂತಿ ಯ ಏವಂ ವೇದ ।**

ಅಥೇಂದ್ರಸ್ಯ ಮಹತ್ವಪ್ರಸಕ್ತಂ ಸತ್ಕಾರವಿಶೇಷಂ ದರ್ಶಯತಿ—ಸ ಇಂದ್ರ ಉಕ್ತಪ್ರಕಾರೇಣ ಮಹತ್ವಂ ಪ್ರಾಪ್ಯ ದೇವತಾಃ ಪ್ರತ್ಯೇತದಬ್ರವೀತ್ ॥ ಹೇ ದೇವಾ ಉದ್ಧಾರಮುತ್ಕರ್ಷಂ ನಿಮಿತ್ತೀಕೃತ್ಯ ಯಃ ಪುಂಸಾ ಪೂಜಾವಿಶೇಷೋ ಹ್ರಿಯತೇ ಸಂಪಾದ್ಯತೇ ಸೋಽಯಂ ಸತ್ಕಾರ ಉದ್ಧಾರಸ್ತಂ ಸತ್ಕಾರಭಾಗಂ ಮೇ ಮದರ್ಥಮುದ್ಧರತ ಪೃಥಕ್ಕುರತೇತಿ ॥ ಯಥೇತ್ಯಾದಿನಾ ಲೌಕಿಕದೃಷ್ಟಾಂತ ಉಚ್ಯತೇ । ಯೋ ವೈ ಭವತಿ ಯಃ ಪುಮಾನ್ಭವತ್ಯೈಶ್ವರ್ಯಂ ಪ್ರಾಪ್ನೋತಿ । ಯಶ್ಚ ಶ್ರೇಷ್ಠತಾಂ ವಿದ್ಯಾಚಾರಾದಿಪ್ರಯುಕ್ತವೈಶಿಷ್ಟ್ಯಮಶ್ನುತೇ । ಸ ಪ್ರಾಪ್ತೈಶ್ವರ್ಯೋ ವಿಶಿಷ್ಟಶ್ಚ ಸರ್ವೇಷಾಂ ಮಧ್ಯೇ ಮಹಾನ್ಭವತಿ ॥ ಸ ತಾದೃಶಃ ಪುರುಷ ಏತರ್ಹ್ಯಪೀದಾನೀಮಪಿ ಯಥಾ ವಿಶಿಷ್ಟಪೂಜಾರೂಪಂ ಭಾಗಮಿಚ್ಛತಿ ತಥಾಽಯಮಿಂದ್ರೋಽಪೀತ್ಯಧ್ಯಾಹಾರಃ । ತಮುದ್ಧಾರೇಚ್ಛಾವಂತಮಿಂದ್ರಂ ದೇವಾ ಇದಮಬ್ರುವನ್ ॥ ಹೇ ಇಂದ್ರ ಯತ್ತೇ ಪ್ರಿಯಂ ಭವಿಷ್ಯತಿ ತತ್ಸ್ವಯಮೇವ ಬ್ರೂಷ್ವೇತಿ । ತತಃ ಸ ಇಂದ್ರೋ ಗ್ರಹಾಣಾಂ ಮಧ್ಯ ಏತಂ ಮಾಹೇಂದ್ರಗ್ರಹಮಬ್ರೂತ ತಥಾ ಸವನಾನಾಂ ಮಧ್ಯೇ ಮಾಧ್ಯಂದಿನಂ ಸವನಂ ಶಸ್ತ್ರಾಣಾಂ ಮಧ್ಯೇ ನಿಷ್ಕೇವಲ್ಯಂ ಶಸ್ತ್ರಂ ಛಂದಸಾಂ ಮಧ್ಯೇ ತ್ರಿಷ್ಟುಭಂ ಸಾಮ್ನಾಂ ಮಧ್ಯೇ ಪೃಷ್ಠಸ್ತೋತ್ರನಿಷ್ಪಾದಕಂ ಬೃಹದ್ರಥಂತರವೈರೂಪಾದಿಕಂ । ತತೋ ದೇವಾ ಅಸ್ಮಾ ಇಂದ್ರಾಯ ತಮುದ್ಧಾರಂ ಮಾಹೇಂದ್ರಗ್ರಹಾದಿಕಂ ಯಜ್ಞಾದುದಹರನ್ ॥ ತದೇತಚ್ಛಾಖಾಂತರೇಽಪ್ಯಾಮ್ನಾತಂ ॥ 'ಸ ಏತಂ ಮಾಹೇಂದ್ರಮುದ್ಧಾರಮುದಹರತ ವೃತ್ರಂ ಹತ್ವಾಽನ್ಯಾಸು ದೇವತಾಸ್ವಧೀತಿ ಯನ್ಮಾಹೇಂದ್ರೋ ಗೃಹ್ಯತ ಉದ್ಧಾರಮೇವ ತಂ ಯಜಮಾನ ಉದ್ಧರತೇ ನ ಪ್ರಜಾಸ್ವಧಿ' ಇತಿ ॥ ವೇದನಂ ಪ್ರಶಂಸತಿ ॥

ಬಳಿಕ ಇಂದ್ರನು ಮೇಲೆ ಹೇಳಿದಂತೆ ಮಹತ್ಪದವಿಯನ್ನು ಗಳಿಸಿ ದೇವತೆಗಳನ್ನು ಕರೆದು ಇಂತೆಂದನು – ಎಲೈ ದೇವತೆಗಳೇ, ನಾನು ಮಹತ್ಪದವಿಯನ್ನು ಗಳಿಸಿರುವುದರಿಂದ ಇದರ ನಿಮಿತ್ತವಾಗಿ ಎಂದರೆ ನನ್ನನ್ನು ಅಭಿನಂದಿಸುವುದಕ್ಕಾಗಿ ಗೌರವಸೂಚಕವಾದ ಸತ್ಕಾರವೊಂದನ್ನು ಏರ್ಪಡಿಸಿ ಎಂದನು. ಲೋಕವ್ಯವಹಾರದಲ್ಲಿಯೂ ಸಹ ಒಬ್ಬ ಪುರುಷನಿಗೆ ಅತುಳೈಶ್ವರ್ಯ ಪ್ರಾಪ್ತಿಯಾಗಲಿ, ವಿದ್ಯಾದಿಗಳಲ್ಲಿ ಪ್ರಶಸ್ತಿಯಾಗಲಿ, ರಾಜಸನ್ಮಾನವಾಗಲಿ ಲಭಿಸಿದಲ್ಲಿ ಅಂತಹ ಪುರುಷನು ಜನರ ಮಧ್ಯೆ ಗಣ್ಯನಾದವನೆಂದು ಪ್ರಸಿದ್ಧನಾಗಿರುವುದರಿಂದ, ಜನರು ಸಾಧಾರಣವಾಗಿ ಅಂತಹ ಪುರುಷನನ್ನು ಅಭಿನಂದಿಸಲು ಸತ್ಕಾರಕೂಟವನ್ನು ಏರ್ಪಡಿಸುವುದು ರೂಢಿಯಷ್ಟೆ. ಅದರಂತೆ ಇಂದ್ರನು ದೇವತೆಗಳನ್ನು ಈ ವಿಷಯವಾಗಿ ಪ್ರಶ್ನೆಮಾಡಿದನು. ದೇವತೆಗಳೂ ಸಹ ಇಂದ್ರನ ಮಾತನ್ನನುಮೋದಿಸಿ–– ಎಲೈ ಇಂದ್ರನೇ, ಈ ಸತ್ಕಾರ ಸಮಾರಂಭವನ್ನು ಯಾವರೀತಿ ಮಾಡಬೇಕು ? ಹೇಗೆ ಮಾಡಿದರೆ ನಿನಗೆ ಸಂತೋಷವಾಗುವುದು ? ಅದನ್ನು ನೀನೇ ಹೇಳಬೇಕು. ನಾವು ಅದರಂತೆ ನಡೆಸುವೆವು ಎನ್ನಲು, ಅದಕ್ಕೆ ಇಂದ್ರನು— ಗ್ರಹಗಳ (ಗ್ರಹವೆಂದರೆ ಸೋಮವನ್ನು ಪಾನಮಾಡುವ ಪಾತ್ರವಿಶೇಷ) ಮಧ್ಯದಲ್ಲಿ ಮಾಹೇಂದ್ರ ಗ್ರಹವು (ಮಹೇಂದ್ರನಾದ ನನಗೆ ಅರ್ಪಿಸುವ ಸೋಮಪಾತ್ರೆಯು) ಎಲ್ಲಾ ಗ್ರಹಗಳಿಗಿಂತ ಶ್ರೇಷ್ಠವಾದುದಾಗಿರಬೇಕು. ಅದರಂತೆಯೇ, ಪ್ರಾತಃಸವನ, ಮಾಧ್ಯಂದಿನ ಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿ ಮಾಧ್ಯಂದಿನಸವನವೂ, ಆಶ್ವಿನಶಸ್ತ್ರ, ಮರುತ್ವತೀಯ ಮೊದಲಾದ ಶಸ್ತ್ರ (ಮಂತ್ರ)ಗಳಲ್ಲಿ ನಿಷ್ಕೇವಲ್ಯಶಸ್ತ್ರವೂ, ಗಾಯತ್ರ್ಯಾದಿಛಂದಸ್ಸುಗಳಲ್ಲಿ ತ್ರಿಷ್ಟುಪ್‌ಛಂದಸ್ಸೂ, ಸಾಮಗಾನಗಳ ಮಧ್ಯದಲ್ಲಿ ಪೃಷ್ಠಸ್ತೋತ್ರನಿಷ್ಪಾದಕವಾದ ಬೃಹದ್ರಥಂತರಸಾಮವೂ, ಶ್ರೇಷ್ಠವಾಗಿರುವುದೆಂದು ನೀವು ಅನುಮೋದಿಸಬೇಕು. ಏಕೆಂದರೆ ಅವುಗಳೆಲ್ಲಾ ನನಗೆ ಪ್ರಿಯವಾಗಿರುವವು. ಇದೇ ನೀವು ನನಗೆ ಮಾಡುವ ಸತ್ಕಾರವು ಎಂದನು. ದೇವತೆಗಳು ಹಾಗೆಯೇ ಆಗಲೆಂದೊಪ್ಪಿ ಯಜ್ಞಾದಿಗಳಲ್ಲಿ ಮಾಹೇಂದ್ರಗ್ರಹಾದಿಗಳಿಗೆ ಶ್ರೇಷ್ಠತೆಯನ್ನು ಅನುಮೋದಿಸಿದರು. ಈ ವಿಷಯವು ಇತರ ವೇದಗಳಲ್ಲಿಯೂ—

ಸ ಏತಂ ಮಾಹೇಂದ್ರಮುದಹರತ ವೃತ್ರಂ ಹತ್ವಾನ್ಯಾಸು ದೇವತಾಸ್ವಧೀತಿ ಯನ್ಮಾಹೇಂದ್ರೋ ಗೃಹ್ಯತ ಉದ್ಧಾರಮೇವ ತಂ ಯಜಮಾನ ಉದ್ಧರತೇ ನ ಪ್ರಜಾಸ್ವಧಿ । ಎಂದು ಹೇಳಿರುವುದು. ಈ ವಿಷಯವನ್ನು ಯಜ್ಞ ಮಾಡುವ ಯಾವ ಯಜಮಾನನು ತಿಳಿಯುವನೋ ಅವನು ಜನರಲ್ಲಿ ಶ್ರೇಷ್ಠತೆಯನ್ನೂ, ಗಣ್ಯತೆಯನ್ನೂ ಪಡೆಯುವನು.

ತಂ ದೇವಾ ಅಬ್ರುವನ್ಸರ್ವಂ ವಾ ಅವೋಚಥಾ ಅಪಿ ನೋಽತ್ರಾಸ್ತ್ವಿತಿ
ಸ ನೇತ್ಯಬ್ರವೀತ್ಕಥಂ ವೋಽಪಿ ಸ್ಯಾದಿತಿ ತಮಬ್ರುವನ್ನಪ್ಯೇವ
ನೋಽಸ್ತು ಮಘವನ್ನಿತಿ ತಾನೀಕ್ಷತೈವ ॥

ಉದ್ಧಾರಭಾಗಂ ದತ್ತವತಾಂ ದೇವಾನಾಂ ತಸ್ಮಿನ್ನುದ್ಧಾರೇ ಸ್ವಾಪೇಕ್ಷಿತಭಾಗಪ್ರಾರ್ಥನಾಂ ದರ್ಶಯತಿ—ಉದ್ಧಾರಯುಕ್ತಂ ತಮಿಂದ್ರಮಿತರೇ ದೇವಾ ಇದಮಬ್ರುವನ್ ॥ ಹೇ ಮಘವನ್ನಿಂದ್ರ ಸರ್ವಮೇವ ಯಜ್ಞಂ ಸ್ವಸಂಬಂಧಿತ್ವೇನೋಕ್ತವಾನಸಿ, ಅಸ್ಮಾಕಮಪ್ಯತ್ರ ಸಾರೋ ಭಾಗೋಽಸ್ತ್ವಿತಿ ॥ ತತಃ ಸ ಇಂದ್ರ ಏವಮಬ್ರವೀತ್ ॥ ಅಯಂ ಸಾರಃ ಸರ್ವೋಽಪಿ ಮಮೈವಾಪೇಕ್ಷಿತೋ ಯುಷ್ಮಾಕಮಪ್ಯತ್ರ ಭಾಗಃ ಕಥಂ ಸ್ಯಾನ್ನಾಸ್ತ್ಯೇವ ಯುಷ್ಮಾಕಂ ಭಾಗ ಇತಿ ॥ ನಿರಾಕೃತವಂತಂ ತಮಿಂದ್ರಂ ದೇವಾಃ ಪ್ರಾರ್ಥಯಮಾನಾ ಇದಮಬ್ರುವನ್ ॥ ಹೇ ಮಘವನ್ನೋಽಸ್ಮಾಕಮಪ್ಯಸ್ತ್ವೇವ ಸರ್ವಥಾ ಭಾಗೋಽಪೇಕ್ಷಿತ ಏವೇತಿ ॥ ತತಃ ಸ ಇಂದ್ರಸ್ತಾನ್ದೇವಾನೀಕ್ಷತೈವಾನುಗ್ರಹದೃಷ್ಟ್ಯಾಽವಲೋಕಿತವಾನೇವ ॥

ಅನಂತರ ದೇವತೆಗಳು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನಾವು ನಿನ್ನನ್ನು ಸತ್ಕರಿಸಿ ಯಜ್ಞದಲ್ಲಿ ನಿನಗೆ ಬೇಕಾದ ಸಾರವಸ್ತುಗಳನ್ನೆಲ್ಲಾ ಅರ್ಪಿಸಿರುವೆವು. ಸಾರವಾದ ಎಲ್ಲಾ ವಸ್ತುಗಳನ್ನೂ ನೀನೇ ತೆಗೆದುಕೊಂಡಿರುವೆ. ಇವುಗಳಲ್ಲಿ ಕೆಲವನ್ನು ನಮಗೂ ಕೊಡು ಎಂದರು. ಇಂದ್ರನು—ಅದಾಗುವುದಿಲ್ಲ. ಈ ಸಾರವಸ್ತುಗಳನ್ನೆಲ್ಲಾ ನಾನೇ ಅಪೇಕ್ಷಿಸಿದೆನು. ಅವೆಲ್ಲಾ ನನಗೆ ಲಭಿಸಿತು. ನಿಮಗೆ ಕೊಡಲು ಕಾರಣವೇನು? ಎಂದನು. ದೇವತೆಗಳು ಮತ್ತೆ—ಎಲೈ ಇಂದ್ರನೇ, ಈರೀತಿ ನಮ್ಮ ಪ್ರಾರ್ಥನೆಯನ್ನು ನಿರಾಕರಿಸಬೇಡ. ನಮಗೂ ಸ್ವಲ್ಪ ಭಾಗವನ್ನು ಕೊಡು ಎಂದು ಪ್ರಾರ್ಥಿಸಲು ಇಂದ್ರನು ಅವರನ್ನು ಅನುಗ್ರಹದೃಷ್ಟಿಯಿಂದ ನೋಡಿದನು. ಮತ್ತೇನನ್ನೂ ಹೇಳಲಿಲ್ಲ.

*English Translation*

**(Indra wishes for Prajapati's rank. Why Prajapati is called kah. Indra's share in the sacrifice)**

Indra after having slain Vritra and remained victor in various battles, said to Prajapati, "I will have thy rank, that of the supreme deity; I will be great!" Prajapati said, "Who am I" (ko aham)? Indra answered, "just what thou hast told (i.e. kah, who?)" Thence Prajapathi received the name kah, who? Prajapati is (the god) kah, who? Indra is called mahendra, i.e., the great Indra, because he had become great (greater than all the other gods).

He, after having become great, said to the gods, "give me a distinguished reception!" just as one here (in this world) who is (great) wishes for honourable distinction and he who attains to an eminent position, is great. The gods said to him, "tell it yourself what shall be yours (as a mark of distinction)." He answered. "This Mahendra Soma jar (Graha), among the libations that of the midday, among the Shastras the Nishkevalya, among the metres the Trishtubh and among the Samans the Pristha. They thus gave him these marks of distinction. They give them also to him who has such a knowledge. The gods said to him, "thou hast chosen for thyself all; let some of these things (just mentioned) be ours also." He said, "No, why should anything belong to you?" They answered, "let it belong to us, Maghavann." He only looked at them (as if conniving).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ದಶಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು
ಸಮಾಪ್ತವಾದುದು.



## ಅಥ ದ್ವಾದಶಾಧ್ಯಾಯೇ ಏಕಾದಶಃ ಖಂಡಃ

### ಹನ್ನೆರಡನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು



[ಋಕ್ಕುಗಳಿಗೂ ಸಾಮಕ್ಕೂ ಇರುವ ನಿಕಟಸಂಬಂಧವು—ಸಾಮಗಾನಮಾಡುವ ಋತ್ವಿಜರು ಏತಕ್ಕಾಗಿ ಮೂರು ಋಕ್ಕುಗಳನ್ನು (ತೃಚ) ಪಠಿಸಿ ಗಾನಮಾಡುವರು—ಈ ಋಕ್ ಮತ್ತು ಸಾಮಮಂತ್ರಗಳ ಐದುವಿಧ ಪ್ರಭೇದಗಳು—ಈ ಎರಡು ವಿಧವೂ ವಿರಾಟ್‌ಛಂದಸ್ಸಿನಲ್ಲಿರುವುದು—ನಿಷ್ಕೇವಲ್ಯಶಸ್ತ್ರದ ಐದು ವಿಭಾಗಗಳು.]

---

**ತೇ ದೇವಾ ಅಬ್ರುವನ್ನಿಯಂ ವಾ ಇಂದ್ರಸ್ಯ ಪ್ರಿಯಾ ಜಾಯಾ ವಾವಾತಾ ಪ್ರಾಸಹಾ ನಾಮಾಸ್ಯಾಮೇವೇಚ್ಛಾಮಹಾ ಇತಿ ತಥೇತಿ ತಸ್ಯಾಮೈಚ್ಛಂತ ಸೈನಾನಬ್ರವೀತ್ಪ್ರಾತರ್ವಃ ಪ್ರತಿವ-**

ಕ್ವಾಸ್ಮೀತಿ ತಸ್ಮಾತ್ಸ್ತ್ರಿಯಃ ಪತ್ಯಾವಿಚ್ಛಂತೇ ತಸ್ಮಾದು ಸ್ತ್ರ್ಯನು-ರಾತ್ರಂ ಪತ್ಯಾವಿಚ್ಛತೇ ತಾಂ ಪ್ರಾತರುಪಾಯನ್ನೈತದೇವ ಪ್ರತ್ಯಪದ್ಯತ ।

ಅಥ ನಿಷ್ಕೇವಲ್ಯಶಸ್ತ್ರೇ ಯಾಜ್ಯಾಂ ವಿಧಾತುಂ ಪೂರ್ವೋಪಾಖ್ಯಾನಶೇಷಂ ಪ್ರಸ್ತೌತಿ ॥ ತೇ ದೇವಾ ಇಂದ್ರಸ್ಯಾಭಿಪ್ರಾಯಮಜಾನಂತಃ ಪರಸ್ಪರಮಿದಮಬ್ರುರ್ವ ॥ ಇಯಂ ವೈ ಪುರತೋ ದೃಶ್ಯಮಾನೈವೇಂದ್ರಸ್ಯ ಪ್ರಿಯಾ ಜಾಯಾ ಸಾ ವಾವಾತಾ ಮಧ್ಯಮಜಾತೀಯಾ । ರಾಜ್ಞಾಂ ಹಿ ತ್ರಿವಿಧಾಃ ಸ್ತ್ರಿಯಸ್ತತ್ರೋತ್ತಮಜಾತೇರ್ಮಹಿಷೀತಿ ನಾಮ ॥ ಮಧ್ಯಮಜಾ-ತೇರ್ವಾವಾತೇತಿ । ಅಧಮಜಾತೇಃ ಪರಿವೃಕ್ತಿರಿತಿ । ಅತ ಏವಾಶ್ವಮೇಧೇಽಶ್ವಂ ಪ್ರತಿ ರಾಜ-ಸ್ತ್ರೀಣಾಂ ಕರ್ತವ್ಯವಿಶೇಷ ಏತೈರ್ನಾಮಭಿರಾಮ್ನಾತಃ-ಭೂರಿತಿ ಮಹಿಷೀ ಭುವ ಇತಿ ವಾವಾತಾ ಸುವರಿತಿ ಪರಿವೃಕ್ತಿರಿತಿ ॥ ತಸ್ಯಾಶ್ಚ ವಾವಾತಾಯಾಃ ಪ್ರಾಸಹೇತಿ ನಾಮ ರಾಜಪ್ರಿಯತ್ವಾತ್ ॥ ಪ್ರಸಹ್ಯ ಬಲಾತ್ಕಾರೇಣ ಸರ್ವಂ ಕಾರ್ಯಂ ಕರ್ತುಂ ಶಕ್ತೇತ್ಯರ್ಥಃ ॥ ತಸ್ಮಾದೇತಸ್ಯಾಮೇವ ನಿಮಿತ್ತಭೂತಾಯಾಂ ಸತ್ಯಾಂ ರಾಜಾಭಿಪ್ರಾಯಂ ಜ್ಞಾತುಮಿಚ್ಛಾಮಹಾ ಇತಿ ವಿಚಾರ್ಯ ಸರ್ವೇಽಂಗೀಕೃತ್ಯ ತಸ್ಯಾಂ ವಾವಾತಾಯಾಂ ಸ್ವಾಭೀಷ್ಟಮೈಚ್ಛಂತ ॥ ಸಾಪಿ ವಾವಾತೈತಾನ್ದೇ-ವಾನಿದಮಬ್ರವೀತ್ ॥ ರಾತ್ರೌ ರಾಜಾಭಿಪ್ರಾಯಂ ವಿಚಾರಯಿತುಂ ಶಕ್ಯತ್ವಾತ್ಪರೇದ್ಯುಃ ಪ್ರಾತಃ-ಕಾಲೇ ವೋ ಯುಷ್ಮಾಕಂ ಪ್ರತ್ಯುತ್ತರಂ ವಕ್ತಾಽಸ್ಮಿ ವಕ್ಷ್ಯಾಮೀತಿ ॥ ಯಸ್ಮಾದೇವಂ ತಸ್ಮಾ-ಲ್ಲೋಕೇಽಪಿ ಪ್ರಿಯಾಃ ಸ್ತ್ರಿಯಃ ಸರ್ವಮವಗಂತವ್ಯಂ ವೃತ್ತಾಂತಂ ಪತ್ಯಾವವಗಂತುಮಿಚ್ಛಂತೇ ॥ ಯಸ್ಮಾದ್ವಿವಿಕ್ತಾವಸರೇ ಸರ್ವಮವಗಂತುಂ ಸುಶಕಂ ತಸ್ಮಾದು ತಸ್ಮಾದೇವ ಕಾರಣಾತ್ಪ್ರಿಯಾ ಸ್ತ್ರೀ, ಅನುರಾತ್ರಂ ರಾತ್ರಿಸಮಯೇ ವಿವಿಕ್ತವೇಲಾಯಾಂ ಪತ್ಯೌ ಸರ್ವಮವಗಂತುಮಿಚ್ಛತೇ । ದೇವಾಸ್ತು ಪ್ರಾತಃಕಾಲೇ ವಾವಾತಾಮುಪಾಗಚ್ಛನ್ ॥ ಸಾ ವಾವಾತೈತದೇವ ವಕ್ಷ್ಯಮಾಣ ಮಂತ್ರರೂಪಂ ವಾಕ್ಯಂ ಪ್ರತ್ಯುತ್ತರತ್ವೇನ ಪ್ರಾಪ್ತವತೀ ।

ಇಂದ್ರನು ಯಾವ ಮಾತನ್ನೂ ಆಡದ್ದರಿಂದ ದೇವತೆಗಳಿಗೆ ಇಂದ್ರನ ಅಭಿಪ್ರಾಯವು ತಿಳಿಯಲಿಲ್ಲ. ಆದ್ದರಿಂದ ಅವರು ಪರಸ್ಪರ ಈ ರೀತಿ ಮಾತನಾಡಿಕೊಂಡರು. ಈಗ ನಮ್ಮೆದುರಿಗೆ ಇರುವ ಈ ಸ್ತ್ರೀಯು ಇಂದ್ರನಿಗೆ ಪ್ರೀತಿಪಾತ್ರಳಾದ ಪತ್ನಿಯು. ಇವಳು ಮಧ್ಯಮಜಾತಿಯವಳು. ಇವಳ ಹೆಸರು ವಾವಾತಾ ಎಂದು. ರಾಜರಿಗೆ ಮೂರುವಿಧವಾದ ಪತ್ನಿಯರು ಇರುವರು. ಅವರಲ್ಲಿ ಉತ್ತಮಜಾತಿಯ ಪತ್ನಿಗೆ ಮಹಿಷಿ ಎಂದೂ, ಮಧ್ಯಮ ಜಾತಿಯ ಪತ್ನಿಗೆ ವಾವಾತಾ ಎಂದೂ, ಅಧಮ ಜಾತಿಯ ಪತ್ನಿಗೆ ಪರಿವೃಕ್ತಿ ಎಂದೂ ಹೇಳುವ ರೂಢಿ ಇದೆ. ಆದ್ದರಿಂದಲೇ ಅಶ್ವಮೇಧಯಜ್ಞದಲ್ಲಿ ಸ್ತ್ರೀಯರು ಮಾಡಬೇಕಾದ ಕರ್ತವ್ಯಕರ್ಮಗಳಲ್ಲಿ **ಮಹಿಷಿ**ಯನ್ನು **ಭೂಃ** ಎಂಬ ಶಬ್ದದಿಂದಲೂ **ವಾವಾತ** ಎಂಬ ಪತ್ನಿಯನ್ನು **ಭುವಃ** ಎಂಬ ಶಬ್ದ ದಿಂದಲೂ **ಪರಿವೃಕ್ತಿ** ಎಂಬ ಪತ್ನಿಯನ್ನು **ಸುವಃ** ಎಂಬ ಶಬ್ದದಿಂದಲೂ ನಿರ್ದೇಶಿಸುವರು. ಈ ಮೂವರಲ್ಲಿ **ವಾವಾತ** ಎಂಬ ಮಧ್ಯಮಜಾತಿಗೆ ಸೇರಿದ ಪತ್ನಿಗೆ **ಪ್ರಾಸಹಾ** ಎಂದು ಹೆಸರಿದೆ. ಏಕೆಂದರೆ ಈ ಪತ್ನಿಯು ಪತಿಯ ಇಷ್ಟವನ್ನು ತಿಳಿದು ಅದರಂತೆ ವರ್ತಿಸುತ್ತಾ ಬಲಾತ್ಕಾರದಿಂದ ಸಮಸ್ತ ಕೆಲಸವನ್ನೂ ಮಾಡಲು ಸಮರ್ಥಳಾದ್ದರಿಂದ ಇವಳು ರಾಜನಿಗೆ ಬಹಳ ಪ್ರೀತಿಪಾತ್ರ ಳಾಗಿರುವಳು. ಆದ್ದರಿಂದ ಇವಳ ಮೂಲಕ ರಾಜನಾದ ಇಂದ್ರನ ಅಭಿಪ್ರಾಯವನ್ನು ತಿಳಿದುಕೊಳ್ಳುವುದು ಯುಕ್ತವೆಂದರಿತು,

ಇವಳಲ್ಲಿ ತಮ್ಮ ವಿಚಾರವನ್ನು ಅರಿಕೆಮಾಡಿಕೊಂಡರು. ಅದನ್ನು ಕೇಳಿ ವಾವಾತೆಯು—ಎಲೈ ದೇವತೆಗಳೇ, ನಿಮ್ಮ ವಿಚಾರವನ್ನು ಇಂದ್ರನಿಗೆ ತಿಳಿಸಿ ಅವನ ಅಭಿಪ್ರಾಯವನ್ನು ತಿಳಿಯಬೇಕಾದರೆ ಈಗ ಸರಿಯಾದ ಕಾಲವಲ್ಲ. ಲೋಕದಲ್ಲಿ ಸ್ತ್ರೀಯರು ತಮ್ಮ ಪತಿಗೆ ತಿಳಿಸಬೇಕಾದ ಯಾವ ಮುಖ್ಯ ವಿಷಯವನ್ನಾಗಲಿ ಏಕಾಂತದಲ್ಲಿರುವಾಗ ತಿಳಿಸುವುದು ರೂಢಿಯಷ್ಟೆ. ಏಕಾಂತದಲ್ಲಿರುವಾಗ ಯಾವ ವಿಧವಾದ ಅಡ್ಡಿ ಆತಂಕಗಳಿಲ್ಲದೆ ಇರುವುದರಿಂದ ಸ್ತ್ರೀಯರು ಹೇಳಿದ್ದನ್ನು ಪುರುಷನು ಸಹಾನುಭೂತಿಯಿಂದ ಕೇಳಿ ಯೋಗ್ಯವಾದ ಉತ್ತರವನ್ನು ಹೇಳುವನು. ಆದ್ದರಿಂದ ನಾನು ಈ ರಾತ್ರಿ ಇಂದ್ರನೊಡನೆ ಏಕಾಂತದಲ್ಲಿರುವಾಗ ನಿಮ್ಮ ವಿಷಯವನ್ನು ಪ್ರಸ್ತಾಪಮಾಡಿ ಇಂದ್ರನ ಅಭಿಪ್ರಾಯವನ್ನು ತಿಳಿದುಕೊಳ್ಳುವೆನು. ಆದ್ದರಿಂದ ನೀವು ನಾಳೆ ಬೆಳಿಗ್ಗೆ ಬಂದರೆ ಇಂದ್ರನ ಪ್ರತ್ಯುತ್ತರವನ್ನು ತಿಳಿಸುವೆನು ಎಂದಳು. ದೇವತೆಗಳು ಹಾಗೇ ಆಗಲೆಂದು ಹೇಳಿ ಮಾರನೆಯ ದಿವಸ ಪ್ರಾತಃಕಾಲ ಬಂದು ಕೇಳಲು, ಆ ವಾವಾತೆಯು ಪ್ರತ್ಯುತ್ತರರೂಪವಾಗಿ ಮಂತ್ರರೂಪವಾದ ಈ ವಾಕ್ಯವನ್ನು ಹೇಳಿದಳು—

**ಯದ್ವಾವಾನ ಪುರುತಮಂ ಪುರಾಷಾಳಾ ವೃತ್ರಹೇಂದ್ರೋ ನಾಮಾ-ನ್ಯಪ್ರಾಃ । ಅಚೇತಿ ಪ್ರಾಸಹಸ್ಪತಿಸ್ತುವಿಷ್ಮಾನಿತಿ॥ ಇಂದ್ರೋ ವೈ ಪ್ರಾಸಹಸ್ಪತಿಸ್ತುವಿಷ್ಮಾನ್ ।**

ತಸ್ಮಿನ್ಮಂತ್ರೇ ಪಾದತ್ರಯಂ ಪಠತಿ ॥ ಪುರಾತನಾನಾಂ ಪುರುಷಾಣಾಂ ಮಧ್ಯೇ ಸಹಿಷ್ಣುಃ ಪುರುಷ ಇಂದ್ರಃ ಸ ಚ ಪುರುತಮಮತಿಶಯೇನ ಪ್ರಭೂತಂ ಯದುದ್ಧಾರಿತರೂಪಂ ವಸ್ತು ವಾವಾನ ॥ ಆದೌ ದೀರ್ಘಶ್ಛಾಂದಸಃ । ವವಾನ ಸಮ್ಯಗ್ಭೇಜೇ ಲಬ್ಧವಾನಿತ್ಯರ್ಥಃ ॥ ಸ ಚ ವೃತ್ರಹೇಂದ್ರಸ್ತಸ್ಮಿನ್ನುದ್ಧಾರೇ ನಾಮಾನಿ, ಆಪ್ರಾ ಮಾಹೇಂದ್ರಗ್ರಹೋ ಮಾಧ್ಯಂದಿನಮಿತ್ಯಾ-ದೀನಿ ಸ್ವಾಭೀಷ್ಟನಾಮಾನ್ಯಾ ಸಮಂತಾತ್ಪೂರಿತವಾನ್॥ ಪ್ರಕೃಷ್ಟಂ ಸಹೋ ಬಲಂ ಯೇಷಾಂ ತೇ ಪ್ರಾಸಹಾಸ್ತೇಷಾಂ ಪತಿಃ ಪ್ರಾಸಹಸ್ಪತಿರಿಂದ್ರಃ, ಅಚೇತಿ, ಅಜ್ಞಾನಾದ್ದೇವಾನಾಮಭೀಷ್ಟಂ ಜ್ಞಾತವಾನ್ಕಟಾಕ್ಷೇಣಾನುಗೃಹೀತವಾನಿತ್ಯರ್ಥಃ ॥ ಸ ಚೇಂದ್ರಸ್ತುವಿಷ್ಮಾನ್ಬಹುಧನವಾನ್ ॥ ಅಸ್ಮಿಂಸ್ತೃತೀಯಪಾದೇ ಪಾದಯೋರಪ್ರಸಿದ್ಧತ್ವಾದರ್ಥಂ ವ್ಯಾಚಷ್ಟೇ—

ಪುರಾತನ ಪುರುಷರ ಮಧ್ಯದಲ್ಲಿ ಇಂದ್ರನು ವೃತ್ರನನ್ನು ಸಂಹಾರಮಾಡಿ, ಇತರ ಅನೇಕ ಯುದ್ಧಗಳಲ್ಲಿಯೂ ಜಯಶಾಲಿಯಾಗಿ ಪ್ರಪಂಚದಲ್ಲೆಲ್ಲಾ ಖ್ಯಾತಿಯನ್ನು ಗಳಿಸಿರುವನು. ಆದ್ದರಿಂದ ಇಂದ್ರನಿಗೆ ಪ್ರಾಸಹಸ್ಪತಿ ಎಂಬ ಹೆಸರು. ಪ್ರ–ಅತಿಶಯವಾದ, ಸಹಃ–ಬಲಕ್ಕೆ, ಪತಿಃ–ಪ್ರಭುವು, ಅತ್ಯಂತ ಬಲಶಾಲಿಯು ಎಂಬ ಹೆಸರು ಅನ್ವರ್ಥನಾಮವಾಗಿರುವುದು. ಇಂತಹ ಹೆಸರನ್ನು ವೃತ್ರಸಂಹಾರರೂಪವಾದ ಮಹಾಕಾರ್ಯದಿಂದ ಗಳಿಸಿ, ಮಾಹೇಂದ್ರ ಗ್ರಹ, ಮಾಧ್ಯಂದಿನಸವನ ಮೊದಲಾದ ಪ್ರಶಸ್ತಿನಾಮಗಳು ತನಗೆ ಅತ್ಯಂತ ಪ್ರಿಯವಾಗಿರುವುದೆಂದು ಪ್ರಪಂಚದಲ್ಲೆಲ್ಲಾ ಹರಡಿರುವನು. ಈ ಇಂದ್ರನು ದೇವತೆಗಳ ಅಭೀಷ್ಟವೇನೆಂಬುದನ್ನೂ ತಿಳಿದೇ ಇರುವನು. ಮತ್ತು ಇವನು ಬಹಳ ಬಲಶಾಲಿಯು—ಎಂದು ಈ ಋಕ್ಕಿನ ಮೂರು ಪಾದಗಳಿಗೆ ಅರ್ಥವು. ಇದನ್ನೇ ವಾವಾತೆಯು ದೇವತೆಗಳಿಗೆ ತಿಳಿಸಿದಳು.

**ಯದೀಮುಶ್ಮಸಿ ಕರ್ತವೇ ಕರತ್ತದಿತಿ ಯದೇವೈತದವೋಚಾಮಾಕರ-ತ್ತದಿತ್ಯೇವೈನಾಂಸ್ತದಬ್ರವೀತ್ ॥**

ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ—ಪಾದತ್ರಯೋಕ್ತಂ ವಾವಾತಾಯಾ ವಚನಂ ಶ್ರುತ್ವಾ ಚತುರ್ಥಪಾದೇನ ದೇವಾಃ ಪರಸ್ಪರಂ ಬ್ರುವತೇ ಯದಿ, ಈಂ ಯದಿದಮಸ್ಮಾಕಮ-ಪ್ಯತ್ರ ಭಾಗೋಽಸ್ತ್ವಿತ್ಯೇತಾದೃಶಂ ಕಾರ್ಯಂ ಕರ್ತವೇ ಕರ್ತುಮುಶ್ಮಸಿ ವಯಂ ಸರ್ವೇ ಕಾಮಯಾಮಹೇ ತತ್ಸರ್ವಮಕರದಿಂದ್ರಃ ಸಂಪೂರ್ಣಮಕರೋತ್ ॥ ಅಥವಾ ಚತುರ್ಥ-ಪಾದೋಽಪಿ ವಾವಾತಾಯಾ ಏವ ವಚನಂ । ಹೇ ದೇವಾ ವಯಂ ಸರ್ವೇ ಯದಿದಂ ಕಾರ್ಯಂ ಕರ್ತುಂ ಕಾಮಯಾಮಹೇ ತದ್ಯುಷ್ಮದ್ಭಾಗಪ್ರದಾನರೂಪಂ ಕಾರ್ಯಮಿಂದ್ರೋಽಕರೋದಿತಿ । ಇದಮೇವ ದ್ವಿತೀಯಂ ವ್ಯಾಖ್ಯಾನಂ ಯದೇವೈತದಿತ್ಯಾದಿಬ್ರಾಹ್ಮಣೇನ ಸ್ಪಷ್ಟೀಕೃತಂ ॥ ಹೇ ದೇವಾ ಮಯಾ ಸಹ ಯುಷ್ಮಾಭಿರಾಲೋಚಿತಂ ಕಾರ್ಯಮಿಂದ್ರಃ ಕೃತವಾನಿತ್ಯನೇನೈವ ಪ್ರಕಾರೇಣ ತಸ್ಮಿನ್ಮಂತ್ರೇ ಸಾ ವಾವಾತಾಽಬ್ರವೀತ್ ॥

ಮೇಲೆ ಹೇಳಿದಂತೆ ಮಂತ್ರದ ಮೂರು ಪಾದಗಳಿಂದ ವಾವಾತೆಯು ಹೇಳಿದ ಉತ್ತರವನ್ನು ಕೇಳಿ ದೇವತೆಗಳು—**ಯದೀಮುಶ್ಮಸಿ ಕರ್ತವೇ ಕರತ್ತತ್** । ಎಂಬ ನಾಲ್ಕನೆಯ ಪಾದದಿಂದ ತಮ್ಮತಮ್ಮಲ್ಲಿ ಮಾತನಾಡಿಕೊಂಡರು. ನಮಗೂ ಯಜ್ಞದಲ್ಲಿ ಭಾಗವಿರುವುದಾದರೆ ಮತ್ತು ಇಂದ್ರನು ನಮಗೆ ಆ ಯಜ್ಞಭಾಗವನ್ನು ಕಲ್ಪಿಸಿಕೊಡುವುದಾದರೆ, ನಮ್ಮ ಅಪೇಕ್ಷೆಯನ್ನು ಇಂದ್ರನು ನೆರವೇರಿಸಿದಂತಾಗುವುದು ಎಂದು, ಅಥವಾ ಈ ನಾಲ್ಕನೆಯ ಪಾದದ ವಾಕ್ಯವನ್ನು ವಾವಾತೆಯು ಪ್ರತ್ಯುತ್ತರವೆಂದೇ ಪರಿಗಣಿಸುವುದಾದರೆ ಆಗ—ಎಲೈ ದೇವತೆಗಳೇ, ನೀವು ಆಲೋಚಿಸಿ ಇಂದ್ರನನ್ನು ಪ್ರಾರ್ಥಿಸಿದ ಕಾರ್ಯವನ್ನು ಇಂದ್ರನು ನೆರವೇರಿಸುತ್ತಾನೆ ಅಥವಾ ನೆರವೇರಿಸುವನು, ಎಂದು ಚತುರ್ಥಪಾದದ ಅರ್ಥವು. ಅದನ್ನೇ ಇಲ್ಲಿ ಸ್ಪಷ್ಟವಾಗಿ ಹೇಳಿರುವುದು.

## ತೇ ದೇವಾ ಅಬ್ರುವನ್ನಪ್ಯಸ್ಯಾ ಇಹಾಸ್ತು ಯಾ ನೋಽಸ್ಮಿನ್ನ ನ್ಯೈಕಮವಿದದಿತಿ ತಥೇತಿ ತಸ್ಯಾ ಅಪ್ಯತ್ರಾಕುರ್ವನ್ ॥

ಉಪಾಖ್ಯಾನವಿಶೇಷಂ ದರ್ಶಯತಿ—ತೇ ದೇವಾ ವಾವಾತಾಯಾ ಉತ್ತರಂ ಶ್ರುತ್ವಾ ಪರಸ್ಪರಮಿದಮಬ್ರುವನ್ ॥ ವಾವಾತಾ ನೋಽಸ್ಮಾಕಮುಪಕಾರಿಣ್ಯಸ್ಮಿನ್ನಿಷ್ಕೇವಲ್ಯೇ ಶಸ್ತ್ರೇ ಕಮಪಿ ಸಂಬಂಧಂ ನ ವಾ ಅವಿದನ್ನೈವ ಲಬ್ಧವತೀ ॥ ಅಸ್ಯಾ ಅಪಿ ವಾವಾತಾಯಾ ಇಹ ನಿಷ್ಕೇ-ವಲ್ಯೇ ಶಸ್ತ್ರೇ ಸಂಬನ್ಧೋಽಸ್ತು । ಇತ್ಯೇತದಂಗೀಕೃತ್ಯ ತಸ್ಯಾ ಅಪ್ಯತ್ರ ಸಂಬಂಧಮಕುರ್ವನ್ ॥

ಈ ರೀತಿ ಹೇಳಿದ ವಾವಾತೆಯ ಪ್ರತ್ಯುತ್ತರವನ್ನು ದೇವತೆಗಳು ಕೇಳಿ ಈ ವಾವಾತೆಯು ದೇವತೆಗಳಾದ ನಮಗೆ ಬಹಳ ಉಪಕಾರಮಾಡಿದ್ದಾಳೆ. ಆದ್ದರಿಂದ ಇವಳಿಗೆ ನಾವು ಪ್ರತ್ಯುಪಕಾರವನ್ನು ಮಾಡಬೇಕಾಗಿರುವುದು. ನಿಷ್ಕೇವಲ್ಯಶಸ್ತ್ರದಲ್ಲಿ ಈ ವಾವಾತೆಗೆ ಯಾವುದಾದರೂ ಸಂಬಂಧವಿದೆಯೋ ಇಲ್ಲವೋ ತಿಳಿಯದು. ಹೇಗಾದರೂ ಆಗಲಿ ಈ ವಾವಾತೆಗೆ ನಿಷ್ಕೇವಲ್ಯ ಶಸ್ತ್ರದಲ್ಲಿ ಯೋಗ್ಯವಾದ ಸಂಬಂಧವನ್ನು ಕಲ್ಪಿಸೋಣ ಎಂದು ಯೋಚಿಸಿ ಅದರಂತೆ ಮಾಡಿದರು.

## ತಸ್ಮಾದೇಷಾತ್ರಾಪಿ ಶಸ್ಯತೇ ಯದ್ವಾವಾನ ಪುರುತಮಂ ಪುರಾಷಾಳಿತಿ ।

ಇದಾನೀಂ ಧಾಯ್ಯಾಂ ವಿಧತ್ತೇ—ಯಸ್ಮಾದ್ವಾವಾತಾಯಾಃ ಸಂಬಂಧಃ ಕೃತಃ ತಸ್ಮಾ-ತ್ಕಾರಣಾದ್ಯದ್ವಾವಾನೇತ್ಯೇಷಾಽಪ್ಯೃಗ್ನಿಷ್ಕೇವಲ್ಯೇ ಶಸ್ತ್ರೇ ಧಾಯ್ಯಾತ್ವೇನ ಶಂಸನೀಯಾ ।

ಈ ರೀತಿ ನಿಷ್ಕೇವಲ್ಯಶಸ್ತ್ರದಲ್ಲಿ ವಾವಾತೆಗೆ ಈ ಋಕ್ಕಿನ (ಯದ್ವಾವಾನ ಋ. ಸಂ. ೧೦-೭೪-೬) ಸಂಬಂಧವನ್ನು ದೇವತೆಗಳು ಕಲ್ಪಿಸಿದ್ದರಿಂದ ಈ ಋಕ್ಕು ನಿಷ್ಕೇವಲ್ಯಶಸ್ತ್ರದಲ್ಲಿ ಧಾಯ್ಯಾಮಂತ್ರವೆಂದು ಹೇಳಲ್ಪಡುವುದು.

ಸೇನಾ ವಾ ಇಂದ್ರಸ್ಯ ಪ್ರಿಯಾ ಜಾಯಾ ವಾವಾತಾ ಪ್ರಸಹಾ ನಾಮ ಕೋ ನಾಮ ಪ್ರಜಾಪತಿಃ ಶ್ವಶುರಸ್ತದ್ಯಾಸ್ಯ ಕಾಮೇ ಸೇನಾ ಜಯೇತ್ತಸ್ಯಾ ಅರ್ಧಾತ್ತಿಷ್ಠಂಸ್ತೃಣಮುಭಯತಃ ಪರಿಚ್ಛಿದ್ಯೇ-ತರಾಂ ಸೇನಾಮಭ್ಯಸ್ಯೇತ್ಪ್ರಾಸಹೇ ಕಸ್ತ್ವಾ ಪಶ್ಯತೀತಿ ತದ್ಯಥೈ-ವಾದಃ ಸ್ನುಷಾ ಶ್ವಶುರಾಲ್ಲಜ್ಜಮಾನಾ ನಿಲೀಯಮಾನೈತ್ಯೇವ-ಮೇವ ಸಾ ಸೇನಾ ಭಜ್ಯಮಾನಾ ನಿಲೀಯಮಾನೈತಿ ಯತ್ರೈವಂ ವಿದ್ವಾಂಸ್ತೃಣಮುಭಯತಃ ಪರಿಚ್ಛಿದ್ಯೇತರಾಂ ಸೇನಾಮಭ್ಯಸ್ಯತಿ ಪ್ರಾಸಹೇ ಕಸ್ತ್ವಾ ಪಶ್ಯತೀತಿ ।

ಅಸ್ಯಾ ಋಚೋ ವಕ್ತ್ರೀ ಯೇಂದ್ರಸ್ಯ ಜಾಯೋಕ್ತಾ ತತ್ಪ್ರಶಂಸಾಬುದ್ಧಿಸ್ಥಂ ಕಂಚಿ-ತ್ಪ್ರಯೋಗಂ ವಿಧತ್ತೇ—ಪೂರ್ವತ್ರಾಸ್ಯೇಂದ್ರಸ್ಯ ಪ್ರಿಯಾ ಜಾಯಾ ವಾವಾತಾ ಪ್ರಾಸಹಾ ನಾಮೇತಿ ಯೈವಮುಕ್ತಾ ಸೇಯಂ ಲೋಕವ್ಯವಹಾರೇ ಸೇನಾ ವೈ ಯುದ್ಧಾರ್ಥೋದ್ಯತ-ಸೇನಾರೂಪೇಣ ವರ್ತತೇ, ಇಂದ್ರಜಾಯಾಯಾಃ ಸೇನಾಭಿಮಾನಿತ್ವಾತ್ ॥ ತಚ್ಚ ಶಾಖಾಂತರೇ ಸಮಾಮ್ನಾತಂ—'ಇಂದ್ರಾಣೀ ವೈ ಸೇನಾಯಾ ದೇವತಾ' ಇತಿ ॥ ಕೋ ನಾಮ ಕ ಇತ್ಯನೇನ ನಾಮ್ನಾ ಯುಕ್ತಃ ಪ್ರಜಾಪತಿಸ್ತಸ್ಯಾ ಇಂದ್ರಜಾಯಾಯಾಃ ಶ್ವಶುರಃ ಪ್ರಜಾಪತೇರಿಂದ್ರೋ-ತ್ಪಾದಕತ್ವಾತ್ ॥ ತಥಾ ಚಾನ್ಯತ್ರ ಶ್ರೂಯತೇ—'ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ' ಇತಿ ॥ ತತ್ತಥಾ ಸತಿ, ಅಸ್ಯ ಲೌಕಿಕಸ್ಯ ಪುರುಷಸ್ಯ ಯುದ್ಧಾರ್ಥಿನೋ ಯಾ ಸ್ವಕೀಯಾ ಸೇನಾ ಜಯತ್ವಿತಿ ಕಾಮೋ ಭವತಿ ॥ ಏತಸ್ಮಿನ್ಕಾಮೇ ಸತಿ ಸ ಪುಮಾಂಸ್ತಸ್ಯಾಃ ಸ್ವಕೀಯಾಯಾಃ ಸೇನಾಯಾ ಅರ್ಧಾತ್ತಿಷ್ಠನ್ನರ್ಧಭಾಗೇಽತೀತೇ ಭೂಮಾವವಸ್ಥಿತಃ ಕಿಂಚಿ-ತ್ತೃಣಮಧ್ಯ ಆದಾಯ ಮೂಲತೋಽಗ್ರತ ಉಭಯತಃ ಪರಿಚ್ಛಿದ್ಯೇತರಾಂ ಪರಕೀಯಾಂ ಸೇನಾಮಭಿಲಕ್ಷ್ಯಾಸ್ಯೇತ್, ಬಾಣವತ್ಕ್ಷಿಪೇತ್ । ತತ್ರಾಯಂ ಮಂತ್ರಃ । ಪ್ರಾಸಹೇ ಕಸ್ತ್ವಾ ಪಶ್ಯತೀತಿ ಹೇ ಪ್ರಾಸಹಾಖ್ಯ ಇಂದ್ರಜಾಯೇ ಕಃ ಪ್ರಜಾಪತಿಸ್ತ್ವದೀಯಃ ಶ್ವಶುರಸ್ತ್ವಾಂ ಚಕ್ಷುಷಾ ಪಶ್ಯತಿ । ಅನೇನ ಮಂತ್ರೇಣ ತೃಣೇ ಕ್ಷಿಪ್ತೇ ಸತಿ ಪರಸೇನಾಯಾ ಭಂಗೇ ದೃಷ್ಟಾಂತ ಉಚ್ಯತೇ । ತತ್ತಸ್ಮಿನ್ವಿವಕ್ಷಿತಾರ್ಥೇ ಯಥೈವಾದೋ ನಿದರ್ಶನಂ ಭವತಿ ತಥಾ ಕಥಯಾಮಃ । ಅನೂಚಾನಾನಾಮೀಶಾನಾಂ ವಾ ಗೃಹೇಷು ಯುವತಿಃ ಸ್ನುಷಾ ಶ್ವಶುರಂ ದೃಷ್ಟ್ವಾ ತಸ್ಮಾಲ್ಲ-ಜ್ಜಮಾನಾ ಲಜ್ಜಾಂ ಪ್ರಾಪ್ನುವತೀ ನಿಲೀಯಮಾನಾ ವಸ್ತ್ರಾವಗುಂಠನಹಸ್ತಾದ್ಯಂಗಸಂಕೋ-ಚೇನ ತಿರೋಹಿತೇ ವಸತಿ ಗೃಹಾಭ್ಯಂತರಮಾಗಚ್ಛತಿ । ಏವಮೇವ ಸಾ ಪರಕೀಯಾ ಸೇನಾಽಭಿ-ಮಂತ್ರಿತತೃಣರೂಪಾಸ್ತ್ರಪ್ರಕ್ಷೇಪೇಣ ಭಜ್ಯಮಾನಾ ಸತೀ ತತ್ರ ತತ್ರಾರಣ್ಯಪರ್ವತಾದಿಷು

**ನಿಲೀಯಮಾನಾ ತಿರೋಹಿತಾ ಸತೀ ಸ್ವಕೀಯಂ ದೇಶಮೇತಿ ॥ ಕುತ್ರಾಯಮಿತರಸೇನಾಭಂಗ ಇತ್ಯಾಶಂಕ್ಯ ಯತ್ರೈವಮಿತ್ಯಾದಿನಾ ಪೂರ್ವೋಕ್ತ ಏವಾರ್ಥಃ ಸ್ಪಷ್ಟೀಕೃತಃ ।**

ಈ ಧಾಯ್ಯಾಮಂತ್ರವನ್ನು ಹೇಳಿದ ಇಂದ್ರಪತ್ನಿಯಾದ ವಾವಾತೆಯ ಪ್ರಶಂಸೆಯನ್ನು ಸ್ವಲ್ಪ ವಿವರವಾಗಿ ಇಲ್ಲಿ ತಿಳಿಸಿದೆ ಹಿಂದೆ ವಾವಾತೆಯೆಂಬುವಳು ಇಂದ್ರನ ಪ್ರಿಯಪತ್ನಿಯೆಂದೂ ಇವಳ ಹೆಸರು ಪ್ರಾಸಹಾ ಎಂದೂ ಹೇಳಿದೆಯಷ್ಟೆ. ಲೋಕವ್ಯವಹಾರದಲ್ಲಿ ಈ ವಾವಾತಾ ಅಥವಾ ಪ್ರಾಸಹಾ ಎಂಬುವಳು ಯುದ್ಧಕ್ಕಾಗಿ ಸಿದ್ಧವಾಗಿರುವ ಸೇನಾರೂಪದಿಂದ ಇರುವಳೆಂದು ಹೇಳುವರು. ಏಕೆಂದರೆ ಇಂದ್ರಪತ್ನಿಯು ಸೇನಾಭಿಮಾನಿದೇವತೆಯು. ವೇದದಲ್ಲಿಯೂ ಸಹ **ಇಂದ್ರಾಣೀ ವೈ ಸೇನಾಯಾ ದೇವತಾ ।** ಎಂದು ಹೇಳಿರುವುದು. ಮತ್ತು **ಕೋ ನಾಮ**—ನಾನು ಯಾರು ಎಂದು ಹೇಳಿದ್ದರಿಂದ ಪ್ರಜಾಪತಿಯು ಕಶಬ್ದವಾಚ್ಯನೆಂದೂ ಹಿಂದೆ ವಿವರಿಸಲಾಗಿದೆಯಷ್ಟೆ. ಆ ಪ್ರಜಾಪತಿಯೇ ಇಂದ್ರಪತ್ನಿಯ ಶ್ವಶುರ ಅಥವಾ ಮಾವನು. ಇಂದ್ರನು ಪ್ರಜಾಪತಿಯ ಪುತ್ರನೆಂಬ ವಿಷಯದಲ್ಲಿ—**ಪ್ರಜಾಪತಿರಿಂದ್ರಮಸೃಜತಾನುಜಾವರಂ ದೇವಾನಾಂ** ಎಂದು ವೇದದಲ್ಲಿಯೇ ಹೇಳಿದೆ. ಈ ವಿಷಯವು ಹೀಗಿರುವಾಗಿ ಲೌಕಿಕ ವ್ಯವಹಾರದಲ್ಲಿ ಯುದ್ಧಾಭಿಲಾಷಿಯಾದ ಪುರುಷನು ತನ್ನ ಸೇನೆಯು ಜಯವನ್ನು ಪಡೆಯಬೇಕೆಂದು ತನಗಿಷ್ಟವಿದ್ದರೆ ಆಗ ಅವನೊಂದು ಕಾರ್ಯವನ್ನು ಮಾಡಬೇಕು. ಯುದ್ಧಸಮಯದಲ್ಲಿ ಎರಡು ಸೇನೆಗಳೂ; ಪರಸ್ಪರಾಭಿಮುಖವಾಗಿ ಯುದ್ಧಮಾಡಲು ನಿಂತಿರುವಾಗ ಆ ಪುರುಷನು ತನ್ನ ಸೇನೆಯನ್ನತಿಕ್ರಮಿಸಿ ಎಂದರೆ ಸೇನೆಯ ಮಧ್ಯಭಾಗದಿಂದ ಸ್ವಲ್ಪಮುಂದಕ್ಕೆ ಹೋಗಿ ಭೂಮಿಯಲ್ಲಿ ನಿಂತುಕೊಂಡು ಒಂದು ಹುಲ್ಲುಕಡ್ಡಿಯನ್ನು ತೆಗೆದುಕೊಂಡು ಅದರ ಬೇರನ್ನೂ ತುದಿಯನ್ನೂ ಕತ್ತರಿಸಿ ಉಳಿದ ಮಧ್ಯಭಾಗವನ್ನೂ ಶತ್ರುಸೇನೆಯ ಅಭಿಮುಖವಾಗಿ (ಎದುರಿಗೆ) ಬಾಣವನ್ನು ಎಸೆಯುವಂತೆ ಎಸೆಯಬೇಕು. ಹೀಗೆ ಎಸೆಯುವಾಗ—**ಪ್ರಾಸಹೇ ಕಸ್ತ್ವಾ ಪಶ್ಯತಿ ।** ಎಲೈ ಪ್ರಾಸಹಾ ಎಂಬ ಹೆಸರುಳ್ಳ ಇಂದ್ರಪತ್ನಿಯೇ, ಕಶಬ್ದವಾಚ್ಯನೂ, ನಿನ್ನ ಮಾವನೂ ಆದ ಪ್ರಜಾಪತಿಯು ನಿನ್ನನ್ನು ತನ್ನ ಕಣ್ಣುಗಳಿಂದ ನೋಡುವನು—ಎಂಬ ಮಂತ್ರದಿಂದ ಆ ಹುಲ್ಲುಕಡ್ಡಿಯನ್ನು ಎಸೆಯಬೇಕು. ಈ ಮಂತ್ರದಿಂದ ಹುಲ್ಲುಕಡ್ಡಿಯನ್ನು ಈರೀತಿ ಎಸೆದರೆ ಶತ್ರುಸೇನೆಗೆ ಪರಾಜಯವುಂಟಾಗುವುದು. ಇದನ್ನು ಒಂದು ದೃಷ್ಟಾಂತಮೂಲಕ ಸ್ಪಷ್ಟಪಡಿಸುವರು. ಲೋಕವ್ಯವಹಾರದಲ್ಲಿ ದೊಡ್ಡ ಮನುಷ್ಯರೂ ಪೂರ್ವಾಚಾರ ಸಂಪ್ರದಾಯನಿಷ್ಠರೂ ಆದ ಗೃಹಸ್ಥರ ಮನೆಯಲ್ಲಿ ತರುಣಿಯಾದ ಸೊಸೆಯು ತನ್ನ ಮಾವನನ್ನು ಕಂಡರೆ ನಾಚಿಕೆಯಿಂದ ಸೀರೆಯ ಸೆರಗನ್ನು ಸರಿಮಾಡಿಕೊಳ್ಳುತ್ತಾ ಹಸ್ತಾದ್ಯವಯವಗಳನ್ನು ಮುದುರಿಕೊಂಡು ಮನೆಯ ಒಳಭಾಗಕ್ಕೆ ಮೆಲ್ಲನೆ ಹೊರಟುಹೋಗುವಳು. ಅದರಂತೆ ಮಂತ್ರಪೂರ್ವಕವಾದ ತೃಣವಿಕ್ಷೇಪದಿಂದ ಶತ್ರುಸೇನೆಗೆ ಪರಾಭವ (ಸೋಲು)ವುಂಟಾಗಿ ಅದು ಪರ್ವತಾರಣ್ಯನದಿಗಳನ್ನು ದಾಟಿ ಹಿಂದಕ್ಕೆ ಸರಿಯುತ್ತಾ ತನ್ನ ಸ್ವದೇಶಕ್ಕೆ ಪಲಾಯನ ಮಾಡುವುದು. ಪ್ರಾಸಂಗಿಕವಾಗಿ ಹೇಳಿದ ಈ ವಿಷಯವನ್ನು ಇಲ್ಲಿಗೆ ನಿಲ್ಲಿಸಿ ಮುಂದೆ ಪ್ರಕೃತಸಂದರ್ಭವನ್ನು ವಿಸ್ತರಿಸಿರುವರು—

ತಾನಿಂದ್ರ ಉವಾಚಾಪಿ ವೋಽತ್ರಾಸ್ತ್ವಿತಿ ತೇ ದೇವಾ ಅಬ್ರುವನ್ನಿ-
ರಾಡ್ಯಾಜ್ಯಾಸ್ತು ಸಿಷ್ಕೇವಲ್ಯಸ್ಯ ಯಾ ತ್ರಯಸ್ತ್ರಿಂಶದಕ್ಷರಾ
ತ್ರಯಸ್ತ್ರಿಂಶದ್ವೈ ದೇವಾ ಅಷ್ಟೌ ವಸವ ಏಕಾದಶ ರುದ್ರಾ
ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚ ದೇವತಾ ಅಕ್ಷರ-
ಭಾಜಃ ಕರೋತ್ಯಕ್ಷರಮಕ್ಷರಮೇವ ತದ್ದೇವತಾ ಅನು ಪ್ರಪಿ-
ಬಂತಿ ದೇವಪಾತ್ರೇಣೈವ ತದ್ದೇವತಾಸ್ತೃಪ್ಯಂತಿ ।

ಪ್ರಾಸಂಗಿಕಂ ಪರಿಸಮಾಪ್ಯ ಪ್ರಕೃತಮನುಸರತಿ—ವಾವಾತಾಯಾ ವಚನೇನೇಂದ್ರಸಮೀಪಂ ಪ್ರತಿ ದೇವೇಷ್ವಾಗತೇಷು ತಾನ್ದೇವಾನಿಂದ್ರ ಏವಮುವಾಚ ಯುಷ್ಮಾಕಮುಪ್ಯತ್ರ ನಿಷ್ಕೇವಲ್ಯೇಽಪೇಕ್ಷಿತೋ ಭಾಗೋಽಸ್ತ್ವಿತಿ ॥ ತತೋ ದೇವಾಸ್ತ್ರಯಸ್ತ್ರಿಂಶದಕ್ಷರಾಂ ವಿರಾಟ್ಛಂದಸ್ಕಾಂ ಪಿಬಾ ಸೋಮಮಿತ್ಯೇತಾಂ ಯಾಜ್ಯಾಂ ಪ್ರಾರ್ಥಿತವಂತಃ ॥

ತಾಂ ಯಾಜ್ಯಾಂ ಪ್ರಶಂಸತಿ—ಏತದ್ವಾಕ್ಯಂ ಪೂರ್ವತ್ರೈವ ವ್ಯಾಖ್ಯಾತಂ । ಯದ್ಯಪ್ಯಸ್ಯಾ ಯಾಜ್ಯಾಯಾಸ್ತ್ರಯಸ್ತ್ರಿಂಶದಕ್ಷರಾಣಿ ಸಾಕ್ಷಾನ್ನದೃಶ್ಯಂತೇ ತಥಾಪಿ ಸಂಯೋಗಾಕ್ಷರಾದಿ ವಿಭಾಗೇನ ಸಂಖ್ಯಾ ಪೂರಣೀಯಾ ॥ ತತೋ ದೇವಸಾಮ್ಯಾತ್ಪ್ರತ್ಯಕ್ಷರಮೇಕೈಕದೇವತಾತೃಪ್ತಿಃ ಸಿಧ್ಯತಿ ॥

ವಾವಾತೆಯು ವಚನವನ್ನು (ಪ್ರತ್ಯುತ್ತರವನ್ನು) ಕೇಳಿ ದೇವತೆಗಳು ಇಂದ್ರನ ಸಮೀಪಕ್ಕೆ ಹೋಗಲು, ಇಂದ್ರನು ಅವರನ್ನು ಕುರಿತು—ಎಲೈ ದೇವತೆಗಳೇ, ನೀವು ಅಪೇಕ್ಷಿಸುವಂತೆ ಯಜ್ಞದ ನಿಷ್ಕೇವಲ್ಯಶಸ್ತ್ರದಲ್ಲಿ ನಿಮಗೆ ಯಜ್ಞಭಾಗವು ಕೊಡಲ್ಪಟ್ಟಿರುವುದು ಎಂದನು. ಅದನ್ನು ಕೇಳಿ ದೇವತೆಗಳು—ನಾವು (ದೇವತೆಗಳು) ಮೂವತ್ತಮೂರುಮಂದಿ ಇರುವೆವು. ಹೇಗೆಂದರೆ, ಎಂಟುಮಂದಿ ವಸುಗಳು, ಹನ್ನೊಂದುಮಂದಿ ರುದ್ರರು, ಹನ್ನೆರಡುಮಂದಿ ಆದಿತ್ಯರು, ಇವರ ಜತೆಗೆ ಪ್ರಜಾಪತಿ ಒಬ್ಬನು, ವಷಟ್ಕಾರವು ಒಂದು, ಒಟ್ಟು ಮೂವತ್ತಮೂರು ದೇವತೆಗಳಿರುವುದರಿಂದ ಮೂವತ್ತಮೂರು ಅಕ್ಷರಗಳುಳ್ಳ ವಿರಾಟ್ ಎಂಬ ಛಂದಸ್ಸಿನ ಯಾಜ್ಯಾಮಂತ್ರದಿಂದ ಎಂದರೆ—

ಯಂ ಕಾಮಯೇತಾನಾಯತನವಾನ್ ಸ್ಯಾದಿತ್ಯವಿರಾಜಾಸ್ಯ ಯಜೇದ್ಗಾಯತ್ರ್ಯಾ ವಾ ತ್ರಿಷ್ಟುಭಾ ವಾನ್ಯೇನ ವಾ ಛಂದಸಾ ವಷಟ್ಕುರ್ಯಾದನಾಯತನವಂತಮೇವೈನಂ ತತ್ಕರೋತಿ ಯಂ ಕಾಮಯೇತಾಯತನವಾನ್ ಸ್ಯಾದಿತಿ ವಿರಾಜಾಸ್ಯ ಯಜೇತ್ಪಿಬಾ ಸೋಮಮಿಂದ್ರ ಮಂದತು ತ್ವೇತ್ಯೇತಯಾಯತನವಂತಮೇವೈನಂ ತತ್ಕರೋತಿ ।

ಅಥಾಭಿಚಾರಪ್ರಯೋಗಂ ವಿಧತ್ತೇ—ಆಯತನಮಾಶ್ರಯೋ ಗೃಹಾದಿರಸ್ಯಾಸ್ತೀತ್ಯಾಯತನವಾಂಸ್ತದ್ವಿಪರೀತೋ ಯಜಮಾನೋಽಸ್ತ್ವಿತಿ ಕಾಮಯಮಾನೋ ಹೋತಾ ವಿರಾಡ್ವ್ಯತಿರಿಕ್ತಗಾಯತ್ರ್ಯಾದಿ ಛಂದೋಯುಕ್ತಾಂ ಯಾಜ್ಯಾಂ ಪಠಿತ್ವಾ ತದಂತೇ ವಷಟ್ಕುರ್ಯಾತ್ ॥ ತಥಾ ಸತ್ಯಾಯತನಹೀನೋ ಯಜಮಾನೋ ಭವತಿ । ಉಕ್ತಾರ್ಥವ್ಯತಿರೇಕಂ ವಿಧತ್ತೇ—

ಎಂಬ ಯಾಜ್ಯಾಮಂತ್ರದಿಂದ ಸೋಮಪಾನವನ್ನು ಕಲ್ಪಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದರು. ಈ ಯಾಜ್ಯಾಮಂತ್ರದಲ್ಲಿ ಮೂವತ್ತಮೂರು ಅಕ್ಷರಗಳಿರಬೇಕು. ಆದರೆ ಹಾಗಿಲ್ಲದೆ ಇಪ್ಪತ್ತೊಂಭತ್ತುಅಕ್ಷರಗಳು ಮಾತ್ರ ಇರುವವು. ಆದರೂ ಅಕ್ಷರಸಂಯೋಜನಾಕ್ರಮದಿಂದ ಅಕ್ಷರಗಳು ಕಮ್ಮಿ ಇದ್ದರೂ ಒಟ್ಟು ಮೂವತ್ತಮೂರು ಅಕ್ಷರಗಳಿರುವುವೆಂದೇ ಪರಿಗಣಿಸಬೇಕು.

ಈರೀತಿ ಯಾಜ್ಯಾಮಂತ್ರದಲ್ಲಿರುವ ಮೂವತ್ತಮೂರು ಅಕ್ಷರಗಳೂ, ಒಂದೊಂದು ಅಕ್ಷರ ಒಂದೊಂದು ದೇವತೆಯಂತೆ, ಮೂವತ್ತ ಮೂರು ದೇವತೆಗಳನ್ನೂ ತೃಪ್ತಿಪಡಿಸುವವು. ಈ ಕ್ರಮವನ್ನು ಬಿಟ್ಟು ಬೇರೆ ಛಂದಸ್ಸಿನ ಮಂತ್ರದಿಂದ ಯಾಜ್ಯಾಹುತಿಯನ್ನು ಅರ್ಪಿಸಿದರೆ ಅದರಿಂದ ಉಂಟಾಗುವ ಹಾನಿಯನ್ನು ವಿವರಿಸುವರು—

ಯಜ್ಞಮಾಡುವ ಯಜಮಾನನಿಗೆ ಗೃಹಾದಿಸಂಪತ್ತುಗಳು ನಾಶವಾಗಬೇಕೆಂಬ ಅಪೇಕ್ಷೆಯು ಹೋತೃವಿಗಿದ್ದಲ್ಲಿ ಆಗ ಅವನು ನಿಷ್ಕೇವಲ್ಯಶಸ್ತ್ರದಲ್ಲಿ ಪಠಿಸಬೇಕಾದ ಯಾಜ್ಯಾಮಂತ್ರವನ್ನು ವಿರಾಟ್‌ಛಂದಸ್ಸಿನ ಋಕ್ಕಿನಿಂದ ಪಠಿಸದೆ ಗಾಯತ್ರೀ, ತ್ರಿಷ್ಟುಪ್ ಅಥವಾ ಬೇರೆ ಛಂದಸ್ಸಿನ ಮಂತ್ರಗಳನ್ನು ಪಠಿಸುತ್ತಾ ಹೋಮಮಾಡಬೇಕು. ಆರೀತಿ ಮಾಡಿದಲ್ಲಿ ಯಜಮಾನನ ಗೃಹಾದಿನಿವಾಸಸ್ಥಾನಗಳು ನಾಶವಾಗುವವು. ಆದ್ದರಿಂದ ಯಜಮಾನನಿಗೆ ಗೃಹಸಂಪತ್ತು ಶಾಶ್ವತವಾಗಿರಲಿ ಎಂಬ ಅಪೇಕ್ಷೆಯಿದ್ದಲ್ಲಿ ಹೋತೃವು ಈ ಯಾಜ್ಯಾಹೋಮವನ್ನು ವಿರಾಟ್‌ಛಂದಸ್ಸಿನಕ್ಕೆ ಋಕ್ಕಾದ— **ಪಿಬಾ ಸೋಮಮಿಂದ್ರ** (ಋ.ಸಂ. ೭-೨೨-೧) ಎಂಬ ಮಂತ್ರದಿಂದಲೇ ನೆರವೇರಿಸಬೇಕು. ಹಾಗೆ ಮಾಡಿದಲ್ಲಿ ಯಜಮಾನನಿಗೆ ಗೃಹಾದಿನಿವಾಸಸ್ಥಾನಗಳ ಸಮೃದ್ಧಿ ಯುಂಟಾಗುವುದು.



## *English Translation*

**(Story of Prasaha the wife of Indra. On the origin of the Dhayya verse of the Nishkevalya Shastra. How a king can defeat a hostile army. All gods have a share in the Yajya in the Virat metre, On the importance of the Virat metre at this occasion.)**

The gods said, "there is a beloved wife of Indra, of the Vavata order, Prasaha by name. Let us inquire of her (what Indra's intention is)." So they did. They inquired of her (what Indra's intention was). She said to them. "I shall give yon the answer tomorrow." For women ask their husbands; they do so during the night. On the morning the gods went to her to inquire. She addressed the following verses to them; yad vavana purutamam (10, 74, 6) i.e., what Indra, the slayer of Vritra, the conqueror in many battles of old has gained, filling (the world) with his name (fame), by what he showed himself as master in conquering (prasahaspati), as a powerful hero, that is what we beseech him to do now; may he do it!" Indra is the mighty husband of Prasaha. (The last pada) "that is what we beseech him," & c. means, he will do what we have told him.

Thus she (Prasaha) told them. The gods said, "let her have a share here (in this Nishkevalya Shastra) who has not yet obtained one (a share) in it; thence this verse yad varana & c. forms part of the (Nishkevalya) Shastra.

The army (sena) is Indra's beloved wife, Vavata, Prasaha by name. Prajapati is by the name of kah (who?) his father-in-law. If one wish that his army might be victorious then he should go beyond the battle line (occupied by his own army), cut a stalk of grass at the top and end, and throw it against the

other (hostile) army by the words, prasahe kas tva pasyati? i.e. "O Prasaha who sees thee?" If one who has such a knowledge cuts a stalk of grass at the top and end. and throws (the parts cut) against the other (hostile) army, saying prasahe kas tva pasyati? it becomes split and dissolved, just as a daughter-in-law becomes abashed and faints, when seeing her father-in-law (for the first time).

Indra said to them (the gods), "you also shall have a share in this Shastra." The gods said, "let it be the Yajya verse in the Virat metre of the Nishkevalya Shastra." The Virat has thirty-three syllables. There are thirty-three gods, viz., eight Vasus, eleven Rudras, twelve adityas (one) Prajapati and one Vashatkara. He thus makes the deities participate in the syllables, and according to the order of the syllables they drink, and become thus satisfied by this divine dish.

Should the Hotar wish to deprive the sacrificer of his house and estate, he ought to use for his Yajya along with the Vashatkara a verse, which is not in the Virat metre, but in the Gayatri or Trishtubh, or any other metre (save the Virat); thus he deprives him of his house and estate.

Should he wish to procure a house and estate for the sacrificer he ought to repeat his Yajya in the Virat metre; piba somam indra mandatu, (7, 22, 1). By this verse he procures for the sacrificer a house and estate.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ಏಕಾದಶಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ದ್ವಾದಶಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಹನ್ನೆರಡನೆಯ ಖಂಡವು



[ಋಕ್ಕುಗಳಿಗೂ ಸಾಮಕ್ಕೂ ಇರುವ ನಿಕಟಸಂಬಂಧವು—ಸಾಮಗಾನಮಾಡುವ ಋತ್ವಿಜರು ಏತಕ್ಕಾಗಿ ಮೂರು ಋಕ್ಕುಗಳನ್ನು (ತೃಚ) ಹಿಡಿದು ಗಾನಮಾಡುವರು—ಈ ಋಕ್ ಮತ್ತು ಸಾಮಮಂತ್ರಗಳ ಐದುವಿಧ ಪ್ರಭೇದಗಳು—ಈ ಎರಡು ವಿಧವೂ ವಿರಾಟ್ಛಂದಸ್ಸಿನಲ್ಲಿರುವುದು—ನಿಷ್ಕೇವಲ್ಯಶಸ್ತ್ರದ ಐದು ವಿಭಾಗಗಳು.]



ಋಕ್ಚ ವಾ ಇದಮಗ್ರೇ ಸಾಮ ಚಾಸ್ತಾಂ ಸೈವ ನಾಮ ಋಗಾಸೀ-
ದಮೋ ನಾಮ ಸಾಮ ಸಾ ವಾ ಋಕ್ಸಾಮೋಪಾವದನ್ಮಿಥುನಂ
ಸಂಭವಾವ ಪ್ರಜಾತ್ಯಾ ಇತಿ ನೇತ್ಯಬ್ರವೀತ್ಸಾಮ ಜ್ಯಾಯಾನ್ವಾ
ಅತೋ ಮಮ ಮಹಿಮೇತಿ ತೇ ದ್ವೇ ಭೂತ್ವೋಪಾವದತಾಂ
ತೇನ ಪ್ರತಿಚನ ಸಮವದತ ತಾಸ್ತಿಸ್ರೋ ಭೂತ್ವೋಪಾವದಂಸ್ತ-
ತ್ತಿಸೃಭಿಃ ಸಮಭವದ್ಯತ್ತಿಸೃಭಿಃ ಸಮಭವತ್ತಸ್ಮಾತ್ತಿಸೃಭಿಃ ಸ್ತುವಂತಿ
ತಿಸೃಭಿರುದ್ಗಾಯಂತಿ ತಿಸೃಭಿರ್ಹಿ ಸಾಮ ಸಂಮಿತಂ ತಸ್ಮಾದೇ-
ಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ
ಪತಯೋ ಯದ್ವೈ ತತ್ಸಾ ಚಾಮಶ್ಚ ಸಮಭವತಾಂ ತತ್ಸಾಮಾ-
ಭವತ್ತತ್ಸಾಮ್ನಃ ಸಾಮತ್ವಂ ಸಾಮನ್ಭವತಿ ಯ ಏವಂ ವೇದ ।

ಸ್ತುತಮನುಶಂಸತೀತಿವಿಧಿಬಲೇನ ನಿಷ್ಕೇವಲ್ಯಶಸ್ತ್ರಸ್ಯ ಸ್ತೋತ್ರಪೂರ್ವಕತ್ವಾದ್ಬುದ್ಧಿಸ್ಥಸ್ಯ ಸಾಮ್ನ ಆಶ್ರಯತ್ವೇನ ತ್ಯೃಚಂ ವಿಧಾತುಮಾಖ್ಯಾಯಿಕಾಮಾಹ—ಯದಿದಮಿದಾನೀಮೃಗಾ-ಶ್ರಿತಂ ಸಾಮೋಭಯಮೇಲನರೂಪಮಧೀಯತೇ ತದಿದಮಗ್ರೇ ಮೇಲನಾತ್ಪುರಾ ಋಗಕ್ಷರ-ಪದರೂಪಾ ಪೃಥಗ್ಭೂತಮಿತ್ಯೇವಂ ದ್ವೇ ಅಪಿ ಪೃಥಗೇವಾಽಽಸ್ತಾಂ ತಯೋಃ ಪರಸ್ಪರಮೇಲನ ಯೋಗ್ಯತಾಂ ಪ್ರದರ್ಶಯಿತುಮಸ್ಮಿನ್ನೇವ ಸಾಮನಾಮ್ನ್ಯಂತರ್ಭಾವಃ ಪ್ರದರ್ಶ್ಯತೇ ॥ ಸಾಮೇತಿ ನಾಮ್ನಿ ಯದೇತತ್ಸೇತಿ ಪೂರ್ವಮಕ್ಷರಂ ತದೇವೈಕಂ ನಾಮ ತನ್ನಾಮವಾಚ್ಯಾ, ಋಗಾಸೀತ್ ॥ ಅಮ ಇತ್ಯೇಕಂ ನಾಮ ತದ್ವಾಚ್ಯಂ ಸಾಮಾಸೀತ್ ॥ ಅತೋ ಮೇಲನಯೋಗ್ಯ-ತಾಯಾಂ ಸತ್ಯಾಂ ಸೈವ ಋಕ್ಸಾಮ ಪ್ರತ್ಯುಪಾವದತ್ಸಮೀಪಮಾಗತ್ಯೋಕ್ತವತೀ ॥ ಆವಾ-

ಮುಭೇ ಮಿಥುನಂ ಯಥಾ ಭವತಿ ತಥಾ ಸಂಭವಾವ ॥ ತಚ್ಚ ಸಂಭವನಂ ಪ್ರಜೋತ್ಪತ್ತ್ಯರ್ಥ-ಮಿತಿ ತದುಕ್ತಂ ಸಾಮ ನಿರಾಕರೋತ್ ಸ್ವಾಭಿಪ್ರಾಯಂ ಚಾವದತ್ ॥ ಅತೋಽಸ್ಮಾದೃಙ್ಮ-ಹಿಮ್ನೋ ಜ್ಯಾಯಾನಭ್ಯಧಿಕೋ ಮಮ ಸಾಮ್ನೋ ಮಹಿಮಾ ತಸ್ಮಾದ್ದ್ವಿವಾದಶ್ಚ ವಿವಾಹಶ್ಚ ತುಲ್ಯಯೋರಿತಿ ನ್ಯಾಯವಿರೋಧ ಇತಿ । ತತಃ ಸಾಮ್ನಾ ಸ್ವಸ್ಯ ತುಲ್ಯತ್ವಸಿದ್ಧಯೇ ತೇ ಋಚೌ ದ್ವೇ ಸಂಭೂಯೋಪೇತ್ಯ ಪೂರ್ವವದುಕ್ತವತ್ಯೌ ॥ ಚನೇತ್ಯಕ್ಷರದ್ವಯಾತ್ಮಕೋ ನಿಪಾತೋಽಪಿ-ಶಬ್ದಾರ್ಥಃ । ತೇ ದ್ವೇ ಋಚೌ ಪ್ರತ್ಯಪಿ ಸಾಮ ನ ಸಮವದತ ಸಂವಾದಮಂಗೀಕಾರಂ ನಾಕ-ರೋತ್ ॥ ಪುನಸ್ತಾ ಋಚಸ್ತಿಸ್ರೋ ಭೂತ್ವೋಪೇತ್ಯ ಪೂರ್ವವದುಕ್ತವತ್ಯಃ । ತದಾನೀಂ ತಾಭಿ-ಸ್ತಿಸೃಭಿಃ ಸಮಭವತ್ಸಂಭವನಂ ಸಂಯೋಗಮಕರೋತ್ ॥ ಯಸ್ಮಾತ್ಸಂಯೋಗಃ ಸಂಭೂತ-ಸ್ತಸ್ಮಾದುಯುಕ್ತಾಭಿಸ್ತಿಸೃಭಿರ್ಋಗ್ಭಿಃ ಸಾಮಗಾಃ ಸ್ತುವಂತಿ, ಯಜ್ಞೇ ಸ್ತೋತ್ರಂ ಕುರ್ವಂತಿ ॥ ತಸ್ಯೈವ ವ್ಯಾಖ್ಯಾನಂ ತಿಸೃಭಿರುದ್ಗಾಯಂತೀತಿ ॥ ಔದ್ಗಾತ್ರಂ ಕರ್ಮ ಕುರ್ವಂತೀತ್ಯರ್ಥಃ । ಅತ ಏವ ಶಾಖಾಂತರೇ ಶ್ರೂಯತೇ 'ಏಕಂ ಸಾಮ ತೃಚೇ ಕ್ರಿಯತೇ ಸ್ತೋತ್ರಿಯಂ' ಇತಿ ॥ ಯದ್ಯಪಿ ಛಂದಃ ಸಾಮನಾಮಕೇ ಗ್ರಂಥ ಏಕಸ್ಯಾಮೃಚಿ ಸಾಮೋತ್ಪನ್ನಂ ತಥಾಪ್ಯುತ್ತರಾಖ್ಯೇ ಗ್ರಂಥ ಆಮ್ನಾತೇಷು ತ್ರ್ಯೃಚೇಷು ಪ್ರಯೋಗಕಾಲೇ ಸಾಮ ಗಾತವ್ಯಂ । ತತ್ರ ಪ್ರಥಮಾಯಾ-ಮೃಚಿ ಯೋನಿರೂಪಾಯಾಂ ಯತ್ಸಾಮೋತ್ಪನ್ನಂ ಛಂದಃ ಸಮಾಮ್ನಾತಂ ತದವಲೋಕ್ಯ ತತ್ಸಾದೃಶ್ಯೇನ ದ್ವಿತೀಯತೃತೀಯಯೋರ್ಋಚೋರ್ಗಾನಂ ಸಮೂಹನೀಯಂ । ಏತದಪಿ ಶಾಖಾಂತರೇ ವಿಹಿತಂ—'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' ಇತಿ ॥ ತಸ್ಮಾದೌ-ದ್ಗಾತ್ರಂ ಕರ್ಮ ತಿಸೃಭಿರ್ಋಗ್ಭಿರ್ನಿಷ್ಪಾದ್ಯತೇ । ಯಸ್ಮಾದಾಖ್ಯಾನೋಕ್ತಪ್ರಕಾರೇಣ ತಿಸೃಭಿ-ರ್ಋಗ್ಭಿಃ ಸಾಮ ಸಂಮಿತಂ ಸಾಮ್ನ ಏಕಸ್ಯ ಮಹಿಮಾ ತುಲ್ಯಃ ಸಂವೃತ್ತಸ್ತಸ್ಮಾಲ್ಲೋಕೇಽಪ್ಯೇ-ಕಸ್ಯ ಪುರುಷಸ್ಯ ಸಾಮಸ್ಥಾನೀಯಸ್ಯ ಬಹ್ವ್ಯೋ ಜಾಯಾ ಋಕ್ಸ್ಥಾನೀಯಾ ಭವಂತಿ ನ ತು ವಿಪರ್ಯಯೋಽನ್ಯೈಕಸ್ಯಾಃ ಸ್ತ್ರಿಯಾ ಬಹವಃ ಪತಯಃ ಪರಸ್ಪರೈಕಮತ್ಯೇನ ಸಹ ವರ್ತಮಾನಾ ದೃಶ್ಯಂತೇ । ಯಸ್ಮಾದೃಗಕ್ಷರಪದಾದಿರೂಪಾ ಸೇತ್ಯನೇನ ಶಬ್ದೇನಾಭಿಧೇಯಾ ಸಾಮ ಚಾಮ-ಶಬ್ದೇನಾಭಿಧೇಯಂ ಸತ್ಪಶ್ಚಾದುಭಯಂ ಸಂಯುಕ್ತಂ ಸತ್ಸಾಮಾಭವತ್ತಸ್ಮಾದೇಕೋಭಯಾ-ತ್ಮಕವಸ್ತುನಃ ಸಾಮನಾಮ ಸಂಪನ್ನಂ ॥ ಉಕ್ತಾರ್ಥವೇದನಂ ಪ್ರಶಂಸತಿ । ಋಕ್ಸಾಮಯೋ-ರೇಕತ್ವವೇದಿತಾ ಯಃ ಸ ಸರ್ವೈರಭ್ಯರ್ಹಿತೈಃ ಸಹಿತೋ ಭವತಿ ।

ಈಗ ಋಙ್ಮಂತ್ರಗಳಿಗೂ ಸಾಮಮಂತ್ರಗಳಿಗೂ ಪರಸ್ಪರ ಸಂಬಂಧವಿದ್ದು, ಯಜ್ಞದಲ್ಲಿ ಇವು ಪರಸ್ಪರ ಆಶ್ರಯಭೂತವಾಗಿವೆ. ಆದರೆ ಪೂರ್ವದಲ್ಲಿ ಹಾಗಿರಲಿಲ್ಲ. ಇವು ಬೇರೆಬೇರೆಯಾಗಿದ್ದವು. ಎಂದರೆ, ಋಙ್ಮಂತ್ರವು ಅಕ್ಷರ ಮತ್ತು ಪದಗಳಿಂದ ಕೂಡಿ ಛಂದೋಬದ್ಧವಾದ ಋಕ್ಕುಗಳಾಗಿದ್ದವು; ಸಾಮಮಂತ್ರವು ಗೀತಿರೂಪದಲ್ಲಿ (ಗಾನಮಾಡಲು ಅನುಕೂಲವಾದ ರೂಪದಲ್ಲಿ) ಪ್ರತ್ಯೇಕವಾದ ಮಂತ್ರವಾಗಿದ್ದಿತು. ಇವುಗಳಲ್ಲಿ ಒಂದಕ್ಕೊಂದು ಸಂಬಂಧವಿರಲಿಲ್ಲ. ಎರಡೂ ಬೇರೆಬೇರೆಯಾಗಿಯೇ ಇದ್ದುವು. ಈ ಋಕ್ ಮತ್ತು ಸಾಮ ಎಂಬ ಎರಡುವಿಧವಾದ ಮಂತ್ರಗಳ ಸಂಮೇಳನ (ಒಟ್ಟಿಗೆ ಸೇರಿ ಯಜ್ಞಕ್ಕೆ ಸಹಕಾರಿಯಾಗಿರುವುದನ್ನು) ಸಾಮ ಎಂಬ ಶಬ್ದದಲ್ಲಿ ಅಂತರ್ಭೂತವಾಗಿರುವುದನ್ನು (ಅಡಗಿರುವುದನ್ನು) ಸ್ಪಷ್ಟಪಡಿಸುವುದಕ್ಕಾಗಿ ಒಂದು ಉಪಾಖ್ಯಾನವು ಉಕ್ತವಾಗಿರುವುದು. ಸಾಮ ಎಂಬ ಶಬ್ದವು ಸಾ+ಅಮ ಎಂಬ ಬೇರೆಬೇರೆ ಶಬ್ದಗಳು ಸೇರಿ ಉಂಟಾಗಿದೆ. ಈ ಎರಡು ಶಬ್ದಗಳಲ್ಲಿ

ಸಾ ಎಂಬ ಶಬ್ದವು ಋಗ್ವೇದಮಂತ್ರವಾದ ಋಕ್ಕು ಆಗಿದ್ದಿತು. ಅಮ ಎಂಬ ಶಬ್ದವು ಸಾಮವೇದದ ಸಾಮಮಂತ್ರವಾಗಿದ್ದಿತು. ಆದ್ದರಿಂದ ಋಙ್ಮಂತ್ರ ಅಥವಾ ಋಕ್ಕು ಸಾಮದೊಡನೆ ಮಿಲನವಾಗಬೇಕೆಂದು ಅಥವಾ ಸೇರಿ ಒಂದಾಗಬೇಕೆಂದು ಬಯಸಿ, ಋಕ್ಕು (ಋಕ್ ಶಬ್ದವು ಸ್ತ್ರೀಲಿಂಗವು) ಸಾಮಮಂತ್ರದ ಬಳಿಗೆ ಹೋಗಿ—ನಾವಿಬ್ಬರೂ ಮಿಥುನಭಾವವನ್ನು ಎಂದರೆ, ಪತಿಪತ್ನಿಯರ ಭಾವವನ್ನು ಹೊಂದೋಣ. ಈ ವಿಧವಾದ ಸಂಮೇಲನದಿಂದ ಪ್ರಜೋತ್ಪತ್ತಿಗೆ ಸಹಾಯವಾಗುವುದು ಎಂದಿತು. ಅದನ್ನು ಕೇಳಿ ಸಾಮವು—ಋಙ್ಮಂತ್ರದ ಮಹಿಮೆಗಿಂತ ನನ್ನ ಸಾಮಮಂತ್ರದ ಮಹಿಮೆಯ ಅಧಿಕವಾಗಿರುವುದು. ಲೋಕವ್ಯವಹಾರದಲ್ಲಿ ವಿವಾದ (ವ್ಯವಹಾರ)ವೂ, ವಿವಾಹಾದಿ ಸಂಬಂಧವೂ ಸರಿಸಮಾನದಲ್ಲಿ ಮಾತ್ರ ನಡೆಯುವುದು ರೂಢಿಯಷ್ಟೆ. ಅದರಂತೆ ಈಗ ನಿನ್ನ ಮಹಿಮೆಗಿಂತ ನನ್ನ ಮಹಿಮೆಯು ಅಧಿಕವಾಗಿರುವುದರಿಂದ ನಿನ್ನೊಡನೆ ಸಂಬಂಧಮಾಡಲು ಸಾಧ್ಯವಿಲ್ಲ ಎಂದು ಹೇಳಿ ಋಕ್ಕಿನ ಮಾತನ್ನು ತಿರಸ್ಕರಿಸಿತು. ಅನಂತರ ಋಕ್ಕು ತಾನೂ ಸಾಮದ ಮಹಿಮೆಗೆ ಸರಿಸಮವಾಗಿ ಆಗಬೇಕೆಂದು ಇಚ್ಛಿಸಿ ಒಂದಾಗಿದ್ದು (ಎಂದರೆ ಒಂದು ಋಕ್ಕನ್ನು) ಋಕ್ಕನ್ನು ಎರಡು ಋಕ್ಕುಗಳನ್ನಾಗಿ ಪರಿವರ್ತಿಸಿಕೊಂಡಿತು. ಅನಂತರ ಈ ಎರಡು ಋಕ್ಕುಗಳೂ ಸಾಮದ ಬಳಿಗೆ ಹೋಗಿ ಹಿಂದೆ ಹೇಳಿದಂತೆ ಸಾಮವನ್ನು ಪ್ರಾರ್ಥಿಸಿದವು. ಆಗಲೂ ಸಾಮವು ಅದಕ್ಕೊಪ್ಪದೆ ಆ ಎರಡು ಋಕ್ಕುಗಳ ಮಾತನ್ನು ತಿರಸ್ಕರಿಸಿತು. ಆದ್ದರಿಂದ ಮತ್ತೆ ಆ ಎರಡು ಋಕ್ಕುಗಳು ಮೂರು ಋಕ್ಕುಗಳಾಗಿ ಪರಿವರ್ತಿತವಾಗಿ ಸಾಮದ ಬಳಿಗೆ ಬಂದು ಹಿಂದಿನಂತೆ ಪ್ರಾರ್ಥಿಸಿದವು. ಆಗ ಸಾಮವು ಆ ಮೂರು ಋಕ್ಕುಗಳನ್ನು ತನಗೆ ಸರಿಸಮಾನವೆಂದು ಪರಿಗಣಿಸಿ ಋಕ್ಕುಗಳ ಪ್ರಾರ್ಥನೆಯನ್ನಂಗೀಕರಿಸಿ ಅವುಗಳೊಡನೆ ಸಂಯೋಗವನ್ನು ಮಾಡಿತು. ಈರೀತಿ ಸಾಮವು ಮೂರು ಋಕ್ಕುಗಳೊಡನೆ ಸಂಯೋಗಮಾಡಿದ್ದರಿಂದ ಸಾಮಗಾನಮಾಡುವವರು ಮೂರು ಮೂರು ಋಕ್ಕುಗಳಿಂದ ಎಂದರೆ ಮೂರು ಋಕ್ಕುಗಳನ್ನೊಳಗೊಂಡ ಸ್ತೋತ್ರಗಳಿಂದ ಯಜ್ಞದಲ್ಲಿ ಗಾನಮಾಡಿ ಸ್ತುತಿಸುತ್ತಾರೆ. ಅದನ್ನೇ ಇಲ್ಲಿ **ತಿಸೃಭಿಃ ಸ್ತುವಂತಿ ತಿಸೃಭಿರುದ್ಗಾಯಂತಿ** ಎಂಬ ವಾಕ್ಯದಿಂದ ವಿವರಿಸಿದೆ. ಎಂದರೆ ಉದ್ಗಾತೃ ಮೊದಲಾದ ಸಾಮಗಾನಮಾಡುವ ಋತ್ವಿಜರು ತಮ್ಮ ಕರ್ತವ್ಯವಾದ ಸಾಮಗಾನವನ್ನು ಮೇಲೆ ಹೇಳಿದಂತೆ ಮೂರು ಋಕ್ಕುಗಳನ್ನು ಗಾನಮಾಡಿ ಸ್ತುತಿಸುತ್ತಾರೆ ಎಂದಭಿಪ್ರಾಯವು ಆದ್ದರಿಂದಲೇ ವೇದದಲ್ಲಿ (ಶಾಖಾಂತರದಲ್ಲಿ)—**ಏಕಂ ಸಾಮ ತೃಚೇ ಕ್ರಿಯತೇ ಸ್ತೋತ್ರಿಯಂ** ಎಂದರೆ ಒಂದಾದ ಸಾಮ ಮಂತ್ರದಲ್ಲಿ ಮೂರು ಋಕ್ಕುಗಳನ್ನೊಳಗೊಂಡ ಸ್ತೋತ್ರವಿರುವುದು ಎಂದು ಹೇಳಿದೆ. ಮತ್ತು ಛಂದಸ್ಸಾಮವೆಂಬ ಗ್ರಂಥದಲ್ಲಿ ಒಂದು ಋಕ್ಕಿನಲ್ಲಿಯೇ ಸಾಮಮಂತ್ರವು ಉತ್ಪನ್ನವಾಗಿದೆ (ಎಂದರೆ ಸಾಮದಲ್ಲಿ ಒಂದೇ ಋಕ್ಕಿದೆ) ಎಂದು ಹೇಳಿದ್ದರೂ ಆ ಗ್ರಂಥದ ಉತ್ತರಭಾಗದಲ್ಲಿ—ಪ್ರಯೋಗಕಾಲದಲ್ಲಿ ಎಂದರೆ ಸಾಮಮಂತ್ರವನ್ನು ಗಾನಮಾಡುವ ಕಾಲದಲ್ಲಿ ಮೂರು ಋಕ್ಕುಗಳಿಂದ ಗಾನಮಾಡಬೇಕು ಎಂದು ಹೇಳಿರುವುದು. ಆ ಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕಿಗೆ ಯೋನಿ (ಅಥವಾ ಮೂಲಸ್ಥಾನ) ಎಂದು ಹೆಸರು. ಯೋನಿರೂಪವಾದ ಮೊದಲನೆಯ ಋಕ್ಕಿನ ಗಾನವನ್ನನುಸರಿಸಿ ಎರಡನೆಯ ಮತ್ತು ಮೂರನೆಯ ಋಕ್ಕಗಳ ಗಾನವನ್ನು ಊಹಿಸಿ ಗಾನಮಾಡಬೇಕು ಎಂದು ಶಾಖಾಂತರದಲ್ಲಿಯೂ ಸಹ—**ಯದ್ಯೋನ್ಯಾಂ ತದುತ್ತರಯೋರ್ಗಾಯತಿ** ಎಂದು ಹೇಳಿರುವುದು. ಆದುದರಿಂದ ಉದ್ಗಾತೃವರ್ಗದ ಋತ್ವಿಜರು ತಮ್ಮ ಗಾನಕರ್ಮವನ್ನು ಮೂರು ಋಕ್ಕುಗಳನ್ನು ಗಾನಮಾಡುವುದರಿಂದ ನೆರವೇರಿಸುತ್ತಾರೆ. ಈ ಉಪಾಖ್ಯಾನದಲ್ಲಿ ಹಿಂದೆ ಹೇಳಿರುವಂತೆ ಒಂದು ಸಾಮಮಂತ್ರಕ್ಕೆ ಮೂರು ಋಕ್ಕುಗಳು ಸಮನಾಗಿರುವುದರಿಂದ ಎಂದರೆ ಮೂರು ಋಕ್ಕುಗಳು ಸೇರಿ ಒಂದು ಸಾಮವಾಗಿರುವುದರಿಂದ ಸಾಮದ ಮಹಿಮೆಯು ಋಕ್ಕಿನ ಮಹಿಮೆಗೆ ಮೂರರಷ್ಟು ಅಧಿಕವಾಗಿರುವುದು. ಲೋಕವ್ಯವಹಾರದಲ್ಲಿಯೂ ಕೂಡ ಒಬ್ಬ ಪುರುಷನಿಗೆ ಅನೇಕ ಪತ್ನಿಯರಿರುವರು. ಒಬ್ಬ ಸ್ತ್ರೀಗೆ ಅನೇಕ ಪತಿಯರಿರುವುದಿಲ್ಲ. ಅದರಂತೆ ಋಕ್ಕು ಸ್ತ್ರೀಸ್ಥಾನದಲ್ಲಿರುವುದು. ಸಾಮವು ಪುರುಷಸ್ಥಾನದಲ್ಲಿರುವವುದು ಆದ್ದರಿಂದ ಪುರುಷಸ್ಥಾನದಲ್ಲಿರುವ ಸಾಮಮಂತ್ರಕ್ಕೆ ಸ್ತ್ರೀಸ್ಥಾನದಲ್ಲಿರುವ ಮೂರು ಋಕ್ಕುಗಳು (ಪತ್ನಿಭಾವದಲ್ಲಿ) ಸೇರಿರುವುದು ಯುಕ್ತವಾಗಿದೆ. ಇದಕ್ಕೆ ವಿರುದ್ಧವಾದ ವರ್ತನವು ಎಲ್ಲಿಯೂ ಕಂಡುಬರುವುದಿಲ್ಲ. ಒಟ್ಟಿನಲ್ಲಿ-ಋಕ್ ಶಬ್ದವನ್ನು ಎಂದರೆ ಋಕ್ಕಿನ ಅಕ್ಷರ ಪದಾದಿಗಳನ್ನು ಸೂಚಿಸುವ **ಸಾ** ಎಂಬ ಶಬ್ದವೂ, ಸಾಮಮಂತ್ರವನ್ನು ಸೂಚಿಸುವ **ಅಮ** ಶಬ್ದವೂ ಸೇರಿ ಸಾಮ ಎಂಬ

ಶಬ್ದವಾಗಿರುವುದು. ಈ ಸಾಮಮಂತ್ರದಲ್ಲಿ ಋಕ್ ಮತ್ತು ಸಾಮವೆಂಬ ಎರಡು ವಿಧಮಂತ್ರಗಳೂ ಸೇರಿರುವವು ಎಂದು ಮುಖ್ಯಾಭಿಪ್ರಾಯವು. ಈ ವಿಷಯವನ್ನು ತಿಳಿದಿರುವ ಪುರುಷನು ಪೂಜಾರ್ಹನಾಗುವನು.

**ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಸಾಮನ್ ಭವತ್ಯ-ಸಾಮನ್ಯ ಇತಿ ಹಿ ನಿಂದಂತಿ ।**

ಲೌಕಿಕವೃತ್ತಾಂತೋದಾಹರಣೇನಾಪಿ ಸಾಮಸ್ವರೂಪಂ ಪ್ರಶಂಸತಿ । ಯಃ ಪುಮಾನ್ಭೂತಿರ್ಮೈಶ್ವರ್ಯಂ ಪ್ರಾಪ್ನೋತಿ ಯಶ್ಚ ವಿದ್ಯಾವೃತ್ತಾಭ್ಯಾಂ ಶ್ರೇಷ್ಠತ್ವಂ ಪ್ರಾಪ್ನೋತಿ ಸ ಸರ್ವೋಽಪಿ ಸಾಮನ್ಭವತಿ । ಸರ್ವೇಷು ಸ್ವಕೀಯತ್ವಬುದ್ಧ್ಯಾ ಸಮದೃಷ್ಟಿರ್ಭವತಿ । ಅನ್ಯಥಾ ಸರ್ವೇಜನಾಃ ತಮಸಾಮನ್ಯಃ ಪಕ್ಷಪಾತೀತಿ ನಿಂದಂತಿ । ಅತಃ ಸಾಮಾನ್ಯರೂಪಸ್ಯ ಲೋಕೇ ಪ್ರಶಸ್ತತ್ವಾದತ್ರಾಕ್ಷರಪಾಠಸ್ಯ ಗಾನಸ್ಯ ಚೈಕತ್ವೇನ ಸಾಮತ್ವಂ ಪ್ರಶಸ್ತಮಿತ್ಯರ್ಥಃ ॥

ಲೋಕವ್ಯವಹಾರದಲ್ಲಿಯೂ ಕೂಡ ಯಾವ ಪುರುಷನು ಐಶ್ವರ್ಯಪ್ರಾಪ್ತಿಯನ್ನಾಗಲಿ, ವಿದ್ಯಾಪ್ರಶಸ್ತಿಯನ್ನಾಗಲಿ ಸಂಪಾದಿಸುವನೋ ಅವನನ್ನು ಸಾಮನ್ ಎಂದು ಕರೆಯುವರು. ಎಂದರೆ ಅವನು ತನ್ನಂತೆಯೇ ಇತರರಲ್ಲಿಯೂ ಸರ್ವಸಮ ದೃಷ್ಟಿಯಿಂದ ವರ್ತಿಸುವವನೆಂದು ಹೇಳುವರು. ಹಾಗಿಲ್ಲದಿದ್ದರೆ, ಇತರರ ವಿಷಯದಲ್ಲಿ ಪಕ್ಷಪಾತಬುದ್ಧಿಯನ್ನು ಪ್ರದರ್ಶಿಸುವನಾದರೆ ಅವನನ್ನು ಅಸಾಮಾನ್ಯ ಎಂದು ನಿಂದಿಸುವರು. ಅದರಂತೆಯೇ ಇಲ್ಲಿಯೂ ಗಾನರೂಪವಾಗಿರುವ ಸಾಮಮಂತ್ರವು ಒಂದಾಗಿರುವುದರಿಂದ ಇದಕ್ಕೆ ಪ್ರಾಶಸ್ತ್ಯವಿದೆಯೆಂದು ಹೇಳುವರು.

**ತೇ ವೈ ಪಂಚಾನ್ಯದ್ಭೂತ್ವಾ ಪಂಚಾನ್ಯದ್ಭೂತ್ವಾ ಕಲ್ಪೇತಾಮಾಹಾವಶ್ಚ ಹಿಂಕಾರಶ್ಚ ಪ್ರಸ್ತಾವಶ್ಚ ಪ್ರಥಮಾ ಚ ಋಗುದ್ಗೀಥಶ್ಚ ಮಧ್ಯಮಾ ಚ ಪ್ರತಿಹಾರಶ್ಚೋತ್ತಮಾ ಚ ನಿಧನಂ ಚ ವಷಟ್ಕಾರಶ್ಚ ।**

ನನ್ವಸ್ತ್ವೇವಂ ಸಾಮತ್ವಂ ನಿಷ್ಕೇವಲ್ಯಶಸ್ತ್ರೇ ಕಿಮಾಯಾತಮಿತ್ಯಾಶಂಕ್ಯ ಸಾಮಸಾದೃಶ್ಯೇನ ಶಸ್ತ್ರಪ್ರಶಂಸಾಂ ದರ್ಶಯತಿ—ತೇ ವೈ ತಏವ ವಕ್ಷ್ಯಮಾಣಾಃ ಶಸ್ತ್ರಾವಯವಾಃ ಪಂಚಸಂಖ್ಯಾಕಾ ಅನ್ಯತ್ಪೃಥಗೇವ ಶಸ್ತ್ರರೂಪಂ ಭೂತ್ವಾ ವರ್ತಂತೇ ಚ(?)ಶಸ್ತ್ರಸಾಮನೀ ಸ್ವಾಹಾವಾದಯತ್ರ್ಯ(?) ವಯವೋಪೇತೇ ಉಭೇ ಕಲ್ಪೇತಾಂ ಸ್ವವ್ಯಾಪಾರ ಸಮರ್ಥೇ ಭವತಃ । ಆಹಾವಃ ಶೋಂಸಾವೋಮಿತಿಮಂತ್ರಃ । ಸ್ತೋತ್ರಿಯೇ ತೃಚೇ ಪ್ರಥಮಮಧ್ಯಮೋತ್ತಮಾಸ್ತಿಸ್ರ ಋಚಃ । ಯಾಜ್ಯಾಂತೇ ಪಠಿತವ್ಯೋ ವಷಟ್ಕಾರಃ । ತದೇತತ್ಪಂಚಕಂ ಶಸ್ತ್ರಸ್ವರೂಪಂ ॥ ಉದ್ಗಾತ್ರಾ ಪಠಿತವ್ಯಃ ಸಾಮ್ನ ಆದೌ ಹಿಮಿತ್ಯೇವಂ ಶಬ್ದೋ ಹಿಂಕಾರಃ ಪ್ರಸ್ತೋತ್ರಾ ಗಾತವ್ಯಃ ಸಾಮಾವಯವಃ ಪ್ರಸ್ತಾವಃ । ಉದ್ಗಾತ್ರಾ ಗಾತವ್ಯ ಉದ್ಗೀಥಃ । ಪ್ರತಿಹರ್ತ್ರಾ ಗಾತವ್ಯಃ ಪ್ರತಿಹಾರಃ । ಅಂತೇ ಸರ್ವೈರ್ಗಾತವ್ಯೋ ನಿಧನಂ । ತದೇತತ್ಪಂಚಕಂ ಸ್ತೋತ್ರಸ್ವರೂಪಂ ॥ ಅತಃ ಸಾಮಸಾದೃಶ್ಯೇನ ನಿಷ್ಕೇವಲ್ಯಶಸ್ತ್ರಂ ಪ್ರಶಸ್ತಂ ।

ಯಜ್ಞಕರ್ಮಗಳ ಅನುಕೂಲಕ್ಕಾಗಿ ಋಕ್ ಮತ್ತು ಸಾಮ ಎಂಬ ಎರಡುವಿಧ ಮಂತ್ರಗಳಲ್ಲಿಯೂ ಐದುವಿಧ ಪ್ರಭೇಧಗಳನ್ನು ಕಲ್ಪಿಸಲಾಗಿದೆ. ಎಂದರೆ ಋಗ್ವೇದಸಂಬಂಧವಾದ ಶಸ್ತ್ರಮಂತ್ರಗಳಲ್ಲಿ (೧) **ಆಹಾವಃ** (೨-೪) ಸ್ತೋತ್ರೀಯ ತೃಚ ಎಂದರೆ ಮೊದಲನೆಯ ಋಕ್ಕು, ಮಧ್ಯದ ಋಕ್ಕು, ಕೊನೆಯ ಋಕ್ಕು ಎಂದು ಮೂರು ಋಕ್ಕುಗಳು (೫) ಯಾಜ್ಯಾಮಂತ್ರದ ಕೊನೆಯಲ್ಲಿ ಪಠಿಸುವ ವಷಟ್ಕಾರವು ಎಂದು ಐದು **ಅವಯವ**ಗಳು; ಈ ಐದೂ ಶಸ್ತ್ರಮಂತ್ರಗಳು ಮತ್ತು ಋಗ್ವೇದಕ್ಕೆ ಸಂಬಂಧಪಟ್ಟಿರುವವು. ಸಾಮಮಂತ್ರದಲ್ಲಿ (೧) **ಹಿಂ** ಎಂಬ ಹಿಂಕಾರ (೨) **ಪ್ರಸ್ತಾವಃ** (೩) **ಉದ್ಗೀಥಃ** (೪) **ಪ್ರತಿಹಾರಃ** (೫) **ನಿಧನಂ** ಎಂದು ಐದು ಪ್ರಭೇದ ಅಥವಾ ಅವಯುವಗಳಿರುವವು. ಈ ಐದೂ ಸ್ತೋತ್ರರೂಪವಾದ ಸಾಮದ ಅವಯುವಗಳು. ಇವುಗಳ ವಿವರಣೆಯು ಈರೀತಿ ಇರುವುದು.

1. ಶಸ್ತ್ರಮಂತ್ರಗಳ ೫ ಅವಯವಗಳು—

೧. **ಆಹಾವಃ । ಶೋಂ ೩ ಸಾವೋಂ ೩** ಎಂದು ಮಂತ್ರದ ಆದಿಯಲ್ಲಿ ಪಠಿಸುವ ಮಂತ್ರವು.

೨. ತೃಚವೆಂಬ ಮೂರು ಋಕ್ಕುಗಳಲ್ಲಿ ಮೊದಲನೆಯ ಋಕ್ಕು.

೩. ,, ,, ,, ಎರಡನೆಯ ,,

೪. ,, ,, ,, ಮೂರನೆಯ ,,

೫. ಯಾಜ್ಯಾಮಂತ್ರದ ಕೊನೆಯಲ್ಲಿ ಸೇರಿಸಿ ಪಠಿಸುವ **ವೌಷಟ್** ಎಂಬ ವಷಟ್ಕಾರವು.

ಈ ಐದೂ ಋಗ್ವೇದಮಂತ್ರಗಳನ್ನೊಳಗೊಂಡ ಶಸ್ತ್ರಮಂತ್ರಗಳು. ಇವುಗಳನ್ನು ಹೋತೃವರ್ಗದ ಋತ್ವಿಜರು ಪಠಿಸುವರು.

2. ಇದರಂತೆ ಸಾಮಮಂತ್ರದ ೫ ಅವಯುವಗಳು—

೧. ಹಿಂ ಎಂಬ **ಹಿಂಕಾರ.** ಇದನ್ನು ಉದ್ಗಾತೃವೆಂಬ ಋತ್ವಿಜನು ಸಾಮಗಾನದ ಪ್ರಾರಂಭದಲ್ಲಿ ಪಠಿಸುವನು.

೨. **ಪ್ರಸ್ತಾವಃ ।** ಇದನ್ನು ಪ್ರಸ್ತೋತೃವೆಂಬ ಋತ್ವಿಜನು ಗಾನಮಾಡುವನು.

೩. **ಉದ್ಗೀಥಃ ।** ಇದನ್ನು ಉದ್ಗಾತೃವೆಂಬ ಋತ್ವಿಜನು ಗಾನಮಾಡುವನು.

೪. **ಪ್ರತಿಹಾರಃ ।** ಪ್ರತಿಹರ್ತೃವೆಂಬ ಋತ್ವಿಜನು ಇದನ್ನು ಗಾನಮಾಡುವನು.

೫. **ನಿಧನಂ ।** ಸಾಮಗಾನದ ಕೊನೆಯಲ್ಲಿ ಉದ್ಗಾತೃವರ್ಗದ ಋತ್ವಿಜರೆಲ್ಲರೂ ಸೇರಿ ಒಟ್ಟಾಗಿ ಇದನ್ನು ಗಾನಮಾಡುವರು.

ಮೇಲೆ ಸೂಚಿಸಿರುವಂತೆ ಶಸ್ತ್ರಮಂತ್ರದ ಐದು ಅವಯುವಗಳಿಗೂ ಸಾಮಮಂತ್ರದ ಐದು ಅವಯುವಗಳಿಗೂ ಸಾದೃಶ್ಯವಿರುವುದು ಕಂಡುಬರುವುದು. ಈ ವಿಧವಾದ ಸಾದೃಶ್ಯವಿರುವುದರಿಂದ ಈ ನಿಷ್ಕೇವಲ್ಯಶಸ್ತ್ರವು ಪ್ರಶಸ್ತವಾದುದೆಂದು ಹೇಳಲ್ಪಡುವುದು. ತೈತ್ತಿರೀಯಸಂಹಿತೆಯಲ್ಲಿ ಸಾಮಮಂತ್ರದ ಐದುವಿಧ ಅವಯುವ ವಿಭಾಗಗಳನ್ನು ಅವುಗಳ ಅಭಿಮಾನಿ ದೇವತೆಗಳನ್ನು ಹೇಳಿದೆ—

**ವಾಯುರ್ಹಿಂಕರ್ತಾಗ್ನಿಃ ಪ್ರಸ್ತೋತಾ ಪ್ರಜಾಪತಿಃ ಸಾಮ ಬೃಹಸ್ಪತಿರುದ್ಗಾತಾ ವಿಶ್ವೇ ದೇವಾ ಉಪಗಾತಾರೋ ಮರುತಃ ಪ್ರತಿಹರ್ತಾರ ಇಂದ್ರೋ ನಿಧನಂ ತೇ ದೇವಾಃ ।**

(ತೈ. ಸಂ. ೩-೩-೨-೧)

ಎಂದರೆ ಸಾಮಗಾನದ ಅವಯುವಗಳಾದ ಹಿಂಕಾರಕ್ಕೆ ವಾಯುವೂ, ಪ್ರಸ್ತಾವಕ್ಕೆ ಪ್ರಜಾಪತಿಯೂ, ಉದ್ಗೀಥಕ್ಕೆ ಬೃಹಸ್ಪತಿಯೂ, (ವಿಶ್ವೇದೇವತೆಗಳು ಉಪಗಾತೃಗಳೆಂದು ಇಲ್ಲಿ ವಿಶೇಷವಿಷಯವಿದೆ) ಪ್ರತಿಹಾರಕ್ಕೆ ಮರುದ್ದೇವತೆಗಳೂ, ನಿಧನಕೆ

ಇಂದ್ರನೂ ಅಭಿಮಾನಿದೇವತೆಗಳು. ಇಲ್ಲಿ ವಿಶ್ವೇದೇವತೆಗಳೆಂದರೆ ಎಲ್ಲಾ ದೇವತೆಗಳು ಎಂದರ್ಥ. ಉಪಗಾನವೆಂದರೆ ಎಲ್ಲರೂ ಸೇರಿ ಒಟ್ಟಿಗೆ ಗಾನಮಾಡುವುದು. ಗಾನಾಂತ್ಯದಲ್ಲಿ ಮೊದಲನೆಯ ಹಿಂಕಾರವನ್ನೂ ಕೊನೆಯ ನಿಧನವನ್ನೂ ಎಲ್ಲ ದೇವತೆಗಳೂ ಸೇರಿ ಒಟ್ಟಿಗೆ ಗಾನಮಾಡುವರು. ಆದುದರಿಂದ ಇಲ್ಲಿ **ವಿಶ್ವೇ ದೇವಾ ಉಪಗಾತಾರಃ** ಎಂಬ ವಿವರಣೆ ಇದೆ. ಈ ಐದು ವಿಧವಾದ ಅವಯುವಗಳಿಂದ ಕೂಡಿರುವ ಒಟ್ಟು ಸಾಮಮಂತ್ರಕ್ಕೆ ಸರ್ವದೇವತಾ ಜನಕನಾದ ಪ್ರಜಾಪತಿಯು ಅಭಿಮಾನಿ ದೇವತೆಯು ಎಂದು ಇಲ್ಲಿ ಹೇಳಿದೆ.

**ತೇ ಯತ್ಪಂಚಾನ್ಯದ್ಭೂತ್ವಾ ಪಂಚಾನ್ಯದ್ಭೂತ್ವಾ ಕಲ್ಪೇತಾಂ ತಸ್ಮಾ-ದಾಹುಃ ಪಾಂಕ್ತೋ ಯಜ್ಞಃ ಪಾಂಕ್ತಾಃ ಪಶವಃ ।**

**ಪ್ರಕಾರಾಂತರೇಣ ಪ್ರಶಂಸತಿ—ಯಸ್ಮಾತ್ಸಾಮಶಸ್ತ್ರಯೋರುಕ್ತಪ್ರಕಾರೇಣ ಪ್ರತ್ಯೇಕಂ ಪಂಚಾವಯವತ್ವಂ ಸಂಪನ್ನಂ ತಸ್ಮಾತ್ಪಂಚಾನಾಂ ಪಂಕ್ತ್ಯಾ ಯೋಗಾದಯಂ ಯಜ್ಞಃ ಪಾಂಕ್ತ ಇತ್ಯೇವಂ ಬ್ರಹ್ಮವಾದಿನ ಆಹುಃ । ತಥಾ ಗವಾದಿಪಶವೋಽಪಿ ಚತುರ್ಭಿಃ ಪಾದೈರ್ಮುಖೇನ ಚ ಯೋಗಾತ್ಪಾಂಕ್ತಾಃ । ಅತೋ ಯಜ್ಞಪಾಂಕ್ತತ್ವಪ್ರಸಿದ್ಧಿಸಂಪಾದನಾತ್ಪಶುಸಾಮ್ಯಾಚ್ಚ ಶಸ್ತ್ರಂ ಪ್ರಶಸ್ತಂ ॥**

ಸಾಮ ಮತ್ತು ಶಸ್ತ್ರಮಂತ್ರಗಳ ಪಂಚಾವಯವವಿಭಾಗವನ್ನು ಪ್ರಕಾರಾಂತರದಿಂದ ವರ್ಣಿಸುವರು. ಸಾಮಮಂತ್ರದಲ್ಲಿಯೂ, ಶಸ್ತ್ರಮಂತ್ರದಲ್ಲಿಯೂ ಮೇಲೆ ಹೇಳಿದಂತೆ ಐದೈದು ಅವಯವವಿಭಾಗಗಳಿರುವುದರಿಂದಲೂ, ಯಜ್ಞದಲ್ಲಿ ಸಾಮಶಸ್ತ್ರ ಮಂತ್ರಗಳಿಗೆ ಬಹು ಮುಖ್ಯವಾದ ಸ್ಥಾನವಿರುವುದರಿಂದಲೂ, ಯಜ್ಞದಲ್ಲಿಯೂ ಐದುಐದು ಅವಯವವಿಭಾಗವಿದ್ದಂತಾಯಿತು. ಆದ್ದರಿಂದಲೇ ಪಂಕ್ತಿಛಂದಸ್ಸಿನಲ್ಲಿ ಐದು ಪಾದಗಳಿರುವಂತೆ ಯಜ್ಞವೂ ಸಹ ಐದು ವಿಭಾಗಗಳನ್ನೊಳಗೊಂಡಿದೆ. ಆದ್ದರಿಂದ **ಪಾಂಕ್ತೋ ಯಜ್ಞಃ** ಎಂದು ಹೇಳುವರೆಂದೂ, ಪಶುಗಳಿಗೂ ಸಹ ನಾಲ್ಕು ಪಾದಗಳು, ಒಂದು ಮುಖ ಒಟ್ಟು ಐದು ಅವಯವಗಳಿರುವುವೆಂದೂ ಪಂಚಾವಯವವಿಷಯದಲ್ಲಿ ಯಜ್ಞಕ್ಕೆ ಪಶುಸಾಮ್ಯವನ್ನು ಹೇಳುವರು.

**ಯದು ವಿರಾಜಂ ದಶಿನೀಮಭಿಸಮಪದ್ಯೇತಾಂ ತಸ್ಮಾದಾಹುರ್ವಿ-ರಾಜಿ ಯಜ್ಞೋ ದಶಿನ್ಯಾಂ ಪ್ರತಿಷ್ಠಿತ ಇತಿ ।**

**ಪುನಃ ಪ್ರಕಾರಾಂತರೇಣ ಪ್ರಶಂಸತಿ—ದಶಾಕ್ಷರಾ ವಿರಾಡಿತಿ ಶ್ರುತ್ಯಂತರಾದ್ದಶಾನಾ-ಮಕ್ಷರಾಣಾಂ ಸಮೂಹೋ ದಶಿನೀ ಯಾ ವಿರಾಡಸ್ತಿ ತಾಮಭಿಲಕ್ಷ್ಯ ಪಂಚದ್ವಯಾತ್ಮಕೇ ಶಸ್ತ್ರಸಾಮನೀ ಸಮಪದ್ಯೇತಾಂ ವಿರಾಡ್ಸದೃಶೇ ಜಾತೇ ಇತ್ಯರ್ಥಃ ॥ ಯದು ಯಸ್ಮಾದೇವ ಕಾರಣಾತ್ಸಂಖ್ಯಯಾ ವಿರಾಟ್ಸಾದೃಶ್ಯಂ ತಸ್ಮಾದಭಿಜ್ಞಾ ಏವಮಾಹುಃ । ದಶಸಂಖ್ಯೋಪೇ-ತಾಯಾಂ ಶಸ್ತ್ರಸಾಮರೂಪಾಯಾಂ ವಿರಾಜಿ ಯಜ್ಞೋ ವ್ಯವಸ್ಥಿತ ಇತಿ ॥**

ಯಜ್ಞದ ವಿಷಯದಲ್ಲಿ ಮತ್ತೊಂದು ದೃಷ್ಟಾಂತವನ್ನು ಹೇಳಿರುವರು. ವಿರಾಡ್ ಛಂದಸ್ಸಿನ ಪಾದದಲ್ಲಿ ಹತ್ತು ಅಕ್ಷರಗಳಿರುವವು (ಹತ್ತೇ ಅಕ್ಷರಗಳಿರುವುದು ಸರಿಯಲ್ಲ, ವ್ಯತ್ಯಾಸವಿರುವುದು) ಸಾಮಮಂತ್ರದ ಐದು ಅವಯವಗಳೂ ಶಸ್ತ್ರಮಂತ್ರದ ಐದು ಅವಯವಗಳೂ ಸೇರಿ ಹತ್ತು ಅವಯವಗಳಾಗುವವು. ಈ ಹತ್ತು ಅವಯವಗಳು ವಿರಾಟ್‌ಛಂದಸ್ಸಿನ ಹತ್ತು ಅಕ್ಷರಗಳಿಗೆ ಸದೃಶವಾಗಿರುವವು. ಈ ಎರಡರಲ್ಲಿಯೂ ಹತ್ತು ವಿಭಾಗಗಳಿರುವುದರಿಂದ ವಿರಾಟ್‌ಛಂದಸ್ಸು ಹತ್ತು ಅಕ್ಷರಗಳಿಂದ ಕೂಡಿ

ಪ್ರಕಾಶಿಸುವಂತೆ ಯಜ್ಞವೂ ಸಾಮ ಮತ್ತು ಶಸ್ತ್ರಮಂತ್ರಗಳಲ್ಲಿರುವ ಹತ್ತು ಅವಯವಭಾಗಗಳಿಂದ ಕೂಡಿ ಪ್ರಕಾಶಿಸುತ್ತಿರುವುದೆಂದು ಹೇಳುವರು.

**ಆತ್ಮಾ ವೈ ಸ್ತೋತ್ರಿಯಃ ಪ್ರಜಾನುರೂಪಃ ಪತ್ನೀ ಧಾಯ್ಯಾ ಪಶವಃ ಪ್ರಗಾಥೋ ಗೃಹಾಃ ಸೂಕ್ತಂ । ಸ ವಾ ಅಸ್ಮಿಂಶ್ಚ ಲೋಕೇಽಮುಷ್ಮಿಂಶ್ಚ ಪ್ರಜಯಾ ಚ ಪಶುಭಿಶ್ಚ ಗೃಹೇಷು ವಸತಿ ಯ ಏವಂ ವೇದ ।**

ಪುನರಪಿ ಗೃಹಸ್ಥಪುರುಷಸಾದೃಶ್ಯೇನ ಶಸ್ತ್ರಂ ಪ್ರಶಂಸತಿ—ಯೇನ ತ್ಯೃಚೇನ ಸಾಮಗಾಃ ಸ್ತುವಂತಿ ಸ ಸ್ತೋತ್ರಿಯಸ್ತ್ಯೃಚೋ ನಿಷ್ಕೇವಲ್ಯಶಸ್ತ್ರಸ್ಯ ಪ್ರಾರಂಭೇ ಶಂಸನೀಯಃ । ಸ ಚಾಽಽತ್ಮಾ ವೈ ಗೃಹಸ್ಥಶರೀರಸ್ಥಾನೀಯ ಏವ ಸ್ತೋತ್ರಿಯಂ ತ್ರ್ಯೃಚಮನು ದ್ವಿತೀಯೋ ಯಸ್ತ್ಯೃಚಃ ಶಸ್ಯತೇ ಸೋಽಯಮನುರೂಪಃ । ಸ ಚ ಪ್ರಜಾ ಪುತ್ರಪೌತ್ರಾದಿಸ್ಥಾನೀಯಃ । ಯೇಯಂ ಧಾಯ್ಯಾ ಶಸ್ತ್ರೇ ಪ್ರಕ್ಷೇಪಣೀಯಾ ಸಾ ಪತ್ನೀಸ್ಥಾನೀಯಾ । ಯಃ ಪ್ರಗಾಥಃ ಸ ಪಶುಸ್ಥಾನೀಯಃ । ಯನ್ನಿವಿದ್ಧಾನೀಯಂ ಸೂಕ್ತಂ ತದ್ಗೃಹಸ್ಥಾನೀಯಂ ।

ಏತದ್ವೇದನಂ ಪ್ರಶಂಸತಿ—ಪಶುಭಿಶ್ಚ ಸಹಿತ ಇತಿ ಶೇಷಃ ।

ಸಾಮಮಂತ್ರದಲ್ಲಿಯೂ, ಶಸ್ತ್ರಮಂತ್ರದಲ್ಲಿಯೂ ಐದೈದು ವಿಭಾಗಗಳಿರುವಂತೆ ನಿಷ್ಕೇವಲ್ಯಶಸ್ತ್ರದಲ್ಲಿಯೂ ಐದು ವಿಭಾಗಗಳಿರುವವು. ಸ್ತೋತ್ರಿಯ, ಅನುರೂಪ, ಧಾಯ್ಯಾ, ಪ್ರಗಾಥ, ನಿವಿದ್ಧಾನೀಯಸೂಕ್ತಂ ಎಂದು ಐದು ವಿಭಾಗಗಳು. ಇವುಗಳಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳ ಪ್ರಾರಂಭದಲ್ಲಿ ಸಾಮಗಾನಮಾಡುವವರು ಗಾನಮಾಡುವ ತೃಚಕ್ಕೆ (ಮೂರು ಋಕ್ಕುಗಳಿಗೆ) **ಸ್ತೋತ್ರಿಯ** ಅಥವಾ ಸ್ತೋತ್ರಿಯಸ್ತೃಚವೆಂದು ಹೆಸರು. ಈ ಸ್ತೋತ್ರಿಯಸ್ತೃಚವನ್ನನುಸರಿಸಿ ಅದಕ್ಕೆ ಸದೃಶವಾದ ಬೇರೆ ತೃಚವನ್ನು ಗಾನಮಾಡುವರು. ಎರಡನೆಯ ಸಲ ಗಾನಮಾಡುವ ಈ ತೃಚಕ್ಕೆ **ಅನುರೂಪ**ವೆಂದು ಹೆಸರು. ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸುವ ಮಂತ್ರಕ್ಕೆ **ಧಾಯ್ಯಾ** ಎಂದು ಹೆಸರು. ರಥಂತರ ಮೊದಲಾದ ಮುಖ್ಯ ಸಾಮಮಂತ್ರಕ್ಕೆ **ಪ್ರಗಾಥ**ವೆಂದು ಹೆಸರು. ದೇವತೆಗಳ ಗುಣಗಳನ್ನು ವರ್ಣಿಸುವ ಸೂಕ್ತಕ್ಕೆ **ನಿವಿತ್‌ಸೂಕ್ತ**ವೆಂದು ಹೆಸರು. ಈ ಐದು ಮಂತ್ರಗಳಿಗೂ ಇಲ್ಲಿ ಬೇರೆ ಬೇರೆ ಸ್ಥಾನಗಳನ್ನು ಕಲ್ಪಿಸಿ ಗೃಹಸ್ಥಪುರುಷನ ದೃಷ್ಟಾಂತದಿಂದ ವರ್ಣಿಸಲಾಗಿದೆ. ಹೇಗೆಂದರೆ—ಸ್ತೋತ್ರಿಯವೇ ಗೃಹಸ್ಥನ ಶರೀರದಲ್ಲಿರುವ ಆತ್ಮವು; ಅನುರೂಪವೇ ಪುತ್ರನು; ಧಾಯ್ಯಾಮಂತ್ರವೇ ಪತ್ನಿಯು; ಪ್ರಗಾಥವೇ ಪಶುವು (ಗೋವು); ನಿವಿದ್ಧಾನೀಯಸೂಕ್ತವೇ ಗೃಹವು ಎಂದು ಹೇಳುವರು.

ನಿಷ್ಕೇವಲ್ಯಶಸ್ತ್ರದ ವಿಭಾಗಗಳಾದ (1) ಸ್ತೋತ್ರಿಯ (2) ಅನುರೂಪ (3) ಧಾಯ್ಯಾ (4) ಪ್ರಗಾಥ (5) ನಿವಿದ್ಧಾನೀಯ ಸೂಕ್ತ ಎಂಬ ಐದು ವಿಭಾಗಗಳನ್ನು ಪಠಿಸುವ ಮಂತ್ರಗಳನ್ನು ಇಲ್ಲಿ ವಿವರಿಸಲಾಗಿದೆ—

(1) **ಸ್ತೋತ್ರಿಯ ಮಂತ್ರಗಳು—**

**ಅಭಿ ತ್ವಾ ಶೂರ ನೋನುಮೋಽದುಗ್ಧಾ ಇವ ಧೇನವಃ ।**
**ಈಶಾನಮಸ್ಯ ಜಗತಃ ಸ್ವರ್ದೃಶಮೀಶಾನಮಿಂದ್ರ ತಸ್ಥುಷಃ ॥**

(ಋ. ಸಂ. ೭-೩೨-೨೨ ; ಸಾಮ. ೨೩೩,೬೮೦ ; ಅಥರ್ವ. ೨೦-೧೨೧-೧ ; ವಾಜ. ಸಂ. ೨೭-೩೫ ;
ತೈ. ಸಂ. ೨-೪-೧೪-೨)

**ನ ತ್ವಾವಾँ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ ।**
**ಅಶ್ವಾಯಂತೋ ಮಘವನ್ನಿಂದ್ರ ವಾಜಿನೋ ಗವ್ಯಂತಸ್ತ್ವಾ ಹವಾಮಹೇ ॥**

(ಋ. ಸಂ. ೭-೩೨-೨೩ ; ಸಾಮ. ೬೮೧ ; ಅಥರ್ವ. ೨೦-೧೨೧-೨ ; ವಾಜ. ಸಂ. ೨೭-೩೬)

ಈ ಎರಡು ಋಕ್ಕುಗಳನ್ನು ಹೋತೃವೂ, ಸಾಮಗಾನಮಾಡವವರೂ ಮೂರು ಋಕ್ಕುಗಳನ್ನಾಗಿ ಮಾಡಿ ಪಠಿಸುವರು. ಇದೇ ಪ್ರಾರಂಭದಲ್ಲಿ ಪಠಿಸುವ ಸ್ತೋತ್ರಿಯಮಂತ್ರವು. ಇದನ್ನು ರಥಂತರಸಾಮವೆಂದೂ ಹೇಳುವರು. ಈ ಎರಡು ಋಕ್ಕುಗಳನ್ನು ಮೂರು ಋಕ್ಕುಗಳನ್ನಾಗಿಯೂ ಐದು ವಿಭಾಗಗಳನ್ನಾಗಿಯೂ ಹೇಗೆ ಗಾನಮಾಡುವರು ಎಂಬುದನ್ನು ಇಲ್ಲಿ ವಿವರಿಸಿದ್ದೇವೆ—

೧ ನೇ ಋಕ್ಕು—

(೧) **ಪ್ರಸ್ತಾವ—ಹುಂ । ಅಭಿ ತ್ವಾ ಶೂರನೋನುಮೋ ವಾ ॥**
(೨) **ಉದ್ಗೀಥ—ಓಮಾದುಗ್ಧಾ ಇವ ಧೇನವ ಈಶಾನಮಸ್ಯ ಜಗತಃ ಸುವಾ ಈಶಾಂ ॥**
(೩) **ಪ್ರತಿಹಾರ—ಆ ಈಶಾನಮಾ ಇಂದ್ರಾ ॥**
(೪) **ಉಪದ್ರವ—ಸುಸ್ಥುಷಾ ಓವಾ ಹಾ ಉವಾ ॥**
(೫) **ನಿಧನಂ—ಅಸ್ ॥**

೨ ನೇ ಋಕ್ಕು—

(೧) **ಪ್ರಸ್ತಾವ—ಇಶೋ ವಾ ।**
(೨) **ಉದ್ಗೀಥ—ಓನಾಮಿಂದ್ರ ಸುಸ್ಥುಷೋನತ್ವಾವಾँ ಅನ್ಯೋ ದಿವಿಯೋ ನ ಪಾರ್ಥಿವಾ ।**
(೩) **ಪ್ರತಿಹಾರ—ನ ಜಾತೋ ನಾಜಾ ।**
(೪) **ಉಪದ್ರವ—ನಾ ಇಷ್ಯಾತಾ ಓವಾ ಹಾ ಉವಾ ।**
(೫) **ನಿಧನಂ—ಅಸ್ ॥**

೩ ನೇ ಋಕ್ಕು—

(೧) **ಪ್ರಸ್ತಾವ—ಸಜೋವಾ ।**
(೨) **ಉದ್ಗೀತ—ಓತೋನ ಜನಿಷ್ಯತೇ ಅಶ್ವಾಯಂತೋ ಮಘವನ್ನಿಂದ್ರವಾಜಿನಾ ।**
(೩) **ಪ್ರತಿಹಾರ—ಗವ್ಯಂತಸ್ತ್ವಾಹಾ ।**
(೪) **ಉಪದ್ರವ—ವಾಮಾಹಾ ಓವಾ ಹಾ ಉಹಾ ।**
(೫) **ನಿಧನಂ—ಅಸ್ ॥**

(2) **ಅನುರೂಪ ।** ಇದರಲ್ಲಿಯೂ ಎರಡೇ ಋಕ್ಕುಗಳಿರುವವು. ಇದನ್ನು ಮೂರು ಋಕ್ಕುಗಳನ್ನಾಗಿ ಪಠಿಸುವರು. ಈ ಅನುರೂಪ ಮಂತ್ರವೂ ಸಹ ಸ್ತೋತ್ರಿಯ ಮಂತ್ರದ ಪ್ರಾರಂಭದಲ್ಲಿರುವ ಅಭಿತ್ವಾ ಎಂಬ ಶಬ್ದಗಳಿಂದಲೇ ಆರಂಭವಾಗಬೇಕು.—

**ಅಭಿ ತ್ವಾ ಪೂರ್ವಪೀತಯ ಇಂದ್ರ ಸ್ತೋಮೇಭಿರಾಯವಃ ।**
**ಸಮೀಚೀನಾಸ ಋಭವಃ ಸಮಸ್ವರನ್ ರುದ್ರಾ ಗೃಣಂತ ಪೂರ್ವ್ಯಂ ॥**

(ಋ. ಸಂ. ೮-೩-೭ ; ಸಾಮ. ೨೫೬, ೧೫೭೩ ; ಅಥರ್ವ. ೨೦-೯೯-೧)

ಅಸ್ಯೇದಿಂದ್ರೋ ವಾವೃಧೇ ವೃಷ್ಣ್ಯಂ ಶವೋ ಮದೇ ಸುತಸ್ಯ ವಿಷ್ಣವಿ ।
ಅದ್ಯಾ ತಮಸ್ಯ ಮಹಿಮಾನಮಾಯವೋಽನು ಷ್ಟುವಂತಿ ಪೂರ್ವಥಾ ॥
(ಋ. ಸಂ. ೮-೩-೮ ; ಸಾಮ. ೧೫೭೪ ; ಅಥರ್ವ. ೨೦-೯೯-೨ ; ವಾಜ. ಸಂ. ೩೩-೯೭)

(3) ಧಾಯ್ಯಾ ಮಂತ್ರವು—

ಯದ್ವಾವಾನ ಪುರುತಮಂ ಪುರುಷಾಳಾ ವೃತ್ರಹೇಂದ್ರೋ ನಾಮಾನ್ಯಪ್ರಾಃ ।
ಅಚೇತಿ ಪ್ರಾಸಹಸ್ಪತಿಸ್ತುವಿಷ್ಮಾನ್ ಯದೀಮುಶ್ಮಸಿ ಕರ್ತವೇ ಕರತ್ತತ್ ॥
(ಋ. ಸಂ. ೧೦-೭೪-೬)

(4) ಪ್ರಗಾಥ ಅಥವಾ ಸಾಮಪ್ರಗಾಥ—

ಪಿಬಾ ಸುತಸ್ಯ ರಸಿನೋ ಮತ್ಸ್ವಾ ನ ಇಂದ್ರ ಗೋಮತಃ ।
ಆಪಿರ್ನೋ ಬೋಧಿ ಸಧಮಾದ್ಯೋ ವೃಧೇ ೩ ಽಸ್ಮಾँ ಅವಂತು ತೇ ಧಿಯಃ ॥
(ಋ. ಸಂ. ೮-೩-೧ ; ಸಾಮ. ೨೩೯, ೧೪೨೧)

(5) ನಿವಿತ್ ಸೂಕ್ತ—

ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ ।
ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ಪರ್ವತಾನಾಂ ॥ ೧ ॥
ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।
ವಾಶ್ರಾ ಇವ ಧೇನವಃ ಸ್ಯಂದಮಾನಾ ಅಂಜಃ ಸಮುದ್ರಮವ ಜಗ್ಮುರಾಪಃ ॥ ೨ ॥
ವೃಷಾಯಮಾಣೋಽವೃಣೀತ ಸೋಮಂ ತ್ರಿಕದ್ರುಕೇಷ್ವಪಿಬತ್ಸುತಸ್ಯ ।
ಆ ಸಾಯಕಂ ಮಘವಾ ದತ್ತ ವಜ್ರಮಹನ್ನೇನಂ ಪ್ರಥಮಜಾಮಹೀನಾಂ ॥ ೩ ॥
ಯದಿಂದ್ರಾಹನ್ಪ್ರಥಮಜಾಮಹೀನಾಮಾನ್ಮಾಯಿನಾಮಮಿನಾಃ ಪ್ರೋತ ಮಾಯಾಃ ।
ಆತ್ಸೂರ್ಯಂ ಜನಯನ್ದ್ಯಾಮುಷಾಸಂ ತಾದೀತ್ನಾ ಶತ್ರುಂ ನ ಕಿಲಾ ವಿವಿತ್ಸೇ ॥ ೪ ॥
ಅಹನ್ವೃತ್ರಂ ವೃತ್ರತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ವಧೇನ ।
ಸ್ಕಂಧಾಂಸೀವ ಕುಲಿಶೇನಾ ವಿವೃಕ್ಣಾಹಿಃ ಶಯತ ಉಪಪೃಕ್ ಪೃಥಿವ್ಯಾಃ ॥ ೫ ॥
ಅಯೋದ್ಧೇವ ದುರ್ಮದ ಆ ಹಿ ಜುಹ್ವೇ ಮಹಾವೀರಂ ತುವಿಬಾಧಮೃಜೀಷಂ ।
ನಾತಾರೀದಸ್ಯ ಸಮೃತಿಂ ವಧಾನಾಂ ಸಂ ರುಜಾನಾಃ ಪಿಪಿಷ ಇಂದ್ರಶತ್ರುಃ ॥ ೬ ॥
ಅಪಾದಹಸ್ತೋ ಅಪೃತನ್ಯದಿಂದ್ರಮಾಸ್ಯ ವಜ್ರಮಧಿ ಸಾನೌ ಜಘಾನ ।
ವೃಷ್ಣೋ ವಧ್ರಿಃ ಪ್ರತಿಮಾನಂ ಬುಭೂಷನ್ ಪುರುತ್ರಾ ವೃತ್ರೋ ಅಶಯದ್ವ್ಯಸ್ತಃ ॥ ೭ ॥
ನದಂ ನ ಭಿನ್ನಮಮುಯಾ ಶಯಾನಂ ಮನೋರುಹಾಣಾ ಅತಿ ಯಂತ್ಯಾಪಃ ।
ಯಾಶ್ಚಿದ್ವೃತ್ರೋ ಮಹಿನಾ ಪರ್ಯತಿಷ್ಠತ್ತಾಸಾಮಹಿಃ ಪತ್ಸುತಃಶೀರ್ಬಭೂವ ॥ ೮ ॥

ಇಂದ್ರೋ ದೇವಃ ಸೋಮಂ ಪಿಬತು । ಏಕಜಾನಾಂ ವೀರತಮಃ । ಭೂರಿದಾನಾಂ ತಮಸ್ತಮಃ । ಹರ್ಯೋಃ ಸ್ಥಾತಾ । ಪ್ರಶ್ನೇಃ ಪ್ರೇತಾ । ವಜ್ರಸ್ಯ ಭರ್ತಾ । ಪುರಾಂ ಭೇತ್ತಾ । ಪುರಾಂ ದರ್ಮಾ । ಅಪಾಂ ಸ್ರಷ್ಟಾ । ಅಪಾಂ ನೇತಾ । ಸತ್ವನಾಂ ನೇತಾ । ನಿಜಘ್ನಿರ್ದೂರೇ

ಶ್ರವಾಃ । ಉಪನೂತಿಕೃದ್ವಂಸನಾರ್ವಾ । ಇಹೋಽಶಂ ದೇವೋ ಬಭೂರ್ವಾ । ಇಂದ್ರೋ ದೇವ ಇಹ ಶ್ರವದಿಹ ಸೋಮಸ್ಯ ಪಿಬತು । ಪ್ರೇಮಾಂ ದೇವೋ ದೇವಹೂತಿಮವತು ದೇವ್ಯಾ ಧಿಯಾ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಂ । ಪ್ರೇದಂ ಸುನ್ವಂತಂ ಯಜಮಾನಂ ಅವತು । ಚಿತ್ರಶ್ಚಿತ್ರಾಭಿರೂತಿಭಿಃ । ಶ್ರವದ್ಬ್ರಹ್ಮಾಣ್ಯಾವಸಾಗಮತ್ ॥

ನೀಚಾವಯಾ ಅಭವದ್ವೃತ್ರಪುತ್ರೇಂದ್ರೋ ಅಸ್ಯಾ ಅವ ವಧರ್ಜಭಾರ ।
ಉತ್ತರಾ ಸೂರಧರಃ ಪುತ್ರ ಆಸೀದ್ದಾನುಃ ಶಯೇ ಸಹವತ್ಸಾ ನ ಧೇನುಃ ॥ ೯ ॥
ಅತಿಷ್ಠಂತೀನಾಮನಿವೇಶನಾನಾಂ ಕಾಷ್ಠಾನಾಂ ಮಧ್ಯೇ ನಿಹಿತಂ ಶರೀರಂ ।
ವೃತ್ರಸ್ಯ ನಿಣ್ಯಂ ವಿ ಚರಂತ್ಯಾಪೋ ದೀರ್ಘಂ ತಮ ಆಶಯದಿಂದ್ರಶತ್ರುಃ ॥ ೧೦ ॥
ದಾಸಪತ್ನೀರಹಿಗೋಪಾ ಅತಿಷ್ಠನ್ನಿರುದ್ಧಾ ಆಪಃ ಪಣಿನೇವ ಗಾವಃ ।
ಅಪಾಂ ಬಿಲಮಪಿಹಿತಂ ಯದಾಸೀದ್ವೃತ್ರಂ ಜಘನ್ವಾಁ ಅಪ ತದ್ವವಾರ ॥ ೧೧ ॥
ಅಶ್ವ್ಯೋ ವಾರೋ ಅಭವಸ್ತದಿಂದ್ರ ಸೃಕೇ ಯತ್ತ್ವಾ ಪ್ರತ್ಯಹರ್ನ್ ದೇವ ಏಕಃ ।
ಅಜಯೋ ಗಾ ಅಜಯಃ ಶೂರ ಸೋಮಮವಾಸೃಜಃ ಸರ್ತವೇ ಸಪ್ತ ಸಿಂಧೂನ್ ॥ ೧೨ ॥
ನಾಸ್ಮೈ ವಿದ್ಯುನ್ನ ತನ್ಯತುಃ ಸಿಷೇಧ ನ ಯಾಂ ಮಿಹಮಕಿರದ್ಧ್ರಾದುನಿಂ ಚ ।
ಇಂದ್ರಶ್ಚ ಯದ್ಯುಯುಧಾತೇ ಅಹಿಶ್ಚೋತಾಪರೀಭ್ಯೋ ಮಘವಾ ವಿ ಜಿಗ್ಯೇ ॥ ೧೩ ॥
ಅಹೇರ್ಯಾತಾರಂ ಕಮಪಶ್ಯ ಇಂದ್ರ ಹೃದಿ ಯತ್ತೇ ಜಘ್ನುಷೋ ಭೀರಗಚ್ಛತ್ ।
ನವ ಚ ಯನ್ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ॥ ೧೪ ॥
ಇಂದ್ರೋ ಯಾತೋಽವಸಿತಸ್ಯ ರಾಜಾ ಶಮಸ್ಯ ಚ ಶೃಂಗಿಣೋ ವಜ್ರಬಾಹುಃ ।
ಸೇದು ರಾಜಾ ಕ್ಷಯತಿ ಚರ್ಷಣೀನಾಮರಾನ್ನ ನೇಮಿಃ ಪರಿ ತಾ ಬಭೂವ ॥ ೧೫ ॥

(ಋ. ಸಂ. ೧-೩೨-೧ ರಿಂದ ೧೫)

ಈ ವಿಧವಾದ ಸಾಮಶಸ್ತ್ರಮಂತ್ರಗಳ ಅವಯವ ವಿಭಾಗಕ್ರಮವನ್ನು ತಿಳಿದಿರುವ ಪುರುಷನು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಪಶುಪುತ್ರಾದಿಗಳಿಂದ ಕೂಡಿ ಉತ್ತಮವಾದ ಗೃಹದಲ್ಲಿ ವಾಸಮಾಡುವನು.

## *English Translation*

**(On the close relationship between Saman and Rik. Why the Sama Singers require three richas. The five-fold division of both. Both are contained in the Virat, The five parts of the Nishkevalya Shastra)**

First there existed the Rik and the Saman (separate) from one another: sa was the Rik, and the name amah was the Saman. Sa, which was Rik, said to the Saman, "let us copulate for begetting children." The Saman answered, "No; for my greatness exceeds yours." Thereupon the Rik became two; both spoke to the Saman to the same effect; But it did not comply with their request.

The Rik became three (divided into three): all three spoke (to the Saman to the same effect). Thus the Saman joined the three Richas. Thence the Sama singers use for their chant three Richas, (that is) they perform their work of chanting with three Richas. (This is so also in wordly affairs). For one man has many wives (represented by the Richas), but one wife has not many husbands at the same time. From sa and amah having joined, Sama was produced. Thence it is called saman. He who has such a knowledge becomes saman, i.e, equal, equitious. He who exists and attains to the highest rank, is a saman, whilst they use the word asamanya, i.e., inequitous, partial, as a term of reproach.

Both, the Rik as well as the Saman, were prepared (for sacrificial use) by dividing either into five separate parts: (1) ahava (the call s'omsavom at the commencement of the Shastras, and himkara (the sound hum, commencing every Saman;) (2) the prastava (prelude, first part of the text of the Saman) and the first rich (out of the three, required for the Saman of the Nishkevalya Shastras); (3) the udgitha (principal part of the Saman) and the second rich; (4) the pratihara (response of the Saman,) and the last rich (out of the three); (5) nidhanam (the finale of the Samau) and the call vaushat (at the end of the Yajya verses). Thence they say, the sacrifice is five-fold (is a pentad). Animals are five-fold (consist of five parts, four feet and a mouth),

Both, the Rik and the Saman, either of which is divided into five parts, are contained in the Virat, which consists of ten syllables). Thence they say, the sacrifice is put in the Virat, which consists of ten parts.

(The whole Nishkevalya Shastra also consists of five parts, analogous to the five parts of the Saman and the Rik at this Shastra). The stotriya is the soul; the anurupa is off-spring, the dhayya is the wife, animals are the pragatha, the suktam is the house.

He who has such a knowledge lives in his premises in this world, and in the other, with children and cattle.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ದ್ವಾದಶಾಧ್ಯಾಯೇ ದ್ವಾದಶಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹನ್ನೆರಡನೆಯ ಅಧ್ಯಾಯದಲ್ಲಿ ಹನ್ನೆರಡನೆಯ ಖಂಡವು
ಸಮಾಪ್ತವಾದುದು.



# ಅಥ ದ್ವಾದಶಾಧ್ಯಾಯೇ ತ್ರಯೋದಶಃ ಖಂಡಃ

## ಹನ್ನೆರಡನೆಯ ಅಧ್ಯಾಯದಲ್ಲಿ ಹದಿಮೂರನೆಯ ಖಂಡವು



[ನಿಷ್ಕೇವಲ್ಯಶಸ್ತ್ರದ ಸ್ತೋತ್ರಿಯ, ಅನುರೂಪ, ಧಾಯ್ಯಾ, ಸಾಮಪ್ರಗಾಥ ಮತ್ತು ನಿವಿದ್ಧಾನೀಯ ಸೂಕ್ತಗಳು]

ಹಿಂದೆ ನಿಷ್ಕೇವಲ್ಯಶಸ್ತ್ರದಲ್ಲಿ ಐದು ವಿಭಾಗಗಳಿರುವವೆಂದು ಹೇಳಿರುವುದಷ್ಟೆ. ಅವುಗಳಲ್ಲಿ ಪ್ರಥಮ ಭಾಗವಾದ ಸ್ತೋತ್ರಿಯವನ್ನು ವಿವರಿಸುವರು.

**ಸ್ತೋತ್ರಿಯಂ ಶಂಸತ್ಯಾತ್ಮಾ ವೈ ಸ್ತೋತ್ರಿಯಃ ತಂ ಮಧ್ಯಮಯಾ ವಾಚಾ ಶಂಸತ್ಯಾತ್ಮಾನಮೇವ ತತ್ಸಂಸ್ಕುರುತೇ ।**

ಅಥ ನಿಷ್ಕೇವಲ್ಯಶಸ್ತ್ರಭಾಗಾಃ ಸ್ವರವಿಶೇಷಾಶ್ಚ ವಕ್ತವ್ಯಾಃ । ತತ್ರ ಪ್ರಥಮಭಾಗಂ ವಿಧತ್ತೇ—ಅಭಿ ತ್ವಾ ಶೂರ ನೋನುಮಃ [೯೩೩-೨೨] ಇತ್ಯಸ್ಮಿನ್ಪ್ರಗಾಥೇ ತ್ರ್ಯೃಚಂ ಸಂಪಾದ್ಯ ಸಾಮಗಾಃ ಸ್ತುವಂತಿ ಸೋಽಯಂ ಸ್ತೋತ್ರಿಯಸ್ತಮಾದೌ ಶಂಸೇತ್ ॥ ತಸ್ಯ ಗೃಹಸ್ಥದೇಹ ಸ್ವರೂಪತ್ವಂ ಪೂರ್ವಮೇವೋಕ್ತಂ ॥ ತಸ್ಮಿನ್ ಸ್ತೋತ್ರಿಯೇ ಸ್ವರವಿಶೇಷಂ ವಿಧತ್ತೇ—ಅತ್ಯುಚ್ಚ-ತ್ವಮತಿನೀಚತ್ವಂ ಚ ಯಸ್ಯಾಂ ವಾಚಿ ನಾಸ್ತಿ ಸಾ ಮಧ್ಯಮಾ । ಯಾವತಾ ಧ್ವನಿನಾ ದೇವಯ-ಜನದೇಶಸ್ಥಾಃ ಶೃಣ್ವಂತಿ ನ ತದ್ಬಹಿರ್ದೇಶಸ್ಥಾಸ್ತಾವಂತಂ ಧ್ವನಿಂ ಕುರ್ಯಾತ್ ॥ ತೇನಾಽಽತ್ಮಾ-ನಮೇವ ದೇಹಮೇವ ಸಂಸ್ಕುರುತೇ ।

ಹಿಂದೆ ಹೇಳಿದಂತೆ ಸ್ತೋತ್ರಿಯ ಮಂತ್ರಗಳಾದ ಅಭಿ ತ್ವಾ ಶೂರ ನೋನು ಮಃ ಎಂಬ ಮಂತ್ರಗಳನ್ನು ನಿಷ್ಕೇವಲ್ಯ ಶಸ್ತ್ರದ ಪ್ರಾರಂಭದಲ್ಲಿ ಸಾಮಗಾನಮಾಡುವವರು ಪಠಿಸಿ ಗಾನಮಾಡುವರು. ಈ ಮಂತ್ರಕ್ಕೆ ಗೃಹಸ್ಥನ ಸ್ವರೂಪವಿರುವುದೆಂದು ಹಿಂದೆಯೇ ಹೇಳಿದೆ. ಈ ಮಂತ್ರವನ್ನು ಅತಿಘಟ್ಟಿಯಾಗಿಯೂ ಹೇಳಬಾರದು, ಅತಿ ಮೆಲ್ಲಗೂ ಹೇಳಬಾರದು. ಈ ಎರಡಕ್ಕೂ ಮಧ್ಯಸ್ಥವಾದ ಸಾಧಾರಣ ಧ್ವನಿಯಿಂದ ಪಠಿಸಬೇಕು. ಎಂದರೆ ಯಜ್ಞಭೂಮಿಯಲ್ಲಿರುವವರಿಗೆ ಕೇಳಿಸುವಂತಿರಬೇಕು. ಆದರಿಂದಾಚೆ ಇರುವವರಿಗೆ ಕೇಳಿಸಬಾರದು. ಇಂತಹ ಧ್ವನಿಯಿಂದ ಪಠಿಸಬೇಕು. ಈ ಮಂತ್ರವು ಯಜಮಾನನ ಆತ್ಮ ಸ್ವರೂಪವಾಗಿರುವುದು. ಈ ಮಂತ್ರವನ್ನು ಈರೀತಿ ಪಠಿಸುವುದರಿಂದ ಯಜಮಾನನು ತನ್ನ ಆತ್ಮಶುದ್ಧಿಯನ್ನು ಮಾಡಿ ಕೊಂಡಂತಾಗುವುದು.

**ಅನುರೂಪಂ ಶಂಸತಿ ಪ್ರಜಾ ವಾ ಅನುರೂಪಃ ಸ ಉಚ್ಚೈಸ್ತರಾಮಿ-ವಾನುರೂಪಃ ಶಂಸ್ತವ್ಯಃ ಪ್ರಜಾಮೇವ ತಚ್ಛ್ರೇಯಸೀಮಾತ್ಮನಃ ಕುರುತೇ ।**

ತ್ಯೃಚಾಂತರಂ ವಿಧತ್ತೇ—ಸ್ತೋತ್ರಿಯೇಣ ಸದೃಶಸ್ತ್ಯೃಚೋಽನುರೂಪಃ । ಸ ಚಾತ್ರಾಭಿತ್ವಾ ಪೂರ್ವಪೀತಯ ಇಂದ್ರಸ್ತೋಮೇಭಿರಾಯವ ಇತ್ಯೇಷ ಪ್ರಗಾಥಃ । ಉಭಯೋಃ ಪ್ರಗಾಥಯೋಃ ಸಮಾನಚ್ಛಂದಸ್ತ್ವಾತ್ಸಮಾನದೇವತಾಕತ್ವಾಚ್ಚಾನುರೂಪತ್ವಂ । ತಮಿಮಂ ತ್ಯೃಚಂ ಶಂಸೇತ್ ॥ ತಸ್ಯ ಚ ಪುತ್ರಾದಿಪ್ರಜಾಸ್ಥಾನೀಯಸ್ಯಾನುರೂಪತ್ವಮುಪೇಕ್ಷಿತಂ ಪಿತೃ (ತಾ) ಪುತ್ರಯೋಃ ಕುಲಶೀಲಾದಿನಾ ಸಮಾನರೂಪತ್ವಾತ್ ॥ ತಸ್ಯ ಧ್ವನಿವಿಶೇಷಂ ವಿಧತ್ತೇ—ಸ್ತೋತ್ರಿಯಧ್ವನೇರಪ್ಯಧಿಕಂ ಧ್ವನಿಂ ಕುರ್ಯಾತ್ ॥ ತಥಾ ಸತಿ ಸ್ವಸ್ಮಾದಾಧಿಕ್ಯಂ ಪುತ್ರಾದೌ ಸಂಪಾದಿತಂ ಭವತಿ ।

ಸ್ತೋತ್ರಿಯಮಂತ್ರಕ್ಕೆ ಸದೃಶವಾದ ಮಂತ್ರಕ್ಕೆ ಅನುರೂಪವೆಂದು ಹೆಸರು. ಇಲ್ಲಿ ಅನುರೂಪಮಂತ್ರವೆಂದರೆ—**ಅಭಿತ್ವಾ ಪೂರ್ವಪೀತಯೇ** ಮತ್ತು **ಇಂದ್ರ ಸ್ತೋಮೇಭಿರಾಯವಃ** ಎಂಬ ಋಕ್ಕುಗಳು. ಇವೇ ಪ್ರಗಾಥಮಂತ್ರವು. ಈ ಎರಡು ಋಕ್ಕುಗಳು ಸ್ತೋತ್ರಿಯಮಂತ್ರದ ಋಕ್ಕುಗಳಿಗಿರುವ ಛಂದಸ್ಸು ಮತ್ತು ದೇವತೆಗಳನ್ನು ಹೊಂದಿರುವುದರಿಂದ ಇವು ಸಮಾನ ಛಂದಸ್ಕ ಮತ್ತು ಸಮಾನದೇವತಾಕವು. ಆದುದರಿಂದಲೇ ಇವುಗಳಿಗೆ ಅನರೂಪಮಂತ್ರಗಳೆಂದು ಹೆಸರು. ಪಿತೃಪುತ್ರರಿಗೆ ಪರಸ್ಪರ ಅನುರೂಪವಿರುವುದರಿಂದ ಈ ಅನುರೂಪಮಂತ್ರವು ಪುತ್ರಸ್ಥಾನೀಯವೆಂದು ಹೇಳಲ್ಪಡುವುದು. ಈ ಮಂತ್ರವನ್ನು ಸ್ತೋತ್ರಿಯ ಮಂತ್ರವನ್ನು ಪಠಿಸುವ ಧ್ವನಿಗಿಂತಲೂ ಅಧಿಕವಾದ ಎಂದರೆ ಘಟ್ಟಿಯಾದ ಧ್ವನಿಯಿಂದಲೇ ಉಚ್ಚರಿಸಬೇಕು. ಹೀಗೆ ಮಾಡಿದರೆ ತನಗಿಂತಲೂ ತನ್ನ ಪುತ್ರರಲ್ಲಿ ಆಧಿಕ್ಯವನ್ನು (ಅಧಿಕ ಗುಣವನ್ನು) ಸಂಪಾದಿಸಿದಂತಾಗುವುದು.

ಧಾಯ್ಯಾಂ ಶಂಸತಿ ಪತ್ನೀ ವೈ ಧಾಯ್ಯಾ ಸಾ ನೀಚೈಸ್ತರಾಮಿವ ಧಾಯ್ಯಾ ಶಂಸ್ತವ್ಯಾ । ಅಪ್ರತಿವಾದಿನೀ ಹಾಸ್ಯ ಗೃಹೇಷು ಪತ್ನೀ ಭವತಿ ಯತ್ರೈವಂ ವಿದ್ವಾನ್ನೀಚೈಸ್ತರಾಂ ಧಾಯ್ಯಾಂ ಶಂಸತಿ ।

ತತೋ ಯದ್ವಾವಾನೇತ್ಯೇತಸ್ಯಾ ಧಾಯ್ಯಾಯಾಃ ಶಂಸನಂ ವಿಧತ್ತೇ—ಪತ್ನೀತ್ವಂ ಪೂರ್ವಮೇವೋಕ್ತಂ । ಸ್ವರವಿಶೇಷಂ ವಿಧತ್ತೇ—ಅತ್ಯಂತ ನೀಚೋ ಧ್ವನಿಃ ಕರ್ತವ್ಯಃ । ಹೋತುರೇತದ್ವೇದನಂ ಪ್ರಶಂಸತಿ—ಪತ್ಯುಃ ಪ್ರವಿಕಲಂ ವದತೀತಿ ಪ್ರತಿವಾದಿನೀ ತದ್ವಿಪರ್ಯಯೇಣಾಜ್ಞಾನುಕೂಲವಾದಿನೀ ಭವತಿ । ಪಿಬಾ ಸುತಸ್ಯ ರಸಿನ ಇತ್ಯೇತಂ ಪ್ರಗಾಥಂ ವಿಧತ್ತೇ—

**ಯದ್ವಾವಾನ** ಎಂಬ ಧಾಯ್ಯಾ ಮಂತ್ರವು ಪತ್ನೀಸ್ಥಾನೀಯವೆಂದು ಹೇಳಲ್ಪಡುವುದು. ಈ ಮಂತ್ರವನ್ನು ನೀಚ ಧ್ವನಿಯಿಂದ ಎಂದರೆ ಬಹುಮೆಲ್ಲನೆ ಧ್ವನಿಯಿಂದ ಪಠಿಸಬೇಕು. ಪತ್ನಿಯು ಪತಿಯ ಮಾತಿಗೆ ವಿರೋಧವಿಲ್ಲದಂತೆ ಎಂದರೆ ಪ್ರತಿಯಾಗಿ ಏನನ್ನೂ ಹೇಳದೆ, ಪತಿಯ ಇಚ್ಛಾನುಸಾರ ಗೃಹದಲ್ಲಿ ಕೆಲಸಕಾರ್ಯಗಳನ್ನು ಮಾಡಿಕೊಂಡು ಪತಿಗೆ ವಿಧೇಯಳಾಗಿರುವಳು. ಈ ವಿಧೇಯತೆಯನ್ನು ಸ್ಪಷ್ಟಪಡಿಸುವುದಕ್ಕಾಗಿ ಪತ್ನೀಸ್ಥಾನೀಯವಾದ ಈ ಧಾಯ್ಯಾಮಂತ್ರವನ್ನು ವಿದ್ವಾಂಸನಾದವನು ಬಹಳ ಮೆಲ್ಲಗೆ ಪಠಿಸಬೇಕು.

ಪ್ರಗಾಥಂ ಶಂಸತಿ ಸ ಸ್ವರವತ್ಯಾ ವಾಚಾ ಶಂಸ್ತವ್ಯಃ ಪಶವೋ ವೈ ಸ್ವರಃ ಪಶವಃ ಪ್ರಗಾಥಃ ಪಶೂನಾಮುವರುಧ್ಯೈ ।

**ತತ್ರ ಸ್ವರವಿಶೇಷಂ ವಿಧತ್ತೇ—ಸ್ವರವತ್ಯಾ ಸ್ವರಯುಕ್ತಯಾ ವಾಚೇತ್ಯರ್ಥಃ । ಪ್ರಗಾಥಸ್ಯ ಪಶುತ್ವಂ ಪೂರ್ವಮುಕ್ತಂ ಸ್ವರಸ್ಯ ಪಶುತ್ವಂ ಸಂಖ್ಯಾ ಸಾಮ್ಯಾತ್ ॥ ಚತ್ವಾರಃ ಸ್ವರಾಃ ಪಶವೋಽಪಿ ಚತುಷ್ಪದಾಃ ।**

ಪ್ರಗಾಥಮಂತ್ರವನ್ನು ಸ್ವರಸಹಿತವಾಗಿ ಉಚ್ಚಾರಣೆಮಾಡಬೇಕು. ಪ್ರಗಾಥಮಂತ್ರವು ಪಶುಸಂಪತ್ತನ್ನು ಒದಗಿಸುವುದೆಂದು ಹಿಂದೆಯೇ ಹೇಳಿದೆ. ಸ್ವರಗಳಿಗೂ ಪಶುಗಳಿಗೂ ಸಂಬಂಧವಿದೆ. **ಚತುಷ್ಪದಾಃ ಪಶವಃ** ಎಂದು ಪಶುಗಳು ನಾಲ್ಕು ಕಾಲುಗಳುಳ್ಳವು ಎಂದು ಹೇಳಿರುವುದು. ಸ್ವರಗಳೂ ಅನುದಾತ್ತ, ಅನುದಾತ್ತೇತರ, ಉದಾತ್ತ, ಸ್ವರಿತಗಳೆಂದು ನಾಲ್ಕು ವಿಧಗಳಾಗಿವೆ. ಇದುವರೆಗೆ ಶಸ್ತ್ರಮಂತ್ರಗಳನ್ನು ಏಕಶ್ರುತಿಯಿಂದ (ಸ್ವರವಿಲ್ಲದೆ ಒಂದೇ ಸಮನಾದ ಧ್ವನಿ) ಹೇಳಿ ಈಗ ಪ್ರಗಾಥಮಂತ್ರವನ್ನು ಮಾತ್ರ ಸ್ವರಚತುಷ್ಟಯಯುಕ್ತವಾಗಿ ಪಠಿಸಲಾಗುವುದು.

**ಇಂದ್ರಸ್ಯ ನು ವೀರ್ಯಾಣಿ ಪ್ರವೋಚಮಿತಿ ಸೂಕ್ತಂ ಶಂಸತಿ ತದ್ವಾ ಏತತ್ಪ್ರಿಯಮಿಂದ್ರಸ್ಯ ಸೂಕ್ತಂ ನಿಷ್ಕೇವಲ್ಯಂ ಹೈರಣ್ಯಸ್ತೂಪಮೇ-ತೇನ ವೈ ಸೂಕ್ತೇನ ಹಿರಣ್ಯಸ್ತೂಪ ಆಂಗಿರಸ ಇಂದ್ರಸ್ಯ ಪ್ರಿಯಂ ಧಾಮೋಪಾಗಚ್ಛತ್ಸ ಪರಮಂ ಲೋಕಮಜಯತ್ ।**

**ನಿವಿದ್ಧಾನೀಯಂ ಪಂಚದಶರ್ಚಂ ಸೂಕ್ತಂ ವಿಧತ್ತೇ—ತದೇತತ್ಪ್ರಶಂಸತಿ—ಯದೇತದಿಂದ್ರಸ್ಯ ನು ವೀರ್ಯಾಣಿ ಪ್ರವೋಚಮಿತಿ ನಿಷ್ಕೇವಲ್ಯಶಸ್ತ್ರಂ ಸೂಕ್ತಂ ತದೇತದಿಂದ್ರಸ್ಯ ಪ್ರಿಯಂ ಹಿರಣ್ಯಸ್ತೂಪನಾಮ್ನಾ ಮಹರ್ಷಿಣಾ ದೃಷ್ಟತ್ವಾದ್ಧೈರಣ್ಯಸ್ತೂಪಂ ತದೇವೈತೇನೇತ್ಯಾದಿನಾ ಸ್ಪಷ್ಟೀಕ್ರಿಯತೇ । ಅಂಗಿರಸಃ ಪುತ್ರೋ ಹಿರಣ್ಯಸ್ತೂಪಾಖ್ಯೋ ಮುನಿರೇತೇನೈವ ಸೂಕ್ತೇ-ನೇಂದ್ರಂ ಸ್ತುತ್ವಾ ತದೀಯಂ ಸ್ಥಾನಂ ಪ್ರಾಪ್ಯ ತತೋಽಪ್ಯುತ್ತಮಂ ಲೋಕಮಜಯತ್ ।**

ಈಗ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಕೊನೆಯ ವಿಭಾಗವಾದ ಹದಿನೈದು ಋಕ್ಕುಗಳುಳ್ಳ **ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ** ಎಂಬ ನಿವಿದ್ಧಾನೀಯ ಸೂಕ್ತಪಠನವನ್ನು ವಿವರಿಸುವರು. ಈ ಸೂಕ್ತವು ಇಂದ್ರನಿಗೆ ಪ್ರಿಯವಾಗಿರುವುದು. ಇದಕ್ಕೆ ನಿಷ್ಕೇವಲ್ಯಸೂಕ್ತವೆಂದು ಹೆಸರು. ಹಿರಣ್ಯಸ್ತೂಪಋಷಿದೃಷ್ಟವಾದುದರಿಂದ ಈ ಸೂಕ್ತಕ್ಕೆ ಹೈರಣ್ಯಸ್ತೂಪಸೂಕ್ತವೆಂದೂ ಹೆಸರು. ಅಂಗಿರಸಋಷಿಯ ಪುತ್ರನಾದ ಹಿರಣ್ಯಸ್ತೂಪಋಷಿಯು ಈ ಸೂಕ್ತದಿಂದ ಇಂದ್ರನನ್ನು ಸ್ತುತಿಸಿ ಇಂದ್ರನಿಗೆ ಪ್ರಿಯವಾದ ಉತ್ತಮ ಸ್ಥಾನವನ್ನು ಸೇರಿ ಅನಂತರ ಅದಕ್ಕಿಂತಲೂ ಉತ್ಕೃಷ್ಟವಾದ ಲೋಕವನ್ನೂ ಪಡೆದನು.

**ಉಪೇಂದ್ರಸ್ಯ ಪ್ರಿಯಂ ಧಾಮ ಗಚ್ಛತಿ ಜಯತಿ ಪರಮಂ ಲೋಕಂ ಯ ಏವಂ ವೇದ ।**

**ವೇದನಂ ಪ್ರಶಂಸತಿ ।**

ಈ ವಿಷಯವನ್ನು ತಿಳಿದಿರುವ ಪುರುಷನು ಇಂದ್ರನ ಅನುಗ್ರಹದಿಂದ ಪರಮೋತ್ಕೃಷ್ಟವಾದ ಲೋಕವನ್ನು ಜಯಿಸುವನು ಎಂದರೆ ಪಡೆಯುವನು.

ಗೃಹಾ ವೈ ಪ್ರತಿಷ್ಠಾ ಸೂಕ್ತಂ ತತ್ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಂ ತಸ್ಮಾದ್ಯದ್ಯಪಿ ದೂರ ಇವ ಪಶೂನ್ ಲಭತೇ ಗೃಹಾನೇವೈನಾನಾಜಿಗಮಿಷತಿ ಗೃಹಾ ಹಿ ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ‖

ಸೂಕ್ತೇ ಧ್ವನಿವಿಶೇಷಂ ವಿಧತ್ತೇ—ಇಂದ್ರ ಸ್ಯ ನು ವೀರ್ಯಾಣೀತ್ಯಸ್ಮಿನ್ಸೂಕ್ತೇ ಶಸ್ತ್ರಸ್ಯ ಸಮಾಪನೇನಾವಸ್ಥಾನಾತ್ತಸ್ಯ ಪ್ರತಿಷ್ಠಾರೂಪತ್ವಂ । ಗೃಹಾ ಅಪಿ ಸ್ಥಿತಿಹೇತುತ್ವಾತ್ಪ್ರತಿಷ್ಠಾ-ರೂಪಾಃ । ತಥಾ ಸತ್ಯೇತತ್ಸೂಕ್ತಂ ಪ್ರತಿಷ್ಠಿತತಮಯಾಽದ್ರುತವಿಲಂಬಿತತ್ವಾದಿದೋಷರಹಿತಯಾ ಶ್ರಾವ್ಯೇಣ ಧ್ವನಿನೋಪೇತಯಾ ವಾಚಾ ಶಂಸೇತ್ ‖ ತಸ್ಮಾದ್ಗೃಹಸ್ಥಾನೀಯಸ್ಯ ಸೂಕ್ತಸ್ಯ ಧ್ವನಿಃ ಪ್ರತಿಷ್ಠಿತತಮಸ್ತಸ್ಮಾಲ್ಲೋಕೇಽಪಿ ಯದ್ಯಪಿ ತೃಣಭಕ್ಷಣಾರ್ಥಮರಣ್ಯೇ ಗತಾನ್ದೂರದೇಶ ಏವಾವಸ್ಥಿತಾನ್ಪಶೂನ್ದಿವಸೇ ಪುರುಷೋ ಲಭತೇ ಪಶ್ಯತಿ ತಥಾಪ್ಯೇನಾನ್ಪಶೂನ್ಸಾಯಂಕಾಲೇ ಗೃಹಾನೇವಾಜಿಗಮಿಷತ್ಯಾನೇತುಮಿಚ್ಛತಿ ‖ ಯಸ್ಮಾತ್ಪಶೂನಾಂ ಗೃಹಾಃ ಪ್ರತಿಷ್ಠಾ ಸುಖೇನಾ-ವಸ್ಥಾತುಂ ಸ್ಥಾನಂ । ದ್ವಿರಭ್ಯಾಸೋಽಧ್ಯಾಯಪರಿಸಮಾಪ್ತ್ಯರ್ಥಃ ‖

ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ ಎಂಬ ಈ ನಿವಿದ್‌ಸೂಕ್ತವು ಗೃಹಸ್ಥಾನೀಯವೆಂದು ಹೇಳಲ್ಪಡುವುದು. ಗೃಹದ ತಳಪಾಯವು ಭದ್ರವಾಗಿರಬೇಕಷ್ಟೆ. ಆದ್ದರಿಂದ ಗೃಹದ ಭದ್ರವಾಗಿರುವುದಕ್ಕಾಗಿ ಈ ಸೂಕ್ತವನ್ನು ಅವಸರಪಡದೆ ಒಂದೇ ಸಮನಾದ ಧ್ವನಿಯಿಂದ ನಿಧಾನವಾಗಿ ಪಠಿಸಬೇಕು. ದೂರದಲ್ಲಿ ಮೇಯುತ್ತಿರುವ ಗೋವುಗಳನ್ನು ಕಂಡು ಪುರುಷನು ಸಾಯಂಕಾಲವಾದಕೂಡಲೆ ತನ್ನ ಮನೆಗೆ ಅಟ್ಟಿಕೊಂಡು ಬಂದು ಗೃಹದ ಒಂದು ಭಾಗದಲ್ಲಿರುವ ಕೊಟ್ಟಿಗೆಯಲ್ಲಿ ಕಟ್ಟುವನು. ಪಶುಗಳಿಗೆ ಕೊಟ್ಟಿಗೆ ಅಥವಾ ಗೃಹವೇ ಭದ್ರವಾದ ಸ್ಥಾನವು. ಈ ಸೂಕ್ತವು ಪಶುಸಂಪತ್ತಿನಿಂದ ಕೂಡಿದ ಗೃಹಸ್ಥಾನೀಯವೆಂದು ಹೇಳಲ್ಪಡುವುದರಿಂದ ಇದು ಭದ್ರವಾಗಿರುವುದು ಅವಶ್ಯಕವು. ಆದ್ದರಿಂದ ಈ ಸೂಕ್ತವನ್ನು ಅವಸರವಿಲ್ಲದಂತೆ ನಿಧಾನವಾಗಿಯೂ ಸ್ಪಷ್ಟವಾಗಿಯೂ ಪಠಿಸಬೇಕು.

ಇಲ್ಲಿಗೆ ನಿಷ್ಕೇವಲ್ಯಶಸ್ತ್ರಮಂತ್ರಗಳ ವಿವರಣೆಯು ಸಮಾಪ್ತವು.



*English Translation*

**(The Stotriya, Anurupa, Dhayya, Sama-Pragatha and Nivid Sukta of the Nishkevalya Shastra)**

He repeats the Stotriya. He recites it with a half loud voice. By doing so he makes his own soul (the Stotriya representing the soul).

He repeats the Anurupa. The Anurupa is offspring. It is to be repeated with a very loud voice. By doing so, he makes his children more happy than he

himself is (for the Stotriya representing his own self, was repeated by him with a half loud voice only).

He repeats the Dhayya. The Dhayya is the wife. It is to be repeated with a very low voice. When he who has such a knowledge repeats the Dhayya with a very low voice, then his wife does not quarrel with him in his house.

He repeats the (sama) Pragatha. It is to be repeated with the proper modulation of the voice (i.e., with the pronunciation of the four accents). The accents are the animals, the Pragatha are the animals. (This is done) for obtaining cattle.

He repeats the Sukta (hymn): indrasya nu viryani (1, 32). This is the hymn liked by Indra, belonging to the Nishkevalya, and (seen) by Hiranyastupa. By means of this hymn Hiranyastupa, the son of Angiras, obtained the favour of Indra (and) gained the highest world. He who has such a knowledge obtains the favour of Indra (and) gains the highest world. The hymn is the house as a firm footing. Thence it is to be repeated with the greatest slowness. (For a firm footing as a resting place is required for every one). If, for instance, one happens to have cattle grazing in a distant quarter, he wishes to bring them (in the evening) under shelter. The stables are the firm footing (the place where to put up) for cattle. That is the reason that this hymn, which represents a firm footing, or shelter, for cattle, which was represented by the Pragatha, is to be repeated very slowly, so as to represent a firm footing.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ದ್ವಾದಶಾಧ್ಯಾಯಸ್ಯ ತ್ರಯೋದಶಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ದ್ವಾದಶಾಧ್ಯಾಯಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಹನ್ನೆರಡನೆಯ ಅಧ್ಯಾಯದಲ್ಲಿ ಹದಿಮೂರನೆಯ ಖಂಡವು ಸಮಾಪ್ತವಾದುದು.

ಹನ್ನೆರಡನೆಯ ಅಧ್ಯಾಯವು ಮುಗಿದುದು.



# ಅಥೈತರೇಯಬ್ರಾಹ್ಮಣೇ ತ್ರಯೋದಶಾಧ್ಯಾಯೇ ಪ್ರಥಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು



[ಸ್ವರ್ಗಲೋಕದಲ್ಲಿದ್ದ ಸೋಮಲತೆಗಳನ್ನು ಭೂಮಿಗೆ ತಂದ ವಿಚಾರ; ಪ್ರಾತಸ್ಸವನ, ಮಾಧ್ಯಂದಿನ ಸವನ, ತೃತೀಯ ಸವನಗಳೆಂಬ ಮೂರು ಸವನಗಳು ಹೇಗೆ ರೂಢಿಗೆ ಬಂದಿತು ಎಂಬ ವಿಚಾರ; ವೈಶ್ವದೇವ ಮತ್ತು ಅಗ್ನಿಮಾರುತ ಶಸ್ತ್ರಗಳ ಸ್ವರೂಪ.]

[ದೇವತೆಗಳು ಸ್ವರ್ಗದಲ್ಲಿದ್ದ ಸೋಮವನ್ನು ಭೂಮಿಗೆ ತರುವುದಕ್ಕಾಗಿ ಛಂದಸ್ಸುಗಳನ್ನು ಪ್ರಾರ್ಥಿಸಿದ ವಿಚಾರ; ಜಗತೀ ಮತ್ತು ತ್ರಿಷ್ಟುಪ್ ಛಂದಸ್ಸುಗಳು ಈ ಕಾರ್ಯದಲ್ಲಿ ಪ್ರಯತ್ನಪಟ್ಟು ವಿಫಲರಾದ ಬಗೆ; ದೀಕ್ಷಾ, ತಪಸ್ಸು ಮತ್ತು ದಕ್ಷಿಣೆ ಇವುಗಳು ಹೇಗೆ ಪ್ರಚಾರಕ್ಕೆ ಬಂದವು ಎಂಬ ವಿಚಾರ]



ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸಿತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯಮಸ್ಮಾತ್ಸೋಮೋ ರಾಜಾಽಽಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ ।

ವಕ್ತ್ರ್ಯಹಾವಪ್ರಭೇದಂ ಪ್ರತಿಗರಣಮಥಾನುಷ್ಟುಭಃ ಶಸ್ಯಮಾನಾ
ಮೃತ್ಯೋಃ ಸಂನದ್ಧವಾದಿಕ್ರಮಣಮಥ ಮರುತ್ವದ್ವಿಧಾನಪ್ರಶಂಸಾ ॥
ತಚ್ಛೇಷಾ ಯೇ ವಿಶೇಷಾಃ ಪ್ರತಿಪದನುಚರಪ್ರಕ್ರಮಾಃ ಸಪ್ತಭಾಗಂ
ನಿಷ್ಕೇವಲ್ಯಂ ಚ ಶಸ್ತ್ರಂ ತದವಯವಕೃತಾಃ ಸ್ತೋತ್ರಿಯಾದ್ಯಾಶ್ಚ ಪಂಚ ॥

ಅಥ ತೃತೀಯಸವನಂ ವಕ್ತುಮಾದಾವಾಖ್ಯಾಯಿಕಾಮಾಹ—ಪುರಾ ಸೋಮವಲ್ಲೀ ದ್ಯುಲೋಕ ಏವಾಸೀನ್ನ ತ್ವೇತಸ್ಮಿಂಲ್ಲೋಕೇ ತದಾನೀಂ ಸೋಮಮಭಿಲಕ್ಷ್ಯ ಕೇನ ಪ್ರಕಾರೇಣ ಸೋಮೋ ನ ಆಗಚ್ಛೇದಿತಿ ದೇವಾ ಋಷಯಶ್ಚ ವಿಚಾರಿತವಂತಃ । ವಿಚಾರ್ಯ ಗಾಯತ್ರ್ಯಾದೀನಿ ಚ್ಛಂದಾಂಸಿ ಪ್ರತ್ಯೇವಮಬ್ರುವನ್ ॥ ಹೇ ಚ್ಛಂದಾಸ್ಯಸ್ಮದರ್ಥಂ ಸೋಮಮಾಹರತೇತಿ । ತಾನಿ ಚ ತದಂಗೀಕೃತ್ಯ ತೇ ಲೋಕಪ್ರಸಿದ್ಧಾಃ ಪಕ್ಷಿಣೋ ಭೂತ್ವಾ ದ್ಯುಲೋಕಂ ಪ್ರತ್ಯುದಪತನ್ ॥ ಯಸ್ಮಾದೇವಂ ತಸ್ಮಾದೇತತ್ಸೋಮಾಹರಣಪ್ರತಿಪಾದಕಂ ಗ್ರಂಥಜಾತಂ ಸೌಪರ್ಣಮಾಖ್ಯಾನಮಿತಿ ಪೌರಾಣಿಕಾ ಆಖ್ಯಾನವಿದಃ ಕಥಯಂತಿ ॥

ಈಗ ತೃತೀಯಸವನವೆಂಬ ಕರ್ಮವನ್ನು ವಿವರಿಸುವುದಕ್ಕಾಗಿ ಪೂರ್ವಭಾವಿಯಾಗಿ ಒಂದು ಇತಿಹಾಸವನ್ನು ಹೇಳುವರು—ಪೂರ್ವದಲ್ಲಿ ಸೋಮಲತೆಗಳು ಸ್ವರ್ಗಲೋಕದಲ್ಲಿದ್ದವು ಎಂದರೆ ಅಲ್ಲೇ ಬೆಳೆಯುತ್ತಿದ್ದವು. ಭೂಲೋಕದಲ್ಲಿರಲಿಲ್ಲ. ಆಗ ದೇವತೆಗಳು ಮತ್ತು ಋಷಿಗಳು ಯಜ್ಞಮಾಡುವುದಕ್ಕಾಗಿ ಸೋಮಲತೆಗಳು ಅವಶ್ಯಕವಾಗಿ ಬೇಕಾದ್ದರಿಂದ ಸ್ವರ್ಗದಲ್ಲಿದ್ದ ಸೋಮಲತೆಗಳನ್ನು ಭೂಮಿಗೆ ತರುವ ಬಗೆ ಹೇಗೆ ಎಂದು ಬಹುನಾಗಿ ಆಲೋಚಿಸಿ ಒಂದು ನಿರ್ಧಾರಕ್ಕೆ ಬಂದರು. ಸ್ವರ್ಗದಿಂದ ಭೂಮಿಗೆ ಸೋಮರಾಜನನ್ನು (ಗೌರವಾರ್ಥವಾಗಿ ರಾಜನೆಂದು ಕರೆಯುವ ರೂಢಿಯಿದೆ) ತರಲು ಛಂದಸ್ಸುಗಳಿಗೆ ಮಾತ್ರ ಶಕ್ತಿ ಇರುವುದು. ಇದಕ್ಕಾಗಿ ಅವುಗಳನ್ನು ಕಳುಹಿಸೋಣ ಎಂದು ನಿರ್ಧರಿಸಿ ಛಂದಸ್ಸುಗಳ ಬಳಿಗೆ ಬಂದು—ಎಲೈ ಛಂದಸ್ಸುಗಳೇ, ಸ್ವರ್ಗದಲ್ಲಿರುವ ಸೋಮವನ್ನು ಭೂಮಿಗೆ ತರಲು ನಿಮಗೆ ಶಕ್ತಿಸಾಮರ್ಥ್ಯಗಳಿರುವವು. ನಾವು ಯಜ್ಞಮಾಡಬೇಕಾಗಿರುವುದರಿಂದ ನಮಗೆ ಸೋಮಲತೆಗಳು ಅತ್ಯವಶ್ಯಕವಾಗಿವೆ. ಅವುಗಳನ್ನು ನಮಗೆ ತಂದುಕೊಟ್ಟು ಸಹಾಯಮಾಡಬೇಕು ಎಂದು ಪ್ರಾರ್ಥಿಸಿದರು ಇದನ್ನು ಕೇಳಿ ಛಂದಸ್ಸುಗಳು ಹಾಗೇ ಆಗಲೆಂದೊಪ್ಪಿ ದೇವತೆಗಳ ಪ್ರಾರ್ಥನೆಯನ್ನಂಗೀಕರಿಸಿದವು. ಅನಂತರ ಈ ಕಾರ್ಯಕ್ಕಾಗಿ ಆ ಛಂದಸ್ಸುಗಳು ಇಂತು ಯೋಚಿಸಿದವು—ಸ್ವರ್ಗವು ಭೂಮಿಯಮೇಲೆ ಬಹು ಎತ್ತರದಲ್ಲಿರುವುದು. ಅಲ್ಲಿಗೆ ಹೋಗಬೇಕಾದರೆ ಅದಕ್ಕೆ ತಕ್ಕ ಸಾಧನವು ಅವಶ್ಯಕವು. ಆದ್ದರಿಂದ ಉತ್ತಮವಾದ ರೆಕ್ಕೆಗಳುಳ್ಳ ಮತ್ತು ಬಹು ಎತ್ತರಕ್ಕೆ ಹಾರಿಹೋಗಿ ಬರಬಲ್ಲ ಪಕ್ಷಿಗಳೇ ಸರಿಯಾದ ಸಾಧನವು ಎಂದು ನಿಶ್ಚಯಿಸಿ ಛಂದಸ್ಸುಗಳಲ್ಲಿ ಮುಖ್ಯವಾದ ಜಗತೀ, ತ್ರಿಷ್ಟುಪ್ ಮತ್ತು ಗಾಯತ್ರಿ ಛಂದಸ್ಸುಗಳ ತಮಗೆ ಬೇಕಾದ ಪಕ್ಷಿಗಳ ರೂಪವನ್ನು ಕೈಕೊಂಡು ಸ್ವರ್ಗಲೋಕಕ್ಕೆ ಹಾರಿಹೋಗಲು ಪ್ರಯತ್ನಿಸಿದವು. ಈರೀತಿ ಛಂದಸ್ಸುಗಳ ಪಕ್ಷಿಗಳ (ಸೌಪರ್ಣ) ರೂಪದಿಂದ ಸ್ವರ್ಗಕ್ಕೆ ಹೋಗಿ ಸೋಮವನ್ನು ತಂದ ವಿಷಯವನ್ನು ವರ್ಣಿಸುವ ಪೂರ್ವೇತಿಹಾಸಕ್ಕೆ ಸೋಮಾಹರಣೋಪಾಖ್ಯಾನ ಅಥವಾ ಸೌಪರ್ಣವೆಂಬ ಹೆಸರು ಪ್ರಸಿದ್ಧವಾಗಿರುವುದು. ಎಂದರೆ ಇತಿಹಾಸಜ್ಞರು ಈರೀತಿ ಹೇಳುವರು.

ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಛಂದಾಂಸ್ಯಾಸನ್ತ್ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾಽರ್ಧಮಧ್ವನೋ ಗತ್ವಾಽಶ್ರಾಮ್ಯತ್ಸಾ ಪರಾಸ್ಯ ತ್ರೀಣ್ಯಕ್ಷರಾಣ್ಯೇಕಾಕ್ಷರಾ ಭೂತ್ವಾ ದೀಕ್ಷಾಂ ಚ ತಪಶ್ಚ ಹರಂತೀ ಪುನರಭ್ಯವಾಪತತ್ತಸ್ಮಾತ್ತಸ್ಯ ವಿತ್ತಾ ದೀಕ್ಷಾ ವಿತ್ತಂ ತಪೋ ಯಸ್ಯ ಪಶವಃ ಸಂತಿ ಜಾಗತಾ ಹಿ ಪಶವೋ ಜಗತೀ ಹಿ ತಾನಾಹರತ್ ॥

ಅಥೋತ್ಪತತ್ಸು ಚ್ಛಂದಃಸ್ಸು ಮಧ್ಯೇ ಜಗತೀವೃತ್ತಾಂತಮಾಹ—ಗಾಯತ್ರ್ಯಾದಿಚ್ಛಂದಾಂಸ್ಯುತ್ಪತನೇ ಪ್ರವೃತ್ತಾನಿ ತದಾನೀಂ ಸೋಮಮಚ್ಛ ಪ್ರಾಪ್ತುಂ ದ್ಯುಲೋಕಂ ಪ್ರತ್ಯಚರಂಸ್ತಾನಿ ಚ ಚ್ಛಂದಾಂಸಿ ತಸ್ಮಿನ್ಕಾಲೇ ಚತುರಕ್ಷರೋಪೇತಾನ್ಯತಃ ಪುರಾ ಸರ್ವದಾ ಚತುರಕ್ಷರಾಣ್ಯೇವಾಽಽಸನ್ನ ತು ಕಸ್ಯಾಪಿ ಚ್ಛಂದಸೋಽಧಿಕಾಕ್ಷರತಾಽಽಸೀತ್ । ತತಃ ಸಾ ಜಗತೀ ಚತುರಕ್ಷರಾ ಸತೀ ಛಂದೋಂತರೇಭ್ಯಃ ಸರ್ವೇಭ್ಯಃ ಪ್ರಥಮಂ ಪ್ರವೃತ್ತಾ ಸೋಮಸ್ಥಾನಂ ಪ್ರತ್ಯುದಪತತ್ ॥ ಸಾ ಚ ಮಾರ್ಗಸ್ಯಾರ್ಧಂ ಗತ್ವಾ ಶ್ರಾಂತಾ ಸತೀ ಶ್ರಮವಶಾತ್ತ್ರೀಣ್ಯಕ್ಷರಾಣಿ ಪರಿತ್ಯಜ್ಯ ಸ್ವಯಮೇಕಾಕ್ಷರಾ ಭೂತ್ವಾ ಸೋಮಮಾಹರ್ತುಮಶಕ್ನುವತೀ ಸೋಮಯಾಗಸಂಬಂಧಿನೀಂ

**ದೀಕ್ಷಾಂ ದೀಕ್ಷಣೀಯೇಷ್ಟ್ಯಾದಿರೂಪಾಂ ಕ್ಷೀರಪಾನಾದಿರೂಪಂ ತಪಶ್ಚ ಹರಂತೀ ತಸ್ಮಾ-ಲ್ಲೋಕಾದಾನಯಂತೀ ಪುನರೇತಂ ಲೋಕಮಭಿಲಕ್ಷ್ಯೈವಾಪತತ್, ಅಧೋಮುಖೀ ಸಮಾಗತಾ । ಯಸ್ಮಾದೇವಂ ತಸ್ಮಾಲ್ಲೋಕೇ ಯಸ್ಯ ಪುರುಷಸ್ಯ ಪಶವಃ ಸಂತಿ ತೇನ ದೀಕ್ಷಾ ವಿತ್ತಾ ಲಬ್ಧಾ ತಪಶ್ಚ ಲಬ್ಧಂ ಭವತಿ । ನ ಚ ದೀಕ್ಷಾತಪಸೋರ್ಜಗತ್ಯಾ ಸಮಾನೀತಯೋಃ ಸತೋಃ ಪಶೂನಾಂ ತದುಭಯಕಾರಣತ್ವಂ ಕಥಮಿತಿ ಶಂಕನೀಯಂ । ಪಶೂನಾಂ ಜಾಗತತ್ವೇನ ಜಗತೀದ್ವಾರಾ ದೀಕ್ಷಾಸಂಬಂಧಸಂಭವಾತ್ ॥ ಜಾಗತತ್ವಂ ಕಥಮಿತಿ ಚೇತ್ । ಜಗತ್ಯಾ ಪಶೂನಾಮಾನೀತತ್ವಾದಿತಿ ದ್ರಷ್ಟವ್ಯಂ । ಅತ ಏವ ಶಾಖಾಂತರೇ ಜಗತೀಂ ಪ್ರಕೃತ್ಯೈವ-ಮಾಮ್ನಾತಂ—'ಸಾ ಪಶುಭಿಶ್ಚ ದೀಕ್ಷಯಾ ಚಾಽಽಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾದುತ್ತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ' ಇತಿ ॥**

ಪಕ್ಷಿಗಳ ರೂಪವನ್ನು ಕೈಗೊಂಡು ಸ್ವರ್ಗಾಭಿಮುಖವಾಗಿ ಮೊದಲು ಜಗತೀಛಂದಸ್ಸು ಪ್ರಯತ್ನಪಟ್ಟಿತು. ಪೂರ್ವದಲ್ಲಿ ಎಲ್ಲಾ ಛಂದಸ್ಸುಗಳಿಗೂ (ಛಂದಸ್ಸಿನ ಪಾದಗಳಿಗೂ) ನಾಲ್ಕು ಅಕ್ಷರಗಳು ಮಾತ್ರವಿದ್ದವು. ಆದ್ದರಿಂದ ಮೊದಲು ಪಯತ್ನಪಟ್ಟ ಜಗತೀಛಂದಸ್ಸು ತನ್ನ ನಾಲ್ಕು ಅಕ್ಷರಗಳೊಡನೆ ಸೋಮಾಹರಣಕ್ಕಾಗಿ ಸ್ವರ್ಗಲೋಕಾಭಿಮುಖವಾಗಿ ಹಾರಿಹೋಯಿತು. ಆದರೆ ಅರ್ಧದಾರಿಯಷ್ಟು ಹಾರಿಹೋದಕೂಡಲೇ ಅದಕ್ಕೆ ಬಹಳ ಬಳಲಿಕೆಯುಂಟಾಗಿ ಮುಂದಕ್ಕೆ ಹಾರಲಾರದೆ ಆಯಾಸದಿಂದ ಭೂಮಿಗೆ ಹಿಂತಿರುಗಬೇಕಾಯಿತು. ಮತ್ತು ಬಳಲಿಕೆಯಿಂದ ತನ್ನಲ್ಲಿದ್ದ ನಾಲ್ಕು ಅಕ್ಷರಗಳಲ್ಲಿ ಮೂರನ್ನು ಕಳೆದುಕೊಂಡು ಅದಕ್ಕೆ ಒಂದು ಅಕ್ಷರಮಾತ್ರ ಉಳಿಯಿತು. ಹಾಗೆ ಒಂದು ಅಕ್ಷರದಿಂದಲೇ ಹಿಂತಿರುಗುವಾಗ ಅಲ್ಲಿದ್ದ ದೀಕ್ಷಾ (ದೀಕ್ಷಣೀಯೇಷ್ಟಿ) ಮತ್ತು ತಪಸ್ಸು ಎಂಬ ಕರ್ಮಗಳನ್ನು ತೆಗೆದುಕೊಂಡು ಹಿಂತಿರುಗಿ ಬಂದಿತು. ತಪಸ್ಸೆಂದರೆ, ವಿತ್ತವು, ಧನವು ಅಥವಾ ಪಶುಗಳು. ಆದ್ದರಿಂದ ಈಗಲೂ ಲೋಕವ್ಯವಹಾರದಲ್ಲಿ ಪಶುಸಂಪತ್ತಿರುವ ಯಜಮಾನನಿಗೆ ದೀಕ್ಷೆಯು ಸುಲಭವಾಗಿ ಲಬ್ಧವಾಗುವುದು. **ಜಾಗತಾ ಹಿ ಪಶವಃ** ಎಂಬ ಜಗತೀಛಂದಸ್ಸು ಪಶುಗಳಿಗೆ ಅಭಿಮಾನಿಯಾಗಿರುವುದು. ಆದ್ದರಿಂದ ಜಗತೀಛಂದಸ್ಸಿನಿಂದ ಯಜ್ಞಮಾಡುವ ಯಜಮಾನನಿಗೆ ಪಶುಸಮೃದ್ಧಿಯುಂಟಾಗುವುದು. ಈ ವಿಷಯವು ಶಾಖಾಂತರದಲ್ಲಿ ಈರೀತಿ ಹೇಳಲ್ಪಟ್ಟಿರುವುದು.—**ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋ-ಪನಮತಿ** (ತೈ. ಸಂ. ೬-೧-೬-೨) ಎಂದು.

ಅಥ ತ್ರಿಷ್ಟುಬುದಪತತ್ಸಾ ಪತಿತ್ವಾ ಭೂಯೋಽರ್ಧಾದಧ್ವನೋ
ಗತ್ವಾಽಶ್ರಾಮ್ಯತ್ಸಾ ಪರಾಸ್ಯೈಕಮಕ್ಷರಂ ತ್ರ್ಯಕ್ಷರಾ ಭೂತ್ವಾ
ದಕ್ಷಿಣಾ ಹರಂತೀ ಪುನರಭ್ಯವಾಪತತ್ತಸ್ಮಾನ್ಮಧ್ಯಂದಿನೇ ದಕ್ಷಿಣಾ
ನೀಯಂತೇ ತ್ರಿಷ್ಟುಭೋ ಲೋಕೇ ತ್ರಿಷ್ಟುಭ್ಹಿ ತಾ ಆಹರತ್ ॥

**ತ್ರಿಷ್ಟುಭೋ ವೃತ್ತಾಂತಮಾಹ—ಸಾ ತ್ರಿಷ್ಟುಬ್ದ್ಯುಲೋಕೇ ಭೂಯೋ ಭೂಯಃ ಪತಿ-ತ್ವಾಽಪಿ ಮಾರ್ಗಸ್ಯಾರ್ಧಾದೇವಾಶ್ರಾಮ್ಯದಿತ್ಯನ್ವಯಃ । ಯಸ್ಮಾದೇವ ದಕ್ಷಿಣಾಃ ಸರ್ವಾ ಆನೀತವತೀ ತಸ್ಮಾತ್ತ್ರಿಷ್ಟುಭಃ ಸ್ಥಾನೇ ಮಾಧ್ಯಂದಿನಸವನೇ ಯಜಮಾನೈರ್ದತ್ತಾಃ ಸರ್ವಾ ದಕ್ಷಿಣಾ ಋತ್ವಿಗ್ಭಿರ್ನೀಯಂತೇ ॥**

ಈಗ ತ್ರಿಷ್ಟುಪ್‌ಛಂದಸ್ಸು ಪ್ರಯತ್ನಪಟ್ಟ ವಿಚಾರವನ್ನು ವಿವರಿಸುವರು—ಜಗತೀಛಂದಸ್ಸು ತನ್ನ ಪ್ರಯತ್ನದಲ್ಲಿ ಸಫಲವಾಗದೆ ಹಿಂತಿರುಗಿ ಬಂದನಂತರ ತ್ರಿಷ್ಟುಪ್‌ಛಂದಸ್ಸು ತನ್ನ ಪ್ರಯತ್ನವನ್ನು ಆರಂಭಿಸಿತು ಎಂದರೆ ಅಂತರಿಕ್ಷದಲ್ಲಿ ಸ್ವರ್ಗಾಭಿ

ಮುಖವಾಗಿ ಹಾರಿಹೋಯಿತು. ಆದರೆ ಅದು ಸಹ ಅರ್ಧದಾರಿಯನ್ನೂ ಮೀರಿ ಕೊಂಚದೂರ ಹೋಗುವಷ್ಟರಲ್ಲಿಯೇ ಬಳಲಿತು. ಅಲ್ಲಿಂದ ಮುಂದೆ ಹೋಗಲು ಸಾಧ್ಯವಿಲ್ಲದೆ ತನ್ನ ನಾಲ್ಕು ಅಕ್ಷರಗಳಲ್ಲಿ ಒಂದು ಅಕ್ಷರವನ್ನು ಕಳೆದುಕೊಂಡು ಉಳಿದ ಮೂರು ಅಕ್ಷರಗಳೊಡನೆ ಹಿಂತಿರುತು. ಬರುವಾಗ ಯಜ್ಞಸಾಮಗ್ರಿಯಾದ ದಕ್ಷಿಣೆಯನ್ನು ತಂದಿತು. ಆದ್ದರಿಂದ ಈಗಲೂ ತ್ರಿಷ್ಟುಪ್ ಛಂದಸ್ಸಿನ ಪ್ರಾಧಾನ್ಯವಿರುವ ಮಾಧ್ಯಂದಿನಸವನಕಾಲದಲ್ಲಿ ಋತ್ವಿಕ್ಕುಗಳಿಗೆ ದಕ್ಷಿಣೆಯನ್ನು ಕೊಡುವುದೂ ಅದನ್ನು ಅವರು ಸ್ವೀಕರಿಸಿ ಒಯ್ಯುವುದೂ ರೂಢಿಯಲ್ಲಿದೆ.

## *English Translation*

(The abstracting of Soma· Origin of the three libations· Evening libation· The Vaisvadeva and Agnimaruta Shastras)

**(Story of the metres which were despatched by the Gods to fetch the Soma from heaven. Jagati and Trishtubh unsuccessful. Origin of Diksha, Tapas and Dakshina)**

The king Soma lived (once) in the other world (in heaven). The Gods and Rishis deliberated ; how might the king Soma (be induced) to come to us? They said, " Ye metres must bring back to us this king Soma." They consented. They transformed themselves into birds. That they transformed themselves into birds (suparna), and flew up, is called by the knowers of stories sauparnam (i.e. this very story is called so). The metres went to fetch the king Soma. They consisted (at that time) of four syllables only ; for at that time, there were only such metres as consisted of four syllables. The Jagati with her four syllables, flew first up. In flying up she became tired, after having completed only half the way. She lost three syllables, and being reduced to one syllable, she took from heaven with her only the Diksha and Tapas, and flew back to the earth. He who has cattle is possessed of Dikshi and possessed of Tapas. For cattle belong to Jagati. Jagati took them.

Then the Trishtubh flew up. After having completed more than half the way, she became fatigued, and throwing off one syllable, became reduced to three syllables, and taking with her the Dakshina, flew back to the earth. Thence the Dakshina gifts (sacrificial rewards) are carried away by the priests at the midday libation which is the place of the Trishtubh; for Trishtubh alone had taken them the Dakshina gifts.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಪ್ರಥಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಮೊದಲನೆಯ ಖಂಡವು
ಸಮಾಪ್ತವಾದುದು.

# ಅಥ ತ್ರಯೋದಶಾಧ್ಯಾಯೇ ದ್ವಿತೀಯಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು



[ಗಾಯತ್ರಿಯು ಶ್ಯೇನಪಕ್ಷಿಯ ರೂಪದಿಂದ ಸೋಮಾಹರಣಕ್ಕಾಗಿ ಪ್ರಯತ್ನಪಟ್ಟು ಆ ಕಾರ್ಯದಲ್ಲಿ ಸಫಲವಾಗುವುದು ; ಸೋಮವನ್ನು ಅಪಹರಿಸಿ ತರುವಾಗ ಸೋಮಪಾಲಕರಿಂದ ಗಾಯಗೊಳಿಸಲ್ಪಟ್ಟು ತನ್ನ ಉಗುರುಗಳನ್ನು ಕಳೆದುಕೊಳ್ಳುವುದು ಮತ್ತು ಆ ಉಗುರುಗಳು ಏನಾದವೆಂಬ ವಿಚಾರ ಇತ್ಯಾದಿ]



ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತಿ ಪುನರಾಗಚ್ಛತಿ ||

ಅಥ ಗಾಯತ್ರೀವೃತ್ತಾಂತಮಾಹ— ಜಗತೀತ್ರಿಷ್ಟುಭೋಃ ಸೋಮಾಸಯನಸಾಮರ್ಥ್ಯಾಭಾವಂ ದೃಷ್ಟ್ವಾ ತೇ ದೇವಾ ಗಾಯತ್ರೀಂ ಪ್ರಾರ್ಥಿತವಂತಃ || ಹೇ ಗಾಯತ್ರಿ ತ್ವಂ ನೋಽಸ್ಮದರ್ಥಮಿಮಂ ಸೋಮಮಾಹರೇತಿ ಸಾ ಚ ಗಾಯತ್ರೀ ತಥೇತ್ಯಂಗೀಕೃತ್ಯ ದೇವಾನ್ಪ್ರತ್ಯೇವಮಬ್ರವೀತ್ || ಹೇ ದೇವಾ ಯದಾಽಹಂ ಸೋಮಮಾನೇತುಂ ಗಚ್ಛಾಮಿ ತದಾನೀಂ ತಾಮೇವಂ ಗಚ್ಛಂತೀಂ ಮಾಂ ಯೂಯಂ ಸರ್ವೇಽಪಿ ಯಥಾಶಕ್ತಿ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಂ ಕ್ಷೇಮಪ್ರಚರಣಂ ಸ್ವಸ್ತ್ಯಯನಂ ತದರ್ಥಮಾಶೀರ್ವಾದರೂಪೇಣ ಮಂತ್ರೇಣ ಮಮಾನುಮಂತ್ರಣಂ ಕುರುತೇತಿ || ಏವಮುಕ್ತ್ವಾ ತಥೇತಿ ದೇವೈರಂಗೀಕೃತೇ ಸತಿ ಸಾ ಗಾಯತ್ರೀ ದ್ಯುಲೋಕಂ ಪ್ರತ್ಯುತ್ಪತನಮಕರೋತ್ತದಾನೀಂ ದೇವಾ ಸ್ವಾಗತಪ್ರಕಾರೇಣ ಸರ್ವೇಣಾಪಿ ಕ್ಷೇಮಪ್ರಾಪಣಮಂತ್ರೇಣ ಗಾಯತ್ರೀಮನುಮಂತ್ರಿತವಂತಃ | ಕೋಽಸೌಮಂತ್ರ ಇತಿ | ಪ್ರಶಬ್ದ ಏಕೋ ಮಂತ್ರಃ | ಆಶಬ್ದೋ ದ್ವಿತೀಯೋ ಮಂತ್ರಃ | ತದುಭಯಪ್ರದರ್ಶನಾರ್ಥಮಿತಿಶಬ್ದದ್ವಯಂ | ಉಭಯಸಮುಚ್ಚಯಾರ್ಥಂ ಚಕಾರದ್ವಯಂ | ಕ್ಷೇಮೇಣ ಸೋಮಂ ಪ್ರಾಪ್ನುಹಿ ಪುನರಪಿ ಕ್ಷೇಮೇಣಾಽಽಗಚ್ಛೇತ್ಯಯಮಾಶೀರ್ವಾದಮಂತ್ರದ್ವಯಾರ್ಥಃ ||ಏತದೇವ ಮಂತ್ರದ್ವಯಂ ಸರ್ವಂ ಸ್ವಸ್ತ್ಯಯನಂ ಪ್ರೇತ್ಯೇಕಮೇತಿ ದ್ವಿತೀಯಂ ಯದಸ್ತಿ, ಇತೋಽಧಿಕಂ

ನಾನ್ಯತ್ಸ್ವಸ್ತ್ಯಯನಮಸ್ತಿ । ಯಸ್ಮಾದಿದಮೇವ ಸರ್ವಕ್ಷೇಮಪ್ರಾಪಕಂ ತಸ್ಮಾದಿದಾನೀಮಪಿ ಯಃ ಪುಮಾನ್ಗ್ರಾಮಾಂತರಂ ಜಿಗಮಿಷುರಸ್ಯ ಗೃಹಸ್ವಾಮಿನಃ ಪ್ರಿಯಃ ಸ್ಯಾತ್ತಂ ಜಿಗಮಿಷುಂ ಪ್ರೇತ್ಯೇತೀತಿ ಮಂತ್ರದ್ವಯೇನಾನುಮಂತ್ರಯೇತ ತೇನಾಽಽಶೀರ್ವಾದಪ್ರಸಾದೇನಾಯಂ ಕ್ಷೇಮೇಣೈವ ಗಚ್ಛತಿ ಪುನರಾಗಚ್ಛತಿ ಚ ॥

ಅನಂತರ ಗಾಯತ್ರಿಯ ವಿಷಯವನ್ನು ವಿವರಿಸುವರು—ಅನಂತರ ದೇವತೆಗಳು ಗಾಯತ್ರಿಯನ್ನು ಸಮೀಪಿಸಿ ನಮಗೆ ಸೋಮರಾಜನನ್ನು ತಂದುಕೊಡು ಎಂದು ಪ್ರಾರ್ಥಿಸಿದರು. ಹಾಗೇ ಆಗಲೆಂದು ಗಾಯತ್ರಿಯು ಒಪ್ಪಿ ದೇವತೆಗಳು ಸ್ವಸ್ತ್ಯಯನ ಮಂತ್ರವನ್ನು ಪಠಿಸುತ್ತಾ ತನ್ನನ್ನು ಹಿಂಬಾಲಿಸಬೇಕೆಂದಿತು. ದೇವತೆಗಳು ಸಂತೋಷದಿಂದ ಅದನ್ನು ಅಂಗೀಕರಿಸಿ "ಪ್ರ ಮತ್ತು ಚ" ಎಂಬ ಸ್ವಸ್ತ್ಯಯನ ಮಂತ್ರವನ್ನು ಪಠಿಸುತ್ತಾ ಹೊರಟರು. ಈ ಮಂತ್ರದ ಪಠನದಿಂದ ಪ್ರಯಾಣವು ನಿರ್ವಿಘ್ನವಾಗಿ ನೆರವೇರಿ ಕಾರ್ಯವು ಸಿದ್ಧಿಸುವುದರಿಂದ ದೇವತೆಗಳು ಇದನ್ನು ಪಠಿಸಿದರು.

**ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ॥**

ಇತ್ಥಂ ಪ್ರಾಸಂಗಿಕಂ ಲೌಕಿಕವಿಧಿಮುಕ್ತ್ವಾ ಪ್ರಾಕೃತಮೇವ ಗಾಯತ್ರೀವೃತ್ತಾಂತಮನುಸರತಿ—ಗಾಯತ್ರೀ ಪತಿತ್ವೋತ್ಪತನೇನ ಸೋಮಂ ಪ್ರಾಪ್ಯ ಗಂಧರ್ವಾನ್ಸ್ವಾನಭ್ರಾಜಾದೀನ್ಸೋಮರಕ್ಷಕಾನಾಸ್ಫೋಟನಾಯುಧಪ್ರದರ್ಶನಾದಿನಾ ಭೀಷಯಿತ್ವಾ ಭೀತ್ವಾ ತೇಷ್ವಪಸೃತೇಷು ಸ್ವಯಂ ಪಕ್ಷಿರೂಪಾ ಸತೀ ಸ್ವಕೀಯಾಭ್ಯಾಂ ಪದ್ಭ್ಯಾಂ ಮುಖೇನ ಚ ಸೋಮಂ ಸಮ್ಯಗ್ಗೃಹೀತವತೀ । ಸ್ವಾನಭ್ರಾಜಾದೀನಾಂ ಸೋಮಪಾಲಕತ್ವಮಾಧ್ವರ್ಯವೇ ಸೋಮಪ್ರಕರಣೇ ಮಂತ್ರತದ್ಬ್ರಾಹ್ಮಣಾಭ್ಯಾಮವಗಮ್ಯತೇ ॥ ಸ್ವಾನಭ್ರಾಜಾಂಘಾರೇಬಂಭಾರೇಹಸ್ತಸುಹಸ್ತಕೃಶಾನವೇತೇವಃ (?) ಸೋಮಕ್ರಯಣಾಸ್ತಾನ್ರಕ್ಷಧ್ವಮಿತಿ ಮಂತ್ರಃ । ಸ್ವಾನಭ್ರಾಜೇತ್ಯಾಹೈತೇ ವಾಽಮುಷ್ಮಿಁಲ್ಲೋಕೇ ಸೋಮಮರಕ್ಷನ್ನಿತಿ ಬ್ರಾಹ್ಮಣಂ ॥ ನ ಕೇವಲಂ ಗಾಯತ್ರೀ ಸೋಮಮೇವ ಗೃಹೀತವತೀ ಕಿಂತ್ವಿತರೇ ಛಂದಸೀ ಜಗತೀತ್ರಿಷ್ಟುಭಾಖ್ಯೇ ಯಾನಿ ಚತ್ವಾರ್ಯಕ್ಷರಾಣ್ಯಜಹಿತಾಂ ಪರಿತ್ಯಕ್ತವತ್ಯೌ ತಾನಿ ಚೋಪೇತ್ಯ ಸಮ್ಯಗ್ಗೃಹೀತವತೀ ॥

ಗಾಯತ್ರಿಯು ನಿರ್ವಿಘ್ನವಾಗಿ ಸೋಮವಿರುವ ಪ್ರದೇಶವನ್ನು ಸೇರಿ ತನ್ನ ಪಾದಗಳಿಂದಲೂ, ಮುಖದಿಂದಲೂ ಸೋಮವನ್ನೆತ್ತಿಕೊಂಡು ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟುಬಂದಿದ್ದ ಚತುರಕ್ಷರಗಳನ್ನೂ (೩+೧) ತೆಗೆದುಕೊಂಡು ಹಿಂತಿರುಗಿತು.

**ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸನಖಮಿವ ಯದ್ವಶಮಸ್ರವತ್ಸಾ ವಶಾಭವತ್ತಸ್ಮಾತ್ಸಾ ಹವಿರಿವಾಥ ಯಃ ಶಲ್ಯೋ ಯದನೀಕಮಾಸೀತ್ಸ ಸರ್ಪೋ ನಿರ್ದಂಶ್ಯಭವತ್ಸಹಸಸ್ವಜೋ ಯಾನಿ**

ಪರ್ಣಾನಿ ತೇ ಮಂಥಾವಲಾ ಯಾನಿ ಸ್ನಾವಾನಿ ತೇ ಗಂಡೂಪದಾ ಯತ್ತೇಜನಂ ಸೋಽಂಧಾಹಿಃ ಸೋ ಸಾ ತಥೇಷುರಭವತ್ ॥

ಅಥ ತಸ್ಯಾ ಗಾಯತ್ರ್ಯಾ ಗಂಧರ್ವೇಣ ಸಹ ಯುದ್ಧೇ ಯೋ ವೃತ್ತಾಂತಸ್ತಂ ದರ್ಶಯತಿ—ಸ್ವಾನಭ್ರಾಜಾದಿಷು ಸೋಮರಕ್ಷಕೇಷು ಯಃ ಸಪ್ತಮೋ ಗಂಧರ್ವಃ ಕೃಶಾನುನಾಮಕಃ ಸೋಽಯಂ ತಸ್ಯಾ ಗಾಯತ್ರ್ಯಾ ಅನು ಪೃಷ್ಠತೋ ಬಾಣಂ ವಿಸೃಜ್ಯ ತದೀಯಸ್ಯ ವಾಮಪಾದಸ್ಯೈಕಂ ನಖಂ ಛಿನ್ನವಾನ್ ॥ ತಚ್ಚ ನಖಂ ಶಲ್ಯಕೋ ಮರ್ಕಟಶರೀರಪರಿಮಿತಃ ಶಲಲ್ಯಾಖ್ಯೋ ಮೃಗ ಆಸೀತ್ ॥ ಯಸ್ಯ ಮೃಗಸ್ಯ ಪುಚ್ಛಸಮೀಪೇ ಬಹವೋ ರೋಮವಿಶೇಷಾಃ ಪ್ರಾದೇಶಪರಿಮಿತಾಸ್ತೀಕ್ಷ್ಣಾಗ್ರಾಲೋಹಮಯಾ ಉತ್ಪದ್ಯಂತೇ ಸ ಶಲ್ಯಕಃ ॥ ಯಸ್ಮಾದಯಂ ನಖಾದುತ್ಪನ್ನಃ ತಸ್ಮಾತ್ಸ ನಖಮಿವ ತೀಕ್ಷ್ಣಾಗ್ರರೋಮೋಪೇತಃ ॥ ತತ್ರ ಚ್ಛಿನ್ನನಖಪಾದಪ್ರದೇಶೇ ಯದ್ವಶಂ ಮೇದೋಽಸ್ರವತ್ ಸಾ ವಶಾ ಮೇಧ್ಯಾ ಕಾಚಿದಜಾವ್ಯಾದಿಪಶುಸ್ವಾಸೀತ್ ॥ ತಸ್ಮಾದ್ಗಾಯತ್ರ್ಯಾ ಉತ್ಪನ್ನತ್ವಾತ್ಸಾ ವಶಾ ಹವಿರಿವ ದೇವತಾಯೋಗ್ಯಂ ಹವಿರೇವಾಽಽಸೀತ್ ॥ ತಚ್ಚ ಹವಿಷ್ಟ್ವಂ ಶಾಖಾಂತರೇ ಶ್ರೂಯತೇ ॥ “ಏತಾಮೇವ ವಶಾಮಾದಿತ್ಯೇಭ್ಯಃ ಕಾಮಾಯಾಽಽಲಭೇತ” ಇತಿ ॥ ಅಥ ನಖಚ್ಛೇದನಾಯ ಗಂಧರ್ವೇಣ ವಿಸೃಷ್ಟೋ ಬಾಣಃ ಸೋಽಪಿ ನಖಸಂಘಟ್ಟನೇನ ಕುಂಠಿತಾಗ್ರೋ ಬಹುಧಾ ಭಗ್ನೋ ಭೂಮೌ ಪತಿತಃ ॥ ತಸ್ಯ ಬಾಣಸ್ಯ ಯಃ ಶಲ್ಯಃ ಕೃಷ್ಣಾಯಸನಿರ್ಮಿತೋ ಬಾಣಾಗ್ರೇ ಸ್ಥಾಪಿತಃ ತಸ್ಯ ಚ ಶಲ್ಯಸ್ಯ ಯದನೀಕಂ ಮುಖಂ ಸಂಘಟ್ಟನೇನ ಕುಂಠಿತಮಾಸೀತ್ಸೋಽಯಂ ಶಲ್ಯಸ್ತದನೀಕೋಭಯಾತ್ಮಕೋ ಬಾಣಭಾಗೋ ನಿರ್ದಂಶೀ ದಂಶನಾಸಮರ್ಥಃ ಸರ್ಪೋಽಭವತ್ ॥ ಜಲಮಧ್ಯೇ ಸಂಚರತೋ ದುಂದುಭಾಖ್ಯಸ್ಯ ಸರ್ಪಸ್ಯ ವಿಷರಹಿತತ್ವಾದ್ದಂಶನಸಾಮರ್ಥ್ಯಂ ನಾಸ್ತಿ ॥ ತಸ್ಮಾತ್ಕುಂಠಿತಾಗ್ರಸ್ಯ ಲೋಹಸ್ಯ ಯೋಽಯಂ ಸಹೋ ವೇಗಸ್ತಸ್ಮಾತ್ಸಹಸೋ ಬಾಣವೇಗಾತ್ಸ್ವಜ ಉಭಯತಃ ಶಿರಾಃ ಸರ್ಪೋಽಭವತ್ ॥ ತಸ್ಯ ಬಾಣಸ್ಯ ಮೂಲೇ ಯಾನಿ ಪರ್ಣಾನಿ ಕಂಕಪತ್ರಾಣಿ ತೇ ಮಂಥಾವಲಾ ಅಭವನ್ ॥ ಯೇ ಜೀವವಿಶೇಷಾ ವೃಕ್ಷಶಾಖಾಸ್ವಧೋಮುಖಾ ಅವಲಂಬಂತೇ ತೇ ಮಂಥಾವಲಾಃ ॥ ತಸ್ಮಿನ್ಬಾಣೇ ಯಾನಿ ಸ್ನಾವಾನಿ ಪತ್ರಬಂಧನಾರ್ಥಾಃ ಸ್ನಾಯುವಿಶೇಷಾಸ್ತೇ ಗಂಡೂಪದಾ ಅಭವನ್ನವಸ್ಕಾರಾದಿಸ್ಥಾನೇಷು ಯೇ ಸರ್ಪವಜ್ಜಾಯಂತೇ ತೇ ಗಂಡೂಪದಾಃ । ತಸ್ಮಿನ್ಬಾಣೇ ಯತ್ತೇಜನಂ ಲೋಹಪತ್ರವ್ಯತಿರಿಕ್ತಂ ಕಾಷ್ಠಂ ಸೋಽಂಧಾಹಿರಭವತ್ ದೃಷ್ಟಿರಹಿತಃ ಸರ್ಪೋಽಭೂತ್ ॥ ತಥಾ ತೇನೋಕ್ತಪ್ರಕಾರೇಣೇಷುರ್ಗಂಧರ್ವೇಣ ಮುಕ್ತೋ ಬಾಣಃ ಸೋ ಸಾಽಭವತ್ ॥ ಉಶಬ್ದಃ ಸಮುಚ್ಚಯಾರ್ಥಃ । ಸಾ ಚ ಸಾ ಚೇತ್ಯುಕ್ತಂ ಭವತಿ । ತಥೋಽಕ್ತೇ ಸತಿ ತತ್ತಜ್ಜಾತಿರ್ನಿರ್ದಂಶಿಸರ್ಪಾದಿರೂಪೇತ್ಯುಕ್ತಾರ್ಥೋಪಸಂಹಾರಃ ॥

ಆದರೆ ಸೋಮಪಾಲಕನಾದ ಕೃಶಾನುವು ಇದರ ಎಡಗಡೆ ಪಾದದ ನಖವನ್ನು ಕತ್ತರಿಸಿಹಾಕಿದನು. ಅದು ಮುಳ್ಳುಹಂದಿ ರೂಪಕ್ಕೆ ಪರಿವರ್ತಿತವಾಗಿ ಶಲ್ಯರೂಪಕ್ಕೆ ತಿರುಗಿತು. ಆದರಿಂದ ಸುರಿದ ರಕ್ತವು ಬಂಜೆಹಸುವಾಗಿಯೂ, ಎಲುಬುಗೂಡು ಸರ್ಪರೂಪಕ್ಕೂ ತಿರುಗಿತು. ಆದರೆ ವಿಷವನ್ನು ಕಾರಿ ಕಚ್ಚುವಂತಾಗಲಿಲ್ಲ. ಹೀಗೆಯೇ ರೆಕ್ಕೆ ಬಾವಲಿಯೂ, ಸ್ನಾಯುವಿನಿಂದ ಮಣ್ಣುಹುಳುವೂ ಉತ್ಪನ್ನವಾಗಿ ಇಷುವಿನ ಸ್ವರೂಪವು ಈರೀತಿಯಾಯಿತು.

*English Translation*

### (Gayatri successful ; wounded when robbing the Soma. What became of her nail cut off, & c.)

The gods said to the Gayathri, "fetch thou the king Soma," She consented, but said, "during the whole of my journey (up to the celestial world) you must repeat the formula for wishing a safe passage for me." The gods consented. She flew up. The gods repeated throughout her passage the formula for wishing a safe passage, viz., pra cha cha, go and come back, and come back. For the words pra cha cha signify, that the whole journey will be made in safety. He who has a friend who sets out on a journey ought to repeat this formula; he then makes his passage in safety, and returns in safety.

The Gayatri, when flying up, frightened the guardians of Soma, and seized him with her feet and bill, and along with him she also seized the syllables which the two other metres (Jagati and Trishtubh) had lost. Kris'anu (one of) the guardians of the Soma, discharged an arrow after her, which cut off the nail of her left leg. This became a porcupine.

The porcupine having thus sprung from the nail which was cut off the Vas'a (a kind of grcat) sprang from the marrow (cas'a) which dripped from the nail cut off. Thence this goat is a suitable offering. The shaft of the arrow with the point discharged by Krish'anu became a serpent which does not bite (dundubha by name). From the vehemence with which the arrow was discharged. the snake svaja was produced; from the feathers, the shaking branches which hang down the airy roots of the As'vattha; from the sinews with which the feathers were fastened on the shaft the worms called gandupada, from the fulmination of the steel the serpent andhahi. Into sueh objects was the arrow of Kris'anu transformed.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ದ್ವಿತೀಯಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಎರಡನೆಯ ಖಂಡವು ಸಮಾಪ್ತವಾದುದು.**



# ಅಥ ತ್ರಯೋದಶಾಧ್ಯಾಯೇ ತೃತೀಯಃ ಖಂಡಃ

## ಹಡಿಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು



[ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನಗಳ ಸ್ವರೂಪವು; ಇವುಗಳೆಲ್ಲವೂ ಸಮಾನಶಕ್ತಿಸಾಮರ್ಥ್ಯಗಳನ್ನು ಹೊಂದಿದ ವಿಚಾರ]



ಸಾ ಯದ್ದಕ್ಷಿಣೇನ ಪದಾ ಸಮುಗೃಭ್ಣಾತ್ತತ್ಪ್ರಾತಃಸವನಮಭವತ್ತ-ದ್ಗಾಯತ್ರೀ ಸ್ವಮಾಯತನಮಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮುಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮುಗೃಭ್ಣಾತ್ತನ್ಮಾಂಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮುದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವ-ನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀರ್ಯಾಭ್ಯಾಂ ಸಮಾ-ವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮುಗೃಭ್ಣಾತ್ತತ್ತೃತೀಯಸವನಮಭವತ್ ।

ಅಥ ತೃತೀಯಸವನಾರ್ಥಂ ಸವನಸ್ಯೋತ್ಪತ್ತಿಂ ದರ್ಶಯತಿ—ಸಾ ಗಾಯತ್ರೀ ಸೋಮ-ಮಾನಂಯಂತೀ ದಕ್ಷಿಣೇನ ಪದಾ ಪಾದೇನ ಯತ್ಸೋಮಸ್ಯ ಸ್ವರೂಪಂ ಯಾವದ್ಗೃಹೀತವತೀ ತತ್ತಾವತ್ಪ್ರಾತಃಸವನಮಭವತ್ ॥ ತಚ್ಚ ಪ್ರಾತಃಸವನಂ ಸಾ ಗಾಯತ್ರೀ ಸ್ವಕೀಯಂ ಸ್ಥಾನ-ಮಕರೋತ್ ॥ ತಸ್ಮಾತ್ತತ್ಸರ್ವೇಷಾಂ ಸವನಾನಾಂ ಮಧ್ಯೇಽತಿಶಯೇನ ಸಮೃದ್ಧಮಿತಿ ಯಾಜ್ಞಿ-ಕಾ ಮನ್ಯಂತೇ । ತತ್ರ ಪ್ರಯೋಗಬಾಹುಳ್ಯಸದ್ಭಾವಾತ್ ॥ ಯ ಏವಮುಕ್ತಾರ್ಥಂ ವೇದ ಸ ಸ್ವಕೀಯಾನಾಂ ಮಧ್ಯೇ ಶ್ರೇಷ್ಠೋ ಮುಖ್ಯಃ ಸನ್ವಿದ್ಯಾವೃತ್ತಾದಿರೂಪಾಂ ಶ್ರೇಷ್ಠತಾಂ ಪ್ರಾಪ್ನೋತಿ । ಅಥ ಸಾ ಗಾಯತ್ರೀ ವಾಮಪಾದೇನ ಯತ್ಸೋಮಸ್ಯ ಸ್ವರೂಪಂ ಗೃಹೀತವತೀ ತನ್ಮಾಧ್ಯಂದಿನಂ ಸವನವಿಸ್ರಸ್ತಮಭೂತ್ ॥ ವಾಮಪಾದಾತ್ತತ್ರ ವಿಸ್ರಸ್ತಂ ಗಲಿತಂ ತನ್ಮಾಧ್ಯಂ-

ದಿನಂ ಸವನಂ ಪೂರ್ವೋಕ್ತಪ್ರಾತಃಸವನಾನುಗಮನಾಯ ಶಕ್ತಂ ನಾಭೂತ್ ॥ ತೇ ದೇವಾ-ವಿಚಾರ್ಯ ತಸ್ಮಿನ್ಮಾಧ್ಯಂದಿನೇ ಸವನೇ ಸ್ವಾಮಿತ್ವೇನ ಛಂದಸಾಂ ಮಧ್ಯೇ ತ್ರಿಷ್ಟುಭಂ ದೇವ-ತಾನಾಂ ಮಧ್ಯ ಇಂದ್ರಂ ಚ ಸ್ಥಾಪಿತವಂತಃ ॥ ತೇನ ತನ್ಮಾಧ್ಯಂದಿನಂ ಸವನಂ ಪ್ರಾತಃಸವನೇನ ಸಹ ಸಮಾನವೀರ್ಯಂ ತುಲ್ಯಸಾಮರ್ಥ್ಯಮಭೂತ್ ॥ ಉಕ್ತಾರ್ಥವೇದಿತಾ ತುಲ್ಯಸಾಮ-ರ್ಥ್ಯಾಭ್ಯಾಮತ ಏವ ತುಲ್ಯಜಾಮೀಭ್ಯಾಮುಭಾಭ್ಯಾಂ ಸವನಾಭ್ಯಾಂ ಸಮೃದ್ಧೋ ಭವತಿ ॥ ಜಾಮೀಶಬ್ದೋ ಜಾತಿವಾಚೀ ತುಲ್ಯಜಾತಿಭ್ಯಾಮಿತ್ಯರ್ಥಃ ॥ ಅಥ ಗಾಯತ್ರೀ ಮುಖೇನ ಯತ್ಸೋಮಸ್ವರೂಪಂ ಗೃಹೀತವತೀ ತತ್ತೃತೀಯಸವನಮಭೂತ್ ॥

ಗಾಯತ್ರಿಯು ತನ್ನ ಬಲಭಾಗದ ಪಾದದಿಂದ ಹಿಡಿದುಕೊಂಡ ಸೋಮದ ಭಾಗವು ಪ್ರಾತಃಸವನವಾಯಿತು. ಈ ಪ್ರಾತಃಸವನವೇ ಗಾಯತ್ರಿಯ ನಿವಾಸಸ್ಥಾನವಾಯಿತು. ಆದುದರಿಂದಲೇ ಪ್ರಾತಃಸವನವನ್ನು ಸವನಗಳಲ್ಲೆಲ್ಲಾ ಸಮೃದ್ಧ ತಮವೆಂದು ತಿಳಿದಿದ್ದಾರೆ. ಈ ತತ್ತ್ವವನ್ನು ತಿಳಿದವನು ಯಜ್ಞಕರ್ತರಲ್ಲಿ ಅಗ್ರಣ್ಯನೂ ಅತಿಮುಖ್ಯನೂ ಆಗುತ್ತಾನೆ. ಎಡಭಾಗದ ಪಾದದಿಂದ ಗಾಯತ್ರಿಯು ಹಿಡಿದುಕೊಂಡ ಸೋಮದ ಭಾಗವು ಮಾಧ್ಯಂದಿನಸವನವಾಯಿತು. ಅದು ಜಾರಿಹೋದುದರಿಂದ ಪ್ರಾತಃಸವನದ ಶ್ರೇಷ್ಠತೆಯು ಅದಕ್ಕೆ ಲಭಿಸಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಲು ಪ್ರಯತ್ನಿಸಿ ಅದರಲ್ಲಿ ಛಂದಸ್ಸುಗಳಲ್ಲಿ ತ್ರಿಷ್ಟುಪ್ಪನ್ನೂ ದೇವತೆಗಳಲ್ಲಿ ಇಂದ್ರನನ್ನು ಸ್ಥಾಪಿಸಿದರು. ಅನಂತರ ಅದೂ ಸಹ ಪ್ರಾತಃಸವನದ ವೀರ್ಯವನ್ನೇ ಪಡೆಯಿತು. ಈ ಎರಡು ಸವನಗಳ ಸಮಾನ ಶಕ್ತಿಯನ್ನೂ ಸಂಪತ್ತನ್ನೂ ತಿಳಿದ ಪುರುಷನು ವೃದ್ಧಿಯನ್ನು ಹೊಂದುತ್ತಾನೆ. ಮುಖದಿಂದ ಹಿಡಿದುಕೊಂಡ ಸೋಮದ ಭಾಗವು ತೃತೀಯಸವನವಾಯಿತು.

ತಸ್ಯ ಪತಂತೀ ರಸಮಧಯತ್ತದ್ಧೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯ-ದಾಶಿರಮವನಯನ್ನಾಜ್ಯೇನ ಪಶುನಾ ಚರಂತಿ ತೇನ ತತ್ಸಮಾ-ನವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ।

ತಸ್ಮಿನ್ಸವನ ಋಜೀಷಸ್ವರೂಪೇ ನಿಃಸಾರೇ ಸೋಮ ಆಶಿರಾದಿಕಂ ವಿಧತ್ತೇ—ಸಾ ಗಾಯತ್ರೀ ಮುಖೇನ ತೃತೀಯಸವನರೂಪಂ ಸೋಮಂ ಗೃಹೀತ್ವಾ ದ್ಯುಲೋಕಾದಧಃ ಪತಂತೀ ತಸ್ಯ ಸೋಮಸ್ಯ ರಸಮಧಯತ್ಸಾರಂ ಪೀತವತೀ ॥ ತತ್ತೃತೀಯಸವನಂ ಧೀತರಸಂ ಪೀತಸಾರಂ ಭೂತ್ವಾ ಪೂರ್ವೋಕ್ತಪ್ರಾತಃಸವನಮಾಧ್ಯಂದಿನಸವನೇ ದ್ವೇ ಅನುಗಂತುಂ ನಾಶಕ್ನೋತ್ । ತೇ ದೇವಾಸ್ತತ್ಪ್ರತೀಕಾರಂ ವಿಚಾರ್ಯ ತತ್ಸಾಧನಂ ಪಶುಷ್ವಪಶ್ಯನ್ ॥ ಪಶುಷು ಕ್ಷೀರಂ ಯದಸ್ತಿ ಯಚ್ಚಾಽಽಜ್ಯಮಸ್ತಿ ಯದಪಿ ಹೃದಯಾದ್ಯಂಗಮಸ್ತಿ ತತ್ಸರ್ವಂ ಸಾರಂ ತಸ್ಮಾದ್ಧೃತ್ವಾ ಪೀತರಸೇ ಸೋಮ ಸಂಬಂಧಿನಿ ಋಜೀಷ ಆಶಿರಂ ಕ್ಷೀರಮವನಯಂತಿ ಸಿಂಚಂತಿ ಯಾಜ್ಞಿಕಾಸ್ತಥಾಽಽಜ್ಯಪಶುಭ್ಯಾಂ ಚರಂತ್ಯನುತಿಷ್ಠಂತಿ ತದಾನೀಂ ತೇನಾನುಷ್ಠಾನೇನ ತತ್ತೃ-ತೀಯಸವನಂ ಪೂರ್ವಸವನಾಭ್ಯಾಂ ತುಲ್ಯಸಾಮರ್ಥ್ಯಮಭೂತ್ ॥ ಅಯಮರ್ಥಃ ಸರ್ವೋಽಪಿ ಶಾಖಾಂತರೇ ಸಂಗೃಹ್ಯಾಽಽಮ್ನಾತಃ—'ಬ್ರಹ್ಮವಾದಿನೋ ವದಂತಿ ತಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಂ ಸತೀ ಯಜ್ಞಮುಖಂ ಪ್ರತೀಯಾಯೇತಿ ಯದೇವಾದಃ ಸೋಮಮಾಹ-

ರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀ ತಮಾಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾ-
ನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ವೇ ಸವನೇ ಶುಕ್ರವತೀ ಪ್ರಾತಃ-
ಸವನಂ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುತ್ಯ ಧೀತಮಿವ ಹಿ ಮನ್ಯತ
ಆಶಿರಮವನಯತಿ ಸಶುಕ್ರತ್ವಾಯೇತಿ ॥

ಹಾರುತ್ತಿರುವಾಗಲೇ ಗಾಯತ್ರೀರೂಪವಾದ ಶ್ಯೇನವು ಅದನ್ನು ಪಾನಮಾಡಿತು. ಆದುದರಿಂದಲೇ ಅದು ಮೊದಲಿನ ಎರಡು ಸವನಗಳ ಶಕ್ತಿಸಮಾನತೆಯನ್ನು ಪಡೆಯಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಬೇಕೆಂದರಿತರು. ಅವರು ಅನಂತರ ಅದನ್ನು ಪಶುಗಳಲ್ಲಿ ವೀಕ್ಷಿಸಿ ಅನಂತರ ಆಶಿರದಿಂದಲೂ ಆಜ್ಯಾರ್ಪಣೆಯಿಂದಲೂ ಆರಾಧಿಸಿದರು. ಅನಂತರ ಅದೂ ಸಹ ಮೊದಲಿನ ಎರಡು ಸವನಗಳ ಶಕ್ತಿಯನ್ನು ಪಡೆಯಿತು.

**ಸರ್ವೈಃ ಸವನೈಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ
ಯ ಏವಂ ವೇದ ।**

ವೇದನಂ ಪ್ರಶಂಸತಿ—

ಈ ತತ್ತ್ವವನ್ನರಿತವನು ವೃದ್ಧಿಯನ್ನು ಪಡೆಯುತ್ತಾನೆ.

*English Translation*

**(Origin of the three libation. They all are of equal strength).**

What Gayatri had seized with her right foot, that became the morning libation; she made it her own place. Thence they think the morning ltbation to be the most auspicious of all. He who has such a knowledge becomes the first and most prominent among his people and attains to the leadership.

What she had seized with her left foot, became the midday libation. This portion slipped down, and after having slipped down, did not attain to the same strength as the first libation held with the right foot. The gods got aware of it, and wished that this portion should not be lost. They put therefore in it, of the metres, the Trishtubh, and of the deities, Indra. Therefore it (the midday libation) became endowed with the same strength as the first libation. He who has such a knowledge prospers through both the libations which are of equal strength, and of the same quality.

What Gayatri had seized with her bill, became the evening libatiou. When flying down, she suckled in the juice of this (portion of Soma, held in her bill), and after its juice had gone, it did not equal (in strength) the two first libations. The gods got aware of that and wished that the juice of this portion

should be kept. They discovered it (the remedy) in cattle. That is the reason that the priests pour sour milk in the Soma at the evening libation, and bring oblations of melted butter and of flesh (things comming from the cattle·) In this way the evening libation obtaincd equal strength with the two first libations.

He who has such a knowledge prospers, through all the libations which are of equal strength and of the same quality.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ತೃತೀಯಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಮೂರನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ಚತುರ್ಥಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು



[ಸೋಮಾಹರಣಕ್ಕಾಗಿ ಪ್ರಯತ್ನಪಟ್ಟ ತ್ರಿಷ್ಟುಪ್ ಮತ್ತು ಗಾಯತ್ರೀ ಛಂದಸ್ಸುಗಳು ಪುನಃ ತಮ್ಮ ಅಕ್ಷರಗಳನ್ನು ಪಡೆದ ವಿಚಾರ].

ತೇ ವಾ ಇಮೇ ಇತರೇ ಛಂದಸೀ ಗಾಯತ್ರೀಮಭ್ಯವದೇತಾಂ ವಿತ್ತಂ ನಾವಕ್ಷರಾಣ್ಯನುಪರ್ಯಾಗುರಿತಿ ನೇತ್ಯಬ್ರವೀದ್ಗಾಯತ್ರೀ ಯಥಾವಿತ್ತಮೇವ ನ ಇತಿ ತೇ ದೇವೇಷು ಪ್ರಶ್ನಮೈತಾಂ ತೇ ದೇವಾ ಅಬ್ರುವನ್ಯಥಾವಿತ್ತಮೇವ ವ ಇತಿ ತಸ್ಮಾದ್ಧಾಪ್ಯೇತರ್ಹಿ ವಿತ್ತ್ಯಾಂ ವ್ಯಾಹುರ್ಯಥಾವಿತ್ತಮೇವ ನ ಇತಿ ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವತ್ತ್ರ್ಯಕ್ಷರಾ ತ್ರಿಷ್ಟುಬೇಕಾಕ್ಷರಾ ಜಗತೀ ।

ನನು ಪೂರ್ವತ್ರ ಸರ್ವಾಣಿ ಛಂದಾಂಸಿ ಚತುರಕ್ಷರಾಣೀತ್ಯುಕ್ತಂ ತೇಷ್ವಪಿ ತ್ರಿಷ್ಟುಭ ಏಕಮಕ್ಷರಂ ಗತಂ ಜಗತ್ಯಾಶ್ಚ ತ್ರೀಣ್ಯಕ್ಷರಾಣಿ ಗತಾನಿ।ತಥಾ ಸತಿ ಸರ್ವಶ್ರುತ್ಯಂತರವಿರೋಧಃ ।

ಕೇಷು ಚ ಶ್ರುತ್ಯಂತರೇಷ್ವಷ್ಟಾಕ್ಷರಾ ಗಾಯತ್ರೀ ॥ ಏಕಾದಶಾಕ್ಷರಾ ತ್ರಿಷ್ಟುಪ್॥ದ್ವಾದಶಾಕ್ಷರಾ ಜಗತೀತಿ ಸರ್ವತ್ರ ಶ್ರೂಯತೇಽಸುಷ್ಠಾನಂ ಚ ತಥೈವ ಕ್ರಿಯತೇ ತತ್ಕಥಂ ವಿರೋಧಪರಿಹಾರ ಇತ್ಯಾಖ್ಯಾಯಿಕಯಾ ಪರಿಹಾರಂ ದರ್ಶಯಿತುಮಾರಭತೇ— ಯೇ ತ್ರಿಷ್ಟುಬ್ಜಗತ್ಯಾ ಪುರಾ ಸ್ವಕೀಯಾನ್ಯಕ್ಷರಾಣಿ ಪರಿತ್ಯಕ್ತವತ್ಯೌ ತೇ ಏವೇಮೇ ಇತರೇ ಗಾಯತ್ರೀವ್ಯತಿರಿಕ್ತೇ ಛಂದಸೀ ಗಾಯತ್ರೀಮಭಿಲಕ್ಷ್ಯ ಸಮಾಗತ್ಯೈವಮುಕ್ತವತ್ಯೌ । ಹೇ ಗಾಯತ್ರಿ ಯತ್ತ್ವಯಾ ವಿತ್ತಂ ಲಬ್ಧಮಧಿಕಮಕ್ಷರಚತುಷ್ಟಯಂ ತದೇತನ್ನೌ ತ್ರಿಷ್ಟುಬ್ಜಗತ್ಯೋರಾವಯೋಃ । ತಸ್ಮಾತ್ತಾನಿ ಚತ್ವಾರ್ಯಕ್ಷರಾಣ್ಯನುಪರ್ಯಾಗುರಾವಾಂ ತ್ರಿಷ್ಟುಬ್ಜಗತ್ಯಾವನುಪಲಕ್ಷ್ಯ ಪರ್ಯಾವೃತ್ಯ ಗಚ್ಛಂತ್ವಿತಿ । ಗಾಯತ್ರೀ ತಯೋರ್ವಚನಂ ನೇತಿ ನಿರಾಕೃತ್ಯ ತತ್ರೈತಾಮುಪಪತ್ತಿಮಬ್ರವೀತ್ । ನೋಽಸ್ಮಾಕಂ ಯಥಾವಿತ್ತಮೇವ ಲಬ್ಧಮನತಿಕ್ರಮ್ಯೈವ ಸ್ವಾಮಿತ್ವಂ ಯುಕ್ತಂ॥ ಯದ್ವಸ್ತು ಯೇನ ಲಬ್ಧಂ ತತ್ತಸ್ಯೈವೇತಿ ಲೌಕಿಕನ್ಯಾಯಸ್ತಂ ನ್ಯಾಯಂ ನಿರ್ಣೇತುಂ ತೇ ತ್ರಿಷ್ಟುಬ್ಜಗತ್ಯೌ ದೇವೇಷು ಪ್ರಶ್ನಮೈತಾಂ ಪ್ರಾಪ್ನುತಾಂ । ಹೇ ದೇವಾಃ ಕಥಂ ನ್ಯಾಯ ಇತಿ ತಯೋಃ ಪ್ರಶ್ನಃ । ತೇ ಚ ದೇವಾ ಉತ್ತರಮೇವಮಬ್ರುವನ್ ॥ ವೋ ಯುಷ್ಮಾಕಂ ತಿಸೃಣಾಂ ಯಥಾವಿತ್ತಮೇವಾಕ್ಷರಸ್ವೀಕಾರೋ ಯುಕ್ತ ಇತಿ । ಯಸ್ಮಾದ್ದೇವೈರೇವಮುಕ್ತಂ ತಸ್ಮಾದ್ಧ ತತ ಏವ ಕಾರಣಾದಿದಾನೀಮಪಿ ವಿತ್ತ್ಯಾಂ ಕಸ್ಯಾಂ ಚಿತ್ಪುರುಷಸ್ಯ ದ್ರವ್ಯಲಬ್ಧೌ ಸತ್ಯಾಂ ವ್ಯಾಹುರ್ವಿಪ್ರತಿಪನ್ನಂ ಪ್ರತಿ ನ್ಯಾಯಾಭಿಜ್ಞಾ ಏವಮಾಹುಃ॥ನೋಽಸ್ಮಾಕಂ ಸರ್ವೇಷಾಮಪಿ ಲಬ್ಧಮನತಿಕ್ರಮ್ಯೈವ ವಸ್ತುಸ್ವೀಕಾರೋ ಯುಕ್ತ ಇತಿ ವಕ್ತೄಣಾಮಭಿಪ್ರಾಯಃ । ದೇವೈರ್ನ್ಯಾಯೇ ನಿರ್ಣೀತೇ ಸತಿ ತದೂರ್ಧ್ವಂ ಗಾಯತ್ರೀ ಸ್ವಕೀಯೈಃ ಸ್ವಭಾವಸಿದ್ಧೈಶ್ಚತುರಕ್ಷರೈರ್ಯುದ್ಧೇ ಲಬ್ಧೈಶ್ಚತುರಕ್ಷರೈರಪಿ ಸ್ವಯಮಷ್ಟಾಕ್ಷರಾಽಭೂತ್ ॥ ತ್ರಿಷ್ಟುಭಃ ಪೂರ್ವಂ ವರ್ತಮಾನೇಷು ಚತುರ್ಷ್ವೇತಾಕ್ಷರಸ್ಯ ಗತತ್ವಾತ್ತ್ರ್ಯಕ್ಷರೈವ ಸಾ ॥ ತಥಾ ಜಗತ್ಯಾಶ್ಚತುರಕ್ಷರೇಷ್ವಕ್ಷರತ್ರಯಸ್ಯ ಗತತ್ವಾದೇಕಾಕ್ಷರೈವ ಸಾಽಭವತ್ ॥

ಗಾಯತ್ರಿಯು ತ್ರಿಷ್ಟುಪ್ಪಿನ ಮೂರು ಅಕ್ಷರಗಳನ್ನೂ, ಜಗತಿಯ ಒಂದಕ್ಷರವನ್ನೂ ತೆಗೆದುಕೊಂಡು ಹಿಂತಿರುಗಿದನಂತರ ಅವೆರಡೂ ಇದನ್ನು ಸಮೀಪಿಸಿ ನಮ್ಮ ಐಶ್ವರ್ಯವಾದ ಅಕ್ಷರಗಳು ನಿನ್ನೊಡನೆ ಸೇರಿ ಬಂದಿವೆ. ಅವನ್ನು ಹಿಂತಿರುಗಿಸು ಎಂದು ಪ್ರಾರ್ಥಿಸಿದಾಗ ಗಾಯತ್ರಿಯು ಇಲ್ಲ, ಅವು ನಿಮ್ಮವಲ್ಲ, ನಾನು ಅದನ್ನು ತಂದುದರಿಂದ ಅದು ನನ್ನದೇ ಆಯಿತು ಎಂದಿತು. ಅನಂತರ ಅವೆರಡೂ ದೇವತೆಗಳನ್ನು ಸಮೀಪಿಸಿ ತಮ್ಮ ದೂರನ್ನು ಹೇಳಿಕೊಂಡವು. ದೇವತೆಗಳು ಗಾಯತ್ರಿಯ ಪಕ್ಷವನ್ನೇ ವಹಿಸಿ, ನೀನು ಅವನ್ನು ತಂದುದರಿಂದ ಆ ಮೂರಕ್ಷರಗಳೂ ನಿನ್ನದೇ ಆಯಿತು ಎನ್ನುವ ರೂಢಿಯಿರುವಂತೆಯೇ ಅವನ್ನು ಸ್ವಾಯತ್ತೀಕರಿಸಿಕೊಳ್ಳುವ ಅಧಿಕಾರವು ನಿನಗಿದೆ ಎಂದರು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ತ್ರ್ಯಕ್ಷರಾತ್ಮಕವಾಗಿಯೂ ಜಗತಿಯು ಏಕಾಕ್ಷರಾತ್ಮಕವಾದುದೂ ಆದವು.

ಸಾಷ್ಟಾಕ್ಷರಾ ಗಾಯತ್ರೀ ಪ್ರಾತಃಸವನಮುದಯಚ್ಛನ್ನಾಶಕ್ನೋತ್ತ್ರಿಷ್ಟುಪ್ ತ್ರ್ಯಕ್ಷರಾ ಮಾಧ್ಯಂದಿನಂ ಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯ-

ಬ್ರವೀತ್ ತ್ರಿಷ್ಟುಪ್ ತಾಂ ವೈ ಮೈತೈರಷ್ಟಾಭಿರಕ್ಷರೈರುಪ-
ಸಂಧೇಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾ-
ಯತ್ರ್ಯೈ ಮಧ್ಯಂದಿನೇ ಯನ್ಮರುತ್ವತೀಯಸ್ಯೋತ್ತರೇ ಪ್ರತಿ-
ಪದೋ ಯಶ್ಚಾನುಚರಃ ಸೈಕಾದಶಾಕ್ಷರಾ ಭೂತ್ವಾ ಮಾಧ್ಯದಿನಂ
ಸವನಮುದಯಚ್ಛತ್ ।

ಇದಾನೀಂ ತ್ರಿಷ್ಟುಭೋಽಕ್ಷರತ್ರಯಾದಧಿಕಾನಾಮಕ್ಷರಾಣಾಂ ಪ್ರಾಪ್ತಿಪ್ರಕಾರಂ ದರ್ಶಯತಿ—ಯೇಯಮಷ್ಟಾಕ್ಷರಾ ಗಾಯತ್ರೀ ಸೇಯಂ ಪ್ರಾತಃಸವನಮುದಯಚ್ಛದುದ್ಯಮನಂ ನಿರ್ವಾಹಂ ತಸ್ಯ ಪ್ರಾತಃಸವನಸ್ಯಾಕರೋತ್॥ ಯಾ ತು ತ್ರಿಷ್ಟುಪ್ತ್ರ್ಯಕ್ಷರಾಽಕ್ಷರತ್ರಯಮಾತ್ರೇಣ ಯುಕ್ತಾ ಸತೀ ಮಾಧ್ಯಂದಿನಸವನಮುದ್ಯಂತಂ ನಿರ್ವೋಢುಂ ನಾಶಕ್ನೋತ್ತಾಮಶಕ್ತಾಂ ತ್ರಿಷ್ಟುಭಂ ದೃಷ್ಟ್ವಾ ಗಾಯತ್ರ್ಯೇವಮಬ್ರವೀತ್ ॥ ಆಯಾನಿ ತ್ವತ್ಸಾಹಾಯಾರ್ಥಮಹಮಾಗಚ್ಛಾನಿ ಮೇ ಮಮಾಪ್ಯಸ್ಮಿನ್ಮಾಧ್ಯಂದಿನೇ ಸವನೇ ಭಾಗೋಽಸ್ತು ಇತಿ । ತದ್ವಚನಮಂಗೀಕೃತ್ಯ ಸಾ ತ್ರಿಷ್ಟುಬೇವಮಬ್ರವೀತ್ ಗಾಯತ್ರೀಂ ತಾಂ ವೈ ಮಾ ತಾದೃಶೀಂ ತ್ರ್ಯಕ್ಷರಾಮೇವ ಮಾಂ ಸ್ವಕೀಯೈರೇತೈರಷ್ಟಾಭಿರಕ್ಷರೈರುಪಸಂಧೇಹಿ ಸಾ ಮಿಾಹ್ಯೇನ ಸಂಧಾನಂ ಕುರು ಪ್ರವಿಶೇತ್ಯರ್ಥಃ । ತದ್ವಚನಮಂಗೀಕೃತ್ಯ ಸಾ ಗಾಯತ್ರೀ ತಾಂ ತ್ರಿಷ್ಟುಭಮುಪದಧಾತ್ಸ್ವಕೀಯೈರಷ್ಟಾಭಿರಕ್ಷರೈಃ ಪ್ರಾವಿಶತ್ । ಕೋಽಸೌ ಗಾಯತ್ರ್ಯಾ ಲಬ್ಧೋ ಭಾಗ ಇತಿ ಸ ಉಚ್ಯತೇ । ಮರುತ್ವತೀಯಸ್ಯ ಶಸ್ತ್ರಸ್ಯೋತ್ತರೇ ಪ್ರತಿಪದೌ, ಆ ತ್ವಾ ರಥಮಿತ್ಯಸ್ಮಿನ್ಪ್ರಾರಂಭರೂಪೇ ತ್ರ್ಯೃಚೇ ಪ್ರಥಮಾಯಾ ಉತ್ತರೇ ಯೇ ದ್ವೇ ಋಚೌ ಪ್ರತಿಪದೌ ಪ್ರಾರಂಭರೂಪೇ ವಿದ್ಯೇತೇ ಯಶ್ಚೇದಂ ವಸೋ ಸುತಮಿತ್ಯನುಚರರೂಪಸ್ತ್ರ್ಯೃಚಸ್ತದೇವೈತದೃಕ್ಪಂಚಕಂ ಮಾಧ್ಯಂದಿನಸವನೇ ಗಾಯತ್ರ್ಯೈ ತ್ರಿಷ್ಟುಭಾ ದತ್ತಂ ತಾಶ್ಚ ಪಂಚರ್ಚೋ ಗಾಯತ್ರೀಚ್ಛಂದಸ್ಕಾಸ್ತತೋ ಗಾಯತ್ರೀಪ್ರವೇಶಾತ್ ಸಾ ತ್ರಿಷ್ಟುಬೇಕಾದಶಾಕ್ಷರಾ ಭೂತ್ವಾ ಮಾಧ್ಯಂದಿನಸವನಪ್ರಯೋಗಮುದಯಚ್ಛನ್ನಿರವಹತ್ ।

ಆಗ ಗಾಯತ್ರಿಯು ಅಷ್ಟಾಕ್ಷರಗಳೊಡನೆ ಪ್ರಾತಃಸವನದಲ್ಲಿ ಭಾಗವಹಿಸಲು ಸಮರ್ಥವಾಯಿತು. ಆದರೆ ತ್ರಿಷ್ಟುಪ್ಪು ತನ್ನ ಮೂರು ಅಕ್ಷರಗಳೊಡನೆ ಮಾಧ್ಯಂದಿನಸವನದಲ್ಲಿ ಭಾಗವಹಿಸಲಾಗಲಿಲ್ಲ. ಆಗ ಗಾಯತ್ರಿಯು ನಾನೂ ಸಹ ಮಾಧ್ಯಂದಿನ ಸವನದಲ್ಲಿ ಭಾಗವಹಿಸುತ್ತೇನೆ. ನನಗೂ ಅದರ ಯಜ್ಞಭಾಗವಿರಬೇಕೆಂದಿತು ಹಾಗೆ ಆಗಲಿ, ನೀನು ನಿನ್ನ ಅಷ್ಟಾಕ್ಷರಗಳೊಡನೆ ನನ್ನೊಂದಿಗೆ ಸೇರಿಕೋ ಎಂದು ತ್ರಿಷ್ಟುಪ್ಪು ಹೇಳಿತು. ಒಟ್ಟಿಗೆ ಏಕಾದಶಾಕ್ಷರಾತ್ಮಕವಾಗಿ ಮಾಧ್ಯಂದಿನಸವನಕ್ಕೆ ಸಹಾಯಕವಾಯಿತು.

ನಾಶಕ್ನೋಜ್ಜಗತ್ಯೇಕಾಕ್ಷರಾ ತೃತೀಯಸವನಮುದ್ಯಂತುಂ ತಾಂ
ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯ-
ಬ್ರವೀಜ್ಜಗತೀ ತಾಂ ವೈ ಮೈತೈರೇಕಾದಶಭಿರಕ್ಷರೈರುಪಸಂಧೇ-
ಹೀತಿ ತಥೇತಿ ತಾಮುಪಸಮದಧಾದೇತದ್ವೈ ತದ್ಗಾಯತ್ರ್ಯೈ

ತೃತೀಯ ಸವನೇ ಯದ್ವೈಶ್ವದೇವಸ್ಯೋತ್ತರೇ ಪ್ರತಿಪದೋ ಯಶ್ಚಾನುಚರಃ ಸಾ ದ್ವಾದಶಾಕ್ಷರಾ ಭೂತ್ವಾ ತೃತೀಯಸವನ- ಮುದಯಚ್ಛತ್ ।

ಅಥ ಜಗತ್ಯಾಃ ಸ್ವಕೀಯಾದೇಕಸ್ಮಾದಕ್ಷರಾದಧಿಕಾನಾಮಕ್ಷರಾಣಾಂ ಪ್ರಾಪ್ತಿ ಪ್ರಕಾ- ರಂ ದರ್ಶಯತಿ ॥ ವೈಶ್ವದೇವಶಸ್ತ್ರಸ್ಯ ಪ್ರತಿಪದನುಚರಾವುಪರಿಷ್ಟಾದುದಾಹರಿಷ್ಯೇತೇ ॥

ಜಗತಿಯು ಏಕಾಕ್ಷರಾತ್ಮಕವಾಗಿ ತೃತೀಯಸವನದ ನಿರ್ವಹಣಕ್ಕೆ ಅಸಮರ್ಥವಾಯಿತು. ಆಗ ಪುನಃ ಗಾಯತ್ರಿಯು ಅದರೊಂದಿಗೆ ತಾನು ಸೇರುವುದಾಗಿಯೂ ತನಗೆ ತೃತೀಯಸವನದಲ್ಲಿಯೂ ಭಾಗವಿರಬೇಕೆಂದೂ ಕೇಳಿತು. ಜಗತಿಯು ಹಾಗೇ ಆಗಲೆಂದು ಒಪ್ಪಲಾಗಿ ತೃತೀಯಸವನದಕಾಲದಲ್ಲಿ ಅದರೊಂದಿಗೆ ಸೇರಿಕೊಂಡಿತು. ಆಗ ದ್ವಾದಶಾಕ್ಷರಾತ್ಮಕವಾಗಿ ತೃತೀಯ ಸವನಕ್ಕೆ ಸಹಾಯಕವಾಯಿತು.

ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವದೇಕಾದಶಾಕ್ಷರಾ ತ್ರಿಷ್ಟುಬ್ ದ್ವಾದಶಾಕ್ಷರಾ ಜಗತೀ ।

ಉಕ್ತಮರ್ಥಂ ನಿಗಮಯತಿ ॥

ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ಏಕಾದಶಾಕ್ಷರಾತ್ಮಕವಾಗಿಯೂ, ಜಗತಿಯು ದ್ವಾದಶಾಕ್ಷ ರಾತ್ಮಕವಾಗಿಯೂ ಆಯಿತು.

ಸರ್ವೈಶ್ಛಂದೋಭಿಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ॥

ವೇದನಂ ಪ್ರಶಂಸತಿ—

ಈ ತತ್ವವನ್ನು ತಿಳಿದವನು ಸಮಾನವಾದ ಶಕ್ತಿಯನ್ನೂ ವೈಭವವನ್ನೂ ಪಡೆದಿರುವ ಈ ಛಂದಸ್ಸುಗಳ ಅನುಗ್ರಹದಿಂದ ಸಕಲ ಸಂಪತ್ತನ್ನೂ ಪಡೆಯುತ್ತಾನೆ ಎಂದು ಗಾಯತ್ರೀಸ್ತುತಿಯಿದೆ.

ಏಕಂ ವೈ ಸತ್ತ್ರೇಧಾಭವತ್ತಸ್ಮಾದಾಹುರ್ದಾತವ್ಯಮೇವಂ ವಿದುಷ ಇತ್ಯೇಕಂ ಹಿ ಸತತ್ತ್ರೇಧಾಭವತ್ ॥

ಗಾಯತ್ರೀಂ ವಿಶೇಷಣವಿಶೇಷೇಣ ಪ್ರಶಂಸತಿ—ತದ್ಗಾಯತ್ರ್ಯಾಃ ಸ್ವರೂಪಂ ಪೂರ್ವಂ ಚತುರಕ್ಷರರೂಪೇಣೈಕಮೇವ ಸತ್ಪಶ್ಚಾದಧಿಕಾಕ್ಷರಚತುಷ್ಟಯತ್ವಸಂಪಾದನೇನ ಸ್ವಕೀಯಾ- ನಾಮಷ್ಟಾಕ್ಷರಾಣಾಂ ತ್ರಿಷ್ಟುಬ್ಜಗತ್ಯೋಃ, ಪ್ರವೇಶೇನ ಚ ತ್ರೇಧಾಽಭವತ್ ॥ ಯಸ್ಮಾದೀ- ದೃಶೋ ಗಾಯತ್ರ್ಯಾ ಮಹಿಮಾ ತಸ್ಮಾದೇವಂ ವಿದುಷೇ ಗಾಯತ್ರೀಮಹಿಮಾನಂ ಜ್ಞಾತವತೇ

**ಪುರುಷಾಯ ಲೋಕೇ ಸುವರ್ಣಾದಿಕಂ ದಾತವ್ಯಮಿತ್ಯೇವಂ ಧರ್ಮರಹಸ್ಯವಿದಃ ಪ್ರಾಹುಃ । ಯಸ್ಮಾದ್ಗಾಯತ್ರೀಸ್ವರೂಪಮೇಕಮೇವ ಸತ್ತ್ರೇಧಾಽಭೂತ್ತಸ್ಮಾತ್ತದ್ವಿದೇ ದಾನಮುಚಿತಮೇ-ವೇತ್ಯುಪಸಂಹಾರಾರ್ಥೇ ಪುನರ್ವಚನಂ ॥**

ಈಗ ಗಾಯತ್ರೀಛಂದಸ್ಸನ್ನು ವಿಶೇಷವಾಗಿ ಪ್ರಶಂಸೆಮಾಡುವರು—ಪೂರ್ವದಲ್ಲಿ ಗಾಯತ್ರಿಗೆ ನಾಲ್ಕು ಅಕ್ಷರಗಳು ಮಾತ್ರವಿದ್ದುವು. ಅನಂತರ ತ್ರಿಷ್ಟುಪ್‌ಛಂದಸ್ಸಿನ ಒಂದು ಅಕ್ಷರ, ಜಗತೀಛಂದಸ್ಸಿನ ಮೂರು ಅಕ್ಷರಗಳು ಒಟ್ಟು ನಾಲ್ಕು ಅಕ್ಷರಗಳು ಸೇರಿ ಗಾಯತ್ರಿಗೆ ಎಂಟು ಅಕ್ಷರಗಳಾದವು. ಹೀಗೆ ತ್ರಿಷ್ಟುಪ್ ಮತ್ತು ಜಗತೀಛಂದಸ್ಸುಗಳ ಪ್ರವೇಶದಿಂದ ಗಾಯತ್ರಿಯ ಈ ಮಹಿಮೆಯನ್ನು ತಿಳಿದಿರುವ ಪುರುಷನಿಗೆ ಸುವರ್ಣಾದಿ ದಾನದಕ್ಷಿಣೆಗಳನ್ನು ಕೊಡಬೇಕು. ಈರೀತಿ ಧರ್ಮ ರಹಸ್ಯವನ್ನು ತಿಳಿದವರು ಹೇಳುವರು ಎಂದಭಿಪ್ರಾಯವು.

ತೈತ್ತಿರೀಯಸಂಹಿತೆಯಲ್ಲಿ ಈ ಕಥಾಭಾಗವು ಈರೀತಿ ವರ್ಣಿತವಾಗಿದೆ—

**ಕದ್ರೂಶ್ಚ ವೈ ಸುಪರ್ಣೀ ಚಾತ್ಮರೂಪಯೋರಸ್ಪರ್ಧೇತಾಗ್ಂ ಸಾ ಕದ್ರೂಸ್ಸುಪರ್ಣೀ-ಮಜಯತ್ಸಾಬ್ರವೀತ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀ-ಣೀಷ್ವೇತೀಯಂ ವೈ ಕದ್ರೂರಸೌ ಸುಪರ್ಣೀ ಛಂದಾಗ್ಂಸಿ ಸೌಪರ್ಣೇಯಾಸ್ಸಾಬ್ರವೀದಸ್ಮೈ ವೈ ಪಿತರೌ ಪುತ್ರಾನ್ ಬಿಭೃತಸ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀಣೀಷ್ವೇತಿ ಮಾ ಕದ್ರೂರವೋಚದಿತಿ ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತ-ಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋಪನಮತಿ ತ್ರಿಷ್ಟುಗುದಪ-ತತ್ತ್ರಯೋದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತ ಏತತ್ಖಲು ವಾವ ತಪ ಇತ್ಯಾಹುರ್ಯಸ್ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತು-ರಕ್ಷರಾ ಸತ್ಯಜಯಾ ಜ್ಯೋತಿಷಾ ತಮುಸಾ ತಮಸ್ಯಾ ಅಜಾಭ್ಯರುಂಧ ತದಜಾಯಾ ಅಜತ್ವಗ್ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾ-ಯೇತಿ ಯದೇವಾದಸ್ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮುಖೇನ ಸಮಗೃಹ್ಣಾತ್ತದಧಯತ್ತ-ಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ।** (ತೈ. ಸಂ. ೬-೧-೬-೧ ರಿಂದ ೩)

ಕದ್ರು ಮತ್ತು ಸುಪರ್ಣೀ ಎಂಬಿಬ್ಬರಿಗೂ ಸಹ ತಮ್ಮ ರೂಪದ ವಿಷಯದಲ್ಲಿ ಯಾರಧಿಕರೆಂಬ ಸ್ಪರ್ಧೆಯುಂಟಾಯಿತು. ಕದ್ರುವೇ ಜಯಿಸಿ ಸುಪರ್ಣಿಯನ್ನು ಸೋಲಿಸಿ ತನ್ನ ಅಧೀನದಲ್ಲಿರಿಸಿಕೊಂಡಳು. ಆಗ ಸೋತ ಸುಪರ್ಣಿಯನ್ನು ಕುರಿತು ಕದ್ರುವೇ ಜಯಿಸಿ ಸುಪರ್ಣಿಯನ್ನು ಸೋಲಿಸಿ ತನ್ನ ಅಧೀನದಲ್ಲಿರಿಸಿಕೊಂಡಳು. ಮೂರನೇ ಸ್ವರ್ಗಭಾಗದಲ್ಲಿ ಸೋಮವು ಇದೆ. ಅದನ್ನು ತಂದುಕೊಟ್ಟು ನೀನು ಬಿಡುಗಡೆಯನ್ನು ಹೊಂದಬಹುದು ಎಂದು ಭರವಸೆಯನ್ನು ಕೊಟ್ಟಳು. ಕದ್ರುವೇ ಈ ಪೃಥ್ವಿಯು; ಸುಪರ್ಣಿಯೇ ಅಂತರಿಕ್ಷವು. ಛಂದಸ್ಸುಗಳೇ ಸುಪರ್ಣಿಯ ಸಂತಾನಗಳು. ತಾಯಿಯ ಸೇವೆಗಾಗಿಯೇ ಪೋಷಿಸಲ್ಪಡತಕ್ಕ ಮಕ್ಕಳುಗಳ ಸಹಾಯದಿಂದ ನೀನು ಸೋಮವನ್ನು ತರಿಸಿಕೊಟ್ಟು ನಿನ್ನ ಮುಕ್ತಿ

ಯನ್ನು ಪಡೆಯಬಹುದೆಂದು ಕದ್ರುವು ಸುಪರ್ಣಿಗೆ ಹೇಳಿದಳು. ಆಗ ಅದೇರೀತಿ ಸುಪರ್ಣಿಯೂ ಸಹ ತನ್ನ ಮಕ್ಕಳಿಗೆ ಈ ಸಂದರ್ಭವನ್ನು ತಿಳಿಸಿದಳು. ಆಗ ಹದಿನಾಲ್ಕು ಅಕ್ಷರಾತ್ಮಕವಾದ ಜಗತಿಯು ಅಂತರಿಕ್ಷಕ್ಕೆ ಹಾರಿತು. ಆದರೆ ಸೋಮವನ್ನು ಪಡೆಯಲಾಗದೇ ಹಿಂತಿರುಗಿತು. ಹದಿನಾಲ್ಕರಲ್ಲಿ ಎರಡಕ್ಷರಗಳನ್ನು ಕಳೆದುಕೊಂಡಿತು ಮತ್ತು ಯಜ್ಞಪಶುಗಳೊಡನೆಯೂ ಹಿಂತಿರುಗಿತು. ಆದುದರಿಂದಲೇ ಜಗತೀಛಂದಸ್ಸು ಪಶುಸಂಪತ್ಸಮೃದ್ಧಿಯಿಂದ ಕೂಡಿದೆ. ಪಶುಸಂಪತ್ಸಮೃದ್ಧನಾದ ಪುರುಷನು ಅಭಿಷಿಕ್ತನಾಗಲರ್ಹನಾಗುತ್ತಾನೆ. ನಂತರ ಹದಿಮೂರು ಅಕ್ಷರಗಳೊಡನೆ ಕೂಡಿದ ತ್ರಿಷ್ಟುಪ್ ಛಂದಸ್ಸು ಅಂತರಿಕ್ಷಕ್ಕೆ ಹಾರಿತು. ಅದಕ್ಕೂ ಕೂಡ ಎರಡು ಅಕ್ಷರಗಳು ಹೀನವಾಗಿ ಸೋಮವು ಲಭಿಸಲಿಲ್ಲ. ಆದರೆ ಅದು ಹಿಂತಿರುಗಿ ಬರುವಾಗ ಯಜ್ಞಕ್ಕೆ ಉಪಯುಕ್ತವಾದ ದಕ್ಷಿಣೆಯೊಡನೆಯೂ, ತಪಸ್ಸಾಮಗ್ರಿಗಳೊಡನೆಯೂ ಹಿಂತಿರುಗಿತು. ಆದುದರಿಂದ ಲೋಕವ್ಯವಹಾರದಲ್ಲಿ ಮಾಧ್ಯಂದಿನಸವನಕಾಲದಲ್ಲಿ ದಕ್ಷಿಣೆಯು ಅರ್ಪಿತವಾಗುತ್ತದೆ. ಯಾವನು ತನ್ನ ಸಂಪತ್ತನ್ನು ದಾನರೂಪದಲ್ಲರ್ಪಿಸುವನೋ ಅದೇ ತಪಃಕ್ರಿಯೆಯೆನ್ನಿಸಿಕೊಳ್ಳುವುದು. ಅನಂತರ ನಾಲ್ಕು ಅಕ್ಷರಾತ್ಮಕವಾದ ಗಾಯತ್ರಿಯು ತನ್ನೊಡನೆ ಜ್ಯೋತೀರೂಪವಾದ ಒಂದು ಅಜದೊಡನೆ ಅಂತರಿಕ್ಷಾಭಿಮುಖವಾಗಿ ಹೊರಟಿತು. ಆ ಅಜವು ಗಾಯತ್ರಿಗೆ ಸೋಮವು ಲಭಿಸುವಂತೆ ಮಾಡಿತು. ಆಗ ಗಾಯತ್ರಿಯು ಸೋಮವನ್ನು ತೆಗೆದುಕೊಂಡು ಬರುವಾಗ ತ್ರಿಷ್ಟುಪ್ ಮತ್ತು ಜಗತಿಯು ಅಲ್ಲ ಬಿಟ್ಟುಬಂದ ನಾಲ್ಕು ಅಕ್ಷರಗಳನ್ನೂ ಹಿಂದಕ್ಕೆ ತೆಗೆದುಕೊಂಡು ಬಂದುದರಿಂದ ತನ್ನ ಪೂರ್ವಸ್ಥಿತಿಯಲ್ಲಿದ್ದ ನಾಲ್ಕು ಅಕ್ಷರಗಳೊಡನೆ ಈ ನಾಲ್ಕು ಅಕ್ಷರಗಳೂ ಸೇರಿಕೊಂಡು ಒಟ್ಟು ಅಷ್ಟಾಕ್ಷರಾತ್ಮಕವಾಯಿತು. ಹೀಗೆ ಛಂದಸ್ಸುಗಳಲ್ಲೆಲ್ಲಾ ಅತಿ ಚಿಕ್ಕದಾದರೂ ಸಹ ಯಜ್ಞಕ್ಕೆ ಅತಿ ಮುಖ್ಯವಾದ ಸೋಮವನ್ನು ತಂದುದಕ್ಕಾಗಿ ಯಜ್ಞಕಾರ್ಯದಲ್ಲಿ ಅತಿ ಪ್ರಧಾನವಾದ ಸ್ಥಾನವನ್ನು ಹೊಂದಿದೆಯೆಂದು ಬ್ರಹ್ಮವಾದಿಗಳ ಮತವಾಗಿದೆ. ಆದುದರಿಂದಲೇ ಅದು ಛಂದಸ್ಸುಗಳಲ್ಲೆಲ್ಲಾ ಅತ್ಯಂತ ತೇಜಸ್ವಿಯಾಗಿದೆ. ಅದು (ಪಕ್ಷಿರೂಪವಾದ ಗಾಯತ್ರಿಯು) ಎರಡು ಪಾದಗಳಿಂದಲೂ ಎರಡು ಸವನಗಳನ್ನೂ, ಮುಖದಿಂದ ಒಂದನ್ನೂ ತಂದಿತು. ಮುಖದಿಂದ ತಂದ ಸವನವನ್ನು ಪಾನ ಮಾಡಿತು. ಆದುದರಿಂದಲೇ ಪ್ರಾತಃಸವನವೂ, ಮಾಧ್ಯಂದಿನಸವನವೂ ಶುಭ್ರವಾದ ಸೋಮಯುಕ್ತವಾಗಿಯೂ ಮತ್ತು ತೃತೀಯಸವನವು ಋಜೀಷ (ಹಿಂಡಿದ ರಸವುಳ್ಳದ್ದು) ಯುಕ್ತವಾಗಿಯೂ ಇರುತ್ತದೆ. ಇದು ತೈತ್ತಿರೀಯಸಂಹಿತೆಯಲ್ಲಿ ಉಕ್ತವಾಗಿರುವ ಕ್ರಮ. ಐತರೇಯಬ್ರಾಹ್ಮಣದಲ್ಲಿ ಈ ವಿವರಣೆಯು ಕೊಂಚ ವ್ಯತ್ಯಸ್ತವಾಗಿದೆ. ಇದು ಎರಡು ಪ್ರಕರಣಗಳಲ್ಲಿ ಹೇಳಲ್ಪಟ್ಟಿದೆ.



*English Translation*

**(How Trishtubh and Gayatri obtained their proper number of Syllables)**

The two other metres said to the Gayatri, "That which thou hast obtained of us, viz., our syllables, should be restored to us." The Gayatri answered, "No". They said "As far as the right of possession is concerned, they (those syllables) are ours." They went to ask the gods. The gods said, "as far as the right of possession is concerned, they are yours." Thence it comes, that even here (in affairs of daily life), people say when they quarrel, "as far as the right of possession is concerned, this is ours."

Hence the Gayatri became possessed of eight syllables for she did not return the four which she had taken from the others), the Trishtubh had three, and the Jagati only one syllable.

The Gayatri lifted the morning libation up to the gods ; but the Trishtubh was unable to lift up the midday libation. The Gayatri said to her, "I will go up with the midday libation ; let me have a share in it. The Trishtubh consented, and said, "put upon me who consists of three syllables, these eight syllables. The Gayatri consented and put upon her eight syllables. That is the reason that at the midday libation the two last verses of the triplet at the beginning of the Marutvatiya Shastra the first verse being in the Anushtubh metre, and its sequel (the anuchara triplet) belong to the Gayatri. After having obtained thns eleven syllables, she lifted the midday libation up (to heaven).

The Jagati which had only one syllable, was unable to lift the third libation up. The Gayatri said to her, "I will also go up with thee ; let me have a share in this libation." The Jagati consented and said, "put upon me those eleven syllables of the Gayatri and Trishtubh joined. She consented and put those eleven syllables upon the Jagati. That is the reason, that, at the evening libation, the two latter verses of the triplet with which the Vais' vadeva Shastra commences (pratipad), and its sequel (anuchara) belong to the Gayatri, was able to lift the evening libation up to heaven. Thence it comes that the Gayatri obtained eight, the Trishtubh eleven, and the Jagati twelve syllables.

He who has such a knowledge, prospers through all metres which are of equal strength and of the same quality. What was one, that became three-fold. Thence they say, only he who has this knowledge, that what was one, became three-fold, should receive presents.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಚತುರ್ಥಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿಮೂರನೆಯ ಅಧ್ಯಾಯದಲ್ಲಿ ನಾಲ್ಕನೆಯ ಖಂಡವು
ಸಮಾಪ್ತವಾದುದು.



# ಅಥ ತ್ರಯೋದಶಾಧ್ಯಾಯೇ ಪಂಚಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು



[ತೃತೀಯ ಸವನದಲ್ಲಿ ಆದಿತ್ಯರು ಮತ್ತು ಸವಿತೃಗಳಿಗೆ ಭಾಗವು ಹೇಗೆ ಲಭಿಸಿತೆಂಬ ವಿಚಾರ ಮತ್ತು ತೃತೀಯ ಸವನದಲ್ಲಿ ವಾಯು ಮತ್ತು ದ್ಯಾವಾಪೃಥಿವಿಗಳ ಭಾಗವು]



ಏವಂ ತಾವತ್ತೃತೀಯಸವನಮವತಾರಯಿತುಂ ಸೋಮಾಹರಣಕಥಾ ವರ್ಣಿತಾ ॥ ಅಥ ತೃತೀಯಸವನಮುಚ್ಯತೇ । ತತ್ರ ವೈಶ್ವದೇವಾಗ್ನಿಮಾರುತಯೋಃ ಕ್ಲೃಪ್ತಿಃ ಸಂಗೃಹ್ಯತೇ ।

" ಸ್ಯಾದ್ವೈಶ್ವದೇವೇ ಸವಿತುಃ ಪುನಸ್ತು ।
ದ್ಯಾವಾಪೃಥಿವ್ಯಾರ್ಭವ ವೈಶ್ವದೇವಿಕಾ ॥
ವೈಶ್ವಾನರೀಯಂ ಮರುತಾಂ ಚ ಶಂಸನಂ
ಸ್ಯುರ್ಜಾತವೇದಸ್ಯಮಿಹಾಽಽಗ್ನಿಮಾರುತೇ " ॥

ತೇ ದೇವಾ ಅಬ್ರುವನ್ನಾದಿತ್ಯಾನ್ಯುಷ್ಮಾಭಿರಿದಂ ಸವನಮುದ್ಯಚ್ಛಾಮೇತಿ ತಥೇತಿ ತಸ್ಮಾದಾದಿತ್ಯಾರಂಭಣಂ ತೃತೀಯಸವನಮಾದಿತ್ಯಗ್ರಹಃ ಪುರಸ್ತಾತ್ತಸ್ಯ ॥

ತೃತೀಯಸವನಸ್ಯಾಽಽದಿತ್ಯಗ್ರಹಂ ವಿಧತ್ತೇ—ತೃತೀಯಸವನಂ ನಿರ್ವಹಂತ್ಯಾ ಜಗತ್ಯಾ ಅಕ್ಷರಸಂಪೂರ್ತಿಮನವಗತವಂತಃ । ತೇ ದೇವಾಃ ಆದಿತ್ಯಾನ್ದ್ವಾದಶಸಂಖ್ಯಾಕಾನ್ಪ್ರತ್ಯೇವಮಬ್ರುವನ್ ॥ ಹೇ ಆದಿತ್ಯಾ ಯುಷ್ಮಾಭಿಃ ಸಹಿತಾ ವಯಮಿ ತೃತೀಯಸವನಮುದ್ಯಚ್ಛಾಮ ನಿರ್ವಾಹಂ ಕರವಾಮಹಾ ಇತಿ ॥ ಆದಿತ್ಯಾಶ್ಚ ತಥೇತ್ಯಂಗೀಕೃತವಂತಃ ॥ ಯಸ್ಮಾದಾರಂಭೇ ದೇವೈರಾದಿತ್ಯಸಾಹಿತ್ಯಂ ಪ್ರಾರ್ಥಿತಂ ತಸ್ಮಾದಾದಿತ್ಯಾರಂಭಣಂ ತೃತೀಯಸವನಮಾದಿತ್ಯಗ್ರಹ ಆರಂಭಣೇ ಸರ್ವೇಷಾಂ ಗ್ರಹಾಣಾಮಾದೌ ಯಸ್ಯ ಸವನಸ್ಯ ತದಿದಮಾದಿತ್ಯಾರಂಭಣಂ ಸ ಏವಾರ್ಥ ಆದಿತ್ಯಗ್ರಹ ಇತ್ಯಾದಿನಾ ಸ್ಪಷ್ಟೀಕ್ರಿಯತೇ ॥ ತಸ್ಯ ತೃತೀಯಸವನಸ್ಯ ಪುರಸ್ತಾದಾದಾವಾದಿತ್ಯದೇವತಾಕೋ ಗ್ರಹಃ ಕರ್ತವ್ಯಃ ।

ತೃತೀಯಸವನದಲ್ಲಿ ಆದಿತ್ಯಗ್ರಹದ ವಿಷಯವನ್ನು ತಿಳಿಸುವರು—ಹಿಂದೆ ಹೇಳಿದಂತೆ ದೇವತೆಗಳು ಜಗತೀಛಂದಸ್ಸಿನ ಅಕ್ಷರಸಂಖ್ಯೆಯನ್ನು ತಿಳಿದರು. ಈ ಅಕ್ಷರಸಂಖ್ಯೆಯು ಹನ್ನೆರಡಿರುವುದರಿಂದಲೂ ಆದಿತ್ಯನು (ಸೂರ್ಯನ) ಹನ್ನೆರಡು ಹೆಸರು

ಗಳಿಂದ ಪ್ರಸಿದ್ಧನಾಗಿರುವುದರಿಂದಲೂ ತೃತೀಯಸವನದಲ್ಲಿ ಜಗತೀಛಂದಸ್ಸಿನ ಪ್ರಾಧಾನ್ಯತೆ ಇರುವುದರಿಂದಲೂ ದೇವತೆಗಳು ಆದಿತ್ಯನನ್ನು ಸಮೀಪಿಸಿ—ಎಲೈ ಆದಿತ್ಯನೇ, ನಿನ್ನ ಸಹಾಯದಿಂದ ನಾವು ತೃತೀಯಸವನವನ್ನು ನಿರ್ವಹಿಸುವಂತಾಗಲಿ ಎಂದು ಪ್ರಾರ್ಥಿಸಿದರು. ಆದಿತ್ಯನು ಹಾಗೆಯೇ ಆಗಲೆಂದು ಒಪ್ಪಿದನು. ಆದ್ದರಿಂದ ತೃತೀಯಸವನದಲ್ಲಿ ಆದಿತ್ಯಗ್ರಹವು ಮೊದಲು ಪ್ರಾರಂಭಿಸಲ್ಪಡುವುದು. ಎಂದರೆ ತೃತೀಯಸವನದಲ್ಲಿ ಆಚರಿಸಲ್ಪಡುವ ಎಲ್ಲಾ ಗ್ರಹಗಳಿಗಿಂತಲೂ ಪ್ರಾರಂಭದಲ್ಲಿ ಆದಿತ್ಯಗ್ರಹವು ಉಪಯೋಗಿಸಲ್ಪಡುವುದು.

## ಯಜತ್ಯಾದಿತ್ಯಾಸೋ ಅದಿತಿರ್ಮಾದಯಂತಾಮಿತಿ ಮದ್ವತ್ಯಾ ರೂಪ-ಸಮೃದ್ಧಾ್ಯ ಮದ್ವದ್ವೈ ತೃತೀಯಸವನಸ್ಯ ರೂಪಂ ।

**ತಸ್ಯ ಗ್ರಹಸ್ಯ ಯಾಜ್ಯಾಂ ವಿಧತ್ತೇ— ಅದಿತೇಃ ಪುತ್ರಾ ಆದಿತ್ಯಾಸ್ತೇ ಚ ತನ್ಮಾತಾದಿತಿಶ್ಚ ಮಾದಯಂತಾಂ ಗ್ರಹೇಣಾನೇನ ತುಷ್ಯಂತು ॥ ಇತ್ಯೇಷಾ ಯಾಜ್ಯಾ ಮದ್ವತೀ ॥ ಮದೀ ಹರ್ಷ ಇತ್ಯಸ್ಮಾದ್ಧಾತೋರುತ್ಪನ್ನೇನ ಮಚ್ಛಬ್ದೇನ ಯುಕ್ತಾ ॥ ತಸ್ಯಾಮಾದಿತ್ಯಾನಾಮದಿತೇಶ್ಚ ಹರ್ಷವರ್ಣನಾದ್ವಿವಕ್ಷಿತದೇವತಾವಿಷಯತ್ವೇನ ರೂಪಸಮೃದ್ಧಾ ॥ ತೃತೀಯಸವನಸ್ಯ ಸ್ವರೂಪಮಪಿ ಮದ್ವದ್ವೈ ಹರ್ಷೋಪೇತಮೇವ ತತ್ಸಮಾಪ್ತೌ ದೇವತಾನಾಂ ಯಜಮಾನಾನಾಮೃತ್ವಿಜಾಂ ಹರ್ಷೋತ್ಪತ್ತೇಃ ।**

ಈ ಆದಿತ್ಯಗ್ರಹದ ಯಾಜ್ಯಾಮಂತ್ರವನ್ನು ವಿವರಿಸುವರು—ಇಲ್ಲಿ **ಆದಿತ್ಯಾಸಃ** ಎಂಬ ಪದಪ್ರಯೋಗವಿರುವುದು. ಎಂದರೆ **ಅದಿತೇಃ ಪುತ್ರಾಃ ಆದಿತ್ಯಾಃ** ಅದಿತಿಯ ಪುತ್ರರಿಗೆ **ಆದಿತ್ಯಾಃ** ಅಥವಾ **ಆದಿತ್ಯಾಸಃ** ಎಂದು ಹೆಸರು. ಈ ಆದಿತ್ಯರೂ ಅವರ ತಾಯಿಯಾದ ಅದಿತಿಯೂ ಈ ಗ್ರಹಸಂಬಂಧವಾದ ಯಾಜ್ಯಾಮಂತ್ರದಿಂದ ಸಂತುಷ್ಟರಾಗಲಿ ಎಂದು **ಆದಿತ್ಯಾಸೋ ಅದಿತಿರ್ಮಾದಯಂತಾಂ** ಈ ಯಾಜ್ಯಾಮಂತ್ರದ ಅರ್ಥವು. (ಋ. ಸಂ. ೭-೫೧-೨) **ಮದೀ-ಹರ್ಷೇ** ಎಂಬ ಧಾತುವಿನಿಂದ ನಿಷ್ಪನ್ನವಾದ **ಮಾದಯಂತಾಂ** ಎಂಬ ಪದವು ಈ ವಿಷಯಕ್ಕೆ ಸಮಯೋಚಿತವಾಗಿದೆ. ಏಕೆಂದರೆ ತೃತೀಯಸವನದ ಮುಖ್ಯೋದ್ದೇಶವು ಸಂಬಂಧಪಟ್ಟ ದೇವತೆಗಳಿಗೆ ಹರ್ಷವನ್ನುಂಟುಮಾಡುವುದೇ ಆಗಿರುವುದು. ಈ ವಿಧವಾದ ರೂಪಸಮೃದ್ಧಿಯುಕ್ತವಾದ ಮಂತ್ರಪಠನದಿಂದ ಯಜಮಾನನಿಗೂ ಯಜ್ಞದಲ್ಲಿ ಪಾತ್ರವಹಿಸುವ ಋತ್ವಿಕ್ಕುಗಳಿಗೂ ಹರ್ಷವುಂಟಾಗುವುದು.

## ನಾನುವಷಟ್ಕರೋತಿ ನ ಭಕ್ಷಯತಿ ಸಂಸ್ಥಾ ವಾ ಏಷಾ ಯದನುವಷ-ಟ್ಕಾರಃ ಸಂಸ್ಥಾಭಕ್ಷಃ ಪ್ರಾಣಾ ಆದಿತ್ಯಾ ನೇತ್ಪ್ರಾಣಾನ್ಸಂಸ್ಥಾ-ಪಯಾನೀತಿ ॥

**ಇತರಗ್ರಹವತ್ಪ್ರಸಕ್ತಾವನುವಷಟ್ಕಾರಭಕ್ಷೌ ಪ್ರತಿಷೇಧತಿ — ಅನುವಷಟ್ಕಾರಭಕ್ಷಯೋರ್ಗ್ರಹಸಮಾಪ್ತಿರೂಪತ್ವಾದಾದಿತ್ಯಾನಾಂ ಚ ಪ್ರಾಣರೂಪತ್ವಾದಾದಿತ್ಯಗ್ರಹಂ ಸಮಾಪಯನ್ನಹಂ ಪ್ರಾಣಾನೇವ ಸಮಾಪಿತವಾನ್ಭವಿಷ್ಯಾಮೀತಿ ಭೀತ್ವಾ ತತ್ಸಮಾಪ್ತಿರೂಪಾನುವಷಟ್ಕಾರಭಕ್ಷೌ ನ ಕುರ್ಯಾತ್ ॥ ನೇದಿತಿ ಭಯದ್ಯೋತನಾರ್ಥೋ ನಿಪಾತಃ ॥**

ಇತರ ಗ್ರಹಗಳ ವಿಷಯದಲ್ಲಿ ಆಚರಿಸುವಂತೆ ಆದಿತ್ಯಗ್ರಹದ ವಿಷಯದಲ್ಲಿ ಅನುವಷಟ್ಕಾರವನ್ನೂ ಹವಿಶ್ಶೇಷಭಕ್ಷಣವನ್ನೂ ನಿಷೇಧಿಸುವರು— ಅನುವಷಟ್ಕಾರವು ಹೋಮಶೇಷಭಕ್ಷವೂ ಗ್ರಹಸಮಾಪ್ತಿಯನ್ನು ಸೂಚಿಸುವವು. ಎಂದರೆ ಈ ಎರಡನ್ನೂ ಗ್ರಹಸಮಾಪ್ತಿಯಾದಮೇಲೆ ಆಚರಿಸುವರು. ಆದರೆ ಇಲ್ಲಿ ಆದಿತ್ಯರು ಪ್ರಾಣಿಗಳಿಗೆ ಪ್ರಾಣರೂಪರಾಗಿರುವುದರಿಂದ ಆದಿತ್ಯಗ್ರಹ ವಿಲ್ಲದಿದ್ದರೆ ಎಂದರೆ ಈ ಗ್ರಹಸಮಾಪ್ತಿಯಾದರೆ ಆದಿತ್ಯರ ಆಧಾರವಿಲ್ಲದೆ ಪ್ರಾಣಿಗಳು ಬದುಕುವಂತಿಲ್ಲ. ಆದ್ದರಿಂದ ಈ ಗ್ರಹದ ಸಮಾಪ್ತಿಯನ್ನು ಮಾಡದೆ ಯಾವಾಗಲೂ ಪ್ರಾಣಿಗಳಿಗೆ ಆಧಾರವಿರಲೆಂಬ ಉದ್ದೇಶದಿಂದ ಇದರ ಸಮಾಪ್ತಿಸೂಚಕವಾದ ಅನುವಷಟ್ಕಾರವನ್ನೂ ಶೇಷಭಕ್ಷವನ್ನೂ ಇಲ್ಲಿ ನಿಷೇಧಿಸಲಾಗಿದೆ. ಆದ್ದರಿಂದ ಇವೆರನ್ನೂ ಇಲ್ಲಿ ಮಾಡಕೂಡದು ಈ ನಿಷೇಧಾರ್ಥ ವನ್ನು ವತ್ತಿ ಹೇಳುವುದಕ್ಕಾಗಿ ಇಲ್ಲಿ ನೇತ್ (ನ+ಇತ್) ಎಂಬ ಶಬ್ದಪ್ರಯೋಗವಿರುವುದು.

ತ ಆದಿತ್ಯಾ ಅಬ್ರುವನ್ಸವಿತಾರಂ ತ್ವಯೇದಂ ಸಹ ಸವನಮುದ್ಯಚ್ಛಾ-
ಮೇತಿ ತಥೇತಿ ತಸ್ಮಾತ್ಸಾವಿತ್ರೀಂ ಪ್ರತಿಪದ್ಭವತಿ ವೈಶ್ವದೇವಸ್ಯ
ಸಾವಿತ್ರಗ್ರಹಃ ಪುರಸ್ತಾತ್ತಸ್ಯ ಯಜತಿ ದಮೂನಾ ದೇವಃ
ಸವಿತಾ ವರೇಣ್ಯ ಇತಿ ಮದ್ವತ್ಯಾ ರೂಪಸಮೃದ್ಧ್ಯೈ ಮದ್ವದ್ವೈ
ತೃತೀಯಸವನಸ್ಯ ರೂಪಂ ನಾನುವಷಟ್ಕರೋತಿ ನ ಭಕ್ಷಯತಿ
ಸಂಸ್ಥಾ ವಾ ಏಷಾ ಯದನುವಷಟ್ಕಾರಃ ಸಂಸ್ಥಾ ಭಕ್ಷಃ
ಪ್ರಾಣಃ ಸವಿತಾ ನೇತ್ಪ್ರಾಣಂ ಸಂಸ್ಥಾಪಯಾನೀತಿ ॥

ಅಥ ಸಾವಿತ್ರಗ್ರಹಂ ವೈಶ್ವದೇವಶಸ್ತ್ರಸ್ಯ ಪ್ರತಿಪದಂ ಚ ವಿಧತ್ತೇ—ವೈಶ್ವದೇವಶಸ್ತ್ರಸ್ಯ ತತ್ಸವಿತುರ್ವೃಣೀಮಹ. ಇತ್ಯೇಷಾ ಸವಿತೃದೇವತಾಕಾ ಪ್ರತಿಪತ್ಪ್ರಾರಂಭರೂಪಾ ಕರ್ತವ್ಯಾ ದಮೂನಾ ದೇವ ಇತ್ಯಾದಿಕಾ ಗ್ರಹಸ್ಯ ಯಾಜ್ಯಾ॥ಸಾ ಚ ಸಂಹಿತಾಯಾಮನಾಮ್ನಾತತ್ವಾತ್ಸೂ-ತ್ರಕಾರೇಣ ಪಠಿತಾ ॥ ತಸ್ಯಾಂ ಚ, ಅಮದನ್ನೇನ ಮಿಷ್ಟಯ ಇತಿ ಮದಿಧಾತುಃ ಪ್ರಯುಕ್ತಃ । ತಸ್ಮಾದಿಯಂ ಮದ್ವತೀ ॥ ಅನ್ಯತ್ಸರ್ವಮಾದಿತ್ಯಗ್ರಹವದ್ವ್ಯಾಖ್ಯೇಯಂ ॥

ಈಗ ಸವಿತೃದೇವತಾಕವಾದ ಗ್ರಹವನ್ನೂ ವೈಶ್ವದೇವಶಸ್ತ್ರಗಳ ಮೊದಲಿನ ಮಂತ್ರವನ್ನೂ ವಿವರಿಸುವರು—ಆದಿತ್ಯರು ಸವಿತೃದೇವನನ್ನು ಕುರಿತು—ಎಲೈ ಸವಿತೃವೇ, ನಾವು ನಿನ್ನೊಡನೆ ಸೇರಿ ಈ ತೃತೀಯಸವನವನ್ನು ನೆರವೇರಿಸುವೆವು ಎಂದು ಹೇಳಲು ಅದಕ್ಕೆ ಸವಿತೃವು ಹಾಗೆಯೇ ಆಗಲೆಂದೊಪ್ಪಿದನು. ಆದ್ದರಿಂದ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ ಪ್ರಾರಂಭದಲ್ಲಿ ಸವಿತೃದೇವತಾಕವಾದ ತತ್ಸವಿತುರ್ವೃಣೀಮಹೇ (ಋ. ಸಂ. ೫-೮೨-೧) ಎಂಬ ಪ್ರಾರಂಭಮಂತ್ರವನ್ನು ಪಠಿಸಬೇಕು. ದಮೂನಾ ದೇವಃ ಎಂಬ ಪದಗಳಿಂದ ಯುಕ್ತವಾದುದು ಈ ಗ್ರಹದ ಯಾಜ್ಯಾಮಂತ್ರವು. ಈ ಮಂತ್ರವು ಋಕ್ಸಂಹಿತೆಯಲ್ಲಿ ಇಲ್ಲದಿರುವುದರಿಂದ ಇದು ಸೂತ್ರಕಾರರಾದ ಆಶ್ವಲಾಯನರಿಂದ ಇಲ್ಲಿ ಉಕ್ತವಾಗಿದೆ—

ದಮೂನಾ ದೇವಃ ಸವಿತಾ ವರೇಣ್ಯೋಂ ದಧದ್ರತ್ನಾ ದಕ್ಷಪಿತೃಭ್ಯೋ ಆಯೂನಿ ।
ಪಿಬಾತ್ಸೋಮಂ ಮಮದನ್ನೇನಮಿಷ್ಟಯಃ ಪರಿಜ್ಮಾ ಚಿದ್ರಮತೇ ಅಸ್ಯ ಧರ್ಮಣಿ ॥
(ಆ. ಶ್ರೌ. ಸೂ. ೫-೧೮)

ಎಂಬುದೇ ಆ ಮಂತ್ರವು. ಇದು ಅಥರ್ವವೇದದಲ್ಲಿ ಕೆಲವು ವ್ಯತ್ಯಾಸಗಳೊಡನೆ ಪಠಿಸಲ್ಪಟ್ಟಿದೆ. ಇದರಲ್ಲಿ **ಅಮದನ್ನೇನಮಿಷ್ಟಯಃ** ಎಂಬಲ್ಲಿ ಮದಿಧಾತುವಿನ ಪ್ರಯೋಗವಿರುವುದರಿಂದ ಮತ್ತು ಅಥವಾ ಹರ್ಷ ಎಂಬರ್ಥವು ಸೂಚಿತವಾಗುವುದು. ಉಳಿದ ವಿಷಯವೆಲ್ಲವೂ ಆದಿತ್ಯಗ್ರಹದಂತೆಯೇ ಇದಕ್ಕೂ ಅನ್ವಯಿಸುವವು.

**ಉಭೇ ವಾ ಏಷ ಏತೇ ಸವನೇ ವಿಪಿಬತಿ ಯತ್ಸವಿತಾ ಪ್ರಾತಸ್ಸವನಂ ಚ ತೃತೀಯಸವನಂ ಚ ತದ್ಯತ್ಪಿಬವತ್ಸಾವಿತ್ರ್ಯೈ ನಿವಿದಃ ಪದಂ ಪುರಸ್ತಾದ್ಭವತಿ ಮದ್ವದುಪರಿಷ್ಟಾದುಭಯೋರೇವೈನಂ ತತ್ಸವನಯೋರಾಭಜತಿ ಪ್ರಾತಃಸವನೇ ಚ ತೃತೀಯಸವನೇ ಚ ॥**

ಅಥ ನಿವಿತ್ಪದದ್ವಾರಾ ಸಾವಿತ್ರಗ್ರಹಂ ಪ್ರಶಂಸತಿ—ಗ್ರಹಸ್ಯ ದೇವತಾ ಯಃ ಸವಿತಾಽಸ್ತಿ, ಏಷ ದೇವಃ ಪ್ರಾತಃಸವನಂಚ ತೃತೀಯಸವನಂ ಚೇತ್ಯೇತೇ ಉಭೇ ಅಪಿ ಸವನೇ ವಿಪಿಬತಿ ವಿಲಕ್ಷಣತ್ವೇನ ಪಿಬತಿ—ತತ್ಕಥಮಿತಿ ತದೇವೋಚ್ಯತೇ । ವೈಶ್ವದೇವಶಸ್ತ್ರೇ ಸಾವಿತ್ರ್ಯೈ ಸವಿತೃದೇವತಾಕಾಯಾ ನಿವಿದಃ ಪದಂ ಪಿಬವತ್ಪಿಬತಿಧಾತುಯುಕ್ತಂ ಪುರಸ್ತಾದಾದೌ ಭವತಿ ಮದ್ವತ್ಪದಂ ಮದಧಾತುಯುಕ್ತ ಮುಪರಿಷ್ಟಾದಂತೇ ಭವತಿ ॥ ತೇನ ಪ್ರಾತಃಸವನೇ ಚ ತೃತೀಯಸವನೇ ಚೇತ್ಯುಭಯೋರಪಿ ಸವನಯೋರೇನಂ ಸವಿತಾರಮಾಭಜತಿ ಭಾವಿತಂ ಕರೋತಿ। ಸವಿತಾ ದೇವಃ ಸೋಮಸ್ಯ ಪಿಬತ್ವಿತ್ಯೇತನ್ನಿವಿದ ಆದೌ ಪ್ರಯುಜ್ಯಮಾನಂ ಪದಂ ಪಿಬವತ್ಪದಂ । ತಥಾಂತೇ ಪ್ರಯುಜ್ಯಮಾನಂ ಸವಿತಾ ದೇವ ಇಹ ಶ್ರವದಿಹ ಸೋಮಸ್ಯ ಮತ್ಸದಿತಿ ಮದ್ವತ್ಪದಮುದಾಹರಣೀಯಂ । ತಯೋರುಭಯೋಃ ಪದಯೋಃ ಸವನದ್ವಯರೂಪಯೋರ್ವಿಲಕ್ಷಣತ್ವಾತ್ಸವಿತುಃ ಪಾನಮಿತಿ ವಿಲಕ್ಷಣಮಿತಿ ದ್ರಷ್ಟವ್ಯಂ ॥ ಏವಂವಿಧ ಸವಿತೃದೇವತಾಕತ್ವಾತ್ಪ್ರಶಸ್ತೋಽಯಂ ಗ್ರಹ ಇತ್ಯಭಿಪ್ರಾಯಃ ॥ ಅಥವಾ ನಿವಿತ್ಪದವಿಧಾನಾರ್ಥಮಿದಂ ವಾಕ್ಯಂ ದ್ರಷ್ಟವ್ಯಂ ॥

ಈಗ ನಿವಿತ್ಪದಗಳ ಮೂಲಕ ಸಾವಿತ್ರಗ್ರಹವನ್ನು ಪ್ರಶಂಸೆಮಾಡುವರು—ಯಾವ ಗ್ರಹಕ್ಕೆ ಸವಿತೃವು ದೇವನಾಗಿರುವನೋ ಆ ಸವಿತೃದೇವನು ಪ್ರಾತಸ್ಸವನ ಮತ್ತು ತೃತೀಯಸವನ ಎಂಬ ಎರಡು ಸವನಗಳಲ್ಲಿಯೂ ಸೋಮವನ್ನು ವಿಲಕ್ಷಣವಾಗಿ ಎಂದರೆ ಅಪ್ರತ್ಯಕ್ಷವಾಗಿ ಪಾನಮಾಡುವನು. ಹೇಗೆ ಎಂದರೆ—ವೈಶ್ವದೇವಶಸ್ತ್ರಮಂತ್ರಗಳಲ್ಲಿ **ಸಾವಿತ್ರ್ಯೈ** ಎಂಬ ಸವಿತೃದೇವತಾಕವಾದ ಪದವು ಪಿಬತಿಧಾತುಯುಕ್ತವಾದ **ಪಿಬವತ್** ಎಂಬ ನಿವಿತ್‌ಪದವು ಪ್ರಾರಂಭದಲ್ಲಿಯೇ ಇದೆ. ಮದಿಧಾತುಯುಕ್ತವಾದ **ಮದ್ವತ್ಪದಂ** ಎಂಬ ನಿವಿತ್ಪದವು ಅನಂತರ ಎಂದರೆ ಕೊನೆಯಲ್ಲಿ ಇರುವುದು. ಆದ್ದರಿಂದ ಈ ಸವಿತೃದೇವನು ಪ್ರಾತಸ್ಸವನ ಮತ್ತು ತೃತೀಯಸವನ ಎಂಬ ಎರಡು ಸವನಗಳಲ್ಲಿಯೂ ಭಾಗವಹಿಸಿದಂತೆ ಆಯಿತು. ಹೇಗೆಂದರೆ **ಸವಿತಾ ದೇವಃ ಸೋಮಸ್ಯ ಪಿಬತು** (ನಿವಿತ್ ೪-೧) ಎಂಬ ನಿವಿದಗಳ ಆದಿಯಲ್ಲಿ ಪಠಿತವಾಗುವ ಪದವು ಇಲ್ಲಿ **ಪಿಬವತ್ಪದಂ** ಎಂಬುದರಿಂದ ಸೂಚಿತವಾದಂತಾಯಿತು. ಹಾಗೆಯೇ **ಸವಿತಾ ದೇವ ಇಹ ಶ್ರವದಿವ ಸೋಮಸ್ಯ ಮತ್ಸತ್** (ನಿವಿತ್ ೪-೧೫) ಎಂಬ ಅಂತ್ಯದಲ್ಲಿ ಉಪಯೋಗಿಸಲ್ಪಡುವ ನಿವಿತ್ಪದವೂ ಇಲ್ಲಿ **ಮದ್ವತ್ಪದಂ** ಎಂಬ ಶಬ್ದದಿಂದ ಸೂಚಿತವಾದಂತಾಯಿತು. ಈ ವಿಧವಾದ ಪದಪ್ರಯೋಗವು ಸವನದ್ವಯಗಳಲ್ಲಿಯೂ ಸವಿತೃವಿನ ಭಾಗವಿರುವುದನ್ನು ಸಮರ್ಥಿಸುವುದರಿಂದ ಅದನ್ನು ಇಲ್ಲಿ ವಿಲಕ್ಷಣವೆಂದು ತಿಳಿಸಿದೆ. ಈ ವಿಧವಾದ ಗ್ರಹವು ಸವಿತೃದೇವನಿಂದ ಪ್ರಶಸ್ತವಾಗಿದೆ ಎಂಬ ಅಭಿಪ್ರಾಯವೂ ಸೂಚಿತವಾಗುವುದು.

ಬಹ್ವ್ಯಃ ಪ್ರಾತರ್ವಾಯವ್ಯಾಃ ಶಸ್ಯಂತ ಏಕಾ ತೃತೀಯಸವನೇ ತಸ್ಮಾ-
ದೂರ್ಧ್ವಾಃ ಪುರುಷಸ್ಯ ಭೂಯಾಂಸಃ ಪ್ರಾಣಾ ಯಚ್ಚಾ-
ವಾಂಚಃ ।

ಅಥ ತಸ್ಮಿನ್ವೈಶ್ವದೇವಶಸ್ತ್ರ ಏಕಯಾ ಚ ದಶಭಿಶ್ಚ ಸ್ವಭೂತ ಇತ್ಯೇತಾಂ ವಾಯುದೇವತಾಕಾಮೃಚಂ ವಿಧತ್ತೇ—ವಾಯುರಗ್ರೇ ಗಾ ಇತ್ಯಾದ್ಯಾ ವಾಯವ್ಯಾ ಋಚೋ ಬಹ್ವ್ಯಃ ಪ್ರಾತಃಸವನೇ ಶಸ್ಯಂತೇ । ತೃತೀಯಸವನೇತು ಏಕೈವ ಪೂರ್ವೋದಾಹೃತಾ ॥ ತಸ್ಮಾತ್ಪ್ರಾತಃಸವನೇ ವಾಯುದೇವತಾಕಾನಾಂ ಭೂಯಸ್ತ್ವಾತ್ಪುರುಷಸ್ಯಾಪಿ ಪ್ರಾತಃಸವನೀಯಸ್ಥಾನೀಯೇ ಮುಖೇ ವರ್ತಮಾನತ್ವಾದೂರ್ಧ್ವಾಶ್ಚಕ್ಷುರ್ಘ್ರಾಣಾದಯಃ ಪ್ರಾಣಾ ಭೂಯಾಂಸಃ । ಯಚ್ಚ ಯೇ ಕೇಚಿದವಾಂಚೋ ನಾಭೇರರ್ವಾಚೀನೇ ತೃತೀಯಸ್ಥಾನೀಯೇ ದೇಶೇ ವರ್ತಮಾನಾ ಪಾಯುಗುಹ್ಯಾದಯೋಽವಾಂಚಃ ಪ್ರಾಣಾಃ ಅಲ್ಪೀಯಾಂಸ ಇತಿ ಶೇಷಃ ॥

ಈಗ ವೈಶ್ವದೇವಶಸ್ತ್ರದಲ್ಲಿ ಹೇಳಿರುವ ಏಕಯಾ ಚ ದಶಭಿಶ್ಚ ಸ್ವಭೂತೇ (ಆಶ್ವ. ಶ್ರೌ. ಸೂ. ೫-೧೮-೫) ಎಂಬ ವಾಯುದೇವತಾಕವಾದ ಋಕ್ಕನ್ನು ವಿಮರ್ಶೆಮಾಡುವರು— ಈ ಋಕ್ಕು ಋಗ್ವೇದದಲ್ಲಿ ಇಲ್ಲದಿರುವುದರಿಂದ ಸೂತ್ರಕಾರರಾದ ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ ಇದನ್ನು ಹೇಳಿದಾರೆ. ಪ್ರಾತಸ್ಸವನದಲ್ಲಿ ವಾಯುದೇವತಾಕವಾದ **ವಾಯುರಗ್ರೇ ಗಾಃ** ಎಂದು ಮೊದಲಾದ ಅನೇಕಮಂತ್ರಗಳನ್ನು ಪಠಿಸಲಾಗುತ್ತದೆ. ಆದರೆ ತೃತೀಯಸವನದಲ್ಲಿ ವಾಯುದೇವತಾಕವಾದ ಒಂದು ಮಂತ್ರವನ್ನು ಮಾತ್ರ ಪಠಿಸಲಾಗುವುದು. ಇದು ಹೇಗೆ ಎಂದರೆ ಪ್ರಾತಸ್ಸವನರೂಪವಾದ ಪುರುಷದೇಹದ ಊರ್ಧ್ವ (ಮೇಲಿನ) ಭಾಗದಲ್ಲಿ ಎಂದರೆ ಕಣ್ಣುಗಳು, ನಾಸಿಕೆಗಳು, ಕಿವಿಗಳು ಮೊದಲಾದ ಪ್ರಾಣವಾಯುಸಂಚಾರಕ್ಕೆ ಅವಶ್ಯಕವಾದ ಅನೇಕ ಅಂಗಗಳಿರುವವು. ಶರೀರದಲ್ಲಿ ನಾಭಿಯಿಂದ ಕೆಳಭಾಗದಲ್ಲಿ ಸ್ವಲ್ಪಭಾಗಮಾತ್ರ ಪ್ರಾಣವಾಯುಸಂಚಾರಕ್ಕೆ ಅನುಕೂಲವಾಗಿರುವುದು. ಪುರುಷನ ಶರೀರದ ಊರ್ಧ್ವಭಾಗವು (ಶಿರಸ್ಸು) ಪ್ರಾತಸ್ಸವನರೂಪವಾಗಿರುವುದು. ಶರೀರದ ಅಧೋಭಾಗವು ತೃತೀಯಸವನದ ರೂಪವಾಗಿರುವುದು. ಆದ್ದರಿಂದ ಪ್ರಾತಸ್ಸವನದಲ್ಲಿ ವಾಯುದೇವತಾಕವಾದ ಅನೇಕ ಮಂತ್ರಗಳನ್ನೂ ತೃತೀಯಸವನದಲ್ಲಿ ವಾಯುದೇವತಾಕವಾದ ಒಂದೇ ಮಂತ್ರವನ್ನೂ ಪಠಿಸುವರು.

ದ್ಯಾವಾಪೃಥಿವೀಯಂ ಶಂಸತಿ ದ್ಯಾವಾಪೃಥಿವೀ ವೈ ಪ್ರತಿಷ್ಠೇ ಇಯ-
ಮೇವೇಹ ಪ್ರತಿಷ್ಠಾಸಾವಮುತ್ರ ತದ್ಯದ್ದ್ಯಾವಾಪೃಥಿವೀಯಂ
ಶಂಸತಿ ಪ್ರತಿಷ್ಠಯೋರೇವೈನಂ ತತ್ಪ್ರತಿಷ್ಠಾಪಯತಿ ।

ತಸ್ಮಿನ್ನೇವ ವೈಶ್ವದೇವಶಸ್ತ್ರೇ ದ್ಯಾವಾಪೃಥಿವೀದೇವತಾಕಂ ಸೂಕ್ತಂ ವಿಧತ್ತೇ—ಇಹ ಮನುಷ್ಯಜನ್ಮನೀಯಮೇವ ಭೂಮಿಃ ಪ್ರತಿಷ್ಠಾಽಽಶ್ರಯಃ । ಅಮುತ್ರ ಜನ್ಮಾಂತರೇಽಸಾವೇವ ದ್ಯುಲೋಕಃ ಪ್ರತಿಷ್ಠಾಽಽಶ್ರಯಃ ॥ ಏವಂ ದ್ಯಾವಾಪೃಥಿವ್ಯಾವೇವ ಪ್ರತಿಷ್ಠೇ ಯಸ್ಮಾತ್ತಸ್ಮಾತ್ತದೀಯಸೂಕ್ತಶಂಸನೇನೈನಂ ಯಜಮಾನಂ ಪ್ರತಿಷ್ಠಾರೂಪಯೋಃ ದ್ಯಾವಾಪೃಥಿವ್ಯೋರೇವಾವಸ್ಥಾಪಯತಿ ॥

ಈ ವೈಶ್ವದೇವಶಸ್ತ್ರಮಂತ್ರಗಳಲ್ಲಿರುವ ದ್ಯಾವ್ಯಾಪೃಥಿವೀದೇವತಾಕವಾದ ಮಂತ್ರವನ್ನು ವಿವರಿಸುವರು—ಮನುಷ್ಯರಾದವರಿಗೆ ಈ ಭೂಮಿಯೇ ಎಲ್ಲಕ್ಕೂ ಆಶ್ರಯಭೂತವಾಗಿದೆ. ಅನಂತರ ಎಂದರೆ ಜನ್ಮಾಂತರದಲ್ಲಿ ಪುರುಷನಿಗೆ ಸ್ವರ್ಗವು ಆಶ್ರಯವಾಗಿರುವುದು. ಆದ್ದರಿಂದ ದ್ಯಾವಾಪೃಥಿವಿಗಳು ಎಂದರೆ ಭೂಲೋಕ ಮತ್ತು ಸ್ವರ್ಗಲೋಕಗಳೆರಡೂ ಪುರುಷನಿಗೆ ಇಹ ಮತ್ತು ಪರಜನ್ಮಗಳಲ್ಲಿ ಆಶ್ರಯವಾಗಿವೆ. ಆದ್ದರಿಂದ ಈ ವ್ಯಾವಾಪೃಥಿವೀದೇವತೆಗಳನ್ನು ಇಲ್ಲಿ ಸ್ತುತಿಸುವುದು ಯುಕ್ತವಾಗಿದೆ. ಹೀಗೆ ಸ್ತುತಿಸುವುದರಿಂದ ಯಜ್ಞಮಾಡುವ ಯಜಮಾನನಿಗೆ ಈ ದ್ಯಾವಾಪೃಥಿವಿಗಳ ಆಶ್ರಯವು ಇಹ ಪರಜನ್ಮಗಳಲ್ಲಿ ದೊರೆಯುವುದೆಂದಭಿಪ್ರಾಯವು.



*English Translation*

**(Why the Adityas and Savitar have a share in the evening libation. On Vayu's and Dyavaprithvi's share in it.)**

The gods said to the Adityas, "let us lift up this the evening libation through you," They consented, Thence the evening libation commences with the Adityas. At the commencement of it there is the libation from the Aditya graha. Its Yajya mantra is, adityaso aditir madyantim (7, 51, 2), which contains the term mad " to be drunk " which is complete in form equal to the occasion. For the characteristic feature of the evening libation is, " To be drunk." He does not repeat the Anuvashatkara, nor does he taste the Soma (as is usual, after the libation has been poured into the fire: for the Anuvashatkara is the completion, and the tasting of the offering by the priests, is also the completion of the ceremony. The Adityas are the vital airs. When the Hotar, therefore, does not repeat the Anuvashatkara, nor taste the Aditya libation, he thinks I will certainly put no end to the life of the sacrificer.

The Adityas said to Savitar, " let us lift up this (the evening) libation through thee." He consented ; Thence the beginning (Pratipad of the Vais'vadeva Shastra at the evening libation) is made with a triplet of verses addressed to Savitar, To the Vais'vadeva Shastra belongs the Savitrigraha. Before the commencement of this Shastra he repeats the Yajya for the libation from the Savitrigraha), damuna devah savita varenyam (as'v. S'r. S. 5, 18). This verse contains the term mad " to be drunk " which is complete in form. The term made " to be drunk " is a characteristic of the evening libation. He does not repeat the Anuvashatkara, nor does he taste (from the Soma juice in the Savitrigraha). For the Anuvashatkara is completion, the tasting of the Soma by the priest is completion. Savitar is the life. He should do neither, thinking, I will certainly put no end to the life of the sacrificer. Savitar drinks largely from both the

morning and evening libations. For there is the term piba "drink", at the commencement of the Nivid addressed to Savitar at the evening libation, and at the end the term made "to be drunk." Thus he makes Savitar share in both the morning and evening libations.

At the morning and evening libations verses addressed to Vayu are repeated, many at the morning, one only at the evening libation. That is done because the vital airs (represented by Vayu, the wind) in the upper parts represented by the morning libation of the human body are more numerous than those in the lower parts represented by the evening libation.

He repeats a hymn addressed to Heaven and Earth. For Heaven and Earth are stand-points. Earth is the stand-point here, and Heaven is the stand-point there (in the other world). By thus repeating a hymn addressed to Heaven and Earth, the Hotar establishes the sacrificer in both places in earth and heaven.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಪಂಚಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಐದನೆಯ ಖಂಡವು
ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ಷಷ್ಠಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು



[ಋಭು ಎಂಬ ದೇವತೆಗಳ ಪೂರ್ವೇತಿಹಾಸವು. ತೃತೀಯಸವನಕಾಲದಲ್ಲಿ ಅವರಿಗೆ ಸೋಮಪಾನ
ಮಾಡುವುದಕ್ಕೆ ಇರುವ ಅರ್ಹತೆಯು].

ಆರ್ಭವಂ ಶಂಸತಿ ।

ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾಪೃಧೇತ್ಯೇತದ್ದ್ಯಾವಾಪೃಥಿವೀಯಂ ಸೂಕ್ತಂ ವಿಧಾಯ ತಕ್ಷನ್ರಥಂ ಸುವೃತಮಿತ್ಯೇತದಾರ್ಭವಂ ಸೂಕ್ತಂ ವಿಧತ್ತೇ—

ಋಭುನಾಮಕಾ ದೇವಾ ಯಸ್ಮಿನ್ಸೂಕ್ತೇ ಸಂತಿ ತದಿದಮಾರ್ಭವಂ ತಸ್ಯ ಸೂಕ್ತಸ್ಯ ಪ್ರಥಮಾಯಾಮೃಚಿ ತೃತೀಯಪಾದೇ ತಕ್ಷನ್ಪಿತೃಭ್ಯಾಮೃಭವೋ ಯುವದ್ವಯ ಇತಿ ತದ್ದೇವತಾಕತ್ವಂ ಪ್ರತೀಯತೇ ॥

ಪ್ರ ದ್ಯಾವಾ ಯಜ್ಞೈಃ ಪೃಥಿವೀ ಋತಾವೃಧಾ (ಋ. ಸಂ. ೧-೧೫೯-೧) ಎಂಬ ದ್ಯಾವಾಪೃಥಿವೀದೇವತಾಕವಾದ ಸೂಕ್ತವನ್ನು ಪ್ರಶಂಸಿಸಿ ಈಗ ತಕ್ಷನ್ರಥಂ ಸುವೃತಂ (ಋ. ಸಂ. ೧-೧೧೧-೧) ಎಂಬ ಋಭುದೇವತಾಕವಾದ ಸೂಕ್ತವನ್ನು ವಿವರಿಸುವರು—ಇಲ್ಲಿ ಆರ್ಭವಂ ಶಂಸತಿ ಎಂದಿರುವುದು. ಋಭು ಎಂಬ ಹೆಸರಿನ ದೇವತೆಗಳು ಯಾವ ಸೂಕ್ತದಲ್ಲಿ ಪ್ರತಿಪಾದಿಸಲ್ಪಡುವರೋ ಆ ಸೂಕ್ತಕ್ಕೆ ಆರ್ಭವಸೂಕ್ತವೆಂದು ಹೆಸರು. ಈ ಸೂಕ್ತದ ಮೊದಲನೆಯ ಋಕ್ಕಿನ ಮೂರನೆಯ ಪಾದದಲ್ಲಿ ತಕ್ಷನ್ ಪಿತೃಭ್ಯಾಮೃಭವಃ ಎಂದು ಇರುವುದರಿಂದ ಈ ಸೂಕ್ತವು ಋಭುಗಳನ್ನು ಪ್ರತಿಪಾದಿಸುವುದಾಗಿದೆ ಎಂದು ತಿಳಿಯಬೇಕು.

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಸ್ಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಸ್ಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽನ್ತೇವಾಸಾಸ್ತ್ವಮೇವೇಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ॥

ಅಥ ಧಾಯ್ಯೇ ವಿಧಾತುಮಾಖ್ಯಾಯಿಕಾಮಾಹ—ದೇವೇಷು ಸರ್ವೇಷು ಮಧ್ಯ ಋಭುನಾಮಕಾಃ ಕೇಚನ ದೇವತ್ವಂ ಪ್ರಾಪ್ತಾ ಮನುಷ್ಯವಿಶೇಷಾಃ ಪ್ರಜಾಪತಿಮುದ್ದಿಶ್ಯ ತಪಃ ಕೃತ್ವಾ ತೇನ ತಪಸಾ ಸೋಮಪೀಥಮಭ್ಯಜಯನ್ಸೋಮಪಾನಮಭಿಲಕ್ಷ್ಯ ಜಿತವಂತಃ ಪ್ರಜಾಪತೇಃ ಸಕಾಶಾತ್ತಲ್ಲಬ್ಧವಂತ ಇತ್ಯರ್ಥಃ ॥ ಸ ಪ್ರಜಾಪತಿರನ್ಯಾ ದೇವತಾಶ್ಚ ತೇಭ್ಯ ಋಭುಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷನ್ಸೋಮಪಾನಂ ಕಲ್ಪಯಿತುಮೈಚ್ಛಂಸ್ತದಾನೀಂ ಪ್ರಾತಃಸವನಾಭಿಮಾನ್ಯಗ್ನಿರ್ದೇವಃ ಸ್ವಭೃತ್ಯೈರ್ವಸುಭಿಃ ಸಹ ತಸ್ಮಾತ್ಪ್ರಾತಃ ಸವನಾತ್ತಾನೃಭೂನನುದತ ನಿರಾಕರೋತ್ ॥ ತಥೇಂದ್ರೋ ರುದ್ರೈಃ ಸಹ ಮಾಧ್ಯಂದಿನಾತ್ಸವನಾನ್ನಿರಾಕರೋತ್ ॥ ವಿಶ್ವೇದೇವಾಸ್ತೃತೀಯಸವನಾದನೋನುದ್ಯಂತ ಭೃಶಂ ನಿರಾಕುರ್ವನ್ ॥ ನಿರಾಕರಣಪ್ರಕಾರಃ ಸ ಚ ನೇಹೇತಿ ವಾಕ್ಯೇನ ಪುನಃಪುನರನೂದ್ಯತೇ । ಇಹ ತೃತೀಯಸವನ ಋಭವೋ ನ ಪಾಸ್ಯಂತಿ—॥ ವಿಶ್ವೇಷಾಂ ದೇವಾನಾಂ ಪ್ರತ್ಯೇಕಂ ನಿರಾಕರಣವಾಕ್ಯೇನ ಸಂಬಂಧಾನ್ನೇಹೇತಿ ನಿಯುಕ್ತಂ ॥

ತತಃ ಸ ಪ್ರಜಾಪತಿರ್ನಿರಾಕೃತಾನೃಭೂನ್ದೃಷ್ಟ್ವಾ ಸವಿತಾರಮಬ್ರವೀತ್ ॥ ಹೇ ಸವಿತಸ್ತ್ವಮೇವ ಋಭವೋಂತೇವಾಸಾಃ ಸಮೀಪವಾಸಿನಃ ಶಿಷ್ಯಾ ಅತಸ್ತ್ವಮೇಭಿಃ ಸಹ ಸಮ್ಯಕ್ಪಿಬಸ್ವ ತಥೇತ್ಯಂಗೀಕೃತ್ಯ ಸವಿತಾ ಪ್ರಜಾಪತಿಮಿದಮಬ್ರವೀತ್ ॥ ಹೇ ಪ್ರಜಾಪತೇ ತ್ವಂ ತಾನ್ವೈ ತಾನೇವ ಋಭೂನುಭಯತಃ ಪಿಬ ತೇಷಾಂ ಋಭೂಣಾಮುಭಯೋಃ ಪಾರ್ಶ್ವಯೋಃ ಸ್ಥಿತ್ವಾ ತ್ವದುಪಿ ಸೋಮಪಾನಂ ಕುರು । ಏವಮುಕ್ತಃ ಪ್ರಜಾಪತಿಸ್ತಥೈವಾಕರೋತ್ ॥

ದೇವತೆಗಳ ಮಧ್ಯದಲ್ಲಿ ಋಭುಗಳು ಎಂಬ ಹೆಸರಿನ ಕೆಲವು ದೇವತೆಗಳಿದ್ದರು. ಇವರು ಪೂರ್ವದಲ್ಲಿ ಮನುಷ್ಯರಾಗಿದ್ದು ಪ್ರಜಾಪತಿಯನ್ನು ಕುರಿತು ತಪಸ್ಸುಮಾಡಿ ಅವನನ್ನು ಮೆಚ್ಚಿಸಿ ದೇವತ್ವವನ್ನು ಪಡೆದರು. ಮತ್ತು ಯಜ್ಞಗಳಲ್ಲಿ ಸೋಮಪಾನ ಮಾಡಲು ಅರ್ಹತೆಯು ತಮಗೂ ಬೇಕೆಂದು ಪ್ರಜಾಪತಿಯನ್ನು ಮೆಚ್ಚಿಸಿ ವರವನ್ನು ಪಡೆದರು. ಪ್ರಜಾಪತಿಯು ಋಭುಗಳಿಗೆ ತಾನು ಕೊಟ್ಟ ವರದಂತೆ ಪ್ರಾತಃಸವನದಲ್ಲಿ ಇವರು ಸೋಮಪಾನ ಮಾಡಲೆಂದು ಏರ್ಪಡಿಸಿ ಅದಕ್ಕಾಗಿ ಅವರನ್ನು ಅಲ್ಲಿಗೆ ಕಳುಹಿಸಿದನು. ಪ್ರಾತಸ್ಸವನಕ್ಕೆ ಅಗ್ನಿಯು ಅಭಿಮಾನಿದೇವನು. ಅವನು ಈ ಋಭುಗಳೊಡನೆ ಸೋಮಪಾನಮಾಡಲು ಇಷ್ಟಪಡಲಿಲ್ಲ. ಆದ್ದರಿಂದ ಇವರಿಗೆ ಸೋಮಪಾನಕ್ಕೆ ಅವಕಾಶಕೊಡದೆ ತನ್ನ ಭೃತ್ಯರಾದ ಅಷ್ಟವಸುಗಳ ಸಹಾಯದಿಂದ ಪ್ರಾತಸ್ಸವನದಿಂದ ಇವರನ್ನು ಓಡಿಸಿದನು. ಅನಂತರ ಈ ಋಭುಗಳು ಮಾಧ್ಯಂದಿನಸವನದ ಬಳಿಗೆ ಹೋಗಲು ಮಾಧ್ಯಂದಿನ ಸವನಕ್ಕೆ ಅಭಿಮಾನಿದೇವತೆಯಾದ ಇಂದ್ರನು ಇವರೊಡನೆ ಸೋಮಪಾನಮಾಡಲು ಇಷ್ಟಪಡದೆ ಇವರನ್ನು ತನ್ನ ಅನುಚರರಾದ ಏಕಾದಶರುದ್ರಗಣಗಳ ಮೂಲಕ ಮಾಧ್ಯಂದಿನಸವನದಿಂದಲೂ ಓಡಿಸಿದನು. ಅನಂತರ ಇವರು ತೃತೀಯಸವನಕ್ಕೆ ಹೋಗಲು ಅಲ್ಲಿದ್ದ ವಿಶ್ವೇದೇವತೆಗಳು ಅಲ್ಲಿಯೂ ಇವರನ್ನು ಸೋಮಪಾನಮಾಡಲು ಅಡ್ಡಿಮಾಡಿದರು. ಇಲ್ಲಿ ನೇಹ ಎಂಬ ಶಬ್ದಪ್ರಯೋಗವು ಇಲ್ಲಿಯೂ ಇವರು ಸೋಮಪಾನಮಾಡಲಾಗದು ಎಂಬ ವಿಷಯವನ್ನು ಸೂಚಿಸುವುದು. ಆದ್ದರಿಂದ ಮೂರು ಸವನಗಳಲ್ಲಿಯೂ ಈ ಋಭುಗಳು ಸೋಮಪಾನದಿಂದ ನಿರಾಕರಿಸಲ್ಪಟ್ಟಿರುವುದನ್ನು ಪ್ರಜಾಪತಿಯು ಕಂಡು ಇದಕ್ಕೆ ಏನಾದರೂ ಒಂದು ಉಪಾಯ ವನ್ನು ಮಾಡಬೇಕೆಂದು ಆಲೋಚಿಸಿ ಸವಿತೃದೇವನನ್ನು ಕರೆದು ಇಂತು ಹೇಳಿದನು—ಎಲೈ ಸವಿತೃವೇ, ಈ ಋಭುಗಳು ನಿನಗೆ ಶಿಷ್ಯರಾದವರು, ನಿನಗೆ ಆಪ್ತರು ಆದ್ದರಿಂದ ನೀನು ಈ ಋಭುಗಳ ಅಪೇಕ್ಷೆಯನ್ನು ಎಂದರೆ ಇವರು ಸೋಮಪಾನ ಮಾಡಬೇಕೆಂಬ ಇವರ ಅಭಿಲಾಷೆಯನ್ನು ನೀನು ನೆರವೇರಿಸು ಎಂದು ಹೇಳಿದನು. ಸವಿತೃದೇವನು ಹಾಗೆಯೇ ಆಗಲೆಂದು ಪ್ರಜಾಪತಿಯ ಮಾತನ್ನು ಅಂಗೀಕರಿಸಿ ಪ್ರಜಾಪತಿಗೆ ಈರೀತಿ ಹೇಳಿದನು—ಎಲೈ ಪ್ರಜಾಪತಿಯೇ, ಈ ಋಭುಗಳ ಎರಡು ಪಾರ್ಶ್ವಗಳಲ್ಲಿಯೂ ನೀನೂ ಇದ್ದು ಸೋಮಪಾನವನ್ನು ಮಾಡಬೇಕು ಎಂದು ಕೇಳಿಕೊಂಡನು. ಅದರಂತೆ ಪ್ರಜಾಪತಿಯು ಹಾಗೆಯೇ ಮಾಡಿದನು.

**ತೇ ಏತೇ ಧಾಯ್ಯೇ ಅನಿರುಕ್ತೇ ಪ್ರಾಜಾಪತ್ಯೇ ಶಸ್ಯೇತೇ ಅಭಿತ ಆರ್ಭವಂ ಸುರೂಪಕೃತ್ನುಮೂತಯೇಽಯಂ ವೇನಶ್ಚೋದಯತ್ಪೃಶ್ನಿಗರ್ಭಾ ಇತಿ ಪ್ರಜಾಪತಿರ್ವೈನಾಂಸ್ತದುಭಯತಃ ಪರಿಪಿಬತಿ ತಸ್ಮಾದು ಶ್ರೇಷ್ಠೀ ಪಾತ್ರೇ ರೋಚಯತ್ಯೇವ ಯಂ ಕಾಮಯತೇ ತಂ ॥**

ಅಥ ಧಾಯ್ಯೇ ವಿಧತ್ತೇ—ಸುರೂಪಕೃತ್ನುಮಿತ್ಯೇಕಾ ಧಾಯ್ಯಾಽಯಂ ವೇನ ಇತಿ ದ್ವಿತೀಯಾ ತೇ ಏತೇ ಧಾಯ್ಯೇ ಆರ್ಭವಸೂಕ್ತೇ ಅಭಿತಃ ಶಸ್ಯತೇ । ಸುರೂಪಕೃತ್ನುಮಿತ್ಯೇಷಾ

ಸೂಕ್ತಾತ್ಪೂರ್ವಂ ಶಂಸನೀಯಾ । ಅಯಂ ವೇನ ಇತ್ಯೇಷಾ ಸೂಕ್ತಾತ್ಪಶ್ಚಾಚ್ಛಂಸನೀಯಾ । ಕೀದೃಶ್ಯೌ ಧಾಯ್ಯೇ ಅನಿರುಕ್ತೇ ನಿಃಶೇಷೇಣೋಕ್ತೋ ದೇವೋನಿರುಕ್ತಸ್ತಾದೃಶೋ ಯಯೋ- ರ್ಧಾಯ್ಯಯೋರ್ನಾಸ್ತಿ ತೇ ಅನಿರುಕ್ತೇ ॥ ನಖಲ್ವನಯೋರ್ಋಚೋರೀದೃಶೋ ದೇವ ಇತಿ ಸಹಸಾ ನಿರ್ಣೇತುಂ ಶಕ್ಯತೇ ॥ ಪ್ರಜಾಪತಿರಪಿ ಜಗತ್ಸೃಷ್ಟೇಃ ಪೂರ್ವಂ ಮೂರ್ತಸ್ಯ ನಿರ್ವಕ್ತು- ಮಶಕ್ಯತ್ವಾತ್ಸೋಽಪ್ಯನಿರುಕ್ತೋಽತೋ ಯೋಗ್ಯತ್ವಾತ್ತೇ ಉಭೇ ಪ್ರಜಾಪತಿದೇವತಾಕೇ ॥ ಏತಯೋರ್ಧಾಯ್ಯಯೋಃ ಶಂಸನೇ ಪ್ರಜಾಪತಿರೇವೈನಾನೃಭೂನುಭಯತಃ ಪರಿಪಿಬತಿ ॥ ಯಸ್ಮಾತ್ಪ್ರಜಾಪತಿರಗ್ನಿರ್ವಸ್ವಾದಿದೇವತಾನಾಮೃಭುಷು ರುಚ್ಯಭಾವೇ ಸತಿ ಪಿತೃದ್ವಾರಾ ಬಲಾದ್ರುಚಿಮುತ್ಪಾದಿತವಾಸ್ತಸ್ಮಾದು ತಸ್ಮಾದೇವಕಾರಣಾಲ್ಲೋಕೇಽಪಿ ಶ್ರೇಷ್ಠೀ ಕಶ್ಚಿದ್ಧನ- ಪತಿರ್ಯಂ ಸ್ವಕೀಯಂ ಭೃತ್ಯಮಿತರೈರಂಗೀಕೃತಮಪಿ ಸರ್ವೇಭ್ಯೋ ರೋಚಯಿತುಂ ಕಾಮಯತೇ ತಂ ಭೃತ್ಯಮಾಚಾರಹೀನಂ ಪಾತ್ರೇ ಪ್ರತಿಗ್ರಹಯೋಗ್ಯಸ್ಥಾನೇ ಬಲಾತ್ಸರ್ವೇಭ್ಯೋ ರೋಚಯತ್ಯೇವ ॥

ಈ ಆರ್ಭವಸೂಕ್ತದಲ್ಲಿ ಸೇರಿಸಬೇಕಾದ ಎರಡು ಧಾಯ್ಯಾಮಂತ್ರಗಳಲ್ಲಿ **ಸುರೂಪಕೃತ್ನುಮೂತಯೇ** (ಋ. ಸಂ. ೧-೪-೧) ಎಂಬ ಋಕ್ಕು ಮೊದಲನೆಯದು; **ಅಯಂ ವೇನಃ** (ಋ. ಸಂ. ೧೦-೧೨೩-೧) ಎಂಬ ಋಕ್ಕು ಎರಡನೆಯದು. ಈ ಎರಡು ಮಂತ್ರಗಳನ್ನು ಆಭರ್ವಸೂಕ್ತದ ಎರಡು ಕಡೆಗಳಲ್ಲಿ ಎಂದರೆ ಮೊದಲು ಮತ್ತು ಕೊನೆಗಳಲ್ಲಿ ಪಠಿಸಬೇಕು. **ಸುರೂಪ- ಕೃತ್ನುಂ** ಎಂಬುದನ್ನು ಆರ್ಭವಸೂಕ್ತದ ಪ್ರಾರಂಭದಲ್ಲಿಯೂ, **ಅಯಂ ವೇನಃ** ಎಂಬುದನ್ನು ಆರ್ಭವಸೂಕ್ತದ ಕೊನೆ ಯಲ್ಲಿಯೂ ಪಠಿಸಬೇಕು. ಈ ಧಾಯ್ಯಾಮಂತ್ರಗಳ ಸ್ವರೂಪವೇನು ಎಂದರೆ **ಅನಿರುಕ್ತೇ** ಎಂದು ಹೇಳಲ್ಪಡುವವು. ನಿಶ್ಶೇಷವಾಗಿ (ಪೂರ್ತಿಯಾಗಿ) ಹೇಳಲ್ಪಡುವ ಮಂತ್ರಕ್ಕೆ ನಿರುಕ್ತವೆಂದು ಹೆಸರು. ಇಲ್ಲಿ ನಿಶ್ಶೇಷವೆಂದರೆ ಆ ಋಕ್ಕಿನಲ್ಲಿ ಪ್ರತಿಪಾದಿ ಸಲ್ಪಡುವ ದೇವತೆಯ ಹೆಸರಿನಿಂದ ಸಹಿತವಾಗಿ ಎಂದರ್ಥವು. ದೇವತೆಯ ಹೆಸರನ್ನು ತಿಳಿಸದೆ ಪಠಿಸಲ್ಪಡುವ ಈ ಎರಡು ಮಂತ್ರಗಳಿಗೆ **ಅನಿರುಕ್ತೇ** ಎಂದು ಹೆಸರು. ಎಂದರೆ ಈ ಎರಡು ಧಾಯ್ಯಾಮಂತ್ರಗಳಲ್ಲಿ ಯಾವ ದೇವತೆಯನ್ನು ಪ್ರತಿಪಾದಿಸ ಲಾಗಿದೆ ಎಂದು ಹೇಳಿರುವುದಿಲ್ಲ. ಏಕೆಂದರೆ ಸೃಷ್ಟಿಗೆ ಪೂರ್ವದಲ್ಲಿ ಪ್ರಜಾಪತಿಗೆ ಯಾವ ನಿರ್ದಿಷ್ಟವಾದ ಮೂರ್ತಿಯೂ ಎಂದರೆ ಆಕಾರವೂ ಇರಲಿಲ್ಲ. ಆಕಾರರಹಿತವಾದ ಪರಬ್ರಹ್ಮಸ್ವರೂಪನಾಗಿದ್ದನು. ಆದ್ದರಿಂದ ನಾಮರೂಪಗಳೊಂದೂ ಇಲ್ಲದ ಪರಬ್ರಹ್ಮಕ್ಕೆ ವ್ಯಕ್ತಿರೂಪವಾದ ಒಂದು ಮೂರ್ತಿಯನ್ನು ಕಲ್ಪಿಸುವುದು ಸಮಂಜಸವಾಗುವುದಿಲ್ಲ. ಮತ್ತು ಸೃಷ್ಟವಾದ ಮತ್ತು ನಿರ್ದಿಷ್ಟ ಅಥವಾ ಅನಿರ್ದಿಷ್ಟವಸ್ತುಗಳೆಲ್ಲವೂ ಪರಮಾತ್ಮ ಅಥವಾ ಪರಬ್ರಹ್ಮಸ್ವರೂಪವಾಗಿರುವುದರಿಂದ, ಅನಿರ್ದಿಷ್ಟದೇವತಾಕ ವಾದ ಮೇಲಿನ ಎರಡು ಧಾಯ್ಯಾಮಂತ್ರಗಳಿಗೆ ಪ್ರಜಾಪತಿಯೇ ದೇವತೆಯೆಂದು ಹೇಳಬೇಕು. ಈ ಎರಡು ಧಾಯ್ಯಾಮಂತ್ರ ಗಳನ್ನು ಒಂದೊಂದರಂತೆ ಆರ್ಭವಸೂಕ್ತದ ಪ್ರಾರಂಭ ಮತ್ತು ಕೊನೆಯಲ್ಲಿ ಪಠಿಸುವುದು ಪ್ರಜಾಪತಿಯು ತೃತೀಯಸವನದಲ್ಲಿ ಈ ಋಭುಗಳ ಎರಡು ಪಾರ್ಶ್ವಗಳಲ್ಲಿಯೂ ಕುಳಿತು ಸೋಮಪಾನಮಾಡುವನು ಎಂಬ ವಿಷಯದ ಸಂಕೇತವಾಗಿರುವುದು ಮತ್ತು ಧನವಂತನಾದ ಮುಖ್ಯಸ್ಥನು ತನ್ನನ್ನು ಆಶ್ರಯಿಸಿ ಅನುಸರಿಸುವ ಸೇವಕನು ಉತ್ತಮನಲ್ಲದಿದ್ದರೂ ತನ್ನ ಆಶ್ರಯವರ್ಗದಲ್ಲಿ ಸೇರಿದವನೆಂದು ಅವನಿಗೆ ಸೋಮಪಾನ ಮಾಡಲು ಅವಕಾಶಕೊಡುವಂತೆಯೂ ಅದನ್ನು ಇತರರು ತಮಗಿಷ್ಟವಿಲ್ಲದಿದ್ದರೂ ಧನವಂತನನ್ನು ನಿಷ್ಠುರಮಾಡದೆ ಒಪ್ಪಿಕೊಳ್ಳುವಂತೆಯೂ ಈ ಪ್ರಜಾಪತಿಯು ಋಭುಗಳಿಗೆ ಕಲ್ಪಿಸಿದ ಈ ಸೋಮಪಾನಾರ್ಹತೆ ಯನ್ನು ಇತರ ದೇವತೆಗಳು ಒಪ್ಪಿಕೊಳ್ಳಲೇ ಬೇಕಾಯಿತು.

**ತೇಭ್ಯೋ ವೈ ದೇವಾ ಅಪ್ಯೈವಾಬೀಭತ್ಸಂತ ಮನುಷ್ಯಗಂಧಾತ್ತ ಏತೇ ಧಾಯ್ಯೇ ಅಂತರದಧತ ಯೇಭ್ಯೋ ಮಾತ್ರೈವಾ ಪಿತ್ರ ಇತಿ ।**

ಅಥಾಪರಮೃಗ್ದ್ವಯಂ ವಿಧತ್ತೇ—ಅಗ್ನಿವಸ್ವಾದಯೋ ದೇವಾಸ್ತೇಭ್ಯಃ ಋಭುಭ್ಯೋಽಪ್ಯೈವ ಸ್ವಯಮುಪಗತಾಏವ ಸಂತೋಽಭೀಭತ್ಸಂತ ಏವಂ ಮನಸಿ ಬೀಭತ್ಸಾಂ ಕೃತವಂತಃ । ತಸ್ಮಾತ್ಕಾರಣಾದಿತಿ ತದುಚ್ಯತೇ ॥ ಮನುಷ್ಯಗಂಧಾದಿತಿ ॥ ಏತೇ ಮನುಷ್ಯಾ ಅಸ್ಮತ್ಪಂಕ್ತಿಯೋಗ್ಯಾನ ಭವಂತಿ ಇತಿ ಶಂಕ್ಯೇತ್ಯರ್ಥಃ ॥ ಬೀಭತ್ಸಾಂ ಪ್ರಾಪ್ಯೈತೇ ವಕ್ಷ್ಯಮಾಣೇ ದ್ವೇ ಧಾಯ್ಯೇ ಅಂತರದಧತ ಋಭೂಣಾಮಸ್ಮತ್ಪ್ರಭೃತೀನಾಂ ಚ ಮಧ್ಯೇಽಂತರ್ಧಾನಂ ವ್ಯವಧಾನಮಕುರ್ವತ । ಕೇ ತೇ ಧಾಯ್ಯೇ ಇತ್ಯುಚ್ಯೇತೇ ॥ ಯೇ ಭ್ಯೋ ಮಾತಾ ಮಧುಮದಿತ್ಯೇಕಾ ॥ ಏವಾ ಪಿತ್ರೇ-ವಿಶ್ವದೇವಾಯೇತ್ಯಪರಾಽಯಂವೇನ ಇತ್ಯೇತಸ್ಮಾತ್ಪೂರ್ವಮೇತದುಭಯಂ ಶಂಸೇದಿತ್ಯರ್ಥಃ ॥

ಅಗ್ನಿ, ವಸು ಮುಂತಾದ ದೇವತೆಗಳು ಈ ಋಭುಗಳ ವಿಷಯದಲ್ಲಿ ಭೀತಿಯನ್ನು ಎಂದರೆ ಜುಗುಪ್ಸೆಯನ್ನು ವ್ಯಕ್ತಪಡಿಸಿದರು. ಈ ಋಭುಗಳು ಪೂರ್ವದಲ್ಲಿ ಮನುಷ್ಯರಾಗಿದ್ದು ಈಗ ದೇವತ್ವವನ್ನು ಪಡೆದರೂ ಇವರಲ್ಲಿ ಮನುಷ್ಯಗಂಧ ಅಥವಾ ಮನುಷ್ಯಸಂಪರ್ಕವಿರುವುದು. ಇವರು ದೇವತೆಗಳಾದ ನಮ್ಮ ಸಹಪಂಕ್ತಿಗೆ ಯೋಗ್ಯರಲ್ಲ. ಇವರೊಡನೆ ಕುಳಿತು ಸೋಮಪಾನ ಮಾಡುವುದು ಅವಮಾನವು ಎಂದು ಭಾವಿಸಿ ತಮಗೂ (ದೇವತೆಗಳಿಗೂ) ಋಭುಗಳಿಗೂ ಮಧ್ಯೆ (ತೆರೆಯನ್ನು ನೀಡುವಂತೆ) ಅಡ್ಡವಾಗಿ ಎರಡು ಧಾಯ್ಯಾಮಂತ್ರಗಳನ್ನು ಕಲ್ಪಿಸಿದರು. **ಯೇಭ್ಯೋ ಮಾತಾ** (ಋ.ಸಂ. ೧೦-೬೩-೩) ಎಂಬುದು ಮೊದಲನೇ ಧಾಯ್ಯಾಮಂತ್ರವು; **ಏವಾ ಪಿತ್ರೇ ವಿಶ್ವದೇವಾಯ** (ಋ.ಸಂ. ೪-೫೦-೬) ಎಂಬುದು ಎರಡನೇ ಧಾಯ್ಯಾಮಂತ್ರವು. ಆದ್ದರಿಂದ ಹಿಂದೆ ಹೇಳಿದ **ಅಯಂ ವೇನಃ** ಎಂಬ ಧಾಯ್ಯಾಮಂತ್ರಪಠನಕ್ಕೆ ಪೂರ್ವಭಾವಿಯಾಗಿ ಈ ಎರಡು ಧಾಯ್ಯಾಮಂತ್ರಗಳನ್ನು ಪಠಿಸಬೇಕು.

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿರುವುದು. ಪೂರ್ವದಲ್ಲಿ ಅಂಗಿರಾಋಷಿಗೆ ನೀತಿಮಂಜರಿ ಎಂಬ ಓರ್ವ ಪುತ್ರನಿದ್ದನು. ಇವನ ವಂಶದಲ್ಲಿ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಋಭುಗಳೆಂದು ಹೇಳುವ ರೂಢಿಯಿದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ದೇವಶಿಲ್ಪಿಗಳೆಂದೂ ಹೇಳುವರು. ಇವರು ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಸಲಕರಣೆಗಳನ್ನು ಎಂದರೆ ಇಂದ್ರನ ರಥವನ್ನೂ ಅಗ್ನಿಯ ಚಮಸಪಾತ್ರೆಯನ್ನೂ ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಈ ಸೂಕ್ತದಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು. ಇವರಿಗೆ ಅದ್ಭುತವಾದ ಶಕ್ತಿಯಿರುವುದೆಂದೂ ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಇವರು ಸೂರ್ಯಮಂಡಲದಲ್ಲಿ ವಾಸವಾಗಿದ್ದು ಸೂರ್ಯರಶ್ಮಿಗಳ ಮೂಲಕ ಕಾರ್ಯಗಳನ್ನು ಮಾಡುವರೆಂದು ಪ್ರತೀತಿ ಇರುವುದು.

ಋಭುಶಬ್ದಕ್ಕೆ ಯಾಸ್ಕರು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿರುವರು---

(೧) **ಋಭವ ಉರು ಭಾಂತೀತಿ ವಾ ।** ಉರು-ಬಹಳವಾಗಿ ಭಾಂತಿ-ಪ್ರಕಾಶಿಸುವವರು. ಆದ್ದರಿಂದ ಇವರಿಗೆ ಋಭುಗಳೆಂದು ಹೆಸರು-ಇಲ್ಲಿ ಉರು ಶಬ್ದದ ಅಂತ್ಯಾಕ್ಷರವಾದ ರುಕಾರವನ್ನೂ ಭಾಂತಿ ಶಬ್ದದ ಆದ್ಯಕ್ಷರವನ್ನೂ ಸೇರಿಸಿ ರುಭು ಅಥವಾ ಋಭು ಎಂದು ಶಬ್ದವಾಗಿರುವುದಾಗಿ ಕೆಲವರ ಅಭಿಪ್ರಾಯವು. ಅಹಃ+ರಾತ್ರಿ=ಹೋರಾ ಎಂಬಂತೆ

(೨) **ಋತೇನ ಭಾಂತೀತಿ ಇತಿ ವಾ ।** ಋತೇನ-ಎಂದರೆ ಸತ್ಯದಿಂದ ಅಥವಾ ಯಜ್ಞದಿಂದ ಪ್ರಕಾಶಿಸುವವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು.

(೩) **ಋತೇನ ಭವಂತೀತಿ ವಾ ॥** ಋತೇನ ಎಂದರೆ ಸತ್ವದಿಂದ (ಸಾಮರ್ಥ್ಯದಿಂದ) ಇರುವವರಾದ್ದರಿಂದ ಎಂದರೆ ಸಾಮರ್ಥ್ಯವುಳ್ಳವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು. ಋತೇನ ಎಂಬ ಶಬ್ದದ ಆದ್ಯಕ್ಷರವಾದ ಋಕಾರವೂ ಭವಂತಿಶಬ್ದದ ಆದ್ಯಕ್ಷರವಾದ ಭಕಾರವೂ ಸೇರಿ ಋಭುವೆಂದು ಆಗಿರುವುದೆಂದು ಕೆಲವರು ಹೇಳುವರು.

ಈ ಋಭುಗಳು ಹಿಂದೆ ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ವಿಷಯವನ್ನು ಈ ಋಕ್ಕು ವಿಶದವಾಗಿ ತಿಳಿಸುವುದು---

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥**

(ಸಂ. ಸಂ. ೧-೧೧೦-೪)

ಇದಕ್ಕೆ ಯಾಸ್ಕರ ನಿರುಕ್ತವು---

**ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತತತ್ವಮಾನಶಿರೇ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ, ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ ॥**

ಮುಖ್ಯಾಭಿಪ್ರಾಯವೇನೆಂದರೆ---ಸುಧನ್ವನ ಪುತ್ರರಾದ ಈ ಋಭುಗಳು ಹಿಂದೆ ಮನುಷ್ಯರಾಗಿದ್ದರು. ಅವರು ಸೂರ್ಯನಿಗೆ ಸಮಾನವಾದ ತಮ್ಮ ಪ್ರಜ್ಞೆ ಅಥವಾ ಬುದ್ಧಿಶಕ್ತಿಯಿಂದ ಬೇಗನೆ ಎಂದರೆ ಒಂದೇ ಸಂವತ್ಸರದಲ್ಲಿ ಸರ್ವಯಜ್ಞಗಳನ್ನೂ ಮಾಡಿ **ಅಮೃತತ್ವಂ** ಎಂದರೆ ದೇವತ್ವವನ್ನು (ಮರಣರಹಿತತ್ವವನ್ನು) ಪಡೆದರು.

ಋಭುಶಬ್ದಕ್ಕೆ ಯಾಸ್ಕರು ಮತ್ತೊಂದರ್ಥವನ್ನೂ ಹೇಳಿರುವರು---

**ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ**---ಸೂರ್ಯನ ರಶ್ಮಿಗಳಿಗೂ ಋಭವಃ ಎಂದು ಹೇಳುವರು ಎಂದು. ಉದಾಹರಣೆಗಾಗಿ---

**ಉದ್ವತ್ಸಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।**
**ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ॥**

(ಋ. ಸಂ. ೧-೧೬೧-೧೧)

ಈ ಋಕ್ಕಿಗೆ ಯಾಸ್ಕರು--- **ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವತ್ತತ್ರ ಭವಥ ನ ತಾವದಿಹ ಭವಥೇತಿ ।** ಎಂದು ನಿರುಕ್ತವನ್ನು ಹೇಳಿರುವರು. ಭಾಷ್ಯಕಾರರೂ ಸಹ ಈ ಋಕ್ಕಿನ ಅರ್ಥವಿವರಣೆ

ಮಾಡುವಾಗ ಋಭವಃ ಎಂಬ ಶಬ್ದಕ್ಕೆ—**ಋಭವಃ ಉರು ಪ್ರಭೂತಂ ಭಾಸಮಾನಾಃ ಋತೇನಾದಿತ್ಯೇನ ಭಾಸಮಾನಾ ವಾ ಋತೇನೋದಕೇನೋದಕಾರ್ಥಮುತ್ಪನ್ನಾ ವಾ**—ಎಂದು ಅರ್ಥಮಾಡಿರುವರು.

ಋ. ಸಂ. ೧-೧೧೦-೨ ನೆಯ ಋಕ್ಕಿನಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸಿದ ಅಥವಾ ಆತಿಥ್ಯವನ್ನು ನೀಡಿದ ಸವಿತೃವಿನ ಮನೆಗೆ ಋಭುಗಳು ಹೋದರು ಎಂದು ಪೂರ್ವದ ಇತಿಹಾಸದ ಸಂದರ್ಭವು ಸೂಚಿಸಿದೆ. ಈ ಇತಿಹಾಸವನ್ನು ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ, ಸಾಯಣರು ಇನ್ನೊಂದುವಿಧವಾಗಿಯೂ ವಿವರಿಸಿದ್ದಾರೆ. ಈ ಸಂದರ್ಭದಲ್ಲಿ,

**ಅತ್ರೇತಿಹಾಸಮಾಚಕ್ಷತೇ । ಋಭವೋ ಯಜ್ಞಿಯತ್ವಂ ಪ್ರಾರ್ಥಯಮಾನಾಃ ಪ್ರಜಾಪತೇಃ ಸಕಾಶಮುಗಮನ್ । ಅಥ ಪ್ರಜಾಪತಿಃ ಸವಿತಾರಮಾಹೂಯಾವೋಚತ್ । ಏತೇಽಪಿ ಯಾ ಭವಂತ್ವಿತಿ । ತಥೇತಿ ಸವಿತಾ ಪ್ರತಿಪದ್ಯ ತಾನ್ ಸ್ವಗೃಹಂ ನೀತ್ವಾ ದ್ವಾದಶ ದಿನಾನ್ಯಾತಿಥ್ಯಮೇಷಾಮಕಾರ್ಷೀದಿತಿ । ತದೇತದ್ವಾಮದೇವೋ ವಕ್ಷ್ಯತಿ ।**

ಋಭುಗಳು ಯಜ್ಞದಲ್ಲಿ ಭಾಗವಹಿಸಿ ಹವಿಸ್ಸನ್ನು ಸ್ವೀಕರಿಸಲು ಅರ್ಹತೆಯನ್ನು ಪಡೆಯಬೇಕೆಂದು ಇಚ್ಛಿಸಿ ಪ್ರಜಾಪತಿಯ ಸಮೀಪಕ್ಕೆ ಹೋದರು. ಆಗ ಪ್ರಜಾಪತಿಯು ಸವಿತೃವನ್ನು ಕರೆದು ಇವರೂ ಸಹ ಯಜ್ಞಾರ್ಹರಾಗಲಿ (ಅದಕ್ಕೆ ಸಹಾಯಮಾಡು) ಎಂದು ಹೇಳಿದ ನಂತರ ಸವಿತೃವು ಹಾಗೇ ಆಗಲೆಂದು ಒಪ್ಪಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಹನ್ನೆರಡು ದಿನಗಳು ಅವರಿಗೆ ಅತಿಥಿಸತ್ಕಾರವನ್ನು ನೆರವೇರಿಸಿದನು ಎಂದು ಸ್ಕಂದಸ್ವಾಮಿಗಳು ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಈ ಕಥಾಸಂದರ್ಭವನ್ನು ಸೂಚಿಸತಕ್ಕ,

**ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।**
**ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥**

(ಋ. ಸಂ. ೪-೩೩-೭)

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. ಇದೇ ಸಂದರ್ಭದಲ್ಲಿ ಸಾಯಣರು ಋಭುಗಳು ಸವಿತೃವಿನ ಮನೆಗೆ ಹೋಗಲು ಒದಗಿದ ಕಾರಣವನ್ನು ತಿಳಿಸತಕ್ಕ ಅಂಶವನ್ನು ಸೂಚಿಸಿದ್ದಾರೆ.

**ಚಾತುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪಸಾರಿತೇಭ್ಯ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುಃ ಗೃಹಂ ನಿವಾಸಸ್ಥಾನಂ ತೃತೀಯಸವನಾಖ್ಯಮಗಚ್ಛತ ಪ್ರಾಪ್ತಾಃ ॥**

ಪ್ರಾತಃಸವನಾದಿಗಳಲ್ಲಿ ಅಗ್ನ್ಯಾದಿದೇವತೆಗಳಿಂದ ತಿರಸ್ಕರಿಸಲ್ಪಟ್ಟು ಹೊರಕ್ಕೆ ಕಳುಹಲ್ಪಟ್ಟ ಋಭುಗಳಾದ ನಿಮಗೆ ಸೋಮಪಾನವನ್ನು ಅರ್ಪಿಸಿದ ಸವಿತೃವಿನ ತೃತೀಯಸವನರೂಪವಾದ ಯಜ್ಞಗೃಹವನ್ನು ಪ್ರವೇಶಿಸಿರಿ ಎಂದು ಅಗ್ನ್ಯಾದಿಗಳಿಂದ ಸಂಭವಿಸಿದ ತಿರಸ್ಕಾರದ ವಿಷಯವನ್ನೂ ಹೇಳಿದ್ದಾರೆ. ಈ ವಿಷಯವು ಐತರೇಯಬ್ರಾಹ್ಮಣದಲ್ಲಿ ವಿಶದವಾಗಿ ಉಕ್ತವಾಗಿದೆ.

**ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ।** (ಐ. ಬ್ರಾ. ೧೩-೩೦)

ಋಭುಗಳು ತಮ್ಮ ತಪಃಸಾಧನೆಯಿಂದಲೂ, ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನವನ್ನು ಸಂಪಾದಿಸಿದರು. ಮೊದಲು ಪ್ರಾತಃಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಮಾಧ್ಯಂದಿನ ಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ವಿಶ್ವೇದೇವತೆಗಳು 'ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ, ನೀವು ಮಾಡಕೂಡದು' ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು 'ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು' ಎಂದನು. ಅನಂತರ ಸವಿತೃವು ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಸೋಮರಸವನ್ನು ಪಾನಮಾಡಿದನು, ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಸನ್ನಿವೇಶವನ್ನು ಸಾಯಣರು ಸೂಕ್ಷ್ಮವಾಗಿ ಹೇಳಿದ್ದಾರೆ.

ಋಭುಗಳ ಕಲಾಕೌಶಲ್ಯದ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು—ತ್ವಷ್ಟೃವಿನಿಂದ ನಿರ್ಮಿತವಾದಾಗ ಒಂದೇ ಆಗಿ ಇದ್ದ ಚಮಸಪಾತ್ರೆಯನ್ನು ನಾಲ್ಕುಪಾತ್ರೆಗಳನ್ನಾಗಿ ಮಾಡಿದಿರಿ ಎಂದು ಋಭುಗಳ ಕಲಾಕೌಶಲ್ಯವನ್ನು ಶ್ಲಾಘಿಸಿದೆ.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ।
ಅಕರ್ತ ಚತುರಃ ಪುನಃ।

(ಋ. ಸಂ. ೧-೨೦-೬)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ ಮತ್ತು ಇದೇ ವಿವರವನ್ನು ಮುಂದೆಯೂ

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ಕೃಣವಾಮೇತ್ಯಾಹ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ॥

(ಋ. ಸಂ. ೪-೩೩-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳುವಂತೆಯೂ ಸಹ ಒಂದಾದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇದು ತ್ವಷ್ಟೃವಿನ ಶಿಷ್ಯರಾಗಿದ್ದರೆಂಬುದೂ ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್॥
ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು।
ಧೇನು ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ।
ಉಕ್ತ್ವಾ ತತಶ್ಚತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ॥

**ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ।**
**ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ದದುಶ್ಚ ತೇ ॥**
**ತೇಷಾಮಾದ್ಯಂತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।**
**ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥**
**ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ॥**

(ಬೃ. ದೇ. ೩-೮೩ ರಿಂದ ೮೯)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲಕಲಾ ಕುಶಲನಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ನಿಪುಣರಾದ ವಿಶ್ವೇದೇವತೆಗಳು ಅವರನ್ನು ಪ್ರತಿಭಟನಾವೃತ್ತಿಯಿಂದ ಎದುರಿಸಿದರು. ಆಗ ಇವರು ಸಕಲದೇವತೆಗಳಿಗೂ ಸಹ ಆಯುಧಗಳನ್ನೂ, ವಾಹನಗಳನ್ನೂ ನಿರ್ಮಿಸಿದರು. ಅನಂತರ ಅಮೃತದಾಯಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳಿಗೆ, ಆಸನತ್ರಯಗಳುಳ್ಳ ರಥಗಳನ್ನೂ, ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತ ವಾದುದನ್ನೂ, ಎಂದರೆ,

**ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ ೧ ಕದ್ಯದೂಚಿಮ ।**
**ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥**
**ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ ಆಗಮಂ ।**
**ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥ ॥**
**ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ ಕರ್ತ್ವಃ ।**
**ಧೇನುಃ ಕರ್ತ್ವಾ ಯುವಶಾ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇಮಸಿ ॥**

(ಋ. ಸಂ. ೧-೧೬೧-೧ ರಿಂದ ೩)

ಎಂಬ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವದೂತನಾಗಿ ಸುಧನ್ವಪುತ್ರರಲ್ಲಿಗೆ ಹೋಗಿ ಒಂದೇ ಆಗಿರುವ ಚಮಸ ಪಾತ್ರೆಯನ್ನು ನಾಲ್ಕನ್ನಾಗಿ ಮಾಡಿ ದೇವತೆಗಳಿಗೆ ಸಹಾಯಮಾಡಿದರೆ ಆಗ ಅವರ ಜೊತೆಯಲ್ಲಿ ಸೋಮರಸ ಪಾನಕ್ಕೆ ಅರ್ಹತೆಯನ್ನು ಅವರು ಪಡೆಯುವರೆಂದು ಹೇಳಿದಾಗ ಅವರು ನಿಮಗೆ ಇದೊಂದು ಕೆಲಸಮಾತ್ರವಲ್ಲದೇ ಅಶ್ವನಿರ್ಮಾಣವಾಗಲಿ, ರಥನಿರ್ಮಾಣವಾಗಲಿ ಅಥವಾ ಧೇನುನಿರ್ಮಾಣವಾಗಲಿ ಅಥವಾ ವೃದ್ಧರಾದ ಮಾತಾಪಿತಗಳನ್ನು ಯುವಕರನ್ನಾಗಿ ಮಾಡುವುದಾಗಲಿ ಇವೆಲ್ಲಾ ನಮ್ಮಿಂದ ಸಾಧ್ಯವಾಗಿದ್ದು, ಅದರಂತೆಯೇ ಈಗಲೂ ಸಹ ನಿಮಗೆ ಅಪೇಕ್ಷಿತವಾದುದನ್ನೆಲ್ಲಾ ಮಾಡಿ ಕೊಡುವೆವು ಎಂದು ಅದನ್ನು ಮಾಡಿಕೊಟ್ಟರು ಎಂಬ ವಿಷಯವನ್ನು ಇಲ್ಲಿ ಸೂಚಿಸಿದೆಯಾದ್ದರಿಂದ ಅಂತಹ ಕುಶಲಕಾರ್ಯದಿಂದ ಅಗ್ನಿಗೆ ಸಹಾಯವನ್ನು ಮಾಡಿದರು. ಆಗ ತ್ವಷ್ಟೃವೂ ಸವಿತೃವೂ, ದೇವದೇವನಾದ ಪ್ರಜಾಪತಿಯೂ ಸಕಲ ದೇವತೆಗಳನ್ನೂ ಕರೆದು ಋಭುಗಳಿಗೆ ಅಮೃತತ್ವವು ಲಭಿಸುವಂತೆ ಅನುಗ್ರಹಿಸಿದರು. ಆಗ (ಅವರನ್ನು ಮೊದಲು ತಿರಸ್ಕರಿಸಿದ್ದ) ಇಂದ್ರನೂ ಸಹ ಅವರೊಂದಿಗೆ ಸೋಮರಸವನ್ನು ಪಾನಮಾಡಿದನು ಎಂಬ ಕಥೆಯು ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸಾಯಣಭಾಷ್ಯದಲ್ಲಿ ಹೇಳಿರುವ ಕಥೆಯು ಈ ರೀತಿಯಿದೆ.— **ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ವತ್ಸಂ ದೃಷ್ಟ್ವಾ ಋಭುಂ ತುಷ್ಟಾವ । ಋಭವಸ್ತತ್ಸದೃಶೀಮನ್ಯಾಂ ಧೇನುಂ ಕೃತ್ವಾ ತದೀಯೇನ ಚರ್ಮಣಾ ಸಂವೀಯ ತೇನ ವತ್ಸೇನ ಸಮಯೋಜಯನ್ನಿತಿ ।** ಹಿಂದೆ ಒಬ್ಬ ಋಷಿಯ ಧೇನುವು

ಮೃತವಾದಾಗ ಅದರ ಸಣ್ಣ ಕರುವಿನ ಮೇಲಿನ ಕನಿಕರದಿಂದ ಅದಕ್ಕೆ ಸಹಾಯಮಾಡಬೇಕೆಂದು ಋಭುಗಳನ್ನು ಪ್ರಾರ್ಥಿಸಿದನು. ಆಗ ಋಭುಗಳು ಬೇರೆ ಹಸುವನ್ನು ಸೃಷ್ಟಿಸಿ ಅದಕ್ಕೆ ಸತ್ತ ಹಸುವಿನ ಚರ್ಮವನ್ನು ಹೊದ್ದಿಸಿ ಆ ಕರುವಿನೊಂದಿಗೆ ಸೇರುವಂತೆ ಮಾಡಿದರು. ಇದು ಇವರ ಮಹಿಮೆಯು. ಸ್ಕಂದಸ್ವಾಮಿಗಳ ವಿವರಣೆಯಂತೆ,

> **ಅತ್ರೇತಿಹಾಸಮಾಚಕ್ಷತೇ । ಋಷೇಃಕಸ್ಯಚಿದಗ್ನಿಹೋತ್ರಧೇನುಸ್ಸರುಣವತ್ಸಾ ಮಮಾರ । ತಸ್ಯಾಂ ವಿಕರ್ತಿತಾಯಾಂ ಆರುದತಾ ವತ್ಸೇನ ಉದ್ವೇಜಿತಃ ಋಭೂನ್ ಸ್ವಪಿತರೌ ವೃದ್ಧೌ ಪುನರ್ಯುವಾನೌ ಕುರ್ವತೋ ದದರ್ಶ । ತಾನುವಾಚ । ಮಮಾಪ್ಯಗ್ನಿಹೋತ್ರಧೇನುಂ ಮೃತಾಂ ಪುನರ್ಜೀವಯತೇತಿ । ತಸ್ಯ ಸ್ವಮಾಹಾತ್ಮ್ಯೇನ ತಸ್ಮಾಚ್ಚರ್ಮಣಃ ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ ಇತಿ । ತದೇತದಿಹೋಚ್ಯತೇ ನಿಶ್ಚರ್ಮಣ ಇತಿ ।**

ಒಬ್ಬ ಋಷಿಯ ಅಗ್ನಿಹೋತ್ರಧೇನುವು ತನ್ನ ಎಳೆಯ ಕರುವನ್ನು ಬಿಟ್ಟು ಸತ್ತುಹೋಯಿತು. ಅದನ್ನು ಕುಯ್ಯುವಾಗ ಆ ಎಳೆಯ ಕರುವಿನ ಆರ್ತನಾದವನ್ನು ಕೇಳಿ ಕನಿಕರದಿಂದ ಋಷಿಯು ಋಭುಗಳನ್ನು ಜ್ಞಾಪಿಸಿಕೊಂಡನು. ಅವರು ತಮ್ಮ ವೃದ್ಧರಾದ ಮಾತಾಪಿತೃಗಳನ್ನು ಪುನಃ ವಯಸ್ಕರನ್ನಾಗಿ ಮಾಡುತ್ತಿದ್ದರು. ಅವರ ಆ ಶಕ್ತಿಯನ್ನು ನೋಡಿ ಮೃತವಾದ ತನ್ನ ಅಗ್ನಿಹೋತ್ರಧೇನುವನ್ನೂ ಬದುಕಿಸಬೇಕೆಂದು ಕೇಳಿಕೊಂಡನು. ಅವರು ಸತ್ತುಹೋಗಿದ್ದ ಆ ಹಸುವನ್ನು ಅದೇ ವಿಕರ್ತಿತವಾದ ಚರ್ಮದ ಹೊದ್ದಿಕೆಯಿಂದ ಪೂರ್ಣವಾದ ಅವಯವಗಳುಳ್ಳದ್ದನ್ನಾಗಿ ಮಾಡಿ ಆ ಹಸುವನ್ನು ಬದುಕಿಸಿದರು ಎಂದು ಹೇಳಿದೆ. ಸಾಯಣರು ಹೇಳುವುದಕ್ಕೂ ಇದಕ್ಕೂ ಇರುವ ಮುಖ್ಯವ್ಯತ್ಯಾಸವು ಏನೆಂದರೆ, ಅವರು **ಅನ್ಯಾಂ ಧೇನುಂ ಕೃತ್ವಾ** ಎಂದಿದ್ದಾರೆ. ಸ್ಕಂದಸ್ವಾಮಿಯು **ತಾಮೇವ ಗಾಂ ಅಶೇಷಾವಯವೋಪೇತಾಂ ಚಕ್ರುಃ** ಎಂದು ಹೇಳಿದ್ದಾರೆ.

ಋಭು ಎಂಬ ಪದವು ಪ್ರಾಯಶಃ ರಭ್ (ಹಿಡಿದಿಕೋ) ಧಾತುವಿನಿಂದ ನಿಷ್ಪನ್ನವಾಗಿದೆ. (೨-೩-ಅನ್ನು ಹೋಲಿಸಿ); ಆದುದರಿಂದಲೇ ಆ ಪದಕ್ಕೆ 'ಸಮಯಕ್ಕೆ ಒದಗುವ' 'ಕೈಚಳಕವುಳ್ಳ' ಎಂದು ಅರ್ಥವಾಗಿದೆ. ಈ ಋಭುಪದವು ಇದೇ ಅರ್ಥದಲ್ಲಿ ವಿಶೇಷಣವಾಗಿ ಇಂದ್ರ, ಅಗ್ನಿ, ಮತ್ತು ಆದಿತ್ಯರುಗಳಿಗೆ ಅನೇಕ ಸಲ ಉಪಯೋಗಿಸಲ್ಪಟ್ಟಿವೆ. ವಾಜ ಎಂಬ ಪದಕ್ಕೆ ಸಮರ್ಥ ಎಂತಲೂ ವಿಭ್ವಾ ಎಂಬುದಕ್ಕೆ ಪ್ರಸಿದ್ಧವಾದ ಎಂತಲೂ ಅರ್ಥವಾಗುತ್ತದೆ. ಆದುದರಿಂದ ಋಭು ಮೊದಲಾದ ಪದಗಳು, ಅವರುಗಳ ಕೌಶಲ್ಯವನ್ನೂ ಸೂಚಿಸುವ ಅನ್ವರ್ಥನಾಮಗಳಾಗಿವೆ.

ಇವರು ಮೊದಲು ದೇವತೆಗಳಾಗಿರಲಿಲ್ಲವೆಂಬುದು ಸ್ಪಷ್ಟವಾದ ವಿಷಯ. ಆದರೆ ದೇವತೆಗಳಾಗುವ ಮುಂಚೆ ಅವರ ಸ್ವಭಾವವೇನು ಎಂಬುದು ಸ್ಪಷ್ಟವಾಗಿಲ್ಲ. ಸೌಧನ್ವರು ಎಂದು ಹೇಳಿದಾಗಲೂ ಅವರು ಯಾರೆಂಬುದು ಗೊತ್ತಾಗುವುದಿಲ್ಲ. ಸುಧನ್ವಾನ್ ಎಂಬುದು ರುದ್ರ ಮತ್ತು ಮರುತರಿಗೆ ಅನ್ವಯಿಸುವಂತೆ ಎರಡೇ ಸಲ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಅನೇಕ ಕಡೆ ಹೇಳಿರುವಂತೆ, ದ್ಯಾವಾಭೂಮಿಗಳು ಅವರ ಮಾತಾಪಿತೃಗಳಿರಬಹುದು. ಮರೆಮಾಡಲಸಾಧ್ಯವಾದ ಸವಿತೃವಿನ ಮನೆಯಲ್ಲಿದ್ದುದರಿಂದ ಅವರಿಗೆ ಭೂಮಿಯನ್ನು ಫಲವತ್ತಾಗಿ ಮಾಡುವ ಶಕ್ತಿಯಿದೆಯೆಂದು ಹೇಳಿರಬಹುದು. ಅನೇಕ ವಿದ್ವಾಂಸರು, ಈ ಮೂವರೂ ಮೂರು ಋತುಗಳ ಅಭಿಮಾನಿಗಳೆಂದೂ, ಅವರು ಹನ್ನೆರಡು ದಿನಗಳು ನಿದ್ರಿಸಿದರೆಂಬುದು ಮಕರಸಂಕ್ರಾಂತಿ ಕಾಲದಲ್ಲಿ ಋತುಗಳು ಹನ್ನೆರಡು ದಿವಸ ಚಲಿಸದೇ ಇರುವುದಕ್ಕೆ ಅನ್ವಯಿಸುತ್ತದೆಯೆಂತಲೂ, ಬಟ್ಟಲೆಂಬುದು ಚಂದ್ರನೆಂತಲೂ, ಅದು ನಾಲ್ಕು ಆಯಿತೆಂಬುದು ಚಂದ್ರನ ನಾಲ್ಕು ರೂಪಗಳೆಂತಲೂ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಇವರು ಭೂಮಿ ಅಥವಾ ವಾಯುಮಂಡಲದಲ್ಲಿರುವ ಅಪ್ರಾಕೃತವ್ಯಕ್ತಿಗಳೆಂದೂ, ಅವರ ಕೌಶಲ್ಯವು ಅವರ ವಿಷಯವಾಗಿ ಅನೇಕ ಸಾಹಸ ಕರ್ಮಗಳ ಕಥೆಗಳು ಹೊರಡುವಂತೆ ಮಾಡಿತೆಂದೂ ಹೇಳಬಹುದು. ಆದರೆ ಋಗ್ವೇದವೊಂದನ್ನೇ ಆಧಾರವಾಗಿಟ್ಟುಕೊಳ್ಳುವುವುದಾದರೆ ಯಾವ ನಿಶ್ಚಿತ ಅಭಿಪ್ರಾಯಕ್ಕೂ ಅವಕಾಶವಿಲ್ಲ.

## *English Translation*

### (Story of the Ribhus. On their share in the evening libation.)

He repeats the Ribhu hymn (takshan ratham, 1, 111). The (beings called) Ribhus among the gods, had by means of austerities, obtained the right to a share in the Soma beverage. They (the gods) wished to make room for them in the recitations at the morning libations; but Agni with the Vasus, to whom this libation belongs, turned them out of the morning libation. They (the gods) then wished to make room for them in the recitations at the midday libation; but Indra with the Rudras, to whom this libation belongs, turned them out of this libation. They then wished to make room for them in the recitations at the evening libation; but the Vis've Devah to whom it belongs tried to turn them. out of it, saying, "they shall not drink here, they shall not." Prajapati then said to Savitar, "these are thy pupils; thou alone among the Vis've Devah, therefore shalt drink with them." He consented, and said to Prajapathi, "drink thou also, standing on both sides of the Ribhus." Prajapati drank standing on both sides of them. That is the reason that these two Dhayyas required for the Vais'vadeva Shastra which do not contain the name of any particular deity, and belong to Prajapati, are repeated, one before the other, after the Ribhu hymn. They are surupakritnum utaye (1, 4, 1) and ayam venas' chodayat (10, 123, 1) Prajapati thus drinks on both their sides. Thus it comes that a chief (s'reshthi) favours with a draught from his goblet whom he likes.

The gods, however, abhorred them (the Ribhus) on account of their human smell. (Therefore) they placed two other Dhayyas between the Ribhus and themselves. These are yebhyo mata madhumat (10, 63, 3) and eva pitre vis'va devaya (4, 50, 6).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ಷಷ್ಠಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಆರನೆಯ ಖಂಡವು
ಸಮಾಪ್ತವಾದುದು.



# ಅಥ ತ್ರಯೋದಶಾಧ್ಯಾಯೇ ಸಪ್ತಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು



[ವಿಶ್ವೇದೇವತೆಗಳನ್ನು ಉದ್ದೇಶಿಸಿ ಪಠಿಸುವ ನಿವಿತ್ಸೂಕ್ತವು; ವಿಶ್ವೇದೇವತೆಗಳನ್ನುದ್ದೇಶಿ ಪಠಿಸುವ ವೈಶ್ವದೇವಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಬೇಕಾದ ಧಾಯ್ಯಾಮಂತ್ರಗಳು; ಈ ಧಾಯ್ಯಾಮಂತ್ರಗಳು ಯಾವ ದೇವತೆಗಳಿಗೆ ಸೇರಿದ್ದು ಮತ್ತು ಈ ವೈಶ್ವದೇವಶಸ್ತ್ರ ಮಂತ್ರಗಳಲ್ಲಿ ಕೊನೆಯ ಋಕ್ಕಿನ ವಿವರಣೆಯು]

---

### ವೈಶ್ವದೇವಂ ಶಂಸತಿ ।

ಅಥ ವಿಶ್ವೇದೇವದೇವತಾಕಮಾ ನೋ ಭದ್ರಾಃ (೧-೮೯-೧) ಇತ್ಯೇತತ್ಸೂಕ್ತಂ ವಿಧತ್ತೇ—
ಈಗ ವಿಶ್ವೇದೇವತಾಕವಾದ ಆ ನೋ ಭದ್ರಾಃ (ಋ. ಸಂ. ೧-೮೯-೧) ಎಂಬ ಸೂಕ್ತವನ್ನು ಪಠಿಸಬೇಕು.

**ಯಥಾ ವೈ ಪ್ರಜಾ ಏವಂ ವೈಶ್ವದೇವಂ ತದ್ಯಥಾಂತರಂ ಜನತಾ ಏವಂ ಸೂಕ್ತಾನಿ ಯಥಾಽರಣ್ಯಾನ್ಯೇವಂ ಧಾಯ್ಯಾಸ್ತದುಭಯತೋ ಧಾಯ್ಯಾಂ ಪರ್ಯಾಹ್ವಯತೇ ತಸ್ಮಾತ್ತಾನ್ಯರಣ್ಯಾನಿ ಸಂತ್ಯನರಣ್ಯಾನಿ ಮೃಗೈಶ್ಚ ವಯೋಭಿಶ್ಚೇತಿ ಹ ಸ್ಮಾಽಽಹ ॥**

ಲೌಕಿಕದೃಷ್ಟಾಂತೇನ ಪ್ರಶಂಸನ್ನಾಹಾವಂ ವಿಧತ್ತೇ—ಲೋಕೇ ಯಥಾ ಪ್ರಜಾ ಏವಮತ್ರ ವೈಶ್ವದೇವಶಸ್ತ್ರಂ ಪ್ರಜಾಶಬ್ದೇನ ತನ್ನಿವಾಸಸ್ಥಾನಂ ರಾಜ್ಯಮುಪಲಕ್ಷ್ಯತೇ ರಾಜ್ಯಸದೃಶಂ ಶಸ್ತ್ರಮಿತ್ಯರ್ಥಃ॥ ತತ್ತತ್ರ ಪ್ರಜಾಶಬ್ದೇನ ರಾಜ್ಯೇ ವಿವಕ್ಷಿತೇ ರಾಜ್ಯೇಽಂತರಮಭ್ಯಂತರಮಭ್ಯಂತರೇ ಜನತಾ ಜನಸಮೂಹಾ ಯಥಾ ತಿಷ್ಠಂತಿ, ಏವಂ ತಸ್ಮಿನ್ಸೂಕ್ತೇ ಶಸ್ತ್ರೇ ಸೂಕ್ತಾನಿ ತಿಷ್ಠಂತಿ। ಯಥಾ ವಾಽರಣ್ಯಾನಿ ರಾಜ್ಯೇ ಕ್ವಚಿತ್ಕ್ವಚಿದ್ಭವಂತಿ, ಏವಮಸ್ಮಿನ್ಶಸ್ತ್ರೇ ಧಾಯ್ಯಾಃ ಕ್ವಚಿತ್ಪ್ರಕ್ಷಿಪ್ಯಂತೇ ॥ ತಥಾ ಸತ್ಯರಣ್ಯಸ್ಥಾನೀಯಾಂ ಧಾಯ್ಯಾಮುಭಯತಃ ಪರ್ಯಾಹ್ವಯತೇ ॥ ಶೋಂಸಾವೋಮಿತ್ಯೇಷ ಮಂತ್ರಃ ಪರ್ಯಾಹಾವಃ ॥ ಅಸ್ಯ ಧಾಯ್ಯಾಯಾಃ ಪಾರ್ಶ್ವಯೋರ್ಯಸ್ಮಾತ್ಪಾಠಸ್ತಸ್ಮಾಲ್ಲೋಕೇಽಪಿ ಬಹುವೃಕ್ಷಸಂಕೀರ್ಣಾನಿ ಸ್ಥಾನಾನಿ ಸ್ವಭಾವತೋಽರಣ್ಯಾನಿ ಮನುಷ್ಯಶೂನ್ಯಾನಿ ಸಂತ್ಯಪಿ ಮೃಗೈಶ್ಚ ಪಕ್ಷಿಭಿಶ್ಚ ಸಂಕೀರ್ಣಾನ್ಯನರಣ್ಯಾನ್ಯಶೂನ್ಯಾನ್ಯೇವೇತಿ ಕಶ್ಚಿದಭಿಜ್ಞ ಆಹ ಸ್ಮ॥

ಲೋಕವ್ಯವಹಾರ ದೃಷ್ಟಾಂತಪೂರ್ವಕವಾಗಿ ಆಹಾವಂ ಎಂಬ ಅಧ್ವರ್ಯುವನ್ನು ಆಹ್ವಾನಮಾಡುವ **ಶೋಂಸಾವೋಂ** ಎಂಬ ಮಂತ್ರವನ್ನು ವಿವರಿಸುವರು— **ಆ ನೋ ಭದ್ರಾ** (ಋ. ಸಂ. ೧-೮೯-೧) ಎಂಬುದು ವೈಶ್ವದೇವಶಸ್ತ್ರಮಂತ್ರವು.

ಲೋಕವ್ಯವಹಾರದಲ್ಲಿ ಕಂಡುಬರುವಂತೆ ಒಂದು ದೇಶದಲ್ಲಿ ರಾಜನೂ ಪ್ರಜೆಗಳೂ ಇರುವರು. ಅದರಂತೆ ಈ ವೈಶ್ವದೇವಸೂಕ್ತ ದಲ್ಲಿರುವ ಮಂತ್ರಗಳೇ ಪ್ರಜೆಗಳೆಂದು ಭಾವಿಸಲ್ಪಡುವುದು. ಎಂದರೆ ಒಂದು ರಾಜ್ಯದಲ್ಲಿ ಜನಸಮೂಹಗಳು ಯಾವರೀತಿ ವಾಸ ಮಾಡುತ್ತಿರುವರೋ ಹಾಗೆ ಈ ವೈಶ್ವದೇವಶಸ್ತ್ರದಲ್ಲಿ (ರಾಜ್ಯದಲ್ಲಿ) ಮಂತ್ರಗಳು (ಪ್ರಜೆಗಳು) ಇರುವರು. ಅರಣ್ಯಪ್ರದೇಶದಲ್ಲಿ ಅಲ್ಲಲ್ಲಿ ಕೆಲವು ಪ್ರದೇಶಗಳಲ್ಲಿ ಮಾತ್ರ ರಾಜ್ಯಗಳಿರುವಂತೆ, ಈ ಶಸ್ತ್ರದಲ್ಲಿ ಧಾಯ್ಯಾಮಂತ್ರಗಳು ಪ್ರತಿಯೊಂದು ಶಸ್ತ್ರಮಂತ್ರದ ಮೊದಲು ಮತ್ತು ಕೊನೆಯಲ್ಲಿ ಸೇರಿಸಲ್ಪಡುವವು. ಆದ್ದರಿಂದ ಪ್ರತಿಯೊಂದು ಧಾಯ್ಯಾಮಂತ್ರದ ಆದಿ ಮತ್ತು ಕೊನೆಗಳಲ್ಲಿಯೂ ಈ ಆಹಾವ (ಶೋಂಸಾವೋಂ)ವನ್ನು ಸೇರಿಸಿ ಪಠಿಸಲ್ಪಡುವುದು. ಲೋಕವ್ಯವಹಾರದಲ್ಲಿ ಈ ಅರಣ್ಯಪ್ರದೇಶಗಳಲ್ಲಿ ಜನರು ಹೆಚ್ಚಾಗಿ ವಾಸಮಾಡುವುದಿಲ್ಲವಾದರೂ ಈ ಪ್ರದೇಶಗಳು ಪೂರ್ತಿ ನಿರ್ಜನಪ್ರದೇಶಗಳೆಂದು ಭಾವಿಸಬೇಕಾಗಿಲ್ಲ. ಏಕೆಂದರೆ ಅರಣ್ಯಾದಿ ಪ್ರದೇಶಗಳಲ್ಲಿ ಜನರು ವಾಸಮಾಡದೇ ಇದ್ದರೂ ಅಲ್ಲಿ ಪಶುಪಕ್ಷ್ಯಾದಿಗಳು ಇದ್ದೇ ಇರುವುದರಿಂದ ಅವು ಶೂನ್ಯ ಪ್ರದೇಶಗಳೇನೂ ಅಲ್ಲವೆಂದು ಕೆಲವರು ಹೇಳುವರು.

**ಯಥಾ ವೈ ಪುರುಷ ಏವಂ ವೈಶ್ವದೇವಂ ತಸ್ಯ ಯಥಾವಾಂತರ-ಮಂಗಾನ್ಯೇವಂ ಸೂಕ್ತಾನಿ ಯಥಾ ಪರ್ವಾಣ್ಯೇವಂ ಧಾಯ್ಯಾ-ಸ್ತದುಭಯತೋ ಧಾಯ್ಯಾಂ ಪರ್ಯಾಹ್ವಯತೇ ತಸ್ಮಾತ್ಪು-ರುಷಸ್ಯ ಪರ್ವಾಣಿ ಶಿಥಿರಾಣಿ ಸಂತಿ ದೃಳ್ಹಾನಿ ಬ್ರಹ್ಮಣಾಽಽ-ಹಿತಾನಿ ಧೃತಾನಿ ।**

ಏವಮೇಕೇನ ದೃಷ್ಟಾಂತೇನ ಪರ್ಯಾಹಾವಂ ಪ್ರಶಸ್ಯ ಪುನರಪ್ಯನ್ಯೇನ ದೃಷ್ಟಾಂತೇನ ಪ್ರಶಂಸತಿ ॥ ಲೋಕೇ ಯಥಾ ಪುರುಷೋ ಹಸ್ತಪಾದಾದಿಮಾನ್ಮನುಷ್ಯದೇಹಸ್ತದ್ವದಿದಂ ವೈಶ್ವ-ದೇವಶಸ್ತ್ರಂ ತಸ್ಯ ಶರೀರಸ್ಯಾವಾಂತರಮಭ್ಯಂತರಪ್ರವೇಶಾಂಗಾನ್ಯವಯವಾ ಯಥಾ ವರ್ತಂತ ಏವಂ ಶಸ್ತ್ರಸ್ಯಾಭ್ಯಂತರೇ ಸೂಕ್ತಾನಿ ನಿವಿಷ್ಟಾನಿ । ಯಥಾ ತೇಷಾಮವಯವಾನಾಂ ಸಂಧಯ ಏವಮೇತಾ ಧಾಯ್ಯಾಃ ಶಸ್ತ್ರೇ ತಿಷ್ಠಂತಿ । ತಥಾ ಸತಿ ಧಾಯ್ಯಾ ಉಭಯಪಾರ್ಶ್ವಪರ್ವಾಣಿ ಶಿಥಿರಾಣಿ ಪೂರ್ವಂ ಶಿಥಿಲಾನಿ ಸಂತ್ಯಪಿ ಪಾಶ್ಚಾತ್ಪ್ರಯತ್ನೇನ ಧಾರಿತಾನಿ ದೃಢಾನಿ ಸಂಪದ್ಯಂತೇ ಬ್ರಹ್ಮ ವಾ ಆಹಾವ ಇತಿ ಶ್ರುತತ್ವಾದಾಹಾವರೂಪೇಣ ಬ್ರಹ್ಮಣೈವ ಧಾಯ್ಯಾರೂಪಾಣಿ ಪರ್ವಾಣಿ ಧೃತಾನಿ ಭವಂತಿ ॥

ಹಿಂದೆ ಹೇಳಿದ ವಿಷಯವನ್ನು ಒಂದು ದೃಷ್ಟಾಂತ ಮೂಲಕ ವಿವರಿಸಿ ಪುನಃ ಅದೇ ವಿಷಯವನ್ನು ಮತ್ತೊಂದು ದೃಷ್ಟಾಂತದ ಮೂಲಕ ವಿವರಿಸುತ್ತಾರೆ-- ಲೋಕವ್ಯವಹಾರದಲ್ಲಿ ಕಂಡುಬರುವಂತೆ ಪುರುಷನಿಗೆ ಹಸ್ತಪಾದಾದಿ ಅನೇಕ ಅವಯವ ಗಳಿರುವವು. ಅದರಂತೆ ಈ ವೈಶ್ವದೇವಶಸ್ತ್ರಕ್ಕೂ ಅನೇಕ ಅವಯವಗಳು ಎಂದರೆ ಭಾಗಗಳಿರುವವು. ಮನುಷ್ಯನ ಶರೀರದಲ್ಲಿರುವ ಅವಯವಗಳು (ಅಂಗಗಳು) ಯಾವರೀತಿ ಶರೀರಕ್ಕೆ ಸೇರಿಕೊಂಡಿರುವವೋ ಅದರಂತೆ ಈ ಶಸ್ತ್ರಮಂತ್ರಗಳೂ ಸೇರಿಕೊಂಡಿರುವವು. ಅಂಗಗಳ ಮಧ್ಯೆ ಇರುವ ಸಂಧಿಪ್ರದೇಶಗಳಂತೆ ಮಂತ್ರಗಳ ಮಧ್ಯೇ ಧಾಯ್ಯಾಮಂತ್ರಗಳಿರುವವು. ಈ ಸಂಧಿಪ್ರದೇಶಗಳು ಕೆಲವು ವೇಳೆ ಶಿಥಿಲವಾಗಿ ಕಂಡುಬಂದರೂ ಪ್ರಯತ್ನದಿಂದ ದೃಢವಾಗಿ ಎಂದರೆ ಗಟ್ಟಿಮುಟ್ಟಾಗಿ ಆಗುವವು. ಇಲ್ಲಿಯೂ ಎಂದರೆ ಶಸ್ತ್ರ ಮಂತ್ರಗಳಲ್ಲಿ ಒಂದೊಂದಕ್ಕಿರುವ ಸಂಬಂಧವು (ಸಂಧಿ ಪ್ರದೇಶವು) ಸರಿಯಾಗಿಲ್ಲವೆಂದು ಕಂಡುಬಂದರೂ ಇವುಗಳ ಮಧ್ಯದಲ್ಲಿ

ಸೇರಿರುವ ಧಾಯ್ಯಾಮಂತ್ರಗಳು ಇವುಗಳನ್ನು (ಈ ಮಂತ್ರಗಳನ್ನು) ಸರಿಯಾದ ಕ್ರಮದಲ್ಲಿರುವಂತೆ ಮಾಡುವವು. **ಬ್ರಹ್ಮ ವಾ ಆಹಾವಃ** ಎಂಬ ಶ್ರುತಿವಾಕ್ಯದಂತೆ ಆಹಾವ ಮಂತ್ರವು ಬ್ರಹ್ಮಸ್ವರೂಪವಾಗಿರುವುದು. ಆದ್ದರಿಂದ ಇದು ಪದೇಪದೇ ಪರಿಸಲ್ಪಟ್ಟ ಧಾಯ್ಯಾರೂಪವಾಗಿರುವ ಸಂಧಿಪ್ರದೇಶಗಳನ್ನು ಸರಿಯಾದ ಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುವವು ಎಂದಭಿಪ್ರಾಯವು.

**ಮೂಲಂ ವಾ ಏತದ್ಯಜ್ಞಸ್ಯ ಯದ್ಧಾಯ್ಯಾಶ್ಚ ಯಾಜ್ಯಾಶ್ಚ ತದ್ಯದನ್ಯಾ ಅನ್ಯಾ ಧಾಯ್ಯಾಶ್ಚ ಯಾಜ್ಯಾಶ್ಚ ಕುರ್ಯುರುನ್ಮೂಲಮೇವ ತದ್ಯಜ್ಞಂ ಕುರ್ಯುಸ್ತಸ್ಮಾತ್ತಾಃ ಸಮಾನ್ಯ ಏವ ಸ್ಯುಃ ।**

**ಅಥ ಧಾಯ್ಯಾನಾಂ ಶಸ್ತ್ರಯಾಜ್ಯಾನಾಂ ಚ ಪ್ರಕೃತೌ ವಿಕೃತೌ ಚಾನ್ಯತ್ವಂ ನಿರಾಕೃತ್ಯೈಕರೂಪತ್ವಂ ವಿಧತ್ತೇ—ಧಾಯ್ಯಾನಾಂ ಶಸ್ತ್ರಯಾಜ್ಯಾನಾಂ ವೃಕ್ಷಮೂಲವದ್ಯಜ್ಞಮೂಲತಾ ॥ ತತ್ಪ್ರಕೃತಿಗತಾಃ ಪರಿತ್ಯಜ್ಯ ವಿಕೃತಾವನ್ಯಸ್ವೀಕಾರೇ ಯಜ್ಞರೂಪೋ ವೃಕ್ಷ ಉನ್ಮೂಲಿತಃ ಸ್ಯಾತ್ । ತಸ್ಮಾತ್ಪ್ರಕೃತೌ ಯಾಃ ಸಂತಿ ತಾ ಏವ ವಿಕೃತಾವಿತ್ಯುಭಯತ್ರ ಸಮಾನ್ಯ ಏವೈಕವಿಧಾ ಏವ ಕರ್ತವ್ಯಾಃ ।**

ಈ ವೈಶ್ವದೇವಶಸ್ತ್ರಮಂತ್ರಗಳಲ್ಲಿ ಉಪಯೋಗಿಸಲ್ಪಡುವ ಧಾಯ್ಯಾಮಂತ್ರಗಳೂ ಯಾಜ್ಯಾಮಂತ್ರಗಳೂ ಪ್ರಕೃತಿಯೇ (ಮೂಲಭೂತವೇ) ಅಥವಾ ವಿಕೃತಿಸ್ವರೂಪವೇ ಎಂಬ ಸಂಶಯವನ್ನು ಪರಿಹಾರಮಾಡಿ ಈ ಮಂತ್ರಗಳಲ್ಲಿ ಯಾವುದು ಪ್ರಕೃತಿ, ಯಾವುದು ವಿಕೃತಿ ಎಂದು ಪರಿಗಣಿಸದೆ ಈ ಎರಡು ವಿಧವಾದ ಸಮಾನತ್ವವೂ ಈ ಮಂತ್ರಗಳಿಗಿವೆಯೆಂದು ತಿಳಿಸುವರು— ಈ ಧಾಯ್ಯಾಮಂತ್ರಗಳೂ ಮತ್ತು ಶಸ್ತ್ರಯಾಜ್ಯಾಮಂತ್ರಗಳೂ ಯಜ್ಞಕ್ಕೆ ಮೂಲಭೂತವಾಗಿರುವವು. ವೃಕ್ಷಕ್ಕೆ ಮೂಲ ಎಂದರೆ ಬೇರು ಹೇಗೆ ಆಧಾರವೋ ಅದರಂತೆ ಯಜ್ಞಕ್ಕೆ ಧಾಯ್ಯಾ ಮತ್ತು ಯಾಜ್ಯಾಮಂತ್ರಗಳು ಮೂಲಾಧಾರವಾಗಿವೆ ಎಂದು ತಿಳಿಯಬೇಕು. ಈ ಮಂತ್ರಗಳು ಪ್ರಕೃತಿ (ಮೂಲಸ್ವರೂಪ) ರೂಪವಾದ ಮಂತ್ರಗಳಲ್ಲ, ವಿಕೃತಿಗಳು ಎಂದು ಪರಿಗಣಿಸಿದಲ್ಲಿ ವೃಕ್ಷದ ಬೇರನ್ನು ಕತ್ತರಿಸಿದರೆ ವೃಕ್ಷವು ಉರುಳುವಂತೆ ಯಜ್ಞವು ಉರುಳುವುದು ಎಂದರೆ ಕೆಟ್ಟುಹೋಗುವುದು. ಆದ್ದರಿಂದ ಈ ಮಂತ್ರಗಳು ಪ್ರಕೃತಿಯೇ ಆಗಿರಲಿ, ವಿಕೃತಿಯೇ ಆಗಿರಲಿ, ಇವೆರಡುವಿಧವಾದ ಮಂತ್ರಗಳಿಗೂ ಸಮಾನತ್ವವು ಎಂದರೆ ಒಂದೇ ವಿಧವಾದ ಸ್ಥಾನಮಾನಗಳು ಇರುವವು ಎಂದು ತಿಳಿಯಬೇಕು.

**ಪಾಂಚಜನ್ಯಂ ವಾ ಏತದುಕ್ಥಂ ಯದ್ವೈಶ್ವದೇವಂ ಸರ್ವೇಷಾಂ ವಾ ಏತತ್ಪಂಚಜನಾನಾಮುಕ್ಥಂ ದೇವಮನುಷ್ಯಾಣಾಂ ಗಂಧರ್ವಾಪ್ಸರಸಾಂ ಸರ್ಪಾಣಾಂ ಚ ಪಿತೃಣಾಂ ಚೈತೇಷಾಂ ವಾ ಏತತ್ಪಂಚಜನಾನಾಮುಕ್ಥಂ ಸರ್ವ ಏನಂ ಪಂಚಜನಾ ವಿದುಃ**

**ವೈಶ್ವದೇವಶಸ್ತ್ರಮವಯವಶಃ ಪ್ರಶಸ್ಯ ಸಮುದಾಯಾಕಾರೇಣ ಪ್ರಶಂಸತಿ—ಯದ್ವೈಶ್ವದೇವನಾಮಕಂ ಉಕ್ಥಂ ಶಸ್ತ್ರಮಸ್ತಿ ತದೇತತ್ಪಾಞ್ಚಜನ್ಯಂ ವೈ ಪಂಚವಿಧಾನಾಂ ಜನಾನಾಂ ಸಂಬಂಧ್ಯೇವ ॥ ಸ ಏವಾರ್ಥಃ ಸರ್ವೇಷಾಮಿತ್ಯಾದಿನಾ ಸ್ಪಷ್ಟೀಕ್ರಿಯತೇ ॥ ಯೇ ಪಂಚವಿಧಾ ಜನಾಃ ಸಂತಿ ತೇಷಾಂ ಸರ್ವೇಷಾಮೇವ ಸಂಬಂಧ್ಯೇತಚ್ಛಸ್ತ್ರಂ । ಪಂಚವಿಧತ್ವಮೇವ ಮನು-**

ಷ್ಯಾಣಾಮಿತ್ಯಾದಿನೋಚ್ಯತೇ ॥ ಅಗ್ನೀಂದ್ರಾದಿದೇವಗಣ ಏಕೋವರ್ಗಃ ॥ ಬ್ರಾಹ್ಮಕ್ಷತ್ರಿಯಾದಿ ಮನುಷ್ಯಗಣೋ ದ್ವಿತೀಯೋ ವರ್ಗಃ ॥ ಗಂಧರ್ವಾಣಾಮಪ್ಸರಸಾಂ ವರ್ಗಸ್ತೃತೀಯಃ ॥ ಸರ್ಪಾಣಾಂ ವರ್ಗಶ್ಚತುರ್ಥಃ ॥ ಪಿತೄಣಾಂ ವರ್ಗಃ ಪಂಚಮಃ ॥ ಏತೇಷಾಂ ಪಂಚವಿಧಾನಾಂ ಜನಾನಾಂ ತುಷ್ಟಿಹೇತುತ್ವಾತ್ತದೀಯಮೇತಚ್ಛಸ್ತ್ರಂ ॥ ಏನಂ ವೈಶ್ವದೇವಶಸ್ತ್ರಸ್ಯ ಶಂಸಿತಾರಂ ಹೋತಾರಂ ಸರ್ವೇ ಪಂಚಜನಾ ವಿದುರ್ಜಾನಂತಿ ತೇಷ್ವಸ್ಯ ಕೀರ್ತಿಃ ಪ್ರಸರತೀತ್ಯರ್ಥಃ ॥

ಈಗ ವೈಶ್ವದೇವಶಸ್ತ್ರವನ್ನು ಅವಯವಪ್ರಕಾರವಾಗಿ ಎಂದರೆ ಪ್ರತ್ಯೇಕವಾಗಿ ವಿವರಿಸಿ ಒಟ್ಟಿನಲ್ಲಿ ಸಮುದಾಯರೂಪವಾಗಿ ಪ್ರಶಂಸೆಮಾಡುವರು— ವೈಶ್ವದೇವ ಎಂಬ ಯಾವ ಶಸ್ತ್ರವಿರುವುದೋ ಅದು ಪಾಂಚಜನ್ಯಂ ಎಂದರೆ ಐದುವಿಧ ಪಂಗಡಗಳುಳ್ಳ ಜನಗಳಿಗೆ ಸಂಬಂಧಪಟ್ಟಿರುವುದು. ಎಂದರೆ ಈ ಮಂತ್ರವು ಎಲ್ಲಾ ಪಂಗಡದ ಜನರಿಗೂ ಸಂಬಂಧಿಸಿದ್ದು ಎಂದಭಿಪ್ರಾಯವು. ಈ ಐದುವಿಧ ಪಂಗಡಗಳು ಯಾವವು ಎಂದರೆ—ಅಗ್ನಿ, ಇಂದ್ರ ಮೊದಲಾದ ದೇವತೆಗಳ ಸಮೂಹವು ಒಂದು ಪಂಗಡವು; ಬ್ರಾಹ್ಮಣ, ಕ್ಷತ್ರಿಯ ಎಂದು ಮೊದಲಾದ ಚಾತುರ್ವರ್ಣ್ಯಸಹಿತರಾದ ಮನುಷ್ಯರು ಎರಡನೆಯ ಪಂಗಡವು; ಗಂಧರ್ವರೇ ಮೊದಲಾದ ಅಪ್ಸರಸ್ತ್ರೀಯರಿಂದ ಕೂಡಿದ ಸಮೂಹವು ಮೂರನೆಯ ಪಂಗಡವು; ಸರ್ಪಗಳು (ನಾನಾವಿಧ ಹಾವುಗಳು) ನಾಲ್ಕನೆಯ ಪಂಗಡವು: ಪಿತೃದೇವತೆಗಳ ಸಮೂಹವು ಐದನೆಯ ಪಂಗಡವು. ಈ ಐದುವಿಧವಾದ ಪಂಗಡದವರನ್ನೂ ಈ ವೈಶ್ವದೇವಶಸ್ತ್ರವು ತುಷ್ಟಿಗೊಳಿಸುವುದು. ಈ ವೈಶ್ವದೇವಶಸ್ತ್ರವನ್ನು ಪಠಿಸುವ ಹೋತೃವೆಂಬ ಋತ್ವಿಜನನ್ನು ಈ ಐದುವಿಧ ಪಂಗಡದವರೂ ಚೆನ್ನಾಗಿ ತಿಳಿದಿರುವರು. ಇವರೆಲ್ಲಾ ಈ ಹೋತೃವಿನ ಕೀರ್ತಿಯನ್ನು ಪ್ರಕಾಶಪಡಿಸುವರು. ಇಲ್ಲಿ ಹೇಳಿರುವ ಪಂಚಜನರು ಯಾರು ಎಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ. ಋಗ್ವೇದ, ನಿರುಕ್ತ, ಬೃಹದ್ದೇವತಾ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಈ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಿದೇವೆ—

೧. **ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ** । ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು ಮತ್ತು ಪಕ್ಷಿಗಳು ಎಂಬ ಐದು ವಿಧವೆಂದೂ ಎರಡನೆಯದಾಗಿ,

೨. **ಚತ್ವಾರೋ ವರ್ಣಾಃ ನಿಷಾದ ಪಂಚಮಾಃ ಪಂಚ ಜನಾ ಇತ್ಯನ್ಯೇ**—ನಿಷಾದರೊಡಗೂಡಿದ ನಾಲ್ಕು ವರ್ಣದ ಜನರೆಂದು ಇನ್ನೊಂದು ವಿಧವಾಗಿಯೂ ವಿವರಿಸಿದ್ದಾರೆ. ಈ ಎರಡು ಅರ್ಥಗಳಿಗೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು. ಮೊದಲು ಕ್ಷಿತಿ ಶಬ್ದದ ನಿರ್ವಚನವನ್ನು ಪರಿಶೀಲಿಸಿ ಅನಂತರ ಪಂಚಕ್ಷಿತಿಯೆಂಬುದಕ್ಕೆ ಪ್ರಕೃತದಲ್ಲಿ ಯಾವ ಅರ್ಥವನ್ನು ಹೇಳಬಹುದೆಂದು ಅನಂತರ ವಿಮರ್ಶಿಸಬಹುದು.

ಕ್ಷಿತೀನಾಂ—ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ ಕ್ಷಿತಯೋ ಮನುಷ್ಯಾಃ । ವಾಸಿಸುತ್ತಾರೆ ಅಥವಾ ಸಂಚರಿಸುತ್ತಾರೆ ಆದ್ದರಿಂದ ಮಾನವರಿಗೆ ಈ ವಿಶೇಷಣವಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಕ್ಷಿತಿ ಶಬ್ದವನ್ನು **ನರಃ** ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೩)

ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।
ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ।

(ಋ. ಸಂ. ೩-೨೦-೪)

ಇತ್ಯಾದಿ ಋಕ್ಕುಗಳಲ್ಲಿ ಮಾನವರಿಗೂ, ದೇವಸಂಬಂಧಿಗಳಾದ ಪ್ರಜೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಪಾರ್ಥಿವವಾದ ಮಾನವರೇ ಎಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಏಕೆಂದರೆ ಇಂದ್ರನ ಐಶ್ವರ್ಯವು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿರುತ್ತದೆ.

**ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ ।**
**ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ।**

(ಋ. ಸಂ. ೧-೧೦೦-೧೫)

ಇತ್ಯಾದಿ ಋಕ್ಕುಗಳಲ್ಲಿ ದಾನಾದಿಗುಣಗಳಿಂದ ಕೂಡಿ ದೇವತಾತ್ಮಕನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲರ ಶಕ್ತಿಗಿಂತಲೂ ಮೀರಿದುದೆಂದೂ, ಅದರ ಅಂತವನ್ನು ದೇವತೆಗಳಾಗಲಿ ಮಾನವರಾಗಲಿ ಪಡೆಯಲಾಗಲಿಲ್ಲವೆಂದೂ, ಮತ್ತು ಇಂದ್ರನು ಶತ್ರುನಾಶಕವಾದುದೂ ಪ್ರಭಾವಯುತವಾದುದೂ ಆದ ತನ್ನ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆಂದೂ ವರ್ಣಿಸಿರುವುದರಿಂದಲೂ, ಪ್ರಕೃತವಾದ ಋಕಿನಲ್ಲಿಯೂ ಸಹ ಇಂದ್ರನ ಐಶ್ವರ್ಯವು ಸರ್ವ ವ್ಯಾಪಿಯೆಂದು ವರ್ಣಿತವಾಗಿರುವುದರಿಂದಲೂ ಸಹ **ಪಂಚಕ್ಷಿತೀನಾಂ** ಎನ್ನುವುದಕ್ಕೆ ಕೇವಲ ನಿಷಾದಪಂಚಮರಿಂದ ಕೂಡಿದ ವರ್ಗಚತುಷ್ಟಯವೆಂದು ಹೇಳಲಾಗುವುದಿಲ್ಲ. ಈ ವಿಷಯದಲ್ಲಿ ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೆ ಇತರರ ಅಭಿಪ್ರಾಯಗಳನ್ನು ಮಾತ್ರ ತಿಳಿಸುವರು.

**ಪಂಚಜನಾ "ಮಮ ಹೋತ್ರಂ ಜುಷಧ್ವಂ" ಗಂಧರ್ವಾಃ ಪಿತರೋ ದೇವಾ ಅಸುರಾ**
**ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ।**

(ನಿ. ೩-೮)

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧವಾದ ಗುಂಪುಗಳೆಂದು ಕೆಲವರೂ, ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ **ಪಂಚಜನ**ರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾঁ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ॥**

(ಋ. ಸಂ ೧೦-೫೩-೪)

**ಪಂಚಜನ**ರೂ ಸೇರಿ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾಕಾರರು ಉದಹರಿಸಿ ಪಂಚಜನರು ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

**ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।**
**ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥**

(ಬೃ. ದೇ. ೭-೬೭)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನ** ಶಬ್ದವನ್ನು ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

(ಬೃ. ದೇ. ೭-೬೭)

ಎಂದರೆ ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ, ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದುವಿಧವಾದ ಅಗ್ನಿಗಳೂ ಐದುಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯವಹಾರವಾಗಿದೆ. ಈ ಮತವಲ್ಲದೇ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।**
**ಗಂಧರ್ವಾ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ **ಉರಗರಾಕ್ಷಸರು** ಒಂದು ಗುಂಪು; ಎರಡನೆಯ ಅಭಿಪ್ರಾಯದಂತೆ **ಯಕ್ಷ-ರಾಕ್ಷಸರು** ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹುತಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದೆಯೇ ಹೊರತು ಯಾಸ್ಕರು ತಮ್ಮ ಮತವನ್ನು ನಿಸ್ಪಷ್ಟವಾಗಿ ತಿಳಿಸಿಲ್ಲ. ಪ್ರಾಯಃ ಅದನ್ನೇ ಅವರು ಅಂಗೀಕರಿಸಿರಬಹುದು.

**ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।**

(ಬೃ ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯವರ ಮತವಾಗಿದೆ.

ಚಕ್ಷುಃಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।
ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತ್ತರಸ್ತಥಾ ॥
ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥

(ಬೃ. ದೇ. ೭-೭೧,೭೨)

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ **ಪಂಚಜನ**ರೆಂದು ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ. (ಐ. ಬ್ರಾ. ೩-೩೧-೫) ಇಂತಹ ಪಂಚಜನರೂ ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯಭೇದಗಳು ತಿಳಿಸಲ್ಪಟ್ಟಿವೆ.

**ಪಂಚ ಕ್ಷಿತೀನಾಂ ವಿಶ್ವಾನಿ ವಸು ಇಂದ್ರಸ್ಯ ಹಸ್ತಯೋಃ।** ಎಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆ. ಸಕಲ ಲೋಕವೂ ಇಂದ್ರನ ರಕ್ಷಣೆಗೇ ಒಳಪಟ್ಟುದುದರಿಂದ **ಪಂಚ ಕ್ಷಿತೀನಾಂ** ಎಂಬುದಕ್ಕೆ ಮೇಲಿನ ಅಭಿಪ್ರಾಯಗಳೆಲ್ಲವೂ ಹೊಂದಿಕೊಳ್ಳುತ್ತವೆ.

## ಏನಂ ಪಂಚಿನ್ಯೈ ಜನತಾಯೈ ಹವಿನೋ ಗಚ್ಛಂತಿ ಯ ಏವಂ ವೇದ।

**ವೇದನಂ ಪ್ರಶಂಸತಿ—ಜನಾನಾಂ ದೇವಮನುಷ್ಯಾಣಾಂ ಸಮೂಹೋ ಜನತಾ॥ ಸಾ ಚ ಪಂಚಸಂಖ್ಯೋಪೇತತ್ವಾತ್ಪಂಚಿನೀ ತಸ್ಯೈ ತತ್ಪ್ರೀತ್ಯರ್ಥಂ ಹವಿನೋ ಹೋತುಂ ಕುಶಲಾಃ ಪುರುಷಾ ಏನಂ ವೇದಿತಾರಮಾಗಚ್ಛಂತಿ ॥**

ಈ ವೈಶ್ವದೇವಶಸ್ತ್ರಮಂತ್ರವನ್ನು ತಿಳಿದ ಪುರುಷನನ್ನು ಪ್ರಶಂಸೆಮಾಡುವರು—ಮೇಲೆ ಹೇಳಿದ ಐದುವಿಧವಾದ ಪಂಗಡಗಳಿಂದ ಕೂಡಿದ ಎಲ್ಲಾ ಜನರೂ ಈ ವೈಶ್ವದೇವಸೂಕ್ತದ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನ ಸಮೀಪಕ್ಕೆ ಬರುತ್ತಾರೆ.

## ಸರ್ವದೇವತ್ಯೋ ವಾ ಏಷ ಹೋತಾ ಯೋ ವೈಶ್ವದೇವಂ ಶಂಸತಿ ಸರ್ವಾ ದಿಶೋ ಧ್ಯಾಯೇಚ್ಛಂಸಿಷ್ಯನ್ಸರ್ವಾಸ್ವೇವ ತದ್ದಿಕ್ಷು ರಸಂ ದಧಾತಿ।

**ಅಥ ಶಂಸನಪೂರ್ವಕಾಲೇ ದಿಗ್ಧ್ಯಾನಂ ವಿಧತ್ತೇ—ಯೋ ಹೋತಾ ವೈಶ್ವದೇವಂ ಶಸ್ತ್ರಂ ಶಂಸತಿ ಏಷ ಸರ್ವದೇವತ್ಯೋ ವೈ ಸರ್ವಾ ದೇವತಾ ಅಸ್ಯೇತಿ ತತ್ಪರಿತೋಷಹೇತುರಿತ್ಯರ್ಥಃ॥ ಸೋಽಯಂ ಶಂಸಿತುಮುದ್ಯುಕ್ತಃ ಸರ್ವಾ ದಿಶೋ ಮನಸಾ ಧ್ಯಾಯೇತ್ತೇನ ಶಂಸನೇನ ಸರ್ವಾಸ್ವೇವ ತದ್ದಿಕ್ಷು ರಸಂ ದಧಾತಿ ॥**

ಈ ವೈಶ್ವದೇವಸೂಕ್ತವನ್ನು ಪಠಿಸುವ ಕಾಲದಲ್ಲಿ ಸಮಸ್ತ ದಿಕ್ಕುಗಳನ್ನೂ ಧ್ಯಾನಿಸಬೇಕು—ಈ ವೈಶ್ವದೇವಸೂಕ್ತವನ್ನು ಹೋತೃವು ಪಠಿಸುವಾಗ ಎಲ್ಲಾ ದಿಕ್ಕುಗಳನ್ನೂ ಮನಸ್ಸಿನಲ್ಲಿ ಧ್ಯಾನಮಾಡುತ್ತಿರಬೇಕು. ಏಕೆಂದರೆ ಈ ಸೂಕ್ತದಲ್ಲಿ ಸ್ತುತರಾಗಿರುವ ಎಲ್ಲಾ ದೇವತೆಗಳೂ ನಾನಾ ದಿಕ್ಕುಗಳಲ್ಲಿರುವರು. ಇವರನ್ನು ಧ್ಯಾನಿಸುವ ಕಾರಣದಿಂದ ಮಂತ್ರವನ್ನು ಪಠಿಸುವ ಹೋತೃವು ಎಲ್ಲಾ ದಿಕ್ಕುಗಳನ್ನು ಧ್ಯಾನಿಸುತ್ತಿರಬೇಕೆಂದು ಇಲ್ಲಿ ಹೇಳಲಾಗಿದೆ. ಈ ಕಾರಣದಿಂದ ಹೋತೃವು ಸಕಲ ದೇವತಾಸ್ವರೂಪನಾಗಿರುವನೆಂದು ಭಾವಿಸಬೇಕು ಮತ್ತು ಎಲ್ಲಾ ದೇವತೆಗಳನ್ನೂ ಪ್ರಶಂಸೆಮಾಡುವುದರಿಂದ ಎಲ್ಲಾ ದಿಕ್ಕುಗಳಲ್ಲಿಯೂ ರಸ (ಉದಕ)ವುಂಟಾಗುವಂತೆ ಮಾಡುವನು. ಎಂದರೆ ಸರ್ವರಿಗೂ ಬೇಕಾದ ವೃಷ್ಟಿಯು ಎಲ್ಲಾ ಕಡೆಗಳಲ್ಲಿಯೂ ಉಂಟಾಗುವಂತೆ ಮಾಡುವನು ಎಂದಭಿಪ್ರಾಯವು.

## ಯಸ್ಯಾಮಸ್ಯ ದಿಶಿ ದ್ವೇಷ್ಯಃ ಸ್ಯಾನ್ನ ತಾಂ ಧ್ಯಾಯೇದನುಹಾಯೈವಾಸ್ಯ ತದ್ವೀರ್ಯಮಾದತ್ತೇ।

ಕ್ವಚಿದ್ಧ್ಯಾನಂ ವಿಧತ್ತೇ—ಅಸ್ಯ ಹೋತುರ್ದ್ವೇಷ್ಯಃ ಶತ್ರುರ್ಯಸ್ಯಾಂ ದಿಶಿ ವಸತಿ ತಾಮೇಕಾಂ ದಿಶಂ ನ ಧ್ಯಾಯೇತ್ ॥ ತಥಾ ಸತಿ, ಅನುಹಾಯ್ಯೈವ ದ್ವೇಷ್ಯಸ್ಯ ಪೃಷ್ಠತೋ ಗತ್ವೈವ ತದೀಯಂ ವೀರ್ಯಂ ಸರ್ವಂ ಸ್ವೀಕರೋತಿ ॥

ಈ ಧ್ಯಾನವಿಚಾರದಲ್ಲಿ ಒಂದು ವಿಶೇಷವನ್ನು ಹೇಳುವರು—ಹೋತೃವು ಮಂತ್ರವನ್ನು ಪಠಿಸುವಾಗ ದಿಕ್ಕುಗಳನ್ನು ಧ್ಯಾನಮಾಡುತ್ತಿರಬೇಕೆಂದು ಹೇಳಿದೆಯಷ್ಟೆ. ಆದರೆ ಈ ಹೋತೃವಿಗೆ ದ್ವೇಷಿಸುವ ಶತ್ರುವು ಇದ್ದಲ್ಲಿ ಆ ಶತ್ರುವು ಇರುವ ದಿಕ್ಕನ್ನು ಧ್ಯಾನಿಸಬಾರದು. ಹೀಗೆ ಮಾಡಿದಲ್ಲಿ ಆ ಶತ್ರುವಿನ ವೀರ್ಯಸಾಮರ್ಥ್ಯಾದಿಗಳು ಹೋತೃವಿಗೇ ಲಭಿಸುವವು.

ಅದಿತಿರ್ದ್ಯೌರದಿತಿರಂತರಿಕ್ಷಮಿತ್ಯುತ್ತಮಯಾ ಪರಿದಧಾತೀಯಂ ವಾ ಅದಿತಿರಿಯಂ ದ್ಯೌರಿಯಮಂತರಿಕ್ಷಂ । ಅದಿತಿರ್ಮಾತಾ ಸ ಪಿತಾ ಸ ಪುತ್ರ ಇತೀಯಂ ವೈ ಮಾತೇಯಂ ಪಿತೇಯಂ ಪುತ್ರಃ । ವಿಶ್ವೇ ದೇವಾ ಅದಿತಿಃ ಪಂಚಜನಾ ಇತ್ಯಸ್ಯಾ ವೈ ವಿಶ್ವೇ ದೇವಾ ಅಸ್ಯಾಂ ಪಂಚಜನಾಃ । ಅದಿತಿರ್ಜಾತಮದಿತಿರ್ಜನಿತ್ವಮಿತೀಯಂ ವೈ ಜಾತಮಿಯಂ ಜನಿತ್ವಂ ।

ಶಸ್ತ್ರಸ್ಯ ಪರಿಧಾನೀಯಾಮೃಚಂ ವಿಧತ್ತೇ—ಅಖಂಡಿತತ್ವಾದದೀನತ್ವಾದ್ವಾ ಭೂಮಿರೇವಾದಿತಿರಿತ್ಯುಚ್ಯತೇ ॥ ಸೇಯಂ ಭೂಮಿರೇವ ದ್ಯುಲೋಕರೂಪಾಂತರಿಕ್ಷರೂಪಾ ಚಾಸ್ಯಾಂ ಭೂಮೌ ಕರ್ಮ ಕೃತ್ವಾ ತತ್ತಲ್ಲೋಕಪ್ರಾಪ್ತೇಃ ಸಂಪಾದಯಿತುಂ ಶಕ್ಯತ್ವಾತ್ ॥ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಯೇಯಮದಿತಿರ್ಭೂಮಿಃ ಸೈವ ಮಾತಾ ॥ ಸೋಽದಿತಿರೂಪ ಏವ ಪಿತಾ ॥ ಸೋಽದಿತಿರೂಪ ಏವ ಪುತ್ರಃ ॥ ಇಯಂ ವಾ ಇತ್ಯಾದಿನೋಕ್ತಾರ್ಥಪ್ರಸಿದ್ಧಿರುಚ್ಯತೇ ॥ ಸತ್ಯಾಂ ಭೂಮೌ ಮಾತಾಪಿತೃ (ತಾ) ಪುತ್ರಾದಿಭಿರವಸ್ಥಾತುಂ ಶಕ್ಯತ್ವಾತ್ತೇಷಾಮದಿತಿರೂಪತ್ವಂ ಪ್ರಸಿದ್ಧಮಿತ್ಯರ್ಥಃ ॥ ತೃತೀಯಪಾದಮನೂದ್ಯ ವ್ಯಾಚಷ್ಟೇ—ವಿಶ್ವೇಷಾಂ ದೇವಾನಾಂ ಭೂಮೌ ಮನುಷ್ಯೈಃ ಪೂಜ್ಯಮಾನತ್ವಾತ್ಪಂಚಜನಾನಾಂ ದೇವಮನುಷ್ಯಾದೀನಾಂ ಭೂಮಾವವಸ್ಥಾನಾದದಿತೇಸ್ತದ್ರೂಪತ್ವಂ ॥ ಚತುರ್ಥಂ ಪಾದಮನೂದ್ಯ ವ್ಯಾಚಷ್ಟೇ—ಜಾತಂ ಪೂರ್ವಮುತ್ಪನ್ನಂ ಪ್ರಾಣಿರೂಪಂ ಜನಿತ್ವಮಿತಃಪರಮುತ್ಪತ್ಸ್ಯಮಾನಂ ಪ್ರಾಣಿರೂಪಂ ತಯೋರುಭಯೋರ್ಭೂಮೌ ಸಂಭವಾದದಿತೇಸ್ತದ್ರೂಪತ್ವಂ ॥

ಈ ಶಸ್ತ್ರಮಂತ್ರದ ಕೊನೆಯ ಋಕ್ಕನ್ನು ವಿವರಿಸುವರು—ಅದಿತಿರ್ದ್ಯೌರದಿತಿಃ (ಋ. ಸಂ. ೧-೮೯-೧) ಎಂಬುದು ಈ ಶಸ್ತ್ರಮಂತ್ರದ ಕೊನೆಯ ಋಕ್ಕು. ಈ ಋಕ್ಕಿಗೆ ಅದಿತಿಯು ದೇವತೆಯು. ಅದಿತಿಯೆಂದರೆ ಇಲ್ಲಿ ಭೂಮಿಯು. ಭೂಮಿಯು ಅಖಂಡವಾಗಿಯೂ (ವಿಸ್ತಾರವಾಗಿಯೂ) ಐಶ್ವರ್ಯಯುಕ್ತವಾಗಿಯೂ ದೀನ (ದರಿದ್ರ) ರಹಿತಳಾಗಿಯೂ ಇರುವುದರಿಂದ ಮತ್ತು ದೇವಮಾತೆಯೂ ಆಗಿರುವುದರಿಂದ ಅದಿತಿ ಎಂದರೆ ಭೂಮಿಯು (ನಿರುಕ್ತ. ೪-೪-೧) ಅಂತರಿಕ್ಷ ಮತ್ತು ಸ್ವರ್ಗಲೋಕಗಳು ಈ ಭೂಮಿಗೇ ಸಂಬಂಧಪಟ್ಟಿರುವವು. ಎಂದರೆ ಇದಕ್ಕೆ ಸೇರಿದಂತೆಯೇ ಇರುವವು ಮತ್ತು ಈ ಭೂಮಿಯಲ್ಲಿ ಸತ್ಕರ್ಮವನ್ನು ಮಾಡಿ ಸ್ವರ್ಗಾದಿಲೋಕಗಳಿಗೆ ಹೋಗಲು ಸಾಧ್ಯವು. ಈಗ **ಅದಿತಿರ್ಮಾತಾ ಸ ಪಿತಾ ಸ ಪುತ್ರಃ** ಎಂಬ ಎರಡನೆಯ

ಪಾದವನ್ನು ವಿವರಿಸುವರು. ಅದಿತಿಯೆಂದು ಯಾವ ದೇವತೆಯು ಪ್ರಸಿದ್ಧಳಾಗಿರುವಳೋ ಆ ದೇವತೆಯೇ ಈ ಭೂಮಿಯು. ಈ ಅದಿತಿಯೇ ಎಲ್ಲರಿಗೂ ಮಾತೆಯು, ಅದಿತಿಯೇ ತಂದೆಯು ಎಂದರೆ ತಂದೆತಾಯಿಗಳಂತೆ ಜನರ ವಿಷಯದಲ್ಲಿ ಪ್ರೀತಿವಿಶ್ವಾಸ ಗಳನ್ನು ವ್ಯಕ್ತಪಡಿಸುತ್ತಾ ಅವರನ್ನು ಕಾಪಾಡುವಳು. ಅವಳೇ ಪುತ್ರನಂತೆ ಪ್ರೀತಿಪಾತ್ರಳಾದವಳು. ಅಥವಾ ಮಾತಾ, ಪಿತಾ ಪುತ್ರಾದಿಗಳು ಅದಿತಿರೂಪರೇ ಆಗಿರುವರು. ಈ ಭೂಮಿಯಲ್ಲಿ ಪಿತಾ ಪುತ್ರಾದಿಗಳು ಇರಲು ಶಕ್ಯವಾಗಿರುವುದರಿಂದ ಎಲ್ಲಾ ಪ್ರೀತಿಪಾತ್ರರಾದ ಬಂಧು ಮುಂತಾದವರೂ ಅದಿತಿರೂಪರೇ ಆಗಿರುವರು. **ವಿಶ್ವೇ ದೇವಾ ಅದಿತಿಃ ಪಂಚಜನಾಃ** ಎಂಬುದು ಈ ಋಕ್ಕಿನ ಮೂರನೆಯ ಪಾದವು. ಈ ಭೂಮಿಯಲ್ಲಿರುವ ಪಂಚಜನರೂ ಇತರರೂ ವಿಶ್ವೇದೇವತೆಗಳನ್ನು ಪೂಜಿಸುತ್ತಾ ಈ ಭೂಮಿಯಲ್ಲಿ ವಾಸಮಾಡುವವರಾದ್ದರಿಂದ ಇವರೆಲ್ಲ ಅದಿತಿಸ್ವರೂಪರು ಎಂದು ಹೇಳಲ್ಪಡುವರು. **ಅದಿತಿರ್ಜಾತಮದಿ-ತಿರ್ಜನಿತ್ವಂ** ಎಂಬುದು ಈ ಋಕ್ಕಿನ ನಾಲ್ಕನೆಯ ಮತ್ತು ಕೊನೆಯ ಪಾದವು. ಈ ಭೂಮಿಯಲ್ಲಿ ಪೂರ್ವದಿಂದ ಇದುವರೆಗೂ ಹುಟ್ಟಿರುವ ಪ್ರಾಣಿಸಮೂಹವೂ ಮುಂದೆ ಹುಟ್ಟಬೇಕಾದ ಪ್ರಾಣಿಸಮೂಹವೂ ಈ ಅದಿತಿಯ ಸ್ವರೂಪವೇ ಆಗಿರುವುದು. ಎಲ್ಲಾ ಪ್ರಾಣಿಗಳೂ ಭೂಮಿಯಲ್ಲಿಯೇ ಹುಟ್ಟಿ ಅಲ್ಲಿಯೇ ಬೆಳೆದು ಅಲ್ಲಿಯೇ ಲಯವಾಗುವುದರಿಂದಲೂ ಮುಂದೆಯೂ ಅರೀತಿ ನಡೆಯುವುದರಿಂದಲೂ ಈಗ ಹುಟ್ಟಿರುವ ಮತ್ತು ಮುಂದೆ ಹುಟ್ಟುವ ಸಮಸ್ತ ಪ್ರಾಣಿವರ್ಗ ಮನುಷ್ಯವರ್ಗಗಳೆಲ್ಲಾ ಅದಿತಿ ರೂಪವೇ ಆಗಿರುವುದೆಂದಭಿಪ್ರಾಯವು.

ಅದಿತಿ ಎಂಬ ದೇವತೆಯ ವಿಷಯದಲ್ಲಿ ಋಗ್ವೇದಾದಿಗ್ರಂಥಗಳಲ್ಲಿ ಹೇಳಿರುವ ವಿಷಯಗಳನ್ನು ಸೂಕ್ಷ್ಮವಾಗಿ ಇಲ್ಲಿ ತಿಳಿಸಿದೆ—

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇದೇವಾ ಅದಿತಿಃ ಪಂಚಜನಾ ಅದಿತಿರ್ಜಾತಮದಿತಿರ್ಜನಿತ್ವಂ ॥**
(ಋ. ಸಂ. ೧-೮೯-೧೦)

## ಇತ್ಯದಿತೇರ್ವಿಭೂತಿಮಾಚಷ್ಟೇ ಏನಾನ್ಯದೀನಾನೀತಿ ವಾ ॥

ಅದಿತಿರ್ದ್ಯೌಃ ಎಂಬ ಋಕ್ಕಿನ ಅರ್ಥವು—ಅಖಂಡಳಾದ ಅದಿತಿಯು ಸಕಲ ವಿಶ್ವಕ್ಕೂ ಜನ್ಮದಾತೆಯು. ಅವಳೇ ಜಗಜ್ಜನನಿಯು, ಜಗಜ್ಜನಕನು. ಉತ್ಪನ್ನವಾದ ಸಕಲ ವಸ್ತುವೂ ಅವಳೇ. ಅದಿತಿಯೇ ಸಮಸ್ತಕ್ಕೂ ಉತ್ಪತ್ತಿಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದದಿಂದ ಕೂಡಿದ ಐದು ಜಾತಿಯ ಜನರೂ ಅವಳೇ. ಅದಿತಿಯೇ ಸಕಲ ದೇವತೆಗಳು. ಅವಳೇ ಪ್ರಕಾಶಮಾನವಾದ ಸ್ವರ್ಗವು. ಅವಳೇ ಅಂತರಿಕ್ಷವು, ಅವಳೇ ಸಕಲ ವಿಶ್ವವು, ಅವಳೇ ವಿಶ್ವನಿಯಾಮಕಳು.

ಅದಿತಿನಿಷ್ಟಿಗ್ರೀ ಮತ್ತು ಉಷಸ್ಸು ಈ ಎರಡು ದೇವತೆಗಳನ್ನು ಬಿಟ್ಟರೆ ದೇವಮಾತೆಯೆಂದು ಸಾಕ್ಷಾತ್ತಾಗಿ ನಿರ್ದಿಷ್ಟವಾಗಿರುವವರಲ್ಲಿ ಅದಿತಿಯೇ ಪ್ರಥಮ ದೇವತೆಯೆಂದು ತಿಳಿದುಬರುತ್ತದೆ.

**೧. ಅದಿತಿಯ ಸ್ವರೂಪವನ್ನು ವರ್ಣಿಸುವ ವಿಶೇಷಗಳು.**

ಅದಿತಿಯನ್ನು ಉದ್ದೇಶಿಸಿದ ಪ್ರತ್ಯೇಕವಾದ ಸೂಕ್ತವಾವುದೂ ಇಲ್ಲದಿದ್ದರೂ ಸಹ, ಅನೇಕ ಸೂಕ್ತಗಳಲ್ಲಿ ಅಂತರ್ಗತ ವಾಗಿರುವ ಮಂತ್ರಗಳಿಂದ ಅದಿತಿಯು ಪ್ರಶಂಸಿತಳೂ, ಪ್ರಾರ್ಥಿತಳೂ ಆಗಿದ್ದಾಳೆ. ಪುತ್ರಾದಿಗಳನ್ನೂ, ಪಶ್ವಾದಿಸಂಪತ್ತುಗಳನ್ನೂ ಅನುಗ್ರಹಿಸಿಕೊಡಬೇಕೆಂದು ಪ್ರಾರ್ಥಿತಳಾಗಿದ್ದಾಳೆ. ಅವಳ ರಕ್ಷಣೆಯೂ, ಕ್ಷಮೆಯೂ ಅನೇಕಕಡೆಗಳಲ್ಲಿ ಬೇಡಲ್ಪಟ್ಟದೆ. (೧-೪೩-೨). ವರುಣನಿಗೂ, ಇನ್ನೂ ಇತರ ದೇವತೆಗಳಿಗೂ ಮಾತೃವೆಂದೂ ವರ್ಣಿತಳಾಗಿದ್ದಾಳೆ. ನಿಘಂಟುವಿನಲ್ಲಿ **ಅದಿತಿ**

ಪದವನ್ನು, (1) ಪೃಥ್ವೀನಾಮಗಳಲ್ಲಿಯೂ, (2) ವಾಙ್ನಾಮಗಳಲ್ಲಿಯೂ, (3) **ಗೋನಾಮಗಳಲ್ಲಿಯೂ**, (4) **ದ್ಯಾವಾ-ಪೃಥಿವೀನಾಮಗಳಲ್ಲಿಯೂ** ಸೇರಿಸಿ ಪಠಿಸಿದೆ (ನಿ. ೧-೧ ; ೧-೧೧ ; ೨-೧೧ ; ೩-೩೦). ನಿರುಕ್ತದ ೪-೨೨ ನೇ ಪ್ರಕರಣದಲ್ಲಿ ಅದಿತಿಯನ್ನು **ಅದೀನಾ ದೇವಮಾತಾ,** ಮಹಾತ್ಮಳಾದ ದೇವಮಾತೆಯೆಂದು ವರ್ಣಿಸಿದೆ. ಋಕ್ಸಂಹಿತೆಯಲ್ಲಿ (೧-೧೧೩-೧೯) ದೇವಮಾತೆಯಾದ ಉಷಸ್ಸೇ ಅದಿತಿಯ ಅನೀಕವೆಂದು ವರ್ಣಿಸಿದೆ. (ಸಾಯಣರು ಕೊಂಚ ವ್ಯತ್ಯಸ್ತವಾದ ಅರ್ಥವನ್ನು ಹೇಳಿದ್ದಾರೆ). ಇಲ್ಲಿ ಅದಿತಿಯ ಮುಖವೆಂದು ಸ್ಥೂಲವಾದ ಅರ್ಥ. ಅವಳ ರೂಪಾಂತರವೆಂದು ಹೇಳಿದರೂ ಹೇಳಬಹುದು. ನಿರುಕ್ತದ ಬೇರೆ ಭಾಗದಲ್ಲಿ (೧೦-೨೨) ದೇವತೆಗಳ ವರ್ಗೀಕರಣವನ್ನು (ಹಿಂದೆ ತೋರಿಸಿದಂತೆ) ಅನುಸರಿಸಿ ಅಂತರಿಕ್ಷಸ್ಥರಾದ ದೇವತೆಗಳ ವಿಷಯವನ್ನು ವಿವರಿಸುವಾಗ ಸ್ತ್ರೀದೇವತೆಗಳಲ್ಲಿ ಅದಿತಿಗೆ ಅಗ್ರಸ್ಥಾನವನ್ನು ಕೊಟ್ಟಿದೆ.

**" ಅಥಾತೋ ಮಧ್ಯಸ್ಥಾನಾಃ ಸ್ತ್ರಿಯಃ । ತಾಸಾಂ ಅದಿತಿಃ ಪ್ರಥಮಾಗಾಮಿನೀ ಭವತಿ "**

(ನಿ. ೧೧-೨೨)

ಮಧ್ಯಮಲೋಕದ ಸ್ತ್ರೀದೇವತೆಗಳಲ್ಲಿ ಅದಿತಿಯು ಪ್ರಥಮಸ್ಥಾನವನ್ನಾಕ್ರಮಿಸುತ್ತಾಳೆ.

ಋಕ್ಸಂಹಿತೆಯಲ್ಲಿ ೪-೫೫-೩ ; ೪-೫೫-೭ ; ೫-೫೧-೧೧ ; ೬-೫೦-೧ ; ೭-೩೮-೪ ; ೭-೪೦-೨ ; ೮-೨೫-೧೦ ; ೮-೨೭-೫ ; ೮-೫೬-೧೦. ಇತ್ಯಾದಿ ಋಕ್ಕುಗಳಲ್ಲಿ ಅದಿತಿಯನ್ನು **ದೇವಿಯೆಂದೂ**, ೨-೪೦-೬ ; ೭-೪೦-೪ ; ೧೦-೯೨-೧೪ ನೇ ಮಂತ್ರಗಳಲ್ಲಿ **ದೇವೀ ಅದಿತಿರನರ್ವಾ** ; ಅಪ್ರತಿಹತವಾದ ಶಕ್ತಿಯುಳ್ಳವಳೂ, ದೇವತಾತ್ಮಳೂ ಆದ ಅದಿತಿಯೆಂದೂ ; ೧-೧೩೬-೩ ರಲ್ಲಿ ಪ್ರಭಾಯುತಳೂ, ಕ್ಷಿತಿಯನ್ನು ಧರಿಸುವವಳೆಂದೂ, ದ್ಯುಲೋಕಸ್ಥಳೆಂದೂ (**ಜ್ಯೋತಿಷ್ಮತೀಮದಿತಿಂ........**) ವರ್ಣಿಸಿದೆ. ಇಷ್ಟಲ್ಲದೇ, **ಉರುವ್ಯಚಾಃ** ; ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವಳು ; (೫-೪೬-೬) ; **ವಿಶ್ವಜನ್ಯಾಂ** ; ಸಕಲಮಾನವರಿಗೂ ಪ್ರಿಯ ಸಖಿಳು (೭-೧೦-೪) ; ಇತ್ಯಾದಿ ವಿಶೇಷಣಗಳು ಗಮನಾರ್ಹವಾದವಾಗಿವೆ. ಇಂತಹ ಉತ್ತಮಳೂ ಲೋಕೋಪಕಾರಿಣಿಯೂ ಆದ ಅದಿತಿಯನ್ನು ಸ್ತುತಿಸುತ್ತಾ,

" ಪ್ರಾತಃಕಾಲದಲ್ಲಿಯೂ, ಮಧ್ಯಾಹ್ನದಲ್ಲಿಯೂ, ಸಾಯಂಕಾಲದಲ್ಲಿಯೂ ಸಹ ನಾನು ಅದಿತಿಯನ್ನು ಅನುಸ್ಯೂತವಾಗಿ ಪ್ರಾರ್ಥಿಸಿ ಕರೆಯುತ್ತೇನೆ '' ಎಂದು ಋಷಿಯು ಪ್ರಶಂಸಿಸಿ ಪ್ರಾರ್ಥಿಸುತ್ತಾನೆ. (೫-೬೯-೩) ೧-೧೮೫-೩ನೇ ಮಂತ್ರದಲ್ಲಿ ಅದೇ ಅದಿತಿಯು ಶುದ್ಧವಾದುದೂ, ಕ್ಷಯರಹಿತವಾದುದೂ, ದಿವ್ಯವಾದುದೂ ಅತ್ಯಂತ ಪೂಜ್ಯವಾದುದೂ ಆದ ಧನದಾನವು ಯಾಚಿತವಾಗಿದೆ. ೧-೧೬೬-೧೨ ರಲ್ಲಿ ಮರುತ್ತುಗಳನ್ನು ಪ್ರಶಂಸಿಸುವಾಗ, ಅವರಿಂದ ದತ್ತವಾಗತಕ್ಕ ಅನುಗ್ರಹವು ಅದಿತಿಗಳ ದಾನಕ್ಕೆ ಸಮನಾಗಿದೆಯೆಂದು ಅದಿತಿಯ ಪ್ರಶಂಸೆಯಿದೆ. ೪-೫೫-೩ ರಲ್ಲಿ ಪಸ್ತ್ಯವೆಂಬುದು ಅದಿತಿಯ ವಿಶೇಷ ಗುಣವನ್ನು ಸೂಚಿಸುವ ವಿಶೇಷಣವಾಗಿದೆ. ಸಕಲರಿಗೂ ಆಶ್ರಯಭೂತಳಾದ ಗೃಹದೇವತೆಯೆಂಬುದು ಇದರಿಂದ ತಿಳಿಯುತ್ತದೆ. ವಾಜಸನೇಯ ಸಂಹಿತೆಯಲ್ಲಿ ಅದಿತಿಯ ಮಹದ್ಗುಣಗಳನ್ನು ಈ ರೀತಿ ಸ್ತುತಿಸಿದೆ —

**ಮಹೀಮೂ ಷು ಮಾತರಂ ಸುವ್ರತಾನಾಂ..................... ಅದಿತಿಂ ಸುಪ್ರಣೀತಿಂ ।**

(ತೈ. ಸಂ. ೧-೫-೧೧-೫ ಮತ್ತು ವಾ. ಸಂ. ೨೧-೫)

ಭಕ್ತರಿಗೆ ಆಶ್ರಯಭೂತಳಾದ ಮಾತೆಯು ಸ್ವರೂಪಳೂ, ಯಜ್ಞಕ್ಕೆ ನೇತ್ರಿಯೂ, ಅತ್ಯತಿಶಯವಾದ ಶಕ್ತಿಯುಳ್ಳವಳೂ ಜರಾರಹಿತಳೂ, ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವವಳೂ, ರಕ್ಷಕಳೂ, ಕುಶಲತೆಯಿಂದ ಎಲ್ಲರಿಗೂ ಮಾರ್ಗವನ್ನು ತೋರಿಸಿ ಎಲ್ಲರನ್ನೂ ಸತ್ಪಥದಲ್ಲಿ ಕೊಂಡೊಯ್ಯುವವಳೂ ಆದ ಅದಿತಿಯನ್ನು ನಾವು ಪ್ರಾರ್ಥಿಸಿ ಕರೆಯೋಣ ಎಂದು ಅವಳ ಮಹತ್ವವನ್ನು ವರ್ಣಿಸಿದೆ.

**ಅದಿತಿಯ ಮೂಲರೂಪದ ವಿಷಯದಲ್ಲಿ Roth ಮತ್ತು Max-Muller ಎಂಬುವರು ತಿಳಿಸಿರುವ ಅಭಿಪ್ರಾಯಗಳು :—**

ಅದಿತಿಯೆಂಬುದು, ನಿಯಮಿತವಾದ ಸೀಮಾಪ್ರದೇಶಗಳುಳ್ಳ ಪೃಥ್ವಿಗಿಂತಲೂ ಅಧಿಕವಾದ ಮಹತ್ವವನ್ನು ಹೊಂದಿರುವುದೂ, ಮಾನಾತೀತವಾದ ವಿಸ್ತೃತಿಯನ್ನು ಹೊಂದಿರುವುದೂ ಆದ ಅಂತರಿಕ್ಷದ ಅನಂತತ್ವವನ್ನು ವರ್ಣಿಸಲು ಅನಂತ ಎಂಬರ್ಥವನ್ನು ಕೊಡುವ ಪರ್ಯಾಯಪದವಾಗಿದೆಯೆಂದು Roth ಎಂಬ ಪಂಡಿತನ ಅಭಿಪ್ರಾಯವಾಗಿರುತ್ತೆ. ಇದೇ ಪಂಡಿತನು ನಿರುಕ್ತವಾಕ್ಯವನ್ನು ವಿವರಿಸುವಾಗಲೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಅದಿತಿ ಎಂಬ ಪದಕ್ಕೆ ಅಲಂಘ್ಯ, ಅನತಿಕ್ರಮಣೀಯ, ಅಕ್ಷಯ, ಪ್ರಮಾಣಾತೀತ ಎಂಬರ್ಥವು ಸಹಜವಾಗಿದೆ. 'ಅನಂತತ್ವ' ವನ್ನು ಪ್ರತಿಬಿಂಬಿಸುವ ದೇವತಾವಿಶೇಷಳಾಗಿದ್ದಾಳೆ. ಈ ರೂಪದಲ್ಲಿಯೇ ಇವಳು ಪೂಜಿತಳಾಗಿದ್ದಾಳೆ, ಅಲೌಕಿಕವಾದ ದಿವ್ಯತೇಜಸ್ಸು ಯಾವರೀತಿ ಅಪ್ರಾರ್ಥಿವವೂ, ನಿತ್ಯವೂ ಆದ ತತ್ತ್ವವೆಂದು ಪರಿಗಣಿತವಾಗಿರುವುದೋ ಅದರಂತೆಯೇ ತೇಜೋರೂಪರಾದ **ವರುಣ, ಮಿತ್ರ, ಅರ್ಯಮಾ, ಭಗ** ಇತ್ಯಾದಿ ಆದಿತ್ಯರೂ ಸಹ ಅದಿತಿರೂಪವಾದ ಈ ನಿತ್ಯತತ್ತ್ವದ ಪುತ್ರರೆಂದೇ ಪರಿಗಣಿತರಾಗಿದ್ದಾರೆ. 'ಮಾನಾತೀತವಾದುದೂ, ಲೌಕಿಕಗೋಚರಕ್ಕೆ ಅತೀತವಾದುದೂ ಆದ ನಿತ್ಯತತ್ತ್ವವನ್ನು ಪ್ರತಿಬಿಂಬಿಸುವುದರಿಂದಲೇ ವೈದಿಕ ಸಾಹಿತ್ಯದಲ್ಲಿ ಈ ದೇವತೆಯ ನಿರ್ದಿಷ್ಟವಾದ ರೂಪಾದಿಗಳು ವರ್ಣಿತವಾಗಿ ಇರಲು ಸಾಧ್ಯವಾಗಿಲ್ಲ. ಆದಿತ್ಯರನ್ನು ಧಾರಣ ಮಾಡತಕ್ಕದ್ದೂ, ಆದಿತ್ಯರಿಂದಲೇ ಧರಿಸಲ್ಪಡತಕ್ಕದ್ದೂ, ಆದ ಈ ನಿತ್ಯತತ್ತ್ವವು ಆದಿತ್ಯರಿಗೆಲ್ಲಾ ಆಶ್ರಯರೂಪವಾಗಿದೆ. ಇದೇ ದಿವ್ಯಜ್ಯೋತಿಯು ಅವರೆಲ್ಲರ ಸಾರಭೂತವೂ' ಆಗಿದೆ ಎಂದು ಇದೇ ಪಂಡಿತನು ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ.

(Journal of the German Oriental Society Vol. 6. p. 68)

'ಅನಂತ' ಎಂಬ ತತ್ವವನ್ನು ಪ್ರತಿಬಿಂಬಿಸುವ **ಅದಿತಿ** ದೇವತೆಯು ಋಷಿಗಳಿಂದ ದೃಷ್ಟವಾಗಿರುವ ದೇವತೆಗಳಲ್ಲೆಲ್ಲಾ ಅತ್ಯಂತ ಪ್ರಾಚೀನಳು. ಆದರೆ, ಕೇವಲ ಮಾನಸಿಕವಾದ ಭಾವಕಲ್ಪನೆಯಲ್ಲೇ ಅಮೂರ್ತರೂಪದಲ್ಲಿ ಚಿಂತಿತಳಾಗಿರತಕ್ಕ ತತ್ತ್ವವಾಗಿರದೇ, ಮೂರ್ತರೂಪದ ವಿಶ್ವತ್ವವನ್ನು ಒಳಗೊಂಡ ದೇವತೆಯಾಗಿದ್ದಾಳೆ. ಮಾನುಷಪ್ರತ್ಯಕ್ಷಕ್ಕೆ ಗೋಚರಳಾಗತಕ್ಕವಳೂ ಆಗಿದ್ದಾಳೆ. ಈ ಅನಂತತ್ವವನ್ನು ಪ್ರತಿಬಿಂಬಿಸುವುದರಿಂದಲೇ ಅದಿತಿಯು ಅನೇಕ ವಿಧವಾದ ವಿಶೇಷಣಗಳಿಂದ ವರ್ಣಿತಳಾಗಿದ್ದಾಳೆ.

(Translation of the Rig-veda. 1-230)

**೩. ಅದಿತಿಯು ಆದಿತ್ಯರ ಮಾತೆ ಎಂದು ವರ್ಣಿಸಿರುವ ಪ್ರಕರಣಗಳು :—**

ಕೆಳಗೆ ಉದಾಹೃತವಾಗಿರುವ ವಾಕ್ಯಗಳಿಂದ ಅದಿತಿಯು, ವರುಣಾದಿ ದೇವತೆಗಳಿಗೆ ಮಾತೃವೆಂಬುದು ತಿಳಿಯುತ್ತದೆ. ಋಕ್ಸಂಹಿತಾ ವಾಕ್ಯಗಳೇ ಅಲ್ಲದೆ ಇತರ ಶ್ರುತಿಗಳೂ ಈ ಅಂಶವನ್ನು ತಿಳಿಸುತ್ತವೆ.

"ಸಂಪತ್ತುಗಳಿಗೆಲ್ಲಾ ಪ್ರಭುಗಳಾದ ಮಿತ್ರಾವರುಣರು ತಮ್ಮ ದಿವ್ಯಶಕ್ತಿಯನ್ನು ಪ್ರಕಾಶಪಡಿಸಲೆಂದು, ಜಗನ್ಮಾತೆಯೂ, ಮಹತ್ಸ್ವರೂಪವುಳ್ಳವಳೂ, ಪೂಜ್ಯಳೂ ಆದ **ಅದಿತಿಯು** ಮಿತ್ರಾವರುಣರನ್ನು ಹಡೆದಳು"

(೮–೨೫–೩)

'ಸಂಪದ್ಯುಕ್ತನಾದ ಮಿತ್ರನಿಗೂ, ಅರ್ಯಮನಿಗೂ, ಪವಿತ್ರಾತ್ಮನಾದ ವರುಣನಿಗೂ ಮಾತೆಯಾದ ಅದಿತಿಯು ನಮಗೆ ರಕ್ಷಣೆಯನ್ನು ನೀಡಲಿ.

(cf. ೧೦–೩೬–೩ ; ೧೦–೧೩೨೬ ; ಅ. ವೇ. ೫–೧–೯) (೮–೪೭–೯)

೨–೨೭–೭ ರಲ್ಲಿ "**ರಾಜಪುತ್ರಾ**" ಎಂದರೆ ಜಗತ್ಪ್ರಭುಗಳಾದ ವರುಣಾದ್ಯಾದಿತ್ಯರೇ, ಪುತ್ರಳಾಗಿ ಉಳ್ಳವಳು ಎಂದೂ; ೩–೪–೧೧ ರಲ್ಲೂ "**ಸುಪುತ್ರಾ**" ಉತ್ತಮವಾದ ಪುತ್ರರುಳ್ಳವಳು ಎಂದೂ; ೮–೫೬–೧೧ ರಲ್ಲೂ **ಉಗ್ರಪುತ್ರಾ ಅತಿ**

ಪ್ರಬಲವಾದ ಶಕ್ತಿಯುತರಾದ ಪುತ್ರರುಳ್ಳವಳು ಎಂದೂ; ಅರ್ಥವೇದದ ೩–೮–೨ ಮತ್ತು ೧೧–೧–೧೧ ನೇ ಮಂತ್ರಗಳಲ್ಲಿ **ಶೂರಪುತ್ರಾ** ಎಂದೂ ನಿರ್ದಿಷ್ಟಳಾಗಿದ್ದಾಳೆ. ಅ. ವೇ. ೮–೯–೨೧ ನೇ ಮಂತ್ರದಲ್ಲಿ " **ಅಷ್ಟಯೋನೀರದಿತಿರಷ್ಟಪುತ್ರಾ** " ಅದಿತಿಯು ಅಷ್ಟಯೋನಿಯುಳ್ಳವಳು ಮತ್ತು ಅಷ್ಟಪುತ್ರರುಳ್ಳವಳು ಎಂದು ಸ್ತುತಳಾಗಿದ್ದಾಳೆ. ಇದೇ ಅಥರ್ವವೇದದ ೮–೯೦–೧೫ ನೇ ಮಂತ್ರದಲ್ಲಿ ಆದಿತ್ಯರಿಗೂ ಅದಿತಿಗೂ ಇರುವ ಸಂಬಂಧವನ್ನು ಕೊಂಚ ವ್ಯತ್ಯಸ್ತವಾಗಿ ತಿಳಿಸಿದೆ.

**" ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾಂ...................... ಅದಿತಿಂ ವಧಿಷ್ಟ "** ಅದಿಯು ವಸುಗಳಿಗ ದುಹಿತೆಯೂ, ರುದ್ರರಿಗೆ ಮಾತೆಯೂ, ಆದಿತ್ಯರಿಗೆ ಸಹೋದರಿಯೂ ಆಗಿದ್ದಾಳೆಂದು ವರ್ಣಿಸಿದೆ. ಸಾಮವೇದದಲ್ಲಿ ಅದಿತಿಯ ಭ್ರಾತೃಗಳೂ, ಪುತ್ರರೂ ಸಹ ಪ್ರತ್ಯೇಕವಾಗಿ ಕೆಳಗೆ ಉದಾಹೃತವಾಗಿರುವ ವಾಕ್ಯದಲ್ಲಿ ತಿಳಿಸಿರುವಂತೆ ನಿರ್ದಿಷ್ಟರಾಗಿದ್ದಾರೆ.

**" ತ್ವಷ್ಟಾ ನೋ ದೈವಂ ವಚಃ................ತ್ರಾಮಣಂ ವಚಃ "**

(ಸಾ. ವೇ. ೧–೨೯೯)

ತ್ವಷ್ಟೃವೂ, ಪರ್ಜನ್ಯನೂ, ಬ್ರಹ್ಮಣಸ್ಪತಿಯೂ ನಮಗೆ ಆಶೀರ್ವಚನಗಳನ್ನು ಪಠಿಸಲಿ. ಅದಿತಿಯೂ ಸಹ ಅವಳ ಪುತ್ರರೊಡನೆಯೂ ಭಾತೃಗಳೊಡನೆಯೂ **(ಪುತ್ರೈರ್ಭ್ರಾತೃಭಿಃ)** ನಮಗೆ ರಕ್ಷಣಾವಾಕ್ಯಗಳನ್ನು ಪಠಿಸಲಿ.

**೪. ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯಭಾವವಿದೆಯೇ ?**

೧೦-೬೩-೨ ನೇ ಋಕ್ಕಿನಲ್ಲಿ, ಉದಕ ಮತ್ತು ಪೃಥ್ವಿಗಳೊಡನೆ ಅದಿತಿಯೂ ದೇವಯೋನಿಯೆಂದು ವರ್ಣಿತಳಾಗಿದ್ದಾಳೆ. ಆ ಮಂತ್ರದ ಅರ್ಥವೇನೆಂದರೆ, "ಎಲೈ ದೇವತೆಗಳೇ, ನಿಮ್ಮ ನಾಮಗಳೆಲ್ಲವೂ ಪವಿತ್ರವಾದುವು ಮತ್ತು ಪೂಜ್ಯವಾದುವು. ಅದಿತಿಯ ಗರ್ಭದಲ್ಲಿ ಉತ್ಪನ್ನರಾದವರೂ, ಪೃಥ್ವಿಯ ಗರ್ಭದಲ್ಲಿ ಉತ್ಪನ್ನರಾದವರೂ ಮತ್ತು ಅಬ್ಜರೂ ಆದ ನೀವು ನಮ್ಮ ಪ್ರಾರ್ಥನೆಯನ್ನು ಕೇಳಿರಿ" ಎಂದಿದೆ.

[ಈ ವಿಭಾಗವು ದೇವತೆಗಳಲ್ಲಿ ದ್ಯುಲೋಕಸ್ಥರು, ಅಂತರಿಕ್ಷಸ್ಥರು ಮತ್ತು ಪೃಥಿವೀಸ್ಥರು ಎಂಬ ಮೂರು ವಿಭಾಗಾತ್ಮಕವಾಗಿರುತ್ತದೆ. (ಈ ವಿಭಾಗಕ್ರಮವನ್ನು ನಾವು ಹಿಂದೆ ೧-೧೩೯-೧೧ ನೇ ಮಂತ್ರವನ್ನು ಉದ್ಧರಿಸಿದಾಗ ವಿಮರ್ಶಿಸಿದ್ದೇವೆ). ಅಂತರಿಕ್ಷಸ್ಥರು ಎಂಬುದಕ್ಕೆ ಬದಲಾಗಿ ಉದಕದಿಂದ ಉತ್ಪನ್ನರಾದವರು ಎಂದು ಹೇಳಿರುವುದು ಒಂದು ವಿಶೇಷ. ಅದರೆ, ಈ ಸನ್ನಿವೇಶದಲ್ಲಿ ಮಾತ್ರವಲ್ಲದೆ, ೧೦-೪೯-೨ ರಲ್ಲೂ ಸಹ ಇದೇ ಪ್ರಯೋಗವಿರುತ್ತದೆ. "ದ್ಯುಲೋಕೋತ್ಪನ್ನರೂ, ಅಂತರಿಕ್ಷೋತ್ಪನ್ನರೂ ಮತ್ತು ಪೃಥಿವ್ಯುತ್ಪನ್ನರೂ ಆದ ಸಕಲ ದೇವತೆಗಳೂ ಸಹ ನನ್ನನ್ನೇ ಇಂದ್ರನೆಂದು ಪೂಜಿಸುತ್ತಾರೆ" ಎಂದು ಈ ವಿಭಾಗವಿದೆ. (ಪ್ರಕೃತವಾದ ಈ ಎರಡು ಉದಾಹರಣೆಗಳಲ್ಲಿಯೂ ಸಹ ಅಪ್ ಎಂಬ ಶಬ್ದಕ್ಕೆ ಅಂತರಿಕ್ಷವೆಂದೇ ಅರ್ಥವನ್ನು ಹೇಳಬಹುದು). ಇದರಂತೆಯೇ ೧೦-೬೫-೯ : ೨-೨೭-೧೧ ; ೧೦-೪೫-೧ ; ಮತ್ತು ೭-೩೫-೧೧ ಈ ಋಕ್ಕುಗಳಲ್ಲಿಯೂ ಇದೇ ವಿಭಾಗಗಳು ಸ್ಪಷ್ಟವಾಗಿದೆ. ಆದರೆ ೬-೫೦-೧೧ ಮತ್ತು ೭-೩೫-೧೪ ನೇ ಮಂತ್ರಗಳಲ್ಲಿ ದಿವ್ಯಾಃ, ಪಾರ್ಥಿವಾಸಃ, ಗೋಜಾತಾಃ, ಅಪ್ಯಾಃ ಎಂಬ ನಾಲ್ಕು ವಿಭಾಗಗಳಾಗಿರುತ್ತವೆ.]

೧೦-೬೩-೨ ರಂತೆಯೇ, ೧೦-೬೩-೩ ನೆಯ ಋಕ್ಕಿನಲ್ಲಿಯೂ ಈ ಅಂಶವನ್ನು ಗಮನಿಸಬಹುದು. "ಯಾವ ಆದಿತ್ಯರಿಗೆ ಮಾತೆಯಾದ ಪೃಥ್ವಿಯು ಮಾಧುರ್ಯೋಪೇತವಾದ ಕ್ಷೀರವನ್ನೂ, ಅದಿತಿರೂಪಳಾದ ದ್ಯುಲೋಕಾಧಿದೇವತೆಯ ಅಮೃತವನ್ನೂ ಕೊಡುವರೋ ಅಂತಹ ವೃಷ್ಟಿಪ್ರದರೂ ಸತ್ಕರ್ಮಕಾರರೂ ಆದ ಆದಿತ್ಯರಿಗೆ ಸ್ತುತಿಗಳನ್ನರ್ಪಿಸಿರಿ" ಎಂದಿರುವಾಗ **ಅದಿತಿಃ** ಎಂಬ ಪದವು **ದ್ಯೌಃ** ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲದೇ ೫-೫೯-೮ ನೇ ಋಕ್ಕಿನಲ್ಲಿಯೂ ಸಹ **"ಮಿಮಾತು ದ್ಯೌರದಿತಿರ್ವೀತಯೇ"** ಎಂದು ಪ್ರಯೋಗವಿದೆ. ಇಲ್ಲಿ **ಅದಿತಿ ಶಬ್ದಕ್ಕೆ** ಸಾಯಣರೇ ನಿಸ್ಪಷ್ಟವಾದ ಅರ್ಥವನ್ನು **ಹೇಳಿಲ್ಲ. ದ್ಯೌಃ**

**ಅಂತರಿಕ್ಷಂ ; ಕೀದೃಶೀ । ಅದಿತಿಃ ಅದೀನಾ ।** ದ್ಯೌಃ ಅಂದರೆ **ಅಂತರಿಕ್ಷ** ಮತ್ತು ಅದೀನಳಾದ ಅಂತರಿಕ್ಷವೆಂದು ಒಂದರ್ಥವನ್ನೂ, ಎರಡನೆಯದಾಗಿ **ಅದಿತಿಃಭೂಮಿಶ್ಚ** ಎಂದು **ಅದಿತಿ** ಶಬ್ದಕ್ಕೆ **ಭೂಮಿ** ಎಂಬ ಇನ್ನೊಂದು ಅರ್ಥವನ್ನೂ ಹೇಳಿದ್ದಾರೆ. ಇಂತಹ ಸಂದರ್ಭಗಳು ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯವನ್ನು ತೋರಿಸುತ್ತವೆ. ಆದರೆ,

**"ದೇವಾ ಆದಿತ್ಯಾ ಅದಿತಿಂ ಹವಾಮಯೇ ಯೇ ಪಾರ್ಥಿವಾಸೋ ದಿವ್ಯಾಸೋ ಅಪ್ಸುಯೇ"**

(ಋ. ಸಂ. ೧೦-೬೫)

ಎಂಬ ಈ ಮಂತ್ರದಲ್ಲಿ ಆದಿತ್ಯರು ಅವರ ಮಾತೆಯಾದ ಅದಿತಿ ಇವರಲ್ಲದೆ ಪೃಥಿವ್ಯುತ್ಪನ್ನರೂ, ದ್ಯುಲೋಕೋತ್ಪನ್ನರೂ ಆದ ದೇವತೆಗಳು ಎಂದು ಬೇರೆಬೇರೆ ಹೇಳಿದೆ. **ಅದಿತಿ ಮತ್ತು ದ್ಯುಲೋಕ** ಇವೆರಡೂ ಬಿನ್ನವೆಂದು ಈ ಸಂದರ್ಭದಲ್ಲಿ ತಿಳಿಸಿದೆ.

**೫. ಅದಿತಿಯು ಪೃಥ್ವಿಗಿಂತಲೂ ಬೇರೆಯಾದ ದೇವತೆ ಎಂಬುದಕ್ಕೆ ಆಧಾರಗಳು—**

ಮೇಲೆ ಉದ್ಧರಿಸಿರುವ ಕೆಲವು ವಾಕ್ಯಗಳಲ್ಲಿ ಅದಿತಿಗೂ ಅಂತರಿಕ್ಷಕ್ಕೂ ತಾದಾತ್ಮ್ಯವನ್ನು ಹೇಳಿದ್ದರೂ ಸಹ ಸಂಹಿತೆಯ ಉಳಿದ ಭಾಗಗಳಲ್ಲೂ ಸಹ ಇವೇ ತಾದಾತ್ಮ್ಯಸಂಬಂಧವನ್ನು ತೋರಿಸಿದೆಯೆಂದು ಹೇಳಲಾಗುವುದಿಲ್ಲ. ಒಂದೊಂದು ಸಲ ಪೃಥಿವಿಯೂ, ಆದಿತಿಯೂ ಒಂದೇ ಎಂದು ತೋರಿಸುವ ಸನ್ನಿವೇಶಗಳೂ ಇವೆ. ಆದರೆ ಇದಕ್ಕೆ ವ್ಯತ್ಯಸ್ತವಾದ ವರ್ಣನೆಗಳೂ ಇರುತ್ತವೆ. ನಿರುಕ್ತಪಾಠಗಳಂತೆ ಒಂದುಸಲ ಪೃಥಿವಿಗೂ ಇನ್ನೊಂದು ಸಲ ದ್ಯಾವಾಪೃಥಿವಿಗಳಿಗೂ ಪರ್ಯಾಯಪದವಾಗಿರುತ್ತದೆಂದು ಮೇಲೆ ತಿಳಿಸಿದೆ "ಉತ್ತಮನಾದ ಕರ್ಮವನ್ನಾಚರಿಸುವ ಪುತ್ರರೊಡಗೂಡಿ ಅದಿತಿರೂಪಳಾದ ಪೃಥ್ವಿಯು ಅಗ್ನಿಯ ಅನುಗ್ರಹ ದಿಂದ ಸ್ಥಿತಳಾಗಿದ್ದಾಳೆ" ಇತ್ಯಾದಿಯಾಗಿ (೧-೮೨-೯) ಒಂದೆರಡು ಸನ್ನಿವೇಶಗಳಲ್ಲಿ **ಅದಿತಿ** ಶಬ್ದವು ಪೃಥಿವಿಗೆ ವಿಶೇಷಣವಾಗಿರುತ್ತದೆ. (ಅ. ವೇ. ೧೩-೧-೩೮) ಆದರೆ ಇತರ ಅನೇಕ ಸಂದರ್ಭಗಳಲ್ಲಿ ಪೃಥ್ವಿಗಿಂತಲೂ ಭಿನ್ನಳಾದ ದೇವತೆಯೆಂಬುದು ನಿಸ್ಪಷ್ಟವಾಗಿ ತಿಳಿಯುತ್ತದೆ. ಉದಾಹರಣೆಗೆ—

"ದ್ಯಾವಾಪೃಥಿವಿಗಳೂ ; ಅಪ್ಪುಗಳೂ, ಸನಕ್ಷತ್ರನಾದ ಸೂರ್ಯನೂ ನಮ್ಮ ಪ್ರಾರ್ಥನೆಯನ್ನು ಕೇಳಲಿ" ಎಂದು ೩-೫೪-೧೯ ನೇ ಮಂತ್ರದಲ್ಲಿ ಪ್ರಾರ್ಥಿಸಿ ಪುನಃ ಅದಕ್ಕೆ ಮುಂದಿನ ಎಂದರೆ ೩-೫೪-೨೦ ನೇ ಋಕ್ಕಿನಲ್ಲಿ "ಆದಿತ್ಯರೊಡಗೂಡಿದ ಅದಿತಿಯು ನಮ್ಮ ಪ್ರಾರ್ಥನೆಯನ್ನು ಕೇಳಲಿ" ಎಂದು ಪ್ರಾರ್ಥಿಸಿದೆ. ಆದುದರಿಂದ ಅದಿತಿಯು ಪೃಥಿವಿಗಿಂತಲೂ ಭಿನ್ನಳು ಎಂಬ ವಿಷಯದಲ್ಲಿ ಸಂಶಯವಿಲ್ಲ. ಇನ್ನೂ ಕೆಲವು ಉದಾಹರಣೆಗಳನ್ನು ತೆಗೆದುಕೊಂಡರೆ,

"ಇಂದ್ರನನ್ನೂ, ಅಗ್ನಿಯನ್ನೂ, ಮಿತ್ರನನ್ನೂ, ವರುಣನನ್ನೂ, ಅದಿತಿಯನ್ನೂ, ಅಂತರಿಕ್ಷವನ್ನೂ, ಪೃಥಿವಿಯನ್ನೂ, ದ್ಯುಲೋಕವನ್ನೂ, ಮರುತ್ತುಗಳನ್ನೂ, ಪರ್ವತಗಳನ್ನೂ, ಅಪ್ಪುಗಳನ್ನೂ ನಾನು ಪ್ರಾರ್ಥಿಸಿ ಕರೆಯುತ್ತೇನೆ"

(೫-೪೬-೩)

"ಪಿತೃರೂಪನಾದ ದ್ಯುಲೋಕವೇ, ಉಪಕಾರಕಳಾದ ಪೃಥ್ವಿಯೇ, ಭ್ರಾತೃರೂಪನಾದ ಅಗ್ನಿಯೇ, ವಸುಗಳೇ, ನಮಗೆ ಸುಖದಾಯಕರಾಗಿರಿ. ಎಲೈ ಆದಿತ್ಯರೇ, ಅದಿತಿದೇವಿಯೇ, ನಮಗೆ ಪೂರ್ಣವಾದ ರಕ್ಷಣೆಯನ್ನು ನೀಡಿರಿ"

(೬-೫೧-೫)

"ಮಿತ್ರನೂ, ವರುಣನೂ, ಅದಿತಿಯೂ, ಸಾಗರಾಧಿದೇವತೆಯೂ, ಪೃಥ್ವಿಯೂ, ದ್ಯುಲೋಕವೂ ನಮಗೆ ಸಂತೋಷ ಕಾರಕವಾಗಲಿ"

(೯-೯೭-೫೮)

"ಪ್ರಾಜ್ಞರೂ, ವಿವೇಕಿಗಳೂ ಆದ ದ್ಯಾವಾಪೃಥ್ವಿಗಳು ನಮ್ಮನ್ನು ರಕ್ಷಿಸಲಿ. ಮಿತ್ರಾವರುಣರ ಮಾತೆಯಾದ ಅದಿತಿಯೂ ನಮ್ಮನ್ನು ಆಪತ್ತುಗಳಿಂದ ರಕ್ಷಿಸಲಿ"

(೧೦-೩೬-೨,೨)

"ದ್ಯಾವಾಪೃಥಿವಿಗಳೂ, ಯಮನೂ, ಅದಿತಿಯೂ, ತ್ವಷ್ಟೃವೂ.... ....ವಿಷ್ಣುವು ನಮ್ಮ ಪೂಜೆಗೆ ಅರ್ಹರಾಗಿರುತ್ತಾರೆ" (೧೦-೯೨-೧೧)

"ಅತ್ಯುತ್ತಮವಾದ ರಕ್ಷಣೆಯನ್ನು ನೀಡತಕ್ಕ ಪೃಥ್ವಿಯನ್ನೂ, ಪಾಪರಹಿತವಾದ ದ್ಯುಲೋಕವನ್ನೂ, ಮಾರ್ಗದರ್ಶಕಳಾದ ಅದಿತಿಯನ್ನೂ..........ನಾವು ಆಶ್ರಯಿಸೋಣ" (೧೦-೬೩-೧೦)

ಇತ್ಯಾದಿ ವಾಕ್ಯಗಳಲ್ಲಿ ಪೃಥಿವಿಗೂ ಅದಿತಿಗೂ ಇರತಕ್ಕ ಭಿನ್ನತೆಯು ಸ್ಪಷ್ಟವಾಗಿರುತ್ತವೆ. ಇದೇ ಅಭಿಪ್ರಾಯವನ್ನು ಸಮರ್ಥಿಸುವಂತೆ ವಾಜಸನೇಯ ಸಂಹಿತೆಯಲ್ಲಿಯೂ ಸಹ ಈರೀತಿ ಪ್ರಾರ್ಥನೆಯಿರುತ್ತದೆ--"**ಪೃಥಿವೀ ಚ ಮೇಽದಿತಿಶ್ಚ ಮೇ**...ಪೃಥ್ವಿಯೂ, ಅದಿತಿಯೂ, ದಿತಿಯೂ,....ನನ್ನನ್ನು ತೃಪ್ತಿಗೊಳಿಸಲಿ [ವಾ. ಸಂ. ೧೮-೨೨] ಎಂದಿದೆ. ಅಥರ್ವವೇದವಲ್ಲಿಯೂ ಸಹ; **ಭೂಮಿರ್ಮಾತಾ ಅದಿತಿರ್ನೋ ಜನಿತ್ರೀಂ**.........."ಮಾತೃರೂಪಳಾದ ಪೃಥ್ವಿಯೂ, ಉತ್ಪತ್ತಿಹೇತುವಾದ ಅದಿತಿಯೂ ನಮ್ಮನ್ನು ರಕ್ಷಿಸಲಿ ಎಂದಿದೆ (ಅ. ವೇ. ೬-೧೨೦-೨).

ಆದರೆ ಕೆಲವು ಬ್ರಾಹ್ಮಣವಾಕ್ಯಗಳಲ್ಲಿ ಅದಿತಿಗೂ, ಪೃಥಿವಿಗೂ ನಿಸ್ಪಷ್ಟವಾದ ತಾದಾತ್ಮ್ಯವನ್ನೇ ಹೇಳಿದೆ ಉದಾಹರಣೆಗೆ :—

"**ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ಪ್ರತಿಷ್ಠಾ**" (ಶ. ಬ್ರಾ. ೨-೨೧-೧೯)

**ಈ ಪೃಥ್ವಿಯೇ ಅದಿತಿಯು; ಇವಳೇ ಜಗತ್ತಿನ ಧಾರಕಳು.**

"**ಇಯಂ ವೈ ಪೃಥ್ವೀ ಅದಿತಿಃ ಸಾ ಇಯಂ ದೇವಾನಾಂ ಪತ್ನೀ**" (ಶ. ಬ್ರಾ. ೫-೩-೧-೪)

ಈ ಪೃಥ್ವಿಯೇ ಅದಿತಿಯು. ಅವಳೇ ಪೂಜ್ಯಳಾದ ದೇವಪತ್ನಿಯು. ಇತ್ಯಾದಿಯಾಗಿರತಕ್ಕ ಬ್ರಾಹ್ಮಣವಾಕ್ಯಗಳೂ ಇರುವುದರಿಂದ **ಅದಿತಿ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಆಯಾ ಸಂದರ್ಭೋಚಿತವಾಗಿ ಮಾತ್ರ ಹೇಳಬೇಕು.

ಅದಿತಿಯು ಅಂತರಿಕ್ಷಸ್ಥರಾದ ದೇವತೆಗಳಿಗೆಲ್ಲಾ ಮುಖ್ಯಳು ಎಂದು ಯಾಸ್ಕರು ಸೂಚಿಸಿರುವುದನ್ನು ಹಿಂದೆ ತಿಳಿಸಿದೆ. ಆದರೆ ಅದೇ ಯಾಸ್ಕರು ಅದಿತಿಪುತ್ರರಾದ ಆದಿತ್ಯರನ್ನು ದ್ಯುಲೋಕಸ್ಥರಾದ ದೇವತೆಗಳೊಡನೆ ಸೇರಿಸಿ ಅವರ ಮಾತೆಯಾದ ಅದಿತಿಯನ್ನು ಮಾತ್ರ ಅಂತರಿಕ್ಷಸ್ಥರಾದ ದೇವತೆಗಳೊಡನೆ ಸೇರಿಸದಿರುವುದು ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಆದರೆ, ಯಾಸ್ಕರು ನಿಷ್ಕೃಷ್ಟವಾದ ವರ್ಗೀಕರಣದಲ್ಲಿ ಪ್ರಯುಕ್ತಿಸಿದ್ದಾರೆಂದು ಹೇಳಲಾಗುವುದಿಲ್ಲ.

**೬. ಅದಿತಿ ಮತ್ತು ದಿತಿ—**

"ಎಲೈ ಮಿತ್ರಾವರುಣರೇ, ಉಷಃಕಾಲದಲ್ಲಿ ನಿಮ್ಮ ಸುವರ್ಣನಿರ್ಮಿತವಾದ ರಥವನ್ನು ಹತ್ತಿ ಅದಿತಿಯನ್ನು ದಿತಿಯನ್ನೂ, ವೀಕ್ಷಿಸಿರಿ" ಋ. ಸಂ. ೫-೬೨-೮)

ಎಂಬ ಅರ್ಥವನ್ನು ಕೊಡುವ 'ಹಿರಣ್ಯರೂಪಂ' ಎಂಬ ಮಂತ್ರದಲ್ಲಿ **ಅದಿತಿಯು ದಿತಿಯೊಂದಿಗೆ** ನಿರ್ದಿಷ್ಟಳಾಗಿದ್ದಾಳೆ. **ಅದಿತಿ** **ದಿತಿ** ಈ ಎರಡು ಪದಗಳೂ ಸಹ ಒಂದಕ್ಕೊಂದಕ್ಕೆ ವ್ಯತ್ಯಾಸವನ್ನು ತೋರಿಸುವ ಅರ್ಥದಾಯಕವಾಗಿರುತ್ತದೆ ಅಥವಾ ಒಂದರ ನ್ಯೂನತೆಯನ್ನು ಇನ್ನೊಂದು ಪೂರ್ಣಗೊಳಿಸುವುದಾಗಿರುತ್ತದೆ. ಈ ರೀತಿ ಒಂದರ್ಥದಲ್ಲಿ ಪರಸ್ಪರ ವಿರೋಧಸೂಚಕವೂ, ಇನ್ನೊಂದರ್ಥದಲ್ಲಿ ಪರಸ್ಪರ ಪರಿಪೂರಕವೂ ಆದ ಈ ಎರಡು ದೇವತೆಗಳ ಸಂಬಂಧವನ್ನೂ ಮತ್ತು ಭಿನ್ನತೆಯನ್ನೂ ಮೇಲಿನ ಮಂತ್ರವು ಸೂಚಿಸುತ್ತದೆ.

(ಇದೇ ಪದಗಳು ವಾಜಸನೇಯಸಂಹಿತೆಯಲ್ಲಿಯೂ **ಸಹ ಪ್ರಯುಕ್ತವಾಗಿದೆ.** (೧-೧೬) ಇದಕ್ಕೆ ಭಾಷ್ಯಕಾರರು ಅಧಿದೈವಾರ್ಥದಲ್ಲಿ ತಾತ್ಪರ್ಯವನ್ನು ಹೇಳಿದ್ದಾರೆ. **ಅದಿತಿ** ಶಬ್ದಕ್ಕೆ ದಾರಿದ್ರ್ಯರಹಿತನೆಂದೂ (ಅದೀನ) ಮತ್ತು **ದಿತಿ** ಶಬ್ದಕ್ಕೆ

ದರಿದ್ರನೆಂದೂ (ದೀನ) ಅರ್ಥಮಾಡಿದ್ದಾರೆ. ಎಂದರೆ ವಿಹಿತಾನುಷ್ಠಾತನಾದವನು ಅದಿತಿಯು; ನಾಸ್ತಿಕ ವರ್ತನೆಯುಳ್ಳವನು ದಿತಿಯು. ಈ ರೀತಿಯ ವ್ಯತ್ಯಾಸವನ್ನು ತೋರಿಸಿದೆ.)

ಸಾಯಣರು ಋ. ಸಂ. ೫-೬೨-೮ ನೇ ಮಂತ್ರದ ಭಾಷ್ಯದಲ್ಲಿ ಅದಿತಿಯೆಂದರೆ ಅಖಂಡನೀಯವಾದ ಭೂಮಿಯೆಂದೂ, ದಿತಿಯೆಂದರೆ ಖಂಡನೀಯವಾದ ಎಂದರೆ ವೈಯಕ್ತಿಕವಾದ ಪ್ರಜಾದಿಗಳುಳ್ಳ ಭೂಮಿಯೆಂದೂ ಅರ್ಥಮಾಡಿದ್ದಾರೆ. Roth ಎಂಬ ಜರ್ಮನ್ ಪಂಡಿತನು ಅದಿತಿ ಶಬ್ದಕ್ಕೆ ನಿತ್ಯವೆಂದೂ, ದಿತಿ ಶಬ್ದಕ್ಕೆ ಅನಿತ್ಯವೆಂದೂ ಅರ್ಥಮಾಡಿದ್ದಾನೆ.

(Journal of German Oriental Society Vol. VI p. 71)

ಒಟ್ಟಿನಲ್ಲಿ ಎಲ್ಲಾ ಸನ್ನಿವೇಶಗಳನ್ನೂ ಪರಿಶೀಲಿಸಿದರೆ, ಅದಿತಿಯು ಅಂತರಿಕ್ಷವನ್ನೂ, ದಿತಿಯು ಪೃಥ್ವಿಯನ್ನೂ ಪ್ರತಿಬಿಂಬಿಸುವ ದೇವತೆಗಳೆನ್ನಬಹುದೆಂದು ತೋರುತ್ತದೆ. ಪ್ರಕೃತಿಯ ಎಲ್ಲಾ ಅವಸ್ಥೆಗಳನ್ನೂ ಒಳಗೊಂಡಿರುವ ಪರಿಪೂರ್ಣಾವಸ್ಥೆಯನ್ನು ಈ ಎರಡು ತತ್ತ್ವಗಳೂ ಸೇರಿ ಪ್ರತಿಬಿಂಬಿಸುವುವು ಎಂದೂ ಹೇಳಬಹುದು.

ಋ. ಸಂ. ೪-೨-೧೧ನೇ ಮಂತ್ರದಲ್ಲಿ ಪ್ರಯುಕ್ತವಾಗಿರುವ ದಿತಿಶಬ್ದಕ್ಕೆ ಸಾಯಣರು ಉದಾರಿಯಾದ ದಾನಿಯೆಂದೂ, ಅದಿತಿ ಶಬ್ದಕ್ಕೆ ದಾನಮಾಡದಿರುವ ಲೋಭಿಯೆಂದೂ ಅರ್ಥಮಾಡಿದ್ದಾರೆ. ದಿತಿಂ—ದಾತಾರಂ; ಅದಿತಿಂ-ಅದಾತುಃ ಪಂಚಮ್ಯರ್ಥೇ ದ್ವಿತೀಯಾ ಎಂದು ವಿವರಿಸಿದೆ.

ಅದಿತಿಯಿಲ್ಲದೆ ಕೇವಲ ದಿತಿ ಪ್ರಯೋಗವಿರುವ ಸಂದರ್ಭಗಳೂ ಕೆಲವಿವೆ. ಉದಾಹರಣೆಗೆ—

"ಅಗ್ನಿಯೇ, ಪೂಜ್ಯರಾದ ಸವಿತೃ ಮತ್ತು ಭಗದೇವತೆಗಳೇ, ನಮಗೆ ಪ್ರಖ್ಯಾತಿಯನ್ನೂ ಸಂತತಿಯನ್ನೂ ಅನುಗ್ರಹಿಸಿರಿ. ದಿತಿಯೂ ಸಹ ನಮ್ಮ ಅಪೇಕ್ಷಿತವಾದ ವಸ್ತುಗಳನ್ನು ಅನುಗ್ರಹಿಸಿ ಕೊಡುತ್ತಾಳೆ"

(೭-೧೫-೧೨)

ಎಂಬರ್ಥವನ್ನು ಕೊಡುವ 'ತ್ವಮಗ್ನೇ' ಎಂಬ ಮಂತ್ರದಲ್ಲಿ ದಿತಿ ಶಬ್ದಕ್ಕೆ ಸಾಯಣರು ದೇವಿಯೆಂಬ ಅರ್ಥವನ್ನು ಮಾತ್ರ ಹೇಳಿದ್ದಾರೆ. ಇಲ್ಲಿ ದಿತಿಯು ಅದಿತಿಯೊಡನೆ ಸೇರಿಲ್ಲ. ಈ ಸಂದರ್ಭದಲ್ಲಿ ಆಂಗ್ಲ ಅಥವಾ ಜರ್ಮನ್ ಪಂಡಿತರು ದಿತಿ ಶಬ್ದಕ್ಕೆ ತಮ್ಮದೇ ಆದ ಅರ್ಥವನ್ನು ತಮ್ಮ ಕಲ್ಪನೆಗನುಸಾರವಾಗಿ ಸೇರಿಸಿದ್ದಾರೆ. ಉದಾಹರಣೆಗೆ Roth ಎಂಬುವನು "ದಿತಿಯೆಂದರೆ ಔದಾರ್ಯವನ್ನಾಗಲಿ ಅಥವಾ ಸಂಪದ್ವೃದ್ಧಿಯನ್ನಾಗಲಿ ಪ್ರತಿಬಿಂಬಿಸುವ ದೇವತಾ ವಿಶೇಷ"ವೆಂದು ಹೇಳಿದ್ದಾನೆ. Max Muller ಎಂಬುವನು "ಈ ಸಂದರ್ಭದಲ್ಲಿ ಅದಿತಿ ಪದವೇ ದಿತಿಯಾಗಿ ಪಾಠಭೇದದಿಂದ ಪರಿವರ್ತಿತವಾಗಿದೆ" ಯೆಂದೂ ತಿಳಿಸಿದ್ದಾನೆ. ಅ. ವೇ. ೧೫-೬-೭; ೧೬-೧೮-೪; ವಾ. ಸಂ. ೧೮-೨೨ ಈ ಮಂತ್ರಗಳಲ್ಲಿ ದಿತಿ ಮತ್ತು ಅದಿತಿಯರು ಪ್ರತ್ಯೇಕ ದೇವತೆಗಳೆಂದು ನಿಸ್ಪಷ್ಟವಾಗಿ ತಿಳಿಸಿದೆ. ಅ. ವೇ. ೭-೭-೧ ರಲ್ಲಿ ದಿತಿ ಪುತ್ರರಾರು ಎಂಬುದನ್ನು ನಿರ್ದೇಶಿಸಿದೆ. ಈ ದಿತಿಪುತ್ರರೇ ಮುಂದೆ ಪುರಾಣಾದಿಗಳಲ್ಲಿ ದೈತ್ಯರೆಂದೂ, ದೇವತೆಗಳ ಶತ್ರುಗಳೆಂದೂ ಪರಿಗಣಿತರಾಗಿದ್ದಾರೆ.

### ೭. ವಿಶ್ವಪ್ರಕೃತಿಯನ್ನು ಪ್ರತಿಬಿಂಬಿಸುವ ದೇವತಾತತ್ತ್ವವೇ ಅದಿತಿಯಾಗಿರಲು ಸಾಧ್ಯ.

ವಿಶ್ವವ್ಯಾಪಕವಾದ ಪ್ರಕೃತಿಯನ್ನೇ ಅದಿತಿಯು ಪ್ರತಿಬಿಂಬಿಸುತ್ತಾಳೆ ಎಂದು ತಿಳಿಸುವ ಮಂತ್ರಗಳೂ ಇರುತ್ತವೆ. ದ್ಯುಲೋಕಸ್ಥವೂ, ಅಂತರಿಕ್ಷಸ್ಥವೂ ಆದ ಯಾವ ಸಕಲ ವಸ್ತುಗಳುಂಟೋ, ದೈವೀ ಮತ್ತು ಮಾನುಷ ಎಂಬ ಯಾವ ಯಾವ ಭೂತಗಳುಂಟೋ, ಭೂತ, ಭವಿಷ್ಯತ್ತು ಮತ್ತು ವರ್ತಮಾನಾದಿಗಳಿಗೆಲ್ಲಾ ಸೇರಿದ ಯಾವ ತತ್ತ್ವವಿಶೇಷವುಂಟೋ, ಅವೆಲ್ಲಕ್ಕೂ ಅದಿತಿಯೇ ಮೂಲಳು ಮತ್ತು ಅವಳೇ ಸರ್ವಾತ್ಮಳಾಗಿದ್ದಾಳೆ.

"ಅದಿತಿರ್ದ್ಯೌರದಿತಿರಂತರಿಕ್ಷಂ..............ಅದಿತಿರ್ಜನಿತ್ವಂ"　(ಋ. ಸಂ. ೧-೮೯-೧೦)

ಅಖಂಡಳಾದ ಅದಿತಿಯು ಸಕಲ ವಿಶ್ವಕ್ಕೂ ಜನ್ಮದಾತೆಯು. ಅವಳೇ ಜಗಜ್ಜನನಿಯು, ಅವಳೇ ಜಗಜ್ಜನಕಳು. ಉತ್ಪನ್ನವಾದ ಸಕಲ ವಸ್ತುವೂ ಅವಳೇ. ಅವಳೇ ಎಲ್ಲದಕ್ಕೂ ಉತ್ಪತ್ತಿಸ್ಥಾನವು. ವರ್ಣಾತ್ಮಕವಾದ ಮತ್ತು ನಿಷಾದರಿಂದ ಕೂಡಿದ ಐದುಜಾತಿಯ ಜನರೂ ಅವಳೇ. ದೇವಗಂಧರ್ವಾದಿಗಳೂ ಅವಳೇ. ಅದಿತಿಯೇ ಸಕಲ ದೇವತೆಗಳು. ಅವಳೇ ಪ್ರಕಾಶಮಾನವಾದ ಸ್ವರ್ಗವು. ಅವಳೇ ಅಂತರಿಕ್ಷವು. ಅವಳೇ ಸಲಕ ವಿಶ್ವವು. ಅವಳೇ ವಿಶ್ವನಿಯಾಮಕಳು.

ಸಾಯಣರು ಈ ವಾಕ್ಯಕ್ಕೆ ಭಾಷ್ಯವನ್ನು ಹೇಳುವಾಗ 'ಇಲ್ಲಿ ಅದಿತಿಶಬ್ದಕ್ಕೆ ಪೃಥ್ವಿಯೆಂದಾಗಲಿ ಅಥವಾ ದೇವಮಾತೆಯೆಂದಾಗಲಿ ಅರ್ಥ' ಎಂದು ತಿಳಿಸಿ ಅವಳ ವಿಶ್ವವ್ಯಾಪಕತ್ವವನ್ನು ವಿವರಿಸಿದ್ದಾರೆ. **ಅದಿತಿರಾದೀನಾ ಅಖಂಡನೀಯಾ ವಾ ಪೃಥ್ವೀ ದೇವಮಾತಾ ವಾ |............ಏವಂ ಸಕಲಜಗದಾತ್ಮನಾ ಅದಿತಿಃ ಸ್ತೂಯತೇ** ನಿರುಕ್ತಕಾರರು ಈ ಪದದ ನಿರ್ವಚನವನ್ನು ತಿಳಿಸುತ್ತಾ **(ಅದಿತಿರದೀನಾ ದೇವಮಾತಾ)** ಮಹಾತ್ಮಳಾದ ದೇವಮಾತೆಯೆಂದರ್ಥಮಾಡಿದ್ದಾಳೆ (ನಿ. ೪-೨೨) ಮೇಲೆ ಉದ್ಧೃತವಾಗಿರುವ ೧-೮೯-೧೦ ನೇ ಮಂತ್ರದಲ್ಲಿ ಅವಳ ಮಾಹಾತ್ಮ್ಯವೂ ವಿವಿಧವಾದ ರೂಪಪ್ರಕಾಶನವೂ ವಿವೃತವಾಗಿದೆ.

**'ಸ್ವಯಂಭು ಬ್ರಹ್ಮ ಪರಮಂ ತಪೋ ಯತ್ | ಸ ಏವ ಪುತ್ರಃ ಸ ಪಿತಾ ಸ ಮಾತಾ'** ಸ್ವಯಂಭುವಾದ ಪರಬ್ರಹ್ಮನೇ ಪರಮಪವಿತ್ರವಾದ ತಪಸ್ಸು. ಅತನೇ ಪುತ್ರನು, ಅತನೇ ಮಾತೃವೂ, ಪಿತೃವು ಇತ್ಯಾದಿಯಾಗಿ ಯಾವರೀತಿ ಬ್ರಹ್ಮನಿಗೆ ಸರ್ವಾತ್ಮತ್ವವೂ ವಿಶ್ವವ್ಯಾಪಕತ್ವವೂ ವರ್ಣಿತವಾಗಿದೆಯೋ (ತೈ. ಬ್ರಾ. ೩-೧೨-೩-೧) ಅದೇ ರೀತಿಯಲ್ಲಿ ಈ ಮಂತ್ರದಲ್ಲಿ ಅದಿತಿಯು ವರ್ಣಿತಳಾಗಿದ್ದಾಳೆ.

ಅದಿತಿ ತತ್ತ್ವದ ಮಾಹಾತ್ಮ್ಯವನ್ನರಿಯಲು ಇನ್ನೊಂದು ಬಹು ಮುಖ್ಯವಾದ ಸನ್ನಿವೇಶವನ್ನು ಪರಿಶೀಲಿಸಬಹುದು. ಆ ಮಂತ್ರದ ತಾತ್ಪರ್ಯವು ಈರೀತಿಯಲ್ಲಿದೆ—

'ದೇವತೆಗಳಲ್ಲಿ ಯಾರು ಶ್ರೇಷ್ಠರು? ಯಾವ ದೇವನನ್ನು ನೆನೆದರೆ ನನ್ನ ಈ ಕಷ್ಟವು ಪರಿಹಾರವಾಗುತ್ತದೆ? ನನ್ನ ತಂದೆಯನ್ನೂ ತಾಯಿಯನ್ನೂ ಯಾವಾಗ ನೋಡುವೆನು?' (೧-೨-೧)

ಐತರೇಯ ಬ್ರಾಹ್ಮಣದಲ್ಲಿ ಇದೇ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳನ್ನು ಉದ್ಧರಿಸಿ, ಈ ಮಂತ್ರಗಳು ಶುನಃಶೇಫನಿಂದ ಪಠಿತವಾದುವೆಂದು ತಿಳಿಸಿದೆ. ಈ ಸನ್ನಿವೇಶಕ್ಕೂ ಶುನಃಶೇಫನಿಗೂ ನಿಕಟವಾದ ಸಂಬಂಧವಿದೆಯೋ ಇಲ್ಲವೋ ಎಂಬುವದರ ವಿಷಯದಲ್ಲಿ ಕೆಲವು ಪಂಡಿತರಲ್ಲಿ ಅಭಿಪ್ರಾಯ ಭೇದವಿದೆ. ಅದು ಇಲ್ಲಿ ಅಷ್ಟು ಮುಖ್ಯವಲ್ಲ. ಯಾರು ಈ ಮಂತ್ರವನ್ನು ಪಠಿಸಿದ್ದರೂ ಆಪತ್ತಿನಲ್ಲಿ ಸಿಕ್ಕಿರುವ ಪುರುಷನು ಆಪತ್ತಿನಿಂದ ಪಾರಾಗಬೇಕೆಂಬ ಬಯಕೆಯಿಂದ ಪಠಿಸತಕ್ಕ ಮಂತ್ರವಾಗಿದೆ.

**೮. ಅದಿತಿಯು ಪಾಪವನ್ನು ಕ್ಷಮಿಸತಕ್ಕ ದೇವತೆ—**

Benfey ಎಂಬ ಪಂಡಿತನು ಇದೇ ಮೇಲೆ ಉದ್ಧರಿಸಿದ ೧-೨೪-೧ ಮತ್ತು ೧-೨೪-೨ ನೇ ಮಂತ್ರಗಳಲ್ಲಿ **ಅದಿತಿ** ಶಬ್ದಕ್ಕೆ ಅರ್ಥವನ್ನು ಹೇಳುವಾಗ ಈ ಪದಕ್ಕೆ ಪಾಪರಾಹಿತ್ಯವೆಂಬರ್ಥವನ್ನು ತಿಳಿಸಿದ್ದಾನೆ (Orient and Occedent I 33) ಈತನು ಹೇಳಿರುವ ತಾತ್ಪರ್ಯವು ಒಂದು ದೃಷ್ಟಿಯಿಂದ ಸಮಂಜಸವಾಗಿದೆ. ಅದಿತಿಯು ಪಾಪನಾಶಕಳು ಎಂಬುದು ಮಾತ್ರ ಪ್ರಸಿದ್ಧವಾದ ವಿಷಯವಾಗಿದೆ ಪಾಪರಹಿತಳೂ ಎಂಬುದೂ **ಅನಾಗಸ** ಇತ್ಯಾದಿ ವಿಶೇಷಣಗಳಿಂದ ವಿವೃತವಾಗಿದೆ. ಆದುದರಿಂದಲೇ ಅವಳನ್ನು ನಿರ್ದೇಶಿಸಿದ ಪ್ರಾರ್ಥನೆಯೂ ಈರೀತಿಯಿರುತ್ತದೆ.

"ಎಲೈ ವರುಣನೇ, ನನ್ನ ಶಿರೋಭಾಗದಲ್ಲಿರುವುದೂ, ಅಧಃಪ್ರದೇಶದಲ್ಲಿರುವುದೂ ಎಲ್ಲಾ ಬಂಧನಗಳನ್ನೂ ಬಿಡಿಸು. ನಾವು ಅದಿತಿಯ ವಿಷಯದಲ್ಲ ಪಾಪರಹಿತರಾಗಿರೋಣ" (೧-೨೪-೧೫)

ಹೀಗೆಯೇ ಅದಿತಿಯ ಅನುಗ್ರಹದಿಂದ ಲಭಿಸತಕ್ಕ ಪಾಪರಾಹಿತ್ಯವೂ ಆತ್ಮಶುದ್ಧಿಯೂ ವಿವೃತವಾಗಿರುವ ಕೆಲವು ವಾಕ್ಯಗಳನ್ನು ಕೆಳಗೆ ಉದ್ಧರಿಸಿದೆ.

"ಅದಿತಿಯು ನಮ್ಮನ್ನು ಪಾಪರಹಿತರನ್ನಾಗಿ ಮಾಡಲಿ" (೧-೧೬೬-೨೨)

"ಎಲೈ ಅದಿತಿಯೇ, ಮಿತ್ರಾವರುಣರೇ, ನಿಮ್ಮ ವಿಷಯದಲ್ಲಿ ನಾವೇನಾದರೂ ಪಾಪವನ್ನಾಚರಿಸಿದ್ದರೆ, ದಯವಿಟ್ಟು ಅದನ್ನು ಕ್ಷಮಿಸಿ ನಮ್ಮನ್ನು ಅನುಗ್ರಹಿಸಿರಿ" (೨-೨೭-೧೪)

"ಎಲೈ ಅಗ್ನಿಯೇ, ಮಾನವರಿಗೆ ಸಹಜವಾದ ಅವಿವೇಕದಿಂದ ನಾವು ಯಾವ ತಪ್ಪನ್ನು ಮಾಡಿದ್ದರೂ ಸಹ ನಮಗೆ ಅದಿತಿಯ ಅನುಗ್ರಹವು ಲಭಿಸುವುದಕ್ಕಾಗಿ ನಮ್ಮನ್ನು ಪಾಪರಹಿತರನ್ನಾಗಿ ಮಾಡು" (೪-೧೨-೪)

"ದೇವತಾತ್ಮನಾದ ಸವಿತೃವಿನ ಸಹಾಯದಿಂದ ನಾವು ಅದಿತಿಯ ವಿಷಯದಲ್ಲಿ ಯಾವ ಪಾಪವನ್ನೂ ಆಚರಿಸದೇ ಇರುವಂತಾಗಲಿ" (೫-೮೨-೬)

"ಅದಿತಿಯ ಸಂಕಲ್ಪಿತವಾದ ನಿಯಮವನ್ನು ನಾವು ಪೂರ್ಣವಾಗಿ ಪಾಲಿಸುತ್ತಾ ವರುಣನಲ್ಲಿ ಯಾವ ಪಾಪವನ್ನೂ ಆಚರಿಸದಿರೋಣ. ವರುಣನು ಪಾಪಿಷ್ಠರನ್ನು ರಕ್ಷಿಸುವ ಸ್ವಭಾವವುಳ್ಳವನು" (೮-೮೭-೭)

"ಎಲೈ ಅಗ್ನಿಯೇ, ನಾವು ಯಾವ ಪಾಪವನ್ನು ಮಾಡಿದ್ದರೂ, ನಮ್ಮಲ್ಲಿ ದಯೆಯಿಂದ ಅದನ್ನು ಕ್ಷಮಿಸು ಅರ್ಯಮನೂ, ಅದಿತಿಯೂ ಆ ಪಾಪವನ್ನು ನಾಶಮಾಡಲಿ" (೮-೯೨-೭)

"ಮಿತ್ರನು ನನ್ನ ಪ್ರಾರ್ಥನೆಯನ್ನು ಕೇಳಲಿ. ಅದಿತಿಯೂ, ದೇವತಾತ್ಮನಾದ ಸವಿತೃವೂ ನಮ್ಮನ್ನು ವರುಣನ ಮುಂದೆ ಪಾಪರಹಿತನೆಂದು ತಿಳಿಸಲಿ" (೧೦-೧೨-೮)

ಇದಲ್ಲದೆ—

**"ಅನಾಗಾಸ್ತ್ವೇ ಅದಿತಿತ್ವೇ ತುರಾಸ ಇಮಂ ಯಜ್ಞಂ ದಧತು ಶ್ರೋಷಮಾಣಾಃ ।**

(ಋ. ಸಂ. ೭-೫೧-೧)

ಎಂಬ ಮಂತ್ರದಲ್ಲಿ **ಅದಿತಿತ್ವ** ಮತ್ತು **ಅನಾಗಾಸ್ತ್ವ** ಎಂಬ ಎರಡು ಪದಗಳೂ ಒಟ್ಟಿಗೆ ಪ್ರಯುಕ್ತವಾಗಿವೆ. "ಮಹಾತ್ಮರಾದ ದೇವತೆಗಳು, ನಮ್ಮ ಪ್ರಾರ್ಥನೆಯನ್ನು ಆಲಿಸಿ, ನಮ್ಮ ಯಜ್ಞಕರ್ಮಗಳನ್ನು ಪಾಪರಹಿತನನ್ನಾಗಿಯೂ ಅಭ್ಯುದಯಕಾರಕಗಳನ್ನಾಗಿಯೂ ಮಾಡಲಿ" ಎಂಬ ಈ ಪ್ರಾರ್ಥನೆಯಿದೆ. ಆದರೆ ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಈ ಎರಡು ಪದಗಳ ಪ್ರಯೋಗವೂ ಒಟ್ಟಿಗಿದ್ದರೂ ಸಹ ಎರಡಕ್ಕೂ ಸಮಾನಾರ್ಥವಿರಬೇಕೆಂಬ ನಿಯಮವಿಲ್ಲ. ಅದಿತಿ ಶಬ್ದಕ್ಕೆ ಬೇರೆ ವಿಧವಾದ ನಿರ್ವಚನವನ್ನು ತೋರಿಸುತ್ತಾ ಶತಪಥಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

"ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರ-
ದಿತಿತ್ವಂ । ಸರ್ವಸ್ಯೈತಸ್ಯಾತ್ತಾ ಭವತಿ । ಸರ್ವಮಸ್ಯಾಂತಂ ಭವತಿ ಯ ಏವಮೇತದದಿತೇರ-
ದಿತಿತ್ವಂ ವೇದ" (ಶ. ಬ್ರಾ. ೧೦-೬-೫-೫ ; ಬೃ. ಉ. ೧-೨-೫)

ಬ್ರಹ್ಮನು ಯಾವ ಯಾವ ಪದಾರ್ಥಗಳನ್ನು ನಿರ್ಮಿಸಿದನೋ ಅವುಗಳೆಲ್ಲವನ್ನೂ ಪುನಃ ಭಕ್ಷಿಸತೊಡಗಿದನು. ಈ ಭಕ್ಷಣ ಕಾರ್ಯವಿದ್ದುದರಿಂದಲೇ **ಅದಿತಿ** (ಮೃತ್ಯು) ನಾಮನಿರ್ದೇಶವಾಯಿತು. ಈ ತತ್ತ್ವವನ್ನರಿತವನು ತಾನೂ ಅದಿತಿ ಸ್ವರೂಪವನ್ನು ಹೊಂದುವನು ಎಂಬುದಾಗಿ **ಅದಿತಿಯ** ನಾಮನಿರ್ವಚನವನ್ನು ತಿಳಿಸಿ ಈ ದೇವತೆಯ ನಿಯಾಮಕತ್ವವನ್ನೂ ತಿಳಿಸಿದೆ. ಪರಬ್ರಹ್ಮನೂ ಈ ಕಾರಣದಿಂದ ಈ ನಾಮನಿರ್ದಿಷ್ಟನಾಗಿದ್ದಾನೆ.

ಅಲ್ಲದೇ, " ವಿಶ್ವೇಷಾಮದಿತಿರ್ಯಜ್ಞಿಯಾನಾಂ "; (೪-೧-೨೦); " ಅಮೂರಃ ಕವಿರದಿತಿರ್ವಿವಸ್ವಾನ್ " (೭-೯-೩) ಇತ್ಯಾದಿ ಸ್ಥಳಗಳಲ್ಲಿ ಅದಿತಿ ಶಬ್ದವು ಅಗ್ನಿಗೆ ವಿಶೇಷಣವಾಗಿದೆ. ೯-೮೩-೫ ರಲ್ಲಿ ಅರ್ಯಮನಿಗೆ ವಿಶೇಷಣವಾಗಿದೆ. ಯಾಸ್ಕರು ನಿರುಕ್ತದಲ್ಲಿ ' ಅಗ್ನಿರಪ್ಯದಿತಿರುಚ್ಯತೇ ' (ನಿ. ೧೧-೨೩) ಅಗ್ನಿಯೂ ಅದಿತಿ ಶಬ್ದವಾಚ್ಯನು ಎಂದು ತಿಳಿಸಿದ್ದಾರೆ. ಮತ್ತು ತಮ್ಮ ತಾದಾತ್ಮ್ಯಬೋಧಕವಾದ ವಾಕ್ಯವನ್ನು ಸಮರ್ಥಿಸಲು,

' ಯಸ್ಮೈ ತ್ವಂ ಸುದ್ರವಿಣೋ ದದಾಶೋಽನಾಗಾಸ್ತ್ವಮದಿತೇ ಸರ್ವತಾತಾ '
(ಋ. ಸಂ. ೧-೯೪-೧೫)

ಎಂಬ ವಾಕ್ಯವನ್ನುದಾಹರಿಸಿ ಅಲ್ಲಿ ಅಗ್ನಿ ಶಬ್ದಕ್ಕೆ ವಿಶೇಷಣವಾಗಿ ಅದಿತಿಶಬ್ದದ ಪ್ರಯೋಗವಿರುವುದನ್ನು ತಿಳಿಸಿದ್ದಾರೆ, ಅಖಂಡನೀಯನಾದ ಎಂದರೆ ಪೂರ್ಣನಾದ ಅಗ್ನಿಯೆಂದರ್ಥವೆಂದು ಸಾಯಣರು ವಿವರಿಸಿದ್ದಾರೆ.

ಈ ರೀತಿ ಪಾಪನಾಶಕಗಳೂ, ಪಾಪಗಳನ್ನು ಕ್ಷಮಿಸುವವಳೂ ಆದ ಅದಿತಿಯು ರಕ್ಷಣೆಯನ್ನು ಬೇಡಿ ಕ್ಷಮೆಯನ್ನು ಯಾಚಿಸುವ ಅರ್ಥವನ್ನು ಕೊಡತಕ್ಕ ವಾಕ್ಯಗಳೆಲ್ಲವೂ ಸಹ ಅದಿತಿಯ ಅನಂತಶಕ್ತಿಯನ್ನು ವರ್ಣಿಸುವುದಾಗಿವೆ. ಈ ವಿಶೇಷಣಗಳೂ ಮತ್ತು ವರ್ಣನೆಗಳೂ ಅದಿತಿಯೇ ವಿಶ್ವನಿಯಮನಶಕ್ತಿಯುಳ್ಳವಳೆಂದು ತಿಳಿಸುತ್ತವೆ. ಈ ನಿಯಮಗಳು ಕೇವಲ ಭೌತಿಕ ಶಕ್ತಿಯ ಪ್ರದರ್ಶನವಾಗಿರದೆ, ಆಧ್ಯಾತ್ಮಿಕ ನೀತಿನಿಯಮಗಳುಳ್ಳವು ಎಂದೂ ತಿಳಿಯುತ್ತದೆ. ಈ ಅಂಶವನ್ನು ಅದಿತಿಗೂ, ಋತಪಾಲಕನಾದ ವರುಣನಿಗೂ ಇರುವ ನಿಕಟಸಂಬಂಧವೂ ವಿಶದವಾಗಿ ತಿಳಿಸುತ್ತದೆ ಇದರಂತೆಯೇ, ಸವಿತೃ, ಸೂರ್ಯ, ಉಷಸ್ಸು, ದ್ಯಾವಾಪೃಥಿವಿಗಳು ಇತ್ಯಾದಿ ದೇವತೆಗಳೂ ಪ್ರಾರ್ಥಿತರಾಗಿದ್ದಾರೆ. (೪-೫೪-೩ ; ೧೦-೩೫-೨,-೩ ; ೦-೫೪-೧೯ ಇತ್ಯಾದಿ.)

**೯. ವಿಶ್ವನಿಯಾಮಕಳಾದ ಅದಿತಿಯೂ ಸಹ ಇತರ ಶಕ್ತಿಗಳಿಂದ ನಿಯಂತ್ರಿತಳಾದವಳು ಎಂದು ವರ್ಣಿಸುವ ಕೆಲವು ಪ್ರಕರಣಗಳು :—**

ವಿಶ್ವಪ್ರಭುಗಳೆಂದೆನ್ನಿಸಿಕೊಂಡ ವರುಣಾದಿ ದೇವತೆಗಳಿಗೂ, ಮಾತೆಯೆಂದು ವರ್ಣಿತಳಾದ ಅದಿತಿಯೂ ಸಹ ಕೆಲವು ವೇಳೆ ಇತರ ಶಕ್ತಿಗಳ ನಿಯಮನಕ್ಕೆ ಅಧೀನಳಾಗಿರಬೇಕೆಂಬ ವರ್ಣನೆಗಳೂ ಕೆಲವಿವೆ. ಉದಾಹರಣೆಗೆ.—

ಅದಿತಿಯು ತನ್ನ ಪುತ್ರರಾದ ವರುಣ, ಮಿತ್ರ, ಅರ್ಯಮ ಇತ್ಯಾದಿ ದೇವತೆಗಳೊಡನೆ ಕೂಡಿಕೊಂಡು ಸವಿತೃವನ್ನು ಸ್ತುತಿಸುತ್ತಲೂ, ಸವಿತೃವಿನ ಸಹಾಯವನ್ನು ಪ್ರಾರ್ಥಿಸುತ್ತಲೂ ಇರತಕ್ಕ ವರ್ಣನೆಯು ೭-೩೮-೪ ನೇ ಮಂತ್ರದಲ್ಲಿರುವುದು. ೮-೧೨-೧೪ ರಲ್ಲಿ ಅದಿತಿಯು ಇಂದ್ರನನ್ನು ಸ್ತುತಿಸಲು ಒಂದು ಸ್ತುತಿರೂಪವಾದ ಕೃತಿಯನ್ನು ನಿರ್ಮಿಸಿದಳು ಎಂದು ತಿಳಿಸಿದೆ. **(ಅದಿತಿಃ ಸ್ತೋಮಮಿಂದ್ರಾಯ ಜೀಜನತ್)**

**೧೦. ಋಕ್ಸಂಹಿತೆಯ ೧೦ ನೇ ಮಂಡಲದ ೭೨ ನೇ ಸೂಕ್ತದಲ್ಲಿ ವರ್ಣಿತವಾಗಿರುವಂತೆ ವಿಶ್ವಸೃಷ್ಟಿಯ ಕ್ರಮಃ—ಅದಿತಿ, ದಕ್ಷ, ಆದಿತ್ಯರು ಮತ್ತು ಇತರ ದೇವತೆಗಳ ಉತ್ಪತ್ತಿಸ್ವರೂಪ—**

ಋಕ್ಸಂಹಿತೆಯಲ್ಲಿ ಹತ್ತನೇ ಮಂಡಲದ ೭೨ ನೇ ಸೂಕ್ತವು ಸಂಹಿತೆಯ ಇತರ ಸೂಕ್ತಗಳಷ್ಟು ಪ್ರಾಚೀನವಾದುದಲ್ಲ ಎಂದು ಕೆಲವು ಪಂಡಿತರ ಮತವಾಗಿದೆ. ಆದರೆ ಇದಕ್ಕೆ ಸರಿಯಾದ ಆಧಾರವನ್ನು ಕೊಡಲಾಗುವುದಿಲ್ಲ. ಆದರೆ ಈ ಸೂಕ್ತವು ಪ್ರಾಚೀನವೇ ಅಥವಾ ಅರ್ವಾಚೀನವೇ ಎಂಬ ವಿಷಯದ ವಿಮರ್ಶೆವು ಸದ್ಯಃ ಅಪ್ರಕೃತ, ಪ್ರಕೃತದಲ್ಲಿ ಉಪಯುಕ್ತವಾದುದು. ಈ ಸೂಕ್ತದಲ್ಲಿ ವಿವರಿಸಿರುವ ವಿಶ್ವಸೃಷ್ಟಿಯ ವರ್ಣನಾಕ್ರಮ. ಅದರ ವಿವರವು ಈ ರೀತಿಯಿದೆ.

(೧) ಪ್ರಶಂಸಾತ್ಮಕವಾದ ಈ ಸೂಕ್ತಮಂತ್ರಗಳಿಂದ ನಾವು ದೇವತಗಳ ಉತ್ಪತ್ತಿಕ್ರಮವನ್ನು ವರ್ಣಿಸುವೆವು. ಈ ಸ್ತುತಿರೂಪವಾದ ಮಂತ್ರಗಳ ಸಹಾಯದಿಂದ ಉತ್ತರಯುಗಕ್ಕೆ ಸೇರಿದ ನಾವು ಪೂರ್ವಯುಗದ ದೇವತೆಗಳ ಉತ್ಪತ್ತಿ ಮತ್ತು ಸ್ವರೂಪಗಳನ್ನರಿಯಲು ಸಾಧ್ಯವಾಗುವುದು.

(೨) ಕಮ್ಮಾರನು ತಿದಿಯನ್ನು ಒತ್ತಿ ಒಳಗಿರುವ ಅಂತಃಶಕ್ತಿಯನ್ನು ಹೊರಕ್ಕೆ ಬರಮಾಡುವಂತೆ, ಬ್ರಹ್ಮಣಸ್ಪತಿಯು ತಲ್ಲೀನವಾದ ಈ ದೇವತೆಗಳನ್ನು ಸೃಷ್ಟಿರೂಪದಲ್ಲಿ ಹೊರಗೆ ಆವಿರ್ಭೂತರಾಗುವಂತೆ ಮಾಡಿದನು. ದೇವತೆಗಳ ಅತ್ಯಂತ ಪ್ರಾಚೀನವಾದ ಯುಗದಲ್ಲಿ ಅಸತ್ತಿನಿಂದ ಸತ್ತು ಪ್ರಾದುರ್ಭೂತವಾಯಿತು.

(೩) ಆದಿಯಲ್ಲಿ ಅಸತ್ತಿನಿಂದ ಸತ್ತಿನ ಆವಿರ್ಭಾವವುಂಟಾಯಿತು. ಅದರಿಂದ ದಿಗ್ದೇಶಗಳ ಪ್ರಕಾಶನವಾಯಿತು. ಅನಂತರ ವೃಕ್ಷಾದಿಗಳು......................

(೪) ವೃಕ್ಷಾದಿಗಳಿಂದ ಪೃಥ್ವಿಯೂ, ಪೃಥ್ವಿಯಿಂದ ದಿಗ್ದೇಶಗಳೂ ಉತ್ಪನ್ನವಾದವು. ದಕ್ಷನಿಂದ ಅದಿತಿಯೂ ಅದಿತಿಯಿಂದ ದಕ್ಷನೂ ಉತ್ಪನ್ನರಾದರು.

(೫) ಎಲೈ ದಕ್ಷನೇ, ಅದಿತಿಯು ನಿನ್ನಿಂದ ಉತ್ಪನ್ನಳಾದಳು. ಅವಳೇ ನಿನ್ನ ಪುತ್ರಿಯು. ಅನಂತರ, ಅವಳಿಂದ ಕಲ್ಯಾಣಾತ್ಮಕರೂ ಮತ್ತು ಅಮರ್ತ್ಯರೂ ಆದ ದೇವತೆಗಳು ಜನಿಸಿದರು.

(೬) ಎಲೈ ದೇವತೆಗಳೇ, ನೀವು ಯಾವಾಗ ಚಲಿಸಿದಿರೋ ಅಂತರಿಕ್ಷದ ಉದಕಗಳನ್ನು ಯಾವಾಗ ಪ್ರಕ್ಷುಬ್ಧವಾಗುವಂತೆ ಮಾಡಿದಿರೋ ಆ ಒಡನೆಯೇ ನರ್ತನಕಾರರ ದೇಹದಿಂದ ಹೊರಕ್ಕೆ ಹೊರಡುವಂತೆ ಅವರ ದೇಹದಿಂದ ರೇಣುಗಳು ಹೊರಕ್ಕೆ ಬಂದವು.

(೭) ಎಲೈ ದೇವತೆಗಳೇ, ಶ್ರಮಸಹಿಷ್ಣುಗಳಾದ ಮಾನವರಂತೆ ಯಾವಾಗ ನೀವು ವಿಶ್ವವನ್ನು ವ್ಯಾಪಿಸಿ ಅಲಂಕರಿಸಿ ರಚಿಸಿದಿರೊ, ಆಗಲೇ ನೀವು ಅಂತರಿಕ್ಷರೂಪದ ಸಮುದ್ರದಲ್ಲಿ ಅಂತರ್ಗತನಾದ ಸೂರ್ಯನನ್ನು ಹೊರಕ್ಕೆ ಬರಮಾಡಿ ಪ್ರಕಾಶಿಸುವಂತೆ ಮಾಡಿದಿರಿ.

(೮) ತನ್ನ ದೇಹೋತ್ಪನ್ನರಾದ ಅಷ್ಟಪುತ್ರರಲ್ಲಿ, ಏಳು ಜನರೊಡನೆ ಮಾತ್ರ ಅದಿತಿಯು ದೇವತೆಗಳನ್ನು ಸಮೀಪಿಸಿದಳು. ಎಂಟನೆಯವನಾದ ಮಾರ್ತಾಂಡನನ್ನು ಹಿಂದೆಯೇ ಬಿಟ್ಟಳು.

(೯) ಪೂರ್ವಯುಗಕ್ಕೆ ಸೇರಿದ ದೇವತೆಗಳನ್ನು ಅದಿತಿಯು ಸಪ್ತಪುತ್ರರೊಂದಿಗೆ ಹೋಗಿ ಸೇರಿದಳು. ಎಂಟನೆಯವನಾದ ಮಾರ್ತಾಂಡನನ್ನು ಪುನಃ ಪಡೆದಳು. ಅವನ ಉತ್ಪತ್ತಿಗಾಗಿಯೂ ಮತ್ತು ಮರಣಕ್ಕಾಗಿಯೂ ಅವನಿಗೆ ಜನ್ಮವನ್ನು ಕೊಟ್ಟಳು.

ಇಲ್ಲಿ ೭ ನೇ ಋಕ್ಕಿನಲ್ಲಿ ಪ್ರಯೋಗಿಸಿರುವ **ಯತಯಃ** ಎಂಬ ಪದದ ತಾತ್ಪರ್ಯವೇನೆಂದು ವಿಮರ್ಶಿಸುವುದು ಪ್ರಕೃತವಾಗಿದೆ. ೧೧-೨೨-೭ ನೇ ಋಕ್ಕಿನಲ್ಲಿ ಯಾವ ವಿಶ್ವರಚನೆಯು ವರ್ಣನೆಯಿದೆಯೋ ಆ ರಚನೆಗೂ, ೮-೩-೯ ಮತ್ತು ೮-೬-೧೮ ನೇ ಮಂತ್ರದಲ್ಲಿ ವರ್ಣಿತವಾಗಿರುವ ಭೃಗುಗಳಿಗೂ ಕೆಲವೆಡೆಗಳಲ್ಲಿ ಸಂಬಂಧವನ್ನು ತಿಳಿಸಿದೆ. ಪ್ರಕೃತವಾದ ಮಂತ್ರದಲ್ಲಿ **ಯತಯಃ** ಎಂಬ ಪದವು ಆ ಭೃಗುಗಳನ್ನು ನಿರ್ದೇಶಿಸುತ್ತದೆ ಎಂಬುದಾಗಿ ಬೋಟ್ಲಿಂಕ್ ಮತ್ತು Roth ಎಂಬ ಪಂಡಿತರು ಅಭಿಪ್ರಾಯಪಡುತ್ತಾರೆ. ಋ. ಸಂ. ೭-೧೩-೧ ರಲ್ಲಿ ಇದೇ ಪದವು ಅಗ್ನಿಗೆ ವಿಶೇಷಣವಾಗಿರುತ್ತದೆ. **(ವೈಶ್ವಾನರಾಯ ಯತಯೇ ಮತೀನಾಂ)** ೮-೬-೧೮ ರಲ್ಲಿ **“ಯೇ ಇಂದ್ರ ಯತಯಸ್ತ್ವಾ ಭೃಗವೋ ಯೇ ಚ........”** ಎಂಬಲ್ಲಿ **ಯತಯಃ** ಎಂಬುದಕ್ಕೆ ಒಂದು ಗುಂಪಿನ ಯಜಮಾನ ಸಂತತಿಯವರು ಎಂದಾದರೂ ಅರ್ಥಮಾಡಬಹುದು.

ಋಕ್ಸಂಹಿತೆಯಲ್ಲಿ ಅಂತರ್ಗತವಾಗದಿರತಕ್ಕ ಕೆಲವು ಸಾಮಮಂತ್ರಗಳಿವೆ. ಅವುಗಳೊಂದರಲ್ಲಿ **ಯತಿ** ಮತ್ತು **ಭೃಗು** ಈ ಎರಡು ಪದಗಳ ಪ್ರಯೋಗವೂ ಇರುತ್ತವೆ. (ಸಾ. ವೇ. ೨-೩೦೪). **‘ಇಂದ್ರಸ್ತುರಾಷಾಣ್ಮಿತ್ರೋ ನ ಜಘಾನ ವೃತ್ರಂ ಯತಿರ್ನ ।’** ಹಿಂದೆ ಮಿತ್ರನೂ, **ಯತಿಯೂ** ಕೊಂದಂತೆಯೇ, ಈಗಲೂ ಇಂದ್ರನು ವೃತ್ರನನ್ನು ಕೊಂದನೆಂದೂ,

**'ಬಿಭೇದ ಬಲಂ ಭೃಗುರ್ನ'** ಭೃಗುವು ಕೊಂದಂತೆ ಬಲನನ್ನು ಕೊಂದನೆಂದೂ ಈ ಮಂತ್ರದ ತಾತ್ಪರ್ಯವಿರುತ್ತದೆ. ಇದಲ್ಲದೇ, ಐತರೇಯಬ್ರಾಹ್ಮಣದಲ್ಲಿ (೭-೨೮) ಇಂದ್ರನು **ಯತಿಗಳನ್ನು** ತ್ಯಾಗಮಾಡಿ ಅವರು ತೋಳಗಳಿಗೆ ಆಹುತಿಗಳಾಗುವಂತೆ ಮಾಡಿದವನು ಎಂದಿದೆ.

೮ ನೇ ಮಂತ್ರದ ತಾತ್ಪರ್ಯವು ಅಥರ್ವವೇದದ **'ಅಷ್ಟಯೋನೀರದಿತಿರಷ್ಟಪುತ್ರಾ'** (ಅ. ವೇ. ೮-೯-೨೧) ಎಂಬ ವಾಕ್ಯದ ತಾತ್ಪರ್ಯವನ್ನು ಕೊಡುವುದಾಗಿದೆ. ಇದೇ ಅಭಿಪ್ರಾಯವನ್ನು ತೈತ್ತಿರೀಯಾರಣ್ಯಕದಲ್ಲೂ ತಿಳಿಸುತ್ತಾ **'ಅಷ್ಟಯೋನೀಮಷ್ಟಪುತ್ರಾಂ । ಅಷ್ಟಪತ್ನೀಮಿಮಾಂ ಮಹೀಂ ॥'** (ತೈ. ಆ. ೧-೧೩-೧) ಪೃಥ್ವಿಗೆ ಎಂಟು ಜನ್ಮವೂ ಎಂಟು ಪುತ್ರರೂ, ಎಂಟು ಪತಿಗಳೂ ಇರುವುದಾಗಿ ತಿಳಿಸಿದೆ.

೭೨ ನೇ ಸೂಕ್ತದ ೮ ಮತ್ತು ೯ ನೆಯ ಮಂತ್ರಗಳು ತೈತ್ತರೀಯಾರಣ್ಯಕದಲ್ಲೂ ಉದ್ಧೃತವಾಗಿವೆ. **"ಪರಾ ಮಾರ್ತಾಂಡಮಾಸ್ಯತ್"** ಎಂದು ಸಂಹಿತಾಪಾಠಕ್ಕೆ ಬದಲಾಗಿ ಅಲ್ಲಿ **'ಪರಾ ಮಾರ್ತಾಂಡಮಾಭರತ್'** ಎಂಬ ಪಾಠಭೇದವಿರುತ್ತದೆ. ಇದಕ್ಕೆ ಭಾಷ್ಯಕಾರರು ಅರ್ಥವನ್ನು ವಿವರಿಸುತ್ತಾ ಈರೀತಿ ತಿಳಿಸಿದ್ದಾರೆ. **"ಮಾರ್ತಾಂಡಾಖ್ಯಂ ಅಷ್ಟಮಂ ಪುತ್ರಂ 'ಪರಾ ಭರತ್' ಪರಿತ್ಯಕ್ತವತೀ ಇತಿ ಯತ್ ತತ್ ಮೃತ್ಯವೇ ಮೃತ್ಯುನಿಮಿತ್ತಂ"** ಮಾರ್ತಾಂಡನು ಉತ್ಪನ್ನವಾದೊಡನೆಯೇ ಅಂಡವು ಮರಣಹೊಂದಿತೆಂದು ತಾತ್ಪರ್ಯ. ಮೇಲಿನ ೮ ನೇ ಮಂತ್ರಕ್ಕೆ ವಿವರಣೆಯನ್ನು ಯ. ತಾ. ಶತಪಥಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

> **"ಅಷ್ಟೌ ಹ ವೈ ಪುತ್ರಾ ಅದಿತೇಃ ॥....ಯಾಂಸ್ತ್ವೇತದ್ದೇವಾ ಆದಿತ್ಯಾ ಇತ್ಯಾಚಕ್ಷತೇ ಸಪ್ತ ಹೈವ ತೇಽವಿಕೃತಗ್‌ಂ ಹಾಷ್ಟಮಂ ಜನಯಾಂಚಕಾರ ಮಾರ್ತಾಂಡಗ್‌ಂ ಸಂದೇಘೋ ಹೈವಾಸ ಯಾವಾನೇವೋರ್ಧ್ವಸ್ತಾವಾಂಸ್ತಿರಙ್ ಪುರುಷಸಮ್ಮಿತ ಇತ್ಯು ಹೈಕ ಆಹುಃ"**
> (ಶ. ಬ್ರಾ. ೩-೧-೩-೩)

ಅದಿತಿಗೆ ಎಂಟುಜನ ಪುತ್ರರು. ಆದರೆ ಅವರಲ್ಲಿ ಏಳು ದೇವತೆಗಳನ್ನು ಮಾತ್ರ ಮಾನವರು ಆದಿತ್ಯರೆಂದು ಕರೆಯುತ್ತಾರೆ ಏತಕ್ಕೆಂದರೆ ಎಂಟನೆಯ ಮಾರ್ತಾಂಡನು ಹಸ್ತಪಾದಾದಿರಹಿತನಾಗಿ ಯಾವ ವಿಶೇಷಗುಣವೂ ಇಲ್ಲದೆ ಕೇವಲ ಮಾರ್ದವ ಗುಣದಿಂದ ಮಾತ್ರ ಯುಕ್ತನಾಗಿಯೂ, ನಿರ್ವಿಕಲ್ಪಕನಾಗಿಯೂ, ಎಷ್ಟು ಉನ್ನತವಾಗಿದ್ದನೋ ಅಷ್ಟೇ ದೀರ್ಘವಾಗಿ ಬೆಳೆದು ಉತ್ಪನ್ನನಾದನು. ಕೇವಲ ಮಾನವನ ಶರೀರದಷ್ಟು ಪ್ರಮಾಣವುಳ್ಳವನಾಗಿ ಮಾತ್ರವಾದನು ಎಂದು ಕೆಲವರ ಅಭಿಪ್ರಾಯ.

> **ತೇ ಹೋಚುಃ ಹೈತ ಊಚುಃ । ದೇವಾ ಆದಿತ್ಯಾ ಯದಸ್ಮಾನನ್ವಜನಿ ಮಾ ತದಮುಯೇವ ಭೂದ್ಧಂತೇಮಂ ವಿಕರವಾಮೇತಿ ತಂ ವಿಚಕ್ರುರ್ಯಥಾಯಂ ಪುರುಷೋ ವಿಕೃತಸ್ತಸ್ಯ ಯಾನಿ ಮಾಗ್‌ಂಸಾನಿ ಸಂಸ್ಕೃತ್ಯ ಸನ್ನ್ಯಾಸುಸ್ತತೋ ಹಸ್ತೀ ಸಮಭವತ್ತಸ್ಮಾದಾಹುರ್ನ ಹಸ್ತಿನಂ ಪ್ರತಿಗೃಹ್ಣೀಯಾತ್ಪುರುಷಾಜಾನೋ ಹಿ ಹಸ್ತೀತಿ ಯಮು ಹ ತದ್ವಿಚಕ್ರುಃ ಸ ವಿವಸ್ವಾನಾದಿತ್ಯಸ್ತಸ್ಯೇಮಾಃ ಪ್ರಜಾಃ ॥**
> (ಶ. ಬ್ರಾ. ೩-೧-೩-೪)

ಈರೀತಿಯಾದ ವಿಕಲ್ಪರಹಿತನಾದ ಮಾರ್ತಾಂಡನನ್ನು ನೋಡಿ ಆದಿತ್ಯರು ಭೀತಿಗೊಂಡರು. "ಈ ಮಾರ್ತಾಂಡನು ನಮ್ಮ ರೂಪವನ್ನು ಹೋಲದಿದ್ದರೆ, ಆಗ ನಮಗೆ ಮೃತ್ಯುವು ಸನ್ನಿಹಿತವಾದಂತೆಯೇ. ಆದುದರಿಂದ ನಾವು ಇವನನ್ನು ರೂಪವನ್ನು ಹೊಂದುವಂತೆ ಮಾಡಬೇಕು" ಎಂದು ಅವನನ್ನು ಪುರುಷಾಕಾರನನ್ನಾಗಿ ಪರಿವರ್ತಿಸಿದರು. ಅವನಿಗೆ ತಮ್ಮ ರೂಪವನ್ನು ಉಂಟುಮಾಡಲು ಅವನ ಶರೀರವನ್ನು ಕತ್ತರಿಸಿ ಸರಿಪಡಿಸಿದಾಗ ಹೊರಕ್ಕೆ ತೆಗೆದ ಮಾಂಸವನ್ನು ಎಸೆದಾಗ ಅದರಿಂದ ಗಜವು

ಉತ್ಪನ್ನವಾಯಿತು. ನಾಮರೂಪಾದಿ ವಿಶೇಷಗುಣಗಳಿಂದ ಕೂಡಿದ ಈ ಹೊಸ ವ್ಯಕ್ತಿಯನ್ನು ವಿವಸ್ವಾನ್ ಎಂದು ಕರೆದರು. ಈ ವಿವಸ್ವಂತನೇ ಸಕಲ ಭೂತಗಳ ಉತ್ಪತ್ತಿಗೂ ಕಾರಣನಾದನು.

ಇದೇ ವಾಕ್ಯವು ತೈತ್ತಿರೀಯಸಂಹಿತೆಯಲ್ಲಿಯೂ ಉದಾಹೃತರಾಗಿ, ಅಲ್ಲಿ ಅದಿತಿಯ ಈ ಎರಡನೆಯ ಗರ್ಭವು ಅಂಡರೂಪದಲ್ಲಿ ಪರಿಣಮಿಸಿತು ಎಂದು ತಿಳಿಸಿದೆ. (ತೈ. ಸಂ. ೬-೫-೬-೧)

ಯಾಸ್ಕರು ಮೇಲಿನ ೧೦-೭೨-೪ ನೇ ಮಂತ್ರದ ತಾತ್ಪರ್ಯವನ್ನು ವಿವರಿಸುತ್ತಾ ನಿರುಕ್ತವಾಕ್ಯಗಳಲ್ಲಿ ಈರೀತಿ ತಿಳಿಸಿದ್ದಾರೆ.

**ಆದಿತ್ಯೋ ದಕ್ಷ ಇತ್ಯಾಹುಃ । ಆದಿತ್ಯಮಧ್ಯೇ ಚ ಸ್ತುತಃ । ಅದಿತಿಃ ದಾಕ್ಷಾಯಣೀ । ಅದಿತೇರ್ದಕ್ಷೋ ಅಜಾಯತ ದಕ್ಷಾದ್ವದಿತಿಃ ಪರಿ (೧೦-೭೨-೪) ಇತಿ । ತತ್ಕಥಂ ಉಪಪದ್ಯೇತ ಸಮಾನಜನ್ಮಾನೌ ಸ್ಯಾತಾಂ ಇತಿ । ಅಪಿ ವಾ ದೇವಧರ್ಮೇಣ ಇತರೇತರಜನ್ಮಾನೌ ಸ್ಯಾತಾಂ॥ ಇತರೇತರಪ್ರಕೃತೀ॥** (ನಿ. ೧೧-೨೩)

ದಕ್ಷನು ಅದಿತಿಪುತ್ರರಲ್ಲೊಬ್ಬನೆಂದೂ, ಆದಿತ್ಯರ ಗುಂಪಿಗೆ ಸೇರಿದವನೆಂದೂ ಸ್ತುತನೂ ಪ್ರಖ್ಯಾತನೂ ಆಗಿದ್ದಾನೆ. ಆದರೆ "ದಕ್ಷನಿಂದ ಅದಿತಿಯು ಉತ್ಪನ್ನಳಾದಳು. ಅದಿತಿಯಿಂದ ದಕ್ಷನು ಉತ್ಪನ್ನನಾದನು" ಎಂಬ ವಾಕ್ಯವು ಅದಿತಿಯು ದಕ್ಷಪುತ್ರಿಯೆಂಬುದನ್ನು ತಿಳಿಸುತ್ತದೆ. ಇದು ಹೇಗೆ ಸಾಧ್ಯವಾಗಬಲ್ಲುದು? ಅವರಿಬ್ಬರಿಗೂ ಒಂದೇ ಉತ್ಪತ್ತಿಸ್ಥಾನವಿರಬಹುದು ಅಥವಾ ದೇವತೆಗಳ ಸ್ವಾಭಾವಿಕವಾದ ಶಕ್ತಿಗನುಗುಣವಾಗಿ ಒಬ್ಬರಿಂದ ಇನ್ನೊಬ್ಬರು ಉತ್ಪನ್ನವಾಗಿಯೂ ಇರಬಹುದು ಮತ್ತು ಪರಸ್ಪರ ಮಾಹಾತ್ಮ್ಯಗಳನ್ನು ಒಬ್ಬರಿಂದಿನ್ನೊಬ್ಬರು ಪಡೆದಿರಬಹುದು. ಇದೇರೀತಿ ಪರಸ್ಪರ ಒಬ್ಬರ ಉತ್ಪತ್ತಿಗೆ ಇನ್ನೊಬ್ಬರೂ ಯೋನಿಯಾದರು ಎಂಬ ವಿಷಯವನ್ನು ತಿಳಿಸುವ ಬೇರೆ ಶ್ರುತಿವಾಕ್ಯವೂ ಇರುವುದು.

"ತಸ್ಮಾದ್ವಿರಾಡಜಾಯುತ ವಿರಾಜೋ ಅಧಿ ಪೂರುಷಃ" (೧೦-೯೦-೫)

ಪುರುಷನಿಂದ ವಿರಾಡುತ್ಪತ್ತಿಯು. ವಿರಾಟ್ಟಿನಿಂದ ಪುರುಷನು ಉತ್ಪನ್ನನಾದವನು ಎಂಬ ವಿಷಯವೂ ಸಹ ಪ್ರಸಿದ್ಧವಾಗಿದೆಯಾದುದರಿಂದ ದಕ್ಷ ಮತ್ತು ಅದಿತಿಗಳ ಉತ್ಪತ್ತಿಕ್ರಮವೂ ಇದೇ ರೀತಿ ಇದ್ದಿರಬಹುದು. ದಕ್ಷ ಮತ್ತು ಅದಿತಿಗಳ ಪರಸ್ಪರ ಸಂಬಂಧವನ್ನು ನಿರೂಪಿಸತಕ್ಕ ಬೇರೆ ವಾಕ್ಯಗಳನ್ನೂ ಪರಿಶೀಲಿಸಬಹುದು. "ಅಸಚ್ಚ ಸಚ್ಚ.... ವೃಷಭಶ್ಚ ಧೇನುಃ" ೧೦-೫-೭)

೧. "ಅವ್ಯಾಕೃತವಾದುದೂ ಪಾರಮಾರ್ಥಿಕವಾದ ಸತ್ವವುಳ್ಳದ್ದೂ ಆದ ತತ್ತ್ವವು ದಕ್ಷನ ವೀರ್ಯದಲ್ಲಿಯೂ ಮತ್ತು ಅದಿತಿಯ ಗರ್ಭದಲ್ಲಿಯೂ ಸ್ಥಿತವಾಗಿದ್ದು ನಂತರ ಸ್ತ್ರೀಪುಂರೂಪಕವಾದ ಎರಡು ಶಕ್ತಿಗಳನ್ನು ಒಳಗೊಂಡ ತತ್ತ್ವವಾಗಿ ಪರಿಣಮಿಸಿತು."

೨. 'ದಕ್ಷಸ್ಯ ವಾದಿತೇ ಜನ್ಮನಿ....................ವಿಷುರೂಪೇಷು ಜನ್ಮಸು'

(೧೦-೬೪-೫)

ಎಲೈ ಅದಿತಿಯೇ, ದಕ್ಷನ ಜನನವಾದೊಡನೆಯೂ ಮತ್ತು ಅವನ ಸಂಕಲ್ಪಾನುಸಾರವಾಗಿಯೂ ನೀನು ಮಿತ್ರಾವರುಣರೂಪವಾದ ಎರಡು ಪ್ರಭುಗಳನ್ನು ಪೋಷಿಸಿದೆ.

ಹೀಗೆ, ೧೦-೭೨-೪ ಮತ್ತು ೫ ನೇ ಮಂತ್ರಗಳು ದಕ್ಷನೇ ಅದಿತಿಯ ಪಿತೃ ಮತ್ತು ಪುತ್ರನೆಂದು ಒಟ್ಟಿಗೆ ಎರಡು ಸಂಬಂಧಗಳನ್ನೂ ತಿಳಿಸಿದ್ದರೂ, ೨-೨೭-೧ ಇತ್ಯಾದಿ ವಾಕ್ಯಗಳಲ್ಲಿ ದಕ್ಷನು ಅದಿತಿಪುತ್ರನೆಂದೂ, ಆದಿತ್ಯರಲ್ಲೊಬ್ಬನೆಂದೂ

ಸ್ಪಷ್ಟವಾಗಿ ತಿಳಿಸುತ್ತದೆ. ಇದಲ್ಲದೇ, ಇನ್ನೂ ಕೆಲವೆಡೆಗಳಲ್ಲಿ ದೇವತೆಗಳಿಗೆ ದಕ್ಷಪಿತ್ರ ಎಂಬ ವಿಶೇಷಣವಿರುತ್ತದೆ. ಉದಾಹರಣೆಗೆ—

೧. '**ಸುಜ್ಯೋತಿಷಃ ಸೂರ್ಯ ದಕ್ಷಪಿತೄನನಾಗಾಸ್ತ್ವೇ ಸುಮಹೋವೀಹಿ ದೇವಾನ್**'
(೬-೬೦-೨)

ಎಲೈ ಮಹಾತ್ಮನಾದ ಸೂರ್ಯನೇ, ದಕ್ಷನೇ ಪಿತೃವಾಗಿ ಉಳ್ಳ ದೇವತೆಗಳನ್ನು ಸಮೀಪಿಸು. (ಸಾಯಣರು ಇಲ್ಲಿ ಪಿತೃಶಬ್ದಕ್ಕೆ ಪಿತಾಮಹನೆಂದರ್ಥಮಾಡಿದ್ದಾರೆ. ಅದಿತಿಯು ದಕ್ಷಪುತ್ರಿಯಾದುದರಿಂದಲೂ, ದೇವತೆಗಳು ಅದಿತಿಪುತ್ರರಾದುದರಿಂದಲೂ, ದಕ್ಷನು ಈ ದೇವತೆಗಳಿಗೆ ಪಿತಾಮಹನು.)

೨. "**ಯಾ ಧಾರಯಂತ ದೇವಾಃ ಸುದಕ್ಷಾ ದಕ್ಷಪಿತರಾ । ಅಸುರ್ಯಾಯ ಪ್ರಮಹಸಾ ॥**"
(೭-೬೬-೨)

ದಕ್ಷಪಿತೃಗಳಾದ ಮಿತ್ರಾವರುಣರು ತಮ್ಮ ದಿವ್ಯಪವಿತ್ರವನ್ನು ಸ್ಥಾಪಿಸಿದ್ದಾರೆ ಇತ್ಯಾದಿಯಾಗಿರುತ್ತದೆ. ಇದರಂತೆಯೇ ತೈತ್ತಿರೀಯಸಂಹಿತೆಯಲ್ಲಿಯೂ ಸಹ,

**ಯೇ ದೇವಾ ಮನೋಜಾತಾ ಮನೋಯುಜಃ ಸುದಕ್ಷಾ ದಕ್ಷಪಿತಾರಸ್ತೇ ನಃ ಪಾಂತು ॥**
(ತೈ. ಸಂ. ೧-೨-೩-೧)

ಮನೋಜಾತರೂ, ಮನೋಯುಜರೂ, ದಕ್ಷನನ್ನೇ ಪಿತೃವಾಗಿ ಉಳ್ಳವರೂ ಆದ ದೇವತೆಗಳು ನಮ್ಮನ್ನು ರಕ್ಷಿಸಲಿ.

ಮೇಲಿನ ಉದಾಹರಣೆಗಳಲ್ಲಿ **ದಕ್ಷ** ಪದವು ವೈಯಕ್ತಿಕವಾದ ಒಂದು ನಾಮನಿರ್ದೇಶವೆಂದು ನಿಸ್ಸಂಶಯವಾಗಿ ಹೇಳುವಂತಿಲ್ಲ, ೮-೫೫-೫ ರಲ್ಲಿ ಮಿತ್ರಾವರುಣರು 'ದಕ್ಷನ ಶಕ್ತಿಯುತರಾದ ಪುತ್ರರು' (**ಸೂನಾ ದಕ್ಷಸ್ಯ ಸುಕ್ರತೂ**) ಎಂದು ವರ್ಣಿತರಾಗಿರದೇ, 'ಶಕ್ತಿಯ ಪೌತ್ರರು' (**ನಪಾತಾ ಶವಸೋ ಮಹಃ**) ಎಂದೂ ಸಹ ವರ್ಣಿತರಾಗಿದ್ದಾರೆ. ೬-೫೦-೨ ನೆ ಮಂತ್ರಕ್ಕೆ ಸಾಯಣರು ಅರ್ಥಮಾಡಿರುವ ಕ್ರಮವನ್ನು ಮೇಲೆ ತಿಳಿಸಿದೆ. ಮೇಲೆ ಉದಾಹೃತವಾಗಿರುವ ೭-೬೬-೨ನೇ ಋಕ್ಕಿನಲ್ಲಿ **ದಕ್ಷಪಿತಾರಾ** ಎಂಬುದಕ್ಕೆ **ಬಲಸ್ಯ ಪಾಲಕೌ** ಶಕ್ತಿಯ ರಕ್ಷಕರು ಎಂದರ್ಥಮಾಡಿದ್ದಾರೆ. **ಸಹಸಸ್ಪುತ್ರಃ, ಸಹಸಃಸೂನುಃ** ಇತ್ಯಾದಿ ವಿಶೇಷಣಗಳು ಕೆಲವೆಡೆಗಳಲ್ಲಿ **ಅಗ್ನಿ** ಪರವಾಗಿಯೂ (೮-೪೯-೨ ; ೮-೬೦-೧೧) ಇತ್ಯಾದಿ ಕೆಲವೆಡೆಗಳಲ್ಲಿ **ಇಂದ್ರ** ಪರವಾಗಿಯೂ (೮-೪೯-೨ ಇತ್ಯಾದಿ) ಪ್ರಯುಕ್ತವಾಗಿವೆ.

ಶತಪಥಬ್ರಾಹ್ಮಣದ ೨-೪-೪-೨ನೇ ವಾಕ್ಯದಲ್ಲಿ ದಕ್ಷನಿಗೂ ಸೃಷ್ಟಿಕರ್ತನಾದ ಪ್ರಜಾಪತಿಗೂ ತಾದಾತ್ಮ್ಯವನ್ನು ತೋರಿಸಿದೆ. ೨-೪-೪-೬ ರಲ್ಲಿ ಪರ್ವತಪುತ್ರನಾದ ಒಂದು ವ್ಯಕ್ತಿಯ ಹೆಸರೆಂದು ತಿಳಿಸಿದೆ.

ಈ ವೈದಿಕವಾಕ್ಯಗಳ ಆಧಾರವನ್ನೇ ಅವಲಂಬಿಸಿರುವ ಕಥೆಯನ್ನು ವಿಸ್ತರಿಸಿರುವ ವಿಷ್ಣುಪುರಾಣದಲ್ಲಿ ದಕ್ಷನ ವಿಷಯವು ಯಾವರೀತಿ ವರ್ಣಿತವಾಗಿದೆಯೆಂದು ಪರಿಶೀಲಿಸಿದರೆ ಸದ್ಯಃ ಅವುಗಳನ್ನು ಒಂದೊಂದಾಗಿ ವಿಮರ್ಶಿಸಬಹುದು.

೧. ಮೊದಲನೆಯ ಕ್ರಮದಲ್ಲಿ ಕಥೆಯ ವಿವರಣವು ಈರೀತಿಯದೆ.—ದಕ್ಷನು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನು ಪ್ರಸೂತಿಯೆಂಬುವಳನ್ನು ವಿವಾಹಮಾಡಿಕೊಳ್ಳುತ್ತಾನೆ. ಅವಳಲ್ಲಿ ಇಪ್ಪತ್ತನಾಲ್ಕು ಪುತ್ರಿಯರನ್ನು ಪಡೆಯುತ್ತಾನೆ. ಆದರೆ ಇವರಲ್ಲಿ ಅದಿತಿಯೂ ಒಬ್ಬಳು ಎಂಬುದನ್ನು ಸೇರಿಸಿಲ್ಲ.

೨. ಎರಡನೆಯ ಪಾಠಕ್ರಮದಲ್ಲಿ—ದಕ್ಷನ ಅರವತ್ತು ಮಂದಿ ಪುತ್ರಿಯರಲ್ಲಿ ಅದಿತಿಯೂ ಒಬ್ಬಳೆಂದೂ ಇವಳನ್ನು ದಿತಿ, ದನು ಮತ್ತು ಇನ್ನೂ ಹತ್ತುಮಂದಿಯರೊಂದಿಗೆ ಕಶ್ಯಪನಿಗೆ ವಿವಾಹಮಾಡಿಕೊಟ್ಟನೆಂದೂ ಆಗ ಕಶ್ಯಪನಿಗೆ ಅದಿತಿಯಲ್ಲಿ ದ್ವಾದಶಾದಿತ್ಯರು ಉತ್ಪನ್ನರಾದರೆಂದೂ ತಿಳಿಸಿದೆ.

(೩) ಮೂರನೆಯ ಪ್ರವಚನದ ರೀತಿಯಲ್ಲಿ:—ಅದಿತಿಯು ದಕ್ಷನ ಪುತ್ರಿಯೆಂದೂ, ವಿವಸ್ವಂತನ (ಸೂರ್ಯನ) ಮಾತೆಯೆಂದೂ ತಿಳಿಯುತ್ತದೆ. [ಇದೇ ಅದಿತಿಯು ಕಶ್ಯಪನ ಪತ್ನಿಯೆಂದೂ, ವಾಮನಾವತಾರವನ್ನಾಶ್ರಯಿಸಿದ ವಿಷ್ಣುವಿನ ಮಾತೆಯೆಂದೂ ರಾಮಾಯಣದ ಒಂದು ಸನ್ನಿವೇಶದಲ್ಲಿ (ಇಲ್ಲಿಯೂ ಪಾಠಪ್ರಭೇದಗಳಿವೆ) ತಿಳಿಯುತ್ತದೆ.] ವಾಜಸನೇಯ ಸಂಹಿತೆಯಲ್ಲೂ (೨೯-೬೦) ಮತ್ತು ತೈತ್ತಿರೀಯಸಂಹಿತೆಯಲ್ಲೂ (೭-೫-೧೪-೧) ಅದಿತಿಯನ್ನು ವಿಷ್ಣುಪತ್ನಿಯೆಂದು ತಿಳಿಸಿದೆ. (ಅದಿತ್ಯೈ ವಿಷ್ಣುಪತ್ನ್ಯೈ ಚರುಃ) ತೈತ್ತಿರೀಯಸಂಹಿತೆಯಿಂದ ಉದ್ಧೃತವಾಗಿರುವ ಕೆಳಗಿನ ಮಂತ್ರದಲ್ಲೂ ಅದಿತಿಯ ಸ್ವರೂಪವರ್ಣನೆಯು ಈರೀತಿ ಇರುತ್ತದೆ.

ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ಅಸ್ಯೇಶಾನಾ ಜಗತೋ ವಿಷ್ಣುಪತ್ನೀ ।
ವಿಶ್ವವ್ಯಚಾ ಇಷಯಂತೀ ಸುಭೂತಿಃ ಶಿವಾ ನೋ ಅಸ್ತು ಅದಿತಿರುಪಸ್ಥೇ ॥

ದ್ಯುಲೋಕಕ್ಕೆ ಅವಲಂಬನಪ್ರಾಯಳೂ, ಪೃಥ್ವಿಗೆ ಧಾರಕಳೂ, ವಿಶ್ವಕ್ಕೆಲ್ಲಾ ಒಡೆಯಳೂ, ವಿಷ್ಣುಪತ್ನಿಯೂ ವಿಶ್ವವ್ಯಾಪಕಳೂ ಶಕ್ತಿಯುತಳೂ ಆದ ಅದಿತಿಯು, ಆವಳ ಉತ್ಸಂಗವನ್ನೇ ಆಶ್ರಯಿಸಿರುವ ನಮಗೆ ಕಲ್ಯಾಣವನ್ನುಂಟುಮಾಡಲಿ.

ಈ ಎಲ್ಲಾ ಸನ್ನಿವೇಶಗಳಲ್ಲೂ ಸಹ ಅದಿತಿಯು ಜಗತ್ಸೃಷ್ಟಿಗೂ, ಜಗತ್ಪೋಷಣೆಗೂ ಪ್ರಧಾನಕಾರಣಳಾಗಿದ್ದಾಳೆ ಎಂಬಂಶಗಳು ವಿಶದವಾಗಿವೆ.

**ದ್ವಿ ಪಚ್ಛಃ ಪರಿದಧಾತಿ ಚತುಷ್ಪಾದಾ ವೈ ಪಶವಃ ಪಶೂನಾಮವರುಧ್ಯೈ ಸಕೃದರ್ಧರ್ಚಶಃ ಪ್ರತಿಷ್ಠಾಯಾ ಏವ ದ್ವಿಪ್ರತಿಷ್ಠೋ ವೈ ಪುರುಷಶ್ಚತುಷ್ಪಾದಾಃ ಪಶವೋ ಯಜಮಾನಮೇವ ತದ್ದ್ವಿಪ್ರತಿಷ್ಠಂ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ।**

**ಪರಿಧಾನೀಯಾಯಾ ಅಸ್ಯಾ ಋಚಃ ಶಂಸನೇ ಪ್ರಕಾರವಿಶೇಷಂ ವಿಧತ್ತೇ—ತ್ರಿಃ ಪ್ರಥಮಾಂ ತ್ರಿರುತ್ತಮಾಮನ್ವಾಹೇತಿ ವಿಧೇಃ ಸಾರ್ವತ್ರಿಕತ್ವಾದಸ್ಯಾಃ ಪರಿಧಾನೀಯಾಯಾಸ್ತ್ರಿರಾವೃತ್ತಿಃ ಪ್ರಾಪ್ತಾ ॥ ತತ್ರ ದ್ವಯೋರಾವೃತ್ತ್ಯೋಃ ಪಚ್ಛಃ ಶಂಸೇತ್ ॥ ಏಕೈಕಸ್ಮಿನ್ಪಾದೇಽವಸಾಯಾವಸಾಯ ಶಂಸನಂ ಕುರ್ಯಾತ್ ॥ ತತ್ರ ಪಾದಾನಾಂ ಚತುಷ್ಟಯೇನ ಪಶುಸಾಮ್ಯಾತ್ಪಶುಪ್ರಾಪ್ತಿರ್ಭವತಿ ॥ ತೃತೀಯಸ್ಯಾಮಾವೃತ್ತಾವರ್ಧರ್ಚಶಃ ಶಂಸೇತ್ ॥ ಅರ್ಧರ್ಚೇಽವಸಾಯ ಪಠೇದಿತ್ಯರ್ಥಃ ॥ ತಚ್ಚ ಪ್ರತಿಷ್ಠಾಯೈ ಸ್ಥೈರ್ಯೇಣಾವಸ್ಥಾನಾರ್ಥಮೇವ ಭವತಿ ॥ ಕಿಂಚ ಪುರುಷೋಽಯಂ ದ್ವಿಪ್ರತಿಷ್ಠಃ ಪಾದದ್ವಯೋಪೇತಃ ಪಶವಶ್ಚತುಷ್ಪಾದಾಸ್ತಥಾ ಸತ್ಯುಭಯವಿಧಶಂಸನೇನ ದ್ವಿಪಾದಂ ಯಜಮಾನಮೇವ ಚತುಷ್ಪಾತ್ಸು ಪಶುಷು ಪ್ರತಿಷ್ಠಾಪಯತಿ ॥**

ಪರಿಧಾನೀಯವೆಂಬ ಈ ಕೊನೆಯ ಋಕ್ಕನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು—ತ್ರಿಃ ಪ್ರಥಮಾಮನ್ವಾಹ ತ್ರಿರುತ್ತಮಾಂ ಎಂಬ ವಿಧಿಯ ಪ್ರಕಾರ ಶಸ್ತ್ರಮಂತ್ರಗಳ ಮೊದಲು ಮತ್ತು ಕೊನೆಯ ಋಕ್ಕುಗಳನ್ನು ಮೂರು ಮೂರಾವೃತ್ತಿ ಪಠಿಸಬೇಕೆಂದು ನಿಯಮವಿರುವುದಷ್ಟೆ ಅದರಂತೆ ಕೊನೆಯ ಋಕ್ಕಾದ ಅದಿತಿರ್ದ್ಯೌಃ ಎಂಬ ಮಂತ್ರವನ್ನು ಮೂರಾವೃತ್ತಿ ಪಠಿಸಬೇಕೆಂದಾಯಿತು. ಈರೀತಿ ಪಠಿಸುವಾಗ ಮೊದಲು ಮತ್ತು ಎರಡನೆಯ ಆವೃತ್ತಿಪಠನಗಳಲ್ಲಿ ಈ ಋಕ್ಕನ್ನು ಪಾದಪಾದಗಳಾಗಿ ಮಧ್ಯಮಧ್ಯ ನಿಲ್ಲಿಸುತ್ತಾ ಪಠಿಸಬೇಕು. ಎಂದರೆ ಒಂದು ಪಾದವನ್ನು ಪಠಿಸಿದನಂತರ ಸ್ವಲ್ಪ ನಿಲ್ಲಿಸಿ ಅನಂತರ ಎರಡನೆಯ

ಪಾದವನ್ನೂ ಅನಂತರ ಸ್ವಲ್ಪ ನಿಲ್ಲಿಸಿ ಮೂರನೆಯ ಪಾದವನ್ನು ಮತ್ತೆ ನಿಲ್ಲಿಸಿ ನಾಲ್ಕನೆಯ ಪಾದವನ್ನೂ ಪಠಿಸಬೇಕು. ಹೀಗೆ ಈ ಕೊನೆಯ ಋಕ್ಕನ್ನು ಎರಡಾವೃತ್ತಿ ಪಠಿಸಬೇಕು. ಏಕೆಂದರೆ ಪಶುಗಳಿಗೆ ನಾಲ್ಕು ಪಾದಗಳಿರುವವು. ಆದ್ದರಿಂದ ಅದರ ಪ್ರತೀಕವಾಗಿ ಋಕ್ಕನ್ನು ನಾಲ್ಕು ಪಾದಗಳಾಗಿ ವಿಂಗಡಿಸಿ ಒಂದು ಪಾದವಾದನಂತರ ಮಧ್ಯೆ ಬಿಟ್ಟುಬಿಟ್ಟು ನಾಲ್ಕುಪಾದಗಳನ್ನೂ ಬೇರೆಬೇರೆಯಾಗಿ ಪಠಿಸಬೇಕು. ಮೂರನೆಯ ಆವೃತ್ತಿ ಪಠಿಸುವಾಗ ಈ ಋಕ್ಕನ್ನು ಅರ್ಧಋಕ್ಕಿಗೆ ಒಂದುಭಾಗದಂತೆ ಎರಡು ಭಾಗಗಳನ್ನಾಗಿ ಮಾಡಿ ಪಠಿಸಬೇಕು. ಏಕೆಂದರೆ ಮನುಷ್ಯ ಯಜಮಾನನಿಗೆ ಎರಡು ಕಾಲುಗಳು (ಪಾದಗಳು) ಮಾತ್ರವಿರುವವು. ಅವುಗಳ ಪ್ರತೀಕವಾಗಿ ಋಕ್ಕನ್ನು ಎರಡು ಭಾಗಗಳನ್ನಾಗಿ ಪಠಿಸಬೇಕು. ಹೀಗೆ ಮಾಡುವುದರಿಂದ ಪಶುಗಳಲ್ಲಿ ಯಜಮಾನನನ್ನು ಸ್ಥಾಪಿಸಿದಂತಾಗುವುದು ಎಂದರೆ ಯಜಮಾನನಿಗೆ ಪಶುಸಮೃದ್ಧಿಯುಂಟಾಗುವುದು.

**ಸದೈವ ಪಂಚಜನೀಯಯಾ ಪರಿದಧ್ಯಾತ್ತದುಪಸ್ಪೃಶನ್ಭೂಮಿಂ ಪರಿ-ದಧ್ಯಾತ್ತದ್ಯಸ್ಯಾಮೇವ ಯಜ್ಞಂ ಸಂಭರತಿ ತಸ್ಯಾಮೇವೈನಂ ತದಂತತಃ ಪ್ರತಿಷ್ಠಾಪಯತಿ ।**

ಪರಿಧಾನಕಾಲೇ ಭೂಮಿಸ್ಪರ್ಶಂ ವಿಧತ್ತೇ—ಸದೈವ ಸರ್ವೇಷ್ವಪಿ ಯಜ್ಞಪ್ರಯೋಗೇಷು ಪಂಚಜನೀಯಯಾ ವಿಶ್ವೇ ದೇವಾ ಅದಿತಿಃ ಪಂಚಜನಾ ಇತ್ಯುಕ್ತತ್ವಾದಿಯಮೃಕ್ಪಂಚಜನೀಯಾ ತಯಾ ಪರಿಧಾನಂ ಸಮಾಪನಂ ಯದಾ ಕುರ್ಯಾತ್ತದಾನೀಂ ಭೂಮಿಮುಪಸ್ಪೃಶನ್ಪರಿದಧ್ಯಾತ್ ॥ ತಥಾ ಸತಿ ಯಸ್ಯಾಮೇವ ಭೂಮೌ ಯಜ್ಞಂ ಸಂಭರತಿ, ಅನುಷ್ಠಾತುಂ ಯಜ್ಞಸಾಧನಾನಿ ಸಂಪಾದಯತಿ ತಸ್ಯಾಮೇವ ಭೂಮಾವೇನಂ ಯಜ್ಞಮನೇನೋಪಸ್ಪರ್ಶನೇನ ಅಂತತಃ ಪ್ರತಿಷ್ಠಾಪಯತಿ ॥

ಶಸ್ತ್ರಮಂತ್ರದ ಕೊನೆಯ ಋಕ್ಕನ್ನು ಹೇಳಿ ಮುಗಿಸುವ ಕಾಲದಲ್ಲಿ ಭೂಮಿಯನ್ನು ಸ್ಪರ್ಶಿಸಬೇಕೆಂಬ ವಿಧಿಯನ್ನು ಹೇಳುತ್ತಾರೆ. ಸಮಸ್ತವಾದ ಯಜ್ಞಾಂಗಕರ್ಮಗಳಲ್ಲಿಯೂ ಅದರಲ್ಲಿಯೂ ಪಂಚಜನಾಃ ಎಂಬ ಶಬ್ದಪ್ರಯೋಗವಿರುವ ಅದಿತಿರ್ದ್ಯೌಃ ಎಂಬ ಕೊನೆಯ ಋಕ್ಕನ್ನು ಹೇಳಿ ಕರ್ಮವನ್ನು ಸಮಾಪ್ತಿಗೊಳಿಸುವಾಗ ಆ ಋಕ್ಕನ್ನು ಪಠಿಸುತ್ತಾ ಭೂಮಿಯನ್ನು ಹಸ್ತದಿಂದ ಸ್ಪರ್ಶಮಾಡಬೇಕು. ಹಾಗೆ ಮಾಡುವುದರಿಂದ ಯಾವ ಭೂಮಿಯಲ್ಲಿ ಯಜ್ಞಕ್ಕೆ ಬೇಕಾದ ಸಾಧನಸಾಮಗ್ರಿಗಳು ಲಭಿಸಿದವೋ ಅಂತಹ ಭೂಮಿಯಲ್ಲಿ ಯಜ್ಞವು ಪರಿಸಮಾಪ್ತಿಯಾಯಿತು ಎಂಬುವುದನ್ನು ದೃಢಪಡಿಸುತ್ತದೆ.

**ವಿಶ್ವೇ ದೇವಾಃ ಶೃಣುತೇಮಂ ಹವಂ ಮ ಇತಿ ವೈಶ್ವದೇವಮುಕ್ಥಂ ಶಸ್ತ್ವಾ ವೈಶ್ವದೇವ್ಯಾ ಯಜತಿ ಯಥಾ ಭಾಗಂ ತದ್ದೇವತಾಃ ಪ್ರೀಣಾತಿ ॥**

ಶಸ್ತ್ರಯಾಜ್ಯಾಂ ವಿಧತ್ತೇ—ವೈಶ್ವದೇವಶಸ್ತ್ರಶಂಸನಾದೂರ್ಧ್ವಂ ವಿಶ್ವೇ ದೇವಾಃ ಶೃಣುತೇತ್ಯೇತಾಂ ವೈಶ್ವದೇವೀಂ ಯಾಜ್ಯಾಂ ಪಠೇತ್ ॥ ತಸ್ಯಾಂ ಯೇ ಅಂತರಿಕ್ಷೇ ಯ ಉಪದ್ಯವಿಷ್ಠೇತ್ಯಾದಿನಾ ಭಿನ್ನವರ್ಗಾಣಾಂ ದೇವಗಣಾನಾಮಭಿಧಾನಾತ್ತಾಸಾಂ ದೇವತಾನಾಂ ಸ್ವಸ್ವಭಾಗಮತಿಕ್ರಮ್ಯ ಪ್ರೀತಿಂ ಕರೋತಿ ॥

ವೈಶ್ವದೇವಶಸ್ತ್ರಮಂತ್ರಪಠನಾನಂತರ, ಎಲೈ ವಿಶ್ವದೇವತೆಗಳೇ ನನ್ನ ಈ ಪ್ರಾರ್ಥನೆಯನ್ನು ಕೇಳಿರಿ ಎಂಬರ್ಥವುಳ್ಳ **ವಿಶ್ವೇ ದೇವಾಃ ಶೃಣುತೇಮಂ ಹವಂ ಮೇ** (ಋ. ಸಂ. ೬-೫೨-೧೩) ಎಂಬ ಯಾಜ್ಯಾಮಂತವನ್ನು ಪಠಿಸಬೇಕು. ಈ ಮಂತ್ರಪಠನದಿಂದ ಅಂತರಿಕ್ಷ ಮೊದಲಾದ ಪ್ರದೇಶಗಳಲ್ಲಿ ಇರುವ ಎಲ್ಲಾ ದೇವತೆಗಳೂ ಎಂದರೆ ದೇವತೆಗಳ ಬೇರೆಬೇರೆ ಗಣಗಳು ತಮತಮಗೆ ಸಲ್ಲಬೇಕಾದ ಹವಿರ್ಭಾಗಗಳನ್ನು ಪಡೆದು ಸಂತುಷ್ಟರಾಗುವರು ಎಂದಭಿಪ್ರಾಯವು.



*English Translation*

**(The Nivid hymn for the Vis've Devah. On the Dhayyas of the Vais'vadeva Shastra. To what deities it belongs. On the concluding verse of this Shastra)**

He repeats the Vais'vadeva hymn. The Vais'vadeva Shastra shows the relationship of subjects to their king. Just as people represent the interior part of a kingdom, so do also the hymns represent the interior, the kernel, of the Shastra. The Dhayyas, then, are like what is in the desert (beasts, & c.) That is the reason that the Hotar must repeat before and after every Dhayya the call S'omsavom for every Dhayya is considered as a separate recitation distinct from the body of the Shastra. Some one might object how can verses, like the Dhayyas, which are life, be compared to a desert? Regarding this he (the Aitareya Rishi) has told, that the deserts (aranyani) are properly speaking no deserts on account of the deers and birds to be found there.

The Vaisvadeva Shastra is to be likened to man, Its hymns are like his internal parts ; its dhayyas are like the links of his body. That is the reason that the Hotar calls somsavom before and after every Dhayya (to represent motion and flexibility). For the links of the human body are loose, these are, however, fastened and held together by the Brahma. The Dhayya and Yajya verses are the root of the sacrifice. When they use Dhayyas and Yajyas different from those which are prescribed, then they uproot the sacrifice. Therefore they (the Dhayyas and Yajyas) should be only of the same nature (they should not use other ones than those mentioned).

The Vaisvadeva Shastra belongs to five classes of beings. It belongs to all fiive classes of beings, viz., Gods and Men, Gandharvas and Apsaras, Serpents and Manes. To all these five classes of beings belongs the Vaisvadeva Shastra. All beings of these five classes know him (the Hotar who repeats the Vaisvadeva Shastra). To that Hotar who has such a knowledge come those individuals of these five classes of beings who understand the art of recitation to assist him.

The Hotar who repeats the Vaisvadeva Shastra belongs to all deities. When he is about to repeat his Shastra, he ought to think of all directions (have them before his mind) by which means he provides all these directions with liquid (rasa). But he ought not to think of that direction in which his enemy lives. By doing so he consequently deprives him of his strength.

He concludes (the Vaisvadeva Shastra) with the verse aditir dyaur aditir antariksham (1.89.10) i.e. Aditi is heaven, Aditi is the air, Aditi is mother, father and son: Aditi is all gods; Aditi is the five classes of creatures; Aditi is what is born; Aditi is what is to be born." She (Aditi) is mother, she is father, she is son. In her are the Vaisvedevas, in her the five classes of creatures. She is what is born, she is what is to be born.

(When reciting this concluding verse which is to be repeated thrice) he recites it twiee (for the second and third times) so as to stop at each of the four padas. He does so for obtaining cattle, which are four-footed. Once the first time he repeats the concluding verse, stopping at the end of each half of the verse only. (That is done) for establishing a firm footing. Man has two feet, but animals have four. By repeating the concluding verse twice in the said manner the Hotar places the two-legged sacrificer among the four-legged animals.

He ought always to couclude the Vaisvadeva Shastra with a verse addressed to the five classes of beings as in the case in aditir dyaur; and, when concluding, touch the earth. Thus he finally establishes the sacrifice in the same place in which he acquires the means of his performance.

After having repeated the Vaisvadeva Shastra, he recites the Yajya verse addressed to the Vaisvedevas; vaisvedevah srinuta imam havam me (6, 52, 13). Thus he pleases the deities according to their shares in the libation.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ಸಪ್ತಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಏಳನೆಯ ಖಂಡವು
ಸಮಾಪ್ತವಾದುದು.



# ಅಥ ತ್ರಯೋದಶಾಧ್ಯಾಯೇ ಅಷ್ಟಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು



[ಅಗ್ನಿ ಮತ್ತು ವಿಷ್ಣು ಎಂಬ ದೇವತೆಗಳಿಗೆ ಸಲ್ಲಬೇಕಾದ ಆಜ್ಯ (ತುಪ್ಪ) ವೆಂಬ ಹವಿರ್ದ್ರವ್ಯವು ಮತ್ತು ಸೋಮದೇವತೆಗೆ ಸಲ್ಲಬೇಕಾದ ಚರುದ್ರವ್ಯವು]



ಈಗ ಘೃತಯಾಗ ಮತ್ತು ಸೋಮಸಂಬಂಧಿಯಾದ ಯಾಜ್ಯಾಮಂತ್ರಗಳನ್ನು ವಿವರಿಸುವರು—ವೈಶ್ವದೇವಶಸ್ತ್ರಪಠನಾನಂತರ ವಿಶ್ವೇದೇವತೆಗಳನ್ನುದ್ದೇಶಿಸಿ ಯಾಜ್ಯಾಮಂತ್ರಪೂರ್ವಕವಾಗಿ ಸೋಮರಸವನ್ನು ಅರ್ಪಿಸಿದನಂತರ ಅಗ್ನಿ ಮತ್ತು ವಿಷ್ಣುವನ್ನುದ್ದೇಶಿಸಿ ಆಜ್ಯ (ಕರಗಿಸಿದ ಬಿಸಿಯ ತುಪ್ಪ)ದಿಂದ ಹೋಮಮಾಡುವರು. ಅನಂತರ ಸೋಮದೇವತೆಯನ್ನುದ್ದೇಶಿಸಿ ಚರು (ಅನ್ನ) ಹೋಮವನ್ನು ಮಾಡುವರು. ಈ ಮೂರು ಹೋಮಗಳಲ್ಲಿ ಸೋಮದೇವತೆಯನ್ನುದ್ದೇಶಿಸಿ ಅರ್ಪಿಸುವ ಚರು ಹೋಮವೇ ಮುಖ್ಯವಾದುದು. ಅಗ್ನಿ ಮತ್ತು ವಿಷ್ಣುಗಳಿಗೆ ಅರ್ಪಿಸಬೇಕಾದ ಆಹುತಿಗಳಿಗೆ ಬೇಕಾದ ಯಾಜ್ಯಾಮಂತ್ರಗಳನ್ನು ಇಲ್ಲಿ ತಿಳಿಸಿಲ್ಲ. ಮತ್ತು ಋಗ್ವೇದಸಂಹಿತೆಯಲ್ಲಿಯೂ ಈ ಮಂತ್ರಗಳಿರುವುದಿಲ್ಲ. ಆದರೆ ಆಶ್ವಲಾಯನರು ಈ ಯಾಜ್ಯಾಮಂತ್ರಗಳನ್ನು ಇಲ್ಲಿ ಈರೀತಿಯಾಗಿ ಹೇಳಿರುವರು—

ಘೃತಾಹವನೋ ಘೃತಪೃಷ್ಠೋ ಅಗ್ನಿರ್ಘೃತೇಶ್ರಿತೋ ಘೃತಮಸ್ಯಧಾಮ ।
ಘೃತಪ್ರುಷಸ್ತ್ವಾಂ ಹರಿತೋ ವಹಂತು ಘೃತಂ ಪಿಬನ್ ಯಜಸಿ ದೇವ ದೇವಾನ್ ॥

(ಆಶ್ವ. ಶ್ರೌ. ಸೂ. ೫-೧೯)

ಇದು ಅಗ್ನಿಯನ್ನುದ್ದೇಶಿಸಿ ಪಠಿಸುವ ಯಾಜ್ಯಾಮಂತ್ರವು

ಉರು ವಿಷ್ಣೋ ವಿಕ್ರಮಸ್ವೋರು ಕ್ಷಯಾಯ ನಃ ಕೃಧಿ ।
ಘೃತಂ ಘೃತಯೋನೇ ಪಿಬ ಪ್ರ ಪ್ರ ಯಜ್ಞಪತಿಂ ತಿರ ॥

ಈ ಮಂತ್ರವು ವಿಷ್ಣುವನ್ನುದ್ದೇಶಿಸಿ ಪಠಿಸುವ ಯಾಜ್ಯಾಮಂತ್ರವು.

**ಆಗ್ನೇಯೀ ಪ್ರಥಮಾ ಘೃತಯಾಜ್ಯಾ ಸೌಮೀ ಸೌಮ್ಯಯಾಜ್ಯಾ ವೈಷ್ಣವೀ ಘೃತಯಾಜ್ಯಾ ತ್ವಂ ಸೋಮ ಪಿತೃಭಿಃ ಸಂವಿದಾನ ಇತಿ ಪಿತೃಮತ್ಯಾ ಯಜತಿ ॥**

**ಅಥ ಘೃತಯಾಗಸೌಮ್ಯಯಾಗಯೋರ್ಯಾಜ್ಯಾಂ ವಿಧತ್ತೇ—ಸೌಮ್ಯಚರೋರುಭಯತೋ ಘೃತಸಾಧ್ಯೌ ದ್ವೌ ಯಾಗಾವನುಷ್ಠೇಯೌ ॥ ತತ್ರಾಗ್ನಿದೇವತಾಕಾ ವಿಷ್ಣುದೇವತಾಕಾಚೇತಿ ದ್ವೇ ಯಾಜ್ಯೇ ॥ ಘೃತಾಹವನೋ ಘೃತಪೃಷ್ಠೋ ಅಗ್ನಿರಿತ್ಯಾಗ್ನೇಯೀ ಪ್ರಥಮಾ**

**ಯಾಜ್ಯಾ । ಉರು ವಿಷ್ಣೋ ವಿಕ್ರಮಸ್ವೇತಿ ವೈಷ್ಣವೀ ದ್ವಿತೀಯಾ ಘೃತಯಾಜ್ಯಾ ॥ ಅಸ್ತಿ ಕಶ್ಚಿತ್ಸೋಮದೇವತಾಕಶ್ಚರುಸ್ತಸ್ಯ ತ್ವಂ ಸೋಮೇತಿ ಸೌಮೀ ಯಾಜ್ಯಾ ತತ್ರ ಪಿತೃಭಿಃ ಸಂವಿದಾನ ಇತಿ ಶ್ರುತತ್ವಾದಿಯಂ ಪಿತೃಮತೀ ತಾಂ ಯಾಜ್ಯಾಂ ಸೌಮ್ಯಚರೌ ಪಠೇತ್ ॥ ತಸ್ಯ ಚರೋಃ ಪುರಸ್ತಾದಾಗ್ನೇಯಯಾಜ್ಯಯಾ ಘೃತಯಾಗಃ ॥ ಉಪರಿಷ್ಟಾದ್ವೈಷ್ಣವಯಾಜ್ಯಯಾ ಘೃತಯಾಗಃ ॥ ತದ್ಯಾಜ್ಯಾದ್ವಯಮಾಶ್ವಲಾಯನೇನ ಪಠಿತಂ ॥**

ಸೋಮದೇವತೆಯನ್ನುದ್ದೇಶಿಸಿ ಯಾಜ್ಯಾಮಂತ್ರದಿಂದ ಚರುಹೋಮವನ್ನು ಮಾಡಬೇಕು. ಈ ಚರು ಹೋಮದ ಮೊದಲು ಮತ್ತು ಅನಂತರ ಎರಡು ಘೃತಹೋಮವನ್ನು ಮಾಡಬೇಕು. ಯಾಜ್ಯಾಮಂತ್ರದಿಂದ ಅಗ್ನಿಯನ್ನುದ್ದೇಶಿಸಿ ಮೊದಲೂ, ಅನಂತರ ಸೋಮಾಹುತಿಯನ್ನು (ಚರುಹೋಮದಿಂದ) ಮಧ್ಯದಲ್ಲಿಯೂ, ಕೊನೆಯಲ್ಲಿ ಮತ್ತೆ ವಿಷ್ಣುವನ್ನುದ್ದೇಶಿಸಿ ಘೃತದಿಂದ ಮೂರನೆಯ ಹೋಮವನ್ನು ಮಾಡಬೇಕು. ಈ ಎಲ್ಲಾ ಹೋಮಗಳನ್ನೂ ಯಾಜ್ಯಾಮಂತ್ರಗಳಿಂದಲೇ ಮಾಡಬೇಕು. ಪ್ರತಿ ದೇವತೆಗೂ ಬೇರೆಬೇರೆ ಯಾಜ್ಯಾಮಂತ್ರಗಳಿರುವವು. **ಘೃತಾಹವನೋ ಘೃತಪೃಷ್ಠೋ ಅಗ್ನಿಃ** (ಆಶ್ವ. ಶ್ರೌ ೫-೧೯-೩) ಎಂಬುದು ಅಗ್ನಿದೇವತಾಕವಾದ ಯಾಜ್ಯಾಮಂತ್ರವು. **ಉರು ವಿಷ್ಣೋ ವಿಕ್ರಮಸ್ವ** (ಆಶ್ವ. ಶ್ರೌ. ೫-೧೯-೩) ಎಂಬುದು ವಿಷ್ಣುದೇವತಾಕವಾದ ಯಾಜ್ಯಾಮಂತ್ರವು. ಸೋಮದೇವತೆಯನ್ನು ಉದ್ದೇಶಿಸಿ ಮಾಡುವ ಆಹುತಿಯನ್ನು **ತ್ವಂ ಸೋಮ ಪಿತೃಭಿಃ ಸಂವಿದಾನಃ** (ಋ.ಸಂ. ೮-೪೮-೧೩) ಎಂಬ ಯಾಜ್ಯಾಮಂತ್ರದಿಂದ ಚರುವನ್ನರ್ಪಿಸಿ ಹೋಮಮಾಡಬೇಕು. ಈ ಚರುಹೋಮದ ಮೊದಲು ಅಗ್ನಿಯನ್ನೂ ಚರುಹೋಮಾನಂತರ ವಿಷ್ಣುವನ್ನೂ ಉದ್ದೇಶಿಸಿ ಘೃತದ್ರವ್ಯದಿಂದ ಯಾಜ್ಯಾಮಂತ್ರ ಪೂರ್ವಕವಾಗಿ ಹಿಂದೆ ಹೇಳಿದಂತೆ ಹೋಮಮಾಡಬೇಕು. ಮೇಲೆ ಹೇಳಿದ ಸೋಮದೇವತಾಕವಾದ ಯಾಜ್ಯಾಮಂತ್ರದಲ್ಲಿ **ಪಿತೃಭಿಃ ಸಂವಿದಾನಃ** ಎಂದು ಹೇಳಿರುವುದರಿಂದ ಈ ಮಂತ್ರವು ಪಿತೃಮತೀ ಋಕ್ಕೆಂದು ಹೇಳಲ್ಪಡುವುದು.

**ಘ್ನಂತಿ ವಾ ಏತತ್ಸೋಮಂ ಯದಭಿಷುಣ್ವಂತಿ ತಸ್ಯೈತಾಮನುಸ್ತರಣೀಂ ಕುರ್ವಂತಿ ಯತ್ಸೌಮ್ಯಃ ಪಿತೃಭ್ಯೋ ವಾ ಅನುಸ್ತರಣೀ ತಸ್ಮಾತ್ಸೌಮ್ಯಸ್ಯ ಪಿತೃಮತ್ಯಾ ಯಜತಿ ।**

**ಸೌಮೀಂ ಯಾಜ್ಯಾಂ ಪ್ರಶಂಸತಿ—ಋತ್ವಿಜಃ ಸೋಮಮಭಿಷುಣ್ವಂತೀತಿ ಯದಸ್ತಿ ಸೋಽಯಂ ಸೋಮಸ್ಯ ವಧ ಏವ। ತತ್ರ ಯಃ ಸೌಮ್ಯಶ್ಚರುರಸ್ತಿ, ಏತಾಂ ಸಾಮ್ಯಚರುರೂಪಾಂ ತಸ್ಯ ಮೃತಸ್ಯ ಸೋಮಸ್ಯಾನುಸ್ತರಣೀಂ ಕುರ್ವಂತಿ ।ಮೃತಸ್ಯ ದೀಕ್ಷಿತಸ್ಯ ದಹನಕಾಲೇ ಕಾಂಚಿದ್ವೃದ್ಧಾಂ ಗಾಂ ಹತ್ವಾ ದೀಕ್ಷಿತಾವಯವೇಷು ಗೋರವಯವಾನವಸ್ಥಾಪ್ಯ ದಹೇತ್ ॥ ಸೇಯಂ ಗೌರ್ಮೃತಂ ದೀಕ್ಷಿತಮನು ಮೃತತ್ವಾದ್ಧಿಂಸಿತತ್ವಾಚ್ಚಾನುಸ್ತರಣೀತ್ಯುಚ್ಯತೇ ॥ ಯಸ್ಮಾತ್ಸಾ ಪಿತೃಭ್ಯೋ ಯೋಗ್ಯಾ ತಸ್ಮಾತ್ಪಿತೃಮತ್ಯಾ ಯಾಜ್ಯಯಾ ಸಾಮ್ಯಯಾಗಸ್ಯ ಹವಿರ್ಯಜೇತ್ ॥**

ಸೋಮದೇವತಾಕವಾದ ಯಾಜ್ಯಾಮಂತ್ರವನ್ನು ಪ್ರಶಂಸೆಮಾಡುವರು—ಇಲ್ಲಿ **ಘ್ನಂತಿ ವಾ ಏತತ್ಸೋಮಂ ಯದಭಿಷುಣ್ವಂತಿ** ಎಂಬ ವಾಕ್ಯವಿರುವುದು. ಇದರ ಅರ್ಥವೇನೆಂದರೆ ಯಜ್ಞದಲ್ಲಿ ಋತ್ವಿಗ್ಜನರು ಸೋಮರಸವನ್ನು ಹಿಂಡುವಾಗ ಸೋಮಲತೆಗಳನ್ನು ಕಲ್ಲಿನಿಂದ ಜಜ್ಜಿ ಅನಂತರ ರಸವನ್ನು ಹಿಂಡಿ ತೆಗೆದು ಶೋಧಿಸುವರು. ಸೋಮವನ್ನು ಕಲ್ಲಿನಿಂದ ಜಜ್ಜಿದರೆ ಅದನ್ನು ಕೊಂದಂತಾಗುವುದು. ಇದನ್ನೇ ಸೋಮಾಭಿಷವಣವೆಂದು ಹೇಳುವರು. ಲೋಕವ್ಯವಹಾರದಲ್ಲಿ ದೀಕ್ಷಿತನಾದವನು ಎಂದರೆ ಅನೇಕ ಯಜ್ಞಯಾಗಾದಿಗಳನ್ನು ಮಾಡಿದ ಪುರುಷನು ಮೃತನಾದಲ್ಲಿ ಆಗ ಅವನ ಸಂಬಂಧಿಗಳು

ಮುದಿಯಾದ ಒಂದು ಗೋವನ್ನು ಕೊಂದು ಅದರ ಅವಯವಗಳನ್ನು ದೀಕ್ಷಿತನ ಮೃತಶರೀರದೊಡನೆ ಸೇರಿಸಿ ದಹನಾದಿ ಸಂಸ್ಕಾರಗಳನ್ನು ಮಾಡುವರು. ಇದು ಪದ್ಧತಿಯು. ಇಲ್ಲಿ ಗೋವನ್ನು ಹಿಂಸಿಸಿ ಕೊಲ್ಲುವುದರಿಂದ ಅದು ಅನುಸ್ತರಣೀ (ಮೃತನನ್ನು ಅನುಸರಿಸಿ ಹೋಗಿ ಅವನನ್ನು ನರಕಾದಿದುರ್ಗತಿಯಿಂದ ದಾಟಿಸುವುದು) ಎಂದು ಹೇಳಲ್ಪಡುವುದು. ಅದರಂತೆ ಈ ಅಗ್ನಿ ಮತ್ತು ವಿಷ್ಣುವಿನ ಯಾಜ್ಯಾಹೋಮಗಳು ಮೃತವಾದ ಸ್ತೋಮಕ್ಕೆ ಅನುಸ್ತರಣೀರೂಪವಾಗಿರುವವು. ಆದ್ದರಿಂದ ಇಲ್ಲಿ ಪಿತೃಗಳಿಗೆ ಯೋಗ್ಯವಾದ ಪಿತೃಮತೀ ಎಂಬ ಯಾಜ್ಯಾಮಂತ್ರದಿಂದ ಹವಿಸ್ಸನ್ನು ಅರ್ಪಿಸಬೇಕೆಂದು ಇಲ್ಲಿ ಹೇಳಲಾಗಿದೆ.

ಅವಧಿಷುರ್ವಾ ಏತತ್ಸೋಮಂ ಯದಭ್ಯಸುಷವುಸ್ತದೇನಂ ಪುನಃ ಸಂಭಾವಯಂತಿ ।

**ಘೃತಯಾಗಸಹಿತಂ ಸೌಮ್ಯಂ ಚರುಂ ಸಂಗೃಹ್ಯ ಪ್ರಶಂಸತಿ— ಅಭ್ಯಸುಷವುರಭಿತಃ ಸೋಮಂ ಸುತವಂತ ಇತಿ ಯದಸ್ತಿ, ಏತೇನ ಸೋಮಮವಧಿಷುರ್ವೈ, ಋತ್ವಿಜೋ ಹತವಂತ ಏವ ತಸ್ಮಾದೇನಂ ವ್ಯಥಿತಂ ಸೋಮಂ ಘೃತಚರುಭ್ಯಾಂ ವ್ಯಥಾಪರಿಹಾರಾಯ ಸಂಭಾವಯಂತಿ ॥**

ಅಗ್ನಿ ಮತ್ತು ವಿಷ್ಣುವನ್ನುದ್ದೇಶಿಸಿ ಮಾಡುವ ಘೃತಹೋಮಸಹಿತವಾದ ಸೌಮ್ಯಂ ಚರುಂ ಸೋಮದೇವತಾಕವಾದ ಚರು ಎಂಬ ಹೋಮದ್ರವ್ಯವನ್ನು ಪ್ರಶಂಸೆಮಾಡುವರು—ಸೋಮಾಭಿಷವಣಕಾಲದಲ್ಲಿ ಋತ್ವಿಜರೆಲ್ಲರೂ ಸೇರಿ ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವರು. ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜುವ ಈ ಕಾರ್ಯವು ಸೋಮವನ್ನು ವಧೆಮಾಡುವ ಕಾರ್ಯವು ಎಂದು ಹೇಳಲ್ಪಡುವುದು. ಈ ವಧರೂಪವಾದ ಹಿಂಸಾಕಾರ್ಯದಿಂದ ವ್ಯಥಿತನಾದ ಸೋಮದೇವನನ್ನು ಘೃತಚರುಗಳ ಅರ್ಪಣೆಯಿಂದ ಸಮಾಧಾನಪಡಿಸುವರು ಎಂದು ಇಲ್ಲಿ ಹೇಳಲಾಗಿದೆ.

ಪುನರಾಪ್ಯಾಯಯಂತ್ಯುಪಸದಾಂ ರೂಪೇಣೋಪಸದಾಂ ಕಿಲ ವೈ ತದ್ರೂಪಂ ಯದೇತಾ ದೇವತಾ ಅಗ್ನಿಃ ಸೋಮೋ ವಿಷ್ಣುರಿತಿ ॥

**ಸಂಗೃಹ್ಯ ಪ್ರಶಸ್ಯ ದೇವತಾದ್ವಾರಾ ಪುನರ್ವಿಸ್ತರೇಣ ಪ್ರಶಂಸಾಂ ದರ್ಶಯತಿ— ಯೋಽಯಂ ಹತಃ ಸೋಮಸ್ತಂ ಸೋಮಮುಪಸದಾಂ ರೂಪೇಣ ಸಂಪಾದಿತೇನ ಪುನರಪ್ಯಾಯಯಂತಿ— ಅಗ್ನಿಃ ಸೋಮೋ ವಿಷ್ಣುರಿತಿ ಯಾ ಏತಾಸ್ತಿಸ್ರೋ ದೇವತಾಸ್ತದೇತದುಪಸದಾಮೇವ ಸ್ವರೂಪಂ ತತ್ರಾಪ್ಯೇತಸ್ಯ ದೇವತಾತ್ರಯಸ್ಯ ವಿದ್ಯಮಾನತ್ವಾದ್ ॥**

ಹಿಂದೆ ಹೇಳಿದ ವಿಷಯವನ್ನು ದೇವತೆಗಳ ಮೂಲಕ ವಿಸ್ತಾರವಾಗಿ ಪ್ರಶಂಸೆಮಾಡುವರು. ಸೋಮಾಭಿಷವಣಕಾಲದಲ್ಲಿ ಯಾವ ಸೋಮವು ಹತ (ವಧ) ಮಾಡಲ್ಪಟ್ಟಿತೋ ಆ ಸೋಮವು ಉಪಸದ್ದೇವತೆಗಳ ಸಹಾಯದಿಂದ ಆಪ್ಯಾಯನಗೊಳಿಸಲ್ಪಟ್ಟು ಪುನರುಜ್ಜೀವಿತವಾಗುವುದು. ಉಪಸದ್ದೇವತೆಗಳೆಂದರೆ–ಅಗ್ನಿ ವಿಷ್ಣು ಸೋಮದೇವತೆಗಳು ಈ ವಿಷಯದಲ್ಲಿ— **ತ ಇಷುಗ್ಂ ಸಮಸ್ಕುರ್ವತಾಗ್ನಿಮನೀಕಗ್ ಸೋಮಗ್ಂ ಶಲ್ಯಂ ವಿಷ್ಣುಂ ತೇಜನಂ** (ತೈ. ಸಂ. ೬-೨-೩-೧) ಎಂದು ಹೇಳಿರುವುದು. ಹಿಂದೆ ತ್ರಿಪುರದಹನಕಾಲದಲ್ಲಿ ರುದ್ರನು ತ್ರಿಪುರವನ್ನು ದಹಿಸಲು ಪ್ರಯತ್ನಪಡುವುದಕ್ಕಾಗಿ ದೇವತೆಗಳು ಆ ರುದ್ರನು ಧನುಸ್ಸಿನ ಬಾಣವನ್ನು ದೇವತಾರೂಪದಿಂದ ರಚಿಸಿ ಸಿದ್ಧಪಡಿಸಿದರು. ಆ ಬಾಣಕ್ಕೆ ಅಗ್ನಿ, ಸೋಮ ಮತ್ತು ವಿಷ್ಣು ಎಂಬ ದೇವತೆಗಳು ಕಡ್ಡಿ ಮತ್ತು ಲೋಹದ ಮೊನೆಯ ಪಾತ್ರವನ್ನು ವಹಿಸಿದ್ದರು ಎಂದು ಹೇಳಿದೆ. ಮೇಲಿನ ಮಂತ್ರದಲ್ಲಿಯೂ

ಮೊದಲು ಅಗ್ನಿ ಅನಂತರ ಸೋಮ ಆಮೇಲೆ ವಿಷ್ಣು ಎಂಬ ಕ್ರಮವಿರುವುದು. ಈ ಕ್ರಮವನ್ನೇ ಎಂದರೆ ಅಗ್ನಿ, ಸೋಮ, ವಿಷ್ಣು ಎಂಬ ಕ್ರಮವನ್ನು ಇಲ್ಲಿಯೂ ಅನುಸರಿಸಲಾಗಿದೆ ಎಂದಭಿಪ್ರಾಯವು.

ಪ್ರತಿಗೃಹ್ಯ ಸೌಮ್ಯಂ ಹೋತಾ ಪೂರ್ವಶ್ಛಂದೋಗಭ್ಯೋಽವೇಕ್ಷೇತ।

ಅಥ ಹೋತುರಾಜ್ಯಾವೇಕ್ಷಣಂ ವಿಧತ್ತೇ – ಹುತಶೇಷಂ ಸೌಮ್ಯಂ ಚರುಮಧ್ವರ್ಯುಣಾ ದತ್ತಂ ಹೋತಾ ಪ್ರತಿಗೃಹ್ಯ ಚರುಮಧ್ಯೇ ಸಿಕ್ತೇ ಬಹುಲೇ ಘೃತೇ ಛಂದೋಗೇಭ್ಯಃ ಉದ್ಗಾತೃಭ್ಯಃ ಸ್ವಯಂ ಪೂರ್ವಭಾವೀ ಸನ್ಸ್ವಕೀಯಾಂ ದೇಹಚ್ಛಾಯಾಮವೇಕ್ಷೇತ ॥

ಹೋತೃವು ಘೃತದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುವುದನ್ನು ತಿಳಿಸುವರು—ಹೋಮಾನಂತರ ಅಧ್ವರ್ಯುವು ಸೋಮದೇವತಾಕವಾದ ಚರುವಿನ ಹವಿಶ್ಶೇಷವನ್ನು ಹೋತೃವಿಗೆ ಕೊಡುವನು. ಹೋತೃವು ಅದನ್ನು ಅಧ್ವರ್ಯುವಿನಿಂದ ಸ್ವೀಕರಿಸಿ ಅದನ್ನು ಸಾಮಗರಿಗೆ ಎಂದರೆ ಉದ್ಗಾತೃವೇ ಮುಂತಾದ ಸಾಮಗಾನಮಾಡುವ ಋತ್ವಿಜರಿಗೆ ಕೊಡುವುದಕ್ಕೆ ಮೊದಲೇ ಆ ಚರುವಿನ ಮಧ್ಯದಲ್ಲಿ ಹಾಕಿರುವ ಆಜ್ಯದಲ್ಲಿ (ಕರಗಿಸಿದ ತುಪ್ಪದಲ್ಲಿ) ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳಬೇಕು.

ತಂ ಹೈಕೇ ಪೂರ್ವಂ ಛಂದೋಗೇಭ್ಯೋ ಹರಂತಿ ತತ್ತಥಾ ನ ಕುರ್ಯಾದ್ವಷಟ್ಕರ್ತಾ ಪ್ರಥಮಃ ಸರ್ವಭಕ್ಷಾನ್ಭಕ್ಷಯತೀತಿ ಹ ಸ್ಮಾಽಽಹ ತೇನೈವ ರೂಪೇಣ ತಸ್ಮಾದ್ವಷಟ್ಕರ್ತೈವ ಪೂರ್ವೋಽವೇಕ್ಷೇತಾಥೈನಂ ಛಂದೋಗೇಭ್ಯೋ ಹರಂತಿ ॥

ಅತ್ರ ಪೂರ್ವಪಕ್ಷಮುತ್ಥಾಪ್ಯ ದೂಷಯತಿ—ಕೇಚನ ಯಾಜ್ಞಿಕಾ ಹೋತುರಾಜ್ಯಾವೇಕ್ಷಣಾತ್ಪೂರ್ವಮೇವ ತಂ ಘೃತಯುಕ್ತಂ ಸೌಮ್ಯಂ ಚರುಂ ಛಂದೋಗೇಭ್ಯಃ ಸಮರ್ಪಯಂತಿ। ತತ್ಸಮರ್ಪಣಂ ತಥಾ ನ ಕುರ್ಯಾತ್ ॥ ಹವಿಃಶೇಷಭಕ್ಷಣೇಷು ವಷಟ್ಕರ್ತಾ ಹೋತಾ ಪ್ರಥಮಃ ಪೂರ್ವಭಾವೀ ಸನ್ಹವಿಃ ಶೇಷಾನ್ಭಕ್ಷಯತಿ ॥ ಇತ್ಯೇವಮಭಿಜ್ಞೋ ಮಹರ್ಷಿರಾಹ ಸ್ಮ॥ ತಸ್ಮಾತ್ಕಾರಣಾತ್ತೇನೈವ ರೂಪೇಣ ಭಕ್ಷಣರೂಪೇಣೈವಾವೇಕ್ಷಣೇಽಪಿ ಹೋತೈವ ಪ್ರಥಮೋ ಭೂತ್ವಾಽವೇಕ್ಷೇತ ॥ ಅನಂತರಮೇವೈನಂ ಸೌಮ್ಯಂ ಚರುಂ ಛಂದೋಗೇಭ್ಯಃ ಸಮರ್ಪಯೇಯುಃ ॥

ಇಲ್ಲಿ ಪೂರ್ವಪಕ್ಷವನ್ನು ಶಂಕಿಸಿ ದೂಷಣೆಮಾಡುವರು—ಕೆಲವರು ಹೀಗೆ ಹೇಳುವರು. ಅಧ್ವರ್ಯುವು ಹೋಮಶೇಷವಾದ ಚರುವನ್ನು ಹೋತೃವು ಮಾಡುವ ಅವೇಕ್ಷಣಕ್ಕೆ (ತನ್ನ ಪ್ರತಿಬಿಂಬವನ್ನು ನೋಡುವುದಕ್ಕೆ) ಮೊದಲೇ ಅದನ್ನು ಸಾಮಗರಿಗೆ ಕೊಡುತ್ತಾನೆಂದು ಹೇಳುವರು. ಆರೀತಿ ಸರ್ವಥಾ ಮಾಡಕೂಡದು. ಹವಿಶ್ಶೇಷವನ್ನು ಭಕ್ಷಣಮಾಡುವ ವಿಷಯದಲ್ಲಿ ವಷಟ್ಕಾರವನ್ನು ಮಾಡುವ ಹೋತೃವೇ ಎಲ್ಲರಿಗಿಂತ ಮೊದಲು ಹವಿಶ್ಶೇಷವನ್ನು ಭಕ್ಷಿಸಬೇಕು. ಈ ಪ್ರಕಾರವಾಗಿ ಅಭಿಜ್ಞನಾದ ಐತರೇಯ ಮಹರ್ಷಿಯು ಹೇಳುವನು. ಈ ಕಾರಣದಿಂದಲೇ ಭಕ್ಷಣಾರ್ಥವಾಗಿ ಕೊಡಲ್ಪಡುವ ಹವಿಶ್ಶೇಷವನ್ನು ಭಕ್ಷಿಸುವುದಕ್ಕೆ ಬದಲಾಗಿ ಅದನ್ನು ಅವೇಕ್ಷಣಮಾಡುವನು. ಅವೇಕ್ಷಣವೇ ಹವಿಶ್ಶೇಷಭಕ್ಷಣಕ್ಕೆ ಬದಲಾಗಿ ನೆರವೇರಿಸುವ ಕಾರ್ಯವು. ಎಂದರೆ ಅವೇಕ್ಷಣಮಾಡುವುದರಿಂದ ಹವಿಶ್ಶೇಷವನ್ನು ಭಕ್ಷಿಸಿದಂತಾಯಿತು ಎಂದಭಿಪ್ರಾಯವು. ಆದ್ದರಿಂದ ಹೋತೃವು ತಾನು ಮೊದಲು ಅವೇಕ್ಷಿಸಿ ಅನಂತರ ಆ ಹವಿಶ್ಶೇಷವನ್ನು ಭಕ್ಷಣಾರ್ಥವಾಗಿ ಛಂದೋಗರಿಗೆ ಎಂದರೆ ಸಾಮಗರಿಗೆ ಕೊಡುವನು.

*English Translation*

**(The offerings of Ghee to Agni and Vishnu, and the offering of a Charu to Soma)**

The first Yajya verse for the offering of hot butter is addressed to Agni, that for the offering of Charu is addressed to Soma, and another for the offering of hot butter is addressed to Vishnu.

The Vayjya verse for the offering of Charu to Soma is tvam soma pitribhih (8, 48, 13); it contains the word "Pitaras," i.e. manes. (This Charu is an oblation to the dead Soma). The priests kill the Soma, when they extract its juice. This oblation of Charu is therefore the cow which they use to kill (when the body of a sacrificer is laid on the funeral pile.) For this Charu oblation has, for the Soma, the same significane as the cow sacrificed as the funeral pile for the manes. This is the reason that the Hotar repeats at this occasion, a Yajya verse, containing the term "pitaras," i.e. manes. Those who have extracted the Soma juice, have killed the Soma. By making this oblation they produce him anew.

They make him fat in the form of a siege (by putting him between Agni and Vishnu); for the order of the deities Agni, Soma, and Vishuu, has the form of a siege.

After having received from the Adhvaryu the Charu for Soma for being eaten by him, the Hotar should first look at himself and then offer it to the Sama singers. Some Hotri-priests offer first this Charu after the oblation to the gods is over to the Sama singers. But he onght not to do that; for he the Hotar who pronounces the powerful call vaushat eats all the remains of the food offered to the gods. So it has been said by him the Aitareya Rishi. Therefore the Hotar who pronounces the powerful formula vaushat should, when acting upon that injunction to offer first the Charu remains to the Sama singers, certainly first look upon himself. Afterwards the Hotars offer it to the Sama singers.

**ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಅಷ್ಟಮಃ ಖಂಡಃ**

**ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಎಂಟನೆಯ ಖಂಡವು ಸಮಾಪ್ತವಾದುದು.**



# ಅಥ ತ್ರಯೋದಶಾಧ್ಯಾಯೇ ನವಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು



[ಪ್ರಜಾಪತಿಯು ತನ್ನ ಸ್ವಂತಪುತ್ರಿಯೊಡನೆ ಸಂಭೋಗಮಾಡುವುದು. ಅದರ ಫಲವು ಭೂತವಾ‌ನ್ ಎಂಬ ವ್ಯಕ್ತಿಯ ಮೂಲವು]



ಪ್ರಜಾಪ್ರತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋನ್ಯಸ್ಮಿನ್ನಾವಿಂದಂಸ್ತೇಷಾಂ ಯಾ ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದಸ್ಯೈತದ್ಭೂತವನ್ನಾಮ ಭವತಿ ವೈ ಸ ಯೋಽಸ್ಯೈತದೇವಂ ನಾಮ ವೇದ ॥

ಅಥಾಗ್ನಿಮಾರುತಶಸ್ತ್ರಂ ವಕ್ತವ್ಯಂ ತದರ್ಥಮಾದಾವುಪಾಖ್ಯಾನಮಾಹ— ಪುರಾ ಕದಾಚಿತ್ಪ್ರಜಾಪತಿಃ ಸ್ವಕೀಯಾಂ ದುಹಿತರಮಭಿಲಕ್ಷ್ಯ ಭಾರ್ಯಾತ್ವೇನ ಧ್ಯಾನಮಕರೋತ್ ॥ ತಸ್ಯಾಂ ದುಹಿತರಿ ಮಹರ್ಷೀಣಾಂ ಮತಭೇದ ಆಸೀತ್ ॥ ಅನ್ಯೇ ಕೇಚನ ಮಹರ್ಷಯೋ ದಿವಂ ದ್ಯುಲೋಕದೇವತಾಂ ಧ್ಯಾತವಾನಿತ್ಯಾಹುಃ ॥ ಅಪರೇ ತು ಮಹರ್ಷಯ ಉಷಸಮುಷಃ ಕಾಲದೇವತಾಂ ಧ್ಯಾತವಾನಿತ್ಯಾಹುಃ ॥ ಋಶ್ಯೋ ಮೃಗವಿಶೇಷಃ ॥ ತಥಾ ಚಾಭಿಧಾನಕಾರ ಆಹ ಗೋಕರ್ಣಪೃಷತೈಣರ್ಶ್ಯರೋಹಿತಾಶ್ಚಮರೋ ಮೃಗಾ ಇತಿ ॥ ಸ ಪ್ರಜಾಪತಿಸ್ತಥಾವಿಧ ಋಶ್ಯೋಽಭೂತ್ ॥ ಸಾ ಚ ದುಹಿತಾ ರೋಹಿತಂ ಲೋಹಿತಂ ಭೂತಾ ಪ್ರಾಪ್ತಾ ॥ ಋತುಮತೀ ಜಾತೇತ್ಯರ್ಥಃ । ತಾದೃಶೀಂ ತಾಂ ದುಹಿತರಂ ಅಭ್ಯೈದಭಿಗತವಾನ್ಮಿಥುನಧರ್ಮಂ ಪ್ರಾಪ್ತವಾನಿತ್ಯರ್ಥಃ ॥ ತಂ ದುಹಿತೃಗಾಮಿನಂ ಪ್ರಜಾಪತಿಂ ದೇವಾಃ ಪರಸ್ಪರಮಿದಮಬ್ರುವನ್ ॥ ಅಯಂ ಪ್ರಜಾಪತಿರಕೃತಂ ವೈ, ಅಕರ್ತವ್ಯಮೇವ ನಿಷಿದ್ಧಾಚರಣಂ ಕರೋತೀತಿ ವಿಚಾರ್ಯ ಯಃ ಪುರುಷ ಏನಂ ಪ್ರಜಾಪತಿಮಾರಿಷ್ಯತಿ, ಆರ್ತಿಂ ಪ್ರಾಪಯಿತುಂ ಕ್ಷಮಸ್ತಾದೃಶಂ ಪುರುಷಮೈಚ್ಛನ್ನನ್ವೇಷಣಂ ಕೃತವಂತಃ । ಕೃತ್ವಾ ಚಾನ್ಯೋನ್ಯಸ್ಮಿಂಸ್ತೇಷಾಂ ಮಧ್ಯೇ ತಂ ಪ್ರಜಾಪತಿ-

ಘಾತಕಂ ನಾವಿಂದನ್ನಾಲಭಂತ ತ್ವಂ ಹಂತುಂ ಶಕ್ನೋಷಿ ತ್ವಂ ಹಂತುಮಿತಿ ಪರಸ್ಪರಂ ಪೃಷ್ಟ್ವೈ-ಕೈಕಸ್ಯ ಶಕ್ತಿರಾಹಿತ್ಯಂ ನಿಶ್ಚಿತವಂತಃ ॥ ಸರ್ವೇಷು ದೇವೇಷು ಯಾ ಏವ ಕಶ್ಚಿದ್ಘೋರತಮಾ-ಸ್ತನ್ವೋಽತ್ಯುಗ್ರಾಣಿ ಶರೀರಾರಾಣ್ಯಾಸಂಸ್ತಾಃ ಸರ್ವಾ ಏಕದಾ ಸಮಭರನ್ ಮೇಲಯಿತ್ವೈಕಂ ಶರೀರಂ ಕೃತವಂತಸ್ತಾ ಘೋರತಮಾಸ್ತನ್ವಃ ಸಂಭೃತಾ ಏಕತ್ವೇನ ಸಂಪಾದಿತಾಃ ಸತ್ಯ ಏಷ ದೇವೋಽಭವತ್ ॥ ಏಷ ಇತಿ ಹಸ್ತೇನ ಪ್ರದರ್ಶ್ಯ ರುದ್ರೋಽಭಿಧೀಯತೇ । ತತ್ತಸ್ಮಾದೇವ ಕಾರಣಾದಸ್ಯ ರುದ್ರಸ್ಯೈತಲ್ಲೋಕಪ್ರಸಿದ್ಧಂ ಭವದ್ಭೂತಶಬ್ದೋಪೇತಂ ನಾಮ ಸಂಪನ್ನಂ ॥ ಭೂತಪತಿರಿತಿ ಭೂತವನ್ನಾಮ । ತಚ್ಚ ತಸ್ಯ ಭವತ್ಯರ್ಥಾನುಗಮಾದ್ಯುಕ್ತಂ ॥ ಏತನ್ನಾಮವೇದನಂ ಪ್ರಶಂಸತಿ ವೇದಿತಾ ಭವತಿ ವೈ ಭೂತಿಮಾನೇವ ಸಂಪದ್ಯತೇ ॥

ಪೂರ್ವದಲ್ಲಿ ಒಂದಾನೊಂದು ಸಮಯದಲ್ಲಿ ಪ್ರಜಾಪತಿಯು ತನ್ನ ಸ್ವಂತ ಪುತ್ರಿಯನ್ನು ನೋಡಿ ಪತ್ನಿಯನ್ನು ಮೋಹಿಸುವಂತೆ ಮೋಹಗೊಂಡನು. ಅವಳ ರೂಪವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಿದ್ದನು. ಆ ಪ್ರಜಾಪತಿಯ ಪುತ್ರಿಯು ಯಾರೆಂಬ ವಿಷಯದಲ್ಲಿ ಮಹರ್ಷಿಗಳಲ್ಲಿಯೇ ಮತಭೇದವಿದೆ. ಕೆಲವರು ದ್ಯುಲೋಕದೇವತೆಯೆಂದೂ ಮತ್ತೆ ಕೆಲವರು ಉಷೋದೇವತೆಯೆಂದೂ ಹೇಳುವರು. ಅದು ಹೇಗಾದರೂ ಇರಲಿ. ಆಗ ಪ್ರಜಾಪತಿಯು ಋಶ್ಯವೆಂಬ ಒಂದು ವಿಧವಾದ ಜಿಂಕೆಯ (ಮೃಗದ) ರೂಪವನ್ನು ಧರಿಸಿದನು. ಅವನ ಪುತ್ರಿಯು ರೋಹಿತವೆಂಬ ಕೆಂಪುಬಣ್ಣದ ಜಿಂಕೆಯ ರೂಪವನ್ನು ಧರಿಸಿದಳು. (ಇಲ್ಲಿ **ರೋಹಿತಂ ಪ್ರಾಪ್ತಾ** ಎಂಬ ಶಬ್ದಗಳಿಗೆ ಋತುಮತಿಯಾದಳು ಎಂದು ಭಾಷ್ಯಕಾರರ ವಿವರಣೆ ಇದೆ) ರೋಹಿತರೂಪದಲ್ಲಿರುವ ತನ್ನ ಪುತ್ರಿಯನ್ನು ಪ್ರಜಾಪತಿಯು ಸಮೀಪಿಸಿ ಮಿಥುನಕಾರ್ಯಾಸಕ್ತನಾದನು. ಈರೀತಿ ತನ್ನ ಪುತ್ರಿಯಲ್ಲೇ ಅನುರಕ್ತನಾಗಿ ಸಂಭೋಗಿಸಲು ಉದ್ಯುಕ್ತನಾಗಿರುವ ಪ್ರಜಾಪತಿಯನ್ನು ನೋಡಿ ದೇವತೆಗಳು ಪರಸ್ಪರವಾಗಿ ಈರೀತಿ ಮಾತನಾಡಿಕೊಂಡರು— ಈ ಪ್ರಜಾಪತಿಯು ಯಾರೂ ಯಾವಾಗಲೂ ಮಾಡದಿರುವ ನಿಷಿದ್ಧಕರ್ಮಾಚರಣೆಯಲ್ಲಿ ಆಸಕ್ತನಾಗಿರುವನು. ಈ ಕಾರ್ಯವನ್ನು ನಡೆಯದಂತೆ ತಡೆಗಟ್ಟಲು ಸಮರ್ಥನಾದ ಪುರುಷನಾರು ಎಂದು ಎಲ್ಲಾಕಡೆಯಲ್ಲಿಯೂ ಹುಡುಕಿನೋಡಿದರು. ಎಷ್ಟು ಹುಡುಕಿದರೂ ಪ್ರಜಾಪತಿಯನ್ನು ನಿಗ್ರಹಿಸಲು ಶಕ್ತನಾದ ಪುರುಷನು ಸಿಕ್ಕಲಿಲ್ಲ. ನಿನಗೆ ಶಕ್ತಿ ಇದ್ದರೆ ನೀನು ಪ್ರಜಾಪತಿಯನ್ನು ಸಂಹರಿಸು ಎಂದು ದೇವತೆಗಳು ತಮ್ಮತಮ್ಮಲ್ಲಿ ಪ್ರತಿಯೊಬ್ಬನನ್ನೂ ಪ್ರಶ್ನಿಸಿ ನೋಡಲು ಅವರಲ್ಲಿ ಯಾರಿಗೂ ಆ ಸಾಮರ್ಥ್ಯವಿದ್ದಂತೆ ಕಂಡುಬರಲಿಲ್ಲ. ಆಗ ದೇವತೆಗಳೆಲ್ಲರೂ ಸೇರಿ ತಮ್ಮತಮ್ಮ ಘೋರರೂಪಗಳನ್ನೆಲ್ಲಾ (ದೇವತೆಗಳಿಗೆ ಯಾವ ರೂಪವನ್ನು ಬೇಕಾದರೂ ಧರಿಸಲು ಶಕ್ತಿಯಿರುವುದೆಂದು ಪ್ರಸಿದ್ಧಿಯು. ಆದ್ದರಿಂದ ತಮ್ಮ ಸೌಮ್ಯರೂಪಗಳನ್ನು ಬಿಟ್ಟು ಘೋರವಾದ ಆಕಾರಗಳನ್ನು ಎಂದು ಇಲ್ಲಿ ಹೇಳಿದೆ) ಒಟ್ಟಿಗೆ ಕೇಂದ್ರೀಕರಿಸಿ ಅತ್ಯಂತ ಘೋರಾಕಾರವುಳ್ಳ ಓರ್ವ ಪುರುಷನನ್ನು ಸೃಷ್ಟಿಸಿದರು. ಈ ಪುರುಷನೇ ರುದ್ರನೆಂಬ ಅಭಿದಾನವನ್ನು ಪಡೆದನು. ಆದ್ದರಿಂದ ರುದ್ರನಿಗೆ ಭೂತವತ್ ಭೂತಪತಿ ಎಂಬ ಹೆಸರುಗಳು ಲೋಕದಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ರುದ್ರನ ಈರೀತಿಯಾದ ಭೂತವದ್ಭಾವವನ್ನು ತಾಳಿದ ಪುರುಷನು ಭೂತಿಮಂತ (ಐಶ್ವರ್ಯವಂತ)ನಾಗುವನು.

ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏತಮೇವ ವರಮವೃಣೀತ ಪಶೂನಾಮಾಧಿ-ಪತ್ಯಂ ತದಸ್ಯೈತತ್ಪಶುಮನ್ನಾಮ ಪಶುಮಾನ್ಭವತಿ ಯೋಽಸ್ಯೈ-ತದೇವಂ ನಾಮ ವೇದ ।

**ಅಥ ತೇನ ರುದ್ರೇಣ ಸಹ ದೇವಾನಾಂ ಸಂವಾದಂ ದರ್ಶಯತಿ—ತಂ ರುದ್ರಂ ದೇವಾ ಏವಮಬ್ರುವನ್ ॥ ಹೇ ರುದ್ರಾಯಂ ಪ್ರಜಾಪತಿ ಅಕೃತಮಕರ್ನಿಷಿದ್ಧಾಚರಣಂ ಕೃತವಾಂಸ್ತಸ್ಮಾದಿಮಂ ಬಾಣೇನ ಪ್ರಹರೇತಿ ॥ ಸ ರುದ್ರಸ್ತದಂಗೀಕೃತ್ಯೋತ್ಕ್ಯೋಚತ್ವೇನ ಪಶೂನಾಮಾಧಿಪತ್ಯಂ ಕೃತವಾನ್ ॥ ತಸ್ಮಾತ್ಕಾರಣಾದಸ್ಯ ರುದ್ರಸ್ಯೈತಲ್ಲೋಕಪ್ರಸಿದ್ಧಂ ಪಶುಪತಿರಿತ್ಯೇತಾದೃಶಂ ಪಶುಶಬ್ದೋಪೇತಂ ನಾಮ ಸಂಪನ್ನಂ ॥ ತದ್ವೇದನಂ ಪ್ರಶಂಸತಿ ॥**

ಅನಂತರ ದೇವತೆಗಳು ಆ ಪುರುಷನನ್ನು (ರುದ್ರನನ್ನು) ಉದ್ದೇಶಿಸಿ - ಎಲೈ ರುದ್ರನೇ, ಪ್ರಜಾಪತಿಯು ನಿಷಿದ್ಧಕಾರ್ಯವನ್ನು ಮಾಡಿರುವನು. ಆದುದರಿಂದ ಅವನನ್ನು ಶಿಕ್ಷಿಸುವುದಕ್ಕಾಗಿ ನೀನು ಈ ಬಾಣದಿಂದ ಅವನನ್ನು ಪ್ರಹರಿಸು ಎಂದರು. ರುದ್ರನು ಹಾಗೆಯೇ ಆಗಲೆಂದೊಪ್ಪಿದನು. ಆದರೆ ತಾನು ಪಶುಗಳಿಗೆಲ್ಲಾ ಅಧಿಪತಿಯಾಗುವಂತೆ ವರವನ್ನು ಕೇಳಿದನು. ದೇವತೆಗಳು ಅದರಂತೆ ವರವನ್ನು ಕೊಟ್ಟರು. ಆದ್ದರಿಂದ ರುದ್ರನು ಪಶುಪತಿ ಎಂಬ ಹೆಸರಿನಿಂದ ಪ್ರಸಿದ್ಧವಾದನು ಈ ವಿಷಯವನ್ನು ತಿಳಿದ ಪುರುಷನು ಪಶುಸಂಪತ್ತನ್ನು ಪಡೆಯುವನು.

ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ
ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ
ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷುಸ್ತ್ರಿಕಾಂಡಾ
ಸೋ ಏವೇಷುಸ್ತ್ರಿಕಾಂಡಾ ।

ಅಥ ರುದ್ರಪ್ರಜಾಪತ್ಯೋರ್ವೃತ್ತಾಂತಂ ದರ್ಶಯತಿ—ಸ ರುದ್ರೋಽಭ್ಯಾಯತ್ಯ ಬಾಣಯುಕ್ತಂ ಧನುರಭಿತ ಆಕೃಷ್ಯ ತಂ ಪ್ರಜಾಪತಿಮವಿಧ್ಯತ್ ॥ ಋಶ್ಯಮೃಗರೂಪಃ ಪ್ರಜಾಪತಿರ್ವಿದ್ಧಃ ಸನ್ನೂರ್ಧ್ವಮುಖ ಉದಪತತ್ಪ್ರಕರ್ಷೇಣೋತ್ಪತನಮಕರೋತ್ ॥ ತಮೇತಮುತ್ಪತಿತಮೃಶ್ಯಮೃಗರೂಪಂ ಪ್ರಜಾಪತಿಮಾಕಾಶೇ ದೃಷ್ಟ್ವಾ ಸರ್ವ ಏವ ತೇ ಜನಾ ಮೃಗ ಇತ್ಯಾಚಕ್ಷತೇ ರೋಹಿಣ್ಯಾದ್ರ್ರಯೋರ್ನಕ್ಷತ್ರಯೋರ್ಮಧ್ಯೇಽವಸ್ಥಿತಂ ಮೃಗಶೀರ್ಷನಕ್ಷತ್ರಂ ಕಥಯಂತಿ ನಕ್ಷತ್ರರೂಪೇಣ ನಿಷ್ಪನ್ನ ಇತ್ಯರ್ಥಃ । ಯ ಉ ಏವ ಯಸ್ತು ರುದ್ರೋ ಮೃಗವ್ಯಾಧೋ ಮೃಗಘಾತೀ ಸ ರುದ್ರ ಆಕಾಶೇ ದೃಶ್ಯಮಾನಃ ಸ ಉ ಏವ ಲೋಕಪ್ರಸಿದ್ಧೋ ಮೃಗವ್ಯಾಧ ಆಸೀತ್ ॥ ಯಾ ದುಹಿತಾ ರೋಹಿತಾ ರೋಹಿದ್ರಕ್ತವರ್ಷಾ ಮೃಗೀ ಸೇಯಮಾಕಾಶೇ ರೋಹಿಣೀ ನಕ್ಷತ್ರಮಭೂತ್ ॥ ಯೋ ಏವ ಯಾ ತು ರುದ್ರೇಣ ಪ್ರೇರಿತೇಷು ಸ್ತ್ರಿಕಾಂಡಾನೀಕಂ ಶಲ್ಯಸ್ತೇಜನಮಿತ್ಯವಯವತ್ರಯೋಪೇತಾ ಸೋ ಏವ ಸೈವ ಲೋಕಪ್ರಸಿದ್ಧಾ ಕಾಂಡತ್ರಯೋಪೇತೇಷುರ್ಬಾಣೋಽಭವತ್ ॥

ಅನಂತರ ಆ ರುದ್ರನು ಮುಂದೆ ಬಂದು ತನ್ನ ಧನುಸ್ಸಿಗೆ ಹೆದೆಯನ್ನೇರಿಸಿ ಬಾಣವನ್ನು ಹೂಡಿ ಅದನ್ನು ಹಿಂದಕ್ಕೆ ಎಳೆದು ಪ್ರಜಾಪತಿಗೆ ಗುರಿಯಿಟ್ಟು ಹೊಡೆದನು. ಋಶ್ಯರೂಪದಲ್ಲಿದ್ದ ಪ್ರಜಾಪತಿಗೆ ಆ ಬಾಣವು ತಗಲಿ ಅವನು ಊರ್ಧ್ವಾಭಿಮುಖವಾಗಿ ಅಂತರಿಕ್ಷಕ್ಕೆ ನೆಗೆದನು. ಅಂತರಿಕ್ಷದಲ್ಲಿ ಊರ್ಧ್ವಾಭಿಮುಖವಾಗಿ ನೆಗೆಯುತ್ತಿರುವ ಪ್ರಜಾಪತಿಯನ್ನು ಜನರೆಲ್ಲರೂ ಆಕಾಶದಲ್ಲಿ ನೋಡಿ ಅದನ್ನು ಮೃಗವೆಂಬ ನಕ್ಷತ್ರರಾಶಿಯೆಂದು ಕರೆಯುತ್ತಾರೆ. (Stars in the Orion) ಎಂದರೆ ರೋಹಿಣೀ ಮತ್ತು

ಆರ್ದ್ರಾನಕ್ಷತ್ರಗಳ ಮಧ್ಯದಲ್ಲಿರುವ ಮೃಗಶೀರ್ಷನಕ್ಷತ್ರವೆಂದು ಹೇಳುವರು. ಪ್ರಜಾಪತಿಯು ನಕ್ಷತ್ರರೂಪನಾಗಿ ಇರುವನೆಂದಭಿಪ್ರಾಯವು. ಮೃಗರೂಪದಿಂದಿದ್ದ ಪ್ರಜಾಪತಿಯನ್ನು ಬಾಣದಿಂದ ಪ್ರಹರಿಸಿದ ರುದ್ರನು ಮೃಗವ್ಯಾಧನೆಂಬ ಹೆಸರಿನಿಂದ ಆಕಾಶದಲ್ಲಿ ಗೋಚರಿಸುತ್ತಾನೆ. ರೋಹಿತವೆಂಬ ಕೆಂಪುಜಿಂಕೆಯ ರೂಪದಿಂದಿದ್ದ (ಮೃಗೀ) ಪ್ರಜಾಪತಿಯ ಪುತ್ರಿಯು ಆಕಾಶದಲ್ಲಿ ರೋಹಿಣೀ ನಕ್ಷತ್ರರೂಪದಿಂದ ಗೋಚರಿಸುತ್ತಾಳೆ. ರುದ್ರನಿಂದ ಪ್ರೇರಿತವಾದ ಬಾಣವು ಕಾಂಡ (ಬಾಣದ ಉದ್ದವಾದ ಕಡ್ಡಿ) ಶಲ್ಯ (ಅಲಗು) ತುದಿ (ಹರಿತವಾದ ಮೊನೆ) ಎಂಬ ಮೂರು ಭಾಗಗಳುಳ್ಳದ್ದಾಯಿತು. ಆದ್ದರಿಂದ ಬಾಣದಲ್ಲಿ ಈಗಲೂ ಈ ಮೂರು ಭಾಗಗಳಿರುವವು.

ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ತನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥

ಅಥ ಮನುಷ್ಯೋತ್ಪತ್ತಿಂ ದರ್ಶಯತಿ—ಮೃಗರೂಪೇಣ ಪ್ರಜಾಪತಿನಾ ಯದ್ರೇತೋ ಮೃಗ್ಯಾಂ ಸಿಕ್ತಂ ತದೇತದತಿಬಹುತ್ವಾದ್ಭೂಮೌ ಪತಿತಂ ಸತ್ಪ್ರವಾಹರೂಪೇಣಾಧಾವತ್ ॥ ತಚ್ಚ ಕ್ವಚಿನ್ನಿಮ್ನದೇಶೇಽವಸ್ಥಾಯ ಪ್ರೌಢಂ ಸರೋಽಭೂತ್ ॥ ತೇ ದೇವಾ ಏವಮಬ್ರುವನ್ಪ್ರಜಾಪತೇರಿದಂ ರೇತೋ ಮಾ ದುಷದ್ದುಷ್ಟಮಸ್ಪೃಶ್ಯಂ ಮಾ ಭೂದಿತಿ ॥ ಯಸ್ಮಾನ್ಮಾ ದುಷದಿತ್ಯವದಂಸ್ತಸ್ಮಾದ್ದೋಷರಹಿತಸ್ಯ ರೇತಸೋ ಮಾದುಷಮಿತಿ ನಾಮ ಸಂಪನ್ನಂ ॥ ಜನಾಸ್ತು ದಕಾರಸ್ಥಾನೇ ನಕಾರಂ ಪ್ರಕ್ಷಿಪ್ಯ ಮಾನುಷಮಿತಿ ಬ್ರಾಹ್ಮಣಕ್ಷತ್ರಿಯಾದಿ ಶರೀರಮಾಚಕ್ಷತೇ । ತದ್ವಸ್ತುತೋ ದೇವಾಚಾರೇಣ ದೋಷರಹಿತತ್ವಾನ್ಮಾದುಷಮೇವ । ತಥಾ ಸತಿ ಮಾದುಷನಾಮ ಯೋಗ್ಯಮಪಿ ತಚ್ಛರೀರಂ ಪರೋಕ್ಷೇಣ ನಾಮ್ನಾ ವ್ಯವಹರ್ತವ್ಯಮಿತ್ಯಭಿಪ್ರೇತ್ಯ ವರ್ಣವ್ಯತ್ಯಯೇನ ಮಾನುಷಮಿತ್ಯಾಚಕ್ಷತೇ । ಯಸ್ಮಾಲ್ಲೋಕೇ ದೇವವತ್ಪೂಜ್ಯಾ ಉತ್ತಮಾಃ ಪುರುಷಾಃ ಪರೋಕ್ಷಪ್ರಿಯಾ ಇವ ಹಿ ಪ್ರತ್ಯಕ್ಷೇ ಮಾತಾಪಿತೃನಿರ್ಮಿತೇ ದೇವದತ್ತಾದಿನಾಮ್ನಿ ನ ಪ್ರೀತಿಂ ಕುರ್ವಂತಿ ಕಿಂತೂಪಾಧ್ಯಾಯಾಚಾರ್ಯಸ್ವಾಮೀತ್ಯಾದಿಕೇ ಮಾತಾಪಿತ್ರಾದೀನಾಮಕ್ಲೃಪ್ತತ್ವೇನ ಪರೋಕ್ಷೇ ನಾಮ್ನಿ ಪ್ರೀತಿಂ ಕುರ್ವಂತಿ ತಸ್ಮಾತ್ಪರೋಕ್ಷತ್ವಾಯ ನಕಾರಪ್ರಕ್ಷೇಪೋ ಯುಜ್ಯತೇ ॥

ಇನ್ನು ಮೃಗರೂಪದಲ್ಲಿದ್ದ ಪ್ರಜಾಪತಿಯ ರೇತಸ್ಸು (ವೀರ್ಯವು) ಬಹಳವಾಗಿದ್ದುದರಿಂದ ತನ್ನ ಪುತ್ರಿಯಾದ ಮೃಗಿಯಲ್ಲಿ ಸಿಕ್ತವಾಗಿ ಉಳಿದ ಭಾಗವು ಭೂಮಿಯಲ್ಲಿ ಬಿದ್ದು ಪ್ರವಾಹರೂಪದಿಂದ ನದಿಯಂತೆ ಹರಿಯಲುಪಕ್ರಮಿಸಿ ಒಂದು ತಗ್ಗಾದ ಪ್ರದೇಶದಲ್ಲಿ ಸಂಗ್ರಹವಾಗಿ ಮಹಾಸರೋವರವಾಗಿ ಪರಿಣಮಿಸಿತು. ಅದನ್ನು ನೋಡಿ ದೇವತೆಗಳು ಪ್ರಜಾಪತಿಯ ಈ ವೀರ್ಯವು **ಅಸ್ಪೃಶ್ಯ** (ಮುಟ್ಟಬಾರದೆಂದು) ವೆಂದೂ **ಮಾದುಷತ್** ಕೆಟ್ಟದ್ದೆಂದೂ ಜನರು ಭಾವಿಸದಂತಾಗಲಿ ಎಂದು ಅಪೇಕ್ಷಿಸಿದರು. ದೇವತೆಗಳು ಅದನ್ನು ಮಾದುಷತ್ ಎಂದು ಕರೆದದ್ದರಿಂದ ದೋಷರಹಿತನಾದ ಪ್ರಜಾಪತಿಯ ರೇತೋರೂಪವಾದ ಸರೋವರಕ್ಕೆ ಮಾದುಷತ್ ಎಂದೇ ಹೆಸರಾಯಿತು. ಜನರು ಮಾದುಷ ಎಂಬ ಶಬ್ದದ ದಕಾರಸ್ಥಾನದಲ್ಲಿ ನಕಾರವನ್ನು ಸೇರಿಸಿ ಪಠಿಸುವುದರಿಂದ

ಬ್ರಾಹ್ಮಣಕ್ಷತ್ರಿಯಾದಿ ಜನರನ್ನು ಮಾನುಷ ಎಂದು ಕರೆಯುತ್ತಾರೆ. ನ್ಯಾಯವಾಗಿ ನೋಡಿದರೆ ಮಾನುಷಶಬ್ದಕ್ಕೆ (ಮಾದುಷ) ದೋಷರಹಿತವಾಗುವುದು ಎಂದೇ ಅರ್ಥವು. ಹೀಗಿರುವಾಗ ಜನರು ತಮ್ಮ ಶರೀರವನ್ನು ಸಾಧಾರಣಾರ್ಥವಿರುವ ಮಾನುಷ ಶಬ್ದದಿಂದ ವ್ಯವಹರಿಸುವುದಕ್ಕೆ ಬದಲಾಗಿ ಪರೋಕ್ಷಾರ್ಥವಿರುವ (ಎಂದರೆ ಮಾಧುಷ ಎಂಬ ಶ್ರೇಷ್ಠಾರ್ಥವಿರುವ) ಶಬ್ದದಿಂದಲೇ ವ್ಯವಹರಿಸುತ್ತಾರೆ; ಆದ್ದರಿಂದ ದೇವತೆಗಳಂತೆ ಯೋಗ್ಯರೂ, ಪೂಜ್ಯರೂ ಆದ ಪುರುಷರು ಲೋಕವ್ಯವಹಾರದಲ್ಲಿ ಪರೋಕ್ಷಪ್ರಿಯರಾಗಿಯೇ (ಪ್ರತ್ಯಕ್ಷವಾಗಿ ತೋರುವ ಅರ್ಥವಲ್ಲದೆ ಗೂಢಾರ್ಥವಿರುವ ಶಬ್ದಗಳಿಂದಲೇ ತೃಪ್ತರಾಗಿ) ಇರುತ್ತಾರೆ. ಹೇಗೆಂದರೆ ತಮಗೆ ಮಾತಾಪಿತೃಗಳು ಇಟ್ಟ ದೇವದತ್ತ ಮೊದಲಾದ ಸಾಮಾನ್ಯನಾಮಗಳಿಗಿಂತ ತಮ್ಮ ಯಶಸ್ಸನ್ನು ಪ್ರಕಾಶಗೊಳಿಸುವ ಉಪಾಧ್ಯಾಯ, ಆಚಾರ್ಯ, ಸ್ವಾಮಿ ಎಂದು ಮೊದಲಾದ ಅನ್ವರ್ಥನಾಮಗಳಿಂದಲೇ ತೃಪ್ತಿಪಡುತ್ತಾರೆ. ದೇವತೆಗಳೂ ಪ್ರತ್ಯಕ್ಷವಾಗಿ ಗೋಚರಿಸದೆ ಪರೋಕ್ಷದಲ್ಲಿದ್ದುಕೊಂಡೇ ಸ್ತುತ್ಯಾದಿಗಳನ್ನು ಸ್ವೀಕರಿಸುತ್ತಾರೆ. ಆದ್ದರಿಂದ ದೇವತೆಗಳು ಪರೋಕ್ಷಪ್ರಿಯರು ಎಂದು ಹೇಳವರು. ಆದ್ದರಿಂದ ಪರೋಕ್ಷತ್ವವನ್ನು ಪ್ರದರ್ಶಿಸುವುದಕ್ಕಾಗಿ **ಮಾದುಷ**ಶಬ್ದದಲ್ಲಿ ದಕಾರಕ್ಕೆ ಬದಲಾಗಿ ನಕಾರವನ್ನು ಸೇರಿಸಿ **ಮಾನುಷ** ಎಂದು ಉಪಯೋಗಿಸುವರು.



## *English Translation*

**(Prajapati's illegal intercourse with his daughter and the consequences of it. The origin of Bhutavan)**

Prajapati thought of cohabiting with his own daughter, whom some call "Heaven," others, "Dawn" (Ushas). He transformed himself into a buck of a kind of deer (risya) whilst his daughter assumed the shape of a female deer (rohit). He approached her. The gods saw it (crying): "Prajapati commits an act never done before." (In order to avert the evil consequences of this incestuous act), the gods inquired for some one who might destroy the evil consequences of it. Among themselves they did not find any one who might do that at (one for Prajapati's crime). They then put the most fearful bodies (for the gods have many bodies) of theirs in one. This aggregate of the most fearful bodies of the gods became a god Bhutavan by name. For he who knows this name only is born. The gods satd to him, "Prajapati has committed an act which he ought not to have committed. Pierce this (the incarnation of his evil deed.)" So he did. He then said, "I will choose a boon from you." They said, "Choose". He then chose as his boon sovereignty over cattle. That is the reason that his name is pasuman, i.e. having cattle. He who knows on this earth only this name (pasuman), becomes rich in cattle.

He (Bhutavan) attacked him (the incarnation of Prajapati's evil deed) and pierced him (with an arrow). After having pierced him he sprang up (and became a constellation). They call him mriga, i.e. deer (stars in the Orion), and him

who killed that being (which sprang from Prajapati's misdeeds, mriga vyadha, i.e., hunter of the deer (name of star). The female deer Rohit (into which Prajapati's daughter had been transformed) became (the constellation) Rohini. The arrow (by which the phantom of Prajapati's sin was pierced) which had three parts (shaft, steel and point) became such an arrow (in the sky). The sperm which had been poured forth from Prajapati, flew down on the earth and became a lake. The gods said, "May this sperm of Prajapati not be spilt (ma dushat)," This became the madusham. This name madusha is the same as manusha, i.e. man. For the word manusha, i.e., man, means "one who should not be spoiled (madushan). This (madusha) is a (commonly) unknown word. For the gods like to express themselves in such terms unknown to men.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ನವಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿಮೂರನೆಯ ಅಧ್ಯಾಯದಲ್ಲಿ ಒಂಬತ್ತನೆಯ ಖಂಡವು ಸಮಾಪ್ತವಾದುದು.



# ಅಥ ತ್ರಯೋದಶಾಧ್ಯಾಯೇ ದಶಮಃ ಖಂಡಃ

## ಹದಿಮೂರನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು



[ಪ್ರಜಾಪತಿಯ ಸ್ಖಲನವಾದ ವೀರ್ಯದಿಂದ ನಾನಾವಿಧ ಪ್ರಾಣಿಗಳು ಹೇಗೆ ಉತ್ಪನ್ನವಾದವು ಎಂಬ ವಿಚಾರ. ರುದ್ರದೇವನನ್ನು ಸ್ತುತಿಸಲಾಗಿರುವ ಋಕ್ಕು ಮತ್ತು ರುದ್ರನನ್ನು ಸಮಾಧಾನಪಡಿಸಿದ ವಿಚಾರ].



ತದಗ್ನಿನಾ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ದ್ವಿತೀಯಮಾಸೀತ್ತದ್ಭೃಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ

ಭೃಗುರ್ವಾರುಣಿರಥ ಯತ್ತೃತೀಯಮದೀದೇದಿವ ತ ಆದಿತ್ಯಾ
ಅಭವನ್ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ಯದಂಗಾರಾಃ
ಪುನರವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್ ।

ಅಥಾಽಽದಿತ್ಯಾದಿ ದೇವತೋತ್ಪತ್ತಿಂ ದರ್ಶಯತಿ-ಪ್ರಜಾಪತೇಃ ಸಂಬಂಧಿ ಯದ್ರೇತೋ ದೈವೈರ್ದೋಷರಹಿತಂ ಕೃತಂ ತದ್ರೇತೋ ದೇವಾ ಅಗ್ನಿನಾ ಪರ್ಯಾದಧುಃ ಪರಿತೋ ವೇಷ್ಟಿತವಂತಃ । ಸರೋರೂಪೇಣಾವಸ್ಥಿತಸ್ಯ ರೇತಸೋ ದಾಹೇನ ದ್ರವೀಭಾವಂ ನಿವಾರಯಿತುಂ ಪರಿತೋಽಗ್ನಿಂ ಪ್ರಜ್ವಲಿತವಂತ ಇತ್ಯರ್ಥಃ ॥ ಯದಾಽಗ್ನಿಃ ಪ್ರಜ್ವಲಿತಸ್ತದಾ ಮರುತೋ ವಾಯವಸ್ತದ್ರೇತೋಽಧೂನ್ವನ್ನ್ಯೇಷಣಾಯ ವಾಯುಸಂಯುಕ್ತಮಕುರ್ವನ್ ॥ ಸೋಽಗ್ನಿಸ್ತದ್ರೇತೋ ನ ಪ್ರಾಚ್ಯಾವಯತ್ ॥ ದ್ರವೀಭಾವಾತ್ಪ್ರಚ್ಯುತಂ ನಾಕರೋತ್ ॥ ದ್ರವಬಾಹುಲ್ಯಾತ್ಪಿಂಡಾಕಾರಂ ಕರ್ತುಂ ನಾಶಕ್ನೋದಿತ್ಯರ್ಥಃ ॥ ವೈಶ್ವಾನರೋ ನಾಮ ಕಶ್ಚಿದಗ್ನಿವಿಶೇಷಃ । ಪ್ರಾಣಿನಾಮುದರೇ ಪ್ರವಿಶ್ಯಾನ್ನಪಾನಾದಿಕಂ ಪಾಚಯತಿ । ತಥಾ ಚ ಭಗವತೋಕ್ತಂ ॥

" ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ॥
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ " ॥ ಇತಿ ॥

ತೇನ ವೈಶ್ವಾನರನಾಮಕಾಗ್ನಿವಿಶೇಷೇಣ ತದ್ರೇತಃ ಪೂರ್ವವತ್ಪರ್ಯಾದಧುಃ ॥ ದೇವೈರಗ್ನೌ ಪರಿಕ್ಷಿಪ್ತೇ ಸತಿ ಮರುತಸ್ತದ್ರೇತಃ ಪೂರ್ವವದಧೂನ್ವನ್ ॥ ಸೋಽಯಂ ವೈಶ್ವಾನರೋಽಗ್ನಿಸ್ತದ್ರೇತೋ ದ್ರವೀಭಾವಾತ್ಪ್ರಚ್ಯುತಮಕರೋತ್ ॥ ತಸ್ಯ ಪಿಂಡೀಭೂತಸ್ಯ ರೇತಸೋ ಯತ್ಪ್ರಥಮಂ ಪಿಂಡರೂಪಮುದದೀಪ್ಯತೋದ್ದೀಪ್ತಮಭೂತ್ತದ್ರೂಪಮಸೌ ದಿವಿ ದೃಶ್ಯಮಾನ ಆದಿತ್ಯೋಽಭವತ್ ॥ ದ್ವಿತೀಯಂ ಯತ್ಪಿಂಡರೂಪಮಾಸೀತ್ತದೃಷಿರ್ಭೃಗುರಭವತ್ತಂ ಭೃಗುಂ ವರುಣೋಽಗೃಹ್ಣೀತ ನಿಗೃಹ್ಯ ಸ್ವಪುತ್ರತ್ವೇನ ಸ್ವೀಕೃತವಾನ್ ತಸ್ಮಾತ್ಸಭೃಗುರ್ವಾರುಣಿರಿತ್ಯುಚ್ಯತೇ ॥ ವರುಣಸ್ಯಾಪತ್ಯಂ ವಾರುಣಿಃ । ಏತದೇವಾಭಿಪ್ರೇತ್ಯ ತೈತ್ತಿರೀಯಾ ಆಮನಂತಿ — " ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ ' ಇತಿ । ಅಥಾನಂತರಂ ತೃತೀಯಂ ಪಿಂಡರೂಪಮದೀದೇದಿವಾತಿಶಯೇನ ದೀಪ್ತಮೇವಾಸೀತ್ ॥ ತ ಆದಿತ್ಯಾ ಅದಿತೇಃ ಪುತ್ರಾಃ ದೇವವಿಶೇಷಾ ಅಭವನ್ ॥ ಪೂರ್ವಮಾದಿತ್ಯಶಬ್ದೇನ ಮಂಡಲವರ್ತೀ ಸೂರ್ಯ ಉಕ್ತಃ ಅತ್ರ ಅದಿತೇಃ ಪುತ್ರಾಃ ಇತರೇ ದೇವಾ ಉಚ್ಯಂತೇ । ಯೇ ರೇತಃಪಿಂಡಾ ದಗ್ಧಾಃ ಸಂತೋಽಙ್ಗಾರಾ ಅಭವಂಸ್ತೇ ಸರ್ವೇಽಪ್ಯಂಗಿರೋನಾಮಕಾ ಋಷಯೋಽಭವನ್ ॥ ಪುನರಪಿ ತತ್ರ ಯದಂಗಾರಾ ಯೇಕೇಚಿದಂಗಾರಾ ಅವಶಾಂತಾಃ ಶಾಂತಿರಹಿತಾಃ ಸಂತ ಉದದೀಪ್ಯಂತ, ಉತ್ಕರ್ಷೇಣ ದೀಪ್ತಾಸ್ತತ್ಸರ್ವಂ ಬೃಹಸ್ಪತಿರಭವತ್ ॥

ಅನಂತರ ದೇವತೆಗಳು ಪ್ರಜಾಪತಿಯ ಸಂಬಂಧವಾದ ರೇತಸ್ಸನ್ನು ದೋಷರಹಿತವನ್ನಾಗಿ ಮಾಡಿದಮೇಲೆ ಸರೋವರ ರೂಪದಲ್ಲಿ ದ್ರವರೂಪದಿಂದಿರುವ ಆ ರೇತಸ್ಸನ್ನು ದ್ರವರಹಿತವನ್ನಾಗಿ ಮಾಡಬೇಕೆಂದು ಯೋಚಿಸಿ ಆ ಸರೋವರದ ಸುತ್ತಲೂ ಅಗ್ನಿಯನ್ನು ಹೊತ್ತಿಸಿ ಉರಿಸತೊಡಗಿದರು. ಸರೋವರದ ಸುತ್ತಲೂ ಅಗ್ನಿಯು ಪ್ರಜ್ವಲಿತವಾಗಿ ಉರಿಯುತ್ತಿರುವಾಗ ವಾಯುವು

ರೇತಸ್ಸಿನಲ್ಲಿ ಸೇರಿರುವ ದ್ರವ್ಯವನ್ನು ಒಣಗಿಸುವುದಕ್ಕಾಗಿ ರೇತಸ್ಸನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿತು. ಆದರೂ ಸಹ ಅಗ್ನಿಯು ತನ್ನ ಶಾಖದಿಂದ ರೇತಸ್ಸಿನಲ್ಲಿ ದ್ರವಭಾವವು ವಿಶೇಷವಾಗಿದ್ದುದರಿಂದ ಅದನ್ನು ಪರಿಹರಿಸಿ ಅದನ್ನು ಪಿಂಡಾಕಾರಕ್ಕೆ (ಘನದ್ರವ್ಯ, ಘಟ್ಟಿಯಾದ ಪದಾರ್ಥ) ಪರಿವರ್ತಿಸಲು ಅಗ್ನಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ದೇವತೆಗಳು ಅಗ್ನಿಯಿಂದ ಸಾಧ್ಯವಾಗದ ಈ ಕಾರ್ಯವನ್ನು ವೈಶ್ವಾನರನಾಮಕನಾದ ಅಗ್ನಿಯ ರೂಪವಿಶೇಷದಿಂದ ಸಾಧಿಸಲು ಪ್ರಯತ್ನಮಾಡಿದರು. ಈ ವೈಶ್ವಾನರಾಗ್ನಿಯು ಸಮಸ್ತಪ್ರಾಣಿಗಳ ಉದರಗಳಲ್ಲಿ ಜಾಠರಾಗ್ನಿರೂಪದಿಂದ ಪ್ರವೇಶಮಾಡಿ ಅನ್ನಪಾನಾದಿಗಳ ಪಚನಕಾರ್ಯದಲ್ಲಿ ತೊಡಗಿರುವನು—

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥**

ನಾನೇ ವೈಶ್ವಾನರಾಗ್ನಿರೂಪದಿಂದ ಪ್ರಾಣಿಗಳ ದೇಹದಲ್ಲಿದ್ದುಕೊಂಡು ಪ್ರಾಣ ಅಪಾನಗಳಿಂದ ಪ್ರಾಣವಾಯುಗಳ ಸಹಾಯದಿಂದ ಪ್ರಾಣಿಗಳು ತಿನ್ನುವ ನಾಲ್ಕುವಿಧವಾದ ಅನ್ನಾದ್ಯಾಹಾರಗಳನ್ನು ಪಚನಮಾಡುತ್ತೇನೆ ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದ ದೇವತೆಗಳು ವೈಶ್ವಾನರಾಗ್ನಿಯ ಸಾಮರ್ಥ್ಯವು ವಿಶೇಷವಾಗಿರುವುದೆಂದು ತಿಳಿದು ಆ ಪ್ರಜಾಪತಿಯ ರೇತಸ್ಸನ್ನು ಶೋಷಿಸಲು (ಒಣಗಿಸಲು) ವೈಶ್ವಾನರಾಗ್ನಿಯನ್ನು ಸರೋವರದ ಸುತ್ತಲೂ ಸ್ಥಾಪಿಸಿದರು. ವಾಯುವೂ ಪೂರ್ವದಂತೆ ಸರೋವರವನ್ನು ಪ್ರವೇಶಿಸಿ ಅದನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿ ಶೋಷಿಸಲು ಪ್ರಾರಂಭಿಸಿತು. ಹೀಗೆ ವಾಯು ಸಹಾಯದಿಂದ ವೈಶ್ವಾನರಾಗ್ನಿಯು ಪ್ರಜಾಪತಿಯ ರೇತಸ್ಸನ್ನು ದ್ರವೀಭಾವದಿಂದ ಬೇರ್ಪಡಿಸಿ ಪಿಂಡಾಕಾರವಾದ ಘನಪದಾರ್ಥವನ್ನಾಗಿ ಪರಿವರ್ತಿಸಿತು. ಈರೀತಿ ರೇತಸ್ಸು ಅನೇಕಪಿಂಡಗಳಾಗಿ (ಗೋಳಾಕಾರವಾಗಿ) ಪರಿವರ್ತಿಸಲ್ಪಟ್ಟು ಜಾಜ್ವಲ್ಯಮಾನವಾಗಿ ಪ್ರಕಾಶಿಸತೊಡಗಿತು. ಇವುಗಳಲ್ಲಿ ಮೊದಲನೆಯ ಪಿಂಡರೂಪವಾದ ತೇಜೋರಾಶಿಯೇ ಸ್ವರ್ಗದಲ್ಲಿ (ಆಕಾಶದಲ್ಲಿ) ಕಾಣುವ ಆದಿತ್ಯನಾಯಿತು. ಎರಡನೆಯ ಪಿಂಡವು ಭೃಗುಋಷಿಯಾಯಿತು. ಈ ಭೃಗುವನ್ನು ವರುಣನು ತನ್ನ ಪುತ್ರನನ್ನಾಗಿ ಸ್ವೀಕರಿಸಿದನು. ಆದ್ದರಿಂದ ಭೃಗುಋಷಿಗೆ **ಭೃಗುರ್ವಾರುಣಿಃ** ವರುಣಪುತ್ರನಾದ ಭೃಗುಋಷಿ ಎಂದು ಹೆಸರಾಯಿತು. ವರುಣನ ಮಗನಾದ್ದರಿಂದ ವಾರುಣಿಯೆಂದೂ ಹೇಳುವರು. ಇದನ್ನೇ ಗಮನದಲ್ಲಿಟ್ಟುಕೊಂಡು ತೈತ್ತಿರೀಯ ಶಾಖಾಧ್ಯಾಯಿಗಳು — **ಭೃಗುರ್ವೈ-ವಾರುಣಿಃ । ವರುಣಂ ಪಿತರಮುಪಸಸಾರ** (ತೈ. ಉ. ೩-೧) ಎಂದು ಪಠಿಸುವರು. ಅನಂತರ ಮೂರನೆಯ ಪಿಂಡವು ಅತಿಯಾಗಿ ಪ್ರಕಾಶಿಸುತ್ತಿದ್ದು ಅದಿತಿಪುತ್ರರಾಗಿ ಆದಿತ್ಯರು ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಆದಿತ್ಯ ಎಂದರೆ ಮಂಡಲವರ್ತಿಯಾದ ಸೂರ್ಯನು. ಇಲ್ಲಿ ಆದಿತ್ಯಾಃ ಎಂಬ ಶಬ್ದದಿಂದ ಅದಿತಿಪುತ್ರರಾದ ಇತರ ದೇವತೆಗಳು ಸೂಚಿತರಾಗಿರುವರು ಎಂದು ತಿಳಿಯಬೇಕು. ಅನಂತರ ಮತ್ತೆ ಕೆಲವು ಪಿಂಡಗಳು ಚೆನ್ನಾಗಿ ದಗ್ಧವಾಗಿ (ಉರಿದು) ಕೆಂಡಗಳಾದವು. ಆ ಕೆಂಡಗಳಿಂದ ಅಂಗಿರ ಎಂಬ ಋಷಿಗಳು ಉತ್ಪನ್ನರಾದರು. ಮತ್ತು ಇನ್ನೂ ಉರಿಯುತ್ತಲೇ ಇದ್ದು ಆರಿಹೋಗದಿದ್ದ ಎಂದರೆ ಮತ್ತೆಮತ್ತೆ ಪ್ರಕಾಶಮಾನವಾಗಿ ಉರಿಯತೊಡಗಿದ್ದ ಕೆಂಡಗಳಿಂದ ಬೃಹಸ್ಪತಿಯು ಉತ್ಪನ್ನನಾದನು.

**ಯಾನಿ ಪರಿಕ್ಷಾಣಾನ್ಯಾಸಂಸ್ತೇ ಕೃಷ್ಣಾಃ ಪಶವೋಽಭವನ್ಯಾ ಲೋಹಿನೀ ಮೃತ್ತಿಕಾ ತೇ ರೋಹಿತಾ ಅಥ ಯದ್ಭಸ್ಮಾಸೀತ್ತತ್ಪರುಷ್ಯಂ ವ್ಯಸರ್ಪದ್ಗೌರೋ ಗವಯ ಋಶ್ಯ ಉಷ್ಟ್ರೋ ಗರ್ದಭ ಇತಿ ಯೇ ಚೈತೇಽರುಣಾಃ ಪಶವಸ್ತೇ ಚ ।**

ಅಥ ಪಶುಸೃಷ್ಟಿಂ ದರ್ಶಯತಿ— ಅಂಗಾರೇಷು ಶಾಂತೇಷು ಯಾನಿ ಕೃಷ್ಣವರ್ಣಾನ್ಯಾರ್ಸ ಕಾಷ್ಠಾನಿ ತೇ ಕೃಷ್ಣವರ್ಣಾಃ ಪಶವೋಽಭವನ್ ॥ ಅಗ್ನಿದಾಹೇನ ಭೂಮೌ ಯಾ ಲೋಹಿನೀ ರಕ್ತವರ್ಣಾ ಮೃತ್ತಿಕಾ ತಿಷ್ಠತಿ ತೇ ರೋಹಿತಾ ರಕ್ತವರ್ಣಾಃ ಪಶವೋಽಭವನ್ ॥ ಅತ್ರಾಗ್ನಿಸ್ಥಾನೇ ಯದ್ಭಸ್ಮಾಸೀತ್ತತ್ಪರುಷ್ಯಂ ಪರುಷಶರೀರಜಾತಂ ಭೂತ್ವಾ ವ್ಯಸರ್ಪತ್ ॥ ವಿವಿಧಮರಣ್ಯಾದಾವಗಚ್ಛತ್ ॥ ಕಿಂ ತತ್ಪರುಷ್ಯಮಿತಿ ತದೇವೋಚ್ಯತೇ । ಗೌರೋ ಗವಯ ಋಶ್ಯ ಇತ್ಯೇತೇಽರಣ್ಯಮೃಗಾಃ । ಉಷ್ಟ್ರಗರ್ದಭೌ ಪ್ರಸಿದ್ಧೌ ॥ ಏವಮಾದಿಕಂ ಪರುಷಶರೀರಂ । ಯೇಽಪ್ಯೇತೇಽರುಣಾಃ ಪಶವಸ್ತೇ ಚ ವ್ಯಸರ್ಪನ್ ॥

ಅನಂತರ ಕೆಂಡಗಳು ಆರಿಹೋಗಿ ಅಂಗಾರ (ಇಜ್ಜಲು)ಗಳಾದಮೇಲೆ ಅವುಗಳು ಕಪ್ಪುಬಣ್ಣದ ಪಶುಗಳಾದವು. ಅಗ್ನಿಯು ಉರಿದಮೇಲೆ ತಳದಲ್ಲಿ ಇದ್ದ ಕೆಂಪಾದ ಮೃತ್ತಿಕೆಯು (ಮಣ್ಣು) ಕೆಂಪುಬಣ್ಣದ ಪಶುಗಳಾದವು. ಬೂದಿಯಿಂದ (ಭಸ್ಮ) ಪರುಷ್ಯಪಶುಗಳು ಎಂದರೆ ಗೌರ, ಗವಯ, ಋಷ್ಯ ಎಂಬ ಅರಣ್ಯಮೃಗಗಳೂ ಒಂಟೆ, ಕತ್ತೆ ಇವುಗಳೂ ಉತ್ಪನ್ನವಾದುವು ಇತ್ಯಾದಿ. ಈ ಉಪಾಖ್ಯಾನದಿಂದ ಅಂಗಿರಾ ಋಷಿಗಳ ಉತ್ಪತ್ತಿವಿಚಾರವೂ ಅಂಗಿರಾ ಋಷಿಗಳಿಗೂ ಅಗ್ನಿಗೂ ಇರುವ ಸಂಬಂಧವೂ, ಅಗ್ನಿಗೆ ಅಂಗಿರ ಎಂದು ಹೆಸರು ಬರಲು ಕಾರಣವೂ ಸಹ ವಿವೃತವಾಗಿರುವುದು.

**ತಾನ್ವಾ ಏಷ ದೇವೋಽಭ್ಯವದತ ಮಮ ವಾ ಇದಂ ಮಮ ವೈ ವಾಸ್ತುಹಮಿತಿ ತಮೇತಯರ್ಚಾ ನಿರವಾದಯಂತ ಯೈಷಾ ರೌದ್ರೀ ಶಸ್ಯತೇ ॥**

ಏವಮುಪಾಖ್ಯಾನೇನ ಆಗ್ನಿಮಾರುತಶಸ್ತ್ರಸ್ಯೋಪೋದ್ಘಾತಮಭಿಧಾಯ ತಸ್ಮಿಞ್ಶಸ್ತ್ರೇ ಶಂಸನೀಯಾಮೇಕಾಮೃಚಂ ವಿಧತ್ತೇ— ತಾನ್ವೈ ತಾನೇವ ಪಶೂನ್ಸರ್ವಾನಭಿಲಕ್ಷ್ಯೈಷ ರುದ್ರ ಇದಂ ಸರ್ವಂ ಮಮೈವೇತ್ಯಬ್ರವೀತ್ ॥ ತತ್ರೋಪಪತ್ತಿಂ ಚೋಕ್ತವಾನ್ ॥ ವಾಸ್ತುಹಂ ವಾಸ್ತೌ ಯಜ್ಞಭೂಮೌ ಹೀನಂ ಯದ್ದ್ರವ್ಯಮಸ್ತಿ ತತ್ಸರ್ವಂ ಮಮೇತಿ ಶ್ರುತ್ಯಂತರೇಽಪಿ ಪ್ರಸಿದ್ಧಂ ॥ ತಥಾ ಚ ತೈತ್ತರೀಯಾ ರುದ್ರವಾಕ್ಯಮಾಮನಂತಿ—' ಯದ್ಯಜ್ಞವಾಸ್ತೌ ಹೀಯತೇ ಮಮ ವೈ ತತ್ " ॥ ಇತಿ ॥ ತಂ ರುದ್ರಂ ಸರ್ವಾನ್ಪಶೂನಭಿಗಚ್ಛಂತಮೇತಯಾ ವಕ್ಷ್ಯಮಾಣಯರ್ಚಾ ನಿರವಾದಯಂತ ನಿರಪೇಕ್ಷಮಕುರ್ವತ ॥ ತಯಾ ತುಷ್ಟೋ ರುದ್ರಃ ಪಶ್ವಪೇಕ್ಷಾಂ ಪರಿತ್ಯಜತಿ ಸ್ಮ ॥ ಕಾ ಸರ್ಗಿತಿ ಸೋಚ್ಯತೇ ॥ ಯೈಷಾ ರೌದ್ರೀ ರುದ್ರದೇವತಾಕಾ ಶಸ್ಯತೇ ಸಾಽವಗಂತವ್ಯಾ ॥

ಈರೀತಿ ಇದುವರೆಗೆ ಹೇಳಿದ ಉಪಾಖ್ಯಾನದಿಂದ ಅಗ್ನಿಮಾರುತಶಸ್ತ್ರದ ಉಪೋದ್ಘಾತವನ್ನು (ಪೀಠಿಕಾ ರೂಪವಾದ ವಿಷಯವನ್ನು) ಹೇಳಿ ಈ ಶಸ್ತ್ರದಲ್ಲಿ ಪಠಿಸಬೇಕಾದ ಒಂದು ಋಕ್ಕನ್ನು ವಿವರಿಸುವರು— ಹಿಂದೆ ಹೇಳಿದ ಗೌರ, ಗವಯ ಮುಂತಾದ ಮೃಗಗಳನ್ನು ನೋಡಿ ರುದ್ರದೇವನು ಇಂತು ಹೇಳಿದನು. ಈ ಮೃಗಗಳೆಲ್ಲವೂ ನನಗೆ ಸೇರಬೇಕು. ಏಕೆಂದರೆ— ಯದ್ಯಜ್ಞವಾಸ್ತೌ ಹೀಯತೇ ಮಮ ವೈ ತತ್ (ತೈ. ಸಂ. ೩-೧-೯-೫) ಯಜ್ಞಭೂಮಿಯಲ್ಲಿ ಯಜ್ಞಮಾಡಿ ಮುಗಿದ ನಂತರ ಅಲ್ಲಿ ಉಳಿದಿರುವ ಸಮಸ್ತ ಪದಾರ್ಥಗಳೂ ನನಗೆ ಸೇರಬೇಕು. ಇದು ಶ್ರುತಿಪ್ರಸಿದ್ಧವು ಎಂದು ಹೇಳಿದನು. ಹೀಗೆಹೇಳಿ

ಅಲ್ಲಿದ್ದ ಪಶುಗಳನ್ನೆಲ್ಲಾ ತೆಗೆದುಕೊಂಡು ಹೋಗುತ್ತಿರುವ ರುದ್ರದೇವನನ್ನು ಸಮಾಧಾನಪಡಿಸುತ್ತಾ ದೇವತೆಗಳು ಮುಂದೆ ಹೇಳುವ ಋಕ್ಕನ್ನು ಪಠಿಸಿ ಅವನು ಆ ಪಶುಗಳನ್ನು ತೆಗೆದುಕೊಳ್ಳದೆ ಅಲ್ಲಿಯೇ ಬಿಟ್ಟುಹೋಗುವಂತೆ ಮಾಡಿದರು. ಈ ವಿಧವಾದ ಸಮಾಧಾನದಿಂದ ರುದ್ರದೇವನು ಸಂತುಷ್ಟನಾಗಿ ಪಶುಗಳನ್ನು ತೆಗೆದುಕೊಳ್ಳದೆ ಅಲ್ಲಿಯೇ ಬಿಟ್ಟುಹೋದನು. ದೇವತೆಗಳು ರುದ್ರದೇವನನ್ನು ಸಮಾಧಾನಪಡಿಸಿದ ಋಕ್ಕು ಯಾವುದೆಂದರೆ ಅದನ್ನು ವಿಶದಪಡಿಸುವರು. ಆ ಋಕ್ಕಿಗೆ **ರೌದ್ರೀ ಋಕ್** ಎಂದರೆ ರುದ್ರದೇವತಾಕವಾದ ಮಂತ್ರವು ಎಂದು ಹೇಳಲ್ಪಡುವುದು.

**ಆ ತೇ ಪಿತರ್ಮರುತಾಂ ಸುಮ್ನಮೇತು ಮಾ ನಃ ಸೂರ್ಯಸ್ಯ ಸಂದೃಶೋ ಯುಯೋಥಾಃ । ತ್ವಂ ನೋ ವೀರೋ ಅರ್ವತಿ ಕ್ಷಮೇಥಾಃ ಇತಿ ಬ್ರೂಯಾನ್ನಾಭಿ ನ ಇತ್ಯನಭಿಮಾನುಕೋ ಹ್ಯೆಷ ದೇವಃ ಪ್ರಜಾ ಭವತಿ । ಪ್ರಜಾಯೇಮಹಿ ರುದ್ರಿಯ ಪ್ರಜಾಭಿರಿತಿ ಬ್ರೂಯಾನ್ನ ರುದ್ರೇತ್ಯೇತಸ್ಯೈವ ನಾಮ್ನಃ ಪರಿಹೃತ್ಯೈ ।**

ತಸ್ಯಾ ಋಚಃ ಪಾದತ್ರಯಂ ಪಠತಿ—ಮರುತಾಂ ದೇವಾನಾಂ ಪಿತರ್ಹೇ ರುದ್ರ ತೇ ತವ ಸುಮ್ನಂ ಸುಖಮೈತ್ವಾಗಚ್ಛತು । ನೋಽಸ್ಮಾನ್ಸೂರ್ಯಸ್ಯ ಸಂದೃಶಃ ಸೂರ್ಯಾವಲೋಕನಾನ್ಮಾ ಯುಯೋಥಾ ಮಾ ವಿಯೋಜಯ ದೃಷ್ಟಿಯುಕ್ತಾನ್ಕುರ್ವಿತ್ಯರ್ಥಃ । ಕಿಂಚ ಹೇ ರುದ್ರ ವೀರಸ್ತ್ವಂ ನೋಽಸ್ಮಾಕಮರ್ವತಿ ಪಶ್ವಾದಿವಸ್ತುನಿ ಕ್ಷಮೇಥಾಃ ಸಹಿಷ್ಣುರ್ಭವ॥ ಅಸ್ಮದೀಯಾನ್ಪಶ್ವಾದಿವಸ್ತೂನಿ ಮಾ ವಿವಾಸಯೇತ್ಯರ್ಥಃ ॥ ತೃತೀಯಪಾದಸ್ಯ ತ್ವಂ ನೋ ವೀರ ಇತ್ಯತ್ರತ್ಯಃ ಪಾಠಃ । ಅಭಿ ನೋ ವೀರ ಇತಿ ಶಾಖಾಂತರಪಾಠಸ್ತಯೋರ್ಮಧ್ಯೇ ಸ್ವಪಾಠಂ ವಿಧಾಯ ಶಾಖಾಂತರಪಾಠಂ ನಿಷೇಧತಿ—ಇತ್ಯನೇನ ಪೂರ್ವೋಕ್ತೇನ ಪ್ರಕಾರೇಣ ತ್ವಂ ನೋ ವೀರ ಇತಿ ಪಾಠಮೇವ ಶಂಸನಕಾಲೇ ಬ್ರೂಯಾನ್ನಾಭಿ ನ ಇತಿ ಪಾಠಂ ಬ್ರೂಯಾತ್ ॥ ತ್ವಂ ನೋ ವೀರ ಇತಿ ಪಾಠೇ ಸತ್ಯೇಷ ದೇವಃ ಪ್ರಜಾ ಅನಭಿಮಾನುಕೋ ಭವತಿ ॥ ಅಭಿಮಾನುಕೋಽಭಿ ನ ಇತಿ ಪಾಠಾಂತರೇಭಿಶಬ್ದಸ್ಯ ವಿದ್ಯಮಾನತ್ವಾತ್ಪುತ್ರಾದಿಕಾಃ ಪ್ರಜಾ ಅಭಿಲಕ್ಷ್ಯ ತಾಃ ಶ್ರಯಿಷ್ಯಾಮೀತಿ ರುದ್ರೋ ಮನುತೇ । ತ್ವಂ ನ ಇತಿ ಪಾಠೇ ತು ನ ತಥೇತ್ಯರ್ಥಃ ॥ ಚತುರ್ಥಪಾದೇಽಪಿ ಸ್ವಾಭಿಮತಪಾಠವಿಧಿಪೂರ್ವಕಂ ಪಾಠಾಂತರಂ ವಿಧತ್ತೇ—ಹೇ ರುದ್ರಿಯ ರುದ್ರಸಂಬಂಧಿಭೃತ್ಯ ತ್ವದನುಜ್ಞಯಾ ವಯಂ ಪ್ರಜಾಭಿಃ ಪ್ರಜಾಯೇಮಹಿ ಪುತ್ರಪೌತ್ರಾದಿರೂಪೇಣೋತ್ಪದ್ಯೇಮಹಿ। ಅಸ್ಮಿನ್ಪಾದೇ ರುದ್ರಿಯೇತ್ಯೇತಮೇವ ಪಾಠಂ ಬ್ರೂಯಾನ್ನ ತು ರುದ್ರೇತಿ ಪಾಠಂ ॥ ಏತಸ್ಯೈವರುದ್ರನಾಮ್ನ ಉಗ್ರಸ್ಯ ಪರಿಹಾರಾಯ ರುದ್ರಿಯೇತಿಪಾಠಾದರಃ ।

ಈ ಋಕ್ಕಿನ ನಾಲ್ಕು ಪಾದಗಳನ್ನೂ ಇಲ್ಲಿ ವಿವರಿಸುವರು. ಈ ಋಕ್ಕು ಯಾವುದೆಂದರೆ—

**ಆ ತೇ ಪಿತರ್ಮರುತಾಂ ಸುಮ್ನಮೇತು ಮಾನಃ ಸೂರ್ಯಸ್ಯ ಸಂದೃಶೋ ಯುಯೋಥಾಃ ।**
**ತ್ವಂ ನೋ ವೀರೋ ಅರ್ವತಿ ಕ್ಷಮೇಥಾಃ ಪ್ರಜಾಯೇಮಹಿ ರುದ್ರಿಯ ಪ್ರಜಾಭಿಃ ॥**

(ಋ. ಸಂ. ೨-೩೩-೧)

ಋಗ್ವೇದಸಂಹಿತೆಯಲ್ಲಿ ಈ ಋಕ್ಕಿನ ತೃತೀಯ ಪಾದವು **ಅಭಿ ನೋ** ಎಂದಿರುವುದು ಮತ್ತು ನಾಲ್ಕನೆಯ ಪಾದದಲ್ಲಿ **ರುದ್ರಿಯ** ಎಂಬ ಪದಕ್ಕೆ ಬದಲಾಗಿ ರುದ್ರ ಎಂಬ ಪದವಿರುವುದು. ಆದರೆ ಈ ವ್ಯತ್ಯಾಸವು ಅವಶ್ಯವೆಂದು ಗ್ರಂಥಕಾರರು ಹೇಳಿ ಅದರಂತೆ ಅರ್ಥವಿವರಣೆಮಾಡಿರುವರು. ಅದನ್ನೇ ಇಲ್ಲಿ ಅನುಸರಿಸಲಾಗಿದೆ—ಎಲೈ ಮರುದ್ದೇವತೆಗಳಿಗೆ ತಂದೆಯಾದ ರುದ್ರ ದೇವನೇ, ನಿನಗೆ ಸುಖವುಂಟಾಗಲಿ ನಮಗೆ ಯಾವಾಗಲೂ ಸೂರ್ಯನನ್ನು ನೋಡುತ್ತಿರುವಂತೆ (ಅಂದರೆ ಜೀವಿಸುತ್ತಿರುವಂತೆ) ಅನುಗ್ರಹಿಸು. ನೀನು ನಮಗೆ ಮೃತ್ಯುಪ್ರಾಯನಾಗದಿರು ಎಂದು ಮೂರುಪಾದಗಳ ಅರ್ಥವು. ಋಗ್ವೇದಸಂಹಿತೆಯಲ್ಲಿ **ಅಭಿ ನೋ** ಎಂದಿರುವುದನ್ನು ಇಲ್ಲಿ ಪಠಿಸಕೂಡದೆಂದೂ **ತ್ವಂ ನಃ** ಎಂತಲೇ ಪಠಿಸಬೇಕೆಂತಲೂ ಗ್ರಂಥಕಾರರು ಸ್ಪಷ್ಟಪಡಿಸಿದ್ದಾರೆ. ಇನ್ನು ನಾಲ್ಕನೆಯ ಪಾದದ ಅರ್ಥವು ಹೀಗಿರುವುದು. ಈ ಪಾದದಲ್ಲಿ **ರುದ್ರ** ಎಂಬ ಶಬ್ದಕ್ಕೆ ಬದಲಾಗಿ **ರುದ್ರಿಯ** ಎಂಬ ಶಬ್ದವನ್ನು ಪಠಿಸಬೇಕೆಂದು ಹೇಳಲಾಗಿದೆ. ಏಕೆಂದರೆ ಇಲ್ಲಿ ರುದ್ರನನ್ನೇ ಪ್ರಾರ್ಥಿಸುವುದಕ್ಕೆ ಬದಲಾಗಿ ರುದ್ರನ ಸಂಬಂಧವಾದ **ಭೂತವಾನ್** ಎಂಬ ವ್ಯಕ್ತಿಯನ್ನು ಪ್ರಾರ್ಥಿಸಲಾಗಿದೆ. ಆದ್ದರಿಂದ ಎಲೈ ರುದ್ರಸಂಬಂಧಿಯಾದ ಭೂತವಾನ್ ಎಂಬ ಪುರುಷನೇ, ನಾವು ಪುತ್ರಾದಿ ಪ್ರಜಾಸಂತತಿಗಳನ್ನು ಉತ್ಪಾದನೆಮಾಡುವಂತಾಗಲಿ ಎಂದು ಈ ನಾಲ್ಕನೆಯ ಪಾದದ ಅರ್ಥವು. ಇಲ್ಲಿ ರುದ್ರದೇವನ ಉಗ್ರತೆ (ಕ್ರೂರತ್ವ)ವನ್ನು ಶಮನಗೊಳಿಸುವುದಕ್ಕಾಗಿ ರುದ್ರಶಬ್ದಕ್ಕೆ ಬದಲಾಗಿ ಆ ದೇವನ ಸಂಬಂಧಿಯಾದ ವ್ಯಕ್ತಿವಿಶೇಷವನ್ನು **ರುದ್ರಿಯ** ಎಂಬ ಶಬ್ದದಿಂದ ಸಂಬೋಧಿಸಲಾಗಿದೆ.

**ತದು ಖಲು ಶಂ ನಃ ಕರತೀತ್ಯೇವ ಶಂಸೇಚ್ಛಮಿತಿ ಪ್ರತಿಪದ್ಯತೇ ಸರ್ವಸ್ಮಾ ಏವ ಶಾಂತ್ಯೈ ನೃಭ್ಯೋ ನಾರಿಭ್ಯೋ ಗವ ಇತಿ ಪುಮಾಂಸೋ ವೈ ನರಃ ಸ್ತ್ರಿಯೋ ನಾರ್ಯಃ ಸರ್ವಸ್ಮಾ ಏವ ಶಾಂತ್ಯೈ ॥**

ಆ ತೇ ಪಿತರಿತ್ಯಸ್ಯಾ ಋಚಃ ಸ್ಥಾನೇ ಕಾಂಚಿದನ್ಯಾಮೃಚಂ ವಿಧತ್ತೇ—ತದು ಖಲು ತತ್ರೈವ ಪೂರ್ವಾಮೃಚಂ ಪರಿತ್ಯಜ್ಯ ತಸ್ಯಾ ಏವ ಸ್ಥಾನೇ ಶಂ ನಃ ಕರತ್ಯರ್ವತ ಇತ್ಯೇತಾಮೃಚಂ ಶಂಸೇತ್ ॥ ತಥಾ ಸತಿ ಕೋ ಲಾಭ ಇತಿ ತದುಚ್ಯತೇ ॥ ತಸ್ಯಾ ಋಚ ಆದೌ ಯಚ್ಛಮಿತ್ಯನೇನ ಪದೇನ ಪ್ರತಿಪದ್ಯತೇ ಪ್ರಾರಂಭಃ ಕ್ರಿಯತೇ ತಸ್ಯ ಪದಸ್ಯ ಶಾಂತಿವಾಚಕತ್ವಾತ್ಸರ್ವಸ್ಮೈ ಸರ್ವಸ್ಯಾಪಿ ಸ್ವಕೀಯಸ್ಯ ವಸ್ತುನಃ ಶಾಂತಿರ್ಭವತಿ। ಸರ್ವಸ್ಮಾ ಇತ್ಯಸ್ಯ ವ್ಯಾಖ್ಯಾನಂ ನೃಭ್ಯ ಇತ್ಯಾದಿ। ತಸ್ಯಾಪಿ ವ್ಯಾಖ್ಯಾನಂ ಪುಮಾಂಸ ಇತ್ಯಾದಿ ಸರ್ವಸ್ಮಾ ಏವ ಶಾಂತ್ಯಾ ಇತ್ಯುಪಸಂಹಾರಃ ॥

ಹಿಂದೆ ಹೇಳಿದ **ಆ ತೇ ಪಿತಃ** ಎಂಬ ಋಕ್ಕಿಗೆ ಬದಲಾಗಿ ಬೇರೊಂದು ಋಕ್ಕನ್ನು ಹೇಳಿ ಸ್ತುತಿಸಬಹುದೆಂದು ವಿವರಿಸುತ್ತಾರೆ—**ಶಂ ನಃ ಕರತ್ಯರ್ವತೇ ಸುಗಂ ಮೇಷಾಯ ಮೇಷ್ಯೇ । ನೃಭ್ಯೋ ನಾರಿಭ್ಯೋ ಗವೇ ॥** (ಋ. ಸಂ, ೧-೪೩-೬) ಎಂಬುದೇ ಆ ಮಂತ್ರವು. ಹಿಂದೆ ಹೇಳಿದ **ಆ ತೇ ಪಿತಃ** ಎಂಬ ಋಕ್ಕನ್ನು ಬಿಟ್ಟು ಅದರ ಸ್ಥಾನದಲ್ಲಿ **ಶಂ ನಃ ಕರತ್ಯರ್ವತೇ** ಎಂಬ ಋಕ್ಕನ್ನು ಹೇಳಬಹುದು. ಈ ಋಕ್ಕಿನ ಪ್ರಾರಂಭದಲ್ಲಿ **ಶಂ ನಃ** ಎಂಬ ಪದಗಳಿರುವವು. ಇವು ನಮಗೆ ಶಾಂತಿಯನ್ನು ಅಥವಾ ಸುಖವನ್ನುಂಟುಮಾಡಲಿ ಎಂಬರ್ಥವನ್ನು ಸೂಚಿಸುವವು. ಇಲ್ಲಿ **ನಃ** ನಮಗೆ ಎಂಬ ಪದದ ಅರ್ಥವು ಈ ಋಕ್ಕಿನ ಉತ್ತರಾರ್ಧದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿರುವುದು. ಅಲ್ಲಿರುವ ಶಬ್ದಗಳಿಗೆ ಎಂದರೆ **ನೃಭ್ಯಃ**-ಪುರುಷರಿಗೂ, **ನಾರಿಭ್ಯಃ**—ಸ್ತ್ರೀಯರಿಗೂ, **ಗವೇ**-ಗೋವು ಮುಂತಾದ ನಮ್ಮ ಪಶುಗಳಿಗೂ ಎಂದರೆ ಎಲ್ಲರಿಗೂ ಸುಖವನ್ನುಂಟುಮಾಡಲಿ ಎಂಬಭಿಪ್ರಾಯವು ಸೂಚಿತವಾಗಿರುವುದು.

## ಸೋಽನಿರುಕ್ತಾ ರೌದ್ರೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ ।

**ಪ್ರಕಾರಾಂತರೇಣ ತಾಮೃಚಂ ಪ್ರಶಂಸತಿ—ಸೋ ಸಾಽಸ್ಯೃಗನಿರುಕ್ತಾ ರುದ್ರವಾಚಕ ಪದಾಭಾವಾದಸ್ಪಷ್ಟದೇವತಾಕಾಽತ ಏವ ರೌದ್ರೀ ರುದ್ರ ದೇವತಾಕಾ ಸತ್ಯಪಿ ಘೋರಾರ್ಥವಾಚಕರುದ್ರಪದಾಭಾವಾದಿಯಂ ಶಾಂತಾ ತಾಂ ಶಂಸೇದ್ಧೋತಾ ಸರ್ವಾಯುರ್ಭವತಿ । ತಚ್ಚ-ಯುಜಮಾನಸ್ಯ ಸರ್ವಾಯುತ್ವಾಯ ಸಂಪದ್ಯತೇ ।**

ಮೇಲೆ ಹೇಳಿದ **ಶಂ ನಃ** ಎಂಬ ಋಕ್ಕನ್ನು ಪ್ರಕಾರಾಂತರವಾಗಿ ಪ್ರಶಂಸೆಮಾಡುವರು. ಈ ಋಕ್ಕನ್ನು ಈ ಸಂದರ್ಭದಲ್ಲಿ ಪಠಿಸಬೇಕೆಂದು ಹೇಳಿಲ್ಲವಾದರೂ ಈ ಋಕ್ಕು ಸಂದರ್ಭೋಚಿತವಾಗಿರುವುದು. ಹೇಗೆಂದರೆ—ಈ ಋಕ್ಕಿನಲ್ಲಿ ರುದ್ರನೆಂಬ ದೇವತಾವಾಚಕವಾದ ಪದಪ್ರಯೋಗವಿಲ್ಲದಿದ್ದರೂ ಈ ಋಕ್ಕಿಗೆ ರುದ್ರನೇ ದೇವತೆಯೆಂದು ನಿಶ್ಚಯಿಸಲ್ಪಟ್ಟಿರುವುದು. ಮತ್ತು ಈ ಋಕ್ಕಿನಲ್ಲಿ ರುದ್ರದೇವತೆಯ ಉಗ್ರಸ್ವರೂಪವು ವ್ಯಕ್ತವಾಗಿಲ್ಲ ಮತ್ತು ಶಾಂತಿಯನ್ನೂ ಸುಖವನ್ನೂ ಎಲ್ಲರಿಗೂ ಉಂಟುಮಾಡಬೇಕೆಂಬ ಪ್ರಾರ್ಥನೆಯೂ ಇರುವುದರಿಂದ ಈ ಋಕ್ಕು ಈ ಸಂದರ್ಭಕ್ಕೆ ಅನುಸಾರವಾಗಿರುವುದರಿಂದ ಹೋತೃವು ಈ ಋಕ್ಕನ್ನು ಇಲ್ಲಿ ಪಠಿಸಬೇಕು. ಇದರಿಂದ ಯಜಮಾನನಿಗೆ ಆಯುರ್ವೃದ್ಧಿಯುಂಟಾಗುವುದು.

## ಸರ್ವಮಾಯುರೇತಿ ಯ ಏವಂ ವೇದ ಸೋ ಗಾಯತ್ರೀ ಬ್ರಹ್ಮ ವೈ ಗಾಯತ್ರೀ ಬ್ರಹ್ಮಣೈವೈನಂ ತಂ ನಮಸ್ಯತಿ ।

**ವೇದನಂ ಪ್ರಶಂಸತಿ—ಪುನರಪಿ ಪ್ರಕಾರಾಂತರೇಣ ಪ್ರಶಂಸತಿ । ಸೋ ಸಾ ಚ ಋಗ್ಗಾಯತ್ರೀಚ್ಛಂದಸ್ಕಾ । ಗಾಯತ್ರೀ ಚ ಬ್ರಹ್ಮ ಬ್ರಾಹ್ಮಣಜಾತಿರೇವ ॥ ಉಭಯೋಃ ಪ್ರಜಾಪತಿಮುಖಜತ್ವಾತ್ ॥ ಅತೋ ಬ್ರಹ್ಮಣೈವ ಬ್ರಾಹ್ಮಣೇನೈವೈನಂ ರುದ್ರಂ ನಮಸ್ಕರೋತಿ ॥**

ಪ್ರಕಾರಾಂತರವಾಗಿ ಈ ಋಕ್ಕನ್ನು ಪ್ರಶಂಸೆಮಾಡುವರು. ಈ ಋಕ್ಕನ್ನು ಪಠಿಸುವುದರಿಂದ ಯಜಮಾನನ ಆಯುರ್ವೃದ್ಧಿಯುಂಟಾಗುವುದು. ಈ ವಿಷಯವನ್ನು ತಿಳಿದಿರುವ ಪುರುಷನಿಗೂ ಆಯುರ್ವೃದ್ಧಿಯುಂಟಾಗುವುದು. ಏಕೆಂದರೆ **ಶಂ ನಃ** ಎಂಬ ಈ ಋಕ್ಕು ಗಾಯತ್ರೀಛಂದಸ್ಕವು. ಗಾಯತ್ರೀಛಂದಸ್ಸು ಬ್ರಹ್ಮಸ್ವರೂಪವು. ಗಾಯತ್ರಿಯು ಮತ್ತು ಬ್ರಾಹ್ಮಣವರ್ಣವು ಪ್ರಜಾಪತಿಯ ಮುಖದಿಂದ ಉತ್ಪನ್ನವಾದುದೆಂದು ಶ್ರುತಿಯಲ್ಲಿ ಅನೇಕಕಡೆ ಹೇಳಿದೆ. ಇಂತಹ ಗಾಯತ್ರೀಛಂದಸ್ಸಿನ ಋಕ್ಕಿನಿಂದ ಸ್ತುತಿಸುವುದರಿಂದ ಬ್ರಹ್ಮನನ್ನು ಅಥವಾ ಬ್ರಾಹ್ಮಣನಿಂದ ರುದ್ರದೇವನನ್ನು ಸ್ತುತಿಸಿದಂತಾಗಿ ಆ ಪ್ರಜಾಪತಿಸ್ವರೂಪನಾದ ಬ್ರಹ್ಮನು ಯಜಮಾನನಿಗೂ ಇತರರಿಗೂ ಆಯುರ್ವೃದ್ಧಿಯನ್ನುಂಟುಮಾಡುವನು ಎಂದಭಿಪ್ರಾಯವು. ಈ ಋಕ್ಕಿನ ಅರ್ಥವು—

ಮರುತ್ತುಗಳಿಗೆ ಪಿತೃವಾದ ಎಲೈ ರುದ್ರನೇ, ನಿನ್ನಿಂದ ಲಭಿಸಬೇಕಾದ ಸುಖವು ನಮಗೆ ಬಂದು ಸೇರಲಿ. ನಮ್ಮನ್ನು ಸೂರ್ಯನ ಸಂದರ್ಶನದಿಂದ ಬೇರೆಮಾಡಿ ನಮ್ಮನ್ನು ಕತ್ತಲಿನಲ್ಲಿರಿಸಬೇಡ. ನಮ್ಮ ವೀರ್ಯವಂತನಾದ ಪುತ್ರನು ಶತ್ರುವಿನೊಡನೆ ಹೋರಾಡಿ ಅವನನ್ನು ಸೋಲಿಸುವ ಸಾಮರ್ಥ್ಯವನ್ನು ಪಡೆಯಲಿ. ಎಲೈ ರುದ್ರನೇ, ಪುತ್ರಪೌತ್ರಾದಿಗಳಿಂದ ನಮ್ಮ ವಂಶವು ಅಭಿವೃದ್ಧಿಯನ್ನು ಹೊಂದುವಂತೆ ಮಾಡು.

**ರುದ್ರ**—ಸಾಯಣರು ರುದ್ರಶಬ್ದಕ್ಕೆ ಆರುವಿಧವಾಗಿ ಅರ್ಥವನ್ನು ವಿವರಿಸಿರುವರು. ರುದ್ರಶಬ್ದವು ರುದ್ ಧಾತುವಿನಿಂದ ಣಿಜಂತದಲ್ಲಿ ನಿಷ್ಪನ್ನವಾಗಿರುವುದು. ಯಾಸ್ಕರು—**ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ**

**ರೋದಯತೇರ್ವಾ** । ರುದ್ರನೆಂದರೆ **ರೌತಿ-ಸ್ತನಯಿತ್ನು ಶಬ್ದಂ ಕರೋತಿ ಇತಿ ರುದ್ರಃ** ಮೇಘದ ಗುಡುಗಿನ ಹಾಗೆ ಧ್ವನಿಮಾಡುವವನು, **ರೋರೂಯಮಾಣೋ ದ್ರವತಿ** ಶಬ್ದವನ್ನು ಮಾಡುತ್ತಾ ಮೇಘದ ಮಧ್ಯದಲ್ಲಿ ಓಡುವವನು. **ರೋದಯತೇರ್ವಾ** ಶತ್ರುಗಳನ್ನು ಪರಾಭವಗೊಳಿಸಿ ಅವರು ಅಳುವಂತೆ ಮಾಡುವವನು ಎಂದು ಅರ್ಥವನ್ನು ವಿವರಿಸುವರು. ಮತ್ತು **ಯದರುದತ್ ತದ್ರುದ್ರಸ್ಯ** ಇವನು ತನ್ನ ತಂದೆಯಾದ ಪ್ರಜಾಪತಿಗೆ ಬಾಣಗಳಿಂದ ಪೆಟ್ಟುಗಳು ಬಿದ್ದಾಗ ಅವನನ್ನು ನೋಡಿ ವ್ಯಸನಪಟ್ಟು ಅತ್ತನು ಎಂದು **ಕಠೋಪನಿಷತ್ತಿನಲ್ಲಿ** ಪ್ರಸಿದ್ಧವಾದ ಇತಿಹಾಸವನ್ನು ಅನುಸರಿಸಿಯೂ ಅಥವಾ **ಮೈತ್ರಾಯಣೀಯಶಾಖಾ** ಮತ್ತು ತೈತ್ತಿರೀಯಶಾಖಾವಾಕ್ಯವನ್ನು ಅನುಸರಿಸಿಯೂ **ಯದರೋದೀತ್ ತದ್ರುದ್ರಸ್ಯ ರುದ್ರತ್ವಮ್** ಇವನು (ಅತ್ತ ಕಾರಣ) ರೋದನಮಾಡಿದ ಕಾರಣ ಇವನಿಗೆ ರುದ್ರನೆಂಬ ಹೆಸರು ಎಂದು (ನಿ. ೧೦-೫) ರುದ್ರ ಶಬ್ದಾರ್ಥ ನಿರ್ವಚನವನ್ನು ಮಾಡಿರುವರು. ಸಾಯಣರು ರುದ್ರಶಬ್ದಕ್ಕೆ ಅರ್ಥವನ್ನು ಹೇಳಿರುವುದು ಇದಕ್ಕಿಂತಲೂ ಬೇರೆ ವಿಧವಾಗಿರುವುದು. ಪ್ರಳಯಕಾಲದಲ್ಲಿ ಎಲ್ಲರೂ ಅಳುವಂತೆ ಮಾಡುವುದರಿಂದಲೂ ಅಥವಾ ಸಂಸಾರವೆಂಬ ದುಃಖವನ್ನು ನಾಶ ಮಾಡುವುದರಿಂದಲೂ ಅಥವಾ ಶಬ್ದರೂಪವಾದ ಉಪನಿಷತ್ತುಗಳಿಂದ ಪ್ರತಿಪಾದ್ಯನಾಗಿರುವುದರಿಂದಲೂ ಅಥವಾ ಆತ್ಮವಿದ್ಯೆಯನ್ನು ಆತ್ಮವಿದ್ಯೋಪಾಸಕರಿಗೆ ಉಪದೇಶಮಾಡುವುದರಿಂದಲೂ ಅಥವಾ ಪ್ರಕಾಶವನ್ನು ಆವರಿಸುವ ಕಗ್ಗತ್ತಲೆಯಂತೆ ಜ್ಞಾನವನ್ನು ಆವರಿಸುವ ಅಜ್ಞಾನವನ್ನು ನಾಶಮಾಡುವುದರಿಂದಲೂ, ರುದ್ರನಾಗಿರುವವನು ಎಂದು ರುತ್ ಶಬ್ದದ ಅರ್ಥದಿಂದ ಉಂಟಾಗುವ ಅರ್ಥಭೇದಪ್ರದರ್ಶನಪೂರ್ವಕವಾಗಿ ರುದ್ರಶಬ್ದದ ಅರ್ಥವನ್ನು ವಿವರಿಸುವರು.

ಮತ್ತು ಐತಿಹಾಸಿಕಮತದಲ್ಲಿ ನಿರ್ದಿಷ್ಟವಾಗಿರುವ ಇತಿಹಾಸಕ್ಕನುಗುಣವಾಗಿ ರುದಿರ್ ಅಶ್ರುವಿಮೋಚನೇ ಎಂಬ ಧಾತುವಿನಿಂದ ಉಂಟಾದ ರುದ್ರಶಬ್ದದ ಅರ್ಥವನ್ನು **ಸೋಽರೋದಿದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ** (ತೈ. ಸಂ. ೧-೫-೧-೧) ಎಂಬ ಶ್ರುತಿವಚನೋಪನ್ಯಾಸಪೂರ್ವಕವಾಗಿ ವಿವರಿಸಿರುವರು. ಇದರಿಂದ ರುದ್ರನ ಮಹಿಮೆಯೂ, ರುದ್ರನಿಗೆ ಪ್ರಾಣಿಗಳ ವಿಷಯದಲ್ಲಿ ಇರುವ ಕಾರುಣ್ಯವೂ ವ್ಯಕ್ತವಾಗುತ್ತದೆ.

**ಮರುತಾಂ ಪಿತಃ ರುದ್ರ ತೇ ಸುಮ್ನಂ ಆ ಏತು – ಮರುತ್ಸಂಜ್ಞಾನಾಂ ದೇವಾನಾಮುತ್ಪಾದಕ ರುದ್ರ ತ್ವದೀಯಮಸ್ಮಭ್ಯಂ ದಾತವ್ಯಂ ಸುಖಂ ಆಗಚ್ಛತು** । ಯಾಸ್ಕರು ಮರುತಃ ಎಂಬ ಪದಕ್ಕೆ **ಮಿತರಾವಿಣೋ ಮಿತ-ರಾವಿಣೋ ವಾ, ಮಿತರೋಚಿನೋ ವಾ, ಮಹತ್ ದ್ರವಂತೀತಿ ವಾ** (ನಿ. ೧೧-೧೩) ಎಂದು ಅರ್ಥವನ್ನು ವಿವರಿಸಿದ್ದಾರೆ ಮತ್ತು ರುದ್ರ ಶಬ್ದವನ್ನು ಸ್ತೋತೃ ನಾಮಗಳಲ್ಲಿ (ನಿ. ೩-೧೯) ಪಾಠಮಾಡಿ, **ರುದ್ರೋ ರೌತೀತಿ ಸತಃ ರೋರೂಯಮಾಣೋ ದ್ರವತೀತಿ ವಾ; ರೋದಯತೇರ್ವಾ,** ಎಂದು ವ್ಯಾಖ್ಯಾನಮಾಡಿ, " **ಯದರುದತ್ ತದ್ರುದ್ರಸ್ಯ ರುದ್ರತ್ವಂ** " ಎಂದು ಕಾಠಕವಚನವನ್ನೂ " **ಯದರೋದೀತ್ ತದ್ರುದ್ರಸ್ಯ ರುದ್ರತ್ವಂ** " ಎಂಬ ಮೈತ್ರಾಯಣೀಯ ಶಾಖಾವಚನವನ್ನೂ (ನಿ. ೧೦-೫) ಉದಹರಿಸಿದ್ದಾರೆ. ಸಾಯಣರು ಮರುದ್ದೇವತೆಗಳು ರುದ್ರನ ಪುತ್ರರೆಂದು ವ್ಯಾಖ್ಯಾನಮಾಡಿ, **ರುದ್ರಸ್ಯ ಚ ಮರುತಾಂ ಪಿತೃತ್ವಂ " ಇದಂ ಪಿತ್ರೇ ಮರುತಾಂ "** (ಋ. ಸಂ. ೧-೧೧೪-೬) **ಇತ್ಯತ್ರ ಆಖ್ಯಾಯಿಕಾಮುಖೇನಾವಾದಿಷ್ಮ** । ಇದಂ ಪಿತ್ರೇ ಮರುತಾಂ ಎಂಬ ಸೂಕ್ತವನ್ನೂ ವಿವರಿಸುವಾಗ ರುದ್ರನು ಮರುದ್ದೇವತೆಗಳ ಜನಕನು ಎಂದು ಉಪಾಖ್ಯಾನವನ್ನು ವರ್ಣಿಸಿದ್ದಾರೆ. ಮರುದ್ದೇವತೆಗಳ ಜನಕನಾದ ರುದ್ರನು ಅನುಗ್ರಹಿಸುವ ಸುಖವು ಯಜಮಾನರಾದ ನಮಗೆ ಉಂಟಾಗಲಿ ಎಂದು ಆಶಿಸಿದೆ.

**ನಃ ಸೂರ್ಯಸ್ಯ ಸಂದೃಶಃ ಮಾ ಯುಯೋಥಾಃ—ಅಸ್ಮಾನ್ ಸೂರ್ಯಸ್ಯ ಸಂದರ್ಶನಾತ್ ಮಾ ಪೃಥಕ್ಕಾರ್ಷೀಃ** । ರುದ್ರದೇವನು ಯಜಮಾನರಾದ ನಮಗೆ ಸೂರ್ಯನ ಪ್ರಕಾಶವು ತಪ್ಪದಿರುವಂತೆ ನಮ್ಮನ್ನು ರಕ್ಷಿಸಲಿ ಎಂದೂ, **ನಃ ವೀರಃ ಅರ್ವತಿ ಅಭಿಕ್ಷಮೇತ**—ಯಜಮಾನರಾದ ನಮ್ಮ ಪುತ್ರರೇ ಮೊದಲಾದವರಿಗೆ ಶತ್ರುವನ್ನು ತಿರಸ್ಕರಿಸುವ

ಒಲವನ್ನು ರುದ್ರನು ಅನುಗ್ರಹಿಸಲಿ ಎಂದೂ ಅಥವಾ ಯದ್ವಾ ವೀರಸ್ತ್ವಂ ನೋ ಅಸ್ಮಾನಭಿಕ್ಷನ್ಮೇಥಾಃ ಅಸ್ಮಾನ್ ಕೃತಾಪರಾಧಾನಭಿಕ್ಷಮಸ್ವ ಶೂರನಾದ ರುದ್ರನು ಅಪರಾಧವನ್ನು ಆಚರಿಸುವ ನಮ್ಮ ಅಪರಾಧಗಳನ್ನು ಮನ್ನಿಸಲಿ ಎಂದೂ ಪ್ರಜಾಭಿಃ ಪ್ರಜಾಯೇಮಹಿ ಪುತ್ರಪೌತ್ರಾದಿಗಳಿಂದ ಯಜಮಾನರಾದ ನಾವು ವೃದ್ಧಿಯನ್ನು ಹೊಂದೋಣವೆಂದು ಆಶಂಸಿತವಾಗಿದೆ.

*English Translation*

**How different creatures originated from Prajapati's sperm. On the verse addressed to Rudra. Propitiation of Rudra.)**

The gods surrounded this sperm with Agni in order to make it flow; the Marutas agitated it; but Agni did not make it (the pool formed of Prajapati's sperm) move. They then surrounded it with Agni Vaisvanara; the Marutas agitated it; Agni Vaisvanara then made it move. That spark which first blazed up from Prajapati's sperm became that Aditya (the sun); the second which blazed up became Bhrigu. Varuna adopted him as his son. Thence Bhrigu is called Varuni, i.e. descendant of Varuna. The third which blazed up (adidedivata) became the Adityas (a class of gods). Those parts of Prajapati's seed after it was heated which were coals (angara) became the Angiras. Those coals whose fire was not extinguished, and which blazed up again, became Brihaspati. Those parts which remained as coal dust (parikshanani) became black animals, and the earth burnt red by the fire became red animals. The ashes which remained became a being full of links, which went in all directions (and sent forth a stag, buffalo, antelope, camel, ass and wild beasts.

This god the Bhutavan, addressed them (these animals). "This is mine; mine is what was left on the place." They make him resign his share by the verse which is addressed to Rudra: a te pita marutam (2, 33, 1) i.e. "may it please thee, father of the Marutas, not to cut us off from beholding the sun (i. e. from living); may'st thou, powerful hero (Rudra)! spare our cattle and children, that we, O master of the Rudras! might be propogated by our progeny."

The Hotar ought to repeat (in the third pada of the verse) tvam no viro and not abhi no viro (as is the reading of another Sakha). For if he do not repeat the words abhi nah i.e., towards us. Then this god (Rudra) does not entertain any designs against (abhi) our children and cattle (i.e. he does not kill them). In the fourth half verse he ought to use the word rudriya instead of rudra, for diminishing the terror (and danger) arising from (the pronunciation of) the real name Rudra.

(But should this verse appear to be too dangerous) the Hotar may omit it, and repeat (instead of it) only sam nah karati (1, 43, 6) i.e. "may he be propitiated and let our horses, rams and ewes, our males and females, and cows go on well." (By repeating this verse) he commences with the word sam, i.e. propitiated, which serves for general propitiation. Narah (in the verse mentioned) means males, and naryah females.

(That the latter verse and not the first one should be repeated, may be shown from another reason.) The deity is not mentioned with its name, though it is addressed to Rudra, and contains the propitiatory term sam. (This verse helps) to obtain the full term of life (100 years). He who has such a knowledge obtains the full term of his life. This verse (sam nah karati) is in the Gayatri metre. Gayatri is Brahma. By repeating that verse the Hotar worships him (Rudra) by means of Brahma (and averts consequently all evil consequences which arise from using a verse referring to Rudra).

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ದಶಮಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಹತ್ತನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ಏಕಾದಶಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು



[ವೈಶ್ವಾನರ ಮತ್ತು ಮಾರುತ ನಿವಿತ್ಸೂಕ್ತಗಳು ಮತ್ತು ಆಗ್ನಿಮಾರುತ ಶಸ್ತ್ರದ ಸ್ತೋತ್ರಿಯ ಮತ್ತು ಅನುರೂಪ ಮಂತ್ರಗಳು]



ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ವೈಶ್ವಾನರೋ ವಾ ಏತದ್ರೇತಃ ಸಿಕ್ತಂ ಪ್ರಾಚ್ಯಾವಯತ್ತಸ್ಮಾದ್ವೈಶ್ವಾನರೀಯೇಣಾ-ಗ್ನಿಮಾರುತಂ ಪ್ರತಿಪದ್ಯತೇ ।

**ಅಥ ವೈಶ್ವಾನರಾಯ ಪೃಥುಪಾಜಸೇ ವಿಪ ಇತ್ಯನೇನ ಸೂಕ್ತೇನಾಽಽಗ್ನಿಮಾರುತಶಸ್ತ್ರಸ್ಯ ಪ್ರಾರಂಭಂ ವಿಧತ್ತೇ—**

ಈಗ ವೈಶ್ವನರಾಯ ಪೃಥುಪಾಜಸೇ ಎಂದು ಪ್ರಾರಂಭವಾಗುವ ಸೂಕ್ತದಿಂದ ಅಗ್ನಿಮಾರುತಶಸ್ತ್ರವನ್ನು ಪಠಿಸಲು ಹೋತೃವು ಪ್ರಾರಂಭಮಾಡುವನು. ವೈಶ್ವಾನರ ಎಂಬುದು ಬೀಜರೂಪವಾಗಿರುವುದು. ಪ್ರಜೋತ್ಪಾದನೆಗೆ ಮೊದಲು ಬೀಜ ರೂಪವಾದ ರೇತಸ್ಸನ್ನು ಸ್ತ್ರೀಯೋನಿಯಲ್ಲಿ ಸೇಚನಮಾಡುವಂತೆ, ಅಗ್ನಿಮಾರುತಶಸ್ತ್ರವನ್ನು ಪ್ರಾರಂಭಿಸುವಾಗ ಮೊದಲು ಹೋತೃವು ವೈಶ್ವಾನರೀಯಸೂಕ್ತವನ್ನು ಪಠಿಸುವನು.

## ಅನವಾನಂ ಪ್ರಥಮು ಋಕ್ ಶಂಸ್ತವ್ಯಾಗ್ನೀನ್ವಾ ಏಷೋಽರ್ಚೀಂಷ್ಯಶಾಂತಾನ್ಪ್ರಸೀದನ್ನೇತಿ ಯ ಆಗ್ನಿಮಾರುತಂ ಶಂಸತಿ ಪ್ರಾಣೇನೈವ ತದಗ್ನೀಂಸ್ತರತಿ

**ರೇತಸಃ ಪ್ರಚ್ಯಾವನಂ ಕಾಲಿನ್ಯಾಪಾದನಂ । ತಸ್ಮಿನ್ವೈಶ್ವಾನರೀಯಸೂಕ್ತೇ ಕಂಚಿದ್ವಿಶೇಷಂ ವಿಧತ್ತೇ-ಅವಾನಶಬ್ದೇನೋಚ್ಛ್ವಾಸನಿಃಶ್ವಾಸಾವುಚ್ಯೇತೇ । ತೌ ಯಥಾ ನ ಭವತಸ್ತಥಾ ಪ್ರಥಮಾ ಋಕ್ಶಂಸ್ತವ್ಯಾ ॥ ತಥಾ ಸತಿ ಸರ್ವಾನಗ್ನೀನ್ಜ್ವಾಲಾರೂಪಾನಗ್ನೀನೇವೈಷ ಹೋತಾಽಶಾಂತಾನ್ಕೃತ್ವಾ ಪ್ರಸೀದನ್ಪ್ರಸಾದಂ ಕುರ್ವನ್ನೇತಿ ಗಚ್ಛತಿ । ಯಃ ಪುಮಾನಾಗ್ನಿಮಾರುತಂ ಶಸ್ತ್ರಂ ಶಂಸತಿ ತಸ್ಯ ಪ್ರಸಾದಹೇತುತ್ವಂ ಕಥಮಿತಿ ತದುಚ್ಯತೇ । ಉಚ್ಛ್ವಾಸನಿಃಶ್ವಾಸನಿರೋಧಾದನವಾನಂ ಶಂಸನ್ಪ್ರಾಣವಾಯುನೈವ ತಾನಗ್ನೀಂಸ್ತರತ್ಯುಲ್ಲಂಘಯತಿ, ಅಗ್ನಿಕೃತಮುಪದ್ರವಂ ಶಮಯತೀತ್ಯರ್ಥಃ ॥**

ಈ ವೈಶ್ವಾನರೀಯಸೂಕ್ತವನ್ನು ಪಠಿಸುವಾಗ ಒಂದು ವಿಶೇಷಕ್ರಮವಿರುವುದು. ಅದನ್ನು ವಿವರಿಸುವರು. ಉಚ್ಛ್ವಾಸ ನಿಃಶ್ವಾಸವನ್ನು ಘಟ್ಟಿಯಾಗಿ (ಶಬ್ದಪೂರ್ವಕವಾಗಿ) ಬಿಡುವುದಕ್ಕೆ ಅನವಾನಂ ಎಂದು ಹೆಸರು. ಹಾಗೆ ಆಗದಂತೆ ಎಂದರೆ ಎಲ್ಲರಿಗೂ ಕೇಳಿಸದಂತೆ ಮೆತ್ತಗೆ ಬಿಡುವ ಉಚ್ಛ್ವಾಸನಿಃಶ್ವಾಸಪೂರ್ವಕವಾಗಿ ಈ ವೈಶ್ವಾನರೀಯ ಮಂತ್ರವನ್ನು ಹೋತೃವು ಪಠಿಸಿದರೆ ಆದರಿಂದ ಧಗಧಗನೆ ಜ್ವಾಲೆಗಳಿಂದ ಉರಿಯುತ್ತಿರುವ ಅಗ್ನಿಯನ್ನು ಶಾಂತಗೊಳಿಸಿ ಆ ಅಗ್ನಿಯನ್ನು ಸಮಾಧಾನಪಡಿಸಿದಂತಾಗುವುದು. ಯಾವ ಪುರುಷನು ಉಚ್ಛ್ವಾಸನಿಶ್ವಾಸಗಳನ್ನು ಘಟ್ಟಿಯಾದ ಶಬ್ದಪೂರ್ವಕ ಬಿಡದೆ ಮೆತ್ತಗೆ ಉಸಿರುಬಿಡುತ್ತಾ ಮಂತ್ರಪಠನ ಮಾಡುವನೋ ಆ ಪುರುಷನು ಪ್ರಾಣವಾಯುಗಳಿಂದ ಆ ಅಗ್ನಿಯ ಕ್ರೂರರೂಪವನ್ನು ಶಮನಮಾಡಿ ಅಗ್ನಿಯಿಂದ ಯಾವ ಬಾಧೆಯೂ ಉಂಟಾಗದಂತೆ ಶಮನಗೊಳಿಸಲು ಶಕ್ತನಾಗುವನು.

## ಅಧೀಯನ್ನುಪಹನ್ಯಾದನ್ಯಂ ವಿವಕ್ತಾರಮಿಚ್ಛೇತ್ತಮೇವ ತತ್ಸೇತುಂ ಕೃತ್ವಾ ತರತಿ । ತಸ್ಮಾದಾಗ್ನಿಮಾರುತೇ ನ ವ್ಯುಚ್ಯಮೇಷ್ಟವ್ಯೋ ವಿವಕ್ತಾ ।

**ಶಂಸನಕಾಲೇ ಪ್ರಾಮಾದಿಕಸ್ಯ ವರ್ಣಾದಿಲೋಪರೂಪಸ್ಯ ಅಪರಾಧಸ್ಯ ಪ್ರತೀಕಾರಂ ದರ್ಶಯತಿ-ಅಧೀಯನ್ನಧೀಯಾನಃ ಶಂಸನಂ ಕುರ್ವನ್ಹೋತಾ ಯದ್ಯುಪಹನ್ಯಾದುಪಘಾತಂ ವರ್ಣಲೋಪಂ ಕುರ್ಯಾತ್ತದಾನೀಮನ್ಯಂ ಕಂಚಿತ್ಪುರುಷಂ ವಿವಕ್ತಾರಂ ವಿವಿಚ್ಯ ವಕ್ತುಂ**

ಸಮರ್ಥಮಿಚ್ಛೇತ್ಸಮೀಪೇಽವಸ್ಥಾಪಯೇತ್ ॥ ತದಾನೀಂ ತಮೇವ ಪುರುಷಮಪರಾಧತರಣೋಪಾಯಂ ಸೇತುಂ ಕೃತ್ವಾ ತಮಪರಾಧಮುಲ್ಲಂಘಯತಿ । ಅಯಂ ಪಕ್ಷೋಽನುಕಲ್ಪಃ ॥ ಮುಖ್ಯ-ಪಕ್ಷಂ ದರ್ಶಯತಿ—ಯಸ್ಮಾತ್ಪ್ರಮಾದಂ ಕೃತ್ವಾ ವಿವಕ್ತೃಪುರುಷಸಂಪಾದನಂ ನ ಮುಖ್ಯಂ ತಸ್ಮಾದಾಗ್ನಿಮಾರುತೇ ಶಸ್ತ್ರೇ ನ ವ್ಯಚ್ಯಂ ನ ಪಶ್ಚಾದ್ವಿವಕ್ತವ್ಯಂ ಕಿಂತು ಪ್ರಥಮಮೇವ ವಿವಕ್ತಾ ವಿವಿಚ್ಯ ವಕ್ತುಂ ಸಮರ್ಥೋ ಹೋತಾ ಏಷ್ಟವ್ಯಃ ಪ್ರಯತ್ನೇನ ಸಂಪಾದನೀಯಃ ॥

ಅಧ್ಯಯನಮಾಡಿ ಮಂತ್ರಗಳನ್ನು ಪಠಿಸಲು ಸಮರ್ಥನಾದ ಹೋತೃವು ಮಂತ್ರವನ್ನು ಎಂದರೆ ವೈಶ್ವಾನರೀಯಮಂತ್ರವನ್ನು ವಿಧಿಯಂತೆ ಪಠಿಸಬೇಕು. ಹೀಗೆ ಪಠಿಸುವಾಗ ಮಂತ್ರಪಠನ ಮಧ್ಯದಲ್ಲಿ ಸ್ವರವರ್ಣಾದಿಲೋಪಗಳು ಸಂಭವಿಸಿದಲ್ಲಿ ಅದನ್ನು ತಿಳಿದು ಸರಿಪಡಿಸಬಲ್ಲ ಸಾಮರ್ಥ್ಯವುಳ್ಳ ಮತ್ತೊಬ್ಬ ಪುರುಷನನ್ನು ತನ್ನ ಹತ್ತಿರವಿರುವಂತೆ ನೇಮಿಸಿಕೊಳ್ಳಬೇಕು. ಈ ಪುರುಷನು ಹೋತೃವಿನಿಂದ ಮಂತ್ರಪಠನದಲ್ಲಿ ಸಂಭವಿಸುವ ಅಪರಾಧಗಳನ್ನು (ತಪ್ಪುಗಳನ್ನು) ತಿದ್ದಿ ಸರಿಪಡಿಸಲು ಸಮರ್ಥನಾದ್ದರಿಂದ ಇವನನ್ನು ಸೇತು (ದಾಟಿಸುವವನು) ವೆಂದು ಕರೆಯುವರು. ಈ ವಿಧವಾಗಿ ಮಾಡುವುದು ಅನುಕೂಲಪಕ್ಷವೆಂದು ಹೇಳಲ್ಪಡುವುದು. ಮುಖ್ಯಪಕ್ಷದ ಪ್ರಕಾರ ಮಾಡಬೇಕಾದುದೇನೆಂದರೆ ಆಗ್ನಿಮಾರುತಶಸ್ತ್ರಮಂತ್ರಪಠನಕಾಲದಲ್ಲಿ ಹೋತೃವಿನ ಪ್ರಮಾದಾದಿಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಬೇರೊಬ್ಬ ಪುರುಷನನ್ನು ನೇಮಿಸಿಕೊಳ್ಳುವುದಕ್ಕಿಂತ ಸರಿಯಾದ ಹೋತೃವೇ ತನ್ನ ಕರ್ತವ್ಯನಿರ್ವಹಣೆಮಾಡಲು ಸಮರ್ಥನಾಗಿರುವುದೇ ಉತ್ತಮಪಕ್ಷವೆಂದು ಪರಿಗಣಿಸಲ್ಪಡುವುದು.

ಮುಂದೆ ಹೇಳಿರುವುದು ವೈಶ್ವಾನರೀಯಸೂಕ್ತದಲ್ಲಿ ಪಠಿಸಬೇಕಾದ ನಿವಿನ್ಮಂತ್ರವು— ಅಗ್ನಿರ್ವೈಶ್ವಾನರಃ ಸೋಮಸ್ಯ ಮತ್ಸತ್ । ವಿಶ್ವೇಷಾಂ ದೇವಾನಾಂ ಸಮಿತ್ । ಅಜಸ್ರಂ ದೈವ್ಯಂ ಜ್ಯೋತಿಃ । ಯೋ ವಿಡ್ಭ್ಯೋ ಮಾನು-ಷೀಭ್ಯೋ ಅದೀದೇತ್ । ದ್ಯುಷು ಪೂರ್ವಾಸು ದಿದ್ಯುತಾ ನಃ । ಅಜರ ಉಷಸಾಮನೀಕೇ । ಆ ಯೋ ದ್ಯಾಂ ಭಾತ್ಯಾಪೃಥಿವೀಂ । ಓರ್ವಂತರಿಕ್ಷಂ । ಜ್ಯೋತಿಷಾ ಯಜ್ಞಾಯ ಶರ್ಮ ಯಂಸತ್ । ಅಗ್ನಿರ್ವೈಶ್ವಾನರ ಇಹ ಶ್ರವದಿಹ ಸೋಮಸ್ಯ ಮತ್ಸತ್ । ಪ್ರೇಮಾಂ ದೇವೋ ದೇವಹೂತಿಮವತು ।

ಮಾರುತಂ ಶಂಸತಿ ಮರುತೋ ಹ ವಾ ಏತದ್ರೇತಃ ಸಿಕ್ತಂ ಧೂನ್ವಂತಃ ಪ್ರಾಚ್ಯಾವಯಂಸ್ತಸ್ಮಾನ್ಮಾರುತಂ ಶಂಸತಿ ।

ಅಥ ಪ್ರತ್ವಕ್ಷಸಃ ಪ್ರತವಸ ಇತ್ಯೇತನ್ಮರುದ್ದೇವತಾಕಂ ಸೂಕ್ತಂ ವಿಧತ್ತೇ—ಮರುತಾಂ ಧೂನನೇನ ಪ್ರಜಾಪತಿರೇತಃ ಶೋಷಣಂ ಪೂರ್ವಮೇವೋಕ್ತಂ ॥

ಈ ಪ್ರತ್ವಕ್ಷಸಃ ಪತವಸಃ (ಋ. ಸಂ. ೧-೮೭-೧ ರಿಂದ ೬) ಎಂಬ ಮರುದ್ದೇವತಾಕವಾದ ಸೂಕ್ತವನ್ನು ವಿವರಿಸುವರು. ಈ ಸೂಕ್ತದಲ್ಲಿ ಹೇಳಿರುವಂತೆ ಮರುತ್ತುಗಳ ಚಾಲನದಿಂದ ಪ್ರಜಾಪತಿಯ ರೇತಸ್ಸು ಶೋಷಣವಾಗುವುದೆಂದು ಹಿಂದೆಯೇ ಹೇಳಲಾಗಿದೆ. ಆದ್ದರಿಂದ ಹೋತೃವು ಮರುದ್ದೇವತಾಕವಾದ ಸೂಕ್ತವನ್ನು ಪಠಿಸುವನು. ತೃತೀಯಸವನಕಾಲದಲ್ಲಿ ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಸೇರಿಸಿ ಪಠಿಸಬೇಕಾದ ನಿವಿನ್ಮಂತ್ರಗಳು ಈರೀತಿ ಇವೆ— ಮರುತೋ ದೇವಾಃ ಸೋಮಸ್ಯ ಮತ್ಸನ್ । ಸುಷ್ಟುಭಃ ಸ್ವರ್ಕಾಃ । ಅರ್ಕಸ್ತುಭೋ ಬೃಹದ್ವಯಸಃ । ಖುರಾ ಅನಾಧೃಷ್ಟರಥೀಃ । ತ್ವೇಷಾಸಃ ಪೃಶ್ನಿಮಾತರಃ । ಶುಭ್ರಾ ಹಿರಣ್ಯರಥಾ ದಯಃ । ತವಸೋ ಭಂದದಿಷ್ಟಯಃ । ನಭಸ್ಯಾ ವರ್ಷನಿರ್ಣಿಜಃ । ಮರುತೋ ದೇವಾ ಇಹ ಸೋಮಸ್ಯ ಮತ್ಸನ್ । ಪ್ರೇಮಾಂ ದೇವೋ ದೇವಹೂತಿಮವಂತು ॥ ಇದು ನಿವಿನ್ಮಂತ್ರವು.

**ಯಜ್ಞಾ ಯಜ್ಞಾ ವೋ ಅಗ್ನಯೇ ದೇವೋ ವೋ ದ್ರವಿಣೋದಾ ಇತಿ ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತದ್ಯನ್ಮಧ್ಯೇ ಯೋನಿಂ ಚಾನುರೂಪಂ ಚ ಶಂಸತಿ ತಸ್ಮಾನ್ಮಧ್ಯೇ ಯೋನಿರ್ಧೃತಾ ।**

ಅಥ ಪ್ರಗಾಥದ್ವಯಂ ವಿಧತ್ತೇ—ಯಜ್ಞಾಯಜ್ಞೀಯ ಇತ್ಯೇಕಃ ಪ್ರಗಾಥಃ । ದೇವೋ ವ ಇತಿ ದ್ವಿತೀಯಃ । ತತ್ರ ಪ್ರಥಮೇ ಪ್ರಗಾಥೇ ತ್ಯೃಚಃ ಸಂಪದ್ಯತೇ । ಸೋಽಯಂ ಸ್ತೋತ್ರಿಯಸ್ತಸ್ಮಿಂಸ್ತ್ಯೃಚೇ ಸಾಮಗೈಃ ಸ್ತೂಯಮಾನತ್ವಾತ್ ॥ ಅತ ಏವಾಸೌ ದ್ವಯೋರ್ಮಧ್ಯೇ ಪ್ರಥಮಭಾವಿತ್ವಾದ್ಯೋನಿರಿತ್ಯುಚ್ಯತೇ ॥ ದ್ವಿತೀಯಪ್ರಗಾಥೇ ಸಮುತ್ಪನ್ನಸ್ತ್ಯೃಚೋಽನುರೂಪಃ ಯಾಪೃಶಃ ಸ್ತೋತ್ರಿಯಸ್ತಾದೃಶತ್ವಮನುರೂಪತ್ವಂ । ತದೇತದುಭಯಂ ಶಸ್ತ್ರಮಧ್ಯೇ ಶಂಸನೀಯಂ ನ ತು ಶಸ್ತ್ರಾಂತರೇಷ್ವಿವ ಸ್ತೋತ್ರಿಯಾನುರೂಪಯೋರಾದೌ ಶಂಸನೀಯಂ । ತಥಾ ಸತಿ ಯಸ್ಮಾದತ್ರ ಸೂಕ್ತಮಧ್ಯೇ ಯೋನೇರನುರೂಪಸ್ಯ ಚ ಶಂಸನಂ ತಸ್ಮಾಲ್ಲೋಕೇಽಪಿ ನಾರೀಣಾಂ ಶರೀರಮಧ್ಯೇ ಯೋನಿರ್ಧೃತಾ ॥

ಈ ಪ್ರಗಾಥದ್ವಯವೆಂಬ ಎರಡುಮಂತ್ರಗಳನ್ನು ವಿವರಿಸುವರು—**ಯಜ್ಞಾ ಯಜ್ಞಾ ವಃ** (ಸಾ. ಸಂ. ಉತ್ತರ. ಆ ೧-೧-೧೦-೧-೨) ಎಂಬುದು ಮೊದಲನೆಯ ಪ್ರಗಾಥವು. **ದೇವೋ ವಃ** (ಸಾ. ಸಂ. ೧-೧-೨೦-೧-೨) ಎಂಬುದು ಎರಡನೆಯ ಪ್ರಗಾಥವು. ಮೊದಲನೆಯ ಪ್ರಗಾಥದಲ್ಲಿ ಕಲ್ಪಿಸಲ್ಪಡುವ ತೃಚವು (ಮೂರು ಋಕ್ಕುಗಳು) ಸ್ತೋತ್ರಿಯವೆಂದು ಹೇಳಲ್ಪಡುವುದು. ಏಕೆಂದರೆ ಇದನ್ನು ಸಾಮಗರು ಗಾನಮಾಡುವರು. ಶಸ್ತ್ರಮಂತ್ರಗಳ ಎಂದರೆ ವೈಶ್ವಾನರ ಮತ್ತು ಆಗ್ನಿಮಾರುತ ಶಸ್ತ್ರಗಳ ಮಧ್ಯದಲ್ಲಿ ಈ ಸ್ತೋತ್ರಿಯವನ್ನು ಗಾನಮಾಡಲು ಕಾರಣವೇನೆಂದರೆ ಸ್ತ್ರೀಯರು ತಮ್ಮ ಶರೀರದ ಮಧ್ಯದಲ್ಲಿ ಗರ್ಭವನ್ನು ಧರಿಸುವರು. ಇದರ ಪ್ರತೀಕವಾಗಿ ಸ್ತೋತ್ರಿಯವು ಶಸ್ತ್ರಮಂತ್ರಗಳ ಮಧ್ಯದಲ್ಲಿ ಗಾನಮಾಡಲ್ಪಡುವುದು. ದ್ವಿತೀಯಪ್ರಗಾಥವಾದ **ದೇವೋ ವಃ** ಎಂಬುದರಿಂದ ಲಭಿಸುವ ಪ್ರಗಾಥವು ಅನುರೂಪವೆಂದು ಹೇಳಲ್ಪಡುವುದು. ಈ ಅನುರೂಪವೂ ಸ್ತೋತ್ರಿಯದಂತೆಯೇ ಇರುವುದು. ಏಕೆಂದರೆ ಇದನ್ನು ಹಿಂದಿನಂತೆ ಅಗ್ನಿವೈಶ್ವಾನರ ಮತ್ತು ಆಗ್ನಿಮಾರುತ ಎಂಬ ಶಸ್ತ್ರಗಳ ಮಧ್ಯದಲ್ಲಿಯೇ ಪಠಿಸುವರು. ಇವುಗಳನ್ನು ಶಸ್ತ್ರಮಂತ್ರಗಳ ಅಂತ್ಯದಲ್ಲಿ ಪಠಿಸಕೂಡದು. ಎಂದರೆ ಸೂಕ್ತಮಧ್ಯದಲ್ಲಿ ಸ್ತೋತ್ರಿಯ ಮತ್ತು ಅನುರೂಪಗಳೆಂಬ ಎರಡು ಋಕ್ಕುಗಳನ್ನೂ ಪಠಿಸಬೇಕು ಏಕೆಂದರೆ ಲೋಕವ್ಯವಹಾರದಲ್ಲಿ ಸ್ತ್ರೀಯರು ತಮ್ಮ ಉದರ ಮಧ್ಯದಲ್ಲಿರುವ ಯೋನಿಯಲ್ಲಿಯೇ ಗರ್ಭವನ್ನು ಧರಿಸುವರು.

**ಯದು ದ್ವೇ ಸೂಕ್ತೇ ಶಸ್ತ್ವಾ ಶಂಸತಿ ಪ್ರತಿಷ್ಠಯೋರೇವ ತದುಪರಿಷ್ಟಾತ್ಪ್ರಜನನಂ ದಧಾತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

ಶಸ್ತ್ರಮಧ್ಯೇ ತಯೋಃ ಸ್ಥಾನವಿಶೇಷಂ ದರ್ಶಯತಿ—ಯದು ಯಸ್ಮಾದೇವಕಾರಣಾದ್ವೈಶ್ವಾನರೀಯಂ ಮಾರುತಂ ಚೇತಿ ದ್ವೇ ಸೂಕ್ತೇ ಶಸ್ತ್ವಾ ಪಶ್ಚಾದೇತೌ ಸ್ತೋತ್ರಿಯಾನುರೂಪೌ ಶಂಸತಿ ತಸ್ಮಾತ್ಕಾರಣಾದ್ದ್ವಿತ್ವಸಂಖ್ಯೋಪೇತಯೋಃ ಪ್ರತಿಷ್ಠಯೋಃ ಸ್ಥಿತಿಹೇತ್ವೋಃ

ಪಾದಯೋರೇವೋಪರಿಷ್ಟಾದೂರ್ಧ್ವದೇಶೇ ಪ್ರಜನನಂ ಪ್ರಜೋತ್ಪಾದಕಮಿಂದ್ರಿಯಂ ದಧಾತಿ। ತಚ್ಚ ಪ್ರಜಾತ್ಯೈ ಪ್ರಜೋತ್ಪಾದನಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ—

ಹಿಂದೆ ಹೇಳಿದಂತೆ ವೈಶ್ವಾನರ ಮತ್ತು ಅಗ್ನಿಮಾರುತಶಸ್ತ್ರಗಳ ಮಧ್ಯದಲ್ಲಿ ಸ್ತೋತ್ರಿಯಾನುರೂಪಮಂತ್ರಗಳಿಗೆ ಇರುವ ಸ್ಥಾನವಿಶೇಷವನ್ನು ವಿವರಿಸುವರು. ಈ ಎರಡುಶಸ್ತ್ರಗಳ ಮಧ್ಯದಲ್ಲಿ ಸ್ತೋತ್ರಿಯ ಮತ್ತು ಅನುರೂಪಮಂತ್ರಗಳನ್ನು ಗಾನ ಮಾಡುವ ಕಾರಣವೇನೆಂದರೆ, ಲೋಕವ್ಯವಹಾರದಲ್ಲಿ ಪುರುಷನು ತನ್ನ ಪತ್ನಿಯ ಎರಡು ಕಾಲುಗಳ ಮೇಲುಭಾಗದ ಮಧ್ಯ ಪ್ರದೇಶದಲ್ಲಿ (ಯೋನಿಯಲ್ಲಿ) ಪ್ರಜೋತ್ಪತ್ತಿಸಾಧನವಾದ ಇಂದ್ರಿಯವನ್ನು ಸ್ಥಾಪಿಸುವನು (ಇಡುವನು). ಅದರಿಂದ ಸ್ತ್ರೀಯೋನಿಯಲ್ಲಿ (ಆ ಮೂಲಕ ಸ್ತ್ರೀಯಗರ್ಭದಲ್ಲಿ) ಪ್ರಜೋತ್ಪಾದನೆಯುಂಟಾಗುವುದು. ಅದರ ಪ್ರತೀಕವಾಗಿ ಎರಡು ಸೂಕ್ತಗಳ (ಸ್ತ್ರೀಯ ಎರಡು ತೊಡೆಗಳ) ಮಧ್ಯದಲ್ಲಿ ಪುರುಷನ ಜನನೇಂದ್ರಿಯವನ್ನು ಸ್ಥಾಪಿಸುವುದರಿಂದ ಸ್ತ್ರೀಯ ಮಧ್ಯಪ್ರದೇಶವಾದ ಉದರದಲ್ಲಿ ಗರ್ಭೋತ್ಪತ್ತಿಯುಂಟಾಗಿ ಅದರಿಂದ ಪುತ್ರಸಂತಾನವುಂಟಾಗುವುದು. ಈ ಕಾರಣದಿಂದಲೇ ಎರಡು ಸೂಕ್ತಗಳ ಮಧ್ಯದಲ್ಲಿ ನಿವಿನ್ಮಂತ್ರಗಳನ್ನು ಪಠಿಸುವರು. ಈ ವಿಷಯವನ್ನು ಚೆನ್ನಾಗಿ ತಿಳಿದಿರುವ ಪುರುಷನು ತನ್ನ ಪತ್ನಿಯಲ್ಲಿ ಪ್ರಜೋತ್ಪಾದನದಿಂದ ತನ್ನ ಸಂತತಿಯನ್ನು ಅಭಿವೃದ್ಧಿಗೊಳಿಸುವನು.

*English Translation*

**The Vaisvanara and Maruta Nivid hymns, and the Stotriya and Anurupa of the Agnimaruta Shastra.)**

The Hotar commences the Agni-maruta Shastra with a hymn addressed to Agni-Vaisvanara. Vaisvanara is the seed which was poured forth. Thence the Hotar commences the Agni-maruta Shastra with a hymn addressed to Vaisvanara. The first verse is to be repeated without stopping. He who repeats the Agni-maruta Shastra extinguishes the fearful flames of the fires. By suppressing his breath when repeating the first verse he crosses the fires. Lest he might possibly forego some sound of the mantra when repeating it, it is desirable that he should appoint some one to correct such a mistake which might arise. By thus making him the other man the bridge, he crosses the fires, even if he should commit some mistake in repeating. Because of no mistake in repeating being allowed in this, there ought to be some one appointed to correct the mistakes, when the Hotar repeats it.

The Marutas are the sperm which was poured forth. By shaking it they made it flow. Thence he repeats a hymn addressed to the Marutas.

In the midst of the Shastra, after having repeated the two hymns mentioned he repeats the Stotriya and Anurupa Pragathas, yajna yajna vo agnaye (1.168-1-2) and devo vo dravinoda (7,16-11-12). The reaon that he repeats the "womb" (the Stotriya) in the midst of the Shastra, is because women have their

wombs in the middle of their bodies. By repeating it, after having already recited two hymns (the vaisvanara and Agni-maruta), he puts the organ of generation between the two legs in their upper part for producing offspring. He who has such a knowledge will be blessed with offspring and csttle.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಏಕಾದಶಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಹನ್ನೊಂದನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ದ್ವಾದಶಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ಹನ್ನೆರಡನೆಯ ಖಂಡವು



[[ಜಾತವೇದಾಃ ಎಂಬ ಅಗ್ನಿಸಂಬಂಧವಾದ ನಿವಿತ್ಸೂಕ್ತವು.]

ಜಾತವೇದಸ್ಯಂ ಶಂಸತಿ । ಪ್ರಜಾಪತಿಃ ಪ್ರಜಾ ಅಸೃಜತ ತಾಃ ಸೃಷ್ಟಾಃ ಪರಾಚ್ಯ ಏವಾಽಽಯನ್ನ ವ್ಯಾವರ್ತಂತ ತಾ ಅಗ್ನಿನಾ ಪರ್ಯಗಚ್ಛತ್ತಾ ಅಗ್ನಿಮುಪಾವರ್ತಂತ ತಮೇವಾದ್ಯಾಪ್ಯುಪಾವೃತ್ತಾಃ ಸೋಽಬ್ರವೀಜ್ಜಾತಾ ವೈ ಪ್ರಜಾ ಅನೇನಾವಿದಮಿತಿ ಯದಬ್ರವೀಜ್ಜಾತಾ ವೈ ಪ್ರಜಾ ಅನೇನಾವಿದಮಿತಿ ತಜ್ಜಾತವೇದಸ್ಯನುಭವತ್ತಜ್ಜಾತವೇದಸೋ ಜಾತವೇದಸ್ತ್ವಂ ॥

ಅಥ ಪ್ರತವ್ಯಸೀಮಿತ್ಯೇತಜ್ಜಾತವೇದೋದೇವತಾಕಂ ಸೂಕ್ತಂ ವಿಧತ್ತೇ—ತದೇತತ್ಪ್ರಶಂಸತಿ—ಪುರಾ ಪ್ರಜಾಪತಿನಾ ಸೃಷ್ಟಾಃ ಪ್ರಜಾಃ ಪ್ರಜಾಪತಿಂ ಪೃಷ್ಠತಃ ಕೃತ್ವಾ ಪರಾಙ್ಮುಖತ್ವೇನೈವಾಽಽಗಚ್ಛನ್ನ ಪುನರಾವೃತ್ತಾಸ್ತದಾನೀಂ ಪ್ರಜಾಪತಿಸ್ತಾಃ ಪ್ರಜಾ ಅಗ್ನಿನಾ ಪರ್ಯಗಚ್ಛತ್ಪರಿತೋಽಗ್ನಿಪ್ರಾಕಾರಂ ಕೃತವಾನ್ ॥ ಅತಸ್ತಾಃ ಪ್ರಜಾ ದೂರಂ ಗಂತುಮಶಕ್ತಾ ಅಗ್ನಿಮುಪೇತ್ಯ ಪುನರಾವರ್ತಂತ । ಯಸ್ಮಾದೇವಂ ತಸ್ಮಾದದ್ಯಾಪಿ ಶೀತಾರ್ತಾಃ ಪ್ರಜಾಸ್ತಮೇವಾಗ್ನಿಮುಪಾ-

ವೃತಾ್ತಃ ಪರಿತೋ ಗಚ್ಛಂತ್ಯೋಽಪ್ಯಗ್ನಿಂ ದೃಷ್ಟ್ವಾ ಸಮೀಪೇ ಕೃತ್ವಾ ಸೇವಿತುಮಾವರ್ತಂತೇ। ತತಃ ಸಂತುಷ್ಟಃ ಪ್ರಜಾಪತಿರೇನಮಬ್ರವೀತ್ ॥ ಜಾತಾ ಉತ್ಪನ್ನಾ ಯಾಃ ಪ್ರಜಾಸ್ತಾಃ ಸರ್ವಾ ಅಹಮನೇನಾಗ್ನಿನಾಽವಿದಂ ಲಬ್ಧವಾನಸ್ಮಿ ಜ್ಞಾತವಾನಸ್ಮೀತಿ ವಾ ॥ ಯಸ್ಮಾಜ್ಜಾತಾ ಅವಿದಮನೇನೇತ್ಯುಕ್ತವಾಂಸ್ತಸ್ಮಾದಗ್ನಿಸಂಬಂಧಿ ಜಾತವೇದಸ್ಯಂ ಸೂಕ್ತಮಭವತ್ ॥ ಜಾತವೇದಸೋಽಗ್ನಿ(ಗ್ನೇ)ರಪಿ ಜಾತಾನ್ವೇತ್ತ್ಯನೇನೇತಿ ವ್ಯುತ್ಪತ್ಯಾ ತನ್ನಾಮ ಸಂಪನ್ನಂ ॥

ಈಗ ಪ್ರತವ್ಯಸೀಂ (ಋ. ಸಂ. ೧-೧೪೩-೧) ಎಂಬ ಜಾತವೇದೋ ದೇವತಾಕವಾದ ಸೂಕ್ತವನ್ನು ವಿವರಿಸುವರು— ಪೂರ್ವದಲ್ಲಿ ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಮಾಡಿದನು. ಪ್ರಜೆಗಳೆಂದರೆ ಮನುಷ್ಯರೇ ಮೊದಲಾದ ನಾನಾವಿಧಪ್ರಾಣಿಗಳು. ಸೃಷ್ಟಿಮಾಡಿದನಂತರ ಆ ಪ್ರಜೆಗಳು ತಮ್ಮನ್ನು ಸೃಷ್ಟಿಮಾಡಿದ ಪ್ರಜಾಪತಿಯನ್ನು ಒಂದಾವರ್ತಿಯು ಸಹ ನೋಡದೆ ಅವನ ಬಳಿಗೆ ಬರದೆ ಮುಂದೆಲ್ಲಿಗೋ ಹೊರಟುಹೋಗುತ್ತಿದ್ದರು. ಇದನ್ನು ನೋಡಿ ಪ್ರಜಾಪತಿಯು ಜುಗುಪ್ಸೆಗೊಂಡು ಆ ಪ್ರಜೆಗಳು ಮುಂದಕ್ಕೆ ಹೊರಟುಹೋಗದಂತೆ ಅವರ ಸುತ್ತಲೂ ಬೆಂಕಿಯ ಜ್ವಾಲೆಗಳಿಂದ ಕೂಡಿದ ಅಗ್ನಿಪ್ರಾಕಾರವನ್ನು ರಚಿಸಿದನು. ಈ ಅಗ್ನಿಪ್ರಾಕಾರದಿಂದ ತಪ್ಪಿಸಿಕೊಂಡು ಮುಂದೆಹೋಗಲು ಸಾಧ್ಯವಾಗದೆ ಆ ಪ್ರಜೆಗಳು ಪುನಃ ಹಿಂದಕ್ಕೆ ಬರಬೇಕಾಯಿತು. ಆದ್ದರಿಂದ ಈಗಲೂ ಕೂಡ ಛಳಿಯಿಂದಲೂ ಶೀತದಿಂದಲೂ ತೊಂದರೆಪಡುತ್ತಿರುವ ಜನರು ಅಗ್ನಿಯ ಸಮೀಪಕ್ಕೆ ಹೋಗಿ ಬೆಂಕಿಯನ್ನು ಕಾಯಿಸಿಕೊಳ್ಳುತ್ತಾ ತಮ್ಮ ಶೀತಬಾಧೆಯನ್ನು ಪರಿಹರಿಸಿಕೊಳ್ಳುವರು. ಇದರಿಂದ ಸಂತುಷ್ಟನಾದ ಪ್ರಜಾಪತಿಯು ಇಂತು ಹೇಳಿದನು— ನನ್ನಿಂದ ಉತ್ಪನ್ನರಾದ ಈ ಪ್ರಜೆಗಳು ಪುನಃ ನನ್ನ ಬಳಿಗೆ ಬಂದದ್ದರಿಂದ ಅವರನ್ನು (ಪ್ರಜೆಗಳನ್ನು) ನಾನು ಪುನಃ ಹಿಂದಕ್ಕೆ ಪಡೆದೆನು ಅಥವಾ ಅವರ ವಿಷಯವನ್ನು ತಿಳಿದುಕೊಂಡೆನು. ಜಾತಾಃ ಎಂದರೆ ನನ್ನಿಂದ ಉತ್ಪನ್ನರಾದ ಪ್ರಜೆಗಳನ್ನು ಈ ಅಗ್ನಿಯಿಂದ ನಾನು ಪಡೆದದ್ದರಿಂದ ಈ ಅಗ್ನಿಸಂಬಂಧವಾದ ಸೂಕ್ತಕ್ಕೆ ಜಾತವೇದಸೂಕ್ತವೆಂದು ಹೆಸರಾಯಿತು. ಮತ್ತು ಈ ಅಗ್ನಿಯು ಉತ್ಪನ್ನರಾದ ಸಮಸ್ತರನ್ನೂ ಅಥವಾ ಸಮಸ್ತವಿಷಯವನ್ನೂ ತಿಳಿಯಲು ಸಮರ್ಥನಾದುದರಿಂದ **ಜಾತಾನ್ ವೇತ್ತೀತಿ ಜಾತವೇದಾಃ** ಎಂಬ ವಚನದಂತೆ ಈ ಅಗ್ನಿಗೆ ಜಾತವೇದನೆಂಬ ಹೆಸರು ಉಂಟಾಯಿತು. ಅಗ್ನಿಗೆ ಈ ಹೆಸರು ಬರಲು ಇದೇ ಕಾರಣವು.

### ತಾ ಅಗ್ನಿನಾ ಪರಿಗತಾ ನಿರುದ್ಧಾಃ ಶೋಚತ್ಯೋ ದೀಧ್ಯತ್ಯೋಽತಿಷ್ಠಂಸ್ತಾ ಅದ್ಭಿರಭ್ಯಷಿಂಚತ್ತಸ್ಮಾದುಪರಿಷ್ಟಾಜ್ಜಾತವೇದಸ್ಯಸ್ಯಾಪೋಹಿಷ್ಠೀಯಂ ಶಂಸತಿ

ಆಪೋ ಹಿಷ್ಠಾ ಮಯೋ ಭುವ ಇತ್ಯಾದಿಕಂ ತ್ಯೃಚಂ ವಿಧತ್ತೇ—ಅಗ್ನಿನಾ ಪರಿಗತಾ ಪರಿತೋ ವೇಷ್ಟಿತಾ ನಿರುದ್ಧಾ ಗಂತುಮಶಕ್ತಾಃ ಶೋಚತ್ಯಃ ಶೋಕಂ ಪ್ರಾಪ್ನುವತ್ಯೋ ದೀಧ್ಯತ್ಯೋ ದೀಪ್ಯಮಾನಾಃ ಪ್ರಜಾಸ್ತತ್ರೈವಾತಿಷ್ಠನ್ ॥ ಪ್ರಜಾಪತಿಸ್ತಾಃ ಪ್ರಜಾಃ ಸಂತಾಪಪರಿಹಾರಾಯಾದ್ಭಿರಭ್ಯಷಿಂಚತ್ ॥ ಯಸ್ಮಾದೇವಂ ತಸ್ಮಾಜ್ಜಾತವೇದಸ್ಯಾಖ್ಯಸ್ಯೋಪರಿಷ್ಟಾದಾಪೋ ಹಿ ಷ್ಠೇತ್ಯಾದಿಕಂ ತ್ಯೃಚಂ ಶಂಸೇತ್ ॥

ಆಪೋ ಹಿ ಷ್ಠಾ ಮಯೋಭುವಃ (ಋ.ಸಂ. ೧೦-೯-೧,೨,೩) ಎಂಬ ಸೂಕ್ತವನ್ನು ಪ್ರಶಂಸೆಮಾಡುವರು—ಹಿಂದೆ ಹೇಳಿದ ಪ್ರಕಾರ ಅಗ್ನಿಯಿಂದ ಸುತ್ತುವರಿಯಲ್ಪಟ್ಟು ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ದುಃಖಿಸುತ್ತಿರುವ ಆ ಪ್ರಜೆಗಳನ್ನು

ಅಗ್ನಿಜ್ವಾಲೆಗಳಿಂದ ಬಿಡಿಸಲು ಪ್ರಜಾಪತಿಯು ಆ ಅಗ್ನಿಯನ್ನು ನೀರಿನಿಂದ ಸಿಂಪಡಿಸಿ ಶಮನಗೊಳಿಸಿದನು. ಈರೀತಿ ಅಗ್ನಿಜ್ವಾಲೆಗಳನ್ನು ಶಮನಗೊಳಿಸಲು ಪ್ರಜಾಪತಿಯು ಆಪೋ ಹಿ ಷ್ಠಾ ಎಂಬ ಸೂಕ್ತವನ್ನು ಪಠಿಸಿದ್ದರಿಂದ ಈ ಆಪೋ ಹಿ ಷ್ಠಾ ಎಂಬ ಸೂಕ್ತವನ್ನು ಈಗಲೂ ಜಾತವೇದಸ್ಯ ಸೂಕ್ತಾನಂತರ ಪಠಿಸಬೇಕು.

### ತಸ್ಮಾತ್ತಚ್ಛನ್ಮಯತೇವ ಶಂಸ್ತವ್ಯಂ ತಾ ಅದ್ಭಿರಭಿಷಿಚ್ಯ ನಿಜಾ ಸ್ಯೈನಾ-ಮನ್ಯತ

ತತ್ರ ಕಂಚಿದ್ವಿಶೇಷಂ ವಿಧತ್ತೇ -- ಯಸ್ಮಾದಾಪೋಹಿಷ್ಠೀಯಂ ತಾಪಶಮನಕಾರಣಂ ತಸ್ಮಾತ್ತಚ್ಛಮಯತೇವ ಹೋತ್ರಾ ಶಂಸನೀಯಂ ॥ ಯಥಾ ವಹ್ನಿಂ ಶಮಯನ್ಪುರುಷಃ ಶನೈಃ ಶನೈಃ ಕ್ರಮೇಣ ಜಲಂ ಸಿಂಚತಿ, ಏವಮನೇನಾಪಿ ಶನೈಃ ಶಂಸನಂ ಕರ್ತವ್ಯಂ । ತತಃ ಸ ಪ್ರಜಾ-ಪತಿಸ್ತಾಃ ಪ್ರಜಾ ಅದ್ಭಿರಭಿಷಿಚ್ಯ ನಿಜಾ ಏವ ಸ್ವಕೀಯಾ ಏವ ತಾಃ ಪ್ರಜಾ ಇತ್ಯಮನ್ಯತ ॥ ಸ್ಯಾಶಬ್ದಸ್ತಚ್ಛಬ್ದಪರ್ಯಾಯಃ ಏಕವಚನಾಂತೋಽಪಿ ಬಹುವಚನಾಂತತ್ವೇನ ಪರಿಣಮಯಿ-ತವ್ಯಃ ॥ ತಥಾ ಸತಿ ತಾಃ ಪ್ರಜಾ ಇತ್ಯುಕ್ತಂ ಭವತಿ ॥ ತಸ್ಮಾಚ್ಛನೈಃ ಶಂಸನೇನ ಶಸ್ತ್ರಸ್ಯ ಸ್ವಕೀ-ಯತ್ವಂ ಸಂಪದ್ಯತ ಇತ್ಯರ್ಥಃ । ಯದ್ವಾ ತಾ ಅದ್ಭಿರಿತ್ಯಾದ್ಯರ್ಥವಾದ ಉತ್ತರಶೇಷತ್ವೇನ ಯೋಜನೀಯಃ ॥

ಈ ವಿಷಯದಲ್ಲಿ ಒಂದು ವಿಶೇಷಸಂಗತಿಯನ್ನು ತಿಳಿಸುವರು— ಈ ಋಕ್ಕನ್ನು ಪಠಿಸಿ ಪ್ರಜಾಪತಿಯು ತನ್ನ ಪ್ರಜೆಗಳಿಗೆ ಉಂಟಾದ ತಾಪವನ್ನು ಸ್ವಲ್ಪಸ್ವಲ್ಪವಾಗಿ ನೀರನ್ನು ಚುಮುಕಿಸುತ್ತಾ ಪರಿಹಾರಮಾಡಿದನು. ಆದ್ದರಿಂದ ಹೋತೃವು ಈ ಸೂಕ್ತವನ್ನು ನಿಧಾನವಾಗಿ ಪಠಿಸಬೇಕು. ಪ್ರಜಾಪತಿಯು ಅಗ್ನಿತಾಪದಿಂದ ಉದಕಪ್ರೋಕ್ಷಣೆಮಾಡಿ ಪ್ರಜೆಗಳನ್ನು ರಕ್ಷಿಸಿದ್ದರಿಂದ ಆ ಪ್ರಜೆಗಳು ಪ್ರಜಾಪತಿಗೆ ಸ್ವಕೀಯವೇ ಆದವು. ಮೇಲಿನ ಮಂತ್ರದಲ್ಲಿ ಸ್ಯಾ ಎಂದಿರುವ ಶಬ್ದಕ್ಕೆ ತಾಃ ಎಂದರ್ಥವು. ಈ ಸ್ಯಾ ಎಂಬ ಶಬ್ದವು ಏಕವಚನಾಂತ ಶಬ್ದವಾದರೂ ಬಹುವಚನಾರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

### ತಾಸು ವಾ ಅಹಿನಾ ಬುಧ್ನ್ಯೇನ ಪರೋಕ್ಷಾತ್ತೇಜೋದಧಾದೇಷ ಹ ವಾ ಅಹಿರ್ಬುಧ್ನ್ಯೋ ಯದಗ್ನಿರ್ಗಾರ್ಹಪತ್ಯೋಽಗ್ನಿನೈವಾಽಽಸು ತದ್ಗಾರ್ಹಪತ್ಯೇನ ಪರೋಕ್ಷಾತ್ತೇಜೋ ದಧಾತಿ ತಸ್ಮಾದಾಹು-ರ್ಜುಹ್ವದೇವಾಜುಹ್ವತೋಽವಸೀಯಾನಿತಿ ॥

ಉತ ನೋಽಹಿರ್ಬುಧ್ನ್ಯ ಇತ್ಯಸ್ಯಾ ಋಚಃ ಶಂಸನಂ ತದ್ದೇವತಾಸ್ತುತಿದ್ವಾರೇಣೋನ್ನ-ಯತಿ— ತಾಸ್ವಭಿಷೇಕಾದೂರ್ಧ್ವಂ ಸ್ವಕೀಯತ್ವೇನ ಸ್ವೀಕೃತಾಸು ಪ್ರಜಾಸು ಪ್ರಜಾಪತಿರಹಿನಾ ಬುಧ್ನ್ಯೇನಾಹಿಶಬ್ದಬುಧ್ನ್ಯಶಬ್ದದ್ವಯನಾಮಕಾಗ್ನಿವಿಶೇಷೇಣ ಪರೋಕ್ಷಾತ್ಪರೋಕ್ಷರೂಪೇಣ ತೇಜೋಽಧಾತ್ ॥ ಪ್ರಜಾನಾಂ ಸಂತಾಪಭೀರುತ್ವಾತ್ ॥ ತಾ ಯಥಾ ನ ಪಶ್ಯಂತಿ ತಥಾ ತಾಸ್ವ-ಗ್ನಿವಿಶೇಷಸಂಬಂಧಿತೇಜಃ ಸ್ಥಾಪಿತವಾನ್ ॥ ಯೋ ಗಾರ್ಹಪತ್ಯೋಽಗ್ನಿರಸ್ತಿ, ಏಷ ಏವಾಹಿ ಶಬ್ದೇನ ಬುಧ್ನ್ಯಶಬ್ದೇನಾಭಿಹಿತಃ ॥ ಅತಸ್ತದೀಯಾಶಂಸನೇ ಸತಿ ಗಾರ್ಹಪತ್ಯೇನೈವಾಗ್ನಿನಾ

**ಪ್ರಜಾಸು ಪರೋಕ್ಷತ್ವೇನ ತೇಜಃ ಸ್ಥಾಪಯತಿ ॥ ಯಸ್ಮಾದಾಗ್ನೇಯಂ ತೇಜೋಽಪೇಕ್ಷಿತಂ ತಸ್ಮಾದಜುಹ್ವತೋ ಹೋಮರಹಿತಾತ್ಪುರುಷಾಜ್ಜುಹ್ವದೇವ ಹೋಮಂ ಕುರ್ವನ್ನೇವ ಪುರುಷೋಽವಸೀಯಾನತ್ಯಂತಂ ಶ್ರೇಷ್ಠ ಇತ್ಯೇವಂ ಜನಾ ಆಹುಃ ॥**

ಇಲ್ಲಿ ಅಹಿರ್ಬುಧ್ನ್ಯಃ ಎಂಬ ದೇವತೆಯನ್ನು ಸ್ತುತಿಸುವುದಕ್ಕಾಗಿ **ಉತ ನೋಽಹಿರ್ಬುಧ್ನ್ಯಃ** (ಋ. ಸಂ. ೬-೫-೧೪) ಎಂಬ ಋಕ್ಕನ್ನು ಪಠಿಸಿ ಸ್ತುತಿಸಬೇಕೆಂದು ಹೇಳಿರುವರು—ಪ್ರಜಾಪತಿಯು ತಾನು ಸೃಷ್ಟಿಸಿ ರಕ್ಷಿಸಿದ ಪ್ರಜೆಗಳನ್ನು ತನ್ನ ಸ್ವಕೀಯರೆಂದು ಪರಿಗಣಿಸಿದನಂತರ (ಎಂದರೆ ಅಗ್ನಿಯ ತಾಪದಿಂದ ಉದಕಪ್ರೋಕ್ಷಣೆ ಮೂಲಕ ರಕ್ಷಿಸಿ) ಆ ತನ್ನ ಪ್ರಜೆಗಳಲ್ಲಿ ಅಹಿರ್ಬುಧ್ನ್ಯವೆಂಬ ಅಗ್ನಿವಿಶೇಷದಿಂದ ಕಾಂತಿಯನ್ನು ಎಂದರೆ ದಿವ್ಯತೇಜಸ್ಸನ್ನುಂಟುಮಾಡಿದನು. ಇಲ್ಲಿ ಅಹಿರ್ಬುಧ್ನ್ಯವೆಂದರೆ ಗಾರ್ಹಪತ್ಯಾಗ್ನಿಯು ಎಂದರ್ಥವು. ಆದ್ದರಿಂದ ಅಹಿರ್ಬುಧ್ನ್ಯದೇವತಾಕವಾದ ಮಂತ್ರಪಠನದಿಂದ ಪ್ರಜೆಗಳಲ್ಲಿ ಪರೋಕ್ಷವಾಗಿ ದಿವ್ಯತೇಜಸ್ಸನ್ನು ಸ್ಥಾಪಿಸಿದಂತಾಗುವುದು. ಎಂದರೆ ಯಜಮಾನನ ಪುತ್ರಾದಿಸಂತತಿಗಳಲ್ಲಿ ಈ ದಿವ್ಯತೇಜಸ್ಸನ್ನು ಹೋತೃವು ಸ್ಥಾಪಿಸುವನು. ಆದ್ದರಿಂದ ಈ ಅಹಿರ್ಬುಧ್ನ್ಯ ಸಂಬಂಧವಾದ ಆಹುತಿಯನ್ನು ಅರ್ಪಿಸುವ ಪುರುಷನು ಆ ವಿಧವಾಗಿ ಆಹುತಿಯನ್ನರ್ಪಿಸದಿರುವ ಪುರುಷನಿಗಿಂತ ಅತಿಶಯವಾದ ಶರೀರಕಾಂತಿಯಿಂದ ಬೆಳಗುವನು.

ಹಿಂದೆ ಹೇಳಿದ ಜಾತವೇದಸ್ಯ ಸೂಕ್ತದಲ್ಲಿ ಸೇರಿಸಿ ಪಠಿಸಲ್ಪಡಬೇಕಾದ ನಿವಿನ್ಮಂತ್ರಗಳು – **ಅಗ್ನಿರ್ಜಾತವೇದಾಃ ಸೋಮಸ್ಯ ಮತ್ಸತ್ । ಸ್ವನೀಕಶ್ಚಿತ್ರಭಾನುಃ । ಅಪ್ರೋಷಿವಾನ್ಗೃಹಪತಿಃ । ತಿರಸ್ತಮಾಂಸಿ ದರ್ಶತಃ । ಘೃತಾಹವನ ಈಡ್ಯಃ । ಬಹುಲವರ್ತ್ಮಾಸ್ತೃತ ಯಜ್ವಾ । ಪ್ರತೀತ್ಯಾ ಶತ್ರೂನ್ ಜೇತಾಪರಾಜಿತಃ । ಅಗ್ನೇ ಜಾತವೇದೋಽಭಿದ್ಯುಮ್ನಮಭಿಸಹ ಆಯಚ್ಛಸ್ವ । ತುಶೋ ಅಪ್ರುಶಃ । ಸಮೇದ್ಧಾರಂ ಸ್ತೋತಾರಮಂಹಸಸ್ಪಾಹಿ । ಅಗ್ನಿರ್ಜಾತವೇದಾ ಇಹ ಅವದಿಹ ಸೋಮಸ್ಯ ಮತ್ಸತ್ । ಪ್ರೇಮಾಂ ದೇವೋ ದೇವಹೂತಿಮವತು ॥** ಇದು ಜಾತವೇದಸ್ಯಸೂಕ್ತದ ಮಧ್ಯದಲ್ಲಿ ಸೇರಿಸಿ ಪಠಿಸಬೇಕಾದ ನಿವಿನ್ಮಂತ್ರವು.

## *English Translation*

### (The Jatavedas Nivid hymn)

He repeats the hymn addressed to Jatavedas. All beings after having been created by Prajapati walked having their faces turned aside, and did not turn (their backs). He (Prajapati) then encircled them with fire, whereupon they turned to Agni. After they had turned to Agni, Prajapati said, "The creatures which are born (jata), I obtained (avidam) through this one (Agni)." From these words came forth the Jatavedas hymn. That is the reason that Agni is called Jatavedas.

The creatures being encircled by fire were hemmed in walking. They stood in flames and blazing. Prajapati sprinkled them with water. That is the reason that the Hotar, after having recited the Jatavedas hymn, repeats a hymn addressed to the waters: apo hi shtha mayobhuvah (10-9). Thence it is to be recited by him as if he were extinguishing fire (i.e. slowly).

Prajapati after having sprinkled the creatures with water, thought, that they (the creatures) were his own. He provided them with an invisible lustre through Ahir budhanya. This Ahir budhnya (lit. the serpent of the depth) is the Agni Garhapatya (the household fire). By repeating therefore a verse addressed to Ahir budhnya, the Hotar puts the invisible lustre in the offspring (of the sacrificer). Thence they say, " one who brings oblations is more shinning than one who does not bring them."

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯಸ್ಯ ತ್ರಯೋದಶಾಧ್ಯಾಯೇ ದ್ವಾದಶಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದ ಹದಿಮೂರನೆಯ ಅಧ್ಯಾಯದಲ್ಲಿ ಹನ್ನೆರಡನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ತ್ರಯೋದಶಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ಹದಿಮೂರನೆಯ ಖಂಡವು



[ದೇವಪತ್ನಿಯರಿಗೂ, ಯಮನೆಂಬ ದೇವತೆಗೂ, ಪಿತೃಗಳಿಗೂ ಅರ್ಪಿಸಬೇಕಾದ ಆಹುತಿ ವಿಶೇಷಗಳು,]



**ದೇವಾನಾಂ ಪತ್ನೀಃ ಶಂಸತ್ಯನೂಚೀರಗ್ನಿಂ ಗೃಹಪತಿಂ ತಸ್ಮಾದನೂಚೀ ಪತ್ನೀ ಗಾರ್ಹಪತ್ಯಮಾಸ್ತೇ ।**

ಅಥ ದೇವಾನಾಂ ಪತ್ನೀರುಶತೀರವಂತು ನ ಇತ್ಯೃಗ್ದ್ವಯಂ ದೇವಪತ್ನೀದೇವತಾಕಂ ವಿಧತ್ತೇ—ದೇವಾನಾಂ ಪತ್ನೀರಿತ್ಯನೇನ ದೇವತಾವಾಚಕೇನ ಶಬ್ದೇನ ತತ್ಪ್ರತಿಪಾದಕಮೃಗ್ದ್ವಯಂ ವಿವಕ್ಷಿತಂ ॥ ತತಶ್ಚ ದೇವಾನಾಂ ಪತ್ನೀರ್ಗೃಹಪತಿಮನೂಚೀಃ ಶಂಸೇತ್ ॥ ಗೃಹಪತಿರಗ್ನಿರಿತ್ಯೇತಾಭ್ಯಾಂ ಶಬ್ದಾಭ್ಯಾಂ ತತ್ಪ್ರತಿಪಾದಿಕೋಽತ ನೋಽಹಿರ್ಬುಧ್ನ್ಯ ಇತ್ಯೃಗ್ವಿವಕ್ಷಿತಾ ॥ ತದಪೇಕ್ಷಯಾ ದೇವಪತ್ನೀನಾಮುಕಸ್ಯ ಮಂತ್ರಜಾತಸ್ಯ ಪಶ್ಚಾದ್ಭಾವಿತ್ವಮನೂಕ್ತ್ವಂ ॥ ಅತಃ ಪೂರ್ವೋಕ್ತಾಯಾ ಋಚಃ ಪಶ್ಚಾಚ್ಛಂಸೇದಿತ್ಯರ್ಥಃ ॥ ಯಸ್ಮಾದತ್ರೈವಂ ತಸ್ಮಾದ್ಯಜ್ಞಶಾಲಾಯಾಂ ಪತ್ನೀ ಗಾರ್ಹಪತ್ಯಮನೂಚ್ಯ ಪಶ್ಚಾದವತಿಷ್ಠತ ಇತ್ಯರ್ಥಃ ॥

ಈಗ ದೇವಪತ್ನಿಯರನ್ನು ಸ್ತುತಿಸುವ **ದೇವಾನಾಂ ಪತ್ನೀರುಶತೀರವಂತು** (ಋ. ಸಂ. ೫-೪೬-೭,೮) ಎಂಬ ಎರಡು ಋಕ್ಕುಗಳನ್ನು ವಿವರಿಸುವರು— ಈ ಋಕ್ಕುಗಳಲ್ಲಿ **ದೇವಾನಾಂ ಪತ್ನೀಃ** ಎಂಬ ಶಬ್ದಪ್ರಯೋಗವಿರುವುದರಿಂದ ಇವು ದೇವಪತ್ನಿಯರನ್ನು ಪ್ರತಿಪಾದಿಸುವ ಋಕ್ಕುಗಳಾಗಿವೆ. ಈ ಋಕ್ಕುಗಳನ್ನು ಪಠಿಸಬೇಕೆಂದು ಆಶ್ವ. ಶ್ರೌ. ಸೂ. ೫-೨೦-೯ರಲ್ಲಿಯೂ ಹೇಳಿದೆ. ಅನಂತರ **ಗೃಹಪತಿಮುಗ್ನಿಂ ಅಸೂಚೀಃ** ಎಂಬ ಮಂತ್ರವನ್ನು ಪಠಿಸಬೇಕು. ಗೃಹಪತಿ ಮತ್ತು ಅಗ್ನಿ ಎಂಬ ಎರಡು ಶಬ್ದಗಳೂ **ಉತ ನೋಽಹಿರ್ಬುರ್ಧ್ನ್ಯಃ** ಎಂಬ ಋಕ್ಕಿನಲ್ಲಿ ಪ್ರತಿಪಾದಿತವಾಗಿವೆ. ಆದ್ದರಿಂದ ಈ ಋಕ್ಕನ್ನು ಪಠಿಸಿದನಂತರ **ದೇವಾನಾಂ ಪತ್ನೀಃ** ಎಂಬ ಋಕ್ಕನ್ನು ಪಠಿಸಬೇಕು ಏಕೆಂದರೆ ಯಜ್ಞಶಾಲೆಯಲ್ಲಿ ಯಜಮಾನನ ಪತ್ನಿಯು ಗಾರ್ಹಪತ್ಯವೆಂಬ ಅಗ್ನಿಕುಂಡದ ಹಿಂಭಾಗದಲ್ಲಿ ಕುಳಿತಿದ್ದು ಅನಂತರ ಎದ್ದು ಹೋಗುವುದರಿಂದ ಮೊದಲು ಗಾರ್ಹಪತ್ಯಾಗ್ನಿಯನ್ನೂ ಅನಂತರ ದೇವಪತ್ನಿಯರನ್ನು ಸ್ತುತಿಸಬೇಕು ಎಂದಭಿಪ್ರಾಯವು.

ತದಾಹೂ ರಾಕಾಂ ಪೂರ್ವಾಂ ಶಂಸೇಜ್ಜಾಮ್ಯೈ ವೈ ಪೂರ್ವಪೇಯ-
ಮಿತಿ ತತ್ತನ್ನಾದೃತ್ಯಂ ದೇವಾನಾಮೇವ ಪತ್ನೀಃ ಪೂರ್ವಾಃ
ಶಂಸೇದೇಷ ಹ ವಾ ಏತತ್ಪತ್ನೀಷು ರೇತೋ ದಧಾತಿ ಯದಗ್ನಿ-
ರ್ಗಾರ್ಹಪತ್ಯೋಽಗ್ನಿನೈವಾಽಽಸು ತದ್ಗಾರ್ಹಪತ್ಯೇನ ಪತ್ನೀಷು
ಪ್ರತ್ಯಕ್ಷಾದ್ರೇತೋ ದಧಾತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ
ಪಶುಭಿರ್ಯ ಏವಂ ವೇದ ॥

ಅತ್ರ ಕಂಚಿತ್ಪೂರ್ವಪಕ್ಷಮುತ್ಥಾಪಯತಿ-ಸಂಪೂರ್ಣಚಂದ್ರಮಂಡಲಯುಕ್ತಾ ಪೌರ್ಣಮಾಸೀ ರಾಕಾ ॥ ತದಭಿಮಾನಿದೇವತಾಯಾಃ ಪ್ರತಿಪಾದಿಕರ್ಗಪಿ ರಾಕೇತ್ಯುಚ್ಯತೇ ॥ ತಾಂ ರಾಕಾಂ ಪೂರ್ವಾಂ ದೇವಪತ್ನೀಭ್ಯಃ ಪೂರ್ವಭಾವಿನೀಂ ಶಂಸೇತ್ ॥ ಸೇಯಂ ರಾಕಾ ದೇವಾನಾಂ ಜಾಮೀ ನಾಮ ಭಗಿನೀ ತಸ್ಮಾತ್ತಸ್ಯಾ ಏವ ಪೂರ್ವಪೇಯಂ ಪ್ರಥಮತಃ ಸೋಮಪಾನಂ ಯುಕ್ತಮಿತಿ ಪೂರ್ವಃ ಪಕ್ಷಃ ॥ ತಂ ನಿರಾಕೃತ್ಯ ದೇವಪತ್ನೀನಾಮೇವ ಪೂರ್ವತ್ವಂ ದರ್ಶಯತಿ ರಾಕಾಯಾಃ ಪೂರ್ವತ್ವಮನಾದರಣೀಯಂ ದೇವಪತ್ನೀನಾಮೇವ ಪೂರ್ವತ್ವಂ ಯುಕ್ತಂ ಗಾರ್ಹಪತ್ಯೋಽಗ್ನಿಃ ಪತ್ನೀಷ್ವೇವ ರೇತಃ ಸ್ಥಾಪಯತಿ ನ ತು ಭಗಿನ್ಯಾಂ ತಸ್ಮಾತ್ಪತ್ನೀನಾಂ ಪೂರ್ವಶಂಸನೇನ ಪ್ರತ್ಯಕ್ಷಮೇವ ಪತ್ನೀಷು ಗಾರ್ಹಪತ್ಯಮುಖೇನ ರೇತಃ ಸ್ಥಾಪಯತಿ ತಚ್ಚ ಪ್ರಜಾತ್ಯೈ ಸಂಪದ್ಯತೇ ॥ ವೇದನಂ ಪ್ರಶಂಸತಿ ॥

ಇಲ್ಲಿ ಒಂದು ಪೂರ್ವಪಕ್ಷವು ಉಂಟಾಗಿರುವುದು -- ಸಂಪೂರ್ಣ ಚಂದ್ರಮಂಡಲದಿಂದ ಕೂಡಿದ ಪೌರ್ಣಮಾಸಿಗೆ **ರಾಕಾ** ಎಂದು ಹೆಸರು. ಈ ರಾಕಾಭಿಮಾನಿದೇವತೆಯನ್ನು ಪ್ರತಿಪಾದಿಸುವ ಋಕ್ಕಿಗೆ ರಾಕಾ ಎಂದು ಹೆಸರು. ಈ ರಾಕಾ ಎಂಬ ದೇವತಾಕವಾದ ಋಕ್ಕನ್ನು ದೇವಪತ್ನಿಯರಿಗಿಂತ ಮೊದಲು ಪಠಿಸಬೇಕು. ಈ ರಾಕಾ ಎಂಬ ದೇವತೆಯು ದೇವತೆಗಳಿಗೆ ಸಹೋದರಿಯು. ಆದ್ದರಿಂದ ದೇವತೆಗಳಿಗೆ ಸಹೋದರಿಯಾದ ಈ ರಾಕಾ ಎಂಬ ದೇವತೆಯು ದೇವಪತ್ನಿಯರಿಗಿಂತ ಮೊದಲು ಸೋಮಪಾನಮಾಡುವುದು ಯುಕ್ತವು ಎಂದು ಪೂರ್ವಪಕ್ಷವಾದಿಗಳು ಹೇಳುವರು. ಅದು ಸರಿಯಲ್ಲ ದೇವಪತ್ನಿಯರೇ ಮೊದಲು ಸೋಮಪಾನವನ್ನು ಇಲ್ಲಿ ವಿವರಿಸುವರು- ರಾಕಾ ಎಂಬ ದೇವತೆಯನ್ನು ಮೊದಲು ಪರಿಗಣಿಸುವುದು ಸರಿಯಲ್ಲ ದೇವಪತ್ನಿ

ಯರಿಗೇ ಸೋಮಪಾನದಲ್ಲಿ ಪ್ರಥಮಸ್ಥಾನವು ಲಭಿಸಬೇಕು. ಏಕೆಂದರೆ ಗಾರ್ಹಪತ್ಯಾಗ್ನಿಯು ಪತ್ನಿಯರಲ್ಲಿ ರೇತಸ್ಸನ್ನು (ವೀರ್ಯವನ್ನು) ಸ್ಥಾಪಿಸುವನು. ಭಗಿನಿಯರಲ್ಲಲ್ಲ. ಆದ್ದರಿಂದ ದೇವಪತ್ನಿಯರನ್ನು ಮೊದಲು ಪ್ರಶಂಸಿಸುವುದೇ ಯುಕ್ತವು. ಅಗ್ನಿಯು ಗಾರ್ಹಪತ್ಯಮೂಲಕವಾಗಿ ಪತ್ನಿಯರಲ್ಲಿ ರೇತಸ್ಸನ್ನು ಸ್ಥಾಪಿಸುವನು. ಆದರಿಂದ ಪ್ರಜೋತ್ಪಾದನೆಯುಂಟಾಗುವುದು. ಈ ವಿಷಯವನ್ನು ತಿಳಿದು ಅದರಂತೆ ಆಚರಿಸುವ ಪುರುಷನು ಪ್ರಜಾರೂಪವಾದ ಸಂತಾನವನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

**ತಸ್ಮಾತ್ಸಮಾನೋದರ್ಯಾ ಸ್ವಸಾನ್ಯೋದರ್ಯಾಯೈ ಜಾಯಾಯಾ ಅನುಜೀವಿನೀ ಜೀವತಿ ।**

**ಲೌಕಿಕೋದಾಹರಣೇನ ಪತ್ನೀನಾಂ ಪೂರ್ವಭಾವಿತ್ವಂ ಭಗಿನ್ಯಾಃ ಪಶ್ಚಾದ್ಭಾವಿತ್ವಂ ಚೋಪಪಾದಯತಿ । ಪುರುಷಾಣಾಮೇಕೋದರಜಾಽಪಿ ಭಗಿನೀ ಪರಸ್ಮೈ ದೀಯತೇ। ಭಿನ್ನೋದರಜಾಽಪಿ ಜಾಯಾ ಸ್ವಾರ್ಥಂ ಸ್ವೀಕ್ರಿಯತೇ। ತಥಾ ಸತಿ ಪರಸ್ಮೈ ದತ್ತಾ ಭಗಿನೀ ಯದಾಕದಾಚಿದ್ಭ್ರಾತೃಜಾಯಾಮನುಸೃತ್ಯ ತದ್ದತ್ತಾನ್ನಪಾನಾಭ್ಯಾಂ ಜೀವಂತೀ ಸತೀ ಜೀವತಿ ಕಂಚಿತ್ಕಾಲಮವತಿಷ್ಠತಿ ॥**

ಲೋಕವ್ಯವಹಾರದಲ್ಲಿಯೂ ಪತ್ನಿಗೆ ಮೊದಲು ಸ್ಥಾನವನ್ನೂ ಭಗಿನಿಗೆ ಎರಡನೆಯ ಸ್ಥಾನವೂ ಇರುವುದೆಂದು ತಿಳಿಸುವರು—ಒಬ್ಬ ಪುರುಷನಿಗೆ ಪತ್ನಿಯೂ ಮತ್ತು ಸಹೋದರಿಯೂ ಇರುವರೆಂದು ಭಾವಿಸೋಣ. ಹೀಗಿರುವಲ್ಲಿ ಎಂದರೆ ಪತ್ನಿ ಮತ್ತು ಸಹೋದರಿ ಎಂಬಿಬ್ಬರಲ್ಲಿ ಯಾರಿಗೆ ಮೊದಲು ಸ್ಥಾನವನ್ನು (ಪ್ರಾಧಾನ್ಯತೆಯನ್ನು) ಕೊಡಬೇಕು ಎಂದರೆ ಈ ಸಂಶಯವನ್ನು ಪರಿಹರಿಸುವರು. ಪುರುಷನು ಮತ್ತು ಅವನ ಸಹೋದರಿಯು ಏಕೋದರದಲ್ಲಿ ಜನಿಸಿರುವುದು ಸತ್ಯವಾದರೂ ಸಹೋದರಿಗೆ ಪತ್ನಿಗಿಂತ ಪ್ರಾಧಾನ್ಯತೆಯು ಸಲ್ಲುವುದಿಲ್ಲ. ಪತ್ನಿಯು ಬೇರೆಯವನ (ಪುರುಷನ ತಾಯಿಯಲ್ಲದ) ಉದರದಲ್ಲಿ ಜನಿಸಿದ್ದರೂ ಪುರುಷನು ಪತ್ನಿಯನ್ನು ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವನು ಪತ್ನಿಯೂ ಸಹ ತನ್ನ ಪತಿಯಾದ ಪುರುಷನೇ ತನ್ನವನೆಂದು ಭಾವಿಸುವಳು. ಆದರೆ ಸಹೋದರಿಯ ವಿಷಯವು ಹಾಗಲ್ಲ. ಈ ಸಹೋದರಿಯು ಪುರುಷನಂತೆ ಒಂದೇ ತಾಯಿಯ ಉದರದಲ್ಲಿ ಜನಿಸಿದ್ದರೂ ಈ ಸ್ತ್ರೀಯನ್ನು ಪರಾರ್ಥವಾಗಿ ಎಂದರೆ ಇನ್ನೊಬ್ಬ ಪುರುಷನಿಗೆ ಕೊಟ್ಟು ವಿವಾಹ ಮಾಡುವರು. ತನ್ನ ಪತಿಯಾದ ಈ ಪರಪುರುಷನನ್ನೇ ತನ್ನವನೆಂದೂ ಏಕೋದರದಲ್ಲಿ ಜನಿಸಿದ ಪುರುಷನು (ಸಹೋದರನು) ತನ್ನವನಲ್ಲವೆಂದೂ ಸಹೋದರಿಯು ಭಾವಿಸುವಳು. ಮತ್ತು ಸಹೋದರಿಯು ತನ್ನ ಸಹೋದರನಾದ ಪುರುಷನ ಮನೆಗೆ ಬಂದಾಗ ಅವನ ಪತ್ನಿಯನ್ನೇ ಅನುಸರಿಸಿ ಹೊಂದಿಕೊಂಡುಹೋಗುವಳು. ತಾನು ಪತ್ನಿಗಿಂತ ಹೆಚ್ಚೆಂದು ತೋರ್ಪಡಿಸುವುದಿಲ್ಲ. ಲೋಕ ವ್ಯವಹಾರದಲ್ಲಿ ಈವಿಧ ಕಾರಣಗಳಿರುವುದರಿಂದ ಪುರುಷನು ತನ್ನ ಪತ್ನಿಯನ್ನೇ ಪ್ರಾಧಾನ್ಯವಾಗಿ ಎಣಿಸಿ ಅನಂತರ ತನ್ನ ಭಗಿನಿ ಅಥವಾ ಸಹೋದರಿಯನ್ನು ಗಮನಿಸಬೇಕು. ಆದ್ದರಿಂದ ಇಲ್ಲಿ ದೇವಪತ್ನಿಯರಿಗೆ ಮೊದಲು ಸೋಮಪಾನವನ್ನು ಕಲ್ಪಿಸಿ ಅನಂತರ ದೇವತೆಗಳಿಗೆ ಭಗಿನೀಸ್ಥಾನದಲ್ಲಿರುವ ರಾಕಾ ಎಂಬ ಸ್ತ್ರೀದೇವತೆಗೆ ಸೋಮವನ್ನರ್ಪಿಸಬೇಕೆಂದಭಿಪ್ರಾಯವು.

**ರಾಕಾಂ ಶಂಸತಿ ರಾಕಾ ಹ ವಾ ಏತಾಂ ಪುರುಷಸ್ಯ ಸೇವನೀಂ ಸೀವ್ಯತಿ ಯೈಷಾ ಶಿಶ್ನೇಽಧಿ ಪುಮಾಂಸೋಽಸ್ಯ ಪುತ್ರಾ ಜಾಯಂತೇ ಯ ಏವಂ ವೇದ ॥**

ರಾಕಾಮಹಮಿತ್ಯೃಗ್ದ್ವಯಂ ವಿಧತ್ತೇ—ದೇವತಾವಾಚಿರಾಕಾಶಬ್ದೇನ ತದಭಿಧಾಯಿನ್ಯೃಗಭಿಧೀಯತೇ । ತಾಂ ಶಂಸೇತ್ ॥ ಪುರುಷಸ್ಯ ಶಿಶ್ನೇಽಧಿ ಶಿಶ್ನಸ್ಯೋಪರಿ ಸ್ಥಿತಾ ಗುದವಲಯಪರ್ಯಂತಂ ವ್ಯಾಪ್ತಾ ಯೈಷಾ ಸೇವನೀ, ಏತಚ್ಛಬ್ದೋಪಸ್ಥಪದಾಭಿಧೇಯಾ ಶಿರಾಽಸ್ತಿ ತಾಂ ಶಿರಾಂ ರಾಕಾಖ್ಯಾ ದೇವತಾ ಸೀವ್ಯತಿ ದೃಢಬದ್ಧಾಂ ಕರೋತಿ । ತಸ್ಮಾತ್ತದೀಯಾಮೃಚಂ ಶಂಸೇತ್ ॥ ವೇದನಂ ಪ್ರಶಂಸತಿ—

ರಾಕಾಮಹಂ ಎಂಬ ಎರಡು ಋಕ್ಕುಗಳನ್ನು ವಿವರಿಸುವರು—ರಾಕಾಮಹಂ ಎಂಬ ಋಕ್ಕಿನ ಪ್ರಾರಂಭದಲ್ಲಿ ರಾಕಾಂ ಎಂಬ ಶಬ್ದವಿರುವುದರಿಂದ ಈ ಋಕ್ಕಿನಲ್ಲಿ (ಋ. ಸಂ. ೨-೩೨-೪) ರಾಕಾ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ಪುರುಷನ ಶಿಶ್ನದ ಮೇಲುಭಾಗದಲ್ಲಿ ಗುದಪ್ರದೇಶದವರೆಗೂ ವ್ಯಾಪಿಸಿರುವ ವಲಯ ಪ್ರದೇಶವನ್ನು ಈ ರಾಕಾದೇವತೆಯು ಹೊಲಿದು ದೃಢವಾಗಿರುವಂತೆ ಮಾಡುತ್ತಾಳೆ. ಆ ಋಕ್ಕನ್ನು ಇಲ್ಲಿ ಹೇಳಲಾಗಿದೆ—

ರಾಕಾಮಹಂ ಸುಹವಾಂ ಸುಷ್ಟುತೀ ಹುವೇ ಶೃಣೋತು ನಃ ಸುಭಗಾ ಬೋಧತು ತ್ಮನಾ ।
ಸೀವ್ಯತ್ವಪಃ ಸೂಚ್ಯಾಚ್ಛಿದ್ಯಮಾನಯಾ ದದಾತು ವೀರಂ ಶತದಾಯ ಮುಕ್ಥ್ಯಂ ॥
(ಋ. ಸಂ. ೨-೩೨-೪)

ಇದು ಮೊದಲನೆಯ ಋಕ್ಕು. ಇದರ ಅರ್ಥವಿವರಣೆಯು—

ಶ್ರೇಷ್ಠವಾದ ಆಹ್ವಾನಕ್ಕೆ ಅರ್ಹಳಾದ ರಾಕಾ ಎಂಬ ದೇವತೆಯನ್ನು ಶ್ರೇಷ್ಠವಾದ ಸ್ತುತಿಪೂರ್ವಕವಾಗಿ ನಾನು ಪ್ರಾರ್ಥಿಸಿ ಕರೆಯುತ್ತೇನೆ. ಉತ್ತಮವಾದ ಧನವುಳ್ಳ ಆ ದೇವಿಯು ನಮ್ಮ ಆಹ್ವಾನವನ್ನು ಕೇಳಲಿ. ತಾನಾಗಿಯೇ ನಮ್ಮ ಇಷ್ಟಾರ್ಥವನ್ನು ತಿಳಿಯಲಿ. ಹರಿದುಹೋದ ವಸ್ತ್ರವನ್ನು ಸೂಜಿಯಿಂದ ಹೊಲೆದು ಸರಿಪಡಿಸುವಂತೆ ಪುತ್ರೋತ್ಪಾದನರೂಪವಾದ ಕರ್ಮವನ್ನು ಅವಿಚ್ಛಿನ್ನವಾದ ತನ್ನ ಅನುಗ್ರಹ ಬುದ್ಧಿಯಿಂದ ಹೆಣೆಯಲಿ. ಪರಾಕ್ರಮಿಯಾದವನೂ ಬಹು ಧನವುಳ್ಳವನೂ ಮತ್ತು ಪ್ರಶಸ್ಯನೂ ಆದ ಪುತ್ರನನ್ನು ಕೊಡಲಿ.

ಈ ಋಕ್ಕಿನ ವಿಷಯದಲ್ಲಿ ಕೆಲವು ವಿಶೇಷಸಂಗತಿಗಳನ್ನು ತಿಳಿಸಲಾಗುವುದು. ಪತ್ನೀಸಂಯಾಜವೆಂಬ ಇಷ್ಟಿಯಲ್ಲಿ ಗೃಹಪತಿಯೆಂಬ ಅಗ್ನಿಹೋಮಕ್ಕೆ ಪೂರ್ವಭಾವಿಯಾಗಿ ರಾಕಾ ಮತ್ತು ಸಿನೀವಾಲಿ ಎಂಬ ದೇವತೆಗಳನ್ನು ಉದ್ದೇಶಿಸಿ ಹೋಮ ಮಾಡಬೇಕು. ಆಗ ರಾಕಾಹೋಮದಲ್ಲಿ ರಾಕಾಮಹಂ ಎಂಬ ಈ ಋಕ್ಕನ್ನೂ ಯಾಸ್ತೇ ರಾಕೇ ಎಂಬ ಇದರ ಮುಂದಿನ ಋಕ್ಕನ್ನೂ ಯಾಜ್ಯಾ ಮತ್ತು ಪುರೋನುವಾಕ್ಯಾ ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ರಾಕಾಮಹಂ ಸಿನೀವಾಲಿ ಕುಹೂಮಹಮಿತಿ ದ್ವೇ ದ್ವೇ ಯಾಜ್ಯಾನುವಾಕ್ಯೇ (ಆಶ್ವ. ಶ್ರೌ. ಸೂ. ೧-೧೦) ಎಂಬ ಸೂತ್ರದಿಂದ ವಿವೃತವಾಗಿರುವುದು. ಮತ್ತು ಮರುದ್ದೇವತಾಕವಾದ ಮಂತ್ರಗಳಲ್ಲಿ ಈ ಋಕ್ಕುಗಳನ್ನು ಧಾಯ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ರಾಕಾಮಹಮಿತಿ ದ್ವೇ (ಆಶ್ವ. ಶ್ರೌ. ಸೂ. ೫-೨೦) ಎಂಬ ಸೂತ್ರದಿಂದ ವಿವೃತವಾಗಿರುವುದು.

ಈ ಋಕ್ಕಿನಲ್ಲಿಯೂ ಇದರ ಮುಂದಿನ ಋಕ್ಕಿನಲ್ಲಿಯೂ ರಾಕಾ ಎಂಬ ದೇವತೆಯನ್ನು ಸ್ತುತಿಸಲಾಗಿದೆ. ರಾಕಾ—ಸಂಪೂರ್ಣಚಂದ್ರಾ ಪೌರ್ಣಮಾಸೀ ಸಂಪೂರ್ಣವಾದ ಚಂದ್ರನಿಂದ ಬೆಳಗುತ್ತಿರುವ ರಾತ್ರಿಗೆ ಪೂರ್ಣಿಮಾ ಎಂದು ಹೆಸರು ಲೋಕದಲ್ಲಿ ರೂಢಿಯಲ್ಲಿದೆ. ಇದನ್ನೇ ರಾಕಾ ಎಂದು ಹೇಳಿದೆ. ಸುಹವಾಂ ಸುಷ್ಟುತೀ ಅಹಂ ಹುವೇ ಸ್ವಾಹ್ವಾನಾಂ ಆಹ್ವಾನಪ್ರಯೋಜನಕಾರಿಣೀಂ ಶೋಭನಯಾ ಸ್ತುತ್ಯಾ ಅಹಮಾಹ್ವಯಾಮಿ ಈ ದೇವಿಯು ತನ್ನನ್ನು ಆಹ್ವಾನ

ಮಾಡುವವರ ಅಭಿಲಾಷೆಗಳನ್ನು ನೆರವೇರಿಸಿಕೊಡುವವಳಾದುದರಿಂದ ಈ ದೇವಿಯನ್ನು ಉತ್ತಮವಾದ ಸ್ತುತಿಯಿಂದ ಆಹ್ವಾನ ಮಾಡುವೆನು ಎಂದು ಯಜಮಾನನು ಹೇಳಿದ್ದಾನೆ.

**ಸುಭಗಾ** ಎಂಬ ಪದಕ್ಕೆ ಉತ್ತಮವಾದ ಧನವನ್ನು ಹೊಂದಿರುವವಳೆಂದು ಅರ್ಥಮಾಡಿ ಉತ್ತಮವಾದ ಧನವುಳ್ಳ ಈ ದೇವಿಯು ಯಜಮಾನನ ಆಹ್ವಾನವನ್ನು ಕೇಳಲಿ ಎಂದೂ ಕೇಳಿದನಂತರ (ಶ್ರವಣಮಾಡಿದನಂತರ) **ತ್ಮನಾ ಬೋಧತು** ಯಜಮಾನನು ಆಹ್ವಾನಮಾಡಿದ ಉದ್ದೇಶವನ್ನು ತಾನಾಗಿಯೇ ತಿಳಿಯಲಿ ಎಂದೂ **ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು** ಯಜಮಾನನ ಸಂತತಿಯು ವಿಚ್ಛಿನ್ನನಾಗದಂತೆ ಅನುಗ್ರಹಿಸಲಿ ಎಂದೂ **ವೀರಂ ಶತದಾಯಂ ಉಕ್ಥ್ಯಂ ಪುತ್ರಂ ದದಾತು** ಪರಾಕ್ರಮಶಾಲಿಯೂ ಪ್ರಭೂತವಾದ ಧನವಂತನೂ ಅಥವಾ ಪ್ರಭೂತವಾಗಿ ದಾನಮಾಡುವವನೂ ಪ್ರಶಸ್ಯಮಾನನೂ ಆಗಿರುವ ಪುತ್ರನನ್ನು ಅನುಗ್ರಹಿಸಲಿ ಎಂದೂ ಆಶಿಸಿದೆ.

**ಅಪಃ ಸೂಚ್ಯಾ ಅಚ್ಛಿದ್ಯಮಾನಯಾ ಸೀವ್ಯತು–ಪುತ್ರೋತ್ಪಾದನಲಕ್ಷಣಂ ಕರ್ಮ ಸೂಚೀಸ್ಥಾನೀಯಯಾ ಅವಿಚ್ಛಿನ್ನಯಾ ಅನುಗ್ರಹಬುದ್ಧ್ಯಾ ಸಂತನೋತು । ಯಥಾ ವಸ್ತ್ರಾದಿಕಂ ಸೂಚ್ಯಾ ಸ್ಯೂತಂ ಚಿರಂ ತಿಷ್ಠತಿ ಏವಮಿದಂ ಕರೋತು ।** ಅಪಃ ಎಂಬ ಪದವು ಕರ್ಮನಾಮಗಳಲ್ಲಿ (ನಿ. ೩-೨) ಯಾಸ್ಕರಿಂದ ಉಕ್ತವಾಗಿದೆ. ಈ ಪದಕ್ಕೆ ಪುತ್ರೋತ್ಪಾದನರೂಪವಾದ ಕರ್ಮವೆಂದು ಇಲ್ಲಿ ಅರ್ಥವನ್ನು ವಿವರಿಸಿದೆ. ರಾಕಾದೇವಿಯ ಅನುಗ್ರಹವು ಸೂಜಿಯಿಂದ ಹೊಲಿಯಲ್ಪಟ್ಟ (ವಸ್ತ್ರದಹಾಗೆ) ವಸ್ತ್ರವು ಬಹಳಕಾಲದವರೆಗೂ ಹಾಗೆ (ಬಾಳಿಕೆಬರುವಂತೆ) ಇರಲಿ ಎಂಬ ಅರ್ಥವನ್ನು ಇಲ್ಲಿ ವಿವರಿಸಿದೆ.

ರಾಕಾದೇವತೆಯ ಪರವಾದ ಎರಡನೆಯ ಋಕ್ಕು—

**ಯಾಸ್ತೇ ರಾಕೇ ಸುಮತಯಃ ಸುಪೇಶಸೋ ಯಾಭಿರ್ದದಾಸಿ ದಾಶುಷೇ ವಸೂನಿ ।**
**ತಾಭಿರ್ನೋ ಅದ್ಯ ಸುಮನಾ ಉಪಾಗಹಿ ಸಹಸ್ರಪೋಷಂ ಸುಭಗೇ ರರಾಣಾ ॥**

(ಋ. ಸಂ. ೨-೩೨-೫)

ಇದರ ಅರ್ಥವು ಈರೀತಿ ಇರುವುದು—ಉತ್ತಮವಾದ ಧನವುಳ್ಳ ಎಲೈ ರಾಕಾದೇವಿಯೇ, ಶ್ರೇಷ್ಠವಾದ ರೂಪವುಳ್ಳ ನಿನ್ನ ಯಾವ ಶೋಭನಾತ್ಮಕವಾದ ಬುದ್ಧಿಗಳಿವೆಯೋ ಮತ್ತು ಯಾವ ಅದೇ ಅನುಗ್ರಹಬುದ್ಧಿಗಳಿಂದ ಹವಿಸ್ಸನ್ನರ್ಪಿಸುವ ಯಜಮಾನನಿಗೆ ಧನಗಳನ್ನು ಕೊಡುತ್ತೀಯೋ ಈಗ ನಮ್ಮ ವಿಷಯದಲ್ಲಿ ಅದೇ ಬುದ್ಧಿಗಳೊಡನೆ ಕಲ್ಯಾಣಾತ್ಮಕವಾದ ಮನಸ್ಸುಳ್ಳವಳಾಗಿಯೂ ಸಹಸ್ರಸಂಖ್ಯಾಕವಾದ ಧನದ ಪುಷ್ಟಿಯನ್ನು ಕೊಡುವವಳಾಗಿಯೂ ದಯಮಾಡು.

ಈ ಋಕ್ಕಿನ ವಿಶೇಷಸಂಗತಿಗಳು—**ಹೇ ರಾಕೇ** ಎಂಬ ಪದದಿಂದ ಈ ದೇವಿಯನ್ನು ಸಂಬೋಧಿಸಿ **ಯಾಭಿಃ ದಾಶುಷೇ ಯಜಮಾನಾಯ ವಸೂನಿ ಅದ್ಯತಾಭಿಃ ಸುಮನಾಃ ಉಪಾಗಹಿ-ಯಾಭಿಃ ಮತಿಭಿಃ ಹವಿರ್ದತ್ತವತೇ ಯಜಮಾನಾಯ ಧನಾನಿ ಪ್ರಯಚ್ಛಸಿ ತಾಭಿಃ ಮತಿಭಿಃ ಸಹಿತಾ ತ್ವಂ ಶೋಭನಮನಾ ಭೂತ್ವಾ ಉಪಾಗಚ್ಛ ।** ಈ ದೇವಿಯು ತನ್ನನ್ನು ಉದ್ದೇಶಿಸಿ ಯಾಗವನ್ನಾಚರಿಸುವವರ ವಿಷಯದಲ್ಲಿ ಮಂಗಳಕರವಾದ ಬುದ್ಧಿಯುಳ್ಳವಳಾಗಿರುವ ಕಾರಣ ಹವಿಸ್ಸನ್ನು ತನಗೆ ಅರ್ಪಿಸುವ ಯಜಮಾನರಿಗೆ ಕಲ್ಯಾಣವನ್ನು ಉಂಟುಮಾಡುವ ಬುದ್ಧಿಯಿಂದ ಕೂಡಿ ಧನವನ್ನು ಅನುಗ್ರಹಿಸುವುದಕ್ಕಾಗಿ ನಮ್ಮ ಯಾಗಶಾಲೆಗೆ ಆಗಮಿಸಲಿ ಎಂದು ಪ್ರಾರ್ಥಿಸಿದೆ ಮತ್ತು ಈ ದೇವಿಯು **ಸುಭಗೇ ಸಹಸ್ರಪೋಷಂ ರರಾಣಾ—ಶೋಭನಧನೇ ಸಹಸ್ರಸಂಖ್ಯಾತಸ್ಯ ಧನಸ್ಯ ಪುಷ್ಟಿಂ ದದತೀ ।** ಈ ದೇವಿಯು ಪ್ರಭೂತವಾದ ಧನವುಳ್ಳವಳಾದುದರಿಂದ ಸುಭಗೇ ಎಂಬ ಪದದಿಂದ ಸಂಬೋಧಿತಳಾಗಿ ತನ್ನನ್ನು ಸೇವಿಸುವವರಿಗೆ ಸಾವಿರಗಟ್ಟಲೆಯಾಗಿರುವ ಧನಗಳ (ಆತಿಶಯವನ್ನು) ಎಂದರೆ ಸಮೃದ್ಧಿಯನ್ನು ಅನುಗ್ರಹಿಸುವಳು ಎಂದು ಈ ದೇವಿಯ ಔದಾರ್ಯವೂ ವರ್ಣಿತವಾಗಿದೆ.

**ಪಾವೀರವೀಂ ಶಂಸತಿ ವಾಗ್ವೈ ಸರಸ್ವತೀ ಪಾವೀರವೀ ವಾಚ್ಯೇವ ತದ್ವಾಚಂ ದಧಾತಿ ।**

ಪಾವೀರವೀ ಕನ್ಯೇತ್ಯೇತಾಮೃಚಂ ವಿಧತ್ತೇ— ಯೇಯಂ ವಾಗಭಿಮಾನಿನೀ ಸರಸ್ವತೀ ದೇವತಾ ಸೈವ ಪಾವಸ್ಯ ಶೋಧಸ್ಯ ಹೇತುತ್ವಾತ್ಪಾವೀರವೀ ॥ ತತ್ಪಾಠೇನ ವಾಚ್ಯೇವ ದೇವತಾಯಾಂ ಮಂತ್ರರೂಪಾಯಾಂ ವಾಚಂ ಸ್ಥಾಪಯತಿ ॥

ಇದುವರೆಗೂ ದೇವತೆಗಳ ಭಗಿನಿ (ಸಹೋದರಿ)ಯಾದ ರಾಕಾ ಎಂಬ ದೇವತೆಯ ವಿಷಯವನ್ನು ವಿವರಿಸಿದ್ದಾಯಿತು. ಈಗ ಪಾವೀರವೀ (ಸರಸ್ವತೀ) ಕನ್ಯಾ (ಋ. ಸಂ. ೬-೪೯-೭) ಎಂಬ ಋಕ್ಕನ್ನು ವಿವರಿಸುವರು. ವಾಗಭಿಮಾನಿದೇವತೆಯಾದ ಸರಸ್ವತೀದೇವಿಯು ಈ ಋಕ್ಕಿನಲ್ಲಿ ಸ್ತುತಳಾಗಿದ್ದಾಳೆ. ಪಾವೀರವೀ— ಶೋಧಕವಾದ ವಾಕ್ಕುಳ್ಳ ಎಂದರ್ಥವು. ಈ ಋಕ್ಕನ್ನು ಪಠಿಸುವುದರಿಂದ ದೇವತೆಯಲ್ಲಿ ಮಂತ್ರರೂಪವಾದ ವಾಕ್ಯವನ್ನು ಸ್ಥಾಪಿಸಿದಂತಾಗುವುದು. ಈ ಋಕ್ಕನ್ನೂ ಅದರ ಅರ್ಥವನ್ನೂ ಇಲ್ಲಿ ವಿವರಿಸಲಾಗಿದೆ—

ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ ।
ಗ್ನಾಭಿರಚ್ಛಿದ್ರಂ ಶರಣಂ ಸಜೋಷಾ ದುರಾಧರ್ಷಂ ಗೃಣತೇ ಶರ್ಮ ಯಂಸತ್ ॥
(ಋ. ಸಂ. ೬-೪೯-೭)

ಇದರ ಅರ್ಥವು—ಶುದ್ಧಿಕಾರಕಳೂ ಕಮನೀಯವಾದ ರೂಪವುಳ್ಳವಳೂ ಅನೇಕವಿಧವಾದ ಅನ್ನವುಳ್ಳವಳೂ ವೀರರ ಪಾಲಕಳೂ ಆದ ಸರಸ್ವತೀದೇವಿಯು ನಮಗೆ ಕರ್ಮಬೋಧಕವಾದ ಬುದ್ಧಿಯನ್ನು ಅನುಗ್ರಹಿಸಲಿ. ದೇವಪತ್ನಿಯರೊಡನೆ ಕೂಡಿರುವ ಅದೇ ಸರಸ್ವತಿಯು ಸ್ತುತಿಕರ್ತನಾದ ನನಗೆ ಛಿದ್ರರಹಿತವಾದುದೂ ಶತ್ರುಗಳಿಂದ ಅಪ್ರತಿಹತವಾದುದೂ ಆದ ಗೃಹವನ್ನೂ ಸುಖವನ್ನೂ ಅನುಗ್ರಹಿಸಿ ಕೊಡಲಿ.

**ತದಾಹುರ್ಯಾಮೀಂ ಪೂರ್ವಾಂ ಶಂಸೇ೩ತ್ ಪಿತ್ರ್ಯಾ೩ಮಿತಿ । ಯಾಮೀಮೇವ ಪೂರ್ವಾಂ ಶಂಸೇದಿಮಂ ಯಮ ಪ್ರಸ್ತರಮಾ ಹಿ ಸೀದೇತಿ ರಾಜ್ಞೋ ವೈ ಪೂರ್ವಪೇಯಂ ತಸ್ಮಾದ್ಯಾಮೀಮೇವ ಪೂರ್ವಂ ಶಂಸೇತ್ ॥**

ಅತ್ರ ವಿಚಾರಮವತಾರಯತಿ—ಇಮಂ ಯಮ ಪ್ರಸ್ತರಮಿತ್ಯೇಷಾ ಯಮದೇವತಾಕತ್ವಾದ್ಯಾಮ್ಯೋದೀರತಾಮವರ ಇತ್ಯೇಷಾ ಪಿತೃದೇವತಾಕತ್ವಾತ್ಪಿತ್ರ್ಯಾ । ಉಭಯೋಃ ಪೌರ್ವಾಪರ್ಯಕಾರಣಸ್ಯಾನಿಶ್ಚಯಾದ್ವಿಚಾರಸ್ತದರ್ಥಾ ಪ್ಲುತಿಃ ॥ ತತ್ರ ನಿರ್ಣಯಂ ದರ್ಶಯತಿ । ಯಮೋ ಹಿ ರಾಜಾ । ಯಮಃ ಪಿತೄಣಾಂ ರಾಜೇತಿ ಶ್ರುತ್ಯಂತರಾತ್ ॥ ರಾಜ್ಞಶ್ಚ ಪ್ರಥಮಪಾನಂ ಯುಕ್ತಂ ॥

ಇಲ್ಲಿ ಒಂದು ವಿಚಾರವನ್ನು ಚರ್ಚೆಮಾಡಬೇಕಾಗಿರುವುದು. ಇಲ್ಲಿ ಇಮಂ ಯಮಪ್ರಸಕ್ತಂ (ಋ. ಸಂ. ೧೦-೧೪-೪) ಎಂಬ ಋಕ್ಕು ಯಮದೇವತಾಕವು ಎಂದರೆ ಯಮನ ಪರವಾಗಿರುವುದು. ಇದು ಮೊದಲನೆಯ ಋಕ್ಕು. **ಉದೀರತಾಮ-**

ವರೇ (ಋ.ಸಂ. ೧೦-೧೫-೧) ಎಂಬುದು ಪಿತೃದೇವತಾಕವಾಗಿರುವುದು. ಈ ಎರಡು ಋಕ್ಕುಗಳಲ್ಲಿ ಯಾವುದನ್ನು ಮೊದಲು ಹೇಳಬೇಕು ಯಾವುದನ್ನು ಆಮೇಲೆ ಹೇಳಬೇಕು ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿರುವುದನ್ನು ತೋರಿಸುವುದಕ್ಕಾಗಿ ಇಲ್ಲಿ ೩ ಎಂಬ ಪ್ಲುತಿಸಂಜ್ಞೆಯನ್ನು ಸೇರಿಸಿ ಪಠಿಸಲಾಗಿದೆ. ಇದರ ನಿರ್ಣಯವನ್ನು ಇಲ್ಲಿಯೇ ತಿಳಿಸುವರು. **ಯಾಮೀಮೇವ ಪೂರ್ವಾಂ ಶಂಸೇತ್** ಎಂದರೆ ಯಮದೇವತಾಕವಾದ **ಇಮಂ ಯಮಪ್ರಸ್ತರಮಾಹಿ ಸೀದ** ಎಂಬ ಋಕ್ಕನ್ನೇ ಮೊದಲು ಪಠಿಸಬೇಕು. ಏಕೆಂದರೆ **ಯಮಃ ಪಿತೄಣಾಂ ರಾಜಾ** ಯಮದೇವನು ಪಿತೃದೇವತೆಗಳಿಗೆ ರಾಜನು ಎಂದಿರುವುದರಿಂದ ರಾಜನಾದವನಿಗೆ ಪ್ರಥಮಸ್ಥಾನವನ್ನು ಕಲ್ಪಿಸುವುದು ಯುಕ್ತವು. ಈ ಋಕ್ಕು ಮತ್ತು ಇದರ ಅರ್ಥವು—

**ಇಮಂ ಯಮ ಪ್ರಸ್ತರಮಾ ಹಿ ಸೀದಾಂಗಿರೋಭಿಃ ಪಿತೃಭಿಃ ಸಂವಿದಾನಃ ।**
**ಆ ತ್ವಾ ಮಂತ್ರಾಃ ಕವಿಶಸ್ತಾ ವಹಂತ್ವೇನಾ ರಾಜನ್ಹವಿಷಾ ಮಾದಯಸ್ವ ॥**

(ಋ. ಸಂ. ೧೦-೧೪-೪)

ಎಲೈ ಯಮದೇವನೇ, ಅಂಗಿರಾಸಂಜ್ಞಕರಾದ ಪಿತೃಗಳೊಡನೆ ಕೂಡಿದವನಾಗಿ ವಿಸ್ತೃತವಾಗಿ ದರ್ಭೆಗಳನ್ನು ಹರಡಿದ ಈ ಆಸನದಲ್ಲಿ ಕುಳಿತುಕೊ. ಕವಿಗಳಿಂದ ಪಠಿತವಾದ ಸ್ತುತಿಮಂತ್ರಗಳು ನಿನ್ನನ್ನು ಇಲ್ಲಿಗೆ ಕರೆತರಲಿ. ಪ್ರಭುವಾದ ಎಲೈ ಯಮನೇ ಈ ಹವಿಸ್ಸುಗಳಿಂದ ಸಂತುಷ್ಟನಾಗಿ ಯಜಮಾನನನ್ನು ಹರ್ಷಗೊಳಿಸು.

ವಿಶೇಷ ವಿಷಯಗಳು—ಮಹಾಪಿತೃಯಜ್ಞದಲ್ಲಿ ಯಮನನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಇಮಂ ಯಮ** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಇಮಂ ಯಮ ಪ್ರಸ್ತರ ಮಾ ಹಿ ಸೀದೇತಿ ದ್ವೇ** ಎಂಬ ಸೂತ್ರದಿಂದ (ಆಶ್ವ. ಶ್ರೌ. ಸೂ. ೨-೧೯) ವಿವೃತವಾಗಿರುವುದು. ಈ ಮಂತ್ರವು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿಯೂ ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಸೂತ್ರವಾಕ್ಯವನ್ನು ಹಿಂದೆಯೇ ಹೇಳಲಾಗಿದೆ.

**ಪ್ರಸ್ತರಂ–ವಿಸ್ತೀರ್ಣಂ ಯಜ್ಞವಿಶೇಷಂ ।** ವಿಸ್ತಾರವಾಗಿ ನಡೆಯುತ್ತಿರುವ ಈ ಯಜ್ಞಕ್ಕೆ ಬಂದು ಕುಳಿತುಕೋ ಅಥವಾ ಈ ಯಜ್ಞದಲ್ಲಿ ಆಸನಾರ್ಥವಾಗಿ ಹರಡಿರುವ ಬರ್ಹಿಃ ಎಂಬ ದರ್ಭೆಗಳಮೇಲೆ ಬಂದು ಕುಳಿತುಕೋ ಎಂದರ್ಥವು.

ಎಲೈ ಯಮದೇವನೇ, ಈಗ ನಿನ್ನನ್ನುದ್ದೇಶಿಸಿ ನಡೆಯುತ್ತಿರುವ ಈ ಯಜ್ಞದಲ್ಲಿ ಋತ್ವಿಕ್ಕುಗಳು ಮಂತ್ರಗಳನ್ನು ಪಠಿಸುತ್ತಾ ನಿನ್ನನ್ನು ಆಹ್ವಾನಮಾಡುತ್ತಿರುವರು. ಅವರ ಆಹ್ವಾನವನ್ನು ಕೇಳಿ ಅಂಗಿರಸ್ಸುಗಳೊಡನೆಯೂ ಪಿತೃಗಳೊಡನೆಯೂ ಈ ನಮ್ಮ ಯಜ್ಞಕ್ಕೆ ದಯಮಾಡಿ ಇಲ್ಲಿ ಸಿದ್ಧಪಡಿಸಿರುವ ದರ್ಭಾಸನದಮೇಲೆ ಕುಳಿತುಕೊಂಡು ನಾವು ಅರ್ಪಿಸುವ ಹವಿಸ್ಸುಗಳಿಂದ ಸಂತುಷ್ಟನಾಗಿ ಯಜಮಾನನನ್ನೂ ಹರ್ಷಗೊಳಿಸು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

## ಮಾತಲೀ ಕವ್ಯೈರ್ಯಮೋ ಅಂಗಿರೋಭಿರಿತಿ ಕಾವ್ಯಾನಾಮನೂಚೀಂ ಶಂಸತ್ಯವರೇಣೈವ ವೈ ದೇವಾನ್ಕಾವ್ಯಾಃ ಪರೇಣೈವ ಪಿತೄಂಸ್ತಸ್ಮಾತ್ಕಾವ್ಯಾನಾಮನೂಚೀಂ ಶಂಸತಿ ।

ಪೂರ್ವೋಕ್ತಯಾಮ್ಯಾ ಅನ್ಯಾಂ ಯಾಮೀಂ ವಿಧತ್ತೇ—ಕಾವ್ಯೈರಿತಿ ಶ್ರುತ್ಯಂತರಾದಿಯಂ ಕಾವ್ಯಾನಾಮೃಕ್ಸಾ ಚ ಪೂರ್ವೋಕ್ತಾಮೃಚಮನು ಪಶ್ಚಾದ್ಗಚ್ಛತೀತ್ಯನೂಚೀ ತಾಂ ತಥೈವ ಶಂಸೇತ್ ॥ ಕಾವ್ಯಾ ದೇವಾನಾಂ ಸ್ತೋತಾರಃ ಕೇಚಿದಥವಾ ಜಾತಿವಿಶೇಷಾಃ ಪಿತೃಭ್ಯೋ-

**ಪ್ಯುತ್ತಮಜಾತೀಯಾಃ । ತದೇವ ದೇವಾನವರೇಣ ಪಿತ್ಯಾನ್ಪರೇಣೇತ್ಯುಚ್ಯತೇ ॥ ಅತ ಏವ ಪೂರ್ವಮುಕ್ತಾಯಾ ಯಾಮ್ಯಾ ವಕ್ಷ್ಯಮಾಣಾಯಾಃ ಪಿತ್ರ್ಯಾಶ್ಚ ಮಧ್ಯೇ ತಚ್ಛಂಸನಂ ಯುಕ್ತಂ ॥**

ಹಿಂದೆ ಹೇಳಿದಂತೆ ಯಮದೇವತಾಕವಾದ ಎರಡನೆಯ ಋಕ್ಕನ್ನು ವಿವರಿಸುವರು— **ಮಾತಲೀ ಕವ್ಯೈಃ** (ಋ. ಸಂ. ೧೦-೧೪-೩) ಎಂಬುದು ಎರಡನೆಯ ಋಕ್ಕು ಇದು ಅನೂಚೀಋಕ್ ಎಂದರೆ ಹಿಂದೆ ಹೇಳಿದ **ಇಮಂ ಯಮ ಪ್ರಸ್ತರ** ಎಂಬ ಋಕ್ಕಿನ ಅನಂತರ ಇದನ್ನು ಪಠಿಸುವುದರಿಂದ ಇದನ್ನು ಅನೂಚೀಋಕ್ಕೆಂದು ಹೇಳುವರು. **ಕಾವ್ಯಾಃ** ಎಂದರೆ ದೇವತೆಗಳನ್ನು ಸ್ತೋತ್ರಮಾಡುವ ಪಿತೃಗಣಗಳು. ಪಿತೃಗಣಗಳಲ್ಲಿ ಬೇರೆಬೇರೆ ವರ್ಗಗಳಿರುವವು. ಕಾವ್ಯಾಃ ಎಂದು ಹೇಳಲ್ಪಡುವ ಪಿತೃವರ್ಗದವರು ಇತರ ಪಿತೃವರ್ಗದವರಿಗಿಂತ ಉತ್ತಮವರ್ಗದವರೆಂದು ಹೇಳಲ್ಪಡುವರು ದೇವತೆಗಳನ್ನು **ಅವರೇಣ** ಎಂತಲೂ ಪಿತೃಗಳನ್ನು **ಪರೇಣ** ಎಂತಲೂ ಹೇಳುವ ರೂಢಿ ಇದೆ. ಆದ್ದರಿಂದ ಪಿತೃಗಣಗಳಲ್ಲಿ ಉತ್ತಮವರ್ಗದವರಾದ ಕಾವ್ಯಾಃ ಎಂದು ಕರೆಯಲ್ಪಡುವ ಪಿತೃವರ್ಗದವರನ್ನು ಮೊದಲು ಸ್ತುತಿಸಲಾಗಿದೆ. ಮೇಲೆ ಹೇಳಿದೆ ಮಾತಲೀ ಕವ್ಯೈಃ ಎಂಬ ಋಕ್ಕನ್ನೂ ಆದರ ಅರ್ಥ ಮೊದಲಾದ ವಿವರಣೆಗಳನ್ನು ಈರೀತಿ ಕೊಡಲಾಗಿದೆ—

**ಮಾತಲೀ ಕವ್ಯೈರ್ಯಮೋ ಅಂಗಿರೋಭಿರ್ಬೃಹಸ್ಪತಿರ್ಋಕ್ವಭಿರ್ವಾವೃಧಾನಃ ।**
**ಯಾಂಶ್ಚ ದೇವಾ ವಾವೃಧುರ್ಯೇ ಚ ದೇವಾನ್ತ್ಸ್ವಾಹಾನ್ಯೇ ಸ್ವಧಯಾನ್ಯೇ ಮದಂತಿ ॥**
(ಋ. ಸಂ. ೧೦-೧೪-೩)

ಇದರ ಅರ್ಥವಿವರಣೆಯು—ಇಂದ್ರನು ಕವ್ಯಗಳಿಗೆ ಭಾಗಿಗಳಾಗಿ ಪಿತೃಗಳೊಡನೆಯೂ ಯಮನು ಅಂಗಿರಸ್ಸು (ಪಿತೃವಿಶೇಷ)ಗಳೊಡನೆಯೂ ಬೃಹಸ್ಪತಿಯು ಸ್ತುತಿಕರ್ತರೊಡನೆಯೂ ಕೂಡಿ ಪುಷ್ಟಿಯನ್ನು ಹೊಂದುತ್ತಾರೆ. ಇಂದ್ರಾದಿ ದೇವತೆಗಳು ಯಾವ ಪಿತೃಗಳನ್ನು ವೃದ್ಧಿಪಡಿಸುವರೋ ಯಾವ ಪಿತೃಗಳು ಇಂದ್ರಾದಿದೇವತೆಗಳ ವೃದ್ಧಿಗೆ ಕಾರಣರೋ ಇವರುಗಳ ನಡುವೆ ಒಂದು ಗುಂಪಾದ ದೇವತೆಗಳು **ಸ್ವಾಹಾ** ಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಸೇವಿಸಿ ಹರ್ಷವನ್ನು ಹೊಂದುತ್ತಾರೆ. ಇನ್ನೊಂದು ಗುಂಪಾದ ಪಿತೃಗಳು **ಸ್ವಧಾ** ರೂಪದಲ್ಲಿ ಅರ್ಪಿಸಿದ ಹವಿಸ್ಸುಗಳಿಂದ ತೃಪ್ತರಾಗಿ ಹರ್ಷಗೊಳ್ಳುತ್ತಾರೆ.

ಈ ಋಕ್ಕಿನ ವಿಶೇಷಸಂಗತಿಗಳು—

ಅಗ್ನಿಮಾರುತಶಸ್ತ್ರಮಂತ್ರಗಳಲ್ಲಿ **ಮಾತಲೀ ಕವ್ಯೈಃ** ಎಂಬ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಇಮಂ ಯಮ ಪ್ರಸ್ತರಮಾ ಹಿ ಸೀದ ಮಾತಲೀ ಕವ್ಯೈರ್ಯಮೋ ಅಂಗಿರೋಭಿರುದೀರತಾಮವರ ಉತ್ಪರಾಸಃ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

**ಮಾತಲೀ—ಮಾತಲಿಃ** ಎಂಬವನು ಇಂದ್ರನ ಸಾರಥಿಯೆಂದು ಪ್ರಸಿದ್ಧವು. **ಮಾತಲೀ** ಎಂದರೆ ಮಾತಲಿ ಎಂಬ ಸಾರಥಿಯುಳ್ಳ ಇಂದ್ರನು ಎಂದರ್ಥವು.

**ಕವ್ಯೈಃ**—ಕವ್ಯವೆಂದರೆ ಪಿತೃಗಳಿಗೆ ಅರ್ಪಿಸುವ ಅನ್ನವು. ದೇವತೆಗಳಿಗೆ ಅರ್ಪಿಸುವ ಅನ್ನಕ್ಕೆ ಹವಿಃ ಹವ್ಯವೆಂದು ಹೆಸರು.

ಈ ಋಕ್ಕಿನಲ್ಲಿ ದೇವತೆಗಳು ಪಿತೃಗಳನ್ನೂ, ಪಿತೃಗಳು ದೇವತೆಗಳನ್ನೂ ವೃದ್ಧಪಡಿಸುವರು ಎಂದು ಹೇಳಿದಾರೆ. ಮತ್ತು ಮೂರುವಿಧ ಪಿತೃಗಳನ್ನು ಇಲ್ಲಿ ನಿರ್ದೇಶಿಸಲಾಗಿದೆ. **ಕವ್ಯೈಃ** ಕವ್ಯಭಾಗ್ಭಿಃ–ಕವ್ಯಕ್ಕೆ ಅರ್ಹರಾದ ಅಥವಾ ಕವ್ಯವನ್ನು ಭುಜಿಸುವ ಪಿತೃಗಳು ಇಂದ್ರನೊಡಗೂಡಿ ವೃದ್ಧಿಯನ್ನು ಪಡೆಯುತ್ತಾರೆ. ಅಂಗಿರಸ್ಸುಗಳೆಂಬ ಪಿತೃಗಳು ಯಮನೊಡನೆ

ವೃದ್ಧಿಯನ್ನು ಹೊಂದುತ್ತಾರೆ. ಋಕ್ವಿಕ್ಕುಗಳೆಂಬ (ಸ್ತೋತೃಗಳೆಂಬ) ಪಿತೃಗಳು ಬೃಹಸ್ಪತಿಯೊಡನೆ ಸೇರಿ ವರ್ಧಿತರಾಗುತ್ತಾರೆ ಎಂದು ಮೂರು ವಿಧ ಪಿತೃಗಳನ್ನು ನಿರ್ದೇಶಿಸಿ ಅನಂತರ ದೇವತೆಗಳಿಗೂ ಪಿತೃಗಳಿಗೂ ಹವ್ಯಕವ್ಯಗಳನ್ನು ಹೇಗೆ ಅರ್ಪಿಸಬೇಕೆಂಬ ವಿಧಿಯನ್ನು ಋಷಿಯು ತಿಳಿಸಿದಾನೆ—

**ಸ್ವಾಹಾ ದೇವೇಭ್ಯಃ ಸ್ವಧಾ ಪಿತೃಭ್ಯ ಇತ್ಯಾಹ**

ಎಂಬ ಶ್ರುತಿವಾಕ್ಯದಂತೆ ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುವಾಗ ಸ್ವಾಹಾಕಾರಪೂರ್ವಕವಾಗಿಯೂ ಪಿತೃಗಳಿಗೆ ಕವ್ಯವನ್ನರ್ಪಿಸುವಾಗ ಸ್ವಧಾಶಬ್ದಪೂರ್ವವಾಗಿಯೂ ಅರ್ಪಿಸಿದಲ್ಲಿ ಅವರುಗಳು ಸಂತೋಷಪಡುತ್ತಾರೆ ಎಂದು ಋಷಿಯು ತಿಳಿಸಿದಾನೆ.

ಉದೀರತಾಮವರ ಉತ್ಪರಾಸ ಇತಿ ಪಿತ್ರ್ಯಾಃ ಶಂಸತಿ । ಉನ್ಮಧ್ಯಮಾಃ ಪಿತರಃ ಸೋಮ್ಯಾಸ ಇತಿ। ಯೇ ಚೈವಾವಮಾ ಯೇ ಚ ಪರಮಾ ಯೇ ಚ ಮಧ್ಯಮಾಸ್ತಾನ್ಸರ್ವಾನನಂತರಾಯಂ ಪ್ರೀಣಾತಿ ॥

**ಅಥ ತಿಸ್ರಃ ಪಿತೃದೇವತಾಕಾ ಋಚೋ ವಿಧತ್ತೇ—ಉದಾಹೃತಂ ಪಾದಂ ದ್ವಿತೀಯಪಾದೇನ ಸಹ ವ್ಯಾಖ್ಯಾತುಂ ದ್ವಿತೀಯಪಾದಂ ಪಠತಿ ॥ ಪಾದದ್ವಯಂ ವ್ಯಾಚಷ್ಟೇ—ಅವರೇ ನಿಕೃಷ್ಟಾಃ ಪಿತರ ಉದೀರತಾಮುತ್ಕರ್ಷೇಣ ಗಚ್ಛಂತು । ಪರಾಸ ಉತ್ಕೃಷ್ಟಾಃ ಪಿತರ ಉದೀರತಾಂ ॥ ತಥಾ ಮಧ್ಯಮಾ ನಿಕೃಷ್ಟೋತ್ಕೃಷ್ಟಮಧ್ಯವರ್ತಿನಃ ಪಿತರ ಉದೀರತಾಂ ತೇ ತ್ರಿವಿಧಾಃ ಪಿತರಃ ಸೋಮ್ಯಾಸಃ ಸೋಮಯೋಗ್ಯಾ ಇತ್ಯೇತಸ್ಯ ಪಾದದ್ವಯಸ್ಯ ಪಾಠೇನ ತ್ರಿವಿಧಾನಪಿ ಪಿತೄನನಂತರಾಯಂ ಕಸ್ಯಾಪ್ಯಂತರಾಯೋ ಯಥಾ ನ ಭವತಿ ತಥಾ ತರ್ಪಯತಿ ॥**

ಈಗ ಪಿತೃದೇವತಾಕವಾದ ಮೂರು ಋಕ್ಕುಗಳನ್ನು ವಿವರಿಸುವರು—**ಅವರೇ** ಎಂದರೆ ನಿಕೃಷ್ಟರಾದ ಪಿತೃಗಣಗಳು. **ಉದೀರತಾಂ** (ತಮ್ಮ ಸ್ವಸ್ಥಾನಕ್ಕೆ) ಹೊರಟುಹೋಗಲಿ. ಹಾಗೆಯೇ **ಪರಾಸಃ** ಎಂದರೆ ಶ್ರೇಷ್ಠವರ್ಗದ ಪಿತೃಗಳೂ ಹೊರಟು ಹೋಗಲಿ. ಮತ್ತು **ಮಧ್ಯಮಾಃ** ಎಂದರೆ ನಿಕೃಷ್ಟರೂ, ಶ್ರೇಷ್ಠರೂ ಅಲ್ಲದ ಮಧ್ಯಮವರ್ಗದ ಪಿತೃಗಳೂ ಹೊರಟುಹೋಗಲಿ. ಈ ಮೂರುವಿಧ ಪಿತೃಗಣಗಳೂ **ಸೋಮ್ಯಾಸಃ** ಸೋಮಪಾನಕ್ಕೆ ಅರ್ಹರಾದವರು. ಈರೀತಿ ಋಕ್ಕಿನ ಎರಡು ಪಾದಗಳನ್ನು ಪಠಿಸಿ ಮೂರುವಿಧವಾದ ಪಿತೃಗಣಗಳನ್ನು ಹೋತೃವು ತೃಪ್ತಿಪಡಿಸುವನು.

ಈ ಋಕ್ಕು ಮತ್ತು ಇದರ ಅರ್ಥ, ವಿಶೇಷ ಸಂಗತಿ ಇತ್ಯಾದಿಗಳನ್ನು ಇಲ್ಲಿ ವಿವರಿಸಲಾಗಿದೆ—

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

(ಋ. ಸಂ. ೧೦-೧೫-೧)

ಇದರ ಅರ್ಥವು—ಕೆಳಗಿನ ಲೋಕದಲ್ಲಿರುವ ಪಿತೃಗಳೂ, ಉತ್ತಮಲೋಕದಲ್ಲಿರುವವರೂ, ಮಧ್ಯಮಲೋಕದಲ್ಲಿರುವವರೂ ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲಿ. ಅವರೆಲ್ಲರೂ ನಮ್ಮಲ್ಲಿ ಅನುಗ್ರಹಬುದ್ಧಿಯುಳ್ಳವರಾಗಿರಲಿ. ತೋಳಗಳಂತೆ ಕ್ರೂರಿಗಳಲ್ಲದವರೂ, ನಮ್ಮ ಯಜ್ಞಕರ್ಮವನ್ನರಿತವರೂ, ನಮ್ಮ ಪ್ರಾಣವನ್ನು ರಕ್ಷಿಸಲು ಬಂದಿರುವವರೂ ಆದ ಆ ಪಿತೃಗಳು ನಮ್ಮ ಆಹ್ವಾನಕಾಲದಲ್ಲಿ ನಮ್ಮನ್ನು ರಕ್ಷಿಸಲಿ.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಉದೀರತಾಮವರ ಉದೀರತಾಂ ಪರ ಉದೀರತಾಂ ಮಧ್ಯಮಾಃ ಪಿತರಃ ಸೋಮ್ಯಾಃ ಸೋಮಸಂಪಾದಿನಸ್ತೇಽಸುಂ ಪ್ರಾಣಮನ್ವೀಯುರವೃಕಾ ಅನಮಿತ್ರಾಃ ಸತ್ಯಜ್ಞಾ ವಾ ಯಜ್ಞ-ಜ್ಞಾ ವಾ ತೇ ನ ಆಗಚ್ಛಂತು ಪಿತರೋ ಹ್ವಾನೇಷು ॥**

(ನಿ. ೧೧-೧೯)

ಅವರೇ ಕೆಳಭಾಗದಲ್ಲಿ ಎಂದರೆ ಪೃಥ್ವಿಯಲ್ಲಿ ಅಥವಾ ಪಿತೃಲೋಕದ ಕೆಳಭಾಗದಲ್ಲಿರುವ ಪಿತೃಗಳೂ ಪರಾಸಃ ದ್ಯುಲೋಕವಾಸಿಗಳಾದ ಪಿತೃಗಳೂ, ಮಧ್ಯಮಾಃ—ಮಧ್ಯಮಸ್ಥಾನರಾದ ಅಂತರಿಕ್ಷದಲ್ಲಿ ವಾಸಿಸುವ ಪಿತೃಗಳೂ ಸೋಮ್ಯಾಸಃ—ಹಿಂದೆ ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮವನ್ನು ಸಿದ್ಧಪಡಿಸಿ ಅರ್ಪಿಸಿದವರೂ, ಯಾರು ನಮ್ಮ ಪ್ರಾಣಗಳನ್ನು ರಕ್ಷಿಸಲು ಬಂದಿರುವರೋ ಅವರೂ, ಯಾರಿಗೂ ಯಾವವಿಧವಾದ ಹಿಂಸೆಯನ್ನು ಮಾಡದಿರುವವರೂ, ಶತ್ರುಗಳಲ್ಲದವರೂ ಎಂದರೆ ಕೇಡನ್ನು ಬಯಸದಿರುವವರೂ ಸತ್ಯ ಅಥವಾ ಯಜ್ಞಸ್ವರೂಪವನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ಈಗ ನಾವು ಮಾಡುತ್ತಿರುವ ಆಹ್ವಾನದಲ್ಲಿ ಎಂದರೆ ಆಹ್ವಾನದಿಂದ ನಮ್ಮಲ್ಲಿಗೆ ಬಂದು ನಮ್ಮನ್ನು ರಕ್ಷಿಸಲಿ.

**ಅವೃಕಾಃ** ಎಂಬ ಶಬ್ದಕ್ಕೆ—**ವೃಕಾಃ** ಎಂದರೆ ತೋಳವು. ತೋಳದ ಸ್ವಭಾವವು ಹಿಂಸೆಯನ್ನು ಮಾಡುವುದೇ ಆಗಿದೆ. ಈ ಶಬ್ದವನ್ನು ಮನುಷ್ಯರ ಪರವಾಗಿ ಉಪಯೋಗಿಸಿದಾಗ ಹಿಂಸೆಮಾಡುವವರು, ದುಷ್ಟರು ಎಂದರ್ಥವಾಗವುದು **ಅವೃಕಾಃ** ಎಂದರೆ ವೃಕರಲ್ಲದವರು, ಯಾರಿಗೂ ಹಿಂಸೆಯನ್ನು ಮಾಡದಿರುವವರು, ಸಜ್ಜನರು ಎಂದಭಿಪ್ರಾಯವು

**ಅನಮಿತ್ರಾಃ**—ಮಿತ್ರನೆಂದರೆ, ಸ್ನೇಹಿತ, ಹಿತಕಾರಿ ಎಂದು. ಅಮಿತ್ರ ಎಂದರೆ ಮಿತ್ರನಲ್ಲದವನು, ಶತ್ರುವು; **ಅನಮಿತ್ರ** ಎಂದರೆ ಶತ್ರುವಲ್ಲದವನು ಎಂದರೆ ಸ್ನೇಹಿತನು, ಹಿತಕಾರಿಯು ಎಂದೇ ಅರ್ಥವು ಆದ್ದರಿಂದ ಮಿತ್ರಶಬ್ದಕ್ಕೂ ಅನಮಿತ್ರ ಶಬ್ದಕ್ಕೂ ಒಂದೇ ಅರ್ಥವಿರುವುದು. ಈ ಶಬ್ದದಲ್ಲಿ ಎರಡಾವರ್ತಿ ನಿಷೇಧಾರ್ಥಸೂಚಕ ಉಪಸರ್ಗಗಳಿರುವುದರಿಂದ (Two negetives make one affirmative) ಶಬ್ದವು ಪೂರ್ವದ ಅರ್ಥವನ್ನೇ ಸೂಚಿಸುವುದು.

ಭಾಷ್ಯಕಾರರು ಪಿತೃಗಳಲ್ಲಿ ಮೂರು ವಿಧವೆಂದು ಹೇಳಿರುವರು--**ಉತ್ತಮಾ ಮಧ್ಯಮಾ ಅಧಮಾಶ್ಚೇತಿ ।** ಹೇಗೆಂದರೆ—

**ಉತ್ತಮಾಃ—ಯಥಾವಿಧಂ ಶ್ರೌತಂ ಕರ್ಮಾನುಷ್ಠಾಯ ಪಿತೃತ್ವಂ ಪ್ರಾಪ್ತಾ ಉತ್ತಮಾಃ ।** ಉತ್ತಮ ಕರ್ಮಗಳಾದ ಯಜ್ಞಯಾಗಾದಿಗಳನ್ನೂ ಯಥಾವಿಧಿಯಾಗಿ ಮಾಡಿ ಆ ಸತ್ಕರ್ಮಾನುಷ್ಠಾನದ ಫಲವಾಗಿ ಪಿತೃಸ್ಥಾನವನ್ನು ಪಡೆದವರು ಪಿತೃಗಳಲ್ಲಿ ಉತ್ತಮರೆಂದು ಪ್ರಸಿದ್ಧಿಯನ್ನು ಪಡೆದಿದಾರೆ.

**ಮಧ್ಯಮಾಃ—ಸ್ಮಾರ್ತಕರ್ಮಪರಾ ಮಧ್ಯಮಾಃ ।** ಸ್ಮೃತಿಪುರಾಣಾದಿಗಳಲ್ಲಿ ಹೇಳಿರುವಂತೆ ದೇವತೆಗಳನ್ನು ಆರಾಧಿಸಿ ಆ ಪುಣ್ಯದಿಂದ ಪಿತೃತ್ವವನ್ನು ಪಡೆದ ಪಿತೃಗಳು ಮಧ್ಯಮರು.

**ಅಧಮಾಃ—ಅತ್ರಾಪಿ ಕೈಶ್ಚಿತ್ಸಂಸ್ಕಾರೈರ್ವಿಕಲಾ ಅಧಮಾಃ ।** ಮೇಲೆ ಹೇಳಿದ ಕರ್ಮಾದಿಗಳಲ್ಲಿ ಲೋಪ ದೋಷಗಳುಂಟಾಗಿ ಕರ್ಮವನ್ನು ಸಾಂಗವಾಗಿ ನೆರವೇರಿಸಲಸಮರ್ಥರಾದವರು ಪಿತೃಗಳಲ್ಲಿ ಅಧಮರೆನಿಸುವರು ಎಂದು ಉತ್ತಮ ಮಧ್ಯಮಾಧಮರೆಂಬ ಮೂರುವಿಧ ಪಿತೃಗಳ ಸ್ವರೂಪವನ್ನೂ ಅವರ ಸ್ಥಾನಮಾನಗಳನ್ನೂ ತಿಳಿಸಿದಾರೆ. ಇದನ್ನನುಸರಿಯೇ **ಯೇ ಅಗ್ನಿದಗ್ಧಾಃ** ಎಂಬ ಮಂತ್ರವೂ ಇರುವುದು. ಎಂದರೆ ಅಗ್ನಿಯಲ್ಲಿ ಯಾರ ಮೃತಶರೀರವು ಮಂತ್ರಪೂರ್ವಕವಾದ ಸಂಸ್ಕಾರಾದಿಗಳಿಂದ ದಹಿಸಲ್ಪಡುವುದೋ ಅವರು ಪಿತೃಗಳಲ್ಲಿ ಉತ್ತಮ ಸ್ಥಾನವನ್ನು ಗಳಿಸುವರು. ಇವರಿಗೆ ಅಗ್ನಿದಗ್ಧರೆಂದು ಹೆಸರು. ಹಾಗಿಲ್ಲದೆ, ಅಗ್ನಿಸಂಸ್ಕಾರಾದಿಗಳಿಲ್ಲದೆ ನೀರಿನಲ್ಲಿ ಮುಳುಗಿಹೋಗುವುದು, ಅಪರಕರ್ಮವನ್ನು ಮಾಡಲು ಕರ್ತೃವಿಲ್ಲ

ದಿರುವುದು ಅಥವಾ ಯಥಾವಿಧಿಯಾಗಿ ಕರ್ಮದಿಂದ ಸಂಸ್ಕೃತರಾಗದಿರುವವರು ಇವರೆಲ್ಲಾ ಅನಗ್ನಿದಗ್ಧರೆಂದು ಹೇಳಲ್ಪಡುವರು. ಇವರು ಪಿತೃಗಳಲ್ಲಿ ಮಧ್ಯಮಸ್ಥಾನವನ್ನೋ ಅಥವಾ ಅಧಮಸ್ಥಾನವನ್ನೋ ಪಡೆಯುವರು. ಈ ವಿಧವಾದ ಪಿತೃಗಳೆಲ್ಲರೂ, ಸೋಮಸಂಪಾದಿಗಳೂ, ಹಿಂಸಾರಹಿತರೂ, ಪ್ರಾಣವನ್ನು ರಕ್ಷಿಸುವವರೂ, ಯಜ್ಞಾನುಷ್ಠಾನಕರ್ಮಗಳನ್ನು ತಿಳಿದವರೂ ಆದ ಯಾವ ಯಾವ ಪಿತೃಗಳಿರುವರೋ ಅವರೆಲ್ಲರೂ ನಮ್ಮ ಆಹ್ವಾನವನ್ನು ಮನ್ನಿಸಿ ನಮ್ಮನ್ನು ರಕ್ಷಿಸಲಿ ಎಂಬಭಿಪ್ರಾಯವು ಈ ಋಕ್ಕಿನಲ್ಲಿ ಉಕ್ತವಾಗಿದೆ.

ಆಹಂ ಪಿತೄನ್ತ್ಸುವಿದತ್ರಾಂ ಅವಿತ್ಸೀತಿ ದ್ವಿತೀಯಾಂ ಶಂಸತಿ । ಬರ್ಹಿಷದೋ ಯೇ ಸ್ವಧಯಾ ಸುತಸ್ಯೇತ್ಯೇತದ್ಧ ವಾ ಏಷಾಂ ಪ್ರಿಯಂ ಧಾಮ ಯದ್ಬರ್ಹಿಷದ ಇತಿ ಪ್ರಿಯೇಣೈವೈನಾಂಸ್ತದ್ಧಾಮ್ನಾ ಸಮರ್ಧಯತಿ ಪ್ರಿಯೇಣ ಧಾಮ್ನಾ ಸಮೃಧ್ಯತೇ ಯ ಏವಂ ವೇದ ॥

ವಿಹಿತಾಸು ತಿಸೃಷ್ವೃಕ್ಷು ಪ್ರಥಮಾಯಾ ಉದಾಹೃತತ್ವಾದನಂತರಭಾವಿನೀಂ ದ್ವಿತೀಯಾಮೃಚಂ ದರ್ಶಯತಿ ॥ ತಸ್ಯಾ ಋಚಸ್ತೃತೀಯಪಾದಮನೂದ್ಯ ವ್ಯಾಚಷ್ಟೇ ॥ ಬರ್ಹಿಷಿ ದರ್ಭೇ ಸೀದಂತ್ಯುಪವಿಶಂತೀತಿ ಬರ್ಹಿಷದಃ ಪಿತರಃ । ಅತ್ರ ಬರ್ಹಿಷದ ಇತಿ ಯದುಚ್ಯತೇ ಏತದ್ಧವಾ ಏತದೇವ ಬರ್ಹಿರೇಷಾಂ ಪಿತೃಣಾಂ ಪ್ರಿಯಂ ಸ್ಥಾನಂ ತಸ್ಮಾದೇತತ್ಪಾಠೇನೈನಾನ್ಪಿತೄನ್ಪ್ರಿಯೇಣೈವ ಧಾಮ್ನಾ ಸ್ಥಾನೇನ ಸಮೃದ್ಧಾನ್ಕರೋತಿ ॥ ವೇದನಂ ಪ್ರಶಂಸತಿ—

ಹಿಂದೆ ಹೇಳಿದಂತೆ ಹೇಳಬೇಕಾದ ಮೂರು ಋಕ್ಕುಗಳಲ್ಲಿ ಮೊದಲನೆಯದನ್ನು ಹೇಳಲಾಯಿತಷ್ಟೆ. ಈಗ ಎರಡನೆಯ ಋಕ್ಕನ್ನು ವಿವರಿಸುವರು— **ಆಹಂ ಪಿತೄನ್ತ್ಸುವಿದತ್ರಾನ್** (ಋ. ಸಂ. ೧೦-೧೫-೧) ಎಂಬುದೇ ಆ ಋಕ್ಕು. ಈ ಋಕ್ಕಿನ ಮೂರನೆಯ ಪಾದವನ್ನು ವಿವರಿಸುವರು. **ಬರ್ಹಿಷದಃ ಪಿತರಃ** ಎಂದರೆ ಆಸನಾರ್ಥವಾಗಿ ಹರಡಿದ ದರ್ಭೆಗಳಮೇಲೆ ಕೂಡುವ ಪಿತೃಗಣಗಳು. ಬರ್ಹಿಃ ಎಂಬ ಹರಡಿದ ದರ್ಭೆಗಳೇ ಇವರಿಗೆ ಪ್ರಿಯವಾದ (ಇಷ್ಟವಾದ) ಸ್ಥಾನವು ಅಥವಾ ಆಸನವು. ಇಂತಹ ಪ್ರಿಯವಾದ ಸ್ಥಾನವನ್ನು ಈ ಪಿತೃಗಳಿಗೆ ಒದಗಿಸಿಕೊಟ್ಟರೆ ಅವರಿಗೆ ತೃಪ್ತಿ ಅಥವಾ ಸಂತೋಷವುಂಟಾಗುವುದು ಎಂದರ್ಥವು. ಈ ವಿಷಯವನ್ನು ತಿಳಿದಿರುವ ಪುರುಷನು ತನಗೆ ಇಷ್ಟವಾದ ಗೃಹಾದಿಗಳನ್ನು ಪಡೆದು ಸುಖಿಸುವನು.

ಈ ಋಕ್ಕು ಮತ್ತು ಇದರ ಅರ್ಥವು—

**ಆಹಂ ಪಿತೄನ್ತ್ಸುವಿದತ್ರಾಂ ಅವಿತ್ಸಿ ನ ಪಾತಂ ಚ ವಿಕ್ರಮಣಂ ಚ ವಿಷ್ಣೋಃ ।**
**ಬರ್ಹಿಷದೋ ಯೇ ಸ್ವಧಯಾ ಸುತಸ್ಯ ಭುಜಂತ ಪಿತ್ವಸ್ತ ಇಹಾಗಮಿಷ್ಠಾಃ ॥**

(ಋ. ಸಂ. ೧೦-೧೫-೩)

ಯಜಮಾನನಾದ ನಾನು ನನ್ನ ಭಕ್ತಿಯನ್ನು ಅತಿಶಯವಾಗಿ ತಿಳಿದ ಪಿತೃಗಳನ್ನು ನನ್ನೆದುರಿಗೆ ಬರಮಾಡಿಕೊಂಡಿದ್ದೇನೆ. ವ್ಯಾಪಕವಾದ ಯಜ್ಞದ ನಾಶರಹಿತ್ಯವನ್ನು ಕ್ರಮವಾಗಿ ವಿಸ್ತೃತವಾಗುವಿಕೆಯನ್ನು ಹೊಂದಿದ್ದೇನೆ. ಯಾವ ಪಿತೃಗಳು ದರ್ಭಾಸನವನ್ನಾಶ್ರಯಿಸಿ ಕುಳಿತುಕೊಳ್ಳುವರೋ ಅವರು ನಮ್ಮ ಯಾಗಕ್ಕೆ ಬಂದಿದ್ದಾರೆ. ಅವರು ಸ್ವಧಾಸಂಜ್ಞಕವಾದ ಅನ್ನದೊಡನೆ ಹಿಂಡಲ್ಪಟ್ಟ ಸೋಮವನ್ನು ಸೇವಿಸುತ್ತಾರೆ.

**ಇದಂ ಪಿತೃಭ್ಯೋ ನಮೋ ಅಸ್ತ್ವದ್ಯೇತಿ ನಮಸ್ಕಾರವತೀಮಂತತಃ ಶಂಸತಿ ತಸ್ಮಾದಂತತಃ ಪಿತೃಭ್ಯೋ ನಮಸ್ಕ್ರಿಯತೇ ॥**

ತೃತೀಯಾಮೃಚಂ ದರ್ಶಯತಿ । ಅಸ್ಯಾಮೃಚಿ ನಮೋ ಅಸ್ತ್ವಿತಿ ಶ್ರೂಯಮಾಣತ್ವಾದಿಯಂ ನಮಸ್ಕಾರವತೀ ತಾಮೇತಾಂ ತಿಸೃಣಾಂ ಪಿತ್ರ್ಯಾಣಾಮಂತೇ ಶಂಸೇತ್ ॥ ಯಸ್ಮಾದೇವಂ ತಸ್ಮಾಚ್ಛ್ರಾದ್ಧಸ್ಯಾಂತೇ ನಮೋ ವಃ ಪಿತರ ಇತ್ಯಾದಿನಾ ಪಿತೃಭ್ಯೋ ನಮಸ್ಕಾರಃ ಕ್ರಿಯತೇ—

ಈಗ ಮೂರನೆಯ ಋಕ್ಕನ್ನು ವಿವರಿಸುವರು—ಈ ಋಕ್ಕಿನಲ್ಲಿ ನಮೋ ಅಸ್ತು ಎಂಬ ಶಬ್ದಪ್ರಯೋಗವಿರುವುದರಿಂದ ಪಿತೃದೇವತಾಕವಾದ ಋಕ್ಕುಗಳನ್ನು ಪಠಿಸುವಾಗ ಇದನ್ನು ಕೊನೆಯ ಋಕ್ಕನ್ನಾಗಿ ಪಠಿಸುವರು. ಎಂದರೆ ಈಗ ಹೇಳಿದ ಮೂರು ಋಕ್ಕುಗಳಲ್ಲಿ ಇದನ್ನು ಕೊನೆಯದಾಗಿ ಪಠಿಸಬೇಕು. ಈ ಕಾರಣದಿಂದಲೇ ಶ್ರಾದ್ಧದ ಕೊನೆಯಲ್ಲಿ ನಮೋಃ ವಃ ಪಿತರಃ ಎಂಬ ಮಂತ್ರದಿಂದ ಪಿತೃಗಳನ್ನು ನಮಸ್ಕಾರಮಾಡುವುದು ರೂಢಿಯಲ್ಲಿ ಬಂದಿದೆ.

ಈ ಋಕ್ಕು ಮತ್ತು ಇದರ ಅರ್ಥವು—

**ಇದಂ ಪಿತೃಭ್ಯೋ ನಮೋ ಅಸ್ತ್ವದ್ಯ ಯೇ ಪೂರ್ವಾಸೋ ಯ ಉಪರಾಸ ಈಯುಃ ।**
**ಯೇ ಪಾರ್ಥಿವೇ ರಜಸ್ಯಾ ನಿಷತ್ತಾ ಯೇ ವಾ ನೂನಂ ಸುವೃಜನಾಸು ವಿಕ್ಷು ॥**

(ಋ. ಸಂ. ೧೦-೧೫-೨)

ನಮಗಿಂತಲೂ ಹಿರಿಯರಾದ ಪಿತೃಪಿತಾಮಹಾದಿಗಳಲ್ಲಿ ಯಾರು ಪಿತೃಲೋಕವನ್ನು ಸೇರಿರುವರೋ, ನಮಗಿಂತ ಕಿರಿಯರಾದವರಲ್ಲಿ ಯಾರು ಮೃತಿಯನ್ನು ಹೊಂದಿರುವರೋ ಯಾರು ಪಾರ್ಥಿವಲೋಕದಲ್ಲಿ ಹವಿಸ್ಸಿಗಾಗಿ ಬಂದು ಕುಳಿತಿರುವರೋ ಉಳಿದ ಯಾವ ಪಿತೃಗಳು ಉತ್ತಮರಾದ ಧನವಂತರ ನಡುವೆ ಕುಳಿತಿರುವರೋ ಅಂತಹ ಸಕಲ ಪಿತೃಗಳನ್ನೂ ಈ ಯಾಗ ಕಾಲದಲ್ಲಿ ನಾನು ನಮಸ್ಕರಿಸುತ್ತೇನೆ.

ಈ ಋಕ್ಕಿನಲ್ಲಿರುವ ವಿಶೇಷಸಂಗತಿಗಳು.

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ **ಪಿತರೋ ಬರ್ಹಿಷದಃ** ಎಂಬ ಗುಂಪಿನ ಪಿತೃಗಳನ್ನುದ್ದೇಶಿಸಿ ಹೋಮ ಮಾಡುವಾಗ **ಇದಂ ಪಿತೃಭ್ಯಃ** ಎಂಬ ಈ ಋಕ್ಕನ್ನು ಎರಡನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ಉದಾಹರಿಸಲಾಗಿದೆ (ಆ. ೨-೧೯) ಅಗ್ನಿಮಾರುತಶಸ್ತ್ರಮಂತ್ರಗಳಲ್ಲಿಯೂ **ಇದಂ ಪಿತೃಭ್ಯಃ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆಹಂ ಪಿತೄನ್ತ್ಸುವಿದತ್ರಾಁ ಅವಿತ್ಸೀದಂ ಪಿತೃಭ್ಯೋ ನಮೋ ಅಸ್ತ್ವದ್ಯ ಸ್ವಾದುಷ್ಕಿಲಾಯಮಿತಿ ಚತಸ್ರಃ** ಎಂಬ ಸೂತ್ರದಿಂದ (ಆ. ೫-೨೦) ವಿವೃತವಾಗಿರುವುದು.

ಈ ಋಕ್ಕಿನಲ್ಲಿ ಋಷಿಯು ಕೆಲವು ಪಿತೃಗಳ ಬೇರೆ ಬೇರೆ ಸ್ವರೂಪಗಳನ್ನು ವಿವರಿಸಿದಾನೆ—

**ಪೂರ್ವಾಸಃ ಯಜಮಾನೋತ್ಪತ್ತೇಃ ಪೂರ್ವಮುತ್ಪನ್ನಾ ಜ್ಯೇಷ್ಠಭ್ರಾತೃಪಿತಾಮಹಾದಯಃ ।** ಯಜಮಾನನು (ಅಥವ ಋಷಿಯು) ಹುಟ್ಟುವುದಕ್ಕಿಂತ ಮೊದಲೇ ಉತ್ಪನ್ನರಾಗಿದ್ದ ಎಂದರೆ ವಯಸ್ಸಿನಲ್ಲಿ ತನಗಿಂತ ಹಿರಿಯರಾದ ಜ್ಯೇಷ್ಠಸಹೋದರರು, ತಂದೆಯ ತಂದೆ ಮೊದಲಾದವರು ಮೃತರಾಗಿದ್ದು ಪಿತೃಸ್ಥಾನದಲ್ಲಿರುವವರು. ಎಂದರೆ ತನಗಿಂತ ಮೊದಲೇ ಉತ್ಪನ್ನರಾದವರು.

**ಉಪರಾಸಃ—ಯಜಮಾನಜನ್ಮನ ಉಪರಿ ಉತ್ಪನ್ನಾಃ ಕನಿಷ್ಠಭ್ರಾತೃಸ್ವಪುತ್ರಾದಯಃ** । ವಯಸ್ಸಿನಲ್ಲಿ ತನಗಿಂತ ಕಿರಿಯರಾದ ತಮ್ಮಂದಿರು, ಮಕ್ಕಳು ಮುಂತಾದವರು ಕಾರಣಾಂತರದಿಂದ ತನಗೆ ಮೊದಲೇ ಮೃತರಾಗಿ ಪಿತೃಲೋಕದಲ್ಲಿರುವವರು.

**ಪಾರ್ಥಿವೇ ರಜಸಿ ಆ ನಿಷತ್ತಾಃ**—ಪೃಥಿವೀ ಸಂಬಂಧವಾದ ಈ ಭೂಲೋಕದಲ್ಲಿ ಈಗ ನಡೆಯುತ್ತಿರುವ ಪಿತೃಯಜ್ಞದಲ್ಲಿ ಹವಿಃಸ್ವೀಕಾರಾರ್ಥವಾಗಿ ಇಲ್ಲಿಗೆ ಬಂದು ಕುಳಿತಿರುವವರು.

**ಯೇ ವಾ ನೂನಂ ಸುವೃಜನಾಸು ವಿಕ್ಷು**—ನೇರವಾಗಿ ನಮ್ಮ ವಂಶಕ್ಕೇ ಸೇರದಿದ್ದರೂ ನಮ್ಮ ಬಂಧುವರ್ಗಕ್ಕೆ ಸೇರಿ ಶ್ರಾದ್ಧಾದಿಗಳಲ್ಲಿ ಹವಿಃಸ್ವೀಕಾರಾರ್ಥವಾಗಿ ಬಂದು ಕುಳಿತಿರುವ ಇನ್ನು ಕೆಲವು ಪಿತೃಗಳು. ಈ ಮೇಲೆ ಹೇಳಿದ ವಿಧ ವಿಧವಾದ ಪಿತೃಗಳನ್ನು ನಮಸ್ಕರಿಸುವೆನು ಎಂದು ಋಷಿಯು ವರ್ಣಿಸಿದಾನೆ.

ಪಿತೃಗಳ ವಿಷಯದಲ್ಲಿ ಕೆಲವು ವಿವರಣೆಗಳು—

ಮೃತರಾದವರಲ್ಲಿ ಪುಣ್ಯಶಾಲಿಗಳು ಮೂರನೆಯ ಸ್ವರ್ಗದಲ್ಲಿ ವಾಸಿಸುತ್ತಾರೆ; ಇವರಿಗೇ ಪಿತೃಗಳೆಂದು ಹೆಸರು. ಪುರಾತನವಾದ ಮಾರ್ಗಗಳನ್ನು ಅನುಸರಿಸಿದ, ಮೂಲಪುರುಷರೇ ಇವರು (೧೦-೧೫-೮, ೧೦) ; ಮೃತರಾದವರು, ಈ ಋಷಿಗಳು ಏರ್ಪಡಿಸಿದ ದಾರಿಯನ್ನೇ ಅನುಸರಿಸಿ, ಅವರ ಸಮೀಪಕ್ಕೇ ಹೋಗುತ್ತಾರೆ (೧೦-೧೪-೨, ೭, ೧೫). ವಿಷ್ಣುವಿನ ಮೂರನೆಯ ಪಾದಕ್ಕೆ ಸಂಬಂಧಿಸಿದ್ದಾರೆ. (೧೦-೧೫-೩ ; ೧-೧೫೪-೫ ನ್ನು ಹೋಲಿಸಿ). ಎರಡು ಸೂಕ್ತಗಳು ಪಿತೃದೇವತಾಕವಾದವು. (೧೦-೧೫ ; ೧೦-೧೬).

ಪಿತೃಗಳಲ್ಲಿ, ನವಗ್ವರು, ವಿರೂಪರು, ಅಂಗಿರಸರು, ಅಥರ್ವರು, ಭೃಗುಗಳು ಮತ್ತು ವಸಿಷ್ಠರೆಂಬ (೧೦-೧೪-೪ ರಿಂದ ೬ ; ೧೦-೧೫-೮) ಗಣಗಳಿವೆ ; ಇವುಗಳಲ್ಲಿ ಕಡೆಯ ನಾಲ್ಕು ಹೆಸರುಗಳು, ಅಥರ್ವವೇದ ಮತ್ತು ಋಗ್ವೇದದ ಎರಡನೆಯ ಮತ್ತು ಏಳನೆಯ ಮಂಡಲಗಳ ಋಷಿಗಳ ಹೆಸರುಗಳೇ ಆಗಿವೆ. ಇವರಲ್ಲಿ ಅಂಗಿರಸರಿಗೂ ಯಮನಿಗೂ ವಿಶೇಷ ಸಂಬಂಧವಿದೆ (೧೦-೧೪-೩, ೫) ಪಿತೃಗಳಲ್ಲಿ ಅವರಾಃ (ಕೆಳ ದರ್ಜೆದವರು), ಪರಾಃ (ಉತ್ತಮ ದರ್ಜೆಯವರು) ಮತ್ತು ಮಧ್ಯಮಾಃ (ಮಧ್ಯ ದರ್ಜೆಯವರು) ಎಂತಲೂ ವಿಭಾಗಗಳಿವೆ ; ಇವರೆಲ್ಲರೂ ಅವರ ವಂಶಜರಿಂದ ಜ್ಞಾತರಲ್ಲದಿದ್ದರೂ, ಅಗ್ನಿಗೆ ಇವರೆಲ್ಲರ ಪರಿಚಯವೂ ಇದೆ (೧೦-೧೫-೧, ೨, ೧೩). ಉಷಸ್ಸುಗಳು, ನದಿಗಳು, ಪರ್ವತಗಳು, ಭೂಮ್ಯಾಕಾಶಗಳು, ಪೂಷಣ ಮತ್ತು ಋಭುಗಳು, ಇವರುಗಳ ಜೊತೆಯಲ್ಲಿ ಪಿತೃಗಳ ಅನುಗ್ರಹವೂ ಪ್ರಾರ್ಥಿತವಾಗಿದೆ (೬-೫೨-೪ ; ೬-೭೫-೧೦ ; ೭-೩೫-೧೨ ; ೧-೧೦೬-೩). ಅವರ ಕಟಾಕ್ಷವನ್ನು ಬೇಡುವ (೧೦-೧೪-೭) ಅವರ ವಂಶಜರಿಗೆ, ಸಂಪತ್ತು, ಸಂತಾನ ಮತ್ತು ದೀರ್ಘಾಯುಸ್ಸುಗಳನ್ನು ಕೊಡಬೇಕೆಂದು ಪ್ರಾರ್ಥನೆ (೧೦-೧೫-೭, ೧೧ ; ಅ.ವೇ. ೧೮-೩-೧೪ ; ೧೮-೪-೬೨). ತಮ್ಮ ವಂಶೀಕರಿಗೆ ಸಹಾಯಮಾಡಬೇಕೆಂದು ವಸಿಷ್ಠರನ್ನು ಪ್ರಾರ್ಥಿಸಿದೆ (೭-೩೩-೧ ; ೧೦-೧೫-೮ ನ್ನು ಹೋಲಿಸಿ) ; ತುರ್ವಶಯದು ಮತ್ತು ಉಗ್ರದೇವ ಎಂಬುವರು ಒಂಟಿಯಾಗಿಯೂ ಸ್ತುತರಾಗಿದ್ದಾರೆ (೧-೩೬-೧೮).

ಪಿತೃಗಳೂ ಅಮರರು (ಅ.ವೇ. ೬-೪೧-೩) ; ದೇವತೆಗಳೆಂತಲೂ ಕರೆಯಲ್ಪಟ್ಟಿದ್ದಾರೆ (೧೦-೫೬-೪). ಅಂಗಿರಸರು ಮತ್ತು ಕೆಲವು ಗಣಗಳಲ್ಲಿ, ದೇವತ್ವದ ಜೊತೆಗೆ ಋತ್ವಿಜತ್ವವೂ ಸೇರಿದೆ. ಸೃಷ್ಟಿಕಾರ್ಯಗಳು ಕೆಲವು ಪಿತೃಗಳಿಗೂ ಉಕ್ತವಾಗಿವೆ ; ಆಕಾಶವನ್ನು ನಕ್ಷತ್ರರಂಜಿತವನ್ನಾಗಿ ಮಾಡಿದವರು ಅವರೇ ; ಹಗಲು ಹೊತ್ತಿನಲ್ಲಿ ಬೆಳಕೂ, ರಾತ್ರಿ ಕತ್ತಲೂ, ಅವರಿಂದಲೇ ಆಯಿತು (೧೦-೬೮-೧೧) ; ಅಡಗಿಕೊಂಡಿದ್ದ ಬೆಳಕನ್ನು ಕಂಡುಹಿಡಿದು, ಉಷಸ್ಸನ್ನು ಉಂಟುಮಾಡಿದರು (೭-೭೬-೪ ; ೧೦-೧೦೭-೧ ನ್ನು ಹೋಲಿಸಿ) ; ಮತ್ತು ಸೋಮನೊಡನೆ ಸೇರಿಕೊಂಡ, ಭೂಮ್ಯಾಕಾಶಗಳನ್ನು ವಿಸ್ತರಿಸಿದರು (೮-೪೮-೧೩). ದೇವತೆಗಳಿಗೆ ಹೋಮದ್ರವ್ಯವನ್ನು ವಹಿಸುವ ಅಗ್ನಿಗೂ (ಹವ್ಯವಾಹ) ಮತ್ತು ಶವವನ್ನು ದಹಿಸುವ ಅಗ್ನಿಗೂ (ಕ್ರವ್ಯಾದ)

ವ್ಯತ್ಯಾಸವಿರುವಂತೆ (೧೦-೧೬-೯), ದೇವಮಾರ್ಗಗಳಿಗೂ ವ್ಯತ್ಯಾಸವಿದೆ (೧೦-೨-೭ ; ೧೦-೧೮-೧ ; ೧೦-೮೮-೧೫ ನ್ನು ಹೋಲಿಸಿ). ಅದೇ ರೀತಿ, ಸ್ವರ್ಗಲೋಕಕ್ಕೂ ಪಿತೃಲೋಕಕ್ಕೂ ಭೇದವು ಉಕ್ತವಾಗಿದೆ; ದೇವಲೋಕದ ದ್ವಾರವು ಈಶಾನ್ಯದಿಕ್ಕಿನಲ್ಲಿಯೂ (ಶ.ಬ್ರಾ. ೬-೬-೨-೯), ಪಿತೃಲೋಕ ದ್ವಾರವು ಆಗ್ನೇಯದಲ್ಲಿಯೂ (ಶ.ಬ್ರಾ. ೧೩-೮-೧-೫) ಇವೆಯೆಂದು ಉಕ್ತವಾಗಿದೆ. ಪಿತೃಗಳೂ ಮನುಷ್ಯರೂ ಬೇರೆ ಬೇರೆ ವರ್ಗದವರು ಮತ್ತು ಸೃಷ್ಟಿಯೂ ಬೇರೆ ಬೇರೆ (ತೈ.ಬ್ರಾ. ೨-೩-೮-೨). ಪಿತೃಗಳು ಭೂಮಿ, ಅಂತರಿಕ್ಷ ಮತ್ತು ಸ್ವರ್ಗವಾಸಿಗಳು (ಅ.ವೇ. ೧೮-೨-೪೯ ; ಋ.ವೇ. ೧೦-೧೫-೨ ನ್ನು ಹೋಲಿಸಿ).

ಪುರಾತನ ಪಿತೃಗಳೇ ಒಂದು ಸಲ ಸೋಮಾಹುತಿಯನ್ನು ಅರ್ಪಿಸಿದರು (೧೦-೧೫-೮). ಅವರು ಯಮನೊಡನೆ ಸಂತೋಷದಿಂದ ಕಾಲಕಳೆಯುತ್ತಾರೆ (೧೦-೧೪-೧ ; ೧೦-೧೩೫-೧ ಮತ್ತು ಅ.ವೇ. ೧೮-೪-೧೦ ಗಳನ್ನು ಹೋಲಿಸಿ) ಮತ್ತು ದೇವತೆಗಳೊಡನೆ ಭೋಜನ ಮಾಡುತ್ತಾರೆ (೭-೭೬-೪). ದೇವತೆಗಳಿಗೆ ಸಮಾನರಾಗಿ ಜೀವಿಸುತ್ತಾ, ಒಂದೊಂದು ಸಲ ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನೂ ಪಡೆಯುತ್ತಾರೆ. ಇಂದ್ರ ಮತ್ತು ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನೂ ಪಡೆಯುತ್ತಾರೆ. ಇಂದ್ರ ಮತ್ತು ದೇವತೆಗಳ ರಥದಲ್ಲಿಯೇ ಅವರೂ ಬರುತ್ತಾರೆ (೧೦-೧೫-೧೦). ಅವರಿಗೂ ಸೋಮರಸದಲ್ಲಿ ಅಭಿಲಾಷೆ (೧೦-೧೫-೫, ೬) ; ದರ್ಭಾಸನದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು, ಸುತವಾದ ಪಾನೀಯವನ್ನು ಪಾನಮಾಡುತ್ತಾರೆ (೧೦-೧೫-೫, ೬). ತಮಗೋಸ್ಕರ ಸಿದ್ಧವಾದ ಸೋಮರಸವನ್ನು ಪಾನಮಾಡಲು ಆತುರರಾಗಿದ್ದಾರೆ; ಯಮ ಅವನ ತಂದೆ ವಿವಸ್ವತ ಮತ್ತು ಅಗ್ನಿಗಳೊಡನೆ ಬಂದು ಅವರೊಡನೆಯೇ, ಹುತವಾದವುಗಳನ್ನು ಸ್ವೀಕರಿಸಬೇಕೆಂದು ಆವರಿಗೆ ಆಹ್ವಾನವಿದೆ (೧೦-೧೫-೮ ರಿಂದ ೧೧ ; ೧೦-೧೪-೪, ೫). ಸಾವಿರಗಟ್ಟಲೆ ಬಂದು, ದರ್ಭಾಸನದಲ್ಲಿ ಕ್ರಮವಾಗಿ ಕುಳಿತುಕೊಳ್ಳುತ್ತಾರೆ. (೧೦-೧೫-೧೦, ೧೧). ಪಿತೃಗಳು ಯಾಗಶಾಲೆಗೆ ಬಂದಾಗ, ಕೆಲವು ಪಿಶಾಚಿಗಳೂ, ಅವರ ಸ್ನೇಹಿತರ ರೂಪದಲ್ಲಿ, ಅವರೊಡನೆ ಬೆರೆಯುವುದುಂಟು (ಅ.ವೇ. ೧೮-೨-೨೮).

ದೇವತೆಗಳಿಗೆ ಆಹಾರವು ಅರ್ಪಿತವಾಗುವಾಗ 'ಸ್ವಾಹಾ' ಎಂತಲೂ, ಪಿತೃಗಳಿಗೆ ಕೊಡುವಾಗ 'ಸ್ವಧಾ' ಎಂತಲೂ (೧೦-೧೪-೩) ಹೇಳುತ್ತಾರೆ; ಎಲ್ಲಾ ಕರ್ಮಗಳಲ್ಲಿಯೂ ದೇವ ಮತ್ತು ಪಿತೃಭಾಗಗಳಿಗೆ ಈ ವ್ಯತ್ಯಾಸವಿದ್ದೇ ಇರಬೇಕು (ಶ.ಬ್ರಾ. ೪-೪-೨-೨). ಅವರಿಗೂ ಪೂಜೆಯುಂಟು ; ಅನುಯಾಯಿಗಳ ಪ್ರಾರ್ಥನೆಯನ್ನು ಲಾಲಿಸಿ, ಅವರ ಪಕ್ಷವನ್ನು ವಹಿಸಬೇಕು, ಸ್ವಾಭಾವಿಕವಾಗಿ ನಡೆದುಹೋಗುವ ಪ್ರಮಾದಗಳನ್ನು ಮನ್ನಿಸಬೇಕು ಇತ್ಯಾದಿ ಪ್ರಾರ್ಥನೆಗಳಿವೆ (೧೦-೧೫-೨, ೫, ೬ ; ೩-೫೫-೨ ನ್ನು ಹೋಲಿಸಿ).

ಇಲ್ಲಿ ಒಂದು ಸಂಶಯವು ತಲೆದೋರುವುದು. ಒಬ್ಬ ಪುರುಷನು ಮೃತನಾದಮೇಲೆ ಅವನನ್ನು ಪರಲೋಕಕ್ಕೆ ಕರೆದುಕೊಂಡು ಹೋಗುವುದೆಂದರೇನು? ಶರೀರವೇ ನಾಶವಾದಾಗ ಕರೆದುಕೊಂಡುಹೋಗುವುದು ಯಾರನ್ನು ಎಂಬ ಪ್ರಶ್ನೆ ಏಳುವುದು. ಅದಕ್ಕೆ ಸಮಾಧಾನವೇನೆಂದರೆ—ಪುರುಷನು ಅಥವಾ ಪ್ರಾಣಿಯು ಮೃತವಾದಮೇಲೆ ಅವನ ಶರೀರ ಕ್ರಿಯೆಗಳೆಲ್ಲಾ ನಿಂತುಹೋಗಿ ಶರೀರವು ನಿಶ್ಚೇಷ್ಟಿತವಾಗುವುದು. ಅದು ಕ್ರಮೇಣ ಪಂಚಭೂತಗಳಾದ ಪೃಥಿವ್ಯಾದಿಗಳಲ್ಲಿ ಸೇರಿಹೋಗುವುದು. ಎಂದರೆ ಪಂಚಭೂತಗಳ ಸಂಯೋಗದಿಂದಲೇ ಉಂಟಾದ ಶರೀರವು ಕೊನೆಗೆ ಪಂಚಭೂತಗಳಲ್ಲಿಯೇ ಸೇರಿಹೋಗಿ ಅಂತರ್ಗತವಾಗುವುದು. ಪಂಚಭೂತಗಳೆಂದರೆ ಪೃಥಿವೀ, ಅಪ್ಪು, ತೇಜಃ, ವಾಯು, ಆಕಾಶ ಇವುಗಳಿಗೆ ಕ್ರಮವಾಗಿ ಘಟ್ಟಿಪದಾರ್ಥ, ದ್ರವರೂಪವಾದ ವಸ್ತು, ಶಾಖ, ಗಾಳಿ, ಅವಕಾಶ ಎಂಬರ್ಥಗಳನ್ನು ಇಲ್ಲಿ ಹೊಂದಿಸಿಕೊಳ್ಳಬೇಕು. ಈ ಐದುವಿಧವಾದ ವಸ್ತುಗಳು ದೇಹದಲ್ಲಿರುವುದು ಎಲ್ಲರಿಗೂ ತಿಳಿದೇ ಇದೆ. ಚರ್ಮ, ಮಾಂಸ, ಮೂಳೆ, ಉಗುರು ಮೊದಲಾದ ಘಟ್ಟಿಪದಾರ್ಥಗಳು ಪೃಥಿವಿಯ ಅಂಶಗಳು. ಮರಣಾನಂತರ ಅವು ಮಣ್ಣಿನಲ್ಲಿಯೇ ಸೇರಿ ಮಣ್ಣೇ ಆಗುವವು. ರಕ್ತ, ಜೊಲ್ಲು ಮೊದಲಾದ ದ್ರವರೂಪದಲ್ಲಿರುವ ವಸ್ತುಗಳು ಅಪ್ಪಿನ (ಉದಕದ) ಅಂಶಗಳು. ಅವುಗಳು ಜಲದಲ್ಲಿ ಲೀನವಾಗುವವು. ಶರೀರದಲ್ಲಿ ಮರಣಕಾಲದವರೆಗೂ ಇರುವ ಶಾಖವು (ಅಗ್ನಿಯು) ತೇಜಸ್ಸಿನಲ್ಲಿ ಅಥವಾ ಅಗ್ನಿಯಲ್ಲಿ ಬೆರತುಹೋಗುವುದು. ಆದ್ದರಿಂದ ಮೃತಶರೀರದಲ್ಲಿ ಶಾಖವಿರುವುದಿಲ್ಲ. ತಣ್ಣ

ಗಿರುವುದು. ಮರಣಾನಂತರ ಉಚ್ಛ್ವಾಸ ನಿಃಶ್ವಾಸರೂಪವಾದ ವಾಯುಚಲನೆಯು ನಿಂತುಹೋಗಿ ಪ್ರಾಣಾದಿಪಂಚವಾಯುಗಳು ವಾಯುತತ್ತ್ವದಲ್ಲಿ ಎಂದರೆ ಬಾಹ್ಯವಾಯುವಿನಲ್ಲಿ ಸೇರಿಹೋಗುವವು. ಉಸಿರಾಡುವುದು ನಿಂತುಹೋಗಿರುವುದೇ ಮರಣಕ್ಕೆ ಮುಖ್ಯ ಚಿಹ್ನೆಯೆಂದು ಅನುಭವವೇದ್ಯವಾಗಿದೆ. ಇನ್ನು ಆಕಾಶ ಅಥವಾ ಅವಕಾಶವು ಕಣ್ಣಿಗೆ ಕಾಣುವ ವಸ್ತುವಲ್ಲವಾದ್ದರಿಂದ ಅದು ಬಾಹ್ಯಾಕಾಶದಲ್ಲಿ ಲೀನವಾಗುವುದು ಯಾರಿಗೂ ಗೋಚರವಾಗುವುದಿಲ್ಲ. ಈರೀತಿ ಮೃತಶರೀರದ ಭಾಗಗಳೆಲ್ಲಾ ಆಯಾ ತತ್ತ್ವಗಳಲ್ಲಿ ಸೇರಿಹೋದಮೇಲೆ ಏನೂ ಉಳಿಯುವುದಿಲ್ಲವೇ ಎಂದರೆ ಉಳಿಯುತ್ತದೆ. ಪ್ರಾಣಿಯು ಅಥವಾ ಪುರುಷನು ಜೀವಿಸುತ್ತಿದ್ದ ಕಾಲದಲ್ಲಿ ಅವನ ಕ್ರಿಯಾ ವ್ಯಾಪಾರಗಳನ್ನು ಪ್ರೇರಿಸುತ್ತಾ ಚಕ್ಷುರಾದಿಜ್ಞಾನೇಂದ್ರಿಯಗಳ ವ್ಯಾಪಾರಾದಿಗಳನ್ನು ಗಮನಿಸುತ್ತಾ ಇದ್ದ ಚೇತನಾತ್ಮಕವಾದ ವಸ್ತುವೊಂದಿದ್ದಿತು. ವಸ್ತು ಎಂದರೆ ಇಲ್ಲಿ ಇಂದ್ರಿಯಗೋಚರವಾದ ಪಾರ್ಥಿವವಸ್ತುವಲ್ಲ. ಪಾರ್ಥಿವ ವಸ್ತುಗಳಿಗಿಂತ ಅತಿಸೂಕ್ಷ್ಮವಾಗಿ ಶರೀರವು ನಾಶವಾದರೂ ತಾನುಮಾತ್ರ ನಾಶವಾಗದೇ ಇರುವುದು. ಇದನ್ನು ಆತ್ಮನೆಂದು ಕರೆಯುವರು. ಈ ಆತ್ಮನಿಗೆ ಪಾರ್ಥಿವಶರೀರನಾಶಾನಂತರ ಸೂಕ್ಷ್ಮವಾದ ಬೇರೊಂದು ಶರೀರವು ಪ್ರಾಪ್ತವಾಗುವುದು. ಪ್ರಾರಂಭ ದೆಶೆಯಲ್ಲಿ ಇದನ್ನು ಪ್ರೇತಶರೀರವೆಂದು ಕರೆಯುವರು. ಅದು ಅತಿ ಸೂಕ್ಷ್ಮವಾಗಿರುವುದರಿಂದ ಅದನ್ನು ಬಾಹ್ಯಚಕ್ಷುಸ್ಸಿನಿಂದ ನೋಡಲಾಗುವುದಿಲ್ಲ. ಈ ಸೂಕ್ಷ್ಮಶರೀರದಲ್ಲಿ ಕರ್ಮೇಂದ್ರಿಯಗಳಿಲ್ಲದಿದ್ದರೂ ಜ್ಞಾನೇಂದ್ರಿಯ ಅಂಶಗಳಿರುವವು. ಎಂದರೆ ಸುಖದುಃಖಾದಿಗಳ ಅನುಭವವಾಗುವುದು. ಭೂಮಿಯಮೇಲೆ ಜೀವಿಸಿದ್ದ ಕಾಲದಲ್ಲಿ ತಾನು ಅನುಭವಿಸಿದ ಸುಖದುಃಖಗಳ ಮತ್ತು ಬಂಧುಬಾಂಧವರ ವಿಷಯವಾದ ಪ್ರೀತಿದ್ವೇಷಗಳ ವಾಸನೆಯು (ವಾಸನೆಯೆಂದರೆ–ಸೂಕ್ಷ್ಮಾಂಶವು) ಈ ಶರೀರಕ್ಕೆ ಇದ್ದೇ ಇರುವುದು. ಆತ್ಮನು ಕೆಲವು ಕಾಲದವರೆಗೆ ಎಂದರೆ ಮೃತಶರೀರಕ್ಕೆ ಮಾಡುವ ಅಪರಕರ್ಮಾದಿಗಳು ಸಮಾಪ್ತಿಯಾಗುವವರೆಗೆ ಈ ಪ್ರೇತಶರೀರದಲ್ಲಿದ್ದು ಅನಂತರ ತನ್ನ ಕರ್ಮಾನುಸಾರವಾಗಿ ಬೇರೆಲೋಕಕ್ಕೆ ಹೋಗುವನು. ಆಗ ಈ ಪ್ರೇತಶರೀರಕ್ಕಿಂತಲೂ ಇನ್ನೂ ಸೂಕ್ಷ್ಮವಾದ ಶರೀರವು ಪ್ರಾಪ್ತಿಯಾಗುವುದು. ಆಯಾ ಲೋಕಗಳು ಯಾವರೀತಿ ಇರುವವೋ, ಅದರಲ್ಲಿ ವಾಸಿಸುವ ಪ್ರಾಣಿಗಳೂ ಅದೇವಿಧವಾದ ವಸ್ತುವಿನಿಂದ ನಿರ್ಮಿತವಾದ ಶರೀರವುಳ್ಳವುಗಳಾಗಿರುವವು. ಪೃಥಿವಿಯಲ್ಲಿರುವಾಗ ಪೃಥಿವೀ ಸಂಬಂಧವಾದ ಸ್ಥೂಲವಸ್ತುಮಯವಾದ ಶರೀರಗಳೇ ಪ್ರಾಣಿಗಳಿರುವವು. ಸ್ವರ್ಗನರಕಾದಿಗಳಲ್ಲಿಯೂ ಹಾಗೆಯೇ. ಸ್ವರ್ಗ ಲೋಕವು ಅತಿಸೂಕ್ಷ್ಮವಸ್ತು ನಿರ್ಮಿತವಾಗಿರುವುದರಿಂದ ಅಲ್ಲಿ ವಾಸಿಸುವ ದೇವಮನುಷ್ಯಾದಿಗಳಿಗೂ ಅತಿ ಸೂಕ್ಷ್ಮವಾದ ಶರೀರಾದಿಗಳಿರುವವು. ಭೂಮಿಯ ಮೇಲಿರುವ ಜನರು ಸ್ಥೂಲವಸ್ತುಗಳನ್ನು ಮಾತ್ರ ತಮ್ಮ ಕಣ್ಣುಗಳಿಂದ ನೋಡಬಲ್ಲವರಾದ್ದರಿಂದ ಸೂಕ್ಷ್ಮರೂಪದಿಂದಿರುವ ದೇವಲೋಕವನ್ನಾಗಲಿ, ದೇವತೆಗಳನ್ನಾಗಲಿ ನೋಡಲು ಸಾಧ್ಯವಿಲ್ಲ. ದೇವಲೋಕವು ಎಲ್ಲಿರುವುದು ಎಂದರೆ— **ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್** (ತೈ. ಸಂ. ೬-೧-೧-೩) ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಈ ಮನುಷ್ಯಲೋಕದೊಡನೆಯೇ ಓತಪ್ರೋತವಾಗಿ ಎಂದರೆ ಪರಸ್ಪರ ಅಂತರ್ಗತವಾಗಿರುವುದು. ಸ್ವರ್ಗದ ಕೆಲವು ಭಾಗವು ನಮ್ಮ ಸುತ್ತಮುತ್ತಲಿರುವ ವಾತಾವರಣದಲ್ಲಿದ್ದರೂ ನಾವು ಅದನ್ನು ನೋಡಿ ತಿಳಿಯಲಾಗುವುದಿಲ್ಲ. ಸೂಕ್ಷ್ಮರೂಪದಲ್ಲಿರುವ ವಿದ್ಯುತ್ಪ್ರವಾಹವು ತಂತಿಗಳಲ್ಲಿ ಪ್ರವಹಿಸುತ್ತಿದ್ದರೂ ಅದನ್ನು ನೋಡಲಾಗುವುದಿಲ್ಲವಷ್ಟೆ. ಅದರಂತೆ ನಮ್ಮ ಈ ಸ್ಥೂಲ ಶರೀರದ ಅವಯವಗಳಿಂದ ಸೂಕ್ಷ್ಮರೂಪದಿಂದಿರುವ ಸ್ವರ್ಗವನ್ನೂ ಸ್ವರ್ಗವಾಸಿಗಳನ್ನೂ ನೋಡಲಾರೆವು. ಆದರೆ ಸ್ವರ್ಗವಾಸಿಗಳು ಇಷ್ಟಬಂದರೆ ನಮ್ಮನ್ನು ನೋಡಬಲ್ಲರು. ಪ್ರಕೃತಸೂಕ್ತದಲ್ಲಿಯೂ ಮುಂದಿನ ಕೆಲವು ಸೂಕ್ತಗಳಲ್ಲಿಯೂ ಮೃತನಾದ ಪುರುಷನನ್ನುದ್ದೇಶಿಸಿ ಹೇಳುವ ವಾಕ್ಯಗಳು ಮರಣಾನಂತರ ಪ್ರಾಪ್ತವಾಗುವ ಪ್ರೇತಶರೀರದಲ್ಲಿರುವ ಜೀವನನ್ನುದ್ದೇಶಿಸಿ ಹೇಳಿರುವುದೆಂದು ತಿಳಿಯಬೇಕು.

**ತದಾಹುರ್ವ್ಯಾಹಾವಂ ಪಿತ್ರ್ಯಃ ಶಂಸೇತ್ । ಅವ್ಯಾಹಾವಾ೩ ಮಿತಿ । ವ್ಯಾಹಾವಮೇವ ಶಂಸೇದಸಂಸ್ಥಿತಂ ವೈ ಪಿತೃಯಜ್ಞಸ್ಯ ಸಾಧ್ವ-**

**ಸಂಸ್ಥಿತಂ ವಾ ಏಷ ಪಿತೃಯಜ್ಞಂ ಸಂಸ್ಥಾಪಯತಿ ಯೋ ವ್ಯಾಹಾವಂ ಶಂಸತಿ ತಸ್ಮಾದ್ವ್ಯಾಹಾವಮೇವ ಶಂಸ್ತವ್ಯಂ ॥**

ಏತಾಸು ಪಿತ್ರ್ಯಾಸು ಕಂಚಿದ್ವಿಶೇಷಂ ವಿಚಾರ್ಯ ನಿರ್ಣಯಂ ದರ್ಶಯತಿ—ಶೋಂಸಾವೋಮಿತಿ ಮಂತ್ರಃ ಆಹಾವಃ । ಅನೇನ ಮಂತ್ರೇಣ ಪ್ರತ್ಯೃಚಂ ವ್ಯಾಹಾವಂ ವಿಶೇಷೇಣಾಹೂಯಾಽಽಹೂಯ ಕಿಂ ತಿಸ್ರಃ ಪಿತ್ರ್ಯಾಃ ಶಂಸೇತ್ ॥ ಆಹೋಸ್ವಿದವ್ಯಾಹಾವಂ ಪೃಥಕ್ಪೃಥಗಾಹಾವಮಂತ್ರಂ ವಿನಾ ಶಂಸೇದಿತಿ ವಿಚಾರಂ ಬ್ರಹ್ಮವಾದಿನ ಆಹುಃ ॥ ಅತ್ರ ಪಿತ್ರ್ಯಾಃ ಶಂಸತೀತ್ಯೇಕೇನೈವ ವಿಧಿನಾ ವಿಹಿತತ್ವಾತ್ಪೃಥಕ್ಪೃಥಗಾಹಾವೋ ನಾಸ್ತೀತಿ ಪಕ್ಷಃ ಪ್ರತಿಭಾತಿ । ಪುನರಪಿ ದ್ವಿತೀಯಾಂ ಶಂಸತಿ ನಮಸ್ಕಾರವತೀಂ ಶಂಸತೀತಿ ಪೃಥಗ್ವಿಧಿದರ್ಶನಾತ್ಪ್ರತ್ಯೇಕಮಾಹಾವಃ ಕರ್ತವ್ಯ ಇತ್ಯಪಿ ಪ್ರತಿಭಾತಿ । ವಿಚಾರಾರ್ಥಂ ಪ್ಲುತಿಪ್ರಯಂ ॥ ತತ್ರ ಪೃಥಕ್ಪೃಥಗಾಹಾವ ಏವ ಸಿದ್ಧಾಂತಃ ॥ ತತ್ರೇಯಮುಪಪತ್ತಿಃ ಪಿತೃಯಜ್ಞಸ್ಯ ಸಂಬಂಧಿ ಯದಂಗಮಸಂಸ್ಥಿತಮೇವ ವರ್ತತೇಽಸಮಾಪ್ತಂ ತಿಷ್ಠತಿ । ತದಂಗಂ ಸಾಧು ಸಮಾಪ್ತಂ ಕರ್ತವ್ಯಂ । ಯೋ ಹೋತಾ ಪೃಥಗಾಹಾವಂಕೃತ್ವಾ ಶಂಸತಿ । ಏಷ ಹೋತಾ ಪೂರ್ವಮಸಂಸ್ಥಿತಮಸಮಾಪ್ತಂ ಪಿತೃಯಜ್ಞಂ ಸಂಸ್ಥಾಪಯತಿ । ತಸ್ಮಾತ್ಪೃಥಕ್ಪೃಥಗಾಹಾವಮಂತ್ರಂ ಪಠಿತ್ವೈವ ಶಂಸ್ತವ್ಯಂ ॥

ಇದುವರೆಗೂ ಹೇಳಿದ ಪಿತೃಸಂಬಂಧವಾದ ಮಂತ್ರಗಳನ್ನು ಪಠಿಸುವಾಗ ಒಂದು ವಿಶೇಷ ಸಂಗತಿ ಇರುವುದು. ಅದನ್ನು ಇಲ್ಲಿ ವಿವರಿಸುತ್ತಾರೆ. ಬ್ರಹ್ಮವಾದಿಗಳು ಈರೀತಿ ಪ್ರಶ್ನೆಮಾಡುತ್ತಾರೆ. **ಶೋಂಸಾವೋಂ** ಎಂಬುದು ಆಹಾವಮಂತ್ರವು ಇದನ್ನು ಹೋತೃವು ಮಂತ್ರಪಠನದ ಪೂರ್ವದಲ್ಲಿ ಅಧ್ವರ್ಯುವನ್ನುದ್ದೇಶಿಸಿ ಪಠಿಸುವನು ಆದರೆ ಹಿಂದೆ ಹೇಳಿದ ಪಿತೃದೇವತಾಕವಾದ ಮೂರು ಋಕ್ಕುಗಳನ್ನು ಪಠಿಸುವಾಗ ಪ್ರಾರಂಭದಲ್ಲಿ ಮಾತ್ರ (ಮೂರು ಋಕ್ಕುಗಳೂ ಸೇರಿ) **ಶೋಂಸಾವೋಂ** ಎಂದು ಒಂದಾವರ್ತಿ ಮಾತ್ರ ಪಠಿಸಬೇಕೇ? ಅಥವಾ ಪ್ರತಿಯೊಂದು ಋಕ್ಕಿನ ಆರಂಭದಲ್ಲೂ **ಶೋಂಸಾವೋಂ** ಎಂದು ಮೂರು ಋಕ್ಕುಗಳಿಗೂ ಮೂರಾವರ್ತಿ ಪಠಿಸಬೇಕೇ? ಎಂದು ಕೇಳುವರು. ಇಲ್ಲಿ ಮೇಲೆ ಹೇಳಿರುವಂತೆ **ಪಿತ್ರ್ಯಾಃ ಶಂಸತಿ**—ಎಂಬ ಒಂದು ವಿಧಿ ಮಾತ್ರ ಇರುವುದು ಎಂದರೆ ಪಿತೃದೇವತಾಕವಾದ ಋಕ್ಕುಗಳನ್ನು ಪಠಿಸಬೇಕು ಎಂದು ಇದರ ಅರ್ಥವು. ಹೀಗೆ ಹೇಳಿರುವುದರಿಂದ ಆಹಾವವನ್ನು ಒಂದಾವರ್ತಿ ಮಾತ್ರ ಹೇಳಬೇಕು. ಪ್ರತಿಋಕ್ಕಿಗೂ ಹೇಳಬೇಕಾಗಿಲ್ಲ ಎಂಬ ಅರ್ಥವು ಭಾಸವಾಗುವುದು. ಆದರೆ ಮತ್ತೆ **ದ್ವಿತೀಯಾಂ ಶಂಸತಿ, ನಮಸ್ಕಾರವತೀಂ ಶಂಸತಿ** ಎಂದು ಪ್ರತಿಋಕ್ಕನ್ನು ನಿರ್ದೇಶಿಸಿ ವಿಧಿಸಲಾಗಿದೆ. ಇದರಿಂದ ಪ್ರತಿಋಕ್ಕನ್ನೂ ಪ್ರತ್ಯೇಕ ಆಹಾವಮಂತ್ರವನ್ನು ಪಠಿಸಿ ಪ್ರಾರಂಭಮಾಡಬೇಕೆಂಬ ಅರ್ಥವು ಭಾಸವಾಗುವುದು. ಈ ಎರಡು ಪಕ್ಷಗಳಲ್ಲಿ ಯಾವುದು ಸರಿ ಎಂದು ತಿಳಿಯದೆ ಸಂಶಯಕ್ಕೆ ಅವಕಾಶವಾಗಿರುವುದರಿಂದ ಇಲ್ಲಿ ೩ ಎಂಬ ಪ್ಲುತಿಯನ್ನು ಸೇರಿಸಿ ಪಠಿಸಲಾಗಿದೆ. ಆದರೆ ಈ ವಿಷಯದಲ್ಲಿ ಸಿದ್ಧಾಂತವು (ನಿರ್ಣಯವು) ಈರೀತಿ ನಿಶ್ಚಯಿಸಲ್ಪಟ್ಟಿರುವುದು—ಮೂರು ಋಕ್ಕುಗಳಲ್ಲಿ ಪ್ರತಿಯೊಂದು ಋಕ್ಕಿಗೂ ಆಹಾವವನ್ನು ಸೇರಿಸಿಯೇ ಪಠಿಸಬೇಕು. ಏಕೆಂದರೆ ಆಹಾವಪೂರ್ವಕವಾಗಿ ಪಠಿಸುವ ಈ ಪಿತೃದೇವತಾಕವಾದ ಋಕ್ಕುಗಳು ಪಿತೃಯಜ್ಞದ ಒಂದು ಭಾಗವು. ಈ ಯಜ್ಞದಲ್ಲಿ ಸಮಾಪ್ತವಾಗದ ಯಾವುದಾದರೂ ಭಾಗವಿದ್ದಲ್ಲಿ ಅದು ಆಹಾವಪೂರ್ವಕವಾಗಿ ಈ ಋಕ್ಕುಗಳನ್ನು ಪಠಿಸುವುದರಿಂದ ಪರಿಸಮಾಪ್ತಿಯಾಗುವುದು. ಹಿಂದೆ ಯಾವಾಗಲಾದರೂ ಈ ಪಿತೃಯಜ್ಞವು ಸಮಾಪ್ತಿಯಾಗದೆ ಹಾಗೆಯೇ ಉಳಿದಿದ್ದರೆ ಹೋತೃವು ಈಗ ಆಹಾವಪೂರ್ವಕವಾಗಿ ಪಠಿಸುವ ಪಿತೃದೇವತಾಕವಾದ ಋಕ್ಕುಗಳ ಪಠನದಿಂದ ಸಮಾಪ್ತಿಯನ್ನೈದುವುದು. ಆದ್ದರಿಂದ ಪ್ರತಿಮಂತ್ರದ ಪ್ರಾರಂಭದಲ್ಲಿಯೂ ಆಹಾವವನ್ನು ಸೇರಿಸಿಯೇ ಪಠಿಸಬೇಕು. ಇದು ವಿಧಿಯು.

*English Translation*

**(The offerings to the wives of the gods and to Yama and the Kavyas, a class of mannes.)**

After having addressed (in the Ahir budhaya verse) Agni, the house-father, he recites the verses addressed to the wives of the gods. For the wife (of the sacrificer) sits behind the Garhapatya fire.

They say: he should first address Raka with a verse, for the honour of drinking first from the Soma belongs (amoug the divine women) to the sister (of the gods). But this precept should not be cared for· He should first address the wives of the gods. By doing so. Agni, the house-father, provides the wives with seed. By means of the Garhapatya, Agni the Hotar, thus actually provides the wives with seed for prsduction. He who has such a knowledge will be blessed with offspring and cattle. (That the wives have precedence to a sister is apparent in wordly things.) For a sister who has come from the same womb is provided with food &c. after the wife who has come from another womb has beeu cared for.

He repeats the Raka verse. She sews that seam (in the womb) which is on the penis, so as to form a man. He who has such a knowledge obtains male children.

By repeats the Paviravi verse· Speech is Sarasvati paviravi. By repeating this verse he provides the sacrificer with speech.

They ask, should he first repeat the verse addressed to Yama or that one which is devoted to the Manes? He should first repeat the verse addressed to Yama: imam yama prastara (10,14,4) for a king (Yama being a ruler) has the honour of drinking first.

Immediately after it he repeats the verse for the Kavyas: matali kavyair yamo (10, 14, 3). The Kavyas are beings inferior to the gods and superior to the manes· Thence he repeats the verses for the manes, udiratam avara utparasah (10, 15, 1-3), after that one addressed to the Kavyas. By the words of the first verse: "May the Soma-loving manes who are of low as well as those who are of a middling and superior character, rise," he pleases them all, the lowest as well the middling and highest ones, without foregoing any one· In the second verse, the term barhishado, "sitting on the sacred grass," implies, that they have a beloved house. By repeating it, he makes them prosper through their beloved house. He who has such a knowledge prospers through his beloved house. The verse (out of three) which contains the term "adoration," "this adoration be to

tha manes," he repeets at the end (though it be second in order). That is the reason, that at the end of funeral ceremonies, the manes are adored by the words " adoration to you, O manes!"

They ask, should he, when repeating the verses to the manes, use at each verse the call somsavam, or should he repeat them without that call? He should repeat it. What ceremony is not finished in the Pitri yajna (offeriug to the manes), that is to be eompleted. The Hotar who repeats the call somsavom at each verse, completes the incomplete sacrifice. Thence the call Somsavom ought to be repeated.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ತ್ರಯೋದಶಃ ಖಂಡಃ

ಇಲ್ಲಿಗೆ ಐತರೇಯಬ್ರಾಹ್ಮಣದಲ್ಲಿ ಹದಿಮೂರನೆಯ ಅಧ್ಯಾಯದಲ್ಲಿ ಹದಿಮೂರನೆಯ ಖಂಡವು ಸಮಾಪ್ತವಾದುದು.



## ಅಥ ತ್ರಯೋದಶಾಧ್ಯಾಯೇ ಚತುರ್ದಶಃ ಖಂಡಃ

### ಹದಿಮೂರನೆಯ ಅಧ್ಯಾಯದಲ್ಲಿ ಹದಿನಾಲ್ಕನೆಯ ಖಂಡವು



[ತೃತೀಯಸವನದಲ್ಲಿ ಇಂದ್ರನಿಗಿರುವ ಭಾಗವು; ವಿಷ್ಣು ಮತ್ತು ವರುಣನನ್ನು ಸ್ತುತಿಸಲಾಗಿರುವ ಕೆಲವು ಋಕ್ಕುಗಳು, ವಿಷ್ಣುವನ್ನು ಮಾತ್ರ ಸ್ತುತಿಸುತ್ತಿರುವ ಋಕ್ಕು ಹಾಗೆಯೇ ಪ್ರಜಾಪತಿ ದೇವತಾಕವಾದ ಋಕ್ಕು. ಅಗ್ನಿಮಾರುತ ಶಸ್ತ್ರದ ಕೊನೆಯ ಋಕ್ಕು ಮತ್ತು ಈ ಶಸ್ತ್ರದ ಯಾಜ್ಯಾಮಂತ್ರವು.]

---

**ಸ್ವಾದುಷ್ಕಿಲಾಯಂ ಮಧುಮಾँ ಉತಾಯಮಿತೀಂದ್ರಸ್ಯೈಂದ್ರೀರನು-ಪಾನೀಯಾಃ ಶಂಸತ್ಯೇತಾಭಿರ್ವಾ ಇಂದ್ರಸ್ತೃತೀಯಸವನಮ-ನ್ವಪಿಬತ್ತದನುಪಾನೀಯಾನಾಮನುಪಾನೀಯತ್ವಂ ।**

ಅಥ ಚತಸ್ರ ಋಚೋ ವಿಧತ್ತೇ--ಸ್ವಾದುಷ್ಕಿಲಾಯಮಿತ್ಯಾದಿಕಾ ಋಚ ಐಂದ್ರ್ಯ ಇಂದ್ರದೇವತಾಕತ್ವಾತ್ಪಿಬಾಂಸಮಿಂದ್ರಮಿತೀಂದ್ರಸ್ತೃತೀಯಪಾದೇ ಶ್ರೂಯತೇ । ತಾಶ್ಚೇಂ-

**ದ್ರಸ್ಯಾನುಪಾನೀಯಾ ಭೋಜನಾದೂರ್ಧ್ವಂ ಯತ್ಪಾನಂ ತತ್ಪಶ್ಚಾದ್ಭಾವಿತ್ವಾದನುಪಾನಂ ತತ್ಸಾಧನೀಯಾ ಏತಾ ಋಚಃ । ತಾಃ ಶಂಸೇತ್ । ಕಥಮಿವಾಽಸಾಮನುಪಾನೀಯತ್ವಮಿತಿ ತದುಚ್ಯತೇ । ಅಯಮಿಂದ್ರಸ್ತೃತೀಯಸವನಮನು ಪಶ್ಚಾದೇತಾಭಿರ್ಋಗ್ಭಿಃ ಶಸ್ಯಮಾನಃ ಸನ್ಸೋಮಮುಪಿಬತ್ತಸ್ಮಾದನುಪಾನೀಯೇತಿ ನಾಮ ಸಂಪನ್ನಂ ॥**

ಈಗ ಇಂದ್ರದೇವತಾಕವಾದ ನಾಲ್ಕು ಋಕ್ಕುಗಳನ್ನು ವಿವರಿಸುವರು—**ಸ್ವಾದುಷ್ಕಿಲಾಯಂ** (ಋ. ಸಂ. ೬-೪೭-೧ ರಿಂದ ೪) ಎಂಬ ನಾಲ್ಕು ಋಕ್ಕುಗಳು ಇಂದ್ರದೇವತಾಕವು. ಏಕೆಂದರೆ ಮೂರನೆಯ ಪಾದದಲ್ಲಿ **ಪಪಿವಾಂಸಮಿಂದ್ರಂ** ಎಂಬ ಶಬ್ದಗಳಿರುವುದರಿಂದ ಈ ಋಕ್ಕುಗಳು ಇಂದ್ರದೇವತಾಕವು. ಇವು ಇಂದ್ರನನ್ನುದ್ದೇಶಿಸಿ ಪಠಿಸಬೇಕಾದ ಅನುಪಾನೀಯ ಋಕ್ಕುಗಳೆಂದು ಹೇಳಲ್ಪಡುವವು. ಭೋಜನಾನಂತರ ಪಾನಮಾಡುವುದಕ್ಕೆ ಅನುಪಾನವೆಂದು ಹೆಸರು. ಈ ಋಕ್ಕುಗಳು ಅನುಪಾನೀಯ ಋಕ್ಕುಗಳಾದ್ದರಿಂದ ಇವುಗಳನ್ನು ಪಠಿಸಬೇಕು. ಈ ಋಕ್ಕುಗಳಿಗೆ ಅನುಪಾನೀಯವೆಂಬ ಹೆಸರು ಹೇಗೆ ಬಂದಿತೆಂದರೆ—ಈ ಇಂದ್ರನು ತೃತೀಯಸವನದಲ್ಲಿ ಭಾಗವಹಿಸಿದಮೇಲೆ ಈ ಋಕ್ಕುಗಳಿಂದ ಸ್ತುತಿಸಲ್ಪಟ್ಟು ಪುನಃ ಸೋಮವನ್ನು ಪಾನಮಾಡಿದನು. ಆದ್ದರಿಂದ ಈ ಋಕ್ಕುಗಳಿಗೆ ಅನುಪಾನೀಯ ಋಕ್ಕುಗಳೆಂಬ ಹೆಸರು ಬರಲು ಕಾರಣವು.

**ಮಾದ್ಯಂತೀವ ವೈ ತರ್ಹಿ ದೇವತಾ ಯದೇತಾ ಹೋತಾ ಶಂಸತಿ ತಸ್ಮಾದೇತಾಸು ಮದ್ವತ್ಪ್ರತಿಗೀರ್ಯಂ ।**

**ಏತಚ್ಛಂಸನಕಾಲೇಽಧ್ವರ್ಯೋಃ ಪ್ರತಿಗರಮಂತ್ರೇ ವಿಶೇಷಂ ವಿಧತ್ತೇ—ತಸ್ಮಿನ್ನನುಪಾನೀಯಾನಾಮೃಚಾಂ ಶಂಸನಕಾಲೇ ಹೋತುಃ ಶಂಸನಂ ಶ್ರುತ್ವಾ ದೇವತಾಃ ಸರ್ವಾ ಮಾದ್ಯಂತೀವ ವೈ ಸರ್ವಥಾ ಹೃಷ್ಯಂತ್ಯೇವ । ತಸ್ಮಾತ್ಕಾರಣಾದೇತಾಸ್ವೃಕ್ಷು ಶಸ್ಯಮಾನಾಸ್ವಧ್ವರ್ಯುಣಾ ಮದ್ವತ್ಪ್ರತಿಗೀರ್ಯಂ ಮದಿಧಾತುಯುಕ್ತಂ ಪ್ರತಿಗರಣಂ ಪಠನೀಯಂ ಮದಾಮೋ ದೈವೇತ್ಯಯಂ ಮದಿಧಾತುಯುಕ್ತಃ ಪ್ರತಿಗರಣಮಂತ್ರಃ ॥**

ಈ ಮಂತ್ರಗಳನ್ನು ಹೋತೃವು ಪಠಿಸುವ ಕಾಲದಲ್ಲಿ ಅಧ್ವರ್ಯುವು ಹೋತೃವಿನ ಆಹಾವಕ್ಕೆ ಪ್ರತಿಯಾಗಿ ಹೇಳುವ ಪ್ರತಿಗರವೆಂಬ ಮಂತ್ರದಲ್ಲಿ ಪಠಿಸಬೇಕಾದ ಒಂದು ವಿಶೇಷ ಸಂಗತಿಯಿರುವದು ಅದನ್ನು ಇಲ್ಲಿ ತಿಳಿಸುವರು—ಅನುಪಾನೀಯ ಋಕ್ಕುಗಳನ್ನು ಹೋತೃವು ಪಠಿಸುತ್ತಿರುವಾಗ ಅದನ್ನು ಕೇಳಿ ಸಮಸ್ತ ದೇವತೆಗಳೂ ಬಹಳವಾಗಿ ಹರ್ಷಗೊಂಡರು. ಆದ್ದರಿಂದ ಎಂದರ್ರೆ ಈ ಅನುಪಾನೀಯ ಋಕ್ಕುಗಳನ್ನು ಕೇಳಿ ದೇವತೆಗಳು ಬಹಳ ಹರ್ಷಗೊಂಡಿದ್ದರಿಂದ ಅದನ್ನು ಸೂಚಿಸುವುದಕ್ಕಾಗಿ ಅಧ್ವರ್ಯುವು ಆಹಾವಮಂತ್ರಕ್ಕೆ ಪ್ರತಿಯಾಗಿ ಪ್ರತಿಗರ(ಉತ್ತರ) ವನ್ನು ಹೇಳುವಾಗ **ಮದ್ವತ್ಪ್ರತಿಗೀರ್ಯಂ** ಹರ್ಷವನ್ನು ಹೊಂದು ಎಂಬರ್ಥವುಳ್ಳ ಮದಿದಾತುಯುಕ್ತವಾದ ಪ್ರತಿಗರವನ್ನೇ ಪಠಿಸಬೇಕು. **ಮದಾ ಮೋ ದೈವ** ಎಂಬುದೇ ಮಧಿಧಾತುಯುಕ್ತವಾದ ಪ್ರತಿಗರ ಮಂತ್ರವು. ಇದನ್ನು ಅಧ್ವರ್ಯುವು ಪಠಿಸಬೇಕು.

**ಯಯೋರೋಜಸಾ ಸ್ಕಭಿತಾ ರಜಾಂಸೀತಿ ವೈಷ್ಣುವಾರುಣೀಮೃಚಂ ಶಂಸತಿ ವಿಷ್ಣುರ್ವೈ ಯಜ್ಞಸ್ಯ ದುರಿಷ್ಟಂ ಪಾತಿ ವರುಣಃ ಸ್ವಿಷ್ಟಂ ತಯೋರುಭಯೋರೇವ ಶಾಂತ್ಯೈ ॥**

ಋಗಂತರಂ ವಿಧತ್ತೇ—ವಿಷ್ಣುರ್ವರುಣಶ್ಚ ಮಿಲಿತ್ವಾ ದೇವತಾ ಯಸ್ಯಾ ಋಚಃ ಸಾ ವೈಷ್ಣುವಾರುಣೀ ತಾಂ ಜಪೇಚ್ಛಂಸೇದಿತ್ಯರ್ಥಃ । ತಸ್ಯಾಃ ಚತುರ್ಥಪಾದೇ ವಿಷ್ಣುರಗನ್ವರುಣೇತಿ ಶ್ರವಣಾದ್ವೈಷ್ಣುವಾರುಣೀಯಂ ಸಾ ಚಾಽಽಶ್ವಲಾಯನೇನ ಪಠಿತಾ । ದುರಿಷ್ಟಮಂಗವಿಕಲಂ ಯದನುಷ್ಠಿತಂ ತದ್ವಿಷ್ಣುಃ ಪಾತಿ ವೈಕಲ್ಯಂ ನಿವಾರಯತೀತ್ಯರ್ಥಃ । ಸ್ವಿಷ್ಟಂ ಸಾಕಲ್ಯೇನ ಯದಂಗಮನುಷ್ಠಿತಂ ತದ್ವರುಣಃ ಪಾತಿ ತಸ್ಯ ಫಲಪ್ರತಿಬಂಧಂ ನಿವಾರಯತೀತ್ಯರ್ಥಃ । ತಸ್ಮಾದಿಯಮೃಕ್ತಯೋರುಭಯೋರ್ವಿಷ್ಣುವರುಣಯೋರುಭಯೋರೇವ ಶಾಂತ್ಯೈ ಪ್ರೀತ್ಯೈ ಸಂಪದ್ಯತೇ ।

ವಿಷ್ಣು ಮತ್ತು ವರುಣ ಎಂಬ ದೇವತೆಗಳನ್ನು ಸ್ತುತಿಸಿರುವ ಋಕ್ಕಿಗೆ ವೈಷ್ಣುವಾರುಣೀ ಋಕ್ಕೆಂದು ಹೆಸರು. ಅದನ್ನು ಇಲ್ಲಿ ಪಠಿಸಬೇಕು. ಈ ಋಕ್ಕು ಋಗ್ವೇದದಲ್ಲಿಲ್ಲದಿರುವುದರಿಂದ ಅದನ್ನು ಆಶ್ವಲಾಯನರು ತಮ್ಮ ಶ್ರೌತಸೂತ್ರದಲ್ಲಿ (ಆಶ್ವ. ಶ್ರೌ. ಸೂ. ೫-೨೦-೬) ದಲ್ಲಿ ಹೇಳಿದಾರೆ. ಆ ಋಕ್ಕು ಯಾವುದೆಂದರೆ—

ಯಯೋರೋಜಸಾ ಸ್ಕಭಿತಾ ರಜಾಂಸಿ ವೀರ್ಯೇಭಿರ್ವೀರತಮಾ ಶವಿಷ್ಠಾ ।
ಯಾ ಪತ್ಯೇತೇ ಅಪ್ರತೀತಾ ಸಹೋಭಿರ್ವಿಷ್ಣುರಗನ್ ವರುಣಾ ಪೂರ್ವಹೂತೌ ॥

ಎಂಬುದೇ ಆ ಮಂತ್ರವು. ಮೇಲಿನ ವಾಕ್ಯದಲ್ಲಿ ದುರಿಷ್ಟಂ ಪಾತಿ ಎಂದು ಹೇಳಿರುವುದು. ಇಲ್ಲಿ ದುರಿಷ್ಟಂ ಎಂದರೆ ವೈಕಲ್ಯ, ಲೋಪದೋಷಗಳು ಎಂದರ್ಥವು. ವಿಷ್ಣುವು ಅದನ್ನು ಸರಿಪಡಿಸುತ್ತಾನೆ. ವರುಣಃ ಸ್ವಿಷ್ಟಂ ವರಣದೇವತೆಯು ಲೋಪದೋಷಗಳಿಲ್ಲದಂತೆ ಎಂದರೆ ಸಾಕಲ್ಯವಾಗಿ ಯಾವ ಕರ್ಮವನ್ನು ಅನುಷ್ಠಾನಮಾಡಲಾಗುವುದೋ ಅದಕ್ಕೆ ತಕ್ಕ ಫಲವು ತಪ್ಪಿಹೋಗದಂತೆ ಪ್ರತಿಬಂಧಕವನ್ನು ಪರಿಹರಿಸುವನು. ಆದ್ದರಿಂದ ಈ ಋಕ್ಕನ್ನು ವಿಷ್ಣುವರುಣ ದೇವತೆಗಳ ಪ್ರೀತ್ಯರ್ಥವಾಗಿ ಪಠಿಸಬೇಕು.

**ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಮಿತಿ ವೈಷ್ಣವೀಂ ಶಂಸತಿ ಯಥಾ ವೈ ಮತ್ಯಮೇವಂ ಯಜ್ಞಸ್ಯ ವಿಷ್ಣುಸ್ತದ್ಯಥಾ ದುಷ್ಕೃಷ್ಟಂ ದುರ್ಮತೀಕೃತಂ ಸುಕೃಷ್ಟಂ ಸುಮತೀಕೃತಂ ಕುರ್ವನ್ನಿಯಾದೇವಮೇವೈತದ್ಯಜ್ಞಸ್ಯ ದುಷ್ಟುತಂ ದುಃಶಸ್ತಂ ಸುಷ್ಟುತಂ ಕುರ್ವನ್ನೇತಿ ಯದೇತಾಂ ಹೋತಾ ಶಂಸತಿ.**

ವಿಷ್ಣೋರಿತಿ ಶ್ರೂಯಮಾಣತ್ವಾದಿಯಂ ವೈಷ್ಣವೀ । ಮತೌ ಬುದ್ಧೌ ಸಮ್ಯಕ್ತ್ವೇನ ಪ್ರತಿಭಾತಂ ಕಾರ್ಯಂ ಮತ್ಯಂ । ಅಯಂ ದೃಷ್ಟಾಂತಃ । ವಿಷ್ಣುರ್ದಾರ್ಷ್ಟಾಂತಿಕಃ । ಯಥಾ ಮತ್ಯಂ ಕಾರ್ಯಂ ಲೋಕೇ ಫಲಪರ್ಯವಸಾಯಿ ಭವತಿ ತಥಾ ವಿಷ್ಣುರಪಿ ಫಲಪರ್ಯವಸಾಯೀತ್ಯರ್ಥಃ ॥ ಉಕ್ತಯೋರ್ದೃಷ್ಟಾಂತದಾರ್ಷ್ಟಾಂತಿಕಯೋಸ್ತಾತ್ಪರ್ಯಂ ತದ್ಯಥೇತ್ಯಾದಿನಾ ಪ್ರಪಂಚ್ಯತೇ । ಯಥಾ ಲೋಕೇ ದುಷ್ಕೃಷ್ಟಂ ಕರ್ಷಕೈಃ ಸಸ್ಯಸ್ಥಾನೇ ದೋಷಯುಕ್ತಂ ಯಥಾ ಭವತಿ ತಥಾ ಕರ್ಷಣಂ ಕೃತಂ । ಯತ್ಕಿಂಚಿದ್ರಾಜಕಾರ್ಯಮಮಾತ್ಯೈರ್ದುರ್ಮತೀ ಕೃತಂ ದುಷ್ಟಂ ಮತಮನ್ಯಥಾ ಚಿಂತಿತಂ ಪೂರ್ವಂ ತತ್ಕಾರ್ಯಮಮತಂ ಸತ್ಪಶ್ಚಾದ್ಬುದ್ಧಿಪ್ರಮಾದಾದ್ದುರ್ಮತಂ ಸಂಪಾದಿತಂ ತತ್ರ ಕಶ್ಚಿದ್ಬುದ್ಧಿಮಾನ್ಕರ್ಷಕಃ ಕೃಷ್ಟಸ್ಥಾನೇ ದುಷ್ಟಸ್ಯ ತೃಣಾದೇರಪನಯನೇನ ಸುಕೃಷ್ಟಂ ಕುರ್ವನ್ನಿಯಾತ್ಕರ್ಷಕಸ್ಯ ಪೃಷ್ಠತೋ ಗಚ್ಛೇತ್ ॥ ರಾಜಕಾರ್ಯ-

ಮಪಿ ದುರ್ಬುದ್ಧಿನಾಽಮಾತ್ಯೇನ ದುರ್ಮತೀಕೃತಂ ಕಶ್ಚಿತ್ಸುಬುದ್ಧಿರಮಾತ್ಯಃ ಸುಮತೀ ಕುರ್ವನ್ನಗಚ್ಛೇತ್ ॥ ಯಥೈತದುಭಯಂ ಲೋಕ ಏವಮೇವಾಸ್ಮಿನ್ಕರ್ಮಣಿ ಯಜ್ಞಸಂಬಂಧಿ ಯತ್ಸ್ತೋತ್ರಮಕುಶಲೈರುದ್ಗಾತೃಭಿರ್ದೋಷಸಹಿತಂ ಕೃತಂ ಯದಪಿ ಹೋತೃಭಿಃಶಸ್ತ್ರಂ ದೋಷಸಹಿತಂ ಪಠಿತಂ ತದುಭಯಮಪಿ ವಿಷ್ಣುಃ ಕ್ರಮೇಣ ಸುಷ್ಟುತಂ ಸುಶಸ್ತಂ ಕುರ್ವನ್ನೇತಿ ಗಚ್ಛತಿ ತತ್ರತ್ಯದೋಷಂ ಪರಿಹರತೀತ್ಯರ್ಥಃ ॥ ಯದ್ಯದಾ ವೈಷ್ಣವೀಮೇತಾಂ ಹೋತಾ ಶಂಸತಿ ತದಾ ತದುಭಯಸಮಾಧಾನಮಿತಿ ದ್ರಷ್ಟವ್ಯಂ ॥

ಈಗ ವಿಷ್ಣುದೇವತಾಕವಾದ ಋಕ್ಕನ್ನು ವಿವರಿಸುವರು—**ವಿಷ್ಣೋರ್ನುಕಂ** ಎಂಬುವುದೇ (ಋ. ಸಂ. ೧-೧೫೪-೧) ಆ ಋಕ್ಕು. ಇದಕ್ಕೆ ವೈಷ್ಣವೀ ಋಕ್ಕೆಂದು ಹೆಸರು. ಇದರಲ್ಲಿ ವಿಷ್ಣುದೇವತೆಯನ್ನು ಸ್ತುತಿಸಲಾಗಿದೆ. ಮನಸ್ಸಿನಲ್ಲಿ ಯಾವ ಕಾರ್ಯವನ್ನು ಮಾಡಬೇಕೆಂದು ಹೊಳೆಯುವುದೋ ಅದಕ್ಕೆ ಮತ್ಯಂ ಎಂದು ಹೆಸರು. ಅದಕ್ಕೆ ಇದೇ ದೃಷ್ಟಾಂತವು. ಮನಸ್ಸಿನಲ್ಲಿ ಯೋಚಿಸಿ ಮಾಡಿದ ಕೆಲಸವು ಯಾವರೀತಿ ಚೆನ್ನಾಗಿ ಕೊನೆಮುಟ್ಟುವುದೋ ಅದರಂತೆ ವಿಷ್ಣುವೂ ಸಹ ಮನಃಪೂರ್ವಕವಾಗಿ ನೆರವೇರಿಸುವ ಕಾರ್ಯವನ್ನು ಫಲಪ್ರದವಾಗುವಂತೆ ಮಾಡುವನು. ಈಗ ಹೇಳಿದ ದೃಷ್ಟಾಂತ, ದಾರ್ಷ್ಟಾಂತಿಕವಾದ ವಿಷಯಗಳನ್ನು ವಿಶದಪಡಿಸುವರು—ಲೋಕವ್ಯವಹಾರದಲ್ಲಿ ಒಬ್ಬ ಕೃಷಿಕನು ಸರಿಯಾಗಿ ಆಲೋಚಿಸದೆ ತನ್ನ ಕೆಲಸದಲ್ಲಿ (ಕೃಷಿಕರ್ಮದಲ್ಲಿ) ಕೆಲವು ತಪ್ಪುಗಳನ್ನು ಮಾಡಬಹುದು. ಹಾಗೆಯೇ ರಾಜತಂತ್ರಜ್ಞನಾದ ಒಬ್ಬ ಅಮಾತ್ಯನೂ ಸರಿಯಾಗಿ ಮನಸ್ಸಿನಲ್ಲಿ ನಿರ್ಧರಿಸದೆ ತಪ್ಪುಗಳನ್ನು ಮಾಡಬಹುದು. ಈ ಎರಡುವಿಧ ಕಾರ್ಯಗಳಲ್ಲಿಯೂ ಕೆಟ್ಟಫಲವುಂಟಾಗುವುದು. ಆದರೆ ಅನಂತರ ಏಕೆ ಹೀಗಾಯಿತೆಂದು ವಿಮರ್ಶೆಮಾಡಿ ಸರಿಮಾಡಿದಲ್ಲಿ ಅದರಿಂದ ಬಾಧಕವು ತಪ್ಪಿ ಸರಿಯಾದ ಪರಿಣಾಮವುಂಟಾಗುವುದು. ಅದರಂತೆ ಮಂತ್ರಗಳನ್ನು ಪಠಿಸುವಾಗ ಉದ್ಗಾತೃವು ತಪ್ಪುತಪ್ಪಾಗಿ ಗಾನಮಾಡಬಹುದು. ಅದನ್ನೇ ಅನುಸರಿಸಿ ಹೋತೃವೂ ಮಂತ್ರವನ್ನು ಪಠಿಸುವನು. ಅದರಿಂದ ದುಷ್ಕೃತವುಂಟಾಗುವುದಲ್ಲದೆ ಸುಕೃತವುಂಟಾಗುವುದಿಲ್ಲ. ಹೀಗಾಗದಿರುವುದಕ್ಕಾಗಿ ಇಲ್ಲಿ ವಿಷ್ಣುವನ್ನು ಸ್ತುತಿಸಿದಲ್ಲಿ ವಿಷ್ಣುವು ಸರಿಯಾಗಿ ನಡೆಯದೆ ಕೆಟ್ಟುಹೋದ ಕಾರ್ಯಕಲಾಪಗಳನ್ನೂ, ತಪ್ಪುತಪ್ಪಾಗಿ ಹೇಳಿದ ಮಂತ್ರಗಳನ್ನೂ ಸರಿಪಡಿಸುವನು. ಆದ್ದರಿಂದ ಇಲ್ಲಿ ಲೋಪದೋಷಗಳ ಪರಿಹಾರಕ್ಕಾಗಿ ವಿಷ್ಣುದೇವತಾಕವಾದ ಈ ಋಕ್ಕನ್ನು ಹೋತೃವು ಅವಶ್ಯಕವಾಗಿ ಪಠಿಸಬೇಕು.

ತಂತುಂ ತನ್ವನ್ರಜಸೋ ಭಾನುಮನ್ವಿಹೀತಿ ಪ್ರಾಜಾಪತ್ಯಾಂ ಶಂಸತಿ ಪ್ರಜಾ ವೈ ತಂತುಃ ಪ್ರಜಾಮೇವಾಸ್ಮಾ ಏತತ್ಸಂತನೋತಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನಿತಿ ದೇವಯಾನಾ ವೈ ಜ್ಯೋತಿಷ್ಮಂತಃ ಪಂಥಾನಸ್ತಾನೇವಾಸ್ಮಾ ಏತದ್ವಿತನೋತಿ । ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಮಿತ್ಯೇವೈನಂ ತನ್ಮನೋಃ ಪ್ರಜಯಾ ಸಂತನೋತಿ ಪ್ರಜಾತ್ಯೈ ಪ್ರಜಾಯತೇ ಪ್ರಜಯಾ ಪಶುಭಿರ್ಯ ಏವಂ ವೇದ ।

ಋಗಂತರಂ ವಿಧತ್ತೇ—ಅಸ್ಯಾಮೃಚಿ ಕಾಚಿದಪಿ ದೇವತಾ ಸಾಕ್ಷಾದ್ವಾಚಕಶಬ್ದೇನ ನೋಕ್ತಾ ತಸ್ಮಾದಿಯಮನಿರುಕ್ತಾ । ತಾದೃಶ್ಯಾಶ್ಚ ಪ್ರಜಾಪತಿರ್ದೇವತಾ । ತದ್ದೇವತಾಕತ್ವಂ ಪೂರ್ವಮೇವ ನಿರೂಪಿತಂ ತಾಮೇತಾಂ ಪ್ರಾಜಾಪತ್ಯಾಂ ಶಂಸೇತ್ ॥ ಹೇ ಪ್ರಜಾಪತೇ ತಂತುಂ ತನ್ವನ್ಪುತ್ರಪೌತ್ರಾದಿಸಂತತಿಂ ವಿಸ್ತಾರಯನ್ರಜಸೋ ರಜ ಆತ್ಮಕಸ್ಯ ಜಗತೋ ಭಾನುಂ ಭಾಸಕಮಾದಿತ್ಯಮನ್ವಿಹ್ಯನುರುಧ್ಯ ಗಚ್ಛ ॥ ಆದಿತ್ಯೋ ಹಿ ಪುನಃ ಪುನಃ ಸಂಚರನ್ನಹೋರಾತ್ರನಿಷ್ಪತ್ತಿಂ ಕರೋತೀತಿತತ್ಕಾಲಾನುಸಾರೇಣೈವ ತ್ವಮಪಿ ಸಂತಾನವೃದ್ಧಿಂ ಕುರ್ವಿತ್ಯರ್ಥಃ ॥ ಅಸ್ಮಿನ್ಪಾದೇ ತಂತುಶಬ್ದೇನ ಪುತ್ರಪೌತ್ರಾದಿಪ್ರಜಾ ವಿವಕ್ಷಿತಾ ತಂತುವದ್ವಿಸ್ತಾರ್ಯಮಾಣತ್ವಾತ್ತಸ್ಮಾದೇತತ್ಪಾದಪಾಠೇನಾಸ್ಮೈ ಯಜಮಾನಾಯ ಪ್ರಜಾಮೇವ ಸಂತನೋತಿ ಅವಿಚ್ಛಿನ್ನಾಂ ಕರೋತಿ । ದ್ವಿತೀಯಪಾದಮನೂದ್ಯ ವ್ಯಾಚಷ್ಟೇ—ಹೇ ಪ್ರಜಾಪತೇ ಧಿಯಾ ಕೃತಾನ್ಯಾಗಾದ್ಯನುಷ್ಠಾನಬುದ್ಧ್ಯಾ ಸಂಪಾದಿತಾನ್ಜ್ಯೋತಿಷ್ಮತಃ ಪ್ರಕಾಶಯುಕ್ತಾನ್ಪಥಃ ಸ್ವರ್ಗಮಾರ್ಗಾನ್ರಕ್ಷ ವಿಘ್ನಪರಿಹಾರೇಣ ಪಾಲಯ । ಅತ್ರ ಜ್ಯೋತಿಷ್ಮತ್ಪಥಿಶಬ್ದಾಭ್ಯಾಂ ದೇವಗಮನಮಾರ್ಗಾ ವಿವಕ್ಷಿತಾಃ । ದೇವಾ ಯೇಷು ಮಾರ್ಗೇಷು ಯಾಂತಿ ತೇ ದೇವಯಾನಾಃ । ಸರ್ವೇಷಾಂ ದೇವಾನಾಂ ತೇಜಸ್ವಿತ್ವಾತ್ತನ್ಮಾರ್ಗೇಷು ನ ಕದಾಪ್ಯಂಧಕಾರೋಽಸ್ತಿ । ತಸ್ಮಾದೇತತ್ಪಾದಪಾಠೇನಾಸ್ಮೈ ಯಜಮಾನಾಯ ತಾನೇವ ಮಾರ್ಗಾನ್ಜ್ಯೋತಿಷ್ಮತೋ ವಿಸ್ತಾರಯತಿ ॥ ಉತ್ತರಾರ್ಧಮನೂದ್ಯ ವ್ಯಾಚಷ್ಟೇ—ಪುನಃ ಪುನಃ ಕರ್ಮಸು ಗಚ್ಛಂತಿ ಪ್ರವರ್ತಂತ ಇತ್ಯನುಷ್ಠಾನಶೀಲಾ ಜೋಗುಶಬ್ದೇನೋಚ್ಯಂತೇ ॥ ತಾದೃಶಾನಾಂ ಜೋಗುವಾಮಸ್ಮತ್ಸಂತತಾವುತ್ಪನ್ನಾನಾಂ ಪುತ್ರಾದೀನಾಮಪೋಽನುಷ್ಠೀಯಮಾನಮೇತತ್ಕರ್ಮಾನುಲ್ಬಣಮನತಿರಿಕ್ತಂ ವಯತ ಹೇ ಪ್ರಜಾಪತೇ ವಯ ನಿರ್ವಹ ॥ ಬಹುವಚನಂ ಪೂಜಾರ್ಥಂ ॥ ಮನುರ್ಭವ ತ್ವಮಪಿ ಮನುಷ್ಯೋತ್ಪಾದನಾರ್ಥಮನುರೂಪೋ ಭವ । ತತೋ ದೈವ್ಯಂ ದೇವತಾರಾಧನಯೋಗ್ಯಂ ಜನಂ ಪುತ್ರಾದಿರೂಪಂ ಮನುಷ್ಯಂ ಜನಯೋತ್ಪಾದಯ । ತತ್ತೇನಾರ್ಧಪಾಠೇನೈನಂ ಯಜಮಾನಂ ಮನೋಃ ಸಂಬಂಧಿನ್ಯಾ ಪ್ರಜಯಾ ಮನುಷ್ಯರೂಪಯಾ ಸಂತನೋತಿ ಸಂಯೋಜಯತಿ ॥ ತಚ್ಚ ಪ್ರಜಾತ್ಯೈ ಯಜಮಾನಸ್ಯ ಪ್ರಜೋತ್ಪಾದನಾಯ ಸಂಪದ್ಯತೇ ॥ ವೇದನಂ ಪ್ರಶಂಸತಿ—

ಈಗ ಮುಂದಿನ ಋಕ್ಕನ್ನು ವಿವರಿಸುವರು—ತಂತುಂ ತನ್ವನ್ರಜಸಃ (ಋ. ಸಂ. ೧೦-೫೩-೬) ಎಂಬುದೇ ಆ ಋಕ್ಕು. ಈ ಋಕ್ಕಿನಲ್ಲಿ ಯಾವ ದೇವತೆಯ ಹೆಸರನ್ನು ಹೇಳಿಲ್ಲವಾದ್ದರಿಂದ ಇದನ್ನು ಪ್ರಜಾಪತಿದೇವತಾಕವಾದ ಋಕ್ಕೆಂದು ಪರಿಗಣಿಸಬಹುದು. ಈ ವಿಷಯವನ್ನು ಹಿಂದೆಯೇ ಹೇಳಲಾಗಿದೆ. ಇಲ್ಲಿ ತಂತುಂ ಎಂಬ ಶಬ್ದಕ್ಕೆ ದಾರದಂತೆ ಅವಿಚ್ಛಿನ್ನವಾದ ಪುತ್ರಪೌತ್ರಾದಿ ಸಂತತಿಯು ಎಂದರ್ಥವು. ಎಲೈ ಪ್ರಜಾಪತಿಯೇ, ಯಜ್ಞಮಾಡುವ ಈ ಯಜಮಾನನ ಪುತ್ರಪೌತ್ರಾದಿಸಂತತಿಯನ್ನು ವಿಸ್ತಾರಗೊಳಿಸುತ್ತಾ ಎಂದರೆ ಅಭಿವೃದ್ಧಿಗೊಳಿಸುತ್ತಾ ಈ ಲೋಕದಲ್ಲಿ ಸೂರ್ಯನನ್ನು ಅನುಸರಿಸು ಎಂದರೆ ಸೂರ್ಯನಂತೆ ಸದಾಕಾಲವೂ ಈ ಕಾರ್ಯವನ್ನು ನೆರವೇರಿಸುತ್ತಿರು ಎಂದು ಮೊದಲನೆಯಪಾದದ ಅರ್ಥವು. ಆದಿತ್ಯನು ಪ್ರತಿದಿನವೂ ಉದಯಿಸುತ್ತಾ ಮತ್ತು ಸಂಚರಿಸುತ್ತಾ ಅಹೋರಾತ್ರಿಗಳನ್ನು ಉಂಟುಮಾಡುತ್ತಿರುವನು. ಅದರಂತೆ ನೀನೂ ಸಹ ವಿಚ್ಛಿತ್ತಿಯಿಲ್ಲದೆ ಸಂತಾನಾಭಿವೃದ್ಧಿಯನ್ನು ಮಾಡುತ್ತಿರು. ಈ ಪಾದದಲ್ಲಿ ಹೇಳಿರುವಂತೆ ತಂತುಶಬ್ದಕ್ಕೆ ಪ್ರಜಾಸಂತತಿಯೆಂದು ಹಿಂದೆಯೇ ಹೇಳಿದೆ ಈ ತಂತುವನ್ನು ಹೇಗೆ ವಿಸ್ತಾರಗೊಳಿಸಬಹುದೋ ಅದರಂತೆ ಈ ಯಜಮಾನನ ಸಂತಾನಾಭಿವೃದ್ಧಿಯನ್ನು ಮಧ್ಯೆ ವಿಚ್ಛಿತ್ತಿಯಿಲ್ಲದಂತೆ ನಡೆಸಿಕೊಂಡು ಬರಬೇಕೆಂದು ಪ್ರಜಾಪತಿಯನ್ನು ಇಲ್ಲಿ ಪ್ರಾರ್ಥಿಸಲಾಗಿದೆ. ಈಗ ಈ ಋಕ್ಕಿನ **ಜ್ಯೋತಿಷ್ಮತಃ ಪಥೋ ರಕ್ಷ-**

**ಧಿಯಾ ಕೃತಾನ್** ಎಂಬ ಎರಡನೆಯ ಪಾದವನ್ನು ವಿವರಿಸುವರು. ಸ್ವರ್ಗಕ್ಕೆ ಹೋಗುವ ಮಾರ್ಗವನ್ನು ಎಂದರೆ ಜನರು ಸತ್ಕರ್ಮಾನುಷ್ಠಾನದಿಂದ ಸ್ವರ್ಗವನ್ನು ಪಡೆದು ಅದಕ್ಕೆ ಹೋಗುವ ಮಾರ್ಗವನ್ನು ಪ್ರಕಾಶಯುಕ್ತವನ್ನಾಗಿ ಮಾಡು. ಇಲ್ಲಿ **ಜ್ಯೋತಿಷ್ಮತಃ ಪಥಃ** ಪ್ರಕಾಶಮಾನವಾದ ಮಾರ್ಗವೆಂದರೆ ದೇವತೆಗಳು ಮುಂತಾದ ಪುಣ್ಯಪುರುಷರು ಸ್ವರ್ಗಕ್ಕೆ ಹೋಗಿ ಸೇರುವ ಮಾರ್ಗಕ್ಕೆ **ದೇವಯಾನ** ಮಾರ್ಗಗಳೆಂದು ಹೆಸರು. ಈ ಮಾರ್ಗದಲ್ಲಿ ಅಂಧಕಾರವೆಂಬುದೇ ಇರುವುದಿಲ್ಲ. ಯಾವಾಗಲೂ ಬೆಳಕಾಗಿಯೇ ಇರುವುದು. ಇಂತಹ ಮಂತ್ರಪಠನದಿಂದ ಹೋತೃವು ಯಜಮಾನನು ಸ್ವರ್ಗಕ್ಕೆ ಹೋಗುವ ಮಾರ್ಗವನ್ನು ಸಿದ್ಧಪಡಿಸುವನು ಇದು ಈ ಪಾದದ ಅರ್ಥವು. ಇನ್ನು ಮುಂದಿನ ಎರಡುಪಾದಗಳನ್ನೂ ವಿವರಿಸುವರು—**ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಂ** । ಎಂಬುದು ಈ ಋಕ್ಕಿನ ಉತ್ತರಾರ್ಧವು. ಎಲೈ ಪ್ರಜಾಪತಿಯೇ ಈ ಯಜಮಾನನ ಸಂತತಿಯವರಲ್ಲಿ ಪುನಃ ಪುನಃ ಸತ್ಕರ್ಮಾಚರಣೆಯಲ್ಲಿ ನಿರತರಾದವರು ತಮ್ಮ ತಮ್ಮ ಅನುಷ್ಠಾನ ಕರ್ಮಗಳಲ್ಲಿ ಯಾವ ತೊಂದರೆಗಳನ್ನೂ ಆತಂಕಗಳನ್ನೂ ಅನುಭವಿಸದೆ ತಮ್ಮ ಕಾರ್ಯಗಳನ್ನು ನಿರ್ವಹಿಸಲು ಅವಕಾಶವನ್ನುಂಟುಮಾಡು ಮತ್ತು ದೇವತೆಗಳನ್ನು ಪೂಜಿಸುವ ಸತ್ಕರ್ಮಗಳಲ್ಲಿ ಆಸಕ್ತಿಯುಳ್ಳ ಸಂತತಿಯವರನ್ನು, ಮನುವು ತನ್ನ ವಂಶಜರನ್ನು ಉತ್ಪತ್ತಿಮಾಡಿದಂತೆ ಉತ್ಪತ್ತಿಮಾಡಿ ಯಜಮಾನನ ವಂಶವನ್ನು ವಿಸ್ತರಿಸು. ಇಲ್ಲಿ ಮನುರ್ಭವ ಎಂಬ ಶಬ್ದಗಳಿಗೆ ಯಜಮಾನನ ಸಂತಾನವನ್ನು ವೃದ್ಧಿಪಡಿಸುವ ಕಾರ್ಯದಲ್ಲಿ ಮನುವಿನಂತೆ ಆಚರಿಸು ಎಂದರೆ ಮನುಷ್ಯರೂಪವಾದ ಮತ್ತು ದೇವತೆಗಳನ್ನು ಪೂಜಿಸುವ ಸಂತತಿಯನ್ನು (ಯಜಮಾನನ) ವಿಸ್ತರಿಸು ಎಂಬಭಿಪ್ರಾಯವು ಸೂಚಿತವಾಗಿದೆ. ಈ ಮಂತ್ರಪಠನದಿಂದ ಯಜ್ಞಮಾಡುವ ಯಜಮಾನನ ಸಂತಾನಾಭಿವೃದ್ಧಿಯುಂಟಾಗುವುದು. ಈ ಮಂತ್ರಾರ್ಥವನ್ನು ತಿಳಿದ ಪುರುಷನೂ ಸಂತಾನಾಭಿವೃದ್ಧಿಯನ್ನೈದುವನು.

ಈ ಋಕ್ಕಿನಲ್ಲಿ ದೇವಯಾನ ಎಂದರೆ ದೇವತೆಗಳು ಸಂಚರಿಸುವ ಮಾರ್ಗವೆಂಬ ವಿಷಯದ ಪ್ರಸ್ತಾಪವಿದೆ. ಅದನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸುತ್ತೇವೆ.

ಉಪನಿಷತ್ತುಗಳಲ್ಲಿ **ದೇವಯಾನ, ಪಿತೃಯಾನ** ಎಂಬ ಪದಗಳಿಗೆ ಪಾರಿಭಾಷಕವಾದ ಅರ್ಥವಿದೆ. ಆದರೆ ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ **ದೇವಯಾನವೆಂಬ** ಪದಕ್ಕೆ ದೇವತೆಗಳು ಸಂಚರಿಸುವ ಮಾರ್ಗವೆಂದೇ ಅರ್ಥವಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಆಧ್ಯಾತ್ಮಿಕವಾದ ತಾತ್ಪರ್ಯವೂ ಸೂಚಿತವಾಗಿದೆ.

ಉಪನಿಷತ್ತುಗಳಲ್ಲಿ **ದೇವಯಾನ ಮತ್ತು ಪಿತೃಯಾನ** ಎಂಬ ಪದಗಳಿಂದ ಪುರುಷನ ಮರಣಾನಂತರ ಅವನ ದೇಹವು ಭಸ್ಮವಾಗಿ ನಿತ್ಯನಾಗಿರುವ ಆತ್ಮನು ಸಂಚರಿಸತಕ್ಕ ಮಾರ್ಗಗಳೆರಡು ಎಂದು ಪ್ರಸಿದ್ಧವಾಗಿದೆ. ಸತ್ಕರ್ಮಕ್ಕೆ ಫಲವನ್ನನುಭವಿಸಲು ಹೋಗತಕ್ಕಮಾರ್ಗಗಳಲ್ಲಿ ಒಂದು ದೇವಯಾನ ಇನ್ನೊಂದು ಪಿತೃಯಾನ. ಒಂದು ದೇವತೆಗಳ ಮಾರ್ಗ; ಮತ್ತೊಂದು ಪಿತೃಗಳ ಮಾರ್ಗ. **ಪಂಚಾಗ್ನಿವಿದ್ಯೆಯನ್ನರಿತು** ಸತ್ಯದಲ್ಲೇ ಶ್ರದ್ಧೆಯನ್ನಿಟ್ಟಿರುವವರು ದೇವಮಾರ್ಗದಲ್ಲಿ ಹೊರಟು ಪರಬ್ರಹ್ಮನನ್ನು ಸೇರುತ್ತಾರೆ. ಇವರ ಮರಣಾನಂತರ ಆತ್ಮನು ಜ್ವಾಲೆಯನ್ನು ಪ್ರವೇಶಿಸಿ ತನ್ಮೂಲಕ ಅಹಸ್ಸನ್ನೂ, ಶುಕ್ಲಪಕ್ಷವನ್ನೂ, ಉತ್ತರಾಯಣವನ್ನೂ, ಸಂವತ್ಸರವನ್ನೂ, ಆದಿತ್ಯನನ್ನೂ, ವಿದ್ಯುತ್ತನ್ನೂ ಪ್ರವೇಶಿಸಿ ತನ್ಮೂಲಕ ಅಮಾನವನಾದ ಪುರುಷನ ಸಹಾಯದಿಂದ ಪರಬ್ರಹ್ಮನನ್ನು ಪಡೆಯುತ್ತಾನೆ—ಎಂಬ ವಿಷಯವನ್ನು ಉಪನಿಷತ್ತುಗಳಲ್ಲಿ ವರ್ಣಿಸಿದೆ.

ಯಾರು ಕೇವಲ ಯಜ್ಞದಿಂದಲೂ ದಾನಾದಿಗಳಿಂದಲೂ ಲೋಕವನ್ನು ತೃಪ್ತಿಗೊಳಿಸುತ್ತಾರೆಯೋ ಎಂದರೆ ಪಂಚಾಗ್ನಿವಿದ್ಯೆಯನ್ನರಿಯದೇ ಕೇವಲ ಸತ್ಕರ್ಮನಿರತರಾಗಿರುವರೋ ಅಂತಹವರು ಮರಣಾನಂತರ ಬೇರೆ ಮಾರ್ಗದಲ್ಲಿ ಸಂಚರಿಸುತ್ತಾರೆ. ದೇಹವು ದಗ್ಧವಾದನಂತರ ಆತ್ಮನು ಧೂಮದೊಂದಿಗೆ ಸೇರಿ ಅನಂತರ ರಾತ್ರಿಯನ್ನೂ, ತನ್ಮೂಲಕ ಕೃಷ್ಣಪಕ್ಷವನ್ನೂ, ತದ್ದ್ವಾರಾ ದಕ್ಷಿಣಾಯನವನ್ನೂ ಅನಂತರ ಪಿತೃಲೋಕವನ್ನೂ ಕೊನೆಗೆ ಚಂದ್ರಲೋಕವನ್ನೂ ಸೇರುತ್ತಾರೆ. ಅದೇ ಅವರ ಚರಮಸ್ಥಾನವು.

ಈ ಲೋಕವಲ್ಲಿ ಅವರ ಸತ್ಕರ್ಮಗಳಿಗನುಗುಣವಾದ ಫಲಗಳನ್ನು ಪೂರ್ಣವಾಗಿ ಅನುಭವಿಸಿ, ಪಿತೃಗಳೊಂದಿಗಿದ್ದು, ತಮ್ಮ ಕರ್ಮದ ಸಂಸ್ಕಾರವು ಮುಗಿದೊಡನೆಯೇ ಪುನಃ ಅವೇ ಧೂಮಮಾರ್ಗವಾಗಿ ಪೃಥ್ವಿಗೆ ಹಿಂತಿರುಗುತ್ತಾರೆ. ಇದೇ ಉಪನಿಷತ್ತು ಗಳಲ್ಲಿ ವರ್ಣಿಸಿರತಕ್ಕ **ದೇವಯಾನ** ಮತ್ತು **ಪಿತೃಯಾನ**ಗಳ ಸ್ವರೂಪಗಳು.

ಪ್ರಕೃತದಲ್ಲಿ ನಾವು ಗಮನಿಸಬೇಕಾದುದೇನೆಂದರೆ ಮೇಲೆ ವಿವರಿಸಿದಂತೆ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ಭಾವವೆಲ್ಲವೂ ಪೂರ್ಣವಾಗಿ ಋಕ್ಸಂಹಿತೆಯಲ್ಲಿ ಉಪಯೋಗಿಸುವ **ದೇವಯಾನ** ಪದದಿಂದ ಸೂಚಿತವಾಗುತ್ತದೆಯೇ ಅಥವಾ ಕೇವಲ ದೇವತೆಗಳು ಸಂಚರಿಸತಕ್ಕ ಭೌತಿಕವಾದ ಮಾರ್ಗವೆಂದರ್ಥವಾಗುತ್ತದೆಯೆ ? ಎಂಬುದು. ಇದರಂತೆಯೇ ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ **ಪಿತೃಯಾನ** ಶಬ್ದಕ್ಕೂ ಸಹ ಯಾವ ಅರ್ಥ ಎಂಬುದನ್ನೂ ಪ್ರಕೃತವಲ್ಲಿ ವಿಮರ್ಶಿಸಬೇಕಾಗಿದೆ.

ಋಕ್ಸಂಹಿತೆಯಲ್ಲಿ **ದೇವಯಾನ** ಎಂಬ ಪದವು ಒಟ್ಟು ಹದಿಮೂರುಸಲ ಪ್ರಯೋಗಿಸಲ್ಪಟ್ಟಿದೆ. [೧-೭೧-೭ ; ೧-೧೬೨-೩ ; ೧-೧೮೩-೬ ; ೧-೧೮೪-೬ ; ೪-೩೭-೧ ; ೫-೪೩-೬ ; ೭-೩೮-೮ ; ೭-೭೬-೨ ; ೧೦-೧೮-೧ ; ೧೦-೫೧-೨ ; ೧೦-೫೧-೫ ; ೧೦-೯೮-೧೧ ; ೧೦-೧೮೧-೩.] ಈ ಸಂದರ್ಭಗಳಲ್ಲೆಲ್ಲಾ ಸಾಯಣರು ಪ್ರಧಾನವಾಗಿ ಎರಡು ಅರ್ಥಗಳನ್ನು ಮಾತ್ರ ಹೇಳಿದ್ದಾರೆ. ಅವರ ವಿವರಣೆಯ ಪ್ರಕಾರ ಮೊದಲನೆಯದಾಗಿ ಯಜ್ಞಕರ್ತರಾದ ಮಾನವರು ತಮ್ಮ ಹವಿಸ್ಸುಗಳೊಂದಿಗೆ ದೇವತೆಗಳನ್ನು ಸಮೀಪಿಸಲು ಹೋಗತಕ್ಕ ಮಾರ್ಗವೆಂದೂ ಎರಡನೆಯದಾಗಿ ದೇವತೆಗಳು ತಮ್ಮ ಹವಿಸ್ಸಿನ ಸ್ವೀಕಾರಕ್ಕಾಗಿ ಪೃಥ್ವಿಗೆ ಬರತಕ್ಕ ಮಾರ್ಗವೆಂದೂ ಅರ್ಥವಾಗುತ್ತದೆ.

**ಪಿತೃಯಾನ**ವೆಂಬ ಪದವು ಋಕ್ಸಂಹಿತೆಯಲ್ಲಿ ಕೇವಲ ಒಂದುಸಲ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಆ ಪ್ರಯೋಗವು ಪ್ರಕೃತಋಕ್ಕಿನಲ್ಲಿ ಮಾತ್ರ—

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
**ಪಂಥಾಮನು ಪ್ರವಿದ್ವಾನ್ ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ॥**
(ಋ. ಸಂ. ೧೦-೨-೭)

ಎಂಬ ಋಕ್ಕಿನಲ್ಲಿ ದ್ಯಾವಾಪೃಥಿವಿಗಳಿಂದಲೂ ಉದಕಗಳಿಂದಲೂ, ಸೃಷ್ಟಿಕರ್ತನಿಂದಲೂ, ತ್ವಷ್ಟೃವಿನಿಂದಲೂ, ಉತ್ಪನ್ನನಾಗಿ ಪಜ್ವಲಿತನಾದವನೂ ಮತ್ತು **ಪಿತೃಯಾಣದ** ಸ್ವರೂಪವನ್ನು ಪೂರ್ಣವಾಗಿ ಅರಿತವನೂ ಆದ ಅಗ್ನಿಯು ಪ್ರಜ್ವಲಿತನಾದೊಡನೆಯೇ ಪ್ರಕಾಶಿತನಾಗಲಿ ಎಂದು ಪ್ರಾರ್ಥಿಸಿದೆ. ಋಕ್ಕಿನಲ್ಲಿ ಮೂರನೇ ಪಾದದಲ್ಲಿರುವ ಈ ಪದಕ್ಕೆ ಸಾಯಣರ ವಿವರಣೆಯಂತೆ " **ಪಿತೃಯಾಣಂ ಪಿತರೋ ಯೇನ ಮಾರ್ಗೇಣ ಗಚ್ಛಂತಿ ತಂ** " ಪಿತೃಗಳು ಯಾವ ಮಾರ್ಗದಲ್ಲಿ ಸಂಚರಿಸುವರೋ ಆ ಮಾರ್ಗವೆಂದರ್ಥ.

ಏವಾ ನ ಇಂದ್ರೋ ಮಘವಾ ವಿರಪ್ಶೀತ್ಯುತ್ತಮಯಾ ಪರಿದಧಾ-
ತೀಯಂ ವಾ ಇಂದ್ರೋ ಮಘವಾ ವಿರಪ್ಶೀ ಕರತ್ಸತ್ಯಾ ಚರ್ಷ-
ಣೀಧೃದನರ್ವೇತೀಯಂ ವೈ ಸತ್ಯಾ ಚರ್ಷಣೀಧೃದನರ್ವಾ ತ್ವಂ
ರಾಜಾ ಜನುಷಾಂ ಧೇಹ್ಯಸ್ಮೇ ಇತೀಯಂ ವೈ ರಾಜಾ ಜನುಷಾಂ
ಅಧಿ ಶ್ರವೋ ಮಾಹಿನಂ ಯಜ್ಜರಿತ್ರ ಇತೀಯಂ ವೈ ಮಾಹಿನಂ
ಯಜ್ಞಶ್ರವೋ ಯಜಮಾನೋ ಜರಿತಾ ಯಜಮಾನಾಯೈವೈ-
ತಾಮಾಶಿಷಮಾಶಾಸ್ತೇ ॥

ಋಗಂತರೇಣ ಶಸ್ತ್ರಸಮಾಪ್ತಿಂ ವಿಧತ್ತೇ – ಯೋಽಯಮಿಂದ್ರೋಽಸ್ತಿ ಸೋಽಯಂ ನ ಏವಾಸ್ಮದರ್ಥಮೇವ ಕರತ್ಕರೋತ್ವಿತಿ ದ್ವಿತೀಯಪಾದೇ ವಕ್ಷ್ಯಮಾಣೇನ ಸಂಬಂಧಃ । ಕೀದೃಶ ಇಂದ್ರಃ । ಮಘವಾ ಧನವಾನ್ ॥ ತಥಾ ವಿರಪ್ಶೀ । ರಭ ರಾಭಸ್ಯ ಇತ್ಯಸ್ಮಾದ್ಧಾತೋರುತ್ಪನ್ನೋಽಯಂ ಶಬ್ದಃ ॥ ವಿಶೇಷೇಣ ರಾಭಸ್ಯವಾನ್ಸರ್ವದೋದ್ಯುಕ್ತ ಇತ್ಯರ್ಥಃ । ಅನಯರ್ಚೋತ್ತಮಯಾ ಶಸ್ತ್ರಾಪೇಕ್ಷಯಾಂತಿಮಯಾ ಪರಿಧಾನಂ ಕುರ್ಯಾತ್ ॥ ಉದಾಹೃತೇ ಪ್ರಥಮಪಾದ ಇಂದ್ರಾದಿಶಬ್ದೈಃ ಸರ್ವೈರಪೀಯಂ ವೈ ಭೂಮಿರೇವೋಪಲಕ್ಷ್ಯತೇ । ಅನಯಾ ಭೂಮಿಸ್ಪರ್ಶಸ್ಯ ವಿಧಾಸ್ಯಮಾನತ್ವಾತ್ ॥ ದ್ವಿತೀಯಪಾದಮನೂದ್ಯ ವ್ಯಾಚಷ್ಟೇ— ಚರ್ಷಣೀಶಬ್ದೋ ಮನುಷ್ಯವಾಚೀ ತಾನ್ಧಾರಯತಿ ಪೋಷಯತಿ ಚರ್ಷಣೀಧೃದಿಂದ್ರಃ ॥ ಸೋಽಯಮನರ್ವಾ ಹಯಂ ಪರಿತ್ಯಜ್ಯ ಯಾಗಭೂಮಾವುಪವಿಷ್ಟತ್ವಾದಶ್ವರಹಿತಸ್ತಾದೃಶಃ ಸನ್ಸತ್ಯಾ ಫಲಪ್ರದಾನಸ್ಯಾಽಽವಶ್ಯಕತ್ವೇನ ಸತ್ಯಾನಿ ಕರ್ಮಾಣಿ ಕರತ್ಕರೋತು ವಿಘ್ನಪರಿಹಾರೇಣ ಸಂಪಾದಯತು॥ ಅಸ್ಮಿನ್ನಪಿ ಪಾದೇ ಸತ್ಯಾದಿಪದೈಃ ಪೂರ್ವವದಿಯಂ ಭೂಮಿರೇವೋಪಲಕ್ಷಣೀಯಾ । ತೃತೀಯಪಾದಮನೂದ್ಯ ವ್ಯಾಚಷ್ಟೇ— ಜನುಷಾಂ ಜಾತಾನಾಮಸ್ಮೇ ಅಸ್ಮಾಕಮೃತ್ವಿಜಾಂ ಹೇ ಇಂದ್ರ ತ್ವಂ ರಾಜಾ ಭೂತ್ವಾ ಧೇಹಿ ವಕ್ಷ್ಯಮಾಣಮಭೀಷ್ಟಂ ಸಂಪಾದಯ । ಅಸ್ಮಿನ್ನಪಿ ಪಾದೇ ರಾಜಾ ಜನುಷಾಮಿತಿ ಪದದ್ವಯೇನ ಪೂರ್ವವದಿಯಂ ಭೂಮಿರೇವೋಪಲಕ್ಷಣೀಯಾ । ಚತುರ್ಥಪಾದಮನೂದ್ಯ ವ್ಯಾಚಷ್ಟೇ— ಜರಿತ್ರೇ ಸ್ತೋತ್ರೇ ಯಜಮಾನಾಯ ಯತ್ಪ್ರಸಿದ್ಧಂ ಮಾಹಿನಂ ಮಹತ್ವಂ ಶ್ರವಃ ಕೀರ್ತಿಂ ಚಾಧಿ ಧೇಹೀತಿ ಪೂರ್ವೇಣಾನ್ವಯಃ । ಹೇ ಇಂದ್ರಾಽಽಧಿಕ್ಯೇನ ಸಂಪಾದಯೇತ್ಯರ್ಥಃ । ಅಸ್ಮಿನ್ನಪಿ ಪಾದೇಮಾಹಿನಮಿತ್ಯನೇನೇಯಂ ಭೂಮಿರೇವೋಪಲಕ್ಷಣೀಯಾ । ಯಚ್ಛಬ್ದೋ ನಪುಂಸಕಲಿಂಗೋ ಯ ಇತಿ ಪುಲ್ಲಿಂಗತ್ವೇನ ವಿಪರಿಣಮಯಿತವ್ಯಃ । ತೇನ ಯೋ ಯಜ್ಞ ಇತಿ ಪ್ರಸಿದ್ಧಂ ಯಜ್ಞಮಾಚಷ್ಟೇ । ಸೋಽಪೀಯಂ ಭೂಮಿರೇವ । ಕೀರ್ತಿವಾಚಿನಾ ಶ್ರವಃಶಬ್ದೇನಾಪಿ ಭೂಮಿರೇವೋಪಲಕ್ಷಣೀಯಾ । ಯಜಮಾನೋ ಜರಿತೃಶಬ್ದೇನಾಭಿಧೇಯಃ । ಏತತ್ಪಾದಚತುಷ್ಟಯಪಾಠೇನ ಹೋತಾ ಯಜಮಾನಾರ್ಥಮೇಪಾಽಽಶಾಸನೀಯಂ ಸರ್ವಂ ಪ್ರಾರ್ಥಯತೇ ॥

ಈಗ ಮುಂದಿನ ಋಕ್ಕನ್ನು ಹೇಳಿ ಶಸ್ತ್ರಸಮಾಪ್ತಿಯನ್ನು ವಿವರಿಸುವರು—

**ಏವಾ ನ ಇಂದ್ರೋ ಮಘವಾ ವಿರಪ್ಶೀ ಕರತ್ಸತ್ಯಾ ಚರ್ಷಣೀಧೃದನರ್ವಾ ।**
**ತ್ವಂ ರಾಜಾ ಜನುಷಾಂ ಧೇಹ್ಯಸ್ಮೇ ಅಧಿ ಶ್ರವೋ ಮಾಹಿನಂ ಯಜ್ಜರಿತ್ರೇ ॥**

(ಋ. ಸಂ. ೪-೧೭-೨೦)

ಎಂಬುದೇ ಆ ಋಕ್ಕು. ಇದರ ವಿವರಣೆಯು—ಈ ಇಂದ್ರನು ನಮಗೋಸ್ಕರವಾಗಿಯೇ ಎಲ್ಲವನ್ನೂ ಮಾಡುವನು. ಈ ಇಂದ್ರನು ಧನವಂತನು ಎಂದರೆ ಇವನಲ್ಲಿ ಬಹಳವಾದ ಧನವಿರುವುದು ಮತ್ತು ವಿರಪ್ಶೀ-**ರಭ ರಾಭಸ್ಯೇ, ವಿಶೇಷೇಣ ರಾಭಸ್ಯವಾನ್** ಯಾವಾಗಲೂ ಎಡಬಿಡದೆ ಉದ್ಯೋಗಶೀಲನಾಗಿರುವನು. ಇಲ್ಲಿ **ಏವಾ ನಃ** ಎಂಬ ಶಬ್ದಪ್ರಯೋಗವಿರುವುದರಿಂದ ಇಲ್ಲಿ ನಾವಿರುವ ಸ್ಥಳವು ಭೂಮಿಯನ್ನು ಸೂಚಿಸುವುದು. ಆದ್ದರಿಂದ ಈ ಋಕ್ಕನ್ನು ಕೊನೆಯ ಋಕ್ಕನ್ನಾಗಿ ಪಠಿಸುವಾಗ ಕೈಯಿಂದ ಭೂಮಿಯನ್ನು ಸ್ಪರ್ಶಿಸಬೇಕು. ಇದು ಮೊದಲನೆಯಪಾದದ ಅರ್ಥವು. ಎರಡನೆಯ ಪಾದವನ್ನು ವಿವರಿಸುವರು— **ಚರ್ಷಣೀ** ಎಂಬ ಶಬ್ದವು ಮನುಷ್ಯರು ಎಂಬರ್ಥವನ್ನು ಸೂಚಿಸುವುದು. **ಚರ್ಷಣೀಧೃದನರ್ವಾ** ಮನುಷ್ಯರನ್ನು ಧರಿಸಿ ಪೋಷಿಸುವ ಈ ಇಂದ್ರನು ತನ್ನ ರಥವನ್ನು ಬಿಟ್ಟಿಳಿದು ನಮ್ಮ ಯಜ್ಞಶಾಲೆಗೆ ಬಂದು ಕುಳಿತು ಸತ್ಯಕರ್ಮಗಳನ್ನು ಎಂದರೆ ಯಜ್ಞಕ್ಕೆ ಒದಗಬಹುದಾದ ವಿಘ್ನಗಳನ್ನೂ ಪರಿಹರಿಸಿ ಯಜ್ಞವೃದ್ಧಿಯನ್ನುಂಟುಮಾಡಲಿ. ಈ ಪಾದದಲ್ಲಿಯೂ ಭೂಮಿಯೆಂಬ ಅರ್ಥವು ಸೂಚಿತವಾಗಿರುವುದರಿಂದ ಅದನ್ನು ಇಲ್ಲಿಯೂ ಸ್ಪರ್ಶಿಸಬೇಕು. ಇನ್ನು ಮೂರನೆಯಪಾದದ ಅರ್ಥವನ್ನು ವಿವರಿ

ಸುವರು—ಎಲೈ ಇಂದ್ರನೇ ನೀನು ನಮಗೆ ಎಂದರೆ ಋತ್ವಿಕ್ಕುಗಳಿಗೂ ಯಜಮಾನ ಮುಂತಾದ ಜನರಿಗೆಲ್ಲಾ ರಾಜನಾಗಿರುವೆ. ಇಂತಹ ನೀನು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸು ಎಂದರ್ಥವು. ಇಲ್ಲಿಯೂ ಭೂಮಿಯು ಸೂಚಿತವಾಗಿರುವುದು. ನಾಲ್ಕನೆಯ ಪಾದವನ್ನು ವಿವರಿಸುವರು—ಎಲೈ ಇಂದ್ರನೇ, ನಿನ್ನನ್ನು ಸ್ತೋತ್ರಮಾಡುತ್ತಿರುವ ಈ ಯಜಮಾನನಿಗೆ ಮಹತ್ವವನ್ನು ಎಂದರೆ ಜನರ ಮಧ್ಯದಲ್ಲಿ ಗಣ್ಯತೆಯನ್ನೂ ಕೀರ್ತಿಯನ್ನೂ ಅನುಗ್ರಹಿಸು ಎಂದು ಇದರ ಅರ್ಥವು. ಇಲ್ಲಿ ಯಜ್ಞ ಮತ್ತು ಕೀರ್ತಿ ಎಂಬ ಶಬ್ದಗಳು ಭೂಮಿಗೆ ಸಂಬಂಧಪಟ್ಟ ವಿಷಯವನ್ನು ಸೂಚಿಸುವವು. ಈ ಋಕ್ಕನ್ನು ಪಠಿಸುವುದರಿಂದ ಹೋತೃವು ಯಜಮಾನನು ಶ್ರೇಯೋಭಿವೃದ್ಧಿಯನ್ನೂ ಆಯುರ್ವೃದ್ಧಿಯನ್ನೂ ಹೊಂದಲಿ ಎಂಬ ಆಶಯವನ್ನು ವ್ಯಕ್ತಪಡಿಸುವನು.

**ತದುಪಸ್ಪೃಶನ್ ಭೂಮಿಂ ಪರಿದಧ್ಯಾತ್ತದ್ಯಸ್ಯಾಮೇವ ಯಜ್ಞಂ ಸಂಭರತಿ ತಸ್ಯಾಮೇವೈನಂ ತದಂತತಃ ಪ್ರತಿಷ್ಠಾಪಯತಿ ।**

ಪರಿಧಾನಕಾಲೇ ಹೋತುರ್ಭೂಮಿಸ್ಪರ್ಶನಂ ವಿಧತ್ತೇ—ತತ್ತದಾ ಶಸ್ತ್ರಪರಿಸಮಾಪ್ತಿ-ಕಾಲೇ ಭೂಮಿಂ ಸ್ಪೃಶನ್ನೇವ ಸಮಾಪಯೇತ್ ॥ ತತ್ತೇನ ಸ್ಪರ್ಶೇನ ಯಸ್ಯಾಮೇವ ಭೂಮೌ ಯಜ್ಞಮನುಷ್ಠಾತುಂ ಸಾಧನಂ ಸಂಭರತಿ ತಸ್ಯಾಮೇವ ಭೂಮಾವೇನಂ ಯಜ್ಞಂ ತದಂತತಸ್ತ-ತ್ಸಮಾಪ್ತಿಪರ್ಯಂತಂ ಪ್ರತಿಷ್ಠಾಪಯತಿ ॥

ಮಂತ್ರಸಮಾಪ್ತಿಕಾಲದಲ್ಲಿ ಕೊನೆಯ ಋಕ್ಕನ್ನು ಪಠಿಸುವಾಗ ಭೂಮಿಯನ್ನು ಸ್ಪರ್ಶಮಾಡಬೇಕೆಂಬ ವಿಷಯವನ್ನು ಸ್ಪಷ್ಟಪಡಿಸುವರು. ಹಿಂದೆ ಹೇಳಿದಂತೆ ಶಸ್ತ್ರಮಂತ್ರಗಳನ್ನು ಹೇಳಿ ಮುಗಿಸಿದಮೇಲೆ ಕೊನೆಯ ಋಕ್ಕನ್ನು ಹೇಳುವಾಗ ಭೂಮಿಯನ್ನು ಹಸ್ತದಿಂದ ಸ್ಪರ್ಶನಮಾಡಬೇಕು. ಏಕೆಂದರೆ ಯಜ್ಞಸಾಧನವಾದ ಸಾಮಗ್ರಿಗಳನ್ನು ಭೂಮಿಯಿಂದಲೇ ಸಂಪಾದಿಸಬೇಕಾಗಿರುವುದು. ಆದ್ದರಿಂದ ಯಜ್ಞಸಮಾಪ್ತಿಕಾಲದಲ್ಲಿ ಯಜ್ಞಮಾಡುವುದಕ್ಕಾಗಿ ಆಶ್ರಯವಿತ್ತ ಭೂಮಿಯನ್ನು ಸ್ಪರ್ಶಿಸುವುದು ಯುಕ್ತವಾಗಿದೆ.

**ಅಗ್ನೇ ಮರುದ್ಭಿಃ ಶುಭಯದ್ಭಿರ್ಋಕ್ವಭಿರಿತ್ಯಾಗ್ನಿಮಾರುತಮುಕ್ಥಂ ಶಸ್ತ್ವಾಽಽಗ್ನಿಮಾರುತ್ಯಾ ಯಜತಿ ಯಥಾಭಾಗಂ ತದ್ದೇವತಾಃ ಪ್ರೀಣಾತಿ ಪ್ರೀಣಾತಿ ॥**

ಅಥ ಶಸ್ತ್ರ ಯಾಜ್ಯಾಂ ವಿಧತ್ತೇ—ಅಗ್ನಿರ್ಮೂರ್ಧೇತ್ಯುದಿತಶ್ಚ ಯಸ್ಯೋಕ್ಥಸ್ಯ ಶಸ್ತ್ರಸ್ಯ ದೇವತಾ ತದಾಗ್ನಿಮಾರುತಮುಕ್ಥಂ ಪೂರ್ವೋಕ್ತಪ್ರಕಾರೇಣ ಶಸ್ತ್ವಾ ತತ ಊರ್ಧ್ವಮಗ್ನೇ ಮರುದ್ಭಿರಿ-ತ್ಯೇತಯಾ ಮಾರುತ್ಯಾಯಜೇತ್ ಆಗ್ನಿಮಾರುತಯಾಜ್ಯಾಂ ಪಠೇದಿತ್ಯರ್ಥಃ । ತಥಾ ಸತಿ ತಸ್ಮಿನ್ಶಸ್ತ್ರೇ ಪ್ರತಿಪಾದಿತಾ ಯಾವತ್ಯೋ ದೇವತಾಃ ಸಂತಿ ತಾಃ ಸರ್ವಾಸ್ತತ್ತದ್ಭಾಗಮನತಿಕ್ರಮ್ಯ ತರ್ಪಯತಿ ॥ ಅಭ್ಯಾಸೋಽಧ್ಯಾಯ ಸಮಾಪ್ತ್ಯರ್ಥಃ ॥

ಆಗ್ನಿಮಾರುತಶಸ್ತ್ರಮಂತ್ರಗಳ ಅಂತ್ಯದಲ್ಲಿ ಪಠಿಸಿ ಹೋಮಮಾಡಬೇಕಾದ ಯಾಜ್ಯಾಮಂತ್ರವನ್ನು ವಿವರಿಸುವರು—

ಅಗ್ನೇ ಮರುದ್ಭಿಃ ಶುಭಯದ್ಭಿರ್ಋಕ್ವಭಿಃ ಸೋಮಂ ಪಿಬ ಮಂದಸಾನೋ ಗಣಶ್ರಿಭಿಃ ।
ಪಾವಕೇಭಿರ್ವಿಶ್ವಮಿನ್ವೇಭಿರಾಯುಭಿರ್ವೈಶ್ವಾನರ ಪ್ರದಿವಾ ಕೇತುನಾ ಸಜೂಃ ॥
(ಋ. ಸಂ. ೫-೬೦-೮)

ಎಂಬುದೇ ಯಾಜ್ಯಾಮಂತ್ರವು. ಅಗ್ನಿಯನ್ನೂ ಮರುದ್ದೇವತೆಯನ್ನೂ ಯಾವ ಶಸ್ತ್ರದಲ್ಲಿ ಸ್ತುತಿಸಲಾಗಿದೆಯೋ ಅದಕ್ಕೆ **ಅಗ್ನಿಮಾರುತಮುಕ್ಥಂ** ಎಂದು ಹೇಳಲ್ಪಡುವುದು. ಹಿಂದೆ ಹೇಳಿದ ಪ್ರಕಾರವಾಗಿ ಈ ಶಸ್ತ್ರಮಂತ್ರಗಳನ್ನೆಲ್ಲಾ ಪಠಿಸಿದಮೇಲೆ ಅನಂತರ **ಅಗ್ನೇ ಮರುದ್ಭಿಃ** ಎಂಬ ಆಗ್ನಿಮಾರುತಶಸ್ತ್ರದ ಯಾಜ್ಯಾಮಂತ್ರದಿಂದ ಹೋಮಮಾಡಬೇಕು. ಮೇಲೆ ಹೇಳದ ಯಾಜ್ಯಾಮಂತ್ರವನ್ನು ಪಠಿಸಿ ಹೋಮಮಾಡಬೇಕೆಂದರ್ಥವು. ಈ ಹೋಮದಿಂದ ಈ ಆಗ್ನಿಮಾರುತಶಸ್ತ್ರ ಮಂತ್ರಗಳಲ್ಲಿ ಪ್ರತಿಪಾದಿತರಾಗಿರುವ ದೇವತೆಗಳೆಲ್ಲರೂ ತಮ್ಮತಮ್ಮ ಭಾಗಗಳನ್ನು ಪಡೆದು ತೃಪ್ತರಾಗುವರು. **ಪ್ರೀಣಾತಿ** ಎಂದು ಎರಡಾವೃತ್ತಿ ಹೇಳುವುದರಿಂದ ಈ ಅಧ್ಯಾಯವು ಸಮಾಪ್ತಿಯಾಯಿತೆಂಬ ವಿಷಯವನ್ನು ಸೂಚಿಸುವುದು ಆಶ್ವಲಾಯನ ಶ್ರೌತಸೂತ್ರದಲ್ಲಿ—**ಅಗ್ನೇ ಮರುದ್ಭಿಃ ಶುಭಯದ್ಭಿರ್ಋಕಭಿರಿತಿ ಯಾಜ್ಯಾ । ಇತ್ಯಂತೋಽಗ್ನಿಷ್ಟೋಮೋಽಗ್ನಿಷ್ಟೋಮಃ** ಎಂದು ಹೇಳಿರುವುದು (ಆಶ್ವ. ಶ್ರೌ. ಸೂ. ೫-೨೦-೮) ಎಂದರೆ **ಅಗ್ನೇ ಮರುದ್ಭಿಃ** ಎಂಬ ಆಗ್ನಿಮಾರುತಶಸ್ತ್ರದ ಯಾಜ್ಯಾಹೋಮದಿಂದ ಇದುವರೆಗೂ ವಿವರಿಸಿದ ಅಗ್ನಿಷ್ಟೋಮವೆಂಬ ಯಜ್ಞದ ವಿವರಣೆಯು ಸಂಪೂರ್ಣವಾಯಿತು ಎಂದಭಿಪ್ರಾಯವು.

*English Translation*

**On Indra's share in the evening libation. On the verses addressed to Vishnu and Varuna, to Vishnu alone and to Prajapati. The concluding verse and the Yajya of the Agnimaruta Shastra.**

The Hotar repeats the anu-paniya verses addressed to Indra and his drinking of the Soma juice after (the other deities have been satisfied), svadush kilayam madhuman (6,47, 1-4). By their means Indra drank from the Soma after the third libation (anupibat). Thence the verses are called anu-paniya "referring to drinking after." The deities are drunk, as it were, at this (third libation) when the Hotar repeats those verses. Thence has the Adhvaryu, when they are repeated, to respond to the Hotar (when calling somsavom) with a word derived from the root mad "to be drunk".

He repeats a verse referring to Vishnu and Varuna, yayor ojasa. Vishnu protects the defects in the sacrifices (from producing any evil consequences), and Varuna protects the fruits arising from its successful performance. (This verse is repeated) to propitiate both of them.

He repeats a verse addressed to Vishnu: vishnor nu kam viryuat (1,154,1). Vishnu is in the sacrifice the same as deliberation in (wordly things). Just as an agriculturist is going to make good the mistakes in ploughing and a king in making good a bad judgment by devising a good one, so the Hotar is going to make well recited what was badly recited and well chanted what was badly chanted, by repeating this verse addressed to Vishnu.

He repeats a verse addressed to Prajapati, tantum tanvan rajaso (10, 53, 6). Tantu i.e. thread means offspring. By repeating this verse the Hotar spreads (santanoti) for him (the sacrificer) offspring. By the words of this verse,

jyotishmatah patho raksha dhiya kritam i.e., "protect the paths which are provided with lights, and made by absorption in meditation" wherein the term "the paths provided with lights" means the roads of the gods to heaven, the Hotar paves these roads (for the sacrificer to go on them on his way to heaven).

By the words anulbanam vayata, i.e. "weave ye the work of the chanters and repeaters so as to rid it from all defects; become a Manu. Produce a divine race," the Hotar propagates him through human offspring. That is done for production, he who has such a knowledge will be blessed with offspring and cattle.

He concludes with the verse eva no indro maghava virapsi (4, 17, 20). This earth is Indra maghava virapsi i. e. Indra, the strong, of manifold crafts. She is also satya the true, charshanidhrit, i.e. holding men, anarva safe. She is also the raja. In the words, sravo mahinam yaj jaritre, mahinam means the earth, sarvo the sacrifice and jarita the sacrificer. By repeating them he asks for a blessing for the sacrificer. When he thus concludes, he ought to touch the earth on which he employs the sacrificial agency. On this earth he finally establishes the sacrifice.

After having repeated the Agni-Maruta Shastra, he recites the Yajya: Agne marudbhih (5, 60, 8). Thus he satisfies (all) the deities, giving to each its due.

ಇತಿ ಶ್ರೀಮತ್ಸಾಯಣಾಚಾರ್ಯವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶ
ಐತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಸ್ಯ ಚತುರ್ದಶಃ ಖಂಡಃ

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ವೀರಬುಕ್ಕಣಸಾಮ್ರಾಜ್ಯಧುರಂಧರ
ಸಾಯಣಾಚಾರ್ಯಕೃತಾವೈತರೇಯಬ್ರಾಹ್ಮಣಭಾಷ್ಯೇ ತ್ರಯೋದಶಾಧ್ಯಾಯಃ ಸಮಾಪ್ತಃ

ಸಾಯಣಭಾಷ್ಯಯುತವೂ ಕರ್ನಾಟಕಭಾಷಾನುವಾದಯುತವೂ ಆದ ಐತರೇಯಬ್ರಾಹ್ಮಣದಲ್ಲಿ
ಹದಿಮೂರನೆಯ ಅಧ್ಯಾಯದಲ್ಲಿ ಹದಿನಾಲ್ಕನೆಯ ಖಂಡವು ಸಮಾಪ್ತವಾದುದು.

**ಹದಿಮೂರನೆಯ ಅಧ್ಯಾಯವು ಮುಗಿದುದು.**

— ಓಂ ತತ್ಸತ್ —

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥